ತತ್ವ ಸಂಶೋಧನ ಸಂಸತ್
ಶ್ರೀಹೃಷೀಕೇಶತೀರ್ಥಸಂಸ್ಥಾನಮ್, ಶ್ರೀ ಪಲಿಮಾರು ಮಠ, ಉಡುಪಿ - ೫೭೬ ೧೦೧

# ಶ್ರೀಮದ್‌ಬ್ರಹ್ಮಸೂತ್ರಭಾಷ್ಯಮ್



ಕನ್ನಡ ಟೀಕಾ ಭಾಷಾಂತರ
ವೇದಮೂರ್ತಿ ದ್ವೈತವೇದಾಂತವಾಚಸ್ಪತಿ
**ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು**

॥ ಶ್ರೀಮಧ್ವನಾಥೋ ವಿಜಯತೇ ॥

## ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯಲ್ಲಿ

# ಶ್ರೀಮದ್‌ಬ್ರಹ್ಮಸೂತ್ರಭಾಷ್ಯಮ್

(ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ ಮತ್ತು ಫಲಾಧ್ಯಾಯಗಳು)

ದ್ವೈತವೇದಾಂತವಿದ್ವಾನ್ ದ್ವೈತವೇದಾಂತ ಶಿರೋಮಣಿ ವೇದಾಂತವಾಚಸ್ಪತಿ
ಉಡುಪಿ ಸಂಸ್ಕೃತ ಮಹಾಪಾಠಶಾಲಾ ನಿವೃತ್ತ ವೇದಾಂತ ಪ್ರಾಚಾರ್ಯ

**ದಿ॥ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ**

ರಚಿತವಾದ ಕನ್ನಡ ಟೀಕಾ ಭಾಷಾಂತರ ಸಹಿತ

ಪ್ರಕಾಶಕರು

**ತತ್ತ್ವ ಸಂಶೋಧನ ಸಂಸತ್**
ಶ್ರೀವಿದ್ಯಾಮಾನ್ಯಪ್ರಕಾಶನಮ್, ಶ್ರೀಹೃಷೀಕೇಶತೀರ್ಥಸಂಸ್ಥಾನಮ್, ಶ್ರೀ ಪಲಿಮಾರು ಮಠ
ರಥಬೀದಿ, ಉಡುಪಿ - ೫೭೬ ೧೦೧

ಗ್ರಂಥದ ಹೆಸರು : ಶ್ರೀಮದ್ ಬ್ರಹ್ಮಸೂತ್ರಭಾಷ್ಯಮ್
(ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ ಮತ್ತು ಫಲಾಧ್ಯಾಯಗಳು)

ಕನ್ನಡ ಟೀಕಾ ಭಾಷಾಂತರ
ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು

ISBN : 978-81-909776-8-5

ಪ್ರಕಾಶಕರು
**ತತ್ತ್ವ ಸಂಶೋಧನ ಸಂಸತ್**
ಶ್ರೀವಿದ್ಯಾಮಾನ್ಯಪ್ರಕಾಶನಮ್, ಶ್ರೀಹೃಷೀಕೇಶತೀರ್ಥಸಂಸ್ಥಾನಮ್, ಶ್ರೀ ಪಲಿಮಾರು ಮಠ
ರಥಬೀದಿ, ಉಡುಪಿ - ೫೭೬ ೧೦೧

ಪ್ರತಿಗಳು : ೧,೦೦೦

ಪುಟಗಳು : ೧೧೨೦



ಬೆಲೆ : ರೂ. ೫೦೦/-

ಮುಖಪುಟ ವಿನ್ಯಾಸ: ಕೆ.ಎಮ್. ಶೇಷಗಿರಿ

ಮುದ್ರಣ : ಲಾವಣ್ಯ ಮುದ್ರಣ, ಬೆಂಗಳೂರು

# ''ಅಂತೇ ಸಿದ್ಧಸ್ತು ಸಿದ್ಧಾಂತಃ ಮಧ್ವಸ್ಯ ಆಗಮ ಏವ ಹಿ''

ಭಗವದವತಾರರಾದ ಶ್ರೀವೇದವ್ಯಾಸರಿಂದ ರಚಿತವಾದ ಈ ಬ್ರಹ್ಮಸೂತ್ರಗಳು ''ಪರವಿದ್ಯೆ'' ''**ಅನುತ್ತಮಶಾಸ್ತ್ರ**''ಗಳು. ಸಕಲವೇದಸ್ಮೃತಿಗಳ ಅರ್ಥನಿರ್ಣಾಯಕವಾದ ಈ ಸೂತ್ರಸಂತತಿಗೆ ಸರಿಮಿಗಿಲೆನಿಸುವ ಕೃತಿಗಳೇ ಇಲ್ಲವೆಂದು ಆಚಾರ್ಯರು ಸಿದ್ಧಾಂತಿಸಿದ್ದಾರೆ. ಒಂದೊಂದು ಸೂತ್ರದ ಮನನಕ್ಕೆ ಶತಗಾಯತ್ರೀಜಪದ ಫಲವೆಂದು ಪುರಾಣಗಳು ಸಾರಿವೆ. ಹನುಮಂತದೇವರು ಕಿಂಪುರುಷಖಂಡದಲ್ಲಿ ಇಂದಿಗೂ ಬ್ರಹ್ಮಸೂತ್ರಗಳ ಪಾಠ-ಪ್ರವಚನ ನಡೆಸುತ್ತಿದ್ದಾರೆಂದರೆ ಈ ಸೂತ್ರಗಳ ಪಾರಮ್ಯ ಅಗಮ್ಯವೇ ಸರಿ.

ಸೂತ್ರಗಳ ಮಹತ್ವಜ್ಞಾನ ಹಾಗೂ ಸಮರ್ಪಕವಾದ ಭಾವ ಬೋಧವಾಗಬೇಕಾದರೆ ಶ್ರೀಮದಾಚಾರ್ಯರ ಭಾಷ್ಯವೇ ಬೇಕು. ವ್ಯಾಸ-ಮಧ್ವರ ಸಂಬಂಧ ಎಷ್ಟು ಅವಿನಾಭಾವವೋ ಅಷ್ಟೇ ಅವಿನಾಭೂತವಾದುದು ಈ ಸೂತ್ರ-ಭಾಷ್ಯಗಳ ವ್ಯಾಖ್ಯೇಯ-ವ್ಯಾಖ್ಯಾನಭಾವವು. ವ್ಯಾಸರು ರಚಿಸಿದ ಅಷ್ಟೂ ಸೂತ್ರಗಳು ಸಿದ್ಧಾಂತವೇ. ಪೂರ್ವಪಕ್ಷ ಸೂತ್ರಗಳು ಒಂದೂ ಇಲ್ಲ. ಪ್ರತಿಯೊಂದು ಸೂತ್ರವೂ ನಿರ್ಣಾಯಕಗಳೇ ಎಂದು ಸಾರಿದ ಏಕೈಕ ಭಾಷ್ಯ ಶ್ರೀಮದಾಚಾರ್ಯರದ್ದು. ಸಿದ್ಧಾಂತ ಮಾಡಿದ ಬಳಿಕ ಪೂರ್ವಪಕ್ಷವೂ ಸರ್ವಾತ್ಮನಾ ಖಂಡಿತವಾಗುತ್ತದೆ. ಪೂರ್ವಪಕ್ಷಕ್ಕೆ ಅಸ್ತಿತ್ವವೇ ಇರಲಾರದು. ಒಂದು ಸೂತ್ರವನ್ನು ಪೂರ್ವಪಕ್ಷಸೂತ್ರಪರವೆಂದರೆ, ಮುಂದಿನ ಸೂತ್ರದಿಂದ ಇದು ನಿರಾಕೃತವಾದರೆ ಈ ಸೂತ್ರವನ್ನು ಅಪ್ರಮಾಣವೆಂದಂತಾಗುವುದಿಲ್ಲವೇ? ಸೂತ್ರವನ್ನೇ ಅಪ್ರಮಾಣವೆಂದು ಸಾರುವ ಅಪಭಾಷ್ಯಗಳು ಇದ್ದರೇನು ಬಿಟ್ಟರೇನು? ಇಂತಹ ಭಾಷ್ಯ ಇರುವುದಕ್ಕಿಂತ ಇಲ್ಲದಿದ್ದರೇ ಲೇಸು. ಶ್ರೀಮದಾಚಾರ್ಯರ ಭಾಷ್ಯ ಇದಕ್ಕೆ ಸರ್ವಾತ್ಮನಾ ಅಪವಾದ. ಪೂರ್ವಪಕ್ಷಪರವಾದ ಸೂತ್ರವೇ ಇಲ್ಲ. ಪ್ರತಿಯೊಂದು ಸೂತ್ರವೂ ಸಿದ್ಧಾಂತವೇ ಎಂದ ಭಾಷ್ಯ ಶ್ರೀಮದಾಚಾರ್ಯರ ಭಾಷ್ಯ.

ಪ್ರತಿಯೊಂದು ಸೂತ್ರಗಳೂ ಭಗವಂತನ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ-ನಾರಾಯಣಗಳೆಂಬ ಐದು ರೂಪಗಳನ್ನು ಪ್ರತಿಪಾದಿಸುವವುಗಳೆಂದು ಸಾರಿದ ಈ ಭಾಷ್ಯದ ವ್ಯಾಖ್ಯಾನ ವರ್ಣನಾತೀತ.

ಸೂತ್ರದ ಅರ್ಥದ ವರ್ಣನೆಯನ್ನು ಮಾಡಿದರೆ ಮಾತ್ರ ಅದು ಭಾಷ್ಯವೆನಿಸುತ್ತದೆ. ಸೂತ್ರದ ಅರ್ಥ ಒಂದು-ಭಾಷ್ಯದ ಚಿಂತನೆ ಮಗದೊಂದು ಆದರೆ ಸೂತ್ರ-ಭಾಷ್ಯ ಸಂಬಂಧವು ಆಭಾಸವೇ ಸರಿ.

**''ಗ್ರಂಥೋಽಯಮಪಿ ಬಹ್ವರ್ಥಃ ಭಾಷ್ಯಂ ಚಾತ್ಯರ್ಥವಿಸ್ತರಮ್ ।**
**ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ॥''**

ಶ್ರೀಮದಾಚಾರ್ಯರೇ ''ಭಾಷ್ಯವು ಮಾನವರ ಬುದ್ಧಿಯನ್ನು ಅತಿಕ್ರಮಿಸುವ ಅರ್ಥ ಪ್ರಭಾವವುಳ್ಳದ್ದೆಂದು'' ನೀಡಿದ ವಿವರಣೆ ''ಭಾಷ್ಯದ ಮಹತ್ತ್ವಕ್ಕೆ ಹಿಡಿದ ಕನ್ನಡಿ''.

ನಾಕೇ ಅಧ್ಯಾಯ, ನಾಕೇ ಪಾದ. ಇವುಗಳ ವ್ಯವಸ್ಥೆ ಆಚಾರ್ಯರ ಭಾಷ್ಯದ ಪ್ರಕಾರ ಸುಂದರವಾದುದು-ಸಮರ್ಥವಾದುದು-ಸಮರ್ಪಕವಾದುದು.

ಯಾವ ಶಬ್ದಕ್ಕೂ ಸಮನ್ವಯವೇ ಇಲ್ಲವೆನ್ನುವ ಮಾಯಾವಾದಭಾಷ್ಯದ ಪ್ರಕಾರ ಸಮನ್ವಯ ಅಧ್ಯಾಯವೆಂಬ ಹೆಸರು ನಿರರ್ಥಕವೇ ಸರಿ. ಶ್ರೀಮದಾಚಾರ್ಯರ ಭಾಷ್ಯ-ಅನುಭಾಷ್ಯಗಳಲ್ಲಿಯೇ ತರ್ಕಬದ್ಧವಾದ ಸಮರ್ಥನೆ ಇರುವುದು.

"**ಸೂತ್ರಾರ್ಥೋ ವರ್ಣ್ಯತೇ ಯತ್ರ**" ಎನ್ನುವ ಭಾಷ್ಯದ ಲಕ್ಷಣ ಕೂಡುವುದು ಶ್ರೀಮದ್ಭಭಾಷ್ಯದಲ್ಲಿಯೇ. ಉದಾಹರಣೆ ನೋಡಿ : "**ಆನಂದಮಯೋऽಭ್ಯಾಸಾತ್**" ತೈತ್ತಿರೀಯ ವಲ್ಲಿಯಲ್ಲಿ ಪ್ರತಿಪಾದಿತನಾದ ಆನಂದಮಯ ಯಾರು? ಎನ್ನುವ ಪ್ರಶ್ನೆಗೆ ಉತ್ತರ ಇಷ್ಟು 'ಬ್ರಹ್ಮ' ಶಬ್ದವಿದೆ ಎನ್ನುವ ಕಾರಣ ಕೊಟ್ಟು ಆನಂದಮಯ ಮುಂತಾದ ಐದೂ ವಿಷ್ಣು ಎಂದು ಸಮರ್ಥಿಸಿದ್ದಾರೆ ಸೂತ್ರಕಾರರು. ಅದಕ್ಕೆ ವಿರುದ್ಧವಾಗಿ ಆನಂದಮಯ ಮುಂತಾದ ಐದೂ ಕೋಶಗಳು ಎನ್ನುವ ಮಾಯಾವಾದಿಗಳ ಭಾಷ್ಯ ಆಭಾಸವೇ ಸರಿ.

"**ಆನಂದಮಯ**" ಒಂದು ವಿಷ್ಣು ಉಳಿದದ್ದು ನಾಲ್ಕೂ ಕೋಶಗಳು ಎನ್ನುವ ರಾಮಾನುಜೀಯರ ಭಾಷ್ಯವೂ ಅಪಭಾಷ್ಯವೇ. ಶ್ರೀಮದ್ವರ ಭಾಷ್ಯವೇ ಭಾಷ್ಯ.

ಮಿತಾಕ್ಷರದ ಭಾಷ್ಯ ಶ್ರೀಮದಾಚಾರ್ಯರದ್ದು, ಸೂತ್ರಪ್ರಾಯವಾದ ಭಾಷ್ಯ. ಸೂತ್ರವೇ ಎಸೋ ಅನ್ನುವಷ್ಟರ ಮಟ್ಟಿಗೆ ಅಲ್ಪಾಕ್ಷರತೆ ಇಲ್ಲಿಯ ಸೊಬಗು. "**ಪದೈಃ ಸೂತ್ರಾನುಕಾರಿಭಿಃ**" ಎನ್ನುವ ಭಾಷ್ಯ ಲಕ್ಷಣವು ಶ್ರೀಮದಾಚಾರ್ಯರ ಭಾಷ್ಯದಲ್ಲಿ ಸುಸ್ಪಷ್ಟ

ಸೂತ್ರಾರ್ಥವನ್ನು ವಿವರಿಸುತ್ತಾ ಶ್ರೀಮದಾಚಾರ್ಯರು ನೀಡುವ ಶ್ರುತಿ-ಸ್ಮೃತಿ-ಇತಿಹಾಸ ಪುರಾಣಗಳ ಸಂವಾದವಂತೂ ಸೂತ್ರಾರ್ಥವನ್ನು ಪುಷ್ಟೀಕರಿಸುತ್ತದೆ. ಶ್ರೀಮದ್ವರು ಹೇಳಿದ ಅರ್ಥ ವ್ಯಾಸರಿಗೆ ನೂರಕ್ಕೆ ನೂರರಷ್ಟು ಸಮ್ಮತ. ಕಪೋಲಕಲ್ಪನೆಗೆ ಎಳ್ಳಷ್ಟೂ ಅವಕಾಶವಿಲ್ಲ ಎನ್ನುವುದನ್ನು ಮನಗಾಣಬಹುದು.

"**ಆಚಾರ್ಯಃ ಸ್ವೋಕ್ತಾರ್ಥೇ ಸ್ವಯಮೇವ ಪ್ರಮಾಣಮ್**" ಎನ್ನುವ ತ್ರಿವಿಕ್ರಮ ಪಂಡಿತಾಚಾರ್ಯರ ಮಾತು ಮೈನಿಮಿರೇಳಿಸುವಂತದ್ದು ಈ ಶ್ರೀಮದಾಚಾರ್ಯರನ್ನು ಕಂಡರೆ "**ಸುಳ್ಳು ಹೇಳಲಾರರೆಂಬುದು**" ನಮ್ಮ ಸಾಕ್ಷಿ. ಆಚಾರ್ಯರ ಮಾತು **ಸ್ವತಃ ಪ್ರಮಾಣ. ಆಚಾರ್ಯರ ಮಾತು ವಾಮನ. ಅರ್ಥವ್ಯಾಪ್ತಿ ತ್ರಿವಿಕ್ರಮನದ್ದು.** ಸಹಸ್ರಾರ್ಥಸ್ಯ ಭಾಷ್ಯಸ್ಯ "**ಶ್ರೀಮದಾಚಾರ್ಯರ ಮಾತು ಸಾವಿರ ಸಾವಿರ ಬಗೆಯಲ್ಲಿ ತೆರೆಯುವಂತಾದ್ದು. ನಾವ್ಯಾರು! ವ್ಯಾಖ್ಯಾನಮಾಡಲು**" ಇದು ತ್ರಿವಿಕ್ರಮರ ಉದ್ಗಾರ. ಶ್ರೀಪದ್ಮನಾಭ ಭಟ್ಟಾರಕರ ಬಲಮುರಿಶಂಖದ ಉದಾಹರಣೆಯಂತೂ ಆಚಾರ್ಯರ ಭಾಷ್ಯಕ್ಕೆ ಅತ್ಯಂತ ಸುಸಂಗತ.

ಶ್ರೀಮಜ್ಜಯತೀರ್ಥರು - **ವ್ಯಾಖ್ಯಾನಕರ್ಮಣಿ ಸುರಾಃ ಹ್ಯಧಿಕಾರಿಣಃ** ಸಾವಿರ ಅರ್ಥದ ಈ ಕೃತಿಗೆ ಸಾವಿರಮುಖದ ದೇವರುಗಳೇ ವ್ಯಾಖ್ಯಾನ ಮಾಡಬೇಕಷ್ಟೇ! ಎಂದು ಉದ್ಗರಿಸಿದ್ದುಂಟು.

ವಾಯುದೇವರು ಆಖಣಾಶ್ಮರು. ಅವರ ದೇಹ-ಸ್ವರೂಪ-ಜ್ಞಾನ ಒಂದೊಂದು ಅಚ್ಛೇದ್ಯಾಭೇದ್ಯ. ಇಂತಹ ವಾಯುದೇವರ ಅವತಾರ ಶ್ರೀಮಧ್ವಾಚಾರ್ಯರು. ವಾಯುದೇವರಂತೆ ಇವರೂ ವಜ್ರಕಾಯರೇ. ಆಚಾರ್ಯರ ಭಾಷ್ಯಾದಿ ಗ್ರಂಥಗಳು ಅಷ್ಟೇ **ರೂಪಮನ್ಯದಿವ ಧನ್ಯಮಾತ್ಮನಃ** ಆಚಾರ್ಯರ ಸ್ವರೂಪದಂತೆ ಶ್ರೀಮದ್ಭಭಾಷ್ಯವೂ ಅಚ್ಛೇದ್ಯಾಭೇದ್ಯವೇ ಸರಿ. **ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ....** ಶ್ರೀಮದಾಚಾರ್ಯರ ಭಾಷ್ಯದ ಅಧ್ಯಯನವು ದುಃಖದ ಬಿಡುಗಡೆ - ಆನಂದದ ಅನುಭವ ಇಂತಹ ಮುಕ್ತಿಗೂ ಕಾರಣ.

ಇಂತಹ ಸುಂದರ ಭಾಷ್ಯ ಕಬ್ಬಿಣದ ಕಡಲೆ. ಪಾಮರರಿಗೂ ಎಟುಕಬೇಕೆಂಬ ಹೆಬ್ಬಯಕೆಯಿಂದ ಸಮುದ್ರವನ್ನು ದಾಟುವ-ದಾಟಿಸುವ ಸಾಹಸ ಮೊಟ್ಟಮೊದಲು ಮಾಡಿದ ಕೀರ್ತಿ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳದ್ದು. ಸಮಸ್ತ ಸರ್ವಮೂಲ ಗ್ರಂಥಗಳನ್ನು ತಮ್ಮ ಕನ್ನಡಭಾಷೆಗೆ ಭಾಷಾಂತರಿಸಿದ "ಅಗ್ರಹಾರದ" ಕೀರ್ತಿ ಶ್ರೀನಾರಾಯಣತಂತ್ರಿಗಳದ್ದು. ಸದಾಚಾರ ಸಂಪನ್ನರೂ-ಸದನುಷ್ಠಾನ ನಿಷ್ಠರೂ-ಪೀಠಾಧಿಪತಿಗಳಿಗೂ ಪಾಠಹೇಳಿದ ಕೀರ್ತಿ ಈ ತಂತ್ರಿಗಳದ್ದು. ಅವರನ್ನು ಹೃದಯತುಂಬಿ ಅಭಿನಂದಿಸಬೇಕು.

ಅವರ ಸುಪುತ್ರರಾದ ಶ್ರೀ ಅಗ್ರಹಾರ ರಘುಪತಿ ತಂತ್ರಿಗಳು ತಂದೆಯ ಜಾಡಿನಲ್ಲಿ ಸಾಗಿ ನಿರಂತರ ಕ್ರಿಯಾಶೀಲರಾಗಿದ್ದು ತಮ್ಮನ್ನು ಸಮಾಜಕ್ಕೆ ಸಮರ್ಪಿಸಿಕೊಂಡ ಪುಣ್ಯಾತ್ಮರು. ಅವರ ಶಾಸ್ತ್ರದೀಕ್ಷೆ ಯಿಂದಾಗಿ ಪಿತೃಪಾದರು ರಚಿಸಿದ ಕನ್ನಡ ಅನುವಾದದ ಸರ್ವಮೂಲಗ್ರಂಥಗಳ ಪುನರ್ಮುದ್ರಣ ನಡೆಯುತ್ತಿದೆ. ಅವರನ್ನು ಹರಿ-ಗುರುಗಳು ಹರಸಲಿ.

ಮಾಧ್ವಸಿದ್ಧಾಂತದ ದಿಗ್ಗಜರೆನಿಸಿದ ಜ್ಞಾನವೃದ್ಧರಾದ ನಮ್ಮ ಗುರುಗಳೂ ಆದ ಶ್ರೀ ವಿದ್ಯಾಮಾನ್ಯತೀರ್ಥರ ಆರಾಧನಾ ಪರ್ವಸಂದರ್ಭದಲ್ಲಿ ಮಧ್ವಸಿದ್ಧಾಂತದ ಪ್ರಚಾರಕ್ಕಾಗಿಯೇ ಗುರುಗಳಿಂದ ಸ್ಥಾಪಿತವಾದ, ಶ್ರೀ ಪಲಿಮಾರುಮಠದ ತತ್ತ್ವಸಂಶೋಧನ ಸಂಸತ್ ಎಂಬ ಸಂಸ್ಥೆಯಿಂದ ಪ್ರಕಾಶನಗೊಳ್ಳುತ್ತಿರುವುದು ಯೋಗಾಯೋಗವೇ ಸರಿ. ಈ ಕೃತಿಗಳ ಪ್ರಯೋಜನ ಸಮಾಜಕ್ಕೆ ಆಗಲೆಂದು ಗುರುಗಳ ಅಂತರ್ಯಾಮಿ ಶ್ರೀರಾಮ-ಕೃಷ್ಣ-ವೇದವ್ಯಾಸರಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳು.

**ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾ ಸಂಸ್ಥಾನ
ಶ್ರೀಪಲಿಮಾರು ಮಠ
**ಉಡುಪಿ**

# ಶ್ರೀಮದ್ ಬ್ರಹ್ಮಸೂತ್ರಭಾಷ್ಯವು

## ಉಪೋದ್ಘಾತ

**ಸತ್ಯಂ ಸತ್ಯಂ ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಮ್ ॥**

**(ಶ್ರೀಮಹಾಭಾರತ)**

(೧) ಲೋಕದಲ್ಲಿ ಹುಟ್ಟಿರುವ ಎಲ್ಲಾ ಪ್ರಾಣಿಗಳಿಗೂ ತಮಗೆ ಸುಖವೇ ಆಗಬೇಕು, ದುಃಖ ಲೇಶವೂ ಆಗಬಾರದೆಂಬ ಆಶೆಯು ಇದೆ. ಹೀಗೆ ಎಲ್ಲ ಜನರೂ ಬಯಸುವ ದುಃಖಮಿಶ್ರಣವಿಲ್ಲದಿರುವ ಸುಖವೆಂಬುದೇ ಮೋಕ್ಷವು. ಅಂದರೆ ಸಂಪೂರ್ಣ ದುಃಖನಿವೃತ್ತಿಯಾಗಿ ಜೀವರ ಸ್ವರೂಪವೇ ಆದ ಆನಂದದ ಪ್ರಾಪ್ತಿಯು. ಇಂತಹ ಮೋಕ್ಷವನ್ನು ನಾವು ಹೇಗೆ ಹೊಂದುವುದು, ಅದಕ್ಕೆ ಉಪಾಯವೇನು? ಎಂತ ವಿಚಾರ ಮಾಡಿದರೆ "**ಪರೋಕ್ಷಜ್ಞಾನರೂಪಾತ್ತು ಸದಾ ಧ್ಯಾನಾತ್ಮಸನ್ನಧೀಃ । ಅಪಸಾರ್ಯನಿರೋಧಂ ತಂ ಸ್ವಾತ್ಮಾನಂ ದರ್ಶಯೇತ್ಪ್ರಭುಃ**" ॥ ಎಂಬ ಶ್ರೀಮದ್ವಾದಿರಾಜ ಶ್ರೀಮಚ್ಚರಣಕೃತಯುಕ್ತಿಮಲ್ಲಿಕೆಯ ವಚನದಂತೆ ಶಾಸ್ತ್ರಶ್ರವಣಾದಿಗಳಿಂದುಂಟಾದ ಪರೋಕ್ಷಜ್ಞಾನ ಪೂರ್ವಕಧ್ಯಾನದಿಂದ ಪ್ರಸನ್ನನಾದ ಶ್ರೀಪರಮಾತ್ಮನೇ ಬಂಧವಿಮೋಚನೆಯನ್ನು ಮಾಡಿ ಮೋಕ್ಷವನ್ನು ಕೊಡುವನು. ಆದರೆ ಈಗ ನಾವು ಸಂಸಾರರೂಪವಾದ ಅನೇಕ ವಿಧ ಬಂಧಕ್ಕೆ ಒಳಗಾಗಿ ಅಪಾರವಾದ ದುಃಖಮಯವಾದ ಸಂಸಾರಸಾಗರದಲ್ಲಿ ನರಳುತ್ತಿದ್ದೇವೆ. ಘೋರಾರಣ್ಯದಲ್ಲಿ ಕಣ್ಣುಕಟ್ಟಿ ಬಿಟ್ಟ ಜನರಂತೆ ದುಃಖಿಸುತ್ತಿದ್ದೇವೆ. ನಾವು ಯಾರು? ಎಲ್ಲಿಂದ ಬಂದವರು? ಮುಂದಕ್ಕೆ ನಾವು ಎಲ್ಲಿಗೆ ಹೋಗುವವರು? ಏಕೆ ನಾವು ಈಗ ದುಃಖಸಾಗರದಲ್ಲಿ ಬಿದ್ದಿರುತ್ತೇವೆ. ನಮ್ಮನ್ನು ಈ ದುಃಖಸಾಗರದಿಂದ ಪಾರಗಾಣಿಸುವವರು ಯಾರು? ವಿಷಯವೊಂದನ್ನು ನಾವು ತಿಳಿಯಲಾರೆವು. ಇವುಗಳನ್ನೆಲ್ಲ ಸರಿಯಾಗಿ ವೇದಾದಿಶಾಸ್ತ್ರಗಳಿಂದ ವಿಚಾರಮಾಡಿ ತಿಳಿದುಕೊಂಡು ಆ ದುಃಖಪರಿಹಾರಕ್ಕೆ ಉಪಾಯವನ್ನು ಕಂಡುಕೊಳ್ಳಬಹುದು. ಆದರೆ ಆ ವೇದಾದಿಶಾಸ್ತ್ರಗಳು ಅನಂತವಾಗಿದ್ದು ತುದಿಮೊದಲು ಕಾಣದಂತಾಗಿವೆ. ಈ ತರವಾದ ಅಪಾರವೇದಾದಿಶಾಸ್ತ್ರಗಳನ್ನು ವಿಚಾರ ಮಾಡುವರೆ ಮನುಷ್ಯನಿಗೆ ಆಯುಷ್ಯವು ಸಾಲದೆಂಬುದು ತಿಳಿದ ವಿಷಯವು. ಅಂತಹ ವೇದಾದಿಶಾಸ್ತ್ರಗಳು ದ್ವಾಪರಯುಗದಲ್ಲಿ ಅಪಪಾಠಾದಿಗಳಿಂದ ನಷ್ಟಪ್ರಾಯಗಳಾಗಿದ್ದುದರಿಂದ ದೇವತೆಗಳಿಗೂ, ಋಷಿಗಳಿಗೂ, ಸಜ್ಜನರಿಗೂ ತತ್ತ್ವಜ್ಞಾನವಿಷಯದಲ್ಲಿ ಸಂದೇಹವೂ, ಭ್ರಾಂತಿಯೂ ಉಂಟಾಯಿತು. ಆಗ ಬ್ರಹ್ಮರುದ್ರಾದಿ ದೇವತೆಗಳು ಕೃಪೆಯಿಂದ ಸಜ್ಜನರನ್ನುದ್ಧರಿಸಬೇಕೆಂದು ಕ್ಷೀರಾಬ್ಧಿಶಾಯಿಯಾದ ಶ್ರೀಪರಮಾತ್ಮನನ್ನು ಪ್ರಾರ್ಥಿಸಿದರು. ದಯಾಳುವಾದ ಶ್ರೀಮನ್ನಾರಾಯಣದೇವರು ವೇದವ್ಯಾಸರೂಪದಿಂದ ವೈವಸ್ವತಮನ್ವಂತರದ ೨೮ನೇ ದ್ವಾಪರಯುಗದಲ್ಲಿ ಅವತರಿಸಿ ವೇದಗಳನ್ನುದ್ಧರಿಸಿ ವಿಭಾಗ ಮಾಡಿದರು. **ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ।** ಎಂಬಂತೆ ವೇದವ್ಯಾಸದೇವರು ಕಲಿಯುಗದ ಜನರಲ್ಲಿ ಜ್ಞಾನ-ಶಕ್ತಿಗಳು ಸ್ವಲ್ಪವಾದುದರಿಂದ ಅವರಿಗೆ ಸಂಪೂರ್ಣ

ತಿಳಿಯಲು ಅಸಾಧ್ಯವೆಂದರಿತು ಅಂತಹವರಿಗಾಗಿ ಋಗ್ವೇದವನ್ನು ೨೪ ಪ್ರಕಾರವಾಗಿಯೂ, ಯಜುರ್ವೇದವನ್ನು ೧೦೧ ಪ್ರಕಾರವಾಗಿಯೂ, ಸಾಮವೇದವನ್ನು ೧೦೦೦ ಪ್ರಕಾರವಾಗಿಯೂ, ಅಥರ್ವಣವೇದವನ್ನು ೧೨ ಪ್ರಕಾರವಾಗಿಯೂ ವಿಭಾಗ ಮಾಡಿದರು. ಆ ವೇದಗಳ ಅರ್ಥಗಳನ್ನು ನಿರ್ಣಯಿಸುವುದಕ್ಕಾಗಿ ಬ್ರಹ್ಮಸೂತ್ರಗಳನ್ನು (ಅಂದರೆ ಸರ್ವವೇದಗಳ ಅರ್ಥಗಳನ್ನೂ ಪರಬ್ರಹ್ಮಸ್ವರೂಪವನ್ನೂ ನಿರ್ಣಯಿಸಿಕೊಡತಕ್ಕ ಸೂತ್ರಗಳನ್ನು) ನಿರ್ಮಿಸಿದರು. ಆದುದರಿಂದಲೇ ೧ ಪರವಿದ್ಯೆ ೨ ಅಪರವಿದ್ಯೆ ಎನ್ನುವ ಎರಡು ವಿದ್ಯೆಗಳಲ್ಲಿ ಈ ಬ್ರಹ್ಮಸೂತ್ರಗಳು ಸರ್ವದಾ ಸರ್ವೋತ್ತಮನಾದ ಶ್ರೀಪರಮಾತ್ಮನ ಗುಣಗಳನ್ನೇ ಬೋಧಿಸತಕ್ಕವುಗಳಾದುದರಿಂದ ಪರವಿದ್ಯೆಯೆಂದೇ ಅನ್ನಿಸಿಕೊಳ್ಳುತ್ತವೆ. ಉಳಿದ ಎಲ್ಲಾ ವಿದ್ಯೆಯು ಅಪರವಿದ್ಯೆಯೆನ್ನಿಸುತ್ತದೆ. ಆದಕಾರಣ ಬ್ರಹ್ಮಸೂತ್ರಗಳಿಗೆ ಸಮಾನವಾದ ವಿದ್ಯೆಯು ಬೇರೆ ಯಾವದೂ ಇಲ್ಲ. ಅಲ್ಲದೆ ನ ಋತೇ ತ್ವತ್ಕ್ರಿಯತೇ ಇತ್ಯಾದಿ ವೇದಗಳಲ್ಲಿ ಹೇಳಿದ ಪ್ರಕಾರ ಒಂದು ಕಡ್ಡಿಯೂ ಕೂಡ ಶ್ರೀಹರಿಯನ್ನು ಬಿಟ್ಟು ಅಲ್ಲಾಡುವುದಿಲ್ಲ. ಸರ್ವವೂ ಅವನಿಂದಲೇ ಹುಟ್ಟಿದ್ದು, ಸ್ಥಿತಿ ಸಂಹಾರಾದಿಗಳೂ ಅವನಿಂದಲೇ ಆಗುವವು. ಅವನೇ ಸರ್ವಕರ್ತನು, ಸರ್ವಶಕ್ತನು. ಸರ್ವಜ್ಞನು, ಸರ್ವಜಗತ್ತೂ ಶ್ರೀಹರಿಯ ಅಧೀನವೇ. ಜಗತ್ತಿನಲ್ಲಿ ಸೇರಿದ ನಾವು ಕೂಡ ಶ್ರೀಹರಿಯ ಅಧೀನರೇ ಇತ್ಯಾದಿ ಅಪಾರ ಮಹಿಮೆಯನ್ನೂ ಸಕಲ ಸಿದ್ಧಾಂತತತ್ತ್ವಗಳನ್ನೂ ಬೋಧಿಸುತ್ತಾ ಸರ್ವಶಾಸ್ತ್ರಾರ್ಥಗಳನ್ನು ನಿರ್ಣಯಿಸಿಕೊಡತಕ್ಕವುಗಳಾದುದರಿಂದ ಈ ಬ್ರಹ್ಮಸೂತ್ರಗಳು ಸರ್ವೋತ್ಕೃಷ್ಟ ಪ್ರಮಾಣಗಳಾಗಿವೆ.

(೨) ಈ ಬ್ರಹ್ಮಸೂತ್ರಗಳಿಗೆ "ಭಾರತೀವಿಜಯ ಸಂವಿದಾನಂದ" ಮೊದಲಾದವರು ೨೧ ಮಂದಿ ಭಾಷ್ಯಕಾರರು ೨೧ ಭಾಷ್ಯಗಳನ್ನು ರಚಿಸಿದ್ದರೂ ಅವುಗಳೆಲ್ಲವೂ ಸರ್ವಪ್ರಮಾಣ ವಿರುದ್ಧಗಳಾಗಿವೆ. ಆದಕಾರಣ ಈ ದುರ್ಭಾಷ್ಯ ಸಮೂಹಗಳಿಂದಲೂ ಕಾಲಬಲದಿಂದಲೂ ಸಜ್ಜನರು ತತ್ತ್ವಜ್ಞಾನವಿರಹಿತರಾಗಿ ಸನ್ಮಾರ್ಗದಿಂದ ಭ್ರಷ್ಟರಾಗುತ್ತಿರಲು ಬ್ರಹ್ಮರುದ್ರಾದಿದೇವತೆಗಳಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟ ಶ್ರೀಹರಿಯ ಆಜ್ಞಾನುಸಾರ ಮುಖ್ಯಪ್ರಾಣದೇವರು ಶ್ರೀಮಧ್ವರೂಪದಿಂದ ಅವತರಿಸಿ **"ಏಕವಿಂಶತಿಕುಭಾಷ್ಯದೂಷಕಂ ಬ್ರಹ್ಮಸೂತ್ರಗಣಭಾಷ್ಯಮದ್ಭುತಂ"** ಎಂದು ಸುಮಧ್ವವಿಜಯದಲ್ಲಿ ಹೇಳಿದ ಪ್ರಕಾರ ೨೧ ದುರ್ಭಾಷ್ಯಗಳನ್ನು ಸಯುಕ್ತಿಕವಾಗಿ ಶ್ರುತಿಸ್ಮೃತ್ಯಾದಿ ಪ್ರಮಾಣಗಳಿಂದ ಖಂಡಿಸತಕ್ಕ ಶ್ರೀಮದ್ಬ್ರಹ್ಮಸೂತ್ರಭಾಷ್ಯವನ್ನು ನಿರ್ಮಿಸಿದರು.

(೩.) ಈ ಬ್ರಹ್ಮಸೂತ್ರಭಾಷ್ಯಕ್ಕೆ ೧ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯಕೃತ ತತ್ತ್ವಪ್ರದೀಪ, ೨ ಶ್ರೀ ನಾರಾಯಣ ಪಂಡಿತಾಚಾರ್ಯಕೃತ ಸತ್ತರ್ಕದೀಪಾವಳೀ, ೩. ಶ್ರೀಜಯತೀರ್ಥಶ್ರೀಮಚ್ಚರಣಕೃತ ತತ್ವಪ್ರಕಾಶಿಕಾ ಹೀಗೆ ಮೂರು ವ್ಯಾಖ್ಯಾನಗಳು ಇವೆ. ಅವುಗಳಲ್ಲಿ ತತ್ತ್ವಪ್ರಕಾಶಿಕಾಕ್ಕೆ ಶ್ರೀರಾಘವೇಂದ್ರ ಯತಿ ಕೃತ ಭಾಷ್ಯಟೀಕಾಭಾವದೀಪ. ಶರ್ಕರಾ, **ಸೂತ್ರೇ ಭಾಷ್ಯೇऽನುಭಾಷ್ಯೇ ಚ ಸನ್ನ್ಯಾಯ ವಿವೃತೌ ತಥಾ । ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ॥** ಎಂದು ಹೇಳಿದ ತಾತ್ಪರ್ಯಚಂದ್ರಿಕಾ ಮೊದಲಾದ ಅನೇಕ ವ್ಯಾಖ್ಯಾನಗಳು ಪ್ರಸಿದ್ಧಗಳಾಗಿವೆ. ಈ ಭಾಷ್ಯವು **ಬಾಲಸಂಘಮಪಿ ಬೋಧಯದ್ವಶಂ ದುರ್ನಿರೂಪವಚನಂ ಚ ಪಂಡಿತೈಃ** ಎಂದು ಶ್ರೀನಾರಾಯಣ ಪಂಡಿತಾಚಾರ್ಯರು ಸುಮಧ್ವವಿಜಯದಲ್ಲಿ ಹೇಳಿದಂತೆಯೇ ಸುಲಲಿತವಾಗಿರುವದರಿಂದ ಅಜ್ಞರಿಗೂ ಸಾಮಾನ್ಯವಾಗಿ

ತಿಳಿಯುವಂತೆಯೂ, ಅರ್ಥಗಾಂಭೀರ್ಯವಿದ್ದುದರಿಂದ ಸುಜ್ಞರಿಗೂ ವಿಚಾರಮಾಡಿದಷ್ಟು ಅತ್ಯಧಿಕ ಅನೇಕಾರ್ಥಭರಿತವಾಗಿರುವದರಿಂದ ಮತ್ತಷ್ಟು ವಿಶೇಷವಾದ ಅರ್ಥವುಳ್ಳದ್ದಾಗಿ ತಿಳಿಯುವಂತೆಯೂ ಇರತಕ್ಕುದು. ಆದುದರಿಂದ **ಭಾಷ್ಯಂ ಚಾತ್ಯರ್ಥವಿಸ್ತರಂ** ಎಂದು ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿಯೂ **ಸಹಸ್ರಾರ್ಥಸ್ಯ ಭಾಷ್ಯಸ್ಯ ಪ್ರಸನ್ನಾಃ ಸಂತು ಸದ್ಗುಣಾಃ** ಎಂದು ತ್ರಿವಿಕ್ರಮಪಂಡಿತಾಚಾರ್ಯರು ತತ್ತ್ವಪ್ರದೀಪದಲ್ಲಿಯೂ ಭಾಷ್ಯಕ್ಕೆ ಸಾವಿರಾರು ಅರ್ಥಗಳು ಇವೆ ಎಂದು ಹೇಳಿರುವರು.

(೪) ಈ ಬ್ರಹ್ಮಸೂತ್ರಭಾಷ್ಯದಲ್ಲಿ ೪ ಅಧ್ಯಾಯಗಳು ಇವೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ನಾಲ್ಕು ನಾಲ್ಕು ಪಾದಗಳು ಇವೆ. ನಾಲ್ಕು ಅಧ್ಯಾಯಗಳಲ್ಲಿ ೧ನೇ ಸಮನ್ವಯಾಧ್ಯಾಯದಲ್ಲಿ ವೇದಗಳಲ್ಲಿರತಕ್ಕ ಎಲ್ಲಾ ಶಬ್ದಗಳೂ ಪರಬ್ರಹ್ಮನನ್ನೇ ಮುಖ್ಯತಃ ಬೋಧಿಸುತ್ತವೆ ಎಂದೂ, ಅದರಲ್ಲಿ೧ನೇ ನಾಮಪಾದದಲ್ಲಿ ವಿಷ್ಣುವಿನಿಂದ ಇತರತ್ರ ಪ್ರಸಿದ್ಧಗಳಾದ ಆಕಾಶ ಪ್ರಾಣ ಮೊದಲಾದ ಶಬ್ದಗಳಿಂದ ಶ್ರೀಹರಿಯೇ ಮುಖ್ಯವಾಚ್ಯನೆಂದೂ ೨ನೇ ಲಿಂಗ (ಧರ್ಮದ್ವಾರಾ ಧರ್ಮಿಬೋಧಕ) ಪಾದದಲ್ಲಿ ಶ್ರೀಹರಿಯಿಂದ ಅನ್ಯತ್ರಪ್ರಸಿದ್ಧಗಳಾದ ಲಿಂಗಾತ್ಮಕಗಳಾದ ಸರ್ವಗತತ್ವ, ಅತ್ತೃತ್ವ ಮೊದಲಾದ ಧರ್ಮಗಳಿಂದ ಕೂಡಿದ ಧರ್ಮಿವಾಚಕ ಶಬ್ದಗಳಿಂದ ಮುಖ್ಯವಾಚ್ಯನು ಎಂದೂ, ೩.ನೇ ನಾಮಲಿಂಗಪಾದದಲ್ಲಿ ಉಭಯತ್ರ (ವಿಷ್ಣುವಿನಲ್ಲಿಯೂ, ರುದ್ರಾದಿಗಳಲ್ಲಿಯೂ) ಶ್ರುತಿ ಲಿಂಗಾದಿಗಳಿಂದ ಪ್ರಸಿದ್ಧಗಳಾದ ಲಿಂಗಾತ್ಮಕಗಳಾದ ದ್ಯುಭ್ವಾದ್ಯಾಯತನತ್ವ ಮೊದಲಾದ ಶಬ್ದಗಳಿಗೂ ನಾಮಾತ್ಮಕಗಳಾದ ಭೂಮಾದಿಶಬ್ದಗಳಿಗೂ ಶ್ರೀಹರಿಯಲ್ಲಿಯೇ ಸಮನ್ವಯವೆಂದೂ, ೪ನೇ ನಾಮಲಿಂಗಪಾದದಲ್ಲಿ ಜೀವಾದಿಗಳಲ್ಲಿಯೇ ಪ್ರಸಿದ್ಧಗಳಾದ ದುಃಖಿ, ಬದ್ಧ ಅಭಾವ, ಅಸತ್, ಶೂನ್ಯ ಮೊದಲಾದ ಶಬ್ದಗಳಿಂದಲೂ ಶ್ರೀಹರಿಯೇ ಮುಖ್ಯವಾಚ್ಯನೆಂದೂ ಅಂತು ೧ನೇ ಅಧ್ಯಾಯದಲ್ಲಿ ವೇದಗಳಲ್ಲಿರತಕ್ಕ ಸ್ವರ, ವರ್ಣ, ಪದ, ವಾಕ್ಯ, ಮಹಾವಾಕ್ಯರೂಪಗಳಾದ ಅಪರ್ಯಾಯ ಅನಂತಾನಂತ ಶಬ್ದಗಳಿಂದ ಮುಖ್ಯವಾಗಿ ಸರ್ವಗುಣಪರಿಪೂರ್ಣನಾದ ಶ್ರೀಹರಿಯೇ ಮುಖ್ಯವಾಚ್ಯನೆಂದು ಸಮರ್ಥಿತವಾಗಿದೆ.

(೫) ೨ನೇ ಅವಿರೋಧಾಧ್ಯಾಯದಲ್ಲಿ ಶ್ರೀಹರಿಯು ಸರ್ವಗುಣಪರಿಪೂರ್ಣನು ಇತ್ಯಾದಿಗಳಿಗೆ ಯುಕ್ತಿಸಮಯಾದಿಗಳಿಂದ ವಿರೋಧವಿಲ್ಲವೆಂದೂ ಅದರಲ್ಲಿ ೧ನೇ ಯುಕ್ತಿ ಪಾದದಲ್ಲಿ ರುದ್ರಾದಿಗಳಿಗೆ ಜಗತ್ಕರ್ತೃತ್ವಾದಿಗಳನ್ನು ಪ್ರತಿಪಾದಿಸತಕ್ಕ ಶೈವಾಗಮ ಸಾಂಖ್ಯ ಮೊದಲಾದ ಸ್ಮೃತಿಗಳಿಂದೊಡಗೂಡಿದ ಅನುಮಾನಗಳಿಂದ ವಿರೋಧವಿಲ್ಲವೆಂದೂ, ೨ನೇ ಸಮಯಪಾದದಲ್ಲಿ ಕಪಿಲ ಕಣಾದ ಸಾಂಖ್ಯ ಚಾರ್ವಾಕ, ವೈಶೇಷಿಕ ಮೊದಲಾದ ಸಮಯಗಳಿಂದ ವಿರೋಧವಿಲ್ಲವೆಂದುಪಪಾದಿಸಿ, ಆ ದುರ್ಮತಗಳು ಅಗ್ರಾಹ್ಯಗಳೆಂದೂ ಪ್ರತಿಪಾದಿತಗಳಾಗಿವೆ. ೩.ನೇ ಶ್ರುತಿಪಾದದಲ್ಲಿ ಜೀವ ಪರಮಾತ್ಮಾದಿ ಗಳನ್ನು ವಿಷಯೀಕರಿಸಿಕೊಂಡಿರುವ ಶ್ರುತಿಗಳ ವಿಷಯದಲ್ಲಿ ಬರತಕ್ಕ ಪರಸ್ಪರ ವಿರೋಧವೂ, ೪ನೇ ನ್ಯಾಯೋಪೇತ ಶ್ರುತಿಪಾದದಲ್ಲಿ ಪ್ರಬಲ ಯುಕ್ತಿಗಳಿಂದ ಕೂಡಿದ ಅಧ್ಯಾತ್ಮವಿಷಯಕಶ್ರುತಿಗಳಿಂದ ವಿರೋಧವೂ ಪರಿಹೃತವಾಗಿದೆ.

(೬) ೩ನೇ ಸಾಧನಾಧ್ಯಾಯದಲ್ಲಿ ಮೋಕ್ಷಕ್ಕೆ ಸಾಧನಗಳಾದ ವೈರಾಗ್ಯಾದಿಗಳ ವಿಚಾರ, ಅದರಲ್ಲಿ ೧ನೇ ವೈರಾಗ್ಯಪಾದದಲ್ಲಿ ಸ್ವರ್ಗಕ್ಕೆ ಹೋಗುವುದು, ಸ್ವರ್ಗದಿಂದ ಭೂಮಿಗೆ ಬರುವುದು. ನರಕ, ಗರ್ಭವಾಸ ಮೊದಲಾದವುಗಳೆಲ್ಲವೂ ದುಃಖರೂಪಗಳಾಗಿರುವುದರಿಂದ ಎಲ್ಲಾ ವಿಷಯಗಳಲ್ಲಿಯೂ ವಿರಕ್ತಿಯನ್ನು ಹೊಂದಿ ಪರಬ್ರಹ್ಮನಲ್ಲಿಯೇ ಮನಸ್ಸನ್ನು ಇಡಬೇಕೆಂದೂ, ೨ನೇ ಭಕ್ತಿ ಪಾದದಲ್ಲಿ ಶ್ರೀಹರಿಯಲ್ಲಿ ಭಕ್ತಿಯು ಹುಟ್ಟುವುದಕ್ಕಾಗಿ ಭಗವಂತನ ಮಾಹಾತ್ಮ್ಯವೂ ಹೇಳಲ್ಪಟ್ಟಿದೆ. ಭಕ್ತಿಯೆಂದರೆ- ಧನ ಧಾನ್ಯ, ಪುತ್ರ, ಮಿತ್ರ, ಕಳತ್ರ, ಮಂದಿರ ಮೊದಲಾದವುಗಳಲ್ಲಿ ಇರುವುದಕ್ಕಿಂತಲೂ ಸಹಸ್ರಾಧಿಕವಾದ ನಿರಂತರ ಸ್ನೇಹಪ್ರವಾಹವು. ೩ನೇ ಉಪಾಸನಾಪಾದದಲ್ಲಿ ಧ್ಯಾನರೂಪ ಉಪಾಸನೆಗೆ ಅಂಗಭೂತನಾದ ಸಮಸ್ತ ಸಚ್ಛಾಸ್ತ್ರ ಶ್ರವಣ ಮನನರೂಪ ಶಾಸ್ತ್ರಾಭ್ಯಾಸರೂಪವಾದ ಉಪಾಸನವೂ, ೪ನೇ ಜ್ಞಾನಪಾದದಲ್ಲಿ ಶ್ರೀಹರಿಯ ಅಪರೋಕ್ಷಜ್ಞಾನವು ಮೋಕ್ಷ ಮೊದಲಾದ ಸರ್ವಪುರುಷಾರ್ಥಗಳಿಗೂ, ಸಾಧನವೆಂದೂ ಪ್ರತಿಪಾದಿತವಾಗಿದೆ.

(೭) ೪ನೇ ಫಲಾಧ್ಯಾಯದಲ್ಲಿ ವೈರಾಗ್ಯಾದಿ ಸಾಧನಗಳಿಂದ ಸಾಧ್ಯವಾದ, ಪರಬ್ರಹ್ಮನ ಅಪರೋಕ್ಷಜ್ಞಾನಕ್ಕೆ ಫಲವಾದ ಮೋಕ್ಷದ ಸ್ವರೂಪವೂ ಅದರಲ್ಲಿ ೧ನೇ ಕರ್ಮಕ್ಷಯ ಪಾದದಲ್ಲಿ ಪರಬ್ರಹ್ಮನ ದರ್ಶನಕಾಲದಲ್ಲಿರತಕ್ಕ ಸಂಚಿತಕರ್ಮಗಳಿಗೆ ನಾಶವಾಗುತ್ತದೆಂದೂ, ೨ನೇ ಉತ್ಕ್ರಾಂತಿ ಪಾದದಲ್ಲಿ ದೇವತೆಗಳಿಗೆ ತಮ್ಮಿಂದುತ್ತಮರಾದ ದೇವತೆಗಳಲ್ಲಿ ಪ್ರವೇಶದಿಂದ ಅಲ್ಲಿ ದೇಹನಾಶದಿಂದ ಮೋಕ್ಷವೆಂದೂ, ಜ್ಞಾನಿಮನುಷ್ಯರಿಗೆ ಶಿರಸ್ಸಿನಲ್ಲಿರತಕ್ಕ ಬ್ರಹ್ಮನಾಡೀದ್ವಾರಾ ಶರೀರದಿಂದುತ್ಕ್ರಮಣ (ಹೊರಟು ಹೋಗುವಿಕೆ)ವೆಂದೂ, ೩ನೇ ಮಾರ್ಗಪಾದದಲ್ಲಿ ಅರ್ಚಿರಾದಿಮಾರ್ಗದಿಂದ ಹೋದ ಜ್ಞಾನಿಮನುಷ್ಯರಿಗೆ ಪ್ರಥಮತಃ ಚತುರ್ಮುಖಬ್ರಹ್ಮಪ್ರಾಪ್ತಿಯೆಂದೂ, ದೇವಾದಿಗಳಿಗೆ ಪರಬ್ರಹ್ಮಪ್ರಾಪ್ತಿಯೆಂದೂ, ೪ನೇ ಭೋಗಪಾದದಲ್ಲಿ ಚತುರ್ಮುಖನಿಂದ ಕೂಡಿಕೊಂಡು ಪರಬ್ರಹ್ಮನನ್ನು ಹೊಂದಿದವರಿಗೆ ಮುಕ್ತಿಯಲ್ಲಿ ಆಗತಕ್ಕ ಆನಂದಾನುಭವವೂ ಸಮರ್ಥಿತವಾಗಿದೆ. ತಥಾಚ **ಶ್ರವಣಂ ಮನನಂ ತಸ್ಮಾದ್ಧ್ಯಾನಂ ಸಾಕ್ಷಾತ್ಕೃತಿರ್ಹರೇಃ । ಭಕ್ತಿಃ ಪ್ರಸಾದ ಇತ್ಯೇತೇ ಮುಕ್ತೇಃ ಸೋಪಾನಪಂಕ್ತಯಃ ॥** ಎಂದು ಯುಕ್ತಿಮಲ್ಲಿಕಾದಲ್ಲಿ ಹೇಳಿರುವಂತೆ ವೈರಾಗ್ಯ ಮನಶ್ಶುದ್ಧ್ಯಾದಿಗಳು, ಶಾಸ್ತ್ರಶ್ರವಣ, ಮನನ, ಧ್ಯಾನರೂಪಉಪಾಸನಾ, ಮಾಹಾತ್ಮ್ಯಜ್ಞಾನಪೂರ್ವಕಸುದೃಢಸ್ನೇಹ, ಸಾಕ್ಷಾತ್ಕಾರ, ಶ್ರೀದೇವರ ಪ್ರಸಾದ ಇವುಗಳು, ಸರ್ವರಿಂದಲೂ ಅಪೇಕ್ಷಿತವಾದ ಮೋಕ್ಷರೂಪ ಮಹಾಪ್ರಾಸಾದವನ್ನು ಏರಲಿಕ್ಕೆ ಸೋಪಾನತುಲ್ಯವಾಗಿ ಇರುವವುಗಳು. ಆದಕಾರಣ ಈ ದುಃಖಮಯವಾದ ಸಂಸಾರಾರ್ಣವದಲ್ಲಿ ಮುಳುಗಿ ಬಳಲುತ್ತಿರುವ ನಮ್ಮನ್ನು ಪಾರಗಾಣಿಸುವುದಕ್ಕಾಗಿ ಶ್ರೀಮದಾಚಾರ್ಯರು ಶ್ರೀಮದ್ಬ್ರಹ್ಮಸೂತ್ರಭಾಷ್ಯವನ್ನು ನಿರ್ಮಾಣಮಾಡಿ ಮೋಕ್ಷಕ್ಕೆ ಸೋಪಾನರೂಪಗಳಾದ ಶ್ರವಣಾದಿಸಾಧನಗಳನ್ನು ಸ್ಪಷ್ಟವಾಗಿ ತೋರಿಸಿ ಕೊಟ್ಟು ಉದ್ಧರಿಸಿ ನಮಗೆ ಮಹೋಪಕಾರವನ್ನು ಮಾಡಿ ನಿರಂತರದಲ್ಲಿಯೂ ಋಣಿಗಳನ್ನಾಗಿ ಮಾಡಿರುತ್ತಾರೆ. ಇಂತಹ ಗುರುವರ ಶ್ರೀಮದಾಚಾರ್ಯರ ಋಣ ಪರಿಹಾರಕ್ಕಾಗಿ ಅವರ ಉಪದೇಶದಂತೆ ನಡೆದು ಅದರಿಂದ ದೊರಕಬಹುದಾದ ಮೋಕ್ಷ ಫಲವನ್ನು ನಾವು ಗಳಿಸುವುದು ಆವಶ್ಯಕವು.

(೮) ಇಂತಹ ಅಮೂಲ್ಯವಾದ ಗ್ರಂಥರತ್ನದ ತತ್ತ್ವಜ್ಞಾನದಿಂದುಂಟಾಗುವ ಐಹಿಕಾಮುಷ್ಮಿಕ ಸಕಲ ಸಂಪತ್ತುಗಳನ್ನು ಎಲ್ಲರೂ ಹೊಂದಬೇಕೆನ್ನುವ ಧ್ಯೇಯದಿಂದಲೇ ಶ್ರೀಮಧ್ವಮುನಿಸೇವಾ ಸಂಘದವರು ತಿಳಿಕನ್ನಡ ಭಾಷೆಯಲ್ಲಿ ನನ್ನ ಮುಖದಿಂದ ಭಾಷಾಂತರೀಕರಿಸಿ ಪ್ರಕಾಶಪಡಿಸಿರುತ್ತಾರೆ. ನಾನು ಶಕ್ಯನುಸಾರ ಮೂಲ ಟೀಕಾ ಟಿಪ್ಪಣಿಗಳನ್ನು ವಿಚಾರ ಮಾಡಿ ಈ ಟೀಕೆಯನ್ನು ಬರೆದಿರುವೆನು. ಆದರೂ ಈ ಟೀಕೆಯಲ್ಲಿ ಯಾವುದಾದರೂ ದೋಷಗಳು ಇದ್ದಲ್ಲಿ ಅವುಗಳನ್ನು ದಯವಿಟ್ಟು ಸೂಚಿಸಿದರೆ ೨ನೇ ಮುದ್ರಣದಲ್ಲಿ ಸರಿಪಡಿಸಲಾಗುವದು. ಆದಪ್ರಯುಕ್ತ ಎಲ್ಲರೂ ಈ ಗ್ರಂಥತತ್ತ್ವಜ್ಞಾನಾಮೃತಪಾನದಿಂದ ಕೃತಾರ್ಥರಾಗಬೇಕು. ಮತ್ತು ಈ ಸಂಘದವರ ಅವಶಿಷ್ಟ ಉದ್ದೇಶ್ಯವೂ ಸಂಪೂರ್ಣ ನೆರವೇರಿಸುವಂತೆ ಶ್ರೀಹರಿವಾಯುಗಳು ಪೂರ್ಣಾನುಗ್ರಹವನ್ನು ಈಯಲಿ ಎಂದು ವಾಚಕ ಮಹನೀಯರೆಲ್ಲರೂ ಶ್ರೀಭಗವಂತನನ್ನು ಪ್ರಾರ್ಥಿಸಬೇಕಾಗಿ ವಿಜ್ಞಾಪಿಸುತ್ತೇನೆ.

ಶ್ರುಣುತಾಮಲಸತ್ಯವಚಃ ಪರಮಂ ಶಪಥೇರಿತಮುಚ್ಛ್ರಿತಬಾಹುಯುಗಮ್ ।
ನ ಹರೇಃ ಪರಮೋ ನ ಹರೇಃ ಸದೃಶಃ ಪರಮಃ ಸ ತು ಸರ್ವಚಿದಾತ್ಮಗಣಾತ್ ॥

(ದ್ವಾದಶ ಸ್ತೋತ್ರಂ)

ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಗಿರಾವರ್ತಯಂತೇ ಸ್ವಶಕ್ತ್ಯಾ ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ ॥

(ಸುಮಧ್ವವಿಜಯ)

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥ (ಭ.೧೮-೬೨)

॥ ಶ್ರೀಕೃಷ್ಣಾರ್ಪಣಮಸ್ತು ॥

# PREFACE TO THE FIRST EDITION

From march 1939, when we last published Anuvyakhyana and Mahabharatha Tatparya Nirnaya, to March 1950 is such a long gap of standstill in the activities of the Sangha as to call for a few words of explanation. The publication of these works had so much drained away our finances that we were almost at the end of our tether. The demand for these books continuing to be rather poor in the succeeding years, the financial position never improved and matters reached a stage when, out of sheer despair, the winding up of the Sangha was at one time seriously contemplated. This was followed by the dire effects of the war in the shape of an acute scarcity and soaring prices of paper and the Pare Control restrictions against free publication of books, all of which prevented any thought of further progress. But in every good cause the very impediments across its path are often transmuted into stepping stones for a further accession of strength. Every year that passed brought new strength to the sinews of the Sangha, so that by the time the sanction of the Government was at last obtained at the end of 1948, the financial position had rallied to such an extent as to permit a move forward. Thus the delay, long and taxing as it has been, has really proved to be a sort of a blessing in disguise.

Sri Madhva's Bhashya or commentary on the Brahma Sutras of Sri Veda Vyasa, who is believed to be an avatar of Sri Narayana Himself, is one of his major works and this translation of that work, which is the 28th work done by the Sangha in the series of his 37 works is indeed another land mark in its career. In translating this great work, which, in the eyes of competent scholars, is the most authoritative and convincing exposition of its kind on the Sutras, no pains have been spared to make the translation as accurate and faithful a mirror of the original as

possible, both in letter and in spirit. The two famous commentaries on this Bhashya, the Tatwa Pradeepa of Sri Trivikrama Panditacharya and the Tatwa Prakashika of Sri Jaya Tirtha, have been freely drawn upon to expound and explain clearly Sri Madhva's views, ideas and concepts regarding Para-Brahman and the relationship between Him and the Jivas, as propounded in the Sutras, and to bring out, wherever necessary, the hidden meaning and import of many difficult words and phrases used by him to connote and convey those ideas and concepts, and by means of a comparative study of the views of the founders of the other Schools of Philosophy, attempts have been made to show how the views and interpretations of Sri Madhva are more logical, more convincing and more in accord with the plain meanings of the texts of the Vedas and the fundamental truths revealed therein. This work must have been of a very exacting nature to the learned translator, Sri A. Narayana Tantri, but undismayed, he has risen to the occasion and executed the task assigned to him with an ability, efficiency, devotion and learning worthy of the cause on hand. For this, the council is deeply grateful to him.

The council is also under a deep debt of gratitude to Professor B. Venkateshachar, the renowned scholar and scientist of Bangalore, for writing a Foreword in English which, by its convincing logic and erudite scholarship makes, within its short compass, a dignified and remarkable vindication of the views and conclusions of Sri Madhva.

To the printers, the Majestic Press, the special thanks of the Council are due for facing the huge task with courage and confidence and despite the handicaps their way, for getting the work through the press with commendable zeal and enthusiasm and within the short span of 8 months, and also for executing the work of printing and binding with neatness and elegance.

In conclusion, in sending out this book, it is the devout hope and prayer of the Council that it will carry its message to all Kannada-knowing people, not conversant with Sanskrit, and by unlocking the doors of the hidden treasure within, for the first time for the benfit of all those amongst them hankering after spiritual development, guide them surely and steadily along the path leading ultimately to the attainment of spiritual perfection or Moksha, which according to the Bhashya, is the Highest Bliss in store for the soul of man.

**OM**

Dated 1st March 1950.

The Council of Sri Madhwa Muni Seva Sangha, Udupi.

# FOREWORD

The present work is a rendering of Sri Madhva's Brahmasutra Bhashya in to Kannada and is intended to help those who are not sufficiently well versed in Sankrit to read and understand the original and its commentaries. In this work of translation the author has freely used the Tattvapradipa of Trivikrama Pandita, and the Tattvaprakashika of Jayatirtha, both commentaries on the Sutra Bhashya.

The propounder of every system of Vedanta has tried to show that his system is the one which Badarayana has taught in the Sutras. How is it, one has to ask, that thinkers like Sri Madhva and Sri Sankara who hold such divergent views on the purport of the Vedas have relied on the same set of Sutras for support? The answer is to be found in the brevity of the Sutras and the consequent necessity of having to understand in their interpretation many a word at the discretion of the commentator. Nevertheless, it is the conviction of the present writer that certain general conclusions can be drawn concerning

(i) The nature of Brahman
(ii) The nature of the soul and its relation to Brahman
(iii) The world and its relation to Brahman and
(iv) The nature of release (Moksha).

Unlike other commentators, Sri Madhva adopts in his Bhashya a method of his own. His words are few and those few are intended to string together the 'Srutis' and 'Smritis' which he profusely quotes in support of his interpretation of the Sutras. In the Bhashya there is not to be found a detailed refutation of the views of others. This is done in a separate work called Anuvyakhyana which is commented on by Jayatirtha in his famous work 'Nyaya-Sudha'. The student who wants to understand the position taken by Madhva in regard to the import

of the Sutras and the religious philosophy he builds on them has to make a careful study of his Bhashya and Anuvyakhyana with the help of the commentaries on them by Jayatirtha.

To Madhva, the Brahma Sutras constitute the highest authority, for in them the divine Badarayana Himself has revealed the true Vedantic doctrine after a critical examination of Vedic texts by applying accepted canons of interpretation. Any one who dispassionately studies the Sutra Bhashya of Sri Madhva, will clearly see how naturally his interpretation emerges from the wording of the Sutras. In his commentary on the Chadogya Upanishad Madhva says:-

''ब्रह्मसूत्रानुसारेण वेदाद्यं सर्वमेव च ।

योज्यं न ब्रह्मसूत्राणि दृश्यमानार्थतोऽन्यथा'' ॥

"All the Vedas and other scriptural texts should be interpreted so as to accord with the Brahma Sutras, but the Sutras should not be constructed in a way different from their plain meaning."

According to Sri Madhva the teaching of the Sutras may be briefly summarized as follows:-

**1. THE NATURE OF BRAHMAN**

Vishnu or Narayana is identical with the Brahman of the first Sutra. He is the Highest Being, completely free from all defects and full of all auspicious qualities. He is all-knowing, all powerful, the very essence of Beauty and the Truth, the fountain head of Mercy. He is the only Independent Being. All else are entirely dependent on Him. Nothing can exist, act or know without Him, in other words His Divine Will sustains all existing entities. He is the creator, preserver and destroyer of the world. To the devotee having no divine knowledge, He gives knowledge; after the devotee realizes Him, He gives him salvation. To the

released soul He gives divine bliss. Such is the Supreme Being, Para-Brahman Narayana.

## 2. THE NATURE OF THE SOUL (JIVA) AND ITS RELATION TO BRAHMAN

Every Jiva is an image of Brahman and is an entity separate from Brahman. For this image there is no upadhi (mirror) other than its own essence (svarupa). The satvic soul resembles Brahman, for knowledge and bliss are its essence. This true nature of the soul is veiled in the state of samsara by ignorance (अविद्या) and the performance of 'pravritti karma'. So in the bound state the soul does not realize its likeness to the Source (Brahman). It should obtain the grace of the Lord who alone could free it from the bondage of samsara. The grace of Narayana can be secured only by steadfast and intense loving devotion to Him (Bhakti). This devotion is perfect only when the supplicant realizes by a study of the sastras His Supreme Glory. The end of all Sastras is to provide the seeker after God with this knowledge.

## 3. THE WORLD AND ITS RELATION TO BRAHMAN

The world is real and not 'maya', an illusory appearance. It is also not like a thing seen in a dream (वैधर्म्याच्च न स्वप्नादिवत्) . Narayana is inside every sentient and insentient thing as its Inner Ruler, guiding and sustaining it.

## 4. THE NATURE OF RELEASE, MOKSHA

In the released state the devotee shines in his own true nature and has direct cognition both of himself and of the God in him. By the grace of Sri Hari who is his Source (Bimba) he enjoys complete bliss according to his capacity and does not again return to samsara. Whatever he wills he realizes, but his will is a reflection of the will of the Lord and always agrees with it.

Now, one would naturally like to ask:- Does all this follow from a plain interpretation of the Sutras? It is not intended in this foreword to enter into an elaborate discussion on this point beyond drawing attention to two works. One of them is the Yuktimallika of Sri Vadiraja. In the Bheda-Saurabha of this work, Vadiraja in a comparative general survey of the sutras, at once convincing and argumentative, shows that the interpretation of Sri Madhva conforms to the wording of the Sutras and is abundantly borne out by scriptural authority. The other is the Tatparya Chandrika of Sri Vyasaraja. This is an exhaustive critical survey of every Sutra. Vyasaraja after discussing the meaning of every adhikarana in the light of Sri Madhva's Bhashya proceeds to examine the interpretations of other commentators and shows how they are untenable. Of Vyasaraja, Das Gupta says in his latest work - ' The logical skill and depth of acute dialectical thinking shown by Vyasatirtha stands almost unrivalled in the whole field of Indian Thought.'

Now it is important to examine how Sri Sankara deals with Badarayana's Brahma Sutras. In the exposition of the first four Sutras Sankara differs from all other commentators including Madhva. He begins his Bhashya with a general introduction which his followers significantly call the Adhyasa Bhashya. Here Sankara states in clear terms what he thinks is the main purport of the Upanishads. Let us now briefly consider how Sankara and Madhva differ in their treatment of the first four Sutras. According to Sankara the Self (Atman) is immediately known as the object of the cognition (or concept) 'I' (Aham). He wants to convey by this that the Brahman introduced by the Sutrakara in the first Sutra is identical with the Self which shines in the 'Aham ('I') cognition (Aham-pratyaya). In the second Sutra Brahman is defined as that from which proceeds the origin, subsistence and dissolution of the world. We have to note here that this characteristic (Lakshana) is absent in what is

revealed in the 'I' notion (aham-pratyaya). So the second Sutra can only be a definition of Saguna Brahamn or Iswara. Thus in his exposition of the first two Sutras Sankara assumes by implication two aspects for Brahman, one Nirguna and the other Saguna. In the first Sutra, it is the Nirguna Brahman that is introduced as the topic of enquiry. It will also be quite manifest from a perusal of the 'Purvapaksha' and 'Siddhanta' of the fourth Sutra in Sankara's commentary that 'sastra' (scripture) as the authority for Brahman and the reconciliation of the Vedanta texts contemplated in the fourth Sutra, refer to 'Nirguna Brahman', that is Brahman without qualities.

Now there is no indication in the wording of the first four Sutras that Badarayana had in mind this dual aspect of Brahman, one 'Saguna' (with attributes) and the other 'Nirguna' (without attributes). Sri Madhva focuses attention on this fact in his 'Anuvyakhyana'. He says:-

जन्मादिकारणे साक्षादाह देवः समन्वयाम् ।
उक्तं तदेव जिज्ञास्यं काकाशोत्त निर्गुणे ॥

"God Badarayana declares 'Samanvaya' (harmonizing Vedic texts) directly in respect of the Brahman defined as the cause of the birth etc. of the world and this is the very Brahman introduced as the object of enquiry (in the first Sutra). This being so, where is any room here for a Nirguna Brahman?"

Sankara is not unaware of this fact. It is for this reason that he has written the so called Adhyasa Bhashya where he states clearly what he considers to be the purport of the Vedic texts, especially of the Upanishads. The Bhashya is intended to interpret the Sutras so as to bring out this meaning. For does he not say at the close of his introductory remarks:

यथा चायमर्थ सर्वेषां वेदान्तानां तथा वयमस्यां शारीरकमीमांसायां प्रदर्शयिष्यामः ।

So with Sankara the aim of his commentary is not to determine the purport of the Vedas in the light of the Sutras. Rather it is to expound the Sutras so as to bring out a meaning which is predetermined.

That this was the object of Sri Sankara in writing his Sutra Bhashya receives additional support from the way he deals with the Sutras of the Anandamaya adhikarana. Here he interprets the Sutras first in a natural way having regard to the wording of the Sutras and concludes that Anandamaya is not Brahman and puts an exceedingly forced interpretation on the Sutras. Bhamati, the reputed commentary on Sankara's Sutra Bhashya, makes in this conection, a most revealing statement:

" वेदसूत्रयोर्विरोधे 'गुणे त्वन्याय्यकल्पना' इति सूत्राण्यन्यथा नेतव्यानि "

This statement is repeated by Govindananda in Ratnaprabha, another commentary on Sankara Bhashya. It is clear from this remark of Bahmati that the plain meaning of the Sutras here is opposed to the view held by Sankara and they have somehow to be made to yield a meaning agreeing with Sankara's view. What does this mean in essence? It can only mean that the Sutrakara's view is the Purvapaksha for the Siddhantha of Sankara, for it is impossible to believe that Badarayana could have had in mind the forced interpretation which Sankara finally puts on these Sutras.

Again Sankara, in commenting on the many Sutras which most unambiguously affirm the separateness of the individual soul (Jiva) from Brahman, first gives in each case the plain meaning of the Sutra and then brushes it aside by the remark that this difference is fictious. Of the eight Sutras in the first adhikarana of the second pada (first Adhyaya) six are devoted to establishing this difference and answering objections. Yet this difference according to Sankara is illusory. But there is not even the slightest indication in the wording of the author of the

Sutras in taking pains to establish a difference which is finally to be discarded as illusory.

We thus see that Sankara's approach to the Sutras in his bhashya is fundamentally different from that of Madhva. Sankara subordinates the Sutras to his own views, while Madhva builds his philosophy on them. A careful study of Sri Sankara's Sutra Bhashya is essential if one wants to understand the stand taken by Sri Madhva in his Sutra Bhashya and Anuvyakhyana, both written to expound the Vedanta taught by Badarayana in His Sutras. It is for this reason that reference is made to Sankara's work in this Foreword.

The author of the present work has taken great pains in the task of translation. It can be trusted to give a correct idea of the original. There can hardly be any doubt that it supplies a long-felt want. Sri Madhva Muni Seva Sangha has done a great service to the Kannada-knowing public by publishing this rendering of Sri Madhva's Sutra Bhashya into Kannada.

**Prof. B. Venkatesachar**
Director of Indian Institute
of Science, Bangalore
and President,
Akhila Bharata Madhwa Mahamandala

Dated 21-2-1950
Basavanagudi
Bangalore

# ವಿಷಯಾನುಕ್ರಮಣಿಕೆ

## 2 ಸಮಯಪಾದ



## 3 ಶ್ರುತಿಪಾದ



## 4 ನ್ಯಾಯೋಪೇತ ಶ್ರುತಿಪಾದ



# 3 ಸಾಧನಾಧ್ಯಾಯ

## 1 ವೈರಾಗ್ಯಪಾದ

## 2 ಭಕ್ತಿಪಾದ



## 3 ಉಪಾಸನಾಪಾದ

### 4 ಜ್ಞಾನಪಾದ



## 4 ಫಲಾಧ್ಯಾಯ

### 1 ಕರ್ಮಕ್ಷಯಪಾದ



### 2 ಉತ್ಕ್ರಾಂತಿ ಪಾದ



### 3 ಮಾರ್ಗ ಪಾದ



### 4 ಭೋಗ ಪಾದ

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಶ್ರೀಮದ್ಬ್ರಹ್ಮಸೂತ್ರ ಭಾಷ್ಯವು

## ಪ್ರಥಮಾಧ್ಯಾಯ ೧ನೇ ಪಾದ

## ಅನ್ಯತ್ರಪ್ರಸಿದ್ಧನಾಮಪಾದ

## ೧. ಜಿಜ್ಞಾಸಾಧಿಕರಣಮ್

ಓಂ ॥ ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥
ವ್ಯಾಸಾಯ ಗುಣವಾಸಾಯ ನಮೋ ಹಯಮುಖಾಯ ಚ।
ವಿಶುದ್ಧ ಬುದ್ಧಿಮಧ್ವಾದಿಗುರುಭ್ಯಶ್ಚ ನಮೋ ನಮಃ ॥
ತತ್ತ್ವಪ್ರದೀಪಸತ್ತರ್ಕದೀಪಾವಳಿಮುಖಾನಥ।
ತತ್ತ್ವಪ್ರಕಾಶಿಕಾಖ್ಯಾಂ ಚ ವ್ಯಾಖ್ಯಾಂ ತಾಮನುಸೃತ್ಯ ಹಿ ॥
ಚಂದ್ರಿಕಾರ್ಥಾನುಸಾರೇಣ ನಿರಸ್ಯ ತು ಮತಾಂತರಂ।
ಬ್ರಹ್ಮಸೂತ್ರದ್ವೈತಭಾಷ್ಯಸಾರಬೋಧಾಭಿಧಾಯುತಾಂ॥
ಕರ್ನಾಟಭಾಷಯಾ ಟೀಕಾಂ ಲಲಿತಾಂ ವಿದುಷಾಂ ಮುದೇ।
ತಂತ್ರೀನಾರಾಯಣೋ ವಿದ್ವಾನ್ ಶಿರೋಮಣಿರಚೀಕರತ್ ॥

ಶ್ರೀಮದ್ದನುದ್ವೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಭಾಷ್ಯ ॥ ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಂ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥ ೧ ॥

ಭಾಷ್ಯಾರ್ಥ ॥ ಸರ್ವಗುಣಗಳಿಂದ ಪರಿಪೂರ್ಣನೂ ದೋಷರಹಿತನೂ, ಜ್ಞಾನದಿಂದ ವಿಷಯೀಕರಿಸಲರ್ಹನೂ, ಪ್ರಾಪ್ಯನೂ ಆದ ಶ್ರೀನಾರಾಯಣನನ್ನೂ, ಗುರುಗಳಾದ ವೇದ ವ್ಯಾಸರನ್ನೂ ಕೂಡ ನಮಸ್ಕರಿಸಿ (ನನ್ನಿಂದ) ಬ್ರಹ್ಮಸೂತ್ರಗಳ ಅರ್ಥವು ಹೇಳಲ್ಪಡುತ್ತದೆ.

**ಪೀಠಿಕೆ ॥** ಪರಮಾನಂದಾದಿ ಸ್ವರೂಪಭೂತನಾದ ಶ್ರೀಪರಮಾತ್ಮನ ಪ್ರತಿಬಿಂಬನಾದುದ ರಿಂದ ಸ್ವತಃ ಚಿದಾನಂದಾದಿಸ್ವರೂಪಭೂತನಾದ ಜೀವನಿಗೆ ಅನಾದಿಯಾದ ಅವಿದ್ಯಾಕಾಮಕರ್ಮಾದಿ ನಿಮಿತ್ತವಾದ ಸಂಸಾರಬಂಧವನ್ನು ನಾಶಗೊಳಿಸುವುದಕ್ಕಾಗಿ ಸಮಸ್ತ ಜೀವ—ಜಡ—ಸ್ವರೂಪನಾದ ಪ್ರಪಂಚದೆಸೆಯಿಂದ ಪಾರಮಾರ್ಥಿಕವಾಗಿ ಅತ್ಯಂತ ಭಿನ್ನನು, ಗುಣಪೂರ್ಣನು, ದೋಷರಹಿತನು ಎಂದು ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿಸಿಕೊಡುವುದಕ್ಕಾಗಿ ಎಲ್ಲಾ ಸದಾಗಮಗಳೂ ಪ್ರವೃತ್ತಗಳಾಗಿವೆ.

**ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ। ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥** ಜೀವರು ಹೊರತು ಬೇರೆ ಎಲ್ಲವೂ ದುಃಖವಿಲ್ಲದಿರುವುದು. ಜೀವರು ಮಾತ್ರ ದುಃಖವಿರುವವರು. ಆ ಜೀವರ ದುಃಖವನ್ನು ಕಳೆಯುವುದಕ್ಕಾಗಿ ಶ್ರುತಿಯು ಪ್ರವೃತ್ತವಾಗಿದೆ.

ಆ ವೇದಗಳಿಗೆ ಅರ್ಥನಿರ್ಣಯಮಾಡುವುದಕ್ಕಾಗಿ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ಮಾಡಿರುವರು. ಆ ಬ್ರಹ್ಮಸೂತ್ರಗಳನ್ನು ಯಥಾವತ್ತಾಗಿ ಅರ್ಥವನ್ನು ತಿಳಿಯದೆ ಇರುವವರು ತಮ್ಮ ಮನಸ್ಸಿಗೆ ಬಂದಂತೆ ವ್ಯಾಖ್ಯಾನ ಮಾಡಿರುವುದರಿಂದ ಸೂತ್ರಗಳನ್ನು ವೇದವ್ಯಾಸರ ಅಭಿಪ್ರಾಯಾನುಸಾರವಾಗಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವ್ಯಾಖ್ಯಾನಮಾಡಲಿಕ್ಕೆ ಇಚ್ಛಿಸಿದವರಾಗಿ ಮಂಗಲವಿದ್ದರೇನೇ ಸಫಲವಾಗುವುದರಿಂದಲೂ ಪ್ರಾರಂಭಿಸಿರುವ ಭಾಷ್ಯವು ಮೋಕ್ಷ ಮೊದಲಾದ ಸರ್ವಪುರುಷಾರ್ಥಗಳಿಗೂ ಸಾಧನವಾಗಿದೆಯೆಂದು ತಿಳಿಸುವುದಕ್ಕಾಗಿಯೂ ನಿರ್ವಿಘ್ನವಾಗಿ ಸಮಾಪ್ತಿ, ಪ್ರಚಯ ಮೊದಲಾದ ಪ್ರಯೋಜನಕ್ಕಾಗಿಯೂ, ಶ್ರೀನಾರಾಯಣನ ನಮಸ್ಕಾರರೂಪವಾದ ಮಂಗಲವನ್ನು ನಿಬಂಧನಮಾಡಿ ಗ್ರಂಥಾರಂಭವನ್ನು ಪ್ರತಿಜ್ಞಾಮಾಡಿರುವರು.

**ವಿಶೇಷಾಂಶ ॥** (ಅ) (೧) ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ೧) ಸಮನ್ವಯಾಧ್ಯಾಯ, ೨) ಅವಿರೋಧಾಧ್ಯಾಯ, ೩.) ಸಾಧನಾಧ್ಯಾಯ, ೪) ಫಲಾಧ್ಯಾಯಗಳೆಂದು ನಾಲ್ಕು ಅಧ್ಯಾಯಗಳು. ಅದರಲ್ಲಿ 'ಗುಣೈರುದೀರ್ಣಂ' ಇದು ಮೊದಲಾದ ನಾಲ್ಕು ವಿಶೇಷಣಗಳಿಂದ ನಾಲ್ಕು ಅಧ್ಯಾಯಗಳ ಅರ್ಥವನ್ನು ಸೂಚಿಸಿರುತ್ತಾರೆ. ಹೇಗೆಂದರೆ ಆದಿಸೂತ್ರದಲ್ಲಿ ಶ್ರೀಹರಿಯ ಪ್ರಸಾದದಿಂದ ಮುಕ್ತಿಯಾಗುತ್ತದೆ ಎಂದು ಹೇಳುತ್ತಿರಲು ಬೇರೆ ಯಾವ ದೇವತೆಗಳಿಗೂ ಮುಕ್ತಿಯನ್ನು ಕೊಡತಕ್ಕ ಶಕ್ತಿಯಿಲ್ಲದೆ ಭಗವಂತನು ಮಾತ್ರ ಮುಕ್ತಿಯನ್ನು ಕೊಡತಕ್ಕವನೆಂದಾದರೆ ಆತನು ಎಂತಹ ಗುಣಗಳುಳ್ಳವನು ಎಂದು ಅಧಿಕಾರಿಗೆ ಶಂಕೆಯು ಹುಟ್ಟುತ್ತದೆ. ಅದನ್ನು ನಿವಾರಣಮಾಡುವುದಕ್ಕಾಗಿ ಒಂದನೇ ಅಧ್ಯಾಯದಲ್ಲಿ ಅಪರ್ಯಾಯಅನಂತಾನಂತಶಬ್ದಗಳು ಶ್ರೀಹರಿಯ ಗುಣಗಳನ್ನೇ ಪ್ರತಿಪಾದಿಸುತ್ತವೆ ಎಂದು ಹೇಳಿ ಸರ್ವಗುಣಪರಿಪೂರ್ಣತ್ವವನ್ನು ಹೇಳಿರುವರು. ೨) ಇದಕ್ಕೆ ಯುಕ್ತಿ ಸಮಯ, ಶ್ರುತಿ, ನ್ಯಾಯೋಪೇತಶ್ರುತಿ, ಇವುಗಳಿಂದ ವಿರೋಧವು ಬಂದರೆ ಶ್ರೀಹರಿಗೆ ಸರ್ವಕರ್ತೃತ್ವ ಸರ್ವಜ್ಞತ್ವ ಮೊದಲಾದ ಗುಣಗಳು ಸಿದ್ಧಿಸಲಾರವು. ಮತ್ತು ಜೀವರಂತೆ ಶ್ರೀಹರಿಗೂ ಜನನ ಮರಣ ಮೊದಲಾದ ದೋಷಗಳೂ ಬರಬೇಕಾಗುವವು ಎಂಬುವ ಶಂಕೆಯನ್ನು ಪರಿಹರಿಸುವುದಕ್ಕಾಗಿ ಎರಡನೇ ಅಧ್ಯಾಯದಲ್ಲಿ ಆ ಯುಕ್ತ್ಯಾದಿಗಳಿಗೆ ದೋಷ ಗಳನ್ನು ಹೇಳಿ ಆ ಶ್ರೀಹರಿಯು ದೋಷಲೇಶರಹಿತನೆಂದೇ ಹೇಳಿರುವರು. ೩.) ಆ ಶ್ರೀಹರಿಯ ಪ್ರಸಾದವು ಯಾವುದರಿಂದ ಆಗುತ್ತದೆ ಎನ್ನುವ ಶಂಕೆಯನ್ನು

ಪರಿಹರಿ ಸುವುದಕ್ಕಾಗಿ ಮೂರನೇ ಅಧ್ಯಾಯದಲ್ಲಿ ವೈರಾಗ್ಯ, ಭಕ್ತಿ ಉಪಾಸನಾ, ಜ್ಞಾನ ಗಳೆನ್ನುವ ಸಾಧನಗಳಿಂದ ಆ ಶ್ರೀಹರಿಯ ಪ್ರಸಾದವನ್ನು ಹೊಂದುವುದಕ್ಕಾಗಿ ಆತನನ್ನು ಅಪರೋಕ್ಷವಾಗಿ ತಿಳಿಯಬೇಕೆಂದು ಹೇಳಿರುವರು. ೪) ಪ್ರಸನ್ನನಾದ ಶ್ರೀಹರಿಯು ಎಂತಹ ಪುರುಷಾರ್ಥವನ್ನು ಕೊಡುತ್ತಾನೆ ಎನ್ನುವ ಶಂಕೆಯನ್ನು ಪರಿಹರಿಸುವುದಕ್ಕಾಗಿ ನಾಲ್ಕನೇ ಅಧ್ಯಾಯದಲ್ಲಿ ಜ್ಞಾನಿಗಳಿಗೆ ಕರ್ಮಕ್ಷಯ ಉತ್ಕ್ರಮಣ ಆನಂದ ಭೋಗರೂಪವಾದ ಮೋಕ್ಷರೂಪ ಫಲವಾಗುತ್ತದೆ ಎಂದು ಹೇಳಿರುವರು.

(ಆ) ಇವೇ ವಿಶೇಷಣಗಳಿಂದ ನಾರಾಯಣ ಶಬ್ದವು ಸಾಂಕೇತಿವಲ್ಲ, ನಿರ್ವಚನದಿಂದ ಇಷ್ಟು ವಿಶೇಷಣಗಳೂ ಅವನಿಗೇನೇ ಒಪ್ಪುತ್ತವೆ. ಅವನೇ ಪರಬ್ರಹ್ಮನು ಅವನೇ ಸರ್ವಶಾಸ್ತ್ರಾರ್ಥನು, ಎಂದೂ ಸೂಚಿಸಿರುತ್ತಾರೆ. ಹೇಗೆಂದರೆ— ೧) ಅರಾಃ ದೋಷಗಳು ಅರವಿರುದ್ಧಾಃ ನಾರಾಃ ದೋಷವಿರುದ್ಧ ಗಳಾದ ಗುಣಗಳು, ನಾರಾಣಾಂ ಅಯನಂ ನಾರಾಯಣಃ ಗುಣಗಳಿಗೆ ಆಶ್ರಯನು. ೨) ಅರಾಣಾಂ ಆಶ್ರಯೋ ನ ಭವತಿ ದೋಷಾಶ್ರಯನಲ್ಲ ಅಂದರೆ ದೋಷವರ್ಜಿತನು. ೩) ನರಸಂಬಂಧಿ ನಾರಂ ಜ್ಞಾನವು, ಅಥವಾ ನ ರೀಯತೇ ಅನೇನ ಕ್ಷೀಣವಾಗದೆ ಇರುವದು ಜ್ಞಾನವು, ಅಥವಾ ನ ಅರಂ ಯೇನ, ಯಾವುದರಿಂದ ದುಃಖವುಂಟಾಗುವುದಿಲ್ಲವೋ ಅದು ಜ್ಞಾನವು, ಅಥವಾ ನಿರ್ದೋಷವಾದ ವೇದದಿಂದ ಹುಟ್ಟಿದ್ದು ಜ್ಞಾನವು. ನಾರಸ್ಯ ಅಯನಂ ಜ್ಞಾನಕ್ಕೆ ವಿಷಯನು, ನಾರಾಯಣನು. ೪) ದೋಷವಿಲ್ಲದೆ ಇರುವುದರಿಂದಲೂ ದುಃಖವಿಲ್ಲದೆಯರುವುದರಿಂದಲೂ ನಾಶವಿಲ್ಲದೆ ಇರುವುದರಿಂದಲೂ ನಾರಾಃ ಮುಕ್ತರು, ನಾರಾಣಾಂ ಅಯನಂ ಮುಕ್ತರಿಗೆ ಆಶ್ರಯನು, ಪ್ರಾಪ್ಯನು. ಹೀಗೆ ನಾರಾಯಣಶಬ್ದವು ಗುಣಪೂರ್ಣತ್ವ ಮೊದಲಾದ ಅರ್ಥಗಳನ್ನು ಹೇಳತಕ್ಕುದಾದುದರಿಂದ ಸಾಂಕೇತಿಕವಲ್ಲ. ಆದುದರಿಂದಲೇ ಅವನೇ ಸರ್ವಶಾಸ್ತ್ರಾರ್ಥನು.

(ಇ) ಈ ನಾಲ್ಕು ವಿಶೇಷಣಗಳಿಂದ ನಾರಾಯಣನಿಗೇನೇ ವಂದ್ಯತ್ವವು ಸಾಧಿಸಲ್ಪಟ್ಟಿದೆ. ಹೇಗೆಂದರೆ ವಂದ್ಯನಾಗಬೇಕಾದರೆ ವಿಶಿಷ್ಟತ್ವ (ಸರ್ವೋತ್ತಮತ್ವ) ಇಷ್ಟತ್ವ (ಪ್ರಿಯತ್ವ) ಅಧಿಕೃತತ್ವ (ಪ್ರಕೃತ ಗ್ರಂಥಪ್ರತಿಪಾದ್ಯತ್ವ) ಎಂದು ಮೂರು ಪ್ರಯೋಜಕಗಳಿವೆ. ಆದುದರಿಂದ ಯಾರು ಬಹುಗುಣಗಳುಳ್ಳ ವರೋ ದೋಷಗಳು ಇಲ್ಲದವರೋ, ವ್ಯಾಖ್ಯೇಯಶಾಸ್ತ್ರಗಳಿಂದ ತಿಳಿಯಲ್ಪಡತಕ್ಕವರೋ, ಶಾಸ್ತ್ರಜ್ಞಾನವುಳ್ಳವರಿಂದ ಪ್ರಾಪ್ಯರೋ ಅಂಥವರೇ ವಂದ್ಯರಾಗುವರು. ಏಕೆಂದರೆ ಅಧಿಕೃತವಾದ ದೇವತೆಯೇ ಆ ಗ್ರಂಥದ ಜ್ಞಾನಾದಿಗಳನ್ನು ಹೊಂದಿಸಿಕೊಡುತ್ತದೆ. ಸರ್ವೋತ್ತಮವೂ ಇಷ್ಟವೂ ಆದ ದೇವತೆಯಲ್ಲಿಯೇ ಭಕ್ತ್ಯಾದಿ ಪೂರ್ವಕವಾಗಿ ನಮಸ್ಕಾರವು ಕೂಡುತ್ತದೆ. ಆದರಿಂದಲೇ ವಿಘ್ನಪರಿಹಾರವಾಗಿ ಇಷ್ಟಸಿದ್ಧಿಯಾಗುವುದು. ಆದಕಾರಣ ಗುಣೈರುದೀರ್ಣಂ ದೋಷವರ್ಜಿತಂ ಎನ್ನುವ ಎರಡು ವಿಶೇಷಣಗಳಿಂದ ಸರ್ವೋತ್ತಮತ್ವವನ್ನೂ ಜ್ಞೇಯಂ ಎನ್ನುವುದರಿಂದ ಅಧಿಕೃತತ್ವವನ್ನೂ ಗಮ್ಯಂ ಎನ್ನುವುದರಿಂದ ಇಷ್ಟತ್ವವನ್ನೂ ಉಪಪಾದಿಸಿರುವರು.

(ಈ) ಶ್ರೋತೃಗಳ ಪ್ರವೃತ್ತಿಗೆ ಅಂಗಭೂತಗಳಾದ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳು ನಾಲ್ಕೂ ಈ ಮಂಗಲ ಶ್ಲೋಕದಲ್ಲಿ ಸೂಚಿಸಲ್ಪಟ್ಟಿವೆ. ಹೇಗೆಂದರೆ, ಮೂರನೇ ಸಾಧನಾಧ್ಯಾಯದಲ್ಲಿ ಹೇಳಿದ ವೈರಾಗ್ಯ ಭಕ್ತಿ ಅಧ್ಯಯನಾದಿಗಳು ಉಳ್ಳವನು, ಅಧಿಕಾರಿ ಎಂದು

ನಾರಾಯಣಂ ನತ್ವಾ ಎನ್ನುವುದರಿಂದ ಸೂಚಿಸಿರುವರು. ನಾರಾಯಣನೇ ವಿಷಯನು. ಗಮ್ಯಂ ಎನ್ನುವುದರಿಂದ ನಾರಾಯಣಪ್ರಾಪ್ತಿರೂಪವಾದ (ಆತ್ಯಂತಿಕ ದುಃಖನಿವೃತ್ತಿ ಪೂರ್ವಕ ಸ್ವರೂಪಾನಂದಾನುಭವ ರೂಪವಾದ) ಮೋಕ್ಷವು ಪ್ರಯೋಜನವೆಂದೂ ಉಕ್ತವಾಯಿತು. ದಾತೃದೇಯಭಾವಾ ದಿರೂಪವಾದ ಸಂಬಂಧವೂ ಕೂಡ ಸೂಚಿತವಾಯಿತು.

(ಉ) *ನಾರಾಯಣಾದಿ ಐದು ಪದಗಳಿಂದ ಪಂಚಮೂರ್ತಿಗಳು ಸೂಚಿಸಲ್ಪಟ್ಟಿವೆ. ಹೇಗೆಂದರೆ ೧) ಸಮುದ್ರಶಾಯಿಯಾದವನು ನಾರಾಯಣನು, ೨) ಸರ್ವೋತ್ಕೃಷ್ಟ ಕ್ರೀಡಾ ಜ್ಞಾನ ಮೊದಲಾದ ಗುಣಗಳಿಂದ ಉತ್ಕೃಷ್ಟನಾದ ಗುಣೋದೀರ್ಣನು ವಾಸುದೇವನು. ೩) ಚೆನ್ನಾಗಿ ದೋಷಗಳನ್ನು ಸೆಳೆಯುವುದರಿಂದ ದೋಷವರ್ಜಿತನು ಸಂಕರ್ಷಣನು. ೪) ಪ್ರಕೃಷ್ಟ ಕಾಂತಿ ಇರತಕ್ಕವನೆಂದು ತಿಳಿಯಲ್ಪಡುವ ಪ್ರಯುಕ್ತ ಜ್ಞೇಯನು ಪ್ರದ್ಯುಮ್ನನು. ೫) ಜ್ಞಾನಿಗಳು ಹೊಂದಲಿಕ್ಕೆ ತಡೆಯಿಲ್ಲದೆ ಇರುವುದರಿಂದ ಗಮ್ಯನು ಅನಿರುದ್ಧನು. ಈ ಪಂಚಮೂರ್ತಿಗಳೂ ಈ ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿರುತ್ತವೆ. ಅಂತೂ ನಾರಾಯಣನನ್ನೂ ಗುಣೋದೀರ್ಣನನ್ನೂ ದೋಷವರ್ಜಿತನನ್ನೂ ಜ್ಞೇಯನನ್ನೂ ಗಮ್ಯನಾದ ಅನಿರುದ್ಧನನ್ನೂ ನಮಸ್ಕರಿಸಿ ಎನ್ನುವ ಅರ್ಥವನ್ನೂ ಸೂಚಿಸಿರುವರು.

(ಊ) ಆ ನಾರಾಯಣನೇ ಓಂ ಎನ್ನುವ ಪ್ರಣವದ ಅರ್ಥಭೂತನು. ಹೇಗೆಂದರೆ ಪ್ರಣವದಲ್ಲಿ ಅಕಾರ, ಉಕಾರ, ಮಕಾರಗಳು ಮೂರು ಅಕ್ಷರಗಳು ಸೇರಿವೆ. ಅವುಗಳಲ್ಲಿ ಅಕಾರಕ್ಕೆ ಅನ್ಯತ್ವ, ವಿರುದ್ಧ, ಅಭಾವ ಎಂದು ಮೂರು ಅರ್ಥಗಳಿವೆ. ಆದುದರಿಂದ ಆ ಅಕಾರವು ಸರ್ವಜಗತ್ತಿಗೆ ಕಾರಣೀಭೂತನಾದ ಬ್ರಹ್ಮನಿಗೆ ಸರ್ವ ಜಗತ್ತಿಗಿಂತ ಅನ್ಯತ್ವ (ಭೇದ)ವನ್ನೂ ಸರ್ವದೋಷಗಳ ಅಭಾವವನ್ನೂ ಗುಣಪೂರ್ಣ ನಾದ ಬ್ರಹ್ಮನಿಗೆ ಅಪೂರ್ಣವಾದ ಜಗತ್ತಿನಿಂದ ವಿರುದ್ಧ ಲಕ್ಷಣವನ್ನೂ ಹೇಳುತ್ತದೆ. ಈ ಅರ್ಥವನ್ನು "ಅ ಇತಿ ಬ್ರಹ್ಮ" ಎನ್ನುವ ಶ್ರುತಿಯು ಪ್ರತಿಪಾದಿಸುತ್ತದೆ. ಉಕಾರ ಮಕಾರಗಳು ಬ್ರಹ್ಮನು ಸರ್ವೋತ್ಕೃಷ್ಟನೆಂದು ತಿಳಿಯಲ್ಪಡತಕ್ಕವನೆಂದೂ ಹೇಳುತ್ತವೆ.

(ಎ) ಭೂಃ, ಭುವಃ, ಸುವಃ ಎನ್ನುವ ಮೂರು ವ್ಯಾಹೃತಿಗಳೂ ಶ್ರೀಮನ್ನಾರಾಯಣನನ್ನೇ ಪ್ರತಿಪಾದಿಸುತ್ತವೆ. ಹೇಗೆಂದರೆ ಪೂರ್ಣನಾದುದರಿಂದ ಭೂಃ ಎಂದೂ ಭಾವಯತಿ= ಜಗತ್ತನ್ನು ಹುಟ್ಟಿಸತಕ್ಕ ಸ್ವಭಾವವಿರತಕ್ಕವನಾದುದರಿಂದ ಭುವಃ ಎಂದೂ, ಸುಖರೂಪನಾದುದರಿಂದಲೂ ಸರ್ವಸ್ವಾತಂತ್ರ್ಯವಿರುವದರಿಂದಲೂ ಸುವಃ ಎಂದೂ ಹೇಳಿಸಿಕೊಳ್ಳಲ್ಪಡುತ್ತಾನೆ.

(ಏ) ಹೀಗೆಯೇ ಶ್ರೀನಾರಾಯಣನೇ ಮೂರು ಪಾದಗಳುಳ್ಳ ಗಾಯತ್ರಿಯಿಂದಲೂ ಮೂರು ವರ್ಗಗಳುಳ್ಳ ಪುರುಷಸೂಕ್ತದಿಂದಲೂ ಸರ್ವ ವೇದಗಳಿಂದಲೂ ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳಿಂದಲೂ ವೇದಾರ್ಥವನ್ನು ಪ್ರತಿಪಾದಿಸುವ ಇತಿಹಾಸ ಪುರಾಣಾದಿಗಳಿಂದಲೂ ಪ್ರತಿಪಾದಿಸಲ್ಪಡುತ್ತಾನೆ.

(ಐ) ಯದ್ಯಪಿ ಶಾಸ್ತ್ರಪ್ರತಿಪಾದ್ಯನಾದ ಶ್ರೀನಾರಾಯಣನೇ ಭಾಷ್ಯಕಾರರಿಗೆ ಗುರುವು. ನಾರಾಯಣನೇ ಬ್ರಹ್ಮಸೂತ್ರಗಳನ್ನು ನಿರ್ಮಿಸಿದವನು. ಶ್ರೀಮದಾಚಾರ್ಯರಿಗೆ ಗುರುವೂ ದೇವತೆಯೂ ಒಬ್ಬರೇ ಆಗಿದ್ದರೂ ದೇವತಾಭಕ್ತಿಯಿಂದಲೂ ತನ್ನ ಗುರುಗಳನ್ನು ಎನ್ನುವ ಭಕ್ತಿಯಿಂದಲೂ

* ಉ ಊ ಎ ಏ ಈ ವಿಷಯಗಳು ತತ್ವಪ್ರದೀಪದಲ್ಲಿ ಹೇಳಲ್ಪಟ್ಟಿವೆ.

ಶಾಸ್ತ್ರಗುರುಗಳು ಎನ್ನುವ ಭಕ್ತಿಯಿಂದಲೂ ವಿಶೇಷಾನುಗ್ರಹಕ್ಕಾಗಿ ಆ ನಾರಾಯಣನನ್ನೇ ಪ್ರತ್ಯೇಕ ನಮಸ್ಕರಿಸಿರುವರು.

(೭) [1]ಗುರುತ್ವಕ್ಕೆ ನಿಮಿತ್ತಗಳಾದ ಶಾಸ್ತ್ರಗಳ ನಿರ್ಮಾಣ, ಶಾಸ್ತ್ರಸಂಪ್ರದಾಯಗಳನ್ನು ಪ್ರವರ್ತಿಸುವಿಕೆ, ಸಾಕ್ಷಾತ್ತಾಗಿ ಉಪದೇಶಮಾಡುವಿಕೆ ಎನ್ನುವ ಧರ್ಮಗಳು ಇದ್ದುದರಿಂದಲೂ ಗೌರವದಿಂದಲೂ ಬಹುಮಾನಕ್ಕಾಗಿಯೂ, ಗುರೂನ್ ಎಂದು ಬಹುವಚನವನ್ನು ಪ್ರಯೋಗಿಸಿರುವರು.

(೮) (೧) ಆಚಾರ್ಯರಿಗೆ ಗುರುಗಳು ಬೇರೆ, ದೇವತೆಯು ಬೇರೆ ಎಂದಿಲ್ಲ. ಗುರುಗಳೂ, ದೇವತೆಯೂ ಒಬ್ಬರೇ ಎಂದು ಸೂಚಿಸುವುದಕ್ಕಾಗಿ ಅಪಿ ಶಬ್ದವು. ತಥಾ ಚ ಅಪಿಃಗುರುಗಳು ದೇವತೆಯು ಒಬ್ಬರೇ ಆಗಿದ್ದಾಗ್ಯೂ ಎಂದರ್ಥವು. ೨) ಅಥವಾ ಅಪಿಃಸೂತ್ರಕಾರರನ್ನು ಕೂಡಾ ಎಂದರ್ಥವು. ವಿಶೇಷಾನುಗ್ರಹಕ್ಕಾಗಿ ಸೂತ್ರಕಾರರಿಗೆ ಪ್ರತ್ಯೇಕ ನಮಸ್ಕಾರವು.

**ಭಾಷ್ಯ ॥ ದ್ವಾಪರೇ ಸರ್ವತ್ರ ಜ್ಞಾನ ಆಕುಲೀಭೂತೇ ತನ್ನಿರ್ಣಯಾಯ ಬ್ರಹ್ಮ ರುದ್ರೇಂದ್ರಾದಿಭಿರರ್ಥಿತೋ [2]ಭಗವನ್ನಾರಾಯಣೋ ವ್ಯಾಸತ್ವೇನಾವತತಾರ ॥ ೨ ॥**

---

೧. ಈ ವಿಷಯವು ತತ್ವಪ್ರದೀಪದಲ್ಲಿ ಹೇಳಲ್ಪಟ್ಟಿದೆ.

೨. (೧) ಜ್ಞಾನಶಕ್ತಿ ಬಲೈಶ್ವರ್ಯವೀರ್ಯತೇಜಾಂಸ್ಯಶೇಷತಃ । ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ । ಹೇಯಗಳಾದ ಗುಣಾದಿಗಳನ್ನು ಬಿಟ್ಟು ಅಶೇಷ ಜ್ಞಾನ ಶಕ್ತಿ ಮೊದಲಾದವುಗಳು ಭಗವತ್ ಎನ್ನುವ ಶಬ್ದದಿಂದ ಹೇಳಲ್ಪಡತಕ್ಕವುಗ ಳು. ಅಂತೂ ನಿರತಿಶಯಜ್ಞಾನಾದಿ ಗುಣಗಳುಳ್ಳವನು ಭಗವಂತನು.

೨) ಶ್ರೀಹರಿಯ ಗುಣಗಳಿಗೂ ಆತನಿಗೂ ಅಭೇದವೆನ್ನುವ ಅಭಿಪ್ರಾಯದಿಂದ ಜ್ಞಾನಾದಿ ಗುಣಗಳೇ ಭಗವಂತನು ಎಂದು ಹೇಳಿರುವರು.

**ಗುಣಗುಣಿಗಳಿಗೆ ಭೇದನಿರಾಸ**

೩) ಭಗವಂತನಿಗೂ ಆತನ ಗುಣಗಳಿಗೂ ಪರಸ್ಪರ ಭೇದವಿಲ್ಲ. ಹಾಗಾದರೆ ಒಂದಕ್ಕೇ ನೇ ಗುಣಗುಣಿಭಾವವು ಹೇಗೆ ಕೂಡುತ್ತದೆ. ಗುಣದಿಂದ ಬೇರೆಯಾದುದು ಗುಣದ ಸಂಬಂಧದಿಂದ ಗುಣವುಳ್ಳದ್ದು. ದಂಡದಿಂದ ಬೇರೆಯಾದವನು ದಂಡಿಯು ಹೀಗೆ ಭಿನ್ನಗಳಿಗೇನೇ ಗುಣಗುಣಿಭಾವವು ಅನುಭೂತವಾಗಿದೆ. ಎಂದರೆ ದಂಡಕ್ಕೂ ದಂಡವುಳ್ಳವನಿಗೂ ಭೇದವು ಪ್ರತ್ಯಕ್ಷವಾಗಿಯೇ ಅನುಭೂತವಾಗಿದೆ. ಆದರೆ ಪ್ರಕೃತದಲ್ಲಿ ಮಾತ್ರ ವಿಜ್ಞಾನಮಾನಂದಂ ಬ್ರಹ್ಮ ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ಶ್ರುತಿಗಳು ಬ್ರಹ್ಮನು ಜ್ಞಾನರೂಪನು, ಆನಂದರೂಪನು,ಎಂದು ಗುಣಗುಣಿಗಳಿಗೆ ಅಭೇದವೇ ಪ್ರತೀತವಾಗಿದೆ. ಲೋಕದಲ್ಲಿಯೂ ಬಿಳುಪುವಸ್ತ್ರ ಇತ್ಯಾದಿಗಳಲ್ಲಿ ಅಭೇದವು ಪ್ರತೀತವಾಗಿದೆ. ಕೆಲವು ಗುಣಗಳು ದ್ರವ್ಯವಿರುವಾಗಲೇ ನಷ್ಟಗಳಾಗುತ್ತವೆ. ಕೆಲವು ನಷ್ಟಗಳಾಗುವುದಿಲ್ಲ. ತಥಾಚ ಆಶ್ರಯವಾದ ದ್ರವ್ಯವಿದ್ದರೂ ಅದರಲ್ಲಿದ್ದ ಗುಣಾದಿಗಳಿಗೆ ನಾಶ ಬಂದರೆ ಅವುಗಳಿಗೆ ಭೇದಾಭೇದವು. ಆಶ್ರಯವಾದ ದ್ರವ್ಯವಿರುವ ತನಕ ಇರುವ ಗುಣಾದಿಗಳಿಗೆ ಅಭೇದವು. ಭೇದವೇ ಎನ್ನುವುದು ಸರ್ವಥಾ ಯುಕ್ತವಲ್ಲ.

ಭಾಷ್ಯಾರ್ಥ॥ ದ್ವಾಪರಯುಗದಲ್ಲಿ ಸಜ್ಜನರ ಯಥಾರ್ಥಜ್ಞಾನವು ಕೆಡುತ್ತಿರಲು ವಿಷ್ಣು ಸರ್ವೋತ್ತಮತ್ವಾದಿ ಜ್ಞಾನವೇ ತತ್ವಜ್ಞಾನವು ಬೇರೆಯಲ್ಲ ಎಂದು ನಿಶ್ಚಯಿಸುವುದಕ್ಕಾಗಿ ಶ್ರೀಮನ್ನಾರಾಯಣನು ವೇದವ್ಯಾಸರೂಪದಿಂದ ಆವಿರ್ಭವಿಸಿದನು.

---

ವಿಶೇಷಕ್ಕೆ ಆವಶ್ಯಕತ್ವ ನಿರೂಪಣ

೪) ಹಾಗಾದರೆ ಪಟಸ್ಯ ಶೌಕ್ಲ್ಯಂ ಎಂದು ಗುಣಗುಣಿಗಳಿಗೆ ಭೇದವೇ ತೋರುತ್ತದೆ ಎಂದರೆ- ಪಟಸ್ಯ ಭೇದಃ ಎನ್ನುವುದರಂತೆ ಅಲ್ಲಿ ವಿಶೇಷವೇ ತೋರುವುದು. ಭೇದ ವಲ್ಲ ಭೇದವು ಧರ್ಮಿಸ್ವರೂಪವೇ ಆಗಿದೆ. ಹೇಗೆ ವೈಶೇಷಿಕರು ಸಮವಾಯಸ್ಯ ಸತ್ವಂ ಎನ್ನುವಲ್ಲಿ ಸತ್ವವು ಸ್ವರೂಪಭೂತವೇ ಎನ್ನುವರು. ಸಮವಾಯದಲ್ಲಿ ವೈಶೇಷಿಕರು ಭಿನ್ನವಾದ ಸತ್ತಾಜಾತಿಯನ್ನು ಅಂಗೀಕರಿಸಲಿಲ್ಲ. ದ್ರವ್ಯ ಗುಣ ಕರ್ಮ ಈ ಮೂರರಲ್ಲಿಯೇ ಸತ್ತಾಜಾತಿಯನ್ನು ಅಂಗೀಕರಿಸಿರುವರೋ, ಸಮವಾಯಸ್ಸನ್ ಎನ್ನುವ ಪ್ರಯೋಗದಲ್ಲಿಯೂ ವಿಶೇಷವನ್ನು ಒಪ್ಪಲೇ ಬೇಕು. ಇಲ್ಲವಾದರೆ ಸಮವಾಯವು ಸತ್= ಸಮವಾಯವು ಎಂದೇ ಹೇಳಿದಂತೆ ಆಗುವುದು.

೫) ಮಾಯಾವಾದಿಗಳ ಮತದಲ್ಲಿಯೂ ಬ್ರಹ್ಮನಿಗೆ ಸತ್ಯ ಜ್ಞಾನ ಆನಂದತ್ವಾದಿಗಳು ವಿ ಶೇಷದಿಂದಲೇ ಎಂದು ಒಪ್ಪಬೇಕು. ಬ್ರಹ್ಮನಲ್ಲಿ ವಿಶೇಷವನ್ನು ಒಪ್ಪದಿದ್ದರೆ ಸತ್ಯ ಜ್ಞಾನ ಮೊದಲಾದ ಶಬ್ದಗಳೇ ಕೂಡದೆ ಹೋಗುವವು. ಆ ಶಬ್ದಗಳು ಪರ್ಯಾಯ ಶಬ್ದಗಳೂ ಆಗಬೇಕಾಗುವವು.

ಹಾಗಾದರೆ ಸತ್ಯಂ ಜ್ಞಾನಮನಂತಂ ಬ್ರಹ್ಮ ಎನ್ನುವಲ್ಲಿ ಸತ್ಯಂ ಅಸತ್ಯತ್ವವಿಲ್ಲದೆ ಇರುವವನು, ಜ್ಞಾನಂ ಅಜ್ಞಾನತ್ವವಿಲ್ಲದೆ ಇರುವವನು ಎಂದರ್ಥವು. ಆದಕಾರಣ ಬ್ರ ಹ್ಮನು ನಿರ್ವಿಶೇಷನಾದಾಗ್ಯೂ ವ್ಯಾವರ್ತ್ಯಗಳಾದ ಅಸತ್ಯತ್ವಾದಿ ಗಳಿಗೆ ಭೇದವಿರುವು ದರಿಂದ ಸತ್ಯ ಜ್ಞಾನ ಮೊದಲಾದ ಶಬ್ದಾಂತರಗಳು ಪ್ರವೃತ್ತಗಳಾಗುತ್ತವೆ ಎಂದರೆ-

ಅಸತ್ಯತ್ವ ಅಜ್ಞಾನತ್ವ ಮೊದಲಾದವುಗಳ ವ್ಯಾವೃತ್ತಿಯಿಂದ ಬ್ರಹ್ಮನಲ್ಲಿ ವಿಶೇಷವು ಉಂಟೋ ಇಲ್ಲವೋ, ಇಲ್ಲವೆಂದು ಹೇಳುವುದಾದರೆ ಒಂದೇ ಪದದಿಂದ ಅಖಂಡಾರ್ಥತ್ವವು ಸಿದ್ಧಿಸುವುದು. ಪದಾಂತರಗಳು ವ್ಯರ್ಥವಾಗಬೇಕಾಗುವುವು. ಸತ್ಯಜ್ಞಾನ ಮೊದಲಾದವುಗಳು ಪರ್ಯಾಯಪದಗಳೂ ಆಗಬೇಕಾಗುವವು. ವಿಶೇಷವನ್ನು ಒಡಂಬಟ್ಟರೆ ಅನಂತಾನಂತ ವೇದಪದಗಳಿಂದ ಪ್ರತಿಪಾದಿಸಲ್ಪಟ್ಟ ಬ್ರಹ್ಮನಿಗೆ ಅನಂತಗುಣಗಳು ಇವೆ, ಎಂದೇ ಸಿದ್ಧಿಸುವುದು. ನಮ್ಮ ಮತವನ್ನೇ ಅಂಗೀಕರಿಸಿದಂತಾಯಿತು. ಆದಕಾರಣ ಸತ್ಯ ಜ್ಞಾನ ಮೊದಲಾದ ಪದಗಳು ಪರ್ಯಾಯ ಶಬ್ದಗಳು ಆಗಬಾರದು ಎನ್ನುವುದಕ್ಕಾಗಿ ವಿಶೇಷವನ್ನು ಸರ್ವಥಾ ಸರ್ವವಾದಿಗಳೂ ಅಂಗೀಕರಿಸಲೇ ಬೇಕು.

ವಿಶೇಷ ಸ್ವರೂಪ ನಿರೂಪಣ

೬) ಆ ವಿಶೇಷವು ಒಂದೇ ಕಡೆಯಲ್ಲಿ ಪರ್ಯಾಯ ಶಬ್ದಗಳಾಗದೆ ಇರುವ, ಅನೇಕ ಶಬ್ದಗಳ ಪ್ರವೃತ್ತಿಗೆ ಕಾರಣೀಭೂತವಾದುದು. ಅದು ವಸ್ತುಸ್ವರೂಪವೂ ಸ್ವನಿರ್ವಾಹಕವೂ ಆಗಿದೆ. ಇಂತಹ ವಿಶೇಷವನ್ನು ಒಡಂಬಡದೆ ಇದ್ದರೆ ಎಲ್ಲರಿಗೂ ವ್ಯವಹಾರವೇ ಕೂಡದೇ ಹೋಗುವುದು. ಗುಣಗುಣ್ಯಾದಿಗಳಿಗೆ ಸಂಬಂಧವು ಕೂಡಲಾಗುವುದು. ಆ ಸಂಬಂಧವು ಸಂಬಂಧಿಯಿಂದ ಭಿನ್ನವಾದರೆ ಗುಣದಂತೆ ಸಂಬಂಧಾಂತರದ ಅಪೇಕ್ಷೆ ಇದ್ದುದರಿಂದ ಅನವಸ್ಥೆಯೂ ಬರುವುದು. ಭೇದವಿಲ್ಲವೆಂದಾದರೆ ವಸ್ತುವೇ ಆಯಿತು. ಸಂಬಂಧವೇ ಆಗಲಾರದು. ಆದಕಾರಣ ಗುಣಗುಣಿಗಳಿಗೆ ಭೇದವನ್ನಾಗಲೀ ಭೇದಾಭೇದವನ್ನಾಗಲೀ ಕಲ್ಪಿಸಿ ಅವುಗಳಿಗೆ ಸಮವಾಯ ಸಂಬಂಧವನ್ನಾಗಲೀ ಬೇರೆ ಸಂಬಂಧವನ್ನಾಗಲೀ ಕಲ್ಪಿಸಿಕೊಂಡು ಹಿಂದೆ ಹೇಳಿದ ಅನವಸ್ಥೆಯನ್ನು ಪರಿಹರಿಸುವುದಕ್ಕಾಗಿ ಅದಕ್ಕೆ ಸ್ವನಿರ್ವಾಹಕತ್ವವನ್ನು ಕಲ್ಪಿಸುವುದಕ್ಕಿಂತ ದ್ರವ್ಯಕ್ಕೇನೇ ಗುಣಮೊದಲಾದ ವಿಶೇಷರೂಪದಿಂದ ಸ್ವನಿರ್ವಾಹಕತ್ವವನ್ನು ಕಲ್ಪಿಸುವದು ಶ್ರೇಷ್ಠವು. ಆದಕಾರಣ ಜ್ಞಾನ ಐಶ್ವರ್ಯ ಮೊದಲಾದ ಸವಿಶೇಷಗಳಾದ ಅನಂತಾನಂತ ಗುಣಗಳ ಸ್ವರೂಪಭೂತನಾದ ಶ್ರೀನಾರಾಯಣನೇ ವ್ಯಾಸರೂಪದಿಂದ ಅವತರಿಸಿದನು.

ಭಾಷ್ಯ ॥ ಅಥೇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛೂನಾಂ ತದ್ಯೋಗಮವಿಜಾನತಾಂ ತಜ್ಜ್ಞಾಪನಾರ್ಥಂ [೧]ವೇದಮುತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್ ಚತುರ್ವಿಂಶತಿಧೈಕಶತಧಾ ಸಹಸ್ರಧಾ ದ್ವಾದಶಧಾ ಚ । ತದರ್ಥನಿರ್ಣಯಾಯ ★ಬ್ರಹ್ಮಸೂತ್ರಾಣಿ ಚಕಾರ ॥ ೩ ॥

---

(ಕ) ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ । ಅತೋ ಮಿಥೋಽಪಿ ಭೇದೋ ನ ತೇಷಾಂ ಕಶ್ಚಿತ್ ಕದಾಚನ ॥ ಸ್ವರೂಪೇಽಪಿ ವಿಶೇಷೋಽಸ್ತಿ ಸ್ವರೂಪತ್ವವದೇವ ತು । ಭೇದಾಭಾವೇಽಪಿ ತೇನೈವ ವ್ಯವಹಾರಶ್ಚ ಸರ್ವತಃ ॥ ಗುಣಕ್ರಿಯಾದಿಗಳೆಲ್ಲವೂ ಶ್ರೀಹರಿಯ ಸ್ವರೂಪವೇ ಬೇರೆಯಲ್ಲ. ಆದಕಾರಣ ಆ ಗುಣಕ್ರಿಯಾದಿಗಳಿಗೂ ಪರಸ್ಪರವಾಗಿಯೂ ಭೇದವಿಲ್ಲ. ಸ್ವರೂಪತ್ವದಂತೆಯೇ ಸ್ವರೂಪದಲ್ಲಿಯೂ ವಿಶೇಷವದೆ. ಭೇದವಿಲ್ಲವಾದರೂ ವಿಶೇಷದಿಂದಲೇ ಸರ್ವ ವ್ಯವಹಾರವೂ ಕೂಡುತ್ತದೆ ಎಂದು ಪರಮೋಪನಿಷತ್ತಿನಲ್ಲಿ ಹೇಳಿಯದೆ.

(ಖ) ಅಭಿನ್ನತ್ವಮಭೇದಶ್ಚ ಯಥಾ ಭೇದವಿವರ್ಜಿತಂ । ವ್ಯವಹಾರ್ಯಂ ಪೃಥಕ್ತ್ವಸ್ಯಾದೇವಂ ಸರ್ವೇ ಗುಣಾ ಹರೇಃ ॥ ವಿಶೇಷೋಽಪಿ ಸ್ವರೂಪಂ ಸಃ ಸ್ವನಿರ್ವಾಹಕತಾಸ್ಯ ಚ । ಅಭಿನ್ನತ್ವಕ್ಕೂ ಅಭೇದಕ್ಕೂ ಹೇಗೆ ಭೇದವಿಲ್ಲವೋ, ವಿಶೇಷದಿಂದ ಪ್ರತ್ಯೇಕ ವ್ಯವಹಾರವು ಹೇಗೆ ಕೂಡುತ್ತದೋ ಹಾಗೆಯೇ ಶ್ರೀಹರಿಯ ಗುಣಗಳು. ಅಂದರೆ ಶ್ರೀಹರಿಗೂ ಆತನ ಗುಣಗಳಿಗೂ ಭೇದವಿಲ್ಲ. ವಿಶೇಷವು ಕೂಡಾ ಸ್ವರೂಪವೇ- ವಿಶೇ ಷಕ್ಕೆ ಸ್ವನಿರ್ವಾಹಕತ್ವವೂ ಕೂಡಾ ಇದೆ ಎಂದು ಬ್ರಹ್ಮತರ್ಕದಲ್ಲಿ ಹೇಳಿಯದೆ.)

## [೧]ಮೂಲವೇದ ನಿರೂಪಣ

(೧) ಏಕೋ ವೇದಃ ಕೃತೇ ಹ್ಯಾಸೀತ್ ತ್ರೇತಾಯಾಂ ಸ ತ್ರಿಧಾಭವತ್। ಸ ಏವ ಪಂಚಧಾ ಜಾತೋ ದ್ವಾಪರಂ ಪ್ರಾಪ್ಯ ವೈ ಯುಗಂ ॥ ಉತ್ಸನ್ನಃ ಸ ಕಲಿಂ ಪ್ರಾಪ್ಯ ವೇದಃ ಪ್ರಾಯೇಣ ಸರ್ವಶಃ। ಕೃತಯುಗದಲ್ಲಿ ಅವ್ಯಕ್ತವಾದ ವೇದರಾಶಿರೂಪವಾದ ಮೂಲವೇದ ಒಂದೇ ಇತ್ತು. ತ್ರೇತಾಯುಗದಲ್ಲಿ ಶ್ರೀಹರಿಯ ಪೂಜೆಗೆ ಸಾಧನವಾಗಿ ಮೂರು ವೇದಗಳು ಇದ್ದವು. ದ್ವಾಪರಯುಗದಲ್ಲಿ ಅಪೌರುಷೇಯಗಳಾದ ವೇದಗಳು ನಾಲ್ಕು. ಪೌರುಷೇಯಗಳಾದ ಇತಿಹಾಸಪುರಾಣಾದಿಗಳು ಒಂದು. ಒಟ್ಟು ಸೇರಿ ಐದು ವಿಧಗಳಾದವು. ಪ್ರಾಯಶಃ ಸರ್ವ ವೇದವೂ ಕಲಿಯುಗದಲ್ಲಿ ನಷ್ಟಪ್ರಾಯವಾಯಿತು. ದ್ವಾಪರಯುಗದಲ್ಲಿಯೂ ವ್ಯಾಸಾವತಾರದಿಂದ ಮೊದಲು ಅಪಪಾಠಾದಿಗಳಿಂದ ಸಂಪೂರ್ಣವಾಗಿ ನಾಶವು ಬಂದಿರುತ್ತದೆ.

## ಅವಾಂತರ ವೇದವಿಭಾಗ

(೨) ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ। ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ॥ ಏವಂ ಪುರಾಣವಚನಾತ್ ಉದ್ಧೃ ತಾ ಹಿ ತತಸ್ತತಃ । ಋಚಃ ಶಾಖಾತ್ವಮಾಪನ್ನಾಃ ಶಿಷ್ಯತಚ್ಛಿಷ್ಯಕೈರಿಮಾಃ ॥ ವೇದವ್ಯಾಸರು ಋಕ್ಕಿನ ದೆಸೆಯಿಂದ ಋಕ್‌ಗಳನ್ನು ತೆಗೆದು ಋಗ್ವೇದವನ್ನು ಮಾಡಿದರು. ನಿಗದದೆಸೆಯಿಂದ ಯಜುರ್ವೇದವನ್ನು ಮಾಡಿದರು. ಸಾಮದೆಸೆಯಿಂದ ಸಾಮವೇದವನ್ನು ಮಾಡಿದರು ಎನ್ನುವ ಪುರಾಣವನ್ನನುಸರಿಸಿ ಋಗಾದಿಗಳ ದೆಸೆಯಿಂದ ಉದ್ಧೃತಗಳಾದ ಋಗ್ವೇದಾದಿಗಳು ಶಿಷ್ಯಪ್ರಶಿಷ್ಯಾದಿಗಳಿಂದ ಶಾಖಾರೂಪಗಳಾದವು

## ಋಗಾದಿ ಶಾಖಾನಿರೂಪಣ

(೩) ಚಕ್ರೇ ವೇದತರೋಃ ಶಾಖಾಃ ದೃಷ್ಟ್ವಾ ಪುಂಸೋಽಲ್ಪಮೇಧಸಃ । ಅಲ್ಪಜ್ಞಾನಿಗಳಾದ ಪುರುಷರನ್ನು ಕಂಡು ವೇದಗಳ ದೆಸೆಯಿಂದ ಶಾಖೆಗಳನ್ನು ಮಾಡಿದರು.

## ಆಗಮಪ್ರಾಮಾಣ್ಯ

★ ಹಾಗಾದರೆ ಆಗಮವೇ ಪ್ರಮಾಣವಾಗದೆ ಇರುವುದರಿಂದ ತನ್ಮೂಲಕವಾಗಿ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವು

ಭಾಷ್ಯಾರ್ಥ ॥ ತತ್ವನಿಶ್ಚಯಕ್ಕಾಗಿ ಅವತಾರ ಮಾಡಿರುವುದರಿಂದ ಅವತಾರ ಮಾಡಿದೊಡನೆಯೇ ಇಷ್ಟಪ್ರಾಪ್ತಿ ಅನಿಷ್ಟಪರಿಹಾರಗಳನ್ನು ಇಚ್ಛಿಸತಕ್ಕ ಅಥವಾ ಅಪ್ರಾಪ್ತ ಸುಖಪ್ರಾಪ್ತಿ ಆತ್ಯಂತಿಕ ದುಃಖಪರಿಹಾರಗಳನ್ನು ಇಚ್ಛಿಸತಕ್ಕ ಇಷ್ಟಪ್ರಾಪ್ತಿ ಅನಿಷ್ಟಪರಿಹಾರಗಳ ಉಪಾಯ ವಿಶೇಷವನ್ನು ತಿಳಿಯದೆ ಇರುವ ಸಜ್ಜನರಿಗೆ ಇಷ್ಟಪ್ರಾಪ್ತಿ ಅನಿಷ್ಟಪರಿಹಾರಗಳ ಉಪಾಯವನ್ನು ತಿಳಿಸುವುದಕ್ಕಾಗಿ ಅಪಪಾಠಾದಿಗಳಿಂದ ತಿರೋಹಿತವಾದ ವೇದವನ್ನು (ಅಂದರೆ ಅವಾಂತರ ವೇದವಿಭಾಗದೆಸೆಯಿಂದ ಮೊದಲೇ ಸ್ವತ ಏವ ಅವ್ಯಕ್ತವಾಗಿರುವ ವೇದರಾಶಿರೂಪವಾದ ಮೂಲವೇದವನ್ನು ಋಕ್ ನಿಗ ದಾದಿರೂಪವಾದ ಉಪವೇದವನ್ನಾಗಿ) ವ್ಯಕ್ತೀಕರಿಸುತ್ತಾ (ಒಂದೊಂದರಿಂದ ಒಂದೊಂದು

---

ಸಿದ್ಧಿಸಲಾರದು ಎಂದು ಹೇಳಕೂಡದು. ಆಗಮ ಪ್ರಮಾಣವೆಂದು ಒಡಂಬಡದಿದ್ದರೆ ಬ್ರಹ್ಮಸೂತ್ರಗಳು ಅಪ್ರಮಾಣಗಳೆಂದು ಸಾಧಿಸಲಿ ಕ್ಕೂ ಸಾಧ್ಯವಿಲ್ಲ. ಏಕೆಂದರೆ ಅನುಮಾನ ಪ್ರಯೋಗವು ವಾಕ್ಯರೂಪವಾಗಿರುವುದ ರಿಂದ ವಾಕ್ಯವು ಬೋಧಕವಾಗದಿದ್ದರೆ ಅನುಮಾನ ಪ್ರಯೋಗವೇ ವ್ಯರ್ಥವು. ವಾಕ್ಯವು ಬೋಧಕವಾಗಿದ್ದರೆ ಪರರಿಗೆ ಹೇಗೆ ತಿಳಿಸುವುದು. ತಾನೂ ಇತರರಿಂದ ಹೇಗೆ ತಿಳಿದುಕೊಳ್ಳುವನು.

ಪ್ರತ್ಯಕ್ಷವು ಪ್ರಮಾಣವು, ಆಗಮವು ಪ್ರಮಾಣವಲ್ಲ ಎಂದೂ ಹೇಳಲಾಗುವುದಿ ಲ್ಲ. ಇದು ವಾಕ್ಯರೂಪವೇ ಆಗಿದೆ. ಆಗಮವು ಪ್ರಮಾಣವಲ್ಲವೆಂದು ಹೇಳುವುದಾದರೆ ಪ್ರತ್ಯಕ್ಷವೂ ಪ್ರಮಾಣವಾಗದೆ ಹೋಗಬೇಕಾಗುವುದು.

ಪ್ರತ್ಯಕ್ಷವು ಪ್ರಮಾಣವೆಂದು ನಿಶ್ಚಯವಾಗಿದೆ. ಎಂದರೆ ಆಗಮವು ಪ್ರಮಾಣವೆಂದು ನಿಶ್ಚಿತವೇ ಆಗಿದೆ.

ಮತ್ತೂ ಆಗಮವು ಪ್ರಮಾಣವಲ್ಲ ಎನ್ನುವ ಮಾತು ಪ್ರಮಾಣವೋ ಅಪ್ರಮಾಣ ವೋ ಆ ಮಾತು ಅಪ್ರಮಾಣವಾದರೆ ಆಗಮವೂ ಪ್ರಮಾಣವೇ ಆಯಿತು. ಆ ಮಾತು ಪ್ರಮಾಣವಾದರೆ ಸ್ವವ್ಯಾಹತಿಯು (ತನ್ನ ಮಾತಿನಿಂದಲೇ ತನಗೆ ವಿರೋಧ ವು) ಆದಕಾರಣ ಆಗಮವು ಪ್ರಮಾಣವೆಂದು ಅವಶ್ಯವಾಗಿ ಅಂಗೀಕರಿಸಲೇಬೇಕು

### ವೇದಪ್ರಾಮಾಣ್ಯ

(೨) ಆದುದರಿಂದ ಆಗಮವಿಶೇಷವಾದ ವೇದವು ಪ್ರಮಾಣವೆಂದು ಅಂಗೀಕರಿಸಲೇ ಬೇಕು. ಈ ಅಭಿಪ್ರಾಯದಿಂದಲೇ ಭಾಷ್ಯಕಾರರು ವೇದಂ ಎಂದು ಹೇಳಿರುವರು. ವೇದಾನದೇವ ಹಿ ವೇದ ಇತ್ಯುಚ್ಯತೇ ತತ್ವವನ್ನು ತಿಳಿಸಿಕೊಡುವುದರಿಂದಲೇ ವೇದ ವೆನ್ನಿಸುತ್ತದೆ. ವೇದಃ ಎಂದು ಹೇಳಿ ನ ವೇದಯತಿ= ತಿಳಿಸಿಕೊಡುವುದಿಲ್ಲ ಎಂದು ಹೇಳುವುದು ತಪ್ಪು.

### ಆಗಮಕ್ಕೆ ಸ್ವತಃ ಪ್ರಾಮಾಣ್ಯವು

(೩) ಪ್ರತ್ಯಕ್ಷದಂತೆ ಆಗಮವೂ ಸ್ವತ ಏವ ಪ್ರಮಾಣವು. ಅಂತೂ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು (ಯಾವುದರಿಂದ ಜ್ಞಾನವು ಹುಟ್ಟುತ್ತದೋ ಅದರಿಂದಲೇ ಅದರಲ್ಲಿದ್ದ ಪ್ರಾಮಾಣ್ಯ ಗ್ರಹಣವು ಎಂದು) ಅಂಗೀಕರಿಸಬೇಕು. ಆಗಮಕ್ಕೆ ಪ್ರಾಮಾಣ್ಯವು ಪರತಃ (ಮತ್ತೊಂದರಿಂದ) ಎಂದು ಅಂಗೀಕರಿಸಿದರೆ ಅನವಸ್ಥಾ ದೋಷವು ಬರುವುದು.

ಅಪ್ರಾಮಾಣ್ಯ ಕಾರಣಗಳಾದ ದೋಷಗಳು ಇಲ್ಲದಿದ್ದರೆ ಸ್ವತ ಏವ ಪ್ರಾಮಾಣ್ಯವು ಅಂತೂ ದೋಷದೆಸೆಯಿಂದ ಅಪ್ರಾಮಾಣ್ಯವು ದೋಷವಿಲ್ಲದಿದ್ದರೆ ಸ್ವತ ಏವ ಪ್ರಾಮಾಣ್ಯವು. ದೋಷವಾದರೂ ಪ್ರಾಮಾಣ್ಯಕ್ಕೆ ಪ್ರತಿಬಂಧಕವು. ಅಂತಹ ದೋಷಗಳನ್ನು ಪ್ರಬಲ ಪ್ರಮಾಣಗಳಿಂದ ತಿಳಿಯಬೇಕು.

(೪) ಅದುಷ್ಟಮಿಂದ್ರಿಯಂ ತ್ವಕ್ಷಂ ತರ್ಕೋಽದುಷ್ಟಸ್ಥಥಾಽನುಮಾ। ಆಗಮೋಽದುಷ್ಟವಾಕ್ಯಂ ಚ ಸ್ವದ್ಯಕ್ಷಾನುಭವಃ ಸ್ಮೃತಃ। ಬಲವತ್ಪ್ರಮಾಣತಶ್ಚೈವ ಜ್ಞೇಯಾ ದೋಷಾ ನ ಚಾನ್ಯಥಾ। ದೋಷವಿಲ್ಲದೆ ಇರುವ ಇಂದ್ರಿಯವು ಪ್ರತ್ಯಕ್ಷ ವೆನಿಸುತ್ತದೆ. ದೋಷವಿಲ್ಲದೆ ಇರುವ ತರ್ಕವು ಅನುಮಾನವು. ದೋಷವಿಲ್ಲದೆ ಇರುವ ವಾಕ್ಯವು

ಭಾಗವೆಂದು) ನಾಲ್ಕು ಪ್ರಕಾರವಾಗಿ ವಿಭಾಗಮಾಡಿದರು. (ಆ ಅವಾಂತರ ವೇದಗಳಲ್ಲಿ ಋಗ್ವೇದವನ್ನು) ಇಪ್ಪತ್ತುನಾಲ್ಕು ಶಾಖೆಯಾಗಿಯೂ, (ಯಜುರ್ವೇದವನ್ನು) ನೂರೊಂದು ಶಾಖೆಯಾಗಿಯೂ, (ಸಾಮವೇದವನ್ನು) ಸಹಸ್ರಶಾಖೆಯಾಗಿಯೂ, (ಅಥರ್ವವೇದವನ್ನು) ಹನ್ನೆರಡು ಶಾಖೆಯಾಗಿಯೂ (ವಿಭಾಗ ಮಾಡಿದರು) (ಹೀಗೆ ಉಪೋದ್ಘಾತವನ್ನು ಹೇಳಿ ಪ್ರಕೃತವನ್ನು ಹೇಳುತ್ತಾರೆ). ಆ ಸರ್ವ

---

ಆಗಮವು. ತನಗೆ ಹುಟ್ಟಿದ ಜ್ಞಾನವು ಅನುಭವವು ಪ್ರಬಲ ಪ್ರ ಮಾಣಗಳಿಂದಲೇ ದೋಷಗಳನ್ನು ತಿಳಿಯಬೇಕು. ಬೇರೆ ರೀತಿಯಾಗಿ ಅಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

## ವೇದಾಪೌರುಷೇಯತ್ವ ನಿರೂಪಣ

(೪) ವೇದವು ಅಪೌರುಷೇಯವಾದುದರಿಂದ ದೋಷಸಂಭಾವನೆ ಸಹ ಇಲ್ಲ. ವೇದವನ್ನು ಪುರುಷನು ಮಾಡಿದ್ದು ಎಂದು ಹೇಳುವುದಾದರೆ ಕರ್ತೃಪುರುಷನಲ್ಲಿ ಅಜ್ಞಾನ ವಂಚನೆ ಮೊದಲಾದ ದೋಷಗಳನ್ನು ಶಂಕಿಸಬಹುದು. ವೇದಗಳಿಗೆ ನಿತ್ಯತ್ವವನ್ನು ಅಂಗೀಕರಿಸದಿದ್ದರೆ ಇದು ಧರ್ಮವು, ಇದು ಅಧರ್ಮವು ಇತ್ಯಾದಿಗಳೂ ಸಿದ್ಧಿಸಲಾರವು. ಧರ್ಮಾದಿಗಳು ಪ್ರತ್ಯಕ್ಷಕ್ಕೂ ಯುಕ್ತಿಗೂ ವಿಷಯವಾಗದೆ ಇದ್ದ ಪ್ರಯುಕ್ತವೇ ಅವುಗಳನ್ನು ತಿಳಿದುಕೊಳ್ಳುವುದಕ್ಕಾಗಿ ವಾಕ್ಯವನ್ನು ಅಪೇಕ್ಷಿಸಲೇ ಬೇಕು. ಆ ವಾಕ್ಯವನ್ನು ಪುರುಷನು ಮಾಡಿದ್ದು ಎಂದು ಹೇಳುವುದಾದರೆ ಆತನಿಗೆ ಸರ್ವಜ್ಞತ್ವಾದಿಗಳನ್ನು ಪ್ರಮಾಣವಿಲ್ಲದೇನೇ ಕಲ್ಪಿಸಬೇಕಾದುದರಿಂದ ಕಲ್ಪನಾ ಗೌರವವು ಬರುವುದು.

ಹಾಗಾದರೆ ಪ್ರಮಾಣಾಂತರದಿಂದ ಈಶ್ವರನು ಸಿದ್ಧಿಸುವನು ಎಂದರೆ ಸರ್ವಜ್ಞನಾದ ಈಶ್ವರನು ಸಿದ್ಧನಾದರೆ ಅವನು ಮಾಡಿರುವ ಪ್ರಯುಕ್ತ ವೇದಕ್ಕೆ ಪ್ರಾಮಾಣ್ಯ ವು ಸಿದ್ಧಿಸುತ್ತದೆ. ಪ್ರಾಮಾಣ್ಯ ಸಿದ್ಧವಾದರೆ ಆ ವೇದದಿಂದ ಸರ್ವಜ್ಞನು ಸಿದ್ಧಿಸುವನು ಎಂದು ಅನ್ಯೋನ್ಯಾಶ್ರಯದೋಷವು ಬರುವುದು. ಆದಕಾರಣ ವೇದವು ಅನಾದಿ ನಿತ್ಯವು, ಅಪೌರುಷೇಯವು, ಸ್ವತ ಏವ ಪ್ರಮಾಣವೆಂದೂ ಸಿದ್ಧವಾಯಿತು.

(೫) ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ ತಸ್ಮಾದಾಹುರ್ವೇದಾಃ ॥ ಇಂದ್ರಿಯಗಳೂ ಅನುಮಾನವೂ ಶ್ರೀಹರಿಯನ್ನು ತಿಳಿಸಿಕೊಡುವುದಿಲ್ಲ. ವೇದಗಳೇ ತಿಳಿಸಿಕೊಡುತ್ತವೆ ಎಂದು ಪಿಪ್ಪಲಾದ ಶ್ರುತಿಯು.

(೬) ವಾಚಾ ವಿರೂಪ ನಿತ್ಯಯಾ ನಿತ್ಯಭೂತವಾದ ವೇದವಚನದಿಂದ ಸ್ತೋತ್ರಮಾಡುತ್ತೇನೆ. ಎಂದು ಋಗ್ವೇದವು.

(೭) ಶ್ರುತಿರ್ವಾವ ನಿತ್ಯಾ ಅನಿತ್ಯಾ ವಾವ ಸ್ಮೃತಯಃ ಶ್ರುತಿಯು ಅನಾದಿನಿತ್ಯವು. ಸ್ಮೃತಿಗಳು ಅನಿತ್ಯಗಳು ಎಂದು ಪೈಂಗಿ ಶ್ರುತಿಯು.

(೮) ವೇದಾಸ್ತೇ ನಿತ್ಯವಿಜ್ಞತ್ವಾಚ್ಛ್ರುತಯಶ್ಚಾಖಿಲೈಃ ಶ್ರುತೇಃ। ಆಮ್ನಾಯೋಽನನ್ಯಥಾ ಪಾಠಾದೀಶ-ಬುದ್ಧಿಸ್ಥಿತಾಸ್ಸದಾ ॥ ನಿರಂತರದಲ್ಲಿಯೂ ತಿಳಿಯಲ್ಪಡುವುದರಿಂದ ವೇದಗಳೆನಿಸುತ್ತವೆ. ಎಲ್ಲರಿಗೂ ಶ್ರವಣಗೋಚರಗಳಾಗಿರುವುದರಿಂದ ಶ್ರುತಿಗಳೆನಿಸುತ್ತವೆ. ವ್ಯತ್ಯಾಸವಿಲ್ಲದೆ ಏಕರೀತಿಯಾಗಿ ಪಾಠವಿದ್ದುದರಿಂದ ಆಮ್ನಾಯವೆನಿಸುತ್ತದೆ. ಸರ್ವದಾ ಈಶ್ವರನ ಬುದ್ಧಿಯಲ್ಲಿ ಇರತಕ್ಕವುಗಳು ಎಂದು ಮಹಾವಾರಾಹದಲ್ಲಿದೆ.

## ಅನ್ವಿತಾಭಿಧಾನವಾದವು

(೯) ಬೇರೆ ಪದಗಳಿಂದ ಅನ್ವಿತವಾಗದೆ ಇರುವ ಅರ್ಥವೇ ಇಲ್ಲದಿರುವುದರಿಂದ ಇತರ ಪದಗಳಿಂದ ಅನ್ವಿತವಾಗದೆ ಇರುವುದರಲ್ಲಿ ಶಬ್ದಗಳಿಗೆ ಶಕ್ತಿ ಎಂಬುವದು ಕೂಡುವುದಿಲ್ಲ. ಎಲ್ಲಾ ಶಬ್ದವು ಅನ್ವಿತವಾಗಿಯೇ ತೋರುತ್ತದೆ. ಒಂದು ಪದವನ್ನು ಕೇಳಿದೊಡನೆಯೇ ಸಾಮಾನ್ಯವಾಗಿ ಅನ್ವಯವು ತೋರುತ್ತಿರಲು ವಿಶೇಷವಾಗಿ ಅನ್ವ ಯಾಂಕ್ಷೆಯು ಬರುವಾಗ್ಗೆ ಪದಾಂತರವನ್ನು ಕೇಳಿದೊಡನೆಯೇ ಆಕಾಂಕ್ಷೆಯು ಪೂರ್ಣವಾಗುತ್ತದೆ. ಆದಕಾರಣ ಪದಗಳು ಸಾಮಾನ್ಯವಾಗಿ ಯೋಗ್ಯೇತರಾನ್ವಿತವಾದ ಸ್ವಾರ್ಥವನ್ನೇ ಹೇಳುತ್ತವೆ. ಈ ವಿಷಯವನ್ನು ತಮ್ಯೋಗಮವಿಜಾನತಾಂ ತಜ್ಜ್ಞಾಪ ನಾರ್ಥಂ ಎನ್ನುವುದರಿಂದು ಸೂಚಿಸಿರುವರು.

ವೇದಗಳ ಅರ್ಥವನ್ನು (ಉಪಕ್ರಮಾದಿ ಯುಕ್ತಿಗಳಿಂದ) ನಿರ್ಣಯಿಸುವುದಕ್ಕಾಗಿ ವೇದದ ಅಥವಾ ವೇದಾರ್ಥಭೂತನಾದ ಪರಬ್ರಹ್ಮನ ಸ್ವರೂಪನಿರ್ಣಾಯಕಗಳಾದ ಬ್ರಹ್ಮಸೂತ್ರಗಳನ್ನು (ವೇದವ್ಯಾಸರು) ನಿರ್ಮಿಸಿರುವರು.

ವಿಶೇಷಾಂಶ ॥ (ಅ) ಸತ್ವರಜಸ್ತಮೋಗುಣರೂಪವಾದ ಮೂಲಪ್ರಕೃತಿಯಂತೆ ಆ ವ್ಯಕ್ತವಾಗಿ (ಅಂದರೆ ಋಕ್‌ನಿಗದಾದಿರೂಪದಿಂದ ವ್ಯಕ್ತವಾಗದೆ ಇರುವ) ವೇದರಾಶಿ ರೂಪವಾದ ಮೂಲವೇದ ಒಂದೇ ಕೃತಯುಗದಲ್ಲಿ ಇತ್ತು. ಆ ಮಹಾವೇದವನ್ನು ಶ್ರೀನಾರಾಯಣನು ಹಯಗ್ರೀವಾವತರಾದಿಂದ ಋಕ್‌ನಿಗದ ಸಾಮ ಅಥರ್ವ ಎಂದು ನಾಲ್ಕು ಪ್ರಕಾರ ಉಪವೇದಗಳನ್ನಾಗಿ ವಿಭಾಗಮಾಡಿದನು. ಆಮೇಲೆ ವೇದವ್ಯಾಸರು ಆ ನಾಲ್ಕು ಉಪವೇದಗಳ ಮಧ್ಯದಲ್ಲಿ ಒಂದೊಂದರಿಂದ ಒಂದೊಂದು

### ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು

(೬) ಪದಗಳಿಗೆ ಅನ್ವಿತಾಭಿಧಾಯಿತ್ವವು ಇದ್ದೇ ಇದೆ. ಆದಾಗ್ಯೂ ಅವುಗಳಿಗೆ ಸಿದ್ಧಾನ್ವಿತದಲ್ಲಿ ಶಕ್ತಿಯಿಲ್ಲ, ಮತ್ತೆ ಕಾರ್ಯಾನ್ವಿತದಲ್ಲಿಯೇ ಅಲ್ಲಿಯೇ ವ್ಯುತ್ಪತ್ತಿಯು ಎಂದರೆ ಅದು ಅಯುಕ್ತವು. ಕಾರ್ಯಕ್ಕೆ ಕಾರ್ಯಾನ್ವಯವಿರುವುದಿಲ್ಲ. ಮತ್ತೂ ಅಯಂ ಪಿತಾ ಇಯಂ ಮಾತಾ ಇದು ಮೊದಲಾದ ಸಿದ್ಧಪರವಾಕ್ಯದಿಂದ ಸಿದ್ಧಾನ್ವಿತಸ್ವಾರ್ಥದಲ್ಲಿಯೇ ಬಾಲಕನಿಗೆ ವ್ಯುತ್ಪತ್ತಿಯು ಹುಟ್ಟುತ್ತದೆ. ಆದ ಕಾರಣ ವೇದವಾಕ್ಯಗಳಿಗೆ ಅನಂತಾನಂತಗುಣಸಮುದಾಯಗಳಿಂದ ಪರಿಪೂರ್ಣನಾದ ಅಥವಾ ಇಷ್ಟಸಾಧನನಾದ ಸಿದ್ಧರೂಪನಾದ ಬ್ರಹ್ಮನಲ್ಲಿಯೇ ಪ್ರಾಮಾಣ್ಯವು ಸಿದ್ಧವಾಯಿತು.

### ಪುರಾಣಗಳಿಗೆ ಉಪಾದೇಯತ್ವವು

(೭) ಅಪೌರುಷೇಯವಾದ ವೇದವು ಪ್ರಮಾಣವಾಗಲಿ, ಪುರಾಣಾದಿಗಳು ಹೇಗೆ ಪ್ರಮಾಣವು ಎಂದರೆ ಪುರಾಣಗಳು ವೇದಗಳನ್ನು ಅನುಸರಿಸುತ್ತಾ ಇರುವುದರಿಂದಲೂ ವೇದದಿಂದ ಪರಿಗೃಹೀತಗಳಾಗಿರುವುದರಿಂದಲೂ ಪ್ರಮಾಣಗಳೇ ಆಗಿವೆ.

(ಕ) ಋಗ್ವೇದಂ ಭಗವೋಧ್ಯೇಽಮಿ ಎಂದಾರಂಭಿಸಿ ಇತಿಹಾಸಂ ಪುರಾಣಂ ಪಂಚ ಮಂ ವೇದಾನಾಂ ವೇದಂ ಪೂಜ್ಯರೇ ಋಗ್ವೇದವನ್ನು ಅಧ್ಯಯನಮಾಡುತ್ತೇನೆಂದು ಹೇಳಿ ವೇದಗಳಲ್ಲಿ ಐದನೇ ವೇದವಾದ ಇತಿಹಾಸವನ್ನೂ ಪುರಾಣವನ್ನೂ ಅಧ್ಯಯನ ಮಾಡುತ್ತೇನೆಂದು ಛಂದೋಗ ಶ್ರುತಿಯು.

(ಖ) ಇತಿಹಾಸಃ ಪುರಾಣಂ ವಿದ್ಯಾಃ ಉಪನಿಷದಃ ಶ್ಲೋಕಾಃ ಎಂದು ಬೃಹದಾರಣ್ಯಕದಲ್ಲಿ ಇದೆ.

(ಗ) ವೇದೇಷು ಸರ್ವೇಷು ತಥೇತಿಹಾಸೇ ಎಂದು ಪೈಂಗಿ ಶ್ರುತಿಯು.

(ಘ) ಉಪಾಸ್ಯ ಏಕಃ ಪರತಃ ಪರೋ ಯಃ ವೇದೈಶ್ಚ ಸರ್ವೈಃ ಸಹ ಚೇತಿಹಾ ಸೈಃ । ಉತ್ತಮೋತ್ತಮವಾದ ಶ್ರೀಹರಿಯು ಇತಿಹಾಸಪುರಾಣಗಳಿಂದ ಕೂಡಿದ ವೇದಗಳಿಂದ ಉಪಾಸ್ಯನು ಎಂದು ಭಾಲ್ಲವೇಯ ಶ್ರುತಿಯು. ಇದು ಮೊದಲಾದ ಅನೇಕ ಪ್ರಮಾಣಗಳಿಂದ ಪುರಾಣಗಳೂ ಉಪಾದೇಯಗಳೇ ಎಂದು ಸಿದ್ಧವಾಗುತ್ತವೆ.

(೧) ಭಾಷಾತ್ರಯಂ ನ ಜಾನಾತಿ ರೀತಿನಾಂ ಶತಮೇವ ಚ । ಪುರಾಣಾರ್ಥಂ ವದನ್ಯಾತಿ ನರಕಂ ನಾತ್ರಸಂಶಯಃ ॥ ಗುಹ್ಯ ದರ್ಶನ ಸಮಾಧಿ ಎಂಬ ಮೂರು ಭಾಷೆಗಳನ್ನೂ ನೂರು ರೀತಿಗಳನ್ನೂ ತಿಳಿಯದೆ ಪುರಾಣಾರ್ಥವನ್ನು ಹೇಳಿದರೆ ನರಕ ವನ್ನು ಹೊಂದುತ್ತಾನೆಂದು ಬ್ರಾಹ್ಮಪುರಾಣದಲ್ಲಿ ಹೇಳಿಯದೆ. ಆದಕಾರಣ ಪುರಾ ಣಾದಿಗಳಿಗೆ ಸ್ವತಃ ಅನ್ಯೋನ್ಯವಾಗಲೀ ವಿರೋಧವಿಲ್ಲ. ಶೈವಾದಿ ಪುರಾಣಗಳಲ್ಲಿ ದರ್ಶನಭಾಷೆಗೆ ಪ್ರಾಚುರ್ಯವಿದ್ದುದರಿಂದ ವೇದವಿರುದ್ಧದಂತೆ ತೋರಿದರೂ ವಸ್ತುತಃ ಅಲ್ಲಿಯೂ ವಿಷ್ಣುಸರ್ವೋತ್ತಮತ್ವಾದಿಗಳನ್ನೇ ಹೇಳಿಯದೆ. ದುರ್ಜನರನ್ನು ಮೋಹಿಸುವುದಕ್ಕಾಗಿ ಪೂರ್ವಪಕ್ಷಾಂಶವು ಪೆಟ್ಟಿಗೆ ಇದೆ. ಆದುದರಿಂದ ಆಚಾರ್ಯರು ಪರಮಾಪ್ತರೆಂದು ಸಿದ್ಧವಾಯಿತು.

ಭಾಗವನ್ನು ತೆಗೆದು ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣವೇದ ಎನ್ನುವ ಅವಾಂತರ ವೇದಗಳನ್ನಾಗಿ ವಿಭಾಗಮಾಡಿದರು. ಆಮೇಲೆ ಅಧ್ಯಯನಮಾಡುವವರಿಗೆ ಅಲ್ಪಶಕ್ತಿ ಇರುವುದೆಂದು ನೋಡಿ ಋಗ್ವೇದ ಮೊದಲಾದ ಅವಾಂತರ ವೇದಗಳ ಮಧ್ಯದಲ್ಲಿ ಋಗ್ವೇದವನ್ನು ಇಪ್ಪತ್ತನಾಲ್ಕು ಶಾಖೆಯನ್ನಾಗಿಯೂ, ಯಜುರ್ವೇದವನ್ನು ನೂರಒಂದು ಶಾಖೆಯನ್ನಾಗಿಯೂ, ಸಾಮವೇದವನ್ನು ಸಹಸ್ರ ಶಾಖೆಯನ್ನಾಗಿಯೂ ಮತ್ತು ಅಥರ್ವಣವೇದವನ್ನು ಹನ್ನೆರಡು ಶಾಖೆಯನ್ನಾಗಿಯೂ ವಿಭಾಗ ಮಾಡಿರುವರು.

(ಆ) ವಕ್ತೃಗಳಾದ ವೇದವ್ಯಾಸರು ಶ್ರೀನಾರಾಯಣನ ಅವತಾರಭೂತರೆಂದು ಹೇಳಿದ್ದರಿಂದ ಪ್ರಮಾದ ಅಜ್ಞಾನ ಮೊದಲಾದ ದೋಷಗಳು ಇಲ್ಲವೆಂದು ಹೇಳಿದಂತೆ ಆಯಿತು.

(ಇ) ಬ್ರಹ್ಮಾದಿಗಳು ಪ್ರಾರ್ಥಿಸಿದರು ಎಂದು ಹೇಳಿದ್ದರಿಂದ ಶ್ರೋತೃಗಳಲ್ಲಿ ದೋಷವಿಲ್ಲ ವೆಂದೂ ತನ್ನಿಮಿತ್ತವಾಗಿ ಹೇಳುವವನಲ್ಲಿ ವಂಚನೇಚ್ಛೆ ಇಲ್ಲವೆಂದೂ ಉಕ್ತವಾಯಿತು.

(ಈ) ತನ್ನಿರ್ಣಯಾಯ ಎಂದು ಹೇಳಿದ್ದರಿಂದ ಅಜ್ಞಾನವನ್ನು ಪರಿಹರಿಸುವುದೇ ಪ್ರಸಕ್ತವಾದುದ ರಿಂದ ಪ್ರಸಂಗದೋಷ ಇಲ್ಲವೆಂದೂ ಅಪಹಾಸಕ್ಕಾಗಿ ಹೇಳಿದ್ದು ಅಲ್ಲ ವೆಂದೂ ಹೇಳಿದಂತೆ ಆಯಿತು. ಆದುದರಿಂದ ಸೂತ್ರಗಳಿಗೆ ಆಪ್ತಮೂಲಕತ್ವವು ಸಿದ್ಧವಾಯಿತು.

(ಉ) ಬ್ರಹ್ಮಸೂತ್ರಾಣಿ ಎನ್ನುವುದರಿಂದ ಬ್ರಹ್ಮಪರಗಳಾದ ಶ್ರುತಿಗಳ ವ್ಯಾಖ್ಯಾನರೂಪವಾದುದ ರಿಂದ ಶ್ರುತಿಮೂಲಕತ್ವವೂ ಶ್ರುತ್ಯರ್ಥನಿರ್ಣಾಯಕ ನ್ಯಾಯಗಳನ್ನು ತೋರಿಸುವುದರಿಂದ ಯುಕ್ತಿಮೂಲಕತ್ವವೂ ಸೂಚಿತವಾಯಿತು. ಅಂತೂ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವ ಸಿದ್ಧವಾಯಿತು.

ಪೀಠಿಕೆ ॥ ಹಿಂದೆ ಹೇಳಿದ ಅರ್ಥವನ್ನೇ ಪ್ರಮಾಣದಿಂದ ದೃಢೀಕರಿಸುತ್ತಾರೆ.

**ಭಾಷ್ಯ ॥ ತಚ್ಚೋಕ್ತಂ ಸ್ಕಾಂದೇ। ನಾರಾಯಣಾದ್ವಿನಿಷ್ಪನ್ನಂ ಜ್ಞಾನಂ ಕೃತ ಯುಗೇಸ್ಥಿತಂ । ಕಿಂಚಿತ್ತದನ್ಯಥಾ ಜಾತಂ ತ್ರೇತಾಯಾಂ ದ್ವಾಪರೇಽಖಿಲಮ್ ॥ ೪ ॥**

**ಭಾಷ್ಯಾರ್ಥ ॥** ದ್ವಾಪರೇ ಇತ್ಯಾದಿಗಳಿಂದ ನಾವು ಹೇಳಿದ ಪ್ರಮೇಯವು ಸ್ಕಾಂದಪುರಾಣದಲ್ಲಿ ಹೇಳಿದ್ದೇ ಆಗಿದೆ. ಶ್ರೀನಾರಾಯಣನ ದೆಸೆಯಿಂದ (ಬ್ರಹ್ಮಾದಿಗಳ ದ್ವಾರಾ ಉಪದೇಶದಿಂದ) ಹುಟ್ಟಿದ ಸಗುಣತ್ವ ಮೊದಲಾದ ಸರ್ವ ವಿಷಯಕವಾದ ತತ್ತ್ವಜ್ಞಾನವು ಇಪ್ಪತ್ತೆಂಟನೇ ಕೃತಯುಗದಲ್ಲಿ (ಹೇಗೆ ಉತ್ಪನ್ನವಾಗಿದೆಯೋ ಹಾಗೆಯೇ ಸಂಶಯಾದಿಗಳಿಗೆ ವಿಷಯವಾಗದೇನೇ ಸಜ್ಜನರಲ್ಲಿ) ಇತ್ತು. (ಅಂದರೆ ಜ್ಞಾನ ವಿಷಯದಲ್ಲಿ ಸಂಶಯಾದಿಗಳು ಇರಲಿಲ್ಲ. ಆ ಜ್ಞಾನವು ಇಪ್ಪತ್ತೆಂಟನೇ ತ್ರೇತಾಯು ಗದಲ್ಲಿ ಕೆಲವು ವಿಷಯದಲ್ಲಿ ಅಥವಾ ಕೆಲವು ಭಾಗವು ವ್ಯತ್ಯಸ್ತವಾಯಿತು). ಇಪ್ಪತ್ತೆಂಟನೇ ದ್ವಾಪರಯುಗದಲ್ಲಿ ಸರ್ವರಲ್ಲಿರತಕ್ಕ ತತ್ತ್ವಜ್ಞಾನವು ವ್ಯತ್ಯಸ್ತವಾಯಿತು.

(೨) ಆಚಾರ್ಯರಿಗೆ ಸರ್ವಜ್ಞತ್ವವು ಬಳಿತ್ಥಾಸೂಕ್ತ ಮೊದಲಾದ ವೇದಗಳಿಂದಲೂ ಪುರಾಣಾದಿಗಳಿಂದಲೂ ಸಿದ್ಧವಾಗಿದೆ.

(೩) ಯದ್ವೈ ಕಿಂ ಚ ಮನುರವದತ್ ತದ್ಭೇಷಜಂ ಸರ್ವಜ್ಞರಾದ ವಾಯುದೇವರು ಹೇಳಿದ್ದು ಔಷಧತುಲ್ಯವು.

ವಿಶೇಷಾಂಶ ॥ ಈ ಪ್ರಮೇಯಗಳು ಬಹುಪುರಾಣಾದಿಗಳಿಂದ ಸಿದ್ಧಗಳಾದಾಗ್ಯೂ ಸ್ಕಾಂದ ಪುರಾಣವಾಕ್ಯಗಳಿಂದಲೂ ದೃಢೀಕರಿಸಿದರು.

ಪೀಠಿಕೆ ॥ ಹಾಗಾದರೆ ಕಾಲಪ್ರಯುಕ್ತವಾಗಿ ವ್ಯತ್ಯಾಸಬರುವುದಾದರೆ ದ್ವಾಪರಯುಗದಲ್ಲಿ ಎರಡೇ ಅಂಶಕ್ಕೆ ವ್ಯತ್ಯಾಸ ಬರುವುದು ಯುಕ್ತವು. ಸರ್ವಾಂಶಕ್ಕೆ ವ್ಯತ್ಯಾಸ ಬಂದದ್ದು ಯುಕ್ತವಲ್ಲ ಎಂದರೆ ಸರ್ವಾಂಶಕ್ಕೂ ವ್ಯತ್ಯಾಸ ಬರಲಿಕ್ಕೆ ವಿಶೇಷ ಕಾರಣಗಳನ್ನುಹೇಳುತ್ತಾರೆ.

ಭಾಷ್ಯ ॥ ಗೌತಮಸ್ಯ ಋಷೇಃ ಶಾಪಾಜ್ಞಾನೇ ತ್ವಜ್ಞಾನತಾಂ ಗತೇ ।
[೧]ಸಂಕೀರ್ಣಬುದ್ಧಯೋ ದೇವಾ ಬ್ರಹ್ಮರುದ್ರಪುರಸ್ಸರಾಃ ।
ಶರಣ್ಯಂ ಶರಣಂ ಜಗ್ಮುರ್ನಾರಾಯಣಮನಾಮಯಮ್ ॥ ೫ ॥

ಭಾಷ್ಯಾರ್ಥ ॥ ಗೌತಮ ಋಷಿಗಳ ಶಾಪದೆಸೆಯಿಂದಲೂ ಕೂಡ ತತ್ವಜ್ಞಾನವು ತತ್ವ ಜ್ಞಾನವಿರುದ್ಧವಾದ ಸಂಶಯ ಭ್ರಾಂತಿಗಳಿಗೆ ವಿಷಯವಾಗುತ್ತಿರಲು ಸಜ್ಜನರಲ್ಲಿ ದಯೆಯಿಂದ ಕೂಡಿದ ಬ್ರಹ್ಮ ಮೊದಲಾದ ದೇವತೆಗಳು ಮೊರೆಹೋಗಲಿಕ್ಕೆ ಯೋಗ್ಯನಾದ ಅಥವಾ ರಕ್ಷಕರಲ್ಲಿ ಶ್ರೇಷ್ಠನಾದ ದೋಷರಹಿತನಾದ ಶ್ರೀನಾರಾಯಣನನ್ನು ಮೊರೆ ಹೊಂದಿದರು.

ವಿಶೇಷಾಂಶ ॥ (ಅ) ಬ್ರಹ್ಮಾದಿ ದೇವತೆಗಳ ಬುದ್ಧಿಯು ಸಂಕೀರ್ಣವಾಯಿತೆಂದರೆ ಸಂಶಯ ಭ್ರಮೆಗಳಿಂದ ಮಿಶ್ರವಾದ ಬುದ್ಧಿಯುಳ್ಳ ಸಜ್ಜನರಲ್ಲಿ ದಯೆಯಿರುವಿಕೆಯು. ಇತರರ ಬುದ್ಧಿಗಳಂತೆ ಸಂಶಯ ಭ್ರಾಂತಿಗಳಿಂದ ಮಿಶ್ರವಾದುದೆಂದಲ್ಲ.

(ಆ) ಗೌತಮರ ಶಾಪವು ಗೋವನ್ನು ನಿರ್ಮಿಸಿರುವ ಋಷಿಗಳಿಗೆ ಮಾತ್ರ ಸಂಬಂಧಪಟ್ಟದ್ದು. ಬ್ರಹ್ಮಾದಿಗಳು ಗೋವನ್ನು ನಿರ್ಮಿಸಿದವರಲ್ಲ. ಅವರಿಗೆ ದ್ವಾಪರಾಖ್ಯ ಕಾಲಸಾಮರ್ಥ್ಯದಿಂದಲೂ ಜ್ಞಾನವು ನಷ್ಟವಾಗುವುದಿಲ್ಲ. ಲೋಕದಲ್ಲಿದ್ದ ಜನರಿಗಾದರೂ ಸಂಪ್ರದಾಯಪ್ರವರ್ತಕರೇ ಇಲ್ಲದಿರುವುದರಿಂದಲೂ ಕಾಲಮಹಿಮೆಯಿಂದಲೂ ಅಜ್ಞಾನವುಂಟಾಯಿತು.

ಪೀಠಿಕೆ ॥ ದೇವತೆಗಳಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟ ಶ್ರೀಹರಿಯು ಏನು ಮಾಡಿರುವನೆಂದರೆ—

---

೧. ತೇ ವಾಯುವೇ ಮನವೇ ಬಾಧಿತಾಯ । ಸರ್ವಜ್ಞರಾದ ಸಂಸಾರಬಾಧೆಯುಳ್ಳವರಿಂದ ರಕ್ಷಕನೆಂದು ಹೊಂದಲ್ಪಟ್ಟ ವಾಯುದೇವರಿಗೋಸ್ಕರ ಅಂದರೆ ವಾಯುವಿಷಯಕವನ್ನಾಗಿ ಬುದ್ಧಿಯನ್ನು ಮಾಡಿದರು. ಇತ್ಯಾದಿ ಪ್ರಮಾಣಗಳಿಂದ ದೋಷವಿಲ್ಲದವರೆಂದೂ ಸರ್ವಜ್ಞರೆಂದೂ ಸಿದ್ಧವಾಯಿತು.

ಬ್ರಹ್ಮವಿಷ್ಣೂ ಚ ಲೋಕೇಷು ಸರ್ವೇಷಾಪ್ತತಮೌ ಮತೌ । ಆಪ್ತಾಸ್ತದಿತರೇ ಜ್ಞೇಯಾಃ ದೇವಾಮುನಯ ಏವ ಚ । ಸರ್ವ ಜಗತ್ತುಗಳಲ್ಲಿ ಬ್ರಹ್ಮ ವಾಯುಗಳು ಶ್ರೀಹರಿಯು ಅತ್ಯಂತ ಆಪ್ತರು ಇತರರಾದ ದೇವತೆಗಳೂ ಮುನಿಗಳೂ ಆಪ್ತರೆಂದು ತಿಳಿಯಬೇಕು ಎಂದು ವಿಷ್ಣುಸಂಹಿತೆಯಲ್ಲಿ ಹೇಳಿದೆ.

ನಷ್ಟಧರ್ಮಜ್ಞಾನಲೋಕಕೃಪಾಲುಭಿಃ ಬ್ರಹ್ಮರುದ್ರೇಂದ್ರಾದಿಭಿಃ ನಷ್ಟವಾದ ಧರ್ಮ ಮತ್ತು ಜ್ಞಾನಗಳುಳ್ಳ ಸಜ್ಜನರಲ್ಲಿ ದಯೆಯುಳ್ಳ ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳಿಂದ ಪ್ರಾರ್ಥಿತನಾದ ಶ್ರೀನಾರಾಯಣನು ಎಂದು ಗೀತಾಭಾಷ್ಯದಲ್ಲಿ ಹೇಳಿರುವರು.

**ಭಾಷ್ಯ ॥ ತ್ರೈವಿರ್ಜ್ಞಾಪಿತಕಾರ್ಯಸ್ತು ಭಗವಾನ್ ಪುರುಷೋತ್ತಮಃ ।**
**ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್ ॥ ೬ ॥**

ಭಾಷ್ಯಾರ್ಥ ॥ ಮಹಾಶಕ್ತಿಯುಳ್ಳ, ಕ್ಷರ, ಅಕ್ಷರ ಪುರುಷರಿಂದುತ್ತಮನಾದ, ಷಡ್ಗುಣಪೂರ್ಣನಾದ ಶ್ರೀನಾರಾಯಣನು ತನ್ನನ್ನು ಮೊರೆ ಹೊಂದಿದ ದೇವತೆಗಳಿಂದಲೇ ವಿಜ್ಞಾಪಿಸಿಕೊಳ್ಳಲ್ಪಟ್ಟ ಅವತಾರ ಮೊದಲಾದ ಕಾರ್ಯವುಳ್ಳವನಾಗಿ ಮುನಿರೂಪನಾದ ವೇದವ್ಯಾಸನಾಮಕನಾಗಿ ಪರಾಶರಮುನಿಯ ದೆಸೆಯಿಂದ ಸತ್ಯವತೀದೇವಿಯಲ್ಲಿ ಅವತಾರಮಾಡಿರುವನು.

ಪೀಠಿಕೆ ॥ ಅವತಾರಮಾಡಿದ ಮೇಲೆ ಉಂಟಾದ ಪ್ರಯೋಜನವನ್ನು ಹೇಳುತ್ತಾರೆ.

**ಭಾಷ್ಯ ॥ ಉತ್ಪನ್ನಾನ್ ಭಗವಾನ್ ವೇದಾನುಜ್ಜಹಾರ ಹರಿಃ ಸ್ವಯಂ। ಚತುರ್ಧಾ ವ್ಯಭಜತ್ತಾಂಶ್ಚ ಚತುರ್ವಿಂಶತಿಧಾ ಪುನಃ । ಶತಧಾ ಚೈಕಧಾ ಚೈವ ತಥೈವ ಚ ಸಹಸ್ರಧಾ। ಕೃಷ್ಣೋ ದ್ವಾದಶಧಾ ಚೈವ ॥ ೭ ॥**

ಭಾಷ್ಯಾರ್ಥ ॥ ಸಾಕ್ಷಾತ್ ಶ್ರೀಹರಿಯ ಅವತಾರಭೂತರಾದ ಜ್ಞಾನ ಮೊದಲಾದ ಗುಣಗಳುಳ್ಳ ವೇದವ್ಯಾಸದೇವರು ಅಪಪಾತಾದಿಗಳಿಂದ ತಿರೋಹಿತಗಳಾದ ವೇದಗಳನ್ನು ಇತರರ ಉಪದೇಶವಿಲ್ಲದೇನೇ ಉಚ್ಚಾರಣದಿಂದ ವ್ಯಕ್ತೀಕರಿಸಿದರು. ಆ ವೇದಗಳನ್ನು (ಅಂದರೆ ವ್ಯಾಸಾವತಾರದಿಂದ ಮೊದಲೇ ಹಯಗ್ರೀವರೂಪದಿಂದ ಋಕ್‌ನಿಗದಾದಿರೂಪವಾಗಿ ವಿಭಕ್ತಗಳಾದ ಆ ಉಪವೇದಗಳನ್ನು) (ಪುನಃ ಋಗ್ವೇದ ಮೊದಲಾದ ಭೇದದಿಂದ) ನಾಲ್ಕು ಭಾಗಗಳನ್ನು ಮಾಡಿದರು. (ಒಂದೊಂದು ಭಾಗವನ್ನು ಇಪ್ಪತ್ತನಾಲ್ಕು ಶಾಖೆ ಇತ್ಯಾದಿ ರೂಪವಾಗಿ ಅಂದರೆ ಹಾಗೆಯೇ ಋಗ್ವೇದವನ್ನು) ಇಪ್ಪತ್ತನಾಲ್ಕು ಶಾಖೆಯಾಗಿಯೂ, (ಯಜುರ್ವೇದವನ್ನು) ನೂರ ಒಂದು ಶಾಖೆಯಾಗಿಯೂ ಹಾಗೆಯೇ (ಸಾಮವೇದವನ್ನು) ಸಹಸ್ರಶಾಖೆಯಾಗಿಯೂ (ಅಥರ್ವಣವೇದವನ್ನು) ಹನ್ನೆರಡು ಶಾಖೆಯಾಗಿಯೂ ಇತರರ ಉಪದೇಶವಿಲ್ಲದೇನೇ (ಉಚ್ಚಾರಣದಿಂದ ಅಪಪಾತವಿಲ್ಲದಂತೆ) ವ್ಯಕ್ತೀಕರಿಸಿದರು. (ಇತರ ದ್ವಾಪರಗಳಲ್ಲಿದ್ದಂತೆ ಇತರರಿಂದ ವಿಭಾಗಮಾಡಿಸಿದ್ದಲ್ಲ)

ಪೀಠಿಕೆ ॥ ಪ್ರಕೃತವಾದುದನ್ನು ನಿರೂಪಿಸುತ್ತಾರೆ.

**ಭಾಷ್ಯ ॥ ಪುನಸ್ತಸ್ಯಾರ್ಥವಿತ್ತಯೇ। ಚಕಾರ ಬ್ರಹ್ಮಸೂತ್ರಾಣಿ ಯೇಷಾಂ ಸೂತ್ರತ್ವಮಂಜಸಾ ॥ ೮ ॥**

ಭಾಷ್ಯಾರ್ಥ ॥ ವೇದವಿಭಾಗಾನಂತರದಲ್ಲಿ ಆ ವೇದದ ಅರ್ಥಜ್ಞಾನಕ್ಕಾಗಿ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ನಿರ್ಮಿಸಿರುವರು.

ವಿಶೇಷಾಂಶ ॥ ವೇದಾನುಜ್ಜಹಾರ ಎಂದು ಹೇಳಿದುದರಿಂದ ವೇದಗಳಿಗೆ ಬಹುತ್ವವಿದ್ದರೂ ಆ ಎಲ್ಲಾ ವೇದಗಳಲ್ಲಿಯೂ ಸರ್ವೋತ್ತಮತ್ವರೂಪವಾದ ಮಹಾವಾಕ್ಯಾರ್ಥವು ಒಂದೇ ಪ್ರತಿಪಾದಿತವಾಗಿದೆ. ಅವುಗಳಲ್ಲಿ ಅರ್ಥಭೇದವನ್ನು ಶಂಕಿಸಕೂಡದು. ಈ ಅಭಿ ಪ್ರಾಯದಿಂದ **ತಸ್ಯಾರ್ಥವಿತ್ತಯೇ** ಎನ್ನುವಲ್ಲಿ ತಸ್ಯ ಎಂದು ಏಕವಚನವನ್ನು ಪ್ರಯೋಗಿಸಿರುವರು.

**ಪೀಠಿಕೆ ||** ಸೂತ್ರಗಳ ಲಕ್ಷಣವು ಮುಖ್ಯವಾದುದು ಯಾವುದೆಂದರೆ—

**ಭಾಷ್ಯ || ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ |**
**ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ || ೯ ||**

**ಭಾಷ್ಯಾರ್ಥ ||** (೧) ಎಷ್ಟು ಅಕ್ಷರಗಳು ಇಲ್ಲದೆ ಶ್ರುತ್ಯರ್ಥಗಳಿಂದ ವಿವಕ್ಷಿತ ವಾದ ಅರ್ಥವು ಸಿದ್ಧಿಸುವುದಿಲ್ಲವೋ ಆ ಅರ್ಥವನ್ನು ಪ್ರತಿಪಾದಿಸುವುದಕ್ಕಾಗಿ ಅಷ್ಟೇ ಅಕ್ಷರಗಳಿರುವಿಕೆಯು. ನಿಯಾಮಕವಿಲ್ಲದಿದ್ದರೆ ಅದಕ್ಕಿಂತ ಹೆಚ್ಚು ಅಕ್ಷರಗಳಿಲ್ಲದಿರುವಿಕೆಯು, ಅಲ್ಪಾಕ್ಷರವು. (೨) ಸಂದೇಹವನ್ನುಂಟುಮಾಡದಿರುವುದು (ಅಂದರೆ ಹೀಗೆಯೇ ಆಗಬೇಕು ಬೇರೆ ರೀತಿಯಾಗಿ ಅಲ್ಲ ಎಂದು ನಿರ್ಣೀತವಾದ ಅರ್ಥವುಳ್ಳದ್ದು) (೩) ಬೇರೆ ಯಾವುದರಿಂದಲೂ ಸಿಗದಿರುವ ಉತ್ತಮವಾದ ಅರ್ಥವನ್ನು ಹೇಳತಕ್ಕುದು. (೪) ಸರ್ವ ಶಾಖೆಗಳಲ್ಲಿದ್ದ ಪದಾರ್ಥವನ್ನಾಗಲೀ ವಾಕ್ಯಾರ್ಥವನ್ನಾಗಲೀ ನಿರ್ಣಯಿಸತಕ್ಕುದು. ಅಥವಾ ಒಂದು ಪ್ರಯೋಜನಕ್ಕೆ ಆವಶ್ಯಕವಾದ ಎಲ್ಲಾ ಅರ್ಥವನ್ನು ಪ್ರತಿಪಾದಿಸತಕ್ಕುದು. ((೫) ಅರ್ಥಜ್ಞಾನವಿಲ್ಲದೆ ಸಾಮವೇದದಲ್ಲಿ ಗಾನಭಾಗ ಪೂರಣ ಮೊದಲಾದ ಪ್ರಯೋಜನಕ್ಕಾಗಿರುವ ಅಕ್ಷರಗಳಂತೆ ವ್ಯರ್ಥಾಕ್ಷರಗಳಿಲ್ಲದಿರುವಿಕೆಯು. (೬) ಅಪಶಬ್ದ ಮೊದಲಾದ ಶಬ್ದದೋಷಗಳೂ, ಅರ್ಥದೋಷಗಳೂ ಇಲ್ಲದಿರುವುದು. (ಇಂತಹ ವಿಶೇಷಣಗಳಿಂದೊಡಗೂಡಿದ ಶಬ್ದಸಮುದಾಯವನ್ನೇ) ಸೂತ್ರವನ್ನಾಗಿ ಸೂತ್ರಲಕ್ಷಣವನ್ನು ತಿಳಿದವರು ಅಂಗೀಕರಿಸುತ್ತಾರೆ.

**ವಿಶೇಷಾಂಶ ||** (ಎ) ಭಾಷ್ಯದಲ್ಲಿ ಸೂತ್ರಲಕ್ಷಣವು ಬರಬಾರದೆನ್ನುವ ಅಭಿಪ್ರಾಯದಿಂದ **ಅಲ್ಪಾಕ್ಷರಂ** ಎನ್ನುವ ವಿಶೇಷಣವು. (ಬಿ) ನಿರ್ಣಯಹೇತುರಹಿತವಾದ ವಾಕ್ಯದಲ್ಲಿ ಬರಬಾರದೆನ್ನುವ ಅಭಿಪ್ರಾಯದಿಂದ **ಅಸಂದಿಗ್ಧಂ** ಎನ್ನುವುದು. (ಸಿ) ಕುಶಲಪುರುಷನಿಂದ ಹೇಳಲ್ಪಟ್ಟ ಲೌಕಿಕ ವಾಕ್ಯಾದಿಗಳಲ್ಲಿ ಸೂತ್ರಲಕ್ಷಣವು ಬರಬಾರದೆನ್ನುವ ಅಭಿಪ್ರಾಯದಿಂದ **ಸಾರವತ್** ಎನ್ನುವ ವಿಶೇಷಣವು. (ಡಿ) ಶ್ರೀ ಹರಿಯ ನಾಮಮಂತ್ರ ಮೊದಲಾದವುಗಳಲ್ಲಿ ಸೂತ್ರಲಕ್ಷಣವು ಬರಬಾರದೆನ್ನುವ ಅಭಿಪ್ರಾಯದಿಂದ **ವಿಶ್ವತೋಮುಖಂ** ಎನ್ನುವ ವಿಶೇಷಣವು. (ಇ) ಋಗಕ್ಷರಗಳಲ್ಲಿ ಅವ್ಯಾಪ್ತವಾದ ಗಾನಭಾಗಪೂರಕವಾದ ಸಾಮದಲ್ಲಿರತಕ್ಕ ಸ್ತೋಭಾಕ್ಷರಗಳಲ್ಲಿ ಬರಬಾರದೆನ್ನುವ ಅಭಿಪ್ರಾಯದಿಂದ **ಅಸ್ತೋಭಂ** ಎನ್ನುವ ವಿಶೇಷಣವು. (ಎಫ್) ಅಪಶಬ್ದಗಳಿಂದೊಡಗೂಡಿದ ವಾಕ್ಯಗಳಲ್ಲಿ ಸೂತ್ರಲಕ್ಷಣವು ಬರಬಾರದೆನ್ನುವ ಅಭಿಪ್ರಾಯದಿಂದ **ಅನವದ್ಯಂ** ಎನ್ನುವ ವಿಶೇಷಣವು. (ಜಿ) ಇವುಗಳಲ್ಲಿ ಮುಖ್ಯವಾಗಿ **ಅಲ್ಪಾಕ್ಷರತ್ವೇ ಸತಿ** ವಿಶ್ವತೋಮುಖತ್ವವೇ ಸೂತ್ರಕ್ಕೆ ಲಕ್ಷಣವು. ಬೇರೆಯೆಲ್ಲವೂ ಸ್ವರೂಪಸಂಕೀರ್ತನವು. (ಹೆಚ್) ಭಕ್ತರಾದ ಬ್ರಹ್ಮರುದ್ರಾದಿ ದೇವತೆಗಳಿಗೆ ಪರತತ್ತ್ವವಿಷಯದಲ್ಲಿ ಉಂಟಾದ ಅಜ್ಞಾನವನ್ನು ಹೋಗಲಾಡಿಸುವುದಕ್ಕಾಗಿಯೂ ವಿಶೇಷ ಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೂ ನಿರ್ಮಿಸಿರುವುದರಿಂದ ಬ್ರಹ್ಮಸೂತ್ರವು ಆಪ್ತಮೂಲಕವೂ ಶ್ರುತಿಮೂಲಕವೂ ಯುಕ್ತಿಮೂಲಕವೂ ಆಗಿದೆ. ಆದಕಾರಣ ಮುಖ್ಯವಾಗಿಯೇ ಪ್ರಾಮಾಣ್ಯವಿದೆ.

**ಪೀಠಿಕೆ ||** ಈ ಸೂತ್ರಲಕ್ಷಣವು ಮುಖ್ಯವಾಗಿ ಬ್ರಹ್ಮಸೂತ್ರಗಳಿಗೇನೇ ಇರುವುದೆನ್ನುವುದು ಹೇಗೆ ತಿಳಿಯುತ್ತದೆ ಎಂದರೆ—

ಭಾಷ್ಯ ॥ ನಿರ್ವಿಶೇಷಿತಸೂತ್ರತ್ವಂ ಬ್ರಹ್ಮಸೂತ್ರಸ್ಯ ಚಾಪ್ಯತಃ ।
ಯಥಾ ವ್ಯಾಸತ್ವಮೇಕಸ್ಯ ಕೃಷ್ಣಸ್ಯಾನ್ಯೇ ವಿಶೇಷಣಾತ್ ॥ ೧೦ ॥

ಭಾಷ್ಯಾರ್ಥ ॥ ಯಾವ ಕಾರಣದಿಂದ ಬ್ರಹ್ಮಸೂತ್ರಗಳಿಗೇನೇ ಮುಖ್ಯಸೂತ್ರತ್ವವಿದೆಯೋ ಆದುದರಿಂದಲೇ ವಿಶೇಷಣವಿಲ್ಲದಿರುವ ಕೇವಲ ಸೂತ್ರಪದವಾಚ್ಯತ್ವವು (ಇದೆ ಎಂದು ಪುರಾಣಾದಿಗಳಲ್ಲಿ ಉಕ್ತವಾಗಿದೆ). (ಅನ್ವಯವ್ಯಾಪ್ತಿಯಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ.) ಹೇಗೆ ಮುಖ್ಯರಾದ ವೇದವ್ಯಾಸರೊಬ್ಬರಿಗೇನೇ ವಿಶೇಷಣವಿಲ್ಲದಿರುವ ವ್ಯಾಸಪದವಾಚ್ಯತ್ವವಿದೆಯೋ (ಹಾಗೆಯೇ ವಿಶೇಷಣ ರಹಿತವಾದ ಕೇವಲ ಸೂತ್ರಪದವಾಚ್ಯತ್ವವಿದ್ದ ಪ್ರಯುಕ್ತ ಬ್ರಹ್ಮಸೂತ್ರಗಳಿಗೇ ಮುಖ್ಯ ಸೂತ್ರತ್ವವು) (ವ್ಯತಿರೇಕ ವ್ಯಾಪ್ತಿಯಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ) ಹೇಗೆ ಪರಾಶರಪುತ್ರರಿಂದ ಇತರರಾದ ದ್ರೌಣಿ ಮೊದಲಾದವರು ಯಾರು ಅಮುಖ್ಯರೋ ಅವರು ವಿಶೇಷಣವನ್ನು ಅಪೇಕ್ಷಿಸಿಯೇ ವ್ಯಾಸಶಬ್ದವಾಚ್ಯರು.

ಭಾಷ್ಯ ॥ ಸವಿಶೇಷಣಸೂತ್ರಾಣಿ ಹ್ಯಪರಾಣಿ ವಿದೋ ವಿದುಃ ॥ ೧೧ ॥

ಭಾಷ್ಯಾರ್ಥ ॥ ಯಾವ ಕಾರಣದಿಂದ ಬ್ರಹ್ಮಸೂತ್ರಗಳಿಂದ ಇತರಗಳಾದ ಸೂತ್ರಗಳು ಅಮುಖ್ಯಗಳೊ ಆದುದರಿಂದಲೇ ಜ್ಞಾನಿಗಳು ಇತರ ಸೂತ್ರಗಳನ್ನು ವಿಶೇಷಣದಿಂದ ಕೂಡಿರುವ ಸೂತ್ರಪದದಿಂದ ವಾಚ್ಯಗಳನ್ನಾಗಿ ತಿಳಿಯುತ್ತಾರೆ.

ಭಾಷ್ಯ॥ ಮುಖ್ಯಸ್ಯ ನಿರ್ವಿಶೇಷೇಣ ಶಬ್ದೋಽನ್ಯೇಷಾಂ ವಿಶೇಷತಃ ।
ಇತಿ ವೇದವಿದಃ ಪ್ರಾಹುಃ ಶಬ್ದತತ್ತ್ವಾರ್ಥವೇದಿನಃ ॥ ೧೨ ॥

ಭಾಷ್ಯಾರ್ಥ ॥ ಯಾವ ಕಾರಣದಿಂದ ಮುಖ್ಯವಾದುದಕ್ಕೇನೇ ವಿಶೇಷಣಾಭಾವದಿಂದ ವಾಚಕಶಬ್ದವಿದೆ. (ಅಂದರೆ— ವಿಶೇಷಣವಿಲ್ಲದಿರುವ ಶಬ್ದಗಳಿಂದ ವಾಚ್ಯತ್ವವಿದೆ.) ಅಮುಖ್ಯಗಳಿಗೇನೇ ವಿಶೇಷಣವನ್ನು ಅಪೇಕ್ಷಿಸಿ (ಅಂದರೆ ವಿಶೇಷಣದಿಂದ) ವಾಚಕಶಬ್ದವಿದೆ. (ಅಂದರೆ— ವಿಶೇಷಣದಿಂದ ಕೂಡಿರುವ ಪದಗಳಿಂದ ವಾಚ್ಯಗಳು ಅಮುಖ್ಯಗಳಾಗುತ್ತವೆ.) ಈ ಪ್ರಕಾರವಾಗಿ ಶಬ್ದಗಳ ಯಥಾರ್ಥವನ್ನು ತಿಳಿದಿರುವ ವೇದಾರ್ಥವನ್ನು ತಿಳಿದಿರುವ ವೃದ್ಧರು ಹೇಳುತ್ತಾರೆ.

ಭಾಷ್ಯ ॥ ಸೂತ್ರೇಷು ಯೇಷು ಸರ್ವೇಽಪಿ ನಿರ್ಣಯಾಸ್ಸಮುದೀರಿತಾಃ ॥ ೧೩ ॥

ಭಾಷ್ಯಾರ್ಥ ॥ ಯಾವ ಸೂತ್ರಗಳ ದೆಸೆಯಿಂದ ಸರ್ವಶಾಸ್ತ್ರಾರ್ಥನಿರ್ಣಯಗಳೂ ಆಗಬೇಕೆಂದು ಚೆನ್ನಾಗಿ ಹೇಳಲ್ಪಟ್ಟಿವೆಯೋ, (ಯಾವ ಸೂತ್ರಗಳು ಸರ್ವಶಾಸ್ತ್ರನಿರ್ಣಾಯಕಗಳಾಗುತ್ತವೆ ಎಂದು ಪ್ರಮಾಣದಲ್ಲಿ ಹೇಳಲ್ಪಟ್ಟಿವೆಯೋ) ಅಥವಾ ಯಾವ ಬ್ರಹ್ಮಸೂತ್ರಗಳಲ್ಲಿಯೇ ನಿರ್ಣೇತವ್ಯಗಳಾದ ಎಲ್ಲಾ ಶಾಸ್ತ್ರಾರ್ಥಗಳೂ ನಿರ್ಣೀತಗಳಾಗಿವೆ.

ಭಾಷ್ಯ ॥ ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ ।
ಏವಂವಿಧಾನಿ ಸೂತ್ರಾಣಿ ಕೃತ್ವಾ ವ್ಯಾಸೋ ಮಹಾಯಶಾಃ ॥

**ಬ್ರಹ್ಮರುದ್ರಾದಿದೇವೇಷು ಮನುಷ್ಯಪಿತೃಪಕ್ಷಿಷು ।**
**ಜ್ಞಾನಂ ಸಂಸ್ಥಾಪ್ಯ ಭಗವಾನ್ ಕ್ರೀಡತೇ [೧]ಪುರುಷೋತ್ತಮ ಇತ್ಯಾದಿ । ೧೪ ।**

ಭಾಷ್ಯಾರ್ಥ ॥ ಪೂರ್ವಮೀಮಾಂಸಾದಿ ರೂಪಗಳಾದ ಎಲ್ಲಾ ಶಬ್ದಸಮುದಾಯಗಳಿಂದ ಮಾಡಲ್ಪಡತಕ್ಕ ನಿರ್ಣಯವು ಬ್ರಹ್ಮಸೂತ್ರಮೂಲಕವಾಗಿಯದೋ ಪುರುಷೋತ್ತಮನೂ ಉತ್ತಮವಾದ ಯಶಸ್ಸುಳ್ಳವನೂ ಪೂಜ್ಯನೂ ಆದ ವೇದವ್ಯಾಸದೇವರು ಇಂತಹ ಮುಖ್ಯವಾಗಿ ವಿಶ್ವತೋಮುಖತ್ವಾದಿ ಲಕ್ಷಣಗಳಿಂದ ಕೂಡಿರುವ ಸೂತ್ರಗಳನ್ನು ಮಾಡಿ ಬ್ರಹ್ಮ ರುದ್ರ ಮೊದಲಾದ ದೇವತೆಗಳಲ್ಲಿಯೂ ಕರ್ಮಜದೇವತೆಗಳೂ ಆಜಾನಜದೇವತೆಗಳೂ ದೇವಗಂಧರ್ವರೂ ಇವರಲ್ಲಿಯೂ ಮನನಶೀಲರಾದ ಋಷಿಗಳೂ ಮನುಷ್ಯಗಂಧರ್ವರೂ ಪಿತೃದೇವತೆಗಳೂ ಪಾಲಕರಾದ ಚಕ್ರವರ್ತಿಗಳೂ ಮನುಷ್ಯೋತ್ತಮರೂ ಇವರಲ್ಲಿಯೂ ಅಥವಾ ಮನುಷ್ಯರು ಪಿತೃದೇವತೆಗಳೂ ಜಟಾಯುರ್ಯಾದಿಪಕ್ಷಿಗಳೂ ಇವುಗಳಲ್ಲಿ ತತ್ತ್ವಜ್ಞಾನವನ್ನು ಹುಟ್ಟಿಸಿ ಕ್ರೀಡಿಸುತ್ತಾನೆ. ಇದು ಮೊದಲಾದ ಪ್ರಮೇಯವನ್ನು (ನಿರೂಪಿಸಿರುವರು).

ವಿಶೇಷಾಂಶ ॥ (ಎ) ಬ್ರಹ್ಮ ರುದ್ರ ಮೊದಲಾದ ದೇವತೆಗಳಲ್ಲಿ ಜ್ಞಾನಸಂಸ್ಥಾಪನವೆಂದರೆ— ಮೊದಲು ಇದ್ದ ಜ್ಞಾನವನ್ನೇ ವಿಶೇಷ ಯುಕ್ತ್ಯಾದಿಗಳಿಂದ ದೃಢೀಕರಿಸುವಿಕೆ, ಕೆಲವು ಮೊದಲು ಇಲ್ಲದಿದ್ದ ಜ್ಞಾನಕ್ಕೂ ಪ್ರಾಪ್ತಿಯು ಎಂದು ಇಟ್ಟುಕೊಳ್ಳಬೇಕು. ಇತರರಾದ ಮನುಷ್ಯರಲ್ಲಿ ನಷ್ಟವಾದ ಜ್ಞಾನವನ್ನೇ ಹುಟ್ಟಿಸಿದ್ದು. (ಬಿ) ಆದ ಕಾರಣ ಪಾಣಿನಿಸೂತ್ರ ಜೈಮಿನಿಸೂತ್ರ ಇತ್ಯಾದಿಗಳಂತೆ ಬ್ರಹ್ಮಸೂತ್ರಗಳು ಪಾರಾಶರಸೂತ್ರ ವ್ಯಾಸಸೂತ್ರ ಇತ್ಯಾದಿ ಪ್ರಕಾರ ಕರ್ತೃಪದ ಘಟಿತವಾಗಿ ಇಲ್ಲದಿರುವುದರಿಂದ ಮುಖ್ಯ ಸೂತ್ರಗಳು. ಆದುದರಿಂದ ಆತ್ಮಪಾದೇಯಗಳಾಗಿರುವ ಪ್ರಯುಕ್ತ ವ್ಯಾಖ್ಯಾನಾರ್ಹಗಳೆಂದು ಸಿದ್ಧವಾಯಿತು.

ಪೀಠಿಕೆ ॥ ಜೀವಬ್ರಹ್ಮರಿಗೆ ಐಕ್ಯವಿರುವುದು ಭೇದವಿದೆ ಎನ್ನುವ ವಿಷಯದಲ್ಲಿ ಪ್ರಮಾಣ ವಿಲ್ಲದಿರುವುದರಿಂದ ಜೀವಚೈತನ್ಯದಿಂದ ಅತಿರಿಕ್ತನಾದ ಬ್ರಹ್ಮನೇ ಇಲ್ಲ. ಜೀವನಾದರೂ ಸ್ವಪ್ರಕಾಶ ನಾದುದರಿಂದ ಸಂದಿಗ್ಧನಲ್ಲ. ಸಂದಿಗ್ಧವಾದುದು ಅಥವಾ ವಿಪರ್ಯಸ್ತವಾದುದೇ ವಿಷಯವಾಗುವುದು. ಅಂತೂ ವಿಷಯವಿಲ್ಲ. ಪ್ರತ್ಯಗ್ರೂಪನಾದ ಬ್ರಹ್ಮನು ಅಹಂ ಎಂದು ಪ್ರತೀತನಾದರೂ ಮೋಕ್ಷವು

---

೧. (೧) ಜಾನಂತೋಽಪಿ ವಿಶೇಷಾರ್ಥಜ್ಞಾನಾಯ ಸ್ಥಾಪನಾಯ ವಾ । ಪೃಚ್ಛಂತಿ ಸಾಧವೋ ಲೋಕೇ ತೇನ ಪೃಚ್ಛಸಿ ಪಾರ್ಥಿವ ॥ (ಗೀತಾ ತಾ.) ತಾವು ತಿಳಿದ ವರಾದಾಗ್ಯೂ ವಿಶೇಷಾರ್ಥವನ್ನು ತಿಳಿಯುವುದಕ್ಕಾಗಿಯೂ ಲೋಕದಲ್ಲಿ ಪ್ರಚಾರ ಪಡಿಸುವುದಕ್ಕಾಗಿಯೂ ಸಜ್ಜನರು ಪ್ರಶ್ನಿಸುವರು. ಆದುದರಿಂದ ಅರ್ಜುನನೇ ಕೇಳುತ್ತೀ ಎಂದು ಗೀತಾ ತಾತ್ಪರ್ಯದಲ್ಲಿದೆ. (೨) ಏವಂ ಜ್ಞಾನಂ ಪುನಃ ಪ್ರಾಪು ರ್ದೇವಾಶ್ಚ ಋಷಯಸ್ತಥಾ । ಹೀಗೆಯೇ ದೇವತೆಗಳೂ ಋಷಿಗಳೂ ಪುನಃ ಜ್ಞಾನ ವನ್ನು ಹೊಂದಿದರು. (೩) ಉಪಾಸ್ಯೈವ ತು ಪಶ್ಯಂತಿ ನಾನ್ಯಥಾ ತು ಕಥಂಚನ । ಋಷೀನ್ ರಾಜ್ಞಸ್ತಥಾರಭ್ಯ ಪ್ರತಿಭಾಽಭ್ಯಧಿಕಾಃ ಕ್ರಮಾತ್ । ಯಾವದ್ಬ್ರಹ್ಮಾ ಬ್ರಹ್ಮಣಸ್ತು ಪ್ರಾಯೋ ನಾಪ್ರತಿಭಾಸಿತಂ । ವಿಷ್ಣೋಃ ಪ್ರೀತ್ಯರ್ಥಮೇ ವಾಸ್ಯ ಶ್ರೋತವ್ಯಂ ಪ್ರಾಯಶೋ ಭವೇತ್ ॥ ಇತ್ಯಾದಿ ಪ್ರಮಾಣಗಳಿಂದ ಚತುರ್ಮುಖಬ್ರಹ್ಮನಿಂದ ಇತರರಾದವರಿಗೆ ತಿರೋಹಿತವಾದ ಜ್ಞಾನಾದಿಗಳಿಗೆ ಪ್ರಾಪ್ತಿಯು. ಬ್ರಹ್ಮನಿಗಾದರೂ ಜ್ಞಾನಾದಿಗಳಿಗೆ ತಿರೋಧಾನವೇ ಇಲ್ಲ. ಆದರೂ ವಿಷ್ಣುವಿನ ಪ್ರೀತಿಗಾಗಿಯೇ ಚತುರ್ಮುಖನು ಶ್ರವಣಾದಿಗಳನ್ನು ಮಾಡುವನು ಎಂದೂ ಹೇಳಿರುವರು.)

ತೋರದಿರುವುದರಿಂದ ಪ್ರಯೋಜನವೂ ಇಲ್ಲ. ಆದುದರಿಂದಲೇ ಪ್ರಯೋಜನವುಳ್ಳ ಅಧಿಕಾರಿಯೂ ಇರುವುದಿಲ್ಲ. ಆದಕಾರಣ ಬ್ರಹ್ಮಜಿಜ್ಞಾಸ ಮಾಡಕೂಡದು. ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ— ಪೂಜ್ಯರಾದ ಸೂತ್ರಕಾರರು ಸಿದ್ಧಾಂತೀಕರಿಸುವರು.

## ಸೂತ್ರ ॥ ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ॥ ೧ ॥

**ಸೂತ್ರಾರ್ಥ ॥** ಅಥ = ಅಧ್ಯಯನ ಶಮದಮಾದಿ ರೂಪವಾದ ಅಧಿಕಾರವು ಪ್ರಾಪ್ತಿಯಾದ ಮೇಲೆ, ಅತಃ = ೧ ಜ್ಞಾನದಿಂದುಂಟಾದ ಭಗವತ್ಪ್ರಸಾದದಿಂದ ಹುಟ್ಟಿದ ಮೋಕ್ಷರೂಪವಾದ ಫಲವು ಇದ್ದುದರಿಂದಲೂ, ಅಥವಾ ಅಕಾರವಾಚ್ಯನಾದ ಪ್ರಸನ್ನನಾದ ಬ್ರಹ್ಮನ ದೆಸೆಯಿಂದಲೂ, ೨ ಸಂಸಾರ ಬಂಧವು ಸತ್ಯವಾದ ಪ್ರಯುಕ್ತವೂ, ೩. ಆಗಮವು ಪ್ರಮಾಣವಾದುದರಿಂದಲೂ, ೪ ಸಿದ್ಧಾರ್ಥವನ್ನು ತಿಳಿಸಿಕೊಡುವುದರಿಂದಲೂ, ೫ ವೇದವು ಅನ್ವಿತಸ್ವಾರ್ಥವನ್ನು ತಿಳಿಸಿಕೊಡುವುದರಿಂದಲೂ, ಓಂ ಬ್ರಹ್ಮ=ಗುಣ ಪೂರ್ಣನಾದ ಶ್ರೀ ವಿಷ್ಣುವಿನ, ಜಿಜ್ಞಾಸಾ=ಶ್ರವಣಾದಿ ರೂಪವಾದ ವಿಚಾರವು, (ಕರ್ತವ್ಯಾ=ಮಾಡತಕ್ಕುದು) (ಅಂದರೆ ಬ್ರಹ್ಮಜ್ಞಾನ ಹುಟ್ಟುವುದಕ್ಕಾಗಿ ಸರ್ವವೇದವಿಷಯಕ ಶ್ರವಣ ಮನನ ನಿದಿಧ್ಯಾಸನ ರೂಪವಾದ, ಅಥವಾ ಮನನ ಮಾತ್ರ ರೂಪವಾದ ತದ್ವಿಜಿಜ್ಞಾಸಸ್ವ ಇದು ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ವಿಚಾರವು ಮಾಡತಕ್ಕುದು.)

**ವಿಶೇಷಾಂಶ ॥** (ಎ) ಈ ಸೂತ್ರದಲ್ಲಿ ಆದಿಯಲ್ಲಿಯೂ ಅಂತ್ಯದಲ್ಲಿಯೂ ಓಂಕಾರ ವನ್ನು ಉಚ್ಚರಿಸಲೇಬೇಕು. ಆದಿಯಲ್ಲಿ ಒಂದೇ ಓಂಕಾರವು. ದೃಷ್ಟಾರ್ಥಕವೂ ಅದೃಷ್ಟಾರ್ಥಕವೂ ಆಗಿದೆ. ಆದುದರಿಂದಲೇ ಸೂತ್ರಾವಯವವೂ ಆಗಿದೆ. ಎಲ್ಲಾ ಸೂತ್ರಗಳಲ್ಲಿ ಅನುವೃತ್ತಿ ಬರುವುದಕ್ಕಾಗಿ ಓಂ ಎಂದು ಪ್ರತ್ಯೇಕವಾಗಿ ಉಚ್ಚರಿಸಲ್ಪಟ್ಟಿದೆ. (ಬಿ) ಅಥವಾ ಬುಡದಲ್ಲಿ ಎರಡು ಓಂಕಾರಗಳು, ಒಂದು ಅದೃಷ್ಟಾರ್ಥಕವು. ಮತ್ತೊಂದು ದೃಷ್ಟಾರ್ಥಕವು. ಅಂತ್ಯದಲ್ಲಿ ಆದರೂ ಎರಡು ಪಕ್ಷದಲ್ಲಿಯೂ ಅದೃಷ್ಟಾರ್ಥಕವಾದುದು ಒಂದೇ ಓಂಕಾರವು. (ಸಿ) ಅದೃಷ್ಟಾರ್ಥಕತ್ವವೆಂದರೆ— ಕೇವಲ ಸ್ರವಣ (ಸುಕೃತವನ್ನು ಹುಟ್ಟಿಸದೆ ಇರುವಿಕೆ) ವಿಶರಣ (ಫಲವನ್ನು ಹುಟ್ಟಿಸದೆ ಇರುವಿಕೆ) ರೂಪಗಳಾದ ದೋಷಗಳನ್ನು ಪರಿಹರಿಸುವಿಕೆ. (ಡಿ) ದೃಷ್ಟಾರ್ಥಕತ್ವವೆಂದರೆ— ಅನ್ವಯಿಸಿಕೊಳ್ಳಲಿಕ್ಕೆ ಯೋಗ್ಯವದ ಪದಾರ್ಥವನ್ನು ಪ್ರತಿಪಾದಿಸುವಿಕೆ. (ಇ) ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚವಿಶೀರ್ಯತೇ ॥ ಆದಿಯಲ್ಲಿ ಓಂಕಾರವನ್ನು ಉಚ್ಚರಿಸದಿದ್ದರೆ ಸುಕೃತ ಹುಟ್ಟುವುದಿಲ್ಲ. ಅಂತ್ಯದಲ್ಲಿ ಓಂಕಾರವನ್ನು ಉಚ್ಚರಿಸದಿದ್ದರೆ ಫಲವು ಹುಟ್ಟುವುದಿಲ್ಲ. (ಎಫ್) ಓಂ ಶಬ್ದ ಬ್ರಹ್ಮ ಶಬ್ದಗಳು ಎರಡೂ ಯೌಗಿಕಗಳಾದಾಗ್ಯೂ ಒಂದು ರೂಢವಾದುದರಿಂದ ವಿಶೇಷ್ಯವಾಚಕವು. ಇನ್ನೊಂದು ಯೌಗಿಕವಾದುದರಿಂದ ವಿಶೇಷಣ ವಾಚಕವು. ಹೀಗೆ ಇಟ್ಟುಕೊಂಡು ಅನ್ವಯವನ್ನು ಆಶ್ರಯಿಸಿದುದರಿಂದ ಎರಡರಲ್ಲಿ ಒಂದಕ್ಕೂ ವೈಯರ್ಥ್ಯವಿಲ್ಲ (ಜಿ) ಓಮಿತ್ಯೇತದಕ್ಷರಮುದ್ಗೀಥಮುಪಾಸೀತ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ ॥ ಇದು ಮೊದಲಾದ ಅನೇಕ ವಿಷಯವಾಕ್ಯಗಳನ್ನು ಸಂಗ್ರಹಿಸುವುದಕ್ಕಾಗಿ ಓಂಬ್ರಹ್ಮ ಎಂದು ಎರಡನ್ನು ಪ್ರಯೋಗಿಸಿರುವರು. (ಹೆಚ್) ೧ ಈ ಬ್ರಹ್ಮಸೂತ್ರಗಳಲ್ಲಿ ನಾಲ್ಕು ಅಧ್ಯಾಯಗಳು. ೨ ಒಂದೊಂದು ಅಧ್ಯಾಯಗಳಲ್ಲಿ ನಾಲ್ಕು ನಾಲ್ಕು ಪಾದಗಳು. ೩. ಒಂದೊಂದು ಪಾದಗಳಲ್ಲಿ ೭ ಅಧಿಕರಣಗಳನ್ನಾರಂಭಿಸಿಕೊಂಡು ೪೨ ಅಧಿಕರಣ

ಪರ್ಯಂತವಾಗಿ ಇರುತ್ತವೆ. ೪ ಒಂ ದೊಂದು ಅಧಿಕರಣದಲ್ಲಿ ಒಂದು ಸೂತ್ರವನ್ನಾರಂಭಿಸಿಕೊಂಡು ೭ ಸೂತ್ರ ಪರ್ಯಂತವಾಗಿ ಇರುತ್ತವೆ.

| | | | |
|---|---|---|---|
| (ಐ) | ೧ ಶ್ರೀಮದಾಚಾರ್ಯರ ಭಾಷ್ಯಪ್ರಕಾರ— | ಸೂತ್ರಗಳು | ೫೬೪ |
| | | ಅಧಿಕರಣಗಳು | ೨೨೩ |
| | ೨. ಶಂಕರಾಚಾರ್ಯರ ಭಾಷ್ಯಪ್ರಕಾರ— | ಸೂತ್ರಗಳು | ೫೫೫ |
| | | ಅಧಿಕರಣಗಳು | ೧೯೨ |
| | ೩. ರಾಮಾನುಜಾಚಾರ್ಯರ ಭಾಷ್ಯಪ್ರಕಾರ— | ಸೂತ್ರಗಳು | ೫೪೫ |
| | | ಅಧಿಕರಣಗಳು | ೧೫೬ |

(ಜೆ) ೧ ಇದೊಂದೇ ಸೂತ್ರವು ಒಂದು ಅಧಿಕರಣವು. ೨ ಅಧಿಕರಣವೆಂದರೆ— ವಿಷಯ ಸಂಶಯ ಪೂರ್ವಪಕ್ಷ ಸಿದ್ಧಾಂತ ಪ್ರಯೋಜಗಳೆನ್ನುವ (೫) ಐದು ಅಂಗಗಳ ಸಮುದಾಯವು. **ವಿಷಯೋ ವಿಷಯಶ್ಚೈವ ಪೂರ್ವಪಕ್ಷಸ್ತಥೋತ್ತರಃ। ಪ್ರಯೋಜ ನಂ ಚ ಪಂಚೈತಾನ್ ಪ್ರಾಂಚೋಽಧಿ ಕರಣಂ ವಿದುಃ ॥** (ಚಂದ್ರಿಕಾ) ಎಂದು ನಿರೂ ಪಿಸಿರುವರು. (ಕೆ) ೧ ಈ ಜಿಜ್ಞಾಸಾಧಿಕರಣದಲ್ಲಿಯೇ ತದ್ವಿಜಿಜ್ಞಾಸಸ್ವ ಎಂದು ಜಿಜ್ಞಾಸೆಯನ್ನು ಹೇಳತಕ್ಕ ವಾಕ್ಯದಿಂದ ವಿಹಿತವಾದ ಶ್ರವಣಾದಿರೂಪವಾದ ವಿಚಾರವು. ಸಂದಿಗ್ಧವಾದುದು ಯಾ ವಿಪರ್ಯಸ್ತವಾದುದು ವಿಷಯವು. ೨ ವಿಚಾರವನ್ನು ಮಾಡಬೇಕೋ ಬೇಡವೋ ಎಂದು ಸಂದೇಹವು. ೩ ವಿಚಾರವನ್ನು ಮಾಡಬಾರದೆಂದು ಪೂರ್ವಪಕ್ಷವು. ಪೂರ್ವಪಕ್ಷದಲ್ಲಿ ಶಾಸ್ತ್ರವನ್ನು ಆರಂಭಿಸಕೂಡದೆನ್ನುವ ನಿಶ್ಚಯವು ಪ್ರಯೋಜನವು. ೪ ಶಾಸ್ತ್ರವನ್ನು ಆರಂಭಿಸಬೇಕು ಎನ್ನುವುದು ಸಿದ್ಧಾಂತವು. ಅದರಲ್ಲಿ ಆರಂಭಣೀಯತ್ವ ನಿಶ್ಚಯವೇ ಪ್ರಯೋಜನವು. (ಎಲ್) ನ್ಯಾಯಾನುಸಂಧಾನರೂಪವಾದ ಮೀಮಾಂಸಾರೂಪವಾದ ಜಿಜ್ಞಾಸೆಯನ್ನು ಮಾಡಬಾರದೆಂದಾದರೆ ನ್ಯಾಯಗ್ರಂಥನರೂಪವಾದ ಮೀಮಾಂಸಶಾಸ್ತ್ರವನ್ನೂ ಅವಶ್ಯವಾಗಿ ಆರಂಭಿಸದೆ ಇರಬೇಕು. ಹೀಗೆಯೇ ಮುಂದೆಯೂ ಇಟ್ಟುಕೊಳ್ಳಬೇಕು. (ಎಂ) ಒಂದು ಅಧಿಕರಣಕ್ಕೆ (೫) ಐದು ಸಂಗತಿಯು **ಶಾಸ್ತ್ರೇಽಧ್ಯಾಯೇ ತಥಾ ಪಾದೇ ಶ್ರುತ್ಯಾಧಿಕರಣೇನ ಚ। ಸಂಗತಿಃ ಪಂಚಧಾ ಪ್ರೋಕ್ತಾ ಸರ್ವಾಧಿಕರಣೇಷ್ವಪಿ ॥** (ಚಂದ್ರಿಕಾ) ೧. ಶಾಸ್ತ್ರ ಸಂಗತಿ, ೨ ಅಧ್ಯಾಯ ಸಂಗತಿ, ೩. ಪಾದ ಸಂಗತಿ, ೪ ಪೂರ್ವಾಧಿಕರಣ ಸಂಗತಿ, ೫ ಪೂರ್ವಾಧಿಕರಣವಿಷಯ ವಾಕ್ಯಸಂಗತಿ, ಹೀಗೆ ಎಲ್ಲಾ ಅಧಿ ಕರಣಗಳಲ್ಲಿ ಯೂ ಐದು ವಿಧವಾದ ಸಂಗತಿಯು ಇದೆ. (ಎನ್) ೧ ಆ ಸಂಗತಿಯೇ ಪುನಃ ೧ ಅಂತರ್ಭಾವರೂಪವಾದುದು, ೨ ಅನಂತರ್ಯರೂಪವಾದುದು, ಹೀಗೆ ಸಾಮಾನ್ಯವಾಗಿ ಎರಡು ವಿಧವು. ೨ **ತತ್ರಾದ್ಯತ್ರಿತಯಂ ಪ್ರಾಯೇಣಾಂತರ್ಭಾವಾತ್ಮಕಂ ಮತಂ । ಉತ್ತರಂ ತು ದ್ವಯಂ ಪ್ರೋಕ್ತಮಾನಂತರ್ಯಾತ್ಮಕಂ ಸದಾ ॥** ಆ ಐದು ವಿಧ ಸಂಗತಿಗಳ ಮಧ್ಯದಲ್ಲಿ ಮೊದಲು ಮೂರು ಅಂತರ್ಭಾವರೂಪವಾದುದು. ೧ ಶಾಸ್ತ್ರಾಂತರ್ಭಾವಸಂಗತಿಯು, ೨ ಅಧ್ಯಾಯಾಂತರ್ಭಾವ ಸಂಗತಿಯು, ೩. ಪಾದಾಂತ ರ್ಭಾವಸಂಗತಿಯು— ಹೀಗೆ ಮೇಲಿನ ಎರಡು ಅನಂತರ್ಯ ರೂಪವಾದುದು. ೧. ಪೂರ್ವಾಧಿಕರಣಾನಂತರ್ಯರೂಪಸಂಗತಿಯು, ೨ ಪೂರ್ವಾಧಿಕರಣ ವಿಷಯವಾಕ್ಯಾ ನಂತರ್ಯಸಂಗತಿ ಹೀಗೆ ಎರಡು ವಿಧವು. (ಓ) **ಅಧ್ಯಾಯಯೋಃ ಪಾದಯೋರ**

ಪ್ಯಾನಂತರ್ಯಾತ್ಮಿಕೈವ ಹಿ ॥ ಒಂದು ಅಧ್ಯಾಯಕ್ಕೂ ಮತ್ತೊಂದು ಅಧ್ಯಾಯ ಕ್ಕೂ ಹೀಗೆ ೨ ಅಧ್ಯಾಗಳಿಗೂ ಒಂದು ಪಾದಕ್ಕೂ ಮತ್ತೊಂದು ಪಾದಕ್ಕೂ ಹೀಗೆ ೨ ಪಾದಗಳಿಗೂ ಅನಂತರ್ಯರೂಪಸಂಗತಿಯೇ. (೬) **ಆಕ್ಷೇಪಿಕ್ಯಾತಿದೇಶಿಕ್ಯಾ ಉಪೋದ್ಘಾತಾಪವಾದಕೀ। ಪ್ರಸಂಗಶ್ಚೇತ್ಯಾದಿರೂಪಾ ಸಾ ಚಾನಂತರ್ಯಲಕ್ಷಣಾ ॥** ಆ ಅನಂತರ್ಯಸಂಗತಿಯು ಆಕ್ಷೇಪಿಕೀ ಆತಿದೇಶಿಕೀ ಔಪೋದ್ಘಾತಕೀ ಆಪವಾದಕೀ ಪ್ರಾಸಂಗಿಕೀ ಇತ್ಯಾದಿ ಪ್ರಕಾರ ಬಹುವಿಧವಾಗಿದೆ. (೧) **ಪೂರ್ವಮಾಕ್ಷಿಪ್ತತೇ ಯತ್ರ ತತ್ರ ಸಾಕ್ಷೇಪಿಕೀ ಮತಾ।** ಪೂರ್ವಾಧಿಕರಣದಲ್ಲಿ ಅಥವಾ ಪೂರ್ವಾಧಿಕರಣ ವಿಷಯವಾಕ್ಯದಲ್ಲಿ ಹೇಳಿದ್ದನ್ನು ಆಕ್ಷೇಪಿಸಿದರೆ ಆಕ್ಷೇಪಿಕೀ ಸಂಗತಿಯು. (೨) **ಕೃತ್ವಾಽಭ್ಯಧಿಕಾಂ ಶಂಕಾಂ ಪೂರ್ವಮೇವಾತಿದಿಶ್ಯತೇ । ಸಂಗತಿಃ ಕಥಿತಾ ಸದ್ಭಿಃ ಕಾಚಿತ್ತತ್ರಾತಿದೇಶಿಕೀ ॥** ಅಧಿಕಾಶಂಕೆಯನ್ನು ಮಾಡಿಯೂ ಹಿಂದೆ ಹೇಳಿದ್ದನ್ನೇ ಅತಿ ದೇಶಮಾಡಿದರೆ ಅಲ್ಲಿ ಆತಿದೇಶಿಕೀ ಸಂಗತಿಯು. (೩.)**ಚಿಂತಾಂ ಪ್ರಕೃತಸಿದ್ಧ್ಯರ್ಥಾ ಮುಪೋದ್ಘಾತಂ ಪ್ರಚಕ್ಷತೇ ।** ಪ್ರಕೃತ ಸಿದ್ಧಿಯೇ ಪ್ರಯೋಜನವಾಗಿ ಉಳ್ಳ ವಿಚಾರವನ್ನು ಉಪೋದ್ಘಾತವನ್ನಾಗಿ ಹೇಳುತ್ತಾರೆ. (೪) **ಪೂರ್ವಸಿದ್ಧಾಂತತೋ ಯತ್ರ ಪೂರ್ವಪಕ್ಷಃ ಪ್ರವರ್ತತೇ । ತತ್ರಾಪವಾದಕೀ ಪ್ರೋಕ್ತಾ ಸಂಗತಿರ್ನ್ಯಾಯವೇದಿಭಿಃ ॥** ಮೊದಲು ಹೇಳಿದ ಸಿದ್ಧಾಂತವನ್ನು ಅನುಸರಿಸಿ ಪೂರ್ವಪಕ್ಷವು ಎಲ್ಲಿ ಪ್ರವೃತ್ತವಾಗುತ್ತದೋ ಅಲ್ಲಿ ಅಪವಾದಕೀ ಸಂಗತಿಯು. (೫) **ಪ್ರಸಂಗಾ ಚ್ಚಿಂತ್ಯತೇ ಯತ್ರ ತತ್ರ ಪ್ರಾಸಂಗಿಕೀ ಮತಾ ।** ಸ್ಮೃತವಾದುದನ್ನು ಉಪೇಕ್ಷಿಸಲಿಕ್ಕೆ ಅರ್ಹವಾಗದಿರುವುದು ಪ್ರಸಂಗವು. ಅಂತಹ ಪ್ರಸಂಗದಿಂದ ಎಲ್ಲಿ ವಿಚಾರವು ಮಾಡಲ್ಪಡುತ್ತದೋ ಅಲ್ಲಿ ಪ್ರಾಸಂಗಿಕೀ ಸಂಗತಿಯು. (೬) **ಪೂರ್ವನ್ಯಾಯಾತ್ಯಯೋ ಯತ್ರ ಪ್ರತ್ಯುದಾಹರಣ ತು ಸಾ ।** ಮೊದಲು ಹೇಳಿದ ನ್ಯಾಯವನ್ನು ಅತಿಕ್ರಮಿಸಿದರೆ ಪ್ರ ತ್ಯುದಾಹರಣ ಸಂಗತಿಯು. (೭) **ಬುದ್ಧಿಸ್ಥಂ ಚಿಂತ್ಯತೇ ಯತ್ರ ಬುದ್ಧಿಸ್ಥಾನಾತ್ಮಿಕಾ ತು ಸಾ ।** (ಚಂದ್ರಿಕಾ) ಬುದ್ಧಿಯಲ್ಲಿದ್ದ ವಿಷಯವನ್ನು ವಿಚಾರಮಾಡಿದರೆ ಬುದ್ಧಿಸ್ಥಾನಾತ್ಮಿಕ ಸಂಗತಿಯು. ಇತ್ಯಾದಿ ಪ್ರಕಾರ ತಂತ್ರಚೂಡಾಮಣೀಯಲ್ಲಿ ಹೇಳಿದ್ದನ್ನು ಇಟ್ಟುಕೊಳ್ಳಬೇಕು. (ಕ್ರ) (೧) ಮೊದಲು (೩.) ಮೂರು ಅಧಿಕರಣಗಳಲ್ಲಿ ಶಾಸ್ತ್ರಸಂಗತಿಯು ಮಾತ್ರ ಇದೆ. ಅಧ್ಯಾಯ ಸಂಗತಿ ಪಾದಸಂಗತಿಗಳು ಎರಡು ಇಲ್ಲ. (೨) ೪, ೫ನೇ ಅಧಿಕರಣಗಳಲ್ಲಿ ಶಾಸ್ತ್ರಸಂಗತಿಯೂ, ಅಧ್ಯಾಯಸಂ ಗತಿಯೂ ಇದೆ. ಪಾದಸಂಗತಿಯು ಮಾತ್ರ ಇಲ್ಲ. (೩.) ೬ನೇ ಅಧಿಕರಣವನ್ನಾರಂಭಿಸಿ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳು ಮೂರೂ ಇವೆ. (೪) ಐದು (೫) ಅಧಿಕರಣಗಳು ಅಧ್ಯಾಯಕ್ಕೆ ಉಪಯುಕ್ತಗಳಾದ ಅರ್ಥಗಳನ್ನು ಪ್ರತಿಪಾದಿಸತಕ್ಕವುಗಳು. (ಅರ್) ಹಾಗೆಯೇ ಈ ಅಧಿಕರಣಕ್ಕೆ ಪೂರ್ವಾಧಿ ಕರಣಸಂಗತಿಯೂ ಪೂರ್ವಾಧಿಕರಣ ವಿಷಯವಾಕ್ಯಸಂಗತಿಯೂ ಎರಡು ಇಲ್ಲ. ಏಕೆಂದರೆ ಇದು ಒಂದನೇ ಅಧಿಕರಣವಾಗಿದೆ. ಶ್ರುತಿವಿಚಾರವೂ ಕೂಡ ಆರಬ್ಧವೇ ಆಗಲಿಲ್ಲ. ಮೇಲಿನ ನಾಲ್ಕು ಅಧಿ ಕರಣಗಳಿಗೆ ಇವೆರಡು ಸಂಗತಿಗಳೂ ಇವೆ.

ಪೀಠಿಕೆ ॥ ಗ್ರಂಥದ ಆದಿಯಲ್ಲಿ ಮಂಗಲಾಚರಣೆಯನ್ನು ಅವಶ್ಯವಾಗಿ ಮಾಡಬೇಕಾದು ದರಿಂದ ಮಂಗಲಕ್ಕೆ ಪ್ರಯೋಜಕವಾಗಿ ಅಥ ಶಬ್ದವನ್ನು ವ್ಯಾಖ್ಯಾನಮಾಡುತ್ತಾರೆ.

**ಭಾಷ್ಯ ॥ ಅಥಶಬ್ದೋ★ ಮಂಗಲಾರ್ಥೋಽಧಿಕಾರಾನಂತರ್ಯಾರ್ಥಶ್ಚ । ಅತಃಶಬ್ದೋ ಹೇತ್ವರ್ಥಃ ॥ ೧೫ ॥**

★ ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ। ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ ॥

ಭಾಷ್ಯಾರ್ಥ ॥ ಅಥಶಬ್ದವು ಮಂಗಲವೇ ಪ್ರಯೋಜನವಾಗಿವುಳ್ಳದ್ದು. ಅಥವಾ ವಿಘ್ನೋತ್ಸಾರಣಕ್ಕೆ ಅಸಾಧಾರಣ ಕಾರಣವಾಗಿ ಅನುಷ್ಠೇಯವಾದ ವಿಷ್ಣುಸ್ಮರಣ ಅಥಶಬ್ದೋಚ್ಚಾರಣ ರೂಪವಾದ ಪ್ರಯೋಜನವುಳ್ಳದ್ದು. ಹಾಗೆಯೇ ಪ್ರಶಸ್ತರೂಪವಾದ ಅನುಷ್ಠೇಯವಾದ ಮಂಗಲ ರೂಪನಾದ ವಿಷ್ಣುವು ವಿಷ್ಣುವಿನ ಗುಣವಾಗಲೀ ವಾಚ್ಯವಾಗಿ ಉಳ್ಳದ್ದು (ಮುಕ್ತಿಯನ್ನು ಇಚ್ಛಿಸುವವನಿಗೆ ಮಾತ್ರ ಬ್ರಹ್ಮಜಿಜ್ಞಾಸೆಯಲ್ಲಿ ಅಧಿಕಾರವೆಂದಲ್ಲ. ಮುಕ್ತಿಯೋಗ್ಯತ್ವ ಶಮದಮಾದಿಗುಣಸಂಪನ್ನರಿಗೂ ಅಧಿಕಾರವಿದೆ ಎನ್ನುವ ಅಭಿಪ್ರಾಯದಿಂದ ಅಥಶಬ್ದಕ್ಕೆ ಅರ್ಥವನ್ನು ಹೇಳುತ್ತಾರೆ.) ಅಧಿಕಾರ ಪ್ರಾಪ್ತ್ಯನಂತರದಲ್ಲಿ ಎನ್ನುವ ವಾಚ್ಯವಾದ ಅರ್ಥವುಳ್ಳದ್ದು. (ಬ್ರಹ್ಮ ಜಿಜ್ಞಾಸಕ್ಕೆ ಪ್ರಯೋಜನವಿಲ್ಲವೆನ್ನುವ ಶಂಕೆಯನ್ನು ನಿವರ್ತಿಸುವುದಕ್ಕಾಗಿ ಅತಃಶಬ್ದವನ್ನು ವ್ಯಾಖ್ಯಾನಮಾಡುತ್ತಾರೆ.) ಅತಃ ಎನ್ನುವ ಶಬ್ದವು ಲಿಂಗವೆನ್ನುವ ಅರ್ಥ ವುಳ್ಳದ್ದು. ಅಥವಾ ಪ್ರಸಾದಾಖ್ಯಕಾರಣರೂಪ ಅರ್ಥವುಳ್ಳದ್ದು.

ವಿಶೇಷಾಂಶ ॥ (ಎ) ಶಂಖ ವೀಣಾ ವೇಣುಗಳ ಧ್ವನಿಗಳಂತೆ ಶ್ರವಣಮಾತ್ರದಿಂದಲೇ ಮಂಗಲರೂಪವಾದ ಫಲವನ್ನು ಕೊಡತಕ್ಕದ್ದು ಅಥಶಬ್ದವು. (ಬಿ) ಅಥಶಬ್ದವು ಪರಮಮಂಗಲ ರೂಪನಾದ ಶ್ರೀವಿಷ್ಣುವನ್ನು ಹೇಳುವುದರಿಂದ ಅತಿಪ್ರಿಯವಾದ ಪ್ರಯುಕ್ತ ಶ್ರವಣ ಕೀರ್ತನೆಗಳಿಂದ ಮಂಗಲರೂಪಫಲವನ್ನುಂಟುಮಾಡುತ್ತದೆ. (ಸಿ) ಅಥಶಬ್ದಕ್ಕೆ ಅನಂತರದಲ್ಲಿ ಎಂದಿಷ್ಟು ಮಾತ್ರ ಅರ್ಥವಾದಾಗ್ಯೂ ಯೋಗ್ಯತೆಯಿಂದ ಅಧಿಕಾರಪ್ರಾಪ್ತಿಯು ಎನ್ನುವ ಅರ್ಥವು ಸಿಗುತ್ತದೆ. (ಡಿ) ಸರ್ವರಿಗೂ ದುಃಖವು ಆಗಬಾರದು. ಸುಖವೇ ಆಗಬೇಕು ಎಂದು ನಿಶ್ಶೇಷ ದುಃಖನಿವೃತ್ತಿಯೂ ಪರಮಸುಖಪ್ರಾಪ್ತಿಯೂ ಇಚ್ಛೆಗೆ ವಿಷಯವಾದುದರಿಂದ ಸದಾ ಹೃದಯದಲ್ಲಿದ್ದವುಗಳೇ ಅತಃಶಬ್ದದಿಂದ ಹೇಳಿಸಿಕೊಳ್ಳಲ್ಪಡುತ್ತವೆ. ಯಾವ ಕಾರಣದಿಂದ ಬ್ರಹ್ಮಜಿಜ್ಞಾಸೆ ಮಾಡದೆ ನಿಶ್ಶೇಷ ದುಃಖನಿವೃತ್ತಿಯೂ ಸುಖಪ್ರಾಪ್ತಿಯೂ ಸಿದ್ಧಿಸಲಾರವೋ ಅವೆರಡೂ ಜಿಜ್ಞಾಸೆಯಿಂದಲೇ ಸಿದ್ಧಿಸುತ್ತವೋ ಆದಕಾರಣ ಜಿಜ್ಞಾಸೆ ಮಾಡಬೇಕು.

ಪೀಠಿಕೆ ॥ ಎಲ್ಲಾ ಸೂತ್ರಗಳ ಆದಿಯಲ್ಲಿಯೂ ಅಥ ಅತಃ ಎನ್ನುವ ಶಬ್ದಗಳು ಇರಲಿಕ್ಕೆ ಕಾರಣವೇನು? ವಿಘ್ನನಿವರ್ತಕವಾದ ಶಬ್ದೋಚ್ಚಾರಣಾದಿಗಳು ಮಂಗಲಂ ತತಃ ಎನ್ನುವ ಶಬ್ದಾಂತರವನ್ನು ಹೇಳಿದರೂ ಕೂಡಬಹುದು ಎನ್ನುವ ಆಶಂಕೆಯನ್ನು ಪುರಾಣವಚನದಿಂದಲೇ ನಿರಾಕರಿಸುತ್ತಾರೆ.

**ಭಾಷ್ಯ ॥ ಉಕ್ತಂ ಚ ಗಾರುಡೇ। ಅಥಾತಃಶಬ್ದಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ।**
**ಪ್ರಾರಭಂತೇ ನಿಯತ್ಯೈವ ತತ್ಕಿಮತ್ರ ನಿಯಾಕಮ್ ॥ ೧೬ ॥**

ಭಾಷ್ಯಾರ್ಥ ॥ (೧) (ಅಥಶಬ್ದ ಇತ್ಯಾದಿಗಳಿಂದ ಹೇಳಲ್ಪಟ್ಟ ಪ್ರಮೇಯವು) ಗಾರುಡ ಪುರಾಣದಲ್ಲಿ ಉಕ್ತವೇ ಆಗಿದೆ. ಆದಿಕವಿಯಾದ ಚತುರ್ಮುಖಬ್ರಹ್ಮನೇ! ಜೈಮಿನ್ಯಾದಿಗಳಿಂದ ಮಾಡಲ್ಪಟ್ಟ ಕರ್ಮಮೀಮಾಂಸಾ ಮೊದಲಾದ ಎಲ್ಲಾ ಆದಿ ಸೂತ್ರಗಳನ್ನು ನಿಯಮದಿಂದಲೇ

---

ಓಂಕಾರ ಅಥಶಬ್ದಗಳೆರಡೂ ಮೊದಲು ಬ್ರಹ್ಮದೇವರ ಕಂಠವನ್ನು ಭೇದಿಸಿಕೊಂಡು ಹೊರಟವೆ. ಆದಕಾರಣ ಎರಡೂ ಮಾಂಗಲಿಕಗಳು ಆದಕಾರಣ ಅಥಶಬ್ದಶ್ರವಣದಿಂದಲೇ ಮಂಗಲವು ಉಂಟಾಗುತ್ತದೆಯೆಂದು ತಿಳಿಯುತ್ತದೆ.

(ಕಲ್ಪಾಂತರದಲ್ಲಿಯೂ) ಅಥ ಅತಃ ಎನ್ನುವ ಶಬ್ದಗಳೇ ಪ್ರಥಮಪ್ರಯೋಜ್ಯಗಳಾಗಿ ಉಳ್ಳವುಗಳನ್ನಾಗಿಯೇ (ಸೂತ್ರಕಾರರೆಲ್ಲರೂ) ಪ್ರಾರಂಭಿಸುತ್ತಾರೆ. ನಿಯಮದಿಂದಲೇ ಅಥ ಅತಃ ಎನ್ನುವ ಶಬ್ದಗಳನ್ನೇ ಪ್ರಥಮತಃ ಪ್ರಯೋಗಮಾಡುವ ವಿಷಯದಲ್ಲಿ (ಯಾವುದಾದರೊಂದು ನಿಯಾಮಕವು ಇರಲೇಬೇಕು). ಅಂತಹ ನಿಯಾಮಕವು ಯಾವುದು?

ಪೀಠಿಕೆ ॥ ನಿಯಾಮಕವು, ೧ ಅವಶ್ಯವಾಗಿ ಹೇಳಬೇಕಾದ ಅರ್ಥವುಳ್ಳದ್ದು ೨ ಆಧಿಕ್ಯವು ಹೀಗೆ ಎರಡು ವಿಧವು. ಅದರಲ್ಲಿ ಆಧಿಕ್ಯವು ೧ ಸ್ವರೂಪತಃ ಆಧಿಕ್ಯವು ೨ ಅರ್ಥತಃ ಆಧಿಕ್ಯವು ಹೀಗೆ ಎರಡು ವಿಧವು. ಅವುಗಳಲ್ಲಿ ಅವಶ್ಯವಾಗಿ ಹೇಳಬೇಕಾದ ಅರ್ಥವುಳ್ಳದ್ದು ಎನ್ನುವ ಆದಿಪಕ್ಷದಲ್ಲಿ ಪ್ರಶ್ನಿಸುತ್ತಾರೆ.

ಭಾಷ್ಯಾ ॥ ಕಶ್ಚಾರ್ಥಶ್ಚ ತಯೋರ್ವಿದ್ವನ್ ಕಥಮುತ್ತಮತಾ ತಯೋಃ ।
ಏತದಾಖ್ಯಾಹಿ ಮೇ ಬ್ರಹ್ಮನ್ಯಥಾ ಜ್ಞಾಸ್ಯಾಮಿ ತತ್ತ್ವತಃ ॥
ಏವಮುಕ್ತೋ ನಾರದೇನ ಬ್ರಹ್ಮಾ ಪ್ರೋವಾಚ ಸತ್ತಮಃ ॥ ೧೭ ॥

ಭಾಷ್ಯಾರ್ಥ ॥ ಜ್ಞಾನಿಯಾದ ಚತುರ್ಮುಖಬ್ರಹ್ಮನೇ! ಅಥ ಅತಃ ಎನ್ನುವ ಶಬ್ದಗಳಿಗೆ ಅವಶ್ಯವಾಗಿ ಹೇಳಬೇಕಾದ ಅರ್ಥವು ಯಾವದು? (ಹೇಗೆ ಪ್ರಾಥಮ್ಯವು) (ಎರಡನೇದ್ದನ್ನು ಆಕ್ಷೇಪಿಸುತ್ತಾರೆ.) ಅಥ ಅತಃ ಶಬ್ದಗಳಿಗೆ (ಇತರ ಶಬ್ದಗಳಿಗಿಂ ತ) ಸ್ವರೂಪತಃ ಉತ್ತಮತ್ವವು ಹೇಗೆ? (ಅಂದರೆ ಬೇರೆ ಯಾವ ಶಬ್ದಗಳಿಗೂ ಸ್ವ ರೂಪೋತ್ತಮತ್ವವು ಕಾಣದಿರುವುದರಿಂದ ಇವುಗಳಿಗೆ ಮಾತ್ರ ಸ್ವರೂಪೋತ್ತಮತ್ವವು ಕೂಡಲಾರದು.) (ಮೂರನೇ ಪಕ್ಷದಲ್ಲಿ ಪ್ರಶ್ನಿಸುತ್ತಾರೆ.) ಅಥ ಅತಃ ಶಬ್ದಗಳಿಗೆ ಅರ್ಥತಃ ಆಧಿಕ್ಯವೂ ಹೇಗೆ? ಪ್ರಶ್ನೆಗೂ ಆಕ್ಷೇಪಕ್ಕೂ ವಿಷಯೀಭೂತವಾದ ನಿಯಾಮಕವನ್ನು (ನಾನು) ಯಥಾರ್ಥವಾಗಿ ಹೇಗೆ ತಿಳಿಯವುನೋ ಹಾಗೆ ನನಗೋಸ್ಕರ ಹೇಳು. ಹೀಗೆ ನಾರದ ಋಷಿಗಳಿಂದ ಪ್ರಶ್ನಿಸಿಕೊಳ್ಳಲ್ಪಟ್ಟ ಸಜ್ಜೀವರಲ್ಲಿ ಉತ್ತಮನಾದ ಚತುರ್ಮುಖಬ್ರಹ್ಮನು ಪ್ರತ್ಯುತ್ತರಕೊಟ್ಟನು.

ವಿಶೇಷಾಂಶ ॥ (ಎ) ಓಂಕಾರವು ಸರ್ವಶಾಸ್ತ್ರಗಳ ಆದಿಸೂತ್ರದ ಅವಯವವೆಂದು ತೋರಿಬಾರದೆ ಇರುವುದರಿಂದ ಓಂಕಾರ ವಿಷಯದಲ್ಲಿ ಪ್ರಶ್ನೆಮಾಡಲಿಲ್ಲ (ಬಿ) ಆದರೂ ಪ್ರವತ್ಯನೋಂಕೃತಂ ಎನ್ನುವ ಶ್ರುತಿಯಿಂದಲೂ ಸಿಸೃಕ್ಷೋಃ ಪರಮಾತ್ ಎನ್ನುವ ಸ್ಮೃತಿಯಿಂದಲೂ ಈ ಶಾಸ್ತ್ರದಲ್ಲಿ ಮಾತ್ರ ಮುಖ್ಯವಾಗಿ ಆದಿಯಾಗಿವೆ ಎಂದು ಸಿದ್ಧವಾಗಿದೆ.

ಪೀಠಿಕೆ ॥ ಜಜ್ಞಾಸಾಧಿಕಾರವನ್ನು ಅವಶ್ಯವಾಗಿ ಹೇಳಬೇಕಾಗಿರುವುದರಿಂದ ಜಜ್ಞಾಸಕ್ಕೆ ಹೇತುತ್ವವನ್ನು ಸಾಧಿಸತಕ್ಕ ಆನಂತರ್ಯವನ್ನೂ, ಜಿಜ್ಞಾಸಾಹೇತುವನ್ನು ಕರ್ತವ್ಯತ್ವಕ್ಕೆ ಹೇತುವನ್ನು ಅವಶ್ಯವಾಗಿ ಹೇಳಬೇಕಾಯಿತು. ಆದಕಾರಣ ಆ ಉದ್ದೇಶದಿಂದ ಅಥ ಅತಃಶಬ್ದಗಳನ್ನು ಪ್ರಥಮತಃ ಪ್ರಯೋಗಿಸಬೇಕು ಎನ್ನುವ ಪರಿಹಾರವನ್ನೂ ಇಟ್ಟುಕೊಂಡು ಅಥಅತಃಶಬ್ದಗಳಿಗೆ ಆವಶ್ಯವಕತ್ವಾರ್ಥತ್ವವನ್ನೂ ತೋರಿಸುತ್ತಾರೆ.

ಭಾಷ್ಯ ॥ ಆನಂತರ್ಯೇಽಧಿಕಾರಸ್ಯ ಮಂಗಲಾರ್ಥೇ ತಥೈವ ಚ ।
ಅಥಶಬ್ದಸ್ತ್ವತಃಶಬ್ದೋ ಹೇತ್ವರ್ಥೇ ಸಮುದೀರಿತಃ ॥ ೧೮ ॥

**ಭಾಷ್ಯಾರ್ಥ ॥** ಸೂತ್ರದಲ್ಲಿದ್ದ ಅಥಶಬ್ದವು ಅಧಿಕಾರಸಂಪತ್ತ್ಯನಂತರದಲ್ಲಿ ಎನ್ನುವ ವಾಚ್ಯವಾದ ಅರ್ಥದಲ್ಲಿ (ಸೂತ್ರಕಾರರಿಂದ) ಪ್ರಯುಕ್ತವಾಗಿದೆ. (ಮಂಗಲಾದಿ ವಾಚಕವಾಗಿದೆ ಎನ್ನುವ ಅಭಿಪ್ರಾಯದಿಂದ ಪ್ರಯುಕ್ತವಲ್ಲ) (ಅವಶ್ಯವಾಗಿ ಮಾಡಬೇಕೆನ್ನುವ ಪ್ರಯೋಜನವಿದ್ದ ಪ್ರಯುಕ್ತವೂ ಅಥಶಬ್ದವನ್ನು ಪ್ರಥಮದಲ್ಲಿ ಪ್ರಯೋಗಿಸಿದ್ದು ಎನ್ನುವ ಅಭಿಪ್ರಾಯದಿಂದ **ಅಥಶಬ್ದೋ ಮಂಗಲಾರ್ಥಃ** ಎಂದು ತಾನು ಹೇಳಿದ ಅರ್ಥದಲ್ಲಿ ಪ್ರಮಾಣವನ್ನು ತೋರಿಸುತ್ತಾರೆ.) ಹಾಗೆಯೇ ಮಂಗಲರೂಪ ಪ್ರಯೋಜನಕ್ಕಾಗಿಯೂ ಅಥಶಬ್ದವು (ಸೂತ್ರಕಾರರಿಂದ) ಪ್ರಯುಕ್ತವಾಗಿದೆ. (ಹೀಗೆ ಅಥಶಬ್ದಕ್ಕೆ ಪ್ರಥಮತಃ ಪ್ರಯೋಗಮಾಡಲಿಕ್ಕೆ ನಿಯಾಮಕವು ಅವಶ್ಯವಕ್ತವ್ಯಾರ್ಥತ್ವವು ಎನ್ನುವುದನ್ನು ತೋರಿಸಿ ಅತಃಶಬ್ದಕ್ಕೂ ತೋರಿಸುತ್ತಾರೆ.) ಅತಃ ಎನ್ನುವ ಶಬ್ದವಾದರೂ ಲಿಂಗ ಮತ್ತು ಕಾರಣವನ್ನುವ ವಾಚ್ಯವಾದ ಅರ್ಥ ವಿಷಯದಲ್ಲಿ(ಅಂದರೆ ಲಿಂಗ ಮತ್ತು ಕಾರಣ ಇವುಗಳಿಗೆ ವಾಚಕವೆಂದು) (ಸೂತ್ರ ಕಾರರಿಂದ) ಹೇಳಲ್ಪಡುತ್ತದೆ.

**ಪೀಠಿಕೆ ॥** ಅತಃಶಬ್ದಕ್ಕೆ ಅವಶ್ಯವಾಗಿ ಹೇಳಬೇಕಾದ ಅರ್ಥಾಂತರವನ್ನು ಹೇಳುತ್ತಾರೆ.

**ಭಾಷ್ಯ ॥ ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿ ವಾ ಭವೇತ್ ॥ ೧೯ ॥**

**ಭಾಷ್ಯಾರ್ಥ ॥** ಆ ಇತಿ ಬ್ರಹ್ಮ ಎನ್ನುವ ಶ್ರುತಿಯ ದೆಸೆಯಿಂದ ಅಕಾರವಾಚ್ಯನಾದ, ಪರಬ್ರಹ್ಮ ಶಬ್ದವಾಚ್ಯನಾದ ವಿಷ್ಣುವಿನ ಪ್ರಸಾದದೆಸೆಯಿಂದ (ಬ್ರಹ್ಮಜಿಜ್ಞಾಸಾ ಮಾಡಬೇಕು) ಎಂದೂ ಅತಃಶಬ್ದಾರ್ಥವು ಆಗುವುದು.

**ಪೀಠಿಕೆ ॥** ಜಿಜ್ಞಾಸಾದಿಗಳನ್ನು ಮಾಡಬೇಕಾದರೆ ಭಗವತ್ಪ್ರಸಾದವು ಏತಕ್ಕೆ? ಅವಶ್ಯವಕ್ತವ್ಯಾರ್ಥವು ಹೇಗೆ ಆಗುವುದೆಂದರೆ—

**ಭಾಷ್ಯ ॥ ಸ ಹಿ ಸರ್ವಮನೋವೃತ್ತಿಪ್ರೇರಕಸ್ಸಮುದಾಹೃತಃ ॥ ೨೦ ॥**

**ಭಾಷ್ಯಾರ್ಥ ॥** ಯಾವ ಕಾರಣದೆಸೆಯಿಂದ ಆ ವಿಷ್ಣುಪ್ರಸಾದವು ಅಥವಾ ಪ್ರಸನ್ನ ನಾದ ವಿಷ್ಣುವು ಎಲ್ಲಾ ಅಧಿಕಾರಿಗಳಿಗೆ ಪೂರ್ಣನಾದ ವಿಷ್ಣುವಿನಲ್ಲಿ ಜಿಜ್ಞಾಸಾರೂಪವಾದ ಮನಃಪ್ರಾಮಾಣ್ಯಕ್ಕೆ ಹೇತುವೆಂದು (ಪ್ರಾಮಾಣಿಕರಿಂದ) ಹೇಳಲ್ಪಟ್ಟಿದ್ದಾನೆ. ಮತ್ತು ಎಲ್ಲಾ ಮನೋವೃತ್ತಿಪ್ರಭೇದಗಳಾದ ಜ್ಞಾನ ಅಧ್ಯಯನಾದಿಗಳಿಗೂ ಮನೋವೃತ್ತಿಸಾಧ್ಯಗಳಾದ ಮೋಕ್ಷಾದಿಗಳಿಗೂ ಸಂಪಾದಕನೆಂದು ಆ ಪ್ರಸನ್ನನಾದ ವಿಷ್ಣು ವು ಹೇಳಲ್ಪಡುತ್ತಾನೆ. (ಆದಕಾರಣ ಪ್ರಸಾದವು ಆವಶ್ಯಕವು.)

**ಪೀಠಿಕೆ ॥** ಮಂಗಲಾಚರಣಾದಿಗಳು ಮಂಗಲಂ ತತಃ ಎಂದು ಶಬ್ದಾಂತರದಿಂದಲೂ ಕೂಡುವುದರಿಂದ ಅಥ ಎನ್ನುವ ಶಬ್ದವನ್ನೇ ನಿಯಮದಿಂದ ಪ್ರಥಮತಃ ಪ್ರಯೋಗ ಮಾಡಲು ಕಾರಣವೇನು ಎನ್ನುವ ಚೋದ್ಯಕ್ಕೆ ಪರಿಹಾರವೇನು ಎಂದರೆ— ಅವಶ್ಯವಕ್ತವ್ಯಾರ್ಥತ್ವವಿದ್ದ ಪ್ರಯುಕ್ತ ಮಾತ್ರ ಅಥ ಅತಃಶಬ್ದಗಳಿಗೆ ಪ್ರಥಮತಃ ಪ್ರಯೋಗವಲ್ಲ. ಸ್ವರೂಪಾಧಿಕ್ಯವಿದ್ದ ಪ್ರಯುಕ್ತವೂ ಪ್ರಥಮತಃ ಪ್ರಯೋಗವು ಎನ್ನುವ ಅಭಿಪ್ರಾಯದಿಂದ ಅಥ ಅತಃಶಬ್ದಗಳಿಗೆ ಸ್ವರೂಪಾಧಿಕ್ಯವನ್ನು ಹೇಳುತ್ತಾರೆ.

ಭಾಷ್ಯ ॥ ಸಿಸೃಕ್ಷೋಃ ಪರಮಾದ್ವಿಷ್ಣೋಃ ಪ್ರಥಮಂ ದ್ವೌ ವಿನಿಸ್ಸೃತೌ ।
ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ಪ್ರಾಥಮಿಕೌ ಕ್ರಮಾತ್ ॥ ೨೦ ॥

ಭಾಷ್ಯಾರ್ಥ ॥ ಯಾವ ಕಾರಣದೆಸೆಯಿಂದ ಸೃಷ್ಟಿ ಮಾಡಲಿಕ್ಕೆ ಇಚ್ಛಿಸಿದ ಸರ್ವೋತ್ತಮನಾದ ವಿಷ್ಣುವಿನ ಮುಖದ ದೆಸೆಯಿಂದ ತನ್ನ ಸಮಾನಜಾತೀಯಗಳಾದ ಇತರಶಬ್ದಗಳ ಉಚ್ಚಾರಣಗಿಂತ ಮೊದಲು ಓಂಕಾರವೂ ಅಥಶಬ್ದವೂ ಇವು ಎರಡು ಕಂಠವನ್ನು ಭೇದಿಸಿಕೊಂಡು ಹೊರಟು ಬಂದಿರುತ್ತಾವೋ ಆದುದರಿಂದ ಸ್ವರೂಪೋತ್ತಮಗಳು. ಸ್ವರೂಪೋತ್ತಮತ್ವವಿದ್ದ ಪ್ರಯುಕ್ತವೇ ಆದಿ, ಮಧ್ಯ, ಕ್ರಮದಿಂದ ಪ್ರಥಮ ಪ್ರಯೋಜ್ಯಗಳು.

ವಿಶೇಷಾಂಶ ॥ (ಎ) ಮೊದಲು ಓಂಕಾರ ವಿಷಯದಲ್ಲಿ ಆಕ್ಷೇಪಿಸದಿದ್ದರೂ ಓಂಕಾರಕ್ಕೆ ಸ್ವರೂಪಾಧಿಕ್ಯವನ್ನು ಹೇಳಿದ್ದು. ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಲ್ಲಾ ಮುಖ್ಯವಾಗಿ ಅಧಿಕ್ಯವು. ಅಥಶಬ್ದಕ್ಕೆ ಎರಡನೇ ಆಧಿಕ್ಯವೋ ಎನ್ನುವ ವಿವಕ್ಷೆಯಿಂದ ಪ್ರವೃತ್ತನಾದ ಸರ್ವ ಏತೇ ಸತಾಂ ಮತಾಃ ಎನ್ನುವ ಪ್ರಮಾಣವನ್ನು ಅನುಸರಿಸಿ ಹೇಳಿದ್ದು ಎಂದು ತಿಳಿಯಬೇಕು. (ಬಿ) ಹಾಗಾದರೆ ಎರಡೂ ಪ್ರಾಥಮಿಕಗಳು ಎನ್ನುವುದು ವಿರುದ್ಧವು. ಎಂದರೆ—ಕ್ರಮಾತ್= ಅಂದರೆ ಓಂಕಾರಕ್ಕೆ ಮುಖ್ಯವಾಗಿ ಪ್ರಾಥಮಿಕತ್ವವು. ಅಥಶಬ್ದಕ್ಕೆ ಎರಡನೇದಾಗಿ ಮುಖ್ಯತ್ವವು.

ಪೀಠಿಕೆ ॥ ಓಂಕಾರಕ್ಕೂ ಅಥಶಬ್ದಕ್ಕೂ ಸ್ವರೂಪಾಧಿಕ್ಯವನ್ನು ಹೇಳಿ ಅತಃ ಎನ್ನುವ ಶಬ್ದಕ್ಕೂ ಸ್ವರೂಪಾಧಿಕ್ಯವನ್ನು ಹೇಳುತ್ತಾರೆ.

ಭಾಷ್ಯ ॥ ತದ್ಧೇತುತ್ವಂ ವದಂಶ್ಚಾಪಿ ತೃತೀಯೋಽತ ಉದಾಹೃತಃ ॥ ೨೨ ॥

ಭಾಷ್ಯಾರ್ಥ ॥ (ಓಂಕಾರ ಅಥಶಬ್ದಗಳು ಮಾತ್ರ ಸ್ವರೂಪೋತ್ತಮಗಳಲ್ಲ ಮತ್ತೆ) ಪ್ರಸನ್ನನಾದ ಅಕಾರವಾಚ್ಯನಾದ ವಿಷ್ಣುವಿಗೆ ಜಿಜ್ಞಾಸಾದಿಗಳಲ್ಲಿ ಕಾರಣತ್ವವನ್ನು (ತಸಿಪ್ರತ್ಯಯದಿಂದ) ಹೇಳತಕ್ಕ ಅಥವಾ ಸ್ವಭಾವದಿಂದಲೇ ಜಿಜ್ಞಾಸಾದಿಗಳಿಗೆ ಮೋಕ್ಷಹೇತುತ್ವರೂಪವಾದ ಲಿಂಗವನ್ನು ಹೇಳತಕ್ಕ ಸರ್ವನಾಮವೇ ಪ್ರಕೃತಿಯಾಗಿ ಉಳ್ಳ ಅತಃಶಬ್ದವೂ ಕೂಡಾ ಯಾವ ಕಾರಣದಿಂದ ವಿಷ್ಣುವಿನ ದೆಸೆಯಿಂದ ಮೂರನೇದಾಗಿ ಉಚ್ಚರಿಸಲ್ಪಟ್ಟದೋ ಆದಕಾರಣ ಅತಃಶಬ್ದವೂ ಕೂಡಾ ಸ್ವರೂಪೋತ್ತಮವು. ಆದುದರಿಂದಲೇ ಅತಃಶಬ್ದವೂ ಕೂಡಾ ಮೂರನೇದಾಗಿ ಪ್ರಾಥಮಿಕವಾಗಿ ಉದಾಹೃತವಾಗಿದೆ.

ವಿಶೇಷಾಂಶ ॥ (ಎ) ಮಂಗಲಂ ತತಃ ಎಂದು ಮಂಗಲಶಬ್ದದಿಂದ ಮಂಗಲವನ್ನು ಹೇಳಿದಾಗ್ಯೂ ಮಂಗಲಶಬ್ದಕ್ಕೆ ಸ್ವರೂಪಾಧಿಕ್ಯವಿಲ್ಲ. ಅಥಶಬ್ದ ಅತಃಶಬ್ದ ಇವುಗಳಿಂದಲೆಂಬಂತೆ ಅಧಿಕಾರವನ್ನೂ ಪ್ರಯೋಜನವನ್ನೂ ಹೇಳಿದಂತೆ ಆಗುವುದಿಲ್ಲ. ಆದುದರಿಂದಲೇ ಮಂಗಲಶಬ್ದದಿಂದ ಗತಾರ್ಥವಾಗುವುದಿಲ್ಲ. ಅಧಿಕಾರವನ್ನೂ ಪ್ರಯೋಜನಗಳನ್ನೂ ಸೂಚಿಸುವುದಕ್ಕಾಗಿ ಅಥ ಅತಃಶಬ್ದಗಳು ಅವಶ್ಯವಾಗಿ ಬೇಕಾಗಿವೆ. (ಬಿ) ತತಃ ಶಬ್ದದಿಂದ ಅಧಿಕಾರ ಅನಂತರದಲ್ಲಿ ಎಂದು ಅರ್ಥವು ಸಿಗುವುದಾದರೆ ಅದಕ್ಕೆ ಸ್ವರೂಪಾಧಿಕ್ಯವನ್ನು ಹೇಳದಿರುವುದರಿಂದಲೇ ಅದನ್ನು ಆದಿಸೂತ್ರದಲ್ಲಿ ಹೇಳಲಿಲ್ಲ.

**ಪೀಠಿಕೆ ॥** ಅವಶ್ಯವಕ್ತವ್ಯಾರ್ಥತ್ವವಿದ್ದ ಪ್ರಯುಕ್ತ ಮತ್ತು ಸ್ವರೂಪಾಧಿಕ್ಯವಿದ್ದ ಪ್ರಯುಕ್ತ ಮಾತ್ರ ಅಥ ಅತಃಶಬ್ದಗಳನ್ನು ಪ್ರಥಮತಃ ಪ್ರಯೋಗಮಾಡಿದ್ದೆಂದಲ್ಲ ಮತ್ತೆ ಅವಯವಾರ್ಥವಿದ್ದ ಪ್ರಯುಕ್ತವೂ ಪ್ರಥಮತಃ ಪ್ರಯೋಗಮಾಡಿದ್ದು ಎನ್ನುವ ಅಭಿಪ್ರಾಯದಿಂದ ಕಥಮುತ್ತಮತಾ ಎನ್ನುವ ಮೂರನೇ ಪ್ರಶ್ನೆಗೆ ಪ್ರಕಾರಾಂತರದಿಂದ ಉತ್ತರವನ್ನು ಹೇಳುತ್ತಾರೆ.

**ಭಾಷ್ಯ ॥ ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ ।**
**ತಥೌ ಪ್ರಾಣಾತ್ಮಕೌ ಪ್ರೋಕ್ತೌ ವ್ಯಾಪ್ತಿಸ್ಥಿತಿವಿಧಾಯಕೌ ॥**
**ಅತಶ್ಚ ಪೂರ್ವಮುಚ್ಚಾರ್ಯಾಃ ಸರ್ವ ಏತೇ ಸತಾಂ ಮತಾಃ ॥ ೨೩ ॥**

**ಭಾಷ್ಯಾರ್ಥ ॥** ಅಥ ಅತಃಶಬ್ದಗಳಲ್ಲಿರತಕ್ಕ ಅಕಾರವು ಯಾವ ಕಾರಣದೆಸೆಯಿಂದ ಎಲ್ಲಾ ವಚನಗಳ ಅರ್ಥಭೂತವಾದ ಪೂರ್ಣತ್ವವನ್ನು ಹೇಳುತ್ತದೋ ಆದುದರಿಂದ ಪರಬ್ರಹ್ಮನನ್ನು ಹೇಳುತ್ತದೆ. ಅಥ ಅತಃ ಎನ್ನುವಲ್ಲಿದ್ದ ಥಕಾರ ತಕಾರಗಳು ವಿಷ್ಣು ವಾಯುಗಳೇ ಸ್ವರೂಪವಾಗಿವುಳ್ಳವುಗಳು ಎಂದು ಹೇಳಲ್ಪಟ್ಟಿವೆ. ಮತ್ತು ಥಕಾರ ತಕಾರಗಳು ದೇಶ ಕಾಲ ವ್ಯಾಪ್ತಿ ವಿಕಾರವಿಲ್ಲದೆ ಇರುವಿಕೆ ಎಂಬ ಅರ್ಥಗಳನ್ನು ಹೇಳತಕ್ಕವುಗಳು. ಭಗವದ್ವಾಚಕಗಳಾದ ಅಕಾರಾದಿಗಳಿಂದ ಕೂಡಿದುದರಿಂದಲೂ ಓಂ ಕಾರವು ಭಗವಂತನನ್ನು ಹೇಳತಕ್ಕುದಾದುದರಿಂದಲೂ ಪ್ರಸಕ್ತಗಳಾದ ಓಂಕಾರ, ಅಥ, ಅತಃಶಬ್ದಗಳು ಸ್ವರೂಪೋತ್ತಮಗಳು. ಆದುದರಿಂದ ಈ ಶಾಸ್ತ್ರದ ಆದಿಯಲ್ಲಿ ಅಥವಾ ಮುಖ್ಯಗಳಾದ ಬ್ರಹ್ಮಸೂತ್ರಗಳ ಆದಿಸೂತ್ರದಲ್ಲಿ ಕ್ರಮವಾಗಿ ಪ್ರಯೋಜ್ಯಗಳೆಂದು ಸಜ್ಜನರಿಗೆ ಸಮ್ಮತಗಳು.

**ವಿಶೇಷಾಂಶ ॥** (ಎ) ★ ಸರ್ವವಾಗಾತ್ಮಾ= ಸರ್ವವಾಕ್, ಸರ್ವವಾಗಾರ್ಥವು ಅಂದರೆ ಅವಾವ ಶಬ್ದಪ್ರವೃತ್ತಿಗಳಿಗೆ ನಿಮಿತ್ತಭೂತವಾದ ಗುಣವುಳ್ಳತನವು. ಮತ್ತು ಆವಾವ ವಾಕ್ಯಾರ್ಥಭೂತನಾದ ಗುಣವುಳ್ಳತನವು. ಹೀಗೆ ಗುಣಪರಿಪೂರ್ಣತ್ವರೂಪವಾದ ಅರ್ಥವೇ ಆತ್ಮಾ= ಸ್ವರೂಪವಾಗಿ ಉಳ್ಳದ್ದು ಅಂದರೆ ಸರ್ವ ವಚನಗಳ ಅರ್ಥಭೂತವಾದ ಗುಣಪರಿಪೂರ್ಣತ್ವವನ್ನು ಹೇಳತಕ್ಕದ್ದು. (ಬಿ) ಗುಣಪರಿಪೂರ್ಣತ್ವವೇ ಪರಬ್ರಹ್ಮನು. ಧರ್ಮಕ್ಕೂ ಧರ್ಮಿಗೂ ಭೇದವಿಲ್ಲ.

---

★ **(ಕ) ಅನ್ಯೇಽಪಿ ಶಬ್ದಾಃ ಸರ್ವೇಽಪಿ ಹ್ಯಕಾರಾರ್ಥಾಭಿಧಾಯಿನಃ । ತಸ್ಮಾದ ಕಾರ ಏವಾಯಂ ಸರ್ವವಾಗಾತ್ಮಕಃ ಶ್ರುತಃ । ತಸ್ಮಾತ್ಸರ್ವಗುಣಾನ್ವಿಷ್ಣೋರ ಕಾರೋ ವಕ್ತಿ ಯತ್ಪ್ರಭೋಃ । ತದ್ವ್ಯಕ್ತಯೋಽಪಿ ಶಬ್ದಾದ್ಯೇ ಸರ್ವೇ ವಿಷ್ಣು ಗುಣಾಬ್ರುವಾಃ ।** ಇತರ ಎಲ್ಲಾ ಶಬ್ದಗಳೂ ಅಕಾರಾರ್ಥವನ್ನೇ ಹೇಳತಕ್ಕವುಗಳು. ಆದಕಾರಣ ಅಕಾರವೇ ಸರ್ವವಾಕ್ ಸ್ವರೂಪವೆಂದು ಹೇಳಲ್ಪಟ್ಟಿದೆ. ಅಕಾರವು ವಿಷ್ಣುವಿನ ಸರ್ವಗುಣಗಳನ್ನು ಹೇಳುತ್ತದೆ. ಆದರಿಂದ ವ್ಯಕ್ತಗಳಾದ ಶಬ್ದಗಳೂ ವಿಷ್ಣುವಿನ ಗುಣಗಳನ್ನೇ ಹೇಳುತ್ತವೆ ಎನ್ನುವ ಪ್ರಮಾಣದಿಂದ ಸರ್ವವಚನಗಳು ಗುಣಪರಿಪೂರ್ಣತ್ವರೂಪ ಅರ್ಥವನ್ನು ಹೇಳುತ್ತವೆ.

**(ಖ) ತಥೌ ಪ್ರಾಣಾತ್ಮಕೌ ಎನ್ನುವಲ್ಲಿ ವಾಚ್ಯವಾಚಕಗಳಿಗೆ ಐಕ್ಯವ್ಯಪದೇಶವು. ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನೀ । ಪ್ರಥಮಾ ಯಾ ಮಹಾನಾಮ್ನೀ ತದ್ವಾಚ್ಯಃ ಪಾರ್ಥಿವೋ ಹರಿಃ ॥ (ಋಗ್ಭಾಷ್ಯ)** ಪ್ರಾಥಮಿಕವಾದ ಮಹಾನಾಮ್ನೀ ಋಕ್ಕಿನಿಂದ ವಾಚ್ಯನು ಪೃಥಿವೀಲೋಕದಲ್ಲಿದ್ದ ಶ್ರೀಹರಿಯು ಇತ್ಯಾದಿಗಳಲ್ಲಿ ಕಂಡಿದೆ.

**(ಗ) ವಿಜ್ಞಾನತತ್ತ್ವಂ ಮಹತಸ್ಸಮುತ್ಪನ್ನಂ ಚತುರ್ಮುಖಾತ್ ।** ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನದೆಸೆಯಿಂದ ಎನ್ನುವ ಅರ್ಥದಲ್ಲಿ ಮಹತಃ ಚತುರ್ಮುಖಾತ್ ಎಂದು ಪ್ರಯೋಗವಿದ್ದಂತೆ ತಥೌ ಎನ್ನುವದರಲ್ಲಿಯೂ ಅಭಿಮಾನಿ ಅಭಿಮನ್ಯಮಾನಗಳಿಗೆ ಐಕ್ಯವ್ಯಪದೇಶವು.)

ಆದಕಾರಣ **ಪರಬ್ರಹ್ಮಾ ಭಿಧಾಯಕಃ** ಎಂದು ಹೇಳಿದ್ದು ಯುಕ್ತವು. (ಸಿ) ಗುಣವಾಚಕವಾದ ಅಕಾರಕ್ಕೆ ಗುಣಿಭೂತನಾದ ಬ್ರಹ್ಮನ ವಾಚಕತ್ವವು ಗುಣಗುಣಿಗಳಿಗೆ ಅಭೇದವಿದ್ದುದರಿಂದ ಕೂಡುತ್ತದೆ. (ಡಿ) ಅಕಾರಾರ್ಥವು ಗುಣವ್ಯಾಪ್ತಿಯು. ತಕಾರಥಕಾರಗಳು ವಿಷ್ಣುವಾಚಕಗಳು. ಮುಖ್ಯಪ್ರಾಣನೇ ದೇವತೆಯಾಗಿ ಉಳ್ಳವುಗಳು. ಹೇಗೆ ವಾಚಕಗಳೆಂದರೆ— ತಕಾರಾರ್ಥವು ದೇಶಕಾಲವ್ಯಾಪ್ತಿಯು. ಥಕಾರಾರ್ಥವು ವಿಕಾರವಿಲ್ಲದಿರುವಿಕೆಯು ಎನ್ನುವ ಗುಣಗಳನ್ನು ಹೇಳತಕ್ಕವುಗಳು. (ಇ) **ತಥೌ ಪ್ರಾಣಾತ್ಮಕಂ ಪ್ರಾಪ್ತೌ** ಎಂದು ತತ್ವಪ್ರದೀಪದಲ್ಲಿ ಪಾಠವು. ಮುಖ್ಯಪ್ರಾಣನಿಗೆ ನಿಯಾಮಕನಾದ ವಿಷ್ಣುವನ್ನು ಹೇಳತಕ್ಕುವಗಳೆಂದು ಪ್ರಾಪ್ತಗಳಾದವು ಎಂದು ವ್ಯಾಖ್ಯಾನಮಾಡಿರುವರು. (ಎಫ್) ಯದ್ಯಪಿ ಸೂತ್ರದಲ್ಲಿ ಪ್ರವಿಷ್ಟವಾದ ಸರ್ವನಾಮವೇ ಪ್ರಕೃತಿಯಾಗಿಉಳ್ಳ ಅತಃಶಬ್ದಕ್ಕೆ ಹೀಗೆ ಅವಯವಾರ್ಥವನ್ನು ಹೇಳಿದ್ದು ಕೂಡುವುದಿಲ್ಲ. ಸರ್ವನಾಮವೇ ಪ್ರಕೃತಿಯಾಗದಿದ್ದು ಅತಃಶಬ್ದಕ್ಕೆ ಪರಸ್ಯ ಬ್ರಹ್ಮಣಃ ಎನ್ನುವುದರಿಂದಲೇ ಅರ್ಥತಃ ಆಧಿಕ್ಯವೂ ಉಕ್ತವಾಗಿದೆ. ಆದಾಗ್ಯೂ ಅಥ ಶಬ್ದಕ್ಕೆ ಅರ್ಥತಃ ಆಧಿಕ್ಯವನ್ನು ಹೇಳದೆ ಇರುವುದರಿಂದ ಅಥಶಬ್ದದಲ್ಲಿರತಕ್ಕ ವರ್ಣಗಳಿಗೂ ಸರ್ವನಾಮವೇ ಪ್ರಕೃತಿಯಾಗದಿದ್ದ ಅತಃಶಬ್ದದಲ್ಲಿರತಕ್ಕ ವರ್ಣಗಳಗೂ ವಾಕ್ಯಾರ್ಥದಲ್ಲಿ ಪ್ರವೇಶಿಸದೆ ಇರುವ ಅತಿಶಯಿತವಾದ ಅರ್ಥಾಂತರವನ್ನು ಹೇಳಿದ್ದು. ಆದಕಾರಣ ದೋಷವಿಲ್ಲ.

**ಪೀಠಿಕೆ ॥** ತತ್ಕಿಮತ್ರ ನಿಯಾಮಕಂ ಇತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನುಪಸಂಹಾರ ಮಾಡುತ್ತಾರೆ.

**ಭಾಷ್ಯ ॥ ಅಥಾತಃಶಬ್ದಯೋರೇವಂ ವೀರ್ಯಮಾಜ್ಞಾಯ ತತ್ತ್ವತಃ ।**
**ಸೂತ್ರೇಷು ತು ಮಹಾಪ್ರಾಜ್ಞಾಸ್ತಾವೇವಾದೌ ಪ್ರಯುಂಜತ ಇತಿ ॥ ೨೪ ॥**

**ಭಾಷ್ಯಾರ್ಥ ॥** ಶಬ್ದಗಳ ಮಾಹಾತ್ಮ್ಯಜ್ಞಾನವನ್ನು ತಿಳಿದಿರುವ ವ್ಯಾಸ ಮೊದಲಾದವರು ಹಿಂದೆ ಹೇಳಿದ ಪ್ರಕಾರ ಅಥ ಅತಃಶಬ್ದಗಳಿಗೆ ಸ್ವರೂಪಾಧಿಕ್ಯಾದಿ ಮಾಹಾತ್ಮ್ಯ ವನ್ನು ಯಥಾರ್ಥವಾಗಿ ತಿಳಿದು ವಿಚಾರಶಾಸ್ತ್ರಗಳಲ್ಲಿ ಎಲ್ಲಾ ಅಥಾತಶ್ಶಬ್ದಗಳನ್ನೇ (ಇತರವಾದುದನ್ನು ಅಲ್ಲ) ಪ್ರಥಮದಲ್ಲಿಯೇ ಪ್ರಯೋಗಮಾಡುತ್ತಾರೆ. ಹೀಗೆ ಉಕ್ತವಾಗಿದೆ.

**ವಿಶೇಷಾಂಶ ॥** (ಎ) ಸರ್ವಶಾಸ್ತ್ರಗಳ ಆದಿಸೂತ್ರದಲ್ಲಿ ಓಂಕಾರವಿಲ್ಲವೆಂದು ತಿಳಿಸುವುದಕ್ಕಾಗಿ ತಾವೇವ ಎಂದು ವಿವರಶಬ್ದವನ್ನು ಕೊಟ್ಟಿರುವರು. ಆದುದರಿಂದಲೇ **ಓಂ ಅಥ ಅತಃ** ಎಂದು ಮೂರು ಪ್ರಕೃತವಾದಾಗ್ಯೂ ಓಂಕಾರಕ್ಕಿಂತ ವೈಷಮ್ಯವಿದೆ ಎಂದು ತಿಳಿಸುವುದಕ್ಕಾಗಿ ಅಥ ಅತಃಶಬ್ದಗಳನ್ನೇ ಇಲ್ಲಿ ಹೇಳಿದ್ದು. (ಬಿ) ಜೈಮಿನ್ಯಾದಿ ಎಲ್ಲ ಸೂತ್ರಗಳ ಆದಿಯಲ್ಲಿ ಅಥ ಅತಃಶಬ್ದಗಳೇ. ಆದುದರಿಂದಲೇ ಇಲ್ಲಿ ಆದಿಯಲ್ಲಿ ಅಥ ಅತಃಶಬ್ದಗಳ ವಿಷಯದಲ್ಲಿಯೇ **ನಿಖಿಲಾನಿ ಸೂತ್ರಾಣಿ** ಎಂದೂ ಅಂತ್ಯ ದಲ್ಲಿ **ಸೂತ್ರೇಷು** ಎಂದೂ ಸರ್ವ ಸೂತ್ರಗಳನ್ನು ಹೇಳಿರುವರು. ಈ ಬ್ರಹ್ಮ ಮೀಮಾಂಸಾಸೂತ್ರದಲ್ಲಿ ಮಾತ್ರ ಓಂಕಾರವೇ ಸರ್ವಾಪೇಕ್ಷಯಾ ಆದಿಯಲ್ಲಿರತಕ್ಕುದು. ಆಮೇಲೆ ಅಥ ಅತಃ ಶಬ್ದಗಳು. ಈ ಅಭಿಪ್ರಾಯದಿಂದಲೇ **ಓಂಕಾರಶ್ಚಾಥಶಬ್ದಶ್ಚ** ಎಂದು ಮಧ್ಯದಲ್ಲಿ ಹೇಳಿರುವರು. ಅಂತೂ ಆದಿಭಾಗ ದಲ್ಲಿಯೂ ಅಂತ್ಯಭಾಗದಲ್ಲಿಯೂ ಓಂಕಾರವನ್ನು ಹೇಳದೆ ಇದ್ದುದರಿಂದಲೇ ಓಂಕಾರವು ಸಾರ್ವತ್ರಿಕವಲ್ಲ.

ಪೀಠಿಕೆ ॥ ಅಥಶಬ್ದಕ್ಕೆ ಅಧಿಕಾರವು ಪ್ರಾಪ್ತಿಯಾದ ಮೇಲೆ ಎಂದು ಅರ್ಥವನ್ನು ಹೇಳಿಯದೆ. ಬ್ರಹ್ಮಜಿಜ್ಞಾಸಾದಲ್ಲಿ ಉಪಯುಕ್ತವಾಗುವ ಅಧಿಕಾರಶಬ್ದವು ಯಾವುದು? ಅದು ಎಷ್ಟು ವಿಧವು? ಎಂದರೆ—

ಭಾಷ್ಯ॥ ಅಧಿಕಾರಶ್ಚೋಕ್ತೋ ಭಾಗವತತಂತ್ರೇ ।
ಮಂದಮಧ್ಯೋತ್ತಮತ್ವೇನ ತ್ರಿವಿಧಾ ಹ್ಯಧಿಕಾರಿಣಃ ॥ ೨೫ ॥

ಭಾಷ್ಯಾರ್ಥ ॥ ಅಧಿಕಾರ ಮಾತ್ರವಲ್ಲ, ಮತ್ತೆ ಅಧಿಕಾರವಿಭಾಗವೂ ಕೂಡ ಭಾಗವ ತತಂತ್ರಾಖ್ಯಾಗ್ರಂಥದಲ್ಲಿ ಹೇಳಲ್ಪಟ್ಟದೆ. (ಹೇಗೆಂದರೆ) ಮುಕ್ತಿಯೋಗ್ಯರೇ ಅಧಿಕಾರಿಗಳು. ಆ ಅಧಿಕಾರಿಗಳು ಬ್ರಹ್ಮಜಿಜ್ಞಾಸಾದಲ್ಲಿ ೧ ಮಂದರು, ೨ ಮಧ್ಯಮರು ೩ ಉತ್ತಮರು ಎನ್ನುವ ಭೇದದಿಂದ ಮೂರು ವಿಧರು. ಪ್ರಸಿದ್ಧವು.

ಪೀಠಿಕೆ ॥ ಆ ಅಧಿಕಾರಿಗಳ ಸ್ವರೂಪವನ್ನು ಹೇಳುತ್ತಾರೆ.

ಭಾಷ್ಯ ॥ ತತ್ರ ಮಂದಾ ಮನುಷ್ಯೇಷು ಯ ಉತ್ತಮಗಣಾ ಮತಾಃ ।
ಮಧ್ಯಮಾ ಋಷಿಗಂಧರ್ವಾ ದೇವಾಸ್ತತ್ರೋತ್ತಮಾ ಮತಾಃ ।
ಇತಿ ಜಾತಿಕೃತೋ ಭೇದಃ ॥ ೨೬ ॥

ಭಾಷ್ಯಾರ್ಥ ॥ ಮೂರು ವಿಧರಾದ ಅಧಿಕಾರಿಗಳ ಮಧ್ಯದಲ್ಲಿ ಮನುಷ್ಯರಲ್ಲಿ ಯಾರು ಉತ್ತಮ ಗಣಕ್ಕೆ ಸೇರಿದರೋ ಅವರು ಮೋಕ್ಷಯೋಗ್ಯರಲ್ಲಿ ಬ್ರಹ್ಮ ಜಿಜ್ಞಾಸಾದಲ್ಲಿ ಮಂದಾಧಿಕಾರಿಗಳು. ಯಾರು ಋಷಿಗಳು ಗಂಧರ್ವರು (ಪಿತೃದೇವತೆಗಳು ಚಕ್ರವರ್ತಿಗಳೋ ಅವರು) ಮಧ್ಯಮಾಧಿಕಾರಿಗಳು. ಯಾರು ದೇವತೆಗಳೋ ಅವರು ಬ್ರಹ್ಮಜಿಜ್ಞಾಸಾದಲ್ಲಿ ಉತ್ತಮಾಧಿಕಾರಿಗಳೆಂದು ಸಮ್ಮತರಾಗಿರುತ್ತಾರೆ. ಮತ್ತು ಋಷಿ ಗಂಧರ್ವರಲ್ಲಿಯೂ ಅತ್ಯುತ್ತಮರಾದವರು ದೇವತೆಗಳ ಗಣದಲ್ಲಿಯೇ ಸೇರಿದವರೆಂದು ಸಮ್ಮತರಾಗಿರುತ್ತಾರೆ. ಈ ಪ್ರಕಾರವಾಗಿ ಮನುಷ್ಯೋತ್ತಮತ್ವಾದಿ ಪ್ರಯುಕ್ತವಾದ ಅಥವಾ ಆಯಾಯ ಕುಲದಲ್ಲಿ ಉತ್ಪತ್ತಿನಿಮಿತ್ತಕವಾದ ಅವಾಂತರ ವಿಭಾಗವು (ತಿಳಿಯಲ್ಪಡಬೇಕು).

ವಿಶೇಷಾಂಶ ॥ (ಎ) ಇಲ್ಲಿ ಗಣಶಬ್ದದಿಂದ ಪುರುಷಾರ್ಥಾಧಿಕರಣ (ಅಧ್ಯಾ—೩, ಪಾ—೪, ಅ—೧)ರಲ್ಲಿ ಹೇಳಿದ ಮೂರುವಿಧರಾದ ಮನುಷ್ಯೋತ್ತಮರನ್ನು ಇಟ್ಟು ಕೊಳ್ಳಬೇಕು. (ಬಿ) ವೈದಿಕಬ್ರಹ್ಮವಿದ್ಯೆಯಲ್ಲಿ ಮೋಕ್ಷಯೋಗ್ಯತ್ವವು ಅಧಿಕಾರಿಗಳಿಗೆ ಸಾಮಾನ್ಯಲಕ್ಷಣವೆಂದೂ ದೇವತ್ವಾದಿಗಳು ವಿಶೇಷಲಕ್ಷಣವೆಂದೂ ಉಕ್ತ ವಾಯಿತು.

ಪೀಠಿಕೆ ॥ ಸಚ್ಛೂದ್ರರಾದ ಧರ್ಮವ್ಯಾಧಾದಿಗಳು ಮುಕ್ತಿಯೋಗ್ಯರಾಗಿರುತ್ತಾರೆ. ಬ್ರಹ್ಮಜಿಜ್ಞಾಸಾ ದಲ್ಲಿ ಅಧಿಕಾರಗಳಲ್ಲ. ಆದಕಾರಣ ಮುಕ್ತಿಯೋಗ್ಯತ್ವರೂಪವಾದ ಈ ಸಾಮಾನ್ಯಲಕ್ಷಣಕ್ಕೆ ಅವರಲ್ಲಿ ಅತಿವ್ಯಾಪ್ತಿಯು ಬರುವುದು. ಆ ಧರ್ಮವ್ಯಾಧಾದಿಗಳಿಗೆ ಜನ್ಮಾಂತರದಲ್ಲಿ ಬ್ರಾಹ್ಮಣದೇಹವು ಇದ್ದುದರಿಂದ ಜಿಜ್ಞಾಸಾದಲ್ಲಿ ಅಧಿಕಾರವಿದೆ. ಅತಿವ್ಯಾಪ್ತಿಯಿಲ್ಲ ಎಂದು ಹೇಳಿಕೂಡದು. ಈ ಶೂದ್ರಶರೀರದಿಂದ ಜಿಜ್ಞಾಸಾ ಮಾಡಲಿಕ್ಕೆ ಜನ್ಮಾಂತರದಲ್ಲಿ ಬ್ರಾಹ್ಮಣದೇಹವಿದ್ದುದು ಉಪಯುಕ್ತವಲ್ಲ.

ಆದಕಾರಣ ಮೋಕ್ಷಯೋಗ್ಯತ್ವವು ಜೀವಸ್ವರೂಪವಾಗಿರುವುದರಿಂದ ಅಧಿಕಾರವಿಲ್ಲದಿರುವಾಗಲೂ ಇದ್ದುದರಿಂದ ಅತಿವ್ಯಾಪ್ತಿಯು ತಪ್ಪಿದ್ದಲ್ಲ. ಆದಕಾರಣ ಬೇರೆ ರೀತಿಯಾಗಿ ಅಧಿಕಾರಿಗಳಿಗೆ ಲಕ್ಷಣವನ್ನು ಹೇಳುತ್ತಾರೆ.

**ಭಾಷ್ಯ ॥ ತಥಾನ್ಯೋ ಗುಣಪೂರ್ವಕಃ ।**

**★ಭಕ್ತಿಮಾನ್ ಪರಮೇ ವಿಷ್ಣೌ ಯಸ್ತ್ವಧ್ಯಯನವಾನ್ನರಃ।**
**ಅಧಮಃ ಶಮಾದಿಸಂಯುಕ್ತೋ ಮಧ್ಯಮಸ್ಸಮುದಾಹೃತಃ ॥ ೨೬ ॥**

**ಭಾಷ್ಯಾರ್ಥ ॥** ಹಾಗೆಯೇ ಜಾತಿಕೃತಭೇದ ದೆಸೆಯಿಂದ ಭಿನ್ನವಾದ ಭಕ್ತಿ ಅಧ್ಯಯನ ಮೊದಲಾದ ಶುಭಧರ್ಮನಿಮಿತ್ತಕವಾದ ಅವಾಂತರ ವಿಭಾಗವಿದೆ. (ಅದನ್ನೇ ತೋರಿಸು ತ್ತಾರೆ.) ಯಾವ ಭಕ್ತಿಜನರು ಸರ್ವೋತ್ತಮನಾದ ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳವರೋ ಅಧ್ಯಯನವುಳ್ಳವರೋ ಅವರು ಬ್ರಹ್ಮಜಿಜ್ಞಾಸಾದಲ್ಲಿ ಅಧಮಾಧಿಕಾರಿಗಳೆಂದು (ಪ್ರಾಮಾಣಿಕರಿಂದ) ಹೇಳಲ್ಪಡುತ್ತಾರೆ. ಯಾವಾತನು ಶಮದಮಾದಿಗುಣಸಂಪನ್ನನೋ ಆತನು ಮಧ್ಯಮಾಧಿಕಾರಿಯೆಂದು ಹೇಳಲ್ಪಡುತ್ತಾನೆ.

**ವಿಶೇಷಾಂಶ ॥** ಮೊದಲು ಉದ್ದೇಶವಾಕ್ಯದಲ್ಲಿ ಅಧಿಕಾರಿಣಃ ಎಂದು ಬಹುವಚನ ನಿರ್ದೇಶ ಮಾಡಿದಾಗ್ಯೂ ಭಕ್ತಿಮಾನ್ ಇತ್ಯಾದಿಗಳು ಲಕ್ಷಣವಾಕ್ಯವಾದುದರಿಂದ ನರಃ ಇತ್ಯಾದ್ಯೇಕವಚನ ನಿರ್ದೇಶವು ಸಂಗತವಾಗುತ್ತದೆ.

**ಪೀಠಿಕೆ ॥** ಉತ್ತಮಾಧಿಕಾರಿಗಳಿಗೆ ಲಕ್ಷಣವನ್ನು ಹೇಳುತ್ತಾರೆ.

**ಭಾಷ್ಯ ॥ ಆಬ್ರಹ್ಮಸ್ತಂಬಪರ್ಯಂತಮಸಾರಂ ಚಾಪ್ಯನಿತ್ಯಕಂ ।**
**ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕಸಂಶ್ರಯಃ ।**
**ಸ ಉತ್ತಮೋಽಧಿಕಾರೀ ಸ್ಯಾತ್ಸನ್ನ್ಯಸ್ತಾಖಿಲಕರ್ಮವಾನ್ ॥ ೨೮ ॥**

**ಭಾಷ್ಯಾರ್ಥ ॥** ಯಾವಾತನು ಚತುರ್ಮುಖನನ್ನು ಆರಂಭಿಸಿಕೊಂಡು ತೃಣಜೀವ ಪರ್ಯಂತ ಜೀವಸಮುದಾಯವನ್ನು ಅಸರ್ವೋತ್ತಮವನ್ನಾಗಿಯೂ ಅಥವಾ ಮೋಕ್ಷದಿಂದ ನಿಕೃಷ್ಟವಾದ ಪದಾದಿಗಳುಳ್ಳವನ್ನಾಗಿಯೂ ಅನಿತ್ಯವಾದ ಶರೀರಾದಿಗಳುಳ್ಳದ್ದನ್ನಾಗಿಯೂ (ಪರಬ್ರಹ್ಮನಾದರೂ ಸರ್ವೋತ್ತಮನು ನಿತ್ಯನೆಂದೂ) ಚೆನ್ನಾಗಿ ತಿಳಿದು (ಅಂದರೆ ಸಾರ ಅಸಾರ ನಿತ್ಯ ಅನಿತ್ಯ ವಸ್ತುವಿವೇಕವುಳ್ಳವನೋ) ಯಾವಾತನು (ವಿವೇಕದೆಸೆಯಿಂದ) ಆಯಾಯ ಜೀವೈಶ್ವರ್ಯಾದಿಗಳಲ್ಲಿ ಹುಟ್ಟಿದ ವಿರಕ್ತಿಯುಳ್ಳವನೋ ಯಾವಾತನು ಶ್ರೀಹರಿಯ ಪಾದವೇ ನನಗೆ ಮುಖ್ಯವಾಗಿ ಆಶ್ರಯವು

★ ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ । ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ । ನ ಚ ವರ್ಣಾವರಸ್ಯಾಪಿ ॥ ವೈಷ್ಣವನಾಗದಿದ್ದವನಿಗೂ ಗುರುಭಕ್ತಿಯಿಲ್ಲದವನಿಗೂ ಶಮದಮಾದಿ ಗುಣಗಳಿಲ್ಲದವನಿಗೂ ಹೀನಜಾತಿಯವನಿಗೂ ವೇದದಲ್ಲಿಯೂ ಅಧಿಕಾರವಿಲ್ಲ ಎನ್ನುವ ಪ್ರಮಾಣದಿಂದ ಅಧ್ಯಯನವಾನ್ ಎನ್ನುವು ದರಿಂದಲೇ ವಿಷ್ಣುಭಕ್ತಿಯೂ ಶಮದಮಾದಿಗಳೂ ಸಿಗುವುದು. ಆದರೂ ಅಭಕ್ತರಿಂದ ಲೂ ಅನಧಿಕಾರಿಗಳಿಂದಲೂ ಮಾಡಲ್ಪಡತಕ್ಕ ಅಧ್ಯಯನವನ್ನೂ ಶಮದಮಾದಿಗಳನ್ನೂ ನಿವೃತ್ತಿಗೊಳಿಸುವುದಕ್ಕಾಗಿ ಭಕ್ತಿಮಾನ್ ಎಂದು ಪ್ರತ್ಯೇಕ ಹೇಳಿರುತ್ತಾರೆ.

(ಅಂದರೆ ಶ್ರೀಹರಿಯ ಪಾದಾರವಿಂದವೇ ನನಗೆ ಗತಿಯು) ಎನ್ನುವ ಜ್ಞಾನವುಳ್ಳವನೋ, ಯಾವಾತನು ಶ್ರೀಹರಿಯಲ್ಲಿ ಸಮರ್ಪಿತವಾದ ಎಲ್ಲಾ ಸತ್ಕರ್ಮವುಳ್ಳವನೋ, ಅವನೇ ಉತ್ತಮಾಧಿಕಾರಿಯೆಂದು ಹೇಳಲ್ಪಡುವನು.

**ವಿಶೇಷಾಂಶ ॥** (ಎ) ಸನ್ಯಾಸವೆಂದರೆ— ನಾನು ಕರ್ತನಲ್ಲ ಶ್ರೀಹರಿಯೇ ಸರ್ವ ಕರ್ಮಗಳನ್ನು ಮಾಡಿಸುವವನು, ಸರ್ವಕರ್ಮಗಳೂ ಶ್ರೀಹರಿಯ ಪೂಜಾರೂಪಗಳು ಎಂದು ತಿಳಿದು ಭ್ರಾಂತಿಯಿಂದ ಜೀವಕರ್ತೃಕಗಳೆಂದು ತಿಳಿಯಲ್ಪಟ್ಟ ಕರ್ಮಗಳನ್ನು ಭಗವಂತನಲ್ಲಿಡುವುದು. (ಬಿ) ಹರಿಭಕ್ತಿಪೂರ್ವಕ ಅಧ್ಯಯನವತ್ತ್ವವು ಅಧಿಕಾರಿಗಳಿಗೆ ಸಾಮಾನ್ಯ ಲಕ್ಷಣವು. (ಸಿ) **ಶಮಾದಿಸಂಯುಕ್ತಃ** ಇತ್ಯಾದಿಗಳಲ್ಲಿ ಮೊದಲು ಹೇಳಿದ ಅಧ್ಯಯನವನ್ನು ಇಟ್ಟುಕೊಳ್ಳಬೇಕು. ಅಧಮಾಧಿಕಾರಿಗಳಿಗೆ ಹೇಳಿದ ಲಕ್ಷಣದಲ್ಲಿ ಶಮದಮಾದಿಗಳನ್ನು ಇಟ್ಟುಕೊಳ್ಳಬೇಕು. ಮೂರುವಿಧ ಅಧಿಕಾರಿಗಳಲ್ಲಿಯೂ ಅಧ್ಯಯನ ಶಮದಮಾದಿಗಳೆಲ್ಲಾ ಇದ್ದಪ್ರಯುಕ್ತ ಒಬ್ಬರಿಗೆ ಹೇಳಿದ ಲಕ್ಷಣವು ಇನ್ನೊಬ್ಬರಲ್ಲಿಯೂ ಇದೆ. ಆದ ಪ್ರಯುಕ್ತ ಸಾಂಕರ್ಯವೆಂದರೆ ಒಬ್ಬರಲ್ಲಿ ಒಂದಕ್ಕೆ ಪ್ರಾಚುರ್ಯವು. ಇತರ ಎರಡಕ್ಕೆ ಅಪ್ರಾಚುರ್ಯವು. ಹೀಗೆ ವಿವಕ್ಷಾ ಮಾಡಿಕೊಂಡು ಸಾಂಕರ್ಯವನ್ನು ಪರಿಹರಿಸಿಕೊಳ್ಳಬೇಕು. (ಡಿ) ಅಧ್ಯಯನ ಶಮದಮಾದಿಗಳು ವಿಷ್ಣುಪಾದೈಕಸಂಶ್ರಯತ್ವಾದಿಗಳು ಇವುಗಳ ಮಧ್ಯದಲ್ಲಿ ಯಾರಿಗೆ ಅಧ್ಯಯನವು ಪ್ರಚುರವಾಗಿಯದೋ ಇತರಗಳು ಅಪ್ರಚುರಗಳೋ ಆತನು ಅಧಮಾಧಿಕಾರಿಯು. (ಇ) ಯಾರಿಗೆ ಅಧ್ಯಯನ ಮತ್ತು ಶಮದಮಾದಿಗಳು ಪ್ರಚುರಗಳಾಗಿವೆಯೋ ಇತರವಾದುದೊಂದೇ ವಿಷ್ಣುಪಾದೈಕಸಂಶ್ರಯತ್ವಾದಿಯೇ ಉತ್ತ ಮಾಧಿಕಾರ್ಯಪೇಕ್ಷಯಾ ಅಪ್ರಚುರವಾಗಿಯದೋ ಆತನು ಮಧ್ಯಮಾಧಿಕಾರಿಯು. (ಎಫ್) ಯಾರಿಗೆ ವಿಷ್ಣುಪಾದೈಕಸಂಶ್ರಯತ್ವಾದಿಗಳೇ ಪ್ರಚುರಗಳಾಗಿವೆಯೋ ಅಧ್ಯಯನ ಶಮದಮಾದಿಗಳು ಪ್ರಚುರಗಳಾಗಿಲ್ಲವೋ (ಅಂದರೆ ಅಧಮ ಮಧ್ಯಮಾಧಿ ಕಾರ್ಯಪೇಕ್ಷಯಾ ಅಧ್ಯಯನಾದಿಗಳು ಪ್ರಚುರಗಳಾಗಿದ್ದಾಗ್ಯೂ ಇವುಗಳು ವಿಷ್ಣು ಪಾದೈಕಸಂಶ್ರಯತ್ವಾದಿಗಳಿಗಿಂತ ಕಡಿಮೆಗಳಾಗಿವೆ.) ಆತನು ಉತ್ತಮಾಧಿಕಾರಿ ಯು. ಬ್ರಹ್ಮಾದಿಗಳಿಗೆ ಅಸಾರತ್ವವೆಂದರೆ ಬ್ರಹ್ಮಾದಿಗಳಿಗೆ ಸರ್ವೋತ್ತಮತ್ವವಿಲ್ಲದಿ ರುವಿಕೆಯು ಮತ್ತು ಬ್ರಹ್ಮಾದಿಗಳ ಪದವಿ ಮೊದಲಾದವುಗಳಿಗೆ ಮುಕ್ತಿಯಿಂದ ನಿಕೃಷ್ಟತನವು. (ಜಿ) ಬ್ರಹ್ಮಾದಿ ಜೀವರಿಗೆ ದೇಹನಾಶವಿದ್ದರೂ ಸ್ವರೂಪಕ್ಕೆ ನಾಶವಿಲ್ಲವೆಂದು ತೋರಿಸುವುದಕ್ಕಾಗಿ ಅನಿತ್ಯಕಂ ಎನ್ನುವಲ್ಲಿ ಕಪ್ರತ್ಯಯವು.

**ಪೀಠಿಕೆ ॥** ಅಧ್ಯಯನವು ಬ್ರಹ್ಮವಿದ್ಯೆಯಲ್ಲಿ ಅಧಿಕಾರವೆಂದು ಹೇಳಲ್ಪಟ್ಟಿದೆ. ಆದರೆ ಉದಾಹೃತ ಪ್ರಮಾಣದಲ್ಲಿ ಬ್ರಹ್ಮವಿದ್ಯಾಯಾಂ ಎಂದು ಸ್ಪಷ್ಟವಾಗ ಹೇಳದೆ ಇರುವುದರಿಂದ ಈ ಅಧಿಕಾರವು ಬ್ರಹ್ಮವಿದ್ಯೆಯಲ್ಲಿ ಎಂದು ಹೇಗೆ ಸಿಗುತ್ತದೆ. ಆ ಅಧಿಕಾರವು ಮೂರುವಿಧವು ಎನ್ನುವುದೂ ಕೂಡ ಹೇಗೆ ಸಿಗುತ್ತದೆ ಅಂದರೆ—

**ಭಾಷ್ಯ ॥ ಅಧ್ಯಯನಮಾತ್ರವತಃ । ನಾವಿಶೇಷಾದಿತಿ ಚೋಪರಿ ॥ ೨೯ ॥**

(ಬ್ರ. ಸೂ. ಅಧ್ಯಾ.೩ ಪಾ.೪ ಸೂ. ೧೨—೧೩.)

**ಭಾಷ್ಯಾರ್ಥ ॥** ಶಕ್ತ್ಯನುಸಾರವಾಗಿ ಸರ್ವವೇದಗಳನ್ನು ಅಧ್ಯಯನ ಮಾಡುವವನಿಗೇನೆ

ಬ್ರಹ್ಮವಿದ್ಯೆಯಲ್ಲಿ ಅಧಿಕಾರವು. ದೇವಾದಿಗಳಿಗೆ ಬ್ರಹ್ಮವಿದ್ಯಾಧಿಕಾರವು ಸಾಮ್ಯದಿಂದಲ್ಲ ಮತ್ತೆ ತಾರತಮ್ಯದಿಂದಲೇ ಜ್ಞಾನಾಧಿಕಾರವು. ಹೀಗೆ ಮೂರನೇ ಅಧ್ಯಾಯದಲ್ಲಿ (ಅಧಿಕಾರವು ತಾರತಮ್ಯದಿಂದ ಎಂದು ಸೂತ್ರಕಾರರಿಂದ ಹೇಳಲ್ಪಡುತ್ತದೆ.)

**ವಿಶೇಷಾಂಶ ॥** (ಎ) ಸೂತ್ರಕ್ಕೆ ಅಭಿಮತವಾದ ಸ್ಮೃತಿಯಲ್ಲಿ **ಬ್ರಹ್ಮಜ್ಞಾನೇ ತು ವೇದೋಕ್ತೇ** ಎಂದು ಹೇಳಿರುವುದರಿಂದ ಅಧ್ಯಯನವು ಬ್ರಹ್ಮವಿದ್ಯಾಧಿಕಾರ ಎಂದು ತಿಳಿಯುತ್ತದೆ. (ಬಿ) ಅಲ್ಲಿ ಉದಾಹೃತ ಶ್ರುತಿಯಲ್ಲಿ **ತತ್ರಾಧಿಕಾರಿಣೋ ಮನುಷ್ಯಾ ಋಷಯೋ ದೇವಾಃ** ಎಂದು ಅಧಿಕಾರಿಗಳು ಮೂರು ವಿಧರೆಂದೂ ಹೇಳಿಯದೆ.

**ಪೀಠಿಕೆ ॥** ಶಮದಮಾದಿಗಳೂ ಕೂಡ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಎನ್ನುವಲ್ಲಿ ಕಾಣ್ವ ಶ್ರುತಿಯಲ್ಲಿ ಉದಾಹರಿಸುತ್ತಾರೆ.

**ಭಾಷ್ಯ ॥ ★ಶಾಂತೋ ದಾಂತ ಉಪರತಸ್ತಿತಿಕ್ಷುಸ್ಸಮಾಹಿತೋ**

**ಭೂತ್ವಾऽऽತ್ಮನ್ಯೇವಾತ್ಮಾನಂ ಪಶ್ಯೇತ್ ॥ ೩೦ ॥ (ಬೃ.ಉ.೪—೪—೨೩)**

**ಭಾಷ್ಯಾರ್ಥ ॥** ಶಾಂತಃ = ಶ್ರೀಹರಿಯಲ್ಲಿಯೇ ಆಸಕ್ತನಾದ ಬುದ್ಧಿಯುಳ್ಳವನು. ಅಥವಾ ವೈಷ್ಣವ ಸಿದ್ಧಾಂತದಿಂದ ಕದಲದೆ ಇರುವವನು. ದಾಂತಃ=ನಿಗ್ರಹಿಸಲ್ಪಟ್ಟ ಮದವುಳ್ಳವನು. ಅಂದರೆ ಇಂದ್ರಿಯಗಳನ್ನು ನಿಗ್ರಹಿಸಿದವನು. ಉಪರತಃ=ವಿಷಯಗಳಲ್ಲಿ ಅಲಂಬುದ್ಧಿಯುಳ್ಳವನು ಅಥವಾ ಸಮೀಪದಲ್ಲಿ ತನ್ನ ಹೃದಯದಲ್ಲಿರತಕ್ಕ ವಿಷ್ಣುವಿನಲ್ಲಿ ಸಂತೋಷವುಳ್ಳವನು. ಆಸಕ್ತನಾದವನು. ತಿತಿಕ್ಷುಃ ಶೀತ ಉಷ್ಣ ಸುಖ ದುಃಖ ಇತ್ಯಾದಿ ರೂಪಗಳಾದ ದ್ವಂದ್ವಗಳನ್ನು ಸಹಿಸಿಕೊಂಡಿರುವನು. (ಅಂದರೆ ತತ್ವಯುಕ್ತವಾಗಿ ಉಚ್ಚತ್ವ ನೀಚತ್ವವಿಲ್ಲದವನು.) ಸಮಾಹಿತಃ=ಲಕ್ಷ್ಮೀಸಹಿತನಾದ ಶ್ರೀಹರಿಯಲ್ಲಿ ಮನೋವ್ಯಾಪಾರವುಳ್ಳವನು. ಅಥವಾ ವಸ್ತು ಇದ್ದ ಹಾಗೆ ಜ್ಞಾನಾದಿಗಳುಳ್ಳವನು ಆಗಿ ತನ್ನ ಹೃದಯದಲ್ಲಿರತಕ್ಕ ಶ್ರೀಹರಿಯನ್ನು ತಿಳಿಯಬೇಕು. (ಅಂದರೆ ವಿಚಾರಮಾಡಬೇಕು.)

**ವಿಶೇಷಾಂಶ ॥** (ಎ) ಆತ್ಮನಿ **ಪಶ್ಯೇತ್** ಎಂದು ಹೇಳಿದುದರಿಂದ **ಋಷಯೋऽತಃ ಪ್ರಕಾಶಾಃ** ಎನ್ನುವ ಶ್ರುತಿಯಿಂದ ಮಧ್ಯಮಾಧಿಕಾರಿಯೆಂದು ಸೂಚಿಸಿದರು. (ಬಿ) ಶ್ರೀಹರಿಯು ಸಂಸಾರಮೋಚಕನೆಂದು ಜ್ಞಾನವುಳ್ಳವನಾಗಿ ಶಮದಮಾದಿಸಂಪನ್ನನಾಗಿ ಆತ್ಮನನ್ನು ತಿಳಿಯಬೇಕು ಎಂದು ಹೇಳಿದುದರಿಂದ ಶಮದಮಾದಿಗಳು ಬ್ರಹ್ಮವಿದ್ಯೆಗೆ ಉಪಯುಕ್ತಗಳೆಂದು ತಿಳಿಯುತ್ತದೆ. (ಸಿ) ಯದ್ಯಪಿ ಉಪನಿಷತ್ತಿನಲ್ಲಿ ಪಶ್ಯತಿ ಎಂದು ಪಾಠವಿರುವುದು. ಆದರೂ **ಪಶ್ಯೇತ್** ಎನ್ನುವುದು ಸದೃಶ ಶಾಖಾಂತರದಲ್ಲಿದ್ದ ಪಾಠವು ಎಂದು ತಿಳಿಯಬೇಕು.

---

★ (ಕ) **ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯನಿಗ್ರಹಃ ।** ಬುದ್ಧಿಗೆ ಶ್ರೀಹರಿಯಲ್ಲಿ ಆಸಕ್ತಿಯು ಶಮವೆನ್ನಿಸುತ್ತದೆ. ಇಂದ್ರಿಯಗಳ ನಿಗ್ರಹವು ದಮವೆನ್ನಿಸುತ್ತದೆ ಎಂದು ಭಾಗವತದಲ್ಲಿ ಹೇಳಿಯದೆ.

(ಖ) **ಯಥಾ ವಸ್ತು ತಥಾ ಜ್ಞಾನಂ ತತ್ರಾಪ್ಯಾತ್ಮಮೀರಿತಂ ।** ಎನ್ನುವ ವಚನದಿಂದ ಸಮಃ= ಯಥಾರ್ಥವಾದ ಆಹಿತಂ=ಇಡಲ್ಪಟ್ಟ ಮನೋವೃತ್ತಿರೂಪವಾದ ಜ್ಞಾನವೂ ಇಚ್ಛೆಯೂ ಉಳ್ಳವನು. ಅಂತೂ ವಸ್ತು ಇದ್ದ ಹಾಗೆ ಜ್ಞಾನಾದಿಗಳುಳ್ಳವನು.

ಭಾಷ್ಯ ॥ ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ
ನಿರ್ವೇದಮಾಯಾತ್ । ನಾಸ್ತ್ಯಕೃತಃ ಕೃತೇನ ।
ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ।
ಸಮಿತ್ಪಾಣಿಃ ಶ್ರೋತ್ರಿಯಂ ★ಬ್ರಹ್ಮನಿಷ್ಠಮ್ ॥ ೩೦ ॥

ಭಾಷ್ಯಾರ್ಥ ॥ (೧) ಬ್ರಹ್ಮಜ್ಞಾನಕ್ಕೆ ಯೋಗ್ಯನಾದವನು ವಿಷ್ಣುಲೋಕದಿಂದ ಇತರಗಳಾದ ಲೋಕಗಳನ್ನು ಕಾಮ್ಯಕರ್ಮದಿಂದ ಸಂಪಾದಿಸಿಕೊಳ್ಳಲ್ಪಟ್ಟವುಗಳನ್ನಾಗಿ (ಅಸಾರಗಳೆಂದೂ ಅನಿತ್ಯಗಳೆಂದೂ) ನಿಶ್ಚಯಮಾಡಿ (ಆ ವಿವೇಕದಿಂದ ಕಾಮ್ಯಕರ್ಮ ದಲ್ಲಿಯೂ ಕಾಮ್ಯಫಲದಲ್ಲಿಯೂ) ವಿರಕ್ತಿಯನ್ನು ಹೊಂದಬೇಕು. (೨) (ಯಾವ ಕಾರಣದಿಂದ ಸ್ವರೂಪಾನಂದಾವಿರ್ಭಾವರೂಪ ವಾದುದರಿಂದ) ನಿತ್ಯಪುಮರ್ಥವಾದಮೋಕ್ಷವು ಅನಿತ್ಯಫಲವುಳ್ಳ ಕರ್ಮದಿಂದಲೂ (ವರಾದಿಗಳಿಂದಲೂ) ಸಿದ್ಧಿಸುವುದಿಲ್ಲವೋ (ಜ್ಞಾನದಿಂದಲೇ ಸಿದ್ಧಿಸುತ್ತದೋ) (೩) ಆದುದರಿಂದ ಮುಕ್ತಿಯಿಂದ ಬೇರೆ ಕಡೆ ಗಳಲ್ಲಿ ವಿರಕ್ತನಾದವನು ಬ್ರಹ್ಮನ ವಿಶೇಷಜ್ಞಾನಕ್ಕಾಗಿ ಸಮಿಧೆಗಳಿಂದ ಕೂಡಿದ ಹಸ್ತಗಳುಳ್ಳವನಾಗಿ ಅಥವಾ ಸಂಪುಟೀಕೃತಗಳಾದ ಹಸ್ತಗಳುಳ್ಳವನಾಗಿ ವೇದಗಳನ್ನು ಅಧ್ಯಯನ ಮಾಡುತ್ತಿರುವ (ಮತ್ತು ವೇದವಿಹಿತ ಕರ್ಮಗಳನ್ನು ಮಾಡುತ್ತಿರುವ) ಬ್ರಹ್ಮನಲ್ಲಿಯೇ ಆಸಕ್ತರಾದ ಗುರುಗಳನ್ನೇ ಉಪಸತ್ತಿಮಾಡಬೇಕು. ಅಥವಾ ಕರ್ಮದಿಂದ ಸಂಬದ್ಧಗಳಾದ ಐಹಿಕವಸ್ತುಗಳನ್ನು ವಿನಾಶವುಳ್ಳವುಗಳನ್ನಾಗಿ ಸುತ್ತಮುತ್ತಲೂ ನೋಡಿ ಸ್ವರ್ಗಾದಿಲೋಕಗಳನ್ನು ವಿನಾಶವುಳ್ಳವು ಗಳನ್ನಾಗಿಯೇ ನಿಶ್ಚಯಮಾಡಿ ಅವುಗಳಿಂದ ವೈರಾಗ್ಯವನ್ನು ಹೊಂದಬೇಕು. ಜ್ಞಾನಪ್ರಿಯನಾದ ಶ್ರೀಪರಮಾತ್ಮನು ಕರ್ಮದಿಂದ ಲಭಿಸುವುದಿಲ್ಲ. ಆದಕಾರಣ ಜ್ಞಾನಪ್ರಿಯನಾದ ವಿಷ್ಣುವಿನ ವಿಶೇಷಜ್ಞಾನಕ್ಕಾಗಿ ಗುರುಗಳನ್ನೇ ಹೊಂದಬೇಕು.

ಪೀಠಿಕೆ ॥ ವಿಷ್ಣುಭಕ್ತಿಯೂ ಕೂಡ ಬ್ರಹ್ಮವಿದ್ಯೆಯಲ್ಲಿಯೇ ಅಧಿಕಾರವು ಎನ್ನುವುದನ್ನು ಕಠಶ್ರುತಿಯಿಂದ ತೋರಿಸುತ್ತಾರೆ.

ಭಾಷ್ಯ ॥ ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ
ಆತ್ಮಾ ವಿವೃಣುತೇ ತನೂಂ ಸ್ವಾಂ (ಕಠ. ೨—೨೩) ॥ ೩೨ ॥

ಭಾಷ್ಯಾರ್ಥ ॥ ಇಚ್ಛಾರೂಪನಾದ ಶ್ರೀಹರಿಯು ಯಾವ ಅಧಿಕಾರಿಯನ್ನೇ (ಭಕ್ತಿಯನ್ನು ಕೊಟ್ಟು) ಸ್ವೀಕರಿಸುತ್ತಾನೋ ಆತನಿಂದಲೇ ಪ್ರಾಪ್ಯನು. (ಆತನಿಗೇನೇ ಸಂತುಷ್ಟನಾಗುತ್ತಾನೆ.) ಆ ಅಧಿಕಾರಿಗೇನೇ ಪ್ರಸನ್ನನಾದ ಶ್ರೀಹರಿಯು ತನ್ನ ಸ್ವರೂಪವನ್ನು ಪ್ರಕಾಶಪಡಿಸುತ್ತಾನೆ. ಅಥವಾ ತನ್ನ ಶರೀರವನ್ನು ವೇದವಾಕ್ಯಗಳಿಂದ ಪ್ರಕಾಶಪಡಿಸುತ್ತಾನೆ.

---

★ (ಕ) ದೇವಾದೀನಾಂ ತು ಯಜ್ಜ್ಞಾನಂ ವಿಜ್ಞಾನಮಿತಿ ಕೀರ್ತಿತಂ । ದೇವಾದಿಗಳ ಜ್ಞಾನವು ವಿಜ್ಞಾನವೆನ್ನಿಸುತ್ತದೆ ಎಂದು ಗೀತಾಭಾಷ್ಯದಲ್ಲಿ ಹೇಳಿಯದೆ.

(ಖ) ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ । ಎನ್ನುವ ಪ್ರಮಾಣ ಪ್ರಕಾರ ಇಲ್ಲಿಯೂ ವಿಜ್ಞಾನಪದದಿಂದಲೂ ಬ್ರಾಹ್ಮಣಪದದಿಂದಲೂ ಉತ್ತಮಾಧಿಕಾರಿತ್ವ ವು ಸೂಚಿತವಾಯಿತು.

**ವಿಶೇಷಾಂಶ ॥** ಭಕ್ತನನ್ನೇ ವರಿಸುವುದು. ಆದುದರಿಂದ ವೃಣುತೇ ಎನ್ನುವುದರಿಂದ ಭಕ್ತತ್ವವು ಸೂಚಿತವಾಯಿತು.

**ಪೀಠಿಕೆ ॥** ಭಕ್ತಿಯು ಶ್ರೀಹರಿಯಲ್ಲಿ ಸರ್ವಾಧಿಕವಾದುದು. ಇತರರಲ್ಲಿಯೂ ಯಥಾ ಯೋಗ್ಯವಾದುದೇ ಬ್ರಹ್ಮವಿದ್ಯೆಗೆ ಉಪಯುಕ್ತವಾದುದು ಎನ್ನುವ ಅರ್ಥದಲ್ಲಿ ಶ್ವೇತಾಶ್ವತರ ಶ್ರುತಿಯನ್ನು ಉದಾಹರಿಸುತ್ತಾರೆ.

**ಭಾಷ್ಯ ॥ ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ**
**ಇತ್ಯಾದಿ *ಶ್ರುತಿಭ್ಯಶ್ಚ** (ಶ್ವೇ.ಉ.೬—೨೩.) ॥ ೩೩ ॥

**ಭಾಷ್ಯಾರ್ಥ ॥** ಯಾವ ಅಧಿಕಾರಿಗೆ ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಯಲ್ಲಿ ಸರ್ವಾಧಿಕವಾದ ಭಕ್ತಿಯು ಇದೆಯೋ, ಚತುರ್ಮುಖಾದಿ ದೇವತೆಗಳಲ್ಲಿ ಅವರವರ ಯೋಗ್ಯತಾನುಗುಣವಾಗಿ ಭಕ್ತಿಯು ಇದೆಯೋ, ಹಾಗೆಯೇ ಇತರರಾದ ತಮ್ಮಿಂದುತ್ತಮರಾದ ಗುರುಗಳಲ್ಲಿ ಅವರವರ ಯೋಗ್ಯತಾನುಗುಣವಾದ ಭಕ್ತಿಯದೆಯೋ ಅಂತಹ ಭಕ್ತಿಯುಳ್ಳ ಮಹಾನುಭಾವನಾದ ಅಧಿಕಾರಿಗೆ ಗುರೂಪದಿಷ್ಟಗಳಾದ ಈ ಅರ್ಥಗಳು ಪ್ರಕಾಶವಿಷಯಗಳಾಗುತ್ತವೆ. ಅಥವಾ ಆ ಅಧಿಕಾರಿಯಿಂದ (ಮೊದಲು ವೇದಾದಿಗಳಿಂದ ಅಥವಾ ಗುರುಗಳಿಂದ) ಹೇಳಲ್ಪಟ್ಟ ಪರಾಪರತತ್ತ್ವರೂಪಗಳಾದ ಅರ್ಥಗಳು ತಿಳಿಯಲ್ಪಡುತ್ತವೆ. ಅಥವಾ ಶಮದಮಾದಿರೂಪಗಳಾದ ಗುಣಗಳು ಆ ಅಧಿಕಾರಿಯಲ್ಲಿ ಕಾಣಲ್ಪಡುತ್ತವೆ. ಅಥವಾ ಅಧಿಕಾರಿಗೆ ಭಕ್ತಿಯ ಅಧೀನದಿಂದ ಗುರುಗಳಿಂದ ಉಪದಿಷ್ಟ ಗಳಾಗದೆ ಇರುವ ಅರ್ಥಗಳು ಕಾಣಲ್ಪಡುತ್ತವೆ. ಪ್ರಸಿದ್ಧವು ಇದು ಮೊದಲಾದ ಶ್ರುತಿಗಳಿಂದಲೂ (ಅಧಿಕಾರವು ಹೇಳಲ್ಪಟ್ಟಿದೆ.)

**ಪೀಠಿಕೆ ॥** ಅಧ್ಯಯನ ಮಾಡುವವರಿಗೇನೇ ಬ್ರಹ್ಮವಿದ್ಯಾಧಿಕಾರವೆಂದಾದರೆ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಂದ ಇತರರಾದ ಶೂದ್ರಾದಿಗಳಿಗೆ ಅಧ್ಯಯನವೇ ಇಲ್ಲದಿರುವುದರಿಂದ ಅಧಿಕಾರವೇ ಇಲ್ಲವೆಂದಾಗಬೇಕಾಗುವುದು. ಅಂತೂ ಅವರಿಗೆ ಬ್ರಹ್ಮಜ್ಞಾನವಿಲ್ಲದಿರುವುದರಿಂದ ಮೋಕ್ಷವೂ ಇಲ್ಲವೆಂದಾಗುವುದು ಎನ್ನುವ ಆಶಂಕೆಯನ್ನು ಸ್ಮೃತಿಯಿಂದ ಪರಿಹರಿಸುತ್ತಾರೆ.

---

★ (ಕ) ಶ್ರುತಿಗಳಿಂದ ಮಾತ್ರ ಅಧಿಕಾರವು ಹೇಳಲ್ಪಟ್ಟಿದ್ದಲ್ಲ. ಮತ್ತೆ ಭಕ್ತ್ಯೈವ ವೃಣುತೇ ವಿಷ್ಣುಃ ಭಕ್ತ್ಯಾ ದದ್ಯಾನ್ನಿಜಂ ಪದಂ । ಭಕ್ತ್ಯೈವ ದೃಶ್ಯತೇ ನಿತ್ಯಂ ಭಕ್ತ್ಯಾ ಭೋಗಾನ್ ದದಾತಿ ಚ ॥ ಭಕ್ತಿಯಿಂದಲೇ ವಿಷ್ಣುವು ಭಕ್ತನನ್ನು ವರಿಸುತ್ತಾನೆ. ಭಕ್ತಿಯಿಂದಲೇ ತನ್ನ ಪದವನ್ನು ಕೊಡುವನು. ಭಕ್ತಿಯಿಂದಲೇ ನಿರಂತರದಲ್ಲಿಯೂ ಕಾಣಲ್ಪಡುತ್ತಾನೆ. ಭಕ್ತಿಯಿಂದಲೇ ಭೋಗಗಳನ್ನು ಕೊಡುತ್ತಾನೆ ಎಂದು ಪಾದ್ಮ ಪುರಾಣದಲ್ಲಿ ಹೇಳಿಯದೆ.

(ಖ) ಭಕ್ತ್ಯಾ ತ್ವನನ್ಯಯಾ ಶಕ್ಯಃ (ಭ.ಗೀ.೧೧—೫೪) ಇದು ಮೊದಲಾದ ಸ್ಮೃತಿ ಗಳಿಂದಲೂ ಅಧಿಕಾರವು ಹೇಳಲ್ಪಟ್ಟಿದೆ.

(ಗ) ವಿಷ್ಣುಭಕ್ತಿರ್ದೇವಭಕ್ತಿರ್ಗುರುಭಕ್ತಿಸ್ತಥೈವ ಚ । ತತ್ತದ್ಯೋಗ್ಯಾನುಸಾರೇಣ ಎನ್ನುವ ಪ್ರಮಾಣದಿಂದ ಬ್ರಹ್ಮಾದಿದೇವತೆಗಳಲ್ಲಿ ಮಾಡತಕ್ಕ ಭಕ್ತಿಯಲ್ಲಿ ತಾರತಮ್ಯವು ಉಕ್ತವಾಯಿತು.

**ಭಾಷ್ಯ ॥ ವ್ಯೋಮಸಂಹಿತಾಯಾಂ ಚ ।**
**ಅಂತ್ಯಜಾ ಅಪಿ ಯೇ ಭಕ್ತಾ ನಾಮಜ್ಞಾನಾಧಿಕಾರಿಣಃ ॥ ೩೪ ॥**

ಭಾಷ್ಯಾರ್ಥ ॥ ವ್ಯೋಮಸಂಹಿತೆಯಲ್ಲಿಯೂ ಕೂಡ (ಪ್ರಕೃತಶಂಕೆಯನ್ನು ನಿವಾರಣ ಮಾಡಿಕೊಂಡು ಶೂದ್ರಾದಿಗಳಿಗೂ ಅಧಿಕಾರವು ಹೇಳಲ್ಪಟ್ಟಿದೆ.) ತ್ರೈವರ್ಣಿಕರು ಮಾತ್ರ ಅಧಿಕಾರಿಗಳು ಎಂದಲ್ಲ, ಮತ್ತೆ ಯಾರು ತ್ರಿವರ್ಣಬಾಹ್ಯರಾದ ಶೂದ್ರರನ್ನಾರಂಭಿಸಿ ಪುಲ್ಕಸಪರ್ಯಂತರಾದವರೋ (ಅವರು ಯದ್ಯಪಿ ವೈದಿಕ ಬ್ರಹ್ಮಜ್ಞಾನದಲ್ಲಿ ಅಧಿಕಾರಿಗಳಲ್ಲ, ಆದಾಗ್ಯೂ) ಭಕ್ತರಾಗಿರುವುದರಿಂದ ವಿಷ್ಣು ಮೊದಲಾದ ನಾಮಜ್ಞಾನದಲ್ಲಿಯೂ ಭಾಷಾತ್ಮಕ ಪ್ರಬಂಧಾಧ್ಯಯನದಲ್ಲಿಯೂ ಅದರಿಂದುಂಟಾದ ಬ್ರಹ್ಮಜ್ಞಾನದಲ್ಲಿಯೂ ಅಧಿಕಾರಿಗಳು.(ಆದುದರಿಂದ ಅವರೂ ಮುಕ್ತಿಯೋಗ್ಯರೇ.)

ಪೀಠಿಕೆ ॥ ತ್ರೈವರ್ಣಿಕರಲ್ಲಿಯೂ ವೇದದಲ್ಲಿ ಅಧಿಕಾರವಿಲ್ಲದಿರುವ ಕೆಲವರಿಗೂ ಅಂತ್ಯಜ ರಲ್ಲಿಯೂ ಭಕ್ತರಾದವರಿಗೆ ಅಧಿಕಾರವು ಉಕ್ತವಾಯಿತು. ಅದಕ್ಕಿಂತ ಇತರವಾದು ದನ್ನು ಹೇಳುತ್ತಾರೆ.

**ಭಾಷ್ಯ ॥ ಸ್ತ್ರೀಶೂದ್ರ ಬ್ರಹ್ಮಬಂಧೂನಾಂ ತಂತ್ರಜ್ಞಾನೇಽಧಿಕಾರಿತಾ ।**
**ಏಕದೇಶೇ ಪರೋಕ್ತೇ ತು ನ ತು ಗ್ರಂಥಪುರಸ್ಸರೇ ॥ ೩೫ ॥**

ಭಾಷ್ಯಾರ್ಥ ॥ ಬ್ರಾಹ್ಮಣಾದಿ ಸ್ತ್ರೀಯರಿಗೂ, ಶೂದ್ರರಿಗೂ ತಾವು ಬ್ರಾಹ್ಮಣರಾಗದೆ ಬ್ರಾಹ್ಮಣರನ್ನು ಬಂಧುಗಳನ್ನಾಗಿ ವ್ಯಪದೇಶಮಾಡುವವರಿಗೂ ಅಥವಾ ಬ್ರಾಹ್ಮಣಾಭಾಸರಿಗೂ ಒಬ್ಬರಿಂದ ಇನ್ನೊಬ್ಬ ರನ್ನು ಕುರಿತು ಆರಬ್ಧವಾದುದರಲ್ಲಿಯೇ ಏಕದೇಶದಲ್ಲಿಯೇ ಪಂಚರಾತ್ರಾದಿಗಳಿಂದುತ್ಪನ್ನವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು. (ಸರ್ವಥಾ ವೈದಿಕವಿದ್ಯೆಯಲ್ಲಿ ಅಧಿಕಾರವಿಲ್ಲ) ಸ್ತ್ರೀ ಮೊದಲಾದ ವರನ್ನು ಮಾತ್ರ ಪುರಸ್ಕರಿಸಿಕೊಂಡು ಪ್ರಾರಂಭಿಸಲ್ಪಡತಕ್ಕ ತಂತ್ರಗ್ರಂಥಾದಿಗಳಲ್ಲಿ ಅವರಿಗೆ ಅಧಿಕಾರವಿಲ್ಲ.

ವಿಶೇಷಾಂಶ ॥ (ಎ) ಬ್ರಾಹ್ಮಣಾದಿಗಳನ್ನುದ್ದೇಶಿಸಿಕೊಂಡು ಮಾಡಲ್ಪಡತಕ್ಕ ಪ್ರವಚನವಿಷಯ ದಲ್ಲಿ ಪಂಚರಾತ್ರಾಗಮ ಇತಿಹಾಸ ಮೊದಲಾದ ತಂತ್ರಗಳಿಂದುಂಟಾಗತಕ್ಕ ಬ್ರಹ್ಮಜ್ಞಾನದಲ್ಲಿಯೇ ಅಧಿಕಾರವು. ಅದರಲ್ಲಿಯೂ ಸರ್ವತ್ರ ಅಧಿಕಾರವಿಲ್ಲ, ಮತ್ತೆ ವೇದಭಾಗದಿಂದ ಮಿಶ್ರಿತವಾಗಿರುವ ಏಕದೇಶದಲ್ಲಿಯೇ ಅಧಿಕಾರವು. ಆ ಜ್ಞಾನದಿಂದಲೇ ಮೋಕ್ಷವಾಗುವುದು. (ಬಿ) ಬ್ರಾಹ್ಮಣಾದಿಗಳನ್ನುದ್ದೇಶಿಸಿ ಪ್ರವೃತ್ತವಾದಾಗ್ಯೂ ಈ ಗ್ರಂಥಕ್ಕೆ ಇದು ಅರ್ಹವು. ಹೀಗೆ ಗ್ರಂಥಗಳನ್ನು ಅವಲೋಕನ ಮಾಡಿಕೊಂಡು ತಂತ್ರಜನ್ಯಜ್ಞಾನದಲ್ಲಿ ಅಧಿಕಾರವಿಲ್ಲ. (ಸಿ) ಅಂತೂ ಸ್ತ್ರೀಶೂದ್ರಾದಿಗಳನ್ನು ಮಾತ್ರ ಪುರಸ್ಕರಿಸಿಕೊಂಡು ಭಾರತ ಭಾಗವತ ಮೊದಲಾದ ಪುರಾಣಾದಿ ಗ್ರಂಥಗಳನ್ನು ಪ್ರವಚನ ಮಾಡಬಾರದು ಎಂದುಕ್ತವಾಯಿತು.

ಪೀಠಿಕೆ— ಹಾಗಾದರೆ ವೇದದಿಂದ ಹುಟ್ಟಿದ ಬ್ರಹ್ಮಜ್ಞಾನದಲ್ಲಿಯೂ ತ್ರೈವರ್ಣಿಕರಿಗೆಲ್ಲರಿಗೆ ಅಧಿ ಕಾರವಿಲ್ಲ, ಕೆಲವರಿಗೆ ಮಾತ್ರ ಅಧಿಕಾರವೆನ್ನುತ್ತಾರೆ.

**ಭಾಷ್ಯ ॥ ತ್ರೈವರ್ಣಿಕಾನಾಂ ವೇದೋಕ್ತೇ ಸಮ್ಯಗ್ಭಕ್ತಿಮತಾ ಹರೌ ॥ ೩೬ ॥**

ಭಾಷ್ಯಾರ್ಥ ॥ ವೇದದಿಂದ ಹುಟ್ಟಿದ ಬ್ರಹ್ಮಜ್ಞಾನದಲ್ಲಿ ಆದರೂ ಶ್ರೀಹರಿಯಲ್ಲಿ ಚೆನ್ನಾಗಿ ಭಕ್ತಿಯಿರುವ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೇನೇ ಅಧಿಕಾರವು.

ವಿಶೇಷಾಂಶ ॥ ನಾಮಾದಿಗಳ ಜ್ಞಾನದಲ್ಲಿ ಮಾತ್ರ ಅಧಿಕಾರವೆಂದಲ್ಲ, ವೈದಿಕಜ್ಞಾನ ದಲ್ಲಿಯೂ ಅಧಿಕಾರವಿದೆ.

ಪೀಠಿಕೆ ॥ ಸಪತ್ನೀಂ ಮೇ ಪರಾಧಮ ಪತಿಂ ಮೇ ಕೇವಲಂ ಕುರು ಇತ್ಯಾದಿ ಶ್ರುತಿಗಳಲ್ಲಿ ಸ್ತ್ರೀಯರಿಗೂ ವೇದಾಧಿಕಾರವು ಕಂಡಿರುವುದರಿಂದ ಅವರಿಗೆ ಅಧಿಕಾರವಿಲ್ಲವೆನ್ನುವುದು ಹೇಗೆ ಕೂಡುತ್ತದೆ ಎಂದರೆ ಅದಕ್ಕೆ ಅಪವಾದವನ್ನು ಹೇಳುತ್ತಾರೆ.

ಭಾಷ್ಯ ॥ ಆಹುರಪ್ಯುತ್ತಮಸ್ತ್ರೀಣಾಮಧಿಕಾರಂ ತು ವೈದಿಕೇ ।

ಯಥೋರ್ವಶೀ ಯಮೀ ಚೈವ ಶಚ್ಯಾದ್ಯಾಶ್ಚ ತಥಾ[೧] ಪರಾ ಇತಿ ॥ ೩೭ ॥

ಭಾಷ್ಯಾರ್ಥ ॥ ಉತ್ತಮರಾದ ದೇವಾದಿಗಳ ಸ್ತ್ರೀಯರಿಗೆ ನಾಮಾದಿ ಜ್ಞಾನದಲ್ಲಿ ಮಾತ್ರ ಅಧಿಕಾರವಲ್ಲ, ಮತ್ತೆ ವೇದದಿಂದ ಹುಟ್ಟಿದ ಬ್ರಹ್ಮವಿದ್ಯೆಯಲ್ಲಿಯೂ ಕೂಡ ಅಧಿಕಾರವನ್ನು ಹೇಳುತ್ತಾರೆ. (ಹೇಗೆಂದರೆ ಉದಾಹರಿಸಿ ತೋರುತ್ತಾರೆ.) ಊರ್ವಶಿಯೂ ಯಮನ ಹೆಂಡತಿಯಾದ ಶ್ಯಾಮಲಾ ದೇವಿಯೂ, ಚ=ಪಾರ್ವತೀರತೀ ಮೊದಲಾದವರೂ ಶಚೀ ಮೊದಲಾದ ದೇವಸ್ತ್ರೀಯರೂ, ಚ=ಮನುಷ್ಯಾದಿಗಳ ಕುಲದಲ್ಲಿ ಹುಟ್ಟಿದ ಶಚೀ ಮೊದಲಾದ ದೇವಸ್ತ್ರೀಯರೂ ಉತ್ತಮ ದೇವಸ್ತ್ರೀಯರಿಂದ ಇತರರಾದ ಋಷಿಪತ್ನಿಯರೂ ಕೂಡ ವೇದಾಧಿಕಾರವುಳ್ಳವರು.

ಪೀಠಿಕೆ ॥ ಹೀಗೆ ಪ್ರತಿಜ್ಞಾ ಪ್ರಮಾಣೋಪನ್ಯಾಸ ಇವುಗಳಿಂದ ಅಧಿಕಾರವನ್ನು ವಿವರಣ ಮಾಡುತ್ತಾ ಅಥಶಬ್ದವನ್ನು ಸಂಕ್ಷೇಪವಾಗಿಯೂ ವಿಸ್ತರವಾಗಿಯೂ ವ್ಯಾಖ್ಯಾನ ಮಾಡಿ ಈಗ ಅತಃಶಬ್ದೋ ಹೇತ್ವರ್ಥಃ ಎಂದು ಸಂಕ್ಷೇಪದಿಂದ ಹೇಳಲ್ಪಟ್ಟ ಅರ್ಥವನ್ನು ವಿಶದೀಕರಿಸುತ್ತಾರೆ.

ಭಾಷ್ಯ ॥ ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ ।

ನ ಚ ಜ್ಞಾನಂ ವಿನಾತ್ಯರ್ಥಪ್ರಸಾದಃ ।

[೨]ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ ॥ ೩೮ ॥

ಭಾಷ್ಯಾರ್ಥ ॥ ಯಾವ ಕಾರಣದಿಂದ ಸುಖವೇ ಆಗಬೇಕು. ದುಃಖಲೇಶವೂ ಆಗ ಲಾರದು

---

೧ ದೇವ್ಯೋ ಮುನಿಸ್ತ್ರಿಯಶ್ಚೈವ ನರಾದಿಕುಲಜಾ ಅಪಿ । ಉತ್ತಮಾ ಇತಿ ವಿಜ್ಞೇಯಾಃ ಸಚ್ಛೂದ್ರೈರಪ್ಯವೈದಿಕಮ್ ॥ ಜ್ಞೇಯಮನ್ಯೈರ್ಹರೇರ್ನಾಮ ದೇವಸ್ತ್ರೀಯರೂ ಋಷಿಪತ್ನಿಯರೂ ಮನುಷ್ಯಾದಿಗಳ ಕುಲದಲ್ಲಿ ಹುಟ್ಟಿದವರಾದಾಗ್ಯೂ ಉತ್ತಮರೆಂದೇ ತಿಳಿಯಬೇಕು. ಸಚ್ಛೂದ್ರರೂ ಕೂಡ ಅವೈದಿಕರಾದ ಶ್ರೀಹರಿಯ ನಾಮಾದಿಗಳನ್ನು ತಿಳಿಯವರು.

೨ (ಕ) ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ । ಸ ದುಃಖೀ ಸಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ॥ ಅಹಂ ಎಂದು ತಿಳಿಯಲ್ಪಡತಕ್ಕವನು ಜೀವನೆನಿಸುತ್ತಾನೆ. ಆತನೇ ದುಃಖಿಯು, ಸುಖಿಯು, ಸಂಸಾರಬಂಧಕ್ಕೂ ಮೋಕ್ಷಕ್ಕೂ ಪಾತ್ರಭೂತರು ಎಂದು ಪರಮಶ್ರುತಿಯು.

(ಖ) ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ । ಯಾವ ಶ್ರೀಹರಿಯ ಪ್ರಸಾದದಿಂದಲೇ ದುಃಖರೂಪವಾದ ಸಂಸಾರದೆಸೆಯಿಂದ ಬಿಡುಗಡೆಯನ್ನು ಹೊಂದುತ್ತಾನೆ ಎಂದು ನಾರಾಯಣಶ್ರುತಿಯು.

ಎನ್ನುವ ಸರ್ವಾಭಿಮತವಾದ ಮೋಕ್ಷವು ಶ್ರೀನಾರಾಯಣನ ಅತಿಶಯಪ್ರಸಾದವಿಲ್ಲದೆ ಆಗುವುದಿಲ್ಲವೋ, ಆ ಪ್ರಸಾದವು ಶ್ರೀಹರಿಯ ಅಪರೋಕ್ಷ ಜ್ಞಾನವಿಲ್ಲದೆ ಆಗುವುದಿಲ್ಲವೋ (ಆ ಅಪರೋಕ್ಷ ಜ್ಞಾನವು ಬ್ರಹ್ಮಜಿಜ್ಞಾಸಾಮಾಡದೆ ಹುಟ್ಟುವುದಿಲ್ಲವೋ) ಆದಕಾರಣ ಅತಿಶಯಿತಪ್ರಸಾದದ್ವಾರಾ ಮುಕ್ತಿಗೆ ಸಾಧನವಾದ ಅಪರೋಕ್ಷಜ್ಞಾನವನ್ನು ಹುಟ್ಟಿಸತಕ್ಕ ಬ್ರಹ್ಮವಿಚಾರವು ಮಾಡತಕ್ಕದು.

**ವಿಶೇಷಾಂಶ ॥** (ಎ) ಬ್ರಹ್ಮಜಿಜ್ಞಾಸಾ ಅಂದರೆ ಅಧಿಕಾರವನ್ನನುಸರಿಸಿ ಬ್ರಹ್ಮಜ್ಞಾನಕ್ಕಾಗಿ ವೇದವೇದಾನುಸಾರಿಗ್ರಂಥಗಳ ಅರ್ಥವಿಷಯಕವಾದ ಶ್ರವಣ ಮನನ ನಿದಿಧ್ಯಾಸ ನಾದಿಗಳು. (ಬಿ) ಶ್ರೀಹರಿಯ ಪ್ರಸಾದದಿಂದ ಮೋಕ್ಷವಾಗುತ್ತದೆಂದು ಹೇಳಿದ್ದು ಕೂಡುವುದಿಲ್ಲ. ಏಕೆಂದರೆ ಸಂಸಾರ ಬಂಧವು ಅಜ್ಞಾನಕಾರ್ಯವಾದುದರಿಂದ ಮಿಥ್ಯಾಭೂತವಾಗಿದೆ. ಆದುದರಿಂದ ಜ್ಞಾನದಿಂದಲೇ ಸಂಸಾರಬಂಧವು ಬಿಡುಗಡೆಯಾಗುತ್ತದೆ. ಪ್ರಸಾದದಿಂದ ಬಿಡುಗಡೆ(ಮೋಕ್ಷ)ಯಾಗುತ್ತದೆಂದು ಸಿದ್ಧಾಂತಿಗಳು ಹೇಳಿದ್ದು ಅಯುಕ್ತವೆಂದು ಮಾಯಾವಾದಿಗಳು ಹೇಳುವರು. ಅದು ಅತ್ಯಯುಕ್ತವು. ಏಕೆಂದರೆ— ಅದ್ವೈತಿಗಳ ಮತದಲ್ಲಿ ಆಶ್ರಯವೂ ವಿಷಯವೂ ಕೂಡದಿರುವ ಪ್ರಯುಕ್ತ ಅಜ್ಞಾನವೇ ಸಿದ್ಧಿಸುವುದಿಲ್ಲ. ಸರ್ವಜ್ಞನಾದ ಪರಮಾತ್ಮನಿಗೆ ಅಜ್ಞಾನವು ಕೂಡುವುದಿಲ್ಲ. ಬ್ರಹ್ಮನಿಂದ ಭಿನ್ನನಾದ ಜೀವನೂ ಇಲ್ಲ. ಆದಕಾರಣ ಜೀವನಿಗೂ ಅಜ್ಞಾನವು ಕೂಡವುದಿಲ್ಲ. ಅಜ್ಞಾನವೇ ಕೂಡದಿದ್ದ ಮೇಲೆ ಬಂಧವು ಅಜ್ಞಾನಕಾರ್ಯವು ಹೇಗೆ ಆಗುವುದು? (ಸಿ) ಮತ್ತು **ಅಹಂ ದುಃಖೀ** ಎಂದು ಸರ್ವರಿಗೂ ಅಬಾಧಿತವಾದ ಅನುಭವವಿದೆ— ಈ ಅನುಭವವು ದುಃಖಕ್ಕೆ ಸತ್ಯತ್ವವನ್ನೇ ತಿಳಿಸಿಕೊಡುತ್ತದೆ. ಇಂತಹುದನ್ನು ಮಾಯಾವಾದಿಗಳು ಭ್ರಾಂತಿಯೆನ್ನುತ್ತಾರೆ. ಜೀವಬ್ರಹ್ಮರಿಗೆ ಭೇದವು ಸರ್ವರಿಗೂ ಅನುಭವಸಿದ್ಧವಾಗಿದೆ. ಇದನ್ನು **ಅಹಂ ಬ್ರಹ್ಮಾಸ್ಮಿ** ಎನ್ನುವ ಶ್ರುತಿಯಿಂದ ಅಭೇದವೆನ್ನುತ್ತಾರೆ. ಇದು ಪ್ರತ್ಯಕ್ಷ ಅನುಮಾನಗಳಿಂದ ವಿರುದ್ಧವಾಗಿದೆ. ಇಂತಹುದನ್ನು ಯಥಾರ್ಥವೆನ್ನುತ್ತಾರೆ. ಆದಕಾರಣ ಪ್ರತ್ಯಕ್ಷ ಅನು ಮಾನಗಳಿಂದ ಆಗಮಗಳಿಗೆ ವಿರುದ್ಧವಾಗಿ ಹೇಳುವುದರಿಂದ ಮಾಯಾವಾದಿಗಳ ಮಾತು ಅನಾದರಣೀಯವೇ ಆಗಿದೆ. (ಡಿ) ಇಂತಹ ಸಂಸಾರಬಂಧವು ಸ್ವಾತಂತ್ರ್ಯ ಸರ್ವಜ್ಞತ್ವ ಮೊದಲಾದ ಗುಣಗಳಿಂದ ಪರಿಪೂರ್ಣನಾದ ಶ್ರೀಹರಿಯ ಪ್ರಸಾದವಿಲ್ಲದೆ ನಾಶವನ್ನು ಹೊಂದುವುದಿಲ್ಲ.

**ಪೀಠಿಕೆ ॥** ಹಾಗಾದರೆ ಸೂತ್ರದಲ್ಲಿ ಕರ್ತವ್ಯಾ ಎನ್ನುವ ಪದವು ಇಲ್ಲ. ಅಧ್ಯಾಹಾರ ಮಾಡಿಕೊಳ್ಳುವದಾದರೆ ನ ಕರ್ತವ್ಯಾ ಎನ್ನುವ ವಾಕ್ಯವನ್ನೇ ಏಕೆ ಅಧ್ಯಾಹಾರ ಮಾಡಿಕೊಳ್ಳಬಾರದು. ಹೀಗೆಯೇ ಅಧ್ಯಾಹಾರ ಮಾಡಿಕೊಳ್ಳಬೇಕೆನ್ನುವ ವಿಷಯ ದಲ್ಲಿ ನಿಯಾಮಕವಿಲ್ಲವಷ್ಟೆ ಎಂದರೆ—

**ಭಾಷ್ಯ ॥ ಯತ್ರಾನವಸರೋಽನ್ಯತ್ರ ಪದಂ ತತ್ರ ಪ್ರತಿಷ್ಠಿತಂ । ವಾಕ್ಯಂ ವೇತಿ ಸತಾಂ ನೀತಿಃ । ಸಾವಕಾಶೇ ನ ತದ್ಭವೇದಿತಿ ಬೃಹ(*ಬ್ರಹ್ಮ)ತ್ಸಂಹಿತಾಯಾಮ್ ॥ ೩೯ ॥**

(ಗ) ನ ತಾದೃಶೀ ಪ್ರೀತಿರೀಢ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ । ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಃ ತತೋ ವೇದಾಸ್ತತ್ಪರಾ ಸ್ಸರ್ವ ಏವ ॥ ತನ್ನ ಗುಣೋತ್ಕರ್ಷವನ್ನು ತಿಳಿದವನಲ್ಲಿ ಪ್ರೀತಿಯಿದ್ದಷ್ಟು ಯಾರಲ್ಲಿಯೂ ಇಲ್ಲ. ಆ ಶ್ರೀಹರಿಯನ್ನು ಸಂತೋಷಿಸಿದುದರಿಂದಲೇ ಸರ್ವರೂ ಮೋಕ್ಷವನ್ನು ಹೊಂದುತ್ತಾರೆ. ಆದಕಾರಣ ಸಮಸ್ತ ವೇದಗಳೂ ಭಗವತ್ಪರಗಳೇ ಎಂದು ಸುಪರ್ಣಶ್ರುತಿಯು.)

★ ಈ ಚಿಹ್ನೆಯು ಒಳಗಿನದ್ದು ಹೃಷಿಕೇಶೀಯ ಪಾಠ.

**ಭಾಷ್ಯಾರ್ಥ ॥** ಯಾವ ಅವಾಂತರವಾಕ್ಯದಲ್ಲಿ ಯಾವ ಪದವಿಲ್ಲದೆ ಅರ್ಥಾಂತರದಲ್ಲಿ ಅವಸರವಿಲ್ಲವೋ (ಅರ್ಥಾಂತರವು ಕೂಡುವುದಿಲ್ಲವೋ) ಅಂತಹ ವಾಕ್ಯದಲ್ಲಿ ಆಪದವೇ ಅಧ್ಯಾಹಾರ್ಯವಾಗಿದೆ. ಯಾವ ಮಹಾವಾಕ್ಯದಲ್ಲಿ ಯಾವ ಅವಾಂತರ ವಾಕ್ಯವಿಲ್ಲದೆ ಅರ್ಥಾಂತರವು ಕೂಡುವುದಿಲ್ಲವೋ ಅಂತಹ ಮಹಾವಾಕ್ಯದಲ್ಲಿ ಅಂತಹ ಅವಾಂತರವಾಕ್ಯವೇ ಅಧ್ಯಾಹಾರ್ಯವು. (ಬೇರೆ ಯಾವುದೂ ಇಲ್ಲ) ಹೀಗೆ ಸಜ್ಜನರ ನ್ಯಾಯವು ಯಾವ ಪದವನ್ನಾಗಲೀ ವಾಕ್ಯವನ್ನಾಗಲೀ ಅಧ್ಯಾಹಾರಮಾಡದೆ ಪದಾಂತರದಿಂದ ವಾಕ್ಯಾಂತರದಿಂದಲಾಗಲೀ ಆ ವಾಕ್ಯವಾಗಲೀ ಮಹಾವಾಕ್ಯವಾಗಲೀ ಅರ್ಥಾಂತರದಲ್ಲಿ ಸಂಬಂಧವುಳ್ಳದ್ದಾದರೆ ಆಪದವಾಗಲೀ ವಾಕ್ಯವಾಗಲೀ ನಿಯಮದಿಂದ ಅಧ್ಯಾಹಾರ್ಯವಾಗಲಾರದು ಎಂದು ಬೃಹತ್ಸಂಹಿತೆಯಲ್ಲಿ (ಹೇಳಿಯದೆ).

**ಪೀಠಿಕೆ ॥** ಶ್ರೀಹರಿಯ ಪ್ರಸಾದವು ಮೋಕ್ಷಕ್ಕೆ ಸಾಧನವಾಗುತ್ತದೆ ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆಂದರೆ ಶ್ರುತಿಯನ್ನು ಹೇಳುತ್ತಾರೆ.

**ಭಾಷ್ಯ ॥ ತಮೇವಂ ವಿದ್ವಾನಮೃತ ಇಹ ಭವತಿ ।**

**ನಾನ್ಯಃ ಪಂಥಾ ಅಯನಾಯ ವಿದ್ಯತೇ** (ತೈ.ಉ.ಶಿ-೧೨) **॥ ೪೦ ॥**

**ಭಾಷ್ಯಾರ್ಥ ॥** ಅಧಿಕಾರವರ್ಗದಲ್ಲಿ ಆ ಶ್ರೀಹರಿಯನ್ನು ಸಹಸ್ರಶಿರಸ್ಸುಗಳುಳ್ಳವನು ಇತ್ಯಾದಿ ರೀತಿಯಾಗಿ ಈ ಲೋಕದಲ್ಲಿ ಪರೋಕ್ಷಜ್ಞಾನದ್ವಾರಾ ಅಪರೋಕ್ಷವಾಗಿ ತಿಳಿದವನೇ ಮುಕ್ತನಾಗುತ್ತಾನೆ. ನಾರಾಯಣನ ಪ್ರಾಪ್ತಿರೂಪವಾದ ಮೋಕ್ಷಕ್ಕಾಗಿ ಜ್ಞಾನದಿಂದ ಅತಿರಿಕ್ತವಾದ ಕರ್ಮಾದಿರೂಪವಾದ ಉಪಾಯವು ಇಲ್ಲ.

**ವಿಶೇಷಾಂಶ ॥** (ಎ) ಜ್ಞಾನವು ಪ್ರಸಾದದ್ವಾರಾ ಮೋಕ್ಷಕ್ಕೆ ಸಾಧನವು ಎನ್ನುವಲ್ಲಿ ಪ್ರಮಾಣವು. (ಬಿ) ಇಲ್ಲಿ ಜ್ಞಾನಕ್ಕೆ ಮೋಕ್ಷಸಾಧನತ್ವವು ಸಾಕ್ಷಾತ್ ತಿಳಿಯುತ್ತದೆ. ಪ್ರಸಾದಕ್ಕೆ ಮೋಕ್ಷಸಾಧನತ್ವವಾದರೂ ಸಾಕ್ಷಾತ್ತಾಗಿ ತಿಳಿಯುವು ದಿಲ್ಲ. ಮತ್ತೆ ಪ್ರಸಾದವಿಲ್ಲದೆ ವಿದ್ವತ್‌ಪದದಿಂದ ಲಕ್ಷ್ಯವಾದ ಅಪರೋಕ್ಷಜ್ಞಾನ ಮಾತ್ರದಿಂದ ಮೋಕ್ಷವಾಗುವುದಿಲ್ಲವೆನ್ನುವ ಅನ್ಯಥಾನುಪಪತ್ತಿಯಿಂದಲೇ.

**ಪೀಠಿಕೆ ॥ ನ ಚ ಜ್ಞಾನಂ ವಿನಾ ಆತ್ಮರ್ಥಪ್ರಸಾದಃ** ಎಂದು ಅಪರೋಕ್ಷಜ್ಞಾನವು ಪ್ರಸಾದಕ್ಕೆ ಸಾಧನವೆಂದು ಯಾವುದು ಹೇಳಲ್ಪಟ್ಟದೋ ಆ ವಿಷಯದಲ್ಲಿ ಪ್ರಮಾಣ ವನ್ನು ಹೇಳುತ್ತಾರೆ.

**ಭಾಷ್ಯ ॥ ಪ್ರಿಯೋ ಹಿ ಜ್ಞಾನಿನ್ಯೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೪೧ ॥**

**ಭಾಷ್ಯಾರ್ಥ ॥** ನಾನು ಜ್ಞಾನಿಗೆ ಅತ್ಯಂತ ಪ್ರಿಯನು. ಪ್ರಸಿದ್ಧವು. ಆ ಅಪರೋಕ್ಷಜ್ಞಾನಿಯೂ ನನಗೆ ಪ್ರಿಯನು(ಪ್ರಸಾದವಿಷಯನು.) (ಎಂದು ಶ್ರೀಕೃಷ್ಣನ ಮಾತು.)

**ಪೀಠಿಕೆ ॥** ಪ್ರಸಾದವು ಮೋಕ್ಷಕ್ಕೆ ಸಾಧನವು ಎನ್ನುವುದು ಕೇವಲ ಅರ್ಥಿಕಾರ್ಥವಲ್ಲ. ಮತ್ತೆ ಶ್ರುತಿಯಿಂದಲೂ ತಿಳಿಯುತ್ತದೆ ಎನ್ನುವ ಅಭಿಪ್ರಾಯದಿಂದ ಆ ವಿಷಯದಲ್ಲಿ ಕಠಶ್ರುತಿಯನ್ನುದಾಹರಿಸು ತ್ತಾರೆ.

**ಭಾಷ್ಯ॥ ಯಮೇವೈಷ ವೃಣುತೇ ತೇನ ಲಭ್ಯಃ** ॥ ೪೨ ॥

**ಭಾಷ್ಯಾರ್ಥ ॥** ಈ ಪರಮಾತ್ಮನು ಇಚ್ಛಾರೂಪನಾಗಿ ಪ್ರಸನ್ನನಾಗಿ ಯಾವ ಅಧಿಕಾರಿಯನ್ನು ಅನುಗ್ರಹಿಸುತ್ತಾನೋ ಅವನಿಂದಲೇ ಪ್ರಾಪ್ಯನು. (ಬೇರೆ ಯಾರಿಂದಲೂ ಕರ್ಮದಿಂದಲೂ ಪ್ರಾಪ್ಯನಲ್ಲ)

**ಪೀಠಿಕೆ ॥** ಜಿಜ್ಞಾಸೆಯು ಅಪರೋಕ್ಷಜ್ಞಾನಕ್ಕೆ ಸಾಧನವೆಂದು ಯಾವುದು ಹೇಳಲ್ಪಟ್ಟದೋ ಆ ವಿಷಯದಲ್ಲಿ ಪ್ರಮಾಣವಾಗಿ ಶ್ರುತಿಯನ್ನು ಹೇಳುತ್ತಾರೆ.

**ಭಾಷ್ಯ ॥ ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ (ಬೃ.ಉ.೬.೫-೬) ಇತ್ಯಾದಿ ಶ್ರುತಿಸ್ಮೃತಿಭ್ಯಃ** ॥ ೪೩ ॥

**ಭಾಷ್ಯಾರ್ಥ ॥** ಎಲೇ ಮೈತ್ರೇಯಿಯೇ (ಮುಕ್ತಿಯು ಇಚ್ಛಿಸಲ್ಪಡುವುದಾದರೆ) ಪರಮಾತ್ಮನು ದ್ರಷ್ಟವ್ಯಃ=ಅಪರೋಕ್ಷೀಕರಿಸಲ್ಪಡಬೇಕು. (ದರ್ಶನವಾಗಬೇಕಾದರೆ) ನಿದಿಧ್ಯಾಸಿತವ್ಯಃ= ಧ್ಯಾನವಿಷಯನಾಗಿ ಮಾಡಲ್ಪಡಬೇಕು.(ಅದಕ್ಕಾಗಿ) ಮಂತವ್ಯಃ=ಯುಕ್ತಿಗಳಿಂದ ವಿಚಾರಮಾಡಲ್ಪಡಬೇಕು. (ಅದಕ್ಕಾಗಿ) ಶ್ರೋತವ್ಯಃ=ಗುರುಗಳ ಉಪದೇಶದಿಂದ ಈ ವಾಕ್ಯಕ್ಕೆ ಇದು ಅರ್ಥವು ಎಂದು ಉಪನಿಷತ್ತುಗಳ ವಾಕ್ಯಾರ್ಥಗ್ರಹಣರೂಪವಾದ ಶ್ರವಣದಿಂದ ವಿಷಯೀಕರಿಸಲ್ಪಡಬೇಕು. ಇದು ಮೊದಲಾದ ಶ್ರುತಿ—ಸ್ಮೃತಿಗಳಿಂದ (ಸಿದ್ಧವಾಯಿತು.)

**ವಿಶೇಷಾಂಶ ॥** (ಎ) ಅಂಗಾಂಗಿರೂಪವಾದ ಶ್ರವಣ—ಮನನ—ನಿದಿಧ್ಯಾಸನರೂಪವಾದ ಜಿಜ್ಞಾಸೆಯು ಜ್ಞಾನಕ್ಕೆ ಸಾಧನವೆಂದು ಉಕ್ತವಾಯಿತು. (ಬಿ) ★ಶ್ರವಣವೆಂದರೆ— ಉಪನಿಷದ್ವಾಕ್ಯಾದಿ ರೂಪವಾದ ಉಪದೇಶದಿಂದುಂಟಾದ ವಾಕ್ಯಾರ್ಥಜ್ಞಾನವು. (ಸಿ) ಮನನವೆಂದರೆ— ಶ್ರುತವಾದ ವಾಕ್ಯಾರ್ಥದಲ್ಲಿ ಯುಕ್ತ್ಯನುಸಂಧಾನವು. (ಡಿ) ನಿದಿಧ್ಯಾಸನವೆಂದರೆ— ನಿರಂತರದಲ್ಲಿ ತಮ್ಮ ಯೋಗ್ಯತಾನುಗುಣವಾದ ತದ್ವಿಷಯಕವಾದ ವಿಚಾರವು. (ಇ) ಜಿಜ್ಞಾಸಾ ಎನ್ನುವಲ್ಲಿ ಇಚ್ಛಾರ್ಥದಲ್ಲಿ ಸನ್‌ಪ್ರತ್ಯಯವು. ಆದಕಾರಣ ಇಚ್ಛಾರೂಪವಲ್ಲದ ಶ್ರವಣಾದಿಗಳು ಸನ್ನಂತ ಜಿಜ್ಞಾಸಾಪದದಿಂದ ವಾಚ್ಯಗಳು ಹೇಗೆ ಆಗುವವು ಎಂದರೆ? ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಂ । (ಭಾ. ೧-೫-೩.) ಪೂರ್ಣನಾದ ಬ್ರಹ್ಮನನ್ನು ವಿಚಾರಮಾಡಿರುವಿರಿ ಎಂದು ನಾರದರು ವೇದವ್ಯಾಸರ ಹತ್ತಿರ

---

★ (ಕ) ಶ್ರವಣಂ ಶಬ್ದಜಂ ಜ್ಞಾನಮುಪಪತ್ತ್ಯನುಚಿಂತನಂ । ಮತಿರ್ನಿರಂತರಾ ಚಿಂತಾ ನಿದಿಧ್ಯಾಸನಮೇವ ಚ ॥ (ಸ್ಪಷ್ಟಾರ್ಥಕವು.)

(ಖ) ಶ್ರವಣಂ ಮನನಂ ಚೈವ ನಿದಿಧ್ಯಾಸನಮೇವ ಚ । ವಿಷ್ಣೋಃ ಸಸ್ತು ಬ್ರಹ್ಮ ವಿದ್ಯಾಯಾಂ ಜಿಜ್ಞಾಸೇತಿ ವಿದೋ ವಿದುಃ । ಶ್ರವಣಾದಿಗಳನ್ನು ಜಿಜ್ಞಾಸೆಯೆಂದು ಜ್ಞಾನಿಗಳು ಹೇಳುತ್ತಾರೆ.

(ಗ) ಯತ್ರಾರ್ಥಸ್ಯ ವಿಸಂವಾದಃ ಪ್ರತ್ಯಕ್ಷೇಣೋಪಲಭ್ಯತೇ । ಸ್ವರಸಂಸ್ಕಾರಮಾತ್ರಾರ್ಥಾ ತತ್ರ ವ್ಯಾಕರಣಸ್ಮೃತಿಃ ॥ ಹಾಗಾದರೆ ಜಿಜ್ಞಾಸಾ ಎನ್ನುವಲ್ಲಿ ಸನ್‌ಪ್ರತ್ಯಯವು ಹೇಗೆ ಕೂಡುತ್ತದೆಂದರೆ ಎಲ್ಲಿ ಪ್ರತ್ಯಕ್ಷವಾಗಿ ಅರ್ಥಕ್ಕೆ ವಿಸಂವಾದವು ತೋರುತ್ತದೋ, ಅಲ್ಲಿ ಸನ್ ಎನ್ನುವ ವ್ಯಾಕರಣಸ್ಮೃತಿಯು ಸ್ವರ ಸಂಸ್ಕಾರಕ್ಕೆ ಮಾತ್ರ ಉಪಯುಕ್ತವಾದುದು. ಅಂತೂ ಪ್ರತ್ಯಯವು ಶಬ್ದಕ್ಕೆ ಸಾಧುತ್ವವನ್ನು ಮಾತ್ರ ತಿಳಿಸಿಕೊಡತಕ್ಕದು.)

ಹೇಳಿದ ಪ್ರಕಾರ ವಿಚಾರದಲ್ಲಿಯೂ ಪ್ರಯೋಗವಿದ್ದುದರಿಂದ ಜಿಜ್ಞಾಸಾ ಶಬ್ದವು ರೂಢವೆಂದು ತಿಳಿಯುತ್ತದೆ. (ಎಫ್) ಹಾಗಾದರೆ ಜ್ಞಾನೇಚ್ಛೆಯಲ್ಲಿಯೂ ಜಿಜ್ಞಾಸಾ ಶಬ್ದಕ್ಕೆ ಪ್ರಯೋಗವಿದ್ದುದರಿಂದ ಜಿಜ್ಞಾಸಾ ಶಬ್ದಕ್ಕೆ ಇಚ್ಛೆಯೆಂದೇ ಅರ್ಥವು ಏಕೆ ಆಗಲಾರದೆಂದರೆ ಪ್ರಯತ್ನಸಾಧ್ಯವಾದುದೇ ವಿಧೇಯ ವಾಗುವುದು. ಪುರುಷರ ಪ್ರಯತ್ನಕ್ಕೆ ಅಗೋಚರವಾದ ಇಚ್ಛೆಗೆ ಕರ್ತವ್ಯತ್ವವಿಧಾನವು ಕೂಡಲಾರದು. (ಜಿ) ಹಾಗಾದರೆ ಕರ್ತವ್ಯಾ ಎಂದು ಅಧ್ಯಾಹಾರವು ಮಾಡುವುದು ಬೇಡ. ವಾಚಸ್ಪತಿಯು ಹೇಳುವ ಪ್ರಕಾರ ಭವತಿ ಎಂದು ಅಧ್ಯಾಹಾರವನ್ನು ಮಾಡಬಹುದಷ್ಟೆ. ಹಾಗಾದರೆ— ಜ್ಞಾನೇಚ್ಛೆಯು ಎನ್ನುವ ಅರ್ಥವೂ ಕೂಡಬಹುದೆಂದರೆ— ಭವತಿ ಎನ್ನುವುದು ವ್ಯರ್ಥವೇ. ಮತ್ತು ತದ್ವಿಜಿಜ್ಞಾಸಸ್ವ ಎನ್ನುವ ಶ್ರುತ್ಯರ್ಥವನ್ನು ನಿರೂಪಿಸಲಿಕ್ಕೆ ಈ ಸೂತ್ರವು ಹೊರಟದ್ದು. ಅದಕ್ಕೆ ಅನುಗುಣವಾಗಿ ಕರ್ತವ್ಯಾ ಎಂದೇ ಇಟ್ಟುಕೊಳ್ಳಬೇಕು.

ಪೀಠಿಕೆ ॥ ಹಾಗಾದರೆ ಭಗವತ್ಪ್ರಸಾದದಿಂದ ಮೋಕ್ಷವಾಗುವುದಾದರೆ ಅದಕ್ಕಾಗಿ ಜ್ಞಾನವು ಬೇಕಾಗಿಲ್ಲ. **ತತ್ಕರ್ಮ ಹರಿತೋಷಂ ಯತ್‌।** ಯ ಇಮಂ ಪರಮಂ ಗುಹ್ಯಂ ಇತ್ಯಾದಿ ಸ್ಮೃತಿಗಳಿಂದ ಕರ್ಮಾದಿಗಳಿಂದಲೂ ಭಗವತ್ಪ್ರಸಾದವು ಸಿದ್ಧಿಸುತ್ತದೆಂದು ಹೇಳಿಯದೆ. ಅಲ್ಲದೆ ಪ್ರಸಾದವು ಮೋಕ್ಷಕ್ಕೆ ಸಾಧನವು ಎಂದು ತಿಳಿಸಿಕೊಡತಕ್ಕ **ತಮೇವಂ ವಿದ್ವಾನ್ ಯಮೇವೈಷ ವೃಣುತೇ** ಇತ್ಯಾದಿಗಳಲ್ಲಿ ಇತರವಾದುದಕ್ಕೆ ನಿಷೇಧವಿದ್ದಂತೆ **ಪ್ರಿಯೋ ಹಿ ಜ್ಞಾನಿನಃ** ಎನ್ನುವ ವಾಕ್ಯದಲ್ಲಿ ಕರ್ಮಾದಿಗಳಿಗೆ ನಿಷೇಧವಿಲ್ಲ ಎನ್ನುವ ಆಶಂಕೆಯನ್ನು ಸ್ಮೃತಿಯಿಂದ ಪರಿಹರಿಸುತ್ತಾರೆ.

**ಭಾಷ್ಯ ॥ ಕರ್ಮಣಾ ತ್ವಧಮಃ ಪ್ರೋಕ್ತಃ ಪ್ರಸಾದಃ ಶ್ರವಣಾದಿಭಿಃ ।**
**ಮಧ್ಯಮೋ ಜ್ಞಾನಸಂಪತ್ತ್ಯಾ ಪ್ರಸಾದಸ್ತೂತ್ತಮೋಮತಃ ॥ ೪೪ ॥**

ಭಾಷ್ಯಾರ್ಥ ॥ ಕಾಮ್ಯಕರ್ಮದಿಂದಲೂ ಅಕಾಮ್ಯಕರ್ಮದಿಂದಲೂ ಉಂಟಾಗತಕ್ಕ ಯಾವ ವಿಷ್ಣುಪ್ರಸಾದವೋ ಅದು ಅಧಮವೆಂದೇ ಹೇಳಲ್ಪಡುತ್ತದೆ. ಶ್ರವಣಾದಿಗಳಿಂದ ಯಾವ ಪ್ರಸಾದವು ಉಂಟಾಗುತ್ತದೋ, ಅದು ಮಧ್ಯಮವೆಂದೇ ಹೇಳಲ್ಪಡುತ್ತದೆ. ಸ್ವಯೋಗ್ಯಬಿಂಬಾಪರೋಕ್ಷಜ್ಞಾನ ಪರಿಪಾಕದಿಂದುಂಟಾಗತಕ್ಕ ಯಾವ ಪ್ರಸಾದವೋ ಅದೇ ಉತ್ತಮಪ್ರಸಾದವೆಂದು ಪ್ರಮಿತವಾಗಿದೆ.

**ವಿಶೇಷಾಂಶ ॥** **ಶ್ರವಣಾದಿಭಿಃ** ಎನ್ನುವಲ್ಲಿದ್ದ ಆದಿಶಬ್ದದಿಂದ ಸ್ವಯೋಗ್ಯವಾದ ಬಿಂಬದರ್ಶನ ದಿಂದ ವ್ಯತಿರಿಕ್ತವಾದ ಧ್ಯಾನಸಾಮರ್ಥ್ಯದಿಂದ ಲಬ್ಧವಾದ ಭಗವನ್ಮೂರ್ತಿಯ ಸಾಮಾನ್ಯದರ್ಶನವನ್ನು ಇಟ್ಟುಕೊಳ್ಳಬೇಕು.

ಪೀಠಿಕೆ ॥ ಪ್ರಕೃತವೇನಾಯಿತೆಂದರೆ—

**ಭಾಷ್ಯ ॥ ಪ್ರಸಾದಾತ್ತ್ವಧಮಾದ್ವಿಷ್ಣೋಃ ★ಸ್ವರ್ಗಲೋಕಃ ಪ್ರಕೀರ್ತಿತಃ।**
**ಮಧ್ಯಮಾಜ್ಜನಲೋಕಾದಿರುತ್ತಮಸ್ತ್ವೇವ ಮುಕ್ತಿದಃ ॥ ೪೫ ॥**

★ (ಕ) ಯೋಗಸ್ಯ ತಪಸಶ್ಚೈವ ಜ್ಞಾನಸ್ಯ ಗತಯೋಽಮಲಾಃ । ಮಹರ್ಜನಃ ತಪಸ್ಸತ್ಯಂ ಭಕ್ತಿಯೋಗಸ್ಯ ಮದ್ಗತಿಃ ॥ (ಭಾ.ಸ್ಕ.೧೧) ಯೋಗಾದಿಗಳಿಗೆ ಮಹ ರ್ಲೋಕ ಮೊದಲಾದ ಗತಿಗಳು ಲಭಿಸುತ್ತವೆ. ಭಕ್ತಿಯೋಗದಿಂದ ನನ್ನ ಲೋಕವು ಪ್ರಾಪ್ತಿಯಾಗುತ್ತದೆ.

**ಭಾಷ್ಯ॥ ಯಮೇವೈಷ ವೃಣುತೇ ತೇನ ಲಭ್ಯಃ** ॥ ೪೨ ॥

**ಭಾಷ್ಯಾರ್ಥ ॥** ಈ ಪರಮಾತ್ಮನು ಇಚ್ಛಾರೂಪನಾಗಿ ಪ್ರಸನ್ನನಾಗಿ ಯಾವ ಅಧಿಕಾರಿಯನ್ನು ಅನುಗ್ರಹಿಸುತ್ತಾನೋ ಅವನಿಂದಲೇ ಪ್ರಾಪ್ತನು. (ಬೇರೆ ಯಾರಿಂದಲೂ ಕರ್ಮದಿಂದಲೂ ಪ್ರಾಪ್ಯನಲ್ಲ)

**ಪೀಠಿಕೆ ॥** ಜಿಜ್ಞಾಸೆಯು ಅಪರೋಕ್ಷಜ್ಞಾನಕ್ಕೆ ಸಾಧನವೆಂದು ಯಾವುದು ಹೇಳಲ್ಪಟ್ಟದೋ ಆ ವಿಷಯದಲ್ಲಿ ಪ್ರಮಾಣವಾಗಿ ಶ್ರುತಿಯನ್ನು ಹೇಳುತ್ತಾರೆ.

**ಭಾಷ್ಯ ॥ ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ (ಬೃ.ಉ.೬.೫-೬) ಇತ್ಯಾದಿ ಶ್ರುತಿಸ್ಮೃತಿಭ್ಯಃ** ॥ ೪೩ ॥

**ಭಾಷ್ಯಾರ್ಥ ॥** ಎಲೇ ಮೈತ್ರೇಯಿಯೇ (ಮುಕ್ತಿಯು ಇಚ್ಛಿಸಲ್ಪಡುವುದಾದರೆ) ಪರಮಾತ್ಮನು ದ್ರಷ್ಟವ್ಯಃ=ಅಪರೋಕ್ಷೀಕರಿಸಲ್ಪಡಬೇಕು. (ದರ್ಶನವಾಗಬೇಕಾದರೆ) ನಿದಿಧ್ಯಾಸಿತವ್ಯಃ= ಧ್ಯಾನವಿಷಯನಾಗಿ ಮಾಡಲ್ಪಡಬೇಕು.(ಅದಕ್ಕಾಗಿ) ಮಂತವ್ಯಃ=ಯುಕ್ತಿಗಳಿಂದ ವಿಚಾರಮಾಡಲ್ಪಡಬೇಕು. (ಅದಕ್ಕಾಗಿ) ಶ್ರೋತವ್ಯಃ=ಗುರುಗಳ ಉಪದೇಶದಿಂದ ಈ ವಾಕ್ಯಕ್ಕೆ ಇದು ಅರ್ಥವು ಎಂದು ಉಪನಿಷತ್ತುಗಳ ವಾಕ್ಯಾರ್ಥಗ್ರಹಣರೂಪವಾದ ಶ್ರವಣದಿಂದ ವಿಷಯೀಕರಿಸಲ್ಪಡಬೇಕು. ಇದು ಮೊದಲಾದ ಶ್ರುತಿ—ಸ್ಮೃತಿಗಳಿಂದ (ಸಿದ್ಧವಾಯಿತು.)

**ವಿಶೇಷಾಂಶ ॥** (ಎ) ಅಂಗಾಂಗಿರೂಪವಾದ ಶ್ರವಣ—ಮನನ—ನಿದಿಧ್ಯಾಸನರೂಪವಾದ ಜಿಜ್ಞಾಸೆಯು ಜ್ಞಾನಕ್ಕೆ ಸಾಧನವೆಂದು ಉಕ್ತವಾಯಿತು. (ಬಿ) ★ಶ್ರವಣವೆಂದರೆ— ಉಪನಿಷದ್ವ್ಯಾಖ್ಯಾದಿರೂಪವಾದ ಉಪದೇಶದಿಂದುಂಟಾದ ವಾಕ್ಯಾರ್ಥಜ್ಞಾನವು. (ಸಿ) ಮನನವೆಂದರೆ— ಶ್ರುತವಾದ ವಾಕ್ಯಾರ್ಥದಲ್ಲಿ ಯುಕ್ತ್ಯನುಸಂಧಾನವು. (ಡಿ) ನಿದಿಧ್ಯಾಸನವೆಂದರೆ— ನಿರಂತರದಲ್ಲಿ ತಮ್ಮ ಯೋಗ್ಯತಾನುಗುಣವಾದ ತದ್ವಿಷಯಕವಾದ ವಿಚಾರವು. (ಇ) ಜಿಜ್ಞಾಸಾ ಎನ್ನುವಲ್ಲಿ ಇಚ್ಛಾರ್ಥದಲ್ಲಿ ಸನ್‌ಪ್ರತ್ಯಯವು. ಆದಕಾರಣ ಇಚ್ಛಾರೂಪವಲ್ಲದ ಶ್ರವಣಾದಿಗಳು ಸನ್ನಂತ ಜಿಜ್ಞಾಸಾಪದದಿಂದ ವಾಚ್ಯಗಳು ಹೇಗೆ ಆಗುವವು ಎಂದರೆ? ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಂ । (ಭಾ. ೧-೫-೩) ಪೂರ್ಣನಾದ ಬ್ರಹ್ಮನನ್ನು ವಿಚಾರಮಾಡಿರುವಿರಿ ಎಂದು ನಾರದರು ವೇದವ್ಯಾಸರ ಹತ್ತಿರ

---

★ (ಕ) ಶ್ರವಣಂ ಶಬ್ದಜಂ ಜ್ಞಾನಮುಪಪತ್ತ್ಯನುಚಿಂತನಂ । ಮತಿರ್ನಿರಂತರಾ ಚಿಂತಾ ನಿದಿಧ್ಯಾಸನಮೇವ ಚ ॥ (ಸ್ಪಷ್ಟಾರ್ಥಕವು.)

(ಖ) ಶ್ರವಣಂ ಮನನಂ ಚೈವ ನಿದಿಧ್ಯಾಸನಮೇವ ಚ । ವಿಷ್ಣೋಽಸ್ತು ಬ್ರಹ್ಮ ವಿದ್ಯಾಯಾಂ ಜಿಜ್ಞಾಸೇತಿ ವಿದೋ ವಿದುಃ । ಶ್ರವಣಾದಿಗಳನ್ನು ಜಿಜ್ಞಾಸೆಯೆಂದು ಜ್ಞಾನಿಗಳು ಹೇಳುತ್ತಾರೆ.

(ಗ) ಯತ್ರಾರ್ಥಸ್ಯ ವಿಸಂವಾದಃ ಪ್ರತ್ಯಕ್ಷೇಣೋಪಲಭ್ಯತೇ । ಸ್ವರಸಂಸ್ಕಾರಮಾತ್ರಾರ್ಥಾ ತತ್ರ ವ್ಯಾಕರಣಸ್ಮೃತಿಃ ॥ ಹಾಗಾದರೆ ಜಿಜ್ಞಾಸಾ ಎನ್ನುವಲ್ಲಿ ಸನ್‌ಪ್ರತ್ಯಯವು ಹೇಗೆ ಕೂಡುತ್ತದೆಂದರೆ ಎಲ್ಲಿ ಪ್ರತ್ಯಕ್ಷವಾಗಿ ಅರ್ಥಕ್ಕೆ ವಿಸಂವಾದವು ತೋರುತ್ತದೋ, ಅಲ್ಲಿ ಸನ್ ಎನ್ನುವ ವ್ಯಾಕರಣಸ್ಮೃತಿಯು ಸ್ವರ ಸಂಸ್ಕಾರಕ್ಕೆ ಮಾತ್ರ ಉಪಯುಕ್ತವಾದುದು. ಅಂತೂ ಪ್ರತ್ಯಯವು ಶಬ್ದಕ್ಕೆ ಸಾಧುತ್ವವನ್ನು ಮಾತ್ರ ತಿಳಿಸಿಕೊಡತಕ್ಕುದು.)

ಹೇಳಿದ ಪ್ರಕಾರ ವಿಚಾರದಲ್ಲಿಯೂ ಪ್ರಯೋಗವಿದ್ದುದರಿಂದ ಜಿಜ್ಞಾಸಾ ಶಬ್ದವು ರೂಢವೆಂದು ತಿಳಿಯುತ್ತದೆ. (ಎಫ್) ಹಾಗಾದರೆ ಜ್ಞಾನೇಚ್ಛೆಯಲ್ಲಿಯೂ ಜಿಜ್ಞಾಸಾ ಶಬ್ದಕ್ಕೆ ಪ್ರಯೋಗವಿದ್ದುದರಿಂದ ಜಿಜ್ಞಾಸಾ ಶಬ್ದಕ್ಕೆ ಇಚ್ಛೆಯೆಂದೇ ಅರ್ಥವು ಏಕೆ ಆಗಲಾರದೆಂದರೆ ಪ್ರಯತ್ನಸಾಧ್ಯವಾದುದೇ ವಿಧೇಯವಾಗುವುದು. ಪುರುಷರ ಪ್ರಯತ್ನಕ್ಕೆ ಅಗೋಚರವಾದ ಇಚ್ಛೆಗೆ ಕರ್ತವ್ಯತ್ವವಿಧಾನವು ಕೂಡಲಾರದು. (ಜಿ) ಹಾಗಾದರೆ ಕರ್ತವ್ಯಾ ಎಂದು ಅಧ್ಯಾಹಾರವು ಮಾಡುವುದು ಬೇಡ. ವಾಚಸ್ಪತಿಯು ಹೇಳುವ ಪ್ರಕಾರ ಭವತಿ ಎಂದು ಅಧ್ಯಾಹಾರವನ್ನು ಮಾಡಬಹುದಷ್ಟೆ. ಹಾಗಾದರೆ— ಜ್ಞಾನೇಚ್ಛೆಯು ಎನ್ನುವ ಅರ್ಥವೂ ಕೂಡಬಹುದೆಂದರೆ— ಭವತಿ ಎನ್ನುವುದು ವ್ಯರ್ಥವೇ. ಮತ್ತು ತದ್ವಿಜಿಜ್ಞಾಸಸ್ವ ಎನ್ನುವ ಶ್ರುತ್ಯರ್ಥವನ್ನು ನಿರೂಪಿಸಲಿಕ್ಕೆ ಈ ಸೂತ್ರವು ಹೊರಟಿದ್ದು. ಅದಕ್ಕೆ ಅನುಗುಣವಾಗಿ ಕರ್ತವ್ಯಾ ಎಂದೇ ಇಟ್ಟುಕೊಳ್ಳಬೇಕು.

ಪೀಠಿಕೆ ॥ ಹಾಗಾದರೆ ಭಗವತ್ಪ್ರಸಾದದಿಂದ ಮೋಕ್ಷವಾಗುವುದಾದರೆ ಅದಕ್ಕಾಗಿ ಜ್ಞಾನವು ಬೇಕಾಗಿಲ್ಲ. ತತ್ಕರ್ಮ ಹರಿತೋಷಂ ಯತ್। ಯ ಇಮಂ ಪರಮಂ ಗುಹ್ಯಂ ಇತ್ಯಾದಿ ಸ್ಮೃತಿಗಳಿಂದ ಕರ್ಮಾದಿಗಳಿಂದಲೂ ಭಗವತ್ಪ್ರಸಾದವು ಸಿದ್ಧಿಸುತ್ತದೆಂದು ಹೇಳಿಯದೆ. ಅಲ್ಲದೆ ಪ್ರಸಾದವು ಮೋಕ್ಷಕ್ಕೆ ಸಾಧನವು ಎಂದು ತಿಳಿಸಿಕೊಡತಕ್ಕ ತಮೇವಂ ವಿದ್ವಾನ್ ಯಮೇವೈಷ ವೃಣುತೇ ಇತ್ಯಾದಿಗಳಲ್ಲಿ ಇತರವಾದುದಕ್ಕೆ ನಿಷೇಧವಿದ್ದಂತೆ ಪ್ರಿಯೋ ಹಿ ಜ್ಞಾನಿನಃ ಎನ್ನುವ ವಾಕ್ಯದಲ್ಲಿ ಕರ್ಮಾದಿಗಳಿಗೆ ನಿಷೇಧವಿಲ್ಲ ಎನ್ನುವ ಆಶಂಕೆಯನ್ನು ಸ್ಮೃತಿಯಿಂದ ಪರಿಹರಿಸುತ್ತಾರೆ.

**ಭಾಷ್ಯ ॥ ಕರ್ಮಣಾ ತ್ವಧಮಃ ಪ್ರೋಕ್ತಃ ಪ್ರಸಾದಃ ಶ್ರವಣಾದಿಭಿಃ ।**
**ಮಧ್ಯಮೋ ಜ್ಞಾನಸಂಪತ್ಯಾ ಪ್ರಸಾದಸ್ತೂತ್ತಮೋಮತಃ ॥ ೪೪ ॥**

ಭಾಷ್ಯಾರ್ಥ ॥ ಕಾಮ್ಯಕರ್ಮದಿಂದಲೂ ಅಕಾಮ್ಯಕರ್ಮದಿಂದಲೂ ಉಂಟಾಗತಕ್ಕ ಯಾವ ವಿಷ್ಣುಪ್ರಸಾದವೋ ಅದು ಅಧಮವೆಂದೇ ಹೇಳಲ್ಪಡುತ್ತದೆ. ಶ್ರವಣಾದಿಗಳಿಂದ ಯಾವ ಪ್ರಸಾದವು ಉಂಟಾಗುತ್ತದೋ, ಅದು ಮಧ್ಯಮವೆಂದೇ ಹೇಳಲ್ಪಡುತ್ತದೆ. ಸ್ವಯೋಗ್ಯಬಿಂಬಾಪರೋಕ್ಷಜ್ಞಾನ ಪರಿಪಾಕದಿಂದುಂಟಾಗತಕ್ಕ ಯಾವ ಪ್ರಸಾದವೋ ಅದೇ ಉತ್ತಮಪ್ರಸಾದವೆಂದು ಪ್ರಮಿತವಾಗಿದೆ.

**ವಿಶೇಷಾಂಶ ॥** ಶ್ರವಣಾದಿಭಿಃ ಎನ್ನುವಲ್ಲಿದ್ದ ಆದಿಶಬ್ದದಿಂದ ಸ್ವಯೋಗ್ಯವಾದ ಬಿಂಬದರ್ಶನದಿಂದ ವ್ಯತಿರಿಕ್ತವಾದ ಧ್ಯಾನಸಾಮರ್ಥ್ಯದಿಂದ ಲಬ್ಧವಾದ ಭಗವನ್ಮೂರ್ತಿಯ ಸಾಮಾನ್ಯದರ್ಶನವನ್ನು ಇಟ್ಟುಕೊಳ್ಳಬೇಕು.

ಪೀಠಿಕೆ ॥ ಪ್ರಕೃತವೇನಾಯಿತೆಂದರೆ—

**ಭಾಷ್ಯ ॥ ಪ್ರಸಾದಾತ್ತ್ವಧಮಾದ್ವಿಷ್ಣೋಃ ★ಸ್ವರ್ಗಲೋಕಃ ಪ್ರಕೀರ್ತಿತಃ।**
**ಮಧ್ಯಮಾಜ್ಜನಲೋಕಾದಿರುತ್ತಮಸ್ತ್ವೇವ ಮುಕ್ತಿದಃ ॥ ೪೫ ॥**

---

★ (ಕ) ಯೋಗಸ್ಯ ತಪಸಶ್ಚೈವ ಜ್ಞಾನಸ್ಯ ಗತಯೋಽಮಲಾಃ । ಮಹರ್ಜನಃ ತಪಸ್ಸತ್ಯಂ ಭಕ್ತಿಯೋಗಸ್ಯ ಮದ್ಗತಿಃ ॥ (ಭಾ.ಸ್ಕ.೧೧) ಯೋಗಾದಿಗಳಿಗೆ ಮಹ ರ್ಲೋಕ ಮೊದಲಾದ ಗತಿಗಳು ಲಭಿಸುತ್ತವೆ. ಭಕ್ತಿಯೋಗದಿಂದ ನನ್ನ ಲೋಕವು ಪ್ರಾಪ್ತಿಯಾಗುತ್ತದೆ.

ಭಾಷ್ಯಾರ್ಥ ॥ ಕಾಮ್ಯಕರ್ಮದಿಂದುಂಟಾಗತಕ್ಕ ವಿಷ್ಣುವಿನ ಅಧಮಪ್ರಸಾದದಿಂದ ಸ್ವರ್ಗಲೋಕವು ಆಗುತ್ತದೆಯೆಂದು (ವೃದ್ಧರಿಂದ) ಹೇಳಲ್ಪಟ್ಟಿದೆ. ಮಧ್ಯಮಪ್ರಸಾದದಿಂದ ಮಹರ್ಲೋಕ ಜನಲೋಕ ತಪೋಲೋಕ ಸತ್ಯಲೋಕಗಳು ಆಗುತ್ತವೆ. ಮುಕ್ತಿಯನ್ನು ಕೊಡತಕ್ಕುದು ಉತ್ತಮಪ್ರಸಾದವೇ ಎಂದು ಹೇಳಲ್ಪಟ್ಟಿದೆ. (ಇತರ ಪ್ರಸಾದಗಳಲ್ಲ).

---

(ಖ) ಜ್ಞಾನೇನ ಬ್ರಹ್ಮಲೋಕಃ ಸ್ಯಾತ್ ಮಹಾಜ್ಞಾನಾದ್ಧರೇರ್ಗತಿಃ । ಪಾದ ಯೋಗಾನ್ಮಹರ್ಲೋಕೋ ಜನೋಲೋಕಸ್ತು ಯೋಗತಃ । ತಪಸಸ್ತು ತಪೋಲೋ ಕಃ ಪ್ರಾಪ್ಯತೇ ನಾನ್ಯತಃ ಕ್ವಚಿತ್॥ ಜ್ಞಾನದಿಂದ ಬ್ರಹ್ಮಲೋಕವು, ಮಹಾಜ್ಞಾನದಿಂದ ವೈಕುಂಠವು, ಪಾದಯೋಗ (ನಿರಂತರ ಅಖಂಡಿತವಾದ ಧ್ಯಾನ) ದಿಂದ ಮಹರ್ಲೋಕವು, ಯೋಗದಿಂದ ಜನಲೋಕವು ತಪಸ್ಸಿನಿಂದ ತಪೋಲೋಕವು ಪ್ರಾಪ್ತವಾಗುತ್ತದೆಂದು ಭಾಗವತ ತಾತ್ಪರ್ಯದಲ್ಲಿ ಹೇಳಿಯದೆ.

(ಗ) ಈಯುಸ್ತ್ರೀನ್ ಕರ್ಮಣಾ ಲೋಕಾನ್ ಜ್ಞಾನೇನೈವ ತದುತ್ತರಾನ್ । ಕರ್ಮದಿಂದ ಭೂಲೋಕ ಭುವರ್ಲೋಕ ಸ್ವರ್ಗಲೋಕಗಳನ್ನೂ ಮಹರಾದಿ ಲೋಕಗಳನ್ನೂ ಜ್ಞಾನದಿಂದಲೇ ಹೊಂದುತ್ತಾರೆ.

(ಘ) ಜ್ಞಾನಂ ವಿನಾ ನಾಪಿ ಮಹರ್ಲೋಕಾದಿಕಾ ಗತಿಃ। ಜ್ಞಾನವಿಲ್ಲದೆ ಮಹರಾದಿ ಲೋಕಗಳು ಸಿಗಲಾರವು. ಇದು ಮೊದಲಾದ ಪ್ರಮಾಣಗಳಿಂದ ಮಹರ್ಲೋಕ ಜನಲೋಕಾದಿಗಳು ಅಪರೋಕ್ಷಜ್ಞಾನದಿಂದಲೇ ಸಾಧ್ಯಗಳೆಂದು ಹೇಳಲ್ಪಟ್ಟಿವೆ.

(ಙ) ಆದಕಾರಣ ಶ್ರವಣಾದಿಗಳಿಂದುಂಟಾದ ಮಧ್ಯಮ ಪ್ರಸಾದದಿಂದ ಜನಲೋಕಾದಿಗಳು ಪ್ರಾಪ್ತಗಳಾಗುತ್ತವೆಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ— ಅಪರೋಕ್ಷಜ್ಞಾನವು (೧) ಸ್ವಯೋಗ್ಯ ಬಿಂಬದರ್ಶನ, (೨) ಧ್ಯಾನಸಾಮರ್ಥ್ಯದಿಂದ ಲಬ್ಧವಾದ ಭಗವನ್ಮೂರ್ತಿ ಸಾಮಾನ್ಯ ದರ್ಶನ ಎಂದು ಎರಡು ವಿಧವು. ಬಿಂಬವ್ಯತಿರಿಕ್ತವಾದ ಭಗವನ್ಮೂರ್ತಿ ಸಾಮಾನ್ಯ ದರ್ಶನರೂಪವಾದ ಅಪರೋಕ್ಷಜ್ಞಾನದಿಂದ ಕೂಡಿದ ಶ್ರವಣಾದಿಗಳಿಂದುಂಟಾದ ಪ್ರಸಾದದೆಸೆಯಿಂದ ಜನಲೋಕಾದಿಗಳು ಪ್ರಾಪ್ತಗಳಾಗುತ್ತವೆ.

(ಚ) ಎರಡು ವಿಧ ದರ್ಶನವೂ, ಸಾಮಾನ್ಯ ದರ್ಶನವು ಜನಲೋಕಾದಿಗಳಿಗೆ ಕಾರಣವು ಎನ್ನುವುದೂ ಸಾಮಾನ್ಯ ದರ್ಶನಾಲ್ಲೋಕಾಃ ಮುಕ್ತಿಯೋಗ್ಯಾತ್ಮದರ್ಶನಾತ್ । ಸಾಮಾನ್ಯದರ್ಶನದೆಸೆಯಿಂದ ಜನಲೋಕಾದಿಗಳು ಪ್ರಾಪ್ತಗಳಾಗುತ್ತವೆ.

(ಛ) ಭೂಲೋಕಾದಿ ಮೂರು ಲೋಕಗಳು ಕರ್ಮಸಂಪಾದಿತಗಳಾದಾಗ್ಯೂ ಮಹರಾದಿ ಲೋಕಗಳು ಕರ್ಮಗಳಿಂದ ಸಂಪಾದಿತಗಳಲ್ಲ. ಜ್ಞಾನದಿಂದಲೇ ಲಭಿಸತಕ್ಕವುಗಳು. ಮಹರಾದಿಲೋಕಗಳು ವಿಷ್ಣುಲೋಕಗಳೇ. ಅಂ ವಿಷ್ಣುಂ ಬಿಭರ್ತೀತ್ಯಂಭೋ ವಿಷ್ಣು ಲೋಕಃ ದಿವಃ ಪರಃ । ಮಹರಾದಯಶ್ಚ ತೇಷು ಹಿ ಸರ್ವೇಷು ಪ್ರತ್ಯಕ್ಷತಶ್ಚರತಿ ವಿಷ್ಣುಃ ॥ ವಿಷ್ಣುವನ್ನು ಧರಿಸಿರುವುದರಿಂದ ಅಂಭಃ=ವಿಷ್ಣುಲೋಕವು, ಮಹರಾದಿಲೋಕಗಳೂ ವಿಷ್ಣುಲೋಕವೇ. ಅವುಗಳಲ್ಲೆಲ್ಲಾ ಶ್ರೀಹರಿಯು ಪ್ರತ್ಯಕ್ಷವಾಗಿಯೇ ಸಂಚರಿಸುತ್ತಾನೆಂದು ಐತರೇಯ ಭಾಷ್ಯದಲ್ಲಿ ಹೇಳಿಯದೆ.

(ಜ) ಕೆಲವರು ಪ್ರಾದುರ್ಭಾವಾನ್ಯತೇ ವಿಷ್ಣುಮಿಂದ್ರಿಯೈರ್ನೈವ ಪಶ್ಯತಿ । ಪ್ರಾ ದುರ್ಭಾವಾನಪಿ ಯದಾ ಜ್ಞಾನದೃಷ್ಟ್ಯೈವ ಪಶ್ಯತಿ । ತದೈವ ಮುಚ್ಯತೇ ಜೀವಃ ನ ದುಷ್ಟೈರಿಂದ್ರಿಯೈಃ ಕ್ವಚಿತ್ । ಪ್ರಾದುರ್ಭಾವಗಳನ್ನು ಹೊರತು ಇಂದ್ರಿಯಗಳಿಂದ ವಿಷ್ಣುವನ್ನು ಪ್ರತ್ಯಕ್ಷೀಕರಿಸುವುದಿಲ್ಲ. ಪ್ರಾದುರ್ಭಾವರೂಪಗಳನ್ನೂ ಕೂಡ ಯಾವಾಗ ಜ್ಞಾನದೃಷ್ಟಿಯಿಂದಲೇ ನೋಡುತ್ತಾನೋ ಆವಾಗಲೇ ಜೀವನು ಮುಕ್ತನಾಗುತ್ತಾನೆ ಎನ್ನುವ ಪ್ರಮಾಣದಿಂದ ಅವತಾರವಿಷಯಕ ಜ್ಞಾನದರ್ಶನಸಹಿತವಾದ ಮಧ್ಯಮಪ್ರಸಾದದಿಂದ ಜನಲೋಕಾದಿಗಳು ಪ್ರಾಪ್ತವಾಗುತ್ತವೆಂದು ಹೇಳುತ್ತಾರೆ.

(ಝ) ಈಯುಸ್ತ್ರೀನ್ ಕರ್ಮಣಾ ಜ್ಞಾನೇನೈವ ತದುತ್ತರಾನ್ । ಅಜನಾನ್ನ ಜನಿ ರ್ಭುವಿ । ಈ ಎರಡು ಪ್ರಮಾಣಗಳಿಂದ ಮಹರಾದಿಲೋಕಗಳಲ್ಲಿ ೧ ಪುನರಾವೃತ್ತಿ ಭಾಗವು, ೨ ಅಪುನರಾವೃತ್ತಿಭಾಗವು ಎಂದು ಎರಡು ಭಾಗಗಳು ಇವೆ.

**ವಿಶೇಷಾಂಶ ||** (ಎ) ಪ್ರಸಾದವು ಕರ್ಮಾದಿಗಳಿಂದ ಸಾಧ್ಯವು ಎಂದು ಇದ್ದಂತೆ ಮೋಕ್ಷವೂ ಕೂಡ ಕರ್ಮಸಾಧ್ಯವೆಂದು **ಅಪಾಮ ಸೋಮಮಮೃತಾ ಅಭೂಮ** ಸೋಮರಸವನ್ನು ಕುಡಿದೆವು, ಮುಕ್ತರಾದೆವು ಮತ್ತು **ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ** ಜನಕಾದಿಗಳು ಕರ್ಮದಿಂದಲೇ ಮೋಕ್ಷವನ್ನು ಹೊಂದಿದರು. ಇದು ಮೊದಲಾದ ಶ್ರುತಿ—ಸ್ಮೃತಿಗಳಿಂದ ಸಿದ್ಧ ವಾಗುತ್ತವೆ. (ಬಿ) ಹೀಗೆ ಇರಲು ಮೋಕ್ಷವು ಕರ್ಮಸಾಧ್ಯವೆಂದು ಶಂಕಿಸದೆ ಪ್ರಸಾದವು ಕರ್ಮ ಸಾಧ್ಯವೆಂದು ಏತಕ್ಕೆ ಶಂಕಿಸಿದ್ದೆಂದರೆ ಯದ್ಯಪಿ ಮೋಕ್ಷವು ಕರ್ಮಾದಿಗಳಿಂದ ಸಾಧ್ಯವೆಂದು ಶ್ರುತ್ಯಾದಿ ಗಳಿಂದ ಸಿದ್ಧವಾಗಿದೆ. ಆದಾಗ್ಯೂ **ತಮೇವಂ ವಿದ್ವಾನ್ । ಯ ಮೇವೈಷ ವೃಣುತೇ ತೇನ** ಇತ್ಯಾದಿಗಳಲ್ಲಿ **ನಾನ್ಯಃ ಪಂಥಾಃ** ಎಂದೂ ತೇನೈವ ಎಂದೂ ಜ್ಞಾನೇತರಪ್ರಸಾದಾತಿರಿಕ್ತವಾದ ಸಾಧನವನ್ನು ನಿಷೇಧ ಮಾಡಿದುದರಿಂದ ಹಾಗೆ ಅಲ್ಲಿ ಶಂಕೆಯಿಲ್ಲ. ಇಲ್ಲಿಯಾದರೂ **ಪ್ರಿಯೋ ಹಿ ಜ್ಞಾನಿನಃ** ಎನ್ನುವ ವಾಕ್ಯದಲ್ಲಿ ಜ್ಞಾನವ್ಯತಿರಿಕ್ತವಾದ ಕರ್ಮರೂಪಸಾಧನಕ್ಕೆ ನಿಷೇಧವಿಲ್ಲದಿರುವ ಪ್ರಯುಕ್ತ ಪ್ರಸಾದಕ್ಕೆ ಕರ್ಮಸಾಧ್ಯತ್ವ ಶಂಕೆಯು ಹುಟ್ಟಿಯೇ ಹುಟ್ಟುತ್ತದೆ. ಈ ಆಶಂಕೆಯನ್ನು **ಕರ್ಮಣಾ ಸತ್ವಧಮಃ ಪ್ರೋಕ್ತಃ** ಎನ್ನುವ ಪ್ರಮಾಣದಿಂದ ಪರಿಹರಿಸಿದರು. (ಸಿ) ಕರ್ಮಾದಿಗಳಿಂದಲೂ ಭಗವತ್ಪ್ರಸಾದವು ಸಿಗುವುದೆನ್ನುವುದು ಸತ್ಯವೇ. ಆದಾಗ್ಯೂ ಅದು ಉತ್ತಮ ಪ್ರಸಾದವಲ್ಲ. ಜ್ಞಾನಸಾಧ್ಯವಾದುದೇ ಉತ್ತಮಪ್ರಸಾದವು. ಅನುತ್ತಮ ಪ್ರಸಾದದಿಂದ ಸ್ವರ್ಗಾದಿಗಳು ಮಾತ್ರ ಲಭಿಸುವವು. ಮೋಕ್ಷವು ಉತ್ತಮ ಪ್ರಸಾದದಿಂದಲೇ ಸಿಗುವುದು. ಉತ್ತಮ ಪ್ರಸಾದಕ್ಕೆ ಸಾಧನವಾದುದು ಜ್ಞಾನವೇ ಕರ್ಮವಲ್ಲ.

**ಪೀಠಿಕೆ ||** ಹಾಗಾದರೆ ಉತ್ತಮ ಪ್ರಸಾದಕ್ಕೆ ಜ್ಞಾನವು ಆವಶ್ಯಕವಾಗಲಿ, ಆದಾಗ್ಯೂ ಜ್ಞಾನವು **ಕರ್ಮಣಾ ಜ್ಞಾನಮಾತನೋತಿ** ಇತ್ಯಾದಿ ಪ್ರಮಾಣಗಳಿಂದ ಕರ್ಮಾದಿಗಳಿಂದಲೂ ಹುಟ್ಟಬಹುದು. ಜ್ಞಾನಕ್ಕಾಗಿ ಜಿಜ್ಞಾಸೆಯು ಬೇಕಾಗಿಲ್ಲ. **ಆತ್ಮಾ ವಾ** ಎನ್ನುವ ವಾಕ್ಯದಲ್ಲಿ ಕರ್ಮಾದಿಗಳನ್ನು ನಿಷೇಧ ಮಾಡಲಿಲ್ಲ ಎನ್ನುವ ಆಶಂಕೆಯನ್ನು ಪ್ರಮಾಣದಿಂದ ಪರಿಹರಿಸುತ್ತಾರೆ.

---

ಅದರಲ್ಲಿ ೨ನೇ ಅಪುನರಾವೃತ್ತಿಭಾಗವು ಜ್ಞಾನಿಗಳಿಂದ ಪ್ರಾಪ್ಯವು. ೧ನೇ ಪುನರಾವೃತ್ತಿ ಭಾಗವಾದರೂ ಮಧ್ಯಮಪ್ರಸಾದವುಳ್ಳವರಿಂದ ಪ್ರಾಪ್ಯವು ಹೀಗೆ ಇಟ್ಟುಕೊಳ್ಳಬೇಕು.

(ಇ) ಆದುದರಿಂದಲೇ ಮನ್ವಂತರಾಯುಷಃ ಸ್ವರ್ಗ್ಯಾ ಮಹರ್ಲೋಕೇಷು ಕಾಲ್ಪಿಕಾಃ । ಅಬ್ರಹ್ಮಣೋ ಜನಾದ್ಯಾಸ್ತು ಮಹರ್ಲೋಕೇಽಪಿ ಯೇ ವರಾಃ ॥ ಮಹರ್ಲೋಕದಲ್ಲಿದ್ದವರಿಗೆ ಕೆಲವರಿಗೆ ದೈನಂದಿನ ಕಲ್ಪಪರ್ಯಂತರ ಮಾತ್ರ ಆಯುಷ್ಯ ವು. ಕೆಲವರಿಗೆ ಬ್ರಹ್ಮಕಲ್ಪಪರ್ಯಂತ ಆಯುಷ್ಯವು ಎಂದು ಭಾಗವತದಲ್ಲಿ ಹೇಳಿರುವರು.

(ಟ) ಅಧಮಪ್ರಸಾದದಿಂದ ಸ್ವರ್ಗಲೋಕವು ಪ್ರಾಪ್ಯವೆಂದು ಹೇಳಲ್ಪಟ್ಟಿದೆ. ಆದರೆ ಅಧಮಪ್ರಸಾದವಿಲ್ಲದೆ ಇರುವ ಅತಿ ದ್ವೇಷಿಗಳಾದ ದುರ್ಯೋಧನಾದಿಗಳಿಗೆ ಸ್ವರ್ಗ ಲೋಕವು ಪ್ರಾಪ್ತವಾಗಿದೆ ಎಂದು ಹೇಳಿಯದೆ. ಅದು ಹೇಗೆ ಸಂಗತವಾಗುತ್ತದೆ ಎಂದರೆ ದಕ್ಷಿಣಾತರ್ಪಿತಾನಾಂ ತು ಆಚಾರ್ಯಾಣಾಂ ತು ತೇಜಸಾ । ಯಾಂತಿ ಸ್ವರ್ಗಂ ತತಃ ಕ್ಷಿಪ್ರಂ ತಮೋಽಂಧಂ ಪ್ರಾಪ್ನುವಂತಿ ಚ ॥ ತದನ್ಯೇ ನೈವ ಚ ಸ್ವರ್ಗಂ । ದಕ್ಷಿಣೆಗಳಿಂದ ತೃಪ್ತಿಹೊಂದಿದ ಭಾಗವತಾಚಾರ್ಯರ ಮಹಿಮೆಯಿಂದ ಸ್ವಲ್ಪಕಾಲ ಸ್ವರ್ಗಲೋಕವನ್ನು ಹೊಂದಿ ಶೀಘ್ರದಲ್ಲಿ ಅಂಧಂತಮಸ್ಸನ್ನು ಹೊಂದುತ್ತಾರೆ. ಅಂತಹ ಆಚಾರ್ಯರ ಅನುಗ್ರಹವಿಲ್ಲದೆ ಇದ್ದವರು ಹೊಂದುವುದೇ ಇಲ್ಲ. ಎಂದೂ ಹೇಳಿರುವರು.

ಭಾಷ್ಯ ॥ ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ ।
ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ॥ ೪೬ ॥

ಭಾಷ್ಯಾರ್ಥ ॥ ಅಪರೋಕ್ಷಜ್ಞಾನವು ಹುಟ್ಟುವ ವಿಷಯದಲ್ಲಿ ಹೇಗೆ ಭಕ್ತಿಯೋ ಹಾಗೆಯೇ ಶ್ರವಣವು ಮನನವು ಧ್ಯಾನವು ಇವುಗಳೇ ಸಾಧನವು. ಇತರ ಕರ್ಮಾದಿಗಳಲ್ಲ (ಹಾಗಾದರೆ **ಕರ್ಮಣಾ ಜ್ಞಾನಮಾತನೋತಿ** ಇತ್ಯಾದಿ ವಚನವು ಹೇಗೆ ಸಂಗತವಾಗುತ್ತದೆ ಎಂದರೆ) ಶ್ರವಣಾದಿಗಳು ಪ್ರಧಾನ ಸಾಧನವು. ಕರ್ಮಾದಿಗಳು ಅಪ್ರಧಾನ ಸಾಧನವೆಂದೇ ಅಂಗೀಕರಿಸಲ್ಪಡುತ್ತದೆ.

ವಿಶೇಷಾಂಶ ॥ ಕರ್ಮಾದಿಗಳು ಅಪರೋಕ್ಷಜ್ಞಾನವು ಹುಟ್ಟುವ ವಿಷಯದಲ್ಲಿ ಸಾಧನವೇ ಅಲ್ಲವೆಂದಲ್ಲ. ಕರ್ಮಾದಿಗಳು ಅಪ್ರಧಾನ ಸಾಧನವು.

ಪೀಠಿಕೆ ॥ ಹಾಗಾದರೆ ಕರ್ಮವೇ ಪ್ರಧಾನ ಸಾಧನವು. ಶ್ರವಣಾದಿಗಳು ಅಮುಖ್ಯ ಸಾಧನಗಳೆಂದು ಏಕೆ ಆಗಲಾರದು—

ಭಾಷ್ಯ ॥ ನ ಚೈತಾನಿ ವಿನಾ ಕಶ್ಚಿಜ್ಜ್ಞಾನಮಾಪ ಕುತಶ್ಚನ ॥ ಇತಿ ನಾರದೀಯೇ ॥ ೪೭ ॥

ಭಾಷ್ಯಾರ್ಥ ॥ ಈ ಶ್ರವಣಾದಿಗಳನ್ನು ಹೊರತು ಯಾರೊಬ್ಬ ಅಧಿಕಾರಿಯೂ ಕರ್ಮಾದಿಗಳ ಸಹಕಾರದಸೆಯಿಂದಲೇ ಜ್ಞಾನವನ್ನು ಹೊಂದಲಿಲ್ಲ ಎಂದು ನಾರದೀಯ ಪುರಾಣದಲ್ಲಿದೆ.

ವಿಶೇಷಾಂಶ ॥ (ಎ) ಶ್ರವಣಾದಿಗಳು ಇರುವಾಗ್ಗೆ ಕರ್ಮಾದಿಗಳು ಇಲ್ಲದಿದ್ದರೆ ಜ್ಞಾನವು ಹುಟ್ಟಲಿಲ್ಲವೆಂದಲ್ಲ. (ಬಿ) ಶ್ರವಣಾದಿಗಳು ಇದ್ದರೇನೇ ಜ್ಞಾನವು ಹುಟ್ಟುವುದು. ಶ್ರವಣಾದಿಗಳು ಇಲ್ಲವಾದರೆ ಜ್ಞಾನವು ಹುಟ್ಟುವುದಿಲ್ಲ ಎನ್ನುವ ಅನ್ವಯವ್ಯತಿರೇಕದಿಂದ ಶ್ರವಣಾದಿಗಳೇ ಜ್ಞಾನಕ್ಕೆ ಪ್ರಧಾನ ಸಾಧನಗಳು. ಕರ್ಮಾದಿಗಳಿಗೆ ಅಂತಹ ಅನ್ವಯವ್ಯತಿರೇಕವಿಲ್ಲದಿರುವುದರಿಂದ ಕರ್ಮಾದಿಗಳು ಅಂತಃಕರಣಶುದ್ಧಿದ್ವಾರಾ ಅಪ್ರಧಾನ ಸಾಧನಗಳು.

ಪೀಠಿಕೆ ॥ ಶ್ರೀನಾರಾಯಣನ ಪ್ರಸಾದವಿಲ್ಲದೆ ಮೋಕ್ಷವಾಗುವುದಿಲ್ಲವೆಂದಾದರೆ ನಾರಾಯಣನ ಜಿಜ್ಞಾಸೆಯನ್ನೇ ಮಾಡಬೇಕು. ಬ್ರಹ್ಮಜಿಜ್ಞಾಸೆಯನ್ನು ಮಾಡುವುದಲ್ಲ. ಸೂತ್ರಕಾರರಿಗೆ ನಾರಾಯಣನೇ ಬ್ರಹ್ಮಶಬ್ದದಿಂದ ವಿವಕ್ಷಿತನಾಗಿದ್ದಾನೆಂದು ಹೇಳಕೂಡದು. ಬ್ರಹ್ಮಶಬ್ದಕ್ಕೆ ಜಾತಿ ಜೀವ ಮೊದಲಾದ ಅನೇಕಾರ್ಥಗಳು ಇದ್ದಪ್ರಯುಕ್ತ ಸೂತ್ರಕಾರರ ವಿವಕ್ಷಾವಿಶೇಷವನ್ನು ತಿಳಿಯಲು ಸಾಧ್ಯವಿಲ್ಲ ಎಂದರೆ—

ಭಾಷ್ಯ ॥ ★ಬ್ರಹ್ಮಶಬ್ದಶ್ಚ ವಿಷ್ಣಾವೇವ ॥ ೪೮ ॥

ಭಾಷ್ಯಾರ್ಥ ॥ ಬ್ರಹ್ಮಶಬ್ದಕ್ಕೆ ಅನೇಕ ಅರ್ಥಗಳು ಇದ್ದರೂ ಯಾವ ಕಾರಣದಿಂದ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿಯದೋ ಆದಕಾರಣ (ಮುಖ್ಯ ಅಮುಖ್ಯಗಳಲ್ಲಿ ಮುಖ್ಯವಾದುದನ್ನೇ

---

★ ದೇಶತಃ ಕಾಲತಶ್ಚೈವ ಗುಣತಶ್ಚಾಪಿ ಪೂರ್ತಿತಃ । ವಿಷ್ಣೌ ಬ್ರಹ್ಮೇತಿ ನಾಮೈತನ್ಮುಖ್ಯತೋಽನ್ಯತ್ರ ನ ಕ್ವಚಿತ್ । ದೇಶ ಕಾಲ ಗುಣ ಪರಿಚ್ಛೇದರೂಪ ತ್ರಿವಿಧ ಪೂರ್ತಿವಾಚಕ ಬ್ರಹ್ಮಶಬ್ದವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ವಿಷ್ಣುಶಬ್ದ ಪ್ರಯೋಗವು. ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವು ಮುಖ್ಯವಾದುದು. ಬೇರೆಯಲ್ಲಿ ಯೂ ಮುಖ್ಯವಾಗಿಲ್ಲ.

ಸ್ವೀಕರಿಸಬೇಕಾದುದರಿಂದ) ನಾರಾಯಣನೇ ಸೂತ್ರಕಾರರಿಗೆ ಬ್ರಹ್ಮಶಬ್ದದಿಂದ ವಿವಕ್ಷಿತನಾಗಿದ್ದಾನೆಂದು ತಿಳಿಯುತ್ತದೆ.

**ವಿಶೇಷಾಂಶ ॥** (ಎ) ಇಲ್ಲಿ ಬೇರೆ ಶಬ್ದಗಳನ್ನು ಬಿಟ್ಟು ವಿಷ್ಣುಶಬ್ದವನ್ನು ಪ್ರಯೋಗ ಮಾಡಿದ್ದರಿಂದ ವಿಷ್ಣುಶಬ್ದದಲ್ಲಿರತಕ್ಕ ವರ್ಗಗಳ ಐದು, ಆರು ನಾಲ್ಕನೇ ದಾದ ಣ ಷ ವಿ ಎನ್ನುವ ಅಕ್ಷರಗಳ ಸಂಖ್ಯೆಯು ಒಟ್ಟು ೫೬೪ ಸೂತ್ರಗಳ ಸಂಖ್ಯೆ ಯೆಂದು ಉಕ್ತವಾಯಿತು. (ಬಿ) ಇಲ್ಲಿ ವಿಷ್ಣುಶಬ್ದವನ್ನು ತೆಗೆದುಕೊಂಡದ್ದರಿಂದ **ಸ ವಿಷ್ಣುರಾಹ ಹಿ ತಂ ಬ್ರಹ್ಮೇತ್ಯಾಚಕ್ಷತೇ** ಎಂದು ದೈವೀ ಮೀಮಾಂಸಾ ಅಂತಿಮ ಎರಡು ಸೂತ್ರಗಳನ್ನು ನಿರ್ಮಿಸಿದೊಡನೆಯೇ ವೇದವ್ಯಾಸರು **ಅಥಾತೋ ಬ್ರಹ್ಮಜಿಜ್ಞಾಸಾ** ಎಂದು ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಆರಂಭಿಸಿರುವುದರಿಂದ ಇದಕ್ಕೆ ಅವ್ಯವಹಿತವಾದ ದೈವೀಮೀಮಾಂಸಾ ಅಂತಿಮ ಎರಡು ಸೂತ್ರಗಳಲ್ಲಿ ಬ್ರಹ್ಮಶಬ್ದದಿಂದ ನಾರಾಯಣನೇ ಪ್ರಸ್ತುತನೆಂದು ಸೂಚಿಸಿರುವರು. (ಸಿ) ತಥಾ ಚ ಶ್ರೀಹರಿಯು ದೇವಮೀಮಾಂಸಾ ಸೂತ್ರದ ಅಂತ್ಯದಲ್ಲಿ **ವಿಷ್ಣುರೇವ ಹಿ ತಚ್ಚು ತೇಃ, ತಂ ಬ್ರಹ್ಮೇತ್ಯಾಚಕ್ಷತೇ** ಎಂದು ಸರ್ವ ದೇವೋತ್ತಮನೆಂದೂ ಬ್ರಹ್ಮನೆಂದೂ ಹೇಳಲ್ಪಟ್ಟಿದ್ದಾನೋ ಆತನೇ ಉತ್ತರಮೀಮಾಂಸಾದಲ್ಲಿ ವಿಚಾರ್ಯನೆಂದು ಹೇಳಲ್ಪಡುತ್ತಾನೆ.

**ಪೀಠಿಕೆ ॥** ಬ್ರಹ್ಮಶಬ್ದವು ಬೇರೆ ಕಡೆಗಳಲ್ಲಿಯೂ ರೂಢವಾಗಿದೆ. ರೂಢಿಯೇ ಮುಖ್ಯ ವೃತ್ತಿಯಾಗಿದೆ. ಆದಕಾರಣ ಈ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವೆನ್ನುವುದು ಹೇಗೆ ಕೂಡುತ್ತದೆಂದರೆ—

**ಭಾಷ್ಯ ॥ ಯಮಂತಃಸಮುದ್ರೇ ಕವಯೋ ವಯಂತಿ ಯದಕ್ಷರೇ ಪರಮೇ ಪ್ರಜಾಃ । ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ವ್ಯಸಸರ್ಜ ಭೂಮ್ಯಾಮಿತ್ಯುಕ್ತ್ವಾ ತದೇವರ್ತಂ ತದು ಸತ್ಯಮಾಹು (★ಇತ್ಯಾದ್ಯುಕ್ತ್ವಾ) ಸ್ತದೇವ ಬ್ರಹ್ಮಪರಮಂ ಕವೀನಾಮಿತಿ ಹಿ ಶ್ರುತಿಃ ॥ ೪೯ ॥**

**ಭಾಷ್ಯಾರ್ಥ ॥** ಕವಯಃ=ಜ್ಞಾನಿಗಳು, ಅಂತಸ್ಸಮುದ್ರೇ=ಸಮುದ್ರದ ಒಳಗೆ ಇರತಕ್ಕ, ಯಂ= ಯಾವ ಪುರುಷನನ್ನು, ಅವಯಂತಿ=ಸ್ವಲ್ಪವೇ ತಿಳಿಯುತ್ತಾರೋ, ಅಥವಾ ವಯಂತಿ= ಇಚ್ಛಿಸುತ್ತಾರೋ, ತದಕ್ಷರೇತತ್ರ=ಅವಿಜ್ಞೇಯತ್ವ ರೂಪವಾದ ವಿಶೇಷಣದಿಂದ ಕೂಡಿರುವ, ಅಥವಾ ಪ್ರಸಿದ್ಧನಾದ, ಅಕ್ಷರೇ=ವಿನಾಶವಿಲ್ಲದಿರುವ, ಪರಮೇ=ಸರ್ವೋತ್ತಮನಾದ ಶ್ರೀಹರಿಯಲ್ಲಿ, ಪ್ರಜಾಃ=ಪ್ರಜೆಗಳು,

---

★ ಇತ್ಯಾದ್ಯುಕ್ತ್ವಾ ಎನ್ನುವಲ್ಲಿದ್ದ ಆದಿಶಬ್ದದಿಂದ ಯದೋಷಧೀಭಿಃ ಪುರುಷಾನ್ ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ ಅತಃ ಪರಂ ನಾನ್ಯದಣೀಯಸಂ ಹಿ ಪರಾತ್ಪರಂ ಯನ್ಮಹತೋ ಮಹಾಂತಂ । ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ॥ ಯಾವಾತನು ಓಷಧಿಗಳಿಂದ ಕೂಡಿದ ಪುರುಷರನ್ನೂ ಪಶುಗಳನ್ನೂ ಚೇತನಾಚೇತನಾತ್ಮಕ ಪ್ರಾಣಿಗಳನ್ನೂ ಪ್ರೇರಿಸುವುದಕ್ಕಾಗಿ ಪ್ರವೇಶಮಾಡಿರುವನೋ, ಆತನಿಂದ ಅತಿಶಯವಾದುದು ಇತರವಾದ ವಸ್ತುವು ಅತ್ಯಣುವಾದುದು ಇಲ್ಲವೋ ಯಾವ ಬ್ರಹ್ಮನು ಉತ್ಕೃಷ್ಟದಿಂದಲೂ ಉತ್ಕೃಷ್ಟನೋ, ಮಹತ್ಪರಿಮಾಣದಿಂದಲೂ ಮಹತ್ತಾದವನೋ, ಯಾವನು ತನ್ನ ಪ್ರಸಾದವಿಲ್ಲದೇ ಅತೀಂದ್ರಿಯನೋ, ಪೂರ್ಣನೋ, ಪುರಾತನನೋ ಪ್ರಕೃತಿಯಿಂದಲೂ, ಅಜ್ಞಾನದಿಂದಲೂ, ಅತಿಕ್ರಮಿಸಿಕೊಂಡು ಇರುತ್ತಾನೋ ಅವನೇ ಯಥಾರ್ಥಜ್ಞಾನರೂಪನು, ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

**ಭಾಷ್ಯ ॥ ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ ।
ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ॥ ೪೬ ॥**

**ಭಾಷ್ಯಾರ್ಥ ॥** ಅಪರೋಕ್ಷಜ್ಞಾನವು ಹುಟ್ಟುವ ವಿಷಯದಲ್ಲಿ ಹೇಗೆ ಭಕ್ತಿಯೋ ಹಾಗೆಯೇ ಶ್ರವಣವು ಮನನವು ಧ್ಯಾನವು ಇವುಗಳೇ ಸಾಧನವು. ಇತರ ಕರ್ಮಾದಿಗಳಲ್ಲ (ಹಾಗಾದರೆ **ಕರ್ಮಣಾ ಜ್ಞಾನಮಾತನೋತಿ** ಇತ್ಯಾದಿ ವಚನವು ಹೇಗೆ ಸಂಗತವಾಗುತ್ತದೆ ಎಂದರೆ) ಶ್ರವಣಾದಿಗಳು ಪ್ರಧಾನ ಸಾಧನವು. ಕರ್ಮಾದಿಗಳು ಅಪ್ರಧಾನ ಸಾಧನವೆಂದೇ ಅಂಗೀಕರಿಸಲ್ಪಡುತ್ತದೆ.

**ವಿಶೇಷಾಂಶ ॥** ಕರ್ಮಾದಿಗಳು ಅಪರೋಕ್ಷಜ್ಞಾನವು ಹುಟ್ಟುವ ವಿಷಯದಲ್ಲಿ ಸಾಧನವೇ ಅಲ್ಲವೆಂದಲ್ಲ. ಕರ್ಮಾದಿಗಳು ಅಪ್ರಧಾನ ಸಾಧನವು.

**ಪೀಠಿಕೆ ॥** ಹಾಗಾದರೆ ಕರ್ಮವೇ ಪ್ರಧಾನ ಸಾಧನವು. ಶ್ರವಣಾದಿಗಳು ಅಮುಖ್ಯ ಸಾಧನಗಳೆಂದು ಏಕೆ ಆಗಲಾರದು—

**ಭಾಷ್ಯ ॥ ನ ಚೈತಾನಿ ವಿನಾ ಕಶ್ಚಿಜ್ಜ್ಞಾನಮಾಪ ಕುತಶ್ಚನ ॥ ಇತಿ ನಾರದೀಯೇ ॥ ೪೭ ॥**

**ಭಾಷ್ಯಾರ್ಥ ॥** ಈ ಶ್ರವಣಾದಿಗಳನ್ನು ಹೊರತು ಯಾರೊಬ್ಬ ಅಧಿಕಾರಿಯೂ ಕರ್ಮಾದಿಗಳ ಸಹಕಾರದಸೆಯಿಂದಲೇ ಜ್ಞಾನವನ್ನು ಹೊಂದಲಿಲ್ಲ ಎಂದು ನಾರದೀಯ ಪುರಾಣದಲ್ಲಿದೆ.

**ವಿಶೇಷಾಂಶ ॥** (ಎ) ಶ್ರವಣಾದಿಗಳು ಇರುವಾಗ್ಯೆ ಕರ್ಮಾದಿಗಳು ಇಲ್ಲದಿದ್ದರೆ ಜ್ಞಾನವು ಹುಟ್ಟಲಿಲ್ಲವೆಂದಲ್ಲ (ಬಿ) ಶ್ರವಣಾದಿಗಳು ಇದ್ದರೇನೇ ಜ್ಞಾನವು ಹುಟ್ಟುವುದು. ಶ್ರವಣಾದಿಗಳು ಇಲ್ಲವಾದರೆ ಜ್ಞಾನವು ಹುಟ್ಟುವುದಿಲ್ಲ ಎನ್ನುವ ಅನ್ವಯವ್ಯತಿರೇಕದಿಂದ ಶ್ರವಣಾದಿಗಳೇವೇ ಜ್ಞಾನಕ್ಕೆ ಪ್ರಧಾನ ಸಾಧನಗಳು. ಕರ್ಮಾದಿಗಳಿಗೆ ಅಂತಹ ಅನ್ವಯವ್ಯತಿರೇಕವಿಲ್ಲದಿರುವುದರಿಂದ ಕರ್ಮಾದಿಗಳು ಅಂತಃಕರಣಶುದ್ಧಿದ್ವಾರಾ ಅಪ್ರಧಾನ ಸಾಧನಗಳು.

**ಪೀಠಿಕೆ ॥** ಶ್ರೀನಾರಾಯಣನ ಪ್ರಸಾದವಿಲ್ಲದೆ ಮೋಕ್ಷವಾಗುವುದಿಲ್ಲವೆಂದಾದರೆ ನಾರಾಯಣನ ಜಿಜ್ಞಾಸೆಯನ್ನೇ ಮಾಡಬೇಕು. ಬ್ರಹ್ಮಜಿಜ್ಞಾಸೆಯನ್ನು ಮಾಡುವುದಲ್ಲ. ಸೂತ್ರಕಾರರಿಗೆ ನಾರಾಯಣನೇ ಬ್ರಹ್ಮಶಬ್ದದಿಂದ ವಿವಕ್ಷಿತನಾಗಿದ್ದಾನೆಂದು ಹೇಳಕೂಡದು. ಬ್ರಹ್ಮಶಬ್ದಕ್ಕೆ ಜಾತಿ ಜೀವ ಮೊದಲಾದ ಅನೇಕಾರ್ಥಗಳು ಇದ್ದಪ್ರಯುಕ್ತ ಸೂತ್ರಕಾರರ ವಿವಕ್ಷಾವಿಶೇಷವನ್ನು ತಿಳಿಯಲು ಸಾಧ್ಯವಿಲ್ಲ ಎಂದರೆ—

**ಭಾಷ್ಯ ॥ ★ಬ್ರಹ್ಮಶಬ್ದಶ್ಚ ವಿಷ್ಣಾವೇವ ॥ ೪೮ ॥**

**ಭಾಷ್ಯಾರ್ಥ ॥** ಬ್ರಹ್ಮಶಬ್ದಕ್ಕೆ ಅನೇಕ ಅರ್ಥಗಳು ಇದ್ದರೂ ಯಾವ ಕಾರಣದಿಂದ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿಯದೋ ಆದಕಾರಣ (ಮುಖ್ಯ ಅಮುಖ್ಯಗಳಲ್ಲಿ ಮುಖ್ಯವಾದುದನ್ನೇ

---

★ ದೇಶತಃ ಕಾಲತಶ್ಚೈವ ಗುಣತಶ್ಚಾಪಿ ಪೂರ್ತಿತಃ । ವಿಷ್ಣೌ ಬ್ರಹ್ಮೇತಿ ನಾಮೈತನ್ಮುಖ್ಯತೋಽನ್ಯತ್ರ ನ ಕ್ವಚಿತ್ । ದೇಶ ಕಾಲ ಗುಣ ಪರಿಚ್ಛೇದರೂಪ ತ್ರಿವಿಧ ಪೂರ್ತಿವಾಚಕ ಬ್ರಹ್ಮಶಬ್ದವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ವಿಷ್ಣುಶಬ್ದ ಪ್ರಯೋಗವು. ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವು ಮುಖ್ಯವಾದುದು. ಬೇರೆಯಲ್ಲಿಯೂ ಮುಖ್ಯವಾಗಿಲ್ಲ.

ಸ್ವೀಕರಿಸಬೇಕಾದುದರಿಂದ) ನಾರಾಯಣನೇ ಸೂತ್ರಕಾರರಿಗೆ ಬ್ರಹ್ಮಶಬ್ದದಿಂದ ವಿವಕ್ಷಿತನಾಗಿದ್ದಾನೆಂದು ತಿಳಿಯುತ್ತದೆ.

**ವಿಶೇಷಾಂಶ ॥** (ಎ) ಇಲ್ಲಿ ಬೇರೆ ಶಬ್ದಗಳನ್ನು ಬಿಟ್ಟು ವಿಷ್ಣುಶಬ್ದವನ್ನು ಪ್ರಯೋಗ ಮಾಡಿದ್ದರಿಂದ ವಿಷ್ಣುಶಬ್ದದಲ್ಲಿರತಕ್ಕ ವರ್ಗಗಳ ಐದು, ಆರು ನಾಲ್ಕನೇ ದಾದ ಣ ಷ ವಿ ಎನ್ನುವ ಅಕ್ಷರಗಳ ಸಂಖ್ಯೆಯು ಒಟ್ಟು ೫೬೪ ಸೂತ್ರಗಳ ಸಂಖ್ಯೆ ಯೆಂದು ಉಕ್ತವಾಯಿತು. (ಬಿ) ಇಲ್ಲಿ ವಿಷ್ಣುಶಬ್ದವನ್ನು ತೆಗೆದುಕೊಂಡದ್ದರಿಂದ **ಸ ವಿಷ್ಣುರಾಹ ಹಿ ತಂ ಬ್ರಹ್ಮೇತ್ಯಾಚಕ್ಷತೇ** ಎಂದು ದೈವೀ ಮೀಮಾಂಸಾ ಅಂತಿಮ ಎರಡು ಸೂತ್ರಗಳನ್ನು ನಿರ್ಮಿಸಿದೊಡನೆಯೇ ವೇದವ್ಯಾಸರು **ಅಥಾತೋ ಬ್ರಹ್ಮಜಿಜ್ಞಾಸಾ** ಎಂದು ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಆರಂಭಿಸಿರುವುದರಿಂದ ಇದಕ್ಕೆ ಅವ್ಯವಹಿತವಾದ ದೈವೀಮೀಮಾಂಸಾ ಅಂತಿಮ ಎರಡು ಸೂತ್ರಗಳಲ್ಲಿ ಬ್ರಹ್ಮಶಬ್ದದಿಂದ ನಾರಾಯಣನೇ ಪ್ರಸ್ತುತನೆಂದು ಸೂಚಿಸಿರುವರು. (ಸಿ) ತಥಾ ಚ ಶ್ರೀಹರಿಯು ದೇವಮೀಮಾಂಸಾ ಸೂತ್ರದ ಅಂತ್ಯದಲ್ಲಿ **ವಿಷ್ಣುರೇವ ಹಿ ತಚ್ಛುತ್ರ ತೇಃ,** ತಂ ಬ್ರಹ್ಮೇತ್ಯಾಚಕ್ಷತೇ ಎಂದು ಸರ್ವ ದೇವೋತ್ತಮನೆಂದೂ ಬ್ರಹ್ಮನೆಂದೂ ಹೇಳಲ್ಪಟ್ಟಿದ್ದಾನೋ ಆತನೇ ಉತ್ತರಮೀಮಾಂಸಾದಲ್ಲಿ ವಿಚಾರ್ಯನೆಂದು ಹೇಳಲ್ಪಡುತ್ತಾನೆ.

**ಪೀಠಿಕೆ ॥** ಬ್ರಹ್ಮಶಬ್ದವು ಬೇರೆ ಕಡೆಗಳಲ್ಲಿಯೂ ರೂಢವಾಗಿದೆ. ರೂಢಿಯೇ ಮುಖ್ಯ ವೃತ್ತಿಯಾಗಿದೆ. ಆದಕಾರಣ ಈ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವೆನ್ನುವುದು ಹೇಗೆ ಕೂಡುತ್ತದೆಂದರೆ—

**ಭಾಷ್ಯ ॥ ಯಮಂತಃಸಮುದ್ರೇ ಕವಯೋ ವಯಂತಿ ಯದಕ್ಷರೇ ಪರಮೇ ಪ್ರಜಾಃ । ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ವ್ಯಸಸರ್ಜ ಭೂಮ್ಯಾಮಿತ್ಯುಕ್ತ್ವಾ ತದೇವರ್ತಂ ತದು ಸತ್ಯಮಾಹು (★ಇತ್ಯಾದ್ಯುಕ್ತ್ವಾ) ಸ್ತದೇವ ಬ್ರಹ್ಮಪರಮಂ ಕವೀನಾಮಿತಿ ಹಿ ಶ್ರುತಿಃ ॥ ೪೯ ॥**

**ಭಾಷ್ಯಾರ್ಥ ॥** ಕವಯಃ=ಜ್ಞಾನಿಗಳು, ಅಂತಸ್ಸಮುದ್ರೇ=ಸಮುದ್ರದ ಒಳಗೆ ಇರತಕ್ಕ, ಯಂ= ಯಾವ ಪುರುಷನನ್ನು, ಅವಯಂತಿ=ಸ್ವಲ್ಪವೇ ತಿಳಿಯುತ್ತಾರೋ, ಅಥವಾ ವಯಂತಿ= ಇಚ್ಛಿಸುತ್ತಾರೋ, ತದಕ್ಷರೇತತ=ಅವಿಜ್ಞೇಯತ್ವ ರೂಪವಾದ ವಿಶೇಷಣದಿಂದ ಕೂಡಿರುವ, ಅಥವಾ ಪ್ರಸಿದ್ಧನಾದ, ಅಕ್ಷರೇ=ವಿನಾಶವಿಲ್ಲದಿರುವ, ಪರಮೇ=ಸರ್ವೋತ್ತಮನಾದ ಶ್ರೀಹರಿಯಲ್ಲಿ, ಪ್ರಜಾಃ=ಪ್ರಜೆಗಳು,

---

★ ಇತ್ಯಾದ್ಯುಕ್ತ್ವಾ ಎನ್ನುವಲ್ಲಿದ್ದ ಆದಿಶಬ್ದದಿಂದ ಯದೋಷಧೀಭಿಃ ಪುರುಷಾನ್ ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ ಅತಃ ಪರಂ ನಾನ್ಯದಣೀಯಸಂ ಹಿ ಪರಾತ್ಪರಂ ಯನ್ಮಹತೋ ಮಹಾಂತಂ । ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ॥ ಯಾವಾತನು ಓಷಧಿಗಳಿಂದ ಕೂಡಿದ ಪುರುಷರನ್ನೂ ಪಶುಗಳನ್ನೂ ಚೇತನಾಚೇತನಾತ್ಮಕ ಪ್ರಾಣಿಗಳನ್ನೂ ಪ್ರೇರಿಸುವುದಕ್ಕಾಗಿ ಪ್ರವೇಶಮಾಡಿರುವನೋ, ಆತನಿಂದ ಅತಿಶಯವಾದುದು ಇತರವಾದ ವಸ್ತುವು ಅತ್ಯಣುವಾದುದು ಇಲ್ಲವೋ ಯಾವ ಬ್ರಹ್ಮನು ಉತ್ಕೃಷ್ಟರಿಂದಲೂ ಉತ್ಕೃಷ್ಟನೋ, ಮಹತ್ಪರಿಮಾಣದಿಂದಲೂ ಮಹತ್ತಾದವನೋ, ಯಾವನು ತನ್ನ ಪ್ರಸಾದವಿಲ್ಲದೇ ಅತೀಂದ್ರಿಯನೋ, ಪೂರ್ಣನೋ, ಪುರಾತನನೋ ಪ್ರಕೃತಿಯಿಂದಲೂ, ಅಜ್ಞಾನದಿಂದಲೂ, ಅತಿಕ್ರಮಿಸಿಕೊಂಡು ಇರುತ್ತಾನೋ ಅವನೇ ಯಥಾರ್ಥಜ್ಞಾನರೂಪನು, ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

ಭಾಷ್ಯ ॥ ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ ।
ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ॥ ೪೬ ॥

ಭಾಷ್ಯಾರ್ಥ ॥ ಅಪರೋಕ್ಷಜ್ಞಾನವು ಹುಟ್ಟುವ ವಿಷಯದಲ್ಲಿ ಹೇಗೆ ಭಕ್ತಿಯೋ ಹಾಗೆಯೇ ಶ್ರವಣವು ಮನನವು ಧ್ಯಾನವು ಇವುಗಳೇ ಸಾಧನವು. ಇತರ ಕರ್ಮಾದಿಗಳಲ್ಲ (ಹಾಗಾದರೆ ಕರ್ಮಣಾ ಜ್ಞಾನಮಾತನೋತಿ ಇತ್ಯಾದಿ ವಚನವು ಹೇಗೆ ಸಂಗತವಾಗುತ್ತದೆ ಎಂದರೆ) ಶ್ರವಣಾದಿಗಳು ಪ್ರಧಾನ ಸಾಧನವು. ಕರ್ಮಾದಿಗಳು ಅಪ್ರಧಾನ ಸಾಧನವೆಂದೇ ಅಂಗೀಕರಿಸಲ್ಪಡುತ್ತದೆ.

ವಿಶೇಷಾಂಶ ॥ ಕರ್ಮಾದಿಗಳು ಅಪರೋಕ್ಷಜ್ಞಾನವು ಹುಟ್ಟುವ ವಿಷಯದಲ್ಲಿ ಸಾಧನವೇ ಅಲ್ಲವೆಂದಲ್ಲ. ಕರ್ಮಾದಿಗಳು ಅಪ್ರಧಾನ ಸಾಧನವು.

ಪೀಠಿಕೆ ॥ ಹಾಗಾದರೆ ಕರ್ಮವೇ ಪ್ರಧಾನ ಸಾಧನವು. ಶ್ರವಣಾದಿಗಳು ಅಮುಖ್ಯ ಸಾಧನಗಳೆಂದು ಏಕೆ ಆಗಲಾರದು—

ಭಾಷ್ಯ ॥ ನ ಚೈತಾನಿ ವಿನಾ ಕಶ್ಚಿಜ್ಞ್ಞಾನಮಾಪ ಕುತಶ್ಚನ ॥ ಇತಿ ನಾರದೀಯೇ ॥ ೪೭ ॥

ಭಾಷ್ಯಾರ್ಥ ॥ ಈ ಶ್ರವಣಾದಿಗಳನ್ನು ಹೊರತು ಯಾರೊಬ್ಬ ಅಧಿಕಾರಿಯೂ ಕರ್ಮಾದಿಗಳ ಸಹಾಯದಿಂದಲೇ ಜ್ಞಾನವನ್ನು ಹೊಂದಲಿಲ್ಲ ಎಂದು ನಾರದೀಯ ಪುರಾಣದಲ್ಲಿದೆ.

ವಿಶೇಷಾಂಶ ॥ (ಎ) ಶ್ರವಣಾದಿಗಳು ಇರುವಾಗ್ಯೆ ಕರ್ಮಾದಿಗಳು ಇಲ್ಲದಿದ್ದರೆ ಜ್ಞಾನವು ಹುಟ್ಟಲಿಲ್ಲವೆಂದಲ್ಲ (ಬಿ) ಶ್ರವಣಾದಿಗಳು ಇದ್ದರೇನೇ ಜ್ಞಾನವು ಹುಟ್ಟುವುದು. ಶ್ರವಣಾದಿಗಳು ಇಲ್ಲವಾದರೆ ಜ್ಞಾನವು ಹುಟ್ಟುವುದಿಲ್ಲ ಎನ್ನುವ ಅನ್ವಯವ್ಯತಿರೇಕದಿಂದ ಶ್ರವಣಾದಿಗಳೇವೇ ಜ್ಞಾನಕ್ಕೆ ಪ್ರಧಾನ ಸಾಧನಗಳು. ಕರ್ಮಾದಿಗಳಿಗೆ ಅಂತಹ ಅನ್ವಯವ್ಯತಿರೇಕವಿಲ್ಲದಿರುವುದರಿಂದ ಕರ್ಮಾದಿಗಳು ಅಂತಃಕರಣಶುದ್ಧಿದ್ವಾರಾ ಅಪ್ರಧಾನ ಸಾಧನಗಳು.

ಪೀಠಿಕೆ ॥ ಶ್ರೀನಾರಾಯಣನ ಪ್ರಸಾದವಿಲ್ಲದೆ ಮೋಕ್ಷವಾಗುವುದಿಲ್ಲವೆಂದಾದರೆ ನಾರಾಯಣನ ಜಜ್ಞಾಸೆಯನ್ನೇ ಮಾಡಬೇಕು. ಬ್ರಹ್ಮಜಿಜ್ಞಾಸೆಯನ್ನು ಮಾಡುವುದಲ್ಲ. ಸೂತ್ರಕಾರರಿಗೆ ನಾರಾಯಣನೇ ಬ್ರಹ್ಮಶಬ್ದದಿಂದ ವಿವಕ್ಷಿತನಾಗಿದ್ದಾನೆಂದು ಹೇಳಕೂಡದು. ಬ್ರಹ್ಮಶಬ್ದಕ್ಕೆ ಜಾತಿ ಜೀವ ಮೊದಲಾದ ಅನೇಕಾರ್ಥಗಳು ಇದ್ದಪ್ರಯುಕ್ತ ಸೂತ್ರಕಾರರ ವಿವಕ್ಷಾವಿಶೇಷವನ್ನು ತಿಳಿಯಲು ಸಾಧ್ಯವಿಲ್ಲ ಎಂದರೆ—

ಭಾಷ್ಯ ॥ *ಬ್ರಹ್ಮಶಬ್ದಶ್ಚ ವಿಷ್ಣಾವೇವ ॥ ೪೮ ॥

ಭಾಷ್ಯಾರ್ಥ ॥ ಬ್ರಹ್ಮಶಬ್ದಕ್ಕೆ ಅನೇಕ ಅರ್ಥಗಳು ಇದ್ದರೂ ಯಾವ ಕಾರಣದಿಂದ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿಯದೋ ಆದಕಾರಣ (ಮುಖ್ಯ ಅಮುಖ್ಯಗಳಲ್ಲಿ ಮುಖ್ಯವಾದುದನ್ನೇ

* ದೇಶತಃ ಕಾಲತಶ್ಚೈವ ಗುಣತಶ್ಚಾಪಿ ಪೂರ್ತಿತಃ । ವಿಷ್ಣೌ ಬ್ರಹ್ಮೇತಿ ನಾಮೈತನ್ಮುಖ್ಯತೋಽನ್ಯತ್ರ ನ ಕ್ವಚಿತ್ । ದೇಶ ಕಾಲ ಗುಣ ಪರಿಚ್ಛೇದರೂಪ ತ್ರಿವಿಧ ಪೂರ್ತಿವಾಚಕ ಬ್ರಹ್ಮಶಬ್ದವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ವಿಷ್ಣುಶಬ್ದ ಪ್ರಯೋಗವು. ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವು ಮುಖ್ಯವಾದುದು. ಬೇರೆಯಲ್ಲಿಯೂ ಮುಖ್ಯವಾಗಿಲ್ಲ.

ಸ್ವೀಕರಿಸಬೇಕಾದುದರಿಂದ) ನಾರಾಯಣನೇ ಸೂತ್ರಕಾರರಿಗೆ ಬ್ರಹ್ಮಶಬ್ದದಿಂದ ವಿವಕ್ಷಿತನಾಗಿದ್ದಾನೆಂದು ತಿಳಿಯುತ್ತದೆ.

**ವಿಶೇಷಾಂಶ** ॥ (ಎ) ಇಲ್ಲಿ ಬೇರೆ ಶಬ್ದಗಳನ್ನು ಬಿಟ್ಟು ವಿಷ್ಣುಶಬ್ದವನ್ನು ಪ್ರಯೋಗ ಮಾಡಿದ್ದರಿಂದ ವಿಷ್ಣುಶಬ್ದದಲ್ಲಿರತಕ್ಕ ವರ್ಗಗಳ ಐದು, ಆರು ನಾಲ್ಕನೇ ದಾದ ಣ ಷ ವಿ ಎನ್ನುವ ಅಕ್ಷರಗಳ ಸಂಖ್ಯೆಯು ಒಟ್ಟು ೫೬೪ ಸೂತ್ರಗಳ ಸಂಖ್ಯೆ ಯೆಂದು ಉಕ್ತವಾಯಿತು. (ಬಿ) ಇಲ್ಲಿ ವಿಷ್ಣುಶಬ್ದವನ್ನು ತೆಗೆದುಕೊಂಡದ್ದರಿಂದ **ಸ ವಿಷ್ಣುರಾಹ ಹಿ ತಂ ಬ್ರಹ್ಮೇತ್ಯಾಚಕ್ಷತೇ** ಎಂದು ದೈವೀ ಮೀಮಾಂಸಾ ಅಂತಿಮ ಎರಡು ಸೂತ್ರಗಳನ್ನು ನಿರ್ಮಿಸಿದೊಡನೆಯೇ ವೇದವ್ಯಾಸರು **ಅಥಾತೋ ಬ್ರಹ್ಮಜಿಜ್ಞಾಸಾ** ಎಂದು ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಆರಂಭಿಸಿರುವುದರಿಂದ ಇದಕ್ಕೆ ಅವ್ಯವಹಿತವಾದ ದೈವೀಮೀಮಾಂಸಾ ಅಂತಿಮ ಎರಡು ಸೂತ್ರಗಳಲ್ಲಿ ಬ್ರಹ್ಮಶಬ್ದದಿಂದ ನಾರಾಯಣನೇ ಪ್ರಸ್ತುತನೆಂದು ಸೂಚಿಸಿರುವರು. (ಸಿ) ತಥಾ ಚ ಶ್ರೀಹರಿಯು ದೇವಮೀಮಾಂಸಾ ಸೂತ್ರದ ಅಂತ್ಯದಲ್ಲಿ **ವಿಷ್ಣುರೇವ ಹಿ ತಚ್ಛು ತೇಃ, ತಂ ಬ್ರಹ್ಮೇತ್ಯಾಚಕ್ಷತೇ** ಎಂದು ಸರ್ವ ದೇವೋತ್ತಮನೆಂದೂ ಬ್ರಹ್ಮನೆಂದೂ ಹೇಳಲ್ಪಟ್ಟಿದ್ದಾನೋ ಆತನೇ ಉತ್ತರಮೀಮಾಂಸಾದಲ್ಲಿ ವಿಚಾರ್ಯನೆಂದು ಹೇಳಲ್ಪಡುತ್ತಾನೆ.

**ಪೀಠಿಕೆ** ॥ ಬ್ರಹ್ಮಶಬ್ದವು ಬೇರೆ ಕಡೆಗಳಲ್ಲಿಯೂ ರೂಢವಾಗಿದೆ. ರೂಢಿಯೇ ಮುಖ್ಯ ವೃತ್ತಿಯಾಗಿದೆ. ಆದಕಾರಣ ಈ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವೆನ್ನುವುದು ಹೇಗೆ ಕೂಡುತ್ತದೆಂದರೆ—

**ಭಾಷ್ಯ ॥ ಯಮಂತಃಸಮುದ್ರೇ ಕವಯೋ ವಯಂತಿ ಯದಕ್ಷರೇ ಪರಮೇ ಪ್ರಜಾಃ । ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ವ್ಯಸಸರ್ಜ ಭೂಮ್ಯಾಮಿತ್ಯುಕ್ತ್ವಾ ತದೇವರ್ತಂ ತದು ಸತ್ಯಮಾಹು (★ಇತ್ಯಾದ್ಯುಕ್ತ್ವಾ) ಸ್ತದೇವ ಬ್ರಹ್ಮಪರಮಂ ಕವೀನಾಮಿತಿ ಹಿ ಶ್ರುತಿಃ ॥ ೪೯ ॥**

**ಭಾಷ್ಯಾರ್ಥ** ॥ ಕವಯಃ=ಜ್ಞಾನಿಗಳು, ಅಂತಸ್ಸಮುದ್ರೇ=ಸಮುದ್ರದ ಒಳಗೆ ಇರತಕ್ಕ, ಯಂ= ಯಾವ ಪುರುಷನನ್ನು, ಅವಯಂತಿ=ಸ್ವಲ್ಪವೇ ತಿಳಿಯುತ್ತಾರೋ, ಅಥವಾ ವಯಂತಿ= ಇಚ್ಛಿಸುತ್ತಾರೋ, ತದಕ್ಷರೇತತ=ಅವಿಜ್ಞೇಯತ್ವ ರೂಪವಾದ ವಿಶೇಷಣದಿಂದ ಕೂಡಿರುವ, ಅಥವಾ ಪ್ರಸಿದ್ಧನಾದ, ಅಕ್ಷರೇ=ವಿನಾಶವಿಲ್ಲದಿರುವ, ಪರಮೇ=ಸರ್ವೋತ್ತಮನಾದ ಶ್ರೀಹರಿಯಲ್ಲಿ ಪ್ರಜಾಃ=ಪ್ರಜೆಗಳು,

---

★ ಇತ್ಯಾದ್ಯುಕ್ತ್ವಾ ಎನ್ನುವಲ್ಲಿದ್ದ ಆದಿಶಬ್ದದಿಂದ ಯದೋಷಧೀಭಿಃ ಪುರುಷಾನ್ ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ ಅತಃ ಪರಂ ನಾನ್ಯದಣೀಯಸಂ ಹಿ ಪರಾತ್ಪರಂ ಯನ್ಮಹತೋ ಮಹಾಂತಂ । ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ॥ ಯಾವಾತನು ಓಷಧಿಗಳಿಂದ ಕೂಡಿದ ಪುರುಷರನ್ನೂ ಪಶುಗಳನ್ನೂ ಚೇತನಾಚೇತನಾತ್ಮಕ ಪ್ರಾಣಿಗಳನ್ನೂ ಪ್ರೇರಿಸುವುದಕ್ಕಾಗಿ ಪ್ರವೇಶಮಾಡಿರುವನೋ, ಆತನಿಂದ ಅತಿಶಯವಾದುದು ಇತರವಾದ ವಸ್ತುವು ಅತ್ಯಣುವಾದುದು ಇಲ್ಲವೋ ಯಾವ ಬ್ರಹ್ಮನು ಉತ್ಕೃಷ್ಟದಿಂದಲೂ ಉತ್ಕೃಷ್ಟನೋ, ಮಹತ್ಪರಿಮಾಣದಿಂದಲೂ ಮಹತ್ತಾದವನೋ, ಯಾವನು ತನ್ನ ಪ್ರಸಾದವಿಲ್ಲದೇ ಅತೀಂದ್ರಿಯನೋ, ಪೂರ್ಣನೋ, ಪುರಾತನನೋ ಪ್ರಕೃತಿಯಿಂದಲೂ, ಅಜ್ಞಾನದಿಂದಲೂ, ಅತಿಕ್ರಮಿಸಿಕೊಂಡು ಇರುತ್ತಾನೋ ಅವನೇ ಯಥಾರ್ಥಜ್ಞಾನರೂಪನು, ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

(ಅಧೀನರಾಗಿರುತ್ತಾರೋ) ಜಗತಃ ಪ್ರಸೂತೀ = ಜಗಜ್ಜನನಿಯಾದ ಲಕ್ಷ್ಮೀದೇವಿಯು, ಯತಃ=ಯಾವ ಶ್ರೀಹರಿಯ ದೆಶೆಯಿಂದ, ಪ್ರಸೂತಃ=ಪ್ರಾದುರ್ಭೂತಳಾಗಿ (ಸೃಷ್ಟಿಯಲ್ಲಿ ಅಭಿಮುಖೀಭೂತ ಳಾಗಿದ್ದಾಳೋ) ಯಚ್ಚ=ಯಾವ ಶ್ರೀಹರಿಯು, ತೋಯೇನ=ಆವಾವ ಜೀವಕರ್ಮದಿಂದ, ಅಥವಾ ತನ್ನ ವೀರ್ಯದಿಂದ, ಅಥವಾ ಜಲ ಮೊದಲಾದ ಪಂಚಭೂತಗಳಿಂದ, ಭೂಮ್ಯಾಂ=ಪೃಥಿವ್ಯಾದಿ ಲೋಕಗಳಲ್ಲಿ ಜೀವಾನ್=ಜೀವರನ್ನು ವ್ಯಸಸರ್ಜ=ಅನೇಕ ಪ್ರಕಾರ ಸೃಷ್ಟಿ ಮಾಡಿರುವನೋ, ಅಥವಾ ಲಕ್ಷ್ಮೀದೇವಿಯು ಪ್ರಾದುರ್ಭೂತಳಾಗಿ ಇತರಗಳಿಂದ ಮಿಶ್ರಿತವಾದ ಜಲದಿಂದ ಜೀವರನ್ನು ದೇಹಸಹಿತರನ್ನಾಗಿ ಸೃಷ್ಟಿಮಾಡಿರುವಳೋ, ಅಥವಾ ಯತಃ=ಯಾರ ದೆಶೆಯಿಂದ,. ಪ್ರಸೂತಾ=ಪರಾಧೀನವಿಶೇಷವನ್ನು ಹೊಂದಿರತಕ್ಕ ಲಕ್ಷ್ಮೀದೇವಿಯು, ತೋಯೇನ=ಕರ್ಮದಿಂದ, ಜೀವರನ್ನು ಭೂಮ್ಯಾಂ=ಪ್ರಕೃತಿಯಲ್ಲಿ ವಿಶೇಷವಾಗಿ ಸೃಷ್ಟಿಮಾಡಿರುವಳೋ, ಎಂದು ಸಮುದ್ರಶಾಯಿತ್ವ ಮೊದಲಾದ ವಿಷ್ಣುಲಿಂಗವನ್ನು ಹೇಳಿ ತದೇವ=ಆ ವಿಷ್ಣ್ವಾಖ್ಯ ವಸ್ತುವೇ ಋತಂ=ಯಥಾರ್ಥ ಜ್ಞಾನರೂಪವು, ಅಥವಾ ಮೊದಲು ತಿಳಿಯಲ್ಪಟ್ಟಂತೆ ಸದಾ ಇರತಕ್ಕುದು, ಅಥವಾ ಅಬಾಧಿತವಾದುದು, ಆ ವಿಷ್ಣ್ವಾಖ್ಯ ವಸ್ತುವೇ, ಜ್ಞಾನಿಗಳ ಮತದಲ್ಲಿ ಪರಬ್ರಹ್ಮನು ನಿಖಿಲಗುಣಪರಿಪೂರ್ಣನು ಎಂದು ಜ್ಞಾನಿಗಳು ಹೇಳುತ್ತಾರೆ. ಇತ್ಯಾದಿ ಶ್ರುತಿಯು (ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವನ್ನು ಪ್ರಯೋಗಿಸಿರುತ್ತದೆ.) ಪ್ರಸಿದ್ಧವು.

**ವಿಶೇಷಾಂಶ** ॥ (ಎ) ಯದ್ಯಪಿ ಬ್ರಹ್ಮಶಬ್ದವು ಅನ್ಯತ್ರ ರೂಢವಾಗಿದೆ. ಆದಾಗ್ಯೂ ಯಮಂತಸ್ಸಮುದ್ರೇ ಇದು ಮೊದಲಾದ ಶ್ರುತಿಯು ಜ್ಞಾನಿಗಳ ಮತದಲ್ಲಿ ತದೇವ ಬ್ರಹ್ಮ ಪರಮಂ ಎಂದು ಜ್ಞಾನಿಗಳು ಹೇಳುತ್ತಾರೆಂದು ಪ್ರಯೋಗಬಾಹುಲ್ಯರೂಪವಾದ ರೂಢಿಯನ್ನು ಹೇಳುತ್ತದೆ. ಆದಕಾರಣ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಪರಮಮುಖ್ಯವು. (ಬಿ) ಯದ್ಯಪಿ ಬ್ರಹ್ಮಶಬ್ದವು ಬೇರೆ ಕಡೆಗಳಲ್ಲಿಯೂ ರೂಢವಾಗಿದೆ. ಆದರೂ ವಿಷ್ಣುವಿನಲ್ಲಿಯೇ ಮುಖ್ಯವಾದುದು. ಬೇರೆಯವರಲ್ಲಿ ಅಜ್ಞರೂಢಿಯಿರುವುದು. ವಿಷ್ಣುವಿನಲ್ಲಿ ಆದರೂ ವಿದ್ವದ್ರೂಢಿಯು. ವಿದ್ವದ್ರೂಢಿ ಅವಿದ್ವದ್ರೂಢಿಗಳ ಮಧ್ಯದಲ್ಲಿ ಅಜ್ಞರೂಢಿಯಿಂದ ವಿದ್ವದ್ರೂಢಿಯೇ ಅತಿಮುಖ್ಯವಾದುದು. (ಸಿ) ರೂಢಿ, ಯೋಗ, ಯೋಗರೂಢಿ, ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ ಎಂದು ಲೋಕದಲ್ಲಿ ಏಳು ವೃತ್ತಿಗಳು ಪ್ರಸಿದ್ಧಗಳಾಗಿವೆ. ಬ್ರಹ್ಮನಲ್ಲಿ ಆದರೂ ಮಹಾಯೋಗ ವಿದ್ವದ್ರೂಢಿ ಎಂದು ಎರಡು ವೃತ್ತಿಗಳು.

**ಪೀಠಿಕೆ** ॥ ಸಮುದ್ರಸ್ಥತ್ವ ಮೊದಲಾದ ಲಿಂಗಗಳು ರುದ್ರಾದಿಗಳಲ್ಲಿಯೂ ಕಥಂಚಿತ್ ಕೂಡುವ ಪ್ರಯುಕ್ತ ತದೇವ ಎನ್ನುವಲ್ಲಿದ್ದ ತತ್ ಶಬ್ದದಿಂದ ವಿಷ್ಣುವೆಂದೇ ಹೇಗೆ ನಿಶ್ಚಯವಾಗುತ್ತದೆ ಎಂದರೆ—

**ಭಾಷ್ಯ ॥ ತನ್ನೋ ವಿಷ್ಣುರಿತಿ (ಮಹಾನಾಮ್ನೀ ೧) ವಚನಾದ್ವಿಷ್ಣುರೇವ ಹಿ ತತ್ರೋಚ್ಯತೇ ॥ ೫೦ ॥**

**ಭಾಷ್ಯಾರ್ಥ** ॥ (ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ ॥ ಯಾವ ಕಾರಣದಿಂದ (ನಾವು) ನಾರಾಯಣನನ್ನು ತಿಳಿಯುತ್ತೇವೋ, ವಾಸುದೇವನನ್ನು ಧ್ಯಾನಮಾಡುತ್ತೇವೋ,) ಆದುದರಿಂದ ನಮ್ಮನ್ನು ಶುಭವನ್ನು ಕುರಿತು ವಿಷ್ಣುವು (ಪ್ರೇರಿಸಲಿ) ಎನ್ನುವ ವಿಷ್ಣು ಗಾಯತ್ರೀರೂಪವಾದ ವಚನದೆಸೆಯಿಂದ ವಿಷ್ಣುವೇ ತದೇವ ಎನ್ನುವ ಶ್ರುತಿಯಲ್ಲಿ ತತ್ ಶಬ್ದದಿಂದ ಪ್ರತಿಪಾದಿಸಲ್ಪಡುತ್ತಾನೆ.

ವಿಶೇಷಾಂಶ ॥ (ಎ) ನಿರವಕಾಶವಾದ (ಅರ್ಥಾಂತರ ರಹಿತವಾದ) ವಿಷ್ಣುಶಬ್ದರೂಪವಾದ ಶ್ರುತಿಯಿಂದಲೇ ವಿಷ್ಣುವೆಂದು ನಿಶ್ಚಯವಾಗುತ್ತದೆ. (ಬಿ) (೧) ಸಪ್ತಾ ರ್ಧಗರ್ಭಾ ಭುವನಸ್ಯ ರೇತೋ । (೨) ಋಚೋ ಅಕ್ಷರೇ ಪರಮೇ ವ್ಯೋಮನ್ । (೩) ಅಹಂ ಸುವೇ ಪಿತರಮಸ್ಯ ಮೂರ್ಧನ್ । (೪) ಸಮುದ್ರೇಽಂತಃ ಕವಯೋ ವಿಚಕ್ಷತೇ । ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ವಿಷ್ಣುವನ್ನೇ (೫) ಅಂಭಸ್ಯ ಪಾರೇಭುವನಸ್ಯ ಮಧ್ಯೇ । ಇದು ಮೊದಲಾದ ತೈತ್ತಿರೀಯ ಶ್ರುತಿಯು (೬) ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ । (೭) ಯಮಂತಃ ಸಮುದ್ರೇ । (೮) ಯತಃ ಪ್ರಸೂತಾ ಎಂದು ಯತ್ ಶಬ್ದಗಳಿಂದ, ಪರಾಮರ್ಶೆಮಾಡಿ (೯) ವಿವೇಶ ಭೂತಾನಿ ಚರಾಚರಾಣಿ । ಎಂದು ವ್ಯಾಪ್ತಿಯನ್ನು ಹೇಳಿ ವಿಷ್ಣುಶಬ್ದಯೋಗದಿಂದಲೂ ಅನುವಾದ ಮಾಡಿ (೧೦) ತದೇವ ಬ್ರಹ್ಮ ಎಂದು ಹೇಳಿರುತ್ತಾರೆ. ಅಲ್ಲದೆ (೧೧) ತನ್ನೋ ವಿಷ್ಣುಃ ಎಂದು ಸ್ಪಷ್ಟವಾಗಿಯೂ ಹೇಳಿರುತ್ತಾರೆ.

ಟೀಕೆ ॥ ಉತ್ತರವಾಕ್ಯದಲ್ಲಿ ವಿಷ್ಣು ಮೊದಲಾದ ಶಬ್ದಗಳಿದ್ದ ಪ್ರಯುಕ್ತ ವಿಷ್ಣುವೇ ಇಲ್ಲಿ ಹೇಳಲ್ಪಟ್ಟ ಬ್ರಹ್ಮನು ಎಂದು ಹೇಳುವುದಾದರೆ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ । ಇದು ಮೊದಲಾದ ರುದ್ರಾದಿಗಳನ್ನು ಹೇಳತಕ್ಕ ಶಬ್ದವಿದ್ದ ಪ್ರಯುಕ್ತ ರುದ್ರಾದಿಗಳಿಗೂ ಮುಖ್ಯಬ್ರಹ್ಮತ್ವವು ಬರಬೇಕಾಯಿತೆಂದರೆ—

ಭಾಷ್ಯ ॥ ನ ಚೇತರಶಬ್ದಾತ್ತತ್ಪ್ರಾಪ್ತಿಃ ॥ ೫೧ ॥

ಭಾಷ್ಯಾರ್ಥ ॥ ವಿಷ್ಣುವಿನಿಂದ ಇತರರಾದ ರುದ್ರಾದಿಗಳನ್ನು ಹೇಳತಕ್ಕ ರುದ್ರ, ದಂತಿ, ನಂದಿ, ದುರ್ಗಿ ಮೊದಲಾದ ಶಬ್ದಗಳ ಸಾಮರ್ಥ್ಯದಿಂದ ರುದ್ರಾದಿಗಳಿಗೂ ಮುಖ್ಯಬ್ರಹ್ಮತ್ವವು ಪ್ರಾಪ್ತಿ ಯಾಗುವುದಿಲ್ಲ.

ಟೀಕೆ ॥ ರುದ್ರಾದಿಗಳಿಗೆ ಮುಖ್ಯಬ್ರಹ್ಮತ್ವವು ಏಕೆ ಪ್ರಾಪ್ತಿಯಾಗುವುದಿಲ್ಲವೆಂದರೆ ರುದ್ರಾದಿಗಳನ್ನು ಹೇಳತಕ್ಕ ರುದ್ರಾದಿಶಬ್ದಗಳೂ ವಿಷ್ಣುವಿನಲ್ಲಿಯೇ ಮುಖ್ಯಗಳಾಗಿರುತ್ತವೆ. ಅಲ್ಲದೆ ವಿಷ್ಣುವೇ ಮುಖ್ಯವಾಗಿ ಸರ್ವಶಬ್ದಗಳಿಂದಲೂ ವಾಚ್ಯನು ಎನ್ನುವ ವಿಷಯದಲ್ಲಿ ಶ್ರುತಿಯನ್ನುದಾಹರಿಸುತ್ತಾರೆ.

ಭಾಷ್ಯ ॥ ★ನಾಮಾನಿ ವಿಶ್ವಾಭಿ ನ ಸಂತಿ ಲೋಕೇ ಯದಾವಿರಾಸೀದನೃತಸ್ಯ ಸರ್ವಂ ।
ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ
ಪರಮಮುದಾಹರಂತೀತಿ ಭಾಲ್ಲವೇಯ ಶ್ರುತಿಃ (ತೇಃ) ॥ ೫೨ ॥

ಭಾಷ್ಯಾರ್ಥ ॥ ಯಾವ ಕಾರಣದೆಸೆಯಿಂದ ಅನೃತಸ್ಯ=ಋತಶಬ್ದವಾಚ್ಯನಾದ ವಿಷ್ಣುವಿನಿಂದ ಭಿನ್ನವಾದ ಜಗತ್ತಿನ ನಾಮಪ್ರವೃತ್ತಿನಿಮಿತ್ತವೆಲ್ಲವೂ ಯಾವ ಶ್ರೀಹರಿಯಿಂದಲೇ ಉತ್ಪನ್ನವಾಯಿತೋ ಆದಕಾರಣ ಎಲ್ಲಾ ನಾಮಗಳೂ ರುದ್ರಾದಿಜಗತ್ತಿನಲ್ಲಿ ಮುಖ್ಯವಾಗಿ ವಾಚಕಗಳಾಗಿ ಇರುವುದಿಲ್ಲ.

★ ಏತೇಷಾಂ ದೇವಾನಾಂ ಏತೇಷಾಂ ಕಾಲಾನಾಂ ಏತಾಷಾಂ ನಾಡೀನಾಂ ಅನ್ಯಸ್ಯ ಸರ್ವಸ್ಯ ಯಾನಿ ನಾಮಾನಿ ತಾನಿ ನಾರಾಯಣಸ್ಯ ನಾಮಾನಿ ॥ ದೇವತೆಗಳದ್ದು ಕಾಲಗಳದ್ದು ನಾಡಿಗಳದ್ದು ಇತರ ಎಲ್ಲಾ ವಸ್ತುಗಳ ನಾಮಗಳು ನಾರಾಯಣನ ನಾಮಧೇಯಗಳೇ ಎಂದು ನಾರಾಯಣಶ್ರುತಿಯು.

(ನಿತ್ಯಗಳಾದ ನಾಮಗಳಿಗೆ ಅನಿತ್ಯಪ್ರವೃತ್ತಿಯುಳ್ಳವರು ಮುಖ್ಯವಾಗಿ ವಾಚ್ಯರಾಗಲಾರರು.) (ಹಾಗಾದರೆ ಆ ನಾಮಧೇಯಗಳು ಯಾರಲ್ಲಿ ಮುಖ್ಯಗಳೆಂದರೆ) ಎಲ್ಲಾ ನಾಮಧೇಯಗಳು ಯಾರನ್ನು ಮುಖ್ಯವಾಗಿ ವಾಚಕಗಳಾಗಿ ಪ್ರವೇಶ ಮಾಡುತ್ತಾವೋ (ಹೇಳುತ್ತಾವೋ) ಆ ಪರಮಾತ್ಮನನ್ನು ದೇಶಕಾಲಗಳಿಂದ ಅಪರಿಚ್ಛಿನ್ನಪ್ರವೃತ್ತಿನಿಮಿತ್ತವುಳ್ಳ ವಿಷ್ಣುವನ್ನಾಗಿಯೇ (ವಿದ್ವಾಂಸರು) ಹೇಳುತ್ತಾರೆ. ಅಥವಾ ಎಲ್ಲಾ ನಾಮಗಳು ಮುಖ್ಯವಾಗಿ ಲೋಕದಲ್ಲಿ ವಾಚಕಗಳಾಗುವುದಿಲ್ಲ. ವಿಷ್ಣುವಿನಿಂದ ಇತರವಾದ ಜಗತ್ತಿನ ಉತ್ಪತ್ತಿ ನಾಶ ಮೊದಲಾದದೆಲ್ಲವೂ ಯಾವ ಶ್ರೀಹರಿಯಿಂದಲೇ ಆಗುವುದೋ ಎಲ್ಲಾ ನಾಮಗಳೂ ಯಾವ ಶ್ರೀಹರಿಯನ್ನೇ ಚೆನ್ನಾಗಿ ಹೇಳುತ್ತಾವೋ ಅಂತಹ ವಿಷ್ಣುವನ್ನೇ ಸರ್ವೋತ್ತಮನನ್ನಾಗಿ ಹೇಳುತ್ತಾರೆ. ಪ್ರಸಿದ್ಧವು ಎಂದು ಭಾಲ್ಲವೇಯ ಶ್ರುತಿಯು.

ಪೀಠಿಕೆ ॥ ಹಾಗಾದರೆ ವಿಷ್ಣುವಿಗೇನೇ ಶ್ರುತ್ಯಂತರಸಿದ್ಧಗಳಾದ ಸರ್ವನಾಮಧೇಯಗಳೂ ಇದ್ದಪ್ರಯುಕ್ತ ವಿಷ್ಣುವೇ ಇಲ್ಲಿ ಹೇಳಲ್ಪಟ್ಟ ಬ್ರಹ್ಮನು ಎಂದು ಹೇಳುವುದಾದರೆ ರುದ್ರಾದಿಗಳಿಗೂ ವಿಷ್ಣು ಮೊದಲಾದ ಶಬ್ದಗಳಿಂದ ವಾಚ್ಯತ್ವವಿದ್ದಪ್ರಯುಕ್ತ ರುದ್ರಾದಿಗಳೇ ಇಲ್ಲಿ ಹೇಳಲ್ಪಟ್ಟ ಬ್ರಹ್ಮನೆಂದು ಏಕೆ ಆಗಲಾರದೆಂದರೆ—

**ಭಾಷ್ಯ ॥ ಯೋ ದೇವಾನಾಂ ನಾಮಧಾ ಏಕ ಏವ ತಂ**

**ಸಂಪ್ರಶ್ನಂ ಭುವನಾಯಂತ್ಯನ್ಯಾ** (ಋ.ಸಂ.೧೦, ೮೨, ೩ )

**ಇತ್ಯೇವಶಬ್ದಾನ್ನಾನ್ಯೇಷಾಂ (ನ ಚಾನ್ಯೇಷಾಂ) ಸರ್ವನಾಮತಾ ॥ ೫೩ ॥**

ಭಾಷ್ಯಾರ್ಥ ॥ ಯಾವ ಶ್ರೀಹರಿಯು ಒಬ್ಬನೇ ಬ್ರಹ್ಮ ರುದ್ರ ಮೊದಲಾದ ದೇವತೆಗಳ ನಾಮಧಾರಕನೋ (ಇತರರು ಸರ್ವಥಾ ಎಲ್ಲ ದೇವತೆಗಳ ನಾಮಧಾರಕರಲ್ಲ) ಅಂತಹ ಪ್ರಶ್ನೆಕರ್ತನಾದ ಶ್ರೀಹರಿಯನ್ನು ಇತರ ಪ್ರಾಣಿಗಳು ಮುಕ್ತಿಯಲ್ಲಿಯೂ ಪ್ರಲಯಕಾಲದಲ್ಲಿಯೂ ಹೊಂದುತ್ತಾರೆ. ಹೀಗೆ ಈ ವಾಕ್ಯದಲ್ಲಿದ್ದ ಏವ ಶಬ್ದದೆಸೆಯಿಂದ ರುದ್ರಾದಿಗಳಿಗೆ ವಿಷ್ಣ್ವಾದಿ ಸರ್ವಶಬ್ದವಾಚ್ಯತ್ವವು ಇಲ್ಲ. (ಆದುದರಿಂದಲೇ ತನ್ನೋ ವಿಷ್ಣುಃ ಇತ್ಯಾದಿಗಳಲ್ಲಿ ಇತರರಿಗೆ ಪ್ರಾಪ್ತಿ ಇಲ್ಲ. ಆದುದರಿಂದಲೇ ರುದ್ರಾದಿಗಳಿಗೆ ಬ್ರಹ್ಮತ್ವವು ಪ್ರಾಪ್ತವಾಗುವುದಿಲ್ಲ)

ಪೀಠಿಕೆ ॥ ವಿಶ್ವಕರ್ಮಸೂಕ್ತವಾದ ಪ್ರಯುಕ್ತ ಇಲ್ಲಿಯೂ ಯತ್ ಶಬ್ದದಿಂದ ವಿಷ್ಣುವೆಂದು ಹೇಗೆ ಸಿದ್ಧವಾಗುತ್ತದೆ. ವಿಶ್ವಕರ್ಮಾ ಎನ್ನುವ ಶ್ರುತಿಬಲದಿಂದ ಈ ಸೂಕ್ತವು ವಿಷ್ಣುವಿನಿಂದ ಇತರರಾದ ವಿಶ್ವಕರ್ಮಾದಿಗಳ ಪರವೇ ಆಗಬಹುದು. ಆದಕಾರಣ ಅಲ್ಲಿದ್ದ ಯತ್ ಶಬ್ದವೂ ವಿಶ್ವಕರ್ಮಾದಿಗಳ ಪರವೆನ್ನುವದೇ ಉಚಿತವು ಎಂದರೆ—

**ಭಾಷ್ಯ ॥ ಅಜಸ್ಯ ನಾಭಾವಧ್ಯೇ ಕಮರ್ಪಿತಂ ಯಸ್ಮಿನ್ವಿಶ್ವಾನಿ**

**ಭುವನಾನಿ ತಸ್ಥುಃ** (ಋ.ಸಂ. ೧೦.೮೨.೬) **ಇತಿ ಹಿ ವಿಷ್ಣೋರ್ಲಿಂಗಮ್ ॥ ೫೪ ॥**

ಭಾಷ್ಯಾರ್ಥ ॥ ಉತ್ಪತ್ತಿರಹಿತನಾದ ಶ್ರೀವಿಷ್ಣುವಿನ ನಾಭಿಯಲ್ಲಿ ಒಂದು ಪದ್ಮಾಖ್ಯವಸ್ತುವು ಉದ್ಭೂತವಾಗಿಯದೆ. ಯಾವ ನಾಭಿಕಮಲದಲ್ಲಿ ಎಲ್ಲಾ ಹದಿನಾಲ್ಕು ಲೋಕಗಳು

ಆಶ್ರಯಿಸಿಕೊಂಡಿರುತ್ತಾರೋ ಎಂದು ಯಾವ ಕಾರಣದಿಂದ ಈ ವಾಕ್ಯದಲ್ಲಿ ವಿಷ್ಣುವಿಗೆ ಪದ್ಮನಾಭತ್ವರೂಪವಾದ ಅಸಾಧಾರಣ ಧರ್ಮವು (ಶ್ರುತವಾಗಿಯದೋ) ಆದುದರಿಂದ ಯತ್ ಶಬ್ದದಿಂದ ಹೇಳಲ್ಪಟ್ಟವನು ವಿಷ್ಣುವೇ.

**ವಿಶೇಷಾಂಶ ॥** (ಎ) ಶ್ರುತಿಯ ದೆಶೆಯಿಂದ ಲಿಂಗವು ದುರ್ಬಲವಾದುದರಿಂದ ಪ್ರಕೃತ ಪದ್ಮನಾಭತ್ವರೂಪಲಿಂಗದಿಂದ ಹೇಗೆ ನಿರ್ಣಯವಾಗುತ್ತದೆಂದರೆ: ಸ್ವಭಾವತಃ ಲಿಂಗದ್ದೆಶೆಯಿಂದ ಶ್ರುತಿಯು ಪ್ರಬಲವೇ ಆದರೂ ವಿಶ್ವಕರ್ಮಶ್ರುತಿಯು ಸಾವಕಾಶವಾಗಿಯದೆ. ಅಂದರೆ ನಾಮಾನಿ ಸರ್ವಾಣಿ ಎಂದು ಹೇಳಿದ ಪ್ರಕಾರ ವಿಷ್ಣುಪರವೇ ಆಗಲಿಕ್ಕೆ ಯೋಗ್ಯವಾಗಿಯದೆ. ಪದ್ಮನಾಭತ್ವ ರೂಪಲಿಂಗವಾದರೂ ನಿರವಕಾಶವಾಗಿಯದೆ. ಅಂದರೆ ಸರ್ವಥಾ ಅರ್ಥಾಂತರಪರವಾಗಿ ಮಾಡಲಿಕ್ಕೆ ಬಾರದಿರುವುದು. ಆದುದರಿಂದ ಸಾವಕಾಶವಾದ ವಿಶ್ವಕರ್ಮಶ್ರುತಿಗೆ ನಿರವಕಾಶವಾದ ಲಿಂಗದಿಂದ ಬಾಧವು ಕೂಡುತ್ತದೆ. ಅಂತೂ ಪ್ರಸಿದ್ಧವಾದ ವಿಶ್ವಕರ್ಮರೂಪನಾದ ಅರ್ಥವನ್ನು ಬಿಟ್ಟು ವಿಷ್ಣು ಪರವೆನ್ನುವ ನಿರ್ಣಯವು ಆಗುತ್ತದೆ.

**ಪೀಠಿಕೆ ॥** ನಾಭಿಯಲ್ಲಿರತಕ್ಕುದು ಪದ್ಮವೇ ಏಕ ಆಗಬೇಕು. ಬೇರೆ ಎಂದು ಏಕೆ ಹೇಳಬಾರದು, ಎಂದರೆ—

**ಭಾಷ್ಯ ॥ ನ ಚ ಪ್ರಸಿದ್ಧಾರ್ಥಂ ವಿನಾನ್ಯೋಽರ್ಥೋ ಯುಜ್ಯತೇ ॥ ೫೫ ॥**

**ಭಾಷ್ಯಾರ್ಥ ॥** ನಾಭ್ಯರ್ಪಿತವಾದ ವಿಶ್ವಾಧಾರವಾದ ಪದಾರ್ಥವು ಪ್ರಸಿದ್ಧವಾದ ಪದ್ಮಾಖ್ಯವಾದ ಅರ್ಥವೇ ಅಲ್ಲದೆ ಬೇರೆ ಅರ್ಥವೆನ್ನುವುದು ಕೂಡುವುದಿಲ್ಲ. ಅಥವಾ ವಿಷ್ಣುವಿನ ನಾಭಿಯಲ್ಲಿರತಕ್ಕುದೆಂದು ಪ್ರಸಿದ್ಧವಾದ ಪದ್ಮಾಖ್ಯವಾದ ಅರ್ಥವು ಹೊರತು ಬೇರೆ ಅರ್ಥ ಎನ್ನುವುದು ಕೂಡುವದಿಲ್ಲ. (ಪ್ರಸಿದ್ಧಿಯಿಂದ ಬಾಧವು ಬರುವುದು) (ವಿಶ್ವಕರ್ಮಶ್ರುತಿಯಂತೆ ಪದ್ಮನಾಭತ್ವ ಲಿಂಗವೂ ಕೂಡ ಇತರರಿಗೆ ಏಕೆ ಆಗ ಲಾರದೆಂದರೆ—) ಪದ್ಮನಾಭನೆಂದು ಪ್ರಸಿದ್ಧನಾದ ಶ್ರೀಹರಿಯನ್ನು ಹೊರತು ಮತ್ತೊಬ್ಬ ಪದ್ಮನಾಭನೆನ್ನುವುದು ನಾಭಿಪದ್ಮವುಳ್ಳವನೆಂಬುದು ಕೂಡುವುದಿಲ್ಲ (ಪ್ರಸಿದ್ಧಿಯಿಂದ ಬಾಧವು ಬರುವುದು.)

**ಪೀಠಿಕೆ ॥** ಕೇವಲ ಪ್ರಸಿದ್ಧಿಬಲದಿಂದಲೇ ಈ ಶ್ರುತ್ಯುಕ್ತವಾದುದು ಪದ್ಮವು ಪದ್ಮನಾಭನು ಹರಿಯು ಎಂದು ನಿಶ್ಚಿತವಾಗುತ್ತದೆಂದಲ್ಲ. ಮತ್ತೆ ಅಜಸ್ಯ ಎನ್ನುವ ಶ್ರುತಿಗೆ ಹೀಗೆಯೇ ವ್ಯಾಖ್ಯಾನ ಮಾಡತಕ್ಕ ಸ್ಮೃತಿಯೂ ಇದೆ ಎನ್ನುತ್ತಾರೆ.

**ಭಾಷ್ಯ ॥ ಅಜಸ್ಯ ನಾಭಾವಿತಿ ಯಸ್ಯ ನಾಭೇರಭೂಚ್ಚುತೇಃ**
**ಪುಷ್ಕರಂ ಲೋಕಸಾರಂ । ತಸ್ಮೈ ನಮೋ ವ್ಯಸ್ತಸಮಸ್ತ**
**ವಿಶ್ವವಿಭೂತಯೇ ವಿಷ್ಣವೇ ಲೋಕಕರ್ತ್ರೆ ಇತಿ ಚ ಸ್ಕಾಂದೇ ॥ ೫೬ ॥**

**ಭಾಷ್ಯಾರ್ಥ ॥** ಯಾವ ನಾಭಿಯದೆಸೆಯಿಂದ ಸರ್ವಲೋಕಗಳಿಗೆ ಆಧಾರಭೂತವಾದ ಕಮಲವು ಹುಟ್ಟಿಯದೋ ಎಂದು ಅಜಸ್ಯ ನಾಭೌ ಎನ್ನುವ ಶ್ರುತಿಯ ಸಕಾಶದ್ದೆಸೆಯಿಂದ

(ತಿಳಿಯಲ್ಪಡುತ್ತದೆ.) ಅಂತಹ ಜೀವಾದಿಗಳಲ್ಲಿ ವಿಸ್ತೃತಗಳಾದ ಜಡಾದಿಗಳಲ್ಲಿ ಸಂಕುಚಿತಗಳಾದ ಜಗತ್ತಿನ ಸೃಷ್ಟಿ ಮೊದಲಾದ ವ್ಯಾಪಾರಗಳುಳ್ಳ ಅಥವಾ ಯಾರಿಂದ ಎಲ್ಲಾ ಜಗತ್ತುಗಳ ಸೃಷ್ಟಿಮೊದಲಾದ ವ್ಯಾಪಾರಗಳು ವಿಸ್ತೃತಗಳಾಗಿರುತ್ತವೋ ಅಂತಹ ಅಥವಾ ಯಾರಿಂದ ಜಗದ್ವ್ಯಾಪಾರಗಳು ವಿಸ್ತೃತಗಳೂ ಸಂಕುಚಿತಗಳೂ ಆಗುತ್ತವೋ ಅಂತಹ ಸರ್ವಲೋಕಗಳಿಗೂ ಸ್ವಾಮಿಯಾದ ವಿಷ್ಣುವಿಗೋಸ್ಕರ ನಮಸ್ಕಾರವು. ಹೀಗೆಯೇ ಸ್ಕಾಂದಪುರಾಣದಲ್ಲಿ ಯಾವ ಕಾರಣದಿಂದ ಹೇಳಲ್ಪಟ್ಟಿಯದೋ, ಆದಕಾರಣ ಅಜಸ್ಯ ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟದ್ದ ಕಮಲವೇ, ಪದ್ಮನಾಭನು ಹರಿಯೇ ಎಂದು ಸಿದ್ಧವಾಗುತ್ತದೆ. ಈ ವಿಷಯವು ಪ್ರಸಿದ್ಧಿಬಾಧದಿಂದ ಮಾತ್ರ ಸಿದ್ಧವಾಗುವುದಲ್ಲ. ಈ ಸ್ಕಾಂದಪುರಾಣದಿಂದಲೂ ಸಿದ್ಧವಾಗುತ್ತದೆ.

**ವಿಶೇಷಾಂಶ ॥** ಜೀವರಲ್ಲಿ ಸೃಷ್ಟಿ ಮೊದಲಾದವುಗಳು ಎಂಟೂ ಇವೆ. ಜಡದಲ್ಲಿ ಆದರೂ ಜ್ಞಾನ ಅಜ್ಞಾನ ಬಂಧ ಮೋಕ್ಷ ಬಿಟ್ಟು ಸೃಷ್ಟಿ ಮೊದಲಾದುದು ನಾಲ್ಕೇ.

**ಪೀಠಿಕೆ ॥** ನಿರವಕಾಶವಾದ ಕೇವಲ ಪದ್ಮನಾಭತ್ವಲಿಂಗದಿಂದ ವಿಶ್ವಕರ್ಮಸೂಕ್ತದಲ್ಲಿ ಹೇಳಲ್ಪಟ್ಟವನು ವಿಷ್ಣುವೆಂದಲ್ಲ. ಮತ್ತೆ ಸಮಾಖ್ಯೆಯಿಂದ ಯುಕ್ತವಾದ ಲಿಂಗದಿಂದಲೂ ಪರೋ ದಿವಾ ಎನ್ನುವ ವಿಶ್ವಕರ್ಮಶ್ರುತಿಯು ವಿಷ್ಣುಪರವೆನ್ನುತ್ತಾರೆ.

**ಭಾಷ್ಯ ॥ ಪರೋ ದಿವಾ ಪರ ಏನಾ ಪೃಥಿವ್ಯಾ** (ಋ.ಸಂ.೧೦, ೮೨,೫)

**ಇತಿ ಚ ಸಮಾಖ್ಯಾ ಶ್ರುತೌ ॥ ೫೭ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ವಿಶ್ವಕರ್ಮಸೂಕ್ತದಲ್ಲಿರತಕ್ಕ ಪರೋ ದಿವಾ ಪರ ಏನಾ ಪೃಥಿವ್ಯಾ ಎನ್ನುವ ಉಕ್ತಿಗೆ ಸಮಾನವಾದ (ಪರೋ ದಿವಾ ಎನ್ನುವ ಉಕ್ತಿಯು ಅಂಭೃಣೀ ಸೂಕ್ತದಲ್ಲಿದೆಯೋ) ಆದುದರಿಂದ ವಿಷ್ಣುವೇ ವಿಶ್ವಕರ್ಮ ಸೂಕ್ತದಲ್ಲಿ ಹೇಳಲ್ಪಟ್ಟವನು.

**ವಿಶೇಷಾಂಶ ॥** (ಎ) ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸು ರೈರ್ಯದಸ್ತಿ । ದ್ಯುಶಬ್ದವಾಚ್ಯಳಾದ ಲಕ್ಷ್ಮೀದೇವಿಯಿಂದಲೂ ಉತ್ತಮನು. ಈ ಪೃಥಿವ್ಯಭಿಮಾನಿನಿಯಾದ ಭೂದೇವಿ ಯಿಂದಲೂ ಉತ್ತಮನು. ದೇವತೆಗಳಿಂದಲೂ ಅಸುರರಿಂದಲೂ ಉತ್ತಮನು. ಹೆಚ್ಚು ಹೇಳಿ ಏನು ಪ್ರಯೋಜನವು. ಯಾವುದು ಯಾವುದು ಉಂಟೋ ಅದರಿಂದೆಲ್ಲದರಿಂದಲೂ ಉತ್ತಮನು ಎಂದು ವಿಶ್ವಕರ್ಮ ಸೂಕ್ತದಲ್ಲಿ ಶ್ರುತವಾಗಿದೆ. (ಬಿ) ಇದಕ್ಕೆ ಅಂಭೃಣೀಸೂಕ್ತದಲ್ಲಿ ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವ ಎಂದು ಸಮಾಖ್ಯಾಶ್ರುತಿಯಿದೆ. ಆ ವಿಷ್ಣುವು ದ್ಯಾವಾ ಪೃಥಿವಿಗಳಿಂದ ಮೀರಿದವನು. ನಾನಾದರೂ ಮಹಿಮೆಯಿಂದ ಪರಿಮಿತಳಾಗಿರುತ್ತೇನೆ ಎಂದು ಲಕ್ಷ್ಮೀವಾಕ್ಯವು. ಈ ಸೂಕ್ತಪ್ರವರ್ತಕಳಾದ ಅಂಭೃಣೀದೇವಿಯು ಲಕ್ಷ್ಮೀರೂಪಳು.

**ಪೀಠಿಕೆ ॥** ಸಮಾಖ್ಯಾಶ್ರುತಿಯಲ್ಲಿಯೇ ವಿಷ್ಣುವು ವಾಚ್ಯನು ಎನ್ನುವುದು ಹೇಗೆ ಸಿದ್ಧವಾಗುತ್ತದೆ ಎಂದರೆ—

**ಭಾಷ್ಯ ॥ ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ (ಋ.೧೦.೧೨೫.೫) ಇತ್ಯುಕ್ತ್ವಾ ಮಮ ಯೋನಿರಪ್ಸ್ವ೦ ೧ ತಸ್ಸಮುದ್ರ (ಋ.೧೦.೧೨೫.೭) ಇತ್ಯಾಹ ॥ ೫೮ ॥**

**ಭಾಷ್ಯಾರ್ಥ ॥** (ನಾನು) ರುದ್ರಪದವಿಗೆ ಯೋಗ್ಯನಾದ ಯಾವ ಯಾವ ಜೀವನನ್ನು ರುದ್ರನನ್ನಾಗಿ ಮಾಡಲಿಕ್ಕೆ ಇಚ್ಛಿಸುತ್ತೇನೋ ಅವರವರನ್ನು ರುದ್ರನನ್ನಾಗಿ ಮಾಡುತ್ತೇನೆ. ಹೀಗೆಯೇ ಬ್ರಹ್ಮಪದವಿಯೋಗ್ಯನಾದ ಯಾವ ಜೀವನನ್ನು ಬ್ರಹ್ಮನನ್ನಾಗಿ ಮಾಡಲಿಕ್ಕೆ ಇಚ್ಛಿಸುತ್ತೇನೋ ಅಂತಹವನನ್ನು ಬ್ರಹ್ಮನನ್ನಾಗಿ ಮಾಡುತ್ತೇನೆ. ಋಷಿಪದವಿಗೆ ಯೋಗ್ಯನಾದವನನ್ನು ಋಷಿಯನ್ನಾಗಿಯೂ ಜ್ಞಾನವನ್ನು ಹೊಂದಲಿಕ್ಕೆ ಯೋಗ್ಯನಾದ ಜೀವನನ್ನು ಜ್ಞಾನಿಯನ್ನಾಗಿಯೂ ಮಾಡುತ್ತೇನೆ. ಈ ವಾಕ್ಯದಿಂದ (ಲಕ್ಷ್ಮೀದೇವಿಯು ಬ್ರಹ್ಮಾದಿ ದೇವತೆಗಳು ತನ್ನ ಅಧೀನದಲ್ಲಿರತಕ್ಕವರೆಂದು) ಹೇಳಿ (ಆದಾಗ್ಯೂ ತನಗೆ ಸ್ವಾತಂತ್ರ್ಯವಿಲ್ಲವೆನ್ನುತ್ತಾಳೆ.) ನನಗೆ ಕಾರಣೀಭೂತ ನಾದವನು ಸಮುದ್ರದಲ್ಲಿ ಇರುತ್ತಾನೆ ಎನ್ನುವ ವಾಕ್ಯದಿಂದ ಹೇಳಿರುತ್ತಾಳೆ.

**ವಿಶೇಷಾಂಶ ॥** (ಎ) ಯಾವ ಕಾರಣದಿಂದ **ಪರೊ ದಿವಾ** ಎನ್ನುವ ಸಮಾಖ್ಯಾಶ್ರುತಿಯಲ್ಲಿ **ಮೇತ್ಯಾಖ್ಯಾ ಮಾಖ್ಯಾ— ತಯಾ ಸಹಿತಾ ಸಮಾಖ್ಯಾ, ಪ್ರಕೃತಿ ವಾರ್ವ ಸಮಾಸಮಾ** ಎನ್ನುವ ಮಾಧ್ಯಂದಿನ ಶ್ರುತಿಯಲ್ಲಿ ಸಮಾಸಮತ್ವವನ್ನು ಹೇಳಿದ ಪ್ರಕಾರ ಪ್ರಕೃತಳಾದ ಲಕ್ಷ್ಮೀದೇವಿಯು **ಯಂ ಕಾಮಯೇ** ಇದು ಮೊದಲಾದ ವಾಕ್ಯಗಳಿಂದ ಬ್ರಹ್ಮಾದಿ ದೇವತೆಗಳು ತನ್ನ ಅಧೀನದಲ್ಲಿರತಕ್ಕವರೆಂದು ಹೇಳಿ **ಮಮ ಯೋನಿಃ** ಎನ್ನುವ ವಾಕ್ಯದಿಂದ ವಿಷ್ಣುವು ತನಗೆ ಕಾರಣೀಭೂತನೆಂದೂ ಸಮುದ್ರದಲ್ಲಿರತಕ್ಕವನೆಂದೂ ಹೇಳಿರುತ್ತಾಳೋ ಆದುದರಿಂದ ವಿಷ್ಣುವೇ ಸಮಾಖ್ಯಾಶ್ರುತಿಯಪ್ರತಿಪಾದ್ಯನು. (ಬಿ) ಈ ಸಮಾಖ್ಯೆಯಿಂದ ವಿಶ್ವಕರ್ಮ ಸೂಕ್ತದಲ್ಲಿ ಹೇಳಿಸಿಕೊಳ್ಳಲ್ಪಟ್ಟವನು ವಿಷ್ಣುವೇ. ಪ್ರಸಿದ್ಧ ವಿಶ್ವಕರ್ಮನಲ್ಲ. (ಸಿ) ಪತಿಗಳ ನಾಮವನ್ನು ಹೇಳಬಾರದು ಎಂದು ಇದ್ದ ಪ್ರಯುಕ್ತ **ನಾರಾಯಣಃ** ಎಂದು ಹೇಳದೆ **ಮಮ ಯೋನಿಃ** ಎಂದು ಹೇಳಿರುವಳು.

**ಪೀಠಿಕೆ ॥** ಹಾಗಾದರೆ **ತಪ್ಯಮಾನಾಯ ಸಲಿಲೇ** ಎಂದು ಭಾರತದಲ್ಲಿ ಹೇಳಿದ್ದರಿಂದ ಸಮುದ್ರದಲ್ಲಿತಕ್ಕವನು ರುದ್ರನೆಂದೇ ಏಕೆ ಹೇಳಬಾರದು. ಉಗ್ರಶಬ್ದವಾಚ್ಯನಾದ ರುದ್ರನು ಲಕ್ಷ್ಮೀದೇವಿಯ ಅಧೀನನು. ಎಂದು ಹೇಳಿದ್ದರಿಂದ ವಿರೋಧವು ಬರುತ್ತದೆಂದು ಹೇಳಕೂಡದು. ಉಗ್ರಶಬ್ದದಿಂದ ಒಬ್ಬ ಕ್ರೂರ ಪುರುಷನನ್ನು ಇಟ್ಟುಕೊಳ್ಳಬಹುದು ಎಂದರೆ—

**ಭಾಷ್ಯ ॥ ಉಗ್ರೋ ರುದ್ರಃ । ಸಮುದ್ರೇಂತರ್ನಾರಾಯಣಃ । ಪ್ರಸಿದ್ಧತ್ವಾತ್ತೂಚಿತತ್ವಾಚ್ಚಾಸ್ಯಾರ್ಥಸ್ಯ ॥ ೫೯ ॥**

**ಭಾಷ್ಯಾರ್ಥ ॥** ಉಗ್ರನೆಂದು ಹೇಳಲ್ಪಟ್ಟವನು ರುದ್ರನೇ ಆಗಬೇಕು. ಸಮುದ್ರ ದಲ್ಲಿರತಕ್ಕವನು ನಾರಾಯಣನೇ ಆಗಬೇಕು. ರುದ್ರನಲ್ಲಿ ಉಗ್ರಶಬ್ದವಾಚ್ಯತ್ವ ರೂಪವಾದ ಅರ್ಥವು **ಉಗ್ರಃ ಕಪರ್ದೀ ಶ್ರೀಕಂಠಃ** ಇದು ಮೊದಲಾದ ಕೋಶಗಳಲ್ಲಿ ಪ್ರಸಿದ್ಧವಾಗಿದೆ. ಮತ್ತು ಉಗ್ರಶಬ್ದದಿಂದ ರುದ್ರಶಬ್ದಾರ್ಥವಾದ ಕ್ರೌರ್ಯವು ಜ್ಞಾಪಿತವೂ ಆಗುತ್ತದೆ. ಮತ್ತು **ಉಗ್ರಃ ರುದ್ರಃ ರೌದ್ರಃ** ಇವುಗಳು ಏಕಾರ್ಥಕಗಳೂ

ಆಗಿವೆ. ಹೀಗೆಯೇ ಸಮುದ್ರಶಾಯಿತ್ವರೂಪವಾದ ಅರ್ಥವು **ಮಹೋದಧಿಶಯೋಽನ್ತಕಃ** ಇದು ಮೊದಲಾದ ವಿಷ್ಣುಸಹಸ್ರನಾಮದಲ್ಲಿ ಪ್ರಸಿದ್ಧವಾಗಿದೆ. ಸಮುದ್ರದೊಳಗೆ ಇದ್ದಾನೆಂದು ಹೇಳಿದ್ದರಿಂದ **ಆಪೋ ನಾರಾಃ** ಎನ್ನುವ ಸ್ಮೃತಿಸಿದ್ಧವಾದ ಜಲಾಶ್ರಯತ್ವರೂಪವಾದ ನಾರಾಯಣಶಬ್ದಾರ್ಥವು ಸೂಚಿತವೂ ಆಗಿದೆ.

**ಪೀಠಿಕೆ ॥** ಪ್ರಸಿದ್ಧ್ಯಾದಿಗಳು ಇದ್ದರೂ ಅವರನ್ನು ಬಿಟ್ಟು ಇತರರನ್ನು ಸ್ವೀಕರಿಸಿದರೆ ಏನು ಬಾಧಕವು ಎಂದರೆ—

**ಭಾಷ್ಯ ॥ ನ ಚಾವಿರೋಧೇ ಪ್ರಸಿದ್ಧಃ ಪರತ್ಯಜ್ಯತೇ ॥ ೬೦ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಈ ಅರ್ಥವು ಪ್ರಸಿದ್ಧವಾಗಿಯದೋ ಆದುದರಿಂದ ಪ್ರಮಾಣ ವಿರೋಧವಿಲ್ಲದಿದ್ದರೆ ಬಿಡಲ್ಪಡುವುದಿಲ್ಲ.

**ವಿಶೇಷಾಂಶ ॥** (ಎ) ವಿರೋಧವಿದ್ದರೆ ಮಾತ್ರ ಪ್ರಸಿದ್ಧಾರ್ಥವನ್ನು ಬಿಡಬೇಕು. ಇಲ್ಲದಿದ್ದರೆ ಪ್ರಸಿದ್ಧಿಗೆ ಬಾಧವು ಬರುವುದು. ಆದಕಾರಣ ಪ್ರಸಿದ್ಧಾರ್ಥ ಪರಿತ್ಯಾಗವು ಯುಕ್ತವಲ್ಲ. (ಬಿ) (೧)**ಆಕಾಶಾದೇವ ಸಮುತ್ಪದ್ಯಂತೇ** (೨) **ಜನಿತೋತವಿಷ್ಣೋಃ**, (೩) **ನ ಕಿರಿಂದ್ರ ತ್ವದುತ್ತರಃ** ಇತ್ಯಾದಿಗಳಲ್ಲಿ ಪ್ರಸಿದ್ಧಾರ್ಥವನ್ನು ಬಿಡುವುದರಿಂದ ಬರತಕ್ಕ ದೋಷಪರಿಹಾರಕ್ಕಾಗಿ **ಅವಿರೋಧೇ** ಎಂದು ಹೇಳಿರುವರು.

**ಪೀಠಿಕೆ ॥** ಹಾಗಾದರೆ ವಿರೋಧವಿಲ್ಲವೆನ್ನುವುದು ಸಿದ್ಧವಲ್ಲ. ಏಕೆಂದರೆ ಉಗ್ರಪದದಿಂದ ಲಕ್ಷ್ಮೀದೇವಿಯ ಅಧೀನನಾಗಿ ರುದ್ರನು ಹೇಳಲ್ಪಡುವುದಾದರೆ **ವಿಶ್ವಾಧಿಕೋ ರುದ್ರಃ** ಇತ್ಯಾದಿ ಶ್ರುತಿಗಳಿಂದ ವಿರೋಧವು ಬರುವುದು. ಆದಕಾರಣ ಇಲ್ಲಿ ಉಗ್ರಪದದಿಂದ ರುದ್ರನನ್ನು ಬಿಟ್ಟು ಒಬ್ಬಾನೊಬ್ಬ ಕ್ರೂರಪುರುಷನನ್ನು ಇಟ್ಟುಕೊಳ್ಳುವುದು ಯುಕ್ತವೆಂದರೆ—

**ಭಾಷ್ಯ ॥ ಉಕ್ತನ್ಯಾಯೇನ ಚ ಶ್ರುತಯ ಏತಮೇವ ವದಂತಿ ॥ ೬೧ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ **ವಿಶ್ವಾಧಿಕೋ ರುದ್ರಃ** ಇದು ಮೊದಲಾದ ಆಗಮಗಳು **ನಾಮಾನಿ ವಿಶ್ವಾಭಿ ನ ಸಂತಿ ಲೋಕೇ** ಇದು ಮೊದಲಾದ ಆಗಮದಿಂದಲೂ, ಉತ್ಪತ್ತಿಯುಳ್ಳ ವಸ್ತುಗಳ ಪ್ರವೃತ್ತಿಗೆ ನಿಮಿತ್ತಭೂತನು ಇದು ಮೊದಲಾದ ಅನುಮಾನದಿಂದಲೂ **ವೇದೇ ರಾಮಾಯಣೇ ಚೈವ** ಇದು ಮೊದಲಾದ ಮುಂದೆ ಹೇಳುವ ಪ್ರಮಾಣಗಳಿಂದಲೂ ಈ ವಿಷ್ಣುವನ್ನೇ ಪ್ರಧಾನನನ್ನಾಗಿ ತಿಳಿಸಿಕೊಡುತ್ತವೆ. (ಎಂದು ತಿಳಿಯಲ್ಪಡುತ್ತದೋ ಆದಕಾರಣ **ವಿಶ್ವಾಧಿಕೋ ರುದ್ರಃ** ಇತ್ಯಾದಿ ಶ್ರುತಿವಿರೋಧವಿಲ್ಲ.)

**ವಿಶೇಷಾಂಶ ॥** (ಎ) ವಿಶ್ವಃ ಅಧಿಕಃ ಯಸ್ಮಾತ್, ಯಾರ ದೆಸೆಯಿಂದ ವಾಯುದೇವರು ಉತ್ತಮರೋ ಅವನು ರುದ್ರನು ಎನ್ನುವ ಅರ್ಥವನ್ನು ಇಟ್ಟುಕೊಳ್ಳಬೇಕು. (ಬಿ) ಅಥವಾ ವಿಶ್ವಾಧಿಕಃ = ವಾಯುದೇವರಿಂದುತ್ತಮನು, ರುದ್ರಃ=ರೋಗಪರಿಹಾರಕನಾದ ಜನಾರ್ದನನು. ಈ ಪ್ರಕಾರ ರುದ್ರಾದಿ ಪದಗಳಿಗೆ ವಿಷ್ಣುವಾಚಕತ್ವವನ್ನು ಆಶ್ರಯಿಸಿಕೊಂಡು ವಿರೋಧವನ್ನು ಪರಿಹರಿಸಿಕೊಳ್ಳಬೇಕು.

**ಪೀಠಿಕೆ ॥** ಎಲ್ಲಾ ಶ್ರುತಿಗಳೂ ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತವೆ, ಎನ್ನುವ ವಿಷಯದಲ್ಲಿ ಸ್ಮೃತಿಯನ್ನುದಾಹರಿಸುತ್ತಾರೆ—

**ಭಾಷ್ಯ ॥ ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವಂತೇ ಚ ಮಧ್ಯೇ ಚ ವಿಷ್ಣುಸ್ಸರ್ವತ್ರ ಗೀಯತ ಇತಿ ಹರಿವಂಶೇಷು ॥**
**(೬೨)**

**ಭಾಷ್ಯಾರ್ಥ ॥** ವೇದಗಳಲ್ಲಿಯೂ, ರಾಮಾಯಣದಲ್ಲಿಯೂ, ಪುರಾಣದಲ್ಲಿಯೂ ಹಾಗೆಯೇ ಭಾರತದಲ್ಲಿಯೂ ಸರ್ವಗ್ರಂಥಗಳಲ್ಲಿಯೂ ಆದಿಯಲ್ಲಿಯೂ ಮಧ್ಯಭಾಗದಲ್ಲಿಯೂ ಅಂತ್ಯಭಾಗದಲ್ಲಿಯೂ ಕರ್ಮಾದಿಕಾಂಡತ್ರಯದಲ್ಲೀಯೂ ಉಪಕ್ರಮದಲ್ಲಿಯೂ ಉಪಸಂಹಾರದಲ್ಲಿಯೂ ಅವಾಂತರ ಪ್ರಕರಣದಲ್ಲಿಯೂ ಪ್ರತಿವಾಕ್ಯದಲ್ಲಿಯೂ ಪ್ರತಿಪದದಲ್ಲಿಯೂ ಪ್ರತ್ಯಕ್ಷರದಲ್ಲಿಯೂ ಮುಖ್ಯವಾಗಿ ಪ್ರತಿಪಾದಿಸಲ್ಪಡುತ್ತಾನೆ ಎಂದು ಹರಿವಂಶಗಳಲ್ಲಿ (ಹೇಳಿಯದೆ.)

**ವಿಶೇಷಾಂಶ ॥** ಹರಿವಂಶದಲ್ಲಿರತಕ್ಕ ಖಿಲ ಅಖಿಲ ಪಾರಿಜಾತ ಎನ್ನುವ ಮೂರು ಭಾಗಗಳಲ್ಲಿಯೂ **ವೇದೇ ರಾಮಾಯಣೇ** ಎನ್ನುವ ವಚನವು ಇದೆ ಎಂದು ಸೂಚಿಸುವುದಕ್ಕಾಗಿ **ಹರಿವಂಶೇಷು** ಎಂದು ಬಹುವಚನವನ್ನು ಹೇಳಿರುವರು.

**ಪೀಠಿಕೆ ॥** ಹಾಗಾದರೆ ಪ್ರಮಾಣಗಳಿಂದ ವಿರೋಧವಿಲ್ಲವೆನ್ನುವುದು ಅಸಿದ್ಧವು. ಏಕೆಂದರೆ ಶ್ರುತಿವಿರೋಧವಿಲ್ಲದಿದ್ದರೂ ಪಾಶುಪತಾದಿ ಶಾಸ್ತ್ರಗಳಿಂದ ವಿರೋಧವಿದೆ. ಆದರಲ್ಲಿ ರುದ್ರಾದಿಗಳಿಗೇನೇ ಸರ್ವೋತ್ತಮತ್ವವನ್ನೂ ಸರ್ವಕಾರಣತ್ವವನ್ನೂ ಹೇಳಿಯದೆ ಎಂದರೆ—

**ಭಾಷ್ಯ ॥ ನ ಚೇತರಗ್ರಂಥ (ಗ್ರಂಥೈರ್ವಿ)ವಿರೋಧಃ ॥ ೬೩ ॥**

**ಭಾಷ್ಯಾರ್ಥ ॥** ಶ್ರುತಿವಿರೋಧ ಮಾತ್ರ ಇಲ್ಲವೆಂದಲ್ಲ. ಮತ್ತೆ ವಿಷ್ಣುಸರ್ವೋತ್ತಮತ್ವರೂಪವಾದ ಅರ್ಥಕ್ಕೆ ಪಾಶುಪತ ಮೊದಲಾದ ಕುಶಾಸ್ತ್ರಗಳಿಂದಲೂ ವಿರೋಧವಿಲ್ಲ.

**ಪೀಠಿಕೆ ॥** ಏಕೆ ವಿರೋಧವಿಲ್ಲವೆಂದರೆ ಆ ಶಾಸ್ತ್ರಗಳನ್ನು ದುರ್ಜನರನ್ನು ಮೋಹಿಸುವುದಕ್ಕಾಗಿ ಮಾಡಿದ್ದು ಎನ್ನುತ್ತಾರೆ.

**ಭಾಷ್ಯ ॥ ★ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ಮೋಹಯಿಷ್ಯತಿ ।**
**ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥**
**ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ। ಪ್ರಕಾಶಂ ಕುರು**
**ಚಾತ್ಮಾನಮಪ್ರಕಾಶಂ ಚ ಮಾಂ ಕುರ್ವಿತಿ ವಾರಾಹವಚನಾತ್ ॥ ೬೪ ॥**

---

★ (ಕ) ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು। ಸ್ವೇಚ್ಛಾನುಸಾರವಾಗಿ ಕಲ್ಪಿತಗಳಾದ ಆಗಮಗಳಿಂದ ಜನರನ್ನು ನನ್ನಲ್ಲಿ ವಿಮುಖರನ್ನಾಗಿ ಮಾಡು ಎಂದು ರುದ್ರನನ್ನು ಕುರಿತು ವಿಷ್ಣುವು ಹೇಳಿರುತ್ತಾನೆಂದು ಪಾದ್ಮಪುರಾಣದಲ್ಲಿ ಹೇಳಿದೆ.

ಆಗಿವೆ. ಹೀಗೆಯೇ ಸಮುದ್ರಶಾಯಿತ್ವರೂಪವಾದ ಅರ್ಥವು **ಮಹೋದಧಿಶಯೋಽನಂತಃ** ಇದು ಮೊದಲಾದ ವಿಷ್ಣುಸಹಸ್ರನಾಮದಲ್ಲಿ ಪ್ರಸಿದ್ಧವಾಗಿದೆ. ಸಮುದ್ರದೊಳಗೆ ಇದ್ದಾನೆಂದು ಹೇಳಿದ್ದರಿಂದ **ಆಪೋ ನಾರಾಃ** ಎನ್ನುವ ಸ್ಮೃತಿಸಿದ್ಧವಾದ ಜಲಾಶ್ರಯತ್ವರೂಪವಾದ ನಾರಾಯಣಶಬ್ದಾರ್ಥವು ಸೂಚಿತವೂ ಆಗಿದೆ.

**ಪೀಠಿಕೆ ॥** ಪ್ರಸಿದ್ಧ್ಯಾದಿಗಳು ಇದ್ದರೂ ಅವರನ್ನು ಬಿಟ್ಟು ಇತರರನ್ನು ಸ್ವೀಕರಿಸಿದರೆ ಏನು ಬಾಧಕವು ಎಂದರೆ—

**ಭಾಷ್ಯ ॥ ನ ಚಾವಿರೋಧೇ ಪ್ರಸಿದ್ಧಃ ಪರಿತ್ಯಜ್ಯತೇ ॥ ೬೦ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಈ ಅರ್ಥವು ಪ್ರಸಿದ್ಧವಾಗಿಯದೋ ಆದುದರಿಂದ ಪ್ರಮಾಣ ವಿರೋಧವಿಲ್ಲದಿದ್ದರೆ ಬಿಡಲ್ಪಡುವುದಿಲ್ಲ.

**ವಿಶೇಷಾಂಶ ॥** (ಎ) ವಿರೋಧವಿದ್ದರೆ ಮಾತ್ರ ಪ್ರಸಿದ್ಧಾರ್ಥವನ್ನು ಬಿಡಬೇಕು. ಇಲ್ಲದಿದ್ದರೆ ಪ್ರಸಿದ್ಧಿಗೆ ಬಾಧವು ಬರುವುದು. ಆದಕಾರಣ ಪ್ರಸಿದ್ಧಾರ್ಥ ಪರಿತ್ಯಾಗವು ಯುಕ್ತವಲ್ಲ (ಬಿ) (೧)**ಆಕಾಶಾದೇವ ಸಮುತ್ಪದ್ಯಂತೇ** (೨) **ಜನಿತೋತವಿಷ್ಣೋಃ**, (೩) **ನ ಕರಿಂದ್ರ ತ್ವದುತ್ತರಃ** ಇತ್ಯಾದಿಗಳಲ್ಲಿ ಪ್ರಸಿದ್ಧಾರ್ಥವನ್ನು ಬಿಡುವುದರಿಂದ ಬರತಕ್ಕ ದೋಷಪರಿಹಾರಕ್ಕಾಗಿ **ಅವಿರೋಧೇ** ಎಂದು ಹೇಳಿರುವರು.

**ಪೀಠಿಕೆ ॥** ಹಾಗಾದರೆ ವಿರೋಧವಿಲ್ಲವೆನ್ನುವುದು ಸಿದ್ಧವಲ್ಲ. ಏಕೆಂದರೆ ಉಗ್ರಪದದಿಂದ ಲಕ್ಷ್ಮೀದೇವಿಯ ಅಧೀನನಾಗಿ ರುದ್ರನು ಹೇಳಲ್ಪಡುವುದಾದರೆ **ವಿಶ್ವಾಧಿಕೋ ರುದ್ರಃ** ಇತ್ಯಾದಿ ಶ್ರುತಿಗಳಿಂದ ವಿರೋಧವು ಬರುವುದು. ಆದಕಾರಣ ಇಲ್ಲಿ ಉಗ್ರಪದದಿಂದ ರುದ್ರನನ್ನು ಬಿಟ್ಟು ಒಬ್ಬಾನೊಬ್ಬ ಕ್ರೂರಪುರುಷನನ್ನು ಇಟ್ಟುಕೊಳ್ಳುವುದು ಯುಕ್ತವೆಂದರೆ—

**ಭಾಷ್ಯ ॥ ಉಕ್ತನ್ಯಾಯೇನ ಚ ಶ್ರುತಯ ಏತಮೇವ ವದಂತಿ ॥ ೬೧ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ **ವಿಶ್ವಾಧಿಕೋ ರುದ್ರಃ** ಇದು ಮೊದಲಾದ ಆಗಮಗಳು **ನಾಮಾನಿ ವಿಶ್ವಾಭಿ ನ ಸಂತಿ ಲೋಕೇ** ಇದು ಮೊದಲಾದ ಆಗಮದಿಂದಲೂ, ಉತ್ಪತ್ತಿಯುಳ್ಳ ವಸ್ತುಗಳ ಪ್ರವೃತ್ತಿಗೆ ನಿಮಿತ್ತಭೂತನು ಇದು ಮೊದಲಾದ ಅನುಮಾನದಿಂದಲೂ **ವೇದೇ ರಾಮಾಯಣೇ ಚೈವ** ಇದು ಮೊದಲಾದ ಮುಂದೆ ಹೇಳುವ ಪ್ರಮಾಣಗಳಿಂದಲೂ ಈ ವಿಷ್ಣುವನ್ನೇ ಪ್ರಧಾನನನ್ನಾಗಿ ತಿಳಿಸಿಕೊಡುತ್ತವೆ. (ಎಂದು ತಿಳಿಯಲ್ಪಡುತ್ತದೋ ಆದಕಾರಣ **ವಿಶ್ವಾಧಿಕೋ ರುದ್ರಃ** ಇತ್ಯಾದಿ ಶ್ರುತಿವಿರೋಧವಿಲ್ಲ.)

**ವಿಶೇಷಾಂಶ ॥** (ಎ) ವಿಶ್ವಃ ಅಧಿಕಃ ಯಸ್ಮಾತ್, ಯಾರ ದೆಸೆಯಿಂದ ವಾಯುದೇವರು ಉತ್ತಮರೋ ಅವನು ರುದ್ರನು ಎನ್ನುವ ಅರ್ಥವನ್ನು ಇಟ್ಟುಕೊಳ್ಳಬೇಕು. (ಬಿ) ಅಥವಾ ವಿಶ್ವಾಧಿಕಃ = ವಾಯುದೇವರಿಂದುತ್ತಮನು, ರುದ್ರಃ=ರೋಗಪರಿಹಾರಕನಾದ ಜನಾರ್ದನನು. ಈ ಪ್ರಕಾರ ರುದ್ರಾದಿ ಪದಗಳಿಗೆ ವಿಷ್ಣುವಾಚಕತ್ವವನ್ನು ಆಶ್ರಯಿಸಿಕೊಂಡು ವಿರೋಧವನ್ನು ಪರಿಹರಿಸಿಕೊಳ್ಳಬೇಕು.

**ಪೀಠಿಕೆ ॥** ಎಲ್ಲಾ ಶ್ರುತಿಗಳೂ ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತವೆ, ಎನ್ನುವ ವಿಷಯದಲ್ಲಿ ಸ್ಮೃತಿಯನ್ನುದಾಹರಿಸುತ್ತಾರೆ—

**ಭಾಷ್ಯ ॥ ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**

**ಆದಾವಂತೇ ಚ ಮಧ್ಯೇ ಚ ವಿಷ್ಣು ಸ್ಸರ್ವತ್ರ ಗೀಯತ ಇತಿ ಹರಿವಂಶೇಷು ॥**

**(೬೨)**

**ಭಾಷ್ಯಾರ್ಥ ॥** ವೇದಗಳಲ್ಲಿಯೂ, ರಾಮಾಯಣದಲ್ಲಿಯೂ, ಪುರಾಣದಲ್ಲಿಯೂ ಹಾಗೆಯೇ ಭಾರತದಲ್ಲಿಯೂ ಸರ್ವಗ್ರಂಥಗಳಲ್ಲಿಯೂ ಆದಿಯಲ್ಲಿಯೂ ಮಧ್ಯಭಾಗದಲ್ಲಿಯೂ ಅಂತ್ಯಭಾಗ ದಲ್ಲಿಯೂ ಕರ್ಮಾದಿಕಾಂಡತ್ರಯದಲ್ಲೀಯೂ ಉಪಕ್ರಮದಲ್ಲಿಯೂ ಉಪಸಂಹಾರದಲ್ಲಿಯೂ ಅವಾಂತರ ಪ್ರಕರಣದಲ್ಲಿಯೂ ಪ್ರತಿವಾಕ್ಯದಲ್ಲಿಯೂ ಪ್ರತಿಪದದಲ್ಲಿಯೂ ಪ್ರತ್ಯಕ್ಷರದಲ್ಲಿಯೂ ಮುಖ್ಯವಾಗಿ ಪ್ರತಿಪಾದಿಸಲ್ಪಡುತ್ತಾನೆ ಎಂದು ಹರಿವಂಶಗಳಲ್ಲಿ (ಹೇಳಿಯದೆ.)

**ವಿಶೇಷಾಂಶ ॥** ಹರಿವಂಶದಲ್ಲಿರತಕ್ಕ ಖಿಲ ಅಖಿಲ ಪಾರಿಜಾತ ಎನ್ನುವ ಮೂರು ಭಾಗ ಗಳಲ್ಲಿಯೂ **ವೇದೇ ರಾಮಾಯಣೇ** ಎನ್ನುವ ವಚನವು ಇದೆ ಎಂದು ಸೂಚಿಸುವುದಕ್ಕಾಗಿ **ಹರಿವಂಶೇಷು** ಎಂದು ಬಹುವಚನವನ್ನು ಹೇಳಿರುವರು.

**ಪೀಠಿಕೆ ॥** ಹಾಗಾದರೆ ಪ್ರಮಾಣಗಳಿಂದ ವಿರೋಧವಿಲ್ಲವೆನ್ನುವುದು ಅಸಿದ್ಧವು. ಏಕೆಂದರೆ ಶ್ರುತಿವಿರೋಧವಿಲ್ಲದಿದ್ದರೂ ಪಾಶುಪತಾದಿ ಶಾಸ್ತ್ರಗಳಿಂದ ವಿರೋಧವಿದೆ. ಅದರಲ್ಲಿ ರುದ್ರಾದಿ ಗಳಿಗೇನೇ ಸರ್ವೋತ್ತಮತ್ವವನ್ನೂ ಸರ್ವಕಾರಣತ್ವವನ್ನೂ ಹೇಳಿಯದೆ ಎಂದರೆ—

**ಭಾಷ್ಯ ॥ ನ ಚೇತರಗ್ರಂಥ (ಗ್ರಂಥೈರ್ವಿ)ವಿರೋಧಃ ॥ ೬೩ ॥**

**ಭಾಷ್ಯಾರ್ಥ ॥** ಶ್ರುತಿವಿರೋಧ ಮಾತ್ರ ಇಲ್ಲವೆಂದಲ್ಲ. ಮತ್ತೆ ವಿಷ್ಣುಸರ್ವೋತ್ತಮತ್ವರೂಪವಾದ ಅರ್ಥಕ್ಕೆ ಪಾಶುಪತ ಮೊದಲಾದ ಕುಶಾಸ್ತ್ರಗಳಿಂದಲೂ ವಿರೋಧವಿಲ್ಲ.

**ಪೀಠಿಕೆ ॥** ಏಕೆ ವಿರೋಧವಿಲ್ಲವೆಂದರೆ ಆ ಶಾಸ್ತ್ರಗಳನ್ನು ದುರ್ಜನರನ್ನು ಮೋಹಿಸುವುದಕ್ಕಾಗಿ ಮಾಡಿದ್ದು ಎನ್ನುತ್ತಾರೆ.

**ಭಾಷ್ಯ ॥ ★ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ಮೋಹಯಿಷ್ಯತಿ ।**
**ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥**
**ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ। ಪ್ರಕಾಶಂ ಕುರು**
**ಚಾತ್ಮಾನಮಪ್ರಕಾಶಂ ಚ ಮಾಂ ಕುರ್ವಿತಿ ವಾರಾಹವಚನಾತ್ ॥ ೬೪ ॥**

★ (ಕ) ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು। ಸ್ವೇಚ್ಛಾನುಸಾರವಾಗಿ ಕಲ್ಪಿತಗಳಾದ ಆಗಮಗಳಿಂದ ಜನರನ್ನು ನನ್ನಲ್ಲಿ ವಿಮುಖ ರನ್ನಾಗಿ ಮಾಡು ಎಂದು ರುದ್ರನನ್ನು ಕುರಿತು ವಿಷ್ಣುವು ಹೇಳಿರುತ್ತಾನೆಂದು ಪಾದ್ಮಪುರಾಣದಲ್ಲಿ ಹೇಳಿದೆ.

**ಭಾಷ್ಯಾರ್ಥ ||** (೧) ಯಾವ ಈ ಮೋಹವು ಜನರನ್ನು (ಜನರಿಗೆ) ಅಜ್ಞಾನ ಮಿಥ್ಯಾಜ್ಞಾನ ಮೊದಲಾದುದನ್ನು ಹೊಂದಿಸಿಕೊಡುತ್ತದೋ, ಅಂತಹ ಮೋಹವನ್ನು ಸೃಷ್ಟಿಮಾಡುತ್ತೇನೆ. (೨) ಆಜಾನುಪರಿಮಿತ ಬಾಹುವುಳ್ಳ ರುದ್ರನೇ ಅಥವಾ ಶತ್ರುಗಳನ್ನು ಬಾಧಿಸತಕ್ಕ ಅಂಗಗಳಿಂದ ಯುಕ್ತನಾದ ರುದ್ರನೇ, ನೀನು ಮೋಹವನ್ನು ಸೃಷ್ಟಿ ಮಾಡು, ಮೋಹಕಶಾಸ್ತ್ರಗಳನ್ನು ಮಾಡು. ಮತ್ತು (ದಧೀಚ್ಯಾದಿ ಋಷಿಗಳಿಂದ) ಮಾಡಿಸು. (೩) ಮಹಾಭಕ್ಷಕನಾದ ಅಥವಾ ಮಹಾಕುಟಿಲನಾದ ರುದ್ರನೇ (ಆ ಮೋಹಕಶಾಸ್ತ್ರಗಳಲ್ಲಿ) ಎಲ್ಲಿಯೂ ಇಲ್ಲದಿರುವವುಗಳನ್ನು ವ್ಯಧಿಕರಣವಾಗಿರತಕ್ಕವುಗಳನ್ನು ಪ್ರತಿಪಾದಿಸು. (೪) (ಲೋಕಗಳಲ್ಲಿ) ತನ್ನನ್ನು ರುದ್ರನನ್ನುದ್ದೇಶಿಸಿ ಪ್ರಸಿದ್ಧಿಯನ್ನು ಮಾಡಿಕೊಳ್ಳು. (ಇಷ್ಟು ಮಾತ್ರವಲ್ಲ, ಮತ್ತೆ) ನನ್ನನ್ನು (ವಿಷ್ಣುವನ್ನು)ದ್ದೇಶಿಸಿ ಅಪ್ರಸಿದ್ಧಿಯನ್ನು ಮಾಡಿಕೊಳ್ಳು. (ಎಂದು ರುದ್ರನನ್ನು ಕುರಿತು ವಿಷ್ಣುವಿನ ವಾಕ್ಯವು). ಹೀಗೆ ವಾರಾಹಪುರಾಣದ ವಚನದೆಸೆಯಿಂದ. (ಆ ಶಾಸ್ತ್ರಗಳನ್ನು ಮೋಹಕ್ಕಾಗಿ ಮಾಡಿದ್ದೆಂದು ತಿಳಿಯುತ್ತದೆ. ಆದಕಾರಣ ಇತರ ಗ್ರಂಥಗಳಿಂದ ವಿರೋಧವಿಲ್ಲ.)

**ವಿಶೇಷಾಂಶ ||** (ಎ) ಮುಹ್ಯತೇ ಅನೇನ ಜನಃ=ಜನರು ಇದರಿಂದ ಮೋಹಿಸಲ್ಪಡುತ್ತಾರೆ. ಮೋಹಃ=ನಟನವು ಅಥವಾ ವಂಚನವು. (೧) ವಿದ್ಯಮಾನಾಕಾರಾಚ್ಛಾದನೇನಾವಿದ್ಯಮಾನಾಕಾರ ಪ್ರದರ್ಶನಂ=ಇದ್ದ ಆಕಾರವನ್ನು ಮರೆಮಾಡಿ ಇಲ್ಲದಿರುವ ಆಕಾರವನ್ನು ತೋರಿಸುವುದು, ನಟನವು. (೨) ಅವಿದ್ಯಮಾನಾಕಾರ ಕಥನಂ=ಇಲ್ಲದಿರುವುದನ್ನು ಹೇಳುವುದು ವಂಚನವು. (ಬಿ) ಜನರ ಅನಾದಿ ಕರ್ಮವಾಸನಾರೂಪವಾದ ಮೋಹಕಾರಣವನ್ನು ಅಥವಾ ಮೋಹಕಶಾಸ್ತ್ರವನ್ನು ಸೃಷ್ಟಿ ಮಾಡುತ್ತೇನೆಂದು ಹೇಳಿದುದರಿಂದ ವಿಷ್ಣುವೇ ಮೋಹಶಾಸ್ತ್ರವನ್ನು ಹೇಳಿದ್ದಾನೆಂದು ಶಂಕಿಸಕೂಡದು. ಏಕೆಂದರೆ **ಅಜಸ್ಯಾವಕ್ರಚೇತಸಃ । ನಿರನಿಷ್ಟೋ ನಿರವದ್ಯಃ॥** ಇದು ಮೊದಲಾದ ಶ್ರುತಿಗಳು ವಿಷ್ಣುವಿಗೆ ಸರ್ವಥಾ ದೋಷಗಳು ಇಲ್ಲವೆಂದು ಪ್ರತಿಪಾದಿಸುತ್ತವೆ. (ಸಿ) ಶೈವಾದಿ ಪುರಾಣಗಳಿಗೆ ಶಿವಾದಿಗಳ ಉತ್ತಮತ್ವದಲ್ಲಿಯೇ ತಾತ್ಪರ್ಯವು ಎಂದಂಗೀಕರಿಸಿದರೆ ಅವುಗಳಲ್ಲಿಯೂ ವಿಷ್ಣುವಿಗೆ ಸರ್ವೋತ್ತಮತ್ವ

---

(ಬಿ) **ಅಪ್ರಾಮಾಣಿಕವಾದ ಲಿಂಗಮೂಲಾನ್ವೇಷಣಾದಿಗಳ ಕಥೆಯು ಸ್ಕಾಂದಪುರಾಣ ದಲ್ಲಿ ಹೇಳಿಯದೆ. ಪೂರ್ವದಲ್ಲಿ ಜಗತ್ಕರ್ತೃತ್ವ ವಿಷಯದಲ್ಲಿ ವಿಷ್ಣುವಿಗೂ ಬ್ರಹ್ಮನಿಗೂ ಕಲಹವು ಉಂಟಾಯಿತು. ಈ ಮಧ್ಯದಲ್ಲಿ ಅವರ ಗರ್ವವನ್ನು ನಾಶಗೊಳಿಸು ವುದಕ್ಕಾಗಿ ಒಂದು ಲಿಂಗವು ಪ್ರಾದುರ್ಭೂತವಾಯಿತು. ಅವರಿಬ್ಬರು ಆ ಲಿಂಗವ ನ್ನು ನೋಡಿ ಎಲ್ಲಾ ದೇವತೆಗಳ ಸಮೀಪದಲ್ಲಿ ಪರಸ್ಪರವಾಗಿ ಶಪಥ ಮಾಡಿಕೊಂಡರು. ಆಗ ಬ್ರಹ್ಮನು ನಮ್ಮಿಬ್ಬರಲ್ಲಿ ಈ ಲಿಂಗದ ಆದಿಯನ್ನೂ ಅಂತವನ್ನೂ ಯಾರು ಹೊಂದುವನೋ ಅವನೇ ಜಗತ್ಕರ್ತನು. ಆದುದರಿಂದ ಮೂಲವನ್ನು ಹುಡುಕುವುದಕ್ಕಾಗಿ ಕೆಳಗೆ ಹೋಗು ನಾನು ಅಂತವನ್ನು ಹುಡುಕುವುದಕ್ಕಾಗಿ ಮೇಲಕ್ಕೆ ಹೋಗುವೆನು ಎಂದು ವಿಷ್ಣುವಿನ ಹತ್ತಿರ ಹೇಳಿದನು. ಆಗ ವಿಷ್ಣುವು ವರಾಹರೂಪದಿಂದ ಕೆಳಗೆ ಹೋಗಿ ಆದಿಯನ್ನು ಕಂಡು ಬಂದು ಸತ್ಯವಾಗಿ ಹೇಳಿದನು. ಬ್ರಹ್ಮನಾದರೂ ಹಂಸರೂಪದಿಂದ ಮೇಲಕ್ಕೆ ಹೋಗಿ ವಸ್ತುತಃ ಲಿಂಗದ ಅಂತವನ್ನು ಕಾಣದೆ ಕಂಡನೆಂದು ಸುಳ್ಳು ಹೇಳಿದನು. ಆಗ ಲಿಂಗರೂಪಿಯಾದ ರುದ್ರನು ವಿಷ್ಣುವೇ ನೀನು ಸತ್ಯ ಹೇಳಿದ ಪ್ರಯುಕ್ತ ನಿನಗೆ ಲೋಕದಲ್ಲಿ ನನ್ನ ಸಮಾನ ಪೂಜೆಯು ಲಭಿಸುವುದು. ಬ್ರಹ್ಮನು ಸುಳ್ಳುಹೇಳಿದ್ದರಿಂದ ಆತನಿಗೆ ಪೂಜೆಯೇ ಇಲ್ಲವೆಂದಾಗುವುದು. ಆ ಮೇಲೆ ಬ್ರಹ್ಮನು ಪ್ರಾರ್ಥಿಸೋಣ ಗಂಧಮಾದನಪರ್ವತಕ್ಕೆ ಹೋಗಿ ಯಜ್ಞಗಳನ್ನು ಮಾಡು. ಆಮೇಲೆ ಶ್ರೌತಸ್ಮಾರ್ತಕರ್ಮಗಳಲ್ಲಿಯೇ ಪೂಜೆಯು ಲಭಿಸುವುದು. ದೇವಾಲಯಾದಿಗಳಲ್ಲಿ ಲಭಿಸಲಾರದು ಎಂದು ಹೇಳಿ ಮರೆಯಾದನು ಎಂದು ಅಪ್ರಾ ಮಾಣಿಕವಾದ ಕಥೆಯು ಇದೆ.)**

ವನ್ನು ಪ್ರತಿಪಾದಿಸಿದುದರಿಂದ ಪೂರ್ವಾಪರ ವಿರೋಧವು ಬರುವುದು. ಅಪ್ರಾಮಾಣ್ಯವೂ ಬರಬೇಕಾಗುವುದು. ಆದಕಾರಣ ಪಾಶುಪತಾದಿಗಳಲ್ಲಿ ಹೇಳಲ್ಪಟ್ಟ ಶಿವಾದಿಗಳ ಉತ್ತಮತ್ವವು ಪೂರ್ವಪಕ್ಷರೂಪವಾದುದು. ದರ್ಶನಭಾಷೆಯಿಂದ ಹೇಳಿದ್ದು. (ಡಿ) ವೈಷ್ಣವಪುರಾಣಗಳಲ್ಲಿ ವಿಷ್ಣುವಿನಿಂದ ಇತರರಿಗೆ ಉತ್ತಮತ್ವವನ್ನೇ ಹೇಳಲಿಲ್ಲ. ಕೆಲವು ಕಡೆ ಕೆಲವರಿಗೆ ಸಾಮ್ಯವಾಗಲೀ ಉತ್ತಮ ತ್ವವಾಗಲೀ ಹೇಳಿದಂತೆ ತೋರಿದರೆ ಅದು ತಿಳಿಯುವವರ ಬುದ್ಧಿದೋಷದಿಂದ ಪೂರ್ವ ಪಕ್ಷಸಿದ್ಧಾಂತವಿಭಾಗವನ್ನು ತಿಳಿಯದಿರುವ ಪ್ರಯುಕ್ತ ಹೇಳಿದ್ದೆಂದು ಇಟ್ಟುಕೊಳ್ಳಬೇಕು. (ಇ) ಕ್ವಾಪ್ಯವಿದ್ಯಮಾನಾನಿ ಲಿಂಗಮೂಲಾದ್ಯನ್ವೇಷಣಾದೀನಿ ಅತಥ್ಯಾನಿ ಸಾತ್ವಿಕಪುರಾಣದಲ್ಲಿ ಎಲ್ಲಿಯೂ ಹೇಳದಿರುವ ಲಿಂಗಮೂಲಾದಿಗಳ ಹುಡು ಕೋಣ ಮೊದಲಾದುದನ್ನೇ ಹೇಳಿದವುಗಳು ಅತಥ್ಯಗಳು. (ಎಫ್) ವ್ಯಧಿಕರಣತ್ವೇನ ವಿದ್ಯಮಾನಾನಿ ವಿತಥ್ಯಾನಿ ಅಂದರೆ ವಿಷ್ಣುನಿಷ್ಠಾನಿ ಸರ್ವೋತ್ತಮತ್ವಸರ್ವಸ್ವಾತಂ ತ್ರ್ಯಾದೀನಿ ಅಥವಾ ವಾಯುನಿಷ್ಠಾನಿ ವಿಷಭಕ್ಷಣಾದೀನಿ ರುದ್ರಾದಿ ನಿಷ್ಠತಯೋಚ್ಯ ಮಾನಾನಿ । ವಿಷ್ಣುವಿನಲ್ಲಿರತಕ್ಕ ಸರ್ವೋತ್ತಮತ್ವ ಸರ್ವಸ್ವಾತಂತ್ರ್ಯಾದಿಗಳನ್ನು ರುದ್ರಾದಿಗಳಲ್ಲಿ ಉಂಟೆಂದು ಹೇಳುವುದು ಅಥವಾ ವಾಯುದೇವರಲ್ಲಿರತಕ್ಕ ವಿಷಭಕ್ಷಣಾದಿಗಳನ್ನು ರುದ್ರಾದಿಗಳಲ್ಲಿ ಉಂಟೆಂದು ಹೇಳುವುದು.

ಪೀಠಿಕೆ ॥ ಪಾಶುಪತಾದಿ ಶಾಸ್ತ್ರಗಳನ್ನು ಜನರನ್ನು ಮೋಹಿಸುವುದಕ್ಕಾಗಿ ಮಾಡಿದುದರಿಂದ ಅವುಗಳು ಅಪ್ರಾಮಾಣಿಕಗಳಾಗಲಿ. ಆದಕಾರಣ ಅವುಗಳಿಂದ ವಿರೋಧವು ಬಾರದಿದ್ದರೂ ಸ್ಕಾಂದ ಬ್ರಹ್ಮವೈವರ್ತ ಮೊದಲಾದ ಪುರಾಣಗಳು ಶಿವ ಬ್ರಹ್ಮ ಮೊದಲಾದವರಿಗೆ ಉತ್ತಮತ್ವವನ್ನು ಹೇಳತಕ್ಕುವುಗಳಾದುದರಿಂದ ಅವುಗಳಿಂದ ವಿರೋಧವು ಬಂದೇ ಬರುವುದು ಎಂದರೆ—

**ಭಾಷ್ಯ ॥ ಶೈವೇ ಚ ಸ್ಕಾಂದೇ। ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ ।**
**ತದೈವಾಚ್ಯುತ ಯಾಂತ್ಯೇವ ಯದೈವ ತ್ವಂ ಪರಾಙ್ಮುಖಃ ॥ ಇತಿ ॥ ೬೫ ॥**

ಭಾಷ್ಯಾರ್ಥ ॥ ಎಲೋ ಅಚ್ಯುತನೇ ಯಾವ ಪಕ್ಷದಲ್ಲಿ ನೀನೇ ಅನುಗ್ರಹವನ್ನು ಮಾಡುವುದಿಲ್ಲವೋ ಹಾಗಾದರೆ ಬ್ರಹ್ಮ ರುದ್ರ ಮೊದಲಾದ ದೇವತೆಗಳು ನೀಚರಿಂದಲೂ ಕ್ಲೇಶದಿಂದ ಕೂಡುವಿಕೆಯನ್ನು ಅಥವಾ ಕಷ್ಟವನ್ನು ಹೊಂದಿಯೇ ಹೊಂದುತ್ತಾರೆ ಎಂದು ಶಿವನಿಗೇನೇ ಸರ್ವೋತ್ತಮತ್ವವನ್ನು ಪ್ರತಿಪಾದಿಸತಕ್ಕ ಸ್ಕಾಂದ ಪುರಾಣದಲ್ಲಿಯೂ (ಹೇಳಿಯದೆ).

ವಿಶೇಷಾಂಶ ॥ ಇದರಿಂದ ಬ್ರಹ್ಮ, ರುದ್ರ ಮೊದಲಾದ ದೇವತೆಗಳು ವಿಷ್ಣುವಿನ ಅಧೀನರೆಂದೂ ವಿಷ್ಣುವಿನ ಅತ್ಯಂತ ಅನುಗ್ರಹಕ್ಕೆ ಪಾತ್ರರಾದವರೆಂದು ಸಿದ್ಧಿಸುತ್ತದೆ. ಆದಕಾರಣ ಆ ಪ್ರಮಾಣ ಗಳಿಂದಲೂ ವಿರೋಧವಿಲ್ಲ.

**ಭಾಷ್ಯ ॥ ಬ್ರಾಹ್ಮೇ ಚ ಬ್ರಹ್ಮವೈವರ್ತೇ ।**
**ನಾಹಂ ನ ಚ ಶಿವೋಽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ ।**
**ಬಾಲಃ ಕ್ರೀಡನಕೈರ್ಯದ್ವತ್ಕ್ರೀಡತೇಽಸ್ಮಾಭಿರಚ್ಯುತಃ ॥ ಇತಿ ॥ ೬೬ ॥**

ಭಾಷ್ಯಾರ್ಥ ॥ ಯದ್ಯಪಿ ರುದ್ರನಾಗಲೀ ಇತರ ದೇವತೆಗಳಾಗಲೀ ಪುರುಷನಾದ ನಾನಾಗಲೀ ಆ ಶ್ರೀಹರಿಯ ಸಾಮರ್ಥ್ಯದ ಏಕದೇಶವನ್ನು ಹೊಂದಿದವರಲ್ಲ. ಆದರೂ ಹೇಗೆ ಬಾಲಕನು ಕ್ರೀಡಾಸಾಧನಗಳಾದ ಚೆಂಡು ಮೊದಲಾದ ಪದಾರ್ಥಗಳಿಂದ ಆಡುತ್ತಾನೋ ಹಾಗೆಯೇ ಶ್ರೀಹರಿಯೂ ಕೂಡ ನಮ್ಮಿಂದ ಸೃಷ್ಟ್ಯಾದಿಕ್ರೀಡೆಯನ್ನು ಮಾಡುತ್ತಾನೆ. ಹೀಗೆ ಬ್ರಹ್ಮನಿಗೇನೇ ಸರ್ವೋತ್ಕೃಷ್ಟತ್ವವನ್ನು ಪ್ರತಿಪಾದಿಸತಕ್ಕ ಬ್ರಹ್ಮವೈವರ್ತಪುರಾಣದಲ್ಲಿಯೂ (ಹೇಳಿಯದೆ)

ವಿಶೇಷಾಂಶ ॥ (ಎ) ಶೈವಾದಿ ಪುರಾಣಗಳು ಶಿವಾದಿಗಳಿಗೆ ಉತ್ತಮತ್ವವನ್ನು ಹೇಳಲಿಕ್ಕೆ ಹೊರಟವೆ. ಅಲ್ಲಿಯೂ ವಿಷ್ಣುವಿಗೆ ಉತ್ತಮತ್ವಾದಿಗಳನ್ನೇ ಹೇಳಿಯದೆ. ಆದಕಾರಣ ಅವುಗಳಿಗೆ ಶಿವಾದಿಗಳ ಉತ್ತಮತ್ವದಲ್ಲಿ ತಾತ್ಪರ್ಯವಿಲ್ಲವೆಂದು ಸಿದ್ಧವಾಗುತ್ತದೆ. ಏಕೆಂದರೆ ರುದ್ರಾದಿಗಳಿಗೆ ಉತ್ತಮತ್ವಾದಿಗಳು ಶೈವಾದಿ ಪುರಾಣಗಳಲ್ಲಿ ಮಾತ್ರ ಮುಖ್ಯವಾಗಿ ಪ್ರಾಪ್ತಗಳಾಗಿವೆ. ಬೇರೆಯಲ್ಲಿಯೂ ಪ್ರಾಪ್ತಗಳಾಗಲಿಲ್ಲ. ಆ ಗ್ರಂಥದಲ್ಲಿಯೇ ವಿಷ್ಣುವಿಗೆ ಉತ್ತಮತ್ವವನ್ನೇ ಹೇಳಿದಾಗ ಅದಕ್ಕೆ ಪ್ರಾಮಾಣ್ಯವು ಸುತರಾಂ ಸಿದ್ಧವಾಗುತ್ತದೆ. ಶಿವಾದಿಗಳಿಗೆ ಉತ್ತಮತ್ವವನ್ನು ಅದರಲ್ಲಿ ಕ್ವಚಿತ್ ಹೇಳಿದ್ದಾಗ್ಯೂ ವಸ್ತುತಃ ಅದಕ್ಕೆ ಪ್ರಾಮಾಣ್ಯವಿಲ್ಲವೆಂದೂ ನಿಶ್ಚಿತವಾಗುತ್ತದೆ. ಆದಕಾರಣ ಅವುಗಳಿಂದಲೂ ವಿರೋಧವಿಲ್ಲ.

ಪೀಠಿಕೆ ॥ ಆದರೂ ವಿಷ್ಣುವಿಗೆ ಉತ್ತಮತ್ವವನ್ನೂ ರುದ್ರಾದಿಗಳಿಗೆ ಅಧಮತ್ವವನ್ನೂ ಹೇಳಿದರೆ ಅವುಗಳಿಗೆ ವೈಷ್ಣವಗ್ರಂಥಗಳಿಂದಲೇ ವಿರೋಧವು ಬರುವುದು ಎಂದರೆ—

**ಭಾಷ್ಯ ॥ ನ ಚ ವೈಷ್ಣವೇಷು ತಥಾ। ತಚ್ಚೈಷ ಮೋಹಮಿತ್ಯುಕ್ತಮ್ ॥ ೬೭ ।**

ಭಾಷ್ಯಾರ್ಥ ॥ ವಿಷ್ಣುವಿಷಯಕಗಳಾದ ಭಾಗವತ ಮೊದಲಾದ ಪುರಾಣಗಳಲ್ಲಿಯೂ ವಿಷ್ಣುವಿನಿಂದ ಇತರರಿಗೆ ಉತ್ತಮತ್ವವು ಹೇಳಲ್ಪಡಲೇ ಇಲ್ಲ. ಆದುದರಿಂದಲೇ ಶೈವಪುರಾಣದಂತೆ ಸರ್ವೋತ್ತಮತ್ವ ಅಧಮತ್ವ ವಿಷಯದಲ್ಲಿ ವಿರೋಧವಿಲ್ಲ (ಹಾಗಾದರೆ ಭಾಗವತ ಮೊದಲಾದ ವೈಷ್ಣವ ಪುರಾಣಗಳಲ್ಲಿಯೂ ಶ್ರೀವಿಷ್ಣುವು ಕೃಷ್ಣನ ರೂಪದಿಂದ * ರುದ್ರನ ಸ್ತೋತ್ರಾದಿಗಳನ್ನು ಮಾಡಿದ್ದಾನೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ) ಯಾವ ಕಾರಣದಿಂದ ವೈಷ್ಣವ ಪುರಾಣಗಳಲ್ಲಿ ಯಾವುದು ರುದ್ರನ ಸ್ತೋತ್ರಾದಿಗಳು ಹೇಳಲ್ಪಟ್ಟಿವೆಯೋ ಅವು ಏಷ ಮೋಹಂ ಎನ್ನುವ ವಚನದಿಂದ ಮೋಹಕ್ಕಾಗಿ ಹೇಳಿದ್ದೆಂದು ಸಮಾಧಾನವು ಹೇಳಲ್ಪಟ್ಟಿದೆ. (ಆದಕಾರಣ ಅವುಗಳಿಂದಲೂ ವಿರೋಧವಿಲ್ಲ)

## ಅದ್ವೈತಮತರೀತ್ಯಾ ಸೂತ್ರಾರ್ಥವು

ವಿಚಾರ ॥ (ಎ) ಅಥಶಬ್ದಕ್ಕೆ ಅನಂತರದಲ್ಲಿ ಎಂದು ಅರ್ಥವು. ಯೋಗ್ಯತಯಾ, ೧. ನಿತ್ಯಾನಿತ್ಯವಸ್ತುವಿವೇಕ, ೨ ಐಹಿಕ ಪಾರಲೌಕಿಕ ವಿಷಯಭೋಗದಲ್ಲಿ ವಿರಕ್ತಿ ೩. ಶಮದಮಾದಿ ಸಾಧನಸಂಪತ್ತು ೪ ಮುಮುಕ್ಷಾ ಎನ್ನುವ ನಾಲ್ಕು ವಿಧ ಸಾಧನಸಂಪದ್ರೂಪವಾದ ಅಧಿಕಾರವು ಎನ್ನುವ

* ಆರಾಧ್ಯ ದೇವದೇವೇಶಂ ಶಂಕರಂ ಲೋಕಶಂಕರಂ । ತಪಸಾ ತೋಷಯಿತ್ವಾ ತಂ ಕೈಲಾಸಗಿರಿವಾಸಿನಂ ॥ ದುರ್ಮಿಕ್ಷಾಂ ತನಯಂ ಲೇಭೇ ದಗ್ಧಂ ಕಾಮಂ ಪುನಃ ಹರಿಃ । ಇದು ಮೊದಲಾದುದು ಹೇಳಿದ್ದು ಮೋಹಕವೆಂದು ಸಿದ್ಧವಾಯಿತು.

ಅರ್ಥವು ಲಬ್ಧವಾಗುತ್ತದೆ. ಅಥ=ಅಂತಹ ಅಧಿಕಾರದೆಸೆಯಿಂದ ಅನಂತರದಲ್ಲಿ ಅತಃ = ಅಗ್ನಿಹೋತ್ರಾದಿಕರ್ಮಗಳ ಫಲವು [೧]ಅನಿತ್ಯವೆಂದು ಬ್ರಹ್ಮಜ್ಞಾನವು ಪರಮಪುರುಷಾರ್ಥರೂಪ ಮೋಕ್ಷವೆಂಬ [೨]ನಿತ್ಯಫಲವನ್ನು ಕೊಡುತ್ತದೆಂದು ಪ್ರತಿಪಾದಿಸುವ ತದ್ಯಥೇತ್ಯಾದಿ ವೇದವಚನವಿರೋಣದರಿಂದ (ಕರ್ಮಫಲದಲ್ಲಿ ವೈರಾಗ್ಯವನ್ನು ಸಂಪಾದಿಸಿ) ಬ್ರಹ್ಮಜಿಜ್ಞಾಸಾ=ಬ್ರಹ್ಮವಿಚಾರವು ಮಾಡತಕ್ಕುದು.

## ಅದ್ವೈತಿಗಳ ವ್ಯಾಖ್ಯಾನವು ಅಯುಕ್ತವು

(ಬ) ೧ ನಿತ್ಯಾನಿತ್ಯವಸ್ತುವಿವೇಕವೆಂದರೆ— ಬ್ರಹ್ಮನೊಬ್ಬನೇ ನಿತ್ಯನು, ಬೇರೆಯೆಲ್ಲವೂ ಅನಿತ್ಯವು ಅಥವಾ ಬ್ರಹ್ಮನೊಬ್ಬನೇ ಸತ್ಯನು, ಬೇರೆಯೆಲ್ಲವೂ ಮಿಥ್ಯಾಭೂತವಾದುದು ಎನ್ನುವುದು ನಿತ್ಯಾನಿತ್ಯವಸ್ತುವಿವೇಕವು ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ— ಇಂತಹ ವಿವೇಕವು ಶಾಸ್ತ್ರಾಧ್ಯಯನದಿಂದ ಮೊದಲೇ ಇದ್ದರೆ ಇಂತಹ ವಿವೇಕವನ್ನು ಮಾತ್ರ ಉಂಟುಮಾಡುವ ಶಾಸ್ತ್ರ ವಿಚಾರವೇ ನಿಷ್ಫಲವು ಆಗುವುದು. ಶಾಸ್ತ್ರದಿಂದ ತಿಳಿಯಲರ್ಹವಾದ ಇದಕ್ಕಿಂತ ಹೆಚ್ಚು ವಿಷಯವು ಅದ್ವೈತ ಮತದಲ್ಲಿ ಇರುವುದಿಲ್ಲ. ೨ ಐಹಿಕ ಪಾರಲೌಕಿಕ ವಿಷಯಭೋಗದಲ್ಲಿ ವಿರಕ್ತಿಯು ಎನ್ನುವುದೂ ಪರಮತದಲ್ಲಿ ಕೂಡುವುದಿಲ್ಲ. ಏಕೆಂದರೆ— ವಿವರಣಗ್ರಂಥದಲ್ಲಿ ವಿಷಯಗಳಿಂದಲೂ ಕೂಡ ನಿತ್ಯವಾದ ಆತ್ಮಸ್ವರೂಪಸುಖವೇ ಅಭಿವ್ಯಕ್ತವಾಗುತ್ತದೆ. ಜನ್ಯ ಸುಖವು ಇಲ್ಲವೆಂದು ಹೇಳಿದುದರಿಂದ ಸ್ವರೂಪಸುಖಾಭಿವ್ಯಕ್ತಿಯು ಮುಮುಕ್ಷುವಿಗೆ ಅಪೇಕ್ಷಣೀಯವಾಗಿರುವುದರಿಂದ ಅಂತಹ ಸುಖದಲ್ಲಿ ವೈರಾಗ್ಯ ಹೇಳಿದ್ದು ಯುಕ್ತವಲ್ಲ. ೩ ಶಮದಮಾದಿಸಂಪತ್ತು ಎನ್ನುವದೂ ಪರಮತದಲ್ಲಿ ಕೂಡುವುದಿಲ್ಲ. ಏಕೆಂದರೆ ಆದಿಶಬ್ದದಿಂದ ತಿತಿಕ್ಷಾದಿಗಳನ್ನು ಮಾತ್ರ ಇಟ್ಟುಕೊಳ್ಳಬೇಕು. ವಿವೇಕಾದಿಗಳನ್ನು ಇಟ್ಟುಕೊಳ್ಳಬಾರದು ಎಂದು ಹೇಳಿದ ನಿಯಮಕ್ಕೆ ಹೇತುವಾದ, ತಿತಿಕ್ಷಾದಿಗಳಲ್ಲಿರುವ ವಿವೇಕಾದಿಗಳಲ್ಲಿಲ್ಲದಿರುವ ಸಂಗ್ರಾಹಕ ಧರ್ಮವು ಇರುವು ದಿಲ್ಲ. ೪ ಮುಮುಕ್ಷಾ ಎನ್ನುವುದೂ ಪರರ ಪಕ್ಷದಲ್ಲಿ ಯುಕ್ತವಲ್ಲ. ಏಕೆಂದರೆ ಮೋಕ್ಷವು ನಿತ್ಯಸಿದ್ಧ ಆತ್ಮಸ್ವರೂಪವೇ ಆಗಿರುವುದರಿಂದ ಸಿದ್ಧವಾದ ಮೋಕ್ಷದಲ್ಲಿ ಇಚ್ಛೆಯು ಕೂಡಲಿಕ್ಕಿಲ್ಲ.

(ಸಿ) ಮತ್ತು ಭಾಮತೀರೀತಿಯಾಗಿ ಈ ಸಾಧನಚತುಷ್ಟಯದಲ್ಲಿ ಮೊದಲು ಮೊದಲಿನದ್ದು ಉತ್ತರೋತ್ತರಕ್ಕೆ ಹೇತುವಾಗಿರುವುದರಿಂದ ಮುಮುಕ್ಷಾ ಎನ್ನುವುದು ಮಾತ್ರ ಅಧಿಕಾರಿಯಲ್ಲಿ ವಿಶೇಷಣವು. ಇತರವಾದುದು ಮೋಕ್ಷೇಚ್ಛೆಗೆ ಕಾರಣವಾದುದು ಎಂದು ಹೇಳಿದರೆ ಮೋಕ್ಷೇಚ್ಛಾನಂತರದಲ್ಲಿ ಎಂದೇ ಅಥಶಬ್ದಾರ್ಥ ವಾಗಬೇಕಾಯಿತು. ಸಾಧನಚತುಷ್ಟಯಸಂಪತ್ಯನಂತರದಲ್ಲಿ ಎಂದು

---

೧ ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ । ಏವಮೇವಾಮುತ್ರ ಪುಣ್ಯ ಚಿತೋ ಲೋಕಃ ಕ್ಷೀಯತೇ॥ ಹೇಗೆ ಕರ್ಮಸಂಬಂಧವಾದ ಲೋಕವು ನಾಶವಾಗುತ್ತದೋ. ಹೀಗೆಯೇ ಪುಣ್ಯಸಂಪಾದಿತವಾದ ಲೋಕವೂ ನಾಶವಾಗುತ್ತದೆ. ಇದು ಮೊದಲಾದ ವೇದವು ಯಾವ ಕಾರಣದಿಂದ ಅಗ್ನಿಹೋತ್ರಾದಿ ಕರ್ಮಗಳ ಫಲವು ಅನಿತ್ಯವೆಂದು ತೋರಿಸುತ್ತದೆ.

೨ ಬ್ರಹ್ಮವಿದಾಪ್ನೋತಿ ಪರಂ ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ, ಇದು ಮೊದಲಾದ ವೇದವು ಬ್ರಹ್ಮಜ್ಞಾನದಿಂದ ಪರಮಪುರುಷಾರ್ಥವಾಗುತ್ತ ದೆಂದು ತೋರಿಸುತ್ತದೆ.

ಅಥಶಬ್ದಾರ್ಥವಾಗದೆ ಹೋಗಬೇಕಾಯಿತು.

(ಡಿ) ವಿವರಣರೀತಿಯಾಗಿ ಮುಮುಕ್ಷಾದಂತೆ ವಿವೇಕಾದಿಗಳೂ ಅಧಿಕಾರಿಯಲ್ಲಿ ವಿಶೇಷಣವು ಎಂದು ಹೇಳಕೂಡದು. ಶಮದಮಾದಿಗಳು ಇಲ್ಲದಿದ್ದರೂ ಮುಮುಕ್ಷಾ ಮಾತ್ರದಿಂದಲೇ ಜಿಜ್ಞಾಸೆಯು ದೃಷ್ಟವಾಗಿದೆ.

(ಇ) ಮತ್ತು ಪರೀಕ್ಷ್ಯಲೋಕಾನ್ ಎನ್ನುವ ಶ್ರುತಿಯಲ್ಲಿ ವಿಷ್ಣುಲೋಕದಿಂದ ಇತರಗಳಾದ ಲೋಕಗಳನ್ನು ಅಸಾರ ಅನಿತ್ಯಗಳೆಂದು ಪರೀಕ್ಷಿಸಿ ವಿರಕ್ತಿಯನ್ನು ಹೊಂದಬೇಕು ಎಂದು ಹೇಳಿದ್ದರಿಂದ ವಿವೇಕವು ವಿರಕ್ತಿಗೆ ಕಾರಣವಾಯಿತು. ಆದಕಾರಣ ಮುಮುಕ್ಷಾದಂತೆ ಅಧಿಕಾರಿ ವಿಶೇಷಣವೆಂದು ಹೇಳಿದ್ದು ಕೂಡುವುದಿಲ್ಲ.

(ಎಫ್) ನಮ್ಮ ಮತದಲ್ಲಿ ಆದರೂ ಶಾಸ್ತ್ರಾನುಸಾರವಾಗಿ ವಿವೇಕಾದಿಗಳು ಅಧಿಕಾರಿಯಲ್ಲಿ ವಿಶೇಷಣವಾಗಿರುವ ವೈರಾಗ್ಯಾದಿಗಳಿಗೆ ಕಾರಣವು. ಶಮದಮಾದಿಗಳಾದರೂ ಅಧಿಕಾರಿಯಲ್ಲಿಯೇ ವಿಶೇಷಣವು. ಆದಪ್ರಯುಕ್ತ ಪರರು ಹೇಳಿದ ನಿತ್ಯಾನಿತ್ಯವಸ್ತು ವಿವೇಕಾದಿರೂಪವಾದ ಅಧಿಕಾರವು ಸರ್ವಥಾ ಯುಕ್ತವಲ್ಲ.

(ಜಿ) ಪರರು ಹೇಳಿದ ಅತಃಶಬ್ದಾರ್ಥವೂ ಕೂಡುವುದಿಲ್ಲ. ಏಕೆಂದರೆ ಜಿಜ್ಞಾಸಾ ಕರ್ತವ್ಯತ್ವಾದಿ ರೂಪವಾದ ಸಾಧ್ಯಕ್ಕೆ ಸಾಧಕವಾದ ಹೇತುವನ್ನು ಹೇಳದೆ ವೈರಾಗ್ಯಾದಿ ಸಾಧನಗಳನ್ನುಂಟುಮಾಡುವ ತದ್ಯಥಾ ಇತ್ಯಾದಿ ಶ್ರುತಿನ್ನು ಅತಃಶಬ್ದದಿಂದ ತೆಗೆದುಕೊಳ್ಳಬೇಕೆಂದು ಹೇಳಿದ್ದು ಯುಕ್ತವಲ್ಲ. ಮತ್ತು ಅಥಶಬ್ದದಿಂದ ಉಪಸ್ಥಿತವಾದ ವೈರಾಗ್ಯದಿಂದಲೇ ಅದನ್ನು ಹುಟ್ಟಿಸತಕ್ಕ ತದ್ಯಥಾ ಇತ್ಯಾದಿ ಶ್ರುತಿಗೆ ಸಾಕ್ಷಾತ್ ಉಪಸ್ಥಿತಿಯಾಗುತ್ತದೆಂದು ಹೇಳದೆ ಬ್ರಹ್ಮಶಬ್ದದಿಂದ ಪರಂಪರಯಾ ತದ್ಯಥಾ ಇತ್ಯಾದಿ ಶ್ರುತ್ಯುಪಸ್ಥಿತಿಯು ಆಗುತ್ತದೆಂದು ಹೇಳಿದ್ದು ಯುಕ್ತವಲ್ಲ. ಮತ್ತು ವೈರಾಗ್ಯಕ್ಕೆ ಕಾರಣವೆಂದು ಅದ್ವೈತಿಗಳಿಗೆ ಅಭಿಪ್ರೇತವಾದ ಸತ್ಯಾನೃತ ವಿವೇಕದಲ್ಲಿ ನೇಹ ನಾನ ಇತ್ಯಾದಿ ಶ್ರುತಿಯನ್ನೇ ಹೇತುವೆಂದು ಹೇಳಬೇಕಿತ್ತು. ಅದನ್ನು ಬಿಟ್ಟು ತದ್ಯಥಾ ಇತ್ಯಾದಿ ಶ್ರುತಿಯನ್ನು ಹೇಳಿದ್ದು ಯುಕ್ತವಲ್ಲ.

(ಹೆಚ್) ಸೂತ್ರದಲ್ಲಿದ್ದ ಬ್ರಹ್ಮಶಬ್ದವು ಅಮುಖ್ಯವೃತ್ತಿಯಿಂದ ಅಖಂಡ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುತ್ತದೆಂದು ಪರರು ಹೇಳಿರುವರು. ಇದೂ ಅಯುಕ್ತವು. ಏಕೆಂದರೆ— ಶ್ರುತಿ ಸೂತ್ರಗಳಲ್ಲಿದ್ದ ಬ್ರಹ್ಮಪದಕ್ಕೇನೇ ಗುಣಪರಿಪೂರ್ಣತ್ವ ರೂಪವಾದ ಮುಖ್ಯಾರ್ಥವನ್ನು ಬಿಟ್ಟಂತೆಯೇ ಆಗುವುದು.

(ಐ) ಮತ್ತು ಪರರು ಬ್ರಹ್ಮನಿಗೆ ಜೀವನಿಂದ ಭೇದವನ್ನು ಹೇಳಿದರೆ ಜೀವಾತ್ಮಕ ತ್ವವಿಲ್ಲದಿರೋಣ ದರಿಂದ ಅಲ್ಪತ್ವವೂ ಬರುವುದಾದರಿಂದ ನಿರವಧಿಕಮಹತ್ವವು ಸಿದ್ಧಿಸದೆ ಹೋಗಬೇಕಾಗುವುದು. ಆದಕಾರಣ ದೇಶತಃ ಕಾಲತಃ ವಸ್ತುತಃ ಅಪರಿಚ್ಛಿನ್ನತ್ವರೂಪವಾದ ಮಹತ್ವವನ್ನು ಹೇಳುವ ಬ್ರಹ್ಮಶಬ್ದದಿಂದಲೇ ಜೀವಾಭೇದವು ಸಿದ್ಧಿಯಾಗುವುದೆಂದು ಹೇಳಿರುವರು. ಅದೂ ಅಯುಕ್ತವು. ಓಂದೆ ಹೇಳಿದ ರೀತಿಯಿಂದ ನಿರವಧಿಕಮಹತ್ವವು ಸಿದ್ಧಿಸುವುದಕ್ಕಾಗಿ ಬ್ರಹ್ಮನಿಗೆ ಘಟಪಟಾದಿಗಳಿಂದಲೂ ಅಭೇದವು ಹೇಳಬೇಕಾಗುವುದು. ಘಟ ಮೊದಲಾದ ಜಡಪದಾರ್ಥಗಳಿಂದ ಅಭೇದವನ್ನು ಹೇಳಿದರೆ ಬ್ರಹ್ಮನಿಗೆ ಚೇತನತ್ವವೂ ಇಲ್ಲವೆಂದಾಗುವುದು. ಆದಕಾರಣ ಬ್ರಹ್ಮಶಬ್ದದಿಂದ ಜೀವಾಭೇದವು

ಸಿದ್ಧಿಸುತ್ತದೆಂದು ಹೇಳಿದ್ದು ಯುಕ್ತವಲ್ಲ. ಆದುದರಿಂದ ಸರ್ವದೇಶ ವೃತ್ತಿತ್ವ ಸರ್ವಕಾಲ ವೃತ್ತಿತ್ವ ಸರ್ವಗುಣಪರಿಪೂರ್ಣತ್ವರೂಪವಾದ ತ್ರಿವಿಧ ಅಪರಿಚ್ಛಿನ್ನತ್ವವೇ ಬ್ರಹ್ಮಶಬ್ದಾರ್ಥವು. ಭೇದರಾಹಿತ್ಯವೆನ್ನುವುದು ಸರ್ವಥಾ ಯುಕ್ತವಲ್ಲ. **ದೇಶತಃ ಕಾಲತಶ್ಚೈವ ಗುಣತಶ್ಚಾಪಿ ಪೂರ್ಣತಾ। ಬ್ರಹ್ಮತಾ ನ ತು ಭೇದಸ್ಯ ರಾಹಿತ್ಯಂ ಬ್ರಹ್ಮತೇಷ್ಯತೇ ॥** ಎಂದು ನಿರೂಪಿಸಿರುವರು.

(ಜೆ) **ಬ್ರಹ್ಮಣೋ ಜಿಜ್ಞಾಸಾ** ಎಂದು ಕರ್ಮಣಿ ಷಷ್ಠೀಸಮಾಸವು. ಶೇಷೇ ಷಷ್ಠೀಸಮಾಸವಲ್ಲ ಎಂದು ಪರರು ಹೇಳಿರುವರು. ಇದೂ ಅಯುಕ್ತವು. ಪರರ ಪಕ್ಷದಲ್ಲಿ ವಿಚಾರಜನ್ಯ ಜ್ಞಾನಕ್ಕೆ ಕರ್ಮನಾಗದೆ ಇರುವ ಬ್ರಹ್ಮನಿಗೆ ವಿಚಾರಕರ್ಮತ್ವವೂ ಕೂಡುವುದಿಲ್ಲ. ಆದಕಾರಣ ಷಷ್ಠೀಗೆ ಕರ್ಮತ್ವವೆಂದು ಅರ್ಥಹೇಳಿದ್ದು ಯುಕ್ತವಲ್ಲ.

(ಕೆ) **ಅಥಶಬ್ದೇನಾಧಿಕಾರಮತ ಇತ್ಯಮುನಾ ಫಲಂ । ಬ್ರಹ್ಮಶಬ್ದೇನ ವಿಷಯಂ ಸೂಚಯಾಮಾಸ ಸೂತ್ರಕೃತ್ ॥** ಆದುದರಿಂದ ಸೂತ್ರಕಾರರು ಅಥಶಬ್ದದಿಂದ ಅಧಿಕಾರವನ್ನು ಅತಃ ಎನ್ನುವುದರಿಂದ ಫಲವನ್ನೂ ಬ್ರಹ್ಮಶಬ್ದದಿಂದ ವಿಷಯವನ್ನೂ ಸೂಚಿಸಿರುವರು ಎಂದು ಹೇಳಿದ್ದು ಅತಿಪ್ರಶಸ್ತವು.

(ಎಲ್) ಭಾಮತೀಕಾರರು ಜಿಜ್ಞಾಸಾಶಬ್ದವು ಜ್ಞಾನೇಚ್ಛಾಪರವೆಂದು ಹೇಳಿ ನಿಶ್ಚಿತವಾದುದರಲ್ಲಿ ಜಿಜ್ಞಾಸೆಯು ಕೂಡದಿರುವುದರಿಂದ ಸಂದಿಗ್ಧನಾದ ಪ್ರಯುಕ್ತ ಬ್ರಹ್ಮನೇ ವಿಷಯನು. ಇಚ್ಛಾವಿಷಯ ವಾದುದರಿಂದ ಜ್ಞಾನವೇ ಪ್ರಯೋಜನವು. ಆದಕಾರಣ ಜಿಜ್ಞಾಸಾಪದದಿಂದಲೇ ವಿಷಯಪ್ರಯೋಜನ ಗಳು ಸೂಚಿತಗಳಾಗುತ್ತವೆ ಎಂದು ಹೇಳಿರುವರು. ಅದು ಅಯುಕ್ತವು. ಪೂರ್ವಪಕ್ಷಿಯು ಬ್ರಹ್ಮಜ್ಞಾನದಲ್ಲಿ ಇಚ್ಛೆಯಿದೆ ಎಂದು ಅಂಗೀಕರಿಸಿಕೊಂಡು ವಿಚಾರವನ್ನು ಆಕ್ಷೇಪಿಸಿದ್ದಲ್ಲ. ಮತ್ತೆ ವಿಷಯಾದಿಗಳು ಇಲ್ಲ ದಿರುವುದರಿಂದ ಇಚ್ಛೆಯೇ ಹುಟ್ಟಲಿಕ್ಕೆ ಯೋಗ್ಯನಲ್ಲವೆಂದು ಆಕ್ಷೇಪಿಸಿರುವನು. ಆತನನ್ನು ಕುರಿತು ಇಚ್ಛೆಯಿಂದ ವಿಷಯಾದಿಗಳನ್ನು ಸಾಧಿಸಿದ್ದು ಯುಕ್ತವಲ್ಲ.

(ಎಂ) ವಿವರಣಕಾರರು ಅಥಶಬ್ದದಿಂದ ಅಧಿಕಾರಿಯೂ, ಜಿಜ್ಞಾಸಾಪದದಿಂದ ಇಚ್ಛೆಗೆ ವಿಷಯವಾಗಿ ಬ್ರಹ್ಮಜ್ಞಾನವು ಪ್ರಯೋಜನವೂ, ಅರ್ಥಾತ್ ಅಧಿಕಾರಿ ವಿಶೇಷಣಭೂತವಾದ ಇಚ್ಛೆಯಲ್ಲಿ ವಿಷಯವಾದ ಮೋಕ್ಷವು ಬ್ರಹ್ಮಜ್ಞಾನಕ್ಕೆ ಫಲವೂ, ಬ್ರಹ್ಮನೇ ವಿಷಯನೆಂದೂ ಸೂಚಿತವಾಯಿತು ಎಂದು ಹೇಳಿರುವರು. ಅದೂ ಅಯುಕ್ತವು. ಅವರ ಮತದಲ್ಲಿ ಜಿಜ್ಞಾಸಾಪದವು ವಿಚಾರಲಕ್ಷಕವೆಂದು ಹೇಳಿದುದರಿಂದ ಅದಕ್ಕೆ ಇಚ್ಛಾಪರತ್ವವೇ ಇರುವುದಿಲ್ಲ.

(ಎನ್) ಆದುದರಿಂದ ಭಾಮತೀಕಾರರು ಜಿಜ್ಞಾಸಾಶಬ್ದವು ಜ್ಞಾನೇಚ್ಛಾಪರವೆಂದು ಹೇಳಿದ್ದೂ ವಿವರಣಕಾರರು ಲಕ್ಷಣಯಾ ವಿಚಾರಪರವೆಂದು ಹೇಳಿದ್ದೂ ಯುಕ್ತವಲ್ಲ. ಆದಕಾರಣ ಜಿಜ್ಞಾಸಾಶಬ್ದವು ಮೀಮಾಂಸಾಶಬ್ದದಂತೆ ವಿಚಾರದಲ್ಲಿ ರೂಢಿರೂಪ ಮುಖ್ಯವೃತ್ತಿಯುಳ್ಳದ್ದು.

(ಓ) ಮತ್ತು ಪರರ ಮತದಲ್ಲಿ ಚೈತನ್ಯಸ್ವರೂಪವು ಸ್ವಪ್ರಕಾಶವಾದುದರಿಂದ ನಿತ್ಯಸಿದ್ಧವಾಗಿದೆ. ಇತರವಾದುದು ಅಜ್ಞಾನಕಲ್ಪಿತವಾದುದರಿಂದ ಅಜ್ಞಾನಕ್ಕೆ ವಿಷಯವಾಗುವುದಿಲ್ಲ. ವಿಷಯವಿಲ್ಲ ದಿರುವುದರಿಂದಲೇ ಅಜ್ಞಾನವು ಕೂಡುವುದಿಲ್ಲ. ಆದ ಕಾರಣ ಅಜ್ಞಾತವಾದುದು ವಿಷಯವೂ, ಅಜ್ಞಾನನಿವೃತ್ತಿಯು ಫಲವು ಅಜ್ಞಾನಿಯು ಅಧಿಕಾರಿಯು ಎನ್ನುವುದೂ ಕೂಡುವುದಿಲ್ಲ. ಆದುದರಿಂದ ಪರಮತರೀತ್ಯಾ ಈ ವೇದಾಂತ ಶಾಸ್ತ್ರವು ಅನಾರಂಭಣೀಯವೇ ಆಗುವುದು.

(ಪಿ) ತಸ್ಮಾಚ್ಛಾಸ್ತ್ರೇಣ ಜಿಜ್ಞಾಸ್ಯಮಸ್ಮದೀಯಂ ಗುಣಾರ್ಣವಂ। ವಾಸುದೇವಾಖ್ಯಮದ್ವಂದ್ವಂ ಪರಂ ಬ್ರಹ್ಮಾಖಿಲೋತ್ತಮಂ ॥ ಆದುದರಿಂದ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಸರ್ವೋತ್ತಮನಾದ ವಾಸುದೇವರೂಪಿಯಾದ ಶ್ರೀಪರಬ್ರಹ್ಮನು ಜಿಜ್ಞಾಸ್ಯನೆಂದು ಹೇಳಿದ್ದು ಅತಿಪ್ರಶಸ್ತವು.

## ವಿಶಿಷ್ಟಾದ್ವೈತರೀತ್ಯಾ ವ್ಯಾಖ್ಯಾನವು

ವಿಚಾರ ॥ (ಎ) ಕೇವಲ ಕರ್ಮಾದಿಗಳಿಗೆ ಅಲ್ಪ ಅಸ್ಥಿರ ಫಲಗಳು ಇದ್ದ ಪ್ರಯುಕ್ತವೂ ಬ್ರಹ್ಮಜ್ಞಾನ ಕ್ಕೇನೇ ಅನಂತ ಸ್ಥಿರಫಲಗಳು ಇದ್ದಪ್ರಯುಕ್ತವೂ ಅದನ್ನು ನಿರ್ಣಯಿಸುವುದಕ್ಕಾಗಿ ಬ್ರಹ್ಮವಿಚಾರಾರಂಭವು ಯುಕ್ತವು.

(ಬಿ) ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯಿಲ್ಲದಿರುವುದರಿಂದ ವಿಚಾರವನ್ನು ಮಾಡಕೂಡದೆಂದು ರಾಮಾನುಜಾಚಾರ್ಯರ ರೀತಿಯಾಗಿ ಪೂರ್ವಪಕ್ಷ ಮಾಡಿದರೆ ಬ್ರಹ್ಮ ವಿಚಾರವನ್ನು ಮಾಡಬೇಕೆಂದು ಮಾತ್ರ ಸಿದ್ಧಾಂತಮಾಡಬೇಕು. 'ಅಧಿಕಾರಾನಂತರ್ಯವಿಶಿಷ್ಟವಾದ ಕರ್ತವ್ಯತ್ವವನ್ನು ವಿಧಿಸಬಾರದು. ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ ಯಿಲ್ಲದಿದ್ದರೆ ಕರ್ಮವಿಚಾರಾನಂತರದಲ್ಲಿ ವಿಚಾರಕರ್ತವ್ಯತ್ವವು ಸಿದ್ಧಿಸುವುದಿಲ್ಲ.

(ಸಿ) ವೃದ್ಧವ್ಯವಹಾರದಿಂದ ಕಾರ್ಯದಲ್ಲಿಯೇ ಶಬ್ದಗಳಿಗೆ ವ್ಯುತ್ಪತ್ತಿಯು. ಸಿದ್ಧನಾದ ಬ್ರಹ್ಮನಲ್ಲಿ ವೇದಾಂತಗಳಿಗೆ ಪ್ರಾಮಾಣ್ಯವಿಲ್ಲ. ಆದಕಾರಣ ವಿಚಾರವನ್ನು ಆರಂಭಿಸಕೂಡದೆಂದು ಪೂರ್ವಪಕ್ಷವು ಬಂದರೆ ತಂದೆ ತಾಯಿ ಮೊದಲಾದವರನ್ನು ಅಂಗುಲಿಯಿಂದ ನಿರ್ದೇಶಮಾಡಿ ಆ ಶಬ್ದಗಳನ್ನು ಪ್ರಯೋಗ ಮಾಡೋಣ. ಬಾಲಕರಿಗೆ ಅವರಲ್ಲಿ ಆ ಶಬ್ದಗಳಿಂದ ವ್ಯುತ್ಪತ್ತಿಯು ಬರುವುದು. ಹಾಗೆಯೇ ಸಿದ್ಧರೂಪನಾದ ಬ್ರಹ್ಮನನ್ನು ತಿಳಿಸಿಕೊಡಲಿಕ್ಕೆ ವೇದಾಂತಗಳು ಶಕ್ತಗಳೇ ಆಗಿವೆ. ಆದಕಾರಣ ವಿಚಾರವನ್ನು ಮಾಡಬೇಕಾಗಿರುವುದರಿಂದ ಶಾಸ್ತ್ರವು ಆರಂಭಣೀಯವೇ ಆಗಿದೆ ಎಂದು ರಾಮಾನುಜಾಚಾರ್ಯರ ಅಭಿಪ್ರಾಯವು. ಇದೂ ಅಯುಕ್ತವು. ಏಕೆಂದರೆ

## ಸೂತ್ರ ॥ ಅಥಾತೋ ಬ್ರಹ್ಮಜಿಜ್ಞಾಸಾ

## ರಾಮಾನುಜಾಚಾರ್ಯರ ರೀತಿಯಾಗಿ ಸೂತ್ರಾರ್ಥವು

ಕರ್ಮವಿಚಾರಾನಂತರದಲ್ಲಿ ಕರ್ಮಗಳನ್ನು ವಿಚಾರ ಮಾಡಿರುವುದರಿಂದಲೇ ಬ್ರಹ್ಮ ವಿಚಾರವನ್ನು ಮಾಡಬೇಕು ಎಂದು.

(ಡಿ) ಇಲ್ಲಿ ಅಥಶಬ್ದಾದಿಗಳಿಂದ ಕಾರ್ಯದಲ್ಲಿ ವ್ಯುತ್ಪತ್ತಿನಿರಾಸವು ಪ್ರತೀತವಾಗುವುದಿಲ್ಲ. ಸೂತ್ರದಲ್ಲಿದ್ದ ಪದಗಳಿಂದ ನಿರಸ್ಯಗಳಾದ ಹೇತುಗಳಿಂದ ಸೂತ್ರಾವತಾರಿಕಾರೂಪವಾದ ಪೂರ್ವಪಕ್ಷವು ನಮ್ಮ ರೀತಿಯಾಗಿ ಕೂಡುವಾಗ ಸೂತ್ರದಲ್ಲಿದ್ದ ಪದಗಳಿಂದ ಹೇಳಲ್ಪಡದೆ ಇದ್ದ ಹೇತುಗಳಿಂದ ನಿರಸ್ಯವಾದ ಹೇತ್ವಂತರದಿಂದ ಕಾರ್ಯದಲ್ಲಿ ಪೂರ್ವಪಕ್ಷವು ಯುಕ್ತವಲ್ಲ.

(ಇ) ಹೇಗೆ ದ್ವೈತಿಗಳ ಮತದಲ್ಲಿ ಗುಣಪೂರ್ತಿವಾಚಕ ಬ್ರಹ್ಮಪದಪ್ರಯೋಗದಿಂದ ವಿಷಯವು ಸಿದ್ಧಿಸುತ್ತದೋ ಹಾಗೆಯೇ ಸಿದ್ಧಬ್ರಹ್ಮವಾಚಕ ಬ್ರಹ್ಮಪದಪ್ರಯೋಗದಿಂದ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು

ಆಗಬಹುದೆಂದರೆ— ವಿಧಿವಾಕ್ಯದಲ್ಲಿದ್ದ ಈ ಬ್ರಹ್ಮಶಬ್ದಕ್ಕೆ ಸ್ವಪ್ರಧಾನವಾದ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಈಗಲೂ ಸಿದ್ಧವಾಗಲಿಲ್ಲ. ಆದುದರಿಂದ ಬ್ರಹ್ಮಪದಪ್ರಯೋಗದಿಂದ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಹೇಗೆ ಸೂಚಿತವಾಗುವುದು?

(ಎಫ್) ಮತ್ತು **ಅಥಾತೋ ಧರ್ಮಜಿಜ್ಞಾಸಾ** ಎನ್ನುವುದನ್ನು ಆರಂಭಿಸಿ **ಅನಾವೃತ್ತಿಃ ಶಬ್ದಾತ್** ಎಂಬುವ ಪರ್ಯಂತ ಕರ್ಮಮೀಮಾಂಸಾ, ಬ್ರಹ್ಮಮೀಮಾಂಸಾ ಒಟ್ಟು ಇಪ್ಪತ್ತು ಅಧ್ಯಾಯಾತ್ಮಕ ವಾದುದು ಒಂದು ಶಾಸ್ತ್ರವೆಂದು ಹೇಳತಕ್ಕ ರಾಮಾನುಜಾಚಾರ್ಯರ ನಾಲ್ಕು ಅಧ್ಯಾಯಾತ್ಮಕವಾದ ದೇವಮೀಮಾಂಸೆಯು ಹನ್ನೆರಡು ಅಧ್ಯಾಯಗಳುಳ್ಳ ಕರ್ಮಮೀಮಾಂಸಾಕ್ಕಿಂತ ಪರವಾದುದು. ನಾಲ್ಕು ಅಧ್ಯಾಯಗಳುಳ್ಳ ಬ್ರಹ್ಮಮೀಮಾಂಸಾಕ್ಕಿಂತ ಪೂರ್ವದಲ್ಲಿರತಕ್ಕುದು ಎಂದು ಸ್ವೀಕಾರಮಾಡಿದುದರಿಂದ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಇಲ್ಲದಿದ್ದರೆ ಸಿದ್ಧರೂಪವಾದ ದೇವಮೀಮಾಂಸೆಯೂ ಕೂಡದೆ ಇದ್ದುದರಿಂದ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ದೇವಮೀಮಾಂಸಾದಲ್ಲಿಯೇ ಸಿದ್ಧವಾದ ಪ್ರಯುಕ್ತ ಪುನಃ ಈ ಬ್ರಹ್ಮ ಮೀಮಾಂಸಾ ಶಾಸ್ತ್ರದಲ್ಲಿ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯೇ ಕೂಡುವುದಿಲ್ಲ ಎನ್ನುವ ಹೇತುವಿನಿಂದ ಪೂರ್ವಪಕ್ಷವು ಯುಕ್ತವಲ್ಲ. ಆದುದರಿಂದರಿಂದಲೇ ಸಿದ್ಧಾಂತವೂ ಅಯುಕ್ತವು. ರಾಮಾನುಜಾ ಚಾರ್ಯರ ರೀತಿಯಾಗಿ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಅತಃಶಬ್ದಾದಿಗಳಿಂದ ತಿಳಿದು ಬರುವುದಿಲ್ಲ. ಆದಕಾರಣ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಇಲ್ಲದಿರುವುದರಿಂದ ಸಿದ್ಧಪರ ವೇದಾಂತವಿಚಾರವು ಅನಾರಂಭಣೀಯವೆಂದು ಪೂರ್ವಪಕ್ಷಮಾಡಿದ್ದು ಯುಕ್ತವಲ್ಲ.

## ಅಧಿಕರಣ ಸಾರಾಂಶ

ಕಾಲಬಲದಿಂದಲೂ ಗೌತಮಋಷಿಗಳ ಶಾಪದಿಂದಲೂ ತತ್ತ್ವಜ್ಞಾನವು ನಷ್ಟವಾಗೋಣ ದಯಾವಂತರಾದ ಬ್ರಹ್ಮರುದ್ರಾದಿದೇವತೆಗಳಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟ ಶ್ರೀನಾರಾಯಣನು ವ್ಯಾಸರೂಪದಿಂದ ಅವತರಿಸಿದನು. ಅವರು ಅಪಪಾಠಾದಿಗಳಿಂದ ನಷ್ಟ ಪ್ರಾಯಗಳಾದ ವೇದಗಳನ್ನು ವಿಭಾಗ ಮಾಡಿ ವೇದಾರ್ಥಗಳನ್ನು ನಿರ್ಣಯಿಸುವುದಕ್ಕಾಗಿ ಬ್ರಹ್ಮಸೂತ್ರಗಳನ್ನು ನಿರ್ಮಿಸಿದರು.

ಈ ಸೂತ್ರಗಳ ಮೇಲೆ ಉಂಟಾದ ಅನೇಕ ದುರ್ಭಾಷ್ಯಗಳನ್ನು ಖಂಡಿಸಿ ಶ್ರೀಮದಾಚಾರ್ಯರು ಸರಿಯಾದ ಭಾಷ್ಯವನ್ನು ನಿರ್ಮಿಸಿ ಆ ಭಾಷ್ಯದಲ್ಲಿ ತ್ರಿವಿಧ ಅಧಿಕಾರಿಗಳನ್ನು ನಿರೂಪಿಸಿ ಅಂತಹ ಅಧಿಕಾರಿ ಗಳಿಗೆ ಮೋಕ್ಷವಾಗಬೇಕಾದರೆ ಶ್ರೀನಾರಾಯಣನ ಪ್ರಸಾದವು ಆವಶ್ಯಕವು. ಪ್ರಸಾದಕ್ಕೆ ಅಪರೋಕ್ಷ ಜ್ಞಾನವು, ಅಪರೋಕ್ಷಜ್ಞಾನಕ್ಕೆ ಬ್ರಹ್ಮಜಿಜ್ಞಾಸೆಯು ಆವಶ್ಯಕವು. ಇಲ್ಲಿ ಜಿಜ್ಞಾಸ್ಯಬ್ರಹ್ಮನು ವಿಷ್ಣುವೇ, ಇತರರಲ್ಲ. ತದೇವ ಬ್ರಹ್ಮ ಎನ್ನುವ ಶ್ರುತಿಯಲ್ಲಿ ವಿಷ್ಣುವೇ ಪರಬ್ರಹ್ಮನೆಂದು ಹೇಳಿರುತ್ತಾರೆ. **ತಥಾಚ ಯೋ ದೇವಾನಾಂ** ಎಂದು ವಿಷ್ಣುವಿಗೇನೇ ಸರ್ವನಾಮವನ್ನು ಹೇಳಿದ್ದರಿಂದ ಇತರರಿಗೆ ಸರ್ವಶಬ್ದವಾಚ್ಯತ್ವವು ಇಲ್ಲ. ಆದಕಾರಣ ತನ್ನೋ ವಿಷ್ಣುಃ ಇತ್ಯಾದಿಗಳಲ್ಲಿ ರುದ್ರಾದಿಗಳಿಗೆ ಪ್ರಾಪ್ತಿಯಿಲ್ಲದೆ ಇರುವುದರಿಂದ ವಿಷ್ಣುವೇ ಪರಬ್ರಹ್ಮನು. ಆದಕಾರಣ ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವು ಮುಖ್ಯವಾದ ಪ್ರಯುಕ್ತ ವಿಷ್ಣುವೇ ಸೂತ್ರಕಾರರಿಗೆ ಜಿಜ್ಞಾಸ್ಯಬ್ರಹ್ಮನೆಂದು ವಿವಕ್ಷಿತನು. ಹೀಗೆ ಜಿಜ್ಞಾಸ್ಯನಲ್ಲಿ ತತ್ ಬ್ರಹ್ಮ ಎಂದು ಬ್ರಹ್ಮಪದವು ಶ್ರುತವಾದ ಪ್ರಯುಕ್ತ ಬ್ರಹ್ಮಪದದಿಂದ ವಿಷ್ಣುವಿಗೆ ಗುಣಪರಿಪೂರ್ಣತ್ವವನ್ನು ಹೇಳಿದ್ದರಿಂದ

ಅಲ್ಪಗುಣಗಳುಳ್ಳವನೆಂದು ಅನುಭವಸಿದ್ಧನಾದ ಜೀವನಿಂದ ಬ್ರಹ್ಮನಿಗೆ ಅಭೇದವಿಲ್ಲ. ಈ ಪ್ರಕಾರ ಜೀವನಿಂದ ಭಿನ್ನನಾದ ಶ್ರೀಹರಿಯು ವಾದಿವಿಪ್ರತಿಪತ್ತಿಯಿಂದ ಸಂದಿಗ್ಧನಾದ ಪ್ರಯುಕ್ತ ಶ್ರೀಹರಿಗೆ ವಿಷಯತ್ವವು ಸಿದ್ಧವಾಗಿರುವುದರಿಂದಲೂ ಮೋಕ್ಷರೂಪ ಪ್ರಯೋಜನವೂ ಮುಮುಕ್ಷುರೂಪ ಅಧಿಕಾರಿಯೂ ಇದ್ದಪ್ರಯುಕ್ತ ಬ್ರಹ್ಮಜಿಜ್ಞಾಸೆಯನ್ನು ಅವಶ್ಯವಾಗಿ ಮಾಡಲೇಬೇಕು. ಆದಕಾರಣ ಶ್ರುತ್ಯರ್ಥನಿರ್ಣಾಯಕ ನ್ಯಾಯಪ್ರತಿಪಾದಕವಾದ ಬ್ರಹ್ಮಮೀಮಾಂಸಾ ಶಾಸ್ತ್ರವು ಆರಂಭಣೀಯವೇ ಎಂದು ಸಿದ್ಧವಾಯಿತು.

**ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.**

# ಜನ್ಮಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಹೇಳತಕ್ಕುದನ್ನು ತೋರಿಸುತ್ತಾರೆ.

**ಭಾಷ್ಯ ॥ ಬ್ರಹ್ಮಣೋ ಲಕ್ಷಣಮಾಹ ॥ ೧ ॥**

**ಭಾಷ್ಯಾರ್ಥ ॥** (ಜಿಜ್ಞಾಸ್ಯ) ಬ್ರಹ್ಮನಿಗೆ (ಶ್ರುತಿಯಲ್ಲಿ ಹೇಳಿದ) ಲಕ್ಷಣವನ್ನು (ಸೂತ್ರಕಾರರು) ಹೇಳುತ್ತಾರೆ.

**ಪೀಠಿಕೆ ॥** ★ರೂಢಾರ್ಥಕ್ಕೆ ಬಾಧಕವಿಲ್ಲದೆ ಇರುವುದರಿಂದ ಬ್ರಹ್ಮಶಬ್ದದಿಂದ ಜೀವನನ್ನು ಇಟ್ಟುಕೊಳ್ಳಬೇಕು. ಜೀವನು ಸಂದಿಗ್ಧನಾಗದೆ ಇದ್ದಪ್ರಯುಕ್ತ ಜಿಜ್ಞಾಸ್ಯನಾಗುವುದಿಲ್ಲ ಎನ್ನುವ ಆಶಂಕೆಯನ್ನು ನಿರಾಕರಿಸುವುದಕ್ಕೋಸ್ಕರ ಬ್ರಹ್ಮಶಬ್ದದಿಂದ ರೂಢಾರ್ಥಜೀವನನ್ನು ಇಟ್ಟುಕೊಂಡರೆ ಬಾಧಕವಿದೆನ್ನುವ ಅಭಿಪ್ರಾಯದಿಂದ ಶ್ರುತಿಯಲ್ಲಿ ಹೇಳಿದ ಲಕ್ಷಣವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಜನ್ಮಾದ್ಯಸ್ಯ ಯತಃ ಓಂ ॥ ೨ ॥

**ಸೂತ್ರಾರ್ಥ ॥** ಅಸ್ಯ=ಪ್ರಮಾಣಸಿದ್ಧವಾದ ಚೇತನಾಚೇತನಾತ್ಮಕ ಜಗತ್ತಿಗೆ, ಯತಃ= ಯಾರದೆಸೆಯಿಂದ, ಜನ್ಮಾದಿಃ=ಉತ್ಪತ್ತಿ ಮೊದಲಾದುದು, (ಯಥಾ ಯೋಗ್ಯವಾಗಿ ಆಗುತ್ತದೋ ಅವನೇ ಬ್ರಹ್ಮನು.)

**ವಿಶೇಷಾಂಶ ॥** (ಎ) ಬ್ರಹ್ಮವಿಚಾರವನ್ನು ಆಕ್ಷೇಪಿಸಿಕೊಂಡು ಇಲ್ಲಿ ಪೂರ್ವಪಕ್ಷವು ಹೊರಟಿರುವುದರಿಂದ ಈ ಅಧಿಕರಣಕ್ಕೆ ಜಿಜ್ಞಾಸಾಧಿಕರಣದಿಂದ ಆಕ್ಷೇಪಿಕೀಸಂಗತಿಯು. (ಬಿ) ಪೂರ್ವಾಧಿಕರಣ ಅದರಲ್ಲಿದ್ದ ವಿಷಯವಾಕ್ಯ ಇವುಗಳಿಂದ ಈ ಅಧಿಕರಣ ವಿಷಯವಾಕ್ಯ ಇವುಗಳಿಗೆ ಸಂಗತಿಗಳು ಅಧಿಕರಣಸಂಗತಿ, ಶ್ರುತಿಸಂಗತಿಗಳೆನಿಸುತ್ತವೆ. ಹೀಗೆಯೇ ಮೇಲೆಯೂ ಸಂಗತಿಗ್ರಂಥಗಳನ್ನು ವ್ಯಾಖ್ಯಾನ ಮಾಡಿಕೊಳ್ಳಬೇಕು. (ಸಿ) ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮನು ಇಲ್ಲಿ ವಿಷಯನು. ಬ್ರಹ್ಮ

★ ಬ್ರಹ್ಮಾಣ ಜೀವಾಃ ಸರ್ವೇಽಪಿ ಎನ್ನುವ ಪ್ರಮಾಣದಿಂದಲೂ, ಬೃಹಜ್ಜಾತಿಜೀವ ಕಮಲಾಸನ ಶಬ್ದರಾಶಿಷು ಎನ್ನುವ ವ್ಯಾಕರಣ ಸ್ಮೃತಿಯಿಂದಲೂ ರೂಢಿಯಿಂದ ಬ್ರಹ್ಮಶಬ್ದವಾಚ್ಯನು ಜೀವನೇ ಆಗಬೇಕು.

ಶಬ್ದವಾಚ್ಯನು ವಿಷ್ಣುವೋ, ಜೀವಾದಿಗಳೋ ಎಂಬ ಸಂದೇಹವು. ತದೇವ ಬ್ರಹ್ಮ ಎನ್ನುವ ಶ್ರುತಿಯಿಂದ ವಿಷ್ಣುವಿನಲ್ಲಿಯೂ ಬೃಹ ಜಾತಿಜೀವ ಎನ್ನುವುದರಿಂದ ಜೀವನಲ್ಲಿಯೂ ಹೀಗೆ ಎರಡು ಕಡೆಯಲ್ಲಿಯೂ ಬ್ರಹ್ಮಪದಪ್ರಯೋಗವೇ ಸಂದೇಹಕ್ಕೆ ಕಾರಣವು. (ಡಿ) ಯದ್ಯಪಿ ಬ್ರಹ್ಮಶಬ್ದಕ್ಕೆ ವಿಷ್ಣಾವೇವ ಎನ್ನುವ ಭಾಷ್ಯದಿಂದ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವೆಂದು ಹೇಳಿಯದೆ. ಆದರೂ ಭಾಷ್ಯಕಾರರು ಹೇಳಿದಾಗ್ಯೂ ಸೂತ್ರಕಾರರು ಹೇಳದೆ ಇರುವುದರಿಂದ ಬ್ರಹ್ಮಶಬ್ದವಾಚ್ಯನು ಜೀವನೋ, ವಿಷ್ಣುವೋ ಎಂದು ಸಂದೇಹವು ಬಂದೇ ಬರುತ್ತದೆ. (ಇ) ಬೃಹಜಾತಿಜೀವ ಇತ್ಯಾದಿಗಳಿಂದ ಬ್ರಹ್ಮಶಬ್ದವು ಜೀವನಲ್ಲಿ ರೂಢವಾಗಿದೆ. ಗುಣಪೂರ್ತಿರೂಪವಾದ ಯೋಗಾರ್ಥವು ಜೀವನಲ್ಲಿ ಕೂಡುವುದೇ ಇಲ್ಲ ಆದಕಾರಣ ಬ್ರಹ್ಮಶಬ್ದವಾಚ್ಯನು ಜೀವನೇ ಎಂದು ಪೂರ್ವಪಕ್ಷವು. (ಎಫ್) ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಜೀವನನ್ನು ಇಟ್ಟುಕೊಂಡರೆ ಬಾಧಕವಿದೆ ಎನ್ನುವ ಅಭಿಪ್ರಾಯದಿಂದ ಜಜ್ಞಾಸ್ಯ ಬ್ರಹ್ಮನಿಗೆ ಶ್ರುತಿಯಲ್ಲಿ ಹೇಳಿದ ಲಕ್ಷಣವನ್ನು ಸೂತ್ರಕಾರರು ಹೇಳಿರುವರು. (ಜಿ) ಜನ್ಮಾದಿ ಎನ್ನುವಲ್ಲಿ ಜನ್ಮ ಆದಿರ್ಯಸ್ಯ ಎಂದು ಜನ್ಮವನ್ನು ಸೇರಿಸಿಕೊಂಡು ಸೃಷ್ಟಿ ಮೊದಲಾದ ಎಂಟನ್ನೂ ಇಟ್ಟುಕೊಳ್ಳಬೇಕು.

**ಪೀಠಿಕೆ ॥** ಜನ್ಮಾದಿ ಎನ್ನುವಲ್ಲಿದ್ದ ಆದಿಪದದಿಂದ ಸ್ಥಿತಿ, ಸಂಹಾರಗಳನ್ನು ಮಾತ್ರ ಇಟ್ಟುಕೊಳ್ಳಬೇಕೆಂದು ಪರಕೀಯರು ಹೇಳುವರು. ಅದು ಅಯುಕ್ತವೆನ್ನುವ ಅಭಿ ಪ್ರಾಯದಿಂದ ಸೂತ್ರವನ್ನು ಸರಿಯಾಗಿ ವ್ಯಾಖ್ಯಾನ ಮಾಡುತ್ತಾರೆ.

**ಭಾಷ್ಯ ॥ ★ಸೃಷ್ಟಿಸ್ಥಿತಿ ಸಂಹಾರ ನಿಯಮನ ಜ್ಞಾನಾಜ್ಞಾನ ಬಂಧ ಮೋಕ್ಷಾ ಯತಃ॥ ೨ ॥**

**ಭಾಷ್ಯಾರ್ಥ ॥** ಯಾರದೆಸೆಯಿಂದ (ಜಗತ್ತಿಗೆ) ಸೃಷ್ಟಿ ಸ್ಥಿತಿ ಸಂಹಾರ ನಿಯಮನ ಜ್ಞಾನ ಅಜ್ಞಾನ ಸಂಸಾರಬಂಧ ಮೋಕ್ಷ ಇವು ಎಂಟು (ಆಗುತ್ತವೋ ಅವನೇ ಬ್ರಹ್ಮನು.)

**ವಿಶೇಷಾಂಶ ॥** (ಎ) ಯದ್ಯಪಿ ಸೃಷ್ಟಿ ಎಂದರೆ ಉತ್ಪತ್ತಿಗೆ ಅನುಕೂಲವಾದ ವ್ಯಾಪಾರವು. ಸಂಹಾರಃ ನಾಶಕ್ಕೆ ಅನುಕೂಲವಾದ ವ್ಯಾಪಾರವು. ನಿಯಮನಃಪ್ರೇರಣೆಯು. ಇವು ಶ್ರೀಹರಿಯಲ್ಲಿರುವ ಪ್ರಯೋಜಕ ವ್ಯಾಪಾರಗಳು. ಆದಾಗ್ಯೂ ಸೃಷ್ಟಿ ಮೊದಲಾದ ಪದಗಳಿಂದ ಜಗತ್ತಿನಲ್ಲಿರತಕ್ಕ ಪ್ರಯೋಜ್ಯ ವ್ಯಾಪಾರರೂಪವಾದ ಉತ್ಪತ್ತಿ ನಾಶ, ನಿಯಮ್ಯತ್ವಗಳನ್ನು ಅಮುಖ್ಯವೃತ್ತಿಯಿಂದ ಇಟ್ಟುಕೊಳ್ಳಬೇ ಕು. (ಬಿ) ಈಶ್ವರನು ಉತ್ಪತ್ತಿಕರ್ತನು, ಉಪಾದಾನಕಾರಣನಲ್ಲ. ಈ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿಯೇ ಸೃಷ್ಟಿ ಮೊದಲಾದ ಲಾಕ್ಷಣಿಕ ಪದವನ್ನು ಹೇಳಿರುವರು. (ಸಿ) ಸೃಷ್ಟಿಕರ್ತೃತ್ವ ಮೊದಲಾದವು ಎಂಟು ಪ್ರತ್ಯೇಕ ಪ್ರತ್ಯೇಕ ಲಕ್ಷಣವು. ಎಂಟು ಸೇರಿ ಒಂದು ಲಕ್ಷಣವಲ್ಲ. (ಡಿ) ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಗುಣಪರಿಪೂರ್ಣತ್ವವು ಪ್ರಧಾನಲಕ್ಷಣವು. ಸೃಷ್ಟ್ಯಾದ್ಯಷ್ಟಕರ್ತೃತ್ವವು ಅದಕ್ಕೆ ಉಪಪಾದಕ ಲಕ್ಷಣವು. (ಇ) ನ ಪೌರ್ವಾಪರ್ಯಮಿಚ್ಛಂತಿ ನದ್ಮಾಂ ಭ್ರಾಮ್ಯದ್ಭ್ರಮೇರಿವ । ಎಂದು ಭಾಗವತದಲ್ಲಿ ಹೇಳಿದ ಪ್ರಕಾರ ಜನ್ಮಾದಿಗಳಲ್ಲಿ ಪೌರ್ವಾಪರ್ಯವಿಲ್ಲದಿದ್ದರೂ ಹುಟ್ಟದವನಿಗೇನೇ

★ ಸೃಷ್ಟಿಸ್ಥಿತ್ಯಾಹೃತಿಜ್ಞಾನನಿಯತ್ಯಜ್ಞಾನಬಂಧನಾನ್। ಮೋಕ್ಷಂ ಚ ವಿಷ್ಣುತಶ್ಚೈವ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ॥ ಸೃಷ್ಟಿ ಮೊದಲಾದವು ಎಂಟೂ ವಿಷ್ಣುವಿನಿಂದ ಲೇ ಆಗುತ್ತದೆ ಎಂದು ತಿಳಿದವನಿಗೇನೇ ಮುಕ್ತಿಯು, ಇಲ್ಲವಾದರೆ ಮುಕ್ತಿಯಾಗಲಾರದು.

ಸ್ಥಿತಿಸಂಹಾರಾದಿಗಳೂ ಈ ಅಭಿಪ್ರಾಯದಿಂದಲೇ ಜನ್ಮವನ್ನು ಮೊದಲು ಹೇಳಿದ್ದು. (ಎಫ್) ಸೃಷ್ಟಿ ಕರ್ತೃತ್ವ ಮೊದಲಾದ ಒಂದೊಂದೇ ಲಕ್ಷಣಕ್ಕೆ ಅತಿವ್ಯಾಪ್ತ್ಯಾದಿ ದೋಷಗಳಿಲ್ಲದಿದ್ದರೂ ಮೋಕ್ಷವನ್ನು ಬಯಸುವ ಪುರುಷನು ಎಂಟನ್ನೂ ತಿಳಿದುಕೊಳ್ಳಬೇಕಾದುದರಿಂದ ಎಂಟು ಲಕ್ಷಣಗಳನ್ನು ಹೇಳಿರುವರು.

ಪೀಠಿಕೆ॥ ಜಗಜ್ಜನ್ಮಾದಿಕರ್ತೃತ್ವವು ವಿಷ್ಣುವಿನಲ್ಲಿ ಮಾತ್ರ ಇರತಕ್ಕುದೆಂದಾಗಿದ್ದರೆ ಬ್ರಹ್ಮಶಬ್ದದಿಂದ ಜೀವನನ್ನು ಇಟ್ಟುಕೊಂಡರೆ ಬಾಧಕವು ಬರುತ್ತಿತ್ತು. ಅದು ವಿಷ್ಣುವಿನಲ್ಲಿ ಇರತಕ್ಕದ್ದೆಂದು ಹೇಗೆ ತಿಳಿಯುತ್ತದೆ ಎಂದರೆ—

**ಭಾಷ್ಯ ॥ ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ ।**

**ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸ ಹರಿರೇಕರಾಡಿತಿ ಸ್ಕಾಂದೇ ॥ ೩ ॥**

ಭಾಷ್ಯಾರ್ಥ ॥ ಯಾವ ಪುರುಷನಿಂದ (ಈ ಜಗತ್ತಿಗೆ) ಉತ್ಪತ್ತಿ ಸ್ಥಿತಿ ಸಂಹಾರ ಗಳು ಪ್ರೇರಣೆಯು ಜ್ಞಾನವು ಅಜ್ಞಾನವು ಸಂಸಾರಬಂಧ ಮೋಕ್ಷ ಇವುಗಳೂ ಕೂಡ (ಆಗುತ್ತವೋ) ಆತನು ಸ್ವತಂತ್ರನಾದ ಶ್ರೀಹರಿಯೇ. ಹೀಗೆ ಸ್ಕಾಂದಪುರಾಣ ದಲ್ಲಿ (ಹೇಳಿದುದರಿಂದ ಸೃಷ್ಟಿ ಮೊದಲಾದ ಎಂಟನ್ನೂ ಮಾಡುವವನು ಶ್ರೀಹರಿಯೇ.)

ವಿಶೇಷಾಂಶ ॥ ಜಿಜ್ಞಾಸ್ಯಂ ಬ್ರಹ್ಮ ವಿಷ್ಣುರೇವ ಜಗಜ್ಜನ್ಮಾದಿಕರ್ತೃತ್ವಾತ್=ಜಗತ್ತಿಗೆ ಉತ್ಪತ್ತಿ ಮೊದಲಾದವುಗಳನ್ನು ಮಾಡತಕ್ಕವನಾದುದರಿಂದ ಜಿಜ್ಞಾಸ್ಯನಾದ ಬ್ರಹ್ಮನು ಶ್ರೀಹರಿಯೇ ಎಂದನುಮಾನವು ಉಕ್ತವಾಯಿತು.

ಪೀಠಿಕೆ॥ ಜಗಜ್ಜನ್ಮಾದಿಕರ್ತೃತ್ವರೂಪನಾದ ಹೇತುವು ಪಕ್ಷದಲ್ಲಿ (ಜಿಜ್ಞಾಸ್ಯ ಬ್ರಹ್ಮ ನಲ್ಲಿ) ಸಿದ್ಧವಾಗ ಲಿಲ್ಲವೆಂದರೆ ಆ ಜಗತ್ಕಾರಣತ್ವ ಲಕ್ಷಣವು ಜಿಜ್ಞಾಸ್ಯಬ್ರಹ್ಮನಲ್ಲಿ ತದ್ವಿಜಿಜ್ಞಾಸಸ್ವ ಎನ್ನುವ ವಾಕ್ಯದಿಂದ ಮೊದಲಿನ ವಾಕ್ಯದಲ್ಲಿಯೇ ಹೇಳಿಯದೆ ಎನ್ನುತ್ತಾರೆ.

**ಭಾಷ್ಯ ॥ ಯತೋ ವಾ ಇಮಾನಿ ಭೂತಾನಿ ಜಾಯಂತೇ ।**

**ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ ।**

**ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ (ತೈ.ಉ.೩-೧) ॥ ೪ ॥**

ಭಾಷ್ಯಾರ್ಥ ॥ ಎಲ್ಲಾ ಜಗತ್ತುಗಳೂ ಯಾರಿಂದಲೇ ಹುಟ್ಟುತ್ತವೋ, ಹುಟ್ಟದವುಗಳು ಯಾರಿಂದಲೇ ಪ್ರಾಣವನ್ನು ಧರಿಸುತ್ತವೋ, ಯಾರನ್ನು ಪ್ರಲಯಕಾಲದಲ್ಲಿ ಪ್ರವೇಶಮಾಡುತ್ತವೋ, ಯಾರನ್ನು ತನ್ನ ಇಚ್ಛೆಯಿಂದಲೇ ಚೆನ್ನಾಗಿ ಮುಕ್ತಿಯಲ್ಲಿ ಪ್ರವೇಶಮಾಡುತ್ತವೋ ಅವನೇ ಬ್ರಹ್ಮನು (ಮುಖ್ಯವಾಗಿ ಇವರ ಜ್ಞಾನಕ್ಕಾಗಿಯೇ) ವೇದಗಳ ಅರ್ಥಭೂತನಾದ ಬ್ರಹ್ಮನನ್ನು ವಿಚಾರಮಾಡು. ಹೀಗೆ (ವರುಣನು ಭೃಗುವಿನ ಹತ್ತಿರ ಹೇಳಿರುವನು.)

ಪೀಠಿಕೆ ॥ ಲಕ್ಷಣವು ರುದ್ರಾದಿದೇವತೆಗಳಲ್ಲಿ ಸರ್ವಥಾ ಇಲ್ಲವೆಂದು ಪ್ರಥಮತಃ ಸ್ಮೃತಿಯಿಂದ ಹೇಳಿ ಈಗ ಸೃಷ್ಟಿಕರ್ತೃತ್ವ ಮೊದಲಾದುದು ಒಂದೊಂದು ಕೂಡ ವಿಷ್ಣುವಿನಲ್ಲಿ ಮಾತ್ರ ಇರತಕ್ಕುದು ಎನ್ನುವ ಅಭಿಪ್ರಾಯದಿಂದ ಸ್ಥಿತಿಕರ್ತೃತ್ವವು ವಿಷ್ಣುವಿನಲ್ಲಿ ಮಾತ್ರ ಇರತಕ್ಕುದು ಎನ್ನುವ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.

ಭಾಷ್ಯ ॥ ಯ ಉ ತ್ರಿಧಾತು ಪೃಥಿವೀಮುತ

ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ (ಋ.ಸಂ.೧.೧೫೪.೪.) ॥ ೫ ॥

ಭಾಷ್ಯಾರ್ಥ ॥ ಯಾವ ವಿಷ್ಣುವು ಒಬ್ಬನೇ ಪ್ರಕೃತಿ ಪುರುಷ ಕಾಲಗಳನ್ನು ಧರಿಸಿಕೊಂಡು ಇರುವವನೋ ಭೂದೇವಿಯನ್ನೂ ಲಕ್ಷ್ಮೀದೇವಿಯನ್ನೂ ಎಲ್ಲಾ ಲೋಕ ಗಳನ್ನೂ ಧರಿಸಿರುವವನೋ (ಅಂತಹ ವಿಷ್ಣುವು ನನಗೆ ಸುಖವನ್ನು ಕೊಡಲಿ.)

ಪೀಠಿಕೆ ॥ ಪ್ರೇರಣೆಯನ್ನು ಮಾಡುವವನೂ ಶ್ರೀಹರಿಯೊಬ್ಬನೇ ಎನ್ನುವ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.

ಭಾಷ್ಯ ॥ ಚತುರ್ಭಿಸ್ಸಾಕಂ[1] ನವತಿಂ ಚ ನಾಮಭಿ—

ಶ್ಚಕ್ರಂ ನ ವೃತ್ತಂ ವ್ಯತೀಂರವೀವಿಪತ್ (ಋ.ಸಂ.೧.೧೫೫.೬.) ॥ ೬ ॥

ಭಾಷ್ಯಾರ್ಥ ॥ (ಮೂಲರೂಪಿಯಾದ ವಿಷ್ಣುವು) ಸ್ವರೂಪಭೇದವಿಲ್ಲದಿರುವ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎನ್ನುವ ನಾಲ್ಕುರೂಪಗಳಿಂದ ಕೂಡಿಕೊಂಡು ತೊಂಭತ್ತುಮಂದಿ ವಿಶೇಷವಾಗಿ ಉತ್ತಮರಾದ ದೇವತೆಗಳನ್ನು ವರ್ತುಲವಾದ ಚಕ್ರವನ್ನಂಬಂತೆ (ಸೃಷ್ಟಿ ಮೊದಲಾದ ವ್ಯಾಪಾರಗಳಿಂದ) ತಿರುಗಿಸುತ್ತಾ ಇರುವನು.

ವಿಶೇಷಾಂಶ ॥ ೮ ಮಂದಿ ವಸುಗಳು, ೧೧ ರುದ್ರರು, ವಿಷ್ಣುವನ್ನು ಬಿಟ್ಟು ೧೧ ಆದಿತ್ಯರು, ಚತುರ್ಮುಖನು ಕೂಡಿ ೧೦ ಪ್ರಜಾಪತಿಗಳು. ಪ್ರಧಾನವಾಯುವು ಕೂಡಿ ೫೦ ಮರುತುಗಳು. ಒಟ್ಟು ೯೦ ದೇವತೆಗಳು. ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎನ್ನುವ ನಾಲ್ಕು ಭಗವದ್ರೂಪಗಳು.

ಪೀಠಿಕೆ ॥ ಈ ಲಕ್ಷಣಗಳು ವಿಷ್ಣುವಿನಲ್ಲಿ ಮಾತ್ರ ಇರತಕ್ಕವುಗಳು. ಬೇರೆಯವರಲ್ಲಿ ಇಲ್ಲ ಎನ್ನುವುದನ್ನು ಸ್ಮೃತಿಯಿಂದ ಉಪಪಾದಿಸಿ ಶ್ರುತಿಯಿಂದಲೂ ಉಪಪಾದಿಸುತ್ತಾರೆ.

ಭಾಷ್ಯ ॥ ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂ ತಿ ।

ನ ತೇ ವಿಷ್ಣೋ ಜಾಯಮಾನೋ ನ ಜಾತೋ

ದೇವ ಮಹಿಮ್ನಃ [2]ಪರಮಂತಮಾಪ (ಋ.ಸಂ.೭.೯೯.೧೨.) ॥ ೭ ॥

---

೧. (೧) ಚತುರ್ಭಿರ್ನಾಮಭಿಃ ಸಾಕಂ ವಾಸುದೇವಾದಿಭಿರ್ಹರಿಃ । ವಸೂನ್ ರುದ್ರಾನ್ ತಥಾದಿತ್ಯಾನ್ ಬ್ರಹ್ಮಣೋ ಮರುತಸ್ತಥಾ । ಬೃಹಚ್ಚಕ್ರೀರೋ ಭಗವಾನ್ ನೂನಂ । ಶಾಸತಿ ನಿತ್ಯಶಃ ॥ ಎನ್ನುವ ಪ್ರಮಾಣಾನುಸಾರವಾಗಿ ವ್ಯಾಖ್ಯಾನ ಮಾಡಿರುವರು.

(೨) ವಿಶೇಷೇಣಾಧಿಕತ್ವೇನ ವ್ಯತಯೋ ದೇವತಾಃ ಸ್ಮೃತಾಃ॥ ಎನ್ನುವ ಪ್ರಮಾ ಣದಿಂದ ವ್ಯತಯಃ ಉತ್ತಮ ದೇವತೆಗಳು.

(೩) ಆದಿತ್ಯಾ ವಸವೋ ರುದ್ರಾಃ ಮರುತಶ್ಚಾಶ್ವಿನಾವಪಿ । ಬೃಹಸ್ಪತಿಶ್ಚ ಕಾಮಶ್ಚ ಮನುರ್ದಕ್ಷೋವಿನಾಯಕಃ । ಭೃಗುಶ್ಚೈವಾನಿರುದ್ಧಶ್ಚ ಧರ್ಮೋ ನಿ ಋತಿರೇವ ಚ । ಕುಬೇರಸಹಿತಾ ದೇವಾಃ ನವತಿಃ ಸಂಪ್ರಕೀರ್ತಿತಾಃ । ಅನಂತೋ ಗರುಡೋ ವಾಯುಶ್ಚತ್ವಾರೋ ಬ್ರಹ್ಮಣಾ ಸಹ ॥ ಎನ್ನುವ ಪ್ರಮಾಣಾ ನುಸಾರವಾಗಿ ತತ್ವಪ್ರದೀಪಿಕೆಯಲ್ಲಿ ಬೇರೆ ರೀತಿಯಿಂದ (೯೪) ತೊಂಭತ್ತನಾಲ್ಕು ದೇವತೆಗಳನ್ನು ಹೇಳಿರುವರು.

೨. ಜಾತೋ ಜನಿಷ್ಯಮಾಣಶ್ಚ ವರ್ತಮಾನಸ್ತಥೈವ ಚ । ಎನ್ನುವ ಪ್ರಮಾಣಾನು ಸಾರವಾಗಿ ನ ತೇ ವಿಷ್ಣೋ ಎನ್ನುವ ಶ್ರುತಿಯನ್ನು ವ್ಯಾಖ್ಯಾನ ಮಾಡಿರುವರು.

ಭಾಷ್ಯಾರ್ಥ ॥ (ಕೀರ್ತಿಮಾತ್ರದಿಂದ ಅಲ್ಲ.ಮತ್ತೆ) ತನ್ನ ಮೂರ್ತಿಯಿಂದಲೇ ಅಪರಿಚ್ಛಿನ್ನನಾದ ವಿಷ್ಣುವೇ ಪರಿಮಿತಿಯಿಂದ ವಿಲಕ್ಷಣನು ಆಗಿರುತ್ತಿ. (ಅಂದರೆ ಅಪರಿಮಿತನು.) ನಿನ್ನ ಜಗತ್ಸೃಷ್ಟ್ಯಾದಿ ರೂಪವಾದ ಮಹಿಮೆಯನ್ನು (ಮುಕ್ತರೂ ಅಮುಕ್ತರೂ ಕೂಡ) ಹೊಂದುವುದಿಲ್ಲ, ಅಥವಾ ಅನುಭವಿಸುವುದಿಲ್ಲ. (ವರ್ತಮಾನಕಾಲದಲ್ಲಿ ನಿಷೇಧಮಾಡಿದರೂ ಭೂತಭವಿಷ್ಯತ್ಕಾಲಗಳಲ್ಲಿ ನಿನ್ನ ಮಹಿಮೆಯನ್ನು ಹೊಂದಿದ ಪುರುಷರು ಇರಬಹುದೆಂದರೆ) ಎಲೋ ವಿಷ್ಣುವೇ ರಮಾದಿದೇವತೆಗಳ ಮಹಿಮೆಗೆ ಪರಾವಧಿಭೂತವಾದ ನಿನ್ನ ಮಹಿಮೆಯನ್ನು ಈಗ ಹುಟ್ಟಿದವನು ಹೊಂದಲಿಲ್ಲ. (ಮುಂದೆ ಹುಟ್ಟುವವನೂ ಹೊಂದಲಾರನು.)

ಪೀಠಿಕೆ ॥ ಬ್ರಹ್ಮನು ಜಗತ್ತಿಗೆ ವಿಕಾರಿಕಾರಣನಲ್ಲ, ಮತ್ತೆ ತಂದೆಯಂತೆಯೇ ನಿಮಿತ್ತಕಾರಣನು ಎನ್ನುವುದನ್ನು ಶ್ರುತಿಯಿಂದ ಪ್ರತಿಪಾದಿಸುತ್ತಾರೆ.

**ಭಾಷ್ಯ ॥ ಯೋ ನಃ ★ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ। (ಋ.ಸಂ.೧೦.೮೨.೩) ಇತ್ಯಾದಿ ಚ ॥ ೮ ॥**

ಭಾಷ್ಯಾರ್ಥ ॥ ಯಾವನೊಬ್ಬನೇ ನಮಗೆಲ್ಲರಿಗೆ ಜನಕನೇ ಆಗಿರುತ್ತಾನೆ. ದತ್ತಪುತ್ರನ ತಂದೆಯಂತೆ ರಕ್ಷಕತಂದೆಯು ಮಾತ್ರವಲ್ಲ, ವಿಶೇಷವಾಗಿ ಪೋಷಿಸುವವನು. ಯಾವಾತನು ಎಲ್ಲಾ ಭುವನಗಳನ್ನೂ ಜೀವಾದಿಗಳ ಸ್ವರೂಪಗಳನ್ನೂ ಕೂಡ ತಿಳಿಯುತ್ತಾನೋ ಇದು ಮೊದಲಾದ (ದ್ಯಾವಾಭೂಮಿ ಜನಯನ್ ದೇವ ಏಕಃ ಇದು ಮೊದಲಾದ) ವಾಕ್ಯವು ಹಿಂದೆ ಹೇಳಿದ ವಿಷಯದಲ್ಲಿ ಪ್ರಮಾಣವು.

---

★ (೧) ಸ ಏವ ಪಿತೃ ಸಂಸ್ಥಸ್ತು ಪಾತೃತ್ವಾತ್ಪಿತೃನಾಮಕಃ। ಎನ್ನುವ ಪ್ರಮಾಣದಿಂದ, ಪಿತಾ = ರಕ್ಷಕನು.

(೨) ಯತಃ ಪ್ರಸೂತಾ ಜಗತಃ ಪ್ರಸೂತೀ। ಸರ್ವೇಽನಿಮೇಷಾ ಜಜ್ಞಿರೇ। ವಿದ್ಯುತಃ ಪುರುಷಾದಧಿ। ಈ ಶ್ರುತಿಗಳಲ್ಲಿ ಶ್ರೀಹರಿಯಿಂದಲೇ ಚಿತ್ಪ್ರಕೃತಿ ಕಾಲ ಗಳ ಸೃಷ್ಟಿಯು ಆಗುತ್ತದೆಂದು ಹೇಳಿತು. ಎಲ್ಲಾ ವಸ್ತುಗಳ ಸೃಷ್ಟಿಯು ಪ್ರಕೃತಿ ಕಾಲಗಳ ಅಧೀನವಾದ ಪ್ರಯುಕ್ತ ಸರ್ವವಸ್ತುಗಳ ಸೃಷ್ಟಿಯೂ ಶ್ರೀಹರಿಯಿಂದಲೇ ಆಗುತ್ತದೆಂದು ಹೇಳಲ್ಪಟ್ಟಿತು.

(೩) ಯಸ್ಮಿನ್ನಿದಂ ಸಂಚವಿಚೈತಿ ಸರ್ವಂ। ಎನ್ನುವುದರಿಂದ ಸ್ಥಿತಿಯೂ ಶ್ರೀಹರಿ ಯಿಂದಲೇ ಎಂದು ಹೇಳಲ್ಪಟ್ಟಿತು.

(೪) ವೇನಸ್ತತ್ಪಶ್ಯನ್ ವಿಶ್ವಾ ಭುವನಾನಿ ವಿದ್ವಾನ್। ಎನ್ನುವುದರಿಂದ ಜ್ಞಾನವೂ ಸಂಹಾರವೂ ಶ್ರೀಹರಿಯಿಂದಲೇ ಆಗುತ್ತದೆಂದು ಹೇಳಲ್ಪಟ್ಟಿತು.

(೫) ಭೀಷಾಸ್ಮಾದ್ವಾತಃ ಪವತೇ। ಯಃ ಪೃಥಿವೀಮಂತರೋ ಯಮಯತಿ। ಈ ಶ್ರುತಿಗಳಿಂದ ನಿಯಮನವು ಶ್ರೀಹರಿಯಿಂದಲೇ ಎಂದು ಉಕ್ತವಾಯಿತು.

(೬) ವಿವೇಶ ಭೂತಾನಿ ಚರಾಚರಾಣಿ। ಎನ್ನುವುದರಿಂದ ಅರ್ಥಾತ್ ನಿಯಮನವು ಹೇಳಲ್ಪಟ್ಟಿತು.

(೭) ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ। ಎನ್ನುವುದರಿಂದ ಸ್ಪಷ್ಟವಾಗಿ ನಿಯಮನವೂ ಹೇಳಲ್ಪಟ್ಟಿತು.

(೮) ಋತಸ್ಯ ತಂತುಂ ವಿತತಂ ವಿಧೃತ್ಯ। ಎನ್ನುವುದರಿಂದ ಅಜ್ಞಾನವೂ ಬಂಧವೂ ಕೂಡ ಉಕ್ತವಾಯಿತು.

(೯) ಯ ಏನಂ ವಿದುರಮೃತಾಸ್ತೇ ಭವಂತಿ। ಎನ್ನುವುದರಿಂದ ಮೋಕ್ಷವೂ ಶ್ರೀಹರಿಯಿಂದಲೇ ಆಗುತ್ತದೆಂದು ಉಕ್ತವಾಯಿತು.

(೧೦) ಹೀಗೆಯೇ ಶ್ರೀಹರಿಯೊಬ್ಬನೇ ಮುಕ್ತಿ ಮೊದಲಾದವುಗಳನ್ನೆಲ್ಲಾ ಕೊಡತಕ್ಕವನು ಎನ್ನುವ ವಿಷಯದಲ್ಲಿ ತ್ವಂ ಮುಕ್ತಿದೋ ಬಂಧದೋಽತೋ ಮತೋ ನಃ ತ್ವಂ ಜ್ಞಾನದೋಽಜ್ಞಾನದಶ್ಚಾಸಿ ವಿಷ್ಣೋ। ಇದು ಮೊದಲಾದ ಪ್ರಮಾಣಗಳನ್ನು ಇಟ್ಟುಕೊಳ್ಳಬೇಕು.)

**ವಿಶೇಷಾಂಶ ॥ ಜನ್ಮ ಆದಿರ್ಯಸ್ಯ ಪಾಲನಸ್ಯ** ಎಂದು ಜನ್ಮವನ್ನು ಬಿಟ್ಟು ಪಾಲನ ಕರ್ತೃತ್ವವೊಂದೇ ವಿಷ್ಣುವಿಗೆ ಲಕ್ಷಣವು ಎಂದು ಕೆಲವರು ಹೇಳುವರು, ಅದು ಸಂಗತವಲ್ಲ ಏಕೆಂದರೆ— ಎಲ್ಲಾ ಶ್ರುತಿಸ್ಮೃತಿಗಳಲ್ಲಿ ಶ್ರೀಹರಿಗೆ ಜಗಜ್ಜನ್ಮಾದ್ಯಷ್ಟಕರ್ತೃತ್ವವನ್ನು ಲಕ್ಷಣವೆಂದು ಹೇಳಿದುದರಿಂದ ಶ್ರುತಿಸ್ಮೃತ್ಯಾದಿಗಳಿಂದ ವಿರೋಧವು ಬರುವುದು.

## ಅದ್ವೈತರೀತ್ಯಾ ಸೂತ್ರಾರ್ಥವು

ವಿಚಾರ ॥ (೧) ಜನ್ಮಾದಿ ಎನ್ನುವಲ್ಲಿ **ಜನ್ಮಸ್ಥಿತಿಭಂಗಂ ಸಮಾಸಾರ್ಥಃ** ಎಂದು ಪರಭಾಷ್ಯದಲ್ಲಿ ಹೇಳಿದ ಪ್ರಕಾರ ಉತ್ಪತ್ತಿ ಸ್ಥಿತಿ ಸಂಹಾರಗಳು ಮೂರೇ ಹೇಳಲ್ಪಡುತ್ತವೆ ಎಂದು ಅದ್ವೈತಿಗಳು ಹೇಳಿರುವರು ಅದು ಅಯುಕ್ತವು. ವಿಷಯವಾಕ್ಯವಾದ **'ಯತೋ ವಾ ಇಮಾನಿ ಭೂತಾನಿ ಜಾಯಂತೇ ।** ಎನ್ನುವ ಶ್ರುತಿಯಲ್ಲಿಯೇ ಉತ್ಪತ್ತಿ ಸ್ಥಿತಿ ಸಂಹಾರ ಮೋಕ್ಷ ಈ ನಾಲ್ಕನ್ನು ಹೇಳಿಯದೆ. ಮೂರನ್ನು ಮಾತ್ರ ಹೇಳಲಿಲ್ಲ (೧) ಯ **ಆತ್ಮಾನಮಂತರೋ ಯಮಯತಿ । (೨) ತ್ವಂ ಮುಕ್ತಿದೋ ಬಂಧದೋSತೋ ಮತೋ ನಃ ।** ಇತ್ಯಾದಿಗಳಲ್ಲಿ ನಿಯಮನಾದಿಗಳನ್ನು ಹೇಳಿದ್ದಾರೆ. ಮತ್ತು ಸೂತ್ರಕಾರರೇ ಸ್ಕಾಂದಪುರಾಣಾದಿಗಳಲ್ಲಿ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು ಲಕ್ಷಣವೆಂದು ಹೇಳಿರುತ್ತಾರೆ. ಆದುದರಿಂದ ಸೃಷ್ಟಿ ಸ್ಥಿತಿ ಸಂಹಾರಕರ್ತೃತ್ವ ಮಾತ್ರವೇ ಲಕ್ಷಣವೆಂದು ಹೇಳಿದ್ದು ಅಯುಕ್ತವು.

(೨) ಜನ್ಮಾದಿಕಾರಣತ್ವವು (ಸೃಷ್ಟಿ ಸ್ಥಿತಿ ಸಂಹಾರಕರ್ತೃತ್ವವು) ತಟಸ್ಥಲಕ್ಷಣವು. ಅಂದರೆ ಬ್ರಹ್ಮಾಶ್ರಿತವಾದ ಮಾಯೆಯಲ್ಲಿರತಕ್ಕ ಲಕ್ಷಣವು. ಆನಂದಾದಿಗಳೇ ಸ್ವರೂಪಲಕ್ಷಣವು ಎನ್ನುತ್ತಾರೆ. ಇದೂ ಶ್ರುತಿ ಸ್ಮೃತಿಯುಕ್ತ್ಯಾದಿಗಳಿಂದ ವಿರುದ್ಧ ವಾದ ಪ್ರಯುಕ್ತ ಅಯುಕ್ತವು ಏಕೆಂದರೆ— (೧) **ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ । (೨) ನ ಕರ್ಮಣಾ ವರ್ಧತೇ ನೋ ಕನೀಯಾನ್ । (೩) ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ । (೪) ಪರೇತಿ ಯಾಂ ಪ್ರಾಹುರಜಸ್ಯ ಶಕ್ತಿಂ ।** ಇದು ಮೊದಲಾದ ಶ್ರುತಿಗಳಲ್ಲಿ ಶ್ರೀಹರಿಯ ಜಗಜ್ಜನ್ಮಾದಿಕರ್ತೃತ್ವರೂಪವಾದ ಮಹಿಮೆಯು ನಿತ್ಯವೆಂದೂ ಸ್ವಾಭಾವಿಕವೆಂದೂ ಹೇಳಿರುವರು. ಆದುದರಿಂದ ಜಗಜ್ಜನ್ಮಾದಿ ಸಾಮರ್ಥ್ಯರೂಪವಾದ ಜಗತ್ಕಾರಣತ್ವ ವೂ ಆನಂದಾದಿಗಳಂತೆಯೇ ಸ್ವರೂಪಲಕ್ಷಣವೇ, ತಟಸ್ಥ ಲಕ್ಷಣವಲ್ಲ.

(೩) ಮತ್ತು ಅದ್ವೈತಮತದಲ್ಲಿ ಜೀವಭೇದವನ್ನು ತಿಳಿಸಿಕೊಡುವ ಲಕ್ಷಣ ಸೂತ್ರಾರಂಭವೇ ಕೂಡುವುದಿಲ್ಲ. ಏಕೆಂದರೆ— **ಅಸಾಧಾರಣಧರ್ಮೋSಪಿ ಲಕ್ಷಣಂ ಪರಿಕೀರ್ತ್ಯ ತೇ । ತಚ್ಚ ನಿರ್ಧರ್ಮಕಬ್ರಹ್ಮವಾದಿನಾಂ ಯುಜ್ಯತೇ ಕಥಂ ॥ ಸ್ವರೂಪಂ ವಾ ತಟಸ್ಥಂ ವಾ ಲಕ್ಷಣಂ ಭೇದಕಂ ಮತಂ । ಸಜಾತೀಯಾದ್ವಿಜಾತೀಯಾತ್ತಚ್ಚಾದ್ವೈತಿಮತೇ ಕಥಂ ॥ ನ ಚ ಮಿಥ್ಯಾಭೇದಸಿದ್ಧ್ಯೈ ಮಿಥ್ಯಾಲಕ್ಷಣಕೀರ್ತನಂ । ಮುಮುಕ್ಷುಂ ತತ್ತ್ವಜಿಜ್ಞಾಸುಂ ಪ್ರತಿಶಾಸ್ತ್ರೇಷು ಶೋಭತೇ ॥** ಆದಕಾರಣ ಅದ್ವೈತಮತರೀತ್ಯಾ ಸೂತ್ರಾರ್ಥವು ಸರ್ವಥಾ ಯುಕ್ತವಲ್ಲ.

## ರಾಮಾನುಜಾಚಾರ್ಯರ ರೀತ್ಯಾ ಸೂತ್ರಾರ್ಥವು

ವಿಚಾರ ॥ (೧) ರಾಮಾನುಜಾಚಾರ್ಯರು ಜನ್ಮಸ್ಥಿತಿಸಂಹಾರಕರ್ತೃತ್ವಸಮುದಾಯವೇ

ಲಕ್ಷಣವು. ಪ್ರತ್ಯೇಕ ಪ್ರತ್ಯೇಕ ಲಕ್ಷಣವಲ್ಲ. ವಿಶಿಷ್ಟವಾದುದು ಒಂದೇ ಲಕ್ಷಣವೆಂದು ಹೇಳುತ್ತಾರೆ. ಅದು ಹಿಂದೆ ಉದಾಹರಿಸಿರುವ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು ಹೇಳುವ ಶ್ರುತಿಸ್ಮೃತ್ಯಾದಿರೂಪಗಳಾದ ಪ್ರಮಾಣಗಳಿಂದ ವಿರುದ್ಧವು. (೨) ಮತ್ತು ಜನ್ಮಕರ್ತೃತ್ವ ಸ್ಥಿತಿಕರ್ತೃತ್ವ ಸಂಹಾರಕರ್ತೃತ್ವ ಇವುಗಳು ಪ್ರತ್ಯೇಕ ಲಕ್ಷಣವೆಂದು ಇಟ್ಟುಕೊಂಡರೆ ಅತಿವ್ಯಾಪ್ತಿ ಮೊದಲಾದ ದೋಷಗಳು ಇಲ್ಲದಿರುವುದರಿಂದ ಸಮುದಾಯವು ಲಕ್ಷಣವೆಂದು ಹೇಳಿದ್ದು ಯುಕ್ತವಲ್ಲ.

## ಅಧಿಕರಣ ಸಾರಾಂಶ

ಬ್ರಹ್ಮಾಣಿ ಜೀವಾಃ ಸರ್ವೇಽಪಿ ಎನ್ನುವ ಪ್ರಮಾಣದಿಂದಲೂ ನಿರ್ಬಾಧರೂಢಿಯಿಂದಲೂ ಜಿಜ್ಞಾಸ್ಯ ಬ್ರಹ್ಮನು ಜೀವನೇ ಆಗಬೇಕು ಎನ್ನುವ ಶಂಕೆಯನ್ನು ನಿರಾಕರಿಸುವುದ ಕ್ಕೋಸ್ಕರ ಸೂತ್ರಕಾರರು ಬ್ರಹ್ಮಶಬ್ದದಿಂದ ಜೀವನನ್ನು ಇಟ್ಟುಕೊಂಡರೆ ಶ್ರುತಿಸ್ಮೃತಿ ಯುಕ್ತಿ ಪ್ರತ್ಯಕ್ಷಾದಿಗಳಿಂದ ವಿರೋಧವು ಬರುತ್ತದೆ ಎನ್ನುವ ಅಭಿಪ್ರಾಯದಿಂದ ಜೀವನಲ್ಲಿ ಸರ್ವಥಾ ಇಲ್ಲದಿರುವ ಜಗಜ್ಜನ್ಮಾದಿಕರ್ತೃತ್ವರೂಪವಾದ ಲಕ್ಷಣವನ್ನು ಜಿಜ್ಞಾಸ್ಯಬ್ರಹ್ಮನಿಗೆ ಹೇಳಿರುವರು. ಆ ಲಕ್ಷಣವು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಬ್ರಹ್ಮರುದ್ರಾದಿ ದೇವತೆಗಳಲ್ಲಿಯೂ ಸರ್ವಥಾ ಇಲ್ಲ ಎನ್ನುವುದನ್ನು ಭಾಷ್ಯಕಾರರು ಸಯುಕ್ತಿಕವಾಗಿ ಶ್ರುತಿಸ್ಮೃತ್ಯಾದಿಗಳಿಂದ ಉಪಪಾದಿಸಿರುವರು. ಆದಕಾರಣ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದದಿಂದ ಗುಣಪರಿಪೂರ್ಣನಾದ ಶ್ರೀಹರಿಯನ್ನೇ ತೆಗೆದುಕೊಳ್ಳಬೇಕು. ರುದ್ರಾದಿಜೀವರನ್ನು ತೆಗೆದುಕೊಳ್ಳಲಾಗುವುದಿಲ್ಲ. ಆದುದರಿಂದ ವಿಷಯಾದಿಗಳು ಇದ್ದಪ್ರಯುಕ್ತ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದ್ದು ಯುಕ್ತವೇ.

ಜನ್ಮಾಧಿಕರಣವು ಸಮಾಪ್ತವಾಯಿತು.

# ೩. ಶಾಸ್ತ್ರಯೋನಿತ್ವಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಜಗಜ್ಜನ್ಮಾದಿಕಾರಣತ್ವರೂಪವಾದ ಬ್ರಹ್ಮಲಕ್ಷಣವು ವಿಷ್ಣುವ್ಯತಿರಿಕ್ತರಾದ ರುದ್ರಾದಿ ದೇವತೆಗಳಲ್ಲಿ ಇಲ್ಲವೆಂದು ಸಾಧಿಸುವುದಕ್ಕಾಗಿ ಜಗತ್ಕಾರಣನು ವಿಷ್ಣುವೇ ಎನ್ನುವಲ್ಲಿ ಪ್ರಮಾಣವನ್ನು ಹೇಳುತ್ತಾರೆ.

ಭಾಷ್ಯ ॥ ಅನುಮಾನತೋಽನ್ಯೇ ನ ಕಲ್ಪನೀಯಾಃ ॥ ೧ ॥

ಭಾಷ್ಯಾರ್ಥ ॥ (ಶಿವೋ ಜಗತ್ಕರ್ತಾ ಸರ್ವಜ್ಞತ್ವಾತ್ ವ್ಯತಿರೇಕೇಣ ಯಜ್ಞದತ್ತವತ್ ಇದು ಮೊದಲಾದ) ಅನುಮಾನದಿಂದ (ವಿಷ್ಣುವಿನಿಂದ) ಇತರರಾದ ರುದ್ರ ಮೊದಲಾದವರು (ಜಗತ್ಕಾರಣರೆಂದು) ಶಂಕಿಸಕೂಡದು. ಏಕೆಂದರೆ—

ಸೂತ್ರ ॥ ಓಂ ಶಾಸ್ತ್ರಯೋನಿತ್ವಾತ್ ಓಂ ॥ ೩ ॥

**ಸೂತ್ರಾರ್ಥ ॥** ಶಾಸ್ತ್ರ: ಋಗಾದಿರೂಪವಾದ ಶಾಸ್ತ್ರವೇ, ಯೋನಿಃ ಯಸ್ಯ=ಜ್ಞಪ್ತಿಕಾರಣವು (ಜ್ಞಾಪಕವು) ಯಾವನಿಗೋ, ಅವನು. ತಸ್ಯ ಭಾವಃ=ಶಾಸ್ತ್ರ ಯೋನಿತ್ವಂ, ತಸ್ಮಾತ್ ಅಂದರೆ **ಜಗತ್ಕಾರಣಂ ಆನುಮಾನಿಕಂ ನ ಭವತಿ ತಸ್ಯ ಶಾಸ್ತ್ರೈಕಸಮಧಿಗಮ್ಯತ್ವಾತ್ ಧರ್ಮಾದಿವತ್**=ಜಗತ್ತಿಗೆ ಕಾರಣನಾದವನು ಅನುಮಾನದಿಂದ ನಿಶ್ಚಯಿಸಲು ಸಾಧ್ಯನಾಗುವುದಿಲ್ಲ. ಕೇವಲ ಶಾಸ್ತ್ರದಿಂದಲೇ ತಿಳಿಯಲು ಯೋಗ್ಯನಾಗಿರುವುದರಿಂದ ಧರ್ಮಾದಿಗಳಂತೆ. ದೃಷ್ಟಾಂತವಾದ ಧರ್ಮಾದಿಗಳಲ್ಲಿ ಸಾಧ್ಯವಿಲ್ಲವೆಂದು ಹೇಳಕೂಡದು. ಏಕೆಂದರೆ— ಧರ್ಮಾದಿಗಳ ನಿಶ್ಚಯವು ಅನುಮಾನದಿಂದ ಆಗುವುದಿಲ್ಲ. ಆದಕಾರಣ ಅನುಮಾನರೂಪಪ್ರಮಾಣಬಲದಿಂದ ರುದ್ರಾದಿಗಳು ಜಗತ್ಕಾರಣರೆಂದು ಹೇಳುವುದು ಸರ್ವಥಾ ಕೂಡುವುದಿಲ್ಲ.

**ವಿಶೇಷಾಂಶ—** (ಎ) ಈ ಅಧಿಕರಣದಲ್ಲಿ ಜಗಜ್ಜನ್ಮಾದಿಕಾರಣತ್ವವು ರುದ್ರಾದಿ ದೇವತೆಗಳಲ್ಲಿ ಇಲ್ಲವೆಂದು ಹೇಳುವುದರಿಂದ ಶಾಸ್ತ್ರಾಂತರ್ಭಾವರೂಪವಾದ ಸಂಗತಿಯಿದೆ. (ಬಿ) ಜಗಜ್ಜನ್ಮಾದಿಕರ್ತೃತ್ವವು ಜಿಜ್ಞಾಸ್ಯನಾದ ಬ್ರಹ್ಮನಲ್ಲಿ ಶ್ರುತವಾದ ಪ್ರಯುಕ್ತ ವಿಷ್ಣುವೇ ಬ್ರಹ್ಮನು ಎಂದು ಹೇಳಿಯದೆ. ಜನ್ಮಾದಿಕರ್ತೃತ್ವವು ರುದ್ರಾದಿಗಳಲ್ಲಿ ಸರ್ವಥಾ ಇಲ್ಲವೆಂದು ಹೇಳಿದರೇನೇ ವಿಷ್ಣುವೆಂದು ನಿಶ್ಚಯವಾಗ ಬಹುದು. ಇಲ್ಲಿದಿದ್ದರೆ ನಿಶ್ಚಯವಾಗಲಾರದು. ಹೀಗೆ ಪೂರ್ವಾಧಿಕರಣದಲ್ಲಿ ಹೇಳಿದ್ದನ್ನು ಆಕ್ಷೇಪಿಸುವುದರಿಂದ ಪೂರ್ವಾಧಿಕರಣ, ಅಲ್ಲಿದ್ದ ವಿಷಯವಾಕ್ಯ ಅವುಗಳಿಂದ ಈ ಅಧಿಕರಣ ಇಲ್ಲಿದ್ದ ವಿಷಯವಾಕ್ಯಗಳಿಗೆ ಆಕ್ಷೇಪಿಕೀ ಸಂಗತಿಯೆಂದು ಹೇಳಿದಂತೆ ಆಯಿತು. (ಸಿ) ಜಗಜ್ಜನ್ಮಾದಿಕಾರಣತ್ವವು ವಿಷಯವು. ಹೇಗೆ ವಿಷ್ಣುವಿಗೆ ಸ್ವತಂತ್ರವಾಗಿ ಜಗತ್ಕಾರಣತ್ವವು ಇದೆಯೋ, ಹಾಗೆಯೇ ಇತರರಾದ ರುದ್ರಾದಿಗಳಿಗೂ ಉಂಟೋ ಇಲ್ಲವೋ ಎಂದು ಸಂದೇಹವು. ಪೂರ್ವದಲ್ಲಿ ಹೇಳಿದ ಶ್ರುತಿಸ್ಮೃತಿರೂಪವಾದ ನ್ಯಾಯವೂ, ಬ್ರಹ್ಮನು ಸೃಷ್ಟಿಕರ್ತನು, ರುದ್ರನು ಸಂಹಾರಕನು ಇತ್ಯಾದಿ ಪ್ರಸಿದ್ಧಿಯೂ ಕೂಡ ಸಂಶಯಕಾರಣವು. ರುದ್ರಾದಿಗಳೂ ಜಗತ್ಕಾರಣರೇ ಎಂದು ಪೂರ್ವಪಕ್ಷವು. **ಶಿವೋ ಜಗತ್ಕರ್ತಾ ಸರ್ವಜ್ಞತ್ವಾತ್ ವ್ಯತಿರೇಕೇಣ ಕುಲಾಲವತ್**। ಇದು ಮೊದಲಾದ ಅನುಮಾನಗಳಿಂದ ರುದ್ರಾದಿಗಳೂ ಜಗತ್ಕಾರಣರೆಂದು ಸಿದ್ಧಿಸುವರು. ಮತ್ತು ಪಾಶುಪತಾದ್ಯಾಗಮದಿಂದಲೂ ರುದ್ರಾದಿಗಳು ಜಗತ್ಕಾರಣರೆಂದೂ ಸರ್ವಜ್ಞರೆಂದೂ ಸಿದ್ಧವಾಗುತ್ತದೆ. (ಡಿ) ಹಾಗಾದರೆ ಶ್ರೀವಿಷ್ಣುವಿಗೇನೇ ಜಗಜ್ಜನ್ಮಾದಿಕಾರಣತ್ವವನ್ನು ಪ್ರತಿಪಾದಿಸತಕ್ಕ **ನ ತೇ ವಿಷ್ಣೋ, ಯ ಉ ತ್ರಿಧಾತು** ಇತ್ಯಾದಿ ಶ್ರುತಿಗಳಿಂದ ವಿರೋಧವು ಬರುತ್ತದೆಂದು ಹೇಳಕೂಡದು. ಆ ಶ್ರುತಿಗಳು ಯುಕ್ತಿವಿರುದ್ಧಾರ್ಥದಲ್ಲಿ ಪ್ರಮಾಣವಾಗಲಾರವು. ಅಂದರೆ **ನ ಹಿ ನಿಂದಾ ನಿಂದ್ಯಂ ನಿಂದಿತುಂ ಪ್ರವೃತ್ತಾ ಅಪಿ ತು ಸ್ತುತ್ಯಂ ಸ್ತೋತುಂ** ಎನ್ನುವ ನ್ಯಾಯದಿಂದ ವಿಷ್ಣುವಿಗೂ ಕಾರಣತ್ವವಿದೆ ಎನ್ನುವಲ್ಲಿಯೇ ತಾತ್ಪರ್ಯವು ಅಲ್ಲದೆ ರುದ್ರಾದಿಗಳಿಗೆ ಕಾರಣತ್ವವಿಲ್ಲವೆನ್ನುವಲ್ಲಿ ತಾತ್ಪರ್ಯವುಳ್ಳದ್ದಲ್ಲ. ಆದುದರಿಂದ ರುದ್ರನಿಗೂ ಕಾರಣತ್ವವಿದೆ ಎಂದು ಪೂರ್ವಪಕ್ಷವು. ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು **ಚಕ್ಷುರಾದಿ ಯಥಾಽಯೋಗ್ಯಂ ರಸಗಂಧಾದಿವಸ್ತುಷು। ಅನು ಮಾಽಪಿ ತಥಾಽಶಕ್ತಾ ಧರ್ಮಬ್ರಹ್ಮಾದಿವಸ್ತುಷು ॥** ಹೇಗೆ ರಸ ಗಂಧ ಮೊದಲಾದ ವುಗಳನ್ನು ಚಕ್ಷುರಿಂದ್ರಿಯದಿಂದ ತಿಳಿಯಲಿಕ್ಕೆ ಸಾಧ್ಯವಿಲ್ಲವೋ, ಹಾಗೆಯೇ ಜಗತ್ಕಾರಣೀಭೂತವಾದ ವಸ್ತುವನ್ನು ಅನುಮಾನಾದಿಗಳಿಂದ ನಿಶ್ಚಯಿಸಲಿಕ್ಕೆ ಸಾಧ್ಯವಿಲ್ಲ. ಮತ್ತೆ ಕೇವಲ

ಶಾಸ್ತ್ರಗಳಿಂದಲೇ ತಿಳಿಯಬೇಕು ಎಂದುಪಪಾದಿಸಿರುವರು. ಇದೇ ಅಭಿಪ್ರಾಯವನ್ನು ಚಂದ್ರಿಕಾಚಾರ್ಯರೂ ಸಮರ್ಥಿಸಿರುವರು.

**ಪೀಠಿಕೆ ॥** ಜಗತ್ಕಾರಣನಾದವನು ಶಾಸ್ತ್ರೈಕವೇದ್ಯನು ಎನ್ನುವುದು ಯಾವ ಪ್ರಮಾಣ ದಿಂದ ತಿಳಿಯುತ್ತದೆ ಎಂದರೆ—

**ಭಾಷ್ಯ ॥ ನಾವೇದವಿನ್ಮನುತೇ ತಂ (ದಂ)ಬೃಹಂತಂ**
**ಸರ್ವಾನುಭು(ಭೂ)ಮಾತ್ಮಾನಂಸಾಂಪರಾಯೇ ।** (ತೈ.ಬ್ರಾ.೩-೧೨-೯)
**ಔಪನಿಷದಃ * ಪುರುಷಃ ಇತ್ಯಾದಿಶ್ರುತಿಭ್ಯಃ ॥ ೨ ॥**

**ಭಾಷ್ಯಾರ್ಥ ॥** ತಂ=ಪೂರ್ವಪ್ರಕೃತನೂ, ಬೃಹಂತಂ=ಪೂರ್ಣನೂ, ಸರ್ವಾನು ಭೂಂ= ಸರ್ವಜ್ಞನೂ, ಸರ್ವೋತ್ಪಾದಕನೂ, ಆತ್ಮಾನಂ=ಸರ್ವಸ್ವಾಮಿಯೂ ಆದ ಶ್ರೀಹರಿಯನ್ನು ಸಾಂಪರಾಯೇ=ಚೆನ್ನಾಗಿ ಪರಪ್ರಾಪ್ತಿರೂಪವಾದ ಮೋಕ್ಷಕ್ಕಾಗಿ ಅವೇದವಿತ್=ಸದಾಗಮಗಳ ಅರ್ಥವನ್ನು ತಿಳಿಯದೆ ಇದ್ದವನು ಅಥವಾ ವೇದವಿರುದ್ಧಜ್ಞಾನವುಳ್ಳವನು, ನ ಮನುತೇ= ತಿಳಿಯುವು ದಿಲ್ಲ (ಅಂತೂ ವೇದದಿಂದ ಇತರವಾದ ಅನುಮಾನ ಮೊದಲಾದುದು ಜಗತ್ಕರ್ತನನ್ನು ತಿಳಿಸುವುದಿಲ್ಲ. ವೇದವೇ ತಿಳಿಸುತ್ತದೆ. ಆದಕಾರಣ ಜಗತ್ಕರ್ತನಾದ ಶ್ರೀಹರಿಯು ವೇದೈಕಸಮಧಿಗಮ್ಯನು.) (೨) ಪುರುಷಃ=ಪೂರ್ಣಗುಣಗಳುಳ್ಳ ಜಗತ್ಕರ್ತನು, ಔಪನಿಷದಃ=ಉಪನಿಷತ್ತುಗಳಿಂದಲೇ ಮುಖ್ಯ ವೇದ್ಯನು. ಇದು ಮೊದಲಾದ ಶ್ರುತಿಗಳಿಂದಲೂ.

**ಪೀಠಿಕೆ ॥** ಜಗತ್ಕಾರಣನು ಉಪನಿಷತ್ತುಗಳಿಂದಲೇ ತಿಳಿಯಲರ್ಹನಾದಾಗ್ಯೂ, **ಹರಿಃ ಸರ್ವಜ್ಞಃ ಸ್ವಾತಂತ್ರ್ಯಾತ್** ಇದು ಮೊದಲಾದ ಅನುಮಾನಗಳಿಂದ ಸಾರ್ವಜ್ಞಾದಿಗಳು ಸಿದ್ಧಿಸುವಂತೆ ಅನುಮಾನದಿಂದ ಜಗತ್ಕಾರಣನು ಸಿದ್ಧಿಸುತ್ತಾನೆಂದು ಏಕೆ ಆಗಲಾರ ದೆಂದರೆ—

**ಭಾಷ್ಯ ॥ ನ ಚಾನುಮಾನಸ್ಯ ನಿಯತಪ್ರಾಮಾಣ್ಯಮ್ ॥ ೩ ॥**

**ಭಾಷ್ಯಾರ್ಥ ॥** ಶ್ರುತಿ ಮೊದಲಾದ ಪ್ರಮಾಣಗಳ ಸಾಹಾಯ್ಯವಿಲ್ಲದಿರುವ ಅನುಮಾನಮಾತ್ರಕ್ಕೆ ಸ್ವತಂತ್ರವಾಗಿ ಅದೃಷ್ಟಾರ್ಥನಿಶ್ಚಾಯಕತ್ವವು ಇಲ್ಲ.

**ವಿಶೇಷಾಂಶ ॥** ಪ್ರಮಾಣಾಂತರವನ್ನು ಅನುಸರಿಸಿಕೊಂಡಿರುವ ಅನುಮಾನವಾದ ಪ್ರಯುಕ್ತವೇ ಸ್ವತಂತ್ರವಾಗಿ ಅಂದರೆ ಶ್ರುತಿಸ್ಮೃತಿಗಳ ಸಹಾಯ್ಯವಿಲ್ಲದೆ ಅದೃಷ್ಟಾರ್ಥವನ್ನು ನಿಶ್ಚಯಿಸುವುದಿಲ್ಲ. ಪ್ರತಿಪಕ್ಷಾದಿಗಳು ಬರಬಹುದು. ಅಂದರೆ ವಿರುದ್ಧಾರ್ಥವನ್ನು ಸಾಧಿಸಲಿಕ್ಕೆ ಹೇತ್ವಂತರಾದಿಗಳು ಕೂಡಬಹುದು. ವಿಷ್ಣುವಿಗೆ ಸಾರ್ವಜ್ಞವನ್ನು ಸಾಧಿಸಿಕೊಡತಕ್ಕ ಸ್ವಾತಂತ್ರ್ಯಾದಿ ಹೇತುವಿಗಾದರೂ ಯಃ

---

★ ಜಗೃಹೇ ಪೌರುಷಂ ರೂಪಂ। ಪುರುಷರೂಪವನ್ನು ಸ್ವೀಕರಿಸಿದವನು ಎಂದು ಭಾಗವತದಲ್ಲಿ.

(೧) ಸರ್ವೇ ವೇದಾ ಯತ್ಪದಮಾಮನಂತಿ। (ಕಠ.೨.೧೫) (೨) ವೇದಾ ಹ್ಯೇವೈನಂ ವೇದಯತಿ। (ಭಾಲ್ಲವೇಯ ಶ್ರುತಿಯು), (೩) ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ। (ಬೃ.೩.೯.೨೬.) ಇದು ಮೊದಲಾದವುಗಳನ್ನು ಆದಿ ಶಬ್ದದಿಂದ ಇಟ್ಟುಕೊಳ್ಳಬೇಕು.

ಸರ್ವಜ್ಞಃ ಇದು ಮೊದಲಾದ ಶ್ರುತಿಗಳು ಇದ್ದಪ್ರಯುಕ್ತ ಶ್ರುತಿಸಾಹಾಯ್ಯರಾಹಿತ್ಯವಿಲ್ಲ. ಪೂರ್ವಪಕ್ಷಿಯು ರುದ್ರಾದಿಗಳಿಗೆ ಕಾರಣತ್ವವಿಷಯದಲ್ಲಿ ಶಂಕಿಸಿದ ಸರ್ವಜ್ಞತ್ವ ಕಾರ್ಯತ್ವಾದ್ಯನುಮಾನಗಳಲ್ಲಿ ಆದರೂ ಶ್ರುತಿಗಳ ಸಾಹಾಯ್ಯವಿಲ್ಲದಿರುವುದರಿಂದ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಸಾಧಿಸುವ ವಿಷಯದಲ್ಲಿ ಅವುಗಳಿಗೆ ಪ್ರಾಮಾಣ್ಯವಿಲ್ಲ.

ಪೀಠಿಕೆ ॥ ಕೇವಲ (ಶ್ರುತ್ಯಾದಿ ಸಾಹಾಯ್ಯವಿಲ್ಲದಿರುವ) ಅನುಮಾನವು ಪ್ರಮಾಣವು ಏಕೆ ಆಗುವುದಿಲ್ಲವೆಂದರೆ—

ಭಾಷ್ಯ ॥ ಶ್ರುತಿಸಾಹಾಯ್ಯರಹಿತಮನುಮಾನಂ ನ ಕುತ್ರಚಿತ್ ।
ನಿಶ್ಚಯಾತ್ಸಾಧಯೇದರ್ಥಂ ಪ್ರಮಾಣಾಂತರಮೇವ ಚ ॥ ೪ ॥

ಭಾಷ್ಯಾರ್ಥ ॥ ಅಸ್ಮದಾದಿಗಳಿಗೆ ಕಾಣದಿರುವ ಈಶ್ವರಾದಿಗಳ ವಿಷಯದಲ್ಲಿ ಶ್ರುತಿ ಸ್ಮೃತಿರೂಪ ಸಹಾಯರಹಿತವಾದ ಈಶ್ವರಃ ನ ಸರ್ವಜ್ಞಃ ಚೇತನತ್ವಾತ್ ಇತ್ಯಾದಿ ರೂಪವಾದ ಅನುಮಾನವು ಮತ್ತು ರಾಮಕೃಷ್ಣಾದಿ ಭಗವದ್ರೂಪಗಳಲ್ಲಿ ದೋಷಗ್ರಾಹಿಯಾದ ಶ್ರುತಿಸಾಹಾಯ್ಯವಿಲ್ಲದಿರುವ ಪ್ರತ್ಯಕ್ಷವೂ ಕೂಡ ಸ್ಪಷ್ಟವಾಗಿ ಅತೀಂದ್ರಿಯವಾದ ಅರ್ಥವನ್ನು (ಅಂದರೆ ಅಸ್ವಾತಂತ್ರ್ಯ ಮೊದಲಾದ ಧರ್ಮವಿಶೇಷವನ್ನು ರಕ್ತವು ಸುರಿಯಿತು ಇತ್ಯಾದಿ ಶ್ರೀಹರಿಗೆ ಭೇದ ಭೇದ ಮೊದಲಾದ ದೋಷವನ್ನು ಕೂಡ) ಸಾಧಿಸಲಾರದು. ಅಥವಾ ತಿಳಿಸಲಾರದು.

ವಿಶೇಷಾಂಶ ॥ (ಎ) ಜಗತ್ತಿಗೆ ಕಾರಣನಾದವನು ಅನುಮಾನದಿಂದ ಸಿದ್ಧಿಸುತ್ತಾ ನೆಂದು ಏಕೆ ಹೇಳಬಾರದು. ಹೇಗೆ ಸ್ವಾತಂತ್ರ್ಯಾದಿ ಹೇತುವಿನಿಂದ ವಿಷ್ಣುವು ಪೂರ್ಣಗುಣಗಳುಳ್ಳವನು ಎನ್ನುವುದು ಸಿದ್ಧಿಸುವುದು. ಹೀಗೆ ಸ್ವಾತಂತ್ರ್ಯಾದಿ ಹೇತುಗಳಿಂದ ರುದ್ರಾದಿಗಳಿಗೆ ಪೂರ್ಣಗುಣಗಳಿವೆ ಎಂದು ಸಿದ್ಧಿಸಬಹುದು ಎಂದು ಹೇಳಕೂಡದು. ಏಕೆಂದರೆ— ವಿಷ್ಣುವಿಗೆ ಸಾರ್ವಜ್ಞವನ್ನು ಸಾಧಿಸಿಕೊಡುವ ಅನುಮಾನವು ಶ್ರುತ್ಯಾದಿ ಸಾಹಾಯ್ಯವುಳ್ಳದ್ದು. ರುದ್ರಾದಿಗಳಿಗೆ ಸಾರ್ವಜ್ಞಸಾಧಕವಾದ ಅನುಮಾನವು ಶ್ರುತ್ಯಾದಿ ಸಾಹಾಯ್ಯವುಳ್ಳದ್ದಲ್ಲ (ಬಿ) ಶ್ರುತ್ಯಾದಿರೂಪ ಪ್ರಮಾಣಾಂತರಗಳನ್ನು ಅನುಸರಿಸಿಕೊಂಡಿರುವ ಅನುಮಾನವೇ ಪ್ರಮಾಣವು. ಅನುಸರಿಸಿದೆ ಇರುವುದು ಪ್ರಮಾಣವಲ್ಲ, ಪ್ರಕೃತ ಅನುಮಾನಕ್ಕೆ ಶ್ರುತ್ಯಾದಿಸಾಹಾಯ್ಯವಿಲ್ಲವೇ ಇಲ್ಲ. (ಸಿ) ರಾಮಕೃಷ್ಣಾದಿಗಳಲ್ಲಿ ದೋಷಗ್ರಾಹಿಯಾದ ಪ್ರತ್ಯಕ್ಷವು ವರ್ಜಿತಃ ಸರ್ವದೋಷೈಃ ಇತ್ಯಾದಿ ಶ್ರುತಿವಿರುದ್ಧವು. (ಡಿ) ಅಪರೀಕ್ಷಿತದೃಷ್ಟ್ಯೈವ ಸದೋಷೋ ಜ್ಞಾಯತೇ ಹರಿಃ । ಆದಕಾರಣ ಶ್ರುತಿಸಾಹಾಯ್ಯವಿಲ್ಲದಿರುವ ಪ್ರತ್ಯಕ್ಷವು ಅದೃಷ್ಟಾರ್ಥವನ್ನು ಸಾಧಿಸಲಾರದು.

ಪೀಠಿಕೆ ॥ ಎಂತಹ ಪ್ರತ್ಯಕ್ಷಾದಿಗಳು ಅದೃಷ್ಟಾರ್ಥವನ್ನು ನಿಶ್ಚಯಿಸುತ್ತವೆ ಎಂದರೆ—

ಭಾಷ್ಯ ॥ ಶ್ರುತಿಸ್ಮೃತಿಸಹಾಯಂ ಯತ್ಪ್ರಮಾಣಾಂತರಮುತ್ತಮಂ ।
ಪ್ರಮಾಣಪದವೀಂ ಗಚ್ಛೇನ್ನಾತ್ರ ಕಾರ್ಯಾ ವಿಚಾರಣಾ ॥ ೫ ॥

ಭಾಷ್ಯಾರ್ಥ ॥ ಶ್ರುತಿ ಸ್ಮೃತಿರೂಪ ಸಹಕಾರಿಗಳಿಂದ ಕೂಡಿದ ಯಾವದು ಯಶೋದಾದಿಗಳ

ವಿಶ್ವರೂಪ ಪ್ರತ್ಯಕ್ಷವೋ ಅದು ಉತ್ತಮ ಪ್ರಮಾಣವು. ಆದುದರಿಂದ ಅದು ಪ್ರಮಾಕರಣತ್ವ ರೂಪವಾದ ಪ್ರಮಾಣದ ರೀತಿಯನ್ನು ಹೊಂದುವುದು. ಮತ್ತು ಶ್ರುತಿಸ್ಮೃತಿಗಳ ಸಹಾಯವುಳ್ಳ **ವಿಷ್ಣುಃ ಸ್ವತಂತ್ರಃ ಪೂರ್ಣತ್ವಾತ್** ಎನ್ನುವ ಯಾವ ಅನುಮಾನವೋ ಅದೂ ಕೂಡ ಯಥಾರ್ಥಜ್ಞಾನಕಾರಣತ್ವ ರೂಪವಾದ ಪ್ರಮಾಣತ್ವವನ್ನು ಹೊಂದುವುದು.

**ವಿಶೇಷಾಂಶ ॥** (ಎ) **ಸಾ ತತ್ರ ದದೃಶೇ ವಿಶ್ವಂ ಜಗತ್ ಸ್ಥಾಸ್ನು ಚ ಖಂದಿಶಃ ।** ಇತ್ಯಾದಿ ಪ್ರಮಾಣಗಳಿಂದ ಶ್ರೀಕೃಷ್ಣನ ಮುಖಾರವಿಂದದಲ್ಲಿ ಯಶೋದಾದೇವಿಯ ವಿಶ್ವಗ್ರಾಹಿಪ್ರತ್ಯಕ್ಷವು **ಯ ಉ ತ್ರಿಧಾತು ಪೃಥಿವೀಂ ಏಕೋ ದಾಧಾರ ಭುವನಾನಿ ।** ಇದು ಮೊದಲಾದ ಶ್ರುತಿಸಾಹಾಯ್ಯವುಳ್ಳದ್ದು. (ಬಿ) ವಿಷ್ಣುಃ ಸ್ವತಂತ್ರಃ ಪೂರ್ಣತ್ವಾತ್ ಇದು ಮೊದಲಾದ ಅನುಮಾನವಾದರೂ (೧) **ಅಪೂರ್ಣೋಽಯಂ ಜೀವಸಂಘೋಽಸ ಸ್ವತಂತ್ರಃ ಪೂರ್ಣೋ ಹರಿಃ ಯಃ ಸ್ವತಂತ್ರಃ ಸದೈವ । ನ ಹಿ ಸ್ವತಂತ್ರೋಽಪೂರ್ಣತಾಂ ಕಾಮಯೀತ ಪೂರ್ಣೋ ಯದಿ ಸ್ಯಾದಸ್ವತಂತ್ರಃ ಕುತಸ್ಸ್ಯಾತ್ ॥** ಜೀವರು ಅಪೂರ್ಣರು, ಅಸ್ವತಂತ್ರರು. ಶ್ರೀ ಹರಿಯು ಸದಾ ಸ್ವತಂತ್ರನೇ. ಆದಕಾರಣ ಪೂರ್ಣನು ಸ್ವತಂತ್ರನು ಅಪೂರ್ಣನಾಗಲಾರನು. ಪೂರ್ಣನಾಗಿದ್ದವನು ಅಸ್ವತಂತ್ರನು ಹೇಗೆ ಆದಾನು. (೨) ಮತ್ತು ಹಿಂದೆ ಹೇಳಿದ ಅನುಮಾನವು **ಆತ್ಮಾ ಹಿ ಪರಮಃ ಸ್ವತಂತ್ರಃ ಅಧಿಗುಣಃ ।** (೩) **ಪೂರ್ಣಮದಃ ಪೂರ್ಣಮಿದಂ** ಇದು ಮೊದಲಾದ ಶ್ರುತಿಸಾಹಾಯ್ಯವುಳ್ಳದ್ದು.

**ಪೀಠಿಕೆ ॥** ತರ್ಕಪದಕ್ಕೆ ಅನೇಕಾರ್ಥಗಳು ಇದ್ದಪ್ರಯುಕ್ತ ಪ್ರಕೃತದಲ್ಲಿ ಉಪಯುಕ್ತವಾದ ಅರ್ಥವನ್ನು ಹೇಳುತ್ತಾರೆ.

**ಭಾಷ್ಯ ॥ ಪೂರ್ವೋತ್ತರಾವಿರೋಧೇನ ಕೋಽತ್ರಾರ್ಥೋಽಭಿಮತೋ ಭವೇತ್ । ಇತ್ಯಾದ್ಯಮೂಹನಂ ತರ್ಕಃ ಶುಷ್ಕತರ್ಕಂ ತು ವರ್ಜಯೇತ್ ಇತ್ಯಾದಿ (ಮಹಾ) ಕೌರ್ಮೇ ॥ ೬ ॥**

**ಭಾಷ್ಯಾರ್ಥ ॥** ವಿವಾದ ವಿಷಯವಾದ ವಾಕ್ಯದಲ್ಲಿ ಪೂರ್ವಾಪರ ವಿರೋಧವಿಲ್ಲದೆ ಅಥವಾ ಉಪಕ್ರಮೋಪಸಂಹಾರಗಳಿಗೆ ಅನುಗುಣವಾಗಿ ಯಾವ ಅರ್ಥವು ತಾತ್ಪರ್ಯವಿಷಯವಾಗುವುದು ಇತ್ಯಾದಿ ರೂಪವಾದ ಊಹವು (ಅಂದರೆ ಉಪಕ್ರಮಾದಿ ತಾತ್ಪರ್ಯ ಲಿಂಗಗಳಿಂದ ಇಲ್ಲಿ ಈ ಅರ್ಥವೇ ತಾತ್ಪರ್ಯ ವಿಷಯೀಭೂತವಾದುದು ಇದು ಮೊದಲಾದುದು ಯಾವುದು ಯಥಾರ್ಥಜ್ಞಾನವೋ ಅದನ್ನುಂಟುಮಾಡತಕ್ಕ ಲಿಂಗವೇ) ತರ್ಕವೆನಿಸುತ್ತದೆ. ಇಂತಹ ತರ್ಕವೂ ಕೂಡ ಶ್ರುತಿಸ್ಮೃತಿಗಳ ಸಹಾಯವಿಲ್ಲದಿರುವ ವಿಷ್ಣುವಿಗೆ ಅಸರ್ವಜ್ಞತ್ವವನ್ನು ಸಾಧಿಸುವ ಚೇತನತ್ವ ಮೊದಲಾದ ಅನುಮಾನ ವನ್ನಾದರೂ ಬಿಡಬೇಕು. (ಆದರಿಂದ ಅತೀಂದ್ರಿಯವಾದ ಅರ್ಥವನ್ನು ನಿಶ್ಚಯಿಸ ಕೂಡದು.) ಇದು ಮೊದಲಾದ ಪ್ರಮೇಯವು ಕೌರ್ಮಪುರಾಣದಲ್ಲಿ ಹೇಳಿಯದ.

**ಪೀಠಿಕೆ ॥** ಶ್ರುತ್ಯಾದಿಗಳ ಸಾಹಾಯ್ಯವಿಲ್ಲದಿರುವ ಅನುಮಾನವು ಪ್ರಮಾಣವಲ್ಲ ಎನ್ನುವ ವಿಷಯದಲ್ಲಿ ಸಾಧಕವಿದೆ ಎನ್ನುವುದು ಮಾತ್ರವಲ್ಲ, ಮತ್ತೆ ಅಂತಹ ಅನುಮಾನವೂ ಪ್ರಮಾಣವೆಂದಂಗೀಕರಿಸಿದರೆ ಬಾಧಕವೂ ಇದೆ ಎನ್ನುತ್ತಾರೆ.

ಭಾಷ್ಯ ॥ ಶಕ್ಯತ್ವಾಚ್ಚಾನುಮಾನಾಂ ಸರ್ವತ್ರ ॥ ೭ ॥

ಭಾಷ್ಯಾರ್ಥ ॥ ಶ್ರುತ್ಯಾದಿಗಳ ಸಾಹಾಯ್ಯವಿಲ್ಲದಿರುವ ಚೇತನತ್ವ ವಸ್ತುತ್ವಾದಿ ರೂಪಗಳಾದ ಕೇವಲ ಹೇತುಗಳಿಗೆ ಸರ್ವವಿಷಯದಲ್ಲಿಯೂ (ಅಂದರೆ ಶಶೋ ವಿಷಾಣವಾನ್ ಪಶುತ್ವಾತ್ = ಮೊಲ ಮೊದಲಾದವುಗಳಿಗೆ ಕೋಡು ಇದೆ ಇತ್ಯಾದಿ ವಿಷಯದಲ್ಲಿಯೂ ಹೇಳಲಿಕ್ಕೆ ಬರುವುದರಿಂದ) ಕೇವಲಾನುಮಾನಕ್ಕೆ ಪ್ರಾಮಾಣ್ಯವಿಲ್ಲವೇ ಇಲ್ಲ.

ಪೀಠಿಕೆ ॥ ಈ ವಿಷಯದಲ್ಲಿಯೇ ಪ್ರಮಾಣವನ್ನು ಹೇಳುತ್ತಾರೆ.

ಭಾಷ್ಯ ॥ ಸರ್ವತ್ರ ಶಕ್ಯತೇ ಕರ್ತುಮಾಗಮಂ ಹಿ ವಿನಾಽನುಮಾ ।
ತಸ್ಮಾನ್ನ ಸಾ ಶಕ್ತಿಮತೀ ವಿನಾಗಮಮುದೀಕ್ಷಿತುಮಿತಿ ವಾರಾಹೇ ॥ ೮ ॥

ಭಾಷ್ಯಾರ್ಥ ॥ ಯಾವ ಕಾರಣದಿಂದ ಆಗಮವಿಲ್ಲದ ಅನುಮಾನವು (ಅಂದರೆ ಆಗಮ ಬಲವಿಲ್ಲದ ಅನುಮಾನವು) ಈಶ್ವರನು ಜಗತ್ಕಾರಣನಲ್ಲ ಇತ್ಯಾದಿ ವಿಷಯದಲ್ಲಿ ಹೇಳಲಿಕ್ಕೆ ಶಕ್ಯವಾಗುತ್ತದೋ ಆದುದರಿಂದ ಅನುಮಾನವು ಆಗಮಸಹಾಯವಿಲ್ಲದೆ (ಅದೃಷ್ಟಾರ್ಥವನ್ನು) ತಿಳಿಸಿಕೊಡಲಿಕ್ಕೆ ಶಕ್ತಿಯುಳ್ಳದ್ದು ಆಗುವುದಿಲ್ಲ ಎಂದು ವಾರಾಹಪುರಾಣದಲ್ಲಿ ಹೇಳಿಯದೆ. (ಆದಕಾರಣ ಕೇವಲಾನುಮಾನವು ನಿರ್ಣಾಯಕವಾಗದಿರುವುದರಿಂದ ಶಾಸ್ತ್ರದಿಂದಲೇ ಕರ್ತೃತ್ವ ನಿಶ್ಚಯವಾಗುತ್ತದೆಂದು ಸಿದ್ಧವಾಯಿತು.)

ಪೀಠಿಕೆ ॥ ಅತೀಂದ್ರಿಯವಾದ ಅರ್ಥವೇ ಇಲ್ಲ. ಪ್ರತ್ಯಕ್ಷದಿಂದ ಇತರವಾದ ಅನುಮಾನಾದಿಗಳು ಪ್ರಮಾಣ ಅಲ್ಲ. ಆದುದರಿಂದ ಶಾಸ್ತ್ರದಿಂದ ಈಶ್ವರನು ಹೇಗೆ ಸಿದ್ಧಿ ಸುವನು ಎನ್ನುವ ನಾಸ್ತಿಕವಾದವನ್ನು ಮೋಕ್ಷಧರ್ಮವಚನದಿಂದ ನಿರಾಕರಿಸುತ್ತಾರೆ.

ಭಾಷ್ಯ ॥ ರೇತೋಧಾತುರ್ವಟಕಣಿಕಾಘೃತಧೂಮಾಧಿವಾಸನಂ ।
ಜಾತಿಸ್ಮೃತಿರಯಸ್ಕಾಂತಃ ಸೂರ್ಯಕಾಂತೋಽಂಬುಭಕ್ಷಣಂ ।
ಪ್ರೇತ್ಯ ಭೂತಾಪ್ಯಯಶ್ಚೈವ ದೇವತಾಭ್ಯುಪಯಾಚನಂ ।
ಮೃತೇ ಕರ್ಮನಿವೃತ್ತಿಶ್ಚ ಪ್ರಮಾಣಮಿತಿ ನಿಶ್ಚಯಃ
ಇತಿ ಮೋಕ್ಷಧರ್ಮವಚನಾನ್ನ ನಾಸ್ತಿಕ್ಯವಾದೋ ಯುಜ್ಯತೇ ॥ ೯ ॥

ಭಾಷ್ಯಾರ್ಥ ॥ ರೇತಸ್ಸು ಪಿತ್ತ ಮೊದಲಾದ ಧಾತುವಿಕಾರವು, ವಟವೃಕ್ಷದ ಬೀಜವು, ತುಪ್ಪವು, ಪುಷ್ಪಾದಿಗಳು ಹುಟ್ಟುವುದಕ್ಕೋಸ್ಕರ ಧೂಮದಿಂದ ಮಾಡಲ್ಪಡತಕ್ಕ ವೃಕ್ಷಸಂಸ್ಕಾರವು ಸಾಧನವಿಶೇಷದಿಂದ ಉಂಟಾಗತಕ್ಕ ಪೂರ್ವಜನ್ಮಸ್ಮರಣವು ಸೂಜೀಪಾಷಾಣವು. ಸೂರ್ಯಕಾಂತನಾಮಕ ಶಿಲೆಯು ಜಲಪಾನವು ಮರಣಾ ನಂತರದಲ್ಲಿ (ಅಂದರೆ ಜೀವನನ್ನು ಬಿಟ್ಟು ಇರತಕ್ಕ) ಶರೀರಕ್ಕೆ ಪೃಥಿವ್ಯಾದಿಭೂತಗಳಲ್ಲಿ ಆಗತಕ್ಕ ಲಯವೂ ಕೂಡ ದೇವತೆಗಳ ಪ್ರಾರ್ಥನೆಯೂ, ಮರಣವಾಗೋಣ ಚೇಷ್ಟಾನಿವೃತ್ತಿಯೂ ಕೂಡ (ಅತೀಂದ್ರಿಯಾರ್ಥಗಳು ಇವೆ ಎನ್ನುವ ವಿಷಯದಲ್ಲಿಯೂ ಅನುಮಾನದಿಗಳು ಪ್ರಮಾಣಗಳು ಎನ್ನುವ ವಿಷಯದಲ್ಲಿಯೂ) ಜ್ಞಾಪಕಗಳಾಗುತ್ತವೆನ್ನುವುದು ನಿಶ್ಚಯವು, ಹೀಗೆ ಮೋಕ್ಷಧರ್ಮವಚನದಿಂದ ನಾಸ್ತಿಕ್ಯವಾದವು ಕೂಡುವುದಿಲ್ಲ.

**ವಿಶೇಷಾಂಶ ॥** (ಎ) ರೇತಸ್ಸಿಗೂ ಶರೀರಕ್ಕೂ ಅಪಥ್ಯ ಪಿತ್ತ ಮೊದಲಾದ ಧಾತು ವಿಕಾರಕ್ಕೂ, ವಟಬೀಜಕ್ಕೂ, ವಟವೃಕ್ಷಕ್ಕೂ, ಘೃತಕ್ಕೂ, ಶರೀರದ ಪುಷ್ಟಿಗೂ, ಧೂಮೋಪಭೋಗಕ್ಕೂ, ವೃಕ್ಷದ ಪುಷ್ಪಾದಿಸಂಪತ್ತಿಗೂ, ಸಾಧನವಿಶೇಷಕ್ಕೂ, ಪೂರ್ವಜನ್ಮಸ್ಮರಣೆಗೂ, ಸೂಚಿಕಲ್ಲಿಗೂ ಅದರ ಸನ್ನಿಧಾನದಿಂದ ಅಯೋಭ್ರಮಣಕ್ಕೂ, ಸೂರ್ಯಕಾಂತಮಣಿಗೂ, ಅಗ್ನ್ಯುತ್ಪತ್ತಿಗೂ, ಸಂಪತ್ಪ್ರಾಪ್ತಿಗೂ, ಮರಣಕ್ಕೂ ಶರೀರಚೇಷ್ಟಾ ನಿವೃತ್ತಿಗೂ ಕಾರ್ಯಕಾರಣಭಾವವಿದೆ. ಹೇಗೆಂದರೆ ರೇತಸ್ಸು ಶರೀರಕ್ಕೆ ಕಾರಣವು. ಅಲ್ಲವಾದರೆ ಮಕ್ಕಳು ಹುಟ್ಟುವುದಕ್ಕಾಗಿ ಭಾರ್ಯಾದಿಗಳಲ್ಲಿ ರೇತಸ್ಸೇಚನೆ ಮೊದಲಾದವುಗಳಲ್ಲಿ ಪ್ರವೃತ್ತಿಯೇ ಕೂಡದೆ ಹೋಗಬೇಕಾಗುವುದು. ಈ ಕಾರ್ಯಕಾರಣಭಾವವು ಪ್ರತ್ಯಕ್ಷಸಿದ್ಧವಲ್ಲ. ಮತ್ತೆ **ಶರೀರಂ ರೇತೋಜನ್ಯಂ ತದನ್ವಯವ್ಯತಿರೇಕ ಪ್ರಯುಕ್ತಾನ್ವಯವ್ಯತಿರೇಕ ವತ್ವಾತ್ ।** ರೇತಸ್ಸೇಕ ಮಾಡಿದರೆ ಶರೀರೋತ್ಪತ್ತಿಯು, ರೇತಸ್ಸೇಕಮಾಡದಿದ್ದರೆ ಶರೀರೋತ್ಪತ್ತಿಯಾಗುವುದಿಲ್ಲ ಎನ್ನುವ ಅನ್ವಯವ್ಯತಿರೇಕಿತ್ವರೂಪವಾದ ಅನುಮಾನದಿಂದಲೇ ಕಾರ್ಯಕಾರಣಭಾವವು ತಿಳಿಯಲ್ಪಡಬೇಕು. ಆದಕಾರಣ ಅನ್ವಯವ್ಯತಿರೇಕತ್ವರೂಪ ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧವಾಯಿತು. ಮೃತಶರೀರದಲ್ಲಿ ಸಿಕ್ತವಾದ ರೇತಸ್ಸು ಶರೀರರೂಪವಾಗಿ ಪರಿಣತವಾಗುವುದಿಲ್ಲ. ಮತ್ತೆ ಜೀವಾಧಿಷ್ಠಿತವಾದ ಶರೀರದಲ್ಲಿ ಸೇಚಿಸಲ್ಪಟ್ಟ ರೇತಸ್ಸೇ ಶರೀರರೂಪವಾಗಿ ಪರಿಣತವಾಗುತ್ತದೆ. ಆದ ಕಾರಣ ದೇಹಾತಿರಿಕ್ತವಾದ ಜೀವನು ಸಿದ್ಧನಾಗುವನು. ಬಂಜೆ ಮೊದಲಾದವರ ಶರೀರದಲ್ಲಿ ಸೇಚಿಸಲ್ಪಟ್ಟ ರೇತಸ್ಸು ಕಾರ್ಯಕಾರಿಯಾಗದಿರುವುದರಿಂದ ಯಾರಿಂದ ಪ್ರೇರಿಸಲ್ಪಟ್ಟರೇನೇ ರೇತಸ್ಸು ಕಾರ್ಯಕಾರಿಯಾಗುತ್ತದೋ ಅಂತಹ ಪ್ರೇರಕ ಈಶ್ವರನೂ ಅದೃಷ್ಟವೂ ಸಿದ್ಧಿಸುತ್ತದೆ. ಈಶ್ವರ ಅದೃಷ್ಟಗಳನ್ನು ಪ್ರತಿಪಾದಿಸತಕ್ಕ ಆಗಮವೂ ಪ್ರಮಾಣವೆಂದು ಸಿದ್ಧಿಸುತ್ತದೆ. (ಬಿ) ಹೀಗೆಯೇ ವಾತ ಪಿತ್ತ ಮೊದಲಾದ ಧಾತುವು ಅಪಥ್ಯಾದಿಗಳಿಂದ ಕೆಲವು ಜೀವಚ್ಛರೀರದಲ್ಲಿ ಮಾತ್ರ ವಿಕಾರವನ್ನು ಹೊಂದುತ್ತದೆ. ಮೃತಶರೀರದಲ್ಲಿ ವಿಕಾರವನ್ನು ಹೊಂದುವುದಿಲ್ಲ. ಜೀವವಿರುವ ಎಲ್ಲಾ ಶರೀರಗಳಲ್ಲಿಯೂ ವಿಕಾರವಾಗುವುದಿಲ್ಲ. ಆದುದರಿಂದ ಜೀವ ಈಶ್ವರ ಅವರನ್ನು ತಿಳಿಸಿಕೊಡತಕ್ಕ ಆಗಮಕ್ಕೆ ಪ್ರಾಮಾಣ್ಯ ಮೊದಲಾದುದೂ ಸಿದ್ಧಿಸುತ್ತದೆ. (ಸಿ) ವಟಜೀಜದಿಂದ ವಟವು ಹುಟ್ಟುತ್ತದೆ ಎಂದು ಪ್ರಸಿದ್ಧವು. ಹೊರಿದ ಬೀಜದಿಂದಲೂ ಹುಟ್ಟುವುದಿಲ್ಲ. ಹೊರಯದೆ ಇದ್ದ ಎಲ್ಲಾ ಬೀಜಗಳಿಂದಲೂ ಹುಟ್ಟುವು ದಿಲ್ಲ. ಆದಕಾರಣ ಅದಕ್ಕೆ ಪ್ರೇರಕಗಳಾದ ಈಶ್ವರ ಅದೃಷ್ಟ ಇವುಗಳು ಸಿದ್ಧಿಸುತ್ತವೆ. (ಡಿ) ತುಪ್ಪದಿಂದ ಜೀವಚ್ಛರೀರದಲ್ಲಿಯೇ ಪುಷ್ಟತನ ಬರುತ್ತದೆ. ಮೃತಶರೀರದಲ್ಲಿ ಪುಷ್ಟತನ ಬರುವುದಿಲ್ಲ. ಜೀವವಿರುವ ಎಲ್ಲಾ ಶರೀರಗಳಲ್ಲಿ ಪುಷ್ಟತನ ಬರುವುದಿಲ್ಲ. (ಇ) ಪುಷ್ಪಾದಿಗಳು ಹುಟ್ಟುವುದಕ್ಕಾಗಿ ಧೂಮದಿಂದ ವೃಕ್ಷಕ್ಕೆ ಮಾಡತಕ್ಕ ಸಂಸ್ಕಾರದಿಂದ ಒಣಗದೆ ಇದ್ದ ವೃಕ್ಷಗಳಲ್ಲಿಯೇ ಪುಷ್ಪಾದಿಗಳು ಹುಟ್ಟುತ್ತವೆ. ಒಣಗಿದ ವೃಕ್ಷದಲ್ಲಿ ಆಗುವುದಿಲ್ಲ. ಒಣಗದೆ ಇರುವ ಎಲ್ಲಾ ವೃಕ್ಷಗಳಲ್ಲಿಯೂ ಆಗುವುದಿಲ್ಲ. ಈ ಲಿಂಗಗಳಿಂದಲೂ ಜೀವ ಈಶ್ವರ ಅದೃಷ್ಟಾದಿಗಳು ಸಿದ್ಧಿಸುತ್ತವೆ. (ಎಫ್) ಕೆಲವರಿಗೆ ಸಾಧನವಿಶೇಷದಿಂದ ಪೂರ್ವಜನ್ಮದ ಸ್ಮರಣೆಯು ಬರುತ್ತದೆ. ಈ ಪುಣ್ಯದಿಂದ ಸ್ವರ್ಗವು ಅನುಭೂತವಾಯಿತು. ಈ ಪಾಪದಿಂದ ನರಕವು ಅನುಭೂತವಾಯಿತು. ಹೀಗೆ ಜಾತಿ ಸ್ಮರಣೆಯು ಕೆಲವರಿಗೆ ಮಾತ್ರ. ಸರ್ವರಿಗೆ ಇಲ್ಲ. ದೇಹಾತಿರಿಕ್ತ ಚೇತನಾದಿಗಳು ಇಲ್ಲವಾದರೆ ಆ

ಜಾತಿಸ್ಮರಣೆಯು ಕೂಡಲಾರದು. ಆದುದರಿಂದಲೂ ಚೇತನ ಅದೃಷ್ಟ ಮೊದಲಾದುದು ಸಿದ್ಧಿಸುತ್ತದೆ. (ಜ) ಆಯಸ್ಕಾಂತ ಎನ್ನುವ ಶಿಲಾವಿಶೇಷದಿಂದ ಕಬ್ಬಣಗೋಲು ತಿರುಗುತ್ತದೆ. ಕೇವಲ ಅಚೇತನವು ಹಂದಾಡಿಸತಕ್ಕದ್ದಾಗಿ ಕಾಣಲಿಲ್ಲ. ಎಲ್ಲಾ ಚೇತನಗಳೂ ಹಂದಾಡತಕ್ಕವುಗಳು ಕಂಡುಬರಲಿಲ್ಲ. ಇದರಿಂದಲೂ ಅದಕ್ಕೆ ಪ್ರೇರಕನಾದ ಈಶ್ವರನೂ ಅದೃಷ್ಟ ಮೊದಲಾದುದೂ ಸಿದ್ಧಿಸುತ್ತದೆ. (ಹೆಚ್) ಸೂರ್ಯಕಾಂತ ಎನ್ನುವ ಶಿಲಾವಿಶೇಷದಿಂದ ಅಗ್ನಿಯು ಹುಟ್ಟುತ್ತದೆ. ಅಚೇತನಕ್ಕೆ ಇಂತಹ ಶಕ್ತಿಯು ಕೂಡುವುದಿಲ್ಲ. ಆದುದರಿಂದಲೂ ಅದಕ್ಕೆ ಪ್ರೇರಕನಾದ ಈಶ್ವರನೂ ಅದೃಷ್ಟ ಮೊದಲಾದುದೂ ಸಿದ್ಧಿಸುತ್ತದೆ. (ಐ) ನೀರನ್ನುಕುಡಿಯೋಣದರಿಂದ ಜೀವಚ್ಛರೀರದಲ್ಲಿಯೇ ತೃಷೆಯೂ ನಿವೃತ್ತವಾಗುತ್ತದೆ. ಆ ಕುಡಿದ ನೀರು ಮೃತ ಶರೀರದಲ್ಲಿ ಪರಿಣಾಮ ಹೊಂದುವುದಿಲ್ಲ. ಪಾತ್ರಾಂತರದಲ್ಲಿಟ್ಟರೂ ಪರಿಣಾಮ ವಾಗುವುದಿಲ್ಲ. ಜೀವವಿರುವ ಎಲ್ಲಾ ಶರೀರಗಳಲ್ಲಿಯೂ ಪರಿಣಾಮವಾಗುವುದಿಲ್ಲ. ಆದುದರಿಂದಲೂ ಜೀವ ಈಶ್ವರಾದಿಗಳು ಸಿದ್ಧಿಸುವರು. (ಜೆ) ಮರಣದಿಂದ ದೇಹವು ಪೃಥಿವೀ ಮೊದಲಾದ ಐದು ಭೂತಗಳಲ್ಲಿ ಸೇರುತ್ತದೆ. ಜೀವವಿರುವಾಗ ಸೇರುವುದಿಲ್ಲ. ಸ್ವೇಚ್ಛೆಯಿಂದಲೂ ಸೇರುವುದಿಲ್ಲ. ಆದುದರಿಂದಲೂ ಅದಕ್ಕೆ ನಿಯಾಮಕನಾದ ಈಶ್ವರ ಅದೃಷ್ಟ ಮೊದಲಾದುದು ಸಿದ್ಧಿಸುತ್ತದೆ. (ಕೆ) ದೇವತೆಗಳ ಪ್ರಾರ್ಥನೆಯಿಂದ ಕೆಲವರಿಗೆ ಮಾತ್ರ ಸಂಪತ್ತು ಮೊದಲಾದುದು ಉಂಟಾಗುತ್ತದೆ. (ಎಲ್) ನಿರ್ಜೀವ ಶರೀರದಲ್ಲಿ ಚೇಷ್ಟೆಯಿರುವುದಿಲ್ಲ. ಜೀವವಿರುವಾಗ ಚೇಷ್ಟಾನಿವೃತ್ತಿಯಾಗುವುದಿಲ್ಲ. ಸ್ವೇಚ್ಛೆಯಿಂದಲೂ ಅಲ್ಲ. ಆದುದರಿಂದಲೂ ಜೀವ ಈಶ್ವರ ಅದೃಷ್ಟ ಮೊದಲಾದುದು ಸಿದ್ಧಿಸುತ್ತದೆ. ಹೀಗೆಯೇ ಇತರ ದೃಷ್ಟಾಂತಗಳಿಂದಲೂ ಅದೃಷ್ಟಗಳಾದ ಜೀವ ಈಶ್ವರ ಮೊದಲಾದವುಗಳನ್ನು ಊಹಿಸಲಾಗುವುದು. (ಎಂ) ಹೀಗೆ ಈ ಭಾರತವಾಕ್ಯದಿಂದ ತೋರುವ ಜ್ಞಾನಸಾಧನಗಳಿಂದ ಅನುಮಾನ ಜೀವ ಈಶ್ವರ ಆಗಮ ಅದೃಷ್ಟಾದಿಗಳು ಸಿದ್ಧಿಸುವುದರಿಂದ ನಾಸ್ತಿಕ್ಯವಾದವು (ಪರಲೋಕವಿಲ್ಲ ಧರ್ಮವಿಲ್ಲ ಅಧರ್ಮವಿಲ್ಲ ಎಂದು ಬುದ್ಧಿಪೂರ್ವಕ ವಾಗಿ ಹೇಳುವುದು ಅಥವಾ ಧರ್ಮಾದಿಗಳಲ್ಲಿ ಇದರಿಂದ ಪ್ರಯೋಜನವಿದೆ ಎಂದು ಬುದ್ಧಿಪೂರ್ವಕವಾಗಿ ಹೇಳುವಿಕೆಯು ಆಸ್ತಿಕ್ಯವು. ಅದರಿಂದ ಭಿನ್ನವಾದುದು ನಾಸ್ತಕ್ಯವಾದವು) ಸರ್ವಥಾ ಕೂಡುವುದಿಲ್ಲ.

ಪೀಠಿಕೆ ॥ ಬೇರೆ ಯುಕ್ತಿಯಿಂದಲೂ ನಾಸ್ತಿಕ್ಯವಾದವನ್ನು ದೂಷಿಸುತ್ತಾರೆ.

**ಭಾಷ್ಯ ॥ ದರ್ಶನಾಚ್ಚ ತಪ ಆದಿಫಲಸ್ಯ ॥ ೧೦ ॥**

ಭಾಷ್ಯಾರ್ಥ ॥ ಸ್ವಾಧ್ಯಾಯ ಬ್ರಹ್ಮಚರ್ಯ ಮೊದಲಾದ ತಪಸ್ಸಿನ ಫಲಭೂತವಾದ ತೇಜಸ್ವಿತ್ವಾದಿ ಗಳಿಗೂ, ಅತ್ಯುತ್ಕಟವಾದ ಫಲಕ್ಕೂ ದರ್ಶನವಾದುದರಿಂದ ಅಂದರೆ ಅವುಗಳು ಪ್ರತ್ಯಕ್ಷವಾಗಿಯೇ ಕಾಣುವುದರಿಂದಲೂ, ನಾಸ್ತಿಕ್ಯವಾದವು ಕೂಡುವುದಿಲ್ಲ

ವಿಶೇಷಾಂಶ॥ ತಪಸ್ಸನ್ನಾಗಲೀ ಪಾಪವನ್ನಾಗಲೀ ಮಾಡಿದರೆ ಅವುಗಳಿಗೆ ಫಲವು ಪ್ರತ್ಯಕ್ಷವಾಗಿಯೇ ಕಾಣುತ್ತದೆ. ಈ ಪ್ರತ್ಯಕ್ಷಸಿದ್ಧವಾದ ಫಲದಲ್ಲಿ ತಪಸ್ಸಿಗೆ ಕಾರಣತ್ವವು ಪ್ರತ್ಯಕ್ಷಸಿದ್ಧವಲ್ಲ. ಆದುದರಿಂದ ಇವುಗಳಿಗೆ ಇರುವ ಕಾರ್ಯಕಾರಣಭಾವವು ಅನುಮಾನವೇದ್ಯವು. ಹೀಗೆ ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧಿಸುತ್ತದೆ. ತಪಸ್ಸು ಮೊದಲಾದವುಗಳ ವಿಷಯವನ್ನು ವೇದದಲ್ಲಿ ಹೇಳಿದುದರಿಂದ

ಆಗಮಕ್ಕೆ ಪ್ರಾಮಾಣ್ಯವನ್ನು ಅವಶ್ಯವಾಗಿ ಒಡಂಬಡಬೇಕು. ಅಂತೂ ಪುಣ್ಯಪಾಪರೂಪ ಅತೀಂದ್ರಿಯವಸ್ತುವನ್ನು ಅದನ್ನು ಸಾಧಿಸತಕ್ಕ ಅನುಮಾನ ಆಗಮಗಳ ಪ್ರಾಮಾ ಣ್ಯವನ್ನು ಅಂಗೀಕರಿಸಲೇಬೇಕು. ಅವುಗಳಿಂದ ಈಶ್ವರಾದಿಗಳೂ ಸಿದ್ಧಿಸುತ್ತಾರೆ. ಆದಕಾರಣ ನಾಸ್ತಿಕ್ಯವಾದವು ಕೂಡುವುದಿಲ್ಲ.

ಪೀಠಿಕೆ ॥ ಹಾಗಾದರೆ ಅನುಮಾನವು ನಿಶ್ಚಾಯಕವಾಗದಿದ್ದ ಪ್ರಯುಕ್ತ ಸಾಧಕ ವಾಗುವುದಿಲ್ಲ. ಮತ್ತೆ ಶಾಸ್ತ್ರದಿಂದಲೇ ಜಗತ್ಕಾರಣವು ಸಿದ್ಧಿಸುವುದು ಎಂದಾದರೆ ಪಾಶುಪತಾದಿ ಶಾಸ್ತ್ರದಿಂದ ರುದ್ರಾದಿಗಳೂ ಜಗತ್ಕಾರಣರೆಂದು ಸಿದ್ಧಿಸಬೇಕಾಗುವುದು ಎಂದರೆ ಶಾಸ್ತ್ರ ಪದಾರ್ಥವನ್ನು ಹೇಳುತ್ತಾರೆ.

**ಭಾಷ್ಯ ॥ ಋಗ್ಯಜುಸ್ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ ।**
**ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥ ೧೧ ॥**

ಭಾಷ್ಯಾರ್ಥ ॥ ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದ ಭಾರತ ಪಂಚ ರಾತ್ರಾಗಮ ಮೂಲರಾಮಾಯಣ ಇವುಗಳೇ ಶಾಸ್ತ್ರವೆಂದು ಹೇಳಲ್ಪಡುತ್ತವೆ.

ಪೀಠಿಕೆ ॥ ಹಾಗಾದರೆ ಮನುಸ್ಮೃತ್ಯಾದಿಗಳು ಶಾಸ್ತ್ರವಾಗದೆ ಹೋಗಬೇಕಾಗುವುದು ಎಂದರೆ—

**ಭಾಷ್ಯ ॥ ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ ।**
**ಅತೋಽನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತದಿತಿ ಸ್ಕಾಂದೇ ॥ ೧೨ ॥**

ಭಾಷ್ಯಾರ್ಥ ॥ ಋಗಾದಿಗಳಿಗೆ ಯಾವುದು ಅನುಕೂಲವಾಗಿದೆಯೋ ಅದೂ ಕೂಡ ಶಾಸ್ತ್ರ ವೆಂದು (ಪ್ರಾಮಾಣಿಕರಿಂದ) ಹೇಳಲ್ಪಡುತ್ತದೆ. ಋಗಾದಿಗಳಿಂದಲೂ ಋಗಾದಿಗಳಿಗೆ ಅನುಕೂಲ ಗಳಾದ ಗ್ರಂಥಗಳಿಂದಲೂ ವಿರುದ್ಧವಾದುದು ಉದಾಸೀನವಾದುದು. ಪಾಶುಪತ ಮೊದಲಾದ ವಿಸ್ತೃತಗ್ರಂಥವು ಶಾಸ್ತ್ರವೇ ಅಲ್ಲ. ಅದು ಕುತ್ಸಿತಜ್ಞಾನೋಪಾಯವು ಎಂದು ಸ್ಕಾಂದಪುರಾಣದಲ್ಲಿ ಹೇಳಿಯದೆ.

ವಿಶೇಷಾಂಶ ॥ ಋಗಾದಿಗಳಿಗೆ ಅವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವ ಮನುಸ್ಮೃತ್ಯಾದಿಗಳೂ ಪುರಾಣಾದಿಗಳೂ ಇವೆಲ್ಲವೂ ಶಾಸ್ತ್ರವೆನಿಸುತ್ತದೆ.

ಪೀಠಿಕೆ ॥ ಪಾಶುಪತಾದಿಗಳು ಅಪ್ರಮಾಣಗಳು ಎನ್ನುವ ವಿಷಯದಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ.

**ಭಾಷ್ಯ ॥ ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ**
**ಇತ್ಯಾರಭ್ಯ ವೇದಪಂಚರಾತ್ರಯೋರೈಕ್ಯಾಭಿಪ್ರಾಯೇಣ**
**ಪಂಚರಾತ್ರಸ್ಯೈವ ಪ್ರಾಮಾಣ್ಯಮುಕ್ತಮಿತರೇಷಾಂ**
**ಭಿನ್ನಮತತ್ವಂ ಪ್ರದರ್ಶ್ಯ ಮೋಕ್ಷಧರ್ಮೇಷ್ವಪಿ ॥ ೧೩ ॥**

**ಭಾಷ್ಯಾರ್ಥ ॥** ಮೋಕ್ಷಧರ್ಮಗಳಲ್ಲಿಯೂ ಕೂಡ ಸಾಂಖ್ಯಶಾಸ್ತ್ರ ಯೋಗಶಾಸ್ತ್ರ ಪಾಶುಪತ, ವೇದಾರಣ್ಯಕವು ಎಂದಾರಂಭಿಸಿ (ಪ್ರವೃತ್ತವಾದ ಜ್ಞಾನಾನ್ಯೇತಾನಿ ಭಿನ್ನಾನಿ ನಾತ್ರಕಾರ್ಯಾ ವಿಚಾರಣಾ। ಎನ್ನುವ ವಚನದಿಂದ) ಇತರ ಸಾಂಖ್ಯಾದಿ ಶಾಸ್ತ್ರಗಳಿಗೆ ಪರಸ್ಪರವಿರುದ್ಧಾರ್ಥಕತ್ವವನ್ನು ತೋರಿಸಿ (**ಸಾಂಖ್ಯಂ ಯೋಗಃ** ಎನ್ನುವ ವಚನದಿಂದ ಹೇಳಿ) ವೇದ ಪಂಚರಾತ್ರಾಗಮಗಳಿಗೆ ಐಕ್ಯವನ್ನು ಅಭಿಪ್ರಾಯಮಾಡಿಕೊಂಡು ಪಂಚರಾತ್ರಾಗಮಕ್ಕೇನೇ ಪ್ರಾಮಾಣ್ಯವು ಯಾವ ಕಾರಣದಿಂದ ಹೇಳಲ್ಪಟ್ಟದೋ ಆದಕಾರಣ ಪಾಶುಪತಾದಿಗಗಳು ಅಪ್ರಮಾಣವೇ.

**ವಿಶೇಷಾಂಶ ॥** (ಎ) [೧]ಸಾಂಖ್ಯ ಮೊದಲಾದ ಶಾಸ್ತ್ರಗಳು ಪರಸ್ಪರವಿರುದ್ಧ ಅರ್ಥವುಳ್ಳವುಗಳೋ ಅವಿರುದ್ಧವಾದ ಒಂದೇ ಅರ್ಥವುಳ್ಳವುಗಳೋ ಎಂದು ವೈಶಂಪಾ ಯನಾಚಾರ್ಯರ ಹತ್ತಿರ ಜನಮೇಜಯರಾಜನು ಪ್ರಶ್ನೆಮಾಡಲು ವೈಶಂಪಾಯನಾಚಾರ್ಯರು ಜ್ಞಾನಸಾಧನಗಳಾದ ಈ ಶಾಸ್ತ್ರಗಳು ಭಿನ್ನಾರ್ಥ (ವಿರುದ್ಧಾರ್ಥ) ಉಳ್ಳವುಗಳೇ ಸಂಶಯವಿಲ್ಲ ಎಂದು ಉತ್ತರವನ್ನು ಹೇಳಿರುವರು. ಏಕೆಂದರೆ ಕಪಿಲ ಋಷಿಯು ಸಾಂಖ್ಯಶಾಸ್ತ್ರವನ್ನು, ಚತುರ್ಮುಖನು ಯೋಗಶಾಸ್ತ್ರವನ್ನು, ರುದ್ರನು ಪಾಶುಪತವನ್ನು, ಸಾಕ್ಷಾತ್ ನಾರಾಯಣನೇ ಪಂಚರಾತ್ರಾಗಮವನ್ನು ಮಾಡಿದವನು. (ಬಿ) [೨]ಸಾಂಖ್ಯಾದಿಶಾಸ್ತ್ರಗಳು ಪ್ರಸುತ್ತಗಳಾದಾಗ್ಯೂ ಅವುಗಳನ್ನು ಬಿಟ್ಟು ಪಂಚರಾತ್ರಾಗಮಕ್ಕೇನೇ ಪ್ರಾಮಾಣ್ಯವನ್ನು ಹೇಳಿರುವರು. ಪಾಶುಪತಾದಿಗಳು ಅಪ್ರಮಾಣಗಳೇ. (ಸಿ) ಹಾಗಾದರೆ ಇದರಿಂದ ಪಂಚರಾತ್ರಾಗಮಕ್ಕೆ ಮಾತ್ರ ಪ್ರಾಮಾಣ್ಯವನ್ನು ಹೇಳಿದಂತೆ ಆಯಿತು. ಇತರಶಾಸ್ತ್ರಗಳಿಗೆ ಅಪ್ರಾಮಾಣ್ಯ ವನ್ನು ಹೇಳಿದಂತೆ ಆಗಲಿಲ್ಲ. ಎಂದರೆ ಪರಸ್ಪರ ವಿರುದ್ಧಾರ್ಥವುಳ್ಳವುಗಳಲ್ಲಿ ಒಂದು ಪ್ರಮಾಣವೆಂದು ಹೇಳುವಾಗ ಬೇರೆ ಇದ್ದವುಗಳು ಪ್ರಮಾಣಗಳಲ್ಲವೆಂದು ಸುತರಾಂ ಲಭಿಸುತ್ತವೆ. (ಡಿ) ಹಾಗಾದರೆ ವೇದಾರಣ್ಯಕವೂ ಕೂಡ ಅಪ್ರಮಾಣವಾಗಬೇಕಾದೀತು ಎಂದರೆ ಪಂಚರಾತ್ರಾಗಮವು ವೇದಾರ್ಥ ವನ್ನು ಪ್ರತಿಪಾದಿಸುವುದರಿಂದ ಪಂಚರಾತ್ರಾಗಮಕ್ಕೆ ಪ್ರಾಮಾಣ್ಯವನ್ನು ಹೇಳಿದರೆ ವೇದಕ್ಕೆ ಪ್ರಾಮಾಣ್ಯ ವನ್ನು ಹೇಳಿದಂತೆಯೇ ಆಯಿತು. (ಇ) ಪಂಚರಾತ್ರಾಗಮಕ್ಕೂ ವೇದಾರಣ್ಯಕಕ್ಕೂ ಸ್ವಾನದಲ್ಲಿ ಪಂಚರಾತ್ರಾಗಮಕ್ಕೆ ಪ್ರಾಮಾಣ್ಯವನ್ನು ಹೇಳಿರುವರು. (ಎಫ್) ಪಂಚರಾತ್ರಾಗಮಕ್ಕೆ ವೇದಾರಣ್ಯಕದಿಂದ ಏಕಾರ್ಥತ್ವವು ವಿವಕ್ಷಿತವಾಗದಿದ್ದರೆ ಪಂಚರಾತ್ರಾಗಮಕ್ಕೆ ಆಧಿಕ್ಯವನ್ನು ಹೇಳಿದ್ದು ಅಸಂಗತವಾಗಬೇಕಾದೀತು. (ಜಿ) ಹಾಗಾದರೆ ಪಂಚರಾತ್ರಾಗಮಕ್ಕೆ ಪ್ರಾಮಾಣ್ಯವು ಸಿದ್ಧಿಯಾಗುವುದ ಕ್ಕಾಗಿ ವೇದಕ್ಕೇನೇ ಪ್ರಾಮಾಣ್ಯವನ್ನು ಹೇಳಬಹುದಷ್ಟೆ ಎಂದರೆ ವೇದಕ್ಕೆ ಪ್ರಾಮಾಣ್ಯವನ್ನು ಹೇಳಿದರೆ ಅನುಪಪತ್ತಿಯೇ ಇಲ್ಲದಕಾರಣ ಪಂಚರಾತ್ರಾಗಮಕ್ಕೆ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ. ವೇದಮೂಲಕವಾದ ಪಂಚರಾತ್ರಾಗಮಕ್ಕೆ ಪ್ರಾಮಾಣ್ಯವನ್ನು ಹೇಳಿದರೆ ವೇದಕ್ಕೆ ಪ್ರಾಮಾಣ್ಯವು ಸಿದ್ಧ

---

೧. ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ । ಜ್ಞಾನಾನ್ಯೇತಾನಿ ಭಿನ್ನಾನಿ ಉತಾಹೋನೇತಿ ಚೋಚ್ಯತಾಂ ॥ ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ । ಜ್ಞಾನಾನ್ಯೇತಾನಿ ಭಿನ್ನಾನಿ ನಾತ್ರ ಕಾರ್ಯಾ ವಿಚಾರಣಾ ॥ ಸಾಂಖ್ಯಸ್ಯ ವಕ್ತಾ ಕಪಿಲಃ ಪರಮರ್ಷಿಃ ಸ ಉಚ್ಯತೇ. ಹಿರಣ್ಯಗರ್ಭೋ ಯೋಗಸ್ಯ ವಕ್ತಾ ಚೈವ ಚತುರ್ಮುಖಃ । ಉಕ್ತವಾನಿದಮವ್ಯಗ್ರಂ ಜ್ಞಾನಂ ಪಾಶುಪತಂ ಶಿವಃ ॥)

೨. ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ। ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತತ್ ವಿಶಿಷ್ಯತೇ।)

ವಾಗುತ್ತದೆ. (ಹೆಚ್) ಪ್ರತಿಪಾದ್ಯ ಧರ್ಮಗಳು ಹೆಚ್ಚು ಇದ್ದ ಕಾರಣ ಮೋಕ್ಷಧರ್ಮೇಷು ಎಂದು ಬಹುವಚನವು.

**ಪೀಠಿಕೆ ॥** ಹೀಗೆ ಸೂತ್ರವನ್ನು ವ್ಯಾಖ್ಯಾನಮಾಡಿ **ಶಾಸ್ತ್ರಸ್ಯ ಯೋನಿಃ** ಎಂದು ಪರರು ಷಷ್ಠೀತತ್ಪುರುಷವೆಂದು ಹೇಳುತ್ತಾರೆ. ಅದು ಅಯುಕ್ತವೆನ್ನುವ ಅಭಿಪ್ರಾಯದಿಂದ ತಮಗೆ ಅಭಿಪ್ರೇತವಾದ ಅರ್ಥವನ್ನು ತೋರಿಸುತ್ತಾರೆ.

**ಭಾಷ್ಯ ॥ ಶಾಸ್ತ್ರಂ ಯೋನಿಃ ಪ್ರಮಾಣಮಸ್ಯೇತಿ ಶಾಸ್ತ್ರಯೋನಿ ॥ ೧೪ ॥**

**ಭಾಷ್ಯಾರ್ಥ ॥** ಶಾಸ್ತ್ರವೇ ಇವನಿಗೆ ಜ್ಞಾನಕಾರಣವಾದ ಪ್ರಮಾಣವು ಎಂದೇ ಶಾಸ್ತ್ರ ಯೋನಿ ಶಬ್ದಾರ್ಥವು. (ಅಂತೂ ಬ್ರಹ್ಮನು ಶಾಸ್ತ್ರೈಕಸಮಧಿಗಮ್ಯನು.)

**ವಿಶೇಷಾಂಶ ॥** (ಎ) **ಸ್ಮೃತ್ಯನವಕಾಶದೋಷಪ್ರಸಂಗಃ** ಎನ್ನುವ ಸ್ಮೃತ್ಯಧಿಕರಣದಲ್ಲಿ ಸಾಂಖ್ಯಪಾಶುಪತ ಮೊದಲಾದ ದುರಾಗಮಗಳನ್ನು ನಿರಾಕರಿಸುವರು. ಹಾಗೆಯೇ ಇಲ್ಲಿಯೂ ಅವುಗಳನ್ನೇ ನಿರಾಕರಿಸಿದ್ದರಿಂದ ಸ್ಮೃತ್ಯಧಿಕರಣದಿಂದ ಗತಾರ್ಥ ವಾಯಿತು. ಎಂದರೆ— ಈ ಅಧಿಕರಣ ದಲ್ಲಿ ಜಗತ್ಕರ್ತೃತ್ವಾದಿಗಳು ವಿಷ್ಣುವಿಗೊ ಇತರರಿಗೊ ಎಂದು ಸಂದೇಹವು. ಸ್ಮೃತ್ಯಧಿಕರಣದಲ್ಲಿ ಯಾದರೂ ವಿಷ್ಣುವಿಗೆ ಕರ್ತೃತ್ವಾ ದಿಗಳು ಯುಕ್ತವೋ ಅಯುಕ್ತವೋ ಎಂದು ಸಂದೇಹವು. ಆದಕಾರಣ ಗತಾರ್ಥತಾ ದೋಷವು ಇಲ್ಲವೆಂದು ಹೇಳಕೂಡದು. ಒಂದೇ ಸಿದ್ಧಾಂತದಿಂದ ಎರಡು ವಿಧ ಸಂದೇ ಹ ಗಳನ್ನು ನಿರಾಕರಿಸಲು ಶಕ್ಯವಾಗುವುದು. ಸಂದೇಹ ಪ್ರಕಾರ ಭೇದದಿಂದಲೇ ಅಧಿಕರಣಗಳಿಗೆ ಭೇದ ಹೇಳುವುದಾದರೆ ಎಲ್ಲಾ ಕಡೆಗಳಲ್ಲಿಯೂ ಹೀಗೆ ಹೇಳಬಹುದು. ಆದಕಾರಣ ಗತಾರ್ಥತಾ ದೋಷವು ತಪ್ಪುವುದಿಲ್ಲ. ಎಂದರೆ ಸ್ಮೃತ್ಯಧಿಕರಣದಲ್ಲಿ ಪಾಶುಪತ ಮೊದಲಾದ ಸ್ಮೃತಿಗಳಿಂದ ಪೂರ್ವಪಕ್ಷವು ಬಂದರೆ ಪಂಚರಾತ್ರಾದಿ ಸ್ಮೃತಿಗಳಿಂದ ಸಿದ್ಧಾಂತವು. ಈ ಅಧಿಕರಣದಲ್ಲಿ ಸ್ಮೃತ್ಯನುಮಾನಗಳಿಂದ ಪೂರ್ವಪಕ್ಷ ಬಂದರೆ ಶ್ರುತ್ಯಾದಿರೂಪಶಾಸ್ತ್ರಗಳಿಂದ ಸಿದ್ಧಾಂತವು. ಆದುದರಿಂದಲೇ ಅಲ್ಲಿ ಸ್ಮೃತಿ ಶಬ್ದವು, ಇಲ್ಲಿ ಶಾಸ್ತ್ರಶಬ್ದವು. ಆದಕಾರಣ ಗತಾರ್ಥತ್ವವಿಲ್ಲ.

## ಅದ್ವೈತರೀತ್ಯಾ

**ವಿಚಾರ ॥** (೧) ಪರಕೀಯರು **ಶಾಸ್ತ್ರಸ್ಯ ಯೋನಿಃ** ಎಂದು ವಿಗ್ರಹವನ್ನಾಶ್ರಯಿಸಿ ಬ್ರಹ್ಮನು ಋಗ್ವೇದಾದಿಗಳಿಗೆ ಕಾರಣನು ಎಂದರ್ಥವೆನ್ನುತ್ತಾರೆ. ಸಮಸ್ತಮಾನ ವಾದ ಪದಾರ್ಥವನ್ನು ಬಿಟ್ಟು ಅನ್ಯಪದಾರ್ಥವೇ ಪ್ರಧಾನವೇ ಉಳ್ಳ ಬಹುವ್ರೀಹಿಗಿಂತ ಉತ್ತರ ಪದಾರ್ಥವೇ ಪ್ರಧಾನವಾಗಿ ಉಳ್ಳ ತತ್ಪುರುಷವು ಪ್ರಬಲವಾದ ಪ್ರಯುಕ್ತ ಷಷ್ಠೀ ತತ್ಪುರುಷವೇ ಪ್ರಶಸ್ತವೆನ್ನುತ್ತಾರೆ. ಇದು ಅಯುಕ್ತವು. ಏಕೆಂದರೆ ಬ್ರಹ್ಮನು ವೇದಾದಿಗಳನ್ನು ನಿರ್ಮಿಸಿದ್ದಾನೆಂದು ಹೇಳುವುದು ಪ್ರಕೃತಕ್ಕೆ ಉಪಯೋಗವಿಲ್ಲ. ಮತ್ತು ಅದು ಜಗಜ್ಜನ್ಮಾದಿಕರ್ತೃತ್ವದಲ್ಲಿ ಹೇತುವಾಗಲಾರದು.

(೨) ಜಗತ್ಕಾರಣನು ಎನ್ನುವ ಉಕ್ತಿಯಿಂದ ಅರ್ಥಾತ್ ಲಬ್ಧವಾದ ಸರ್ವಜ್ಞತ್ವ ವನ್ನೇ ಶಾಸ್ತ್ರಗಳನ್ನು ನಿರ್ಮಿಸಿದವನು ಎನ್ನುವ ಉಕ್ತಿಯು ಸ್ಪಷ್ಟೀಕರಿಸುತ್ತದೆ ಎಂದರೆ— ಅರ್ಥಲಬ್ಧವಾದ ಸರ್ವಶಕ್ತ್ಯಾದಿಗಳನ್ನು

ಸ್ಪಷ್ಟೀಕರಿಸದೇ ಸರ್ವಜ್ಞತ್ವವನ್ನು ಮಾತ್ರ ಪ್ರಕಟೀಕರಿಸಲಿಕ್ಕೆ ವಿಶೇಷ ಕಾರಣವಿಲ್ಲ.

(೩.) ಹಾಗಾದರೆ ಸರ್ವಶಕ್ತ್ಯಾದಿಗಳು ಅರ್ಥತಃ ಸಿಕ್ಕಿರುವುದಾದರೂ ಸಾಂಖ್ಯರು 'ಜಗತ್ತಿಗೆ ಅಚೇತನವೇ ಕಾರಣವು' ಎಂದು ಹೇಳುವುದರಿಂದ ಅದನ್ನು ನಿಷೇಧಿಸುವುದಕ್ಕಾಗಿ ಸಾರ್ವಜ್ಞವನ್ನು ತೋರಿಸುವುದು ಕೂಡಬಹುದು ಎಂದರೆ ಚೇತನವು ಕಾರಣವೋ ಎಂದು ಹೇಳಿರುವುದರಿಂದಲೇ ಸಾಂಖ್ಯರಿಗೆ ಅಭಿಮತವಾದ ಅಚೇತನ ಕಾರಣತ್ವವನ್ನು ನಿಷೇಧಿಸಬಹುದು. ಮತ್ತು ಸಾಂಖ್ಯರು ಅಂಗೀಕರಿಸದೆ ಇರುವ ಶಾಸ್ತ್ರಯೋನಿತ್ವದಿಂದ ಸಾರ್ವಜ್ಞವನ್ನು ಸಾಧಿಸುವುದು ಕೂಡುವುದಿಲ್ಲ. ಅಲ್ಲದೆ ಶ್ರುತಿಯಿಂದ ಶಾಸ್ತ್ರಕಾರಣತ್ವವನ್ನು ಸಾಧಿಸಿ ಅದರಿಂದ ಸರ್ವಜ್ಞತ್ವವನ್ನು ಸಾಧಿಸಿ ಅದರಿಂದ ಪ್ರಧಾನಕ್ಕೆ ಕಾರಣತ್ವವನ್ನು ನಿಷೇಧಮಾಡುವುದಕ್ಕಿಂತ ಶ್ರುತಿಯಿಂದಲೇ ಪ್ರಧಾನವು ಜಗತ್ತಿಗೆ ಕಾರಣವಾಗುವುದಿಲ್ಲ ಎಂದು ಹೇಳುವುದು ಪ್ರಶಸ್ತವು. ಮತ್ತು ಅನಂತಾನಂತಜಗತ್ತನ್ನು ನಿರ್ಮಾಣಮಾಡಿದ್ದಾನೆ ಎನ್ನುವ ಉಕ್ತಿಯಿಂದ ಸ್ಪಷ್ಟವಾಗದಿರುವ ಸರ್ವಜ್ಞತ್ವವು ಜಗತ್ತಿನ ಏಕದೇಶಭೂತವಾದ ಶಾಸ್ತ್ರವನ್ನು ಮಾತ್ರ ನಿರ್ಮಿಸಿದ್ದಾನೆಂದು ಹೇಳಿದ್ದರಿಂದ ಹೇಗೆ ಸಿದ್ಧವಾಗುವುದು.

(೪) ಮತ್ತು ಶಾಸ್ತ್ರಯೋನಿತ್ವವೆಂದರೆ (೧) ಅರ್ಥವನ್ನು ತಿಳಿದು ಈಶ್ವರನು ಶಾಸ್ತ್ರವನ್ನು ನಿರ್ಮಾಣಮಾಡಿದ್ದು ಎಂದು ಹೇಳಿದರೆ ತಾರ್ಕಿಕರು ಹೇಳುವಂತೆ ವೇದವು ಪೌರುಷೇಯವಾಗ ಬೇಕಾದೀತು. ಮತ್ತು ವಾಚಾ ವಿರೂಪ ನಿತ್ಯಯಾ, ಅನಾದಿನಿಧನಾ ನಿತ್ಯಾ ಇದು ಮೊದಲಾದ ಶ್ರುತಿಸ್ಮೃತಿಗಳಿಂದ ವಿರೋಧವು ಬರುವುದು. (೨) ಅಧ್ಯಾಪಕರಂತೆ ಉಚ್ಚಾರಣ ಮಾತ್ರ ಮಾಡಿದ್ದು ಎಂದು ಹೇಳಿದರೆ ಇಂತಹ ಶಾಸ್ತ್ರಯೋನಿತ್ವವು ಸರ್ವಜ್ಞತ್ವಕ್ಕೆ ಸಾಧಕವಾಗಲಾರದು.

(೫) ಪುನಃ ಅದ್ವೈತಿಗಳು ಶಾಸ್ತ್ರಂ ಯೋನಿಃ ಜ್ಞಪ್ತಿಕಾರಣಮಸ್ಯ ಎಂದು ವಿಗ್ರಹವನ್ನೂ ಆಶ್ರಯಿಸಿಕೊಂಡು ಹಿಂದೆ ಹೇಳಿದ ಲಕ್ಷಣದಲ್ಲಿ ಅನುಮಾನ ಕೂಡುವುದಿಲ್ಲವಾದ ಕಾರಣ ಆಗಮವನ್ನು ತೋರಿಸುವುದಕ್ಕಾಗಿ ಈ ಅಧಿಕರಣವೆಂದು ಹೇಳಿರುವರು. ಇದೂ ಅಯುಕ್ತವು. ಜಗತ್ತಿಗೆ ಬ್ರಹ್ಮನು ಕಾರಣನು ಎನ್ನುವುದು ಆಗಮದಿಂದ ಸಿದ್ಧಿಸುವಂತೆ ಅನುಮಾನದಿಂದಲೂ ಸಿದ್ಧಿಸಬಹುದು. ಆದಕಾರಣ ಪ್ರಮೇಯದಲ್ಲಿ ವಿಶೇಷವಿಲ್ಲದಿರುವುದರಿಂದ ಅನುಮಾನವನ್ನು ನಿರಾಕರಿಸಿ ಆಗಮವನ್ನು ತೋರಿಸಿದ್ದು ಅಯುಕ್ತವು.

(೬) ಮತ್ತು ಶಾಸ್ತ್ರಪದದಿಂದ ಅನುಮಾನದಂತೆ ದುರಾಗಮಗಳಿಗೂ ನಿರಾಸವು ತೋರುವುದರಿಂದ ಅನುಮಾನಮಾತ್ರಕ್ಕೆ ನಿರಾಸಕ ಎಂದು ಹೇಳುವುದು ಅಯುಕ್ತವು.

(೭) ಆದಕಾರಣ ಅದ್ವೈತಿಗಳು ಹೇಳಿದ ಅರ್ಥವು ಹಿಂದೆ ಹೇಳಿದ್ದಕ್ಕೆ ಉಪಯುಕ್ತವೂ ಅಲ್ಲ. ಅಯುಕ್ತವೂ ಆಗಿದೆ. ಆದಪ್ರಯುಕ್ತ ನಾವು ಹೇಳಿದ ಪ್ರಕಾರವೇ ಸೂತ್ರಾರ್ಥವು ಯುಕ್ತವು.

## ರಾಮಾನುಜಾಚಾರ್ಯ ರೀತ್ಯಾ

ವಿಚಾರ ॥ (೧) ಯತೋ ವಾ ಇತ್ಯಾದಿ ವಾಕ್ಯದಿಂದ ಜಗತ್ಕಾರಣತ್ವವನ್ನು ಅನುವಾದಮಾಡಿ ಬ್ರಹ್ಮಜ್ಞಾನವನ್ನು ವಿಧಿಸಬೇಕು. ಜಗತ್ಕಾರಣತ್ವವನ್ನು ಬ್ರಹ್ಮಜ್ಞಾನವನ್ನು ಎರಡನ್ನು ವಿಧಿಸಿದರೆ

ವಾಗುತ್ತದೆ. (ಹೆಚ್) ಪ್ರತಿಪಾದ್ಯ ಧರ್ಮಗಳು ಹೆಚ್ಚು ಇದ್ದ ಕಾರಣ ಮೋಕ್ಷಧರ್ಮೇಷು ಎಂದು ಬಹುವಚನವು.

**ಪೀಠಿಕೆ ||** ಹೀಗೆ ಸೂತ್ರವನ್ನು ವ್ಯಾಖ್ಯಾನಮಾಡಿ **ಶಾಸ್ತ್ರಸ್ಯ ಯೋನಿಃ** ಎಂದು ಪರರು ಷಷ್ಠೀತತ್ಪುರುಷವೆಂದು ಹೇಳುತ್ತಾರೆ. ಅದು ಅಯುಕ್ತವೆನ್ನುವ ಅಭಿಪ್ರಾಯದಿಂದ ತಮಗೆ ಅಭಿಪ್ರೇತವಾದ ಅರ್ಥವನ್ನು ತೋರಿಸುತ್ತಾರೆ.

**ಭಾಷ್ಯ || ಶಾಸ್ತ್ರಂ ಯೋನಿಃ ಪ್ರಮಾಣಮಸ್ಯೇತಿ ಶಾಸ್ತ್ರಯೋನಿ || ೧೪ ||**

**ಭಾಷ್ಯಾರ್ಥ ||** ಶಾಸ್ತ್ರವೇ ಇವನಿಗೆ ಜ್ಞಾನಕಾರಣವಾದ ಪ್ರಮಾಣವು ಎಂದೇ ಶಾಸ್ತ್ರ ಯೋನಿ ಶಬ್ದಾರ್ಥವು. (ಅಂತೂ ಬ್ರಹ್ಮನು ಶಾಸ್ತ್ರೈಕಸಮಧಿಗಮ್ಯನು.)

**ವಿಶೇಷಾಂಶ || (ಎ) ಸ್ಮೃತ್ಯನವಕಾಶದೋಷಪ್ರಸಂಗಃ** ಎನ್ನುವ ಸ್ಮೃತ್ಯಧಿಕರಣದಲ್ಲಿ ಸಾಂಖ್ಯಪಾಶುಪತ ಮೊದಲಾದ ದುರಾಗಮಗಳನ್ನು ನಿರಾಕರಿಸುವರು. ಹಾಗೆಯೇ ಇಲ್ಲಿಯೂ ಅವುಗಳನ್ನೇ ನಿರಾಕರಿಸಿದ್ದರಿಂದ ಸ್ಮೃತ್ಯಧಿಕರಣದಿಂದ ಗತಾರ್ಥ ವಾಯಿತು. ಎಂದರೆ— ಈ ಅಧಿಕರಣ ದಲ್ಲಿ ಜಗತ್ಕರ್ತೃತ್ವಾದಿಗಳು ವಿಷ್ಣುವಿಗೊ ಇತರರಿಗೊ ಎಂದು ಸಂದೇಹವು. ಸ್ಮೃತ್ಯಧಿಕರಣದಲ್ಲಿ ಯಾದರೂ ವಿಷ್ಣುವಿಗೆ ಕರ್ತೃತ್ವಾ ದಿಗಳು ಯುಕ್ತವೋ ಅಯುಕ್ತವೋ ಎಂದು ಸಂದೇಹವು. ಆದಕಾರಣ ಗತಾರ್ಥತಾ ದೋಷವು ಇಲ್ಲವೆಂದು ಹೇಳಕೂಡದು. ಒಂದೇ ಸಿದ್ಧಾಂತದಿಂದ ಎರಡು ವಿಧ ಸಂದೇ ಹ ಗಳನ್ನು ನಿರಾಕರಿಸಲು ಶಕ್ಯವಾಗುವುದು. ಸಂದೇಹ ಪ್ರಕಾರ ಭೇದದಿಂದಲೇ ಅಧಿಕರಣಗಳಿಗೆ ಭೇದ ಹೇಳುವುದಾದರೆ ಎಲ್ಲಾ ಕಡೆಗಳಲ್ಲಿಯೂ ಹೀಗೆ ಹೇಳಬಹುದು. ಆದಕಾರಣ ಗತಾರ್ಥತಾ ದೋಷವು ತಪ್ಪುವುದಿಲ್ಲ. ಎಂದರೆ ಸ್ಮೃತ್ಯಧಿಕರಣದಲ್ಲಿ ಪಾಶುಪತ ಮೊದಲಾದ ಸ್ಮೃತಿಗಳಿಂದ ಪೂರ್ವಪಕ್ಷವು ಬಂದರೆ ಪಂಚರಾತ್ರಾದಿ ಸ್ಮೃತಿಗಳಿಂದ ಸಿದ್ಧಾಂತವು. ಈ ಅಧಿಕರಣದಲ್ಲಿ ಸ್ಮೃತ್ಯನುಮಾನಗಳಿಂದ ಪೂರ್ವಪಕ್ಷ ಬಂದರೆ ಶ್ರುತ್ಯಾದಿರೂಪಶಾಸ್ತ್ರಗಳಿಂದ ಸಿದ್ಧಾಂತವು. ಆದುದರಿಂದಲೇ ಅಲ್ಲಿ ಸ್ಮೃತಿ ಶಬ್ದವು, ಇಲ್ಲಿ ಶಾಸ್ತ್ರಶಬ್ದವು. ಆದಕಾರಣ ಗತಾರ್ಥತ್ವವಿಲ್ಲ.

## ಅದ್ವೈತರೀತ್ಯಾ

**ವಿಚಾರ ||** (೧) ಪರಕೀಯರು **ಶಾಸ್ತ್ರಸ್ಯ ಯೋನಿಃ** ಎಂದು ವಿಗ್ರಹವನ್ನಾಶ್ರಯಿಸಿ ಬ್ರಹ್ಮನು ಋಗ್ವೇದಾದಿಗಳಿಗೆ ಕಾರಣನು ಎಂದರ್ಥವೆನ್ನುತ್ತಾರೆ. ಸಮಸ್ಯಮಾನ ವಾದ ಪದಾರ್ಥವನ್ನು ಬಿಟ್ಟು ಅನ್ಯಪದಾರ್ಥವೇ ಪ್ರಧಾನವೇ ಉಳ್ಳ ಬಹುವ್ರೀಹಿಗಿಂತ ಉತ್ತರ ಪದಾರ್ಥವೇ ಪ್ರಧಾನವಾಗಿ ಉಳ್ಳ ತತ್ಪುರುಷವು ಪ್ರಬಲವಾದ ಪ್ರಯುಕ್ತ ಷಷ್ಠೀ ತತ್ಪುರುಷವೇ ಪ್ರಶಸ್ತವೆನ್ನುತ್ತಾರೆ. ಇದು ಅಯುಕ್ತವು. ಏಕೆಂದರೆ ಬ್ರಹ್ಮನು ವೇದಾದಿಗಳನ್ನು ನಿರ್ಮಿಸಿದ್ದಾನೆಂದು ಹೇಳುವುದು ಪ್ರಕೃತಕ್ಕೆ ಉಪಯೋಗವಿಲ್ಲ. ಮತ್ತು ಅದು ಜಗಜ್ಜನ್ಮಾದಿಕರ್ತೃತ್ವದಲ್ಲಿ ಹೇತುವಾಗಲಾರದು.

(೨) ಜಗತ್ಕಾರಣನು ಎನ್ನುವ ಉಕ್ತಿಯಿಂದ ಅರ್ಥಾತ್ ಲಬ್ಧವಾದ ಸರ್ವಜ್ಞತ್ವ ವನ್ನೇ ಶಾಸ್ತ್ರಗಳನ್ನು ನಿರ್ಮಿಸಿದವನು ಎನ್ನುವ ಉಕ್ತಿಯು ಸ್ಪಷ್ಟೀಕರಿಸುತ್ತದೆ ಎಂದರೆ— ಅರ್ಥಲಬ್ಧವಾದ ಸರ್ವಶಕ್ತ್ಯಾದಿಗಳನ್ನು

ಸ್ಪಷ್ಟೀಕರಿಸದೇ ಸರ್ವಜ್ಞತ್ವವನ್ನು ಮಾತ್ರ ಪ್ರಕಟೀಕರಿಸಲಿಕ್ಕೆ ವಿಶೇಷ ಕಾರಣವಿಲ್ಲ.

(೩.) ಹಾಗಾದರೆ ಸರ್ವಶಕ್ತ್ಯಾದಿಗಳು ಅರ್ಥತಃ ಸಿಕ್ಕಿರುವುದಾದರೂ ಸಾಂಖ್ಯರು 'ಜಗತ್ತಿಗೆ ಅಚೇತನವೇ ಕಾರಣವು' ಎಂದು ಹೇಳುವುದರಿಂದ ಅದನ್ನು ನಿಷೇಧಿಸುವುದಕ್ಕಾಗಿ ಸಾರ್ವಜ್ಞವನ್ನು ತೋರಿಸುವುದು ಕೂಡಬಹುದು ಎಂದರೆ ಚೇತನವು ಕಾರಣವೋ ಎಂದು ಹೇಳಿರುವುದರಿಂದಲೇ ಸಾಂಖ್ಯರಿಗೆ ಅಭಿಮತವಾದ ಅಚೇತನ ಕಾರಣತ್ವವನ್ನು ನಿಷೇಧಿಸಬಹುದು. ಮತ್ತು ಸಾಂಖ್ಯರು ಅಂಗೀಕರಿಸದೆ ಇರುವ ಶಾಸ್ತ್ರಯೋನಿತ್ವದಿಂದ ಸಾರ್ವಜ್ಞವನ್ನು ಸಾಧಿಸುವುದು ಕೂಡುವುದಿಲ್ಲ. ಅಲ್ಲದೆ ಶ್ರುತಿಯಿಂದ ಶಾಸ್ತ್ರಕಾರಣತ್ವವನ್ನು ಸಾಧಿಸಿ ಅದರಿಂದ ಸರ್ವಜ್ಞತ್ವವನ್ನು ಸಾಧಿಸಿ ಅದರಿಂದ ಪ್ರಧಾನಕ್ಕೆ ಕಾರಣತ್ವವನ್ನು ನಿಷೇಧಮಾಡುವುದಕ್ಕಿಂತ ಶ್ರುತಿಯಿಂದಲೇ ಪ್ರಧಾನವು ಜಗತ್ತಿಗೆ ಕಾರಣವಾಗುವುದಿಲ್ಲ ಎಂದು ಹೇಳುವುದು ಪ್ರಶಸ್ತವು. ಮತ್ತು ಅನಂತಾನಂತಜಗತ್ತನ್ನು ನಿರ್ಮಾಣಮಾಡಿದ್ದಾನೆ ಎನ್ನುವ ಉಕ್ತಿಯಿಂದ ಸ್ಪಷ್ಟವಾಗದಿರುವ ಸರ್ವಜ್ಞತ್ವವು ಜಗತ್ತಿನ ಏಕದೇಶಭೂತವಾದ ಶಾಸ್ತ್ರವನ್ನು ಮಾತ್ರ ನಿರ್ಮಿಸಿದ್ದಾನೆಂದು ಹೇಳಿದ್ದರಿಂದ ಹೇಗೆ ಸಿದ್ಧವಾಗುವುದು.

(೪) ಮತ್ತು ಶಾಸ್ತ್ರಯೋನಿತ್ವವೆಂದರೆ (೧) ಅರ್ಥವನ್ನು ತಿಳಿದು ಈಶ್ವರನು ಶಾಸ್ತ್ರವನ್ನು ನಿರ್ಮಾಣಮಾಡಿದ್ದು ಎಂದು ಹೇಳಿದರೆ ತಾರ್ಕಿಕರು ಹೇಳುವಂತೆ ವೇದವು ಪೌರುಷೇಯವಾಗ ಬೇಕಾದೀತು. ಮತ್ತು ವಾಚಾ ವಿರೂಪ ನಿತ್ಯಯಾ, ಅನಾದಿನಿಧನಾ ನಿತ್ಯಾ ಇದು ಮೊದಲಾದ ಶ್ರುತಿಸ್ಮೃತಿಗಳಿಂದ ವಿರೋಧವು ಬರುವುದು. (೨) ಅಧ್ಯಾಪಕರಂತೆ ಉಚ್ಚಾರಣ ಮಾತ್ರ ಮಾಡಿದ್ದು ಎಂದು ಹೇಳಿದರೆ ಇಂತಹ ಶಾಸ್ತ್ರಯೋನಿತ್ವವು ಸರ್ವಜ್ಞತ್ವಕ್ಕೆ ಸಾಧಕವಾಗಲಾರದು.

(೫) ಪುನಃ ಅದ್ವೈತಿಗಳು ಶಾಸ್ತ್ರಂ ಯೋನಿಃ ಜ್ಞಪ್ತಿಕಾರಣಮಸ್ಯ ಎಂದು ವಿಗ್ರಹವನ್ನೂ ಆಶ್ರಯಿಸಿಕೊಂಡು ಹಿಂದೆ ಹೇಳಿದ ಲಕ್ಷಣದಲ್ಲಿ ಅನುಮಾನ ಕೂಡುವುದಿಲ್ಲವಾದ ಕಾರಣ ಆಗಮವನ್ನು ತೋರಿಸುವುದಕ್ಕಾಗಿ ಈ ಅಧಿಕರಣವೆಂದು ಹೇಳಿರುವರು. ಇದೂ ಅಯುಕ್ತವು. ಜಗತ್ತಿಗೆ ಬ್ರಹ್ಮನು ಕಾರಣನು ಎನ್ನುವುದು ಆಗಮದಿಂದ ಸಿದ್ಧಿಸುವಂತೆ ಅನುಮಾನದಿಂದಲೂ ಸಿದ್ಧಿಸಬಹುದು. ಆದಕಾರಣ ಪ್ರಮೇಯದಲ್ಲಿ ವಿಶೇಷವಿಲ್ಲದಿರುವುದರಿಂದ ಅನುಮಾನವನ್ನು ನಿರಾಕರಿಸಿ ಆಗಮವನ್ನು ತೋರಿಸಿದ್ದು ಅಯುಕ್ತವು.

(೬) ಮತ್ತು ಶಾಸ್ತ್ರಪದದಿಂದ ಅನುಮಾನದಂತೆ ದುರಾಗಮಗಳಿಗೂ ನಿರಾಸವು ತೋರುವುದರಿಂದ ಅನುಮಾನಮಾತ್ರಕ್ಕೆ ನಿರಾಸಕ ಎಂದು ಹೇಳುವುದು ಅಯುಕ್ತವು.

(೭) ಆದಕಾರಣ ಅದ್ವೈತಿಗಳು ಹೇಳಿದ ಅರ್ಥವು ಹಿಂದೆ ಹೇಳಿದ್ದಕ್ಕೆ ಉಪಯುಕ್ತವೂ ಅಲ್ಲ ಅಯುಕ್ತವೂ ಆಗಿದೆ. ಆದಪ್ರಯುಕ್ತ ನಾವು ಹೇಳಿದ ಪ್ರಕಾರವೇ ಸೂತ್ರಾರ್ಥವು ಯುಕ್ತವು.

## ರಾಮಾನುಜಾಚಾರ್ಯ ರೀತ್ಯಾ

ವಿಚಾರ ॥ (೧) ಯತೋ ವಾ ಇತ್ಯಾದಿ ವಾಕ್ಯದಿಂದ ಜಗತ್ಕಾರಣತ್ವವನ್ನು ಅನುವಾದಮಾಡಿ ಬ್ರಹ್ಮಜ್ಞಾನವನ್ನು ವಿಧಿಸಬೇಕು. ಜಗತ್ಕಾರಣತ್ವವನ್ನು ಬ್ರಹ್ಮಜ್ಞಾನವನ್ನು ಎರಡನ್ನು ವಿಧಿಸಿದರೆ

ವಾಕ್ಯಭೇದರೂಪ ದೋಷವು ಬರುವುದು. ಅದು ಅಯುಕ್ತವು. ಜಗತ್ಕಾರಣತ್ವವು ಪ್ರಮಾಣಾಂತರದಿಂದ ಪ್ರಾಪ್ತವಾಗಲಿಲ್ಲ ಎಂದು ಶಂಕಿಸಿದರೆ ರಾಮಾನುಜೀಯರು **ಸದೇವ ಸೌಮ್ಯ** ಇದು ಮೊದಲಾದ ಶಾಸ್ತ್ರಾಂತರದಿಂದ ಪ್ರಾಪ್ತಿ ಇದೆ ಎಂದು ಹೇಳುವುದಕ್ಕಾಗಿ **ಶಾಸ್ತ್ರಯೋನಿತ್ವಾತ್** ಎನ್ನುವ ಸೂತ್ರವು ಎನ್ನುತ್ತಾರೆ. ಅದೂ ಅಯುಕ್ತವು. ಲಕ್ಷಣವನ್ನು ಹೇಳಿದ ಮೇಲೆ ಅತ್ಯಾವಶ್ಯಕವಾದ ಪ್ರಮಾಣಪರತ್ವವನ್ನೇ ಹೇಳಲಿಕ್ಕೆ ಬರುವಾಗ ಬೇರೆ ರೀತಿ ಯಾಗಿ ಹೇಳುವುದು ಯುಕ್ತವಲ್ಲ

(೨) ಮತ್ತು **ಶಾಸ್ತ್ರಯೋನಿತ್ವಾತ್** ಎನ್ನುವ ಹೇತುವಿಗೆ ಪೂರ್ವಸೂತ್ರದಲ್ಲಿ ಹೇಳಿದ ಜಗತ್ಕಾರಣತ್ವರೂಪವಾದ ಸಾಧ್ಯದಿಂದ ಅನ್ವಯವು ಕೂಡುವಾಗ ಹಿಂದೆ ಹೇಳಿದ ಪ್ರಕಾರ ಅನುವಾದಕತ್ವರೂಪವಾದ ಅಧ್ಯಾಹೃತವಾದ ಸಾಧ್ಯದಿಂದ ಅನ್ವಯವು ಕೂಡಲಾರದು.

## ಅಧಿಕರಣ ಸಾರಾಂಶ

(೧) **ಶಿವೋ ಜಗಜ್ಜನ್ಮಾದಿಕರ್ತಾ ಸರ್ವಜ್ಞತ್ವಾತ್** ಇದು ಮೊದಲಾದ ಅನೇಕ ಅನುಮಾನಗಳಿಂದ ರುದ್ರಾದಿಗಳಿಗೂ ಜಗತ್ಕಾರಣತ್ವವನ್ನು ಸಾಧಿಸಲಿಕ್ಕೆ ಬರುವುದರಿಂದ ಲಕ್ಷಣಕ್ಕೆ ಅತಿವ್ಯಾಪ್ತಿಯು ಎಂದರೆ— **ಚಕ್ಷುರಾದಿ ಯಥಾऽಶಕ್ತಂ ರಸಗಂಧಾದಿ ವಸ್ತುಷು । ಅನುಮಾऽಪಿ ತಥಾऽಶಕ್ತಾ ಧರ್ಮಬ್ರಹ್ಮಾದಿ ವಸ್ತುಷು ॥** ರಸ ಗಂಧ ಮೊದಲಾದವುಗಳನ್ನು ತಿಳಿಸಲಿಕ್ಕೆ ಚಕ್ಷುರಾದಿಗಳಿಗೆ ಹೇಗೆ ಶಕ್ತಿಯಿಲ್ಲವೋ ಹಾಗೆಯೇ ಅನುಮಾನಕ್ಕೂ ಧರ್ಮ ಬ್ರಹ್ಮ ಮೊದಲಾದ ಅತೀಂದ್ರಿಯ ವಸ್ತುಗಳನ್ನು ತಿಳಿಸಲಿಕ್ಕೆ ಶಕ್ತಿಯಿಲ್ಲ

(೨) ಅನುಮಾನ ಮಾತ್ರವೇ ಸಾಧಕವಾಗುವುದಾದರೆ ಕುದುರೆಯು ಕೋಡುವುಳ್ಳದ್ದು ಪಶುವಾದ ಪ್ರಯುಕ್ತ ಇತ್ಯಾದಿ ರೀತಿಯಿಂದ ಅಪ್ರಾಮಾಣಿಕವಾದ ಅನೇಕಾರ್ಥಗಳನ್ನು ಸಾಧಿಸಬೇಕಾಗುವುದು. ಮತ್ತು ನಾವೇದವಿತ್ ಇತ್ಯಾದಿ ಶ್ರುತಿಗಳಿಂದ ಜಗತ್ಕಾರಣನಲ್ಲಿ ಅನುಮಾನಕ್ಕೆ ಪ್ರಾಮಾಣ್ಯವನ್ನು ನಿಷೇಧಿಸಿದ್ದ ರಿಂದಲೂ ಸರ್ವಥಾ ಅನುಮಾನವೂ ಜಗತ್ಕಾರಣನಲ್ಲಿ ಪ್ರಮಾಣವಾಗಲಾರದು.

**ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು.**

# ೪ ಸಮನ್ವಯಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಶ್ರೀವಿಷ್ಣುವೇ ಮುಖ್ಯವಾಗಿ ಜಗತ್ಕಾರಣವಾದುದರಿಂದ ಶಾಸ್ತ್ರಗಮ್ಯನು ಇತರರಲ್ಲ ಎಂದು ಸಮರ್ಥಿಸುತ್ತಾರೆ.

**ಭಾಷ್ಯ ॥ ಅಜ್ಞಾನಾಂ ಪ್ರತೀಯಮಾನಮಪಿ ನೇತರೇಷಾಂ ಶಾಸ್ತ್ರಯೋನಿತ್ವಂ ॥ ೧ ॥**

**ಭಾಷ್ಯಾರ್ಥ ॥** ಪಾಶುಪತಾದ್ಯಾಗಮದಿಂದಲೂ ಮತ್ತು **ಏಕೋ ರುದ್ರಃ** ಇತ್ಯಾದಿ ಶ್ರುತಿಗಳ ತಾತ್ಪರ್ಯಾರ್ಥವನ್ನು ತಿಳಿಯದೆ ಇದ್ದವರಿಗೆ (ರುದ್ರಾದಿಗಳು ಜಗತ್ಕಾರಣರೆಂದು ಆಪಾತತಃ

ತೋರಿದಾಗ್ಯೂ) ಇತರರಾದ ರುದ್ರಾದಿಗಳಿಗೂ ಶಾಸ್ತ್ರಯೋನಿತ್ವವಿಲ್ಲ (ಅಂದರೆ— ರುದ್ರಾದಿಗಳು ಜಗತ್ಕಾರಣರೆಂದು ಶಾಸ್ತ್ರಪ್ರತಿಪಾದ್ಯರಲ್ಲ)

**ಪೀಠಿಕೆ ॥** ಪ್ರತೀತ್ಯಾದಿಗಳು ಅಜ್ಞಾನಮೂಲಕವು ಎಂದು ಪರಿಕಲ್ಪಿಸಿ ರುದ್ರಾದಿಗಳಿಗೆ ಶಾಸ್ತ್ರಗಮ್ಯತ್ವವನ್ನು ಅಂಗೀಕಾರಮಾಡದೆ ಇರಲಿಕ್ಕೆ ಕಾರಣವೇನು ಎಂದು ಪ್ರಶ್ನಿಸುತ್ತಾರೆ.

**ಭಾಷ್ಯ ॥ ಕುತಃ** ॥ ೨ ॥

**ಭಾಷ್ಯಾರ್ಥ ॥** (ಪಾಶುಪತಾದ್ಯಾಗಮದಿಂದಲೂ ಹಿಂದೆ ಹೇಳಿದ ಶ್ರುತಿಗಳಿಂದ ಆಪಾ ತತಃ ತೋರಿದರೂ ರುದ್ರಾದಿಗಳಿಗೆ ಶಾಸ್ತ್ರಗಮ್ಯತ್ವವನ್ನು) ಯಾವ ಕಾರಣದಿಂದ (ಅಂಗೀಕರಿಸುವುದಿಲ್ಲ)

**ಪೀಠಿಕೆ ॥** ಹೇತುವನ್ನು ಹೇಳುವುದಕ್ಕಾಗಿ ಸೂತ್ರವನ್ನುಪನ್ಯಾಸಮಾಡುತ್ತಾರೆ.

## ಸೂತ್ರ ॥ ಓಂ ತತ್ತು ಸಮನ್ವಯಾತ್ ಓಂ ॥ ೪ ॥

**ಸೂತ್ರಾರ್ಥ ॥** ಶಾಸ್ತ್ರೇ=ವೇದಾದಿಶಾಸ್ತ್ರವು, ಸಮನ್ವಯಾತ್=ಶ್ರುತ್ಯಾದಿ ಮತ್ತು ಉಪಕ್ರಮಾದಿ ಶಕ್ತಿ ತಾತ್ಪರ್ಯಲಿಂಗಗಳಿಂದ (ಚೆನ್ನಾಗಿ ವಿಚಾರಮಾಡಲ್ಪಡುತ್ತಿರಲು) ತತ್ತು=ಆ ಬ್ರಹ್ಮನೇ ಅಸ್ಯ=ಈ ಜಗತ್ತಿಗೆ, ಆದಿ=ಕಾರಣನೆಂದು, ಸಂಶಾಸ್ತ್ರಯೋನಿ=ಜಗತ್ಕಾರಣತ್ವವನ್ನು ಪ್ರತಿಪಾದನೆ ಮಾಡತಕ್ಕ ಸಮಸ್ತ ಶಾಸ್ತ್ರಗಳನ್ನು ಪರಮಮುಖ್ಯವೃತ್ತಿಯಿಂದ ಸರ್ವಗುಣಗಳುಳ್ಳವನೆಂದು ಸರ್ವಶಾಸ್ತ್ರಗಳಿಂದ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಮಾತ್ರ ಇರತಕ್ಕುದೆಂದು ತಿಳಿದು ಬರುವುದರಿಂದ ವಿಷ್ಣುವಿಗೇನೇ ಜಗಜ್ಜನ್ಮಾದಿಕಾರಣತ್ವವು. ರುದ್ರಾದಿಗಳಿಗೆ ಇದೆ ಎಂದು ತಿಳಿದುಬರುವುದಿಲ್ಲ. ಆದುದರಿಂದ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ)

**ಭಾಷ್ಯ ॥ ಅನ್ವಯ ಉಪಪತ್ತ್ಯಾದಿ ಲಿಂಗಂ** ॥ ೩ ॥

**ಭಾಷ್ಯಾರ್ಥ ॥** (ಅನ್ವೀಯತೇ=ಶಕ್ತಿತಾತ್ಪರ್ಯಗೋಚರೇಣ ಸಂಬಧ್ಯತೇ ಶಾಸ್ತ್ರಂ ಶಬ್ದೋ ವಾ ಅನೇನ=ಇದರಿಂದ ಶಾಸ್ತ್ರವು ಅಥವಾ ಶಬ್ದವು ಶಕ್ತಿ ತಾತ್ಪರ್ಯವುಳ್ಳದ್ದಾಗಿ ತಿಳಿಯಲ್ಪಡುತ್ತದೆ ಎನ್ನುವ ವ್ಯುತ್ಪತ್ತಿಯಿಂದ) ಅನ್ವಯಃ = ಉಪಪತ್ತಿ ಮೊದಲಾದ ತಾತ್ಪರ್ಯಲಿಂಗವು.

**ವಿಶೇಷಾಂಶ ॥** (ಎ) ಸೂತ್ರವನ್ನು ಅನುಸರಿಸಿ ಏಕವಚನವು. ತಾತ್ಪರ್ಯಲಿಂಗಗಳ ಸಮುದಾಯವನ್ನು ಇಟ್ಟುಕೊಳ್ಳಬೇಕು. ಇಲ್ಲಿ ಸಮುದಾಯಾಭಿಪ್ರಾಯವುಳ್ಳ ಏಕವಚನದಿಂದ ಉಪಕ್ರಮಾದಿಲಿಂಗಗಳಿಗೆ ಪ್ರಕೃತಾರ್ಥದಲ್ಲಿ ವಿರೋಧವಿಲ್ಲವೆಂದು ಸೂಚಿತವಾಯಿತು. (ಬಿ) ಆದಿಪದದಿಂದ ★ ಶ್ರುತಿ ಲಿಂಗ ವಾಕ್ಯ ಪ್ರಕರಣ ಸ್ಥಾನ ಸಮಾಖ್ಯೆಗಳನ್ನು ಇಟ್ಟುಕೊಳ್ಳಬೇಕು. (ಸಿ) ಶ್ರುತ್ಯಾದಿಗಳು ಉಪಕ್ರಮಾದಿಗಳಂತೆ ತಾತ್ಪರ್ಯಗ್ರಾಹಕಗಳಲ್ಲ. ಆಗಮಾರ್ಥವನ್ನು ಮಾತ್ರ ನಿರ್ಣಯಿಸತಕ್ಕವುಗಳು. ಆದಕಾರಣ ಇಲ್ಲಿ ಭಾಷ್ಯದಲ್ಲಿ ಆ ಪ್ರಮಾಣವನ್ನು ಹೇಳಲಿಲ್ಲ (ಡಿ) ಹಾಗಾದರೆ— **ಉಪಕ್ರಮಾದಯಃ ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾಶ್ಚ ತಾತ್ಪರ್ಯಲಿಂಗಾನಿ**

---

★ ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ । ಸ್ಥಾನಂ ಪೂರ್ವಂ ಬಲೀಯಃ ಸ್ಯಾದೇವಮಾಗಮ ನಿರ್ಣಯೇ ॥

ಎಂದು ಸುಧಾದಲ್ಲಿ ಜ್ಞಾನಪಾದದಲ್ಲಿ ಹೇಳಿದ್ದರಿಂದ ಆದರಿಂದ ವಿರೋಧವು ಬಂತು ಎಂದರೆ ತಾತ್ಪರ್ಯಲಿಂಗಾನಿ ಎನ್ನುವಲ್ಲಿ ಶಕ್ತಿಯನ್ನು ಸೇರಿಸಿಕೊಳ್ಳಬೇಕು. ಆದುದರಿಂದಲೇ ಚಂದ್ರಿಕಾದಲ್ಲಿ **ವೈದಿಕಶಬ್ದಾನಾಂ ಬ್ರಹ್ಮಣಿ ಉಪಕ್ರಮಾದಿಲಿಂಗಪ್ರಮಾಣತಃ, ಶಕ್ತಿತಾತ್ಪರ್ಯಲಕ್ಷಣಃ, ಸಂಬಂಧಃ, ಸಮನ್ವಯಃ** ಎಂದು ಹೇಳಿರುವರು. ಇಲ್ಲಿಯೂ ಉಪಕ್ರಮಾದಿ ಎನ್ನುವಲ್ಲಿದ್ದ ಆದಿಶಬ್ದದಿಂದ ಶ್ರುತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

**ಪೀಠಿಕೆ ॥** ಉಪಪತ್ತ್ಯಾದಿ ಲಿಂಗಗಳು ಯಾವುಗಳು ಎಲ್ಲಿ ಲಿಂಗಗಳು ಎಂದರೆ—

**ಭಾಷ್ಯ ॥ ಉಕ್ತಂ ಚ ಬೃಹತ್ಸಂಹಿತಾಯಾಂ— ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥ ಇತಿ ॥ ೪ ॥**

**ಭಾಷ್ಯಾರ್ಥ ॥** ಉಪಪತ್ತ್ಯಾದಿಗಳು ಬೃಹತ್ಸಂಹಿತೆಯಲ್ಲಿ ಹೇಳಲ್ಪಟ್ಟಿದೆ. (ಏನು ಹೇಳಿಯದೆ ಎಂದರೆ) ಉಪಕ್ರಮಃ=ಪ್ರಕರಣದ ಆದಿಭಾಗವು, ಉಪಸಂಹಾರೌ=ಪ್ರಕರಣದ ಅಂತ್ಯಭಾಗವು, ಇವುಗಳು ಅಭ್ಯಾಸಃ=ಏಕಪ್ರಕಾರವದ ಅನೇಕಾವರ್ತಿಉಕ್ತಿಯು, ಅಪೂರ್ವತಾ=ಪ್ರಚುರವಾಗಿ ಪ್ರಮಾಣಾಂತರದಿಂದ ಅಸಿದ್ಧವಾದ ಅರ್ಥವನ್ನು ತಿಳಿಸಕೊಡುವಿಕೆಯು, ಫಲಂ=ಫಲವತ್ತಾದ ಅರ್ಥವನ್ನು ಪ್ರತಿಪಾದಿಸತಕ್ಕುದು, ಅರ್ಥವಾದ=ಸ್ತುತಿನಿಂದಾಪರಕೃತಿ ಪುರಾಕಲ್ಪರೂಪವಾದುದು, ಉಪಪತ್ತೀ=ಯುಕ್ತಿಯು ಇವುಗಳು ವಾಕ್ಯಗಳ ತಾತ್ಪರ್ಯ ನಿಶ್ಚಯದಲ್ಲಿ ಸಾಧನಗಳು. ಅಥವಾ ನಿರ್ಣೇತವ್ಯವಾದ ಅರ್ಥದಲ್ಲಿ ತಾತ್ಪರ್ಯವನ್ನು ಸಾಧಿಸುವ ವಿಷಯದಲ್ಲಿ ಹೇತುವು.

**ವಿಶೇಷಾಂಶ ॥** (ಎ) (೧) ಜನ್ಮಾಧಿಕರಣದಲ್ಲಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ ಎನ್ನುವಲ್ಲಿ **ಯತೋ ವಾ ಇಮಾನಿ ಭೂತಾನಿ** ಎನ್ನುವ ಉಪಕ್ರಮ ವಾಕ್ಯದಿಂದ ಅರ್ಥನಿರ್ಣಯವಾಗುತ್ತದೆ. (೨) **ಪ್ರಥಮೇ ಶ್ರವಣಾತ್** ಎನ್ನುವಲ್ಲಿ **ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ** ಎನ್ನುವ ಉಪಸಂಹಾರ ವಾಕ್ಯದಿಂದ ಉಪಕ್ರಮದಲ್ಲಿದ್ದ ಶ್ರದ್ಧಾಪದದ ಅರ್ಥನಿರ್ಣಯವಾಗುತ್ತದೆ. (೩) ಆನಂದಮಯಾಧಿಕರಣದಲ್ಲಿ **ಅಸದ್ಬ್ರಹ್ಮೇತಿ ವೇದ ಚೇತ್ ಅಸ್ತಿ ಬ್ರಹ್ಮೇತಿ ಚೇದ್ವೇದ** ಎನ್ನುವ ಬ್ರಹ್ಮಶಬ್ದಾಭ್ಯಾಸದಿಂದ **ತಸ್ಯೈಷ ಏವ ಶಾರೀರ ಆತ್ಮಾ** ಎನ್ನುವ ಉಪ ಸಂಹಾರದಲ್ಲಿ ಜೀವಲಿಂಗವನ್ನು ಬಾಧಿಸಿ ಪರಬ್ರಹ್ಮನೆನ್ನುವ ಅರ್ಥನಿರ್ಣಯವಾಗುತ್ತದೆ. (೪) ಇತರವ್ಯಪದೇಶಾತ್ ಎನ್ನುವ ಅಧಿಕರಣದಲ್ಲಿ **ಜೀವಾದ್ಭವಂತಿ ಭೂತಾನಿ ಜೀವೇ ತಿಷ್ಠಂತ್ಯಚಂಚಲಾಃ । ಜೀವೇ ತು ಲಯಮೃಚ್ಛಂತಿ ನ ಜೀವಾತ್ಕಾರಣಂ ಪರಂ ॥** ಎನ್ನುವಲ್ಲಿ ಅಪೂರ್ವತ್ವದಿಂದ ಉಪಕ್ರಮ ಉಪಸಂಹಾರ ಅಭ್ಯಾಸಗಳನ್ನು ಬಾಧಿಸಿ ಜೀವಶಬ್ದಕ್ಕೆ ಮುಖ್ಯವಾಗಿ ಪ್ರಾಣಧಾರಕತ್ವವುಳ್ಳ ವಿಷ್ಣುಪರತ್ವರೂಪ ಅರ್ಥನಿರ್ಣಯವು. (೫) ಅಸದಧಿಕರಣದಲ್ಲಿ **ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ** ಎನ್ನುವ ಶ್ರುತಿಯನ್ನು (ಅಂದರೆ ಅಸತ್ಕಾರಣತ್ವವನ್ನು) ಬಾಧಿಸಿ ಬ್ರಹ್ಮನಿಗೆ ಕಾರಣತ್ವವನ್ನು ಪ್ರತಿಪಾದಿಸುವುದರಿಂದ ಫಲಪ್ರತಿಪಾದಕವಾದ **ಸದೇವ ಸೌಮ್ಯೇದಮಗ್ರ ಆಸೀತ್** ಎನ್ನುವ ವಾಕ್ಯದಿಂದ ಬ್ರಹ್ಮಕಾರಣತ್ವರೂಪ ಅರ್ಥನಿರ್ಣಯವಾಗುತ್ತದೆ. (೬) ಅರ್ಥವಾದವೆಂದರೆ— ವಿಧೇಯಾರ್ಥದಲ್ಲಿ ಪ್ರಾಶಸ್ತ್ಯಾದ್ಯರ್ಥ

ವನ್ನು ತಿಳಿಸುವ ವಾಕ್ಯವು. ಅಥವಾ ಅರ್ಥವಾದವೆಂದು ಜ್ಞಾನಿಗಳ ವ್ಯವಹಾರ ವಿಷಯವಾದುದು. ಇದು (೧) ಸ್ತುತಿ, (೨) ನಿಂದಾ, (೩) ಪರಕೃತಿ, (೪) ಪುರಾಕಲ್ಪ ಎಂದು ನಾಲ್ಕು ವಿಧವು. ಅದರಲ್ಲಿ (೧) ಸ್ತುತಿಯು— **ಕರ್ಮಣಾ ಜ್ಞಾನಮಾತನೋತಿ, ಜ್ಞಾನೇನೈವಾಮೃತೀಭವತಿ** ಎನ್ನುವಲ್ಲಿ ಜ್ಞಾನದ ಸ್ತುತಿಯಿಂದ ಕಾಮ್ಯ ಕರ್ಮಗಳನ್ನು ಮಾಡಬಾರದು ಎನ್ನುವ ಅರ್ಥ ನಿರ್ಣಯವಾಗುತ್ತದೆ. (೨) ನಿಂದಾ— **ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾಃ** ಎಂದು ಕಾಮ್ಯಕರ್ಮವನ್ನು ನಿಂದಿಸಿ ಅಕಾಮ್ಯಕರ್ಮವನ್ನು ಮಾಡಬೇಕೆಂದು ನಿರ್ಣಯಿಸತಕ್ಕುದು. (೩) ಪರಕೃತಿ— ಕರ್ತೃನಾಮವನ್ನು ನಿರ್ದೇಶಿಸಿ ಇರತಕ್ಕ ಇತಿಹಾಸವು ಅಥವಾ ಏಕಕರ್ತೃಕವಾದ ಇತಿಹಾಸವು. ಉದಾ— **ಜನಕೋ ಹ ವೈದೇಹ ಆಸಾಂ ಚಕ್ರೇ** ಇದು ಮೊದಲಾದುದು. (೪) ಪುರಾಕಲ್ಪ— ಕರ್ತೃನಾಮ ನಿರ್ದೇಶವಿಲ್ಲದಿರುವ ಅಥವಾ ಬಹುಕರ್ತೃಕವಾದ ಇತಿಹಾಸವು. ಉದಾ— **ತ್ರಯ ಉದ್ಗೀಥೇ ಕುಶಲಾ ಬಭೂವುಃ ।** ಇದು ಮೊದಲಾದುದು. (ಬಿ) ಉಪಕ್ರಮ ಮೊದಲಾದವುಗಳು ಉಪಪತ್ತಿ ಸ್ವರೂಪಗಳಾದಾಗ್ಯೂ ಬ್ರಾಹ್ಮಣ ಪರಿವ್ರಾಜಕನ್ಯಾಯದಿಂದ ಪ್ರತ್ಯೇಕ ಹೇಳಿದ್ದು (ಸಿ) ಸ್ಮೃತಿಯಲ್ಲಿ **ಉಪಕ್ರಮೋಪಸಂಹಾರಾಃ** ಎಂದು ಉಪಕ್ರಮವನ್ನು ಆದಿಯಲ್ಲಿ ಹೇಳಿದಾಗ್ಯೂ ಇವುಗಳಿಗೆ ವಿರೋಧವು ಬಂದರೆ ★ ಉತ್ತರೋತ್ತರವು ಪ್ರಬಲವು ಎಂದು ಸೂಚಿಸುವುದಕ್ಕಾಗಿ ಭಾಷ್ಯದಲ್ಲಿ ಉಪಪತ್ತ್ಯಾದಿ ಎಂದು ವ್ಯತ್ಯಾಸವಾಗಿ ಹೇಳಿರುವರು. (ಡಿ) ಉಪಸಂಹಾರವು ಉಪಕ್ರಮದ ವ್ಯಾಖ್ಯಾನರೂಪವಾದುದರಿಂದ ಉಪಸಂಹಾರಕ್ಕೆ ವಿರೋಧಿಯಾದ ಉಪಕ್ರಮಕ್ಕೆ ಅಪ್ರಾಮಾಣ್ಯವೇ ಬರಬೇಕಾದುದರಿಂದ ಉಪಸಂಹಾರಕ್ಕೆ ಉಪಕ್ರಮಕ್ಕಿಂತಲೂ ಪ್ರಾಬಲ್ಯವು. (ಇ) ಒಂದು ಕಡೆ ಹೇಳಿದ್ದಕ್ಕಿಂತಲೂ ಅನೇಕಾವರ್ತಿ ಹೇಳಿದ್ದು ಪ್ರಬಲವಾದ ಪ್ರಯುಕ್ತ ಅಭ್ಯಾಸವು ಉಪಕ್ರಮ ಉಪಸಂಹಾರಗಳಿಂದ ಪ್ರಬಲವು. (ಎಫ್) ಒಂದು ಕಡೆ ಅನೇಕಾವರ್ತಿ ಹೇಳಿದಕ್ಕಿಂತಲೂ ಮಾನಾಂತರದಿಂದ ತಿಳಿಯದೆ ಇದ್ದುದು ಪ್ರಬಲವಾದ ಪ್ರಯುಕ್ತ ಅಪೂರ್ವತಾ ಎನ್ನುವುದು ಉಪಕ್ರಮ ಉಪಸಂಹಾರ ಅಭ್ಯಾಸಗಳಿಂದ ಪ್ರಬಲವು. (ಜಿ) ಫಲವು ಉದ್ದೇಶ್ಯವಾದುದರಿಂದ ಉಪಕ್ರಮಾದಿಗಳಿಂದ ಪ್ರಬಲವು. (ಹೆಚ್) ಅರ್ಥವಾದವು ಫಲಮಾತ್ರಕ್ಕಿಂತ ಅಧಿಕವಾದ ಪ್ರಯುಕ್ತ ಉಪಕ್ರಮಾದಿಗಳದೆಶೆಯಿಂದ ಪ್ರಬಲವು. (ಐ) ಉಪಪತ್ತಿಯು ಸರ್ವಕ್ಕೂ ಮೂಲಭೂತ ವಾದುದರಿಂದ ಎಲ್ಲದಕ್ಕಿಂತಲೂ ಪ್ರಬಲವು. (ಜೆ) ವಿರೋಧವಿದ್ದರೆ ದುರ್ಬಲವಾದುದನ್ನು ಬಾಧಿಸಿ ಪ್ರಬಲವಾದುದು ನಿರ್ಣಾಯಕವಾಗುತ್ತದೆ. ಸಾಮ್ಯವಿದ್ದರೆ ನಿರವಕಾಶದಿಂದ ಸಾವಕಾಶಕ್ಕೆ ಬಾಧವೂ ಸ್ವಭಾವತಃ ದುರ್ಬಲವೇ ಆದಾಗ್ಯೂ ನಿರವಕಾಶದಿಂದ, ಸ್ವಭಾವತಃ ಪ್ರಬಲವೇ ಆದ ಸಾವಕಾಶವಾದುದಕ್ಕೆ ಬಾಧವು ಬರುತ್ತದೆ. ಹೀಗೆ ಒಂದರಿಂದ ಅನೇಕಗಳಿಗೂ ಬಾಧಕವು ಬರುತ್ತದೆ.

**ಭಾಷ್ಯ ॥ ಉಪಕ್ರಮಾದಿತಾತ್ಪರ್ಯಲಿಂಗೈಃ ಸಮ್ಯಙ್ನಿರೂಪ್ಯಮಾಣೇ ತದೇವ ಶಾಸ್ತ್ರಗಮ್ಯಂ ॥ ೫ ॥**

**ಭಾಷ್ಯಾರ್ಥ ॥** ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಮತ್ತು ಉಪಕ್ರಮ

★ ಉಪಕ್ರಮಾದಿಲಿಂಗಾನಾಂ ಬಲೀಯೋ ಹ್ಯುತ್ತರೋತ್ತರಂ ಎಂದು ಹೇಳಿಯದೆ.

ಮೊದಲಾದ ಶಕ್ತಿತಾತ್ಪರ್ಯಲಿಂಗಗಳಿಂದ ಚೆನ್ನಾಗಿ ಬಲಾಬಲ ವಿಚಾರಪೂರ್ವಕವಾಗಿ (ಋಗಾದಿರೂಪವಾದ ಎಲ್ಲಾ ಶಾಸ್ತ್ರವೂ) ವಿಚಾರ ಮಾಡಲ್ಪಡುತ್ತಿರಲು (ಅಂದರೆ ಏಕಾರ್ಥದಲ್ಲಿ ಶಕ್ತಿತಾತ್ಪರ್ಯರೂಪ ಧರ್ಮವುಳ್ಳದ್ದೆಂದು ತಿಳಿಯಲ್ಪಡುತ್ತಿರಲು) ವಿಷ್ಣುರೂಪನಾದ ಬ್ರಹ್ಮನೇ ಶಾಸ್ತ್ರಗಳಿಂದ ತಿಳಿಯಲ್ಪಡತಕ್ಕವನು. (ಶಾಸ್ತ್ರವೇ ಪ್ರಮಾಣವಾಗಿ ಉಳ್ಳವನು. ರುದ್ರಾದಿಗಳಲ್ಲ. ಆದಕಾರಣ ಅಜ್ಞರಿಗೆ ಹಾಗೆ ತೋರಿದರೂ ಇತರರಿಗೆ ಶಾಸ್ತ್ರಯೋನಿತ್ವವಿಲ್ಲ.)

**ಪೀಠಿಕೆ ॥** ಹಾಗಾದರೆ ಕರ್ಮವಿಧಾನಾದಿ ರೂಪವಾದ ಶಾಸ್ತ್ರವು ಬ್ರಹ್ಮಪ್ರತಿಪಾದಕವು ಹೇಗೆ ಆಗುವುದು ಎಂಬುವ ಆಶಂಕೆಯನ್ನು ಭಗವದ್ವಾಕ್ಯದಿಂದ ನಿಷೇಧಿಸುತ್ತಾರೆ—

**ಭಾಷ್ಯ ॥ ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯೋಽಪೋಹ್ಯ ಇತ್ಯಹಂ। ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನ ॥ ಇತಿ ಭಾಗವತೇ ॥ ೬ ॥**

**ಭಾಷ್ಯಾರ್ಥ ॥** (ವಸಂತೇ, ವಸಂತೇ ಇದು ಮೊದಲಾದ ಕರ್ಮವನ್ನು ವಿಧಾನಮಾಡತಕ್ಕ ಶ್ರುತಿಯೂ ಕೂಡ,) ನನ್ನನ್ನು ಉದ್ದೇಶಿಸಿಕೊಂಡೇ, (ನನ್ನ ಪೂಜಾರೂಪವಾಗಿ ಕರ್ಮವನ್ನು) ವಿಧಿಸುತ್ತದೆ. (ಇಂದ್ರಾದಿಗಳನ್ನು ಹೇಳತಕ್ಕ ಶ್ರುತಿಯೂ ಕೂಡ) ನನ್ನನ್ನು (ನನ್ನ ಐಶ್ವರ್ಯಾದಿ ಗುಣಗಳನ್ನು) ಹೇಳುತ್ತದೆ. ನಾನೇ (**ಚತ್ವಾರಿ ವಾಕ್ಪರಿಮಿತಾ ಪದಾನಿ** ಇದು ಮೊದಲಾದ ಶ್ರುತಿಗಳಿಂದ) ವಾಸುದೇವ ಮೊದಲಾದ ಬಹುರೂಪವುಳ್ಳವನೆಂದು ಕಲ್ಪಿಸಲ್ಪಡತಕ್ಕವನು, ★**ಅಪ್ರಿಯದ್ವಾರಾ, ನ ಸುರಾಂ ಪಿಬೇತ್** ಇತ್ಯಾದಿ ವಾಕ್ಯದಿಂದ ನಾನೇ ನಿಷೇಧ್ಯನು. ಅಥವಾ ನನಗೆ ಅಪ್ರೀತಿಯನ್ನು ಮಾಡತಕ್ಕ (ಸುರಾಪಾನಶಬ್ದವಾಚ್ಯವಾದ ಶ್ರೀಹರಿಯ ಗುಣಗಳು ನನಗೆ ಇರಲಿ ಎನ್ನುವ)ಧ್ಯಾನವನ್ನು ಅಪೇಕ್ಷಿಸಿ ನಿಷೇಧ್ಯನು. ವಿಧಿನಿಷೇಧಾದಿರೂಪವಾದ ಈ ಶ್ರುತಿಯು ಅನ್ಯಪರವೆಂದು ತೋರಿದಾಗ್ಯೂ ಇಂತಹ ಶ್ರುತಿಯ ಹಿಂದೆ ಹೇಳಿದ ಪ್ರಕಾರ ತಾತ್ಪರ್ಯವನ್ನು ನಾನೇ ತಿಳಿಯುತ್ತೇನೆ. ನನ್ನಿಂದ ಇತರನಾದವನು ಯಾರೊಬ್ಬನೂ ಪ್ರಾಯಶಃ ತಿಳಿಯುವುದಿಲ್ಲ. ಈ ಪ್ರಕಾರ ಭಾಗವತದಲ್ಲಿ (ಉದ್ಧವನನ್ನು ಕುರಿತು ಶ್ರೀಕೃಷ್ಣನ ಮಾತು.)

ತತ್ತ್ವಪ್ರದೀಪದಲ್ಲಿ— ವಿಕಲ್ಪ್ಯಃ = ದ್ವೇ ವಾವ ಬ್ರಹ್ಮಣೋ ರೂಪೇ ಎಂದು ವಿವಿಧ ವಾಗಿ ಕಲ್ಪಿಸಿಕೊಂಡು ತತ್ರ ಯಃ ಸ ಆತ್ಮಾ ಎಂದು ಆತ್ಮನು ನಿರ್ದೋಷನೆಂದು ತಿಳಿಯಲ್ಪಡಬೇಕು. ಅಂತಹವನು ನಾನೇ ಎಂದು ಅರ್ಥವನ್ನು ಹೇಳಿರುವರು.

---

★ (೧) ನಿಷೇಧ ಬುದ್ಧಿ ವಿಷಯಮಪ್ರಿಯಂ ಹಿ ಹರೇಃ ಸ್ಮೃತಂ ॥ ಎನ್ನುವ ಉಕ್ತಿಯಿಂದ ಸುರಾಪಾನಾದಿಗಳು ನನ್ನ ಅಪ್ರೀತಿಗೆ ಸಾಧನಗಳಾದ ಪ್ರಯುಕ್ತ ನಿಷೇಧಿಸಲ್ಪಡುತ್ತವೆ.

(೨) ವಿಧಿಭಾಗೇ ಹರೇಃ ಪೂಜ್ಯವಾಭಿಧಾನೇ ಚ ತದ್ಗುಣಾಃ । ವಿಕಲ್ಪೇ ತದ್ಬಹುತ್ವಂ ಚಾಪ್ಯಪೋಹೇತು ತದಪ್ರಿಯಂ । ಉಚ್ಯತೇ ಸರ್ವವೇದೇಷು ತಚ್ಚ ವೇದ ಸ ಏವ ಹಿ ॥

(೩) ಸುರಾ ಹರೇರ್ಗುಣಾಃ ಪ್ರೋಕ್ತಾಸ್ತೇ ಮೇ ಸ್ಯುರಿತಿ ಚಿಂತನಂ । ಸುರಾ ಪಾನಮಿತಿ ಪ್ರೋಕ್ತಂ ತನ್ನ ಕುರ್ಯಾತ್ಕಥಂಚನ ॥

## ಮಾಯಾವಾದರೀತ್ಯಾ ಸೂತ್ರಾರ್ಥ

ವಿಚಾರ ॥ (೧) ಈ ಬ್ರಹ್ಮನು ಸರ್ವಜ್ಞನು, ಸರ್ವಶಕ್ತಿಯುಳ್ಳವನು, ಜಗತ್ತಿನ ಉತ್ಪತ್ತಿ ಸ್ಥಿತಿ ನಾಶಗಳಿಗೆ ಕಾರಣನೆಂದೂ ವೇದಾಂತಶಾಸ್ತ್ರದಿಂದ ತಿಳಿಯಲ್ಪಡುತ್ತಾನೆ. ಹೇಗೆಂದರೆ— **ಸಮನ್ವಯಾತ್**= ಎಲ್ಲಾ ವೇದಾಂತ ಶಾಸ್ತ್ರಗಳಲ್ಲಿ **ಸದೇವ ಸೌಮ್ಯೇದಮಗ್ರ ಆಸೀತ್, ಏಕಮೇವಾದ್ವಿತೀಯಂ, ಆತ್ಮಾ ವಾ ಇದಮೇಕ ಏವಾಗ್ರ ಆಸೀತ್, ತದೇತದ್ಬ್ರಹ್ಮ— ಸರ್ವಾನುಭೂಃ, ಬ್ರಹ್ಮೈವೇದಮಮೃತಂ ಪುರುಸ್ತಾತ್** ಇದು ಮೊದಲಾದ ವಾಕ್ಯಗಳು ತಾತ್ಪರ್ಯದಿಂದ ಈ ಅರ್ಥವನ್ನೇ ಪ್ರತಿಪಾದಿಸುವುದರಿಂದ ತಥಾಚ ಬ್ರಹ್ಮನು ಶಾಸ್ತ್ರಪ್ರತಿಪಾದ್ಯನು ಲಕ್ಷಣಯಾ ಅಖಂಡಾರ್ಥಪರವಾದುದರಿಂದ ಎಂದು ಮಾಯಾವಾದಿಗಳು ಹೇಳುತ್ತಾರೆ.

(೨) ಇದು ಅಯುಕ್ತವು. **ಸ್ವಪ್ರಭತ್ವಾದಸಂದಿಗ್ಧೇಽವಾಚ್ಯತ್ವಾಚ್ಛ್ರುತ್ಯಗೋಚರೇ । ನಿರ್ವಿಶೇಷೇ ಚ ಚಿನ್ಮಾತ್ರೇ ಕಥಂ ಶ್ರುತಿಸಮನ್ವಯಃ ॥** ಸ್ವಪ್ರಕಾಶನಾದುದರಿಂದ ಸಂದಿಗ್ಧನಾಗದಿರುವವನು ಅವಾಚ್ಯನಾದುದರಿಂದ ಶ್ರುತಿಗಳಿಗೆ ಅವಿಷಯನು ನಿರ್ವಿಶೇಷನೂ ಆದಚಿದ್ರೂಪಬ್ರಹ್ಮನಲ್ಲಿ ಶ್ರುತಿಸಮನ್ವಯವು ಕೂಡಲಾರದು. ಏವಂಚ ಸಂದಿಗ್ಧವಾದುದೇ ವಿಷಯವು. ಸಾಮಾನ್ಯಜ್ಞಾನ ವಿಶೇಷಜ್ಞಾನ ನಿಮಿತ್ತವಾದ ಸಂದೇಹವು ನಿರ್ವಿಶೇಷನಲ್ಲಿ ಕೂಡಲಾರದು. ಪೂರ್ವಪಕ್ಷ ಸಿದ್ಧಾಂತಗಳು ಸಂದೇಹ ಕೋಟಿ ಅನ್ಯತರಕೋಟಿಗಳನ್ನು ಅವಲಂಬಿಸಿಕೊಂಡು ಇರತಕ್ಕವುಗಳು. ಪ್ರಯೋಜನವು ಏಕಕೋಟಿನಿರ್ಣಯಾಧೀನವು. ಆದಕಾರಣ ನಿರ್ವಿಶೇಷನಾದ ಆತ್ಮನಲ್ಲಿ ವಿಷಯ ಸಂಶಯ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನರೂಪ ಅಧಿಕರಣವೇ ಮಾಯಾವಾದಿಗಳ ರೀತಿಯಾಗಿ ಕೂಡಲಾರದು.

(೩.) ಮತ್ತು ಮಾಯಾವಾದಿಗಳ ವ್ಯಾಖ್ಯಾನವು ಆದಿಯಿಂದ ಆರಂಭಿಸಿಕೊಂಡು ಪೂರ್ವೋತ್ತರಾಸಂಗತವೂ ಆಗಿದೆ. ಹೇಗೆಂದರೆ— **ಆದ್ಯಸೂತ್ರೇಽಹಮರ್ಥೇ ಹಿ ಪ್ರಸಿದ್ಧಿಃ ಪ್ರತಿಪಾದಿತಾ । ಜಿಜ್ಞಾಸಾರ್ಥಂ ದ್ವಿತೀಯೇ ಹಿ ಜಗಜ್ಜನ್ಮಾದಿಹೇತುತಾ ॥ ಅವಿದ್ಯಮಾನಾಹಮರ್ಥೇ ಲಕ್ಷಣತ್ವೇನ ಕೀರ್ತಿತಾ । ಈಶ್ವರಸ್ಯ ತೃತೀಯೇ ತು ನಿರ್ವಿಶೇಷಪ್ರಮಾಣತಾ ॥ ಶಾಸ್ತ್ರಸ್ಯೋಕ್ತಾ ಚತುರ್ಥೇ ಚ ತಸ್ಮಿನ್ನೇವ ಸಮನ್ವಯಃ । ಪ್ರತಿಜ್ಞಾತೋಽಂತರಿತ್ಯಾದೌ ಸವಿಶೇಷಂ ತು ಕಥ್ಯತೇ ॥ ಬ್ರಹ್ಮೇತಿ ಮಾಯಿನಾಂ ಪಕ್ಷಃ ತತ್ರ ಕಿಂ ಕೇನ ಸಂಗತಂ । ತತ್ತ್ವವಿದ್ವೇಷಮಾತ್ರೇಣ ಶ್ರುತಿಸೂತ್ರೇ ಕದರ್ಥಿಕೇ ॥** (೧) ಪರರ ಭಾಷ್ಯದಲ್ಲಿ ಬ್ರಹ್ಮನು ಪ್ರಸಿದ್ಧನೋ ಅಪ್ರಸಿದ್ಧನೋ ಇತ್ಯಾದಿ ಆಶಂಕಿಸಿಕೊಂಡು **ಸರ್ವೋ ಹ್ಯಾತ್ಮಾಸ್ತಿತ್ವಂ ಪ್ರತ್ಯೇತಿ** ಇತ್ಯಾದಿ ಶ್ರುತಿಗಳಿಂದ ಜಿಜ್ಞಾಸೆಗೆ ಉಪಯುಕ್ತವಾಗಿ ಅಹಮರ್ಥದಲ್ಲಿ ಪ್ರಸಿದ್ಧಿಯನ್ನು ಹೇಳಿರುತ್ತಾರೆ. (೨) ಎರಡನೇ ಸೂತ್ರದಲ್ಲಿ **ಅಸ್ಯ ಜಗತಃ ಜನ್ಮಸ್ಥಿತಿಭಂಗಂ ಯತಃ ಸರ್ವಜ್ಞ ತ್ಸಾತ್ಸರ್ವಶಕ್ತೇಃ ಕಾರಣಾದ್ಭವತಿ ತದ್ಬ್ರಹ್ಮ** ಎಂದು ಪರರ ಭಾಷ್ಯದಲ್ಲಿ ಹೇಳಿದ ಪ್ರಕಾರ ವಿಶಿಷ್ಟನಾದ ಈಶ್ವರನಿಗೆ ಜಗಜ್ಜನ್ಮಾದಿಕಾರಣತ್ವವು ಅಹಮರ್ಥದಲ್ಲಿ ಇಲ್ಲದಿದ್ದುದನ್ನೇ ಲಕ್ಷಣವನ್ನಾಗಿ ಹೇಳಿರುತ್ತಾರೆ. (೩.)ಮೂರನೇ ಸೂತ್ರದಲ್ಲಿ ನಿರ್ವಿಶೇಷ ಬ್ರಹ್ಮನಲ್ಲಿ ಶಾಸ್ತ್ರವು ಪ್ರಮಾಣವೆಂದು ಹೇಳಿರುವರು. (೪) ನಾಲ್ಕನೇ ಸೂತ್ರದಲ್ಲಿ ನಿರ್ವಿಶೇಷ ಬ್ರಹ್ಮನಲ್ಲಿಯೇ ಸಮನ್ವಯವನ್ನು ಪ್ರತಿಜ್ಞಾಮಾಡಿರುತ್ತಾರೆ. **ಅಂತಸ್ತದ್ಧರ್ಮೋಪದೇಶಾತ್**

ಇತ್ಯಾದಿಗಳಲ್ಲಿ ಸವಿಶೇಷ ಬ್ರಹ್ಮನು ಹೇಳಲ್ಪಡುತ್ತಾನೆಂದು ಹೇಳಿರುವರು. ಹೀಗೆ ಪರಸ್ಪರ ಸಂಗತಿಯೇ ಇಲ್ಲದಿರುವುದರಿಂದ ಪರತತ್ತ್ವವಿಷಯದಲ್ಲಿ ದ್ವೇಷಮಾತ್ರವೇ ಉಂಟಾಗಿ ಶ್ರುತಿ ಸೂತ್ರಗಳನ್ನು ಕೆಡಿಸಿದಂತೆಯೇ ಆಯಿತು. ಆದಕಾರಣ ಅದ್ವೈತಿಗಳ ವ್ಯಾಖ್ಯಾನವು ಸರ್ವಥಾ ಯುಕ್ತವಲ್ಲ.

## ರಾಮಾನುಜೀಯರೀತ್ಯಾ

**ವಿಚಾರ ॥** (೧) ಫಲವಿಲ್ಲವೆಂದಾಗಬೇಕಾಗುವುದರಿಂದ ವಾಕ್ಯಗಳು ಸಿದ್ಧಪರವಲ್ಲವೆಂದು ಪ್ರಾಪ್ತವಾದರೆ **ಪುತ್ರಸ್ತೇ ಜಾತಃ** ಇತ್ಯಾದಿ ವಾಕ್ಯಗಳು ಸಿದ್ಧಪರಗಳಾದಾಗ್ಯೂ ಪುತ್ರಜನ್ಮಶ್ರವಣ ದಿಂದುಂಟಾದ ಸುಖವು ಫಲವಾಗಿ ಕಂಡದ್ದರಿಂದ ದೋಷವಿಲ್ಲ ವೆಂದು ಸಿದ್ಧಾಂತಪಡಿಸಿ, **ತತ್**= ಶಾಸ್ತ್ರಪ್ರಮಾಣಕತ್ವವು ಬ್ರಹ್ಮನಿಗೆ ಕೂಡುತ್ತದೆ. **ಸಮನ್ವಯಾತ್**=ಪುರುಷಾರ್ಥ ಬ್ರಹ್ಮನಿಗೆ ಅಭಿಧೇಯವಾಗಿ ಸಂಬಂಧವಿದ್ದುದರಿಂದ, ಎಂದು ಸೂತ್ರಾರ್ಥವು ಎನ್ನುತ್ತಾರೆ.

(೨) ಅದು ಅಯುಕ್ತವು. ಫಲವಿದ್ದುದರಿಂದ ಸಿದ್ಧಪರಗಳಾದ ಎಲ್ಲಾ ವಾಕ್ಯಗಳ ವಿಚಾರವನ್ನುಪ ಪಾದಿಸತಕ್ಕ ಈ ಸಮನ್ವಯಾಧಿಕರಣಕ್ಕೆ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯನ್ನು ಪ್ರತಿಪಾದಿಸಿದ್ದರಿಂದ ಸಿದ್ಧಪರಗಳಾದ ಎಲ್ಲಾ ವಾಕ್ಯಗಳ ವಿಚಾರವನ್ನುಪಪಾದಿಸತಕ್ಕ ಜಿಜ್ಞಾಸಾಸೂತ್ರವನ್ನು ಹೇಳಿದೊಡನೆಯೇ ಹೇಳಬೇಕಿತ್ತು.

(೩) ಜನ್ಮಾದಿ ಸೂತ್ರ ಶಾಸ್ತ್ರ ಯೋನಿಸೂತ್ರಗಳೂ ವಾಕ್ಯಗಳ ವಿಚಾರವನ್ನುಪಪಾದಿಸತಕ್ಕ ವುಗಳಾದುದರಿಂದ ಮಧ್ಯದಲ್ಲಿ ಇವುಗಳನ್ನು ಸೇರಿಸಿದ್ದು ಎಂದೂ ಹೇಳಕೂಡದು. ಅವರ ಮತದಲ್ಲಿ ಜನ್ಮಾದಿಸೂತ್ರ ಶಾಸ್ತ್ರ ಯೋನಿ ಸೂತ್ರಗಳೂ ಕಾರಣವಾಕ್ಯವನ್ನೇ ವಿಚಾರಿಸತಕ್ಕವುಗಳು. ಆದಕಾರಣ ಈ ಅಧಿಕರಣವು ಎಲ್ಲಾ ವಾಕ್ಯಗಳ ವಿಚಾರವನ್ನುಪಪಾದಿಸತಕ್ಕವುಗಳಾದುದರಿಂದ ಒಂದನೇ ಅಧಿಕರಣ ಹೇಳಿದೊಡನೆಯೇ ಹೇಳಬೇಕಿತ್ತು.

(೪) ಮತ್ತು ಯದ್ಯಪಿ ಈ ಸೂತ್ರದಲ್ಲಿ ನಮ್ಮ ಮತದಲ್ಲಿ ಶಾಸ್ತ್ರಯೋನಿ ಎಂದು ಅನುವರ್ತಿಸಿಕೊಂಡಿದೆ, ರಾಮಾನುಜೀಯರಲ್ಲಿ ಶಾಸ್ತ್ರಯೋನಿತ್ವಂ ಎಂದು. ನಮ್ಮ ಮತದಲ್ಲಿ ತತ್ ಶಬ್ದದಿಂದ ಪ್ರಕೃತನಾದ ಬ್ರಹ್ಮನಿಗೆ ಪರಾಮರ್ಶವಿದ್ದುದರಿಂದ ಅದಕ್ಕೇನೇ ಆನಂದಮಯಾದಿಗಳಲ್ಲಿ ಅನುವೃತ್ತಿಯು. ಆದುದರಿಂದಲೇ ಸಂಪೂರ್ಣಅಧ್ಯಾಯದಲ್ಲಿ ತತ್ ಶಬ್ದಕ್ಕೆ ಅನುವೃತ್ತಿಯು. ರಾಮಾನುಜೀಯರಲ್ಲಿ ಶಾಸ್ತ್ರಯೋನಿತ್ವಕ್ಕೆ ಪರಾಮರ್ಶವಿದ್ದುದರಿಂದ ಉತ್ತರಸೂತ್ರಗಳಲ್ಲಿ ಬ್ರಹ್ಮಶಬ್ದವನ್ನು ಅಧ್ಯಾಹಾರ ಮಾಡಬೇಕಾಗುವುದು.

(೫) ಮತ್ತು ನಾಲ್ಕು ಸೂತ್ರಗಳೂ (೧) ವ್ಯುತ್ಪತ್ತ್ಯಭಾವ, (೨) ಪ್ರತಿಪತ್ತಿ ದೌಸ್ಥ್ಯಂ (೩) ಅನ್ಯೇನ ಸಿದ್ಧತ್ವಮಥಾ (೪) ಫಲತ್ವಂ । ಏತಾನಿ ವೈ ಸೂತ್ರಚತುಷ್ಟಯೇನಾನಾರಂಭಮೂಲಾನಿ ನಿರಾಚಕಾರ ॥ ಎಂದು ಶಾಸ್ತ್ರಾರಂಭವನ್ನು ಸಾಧಿಸತಕ್ಕವುಗಳಾದುದರಿಂದ ಉಪೋದ್ಘಾತರೂಪಗಳೆಂದು ಹೇಳಿರುವರು. ಅದೂ ಅಯುಕ್ತವು. ಏಕೆಂದರೆ— ಜನ್ಮಾದಿಸೂತ್ರಗಳಲ್ಲಿ ಸ್ಪಷ್ಟವಾಗಿ ಲಕ್ಷಣವನ್ನೂ, ಶಾಸ್ತ್ರಯೋನಿ ಸೂತ್ರಾದಿಗಳಲ್ಲಿ ಪ್ರಮಾಣಾದಿಗಳನ್ನೂ ಸ್ಪಷ್ಟವಾಗಿ ಹೇಳಿದ ಪ್ರಯುಕ್ತ ಬ್ರಹ್ಮನು ವಿಚಾರಿತನಾದುದರಿಂದ ನಾಲ್ಕು ಸೂತ್ರಗಳೂ ಉಪೋದ್ಘಾತರೂಪಗಳೆಂದು ಹೇಳಿದ್ದು ಸರ್ವಥಾ ಕೂಡಲಾರದು.

## ಅಧಿಕರಣ ಸಾರಾಂಶ

ಸಾವಕಾಶತ್ವ ನಿರವಕಾಶತ್ವಾದಿಗಳಿಂದ ಬಲಾಬಲವನ್ನು ನಿಶ್ಚಯಮಾಡಿಕೊಂಡು ಅನ್ಯತರವನ್ನು ಬಾಧಿಸಿ ವಾಕ್ಯಾರ್ಥವಿಮರ್ಶಕವಾಗಿ ಶ್ರುತಿ, ಲಿಂಗ, ವಾಕ್ಯ, ಪ್ರಕರಣ ಸ್ಥಾನ, ಸಮಾಖ್ಯಾ ಉಪಕ್ರಮ ಮೊದಲಾದ ಶಕ್ತಿತಾತ್ಪರ್ಯಲಿಂಗಸಮುದಾಯದೆಶೆಯಿಂದ ಋಗಾದಿರೂಪಗಳಾದ ಎಲ್ಲಾ ಶಾಸ್ತ್ರಗಳಿಗೂ ಶ್ರೀಹರಿಯಲ್ಲಿಯೇ ಚೆನ್ನಾಗಿ ವಚನವೃತ್ತಿತ್ರಯಿಂದ ಶಕ್ತಿತಾತ್ಪರ್ಯರೂಪವಾದ ಸಂಬಂಧವು ತಿಳಿದುಬರುವುದರಿಂದ ವಿಷ್ಣ್ವಾಖ್ಯನಾದ ಬ್ರಹ್ಮನೇ ಜಗತ್ಕಾರಣನಾಗಿ ಶಾಸ್ತ್ರಗಮ್ಯನು. ರುದ್ರಾದಿಗಳಲ್ಲ. ಆದಕಾರಣ ಶ್ರುತಿಗಳ ತಾತ್ಪರ್ಯಾರ್ಥವನ್ನು ತಿಳಿಯಬಿದ್ದವರಿಗೆ ಆಪಾತತಃ ಹಾಗೆ ತೋರಿದರೂ ಉಪಕ್ರಮಾದಿ ಲಿಂಗಗಳಿಂದ ಶ್ರುತಿತಾತ್ಪರ್ಯವನ್ನು ಚೆನ್ನಾಗಿ ತಿಳಿದವರಿಗೆ ಹಾಗೆ ಸರ್ವಥಾ ತೋರಲಾರದು. ಮತ್ತು ಪಾಶುಪತ್ಯಾಗಮವು ವೇದವಿರುದ್ಧಾರ್ಥವನ್ನು ಹೇಳುವುದರಿಂದ ಅಪ್ರಮಾಣವೇ ಆಗಿರುವುದರಿಂದ ಅದರಿಂದಲೂ ರುದ್ರಾದಿಗಳು ಜಗತ್ಕಾರಣರಾಗಿ ಶಾಸ್ತ್ರಗಮ್ಯರೆಂದು ಸಿದ್ಧವಾಗಲಾರದು. ಆದಕಾರಣ ವಿಷ್ಣುವೇ ಜಗಜ್ಜನ್ಮಾದಿಕಾರಣನೂ ಶಾಸ್ತ್ರಗಮ್ಯನೂ ರುದ್ರಾದಿಗಳಲ್ಲ ಆದುದರಿಂದ ರುದ್ರಾದಿಗಳಿಗೆ ಸರ್ವಥಾ ಶಾಸ್ತ್ರಯೋನಿತ್ವವಿಲ್ಲ.

**ಸಮನ್ವಯಾಧಿಕರಣವು ಸಮಾಪ್ತವಾಯಿತು.**

# ೫ ಈಕ್ಷತ್ಯಧಿಕರಣವು

**ಪೀಠಿಕೆ ॥** ಹಿಂದೆ ಹೇಳಿದ ವಿಷಯದಲ್ಲಿ ಪೂರ್ವಪಕ್ಷವನ್ನು ತೋರಿಸುತ್ತಾರೆ—

ಈ ಐದನೇ ಅಧಿಕರಣದಲ್ಲಿ ಸಮನ್ವಯಾತ್ ಎನ್ನುವಲ್ಲಿದ್ದ ಸಂಶಬ್ದದಿಂದ ಹೇಳಲ್ಪಟ್ಟ ವಾಚ್ಯತ್ವವನ್ನು ಪೂರ್ಣತ್ವ (ಸಾಕಲ್ಯ ಎನ್ನುವ ಅರ್ಥ) ವನ್ನು ಆಕ್ಷೇಪಿಸಿ ಕೊಂಡು ಸಮಾಧಾನ ಹೇಳುತ್ತಾರೆ—

**ಭಾಷ್ಯ ॥ ನನು ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ॥ ೧ ॥**
(ತೈ.ಉ.೨.೪.೧.)

**ಭಾಷ್ಯಾರ್ಥ ॥** ಹಾಗಾದರೆ— ಯಾರದೆಶೆಯಿಂದ ವೇದಗಳೂ ವಾಗಿಂದ್ರಿಯಗಳೂ ಕೂಡ ಮನೋರೂಪವಾದ ಇಂದ್ರಿಯದಿಂದ ಕೂಡಿಕೊಂಡು, ಅಪ್ರಾಪ್ಯ=ಶ್ರೀಹರಿಯನ್ನು ಹೊಂದದೆ (ಅಂದರೆ ಹರಿವಿಷಯಕವಾದ ಸಂಪೂರ್ಣ ಜ್ಞಾನವನ್ನು ಹುಟ್ಟಿಸದೆ ಇದ್ದವುಗಳಾಗಿಯೇ) ಹೊರಟು ಹೋಗುತ್ತವೋ, (ಅಂತಹ ಬ್ರಹ್ಮನ ಆನಂದವನ್ನು ತಿಳಿದವನು ಯಾರ ಭಯವನ್ನೂ ಹೊಂದುವುದಿಲ್ಲ.)

**ಭಾಷ್ಯ ॥ ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ ನಿತ್ಯಮಗಂಧವಚ್ಚಯತ್ ॥ ೨ ॥** (ಕಠ.೩-೧೫)

ಭಾಷ್ಯಾರ್ಥ ॥ ಅಶಬ್ದಂ= (ನ ವಿದ್ಯತೇ ಶಬ್ದಃ=ಗುಣಃ ಪ್ರಮಾಣಂ ವಾ ಯಸ್ಮಿನ್ ಎನ್ನುವ ವ್ಯತ್ಪತ್ತಿಯಿಂದ) ಪ್ರಾಕೃತಶಬ್ದಾಖ್ಯ ಗುಣವಿಲ್ಲದಿರುವುದು. ಶಬ್ದರೂಪ ಪ್ರಮಾಣಕ್ಕೆ ಅಗೋಚರವು. ಮತ್ತು ಶಬ್ದಭಿನ್ನವು. ಅಸ್ಪರ್ಶಂ=ಸ್ಪರ್ಶಗುಣಶೂನ್ಯವು. ಸ್ಪರ್ಶೇಂದ್ರಿಯಕ್ಕೆ ಅಗೋಚರವು. ಸ್ಪರ್ಶಭಿನ್ನವು. ಅರೂಪಂ=ಪ್ರಾಕೃತರೂಪರಹಿತವು. ಚಾಕ್ಷುಷಪ್ರತ್ಯಕ್ಷಕ್ಕೆ ಅಗೋಚರವು. ರೂಪಭಿನ್ನವು. ಹಾಗೆಯೇ ಅರಸಂ=ರಸಗುಣಶೂನ್ಯವು. ರಸಭಿನ್ನವು. (ಗಂಧಗುಣಶೂನ್ಯವು, ಗಂಧಭಿನ್ನವು.) ಅವ್ಯಯಂ= ಸ್ವರೂಪತಃ ನಾಶವಿಲ್ಲದಿರುವುದು. ನಿತ್ಯಂ=ದೇಹತಃ ನಾಶವಿಲ್ಲದಿರುವುದು. ಅಗಂಧವಚ್ಚ=ಗಂಧವುಳ್ಳ ಪೃಥಿವಿಯಿಂದ ವಿಲಕ್ಷಣವು. (ಹೀಗೆಯೇ ಪಂಚಮಹಾಭೂತಗಳಿಂದಲೂ ವಿಲಕ್ಷಣವಾದುದು.) ಯತ್=ಯಾವುದು ಇದೆಯೋ, (ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ=ಅವನನ್ನು ತಿಳಿದು ಮರಣಭಯದಿಂದ ಬಿಡುಗಡೆಯನ್ನು ಹೊಂದುತ್ತಾನೆ.

**ಭಾಷ್ಯ ॥ ಅವಚನೇನೈವ ಪ್ರೋವಾಚ ॥ ೩ ॥** (ಭಾಷ್ಯಲಶ್ರುತಿ)

ಭಾಷ್ಯಾರ್ಥ ॥ ವಚನವೃತ್ತಿಯಿಲ್ಲದೇನೇ ಲಕ್ಷಣಯಾ (ಗುರುಗಳು ಬ್ರಹ್ಮನನ್ನು ಶಿಷ್ಯನಿಗೋಸ್ಕರ) ಉಪದೇಶಕೊಟ್ಟರು.

**ಭಾಷ್ಯ ॥ ಯದ್ವಾಚಾಽನಭ್ಯುದಿತಂ ಯೇನ ವಾಗಭ್ಯುದ್ಯತೇ। ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತಂ ॥** (ತಳವಕಾರೋಪನಿಷತ್ ೧) **ಇತ್ಯಾದೇಃ (ಇತ್ಯಾದಿಭಿಃ ಶ್ರುತಿಭಿಃ ) ನ ತಚ್ಛಬ್ದಗೋಚರಂ ॥ ೪ ॥**

ಭಾಷ್ಯಾರ್ಥ ॥ ವಾಗಿಂದ್ರಿಯದಿಂದ ಉಚ್ಚರಿಸಲ್ಪಡತಕ್ಕ ಶಬ್ದದಿಂದ ಯಾವುದು ಹೇಳಲ್ಪಡುವು ದಿಲ್ಲವೋ ಯಾರಿಂದ ವಚನವು ಉಚ್ಚರಿಸಲ್ಪಡುತ್ತದೋ, ಶ್ರೋತ್ರೇಂದ್ರಿಯದಿಂದ ಯಾವುದನ್ನು (ಪುರುಷನು) ಕೇಳುವುದಿಲ್ಲವೋ, ಯಾರಿಂದ ಈ ಶ್ರೋತ್ರೇಂದ್ರಿಯವು ಕೇಳುವ ಶಕ್ತಿಯುಳ್ಳದ್ದಾಗು ತ್ತದೋ, (ಅದನ್ನೇ ಬ್ರಹ್ಮನನ್ನಾಗಿ ತಿಳಿ, ಇದು ಮೊದಲಾದ ಶ್ರುತಿಗಳಿಂದ ಆ ಬ್ರಹ್ಮನು ಶಬ್ದಗಳಿಂದ ವಾಚ್ಯನಲ್ಲ. ಆದುದರಿಂದ ಮುಖ್ಯವೃತ್ತಿಯಿಂದ ಶಾಸ್ತ್ರಗಳಿಂದ ಕಾರಣನೆಂದು ಪ್ರತಿಪಾದ್ಯನಲ್ಲ.)

ವಿಶೇಷಾಂಶ ॥ (ಎ) ಗೋಚರ ಶಬ್ದವು ಪುಲ್ಲಿಂಗವೇ ಆಗಿರುವುದರಿಂದ ಶಬ್ದ ಗೋಚರಂ ಎನ್ನುವುದು ಹೇಗೆ ಕೂಡುತ್ತದೆ ಎಂದರೆ ತ್ರಯೀ ನ ಶ್ರುತಿಗೋಚರಾ ಎನ್ನುವಲ್ಲಿ ಗೋಚರಶಬ್ದವು ವಿಶೇಷ್ಯಲಿಂಗವಾಗಿ ಪ್ರಯೋಗಿಸಿರುವುದರಿಂದ ಶಬ್ದ ಗೋಚರಂ ಎನ್ನುವ ಪ್ರಯೋಗವು ಯುಕ್ತವು. (ಬಿ) ಅಥವಾ ಗವಾಂ=ಜ್ಞಾನಗಳ ವಾ ಶಬ್ದಗಳ ಚರಃ = ವ್ಯಾಪಾರವು ಯಸ್ಮಿನ್ ಎನ್ನುವ ಅವಯವ ವ್ಯತ್ಪತ್ತಿಯಿಂದ ಯೌಗಿಕವೆಂದು ಇಟ್ಟುಕೊಂಡರೆ ಗೋಚರಂ ಎಂದು ನಪುಂಸಕ ಪ್ರಯೋಗವು ಯುಕ್ತವಾಗುವುದು.

ಪೀಠಿಕೆ ॥ ಈ ಪೂರ್ವಪಕ್ಷವನ್ನು ನಿರಾಕರಿಸುತ್ತಾರೆ.

**ಭಾಷ್ಯ ॥ ನೇತ್ಯಾಹ ॥ ೫ ॥**

ಭಾಷ್ಯಾರ್ಥ ॥ (ಇಲ್ಲಿ ಸೂತ್ರಕಾರರು ಬ್ರಹ್ಮನಿಗೆ) ಶ್ರುತಿಗಳ ತಾತ್ಪರ್ಯವನ್ನು ತಿಳಿಯದೆ ಬಂದಿರತಕ್ಕ ಪೂರ್ವಪಕ್ಷಿಯು ಹೇಳಿದ ಅವಾಚ್ಯತ್ವವನ್ನು ನಿಷೇಧಿಸುತ್ತಾರೆ.

## ಸೂತ್ರ ॥ ಓಂ ಈಕ್ಷತೇರ್ನಾಶಬ್ದಂ ಓಂ ॥ ೫ ॥

ಸೂತ್ರಾರ್ಥ ॥ ತತ್ = ಆ ಬ್ರಹ್ಮನು, ಅಶಬ್ದಂ = ಶಬ್ದಾವಾಚ್ಯನು, ನ = ಅಲ್ಲ ಮತ್ತೆ ವಾಚ್ಯನೇ, ಈಕ್ಷತೇಃ = ಈಕ್ಷಣೀಯನಾದುದರಿಂದ, ಅಂದರೆ ಜ್ಞಾನ ವಿಷಯನಾದುದರಿಂದ.

ಭಾಷ್ಯ ॥ ನ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ ॥ ೬ ॥
(ಷಟ್ಪ್ರಶ್ನ ೫.೫)

ಭಾಷ್ಯಾರ್ಥ ॥ ಪ್ರಣವೋಪಾಸಕನಾದ ಜೀವನು ಜೀವಶ್ರೇಷ್ಠನಾದ ಚತುರ್ಮುಖನ ಉಪದೇಶದಿಂದ ಉತ್ತಮರಿಂದುತ್ತಮನೂ ಸರ್ವದೇಹಾಂತರ್ಗತನೂ ಪೂರ್ಣನೂ ಆದ ವಾಸುದೇವರೂಪಿ ಯಾದ ಶ್ರೀಪರಮಾತ್ಮನನ್ನು ತಿಳಿಯುತ್ತಾನೆ.

ಭಾಷ್ಯ ॥ (೧) ಆತ್ಮನ್ಯೇವಾತ್ಮಾನಂ ಪಶ್ಯೇತ್ (ಬೃ.೬.೪.೨೩.)
(೨) ವಿಜ್ಞಾಯ ಪ್ರಜ್ಞಾಂ ಕುರ್ವೀತ (ಬೃ.೬.೪.೨೧.)
★ಇತ್ಯಾದಿವಚನೈರೀಕ್ಷಣೀಯತ್ವಾದ್ವಾಚ್ಯಮೇವ ॥ ೭ ॥

ಭಾಷ್ಯಾರ್ಥ ॥ (೧) ತನ್ನ ಹೃದಯದಲ್ಲಿರತಕ್ಕ ಪರಮಾತ್ಮನನ್ನು ತಿಳಿಯತಕ್ಕುದು. (೨) ಬ್ರಹ್ಮನಲ್ಲಿ ಆಸಕ್ತನಾದ ಧೀರನು ಶ್ರೀಪರಮಾತ್ಮನನ್ನು ಆಚಾರ್ಯ ಮುಖದಿಂದ ಶಾಸ್ತ್ರದಿಂದ ಪರೋಕ್ಷವಾಗಿ ತಿಳಿದು ಪ್ರಕೃಷ್ಟವಾದ ಅಪರೋಕ್ಷಜ್ಞಾನವನ್ನು ಸಂಪಾದಿಸತಕ್ಕುದು. ಇದು ಮೊದಲಾದ ವಾಕ್ಯಗಳಿಂದ ಜ್ಞಾನವಿಷಯತ್ವವಿದ್ದ ಪ್ರಯುಕ್ತ (ಬ್ರಹ್ಮನು) ವಾಚ್ಯನೇ.

ಪೀಠಿಕೆ ॥ ಬ್ರಹ್ಮನಿಗೆ ಈಕ್ಷಣೀಯತ್ವವಿರಲಿ. ಆದರೂ ಈಕ್ಷಣೀಯತ್ವವು ಅನ್ಯಥೋಪಪನ್ನ ವಾಗುವುದರಿಂದ ಬ್ರಹ್ಮನಿಗೆ ವಾಚ್ಯತ್ವವನ್ನು ಹೇಳಬೇಕಾಗಿಲ್ಲ. ಪ್ರತ್ಯಕ್ಷಾದಿಗಳಿಂದಲೂ ಈಕ್ಷಣೀಯತ್ವವು ಕೂಡಬಹುದೆಂದರೆ—

ಭಾಷ್ಯ ॥ ಔಪನಿಷದತ್ವಾನ್ನಾವಚನೇನೇಕ್ಷಣಂ ॥ ೮ ॥

ಭಾಷ್ಯಾರ್ಥ ॥ ಬ್ರಹ್ಮನಿಗೆ ಕೇವಲ ಉಪನಿಷತ್ತಿನಿಂದಲೇ ತಿಳಿಯಲ್ಪಡುವಿಕೆಯಿದ್ದಪ್ರಯುಕ್ತ (ಅಂದರೆ— ಬ್ರಹ್ಮನು ಕೇವಲ ಉಪನಿಷತ್ತಿನಿಂದಲೇ ತಿಳಿಯಲ್ಪಡತಕ್ಕವನಾದ ಪ್ರಯುಕ್ತ) ವಚನದಿಂದ ಇತರವಾದ ಪ್ರತ್ಯಕ್ಷಾದಿ ಪ್ರಮಾಣದಿಂದ ಬ್ರಹ್ಮನ ಜ್ಞಾನವು ಉಂಟಾಗುವುದಿಲ್ಲ.

ವಿಶೇಷಾಂಶ ॥ (ಎ) ಶ್ರುತಿಸ್ಮೃತಿಗಳ ಸಾಹಾಯ್ಯವಿಲ್ಲದಿರುವ ಪ್ರತ್ಯಕ್ಷಾದಿಗಳಿಂದ ವೇದ್ಯವಾಗ ದಿರುವ ಬ್ರಹ್ಮನಲ್ಲಿರುವ ಈಕ್ಷಣೀಯತ್ವವು ವಾಚ್ಯತ್ವವಿಲ್ಲದೆ ಅನುಪಪನ್ನವಾಗುವುದರಿಂದ ಬ್ರಹ್ಮನಿಗೆ ವಾಚ್ಯತ್ವವೇ ಸಿದ್ಧವಾಗುತ್ತದೆ. (ಬಿ) ಬ್ರಹ್ಮನಿಗೆ ಶ್ರುತಿಗಳಲ್ಲಿ ಹೇಳಿದ ಈಕ್ಷಣವು ಪ್ರಮಾಣದಿಂದಲೇ ಆಗಬೇಕು. ಪ್ರಸಕ್ತ ಪ್ರಮಾಣಗಳಲ್ಲಿ ವಚನಹೊರತು ಬೇರೆ ಯಾವ ಪ್ರಮಾಣದಿಂದಲೂ

---

★ ಆದಿಪದದಿಂದ (೧) ಆತ್ಮಾ ವಾ ಅರೇ ದ್ರಷ್ಟವ್ಯಃ । (೨) ಅಜ ಆತ್ಮಾ ಮಹಾನ್ ಧ್ರುವಃ । (೩) ತಮೇವ ಧೀರೋ ವಿಜ್ಞಾಯ । ಇತ್ಯಾದಿ ಶ್ರುತಿಯನ್ನು ಇಟ್ಟುಕೊಳ್ಳಬೇಕು.

ಲಕ್ಷಣಾದಿಗಳಿಂದಲೂ ಈಕ್ಷಣವು ಕೂಡಲಾರದು— ಅವಾಚ್ಯನಾದ ಪ್ರಯುಕ್ತ ಆದ ಕಾರಣ ಪರಿಶೇಷ ಪ್ರಮಾಣದಿಂದ ಈಕ್ಷಣವು ವಾಚ್ಯತ್ವವನ್ನೇ ಸಾಧಿಸುತ್ತದೆ.

ಪೀಠಿಕೆ ॥ ಶ್ರುತಿಸಿದ್ಧವಾದ ಅವಾಚ್ಯತ್ವವನ್ನು ಈಕ್ಷಣೀಯತ್ವಯುಕ್ತಿಮಾತ್ರದಿಂದ ಹೇಗೆ ದೂಷಿಸುವುದು? ಪ್ರಾಬಲ್ಯಮಾಗಮಸ್ಯೈವ ಎಂದು ಯುಕ್ತಿಗಿಂತ ಶ್ರುತಿಯು ಪ್ರಬಲವೆಂದು ಹೇಳಿದೆ. ಎಂದರೆ— ಸೂತ್ರದಲ್ಲಿ ಹೇಳಿದ ಹೇತುವು ಆಗಮಾರ್ಥನಿರ್ಣಾಯಿಕವಾಗಿರುವುದರಿಂದ ಈಕ್ಷಣೀಯತ್ವಯುಕ್ತಿಯಿಂದ ಅನುಗೃಹೀತವಾದ ವಾಚ್ಯತ್ವಸಾಧಕ ಶ್ರುತಿ ಸ್ಮೃತಿಗಳನ್ನು ಹೇಳುತ್ತಾರೆ—

**ಭಾಷ್ಯ ॥ ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ । (ಕಠ.೨-೧೫) ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಂ । (ಭ.ಗೀ.೧೫-೧೫) ★ಇತ್ಯಾದಿ ಶ್ರುತಿಸ್ಮೃತಿಭ್ಯಶ್ಚ ॥ ೯ ॥**

ಭಾಷ್ಯಾರ್ಥ ॥ (೧) ಎಲ್ಲಾ ವೇದಗಳೂ ಯಾವ ಬ್ರಹ್ಮಸ್ವರೂಪವನ್ನೇ ಮುಖ್ಯವೃತ್ತಿಯಿಂದ ತಾತ್ಪರ್ಯ ಪೂರ್ವಕವಾಗಿ ಪ್ರತಿಪಾದಿಸುತ್ತವೋ, ಎಲ್ಲಾ ವೇದಗಳೂ ಪ್ರಸಿದ್ಧಗಳಾದ ಎಲ್ಲಾ ತಪಸ್ಸುಗಳನ್ನು ಯಾವ ಬ್ರಹ್ಮನನ್ನುದ್ದೇಶಿಸಿಯೇ ಮಾಡತಕ್ಕವುಗಳೆಂದು ಬೋಧಿಸುತ್ತವೆ. ಅಥವಾ ತಪಾಂಸಿ-ಆಲೋಚನರೂಪಗಳಾದ ಸದ್ಯುಕ್ತಿಗಳೂ ಕೂಡ ಬ್ರಹ್ಮನನ್ನು ಹೇಳುತ್ತವೆ. (೨) ಎಲ್ಲಾ ವೇದಗಳಿಂದಲೂ ನಾನೇ ಮುಖ್ಯವಾಗಿ ಪ್ರತಿಪಾದ್ಯನು, ನಾನೇ ಬ್ರಹ್ಮಸೂತ್ರವನ್ನು ಮಾಡಿದವನು, ನಾನೇ ವೇದಾರ್ಥಜ್ಞಾನಿಯು. ಆದುದರಿಂದ ಈ ಶ್ರುತಿ ಸ್ಮೃತಿಗಳಿಂದಲೂ ವಾಚ್ಯತ್ವವೇ ಸಿದ್ಧಿಸುತ್ತದೆ.

ವಿಶೇಷಾಂಶ ॥ ಶ್ರುತಿಯಲ್ಲಿ ಆಮನಂತಿ ಎಂದು ಸಾಕ್ಷಾತ್ ವಾಚ್ಯತ್ವವನ್ನೇ ಹೇಳಿರುತ್ತಾರೆ. ಸ್ಮೃತಿಯಲ್ಲಿ ಅಹಮೇವ ಎಂದು ಅವಧಾರಣವು ಕೂಡುವುದಕ್ಕಾಗಿ ಮುಖ್ಯವಾಗಿ ವೇದ್ಯತ್ವವು ವಿವಕ್ಷಣೀಯವಾಗಿದೆ. ಅದು ವಾಚ್ಯತ್ವವಿಲ್ಲದೆ ಕೂಡದಿದ್ದ ಪ್ರಯುಕ್ತ ಸರ್ವಶಬ್ದಲಕ್ಷಣೆಯೂ ಕೂಡಲಾರದು. ಆದುದರಿಂದ ಈ ಶ್ರುತಿ ಸ್ಮೃತಿಗಳಿಂದ ವಾಚ್ಯತ್ವವೇ ಸಿದ್ಧಿಸುವುದು.

ಪೀಠಿಕೆ ॥ ವಾಚ್ಯತ್ವವು ಯುಕ್ತ್ಯಾದಿಗಳಿಂದ ಸಿದ್ಧವಾದರೆ ಅವಾಚ್ಯತ್ವವನ್ನು ಹೇಳತಕ್ಕ ಯತೋ ವಾಚಃ ಇತ್ಯಾದಿ ಶ್ರುತಿಗಳಿಗೆ ಏನು ಗತಿಯು ಎಂದರೆ—

**ಭಾಷ್ಯ ॥ ಅವಾಚ್ಯತ್ವಾದಿಕಂ ತ್ವಪ್ರಸಿದ್ಧತ್ವಾತ್ ॥ ೧೦ ॥**

ಭಾಷ್ಯಾರ್ಥ ॥ ಸಾಕಲ್ಯೇನ ಅಗೋಚರತ್ವವಿದ್ದ ಪ್ರಯುಕ್ತವೇ (ಬ್ರಹ್ಮನಲ್ಲಿ) ಅವಾಚ್ಯತ್ವ ಅಜ್ಞೇಯತ್ವ ಮೊದಲಾದ ವ್ಯಪದೇಶವು ಕೂಡುತ್ತದೆ.

ಪೀಠಿಕೆ ॥ ಅಪ್ರಸಿದ್ಧಿನಿಮಿತ್ತಕವಾಗಿ ಅವಾಚ್ಯತ್ವಾದಿವ್ಯಪದೇಶವು ಎಲ್ಲಿ ಕಂಡದೆ ಎಂದರೆ—

**ಭಾಷ್ಯ ॥ ನ ತದೀದೃಗಿತಿ ಜ್ಞೇಯಂ ನ ವಾಚ್ಯಂ ನ ಚ ತರ್ಕ್ಯತೇ । ಪಶ್ಯಂ ತೋऽಪಿ ನ ಪಶ್ಯಂತಿ (ಜಾನಂತಿ) ಮೇರೋಃ ರೂಪಂ ವಿಪಶ್ಚಿತಃ ॥ ಇತಿವತ್ ॥ ೧೧ ॥**

---

★ ಆದಿಪದದಿಂದ (೧) ಅಥ ಕಸ್ಮಾದುಚ್ಯತೇ ಬ್ರಹ್ಮೇತಿ । (೨) ನಾಮಾನಿ ಸರ್ವಾಣಿ (೩) ವಚಸಾಂ ವಾಚ್ಯಮುತ್ತಮಂ। ಇತ್ಯಾದಿಗಳನ್ನು ಇಟ್ಟುಕೊಳ್ಳ ಬೇಕು.

**ಭಾಷ್ಯಾರ್ಥ ॥** ಯಾವ ಕಾರಣದಿಂದ ಜ್ಞಾನಿಗಳು ಮೇರುಪರ್ವತದ ರೂಪವನ್ನು ನೋಡಿದರೂ ಹೀಗೆಯೇ ಇರತಕ್ಕುದು ಎಂದು ಸಂಪೂರ್ಣವಾಗಿ ತಿಳಿಯುವುದಿಲ್ಲವೋ, ಆದುದರಿಂದ ಮೇರುಪರ್ವತದ ರೂಪವು (ಪ್ರತ್ಯಕ್ಷದಿಂದ) ತಿಳಿಯಲ್ಪಡುವುದಿಲ್ಲ (ಶಬ್ದದಿಂದ) ಹೇಳಲ್ಪಡುವುದಿಲ್ಲ (ಅನುಮಾನದಿಂದ) ಊಹಿಸಲ್ಪಡುವುದಿಲ್ಲ. ಈ ವಾಕ್ಯದಲ್ಲಿ ಇದ್ದಂತೆಯೇ (ಬ್ರಹ್ಮನಿಗೆ ಅವಾಚ್ಯತ್ವಾದಿ ವ್ಯಪದೇಶವು.)

**ವಿಶೇಷಾಂಶ ॥** ಹೇಗೆ ಮೇರುಪರ್ವತದ ರೂಪದಲ್ಲಿ ಅಪ್ರಸಿದ್ಧಿನಿಮಿತ್ತಕವಾಗಿ ಅವಾಚ್ಯತ್ವಾದಿವ್ಯಪದೇಶವಿದೆಯೋ ಹಾಗೆಯೇ ಬ್ರಹ್ಮನಲ್ಲಿಯೂ ಅವಾಚ್ಯತ್ವಾದಿವ್ಯಪದೇಶವು.

**ಭಾಷ್ಯ ॥ ಅಪ್ರಸಿದ್ಧೇರವಾಚ್ಯಂ ತದ್ವಾಚ್ಯಂ ಸರ್ವಾಗಮೋಕ್ತಿತಃ । ಅತರ್ಕ್ಯಂ ತರ್ಕ್ಯ ಮಜ್ಞೇಯಂ ಜ್ಞೇಯಮೇವಂ ಪರಂ ಸ್ಮೃತಂ ॥ ಇತಿ ಗಾರುಡೇ ॥ ೧೨ ॥**

**ಭಾಷ್ಯಾರ್ಥ ॥** ಆ ಬ್ರಹ್ಮನು ಯಾವ ಕಾರಣದಿಂದ ಪರಂಪೂರ್ಣನೋ, ಆದಕಾರಣ ಸಂಪೂರ್ಣ ಪ್ರಸಿದ್ಧಿಯಿಲ್ಲದಿರುವುದರಿಂದ ಅವಾಚ್ಯನೆನ್ನಿಸುತ್ತಾನೆ. ಎಲ್ಲಾ ಸದಾಗಮಗಳಲ್ಲಿ ಹೇಳಲ್ಪಟ್ಟ ಪ್ರಯುಕ್ತ (ಅವುಗಳಲ್ಲಿ ಪ್ರಸಿದ್ಧಿಯಿದ್ದ ಪ್ರಯುಕ್ತ) ವಾಚ್ಯನೂ ಎನ್ನಿಸುತ್ತಾನೆ. ಹೀಗೆ ಅಪ್ರಸಿದ್ಧಿಗಳಿಂದ ಆ ಬ್ರಹ್ಮನು ಅತರ್ಕ್ಯನು ಅನುಮೇಯನೆಂದೂ ಅಜ್ಞೇಯನು ಜ್ಞಾನಿಪ್ರತ್ಯಕ್ಷಗಮ್ಯನೆಂದೂ ಸ್ಮೃತಿಕಾರರಿಂದ ಹೇಳಲ್ಪಟ್ಟಿದ್ದಾನೆ. ಹೀಗೆ ಗಾರುಡಪುರಾಣದಲ್ಲಿ ಹೇಳಲ್ಪಟ್ಟಿದೆ.

**ಪೀಠಿಕೆ ॥** ಹೀಗೆ **ಯತೋ ವಾಚಃ** ಇತ್ಯಾದಿ ಶ್ರುತಿಗಳಿಗೆ ಯುಕ್ತಿ ಮೊದಲಾದವುಗಳ ಬಲದಿಂದ ಅರ್ಥಾಂತರವು ಕೂಡುವ ಪ್ರಯುಕ್ತ ಅದರ ಸಾಮರ್ಥ್ಯದಿಂದ ಬ್ರಹ್ಮನು ಶಬ್ದಾವಾಚ್ಯನಲ್ಲ ವಾಚ್ಯನೇ ಎಂದು ಸೂತ್ರಕ್ಕೆ ವ್ಯಾಖ್ಯಾನಮಾಡಿ ಪರಕೀಯ ವ್ಯಾಖ್ಯಾನವನ್ನು ತಿರಸ್ಕರಿಸುತ್ತಾರೆ.

**ಭಾಷ್ಯ ॥ ನ ಚಾಶಬ್ದತ್ವಮಿತರಸಿದ್ಧಂ ॥ ೧೩ ॥**

**ಭಾಷ್ಯಾರ್ಥ ॥** ಅಶ್ರೌತತ್ವವು (ಅಂದರೆ ಶಬ್ದದಿಂದ ತಿಳಿಯಲ್ಪಡದಿರುವಿಕೆಯು) ತನ್ನಿಂದ ಇತರ ಸಾಂಖ್ಯಮತಸಿದ್ಧವಲ್ಲ. ಸೂತ್ರಕಾರ ಮತಸಿದ್ಧವೂ ಅಲ್ಲ. ಅಥವಾ ಬ್ರಹ್ಮನಿಂದ ಇತರವಾದ ಪ್ರಧಾನಕ್ಕೆ ಅಶ್ರೌತತ್ವವು ಪರಸ್ಪರ ಮತಭೇದವುಳ್ಳ ಸಾಂಖ್ಯಮಾಯಿಗಳಿಂದ ನಿಶ್ಚಿತವಲ್ಲ. ಇಬ್ಬರೂ ಪ್ರಧಾನಕ್ಕೆ **ಅಜಾಮೇಕಾಂ** ಎಂದು ಶ್ರುತಿಪ್ರತಿಪಾದ್ಯತ್ವವನ್ನು ಅಂಗೀಕರಿಸಿರುತ್ತಾರೆ.

**ವಿಶೇಷಾಂಶ ॥** (ಎ) ಜಗತ್ಕಾರಣವು ಪ್ರಧಾನವಲ್ಲ. ಅಥವಾ ಪ್ರಧಾನವು ಜಗತ್ಕಾರಣವಲ್ಲ. ಏಕೆಂದರೆ ಜಗತ್ಕಾರಣನಿಗೆ ಈಕ್ಷಣಕರ್ತೃತ್ವವು ಶ್ರುತವಾಗಿದೆ. ಪ್ರಧಾನವು ಅಚೇತನವಾದ ಪ್ರಯುಕ್ತ ಅದಕ್ಕೆ ಈಕ್ಷಣವು ಕೂಡಲಾರದು. ಎಂದು ಸಾಂಖ್ಯಮತ ನಿರಾಕರಣಪರವಾಗಿ ವ್ಯಾಖ್ಯಾನ ಮಾಡಿದರೆ ಹೇತೂಕ್ತವಾದ ಅಶಬ್ದತ್ವವು (ಅಶ್ರೌತತ್ವವು) ತನ್ನಿಂದ ಇತರನಾದ ಸಾಂಖ್ಯನಿಗೆ ಸಿದ್ಧವಲ್ಲ. ಇಷ್ಟು ಮಾತ್ರವಲ್ಲ. ತನಗೂ ಸಿದ್ಧವಲ್ಲ. ಸೂತ್ರಕಾರರು **ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ** ಇದು ಮೊದಲಾದ ಶ್ರುತಿಯಲ್ಲಿ ಪ್ರಧಾನವು ಉಕ್ತವಾಗಿದೆ ಎಂದು ಅಂಗೀಕರಿಸಿದರಿಂದ ಸಾಂಖ್ಯನು ತಾನೂ ವೈದಿಕನೆಂದು ಅಂಗೀಕರಿಸಿದ್ದಾನೆ. ಆದುದರಿಂದ ಅದ್ವೈತಿಗಳ ವ್ಯಾಖ್ಯಾನವು ಸರ್ವಥಾ ಯುಕ್ತವಲ್ಲ. (ಬಿ) ಅಥವಾ

ತತ್ವಪ್ರದೀಪರೀತಿಯಾಗಿ ಮಾಯಾವಾದಿಯು ಸಾಂಖ್ಯವನ್ನು ಕುರಿತು ಹೇತುವಾಗಿ ಉಪನ್ಯಾಸ ಮಾಡಿದ ಅಶಬ್ದತ್ವವು ಮಾಯಾವಾದಿಯಿಂದ ಇತರನಾದ ಸಾಂಖ್ಯನಿಗೆ ಸಿದ್ಧವಲ್ಲ. ಸಾಂಖ್ಯನಿಂದ ಇತರವಾದ ಮಾಯಾವಾದಿಗೆ ಸಿದ್ಧವೂ ಅಲ್ಲ. ಅಂತೂ ಅಸಿದ್ಧಿಯು. ಆದಕಾರಣ ಆ ವ್ಯಾಖ್ಯಾನವು ಯುಕ್ತವಲ್ಲ. (ಸಿ) ಹೀಗೆಯೇ ಬ್ರಹ್ಮನಿಗೆ ಶ್ರೌತತ್ವವು ಸಾಂಖ್ಯನಿಂದ ಇತರನಾದ ಮಾಯಾವಾದಿಗೆ ಸಿದ್ಧವಲ್ಲ. ಅವರ ಮತದಲ್ಲಿ ಬ್ರಹ್ಮನು ಅವಾಚ್ಯನು. ಬ್ರಹ್ಮನು ಈಕ್ಷತಿಸ್ವರೂಪನಾದುದರಿಂದ ಅವನಿಗೆ ಈಕ್ಷಿತೃತ್ವವೂ ಸಿದ್ಧವಲ್ಲ. ಅಂತೂ ಎರಡು ಹೇತುಗಳೂ ತನ್ನ ಪಕ್ಷಕ್ಕೆ ಪ್ರತಿಕೂಲವಾದ ಪ್ರಯುಕ್ತ ಪರರ ವ್ಯಾಖ್ಯಾನವು ಯುಕ್ತವಲ್ಲ. (ಡಿ) ತತ್ವಪ್ರದೀಪದಲ್ಲಿ ಈ ಮೂಲಕ್ಕೆ ಬೇರೆ ರೀತಿಯಾಗಿಯೇ ವ್ಯಾಖ್ಯಾನ ಮಾಡಿರುವರು. ಮಾಯಾವಾದಿಸಿದ್ಧವಾದ ಅಶಬ್ದತ್ವವು ಶ್ರುತ್ಯರ್ಥವಲ್ಲ. ಹಿಂದೆ ಹೇಳಿದ ಪ್ರಕಾರ ಬ್ರಹ್ಮನು ವಾಚ್ಯನಾದ ಪ್ರಯುಕ್ತ ಹೀಗೆಯೇ ಬ್ರಹ್ಮನಿಗೆ ಅವಾಚ್ಯತ್ವವು ಮಾಯಾವಾದಿಗೂ ಸಿದ್ಧವಲ್ಲ. ಬ್ರಹ್ಮನಲ್ಲಿ ವ್ಯವಹಾರವೇ ಇಲ್ಲವೆಂದಾಗಬೇಕಾದೀತು. ಹೀಗೆ ಎರಡು ರೀತಿಯಾಗಿ ವ್ಯಾಖ್ಯಾನ ಮಾಡಿ ಪರರು ಮಾಡಿದ ವ್ಯಾಖ್ಯಾನವನ್ನು ತಿರಸ್ಕರಿಸುವುದಕ್ಕಾಗಿ ಪರರು ಹೇಳಿದ ಹೇತುವಿಗೆ ಅಸಿದ್ಧಿಯೆಂದು ಹೇಳಿರುವರು.

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನ ಹೇಳುತ್ತಾರೆ—

## ಸೂತ್ರ ॥ ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ ॥ ೬ ॥

**ಸೂತ್ರಾರ್ಥ ॥** ಪುರುಷಂ ಈಕ್ಷತೇ ಇತ್ಯಾದಿ ಶ್ರುತಿಗಳಲ್ಲಿ ಈಕ್ಷಣಕ್ಕೆ ಕರ್ಮನಾಗಿ ಹೇಳಲ್ಪಟ್ಟವನು ಸತ್ವರಜಸ್ತಮೋಗುಣಸಂಬದ್ಧನಾದ ಜೀವನೇ, ವಿಷ್ಣುವಲ್ಲ ಎಂದು ಹೇಳಕೂಡದು. ಆತ್ಮಾನಂ ಪಶ್ಯೇತ್। ಬ್ರಹ್ಮ ತತಮಮಪಶ್ಯತ್ ಇತ್ಯಾದಿಗಳಲ್ಲಿ ಈಕ್ಷಣೀಯನನ್ನು ವಿಷ್ಣುವನ್ನೇ ಹೇಳತಕ್ಕ ಆತ್ಮ ಪುರುಷ ಬ್ರಹ್ಮ ಮೊದ ಲಾದ ಶಬ್ದಗಳು ಇದ್ದುದರಿಂದ.

**ಭಾಷ್ಯ ॥ ನ ಚ ಗೌಣ ಆತ್ಮಾ ದೃಶ್ಯೋ ವಾಚ್ಯಶ್ಚ ನ ನಿರ್ಗುಣ ಇತಿ ಯುಕ್ತಂ ಆತ್ಮ ಶಬ್ದಾತ್ ॥ ೧೪ ॥**

**ಭಾಷ್ಯಾರ್ಥ ॥** (ಈಕ್ಷತಿ ಶ್ರುತಿಯಲ್ಲಿ) ದೃಶ್ಯನಾಗಿ ಹೇಳಲ್ಪಟ್ಟವನು ತ್ರಿಗುಣ ಸಂಬದ್ಧನಾದ ಜೀವನೇ. ಆದುದರಿಂದ ವಾಚ್ಯನೂ ಅವನೇ ಆಗಬೇಕು. ಗುಣಾತೀತನಾದ ವಿಷ್ಣುವು ದೃಶ್ಯನಾಗಿ ಈಕ್ಷತಿ ಶ್ರುತಿಯಲ್ಲಿ ಹೇಳಲ್ಪಟ್ಟವನು ಎನ್ನುವುದು ಅಲ್ಲ. (ತ್ರಿಗುಣಬದ್ಧನಾದ ಜೀವನೇ ದೃಶ್ಯನೂ ವಾಚ್ಯನೂ ಎಂದು ಇಟ್ಟುಕೊಂಡರೆ ಬಾಧಕವೂ ಇಲ್ಲ. ನಿರ್ಗುಣನನ್ನೇ ಇಟ್ಟುಕೊಳ್ಳಬೇಕೆನ್ನುವಲ್ಲಿ ಜ್ಞಾಪಕವೂ ಇಲ್ಲ. ಆದಕಾರಣ ನಿರ್ಗುಣವಾಚ್ಯನಲ್ಲ ಎನ್ನುವ ಚೋದ್ಯವು ಯುಕ್ತವಲ್ಲ. ಏಕೆಂದರೆ) (ಆತ್ಮನ್ಯೇವ ಎನ್ನುವ ವಾಕ್ಯದಲ್ಲಿ ಈಕ್ಷಣೀಯನಲ್ಲಿ) ಆತ್ಮಶಬ್ದವು ಶ್ರುತವಾದ ಪ್ರಯುಕ್ತ. (ನಿರ್ಗುಣನೇ ದೃಶ್ಯನು. ಆದುದರಿಂದಲೇ ಈಕ್ಷಣೀಯತ್ವರೂಪಲಿಂಗದಿಂದ ವಾಚ್ಯನೂ ಆತನೇ ಆಗಬೇಕು.)

**ವಿಶೇಷಾಂಶ ॥** ಯದ್ಯಪಿ ಸುಧಾದಲ್ಲಿ ಗೌಣಪದವು ಮಾಯಾವಿಶಿಷ್ಟವಾದ ಐಶ್ವರ್ಯ ಮೊದಲಾದ ಧರ್ಮಗಳಿಂದ ಕೂಡಿದ ಸಗುಣಬ್ರಹ್ಮಪರವೆಂದು ವ್ಯಾಖ್ಯಾನ ಮಾಡಿರುವರು. ಆದರೂ ಮಾಯಾವಿಶಿಷ್ಟನು ಅಥವಾ ತ್ರಿಗುಣಸಂಬದ್ಧರಾದ ಜೀವರು ದೃಶ್ಯರು ವಾಚ್ಯರು ಸರ್ವಥಾ ನಿರ್ಗುಣಬ್ರಹ್ಮರಲ್ಲ ಎಂದು ಪೂರ್ವಪಕ್ಷಿಯ ಅಭಿಪ್ರಾಯವು. ಆದುದರಿಂದ ವಿರೋಧವಿಲ್ಲ.

ಪೀಠಿಕೆ ॥ ಆತ್ಮಶಬ್ದವಿದ್ದರೂ ನಿರ್ಗುಣನೆಂದು ಏಕೆ ಒಡಂಬಡಬೇಕು. ಗೌಣನೆಂದೇ ಏಕೆ ಆಗಬಾರದು ಎಂದರೆ—

**ಭಾಷ್ಯ ॥ ಯೋ ಗುಣ್ಯೈಃ ಸರ್ವತೋ ಹೀನೋ ಯಶ್ಚ ದೋಷವಿವರ್ಜಿತಃ। ಹೇಯೋಪಾದೇಯರಹಿತಃ ಸ ಆತ್ಮೇತ್ಯಭಿಧೀಯತೇ ॥ ಏತದನ್ಯಸ್ವಭಾವೋ ಯಃ ಸೋऽನಾತ್ಮೇತಿ ಸತಾಂ ಮತಂ(ತಃ)। ಅನಾತ್ಮನ್ಯಾತ್ಮಶಬ್ದಸ್ತು ಸೋಪಚಾರಃ ಪ್ರಯುಜ್ಯತೇ ॥ ಇತಿ ವಾಮನೇ ॥ ೧೫ ॥**

ಭಾಷ್ಯಾರ್ಥ ॥ ಯಾವಾತನು ಸರ್ವಪ್ರಕಾರದಿಂದಲೂ ಸತ್ವಮೊದಲಾದ ಗುಣಗಳಿಂದ ಶೂನ್ಯನೋ, ಯಾವಾತನು ದುಃಖ ಮೊದಲಾದ ದೋಷವಿರಹಿತನೋ, ಯಾವಾತನು ಹೇಯತ್ವದಿಂದ ಕೂಡಿದ ಉಪಾದೇಯತ್ವವಿಲ್ಲದಿರುವವನೋ (ಅಂದರೆ ಉಪಾದೇಯನೇ ಆಗಿರುತ್ತಾನೋ,) (ಅಥವಾ ತತ್ವಪ್ರದೀಪಕಾ ರೀತಿಯಾಗಿ) ಗುಣಪರಿಪೂರ್ಣನಾದುದರಿಂದ ಸ್ವಾಭಾವಿಕ ದೋಷವಿರಹಿತನು, ಆಪ್ತಕಾಮನಾದುದರಿಂದ ಉಪಾದೇಯವಿಲ್ಲದಿರುವವನು. (ಅಥವಾ ತತ್ತ್ವೋದ್ಯೋತಟೀಕಾ ರೀತಿಯಾಗಿ) ದೋಷವಿಲ್ಲದಿರುವುದರಿಂದಲಾಗಲೀ, ಜಿಡತಕ್ಕವನು ಇಲ್ಲದಿರುವುದರಿಂದಲಾಗಲೀ ಹೇಯತ್ವವಿಲ್ಲದಿರುವವನು, ಲೌಕಿಕ ಗುಣಗಳು ಇಲ್ಲದಿರುವುದರಿಂದ ಅಥವಾ ಸ್ವೀಕಾರಮಾಡತಕ್ಕವನು ಮತ್ತೊಬ್ಬ ಸ್ವತಂತ್ರನು ಇಲ್ಲದಿರುವುದರಿಂದ ಉಪಾದೇಯತ್ವವಿಲ್ಲದಿರುವವನು, ಅಥವಾ ಅನಿಷ್ಟವಿಲ್ಲದಿರುವುದರಿಂದ ಹೇಯವಿಲ್ಲದಿರುವವನು. ಅಪೂರ್ತಿಯಿಲ್ಲದಿರುವುದರಿಂದ ಉಪಾದೇಯವಿಲ್ಲದಿರುವವನು. ಯಾವಾತನು ಈ ರೀತಿಯಾಗಿ ಇದ್ದಾನೋ ಆತನು ಆತ್ಮನೆಂದು ಹೇಳಲ್ಪಡುತ್ತಾನೆ. ಯಾವಾತನು ಇದಕ್ಕೆ ವಿರುದ್ಧವಾದ ಸ್ವಭಾವವುಳ್ಳವನೋ ಆತನು ಅನಾತ್ಮನೆಂದು ಸಜ್ಜನರಿಗೆ ಸಮ್ಮತವು(ನು.) (ಹೃದಿ ಹ್ಯೇಷ ಆತ್ಮಾ ಇದು ಮೊದಲಾದ ಕೆಲವು ಕಡೆ ಇದಕ್ಕೆ ವಿರುದ್ಧ ಸ್ವಭಾವವಿರುವ ಸ್ಥಳದಲ್ಲಿಯೂ ಆತ್ಮಪದಪ್ರಯೋಗವಿದ್ದ ಪ್ರಯುಕ್ತ ಅನಾತ್ಮಾ ಎಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ) ಆತ್ಮಶಬ್ದ ಮುಖ್ಯಾರ್ಥ ಭಿನ್ನನಾದ ಜೀವನಲ್ಲಿ ಆತ್ಮಶಬ್ದವು ಪರಮ ಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿಯೇ ಪ್ರಯೋಗಿಸಲ್ಪಡುತ್ತದೆ.) ಹೀಗೆ ವಾಮನಪುರಾಣದಲ್ಲಿ ಆತ್ಮಶಬ್ದವು (ನಿರ್ಗುಣನಲ್ಲಿ ಮಾತ್ರ ಇರತಕ್ಕುದು ಎಂದು ಹೇಳಿದುದರಿಂದ ಈ ಶ್ರುತಿಯಲ್ಲಿ ಹೇಳಿದ ದೃಶ್ಯನೂ ವಾಚ್ಯನೂ ಗೌಣನಲ್ಲ, ಮತ್ತೆ ನಿರ್ಗುಣನೇ.)

ಪೀಠಿಕೆ ॥ ಈ ವಿಷಯದಲ್ಲಿಯೇ ಪ್ರಮಾಣಾಂತರವನ್ನು ಹೇಳುತ್ತಾರೆ.

**ಭಾಷ್ಯ ॥ ದ್ವೇ ವಾವ ಬ್ರಹ್ಮಣೋ ರೂಪೇ ಆತ್ಮಾ ಚೈವಾನಾತ್ಮಾ ಚ। ತತ್ರ ಯಃ ಸ ಆತ್ಮಾ ಸ ನಿತ್ಯಃ ಶುದ್ಧಃ ಕೇವಲೋ ನಿರ್ಗುಣಶ್ಚ॥ ಅಥ ಹ ಯೋऽನೀ ದೃಶಃ ಸೋऽನಾತ್ಮಾ ॥ ಇತಿ ತಲವಕಾರಬ್ರಾಹ್ಮಣಂ ॥ ೧೬ ॥**

ಭಾಷ್ಯಾರ್ಥ ॥ ಪರಬ್ರಹ್ಮನ ರೂಪಗಳು ಎರಡು. (ಒಂದು ಸ್ವರೂಪವು, ಮತ್ತೊಂದು ರೂಪ್ಯತೇ ಜ್ಞಾಯತೇ ಬ್ರಹ್ಮಾಖ್ಯಂ ಎನ್ನುವ ವ್ಯುತ್ಪತ್ತಿಯಿಂದ ಪ್ರತಿಮಾರೂಪವು.) ಶ್ರುತ್ಯಾದಿ ಪ್ರಸಿದ್ಧವು.

ಯಾವುವೆಂದರೆ ಆತ್ಮಶಬ್ದ ಮುಖ್ಯ ವಾಚ್ಯವಾದುದು, ಆತ್ಮಶಬ್ದ ಮುಖ್ಯವಾಚ್ಯವಾಗದಿರುವುದು ಎಂದು. ಆ ಆತ್ಮ ಅನಾತ್ಮಗಳ ಮಧ್ಯದಲ್ಲಿ ಪ್ರಸಿದ್ಧನಾದವನು ಯಾವಾತನು ಆತ್ಮಶಬ್ದ ಮುಖ್ಯಾರ್ಥನಾದ ವಿಷ್ಣುವೋ, ಆತನು ನಿತ್ಯಃ = ದೇಹಹಾನ್ಯಾದಿ ದೋಷವಿಲ್ಲದಿರುವವನು, ಕರ್ಮಲೇಪ ವಿಧುರನು, ಜಡಾಮಿಶ್ರನು, ಸತ್ವ ಮೊದಲಾದ ಗುಣಗಳಿಂದ ರಹಿತನು. (ಹೀಗೆ ಪ್ರಥಮತಃ ಹೇಳಿದ ಆತ್ಮಶಬ್ದಾರ್ಥವನ್ನು ಲಕ್ಷಣಮುಖದಿಂದ ತೋರಿಸಿ ಅನಾತ್ಮನನ್ನು ತೋರಿಸುತ್ತಾರೆ.) ಯಾವ ಕಾರಣದಿಂದ ಆತ್ಮನು ಈ ರೀತಿಯಾಗಿ ಇರತಕ್ಕವನೋ, ಆದುದರಿಂದ ಯಾವಾತನು ನಿತ್ಯತ್ವಾದಿಗಳಿಲ್ಲದಿರುವವನೆಂದು ಪ್ರಸಿದ್ಧನೋ, ಅವನು ಅನಾತ್ಮನೆಂದು ಸಜ್ಜನರಿಗೆ ಸಮ್ಮತನು. ಹೀಗೆ ತಲವಕಾರ ಬ್ರಾಹ್ಮಣವು (ಯಾವ ಕಾರಣದಿಂದ ನಿರ್ಗುಣನಾದ ವಿಷ್ಣುವಿಗೇನೇ ಆತ್ಮತ್ವವನ್ನು ಹೇಳುತ್ತದೋ ಆದುದರಿಂದ ಈಕ್ಷಣಶ್ರುತಿ ಯಲ್ಲಿ ಹೇಳಿದ ದೃಶ್ಯನೂ, ವಾಚ್ಯನೂ ಗೌಣನಲ್ಲ ನಿರ್ಗುಣನೇ.)

**ಪೀಠಿಕೆ ॥** ಹಾಗಾದರೆ ಉಪಚಾರದಿಂದಲಾಗಲೀ, ಆತ್ಮಶಬ್ದಕ್ಕೆ ಗೌಣನಲ್ಲಿ ಪ್ರಯೋಗವು ಕೂಡುವುದರಿಂದ ಆತನೇ ಶ್ರುತಿಯಲ್ಲಿ ಹೇಳಲ್ಪಟ್ಟ ದೃಶ್ಯ ಆತ್ಮನು ಎಂದು ಏಕೆ ಆಗಲಾರದು ಎಂದರೆ—

**ಭಾಷ್ಯ ॥ ನ ಚ ಮುಖ್ಯೇ ಸತ್ಯಮುಖ್ಯಂ ಯುಜ್ಯತೇ ॥ ೧೭ ॥**

**ಭಾಷ್ಯಾರ್ಥ ॥** ಆತ್ಮಶಬ್ದಮುಖ್ಯಾರ್ಥನು ನಿರ್ಗುಣನು ದೃಶ್ಯನಾಗಿ ಈಕ್ಷತಿಶ್ರುತಿ ಪ್ರತಿಪಾದ್ಯನು ಎನ್ನುವುದು ಕೂಡುವಾಗ ಅಮುಖ್ಯಾರ್ಥಗೌಣನನ್ನು ಇಟ್ಟುಕೊಳ್ಳುವುದು ಕೂಡುವುದಿಲ್ಲ.

**ವಿಶೇಷಾಂಶ ॥** ತತ್ ಎನ್ನುವುದರಿಂದ ಸಾಮಾನಾಧಿಕರಣ್ಯ ಬರುವುದಕ್ಕಾಗಿ ಆಶಬ್ದಂ ಎಂದು ನಪುಂಸಕಲಿಂಗವಾಗಿದ್ದರೂ **ಆತ್ಮನ್ಯೇವಾತ್ಮಾನಂ ಪಶ್ಯೇತ್** ಇತ್ಯಾದಿಗಳಲ್ಲಿ **ಆತ್ಮಾ ನ ಗೌಣಃ ಆತ್ಮಶಬ್ದಾತ್** ಎಂದು ಆತ್ಮಶಬ್ದಸಾಮಾನಾಧಿಕರಣ್ಯಕ್ಕಾಗಿ ಸೂತ್ರದಲ್ಲಿ **ಗೌಣಶ್ಚೇತ್** ಎಂದು ಪುಲ್ಲಿಂಗನಿರ್ದೇಶವು.

**ಪೀಠಿಕೆ ॥** (ಎ) ಆತ್ಮಶಬ್ದವು ಮುಖ್ಯವಾಗಿಯೇ ಗೌಣಾತ್ಮಪರವೆಂದು ಏಕೆ ಆಗಬಾರದು. ಹಿಂದೆ ಹೇಳಿದ ಶ್ರುತಿಸ್ಮೃತಿಗಳಿಂದ ವಿರೋಧವು ಬರುತ್ತದೆಂದು ಹೇಳಕೂಡದು. ಅಲ್ಲಿ ಆತ್ಮಶಬ್ದವು ನಿರ್ಗುಣನಾದ ವಿಷ್ಣುವಿನಲ್ಲಿ ಮುಖ್ಯವು. ಜೀವರಲ್ಲಿ ಅಮುಖ್ಯವೆಂದು ಹೇಳಲಿಲ್ಲ. ಆತ್ಮಶಬ್ದವು ಚೇತನಪರವು, ಅನಾತ್ಮಶಬ್ದವು ಅಚೇತನಪರವು ಎಂದೂ ಆಗಬಹುದು. (ಬಿ) ಮತ್ತು ಹಿಂದೆ ಹೇಳಿದ ಶ್ರುತಿಯಲ್ಲಿದ್ದ ಆತ್ಮ ಅನಾತ್ಮ ಶಬ್ದಗಳಿಗೆ ಪ್ರಸಿದ್ಧ ಚೇತನಾಚೇತನಪರತ್ವವನ್ನು ಇಟ್ಟುಕೊಂಡರೆ ಪ್ರಸಿದ್ಧಾರ್ಥವನ್ನು ಬಿಡದೆ ಇದ್ದುದರಿಂದಲೂ ರೂಪಶಬ್ದಕ್ಕೆ ಅನೇಕಾರ್ಥವನ್ನು ಕಲ್ಪಿಸದೆ ಇದ್ದುದರಿಂದಲೂ ಶ್ರುತಿಗೆ ನ್ಯಾಯವಾದ ಅರ್ಥವನ್ನೇ ಹೇಳಿದಂತೆ ಆಗುವುದು. (ಸಿ) ಜೀವನಿಗೆ ನಿರ್ದೋಷತ್ವಾದಿಗಳು ಕೂಡುವುದಿಲ್ಲವೆಂದಲ್ಲ. ದುಃಖಾದಿ ದೋಷಗಳು ಜೀವನಲ್ಲಿ ಔಪಾಧಿಕ ವಾದುದರಿಂದ ಜೀವನಿಗೂ ಸ್ವಭಾವತಃ ನಿರ್ದೋಷತ್ವವು ಕೂಡುವುದರಿಂದ ನಿರ್ದೋಷತ್ವೋಕ್ತಿಯು ಸ್ವಭಾವವಿಷಯಕವೆಂದು ಕೂಡಬಹುದು ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠನ ಮಾಡುತ್ತಾರೆ—

**ಸೂತ್ರ ॥ ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ ॥ ೭ ॥**

**ಸೂತ್ರಾರ್ಥ ॥** ಆತ್ಮನಲ್ಲಿ ಆಸಕ್ತನಾದವನಿಗೆ ಅಂದರೆ ಆತ್ಮಜ್ಞಾನಿಗೆ ಯಸ್ಮಾನುವಿತ್ತಃ ಎನ್ನುವ ಶ್ರುತಿಯಲ್ಲಿ ಮೋಕ್ಷವನ್ನು ಪ್ರತಿಪಾದಿಸಿದುದರಿಂದ (ಗೌಣನು ಆತ್ಮಶಬ್ದದಿಂದ ಹೇಳಲ್ಪಟ್ಟವನಲ್ಲ. ಗೌಣವಿಷಯಕ ಜ್ಞಾನದಿಂದ ಗುಣನಿವೃತ್ತಿ ರೂಪವಾದ ಮುಕ್ತಿಯು ಕೊಡಲಾರದು.) (ಅಂತೂ ಮೋಕ್ಷವನ್ನು ಕೊಡತಕ್ಕ ಜ್ಞಾನದಲ್ಲಿ ವಿಷಯನಾದ ಆತ್ಮನು ಜೀವನಾಗುವುದಿಲ್ಲ)

**ಪೀಠಿಕೆ॥** ಆತ್ಮಜ್ಞಾನದಿಂದ ಮೋಕ್ಷವನ್ನು ಹೇಳಿದ್ದಾಗ್ಯೂ ಮೋಕ್ಷವನ್ನು ಕೊಡುವ ಜ್ಞಾನದಲ್ಲಿ ತೋರುವ ಆತ್ಮನು ತ್ರಿಗುಣಬದ್ಧನಾದ ಜೀವನು ಏಕೆ ಆಗುವುದಿಲ್ಲವೆಂದರೆ—

**ಭಾಷ್ಯ ॥ ನ ಹಿ ಗೌಣಾತ್ಮನಿಷ್ಠಸ್ಯ ಮೋಕ್ಷಃ ॥ ೧೮ ॥**

**ಭಾಷ್ಯಾರ್ಥ ॥** ತ್ರಿಗುಣಬದ್ಧನಾದ ಜೀವನನ್ನು ತಿಳಿದವನಿಗೆ ಗುಣಬಂಧನಿವೃತ್ತಿ ರೂಪವಾದ ಮೋಕ್ಷವು ಯುಕ್ತವಲ್ಲ.

**ಪೀಠಿಕೆ ॥** ಆತ್ಮಜ್ಞಾನಿಗೆ ಮೋಕ್ಷೋಪದೇಶವು ಯಾವುದೆಂದರೆ—

**ಭಾಷ್ಯ ॥ ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾಽಸ್ಮಿನ್ಸಂದೋಘೇ(ಹೇ)ಗಹನೇ ಪ್ರವಿಷ್ಟಃ। ಸ ವಿಶ್ವಕೃತ್ಸ ಹಿ ಸರ್ವಸ್ಯ ಕರ್ತಾ ತಸ್ಯ ಲೋಕಃ ಸ ಉ ಲೋಕ ಏವ** (ಬೃ.ಉ.೬.೪.೧೩.) **ಇತ್ಯಾತ್ಮನಿಷ್ಠಸ್ಯ ಮೋಕ್ಷ ಉಪದಿಶ್ಯತೇ ॥ ೧೯ ॥**

**ಭಾಷ್ಯಾರ್ಥ ॥** ಹಿ= ಯಾವ ಕಾರಣದಿಂದ, ಸಃ=ಆ ವಿಷ್ಣುವು, ಸರ್ವಸ್ಯ ಕರ್ತಾ=ಎಲ್ಲಾ ಜಗತ್ತನ್ನು ಸೃಷ್ಟಿಮಾಡಿದವನೋ, ಆದುದರಿಂದಲೇ ವಿಶ್ವಕೃತ್=ವಾಯುದೇವರನ್ನು ಸೃಷ್ಟಿಮಾಡಿದವನು. ಪ್ರತಿಬುದ್ಧಃ=ಸ್ವತಃ ಸರ್ವಜ್ಞನು. ಅಸ್ಮಿನ್ ಸಂದೋಹೇ=ಸಂದುಹ್ಯತೇ ಪುರುಷಾರ್ಥಃ ಅನೇನ ಅಥವಾ ಕಾರ್ಯ ಕಾರಣಗಳ ಸಮುದಾಯರೂಪವಾದುದರಿಂದ ಅಥವಾ ಭೂತಸಮುದಾಯರೂಪ ವಾದುದರಿಂದ ಎಂದಾಗಲೀ, ಸಂದೋಹನಾಮಕವಾದ ಮಧ್ಯದೇಹದಲ್ಲಿರತಕ್ಕ, ಗಹನೇ= ಗಂಭೀರವಾದ ಹೃದಯಗುಹಾಸ್ಥಾನದಲ್ಲಿ ಪ್ರವಿಷ್ಟಃ=ಪ್ರವಿಷ್ಟನಾಗಿರುವನೋ, ಸಃ=ಅಂತಹ, ಆತ್ಮಾ= ವಿಷ್ಣುವು, ಯಸ್ಯ= ಯಾವ ಉಪಾಸಕನಿಂದ, ಅನುವಿತ್ತಃ=ಚೆನ್ನಾಗಿ ತಿಳಿಯಲ್ಪಡುತ್ತಾನೋ, ತಸ್ಯ=ಅಂತಹ ಅಧಿಕಾರಿಗೆ, ಉ= ಪ್ರಸಿದ್ಧವಾದ, ತಸ್ಯ=ವಿಷ್ಣುವಿನ, ಯಾವ ವೈಕುಂಠಾದಿ ಲೋಕವೋ, ಸ ಏವ ಲೋಕಃ=ಅದೇ ಸ್ಥಾನವಾಗುತ್ತದೆ. (ತತ್ವಪ್ರದೀಪದಲ್ಲಿ) ಸಃ=ಆ ವಿಷ್ಣುಜ್ಞಾನಿಯು, ವಿಶ್ವಕೃತ್=ಕೃತಕೃತ್ಯನು. (ಏಕೆಂದರೆ) ಸ ಹಿ ಸರ್ವಸ್ಯ ಕರ್ತಾ=ಪರಮಾತ್ಮನು ಪ್ರಸನ್ನನಾಗಿ ಜ್ಞಾನಿಯ ಸರ್ವಕಾರ್ಯವನ್ನು ಮಾಡುತ್ತಾನೆ. (ಎಂದರ್ಥ ಹೇಳಿಯದೆ.) ಈ ಪ್ರಕಾರ ಆತ್ಮಜ್ಞಾನಿಗೆ ಮುಕ್ತಿಯು ಉಪದೇಶಿಸಲ್ಪಡು ತ್ತದೋ (ಆದಕಾರಣ ಮೋಕ್ಷಜನಕಜ್ಞಾನಕ್ಕೆ ವಿಷಯನಾಗಿ ಹೇಳಲ್ಪಟ್ಟ ಆತ್ಮನು ಗೌಣನಲ್ಲ)

**ವಿಶೇಷಾಂಶ ॥** ಅಂತೂ ಈ ಶ್ರುತಿಯಲ್ಲಿ ಹೇಳಲ್ಪಟ್ಟ ಆತ್ಮನು ನಿರ್ಗುಣನು. ಮೋಕ್ಷಜನಕ ಜ್ಞಾನವಿಷಯನಾಗಿ ಇರುವುದರಿಂದ ಎನ್ನುವ ಅನುಮಾನವು ಹೇಳಿದಂತೆ ಆಯಿತು.

**ಪೀಠಿಕೆ ॥** ಆತ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವು. ಜೀವರಲ್ಲಿ ಮುಖ್ಯವಲ್ಲ ಎನ್ನುವಲ್ಲಿ ತನ್ನಿಷ್ಠಸ್ಯ ಇತ್ಯಾದಿಗಳಿಂದ ಹೇಳಲ್ಪಟ್ಟ ಅನುಮಾನಪ್ರಮಾಣವು ಮಾತ್ರವಲ್ಲ. ಮತ್ತೆ ಸೂತ್ರಕಾರರಿಗೆ

ಅಭಿಪ್ರೇತಗಳಾದ ಸ್ಪಷ್ಟಶ್ರುತಿಸ್ಮೃತಿಗಳು ಇವೆ ಎನ್ನುವ ಅಭಿಪ್ರಾಯದಿಂದ ಶ್ರುತಿಯನ್ನು ಸ್ಮೃತಿಗಳನ್ನು ಹೇಳುತ್ತಾರೆ.

**ಭಾಷ್ಯ ॥ ಅಯ ★ಮಾತ್ಮಾ ಬ್ರಹ್ಮ** (ಮಾ.ಉ.೧.೨.ಬೃ.ಉ.೨.೫.೧೯) ॥ ೨೦ ॥

ಭಾಷ್ಯಾರ್ಥ ॥ ರಮಾಬ್ರಹ್ಮಾದಿಗಳಲ್ಲಿ ಆದಾನಾದಿಗಳನ್ನು ಮಾಡಿಕೊಂಡು ಇರತಕ್ಕ ಆತ್ಮನು ವಿಷ್ಣುವೇ.

**ಭಾಷ್ಯ ॥ ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ** (ಭಾ.ಸ್ಕ.೪) ॥ ೨೧ ॥

**ಭಾಷ್ಯಾರ್ಥ ॥ ವದಂತಿ ತತ್ತತ್ತ್ವವಿದಸ್ತತ್ತ್ವಂ ಯಜ್ಜ್ಞಾನಮದ್ವಯಂ। ಬ್ರಹ್ಮೇತಿ.** ಅದ್ವಯಂ=ಸಮಾಧಿಕ ವಿಲ್ಲದಿರುವ, ಜ್ಞಾನಂ=ಜ್ಞಾನಸ್ವರೂಪವಾದ, ಯತ್ತತ್ತ್ವಂ = ಯಾವ ತತ್ತ್ವವನ್ನು, ತತ್ತ್ವವಿದಃ=ಜ್ಞಾನಿಗಳು, ವದಂತಿ=ಹೇಳುತ್ತಾರೋ, ತತ್=ಅದನ್ನು) ದೇಶ ಕಾಲಾದಿಗಳಲ್ಲಿ ಪೂರ್ಣವಾದುದರಿಂದ ಬ್ರಹ್ಮನೆಂದೂ ಸರ್ವಾಂತರ್ಯಾಮಿಯಾದುದರಿಂದ ಪರಮಾತ್ಮನೆಂದೂ, ಐಶ್ವರ್ಯಾದಿಗುಣಗಳು ಇದ್ದುದರಿಂದ ಭಗವಾನ್ ಎಂದೂ ಹೇಳಲ್ಪಡುತ್ತಾನೆ.

**ಭಾಷ್ಯ ॥ ದತ್ತಂ ದೂರ್ವಾಸಸಂ ಸೋಮಮಾತ್ಮೇಶಬ್ರಹ್ಮಸಂಭವಾನ್** (ಭಾ. ಸ್ಕಂಧ.೪ ) ॥ ೨೨ ॥

ಭಾಷ್ಯಾರ್ಥ ॥ **(ಅನಸೂಯಾ ತಥೈವಾತ್ರೇಃ ಜಜ್ಞೇಃ ಪುತ್ರಾನಕಲ್ಮಷಾನ್ ।** ದತ್ತಂ. ಅತ್ರಿಯ ಹೆಂಡತಿಯು, ಅತ್ರಿ ಋಷಿಗಳಿಂದ) ವಿಷ್ಣು ರುದ್ರ ಚತುರ್ಮುಖನಿಂದ ಕೂಡಿರುವ ಪಾಪರಹಿತರಾದ ದತ್ತ ದೂರ್ವಾಸ ಸೋಮ ಎನ್ನುವ ಮಕ್ಕಳನ್ನು ಹೆತ್ತಳು.

ವಿಶೇಷಾಂಶ ॥ ಇಲ್ಲಿ ದತ್ತ ದುರ್ವಾಸರು ಇಬ್ಬರು ಸಾಕ್ಷಾತ್ ವಿಷ್ಣು ಶಿವರೇ. ಚಂದ್ರನು ಬ್ರಹ್ಮನ ಆವೇಶದಿಂದ ಕೂಡಿ ಹುಟ್ಟಿದವನು. ಇಲ್ಲಿ ಸಂಭವಶಬ್ದವು ಮುಖ್ಯವು. ದತ್ತ ದುರ್ವಾಸರಲ್ಲಿ ಛತ್ರಿನ್ಯಾಯದಿಂದ ಅಮುಖ್ಯವು.

**ಭಾಷ್ಯ ॥ ಚೇತನಸ್ತು ದ್ವಿಧಾ ಪ್ರೋಕ್ತೋ ಜೀವ ಆತ್ಮೇತಿ ಚ ಪ್ರಭೋ। ಜೀವಾ ಬ್ರಹ್ಮಾದಯಃ ಪ್ರೋಕ್ತಾ ಆತ್ಮೈಕಸ್ತು ಜನಾರ್ದನಃ ॥ ಇತರೇಷ್ವಾತ್ಮ ಶಬ್ದಸ್ತು ಸೋಪಚಾರಃ ಪ್ರಯುಜ್ಯತೇ (ರೋಽಭಿಧೀಯತೇ)। ತಸ್ಮಾತ್ಮನೋ ನಿರ್ಗುಣಸ್ಯ ಜ್ಞಾನಾನ್ಮೋಕ್ಷ ಉದಾಹೃತಃ ॥ ಸಗುಣಾಸ್ತ್ವಪರೇ ಪ್ರೋಕ್ತಾಸ್ತ ಜ್ಞಾನಾನ್ನೈವ ಮುಚ್ಯತೇ। ಪರೋ ಹಿ ಪುರುಷೋ ವಿಷ್ಣುಸ್ತಸ್ಮಾನ್ಮೋಕ್ಷ ಸ್ತತಃ ಸ್ಮೃತಃ ॥ ಇತಿ ಪಾದ್ಮೇ** ॥ ೨೩ ॥

ಭಾಷ್ಯಾರ್ಥ ॥ ಎಲೋ ಪ್ರಭುವೇ ಚೇತನನಾದರೂ ಜೀವನು ಆತ್ಮನು ಎಂದು ಎರಡು ಪ್ರಕಾರ ಹೇಳಲ್ಪಡುತ್ತಾನೆ. ಅವರಲ್ಲಿ ಜೀವರು ಬ್ರಹ್ಮರುದ್ರಾದಿಗಳು ಎಂದು ಹೇಳಲ್ಪಡುತ್ತಾರೆ. ಆತ್ಮಶಬ್ದದಿಂದ ಮುಖ್ಯವಾಗಿ ವಾಚ್ಯನಾದವನಾದರೂ ವಿಷ್ಣುವು ಒಬ್ಬನೇ ಪ್ರಮಾಣಗಳಲ್ಲಿ ಹೇಳಲ್ಪಟ್ಟಿದ್ದಾನೆ. ಇತರರಾದ

★ ಸೋಽಯಂ ವಿಷ್ಣು ರಮಾಬ್ರಹ್ಮರುದ್ರಾನಂತಾದಿಗಃ ಸದಾ। ಆದಾನಾದನಕರ್ತೃತ್ವಾದಾತ್ಮಾ॥

ಬ್ರಹ್ಮಾದಿಗಳಲ್ಲಿ ಆತ್ಮ ಶಬ್ದವು ಪರಮಮುಖ್ಯವೃತ್ತಿಯಲ್ಲದ ಮುಖ್ಯವೃತ್ತಿಯಿಂದ ಯುಕ್ತವಾದುದು ಎಂದು (ಜ್ಞಾನಿಗಳಿಂದ) ಹೇಳಲ್ಪಡುತ್ತದೆ. (ಶ್ರೀಹರಿಗೇನೇ ಆತ್ಮತ್ವವು. ಇತರರಿಗೆ ಆತ್ಮತ್ವವು ಏಕೆ ಇಲ್ಲ ಎಂದರೆ) ನಿರ್ಗುಣನಾದ ಆ ಆತ್ಮನ ಜ್ಞಾನದಿಂದ ಮುಕ್ತಿಯಾಗುತ್ತದೆ (ಎನ್ನುವುದು **ಯಸ್ಮಾನುವಿತ್ತಃ** ಇತ್ಯಾದಿ ಶ್ರುತಿಗಳಲ್ಲಿ) ಹೇಳಲ್ಪಟ್ಟಿದ್ದಾನೋ (ಆದಕಾರಣ ಈ ಆತ್ಮನು ನಿರ್ಗುಣನಾದ ವಿಷ್ಣುವೇ. ಮತ್ತೊಬ್ಬನಲ್ಲ ಏಕೆಂದರೆ— ನಿರ್ಗುಣನಾದ ವಿಷ್ಣುವಿಗೇನೇ ಮೋಕ್ಷದಾತೃತ್ವವವು ಕೂಡುತ್ತದೆ. ಇತರರಿಗೆ ಕೂಡಲಾರದು.) (ಆತ್ಮಜ್ಞಾನದಿಂದ ಮೋಕ್ಷವನ್ನುಪದೇಶಿಸಿದಾಗ್ಯೂ ಇತರರಿಗೆ ಏಕೆ ಆತ್ಮತ್ವವಿಲ್ಲ ಇತರರಿಗೂ ಮೋಕ್ಷದಾತೃತ್ವವು ಕೂಡಬಹುದಷ್ಟೆ ಎಂಗರೆ) ವಿಷ್ಣುವಿನಿಂದ ಇತರರಾದ ಬ್ರಹ್ಮಾದಿಗಳು ಯಾವ ಕಾರಣದಿಂದ ಸತ್ವ ಮೊದಲಾದ ಗುಣಬದ್ಧರೆಂದೇ ಹೇಳಲ್ಪಟ್ಟಿದ್ದಾರೋ ಆದಕಾರಣ ಅವರ ಜ್ಞಾನದಿಂದ ಸರ್ವಥಾ ಮುಕ್ತನಾಗುವುದೇ ಇಲ್ಲ (ಗುಣಬದ್ಧನಾದ ಆತ್ಮನ ಜ್ಞಾನದಿಂದ ಗುಣಬಂಧ ನಿವೃತ್ತಿರೂಪವಾದ ಮುಕ್ತಿಯು ಕೂಡಲಾರದು) (ಹಾಗಾದರೆ ವಿಷ್ಣುವು ನಿರ್ಗುಣನಾದುದರಿಂದ ಮೋಕ್ಷವನ್ನು ಕೊಡುತ್ತಾನೆಂದು ಸಂಭಾವನೆಯಿರಲಿ, ನಿಶ್ಚಯವು ಹೇಗೆ ಎಂದರೆ) ಯಾವ ಕಾರಣದಿಂದ ವಿಷ್ಣುವು ಸ್ವತಂತ್ರನೋ ಅಥವಾ ಸರ್ವೋತ್ತಮನೋ ಸರ್ವಗುಣ ಪರಿಪೂರ್ಣನೋ ಆದಕಾರಣ ಮೋಕ್ಷವು ವಿಷ್ಣುವಿನಿಂದಲೇ ಆಗುವುದು ಎಂದು ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ ಎಂದು ಪಾದ್ಮಪುರಾಣದಲ್ಲಿದೆ.

**ವಿಶೇಷಾಂಶ ॥** (ಎ) **ಚೇತನಸ್ತು ದ್ವಿಧಾ ಪ್ರೋಕ್ತಃ ಜೀವಃ** ಎನ್ನುವ ಜೀವ ಶಬ್ದವು **ಜೀವೇಶಯೋರ್ಭಿದಾ ಚೈವ** ಇತ್ಯಾದಿಗಳಲ್ಲಿದ್ದಂತೆಯೇ ಅಸ್ವತಂತ್ರಚೇತನಪರವು. ಆದರಿಂದ ಲಕ್ಷ್ಮೀದೇವಿಗೂ ಸಂಗ್ರಹವಾಗುತ್ತದೆ. (ಬಿ) ಹಾಗಾದರೆ **ಜೀವಾಃ ಬ್ರಹ್ಮಾದಯಃ ಪ್ರೋಕ್ತಾಃ** ಎಂದು ಹೇಳಿದ್ದು ಹೇಗೆ ಕೂಡುತ್ತದೆಂದು ಹೇಳಕೂಡದು. **ಮಮ ಯೋನಿರ್ಮಹದ್ಬ್ರಹ್ಮ** ಎಂದು ಲಕ್ಷ್ಮೀದೇವಿಯಲ್ಲಿಯೂ ಬ್ರಹ್ಮಶಬ್ದವು ಇದೆ. (ಸಿ) ಅಥವಾ ಬದ್ಧತ್ವ ★ಮೋಚಕತ್ವಗಳೆರಡೂ ಇಲ್ಲದಿರುವುದರಿಂದ ಲಕ್ಷ್ಮೀದೇವಿಯನ್ನು ಇಲ್ಲಿ ಹೇಳಲಿಲ್ಲ.

**ಪೀಠಿಕೆ ॥** ಆತ್ಮಶಬ್ದಾದಿಗಳು ಇದ್ದುದರಿಂದ ಇಲ್ಲಿ ಹೇಳಿದ ಆತ್ಮಶಬ್ದವಾಚ್ಯನು ಗೌಣ ನಾಗುವುದಿಲ್ಲವೆಂದು ಯುಕ್ತ್ಯಂತರದಿಂದ ಸೂತ್ರಕಾರರು ಹೇಳುತ್ತಾರೆ.

## ಸೂತ್ರ ॥ ಓಂ ಹೇಯತ್ವಾವಚನಾಚ್ಚ ಓಂ ॥ ೮ ॥

**ಸೂತ್ರಾರ್ಥ ॥** ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಎನ್ನುವುದು ಮಾತ್ರ ಹೇತುವಲ್ಲ, ಮತ್ತೆ **ತಮೇವೈಕಂ ಜಾನಥ** ಎಂದು ಆತ್ಮನಿಗೆ ಹೇಯತ್ವವನ್ನು ಹೇಳಲಿಲ್ಲ, ಮತ್ತೆ **ಜಾನಥ** ಎಂದು ಅಹೇಯತ್ವವನ್ನೇ ಹೇಳಿದ್ದಾರೆ ಮತ್ತು ಜೀವರಿಗೆ **ಅನ್ಯಾ ವಾಚೋ ವಿಮುಂಚಥ** ಎಂದು ಮುಮುಕ್ಷುಗಳಿಂದ ಹೇಯತ್ವವನ್ನು ಹೇಳಿದುದರಿಂದಲೂ ಗೌಣನಲ್ಲ.

★ ನಾಮಾದಯಸ್ತು ಬದ್ಧಾಸ್ತ್ಸ್ನೋಚಕತ್ವಾತ್ತರೋಽಪಿ ಚ । ಉಭಯೋರಪ್ಯ ಭಾವೇನ ಯಥಾಽವ್ಯಕ್ತಂ ನ ತೂದಿತಃ ।

**ಭಾಷ್ಯ ॥ ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ । ಅಮೃತಸ್ಯೈಷ ಸೇತುಃ (ಮು.ಉ.೨.೨.೫.) ಇತ್ಯನ್ಯೇಷಾಂ ಹೇಯತ್ವವಚನಾದಸ್ಯಾಹೇಯತ್ವ-ವಚನಾನ್ನ ಗೌಣ ಆತ್ಮಾ ॥ ೨೪ ॥**

**ಭಾಷ್ಯಾರ್ಥ ॥** ಎಲೋ ಋಷಿಗಳೇ ಆ ವಿಷ್ಣುವನ್ನೇ ಪ್ರಧಾನನ್ನಾಗಿ (ಮೋಕ್ಷ ರೂಪ ಮುಖ್ಯ ಫಲ ಉದ್ದೇಶವಾಗಿ) ತಿಳಿಯಿರಿ. ಜೀವಾದಿವಿಷಯಕಗಳಾದ ಮಾತುಗಳನ್ನು ಬಿಟ್ಟುಬಿಡಿರಿ. (ಅಂದರೆ ವಿಷ್ಣುವಿನಿಂದ ಇತರರಾದವರನ್ನು ಪ್ರಧಾನರನ್ನಾಗಿ ತಿಳಿಯಬೇಡಿರಿ.) ಮುಕ್ತವರ್ಗಕ್ಕೆ ವಿಷ್ಣುವು ಮುಖ್ಯಾಶ್ರಯನು, ಇಂತಹ ಮುಂಡಕಶ್ರುತಿಯಲ್ಲಿ ಜೀವರಿಗೆ ಹೇಯತ್ವವನ್ನು ಹೇಳಿದುದರಿಂದಲೂ ವಿಷ್ಣುವಿಗೆ ಅಹೇಯತ್ವವನ್ನು ಹೇಳಿದುದರಿಂದಲೂ ಗೌಣನು ಆತ್ಮಶಬ್ದದಿಂದ ಮುಖ್ಯವಾಚ್ಯನಾಗುವುದಿಲ್ಲ (ನಿರ್ಗುಣನಾದ ವಿಷ್ಣುವೇ ಮುಖ್ಯವಾಚ್ಯನು.)

**ವಿಶೇಷಾಂಶ ॥** (ಎ) ವಿಷ್ಣುವಿಗೆ ಸರ್ವರಿಂದಲೂ ವಿಶೇಷವಾಗಿ ವೈಲಕ್ಷಣ್ಯವನ್ನು ತೋರಿಸುವುದಕ್ಕಾಗಿ ಜಾನಥ ಆತ್ಮಾನಂ ಎಂದು ಅವಿಶೇಷವಾಗಿ (ಜಾನಥಾತ್ಮಾನಂ ಎಂದು ಸಂಧಿಮಾಡದೆ) ಹೇಳಿರುವರು. (ಬಿ) ಆತ್ಮಶಬ್ದವಿದ್ದುದರಿಂದಲೇ ಈಕ್ಷತಿಶ್ರುತಿಯಲ್ಲಿ ಹೇಳಲ್ಪಟ್ಟವನು ನಿರ್ಗುಣನೂ ವಾಚ್ಯನೂ ಎಂದು ಸಿದ್ಧಿಸುತ್ತದೆ.

**ಪೀಠಿಕೆ ॥** ಯುಕ್ತ್ಯಂತರದಿಂದಲೂ ನಿರ್ಗುಣನಾದ ವಿಷ್ಣುವಿಗೆ ವಾಚ್ಯತ್ವವನ್ನುಪಪಾದಿಸತಕ್ಕ ಸೂತ್ರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಸ್ವಾಪ್ಯಯಾತ್ ಓಂ ॥ ೯ ॥

**ಸೂತ್ರಾರ್ಥ ॥** ಆತ್ಮನ್ಯೇವಾತ್ಮಾನಂ ವಿಲಾಪಯತಿ ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟದ್ದರಿಂದ ನಿರ್ಗುಣನಾದ ಬ್ರಹ್ಮನು ಅವಾಚ್ಯನಲ್ಲ, ವಾಚ್ಯನೇ. ಈ ಶ್ರುತಿಯಲ್ಲಿ ಹೇಳಲ್ಪಟ್ಟವನು ಏಕೆ ನಿರ್ಗುಣನಾಗಬೇಕೆಂದರೆ ತನಗೆ ತನ್ನಲ್ಲಿಯೇ ಲಯವನ್ನು ಹೇಳಿದುದರಿಂದ.

**ಭಾಷ್ಯ ॥ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥ ೨೫ ॥**(ಬೃ.ಉ. ೫.೧.೧.)

**ಭಾಷ್ಯಾರ್ಥ ॥** ಮೂಲರೂಪವೂ ಪೂರ್ಣವು. ಅವತಾರರೂಪವೂ ಪೂರ್ಣವು. ಪೂರ್ಣವಾದ ಅವತಾರರೂಪವು (ಸೃಷ್ಟಿಕಾಲದಲ್ಲಿ) ಪೂರ್ಣವಾದ ಮೂಲರೂಪದಿಸೆಯಿಂದ ಹೊರಗೆ ಬರುತ್ತದೆ. ಅಥವಾ (ತತ್ತ್ವಪ್ರದೀಪಿಕಾ ರೀತಿಯಾಗಿ) ಸಂಖ್ಯಾಮಾತ್ರದಿಂದಲೇ ಬೇರೆಯಾಗಿ ತೋರುತ್ತದೆ. ಅಥವಾ ಒಂದೇ ರೂಪವು ವಿಶೇಷದಿಂದಲೇ ಬಹುಸಂಖ್ಯೆಯುಳ್ಳದ್ದಾಗುತ್ತದೆ. (ಪ್ರಲಯಕಾಲದಲ್ಲಿಯೂ) ಮೂಲರೂಪವು ಪೂರ್ಣವಾದ ತನ್ನ ಪೂರ್ಣವಾದ ಅವತಾರರೂಪವನ್ನು ಸ್ವೀಕಾರಮಾಡಿ ಐಕ್ಯವನ್ನು ಹೊಂದಿ ಪೂರ್ಣವಾಗಿಯೇ (ಅಂದರೆ ಬೇರೆಕಡೆಯಲ್ಲಿ ಲೀನವಾಗದೇನೇ) ತಾನೇ ಉಳಿಯುತ್ತದೆ.

**ಭಾಷ್ಯ ॥ ಸ ಆತ್ಮನ ಆತ್ಮಾನಮುದ್ಧೃತ್ಯಾತ್ಮನ್ಯೇವ ವಿಲಾಪ (ಯ) ಯತ್ಯಥಾತ್ಮೈವ ಭವತಿ ॥ ೨೬ ॥**

ಭಾಷ್ಯಾರ್ಥ ॥ ಆ ವಿಷ್ಣುವು ಮೂಲರೂಪದೇಶೆಯಿಂದ ಅವತಾರದಲ್ಲಿರತಕ್ಕ ತನ್ನ ಸ್ವರೂಪವನ್ನು (ಸೃಷ್ಟಿಕಾಲದಲ್ಲಿ) ಪ್ರತ್ಯೇಕ ವ್ಯಕ್ತೀಕರಿಸಿ (ಪ್ರಲಯಕಾಲದಲ್ಲಿ) ತನ್ನಲ್ಲಿಯೇ ಐಕ್ಯವನ್ನು ಹೊಂದಿಸುತ್ತಾನೆ. ಆ ಮೇಲೆ ವಿಷ್ಣುವು ಮೂಲರೂಪಿ ಯಾಗಿಯೇ ಉಳಿಯುತ್ತಾನೆ.

**ಭಾಷ್ಯ ॥ ಸ ದೇವೋ ಬಹುಧಾ ಭೂತ್ವಾ ನಿರ್ಗುಣಃ ಪುರುಷೋತ್ತಮಃ ಏಕೀಭೂಯ ಪುನಃ ಶೇತೇ ನಿರ್ದೋಷೋ ಹರಿರಾದಿಕೃತ್ ॥ ಇತಿ (ಇತ್ಯಾದಿ) (ಸ್ಕಾಂದಸ್ಮೃತಿಯು) ॥ ೨೭ ॥**

ಭಾಷ್ಯಾರ್ಥ ॥ ಕ್ರೀಡಾದಿಗುಣವಿಶಿಷ್ಟನೂ, ಸತ್ವಾದಿಗುಣರಹಿತನೂ, ಸತ್ವಾದಿಗುಣಕಾರ್ಯ ದೋಷರಹಿತನೂ, ಕ್ಷರ ಅಕ್ಷರ ಚೇತನದಿಂದ ಉತ್ತಮನೂ, ಜಗತ್ತಿಗೆ ಸೃಷ್ಟಿಕರ್ತನೂ ಅಥವಾ ಪ್ರಥಮದಲ್ಲಿಯೇ ಸೃಷ್ಟಿಕರ್ತನೂ ಆದ ಶ್ವೇತದ್ವೀಪದಲ್ಲಿರತಕ್ಕ ಶ್ರೀಹರಿಯು (ಆದಿಸೃಷ್ಟಿಯಲ್ಲಿ) ವರಾಹ ಮೊದಲಾದ ಬಹುರೂಪಗಳನ್ನು ತಾಳಿ ಆಮೇಲೆ (ಪ್ರಲಯಕಾಲದಲ್ಲಿ) ಅವುಗಳಿಗೆ ಮೂಲರೂಪ ದಿಂದ ಐಕ್ಯವನ್ನು ಹೊಂದಿಕೊಂಡು (ಶೇಷನಲ್ಲಿ) ಯೋಗನಿದ್ರೆಯನ್ನು ಮಾಡುತ್ತಾನೆ. ಹೀಗೆ (ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಪ್ರಯುಕ್ತವೂ ಬ್ರಹ್ಮನು ವಾಚ್ಯನೇ.)

ಪೀಠಿಕೆ ॥ ಈ ಶ್ರುತಿಯಲ್ಲಿ ಹೇಳಲ್ಪಟ್ಟವನಾದಾಗ್ಯೂ ನಿರ್ಗುಣನು ಏಕೆ ಆಗಬೇಕು. ಗೌಣನೇ ಏಕೆ ಆಗಲಾರದು ಎಂದರೆ—

**ಭಾಷ್ಯ ॥ ಸ್ವಸ್ಯೈವ ಸ್ವಸ್ಮಿನ್ನಪ್ಯಯವಚನಾತ್ ॥ ೨೮ ॥**

ಭಾಷ್ಯಾರ್ಥ ॥ (ಪೂರ್ಣಂ ಎನ್ನುವ ಶ್ರುತಿಯಲ್ಲಿ ಸ್ವಾಪ್ಯಯಪದೋಪಲಕ್ಷಿತ ಪೂರ್ಣತ್ವವನ್ನು ಹೇಳಿದುದರಿಂದಲೂ) ತನಗೆ ತನ್ನಲ್ಲಿಯೇ ಲಯವನ್ನು ಹೇಳಿದುದರಿಂದಲೂ (ಸಃ ಎನ್ನುವ ಸ್ಪಷ್ಟ ಶ್ರುತಿಯೂ ಸ್ಮೃತಿಯೂ) ತನಗೆ ತನ್ನಲ್ಲಿಯೇ ಏಕೀಭಾವರೂಪವಾದ ಲಯವನ್ನು ಹೇಳಿದುದರಿಂದಲೂ (ಆತ್ಮಶಬ್ದವಾಚ್ಯನು ನಿರ್ಗುಣನೇ. ಗೌಣನಲ್ಲ)

ವಿಶೇಷಾಂಶ ॥ (ಎ) ನಿರ್ಗುಣನಾದ ವಿಷ್ಣ್ವಾಖ್ಯಬ್ರಹ್ಮನು ಈಕ್ಷಣೀಯನಾದುದರಿಂದ ಮಾತ್ರ ವಾಚ್ಯನೆಂದಲ್ಲ. ಮತ್ತೆ ಶ್ರುತಿಯಲ್ಲಿ ಉಕ್ತನಾದ ಪ್ರಯುಕ್ತವೂ ವಾಚ್ಯನು. (ಬಿ) ಶ್ರುತಿಯಲ್ಲಿ ಉಕ್ತನಾದಾಗ್ಯೂ ನಿರ್ಗುಣನೇ ಏಕೆ ಆಗಬೇಕು. ಗೌಣನು ಏಕೆ ಆಗಬಾರದು ಎಂದರೆ— ಪೂರ್ಣತ್ವವನ್ನು ತನಗೆ ತನ್ನಲ್ಲಿಯೇ ಲಯವನ್ನು ಹೇಳಿಯದೆ. ಗೌಣನು ಅಪೂರ್ಣನಾದುದರಿಂದ ಇತರರಲ್ಲಿಯೇ ಲಯವಿದ್ದುದರಿಂದ ತನ್ನಲ್ಲಿ ತನಗೆ ಲಯವಿಲ್ಲ.

ಪೀಠಿಕೆ ॥ ಹಾಗಾದರೆ ತನ್ನಲ್ಲಿಯೇ ಲಯವುಳ್ಳವನು. ಅನ್ಯತ್ರ ಲೀನನಾಗದೆ ಇದ್ದವ ನಾದಾಗ್ಯೂ ಗೌಣನೇ ಆಗಬೇಕು. ನಿರ್ಗುಣನು ಮತ್ತೊಬ್ಬನಿದ್ದಾನೆಂದು ಹೇಳಕೂಡದು. ತನ್ನಲ್ಲಿಯೇ ಲಯವುಳ್ಳ ವನು. ಗೌಣನೆಂದಾದರೆ ಗೌಣನೂ ನಿರ್ಗುಣನೂ ಇಬ್ಬರೂ (೧) ಪ್ರಯಲಕಾಲದಲ್ಲಿ ಅನ್ಯತ್ರ

ಲಯರಹಿತರಾಗಿ ಇರುತ್ತಾರೋ (೨) ಅಥವಾ ಒಬ್ಬರಲ್ಲಿ ಒಬ್ಬರಿಗೆ ಲಯವಾಗುತ್ತದೋ, ೧ನೇ ಕಲ್ಪವು ಕೂಡಲಾರದು. ಏಕೆಂದರೆ— ಇದಂ ವಾ ಅಗ್ರೇ ನೈವ ಕಿಂಚನಾಸೀತ್ (ತೈ.ಬ್ರಾ.೨.೨.೯.೧.) ಇದು ಮೊದಲಾದ ಶ್ರುತಿವಿರೋಧವು ಬರುತ್ತದೆ. ಈ ಶ್ರುತಿಯಲ್ಲಿ ಪ್ರಲಯಕಾಲದಲ್ಲಿ ಎರಡನೇ ವಸ್ತುವನ್ನೇ ನಿಷೇಧಿಸಿಯದೆ. ೨ನೇ ಕಲ್ಪದಲ್ಲಿ ಗೌಣನಿಗೆ ನಿರ್ಗುಣ ನಲ್ಲಿ ಲಯವು ಕೂಡಲಾರದು. ಏಕೆಂದರೆ— ಗೌಣನು ತನ್ನಲ್ಲಿಯೇ ಲಯವುಳ್ಳವನೆಂದು ಅಂಗೀಕರಿಸಿದುದರಿಂದ ನಿರ್ಗುಣನಲ್ಲಿ ಲಯವೆಂದು ಹೇಳಕೂಡದು. ತಥಾ ಚ ನಿರ್ಗುಣನಿಗೆ ಸಗುಣನಲ್ಲಿ ಲಯವನ್ನು ಹೇಳಬೇಕಾಯಿತು. ಅದಾದರೂ ಕೂಡಲಾರದು ಎನ್ನುತ್ತಾರೆ—

**ಭಾಷ್ಯ ॥ ನ ಹಿ ಗೌಣಾತ್ಮನಿ ನಿರ್ದೋಷಸ್ಯ ಲಯಃ ॥ ೨೯ ॥**

ಭಾಷ್ಯಾರ್ಥ ॥ ಜೀವನಲ್ಲಿ ಸತ್ವಾದಿಗುಣಬಂಧರೂಪ ದೋಷರಹಿತನೂ ನಿರ್ಗುಣನೂ ಆದ ವಿಷ್ಣುವಿಗೆ ಲಯುವ ಕೂಡಲಾರದು. ಯತ್ಪ್ರಯಂತಿ ಇದು ಮೊದಲಾದ ಶ್ರುತಿ ವಿರೋಧವಿದ್ದ ಪ್ರಯುಕ್ತ (ಎನ್ನುವ ಹೇತುವು ಹಿ ಶಬ್ದದಿಂದ ಸೂಚಿತವಾಯಿತು.)

ವಿಶೇಷಾಂಶ ॥ ಆದುದರಿಂದ ನಿರ್ಗುಣನಿಗೆ ತನ್ನಲ್ಲಿಯೇ ಲಯವನ್ನು ಹೇಳಬೇಕು. ಆದುದರಿಂದ ಮತ್ತೊಬ್ಬರಲ್ಲಿ ಲಯವನ್ನು ಹೊಂದದೆ ಇದ್ದವನು ನಿರ್ಗುಣನೇ. ಶ್ರುತಿಯಲ್ಲಿ ಪ್ರತಿಪಾದಿತನಾದ ಪ್ರಯುಕ್ತ ಅವನಿಗೇನೇ ವಾಚ್ಯತ್ವವು ಸಿದ್ಧವಾಯಿತು.

ಪೀಠಿಕೆ ॥ ಹಾಗಾದರೆ ನಿರ್ಗುಣನಾದ ಬ್ರಹ್ಮನಿಗೆ ವಾಚ್ಯತ್ವವು ಕೂಡುವ ಪ್ರಯುಕ್ತ ಜಗತ್ಕಾರಣ ನಾಗಿ ಶಾಸ್ತ್ರಗಮ್ಯತ್ವವು ಬರಲಿ. ಆದರೂ ಆತನಿಗೆ ಸರ್ವಶಾಸ್ತ್ರಪ್ರತಿಪಾದ್ಯತ್ವವನ್ನು ನಿಶ್ಚಯಿಸಲು ಸಾಧ್ಯವಿಲ್ಲ. ಪ್ರಸಿದ್ಧ ಶಾಖೆಗಳಲ್ಲಿ ಉಪಕ್ರಮಾದಿಗಳಿಂದ ವಿಚಾರಮಾಡಿ ಸರ್ವಶಾಸ್ತ್ರಪ್ರತಿಪಾದ್ಯತ್ವವು ಕೂಡಿದರೂ ಅನಂತ ಅಪ್ರಸಿದ್ಧ ಶಾಖೆಗಳೂ ಇದ್ದ ಪ್ರಯುಕ್ತ ಅವುಗಳಲ್ಲಿ ಇತರರಿಗೆ ಜಗತ್ಕಾರಣತ್ವವನ್ನು ಹೇಳಿ ಶಾಸ್ತ್ರಗಮ್ಯತ್ವವು ಬರಬಹುದು. ಅಪ್ರಸಿದ್ಧ ಶಾಖೆಗಳು ಇಲ್ಲವೆಂದಲ್ಲ. ಅವುಗಳು ಅನಂತಗಳಾದ ಪ್ರಯುಕ್ತ ಇಷ್ಟೇ ಎಂದು ನಿಶ್ಚಯಿಸಲು ಸಾಧ್ಯವಿಲ್ಲವೆಂದರೆ—

**ಭಾಷ್ಯ ॥ ನ ಚ ಕಾಸುಚಿಚ್ಛಾಖಾಸ್ವನ್ಯಥೋಚ್ಯತೇ ॥ ೩೦ ॥**

ಭಾಷ್ಯಾರ್ಥ ॥ ಅಪ್ರಸಿದ್ಧ ಶಾಖೆಗಳಲ್ಲಿ (ನಿರ್ಗುಣನಿಂದ ಭಿನ್ನನಾದ ಸಗುಣನೂ) ಅನ್ಯಥಾ= ಅಕಾರಣತ್ವಾದಿಗಳಿಂದ ಬೇರೆ ರೀತಿಯಾಗಿ (ಅಂದರೆ ಜಗತ್ಕಾರಣನೆಂದೂ ಆತ್ಮಶಬ್ದಮುಖ್ಯವಾಚ್ಯ ನೆಂದೂ ಮೋಕ್ಷಜನಕ ಜ್ಞಾನವಿಷಯನೆಂದೂ) ಅಥವಾ (ನಿರ್ಗುಣನು) ಅನ್ಯಥಾ=ಜಗತ್ಕಾರಣನಲ್ಲ. ಆತ್ಮಶಬ್ದಮುಖ್ಯವಾಚ್ಯನಲ್ಲ. ಮೋಕ್ಷಜನಕ ಜ್ಞಾನವಿಷಯನಲ್ಲ. ಇತ್ಯಾದಿ ಪ್ರಕಾರ ಹೇಳಲ್ಪಡಲಿ ಎಂದು ಹೇಳಕೂಡದು.

ಪೀಠಿಕೆ ॥ ಏಕೆ ಕೂಡದು? ಎಂದರೆ—

**ಸೂತ್ರ ॥ ಓಂ ಗತಿಸಾಮಾನ್ಯಾತ್ ಓಂ ॥ ೧೦ ॥**

**ಸೂತ್ರಾರ್ಥ ॥** ಸರ್ವಶಾಖೆಗಳಲ್ಲಿ ಹುಟ್ಟತಕ್ಕ ಜ್ಞಾನವು ಸಮಾನವಾದುದರಿಂದ (ಅಂದರೆ ಒಂದೇ ವಿಧವಾಗಿದ್ದುದರಿಂದ) **ಸರ್ವೇ ವೇದಾ ಯುಕ್ತಯಃ** ಇತ್ಯಾದಿಗಳಲ್ಲಿ ವಿಷ್ಣ್ವಾಖ್ಯಬ್ರಹ್ಮನೇ ಜಗತ್ಕಾರಣನಾಗಿ ಸರ್ವಶಾಸ್ತ್ರಪ್ರತಿಪಾದ್ಯನು. ಯಾವ ಶಾಖೆಗಳಲ್ಲಿಯೂ ಬೇರೆ ರೀತಿಯಾಗಿ ಹೇಳಲ್ಪಡುವುದಿಲ್ಲ. ಅಥವಾ ಗತಿಸಾಮಾನ್ಯವನ್ನು ಅನುಮೇಯಿಸುವುದರಿಂದ ಅಂದರೆ ಸೂತ್ರಕಾರರಿಂದ ನಿರ್ಣೀತವಾದ ಶಾಖಾದೃಷ್ಟಾಂತದಿಂದ ಶಾಖಾತ್ವರೂಪಹೇತುವಿನಿಂದ ಶಾಖಾಂತರದಲ್ಲಿಯೂ ಕೂಡ ಇದೇ ರೀತಿಯಾಗಿಯೇ ಪ್ರತಿಪಾದ್ಯನಾಗಿದ್ದಾನೆಂದು ಅನುಮೇಯಿಸಲು ಶಕ್ಯವಾಗುವುದು. ಚಂದ್ರಿಕಾದಲ್ಲಿಯಾದರೂ, ಉತ್ತಮಶಬ್ದ ಮೋಕ್ಷೋಪದೇಶಹೇಯತ್ವವನ್ನು ಹೇಳದಿರುವಿಕೆ, ಸ್ವಾಪ್ಯಯ ಇವುಗಳು ಶಾಖಾಂತರದಲ್ಲಿ ಗೌಣಾತ್ಮನಲ್ಲಿ ಅಂದರೆ ಜೀವನಲ್ಲಿಯೂ ಇರಬಹುದು ಎಂದರೆ— ಜ್ಞಾನವು ಎಲ್ಲಾ ಕಡೆಗಳಲ್ಲಿಯೂ ಒಂದೇ ರೀತಿಯಾಗಿ ಇರತಕ್ಕುದು. ಆದಕಾರಣ ಶಾಖಾಂತರದಲ್ಲಿಯೂ ಹಾಗೆ ಇರಲಾರದು ಎಂದರ್ಥವನ್ನು ಹೇಳಿಯದೆ.

**ಪೀಠಿಕೆ ॥** ಸೂತ್ರಸೂಚಿತವಾದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಸರ್ವೇ ವೇದಾ ಯುಕ್ತಯಃ ಸುಪ್ರಮಾಣಾ ಬ್ರಾಹ್ಮಂ ಜ್ಞಾನಂ ಪರಮಂ ತ್ವೇಕಮೇವ । ಪ್ರಕಾಶಯಂತೇ ನ ವಿರೋಧಃ ಕುತುಶ್ಚಿದ್ವೇದೇಷು ಸರ್ವೇಷು ತಥೇSತಿಹಾಸೇ। ಇತಿ ಪೈಂಗಿಶ್ರುತೇರ್ಗತೇರ್ಜ್ಞಾನಸ್ಯ ಸಾಮ್ಯಮೇವ ॥ ೩೧ ॥**

**ಭಾಷ್ಯಾರ್ಥ ॥** ಎಲ್ಲಾ ವೇದಗಳೂ, ಚೆನ್ನಾಗಿ ಮೂಲಭೂತರಾದ ಪ್ರಮಾಣಾಂತರಗಳುಳ್ಳ ಯುಕ್ತಿಗಳೂ, ಇತಿಹಾಸಗಳು ಬ್ರಹ್ಮೈಕವಿಷಯವಾದ ಒಂದೇ ವಿಧವಾದ ಉತ್ತಮವಾದ ಜ್ಞಾನವನ್ನು ಹುಟ್ಟಿಸುತ್ತವೆ. (ಅನೇಕ ವಿಧಜ್ಞಾನವನ್ನು ಹುಟ್ಟಿಸುವುದಿಲ್ಲ) (ಅಂದರೆ ಹೇಳಿದ್ದಕ್ಕೆ ವಿಪರೀತವಾಗಿ ತಿಳಿಸುವುದಿಲ್ಲ) ಆದಕಾರಣ ಸರ್ವವೇದಗಳಲ್ಲಿಯೂ, ಯುಕ್ತಿಗಳಲ್ಲಿಯೂ, ಇತಿಹಾಸಗಳಲ್ಲಿಯೂ ಯಾವುದೊಂದೂ ವಿಷಯಕೃತವಾದ ಅಥವಾ ಪ್ರಕಾರಕೃತವಾದ ವಿರೋಧವಿಲ್ಲ. ಬ್ರಹ್ಮಸ್ವರೂಪವನ್ನು ಒಂದೇ ರೀತಿಯಾಗಿಯೇ (ತಿಳಿಸಿಕೊಡುತ್ತವೆ). ಹೀಗೆ ಪೈಂಗಿಶ್ರುತಿಯಿದ್ದುದರಿಂದ ಜ್ಞಾನಕ್ಕೆ ಸಾಮ್ಯವೇ. (ನ ಹ್ಯೇಕತ್ರ ಜ್ಞಾನಾನಂದಾದಿಕಮುಕ್ತ್ವಾನ್ಯತ್ರಾ ಜ್ಞಾನಾದಿರೂಪತ್ವಂ ಬ್ರಹ್ಮಣ ಉಚ್ಯತೇ। ಕೆಲವು ಶಾಖೆಗಳಲ್ಲಿ ಬ್ರಹ್ಮನಿಗೆ ಜ್ಞಾನಾನಂದಾದಿಸ್ವರೂಪವನ್ನು ಹೇಳಿ ಬೇರೆ ಶಾಖೆಗಳಲ್ಲಿ ಅಜ್ಞಾನಾದಿಸ್ವರೂಪವು ಹೇಳಲ್ಪಡುತ್ತದೆ ಎನ್ನುವುದು ಕೂಡಲಾರದು ಎಂದು ತತ್ತ್ವಪ್ರದೀಪಿಕೆಯಲ್ಲಿ ಹೇಳಿದುದರಿಂದ) (ಹೇಳಲ್ಪಡುತ್ತದೆ.) (ವೈಷಮ್ಯವು ಹೇಳಲ್ಪಡುವುದಿಲ್ಲ)

**ಪೀಠಿಕೆ ॥** ಹೇತ್ವಂತರದಿಂದಲೂ ನಿರ್ಗುಣಬ್ರಹ್ಮನು ವಾಚ್ಯನೆನ್ನಿಸುತ್ತಾರೆ—

## ಸೂತ್ರ ॥ ಓಂ ಶ್ರುತತ್ವಾಚ್ಚ ಓಂ ॥ ೧೧ ॥

**ಸೂತ್ರಾರ್ಥ ॥** ಕೇವಲೋ ನಿರ್ಗುಣಶ್ಚ ಎಂದು ಸತ್ವಾದಿಗುಣರಹಿತನು ಶ್ರುತಿಪ್ರತಿಪಾದ್ಯನಾದುದರಿಂದ ನಿರ್ಗುಣಶಬ್ದಪ್ರತಿಪಾದ್ಯವಾದುದು ಸಗುಣವಾಗಲಾರದು. ಶಬ್ದದಿಂದ ಅವಾಚ್ಯವಾದುದು ಶ್ರುತವಾಗಲಿಕ್ಕಿಲ್ಲ. ಆದಕಾರಣ ಬ್ರಹ್ಮನು ವಾಚ್ಯನೇ.

**ಪೀಠಿಕೆ ॥** ಸೂತ್ರೋಪಾತ್ತ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತ ರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥** (ಶ್ವೇ.೬.೧೧.) ಇತಿ ॥ ೩೨ ॥

**ಭಾಷ್ಯಾರ್ಥ ॥** ಪ್ರಧಾನನು ಅಥವಾ ತನ್ನಲ್ಲಿ ಭೇದವಿಲ್ಲದಿರುವವನು, ಕ್ರೀಡಾದಿ ಗುಣವಿಶಿಷ್ಟನು, ಸಮಸ್ತಪ್ರಾಣಿಗಳಲ್ಲಿ ಗುಪ್ತನಾಗಿರುವವನು, (ಭೂತಗಳಲ್ಲಿ ಇರತಕ್ಕವನು ಮಾತ್ರವಲ್ಲ ಮತ್ತೆ) ದೇಶ ಕಾಲ ಗುಣಗಳಿಂದ ಸರ್ವವನ್ನು ವ್ಯಾಪಸಿಕೊಂಡು ಇರುವವನು, (ಸಮಸ್ತ ಪ್ರಾಣಿಗಳಲ್ಲಿ ಇರುವವನು ಮಾತ್ರವಲ್ಲ ಮತ್ತೆ) ಸರ್ವಪ್ರಾಣಿಗಳ ಒಳಗೆ ಇದ್ದು ಚೆನ್ನಾಗಿ ಅವರನ್ನು ನಿಯಮಿಸುವವನು ಅಥವಾ ಚೆನ್ನಾಗಿ ತಿಳಿಯುವವನು, ಅಥವಾ ಆದಾನಾದಿಗಳನ್ನು ಮಾಡುವವನು, ಕರ್ಮಗಳಿಗೆ ಅಧಿಪತಿಯು ಅಥವಾ (ಕರ್ಮೋಪರಿ ಅಸ್ಮಾಕ್ಷಾಣೇಂದ್ರಿಯಾಣಿ ವರ್ತಂತೇ ಇತ್ಯಧ್ಯಕ್ಷಃ ಎಂದು ತತ್ತ್ವಪ್ರದೀಪದಲ್ಲಿ ಹೇಳಿರುದರಿಂದ) ಕರ್ಮವಿಷಯಕವಾದ ಇಂದ್ರಿಯವುಳ್ಳವನು, ಅಂದರೆ ಎಲ್ಲರ ಕರ್ಮವನ್ನು ತಿಳಿಯಲರ್ಹನು. ಸರ್ವ ಪ್ರಾಣಿಗಳಿಗೆ ಆಶ್ರಯನು. ಸರ್ವವನ್ನು ಸಾಕ್ಷಾತ್ತಾಗಿ ನೋಡತಕ್ಕವನು, (ಈಕ್ಷಣವೂ ಪ್ರಾಕೃತವಲ್ಲ ಮತ್ತೆ ಚೈತನ್ಯಸ್ವರೂಪವೇ ಎನ್ನುತ್ತಾರೆ.) ಚೇತಾ = ಜ್ಞಾನ ರೂಪನು, ಜಡಾಮಿಶ್ರನು, ಅಥವಾ ಸಮನು ಅಧಿಕನೂ ಇಲ್ಲದಿರುವವನು, ಸತ್ತ್ವಾದಿಗುಣಬಂಧ ವಿಧುರನು. ಅಥವಾ ಪ್ರಾಕೃತ ಗುಣರಹಿತನು, ಈ ಪ್ರಕಾರ (ಶ್ರುತಿಯಲ್ಲಿ ನಿರ್ಗುಣನು ಶ್ರುತನಾದ ಪ್ರಯುಕ್ತ)

**ಪೀಠಿಕೆ ॥** ಶ್ರುತನಾದಾಗ್ಯೂ ಅವಾಚ್ಯನು ಏಕೆ ಆಗಲಾರನು ಎಂದಾಶಂಕಿಸಿದರೆ—

**ಭಾಷ್ಯ ॥ ನ ಹ್ಯಶಬ್ದಃ ಶ್ರೂಯತೇ** ॥ ೩೩ ॥

**ಭಾಷ್ಯಾರ್ಥ ॥** ಯಾವ ಕಾರಣದಿಂದ ಅವಾಚ್ಯವಾದ ಪದಾರ್ಥವು ಶ್ರುತಿಪದದಿಂದ ಹೇಳಲ್ಪಡುವುದಿಲ್ಲವೋ (ಆದಕಾರಣ ಹೇತುವು ಅಪ್ರಯೋಜಕವಾಗುವುದಿಲ್ಲ. ವಿರೋಧವಿದ್ದ ಪ್ರಯುಕ್ತ)

**ಪೀಠಿಕೆ ॥** ಬ್ರಹ್ಮನು ಅವಾಚ್ಯನಾದಾಗ್ಯೂ ಲಕ್ಷಣಯಾ ಶ್ರುತಿಪ್ರತಿಪಾದ್ಯನು ಏಕೆ ಆಗಲಾರನು ಎಂದರೆ—

**ಭಾಷ್ಯ ॥ ನ ಚಾಪ್ರಸಿದ್ಧಂ ಲಕ್ಷ್ಯಂ** ॥ ೩೪ ॥

**ಭಾಷ್ಯಾರ್ಥ ॥** (ಯಾವ ಕಾರಣದಿಂದ ಸರ್ವಪದದಿಂದಲೂ ಅವಾಚ್ಯನಾದ ವಸ್ತುವಿಗೆ ಲಕ್ಷ್ಯತ್ವವು) ಅಪ್ರಸಿದ್ಧವಾಗಿಯದೋ, ಆದಕಾರಣ ಅವಾಚ್ಯನಾದ ಬ್ರಹ್ಮನಿಗೆ ಅಪ್ರಸಿದ್ಧವಾದ ಲಕ್ಷ್ಯತ್ವವನ್ನು ಕಲ್ಪಿಸಕೂಡದು.

**ಪೀಠಿಕೆ ॥** ಹಾಗಾದರೆ ವೇದವು ಗಂಗಾಪದದಿಂದ ಅವಾಚ್ಯವಾದುದಾಗ್ಯೂ ಗಂಗಾಪದದಿಂದ ಲಕ್ಷ್ಯವೆಂದು ಪ್ರಸಿದ್ಧವಾಗಿದೆ. ಹಾಗೆಯೇ ಬ್ರಹ್ಮನು ವೇದದಿಂದ ಅವಾಚ್ಯನಾದಾಗ್ಯೂ ಆತನಿಗೆ ವೇದಲಕ್ಷ್ಯತ್ವವನ್ನು ಏಕೆ ಹೇಳಬಾರದು ಎಂದರೆ—

ಭಾಷ್ಯ ॥ ಸರ್ವಶಬ್ದಾವಾಚ್ಯಸ್ಯ ಲಕ್ಷಣಾಽಯುಕ್ತೇಃ ॥ ೩೫ ॥

ಭಾಷ್ಯಾರ್ಥ ॥ ಸರ್ವಶಬ್ದಗಳಿಂದ ಅವಾಚ್ಯನಾದ ಬ್ರಹ್ಮನಿಗೆ ವೇದಪದ ಲಕ್ಷ್ಯತ್ವವು ಅಯುಕ್ತವು. ಅಂದರೆ— ವಿಪ್ರತಿಪನ್ನಂ ನ ಲಕ್ಷ್ಯಂ ಕೇನಾಪಿ ಪದೇನಾವಾಚ್ಯತ್ವಾ ತ್ ವ್ಯತಿರೇಕೇಣ ತೀರವತ್ । ಎನ್ನುವ ಯುಕ್ತಿಯಿಂದ ವಿರುದ್ಧವಾಗಿದೆ.

ವಿಶೇಷಾಂಶ ॥ (ಎ) ನಾವು ಕೇವಲ ಅವಾಚ್ಯತ್ವದಿಂದ ಲಕ್ಷ್ಯತ್ವಾಭಾವವನ್ನು ಸಾಧಿಸುವುದಿಲ್ಲ. ತೀರಾದಿಗಳಲ್ಲಿ ವ್ಯಭಿಚಾರವನ್ನು ಹೇಗೆ ಶಂಕಿಸುವುದು? ಮತ್ತೆ ಸರ್ವಶಬ್ದಗಳಿಂದಲೂ ಅವಾಚ್ಯತ್ವವಿದ್ದ ಪ್ರಯುಕ್ತ ಲಕ್ಷ್ಯತ್ವವಿಲ್ಲವೆಂದು ಹೇಳಿದ್ದು. ತೀರವು ತೀರ ಮೊದಲಾದ ಶಬ್ದಗಳಿಂದ ವಾಚ್ಯವಾದ ಪ್ರಯುಕ್ತ ಸರ್ವಶಬ್ದಗಳಿಂದ ಅವಾಚ್ಯವಲ್ಲ. ಬ್ರಹ್ಮನಾದರೂ ಹಾಗಲ್ಲ. ಸರ್ವಶಬ್ದಾವಾಚ್ಯನೆಂದೇ ಪರರು ಅಂಗೀಕರಿಸಿರುವರು. ಆದಕಾರಣ ಈ ದೃಷ್ಟಾಂತವು ಸಾಧಕವಲ್ಲ. ಯುಕ್ತಿವಿರೋಧವನ್ನು ಪರಿಹರಿಸಲು ಸಾಧ್ಯವಿಲ್ಲ. (ಬಿ) ತೀರಾದಿಗಳು ಗಂಗಾ ಪದಗಳಿಂದ ವಾಚ್ಯಗಳಾಗದೆ ಇದ್ದರೂ ತೀರ ಇತ್ಯಾದಿ ಪದಾಂತರಗಳಿಂದ ವಾಚ್ಯಗಳಾದ ಪ್ರಯುಕ್ತ ಲಕ್ಷ್ಯತ್ವವು ಬರಬಹುದು. ಬ್ರಹ್ಮನಾದರೂ ಸರ್ವಶಬ್ದಗಳಿಂದಲೂ ಅವಾಚ್ಯನಾದ ಪ್ರಯುಕ್ತ ಆತನಿಗೆ ಲಕ್ಷ್ಯತ್ವವು ಬರಲಾರದು. (ಸಿ) ಸರ್ವ ಶಬ್ದಗಳಿಂದ ಅವಾಚ್ಯನಾದವನಿಗೂ ಲಕ್ಷಣಾ ಏಕೆ ಇರಲಾರದು ಎಂದರೆ **ವಿಪ್ರತಿಪನ್ನಂ ನ ಲಕ್ಷ್ಯಂ ಕೇನಾಪಿ ಪದೇನ ಅವಾಚ್ಯತ್ವಾತ್ ವೈಧರ್ಮ್ಯೇಣ ತೀರವತ್** ಎನ್ನುವ ಯುಕ್ತಿ ವಿರುದ್ಧವಾಗಿದೆ. (ಡಿ) ಇಲ್ಲಿ ಲಕ್ಷಣಾಕ್ಕೆ ಯೋಗ್ಯವಾದುದೇ ಲಕ್ಷ್ಯ ಪದಾರ್ಥವಾದರೆ ಸರ್ವಪದಾರ್ಥಗಳೂ ಯತ್ಕಿಂಚಿತ್ಪದಲಕ್ಷಣಾಕ್ಕೆ ಯೋಗ್ಯವೇ ಆಗಿರುವ ಪ್ರಯುಕ್ತ ಲಕ್ಷ್ಯತ್ವಾಭಾವರೂಪವಾದ ಸಾಧ್ಯವು ಎಲ್ಲಿಯೂ ಇಲ್ಲದಿರುವುದರಿಂದ ಸಪಕ್ಷವೇ ಇಲ್ಲ.

## ಮಾಯಾವಾದರೀತ್ಯಾ

ವಿಚಾರ ॥ (೧) ಪರರು **ಸದೇವ ಸೌಮ್ಯೇದಮಗ್ರ ಆಸೀತ್, ಏಕಮೇವಾದ್ವಿತೀಯಂ** ಇದು ಮೊದಲಾದ ಕಾರಣವಾಕ್ಯವು ಸಾಂಖ್ಯಾದಿಸ್ಮೃತಿಸಿದ್ಧವಾದ ಅಚೇತನವಾದ ಜಡಪ್ರಕೃತಿರೂಪವಾದ ಕಾರಣವನ್ನು ಅನುವಾದಮಾಡುತ್ತದೆ ಎಂದು ಪೂರ್ವ ಪಕ್ಷಮಾಡಿಕೊಂಡು ತದೈಕ್ಷತ ಎಂದು ಜಗತ್ಕಾರಣಕ್ಕೆ ಚೇತನಧರ್ಮವಾದ ಈಕ್ಷಣವನ್ನು ಹೇಳಿದುದರಿಂದ ಚೇತನಕಾರಣತ್ವವನ್ನು ಪ್ರತಿಪಾದಿಸುತ್ತದೆ! ಎಂದು ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. ಈ ವಾಕ್ಯವು ವಿಶಿಷ್ಟಬ್ರಹ್ಮನಿಗೆ (೧) ಪರಿಣಾಮಿತ್ವರೂಪಕಾರಣವನ್ನು ಹೇಳುತ್ತದೆ ಎಂದು ಸಿದ್ಧಾಂತವೋ? ಅಥವಾ (೨) ಕರ್ತೃತ್ವವನ್ನು ಹೇಳುತ್ತದೆ ಎಂದು ಸಿದ್ಧಾಂತವೋ? ಅಥವಾ (೩) ಶುದ್ಧ ಬ್ರಹ್ಮನಿಗೆ ಭ್ರಮಾಧಿಷ್ಠಾನತ್ವವನ್ನು ಬೋಧಿಸುತ್ತದೆ ಎಂದು ಸಿದ್ಧಾಂತವೋ? ಇವುಗಳಲ್ಲಿ ೧, ೨ನೇ ಪಕ್ಷಗಳು ಕೂಡುವುದಿಲ್ಲ. ವಿಶಿಷ್ಟನಲ್ಲಿ ಸದೇವ ಇತ್ಯಾದಿ ವಾಕ್ಯಗಳಲ್ಲಿ ಹೇಳುವ ಸತ್ವ ಅದ್ವಿತೀಯತ್ವ ಮೊದಲಾದವುಗಳು ಕೂಡುವುದಿಲ್ಲ. ಮತ್ತು ಅಖಂಡ (ಶುದ್ಧ) ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಜ್ಞಾನ ಮಾಡಿರುವುದರಿಂದ ಇಲ್ಲಿಯೂ ಅಖಂಡಬ್ರಹ್ಮನನ್ನೇ ಹೇಳಬೇಕಿತ್ತು. ಮತ್ತು ೨, ೩ನೇ ಪಕ್ಷಗಳು ಅಸಂಗತಗಳೂ ಆಗಿವೆ. ಏಕೆಂದರೆ— ಪ್ರಧಾನವು ಪರಿಣಾಮಿಯೆಂದು ಪೂರ್ವ ಪಕ್ಷ ಬಂದರೆ ಬ್ರಹ್ಮನು ಕರ್ತನು ಅಥವಾ ಭ್ರಮಾಧಿಷ್ಠಾನನು

ಎಂಬುವ ಸಿದ್ಧಾಂತ ವೂ ಯುಕ್ತವಲ್ಲ. ಇತ್ಯಾದಿ ಪ್ರಕಾರ ಚಂದ್ರಿಕಾದಲ್ಲಿ ಮಾಯಾವಾದಿಗಳ ಮತವನ್ನು ಖಂಡಿಸಿರುವರು.

(೨) ಯಾದವಪ್ರಕಾಶೀಯದಲ್ಲಿ **ಸ್ವಾಪ್ಯಯಾತ್** ಎನ್ನುವುದಕ್ಕೆ **ಸತಾ ಸೌಮ್ಯ ತದಾ ಸಂಪನ್ನೋಭವತಿ** ಎನ್ನುವ ವಾಕ್ಯವು ವಿಷಯವು. **ಗತಿಸಾಮಾನ್ಯಾತ್** ಎನ್ನುವದಕ್ಕೆ **ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹೇ** ಎನ್ನುವ ವಾಕ್ಯವು ವಿಷಯವು ಎಂದು ಹೇಳಿರುವರು. ಅದು ಅಯುಕ್ತವು. ವಾಕ್ಯಭೇದದಿಂದ ಸೂತ್ರಕ್ಕೆ ಭೇದ ಹೇಳುವುದಾದರೆ ಎಲ್ಲಾ ಕಡೆಗಳಲ್ಲಿಯೂ ಹಾಗೆಯೇ ಹೇಳಬೇಕಾಗುವದು. ಆದಕಾರಣ ಅವರ ಮತವೂ ಅಯುಕ್ತವು.

## ರಾಮಾನುಜೀಯರೀತ್ಯಾ

**ವಿಚಾರ॥** (೧) **ಹೇಯತ್ವಾವಚನಾಚ್ಚ** ಎನ್ನುವ ಸೂತ್ರದ ಮೇಲೆ **ಪ್ರತಿಜ್ಞಾವಿರೋಧಾತ್** ಎನ್ನುವುದು ಅಧಿಕ ಸೂತ್ರವಿದೆ ಎನ್ನುತ್ತಾರೆ. (೨) ಈ ಅಧಿಕರಣವು ಪ್ರಧಾನ ಮೊದಲಾದ ಜಡಕ್ಕೆ ಹೇತುತ್ವ ನಿರಾಸಕವು ಎಂದು ರಾಮಾನುಜಾಚಾರ್ಯರು ಹೇಳುವರು. ಇದು ಅಯುಕ್ತವು. ಹೇಗೆಂದರೆ— ಸಮನ್ವಯಾಧ್ಯಾಯದಲ್ಲಿ ಸಮನ್ವಯಸೂತ್ರದಲ್ಲಿ ಹೇಳಿದ ಲಕ್ಷಣಾಸಂಭವವನ್ನು ನಿರಾಕರಿಸತಕ್ಕ ಪ್ರಥಮಾಪಾದದಲ್ಲಿ ಅತಿವ್ಯಾಪ್ತಿನಿರಾಸಕವು ಅಸಂಗತವು. ಸಮನ್ವಯವನ್ನು ಪ್ರತಿಪಾದಿಸುವುದಾದರೆ, **ಸ ಈಕ್ಷತೇಃ** ಎಂದು ನಿರ್ದೇಶವು ಬರಬೇಕಾಗುವುದು. (೩) ಮತ್ತು ಈ ಅಧಿಕರಣವು ಪ್ರಧಾನಕ್ಕೆ ಕಾರಣತ್ವವನ್ನಾಗಲೀ ಉಪಾದಾನತ್ವವನ್ನಾಗಲೀ ನಿರಾಕರಿಸುವುಕ್ಕೋಸ್ಕರ ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ— ಅವರ ಮತದಲ್ಲಿ ಕಾರಣತ್ವ ಉಪಾದಾನತ್ವಗಳು ಪ್ರಧಾನದಲ್ಲಿಯೂ ಇವೆ. ಅವುಗಳನ್ನು ಪ್ರಧಾನದಲ್ಲಿ ಒಪ್ಪಿದ್ದಾರೆಂದು ಹೇಗೆ ತಿಳಿಯುತ್ತದೆ? ತದಧೀನತ್ವಾತ್ ಎನ್ನುವ ಸೂತ್ರದಲ್ಲಿ ರಾಮಾನುಜಾಚಾರ್ಯರೇ **ನ ವಯಮವ್ಯಕ್ತಂ ತತ್ಪರಿಣಾಮವಿಶೇಷಾಂ ಶ್ಚ ಸ್ವರೂಪೇಣ ನಾಭ್ಯುಪಗಚ್ಛಾಮಃ। ಅಪಿತು ಪರಮಪುರುಷಶರೀರತಯಾ ತದಾತ್ಮಕತ್ವವಿರಹೇಣ** ನಾವು ಪ್ರಧಾನವನ್ನು ಅದರ ಪರಿಣಾಮ ವಿಶೇಷಗಳನ್ನು ಸ್ವರೂಪತಃ ಅಂಗೀಕರಿಸುವುದಿಲ್ಲವೆಂದಲ್ಲ ಮತ್ತೆ ಪರಮಪುರುಷನಿಗೆ ಶರೀರವಾಗಿ ತನ್ನಿಯಮ್ಯತ್ವವಿಲ್ಲದೆ ಸ್ವಾತಂತ್ರ್ಯವಾಗಿ ಸಾಂಖ್ಯನಂತೆ ಅಂಗೀಕರಿಸುವುದಿಲ್ಲ ಎಂದು ಹೇಳಿರುವರು. (೪) ಪ್ರಧಾನವು ಪರಮಪುರುಷನಿಗೆ ಶರೀರವಾಗಿ ಕಾರಣವಾದಾಗ್ಯೂ ಕೇವಲ ಪ್ರಧಾನವು ಕಾರಣವಾಗುವುದಿಲ್ಲವೆಂದರೆ— ಹೇಗೆ ಕೇವಲ ಪ್ರಧಾನವು ಅಕಾರಣವೋ ಹಾಗೆಯೇ ಶುದ್ಧಬ್ರಹ್ಮನೂ ಕಾರಣನಲ್ಲ. ವಿಶಿಷ್ಟನೇ ಕಾರಣನು. ಶುದ್ಧನು ನಿರ್ಧರ್ಮಕನಾದುದರಿಂದ ಕಾರಣನಲ್ಲ. ಇದು ಮೊದಲಾದ ರೀತಿಯಿಂದ ಚಂದ್ರಿಕಾಗ್ರಂಥದಲ್ಲಿ ರಾಮಾನುಜಾಚಾರ್ಯರ ಮತವನ್ನು ನಿರಾಕರಿಸಿರುವರು.

## ಅಧಿಕರಣ ಸಾರಾಂಶ

ಬ್ರಹ್ಮನಲ್ಲಿ ಸಮನ್ವಯವೇ ಯುಕ್ತವಲ್ಲ. ಏಕೆಂದರೆ— (೧) **ಯತೋ ವಾಚೋ ನಿವರ್ತಂತೇ** ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನಿಗೆ ವಾಚ್ಯತ್ವವನ್ನು ನಿಷೇಧಿಸಿಯದೆ. ಆದಕಾರಣ ಶಾಸ್ತ್ರಮುಖ್ಯಾರ್ಥತ್ವವಿಲ್ಲವೆಂದರೆ **ಪುರುಷಮೀಕ್ಷತೇ** ಇತ್ಯಾದಿ ಶ್ರುತಿಗಳಲ್ಲಿ ಈಕ್ಷಣೀಯತ್ವವನ್ನು ಹೇಳಿದುದರಿಂದ

ವಾಚ್ಯತ್ವವನ್ನು ಅವಶ್ಯವಾಗಿ ಹೇಳಲೇಬೇಕು. ಬ್ರಹ್ಮನನ್ನು ಉಪನಿಷತ್ತುಗಳಿಂದಲೇ ತಿಳಿಯಬೇಕಾದುದರಿಂದ ವಚನಭಿನ್ನವಾದ ಪ್ರತ್ಯಕ್ಷಾದಿಗಳಿಂದ ಆತನ ಜ್ಞಾನವು ಬರಲಾರದು. (೨) ಗೌಣನಾದ ಜೀವನು ವಾಚ್ಯನೆಂದು ಹೇಳಕೂಡದು. ಆತ್ಮಶಬ್ದ ಮೋಕ್ಷೋಪದೇಶ ಅಹೇಯತ್ವವಚನಗಳು ಇದ್ದಪ್ರಯುಕ್ತವೂ ಗೌಣನಾದ ಜೀವನು ಆತ್ಮಶಬ್ದವಾಚ್ಯನಲ್ಲ (೩) ಮತ್ತು ತನಗೆ ತನ್ನಲ್ಲಿಯೇ ಲಯವನ್ನು ಹೇಳಿದುದರಿಂದಲೂ ಪೂರ್ಣತ್ವವನ್ನು ಹೇಳಿದುದರಿಂದಲೂ **ಏಕೋ ದೇವಃ** ಎನ್ನುವ ಶ್ರುತಿಯಲ್ಲಿ ನಿರ್ಗುಣನೇ ಶ್ರುತನಾದ ಪ್ರಯುಕ್ತವೂ ಸರ್ವಥಾ ಅವಾಚ್ಯನಲ್ಲ (೪) **ಸರ್ವೇ ವೇದಾ ಯತ್ಪದಮಾಮನಂತಿ, ಅಥ ಕಸ್ಮಾದುಚ್ಯತೇ, ಬ್ರಹ್ಮೇತಿ, ತತ್ತತ್ಕಮಿತ್ಯಾಚಕ್ಷತೇ, ಯಮಿಂದ್ರಮಾಹುರ್ವರುಣಂ ಯಮಾಹುಃ ಇತ್ಯಾಚಕ್ಷತೇ, ಏಕಮೇವ ಸಂತಂ ತಸ್ಮಾದುಚ್ಯತೇ, ಪರಂ ಬ್ರಹ್ಮ** ಇತ್ಯಾದಿ ಶ್ರುತಿಗಳೂ ಮತ್ತು **ವಚಸಾಂ ವಾಚ್ಯಮುತ್ತಮಂ, ಪರಮಾತ್ಮೇತಿ ಚಾಪ್ಯುಕ್ತಃ ದೇಹೇಽಸ್ಮಿನ್ ಪುರುಷಃ ಪರಃ** ಇದು ಮೊದಲಾದ ಸ್ಮೃತಿಗಳೂ ಪ್ರಬಲವಾದ ಅನುಭವವೂ ಬ್ರಹ್ಮನಿಗೆ ವಾಚ್ಯತ್ವವನ್ನೇ ಹೇಳುತ್ತವೆ. ಬ್ರಹ್ಮನು ವಾಚ್ಯನಾದುದರಿಂದ ಸರ್ವಜಗತ್ತಿಗೂ ಕಾರಣನೆಂದು ಸರ್ವಶಾಸ್ತ್ರ ಪ್ರತಿಪಾದ್ಯನೆನ್ನುವುದು ಯುಕ್ತವೇ. ಆದಕಾರಣ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ. ಅಂತೂ ಆ ಲಕ್ಷಣಗಳಿಂದ ಕೂಡಿದ ಬ್ರಹ್ಮ ನೇ ವಿಷ್ಣುವಾಗಿರುವುದರಿಂದ ಆತನ ಜಿಜ್ಞಾಸೆಯು ಯುಕ್ತವೇ ಎಂದು ಸಿದ್ಧವಾಯಿತು.

**ಈಕ್ಷತ್ಯಧಿಕರಣವು ಸಮಾಪ್ತವಾಯಿತು.**

## ೬ ಆನಂದಮಯಾಧಿಕರಣವು

**ಪೀಠಿಕೆ ॥** ಅಧ್ಯಾಯಪಾದಗಳಿಗೆ ಉಪೋದ್ಘಾತರೂಪವಾಗಿರುವುದರಿಂದ ಅಧ್ಯಾಯಪೀಠ ಅನ್ನಿಸಿಕೊಳ್ಳುವ ಈ ಐದು ಅಧಿಕರಣಗಳಲ್ಲಿ ಬ್ರಹ್ಮಸ್ವರೂಪವನ್ನು ಸಂಪೂರ್ಣ ನಿರೂಪಿಸಿದುದರಿಂದ ಅಧ್ಯಾಯಾತ್ಮಕ ಶೇಷಗ್ರಂಥವು ಏತಕ್ಕೆ ಎಂದರೆ—

**ಭಾಷ್ಯ ॥ ತಮೇವ ಸಮನ್ವಯಂ ಪ್ರಕಟಯತ್ಯಾನಂದಮಯೋಽಭ್ಯಾಸಾದಿತ್ಯಾದಿನಾ ಸಮಸ್ತೇನಾಧ್ಯಾಯೇನ ಪ್ರಾಯೇಣ ॥ ೧ ॥**

**ಭಾಷ್ಯಾರ್ಥ ॥** (ಅಧ್ಯಾಯಾಖ್ಯವಾದ ಶೇಷಗ್ರಂಥಕ್ಕೆ ಹಿಂದೆ ಹೇಳಿದ ಸಮನ್ವಯವನ್ನು ವಿಸ್ತರಿಸುವುದು ಬಿಟ್ಟು ಬೇರೆ ಪ್ರಯೋಜನವಿಲ್ಲದಿದ್ದರೂ) **ತತ್ತು ಸಮನ್ವಯಾತ್** ಎನ್ನುವುದರಿಂದ ಹೇತುವಾಗಿ ಸಾಮಾನ್ಯವಾಗಿ ಉಪನ್ಯಾಸಮಾಡಿದ ಉಪಕ್ರಮಾದಿಲಿಂಗಗಳಿಂದ ಜ್ಞಾಪ್ಯವಾದ ಶಕ್ತಿತಾತ್ಪರ್ಯಲಕ್ಷಣಸಂಬಂಧರೂಪವಾದ ಸಮನ್ವಯವನ್ನು ಅಂದರೆ ಶಕ್ತಿವೃತ್ತಿಯಿಂದ ಸರ್ವಶಾಸ್ತ್ರೀಯ ಶಬ್ದಗಳಿಗೆ ಭಗವತ್ಪರತ್ವವನ್ನು **ಆನಂದಮಯೋಽಭ್ಯಾಸಾತ್** ಇದು ಮೊದಲುಗೊಂಡು ಸಂಪೂರ್ಣ ಪ್ರಥಮಾ ಧ್ಯಾಯದಿಂದ ಪ್ರಾಯಶಃ (ಸೂತ್ರಕಾರರು ಪ್ರತಿವಾಕ್ಯವನ್ನು ಎತ್ತಿಹೇಳಿ ಅದಕ್ಕೆ ಬೇಕಾದ ಹೇತೂಪನ್ಯಾಸಾದಿಗಳನ್ನು ಮಾಡಿ) ವಿಸ್ತರಿಸುತ್ತಾರೆ.

**ವಿಶೇಷಾಂಶ ॥** (ಎ) ಪ್ರಥಮೇನ ಎಂದು ಹೇಳದೆ **ಆನಂದಮಯೋಽಭ್ಯಾಸಾತ್** ಎಂದು ಹೇಳಿದುದರಿಂದ ಈ ಪ್ರಥಮಾಧ್ಯಾಯದ ೬ನೇ ಅಧಿಕರಣವನ್ನು ಆರಂಭಿಸಿಯೇ ಅಧ್ಯಾಯಾರಂಭ

ಎಂಬುವ ಸಿದ್ಧಾಂತ ವೂ ಯುಕ್ತವಲ್ಲ. ಇತ್ಯಾದಿ ಪ್ರಕಾರ ಚಂದ್ರಿಕಾದಲ್ಲಿ ಮಾಯಾವಾದಿಗಳ ಮತವನ್ನು ಖಂಡಿಸಿರುವರು.

(೨) ಯಾದವಪ್ರಕಾಶೀಯದಲ್ಲಿ **ಸ್ವಾಪ್ಯಯಾತ್** ಎನ್ನುವುದಕ್ಕೆ **ಸತಾ ಸೌಮ್ಯ ತದಾ ಸಂಪನ್ನೋಭವತಿ** ಎನ್ನುವ ವಾಕ್ಯವು ವಿಷಯವು. **ಗತಿಸಾಮಾನ್ಯಾತ್** ಎನ್ನುವದಕ್ಕೆ **ಸತಿ ಸಂಪದ್ಯ ನ ವಿದುಃ ಸತಿ ಸಂಪಧ್ಯಾಮಹೇ** ಎನ್ನುವ ವಾಕ್ಯವು ವಿಷಯವು ಎಂದು ಹೇಳಿರುವರು. ಅದು ಅಯುಕ್ತವು. ವಾಕ್ಯಭೇದದಿಂದ ಸೂತ್ರಕ್ಕೆ ಭೇದ ಹೇಳುವುದಾದರೆ ಎಲ್ಲಾ ಕಡೆಗಳಲ್ಲಿಯೂ ಹಾಗೆಯೇ ಹೇಳಬೇಕಾಗುವದು. ಆದಕಾರಣ ಅವರ ಮತವೂ ಅಯುಕ್ತವು.

## ರಾಮಾನುಜೀಯರೀತ್ಯಾ

**ವಿಚಾರ ॥** (೧) **ಹೇಯತ್ವಾವಚನಾಚ್ಚ** ಎನ್ನುವ ಸೂತ್ರದ ಮೇಲೆ **ಪ್ರತಿಜ್ಞಾವಿರೋಧಾತ್** ಎನ್ನುವುದು ಅಧಿಕ ಸೂತ್ರವಿದೆ ಎನ್ನುತ್ತಾರೆ. (೨) ಈ ಅಧಿಕರಣವು ಪ್ರಧಾನ ಮೊದಲಾದ ಜಡಕ್ಕೆ ಹೇತುತ್ವ ನಿರಾಸಕವು ಎಂದು ರಾಮಾನುಜಾಚಾರ್ಯರು ಹೇಳುವರು. ಇದು ಅಯುಕ್ತವು. ಹೇಗೆಂದರೆ— ಸಮನ್ವಯಾಧ್ಯಾಯದಲ್ಲಿ ಸಮನ್ವಯಸೂತ್ರದಲ್ಲಿ ಹೇಳಿದ ಲಕ್ಷಣಾಸಂಭವವನ್ನು ನಿರಾಕರಿಸತಕ್ಕ ಪ್ರಥಮಾಪಾದದಲ್ಲಿ ಅತಿವ್ಯಾಪ್ತಿನಿರಾಸಕವು ಅಸಂಗತವು. ಸಮನ್ವಯವನ್ನು ಪ್ರತಿಪಾದಿಸುವುದಾದರೆ, **ಸ ಈಕ್ಷತೇಃ** ಎಂದು ನಿರ್ದೇಶವು ಬರಬೇಕಾಗುವುದು. (೩) ಮತ್ತು ಈ ಅಧಿಕರಣವು ಪ್ರಧಾನಕ್ಕೆ ಕಾರಣತ್ವವನ್ನಾಗಲೀ ಉಪಾದಾನತ್ವವನ್ನಾಗಲೀ ನಿರಾಕರಿಸುವುಕ್ಕೋಸ್ಕರ ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ— ಅವರ ಮತದಲ್ಲಿ ಕಾರಣತ್ವ ಉಪಾದಾನತ್ವಗಳು ಪ್ರಧಾನದಲ್ಲಿಯೂ ಇವೆ. ಅವುಗಳನ್ನು ಪ್ರಧಾನದಲ್ಲಿ ಒಪ್ಪಿದ್ದಾರೆಂದು ಹೇಗೆ ತಿಳಿಯುತ್ತದೆ? ತದಧೀನತ್ವಾತ್ ಎನ್ನುವ ಸೂತ್ರದಲ್ಲಿ ರಾಮಾನುಜಾಚಾರ್ಯರೇ **ನ ವಯಮವ್ಯಕ್ತಂ ತತ್ಪರಿಣಾಮವಿಶೇಷಾಂ ಶ್ಚ ಸ್ವರೂಪೇಣ ನಾಭ್ಯುಪಗಚ್ಛಾಮಃ। ಅಪಿತು ಪರಮಪುರುಷಶರೀರತಯಾ ತದಾತ್ಮಕತ್ವವಿರಹೇಣ** ನಾವು ಪ್ರಧಾನವನ್ನು ಅದರ ಪರಿಣಾಮ ವಿಶೇಷಗಳನ್ನು ಸ್ವರೂಪತಃ ಅಂಗೀಕರಿಸುವುದಿಲ್ಲವೆಂದಲ್ಲ ಮತ್ತೆ ಪರಮಪುರುಷನಿಗೆ ಶರೀರವಾಗಿ ತನ್ನಿಯಮ್ಯತ್ವವಿಲ್ಲದೆ ಸ್ವಾತಂತ್ರ್ಯವಾಗಿ ಸಾಂಖ್ಯನಂತೆ ಅಂಗೀಕರಿಸುವುದಿಲ್ಲ ಎಂದು ಹೇಳಿರುವರು. (೪) ಪ್ರಧಾನವು ಪರಮಪುರುಷನಿಗೆ ಶರೀರವಾಗಿ ಕಾರಣವಾದಾಗ್ಯೂ ಕೇವಲ ಪ್ರಧಾನವು ಕಾರಣವಾಗುವುದಿಲ್ಲವೆಂದರೆ— ಹೇಗೆ ಕೇವಲ ಪ್ರಧಾನವು ಅಕಾರಣವೋ ಹಾಗೆಯೇ ಶುದ್ಧಬ್ರಹ್ಮನೂ ಕಾರಣನಲ್ಲ. ವಿಶಿಷ್ಟನೇ ಕಾರಣನು. ಶುದ್ಧನು ನಿರ್ಧರ್ಮಕನಾದುದರಿಂದ ಕಾರಣನಲ್ಲ. ಇದು ಮೊದಲಾದ ರೀತಿಯಿಂದ ಚಂದ್ರಿಕಾಗ್ರಂಥದಲ್ಲಿ ರಾಮಾನುಜಾಚಾರ್ಯರ ಮತವನ್ನು ನಿರಾಕರಿಸಿರುವರು.

## ಅಧಿಕರಣ ಸಾರಾಂಶ

ಬ್ರಹ್ಮನಲ್ಲಿ ಸಮನ್ವಯವೇ ಯುಕ್ತವಲ್ಲ. ಏಕೆಂದರೆ— (೧) **ಯತೋ ವಾಚೋ ನಿವರ್ತಂತೇ** ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನಿಗೆ ವಾಚ್ಯತ್ವವನ್ನು ನಿಷೇಧಿಸಿಯದೆ. ಆದಕಾರಣ ಶಾಸ್ತ್ರಮುಖ್ಯಾರ್ಥತ್ವ ವಿಲ್ಲವೆಂದರೆ **ಪುರುಷಮೀಕ್ಷತೇ** ಇತ್ಯಾದಿ ಶ್ರುತಿಗಳಲ್ಲಿ ಈಕ್ಷಣೀಯತ್ವವನ್ನು ಹೇಳಿದುದರಿಂದ

ವಾಚ್ಯತ್ವವನ್ನು ಅವಶ್ಯವಾಗಿ ಹೇಳಲೇಬೇಕು. ಬ್ರಹ್ಮನನ್ನು ಉಪನಿಷತ್ತುಗಳಿಂದಲೇ ತಿಳಿಯಬೇಕಾದುದರಿಂದ ವಚನಭಿನ್ನವಾದ ಪ್ರತ್ಯಕ್ಷಾದಿಗಳಿಂದ ಆತನ ಜ್ಞಾನವು ಬರಲಾರದು. (೨) ಗೌಣನಾದ ಜೀವನು ವಾಚ್ಯನೆಂದು ಹೇಳಕೂಡದು. ಆತ್ಮಶಬ್ದ ಮೋಕ್ಷೋಪದೇಶ ಅಹೇಯತ್ವವಚನಗಳು ಇದ್ದಪ್ರಯುಕ್ತವೂ ಗೌಣನಾದ ಜೀವನು ಆತ್ಮಶಬ್ದವಾಚ್ಯನಲ್ಲ (೩) ಮತ್ತು ತನಗೆ ತನ್ನಲ್ಲಿಯೇ ಲಯವನ್ನು ಹೇಳಿದುದರಿಂದಲೂ ಪೂರ್ಣತ್ವವನ್ನು ಹೇಳಿದುದರಿಂದಲೂ **ಏಕೋ ದೇವಃ** ಎನ್ನುವ ಶ್ರುತಿಯಲ್ಲಿ ನಿರ್ಗುಣನೇ ಶ್ರುತನಾದ ಪ್ರಯುಕ್ತವೂ ಸರ್ವಥಾ ಅವಾಚ್ಯನಲ್ಲ (೪) **ಸರ್ವೇ ವೇದಾ ಯತ್ಪದಮಾಮನಂತಿ, ಅಥ ಕಸ್ಮಾದುಚ್ಯತೇ, ಬ್ರಹ್ಮೇತಿ, ತತ್ತ್ವಮಿತ್ಯಾಚಕ್ಷತೇ, ಯಮಿಂದ್ರಮಾಹುರ್ವರುಣಂ ಯಮಾಹುಃ ಇತ್ಯಾಚಕ್ಷತೇ, ಏಕಮೇವ ಸಂತಂ ತಸ್ಮಾದುಚ್ಯತೇ, ಪರಂ ಬ್ರಹ್ಮ** ಇತ್ಯಾದಿ ಶ್ರುತಿಗಳೂ ಮತ್ತು **ವಚಸಾಂ ವಾಚ್ಯಮುತ್ತಮಂ, ಪರಮಾತ್ಮೇತಿ ಚಾಪ್ಯುಕ್ತಃ ದೇಹೇಽಸ್ಮಿನ್ ಪುರುಷಃ ಪರಃ** ಇದು ಮೊದಲಾದ ಸ್ಮೃತಿಗಳೂ ಪ್ರಬಲವಾದ ಅನುಭವವೂ ಬ್ರಹ್ಮನಿಗೆ ವಾಚ್ಯತ್ವವನ್ನೇ ಹೇಳುತ್ತವೆ. ಬ್ರಹ್ಮನು ವಾಚ್ಯನಾದುದರಿಂದ ಸರ್ವಜಗತ್ತಿಗೂ ಕಾರಣನೆಂದು ಸರ್ವಶಾಸ್ತ್ರ ಪ್ರತಿಪಾದ್ಯನೆನ್ನುವುದು ಯುಕ್ತವೇ. ಆದಕಾರಣ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ. ಅಂತೂ ಆ ಲಕ್ಷಣಗಳಿಂದ ಕೂಡಿದ ಬ್ರಹ್ಮ ನೇ ವಿಷ್ಣುವಾಗಿರುವುದರಿಂದ ಆತನ ಜಿಜ್ಞಾಸೆಯು ಯುಕ್ತವೇ ಎಂದು ಸಿದ್ಧವಾಯಿತು.

**ಈಕ್ಷತ್ಯಧಿಕರಣವು ಸಮಾಪ್ತವಾಯಿತು.**

## ೬ ಆನಂದಮಯಾಧಿಕರಣವು

**ಪೀಠಿಕೆ ॥** ಅಧ್ಯಾಯಪಾದಗಳಿಗೆ ಉಪೋದ್ಘಾತರೂಪವಾಗಿರುವುದರಿಂದ ಅಧ್ಯಾಯಪೀಠ ಅನ್ನಿಸಿಕೊಳ್ಳುವ ಈ ಐದು ಅಧಿಕರಣಗಳಲ್ಲಿ ಬ್ರಹ್ಮಸ್ವರೂಪವನ್ನು ಸಂಪೂರ್ಣ ನಿರೂಪಿಸಿದುದರಿಂದ ಅಧ್ಯಾಯಾತ್ಮಕ ಶೇಷಗ್ರಂಥವು ಏತಕ್ಕೆ ಎಂದರೆ—

**ಭಾಷ್ಯ ॥ ತಮೇವ ಸಮನ್ವಯಂ ಪ್ರಕಟಯತ್ಯಾನಂದಮಯೋಽಭ್ಯಾಸಾದಿತ್ಯಾದಿನಾ ಸಮಸ್ತೇನಾಧ್ಯಾಯೇನ ಪ್ರಾಯೇಣ ॥ ೧ ॥**

**ಭಾಷ್ಯಾರ್ಥ ॥** (ಅಧ್ಯಾಯಾಖ್ಯವಾದ ಶೇಷಗ್ರಂಥಕ್ಕೆ ಹಿಂದೆ ಹೇಳಿದ ಸಮನ್ವಯವನ್ನು ವಿಸ್ತರಿಸುವುದು ಬಿಟ್ಟು ಬೇರೆ ಪ್ರಯೋಜನವಿಲ್ಲದಿದ್ದರೂ) **ತತ್ತು ಸಮನ್ವಯಾತ್** ಎನ್ನುವುದರಿಂದ ಹೇತುವಾಗಿ ಸಾಮಾನ್ಯವಾಗಿ ಉಪನ್ಯಾಸಮಾಡಿದ ಉಪಕ್ರಮಾದಿಲಿಂಗಗಳಿಂದ ಜ್ಞಾಪ್ಯವಾದ ಶಕ್ತಿತಾತ್ಪರ್ಯಲಕ್ಷಣಸಂಬಂಧರೂಪವಾದ ಸಮನ್ವಯವನ್ನು ಅಂದರೆ ಶಕ್ತಿವೃತ್ತಿಯಿಂದ ಸರ್ವಶಾಸ್ತ್ರೀಯ ಶಬ್ದಗಳಿಗೆ ಭಗವತ್ಪರತ್ವವನ್ನು **ಆನಂದಮಯೋಽಭ್ಯಾಸಾತ್** ಇದು ಮೊದಲುಗೊಂಡು ಸಂಪೂರ್ಣ ಪ್ರಥಮಾ ಧ್ಯಾಯದಿಂದ ಪ್ರಾಯಶಃ (ಸೂತ್ರಕಾರರು ಪ್ರತಿವಾಕ್ಯವನ್ನು ಎತ್ತಿಹೇಳಿ ಅದಕ್ಕೆ ಬೇಕಾದ ಹೇತೂಪನ್ಯಾಸಾದಿಗಳನ್ನು ಮಾಡಿ) ವಿಸ್ತರಿಸುತ್ತಾರೆ.

**ವಿಶೇಷಾಂಶ ॥** (ಎ) ಪ್ರಥಮೇನ ಎಂದು ಹೇಳದೆ **ಆನಂದಮಯೋಽಭ್ಯಾಸಾತ್** ಎಂದು ಹೇಳಿದುದರಿಂದ ಈ ಪ್ರಥಮಾಧ್ಯಾಯದ ೬ನೇ ಅಧಿಕರಣವನ್ನು ಆರಂಭಿಸಿಯೇ ಅಧ್ಯಾಯಾರಂಭ

ವೆಂದು ಸೂಚಿತವಾಯಿತು. (ಬಿ) ಐದು ಅಧಿಕರಣಗಳಿಗೆ ಅಧ್ಯಾಯದಲ್ಲಿ ಅಂತರ್ಭಾವವಿಲ್ಲ. (ಸಿ) ೪ನೇ ಪಾದದಲ್ಲಿ ಸಮನ್ವಯವನ್ನೇ ಮಾಡುವುದಿಲ್ಲ. ಮತ್ತೆ ಪ್ರಧಾನಕ್ಕೆ ಅಶಾಬ್ದತ್ವವನ್ನೇ ನಿರೂಪಣ ಮಾಡುತ್ತಾರೆ ಎನ್ನುವ ಪರಾಪವ್ಯಾಖ್ಯಾನವನ್ನು ನಿರಾಕರಿಸುವುದಕ್ಕಾಗಿ ಸಮಸ್ತೇನ ಎಂದು ಹೇಳಿರುವರು. (ಡಿ) ದೇವತಾಧಿಕರಣ (ಅಧ್ಯಾ.೧.ಪಾ.೩.ಅ.೮) ಅಪಶೂದ್ರಾಧಿಕರಣ(ಅಧಿ.೯) ಗಳಲ್ಲಿ ಸಮನ್ವಯ ವನ್ನೇ ಮಾಡದಿರುವುದರಿಂದ ಸಮಸ್ತೇನ ಎಂದು ಹೇಳಿದ್ದು ಅಯುಕ್ತವು ಎನ್ನುವ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ಪ್ರಾಯೇಣ ಪ್ರಾಯಶಃ ಹೆಚ್ಚಾಗಿ ಎಂದು ಹೇಳಿರುವರು.

**ಪೀಠಿಕೆ ॥** ಹಾಗಾದರೆ ಸಂಪೂರ್ಣ ಅಧ್ಯಾಯಕ್ಕೆ ಸಮನ್ವಯರೂಪವಾದ ಒಂದೇ ಅರ್ಥ ವಾದ ಪ್ರಯುಕ್ತ ಪಾದಭೇದಕ್ಕೆ ಏನು ಕಾರಣವು ಎಂದರೆ ಸಮನ್ವೇತವ್ಯ ಶಬ್ದಗಳಿಗೆ ಭೇದವಿದ್ದ ಪ್ರಯುಕ್ತ ಸಮನ್ವಯದಲ್ಲಿಯ ಅವಾಂತರಭೇದವಿದೆ ಎನ್ನುವ ಅಭಿ ಪ್ರಾಯದಿಂದ ಪ್ರಥಮಾಧ್ಯಾಯದ ಪ್ರಥಮ ಪಾದದಲ್ಲಿ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ.

**ಭಾಷ್ಯ ॥ ಪ್ರಾಯೇಣಾನ್ಯತ್ರ ಪ್ರಸಿದ್ಧಾನಾಂ ಶಬ್ದಾನಾಂಪರಮಾತ್ಮನಿ ಸಮನ್ವಯಃ ಪ್ರದರ್ಶ್ಯತೇಽಸ್ಮಿನ್ಪಾದೇ ॥ ೨ ॥**

**ಭಾಷ್ಯಾರ್ಥ ॥** ಈ ಪ್ರಥಮಪಾದದಲ್ಲಿ ವಿಷ್ಣುವಿನಿಂದ ಇತರಗಳಾದ ವಸ್ತುಗಳಿಗೆ ಶ್ರುತ್ಯಾದಿಗಳಿಂದಲಾಗಲೀ ಲೋಕವ್ಯವಹಾರದಿಂದಲಾಗಲೀ ವಾಚಕಗಳೆಂದು ಪ್ರಸಿದ್ಧಗಳಾದ ನಾಮಾತ್ಮಕಗಳಾದ ಆಪಾತತಃ ರೂಢಗಳಾದ ಶಬ್ದಗಳಿಗೇನೇ ವಿಷ್ಣುವಿನಲ್ಲಿ ಸಮನ್ವಯವು ಹೆಚ್ಚಾಗಿ ವಿಸ್ತರಿಸಲ್ಪಡುತ್ತದೆ.

**ವಿಶೇಷಾಂಶ ॥** (ಎ) ಇಲ್ಲಿಯೂ ಅಂತರಧಿಕರಣದಲ್ಲಿ ಆಂತಸ್ಸತ್ತ್ವರೂಪಲಿಂಗಕ್ಕೆ ಸಮನ್ವಯ ವನ್ನು ಪ್ರತಿಪಾದಿಸುವುದರಿಂದ ಪ್ರಾಯೇಣ ಎಂದು ಹೇಳಿರುವರು. (ಬಿ) ಹಾಗೆಯೇ (ತತ್ತ್ವಪ್ರದೀಪಿಕಾ ರೀತಿಯಾಗಿ) ಆನಂದಮಯಾಧಿಕರಣದಲ್ಲಿಯೂ ಲಿಂಗವಿಚಾರವಿದ್ದ ಪ್ರಯುಕ್ತ ಅದನ್ನು ವ್ಯಾವರ್ತಿಸುವುದಕ್ಕಾಗಿ ಪ್ರಾಯೇಣ ಎಂದು ಹೇಳಿರುವರು. (ಸಿ) ತತ್ತ್ವಪ್ರದೀಪಿಕಾನುಸಾರವಾಗಿ **ಆನಂದಮಯ ನಾಮ್ನಃ** ಎನ್ನುವ ಟೀಕೆಯನ್ನು ಆನಂದಮಯನಲ್ಲಿ ಶ್ರುತವಾದ ಆನಂದಾದಿ ನಾಮಪರವನ್ನಾಗಿ ಇಟ್ಟುಕೊಳ್ಳಬೇಕು ಎಂದು ಚಂದ್ರಿಕಾಗ್ರಂಥದಲ್ಲಿ ಹೇಳಿದೆ. (ಡಿ) ಶಬ್ದಗಳು ೧ ಪರಮಾತ್ಮನಲ್ಲಿಯೇ ಪ್ರಸಿದ್ಧಗಳಾದವು. ೨ ಅನ್ಯತ್ರ ಪ್ರಸಿದ್ಧಗಳು. ೩. ಉಭಯತ್ರ ಪ್ರಸಿದ್ಧಗಳು. ೪ ಅನ್ಯತ್ರೈವ ಪ್ರಸಿದ್ಧಗಳು. ಹೀಗೆ ನಾಲ್ಕು ವಿಧಗಳು. ಅವುಗಳಲ್ಲಿ ೧ನೇ ಪಾದದಲ್ಲಿ ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕ ಶಬ್ದಗಳಿಗೆ, ೨ನೇ ಪಾದದಲ್ಲಿ ಅನ್ಯತ್ರಪ್ರಸಿದ್ಧಗಳಾದ ಲಿಂಗಾತ್ಮಕ ಶಬ್ದಗಳಿಗೆ, ೩.ನೇ ಪಾದದಲ್ಲಿ ಉಭಯಪ್ರಸಿದ್ಧಗಳಾದ ನಾಮಲಿಂಗಾತ್ಮಕಶಬ್ದಗಳಿಗೆ, ೪ನೇ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧಗಳಾದ ನಾಮಲಿಂಗಾತ್ಮಕಶಬ್ದಗಳಿಗೆ ಸಮನ್ವಯವು ಎಂದು ಅವಾಂತರಭೇದವಿದ್ದುದರಿಂದ ಪಾದಭೇದವು ಯುಕ್ತವಾಗುವುದು.

**ಪೀಠಿಕೆ ॥** ಪರರು ಅಧ್ಯಾಯದ ಪಾದಾರ್ಥವನ್ನು ಬೇರೆ ರೀತಿಯಾಗಿ ಹೇಳಿರುವರು. ಅದು ಸರ್ವಥಾ ಕೂಡುವುದಿಲ್ಲವೆನ್ನುತ್ತಾರೆ.

**ಭಾಷ್ಯ ॥ ನಾನ್ಯಥಾ ತದದೃಷ್ಟೇಃ** **॥ ೩ ॥**

**ಭಾಷ್ಯಾರ್ಥ ॥** ಪರರು ಬೇರೆ ರೀತಿಯಾಗಿ ಪಾದಾರ್ಥವನ್ನು ಹೇಳಿರುವರು. ಅದು ಕೂಡುವುದಿಲ್ಲ. ಏತದಮೃತಮಭಯಮೇತದ್ಬ್ರಹ್ಮ ಎಂದು ಎರಡನೇ ಪಾದದಲ್ಲಿ ಉದಾಹೃತಗಳಾದ ವಾಕ್ಯಗಳಲ್ಲಿಯೂ ★ ಸ್ಪಷ್ಟ ಬ್ರಹ್ಮಲಿಂಗಗಳು ಇರುವುದರಿಂದ ಪರರು ಹೇಳಿದ ಪಾದಾರ್ಥವು ಸರ್ವಥಾ ಕಾಣುವುದಿಲ್ಲ.

**ವಿಶೇಷಾಂಶ ॥** (ಎ) ಪರರು ಪ್ರಥಮ ಪಾದದಲ್ಲಿ ಸ್ಪಷ್ಟ ಬ್ರಹ್ಮಲಿಂಗವುಳ್ಳ ಶಬ್ದಗಳಿಗೂ ೨—೩. ನೇ ಪಾದಗಳಲ್ಲಿ ಅಸ್ಪಷ್ಟಬ್ರಹ್ಮಲಿಂಗವುಳ್ಳ ಶಬ್ದಗಳಿಗೂ ಸಮನ್ವಯವು ಪ್ರತಿಪಾದಿಸಲ್ಪಡುತ್ತದೆ. ೨ನೇ ಪಾದವು ಸವಿಶೇಷಬ್ರಹ್ಮನನ್ನು ಪ್ರತಿಪಾದಿಸುತ್ತದೆ. ೩.ನೇ ಪಾದವು ನಿರ್ವಿಶೇಷನಾದ ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ೪ನೇ ಪಾದದಲ್ಲಿ ಆದರೂ ಪ್ರಧಾನವು ಶಬ್ದಬೋಧ್ಯವಾಗುವುದಿಲ್ಲವೆನ್ನುತ್ತಾರೆ. ಹೀಗೆ ನಾವು ಹಿಂದೆ ಹೇಳಿದಕ್ಕಿಂತ ಬೇರೆ ರೀತಿಯಾಗಿ ಪಾದಗಳ ಅರ್ಥವನ್ನು ಹೇಳಿರುತ್ತಾರೆ. ಅದು ಅಯುಕ್ತವು. ಏಕೆಂದರೆ— ಪ್ರಥಮಪಾದದಲ್ಲಿ **ಅಂತಸ್ತದ್ಧರ್ಮೋಪದೇಶಾತ್** ಇತ್ಯಾದಿಗಳಲ್ಲಿ **ಸೈವರ್ಕ್ಸಾಮ ತದುಕ್ಥಂ ತದ್ಯಜುಃ** ಎಂದು **ಸರ್ವಾತ್ಮಕತ್ವರೂಪ ಬ್ರಹ್ಮಲಿಂಗವು ಸರ್ವೇಭ್ಯ ಪಾಪ್ಮಭ್ಯ ಉದಿತಃ** ಎಂದು ಸರ್ವ ಪಾಪರಾಹಿತ್ಯರೂಪವಾದ ಬ್ರಹ್ಮಲಿಂಗವೂ ಸ್ಪಷ್ಟವಾಗಿದೆಯೋ ಹಾಗೆಯೇ ಎರಡನೇ ಪಾದದಲ್ಲಿಯೂ **ಸರ್ವತ್ರಪ್ರಸಿದ್ಧೋಪದೇಶಾತ್** ಎನ್ನುವಲ್ಲಿ **ಸರ್ವಂ ಖಲ್ವಿದಂ ಬ್ರಹ್ಮ** ಎಂದು ಜೀವರಲ್ಲಿ ಸರ್ವಥಾ ಅಯುಕ್ತವಾದ ಸರ್ವಾತ್ಮತ್ವವೂ, ಅತ್ತಾಚರಾಚರ ಎನ್ನುವಲ್ಲಿ **ಅನ್ಯತ್ರಧರ್ಮಾತ್ ಅನ್ಯತ್ರಾಧರ್ಮಾತ** ಎಂದು ಪುಣ್ಯಪಾಪರಾಹಿತ್ಯಾದಿಗಳೂ (೩.) **ಅಂತರಃ** ಎನ್ನುವಲ್ಲಿ **ಏತದಮೃತಮಭಯಮೇತದ್ಬ್ರಹ್ಮ** ಎಂದು ಅಮೃತತ್ವಾದಿಗಳೂ (೪) **ಅಂತರ್ಯಾಮೀ** ಎನ್ನುವಲ್ಲಿ **ಏಷ ತ ಆತ್ಮಾ ಅಂತ ರ್ಯಾಮೀ ಅಮೃತಃ** ಎಂದು ಅಮೃತತ್ವಾದಿಗಳೂ (೫) **ಅದೃಶ್ಯತ್ವಾದಿಗುಣಕಃ** ಇತ್ಯಾದಿಗಳಲ್ಲಿ **ಯಃ ಸರ್ವಜ್ಞಃ** ಎಂದು ಸಾರ್ವಜ್ಞ ಮೊದಲಾದುದೂ ಇವೇ ಮೊದಲಾದ ಬ್ರಹ್ಮಲಿಂಗಗಳು ಸ್ಪಷ್ಟವಾಗಿವೆ. (ಬಿ) ಹೀಗೆಯೇ ೩.ನೇ ಪಾದದಲ್ಲಿ (೧) **ದ್ಯುಭ್ವಾದಿ** ಎನ್ನುವಲ್ಲಿ **ಅಮೃತಸ್ಯೈಷ ಸೇತುಃ ಯಃ ಸರ್ವಜ್ಞಃ** ಎಂದು **ಅಮೃತ ಸೇತುತ್ವ ಸರ್ವಜ್ಞತ್ವ** ಮೊದಲಾದುದೂ (೨) **ಭೂಮಾ** ಎನ್ನುವಲ್ಲಿ **ಯತ್ರನಾನ್ಯತ್ಪಶ್ಯತಿ** ಎಂದು ಅದ್ವಿತೀಯತ್ವ ಮೊದಲಾದುದೂ (೩.) **ಅಕ್ಷರಮಂಬರ** ಎನ್ನುವಲ್ಲಿ **ಅದೃಷ್ಟಂ ದ್ರಷ್ಟೃಶ್ರುತಂ ಶ್ರೋತೃ ಅಸ್ಥೂಲಮನಣು** ಎಂದು ಅದೃಶ್ಯತ್ವ ಅಸ್ಥೂಲತ್ವ ಅನಣುತ್ವ ಮೊದಲಾದುದೂ (೪) **ಈಕ್ಷತಿಕರ್ಮ** ಇತ್ಯಾದಿಗಳಲ್ಲಿ **ಪರಾತ್ಪರಂ** ಎಂದು ಪರಾತ್ಪರತ್ವ ಮೊದಲಾದ ಬ್ರಹ್ಮಲಿಂಗಗಳೂ ಸ್ಪಷ್ಟವಾಗಿವೆ. ಆದಕಾರಣ ಪರ ರು ಹೇಳಿದ ಪಾದಾರ್ಥನಿಯಮವು ಈ ಅಧ್ಯಾಯದಲ್ಲಿರತಕ್ಕ ಪಾದಗಳಲ್ಲಿ ಕಾಣುವುದಿಲ್ಲ. ಸರ್ವಸಾಂಕರ್ಯವೇ ತೋರುತ್ತದೆ. (ಸಿ) ೨ನೇ ಪಾದವು ಯೌಗಿಕ ವಿಷಯವು. ೩.ನೇ ಪಾದವು ರೂಢವಿಷಯಕವು. ಹೀಗೆ ೨ನೇ, ೩.ನೇ ಪಾದಗಳಿಗೆ ಭೇದವಿದೆಯೆಂದು ಪರರು ಹೇಳುವರು. ಅದೂ ಅಯುಕ್ತವು. ೩.ನೇ ಪಾದದಲ್ಲಿಯೂ ದ್ಯುಭ್ವಾದ್ಯಾಯತನತ್ವವೂ **ಈಕ್ಷತಿಕರ್ಮವನ್ನೂ ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ** ಎನ್ನುವ ವಾಕ್ಯದಲ್ಲಿ ಹೇಳಲ್ಪಟ್ಟ

---

★ **ವಾಕ್ಯಾಂತರೇ ಬ್ರಹ್ಮಧರ್ಮತಯಾ ನಿರ್ಣೀತತ್ವಂ ಅಥವಾ ಜೀವಾದೌ ಸ್ವಾರ ಸ್ಯೇನಾನುಪಪದ್ಯಮಾನತ್ವಂ ಸ್ಪಷ್ಟತ್ವಂ**

ಅಭಿಧ್ಯಾತವ್ಯತ್ವವೂ (ಧ್ಯಾನಯೋಗ್ಯತ್ವವಿರುವಿಕೆಯೂ) **ಶಬ್ದಾದೇವ ಪ್ರಮಿತಃ** ಇತ್ಯಾದಿಗಳಲ್ಲಿ ಅಂಗುಷ್ಠಮಾತ್ರತ್ವಾದಿಗಳೂ ಯೌಗಿಕಗಳಾಗಿವೆ. (ಡ) ೪ನೇಪಾದದಲ್ಲಿಯೂ ಅದ್ವೈತಿಗಳು **ಆನುಮಾನಿಕಂ, ಜ್ಯೋತಿಃ, ನ ಸಂಖ್ಯಾ** ಎನ್ನುವ ಮೂರು ಅಧಿಕರಣಗಳಲ್ಲಿಯೇ ಪ್ರಧಾನಕ್ಕೆ ಶಾಬ್ದತ್ವವು ನಿರಸ್ತವಾಗಿದೆ. ಬೇರೆ ಕಾರಣತ್ವೇನ **ಚಾಕಾಶಾದಿಷು** ಎನ್ನುವಲ್ಲಿ ಸೃಷ್ಟಿವಾಕ್ಯದಿಂದ ವಿರೋಧವೂ, **ಜಗದ್ವಾಚಿತ್ವಾತ್** ಎನ್ನುವಲ್ಲಿ ಯಸ್ಯ ಚೈತತ್ಕರ್ಮ ಸ ವೇದಿತವ್ಯಃ ಇದು ಮೊದಲಾದ ವಾಕ್ಯಗಳಿಗೆ ಜೀವಾದಿಪರತ್ವವೂ **ವಾಕ್ಯಾನ್ವಯಾತ್** ಎನ್ನುವಲ್ಲಿ **ಆತ್ಮಾ ವಾ ಅರೇ ದ್ರಷ್ಟವ್ಯಃ** ಇದು ಮೊದಲಾದ ವಾಕ್ಯಗಳಿಗೆ ಜೀವಪರತ್ವವೂ **ಪ್ರಕೃತಿಶ್ಚ** ಎನ್ನುವಲ್ಲಿ ನಿಮಿತ್ತಕಾರಣ ಉಪಾದಾನಕಾರಣಗಳ ಭೇದವೂ ನಿರಸ್ತವಾಗಿದೆ ಎಂದು ಅರ್ಥವನ್ನು ಹೇಳುವರು. ಆದಕಾರಣ ಪ್ರಧಾನಕ್ಕೆ ಅಶಾಬ್ದತ್ವವು ೪ನೇ ಪಾದದಲ್ಲಿ ಸರ್ವತ್ರ ಪ್ರತಿಪಾದ್ಯವಾಗಿ ಇರುವುದಿಲ್ಲ (ಇ) ಮತ್ತು ರಾಮಾನುಜಾಚಾರ್ಯರು, 'ಜನ್ಮಾದಿಸೂತ್ರ' ದಲ್ಲಿ ಬ್ರಹ್ಮನು ಕಾರಣನೇ, ಬ್ರಹ್ಮನೇ ಕಾರಣನು ಹೀಗೆ ಎರಡು ಅವಧಾರಣಗಳೂ ವಿವಕ್ಷಿತಗಳಾಗಿವೆ. ಅದರಲ್ಲಿ ಲಕ್ಷಣದಲ್ಲಿ ಅಸಂಭವ ರೂಪವಾದ ಅನ್ಯಯೋಗವ್ಯವಚ್ಛೇದವು ಅಂದರೆ ಅಸಂಭವಪರಿಹಾರವು ಪ್ರಥಮಪಾದ ದಲ್ಲಿಯೂ, ಅತಿವ್ಯಾಪ್ತಿರೂಪವಾದ ಅನ್ಯಯೋಗವ್ಯವಚ್ಛೇದವು ಅಂದರೆ ಅತಿವ್ಯಾಪ್ತಿ ಪರಿಹಾರವು ಮೂರು ಪಾದಗಳಲ್ಲಿಯೂ, ಅಲ್ಲಿಯೂ ಅಸ್ಪಷ್ಟಜೀವಾದಿ ಲಿಂಗವುಳ್ಳ ವಾಕ್ಯಗಳು ೨ನೇ ಪಾದದಲ್ಲಿಯೂ, ಸ್ಪಷ್ಟಜೀವಾದಿಲಿಂಗವುಳ್ಳ ವಾಕ್ಯಗಳು ೩ನೇ ಪಾದದಲ್ಲಿಯೂ, ಸ್ಪಷ್ಟತರ ಪೂರ್ವಪಕ್ಷ ಹೇತುಗಳುಳ್ಳ ವಾಕ್ಯಗಳು ೪ನೇ ಪಾದದಲ್ಲಿಯೂ ವಿಚಾರ್ಯಗಳಾಗುತ್ತವೆ ಎನ್ನುತ್ತಾರೆ. ಅದು ಅಯುಕ್ತವು. ೧ನೇ ಪಾದದಲ್ಲಿಯೂ ರಾಮಾನುಜಾಚಾರ್ಯರ ಮತದಲ್ಲಿ **ಈಕ್ಷತೇರ್ನಾಶಬ್ದಂ** ಎನ್ನುವಲ್ಲಿ ಪ್ರಧಾನ ಕಾರಣತ್ವವನ್ನು **ಕಾಮಾಚ್ಚ ನಾನುಮಾನಾಪೇಕ್ಷಾ** ಇತ್ಯಾದಿಗಳಲ್ಲಿ ಜೀವಾದಿಕಾರಣತ್ವವನ್ನು ನಿಷೇಧ ಮಾಡಿದುದರಿಂದ ಅತಿವ್ಯಾಪ್ತಿಪರಿಹಾರವನ್ನು ಪ್ರಥಮಪಾದ ದಲ್ಲಿಯೂ ಮಾಡಿರುತ್ತಾರೆ. ಇದು ಮೊದಲಾದ ಪ್ರಕಾರ ಚಂದ್ರಿಕಾಗ್ರಂಥದಲ್ಲಿ ಅನೇಕಾನೇಕ ದೋಷಗಳನ್ನು ಹೇಳಿದುದರಿಂದ ಅವರು ಹೇಳುವ ಪಾದಾರ್ಥವೂ ಸರ್ವಥಾ ಯುಕ್ತವಲ್ಲ.

**ಪೀಠಿಕೆ ॥** (೧) ಆನಂದಮಯಾಧಿಕರಣವನ್ನು ಆರಂಭಿಸಿ ಎಲ್ಲಾ ಅಧಿಕರಣಗಳಲ್ಲಿಯೂ ೫ ಐದು ಸಂಗತಿಗಳನ್ನು ಅವಶ್ಯವಾಗಿ ಹೇಳಬೇಕು. ಹೀಗೆ ಇರಲು ಈ ಅಧಿಕರಣದಲ್ಲಿ ಲೋಕವ್ಯವ ಹಾರಾನುಸಾರವಾಗಿ ಶ್ರೀಹರಿಯಿಂದ ಇತರತ್ರ ಪ್ರಸಿದ್ಧಗಳಾದ ಆನಂದಮಯಶಬ್ದ ಮೊದಲಾದ ಗುಣವಾಚಕಶಬ್ದಗಳಿಗೂ, ಆನಂದ ಮೊದಲಾದ ಗುಣ ವಾಚಕ ಶಬ್ದಗಳಿಗೂ ಬ್ರಹ್ಮನಲ್ಲಿ ಸಮನ್ವಯವನ್ನು ಮಾಡುವುದರಿಂದ ೧ ಶಾಸ್ತ್ರದಲ್ಲಿಯೂ ೨ ಅಧ್ಯಾಯದಲ್ಲಿಯೂ ೩. ಪಾದದಲ್ಲಿಯೂ ಅಂತರ್ಭಾವರೂಪಸಂಗತಿಯು ಇದೆ. (೨) ಆನಂದಮಯನಿಗೆ ವಿಷ್ಣುತ್ವವನ್ನು ಸಮರ್ಥಿಸುವುದರಲ್ಲಿ ೪ ಶ್ರುತಿ, ೫ ಅಧಿಕರಣಸಂಗತಿಗಳು ಯಾವುವು? ಎಂದರೆ ಅವ್ಯವಹಿತ ಪೂರ್ವಾಧಿಕರಣದಿಂದಲೇ ಸಂಗತಿಯನ್ನು ಹೇಳಬೇಕೆಂದು ನಿಯಮವಿಲ್ಲದಿರುವುದರಿಂದ ವ್ಯವಹಿತವಾದ ಜಿಜ್ಞಾಸಾಧಿಕರಣ ದಿಂದಲೂ ಜಿಜ್ಞಾಸಾಧಿಕರಣ ವಿಷಯವಾಕ್ಯದಿಂದಲೂ ಆನಂತರ್ಯಲಕ್ಷಣರೂಪವಾದ ಆಕ್ಷೇಪಿಕೀ ಸಂಗತಿಯನ್ನು ತೋರಿಸುತ್ತಾರೆ.

**ಭಾಷ್ಯ ॥ ಬ್ರಹ್ಮಜಿಜ್ಞಾಸಾ ಕರ್ತವ್ಯೇತ್ಯುಕ್ತಂ । ತಚ್ಚ ಬ್ರಹ್ಮ, ಬ್ರಹ್ಮಪುಚ್ಛಂ ಪ್ರತಿಷ್ಠಾ**

**(ತೈ.೨.೫.೨.) ಇತ್ಯಾನಂದಮಯಾವಯವರೂಪಂ ಪ್ರತೀಯತೇ । ನ ಹ್ಯವಯವಿನಂ ವಿನಾಽವಯವಮಾತ್ರಸ್ಯ ಜ್ಞೇಯತೇತ್ಯತ ಆಹ ॥ ೪ ॥**

**ಭಾಷ್ಯಾರ್ಥ ॥** ಬ್ರಹ್ಮವಿಚಾರವನ್ನು ಮಾಡಬೇಕೆಂದು (ಜಿಜ್ಞಾಸಾಧಿಕರಣದಲ್ಲಿ) ಹೇಳಲ್ಪಟ್ಟಿದೆ. ಯಾವನು ಜಿಜ್ಞಾಸ್ಯನೆಂದು ಹೇಳಲ್ಪಟ್ಟಿದ್ದಾನೋ ಆ ಬ್ರಹ್ಮನೇ **ಬ್ರಹ್ಮ ಪುಚ್ಛಂ ಪ್ರತಿಷ್ಠಾ** ಎನ್ನುವ (ಶ್ರುತಿಯಲ್ಲಿ) ಆನಂದಮಯ ಎಂದು ಹೆಸರುಳ್ಳ ಯಾರೋ ಒಬ್ಬನ ಪುಚ್ಛ (ಪಾದಾಖ್ಯ) ವಾದ ಅವಯವನಾಗಿ ತೋರುತ್ತಾನೆ. ಅವಯವಿಯನ್ನು ಹೊರತು ಅವಯವಮಾತ್ರಕ್ಕೆ ಜ್ಞೇಯತ್ವವಿಲ್ಲ ಎಂದು ಶಂಕಿಸಿದರೆ **ಆನಂದಮಯೋಽಭ್ಯಾಸಾತ್** (ಎನ್ನುವುದರಿಂದ ಆನಂದಮಯನಿಗೆ ವಿಷ್ಣುತ್ವವನ್ನು ಸೂತ್ರಕಾರರು ಸಮರ್ಥಿಸುತ್ತಾರೆ.)

**ವಿಶೇಷಾಂಶ ॥** (ಎ) ಬ್ರಹ್ಮಪುಚ್ಛಂ ಪ್ರತಿಷ್ಠಾ ಎನ್ನುವ ಶ್ರುತಿಯಲ್ಲಿ ಜಿಜ್ಞಾಸ್ಯನಾಗಿ ಹೇಳಲ್ಪಟ್ಟ ಬ್ರಹ್ಮನು ಆನಂದಮಯ ಎಂದು ಹೆಸರುಳ್ಳ ಯಾರೋ ಒಬ್ಬನಿಗೆ ಅವಯವ (ಪಾದ) ರೂಪನಾಗಿ ತೋರುತ್ತಾನೆ. ಮತ್ತೊಬ್ಬನಿಗೆ ಅಂಗವಾಗಿ ಜಿಜ್ಞಾಸ್ಯನಾದಾಗ್ಯೂ ಅವಯವಿಯಾದ ಆನಂದಮಯನನ್ನು ಹೊರತು ಕೇವಲ ಅವಯವಭೂತನೇ ಆದ ಬ್ರಹ್ಮನಿಗೆ ಮುಖ್ಯತ್ವವಿಲ್ಲದಿರುವುದರಿಂದ ಮುಖ್ಯವಾಗಿ ಜಿಜ್ಞಾಸ್ಯತ್ವವು ಕೂಡುವುದಿಲ್ಲ. ತದ್ವಿಜಿಜ್ಞಾಸಸ್ವ ಎನ್ನುವ ಶ್ರುತಿಯಲ್ಲಿ ಬ್ರಹ್ಮಜಿಜ್ಞಾಸೆಯು ವಿಹಿತವಾದ ಪ್ರಯುಕ್ತ ಬ್ರಹ್ಮಜಿಜ್ಞಾಸೆಯನ್ನು ಬಿಡಲಿಕ್ಕೂ ಬರುವುದಿಲ್ಲ. ಆನಂದ ಮಯನು ವಿಷ್ಣುವಿನಿಂದ ಇತರನು ಎಂದಾದರೆ ಆ ಬ್ರಹ್ಮಾವಯನಾದ ಬ್ರಹ್ಮನ ಜಿಜ್ಞಾಸೆಯು ಕೂಡುವುದಿಲ್ಲ ಎನ್ನುವ ಆಕ್ಷೇಪವಿದ್ದುದರಿಂದ ಆನಂದಮಯನು ವಿಷ್ಣುವೆಂದೇ ಆದರೆ ಬ್ರಹ್ಮಜಿಜ್ಞಾಸೆಯು ಕೂಡುವುದರಿಂದಲೂ ಅಂತೂ ಹೀಗೆ ಪೂರ್ವ ಪಕ್ಷಸಿದ್ಧಾಂತಗಳಲ್ಲಿ ಫಲವಿದ್ದುದರಿಂದ ಬ್ರಹ್ಮಜಿಜ್ಞಾಸಾಸಿದ್ಧಿಗಾಗಿ ಸೂತ್ರಕಾರರು ಆನಂದಮಯನು ವಿಷ್ಣುವೇ ಎಂದು ಸಮರ್ಥಿಸುತ್ತಾರೆ. (ಬಿ) **ತಸ್ಮಾದ್ವಾ ಏತ ಸ್ಮಾದ್ವಿಜ್ಞಾನಮಯಾತ್ । ಅನ್ಯೋಽಂತರ ಆತ್ಮಾನಂದಮಯಃ। ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಂ । ⁰ಅನ್ವಯಂ ಪುರುಷವಿಧಃ। ತಸ್ಯ ಪ್ರಿಯಮೇವ ಶಿರಃ। ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ ಬ್ರಹ್ಮಪುಚ್ಛಂ ಪ್ರತಿಷ್ಠಾ॥** (ತೈ.ಉ.ಅಧ್ಯಾ.೨.ಮಂ.೧೨. ಪು.೧೨೮-೧೨೯.) ಅತ್ರಪದದಿಂದ ಹೇಳಲ್ಪಟ್ಟ ಜೀವಶರೀರದಲ್ಲಿರತಕ್ಕ ವಿಜ್ಞಾನಪೂರ್ಣವಾದುದರಿಂದ ವಿಜ್ಞಾನಮಯಶಬ್ದವಾಚ್ಯನಾದ ವಿಷ್ಣುವಿನಿಂದ ಆನಂದಪೂರ್ಣನಾದುದರಿಂದ ಆನಂದಮಯಶಬ್ದ ವಾಚ್ಯನಾದ ನಾರಾಯಣನು ವಿಜ್ಞಾನಮಯನ ಒಳಗೆ ಇರತಕ್ಕವನು. ಆ ಆನಂದಮಯನಿಂದ ಈ ವಿಜ್ಞಾನಮಯಶಬ್ದವಾಚ್ಯನಾದ ವಾಸುದೇವನು ನಿಚ್ಛಿದ್ರನಾಗಿ ಪೂರ್ಣನಾಗಿರುತ್ತಾನೆ. ಪ್ರಸಿದ್ಧವು. ಆ ಈ ಆನಂದಮಯನು ಪುರುಷಾಕಾರನೇ. ಆ ಶರೀರಸ್ಥಾನೀಯವಾದ ಆನಂದಮಯನ ಪುರುಷಾಕಾರ ವನ್ನು ಅನುಸರಿಸಿಕೊಂಡು ಶರೀರಸ್ಥಾನೀಯನಾದ ಈ ವಿಜ್ಞಾನಮಯನು ಪುರುಷಾಕಾರನು, ಅಂದರೆ ಆನಂದಮಯನಿಂದ ವಿಜ್ಞಾನಮಯನು ಪ್ರಾದುರ್ಭವಿಸಿದವನು. ಆ ಆನಂದಮಯನಾದ ವಿಷ್ಣುವಿಗೆ, ಉತ್ತಮರಾದ ದೇವತೆಗಳಿಂದ ಪ್ರಾಪ್ಯವಾದ ಪ್ರಯುಕ್ತ ಪ್ರಿಯಶಬ್ದವಾಚ್ಯವಾದುದು ಯಾವುದು

★ ಉತ್ತರೈಃ ಪೂರಿತಾಃ ಪೂರ್ವಂ ನಿಚ್ಛಿದ್ರತ್ವೇನ ಸರ್ವಶಃ। ಸರ್ವೇऽಪಿ ಪುರುಷಾಕಾರಾಃ ಉತ್ತರಾತ್ಪೂರ್ವ ಸಂಭವಃ ॥

ಸುಖವೋ, ಅದು ಅವನಿಗೆ ಶಿರಸ್ಸು ಮತ್ತು ಅದೇ ಆನಂದಮಯಾಖ್ಯವಾದ ಜೀವಶರೀರಕ್ಕೆ ಇತರರಾದ ಉಪಕಾರಿಗಳಿಂದ ಪ್ರಾಪ್ಯವಾದ ಪ್ರಯುಕ್ತ ಪ್ರಿಯನಾಮಕವಾದ ಉಪಕಾರದಿಂದ ಹುಟ್ಟತಕ್ಕ ವೈಷಯಿಕಸುಖವೆನ್ನಿಸುವುದು ಯಾವುದು ಶಿರಸ್ಸೋ ಅದರಲ್ಲಿ ಇರತಕ್ಕುದು. ಹೀಗೆಯೇ ಆನಂದಮಯಾಖ್ಯ ವಿಷ್ಣುವಿಗೆ [1]ಮೋದವನ್ನು ಮಾಡುವುದರಿಂದ ಮೋದನಾಮಕವಾದ ಬಲ ಬಾಹುವು, ಪ್ರಮೋದವನ್ನು ಮಾಡುವುದರಿಂದ ಎಡ ಬಾಹುವು ಅಂತವಿಲ್ಲದಿರುವುದರಿಂದ ಆತ್ಮಾ ಎನ್ನಿಸಿಕೊಳ್ಳುವ ಮಧ್ಯದೇಹವು. ಇವುಗಳು ಆನಂದಮಯಾಖ್ಯಜೀವಶರೀರದ ಬಲಗೈ ಎಡಗೈ ಮಧ್ಯದೇಹದಲ್ಲಿರತಕ್ಕುವುಗಳು. ಆನಂದಮಯಾಖ್ಯನಾದ ವಿಷ್ಣುವಿನ ಪ್ರತಿಷ್ಠತಿ=ಗಚ್ಛತಿ ಲೋಕಃ ಆಭ್ಯಾಂ ಎನ್ನು ವ ವ್ಯುತ್ಪತ್ತಿಯಿಂದ ಪ್ರತಿಷ್ಠಾ ಎನ್ನಿಸಿಕೊಳ್ಳುವುದು ಯಾವದು ಪಾದಾಖ್ಯ ಅವಯವವೋ ಅದೇ [2]ಬ್ರಹ್ಮವು. ಆತನೇ ಆನಂದಮಯಾಖ್ಯ ಜೀವಶರೀರದ್ದು ಯಾವದು ಪಾದಾಖ್ಯ ಅವಯವವೋ ಅದರಲ್ಲಿತಕ್ಕ ಬ್ರಹ್ಮಾಖ್ಯನಾದ ಪ್ರಧಾನವಾಯುವಿನಲ್ಲಿರತಕ್ಕವನು. (ಸಿ) ಬ್ರಹ್ಮಶಬ್ದವಾಚ್ಯನಾದ ಪ್ರಧಾನವಾಯುವಿಗೆ ಅಧಿಷ್ಠಾನವಾದ ಪ್ರಯುಕ್ತ ಕೋಶಾವಯವವು ಬ್ರಹ್ಮಶಬ್ದವಾಚ್ಯವು. (ಡಿ) ಪ್ರಧಾನವಾಯವು ಪರಬ್ರಹ್ಮನಿಗೆ ಅಧಿಷ್ಠಾನನಾದ ಪ್ರಯುಕ್ತ ಬ್ರಹ್ಮಶಬ್ದವಾಚ್ಯನು. (ಇ) ಆನಂದಮಯಾದಿಶಬ್ದವಾಚ್ಯನಾದ ವಿಷ್ಣುವಿನ ಅವಯವಭೂತಗಳಾದ ಯಾವುವು ಪ್ರಿಯಾದಿಗಳೋ ಅವುಗಳು ವಿಷ್ಣುವಿನಿಂದ ಅಭಿನ್ನಗಳು. ಯಾವುಗಳು ಆನಂದಮಯಾದಿ ಜೀವಕೋಶಾವಯವಗಳಾದ ಪ್ರಿಯಾದಿಗಳೋ ಅವುಗಳು ಪ್ರತಿಶರೀರದಲ್ಲಿಯೂ ಬೇರೆ ಬೇರೆ. ಹೀಗೆ ಪ್ರಿಯಾದಿಗಳು ಎರಡು ವಿಧಗಳು ಎಂದು ಹೇಳಿದ ಹಾಗಾಯಿತು. ಈ ಅಭಿಪ್ರಾಯವನ್ನೇ ಚಂದ್ರಿಕಾಗ್ರಂಥದಲ್ಲಿ ಹೇಳಿಯದೆ. **ಯೇ ಜೀವಾಭಿಮನ್ಯಮಾನಾನಂದಮಯಾದಿಕೋಶಾವಯವಾಃ ಪ್ರಿಯಾದಯಃ ತೇ ಪ್ರತಿಶರೀರಂ ಭಿನ್ನಾಃ ನ ತೇ ಆನಂದಮಯಾದ್ಯಾಖ್ಯಸ್ಯ ವಿಷ್ಣೋರವಯವಾಃ ಯೇ ಚ ಭಗವತೋಽವಯವಾಃ ಪ್ರಿಯಾದಯೋ ನ ತೇ ಪ್ರತಿಶರೀರಂ ಭಿನ್ನಾಃ ಕಿಂ ತ್ವಭಿನ್ನಾಃ** ಯಾವುಗಳು ಜೀವಾಭಿಮನ್ಯಮಾನಗಳಾದ ಆನಂದಮಯ ಮೊದಲಾದ ಕೋಶ ಅವಯವಗಳಾದ ಪ್ರಿಯಾದಿಗಳೋ ಅವುಗಳು ಪ್ರತಿಶರೀರಗಳಲ್ಲಿಯೂ ಭಿನ್ನ ಗಳು. ಅವುಗಳು ಆನಂದಮಯಾದಿಹೆಸರುಳ್ಳ ವಿಷ್ಣುವಿನ ಅವಯವಗಳಲ್ಲ. ಯಾವುಗಳು ಶ್ರೀಹರಿಯ ಅವಯವಗಳಾದ ಪ್ರಿಯಾದಿಗಳೋ ಅವುಗಳು ಪ್ರತಿ ಶರೀರದಲ್ಲಿ ಭಿನ್ನಗಳಲ್ಲ. ಮತ್ತೆ ಅಭಿನ್ನಗಳು. ಹೀಗೆ ಹೇಳಿದರಿಂದ ಜೀವಸ್ವರೂಪ ಭೂತವಾದ ಆನಂದವು ಹೃದಯಾಖ್ಯ ಮಧ್ಯಪ್ರದೇಶದಲ್ಲಿದ್ದ ಪ್ರಯುಕ್ತ ಅದಕ್ಕೆ ಕೋಶಮಧ್ಯ ದೇಹತ್ವವು ಕೂಡುತ್ತದೆ. (ಎಫ್) ಯದ್ಯಪಿ ಭಾಷ್ಯದಲ್ಲಿ ಶಿರೋ ನಾರಾಯಣಃ

---

೧. (೧) ಮೋದೋ ಭೋಗನಿಮಿತ್ತಕಃ । ಭೋಗನಿಮಿತ್ತವಾದುದು ಮೋದವು. ತದ್ವಿಶೇಷೋತ್ಥಃ= ಪ್ರಮೋದಃ=ಭೋಗದಿಂದುಂಟಾದದ್ದು ಪ್ರಮೋದವು.

(೨) ಅಥವಾ, ಮುನ್ನಾಮ ವಿಷಯೋತ್ಥಂ ಯತ್ ಪ್ರಕೃಷ್ಟವಿಷಯಾತ್ಪ್ರಮುತ್। ಸುಖಂ ಸ್ವರೂಪಭೂತಂ ಯದಾನಂದ ಇತಿ ಕಥ್ಯತೇ ॥ ಎಂದು ಬೃಹದಾರಣ್ಯಕದಲ್ಲಿ ಹೇಳಿದುದರಿಂದ ಅಪ್ರಕೃಷ್ಟ ವಿಷಯಗಳಿಂದ ಹುಟ್ಟಿದ್ದು ಮೋದವು. ಪ್ರಕೃಷ್ಟ ವಿಷಯಗಳಿಂದ ಹುಟ್ಟಿದ್ದು ಪ್ರಮೋದವು. ಜೀವಸ್ವರೂಪಭೂತವಾದ ಸುಖವು ಆನಂದವು ಎನ್ನಿಸುತ್ತದೆ.)

೨. ಬ್ರಹ್ಮ ಸೃಷ್ಟ್ಯಾತು ಬೃಂಹಯೇತ್ ಎನ್ನು ವ ಪ್ರಮಾಣದಿಂದ ಸೃಷ್ಟ್ಯಾದಿಕ್ರಿಯಯಿಂದ ಜಗತ್ತಿನ ಗುಣಗಳನ್ನು ವೃದ್ಧೀಕರಿಸು ವುದರಿಂದ ಬ್ರಹ್ಮಶಬ್ದವಾಚ್ಯನು.).

ಪಕ್ಷಃ ಇತ್ಯಾದಿ ಪ್ರಮಾಣಾನುಸಾರವಾಗಿ ಆನಂದಮಯಾಖ್ಯ ನಾರಾಯಣನು ಪುನಃ ನಾರಾಯಣಾದಿ ಐದು ರೂಪಗಳನ್ನು ತಾಳಿಕೊಂಡು ಶಿರಸ್ಸು ಮೊದಲಾದ ಅವಯವರೂಪದಿಂದ ಇರುತ್ತಾನೆಂದು ತೋರುತ್ತದೆ. ತೈತ್ತಿರೀಯಭಾಷ್ಯದಲ್ಲಿ ಆದರೂ ಪ್ರಿಯಾದಿಗಳು ಆನಂದಮಯನ ಅವಯವಗಳು ಎಂದು ತೋರುತ್ತವೆ. ಆದಾಗ್ಯೂ ಪ್ರಿಯಾದಿಸುಖವಿಶೇಷಕ್ಕಾಗಿ ದೇಹದಲ್ಲಿರತಕ್ಕ ಬ್ರಹ್ಮಾಖ್ಯ ಪ್ರಧಾನವಾಯುವಿನಲ್ಲಿರತಕ್ಕ ನಾರಾಯಣಾದಿರೂಪಗಳಿಗೇನೇ ಆನಂದಮಯಾಖ್ಯ ವಿಷ್ಣು ಅವಯವತ್ವ ಕೂಡಬಹುದಾದುದರಿಂದಲೂ *ತೈತ್ತಿರೀಯ ಭಾಷ್ಯದಲ್ಲಿ ಹೇಳಿದ ಪ್ರಕಾರ ಪ್ರಿಯಾದಿಶಬ್ದವಾಚ್ಯತ್ವವು ಕೂಡುವುದರಿಂದಲೂ ವಿರೋಧವಿಲ್ಲ. (ಜ) ತತ್ತ್ವಪ್ರದೀಪದಲ್ಲಿ ಆದರೂ **ಶ್ರವಣೋತ್ಥಂ ಪ್ರಿಯಂ ದರ್ಶನೋತ್ಥೋ ಮೋದಃ, ಭೋಗೋತ್ಥಃ ಪ್ರಮೋದಃ** ಎಂದು ಈ ಮೂರು ಪದಗಳಿಗೆ ಅರ್ಥಾಂತರವನ್ನು ಹೇಳಿರುತ್ತಾರೆ. ಮತ್ತೂ ಅಲ್ಲಿಯೇ **ಪರೇಯಂ ಪ್ರಿಯನಾಮಕಂ** ಎಂದು ತೈತ್ತಿರೀಯ ಛಾಂದೋಗ್ಯ ಭಾಷ್ಯಗಳಲ್ಲಿ ಹೇಳಿದ ಪ್ರಯುಕ್ತ ಪರರಿಂದ ಪ್ರಾಪ್ಯವಾದ ಸುಖಸುಮಾನ್ಯ ವನ್ನು ಹೇಳತಕ್ಕ ಪ್ರಿಯಶಬ್ದದಿಂದ ಪ್ರಾಕೃತಸುಖವನ್ನು ಇಟ್ಟುಕೊಳ್ಳಬೇಕು ಎಂದೂ ಸೂಚಿತವಾಯಿತು, ಎಂದು ಹೇಳಿರುತ್ತಾರೆ. (ಹೆಚ್) ಅಂತೂ ಇಲ್ಲಿ ಇಷ್ಟು ಇಟ್ಟುಕೊಳ್ಳ ತಕ್ಕುದು. ಕಾಣುವಂಥಾದ್ದು ಅನ್ನಮಯ ಶರೀರವು. ಅದರೊಳಗೆ ಪ್ರಾಣಮಯ ದೇಹವಿದೆ. ಅದರೊಳಗೆ ಮನೋಮಯವಾದ ದೇಹವಿದೆ. ಅದರೊಳಗೆ ವಿಜ್ಞಾನಮಯ ದೇಹವು. ಅದರೊಳಗೆ ಆನಂದಮಯ ದೇಹವಿದೆ. ಈ ಐದು ದೇಹಾಖ್ಯ ಕೋಶಗಳಲ್ಲಿ ಆವಾವ ಶಬ್ದವಾಚ್ಯಗಳಾದ ಪುರುಷಾಕಾರಗಳಾದ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ನಾರಾಯಣ ರೂಪಗಳು ದೇಹದೇಹಿಭಾವಗಳಿಂದ ಇರುತ್ತವೆ.

## ಸೂತ್ರ ॥ ಓಂ ಆನಂದಮಯೋಽಭ್ಯಾಸಾತ್ ಓಂ ॥ ೧೨ ॥

**ಸೂತ್ರಾರ್ಥ ॥** ತೈತ್ತಿರೀಯದಲ್ಲಿ ಶ್ರುತಗಳಾದ ಆನಂದಮಯಾದಿಗಳು ಐದೂ ಬ್ರಹ್ಮವೇ. ಅನ್ನಮಯಾದಿಶಬ್ದವಾಚ್ಯನಾದವನು ಬ್ರಹ್ಮನೇ. ಪ್ರತಿಪ್ರಕರಣದಲ್ಲಿಯೂ **ಯೋಽನ್ನಂ ಬ್ರಹ್ಮೋಪಾಸತೇ** ಇತ್ಯಾದಿ ರೂಪದಿಂದ ಬ್ರಹ್ಮಶಬ್ದವು ಶ್ರುತವಾದ ಪ್ರಯುಕ್ತ ಅಥವಾ **ಅನ್ಯೋಽಂತರ ಆತ್ಮಾ ಏತಮನ್ನಮಯಮಾತ್ಮಾನಮುಪಸಂಕ್ರಾಮತಿ, ಏತಮನ್ನಮಯಮಾತ್ಮಾನಮುಪಸಂಕ್ರಮ್ಯ** ಎಂದು ಪ್ರತಿಪ್ರಕರಣದಲ್ಲಿಯೂ ಆತ್ಮಶಬ್ದವು ಶ್ರುತವಾದ ಪ್ರಯುಕ್ತ ಆತ್ಮಶಬ್ದಾಭ್ಯಾಸವಿದ್ದುದರಿಂದ ಅಥವಾ **ಅನ್ನಂ ಬ್ರಹ್ಮೇತಿ ವ್ಯಜಾನಾತ್** ಎಂದು ಉತ್ತರಾನುವಾಕ್ಯದಲ್ಲಿ ಬ್ರಹ್ಮಶಬ್ದವಿದ್ದುದರಿಂದ ಬ್ರಹ್ಮಶಬ್ದಾಭ್ಯಾಸವಿದ್ದುದರಿಂದ.

**ವಿಶೇಷಾಂಶ ॥** ಜಿಜ್ಞಾಸಾಕ್ಷೇಪಕ ಅವಯವತ್ವ ಮೊದಲಾದ ಪೂರ್ವಪಕ್ಷ ಹೇತುವಿದ್ದ ಪ್ರಯುಕ್ತವೂ ಸರ್ವಾಪೇಕ್ಷಿತವಾದ ಆನಂದವನ್ನು ಹೇಳತಕ್ಕುದಾದುದರಿಂದಲೂ ಶ್ರುತಿಯಲ್ಲಿ ಅನ್ನಮಯಶಬ್ದವು ಆದಿಯಲ್ಲಿದ್ದಾಗ್ಯೂ ಇತರಗಳಾದ ನಾಲ್ಕನ್ನು ಇಟ್ಟುಕೊಳ್ಳಬೇಕೆಂದು ಆನಂದಮಯ ಎಂದು ಹೇಳಿರುತ್ತಾರೆ.

---

★ **ಪರೇಯಂ ಪ್ರಿಯನಾಮಕಂ ॥ ಮೋದಪ್ರಮೋದನಾಮಾನೌ ಮೋದನಾಚ್ಚ ಪ್ರಮೋದನಾತ್ । ದೇಹಸ್ಥ ವಾಯುಸಂಸ್ಥಂ ಚ ಬ್ರಹ್ಮ ಸೃಷ್ಟ್ವಾ ತು ಬೃಂಹಯೇತ್ ॥)**

**ಪೀಠಿಕೆ ॥** ಹೀಗೆ ಸಂಗತಿಯನ್ನೂ ಫಲವನ್ನೂ ಹೇಳಿ ವಿಷಯಸಂಶಯಗಳನ್ನು ತೋರಿಸುತ್ತಾರೆ—

**ಭಾಷ್ಯ ॥ ಆನಂದಮಯೋ ಬ್ರಹ್ಮಾದಿಃ ಪ್ರಕೃತಿರ್ವಿಷ್ಣುರ್ವಾ ॥ ೫ ॥**

**ಭಾಷ್ಯಾರ್ಥ ॥** ಆನಂದಮಯ ಶಬ್ದವಾಚ್ಯನು ಚತುರ್ಮುಖನೇ ಮೊದಲಾಗಿ ಉಳ್ಳ ರುದ್ರ ಇಂದ್ರ ಬೃಹಸ್ಪತಿ ಮೊದಲಾದ ದೇವತೆಗಳೂ ಆಯಾಯ ದೇಹಗಳಲ್ಲಿರತಕ್ಕ ಜೀವರೂ ಇವರೋ, ಅಥವಾ ಚಿತ್ಪ್ರಕೃತಿಯೋ, ವಿಷ್ಣುವೋ.(ಎಂದು ಸಂದೇಹವು.)

**ವಿಶೇಷಾಂಶ ॥** ಆನಂದಮಯ ಎನ್ನುವ ಉಪಲಕ್ಷಪದಿಂದ ವಿಷಯವನ್ನು ತೋರಿಸಿದರು.

**ಪೀಠಿಕೆ ॥** ಇಲ್ಲಿ ಸಯುಕ್ತಿಕವಾಗಿ ಪೂರ್ವಪಕ್ಷಗಳನ್ನು ತೋರಿಸುತ್ತಾರೆ—

**ಭಾಷ್ಯ ॥ ಬ್ರಹ್ಮಶಬ್ದಾದ್ಧಿರಣ್ಯಗರ್ಭಸ್ಯ ಪ್ರಾಪ್ತಿಃ ಶತಾನಂದನಾಮ್ನಾ ಚ ॥ ೬ ॥**

**ಭಾಷ್ಯಾರ್ಥ ॥** (ಆನಂದಮಯನನ್ನು ಅಧಿಕರಿಸಿಕೊಂಡು ಪ್ರವೃತ್ತನಾದ **ಅಸ್ತಿ ಬ್ರಹ್ಮೇತಿ ಚೇದ್ವೇದ** ಇತ್ಯಾದಿಗಳಲ್ಲಿ ಶ್ರುತವಾದ) ಬ್ರಹ್ಮದೆಸೆಯಿಂದ ಚತುರ್ಮುಖನಿಗೆ (ಆನಂದಮಯತ್ವದ) ಪ್ರಾಪ್ತಿಯಾಗುತ್ತದೆ. (ಬ್ರಹ್ಮಶಬ್ದವು ಬೇರೆ ಕಡೆ ಯಲ್ಲಿಯೂ ಇದ್ದುದರಿಂದ ಚತುರ್ಮುಖನಿಗೇನೇ ಆನಂದಮಯತ್ವ ನಿಶ್ಚಯವು ಹೇಗೆ ಆಗುತ್ತದೆ ಎಂದರೆ) (**ತೇ ಯೇ ಶತಂ ಪ್ರಜಾಪತೇರಾನಂದಾಃ ಸ ಏಕೋ ಬ್ರಹ್ಮಣ ಆನಂದಃ** ಎನ್ನುವ ವಾಕ್ಯದಿಂದ ಅರ್ಥಾತ್ ಸೂಚಿತವಾದ) ಶತಾನಂದ ಎನ್ನುವ ನಾಮದಿಂದಲೂ, ಅಥವಾ (ಚತುರ್ಮುಖನಲ್ಲಿರತಕ್ಕ ಆನಂದಮಯಶಬ್ದದ ಸಮಾನವಾದ ಅರ್ಥವುಳ್ಳ) ಶತಾನಂದ ಎನ್ನುವ ನಾಮಧೇಯದಿಂದಲೂ (ಆನಂದ ಮಯತ್ವಕ್ಕೆ) ಪ್ರಾಪ್ತಿಯಾಗುತ್ತದೆ. (ಅಂತೂ ಚತುರ್ಮುಖನಿಗೆ ಆನಂದಮಯತ್ವವು ಪ್ರಾಪ್ತವಾಗುತ್ತದೆ.)

**ಪೀಠಿಕೆ ॥** ಹೀಗೆ ಒಂದು ಪೂರ್ವಪಕ್ಷವನ್ನು ಹೇಳಿ ಮತ್ತೊಂದು ಪೂರ್ವಪಕ್ಷವನ್ನು ಹೇಳುತ್ತಾರೆ—

**ಭಾಷ್ಯ ॥ ★ಅಷ್ಟಮೂರ್ತಿತ್ವಾತ್ಸೂರ್ಯೇ ಪ್ರೋಕ್ತತ್ವಾಚ್ಚ ರುದ್ರಸ್ಯ ॥ ೭ ॥**

**ಭಾಷ್ಯಾರ್ಥ ॥** ರುದ್ರನಿಗೂ (ಆನಂದಮಯತ್ವದ) ಪ್ರಾಪ್ತಿಯಾಗುತ್ತದೆ. (**ಯಶ್ಚಾಸಾವಾದಿತ್ಯೇ** ಎಂದು ಆನಂದಮಯನಿಗೆ) ಸೂರ್ಯನಲ್ಲಿ (ಸ್ಥಿತಿಯನ್ನು) ಹೇಳಿದುದರಿಂದಲೂ ರುದ್ರನಿಗೆ ಸೂರ್ಯ ಮೊದಲಾದ ಎಂಟು ಶರೀರಗಳು ಇದ್ದ ಪ್ರಯುಕ್ತವೂ.

**ವಿಶೇಷಾಂಶ ॥** ಅಂತೂ ಸೂರ್ಯಸ್ವಸ್ವರೂಪವಾದ ರುದ್ರಲಿಂಗವು ಆನಂದಮಯನಲ್ಲಿ ಶ್ರುತವಾದ ಪ್ರಯುಕ್ತ ಆನಂದಮಯನು ರುದ್ರನೇ.

**ಪೀಠಿಕೆ ॥** ಪೂರ್ವಪಕ್ಷಾಂತರವನ್ನು ತೋರಿಸುತ್ತಾರೆ—

---

★ **ಸೂರ್ಯೋ ಜಲಂ ಮಹೀ ವಹ್ನಿರ್ವಾಯುರಾಕಾಶ ಏವ ಚ । ದೀಕ್ಷಿತೋ ಬ್ರಾಹ್ಮಣಸ್ಸೋಮ ಇತ್ಯೇತಾಸ್ತನವಃ ಕ್ರಮಾತ್।** ಎನ್ನುವ ವಿಷ್ಣುಪುರಾಣ ವಾಕ್ಯದಿಂದ ರುದ್ರನಿಗೆ ಸೂರ್ಯ ಮೊದಲಾದ ಎಂಟು ಪ್ರತಿಮೆಗಳು ಸಿದ್ಧಿಸುತ್ತವೆ.

**ಭಾಷ್ಯ ॥ ಏವಮನ್ಯೇಷಾಮಪಿ (ಮನ್ಯೇಷಾಂ) ॥ ೮ ॥**

**ಭಾಷ್ಯಾರ್ಥ ॥** ಹೇಳಿದವರಕ್ಕಿಂತ ಇತರರಾದ ಇಂದ್ರ ಬೃಹಸ್ಪತಿಗಳಿಗೆ ಹಿಂದೆ ಹೇಳಿದ ಪ್ರಕಾರ (ತಮ್ಮಿಂದ ಅವರರಾದ ಸೂರ್ಯಾದಿಗಳಲ್ಲಿ ನಿಯಾಮಕವಾಗಿದ್ದುದರಿಂದ) (ಆನಂದಮಯತ್ವ ಪ್ರಾಪ್ತವಾಗುತ್ತದೆ.)

**ಪೀಠಿಕೆ ॥** ಸಯುಕ್ತಿಕವಾಗಿ ಪೂರ್ವಪಕ್ಷಾಂತವನ್ನು ಹೇಳುತ್ತಾರೆ—

**ಭಾಷ್ಯ ॥ ಮಮ ಯೋನಿರ್ಮಹದ್ಬ್ರಹ್ಮ (ಭ.ಗೀ.೧೪.೩) ಇತಿ ಬ್ರಹ್ಮಶಬ್ದಾ ದ್ಬಹುಭಾವಾಚ್ಚ ಪ್ರಕೃತೇಃ ॥ ೯ ॥**

**ಭಾಷ್ಯಾರ್ಥ ॥** ಚಿತ್ಪ್ರಕೃತಿಗಾಗಲೀ ಆನಂದಮಯತ್ವವು ಪ್ರಾಪ್ತಿಯಾಗುತ್ತದೆ. **ಮಮ ಯೋನಿಃ** ಮಹದ್ಬ್ರಹ್ಮ ಎಂದು ಚಿತ್ಪ್ರಕೃತಿಯಲ್ಲಿ ಬ್ರಹ್ಮಶಬ್ದ ಪ್ರಯೋಗವಿದ್ದುದರಿಂದ, ಚಿತ್ಪ್ರಕೃತಿಗೆ ಬಹು ಭಾವಾಭಿಮಾನತ್ವವಿದ್ದುದರಿಂದಲೂ ಅಥವಾ ಜಡಪ್ರಕೃತಿಗೇನೇ ಆನಂದಮಯತ್ವವು ಪ್ರಾಪ್ತವಾಗುತ್ತದೆ. ಅಭಿಮಾನಿತ್ವವಿಲ್ಲದೆ ಸಾಕ್ಷಾತ್ತಾಗಿಯೇ **ಬಹು ಸ್ಯಾಂ ಪ್ರಜಾಯೇಯ** ಎನ್ನುವ ಶ್ರುತಿಯಲ್ಲಿ ಹೇಳುವ ಬಹುಭಾವವು ಕೂಡುವುದರಿಂದ.

**ವಿಶೇಷಾಂಶ ॥** (ಎ) ಆನಂಯಮಯನಲ್ಲಿ ಶ್ರುತವಾದ ಬ್ರಹ್ಮಶಬ್ದಕ್ಕೆ **ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ।** ಮಹದ್ಬ್ರಹ್ಮಶಬ್ದವಾಚ್ಯ ಳಾದ ಲಕ್ಷ್ಮೀದೇವಿಯು ನನಗೆ ಗರ್ಭಾಧಾನಕ್ಕಾಗಿ ಹೆಂಡತಿಯು. ಅವಳಲ್ಲಿ ನಾನು ಗರ್ಭವನ್ನು ಧರಿಸುತ್ತೇನೆ ಎನ್ನುವ ಗೀತೆಯಲ್ಲಿ ಚಿತ್ಪ್ರಕೃತಿಯಲ್ಲಿ ಪ್ರಯೋಗವಿದೆ. (ಬಿ) (ಸಾವಕಾಶವಾದ ಬ್ರಹ್ಮಶಬ್ದದಿಂದ ಚಿತ್ಪ್ರಕೃತಿಗೆ ಆನಂದಮಯತ್ವ ನಿಶ್ಚಯವು ಹೇಗೆ ಆಗುತ್ತದೆ ಎಂದರೆ) **ಸೋಽಕಾಮಯತ। ಬಹು ಸ್ಯಾಂ ಪ್ರಜಾಯೇಯ** ಎಂದು ಆನಂದಮಯನಿಗೆ ಬಹುಭಾವವು ಶ್ರುತವಾಗಿದೆ. ಆ ಬಹುಭಾವಕ್ಕೆ ಚಿತ್ಪ್ರಕೃತಿಯು ಅಭಿಮಾನಿಯಾಗಿದ್ದಾಳೆ. ತನ್ನಿಂದ ಅಭಿಮನ್ಯಮಾನವದ ವಿಕಾರಿಯಾದ ಜಡಪದಾರ್ಥದ್ವಾರಾ ಚಿತ್ಪ್ರಕೃತಿಗೆ ಬಹುಭಾವವು ಕೂಡಬಹುದು.

**ಪೀಠಿಕೆ ॥** ಸಯುಕ್ತಿಕವಾಗಿ ಪೂರ್ವಪಕ್ಷಾಂತರವನ್ನು ಹೇಳುತ್ತಾರೆ—

**ಭಾಷ್ಯ ॥ ಬೃಹ ಜಾತಿಜೀವಕಮಲಾಸನಶಬ್ದರಾಶಿಷ್ವಿತಿ ಬ್ರಹ್ಮಶಬ್ದಾದೇವ ಸರ್ವಜೀವಾನಾಂ ಅನ್ನಮಯತ್ವಾದೇಶ್ಚ ॥ ೧೦ ॥**

**ಭಾಷ್ಯಾರ್ಥ ॥** ಆವಾವ ದೇಹಗಳಲ್ಲಿರತಕ್ಕ ಸರ್ವಜೀವರಿಗೂ ಆನಂದಮಯತ್ವವು ಪ್ರಾಪ್ತವಾಗುತ್ತದೆ. ಜೀವವಾಚಕವಾದ ಬ್ರಹ್ಮಶಬ್ದವಿದ್ದ ಪ್ರಯುಕ್ತವೇ (ಅಲ್ಲಿ ಪ್ರತ್ಯೇಕ ಹೇತುವನ್ನು ಹುಡುಕಬೇಕಾಗಿಲ್ಲ) (ಬ್ರಹ್ಮಶಬ್ದವು ಹೇಗೆ ಜೀವ ವಾಚಕವು ಎಂದರೆ) ಬೃಹಧಾತುವು ಜಾತಿ ಜೀವ ಬ್ರಹ್ಮ ಶಬ್ದರಾಶಿ (ವೇದ) ಈ ಅರ್ಥಗಳಲ್ಲಿದೆ. ಎಂದು (ಧಾತುವ್ಯಾಖ್ಯಾನದಿಂದ) ( ಹಾಗಾದರೆ ಬ್ರಹ್ಮಶಬ್ದವು ಸರ್ವಸಾಧಾರಣವಾಗಿರುವುದರಿಂದ ನಿಶ್ಚಾಯಕವಾಗುವುದಿಲ್ಲ ಎಂದರೆ) (ಬ್ರಹ್ಮಶಬ್ದದಿಂದ ಮಾತ್ರವಲ್ಲ, ಮತ್ತು) ಯಾವ ಕಾರಣದಿಂದ ಜೀವರಿಗೆ **ಅನ್ನರಸಮಯಃ ಪ್ರಾಣಮಯಃ** ಎಂದು ಹೇಳಲ್ಪಟ್ಟ ಅನ್ನಾದಿವಿಕಾರಗಳಾದ ದೇಹಾದಿಗಳ ಅಭಿಮಾನಿತ್ವವಿದ್ದುದರಿಂದ ಅನ್ನಮಯತ್ವಾದಿಗಳು

ಪ್ರಾಪ್ತವಾದವೋ, ಆದಕಾರಣ ಅದರೊಂದಿಗೆ ಪಠಿತವಾದುದರಿಂದಲೂ ಆನಂದಮಯತ್ವವು ಪ್ರಾಪ್ತವಾಗುತ್ತದೆ.

**ವಿಶೇಷಾಂಶ ॥** (ಎ) ಇಲ್ಲಿ ಹಿರಣ್ಯಗರ್ಭಾದಿಗಳು ಜೀವರಾದಾಗ್ಯೂ ದೇವತ್ವವೆನ್ನುವ ವಿಶೇಷವನ್ನು ವಿವಕ್ಷಿಸಿಕೊಂಡು ಪ್ರತ್ಯೇಕ ಹೇಳಿರುವರು. ಆದುದರಿಂದಲೇ ತತ್ತ್ವಪ್ರದೀಪದಲ್ಲಿ **ಬ್ರಹ್ಮಾದಿರ್ಯಸ್ಯ ದೇವತಾ ಸಂಘಸ್ಯ** ಎಂದು ವಿಗ್ರಹವನ್ನು ತೋರಿಸಿರುವರು. (ಬಿ) ದೇವತೆಗಳಲ್ಲಿಯೂ ಬ್ರಹ್ಮರುದ್ರರು ಅತಿಪ್ರಸಿದ್ಧರಾದುದರಿಂದ ಅವರನ್ನು ಪ್ರತ್ಯೇಕ ಹೇಳಿರುವರು. (ಸಿ) **ಬ್ರಹ್ಮಾ ಶಿವಃ ಸುರೇಶಾದ್ಯಾಃ** ಎನ್ನುವ ವಚನದಲ್ಲಿ ಹೇಳಿದಕ್ರಮದಿಂದ ಕ್ಷರದೇವತೆಗಳನ್ನು ಹೇಳಿದ ಮೇಲೆ ಅಕ್ಷರಳಾದ ಪ್ರಕೃತಿಯನ್ನು ಹೇಳಿರುವರು. (ಡಿ) ಆಮೇಲೆ ಅತ್ಯಲ್ಪ ಪ್ರತಿಭೆಯುಳ್ಳವರಾದುದರಿಂದ ದೃಶ್ಯಮಾನ ದೇಹಾಭಿಮಾನಿಗಳಾದ ಜೀವರನ್ನು ಹೇಳಿರುವರು.

**ಪೀಠಿಕೆ ॥** ಸಿದ್ಧಾಂತೀಕರಿಸುತ್ತಾರೆ—

**ಭಾಷ್ಯ ॥ ತಥಾಽಪಿ ನ ತ.ಆನಂದಮಯಶಬ್ದೇನೋಚ್ಯಂತೇ । ಕಿಂತು ವಿಷ್ಣುರೇವ । ತದೇವ ಬ್ರಹ್ಮ ಪರಮಂ ಕವೀನಾಂ ।** (ಮಹಾನಾ.೧.೬.) **ಏತಮೇವ ಬ್ರಹ್ಮೇತ್ಯಾಚಕ್ಷತೇ** (ಐ.ಆ.೩.೨.೩.೧೨.) **॥ ೧೧ ॥**

**ಭಾಷ್ಯಾರ್ಥ ॥** (ಯದ್ಯಪಿ ಹೀಗೆ ಇತರರಿಗೂ ಆನಂದಮಯತ್ವವು ಪ್ರಾಪ್ತವಾಗುತ್ತದೆ.) ಆದಾಗ್ಯೂ ಇಲ್ಲಿ ಯಾರು ಆನಂದಮಯಶಬ್ದದಿಂದ ಹೇಳಲ್ಪಡುತ್ತಾರೋ ಅವರು ಚತುರ್ಮುಖಾದಿಗಳು ಅಲ್ಲ. ಮತ್ತೆ ಯಾರು ಎಂದರೆ ಆನಂದಮಯಶಬ್ದದಿಂದ ಹೇಳಲ್ಪಡತಕ್ಕವನು ವಿಷ್ಣುವೇ. (ಆನಂದಮಯನು ವಿಷ್ಣುವೇ ಏಕೆ ಆಗಬೇಕು ಎಂದರೆ) ಜ್ಞಾನಿಗಳ ಮತದಲ್ಲಿ ವಿಷ್ಣುವೇ ಮುಖ್ಯವಾಗಿ ಬ್ರಹ್ಮಶಬ್ದವಾಚ್ಯನು. ವಿಷ್ಣುವನ್ನೇ ಬ್ರಹ್ಮನೆಂದು ಹೇಳುತ್ತಾರೆ. (ಇತ್ಯಾದಿ ವಾಕ್ಯಗಳಲ್ಲಿ ವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ಬ್ರಹ್ಮಶಬ್ದಕ್ಕೆ ಆನಂದಮಯನಲ್ಲಿ ಅಭ್ಯಾಸವಿದ್ದುದರಿಂದ).

**ಭಾಷ್ಯ ॥ ಬ್ರಹ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ । ಅಸಂಪೂರ್ಣಾಃ ಪರೇ ಯಸ್ಮಾದುಪಚಾರೇಣ ವಾ ಭವೇತ್ ॥ ೧೨ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ವಿಷ್ಣುವು ಸರ್ವಗುಣಪರಿಪೂರ್ಣನೋ ಆದಕಾರಣ ಪೂರ್ಣನಾದ ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವು ಮುಖ್ಯವೆಂದು (ಪ್ರಾಮಾಣಿಕರಿಂದ) ಅಂಗೀಕರಿಸಲ್ಪಡುತ್ತದೆ. ವಿಷ್ಣುವಿನಿಂದ ಇತರರಾದ ಚತುರ್ಮುಖಾದಿಗಳಲ್ಲಿ ಯಾರಲ್ಲಿಯೂ ಮುಖ್ಯವೆಂದು ಅಂಗೀಕರಿಸಲ್ಪಡುವುದಿಲ್ಲ (ಏಕೆಂದರೆ ಅವರಿಗೆ ಬ್ರಹ್ಮಶಬ್ದಮುಖ್ಯಾರ್ಥತ್ವವಿಲ್ಲ ಎನ್ನುವಲ್ಲಿ ಹೇತುವನ್ನು ಹೇಳುತ್ತಾರೆ.) ಇತರರು ಯಾವ ಕಾರಣದಿಂದ ಅಸಂಪೂರ್ಣರೇ ಆಗಿರುವರೋ. (ಹಾಗಾದರೆ—೧ **ತಸ್ಮಾ ದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ** (ಮು.೧.೧.೯.) ೨ **ದ್ವೇ ಬ್ರಹ್ಮಣೇ ವೇದಿತವ್ಯೇ** (ಮೈತ್ರಿ. ಉ.೬.೨೨.) ೩. **ಬ್ರಹ್ಮಾಣಿ ಜೀವಾಃ ಸರ್ವೇಽಪಿ** ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮಶಬ್ದವು ಇತರರಲ್ಲಿ ಹೇಗೆ ಕೂಡುತ್ತದೆ ಎಂದರೆ) ಬ್ರಹ್ಮಶಬ್ದವು ಕೆಲವು ಕಡೆ ಬೇರೆಯವರ(ಚತುರ್ಮುಖಾದಿಗಳ)ಲ್ಲಿ ಇಷ್ಟವಾದಾಗ್ಯೂ ಪರಮಮುಖ್ಯವೃತ್ತಿಯಿಂದ ಇತರವಾದ ಅಮುಖ್ಯವೃತ್ತಿಯಿಂದಲೇ ಕೂಡುವುದು.

ಭಾಷ್ಯ ॥ ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥ ೧೩ ॥

ಭಾಷ್ಯಾರ್ಥ ॥ ವದಂತಿ ತತ್ತತ್ತ್ವವಿದಸ್ತತ್ತ್ವಂ ಯಜ್ಜ್ಞಾನಮದ್ವಯಂ। ಬ್ರಹ್ಮೇತಿ ಅದ್ವಯಂ = ಸಮಾಧಿಕವಿಲ್ಲದಿರುವ, ಜ್ಞಾನಂ = ಜ್ಞಾನಸ್ವರೂಪವಾದ, ಯತ್ತತ್ತ್ವಂ = ಯಾವ ತತ್ತ್ವವನ್ನು, ತತ್ತ್ವವಿದಃ = ಜ್ಞಾನಿಗಳು, ವದಂತಿ = ಹೇಳುತ್ತಾರೋ, ತತ್ = ಅದನ್ನು) ದೇಶ ಕಾಲಾದಿಗಳಲ್ಲಿ ಪೂರ್ಣವಾದುದರಿಂದ ಬ್ರಹ್ಮನೆಂದೂ ಸರ್ವಾಂತರ್ಯಾಮಿಯಾದುದರಿಂದ ಪರಮಾತ್ಮನೆಂದೂ, ಐಶ್ವರ್ಯಾದಿಗುಣಗಳು ಇದ್ದುದರಿಂದ ಭಗವಾನ್ ಎಂದೂ ಹೇಳಲ್ಪಡುತ್ತಾನೆ.)

ಭಾಷ್ಯ ॥ ವಾಸುದೇವಾತ್ಮಕಂ ಬ್ರಹ್ಮ ಮೂಲಮಂತ್ರೇಣಾ ವಾ ಯತಿಃ ಇತ್ಯಾದಿಷು ತಸ್ಮಿನ್ನೇವ ಪ್ರಸಿದ್ಧಬ್ರಹ್ಮಶಬ್ದಾಭ್ಯಾಸಾತ್ ॥ ೧೪ ॥

ಭಾಷ್ಯಾರ್ಥ ॥ ಬುದ್ಧ್ವಾ ಅವಿಹಿಂಸನ್ ಪುಷ್ಪೈರ್ವಾ ಪ್ರಣವೇನ ಸಮರ್ಚಯೇತ್ ಎನ್ನುವ ಪೂರ್ವವಾಕ್ಯವನ್ನು ಸೇರಿಸಿಕೊಳ್ಳಬೇಕು. ತಥಾ ಚ ಸನ್ಯಾಸಿಗಳು ಕೃಷ್ಣಾಖ್ಯಬ್ರಹ್ಮನನ್ನು ಮನಸ್ಸಿನಿಂದ ಪುಷ್ಪಾದಿಗಳಿಂದಲಾಗಲೀ, ಯಾರಿಗೂ ಹಾನಿಯನ್ನು ಮಾಡದೆ ಇದ್ದವರಾಗಿ ಪ್ರಣವದಿಂದಲಾಗಲೀ ಅಷ್ಟಾಕ್ಷರದಿಂದಲಾಗಲೀ ಪೂಜಿಸತಕ್ಕುದು. *ಇದು ಮೊದಲಾದ ವಾಕ್ಯಗಳಲ್ಲಿ ವಿಷ್ಣುವಿನಲ್ಲಿಯೇ ಮುಖ್ಯವೃತ್ತಿ ಯುಳ್ಳದ್ದಾಗಿ ಹೇಳಲ್ಪಟ್ಟ ಬ್ರಹ್ಮಶಬ್ದಕ್ಕೆ ಆ ಆನಂದಮಯನನ್ನು ಕುರಿತು ಪ್ರವೃತ್ತವಾದ ಅಸನ್ನೇವ ಸ ಭವತಿ ಎನ್ನುವ ಶ್ಲೋಕದಲ್ಲಿ ಅನೇಕಾವರ್ತಿ ಶ್ರುತವಾದ ಪ್ರಯುಕ್ತ (ಆನಂದಮಯಶಬ್ದಕ್ಕೆ ವಿಷ್ಣುವಿನಲ್ಲಿಯೇ ತಾತ್ಪರ್ಯವೆಂದು ಅವಗತವಾಗುತ್ತದೆ.)

ವಿಶೇಷಾಂಶ— (ಎ) ಅಪ್ರಯೋಜಕತಾಶಂಕೆಯನ್ನು ನಿವಾರಿಸಿ ಬ್ರಹ್ಮಶಬ್ದವು ಅನ್ಯತ್ರ ನಿರವಕಾಶವಾಗಿದೆ ಎಂದು ತಿಳಿಸುವುದಕ್ಕಾಗಿ ತಸ್ಮಿನ್ ಪ್ರಸಿದ್ಧ ಏವ ಎಂದೂ ಹೇಳಿರುವರು. (ಬಿ) ಬುದ್ಧ್ವಾ ಸಮರ್ಚಯೇತ್ ಎನ್ನುವುದರಿಂದ ಯತಿಗಳಿಗೆ ಮಾನಸಪೂಜೆಯು ಉಕ್ತವಾಯಿತು. (ಸಿ) ಪುಷ್ಪೈರ್ವಾ ಎಂದು ಹೇಳಿದುದರಿಂದ ಕಾಯಿಕಪೂಜೆಯು (ಡಿ) ಅವಿಹಿಂಸನ್ ಎನ್ನುವುದರಿಂದ ಸನ್ಯಾಸಿಗಳ ಸಾಮಾನ್ಯ ಧರ್ಮವನ್ನು ಹೇಳಿದರು. ಇದರಿಂದ ಯತಿಗಳಿಗೆ ವೈಷ್ಣವತ್ವ ಪ್ರಯುಕ್ತವಾದ ತುಳಸೀಪುಷ್ಪಾದ್ಯಾಹರಣಾದಿರೂಪವಾದ ವಿಶೇಷಧರ್ಮದೆಸೆಯಿಂದ ಅಹಿಂಸಾರೂಪವಾದ ಸಾಮಾನ್ಯ ಧರ್ಮವೇ ಬಲಿಷ್ಠವೆಂದು ಹೇಳಿದಂತೆ ಆಯಿತು. ಸಾಮಾನ್ಯಧರ್ಮೋ ಬಲವಾನ್ ಧರ್ಮಾದ್ವೈಶೇಷಿಕಾದ್ಯತಃ। ಎಂದು ಬೃಹದ್ಭಾಷ್ಯದಲ್ಲಿ ಹೇಳಿರುವರು. (ಇ) ಪ್ರಣವೇನ ಮೂಲಮಂತ್ರೇಣ ವಾ ಎನ್ನುವುದರಿಂದ ವಾಚಕಪೂಜೆಯನ್ನು ಹೇಳಿದರು.

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳುತ್ತಾರೆ—

ಸೂತ್ರ ॥ ಓಂ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ಓಂ ॥ ೧೩ ॥

ಸೂತ್ರಾರ್ಥ ॥ ವಿಕಾರಾರ್ಥವಾದ ಮಯಟ್ ಶಬ್ದವಿದ್ದುದರಿಂದ ಅನ್ನಮಯಾದಿ ಶಬ್ದವಾಚ್ಯನು

* ಆದಿಪದದಿಂದ ೧ ಪರಮಂ ಯೋ ಮಹದ್ಬ್ರಹ್ಮ, ೨ ವಾಸುದೇವಾತ್ಪರಃ ಕೋ ನು ಬ್ರಹ್ಮಶಬ್ದೋದಿತೋ ಭವೇತ್। ಇತ್ಯಾದಿ ವಾಕ್ಯಗಳನ್ನು ಇಟ್ಟುಕೊಳ್ಳಬೇಕು.

ಬ್ರಹ್ಮನಲ್ಲ ಎಂದು ಹೇಳಕೂಡದು. ಇಲ್ಲಿದ್ದ ಮಯಟ್ ಶಬ್ದ ಸಮುದಾಯಕ್ಕೆ ಪ್ರಾಚುರ್ಯಾರ್ಥತ್ವ ಎದ್ದುದರಿಂದ. (ಆದಕಾರಣ ಆನಂದಮಯಾದಿ ಶಬ್ದವಾಚ್ಯನು ಶ್ರೀಪರಮಾತ್ಮನೇ.) ಶಬ್ದಾತ್ ಎನ್ನುವ ಏಕವಚನವು ಸಮುದಾಯಾಭಿಪ್ರಾಯವುಳ್ಳದ್ದು.

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಪಠನಮಾಡಿ ಆಕ್ಷೇಪಾಂಶವನ್ನು ವ್ಯಾಖ್ಯಾನಮಾಡುತ್ತಾರೆ.

**ಭಾಷ್ಯ ॥ ವಿಕಾರಾತ್ಮಕತ್ವಾತ್ತದಭಿಮಾನಿತ್ವಾಚ್ಚ ಯುಜ್ಯತೇ ಪ್ರಕೃತಾದೀನಾಂ ಮಯಟ್ ಶಬ್ದಃ । ನ ತು ಪರಮಾತ್ಮನ ಇತಿ ಮಾಭೂತ್। ಪ್ರಚುರಾನಂದ ತ್ವಾದ್ವಾನಂದಮಯಃ । ನ ತು ತದ್ವಿಕಾರತ್ವಾತ್ ॥ ೧೫ ॥**

**ಭಾಷ್ಯಾರ್ಥ ॥** (ಆನಂದಮಯಾದಿಶಬ್ದವಾಚ್ಯನು ವಿಷ್ಣುವಲ್ಲ, ಮತ್ತೆ ಪ್ರಕೃತ್ಯಾದಿಗಳೇ. ಏಕೆಂದರೆ ಇಲ್ಲಿ) ವಿಕಾರಾರ್ಥಕವಾದ ಮಯಟ್ ಶಬ್ದವು (ಪ್ರಯುಕ್ತವಾಗಿದೆ. ಅದು ವಿಕಾರ ವಿಕಾರಾಭಿಮಾನಿತ್ವ ಗಳಿಂದಲೇ ಕೂಡುತ್ತದೆ. ಆದಕಾರಣ) ಮಯಟ್ ಶಬ್ದವುಳ್ಳ ಆನಂದಮಯಾದಿಶಬ್ದವಾಚ್ಯಗಳು ಪ್ರಕೃತ್ಯಾದಿಗಳೇ. (ಏಕೆಂದರೆ) ಜಡಪ್ರಕೃತಿಗೆ ವಿಕಾರಾತ್ಮಕತ್ವವಿದ್ದುದರಿಂದಲೂ ಚೇತನಪ್ರಕೃತ್ಯಾದಿಗಳಿಗೆ ವಿಕಾರಾಭಿಮಾನಿತ್ವವಿದ್ದುದರಿಂದಲೂ ಪರಮಾತ್ಮನಿಗೆ (ವಿಕಾರಿತ್ವ ವಿಕಾರಾಭಿಮಾನಿತ್ವಗಳೆರಡೂ ಇಲ್ಲದಿರುವುದರಿಂದಲೂ) ಮಯಟ್ ಶಬ್ದವು ಕೂಡುವುದಿಲ್ಲ ಎನ್ನುವ (ಶಂಕೆಯು) ಕೂಡುವುದಿಲ್ಲ (ಏಕೆಂದರೆ) ಆನಂದಮಯಪದಾರ್ಥವು ಪೂರ್ಣಾನಂದತ್ವನಿಮಿತ್ತದಿಂದಲೇ (ಆನಂದಮಯಪದ ದಿಂದ ಹೇಳಲ್ಪಡುತ್ತದೆ.) ಆನಂದವಿಕಾರತ್ವವಿದ್ದ ಪ್ರಯುಕ್ತವಲ್ಲ.

**ವಿಶೇಷಾಂಶ ॥** (ಎ) **ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿಧಾ।** ಎಂದು ಮಯಟ್ ಪ್ರತ್ಯಯಕ್ಕೆ ಮೂರು ಅರ್ಥವನ್ನು ಹೇಳಿದುದರಿಂದ ಪ್ರಕೃತ ಪ್ರಾಚುರ್ಯರೂಪವಾದ ಅರ್ಥಾಂತರವನ್ನು ಇಟ್ಟುಕೊಂಡು ಪ್ರವೃತ್ತವಾದುದರಿಂದ ವಿರೋಧವಿಲ್ಲ. (ಬಿ) ಯದ್ಯಪಿ ಶ್ರುತಿಸೂತ್ರಗಳಲ್ಲಿರತಕ್ಕ ತದ್ಧಿತಾಂತವಾದ ಆನಂದಮಯ ಎನ್ನುವ ಪದಕ್ಕೆ ಅರ್ಥವನ್ನು ಹೇಳುವುದಕ್ಕೆ ಅನುಕೂಲವಾಗಿ **ಆನಂದಃ ಪ್ರಚುರಃ ಯಸ್ಮಿನ್** ಎಂದು ವಿಗ್ರಹವನ್ನು ಮಾಡಬೇಕಿತ್ತು. ಅದಕ್ಕೆ ವಿಪರೀತವಾಗಿ **ಪ್ರಚುರಃ ಆನಂದಃ ಅಸ್ಮಿನ್** ಎಂದು ವಿಗ್ರಹವನ್ನು ಮಾಡಬಾರದಿತ್ತು. ಆದಾಗ್ಯೂ ಆನಂದಮಯ ಎಂದು ತದ್ಧಿತವೃತ್ತಿಗೆ ಅನನುಗುಣ ವಾಗಿ **ಆನಂದಪ್ರಚುರಃ** ಎಂದು ಸಮಾಸವಾಕ್ಯವನ್ನು ಹೇಳಿದರೆ **ಬ್ರಾಹ್ಮಣಪ್ರಚುರೋ ಗ್ರಾಮಃ** ಎನ್ನುವಲ್ಲಿ ಬ್ರಾಹ್ಮಣರು ಹೆಚ್ಚು ಅಬ್ರಾಹ್ಮಣರೂ ಅಲ್ಪವಾಗಿ ಇರಬಹುದು ಎಂದು ಹೇಗೆ ಅರ್ಥವಾಗುವುದೋ ಹಾಗೆಯೇ ಅನಾನಂದ(ದುಃಖ)ವೂ ಪ್ರಾಪ್ತವಾಗಬಹುದು. ಅದನ್ನು ನಿವಾರಿಸುವುದಕ್ಕಾಗಿ **ಪ್ರಚುರಾನಂದಃ** ಎಂದು ವಿಪರೀತಸಮಾಸವನ್ನು ಮಾಡಿರುವರು. (ಸಿ) ಯದ್ಯಪಿ ಶ್ರುತಿಸೂತ್ರಗಳನ್ನು ಅನುಸರಿಸಿಕೊಂಡು **ಆನಂದಸ್ಯ ಪ್ರಾಚುರ್ಯಾತ್** ಎಂದು ಪ್ರಾಚುರ್ಯವನ್ನು ವಿಶೇಷವಾಗಿ ಹೇಳಿದರೂ ಅನಾನಂದವು ಪ್ರಾಪ್ತಿಯಾಗುವುದಿಲ್ಲ. **ಪ್ರಕಾಶಪ್ರಚುರೋ ರವಿಃ** ಎಂದು ಹೇಳಿದರೂ ಸೂರ್ಯನಲ್ಲಿ ಅಂಧಕಾರಲೇಶವೂ ಪ್ರತೀತ ವಾಗುವುದಿಲ್ಲವಷ್ಟೆ. ತಥಾಚ **ಆನಂದಪ್ರಚುರತ್ವಾತ್** ಎಂದೇ ವ್ಯಾಖ್ಯಾನಮಾಡಬಹುದಿತ್ತು. ಆದರೂ

ಪ್ರಚುರಾನಂದತ್ವಾತ್ ಎಂದು ಪ್ರಾಚುರ್ಯವು ವಿಶೇಷಣವಾದರೆ ಅನಾನಂದವು ಪ್ರಾಪ್ತಿಯಾಗುವುದಿಲ್ಲ ವೆಂದು ಪರರೂ ಸ್ವೀಕಾರಮಾಡಿರುವರು. ವಿಶೇಷ್ಯವಾದರೆ **ಬ್ರಾಹ್ಮಣಪ್ರಚುರೋ ಗ್ರಾಮಃ** ಇತ್ಯಾದಿಗಳಲ್ಲಿದ್ದಂತೆಯೇ ಅನಾನಂದವು ಪ್ರಾಪ್ತಿಯಾಗುತ್ತದೆ ಎಂದು ಅಂಗೀಕಾರಮಾಡಿದ ಪ್ರಯುಕ್ತ ಉಭಯವಾದಿಗಳಿಗೂ ಸಿದ್ಧಿಯಾಗಿದೆ ಎಂದು ಅನುಸರಿಸಿಕೊಂಡೇ ವ್ಯಾಖ್ಯಾನ ಮಾಡಿರು ವರು. ಆ ಅಭಿಪ್ರಾಯದಿಂದಲೇ **ಪ್ರಚುರಾನಂದತ್ವಾತ್** ಎಂದು ಭಾಷ್ಯದಲ್ಲಿ ಹೇಳಿರುವರು ಎಂದು ಚಂದ್ರಿಕಾಗ್ರಂಥದಲ್ಲಿ ಹೇಳಿಯದೆ.

**ಪೀಠಿಕೆ ॥** ಹಾಗಾದರೆ ಈ ಆನಂದಮಯಶಬ್ದವು ಪ್ರಚುರಾನಂದತ್ವವನ್ನು ಹೇಳುವುದಿಲ್ಲ. ಮತ್ತೆ ವಿಕಾರಾರ್ಥತ್ವವನ್ನೇ ಹೇಳುತ್ತದೆ. ಅನ್ನಾದಿವಿಕಾರಾರ್ಥವುಳ್ಳ ಅನ್ನಮಯಾದಿಶಬ್ದಗಳಿಂದ ಕೂಡಿ ಪಠಿತವಾಗಿದೆ, ಎಂದರೆ—

**ಭಾಷ್ಯ ॥ ಅನ್ನಾದೀನಾಂ ಚ ಪ್ರಾಚುರ್ಯಮೇವ ॥ ೧೬ ॥**

**ಭಾಷ್ಯಾರ್ಥ ॥** (ಆನಂದಮಯಶಬ್ದದಲ್ಲಿರುವ ಮಯಟ್ ಶಬ್ದ ಮಾತ್ರ ಪ್ರಾಚು ರ್ಯಾರ್ಥಕವೆಂದಲ್ಲ, ಮತ್ತೆ) ಅನ್ನಮಯ, ಪ್ರಾಣಮಯ ಶಬ್ದಗಳಲ್ಲಿರತಕ್ಕ ಮಯಟ್ ಶಬ್ದವೂ ಕೂಡ ಅನ್ನಾದಿಗಳ ಪ್ರಾಚುರ್ಯವನ್ನೇ ಹೇಳುತ್ತದೆ. (ವಿಕಾರ ರೂಪವಾದ ಅರ್ಥವನ್ನು ಹೇಳುವುದಿಲ್ಲ)

**ವಿಶೇಷಾಂಶ ॥** (ಎ) ಆದಿಶಬ್ದದಿಂದ ಪ್ರಾಣಾದಿಗಳನ್ನು ಇಟ್ಟುಕೊಳ್ಳಬೇಕು. (ಬಿ) ಮೊದಲು ಅನ್ನಮಯತ್ವಾದೇಶ್ಚ ಎಂದೂ ಇಲ್ಲಿ ಅನ್ನಾದೀನಾಂ ಎಂದೂ ಬಹುಪದಾರ್ಥಗಳನ್ನು ಗ್ರಹಣಮಾಡಿದು ದರಿಂದ ಸೂತ್ರದಲ್ಲಿದ್ದ ಆನಂದಮಯಶಬ್ದದಿಂದ ಸಮಾನಗಳಾದ ಅನ್ನಮಯಶಬ್ದಾಂತರಗಳನ್ನೂ ಇಟ್ಟುಕೊಳ್ಳಬೇಕೆಂದು ಸೂಚಿಸಿರುವರು.

**ಪೀಠಿಕೆ ॥** ಹಾಗಾದರೆ ಇಲ್ಲಿ ಅನ್ನಮಯ ಶಬ್ದಕ್ಕೆ ಅನ್ನಪ್ರಾಚುರ್ಯವೆನ್ನುವ ಅರ್ಥವು ಹೇಗೆ ಕೂಡುತ್ತದೆ. ಔಷಧಿಗಳಿಂದ ಹುಟ್ಟಿದ ಅನ್ನಪ್ರಾಚುರ್ಯವು ಅನ್ನೋಪಜೀವಿಗಳಾದ ಪಾರ್ಥಿವ ಶರೀರ ಗಳಲ್ಲಿ ಕೂಡಿದರೂ ಅಪ್ರಾಕೃತಶರೀರವುಳ್ಳ ಶ್ರೀಹರಿಯಲ್ಲಿ ಕೂಡಲಾರದು. ಮತ್ತು ಪ್ರಸಿದ್ಧ ಅನ್ನ ಪ್ರಾಚುರ್ಯವನ್ನು ಹೇಳಿದರೆ ಶ್ರೀಹರಿಗೆ ಅತ್ಯಲ್ಪತ್ವವೇ ಸಿದ್ಧಿಸುವುದು, ಮಹತ್ವವು ಸಿದ್ಧವಾಗಲಾರದು. ಎಂದರೆ—

**ಭಾಷ್ಯ ॥ ಅದ್ಯತೇಽತ್ತಿ ಚ (ತೈ.೨.೨.) ಇತಿ ವ್ಯಾಖ್ಯಾನಾತ್ತತ್ಪ್ರಾಚುರ್ಯಂ ಚ ಯುಜ್ಯತೇ ॥ ೧೭ ॥**

**ಭಾಷ್ಯಾರ್ಥ ॥** ಅನ್ನಪ್ರಾಚುರ್ಯವು ಅನ್ನಮಯಶಬ್ದಾರ್ಥವು ಕೂಡುತ್ತದೆ. ಏಕೆಂದರೆ— ಆ ಅನ್ನಪ್ರಾಚುರ್ಯವು ಪರಮಾತ್ಮನಿಗೆ ಸಂಗತವಾಗುತ್ತದೆ. (ಹಾಗಾದರೆ ಅನ್ನಪ್ರಾಚುರ್ಯ ಕಥನವು ಅಲ್ಪಾರ್ಥಕವಾದುದರಿಂದ ಮಾಹಾತ್ಮ್ಯಪ್ರತಿಪಾದಕವಾಗದಿರುವುದರಿಂದ ಅದು ಶ್ರೀಪರಮಾತ್ಮನಲ್ಲಿ ಹೇಗೆ ಕೂಡುತ್ತದೆ ಎಂದು ಹೇಳಕೂಡದು. ಏಕೆಂದರೆ ಇಲ್ಲಿ ಅನ್ನಶಬ್ದದಿಂದ ಸುಧಾದಲ್ಲಿ ಹೇಳಿದಪ್ರಕಾರ ಆವಾವ ಭೂತಾದ್ಯತ್ವ ಭೂತಸಂಪರ್ತೃತ್ವರೂಪವಾದ ಎರಡು ಅರ್ಥಗಳೇ ಹೇಳಲ್ಪಡುತ್ತವೆ.

ಪ್ರಸಿದ್ಧವಾದ ಅನ್ನವು ಹೇಳಲ್ಪಡುವುದಿಲ್ಲ. ಈ ಅರ್ಥವು ಯಾವುದರಿಂದ ತಿಳಿಯುತ್ತದೆ ಎಂದರೆ) ಚ= ಯಾವಕಾರಣದಿಂದ, ಅದ್ಯತೇ=ಪ್ರಾಣಿಗಳಿಂದ ಉಪಜೀವಿಸಲ್ಪಡುತ್ತಾನೋ, ಭೂತಾನಿ= ಪ್ರಾಣಿಗಳನ್ನು ಅತ್ತಿ ಚ=ಸಂಹಾರ ಮಾಡುತ್ತಾನೋ, ತಸ್ಮಾತ್=ಆದುದರಿಂದ, ತತ್=ವಿಷ್ಣ್ವಾಖ್ಯಬ್ರಹ್ಮನು, ಅನ್ನಂ= ಅನ್ನಶಬ್ದವಾಚ್ಯನೆಂದು, ಉಚ್ಯತೇ=ವೇದಗಳಲ್ಲಿ ಹೇಳಲ್ಪಡುತ್ತಾನೆ. ಈ ವಾಕ್ಯಗಳಿಂದ ಅನ್ನಶಬ್ದವನ್ನು ವ್ಯಾಖ್ಯಾನಮಾಡಿದುದರಿಂದ. (ಪ್ರಸಿದ್ಧವಾದ ಅನ್ನಕ್ಕೆ ಭೂತಾತ್ತೃತ್ವವು ಭೂತಸಂಹರ್ತೃತ್ವವೂ ಕೂಡದಿರುವುದರಿಂದ ಅದನ್ನು ಇಟ್ಟುಕೊಳ್ಳಲಿಕ್ಕೆ ಆಗುವುದೇ ಇಲ್ಲ.)

**ವಿಶೇಷಾಂಶ ॥** ಹೀಗೆ ಪ್ರಾಣಶಬ್ದಕ್ಕೆ ಶ್ವಾಸವಾಯು ಪ್ರಾಚುರ್ಯ, ಮನ ಆದಿ ಶಬ್ದಕ್ಕೆ ಅಂತಃಕರಣ, ಬುದ್ಧಿಪ್ರಾಚುರ್ಯವೆನ್ನುವ ಅರ್ಥವನ್ನು ಇಟ್ಟುಕೊಂಡರೆ ಅಲ್ಪಾರ್ಥತ್ವವು ತೋರುವುದು. ಅದನ್ನು ಪ್ರಕೃಷ್ಟ ಚೇಷ್ಟಕತ್ವ ಪೂರ್ಣಜ್ಞಾನಗಳೆನ್ನುವ ಅರ್ಥವನ್ನು ಇಟ್ಟುಕೊಂಡು ಪರಿಹರಿಸಿಕೊಳ್ಳಬೇಕು.

**ಪೀಠಿಕೆ ॥** ಆದಾಗ್ಯೂ ಬ್ರಹ್ಮನಿಗೆ ಪ್ರಚುರ ಭೂತಾದ್ಯತ್ವವು ಹೇಗೆ ಕೂಡಬಹುದು. ಭಕ್ಷ್ಯತ್ವರೂಪವಾದ ಅದ್ಯತ್ವವು ಬ್ರಹ್ಮನಲ್ಲಿ ಕೂಡಲಾರದು ಎಂದರೆ ಅದ್ಯತ್ವಶಬ್ದಾರ್ಥವನ್ನು ಹೇಳುತ್ತಾರೆ—

**ಭಾಷ್ಯ ॥ ಉಪಜೀವ್ಯತ್ವಮೇವಾದ್ಯತ್ವಂ ॥ ೧೮ ॥**

**ಭಾಷ್ಯಾರ್ಥ ॥** (ಸುಧಾದಲ್ಲಿ ಹೇಳಿದಪ್ರಕಾರ ಗೌಣೀವೃತ್ತಿಯಿಂದ) ಉಪಜೀವ್ಯತ್ವವೇ ಅದ್ಯತ್ವವು (ಎಂದು ವಿವಕ್ಷಿತವಾಗಿದೆ. ಭಕ್ಷ್ಯತ್ವವಲ್ಲ. ಆದಾದರೂ ಬ್ರಹ್ಮನಲ್ಲಿ ವಿರುದ್ಧವಲ್ಲ.)

**ವಿಶೇಷಾಂಶ ॥** (ಎ) ತತ್ವಪ್ರದೀಪದಲ್ಲಿ ಲೌಕಿಕಾನ್ನವು ಸರ್ವಭೂತಗಳಿಗೆ ಮುಖ್ಯಅದ್ಯವಲ್ಲ. ಮತ್ತೆ ಅದರಲ್ಲಿರತಕ್ಕ ವಿಷ್ಣುವೇ ಅದನಫಲಭೂತವಾದ ತೃಪ್ತಿ ತುಷ್ಟಿಗಳನ್ನು ಕೊಡತಕ್ಕವನಾದುದರಿಂದ ಮುಖ್ಯವಾಗಿ ಅದ್ಯನು. ಆದುದರಿಂದ ಉಪಜೀವ್ಯತ್ವರೂಪವಾದ ಅದ್ಯತ್ವವೇ ಅನ್ನಶಬ್ದಕ್ಕೆ ಮುಖ್ಯಾರ್ಥ ವೆಂದು ಹೇಳಿರುತ್ತಾರೆ. **ಅತ್ತೃತ್ವಾತ್ಸರ್ವಲೋಕಾನಾಮನ್ನಮಿತ್ಯುಚ್ಯತೇ ಹರಿಃ । ಉಪಜೀವ್ಯಶ್ಚ ಭೂತಾನಾಮಿತಿ ಚಾನ್ನಂ ಜನಾರ್ದನಃ ।** ಎನ್ನುವ ಪ್ರಮಾಣದಿಂದ ಉಪಜೀವ್ಯತ್ವವೇ ಅದ್ಯಶಬ್ದ ಮುಖ್ಯಾರ್ಥವೆಂದು ಹೇಳಿರುತ್ತಾರೆ. (ಬಿ) ಹಾಗಾದರೆ ಸುಧಾ ಗ್ರಂಥಕ್ಕೂ ತತ್ವಪ್ರದೀಪಕ್ಕೂ ಪರಸ್ಪರ ವಿರೋಧವು ಬಂತೆಂದು ಹೇಳಕೂಡದು. ಸರ್ವಶಬ್ದಗಳಿಗೂ ಶ್ರೀಹರಿಯಲ್ಲಿ ಸಮನ್ವಯದಲ್ಲಿಯೇ ತಾತ್ಪರ್ಯವು ಎನ್ನುವ ಅಭಿಪ್ರಾಯದಿಂದ ತತ್ವಪ್ರದೀಪವು ಪ್ರವೃತ್ತವಾಗಿದೆ. ಯಥಾಕಥಂಚಿತ್ ಸರ್ವಶಬ್ದಗಳಿಗೂ ಬ್ರಹ್ಮಪರತ್ವವು ಆವಶ್ಯಕವು ಎನ್ನುವ ಅಭಿಪ್ರಾಯದಿಂದ ಸುಧಾಗ್ರಂಥವು ಪ್ರವೃತ್ತವಾಗಿದೆ. ಆದಕಾರಣ ವಿರೋಧವಿಲ್ಲ.

**ಪೀಠಿಕೆ ॥** ಹಾಗಾದರೆ ಅನ್ನಮಯಶಬ್ದವು ಅನ್ನಪ್ರಾಚುರ್ಯಾರ್ಥಕವೆನ್ನುವುದು ಹೇಗೆ ಓಷಧೀಭ್ಯೋಽನ್ನಂ। ಅನ್ನಾತ್ಪುರುಷಃ ॥ (ತೈ.ಉ.೨.೧.೨.) ಎಂದು ಪ್ರಸಿದ್ಧವಾದ ಅನ್ನವಿಕಾರಶರೀರವನ್ನು ಹೇಳಿ ಸ ವಾ ಏಷ ಪುರುಷೋಽನ್ನರಸಮಯಃ ಎಂದು ಯಾವನು ಪುರುಷನೋ ಅವನು ಅನ್ನರಸಮಯ ಎಂದು ಅನ್ನವಿಕಾರಪುರುಷನನ್ನು ಪರಾಮರ್ಶಮಾಡಿಯದೆ. ಇಲ್ಲವಾದರೆ ಅದರಿಂದ ವಿರೋಧವು ಬರುವುದು. ಎಂದರೆ—

**ಭಾಷ್ಯ ॥ ಸ ವಾ ಏಷ (ತೈ.ಉ.೨.೨.) ಇತ್ಯನ್ಯಪ್ರಾರಂಭಾತ್ ॥ ೧೯ ॥**

**ಭಾಷ್ಯಾರ್ಥ ॥** ಯಾವ ಆತ್ಮನದೆಸೆಯಿಂದ ಆಕಾಶಾದಿಗಳು ಹುಟ್ಟಿದ್ದಾವೋ ಆ ಪುರುಷನು ಎಂದು ದೇಹದಿಂದ ಇತರನಾದ ಆತ್ಮನಿಗೆ ಪರಾಮರ್ಶವಿದ್ದುದರಿಂದ ಪರಾಮರ್ಶವಿರೋಧವಿಲ್ಲ.

**ವಿಶೇಷಾಂಶ ॥** (ಎ) ಆತ್ಮನಿಗೇನೇ ಪರಾಮರ್ಶವೆಂದು ಏಕೆ ಇಟ್ಟುಕೊಳ್ಳಬೇಕು ಎನ್ನುವ ಆಶಂಕೆಯನ್ನು ಕಳೆಯುವುದಕ್ಕಾಗಿ ಪರಾಮರ್ಶಾತ್ ಎಂದು ಹೇಳುವುದನ್ನು ಬಿಟ್ಟು ಪ್ರಾರಂಭಾತ್ ಎಂದು ಹೇಳಿರುವರು. ಹೇಗೆಂದರೆ ಮೊದಲು ಯಾವ ಆತ್ಮನಿಗೆ ಆಕಾಶಾದಿಕಾರಣತ್ವವನ್ನು ಹೇಳಿದ್ದಾರೋ, ಆತನಿಗೇನೇ ಅನ್ನಮಯಾದಿ ಪಂಚರೂಪತ್ವವನ್ನು ತೋರಿಸುವುದಕ್ಕಾಗಿ ಸ ವಾ ಏಷಃ ಎನ್ನುವುದು ಪ್ರಾರಂಭವಾಗಿದೆ, ಪ್ರಕ್ರಾಂತವಾಗಿದೆ. ಆ ಅಭಿಪ್ರಾಯದಿಂದಲೇ ಪ್ರಾರಂಭಾತ್ ಎಂದು ಹೇಳಿದ್ದಾರೆ. (ಬಿ) ಸ ವಾ ಎನ್ನುವಲ್ಲಿದ್ದ ವೈಶಬ್ದವು ಅವಧಾರಣಾರ್ಥಕವು ಅಥವಾ ಪ್ರಸಿದ್ಧ್ಯರ್ಥಕವು. (ಸಿ) ತಥಾ ಚ ಸತ್ಯತ್ವಾದಿಲಕ್ಷಣಗಳಿಂದ ಕೂಡಿದ ಯಾವ ಆತ್ಮನದೆಸೆಯಿಂದ ಆಕಾಶಾದಿಗಳು ಹುಟ್ಟಿದವೋ, ಸಃ ಅಂತಹ ಆತ್ಮಪದದಿಂದ ಹೇಳಲ್ಪಟ್ಟ ಭೂತಾದಿಗಳನ್ನು ಸೃಷ್ಟಿಮಾಡಿರತಕ್ಕ, ಏಷಃ ಜೀವರ ಶರೀರದಲ್ಲಿರತಕ್ಕ, ಪುರುಷಃ ಪೂರ್ಣ ಷಡ್ಗುಣಗಳುಳ್ಳ, ದೇಹದಲ್ಲಿರುವ ಭಗವಂತನು, ಅನ್ನರಸಮಯಃ ಉತ್ತಮಾನ್ನತ್ವಪೂರ್ಣನು ಎಂದು ಶ್ರುತ್ಯರ್ಥವು.

**ಪೀಠಿಕೆ ॥** ಹಾಗಾದರೆ ಈ ರೀತಿಯಾಗಿ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯ ವಿಕಾರ ಎನ್ನುವ ಎರಡು ಅರ್ಥಗಳಲ್ಲಿಯೂ ಪ್ರಯೋಗವಿದೆ. ಎರಡು ಕಲ್ಪಗಳಲ್ಲಿಯೂ ದೋಷವೂ ಕಂಡಿದೆ. ಹೀಗೆ ಇರಲು ಐದು ಕಡೆ ಇರುವ ಮಯಟ್ ಪ್ರತ್ಯಯಗಳಿಗೂ ಪ್ರಾಚುರ್ಯರೂಪವಾದ ಅರ್ಥವೇ ಆಗಬೇಕು. ವಿಕಾರಿತ್ವರೂಪವಾದ ಅರ್ಥವಾಗುವುದಿಲ್ಲ ಎನ್ನುವಲ್ಲಿ ಏನು ನಿಯಾಮಕವು? ಅಲ್ಲದೆ ಅನ್ನಮಯ ಮೊದಲಾದ ಐವರೂ ಬ್ರಹ್ಮರು ಎಂದು ಅಂಗೀಕರಿಸಿದರೆ ಏಕಮೇವಾದ್ವಿತೀಯಂ (ಛಾ.ಉ.೬.೨.೧.) ಇದು ಮೊದಲಾದ ಶ್ರುತಿಗಳಿಂದ ವಿರೋಧವೂ ಬರುವುದು ಎಂದರೆ—

**ಭಾಷ್ಯ ॥ ಯೇಽನ್ನಂ ಬ್ರಹ್ಮೋಪಾಸತೇ (ತೈ.ಉ.೨.೨.) ಇತ್ಯಾದಿ *ಬ್ರಹ್ಮ ಶಬ್ದಾದ್ಬಹುರೂಪತ್ವಾಚ್ಚ ನ ವಿಕಾರಿತ್ವಮವಿರೋಧಶ್ಚ ॥ ೨೦ ॥**

**ಭಾಷ್ಯಾರ್ಥ ॥** ಯೇಽನ್ನಂ ಬ್ರಹ್ಮ ಇದು ಮೊದಲಾದ ಅನ್ನಮಯಾದಿಗಳನ್ನು ಕುರಿತು ಉದಾಹೃತ ಶ್ಲೋಕಗಳಲ್ಲಿ ಅನ್ನಮಯಾದಿ ವಿಷಯವಾಗಿ ಬ್ರಹ್ಮಶಬ್ದವು ಶ್ರುತವಾದ ಪ್ರಯುಕ್ತ ಅನ್ಯಥಾ ಸಿದ್ಧವಾಗದೆ ಇರುವ ಆ ಬ್ರಹ್ಮಶಬ್ದಸಮಭಿವ್ಯಾಹಾರದೆಸೆಯಿಂದ ಮಯಟ್ ಪ್ರತ್ಯಯಗಳಿಗೆ ಪ್ರಾಚುರ್ಯ ವಿಕಾರರೂಪ ಎರಡು ಅರ್ಥಗಳು ಕೂಡುವುದಾಗ್ಯೂ ಪ್ರಾಚುರ್ಯರೂಪ ಅರ್ಥವೇ ಆಗಬೇಕು. ವಿಕಾರಿತ್ವರೂಪವಾದ ಅರ್ಥವಾಗುವುದಿಲ್ಲವೆಂದು ನಿಶ್ಚಯಿಸಲ್ಪಡುತ್ತದೆ. ಆದಕಾರಣ ಏನು ನಿಯಾಮಕವು ಎನ್ನುವ ಆಕ್ಷೇಪವು ಯುಕ್ತವಲ್ಲ. ಹೀಗೆಯೇ ಒಬ್ಬ ಬ್ರಹ್ಮನಿಗೇನೇ ಬಹುರೂಪಗಳು

★ ಆದಿಶಬ್ದದಿಂದ ೧ ಯೇ ಪ್ರಾಣಂ ಬ್ರಹ್ಮೋಪಾಸತೇ (ತೈ.ಉ.೨.೩.೧.) ೨ ಆನಂದಂ ಬ್ರಹ್ಮಣೋ ವಿದ್ವಾನ್ (೨.೪.೧.) ೩ ವಿಜ್ಞಾನಂ ಬ್ರಹ್ಮ ಚೇದ್ವೇದ (೨. ೫.೧.) ೪ ಅಸ್ತಿ ಬ್ರಹ್ಮೇತಿ ಚೇದ್ವೇದ (೨.೬.೧.) ಇತ್ಯಾದಿ ವಾಕ್ಯಗಳನ್ನು ಇಟ್ಟುಕೊಳ್ಳಬೇಕು.

ಇದ್ದುದರಿಂದಲೂ (ಶ್ರುತಿಯಿಂದ ಒಬ್ಬನಿಗೇನೇ ಬಹುರೂಪಗಳು ಇವೆ ಎನ್ನುವ ವಚನವು ಯುಕ್ತವಾಗುವುದರಿಂದ) ಏಕಮೇವಾದ್ವಿತೀಯಂ ಎನ್ನುವ ಶ್ರುತಿವಿರೋಧವೂ ಇಲ್ಲ.

**ವಿಶೇಷಾಂಶ ॥** ಆನಂದಮಯಪ್ರಕರಣ ವಿಜ್ಞಾನಮಯಪ್ರಕರಣಗಳಲ್ಲಿ ಬ್ರಹ್ಮಶಬ್ದಕ್ಕೆ ಅಭ್ಯಾಸವಿದ್ದಂತೆಯೇ ಇತರಪ್ರಕರಣಗಳಲ್ಲಿ ಬ್ರಹ್ಮಶಬ್ದಕ್ಕೆ ಅಭ್ಯಾಸವಿಲ್ಲ. ಬ್ರಹ್ಮ ಶಬ್ದವಾದರೂ ಸರ್ವಸಾಧಾರಣವಾಗಿದೆ. ಈ ಅಭಿಪ್ರಾಯದಿಂದಲೇ ಪೂರ್ವದಲ್ಲಿ ಪ್ರಸಿದ್ಧ ಬ್ರಹ್ಮಶಬ್ದಾಭ್ಯಾಸಾತ್ ಎಂದು ಹೇಳಿದ್ದಾಗ್ಯೂ ಇಲ್ಲಿ ಬ್ರಹ್ಮಶಬ್ದಾತ್ ಎಂದಿಷ್ಟು ಮಾತ್ರ ಹೇಳಿರುವರು ಎಂದು ಚಂದ್ರಿಕಾದಲ್ಲಿ ಹೇಳಿರುವರು.

**ಟೀಕಿಕೆ ॥** ರಾಮಾನುಜೀಯರು ಆನಂದಮಯನೇ ಬ್ರಹ್ಮನು. ಅಲ್ಲಿದ್ದ ಮಯಟ್ ಪ್ರತ್ಯಯಕ್ಕೇನೇ ಪ್ರಾಚುರ್ಯಾರ್ಥತ್ವವು. ಅನ್ನಮಯಾದಿಗಳಾದರೂ ಕೋಶಗಳು. ಅಲ್ಲಿದ್ದ ಮಯಟ್ ಪ್ರತ್ಯಯಗಳಿಗೆ ವಿಕಾರಾರ್ಥತ್ವವು ಎಂದು ಹೇಳಿರುವರು. ಆದು ಅಯುಕ್ತವೆನ್ನುತ್ತಾರೆ—

## ಭಾಷ್ಯ ॥ ನ ಚ ಪೃಥಕ್ಕಲ್ಪನಾ ಯುಕ್ತಾ ॥ ೨೦ ॥

**ಭಾಷ್ಯಾರ್ಥ ॥** ಒಟ್ಟಿಗೆ ಪಠಿತಗಳಾದ ಮಯಟ್ ಪ್ರತ್ಯಯಗಳಿಗೆ ಎರಡು ವಿಧ ಅರ್ಥಗಳನ್ನು ಕಲ್ಪಿಸುವುದು ಯುಕ್ತವಲ್ಲ. ಮತ್ತು ಅನ್ನಮಯಾದಿಗಳ ಮಧ್ಯದಲ್ಲಿ ಒಬ್ಬನಿಗೇನೇ ಬ್ರಹ್ಮತ್ವವನ್ನು ಕಲ್ಪಿಸುವುದು ಯುಕ್ತವಲ್ಲ. ಪ್ರಾಯಪಾಠ ವಿರೋಧ ಬರುವುದರಿಂದ ಕ್ಲಿಷ್ಟವಾಗಿದೆ.

**ವಿಶೇಷಾಂಶ ॥** (೧) **ಏಕತ್ರಾಪಿ ನ ಮುಖ್ಯಾರ್ಥಲಂಘನಂ ಮಾಮಕೇ ಮತೇ । ಸರ್ವತ್ರಾಪಿ ಚ ಮುಖ್ಯಾರ್ಥಲಂಘನಂ ತಾವಕೇ ಮತೇ॥** ಆನಂದಮಯ, ಪುಚ್ಛ ಇಬ್ಬರಿಗೂ ಪೂರ್ಣತ್ವವಿದ್ದುದರಿಂದ ಬ್ರಹ್ಮಶಬ್ದವು ಎರಡರಲ್ಲಿಯೂ ಮುಖ್ಯವು. ಪೂರ್ಣತ್ವವೇ ಬ್ರಹ್ಮಶಬ್ದಮುಖ್ಯಾರ್ಥವು. **ವಿಶ್ವತಶ್ಚಕ್ಷುಃ ಪೂರ್ಣಮದಃ ಪೂರ್ಣಮಿದಂ** ಇತ್ಯಾದಿ ಶ್ರುತಿಗಳಿಂದಲೂ, **ಸರ್ವತಃ ಪಾಣಿಪಾದಂ ತತ್** ಇತ್ಯಾದಿ ಸ್ಮೃತಿಗಳಿಂದಲೂ ಅವಯವಕ್ಕೆ ಪೂರ್ಣತ್ವವು. ಹಾಗೆಯೇ **ಉದ್ಬಬರ್ಹಾತ್ಮನಃ ಕೇಶೌ** ಇತ್ಯಾದಿ ಸ್ಮೃತಿಗಳಿಂದ ಕೇಶವರೂಪಿಯಾದ ಶ್ರೀಕೃಷ್ಣನಿಗೆ **ವ್ಯಾಪ್ತಂ ತ್ವ ಯೈಕೇನ ದಿಶಶ್ಚ ಸರ್ವಾಃ** ಎಂದು ಪೂರ್ಣತ್ವವು ಉಕ್ತವಾಗಿದೆ. **ಸ ಶಿರಃ ಸ ದಕ್ಷಿಣಃ ಪಕ್ಷಃ** ಇತ್ಯಾದಿ ಶ್ರುತಿಗಳಿಂದ ಅವಯವಿಗೇನೇ ಅವಯವತ್ವವು ಉಕ್ತವಾಗಿದೆ. ಇತ್ಯಾದ್ಯನೇಕ ಪ್ರಕಾರ ನಮ್ಮ ಮತದಲ್ಲಿ ಎಲ್ಲಿಯಾದರೂ ಮುಖ್ಯಾರ್ಥವನ್ನು ಬಿಟ್ಟದ್ದಿಲ್ಲ. ನಿನ್ನ ಮತದಲ್ಲಿ ಆದರೂ ಎಲ್ಲಾ ಕಡೆಗಳಲ್ಲಿಯೂ ಮುಖ್ಯಾರ್ಥ ಲಂಘನವೇ ಇರುವುದು. ಆದಕಾರಣ ಪ್ರಮಾಣವಿಲ್ಲದೆ ಸ್ವೇಚ್ಛಾನುಸಾರವಾಗಿ ಕಲ್ಪಿಸುವುದು ಸರ್ವಥಾ ಯುಕ್ತವಾಗಲಾರದು. (೨) ಯಾವ ವಾದಿಯು ಅನ್ನಮಯ ಮೊದಲಾದ ಐದೂ ಬ್ರಹ್ಮವಲ್ಲವೆಂದು ಹೇಳುತ್ತಾನೋ ಅವನನ್ನು ಸೂತ್ರಕಾರರೇ ತಿರಸ್ಕರಿಸಿರುವುದರಿಂದ ಭಾಷ್ಯಕಾರರು ಆ ಪಕ್ಷವನ್ನು ತಿರಸ್ಕರಿಸಲಿಲ್ಲ.

**ಟೀಕಿಕ ॥** ಹಾಗಾದರೆ ಬ್ರಹ್ಮನಲ್ಲಿ ಪ್ರಚುರಾನಂದಃ ಇದು ಮೊದಲಾದ ಪ್ರಯೋಗವು ಕೂಡುವುದಿಲ್ಲ. ಬ್ರಹ್ಮನು ಆನಂದಾದಿಗಳ ಸ್ವರೂಪಭೂತನಾಗಿದ್ದಾನೆ. **ಘೃತಪ್ರಚುರಃ ಓದನಃ** ಇತ್ಯಾದಿಗಳಲ್ಲಿ ಭೇದವಿದ್ದ ಸ್ಥಳದಲ್ಲಿಯೇ ಹಾಗೆಯೇ ಪ್ರಯೋಗವು ಕಂಡಿದೆ ಎಂದರೆ—

**ಭಾಷ್ಯ ॥ ಸ್ವರೂಪೇ ಚ ಯುಜ್ಯತೇ ಪ್ರಚುರಪ್ರಕಾಶೋ ರವಿರಿತಿವತ್ ॥ ೨೨ ॥**

**ಭಾಷ್ಯಾರ್ಥ ॥** ಪ್ರಕಾಶಸ್ವರೂಪವಾದಾಗ್ಯೂ ಸೂರ್ಯಬಿಂಬದಲ್ಲಿ ವಿಶೇಷಬಲದಿಂದ ಪ್ರಚುರಪ್ರಕಾಶೋ ರವಿಃ ಎನ್ನುವ ವ್ಯವಹಾರವಿದ್ದಂತೆಯೇ ಆನಂದಾದಿಗಳ ಸ್ವರೂಪಭೂತನೇ ಆದಾಗ್ಯೂ ಶ್ರೀಹರಿಯಲ್ಲಿ ವಿಶೇಷಮಹಿಮೆಯಿಂದ ಪ್ರಚುರಾನಂದಃ ಎನ್ನುವ ವ್ಯವಹಾರವು ಕೂಡುತ್ತದೆ. ಆದಕಾರಣ ಯಾವ ಅನುಪಪತ್ತಿಯೂ ಇಲ್ಲ.

**ಪೀಠಿಕೆ ॥** ಆನಂದಮಯಮಾತ್ರಕ್ಕೆ ಬ್ರಹ್ಮತ್ವವಿದೆ ಎನ್ನುವ ವಿಷಯದಲ್ಲಿಯೂ ಪ್ರಾಚುರ್ಯವೇ ಮಯಡರ್ಥವೆನ್ನುವ ವಿಷಯದಲ್ಲಿಯೂ ಹೇತುವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ತದ್ಧೇತುವ್ಯಪದೇಶಾಚ್ಚ ಓಂ ॥ ೧೪ ॥

**ಸೂತ್ರಾರ್ಥ ॥** ಬ್ರಹ್ಮಶಬ್ದಾಭ್ಯಾಸದಿಂದ ಮಾತ್ರವಲ್ಲ, ಮತ್ತೆ ಆನಂದಮಯ ಪ್ರಕರಣದಲ್ಲಿ ಆ ವಿಷ್ಣುವಿಗೆ ಪೂರ್ಣಾನಂದತ್ವವಿಷಯದಲ್ಲಿಯೂ ಪ್ರಾಚುರ್ಯವೇ ಮಯಡರ್ಥವೆನ್ನುವ ವಿಷಯದಲ್ಲಿಯೂ ಲೋಕಚೇಷ್ಟಕತ್ವರೂಪವಾದ ಹೇತುವನ್ನು ಹೇಳಿದುದರಿಂದಲೂ ಶ್ರೀವಿಷ್ಣುವೇ ಆನಂದಪೂರ್ಣನಾಗಿದ್ದ ಪ್ರಯುಕ್ತವೇ ಆನಂದಮಯಶಬ್ದವಾಚ್ಯನು.

**ಪೀಠಿಕೆ ॥** ಆ ಹೇತುವ್ಯಪದೇಶವನ್ನೇ ತೋರಿಸುತ್ತಾರೆ—

**ಭಾಷ್ಯ ॥ ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾದ್ಯದೇಶ ಆಕಾಶ ಆನಂದೋ ನ ಸ್ಯಾತ್ (ತೈ.೨.೭.) ಇತಿ ॥ ೨೩ ॥**

**ಭಾಷ್ಯಾರ್ಥ ॥** ಚೆನ್ನಾಗಿ ಪ್ರಕಾಶಿಸಿಕೊಂಡಿರತಕ್ಕ ಶ್ರೀಪರಮಾತ್ಮನು ಪೂರ್ಣಾನಂದನು ಆಗದಿದ್ದರೆ (ಆಗ ಈತನು ಲೋಕವನ್ನು ಪ್ರವರ್ತಿಸಲಾರನು. ಪ್ರವೃತ್ತಿಯಲ್ಲಿ ಆನಂದೋದ್ರೇಕ ಹೊರತು ಬೇರೆ ಯಾವ ಕಾರಣವೂ ಇರಲಾರದು.) (ಈತನು ಲೋಕವನ್ನು ಪ್ರವರ್ತಿಸುವುದಿಲ್ಲವೆಂದಾದರೆ) ಆಗ ಯಾರು ತಾನೇ ಲೋಕಕ್ಕೆ ಚೇಷ್ಟೆಯನ್ನು ಮಾಡಿಯಾನು. ಧರ್ಮಾದಿಗಳಲ್ಲಿ ಯಾರು ಪ್ರವೃತ್ತಿಮಾಡಿಯಾರು. (ಯಾರೂ ಮಾಡಲಾರರು.) (ಇಲ್ಲವಾದರೆ ಅಸ್ವಾತಂತ್ರ್ಯವು ಬರಬೇಕಾದೀತು.) (ಹೀಗೆ ತೈತ್ತಿರೀಯ ಭಾಷ್ಯ ಟೀಕಾರೀತಿಯಾಗಿ ಶ್ರುತ್ಯರ್ಥವು.)

**ವಿಶೇಷಾಂಶ ॥** ಸುಧಾದಲ್ಲಿ ಆದರೂ ಯಾರೊಬ್ಬನೂ ಲೌಕಿಕ ಪ್ರವೃತ್ತಿಯನ್ನಾಗಲೀ, ವೈದಿಕ ಪ್ರವೃತ್ತಿಯನ್ನಾಗಲೀ ಸರ್ವಥಾ ಮಾಡಲಾರನು ಎಂದು ವ್ಯಾಖ್ಯಾನ ಮಾಡಿರುವರು.

**ಪೀಠಿಕೆ ॥** ಬ್ರಹ್ಮಶಬ್ದದೆಸೆಯಿಂದ ಆನಂದಮಯಾದಿ ಶಬ್ದವಾಚ್ಯನು ವಿಷ್ಣುವೆಂದು ಯಾವುದು ಹೇಳಿರುವರೋ, ಅದು ಅಯುಕ್ತವು. ಬ್ರಹ್ಮಶಬ್ದವು ಅಪರಬ್ರಹ್ಮನಾದ ಜೀವನಲ್ಲಿಯೂ ಕೂಡಬಹುದು. ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾದಾಗ್ಯೂ ಆತನಿಗೆ ಆನಂದಮಯನ ಅವಯವತ್ವವನ್ನು ಹೇಳುವಿಕೆ ಇದು ಮೊದಲಾದ ಬಾಧಕವಿದ್ದುದರಿಂದ ಅಮುಖ್ಯಾರ್ಥವನ್ನೇ ಇಟ್ಟುಕೊಳ್ಳಬಹುದು ಎನ್ನುವ ಆತಂಕೆಯನ್ನು ಪರಿಹರಿಸುತ್ತಾ ಆನಂದಮಯಾದಿ ಶಬ್ದವಾಚ್ಯರಿಗೆ ವಿಷ್ಣುತ್ವವಿಷಯದಲ್ಲಿ ಯುಕ್ತ್ಯಂತರವನ್ನು ಹೇಳತಕ್ಕ ಸೂತ್ರವನ್ನು ಪಠನಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ ॥ ೧೫ ॥

**ಸೂತ್ರಾರ್ಥ ॥** ಬ್ರಹ್ಮಶಬ್ದಮಾತ್ರದಿಂದಲೇ ಆನಂದಮಯಾದಿ ಶಬ್ದವಾಚ್ಯನು ವಿಷ್ಣ್ವಾಖ್ಯಪರಬ್ರಹ್ಮನೇ, ಅಪರಬ್ರಹ್ಮನಲ್ಲ ಎಂದು ನಿಶ್ಚಿತವಾಗುವುದಿಲ್ಲ. ಮತ್ತೆ ಸತ್ಯಂ ಜ್ಞಾನಮನಂತಂ ಬ್ರಹ್ಮ ಇದು ಮೊದಲಾದ ವೇದದಿಂದ ಲಕ್ಷಣವತ್ತಾಗಿ ಹೇಳಲ್ಪಟ್ಟ ಪರಬ್ರಹ್ಮನೇ ಅನ್ನಮಯ ಮೊದಲಾದ ಐದು ಶಬ್ದಗಳಿಂದ ಪ್ರತಿಪಾದಿಸಲ್ಪಡುತ್ತಾನೆ. ಆ ಸಮಾಖ್ಯೆಯಿಂದ ಅನ್ನಮಯ ಮೊದಲಾದ ಐದು ಶಬ್ದಗಳಿಂದ ವಾಚ್ಯನೂ ಬ್ರಹ್ಮನೇ. ಸತ್ಯ ಜ್ಞಾನ ಅನಂತಪದಗಳಿಗೂ ಅನ್ನಮಯ ಮೊದಲಾದ ಶಬ್ದಗಳಿಗೂ ಅರ್ಥವನ್ನು ಅನುಸಂಧಾನ ಮಾಡಿದರೆ ಏಕಾರ್ಥತ್ವವು ತೋರುತ್ತದೆ.

**ಭಾಷ್ಯ ॥ ಬ್ರಹ್ಮವಿದಾಪ್ನೋತಿ ಪರಮಿತಿ ಸೂಚ(ತ್ರ)ಯಿತ್ವಾ ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ.ಉ.೨.೧.) ಇತಿ ಮಂತ್ರವರ್ಣೋಪಲಕ್ಷಿತಂ ಪರಮೇವ(ರ್ಣಲ ಕ್ಷಿತಮೇವ) ಬ್ರಹ್ಮ ಶಬ್ದಾನುಸಂಧಾನಾದ್ಗೀಯತೇ ॥ ೨೪ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಸತ್ಯಂ ಜ್ಞಾನಮನಂತಂ ಬ್ರಹ್ಮ ಎನ್ನುವ ಮಂತ್ರಾಕ್ಷರಾತ್ಮಕವಾದ ವಾಕ್ಯವಿಶೇಷದಲ್ಲಿ ಲಕ್ಷಣವತ್ತಾಗಿ ಹೇಳಲ್ಪಟ್ಟ ಪರಬ್ರಹ್ಮನೇ ಅಥವಾ ಲಕ್ಷಣವತ್ತಾಗಿ ಹೇಳಲ್ಪಟ್ಟವನೇ ಪರಬ್ರಹ್ಮನು (ಅಪರಬ್ರಹ್ಮನೂ ಅಲ್ಲ ಅಲಕ್ಷಿತನೂ ಅಲ್ಲ) ಅನ್ನಮಯಾದಿಶಬ್ದಗಳಿಂದ ಪ್ರತಿಪಾದಿಸಲ್ಪಡುತ್ತಾನೋ (ಆದುದರಿಂದಲೂ ಅನ್ನಮಯಾದಿಗಳು ಇತರರಲ್ಲ ಮತ್ತೆ ಪರಬ್ರಹ್ಮನೇ.) (ಮಂತ್ರವರ್ಣದಿಂದ ಯಾರ ಲಕ್ಷಣವನ್ನು ಹೇಳಿಯದೋ ಅಂತಹವನನ್ನು ಅನ್ನಮಯಾದಿ ಶಬ್ದಗಳಿಂದ ಹೇಳಿದ್ದೆಂದು ಹೇಗೆ ತಿಳಿಯುತ್ತದೆ ಎಂದರೆ—) ಸತ್ಯಂ ಜ್ಞಾನಮನಂತಂ ಬ್ರಹ್ಮ ಎನ್ನುವ ಶಬ್ದಗಳಿಗೂ ಅನ್ನಮಯಾದಿ ಶಬ್ದಗಳಿಗೂ ಅರ್ಥಾನುಸಂಧಾನದಿಂದುಂಟಾದ ಏಕಾರ್ಥತ್ವಜ್ಞಾನದಿಂದ (ಮಂತ್ರವರ್ಣದಲ್ಲಿಯೂ ಬ್ರಹ್ಮ ಎಂದಿಷ್ಟೇ ಹೇಳಿರುವುದರಿಂದ ಅನ್ನಮಯಾದಿಗಳು ಸತ್ಯ ಮೊದಲಾದವುಗಳ ಅರ್ಥಗಳಾದಾಗ್ಯೂ ಅವುಗಳು ಪರಬ್ರಹ್ಮವು ಎನ್ನುವ ಜ್ಞಾನವು ಹೇಗೆ ಕೂಡುತ್ತದೆ ಎಂದರೆ—) ಬ್ರಹ್ಮವಿದಾಪ್ನೋತಿ ಪರಂ = ಪರಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ. ಅಂತೂ ಪರಬ್ರಹ್ಮನನ್ನು ಹೊಂದಲಿಚ್ಛಿಸುವವನು ಪರಬ್ರಹ್ಮನನ್ನು ತಿಳಿಯಬೇಕು ಎನ್ನುವ ಶ್ರುತಿಯಿಂದ ಪರಬ್ರಹ್ಮಲಕ್ಷಣವನ್ನು, ಬ್ರಹ್ಮಜ್ಞಾನವನ್ನು ಬ್ರಹ್ಮಪ್ರಾಪ್ತಿಯನ್ನು ಸಂಕ್ಷೇಪದಿಂದ ಹೇಳಿ ಅಲ್ಲಿ ಬಂದ ಶಂಕೆಯನ್ನು ಕಳೆಯುವುದಕ್ಕಾಗಿ ಮಂತ್ರವರ್ಣವು ಪ್ರವೃತ್ತವಾಗಿದೆ. (ಆದಕಾರಣ ಇಲ್ಲಿ ಲಕ್ಷಣ ಹೇಳಿದ್ದು ಪರಬ್ರಹ್ಮನಿಗೇನೇ ಎಂದು ತಿಳಿಯುತ್ತದೆ.)

**ವಿಶೇಷಾಂಶ ॥** (ಎ) ಆ ಬ್ರಹ್ಮನು ಎಂತಹ ಲಕ್ಷಣವಿಶಿಷ್ಟನು ಎಂದು ಶಂಕಾ ಬಂದರೆ ಸತ್ಯಂ ಜ್ಞಾನಂ ಇದು ಮೊದಲಾದ ವಾಕ್ಯವು ಪ್ರವೃತ್ತವಾಗಿದೆ. ಅದರಲ್ಲಿ ಸತ್ಯಶಬ್ದದಿಂದ, ಗತಿ ಜೀವನ ನಾಶ ಇವುಗಳನ್ನು ಹೊಂದಿಸಿಕೊಡತಕ್ಕವನು ಎಂದು ಯಾವುದು ಅರ್ಥವು ಹೇಳಲ್ಪಟ್ಟಿದ್ದೋ ಅದೇವೇ ಅನ್ನಮಯ ಪ್ರಾಣಮಯ ಶಬ್ದಗಳಿಂದ ಹೇಳಲ್ಪಡುತ್ತದೆ. (ಬಿ) ಜ್ಞಾನಪದದಿಂದ, ಯಾವುದು ಸಕಲ ಪದಾರ್ಥಗಳ ಸಾಮಾನ್ಯಜ್ಞಾನ ವಿಶೇಷಜ್ಞಾನಗಳು ಯಾವುವು ಹೇಳಲ್ಪಟ್ಟವೆಯೋ ಅದೇವೇ ಮನೋಮಯ ವಿಜ್ಞಾನಮಯ ಶಬ್ದಗಳಿಂದ ಹೇಳಲ್ಪಡುತ್ತವೆ. (ಸಿ) ಅನಂತ ಶಬ್ದದಿಂದ ದೇಶತಃ

ಅಪರಿಚ್ಛಿನ್ನತ್ವ, ಕಾಲತಃ ಅಪರಿಚ್ಛಿನ್ನತ್ವ, ಗುಣತಃ ಅಪರಿಚ್ಛಿನ್ನತ್ವಗಳು ಹೇಳಲ್ಪಡುತ್ತವೆ. ಪರಮಾತ್ಮಾ ಅನಂತಃ ಪೂರ್ಣಾನಂದತ್ವಾತ್ ಎಂದು ಆನಂದಮಯಪದದಿಂದ ಉಪಪಾದಿಸಲ್ಪಡುತ್ತದೆ. ಹೀಗೆ ಸತ್ಯ ಮೊದಲಾದ ಶಬ್ದಗಳಿಗೂ ಅನ್ನಮಯ ಮೊದಲಾದ ಶಬ್ದಗಳಿಗೂ ಏಕಾರ್ಥವನ್ನು ಇಟ್ಟುಕೊಳ್ಳಬೇಕು. (ಡಿ) ದೇಶಾನಂತ್ಯವೆಂದರೆ ನಿರವಧಿಕಪರಿಣಾಮವತ್ತ್ವವು. ಕಾಲಾನಂತ್ಯವೆಂದರೆ ಸರ್ವಕಾಲದಲ್ಲಿರುವಿಕೆ. ಗುಣಾನಂತ್ಯವೆಂದರೆ ಅಪರಿಚ್ಛಿನ್ನಗುಣ, ಕರ್ಮ ವಿಗ್ರಹಗಳು ಇರುವಿಕೆ.

**ಪೀಠಿಕೆ ॥** ವಿಷ್ಣುವು ಆನಂದಮಯನು ಎನ್ನುವುದು ಯುಕ್ತವಲ್ಲ. ಬ್ರಹ್ಮ ಪುಚ್ಛಂ ಪ್ರತಿಷ್ಠಾ ಎನ್ನುವ ಶ್ರುತಿಯಿಂದ ವಿಷ್ಣುವು ಆನಂದಮಯನ ಪುಚ್ಛಾಖ್ಯ ಅವಯವನು ಎಂದು ಹೇಳಿದೆ. ಅವಯವನಿಗೆ ಅವಯವತ್ವವು ವಿರುದ್ಧವು ಎಂದರೆ—

**ಭಾಷ್ಯ ॥ ನ ಚಾವಯವತ್ವವಿರೋಧಃ । ಸ ಶಿರಃ ಸ ದಕ್ಷಿಣಃ ಪಕ್ಷಃ ಸ ಉತ್ತ ರಃ ಪಕ್ಷಃ ಸ ಆತ್ಮಾ ಸ ಪುಚ್ಛಸ್ಸೈ ಮಿತಿ ವಾವಯವತ್ವೋಕ್ತೇಶ್ಚತುರ್ವೇದಶಿಖಾಯಾಂ ॥ ೨೫ ॥**

**ಭಾಷ್ಯಾರ್ಥ ॥** ವಿಷ್ಣುವೇ ಆನಂದಮಯನು ಎಂದು ಹೇಳಿದರೆ, ವಿಷ್ಣುವು ಆನಂದಮಯನ ಅವಯವನು ಎನ್ನುವ ಉಕ್ತಿಯಿಂದ ವಿರೋಧವಿಲ್ಲ. ಮತ್ತು ಅವಯವತ್ವವಿದ್ದರೆ ಅವಯವತ್ವದ ವಿರೋಧವೂ ಇಲ್ಲ. (ಏಕೆಕ್ಕೆಂದರೆ ಅವಯವಿಗೇನೇ ಅವಯವ ತ್ವವನ್ನು ಶ್ರುತಿಯಲ್ಲಿ ಹೇಳಿದುದರಿಂದ ಅವಯವಿ ಮೊದಲಾದುದಕ್ಕೆ ಅವಯವ ಮೊದಲಾದವುಗಳಿಂದ ಅಭೇದವು ಎನ್ನುವ ಅಭಿಪ್ರಾಯದಿಂದ ಆ ಶ್ರುತಿಯನ್ನು ಉದಾಹರಿಸುತ್ತಾರೆ.) ಸಃ=ಆ ನಾರಾಯಣನು, ಶಿರಃ=ಶಿರಸ್ಸು ಅಥವಾ ಶಿರಸ್ಸು ಆ ನಾರಾಯಣನು, ಪ್ರದ್ಯುಮ್ನನು ಬಲಗೈಯು, ಅನಿರುದ್ಧನು ಎಡಗೈಯು, ವಾಸುದೇವನು ಮಧ್ಯದೇಹವು, ಸಂಕರ್ಷಣನು ಪಾದಗಳು ಎನ್ನುವ ಚತುರ್ವೇದಶಿಖಾದಲ್ಲಿ ಅವಯವಿಭೂತನೇ ಆದ ವಿಷ್ಣುವಿಗೇನೇ ಅವಯವತ್ವವನ್ನು ಹೇಳಿದುದರಿಂದ.

**ವಿಶೇಷಾಂಶ ॥** (ಎ) ಏವಶಬ್ದದಿಂದ ಅವಯವ ಅವಯವಿಗಳಿಗೆ ಭೇದವು ನಿವಾರಿತ ವಾಯಿತು. (ಬಿ) ಅವಯವವೇ ಅವಯವಿಯು ಎನ್ನುವ ವಿಷಯದಲ್ಲಿ ಈ ಶ್ರುತಿಯು ಮಾತ್ರ ಪ್ರಮಾಣವಲ್ಲ. ಮತ್ತೆ ಭಾಷ್ಯದಲ್ಲಿ ಉಪಲಕ್ಷಣವಾಗಿ ಸ್ವೀಕರಿಸಿದ ಪದಂ ಪುಚ್ಛಂ ಪ್ರತಿಷ್ಠಾ ವೈ ಪುರುಷಃ ಎಂದು ತತ್ತ್ವಪ್ರದೀಪದಲ್ಲಿ ಉದಾಹೃತವಾದ ಶ್ರುತಿಯನ್ನು ಪ್ರಮಾಣವೆಂದು ಇಟ್ಟುಕೊಳ್ಳಬೇಕು.

**ಪೀಠಿಕೆ ॥** ಅವಯವಿಗೆ ಅವಯವತ್ವವು ವಿರುದ್ಧವು ಎನ್ನುವ ಆಶಂಕೆಯನ್ನು ಶ್ರುತಿಯಿಂದ ಪರಿಹರಿಸಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಶಿರೋ ನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವ ಚ। ಪ್ರದ್ಯುಮ್ನ ಶ್ಚಾನಿರುದ್ಧಶ್ಚ ಸಂದೋಹೋ ವಾಸುದೇವಕಃ ॥ ನಾರಾಯಣೋಽಥ ಸಂದೋಹೋ ವಾಸುದೇವಃ ಶಿರೋಽಪಿ ವಾ। ಪುಚ್ಛಂ ಸಂಕರ್ಷಣಃ ಪ್ರೋಕ್ತ ಏಕ ಏವ ತು ಪಂಚಧಾ॥ ಅಂಗಾಂಗಿತ್ವೇನ ಭಗವಾನ್ ಕ್ರೀಡತೇ ಪುರುಷೋತ್ತಮಃ॥ ಐಶ್ವರ್ಯಾನ್ನ ವಿರೋಧಶ್ಚ ಚಿಂತ್ಯಸ್ತಸ್ಮಿನ್ ಜನಾರ್ದನೇ॥ ಅತರ್ಕ್ಯೇ ಹಿ ಕುತ ಸ್ತರ್ಕಸ್ತ್ವಪ್ರಮೇಯೇ ಕುತಃ ಪ್ರಮಾ॥ ಇತಿ ಬೃಹತ್ಸಂಹಿತಾಯಾಂ ॥ ೨೬ ॥**

**ಭಾಷ್ಯಾರ್ಥ ॥** ಅವಯವಿಭೂತನೇ ಆದ ನಾರಾಯಣನು ಶಿರಸ್ಸು. ಅವಯವಿಭೂತನೇ ಆದ ಪ್ರದ್ಯುಮ್ನನು ಬಲಗೈಯು. ಅವಯವಿಭೂತನೇ ಆದ ಅನಿರುದ್ಧನು ಎಡಗೈ ಯು. ಆನಂದರೂಪಿಯಾದ ವಾಸುದೇವನು ಮಧ್ಯದೇಹವು. ಅಥವಾ ನಾರಾಯಣನು ಮಧ್ಯದೇಹವು. ವಾಸುದೇವನು ಶಿರಸ್ಸು ಸಂಕರ್ಷಣನು ಪಾದವು. ಹೀಗೆ ಕ್ಷರ ಅಕ್ಷರ ಪುರುಷರಿಂದ ಉತ್ತಮನಾದ ಪೂಜ್ಯನಾದ ಶ್ರೀಕೃಷ್ಣನು ಒಬ್ಬನೇ ಐದು ರೂಪವುಳ್ಳವನಾಗಿ (ಏಕ ಏವ=) ಕರಚರಣಾದ್ಯವಯವಗಳಿಂದ ಅಭಿನ್ನನೇ ಭಿನ್ನನಾದ ವನಲ್ಲ. ಅವಯವತ್ವದಿಂದಲೂ ಅವಯವಿತ್ವದಿಂದಲೂ ಅಂದರೆ ಅವಯವತ್ವ ಅವಯವಿತ್ವ ಪ್ರಕಾರವನ್ನು ಹೊಂದಿದವನಾಗಿ ಕ್ರೀಡಿಸುತ್ತಾನೆ. (ಹೀಗಾಗಲಿ ಆದರಿಂದ ವಿರೋಧ ಪರಿಹಾರವಾಗಲಿಲ್ಲ ಎಂದರೆ) ಅವಯವಿಭಾವಾದಿಗಳನ್ನು ಹೊಂದಿದ ಶ್ರೀಹರಿಯಲ್ಲಿ ಅವಯವತ್ವಾದಿ ವಿಷಯದಲ್ಲಿ ಸಹಾನವಸ್ಥಾನರೂಪವಾದ ವಿರೋಧವು (ಯಾರಿಂದಲೂ) ಕಲ್ಪಿಸಲ್ಪಡಕೂಡದು. ಏಕೆಂದರೆ— ಈಶ್ವರಸಾಮರ್ಥ್ಯದಿಂದ (ಅವಯವತ್ವ ಅವಯವಿತ್ವಗಳು ಒಂದೇ ಕಡೆ ಕೂಡಬಹುದು. ಆದಕಾರಣ ವಿರೋಧವಿಲ್ಲ. ಈಶ್ವರಶಕ್ತಿಯು ಅಘಟಿತವಾದುದನ್ನು ಕೂಡಿಸುವುದು.) ಹೀಗೆಯೇ ಒಂದೊಂದು ಅವಯವವು ಸರ್ವಕ್ಕೂ ನಿಯಾಮಕವಾದುದರಿಂದ ಅವಯವವಿಷಯದಲ್ಲಿಯೂ ಅವಯವಿತ್ವ ವಿಷಯದಲ್ಲಿಯೂ ವಿರೋಧವಿಲ್ಲ ಮತ್ತು ಅವಯವ ಅವಯವಿಗಳಿಗೆ ಅಭೇದವಿದ್ದರೆ ಅಯಂ ಅವಯವೀ ಅಯಂ ಅವಯವಃ ಎನ್ನುವ ಭೇದವ್ಯವಹಾರ ವಿರೋಧವೂ ಇಲ್ಲ. ಏಕೆಂದರೆ— (ಚ=) ವಿಶೇಷದ ಬಲದಿಂದ ಶಕ್ತಿವ್ಯಕ್ತಿ ಭಾವವಿದ್ದ ಪ್ರಯುಕ್ತವೂ, ಈಶ್ವರ ಸಾಮರ್ಥ್ಯ ದಿಂದಲೂ. (ತರ್ಕಬಿಟ್ಟು ಬೇರೆ ಪ್ರಮಾಣದಿಂದ ಅವಯವಿಗೆ ಅವಯವತ್ವವೂ ಅವಯವಕ್ಕೆ ಅವಯವಿತ್ವವೂ ವಿರುದ್ಧವೋ ಅಥವಾ ಅವಯವೀ ನಾವಯವಃ ಅವಯವಿತ್ವಾತ್ ಅವಯವಃ ಅವಯವೀ ನ ಅವಯವತ್ವಾತ್ ಲೋಕವತ್ ॥ ಎಂದು ತರ್ಕಪದದಿಂದ ಹೇಳಲ್ಪಟ್ಟ ಅನುಮಾನದಿಂದಲೋ. ೧ನೇದ್ದು ಕೂಡಲಾರದು ಸಿದ್ಧವಲ್ಲ. ೨ನೇದ್ದು ಸರ್ವಥಾ ಕೂಡಲಾರದು ಎನ್ನುತ್ತಾರೆ.) ಯಾವ ಕಾರಣ ಶ್ರೀಹರಿಯು ಅತರ್ಕ್ಯನೋ ಆದಕಾರಣ ಅಸತ್ತಾದ ತರ್ಕಕ್ಕೆ ಅಗೋಚರನಾದ ಶ್ರೀಹರಿಯ ವಿಷಯದಲ್ಲಿ ಅವಯವೀ ನಾವಯವಃ ಅವಯವಿತ್ವಾತ್ ಇದು ಮೊದಲಾದ ತರ್ಕವು (ಸಾಧಕವಾಗಲೀ ಬಾಧಕವಾಗಲೀ) ಹೇಗೆ ಆಗುವುದು. ಸರ್ವಥಾ ಆಗಲಾರದು. (ಮತ್ತು ಲೋಕದಲ್ಲಿ ಪರಿಮಿತಶಕ್ತಿಯಿದ್ದಲ್ಲಿಯೇ ವಿರೋಧವು ಕಂಡದ್ದರಿಂದ ಶ್ರೀವಿಷ್ಣು ವಿಗೆ ವಿರೋಧಕ್ಕೆ ಉಪಯುಕ್ತವಾದ ಪರಿಮಿತ ಶಕ್ತಿಯಿಲ್ಲದಿರುವುದರಿಂದ ತರ್ಕ್ಯತ್ವ ವನ್ನು ಅಂಗೀಕರಿಸಿದರೂ ವಿರೋಧವಿಲ್ಲವೆನ್ನುತ್ತಾರೆ) ದೇಶ ಕಾಲ ಗುಣಗಳಿಂದ ಅಪರಿಚ್ಛಿನ್ನನಾದ ಶ್ರೀಹರಿಯಲ್ಲಿ ಪ್ರಮಾ = ಇಷ್ಟೇ ಸಾಮರ್ಥ್ಯವು ಇದಕ್ಕಿಂತ ಹೆಚ್ಚು ಇಲ್ಲ ಎನ್ನುವ ಶಕ್ತಿಪರಿಚ್ಛೇದವು ಹೇಗೆ (ಅಂತೂ ಪರರು ಹೇಳಿದ ತರ್ಕವು ಪ್ರಮಾಣವೇ ಅಲ್ಲ. ಆದಕಾರಣ ವಿರೋಧವಿಲ್ಲ) ಹೀಗೆ ಬೃಹತ್ಸಂಹಿತೆಯಲ್ಲಿ ಶ್ರೀಹರಿಗೇನೇ ಅವಯವತ್ವವನ್ನು ಹೇಳಿದುದರಿಂದ.

**ವಿಶೇಷಾಂಶ ॥** ೧ನೇ ಕಲ್ಪದಲ್ಲಿ ನಾರಾಯಣನು ಶಿರಸ್ಸು ವಾಸುದೇವನು ಮಧ್ಯದೇಹನು. ೨ನೇ ಕಲ್ಪದಲ್ಲಿ ಆ ಅಂಶದಲ್ಲಿ ವ್ಯತ್ಯಾಸವು. ಹೀಗೆ ಉಪಾಸನಾಭೇದದಿಂದ ಪಕ್ಷಭೇದವು.

**ಪೀಠಿಕೆ ॥** ಹಾಗಾದರೆ— (೧) ಸ ವಾ ಏಷ ಪುರುಷಃ ಎನ್ನುವ ವಾಕ್ಯದಲ್ಲಿ ಶ್ರೀ ಪರಮಾತ್ಮನಿಗೇನೇ ಪರಾಮರ್ಶವು. ಅನ್ನಾತ್ಪುರುಷಃ ಎನ್ನುವ ಅವ್ಯವಹಿತ ಹಿಂದಿನ ವಾಕ್ಯದಲ್ಲಿ ಹೇಳಿದ ದೇಹಕ್ಕೆ

ಪರಾಮರ್ಶವಲ್ಲವೆಂದು ಯಾವುದು ಹೇಳಿದ್ದಾರೋ ಅದು ಅಯುಕ್ತವು. ಶ್ರೀಪರಮಾತ್ಮನು ದೂರದಲ್ಲಿ ಪ್ರತಿಪಾದಿಸಲ್ಪಟ್ಟವನು. ದೇಹವು ಸಮೀಪದಲ್ಲಿ ಹೇಳಲ್ಪಟ್ಟಿದೆ. ಸಮೀಪದಲ್ಲಿ ಹೇಳಿದ್ದನ್ನು ಬಿಟ್ಟು ದೂರದಲ್ಲಿ ಹೇಳಿದ್ದನ್ನು ಪರಾಮರ್ಶಮಾಡಲಿಕ್ಕೆ ಕಾರಣವಿಲ್ಲ (೨) ಮತ್ತು ಪುರುಷ ಪದದಿಂದ ಪ್ರಕೃತವಾದ ದೇಹವನ್ನೇ ಪುರುಷಪದದಿಂದ ಹೇಳಿದುದರಿಂದ ಪರಮಾತ್ಮನು ಪುರುಷಪದದಿಂದ ಪ್ರಸ್ತುತನಾಗದಿರುವುದರಿಂದ ಆತ್ಮನಿಗೆ ಪುರುಷಪದದಿಂದ ಪರಾಮರ್ಶವು ಕೂಡಲಾರದು. (೩) ಹಾಗಾದರೆ— **ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ। ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್** ॥ ಎನ್ನುವ ಎರಡು ವಾಕ್ಯಗಳಲ್ಲಿಷ್ಟ ಒಂದೇ ವಿಧವಾದ ಪುರುಷಪದದಿಂದ ಶ್ರೀಪರಮಾತ್ಮ ಜೀವ ಇಬ್ಬರನ್ನು ಇಟ್ಟುಕೊಳ್ಳುವಂತೆಯೇ ಇಲ್ಲಿಯೂ ಒಂದೇ ವಿಧವಾದ ಎರಡಾವರ್ತಿ ಹೇಳಿದ ಪುರುಷಪದದಿಂದ ದೇಹ ಪರಮಾತ್ಮ ಎನ್ನುವ ಎರಡು ಅರ್ಥಗಳನ್ನು ಅಂಗೀಕರಿಸಬಹುದಷ್ಟೆ ಎಂದು ಹೇಳಕೂಡದು. ಅಲ್ಲಿ ದುಃಖಾನುಭವಿತ್ವತ್ವರೂಪ ಭೇದಕ ಧರ್ಮವಿದ್ದಂತೆಯೇ ಪ್ರಕೃತದಲ್ಲಿ ಭೇದಕಧರ್ಮವಿಲ್ಲ. ಆದ ಕಾರಣ ಅನ್ಯಾತ್ಪುರುಷಃ ಎನ್ನುವಲ್ಲಿ ದೇಹವು ಸ ವಾ ಏಷ ಪುರುಷಃ ಎನ್ನುವಲ್ಲಿ ಪರಮಾತ್ಮನೇ ಹೇಳಲ್ಪಡುತ್ತಾನೆ ಎನ್ನುವ ವ್ಯವಸ್ಥೆಯನ್ನು ಅಂಗೀಕರಿಸಲಿಕ್ಕೆ ಆಗುವುದಿಲ್ಲ ಎಂದರೆ—

**ಭಾಷ್ಯ ॥ ರಸಶಬ್ದೇನ ವಿಶೇಷಣಾತ್ತತ್ತತ್ಸಾರಭೂತಂ ಚಿನ್ಮಾತ್ರಮೇವೋಚ್ಯತೇ ॥ ೨೭ ॥**

**ಭಾಷ್ಯಾರ್ಥ ॥** (ಸ ವಾ ಏಷಃ ಎನ್ನುವ ವಾಕ್ಯದಿಂದ) ಬ್ರಹ್ಮಚೈತನ್ಯವೇ ಪರಾಮರ್ಶಿಸಲ್ಪಡುತ್ತದೆ. (ದೇಹವಲ್ಲ) ಬ್ರಹ್ಮನು ದೂರದಲ್ಲಿ ಹೇಳಲ್ಪಟ್ಟವನು. ಪುರುಷಪದದಿಂದ ಪ್ರಸ್ತುತನಾಗಲಿಲ್ಲ ಅವುಗಳಿಂದ ವಿರೋಧವು ಎಂದೂ ಹೇಳಕೂಡದು. (ಏಕೆಂದರೆ— **ಆತ್ಮನ ಆಕಾಶಃ ಸಂಭೂತಃ** ಎಂದು ಆಕಾಶವನ್ನಾರಂಭಿಸಿ ಪುರುಷಪರ್ಯಂತ ಶಬ್ದಗಳಿಂದ ಹೇಳಲ್ಪಟ್ಟ) ಆಕಾಶಾದಿ ಪದಗಳಿಂದ ತಿಳಿಸಲ್ಪಟ್ಟ ಬ್ರಹ್ಮನೇ (ಸ ವಾ ಏಷಃ ಎನ್ನುವ ಪರಾಮರ್ಶವಾಕ್ಯದಿಂದ) ಹೇಳಲ್ಪಡುತ್ತಾನೆ. (ಹೀಗಾದರೆ ಪುರುಷಪದದಿಂದ ಇಬ್ಬರೂ ಪ್ರಸ್ತುತರಾದುದರಿಂದ ಇಬ್ಬರಿಗೂ ಪರಾಮರ್ಶ ಬರಲಿ ಎಂದು ಹೇಳಕೂಡದು. ಏಕೆಂದರೆ—) ಪುರುಷಸಾರಭೂತನಾದ ಬ್ರಹ್ಮನೇ (ಇತರವಾದ ದೇಹಾದಿಗಳನ್ನು ಬಿಟ್ಟು ಸಃ ಎನ್ನುವ ಪರಾಮರ್ಶವಾಕ್ಯದಿಂದ) ಹೇಳಲ್ಪಡುತ್ತಾನೆ. (ಏಕೆಂದರೆ—) ರಸಶಬ್ದಘಟಿತವಾದ ಅನ್ನರಸಮಯಶಬ್ದದಿಂದ ಸಾರಾನ್ನಮಯತ್ವರೂಪ ಪುರುಷವಿಶೇಷಣವನ್ನು ಹೇಳಿದುದರಿಂದ. ಅಥವಾ ಅನ್ನತ್ವರೂಪವಿಶೇಷಣಕ್ಕೆ ರಸಶಬ್ದಾರ್ಥವಾದ ಮುಖ್ಯತ್ವದಿಂದ ವಿಶೇಷಿತತ್ವವಿದ್ದ ಪ್ರಯುಕ್ತ

**ವಿಶೇಷಾಂಶ ॥** (೨) ಹಾಗಾದರೆ— ಅನುವಾಕಾಂತರದಲ್ಲಿ **ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಂ** ಎಂದು ಶುದ್ಧೀಕರಿಸಬೇಕೆಂದು ಪ್ರಾರ್ಥಿತರಾದ ಅನ್ನಮಯಾದಿಗಳಿಗೆ ಬ್ರಹ್ಮತ್ವವನ್ನು ಹೇಗೆ ಹೇಳುವುದು ಎಂದರೆ—ಇಲ್ಲಿ ಅನ್ನಮಯಾದಿ ಕೋಶಗಳನ್ನು ಹೇಳಿದ್ದಲ್ಲ. ಮತ್ತೆ ಆವಾವ ಕೋಶಗಳಿಗೆ ನಿಯಮಾಕವಾದ ಕೋಶಗಳಲ್ಲಿರತಕ್ಕ ಬ್ರಹ್ಮಚೈತನ್ಯವೇ ಹೇಳಲ್ಪಡುತ್ತದೆ. ಏಕೆಂದರೆ ಸ ವಾ ಏಷಃ ಎಂದು ಆದಿಯಲ್ಲಿಯೂ ರಸೋ ವೈ ಸಃ ಎಂದು ಅಂತ್ಯದಲ್ಲಿಯೂ ಅನ್ನಮಯಾದಿಗಳು ಕೋಶವಾಗಬಾರದೆನ್ನುವ ಉದ್ದೇಶದಿಂದಲೇ ರಸಶಬ್ದವನ್ನು ವಿಶೇಷಣ ಕೊಟ್ಟಿದ್ದಾರೆ. ಅಂತೂ ಅನ್ನಮಯಾದಿಗಳಿಗಿಂತ ಅನ್ನರಸಮಯಾದಿಗಳು ಬೇರೆ

ಎಂದು ಸಿದ್ಧವಾಯಿತು. (ಬಿ) ಮತ್ತು ವ್ಯವಹಿತವಾದ ಆಕಾಶಾದಿಗಳಿಗೆ ಕಾರಣೀಭೂತನಾದ ಆತ್ಮನನ್ನು ಹೇಳುವ ಸಃ ಎನ್ನುವ ವಿಶೇಷಣವೂ ಇದೆ.

**ಪೀಠಿಕೆ ॥** (೧) ಹಾಗಾದರೆ, ಕಾಣತಕ್ಕ ದೇಹವೇ ಅನ್ನಮಯವಲ್ಲ, ಮತ್ತೆ ಬ್ರಹ್ಮನೇ. ಆತ್ಮನಿಗೇನೇ ಸಃ ಇತ್ಯಾದಿಗಳಲ್ಲಿ ಪರಾಮರ್ಶವು ಎಂದಾದರೆ— ತಸ್ಯೇದಮೇ ವ ಶಿರಃ ಎಂದು ಪ್ರತ್ಯಕ್ಷನಿರ್ದೇಶವು ಕೂಡಲಾರದು. (೨) ಹಾಗಾದರೆ ಉಪನಿಷ ದ್ರಷ್ಟ್ರು ಆದ ಮುನಿಯು ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡು ಇದಂ ಎಂದು ಪ್ರತ್ಯಕ್ಷವಾಗಿ ನಿರ್ದೇಶಮಾಡಿದ್ದಾನೆಂದೂ ಹೇಳಲಾಗುವುದಿಲ್ಲ. ಹಾಗೆ ಇದ್ದರೆ ಅವನು ಪ್ರತ್ಯಕ್ಷೀಕರಿಸಿದ ಪ್ರಾಣಮಯಾದಿಗಳಲ್ಲಿಯೂ ಹಾಗೆ ನಿರ್ದೇಶಮಾಡಬೇಕಾಗಿತ್ತು. (೩) ಮತ್ತು ತಾನು ಪ್ರತ್ಯಕ್ಷವಾಗಿ ತಿಳಿದುದರಿಂದ ಇದಂ ಮೊದಲಾದ ಶಬ್ದದ ಅಪೇಕ್ಷೆಯೇ ಇಲ್ಲ. ಉಪದೇಶ್ಯರಾದ ಪುರುಷರು ಪ್ರತ್ಯಕ್ಷಕ್ಕೆ ಅಯೋಗ್ಯರು. ಆದುದರಿಂದ ಇದಂ ಎಂದು ನಿರ್ದೇಶವೇ ವ್ಯರ್ಥವು ಎಂದರೆ—

**ಭಾಷ್ಯ ॥ ಇದಮಿತಿ ಚ ದೃಶ್ಯಮಾನಸನ್ನಿಹಿತತ್ವಾತ್ ॥ ೨೮ ॥**

**ಭಾಷ್ಯಾರ್ಥ ॥** ವಸ್ತ್ರದೊಳಗೆ ಇರುವ ಮೊಳಕಾಲು ಮೊದಲಾದವುಗಳು ಪ್ರತ್ಯಕ್ಷ ವಾಗದೆ ಇದ್ದರೂ ಅವುಗಳಲ್ಲಿ ಇದಂ ಎಂದು ನಿರ್ದೇಶವಿದ್ದಂತೆಯೇ ಅನ್ನಮಯವಾದ ಶ್ರೀಹರಿಯ ಶಿರಸ್ಸು ಬಾಹು ಮೊದಲಾದುದಕ್ಕೆ ಪ್ರತ್ಯಕ್ಷಸಿದ್ಧವಾದ ದೇಹದ ಶಿರಸ್ಸು ಬಾಹು ಮೊದಲಾದವುಗಳಲ್ಲಿ ಚೆನ್ನಾಗಿ ನಿಯಾಮಕನಾಗಿ ಇದ್ದ ಪ್ರಯುಕ್ತ ಲಕ್ಷಣಯಾ ಶ್ರೀಹರಿಯ ಶಿರಸ್ಸಿನಲ್ಲಿ ಇದಂ ಎಂದು ನಿರ್ದೇಶವೂ ಕೂಡುತ್ತದೆ.

**ಪೀಠಿಕೆ ॥** ಹಾಗಾದರೆ (೧) ತಸ್ಮಾದ್ವಾ ಏತಸ್ಮಾದನ್ನರಸಮಯಾತ್, **ಅನ್ಯೋಽಂತರ ಆತ್ಮಾ ಪ್ರಾಣಮಯಃ** ಎಂದು ಅನ್ನಮಯಾದಿಗಳಿಗೆ ಪರಸ್ಪರ ಭೇದವನ್ನು ಹೇಳಿದುದರಿಂದ ಅನ್ನಮಯಾದಿಗಳು ಐವರೂ ಬ್ರಹ್ಮರು ಎಂದು ಹೇಳಿದ್ದು ಅಯುಕ್ತವು. (೨) ಹೀಗೆಯೇ ಒಬ್ಬ ಬ್ರಹ್ಮನಿಗೇನೇ ಬಹುರೂಪಗಳು ಇದ್ದುದರಿಂದ ಏಕಮೇವ ಎನ್ನುವ ಶ್ರುತಿವಿರೋಧವೂ ಇಲ್ಲ ಎನ್ನುವುದು ಅಯುಕ್ತವು. ಏಕೆಂದರೆ ಪ್ರಮಿತವೇ ಆಗಲಿಲ್ಲ ಎಂದರೆ—

**ಭಾಷ್ಯ ॥ ಅನನ್ಯೋಽಪ್ಯನ್ಯಶಬ್ದೇನ ತಥೈಕೋ ಬಹುರೂಪವಾನ್। ಪ್ರೋಚ್ಯತೇ ಭಗವಾನ್ವಿಷ್ಣುರೈಶ್ವರ್ಯಾತ್ಪುರುಷೋತ್ತಮಃ॥ ಇತಿ ಬ್ರಹ್ಮಾಂಡೇ ॥೨೯ ॥**

**ಭಾಷ್ಯಾರ್ಥ ॥** ಕ್ಷರ ಅಕ್ಷರ ಪುರುಷರಿಂದುತ್ತಮನಾದ ಪೂಜ್ಯನಾದ ವಿಷ್ಣುವು ಅಭಿನ್ನನಾದಾಗ್ಯೂ ಭಿನ್ನನು ಎನ್ನುವ ಶಬ್ದದಿಂದ ಹೇಳಲ್ಪಡುತ್ತಾನೆ. ಹಾಗೆಯೇ ಅಚಿಂತ್ಯಶಕ್ತಿಯಿದ್ದುದರಿಂದ ಒಬ್ಬನೇ ಆದಾಗ್ಯೂ ಬಹುರೂಪವುಳ್ಳವನಾಗುತ್ತಾನೆ ಎಂದು ಬ್ರಹ್ಮಾಂಡಪುರಾಣದಲ್ಲಿ (ಹೇಳಿದ ಪ್ರಯುಕ್ತ ವಿರೋಧವಿಲ್ಲ)

**ವಿಶೇಷಾಂಶ ॥** (ಎ) ಅನ್ನಮಯ ಮೊದಲಾದ ಐದು ಕೋಶಗಳಲ್ಲಿರುವ ಅನ್ಯತ್ವ ಅಂತರತ್ವ ಮೊದಲಾದ ಧರ್ಮಗಳು ಅವುಗಳಲ್ಲಿರತಕ್ಕ ಭಗವದ್ರೂಪಗಳಲ್ಲಿ ಲಕ್ಷಿಸಲ್ಪಡುತ್ತವೆ. ಆದುದರಿಂದಲೇ

ಸ್ಥಾನಭೇದಾದೈಶ್ವರ್ಯಾಚ್ಚ ಎನ್ನುವ ಭಾಷ್ಯದಲ್ಲಿ ಸ್ಥಾನಭೇದರೂಪವಾದ ಹೇತ್ವಂತರವನ್ನು ಹೇಳಿರುತ್ತಾರೆ. (ಬ) ತೈತ್ತಿರೀ ಯಭಾಷ್ಯದಲ್ಲಿ **ಭೇದಾಭಾವೇಽಪಿ ಸಂಖ್ಯಾವಿಶೇಷಯುಕ್ತತ್ವಾದನ್ಯತ್ವೋಕ್ತಿಃ** ಎಂದು ಹೇಳಿದ್ದಾರೆ.

**ಪೀಠಿಕೆ ॥** ಹಾಗಾದರೆ ಬ್ರಹ್ಮಶಬ್ದವು ಸರ್ವಸಾಧಾರಣವಾಗಿದೆ. ಹೇತುವ್ಯಪದೇಶವು ವಿಷ್ಣುವಿನಲ್ಲಿಯೇ ಇರತಕ್ಕುದೆಂದು ಸ್ಪಷ್ಟವಾಗಿ ತೋರುವುದಿಲ್ಲ. ಮಂತ್ರವರ್ಣಸಮಾಖ್ಯೆಯು ಅನ್ಯಲಿಂಗಾದಿಗಳಿಂದ ದುರ್ಬಲವಾದುದರಿಂದ ಸಾವಕಾಶವಾಗಿದೆ. ಅನ್ಯಥಾಸಿದ್ಧವಾಗದೆ ಇರುವ ಬೇರೆ ಹೇತುಗಳು ಇಲ್ಲ. ಆದಕಾರಣ ಆನಂದಮಯಾದಿಗಳು ಚತುರ್ಮುಖಾದಿಗಳೇ ಆಗಲಿ ಎನ್ನುವ ಶಂಕೆಯನ್ನು ಪರಿಹರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ.

**ಭಾಷ್ಯ ॥ ನ ಚೋಕ್ತಪ್ರಾಪ್ತ್ಯಾ ವಿರಿಂಚಾದಿರುಚ್ಯತೇ ॥ ೩೦ ॥**

**ಭಾಷ್ಯಾರ್ಥ ॥** ಬ್ರಹ್ಮಶಬ್ದ ಶತಾನಂದತ್ವ ಅಷ್ಟಮೂರ್ತಿತ್ವ ಬಹುಭಾವ ಮೊದಲಾದ ವಿರಿಂಚಾದಿಗಳನ್ನು ತಿಳಿಸಿಕೊಡತಕ್ಕ ಹೇತುಗಳಿಂದ ಅನ್ನಮಯಾದಿಶಬ್ದಗಳಿಂದ ಚತುರ್ಮುಖಾದಿಗಳೇ ಹೇಳಲ್ಪಡುತ್ತಾರೆ. ವಿಷ್ಣುವಲ್ಲವೆಂದು ಹೇಳಕೂಡದು. ಮತ್ತೆ ವಿಷ್ಣುವೇ ಆ ಶಬ್ದಗಳಿಂದ ಹೇಳಲ್ಪಡುತ್ತಾನೆ. ಚತುರ್ಮುಖಾದಿಗಳು ಹೇಳಲ್ಪಡುವುದಿಲ್ಲ.

**ಪೀಠಿಕೆ ॥** ಬ್ರಹ್ಮಾದಿಗಳು ಏಕೆ ಆಗಲಾರರು ಎಂದರೆ—

## ಸೂತ್ರ ॥ ಓಂ ನೇತರೋಽನುಪಪತ್ತೇಃ ಓಂ ॥ ೧೬ ॥

**ಸೂತ್ರಾರ್ಥ ॥** ಆನಂದಮಯಾದಿಗಳು ವಿಷ್ಣುವಿನಿಂದ ಇತರರಾದ ಚತುರ್ಮುಖಾದಿಗಳು ಆಗುವುದಿಲ್ಲ. **ಬ್ರಹ್ಮವಿದಾಪ್ನೋತಿ ಪರಂ** (ತೈ.೧.೨.೧.) **ಸರ್ವಂ ವೈ ತೇಽನ್ನಮಾಪ್ನುವಂತಿ** (೨.೨೧.) **ಸರ್ವಮೇವ ತ ಆಯುರ್ಯಂತಿ** (೨.೩.೧.) ಇತ್ಯಾದಿಗಳಿಂದ ಆನಂದಮಯಾದಿಗಳಿಗೆ ಮುಕ್ತಿಗೆ ಕಾರಣವಾದ ಜ್ಞಾನವಿಷಯತ್ವವನ್ನು ಹೇಳಿದ್ದಾರೆ. ಅದು ವಿಷ್ಣುವಿನಿಂದ ಇತರರಲ್ಲಿ ಕೂಡಲಾರದು.

**ಪೀಠಿಕೆ ॥** ವಿಷ್ಣುಜ್ಞಾನದಿಂದಲೇ ಮೋಕ್ಷವು, ಬ್ರಹ್ಮಾದಿಗಳ ಜ್ಞಾನದಿಂದ ಮೋಕ್ಷವಾಗಲಾರದು ಎಂಬುವುದು ಹೇಗೆ ಎಂದರೆ—

**ಭಾಷ್ಯ ॥ ನ ಹ್ಯನ್ಯಜ್ಞಾನಾನ್ಮೋಕ್ಷ ಉಪಪದ್ಯತೇ**
**ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ**
**ಅಯನಾಯ ವಿದ್ಯತೇ** (ತೈ.ಆ.೩.೧೨.೭.) **ಇತಿ ಹ್ಯುಕ್ತಂ ॥ ೩೧ ॥**

**ಭಾಷ್ಯಾರ್ಥ ॥** ಯಾವಕಾರಣದಿಂದ **ತಮೇವಂ ವಿದ್ವಾನ್★** ಎನ್ನುವ ಶ್ರುತಿಯಿಂದ (ಮುಕ್ತಿಗೆ ವಿಷ್ಣುಜ್ಞಾನ ಹೊರತು ಬೇರೆ ಉಪಾಯವಿಲ್ಲವೆಂದು) ಹೇಳಲ್ಪಟ್ಟಿದೆಯೋ ಆದಕಾರಣ ವಿಷ್ಣುವಿನಿಂದ ಇತರರಾದ ಬ್ರಹ್ಮಾದಿಗಳ ಜ್ಞಾನದಿಂದ ಮೋಕ್ಷವು ಆಗುವುದಿಲ್ಲ.

★ ಶ್ರುತ್ಯರ್ಥವನ್ನು ಮೊದಲು ಹೇಳಿರುತ್ತೇವೆ.

**ಟೀಕಿಕೆ ॥** ಹೇತ್ವಂತರದಿಂದ ಬ್ರಹ್ಮಾದಿಗಳಿಗೆ ಆನಂದಮಯತ್ವವನ್ನು ನಿರಾಕರಿಸತಕ್ಕ ಸೂತ್ರವನ್ನು ಪಠನಮಾಡಿ ವ್ಯಾಖ್ಯಾನ ಮಾಡುತ್ತಾರೆ.

## ಸೂತ್ರ ॥ ಓಂ ಭೇದವ್ಯಪದೇಶಾಚ್ಚ ಓಂ ॥ ೧೭ ॥

**ಸೂತ್ರಾರ್ಥ ॥** ಆನಂದಮಯನ ದೆಸೆಯಿಂದ ಬ್ರಹ್ಮಾದಿಗಳಿಗೆ ಭೇದವನ್ನು ಹೇಳಿದ ಪ್ರಯುಕ್ತವೂ ಆನಂದಮಯನು ಬ್ರಹ್ಮಾದಿಗಳಲ್ಲ. ಅಥವಾ ಆನಂದಮಯಾದಿಗಳು, ವಿರಿಂಚಾದಿಗಳು ಆಗಬಹುದು. ಮುಕ್ತಿಗೆ ಕಾರಣವಾದ ಜ್ಞಾನತ್ವ ಮೊದಲಾದ ಬ್ರಹ್ಮಧರ್ಮಗಳು ಬ್ರಹ್ಮಾಭೇದವಿದ್ದ ಪ್ರಯುಕ್ತ ಜೀವರಿಗೆ ಕಥಂಚಿತ್ ಕೂಡಬಹುದು. ಎಂದು ಶಂಕೆಯು ಬಂದರೆ **ಭೇದವ್ಯಪದೇಶಾಚ್ಚ** ಇತರರು ಆನಂದಮಯಾದಿಗಳು ಆಗುವುದಿಲ್ಲವೆಂದಿಷ್ಟು ಮಾತ್ರವಲ್ಲ. ಮತ್ತೆ ಬ್ರಹ್ಮನಿಂದ ಅಭಿನ್ನನಾಗುವುದಿಲ್ಲ. **ಸ ಯಶ್ಚಾಯಾಂ ಪುರುಷೇ** ಇತ್ಯಾದಿಗಳಲ್ಲಿ ಬ್ರಹ್ಮಭೇದವನ್ನು ಹೇಳಿದ್ದಾರೆ.

**ಭಾಷ್ಯ ॥ ತೇ ಯೇ ಶತಂ ಪ್ರಜಾಪತೇರಾನಂದಾಃ** (ತೈ.ಉ.೨.೮.)**। ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ॥ ಅಥ ಸೋಽಭಯಂ ಗತೋ ಭವತಿ ।** (ತೈ.೨.೭.) **ಸ ಯಶ್ಚಾಯಾಂ ಪುರುಷೇ** (ತೈ.೨.೮.) **ಇತ್ಯಾದಿ ಭೇದವ್ಯಪದೇಶಾತ್ ॥ ೩೨ ॥**

**ಭಾಷ್ಯಾರ್ಥ ॥** (೧) ಪ್ರಜಾಪತೇಃ=ರುದ್ರನಿಗೆ, ಯೇ ಶತಂ=ನೂರುಪಾಲು ಹೆಚ್ಚು ಆನಂದಗಳೋ, ತೇ=ಅವುಗಳು (ಚತುರ್ಮುಖನಿಗೆ ಒಂದು ಆನಂದವು.) (ತೈ.ಉ.ಆ.೨ ೮ ) ಅದೃಶ್ಯೇ=ಸಂಪೂರ್ಣವಾಗಿ ಅಜ್ಞೇಯನಾದ, ಆತ್ಮನಃ ಇಮೇ ಆತ್ಮ್ಯಾಃ=ಜೀವಗುಣಗಳು, ನ ವಿದ್ಯಂತೇ ಆತ್ಮ್ಯಾಃ ಯಸ್ಮಿನ್ ಎನ್ನುವ ವ್ಯುತ್ಪತ್ತಿಯಿಂದ ಅನಾತ್ಮ್ಯೇ=ಜೀವಗುಣವಿಧುರನಾದ, ಅಥವಾ **ಆತ್ಮನಃ ಅಯಂ ಆತ್ಮ್ಯಃ ಸಃ ನ ಇತ್ಯನಾತ್ಮ್ಯಃ** ಎನ್ನುವ ವ್ಯುತ್ಪತ್ತಿಯಿಂದ, ಸ್ವಾಮಿ ರಹಿತನಾದ, ಅನಿರುಕ್ತೇ= ಸಂಪೂರ್ಣವಾಗಿ ನಿರ್ವಚನ ಮಾಡಲಿಕ್ಕೆ ಅಗೋಚರನಾದ, ಅನಿಲಯನೇ=ಮತ್ತೊಬ್ಬ ಆಶ್ರಯನು ಇಲ್ಲದಿರುವ, ಆನಂದಮಯಶಬ್ದವಾಚ್ಯನಾದ ವಿಷ್ಣುವಿಷಯದಲ್ಲಿ ಯಃ=ಯಾವ ಅಧಿಕಾರಿಯು, ಅಭಯಂ = ನಿರ್ಭಯವಾಗಿ, ಪ್ರತಿಷ್ಠಾಂ=ಸ್ಥಿತಿಯನ್ನು ವಿಂದತೇ=ಹೊಂದುತ್ತಾನೋ, ಅಥ=ಆ ಮೇಲೆ, ಸಃ=ಆ ಉಪಾಸಕನು, ಅಭಯಂ=ಭಯರಹಿತನಾದ ಶ್ರೀಹರಿಯನ್ನು, ಗತಃ=ಹೊಂದಿದವನು. ಭವತಿ = ಆಗುತ್ತಾನೆ, (ತೈ.೨.೭.) (೨) ಪುರುಷೇ=ಪುರುಷಪದದಿಂದ ಉಪಲಕ್ಷಿತರಾದ ಅಪಕೃಷ್ಟ ಜೀವರಾಶಿಗಳಲ್ಲಿ ಯಶ್ಚ=ಯಾವ ಆನಂದಮಯನಾದ ವಿಷ್ಣುವಿದ್ದಾನೋ, ಆದಿತ್ಯೇ= ಆದಿತ್ಯಪದದಿಂದ ಉಪಲಕ್ಷಿತರಾದ ಉತ್ಕೃಷ್ಟ ಜೀವರಲ್ಲಿ ಯಶ್ಚ=ಯಾವ ಆನಂದಮಯನು, ಇದ್ದಾನೋ, ಸಃ ಅಯಂ =ಎರಡು ಕಡೆಗಳಲ್ಲಿಯೂ ಇದ್ದ ವಿಷ್ಣುವು, ಏಕಃ=ಅಭಿನ್ನನೇ. (ತೈ.೨.೮.) ಇತ್ಯಾದಿ ಶ್ರುತಿಗಳಿಂದ ಭೇದವನ್ನು ಹೇಳಿದುದರಿಂದ—

**ವಿಶೇಷಾಂಶ ॥** (ಎ) ಆನಂದಮಯನು ವಿರಿಂಚನಲ್ಲ. ವಿರಿಂಚನಿಗೆ **ತೇ ಯೇ ಶತಂ** ಇತ್ಯಾದಿಗಳಿಂದ ರುದ್ರನ ದೆಸೆಯಿಂದ ನೂರುಪಾಲು ಹೆಚ್ಚು ಆನಂದವನ್ನು ಹೇಳಿದ್ದಾರೆ. ಆನಂದಮಯನಿಗೆ **ಯತೋ ವಾಚಃ** ಇತ್ಯಾದಿಗಳಿಂದ ಅಪರಿಮಿತ ಆನಂದವನ್ನು ಹೇಳಿದ್ದಾರೆ. (ಬಿ)

ಹೀಗೆಯೇ ಆನಂದಮಯನು ರುದ್ರನಲ್ಲ. ಆತನಿಗೆ ಹಿರಣ್ಯಗರ್ಭನ ದೆಶೆಯಿಂದ ನೂರುಪಾಲು ಕಡಿಮೆ ಆನಂದವನ್ನು ಹೇಳಿದ್ದಾರೆ. (ಸಿ) ಬೃಹಸ್ಪತ್ಯಾದಿಗಳೂ ಅಲ್ಲ. ಅವರಿಗೆ ಮೇಲುಮೇಲಿನವರಿಗಿಂತ ನೂರು ನೂರು ಪಾಲು ಕಡಿಮೆ ಆನಂದವನ್ನು ಹೇಳಿದ್ದಾರೆ. (ಡಿ) ಪ್ರಕೃತ್ಯಾದಿಗಳೂ ಅಲ್ಲ. ಅದೃಶ್ಯೇ ಅನಾತ್ಮ್ಯೇ ಇತ್ಯಾದಿಗಳಲ್ಲಿ ಪ್ರಕೃತ್ಯಾದಿಗಳಿಗೆ ಅಯೋಗ್ಯಸ್ವಾತಂತ್ರ್ಯ ಮೊದಲಾದ ಭೇದಕ ಧರ್ಮಗಳು ಶ್ರುತಗಳಾಗಿವೆ. (ಇ) ಆನಂದಮಯನು ಬ್ರಹ್ಮಾದಿಜೀವರ ಸಮುದಾಯವೂ ಅಲ್ಲ. ಆನಂದಮಯನಿಗೆ ಸ ಯಶ್ಚಾಯಾಂ ಎಂದು ಅಪಕೃಷ್ಟ ಉತ್ಕೃಷ್ಟ ಸರ್ವಜೀವರಲ್ಲಿ ಸ್ಥಿತಿಯನ್ನು ಹೇಳಿದ್ದಾರೆ. ಜೀವರ ಸಮುದಾಯಕ್ಕೆ ಹಾಗೆ ಇಲ್ಲ. (ಎಫ್) **ಪ್ರಜಾಪತಿಃ ಶಿವಃ ಶೇಷೋ ಲಿಂಗಮಿತ್ಯಭಿಧೀಯತೇ** ಎನ್ನುವ ಶೈವಪುರಾಣವಚನದಿಂದ ಪ್ರಜಾಪತಿಯೆಂದರೆ ರುದ್ರನು.

**ಪೀಠಿಕೆ ॥** ಹಾಗಾದರೆ ಆನಂದಮಯನು ಪರಬ್ರಹ್ಮನಾಗಲಿ, ಆದರೂ ಆನಂದಮಯನಿಂದ ಬ್ರಹ್ಮಾದಿಗಳಿಗೆ ಭೇದವು ಹೇಗೆ ಕೂಡುತ್ತದೆ. ಭೇದವು ತತ್ತ್ವಮಸಿ ಇದು ಮೊದಲಾದ ಶ್ರುತಿಗಳಿಂದ ವಿರುದ್ಧವಾಗಿದೆ ಎಂದರೆ—

**ಭಾಷ್ಯ ॥ ನ ಚ ತತ್ತ್ವಮಸಿ (ಛಾಂ.೬.೮.) ಅಹಂ ಬ್ರಹ್ಮಾಸ್ಮಿ (ಬೃ.೩.೪. ೧೦.) ಇತ್ಯಾದಿ ಶ್ರುತಿವಿರೋಧಃ । ನಾಮಾನಿ ಸರ್ವಾಣಿ ಯಮಾವಿಶಂತಿ (ಭಾಲ್ಲವೇಯಶ್ರುತಿಃ) ಇತಿ ತತ್ತಚ್ಛಬ್ದವಾಚ್ಯತ್ವೋಕ್ತೇಃ ॥ ೩೩ ॥**

**ಭಾಷ್ಯಾರ್ಥ ॥** (ಭೇದವ್ಯಪದೇಶಕ್ಕೆ) ತ್ವಂ=ನೀನು, ತತ್=ಆ ಬ್ರಹ್ಮನು, ಅಸಿ=ಆಗಿರುತ್ತಿ (ಉದ್ದಾಲಕರು ಶ್ವೇತಕೇತುವಿಗೆ ಉಪದೇಶ ಮಾಡಿದ ಛಾಂದೋಗ್ಯ ವಾಕ್ಯವು.) ಅಹಂ =ನಾನು, ಬ್ರಹ್ಮಾಸ್ಮಿ=ಬ್ರಹ್ಮನಿಂದ ಅಭಿನ್ನನು ಆಗಿರುತ್ತೇನೆ. (ವಾಮದೇವವಾಕ್ಯವು.) ಇದು ಮೊದಲಾದ ಶ್ರುತಿಗಳಿಂದ ವಿರೋಧವೆಂದು ಹೇಳಕೂಡದು. ಎಲ್ಲಾ ನಾಮಗಳೂ ಯಾರನ್ನು ಹೊಂದುತ್ತಾವೋ, ಎನ್ನುವ ಶ್ರುತಿಯಿಂದ ಆ ಬ್ರಹ್ಮನಿಗೆ **ತತ್ ತ್ವಂ** ಇದು ಮೊದಲಾದ ಪದಗಳಿಂದ ವಾಚ್ಯತ್ವವನ್ನು ಹೇಳಿದ್ದರಿಂದ.

**ವಿಶೇಷಾಂಶ ॥** (ಎ) **ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ** ಈ ಎರಡು ಶ್ರುತಿಗಳಲ್ಲಿ ಯೂ ವಿಶಿಷ್ಟಗಳಿಗೆ ಐಕ್ಯವು ಕೂಡದಿರುವುದರಿಂದ ತತ್, ತ್ವಂ, ಅಹಂ, ಬ್ರಹ್ಮ ಪದಗಳಿಂದ ಲಕ್ಷಿತಗಳಾದ ಚೈತನ್ಯಗಳಿಗೆ ಐಕ್ಯವನ್ನು ಹೇಳಬೇಕು. (ಬಿ) ಆದಿ ಶಬ್ದದಿಂದ **ತದ್ಯೋಽಹಂ, ಸೋಽಸೌ ಯೋಽಸೌ ಸೋಽಹಂ** (ಐ.ಆ.೨.೨.೪.) **ಯೋಽಸಾವಸೌ ಪುರುಷಃ ಸೋಽಹಮಸ್ಮಿ** (ಐ.ಆ.೨.೨.೫.) ಇದು ಮೊದಲಾದ ಶ್ರುತಿಗಳನ್ನು ಇಟ್ಟುಕೊಳ್ಳಬೇಕು. (ಸಿ) **ತತ್ತ್ವಮಸಿ** ಇತ್ಯಾದಿ ಶ್ರುತಿಗಳಿಂದ ಭೇದವ್ಯಪದೇಶಕ್ಕೆ ಏಕೆ ವಿರೋಧವನ್ನು ಹೇಳಕೂಡದು ಎಂದರೆ— ಈ ಶ್ರುತಿಗಳೂ ಪರಬ್ರಹ್ಮರೂಪವಾದ ಅರ್ಥವನ್ನೇ ಹೇಳತಕ್ಕವುಗಳು. ಐಕ್ಯರೂಪ ಅರ್ಥವನ್ನು ಹೇಳತಕ್ಕವುಗಳಲ್ಲ. ಎನ್ನುವ ಅಭಿಪ್ರಾಯದಿಂದ **ನಾಮಾನಿ ಸರ್ವಾಣಿ** ಎನ್ನುವ ಪ್ರಮಾಣವನ್ನು ಹೇಳಿದರು. (ಡಿ) (೧) ತತತ್ವಾತ್=ವ್ಯಾಪ್ತನಾದ ಪ್ರ ಯುಕ್ತ ತತ್ ಎನ್ನಿಸುತ್ತಾನೆ. (೨) ತ್ವಂ ಎನ್ನುವ ಪದದಿಂದ ಬೋಧ್ಯನಾದ ಜೀವನಲ್ಲಿ ಅಂತರ್ಯಾಮಿಯಾದುದರಿಂದ ಅಥವಾ ಸರ್ವಾಭಿಮುಖನಾದುದರಿಂದ ತ್ವಂ ಎನ್ನಿಸುತ್ತಾನೆ. (೩) ಅಸನಾತ್=ಜಗತ್ತನ್ನು

ಸಂಹರಿಸುವುದರಿಂದ ಅಸಿ ಎನ್ನಿಸುತ್ತಾನೆ. (೪) ಅಹೇಯತ್ವಾತ್ = ಅಹೇಯನಾದುದರಿಂದ ಅಥವಾ ಹಂ ಎಂದು ಹೆಸರುಳ್ಳ ಜೀವನಿಂದ ಭಿನ್ನನಾದುದರಿಂದ ಅಹಂ ಎನ್ನಿಸುತ್ತಾನೆ. (೫) ಗುಣಪರಿಪೂರ್ಣನಾದುದರಿಂದ ಬ್ರಹ್ಮ ಎನ್ನಿಸುತ್ತಾನೆ. (೬) ಅಸನಾತ್ ಮಿನುತೇ=ದುಷ್ಟರನ್ನು ನಿರಾಕರಿಸುವುದರಿಂದಲೂ ಜ್ಞಾನಸ್ವರೂಪನಾದುದರಿಂದಲೂ ಅಸ್ಮಿ ಎನ್ನಿಸುತ್ತಾನೆ. (೭) ಜ್ಞಾನಸ್ವರೂಪನಾದುದರಿಂದಲೂ ಅತ್ಯಂತವಾಗಿ ಪ್ರೇರಕನಾಗಿರುವುದರಿಂದಲೂ ಯಃ ಎನ್ನಿಸುತ್ತಾನೆ. (೮) ಜ್ಞಾನರೂಪನಾದುದರಿಂದಲೂ ಶ್ರೇಷ್ಠನಾದುದರಿಂದಲೂ ಸಃ ಎನ್ನಿಸುತ್ತಾನೆ. (೯) ಪರಲೋಕದಲ್ಲಿ ನಿಯಾಮಕನಾಗಿ ಇದ್ದುದರಿಂದಲೂ ಪರೋಕ್ಷನಾದುದರಿಂದಲೂ ಅಸೌ ಶಬ್ದವಾಚ್ಯನು. ಅಥವಾ ಅಸೌ=ಪ್ರಾಣನಲ್ಲಿ ನಿಯಾಮಕನಾಗಿ ಇದ್ದವನು, ಪುರುಷಃ=ಪೂರ್ಣಷಡ್ಗುಣನು ಇತ್ಯಾದಿ ಪ್ರಕಾರ ಪರಬ್ರಹ್ಮಾದ್ಯರ್ಥವನ್ನು ತತ್ತ್ವಪ್ರದೀಪದಲ್ಲಿ ಹೇಳಿದ ಪ್ರಕಾರ ಇಟ್ಟುಕೊಳ್ಳಬೇಕು.

**ಪೀಠಿಕೆ ॥** ಈ ಶ್ರುತಿಗಳು ಆಪಾತತಃ ಐಕ್ಯಪರಗಳೆಂದು ಇಟ್ಟುಕೊಂಡರೂ ಭೇದಶ್ರುತಿಗೆ ಈ ಶ್ರುತಿಗಳಿಂದ ವಿರೋಧವನ್ನು ಶಂಕಿಸಕೂಡದು. ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ (ಯಾವುದು ಯಾರ ಅಧೀನವೋ ಆತನಿಗೆ ಅದರಿಂದ ಅಭೇದ ವ್ಯಪದೇಶವು ರಾಜಾ ರಾಷ್ಟ್ರಂ ಎನ್ನುವಂತೆ ಕೂಡುತ್ತದೆ.) ಎನ್ನುವನ್ಯಾಯದಿಂದ ಆಪಾತತಃ ಸರ್ವೈಕ್ಯಪ್ರತಿಪಾದಕವಾಗಿ ತೋರುವ ಶ್ರುತಿಯು ಸರ್ವರಿಗೂ ಸ್ವಾಮಿಯು ಒಬ್ಬನೇ ಎನ್ನುವ ಅಭಿಪ್ರಾಯವುಳ್ಳದ್ದು ಎನ್ನುವ ವಿಷಯದಲ್ಲಿ ಪ್ರಮಾಣ ವಾಗಿ ಭಾಗವತವಾಕ್ಯವನ್ನು ಹೇಳುತ್ತಾರೆ.—

**ಭಾಷ್ಯ ॥ ಇದಂ ಹಿ ವಿಶ್ವಂ ಭಗವಾನಿವೇತರೋ ಯತೋ ಜಗತ್ಸ್ಥಾನನಿರೋಧ ಸಂಭವಃ ॥** (ಭಾ.ಸ್ಕಂ.೧.ಅಧ್ಯಾ.೫.ಶ್ಲೋ.೨೦.) **॥ ೩೪ ॥**

**ಭಾಷ್ಯಾರ್ಥ ॥** ಶ್ರೀಹರಿಯು ತಾನು ಜಗತ್ತಿನಿಂದ ಭಿನ್ನನಾದಾಗ್ಯೂ ಜಗತ್ತಿನಿಂದ ಅಭಿನ್ನನೆಂದು ತತ್ತ್ವಮಸಿ ಇತ್ಯಾದಿಗಳಲ್ಲಿ ಹೇಳಿಸಿಕೊಳ್ಳಲ್ಪಡುತ್ತಾನೆ. ಅಥವಾ ಪ್ರಮಿತವಾದ ಜಗತ್ತು ಭಗವಂತನಂತೆ (ಅಂದರೆ ಶ್ರೀಹರಿಯಿಂದ ಅಭಿನ್ನದಂತೆ) ಹೇಳಲ್ಪಡುತ್ತದೆ. ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿಗಳಲ್ಲಿ ಪ್ರಸಿದ್ಧವು. ಹೇಗೆಂದರೆ— ಯಾವ ಕಾರಣದಿಂದ ಜಗತ್ತಿಗೆ ಸ್ಥಿತಿ ನಾಶ ಉತ್ಪತ್ತಿಗಳು ಯಾರಿಂದ ಆಗುತ್ತವೋ ಅಂತಹವನು. (ಅಂದರೆ ಜಗತ್ತಿಗೆ ಸ್ವಾಮಿಯಾದುದರಿಂದ ಶ್ರುತ್ಯಾದಿಗಳಲ್ಲಿ ಅಭೇದ ವ್ಯಪದೇಶವು ಕೂಡುತ್ತದೆ.) ಅಥವಾ ಸ್ಥಾಪಯತೀತಿ ಸ್ಥಾನಂ, ನಿರೋಧಯತೀತಿ ನಿರೋಧಃ, ಸಂಭಾವಯತೀತಿ ಸಂಭವಃ ಎನ್ನುವ ವ್ಯುತ್ಪತ್ತಿಯಿಂದ ಜಗತ್ತಿಗೆ ಸ್ಥಿತಿಯನ್ನು ನಾಶವನ್ನು ಉತ್ಪತ್ತಿಯನ್ನು ಕೊಡತಕ್ಕವನು. ಅಥವಾ ತಿಷ್ಠತಿ ಅಸ್ಮಾತ್ ಇವನಿಂದ ಸ್ಥಿತಿಯನ್ನು ಹೊಂದತಕ್ಕುದು. ನಿರುಧ್ಯತೇ ಪ್ರಲೀಯತೇ ಅಸ್ಮಿನ್=ಇವನಲ್ಲಿ ಲಯವನ್ನು ಹೊಂದತಕ್ಕುದು, ಸಂಭವತಿ ಅಸ್ಮಾತ್=ಇವ ನಿಂದ ಹುಟ್ಟತಕ್ಕುದು ಎನ್ನುವ ವ್ಯುತ್ಪತ್ತಿಯಿಂದ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡತಕ್ಕವನು. ಇಂತಹವನಿಗೆ ಜಗತ್ತಿನಿಂದ ಭೇದವು ಪ್ರಮಾಣಸಿದ್ಧವು ಎಂದು ತಿಳಿಸುವುದಕ್ಕಾಗಿ ಹಿ ಶಬ್ದವು. ತತ್ವಪ್ರದೀಪದಲ್ಲಿ ಆದರೂ— ಈ ಜಗತ್ತು ಶ್ರೀ ಹರಿಯ ಅಧೀನವಾದುದರಿಂದ ಭಗವಂತನಂತೆ ಅಂದರೆ ಶ್ರೀಹರಿಯಿಂದ ಅಭಿನ್ನದಂತೆ ಎಂದು ಹೇಳಿಸಿಕೊಳ್ಳಲ್ಪಡುತ್ತದೆ. ಭಿನ್ನನೇ ಯಾಕೆಂದರೆ— ಯಾರಿಂದ ಜಗತ್ತಿನ ಸೃಷ್ಟ್ಯಾದಿಗಳು ಆಗುತ್ತವೋ ಎಂದು ಅರ್ಥವನ್ನು ಹೇಳಿದ್ದಾರೆ.

**ಪೀಠಿಕೆ ॥** ಸರ್ವಜಗತ್ಸ್ವಾಮಿತ್ವ ಇದ್ದುದರಿಂದ ಐಕ್ಯವ್ಯಪದೇಶವು ಎನ್ನುವುದನ್ನೇ ತುರಶ್ರುತಿಯಿಂದ ಉಪಪಾದನಮಾಡುತ್ತಾರೆ—

**ಭಾಷ್ಯ ॥ ಅಸರ್ವಃ ಸರ್ವ ಇತ್ಯಪಿ (ತುರಶ್ರುತಿಃ)** ॥ ೩೫ ॥

**ಭಾಷ್ಯಾರ್ಥ ॥** ಶ್ರೀಹರಿಯು ಸರ್ವರಿಂದ ಭಿನ್ನನಾದಾಗ್ಯೂ ಸರ್ವರಿಗೂ ಸ್ವಾಮಿಯಾದುದರಿಂದ ಸರ್ವಃ ಎಂದು ಅಭೇದದಿಂದ ವೇದಾದಿಗಳಲ್ಲಿ ಹೇಳಲ್ಪಡುತ್ತಾನೆ. (ಆದುದರಿಂದಲೂ ವಿರೋಧ ವಿಲ್ಲ.)

**ಪೀಠಿಕೆ ॥** ಭೇದಜ್ಞಾನವು ಮಿಥ್ಯಾಜ್ಞಾನವಾದುದರಿಂದ ಅದನ್ನು ಅನುಸರಿಸಿಕೊಂಡು ಐಕ್ಯಶ್ರುತಿಗಳಿಗೆ ಅರ್ಥಾಂತರವನ್ನು ಹೇಳುವುದು ಹೇಗೆ ಎಂಬುವ ಆಶಂಕೆಯನ್ನು ಭಾಗವತವಾಕ್ಯದಿಂದ ಪರಿಹರಿಸುತ್ತಾರೆ—

**ಭಾಷ್ಯ ॥ ವಿದ್ಯಾಽತ್ಮನಿ ಭಿದಾಬೋಧಃ** (ಭಾಗ.ಸ್ಕಂ.೧೧.ಅ.೧೯.ಶ್ಲೋ.೪೧.) ॥ ೩೬ ॥

**ಭಾಷ್ಯಾರ್ಥ ॥ ಭಗೋಮ ಐಶ್ವರ್ಯೋ ಭಾವೋ ಲಾಭೋ ಮದ್ಭಕ್ತಿರುತ್ತಮಃ॥** ನನಗೆ ಈಶ್ವರತ್ವ ಭಾವನೆಯೇ ಭಗವು. ನನ್ನ ಭಕ್ತಿಯೇ ಉತ್ತಮ ಲಾಭವು. ಪರಮಾತ್ಮನಲ್ಲಿ ಜೀವನ ದೆಸೆಯಿಂದ ಭೇದಜ್ಞಾನವು ಅಥವಾ ಜೀವನಲ್ಲಿ ಈಶ್ವರನದೆಸೆಯಿಂದ ಭೇದಜ್ಞಾನವು ವಿದ್ಯೆಯು. (ತತ್ವಜ್ಞಾನವು.) ಅಂದರೆ ಶ್ರೀಹರಿಯು ಸರ್ವರಿಂದ ವಿಲಕ್ಷಣನು ಎನ್ನುವ ಜ್ಞಾನವೇ ವಿದ್ಯೆಯು.

**ವಿಶೇಷಾಂಶ ॥** (ಎ) ವಿದ್ಯೆಯು ಯಾವುದು ಎನ್ನುವ ಉದ್ಧವನ ಪ್ರಶ್ನೆಗೆ ಶ್ರೀಕೃಷ್ಣನು ಉತ್ತರವನ್ನು ಕೊಟ್ಟದ್ದು (ಬಿ) **ಭಿದಾಯಾಂ ಅಬೋಧಃ** ಎಂದು ಪರರ ವ್ಯಾಖ್ಯಾನವು ಅಯುಕ್ತವು. ಏಕೆಂದರೆ— ಅಜ್ಞಾನಕ್ಕೆ ವಿದ್ಯಾತ್ವವಿಲ್ಲ.

**ಪೀಠಿಕೆ—** ಹಾಗಾದರೆ— ಭೇದಜ್ಞಾನವು ಪುರುಷಾರ್ಥಕ್ಕೆ ಕಾರಣವಾಗದಿರುವುದರಿಂದ ಬೇದಜ್ಞಾನಕ್ಕೆ ವಿದ್ಯಾತ್ವವು ಹೇಗೆ ಕೂಡುತ್ತದೆ ಎಂದರೆ—

**ಭಾಷ್ಯ ॥ ★ಭೇದದೃಷ್ಟ್ಯಾಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ** (ಭಾಗ. ಸ್ಕ. ೩. ಅ.೩೩.ಶ್ಲೋ.೧೨.) ॥ ೩೭ ॥

**ಭಾಷ್ಯಾರ್ಥ ॥** (ಬ್ರಹ್ಮನು) ಜೀವೇಶ್ವರ ಭೇದಜ್ಞಾನದಿಂದಲೂ ಈಶ್ವರಬಹುಮಾನದಿಂದಲೂ (ಈಶ್ವರನಲ್ಲಿ ಭಕ್ತಿಯಿಂದಲೂ) ಫಲಸ್ನೇಹರಹಿತವಾದ ಕರ್ಮದಿಂದಲೂ (ಆನಂದಾದಿಗುಣಪೂರ್ಣ ನಾದ ಬ್ರಹ್ಮನನ್ನು ಹೊಂದಿ ಮೊದಲಿನಂತೆ ಹುಟ್ಟುತ್ತಾನೆ.)

---

★ ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ॥ ಯೋಗೇಶ್ವರೈಃ ಕುಮಾರಾದ್ಯೈಃ ಸಿದ್ಧೈಃ ಯೋಗಪ್ರವರ್ತಕೈಃ॥ (ಎನ್ನುವುದು ಪೂರ್ವವಾಕ್ಯವು) ಕರ್ತೃತ್ವಾತ್ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಂ। ಸ ಸಂಗತ್ಯಪುನಃ ಕಾಲೇ ಕಾಲೇನೇಶ್ವರಮೂರ್ತಿನಾ। ಜಾತೇ ಗುಣವ್ಯತಿಕರೇ ಯಥಾ ಪೂರ್ವಂ ಪ್ರಜಾಯತೇ॥ (ಎನ್ನುವುದು ಉತ್ತರವಾಕ್ಯವು.)

**ವಿಶೇಷಾಂಶ** ॥ (ಎ) ಯಾವನು ಸ್ಥಾವರಜಂಗಮಗಳಿಗೆ ಆದಿಯಲ್ಲಿದ್ದವನೋ ಅಂತಹ ಬ್ರಹ್ಮನು ಮನುಷ್ಯೋತ್ತಮನನ್ನು ಆರಂಭಿಸಿ ಗರುಡ ಶೇಷ ಪರ್ಯಂತರಾದ ಜ್ಞಾನಿಗಳಾದ ಯೋಗಸಿದ್ಧರಾದ ಸನತ್ಕುಮಾರಾದಿಗಳಿಂದ ಕೂಡಿಕೊಂಡು ಜೀವೇಶ್ವರಾದಿಗಳ ಭೇದಜ್ಞಾನದಿಂದಲೂ ಪರಮೇಶ್ವರನಲ್ಲಿ ಬಹುಮಾನದಿಂದಲೂ ಫಲಾಭಿಸಂಧಿರಹಿತವಾದ ನಿವೃತ್ತಕರ್ಮದಿಂದಲೂ ಮುಕ್ತನಾಗಿ ಜಗತ್ಕರ್ತೃತ್ವರೂಪನಿಮಿತ್ತದಿಂದ ಸಾರ್ವಜ್ಞಾದಿ ಗುಣಸಂಪೂರ್ಣನಾದ ಕ್ಷರ ಅಕ್ಷರ ಪುರುಷರಿಂದ ಶ್ರೇಷ್ಠನಾದ ಪರಮ ಪುರುಷಾಖ್ಯ ಬ್ರಹ್ಮನನ್ನು ಪ್ರಲಯಕಾಲದಲ್ಲಿ ಪ್ರವೇಶಮಾಡಿ ಪುನಃ ಕಾಲಾಖ್ಯ ವಾದ ಈಶ್ವರಮೂರ್ತಿಯಿಂದ ಸೃಷ್ಟಿಕಾಲವು ಬರುತ್ತಿರಲು ಸತ್ವಾದಿಗುಣವಿಕಾರವಿಲ್ಲದಿರುವ ವಿಷ್ಣುಲೋಕದಲ್ಲಿ ಮೊದಲಿನಂತೆ ಎಲ್ಲಾ ಮುಕ್ತರಿಗೂ ಅಧಿಪತಿಯಾಗಿ ಇರುತ್ತಾನೆ. (ಬಿ) ತತ್ವಪ್ರದೀಪದಲ್ಲಿ ಆದರೂ ಅಭಿಮಾನೇನ = ಅಭಿತಃ ಮಾನೇನ ವಿಶೇಷಜ್ಞಾನದಿಂದ ಎಂದು ವ್ಯಾಖ್ಯಾನಮಾಡಿ ಗುಣವ್ಯತಿಕರೇ ಎಂದು ಪದವನ್ನು ಛೇದಿಸಿದ್ದಾರೆ. ತಥಾಚ ಸಃ =ಬ್ರಹ್ಮಾದಿಜೀವರ ಸಮುದಾಯವು ಪ್ರಲಯಕಾಲದಲ್ಲಿ ಜ್ಞಾನೈಶ್ವರ್ಯಾದಿ ಅನಂತಗುಣಗಳುಳ್ಳ ಬ್ರಹ್ಮನನ್ನು ಹೊಂದಿ ಪುನಃ ಸೃಷ್ಟಿಕಾಲದಲ್ಲಿ ಕಾಲೇನ= ಜ್ಞಾನರೂಪಿಯಾದ, ಈಶ್ವರಮೂರ್ತಿನಾ=ವಿಷ್ಣುರೂಪದಿಂದ, ಗುಣವ್ಯತಿಕರೇ=ಸತ್ವಾದಿಗುಣಗಳಿಗೆ ವೈಷಮ್ಯವು ಉಂಟಾಗೋಣ, ಯಥಾಪೂರ್ವಾಂ=ಮೊದಲಿನಂತೆ ಜ್ಞಾನಾದಿಗುಣತಾರತಮ್ಯವನ್ನು ಪರಸ್ಪರ ಭೇದವನ್ನು ಕೂಡ ಬಿಡದೆ ಅವುಗಳಿಂದ ವಿಶಿಷ್ಟನಾಗಿಯೇ ಚೆನ್ನಾಗಿ ಮುಕ್ತಿಯಲ್ಲಿ ಅಭಿವ್ಯಕ್ತನಾಗುತ್ತಾ ನೆ. ಅಭಿನ್ನನಾಗುವುದಿಲ್ಲ. ಈ ಪದಚ್ಛೇದವು ಟೀಕಾಕಾರರಿಗೂ ಸಮ್ಮತವೇ.

**ಪೀಠಿಕೆ** ॥ ಇದೇ ಅರ್ಥದಲ್ಲಿ ಅಥರ್ವಣವಾಕ್ಯವನ್ನು ಪ್ರಮಾಣವಾಗಿ ಉದಾಹರಿಸುತ್ತಾರೆ—

**ಭಾಷ್ಯ ॥ ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತ ಶೋಕಃ (ಮು.೩.೧.೨.) ॥ ೩೮ ॥**

**ಭಾಷ್ಯಾರ್ಥ** ॥ ಜುಷ್ಟಂ=ಸರ್ವಸೇವ್ಯನೂ, ಈಶಂ=ಸ್ವತಂತ್ರನೂ, ಅನ್ಯಂ=ಜೀವನಿಂದ ಭಿನ್ನನೂ ಆದ ಶ್ರೀವಿಷ್ಣುವನ್ನು ಇತಿ=ತದೇತತ್ಸತ್ಯಂ ಇದು ಮೊದಲಾದ ಹಿಂದೆ ಹೇಳಿದ ಪ್ರಕಾರ, ಅಸ್ಯ= ಶ್ರೀಹರಿಯ, ಮಹಿಮಾನಂ=ಮಹಿಮೆಯನ್ನು ಕೂಡ, ಯದಾ=ಯಾವಾಗ, ಪಶ್ಯತಿ=ನೋಡುತ್ತಾನೋ, ಆಗ, ವೀತಶೋಕಃ=ಮುಕ್ತನಾಗುತ್ತಾನೆ. ತತ್ವಪ್ರದೀಪದಲ್ಲಿ ಆದರೂ— ಜುಷ್ಟಂ=ದೇವತೆಗಳಿಂದ ಸೇವಿಸಲ್ಪಡತಕ್ಕ, ಅಸ್ಯ=ಜೀವನಿಗೆ, ಈಶಂ=ನಿಯಾಮಕನಾದ, ಅನ್ಯಂ=ಭಿನ್ನನಾದ ಶ್ರೀಹರಿಯನ್ನು ಯದಾ=ಯಾವಾಗ, ಮಹಿಮಾನಂ=ಮಹಾಗುಣಸ್ವರೂಪನನ್ನಾಗಿ, ಪಶ್ಯತಿ = ತಿಳಿಯುತ್ತಾನೋ, ಇತಿ ವೀತಶೋಕಃ=(ಜೀವನು) ಆವಾಗಲೇ ದುಃಖದಿಂದ ಬಿಡಲ್ಪಟ್ಟವನು (ಪೂಜ್ಯಗುಣ ರಹಿತನನ್ನಾಗಿ ಯೂ ಅಭಿನ್ನನನ್ನಾಗಿಯೂ ನಿಯಾಮಕನಲ್ಲದಿದ್ದವನನ್ನಾಗಿಯೂ ಸೇವಿಸಲ್ಪಡದೆ ಇದ್ದವನನ್ನಾಗಿಯೂ ತಿಳಿದವನು ಶೋಕರಹಿತನು ಆಗುವುದಿಲ್ಲ ಎಂದು ವ್ಯಾಖ್ಯಾನ ಮಾಡಿರುವರು.

ವಿಶೇಷಾಂಶ— (ಎ) ಯದ್ಯಪಿ ವಿಶೇಷಣಭೇದವ್ಯಪದೇಶಾಭ್ಯಾಂ ಎನ್ನುವ ಸೂತ್ರದಲ್ಲಿ ಆಯಮನ್ಯೋಮಾರ್ಗಃ ಎಂದು ಹೇಳಿದರೆ ಪ್ರಸಿದ್ಧ ಮಾರ್ಗದಿಂದ ಬೇರೆ ಮಾರ್ಗವು ಎಂದು ತೋರು ದಂತೆಯೇ, ಅನ್ಯಮೀಶಂ ಎಂದು ಹೇಳಿದರೆ ಬ್ರಹ್ಮನಿಗೆ ರುದ್ರನದೆಶೆಯಿಂದ ಭೇದವು ತೋರುತ್ತದೆ

ಎಂದು ಹೇಳಿದ್ದಾರೆ. ಆದಕಾರಣ ಬ್ರಹ್ಮನು ರುದ್ರನ ದೆಸೆಯಿಂದ ಭಿನ್ನನು ಎನ್ನುವ ವಿಷಯದಲ್ಲಿ ಪ್ರಮಾಣವಾಗಿ ಉದಾಹರಿಸಿದ್ದಾರೆ. ಬ್ರಹ್ಮನು ಜೀವನಿಂದ ಭಿನ್ನನು ಎನ್ನುವ ವಿಷಯದಲ್ಲಿ ಪ್ರಮಾಣವಾಗಿ ಉದಾಹರಿಸಲಿಲ್ಲ. ಆದಾಗ್ಯೂ ಶ್ರುತಿಗಳಿಗೆ ಅನೇಕಾರ್ಥಗಳು ಇದ್ದಪ್ರಯುಕ್ತ ಅದೊಂದು ವ್ಯಾಖ್ಯಾನಾಂತರವು. ಆದಕಾರಣ ವಿರೋಧವಿಲ್ಲ. (ಬಿ) ಆದುದರಿಂದಲೇ ದ್ಯುಭ್ವಾದಿ ಅಧಿಕರಣದಲ್ಲಿ ಜೀವೇಶಭೇದವಿಷಯದಲ್ಲಿಯೂ ಪ್ರಮಾಣವನ್ನಾಗಿ ಈ ಶ್ರುತಿಯನ್ನೇ ಉದಾಹರಿಸಿದ್ದಾರೆ.

**ಪೀಠಿಕೆ ॥** ಪರರಿಗೆ ಅಭಿಮತಗಳಾದ ಅದ್ವೈತಶ್ರುತಿಗಳು ಸ್ವಾಮಿತ್ವರೂಪವಾದ ಅರ್ಥವುಳ್ಳವುಗಳೆಂದು ವ್ಯಾಖ್ಯಾನ ಮಾಡಿ ಅಂತರ್ಯಾಮಿ ಪರಗಳೂ ಆಗುತ್ತವೆ ಎನ್ನುವ ಅಭಿಪ್ರಾಯದಿಂದ ಆ ಶ್ರುತಿಗಳನ್ನು ಶ್ರುತಿಸ್ಮೃತಿಗಳಿಂದ ವ್ಯಾಖ್ಯಾನ ಮಾಡುತ್ತಾರೆ.

**ಭಾಷ್ಯ ॥ ಅಸರ್ವಃ ಸರ್ವ ಇವಾತ್ಮೇವ ಸನ್ನನಾತ್ಮೇವ ಪ್ರತ್ಯಙ್ ಪರಾಙ್ವೈಕ ಈಯತೇ ಬಹುಧೇಯತೇ ಸ ಪುರುಷಃ ಸ ಈಶ್ವರಃ ಸ ಬ್ರಹ್ಮ ॥ ೩೯ ॥**

**ಭಾಷ್ಯಾರ್ಥ ॥** (ಶ್ರೀಹರಿಯು) ಅಸರ್ವೋऽಪಿ=ಸರ್ವಾತ್ಮನಾಗದೆ ಇದ್ದರೂ, ಸರ್ವ ಇವ= ಸರ್ವಾತ್ಮಕನಂತೆ, (ಅಂದರೆ ಸರ್ವಾತ್ಮಕನಾಗಿ) ಈಯತೇ=ತಿಳಿಯಲ್ಪಡುತ್ತಾನೆ. (ಏಕೆಂದರೆ— ಅಲ್ಲಿ ಅಂತರ್ಯಾಮಿತ್ವವು ಹೇತುವೆಂದು ಅಭಿಪ್ರಾಯಮಾಡಿಕೊಂಡು ಅಂತರ್ಯಾಮಿತ್ವವು ತೋರದಿರುವುದರಿಂದ ಅದಕ್ಕೆ ಅಸಿದ್ಧಿಯನ್ನು ಆಶಂಕಿಸಿಕೊಂಡು ಹೇಳುತ್ತಾರೆ.) ಆತ್ಮೈವ= ಅಂತರ್ಯಾಮಿಯೇ ಆಗಿ, ಅನಾತ್ಮೈವ=ಅಂತರ್ಯಾಮಿಯಾಗದೆ ಇದ್ದವನಾಗಿ, ಈಯತೇ= ರಾಮಕೃಷ್ಣಾದಿ ರೂಪಗಳಲ್ಲಿ ತಿಳಿಯಲ್ಪಡುತ್ತಾನೆ. (ಅಂತೂ ಅಂತರ್ಯಾಮಿಯಲ್ಲವೆನ್ನುವ ಪ್ರತೀತಿಯು ಅಜ್ಞಾನಮೂಲಕವು.) (ಹಾಗಾದರೆ— ಎಷ್ಟುವಿಗೆ ಅಂತರ್ಯಾಮಿತ್ವವಿದ್ದರೆ ಪ್ರತ್ಯಕ್ತ್ವವು ಬರಬೇಕಾಗುವುದು. ಅದು ಅಯುಕ್ತವು. ಪರಾಕ್ತ್ವೇನಪ್ರತೀತಿಯು ಇದ್ದ ಪ್ರಯುಕ್ತ ಎಂದರೆ—) ಶ್ರೀಹರಿಯು, ಪ್ರತ್ಯಙ=ದೇಹದೊಳಗೆಯೂ ಇರತಕ್ಕವನಾದಾಗ್ಯೂ, ಪರಾಙ್ವ=ಹೊರಗೆ ಮಾತ್ರ ಇರತಕ್ಕವನೆಂದು, ಈಯತೇ=ತಿಳಿಯಲ್ಪಡುತ್ತಾನೆ. (ಅಂತೂ ಹೊರಗೆ ಮಾತ್ರ ಇದ್ದಾನೆನ್ನುವ ಪ್ರತೀತಿಯು ಭ್ರಾಂತಿಯು.) (ಹಾಗಾದರೆ ಶ್ರೀಹರಿಯಲ್ಲಿ ವಿರುದ್ಧಗಳಾದ ಅನೇಕ ಧರ್ಮಗಳನ್ನು ಅಂಗೀಕರಿಸಿದರೆ ಭೇದವು ಬರಬೇಕಾದುದರಿಂದ ಏಕಮೇವ ಎನ್ನುವ ಶ್ರುತಿವಿರೋಧವು ಎಂದರೆ—) ಏಕ ಏವ= ಒಬ್ಬನೇ. ಬಹುಧಾ=ಬಹುರೂಪದಿಂದ, ಈಯತೇ=ತಿಳಿಯಲ್ಪಡುತ್ತಾನೆ. (ಅಂತೂ ಒಬ್ಬನಿಗೇನೇ ಬಹುರೂಪಗಳು ಇದ್ದುದರಿಂದ ಸರ್ವಧರ್ಮಗಳೂ ಕೂಡುತ್ತವೆ.) ತತ್ವಪ್ರದೀಪದಲ್ಲಿ ಆದರೂ— ಪ್ರತ್ಯಙ ಪರಾಙ್ವ=ಅಭಿಮುಖನಾದಾಗ್ಯೂ ಅನಭಿಮುಖನಂತೆ, ಒಬ್ಬನೇ ಬಹುಪ್ರಕಾರನಾಗಿ ತಿಳಿಯಲ್ಪಡುತ್ತಾನೆ. ಹೊಂದಲ್ಪಡುತ್ತಾನೆಂದು ಹೇಳಿರುವರು. (ಅಂತರ್ಯಾಮಿತ್ವದಿಂದ ಸರ್ವಾತ್ಮಕನಾಗಿ ಹೇಳಿಸಿಕೊಳ್ಳಲ್ಪಟ್ಟವನು. ಸರ್ವಜ್ಞನೋ? ಎಲ್ಲಿ ಹೇಳಲ್ಪಡುತ್ತಾನೆ? ಎಂದರೆ—) ಸ ಪುರುಷಃ ಆತನು ಸಂಪೂರ್ಣ ಆರುಗುಣಗಳುಳ್ಳವನಾದುದರಿಂದಲೂ ದೇಹಾಖ್ಯಪುರದಲ್ಲಿದ್ದುದರಿಂದಲೂ ಪುರುಷನೆಂದು ಹೆಸರುಳ್ಳವನು. (ಇದರಿಂದ ಪುರುಷ ಏವೇದಂ ಸರ್ವಂ (ತೈ.ಆ.೩.೧೨.) ಎನ್ನುವ ಶ್ರುತಿಯನ್ನು ಸ್ವೀಕರಿಸಿದರು.) (ಸ್ಥಲಾಂತರವನ್ನು ಹೇಳುತ್ತಾರೆ.) ಸಃ=ಸರ್ವಾತ್ಮಕವಾಗಿ ವ್ಯಪದೇಶ

ಮಾಡಲ್ಪಟ್ಟ ಶ್ರೀಹರಿಯು. ಬ್ರಹ್ಮ=ಸರ್ವತ್ರಪೂರ್ಣನಾದುದರಿಂದ ಬ್ರಹ್ಮ ಎಂದು ಹೆಸರುಳ್ಳವನು. (ಇದರಿಂದ **ಸರ್ವಂ ಖಲ್ವಿದಂ ಬ್ರಹ್ಮ** ಎನ್ನುವ (ಛಾ.೩.೧೪. ೧.) ಶ್ರುತಿಯನ್ನು ತೆಗೆದುಕೊಂಡಿರುವರು.) (ಹಾಗಾದರೆ ಅಂತರ್ಗತನಿಗೆ ಬಹಿರ್ಗತತ್ವ ಮೊದಲಾದುದು ಎಲ್ಲಿಯೂ ಕಾಣದಿರುವುದರಿಂದ ಹೇಗೆ ಕೂಡುತ್ತದೆ ಎಂದರೆ—) ಸಃ=ಶ್ರೀಹರಿಯು, ಹಿ=ಯಾವ ಕಾರಣದಿಂದ, ಈಶ್ವರಃ=ಅಚಿಂತ್ಯಶಕ್ತಿ ಇರತಕ್ಕವನೋ, (ಆದುದರಿಂದ ಆತನಲ್ಲಿ ಬೇರೆಕಡೆ ಕೂಡದಿದ್ದರೂ ಎಲ್ಲವೂ ಕೂಡುತ್ತದೆ.)

**ವಿಶೇಷಾಂಶ ॥** (ಎ) ಯದ್ಯಪಿ **ಅಸರ್ವಃ** ಎನ್ನುವ ವಾಕ್ಯವು ಅತ್ಮಶಬ್ದಕ್ಕೆ ಸ್ವಾಮಿತ್ವರೂಪವಾದ ಅರ್ಥವನ್ನು ಅಂಗೀಕರಿಸಿಕೊಂಡು ಸ್ವಾಮಿತ್ವರೂಪನಿಮಿತ್ತದಿಂದ ಐಕ್ಯಶ್ರುತಿಗಳು ಪ್ರವೃತ್ತಗಳಾಗಿವೆ ಎನ್ನುವ ಪ್ರಮಾಣವಾಗಿ ಉದಾಹೃತವಾಗಿದೆ. ಆದಾಗ್ಯೂ ಅಂತರ್ಯಾಮಿ ಪರವಾಗಿಯೂ ಐಕ್ಯಶ್ರುತಿಗಳು ಪ್ರವೃತ್ತಗಳಾಗುತ್ತವೆ. ಆದುದರಿಂದ ಎರಡು ವಿಷಯದಲ್ಲಿಯೂ ಪ್ರಮಾಣವಾಗಿ ಉದಾಹರಿಸಿದ್ದು ಯುಕ್ತವು. (ಬಿ) ತತ್ತ್ವಪ್ರದೀಪಕಾರರಿಗೂ ಸ್ವಾಮಿತ್ವರೂಪವಾದ ಅರ್ಥವು ಕೂಡುವಂತೆ ಅಂತರ್ಯಾಮಿತ್ವರೂಪವಾದ ಅರ್ಥವೂ ಕೂಡುವುದು. ಹೀಗೆ ಎರಡು ಅರ್ಥದಲ್ಲಿಯೂ ಅಸರ್ವಃ ಎನ್ನುವ ಶ್ರುತಿಯು ಪ್ರಮಾಣವು ಎಂದಭಿಪ್ರಾಯವು. (ಸಿ) ತತ್ತದಂತರ್ಯಾಮಿತ್ವೇನಾಪಿ ತತ್ತಚ್ಛಬ್ದವಾಚ್ಯತ್ವಂ ವಿಷ್ಣೋರಸ್ತೀತ್ಯಾಹ=ಸರ್ವಾಂತರ್ಯಾಮಿತಃ ಎನ್ನುವ ಮೂಲದಿಂದ ಎಂದು ತತ್ತ್ವಪ್ರದೀಪದ ಲ್ಲಿ ಹೇಳಿದರಿಂದ ವಿರೋಧವು ಬಂತೆಂದು ಹೇಳಕೂಡದು. **ಅಂತರ್ಯಾಮಿತ್ವೇನಾಪಿ** ಎನ್ನುವ ಉಕ್ತಿಯಿಂದ ನಾಮಾನಿ ಎನ್ನುವ ಶ್ರುತಿಬಲದಿಂದ ಮಾತ್ರ ಆಯಾಯ ಶಬ್ದಪ್ರವೃತ್ತಿನಿಮಿತ್ತದಿಂದ ವಿಷ್ಣುವಿಗೆ ಆವಾವ ಶಬ್ದವಾಚ್ಯತ್ವವು ಎಂದಲ್ಲ. ಮತ್ತೆ ಅಂತರ್ಯಾಮಿತ್ವದಿಂದಲೂ ಕೂಡ.

**ಪೀಠಿಕೆ ॥** ಆವಾವ ವಸ್ತುಗಳಲ್ಲಿ ಅಂತರ್ಯಾಮಿಯಾಗಿರುವುದರಿಂದಲೂ ಆವಾವ ಶಬ್ದ ವಾಚ್ಯತ್ವವು ವಿಷ್ಣುವಿಗೆ ಇದೆ ಎನ್ನುತ್ತಾರೆ.

**ಭಾಷ್ಯ ॥ ಸರ್ವಾಂತರ್ಯಾಮಿಕೋ ವಿಷ್ಣುಃ ಸರ್ವನಾಮ್ನಾಭಿಧೀಯತೇ ॥**
**ಏಷೋಽಹಂ ತ್ವಮಸೌ ಚೇತಿ ನ ತು ಸರ್ವಸ್ವರೂಪತಃ ॥ ೪೦ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ವಿಷ್ಣುವು ಸರ್ವರಿಗೂ ಅಂತರ್ನಿಯಾಮಕನೋ ಆದುದರಿಂದಲೇ **ಏಷ ಆತ್ಮಾ ಇತಿ ಹೋವಾಚ** (ಛಾ.೮.೩.೪.) **ಸೋಽಹಮಸ್ಮಿ** (ಈ.೧೬) **ತತ್ತ್ವಮಸಿ** (ಛಾ.೬.೮.೭.) **ಯೋಽಸಾವಸೌ ಪುರುಷಃ** (ಈ.೧೬.) ಎನ್ನುವ ವಾಕ್ಯಗಳಲ್ಲಿರತಕ್ಕ ಏಷಃ ಅಹಂ ತ್ವಂ ಅಸೌ ಎನ್ನುವ ಸರ್ವವಾಚಕವಾದ ಸರ್ವನಾಮ ಸಂಜ್ಞೆಯುಳ್ಳ ಶಬ್ದದಿಂದ ಸರ್ವಂ ಎನ್ನುವ ನಾಮಧೇಯದಿಂದಲೂ ಹೇಳಲ್ಪಡುತ್ತಾನೆ. ಸರ್ವರ ಸ್ವರೂಪತ್ವವಿದ್ದುದರಿಂದ ಅಲ್ಲ.

**ವಿಶೇಷಾಂಶ ॥** ಶ್ರೀಹರಿಯು ಸರ್ವರ ದೇಹದಲ್ಲಿದ್ದರೂ ಅಜ್ಞಾತನಾಗಿದ್ದಾನೆಂದು ತಿಳಿಸುವುದಕ್ಕಾಗಿ ಸ್ಮೃತಿಯಲ್ಲಿ ಕಪ್ರತ್ಯಯವು.

**ಪೀಠಿಕೆ ॥** ಸರ್ವೋತ್ತಮವಾದ ವಸ್ತುವು ಒಂದೇ ಎನ್ನುವ ಅಭಿಪ್ರಾಯವುಳ್ಳದ್ದೆಂದೂ ಐಕ್ಯ ಶ್ರುತಿಗಳನ್ನು ವ್ಯಾಖ್ಯಾನ ಮಾಡುತ್ತಾರೆ.

**ಭಾಷ್ಯ ॥ ★ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ(ಭಾರತ ಮೋಕ್ಷಧರ್ಮ) ಇತ್ಯಾದೇಶ್ಚ ॥ ೪೧ ॥**

ಭಾಷ್ಯಾರ್ಥ ॥ ವೇದಗಳು ಒಬ್ಬ ಪುರುಷನನ್ನೇ ಹೇಳುತ್ತವೆ ಎನ್ನುವ ಮತವನ್ನು ಜ್ಞಾನಿಗಳು ಅಂಗೀಕರಿಸುವುದಿಲ್ಲ. ಇದು ಮೊದಲಾದ ಪ್ರಮಾಣಗಳಿಂದ ( ತತ್ತ್ವಮಸಿ ಇದು ಮೊದಲಾದ ಪ್ರಮಾಣಗಳಿಂದ ವಿರೋಧವಿಲ್ಲ.)

ವಿಶೇಷಾಂಶ ॥ (ಎ) ಭಾರತದಲ್ಲಿ ಮೋಕ್ಷಧರ್ಮದಲ್ಲಿ ಜನಮೇಜಯರಾಜನು ವೈಶಂಪಾಯನಾಚಾರ್ಯರ ಹತ್ತಿರ ಪ್ರಶ್ನಿಸಿದ್ದು. ಪೂಜ್ಯರಾದ ವೈಶಂಪಾಯನಾಚಾರ್ಯರೇ, ಭೇದವಾಕ್ಯಾನುಸಾರವಾಗಿ ಬಹು ಪುರುಷರನ್ನು ತಿಳಿದುಕೊಂಡು ಐಕ್ಯವಾಕ್ಯವಾದರೂ ಪ್ರಧಾನಪುರುಷ ಪರರೆಂದು ತಿಳಿಯಬೇಕೋ? ಅಥವಾ ಐಕ್ಯವಾಕ್ಯಾನುಸಾರವಾಗಿ ಒಬ್ಬನೇ ಪುರುಷನು, ದ್ವೈತವಾಕ್ಯವಾದರೂ ವ್ಯಾವಹಾರಿಕ ಭೇದಪರವೆಂದು ತಿಳಿಯಬೇಕೋ? ಹಾಗೆಯೇ ಪುರುಷರು ಹೆಚ್ಚು ಮಂದಿ ಎಂದು ಇಟ್ಟುಕೊಂಡು ಐಕ್ಯವಾಕ್ಯವು ಶ್ರೇಷ್ಠವಸ್ತುಪರವು ಎನ್ನುವ ಪಕ್ಷದಲ್ಲಿಯೂ ಅತ್ತರಲ್ಲಿ ಸರ್ವರೂ ಸಮಾನಿಕರೋ ಅಥವಾ ಒಬ್ಬನೇ ಶ್ರೇಷ್ಠನೋ? ಒಬ್ಬನೇ ಶ್ರೇಷ್ಠನು ಎನ್ನುವ ಕಲ್ಪದಲ್ಲಿ ಪುರುಷರಲ್ಲಿ ಶ್ರೇಷ್ಠನು ಯಾರು? ಆತನು ಹೇಗೆ ಶ್ರೇಷ್ಠನು? ಅಂತಹವನನ್ನು ತಾವು ನನಗೋಸ್ಕರ ಹೇಳಬೇಕು ಎಂದು ಜನ ಮೇಜಯರಾಜನು ಪ್ರಶ್ನೆ ಮಾಡಿರುವನು. (ಬಿ) ವೈಶಂಪಾಯನಾರ್ಚಾರು ಉತ್ತರವನ್ನು ಕೊಟ್ಟಿರುವರು. ವೇದಗಳು ಒಬ್ಬ ಪುರುಷನನ್ನೇ ಹೇಳುತ್ತವೆ ಎನ್ನುವ ಮತವನ್ನು ಜ್ಞಾನಿಗಳು ಅಂಗೀಕರಿಸುವುದಿಲ್ಲ. ಅಥವಾ ಈ ಜಗತ್ತಿನಲ್ಲಿ ಒಬ್ಬನೇ ಪುರುಷನು ಎನ್ನುವುದನ್ನು ಅಂಗೀಕರಿಸುವುದಿಲ್ಲ. ಬಹು ಪುರುಷರು ಇದ್ದಾರೆ. (ಸಿ) ಹಾಗಾದರೆ ಅದ್ವೈತಶ್ರುತಿವಿರೋಧವು ಎಂದು ಹೇಳಕೂಡದು. ಏಕೆಂದರೆ ಬಹು ಪುರುಷರಲ್ಲಿ ಶ್ರೇಷ್ಠನೊಬ್ಬನೇ ಎಂದು ಐಕ್ಯವಾಕ್ಯಕ್ಕೆ ತಾತ್ಪರ್ಯವು. (ಡಿ) ಹಾಗಾದರೆ ಬಹುಪುರುಷರಲ್ಲಿ ಶ್ರೇಷ್ಠನು ಯಾರು? ಅವನು ಹೇಗೆ ಶ್ರೇಷ್ಠನು ಎಂದು ಶಂಕಿಸಿದರೆ— ಎಲೋ ಜನಮೇಜಯರಾಜನೇ ಈ ಬಹುಮಂದಿ ಜೀವರ ಮಧ್ಯದಲ್ಲಿ ಸರ್ವರಿಗೂ ಯಾರು ಕಾರಣಭೂತನೋ, ಶ್ರೇಷ್ಠನೋ, ಮತ್ತು ಹೇಗೆ ಶ್ರುತ್ಯಾದಿಗಳಲ್ಲಿ ಶ್ರೇಷ್ಠನೆಂದು ಹೇಳಲ್ಪಡುತ್ತಾನೋ, ಅದೇ ಪ್ರಕಾರವಾಗಿ ಪೂರ್ಣನಾದ ಗುಣಾಧಿಕನಾದ ಪುರುಷನನ್ನು ಹೇಳುತ್ತೇನೆ. (ಇ) ಪರರಿಗೆ ಅಭಿಮತವಾದ ಐಕ್ಯವಾಕ್ಯವು ಸರ್ವೋತ್ತಮವಾದ ವಸ್ತುವು ಒಂದೇ ಎಂದು ತಾತ್ಪರ್ಯವುಳ್ಳದ್ದು. ಅಂತೂ, ತತ್ತ್ವಮಸಿ ಇತ್ಯಾದಿ ವಾಕ್ಯಗಳಿಗೆ ಸರ್ವೋತ್ಕೃಷ್ಟನಾದವನು ಯಾವನೊಬ್ಬ ಬ್ರಹ್ಮನೋ ಅವನಕ್ಕಿಂತ ನೀನು ಅತ್ಯಂತ ಅವರನಾಗಿರುತ್ತಿ. ನಾನೂ ಅತ್ಯಂತ ಅವರನಾಗಿರುತ್ತೇನೆ; ಎಂದು ಶ್ರುತ್ಯರ್ಥವು.

ಪೀಠಿಕೆ ॥ ಹಾಗಾದರೆ ಅದ್ವೈತಶ್ರುತಿಯೇ ಇಲ್ಲವಾದರೆ ಅದ್ವೈತವನ್ನು ಭೇದಶ್ರುತ್ಯಾದಿಗಳಿಂದ

---

★ ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು। ಕೋ ಹ್ಯತ್ರ ಪುರುಷ ಶ್ರೇಷ್ಠಸ್ತಂ ಭವಾನ್ವಕ್ತುಮರ್ಹತಿ । (ಪೂರ್ವವಾಕ್ಯವು.) ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ। ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಂ ॥ (ಇದು ಮೇಲಿನ ವಾಕ್ಯವು.)

ಹೇಗೆ ನಿಷೇಧಿಸಿದ್ದು? ಐಕ್ಯವು ಅಪ್ರತ್ಯಕ್ಷವಾದ ಪ್ರಯುಕ್ತ ಶ್ರುತಿಯಿಲ್ಲದೆ ಪ್ರಾಪ್ತಿಯಿಲ್ಲ. ಪ್ರಾಪ್ತವಾಗದೆ ಇದ್ದುದಕ್ಕೆ ಪ್ರತಿಷೇಧವು ಕೂಡಲಾರದು ಎಂದರೆ—

**ಭಾಷ್ಯ ॥ ಉಕ್ತಾ ಚ ಪ್ರಾಪ್ತಿಃ। ಬ್ರಹ್ಮೈವ ಸನ್ (ಬೃ.೬.೪.) ಇತ್ಯಪಿ ಜೀವ ಏವ ಬ್ರಹ್ಮಶಬ್ದಃ। ಉಪಪದ್ಯತೇ ಚ ವಿರೋಧೇ ॥ ೪೨ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ (ತತ್ತ್ವಮಸಿ ಇತ್ಯಾದಿ ಶ್ರುತಿಗಳಿಂದ ಜೀವೈಶ್ವರೈಕ್ಯಕ್ಕೆ) ಶ್ರುತಿ ತಾತ್ಪರ್ಯಾರ್ಥದ ಅಪರಿಜ್ಞಾನ ನಿಮಿತ್ತದಿಂದ ಪ್ರಸಕ್ತಿಯು ಹೇಳಲ್ಪಟ್ಟದೋ, (ಆದುದರಿಂದ ಆ ನಿಷೇಧವು ಅನುಪಪನ್ನವಾಗುವುದಿಲ್ಲ) (ಹಾಗಾದರೆ ಭೇದಶ್ರುತಿಗೆ ಈ ಶ್ರುತಿಗಳ ವಿರೋಧವಿಲ್ಲ ದಿದ್ದರೂ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಎನ್ನುವ ಶ್ರುತಿವಿರೋಧವು ಬರುವುದು. ಇಲ್ಲಿ ಬ್ರಹ್ಮೈವ ಎನ್ನು ವಲ್ಲಿದ್ದ ಏವಕಾರದಿಂದ ಜೀವನಿಗೆ ಅಬ್ರಹ್ಮತ್ವವನ್ನು ನಿಷೇಧಿಸಿದ್ದರಿಂದ ಬ್ರಹ್ಮನ ಅಧೀನತ್ವ ಮೊದಲಾದ ನಿಮಿತ್ತದಿಂದ ಬ್ರಹ್ಮನಾಗದೆ ಇದ್ದವನಲ್ಲಿ ಬ್ರಹ್ಮನೆನ್ನುವ ವ್ಯವಹಾರವು ಎನ್ನುವುದು ಕೂಡುವುದಿಲ್ಲ. ಎಂದರೆ—) ಯಾವ ಕಾರಣದಿಂದ ಬ್ರಹ್ಮೈವ ಸನ್ ಎನ್ನುವ ವಾಕ್ಯದಲ್ಲಿ ಶ್ರುತವಾದ ಒಂದನೇ ಬ್ರಹ್ಮಶಬ್ದವು ಬ್ರಹ್ಮಾಣಿ ಜೀವಾಃ ಸರ್ವೇಽಪಿ ಎನ್ನುವ ಶ್ರುತ್ಯನುಸಾರವಾಗಿ ಜೀವನನ್ನೇ ಹೇಳುತ್ತದೋ ಪರಬ್ರಹ್ಮನನ್ನು ಹೇಳುವುದಿಲ್ಲವೋ ಆದುದರಿಂದ ತತ್ತ್ವಮಸಿ ಇತ್ಯಾದಿ ವಾಕ್ಯದಿಂದ ಮಾತ್ರ ವಿರೋಧವಿಲ್ಲವೆಂದಲ್ಲ, ಮತ್ತೆ ಬ್ರಹ್ಮೈವ ಸನ್ ಎನ್ನುವ ಬೃಹದಾರಣ್ಯಕ ವಾಕ್ಯದಿಂದ ಭೇದವಾಕ್ಯಕ್ಕೆ ವಿರೋಧವಿಲ್ಲ. ಅಥವಾ ಆ ಮುಕ್ತಜೀವನು ಬ್ರಹ್ಮೈವ ಸನ್=ಜೀವನೇ ಆಗಿ ಜೀವಭಾವವನ್ನು ಬಿಡದೇನೇ ಪ್ರಲಯಕಾಲದಲ್ಲಿ ಪರಬ್ರಹ್ಮನನ್ನು ಹೊಂದುತ್ತಾನೆ. ಹೀಗೆ ಶ್ರುತ್ಯರ್ಥವಾದುದರಿಂದ ಭೇದವ್ಯಪದೇಶಕ್ಕೆ ಈ ಶ್ರುತಿ ವಿರೋಧವಿಲ್ಲ. ★(ಹಾಗಾದರೆ ಬ್ರಹ್ಮಶಬ್ದವು ಪರಬ್ರಹ್ಮನಲ್ಲಿಯೇ ಮುಖ್ಯವು. ಆದಕಾರಣ ಜೀವನಲ್ಲಿ ಕೂಡಲಾರದು ಎಂದರೆ) ಯದ್ಯಪಿ ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವು. ಆದರೂ ಪೂರ್ವೋತ್ತರವಾಕ್ಯವಿರೋಧವಿದ್ದರೆ ಅಥವಾ ಪ್ರಮಾಣಾಂತರ ವಿರೋಧವಿದ್ದರೆ ಜೀವನಲ್ಲಿಯೂ ಕೂಡುತ್ತದೆ. (ಪ್ರಕೃತದಲ್ಲಿ ಆದರೂ ಬ್ರಹ್ಮಾಪ್ಯೇತಿ ಎನ್ನುವ ಮೇಲೆ ಇರುವ ವಾಕ್ಯದಿಂದಲೂ ಪರಮಂ ಸಾಮ್ಯಂ ಎನ್ನುವ ಪೂರ್ವವಾಕ್ಯದಿಂದಲೂ ಭೇದಗ್ರಾಹಿಯಾದ ಪ್ರತ್ಯಕ್ಷಾದಿಗಳಿಂದಲೂ ವಿರೋಧವಿದೆ.) ಆದುದರಿಂದ ಬ್ರಹ್ಮೈವ ಎನ್ನುವಲ್ಲಿದ್ದ ಬ್ರಹ್ಮಶಬ್ದವು ಜೀವ ಪರವೆಂದೇ ಒಪ್ಪಬೇಕು.

**ವಿಶೇಷಾಂಶ ॥** (ಎ) ಯದ್ಯಪಿ ಮುಕ್ತಿಯಲ್ಲಿ ಅಭೇದವಿದೆ ಎನ್ನುವ ವಿಷಯದಲ್ಲಿ ಈ ಬ್ರಹ್ಮೈವ ಸನ್ ಎನ್ನುವ ಶ್ರುತಿಯನ್ನು ಪರರು ಆಶಂಕಿಸಿರುವರು. ಆದುದರಿಂದ ಮುಕ್ತೌ ಎಂದು ಹೇಳಬೇಕಿತ್ತು. ಪ್ರಲಯೇ ಎಂದು ಹೇಳಿದ್ದು ಆಗಲಿಲ್ಲ. ಆದರೂ ಸರ್ವಜೀವರಲ್ಲಿಯೂ ಸಾಧಾರಣವಾಗಿದೆ ಎಂದು ತೋರಿಸುವುದಕ್ಕಾಗಿ ಪ್ರಲಯೇ ಎಂದು ಹೇಳಿರುವರು.

**ಟೀಕೆ ॥** ಆದಾಗ್ಯೂ ಭೇದವ್ಯಪದೇಶಕ್ಕೆ ವಿಮುಕ್ತಶ್ಚ ವಿಮುಚ್ಯತೇ (೨.೫.೧.) ಎನ್ನುವ

★ ಜೀವೋಽಪಿ ಬ್ರಹ್ಮಶಬ್ದೋಕ್ತೋ ಜಡಾದ್ಭ್ರಮುಗುಣತ್ವತಃ। ಪ್ರಾಪ್ನೋತಿ ಪರಮಂ ಬ್ರಹ್ಮ ಪ್ರಲಯೇ ಪ್ರಲಯೇ ಸದಾ ॥ (ಎಂದು ಬೃಹದ್ಭಾಷ್ಯದಲ್ಲಿ)

ಕಠಶ್ರುತಿಯಿಂದ ವಿರೋಧವು. ಇಲ್ಲಿ ಸಂಸಾರದಲ್ಲಿಯೂ ಜೀವನಿಗೆ ಮುಕ್ತತ್ವವನ್ನು ಹೇಳಿದ್ದರಿಂದ ಪರಬ್ರಹ್ಮಾಭೇದವೇ ತಿಳಿಯುತ್ತದೆ ಎಂದರೆ—

**ಭಾಷ್ಯ ॥ ಪ್ರಮಾದಾತ್ಮಕತ್ವಾದ್ಬಂಧಸ್ಯ ವಿಮುಕ್ತತ್ವಂ ಚ ಯುಜ್ಯತೇ ॥ ೪೩ ॥**

**ಭಾಷ್ಯಾರ್ಥ ॥** ಚ=ಜೀವನಿಗೆ ಪರಬ್ರಹ್ಮತ್ವವಿಲ್ಲದಿದ್ದರೂ, ವಿಮುಕ್ತತ್ವಂ ಚ=ಸಂಸಾರದೆಶೆಯಲ್ಲಿ ಬ್ರಹ್ಮಶಬ್ದವು ಮಾತ್ರ ಕೂಡುವುದಿಲ್ಲ, ಮತ್ತೆ ವಿಮುಕ್ತತ್ವ ವಚನವೂ ಕೂಡ, ಯುಜ್ಯತೇ=ಕೂಡುತ್ತದೆ. (ಹೇಗೆಂದರೆ) ಬಂಧಸ್ಯ=ಸ್ವತಃ ಕರ್ತೃತ್ವ ಭೋಕ್ತೃತ್ವಾಭಿಮಾನರೂಪವಾದ ಜೀವನಲ್ಲಿರುವ ಸಂಸಾರಕ್ಕೆ ಪ್ರಮಾದಾ ತ್ಮಕತ್ವಾತ್=ಪ್ರಮಾದಪದದಿಂದ ಹೇಳಲ್ಪಟ್ಟ ಅಜ್ಞಾನಮೂಲಕವಾಗಿರುವ ಪ್ರಯುಕ್ತ ಅಜ್ಞಾನ ನಿಮಿತ್ತ ಪ್ರತೀತಿಯಿದ್ದುದರಿಂದ. ಅಂದರೆ— ಅಸ್ವಾಭಾವಿಕವಾದುದರಿಂದ.

**ವಿಶೇಷಾಂಶ ॥** (ಎ) ಅಸ್ವಾಭಾವಿಕವಾದುದರಲ್ಲಿ ಅವಿದ್ಯಮಾನ ಪದಪ್ರಯೋಗವು ಕಂಡಿದೆ. ಆದಕಾರಣ ಕಠಶ್ರುತಿವಿರೋಧವಿಲ್ಲ. (ಬಿ) **ಉಭೇ ಸತ್ಯೇ ಕ್ಷತ್ರಿಯಾದ್ಯ ಪ್ರವೃತ್ತೇ ಮೋಹೋ ಮೃತ್ಯುಃ ಸಂಗತೋಯಂ ಕವೀನಾಂ। ಪ್ರಮಾದಂ ವೈ ಮೃತ್ಯುಮಹಂ ಬ್ರವೀಮಿ ತಥಾಽಪ್ರಮಾದಾದಮೃತತ್ವಂ ಬ್ರವೀಮಿ।** ಕ್ಷತ್ರಿಯರಲ್ಲಿ ಆದಿಭೂತನಾದ ಧೃತರಾಷ್ಟ್ರನೇ, ಸಂಸಾರವು ಸಂಸಾರಾಭಾವರೂಪವಾದ ಅಮೃತತ್ವವು ಇವೆರಡೂ ಸತ್ಯಗಳಾಗಿಯೇ ಪ್ರವೃತ್ತಗಳಾಗಿವೆ. ಅವುಗಳ ಮಧ್ಯದಲ್ಲಿ ಸಂಸಾರವು ಅಜ್ಞಾನಮೂಲಕವು. ಹಾಗಾದರೆ ಮಿಥ್ಯೆಯಾಗ ಬಹುದು ಎಂದರೆ— ಹಾಗೆ ಹೇಳಕೂಡದು. ನಾನು ಸಂಸಾರವನ್ನು ಅಸ್ವಾಭಾವಿಕವನ್ನಾಗಿ ಹೇಳುತ್ತೇನೆ— ಮುಕ್ತತ್ವವನ್ನಾದರೂ ಸ್ವಾಭಾವಿಕವನ್ನಾಗಿ ಹೇಳುತ್ತೇನೆ. ಎಂದು ಸನತ್ಸುಜಾತರ ವಾಕ್ಯವು. ಹೀಗೆ ತತ್ತ್ವಪ್ರದೀಪದಲ್ಲಿ ಉದಾಹರಿಸಿರುವ ಭಾರತವಚನದಿಂದ ಬಂಧಕ್ಕೆ ಅಜ್ಞಾನಮೂಲಕತ್ವವು ಸಿದ್ಧವಾಗುತ್ತದೆ.

**ಪೀಠಿಕೆ ॥** ಬಂಧವು ಅಸ್ವಾಭಾವಿಕವು ಎನ್ನುವುದ ಹೇಗೆ ಸಿದ್ಧವಾಗುತ್ತದೆ ಎಂದರೆ—

**ಭಾಷ್ಯ ॥ ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ। ಇತಿ ಹಿ ಭಾಗವತೇ ॥ ೪೪ ॥**

**ಭಾಷ್ಯಾರ್ಥ ॥** ಅಸ್ವಾಭಾವಿಕವಾದ ರೂಪವನ್ನು ಬಿಟ್ಟು ನಿಜರೂಪದಿಂದ ಇರುವುದೇ ಮುಕ್ತಿಯು. ಹೀಗೆ ಭಾಗವತದಲ್ಲಿ (ಬಂಧವು ಅಸ್ವಾಭಾವಿಕವೆಂದು ಹೇಳಿದೆ.)

**ಪೀಠಿಕೆ ॥** ಹಾಗಾದರೆ ಭೇದವಚನಕ್ಕೆ ಶ್ರುತಿವಿರೋಧವಿಲ್ಲದಿದ್ದರೂ (೧) ಜೀವಃ ಬ್ರಹ್ಮಾಭಿನ್ನಃ ಚೇತನತ್ವಾತ್ ಬ್ರಹ್ಮವತ್. (೨) ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್. (೩) ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಶರೀರತ್ವಾತ್ ಮಚ್ಛರೀರವತ್ ಇದು ಮೊದಲಾದ ಅನುಮಾನಗಳಿಂದ ವಿರೋಧವು ಬರುವುದು ಎಂದರೆ—

**ಭಾಷ್ಯ ॥ ನ ಚ ತತ್ತದನುಮಾನವಿರೋಧಃ ॥ ೪೫ ॥**

**ಭಾಷ್ಯಾರ್ಥ ॥** ಆ ಭೇದವಚನಕ್ಕೆ ಶ್ರುತಿವಿರೋಧ ಮಾತ್ರ ಇಲ್ಲವೆಂದಲ್ಲ, ಮತ್ತೆ ಅದ್ವೈತಿ ಪರಿಕಲ್ಪಿತಗಳಾದ ಅನುಮಾನಗಳಿಂದಲೂ ವಿರೋಧವಿಲ್ಲ.

## ಸೂತ್ರ ॥ ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ ॥ ೧೮ ॥

**ಸೂತ್ರಾರ್ಥ ॥** ಅದೃಷ್ಟಾರ್ಥವಿಷಯದಲ್ಲಿ ಶುಷ್ಕವಾದ ಅನುಮಾನಾಪೇಕ್ಷೆಯನ್ನು ಮಾಡ ಕೂಡದು. ಅನುಮಾನವು ಕಾಮಚಾರಿಯಾದುದರಿಂದಲೇ.

**ಭಾಷ್ಯ ॥ ಯಥಾಕಾಮಂ ಹ್ಯನುಮಾತುಂ ಶಕ್ಯತೇ। ಅತೋ ನ ತತ್ತ್ವೇ ಪೃಥಮನುಮಾನಮಪೇಕ್ಷ್ಯತೇ ॥ ೪೬ ॥**

**ಭಾಷ್ಯಾರ್ಥ ॥** ಹಿ=ಯಾವ ಕಾರಣದಿಂದ, ಅನುಮಾನಂ=ಅಭೇದವನ್ನು ಸಾಧಿಸುವುದಕ್ಕಾಗಿ ಪರರು ಹೇಳಿದ ಅನುಮಾನವು, ಪೃಥಕ್=ಪ್ರತ್ಯಕ್ಷಾದಿ ವಿರುದ್ಧವೂ ಶ್ರುತಿಸಾಹಾಯ್ಯರಹಿತವೂ ಆಗಿದೆಯೋ, ಅತಃ=ಆದುದರಿಂದ, ತತ್ತ್ವೇ=ತತ್ತ್ವಜ್ಞಾನಕ್ಕಾಗಿ, ನಾಪೇಕ್ಷ್ಯತೇ=ಅಪೇಕ್ಷಿಸಲ್ಪಡುವುದಿಲ್ಲ (ಅಂದರೆ ತತ್ತ್ವಜ್ಞಾನಕಾರಣವಾಗುವುದಿಲ್ಲ) (ಹೇತುವು ಅಪ್ರಯೋಜಕವು ಎಂದು ಹೇಳಕೂಡದು.) ಹಿ=ಏಕೆಂದರೆ, ಯಥಾಕಾಮಂ =ಯಥೇಚ್ಛವಾಗಿ, (ಅಂದರೆ **ಈಶ್ವರಃ ನ ಸ್ವತಂತ್ರಃ ಚೇತನತ್ವಾತ್ ದೇವದತ್ತವತ್, ಜಡಃ ಆತ್ಮಾ ವಸ್ತುತ್ವಾತ್** ಇತ್ಯಾದಿ ರೂಪದಿಂದಲೂ) ನ ತತ್ತ್ವೇ= ಅತತ್ತ್ವವಿಷಯದಲ್ಲಿಯೂ, ಅನುಮಾತುಂ=ಅನುಮೇಯಿಸಲಿಕ್ಕೆ, ಶಕ್ಯತೇ=ಶಕ್ಯವಾಗುತ್ತದೆ. (ಪ್ರತ್ಯಕ್ಷಾದಿ ಗಳಿಂದ ವಿರುದ್ಧವಾದುದಕ್ಕೂ ಪ್ರಾಮಾಣ್ಯವಿರುವುದಾದರೆ ಚೇತನತ್ವ ವಸ್ತುತ್ವ ಮೊದಲಾದುದಕ್ಕೂ ಪ್ರಾಮಾಣ್ಯವು ಬರಬೇಕಾಗುವುದು. ಹೀಗೆ ವಿಪಕ್ಷದಲ್ಲಿ ಬಾಧಕತರ್ಕವನ್ನು ಊಹಿಸಿಕೊಳ್ಳಬೇಕು.

**ವಿಶೇಷಾಂಶ ॥** (ಎ) ಅನುಮಾನವೆಂದು ಪರರಿಗೆ ಅಭಿಮತವಾದ ಅಭೇದಸಾಧಕವಾದ ಅನುಮಾನವು ತತ್ತ್ವಜ್ಞಾನಕಾರಣವಾಗುವುದಿಲ್ಲ. ಏಕೆಂದರೆ ಈ ಅನುಮಾನವು ಪ್ರತ್ಯಕ್ಷಾದಿಗಳಿಂದ ವಿರುದ್ಧವಾಗಿದೆ. ಪ್ರತ್ಯಕ್ಷಾದಿವಿರುದ್ಧವಾದಾಗ್ಯೂ ಸದನುಮಾನವೇ ಏಕೆ ಆಗಬಾರದು ಎಂದರೆ— ಈ ಅನುಮಾನವು ಸ್ವೇಚ್ಛಾನುಸಾರವಾಗಿ ಪ್ರವೃತ್ತವಾದುದು. (ಬಿ) ಅಂತೂ ಪ್ರತ್ಯಕ್ಷಾದಿ ವಿರುದ್ಧವಾದುದೂ ಪ್ರಮಾಣವಾಗುವುದಾದರೆ ಅತತ್ತ್ವವಿಷಯದಲ್ಲಿ ಪ್ರವೃತ್ತವಾದ ಅನುಮಾನವೂ ಪ್ರಮಾಣವಾಗ ಬೇಕಾಗುವುದು. ಆದುದರಿಂದ ದ್ವೈತಶ್ರುತಿಗೆ ಅನುಮಾನವಿರೋಧವಿಲ್ಲ.

**ಪೀಠಿಕೆ ॥** ಇದೇ ವಿಷಯದಲ್ಲಿ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಉಕ್ತಂ ಚ ಸ್ಕಾಂದೇ। ಯಥಾಕಾಮಾಽನುಮಾ ಯಸ್ಮಾತ್ತಸ್ಮಾತ್ಸಾಽನಪಗಾಶ್ರುತೇಃ। ಪೂರ್ವಾಪರಾವಿರೋಧಾಯ ಚೇಷ್ಯತೇ ನಾನ್ಯಥಾ ಕ್ವಚಿತ್ ಇತಿ ॥ ೪೭ ॥**

**ಭಾಷ್ಯಾರ್ಥ ॥** ಸೂತ್ರಕಾರರು ಮಾತ್ರ ಹೇಳಿದ್ದಲ್ಲ. ಸ್ಕಾಂದಪುರಾಣದಲ್ಲಿಯೂ ಹೇಳಿದೆ. (ಏನು ಹೇಳಿದೆ ಎಂದರೆ) ಯಾವ ಕಾರಣದಿಂದ ಶ್ರುತ್ಯಾದಿವಿರುದ್ಧವಾದ ಪ್ರತ್ಯೇಕಅನುಮಾನವು ಯಥಾಕಾಮಾ=ಕಾಮವನ್ನು ಅತಿಕ್ರಮಿಸದೆ ಇರುವುದು ಅಥವಾ **ಯಥಾ ಅನತಿಕ್ರಾಂತಃ ಕಾಮಃ ಯಯಾ** ಎನ್ನುವ ವ್ಯುತ್ಪತ್ತಿಯಿಂದ ಪುರುಷೇಚ್ಛಾನುಸಾರವಾಗಿ ಪ್ರವೃತ್ತಿಯುಳ್ಳದ್ದೋ, ಆದುದರಿಂದ ಶ್ರುತಿಗೆ, ಅನಪಗಾ=(**ಅಪವೃತ್ತಂ ವಿರುದ್ಧಂ** ಗಂ=ಗಮನಂ ಯಸ್ಯಾಃ ಸಾ ಅಪಗಾ, ನ ಅಪ ಗಾ, ಅನಪಗಾ ಎನ್ನುವ ವ್ಯುತ್ಪತ್ತಿಯಿಂದ) ಶ್ರುತ್ಯನುಕೂಲವೂ ಶ್ರುತ್ಯವಿರುದ್ಧ ವೂ ಆದ ಅನುಮಾನವು ಪೂರ್ವೋತ್ತರವಾಕ್ಯಗಳ

ವಿರೋಧ ಪರಿಹಾರಕ್ಕಾಗಿಯೂ, ಚ = ಅತೀಂದ್ರಿಯಾರ್ಥ ತತ್ವನಿಶ್ಚಯಕ್ಕಾಗಿಯೂ, ಅಪೇಕ್ಷಿಸಲ್ಪಡುತ್ತದೆ. ಎಲ್ಲಿ ಯಾದರೂ ವ್ಯತ್ಯಾಸವಿದ್ದರೆ (ಅಂದರೆ ಎಲ್ಲಿ ಶ್ರುತ್ಯಾದಿಗಳ ಅನುಕೂಲ್ಯವೂ ಶ್ರುತ್ಯಾದಿಗಳ ಅವಿರೋಧವೂ ಪೂರ್ವೋತ್ತರ ವಾಕ್ಯಗಳ ಅವಿರೋಧವೂ ಇಲ್ಲವೋ) ಅಲ್ಲಿ ಆ ಅನುಮಾನವು ಪ್ರಮಾಣವೆನ್ನುವುದು ಇಷ್ಟವಲ್ಲ. ಏಕೆಂದರೆ ಮೂಲವೂ ಇಲ್ಲ, ಪ್ರಮಾಣವಿರೋಧವೂ ಇದೆ. ಪ್ರಯೋಜನವೂ ಇಲ್ಲ. ಅಥವಾ ಶ್ರುತ್ಯನುಕೂಲವಾದ ಅನುಮಾನವು ಪೂರ್ವೋತ್ತರವಾಕ್ಯಗಳ ವಿರೋಧಪರಿಹಾರಕ್ಕಾಗಿಯೂ ತತ್ವನಿಶ್ಚಯಕ್ಕಾಗಿಯೂ ಕಾರಣವೆಂದು ಇಷ್ಟವಾಗಿದೆ. ಯಾವ ವಾಕ್ಯದಲ್ಲಿಯೂ ಇತರವಾದ ಪ್ರತ್ಯೇಕ ಅನುಮಾನವು ಇಷ್ಟವಲ್ಲ. ಏಕೆಂದರೆ ಕೇವಲ ಅನುಮಾನವು ಸ್ವೇಚ್ಛಾನುಸಾರಿಯಾದುದು. ಯಾವ ಕಾರಣದಿಂದ ಅನುಮಾನವು ಶ್ರುತ್ಯವಿರುದ್ಧವಲ್ಲವೋ ಆದಕಾರಣ ಅನುಮಾನವು ಹೇಳಿದ ಫಲಕ್ಕಾಗಿ ಅಪೇಕ್ಷಿಸಲ್ಪಡುವುದಿಲ್ಲ. ಹೀಗೆ ಹೇಳಿದೆ.

**ಟೀಕೆ ॥** ಸ್ಪಷ್ಟೋಕ್ತಿಯಾದುದರಿಂದ ಪ್ರಥಮತಃ ಸ್ಮೃತಿಯನ್ನು ಹೇಳಿ ಇದೇ ಅರ್ಥದಲ್ಲಿ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ನೈಷಾ ತರ್ಕೇಣ ಮತಿರಾಪನೇಯಾ ।(ಕಠ.೨.೯.) ಇತಿ ಚ ॥ ೪೮ ॥**

**ಭಾಷ್ಯಾರ್ಥ ॥** ಪರಬ್ರಹ್ಮವಿಷಯಕವಾದ ಬುದ್ಧಿಯು ಶುಷ್ಕತರ್ಕದಿಂದ ಹುಟ್ಟಿಸಲಿಕ್ಕೆ ಯೋಗ್ಯವೂ ನಿರಾಕರಿಸಲಿಕ್ಕೆ ಯೋಗ್ಯವೂ ಆಗುವುದಿಲ್ಲ (ಜೀವೇಶ್ವರಾದಿಗಳ ಭೇದಜ್ಞಾನವುಳ್ಳ ಶ್ರೀಹರಿಯ ಭಕ್ತ್ಯಾದಿಗಳುಳ್ಳ ಆಚಾರ್ಯರ ಉಪದೇಶದಿಂದುಂಟಾದ ಬುದ್ಧಿಯು ತತ್ವಜ್ಞಾನಕ್ಕೆ ಆಗುವುದು. ಎಂದು ನಚಿಕೇತಸರನ್ನು ಕುರಿತು ಯಮನ ಉಕ್ತಿಯು.) ಹೀಗೆ ಕಠಶ್ರುತಿಯೂ ಹೇಳಿದೆ.

**ಟೀಕೆ ॥** ಹಾಗಾದರೆ— ಆನಂದಮಯನಾದ ಬ್ರಹ್ಮನಿಂದ ಹಿರಣ್ಯಗರ್ಭ ಮೊದಲಾದ ಜೀವರಿಗೆ ಭೇದವಿರಲಿ. ಆದರೂ ಅಭೇದವು ವ್ಯಾವಹಾರಿಕವು ಸಂಸಾರದಲ್ಲಿಯೇ ಇರುವುದು. ಪಾರಮಾರ್ಥಿಕವಲ್ಲ, ಮುಕ್ತಿಯಲ್ಲಿ ಇಲ್ಲ. ಆದಕಾರಣ ಹಿಂದೆ ಹೇಳಿದ ಎಲ್ಲಾ ಶ್ರುತಿಗಳು ಸಾಂಸಾರಿಕ ಭೇದಪರಗಳಾಗಿವೆ. ಎಂದರೆ—

**ಸೂತ್ರ ॥ ಓಂ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ಓಂ ॥ ೧೯ ॥**

**ಸೂತ್ರಾರ್ಥ ॥** (ಭೇದವ್ಯಪದೇಶವಿದ್ದಪ್ರಯುಕ್ತ ಮಾತ್ರ ಆನಂದಮಯನಿಂದ ಜೀವರಿಗೆ ಭೇದವು ಸಿದ್ಧವೆಂದಲ್ಲ. ಮತ್ತೆ) ಅಸ್ಮಿನ್=ಈ ಪ್ರಕರಣದಲ್ಲಿ ಅಸ್ಯ=ಜೀವನಿಗೆ, ತದ್ಯೋಗಂ= ಆನಂದಮಯಾದಿ ರೂಪವುಳ್ಳ ಬ್ರಹ್ಮನಿಂದ ಕೂಡಿಕೊಂಡು ಸಂಬಂಧವನ್ನು ಅಸ್ಮಿನ್= ಮೋಕ್ಷದಲ್ಲಿಯೂ ಕೂಡ, (**ಸೋಽಶ್ನುತೇ** ಎನ್ನುವ ಶ್ರುತಿಯು) ಶಾಸ್ತಿ=ಪ್ರತಿಪಾದಿಸುತ್ತದೋ, ಆದುದರಿಂದ ಜೀವರಿಗೆ ಬ್ರಹ್ಮನಿಂದ ಐಕ್ಯವಿಲ್ಲ. ಭೇದವು ವ್ಯಾವಹಾರಿಕ ಎನ್ನುವುದು ಕೂಡುವುದಿಲ್ಲ. ಅಥವಾ ಈ ಎರಡು ಪ್ರಕರಣಗಳಲ್ಲಿಯೂ ಈ ಜೀವನಿಗೆ ಆ ಆನಂದಮಯಾದಿಗಳಿಂದ ಸಂಬಂಧವನ್ನು ಫಲವೆಂದು ಶ್ರುತಿಯು ಪ್ರತಿಪಾದಿಸುತ್ತದೋ ಆದುದರಿಂದ ಆನಂದಮಯವು ಸರ್ವಥಾ ಜೀವಕೋಶಾದಿಗಳಲ್ಲ.

**ಭಾಷ್ಯ ॥ ಅಸ್ಯ ಜೀವಸ್ಯ। ಯುಕ್ತಿಸಮುಚ್ಚಯೇ ಚಶಬ್ದಃ। ಸೋಽಶ್ನುತೇ ಸರ್ವಾನ್ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತಾ (ತೈ.ಉ.೨.೧.)। ಅನಿಲಯನೇಽ ಭಯಂ ಪ್ರತಿಷ್ಠಾಂ ವಿಂದತೇ (ತೈ.೨.೭.) ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ (ತೈ.೨.೮.) ಇತ್ಯಾದಿ ॥ ೬ ॥ ॥ ೪೯ ॥**

**ಭಾಷ್ಯಾರ್ಥ ॥** (೧) ಅಸ್ಯ=ಜೀವನಿಗೆ, ಯುಕ್ತಿಸಮುಚ್ಚಯವೆನ್ನುವ ಅರ್ಥದಲ್ಲಿ ಚ ಶಬ್ದವು ಇದೆ. (ಯೋಗಶಾಸನವು ಯಾವುದೆಂದರೆ) ಸಃ=ಆ ಬ್ರಹ್ಮಜ್ಞಾನಿಯು, ಸರ್ವಜ್ಞನಾದ ಪರಬ್ರಹ್ಮ ನಿಂದಲೂ ಚತುರ್ಮುಖನಿಂದಲೂ ಕೂಡ ಕೂಡಿಕೊಂಡು ಸ್ವಯೋಗ್ಯಗಳಾದ ಎಲ್ಲಾ ಕಾಮಗಳನ್ನು ಮುಕ್ತಿಯಲ್ಲಿ ಹೊಂದುತ್ತಾನೆ. (೨) ಅನಿಲಯನೇಽಭಯಂ ಈ ವಾಕ್ಯವು ಮೊದಲೇ ೧೦೭ನೇ ಪುಟದಲ್ಲಿ ವ್ಯಾಖ್ಯಾತವಾಗಿದೆ. (ತೈ.೨.೬.) (೩) ದೇಹದಿಂದ ಉತ್ಕ್ರಾಂತನಾದ ಜೀವನು ಪೂರ್ಣಾನಂದವುಳ್ಳ ಶ್ರೀಪರಮಾತ್ಮನ ಸಮೀಪವನ್ನೇ ಹೊಂದುತ್ತಾನೆ. ಇದು ಮೊದಲಾದ ವಾಕ್ಯದಿಂದ ಶ್ರುತಿಯು ಜೀವಬ್ರಹ್ಮರಿಗೆ ಮುಕ್ತಿಯಲ್ಲಿಯೂ ಭೇದವನ್ನೇ ವಿಧಾನ ಮಾಡುತ್ತದೆ.

**ವಿಶೇಷಾಂಶ ॥** (ಎ) ಶಬ್ದಗಳು ತತ್ರ ಪ್ರಸಿದ್ಧ ಅನ್ಯತ್ರ ಪ್ರಸಿದ್ಧ ಉಭಯತ್ರ ಪ್ರಸಿದ್ಧ ಅನ್ಯತ್ರೈವ ಪ್ರಸಿದ್ಧ ಹೀಗೆ ನಾಲ್ಕು ವಿಧಗಳು. ಇವುಗಳಲ್ಲಿ ತತ್ರಪ್ರಸಿದ್ಧ ಶಬ್ದಗಳಿಗೆ ಸಮನ್ವಯವನ್ನು ಹೇಳಬೇಕಾಗಿಲ್ಲ. (೨) **ಶ್ರುತ್ಯಂ ತರಾದಿಭಿಸ್ತುಲ್ಯಾ ಹ್ಯುಭಯಸ್ಮಿನ್ ಪ್ರಸಿದ್ಧತಾ। ಶ್ರುತ್ಯಾದಿತೋ ಲೋಕತೋ ವಾಪೀತರೇಷು ಪ್ರಸಿದ್ಧತಾ। ಬಲವಚ್ಛ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ।** ಯಾವ ಶಬ್ದಗಳಿಗೆ ವಾಚ್ಯವ್ಯಕ್ತಿ ವಿಶೇಷವನ್ನು ನಿರ್ಣಯ ಮಾಡುವುದಕ್ಕಾಗಿ ಶ್ರುತಿಗಳನ್ನು ಹುಡುಕುವಾಗ ಇತರರಲ್ಲಿಯೂ ಬ್ರಹ್ಮನಲ್ಲಿಯೂ ಆ ಶ್ರುತಿಗಳು ಸಾಧಾರಣಗಳಾಗಿವೆಯೋ ಅಥವಾ ಆ ಶಬ್ದಪ್ರವೃತ್ತಿನಿಮಿತ್ತಾದಿಗಳೂ ಸಾಧಾರಣಗಳೆಂದು ಸಮ್ಮತಗಳಾಗಿವೆಯೋ ಆ ಶಬ್ದಗಳು ಉಭಯತ್ರ ಪ್ರಸಿದ್ಧಗಳು. (೨) ಯಾವ ಶಬ್ದಗಳಿಗೆ ವಸ್ತ್ವಂತರದಲ್ಲಿ ಲೋಕಪ್ರಸಿದ್ಧ್ಯಾದಿಗಳು ಇದ್ದಪ್ರಯುಕ್ತ ಅದಕ್ಕೆ ವಿರುದ್ಧವಾಗಿ ಎಲ್ಲಿಯಾದರೂ ಬ್ರಹ್ಮನಲ್ಲಿ ಶಕ್ತ್ಯಾದಿಗಳು ಇವೆ ಎಂದು ಪೂರ್ವಪಕ್ಷಿಗೆ ಸಮ್ಮತವಲ್ಲವೋ ಆ ಶಬ್ದಗಳು ಅನ್ಯತ್ರ ಪ್ರಸಿದ್ಧಗಳು. (೩) ಯಾವ ಶಬ್ದಗಳಿಗೆ ವಸ್ತ್ವಂತರದಲ್ಲಿಯೇ ಲೋಕಪ್ರಸಿದ್ಧಿಯೋ ಆ ವಿಷಯದಲ್ಲಿಯೇ ಪ್ರಬಲಶ್ರುತ್ಯಾದಿಗಳು ಇವೆಯೋ ಅವುಗಳು ಅನ್ಯತ್ರೈವ ಪ್ರಸಿದ್ಧಿ ಶಬ್ದಗಳು. ಬಲವತ್ತ್ವವೆಂದರೆ— **ಬ್ರಹ್ಮಪರತ್ವೇ ಬಹುವಿಪ್ಲವಾಪತ್ತಿರೂಪತರ್ಕಾನುಗೃಹೀತತ್ವಂ** ಬ್ರಹ್ಮಪರಗಳೆಂದು ಇಟ್ಟುಕೊಂಡರೆ ಅನೇಕ ವಿಧಗಳಾದ ಅನಿಷ್ಟಾಪತ್ತಿರೂಪ ತರ್ಕಗಳಿಂದ ಅನುಗ್ರಹೀತಗಳಾದ, (೪) ನಾಮಾತ್ಮಕಗಳು, ಲಿಂಗಾತ್ಮಕಗಳು ಎಂದು ಶಬ್ದಗಳು ಎರಡು ವಿಧಗಳು. ಅವುಗಳಲ್ಲಿ **ಯಾನ್ಯಾಪಾತತೋ ರೂಢ್ಯಾನ್ಯೇವ ತಾನಿ ನಾಮಾನಿ। ಯಾನ್ಯಾಪಾತತೋ ಯೌಗಿಕಾನಿ ತಾನಿ ಲಿಂಗಾನಿ** ಎಂದು ಇಟ್ಟುಕೊಳ್ಳಬೇಕು. ಅಥವಾ ಧರ್ಮದ್ವಾರಾ ಧರ್ಮಿಯನ್ನು ತೋರಿಸಿಕೊಡತಕ್ಕುವಗಳು ಲಿಂಗಗಳು, ಆಪಾತತಃ ರೂಢಗಳು ಅಥವಾ ಯೋಗರೂಢಿಗಳಿಂದ ಯುಕ್ತಗಳಾದವುಗಳು ನಾಮಗಳು. (೫) ತತ್ವಪ್ರದೀಪದಲ್ಲಿ ಆದರೂ ಆನಂದ ಮೊದಲಾದ ಗುಣವಾಚಕ ಶಬ್ದಗಳಿಗೆ ಸಮನ್ವಯಕ್ಕಾಗಿ ಆನಂದಮಯ ಮೊದಲಾದ ಗುಣವಾಚಕ ಗಳಾದ ಲಿಂಗಾತ್ಮಕ ಶಬ್ದಗಳಿಗೆ ಸಮನ್ವಯವು ಎನ್ನುವ ಅಭಿಪ್ರಾಯದಿಂದ **ಆನಂದಮಯಾಧಿಕರಣೇ ಲಿಂಗವಿಚಾರಾತ್** ಎಂದು ಹೇಳಿರುವರು.

## ಮಾಯಾವಾದಿಗಳ ರೀತ್ಯಾ

ವಿಚಾರ ॥ (೧) ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯಾನಂದ ಮಯಾ ಮೇ ಶುದ್ಧ್ಯಂತಾಂ ಇತ್ಯಾದಿಗಳಲ್ಲಿ ಅನ್ನಮಯಾದಿ ಶಬ್ದಗಳಿಗೆ ಕೋಶಗಳಲ್ಲಿಯೇ ಪ್ರಸಿದ್ಧಿಯಿದ್ದುದರಿಂದ ಅನ್ನಮಯ ಮೊದಲಾದ ಐದೂ ಕೋಶಗಳೇ. ಬ್ರಹ್ಮಪುಚ್ಛಂ ಎಂದು ಹೇಳಿದ ಪುಚ್ಛವೇ ಬ್ರಹ್ಮವು, ಇತ್ಯಾದಿ ಪ್ರಕಾರ ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ಪರಬ್ರಹ್ಮನಲ್ಲಿಯೇ ಪ್ರಸಿದ್ಧವಾದ ಬ್ರಹ್ಮಶಬ್ದವು ಅನ್ನಮಯಾದಿ ಐದರಲ್ಲಿಯೂ ಶ್ರುತವಾದುದರಿಂದಲೂ ಅನ್ನಮಯಾದಿಗಳ ಜ್ಞಾನದಿಂದ ಅನ್ನಮಯಾದಿಗಳ ಪ್ರಾಪ್ತಿರೂಪವಾದ ಫಲವನ್ನು ಹೇಳಿದ್ದರಿಂದಲೂ ಅನ್ನಮಯಾದಿ ಶಬ್ದಗಳು ಸತ್ಯಂ ಜ್ಞಾನಮನಂತಂ ಬ್ರಹ್ಮ ಎನ್ನುವ ಮಂತ್ರವರ್ಣದಲ್ಲಿ ಹೇಳಿರುವ ಅರ್ಥವನ್ನು ಹೇಳುವುದರಿಂದಲೂ ಇತ್ಯಾದಿ ಹೇತುಗಳಿಂದ ಅನ್ನಮಯಾದಿ ಐದೂ ಬ್ರಹ್ಮವೇ ಕೋಶಗಳೆನ್ನುವುದು ಸರ್ವಥಾ ಕೂಡಲಾರದು. ತಥಾ ಚ— (೧) ಬ್ರಹ್ಮಶಬ್ದಾತ್ತಮಸ್ತಾತ್ತ್ವತ್ಯಾದಿ ಲಿಂಗಾಚ್ಚವಾಕ್ಯತಃ॥ ಪೂರ್ವೋತ್ತರಸ್ಥಾತ್ ಮಂತ್ರಸ್ಥಬ್ರಹ್ಮಪ್ರಕರಣಾದಪಿ। ಭೃಗುವಲ್ಲೀಸಮಾಖ್ಯಾನಾನ್ಮುಕ್ತಗೀತಾವಸಾನಕಾತ್। ಸ್ಥಾನಪ್ರಮಾಣತಶ್ಚೈವ ಪಂಚಾನಾಂ ಬ್ರಹ್ಮತಾ ಸ್ಥಿತಾ ॥ ಶನ್ನೋ ಮಿತ್ರಾದಿಭಿರ್ವಾಕ್ಯೈಸ್ತೈರೇವ ಹರಿಮಸ್ತುವತ್। ಭೃಗುಃ ಪಂಚಾತ್ಮಕಂ ಪೂರ್ಣಮನ್ನಾದಿಮಯಚ್ಯುತಂ । ಮುಕ್ತಗೀತಾವಸಾನೈಸ್ತು ಸ್ತುತಸ್ತೇನ ಜನಾರ್ದನಃ॥ ಸುಪ್ರೀತಃ ಪ್ರದದೌ ಜ್ಞಾನಂ ಸ್ವಾತ್ಮಭಕ್ತಿಂ ಚ ಶಾಶ್ವತೀಂ ॥ ಮತಾಂತರಗಳೆಲ್ಲವೂ ಸರ್ವಥಾ ಕೂಡದಿರುವುದರಿಂದ (೧) ಯೇಽನ್ನಂ ಬ್ರಹ್ಮೋಪಾಸತೇ, ಯೇ ಪ್ರಾಣಂ ಬ್ರಹ್ಮೋಪಾಸತೇ, ಆನಂದಂ ಬ್ರಹ್ಮಣೋ ವಿದ್ವಾನ್, ವಿಜ್ಞಾನಂ ಬ್ರಹ್ಮ ಚೇದ್ವೇ, ಅಸ್ತಿ ಬ್ರಹ್ಮ ಚೇದ್ವೇದ ಎಂದು ಐದು ಪ್ರಕರಣಗಳಲ್ಲಿಯೂ ಪ್ರತ್ಯೇಕ ಬ್ರಹ್ಮಶಬ್ದವು ಇದ್ದುದರಿಂದಲೂ, (೨) ಅದ್ಯತೇಽತ್ತಿ ಚ ಭೂತಾನಿ ಎಂದು ಸರ್ವಾತ್ತೃತ್ವರೂಪ ಸಂಹರ್ತೃತ್ವವೂ ಸರ್ವೋಪ ಜೀವ್ಯತ್ವವೂ ಅನ್ನಂ ಹಿ ಭೂತಾನಾಂ ಜ್ಯೇಷ್ಠಂ ಎಂದು ಜ್ಯೇಷ್ಠತ್ವವೂ ಸರ್ವಂ ವೈ ತೇಽನ್ನಮಾಪ್ನುವಂತಿ ಎಂದು ಉಪಾಸಕ ಪ್ರಾಪ್ಯತ್ವವು ಇತ್ಯಾದಿ ವಿಷ್ಣುಲಿಂಗಗಳು ಇದ್ದುದರಿಂದಲೂ. (೩) ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾತ್ ಎಂದು ಆಕಾಶಾಖ್ಯ ವಿಷ್ಣುವಿಗೆ ಆನಂದಮಯತ್ವರೂಪ ಪೂರ್ಣಾನಂದತ್ವದಲ್ಲಿ ವಿಶ್ವಚೇಷ್ಟಕತ್ವರೂಪ ಹೇತುವನ್ನು ಪ್ರತಿಪಾದಿಸತಕ್ಕ ವಾಕ್ಯವೂ ಅಥವಾ ಅನ್ನಾದ್ವೈ ಪ್ರಜಾಃ ಪ್ರಜಾಯಂತೇ ಇತ್ಯಾದಿ ರೂಪವಾದ ಪ್ರತಿಪ್ರಕರಣದಲ್ಲಿಯೂ ಅನ್ನಮಯಾದಿಗಳ ಮಹಿಮೆಯನ್ನು ಪ್ರತಿಪಾದಿಸತಕ್ಕ ವಾಕ್ಯವು ಇದ್ದುದರಿಂದಲೂ, (೪) ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ಮಂತ್ರವರ್ಣರೂಪ ಬ್ರಹ್ಮಪ್ರಕರಣದಿಂದಲೂ, (೫) ಅನ್ನಂ ಬ್ರಹ್ಮೇತಿ ವ್ಯಜನಾತ್ ಇತ್ಯಾದಿಗಳಲ್ಲಿ ಶ್ರುತಗಳಾದ ಅನ್ನಾದಿಗಳಿಗೂ ಅನ್ನಮಯಾದಿಗಳಿಗೂ ಏಕಾರ್ಥತ್ವವಿದ್ದ ಪ್ರಯುಕ್ತವೂ, (೬) ಏತತ್ಸಾಮ ಗಾಯನ್ನಾಸ್ತೇ ಹಾ ಉ ಹಾ ಉ ಇತ್ಯಂತ ಮುಕ್ತಕರ್ತೃಕವಾಥಿ ಭೃಗುವಲ್ಲೀ ಸಮಾಖ್ಯೆಯಿಂದಲೂ, (೭) ಅನೇಕ ಬ್ರಹ್ಮಪ್ರಕರಣ ಸಮುದಾಯರೂಪವಾದ ಸ್ಥಾನರೂಪ ಪ್ರಮಾಣದಿಂದಲೂ ಕೂಡ ಅನ್ನಮಯಾದಿ ಐದಕ್ಕೂ ಬ್ರಹ್ಮತ್ವವು ಸಿದ್ಧಿಸುವುದು. ಭೃಗುಋಷಿಯು ಶನ್ನೋ ಮಿತ್ರಃ ಶಂ ವರುಣಃ ಎನ್ನುವುದನ್ನು ಆರಂಭಿಸಿ ಮುಕ್ತರ ಗಾನವೇ ಅವಸಾನವಾಗಿಉಳ್ಳ ವಾಕ್ಯಗಳಿಂದ ನಾಶರಹಿತನಾದ ಅನ್ನಮಯ ಮೊದಲಾದ ಐದು ರೂಪಗಳುಳ್ಳ ಶ್ರೀಹರಿಯನ್ನೇ ಸ್ತೋತ್ರಮಾಡಿದನು. ಈ ಪ್ರಮಾಣ ಬಲದಿಂದಲೂ ಬ್ರಹ್ಮಪರತ್ವವೇ ಸಿದ್ಧಿಸುತ್ತದೆ. ತಥಾ— ಬ್ರಹ್ಮ ಪ್ರಶ್ನೋತ್ತರಾದ್ಬ್ರಹ್ಮಲಕ್ಷಣಾದ್ಬ್ರಹ್ಮಶಬ್ದತಃ॥

**ವಿಜ್ಞಾತಾಚ್ಚ ತಪಸಾ ಮುಕ್ತ ಗಮ್ಯತ್ವಶ್ರುತಸ್ತಥಾ। ವಾಧೂಲೀಯಸಮಾಖ್ಯಾನಾತ್ ಅನುವ್ಯಾಖ್ಯಾನಿರೂಪಿತಾತ್। ಭೃಗುವಲ್ಲ್ಯುದಿತಸ್ಯಾನ್ನ ಪ್ರಾಣಾದೇರ್ಬ್ರಹ್ಮತಾ ಸ್ಥಿತಾ॥** (೧) **ಭೃಗುರ್ವೈ ವಾರುಣಿಃ। ವರುಣಂ ಪಿತರಮುಪಸಸಾರ। ಅಧೀಹಿ ಭಗವೋ ಬ್ರಹ್ಮೇತಿ। ತಸ್ಮಾ ಏತತ್ಪ್ರೋವಾಚ। ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಂ॥** ಭೃಗು ಋಷಿಯು ತಂದೆಯಾದ ವರುಣನ ಹತ್ತಿರ ಬ್ರಹ್ಮನನ್ನುಪದೇಶಿಸು ಎಂದು ಪ್ರಶ್ನೆ ಮಾಡೋಣ ಅನ್ನ ಪ್ರಾಣ ಮೊದಲಾದ ಭಗವದ್ರೂಪಗಳನ್ನು ಉಪದೇಶಿಸಿದ್ದ ರಿಂದಲೂ, (೨) **ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ** ಇತ್ಯಾದಿ ಪ್ರಕಾರ ಸೃಷ್ಟಿ ಸ್ಥಿತಿ, ಸಂಹಾರ, ಮೋಕ್ಷಹೇತುತ್ವರೂಪ ಬ್ರಹ್ಮಲಕ್ಷಣ ಸಮುದಾಯದಿಂದಲೂ, (೩) **ಅನ್ನಂ ಬ್ರಹ್ಮೇತಿ, ಪ್ರಾಣೋ ಬ್ರಹ್ಮೇತಿ** ಇತ್ಯಾದಿ ಪ್ರಕಾರ ಪ್ರತ್ಯೇಕ ಬ್ರಹ್ಮಶಬ್ದವು ಶ್ರುತವಾದ ಪ್ರಯುಕ್ತವೂ, (೪) **ಸ ತಪೋಽತಪ್ಯತ। ಅನ್ನಂ ಬ್ರಹ್ಮೇತಿ ವ್ಯಜಾನಾತ್। ಪ್ರಾಣೋ ಬ್ರಹ್ಮೇತಿ ವ್ಯಜಾನಾತ್।** ಇತ್ಯಾದಿ ಪ್ರಕಾರ ನಿದಿಧ್ಯಾಸನಾಖ್ಯ ತಪಸ್ಸಿನಿಂದ ಅಪರೋಕ್ಷೀಕೃತ ತತ್ವರೂಪಲಿಂಗವಿದ್ದುದರಿಂದಲೂ, (೫) **ಸ ಯ ಏವಂ ವಿತ್ ಅಸ್ಮಾಲ್ಲೋಕಾತ್ಪ್ರೇತ್ಯ। ಏತಮನ್ನಮಯಮಾತ್ಮಾನಮುಪಸಂಕ್ರಮ್ಯ।** ಇತ್ಯಾದಿಗಳಿಂದ ಮುಕ್ತರಿಂದ ಪ್ರಾಪ್ಯತ್ವವನ್ನು ಹೇಳಿದ್ದರಿಂದಲೂ, (೬) ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ವಾಧೂಲೀಯ ಶಾಖಾಂತರ ಸಮಾಖ್ಯೆಯಿಂದಲೂ ಭೃಗುವಲ್ಲಿಯಲ್ಲಿ ಹೇಳಲ್ಪಟ್ಟ ಅನ್ನ ಪ್ರಾಣಾದಿಗಳಿಗೆ ಪರಬ್ರಹ್ಮತ್ವವು ಅವಶ್ಯವಾಗಿ ಅಂಗೀಕಾರ್ಯವೇ ಆಗಿದೆ.

## ರಾಮಾನುಜಾಚಾರ್ಯರಿಗೆ ರೀತ್ಯಾ

**ವಿಚಾರ॥** (೧) **ತಸ್ಯೈಷ ಏವ ಶಾರೀರ ಆತ್ಮಾ** ಎಂದು ಶರೀರದಲ್ಲಿದ್ದ ಜೀವನೇ ಆನಂದಮಯನು ಎಂದು ಪ್ರಾಪ್ತವಾದ ಸೈಷಾನಂದಸ್ಯ ಎಂದಾರಂಭಿಸಿ ನಿರತಿಶಯವಾದ ಆನಂದಕ್ಕೆ ಅಭ್ಯಾಸವಿದ್ದುದರಿಂದ ಅದು ಅನಂತ ದುಃಖಮಿಶ್ರವಾದ ಸುಖಲೇಶವನ್ನು ಹೊಂದಿರುವ ಜೀವನಲ್ಲಿ ಕೂಡದಿರುವುದರಿಂದ ಆ ಆನಂದಾಶ್ರಯನಾದ ಆನಂದಮಯನು ಪರಮಾತ್ಮನು. ವಿಜ್ಞಾನಮಯ ನಾದರೂ ಜೀವನು. ಅನ್ನಮಯ ಮೊದಲಾದವುಗಳು ಮೂರು ಕೋಶಗಳು ಎಂದು ಸಿದ್ಧಾಂತವು ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. ಪೂರ್ವಪಕ್ಷಿಯು ಕೂಡ ಜೀವರೆಂದಂಗೀಕರಿಸದೆ ಇರುವ ಪ್ರಾಣಮಯಾದಿಗಳಲ್ಲಿ ಸಾಧಾರಣವಾದ ಶಾರೀರತ್ವರೂಪಹೇತು ವಿನಿಂದ ಆನಂದಮಯನು ಜೀವನೆಂದು ಶಂಕೆಯು ಹುಟ್ಟಲಾರದು. ಪ್ರಾಣಮಯಾದಿಗಳಲ್ಲಿಯೂ ಕೂಡ **ತಸ್ಯೈಷ ಏವ** ಎಂದು ಶಾರೀರತ್ವವು ಶ್ರುತವಾಗಿದೆ. ಸಿದ್ಧಾಂತವೂ ಅಯುಕ್ತವು. ಆನಂದಮಯನಿಗೆ ಬ್ರಹ್ಮತ್ವವಿದ್ದರೆ ಬ್ರಹ್ಮನಿಗೆ ಪುಚ್ಛತ್ವಾದಿಗಳು ಅನುಪಪನ್ನಗಳು ಆಗಬೇಕಾಗುವುದು. (೨) ಮತ್ತು ವಿಜ್ಞಾನಮಯನು ಜೀವನಾದರೆ **ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮಜ್ಯೇಷ್ಠಮುಪಾಸತೇ। ವಿಜ್ಞಾನಂ ಬ್ರಹ್ಮ ಚೇದ್ವೇದ। ಸರ್ವಾನ್ ಕಾಮಾನ್ ಸಮಶ್ನುತೇ** ಇತ್ಯಾದಿಗಳು ಕೂಡಲಾರವು. **ವಿಜ್ಞಾನಂ ಯಜ್ಞಂ ತನುತೇ** ಇದುಮೊದಲಾದುದು ಬ್ರಹ್ಮನು ಸರ್ವಕರ್ತನಾದುದರಿಂದಲೂ, **ಯಜ್ಞಭೃತ್ ಯಜ್ಞಕೃತ್ ಯಜ್ಞೋ** ಇದು ಮೊದಲಾದ ಪ್ರಮಾಣಗಳಿಂದಲೂ ಉಪಪನ್ನವು. ಅನ್ನಮಯಾದಿಗಳಿಗೆ ಅಲ್ಲಿ ಬ್ರಹ್ಮಶಬ್ದವು ಕಂಡದ್ದರಿಂದ ಕೋಶತ್ವವೂ ಕೂಡಲಾರದು— ಮಯಟ್ ಪ್ರತ್ಯಯಕ್ಕೆ ಕೆಲವು ಕಡೆ ವಿಕಾರಾದ್ಯರ್ಥತ್ವವೂ ಕೆಲವು ಕಡೆ ಪ್ರಾಚುರ್ಯಾರ್ಥತ್ವವೂ ಎಂದು ದ್ವೈವಿಧ್ಯದಿಂದ ಅರ್ಥ ಹೇಳಿದ್ದು

ಅಯುಕ್ತವು. ಆದಕಾರಣ ಅವರ ಮತವು ಸರ್ವಥಾ ಯುಕ್ತವಲ್ಲ.

## ಅಧಿಕರಣ ಸಾರಾಂಶ

(೧) ಬ್ರಹ್ಮಶಬ್ದವನ್ನು ಅನೇಕಾವರ್ತಿ ಹೇಳಿದ್ದರಿಂದ ಅನ್ನಮಯಾದಿಗಳು ಬ್ರಹ್ಮನೇ. (೨) ಮಯಟ್ ಪ್ರತ್ಯಯಕ್ಕೆ ಮೂರು ಅರ್ಥಗಳು ಇದ್ದರೂ ಇಲ್ಲಿ ಪ್ರಾಚುರ್ಯಾರ್ಥಕವೇ. ವಿಕಾರರೂಪ ಅರ್ಥವಲ್ಲ. ಅಲ್ಲದೆ ಆನಂದಮಯನಿಗೆ ಸರ್ವಜಗಚ್ಚೇಷ್ಟಕತ್ವವನ್ನು ಹೇಳಿದ್ದರಿಂದಲೂ, ಆನಂದಮಯನು ಬ್ರಹ್ಮನೇ ಆಗಬೇಕು. (೩.) ಬ್ರಹ್ಮಾದಿಗಳು ಆನಂದಮಯಶಬ್ದವಾಚ್ಯರು ಎಂದು ಹೇಳಕೂಡದು. ಬ್ರಹ್ಮಾದಿಗಳ ಜ್ಞಾನದಿಂದ ಮೋಕ್ಷವು ಆಗಲಾರದು. ಶ್ರೀಹರಿಯ ಜ್ಞಾನದಿಂದಲೇ ಮೋಕ್ಷವೆಂದು ಪ್ರಮಿತವಾಗಿದೆ. ತಥಾಚ ಆನಂದಮಯಾದಿಗಳು ಸರ್ವಥಾ ಕೋಶಾದಿಗಳಲ್ಲ ಪರಬ್ರಹ್ಮವೆ. (೪) **ಪ್ರವೃತ್ತಿಹೇತುಪೌಷ್ಕಲ್ಯಾದ್ಭಾಷ್ಯಕೃದ್ಧಿರುದಾಹೃತ್ಯೆ। ಶ್ರುತಿಸ್ಮೃತಿಶತ್ಯೆಶ್ಚಾಪಿ ಬ್ರಹ್ಮಶಬ್ದೋ ಹಿ ವಿಷ್ಣುಗಃ॥** ಪುಷ್ಕಲಪ್ರವೃತ್ತಿ ಹೇತುಗಳಿದ್ದ ಪ್ರಯುಕ್ತವೂ ಭಾಷ್ಯಕಾರರು ಉದಾಹರಿಸಿರುವ ಅನೇಕಾನೇಕ ಶ್ರುತಿಸ್ಮೃತಿ ಗಳಿಂದಲೂ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿ ಇರತಕ್ಕುದು. ಅನ್ಯತ್ರ ಮುಖ್ಯವಾಗಿ ಇರಲಾರದು. (೫) **ಅನಂತಶಾಖಾತತ್ತ್ವಾರ್ಥವಿದಾ ಸೂತ್ರಕೃತೇರಿತಂ। ಕೂಪಮಂಡೂಕವತ್ಸ್ವಲ್ಪವಾಕ್ಯಜ್ಞೋಽನ್ಯಥಯೇತ್ಕಥಂ ॥** ಅನಂತಾನಂತ ಶಾಖೆಗಳ ತತ್ತ್ವಾರ್ಥವನ್ನು ತಿಳಿದಿರುವ ಸೂತ್ರಕಾರರು ಹೇಳಿದ್ದನ್ನು ಕೂಪಮಂಡೂಕ ನ್ಯಾಯದಂತೆ ಅತ್ಯಲ್ಪ ವಾಕ್ಯಗಳನ್ನು ತಿಳಿದ ಅಲ್ಪಜ್ಞನು ಹೇಗೆ ವ್ಯತ್ಯಾಸಪಡಿಸುವನು. ಆದಕಾರಣ ಶ್ರುತ್ಯನುಸಾರವಾಗಿಯೇ ಸೂತ್ರಗಳಿಗೆ ಅರ್ಥವನ್ನು ಹೇಳಬೇಕ ಲ್ಲದೆ ಸ್ವೇಚ್ಛಾನುಸಾರವಾಗಿ ಅರ್ಥವನ್ನು ಕಲ್ಪಿಸಕೂಡದು. ಆದಕಾರಣ ಬ್ರಹ್ಮಶಬ್ದಾದಿಗಳ ಅತ್ಯಭ್ಯಾದಿ ಲಿಂಗಾದಿಗಳೂ ಇದ್ದುದರಿಂದ ಅನ್ನಮಯಾದಿ ಐದಕ್ಕೂ ಬ್ರಹ್ಮತ್ವವು ಸಿದ್ಧಿಸುತ್ತದೆ.

**ಆನಂದಮಯಾಧಿಕರಣವು ಸಮಾಪ್ತವಾಯಿತು.**

## ೭ ಅಂತಸ್ಥತ್ವಾಧಿಕರಣ

**ಪೀಠಿಕೆ ॥** ಈ ಅಧಿಕರಣದಲ್ಲಿ ಅಧಿದೈವದಲ್ಲಿರತಕ್ಕ ದೇವತಾವಾಚಕಗಳಾದ ಅನ್ಯತ್ರಪ್ರಸಿದ್ಧಗಳಾದ ಇಂದ್ರ ಮೊದಲಾದ ನಾಮಗಳಿಗೆ ಸಮನ್ವಯಸಿದ್ಧಿಗಾಗಿ ದೇಹಾಂತಸ್ಥತ್ವ ರೂಪವಾದ ಲಿಂಗಸಮನ್ವಯವನ್ನು ಮಾಡುವುದರಿಂದ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಪಾದಸಂಗತಿಗಳು ಸಿದ್ಧಗಳಾದವು ಎನ್ನುವ ಅಭಿಪ್ರಾಯದಿಂದ ಪೂರ್ವಾಧಿಕರಣ ಅದರ ವಿಷಯವಾಕ್ಯ ಇವುಗಳಿಂದ ಸಂಗತಿಯನ್ನು ತೋರಿಸುತ್ತಾರೆ.

**ಭಾಷ್ಯ ॥ ಅದೃಶ್ಯೇನಾತ್ಮ್ಯ ಇತ್ಯುಕ್ತಂ ತಚ್ಚಾದೃಶ್ಯತ್ವಂ ಅಂತಃ ಪ್ರವಿಷ್ಟಂ ಕರ್ತಾರಮೇತಂ। ಅಂತಶ್ಚಂದ್ರಮಸಿ ಮನಸಾ ಚರಂತಂ। ಸಹೈವ ಸಂತಂ ನ ವಿಜಾನಂತಿ ದೇವಾಃ (ತೈ.ಆ.೩.೧೧.) ಇತ್ಯಂತಸ್ಥಸ್ಯ ಕಸ್ಯಚಿದುಚ್ಯತೇ। ಸ ಚ ಇಂದ್ರೋ ರಾಜಾ**

**(ತೈ.ಆ.೩.೧೧.೬.) ಸಪ್ತ ಯುಂಜಂತಿ (ತೈ.ಆ.೩.೧೧.೮.) ಇತ್ಯಾದಿಭಿರನ್ಯಃ ಪ್ರತೀಯತೇ। ತಸ್ಮಾತ್ಸ ಏವಾನಂದಮಯ ಇತಿ ನ ಮಂತವ್ಯಂ ॥ ೧ ॥**

**ಭಾಷ್ಯಾರ್ಥ ॥** ಪೂರ್ವಾಧಿಕರಣದಲ್ಲಿ ಉದಾಹರಿಸಿರುವ **ಅದೃಶ್ಯೇ ಅನಾತ್ಮ್ಯೇ** ಎನ್ನುವ ವಾಕ್ಯದಲ್ಲಿ (ಆನಂದಮಯನಿಗೆ) ಸಂಪೂರ್ಣ ಅಜ್ಞೇಯತ್ವರೂಪವಾದ ಅದೃಶ್ಯತ್ವವು) ಹೇಳಲ್ಪಟ್ಟಿದೆ. ಯಾವುದು ಪೂರ್ವೋಕ್ತವಾದ ಅದೃಶ್ಯತ್ವವೋ ಅದೇವೇ ಹೃದಯದಗುಹೆಯ ಒಳಗೆ ಪ್ರವೇಶಿಸಿರುವನು. ಸರ್ವಜಗತ್ಕರ್ತನು ಚಂದ್ರನೊಳಗೆ ಸ್ವೇಚ್ಛೆಯಿಂದ ಸಂಚರಿಸುತ್ತಿರುವವನು ಒಟ್ಟಿಗೇನೇ ಇರುವವನು ಇಂತಹ ಈ ಶ್ರೀಹರಿಯನ್ನು ತತ್ತ್ವಾಭಿಮಾನಿಗಳಾದ ದೇವತೆಗಳು ಸಂಪೂರ್ಣವಾಗಿ ತಿಳಿಯುವುದಿಲ್ಲ ಎನ್ನುವ ವಾಕ್ಯದಿಂದ ಯಾರೋ ಒಬ್ಬ ಅಂತಸ್ಥನಿಗೆ ಹೇಳಲ್ಪಡುತ್ತದೆ. (ದೇವತೆಗಳಿಂದಲೂ ಅಜ್ಞೇಯತ್ವವನ್ನು ಹೇಳಿದುದರಿಂದ ಸುತರಾಂ ಅದೃಶ್ಯತ್ವವನ್ನು ಹೇಳಿದಂತೆ ಆಯಿತು. ಇದರಿಂದ ಅಂತಸ್ಥತ್ವದ್ವಾರಾ ಅದೃಶ್ಯತ್ವ ಆನಂದಮಯತ್ವಗಳು ಇತರರಲ್ಲಿವೆ ಎಂಬುವುದನ್ನು ಆಕ್ಷೇಪಿಸಿದುದರಿಂದ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ಹೇಳಿದಂತೆ ಆಯಿತು. ಅಥವಾ ಆನಂದಮಯಧರ್ಮವಾದ ಆ ಅದೃಶ್ಯತ್ವವು ಅಂತಸ್ಥನಲ್ಲಿ ಶ್ರುತವಾದುದರಿಂದ ಅಂತಸ್ಥನು ವಿಷ್ಣು ವಾಗದೆ ಇರುವುದರಿಂದ ಆನಂದಮಯನೂ ವಿಷ್ಣುವಲ್ಲ ಎಂದು ಪೂರ್ವಸಿದ್ಧಾಂತವನ್ನು ಆಕ್ಷೇಪಿಸಿ ಪೂರ್ವಪಕ್ಷವು ಹೊರಟಿದುದರಿಂದ ಆಕ್ಷೇಪಿಕೀ ಸಂಗತಿಯು. ಅದರಲ್ಲಿ ಸಯುಕ್ತಿಕವಾಗಿ ಪೂರ್ವಪಕ್ಷ ವನ್ನು ಹೇಳುತ್ತಾರೆ.) ಯಾವ ಕಾರಣದಿಂದ **ಇಂದ್ರೋ ರಾಜಾ, ಸಪ್ತ ಯುಂಜಂತಿ** ಇದು ಮೊದಲಾದ ವಾಕ್ಯಗಳಿಂದ ವಿಷ್ಣುವಿನಿಂದ ಭಿನ್ನನು ಅಂತಸ್ಥನಾಗಿ ತೋರುತ್ತಾನೋ ಆದಕಾರಣ ಅಂತಸ್ಥನು ಭಿನ್ನನೇ ಆಗುವನು. ಅದೃಶ್ಯತ್ವಯುಕ್ತ ಆನಂತಮಯನೂ ಬೇರೆಯೇ, ಅಂದರೆ ಇಂದ್ರಾದಿಗಳಲ್ಲಿ ಒಬ್ಬನು. ವಿಷ್ಣುವಲ್ಲ. ಹೀಗೆ ತಿಳಿಯಕೂಡದು. (೧) ರಾಜನಾದ ಯಾವ ಇಂದ್ರನು ಜಗತ್ತಿಗೆ ನಿಯಾಮಕನೋ ಅಂದರೆ ಜಗದೀಶ್ವರನಾಗಿ ಇದ್ದಾನೋ ಅಥವಾ ಯಾವ ಕಾರಣದಿಂದ ನಿಯಾಮಕನೋ ಆದಕಾರಣ ಜಗತ್ತಿಗೆ ರಾಜನು. (೨) ಗಾಯತ್ರೀ ಮೊದಲಾದ ಅಶ್ವರೂಪಗಳಾದ ಏಳು ಛಂದಸ್ಸುಗಳು ಒಂದು ಚಕ್ರವುಳ್ಳ ಸೂರ್ಯರಥವನ್ನು ಕುರಿತು ತನ್ನನ್ನು ಪ್ರೇರಿಸುತ್ತವೆ. ಅಂದರೆ ರಥದಲ್ಲಿ ಸಂಬದ್ಧಗಳಾಗುತ್ತವೆ. ಏಳು ಛಂದೋಭಿಮಾನಿಗಳಿಂದ ಪ್ರತ್ಯೇಕ ವೇದಾಭಿಮಾನಿಯಾದ ಸಪ್ತಛಂದ ಎಂದು ಹೆಸರುಳ್ಳದ್ದು ಒಂದು ಪ್ರಧಾನವಾದ ಕುದುರೆಯು ಇದೆ. ಆದಿಪದದಿಂದ **ಅಪಾಂ ನೇತಾರಂ ಭುವನಸ್ಯ ಗೋಪಾಂ** ಇತ್ಯಾದಿ ಶ್ರುತಿಗಳನ್ನು ಇಟ್ಟುಕೊಳ್ಳಬೇಕು.

**ವಿಶೇಷಾಂಶ ॥** (೩) **ಛಂದೋಽಭಿಮಾನಿನಾ ಪೃಥಗ್ವೇದಾಭಿಮಾನೀ ಸಪ್ತಛಂದೋ ನಾಮಾಸಪ್ತಸ್ವೇಕೋಽಸ್ತಿ** ಸಪ್ತಛಂದೋಭಿಮಾನಿಯಿಂದ ಪ್ರತ್ಯೇಕ ವೇದಾಭಿಮಾನಿಯಾದುದು ಸಪ್ತಛಂದ ಎನ್ನುವ ಪ್ರಧಾನವಾದ ಕುದುರೆಯು ಏಳು ಕುದುರೆಗಳ ಮಧ್ಯದಲ್ಲಿದೆ ಎಂದು ತತ್ತ್ವಪ್ರದೀಪದಲ್ಲಿ ಹೇಳಿದೆ. ಆದುದರಿಂದಲೇ **ಸಪ್ತ ಯುಂಜಂತಿ, ಏಕೋ ಅಶ್ವೋ ವಹತಿ ಸಪ್ತನಾಮಾ** ಈ ವಾಕ್ಯಗಳಿಗೆ ವಿರೋಧವಿಲ್ಲ.

**ಪೀಠಿಕೆ ॥** ಏಕೆ ತಿಳಿಯಕೂಡದು ಎಂದರೆ ಅದರಲ್ಲಿ ಹೇತುವಾಗಿ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥ ೨೦ ॥

**ಸೂತ್ರಾರ್ಥ ॥** ಅಂತಃ ಪ್ರವಿಷ್ಟಂ ಕರ್ತಾರಮೇತಂ, ಅಂತಶ್ಚಂದ್ರಮಸಿ ಎಂದು ತೈತ್ತಿರೀಯದಲ್ಲಿ ಅಂತಸ್ಥನಾಗಿ ಶ್ರುತನಾದವನು ವಿಷ್ಣುವೇ. ಇಂದ್ರಾದಿಗಳಲ್ಲ. ಏಕೆಂದರೆ ವಿಷ್ಣುವಿನ ಧರ್ಮಗಳಾದ ಕ್ಷೀರಸಮುದ್ರಸ್ಥತ್ವ, ಬ್ರಹ್ಮಜ್ಞೇಯತ್ವ, ಬ್ರಹ್ಮತಪೋಲಭ್ಯತ್ವ, ಬ್ರಹ್ಮಾಂಡವೀರ್ಯತ್ವಮೊದಲಾದ ಧರ್ಮಗಳಿಗೆ ಆ ಅಂತಃಶ್ರುತನಾದವನಲ್ಲಿ ಯಸ್ಯಾಂಡಕೋಶಂ ಇತ್ಯಾದಿಗಳಿಂದ ಉಪದೇಶ ಮಾಡಿದುದರಿಂದ.

**ಪೀಠಿಕೆ ॥** ಏಕೆ ತಿಳಿಯಕೂಡದು ಎಂದರೆ—

**ಭಾಷ್ಯ ॥ ಅಂತಃ ಶ್ರೂಯಮಾಣೋ ವಿಷ್ಣುರೇವ । ಅಂತಃ ಸಮುದ್ರೇ ಮನಸಾ ಚರಂತಂ ಬ್ರಹ್ಮಾನ್ವವಿಂದದ್ದಶಹೋತಾರಮರ್ಣೇ। (ತೈ.ಆ.೩..೧೧.೧.) ಸಮುದ್ರೇಽಂತಃ ಕವಯೋ ವಿಚಕ್ಷತೇ। ಮರೀಚೀನಾಂ ಪದಮಿಚ್ಛಂತಿ ವೇಧಸಃ। (ತೈ.ಆ.೩..೧೧.೧೧.) ಯಸ್ಯಾಂಡಕೋಶಂ ಶುಷ್ಮಮಾಹುಃ। (ತೈ.ಆ.೩..೧೧.೪.) ಇತ್ಯಾದಿ ತದ್ಧರ್ಮೋಪದೇಶಾತ್। ಸ ಹಿ ಕ್ಷೀರಸಮುದ್ರಶಾಯೀ ॥ ೨ ।**

**ಭಾಷ್ಯಾರ್ಥ ॥** (೧) ಅಂತಃಪ್ರವಿಷ್ಟಂ ಎನ್ನುವ ವಾಕ್ಯದಲ್ಲಿ ಹೃದಯದೊಳಗೆ ಇರತಕ್ಕವನೆಂದು ಶ್ರುತಿಯಲ್ಲಿ ಹೇಳಲ್ಪಟ್ಟವನು ವಿಷ್ಣುವೇ. ಮತ್ತೊಬ್ಬನಲ್ಲ. (೨) ಬ್ರಹ್ಮಾ=ಈಗ ಇರತಕ್ಕ ಚತುರ್ಮುಖ ಬ್ರಹ್ಮನು, ಸಮುದ್ರೇ = ಪ್ರಲಯಸಮುದ್ರದಲ್ಲಿಯೂ ಕ್ಷೀರಸಮುದ್ರದಲ್ಲಿಯೂ, ಅಂತಃ ಅರ್ಣೇ= ಜಲದಲ್ಲಿಯೂ ಕ್ಷೀರದಲ್ಲಿಯೂ, ಮನಸಾ = ತನ್ನ ಇಚ್ಛಾನುಸಾರವಾಗಿ, ಚರಂತಂ=ಸಂಚರಿಸುತ್ತಿರುವ, ದಶಹೋತಾರಂ=ಜ್ಞಾನೇಂದ್ರಿಯ ಕರ್ಮೇಂದ್ರಿಯಎನ್ನುವ ಹತ್ತುಇಂದ್ರಿಯಗಳಲ್ಲಿ ಆವಾವ ವಿಷಯಗಳನ್ನು ಸ್ಥಾಪಿಸಿಕೊಡುವ, ಶ್ರೀಹರಿಯನ್ನು ಅನ್ವವಿಂದತ್=ತಿಳಿದನು. (೩.) ಕವಯಃ= ಜ್ಞಾನಿಗಳು, ಸಮುದ್ರೇ ಅಂತಃ=ಕ್ಷೀರಸಮುದ್ರಪ್ರಲಯಸಮುದ್ರಗಳೊಳಗೆ ಇರತಕ್ಕವನ್ನಾಗಿ, (ಬ್ರಹ್ಮನನ್ನು) ವಿಚಕ್ಷತೇ=ತಿಳಿಯುತ್ತಾರೆ. ವೇಧಸಃ=ಭೂತಭವಿಷ್ಯದ್ಬ್ರಹ್ಮರು, ಮರೀಚೀನಾಂ= ಅಲ್ಪಜ್ಞಾನವುಳ್ಳ ಜೀವರಿಗೆ, ಪದಂ=ಆಶ್ರಯನಾದ ವಿಷ್ಣುವನ್ನು, ಇಚ್ಛಂತಿ=ಪ್ರಾರ್ಥಿಸುತ್ತಾರೆ. (ತತ್ವಪ್ರದೀಪಿಕಾ ರೀತ್ಯಾ) ಜ್ಞಾನಿಗಳಾದ ಬ್ರಹ್ಮರು ವಿಚಕ್ಷತೇ=ಜ್ಞಾನಕ್ಕೋಸ್ಕರ ಜೀವರಿಗೆ ಆಶ್ರಯನಾದ ವಿಷ್ಣುವನ್ನು ಇಚ್ಛಿಸುತ್ತಾರೆ. (೪) (ಜ್ಞಾನಿಗಳು ಬ್ರಹ್ಮಾಂಡಾಖ್ಯಸ್ಥಾನವನ್ನು ಯಾವ ವಿಷ್ಣುವಿನ ವೀರ್ಯವನ್ನಾಗಿ, (ಅಂದರೆ) ವೀರ್ಯವೇ ಉಪಾದಾನಕಾರಣವಾಗಿ ಉಳ್ಳದ್ದನ್ನಾಗಿ ಹೇಳುತ್ತಾರೆ. ಪ್ರಾಣ ಉಲ್ಬಲಂ— ತೇನ ಕ್ಲೃಪ್ತೋ ಅಮೃತೇನಾಹಮಸ್ಮಿ=ಅಂತಹ ಬ್ರಹ್ಮಾಂಡಾಖ್ಯಸ್ಥಾನಕ್ಕೆ, ಉಲ್ಬಂ=ಆವರಕವಾದುದು, ಪ್ರಾಣಃ= ಅಂತಃಪ್ರಾವರಣವು, ಯಾರಿಂದ ಕೂಡಿಯೇ ಹುಟ್ಟುತ್ತದೋ, ತೇನ ಅಮೃತೇನ=ಅಂತಹ ವಿಷ್ಣುವಿನಿಂದ, ಅಹಂಕ್ಲೃಪ್ತೋಸ್ಮಿ=ನಿಯಮಿತನು ಆಗಿರುತ್ತೇನೆ. ಇದು ವಿರಿಂಚನ ವಾಕ್ಯವು. ಎಂದು ತತ್ವಪ್ರದೀಪದಲ್ಲಿ ಹೇಳಿದೆ.) ಇದು ಮೊದಲಾದ ವಿಷ್ಣುವಿನ ಸಮುದ್ರಗಳಲ್ಲಿರುವಿಕೆ, ಚತುರ್ಮುಖಜ್ಞೇಯತ್ವ, ಬ್ರಹ್ಮತಪೋಲಭ್ಯತ್ವ ಮೊದಲಾದ ಧರ್ಮಗಳನ್ನು ಅಂತಃಶ್ರುತನಾದವನಲ್ಲಿ ಹೇಳಿದುದರಿಂದ (ಕ್ಷೀರಸಮುದ್ರಸ್ಥತ್ವವು ವಿಷ್ಣುಲಿಂಗವು ಹೇಗೆ ಎಂದರೆ) ಆ ವಿಷ್ಣುವು ಕ್ಷೀರಸಮುದ್ರಶಾಯಿಯೆಂದು ಸರ್ವಲೋಕಪ್ರಸಿದ್ಧನು.

**ಪೀಠಿಕೆ ॥** ಪ್ರಸಿದ್ಧಿಯಿದ್ದಪ್ರಯುಕ್ತ ಕ್ಷೀರಸಮುದ್ರಶಾಯಿತ್ವವು ವಿಷ್ಣುಲಿಂಗವಾಗಲಿ. ಆದಾಗ್ಯೂ ಪ್ರಲಯಸಮುದ್ರಸ್ಥತ್ವವೂ ಬ್ರಹ್ಮಾಂಡವೀರ್ಯತ್ವವೂ ವಿಷ್ಣು ಧರ್ಮವು ಹೇಗೆ ಆಗುವುದು ಎಂದರೆ—

**ಭಾಷ್ಯ ॥ ತಸ್ಯ ಚ ವೀರ್ಯಮಂಡಕೋಶಃ। ಸೋಽಭಿಧ್ಯಾಯ ಶರೀರಾತ್ಸ್ವಾತ್ಸಿಸೃಕ್ಷುರ್ವಿವಿಧಾಃ ಪ್ರಜಾಃ। ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ತದಂಡ ಮಭವದ್ಧೈಮಂ ಸಹಸ್ರಾಂಶುಸಮಪ್ರಭಂ। ಯಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ। ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ। ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ। ಇತಿ ವ್ಯಾಸಸ್ಮೃತೇಃ ॥ ೩ ॥**

**ಭಾಷ್ಯಾರ್ಥ ॥** (೧) ಬ್ರಹ್ಮಾಂಡಾಖ್ಯ ಸ್ಥಾನವು ವಿಷ್ಣುವಿನ ವೀರ್ಯವು. (೨) ವಿಷ್ಣುವು ತನ್ನ ಶರೀರದಿಂದ ನಾನಾವಿಧರಾದ ಪ್ರಜೆಗಳನ್ನು ಸೃಷ್ಟಿಮಾಡಲಿಕ್ಕೆ ಇಚ್ಛಿಸಿದವನಾಗಿ, ಆಲೋಚಿಸಿ, ಅಂಡಸೃಷ್ಟಿಗಿಂತ ಮೊದಲೇ ಅಂಡಕ್ಕೆ ಆವರಣರೂಪಗಳಾದ ಜಲಗಳನ್ನು ಸೃಷ್ಟಿಮಾಡಿದನು. ಆ ಜಲಗಳಲ್ಲಿ ವೀರ್ಯವನ್ನು (ಮಾಯಾದ್ವಾರಾ) ಇಟ್ಟನು. ಹಿರಣ್ಮಾತ್ಮಕವಾದ ಸೂರ್ಯನಿಗೆ ಸಮಾನವಾದ ಪ್ರಕಾಶವುಳ್ಳ ಆ ವೀರ್ಯವು ಬ್ರಹ್ಮಾಂಡವೆನಿಸಿತು. ಯಾವ ಅಂಡದಲ್ಲಿ ಸರ್ವ ಲೋಕಗಳಿಗೂ ಪಿತಾಮಹನಾದ ಚತುರ್ಮುಖನು ಸ್ವತಂತ್ರನಾದ ಶ್ರೀಹರಿಯ ದೆಶೆಯಿಂದ ಸಾಕ್ಷಾತ್ ಹುಟ್ಟಿರುವನೋ, ಯಾವ ಕಾರಣದಿಂದ ಜಲಗಳು ವಿಷ್ಣುವಿನಿಂದ ಹುಟ್ಟಿದವುಗಳೋ, ಆದಕಾರಣ ಜಲಗಳು ನಾರಾಃ ಎಂದು ಹೇಳಲ್ಪಟ್ಟಿವೆ. ಯಾವ ಕಾರಣದಿಂದ ಪ್ರಲಯಕಾಲದಲ್ಲಿ ಜಲಗಳು ವಿಷ್ಣುವಿಗೆ ಆಶ್ರಯಗಳೋ, ಆದುದರಿಂದ ವಿಷ್ಣುವು ನಾರಾಯಣನೆಂದು ಸ್ಮೃತಿಯಲ್ಲಿ ಹೇಳಲ್ಪಟ್ಟಿದ್ದಾನೆ. ಎನ್ನುವ ವ್ಯಾಸಸ್ಮೃತಿಯ ದೆಶೆಯಿಂದ. (ಆತನ ವೀರ್ಯವು ಅಂಡಕೋಶವು. ಆತನು ಪ್ರಲಯಸಮುದ್ರಶಾಯಿಯು ಎಂದು ಸಿದ್ಧವಾಯಿತು.)

**ವಿಶೇಷಾಂಶ ॥** (ಎ) **ವಿಷ್ಣುರ್ನರೋ ನಾಶಾತ್ವರೋ ಯತಃ** ಎಂದು ಭಾಗವತ ತಾತ್ಪರ್ಯದಲ್ಲಿ ಹೇಳಿದ್ದರಿಂದ ನರನೆಂದರೆ ವಿಷ್ಣುವು. (ಬಿ) **ಪುರುಷೋಽಂಡಂ ವಿನಿರ್ಭಿದ್ಯ ಯದಾದೌ ಸ ವಿನಿರ್ಗತಃ। ಆತ್ಮನೋಽಯನಮನ್ವಿಚ್ಛನ್ನಪೋಽಸ್ರಾ ಕ್ಷೀಚ್ಛುಚಿಃ ಶುಚೀಃ॥** ಎಂದು ಭಾಗವತದಲ್ಲಿಯೂ **ಅಂಡಂ ಪ್ರವಿಷ್ಟೋ ಯೋ ವಿಷ್ಣುಃ ಸೋಽಂಡಂ ಭಿತ್ವಾ ಪ್ರಕಾಶಿತಃ। ಸೋಽಪೋಽಸೃಜತ್ತತೋ ನಾರಾಃ** ಎಂದು ಭಾಗವತ ತಾತ್ಪರ್ಯದಲ್ಲಿಯೂ ಅಂಡಸೃಷ್ಟಿಯ ಅನಂತರದಲ್ಲಿ ಜಲಸೃಷ್ಟಿ ಯಲ್ಲಿ ಹೇಳಿದ್ದಾರೆ. ಆದರೆ ಅದು ಬಹಿಸ್ಸೃಷ್ಟಿಗಿಂತ ಇತರವಾದ ಅಂತರಸೃಷ್ಟಿ ಪರವಾದುದರಿಂದ ವಿರೋಧವಿಲ್ಲ.

**ಪೀಠಿಕೆ ॥** ಇತರ ಪ್ರಮಾಣಗಳಿಂದಲೂ ಬ್ರಹ್ಮಾಂಡಜನಕವೀರ್ಯವುಳ್ಳವನೂ ಪ್ರಲಯ ಸಮುದ್ರದಲ್ಲಿರುವವನೂ ವಿಷ್ಣುವೇ ಎಂದು ತಿಳಿಯುತ್ತದೆ ಎನ್ನುತ್ತಾರೆ—

**ಭಾಷ್ಯ ॥ ಅಹಂ ತತ್ತೇಜೋರಶ್ಮೀನ್ನಾರಾಯಣಂ ಪುರುಷಂ ಜಾತಮಗ್ರತಃ। ಪುರುಷಾತ್ಪ್ರಕೃತಿರ್ಜಗದಂಡಮಿತಿ (ಚ) ಚತುರ್ವೇದಶಿಖಾಯಾಂ ॥ ೪ ॥**

**ಭಾಷ್ಯಾರ್ಥ ॥** ತತ್=ಪ್ರಸಿದ್ಧವಾದ, ಅಥವಾ ವ್ಯಾಪ್ತವಾದ, ಅಹಂ=ಅಹೇಯವಾದ, ರಶ್ಮೀಶ್ = ರತಿಃ ಶಂ ಚ ಮಿತಂಅಸ್ಯ ರಮಣವೂ ಸುಖವೂ ಮಿತವಾಗಿ ಇರುವವನು ಎನ್ನುವ ವ್ಯುತ್ಪತ್ತಿಯಿಂದ, ರಶ್ಮಿಃ=ಜೀವನು, ರಶ್ಮಿಂ ಇಂದಯತಿ ಪ್ರೇರಯತಿ ಎನ್ನುವ ವ್ಯುತ್ಪತ್ತಿಯಿಮದ, ರಶ್ಮೀಶ್= ಜೀವಪ್ರೇರಕ ನಾದ, (ಇಂಪ್ರೇರಣೇ ಎನ್ನುವ ಧಾತುವಿನಿಂದ ಹುಟ್ಟಿದ್ದು) ಅಥವಾ ರಶ್ಮೀನ್ ಇಂದಯತಿ ಎನ್ನುವ ವ್ಯುತ್ಪತ್ತಿಯಿಂದ ಸೂರ್ಯಾದಿ ತೇಜಸ್ಸುಗಳಿಗೆ ಪ್ರಕಾಶನಾದ, ತೇಜಃ=ಜಗತ್ಪ್ರಕಾಶಕವಾದ, ಪುರುಷಂ= ಷಡ್ಗುಣಪರಿಪೂರ್ಣವಾದ, ನಾರಾಯಣಂ=ನಾರಾಯಣಾಖ್ಯಬ್ರಹ್ಮನು, ಅಗ್ರತಃ=ಪ್ರಲಯಕಾಲದಲ್ಲಿ ಜಾತಂ=ಇತ್ತು, ಪುರುಷಾತ್=ಆ ನಾರಾಯಣನ ದೇಶಯಿಂದ, ಅಗ್ರತಃ=ಪ್ರಥಮದಲ್ಲಿ , ಪ್ರಕೃತಿಃ= ಚೇತನಪ್ರಕೃತಿಯು, ಜಗತ್=ಜೀವಸಮುದಾಯವು ಯಥಾಯೋಗ್ಯವಾಗಿ ಹುಟ್ಟಿತು. ಆಮೇಲೆ, ಅಂಡಂ=ಬ್ರಹ್ಮಾಂಡವೂ, (ತ್ರಿಪುರುಷಂ ಮಾಯಾಬೀಜಮಜಾಯತ=ಬ್ರಹ್ಮವಾಯುರುದ್ರ ಎನ್ನುವ ಮೂರು ಪುರುಷರಿಂದೊಡಗೂಡಿದ್ದೂ, ಮಾಯಾಬೀಜಂ=ಪ್ರಕೃತ್ಯುಪಾದಾನಕವಾಗಿ ಹುಟ್ಟಿತು.) ಹೀಗೆ ಚತುರ್ವೇದಶಿಖೆಯಲ್ಲಿ ಹೇಳಿದೆ.

**ಪೀಠಿಕೆ ॥** ಸಮುದ್ರಸ್ಥತ್ವ ಮೊದಲಾದ ಲಿಂಗದೆಶೆಯಿಂದ ಅಂತಸ್ಥನು ವಿಷ್ಣುವು ಎಂದಾದರೆ ಆ ಅಂತಸ್ಥನಾದ ವಿಷ್ಣುವಿನಿಂದ ಇಂದ್ರಾದಿಗಳಿಗೆ ಅಭೇದವು ಇಲ್ಲಿ ವಿವಕ್ಷಿತ ವಾಗಲಿ. ಇಂದ್ರಾದಿಪ್ರಾಪಕ ಶ್ರುತ್ಯಾದಿಗಳೂ ಇವೆ. ಈ ಶ್ರುತ್ಯಾದಿಗಳಿಗೆ ಸ್ವಭಾವತಃ ಪ್ರಾಬಲ್ಯವು. ಲಿಂಗವು ನಿರವಕಾಶವಾದುದರಿಂದ ಪ್ರಬಲವು. ಆದಪ್ರಯುಕ್ತ ಒಂದನ್ನು ಬಾಧಿಸಿ ಒಂದು ಪಕ್ಷನಿರ್ಣಯವು ಆಗಲಾರದು. ಏವಂಚ ಪೂರ್ವೋತ್ತರ ಪಕ್ಷಗಳಲ್ಲಿ ಪರಸ್ಪರ ಬಾಧ್ಯಬಾಧಕಭಾವವು ಇಲ್ಲದಿರಲು ಅಂತಸ್ಥನಾದ ವಿಷ್ಣುವಿನಿಂದ ಇಂದ್ರಾದಿಗಳಿಗೆ ಭೇದವು ಪ್ರಾಪ್ತವಾಯಿತೆನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಪಠನಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭೇದವ್ಯಪದೇಶಾಚ್ಚಾನ್ಯಃ ಓಂ ॥ ೨೧ ॥

**ಸೂತ್ರಾರ್ಥ ॥** ಅಂತಃಶ್ರೂಯಮಾಣನಾದವನು ವಿಷ್ಣುವೆಂದು ಮಾತ್ರವಲ್ಲ, ಮತ್ತೆ ಇಂದ್ರಾದಿಗಳ ದೆಶೆಯಿಂದ ಭಿನ್ನನೂ ಆಗಿದ್ದಾನೆ. ವಿಷ್ಣುವಿಗೆ ಇಂದ್ರಾದ್ಯಂತರ್ಯಾಮಿತ್ವ, ಅಂತಸ್ಥತ್ವವನ್ನು ಹೇಳಿದ್ದರಿಂದ ಇಂದ್ರಾದಿಗಳ ದೆಶೆಯಿಂದ ಭೇದವನ್ನು ಹೇಳಿದ್ದರಿಂದ.

**ಭಾಷ್ಯ ॥ ಇಂದ್ರಸ್ಯಾತ್ಮಾನಿಹಿತಃ ಪಂಚಹೋತಾ। ವಾಯೋರಾತ್ಮಾನಂ ಕವಯೋ ನಿಚಿಕ್ಯುಃ।ಅಂತರಾದಿತ್ಯೇ ಮನಸಾ ಚರಂತಂ। ದೇವಾನಾಂ ಹೃದಯಂ ಬ್ರಹ್ಮಾನ್ವವಿಂದತ್ । (ತೈ.ಆ.೩.೧೧.) ಇತ್ಯಾದಿ ಭೇದವ್ಯಪದೇಶಾತ್ ॥ ೭ ॥ ೫ ॥**

**ಭಾಷ್ಯಾರ್ಥ ॥** ಐದು ಜ್ಞಾನೇಂದ್ರಿಯಗಳಲ್ಲಿ ಶಬ್ದಾದಿವಿಷಯಗಳನ್ನು ಹೋಲಿಸತಕ್ಕವನು, ಇಂದ್ರನಿಗೆ ಅಂತರ್ಯಾಮಿಯು ಎಲ್ಲರ ಹೃದಯದಲ್ಲಿ ಸನ್ನಿಹಿತನು. ಜ್ಞಾನಿಗಳು ವಾಯುವಿನ ಅಂತರ್ಯಾಮಿಯನ್ನು ನೋಡಿದರು. ಆದಿತ್ಯನೊಳಗೆ ಸ್ವೇಚ್ಛಾನುಸಾರವಾಗಿ ಸಂಚರಿಸುತ್ತಿರುವ ವಿಷ್ಣುವನ್ನು ಜ್ಞಾನಿಗಳು ತಿಳಿದರು. ಚತುರ್ಮುಖಬ್ರಹ್ಮನು ದೇವತೆಗಳ ಹೃದಯದಲ್ಲಿದ್ದ ಪ್ರಯುಕ್ತ ಅಥವಾ ಪ್ರವರ್ತಿಸುವುದರಿಂದ ಹೃದಯಶಬ್ದವಾಚ್ಯನಾದ ವಿಷ್ಣುವನ್ನು ನೋಡಿದನು. ಇದು ಮೊದಲಾದ

(**ಆದಿಶಬ್ದದಿಂದ ಅಮೃತಂ ದೇವಾನಾಮಾಯುಃ ಪ್ರಜಾನಾಂ, ಇಂದ್ರಂ ರಾಜಾನಂ ಸವಿತಾರಂ**) ಮೊದಲಾದ ಶ್ರುತಿಗಳಿಂದ ಭೇದವನ್ನು ಹೇಳಿದ್ದರಿಂದ.

**ವಿಶೇಷಾಂಶ॥** ಇಂದ್ರೋ ರಾಜಾ ಇತ್ಯಾದಿ ಶ್ರುತಿಗಳಲ್ಲಿದ್ದ ಇಂದ್ರಾದಿ ಶಬ್ದಗಳು ಪರಮ ಮುಖ್ಯವೃತ್ತಿಯಿಂದ ವಿಷ್ಣುಪರಗಳೇ.

## ಮಾಯಾವಾದಿರೀತ್ಯಾ

**ವಿಚಾರ॥ ಯ ಏಷೋಂಽತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶಃ ಅಪ್ರಣಖಾತ್ಸರ್ವ ಏವ ಸುವರ್ಣಸ್ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯೋದಿತಿನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ ಇತ್ಯಧಿದೈವತಂ। ಅಥಾಧ್ಯಾತ್ಮಂ। ಯ ಏಷೋಂಽತರಕ್ಷಿಣಿ ಪುರುಷೋ ದೃಶ್ಯತೇ ಇತ್ಯಾದಿ ॥** ಇಲ್ಲಿ ಆದಿತ್ಯಮಂಡಲಾದಿಗಳಲ್ಲಿರತಕ್ಕ ಹಿರಣ್ಮಯನಾದ ಪುರುಷನು ವಿದ್ಯಾಕರ್ಮಗಳ ಆಧಿಕ್ಯದಿಂದ ಐಶ್ವರ್ಯವನ್ನು ಹೊಂದಿದ ಒಬ್ಬ ಸಂಸಾರಿಯೋ ಪರಮಾತ್ಮನೋ ಎಂದು ಸಂದೇಹ ಬಂದರೆ ಹಿರಣ್ಯಶ್ಮಶ್ರುಃ ಇತ್ಯಾದಿಗಳಲ್ಲಿ ರೂಪಾದಿಗಳು ಶ್ರುತಗಳಾದುದರಿಂದಲೂ **ಯ ಏಷೋಂಽತರಾದಿತ್ಯೇ** ಇತ್ಯಾದಿಗಳಲ್ಲಿ ಆದಿತ್ಯರೂಪ ಆಧಾರವೋ **ಯೇ ಚಾಮುಷ್ಮಾತ್ಪರಾಂಚೋ ಲೋಕಾಸ್ತೇಷಾಂ ಚೇಷ್ಟೇ** ಎಂದು ಸಾವಧಿಕವಾದ ಐಶ್ವರ್ಯಮರ್ಯಾದೆಯೂ, ಆದಿತ್ಯಮಂಡಲಸ್ಥಪುರುಷನಿಗೆ ಶ್ರುತವಾಗಿದೆ. ಅವುಗಳು **ಅರೂಪಮಸ್ಪರ್ಶಂ** ಎನ್ನುವ ಶ್ರುತಿಯಿಂದ ರೂಪರಹಿತನೂ, **ಸ್ವೇ ಮಹಿಮ್ನಿ** ಎನ್ನುವ ಶ್ರುತಿಯಿಂದ ಆಧಾರರಹಿತನೂ ಏಷ ಸರ್ವೇಶ್ವರಃ ಎನ್ನುವ ಶ್ರುತಿಯಿಂದ ನಿರವಧಿಕಐಶ್ವರ್ಯವೂ ಇರುವ ಪರಮಾತ್ಮನಲ್ಲಿ ಕೂಡಲಾರವು. ಆದಕಾರಣ **ಮರ್ಯಾದಾಧಾರರೂಪಾಣಿ ಸಂಸಾರಿಣಿ ಪರೇತು ನ। ತಸ್ಮಾದುಪಾಸ್ಯಃ ಸಂಸಾರೀ ಕರ್ಮಾನಧಿಕೃತೋ ರವಿಃ।** ಐಶ್ವರ್ಯಮರ್ಯಾದಾ, ಆಧಾರ, ರೂಪ ಇವುಗಳು ಸಂಸಾರಿಯಾದ ಜೀವನಲ್ಲಿ ಇರತಕ್ಕವುಗಳು ಪರಬ್ರಹ್ಮನಲ್ಲಿ ಇಲ್ಲ. ಆದಕಾರಣ ಸಂಸಾರಿಯೇ ಉಪಾಸ್ಯನು ಪರಬ್ರಹ್ಮನಲ್ಲ ಎಂದು ಭಾಮತೀಕಾರನು ಹೇಳಿರುವನು.) ಹೀಗೆ ಪೂರ್ವಪಕ್ಷವು ಬಂದರೆ ಪರಮಾತ್ಮನೇ ಅಂತಸ್ಥನು ಎಂದು ಸಿದ್ಧಾಂತವು. ಹೇಗೆಂದರೆ ಆದಿತ್ಯವಾಕ್ಯದಲ್ಲಿ **ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ** ಎಂದು ಸರ್ವಪಾಪರಾಹಿತ್ಯವೂ, ಅಕ್ಷಿವಾಕ್ಯದಲ್ಲಿ **ಸೈವರ್ಕತ್ಸಾಮ** ಇತ್ಯಾದಿಗಳಲ್ಲಿ ಸರ್ವಾತ್ಮಕತ್ವರೂಪ ಪರಮಾತ್ಮಧರ್ಮವೂ ಉಪದಿಷ್ಟವಾಗಿದೆ. ಅವುಗಳು **ಅಪಹತಪಾಪ್ಮಾ** ಇತ್ಯಾದಿ ಶ್ರುತಿಗಳಿಂದ ನಿತ್ಯಶುದ್ಧನೂ ಸರ್ವಜ್ಞೂ ಉಪಾದಾನಕಾರಣನಾದುದರಿಂದ ಸರ್ವಾಭಿನ್ನನಾದ ಪರಮಾತ್ಮನಲ್ಲಿ ಕೂಡುವಂತೆ ಜೀವರಲ್ಲಿ ಸರ್ವಥಾ ಕೂಡಲಾರವು. ಅಲ್ಲದೆ **ಯ ಆದಿತ್ಯೇ ತಿಷ್ಠನ್** ಇತ್ಯಾದಿಗಳಲ್ಲಿ ಆದಿತ್ಯನಿಗೆ ಶ್ರೀಹರಿಯಿಂದ ಭೇದವನ್ನೇ ಹೇಳಿದ್ದಾರೆ. ಆದುದರಿಂದಲೂ ಸಂಸಾರಿಯಿಂದ ಭಿನ್ನನಾದ ಪರಮಾತ್ಮನೇ ಅಂತಸ್ಥನು. ಸಂಸಾರಿಯಲ್ಲ— ಎಂದು ಸಿದ್ಧಾಂತವು ಎನ್ನುತ್ತಾರೆ. ಬ್ರಹ್ಮನು ರೂಪರಹಿತನಾದಾಗ್ಯೂಕೂಡ ಉಪಾಸಕರ ಅನುಗ್ರಹಕ್ಕಾಗಿ ಸವಿಶೇಷಬ್ರಹ್ಮನಲ್ಲಿ ಐಚ್ಛಿಕವಾದ ಮಾಯಾಮಯವಾದ ಉಪಾಸ್ಯವಾದ ರೂಪಾದಿಗಳೂ ಇವೆ. (೨) ಅಥವಾ ನಿಖಿಲ ಕಾರ್ಯಗಳಿಗೂ ಬ್ರಹ್ಮನೇ ಉಪಾದಾನಕಾರಣನಾದುದರಿಂದ ಉಪದೇಯವು ಉಪಾದಾನದಿಂದ ಅಭಿನ್ನನಾದುದರಿಂದ

ಕಾರ್ಯಶರೀರದಲ್ಲಿರತಕ್ಕ ರೂಪಾದಿಗಳಿಂದ ಬ್ರಹ್ಮನು ರೂಪವುಳ್ಳವನಾಗಿ ವ್ಯಪದೇಶಿಸಲ್ಪಡುತ್ತಾನೆ. ಮುಮುಕ್ಷುವಿಗೆ ಮೋಕ್ಷಸಾಧನ ನಿರ್ವಿಶೇಷಬ್ರಹ್ಮಜ್ಞಾನಕ್ಕಾಗಿ ಸವಿಶೇಷಬ್ರಹ್ಮನನ್ನು ನಿರೂಪಿಸಿದ್ದು **ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾ॥ ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷನಿರೂಪಣೈ॥** ಇತ್ಯಾದಿ ರೀತಿಯಾಗಿ ಮಾಯಾವಾದಿಗಳು ಹೇಳುವರು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ (೧) ರಾಮಾನುಜಾಚಾರ್ಯರೂ ಕೂಡ ಅದ್ವೈತಿಗಳು ಹೇಳಿದ ವಿಷಯವಾಕ್ಯವನ್ನೇ ಉದಾಹರಿಸಿಕೊಂಡು ಅದ್ವೈತಿಗಳಂತೆ ಪೂರ್ವಪಕ್ಷಮಾಡಿಕೊಂಡು **ತಸ್ಯ ಯಥಾ ಕಪ್ಯಾಸಂ ಪುಂಡರೀಕಂ** ಎಂದು ಶ್ರುತವಾದ ಪುಂಡರೀಕಾಕ್ಷತ್ವರೂಪ ವಿಷ್ಣುಲಿಂಗದಿಂದ ಆದಿತ್ಯಮಂಡಲಸ್ಥನು ವಿಷ್ಣುವೇ ಎಂದು ಸಿದ್ಧಾಂತ ಮಾಡಿರುತ್ತಾರೆ. ಮಾಯಾವಾದಿಗಳು ರಾಮಾನುಜಾಚಾರ್ಯರು ಇವರಿಬ್ಬರ ಮತವೂ ಅಯುಕ್ತವು. ಏಕೆಂದರೆ ನಾವು ಹೇಳಿದಪ್ರಕಾರ ಆನಂದಮಯಾಧಿಕರಣದಿಂದ ಆಕ್ಷೇಪಿಕೀಸಂಗತಿಯುಳ್ಳ ಅದೃಶ್ಯತ್ವಾದಿ ಗುಣಯುಕ್ತವಾದ ವಸ್ತುವನ್ನು ಹೇಳುವುದೂ ತನ್ನ ಪ್ರಕರಣದಲ್ಲಿಯೇ ಭೇದವ್ಯಪದೇಶವಿರುವುದೂ ಆದ **ಅಂತಃಪ್ರವಿಷ್ಟಂ** ಇತ್ಯಾದಿ ವಾಕ್ಯಕ್ಕೆ ಉದಾಹರಣತ್ವವು ಕೂಡುವಾಗ ಪೂರ್ವಾಕ್ಷೇಪಕ ಲಿಂಗರಹಿತವೂ ಸ್ವಪ್ರಕರಣದಲ್ಲಿ ಭೇದವ್ಯಪದೇಶ ರಹಿತವೂ ಆದ **ಯ ಏಷೋಽಂತರಾದಿತ್ಯೇ** ಎನ್ನುವ ಪರೋದೀರಿತ ವಾಕ್ಯಕ್ಕೆ ಉದಾಹರಣತ್ವವು ಕೂಡಲಾರದು. **ಯ ಆದಿತ್ಯಮಂತರೋ ಯಮಯತೀತಿ ಶ್ರುತ್ಯಂತರೇ ಭೇದವ್ಯಪದೇಶಾತ್** ಎಂದು ಆ ಇಬ್ಬರು ವಾದಿಗಳೂ ಪ್ರಕರಣಾಂತರದಲ್ಲಿರುವ ಭೇದವ್ಯಪದೇಶವನ್ನೇ ಉದಾಹರಿಸಿರುತ್ತಾರೆ. ತಥಾಚ ಶ್ರುತ್ಯಧಿಕರಣ ಸಂಗತಿಗಳು ಇಲ್ಲದಿರುವುದರಿಂದ ಇಲ್ಲಿ ಈ ವಿಚಾರವು ಅಯುಕ್ತವು. (೨) ಅಲ್ಲದೆ **ನೀರೂಪೇಽಪಿ ಚ ರೂಪಾದಿ ಯದ್ಯುಪಾಸ್ತ್ಯರ್ಥಮುಚ್ಯತೇ। ಜೀವೇಽಪಿ ಪಾಪ್ಮಾಭಾವಾದಿ ತರ್ಹ್ಯುಪಾಸ್ತ್ಯರ್ಥಮುಚ್ಯತಾಂ ॥** ಅದ್ವೈತಮತದಲ್ಲಿ ಬ್ರಹ್ಮನಲ್ಲಿ ರೂಪವಿಲ್ಲದಿದ್ದರೂ ಉಪಾಸನೆಗೋಸ್ಕರ ರೂಪಾದಿಗಳನ್ನು ಹೇಳುವುದಾದರೆ ಜೀವನಲ್ಲಿಯೂ ಕೂಡ ಪಾಪಾಭಾವವಿಲ್ಲದಿದ್ದರೂ ಪಾಪರಾಹಿತ್ಯಾದಿಗಳು ಉಪಾಸನಾಗೋಸ್ಕರವೇ ಹೇಳಿದ್ದೆಂದು ಹೇಳಬಹುದು. ಆದುದರಿಂದ ಪಾಪಾಭಾವರೂಪ ಲಿಂಗದಿಂದ ಆದಿತ್ಯಸ್ಥನು ಜೀವನಲ್ಲವೆಂದು ಸಿದ್ಧಾಂತಮಾಡಿದ್ದು ಕೂಡುವುದಿಲ್ಲ (೩) ಶ್ರುತಿಗಳಿಗೆ ವಿಷಯಭೇದದಿಂದ ಅವಿರುದ್ಧ ತಾತ್ವಿಕ ವಿಷಯತ್ವವನ್ನೇ ಹೇಳಬೇಕಲ್ಲದೆ ವ್ಯಾವಹಾರಿಕ ಪ್ರಾತಿಭಾಸಿಕ ವಿಷಯತ್ವವನ್ನು ಸರ್ವಥಾ ಹೇಳಕೂಡದು. (೪) ಮತ್ತೂ ಮೋಕ್ಷಸಾಧನ ನಿರ್ವಿಶೇಷ ಜ್ಞಾನಕ್ಕಾಗಿ ಸವಿಶೇಷ ಬ್ರಹ್ಮನಿರೂಪಣವೆಂದು ಹೇಳಿದ್ದು ಅಯುಕ್ತವು. **ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ॥** ಎಂದು ಶ್ರುತವಾದ ಸರ್ವಪಾಪನಿವೃತ್ತಿರೂಪವಾದ ಮುಕ್ತಿಫಲವನ್ನು ಬಿಡುವುದೂ ಅಶ್ರುತವಾದ ಫಲಾಂತರವನ್ನು ಕಲ್ಪಿಸುವುದೂ ಅಯುಕ್ತವು. ಆದುದರಿಂದ ನಿರ್ವಿಶೇಷ ಬ್ರಹ್ಮಜ್ಞಾನಕ್ಕಾಗಿ ಸವಿಶೇಷಬ್ರಹ್ಮನನ್ನು ಇಲ್ಲಿ ನಿರೂಪಣೆ ಮಾಡಿದ್ದೆಂದು ಹೇಳುವುದಾದರೆ **ಸತ್ಯಂ ಜ್ಞಾನಮನಂತಂ ಬ್ರಹ್ಮ** ಇತ್ಯಾದಿಗಳಿಂದ ಸದ್ಬ್ರಹ್ಮನಿರೂಪಣವೂ ಕೂಡ **ಅಸದ್ವಾ ಇದಮಗ್ರ ಆಸೀತ್** ಇತ್ಯಾದಿ ಶ್ರುತಿಸಿದ್ಧವಾದ ಅಸತ್‌ಬ್ರಹ್ಮಜ್ಞಾನಕ್ಕಾಗಿ ಎಂದೂ ಹೇಳಬಹುದು. ಏವಂಚ— **ಅಸದ್ರೂಪಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾ॥ ಯೇ ಮಂದಾಸ್ತೇಽನುಕಂಪ್ಯಂತೇ ಸದ್ಬ್ರಹ್ಮಪ್ರತಿಪಾದನೈಃ ॥** ನಿರ್ವಿಶೇಷಂ ಪರಂ

**ಧರ್ಮಮನುಷ್ಠಾತುಮನೀಶ್ವರಾಃ। ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷನಿರೂಪಣೈಃ॥ ಆದ್ಯಸೂತ್ರೇ ಧರ್ಮಶಬ್ದಾದ್ದ್ವಿತೀಯೇ ಭೇದಶಬ್ದತಃ। ನಿರ್ಧರ್ಮಕತ್ವಮೈಕ್ಯಂ ಚ ನಿರಸ್ತಂ ಪರವಸ್ತುನಃ॥ ಧರ್ಮೋ ಭೇದಶ್ಚ ಮಿಥ್ಯಾ ಚೇಚ್ಛ್ರುತಿಸೂತ್ರಾಪ್ರಮಾಣತಾ। ವ್ಯಾಖ್ಯಾವ್ಯಾಜೇನ ಚೋಕ್ತಾ ಸ್ಯಾತ್ತ್ವಯಾ ಸೌಗತಸೌಹೃದಾತ್॥** ಅಂದರೆ ಈ ಎರಡು ಸೂತ್ರಗಳೂ ಪರರಿಗೆ ಅತ್ಯಂತ ಪ್ರತಿಕೂಲಗಳೇ ಆಗಿವೆ. ಪರರು ನಿರ್ಧರ್ಮಕತ್ವವನ್ನೂ ಜೀವಬ್ರಹ್ಮೈಕ್ಯವನ್ನೂ ಅಂಗೀಕರಿಸಿರುತ್ತಾರೆ. ಇಲ್ಲಿ ೧ನೇ ಸೂತ್ರದಲ್ಲಿ ಸಧರ್ಮಕತ್ವವನ್ನೂ ೨ನೇ ಸೂತ್ರದಲ್ಲಿ ಭೇದವನ್ನೂ ಪ್ರತಿಪಾದಿಸಿರುತ್ತಾರೆ. ಆದ ಪ್ರಯುಕ್ತ ಪರಬ್ರಹ್ಮನಿಗೆ ನಿರ್ಧರ್ಮಕತ್ವವೂ ಐಕ್ಯವೂ ಕೂಡ ನಿರಸ್ತವಾಗಿದೆ. ಶ್ರುತಿಸೂತ್ರಗಳಲ್ಲಿ ಹೇಳಿದ ಧರ್ಮವೂ ಭೇದವೂ ಮಿಥ್ಯಾಭೂತವು ಎಂದಾದರೆ ಶ್ರುತಿಸೂತ್ರಗಳನ್ನು ವ್ಯಾಖ್ಯಾನ ಮಾಡುವುದೆನ್ನುವ ವ್ಯಾಜದಿಂದ ಶ್ರುತಿಸೂತ್ರಗಳಿಗೆ ಅಪ್ರಾಮಾಣ್ಯವನ್ನೇ ಬೌದ್ಧನಲ್ಲಿ ಅತಿಸೌಹಾರ್ದವಿರತಕ್ಕ ನೀನು ಹೇಳಿದಂತೆ ಆಯಿತು.

## ಅಧಿಕರಣಸಾರಾಂಶ

(೧) ದೇಹಾಂತಸ್ಸತ್ವರೂಪವಾದ ಲಿಂಗವು ಇಂದ್ರೋ ರಾಜಾ ಸಪ್ತ ಯುಂಜಂತಿ ಇತ್ಯಾದಿ ಶ್ರುತಿಲಿಂಗಗಳಿಂದ ಇಂದ್ರಾದ್ಯನ್ಯತಮರಲ್ಲಿ ಇರತಕ್ಕುದು ಎಂದು ಶಂಕಿಸಿ ಕೊಂಡು ಬ್ರಹ್ಮತಪೋಲಭ್ಯತ್ವ ಕ್ಷೀರಸಮುದ್ರಸ್ಥತ್ವ ಮೊದಲಾದ ಕೇವಲ ವಿಷ್ಣು ಧರ್ಮಗಳನ್ನು ಹೇಳಿದ್ದರಿಂದ ಅಂತಸ್ಥನು ವಿಷ್ಣುವೇ. (೨) ಅಂದರೆ **ಲಿಂಗಾದಿಭ್ಯೋ ಬಲವತೀ ಶ್ರುತಿರ್ಯದ್ಯಪಿ ಚ ಸ್ವತಃ। ಅವಕಾಶೋಜ್ಝಿತೈರ್ಲಿಂಗೈಃ ಸಾವಕಾಶಾ ತು ಬಾಧ್ಯತೇ॥** ಯದ್ಯಪಿ ಜಾತ್ಯಾ ಲಿಂಗಾದಿಗಳಿಂದ ಶ್ರುತಿಯು ಪ್ರಬಲವು. ಆದಾಗ್ಯೂ ಸಮುದ್ರಾಂತಸ್ಥತ್ವ ಬ್ರಹ್ಮಾಂಡವೀರ್ಯತ್ವ ಬ್ರಹ್ಮತಪೋಲಭ್ಯತ್ವ ಮೊದಲಾದ ನಿರವಕಾಶ ವಿಷ್ಣುಲಿಂಗಗಳಿಂದ, ಸಾವಕಾಶವಾದ ಇಂದ್ರಾದಿ ಶ್ರುತಿಯು ಬಾಧಿಸಲ್ಪಡುತ್ತದೆ. ಅಂದರೆ **ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ** ಇತ್ಯಾದಿ ಶ್ರುತಿಗಳಿಂದ ಇಂದ್ರಾದಿಶಬ್ದಗಳಿಗೆ ವಿಷ್ಣುವಿನಲ್ಲಿಯೇ ವಿದ್ವದ್ರೂಢಿಯಿದ್ದುದರಿಂದಲೂ ಇಂದ್ರಾದಿಶಬ್ದಪ್ರವೃತ್ತಿನಿಮಿತ್ತವಾದ ಪರಮೈಶ್ವರ್ಯಾದಿಗಳು ವಿಷ್ಣುವಿನಲ್ಲಿಯೇ ಅನನ್ಯಾಧೀನತ್ವ ನಿರವಧಿಕತ್ವಗಳಿಂದ ಮುಖ್ಯವಾಗಿ ಕೂಡುವ ಪ್ರಯುಕ್ತ ಮಹಾಯೋಗವು ಇದ್ದುದರಿಂದಲೂ ಇಂದ್ರಾದಿಶ್ರುತಿಯು ವಿಷ್ಣುವಿನಲ್ಲಿಯೇ ಮುಖ್ಯವಾದುದು. (೩.) ಅಲ್ಲದೆ **ಲೋಕೇ ಶ್ರುತೌ ಸ್ಮೃತೌ ಚೈವ ವಿಷ್ಣುಲಿಂಗತಯಾ ಸ್ಥಿತಂ। ಸಮುದ್ರಾಂತರಾವಸ್ಥಾನಪೂರ್ವಕಂ ಕಥಮನ್ಯಗಂ॥** ವಿಷ್ಣುಲಿಂಗವಾಗಿಯೇ ಲೋಕವ್ಯವಹಾರಸಿದ್ಧವಾದ ಭಾಷ್ಯೋದಾಹೃತಗಳಾದ ಶ್ರುತಿಸ್ಮೃತಿಗಳಿಂದ ಸಾಧಿಸಲ್ಪಟ್ಟ ಕ್ಷೀರಾಬ್ಧಿಶಾಯಿತ್ವಾದಿಗಳು ಅನ್ಯತ್ರ ಹೇಗೆ ಅವಕಾಶವನ್ನು ಹೊಂದುವವು. ಸರ್ವಥಾ ಅವಕಾಶವನ್ನು ಹೊಂದಲಾರವು. ಶ್ರುತಿಯು ಸಾವಕಾಶವಾದರೆ ನಿರವಕಾಶವಾದ ಲಿಂಗದಿಂದ ನಿರ್ಣಯವಾಗುವುದು. ಏವಂಚ, **ಅಗ್ನೀಂದ್ರಾದಿಶ್ರುತಿರ್ನಾನಾಮಾರ್ಗಾ ಲಿಂಗೈರ್ಹಿ ವೈಷ್ಣವೈಃ। ನೀತೈಕಕಂಠ್ಯಂ ನೋ ಚೇತ್ತತ್ಕಲಹಂ ಕೋ ನಿವಾರಯೇತ್॥** ಬೇರೆ ಬೇರೆ ವಸ್ತುಗಳನ್ನು ಹೇಳುವ ಅಗ್ನಿ ಇಂದ್ರಾದಿ ಶ್ರುತಿಯು ವಿಷ್ಣುಲಿಂಗಗಳಿಂದ ವಿಷ್ಣುರೂಪ ಏಕಾರ್ಥ ಪ್ರತಿಪಾದಕತ್ವವನ್ನು ಹೊಂದಿಯದೆ, ಅಲ್ಲವಾದರೆ ನಾನು ಅಗ್ನಿಯನ್ನೇ ಪ್ರತಿಪಾದಿಸುತ್ತೇನೆ. ಇಂದ್ರನನ್ನೇ ಪ್ರತಿಪಾದಿಸುತ್ತೇನೆ ಇತ್ಯಾದಿ ರೂಪವಾದ ಅಗ್ನಿ ಇಂದ್ರಾದಿ ಶ್ರುತಿಗಳ ಕಲಹವನ್ನು ಯಾರು ನಿವಾರಣಮಾಡಿಯಾನು.

ಯಾರೂ ಮಾಡಲಾರನು. ಅಂದರೆ ಈ ಅಂತಸ್ಥಪ್ರಕರಣದಲ್ಲಿ ಇಂದ್ರಶಬ್ದವು ಅಗ್ನಿಶಬ್ದವು ಅಪಾಂ ನೇತಾರಂ ಎನ್ನುವ ವರುಣಲಿಂಗವೂ ಇವೇ ಮೊದಲಾದ ಇಂದ್ರಾದಿಪ್ರಾಪಕ ಶ್ರುತಿಲಿಂಗಗಳ ಬಹಳ ಇರುವುದರಿಂದ ಇಂದ್ರನೇ ಅಗ್ನಿಯೇ ಇತ್ಯಾದಿ ನಿರ್ಣಯವೂ ಮಾಡುವುದು ಅಶಕ್ಯವು. ನಿರವಕಾಶವಾದ ವಿಷ್ಣುಲಿಂಗದಿಂದ ಅಂತಸ್ಥನು ವಿಷ್ಣುವೇ ಎಂದು ನಿರ್ಣಯವಾದಮೇಲೆ ಅಂತಸ್ಥನಲ್ಲಿ ಶ್ರುತವಾದ ಇಂದ್ರಾದಿ ಶ್ರುತಿಗಳೂ ಯೋ ದೇವಾನಾಂ ನಾಮಧಾ ಇತ್ಯಾದಿ ಶ್ರುತಿಬಲದಿಂದಲೂ ಮಹಾಯೋಗ ವಿದ್ವದ್ರೂಢಿಗಳಿಂದಲೂ ಅನ್ಯಲಿಂಗಗಳೂ ಕೂಡ ಅಂತರ್ಯಾಮಿಯಲ್ಲಿ ಇದ್ದವುಗಳಾಗಿ ವಿಷ್ಣುವಿನಲ್ಲಿಯೇ ಉಪಪನ್ನಗಳಾಗುವವು.

**ಅಂತಸ್ಥತ್ವಾಧಿಕರಣವು ಸಮಾಪ್ತವಾಯಿತು.**

## ೮ ಆಕಾಶಾಧಿಕರಣ

ಪೀಠಿಕೆ ॥ ಈ ಅಧಿಕರಣದಲ್ಲಿ ಶ್ರೀಹರಿಯಲ್ಲಿ ಲೋಕವ್ಯವಹಾರದಿಂದ ಅನ್ಯತ್ರ ಪ್ರಸಿದ್ಧಗಳಾದ ಆಕಾಶ ಮೊದಲಾದ ಆಧಿಭೌತಿಕ (ಅಂದರೆ ಭೂತವಾಚಕಗಳಾದ) ಎಲ್ಲಾ ಶಬ್ದಗಳಿಗೂ ಸಮನ್ವಯವನ್ನು ಮಾಡುತ್ತಾರೆ. ಪೂರ್ವಪಕ್ಷ ಫಲವನ್ನು ಹೇಳುತ್ತಾರೆ—

**ಭಾಷ್ಯ ॥ ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾದ್ಯದೇಷ ಆಕಾಶ ಆನಂದೋ ನ ಸ್ಯಾತ್ (ತೈ.ಉ.೨.೭.) ಇತ್ಯಾಕಾಶಸ್ಯಾನಂದಮಯತ್ವೇ (ದತ್ವೇ) ಹೇತುರುಕ್ತಃ । ನ ತು ವಿಷ್ಣೋಃ ॥ ೧ ॥**

ಭಾಷ್ಯಾರ್ಥ ॥ (ಎ)ಈ ಆಕಾಶಶಬ್ದವಾಚ್ಯನು ಆನಂದಮಯನಾಗದೆ ಇದ್ದರೆ ಯಾರು ಸಾಮಾನ್ಯ ಚೇಷ್ಟೆಯನ್ನು ಮಾಡುವನು. ಯಾರು ಚೆನ್ನಾಗಿ ವಿಶೇಷ ಚೇಷ್ಟೆಯನ್ನು ಮಾಡುವನು. ಎಂದು ಆನಂದಮಯಾಧಿಕರಣದಲ್ಲಿ ಉದಾಹೃತವಾದ ವಾಕ್ಯದಿಂದ ಆಕಾಶಕ್ಕೇನೇ ಪೂರ್ಣಾನಂದತ್ವದಲ್ಲಿ (ಅಂದರೆ ಪೂರ್ಣಾನಂದವಿದ್ದ ಪ್ರಯುಕ್ತ ಆನಂದಮಯಶಬ್ದವಾಚ್ಯತ್ವದಲ್ಲಿ) ಲೋಕಚೇಷ್ಟಕತ್ವರೂಪ ವಾದ ಹೇತುವು ಹೇಳಲ್ಪಟ್ಟದೆ. ವಿಷ್ಣುವಿಗೆ ಅಲ್ಲ (ಆದುದರಿಂದ ಪೂರ್ಣಾನಂದತ್ವನಿಮಿತ್ತದಿಂದ ವಿಷ್ಣುವು ಆನಂದಮಯಶಬ್ದವಾಚ್ಯನೆಂದು ಹಿಂದೆ ಹೇಳಿದ್ದು ಸರಿಯಲ್ಲ) (ಬಿ) ಅಭ್ಯಧಿಕಾಶಂಕೆಯನ್ನು (ಅಂದರೆ ಪೂರ್ವಾಧಿಕರಣದಲ್ಲಿ ಬಾರದೆ ಇರತಕ್ಕ ಅಧಿಕಶಂಕೆಯನ್ನು) ಮಾಡಿ ಪೂರ್ವನ್ಯಾಯವನ್ನೇ ಅತಿದೇಶಮಾಡಿದ್ದರಿಂದ ಈ ಅಧಿಕರಣಕ್ಕೆ ಆತಿದೇಶಿಕೀಸಂಗತಿಯು.

ಪೀಠಿಕೆ ॥ ಸಿದ್ಧಾಂತೀಕರಿಸುತ್ತಾರೆ—

**ಭಾಷ್ಯ ॥ ಇತಿ ನ ಮಂತವ್ಯಂ । ಯತಃ** ॥ ೨ ॥

ಭಾಷ್ಯಾರ್ಥ ॥ ಹೀಗೆ ತಿಳಿಯಕೂಡದು. ಏಕೆಂದರೆ—

## ಸೂತ್ರ ॥ ಓಂ ಆಕಾಶಸ್ತಲ್ಲಿಂಗಾತ್ ಓಂ ॥ ೨೨ ॥

**ಸೂತ್ರಾರ್ಥ ॥** ಆಕಾಶ ಇತಿ ಹೋವಾಚ ಎನ್ನುವ ಛಾಂದೋಗ್ಯದಲ್ಲಿದ್ದ ಆಕಾಶ ಶಬ್ದವಾಚ್ಯನು ಶ್ರೀಹರಿಯೇ. ಸ ಏಷಃ ಇತ್ಯಾದಿ ವಾಕ್ಯದಲ್ಲಿ ವಿಷ್ಣುವಿನ ಧರ್ಮವಾದ ★ಪರೋವರೀಯಸ್ತ್ವಾದಿಗಳು ಆಕಾಶದಲ್ಲಿ ಶ್ರುತವಾದ ಪ್ರಯುಕ್ತ.

**ಭಾಷ್ಯ ॥ ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ (ಛಾ.೧.೯.) ಇತ್ಯತ್ರ ಭೂತಾಕಾಶಸ್ಯ ಪ್ರಾಪ್ತಿಃ। ನ ಚಾಸೌ ಯುಜ್ಯತೇ। ಕಿಂತು ವಿಷ್ಣುರೇವ। ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ (ಛಾ.೧.೯.) ಇತ್ಯಾದಿತಲ್ಲಿಂಗಾತ್ ॥ ೩ ॥**

**ಭಾಷ್ಯಾರ್ಥ ॥** ಪ್ರತ್ಯಕ್ಷಸಿದ್ಧವಾದ ಪೃಥಿವೀಲೋಕಕ್ಕೂ, ಪೃಥಿವೀಲೋಕಾಭಿಮಾನಿಯಾದ ಚತುರ್ಮುಖನಿಗೂ ಯಾರು ಆಶ್ರಯನು? ಎಂದು (ಶಿಲಕನಿಂದ ಪ್ರಶ್ನಿಸ ಲ್ಪಟ್ಟ ಪ್ರವಾಹಣರಾಜನು) ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನಾಮಕನಾದ ವಿಷ್ಣುವೆಂದು ಪ್ರತ್ಯುತ್ತರಕೊಟ್ಟನು. (ಹೇಗೆಂದರೆ— ಅದನ್ನುಪಪಾದಿಸುವುದಕ್ಕಾಗಿ ಆ ಆಕಾಶದ ಮಹಿಮೆಯನ್ನು ಹೇಳುತ್ತಾರೆ. ಸರ್ವಾಣಿ ಹ ವಾ ಇಮಾನಿ ಭೂತಾ ನ್ಯಾಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತಿ। ಆಕಾಶೋ ಹ್ಯೇವೈಭ್ಯೋ ಜ್ಯಾಯಾನ್। ಆಕಾಶಃ ಪರಾಯಣಂ) ಎನ್ನುವ ಛಾಂದೋಗ್ಯವಾಕ್ಯದಲ್ಲಿದ್ದ ಆಕಾಶಶಬ್ದಕ್ಕೆ ಲೋಕಪ್ರಸಿದ್ಧಿಯಿಂದ ಭೂತಾಕಾಶಪರತ್ವವು ಪ್ರಸಕ್ತವಾಗುತ್ತದೆ. (ಆದರೂ) ಭೂತಾಕಾಶವು ಈ ವಾಕ್ಯದಲ್ಲಿ ಆಕಾಶಪದದಿಂದ ವಾಚ್ಯವಾಗುವುದಿಲ್ಲ. ಮತ್ತೆ ವಿಷ್ಣುವೇ ವಾಚ್ಯನಾಗುತ್ತಾನೆ. (ಏಕೆಂದರೆ) ಆ ಈ ಆಕಾಶನಾಮಕನಾದ ಶ್ರೀಹರಿಯು ರುದ್ರಾದಿಗಳಿಂದುತ್ತಮರಾದ ವಾಯುದೇವರಿಂದುತ್ತಮಳಾದ ಲಕ್ಷ್ಮೀದೇವಿಯಿಂದಲೂ ಉತ್ತಮನು. ಸರ್ವೋತ್ತಮನೆಂದು ಶ್ರೀಹರಿಯು ವೇದದಿಂದ ಹೇಳಲ್ಪಟ್ಟವನು. ಆ ಈ ಆಕಾಶನು ದೇಶಕಾಲಗುಣಗಳಿಂದ ಅಪರಿಚ್ಛಿನ್ನನು. ಇದು ಮೊದಲಾದವಾಕ್ಯದಲ್ಲಿ ವಿಷ್ಣುವಿನ ಅಸಾಧಾರಣ ಧರ್ಮವಾದ ಪರೋವರೀಯಸ್ತ್ವಾದಿಗಳು ಆಕಾಶದಲ್ಲಿ ಹೇಳುದುದರಿಂದ.

**ವಿಶೇಷಾಂಶ ॥** ಛಂದೋಗಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶನು ವಿಷ್ಣುವೇ, ಆದುದರಿಂದಲೇ ಕೋ ಹಿ ಎನ್ನುವ ತೈತ್ತಿರೀಯ ವಾಕ್ಯದಲ್ಲಿಯೂ ವಿಷ್ಣುವೇ ಪ್ರತಿಪಾದಿ ಸಲ್ಪಡುತ್ತಾನೆ. ಆದಕಾರಣ ವಿಷ್ಣುವೇ ಆನಂದಮಯನು ಎನ್ನುವ ವಿಷಯದಲ್ಲಿ ಹೇತುವನ್ನು ಹೇಳಿದಂತೆ ಆಯಿತು ಭೂತಾಕಾಶಕ್ಕೆ ಅಲ್ಲ. ಆದುದರಿಂದ ಭೂತಾಕಾಶಕ್ಕೆ ಆನಂದಮಯತ್ವದಲ್ಲಿ ಹೇತುವನ್ನು ಹೇಳಿದ್ದಾರೆ. ವಿಷ್ಣುವಿಗೆ ಹೇಳಲಿಲ್ಲ ಎಂದು ತಿಳಿಯಕೂಡದು.

**ಪೀಠಿಕೆ ॥** ಸ ಏಷೋಽನಂತಃ ಎಂದು ಪೇಳಲ್ಪಟ್ಟ ಅನಂತತ್ವವು ವಿಷ್ಣುವಿನಲ್ಲಿರತಕ್ಕುದೆಂದು ಹೇಗೆ ತಿಳಿಯುತ್ತದೆ ಎಂದರೆ—

---

★ ಪರಸ್ಮಾದುತ್ತಮಂ ಪ್ರೋಕ್ತಂ ಪರೋ ಇತಿ ತತಃ ಪರಂ। ಪರೋವರಂ ಪರಂ ತಸ್ಮಾತ್ಪ್ರೋಕ್ತಂ ಪಾರೋ ವರೀಯಕಂ ॥

**ಭಾಷ್ಯ ॥ ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇರಜಾಂಸಿ। (ಋ.೧.೧೫೪.೧.) ಪರೋ ಮಾತ್ರಯಾ ತನ್ವಾ ವೃಧಾನ (ನ ತೇ ಮಹಿತ್ವಮನ್ವಶ್ನುವಂತಿ) (ಋ.೭.೯೯.೧.) ಇತ್ಯಾದಿನಾ ತಸ್ಯೈವ (ತಸ್ಯ) ಹಿ ತಲ್ಲಿಂಗಂ ॥ ೪ ॥**

**ಭಾಷ್ಯಾರ್ಥ ॥** (೧) ಶ್ರೀವಿಷ್ಣುವಿನ ಸಾಮರ್ಥ್ಯಗಳನ್ನು ಯಾರು ತಾನೇ ಸಂಪೂರ್ಣವಾಗಿ ಹೇಳುವನು. (ಯಾರೊಬ್ಬನೂ ಹೇಳಲಾರನು.) ಯಾವ ಸರ್ವಜ್ಞನಾದ ಬ್ರಹ್ಮನು ಪೃಥಿವೀಪರಮಾಣುಗಳನ್ನು ಗಣನೆ ಮಾಡುತ್ತಾನೋ (ಅವನೂ ಹೇಳಲಾರನು.) (೨) (ಪರೋವರೀಯಾನ್ ಎನ್ನುವಲ್ಲಿ ಹೇಳಲ್ಪಟ್ಟ ಸರ್ವೋತ್ತಮತ್ವವು ವಿಷ್ಣುವಿನ ಧರ್ಮವೆಂದು ಹೇಗೆ ತಿಳಿಯುತ್ತದೆ ಎಂದರೆ) ಮಿತಿಯಿಂದ ಅತಿಕ್ರಾಂತನು. ಶರೀರದಿಂದಲೇ ಅಭಿವೃದ್ಧನಾದವನೇ. (ನಿನ್ನ ಮಹಿಮೆಯನ್ನು ಯಾರೂ ಹೊಂದಲಾರರು.) ಇದು ಮೊದಲಾದ ವಾಕ್ಯದಿಂದ ವಿಷ್ಣುವಿಗೇನೇ ಅನಂತತ್ವ ಮೊದಲಾದುದು ಅಸಾಧಾರಣ ಧರ್ಮವೆಂದು ಅವಗತವಾಗುತ್ತದೆ.

**ವಿಶೇಷಾಂಶ ॥** (ಎ) ಆದಿಶಬ್ದದಿಂದ **ವಿಷ್ಣೋರ್ನು ವೀರ್ಯಗಣನಾಂ ಕತಮೋಽ ರ್ಹತೀಹ ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ** ಎನ್ನುವ ಭಾಗವತ ಸ್ಮೃತಿಯನ್ನು ಇಟ್ಟುಕೊಳ್ಳಬೇಕು. (ಬಿ) ಯದ್ಯಪಿ ಶ್ರುತ್ಯನುಸಾರವಾಗಿ ಸರ್ವೋತ್ತಮತ್ವದಲ್ಲಿ ಪ್ರಮಾಣವನ್ನು ಪ್ರಥಮತಃ ಹೇಳಬೇಕಿತ್ತು. ಅನಂತತ್ವದಲ್ಲಿ ಅಲ್ಲ. ಆದರೂ ಅನಂತತ್ವವು ಸಾವಕಾಶತ್ವಶಂಕಾವಿಷಯವಾದುದರಿಂದ ಪ್ರಥಮತಃ ಅಲ್ಲಿ ಪ್ರಮಾಣವನ್ನು ಉಪನ್ಯಾಸಮಾಡಿದ್ದು.

**ಪೀಠಿಕೆ ॥** ಹಾಗಾದರೆ **ಅನಂತಾಕಾಶವತ್ಪಶ್ಯನ್** ಎಂದು ಅನಂತತ್ವವು ಆಕಾಶಕ್ಕೂ ಸ್ಮೃತವಾಗಿದೆ. ಆದ ಪ್ರಯುಕ್ತ ಅದು ವಿಷ್ಣುವಿನದ್ದೇ ಅಸಾಧಾರಣ ಧರ್ಮವೆನ್ನುವುದು ಹೇಗೆ ಕೂಡುತ್ತದೆ ಎಂದರೆ—

**ಭಾಷ್ಯ ॥ ಅನಂತೋ ಭಗವಾನ್ ಬ್ರಹ್ಮ ಆನಂದೇತ್ಯಾದಿಭಿಃ ಪದೈಃ। ಪ್ರೋಚ್ಯತೇ ವಿಷ್ಣುರೇವೈಕಃ ಪರೇಷಾಮುಪಚಾರತಃ॥ ಇತಿ (ಚ) ಬ್ರಾಹ್ಮೇ ॥ ೫ ॥**

**ಭಾಷ್ಯಾರ್ಥ ॥** ಅನಂತ ಭಗವಾನ್ ಬ್ರಹ್ಮ ಆನಂದ ಇದು ಮೊದಲಾದ ಪದಗಳಿಂದ ಶ್ರೀವಿಷ್ಣು ಒಬ್ಬನೇ ಮುಖ್ಯವಾಗಿ ಹೇಳಲ್ಪಡುತ್ತಾನೆ. ವಿಷ್ಣುವಿನಿಂದ ಇತರರಿಗೆ ತಮ್ಮ ಸಮೀಪದಲ್ಲಿರತಕ್ಕ ಪರಮಾತ್ಮನ ಸಂಬಂಧದಿಂದಲೇ ವಾಚ್ಯತ್ವವು. ಹೀಗೆ ಬ್ರಾಹ್ಮಪುರಾಣದಲ್ಲಿ(ವಿಷ್ಣುವಿಗೇನೇ ಅನಂತತ್ವವು ಅಸಾಧಾರಣ ಧರ್ಮವೆಂದು ಹೇಳಲ್ಪಟ್ಟಿದೆ.)

**ಪೀಠಿಕೆ ॥** ಹಾಗಾದರೆ ಶ್ರುತಿಯಿಂದ ಪೂರ್ವಪಕ್ಷ ಮಾಡಿದಕ್ಕೆ ಲಿಂಗದಿಂದ ಹೇಗೆ ನಿರ್ಣಯವು. ಲಿಂಗವು ಶ್ರುತಿಯಿಂದ ದುರ್ಬಲವಾಗಿದೆ. ಎಂದರೆ— ಆಕಾಶಶ್ರುತಿಯು ವಿಷ್ಣುವಿನಲ್ಲಿ ಸಾವಕಾಶವಾಗಿದೆ ಎನ್ನುವ ಅಭಿಪ್ರಾಯದಿಂದ ಶ್ರುತಿಯಿಂದ ತೋರಿಸುತ್ತಾರೆ.

**ಭಾಷ್ಯ ॥ ನಾಮಾನಿ ಸರ್ವಾಣಿ ಯಮಾವಿಶಂತಿ (ಭಾಲ್ಲವೇಯಶ್ರುತಿ) ಇತಿ ಚೋಕ್ತಂ ॥೬॥**

**ಭಾಷ್ಯಾರ್ಥ ॥** ನಾಮಾನಿ ಸರ್ವಾಣಿ ಎನ್ನುವ ವಾಕ್ಯದಿಂದ ವಿಷ್ಣುವಿಗೆ (ಆಕಾಶಾದಿ

ಸರ್ವಶಬ್ದವಾಚ್ಯತ್ವವು) ಹೇಳಲ್ಪಟ್ಟಿದೆ. (ಆದಕಾರಣ ನಿರವಕಾಶ ಲಿಂಗದಿಂದ ಸಾವಕಾಶಶ್ರುತಿಯನ್ನು ಬಾಧಿಸಿ ನಿರ್ಣಯಮಾಡಿದ್ದು ಯುಕ್ತವಾಗುತ್ತದೆ.)

## ಮಾಯಾವಾದಿ ಮತ್ತು ರಾಮಾನುಜಾಚಾರ್ಯ ರೀತ್ಯಾ

**ವಿಚಾರ ॥ (೧) ಆಕಾಶ ಇತಿ ಹೋವಾಚ** ಎನ್ನುವಲ್ಲಿದ್ದ ಆಕಾಶಶಬ್ದವು ಭೂತಾಕಾಶ ದಲ್ಲಿಯೇ ರೂಢವಾಗಿರುವುದರಿಂದಲೂ ಆದಿಯಲ್ಲಿ ಇರುವುದರಿಂದ ಅನುಪಸಂಜಾತವಿರೋಧಿಯಾಗಿರುವುದ ರಿಂದಲೂ **ಸ ಏಷಃ ಅನಂತಃ ಜ್ಯಾಯಾನ್** ಇತ್ಯಾದಿ ಅಂತ್ಯವಾಕ್ಯಗಳಲ್ಲಿ ತೋರುವ ಜ್ಯಾಯಸ್ತ್ವಾನಂತತ್ವಾದಿಲಿಂಗಗಳು ಭೂತಾಕಾಶದಲ್ಲಿಯೇ ಕಥಂಚಿತ್ ಕೂಡಬಹುದು. ಆದಕಾರಣ ಭೂತಾಕಾಶವೇ ಆಕಾಶಶಬ್ದವಾಚ್ಯವು ಎಂದು ಪೂರ್ವಪಕ್ಷಮಾಡಿಕೊಂಡು ಆಕಾಶಪದದಿಂದಲೂ ಮೊದಲಿರುವ ಅನುಪಸಂಜಾತವಿರೋಧಿಯಾಗಿ ಕಾಣುವ ಸರ್ವಪ್ರಪಂಚವಿಷಯಕವಾದ ಪ್ರಶ್ನವಾಕ್ಯಾನುಸಾರವಾಗಿ ಅಂತ್ಯದಲ್ಲಿರುವ **ಆಕಾಶ ಇತಿ ಹೋವಾಚ** ಎನ್ನುವ ಉತ್ತರವಾಕ್ಯಕ್ಕೆ ಅರ್ಥವನ್ನು ಹೇಳಬೇಕಾಗಿದ್ದರಿಂದ ಈ ಆಕಾಶಪದದಿಂದ ಸರ್ವಲೋಕಸಂಗತಿಯನ್ನು ಹೇಳಬೇಕು. ಲೋಕಾಂತರ್ಗತವಾದ ಭೂತಾಕಾಶವು ಸರ್ವಲೋಕಗತಿಯು ಆಗಲಾರದು. ಆದಕಾರಣ ಆಕಾಶಪದವು ಲಕ್ಷಣಾವೃತ್ತಿಯಿಂದ ಬ್ರಹ್ಮಪರವು. ಅಂತೂ ಸಗುಣಬ್ರಹ್ಮನೇ ಆಕಾಶಪದದಿಂದ ಉಪಾಸ್ಯನಾಗಿ ಉಕ್ತನಾಗಿದ್ದಾನೆಂದು ಅದ್ವೈತಿಗಳೂ ರಾಮಾನುಜಾಚಾರ್ಯರೂ ಸಿದ್ಧಾಂತವೆಂದು ಹೇಳಿರುವರು. ಅದು ಅಯುಕ್ತವು. ಏಕೆಂದರೆ ಆದಿಯಲ್ಲಿದ್ದುದನ್ನು ಅನುಸರಿಸಿ ಅಂತ್ಯದಲ್ಲಿದ್ದುದಕ್ಕೆ ಅಸ್ವಾರಸ್ಯ ಹೇಳುವುದಾದರೆ ಪೂರ್ವಾಧಿಕರಣದಲ್ಲಿಯೂ ಪ್ರಥಮದಲ್ಲಿ ಹೇಳಿದ ಹಿರಣ್ಮಶ್ರುತ್ಯಾದ್ಯನುಸಾರವಾಗಿ ಅಂತ್ಯದಲ್ಲಿ ಹೇಳಿದ ಪಾಪಾತೀತತ್ವವು ಜೀವನಲ್ಲಿಯೂ ಕೂಡಿಸಬಹುದಿತ್ತು. ಮತ್ತು ಪ್ರಶ್ನವಾಕ್ಯದಲ್ಲಿರುವ **ಅಸ್ಯಲೋಕಸ್ಯ** ಎನ್ನುವಲ್ಲಿದ್ದ ಅಸ್ಯ ಎನ್ನುವ ಸರ್ವನಾಮಶಬ್ದವು ಪ್ರಕೃತ ಪೃಥಿವೀಪರವೇ ಆಗಬಹುದು. ತದನುಸಾರವಾಗಿ ಸಮಾಧಾನದಲ್ಲಿರುವ ಆಕಾಶಪದವು ಪೃಥಿವೀಪರವೇ ಆಗಬಹುದು. ಪ್ರಶ್ನವಾಕ್ಯವು ಸರ್ವಪ್ರಪಂಚವಿಷಯಕವಲ್ಲ, ಆದುದರಿಂದ ಉತ್ತರವಾಕ್ಯವೂ ಸರ್ವಗತಿಪರವೂ ಅಲ್ಲ. ಆದುದರಿಂದ ಬ್ರಹ್ಮನು ಆಕಾಶವಾಕ್ಯಪ್ರತಿಪಾದ್ಯನೆಂದು ಹೇಳಿದ್ದು ಅಯುಕ್ತವಲ್ಲ. ಮತ್ತು ಆ ವಾಕ್ಯವು ವಿಶಿಷ್ಟಬ್ರಹ್ಮಪರವೆಂದು ಹೇಳಿದರೆ ಸ ಏಷೋಽನಂತಃ ಇತ್ಯಾದಿಗಳಲ್ಲಿ ಹೇಳಿದ ಅನಂತತ್ವಾದಿಗಳು ಕೂಡಲಾರವು. ಶುದ್ಧ ಬ್ರಹ್ಮಪರವೆಂದು ಹೇಳಿದರೆ **ಜ್ಯಾಯಾನ್** ಎನ್ನುವಲ್ಲಿ ಹೇಳಿದ ಜ್ಯಾಯಸ್ತ್ವ (ಸರ್ವೋತ್ತಮತ್ವ) ಮೊದಲಾದ ಧರ್ಮಗಳು ಕೂಡಲಾರವು. **ವಿಶಿಷ್ಟವಿಷಯತ್ವಂ ಚೇದನಂತತ್ವಾದ್ಯಸಂಭವಃ। ವಿಶುದ್ಧವಿಷಯತ್ವಂ ಚೇಜ್ಜ್ಯಾಯಸ್ತ್ವಾದೇರಸಂಭವಃ॥** ಇತ್ಯಾದ್ಯನೇಕ ದೋಷಗಳು ಇರುವುದರಿಂದ ಪರರು ಹೇಳಿದ್ದು ಅಯುಕ್ತವು.

## ಅಧಿಕರಣ ಸಾರಾಂಶ

(೧) **ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ** ಎನ್ನುವಲ್ಲಿ ಭೂತಾಕಾಶವನ್ನು ಇಟ್ಟುಕೊಳ್ಳಬೇಕು ಎಂದರೆ ಸ ಏಷಃ ಪರೋವರೀಯಾನುದ್ಗೀಥಃ ಇದು ಮೊದಲಾದ ವಿಷ್ಣುಲಿಂಗಗಳು

ಇದ್ದುದರಿಂದ ಆಕಾಶಶಬ್ದದಿಂದ ವಿಷ್ಣುವನ್ನೇ ಇಟ್ಟುಕೊಳ್ಳಬೇಕು. (೨) ಇಂದ್ರಾದಿ ಚೇತನರಲ್ಲಿರುವ ಐಶ್ವರ್ಯ ಮೊದಲಾದ ಧರ್ಮಗಳು ಶ್ರೀಹರಿಯ ಪ್ರಸಾದದಿಂದ ಆಗುವುದು. ಆಕಾಶಶಬ್ದ ಪ್ರವೃತ್ತಿನಿಮಿತ್ತವಾದ ವಿವರತ್ವಾದಿಗಳು ಅಚೇತನದಲ್ಲಿ ಇರತಕ್ಕುದು. ಆದುದರಿಂದಲೂ ಅಚೇತನ ಸ್ವಭಾವವಾದುದರಿಂದಲೂ ಭಗವದಧೀನವಾಗಲಾರವು. ಭೃತ್ಯರಲ್ಲಿರತಕ್ಕ ಜಯವು ರಾಜನ ಅಧೀನ ವಾದುದರಿಂದ ರಾಜಾ ಜಯೀ ಎನ್ನುವ ಪ್ರಯೋಗವಿದ್ದಂತೆ ಅಚೇತನದಲ್ಲಿರತಕ್ಕ ಪ್ರವೃತ್ತಿನಿಮಿತ್ತವು ಚೇತನಾಧೀನವಾಗಿದೆ ಎನ್ನುವ ನಿಮಿತ್ತದಿಂದ ಚೇತನರಲ್ಲಿ ಜಡವಾಚಕ ಶಬ್ದಪ್ರಯೋಗವು ಲೋಕದಲ್ಲಿ ಕಾಣಲಿಲ್ಲ. ಮತ್ತು ಇಂದ್ರಾದಿ ಶಬ್ದಪ್ರವೃತ್ತಿ ನಿಮಿತ್ತಗಳಾದ ಐಶ್ವರ್ಯಾದಿಗಳು ಈಶ್ವರಾಧೀನಗಳಲ್ಲ ಎಂದಾಶಂಕಿಸಿದರೆ— **ಚಿದ್ಗತಸ್ಯೇಶತಂತ್ರತ್ವೇ ಸ್ಯಾದೇವಾಚಿದ್ಗತಸ್ಯ ತತ್। ಯತೋಽತ್ಯಂತಪರಾಧೀನಂ ಚೇತನಾದಪ್ಯಚೇತನಂ ॥** (೧) ಇಂದ್ರಾದಿ ಚೇತನರಲ್ಲಿರತಕ್ಕ ಐಶ್ವರ್ಯಾದಿಗಳೇ ಈಶ್ವರನ ಅಧೀನಗಳು ಎಂದಾದರೆ ಅಚೇತನಗಳಲ್ಲಿರ ತಕ್ಕ ಛಿದ್ರತ್ವಾದಿಗಳು ಈಶ್ವರಾಧೀನಗಳು ಎನ್ನುವುದು ಸುತರಾಂ ಸಿದ್ಧಿಸುವುದು. ಚೇತನರಿಂದಲೂ ಅಚೇತನಗಳು ಅತ್ಯಂತ ಪರಾಧೀನಗಳೇ ಆಗಿವೆ. ರಾಜಾ ಜಯೀ ಎನ್ನುವ ಪ್ರಯೋಗದಂತೆ ಜಡದಲ್ಲಿರತಕ್ಕ ಮೃತ್ತ್ವಾದಿಗಳಿಗೆ ಅಭಿಮಾನಿದೇವತೆಗಳ ಅಧೀನತ್ವ ವಿದ್ದುದರಿಂದ ಅಭಿಮಾನಿ ದೇವತೆಯಲ್ಲಿ ಮೃದಬ್ರವೀತ್ ಇತ್ಯಾದಿ ಪ್ರಯೋಗವು ಇದೆ. ಆದುದರಿಂದ ವಿವರತ್ವಾದಿಗಳು ಅಚೇತನದಲ್ಲಿದ್ದುದರಿಂದ ಈಶ್ವರಾಧೀನವಲ್ಲವೆನ್ನುವ ಮತವು ಯುಕ್ತವಲ್ಲ. (೨) **ಅಸ್ತು ಖಂ ಛಿದ್ರಮಿತಿ ಯಾ ಹರೀಚ್ಛಾ ತದ್ವಶಾನ್ನಭಃ ಛಿದ್ರಾತ್ಮಕಂ ಹಿ ಸಂಜಾತಮನ್ಯಥಾ ನಿಬಿಡಂ ಭವೇತ್॥** ಆಕಾಶವು ಅವಕಾಶಪ್ರದವಾಗಲಿ ಎಂದು ಯಾವುದು ಹರೀಚ್ಛೆಯದೆಯೋ ಅದರಿಂದಲೇ ಆಕಾಶವು ಛಿದ್ರಾತ್ಮಕವಾಗಿ ಉಂಟಾಗಿದೆ. ಇಲ್ಲವಾದರೆ ಅವಕಾಶಪ್ರದವೇ ಆಗದೆ ಹೋಗುತ್ತಿತ್ತು. ಆದಕಾರಣ ವಿವರತ್ವಾದಿಗಳು ಅಚೇತನಸ್ವಭಾವವಾದುದರಿಂದ ಈಶ್ವರಾಧೀನವಲ್ಲ ಎನ್ನುವ ಮತವು ಸರ್ವಥಾ ಯುಕ್ತವಲ್ಲ. (೩.) ಹುಟ್ಟತಕ್ಕ ವಸ್ತುವಿನ ಸ್ವಭಾವವು ಉತ್ಪಾದಕನ ಅಧೀನವಾಗಿದೆ ಎನ್ನುವುದು ಲೋಕಸಿದ್ಧವೂ ಆಗಿದೆ. **ಕುಂಭಸ್ವಭಾವಃ ಕುಂಭತ್ವಂ ಪುಂತಂತ್ರಂ ಧರ್ಮಿಣಾ ಸಹ । ನ ಶರಾವಾರ್ಥಯತ್ನೇನ ಕುಂಭಾಕಾರೋ ಹಿ ಸಿದ್ಧ್ಯತಿ ॥ ೩ ॥ ಯಯೈವ ಹಿ ಮೃದಾ ಕುಂಭಃ ಕುಂಭಕಾರೇಣ ನಿರ್ಮಿತಃ । ತಯೈವ ಚ ಮೃದಾ ಕರ್ತುಂ ಶರಾವಾದ್ಯಪಿ ಶಕ್ಯತೇ ॥** ಲೋಕದಲ್ಲಿಯೂ ಕೂಡ ಕುಂಭದ ಸ್ವಭಾವವಾದ ಕುಂಭತ್ವವು ಕುಂಭದಿಂದ ಕೂಡಿಕೊಂಡೇ ಕುಲಾಲನ ಅಧೀನವೂ ಬಾವಡೆ ಮಾಡಬೇಕೆನ್ನುವ ಪ್ರಯತ್ನದಿಂದ ಕುಂಭದ ಆಕಾರವು ಸಿದ್ಧಿಸಲಾರದು. ಹೇಗೆ ಕುಲಾಲನಿಂದ ಯಾವ ಮಣ್ಣಿನಿಂದ ಕುಂಭವು ನಿರ್ಮಿಸಲ್ಪಡುತ್ತದೋ ಅದೇ ಮಣ್ಣಿನಿಂದ ಬಾವಡೆ ಮೊದಲಾದುದನ್ನು ಮಾಡಲು ಶಕ್ಯವಾಗುತ್ತದೆ. ಆದಕಾರಣ ಪುರುಷಾಧೀನವೇ. ಆದರೆ ಕುಂಭಾದಿಗಳಲ್ಲಿ ಕುಲಾಲಾದಿಗಳಿಗೆ ಸಂಕಲ್ಪಿತವಾಗದೆ ಇದ್ದುದೂ ಅನೇಕ ಧರ್ಮವು ಹುಟ್ಟುತ್ತದೆ. ಈಶ್ವರನಿಂದ ಸಂಕಲ್ಪಿತವಾಗದೆ ಇದ್ದುದು ಅಣುಮಾತ್ರವೂ ಹುಟ್ಟುವುದಿಲ್ಲ ಇಷ್ಟು ವಿಶೇಷವು. (೪) ಮತ್ತು ಹುಟ್ಟದ ಮೇಲೆಯೂ ಆಕಾಶದ ಅವಕಾಶಪ್ರದತ್ವವನ್ನು ತೆಗೆದು ಅವಕಾಶವಿಲ್ಲದ ಹಾಗೆ ಮಾಡಲಿಕ್ಕೆ ಈಶ್ವರನಿಗೆ ಶಕ್ತಿಯಿದೆ. ಆದರೆ ಹಾಗೆ ಇಚ್ಛೆಯಿಲ್ಲದಿರುವುದರಿಂದ ಈಶ್ವರನು ಮಾಡುವುದಿಲ್ಲ. **ಔಷಧಾದಿವಶಾಲ್ಲೋಕೇ ತಾಮ್ರಾದೇರಪ್ಯತಾಮ್ರತಾಂ । ಕುರ್ವಂತೀಶಸ್ತು ನೇಷ್ಯೇ ಕಿಂ ಛಿದ್ರಸ್ಯಾಚ್ಛಿದ್ರತಾಕೃತೇ ॥ ೧ ॥** ಲೋಕದಲ್ಲಿ

ಔಷಧಾದಿಗಳ ಮಹಿಮೆಯಿಂದ ತಾಮ್ರಮೊದಲಾದವುಗಳಿಗೆ ಸ್ವರ್ಣಮೊದಲಾದವುಗಳ ಸ್ವರೂಪತ್ವವನ್ನು ಹೊಂದಿಸಿಕೊಡುತ್ತಾರೆ. ಹೀಗೆ ಇರಲು ಸರ್ವೇಶ್ವರನಾದ ಶ್ರೀಹರಿಗೆ ಛಿದ್ರವನ್ನು ಅಛಿದ್ರನನ್ನಾಗಿ ಮಾಡಲಿಕ್ಕೆ (ನಿಬಿಡೀಕರಿಸಲಿಕ್ಕೆ) ಸಾಮರ್ಥ್ಯವಿಲ್ಲವೋ ಏನು, ಸಾಮರ್ಥ್ಯವಿದ್ದೇ ಇದೆ. ಆದಕಾರಣ ವ್ಯತ್ಯಾಸ ಮಾಡದೆ ಇದ್ದರೂ ವ್ಯತ್ಯಾಸಪಡಿಸಲಿಕ್ಕೆ ಈಶ್ವರನಿಗೆ ಶಕ್ತಿಯು ಉಂಟು. (೫) ಆವಾವ ವಸ್ತುಸ್ವಭಾವವೂ ಕೂಡ ಈಶ್ವರನ ಅಧೀನವಾಗಿದೆ ಎನ್ನುವುದನ್ನು ಶ್ರುತಿಸ್ಮೃತಿಗಳು ಬೋಧಿಸುತ್ತವೆ. **ಸ್ಯಂದಂತೇ ಶಾಸನಾನ್ನದ್ಯೋ ಭೀಷಾಸ್ಮಾತ್ತವತೇऽನಿಲಃ। ನಭೋ ದದಾತಿ ಶ್ವಸತಾಂ ಮಾರ್ಗಮಿತ್ಯಾದಿಕಾಶ್ಚತಾಃ ॥** ಶ್ರೀಹರಿಯ ಆಜ್ಞೆಯಿಂದಲೇ ನದಿಗಳು ಹರಿಯುತ್ತವೆ. ಹರಿಯ ಭಯದಿಂದ ವಾಯುವು ಬೀಜಿಸುತ್ತದೆ. ಆಕಾಶವು ಶ್ವಾಸಬಿಡುವವರಿಗೆ ಮಾರ್ಗವನ್ನು ಕೊಡುತ್ತದೆ. ಇದೇ ಅರ್ಥವನ್ನು **ಪ್ರಾಚ್ಯೋ ನದ್ಯಃ ಸ್ಯಂದಂತೇ, ಭೀಷಾಸ್ಮಾದ್ವಾತಃ ಪವತೇ** ಇತ್ಯಾದಿ ಶ್ರುತಿ ಸ್ಮೃತಿಗಳು ಈಶ್ವರಾಧೀನತ್ವವನ್ನೇ ಬೋಧಿಸುತ್ತವೆ. (೬) ಅಂತೂ ಆಕಾಶಶಬ್ದವು ಬ್ರಹ್ಮನಲ್ಲಿ ಮುಖ್ಯವು. ಅನಂತತ್ವ ಮೊದಲಾದ ಲಿಂಗಗಳಾದರೂ ಭೂತಾಕಾಶದಲ್ಲಿ ನಿರವಕಾಶಗಳಾಗಿವೆ. **ಅಂತತ್ರಯೋಜ್ಝಿತೇ ವಿಷ್ಣೌ ನಿರೂಢಂ ಲೋಕವೇದಯೋಃ । ಅನಂತತ್ವಂ ಕಥಂ ತಿಷ್ಠೇದ್ಭೂತೇऽಂತತ್ರಯಸಂಯುತೇ ॥** ದೇಶಕಾಲಗುಣಗಳಿಂದ ತ್ರಿವಿಧ ಪರಿಚ್ಛೇದವಿಲ್ಲದಿರುವ ವಿಷ್ಣುವಿನಲ್ಲಿ ಅನಂತತ್ವವು ಲೌಕಿಕ ವೈದಿಕಪ್ರಯೋಗಗಳಲ್ಲಿ ಪ್ರಸಿದ್ಧವಾಗಿದೆ. ಆದಕಾರಣ ತ್ರಿವಿಧ ಪರಿಚ್ಛೇದವಿರುವ ಭೂತಾಕಾಶದಲ್ಲಿ ಅನಂತತ್ವವು ಹೇಗೆ ಬಂದೀತು. ಮತ್ತು ಅಚ್ಯುತ ಅನಂತ ಗೋವಿಂದ ಎನ್ನುವ ನಾಮತ್ರಯದಲ್ಲಿ ಅಂತರ್ಗತವಾದ ಅನಂತಶಬ್ದವು ತ್ರಿವಿಧಪರಿಚ್ಛೇದರಹಿತನಾದ ಶ್ರೀವಿಷ್ಣುವಿನಲ್ಲಿ ಭಾಷ್ಯೋಕ್ತ ಶ್ರುತಿಸ್ಮೃತಿಗಳಿಂದಲೂ ಲೋಕವ್ಯವಹಾರದಿಂದಲೂ ಪ್ರಸಿದ್ಧವಾಗಿದೆ. (೭) ಲೋಕಪ್ರಸಿದ್ಧಿಯನ್ನು ಆಶ್ರಯಿಸಿಯೂ ಆಕಾಶಶ್ರುತಿಯಿಂದ ವಿಷ್ಣುಲಿಂಗವನ್ನು ಬಾಧಿಸಲು ಸಾಧ್ಯವಿಲ್ಲ. **ದ್ವಾಭ್ಯಾಮಾವೃತ್ತಿಜಾತಿಭ್ಯಾಮೇವ ಹಿ ಪ್ರಬಲಾ ಶ್ರುತಿಃ । ಅಗತಿತ್ವ ಪರತ್ವಾನೇಕತ್ವೈಃ ಲಿಂಗಾನಿ ತು ತ್ರಿಭಿಃ ॥** ಶ್ರುತಿಯಾದರೂ ಅಭ್ಯಾಸ ಜಾತಿ ಈ ಎರಡರಿಂದಲೇ ಪ್ರಬಲವು. ಲಿಂಗಗಳಾದರೂ ನಿರವಕಾಶತ್ವ ಪರತ್ವ ಅನೇಕತ್ವ ಈ ಮೂರರಿಂದ ಪ್ರಬಲಗಳು. ಆದಕಾರಣ ಪರೋವರೀಯಸ್ತ್ವಮೊದಲಾದ ವಿಷ್ಣುಲಿಂಗಗಳಿಂದ ಆಕಾಶಶಬ್ದವಾಚ್ಯನು ವಿಷ್ಣುವೇ ಭೂತಾಕಾಶವಲ್ಲ ॥ ೮ ॥

**ಆಕಾಶಾಧಿಕರಣವು ಸಮಾಪ್ತವಾಯಿತು.**

# ೯ ಪ್ರಾಣಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಲೋಕವ್ಯವಹಾರದಿಂದ ಅನ್ಯತ್ರ ಪ್ರಸಿದ್ಧವಾದ ಆಧ್ಯಾತ್ಮಿಕ (ಅಂದರೆ ದೇಹದಲ್ಲಿರುವ ವಸ್ತುಗಳನ್ನು ಹೇಳತಕ್ಕ) ಎಲ್ಲಾ ಶಬ್ದಗಳಲ್ಲಿ ಪ್ರಧಾನವಾದ ಪ್ರಾಣಶಬ್ದಕ್ಕೆ ಬ್ರಹ್ಮನಲ್ಲಿಸಮನ್ವಯವನ್ನು ಮಾಡುತ್ತಾರೆ. ಪಾರಾಯಣಾದಿಗಳನ್ನು ಮಾಡುವಾಗ ಎಲ್ಲಾ ಕಡೆಗಳಲ್ಲಿಯೂ ಆದಿಯಲ್ಲಿ ಸೂತ್ರವನ್ನೇ ಹೇಳಬೇಕು. ಆಮೇಲೆ ಸಂಗತ್ಯಾದಿಗಳನ್ನು ಹೇಳಬೇಕು— ಎನ್ನುವುದನ್ನು ಸೂಚಿಸುವುದಕ್ಕಾಗಿ ಇಲ್ಲಿ ಸೂತ್ರವನ್ನು ಆದಿಯಲ್ಲಿಯೇ ಹೇಳುತ್ತಾರೆ—

## ಸೂತ್ರ ॥ ಓಂ ಅತ ಏವ ಪ್ರಾಣಃ ಓಂ ॥ ೨೩ ॥

**ಸೂತ್ರಾರ್ಥ ॥** ತದ್ವೈತ್ವಂ ಪ್ರಾಣಂ ಎನ್ನುವಲ್ಲಿ ಹೇಳಲ್ಪಟ್ಟ ಪ್ರಾಣನು ಬ್ರಹ್ಮನೇ. ರೂಢಿಯಿಂದ ಮುಖ್ಯಪ್ರಾಣನಲ್ಲ. ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಎಂದು ನಿರವಕಾಶವಾದ ಶ್ರೀಪತಿತ್ವ ಲಕ್ಷ್ಮೀಪತಿತ್ವ ಲಿಂಗವಿದ್ದ ಪ್ರಯುಕ್ತವೇ.

**ಪೀಠಿಕೆ ॥** ವಿಷಯವಾಕ್ಯವನ್ನುದಾಹರಣಮಾಡಿ ಪೂರ್ವಾಧಿಕರಣದಿಂದ ಸಂಗತಿಯನ್ನೂ ವಿಷಯಸಂಶಯಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ತದ್ವೈತ್ವಂ ಪ್ರಾಣೋ ಅಭವಃ । ಮಹಾನ್ ಭೋಗಃ ಪ್ರಜಾಪತೇಃ। ಭುಜಃ ಕರಿಷ್ಯಮಾಣಃ । ಯದ್ದೇವಾನ್ ಪ್ರಾಣಯೋ ನವ । (ತೈ.ಆ.೩.೧೪) ಇತಿ ಮಹಾಭೋಗಶಬ್ದೇನ ಪರಮಾನಂದತ್ವಂ ಪ್ರಾಣಸ್ಯೋಕ್ತಂ ॥ ೧ ॥**

**ಭಾಷ್ಯಾರ್ಥ ॥** (ಎಲೋ ವಿಷ್ಣುವೇ) ಯಾವ ಕಾರಣದಿಂದ, ಪ್ರಜಾಪತೇಃ ಚತುರ್ಮುಖಬ್ರಹ್ಮನಿಗೂ ಎಲ್ಲಾ ಜೀವರಿಗೂ, ಭುಜಃ = ಭೋಗಗಳನ್ನು ಯೋಗ್ಯಾನಂದಗಳನ್ನು ಕರಿಷ್ಯಮಾಣಃ=ಮಾಡುವಿಯೋ, ಮಾಡುತ್ತೀಯೋ, ಮಾಡಿದ್ದಿಯೋ, ತತ್=ಆದುದರಿಂದ, ತ್ವಂ= ನೀನು, ಮಹಾನ್‌ಭೋಗಃ=ಪೂರ್ಣಾನಂದವುಳ್ಳವನಾಗಿರುತ್ತಿ. (ತನಗೆ ಪೂರ್ಣಾನಂದವಿಲ್ಲದಿದ್ದರೆ ಮತ್ತೊಬ್ಬರಿಗೆ ಅದನ್ನು ಕೊಡತಕ್ಕದ್ದು ಕೂಡಲಾರದು.) ನವದೇವಾನ್= (ವಾಯುವಿಗೂ, ಗುಹ್ಯೇಂದ್ರಿಯಕ್ಕೂ ಏಕತ್ವವನ್ನು ವಿವಕ್ಷಾಮಾಡಿಕೊಂಡು) ಒಂಭತ್ತು ಇಂದ್ರಿಯಾಭಿಮಾನಿ ದೇವತೆಗಳನ್ನು ಪ್ರಾಣಯಃ=ಆವಾವ ಕಾರ್ಯಗಳಲ್ಲಿ ಪ್ರೇರಿಸಿದ್ದಿಯೋ, ಪ್ರೇರಿಸುತ್ತೀಯೋ, ಪ್ರೇರಿಸುವಿಯೋ ಆದಕಾರಣ ಪ್ರಾಣಃ=ಪ್ರಾಣಶಬ್ದವಾಚ್ಯನು, ಆಗಿರುತ್ತಿ ಎನ್ನುವ ತೈತ್ತಿರೀಯ ಶಾಖೆಯಲ್ಲಿರತಕ್ಕ ವಾಕ್ಯದಲ್ಲಿ ಮಹಾಭೋಗಶಬ್ದದಿಂದ ಪ್ರಾಣನಿಗೆ ಪರಮಾನಂದತ್ವವು ಹೇಳಲ್ಪಟ್ಟಿದೆ.

**ವಿಶೇಷಾಂಶ ॥** (೧) ಯಾವುದೊಂದು ಆನಂದಮಯತ್ವವು ವಿಷ್ಣುವಿಗೆ ಹೇಳಲ್ಪಟ್ಟದೋ ಆ ಪರಮಾನಂದತ್ವವು ತದ್ವೈತ್ವಂ ಎನ್ನುವ ವಾಕ್ಯದಲ್ಲಿ ಮಹಾನ್‌ಭೋಗಃ ಎನ್ನುವ ವಾಕ್ಯದಿಂದ ಪ್ರಾಣನಿಗೆ ಹೇಳಲ್ಪಟ್ಟಿದೆ. (೨) ಇದರಿಂದ ಪ್ರಾಣನು ವಿಷಯನು. ಪ್ರಾಣನು ವಿಷ್ಣುವಿನಿಂದ ಅನ್ಯನು ಎಂದು ಆಕ್ಷೇಪಿಸಿ ಆನಂದಮಯತ್ವವೂ ಅನ್ಯರಲ್ಲಿರತಕ್ಕುದು ಎಂದು ಆಕ್ಷೇಪಿಸಿದ್ದರಿಂದ ಈ ಅಧಿಕರಣಕ್ಕೆ ಆನಂದಮಯಾಧಿಕರಣದಿಂದ ಆಕ್ಷೇಪಿಕೀಸಂಗತಿಯು. ಪ್ರಾಣನು ವಾಯುವೋ ವಿಷ್ಣುವೋ ಎಂದು ಸಂಶಯವೂ ಸೂಚಿತವಾಯಿತು.

**ಪೀಠಿಕೆ ॥** ಸಯುಕ್ತಕವಾಗಿ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಭಾಷ್ಯ ॥ ಸ ಚ ಪ್ರಾಣಃ ಪ್ರಸಿದ್ಧೇರ್ವಾಯುರಿತ್ಯಾಪತತಿ ॥ ೨ ॥**

**ಭಾಷ್ಯಾರ್ಥ ॥** (ಪರಮಾನಂದತ್ವವು ಯಾವ ಪ್ರಾಣನಿಗೆ ಹೇಳಲ್ಪಟ್ಟದೋ) ಅಂತಹ ಪ್ರಾಣಶಬ್ದ ವಾಚ್ಯನು ಮುಖ್ಯವಾಯುವೇ ಎಂದು ಪ್ರಾಪ್ತವಾಗುತ್ತದೆ. (ಆದುದರಿಂದಲೇ ಆನಂದಮಯನೂ

ಕೂಡ ಮುಖ್ಯವಾಯುವೇ ಎಂದು ಪ್ರಾಪ್ತವಾಗುತ್ತ ದೆ.) ಪ್ರಾಣಶ್ರುತಿಗೆ ಆ ವಾಯುವಿನಲ್ಲಿ ರೂಢಿಯಿದ್ದ ಪ್ರಯುಕ್ತ.

**ವಿಶೇಷಾಂಶ ॥** ಅಲ್ಲದೆ ಪ್ರಾಣಪದ ಪ್ರವೃತ್ತಿನಿಮಿತ್ತವಾದ ಜೀವನಾದಿ ಹೇತುತ್ವವು "ಮುಖ್ಯಪ್ರಾಣನು ಶರೀರದಲ್ಲಿರುವಾಗ ಜೀವನಾದಿಗಳು ಕೂಡುತ್ತವೆ. ಇಲ್ಲದಿದ್ದರೆ ಕೂಡಲಾರದು". ಹೀಗೆ ಅನ್ವಯವ್ಯತಿರೇಕಗಳಿಂದ ಶರೀರದಲ್ಲಿರತಕ್ಕ ವಾಯುವಿಕಾರದ್ವಾರಾ ಮುಖ್ಯವಾಯುವಿನಲ್ಲಿಯೇ ಕಂಡಿದೆ.

**ಪೀಠಿಕ ॥** ಸಿದ್ಧಾಂತೀಕರಿಸುತ್ತಾರೆ—

**ಭಾಷ್ಯ ॥ ನ ಚೈವಂ । ಯತಃವಿಷ್ಣುರೇವ ಪ್ರಾಣಃ। ಅತ ಏವ ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ। ಅಹೋ ರಾತ್ರೇ ಪಾರ್ಶ್ವೇ (ತೈ.ಆ.೩.೧೩.) ಇತ್ಯಾದಿ ತಲ್ಲಿಂಗಾದೇವ ॥ ೩ ॥**

**ಭಾಷ್ಯಾರ್ಥ ॥** 'ಯಾವ ಕಾರಣದಿಂದ ಪ್ರಾಣಶಬ್ದವಾಚ್ಯನು ವಿಷ್ಣುವೇ ಆಗಿರುತ್ತಾನೋ, ಆದಕಾರಣ ಪ್ರಾಣನಿಗೆ ವಾಯುತ್ವವೂ ಆನಂದಮಯತ್ವವೂ ಕೂಡ ಯುಕ್ತವಲ್ಲ (ಈ ಪ್ರಾಣನು ವಿಷ್ಣುವೇ ಎನ್ನುವುದು ಹೇಗೆ ಎಂದರೆ) ಎಲೋ ವಿಷ್ಣುವೇ ನಿನಗೆ ಶ್ರೀದೇವಿಯೂ ಲಕ್ಷ್ಮೀದೇವಿಯೂ ಇಬ್ಬರು ಹೆಂಡತಿಯರು. ಅಹೋರಾತ್ರಾಭಿಮಾನಿಗಳಾದ ಸೂರ್ಯಚಂದ್ರರು ಪಾರ್ಶ್ವದಲ್ಲಿರತಕ್ಕವರು, ಇದು ಮೊದಲಾದ ಹೇತುಗಳಿಂದ ಹೇಳಲ್ಪಟ್ಟ ಶ್ರೀಲಕ್ಷ್ಮೀಪತಿತ್ವಾದಿ ವಿಷ್ಣುಲಿಂಗತ್ವವಿದ್ದ ಪ್ರಯುಕ್ತವೇ.

**ವಿಶೇಷಾಂಶ ॥** (ಎ) ಶ್ರುತಿಯಿಂದ ಪೂರ್ವಪಕ್ಷ ಮಾಡಿದ್ದಕ್ಕೆ ಲಿಂಗದಿಂದ ನಿರ್ಣಯವು ಹೇಗೆ ಎಂದರೆ— ಲಿಂಗವು ನಿರವಕಾಶವಾದುದರಿಂದ ಸಾವಕಾಶವಾದ ಶ್ರುತಿಗೆ ಬಾಧವು. (ಬಿ) ವಕ್ಷಸ್ಥಲಾಶ್ರಿತಾ ಶ್ರೀಃ ಅಂಕಸ್ಥಿತಾ ಲಕ್ಷ್ಮೀಃ ಎಂದು ಸಂಪ್ರದಾಯಾಭಿಜ್ಞರು.ತತ್ವಪ್ರದೀಪದಲ್ಲಿ ಆದರೂ ಅಂಕಸ್ಥಿತಾ ಶ್ರೀಃ, ವಕ್ಷಸಿ ಸ್ಥಿತಾ ಲಕ್ಷ್ಮೀಃ ಎಂದು ಹೇಳಿದೆ. (ಸಿ) ಆದಿಪದದಿಂದ **ಹರಿಂ ಹರಂತಮನುಯಂತಿ ದೇವಾಃ। ವಿಶ್ವಸ್ಯೇಶಾನಂ ವೃಷಭಂ ಮತೀನಾಂ** ಸರ್ವರ ಬುದ್ಧಿಗಳಿಗೆ ನಿಯಾಮಕನು, ಜಗತ್ಪತಿಯೂ ಸರ್ವಸಂಹಾರಕನೂ ಆದ ಶ್ರೀಹರಿಯನ್ನು ದೇವತೆಗಳು ತಿಳಿಯುತ್ತಾರೆ ಎಂದು ತತ್ವಪ್ರದೀಪದಲ್ಲಿ ಉದಾಹರಿಸಿದ ವಾಕ್ಯವನ್ನು ಇಟ್ಟುಕೊಳ್ಳಬೇಕು. ಚಂದ್ರಿಕಾದಲ್ಲಿ ಆದರೂ **ತಮೇವ ಮೃತ್ಯುಮಮೃತಂ ತಮಾಹುಃ ತಂ ಭರ್ತಾರಂ ತಮು ಗೋಪ್ತಾರಮಾಹುಃ ॥** ಇತ್ಯಾದಿ ವಾಕ್ಯಗಳನ್ನು ಇಟ್ಟುಕೊಳ್ಳಬೇಕೆಂದು ಹೇಳಿದ್ದಾರೆ. (ಡಿ) ಯದ್ಯಪಿ ತೈತ್ತರೀಯ ಶಾಖೆಯಲ್ಲಿ **ಹ್ರೀಶ್ಚತೇ** ಎಂದು ಪಾಠವಿರುವುದು. ಆದರೂ ಬೃಹದಾರಣ್ಯ ಶಾಖೆ ಯಲ್ಲಿ ಹೀಗೆ ಹೇಳಿಯದೆ ಎನ್ನುವ ಅಭಿಪ್ರಾಯದಿಂದ ಹೀಗೆ ಉದಾಹರಿಸಿದ್ದು.

## ಮಾಯಾವಾದಿರೀತ್ಯಾ

**ವಿಚಾರ ॥** (೧) ಮಾಯಾವಾದಿಗಳು **ಕತಮಾ ಸಾ ದೇವತಾ। ಪ್ರಾಣ ಇತಿ ಹೋ ವಾಚ । ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ।** ಎನ್ನುವ ಛಾಂದೋಗ್ಯ ಪ್ರಥಮಾಧ್ಯಾಯದಲ್ಲಿದ್ದ ಪ್ರಾಣಶಬ್ದವು ವಿಷಯವು. ಅಲ್ಲಿ ಪ್ರಾಣಶಬ್ದವು ಪ್ರಸಿದ್ಧ ಪ್ರಾಣಪರವೆಂದು

ಪೂರ್ವಪಕ್ಷ ಬಂದರೆ ಸರ್ವಭೂತಪ್ರವೇಶ ಮೊದಲಾದ ಬ್ರಹ್ಮಲಿಂಗಗಳು ಇದ್ದ ಪ್ರಯುಕ್ತ ಬ್ರಹ್ಮಪರವೇ ಎಂದು ಸಿದ್ಧಾಂತವು. (೨) ಈ ಅಧಿಕರಣವು ಪೂರ್ವಾಧಿಕರಣದಿಂದ ಗತಾರ್ಥವೂ ಆಗಲಿಲ್ಲ. ಹೇಗೆಂದರೆ **ಯದಾ ವೈ ಪುರುಷಃ ಸ್ವಪಿತಿ। ಪ್ರಾಣಂ ತರ್ಹಿ ವಾಗ್ಯಪೇತಿ। ಪ್ರಾಣಂ ಚಕ್ಷುಃ।** ಇದು ಮೊದಲಾದ ಶ್ರುತಿಯು ಸ್ವಾಪಕಾಲದಲ್ಲಿ ಪ್ರಸಿದ್ಧ ಪ್ರಾಣನಲ್ಲಿ ಸರ್ವಭೂತಗಳ ಸಾರಭೂತವಾದ ಇಂದ್ರಿಯಗಳಿಗೆ ಲಯಾದಿಗಳನ್ನು ಹೇಳುತ್ತಾ ಸರ್ವಭೂತಗಳಿಗೆ ಲಯಾದಿಪರವಾದ ಪ್ರಯುಕ್ತ ಪ್ರಮಾಣಾಂತರಾನು ಗೃಹಿತವಾದ ಪ್ರಯುಕ್ತ ಪ್ರಬಲವಾಗಿದೆ. ಬ್ರಹ್ಮನಲ್ಲಿ ಭೂತಗಳಿಗೆ ಲಯಾದಿಗಳನ್ನು ಬೋಧಿಸತಕ್ಕ **ಯತೋ ವಾ ಇಮಾನಿ** ಇದು ಮೊದಲಾದ ಶ್ರುತಿಗಳಿಗೆ ಮಾನಾಂತರಾನುಗ್ರಹವಿಲ್ಲದಿರುವುದರಿಂದ ದುರ್ಬಲವಾಗಿದೆ ಎನ್ನುತ್ತಾರೆ. ಇದು ಅಯುಕ್ತವು. ಪೂರ್ವಪಕ್ಷದಲ್ಲಿ ಪ್ರಾಣನು ಜಡವಾಯುವಾದರೆ **ಕತಮಾ ಸಾ ದೇವತಾ** ಎನ್ನುವ ಪ್ರಶ್ನವಾಕ್ಯದಲ್ಲಿ **ಸೈಷಾ ದೇವತಾ** ಎನ್ನುವ ಉತ್ತರವಾಕ್ಯದಲ್ಲಿಯೂ ಕೂಡ ದೇವತಾಶಬ್ದವು ಕೂಡಲಾರದು. ಪ್ರಶ್ನ ಪ್ರತಿವಚನವು ಜಡವಾಯುಅಭಿಮಾನಿಯಾದ ಚೇತನಪರವೆಂದು ಇಟ್ಟುಕೊಂಡರೆ **ವಾಯುವಿಕಾರಸ್ಯ ಪಂಚವೃತ್ತೇಃ ಪ್ರಾಣಸ್ಯೋಪಾದಾನಂ ಯುಕ್ತಂ ।** ಇದು ಮೊದಲಾದ ಮಾಯಾವಾದಿಗಳ ಪೂರ್ವಪಕ್ಷ ಭಾಷ್ಯದಿಂದ ವಿರೋಧವು ಬರುವುದು. ಮತ್ತು ಸ್ವಾಪವಾಕ್ಯದಲ್ಲಿ ಪ್ರಮಾಣಾಂತರ ಸಂವಾದವೇ ಇಲ್ಲದಿರುವುದರಿಂದ ಅದನ್ನು ಸ್ವೀಕರಿಸಿ ಪೂರ್ವೋತ್ತರಪಕ್ಷೋಕ್ತಿಯೂ ಕೂಡಲಾರದು. ಹೇಗೆಂದರೆ ಸ್ವಾಪಕಾಲದಲ್ಲಿ ಜಡದಲ್ಲಿ ಆಗಲೀ ದೇವತೆಯಲ್ಲಿ ಆಗಲೀ ಪೃಥಿವ್ಯಾದಿಭೂತಗಳಿಗೆ ಆಗಲೀ ಇಂದ್ರಿಯಗಳಿಗೆ ಆಗಲೀ ಪ್ರತ್ಯಕ್ಷದಿಂದ ಲಾಗಲೀ ಅನುಮಾನದಿಂದಲಾಗಲೀ ಲಯಾದಿಗಳ ಜ್ಞಾನವು ಬರುವುದಿಲ್ಲ. ಸ್ವಾಪಕಾಲದಲ್ಲಿ ಅವುಗಳು ಲೀನಗಳಾಗುವುದಿಲ್ಲವೆಂದೇ ಅನುಭವಸಿದ್ಧವಾಗಿದೆ. ಅಲ್ಲದೆ ಸ್ವಾಪಕಾಲದಲ್ಲಿ ಜಡದಲ್ಲಿ ಆಗಲೀ ದೇವತೆಯಲ್ಲಿ ಆಗಲೀ ಇಂದ್ರಿಯಗಳಿಗೆ ಲಯದಲ್ಲಿ ಪ್ರತ್ಯಕ್ಷ ಸಂವಾದ ಇಲ್ಲ. ಅವುಗಳು ಅತೀಂದ್ರಿಯಗಳಾಗಿವೆ. ಇದು ಮೊದಲಾದ ದೋಷಗಳು ಇದ್ದ ಪ್ರಯುಕ್ತ ಪರರ ಅಧಿಕರಣರಚನೆಯು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ॥ (೧) ಸರ್ವಜಗತ್ತಿಗೂ ಪ್ರಸಿದ್ಧಪ್ರಾಣಾಧೀನ ಪ್ರವೃತ್ತ್ಯಾದಿಗಳು ಕಂಡುದರಿಂದ **ಪ್ರಸ್ತೋತರ್ಯಾ ದೇವತಾ ಪ್ರಸ್ತಾವಂ** ಎನ್ನುವ ಪ್ರಸ್ತಾವವಾಕ್ಯದಲ್ಲಿ ಪ್ರಸಿದ್ಧ ಪ್ರಾಣನೇ ಹೇಳಲ್ಪಡುತ್ತಾನೆ ಎಂದು ಆಕಾಶಾಧಿಕರಣದಿಂದ ಅಧಿಕಾಶಂಕೆ ಯು ಬಂದರೆ ಶಿಲಾಕಾಷ್ಠ ಮೊದಲಾದ ಅಚೇತನಗಳಲ್ಲಿ ಪ್ರಾಣಾಧೀನಸ್ಥಿತಿಯು ಕಾಣದೆ ಇದ್ದ ಪ್ರಯುಕ್ತ **ಸರ್ವಾಣಿ ಹ ವಾ ಇಮಾನಿ ಭೂತಾನಿ** ಎನ್ನುವುದು ಕೂಡಲಾರದು ಎಂದು ಪರಿಹಾರವು ಅಭಿಪ್ರೇತವೆಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. ಪ್ರಾಣಾಧೀನಪ್ರವೃತ್ತಿಯುಳ್ಳ ಶರೀರದಂತೆಯೇ ಪ್ರಾಣಾಧೀನಪ್ರವೃತ್ತಿಯುಳ್ಳ ಇತರವಾದುದನ್ನು ಬೇಕಾದಷ್ಟು ನೋಡತಕ್ಕ ಪೂರ್ವಪಕ್ಷಿಗೆ ಸರ್ವವೂ ಪ್ರಾಣಾಧೀನಪ್ರವೃತ್ತಿಯುಳ್ಳದ್ದು ಎಂದು ಶಂಕೆಯೇ ಕೂಡಲಾರದು. ಆದ ಪ್ರಯುಕ್ತ ಅವರ ಮತವು ಸರ್ವಥಾ ಯುಕ್ತವಲ್ಲ.

## ಅಧಿಕರಣ ಸಾರಾಂಶ

**ತದ್ವೈತ್ತಂ ಪ್ರಾಣೋ ಅಭವತ್ ಮಹಾನ್ ಭೋಗಃ ಪ್ರಜಾಪತೇಃ** ಎನ್ನುವ ಶ್ರುತಿಯಲ್ಲಿ ಪ್ರಾಣನಿಗೆ ಪರಮಾನಂದವನ್ನು ಹೇಳಿಯದೆ. ಆ ಪ್ರಾಣನು ವಾಯುವೆಂದು ಪೂರ್ವಪಕ್ಷಮಾಡಿಕೊಂಡು **ಶ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ** ಇದು ಮೊದಲಾದ ವಿಷ್ಣುಲಿಂಗಗಳು ಇದ್ದ ಪ್ರಯುಕ್ತ ಪ್ರಾಣಶಬ್ದಪ್ರವೃತ್ತಿನಿಮಿತ್ತವಾದ ಜೀವನ ಹೇತುತ್ವವು ವಿಷ್ಣುವಿನಲ್ಲಿಯೇ ಮುಖ್ಯವಾಗಿರುವುದರಿಂದಲೂ ಪ್ರಾಣನು ವಿಷ್ಣುವೇ ಎಂದು ಸಿದ್ಧಾಂತವು. **ವಾಯುವೃತ್ತಿರ್ಯಥಾ ಮುಖ್ಯಪ್ರಾಣದೇಹಸ್ಥದೈವ ಸಃ। ವಿಷ್ಣೋರ್ದೇಹಸ್ತತಸ್ತಸ್ಯೈವಾನ್ವಯು-ವ್ಯತಿರೇಕತಾ॥ ೧ ॥ ಅಪೇಕ್ಷಿಕಾಚ್ಚ ಮುಖ್ಯತ್ವಾದ್ವಾಯೌ ಮುಖ್ಯಪದಂ ಭವೇತ್। ಯಥಾ ಪರಾಕ್ಷರಪದಂ ಶ್ರೀತತ್ವೇ ಮಧ್ಯಮಾಕ್ಷರೇ॥ ೨ ॥** ಹೇಗೆ ಪ್ರಾಣಶರೀರಭೂತವಾದ ವಾಯುವಿಗೆ ಜೀವನವನ್ನು ಕುರಿತು ಅನ್ವಯವ್ಯತಿರೇಕ ಕಂಡುದರಿಂದ ಮುಖ್ಯಪ್ರಾಣನಿಗೆ ಹೇಗೆ ಜೀವನಹೇತುತ್ವವಿದೆಯೋ ಹಾಗೆಯೇ ಪ್ರಾಣನೂ ಶ್ರೀಹರಿಯ ಶರೀರಸ್ಥಾನೀಯನಾಗಿರುವುದರಿಂದ ಅನ್ವಯವ್ಯತಿರೇಕಗಳಿಂದ ಇಲ್ಲಿ ಕಂಡ ಜೀವನ ಹೇತುತ್ವವು ಮುಖ್ಯಪ್ರಾಣನಲ್ಲಿದ್ದ ಶ್ರೀಹರಿಯಲ್ಲಿಯೇ ಮುಖ್ಯವು.

(೨) ಮುಖ್ಯಪ್ರಾಣನು ಜೀವನಾದಿಗಳಿಗೆ ಕಾರಣನಾದಾಗ್ಯೂ ಆತನೂ ಶ್ರೀಹರಿಯ ಅಧೀನನಾದುದರಿಂದ ಶ್ರೀಹರಿಯಲ್ಲಿಯೇ ಪ್ರಾಣಶಬ್ದವು ಮುಖ್ಯವು. ಮತ್ತು ಪ್ರಾಣಸ್ಯ ಪ್ರಾಣಂ ಇತ್ಯಾದಿಗಳಲ್ಲಿ ಬ್ರಹ್ಮನಲ್ಲಿ ಪ್ರಯೋಗವಿದ್ದುದರಿಂದಲೂ ಅಲ್ಲಿ ಪರಮಮುಖ್ಯವೃತ್ತಿಯಿಂದ ನಾಮಾನಿ ಸರ್ವಾಣಿ ಇತ್ಯಾದಿ ಪ್ರಮಾಣಗಳಿಂದಲೂ ಪ್ರಾಣಶಬ್ದಕ್ಕೆ ಬ್ರಹ್ಮಪರತ್ವವೇ. (ಹಾಗಾದರೆ ವಾಯುವಿನಲ್ಲಿ ಮುಖ್ಯವೆನ್ನುವ ಪದವು ಹೇಗೆ ಎಂದರೆ) ವಾಯುವಿನಲ್ಲಿ ಆಪೇಕ್ಷಿಕ(ಸಾವಧಿಕ)ವಾದ ಮುಖ್ಯತ್ವವಿದ್ದುದರಿಂದ ಮುಖ್ಯಪದವು ಇರುವುದು. ಮಧ್ಯಮಾಕ್ಷರಳಾದ ಲಕ್ಷ್ಮಿಯಲ್ಲಿ ಪರಾಕ್ಷರಪದವಿದ್ದಂತೆಯೇ. ಅಂದರೆ ಮುಖ್ಯಪ್ರಾಣನು ಕರಣಭೂತಗಳಾದ ಚಕ್ಷುರಾದಿಪ್ರಾಣ (ಇಂದ್ರಿಯ)ಗಳಿಗಿಂತ ಮುಖ್ಯ (ಪ್ರಧಾನ)ನು. ಮಧ್ಯಮಾಕ್ಷರಳಾದ ಶ್ರೀದೇವಿಯಲ್ಲಿ ತಾಮಕ್ಷರಂ ಪರಂ ಪ್ರಾಹುಃ ಇತ್ಯಾದಿಗಳಲ್ಲಿ ಜಡಪ್ರಕೃತಿರೂಪ ಅಧಮಾಕ್ಷರದಿಂದ ಪರತ್ವವಿದ್ದುದರಿಂದ ಪರಶಬ್ದಪ್ರಯೋಗವಿದೆ. ಆದಕಾರಣ ಮುಖ್ಯಪ್ರಾಣ ಎನ್ನುವ ಪ್ರಯೋಗವು ಯುಕ್ತವು. ಅಂತೂ ಪ್ರಾಣಶಬ್ದವು ಮಹಾಯೋಗ ವಿದ್ವದ್ರೂಢಿಗಳಿಂದ ಪರಮಾತ್ಮಪರವೇ ಆಗುವುದು.

**ಪ್ರಾಣಾಧಿಕರಣವು ಸಮಾಪ್ತವಾಯಿತು.**

# ೧೦ ಜ್ಯೋತಿರಧಿಕರಣ

**ಪೀಠಿಕೆ—** ಈ ಅಧಿಕರಣದಲ್ಲಿ ಆವಾವ ಸೂಕ್ತಗಳಲ್ಲಿರತಕ್ಕ ಎಲ್ಲಾ ಶಬ್ದಗಳ ಸಮನ್ವಯಕ್ಕಾಗಿ ಲೋಕವ್ಯವಹಾರದಿಂದ ಅನ್ಯತ್ರ ಪ್ರಸಿದ್ಧವಾದ ಅಗ್ನಿಸೂಕ್ತದಲ್ಲಿರುವ ಜ್ಯೋತಿಃ ಎನ್ನುವ ನಾಮಧೇಯಕ್ಕೆ ಬ್ರಹ್ಮನಲ್ಲಿ ಸಮನ್ವಯವನ್ನು ಮಾಡುತ್ತಾರೆ. ಪೂರ್ವಾಧಿಕರಣ ಸಂಗತಿಗಳನ್ನು ವಿಷಯವಾಕ್ಯವನ್ನು ಉದಾಹರಿಸುತ್ತಾ ವಿಷಯಸಂಶಯಗಳನ್ನು ತೋರಿಸುತ್ತಾರೆ—

**ಭಾಷ್ಯ ॥ ಯೋ ವೇದ ನಿಹಿತಂ ಗುಹಾಯಾಂ (ತೈ.ಉ.೨.೧.)। ಇತ್ಯುಕ್ತಂ। ತಚ್ಚ ಗುಹಾನಿಹಿತಂ— ವಿ ಮೇ ಕರ್ಣಾ ಪತಯತೋ ವಿ ಚಕ್ಷುರ್ವೀಣದಂ ಜ್ಯೋತಿ ಹೃದಯ ಆಹಿತಂ ಯತ್। ವಿ ಮೇ ಮನಶ್ಚರತಿ ದೂರ ಆಧೀಃ ಕಿಂ ಸ್ವಿದ್ವಕ್ಷ್ಯಾಮಿ ಕಿಮುನೂ ಮನಿಷ್ಯೇ (ಋ.೬.೯.೬.)॥ ಇತಿ ಜ್ಯೋತಿರುಕ್ತಂ ॥ ೧ ॥**

ಭಾಷ್ಯಾರ್ಥ ॥ ಮಂತ್ರವರ್ಣದಲ್ಲಿರತಕ್ಕ **ಯೋ ವೇದ ನಿಹಿತಂ ಗುಹಾಯಾಂ** ಎನ್ನುವ ವಾಕ್ಯದಿಂದ ಹೃದಯಗುಹೆಯಲ್ಲಿರತಕ್ಕ ಯಾವ ವಸ್ತುವು ಕೇಳಲ್ಪಟ್ಟದೋ, ಅದೇವೇ ಆನಂದಮಯ ಮೊದಲಾದ ಹೆಸರು ಉಳ್ಳದ್ದು ಎಂದು ಹೇಳಲ್ಪಟ್ಟದೆ. ಅದೇವೇ **ವಿಮೇ ಕರ್ಣಾ** ಎನ್ನುವ ವಾಕ್ಯದಲ್ಲಿ ಜ್ಯೋತಿಶ್ಶಬ್ದದಿಂದ ಹೇಳಲ್ಪಟ್ಟದೆ. ಯಾವ ಕಾರಣದಿಂದ ನನ್ನ ಕಿವಿಗಳು ಜ್ಯೋತಿಸ್ಸಿನಿಂದ ವಿರುದ್ಧವಾಗಿ ಬೀಳುತ್ತವೋ, ಚಕ್ಷುರಿಂದ್ರಿಯವೂ ಕೂಡ ವಿರುದ್ಧವಾಗಿ ಬೀಳುತ್ತದೋ, ಯಾವ ಈ ಹೃದಯದಲ್ಲಿ ಚೆನ್ನಾಗಿ ಇರತಕ್ಕ ಜ್ಯೋತಿಸ್ಸೋ, ಅದು ಅತ್ಯಂತವಾಗಿ ಕರ್ಣಾದಿಗಳಿಗೆ ದೂರವಾಗಿದೆ. ಹೀಗೆಯೇ ನನ್ನ ಮನಸ್ಸು ಜ್ಯೋತಿಸ್ಸಿನಿಂದ ದೂರದಲ್ಲಿ ಇರುತ್ತದೆ. ಅಂದರೆ ಅತ್ಯಂತ ವಿರುದ್ಧವಾಗಿದೆ. ಆದಕಾರಣ ಸ್ವಲ್ಪ ಬುದ್ಧಿಯುಳ್ಳ ನಾನು ಅಥವಾ ವ್ಯಾಪ್ತವಾದ ಬುದ್ಧಿಯುಳ್ಳವನಾದಾಗ್ಯೂ ಅಥವಾ ತತ್ವಪ್ರದೀಪದ ರೀತಿಯಾಗಿ ಚೆನ್ನಾಗಿ ದೂರದಲ್ಲಿರತಕ್ಕ ಬುದ್ಧಿಯುಳ್ಳ ನಾನು ಏನು ಹೇಳುವೆನು. ಏನು ತಾನೆ ಈಗ ಆಲೋಚಿಸುವೆನು— ಎಂದು ಅಗ್ನಿಸೂಕ್ತದಲ್ಲಿ ಹೃದಯಗುಹೆಯಲ್ಲಿರತಕ್ಕ ಜ್ಯೋತಿಸ್ಸು ಉಕ್ತವಾಗಿದೆ.

ವಿಶೇಷಾಂಶ ॥ (ಎ) ಜ್ಯೋತಿಸ್ಸು ವಿಷ್ಣುವಿನಿಂದ ಭಿನ್ನವಾಗಿರುವುದರಿಂದ ಗುಹಾನಿಹಿತತ್ವರೂಪ ಜ್ಯೋತಿಸ್ಸಿನಲ್ಲಿರುವ ಧರ್ಮದಿಂದ ಕೂಡಿರುವ ಆನಂದಮಯತ್ವವು ವಿಷ್ಣುವಿನಿಂದ ಇತರರಲ್ಲಿರತಕ್ಕುದೆಂದು ಆಕ್ಷೇಪಿಸುವುದರಿಂದ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. (ಬಿ) ಜ್ಯೋತಿಸ್ಸು ವಿಷಯವು. ಅಗ್ನಿಯೋ ವಿಷ್ಣುವೋ ಎಂದು ಸಂದೇಹವೂ ಸೂಚಿತ ವಾಯಿತು. (ಸಿ) ವಿಮೇ ಎನ್ನುವ ಋಙ್ಮಂತ್ರದಲ್ಲಿ ವಿ ಎನ್ನುವ ಉಪಸರ್ಗಗಳಿಗೆ ಕ್ರಿಯಾಪದದಿಂದ ಅನ್ವಯವು. ಧಾತುವಿಗೇನೇ ವಿಚರಣ ಎನ್ನುವ ಅರ್ಥವು. ಉಪಸರ್ಗಗಳು ಆ ಅರ್ಥ ಕ್ಕೆ ದ್ಯೋತಕಗಳು. ಆದಪ್ರಯುಕತವೇ ಸೂತ್ರದಲ್ಲಿ ಚರಣಾಭಿಧಾನಾತ್ ಎಂದೇ ಹೇಳಿರುವರು. ತತ್ವಪ್ರದೀಪದಲ್ಲಿ ಸ್ಪಷ್ಟತ್ವಾಯ ವಿಚರಣಾಭಿಧಾನಾತ್ ಇತ್ಯುಕ್ತಂ ಭಾಷ್ಯದಲ್ಲಿ ಸ್ಪಷ್ಟವಾಗುವುದಕ್ಕಾಗಿ ವಿಚರಣಾಭಿಧಾನಾತ್ ಎಂದು ಹೇಳಿದ್ದೆಂದು ತತ್ವಪ್ರದೀಪದಲ್ಲಿ ಹೇಳಿದ್ದಾರೆ.

ಪೀಠಿಕೆ ॥ ಸಯುಕ್ತಿಕವಾಗಿ ಪೂರ್ವಪಕ್ಷ ಮಾಡುತ್ತಾರೆ—

**ಭಾಷ್ಯ ॥ ತಚ್ಚ ಜ್ಯೋತಿರಗ್ನಿಸೂಕ್ತತ್ವಾತ್ ಪ್ರಸಿದ್ಧೇಶ್ಚಾಗ್ನಿರೇವ । ಇತಿ ಪ್ರಾಪ್ತಂ ॥ ೨ ॥**

ಭಾಷ್ಯಾರ್ಥ ॥ ಆ ಜ್ಯೋತಿಸ್ಸು ಹೃದಯಗುಹೆಯಲ್ಲಿದ್ದರೂ ಅಗ್ನಿಯೇ ಆಗಬೇಕೆಂದು ಪ್ರಾಪ್ತವಾಯಿತು. ಜ್ಯೋತಿಶ್ರುತಿಗೆ ಆ ಅಗ್ನಿಯಲ್ಲಿಯೇ ರೂಢಿಯಿದ್ದ ಪ್ರಯುಕ್ತ ಶ್ರುತಿಯಿಂದ ಮಾತ್ರ ಈ ಜ್ಯೋತಿಸ್ಸು ಅಗ್ನಿಯು ಎಂದಲ್ಲ. ಮತ್ತೆ ಆ ಜ್ಯೋತಿಸ್ಸು ಅಗ್ನಿಸೂಕ್ತದಲ್ಲಿದ್ದುದು. (ಅಗ್ನಿಪ್ರಕರಣದಲ್ಲಿರ ತಕ್ಕುದು) ಆದುದರಿಂದಲೂ—

**ವಿಶೇಷಾಂಶ ॥** (ಎ) ಶ್ರುತಿಪ್ರಕರಣಗಳು ಪ್ರಬಲಗಳು ಎನ್ನುವ ಅಭಿಪ್ರಾಯದಿಂದ ಭಾಷ್ಯದಲ್ಲಿ ಅಗ್ನಿಸೂಕ್ತಸ್ಥತ್ವಾಚ್ಚ ಎಂದು ಚಶಬ್ದಪ್ರಯೋಗವು ಎಂದು ಚಂದ್ರಿಕಾದಲ್ಲಿ ಹೇಳಿದೆ. (ಬಿ) ಶ್ರುತಿಪ್ರಕರಣ ಗಳಿಂದ ಹೃದಯಗುಹಾನಿಹಿತತ್ವರೂಪವಾದ ಲಿಂಗಮಾತ್ರಕ್ಕೆ ಬಾಧವಿದ್ದಪ್ರಯುಕ್ತ ಈ ಜ್ಯೋತಿಸ್ಸೂ ಹೃದಯಗುಹೆಯಲ್ಲಿದ್ದುದೂ ಅಗ್ನಿಯೇ ಆಗಬೇಕು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕಾ ಕೊಡುತ್ತಾರೆ—

**ಭಾಷ್ಯ ॥ ಅತ ಆಹ—** ॥ ೩ ॥

**ಭಾಷ್ಯಾರ್ಥ ॥** ಯಾವ ಕಾರಣದಿಂದ ಪೂರ್ವಪಕ್ಷವು ಪ್ರಾಪ್ತವಾಗಿದೆಯೋ ಆದುದರಿಂದ ಸೂತ್ರಕಾರರು ಉತ್ತರರೂಪವಾದ ಸೂತ್ರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಜ್ಯೋತಿಶ್ಚರಣಾಭಿಧಾನತ್ ಓಂ ॥ ೨೪ ॥

**ಸೂತ್ರಾರ್ಥ ॥** **ಜ್ಯೋತಿರ್ಹೃದಯ ಆಹಿತಂ** ಎನ್ನುವ ಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಸ್ಸು ಪರಬ್ರಹ್ಮನೇ. ಅಗ್ನಿಸೂಕ್ತದಲ್ಲಿದ್ದುದರಿಂದ ಅಗ್ನಿಯಲ್ಲ. **ವಿಮೇ ಕರ್ಣಾ ಪತಯತಃ** ಇತ್ಯಾದಿಗಳಿಂದ ಕರ್ಣಾದಿಗಳಿಗೆ ವಿಚರಣವನ್ನು ಹೇಳಿಯದೆ. ಅಂದರೆ ಕರ್ಣ ಮೊದಲಾದ ಎಲ್ಲಾ ಇಂದ್ರಿಯಗಳಿಗೂ ವಿದೂರತ್ವರೂಪಲಿಂಗವಿದ್ದುದರಿಂದ. ಅಂದರೆ ಅಪರಿಚ್ಛಿನ್ನ ವೈಭವವಿದ್ದ ಪ್ರಯುಕ್ತ.

**ವಿಶೇಷಾಂಶ ॥** (ಎ) ಪ್ರಕಾಶರೂಪ ಅರ್ಥವನ್ನು ಹೇಳುವುದರಿಂದ ಅಥವಾ ಪ್ರಧಾನ ವಾದುದರಿಂದ ಅಥವಾ ಪೂರ್ವಪಕ್ಷಾಕ್ಷೇಪಕಹೃದಯಗುಹಾನಿಹಿತತ್ವವಿದ್ದಪ್ರಯುಕ್ತ ಇತರಗಳಿಗೆ ಉಪಲಕ್ಷಕವಾಗಿ ಜ್ಯೋತಿಸ್ಸನ್ನು ಹೇಳಿದ್ದಾರೆ. (ಬಿ) ವಿಚರಣ ಎಂದು ಹೇಳದೆ ಚರಣ ಎಂದು ಹೇಳಿದ್ದು ಉಪಸರ್ಗವು ದ್ಯೋತಕವೇ ಎಂದು ತಿಳಿಸುವುದಕ್ಕಾಗಿ ಅಥವಾ **ವಿಮೇ ಮನಶ್ಚರತಿ** ಎಂದು ಶ್ರುತ್ಯನುಗಮವನ್ನು ತೋರಿಸುವುದಕ್ಕಾಗಿ.

**ಪೀಠಿಕೆ ॥** ಸೂತ್ರದಲ್ಲಿ ತತ್ತು ಎನ್ನುವುದಕ್ಕೆ ಅನುವೃತ್ತಿಯನ್ನು ಮಾಡಿಕೊಂಡು ಪ್ರತಿಜ್ಞಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ವಿಷ್ಣುರೇವ ಜ್ಯೋತಿಃ ಕರ್ಣಾದೀನಾಂ ವಿಚರಣಾಭಿಧಾನಾತ್ ॥ ೪ ॥**

**ಭಾಷ್ಯಾರ್ಥ ॥** ಜ್ಯೋತಿಶ್ಶಬ್ದವಾಚ್ಯನು ವಿಷ್ಣುವೇ ಆಗಬೇಕು. ಕರ್ಣಾದಿಗಳಿಗೆ ಈ ಜ್ಯೋತಿಸ್ಸನ್ನು ಕುರಿತು ವಿರುದ್ಧ ಚರಣವನ್ನು ಹೇಳಿದುದರಿಂದ ಕರ್ಣಾದಿಗಳಿಗೆ ವಿದೂರತ್ವರೂಪವಾದ ಲಿಂಗವು ಶ್ರುತವಾದುದರಿಂದ. ಕರ್ಣಾದಿವಿದೂರತ್ವವೆಂದರೆ ಕರ್ಣಾದಿಗಳಿಂದ ಇಷ್ಟೇ ಎಂದು ಪರಿಚ್ಛೇದಕ್ಕೆ ಅಯೋಗ್ಯವಾದ ವೈಭವವಿರುವಿಕೆಯು.

**ಪೀಠಿಕೆ ॥** ಹಾಗಾದರೆ ಜ್ಯೋತಿಸ್ಸಿಗೆ ಕರ್ಣಾದಿವಿದೂರತ್ವೋಕ್ತಿಯು ಇರಲಿ. ಆದರಿಂದ ಜ್ಯೋತಿಸ್ಸು ವಿಷ್ಣುವೆನ್ನುವುದು ಹೇಗೆ ಆಗುವುದು ಎಂದರೆ— ಕರ್ಣಾದಿವಿದೂರತ್ವವು ಕೇವಲ ವಿಷ್ಣುಲಿಂಗವು ಎನ್ನುವ ವಿಷಯದಲ್ಲಿ ಶ್ರುತಿಯನ್ನುದಾಹರಿಸುತ್ತಾ ಅದನ್ನು ಪ್ರತಿಜ್ಞಾ ಮಾಡುತ್ತಾರೆ—

**ಭಾಷ್ಯ ॥ ಸ ಹಿ 'ಪರೋ ಮಾತ್ರಯಾ ತನ್ವಾ ವೃಧಾನ (ಋ.೭.೯೮.೧.)। ಇತ್ಯಾದಿನಾ ಕರ್ಣಾದಿವಿದೂರಃ ॥ ೧೦ ॥ ॥ ೬ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಆ ವಿಷ್ಣುವೇ ಮಾತ್ರಯಾ = (ಮಾಪಯತಿ ಜ್ಞಾಪಯತಿ ವಿಷಯಾನ್ ಅಥವಾ ಮೀಯಂತೇ ವಿಷಯಾಃ ಅನೇನ ಎನ್ನುವ ವ್ಯುತ್ಪತ್ತಿಯಿಂದ) ಇಂದ್ರಿಯಗಣದಿಂದ ನೀನು ದೂರನಾಗಿರುತ್ತಿ. ದೇಹದಿಂದಲೇ ಅಭಿವೃದ್ಧನಾದ ವಿಷ್ಣುವೇ, (ನಿನ್ನ ಮಹಿಮೆಯನ್ನು ಯಾರೊಬ್ಬನೂ ಶ್ರೋತ್ರಾದಿಗಳಿಂದ ಹೊಂದಲಿಲ್ಲ) ಇದು ಮೊದಲಾದ ವಾಕ್ಯಗಳಿಂದ ಕರ್ಣಾದಿ ವಿದೂರನೆಂದು ವಿಷ್ಣುವೇ ಪ್ರಮಿತನಾಗಿರುತ್ತಾನೆ.

**ವಿಶೇಷಾಂಶ ॥ ಜ್ಯೋತಿಶ್ಚರಣಾಭಿಧಾನಾತ್** ಇದು ಮೊದಲಾದ ನಾಲ್ಕು ಸೂತ್ರಗಳೂ ಒಂದೇ ಅಧಿಕರಣವೆಂದು ತತ್ವಪ್ರದೀಪಸನ್ನ್ಯಾಯರತ್ನಾವಳೀಕಾರರ ಅಭಿಪ್ರಾಯವು. ಜ್ಯೋತಿಸ್ಸೂತ್ರವು ಒಂದು ಅಧಿಕರಣವು. **ಛಂದೋಭಿಧಾನಾತ್** ಇದು ಮೊದಲಾದುದು ಮೂರು ಸೂತ್ರಗಳು ಅಧಿಕರಣಾಂತರವು ಎಂದು ಟೀಕಾಕಾರರ ಅಭಿಪ್ರಾಯವು.

## ಅಧಿಕರಣ ಸಾರಾಂಶ

**ಜ್ಯೋತಿರ್ಹೃದಯ ಆಹಿತಂ** ಎನ್ನುವ ಅಗ್ನಿಸೂಕ್ತದಲ್ಲಿ ಹೃದಯಗುಹೆಯಲ್ಲಿರುವ ಜ್ಯೋತಿಸ್ಸು ಉಕ್ತವಾಗಿದೆ. ಆ ಜ್ಯೋತಿಸ್ಸು ಪ್ರಸಿದ್ಧ್ಯಾದಿಗಳು ಇದ್ದುದರಿಂದ ಅಗ್ನಿಯೇ ಎಂದು ಪೂರ್ವಪಕ್ಷ ಬಂದರೆ **ವಿ ಮೇ ಕರ್ಣಾ ಪತಯತಃ** ಎಂದು ಕರ್ಣಾದಿಗಳಿಗೆ ವಿರುದ್ಧ ಚರಣವನ್ನು ಹೇಳಿದ್ದರಿಂದ ಅಂದರೆ ನಿರತಿಶಯ ವೈಭವವತ್ತ್ವರೂಪವಾದ ನಿರವಕಾಶವಾದ ವಿಷ್ಣುಲಿಂಗವಿದ್ದುದರಿಂದ ಅಗ್ನಿಸೂಕ್ತದಲ್ಲಿದ್ದ ಜ್ಯೋತಿಶ್ಶಬ್ದ ವಾಚ್ಯನು ವಿಷ್ಣುವೇ ಎಂದು ಸಿದ್ಧಾಂತವು. (೨) **ಕರ್ಣಾದೀನಾಂ ವಿದೂರತ್ವಂ ವಿಷ್ಣೋರನ್ಯತ್ರ ನೈವ ಹಿ । ಅಗ್ನೇಸ್ತು ಶ್ರುತಿಸೂಕ್ತಾದಿ ಸಾವಕಾಶಂ ಪರಾತ್ಮನಿ ॥ ಅಗ್ನಿನಾಗ್ನಿಃ ಸಮಿಧ್ಯತೇ, ತದ್ದೇವಾ ಜ್ಯೋತಿಷಾಂ ಜ್ಯೋತಿಃ, ನಾರಾಯ ಣಪರೋ ಜ್ಯೋತಿಃ, ವಿಷ್ಣುರೇವ ಜ್ಯೋತಿಃ, ಅಹಮಗ್ನಿರಹಂ ಹುತಂ, ಜ್ಯೋತಿ ಷಾಮಪಿ ತಜ್ಜ್ಯೋತಿಃ.** ಇದು ಮೊದಲಾದ ಶ್ರುತಿಸ್ಮೃತಿಗಳಿಂದ ಅಗ್ನಿಶ್ರುತ್ಯಾದಿಗಳು ವಿಷ್ಣುವಿನಲ್ಲಿ ಸಾವಕಾಶಗಳಾಗಿವೆ. ಆದುದರಿಂದ ಈ ಜ್ಯೋತಿಶ್ಶಬ್ದವಾಚ್ಯನೂ ಪೂರ್ವೋಕ್ತ ಗುಹಾನಿಹಿತತ್ವಯುಕ್ತವಾದ ಆನಂದಮಯನೂ ವಿಷ್ಣುವೇ.

**ಜ್ಯೋತಿರಧಿಕರಣವು ಸಮಾಪ್ತವಾಯಿತು.**

# ೧೧ ಗಾಯತ್ರ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ವೇದಗಳಲ್ಲಿರತಕ್ಕ ಗಾಯತ್ರೀ ಮೊದಲಾದ ಎಲ್ಲಾ ಶಬ್ದಗಳಿಗೆ ಸಮನ್ವಯವನ್ನು ಮಾಡುತ್ತಾರೆ. ಸಂಗತಿ ಮೊದಲಾದ ವಿಚಾರವನ್ನು ತಿಳಿಸುವುದಕ್ಕಾಗಿ ಸೂತ್ರವನ್ನೇ ಆದಿಯಲ್ಲಿ ಹೇಳುತ್ತಾರೆ—

## ಸೂತ್ರ ॥ ಓಂ ಛಂದೋಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣ ನಿಗದಾತ್ತಥಾ ಹಿ ದರ್ಶನಂ ಓಂ ॥ ೨೫ ॥

**ಸೂತ್ರಾರ್ಥ ॥ ಛಂದೋಽಭಿಧಾನಾತ್**=**ಗಾಯತ್ರೀ ವಾ ಇದಂ** ಎನ್ನುವ ವಾಕ್ಯದಲ್ಲಿರತಕ್ಕ ಗಾಯತ್ರೀ ಶಬ್ದದಿಂದ ಇಪ್ಪತ್ತನಾಲ್ಕು ಅಕ್ಷರಗಳುಳ್ಳ ಮಂತ್ರವಿಶೇಷರೂಪವಾದ ಛಂದಸ್ಸನ್ನು ಪ್ರತಿಪಾದಿಸಿದ್ದರಿಂದ ಅಂದರೆ ಗಾಯತ್ರೀಶಬ್ದಕ್ಕೆ ಆ ಮಂತ್ರವಿಶೇಷದಲ್ಲಿ ರೂಢಿಯಿದ್ದ ಪ್ರಯುಕ್ತ ಗಾಯತ್ರೀಶಬ್ದವಾಚ್ಯನು ವಿಷ್ಣು ವಲ್ಲ, ಮತ್ತೆ ಛಂದಸ್ಸೇ. ಯಾವ ಕಾರಣದಿಂದ ಗಾಯತ್ರೀಶಬ್ದವಾಚ್ಯನು ವಿಷ್ಣುವಲ್ಲವೋ, ಮತ್ತೆ ಛಂದಸ್ಸೇ ಆಗುತ್ತದೋ, ಆದಕಾರಣ **ಅಥ ಯದತಃ ಪರಃ ದಿವಃ ಜ್ಯೋತಿರ್ದೀಪ್ಯತೇ** ಎನ್ನುವಲ್ಲಿದ್ದ ಜ್ಯೋತಿಶ್ಶಬ್ದವಾಚ್ಯನೂ ವಿಷ್ಣುವಲ್ಲ, ಮತ್ತೆ ಛಂದಸ್ಸೇ. ಏಕೆಂದರೆ— ಗಾಯತ್ರಿಗೆ ಛಂದಸ್ಸಿನಿಂದ ಐಕ್ಯವನ್ನು ಅಭಿಪ್ರಾಯ ಮಾಡಿಕೊಂಡು ಜ್ಯೋತಿಸ್ಸನ್ನು ಉಪಕ್ರಮಿಸಿದ್ದರಿಂದ. ಎಂದು ಶಂಕಿಸಿದರೆ— ಹೀಗೆ ಹೇಳಕೂಡದು. ವಿಷ್ಣುವೇ ಜ್ಯೋತಿಶ್ಶಬ್ದವಾಚ್ಯನು. ಏಕೆಂದರೆ— ನಿಗದಾತ್= ಗಾಯತ್ರೀಪದದಿಂದ ವಿಷ್ಣುವನ್ನೇ ಹೇಳಿದ್ದರಿಂದ. ಗಾಯತ್ರೀ ಮೊದಲಾದ ಪದಗಳಿಂದ ಶ್ರೀವಿಷ್ಣುವನ್ನೇ ಹೇಳಿದ್ದು ಅಭೇದವನ್ನು ವಿಧಾನಮಾಡುವುದಕ್ಕಾಗಿ ಅಲ್ಲ, ಮತ್ತೆ ಹಾಗೆ ಉಪಾಸನಾ ಮಾಡುವುದಕ್ಕಾಗಿಯೇ ಎನ್ನುತ್ತಾರೆ— ತಥಾ=ಗಾಯತ್ರೀ ಮೊದಲಾದ ಶಬ್ದಾರ್ಥಗುಣಸ್ವರೂಪನೆಂದು ಚೇತೋಽರ್ಪಣನಿಗದಾತ್= ಮನಸ್ಸನ್ನು ಬ್ರಹ್ಮನಲ್ಲಿ ಇಡುವುದಕ್ಕಾಗಿ ಅಂದರೆ ಬ್ರಹ್ಮನನ್ನು ಹಾಗೆ ಉಪಾಸನಾ ಮಾಡುವುದಕ್ಕಾಗಿಯೇ ಹೇಳಿದ್ದರಿಂದ. (ಹಾಗಾದರೆ ಗಾಯತ್ರೀಶಬ್ದವಾಚ್ಯತ್ವವು ವಿಷ್ಣುವಿಗೆ ಪ್ರಮಿತವಾಗಿದ್ದರೆ ಗಾಯತ್ರೀಶಬ್ದವಾಚ್ಯನಾದುದರಿಂದ ವಿಷ್ಣುವೇ ಜ್ಯೋತಿಶ್ಶಬ್ದವಾಚ್ಯನೆಂದು ಸಾಧಿಸ ಬಹುದಿತ್ತು, ಅದೇವೇ ಹೇಗೆ ಕೂಡುತ್ತದೆ ಎಂದರೆ—) ಹಿ =ಯಾವ ಕಾರಣದಿಂದ, ತಥಾ=ಗಾನ ತ್ರಾಣ ಕರ್ತೃತ್ವವಿದ್ದುದರಿಂದ ವಿಷ್ಣುವಿಗೆ ಗಾಯತ್ರೀಶಬ್ದವಾಚ್ಯತ್ವವನ್ನು ಸಾಧಿಸತಕ್ಕ, ದರ್ಶನಂ=ದೃಶ್ಯತೇ= ಜ್ಞಾಯತೇ ಅರ್ಥಃ ಯಯಾ ಎನ್ನುವ ವ್ಯುತ್ಪತ್ತಿಯಿಂದ **ಗಾಯತಿ ಚ ತ್ರಾಯತಿ ಚ** ಇತ್ಯಾದಿ ರೂಪವಾದ ಶ್ರುತಿಯು ಇದೆಯೋ, ಆದುದರಿಂದ.

**ಭಾಷ್ಯ ॥ ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ (ಛಾ.೩.೧೩.೭.) ಇತ್ಯುಕ್ತಸ್ಯ ಜ್ಯೋತಿಷೋ 'ಗಾಯತ್ರೀ ವಾ ಇದಂ ಸರ್ವಂ' (ಛಾ.೩.೧೨.೧.) ಇತಿ ಗಾಯತ್ರ್ಯಾ ಸಮಾರಂಭಃ ಕೃತಃ। ತಸ್ಮಾನ್ನ ವಿಷ್ಣುರಿತಿ ಚೇತ್ ॥ ೧ ॥**

**ಭಾಷ್ಯಾರ್ಥ ॥** (ಹೃದಯೇ ಆಹಿತಂ ಯತ್ ಎಂದು ಹೃದಯಗುಹೆಯಲ್ಲಿ ಇರತಕ್ಕುದೆಂದು ಯಾವ ಜ್ಯೋತಿಸ್ಸು ಹೇಳಲ್ಪಟ್ಟದೋ, ಆ ಜ್ಯೋತಿಸ್ಸೇ) **ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷೂತ್ತಮೇಷು ಲೋಕೇಷು ಇದಂ ವಾವತದ್ಯದಿದಮಸ್ಮಿ ನ್ನಂತಃಪುರುಷೇ ಜ್ಯೋತಿಃ ॥** ಅಥ=ಶ್ರೀಹರಿಯ ಬೇರೆ ಮಹಿಮೆಯು ಆರಂಭಿಸ ಲ್ಪಡುತ್ತದೆ. ಯತ್=ಶ್ವೇತದ್ವೀಪಅನಂತಾಸನವೈಕುಂಠಗಳಲ್ಲಿರತಕ್ಕ ನಾರಾಯಣ ವಾಸುದೇವ ವೈಕುಂಠಾಖ್ಯವಾದ ಯಾವ ರೂಪತ್ರಯವಿದೆಯೋ, ಅದು. ಅತಃ=ಈ ವಿವಕ್ಷಿತವಾದ ಬುದ್ಧಿಸ್ಥವಾದ, ದಿವಃ=ಸ್ವರ್ಗಲೋಕದಿಂದ, ಪರಃ=ಅದಕ್ಕಿಂತ ಉಚ್ಚಸ್ಥಾನದಲ್ಲಿರತಕ್ಕುದು. ಜ್ಯೋತಿಃ=ತೇಜೋಮಯ

ವಾದುದು. ★ವಿಶ್ವತಃ ಪೃಷ್ಠೇಷು=ಅಂತರಿಕ್ಷದಲ್ಲಿರತಕ್ಕ ವೈಜಯಂತ, ಮೇರು, ಸತ್ಯಲೋಕಗಳಲ್ಲಿರತಕ್ಕ ಚತುರ್ಮುಖ ಮಂದಿರಗಳ ದೆಶೆಯಿಂದ ಕ್ರಮದಿಂದ ಉನ್ನತಗಳಾದ, ಸರ್ವತಃ ಪೃಷ್ಠೇಷು=ಅಂತರಿಕ್ಷ ಪೃಥಿವೀ ಸ್ವರಾತ್ಮಕಗಳಾದ ಲೋಕಗಳ ದೆಶೆಯಿಂದ ಕ್ರಮದಿಂದ ಉಚ್ಚಗಳಾದ, ಅನುತ್ತಮೇಷು=ನ ವಿದ್ಯತೇ ಉತ್ತಮಃ ಲೋಕಃ ಯೇಭ್ಯಸ್ತೇ ಎನ್ನುವ ವ್ಯುತ್ಪತ್ತಿಯಿಂದ ಇದಕ್ಕಿಂತ ಉತ್ತಮ ಲೋಕದಲ್ಲಿರುವ, ಉತ್ತಮೇಷು = ಸ್ವತ ಏವ ಉತ್ತಮಗಳಾದ, ಲೋಕೇಷು=ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿ ದೀಪ್ಯತೇ =ಪ್ರಕಾಶಿಸುತ್ತದೋ, ತತ್=ಅಂತಹ ಪ್ರಕಾಶಮಾನವಾದ ತೇಜಸ್ಸು ಇದಂ ವಾವ=ಇದಷ್ಟೇ ಯದಿದಂ ಅಸ್ಮಿನ್ ಪುರುಷೇ=ಯಾವುದು ಈ ಹೃದಯದಲ್ಲಿ ಅಂತಃ=ಒಳಗೆ, ಜ್ಯೋತಿಃ= ಜ್ಯೋತಿಶ್ಶಬ್ದವಾಚ್ಯನಾದ ಬ್ರಹ್ಮನು ಇದ್ದಾನೆ. ಅಂದರೆ ಜ್ಯೋತಿಸ್ಸು ಬ್ರಹ್ಮರಿಗೆ ಐಕ್ಯವು ಎಂದು ಛಾಂದೋಗ್ಯದಲ್ಲಿಯೂ ಜ್ಯೋತಿಸ್ಸು ಹೇಳಲ್ಪಟ್ಟಿದೆ. ಅಂತಹ ಜ್ಯೋತಿಸ್ಸು ಗಾಯತ್ರೀರೂಪವಾಗಿ ಪಠಿತವಾಗಿದೆ. (ಇದು ಹೇಗೆ ತಿಳಿಯುತ್ತದೆ ಎಂದರೆ—) ಗಾಯತ್ರೀ ವಾ ಇದಂ ಸರ್ವಂ ವಾಗ್ವಾ ಗಾಯತ್ರೀ ವಾಗ್ವಾ ಇದಂ ಸರ್ವಂ ಯಾವನು ಗಾಯತ್ರೀನಾಮಕನಾದ ಗಾಯತ್ರಿಯಲ್ಲಿರತಕ್ಕ ಸ್ತ್ರೀರೂಪನಾದ ಹಯಗ್ರೀವರೂಪಿಯಾದ ಶ್ರೀಪರಮಾತ್ಮನೋ, ಆ ಇದು ಪ್ರಥಮರೂಪವು ಎನ್ನುವ ಅಭಿಪ್ರಾಯದಿಂದ ಆತನ ಎರಡನೇ ರೂಪವನ್ನೇ ಹೇಳುವುದಕ್ಕಾಗಿ ಗಾಯತ್ರೀ ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. ಇದಂ = ಪೂರ್ಣವಾದ ಯಾವುದು ಮತ್ಸ್ಯಾದ್ಯವತಾರರೂಪವೋ, ಸರ್ವಂ= ಸರ್ವಾಂತರ್ಗತವಾದ ಯಾವುದು ರೂಪವೋ, ತತ್ಸರ್ವಂ=ಅದೆಲ್ಲವೂ, ಗಾಯತ್ರೀ ವಾ=ಗಾಯತ್ರೀ ನಾಮಕ ಶ್ರೀಹರಿಯೇ ಪ್ರಸಿದ್ಧವು. (ಆತನ ಮೂರನೇ ರೂಪವನ್ನು ಹೇಳುತ್ತಾರೆ.) ಗಾಯತ್ರೀ= ಗಾಯತ್ರಿ ನಾಮಕ ಶ್ರೀಹರಿಯು, ವಾಗ್ವೈ=ವಾಕ್ ನಾಮಕನಾದ ವಿಷ್ಣುವೇ, (ವಾಕಿಗೆ ವಿಷ್ಣುತ್ವವು ಹೇಗೆಂದರೆ—) ಇದಂ ಸರ್ವಂ=ಈ ಎಲ್ಲಾ ಪ್ರಾಣಿಸಮುದಾಯವು, ವಾಗ್ವೈ=ವಾಕ್ ನಾಮಕನಾದ ಶ್ರೀಹರಿಯ ಅಧೀನವೇ. ಆದುದರಿಂದ ಸರ್ವರಿಗೂ ಸ್ವಾಮಿಯಾದುದರಿಂದ ವಾಕಿಗೆ ವಿಷ್ಣುತ್ವವು ಕೂಡುತ್ತದೆ. ಎನ್ನುವ ವಾಕ್ಯದಲ್ಲಿ ಗಾಯತ್ರೀ ಶಬ್ದದಿಂದ ಜ್ಯೋತಿಸ್ಸು ಗಾಯತ್ರಿಗಳಿಗೆ ಐಕ್ಯತಾತ್ಪರ್ಯದಿಂದ ಉಪಕ್ರಮವು ಮಾಡಲ್ಪಟ್ಟಿದೆ. ತಸ್ಮಾತ್=ಆದುದರಿಂದ, ನ ವಿಷ್ಣುಃ=ವಿಷ್ಣುವಲ್ಲ ಇತಿ ಚೇತ್=ಎಂದರೆ.

**ವಿಶೇಷಾಂಶ ॥** (ಎ) ಯಾವ ಕಾರಣದಿಂದ ಗಾಯತ್ರಿಯಿಂದ ಸಮಾರಂಭವು ಮಾಡಲ್ಪಟ್ಟಿದೋ, ಅದು ವಿರೋಧಿಶೂನ್ಯವಾದುದರಿಂದ ಪ್ರಬಲವಾಗಿದೆ. ಆದಪ್ರಯುಕ್ತ ಈ ಜ್ಯೋತಿಸ್ಸು ಗಾಯತ್ರಿಯೇ ಆಗಬೇಕು. ಆ ಗಾಯತ್ರಿಯು ವರ್ಣಸಮಾವೇಶರೂಪವಾದ ಮಂತ್ರಾತ್ಮಕವಾದ ಶಬ್ದವೇ ಆಗಬೇಕು. ವಿಷ್ಣುವಲ್ಲ, ಏಕೆಂದರೆ— ಗಾಯತ್ರೀ ಶಬ್ದವು ಛಂದಸ್ಸಿನಲ್ಲಿಯೇ ರೂಢವಾಗಿದೆ. ಅಲ್ಲದೆ ಗಾಯತ್ರಿಗೆ ವಾಕ್ತ್ವವನ್ನೂ ವಿಧಾನಮಾಡಿದ್ದಾರೆ. (ಬಿ) ಗಾಯತ್ರೀ ವಾ ಇದಂ ಸರ್ವಂ ಎನ್ನುವ ಪೂರ್ವವಾಕ್ಯದಲ್ಲಿದ್ದ ಗಾಯತ್ರೀ ಶಬ್ದವು ವಿಷ್ಣುವಿನಿಂದ ಇತರಪರವಾದರೆ ಉತ್ತರ ವಾಕ್ಯದಲ್ಲಿದ್ದ ಜ್ಯೋತಿಸ್ಸೂ ವಿಷ್ಣುವಿನಿಂದ ಭಿನ್ನವಾಗಬೇಕು. ಆದುದರಿಂದಲೇ ಅಗ್ನಿಸೂಕ್ತದಲ್ಲಿದ್ದ ಜ್ಯೋತಿಸ್ಸು ವಿಷ್ಣುಭಿನ್ನವೇ ಆಗಬೇಕು. ಆದುದರಿಂದಲೇ ಆನಂದಮಯತ್ವವೂ ಭಿನ್ನನಿಗೇನೇ ಇರಬೇಕು. ವಿಷ್ಣುವಿಗೆ

---

★ ಪೃಥಿವ್ಯಾಂ ಬ್ರಹ್ಮಣೋ ಮೇರುಃ ವೈಜಯಂತೋಽಂತರಿಕ್ಷಗಃ। ತೃತೀಯಂ ಸತ್ಯಲೋಕೇ ಚ ಸದನಂ ತ್ರಿವಿಧಂ ಸ್ಮೃತಂ॥
ತೇಭ್ಯೋಽನಂತನಾದ್ಯಾಃ ಯತ್ಪರ ತೋ ವಿಶ್ವತಃ ಪರೇ॥

## ಸೂತ್ರ ॥ ಓಂ ಛಂದೋಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣ ನಿಗದಾತ್ತಥಾ ಹಿ ದರ್ಶನಂ ಓಂ ॥ ೨೫ ॥

**ಸೂತ್ರಾರ್ಥ** ॥ ಛಂದೋಽಭಿಧಾನಾತ್=ಗಾಯತ್ರೀ ವಾ ಇದಂ ಎನ್ನುವ ವಾಕ್ಯದಲ್ಲಿರತಕ್ಕ ಗಾಯತ್ರೀ ಶಬ್ದದಿಂದ ಇಪ್ಪತ್ತನಾಲ್ಕು ಅಕ್ಷರಗಳುಳ್ಳ ಮಂತ್ರವಿಶೇಷರೂಪವಾದ ಛಂದಸ್ಸನ್ನು ಪ್ರತಿಪಾದಿಸಿದ್ದರಿಂದ ಅಂದರೆ ಗಾಯತ್ರೀಶಬ್ದಕ್ಕೆ ಆ ಮಂತ್ರವಿಶೇಷದಲ್ಲಿ ರೂಢಿಯಿದ್ದ ಪ್ರಯುಕ್ತ ಗಾಯತ್ರೀಶಬ್ದವಾಚ್ಯನು ವಿಷ್ಣುವಲ್ಲ. ಮತ್ತೆ ಛಂದಸ್ಸೇ. ಯಾವ ಕಾರಣದಿಂದ ಗಾಯತ್ರೀಶಬ್ದವಾಚ್ಯನು ವಿಷ್ಣುವಲ್ಲವೋ, ಮತ್ತೆ ಛಂದಸ್ಸೇ ಆಗುತ್ತದೋ, ಆದಕಾರಣ **ಅಥ ಯದತಃ ಪರಃ ದಿವಃ ಜ್ಯೋತಿರ್ದೀಪ್ಯತೇ** ಎನ್ನುವಲ್ಲಿದ್ದ ಜ್ಯೋತಿಶ್ಶಬ್ದವಾಚ್ಯನೂ ವಿಷ್ಣುವಲ್ಲ. ಮತ್ತೆ ಛಂದಸ್ಸೇ. ಏಕೆಂದರೆ— ಗಾಯತ್ರಿಗೆ ಛಂದಸ್ಸಿನಿಂದ ಐಕ್ಯವನ್ನು ಅಭಿಪ್ರಾಯ ಮಾಡಿಕೊಂಡು ಜ್ಯೋತಿಸ್ಸನ್ನು ಉಪಕ್ರಮಿಸಿದ್ದರಿಂದ. ಎಂದು ಶಂಕಿಸಿದರೆ— ಹೀಗೆ ಹೇಳಕೂಡದು. ವಿಷ್ಣುವೇ ಜ್ಯೋತಿಶ್ಶಬ್ದವಾಚ್ಯನು. ಏಕೆಂದರೆ— ನಿಗದಾತ್= ಗಾಯತ್ರೀಪದದಿಂದ ವಿಷ್ಣುವನ್ನೇ ಹೇಳಿದ್ದರಿಂದ. ಗಾಯತ್ರೀ ಮೊದಲಾದ ಪದಗಳಿಂದ ಶ್ರೀವಿಷ್ಣುವನ್ನೇ ಹೇಳಿದ್ದು ಅಭೇದವನ್ನು ವಿಧಾನಮಾಡುವುದಕ್ಕಾಗಿ ಅಲ್ಲ. ಮತ್ತೆ ಹಾಗೆ ಉಪಾಸನಾ ಮಾಡುವುದಕ್ಕಾಗಿಯೇ ಎನ್ನುತ್ತಾರೆ— ತಥಾ=ಗಾಯತ್ರೀ ಮೊದಲಾದ ಶಬ್ದಾರ್ಥಗುಣಸ್ವರೂಪನೆಂದು ಚೇತೋಽರ್ಪಣನಿಗದಾತ್= ಮನಸ್ಸನ್ನು ಬ್ರಹ್ಮನಲ್ಲಿ ಇಡುವುದಕ್ಕಾಗಿ ಅಂದರೆ ಬ್ರಹ್ಮನನ್ನು ಹಾಗೆ ಉಪಾಸನಾ ಮಾಡುವುದಕ್ಕಾಗಿಯೇ ಹೇಳಿದ್ದರಿಂದ. (ಹಾಗಾದರೆ ಗಾಯತ್ರೀಶಬ್ದವಾಚ್ಯತ್ವವು ವಿಷ್ಣುವಿಗೆ ಪ್ರಮಿತವಾಗಿದ್ದರೆ ಗಾಯತ್ರೀಶಬ್ದವಾಚ್ಯನಾದುದರಿಂದ ವಿಷ್ಣುವೇ ಜ್ಯೋತಿಶ್ಶಬ್ದವಾಚ್ಯನೆಂದು ಸಾಧಿಸ ಬಹುದಿತ್ತು. ಅದೇವೇ ಹೇಗೆ ಕೂಡುತ್ತದೆ ಎಂದರೆ—) ಹಿ=ಯಾವ ಕಾರಣದಿಂದ, ತಥಾ=ಗಾನ ತ್ರಾಣ ಕರ್ತೃತ್ವವಿದ್ದುದರಿಂದ ವಿಷ್ಣುವಿಗೆ ಗಾಯತ್ರೀಶಬ್ದವಾಚ್ಯತ್ವವನ್ನು ಸಾಧಿಸತಕ್ಕ, ದರ್ಶನಂ=ದೃಶ್ಯತೇ= ಜ್ಞಾಯತೇ ಅರ್ಥಃ ಯಯಾ ಎನ್ನುವ ವ್ಯುತ್ಪತ್ತಿಯಿಂದ **ಗಾಯತಿ ಚ ತ್ರಾಯತಿ ಚ** ಇತ್ಯಾದಿ ರೂಪವಾದ ಶ್ರುತಿಯು ಇದೆಯೋ, ಆದುದರಿಂದ.

**ಭಾಷ್ಯ ॥ ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ (ಛಾ.೩..೧೩..೭.) ಇತ್ಯುಕ್ತಸ್ಯ ಜ್ಯೋತಿಷೋ 'ಗಾಯತ್ರೀ ವಾ ಇದಂ ಸರ್ವಂ' (ಛಾ.೩..೧೨.೧.) ಇತಿ ಗಾಯತ್ರ್ಯಾ ಸಮಾರಂಭಃ ಕೃತಃ। ತಸ್ಮಾನ್ನ ವಿಷ್ಣುರಿತಿ ಚೇತ್ ॥ ೧ ॥**

**ಭಾಷ್ಯಾರ್ಥ** ॥ (ಹೃದಯೇ ಆಹಿತಂ ಯತ್ ಎಂದು ಹೃದಯಗುಹೆಯಲ್ಲಿ ಇರತಕ್ಕುದೆಂದು ಯಾವ ಜ್ಯೋತಿಸ್ಸು ಹೇಳಲ್ಪಟ್ಟದೋ, ಆ ಜ್ಯೋತಿಸ್ಸೇ) **ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷೂತ್ತಮೇಷು ಲೋಕೇಷು ಇದಂ ವಾವತದ್ಯದಿದಮಸ್ಮಿ ನ್ನಂತಃಪುರುಷೇ ಜ್ಯೋತಿಃ** ॥ ಅಥ=ಶ್ರೀಹರಿಯ ಬೇರೆ ಮಹಿಮೆಯು ಆರಂಭಿಸ ಲ್ಪಡುತ್ತದೆ. ಯತ್=ಶ್ವೇತದ್ವೀಪಅನಂತಾಸನವೈಕುಂಠಗಳಲ್ಲಿರತಕ್ಕ ನಾರಾಯಣ ವಾಸುದೇವ ವೈಕುಂಠಾಖ್ಯವಾದ ಯಾವ ರೂಪತ್ರಯವಿದೆಯೋ, ಅದು. ಅತಃ=ಈ ವಿವಕ್ಷಿತವಾದ ಬುದ್ಧಿಸ್ಥವಾದ, ದಿವಃ=ಸ್ವರ್ಗಲೋಕದಿಂದ, ಪರಃ=ಅದಕ್ಕಿಂತ ಉಚ್ಚಸ್ಥಾನದಲ್ಲಿರತಕ್ಕುದು. ಜ್ಯೋತಿಃ=ತೇಜೋಮಯ

ವಾದುದು. ★ವಿಶ್ವತಃ ಪೃಷ್ಠೇಷು=ಅಂತರಿಕ್ಷದಲ್ಲಿರತಕ್ಕ ವೈಜಯಂತ, ಮೇರು, ಸತ್ಯಲೋಕಗಳಲ್ಲಿರತಕ್ಕ ಚತುರ್ಮುಖ ಮಂದಿರಗಳ ದೆಶೆಯಿಂದ ಕ್ರಮದಿಂದ ಉನ್ನತಗಳಾದ, ಸರ್ವತಃ ಪೃಷ್ಠೇಷು=ಅಂತರಿಕ್ಷ ಪೃಥಿವೀ ಸ್ವರಾತ್ಮಕಗಳಾದ ಲೋಕಗಳ ದೆಶೆಯಿಂದ ಕ್ರಮದಿಂದ ಉಚ್ಚಗಳಾದ, ಅನುತ್ತಮೇಷು=ನ ವಿದ್ಯತೇ ಉತ್ತಮಃ ಲೋಕಃ ಯೇಭ್ಯಸ್ತೇ ಎನ್ನುವ ವ್ಯುತ್ಪತ್ತಿಯಿಂದ ಇದಕ್ಕಿಂತ ಉತ್ತಮ ಲೋಕದಲ್ಲಿರುವ, ಉತ್ತಮೇಷು = ಸ್ವತ ಏವ ಉತ್ತಮಗಳಾದ, ಲೋಕೇಷು=ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿ ದೀಪ್ಯತೇ =ಪ್ರಕಾಶಿಸುತ್ತದೋ, ತತ್=ಅಂತಹ ಪ್ರಕಾಶಮಾನವಾದ ತೇಜಸ್ಸು ಇದಂ ವಾವ=ಇದಷ್ಟೇ ಯದಿದಂ ಅಸ್ಮಿನ್ ಪುರುಷೇ=ಯಾವುದು ಈ ಹೃದಯದಲ್ಲಿ ಅಂತಃ=ಒಳಗೆ, ಜ್ಯೋತಿಃ ಜ್ಯೋತಿಶ್ಶಬ್ದವಾಚ್ಯನಾದ ಬ್ರಹ್ಮನು ಇದ್ದಾನೆ. ಅಂದರೆ ಜ್ಯೋತಿಸ್ಸು ಬ್ರಹ್ಮರಿಗೆ ಐಕ್ಯವು ಎಂದು ಛಾಂದೋಗ್ಯದಲ್ಲಿಯೂ ಜ್ಯೋತಿಸ್ಸು ಹೇಳಲ್ಪಟ್ಟಿದೆ. ಅಂತಹ ಜ್ಯೋತಿಸ್ಸು ಗಾಯತ್ರೀರೂಪವಾಗಿ ಪಠಿತವಾಗಿದೆ. (ಇದು ಹೇಗೆ ತಿಳಿಯುತ್ತದೆ ಎಂದರೆ—) **ಗಾಯತ್ರೀ ವಾ ಇದಂ ಸರ್ವಂ ವಾಗ್ವಾ ಗಾಯತ್ರೀ ವಾಗ್ವಾ ಇದಂ ಸರ್ವಂ** ಯಾವನು ಗಾಯತ್ರೀನಾಮಕನಾದ ಗಾಯತ್ರಿಯಲ್ಲಿರತಕ್ಕ ಸ್ತ್ರೀರೂಪನಾದ ಹಯಗ್ರೀವರೂಪಿಯಾದ ಶ್ರೀಪರಮಾತ್ಮನೋ, ಆ ಇದು ಪ್ರಥಮರೂಪವು ಎನ್ನುವ ಅಭಿಪ್ರಾಯದಿಂದ ಆತನ ಎರಡನೇ ರೂಪವನ್ನೇ ಹೇಳುವುದಕ್ಕಾಗಿ ಗಾಯತ್ರೀ ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. ಇದಂ = ಪೂರ್ಣವಾದ ಯಾವುದು ಮತ್ಸ್ಯಾದ್ಯವತಾರರೂಪವೋ, ಸರ್ವಂ= ಸರ್ವಾಂತರ್ಗತವಾದ ಯಾವುದು ರೂಪವೋ, ತತ್ಸರ್ವಂ=ಅದೆಲ್ಲವೂ, ಗಾಯತ್ರೀ ವಾ=ಗಾಯತ್ರೀ ನಾಮಕ ಶ್ರೀಹರಿಯೇ ಪ್ರಸಿದ್ಧವು. (ಆತನ ಮೂರನೇ ರೂಪವನ್ನು ಹೇಳುತ್ತಾರೆ.) ಗಾಯತ್ರೀ= ಗಾಯತ್ರಿ ನಾಮಕ ಶ್ರೀಹರಿಯು, ವಾಗ್ವೈ=ವಾಕ್ ನಾಮಕನಾದ ವಿಷ್ಣುವೇ, (ವಾಕಿಗೆ ವಿಷ್ಣುತ್ವವು ಹೇಗೆಂದರೆ—) ಇದಂ ಸರ್ವಂ=ಈ ಎಲ್ಲಾ ಪ್ರಾಣಿಸಮುದಾಯವು, ವಾಗ್ವೈ=ವಾಕ್ ನಾಮಕನಾದ ಶ್ರೀಹರಿಯ ಅಧೀನವೇ. ಆದುದರಿಂದ ಸರ್ವರಿಗೂ ಸ್ವಾಮಿಯಾದುದರಿಂದ ವಾಕಿಗೆ ವಿಷ್ಣುತ್ವವು ಕೂಡುತ್ತದೆ. ಎನ್ನುವ ವಾಕ್ಯದಲ್ಲಿ ಗಾಯತ್ರೀ ಶಬ್ದದಿಂದ ಜ್ಯೋತಿಸ್ಸು ಗಾಯತ್ರಿಗಳಿಗೆ ಐಕ್ಯತಾತ್ಪರ್ಯದಿಂದ ಉಪಕ್ರಮವು ಮಾಡಲ್ಪಟ್ಟಿದೆ. ತಸ್ಮಾತ್=ಆದುದರಿಂದ, ನ ವಿಷ್ಣುಃ=ವಿಷ್ಣುವಲ್ಲ ಇತಿ ಚೇತ್=ಎಂದರೆ.

**ವಿಶೇಷಾಂಶ ॥** (ಎ) ಯಾವ ಕಾರಣದಿಂದ ಗಾಯತ್ರಿಯಿಂದ ಸಮಾರಂಭವು ಮಾಡಲ್ಪಟ್ಟದೋ, ಅದು ವಿರೋಧಿಶೂನ್ಯವಾದುದರಿಂದ ಪ್ರಬಲವಾಗಿದೆ. ಆದಪ್ರಯುಕ್ತ ಈ ಜ್ಯೋತಿಸ್ಸು ಗಾಯತ್ರಿಯೇ ಆಗಬೇಕು. ಆ ಗಾಯತ್ರಿಯು ವರ್ಣಸಮಾವೇಶರೂಪವಾದ ಮಂತ್ರಾತ್ಮಕವಾದ ಶಬ್ದವೇ ಆಗಬೇಕು. ವಿಷ್ಣುವಲ್ಲ. ಏಕೆಂದರೆ— ಗಾಯತ್ರೀ ಶಬ್ದವು ಛಂದಸ್ಸಿನಲ್ಲಿಯೇ ರೂಢವಾಗಿದೆ. ಅಲ್ಲದೆ ಗಾಯತ್ರಿಗೆ ವಾಕ್ತ್ವವನ್ನೂ ವಿಧಾನಮಾಡಿದ್ದಾರೆ. (ಬಿ) **ಗಾಯತ್ರೀ ವಾ ಇದಂ ಸರ್ವಂ** ಎನ್ನುವ ಪೂರ್ವವಾಕ್ಯದಲ್ಲಿದ್ದ ಗಾಯತ್ರೀ ಶಬ್ದವು ವಿಷ್ಣುವಿನಿಂದ ಇತರಪರವಾದರೆ ಉತ್ತರ ವಾಕ್ಯದಲ್ಲಿದ್ದ ಜ್ಯೋತಿಸ್ಸೂ ವಿಷ್ಣುವಿನಿಂದ ಭಿನ್ನವಾಗಬೇಕು. ಆದುದರಿಂದಲೇ ಅಗ್ನಿಸೂಕ್ತದಲ್ಲಿದ್ದ ಜ್ಯೋತಿಸ್ಸು ವಿಷ್ಣುಭಿನ್ನವೇ ಆಗಬೇಕು. ಆದುದರಿಂದಲೇ ಆನಂದಮಯತ್ವವೂ ಭಿನ್ನನಿಗೇನೇ ಇರಬೇಕು. ವಿಷ್ಣುವಿಗೆ

★ **ಪೃಥಿವ್ಯಾಂ ಬ್ರಹ್ಮಕೋ ಮೇರುಃ ವೈಜಯಂತಂ ಽ ರಿಕ್ಷಗಃ। ತೃತೀಯಂ ಸತ್ಯಲೋಕೇ ಚ ಸದನಂ ತ್ರಿವಿಧಂ ಸ್ಮೃತಂ॥ ತೇಭ್ಯೋಽನಂತನಾದ್ಯಾಃ ಯತ್ಪರ ತೋ ವಿಶ್ವತಃ ಪರೇ॥**

ಅಲ್ಲ ಎಂದು ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಈ ಅಧಿಕರಣವು ಹೊರಟದ್ದರಿಂದ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು. (ಸಿ) ಗಾಯತ್ರಿಯು ವಿಷಯವು. ಛಂದೋವಿಶೇಷವೋ ವಿಷ್ಣುವೋ ಎಂದು ಸಂದೇಹವು. ಗಾಯತ್ರಿಯು ಛಂದೋವಿಶೇಷವೇ ಆಗಬೇಕು. ಗಾಯತ್ರೀ ಶಬ್ದವು ಅಲ್ಲಿ ರೂಢವಾದ ಪ್ರಯುಕ್ತ ಎಂದು ಸಯುಕ್ತಿಕವಾಗಿ ಪೂರ್ವಪಕ್ಷವು. ಆದುದರಿಂದ ಜ್ಯೋತಿಸ್ಸೂ ಛಂದಸ್ಸೇ ಆಗಬೇಕು. ಆ ಛಂದಸ್ಸಿಗೇನೇ ಹೃದಯಗುಹಾನಿಹಿತತ್ವವೂ ಆನಂದಮಯತ್ವವೂ ಇದೆ ಎಂದು ಪೂರ್ವಪಕ್ಷ ಫಲವೂ ಸೂಚಿತವಾಯಿತು. (ಡಿ) ಪೂರ್ವಪಕ್ಷದಲ್ಲಿ ಗಾಯತ್ರ್ಯಾದಿ ಶಬ್ದಗಳು ಮಂತ್ರಪರಗಳು. ಸರ್ವವಾಕ್ಯವನ್ನು ಶ್ರೀಹರಿಯ ಮಾಹಾತ್ಮ್ಯಪರವನ್ನಾಗಿ ಕೂಡಿಸಬೇಕು. (ಇ) ಸಿದ್ಧಾಂತರೀತಿಯಾಗಿ ಹಿಂದೆ ಹೇಳಿದ್ದು ಅರ್ಥವು.

**ಪೀಠಿಕೆ ॥** ಸಿದ್ಧಾಂತ ಸೂತ್ರಾಂಶವನ್ನು ಅನುಕರಿಸುತ್ತಾರೆ—

**ಭಾಷ್ಯ ॥ ನ । ತಥಾ ಚೇತೋರ್ಪಣಾರ್ಥಂ ಹಿ ನಿಗದ್ಯತೇ। ಅಗ್ನಿಗಾಯತ್ರ್ಯಾದಿ ಶಬ್ದಾರ್ಥರೂಪೋಽಸಾವಿತಿ ಚೇತೋರ್ಪಣಾರ್ಥಂ ಹಿ ನಿಗದ್ಯತೇ ॥ ೨ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಗಾಯತ್ರೀ ಶಬ್ದದಿಂದಲೂ ವಿಷ್ಣುವೇ ಹೇಳಲ್ಪಡುತ್ತಾನೆಯೋ ಆದುದರಿಂದ ಜ್ಯೋತಿಶ್ಶಬ್ದವಾಚ್ಯನು ವಿಷ್ಣುವಲ್ಲವೆಂದಲ್ಲ. ಮತ್ತೆ ಜ್ಯೋತಿಶ್ಶಬ್ದದಿಂದ ವಿಷ್ಣುವೇ ಹೇಳಲ್ಪಡುತ್ತಾನೆ. (ಗಾಯತ್ರೀ ಮೊದಲಾದ ಶಬ್ದಗಳಿಂದ ವಿಷ್ಣುವನ್ನು ಹೇಳುವುದು ವಿಷ್ಣುವಿಗೂ ಗಾಯತ್ರಿಗೂ ಅಭೇದವನ್ನು ವಿಧಿಸುವುದಕ್ಕಾಗಿ ಅಲ್ಲ ಮತ್ತೆ) ತಥಾ ಚೇತೋರ್ಪಣಾರ್ಥಂ= ಹಾಗೆ ಉಪಾಸನಾ ಮಾಡುವುದಕ್ಕಾಗಿಯೇ, (ಅದನ್ನೇ ವಿವರಿಸುತ್ತಾರೆ.) ಶ್ರೀಹರಿಯು ಅಗ್ನಿ ಗಾಯತ್ರೀ ಮೊದಲಾದ ಶಬ್ದಗಳಿಂದ ಅಗ್ನಿ ಗಾಯತ್ರೀ ಮೊದಲಾದ ಶಬ್ದಾರ್ಥಗುಣಸ್ವರೂಪನು ಎಂದು ಉಪಾಸನಾ ಮಾಡುವುದಕ್ಕಾಗಿಯೇ ಹೇಳಲ್ಪಡುತ್ತಾನೆ. (ಅಭೇದವನ್ನು ವಿಧಿಸುವುದಕ್ಕಾಗಿ ಅಲ್ಲ)

**ಪೀಠಿಕೆ ॥** ಈ ಗಾಯತ್ರಿಯು ವಿಷ್ಣುವಾಗಿದ್ದರೆ ಗಾಯತ್ರೀ ಮೊದಲಾದ ಶಬ್ದಗಳಿಂದ ವಿಷ್ಣುವು ವಾಚ್ಯನಾಗಿ ಜ್ಯೋತಿಶ್ಶಬ್ದದಿಂದ ವಾಚ್ಯನೆಂದು ಸಾಧಿಸಬಹುದಿತ್ತು. ಅದೇವೇ ಹೇಗೆ ಕೂಡುತ್ತದೆಂದರೆ— ಗಾನತ್ರಾಣಕರ್ತೃತ್ವಲಿಂಗದಿಂದ ಎನ್ನುವ ಅಭಿಪ್ರಾಯದಿಂದ ಲಿಂಗಕ್ಕೆ ಅಸಿದ್ಧಿಯನ್ನು ಪರಿಹರಿಸುವುದಕ್ಕಾಗಿ ಪ್ರವೃತ್ತವಾದ ತಥಾ ಹಿ ಎನ್ನುವ ಸೂತ್ರಶೇಷವನ್ನು ಅನುಕರಿಸಿ ದರ್ಶನಪದೋಕ್ತವಾದ ಶ್ರುತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ತಥಾ ಹಿ ದರ್ಶನಂ ಗಾಯತಿ (ಚ) ತ್ರಾಯತಿ ಚ । (ಛಾ.೬.೧೨.೧.) ಇತ್ಯಾದಿ ॥ ೩ ॥**

**ಭಾಷ್ಯಾರ್ಥ ॥** (ಆದಿಪದದಿಂದ ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವ್ಯಸ್ಯಾಂ ಹೀದಂ ಸರ್ವಂ ಭೂತಂ ಪ್ರತಿಷ್ಠಿತಮೇತಾಮೇವ ನಾತಿ ಶೀಯತೇ।) ಯಾವ ಕಾರಣದಿಂದ (ಗಾಯತ್ರೀ ಶಬ್ದವಾಚ್ಯನಾದ ಶ್ರೀಹರಿಯು ವೇದಗಳನ್ನು) ಗಾಯತಿ=ಮುಖದಿಂದ ಹೊರಪಡಿಸುತ್ತಾನೋ, (ಅಂದರೆ ಪ್ರಥಮತಃ ಉಪದೇಶಿಸಿದವನೋ) ತ್ರಾಯತಿ ಚ=(ಇಡೀ ಜಗತ್ತನ್ನು)

ರಕ್ಷಿಸುತ್ತಾನೋ, (ಆದುದರಿಂದ ಗಾಯತ್ರೀ ಶಬ್ದದಿಂದ ಹೇಳಲ್ಪಡುತ್ತಾನೆ.) ಯಾ ಗಾಯತ್ರೀ=ಪ್ರಸಿದ್ಧ ನಾದ ಗಾಯತ್ರೀನಾಮಕನಾದ ಯಾವ ವಿಷ್ಣುವೋ, ಸಾ ಇಯಂ ವೈ=ಆ ಗಾಯತ್ರೀನಾಮಕನು ಇವನೇ. ಯೇಯಂ ಪೃಥಿವೀ =ಆ ಈ ಪೃಥಿವೀನಾಮಕನಾದ ಶ್ರೀಹರಿಯು, ಅಸ್ಯಾಂ=ಈ ಪೃಥಿವಿಯಲ್ಲಿ ಇದಂ ಸರ್ವಂ ಭೂತಂ=ಈ ಎಲ್ಲಾ ಪ್ರಾಣಿಸಮುದಾಯವು, ಪ್ರತಿಷ್ಠಿತಂ=ಆಶ್ರಿತವಾಗಿದೆ.) ಇತ್ಯಾದಿ ದರ್ಶನಂ=ಇದು ಮೊದಲಾದ ಶ್ರುತಿಯದೆ.

ವಿಶೇಷಾಂಶ ॥ ಯದ್ಯಪಿ ಛಾಂದೋಗ್ಯದಲ್ಲಿ ಗಾಯತಿ ತ್ರಾಯತೇ ಚ ಎಂದು ಪಾಠವು. ಆದಾಗ್ಯೂ ಇದು ಶಾಖಾಂತರದಲ್ಲಿದ್ದುದು.

ಪೀಠಿಕೆ ॥ ಹಾಗಾದರೆ ಗಾಯತ್ರ್ಯಾದಿ ಶಬ್ದವು ಅನ್ಯತ್ರ ರೂಢವಾದ ಪ್ರಯುಕ್ತ ಲಿಂಗಮಾತ್ರದಿಂದ ವಿಷ್ಣುವೆಂದು ಹೇಗೆ ನಿಶ್ಚಯವಾಗುತ್ತದೆ ಎಂದರೆ— ಗಾಯತ್ರೀ ಮೊದಲಾದ ಶ್ರುತಿಯು ಸಾವಕಾಶವಾಗಿದೆ ಎನ್ನುವ ಅಭಿಪ್ರಾಯದಿಂದ ಗಾಯತ್ರೀ ಅಗ್ನಿ ಪೃಥಿವೀ ಮೊದಲಾದ ಶಬ್ದಗಳು ಶ್ರುತ್ಯುಕ್ತ ಯೋಗದಿಂದ ಮಾತ್ರ ವಿಷ್ಣುವಿನಲ್ಲಿ ಸಾವಕಾಶಗಳೆಂದಲ್ಲ ಮತ್ತೆ ಪೌರಾಣಿಕರೂಢಿಯಿಂದಲೂ ಗಾಯತ್ರಿಯು ಶ್ರೀಹರಿಯ ಅಧೀನವೂ ಆಗಿದೆ ಎನ್ನುವ ಅಭಿಪ್ರಾಯದಿಂದ ಆ ವಿಷಯದಲ್ಲಿ ಸ್ಮೃತಿ ಯನ್ನು ಹೇಳುತ್ತಾರೆ—

**ಭಾಷ್ಯ ॥ ಸರ್ವಚ್ಛಂದೋಭಿಧೋ ಹ್ಯೇಷ ಸರ್ವದೇವಾಭಿಧೋ ಹ್ಯ(ಪ್ಯ)ಸೌ । ಸರ್ವಲೋಕಾಭಿಧೋ ಹ್ಯೇ(ಪ್ಯೇ)ಷ ತೇಷಾಂ ತದುಪಚಾರತಃ ॥ ಇತಿ ವಾಮನೇ ॥ ೪ ॥**

ಭಾಷ್ಯಾರ್ಥ ॥ ಈ ವಿಷ್ಣುವು ಎಲ್ಲಾ ಛಂದಸ್ಸುಗಳನ್ನು ಹೇಳತಕ್ಕ ಗಾಯತ್ರೀ ಮೊದಲಾದ ಸರ್ವ ಶಬ್ದಗಳಿಂದ ವಾಚ್ಯನು. ಈ ವಿಷ್ಣುವು ದೇವತಾ ವಾಚಕಗಳಾಗಿ ಅಗ್ನಿ ಮೊದಲಾದ ಎಲ್ಲಾ ಶಬ್ದಗಳಿಂದ ವಾಚ್ಯನು. ಈ ವಿಷ್ಣುವು ಸರ್ವಲೋಕಗಳನ್ನು ಹೇಳತಕ್ಕ ಪೃಥಿವೀ ಮೊದಲಾದ ಶಬ್ದಗಳಿಂದ ವಾಚ್ಯನು. ಛಂದಸ್ಸು ಮೊದಲಾದವುಗಳಿಗೆ ಭಗವದಧೀನತ್ವವಿದ್ದ ಪ್ರಯುಕ್ತ ಎಂದು ಪ್ರತ್ಯೇಕವಾಗಿ ಹೇತುಗಳನ್ನು ಸೂಚಿಸುವುದಕ್ಕಾಗಿ ಮೂರು ಹಿ ಶಬ್ದಗಳು. ಅಥವಾ ವೇದಪ್ರಸಿದ್ಧಿಗಳು. (ಹಾಗಾದರೆ ಅನ್ಯತ್ರ ವ್ಯವಹಾರವು ಹೇಗೆ ಕೂಡುತ್ತದೆ ಎಂದರೆ) ಛಂದಸ್ಸು ದೇವ ಲೋಕಗಳಿಗೆ ಆ ಶಬ್ದಬೋಧ್ಯತ್ವವು ಉಪಚಾರತಃ=ವಿಷ್ಣುವಿನ ಸಮೀಪದಲ್ಲಿ ಸಂಚಾರದಿಂದ ವಿಷ್ಣುವಿನ ಅಧೀನತ್ವವಿದ್ದಪ್ರಯುಕ್ತ ಅಮುಖ್ಯವಾಗಿಯೇ, ಯಾವ ಕಾರಣದಿಂದ ವಾಮನ ಪುರಾಣದಲ್ಲಿ ಹೀಗೆ ಪ್ರತಿಪಾದಿಸಿಯದೋ, ಆದುದರಿಂದ ಶ್ರುತಿಗೆ ಮುಖ್ಯವೃತ್ತಿಯಿಂದ ವಿಷ್ಣುವಿನಲ್ಲಿಯೇ ಸಾವಕಾಶತ್ವವಿದ್ದಪ್ರಯುಕ್ತ ಲಿಂಗವು ಅಮುಖ್ಯವಾಗಿ ಅನ್ಯತ್ರ ಅವಕಾಶವನ್ನು ಹೊಂದದೆ ಇದ್ದುದರಿಂದ ಲಿಂಗದಿಂದ ಶ್ರುತಿಗೆ ಬಾಧವು ಕೂಡುವುದರಿಂದ ಗಾನ ತ್ರಾಣಕರ್ತೃತ್ವರೂಪ ನಿರವಕಾಶ ವಿಷ್ಣುಲಿಂಗ ಮಾತ್ರದಿಂದ ಈ ನಿರ್ಣಯವು ಯುಕ್ತವೇ ಆಗುವುದು.)

ವಿಶೇಷಾಂಶ ॥ ಛಂದಸ್ಸು ಲೋಕಗಳೂ ಪ್ರತ್ಯಕ್ಷಗಳಾಗಿವೆ. ದೇವತೆಗಳು ಅಪ್ರತ್ಯಕ್ಷರು. ಆದುದರಿಂದ ಏಷಃ ಅಸೌ ಎನ್ನುವ ವಿಚಿತ್ರವಾದ ಉಕ್ತಿಯು ಕೂಡುತ್ತದೆ.

**ಪೀಠಿಕೆ ।।** ಹೇತ್ವಂತರದಿಂದಲೂ ಗಾಯತ್ರಿಗೆ ವಿಷ್ಣುತ್ವವನ್ನು ಸಾಧಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ।। ಓಂ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ ಓಂ ।। ೨೬ ।।

**ಸೂತ್ರಾರ್ಥ ।।** ಭೂತಂ=ಜಗತ್ತು, ಆದಿಃ=ಪ್ರಥಮತಃ ಉದ್ದೇಶಿಸಲ್ಪಟ್ಟದ್ದು ಯೇಷು ತೇ ಭೂತಾದಯಃ, ಭೂತಾದಯಃ ಪಾದಾಃ ಯಸ್ಯ ಗಾಯತ್ರೀ ಪದಾರ್ಥಸ್ಯ, ತಸ್ಯ ವ್ಯಪದೇಶಃ=ಅದನ್ನು ಪ್ರತಿಪಾದಿಸತಕ್ಕ ವಾಕ್ಯವು. ತಸ್ಯ ಉಪಪತ್ತೇಃ=ಅದು ಯುಕ್ತವಾದ ಪ್ರಯುಕ್ತ. ಅಂದರೆ ಪಾದೋऽಸ್ಯ ಸರ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ ಎಂದು ಗಾಯತ್ರಿಗೆ ಭೂತಾದಿ ಶಬ್ದಗಳಿಂದ ಗೃಹೀತವಾದ ನಾಲ್ಕು ಅಂಶಗಳನ್ನು ಉಪದೇಶ ಮಾಡಿಯದೆ. ಅದು ವಿಷ್ಣುವಿನಲ್ಲಿಯೇ ಕೂಡುತ್ತದೆ. ಅನ್ಯತ್ರ ಕೂಡುವುದಿಲ್ಲ. ಆದಕಾರಣ ಗಾಯತ್ರೀಶಬ್ದವಾಚ್ಯನು ವಿಷ್ಣುವೇ ಆಗಬೇಕು.

**ವಿಶೇಷಾಂಶ ।।** (೧) ಭೂತಾದಿಪಾದತ್ವಕ್ಕೆ ವಿಷ್ಣುಲಿಂಗತ್ವವು ಯುಕ್ತಿಯಿಂದ ಮಾತ್ರ ಸಿದ್ಧವಾಗುವುದಿಲ್ಲ. ಮತ್ತೆ ಪುರುಷಸೂಕ್ತ ಸಮಾಖ್ಯೆಯಿಂದಲೂ ಸಿದ್ಧವಾಗುತ್ತದೆ. (೨) ಛಾಂದೋಗ್ಯದಲ್ಲಿ ಸೈಷಾ ಚತುಷ್ಪ ದಾಪಡ್ವಿಧಾ ಗಾಯತ್ರೀ ಎನ್ನುವ ವಾಕ್ಯದಿಂದ ಯಾವುದು ಷಡ್ವಿಧವಾದ ಗಾಯತ್ರಿಯೋ, ಅದು ನಾಲ್ಕು ಪಾದವುಳ್ಳದ್ದೆಂದು ಗಾಯತ್ರೀನಾಮಕ ಶ್ರೀಹರಿಗೆ ಭೂತ ವಾಕ್ ಪೃಥಿವೀ ಶರೀರ ಹೃದಯ ಎಂದು ಆರು ವಿಧಗಳನ್ನು ಅನುವಾದಮಾಡಿ ನಾಲ್ಕು ಅಂಶರೂಪವಾದ ನಾಲ್ಕು ಪಾದವನ್ನು ವಿಧಾನಮಾಡಿ ತಾನು ಹೇಳಿದ ಅರ್ಥದಲ್ಲಿಯೇ ಪುರುಷಸೂಕ್ತ ಮಂತ್ರವನ್ನು ಸಮಾಖ್ಯಾರೂಪವಾಗಿ ಉದಾಹರಿಸುತ್ತಾರೆ. ತದೇತದೃಚಾಭ್ಯನೂಕ್ತಂ। ಶ್ರೀಹರಿಗೆ ನಾಲ್ಕು ಪಾದಗಳು ಎನ್ನುವುದು ಋಕ್ ಮಂತ್ರದಿಂದ ಸ್ಪಷ್ಟ ವಾಗಿ ಹೇಳಲ್ಪಟ್ಟದೆ ಎಂದು ಬ್ರಾಹ್ಮಣದಲ್ಲಿ ಹೇಳಿದೆ.

**ಪೀಠಿಕೆ ।।** ಏನು ಹೇಳಿಯದೆ ಎಂದರೆ ಆ ಮಂತ್ರವನ್ನು ಹೇಳುತ್ತಾರೆ—

**ಭಾಷ್ಯ ।। ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ। ಪಾದೋऽ ಸ್ಯ ಸರ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ (ಛಾ.೩.೧೨.೬.) ।। ಇತಿ ।। ೫ ।।**

**ಭಾಷ್ಯಾರ್ಥ ।।** ಈ ಪುರುಷನಿಗೆ, ತಾವಾನಸ್ಯಮಹಿಮಾ=ಪುರುಷ ಏವೇದಂ ಸರ್ವಂ ಎನ್ನುವ ಋಕ್ಕಿನಿಂದ ಸರ್ವನಿಯಾಮಕತ್ವಾದಿ ರೂಪವಾದ ಮಹಿಮೆಯನ್ನು ಹೇಳಲ್ಪಟ್ಟದೆ. (ಇಷ್ಟು ಮಾತ್ರವಲ್ಲ ಮತ್ತೆ) ಪುರುಷಃ=ಪೂರ್ಣಗುಣಗಳುಳ್ಳವನು. ತತಃ ಜ್ಯಾಯಾಂಶ್ಚ=ಪೂರ್ವೋಕ್ತ ಮಹಿಮೆಯಿಂದಲೂ ಹೆಚ್ಚು ಮಾಹಾ ತ್ಮ್ಯಯುಕ್ತನು. (ಜ್ಯಾಯಸ್ತ್ವವನ್ನೇ ತೋರಿಸುತ್ತಾರೆ.) ಸರ್ವಾ ಭೂತಾನಿ=ಇಡೀ ಜಗತ್ತು ಅಸ್ಯ=ವಿಷ್ಣುವಿಗೆ, ಪಾದಃ=ಒಂದುಪಾದವು. (ಭಿನ್ನಾಂಶವು.) ಅಸ್ಯ=ಈ ಶ್ರೀಹರಿಯ, ಅಮೃತಂ= ನಾಶರಹಿತವಾದ, ಸ್ವರೂಪಭೂತವಾದ, ತ್ರಿಪಾದ್=ಮೂರು ಅಂಶಗಳ ಸಮುದಾಯರೂಪವಾದ ನಾರಾಯಣ ವಾಸುದೇವ ವೈಕುಂಠಗಳೆನ್ನುವುದು, ದಿವಿ=ಪ್ರಕಾಶಿಸುವುದರಿಂದ ದ್ಯುಶಬ್ದ ವಾಚ್ಯಗಳಾದ ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿ ಇರುತ್ತದೆ. ಎಂದು (ಋಕ್ಕಿನಿಂದ ಹೇಳಲ್ಪಟ್ಟದೆ.)

**ವಿಶೇಷಾಂಶ ।।** (೧) ಯದ್ಯಪಿ ಋಕ್ಕಿನಲ್ಲಿ ಏತಾವಾನ್ ಎಂದೂ, ವಿಶ್ವಾ ಎಂದೂ ಪಾಠವಿರುವುದು. ಆದಾಗ್ಯೂ ಇದು ಶಾಖಾಂತರಗಳಲ್ಲಿದ್ದ ಪಾಠವು. (೨) ಯದ್ಯಪಿ ಭಿನ್ನಪಾದಃ ಸರ್ವಜೀವಾ

ಎಂದು ಛಾಂದೋಗ್ಯಭಾಷ್ಯದಲ್ಲಿ ಭೂತಶಬ್ದವನ್ನು ಜೀವಪರವನ್ನಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಆದಾಗ್ಯೂ **ಸುವರ್ಣಂ ಕೋಶಂ** ಎನ್ನುವ ಶ್ರುತ್ಯನುಸಾರವಾಗಿ ಸರ್ವಜಗತ್ಪರವನ್ನಾಗಿ ವ್ಯಾಖ್ಯಾನ ಮಾಡಿರುತ್ತಾರೆ.

**ಪೀಠಿಕೆ ॥** ಶ್ರೀವಿಷ್ಣುವು ಭೂತಗಳಿಂದ ಭಿನ್ನವಾದ ಪ್ರಯುಕ್ತ ಅವನಿಗೂ ಭೂತಾದಿ ಪಾದತ್ವೋಕ್ತಿಯು ಅಯುಕ್ತವು ಎಂದರೆ—

**ಭಾಷ್ಯ ॥ ಸುವರ್ಣಂ ಕೋಶಂ ರಜಸಾ ಪರೀವೃತಂ। ದೇವಾನಾಂ ವಸುಧಾನೀಂ ವಿರಾಜಂ। ಅಮೃತಸ್ಯ ಪೂರ್ಣಾಂ ತಾಮು ಕಲಾಂ ವಿಚಕ್ಷತೇ। ಪಾದಂ ಷಡ್ಢೋ ತುರ್ನ ಕಿಲಾ ವಿವಿತ್ಸೇ (ತೈ.ಆ.೩.೧೧.)॥ ಇತಿ ಶ್ರುತೇಃ॥ ಪಾದ ಇತ್ಯೇ (ತಿ ಚೈ) ಕದೇಶಪರಿಮಿತಂ। ಚತುರ್ಭಾಗಬಲ ಇತಿವದ್ಭಿನ್ನಂ ಚ ॥ ॥ ೬ ॥**

**ಭಾಷ್ಯಾರ್ಥ ॥** (ಯಾವ ಕಾರಣದಿಂದ ಶ್ರುತಿಯಲ್ಲಿರತಕ್ಕ ಪಾದಃ ಎನ್ನುವ ಶಬ್ದದಿಂದ ಭೂತಗಳಿಗೆ ಅಮೃತಪಾದತ್ರಯದಂತೆ ಸ್ವರೂಪಾಂಶತ್ವವು ಹೇಳಲ್ಪಡುವುದಿಲ್ಲ. ಮತ್ತೆ **ಯಜ್ಞದತ್ತಸ್ಯ ಚತುರ್ಭಾಗಬಲೋ ದೇವದತ್ತಃ** ಎನ್ನುವುದಂತೆ ಜಗತ್ತು ಭಿನ್ನವೇ ಆಗಿದೆ. ಏಕೆಂದರೆ ವಿಷ್ಣುಪಾದಪರಿಮಿತ ಸಾಮರ್ಥ್ಯವುಳ್ಳ ಜಗತ್ತು ಪಾದಃ ಎಂದು ವಿಷ್ಣುಪಾದವಾಗಿ ಹೇಳಲ್ಪಡುತ್ತದೆ.) (ಹಾಗಾದರೆ ಶ್ರೀಹರಿಯು ನಾಲ್ಕು ವಿಶ್ವಗಳಿಗೆ ಸಮಾನಿಕನೆಂದು ಪ್ರಾಪ್ತವಾಯಿತೆಂದರೆ) ಯಾವ ಕಾರಣದಿಂದ ಶ್ರುತಿಯಲ್ಲಿರತಕ್ಕ ಪಾದ ಎನ್ನುವ ಪದವಾದುದೆಂದು ಹೇಳಲ್ಪಡುವುದಿಲ್ಲ. ಮತ್ತೆ ವಿಷ್ಣುಸಾಮರ್ಥ್ಯದ ಏಕದೇಶ ಪರಿಮಿತವಾದುದೆಂದು ಹೇಳಲ್ಪಡುತ್ತದೆ. (ಆದಕಾರಣ ದೋಷವಲ್ಲ) (ಇದು ಹೇಗೇ ತಿಳಿಯುತ್ತದೆ ಎಂದರೆ) ಸುವರ್ಣಂ=ಒಂದು ಕಪಾಲದಲ್ಲಿ ಸುವರ್ಣಮಯವಾದ, ರಜಸಾ ಪರೀವೃತಂ= ರಜೋಗುಣ ಮತ್ತು ಜಲ ಅಗ್ನಿ ವಾಯು ಆಕಾಶ ಅಹಂಕಾರತತ್ವ ಮಹತ್ತತ್ತ್ವ, ಸತ್ವರಜಸ್ತಮೋಗುಣ ಗಳಿಂದ ಯುಕ್ತವಾದ, ವಿರಾಜಂ=ಬ್ರಹ್ಮನಿಗೆ ಶರೀರಭೂತವಾದ, ಅಥವಾ (ತತ್ವಪ್ರದೀಪಿಕಾ ರೀತಿಯಾಗಿ) ವಿಶೇಷವಾಗಿ ಪ್ರಕಾಶಿಸಿಕೊಂಡಿರುವ, ಕೋಶಂ=ಬ್ರಹ್ಮಾಂಡಾಖ್ಯವಾದುದು ಯಾವುದು ಅದೆಯೋ, ದೇವಾನಾಂ=ದೇವತೆಗಳಿಗೆ, ವಸುಧಾನೀಂ=ದ್ರವ್ಯವನ್ನು ಇಡತಕ್ಕ ಪೆಟ್ಟಿಗೆಯನ್ನು, ಅಮೃತಸ್ಯ ಪೂರ್ಣಾಂ=ಮುಕ್ತರಿಂದ ಪೂರ್ಣವಾದ, ತಾಂ=ಆ ಕೋಶವನ್ನು, ಷಡ್ಢೋತುಃ=ಆರು ಇಂದ್ರಿಯಗಳಲ್ಲಿ ವಿಷಯಗಳನ್ನು ಹೋಮಿಸತಕ್ಕ ಅಥವಾ ಆರು ಇಂದ್ರಿಯಗಳನ್ನು ವಿಷಯಗಳಲ್ಲಿ ಹೊಂದಿಸಿ ಕೊಡುವ, ಅಥವಾ ಷಡಿಂದ್ರಿಯಗಳಿಂದ ಸಾರಭೋಕ್ತನಾದ ವಿಷ್ಣುವಿನ, ಕಲಾಮುಃ=ಏಕದೇಶಪರಿಮಿತ ವಾದುದನ್ನೇ, ಪಾದಂ=ಪಾದಶಬ್ದ ದಿಂದ (ಪುರುಷಸೂಕ್ತಾದ್ಯಾಗಮಗಳು) ಹೇಳುತ್ತವೆ. (ಅಲ್ಲದೆ ಇಲ್ಲಿ ಪಾದಶಬ್ದದಿಂದ ಕಾಲನ್ನೂ ಹೇಳುವುದಿಲ್ಲ. ಚತುರ್ಥಾಂಶವನ್ನೂ ಹೇಳುವುದಿಲ್ಲ. ಏಕೆಂದರೆ ಆ ದ್ರವ್ಯನಿಧಾನವಾದ ಪೇಟಿಕೆಯು.) ಪಾದಂ=ಚತುರ್ಥಭಾಗ ಸಾಮ್ಯವನ್ನು ನ ವಿವಿತ್ಸೇ ಕಿಲಾ= ಹೊಂದಲಿಲ್ಲವಷ್ಟೇ. ಎನ್ನುವ ತೈತ್ತಿರೀಯ ಶ್ರುತಿಯ ದೆಸೆಯಿಂದ.

**ವಿಶೇಷಾಂಶ ॥** ಸತ್ತರ್ಕದೀಪಾವಳಿಯಲ್ಲಿ ಪಾದಂ ನ ವಿವಿತ್ಸೇ=ಪಾದಸಾಮ್ಯವನ್ನು ಹೊಂದಲಿಲ್ಲ ಎಂದು ಅರ್ಥ ಹೇಳಿದ್ದಾರೆ.

**ಪೀಠಿಕೆ ॥** ತಾವಾನ್ ಎನ್ನುವ ಋಕ್ಕಿನಲ್ಲಿ ಶ್ರೀವಿಷ್ಣುವು ಹೇಳಲ್ಪಡುತ್ತಾನೆ ಎನ್ನುವ ವಿಷಯದಲ್ಲಿ ಪ್ರಮಾಣವಿರುತ್ತಿದ್ದರೆ ಹೀಗೆ ಆಗುತ್ತಿತ್ತು, ಅದೇವೇ ಇಲ್ಲ. ಆದಪ್ರಯುಕ್ತ ಲಿಂಗವು ಅನ್ಯನಿಷ್ಠವು ಆಗುವುದು ಎಂದರೆ— ಸೂತ್ರದಲ್ಲಿ ದೃ ಚ ಶಬ್ದದಿಂದ ಭೂತಾದಿ ಪಾದತ್ವಕ್ಕೆ ವಿಷ್ಣುಲಿಂಗತ್ವವನ್ನು ಸಾಧಿಸುವಾಗ **ಪುರುಷಸೂಕ್ತೋಕ್ತತ್ವಾತ್** ಎಂದು ಯಾವುದು ಅನುಮಾನವು ಸೂಚಿತವಾಯಿತೋ ಅದಕ್ಕೆ ಅಪ್ರಯೋಜಕತ್ವವನ್ನು ಆಶಂಕಿಸಿಕೊಂಡು ಪರಿಹರಿಸುತ್ತಾರೆ—

**ಭಾಷ್ಯ ॥ ಸ ಹಿ ಪುರುಷಸೂಕ್ತಾಭಿಧೇಯಃ। 'ಯಜ್ಞೇನ ಯಜ್ಞಮಯಜಂತ' (ತೈ.ಆ.೩.೧೨) ಇತಿ ಯಜ್ಞಶಬ್ದಾತ್। 'ಯಜ್ಞೋ ವಿಷ್ಣುರ್ದೇವತಾ' (ಶ್ರು ತ್ಯಂತರಂ) ಇತಿ ಹಿ ಶ್ರುತಿಃ ॥ ೭ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಶ್ರೀವಿಷ್ಣುವೇ ಪುರುಷಸೂಕ್ತಪ್ರತಿಪಾದ್ಯನೋ, ಆದುದರಿಂದ ಆತನೇ ಪುರುಷಸೂಕ್ತದಲ್ಲಿ ಹೇಳಿದ ಪಾದನೂ ಆಗುತ್ತಾನೆ. (ಭೂತಾದಿ ಪಾದತ್ವವು ವಿಷ್ಣುಧರ್ಮವಾಗದಿದ್ದರೆ ಪುರುಷಸೂಕ್ತ ಪ್ರತಿಪಾದ್ಯತ್ವವು ಬಾರದೆ ಹೋಗಬೇಕಾದೀತು.) (ಪುರುಷಸೂಕ್ತದಲ್ಲಿ ಹೇಳಲ್ಪಟ್ಟವನು ವಿಷ್ಣುವು ಏಕೆ ಆಗಬೇಕೆಂದರೆ) (ದೇವತೆಗಳು) ಜ್ಞಾನ ಕರ್ಮಾತ್ಮಕವಾದ ಯಜ್ಞದಿಂದ ಅಥವಾ ರುದ್ರಾಖ್ಯಪಶುವಿನಿಂದ, ಯಜ್ಞಂ=ವಿಷ್ಣುವನ್ನು ಪೂಜಿಸಿದರು ಎನ್ನುವ ವಾಕ್ಯದಲ್ಲಿ ಯಜ್ಞ ಶಬ್ದವು ಶ್ರುತವಾದ ಪ್ರಯುಕ್ತ, (ಯಜ್ಞಶಬ್ದವು ವಿಷ್ಣುತ್ವ ನಿಶ್ಚಾಯಕವು ಹೇಗೆ ಆಗುತ್ತದೆಂದರೆ) ಯಾವ ಕಾರಣದಿಂದ ಯಜ್ಞ ಎನ್ನುವ ಪದದಿಂದ ವಿಷ್ಣ್ವಾಖ್ಯದೇವತೆಯು ಹೇಳಲ್ಪಡುತ್ತದೆ.

**ವಿಶೇಷಾಂಶ ॥** ಯದ್ಯಪಿ **ಯಜ್ಞೋ ವೈ ವಿಷ್ಣುಃ** ಎಂದು ಅಧ್ವರ್ಯುಗಳ ಶ್ರುತಿಯು. ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತಿಯು ಶ್ರುತ್ಯಂತರವೆಂದು ತಿಳಿಯಬೇಕು.

**ಪೀಠಿಕೆ ॥** ಹಾಗಾದರೆ ಪುರುಷಸೂಕ್ತವು ವಿಷ್ಣುವಿನ ಪ್ರಕರಣವಲ್ಲ, ಇತರ ಪ್ರಕರಣವೇ. ಪಶುರೂಪವಾದ ಅನ್ಯಪ್ರಕರಣದಲ್ಲಿ ವಿಷ್ಣುಶ್ರುತಿಯು ಕೂಡದಿರುವುದರಿಂದ ಯಜ್ಞಶ್ರುತಿಯಿಂದ ವಿರೋಧವೆಂದೂ ಹೇಳಕೂಡದು. ಆ ಯಜ್ಞಶ್ರುತಿಯು ಪ್ರಾಸಂಗಿಕವೆಂದು ಕೂಡಬಹುದು. ಆದರಿಂದಲೇ ಭೂತಾದಿ ಪಾದವು ವಿಷ್ಣುವಿನ ಲಿಂಗವೆಂದೂ ನಿಶ್ಚಯವಾಗುವುದಿಲ್ಲ. ಆದಾಗ್ಯೂ **ಪಾದೋಽಸ್ಯ ವಿಶ್ವಾ ಭೂತಾನಿ** ಎನ್ನುವ ಶ್ರುತಿಯಿಂದ ಭೂತಾನಿ ಪಾದದಲ್ಲಿ ಯಜ್ಞಶ್ರುತಿಯು ಇಲ್ಲದಿರುವುದರಿಂದ ಅಸಿದ್ಧಿಯು ಎಂದರೆ ಪುರುಷಸೂಕ್ತದಲ್ಲಿ ಹೇಳಲ್ಪಟ್ಟವನು ವಿಷ್ಣುವು ಎನ್ನುವ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ತಸ್ಮಿನ್ಕಾಲೇ ಮಹಾರಾಜ ರಾಮ ಏವಾಭಿಧೀಯತೇ। ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ॥ ಇತಿ ಚ ಸ್ಕಾಂದೇ ॥ ೮ ॥**

**ಭಾಷ್ಯಾರ್ಥ ॥** ಎಲೋ ಮಹಾರಾಜನೇ, ಆ ತ್ರೇತಾಯುಗದಲ್ಲಿ (ಎಲ್ಲಾ ಪುರುಷ ನಾಮಗಳಿಂದ) ಶ್ರೀ ರಾಮನೇ ಹೇಳಲ್ಪಡುತ್ತಾನೆ. ಹೇಗೆ ಪುರುಷಸೂಕ್ತದಲ್ಲಿ ಎಲ್ಲಾ ಕಡೆಗಳಲ್ಲಿ ವಿಷ್ಣುವೇ

ಹೇಳಲ್ಪಡುತ್ತಾನೋ, (ಮತ್ತೊಬ್ಬನು ಮುಖ್ಯವಾಗಿ ಹೇಳಲ್ಪಡುವುದಿಲ್ಲ) ಪಶು ಪುರುಷನು ಪ್ರಾಸಂಗಿಕವಾಗಿ ಹೇಳಲ್ಪಡುತ್ತಾ ನೆ. ಹೀಗೆ ★ ಸ್ಕಾಂದ ಪುರಾಣದಲ್ಲಿ ಹೇಳಲ್ಪಟ್ಟದೆ.

**ವಿಶೇಷಾಂಶ ॥** ಸಿದ್ಧವಾದುದೇ ದೃಷ್ಟಾಂತವಾಗುವುದರಿಂದ ಪುರುಷಸೂಕ್ತವು ವಿಷ್ಣುಪರ ವೆನ್ನುವುದು ಸಿದ್ಧವಾಗುತ್ತದೆ.

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರ ವನ್ನು ಉಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ಓಂ ॥ ೨೭ ॥

**ಸೂತ್ರಾರ್ಥ ॥** ಉಪದೇಶಭೇದಾತ್=(ಸಪ್ತಮ್ಯಂತ ಪಂಚಮ್ಯಂತ ಪದವುಳ್ಳ ವಾಕ್ಯಗಳಲ್ಲಿ) ಗಾಯತ್ರೀ ಜ್ಯೋತಿಸ್ಸುಗಳಿಗೆ ದ್ಯುಸ್ಥತ್ವ ದಿವಃಪರತ್ವರೂಪ ವಿರುದ್ಧಧರ್ಮಗಳನ್ನು ಹೇಳಿದ್ದರಿಂದ ವಿರೋಧವಿದ್ದಪ್ರಯುಕ್ತ ನಃಎರಡು ವಾಕ್ಯಗಳಲ್ಲಿ ವಿಷ್ಣ್ವಾಖ್ಯವಾದ ಒಂದೇ ವಸ್ತುವು ಪ್ರತಿಪಾದ್ಯ ವಾಗುವುದಿಲ್ಲ, ಭಿನ್ನವೇ ಪ್ರತಿಪಾದ್ಯವಾಗುವುದು. ಇತಿ ಚೇತ್=ಎಂದರೆ, ನಃಅಲ್ಲ, ಮತ್ತೆ ಉಭಯಸ್ಮಿನ್ನಪಿ=ಎರಡು ಉಪದೇಶಗಳಲ್ಲಿಯೂ, ಒಂದೇ ವಸ್ತುವು ಪ್ರತಿಪಾದ್ಯವಾಗುತ್ತದೆ. ಹೇಗೆಂದರೆ, ಅವಿರೋಧಾತ್=ಮೂರುಲೋಕ ಏಳುಲೋಕ ಎನ್ನುವ ಅಪೇಕ್ಷೆಯಿಂದ ಸಪ್ತಮೀ ಪಂಚಮೀಭಕ್ತಿಗಳಿಗೆ ಏಕಾರ್ಥತ್ವವನ್ನು ಇಟ್ಟುಕೊಂಡು ವಿರೋಧವಿಲ್ಲದಿರುವುದರಿಂದ.

**ಪೀಠಿಕೆ ॥** ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತ್ರಿಪಾದಸ್ಯಾಮೃತಂ ದಿವಿ (ಛಾ.೩..೧೨.೬.)। ಇತಿ ಪೂರ್ವೋಪದೇ ಶಃ ॥ ಪರೋ ದಿವಃ (ಛಾ.೩..೧೩..೭.)। ಇತಿ ಪಂಚಮ್ಯಂತಃ ಪಶ್ಚಿಮಃ॥ ತಸ್ಮಾನ್ನೈಕಂ ವಸ್ತ್ವತ್ರೋಚ್ಯತ ಇತಿ ಚೇನ್ನ। ತ್ರಿಸಪ್ತಲೋಕಾಪೇಕ್ಷಯೋಭಯಸ್ಮಿನ್ನಪ್ಯವಿರೋಧಾತ್ ॥ ೯ ॥**

**ಭಾಷ್ಯಾರ್ಥ ॥** ತ್ರಿಪಾದಸ್ಯಾಮೃತಂ ದಿವಿ ಎಂದು ಸಪ್ತಮ್ಯಂತವಾದ ಪೂರ್ವೋಪದೇಶವು. ಪರೋದಿವಃ ಎಂದು ಪಂಚಮ್ಯಂತವಾದುದು ಮೇಲಿನ ಉಪದೇಶವು. (ಪೂರ್ವೋಕ್ತಿಯಿಂದ ಭಿನ್ನವಾದುದು ಇದೆ.) (ಯಾವ ಕಾರಣದಿಂದ ಹೀಗೆ ಭಿನ್ನವಾದ ಉಪದೇಶದ್ವಯವು ಇದೆಯೋ,) ಆದುದರಿಂದ ಈ ಎರಡು ಉಪದೇಶಗಳಲ್ಲಿ (ಗಾಯತ್ರೀ ಜ್ಯೋತಿಶ್ಯಬ್ದಗಳಿಂದ) ವಿಷ್ಣ್ವಾಖ್ಯವಾದ ಒಂದು ವಸ್ತುವು ಹೇಳಲ್ಪಡುವುದಿಲ್ಲ, (ಏಕೆಂದರೆ) ಇಲ್ಲಿ ನೈಕಂ ವಸ್ತು=ಅನೇಕ ವಸ್ತುವು ಅಂದರೆ

---

★ ನಕ್ಷತ್ರಮಾನಗಣಿತಂ ತ್ರಯೋದಶಸಹಸ್ರಕಂ । ಬ್ರಹ್ಮಲೋಕಸಮಂ ಚಕ್ರೇ ಸಮಸ್ತಂ ಕ್ಷಿತಿಮಂಡಲಂ॥ ರಾಮೋ ರಾಮ ಇತಿ ಖ್ಯಾಖ್ಯಾ ಸರ್ವೇಷಾಮಭವತ್ತದಾ । ಸರ್ವೋ ರಾಮಮಯೋ ಲೋಕೋ ಯದಾ ರಾಮಸ್ತ್ವಪಾಲಯತ್॥ ಎಂದು ಸ್ಕಾಂದ ಪುರಾಣದಲ್ಲಿ ಹೇಳಿದೆ ಎಂದು ತತ್ತ್ವಪ್ರದೀಪದಲ್ಲಿ ಅಂಶಾಧಿಕರಣದಲ್ಲಿ ಹೇಳಿದ್ದಾರೆ.

ದ್ಯುಸ್ಥತ್ವ ದಿವಃಪರತ್ವರೂಪವಾದ ಎರಡು ಧರ್ಮವು ಹೇಳಲ್ಪಡುತ್ತದೋ, ಮತ್ತೆ ಇಲ್ಲಿ ವಸ್ತುದ್ವಯವು ಹೇಳಲ್ಪಡುತ್ತದೆ. ಎಂದರೆ— (ಸಿದ್ಧಾಂತೀಕರಿಸತಕ್ಕ ಸೂತ್ರಾಂಶವನ್ನು ವ್ಯಾಖ್ಯಾನಮಾಡುತ್ತಾರೆ.) ನ = ಇಲ್ಲಿ ಎರಡು ವಸ್ತು ವು ಹೇಳಲ್ಪಡುವುದಿಲ್ಲ. ಮತ್ತೆ ಎರಡು ಉಪದೇಶದಲ್ಲಿಯೂ ಒಂದೇ ವಸ್ತುವು ಹೇಳಲ್ಪಡುತ್ತದೆ. (ವಿರೋಧವಿದ್ದ ಪ್ರಯುಕ್ತ ಇದು ಹೇಗೆ ಕೂಡುತ್ತದೆ ಎಂದರೆ) ಮೂರು ಲೋಕಗಳನ್ನೂ ಏಳು ಲೋಕಗಳನ್ನೂ ವಿವಕ್ಷಾ ಮಾಡಿಕೊಂಡು ಎರಡು ಕಡೆಗಳಲ್ಲಿಯ ಒಂದು ವಸ್ತುವನ್ನು ಹೇಳಿದರೆ ವಿರೋಧವಿಲ್ಲದಿರುವುದರಿಂದ.

**ವಿಶೇಷಾಂಶ ॥** (ಎ) ಉಪಕ್ರಮದಲ್ಲಿದ್ದುದು ಪ್ರಬಲವೆಂದು ಉಪಪಾದಿಸುವುದಕ್ಕಾಗಿ **ಪೂರ್ವಃ** ಎಂದು ಉಕ್ತಿಯು. (ಬಿ) ಯಾವಾಗ **ಭೂಃ ಭುವಃ ಸ್ವಃ** ಎಂದು ಮೂರು ಲೋಕಗಳ ವಿವಕ್ಷೆ ಯಿದೆಯೋ, ಆಗ ಲಕ್ಷಯೋಜನ ಎತ್ತರವಾದ ಅಂತರಿಕ್ಷಾಖ್ಯ ಭುವರ್ಲೋಕದಿಂದ ಮೇಲೆ ಇರುವ ಸರ್ವಲೋಕವೂ ದ್ಯುಶಬ್ದವಾಚ್ಯವಾದುದು. ಶ್ವೇತದ್ವೀಪ ಅನಂತಾಸನ ವೈಕುಂಠಗಳಾದರೂ ಅಂತರಿಕ್ಷದಿಂದ ಮೇಲೆ ಇರತಕ್ಕವುಗಳು. ಆದಪ್ರಯುಕ್ತ ಅಲ್ಲಿರತಕ್ಕ ನಾರಾಯಣ ವಾಸುದೇವ ವೈಕುಂಠಾಖ್ಯವಾದ ತ್ರಿಪಾತ್ ಶಬ್ದದಿಂದ ಹೇಳಲ್ಪಡತಕ್ಕುದು ರೂಪತ್ರಯವು ದ್ಯುಲೋಕ ದಲ್ಲಿ ಇರುತ್ತದೆ ಎಂದು ಹೇಳಲ್ಪಡುತ್ತದೆ. ಆದ ಪ್ರಯುಕ್ತ ಸಪ್ತಮ್ಯಂತೋಪದೇಶದಿಂದ ವಿರೋಧವಿಲ್ಲ. (ಸಿ) **ಪೃಥಿವೇಸ್ಥೇಷು ಸರ್ವೋಚ್ಚೋ ಲೋಕೋಽನಂತಾಸನಾತ್ಮಕಃ। ಅಂತರಿಕ್ಷಾತ್ತಕೇಭ್ಯಶ್ಚ ಶ್ವೇತದ್ವೀಪಸ್ಥಿತೋ ಹರಿಃ॥** ಎಂದು ಹೇಳಿದ ಪ್ರಯುಕ್ತ ಅನಂತಾಸನವು ಅಂತರಿಕ್ಷಲೋಕದಿಂದ ಉನ್ನತವಾದುದಲ್ಲವೆಂದು ಶಂಕಿಸಕೂಡದು. ಅನಂತಾಸನವು ಪೃಥಿವೀಲೋಕದಲ್ಲಿದ್ದಾಗ್ಯೂ ಬಹುಲಕ್ಷಯೋಜನ ಉನ್ನತವಾದುದರಿಂದ ಒಂದು ಲಕ್ಷಯೋಜನ ಉನ್ನತವಾದ ಅಂತರಿಕ್ಷ ಲೋಕದಿಂದ ಉನ್ನತವಾಗಿದೆ ಎಂದು ಕೂಡಬಹುದು. (ಡಿ) ಯಾವಾಗ **ಭೂಃ ಭುವಃ ಸ್ವಃ ಮಹಃ ಜನಃ ತಪಃ ಸತ್ಯಂ** ಎಂದು ಏಳು ಲೋಕಗಳ ವಿವಕ್ಷೆಯೋ, ಆಗ ಇಂದ್ರಸದನವು ದ್ಯುಶಬ್ದವಾಚ್ಯವಾದುದರಿಂದ ತದುಚ್ಚವಾದುದೂ ಮೇಲೆ ಇರತಕ್ಕ ವೈಕುಂಠವು ದಿವಃಪರವೆನ್ನುಸುತ್ತದೆ. (ಇ) **ಪೃಥಿವ್ಯಾಂ ದ್ಯೌರ್ಮಹಾ ಮೇರುರಾಕಾಶೇ ಸೂರ್ಯಮಂಡಲಂ। ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ॥** ಎನ್ನುವ ಸ್ಮೃತಿಯದೆಶೆಯಿಂದ ಮೇರು ಪರ್ವತವೂ ದ್ಯುಶಬ್ದವಾಚ್ಯ ವಾದುದರಿಂದ ತದುಚ್ಚವಾದುದು ಭೂಸ್ಪೃಷ್ಟವಾದುದರಿಂದ ತತ್ಸಜಾತೀಯವಾದ ಅನಂತಾಸನವು ದಿವಃಪರವೆನ್ನುಸುತ್ತದೆ. (ಎಫ್) ಹೀಗೆ ಸೂರ್ಯಮಂಡಲವೂ ದ್ಯುಶಬ್ದವಾಚ್ಯವಾದುದರಿಂದ ತದುಚ್ಚವಾಗಿ ಮೇಲೆ ಇದ್ದುದರಿಂದ ತತ್ಸಜಾತೀಯವೂ ಭೂಮಿಗಿಂತ ಕಿಂಚಿದಂತರಿತವೂ ಸ್ವರ್ಗಕ್ಕೆ ಸಮಾನವಾದ ಉನ್ನತವೂ ಆದ ಶ್ವೇತದ್ವೀಪವೂ ದಿವಃಪರವಾಗುವುದು. ಆದಪ್ರಯುಕ್ತ ಪಂಚಮ್ಯಂತೋಪದೇಶದಿಂದ ವಿರೋಧವಿಲ್ಲ. (ಜಿ) ವೈಕುಂಠವು ಸ್ವರ್ಗಲೋಕದಿಂದ ಪರವಾದ ಪ್ರಯುಕ್ತವೇ ದಿವಃಪರವೆಂದು ಸಿದ್ಧಿಸುವುದಾದರೂ ಅದನ್ನು **ಸರ್ವತಃ ಪೃಷ್ಠೇಷು** ಎನ್ನು ವುದರಿಂದಲೇ ಹೇಳಿದ್ದರಿಂದ ಸ್ವರ್ಗವನ್ನು ಬಿಟ್ಟು ಇಂದ್ರಸದನವು ದ್ಯುಶಬ್ದವಾಚ್ಯ ವೆಂದು ಹೇಳಿದ್ದು. (ಹೆಚ್) ಯದ್ಯಪಿ ಮೂರು ಲೋಕಗಳನ್ನು ವಿವಕ್ಷಾಮಾಡಿದರೂ ಕೂಡ ಅನಂತಾಸನಾದಿಗಳು ಮೇರ್ವಾದಿಗಳಿಂದ ಪರವಾದ ಪ್ರಯುಕ್ತ ದಿವಃಪರಗಳೆಂದು ಸಿದ್ಧವಾಗುವುವು. **ಯಾವಾನುಚ್ಚಃ ಸ್ವರ್ಗಲೋಕಸ್ತಾವಾನುಚ್ಚತಯಾ ಸ ಚ। ಶ್ವೇತದ್ವೀಪೋ ದಿವಿಷ್ಠೋಽತಃ** ಇತ್ಯಾದಿ ಪ್ರಮಾಣಗಳಿಂದ

ಅನಂತಾಸನ ಶ್ವೇತದ್ವೀಪಗಳಿಗೆ ಸ್ವರ್ಗಲೋಕದಿಂದ ಪರತ್ವವಿಲ್ಲ. ಏಳು ಲೋಕಗಳನ್ನು ವಿವಕ್ಷಾ ಮಾಡಿದ್ದು ವ್ಯರ್ಥವು ಎಂದು ಹೇಳಕೂಡದು. ಹಾಗಿದ್ದರೆ ವೈಕುಂಠವು ದ್ಯುಶಬ್ದಾರ್ಥದಲ್ಲಿ ಸೇರಿದ್ದರಿಂದ ಅದಕ್ಕೆ ಸರ್ವದ್ಯುಪರತ್ವವು ಸಿದ್ಧಿಸದೇ ಹೋಗುವುದು. ವೈಕುಂಠಕ್ಕೆ ದ್ಯುಪರತ್ವವನ್ನು ಹೇಳದೆ ಇದ್ದರೆ **ದ್ಯಾತ್ಮಕೇಭ್ಯಶ್ಚ ಸರ್ವೇಭ್ಯಃ ವೈಕುಂಠಸ್ತೋಚ್ಚ ಉಚ್ಯತೇ** ಎನ್ನುವ ಪ್ರಮಾಣ ವಿರೋಧವು ಬರ ಬೇಕಾಗುವುದು. ಅದಕ್ಕಾಗಿ ಏಳು ಲೋಕಗಳನ್ನು ವಿವಕ್ಷಾಮಾಡಿ ದಿವಃಪರತ್ವ ಹೇಳಿದ್ದು ಯುಕ್ತವು. (ಈ) **ಅನಂತಶಯನಂ ಚೈವ ತಥಾऽನಂತಾಸನಂ ಹರೇಃ। ಬಹುಲಕ್ಷೋಚ್ಚತ್ರೇ ನಿತ್ಯೇ ವಿಮಾನೇ ಸಂಸ್ಥಿತಂ ಯತಃ। ಚತ್ರಕ್ಕ ತ್ಯಾತ್ಮನಿ ತತೋ ದಿವೀತಿ ಕಥಿತಂ ಶ್ರುತೌ**' ಎನ್ನುವ ಪ್ರಮಾಣದಿಂದ ಚತ್ರಕ್ಕ ತ್ಯಾತ್ಮಕವಾದ ಅನಂತಾಸನ ಶ್ವೇತದ್ವೀಪ ವೈಕುಂಠಾಖ್ಯವಾದ ಮೂರು ಸ್ಥಾನಗಳಲ್ಲಿ ಸಪ್ತಮ್ಯಂತವಾದ ದ್ಯುಶಬ್ದವು ಪ್ರಕಾಶಿಸುವುದರಿಂದ ಯೌಗಿಕವಾಗಿದೆ. ಸ್ವರ್ಗಾದಿಗಳಲ್ಲಿ ಆದರೂ ರೂಢವಾಗಿದೆ. ಆದಪ್ರಯುಕ್ತ ಸಪ್ತಮ್ಯಂತ ವಾಕ್ಯಗಳಿಗೆ ವಿರೋಧವಿಲ್ಲವೆಂದು ರೀತ್ಯಂತರದಿಂದ ವಿರೋಧ ಪರಿಹಾರ ಮಾಡಿರುತ್ತಾರೆ.

## ಮಾಯಾವಾದಿ ರಾಮಾನುಜಾಚಾರ್ಯ ರೀತ್ಯಾ

**ವಿಚಾರ॥** (೧) **ಜ್ಯೋತಿಶ್ಚರಣಾಭಿಧಾನತ್** ಎಂದು ಮೊದಲುಗೊಂಡು **ಉಪದೇಶಭೇಧಾತ್** ಎನ್ನುವ ತನಕ ನಾಲ್ಕು ಸೂತ್ರಗಳು ಒಂದೇ ಅಧಿಕರಣವು. ಚರಣಾಭಿಧಾನಾತ್ ಎನ್ನುವುದಕ್ಕೆ ಪಾದಾಭಿಧಾನಾತ್ ಎಂದು ಅರ್ಥವು. **ತದೇತದೃಚಾऽಭ್ಯುಕ್ತಂ ಪಾದೋऽಸ್ಯ ಸರ್ವಾ ಭೂತಾನಿ, ತ್ರಿಪಾದಸ್ಯಾಮೃತಂ ದಿವಿ** ಎಂದು ಪಾದವನ್ನು ಹೇಳಿದುದರಿಂದ ಎನ್ನುತ್ತಾರೆ. ಇದು ಅಯುಕ್ತವು. ಏಕೆಂದರೆ ಚರಣ ಎನ್ನುವುದಕ್ಕಿಂತ ಪಾದ ಎನ್ನುವಲ್ಲಿ ಅಕ್ಷರಲಾಘವವಿದ್ದುದರಿಂದಲೂ ಶ್ರುತಿಯಲ್ಲಿ ಪಾದಶಬ್ದ ವೇ ಇದ್ದುದರಿಂದಲೂ ಪಾದಾಭಿಧಾನಾತ್ ಎಂದೇ ಸೂತ್ರವಿರಬೇಕಿತ್ತು ಎನ್ನುವ ದೋಷವು ಬರುವುದು. (೨) ಮತ್ತು ನಮ್ಮ ರೀತಿಯಿಂದ **ಹೃದಯ ಆಹಿತಂ ಯತ್** ಎಂದು ಗುಹಾನಿಹಿತತ್ವಯುಕ್ತವಾದ ಅಗ್ನಿಸೂಕ್ತದಲ್ಲಿರುವ ಜ್ಯೋತಿರ್ವಾಕ್ಯವನ್ನುದಾಹರಿಸಿ ಆನಂದಮಯಾಧಿಕರಣವನ್ನು ಆಕ್ಷೇಪಿಸಿಕೊಂಡು ಪೂರ್ವಪಕ್ಷವು ಕೂಡುವಾಗ ಅದನ್ನು ಬಿಟ್ಟು ಆನಂದಮಯಾಧಿಕರಣದಿಂದ ಆಕ್ಷೇಪಿಕೀಸಂಗತಿ ಯಿಲ್ಲದಿರುವ **ಅಥ ಯದತಃ** ಎನ್ನುವ ಛಾಂದೋಗ್ಯ ವಾಕ್ಯವನ್ನುದಾಹರಿಸಿದ್ದು ಅಯುಕ್ತವು. (೩.) ಮತ್ತು **ಪೌನರುಕ್ತ್ಯಂ ಪರಮತೇ ಜ್ಯೋತಿರ್ಭೂತಾದಿ ಸೂತ್ರಯೋಃ। ಪಾದೋಪದೇಶಾದನ್ಯಾ ಹಿ ನೈವಾಸ್ತಿ ಚರಣಾಭಿಧಾ॥** ಪರಮತದಲ್ಲಿ ಜ್ಯೋತಿಸ್ಸೂ ತ್ರಕ್ಕೂ ಭೂತಾದಿಸೂತ್ರಕ್ಕೂ ಪೌನರುಕ್ತ್ಯವು ಬರುವುದು. **ಪಾದೋऽಸ್ಯ ಸರ್ವಭೂತಾನಿ** ಎನ್ನುವ ಪೂರ್ವವಾಕ್ಯದಲ್ಲಿದ್ದ ಪಾದಾಭಿಧಾನದಿಂದ ಇತರವಾದ ಜ್ಯೋತಿರ್ವಾಕ್ಯದಲ್ಲಿ ಪಾದಾಭಿಧಾನವು ಇಲ್ಲದಿರುವುದರಿಂದ ಅದು ಭೂತಾದಿಸೂತ್ರದಲ್ಲಿಯೇ ಉಕ್ತವಾದ ಪ್ರಯುಕ್ತ ಎರಡು ಸೂತ್ರಗಳಲ್ಲಿಯೂ ಒಂದೇ ಅರ್ಥವನ್ನು ಹೇಳಿದುದರಿಂದ ಪೌನರುಕ್ತ್ಯವು ಬರುವುದು. (೪) ಮತ್ತು ಅದ್ವೈತಿಗಳ ಪಕ್ಷದಲ್ಲಿ ಬ್ರಹ್ಮನಿಗೆ ತತ್ತ್ವಾದತ್ವವೆಂದರೆ ತತ್ತದಾತ್ಮಕತ್ವವು. ಅಂತೂ ಚರಣಾಭಿಧಾನಾತ್ ಎನ್ನು ವುದರಿಂದಲೇ ಸರ್ವಾತ್ಮಕತ್ವವನ್ನು ಹೇಳಿದುದರಿಂದ. ಆದರೆ ಏಕದೇಶ ಭೂತವಾದ ಭೂತಾದ್ಯಾತ್ಮಕತ್ವವನ್ನು ಪ್ರತಿಪಾದಿಸತಕ್ಕ ಭೂತಾದಿಸೂತ್ರದಿಂದ ಪ್ರಯೋಜನವಿಲ್ಲ. ಅಂತೂ ಪೌನರುಕ್ತ್ಯವು. ಇತ್ಯಾದ್ಯನೇಕ ದೋಷಗಳು ಬರುವುದರಿಂದ ಪರರ ಮತದಲ್ಲಿ ಭೂತಾದಿಸೂತ್ರವು ವ್ಯರ್ಥವು.

ದ್ಯುಸ್ಥತ್ವ ದಿವಃಪರತ್ವರೂಪವಾದ ಎರಡು ಧರ್ಮವು ಹೇಳಲ್ಪಡುತ್ತದೋ, ಮತ್ತೆ ಇಲ್ಲಿ ವಸ್ತುದ್ವಯವು ಹೇಳಲ್ಪಡುತ್ತದೆ. ಎಂದರೆ— (ಸಿದ್ಧಾಂತೀಕರಿಸತಕ್ಕ ಸೂತ್ರಾಂಶವನ್ನು ವ್ಯಾಖ್ಯಾನಮಾಡುತ್ತಾರೆ.) ನ = ಇಲ್ಲಿ ಎರಡು ವಸ್ತು ವು ಹೇಳಲ್ಪಡುವುದಿಲ್ಲ. ಮತ್ತೆ ಎರಡು ಉಪದೇಶದಲ್ಲಿಯೂ ಒಂದೇ ವಸ್ತುವು ಹೇಳಲ್ಪಡುತ್ತದೆ. (ವಿರೋಧವಿದ್ದ ಪ್ರಯುಕ್ತ ಇದು ಹೇಗೆ ಕೂಡುತ್ತದೆ ಎಂದರೆ) ಮೂರು ಲೋಕಗಳನ್ನೂ ಏಳು ಲೋಕಗಳನ್ನೂ ವಿವಕ್ಷಾ ಮಾಡಿಕೊಂಡು ಎರಡು ಕಡೆಗಳಲ್ಲಿಯ ಒಂದು ವಸ್ತುವನ್ನು ಹೇಳಿದರೆ ವಿರೋಧವಿಲ್ಲದಿರುವುದರಿಂದ.

**ವಿಶೇಷಾಂಶ ।।** (ಎ) ಉಪಕ್ರಮದಲ್ಲಿದ್ದುದು ಪ್ರಬಲವೆಂದು ಉಪಪಾದಿಸುವುದಕ್ಕಾಗಿ **ಪೂರ್ವಃ** ಎಂದು ಉಕ್ತಿಯು. (ಬಿ) ಯಾವಾಗ **ಭೂಃ ಭುವಃ ಸ್ವಃ** ಎಂದು ಮೂರು ಲೋಕಗಳ ವಿವಕ್ಷೆಯಿದೆಯೋ, ಆಗ ಲಕ್ಷಯೋಜನ ಎತ್ತರವಾದ ಅಂತರಿಕ್ಷಾಖ್ಯ ಭುವರ್ಲೋಕದಿಂದ ಮೇಲೆ ಇರುವ ಸರ್ವಲೋಕವೂ ದ್ಯುಶಬ್ದವಾಚ್ಯವಾದುದು. ಶ್ವೇತದ್ವೀಪ ಅನಂತಾಸನ ವೈಕುಂಠಗಳಾದರೂ ಅಂತರಿಕ್ಷದಿಂದ ಮೇಲೆ ಇರತಕ್ಕವುಗಳು. ಆದಪ್ರಯುಕ್ತ ಅಲ್ಲಿರತಕ್ಕ ನಾರಾಯಣ ವಾಸುದೇವ ವೈಕುಂಠಾಖ್ಯವಾದ ತ್ರಿಪಾತ್ ಶಬ್ದದಿಂದ ಹೇಳಲ್ಪಡತಕ್ಕುದು ರೂಪತ್ರಯವು ದ್ಯುಲೋಕ ದಲ್ಲಿ ಇರುತ್ತದೆ ಎಂದು ಹೇಳಲ್ಪಡುತ್ತದೆ. ಆದ ಪ್ರಯುಕ್ತ ಸಪ್ತಮ್ಯಂತೋಪದೇಶದಿಂದ ವಿರೋಧವಿಲ್ಲ. (ಸಿ) **ಪೃಥಿವೇಸ್ತೇಷು ಸರ್ವೋಚ್ಚೋ ಲೋಕೋಽನಂತಾಸನಾತ್ಮಕಃ। ಅಂತರಿಕ್ಷಾತ್ತತೇಭ್ಯಶ್ಚ ಶ್ವೇತದ್ವೀಪಸ್ಥಿತೋ ಹರಿಃ।।** ಎಂದು ಹೇಳಿದ ಪ್ರಯುಕ್ತ ಅನಂತಾಸನವು ಅಂತರಿಕ್ಷಲೋಕದಿಂದ ಉನ್ನತವಾದುದಲ್ಲವೆಂದು ಶಂಕಿಸಕೂಡದು. ಅನಂತಾಸನವು ಪೃಥಿವೀಲೋಕದಲ್ಲಿದ್ದಾಗ್ಯೂ ಬಹುಲಕ್ಷಯೋಜನ ಉನ್ನತವಾದುದರಿಂದ ಒಂದು ಲಕ್ಷಯೋಜನ ಉನ್ನತವಾದ ಅಂತರಿಕ್ಷ ಲೋಕದಿಂದ ಉನ್ನತವಾಗಿದೆ ಎಂದು ಕೂಡಬಹುದು. (ಡಿ) ಯಾವಾಗ **ಭೂಃ ಭುವಃ ಸ್ವಃ ಮಹಃ ಜನಃ ತಪಃ ಸತ್ಯಂ** ಎಂದು ಏಳು ಲೋಕಗಳ ವಿವಕ್ಷೆಯೋ, ಆಗ ಇಂದ್ರಸದನವು ದ್ಯುಶಬ್ದವಾಚ್ಯವಾದುದರಿಂದ ತದುಚ್ಚವಾದುದೂ ಮೇಲೆ ಇರತಕ್ಕ ವೈಕುಂಠವು ದಿವಃಪರವೆನ್ನುಸುತ್ತದೆ. (ಇ) **ಪೃಥಿವ್ಯಾಂ ದ್ಯೌರ್ಮಹಾ ಮೇರುರಾಕಾಶೇ ಸೂರ್ಯಮಂಡಲಂ। ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ।।** ಎನ್ನುವ ಸ್ಮೃತಿಯದೆಶೆಯಿಂದ ಮೇರು ಪರ್ವತವೂ ದ್ಯುಶಬ್ದವಾಚ್ಯ ವಾದುದರಿಂದ ತದುಚ್ಚವಾದುದು ಭೂಸ್ಪೃಷ್ಟವಾದುದರಿಂದ ತತ್ಸಜಾತೀಯವಾದ ಅನಂತಾಸನವು ದಿವಃಪರವೆನ್ನುಸುತ್ತದೆ. (ಎಫ್) ಹೀಗೆ ಸೂರ್ಯಮಂಡಲವೂ ದ್ಯುಶಬ್ದವಾಚ್ಯವಾದುದರಿಂದ ತದುಚ್ಚವಾಗಿ ಮೇಲೆ ಇದ್ದುದರಿಂದ ತತ್ಸಜಾತೀಯವೂ ಭೂಮಿಗಿಂತ ಕಿಂಚಿದಂತರಿತವೂ ಸ್ವರ್ಗಕ್ಕೆ ಸಮಾನವಾದ ಉನ್ನತವೂ ಆದ ಶ್ವೇತದ್ವೀಪವೂ ದಿವಃಪರವಾಗುವುದು. ಆದಪ್ರಯುಕ್ತ ಪಂಚಮ್ಯಂತೋಪದೇಶದಿಂದ ವಿರೋಧವಿಲ್ಲ. (ಜಿ) ವೈಕುಂಠವು ಸ್ವರ್ಗಲೋಕದಿಂದ ಪರವಾದ ಪ್ರಯುಕ್ತವೇ ದಿವಃಪರವೆಂದು ಸಿದ್ಧಿಸುವುದಾದರೂ ಅದನ್ನು **ಸರ್ವತಃ ಪೃಷ್ಠೇಷು** ಎನ್ನು ವುದರಿಂದಲೇ ಹೇಳಿದ್ದರಿಂದ ಸ್ವರ್ಗವನ್ನು ಬಿಟ್ಟು ಇಂದ್ರಸದನವು ದ್ಯುಶಬ್ದವಾಚ್ಯ ವೆಂದು ಹೇಳಿದ್ದು. (ಹೆಚ್) ಯದ್ಯಪಿ ಮೂರು ಲೋಕಗಳನ್ನು ವಿವಕ್ಷಾಮಾಡಿದರೂ ಕೂಡ ಅನಂತಾಸನಾದಿಗಳು ಮೇರ್ವಾದಿಗಳಿಂದ ಪರವಾದ ಪ್ರಯುಕ್ತ ದಿವಃಪರಗಳೆಂದು ಸಿದ್ಧವಾಗುವುವು. **ಯಾವಾನುಚ್ಚಃ ಸ್ವರ್ಗಲೋಕಸ್ತಾವಾನುಚ್ಚತಯಾ ಸ ಚ। ಶ್ವೇತದ್ವೀಪೋ ದಿವಿಷ್ಠೋಽತಃ** ಇತ್ಯಾದಿ ಪ್ರಮಾಣಗಳಿಂದ

ಅನಂತಾಸನ ಶ್ವೇತದ್ವೀಪಗಳಿಗೆ ಸ್ವರ್ಗಲೋಕದಿಂದ ಪರತ್ವವಿಲ್ಲ. ಏಳು ಲೋಕಗಳನ್ನು ವಿವಕ್ಷಾ ಮಾಡಿದ್ದು ವ್ಯರ್ಥವು ಎಂದು ಹೇಳಕೂಡದು. ಹಾಗಿದ್ದರೆ ವೈಕುಂಠವು ದ್ಯುಶಬ್ದಾರ್ಥದಲ್ಲಿ ಸೇರಿದ್ದರಿಂದ ಅದಕ್ಕೆ ಸರ್ವದ್ಯುಪರತ್ವವು ಸಿದ್ಧಿಸದೇ ಹೋಗುವುದು. ವೈಕುಂಠಕ್ಕೆ ದ್ಯುಪರತ್ವವನ್ನು ಹೇಳದೆ ಇದ್ದರೆ **ದ್ಯಾತ್ಮಕೇಭ್ಯಶ್ಚ ಸರ್ವೇಭ್ಯಃ ವೈಕುಂಠಸ್ತೋಚ್ಚ ಉಚ್ಯತೇ** ಎನ್ನುವ ಪ್ರಮಾಣ ವಿರೋಧವು ಬರ ಬೇಕಾಗುವುದು. ಅದಕ್ಕಾಗಿ ಏಳು ಲೋಕಗಳನ್ನು ವಿವಕ್ಷಾಮಾಡಿ ದಿವಃಪರತ್ವ ಹೇಳಿದ್ದು ಯುಕ್ತವು. (ಈ) **ಅನಂತಶಯನಂ ಚೈವ ತಥಾಽನಂತಾಸನಂ ಹರೇಃ। ಬಹುಲಕ್ಷೋಚ್ಚತ್ರೇ ನಿತ್ಯೇ ವಿಮಾನೇ ಸಂಸ್ಥಿತಂ ಯತಃ। ಚಿತ್ರಕ್ಕ ತ್ಯಾತ್ಮನಿ ತತೋ ದಿವೀತಿ ಕಥಿತಂ ಶ್ರುತೌ'।** ಎನ್ನುವ ಪ್ರಮಾಣದಿಂದ ಚಿತ್ರಕ್ಕ ತ್ಯಾತ್ಮಕವಾದ ಅನಂತಾಸನ ಶ್ವೇತದ್ವೀಪ ವೈಕುಂಠಾಖ್ಯವಾದ ಮೂರು ಸ್ಥಾನಗಳಲ್ಲಿ ಸಪ್ತಮ್ಯಂತವಾದ ದ್ಯುಶಬ್ದವು ಪ್ರಕಾಶಿಸುವುದರಿಂದ ಯೌಗಿಕವಾಗಿದೆ. ಸ್ವರ್ಗಾದಿಗಳಲ್ಲಿ ಆದರೂ ರೂಢವಾಗಿದೆ. ಆದಪ್ರಯುಕ್ತ ಸಪ್ತಮ್ಯಂತ ವಾಕ್ಯಗಳಿಗೆ ವಿರೋಧವಿಲ್ಲವೆಂದು ರೀತ್ಯಂತರದಿಂದ ವಿರೋಧ ಪರಿಹಾರ ಮಾಡಿರುತ್ತಾರೆ.

## ಮಾಯಾವಾದಿ ರಾಮಾನುಜಾಚಾರ್ಯ ರೀತ್ಯಾ

**ವಿಚಾರ ॥** (೧) **ಜ್ಯೋತಿಶ್ಚರಣಾಭಿಧಾನತ್** ಎಂದು ಮೊದಲುಗೊಂಡು **ಉಪದೇಶಭೇಧಾತ್** ಎನ್ನುವ ತನಕ ನಾಲ್ಕು ಸೂತ್ರಗಳು ಒಂದೇ ಅಧಿಕರಣವು. ಚರಣಾಭಿಧಾನಾತ್ ಎನ್ನುವುದಕ್ಕೆ ಪಾದಾಭಿಧಾನಾತ್ ಎಂದು ಅರ್ಥವು. ತದೇತದೃಚಾಽಭ್ಯುಕ್ತಂ **ಪಾದೋಽಸ್ಯ ಸರ್ವಾ ಭೂತಾನಿ, ತ್ರಿಪಾದಸ್ಯಾಮೃತಂ** ದಿವಿ ಎಂದು ಪಾದವನ್ನು ಹೇಳಿದುದರಿಂದ ಎನ್ನುತ್ತಾರೆ. ಇದು ಅಯುಕ್ತವು. ಏಕೆಂದರೆ ಚರಣ ಎನ್ನುವುದಕ್ಕಿಂತ ಪಾದ ಎನ್ನುವಲ್ಲಿ ಅಕ್ಷರಲಾಘವವಿದ್ದುದರಿಂದಲೂ ಶ್ರುತಿಯಲ್ಲಿ ಪಾದಶಬ್ದ ವೇ ಇದ್ದುದರಿಂದಲೂ ಪಾದಾಭಿಧಾನಾತ್ ಎಂದೇ ಸೂತ್ರವಿರಬೇಕಿತ್ತು ಎನ್ನುವ ದೋಷವು ಬರುವುದು. (೨) ಮತ್ತು ನಮ್ಮ ರೀತಿಯಿಂದ **ಹೃದಯ ಆಹಿತಂ ಯತ್** ಎಂದು ಗುಹಾನಿಹಿತತ್ವಯುಕ್ತವಾದ ಅಗ್ನಿಸೂಕ್ತದಲ್ಲಿರುವ ಜ್ಯೋತಿರ್ವಾಕ್ಯವನ್ನುದಾಹರಿಸಿ ಆನಂದಮಯಾಧಿಕರಣವನ್ನು ಆಕ್ಷೇಪಿಸಿಕೊಂಡು ಪೂರ್ವಪಕ್ಷವು ಕೂಡುವಾಗ ಅದನ್ನು ಬಿಟ್ಟು ಆನಂದಮಯಾಧಿಕರಣದಿಂದ ಆಕ್ಷೇಪಿಕೀಸಂಗತಿ ಯಿಲ್ಲದಿರುವ **ಅಥ ಯದತಃ** ಎನ್ನುವ ಛಾಂದೋಗ್ಯ ವಾಕ್ಯವನ್ನುದಾಹರಿಸಿದ್ದು ಅಯುಕ್ತವು. (೩) ಮತ್ತು **ಪೌನರುಕ್ತ್ಯಂ ಪರಮತೇ ಜ್ಯೋತಿರ್ಭೂತಾದಿ ಸೂತ್ರಯೋಃ। ಪಾದೋಪದೇಶಾದನ್ಯಾ ಹಿ ನೈವಾಸ್ತಿ ಚರಣಾಭಿಧಾ।** ಪರಮತದಲ್ಲಿ ಜ್ಯೋತಿಸ್ಸೂ ತ್ರಕ್ಕೂ ಭೂತಾದಿಸೂತ್ರಕ್ಕೂ ಪೌನರುಕ್ತ್ಯವು ಬರುವುದು. **ಪಾದೋಽಸ್ಯ** ಸರ್ವಭೂತಾನಿ ಎನ್ನುವ ಪೂರ್ವವಾಕ್ಯದಲ್ಲಿದ್ದ ಪಾದಾಭಿಧಾನದಿಂದ ಇತರವಾದ ಜ್ಯೋತಿರ್ವಾಕ್ಯದಲ್ಲಿ ಪಾದಾಭಿಧಾನವು ಇಲ್ಲದಿರುವುದರಿಂದ ಅದು ಭೂತಾದಿಸೂತ್ರದಲ್ಲಿಯೇ ಉಕ್ತವಾದ ಪ್ರಯುಕ್ತ ಎರಡು ಸೂತ್ರಗಳಲ್ಲಿಯೂ ಒಂದೇ ಅರ್ಥವನ್ನು ಹೇಳಿದುದರಿಂದ ಪೌನರುಕ್ತ್ಯವು ಬರುವುದು. (೪) ಮತ್ತು ಅದ್ವೈತಿಗಳ ಪಕ್ಷದಲ್ಲಿ ಬ್ರಹ್ಮನಿಗೆ ತತ್ತ್ವಾದತ್ವವೆಂದರೆ ತತ್ತದಾತ್ಮಕತ್ವವು. ಅಂತೂ ಚರಣಾಭಿಧಾನಾತ್ ಎನ್ನು ವುದರಿಂದಲೇ ಸರ್ವಾತ್ಮಕತ್ವವನ್ನು ಹೇಳಿದುದರಿಂದ. ಆದರೆ ಏಕದೇಶ ಭೂತವಾದ ಭೂತಾದ್ಯಾತ್ಮಕತ್ವವನ್ನು ಪ್ರತಿಪಾದಿಸತಕ್ಕ ಭೂತಾದಿಸೂತ್ರದಿಂದ ಪ್ರಯೋಜನವಿಲ್ಲ. ಅಂತೂ ಪೌನರುಕ್ತ್ಯವು, ಇತ್ಯಾದ್ಯನೇಕ ದೋಷಗಳು ಬರುವುದರಿಂದ ಪರರ ಮತದಲ್ಲಿ ಭೂತಾದಿಸೂತ್ರವು ವ್ಯರ್ಥವು.

## ಅಧಿಕರಣ ಸಾರಾಂಶ

**ಗಾಯತ್ರೀ ವಾ ಇದಂ ಸರ್ವಂ** ಎಂದು ಛಂದೋವಿಶೇಷವಾದ ಗಾಯತ್ರಿಯನ್ನುಪಕ್ರಮಿಸಿಕೊಂಡು **ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ** ಎಂದು ಹೇಳಿದ ಜ್ಯೋತಿಸ್ಸು ಗಾಯತ್ರಿಯೇ, ವಿಷ್ಣುವಲ್ಲ, ಎಂದರೆ— **ಗಾಯತ್ರಿ ಚ ತ್ರಾಯತಿ ಚ** ಇತ್ಯಾದಿ ಶ್ರುತಿಯಿಂದ ಉಕ್ತವಾದ ಗಾನ ತ್ರಾಣಕರ್ತೃತ್ವರೂಪವಾದ ವಿಷ್ಣುಲಿಂಗದಿಂದಲೂ ಮತ್ತು ಅನಾದಿಯಾದ ಗಾಯತ್ರ್ಯಾದಿ ಛಂದೋವಿಶೇಷನಿಯಾಮಕತ್ವವಿದ್ದುದರಿಂದಲೂ ಗಾಯತ್ರೀಶಬ್ದವಾಚ್ಯನೂ ಕೂಡ ವಿಷ್ಣುವೇ, ಛಂದಸ್ಸಲ್ಲ. ಆದುದರಿಂದ ಜ್ಯೋತಿಶ್ಶಬ್ದವಾಚ್ಯನೂ ವಿಷ್ಣುವೇ. (೨) **ಅನಾದೀನಾಂ ಗುಣಾದೀನಾಂ ಯಥಾ ಗುಣ್ಯಾದಿತಂತ್ರತಾ। ತಥಾऽನಾದಿ ಶ್ರುತೇರಸ್ತು ಕ್ಷೇಮಾಯೇಶ್ವರ ತಂತ್ರತಾ॥** ವೈಶೇಷಿಕರ ಮತದಲ್ಲಿ ಅನಾದಿ ನಿತ್ಯಗಳಾದ ಗಗನಾದಿ ಪರಿಮಾಣಾದಿಗಳಿಗೆ ಸ್ವಾಶ್ರಯವಾದ ಗಗನಾದಿಗಳ ಅಧೀನತ್ವವು ಹೇಗೆ ಇದೆಯೋ, ಅದ್ವೈತಿಗಳ ಮತದಲ್ಲಿ ಅನಾದಿಯಾದ ಆತ್ಮಾಜ್ಞಾನಸಂಬಂಧಕ್ಕೂ ಜೀವಬ್ರಹ್ಮ ವಿಭಾಗಾದಿಗಳಿಗೂ ಸಂಬಂಧಿಯಾದ ಅಜ್ಞಾನಾದ್ಯಧೀನತ್ವವು ಹೇಗೆ ಇದೆಯೋ, ಪ್ರಾಭಾಕರರ ಮತದಲ್ಲಿ ದುಃಖಪ್ರಾಗಭಾವರೂಪವಾದ ಮೋಕ್ಷಕ್ಕೆ ಜ್ಞಾನಾದೀನತ್ವವು ಹೇಗೆ ಇದೆಯೋ ಹಾಗೆಯೇ ಅನಾದಿಯಾದ ಶ್ರುತಿರೂಪವಾದ ಗಾಯತ್ರಿಗೂ ಗಾಯತ್ರೀಪದಪ್ರವೃತ್ತಿನಿಮಿತ್ತಕ್ಕೂ ಕೂಡ ಉತ್ಪತ್ತಿಯಿಲ್ಲದಿದ್ದರೂ ಕೂಡ ಸ್ಥಿತಿಯಲ್ಲಿ ವಿಷ್ಣುವಿನ ಅಧೀನತ್ವವು ಇದೆ. ತಥಾಚ ಅನಾದಿಯಾದುದಕ್ಕೂ ಈಶ್ವರನು ನಿಯಾಮಕನೇ. (೩) ಮತ್ತು **ಅಕರ್ತುಮನ್ಯಥಾ ಕರ್ತುಂ ಕರ್ತುಂ ಚಾಸ್ತೀಶ್ವರಸ್ಯ ತತ್। ಸಾಮರ್ಥ್ಯಂ ತೇನ ತತ್ತಂತ್ರಮನಾದ್ಯಪಿ ಚ ಸಾದಿವತ್॥** ಈಶ್ವರನಿಗೆ ಮಾಡದೆ ಇರಲಿಕ್ಕೂ ಅನ್ಯಥಾ ಮಾಡಲಿಕ್ಕೂ ಸರಿಯಾಗಿ ಮಾಡಲಿಕ್ಕೂ ಸಂಪೂರ್ಣ ಸಾಮರ್ಥ್ಯವಿದೆ. ಆದುದರಿಂದ ಸಾದಿಪದಾರ್ಥದಂತೆ ಅನಾದಿಯಾದುದೂ ಕೂಡ ಈಶ್ವರನ ಅಧೀನವೇ. ಅಂದರೆ ಈಶ್ವರನು ಸರ್ವತ್ರಪೂರ್ಣಶಕ್ತಿಯುಳ್ಳವನಾದುದರಿಂದ ಅತೀತಾದಿಕಾಲವನ್ನು ಅವ್ಯಾಕೃತಾಕಾಶಾದಿಗಳಿಂದ ವಿರಹಿತವಾದುದನ್ನಾಗಿಯೂ ಮಾಡಲಿಕ್ಕೆ ಶಕ್ತನೇ ಆಗಿರುತ್ತಾನೆ. ಹಾಗೆ ಸಂಕಲ್ಪವಿಲ್ಲದೆ ಇರುವುದರಿಂದ ಮಾಡಲಿಲ್ಲ. (೪) ಅಘಟಿತಘಟಕ ಅಚಿಂತ್ಯವಾದ ಅದ್ಭುತವಾದ ಶಕ್ತಿಯುಳ್ಳ ಶ್ರೀಹರಿಯು ಶಕ್ತಿಯಿಲ್ಲದಿರುವುದರಿಂದ ಮಾಡಲಿಲ್ಲವೆಂದು ಹೇಳಕೂಡದು. (೫) ಯದ್ಯಪಿ ಅನಾದಿಸ್ವಭಾವಕ್ಕೆ ಈಶ್ವರನ ಅಧೀನತ್ವವನ್ನು ಹೇಳದೆ ಇದ್ದರೂ ಗಾಯತ್ರೀಶಬ್ದಪ್ರವೃತ್ತಿ ನಿಮಿತ್ತವಾದ ಗಾನ ತ್ರಾಣಕರ್ತೃತ್ವವು. ವೇದವನ್ನುಪದೇಶಿಸಿದವನೂ ರಕ್ಷಕನೂ ಆದ ವಿಷ್ಣುವಿನಲ್ಲಿಯೇ ಕೂಡುವುದರಿಂದ ಗಾಯತ್ರೀಶಬ್ದಕ್ಕೆ ವಿಷ್ಣುಪರತ್ವವನ್ನು ಹೇಳಲು ಶಕ್ಯವಾಗುತ್ತದೆ. ಆದಾಗ್ಯೂ ಛಂದೋಗತವಾದ ಪ್ರವೃತ್ತಿನಿಮಿತ್ತವು ವಿಷ್ಣುವಿನ ಅಧೀನವಾದ ಪ್ರಯುಕ್ತ ಶ್ರುತಿಗೆ ವಿಷ್ಣುವಿನಲ್ಲಿಯೇ ಮಹಾಯೋಗದಿಂದ ಪರಮಮುಖ್ಯತ್ವವನ್ನು ತೋರಿಸುವುದಕ್ಕಾಗಿಯೂ ಅನಾದಿಸ್ವಭಾವನಿಯಾಮಕಶಕ್ತಿರೂಪವಾದ ಮಹಾಗುಣವು ಸಿದ್ಧಿಸುವುದಕ್ಕಾಗಿಯೂ ವಿಷ್ಣುವಿನಲ್ಲಿ ಕೂಡದಿರುವ ಅನಾದಿಪ್ರವೃತ್ತಿನಿಮಿತ್ತಕವಾದ ಶಬ್ದ ಸಮನ್ವಯಸಿದ್ಧಿಗಾಗಿಯೂ ಅನಾದಿಸ್ವಭಾವಕ್ಕೂ ಕೂಡ ಈಶ್ವರಾಧೀನತ್ವವು ಉಕ್ತವಾಗಿದೆ. ಆದಕಾರಣ ವಿಷ್ಣುವೇ ವೇದಗಳಲ್ಲಿರತಕ್ಕ ಗಾಯತ್ರೀ ಮೊದಲಾದ ಶಬ್ದವಾಚ್ಯನು.

**ಗಾಯತ್ರ್ಯಧಿಕರಣವು ಸಮಾಪ್ತವಾಯಿತು.**

# ೧೨ ಉತ್ತರ ಪ್ರಾಣಾಧಿಕರಣ

**ಪೀಠಿಕೆ ॥** ಈ ಅಧಿಕರಣದಲ್ಲಿ ಲೋಕವ್ಯವಹಾರದಿಂದ ಅನ್ಯತ್ರ ಪ್ರಸಿದ್ಧವಾದ ಪ್ರಾಣ ಎನ್ನುವ ನಾಮಕ್ಕೆ ವಿಷ್ಣುವಿನಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಶ್ರುತ್ಯಾದಿಸಂಗತಿ, ವಿಷಯವಾಕ್ಯ, ವಿಷಯ, ಸಂಶಯ, ಸಯುಕ್ತಿಕ ಪೂರ್ವಪಕ್ಷ ಗಳನ್ನು ತೋರಿಸುತ್ತಾರೆ—

**ಭಾಷ್ಯ ॥ ಪ್ರಾಣೋ ವಿಷ್ಣುರಿತ್ಯುಕ್ತಂ । ತತ್ರ ತಾ ವಾ ಏತಾಃ ಶೀರ್ಷಂ ಶ್ರಿ ಯಃಶ್ರಿತಾಶ್ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ (ಐ.ಆ.೨.೧.೪.)। ಇತ್ಯತ್ರ ಪ್ರಾಣಸ್ಯ ವಿಷ್ಣುತ್ವಂ ನ ಯುಜ್ಯತೇ। ಇಂದ್ರಿಯೈಃ ಸಹಾಭಿಧಾನಾತ್। ಇತಿ ॥ ಅತ ಆಹ ॥ ೧ ॥**

**ಭಾಷ್ಯಾರ್ಥ ॥** ಆದ್ಯ ಪ್ರಾಣಾಧಿಕರಣದಲ್ಲಿ ತದ್ಧೈತ್ವಂ ಎನ್ನುವ ವಾಕ್ಯದಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವು ಎಂದು ಹೇಳಲ್ಪಟ್ಟಿದೆ. ಅದು ಕೂಡುವುದಿಲ್ಲ, ಏಕೆಂದರೆ ತಾ ಏತಾಃ=ಆ ಈದಾವ ಚಕ್ಷುಃ ಶ್ರೋತ್ರಂ ಮನಃ ವಾಕ್ ಪ್ರಾಣಃ ಎನ್ನುವ ಶಬ್ದಗಳಿಂದ ವಾಚ್ಯರಾದ ಚಕ್ಷುರಾದ್ಯಭಿಮಾನಿ ದೇವತೆಗಳು, ಶೀರ್ಷನ್=ಚತುರ್ಮುಖನ ಶಿರಸ್ಸಿನಲ್ಲಿ ಶ್ರಿತಾಃ=ಆಶ್ರಿತರಾಗಿರುತ್ತಾರೆ. ಶ್ರಿಯಃ=ಆಶ್ರಯಿಸಿಕೊಂಡಿದ್ದ ಪ್ರಯುಕ್ತ ಶ್ರೀಶಬ್ದವಾಚ್ಯರು. ಎನ್ನುವ ಐತರೇಯ ವಾಕ್ಯದಲ್ಲಿ ಅದೇ ಪ್ರಾಣನು ಶ್ರುತನಾಗಿದ್ದಾನೆ. ಪ್ರಾಣನಿಗೆ ವಿಷ್ಣುತ್ವವು ಇರುವುದಿಲ್ಲ (ಏಕೆ ಇಲ್ಲವೆಂದರೆ) ಇಂದ್ರಿಯಗಳಿಂದ ಕೂಡಿಕೊಂಡು ಪಠಿತವಾದ ಪ್ರಯುಕ್ತ. ಅಂದರೆ ನಿಕೃಷ್ಟರಾದ (ಇಂದ್ರಿಯಾಭಿಮಾನಿಗಳ ಗಣದಲ್ಲಿಯೇ ಗಣನೆ ಮಾಡಿದ್ದರಿಂದ.) ಎಂದು ಆಕ್ಷೇಪ ಬಂದರೆ (ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ.) (ಯಾವ ಕಾರಣದಿಂದ ಈ ಪ್ರಾಣನು ವಿಷ್ಣುವಲ್ಲವೆಂದು ಪೂರ್ವ ಪಕ್ಷವು ಪ್ರಾಪ್ತವಾಗಿದೆಯೋ) ಆದುದರಿಂದ (ವೇದವ್ಯಾಸರು) ಅದಕ್ಕೆ ಉತ್ತರ ವಾಗಿ ಸಿದ್ಧಾಂತ ಮಾಡತಕ್ಕ ಸೂತ್ರವನ್ನು ಹೇಳುತ್ತಾರೆ.

**ವಿಶೇಷಾಂಶ ॥** (ಎ) ಐತರೇಯೋಪನಿಷತ್ತಿನಲ್ಲಿ ಹೇಳಿದ ಪ್ರಾಣನು ವಿಷ್ಣುವಿನಿಂದ ಭಿನ್ನನೆಂದು ಆಕ್ಷೇಪಿಸಿಕೊಂಡು ತೈತ್ತಿರೀಯದಲ್ಲಿ ಹೇಳಿದ ಪ್ರಾಣನೂ ಅನ್ಯನಾಗಬೇಕೆಂದು ಆಕ್ಷೇಪಿಸಿದ್ದರಿಂದ ಪೂರ್ವ ಪ್ರಾಣಾಧಿಕರಣದಿಂದ ಉತ್ತರ ಪ್ರಾಣಾಧಿಕರಣಕ್ಕೆ ಆಕ್ಷೇಪಿಕೀಸಂಗತಿಯು. (ಬಿ) ಐತರೇಯದಲ್ಲಿ ಹೇಳಿದ ಪ್ರಾಣನು ವಿಷಯವು. ಪ್ರಾಣನು ವಿಷ್ಣುವಿನಿಂದ ಭಿನ್ನನೋ ವಿಷ್ಣುವೋ ಎಂದು ಸಂದೇಹವು. ವಿಷ್ಣುವಿನಿಂದ ಭಿನ್ನರಾದ ವಾಯ್ವಾದಿಗಳೇ ಎಂದು ಪೂರ್ವಪಕ್ಷವು. ಇಂದ್ರಿಯಗಣದಲ್ಲಿ ಗಣಿತತ್ವ (ಸೇರಿಸುವಿಕೆ) ರೂಪವಾದ ಪೂರ್ವಪಕ್ಷ ಸಾಧಕವಾದ ಲಿಂಗವೂ ಸೂಚಿತವಾಯಿತು. ತಾವಾ ಏತಾಃ ಎನ್ನುವುದು ಚತುರ್ಮುಖನ ಶಿರಸ್ಸಿನಲ್ಲಿ ಶಿರಶ್ಶಬ್ದ ಪ್ರವೃತ್ತಿನಿಮಿತ್ತವನ್ನು ಹೇಳುವುದಕ್ಕಾಗಿ ಪ್ರವೃತ್ತವಾಗಿದೆ.

**ಸೂತ್ರ ॥ ಓಂ ಪ್ರಾಣಸ್ತಥಾಽನುಮಗಮಾತ್ ಓಂ ॥ ೨೮ ॥**

**ಸೂತ್ರಾರ್ಥ ॥** ಹೇಗೆ ತೈತ್ತಿರೀಯ ಶ್ರುತಿಯಲ್ಲಿ ಹೇಳಿದ ಪ್ರಾಣನು ವಿಷ್ಣುವೋ, ಹಾಗೆಯೇ ಐತರೇಯದಲ್ಲಿ ಹೇಳಿದ ಪ್ರಾಣಶಬ್ದವಾಚ್ಯನೂ ವಿಷ್ಣುವೇ. ದೇವೋಪದೇಶ್ಯತ್ವಮೊದಲಾದ ನಿರವಕಾಶಗಳಾದ ವಿಷ್ಣುಲಿಂಗಗಳಿಗೂ ಬ್ರಹ್ಮಶಬ್ದಕ್ಕೂ ಅಭ್ಯಾಸವಿದ್ದುದರಿಂದಲೂ.

**ಪೀಠಿಕೆ ॥** ಅನುಗಮಾತ್ ಎನ್ನುವ ಹೇತ್ವಂತರವನ್ನು ಶ್ರುತ್ಯುದಾಹರಣಮಾಡಿ ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತಂ ದೇವಾಃ ಪ್ರಾಣಯಂತ (ಐ.ಆ.೨.೧.೫.)। ಸ ಏಷೋऽಸುಃ ಸ ಏಷ ಪ್ರಾಣಃ (ಐ.ಆ.೨.೧.೮.)। ಪ್ರಾಣ ಋಚ ಇತ್ಯೇವ ವಿದ್ಯಾತ್ (ಐ.ಆ. ೨.೨.೨.)। ತದಯಂ ಪ್ರಾಣೋऽಧಿತಿಷ್ಠತಿ (ಐ.ಆ.೨.೩.೮.)। ಇತ್ಯಾದ್ಯನುಗಮಾತ್ ॥ ೨ ॥**

**ಭಾಷ್ಯಾರ್ಥ ॥** (೧) ತಂ= ಆ ನಾರಾಯಣನನ್ನು, ದೇವಾಃ=ದೇವತೆಗಳು, ಪ್ರಾಣಯಂತ= ಶಿಷ್ಯಪ್ರಶಿಷ್ಯಾದಿಗಳಲ್ಲಿ ಉಪದೇಶಿಸಿದರು. (ಇದರಿಂದ ವಿಷ್ಣುವಿಗೆ ಸರ್ವದೇವೋಪಾಸ್ಯತ್ವವು ಉಕ್ತವಾಯಿತು.) (೨) ಸ ಏಷಃ=ಆ ಈ ಶ್ರೀಪರ ಮಾತ್ಮನು, ಅಸುಃ=ದುಷ್ಟರನ್ನು ನಿರಾಕರಿಸಿದವನು, ಪ್ರಾಣಃ=ಪ್ರಕೃಷ್ಟಾನಂದರೂಪನು, ಸ ಏಷಃ=ಆ ಶ್ರೀಹರಿಯು, ಭೂತಿಃ=ದೇವತೆಗಳಿಗೆ ಜ್ಞಾನ ಮೊದಲಾದ ಐಶ್ವರ್ಯವನ್ನು ಕೊಡತಕ್ಕವನು, ಅಭೂತಿಶ್ಚ=ಅಸುರರಿಗೆ ಅಜ್ಞಾನ ಮೊದಲಾದ ಅನೈಶ್ವರ್ಯವನ್ನು ಕೊಡತಕ್ಕವನು. (ಇದರಿಂದ ಭೂತಿತ್ವಾದಿರೂಪದಿಂದ ದೇವಾದ್ಯುಪಾಸ್ಯತ್ವವು ಹೇಳಲ್ಪಟ್ಟಿತು.) (೩) **ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್** ಆ ಈ ಎಲ್ಲಾ ಋಕ್ಕುಗಳೂ ಅವುಗಳಿಂದ ಪ್ರತಿಪಾದ್ಯನು. ಪ್ರಾಣಃ=ವಿಷ್ಣುವೇ, ಯಾವ ಎಲ್ಲಾ ವೇದಗಳೋ (ಅವುಗಳಿಂದಲೂ ಪ್ರಾಣನೇ ಪ್ರತಿಪಾದ್ಯನು. ಯಾವ ಸಮುದ್ರ ಮೊದಲಾದ ಧ್ವನಿಗಳೋ ಅವುಗಳಿಂದಲೂ ವಿಷ್ಣುವೇ ಪ್ರತಿಪಾದ್ಯನು. ಮತ್ತು ಯಾವುಗಳು ಸಮುದ್ರಾದಿಗಳ ಧ್ವನಿಗಳೋ, ಅವುಗಳಿಂದಲೂ ವಿಷ್ಣುವೇ ಪ್ರತಿಪಾದ್ಯನು. ಅವುಗಳಲ್ಲಿ ಋಕ್ಕುಗಳಾದರೂ ವಿಶೇಷವಾಗಿ ಇಂದ್ರ ಮೊದಲಾದ ನಾಮಗಳುಳ್ಳ ವಿಷ್ಣುವಿನ ಗುಣಗಳನ್ನು ಅಲ್ಪ ಜ್ಞಾನಿಗಳಿಗೂ ತೋರಿಸುತ್ತವೆ. ಆದಪ್ರಯುಕ್ತ ನಾರಾಯಣ ಪ್ರತಿಪಾದಕಗಳೇ ಎಂದು ತಿಳಿಯಬೇಕು. ಐತರೇಯಭಾಷ್ಯದಲ್ಲಿ ಆದರೂ, ಏಕೈವ ವ್ಯಾಹೃತಿಃ=ನಿರ್ದೋಷ ಗುಣಪೂರ್ಣತ್ವವನ್ನು ಹೇಳುವುದರಿಂದ ಏಕಪ್ರಕಾರವಾದ ನಾಮವು ಎಂದರ್ಥವನ್ನು ಹೇಳಿದ್ದಾರೆ. ತತ್ವಪ್ರದೀಪದಲ್ಲಿಯೂ ಇದೇ ಅರ್ಥವನ್ನು ಹೇಳಿದ್ದಾರೆ. (೪) **ಅಥ ದೇವರಥಃ ತಸ್ಯ ವಾಗುದ್ಧಿಃ ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಮನಃ ಸಂಗ್ರಹೀತಾ ತದಯಂ ಪ್ರಾಣೋऽಧಿಷ್ಠತಿ** ಅಥ=ಮೇಲೆ, (ದೇಹವು) ದೇವರಥಃ= ವಿಷ್ಣುವಿನ ರಥವು, ತಸ್ಯ=ದೇಹಾಖ್ಯರಥಕ್ಕೆ, ವಾಕ್=ವಾಗಭಿಮಾನಿಯಾದ ಪಾರ್ವತಿಯು, ಉದ್ಧಿಃ= ಧರಿಸತಕ್ಕ ರಜ್ಜುರೂಪಳು, ಶ್ರೋತ್ರೇ=ಬಲ ಎಡ ಪಾರ್ಶ್ವಗಳಲ್ಲಿರತಕ್ಕ ಚಂದ್ರ ಆತನ ಹೆಂಡಂದಿಯರು, ಪಕ್ಷಸೀ=ಪಾರ್ಶ್ವದಲ್ಲಿ ನಿಯುಕ್ತಗಳಾದ ಕುದುರೆಗಳು, ಚಕ್ಷುಷೀ=ಎರಡು ಪಾರ್ಶ್ವಗಳಲ್ಲಿರತಕ್ಕ ಸೂರ್ಯ ಆತನ ಹೆಂಡಂದಿಯರು, ಯುಕ್ತೇ=ಎದುರು ನಿಯುಕ್ತಗಳಾದ ಕುದುರೆಗಳು, ಮನಃ= ಮನೋऽಭಿಮಾನಿಯಾದ ರುದ್ರನು, ಸಂಗ್ರಹೀತಾ=ಸಾರಥಿಯು, ತತ್=ಅಂತಹ ರಥವನ್ನು ಅಯಂ ಪ್ರಾಣಃ=ವಿಷ್ಣುವು, ಅಧಿತಿಷ್ಠತಿ=ಆಶ್ರಿತನಾಗಿದ್ದಾನೆ. ಇದು ಮೊದಲಾದ ವಾಕ್ಯಗಳಲ್ಲಿ ಹೇಳಲ್ಪಟ್ಟ ದೇವತೋಪದೇಶ್ಯತ್ವ ಮೊದಲಾದ ಲಿಂಗಗಳಿಗೆ ಈ ಪ್ರಕರಣದಲ್ಲಿ ಬಹುಸ್ಥಳಗಳಲ್ಲಿ ಅಭ್ಯಾಸವಿದ್ದುದರಿಂದ.

**ವಿಶೇಷಾಂಶ ||** (ಎ) ಆದಿಪದದಿಂದ **ಪ್ರಾಣೋ ಹ್ಯೇವೈಷಃ ಯ ಏಷ ತಪತಿ** ಎಂದು ಸೂರ್ಯಮಂಡಲದಲ್ಲಿದ್ದಾನೆಂದು ಪ್ರತಿಪಾದಿಸತಕ್ಕ ವಾಕ್ಯವನ್ನು ಇಟ್ಟುಕೊಳ್ಳಬೇಕು. ಹಾಗೆಯೇ **ಸರ್ವಾಣಿ ಭೂತಾನ್ಯಾಪಿಪೀಲಿಕಾಭ್ಯಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಾನಿ** ಇತ್ಯಾದಿ ವಾಕ್ಯಗಳನ್ನು ಇಟ್ಟುಕೊಳ್ಳಬೇಕು. (ಬಿ) ಲಿಂಗದಿಂದ ಪೂರ್ವಪಕ್ಷಿಸುವಾಗ ಲಿಂಗದಿಂದಲೇ ಹೇಗೆ ಸಿದ್ಧಾಂತವು ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಬಹುತ್ವ ಪ್ರಯುಕ್ತ ಪ್ರಾಬಲ್ಯವನ್ನು ಸೂಚಿಸುವುದಕ್ಕಾಗಿ ಹೆಚ್ಚು ಲಿಂಗಗಳನ್ನು ಹೇಳಿದ್ದು.

**ಪೀಠಿಕೆ ||** ಸೂತ್ರದಲ್ಲಿದ್ದ ತಥಾಶಬ್ದವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ || ಅತ್ರಾಪಿ ಪ್ರಾಣೋ ವಿಷ್ಣುರೇವ** || ೩ ||

**ಭಾಷ್ಯಾರ್ಥ ||** ಹೇಗೆ ತದ್ವೈತ್ವಂ ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವೋ ಹಾಗೆಯೇ ಐತರೇಯದಲ್ಲಿ ಹೇಳಲ್ಪಟ್ಟ ಪ್ರಾಣನೂ ವಿಷ್ಣುವೇ ಆಗಬೇಕು. ಮತ್ತೊಬ್ಬನಲ್ಲ (ಏಕೆಂದರೆ— ದೇವತೋಪದೇಶತ್ವ ಮೊದಲಾದ ವಿಷ್ಣುಲಿಂಗಗಳನ್ನು ಈ ಪ್ರಕರಣದಲ್ಲಿ ಅನೇಕಾವರ್ತಿ ಹೇಳಿದ್ದರಿಂದ.)

**ಪೀಠಿಕೆ ||** ಹಾಗಾದರೆ ಹೆಚ್ಚು ಇದ್ದ ಪ್ರಯುಕ್ತ ಪ್ರಬಲವಾದ ಸಿದ್ಧಾಂತಲಿಂಗದಿಂದಲೂ ಪೂರ್ವಪಕ್ಷಿಯು ಹೇಳಿದ ಲಿಂಗವೇ ಪ್ರಬಲವು. ನಿರವಕಾಶವಾದುದರಿಂದ ಸ್ವಭಾವತಃ ಪ್ರಬಲವಾಗಿದೆ. ಬಾಹುಲ್ಯದಿಂದ ಪ್ರಬಲವಾದುದಕ್ಕಿಂತಲೂ ಸ್ವಭಾವತಃ ಪ್ರಾಬಲ್ಯವುಳ್ಳದ್ದೇ ಪ್ರಬಲವು. ಏಕೆಂದರೆ— **ದ್ವಿವಿಧಂ ಬಲವತ್ವಂ ಚ ಬಹುತ್ವಾಚ್ಚ ಸ್ವಭಾವತಃ। ತಯೋಃ ಸ್ವಭಾವೋ ಬಲವಾನ್ ಉಪಜೀವ್ಯಾದಿಕಸ್ತಥಾ ||** ಎಂದು ಹೇಳಿರುವರು. ಆದ ಕಾರಣ ಬಹುತ್ವವಿದ್ದರೂ ಸಾವಕಾಶಗಳಾದ ಈ ಲಿಂಗಗಳಿಂದ ವಿಷ್ಣುವೆಂದು ನಿಶ್ಚಯವು ಹೇಗೆ ಆಗುತ್ತದೆ ಎಂದರೆ— ದೇವತೋಪದೇಶತ್ವ ಮೊದಲಾದ ಲಿಂಗಗಳು ನಿರವಕಾಶಗಳೂ ಆಗಿವೆ ಎನ್ನುವುದನ್ನು ಸ್ಮೃತಿಯಿಂದ ಸಾಧಿಸುತ್ತಾರೆ—

**ಭಾಷ್ಯ || ವಿಷ್ಣುಮೇವಾನಯಾನ್ ದೇವಾ ವಿಷ್ಣುಂ ಭೂತಿಮುಪಾಸತೇ। ಸ ಏವ ಸರ್ವವೇದೋಕ್ತಸ್ತದ್ರಥೋ ದೇಹ ಉಚ್ಯತೇ || ಇತಿ ಸ್ಕಾಂದೇ** || ೪ ||

**ಭಾಷ್ಯಾರ್ಥ ||** ದೇವತೆಗಳು ಶ್ರೀ ವಿಷ್ಣುವನ್ನೇ ಪ್ರಧಾನವಾಗಿ ಅಂದರೆ ಸರ್ವೋತ್ತಮನೆಂದು ಶಿಷ್ಯಾದಿಗಳಲ್ಲಿ ಉಪದೇಶಿಸಿದರು. ಐಶ್ವರ್ಯವನ್ನುದ್ದೇಶಿಸಿ ವಿಷ್ಣುವನ್ನೇ ಉಪಾಸನಾ ಮಾಡುತ್ತಾರೆ. ಅಥವಾ ವಿಷ್ಣುವನ್ನು ಜ್ಞಾನಾದ್ಯೈಶ್ವರ್ಯ ರೂಪನನ್ನಾಗಿ ಉಪಾಸನಾ ಮಾಡುತ್ತಾರೆ. ಶ್ರೀವಿಷ್ಣುವೇ ಮುಖ್ಯ ವಾಚ್ಯನಾಗಿ ಸಮಸ್ತ ವೇದಗಳಿಂದ ಹೇಳಲ್ಪಟ್ಟವನು. ದೇಹವು ವಿಷ್ಣುವಿನದ್ದೇ ರಥವೆಂದು ಹೇಳಲ್ಪಡುತ್ತದೆ. ಹೀಗೆ ಸ್ಕಾಂದಪುರಾಣದಲ್ಲಿ (ಲಿಂಗಗಳಿಗೆ ನಿರವಕಾಶತ್ವವು ಹೇಳಲ್ಪಟ್ಟಿದೆ.)

**ವಿಶೇಷಾಂಶ ||** (ಎ) ಏವತಬ್ದಗಳನ್ನು ಹೇಳಿದ್ದರಿಂದ ಸರ್ವಲಿಂಗಗಳೂ ನಿರವಕಾಶಗಳೆಂದು ಹೇಳಿದ ಹಾಗಾಯಿತು. (ಬಿ) ಒಂದು ರೀತಿಯಿಂದ ಪ್ರಬಲವಾದ ಪೂರ್ವಪಕ್ಷಿಯ ಲಿಂಗದಿಂದ ಎರಡು ರೀತಿಗಳಿಂದಲೂ ಪ್ರಬಲವಾದ ಸಿದ್ಧಾಂತಲಿಂಗವು ಅಧಿಕವಾದ ಪ್ರಯುಕ್ತ ನಿರ್ಣಯವು

ಯುಕ್ತವಾಗುವುದು. (೩) ವಸ್ತುತಸ್ತು ಪೂರ್ವಪಕ್ಷಿಯ ಲಿಂಗಕ್ಕೆ ನಿರವಕಾಶತ್ವದಿಂದಲೂ ಪ್ರಾಬಲ್ಯವೇ ಇಲ್ಲ. ಆ ಲಿಂಗವೂ ಕೂಡ ಅಂತರ್ಯಾಮಿಯಲ್ಲಿ ಇರತಕ್ಕುದಾಗಿ ಪರಮಾತ್ಮನಲ್ಲಿ ಸಾವಕಾಶವಾಗಿದೆ.

ಪೀಠಿಕೆ ॥ ಬಹುತ್ವ ನಿರವಕಾಶತ್ವರೂಪಗಳಾದ ಎರಡು ಪ್ರಕಾರಗಳಿಂದಲೂ ಪ್ರಬಲವಾದ ಲಿಂಗದಿಂದ ದುರ್ಬಲವಾದ ಲಿಂಗಕ್ಕೆ ಬಾಧವು ಕೂಡುವುದರಿಂದ ಅದರಿಂದಲೇ ಪ್ರಾಣನಿಗೆ ವಿಷ್ಣುತ್ವವು ಯಾವಾಗ ಸಿದ್ಧಿಸುತ್ತದೋ, ಆಗ ನಿರವಕಾಶವಾದ ಬ್ರಹ್ಮಶಬ್ದಾಭ್ಯಾಸದಿಂದ ವಿಷ್ಣುತ್ವವು ಸುತರಾಂ ಸಿದ್ಧವಾಗುತ್ತದೆ ಎನ್ನುವ ಅಭಿಪ್ರಾಯದಿಂದ ಅನುಗಮಪದವನ್ನು ಪ್ರಕಾರಾಂತರದಿಂದ ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಬ್ರಹ್ಮಶಬ್ದಾನುಗಮಾಚ್ಚ ॥ ೫ ॥**

**ಭಾಷ್ಯಾರ್ಥ ॥** ಈ ಪ್ರಕರಣದಲ್ಲಿ ೧ ಏತದ್ಬ್ರಹ್ಮ=ವಿಷ್ಣುಸ್ವರೂಪವು ಗುಣಪರಿಪೂರ್ಣವು. ೨ ಬ್ರಹ್ಮಣೋ ಲೋಕಃ, ೩ ಬ್ರಹ್ಮೇಮಂ ಪುರುಷಂ, ೪ ಉದರಂ ಬ್ರಹ್ಮೇತ್ಯಾಚಕ್ಷತೇ, ೫ ಅ ಇತಿ ಬ್ರಹ್ಮ ಇದು ಮೊದಲಾದ ನಿರವಕಾಶವಾದ ಬ್ರಹ್ಮ ಶಬ್ದಾಭ್ಯಾಸದಿಂದ.

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ಓಂ ॥ ೨೯ ॥

**ಸೂತ್ರಾರ್ಥ ॥** ವಕ್ತುಃ=ಬೃಹತೀಸಹಸ್ರವನ್ನು ಹೇಳತಕ್ಕ ವಿಶ್ವಾಮಿತ್ರನಿಗೆ, ಆತ್ಮೋಪದೇಶಾತ್ =ಇಂದ್ರನು ಪ್ರಾಣನೆಂದು ತನ್ನನ್ನು ಉಪದೇಶ ಮಾಡಿಕೊಂಡದ್ದರಿಂದ ಈ ಪ್ರಾಣನು ವಿಷ್ಣುವಲ್ಲ. ಮತ್ತೆ ಇಂದ್ರನೇ ಎಂದರೆ— ಈ ಪ್ರಾಣನು ಇಂದ್ರನಲ್ಲ. ವಿಷ್ಣುವೇ. (ಹಿಂದೆ ಹೇಳಿದ ಪ್ರಬಲ ಲಿಂಗಾದಿಗಳು ಇದ್ದುದರಿಂದ. ಉಪದೇಶವಿರೋಧವೂ ಇಲ್ಲ. ಏಕೆಂದರೆ— ಈ ಉಪದೇಶವು ಇಂದ್ರನಲ್ಲಿದ್ದ ಪರಮಾತ್ಮವಿಷಯಕವೇ ಆಗಿದೆ.) ಹಿ= ಏಕೆಂದರೆ, ಅಸ್ಮಿನ್=ಈ ಪ್ರಕರಣದಲ್ಲಿ ಅಧ್ಯಾತ್ಮ ಸಂಬಂಧಭೂಮಾ=ವಿಷ್ಣುವಿಗೆ ಇಂದ್ರ ವಿಶ್ವಾಮಿತ್ರಾದಿ ಬಹುದೇಹಸಂಬಂಧವು ಹೇಳಲ್ಪಟ್ಟಿದೆ. ಅಥವಾ ಈ ಇಂದ್ರನಲ್ಲಿ ಪರಮಾತ್ಮನ ಆವೇಶಬಾಹುಲ್ಯವು ಇದೆ. (ಆದುದರಿಂದ ಉಪದೇಶವು ಸನ್ನಿಹಿತ ಪರಮಾತ್ಮ ವಿಷಯಕವಾಗಿದೆ.)

**ಭಾಷ್ಯ ॥ ಪ್ರಾಣೋ ವಾ ಅಹಮಸ್ಮ್ಯೃಷೇ (ಐ.ಆ.೨.೨.೩.)। ಇತಿ ವಕ್ತುರಾತ್ಮೋಪದೇಶಾದಿಂದ್ರ ಏವೇತಿ ಚೇನ್ನ ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ (ಐ.ಆ.೨.೨.೩.)। ಇತಿ ಬಹ್ವಧ್ಯಾತ್ಮಸಂಬಂಧೋ ಹ್ಯತ್ರ ವಿದ್ಯತೇ ॥ ೬ ॥**

**ಭಾಷ್ಯಾರ್ಥ ॥** ಪ್ರಾಣನು ವಿಷ್ಣುವು ಎಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ — ತಮಿಂದ್ರ ಉವಾಚ। ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ। ವರಂ ತೇ ದದಾಮೀತಿ ॥ ಸ ಹೋವಾಚ।

**ತ್ವಾಮೇವ ಜಾನೀಯಾಂ । ತಮಿಂದ್ರ ಉವಾಚ ॥** ತಂ=ವಿಶ್ವಾಮಿತ್ರನನ್ನು ಇಂದ್ರಃ=ಇಂದ್ರಾಂತರ್ಗತನಾದ ಶ್ರೀಹರಿಯು, ಉವಾಚಃ=ಹೇಳಿದನು. (ಎಲೋ ವಿಶ್ವಾಮಿತ್ರನೇ, ನನ್ನ ಪ್ರಿಯವಾದ ಮಂದಿರವನ್ನು ಹೊಂದು. ನಿನಗೆ ವರವನ್ನು ಕೊಡುತ್ತೇನೆ. ಆಗ ಆ ವಿಶ್ವಾಮಿತ್ರನು ಇಂದ್ರನಲ್ಲಿ ಆವಿಷ್ಟನಾದ ಶ್ರೀಹರಿಯಿಂದ ವರವನ್ನು ಕೊಡುತ್ತೇನೆಂದು ಪುನಃಪುನಃ ಹೇಳಲ್ಪಟ್ಟವನಾಗಿ ಹೇಳಿದನು. ನಿನ್ನನ್ನು ಮೊದಲು ಸಾಮಾನ್ಯವಾಗಿ ತಿಳಿದಿರುವೆನು. ಈಗ ನೀನು ಎಂತಹವನೆಂದು ವಿಶೇಷತಃ ತಿಳಿಯಲು ಇಚ್ಛಿಸುವೆನು. ಹೀಗೆ ಹೇಳಲ್ಪಟ್ಟ ಇಂದ್ರಾಂತರ್ಗತನಾದ ಶ್ರೀಹರಿಯು ಋಷಿಯನ್ನು ಕುರಿತು ಹೇಳಿದನು.) ಋಷೇ= ಎಲೋ ವಿಶ್ವಾಮಿತ್ರನೇ, ಅಹಂ=ನಾನು, ಪ್ರಾಣಃ ಪ್ರಾಃ=ಪ್ರಕೃಷ್ಟಾನಂದರೂಪನಾದುದರಿಂದ ಪ್ರಾಣಶಬ್ದವಾಚ್ಯನು, ಅಸ್ಮಿ=ಆಗಿರುತ್ತೇನೆ. ಅಥವಾ ಅಹೇಯತ್ವಾತ್ ಅಹಂ, ಪ್ರಕೃಷ್ಟಾನಂದರೂಪತ್ವಾತ್ ಪ್ರಾಣಃ ದುಷ್ಟನಿರಸನಾತ್ ಜ್ಞಾತೃತ್ವಾಚ್ಚ ಅಸ್ಮಿ ಎಂದು ಬೃಹತೀಸಹಸ್ರವನ್ನು ಹೇಳತಕ್ಕ ವಿಶ್ವಾಮಿತ್ರನಿಗೆ (ಇಂದ್ರನು ಪ್ರಾಣನೆಂದೂ) ತನಗೇನೇ ಉಪದೇಶಮಾಡಿಕೊಂಡದ್ದರಿಂದ ಪ್ರಾಣನು ಇಂದ್ರನೇ, ಎಂದರೆ— ಈ ಪ್ರಾಣನು ಇಂದ್ರನಲ್ಲ (ಮತ್ತೆ ವಿಷ್ಣುವೇ.) (ಏಕೆಂದರೆ— ಹಿಂದೆ ಹೇಳಿದ ಅತಿಪ್ರಬಲವಾದ ಲಿಂಗಾದಿಗಳಿಂದ, ಹಾಗಾದರೆ ಇಂದ್ರನು ವಿಶ್ವಾಮಿತ್ರನನ್ನು ಕುರಿತು ನಾನೇ ಪ್ರಾಣನು ಎಂದು **ಪ್ರಾಣೋ ಅಹಮಸ್ಮಿ ಋಷೇ** ಎನ್ನುವ ಉಪದೇಶವಿರುವುದರಿಂದ ವಿರೋಧವು ಎಂದರೆ ಇಲ್ಲ. ಏಕೆಂದರೆ ಈ ಪ್ರಕರಣದಲ್ಲಿ ಇಂದ್ರನು ಪ್ರಥಮದಲ್ಲಿ **ಪ್ರಾಣೋ ವಾ ಅಹಮಸ್ಮಿ ಋಷೇ** ಎನ್ನುವ ವಾಕ್ಯದಿಂದ ತನ್ನಲ್ಲಿದ್ದವನೇ ಪರಮಾತ್ಮನು ಎಂದು ಹೇಳಿರುವನು. ಹಾಗಾದರೆ ಐಕ್ಯೋಕ್ತಿ ವಿರೋಧವು ಎಂದೂ ಹೇಳಕೂಡದು. ಏಕೆಂದರೆ ಇಲ್ಲಿ ಪ್ರಾಣಾಖ್ಯಪರಮಾತ್ಮನಿಗೇನೇ.) ನೀನು ಪ್ರಾಣನು, ಸಮಸ್ತ ಭೂತಗಳು ಪ್ರಾಣಗಳೂ ಇದು ಮೊದಲಾದ ವಾಕ್ಯಗಳಿಂದ ಇಂದ್ರ ಮೊದಲಾದ ಜೀವರೂಪ ಬಹುದೇಹಸಂಬಂಧವು (ಅಂದರೆ ಸರ್ವಗತತ್ವವೇ ಋಷಿಯನ್ನು ಕುರಿತು ಇಂದ್ರನಿಂದ ಹೇಳಲ್ಪಟ್ಟದ್ದಾಗಿದೆ.) (ಐಕ್ಯವಲ್ಲ.)

**ವಿಶೇಷಾಂಶ ॥** (ಎ) ಸೂತ್ರದಲ್ಲಿ ಹೇಳಿದ ಸಂಬಂಧ ಬಾಹುಲ್ಯವು ಸಂಬಂಧಿಯಲ್ಲಿ ಪರ್ಯವಸಾನವನ್ನು ಹೊಂದುತ್ತದೆ ಎನ್ನುವ ಅಭಿಪ್ರಾಯದಿಂದ ಬಹು ಎಂದು ಹೇಳಿದೆ. (ಬಿ) ಭೂಮಶಬ್ದವು ಭಾವ (ಧರ್ಮ)ವಾಚಕವಾದಾಗ್ಯೂ ಭಾವ ಭವಿತೃಗಳಿಗೆ ಅಭೇದವಿದ್ದಪ್ರಯುಕ್ತ ಭವಿತೃ (ಧರ್ಮಿ)ನಲ್ಲಿ ಪ್ರಯೋಗವು. (ಸಿ) ಅಥವಾ **ಅಧಿಕಸ್ಯಾಸೌ ಆತ್ಮಾ ಚ, ತಸ್ಯ ಸಂಬಂಧಃ, ಬಹುಶ್ಚಾಸೌ ಅಧ್ಯಾತ್ಮ ಸಂಬಂಧಶ್ಚ** ಎನ್ನುವ ವಿಗ್ರಹದಿಂದ ಇಂದ್ರನಲ್ಲಿ ಬಹುವಾಗಿ ಶ್ರೀಪರಮಾತ್ಮನ ಸನ್ನಿಧಿ ವಿಶೇಷವು ಇದೆ. ಅದನ್ನು ಅಪೇಕ್ಷಿಸಿಯೇ ಈ ಉಪದೇಶವು, ತನ್ನನ್ನು ಅಪೇಕ್ಷಿಸಿಕೊಂಡು ಅಲ್ಲ. ತಥಾಚ ಇಂದ್ರನಲ್ಲಿ ತಾತ್ಕಾಲಿಕ ಈಶ್ವರಸನ್ನಿಧಾನ ವಿಶೇಷಾಭಿಪ್ರಾಯದಿಂದಲೇ **ಪ್ರಾಣೋ ವಾ ಅಹಂ** ಎನ್ನುವ ಉಕ್ತಿಯು. ತಾನೇ ಪ್ರಾಣ ಶಬ್ದವಾಚ್ಯನು ಎನ್ನುವ ಅಭಿಪ್ರಾಯದಿಂದಲ್ಲ. ಆದುದರಿಂದ ಉಪದೇಶ ವಿರೋಧವಿಲ್ಲ. (ಡಿ) ಸ್ವಾಪೇಕ್ಷೆಯಿಂದ ಏಕೆ ಆಗುವುದಿಲ್ಲವೆಂದರೆ ಪ್ರಾಣಸ್ತ್ವಂ ಇತ್ಯಾದಿ ವಾಕ್ಯದಿಂದ ಈ ಪ್ರಕರಣದಲ್ಲಿ ಈ ಪ್ರಾಣನಿಗೆ ಅಂತರ್ಯಾಮಿಯಾಗಿ ಇಂದ್ರಾದಿರೂಪ ಬಹುದೇಹಸಂಬಂಧವನ್ನು ಅಂದರೆ ಸರ್ವಗತತ್ವವನ್ನು ಹೇಳಿದ್ದಾರೆ. ಸರ್ವಗತತ್ವವು ಜೀವವಿಶೇಷನಾದ ಇಂದ್ರನಲ್ಲಿ ಕೂಡಲಾರದು.

**ಪೀಠಿಕೆ ॥** ಹಾಗಾದರೆ ಇಂದ್ರನೂ ವಿಷ್ಣುವನ್ನೇ ತಾನೇ ಮೊದಲಾದ ಸರ್ವರಲ್ಲಿ ಇದ್ದಾನೆಂದು

ಪ್ರಾಣಶಬ್ದದಿಂದ ಹೇಳಿದ್ದೆಂದಾದರೆ ಮಯಿ ಪ್ರಾಣಃ ಎಂದು ನಿರ್ದೇಶ ಮಾಡಬೇಕಿತ್ತು. ಅಹಂ ಪ್ರಾಣಃ ಎಂದು ನಿರ್ದೇಶಮಾಡಿದ್ದು ಆಗಲಿಲ್ಲ. ವಿಷ್ಣುವಿನಲ್ಲಿ ಅಹಂ ಇತ್ಯಾದಿರೂಪವಾದ ಇಂದ್ರಾಭೇದೋಪದೇಶವು ಕೂಡಲಾರದು. ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಪಠನಮಾಡುತ್ತಾರೆ—

## ಸೂತ್ರ ॥ ಓಂ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ಓಂ ॥೩೦॥

**ಸೂತ್ರಾರ್ಥ ॥** (ಪ್ರಾಣನಿಗೆ ವಿಷ್ಣುತ್ವವಿದ್ದರೂ) **ಪ್ರಾಹೊ ವಾ ಅಹಂ** ಎನ್ನುವ ಉಪದೇಶವು (ಕೂಡುತ್ತದೆ, ಆದಪ್ರಯುಕ್ತ ಆ ಅನುಪಪತ್ತಿಯೂ ಇಲ್ಲ) (ಹೇಗೆ ಕೂಡುತ್ತದೆ ಎಂದರೆ) ಈ ಉಪದೇಶವು. ಶಾಸ್ತ್ರದೃಷ್ಟ್ಯಾತುಃಶಾಸ್ತಿ ಸರ್ವಂ ಎನ್ನುವ ವ್ಯುತ್ಪತ್ತಿಯಿಂದ ಅಂತರ್ಯಾಮಿಯಾದ ಶ್ರೀಪರಮಾತ್ಮನನ್ನಪೇಕ್ಷಿಸಿಯೇ (ಪ್ರವೃತ್ತವಾಗಿದೆ. ಐಕ್ಯಾಭಿಪ್ರಾಯದಿಂದ ಪ್ರವೃತ್ತವಾದುದಲ್ಲ. ಹಾಗಾದರೆ ಅಂತರ್ಯಾಮಿಯಲ್ಲಿ ಅಹಂ ಮೊದಲಾದ ಶಬ್ದಪ್ರಯೋಗಗಳು ಕಾಣದಿರುವುದರಿಂದ ಹೇಗೆ ಸಂಗತವಾಗುತ್ತದೆ ಎಂದರೆ—) ವಾಮದೇವವತ್=ವಾಮದೇವಕರ್ತೃಕವಾದ ಪ್ರಯೋಗದಂತೆ. (ಅಂದರೆ— ವಾಮದೇವನಾಮಕ ಋಷಿಯು ಸ್ವಾಂತರ್ಗತನಾದ ಶ್ರೀಹರಿಯನ್ನು ವಿವಕ್ಷಾಮಾಡಿಕೊಂಡು ಅಹಂ ಮನುರಭವಂ ಎಂದು ತನ್ನಲ್ಲಿ ಅಹಂ ಮನುಃ ಮೊದಲಾದ ಶಬ್ದಗಳಿಗೆ ಹೇಗೆ ಪ್ರಯೋಗ ಮಾಡಿರುವನೋ ಹಾಗೆಯೇ ಈ ಉಪದೇಶವೂ ಕೂಡುತ್ತದೆ.

**ಪೀಠಿಕೆ ॥** ಸೂತ್ರದಲ್ಲಿದ್ದ ಶಾಸ್ತ್ರಪದವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಶಾಸ್ತ್ರಮಂತರ್ಯಾಮೀ** ॥ ೭ ॥

**ಭಾಷ್ಯಾರ್ಥ ॥** ಅಂತರ್ಯಾಮಿಯಾದ ವಿಷ್ಣುವು ಇಲ್ಲಿ ಶಾಸ್ತ್ರಪದದಿಂದ ಹೇಳಲ್ಪಟ್ಟಿದ್ದಾನೆ.

**ವಿಶೇಷಾಂಶ ॥** ಶಾಸ್ತಿ=ಸರ್ವಾನ್ ಪ್ರೇರಯತಿ ಎನ್ನುವ ವ್ಯುತ್ಪತ್ತಿಯಿಂದ ಶಾಸ್ತ್ರಂ ಅಂತರ್ಯಾಮಿಯು.

**ಪೀಠಿಕೆ ॥** ಅಂತರ್ಯಾಮಿಯಾದ ವಿಷ್ಣುವು ಶಾಸ್ತ್ರಪದವಾಚ್ಯನು ಎನ್ನುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಸಂವಿಚ್ಛಾಸ್ತ್ರಂ ಪರಂ ಪದಂ। ಇತಿ ಹಿ ಭಾಗವತೇ** (ಸ್ಕ.೧೧.ಅ.೬.ಶ್ಲೋ.೧೭.) ॥ ೮ ॥

**ಭಾಷ್ಯಾರ್ಥ ॥** (ಸ್ವಪ್ನೋ ಮಾಯಾऽಗ್ರಹಃ ಶಯ್ಯಾ ಜಾಗ್ರದಾಭಾಸ ಆತ್ಮ ನಃ । ನಾಮರೂಪಕ್ರಿಯಾವೃತ್ತಿಃ ಸಂವಿಚ್ಛಾಸ್ತ್ರಂ ಪರಂ ಪದಂ ॥ ಜೀವನಿಗೆ, ಮಾಯಾ=ವಾಸನಾಖ್ಯ ಸಂಸ್ಕಾರೋಪಾದನಕವಾದ ವಸ್ತುಜ್ಞಾನರೂಪವಾದುದು ಸ್ವಪ್ನವು. ಅಗ್ರಹಃ=ಜಾಗ್ರತ್ಸ್ವಪ್ನವಿಷಯಕ ಜ್ಞಾನರಹಿತವಾದುದು, ಶಯ್ಯಾ=ಸುಷುಪ್ತಿಯು, ನಾಮರೂಪಕ್ರಿಯಾವೃತ್ತಿಃ=ಶಬ್ದಾರ್ಥ ಕರ್ಮಗಳಲ್ಲಿ ವ್ಯಾವೃತ್ತಿಯುಳ್ಳದ್ದು, ಆಭಾಸಃ=ಸಂಜ್ಞಾದಿ ವಿಷಯಜ್ಞಾನರೂಪವಾದುದು ಜಾಗ್ರದವಸ್ಥೆ ಯು. ಹೀಗೆ ಈ ಅವಸ್ಥಾತ್ರಯವು ಯಾವ ಪರಬ್ರಹ್ಮನಿಂದ ಆಗುತ್ತದೋ, ಅಂತಹವನು.) ಸಂವಿತ್=ಸರ್ವವಿಷಯಕ ಯಥಾರ್ಥಜ್ಞಾನರೂಪನು, ಶಾಸ್ತ್ರಂ=ಸರ್ವನಿಯಾಮಕನು, ಪರಂ=ಉತ್ತಮನು, ಪದಂ=ಸಜ್ಜನರಿಂದ

ಪ್ರಾಪ್ಯನೂ ಆದ ಬ್ರಹ್ಮನನ್ನು (ನಾನು ಧ್ಯಾನಿಸುವೆನು.) ಎಂದು ಭಾಗವತದಲ್ಲಿ (ವ್ಯಾಸರನ್ನು ಕುರಿತು ನಾರದರ ವಾಕ್ಯವು. ಹೀಗೆ ಪ್ರಯೋಗವಿದ್ದುದರಿಂದ.)

**ಪೀಠಿಕೆ ॥** ಹಾಗಾದರೆ ಅಂತರ್ಯಾಮಿಯಲ್ಲಿ ಅಹಂ ಮೊದಲಾದ ಶಬ್ದಪ್ರಯೋಗವು ಹೇಗೆ ಕೂಡುತ್ತದೆ ಎಂದಾಶಂಕಿಸಿದರೆ ತು ಶಬ್ದ ಸೂಚಿತವಾದ ಸ್ಮೃತಿಯನ್ನೇ ಹೇಳುತ್ತಾರೆ—

**ಭಾಷ್ಯ ॥ ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ। ನ ಕ್ವಾಪಿ ಕಿಂಚಿನ್ನಾಮಾಸ್ತಿ ತಮೃತೇ ಪುರುಷೋತ್ತಮಂ॥ ಇತಿ ಚ ಪಾದ್ಮೇ ॥ ೯ ॥**

**ಭಾಷ್ಯಾರ್ಥ ॥** ಶ್ರೀಹರಿಯು ಸರ್ವನಿಯಂತೃತ್ವ ನಿಮಿತ್ತದಿಂದ ಅನ್ಯಪರತ್ವೇನ ಪ್ರಸಿದ್ಧವಾದ ಅಹಮಾದಿ ನಾಮದಿಂದ ಹೇಳಲ್ಪಡುತ್ತಾನೆ. ಪುರುಷೋತ್ತಮನಾದ ಅಂತರ್ಯಾಮಿಯಾದ ವಿಷ್ಣುವನ್ನು ಹೊರತು ಜೀವಾದಿಗಳಲ್ಲಿ ಎಲ್ಲಿಯೂ ಅಹಮಾದಿ ರೂಪವು ಮುಖ್ಯವಾಗಿ ವಾಚಕವಾಗಿ ಇಲ್ಲ. ಹೀಗೆ ಪಾದ್ಮದಲ್ಲಿ (ಅಂತರ್ಯಾಮಿಯಲ್ಲಿ ಅಹಮಾದಿ ಪದಗಳಿಗೆ ಮುಖ್ಯತ್ವವನ್ನು ಹೇಳಿದುದರಿಂದ ಅಂತರ್ಯಾಮಿ ದೃಷ್ಟಿಯಿಂದ ಅಹಮಾದ್ಯುಪದೇಶವು ಯುಕ್ತವೇ.)

**ವಿಶೇಷಾಂಶ ॥** (ಎ) **ತತ್ತನ್ನಾಮ್ನೋಚ್ಯತೇ** ಎನ್ನುವುದರಿಂದ ವಿಷ್ಣುವಿನಲ್ಲಿ ವಿದ್ವದ್ರೂಢಿಯನ್ನು **ಸರ್ವಶಾಸ್ತೃತ್ವ ಹೇತುತಃ** ಎನ್ನುವುದರಿಂದ ಮಹಾಯೋಗವನ್ನು ತೋರಿಸಿದರು. (ಬಿ) **ನ ಕ್ವಾಪಿ** ಇತ್ಯಾದಿಗಳಿಂದ ಶ್ರೀ ಹರಿಯಲ್ಲಿ ಪರಮಮುಖ್ಯವೃತ್ತಿಯನ್ನೂ ಅನ್ಯತ್ರ ಕೇವಲಮುಖ್ಯತ್ವವನ್ನೂ ಹೇಳಿದರು.

**ಪೀಠಿಕೆ ॥** ಹಾಗಾದರೆ ಅಂತರ್ಯಾಮಿಯಲ್ಲಿ ಅಹಮಾದಿಶಬ್ದಪ್ರಯೋಗಗಳು ಕಾಣದಿರುವುದರಿಂದ ಹಾಗೆ ಪ್ರಯೋಗವು ಕೂಡಲಾರದೆನ್ನುವ ಆಶಂಕೆಯನ್ನು ಸೂತ್ರದಲ್ಲಿ ಹೇಳಿದ ದೃಷ್ಟಾಂತವನ್ನು ವಿವರಿಸಿ ಕೊಂಡು ಪರಿಹರಿಸುತ್ತಾರೆ—

**ಭಾಷ್ಯ ॥ ಅಹಂ ಮನುರಭವಂ ಸೂರ್ಯಶ್ಚ (ಋ.೪.೨೬.೧.)। ಇತ್ಯಾದಿವತ್ ॥ ೧೦ ॥**

**ಭಾಷ್ಯಾರ್ಥ ॥** ಅಹಂ=ವಾಮದೇವಸಂಜ್ಞಕಯಪ್ಯಂತರ್ಯಾಮಿಯೂ, ಮನುಃ= ಮನ್ವಂತರ್ಯಾಮಿಯೂ, ಸೂರ್ಯಶ್ಚ=ಸೂರ್ಯಾಂತರ್ಯಾಮಿಯೂ, ಅಭವಂ=ಆಗಿರುವೆನು. ಆದಿಪದದಿಂದ ಅಹಂ ಕಕ್ಷೀವಾನ್ ಋಷಿರಸ್ಮಿ ಇದು ಮೊದಲಾದ ಪ್ರಯೋಗದಂತೆ ಶಾಸ್ತ್ರದೃಷ್ಟ್ಯಾ ಉಪದೇಶವು.

**ಪೀಠಿಕೆ ॥** ಪುನಃ ಒಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಉಪನ್ಯಾಸಮಾಡುತ್ತಾರೆ.

## ಸೂತ್ರ ॥ ಓಂ ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ಓಂ ॥ ೩೧ ॥

**ಸೂತ್ರಾರ್ಥ ॥** ತಂ ಶತಂ ವರ್ಷಾಣ್ಯಭ್ಯಾರ್ಚತ್ ಎಂದು ಶತಾಯುಷ್ಟ್ವಾದಿರೂಪವಾದ ಜೀವಲಿಂಗದಿಂದಲೂ, ಪ್ರಾಣಸಂವಾದ ಮೊದಲಾದ ಮುಖ್ಯಪ್ರಾಣಲಿಂಗದಿಂದಲೂ ಪ್ರಾಣನು

ಬ್ರಹ್ಮನಲ್ಲ ಎಂದರೆ ಹಾಗೆ ಹೇಳಕೂಡದು. (ಜೀವ ಮುಖ್ಯಪ್ರಾಣಲಿಂಗೋಪದೇಶವು ಅಂತರ್ಯಾಮಿ ದೃಷ್ಟಿಯಿಂದಲೇ ಕೂಡುತ್ತದೆ.) (ಅಂತರ್ಯಾಮ್ಯುಕ್ತಿಯು ಏತಕ್ಕೆಂದರೆ—) ಅಂತರುಪಾಸನಾ ವ್ಯಾಪ್ತ್ಯೋಪಾಸನಾ ಬಾಹ್ಯೋಪಾಸನಾ ಎನ್ನುವ ಭೇದದಿಂದ ಬ್ರಹ್ಮೋಪಾಸನವು ಮೂರು ವಿಧವಾದುದರಿಂದ, ಇಹ=ಈ ಪ್ರಕರಣದಲ್ಲಿ ಆಶ್ರಿತತ್ವಾತ್=ಆ ತ್ರೈವಿಧ್ಯವು ಹೇಳಲ್ಪಟ್ಟ ಪ್ರಯುಕ್ತ (ಒಂದೇ ಉಪಾಸನಾ ಸಾಕು. ಮೂರು ವಿಧವು ಏತಕ್ಕೆಂದರೆ) ತದ್ಯೋಗಾತ್=ಉಪಾಸನಾತ್ರೈವಿಧ್ಯವು ಅಧಿಕಾರಿ ಭೇದದಿಂದ ಯುಕ್ತವಾಗುವ ಪ್ರಯುಕ್ತ.

**ಪೀಠಿಕೆ**— ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ (ಐ.ಆ.೨.೨. ೪.)। ಇತಿ ಜೀವಲಿಂಗಂ। ಪ್ರಾಣಸಂವಾದಾದಿ ಮುಖ್ಯಪ್ರಾಣಲಿಂಗಂ। ತಸ್ಮಾನ್ನೇತಿ ಚೇತ್ ॥ ೧೧ ॥**

**ಭಾಷ್ಯಾರ್ಥ ॥** (ಯಾವ ಕಾರಣದಿಂದ ಈ ಪ್ರಕರಣದಲ್ಲಿ **ತಂ ಶತಂ ವರ್ಷಾಣ್ಯಭ್ಯಾರ್ಚತ್। ತಸ್ಮಾತ್ ಶತಂ ವರ್ಷಾಣಿ ಪುರುಷಾಯುಷೋ ಭವಂತಿ** ಎನ್ನುವ ವಾಕ್ಯದಿಂದ ನೂರು ಸಂವತ್ಸರ ಪರ್ಯಂತವಾಗಿ ಪ್ರಾಣಿನಿಗೆ ಜೀವದೇಹದಲ್ಲಿ ಅವಸ್ಥಿತಿಯೇ ಕಾರಣವಾಗಿಉಳ್ಳ ಶತಾಯುಷ್ಟ್ವರೂಪ ವಾದ ಜೀವಲಿಂಗವು ಹೇಳಲ್ಪಟ್ಟದ್ದೋ, ಆದ ಕಾರಣ ಅಂತಹ ಜೀವಲಿಂಗವು) ಶತಸಂವತ್ಸರಸ್ಯ= ಪುರುಷರ ಆಯುಷ್ಯವಾದ ನೂರು ಸಂವತ್ಸರದ, ಅಹ್ನಾಂ=ದಿನಗಳ, ಸಹಸ್ರಾಣಿ ತಾವಂತಿ ಭವಂತಿ= ನೂರು ಸಂವತ್ಸರಗಳಲ್ಲಿ ಅಂತಃಪ್ರವಿಷ್ಟಗಳಾದ ಅಹರ್ನಿಯಾಮಕನಾದ ಸೂರ್ಯನಲ್ಲಿರತಕ್ಕ ಭಗವದ್ರೂಪಗಳು ಅಷ್ಟು ಸಹಸ್ರಗಳು ಆಗುತ್ತವೆ. (ಎಷ್ಟು ಎಂದರೆ— ಬೃಹತೀಸಹಸ್ರದಲ್ಲಿರತಕ್ಕ ಅಕ್ಷರಗಳಿಂದ ವಾಚ್ಯಗಳಾದ ಪುಂರೂಪಗಳು ಎಷ್ಟು ಸಹಸ್ರಗಳಾಗುತ್ತವೋ ಅಷ್ಟು. ಅವುಗಳಾದರೂ ಮೂವತ್ತಾರು ಸಹಸ್ರಗಳಾಗುತ್ತವೆ.) ಇತ್ಯಾದಿ ವಾಕ್ಯದಿಂದ (ಬಹು ಸ್ಥಳಗಳಲ್ಲಿ ಅನುಸಂಧಾನ ಮಾಡಲ್ಪಡುತ್ತದೆ.) (**ತಾ ಅಹಿಂಸಂತಾಹಮುಕ್ಥಮಸ್ಮಿ** ಎನ್ನುವ ವಾಕ್ಯದಿಂದ) ಪ್ರಾಣನಿಗೆ ಇಂದ್ರಿಯಾಭಿಮಾನಿ ದೇವತೆಗಳಿಂದ ಕೂಡಿಕೊಂಡು ಸಂವಾದ (ಕಲಹ) ರೂಪವಾದ ಮುಖ್ಯಪ್ರಾಣಲಿಂಗವೂ (ಉಕ್ತವಾಗಿದೆ.) ಆದಿಪದದಿಂದ (**ಪ್ರಾಣೋ ವಂಶಃ ಇತಿ ಸ್ಥವಿರಃ ಶಾಕಲ್ಯಃ** ಎನ್ನುವ ವಾಕ್ಯದಿಂದ ಸರ್ವ ಜೀವೇಂದ್ರಿಯ ದೇಹಧಾರಕತ್ವ ರೂಪವಾದ ಲಿಂಗವೂ ಉಕ್ತವಾಗಿದೆ.) ಆದುದರಿಂದ ಈ ಪ್ರಾಣನು ವಿಷ್ಣುವಲ್ಲ. ಮತ್ತೆ ಜೀವ ಮುಖ್ಯಪ್ರಾಣರೇ. ಎಂದರೆ—

**ವಿಶೇಷಾಂಶ ॥** ಯದ್ಯಪಿ **ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ** ಎನ್ನುವ ಶತಾಯುಷ್ಟ್ವಲಿಂಗವನ್ನು ಪ್ರತಿಪಾದಿಸತಕ್ಕ ವಾಕ್ಯವನ್ನೇ ಉದಾಹರಿಸಬೇಕಿತ್ತು, **ತಾವಂತಿ** ಎನ್ನುವ ವಾಕ್ಯವನ್ನಲ್ಲ. ಆದರೂ ಲಿಂಗಕ್ಕೆ ಬಹುಸ್ಥಳಗಳಲ್ಲಿ ಅನುಗಮವಿದೆ ಎಂದು ತಿಳಿಸುತ್ತಾ ಉಪನಿಷತ್ತಿಗೆ ಜೀವಲಿಂಗದಲ್ಲಿ ತಾತ್ಪರ್ಯವದೆ ಎಂದು ತಿಳಿಸುವುದಕ್ಕಾಗಿ **ತಾವಂತಿ** ಎನ್ನುವ ವಾಕ್ಯವನ್ನು ಉದಾಹರಿಸಿರುವರು.

**ಪೀಠಿಕೆ ॥** ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ । ಅಂತರ್ಬಹಿಃಸರ್ವಗತತ್ವೇನೇತ್ಯುಪಾಸಾತ್ರೈವಿಧ್ಯಾದಿಹಾಶ್ರಿತತ್ವಾಚ್ಚ॥ ೧೨ ॥**

**ಭಾಷ್ಯಾರ್ಥ ॥** ಪ್ರಾಣನು ವಿಷ್ಣುವಲ್ಲವೆಂದಲ್ಲ. ಮತ್ತೆ ಪ್ರಾಣನು ವಿಷ್ಣುವೇ. ಜೀವಾದಿಗಳಲ್ಲ. ಏಕೆ ಅಲ್ಲವೆಂದರೆ— ದೇಹದೊಳಗೆ ಇರುವಿಕೆ, ಹೊರಗೆ ಇರುವಿಕೆ, ಸರ್ವತ್ರವ್ಯಾಪ್ತಿ ಈ ಪ್ರಕಾರಗಳಿಂದ ಭಗವದುಪಾಸನತ್ರೈವಿಧ್ಯವಿದ್ದುದರಿಂದ. (ಅಂದರೆ ಉಪಾಸನವು ಮೂರು ವಿಧವಾದುದರಿಂದ.) (ಆದರೂ ಹಾಗೆ ಹೇಳಿದ್ದು ವ್ಯರ್ಥವು. ವಸ್ತುತಃ ಇಲ್ಲಿ ಉಪಾಸನಾ ತ್ರೈವಿಧ್ಯವನ್ನು ಹೇಳದೆ ಇದ್ದ ಪ್ರಯುಕ್ತ ಅಂತರ್ಯಾಮಿರೂಪವನ್ನು ಹೇಳಿದ್ದಕ್ಕೆ ಪ್ರಯೋಜಕವಲ್ಲ ಎಂದರೆ—) ಈ ಪ್ರಕರಣದಲ್ಲಿ (ಉಪಾಸನಾ ತ್ರೈವಿಧ್ಯವನ್ನು) ಹೇಳಿದ್ದರಿಂದ. ಅಂತೂ ಇಲ್ಲಿ ಹೇಳಿದ ತ್ರೈವಿಧ್ಯಾಂತರ್ಗತವಾದ ಅಂತರುಪಾಸನೆಗೋಸ್ಕರ ಅಂತರ್ಯಾಮಿಯನ್ನು ಹೇಳಿದ್ದು ಯುಕ್ತವು.

**ಪೀಠಿಕ ॥** ಇಲ್ಲಿ ಉಪಾಸನಾ ತ್ರೈವಿಧ್ಯವು ಹೇಳಲ್ಪಡುತ್ತದೆ ಎನ್ನುವಲ್ಲಿಯೂ ಏನು ಲಿಂಗವು ಎಂದರೆ—

**ಭಾಷ್ಯ ॥ ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ (ಐ.ಆ.೨.೪.೩.) । ಸ ಏತಮೇವ ಪುರುಷಂ ಬ್ರಹ್ಮ ತತಮಮಪಶ್ಯತ್ (ಐ.ಆ.೨.೪.೩.) । ಏತದ್ಧಸ್ಮವೈ ತದ್ವಿದ್ವಾನಾಹ ಮಹಿದಾಸ ಐತರೇಯ (ಐ.ಆ.೨.೧.೮.) ಇತ್ಯಾದಿನಾ ॥ ೧೩ ॥**

**ಭಾಷ್ಯಾರ್ಥ ॥** (೧) ಸಃ = ವಾಸುದೇವರೂಪಿಯಾದ ಶ್ರೀಹರಿಯು. ಏತಮೇವ ಸೀಮಾನಂ= ಶಿರೋಮಧ್ಯವನ್ನು. ವಿದಾರ್ಯೈವ = ಶೀಳಿಸಿಯೇ. ಏತಯಾ ದ್ವಾರಾ=ಸುಷುಮ್ನಾ ನಾಡಿಯಿಂದ. ಪ್ರಾಪದ್ಯತ=ಚತುರ್ಮುಖನ ಹೃದಯವನ್ನು ಹೊಂದಿದನು. (ಇದರಿಂದ ಶ್ರೀಹರಿಗೆ ದೇಹದೊಳಗೆ ಪ್ರವೇಶವನ್ನು ಹೇಳಿದುದರಿಂದ ಅಂತರುಪಾಸನೆಯು ಉಕ್ತವಾಯಿತು.) (೨) ಚತುರ್ಮುಖನ ದೇಹದೊಳಗೆ ಪ್ರವಿಷ್ಟನಾದ ನಾರಾಯಣನು. ಏತಮೇವ ಪುರುಷಂ=ವ್ಯಾಸ ಕೃಷ್ಣ ಕಪಿಲಾದಿ ರೂಪಿಯಾದ. ತತಮಂ=ಅತಿಶಯವಾಗಿ ವ್ಯಾಪ್ತನಾದ. (ಅಂದರೆ ನಿರವಧಿಕ ವ್ಯಾಪ್ತಿಯುಳ್ಳ) ಬ್ರಹ್ಮ= ಗುಣಪೂರ್ಣನನ್ನು. ಅಪಶ್ಯತ್=ಕಂಡನು. (ಇದರಿಂದ ಸರ್ವಗತತ್ವವನ್ನು ಉಪಾಸನೆಗೋಸ್ಕರ ಹೇಳಿದರು.) (೩) ತತ್ ಏತತ್=ಆ ಈ ಎಲ್ಲವನ್ನೂ. ವಿದ್ವಾನ್=ತಿಳಿದ. ಐತರೇಯಃ=ವಿಶಾಲಸಂಜ್ಞಕ ಋಷಿಯ ದೆಸೆಯಿಂದ ಇತರಾದೇವಿಯಲ್ಲಿ ಅವತರಿಸಿದ. ಮಹಿದಾಸಃ=ಮಹಿನಃ ಮಹಾತ್ಮರಾದ ದೇವತೆಗಳು. ದಾಸಾಃ ಯಸ್ಯ ಎನ್ನುವ ವ್ಯುತ್ಪತ್ತಿಯಿಂದ. ಮಹಿದಾಸ ನಾಮಕ ಶ್ರೀಹರಿಯು. ಆಹ= ಹೇಳಿದನು. (ಇದರಿಂದ ಬಹಿರುಪಾಸನೆಯು ಉಕ್ತವಾಯಿತು.) ಇತ್ಯಾದಿನಾ=ಇದು ಮೊದಲಾದ ವಾಕ್ಯದಿಂದ ಉಪಾಸನಾ ತ್ರೈವಿಧ್ಯ ವನ್ನು ಹೇಳಿದುದರಿಂದ. ಆದಿಶಬ್ದದಿಂದ ತಂ ಪ್ರಪದಾಭ್ಯಾಂ ಪ್ರಾಪದ್ಯತ ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

**ಪೀಠಿಕೆ ॥** ಆದಾಗ್ಯೂ ಮಹಿದಾಸನು ವಿಷ್ಣುವೆನ್ನುವುದು ಹೇಗೆ ತಿಳಿಯುತ್ತದೆ ಎಂದರೆ—

**ಭಾಷ್ಯ ॥ ಮಹಿದಾಸಾಭಿಧೋ ಜಜ್ಞ ಇತರಾಯಾಸ್ತಪೋಬಲಾತ್। ಸಾಕ್ಷಾತ್ಸ ಭಗವಾನ್**

ವಿಷ್ಣುರ್ಯಸ್ತಂತ್ರಂ ವೈಷ್ಣವಂ ವ್ಯಧಾತ್॥ ಇತಿ(ಚ) ಬ್ರಹ್ಮಾಂಡೇ ॥ ೧೪ ॥

**ಭಾಷ್ಯಾರ್ಥ ॥** ಇತರಾದೇವಿಯ ತಪಸ್ಸಿನ ಸಾಮರ್ಥ್ಯದಿಂದ ಶ್ರೀಹರಿಯು ಮಹಿದಾ ಸನೆಂದು ಹೆಸರುಳ್ಳವನಾಗಿ ಅಭಿವ್ಯಕ್ತನಾದನು. ಯಾವಾತನು ವಿಷ್ಣುವಿಷಯಕವಾದ ಗ್ರಂಥವನ್ನು ನಿರ್ಮಿಸಿರುವನೋ ಅಥವಾ ವಿಷ್ಣುವಿಷಯಕವಾದ ಪಂಚರಾತ್ರವನ್ನು ನಾರದಾದಿಗಳಿಗೋಸ್ಕರ ಉಪದೇಶಿಸಿರುವನೋ, ಯಾವಾತನು ಸಾಕ್ಷಾತ್ತಾಗಿ ಪೂರ್ಣಜ್ಞಾನಾದಿಗಳುಳ್ಳ ವಿಷ್ಣುವೋ ಆತನ ಅವತಾರಭೂತನೇ ಪೂರ್ವೋಕ್ತನಾದ ಮಹಿದಾಸನು ಇಲ್ಲಿ ವಿವಕ್ಷಿತನಾಗಿದ್ದಾನೆ ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದುದರಿಂದ.

**ವಿಶೇಷಾಂಶ ॥** ಮಹಿದಾಸಸ್ತ್ವೈತರೇಯೋ ಬಹ್ವೃಚೋಪನಿಷದ್ಗತಃ। ಸಾಕ್ಷಾತ್ಸಭಗವಾನ್ವಿಷ್ಣುಃ ತನ್ನಾಮೈಕೋ ಮುನಿರ್ಹ್ಯಭೂತ್ ॥ ಎಂದು ಛಾಂದೋಗ್ಯ ಭಾಷ್ಯದಲ್ಲಿ ಅನಂತರದಲ್ಲಿ ಹೇಳಲ್ಪಟ್ಟವನು ಶ್ರೀಹರಿಯಿಂದ ಭಿನ್ನನಾದ ಇತರಾದೇವಿಯ ಮಗನಾದ ಮಹಿದಾಸನೆಂದು ಪ್ರಸಿದ್ಧನಾದ ಋಷಿಯು ಇಲ್ಲಿ ವಿವಕ್ಷಿತನಲ್ಲ. ಮತ್ತೆ ಇಲ್ಲಿ ವಿಷ್ಣುವೇ ವಿವಕ್ಷಿತನು.

**ಪೀಠಿಕೆ ॥** ಹಾಗಾದರೆ ಒಂದು ವಿಧವಾದ ಉಪಾಸನೆಯಿಂದಲೇ ಎಲ್ಲರಿಗೂ ಬ್ರಹ್ಮನ ಅ ಪರೋಕ್ಷವು ಕೂಡುವುದರಿಂದ ಮೂರು ವಿಧವಾದ ಉಪಾಸನೆಯು ಏಕೆ ಎಂದರೆ— **ತದ್ಯೋಗಾತ್** ಎನ್ನುವ ಸೂತ್ರಶೇಷವನ್ನು ವ್ಯಾಖ್ಯಾನ ಮಾಡುತ್ತಾರೆ—

ಭಾಷ್ಯ ॥ ತತ್ತದುಪಾಸನಾಯೋಗ್ಯತಯಾ ಚ ಪುರುಷಾಣಾಂ ॥೧೫ ॥

**ಭಾಷ್ಯಾರ್ಥ ॥** ಮನುಷ್ಯ ಋಷಿ ಗಂಧರ್ವ ದೇವಾಖ್ಯ ಅಧಿಕಾರಿಗಳಿಗೆ ಆ ಮೂರು ವಿಧ ಉಪಾಸನಾಮಧ್ಯಗಳಲ್ಲಿ ಆವಾವ ಉಪಾಸನೆಯಲ್ಲಿ ಬಹಿಃ ಅಂತಃ ವ್ಯಾಪ್ತಿರೂಪವಾದ ಒಂದೊಂದು ಉಪಾಸನೆಯಲ್ಲಿಯೇ ಯೋಗ್ಯತ್ವವಿದ್ದುದರಿಂದ.

**ವಿಶೇಷಾಂಶ ॥** ಅನೇಕ ವಿಧ ಉಪಾಸನೆಯಲ್ಲಿ ಯೋಗ್ಯತೆಯುಳ್ಳ ಅಧಿಕಾರಿಗಳಿಗೆ ಏಕ ವಿಧವಾದ ಉಪಾಸನೆಯಿಂದ ಬ್ರಹ್ಮಜ್ಞಾನವು ಆಗುವುದಿಲ್ಲ. ಆದಪ್ರಯುಕ್ತ ತ್ರೈವಿಧ್ಯವನ್ನು ಅವಶ್ಯವಾಗಿ ಅಂಗೀಕರಿಸಬೇಕು.

**ಪೀಠಿಕೆ ॥** ಪುರುಷರಿಗೆ ಅನೇಕವಿಧ ಉಪಾಸನಾ ಯೋಗ್ಯತೆಯು ಹೇಗೆ ತಿಳಿಯುತ್ತದೆ ಎಂದರೆ— ಕರ್ತೃವಿಶೇಷಗಳನ್ನು ಹೇಳದೆ ಸಾಮಾನ್ಯವಾಗಿ ಉಪಾಸಕರು ಮೂರು ವಿಧರು ಎಂದು ಪ್ರತಿಪಾದಿಸತಕ್ಕ ಸ್ಮೃತಿಯನ್ನು ಹೇಳುತ್ತಾರೆ—

ಭಾಷ್ಯ ॥ ಕೇಷಾಂಚಿತ್ಸರ್ವಗತ್ವೇನ ಕೇಷಾಂಚಿದ್ಧೃದಯೇ ಹರಿಃ॥ ಕೇಷಾಂಚಿದ್ಬಹಿರೇವಾಸಾವುಪಾಸ್ಯಃ ಪುರುಷೋತ್ತಮಃ ॥ ಇತಿ ಬ್ರಾಹ್ಮೇ ॥ ೧೬ ॥

**ಭಾಷ್ಯಾರ್ಥ ॥** ದೇವತೆಗಳಿಗೆ (ದೇವತೆಗಳಂದ) ಕ್ಷರಾಕ್ಷರ ಪುರುಷರಿಂದುತ್ತಮನಾದ ಶ್ರೀಹರಿಯು, ಸರ್ವಗತತ್ವಪ್ರಕಾರದಿಂದ ಉಪಾಸ್ಯನು. ಋಷಿ ಗಂಧರ್ವಾದಿಗಳಿಗೆ ತಮ್ಮ ತಮ್ಮ

ಹೃದಯಾಕಾಶದಲ್ಲಿ ಉಪಾಸ್ಯನು. ಮನುಷ್ಯೋತ್ತಮರಿಗಾದರೂ ಹೊರಗೇನೇ ಉಪಾಸ್ಯನು. ಹೀಗೆ ಬ್ರಾಹ್ಮಪುರಾಣದಲ್ಲಿ (ಆಯಾಯ ಉಪಾಸನಾ ಯೋಗ್ಯತಾ ವಿಶಿಷ್ಟರಾದ ಪುರುಷರನ್ನು ಹೇಳಿದೆ.)

**ಪೀಠಿಕೆ ॥** ಈ ಉಪಾಸನೆಯಲ್ಲಿಯೇ ಕರ್ತೃವಿಶೇಷವನ್ನು ಪ್ರತಿಪಾದಿಸತಕ್ಕ ವಿಶೇಷ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಅಗ್ನೌ ಕ್ರಿಯಾವತಾಂ ವಿಷ್ಣುರ್ಯೋಗಿನಾಂ ಹೃದಯೇ ಹರಿಃ। ಪ್ರತಿ ಮಾಸ್ವಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಂ ॥ ಇತಿ ಚ ॥ ೧೨ ॥ ೧೭ ॥**

**ಭಾಷ್ಯಾರ್ಥ ॥** ಶ್ರೀಹರಿಯು ಯಜ್ಞಾದಿ ಕ್ರಿಯೆಗಳನ್ನು ಮಾಡತಕ್ಕವರಿಗೆ ಗಾರ್ಹಪತ್ಯ ಮೊದಲಾದ ಅಗ್ನಿಯಲ್ಲಿ ಉಪಾಸ್ಯನು. ಋಷಿಗಳಿಗೆ ಹೃದಯದಲ್ಲಿ ಉಪಾಸ್ಯನು. ಅತ್ಯಲ್ಪ ಪ್ರತಿಭೆಯುಳ್ಳ ಮನುಷ್ಯೋತ್ತಮರಿಗೆ ಕೃಷ್ಣ ರಾಮ ಮೊದಲಾದ ಪ್ರತಿಮೆಗಳಲ್ಲಿ ಉಪಾಸ್ಯನು. ವಿಶೇಷವಾಗಿ ಭಗವದ್ರೂಪವನ್ನು ತಿಳಿದ ವಿಶೇಷ ಜ್ಞಾನವುಳ್ಳ ದೇವತೆಗಳಿಗಾದರೂ ಸರ್ವಸ್ಥಾನಗಳಲ್ಲಿ ಉಪಾಸ್ಯನು ಎಂದು ಹೇಳಿದೆ.

**ವಿಶೇಷಾಂಶ ॥** (೧) ಅಗ್ನೌ, ಪ್ರತಿಮಾಸು ಎನ್ನುವ ಎರಡು ವಾಕ್ಯಗಳಿಂದ ಬಹಿರ್ಮಾತ್ರ ಉಪಾಸನೆಯು ಇಟ್ಟುಕೊಳ್ಳಬೇಕು. (೨) ಯೋಗಿನಾಂ ಎನ್ನುವುದರಿಂದ ಅಂತರುಪಾಸನೆಯು ಉಕ್ತವಾಯಿತು. **ಋಷಯೋಽಂತಃಪ್ರಕಾಶಾ** ಎಂದು ಶ್ರುತಿಯು. (೩) ಸರ್ವತ್ರ ಎನ್ನುವುದರಿಂದ ಸರ್ವಗತೋಪಾಸನೆಯು ಉಕ್ತವಾಯಿತು. (೪) **ಯೇಷಾಂ ಬಹಿರುಪಾಸನೇನ ಮೋಕ್ಷಃ ತೇಷಾಮಪಿ ಹೃದ್ಯುಪಾಸನಂ ಕಿಂಚಿತ್ಕಾರ್ಯಮೇವ** ಎನ್ನುವ ಬೃಹದ್ಭಾಷ್ಯದಿಂದಲೂ ಭಗವಾನ್ ಬಿಂಬದರ್ಶನೇನೈನಂ ಮೋಚಯತಿ ಎನ್ನುವ ನ್ಯಾಯವಿವರಣದಿಂದಲೂ ವಿರೋಧವನ್ನು ಶಂಕಿಸಕೂಡದು. ಅಗ್ನೌ ಎನ್ನುವ ವಾಕ್ಯದಲ್ಲಿ ಇತರವಾದುದಕ್ಕೆ ನಿಷೇಧವಿಲ್ಲದಿರುವುದರಿಂದ ಬಿಂಬರೂಪರಾದ ತಮಗೆ ಯೋಗ್ಯನಾದ ಆತ್ಮನ ಅಪರೋಕ್ಷಕ್ಕಾಗಿ ಸರ್ವರೂ ಹೃದಯದಲ್ಲಿ ಉಪಾಸನವನ್ನು ಮಾಡಬೇಕೆಂದು ಅಂಗೀಕೃತವಾಗಿದೆ.

## ಮಾಯಾವಾದಿ ರೀತ್ಯಾ

ವಿಚಾರ ॥ (೧) ಮಾಯಾವಾದಿಗಳು ಪ್ರತರ್ದನನನ್ನು ಕುರಿತು ಇಂದ್ರನಿಂದ ಪ್ರಯುಕ್ತವಾದ **ಪ್ರಾಣೋಽಸ್ಮಿ ಪ್ರಜ್ಞಾತ್ಮಾ** ಎನ್ನುವ ಕೌಷೀತಕೀ ಬ್ರಾಹ್ಮಣದಲ್ಲಿರುವ ವಾಕ್ಯವನ್ನುದಾಹರಿಸಿ **ಮಾಮೇವ ವಿಜಾನೀಹಿ** ಎಂದು ಇಂದ್ರಲಿಂಗವಿದ್ದುದರಿಂದಲೂ ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ ಎನ್ನುವ ವಾಯುಲಿಂಗವು ಇದ್ದುದರಿಂದಲೂ **ವಕ್ತಾರಂ ವಿದ್ಯಾತ್** ಎಂದು ಜೀವಲಿಂಗವಿದ್ದುದರಿಂದಲೂ ಪ್ರಾಣನು ಇಂದ್ರಾದಿಗಳೇ ಎಂದು ಪೂರ್ವಪಕ್ಷವನ್ನು ಮಾಡಿಕೊಂಡು **ಯಂ ತ್ವಂ ಮನುಷ್ಯಾಯ ಹಿತತಮಂ** ಎಂದು ಹಿತತಮತ್ವ ಮೊದಲಾದ ಬ್ರಹ್ಮಲಿಂಗವಿದ್ದುದರಿಂದ ಬ್ರಹ್ಮನೇ ಪ್ರಾಣನು ಎಂದು ಸಿದ್ಧಾಂತವನ್ನು ಮಾಡಿರುತ್ತಾರೆ. ಅದು ಅಯುಕ್ತವು. ಏಕೆಂದರೆ— ಮಾಯಾವಾದಿಗಳು ಸಿದ್ಧಾಂತಯುಕ್ತಿಯಾಗಿ ಹೇಳಿದ ಹಿತತಮತ್ವವೆಂದರೆ ಪರಮಪುರುಷಾರ್ಥಸಾಧನತ್ವವೆಂದು ಹೇಳಲಿಕ್ಕೆ

ಬರುವುದಿಲ್ಲ. ಏಕೆಂದರೆ ಅದ್ವೈತಿಗಳ ಮತದಲ್ಲಿ ಜ್ಞಾನದಿಂದಲೇ ಅಜ್ಞಾನನಿವೃತ್ತಿಯಾಗುವುದರಿಂದ ಬ್ರಹ್ಮನಲ್ಲಿ ಅಂತಹ ಹಿತತಮತ್ವ ಕೂಡಲಾರದು. ಪರಮಪುರುಷಾರ್ಥತ್ವವು ಹಿತತಮತ್ವವೆಂದರೆ ಸರ್ವೋಪದ್ರವರಹಿತವಾದ ಮೋಕ್ಷದೆಸೆಯಲ್ಲಿ ಅನುಗತವಾಗಿರುವ ಶುದ್ಧಚೈತನ್ಯವೇ ಹಿತತಮವೆಂದು ಹೇಳಬೇಕು. ಮೋಕ್ಷದೆಸೆಯಲ್ಲಿ ವಿಶಿಷ್ಟವು ಇಲ್ಲದಿರುವುದರಿಂದ ಹಿತತಮತ್ವವು ವಿಶಿಷ್ಟನನ್ನು ಕುರಿತು ಅಲ್ಲ, ಶುದ್ಧನನ್ನು ಕುರಿತೂ ಕೂಡಲಾರದು. ಶುದ್ಧನು ಅಖಂಡನಾದ ಪ್ರಯುಕ್ತ ಆತನಿಗೆ ಇದು ಹಿತವು ಎನ್ನುವ ವಿಭಾಗವು ಕೂಡುವುದಿಲ್ಲ. ಮತ್ತು ಹಿತತ್ವವೇ ಕೂಡದಿದ್ದಮೇಲೆ ಹಿತತಮತ್ವವು ಸರ್ವಥಾ ಕೂಡಲಾರದು. ಆದಕಾರಣ ಅಖಂಡನಲ್ಲಿ ಹಿತತ್ವಸಾಮಾನ್ಯವೂ ಹಿತತಮತ್ವವಿಶೇಷವೂ ಕೂಡ ಕೂಡಲಾರದು. ಆದಕಾರಣ ಹಿತತಮತ್ವವು ಬ್ರಹ್ಮಲಿಂಗವು ಆಗಲಾರದು. ಇತ್ಯಾದಿ ದೋಷಗಳು ಬರುವುದರಿಂದಲೂ ಈ ಅಧಿಕರಣದಲ್ಲಿ ಪ್ರಾಣಶಬ್ದವಾಚ್ಯನು ಜೀವನಲ್ಲ ಬ್ರಹ್ಮನೇ ಎಂದು ಸಿದ್ಧಾಂತ ಮಾಡಿರುವುದರಿಂದ ಅದು ಜೀವಬ್ರಹ್ಮಾಭೇದಕ್ಕೆ ಪ್ರತಿಕೂಲವಾಗಿರುವುದರಿಂದ ಮಾಯಾವಾದಿಗಳ ಮತವು ಸರ್ವಥಾ ಯುಕ್ತವಲ್ಲ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** (೧) ಮಾಮುಪಾಸ್ವ ಎಂದು ಇಂದ್ರಲಿಂಗವಿದೆ. ಜೀವಲಿಂಗಗಳು ಜೀವವಿಶೇಷನಾದ ಇಂದ್ರನಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ಪ್ರಾಣಲಿಂಗವಿದ್ದರೂ **ಪ್ರಾಣೋಽಸ್ಮಿ** ಎಂದು ಪ್ರಾಣನಿಗೆ ಜೀವವಿಶೇಷನಾದ ಇಂದ್ರನ ವಿಶೇಷಣತ್ವವು ತೋರುವುದರಿಂದ ಜೀವನೆನ್ನುವ ಪಕ್ಷವೂ ವಾಯುವೆನ್ನುವ ಪಕ್ಷವೂ ಕೂಡದಿರುವುದರಿಂದ ಪ್ರಾಣಶಬ್ದವಾಚ್ಯನು ಇಂದ್ರನೇ ಎಂದು ಪೂರ್ವಪಕ್ಷ ಬಂದರೆ **ಆನಂದೋಽಜರೋಽಮೃತಂ** ಇದು ಮೊದಲಾದ ಬ್ರಹ್ಮಲಿಂಗಗಳು ಇದ್ದುದರಿಂದ ಬ್ರಹ್ಮನೇ ಪ್ರಾಣನು ಎಂದು ಸಿದ್ಧಾಂತವು— ಹೀಗೆ ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. ಏಕೆಂದರೆ ಪ್ರಾಣನು ಇಂದ್ರನೇ ಎಂದು ಪೂರ್ವಪಕ್ಷವಾಗಿದ್ದರೆ ಸೂತ್ರದಲ್ಲಿ **ಜೀವಮುಖ್ಯಪ್ರಾಣಲಿಂಗಾತ್** ಎಂದು ಶಂಕೆಯೇ ಕೂಡದೆ ಹೋಗುವುದು. ಅಲ್ಲಿ ಜೀವಶಬ್ದಕ್ಕೆ ಜೀವವಿಶೇಷನಾದ ಇಂದ್ರಪರತ್ವವಿದ್ದರೆ ಉಪದೇಶಿಸತಕ್ಕ ವಿಶ್ವಾಮಿತ್ರನಿಗೆ ಆತ್ಮನ ಉಪದೇಶವಾದ ಇಂದ್ರಲಿಂಗಕ್ಕೂ ಇದರಿಂದಲೇ ಸಂಗ್ರಹವು ಕೂಡುವುದರಿಂದ **ನ ವಕ್ತುರಾತ್ಮೋಪದೇಶಾತ್** ಎಂದು ಪ್ರತ್ಯೇಕ ಸೂತ್ರದಲ್ಲಿದ್ದ ಶಂಕೆಯೇ ಕೂಡದೇ ಹೋಗುವುದು. ಇತ್ಯಾದ್ಯನೇಕ ದೋಷಗಳು ಬರುವುದರಿಂದ ಅವರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

**ತಾ ವಾ ಏತಾಃ ಸರ್ವಾ ಋಚಃ—ಪ್ರಾಣಃ** ಎನ್ನುವಲ್ಲಿ ಶ್ರುತನಾದ ಪ್ರಾಣನು ಪ್ರಾಣಸಂವಾದಾದಿ ಲಿಂಗಗಳು ಇದ್ದುದರಿಂದ ಮುಖ್ಯಪ್ರಾಣಾದಿಗಳೆಂದು ಪೂರ್ವಪಕ್ಷವು. ಅಂದರೆ (೧) **ಇಂದ್ರಸ್ಯ ಪ್ರಿಯಂ ಧಾಮೋಪೇಯಾಯ ತಮಿಂದ್ರ ಉವಾಚ ಪ್ರಾಣೋ ವಾ ಅಹಮಸ್ಮಿ ।** ಇತ್ಯಾದಿ ಶ್ರುತಿಗಳೂ ಮಹಾವ್ರತಯಾಜಿತ್ವಾದಿ ಲಿಂಗಗಳೂ ಇಂದ್ರವಿಷಯಕಗಳು. (೨) ಪ್ರಾಣಾದಿ ಶ್ರುತಿಗಳೂ, ತಾ **ಅಹಿಂಸಂತ** ಎಂದು ಪ್ರಾಣಸಂವಾದಾದಿಲಿಂಗಗಳೂ ಮುಖ್ಯಪ್ರಾಣವಿಷಯಕಗಳು. (೩) **ಪುರುಷರೂಪೇಣ ಯ ಏಷ ತಪತಿ ಸ ಏಷ ಪುರುಷಃ ಸಮುದ್ರಃ** ಇತ್ಯಾದಿ ಲಿಂಗಗಳೂ ಇದ್ದುದರಿಂದ

ಪ್ರಾಣಶಬ್ದವಾಚ್ಯರು ಮುಖ್ಯಪ್ರಾಣಾದಿಗಳು ಎಂದು ಶಂಕಿಸಿದರೆ— ತಂ ದೇವಾಃ ಪ್ರಾಣಯಂತ ಎಂದು ದೇವೋಪಾಸ್ಯತ್ವವೂ, ಸರ್ವೇ ವೇದಾಃ ಎಂದು ಸರ್ವವೇದ ಪ್ರತಿಪಾದ್ಯತ್ವವೂ, ಪ್ರಾಣೋ ಹ್ಯೇಷ ಯ ಏಷ ತಪತಿ ಎಂದು ಸೂರ್ಯಮಂಡಲಸ್ಥತ್ವವೂ, ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ ಎಂದು ಸರ್ವಾಂತರ್ಯಾಮಿತ್ವವೂ, ಸರ್ವಾಣಿ ಭೂತಾನ್ಯಾಪಿಪೀಲಿಕಾಭ್ಯಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಾನಿ ಎಂದು ಸರ್ವವ್ಯಾಪಿತ್ವವೂ ಇದು ಮೊದಲಾದವುಗಳು ಪ್ರಾಣನಲ್ಲಿ ಶ್ರುತಗಳಾಗಿವೆ. ಅವುಗಳು ವಿಷ್ಣುಮೇವಾನಯನ್ ದೇವಾಃ ಇತ್ಯಾದಿ ಭಾಷ್ಯೋಕ್ತಸ್ಮೃತಿಯಿಂದಲೂ, ಸರ್ವೇ ವೇದಾ ಯತ್ಪದಮಾಮನಂತಿ, ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ, ಪುರುಷ ಏವೇದಂ ಸರ್ವಂ, ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ಇತ್ಯಾದಿ ಶ್ರುತಿಗಳಿಂದಲೂ, ವೇದೈಶ್ಚ ಸರ್ವೈರಹಮೇವವೇದ್ಯಃ ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ, ತಪಾಮ್ಯ ಹಮಹಂ ವರ್ಷಂ, ವಿಷ್ಟಭ್ಯಾಹಮಿದಂಕೃತ್ಸ್ನಂ ಇತ್ಯಾದಿ ಸ್ಮೃತಿಗಳಿಂದಲೂ ಇವುಗಳು ವಿಷ್ಣುಲಿಂಗಗಳೆಂದೇ ಪ್ರಮಿತ ಗಳಾಗಿರುವುದರಿಂದ ಪ್ರಾಣಶಬ್ದವಾಚ್ಯನು ವಿಷ್ಣುವೆಂದೇ ಅವಶ್ಯವಾಗಿ ಅಂಗೀಕರಿಸಬೇಕು. (೪) ಪ್ರಾಣಸಂವಾದವಾದರೂ ಪ್ರಾಣಲಿಂಗಾದಿಕಂ ಯದ್ಯಪ್ಯವಕಾಶೋಜ್ಝಿತಂ ಸ್ವತಃ। ತಥಾಽಪ್ಯಂತರ್ಯಾ-ಮಿಗತತಯಾ ನೇತುಂ ಹಿ ಶಕ್ಯತೇ ॥ ಆದ ಕಾರಣ ತ್ವಮುಕ್ಥಮಸಿ ತ್ವಮಿದಂ ಸರ್ವಮಸಿ ಎಂದು ಉತ್ಕರ್ಷಪರ್ಯವಸಾಯಿಯಾದುದರಿಂದ ಅಂತರ್ಯಾಮಿಯಾದ ವಿಷ್ಣುವಿನಲ್ಲಿಯೇ ಯುಕ್ತವು. ಬಹುತ್ವಾಚ್ಚುತಿಸಾಹಿತ್ಯಾದವಕಾಶೋಜ್ಝಿತತ್ವತಃ । ಬಲವದ್ಭಿರ್ವಿಷ್ಣುಲಿಂಗೈಃ ಪ್ರಾಣಶ್ರುತ್ಯಾದಿ ನೀಯತೇ ॥ ಆದಕಾರಣ ಐತರೇಯದಲ್ಲಿ ಶ್ರುತನಾದ ಪ್ರಾಣಶಬ್ದವಾಚ್ಯನೂ ವಿಷ್ಣುವೇ.

**ಉತ್ತರ ಪ್ರಾಣಾಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನ ಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯ(ಪಾದ)ವಿರಚಿತೇ ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ ॥ ೧-೧ ॥**

ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀ ವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಒಂದನೆಯ ಅಧ್ಯಾಯದಲ್ಲಿ ಒಂದನೇ ಪಾದವು ಸಮಾಪ್ತವಾಯಿತು. ॥ ೧—೧ ॥

**ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।
ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಪ್ರಥಮಾಧ್ಯಾಯ ೨ನೇ ಪಾದ

## ಅನ್ಯತ್ರಪ್ರಸಿದ್ಧ ಲಿಂಗಪಾದಃ

## ೧. ಸರ್ವಗತತ್ವಾಧಿಕರಣವು

**ಪೀಠಿಕೆ ॥** ಪೂರ್ವೋತ್ತರ ಪಾದಭೇದವೂ ತನ್ನಲ್ಲಿ ಏಕವಾಕ್ಯತ್ವವೂ ಸಿದ್ಧಿಸುವುದಕ್ಕಾಗಿ ಈ ಪಾದದಲ್ಲಿ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ—

**ಭಾಷ್ಯ ॥ ಓಂ ಲಿಂಗಾತ್ಮಕಾನಾಂ ಶಬ್ದಾನಾಂ ವಿಷ್ಣೌ ಪ್ರವೃತ್ತಿಂ ದರ್ಶಯತ್ಯಸ್ಮಿನ್ ಪಾದೇ ಪ್ರಾಧಾನ್ಯೇನ ॥ ೧ ॥**

**ಭಾಷ್ಯಾರ್ಥ ॥** (ಲಿಂಗಾತ್ಮಕಾನಾಂ ಲಿಂಗಂ=ಅನುಮಾಪಕವಾದ ಧರ್ಮವು, ಆತ್ಮೇವಾತ್ಮಾ= ಪ್ರವೃತ್ತಿ ನಿಮಿತ್ತವು ಯೇಷಾಂ ಎನ್ನುವ ವ್ಯುತ್ಪತ್ತಿಯಿಂದ) ವ್ಯಾಪ್ಯ ಧರ್ಮದ್ವಾರಾ ಧರ್ಮಿಬೋಧಕ ಗಳಾದ ಅಂದರೆ ಆಪಾತತಃ ಯೌಗಿಕಗಳಾದ, (ವಿಷ್ಣುವಿನಿಂದ ಅನ್ಯತ್ರಪ್ರಸಿದ್ಧಗಳಾದ) ಶಬ್ದಾನಾಂ= ಏಕಪ್ರಾತಿಪದಿಕರೂಪಗಳಾಗಿಯೂ ಅನೇಕಪದ ಸಮಭಿವ್ಯಾಹಾರರೂಪಗಳಾಗಿಯೂ ಇರುವ ಶಬ್ದಗಳಿಗೆ, ಈ ಪಾದದಲ್ಲಿ ಹೆಚ್ಚಾಗಿ ವಿಷ್ಣುವಿನಲ್ಲಿ ಮುಖ್ಯವೃತ್ತಿಯನ್ನು (ಅಂದರೆ ಮಹಾಯೋಗ ವಿದ್ವದ್ರೂಢಿಗಳಿಂದ ವಿಷ್ಣುಪರತ್ವವನ್ನು ಸೂತ್ರಕಾರರು) ಚೆನ್ನಾಗಿ ಸಾಧಿಸುತ್ತಾರೆ.

**ವಿಶೇಷಾಂಶ ॥** (೧) ವೈಶ್ವಾನರಾಧಿಕರಣದಲ್ಲಿ ನಾಮಸಮನ್ವಯವನ್ನು ಮಾಡುವುದರಿಂದ ಪ್ರಾಧಾನ್ಯೇನ ಎಂದು ಹೇಳಿರುತ್ತಾರೆ. ಅಲ್ಲಿಯೂ ವೈಶ್ವಾನರನಾಮ ಸಮನ್ವಯದ್ವಾರಾ ಪ್ರಧಾನವಾಗಿ ಫಲತಃ ಪಾಚಕತ್ವಾದಿ ಬಹುಲಿಂಗ ಸಮನ್ವಯವನ್ನೇ ಮಾಡುವುದರಿಂದ ದೋಷವಿಲ್ಲ (ಅಂದರೆ ಲಿಂಗಪಾದದಲ್ಲಿ ಅಂತರ್ಭಾವವು ಕೂಡುತ್ತದೆ.)

**ಪೀಠಿಕೆ ॥** ಯದ್ಯಪಿ ಪೂರ್ವಪಾದದ ಅಂತ್ಯ ಅಧಿಕರಣದಿಂದ ಈ ಪಾದದ ಆದಿ ಅಧಿಕರಣಕ್ಕೆ ಅವಾಂತರ ಸಂಗತಿಯು ಇರಬೇಕೆನ್ನುವ ನಿಯಮವಿಲ್ಲ. ಆದರೂ ಇಲ್ಲಿ ಆ ಸಂಗತಿಯು ಕೂಡುವುದ ರಿಂದಲೂ ಫಲವನ್ನು ಅವಶ್ಯವಾಗಿ ಹೇಳಬೇಕಾದುದರಿಂದಲೂ ಆ ಸಂಗತಿಯನ್ನು ತೋರಿಸುತ್ತೇನೆ ಎನ್ನುವ ಅಭಿಪ್ರಾಯದಿಂದ ಪೂರ್ವಾಧಿಕರಣಸಂಗತಿಯನ್ನೂ ವಿಷಯಾದಿಗಳನ್ನೂ ತೋರಿಸುತ್ತಾರೆ—

**ಭಾಷ್ಯ ॥ ಬ್ರಹ್ಮ ತತಮಮಿತಿ ಸರ್ವಗತತ್ವಮುಕ್ತಂ ವಿಷ್ಣೋಃ। ತಚ್ಚತಸ್ಯೈತ ಸ್ಯಾಸಾವಾದಿತ್ಯೋ ರಸಃ (ಐ.ಆ.೨.೨.೩.) ಇತ್ಯಾದಿನಾ ಆದಿತ್ಯಸ್ಯ ಪ್ರತೀಯತೇ। ಇತಿ ॥ ಅತೋಽಬ್ರವೀತ್ ॥ ೨ ॥**

**ಭಾಷ್ಯಾರ್ಥ** ॥ ಬ್ರಹ್ಮ ತತಮಂ ಎನ್ನುವ ವಾಕ್ಯದಲ್ಲಿ ವಿಷ್ಣುವಿಗೆ ನಿರವಧಿಕಸರ್ವಗತತ್ವವು ಹೇಳಲ್ಪಟ್ಟಿದೆ. (ತಥಾಚ ಬ್ರಹ್ಮತತಮಂ ಎಂದು ಪ್ರಾಣಾಖ್ಯವಿಷ್ಣುವಿಗೆ ಯಾವುದು ವ್ಯಾಪ್ತತ್ವವು ಹೇಳಲ್ಪಟ್ಟಿದೋ ಅದರ ಏಕದೇಶಭೂತವಾದುದು ಸರ್ವಗತತ್ವದಲ್ಲಿ ಅಂತರ್ಗತವಾದುದು ಸರ್ವಪ್ರಾಣಹೃದಯಸ್ಥತ್ವವು, ಅಲ್ಲಿಯೇ ಐತರೇಯದಲ್ಲಿ ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತೇ ಏತಮಗ್ನಾ ವಧ್ವರ್ಯವಃ ಏತಮೇವ ಬ್ರಹ್ಮೇತ್ಯಾಚಕ್ಷತೇ ಇತ್ಯಂತವಾದ ವಾಕ್ಯಾದಿಗಳಲ್ಲಿ ಏತಂ ಎನ್ನುವ ಉತ್ತರವಾಕ್ಯದಿಂದ ಹೇಳಲ್ಪಟ್ಟಿದೆ.) (ಯಾವ ಕಾರಣದಿಂದ) ತಚ್ಚ= ಏತಂ ಎನ್ನುವ ಉತ್ತರ ವಾಕ್ಯದಿಂದ ಹೇಳಲ್ಪಟ್ಟ ಸರ್ವಪ್ರಾಣಹೃದಯಸ್ಥತ್ವವು ತಸ್ಯೇತ್ಯಾದಿ ವಾಕ್ಯದಿಂದ ಆದಿತ್ಯನಿಗೇನೇ ತೋರುತ್ತದೋ, (ಆದಕಾರಣ ಆದಿತ್ಯನಿಗೇನೇ ಪೂರ್ವೋಕ್ತವಾದ ವ್ಯಾಪಕತ್ವವು ಬರುವುದು. ವಿಷ್ಣುವಿಗೆ ಅಲ್ಲ) ಹೀಗೆ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು ಕೂಡುವುದರಿಂದಲೂ ಆಕ್ಷೇಪವು ಕೂಡುವುದರಿಂದಲೂ ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ (ಉತ್ತರವನ್ನು ವೇದವ್ಯಾಸದೇವರು) ಹೇಳಿದರು.

**ವಿಶೇಷಾಂಶ** ॥ (೧) ಆದಿಶಬ್ದದಿಂದ ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಇತ್ಯಾದಿ ವಾಕ್ಯವು ಹೇಳಲ್ಪಟ್ಟಿದೆ. (೨) ತಸ್ಯ=ಪ್ರಕೃತನಾದ, ಏತಸ್ಯ=ಸಂವತ್ಸರನಾಮಕಚತುರ್ಮುಖನಿಗೆ, ಆದಿತ್ಯಃ ಸರ್ವಾದಿತ್ವ ತತಮತ್ವ ನಿಯಾಮಕತ್ವ ನಿಮಿತ್ತಗಳಿಂದ ಆದಿತ್ಯನಾಮಕನಾದ ಪ್ರದ್ಯುಮ್ನನು, ರಸಃ ಸಾರಭೂತನು.

## ಸೂತ್ರ ॥ ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ ॥ ೧ ॥

**ಸೂತ್ರಾರ್ಥ** ॥ ಸರ್ವತ್ರ=ಏತಮಸ್ಯಾಂ ಇತ್ಯಾದಿ ಶ್ರುತಿಗಳಿಂದ ಪೃಥಿವ್ಯಾದಿಗಳಲ್ಲಿ ಇದ್ದಾನೆಂದು ಹೇಳಲ್ಪಡತಕ್ಕವನು, ತತ್ತು=ಬ್ರಹ್ಮನೇ, (ಆದಿತ್ಯನಾಗಲೀ ಜೀವನಾಗಲೀ ಅಲ್ಲ) ಪ್ರಸಿದ್ಧೋಪದೇಶಾತ್= ಬ್ರಹ್ಮನಲ್ಲಿಯೇ ಶ್ರುತ್ಯಾದಿ ಗಳಲ್ಲಿ ಪ್ರಸಿದ್ಧವಾದ ಬ್ರಹ್ಮಶಬ್ದಕ್ಕೆ ಏತಮಸ್ಯಾಂ ಏತಮೇವ ಬ್ರಹ್ಮೇತ್ಯಾಚಕ್ಷತೇ ಎಂದು ಉಪದೇಶವಿದ್ದುದರಿಂದ.

**ವಿಶೇಷಾಂಶ** ॥ ಬ್ರಹ್ಮಶಬ್ದಾತ್ ಎಂದು ಹೇಳುವದನ್ನು ಬಿಟ್ಟು ಪ್ರಸಿದ್ಧೋಪದೇಶಾತ್ ಎಂದು ಹೇಳಿದ್ದರಿಂದ ಜೀವಾದಿಗಳನ್ನು ಇಟ್ಟುಕೊಂಡರೆ ಪ್ರಸಿದ್ಧಿಬಾಧವಿದೆ ಎಂದು ಸೂಚಿತವಾಯಿತು.

**ಭಾಷ್ಯ ॥ ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ (ಐ.ಆ.೩.೨.೪.) ಇತ್ಯಾದಿನಾ ಸರ್ವತ್ರೋಚ್ಯಮಾನೋ ನಾರಾಯಣ ಏವ ॥ ೩ ॥**

**ಭಾಷ್ಯಾರ್ಥ** ॥ ಸ ಯಶ್ಚಾಯಂ=ಆ ಈ ಪುರುಷದೇಹದಲ್ಲಿರತಕ್ಕ, ಅಶರೀರಃ=ಪ್ರಾಕೃತ ಶರೀರವಿಲ್ಲದಿರುವ, ಪ್ರಜ್ಞಾತ್ಮಾ=ಜ್ಞಾನರೂಪನಾದ ಅನಿರುದ್ಧನೋ, (ಯಶ್ಚಾಸಾವಾದಿತ್ಯೇ=ಯಾವ ಈ ಆದಿತ್ಯನಲ್ಲಿರತಕ್ಕ ಪ್ರದ್ಯುಮ್ನನೋ ಈ ಎರಡು ಸ್ಥಾನಗಳಲ್ಲಿರತಕ್ಕರೂಪವನ್ನು ಒಂದನ್ನಾಗಿ ತಿಳಿಯಬೇಕು.) ಇತ್ಯಾದಿನಾ=ಇದು ಮೊದಲಾದ ವಾಕ್ಯದಿಂದ, ಸರ್ವಪ್ರಾಣಿಗಳ ಹೃದಯಗಳಲ್ಲಿ ಅಂತರ್ಗತನಾಗಿ ಹೇಳಲ್ಪಡತಕ್ಕವನು ನಾರಾಯಣನೇ.

**ವಿಶೇಷಾಂಶ ॥** ನಾರಾಯಣಶಬ್ದಪ್ರಯೋಗದಿಂದ **ಯಚ್ಚ ಕಿಂ ಚ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥** ಎನ್ನುವ ವಾಕ್ಯವೂ ಸಂಗ್ರಹೀತವಾಯಿತು.

**ಪೀಠಿಕೆ ॥** ಹೇತ್ವಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತದೇವ ಬ್ರಹ್ಮ ಪರಮಂ ಕವೀನಾಂ** (ಮಹಾನಾಮ್ನೀ ೧.೬.)**। ಪರಮಂ ಯೋ ಮಹದ್ಬ್ರಹ್ಮ ॥ ೪ ॥**

**ಭಾಷ್ಯಾರ್ಥ ॥** ಜ್ಞಾನಿಗಳ ಮತದಲ್ಲಿ ಆ ಈಶ್ವರನೇ ಪರಬ್ರಹ್ಮನು. (ಈಶ್ವರ ಬ್ರಹ್ಮರಿಗೆ ಅಭೇದವನ್ನು ತಿಳಿಸುವುದಕ್ಕಾಗಿ) **ಪರಮಂ ಯೋ ಮಹದ್ಬ್ರಹ್ಮ** (**ಪರಮಂ ಯಃ ಪರಾಯಣಂ** ಎಂದು ಪ್ರವೃತ್ತವಾದ ಭಾರತವಾಕ್ಯಕ್ಕೆ) ಯಾರು ಸರ್ವೋತ್ತಮನಾದ ಮಹದ್ಬ್ರಹ್ಮನೋ, (ಯಾರು ಮುಖ್ಯಾಶ್ರಯನೋ,) ಅಂತಹ ಸರ್ವಜಗತ್ತಿಗೆ ಸ್ವಾಮಿಯಾದ ಶ್ರೀಹರಿಯ ನಾಮಗಳಸಹಸ್ರವನ್ನು ಹೇಳುತ್ತೇನೆ ಎನ್ನುವ ಉತ್ತರ ವಾಕ್ಯದಿಂದ ಅನ್ವಯವು.

**ಭಾಷ್ಯ ॥ ವಾಸುದೇವಾತ್ಪರಃ ಕೋ ನು ಬ್ರಹ್ಮಶಬ್ದೋದಿತೋ ಭವೇತ್ । ಸ ಹಿ ಸರ್ವಗುಣೈಃ ಪೂರ್ಣಸ್ತದನ್ಯೇ ತೂಪಚಾರತಃ॥ ಇತಿ ತಸ್ಮಿನ್ನೇವ ಪ್ರಸಿದ್ಧ ಬ್ರಹ್ಮಶಬ್ದೋಪದೇಶಾತ್ ॥ ೧ ॥ ॥ ೫ ॥**

**ಭಾಷ್ಯಾರ್ಥ ॥** ಶ್ರೀಕೃಷ್ಣನ ದೆಸೆಯಿಂದ ಭಿನ್ನನು ಯಾವನು ಬ್ರಹ್ಮಶಬ್ದ ಮುಖ್ಯವಾಚ್ಯನು ಆದಾನು? (ಯಾವನೂ ಆಗಲಾರನು. ಅವನೇ ಮುಖ್ಯವಾಚ್ಯನು. ಏಕೆಂದರೆ) ಯಾವ ಕಾರಣದಿಂದ ಆ ವಾಸುದೇವನು ಸರ್ವಗುಣಗಳಿಂದ ಪೂರ್ಣನೋ, ಅವನಿಂದ ಇತರರು (ಅಪೂರ್ಣರೋ ಆದಕಾರಣ.) (ಹಾಗಾದರೆ **ಬ್ರಹ್ಮಾಣ ಜೀವಾಃ ಸರ್ವೇಽಪಿ** ಇತ್ಯಾದಿ ವಾಕ್ಯವು ಹೇಗೆ ಕೂಡುತ್ತದೆ. ಎಂದರೆ—) ವಾಸುದೇವನಿಂದ ಇತರರಾದ ಜೀವರು ಅಮುಖ್ಯವಾಗಿಯೇ ಬ್ರಹ್ಮಶಬ್ದವಾಚ್ಯರು, ಮುಖ್ಯವಾಗಿ ಅಲ್ಲ. ಹೀಗೆ ಇದು ಮೊದಲಾದ ವಾಕ್ಯಗಳಲ್ಲಿ ಆ ವಿಷ್ಣುವಿನಲ್ಲಿ ರೂಢವಾದ ಬ್ರಹ್ಮಶಬ್ದವು ಸರ್ವಗತವಾದ ವಸ್ತುವಿನಲ್ಲಿ ಶ್ರುತವಾಗಿದೆ.

**ವಿಶೇಷಾಂಶ ॥** ತಸ್ಮಿನ್ನೇವ ಎನ್ನುವುದರಿಂದ ಶ್ರುತಿಯು ನಿರವಕಾಶವೆಂದು ಉಕ್ತವಾಯಿತು. ॥೧॥

**ಪೀಠಿಕೆ ॥** ಯುಕ್ತ್ಯಂತರದಿಂದ ವಿಷ್ಣುವಿಗೇನೇ ಸರ್ವಗತತ್ವವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ಸೂತ್ರದಲ್ಲಿ ಹೇಳಿದ ಶ್ರುತಿಯನ್ನೇ ಉದಾಹರಿಸುತ್ತಾರೆ—

## ಸೂತ್ರ ॥ ಓಂ ವಿವಕ್ಷಿತಗುಣೋಪಪತ್ತೇಶ್ಚ ಓಂ ॥ ೨ ॥

**ಸೂತ್ರಾರ್ಥ ॥** ಹೇಳಲಿಕ್ಕೆ ಯೋಗ್ಯಗಳಾದ, ಅಂದರೆ ಶ್ರುತಿತಾತ್ಪರ್ಯವಿಷಯೀಭೂತಗಳಾದ ಅಥವಾ ವಕ್ಷ್ಯಮಾಣಗಳಾದ ಉಪಸಂಹಾರದಲ್ಲಿರತಕ್ಕ ಅಶ್ರುತತ್ವ ಮೊದಲಾದ ಧರ್ಮಗಳು ವಿಷ್ಣುವಿಗೇನೇ ಯೋಗ್ಯಗಳಾಗಿರುವುದರಿಂದ ಶ್ರೀವಿಷ್ಣುವಿನಲ್ಲಿಯೇ ಕೂಡುವುದರಿಂದಲೂ (ಜೀವಾದಿಗಳಲ್ಲಿ ಕೂಡದಿರುವುದರಿಂದಲೂ) ಪೃಥಿವ್ಯಾದಿಗಳಲ್ಲಿ ಹೇಳಲ್ಪಡತಕ್ಕವನು ನಾರಾಯಣನೇ.

**ವಿಶೇಷಾಂಶ ॥** (೧) ವಿವಕ್ಷಿತ ಎಂದು ಹೇಳಿದುದರಿಂದ ಗುಣಗಳು ಉಪಸಂಹಾರದಲ್ಲಿದ್ದುದರಿಂದ ಪ್ರಬಲಗಳೆಂದು ಸೂಚಿತಗಳಾದವು. (೨) ಇತ್ಯಾದಿ ಎನ್ನುವುದಕ್ಕೆ ವಿವಕ್ಷಿತ ಎನ್ನುವ ಸೂತ್ರಪದದಿಂದ ಅನ್ವಯವು. ಆದುದರಿಂದಲೇ ಸೂತ್ರಭಾಷ್ಯಗಳಿಗೆ ಏಕೀಭಾವವು ಎಂದು ತತ್ವಪ್ರದೀಪದಲ್ಲಿ ಹೇಳಿದೆ. (೩.) ಶ್ರುತಿಗಳಿಗೆ ಬ್ರಹ್ಮಗುಣಗಳಲ್ಲಿ ತಾತ್ಪರ್ಯವಿಲ್ಲವೆಂದು ಯಾರು ಹೇಳುತ್ತಾರೋ, ಅವರನ್ನು ನಿರಾಕರಿಸುವುದಕ್ಕಾಗಿ ವಿವಕ್ಷಿತ ಎನ್ನುವ ಪದವನ್ನು ಸೂತ್ರಕಾರರು ಹೇಳಿರುವರು ಎಂದು ತತ್ವಪ್ರದೀಪದಲ್ಲಿ ಹೇಳಿಯದೆ.

**ಭಾಷ್ಯ ॥ ಸ ಯೋಽತೋಽಶ್ರುತಃ** (ಐ.ಆ.೩..೨.೪.) **ಇತ್ಯಾದಿ ॥ ೬ ॥**

**ಭಾಷ್ಯಾರ್ಥ ॥** ಆದಿಪದದಿಂದ ಅಗತೋಽಮತೋಽನತೋಽದೃಷ್ಟೋಽವಿಜ್ಞಾತೋಽ ನಾದಿಷ್ಟಃ **ಶ್ರೋತಾ ಮಂತಾ ದ್ರಷ್ಟಾಽಽದೇಷ್ಟಾಽಽ ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಮಂತರ ಪುರುಷಃ ಸಮ ಆತ್ಮೇತಿ ವಿದ್ಯಾತ್** ಎನ್ನು ವ ವಾಕ್ಯಶೇಷವನ್ನು ಇಟ್ಟುಕೊಳ್ಳಬೇಕು. ಯಃ ಸಃ ಪ್ರಕೃತನಾದ ಯಾವ ವಿಷ್ಣುವೋ, ಆತನು, ಅತಃ ದೇಶಕಾಲಗುಣಗಳಿಂದ ವ್ಯಾಪ್ತನು. ಅಶ್ರುತಃ=ಸಂಪೂರ್ಣವಾಗಿ ಕೇಳಲಿಕ್ಕೆ ಅಶಕ್ಯನು. (ಅಂದರೆ ತಾನೇ ತನ್ನನ್ನು ಸ್ವತಂತ್ರವಾಗಿ ಕೇಳುತ್ತಾನೆ.) (ಅಗತಃ=ಪೂರ್ಣನಾದ ಪ್ರಯುಕ್ತ ಸಂಪೂರ್ಣವಾಗಿ ತಿಳಿಯಲ್ಪಡದೆ ಇದ್ದವನು. ಅಮತಃ=ಸಂಪೂರ್ಣವಾಗಿ ಮನನ ವಿಷಯನಾಗದಿದ್ದವನು. ಅನತಃ=ನೇತ್ರರಹಿತನು, ಸರ್ವಸ್ವತಂತ್ರನು. ಅದೃಷ್ಟಃ=ಪ್ರತ್ಯಕ್ಷಕ್ಕೆ ಅಗೋಚರನು, ಅವಿಜ್ಞಾತಃ=ವಿಶೇಷ ಜ್ಞಾನಕ್ಕೆ ಅಗೋಚರನು, ಅನಾದಿಷ್ಟಃ=ನಿಯೋಜಕ ಶೂನ್ಯನು, ಅಥವಾ ಇತರರ ಆಜ್ಞೆಗೆ ಒಳಪಡದಿದ್ದವನು. (ತನ್ನಂತೆಯೇ ಇತರರಿಗೆ ಅಶ್ರುತತ್ವಾದಿಗಳು ಇಲ್ಲವೆನ್ನುತ್ತಾರೆ) ಶ್ರೋತಾ= ಏಕಕಾಲದಲ್ಲಿ ಸ್ವತಂತ್ರವಾಗಿ, ಸರ್ವವನ್ನು ಶ್ರವಣಮಾಡತಕ್ಕವನು, ಮಂತಾ=ಸ್ವತಂತ್ರವಾಗಿ ಸರ್ವವನ್ನು ಮನನಮಾಡತಕ್ಕವನು, ದ್ರಷ್ಟಾ=ಸ್ವತಂತ್ರವಾಗಿ ಸರ್ವವನ್ನು ನೋಡತಕ್ಕವನು, ಆದೇಷ್ಟಾ= ನಿಯೋಜಿಸತಕ್ಕವನು, ಅಘೋಷ್ಟಾ=ಚೆನ್ನಾಗಿ ಹೇಳತಕ್ಕವನು, ವಿಜ್ಞಾತಾ=ವಿಶೇಷವಾಗಿ ತಿಳಿಯತಕ್ಕವನು. ಪ್ರಜ್ಞಾತಾ=ಚೆನ್ನಾಗಿ ತಿಳಿಯತಕ್ಕವನು, ಸರ್ವೇಷಾಂ ಭೂತಾನಾಂ ಅಂತರಪುರುಷಃ=ಎಲ್ಲಾ ಜೀವರಿಗೂ ಅಂತಸ್ಥನಾದವನು, ಪೂರ್ಣನು, ಸಮಃ=ಸರ್ವರೂಪದಿಂದ ಸಮಾನನು, ಆತ್ಮಾ =ಸರ್ವ ನಿಯಾಮಕನು, ಇತಿ=ಹೀಗೆ, ವಿದ್ಯಾತ್=ತಿಳಿಯತಕ್ಕುದು.)

**ಪೀಠಿಕೆ ॥** ಹಾಗಾದರೆ ಈ ಶ್ರುತಿಯಲ್ಲಿ ಹೇಳಲ್ಪಟ್ಟ ಅಶ್ರುತತ್ವಮೊದಲಾದ ಗುಣಗಳು ವಿಷ್ಣುವಿನಲ್ಲಿರುತ್ತವೆ ಎನ್ನುವುದು ಹೇಗೆ ಸಿದ್ಧಿಸುತ್ತವೆ ಎಂದರೆ—

**ಭಾಷ್ಯ ॥ ಸ ಹಿ ನ ತೇ ವಿಷ್ಣೋ ಜಾಯಮಾನಃ** (ಋ.೭.೯೯.೨.) **ಇತ್ಯಾದಿ ನಾಽಶ್ರುತತ್ವಾದಿಗುಣಃ(ಕಃ) ॥ ೭ ॥**

**ಭಾಷ್ಯಾರ್ಥ ॥** ಆ ವಿಷ್ಣುವು ನ ತೇ ವಿಷ್ಣೋ ಇದು ಮೊದಲಾದ ವಾಕ್ಯದಿಂದ (ಶ್ರೋತ್ರ ಮೊದಲಾದವುಗಳಿಂದ )ಅಶ್ರುತತ್ವ ಮೊದಲಾದ ಗುಣಗಳುಳ್ಳವನೆಂದು ಪ್ರಸಿದ್ಧನು.

**ವಿಶೇಷಾಂಶ ॥** (೧) ಯದ್ಯಪಿ ಶ್ರುತಿಯಲ್ಲಿ **ಅತಃ** ಎಂದು ಮೊದಲು ಹೇಳಿರುವುದರಿಂದ ಅತತ್ವಾದಿಗುಣಃ ಎಂದು ಹೇಳಬೇಕಿತ್ತು. ಆದಾಗ್ಯೂ ಅತಃ ಎನ್ನುವುದರಿಂದ ಹೇಳಲ್ಪಟ್ಟ ಸರ್ವಗತತ್ವವನ್ನು

ವಿಷ್ಣುವಿನಲ್ಲಿರಬೇಕೆಂದು ಸಾಧಿಸಬೇಕಾದುದರಿಂದ ಅಸಿದ್ಧವಾಗಿದೆ. ಆದಕಾರಣ ಆ ವಿಷ್ಣುವು ಅತತ್ವಾದಿ ಗುಣಗಳುಳ್ಳವನೆಂದು ಪ್ರಸಿದ್ಧನು ಎಂದು ಸಿದ್ಧತಯಾ ನಿರ್ದೇಶವು ಕೂಡದಿರುವುದರಿಂದ **ಅಶ್ರುತತ್ವಾದಿ** ಎಂದು ಹೇಳಿರುವರು. (೨) ಅಥವಾ ವಿಷ್ಣುವು ಅತತ್ವಾದಿ ಗುಣವುಳ್ಳವನು. ನ ತೇ ವಿಷ್ಣೋ ಇತ್ಯಾದಿ ಶ್ರುತಿವಿರೋಧದಿಂದ ಎಂದು ಪ್ರಯೋಗಿಸಿದರೆ ಸರ್ವಗತತ್ವರೂಪವಾದ ಅತತ್ವವು ಸಾಧ್ಯವಾಗಿದೆ. ಅದನ್ನು ನ ತೇ ವಿಷ್ಣೋ ಇತ್ಯಾದಿಗಳಲ್ಲಿ ಹೇಳದೆ ಇದ್ದುದರಿಂದ ಹೇತುವಿನಿಂದ ಅನ್ವಯವು ಕೂಡದಿರುವುದರಿಂದ ಅಶ್ರುತತ್ವಾದಿ ಎಂದು ಹೇಳಿರುವರು.

**ಪೀಠಿಕೆ ॥** ನ ತೇ ಇತ್ಯಾದಿ ಶ್ರುತಿಗಳಲ್ಲಿ ಸ್ಪಷ್ಟವಾಗಿ ಅಶ್ರುತತ್ವಾದಿಗಳು ವಿಷ್ಣುವಿಗೆ ತೋರುವುದಿಲ್ಲ ಎಂದರೆ ಇದೇ ಅರ್ಥದಲ್ಲಿ ಸ್ಪಷ್ಟ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಸ ಸವಿತಾ ಸ ವಾಯುಃ ಸ ಇಂದ್ರಃ ಸೋಽಶ್ರುತಃ ಸೋಽದೃಷ್ಟೋ ಯೋ ಹರಿರ್ಯಃ ಪರಮೋ ಯೋ ವಿಷ್ಣುರ್ಯೋಽನಂತಃ। ಇತ್ಯಾದಿ(ಚ) ಚತುರ್ವೇದ ಶಿಖಾಯಾಂ ॥ ೨ ॥ ॥ ೮ ॥**

**ಭಾಷ್ಯಾರ್ಥ ॥** ಯಃ = ಯಾವಾತನು,ಸವಿತಾ=ಜಗದುತ್ಪಾದಕನೋ, ಸಃ=ಆತನು, ಹರಿಃ ಶ್ರೀಹರಿಯೇ, ಯಃ=ಯಾವನು, ವಾಯುಃ=ಬಲಜ್ಞಾನರೂಪನಾದ ದೇವನೋ, ಸಃ=ಆತನು, ಪರಮಃ=ಪರಮಾತ್ಮನೇ. ಯಃ=ಯಾವಾತನು, ಇಂದ್ರಃ = ಪರಮೈಶ್ವರ್ಯವುಳ್ಳವನೋ, ಸಃ=ಆತನು, ವಿಷ್ಣುಃ = ವಿಷ್ಣುವೇ. (ಪ್ರಸಿದ್ಧರಾದ ಸೂರ್ಯಾದಿಗಳಲ್ಲ) ಯಃ=ಯಾವನು, ಅಶ್ರುತಃ=ಕೇಳಲ್ಪಡದೆ ಇದ್ದವನೋ, ಅದೃಷ್ಟಃ=ಕಾಣಲ್ಪಡದೆ ಇದ್ದವನೋ, ಸಃ=ಆತನು, ಅನಂತಃ=ಅಪರಿಮಿತನಾದ ಶ್ರೀಹರಿಯೇ. (ಮತ್ತೊಬ್ಬನಲ್ಲ) ಅಥವಾ ಯಾವಾತನು ಹರಿಮೊದಲಾದ ಶಬ್ದವಾಚ್ಯನೆಂದು ಪ್ರಸಿದ್ಧನೋ, ಆತನೇ ಸವಿತೃತ್ವ ಮೊದಲಾದ ಗುಣಗಳನ್ನು ಹೇಳತಕ್ಕ ಶಬ್ದಗಳಿಂದ ವಾಚ್ಯನು. ಇತ್ಯಾದಿ =ಇದೇ ಮೊದಲಾದುದು, ಚತುರ್ವೇದಶಿಖೆಯಲ್ಲಿ ಯಾವಕಾರಣದಿಂದ ಹೇಳಲ್ಪಟ್ಟದೋ (ಆದುದರಿಂದ ಆತನೇ ಅಶ್ರುತತ್ವಾದಿ ಗುಣಗಳುಳ್ಳವನು.) ॥ ೨ ॥

**ಪೀಠಿಕೆ ॥** ಹಾಗಾದರೆ— ಹೇಗೆ ಬ್ರಹ್ಮಶಬ್ದದಿಂದಲೂ ಅಶ್ರುತತ್ವಾದಿಲಿಂಗಗಳಿಂದಲೂ ವಿಷ್ಣುವು ಸರ್ವಗತನೆಂದು ಹೇಳಲ್ಪಡುತ್ತಾನೋ, ಹಾಗೆಯೇ ಆದಿತ್ಯಾದಿ ಶಬ್ದದಿಂದಲೂ ಚಕ್ಷುರ್ಮಯತ್ವಾದಿ ಸರ್ವ ಜೀವಲಿಂಗದಿಂದಲೂ ಆದಿತ್ಯನಾಗಲೀ ಸರ್ವಜೀವರಾಗಲೀ ಸರ್ವಗತರು ಏಕೆ ಆಗಬಾರದು ಎಂದರೆ—

**ಭಾಷ್ಯ ॥ ನ ಚಾದಿತ್ಯಶಬ್ದಾಚ್ಚಕ್ಷುರ್ಮಯತ್ವಾದೇಶ್ಚ ಜೀವ ಇತಿ ವಾಚ್ಯಂ ॥ ೯ ॥**

**ಭಾಷ್ಯಾರ್ಥ ॥** ಆದಿತ್ಯೋ ರಸಃ ಎನ್ನುವ ಆದಿತ್ಯಶಬ್ದದಿಂದಲೂ ಸರ್ವಗತತ್ವ ಪ್ರಕರಣದಲ್ಲಿ **ಚಕ್ಷುರ್ಮಯಃ ಶ್ರೋತ್ರಮಯಃ ಮನೋಮಯಃ ವಾಙ್ಮಯ ಆತ್ಮಾ** ಎನ್ನುವ ಶ್ರುತಿಯಲ್ಲಿ ಜ್ಞಾನಪ್ರಕರಣವಾದ ಚಕ್ಷುರಾದ್ಯಾತ್ಮಕವಾದ ದೇಹಕ್ಕೆ ಅಭಿಮಾನಿಯಾಗಿರುವುದರಿಂದ ಜೀವನಲ್ಲಿ ಪ್ರಸಿದ್ಧವಾದ ಚಕ್ಷುರ್ಮಯತ್ವಾದಿಗಳಿಂದಲೂ ಆದಿತ್ಯನಾಗಲೀ ಜೀವನಾಗಲೀ ಸರ್ವಗತನೆಂದು ಹೇಳಕೂಡದು.

**ವಿಶೇಷಾಂಶ** ॥ (೧) ಜೀವಃ ಎನ್ನುವ ಪದದಿಂದ ಸೂತ್ರದಲ್ಲಿರುವ ಶಾರೀರಪದವು ಜೀವಪರವೆಂದು ವ್ಯಾಖ್ಯಾತವಾಯಿತು. **ಶಾರೀರೌ ತಾವುಭೌ ಪ್ರೋಕ್ತೌ ಜೀವಶ್ಚ ಪರಮಸ್ತಥಾ** ಎನ್ನುವ ಸ್ಮೃತಿಯದೆಶೆಯಿಂದಲೂ, ಶರೀರಕ್ಕೆ ಅಭಿಮಾನಿಯಾದುದರಿಂದಲೂ ಜೀವನು ಶಾರೀರನು ಎನ್ನುವುದು ಯುಕ್ತವು. (೨) ಜೀವಃ ಎನ್ನುವ ಏಕವಚನವು ಸಮುದಾಯಾಭಿಪ್ರಾಯವುಳ್ಳದ್ದು.

**ಪೀಠಿಕೆ** ॥ ಏಕೆ ಹೇಳಕೂಡದೆಂದರೆ—

## ಸೂತ್ರ ॥ ಓಂ ಅನುಪಪತ್ತೇಸ್ತು ನ ಶಾರೀರಃ ಓಂ ॥ ೩ ॥

**ಭಾಷ್ಯ ॥ ಏಕಸ್ಯ ಸರ್ವಶರೀರಸ್ಥತ್ವಾನುಪಪತ್ತೇರೇವ ॥ ೩ ॥** ॥ ೧೦ ॥

**ಭಾಷ್ಯಾರ್ಥ** ॥ ಒಬ್ಬೊಬ್ಬ ಜೀವನಿಗೆ ಸರ್ವಶರೀರಸ್ಥತ್ವವು ಕೂಡದಿರುವುದರಿಂದ ಸರ್ವಗತನು ಶಾರೀರಃ = ಆದಿತ್ಯನಾಗಲೀ ಜೀವನಾಗಲೀ ಆಗುವುದಿಲ್ಲ.

**ವಿಶೇಷಾಂಶ** ॥ ಎಲ್ಲಾ ಜೀವರೂ ಎಲ್ಲರ ಶರೀರದಲ್ಲಿಯೂ ಇರುವುದಾದರೆ ಎಲ್ಲರಿಗೂ ಪ್ರತಿಶರೀರದಲ್ಲಿಯೂ ಸಮಾನಭೋಗವು ಬರಬೇಕಾಗುವುದು ಎನ್ನುವ ಯುಕ್ತಿವಿರೋಧವನ್ನು ತೋರಿಸುವುದಕ್ಕಾಗಿ ಏವಾರ್ಥಕವಾದ ತು ಶಬ್ದವು ॥ ೩ ॥

**ಪೀಠಿಕೆ** ॥ ಯುಕ್ತ್ಯಂತರದಿಂದ ಜೀವನಿಗೆ ಸರ್ವಗತತ್ವವನ್ನು ನಿರಾಕರಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ಅಲ್ಲಿ ಹೇಳಿದ ಶ್ರುತಿಯನ್ನೇ ಉದಾಹರಿಸುತ್ತಾರೆ.

## ಸೂತ್ರ ॥ ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ ॥ ೪ ॥

**ಭಾಷ್ಯ ॥ ಆತ್ಮಾನಂ ಪರಸ್ಮೈ ಶಂಸತಿ** (ಐ.ಆ.೩.೨.೩.) **ಇತ್ಯಾದಿ ॥ ೪ ॥** ॥ ೧೧ ॥

**ಭಾಷ್ಯಾರ್ಥ** ॥ ಸರ್ವಗತನಿಗೆ ಏತಮಾತ್ಮಾನಂ ಪರಸ್ಮೈಶಂಸತಿ ಎನ್ನುವ ಐತರೇಯ ಶ್ರುತಿಯಲ್ಲಿ ಶಂಸನಕ್ರಿಯೆಯಲ್ಲಿ ಆತ್ಮಾನಂ ಎಂದು ಕರ್ಮತ್ವದಿಂದಲೂ, ಜೀವನಿಗೆ ಅದೇ ಕ್ರಿಯೆಯಲ್ಲಿ ಕರ್ತೃತ್ವದಿಂದಲೂ ವ್ಯಪದೇಶಮಾಡಿದ ಪ್ರಯುಕ್ತ(ಒಂದು ಕ್ರಿಯೆಯಲ್ಲಿ ಕರ್ಮಕರ್ತೃಗಳಿಗೆ ಉತ್ಸರ್ಗತಃ ಭೇದವು ನಿಯತವಾದ ಪ್ರಯುಕ್ತವೂ ಅಪವಾದ ಕಾರಣವು ಇಲ್ಲದಿರುವುದರಿಂದಲೂ) ಸರ್ವತ್ರ ಹೇಳಲ್ಪಡತಕ್ಕವನು ಶಾರೀರನಲ್ಲ. ತತ್ತ್ವಪ್ರದೀಪದಲ್ಲಿ ಆದರೂ, ಚಕಾರದಿಂದ ಪರಸ್ಮೈ ಎಂದು ಸಂಪ್ರದಾನವನ್ನು ವ್ಯಪದೇಶಮಾಡಿದ ಪ್ರಯುಕ್ತವೂ ಎಂದಭಿಪ್ರಾಯವು ಎಂದು ಹೇಳಿರುವರು. ಯಾವಾತನು ಈ ಚಕ್ಷುರ್ಮಯತ್ವಾದಿಗುಣಗಳುಳ್ಳ ಪರಮಾತ್ಮನನ್ನು ಅಯೋಗ್ಯನಿಗೆ ಉಪದೇಶ ಕೊಡುತ್ತಾನೋ, ಆತನ ವೇದಗಳು ಫಲವಿಲ್ಲದವುಗಳು ಆಗುತ್ತವೆ. ಇತ್ಯಾದಿ ಎನ್ನುವುದಕ್ಕೆ ಸೂತ್ರದಿಂದ ಅನ್ವಯವು. ಆದಿಪದದಿಂದ (1) ಆತ್ಮಾನಂ ವೇದ ಎಂದು ಟೀಕೋಕ್ತವಾದ ವಾಕ್ಯವೂ (೨) **ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ** ಕರ್ಮಸಂಚಯವನ್ನು ತಿಳಿದಿರುವ ಶ್ರೀಹರಿಯನ್ನು ಯಾವಾತನು ಅನ್ಯಥಾ ತಿಳಿಯುತ್ತಾನೋ, ಆತನಿಗೆ ವೇದಾಧ್ಯಯನಾದಿಗಳಲ್ಲಿ ಫಲವು ಇಲ್ಲ, ನರಕವೂ ಆಗುವುವದು ಎಂದು ತತ್ತ್ವಪ್ರದೀಪದಲ್ಲಿ ಉದಾಹೃತವಾದ ವಾಕ್ಯವೂ ಸ್ವೀಕರಿಸಲ್ಪಡುತ್ತದೆ. ॥ ೪ ॥

**ಪೀಠಿಕೆ** ॥ ಬ್ರಹ್ಮಶಬ್ದವಿದ್ದುದರಿಂದ ವಿಷ್ಣುವೇ ಸರ್ವಗತನೆಂದು ಯಾವುದು ಹೇಳಿದ್ದಾರೋ ಅದು ಅಯುಕ್ತವು. ಬ್ರಹ್ಮಶಬ್ದವು ಜೀವನಲ್ಲಿಯೂ ಇರಬಹುದು. ಬ್ರಹ್ಮಶಬ್ದವು ಜೀವನಲ್ಲಿ ಅಮುಖ್ಯವಾದ ಪ್ರಯುಕ್ತ ಅದನ್ನು ಇಟ್ಟುಕೊಳ್ಳಕೂಡದು ಎಂದು ಹೇಳಕೂಡದು. ಚಕ್ಷುರ್ಮಯತ್ವಾದಿ ಬಾಧಕವಿದ್ದುದರಿಂದ ಅಮುಖ್ಯಾರ್ಥವನ್ನು ಇಟ್ಟುಕೊಳ್ಳಬಹುದು. ೨ನೇ ಸೂತ್ರದಲ್ಲಿ ಹೇಳಿದ ಅಶ್ರುತತ್ವಾದಿ ಬಾಧ ಕದಿಂದ ಜೀವನು ಸರ್ವಗತನಲ್ಲವೆಂದು ಹೇಳಿದ್ದು ಕೂಡುವುದಿಲ್ಲ. **ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್** ಎಂದು ಗೀತೆಯಲ್ಲಿ ಜೀವನಿಗೆ ಅಶ್ರುತತ್ವಾದಿಗಳು ಶ್ರುತಗಳಾಗಿವೆ. ೩.ನೇ ಸೂತ್ರದಲ್ಲಿ ಹೇಳುವ ಸಮಾನಭೋಗಪ್ರಾಪ್ತಿರೂಪಬಾಧಕದಿಂದ ಒಬ್ಬನಿಗೆ ಸರ್ವಗತತ್ವವು ಕೂಡುವುದಿಲ್ಲ ಎನ್ನುವ ಬಾಧಕವು ವಿಷ್ಣುಪಕ್ಷದಲ್ಲಿಯೂ ಸಮಾನವಾಗಿದೆ. ಚಕ್ಷುರ್ಮಯತ್ವಾದಿ ಬಾಧಕವಿರುವುದರಿಂದ ೪ನೇ ಸೂತ್ರದಲ್ಲಿ ಹೇಳುವ ಕರ್ಮಕರ್ತೃತ್ವವು ಒಬ್ಬನಿಗೇನೇ ಕೂಡಬಹುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ಅಲ್ಲಿ ಹೇಳಿದ ಶ್ರುತಿಯನ್ನೇ ಉದಾಹರಿಸುತ್ತಾರೆ—

## ಸೂತ್ರ ॥ ಓಂ ಶಬ್ದವಿಶೇಷಾತ್ ಓಂ ॥ ೫ ॥

**ಭಾಷ್ಯ ॥ ಏತಮೇವ ಬ್ರಹ್ಮೇತ್ಯಾಚಕ್ಷತೇ** (ಐ.ಆ.೩.೨.೩.)ಇತಿ ॥ ೧೨ ॥

**ಭಾಷ್ಯಾರ್ಥ** ॥ ಏತಮೇವ ಬ್ರಹ್ಮೇತ್ಯಾಚಕ್ಷತೇ ಎನ್ನುವ ವಾಕ್ಯದಲ್ಲಿ ಹೇತುತ್ವೇನ ಪ್ರಕೃತವಾದ ಬ್ರಹ್ಮಶಬ್ದಕ್ಕೆ ಸಾವಧಾರಣತ್ವರೂಪವಾದ ವಿಶೇಷವಿದ್ದ ಪ್ರಯುಕ್ತ ಈ ಬ್ರಹ್ಮಶಬ್ದದಿಂದ ಜೀವನು ಹೇಳಲ್ಪಡುವುದಿಲ್ಲ.

**ಪೀಠಿಕೆ** ॥ ಬ್ರಹ್ಮಶಬ್ದಕ್ಕೆ ಏವ ಎನ್ನುವ ಅವಧಾರಣವಿದ್ದಾಗ್ಯೂ ಜೀವನಲ್ಲಿ ಏಕೆ ಕೂಡುವುದಿಲ್ಲ ಎಂದರೆ—

**ಭಾಷ್ಯ ॥ ನ ಹಿ ಜೀವಮೇವ ಬ್ರಹ್ಮೇತ್ಯಾಚಕ್ಷತೇ** ॥ ೧೩ ॥

**ಭಾಷ್ಯಾರ್ಥ** ॥ ಜ್ಞಾನಿಗಳು ಜೀವನನ್ನೇ ಬ್ರಹ್ಮನೆಂದು ಹೇಳುವುದಿಲ್ಲ.

**ವಿಶೇಷಾಂಶ** ॥ (೧) ಏಕೆಂದರೆ— ಜೀವನಿಗೆ ಏವಕಾರ ಶಿರಸ್ಕವಾದ ಬ್ರಹ್ಮಶಬ್ದ ವಾಚ್ಯ ತ್ವವಿದ್ದರೆ ಮುಖ್ಯ ಬ್ರಹ್ಮತ್ವವು ಬರಬಹುದು. ಅದು ಕೂಡುವುದಿಲ್ಲ. ಜೀವನು ಅಮುಖ್ಯ ಬ್ರಹ್ಮನೆಂದು ಪ್ರಸಿದ್ದನು. (೨) ತತ್ವಪ್ರದೀಪದಲ್ಲಿ ಆದರೂ ಜೀವನು ಬ್ರಹ್ಮನಾದರೆ ಅವನೂ ಭೂತನಾದ ಪ್ರಯುಕ್ತ ಭೂತೇಷು ಎಂದು ಹೇಳಿದ ಭೂತಸ್ಥ ತ್ವವು ಕೂಡುವುದಿಲ್ಲವೆಂದು ಹೇಳಿದ್ದಾರೆ.

**ಪೀಠಿಕೆ** ॥ ವಿಷ್ಣುವಿನಲ್ಲಿಯೂ ಸಾವಧಾರಣವಾದ ಬ್ರಹ್ಮಶಬ್ದವು ಇರುವುದು ಹೇಗೆ ಎಂದರೆ—

**ಭಾಷ್ಯ॥ ಏಷ ಉ ಏವ ಬ್ರಹ್ಮೈಷ ಉ ಏವಾತ್ಮೈಷ ಉ ಏವ ಸವಿತೈಷ ಉ ಏವ ಇಂದ್ರ ಏಷ ಉ ಏವ ಹರಿರ್ಹರತಿ ಪರಃ ಪರಾನಂದ ಇತಿ ಚೇಂದ್ರದ್ಯುಮ್ನಶಾಖಾಯಾಂ ।** ॥ ೫ ॥ ॥ ೧೪ ॥

ಭಾಷ್ಯಾರ್ಥ ॥ ಈ ವಿಷ್ಣುವೇ ಬ್ರಹ್ಮನು. ವಿಷ್ಣುವೇ ಆತ್ಮನು. ವಿಷ್ಣುವೇ ಸವಿತೃಶಬ್ದವಾಚ್ಯನು. ವಿಷ್ಣುವೇ ಇಂದ್ರನು, ವಿಷ್ಣುವೇ ಹರಿಯು. ಯಜ್ಞಗೃಹಗಳಲ್ಲಿ ಇಡೋಪಹುತವಾದ ಭಾಗವನ್ನು ಸ್ವೀಕರಿಸುತ್ತಾನೆ. ಅಥವಾ ಸಜ್ಜನರ ಪಾಪವನ್ನು ಪರಿಹರಿಸುತ್ತಾನೆ. ಈತನೇ ಸರ್ವೋತ್ತಮನು, ಪೂರ್ಣಾನಂದನು ಎಂದೂ ಇಂದ್ರದ್ಯುಮ್ನ ಶಾಖೆಯಲ್ಲಿ(ಸರ್ವಭೂತಸ್ಥನಾದ ವಿಷ್ಣುವನ್ನೇ ಬ್ರಹ್ಮನೆಂದು ಇಂದ್ರದ್ಯುಮ್ನರು ಹೇಳುತ್ತಾರೆ.) ॥ ೫ ॥

ಪೀಠಿಕೆ ॥ ಸ್ಮೃತಿಸಮಾಖ್ಯೆಯಿಂದಲೂ ವಿಷ್ಣುವಿಗೆ ಇಲ್ಲಿ ಹೇಳಿದ ಸರ್ವಗತತ್ವವನ್ನು ಸಾಧಿಸತಕ್ಕ ಸೂತ್ರವನ್ನು ಹೇಳಿ ಆ ಸ್ಮೃತಿಯನ್ನುದಾಹರಿಸುತ್ತಾರೆ—

## ಸೂತ್ರ ॥ ಓಂ ಸ್ಮೃತೇಶ್ಚ ಓಂ ॥ ೬ ॥

ಭಾಷ್ಯ ॥ **ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ** (ಭ.ಗಿ.ಅ.೧೦. ಶ್ಲೋ.೨೦)। **ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ** (ಭ.ಗಿ.ಅ. ೧೫.ಶ್ಲೋ.೧೩)। ಇತ್ಯಾದಿ ॥ ೧೫ ॥

ಭಾಷ್ಯಾರ್ಥ ॥ (೧) ನಿದ್ರಾರಹಿತನೇ, ಅಥವಾ ಮೆತ್ತಗೆಯಾದ ಕೂದಲುಗಳುಳ್ಳವನೇ ನಾನು ಅಂತರ್ಯಾಮಿಯಾಗಿ ಸರ್ವರ ಹೃದಯದಲ್ಲಿರತಕ್ಕವನು. (೨) ಭೂಮಿಯನ್ನು ಪ್ರವೇಶಮಾಡಿ (ಅಂದರೆ ಭೂಮಿಯಲ್ಲಿ ಅವತಾರಮಾಡಿ) ಜೀವರನ್ನು ಸಾಮರ್ಥ್ಯದಿಂದ ನಾನು ಧರಿಸುತ್ತೇನೆ. (ಇವುಗಳು ಅರ್ಜುನನ್ನು ಕುರಿತು ಶ್ರೀ ಕೃಷ್ಣನ ವಾಕ್ಯಗಳು.) ಇದು ಮೊದಲಾದ ಸ್ಮೃತಿಯಿಂದಲೂ ನಾರಾಯಣನೇ ಸರ್ವಗತನು.

ವಿಶೇಷಾಂಶ ॥ ಪೂರ್ವವಾಕ್ಯದಲ್ಲಿ ಸರ್ವಭೂತಗಳ ಹೃದಯಗಳಲ್ಲಿ ಇರತಕ್ಕ ಯಾವ ಜೀವನೋ ಅವನು ನಾನು ಎನ್ನುವ ಅಭೇದಪ್ರತೀತಿಯನ್ನು ನಿರಾಕರಿಸುವುದಕ್ಕೋಸ್ಕರ ೨ನೇ ವಾಕ್ಯವನ್ನುದಾಹರಿಸಿದ್ದು.

ಪೀಠಿಕೆ ॥ ಮಾಯಾವಾದಿಗಳು ಮನೋಮಯಃ ಪ್ರಾಣಶರೀರೋ ಭೂರೂಪಃ ಸತ್ಯ ಸಂಕಲ್ಪಃ ಎನ್ನುವ ವಾಕ್ಯದಲ್ಲಿ ಪ್ರತಿಪಾದ್ಯನಾದ ಮನೋಮಯತ್ವಾದಿ ಗುಣಗಳುಳ್ಳವನು ಈಶ್ವರನೇ, ಜೀವನಲ್ಲ ಎಂದು ಸಿದ್ಧಾಂತವೆಂದು ಹೇಳಿ ಪುನಃ ಜೀವೇಶ್ವರರಿಗೆ ಐಕ್ಯವಿದ್ದ ಪ್ರಯುಕ್ತ ಇದು ಹೇಗೆ ಕೂಡುತ್ತದೆ ಎಂದಾಶಂಕಿಸಿಕೊಂಡು ಜೀವೇಶ್ವರರಿಗೆ ಭೇದವಿದೆ. ಈ ಭೇದವು ಪಾರಮಾರ್ಥಿಕವಲ್ಲ. ಮತ್ತೆ ಮಿಥ್ಯಾಭೂತವೇ ಆದ ಭೇದವು ಸೂತ್ರಕಾರರಿಗೆ ವಿವಕ್ಷಿತವು ಎಂದು ಸಮಾಧಾನ ಮಾಡಿಕೊಂಡು ಭೇದಮಿಥ್ಯಾತ್ವದಲ್ಲಿ ಸೂತ್ರಕಾರರಿಗೆ ತಾತ್ಪರ್ಯವೆಂದು ಹೇಳಿರುತ್ತಾರೆ. ಅವರ ಮತವನ್ನು ಆಶಂಕಿಸಿಕೊಂಡು ದೂಷಿಸುತ್ತಾರೆ—

ಭಾಷ್ಯ ॥ ನ ಚಾಪ್ರಾಮಾಣಿಕಂ ಕಲ್ಪ್ಯಂ ॥ ೬ ॥ ೧೬ ॥

ಭಾಷ್ಯಾರ್ಥ ॥ ಪ್ರಮಾಣ ಸಿದ್ಧವಾಗದೆ ಇರುವ ಭೇದಮಿಥ್ಯಾತ್ವವನ್ನು ಸೂತ್ರಕಾರರಿಗೆ ವಿವಕ್ಷಾವಿಷಯವೆಂದು ಕಲ್ಪಿಸಕೂಡದು. ಏಕೆಂದರೆ— ಅದು ಪ್ರಮಾಣಶೂನ್ಯವಾಗಿದೆ. ದ್ವಾಸುಪರ್ಣಾ ಇತ್ಯಾದಿ ಪ್ರಮಾಣವಿರುದ್ಧವೂ ಆಗಿದೆ. ॥ ೬ ॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಮಾಡುತ್ತಾ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾ ದೇವಂ ವ್ಯೋಮವಚ್ಚ ಓಂ ॥ ೭ ॥

**ಸೂತ್ರಾರ್ಥ ॥** ಅರ್ಭಕೌಕಸ್ತ್ವಾತ್=ಸರ್ವೇಷು ಭೂತೇಷು ಎಂದು ಸರ್ವಪ್ರಾಣ ಹೃದಯಗುಹಾಸ್ಥತ್ವರೂಪವಾದ ಅಲ್ಪಸ್ಥಾನಸ್ಥಿತಿಯನ್ನು ಹೇಳಿದುದರಿಂದ, ತದ್ವ್ಯಪದೇಶಾಚ್ಚ= ಆದಿತ್ಯಶ್ರುತಿಯಿಂದಲೂ ಚಕ್ಷುರ್ಮಯತ್ವಾದಿ ಲಿಂಗದಿಂದಲೂ ಜೀವನಿಗೆ ವ್ಯಪದೇಶವಿದ್ದ ಪ್ರಯುಕ್ತವೂ ಸರ್ವತ್ರ ಹೇಳಲ್ಪಡತಕ್ಕವನು ನಾರಾಯಣನೇ ಎಂದು ಯಾವುದು ಹೇಳಿಯದೋ ಅದು ಯುಕ್ತವಲ್ಲ. ಹಾಗೆ ಹೇಳಕೂಡದು. ನಿಚಾಯ್ಯತ್ವಾತ್ ಏವಂ=ಬ್ರಹ್ಮನು ಅಲ್ಪಸ್ಥಾನದಲ್ಲಿದ್ದಾನೆಂದು ಹೇಳಿದ್ದು ಅಲ್ಪಸ್ಥಾನದಲ್ಲಿ ಸ್ಥಿತಿ, ಚಕ್ಷುರ್ಮಯತ್ವ ಇತ್ಯಾದಿಗಳಿಂದ ಉಪಾಸ್ಯತ್ವವಿದ್ದಪ್ರಯುಕ್ತ ವ್ಯರ್ಥವಲ್ಲ. ವ್ಯೋಮವಚ್ಚ= ಹೇಗೆ ಆಕಾಶವು ವ್ಯಾಪ್ತವಾದಾಗ್ಯೂ ಅದಕ್ಕೆ ಏಕೈಕದೇಶದಲ್ಲಿ ಸ್ಥಿತಿಯು ಕೂಡುತ್ತದೋ ಹಾಗೆಯೇ ವ್ಯಾಪ್ತನಾದ ಬ್ರಹ್ಮನಿಗೂ ಪ್ರಾಣಗಳ ಹೃದಯವೆಂಬ ಅಲ್ಪಸ್ಥಾನದಲ್ಲಿ ಸ್ಥಿತಿಯು ಕೂಡುವುದು.

**ಪೀಠಿಕೆ ॥** ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಸರ್ವೇಷು ಭೂತೇಷ್ವಿತ್ಯಲ್ಪೌಕಸ್ತ್ವಾಚ್ಚಕ್ಷುರ್ಮಯಾದಿನಾ ಜೀವವ್ಯಪದೇಶಾಚ್ಚ ನೇತಿ ಚೇತ್ । ನ ॥** ॥ ೧೭ ॥

**ಭಾಷ್ಯಾರ್ಥ ॥** (ಸಮಸ್ತ ಜೀವರ ಹೃದಯ ಗುಹೆಗಳು ಅಲ್ಪಗಳಾಗಿರುವುದರಿಂದ) ಸರ್ವೇಷು ಭೂತೇಷು ಎಂದು ಅಲ್ಪಸ್ಥಾನ ಸ್ಥಿತಿಯನ್ನು ಹೇಳಿದ್ದರಿಂದಲೂ, **ಚಕ್ಷುರ್ಮಯಃ ಶ್ರೋತ್ರಮಯಃ** ಎನ್ನುವ ಶ್ರುತಿಯಲ್ಲಿ ಚಕ್ಷುರ್ಮಯತ್ವ ಶ್ರೋತ್ರಮಯತ್ವ ಇತ್ಯಾದಿಜೀವಲಿಂಗಗಳಿಂದಲೂ (ಆದಿತ್ಯ ಶ್ರುತಿಯಿಂದಲೂ) ಜೀವನನ್ನು (ಆದಿತ್ಯನನ್ನು) ಹೇಳಿದ್ದರಿಂದಲೂ ಸರ್ವತ್ರ ಹೇಳಲ್ಪಡತಕ್ಕವನು ನಾರಾಯಣನೇ ಎಂದು ಹೇಳಿದ್ದು ಅಯುಕ್ತವು. (ಏಕೆಂದರೆ ಜೀವಪಕ್ಷದಲ್ಲಿದ್ದಂತೆಯೇ ಪರಮಾತ್ಮಪಕ್ಷ ದಲ್ಲಿಯೂ ಬಾಧಕವಿದೆ.) (ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ.) ಎಂದರೆ ಹಾಗೆ ಹೇಳ ಕೂಡದು. ಅಂದರೆ ಹಿಂದೆ ಹೇಳಿದ ಬಾಧಕದಿಂದ ವಿಷ್ಣುವು ಸರ್ವತ್ರ ಹೇಳಲ್ಪಡತಕ್ಕವನೂ ಅಲ್ಲವೆಂದಲ್ಲ.

**ಪೀಠಿಕೆ ॥** ಏಕೆ ಇಲ್ಲವೆಂದರೆ ಬಾಧಕಾಭಾವಾತ್ ಎನ್ನುವ ಹೇತುವನ್ನು ಅರ್ಭಕೌಕಸ್ತ್ವಾದಿಗಳು ವಿಷ್ಣುವಿನಲ್ಲಿಯೇ ಉಪಪನ್ನಗಳಾಗುವುದರಿಂದ ಅಬಾಧಕಗಳಾಗಿವೆ ಎಂದು ಉಪಪಾದಕ ಹೇತುವನ್ನು ಪುರಸ್ಕರಿಸಿ ಕೊಂಡು ಹಾಗಾದರೆ ವಿಷ್ಣುವಿನಲ್ಲಿ ಅರ್ಭಕೌಕಸ್ತ್ವಾದಿಗಳನ್ನು ಹೇಳಿದ್ದು ವ್ಯರ್ಥವೆಂದು ಆಶಂಕಿಸಿಕೊಂಡು ಅದಕ್ಕೆ ಪರಿಹಾರವಾಗಿ ಏವಂ ನಿಚಾಯ್ಯತ್ವಾತ್ ಎನ್ನುವ ಅಂಶವನ್ನು ವ್ಯಾಖ್ಯಾನ ಮಾಡುತ್ತಾರೆ.—

**ಭಾಷ್ಯ ॥ ಅರ್ಭಕೌಕಸ್ತ್ವೇನ ಚಕ್ಷುರ್ಮಯತ್ವಾದಿರೂಪೇಣ ಚ ತಸ್ಯೈವ ವಿಷ್ಣೋರ್ನಿಚಾಯ್ಯತ್ವಾತ್ ॥ ೧೮ ॥**

ಭಾಷ್ಯಾರ್ಥ ॥ ವಿಷ್ಣುವು ಸರ್ವಗತನಾದಾಗ್ಯೂ ಜೀವರಿಂದ ವಿಲಕ್ಷಣನಾದಾಗ್ಯೂ ಆತನಿಗೆ ಅಲ್ಪಸ್ಥಾನದಲ್ಲಿದ್ದಾನೆಂದೂ ಚಕ್ಷುರ್ಮಯತ್ವ ಮನೋಮಯತ್ವಾದಿ ರೂಪದಿಂದಲೂ ಉಪಾಸ್ಯತ್ವವಿದ್ದ ಪ್ರಯುಕ್ತ.

ವಿಶೇಷಾಂಶ ॥ ಇದರಿಂದ ಅಪರಿಚ್ಛಿನ್ನನಲ್ಲಿ ಅಲ್ಪೌಕಸ್ತ್ವೋಕ್ತಿಯೂ ಜೀವಲಕ್ಷಣನಲ್ಲಿ ಚಕ್ಷುರ್ಮಯತ್ವಾದ್ಯುಕ್ತಿಯೂ ವ್ಯರ್ಥವೆನ್ನುವ ಶಂಕೆಯು ನಿರಸ್ತವಾಯಿತು.

ಪೀಠಿಕೆ ॥ ಈಗ ಸರ್ವಗತನಿಗೆ ಅಲ್ಪೌಕಸ್ತ್ವವು ಅಯುಕ್ತವು ಎನ್ನುವ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಸೂತ್ರಗೃಹೀತವಾದ ದೃಷ್ಟಾಂತಾಂಶವನ್ನು ಏವಂ ಎನ್ನುವುದಕ್ಕೆ ಚಶಬ್ದದಿಂದ ಅನ್ವಯವನ್ನೂ, ತತ್ ಎನ್ನುವ ಪದವನ್ನು ವ್ಯತ್ಯಾಸ ಮಾಡಿಕೊಂಡು ಆವರ್ತನೆ ಮಾಡಿಕೊಂಡು ಯುಜ್ಯತೇ ಎಂದು ಅಧ್ಯಾಹಾರಮಾಡಿಕೊಂಡು ಅದರಿಂದ ಸಂಬಂಧವನ್ನು ಇಟ್ಟುಕೊಂಡು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಸರ್ವಗತತ್ವೇऽಪ್ಯಲ್ಪೌಕಸ್ತ್ವಂ ಚ ಯುಜ್ಯತೇ ವ್ಯೋಮವತ್ ॥ ೧೮ ॥**

ಭಾಷ್ಯಾರ್ಥ ॥ ಸರ್ವತ್ರ ವ್ಯಾಪ್ತಿಯಿದ್ದಾಗ್ಯೂ ಅಲ್ಪಸ್ಥಾನ ಸ್ಥಿತಿಯೂ ಕೂಡುತ್ತದೆ. ಆಕಾಶವು ವ್ಯಾಪ್ತವಾದಾಗ್ಯೂ ಅದಕ್ಕೆ ಏಕೈಕದೇಶದಲ್ಲಿ ಹೇಗೆ ಸ್ಥಿತಿಯು ಕೂಡುತ್ತದೋ ಹಾಗೆಯೇ ಬ್ರಹ್ಮನಿಗೂ ಅಲ್ಪಸ್ಥಾನ ಸ್ಥಿತಿಯು ಕೂಡುತ್ತದೆ.

ಪೀಠಿಕೆ ॥ ಜೀವರಿಂದ ವಿಲಕ್ಷಣನಾದ ನಿತ್ಯಜ್ಞಾನವುಳ್ಳವನಿಗೆ ಜ್ಞಾನಕರಣವಾದ ಚಕ್ಷುರಾದಿ ಪ್ರಾಚುರ್ಯರೂಪವಾದ ಚಕ್ಷುರ್ಮಯತ್ವಾದಿಗಳನ್ನು ಹೇಳಿದ್ದು ಅಯುಕ್ತವು ಎನ್ನುವ ಚೋದ್ಯವನ್ನು ಚಶಬ್ದಸೂಚಿತವಾದ ಸ್ಮೃತಿಯಿಂದ ನಿರಾಕರಿಸುತ್ತಾರೆ—

**ಭಾಷ್ಯ ॥ ಸರ್ವೇಂದ್ರಿಯಮಯೋ ವಿಷ್ಣುಃ ಸರ್ವಪ್ರಾಣೇಷು ಚ ಸ್ಥಿತಃ। ಸರ್ವನಾಮಾಭಿಧೇಯಶ್ಚ ಸರ್ವವೇದೋದಿ(ದೇಡಿ)ತಶ್ಚ ಸಃ ॥ ಇತಿ(ಚ)ಸ್ಕಾಂದೇ ॥ ೭ ॥ ೧೯ ॥**

ಭಾಷ್ಯಾರ್ಥ ॥ ಶ್ರೀಪರಮಾತ್ಮನು ಯಾವ ಕಾರಣದಿಂದ ಇಂದ್ರಿಯಗಳುಳ್ಳ ಎಲ್ಲಾ ಪ್ರಾಣಿಗಳಲ್ಲಿ (ಇಂದ್ರಿಯಗಳಿಗೆ ನಿಯಾಮಕನಾಗಿ) ಇರುತ್ತಾನೋ. (ಅಂದರೆ ಸರ್ವ ಇಂದ್ರಿಯಗಳಿಗೆ ಸ್ವಾಮಿಯೋ). ಆದುದರಿಂದ ಸರ್ವೇಂದ್ರಿಯಮಯಃ ಎಂದು ಹೇಳಲ್ಪಡುತ್ತಾನೆ. (ಆದಿತ್ಯ ಮೊದಲಾದ ಸರ್ವ ಪ್ರಾಣಗಳಲ್ಲಿದ್ದ ಪ್ರಯುಕ್ತ ಆದಿತ್ಯ ಮೊದಲಾದ) ಸರ್ವ ನಾಮಗಳಿಂದ ವಾಚ್ಯನು. ಆತನೇ ಸರ್ವವೇದ ಪ್ರತಿಪಾದ್ಯನೂ ಆಗಿರುತ್ತಾನೆ. ಎಂದು ಸ್ಕಾಂದಪುರಾಣದಲ್ಲಿದೆ.

ವಿಶೇಷಾಂಶ ॥ (೧) ಸ್ವಾಮಿತ್ವವು ಮಯಟ್ ಪ್ರತ್ಯಯದ ಅರ್ಥವು. (೨) ಇದರಿಂದ

**ಚಕ್ಷುರ್ಮಯಃ ಶ್ರೋತ್ರಮಯಃ ಮನೋಮಯೋ ವಾಙ್ಮಯಃ** ಇತ್ಯಾದಿಗಳು ಬ್ರಹ್ಮನಲ್ಲಿ ಚಕ್ಷುರಾದಿಗಳಿಗೆ ಸ್ವಾಮಿತ್ವರೂಪವಾದ ನಿಮಿತ್ತದಿಂದ ಪ್ರಯುಕ್ತವಾಗಿದೆ. (೩) ಹೀಗೆಯೇ ಆದಿತ್ಯಾದಿಗಳಲ್ಲಿದ್ದ ಪ್ರಯುಕ್ತ ಆದಿತ್ಯ ಮೊದಲಾದ ನಾಮಗಳಿಂದ ವಾಚ್ಯನೆಂದು ಹೇಳಿದ್ದರಿಂದ ಆದಿತ್ಯಶ್ರುತಿಯು ಈಶ್ವರವಾಚಕವೆಂದು ಉಕ್ತವಾಯಿತು. (೪) ಛಂದಃಪದದಿಂದ ಹೇಳಲ್ಪಟ್ಟ ವೇದಗಳಿಗೆ ಮುಖ್ಯಾರ್ಥನಾದ ಪ್ರಯುಕ್ತ ಛಂದೋಮಯನು ವಿಷ್ಣುವು. (೫) ಐತರೇಯ ಭಾಷ್ಯದಲ್ಲಿ ಸಂಪೂರ್ಣ ದರ್ಶನಶಕ್ತಿಯಿದ್ದ ಪ್ರಯುಕ್ತ ಚಕ್ಷುರ್ಮಯನು, ಸಂಪೂರ್ಣಶ್ರವಣಶಕ್ತಿಯಿದ್ದ ಪ್ರಯುಕ್ತ ಶ್ರೋತ್ರಮಯನು, ಸತ್ಯಕಾಮನಾದ ಪ್ರಯುಕ್ತ ಛಂದೋಮಯನು, ಸರ್ವಮಂತ್ರಆದಪ್ರಯುಕ್ತ ಮನೋಮಯನು, ಸರ್ವವಕ್ತೃ ಆದಪ್ರಯುಕ್ತ ವಾಙ್ಮಯನು, ಪೂರ್ಣಫಲರೂಪನಾದ ಪ್ರಯುಕ್ತ ಆತ್ಮನೆನಿಸು ತ್ತಾನೆ. (೬) ಹಾಗೆಯೇ ಬೃಹದ್ಭಾಷ್ಯದಲ್ಲಿ ಮಯಟ್ ಪ್ರಾಚುರ್ಯಾರ್ಥಕವು ಸ್ವರೂಪಾರ್ಥ ದಲ್ಲಿಯೂ ಇದೆ ಎಂದು ಪ್ರತಿಜ್ಞೆಮಾಡಿ **ಸರ್ವದ್ರಷ್ಟೃಸ್ವರೂಪತ್ವಾತ್ ಚಕ್ಷುರ್ಮಯ ಇತೀರ್ಯತೇ। ಸರ್ವಶ್ರೋತೃಸ್ವರೂಪತ್ವಾತ್ ಸ ಶ್ರೋತ್ರಮಯ ಈರಿತಃ॥** ಹಾಗೆಯೇ ಭಾಗವತ ತಾತ್ಪರ್ಯದಲ್ಲಿ **ಸರ್ವೇ ವಿಷ್ಣೌ ಸ್ಥಿತಾ ಯಸ್ಮಾದತೋ ಸರ್ವಮಯೋಹ್ಯಸೌ।** ಎಂದು ಪ್ರಕಾರಾಂತರದಿಂದ ಚಕ್ಷುರ್ಮಯತ್ವಾದಿಗಳನ್ನು ವ್ಯಾಖ್ಯಾನಮಾಡಿದರು. (೭) ತಥಾಚ **ಸರ್ವೇಷು ಭೂತೇಷು** ಎನ್ನುವಲ್ಲಿ ಅಲ್ಪಸ್ಥಾನಸ್ಥಿತಿಯನ್ನು ಹೇಳಿದ್ದಾರೆ. ಚಕ್ಷುರ್ಮಯಃ ಇತ್ಯಾದಿಗಳಲ್ಲಿ ಜೀವನಿಗೆ ಚಕ್ಷುರ್ಮಯತ್ವಾದಿ ಪ್ರಕಾರದಿಂದ ಹೇಳಿದುದರಿಂದಲೂ ಆದಿತ್ಯನೆಂದು ವ್ಯಪದೇಶಮಾಡಿದುದರಿಂದಲೂ ಇದೇ ಬಾಧಕದಿಂದ ಸರ್ವತ್ರ ಹೇಳಲ್ಪಟ್ಟವನು ನಾರಾಯಣನಲ್ಲ ಎಂದು ಹೇಳಕೂಡದು. ಏಕೆಂದರೆ— ಬಾಧಕವಿಲ್ಲ. ಮತ್ತು ಅರ್ಭಕೌಕಸ್ತ್ವಾದಿಗಳು ವಿಷ್ಣುವಿನಲ್ಲಿಯೇ ಕೂಡುತ್ತವೆ. ಅಪರಿಚ್ಛಿನ್ನನಿಗೆ ಅರ್ಭಕೌಕಸ್ತ್ವೋಕ್ತಿಯೂ ಜೀವವಿಲಕ್ಷಣನಿಗೆ ಚಕ್ಷುರ್ಮಯತ್ವಾದ್ಯುಕ್ತಿಯೂ ವ್ಯರ್ಥವೆಂದು ಹೇಳಕೂಡದು. ಅಪರಿಚ್ಛಿನ್ನನೇಆದ ವಿಷ್ಣುವಿಗೆ ಅಲ್ಪೌಕಸ್ತ್ವಚಕ್ಷುರ್ಮಯತ್ವಾದಿಪ್ರಕಾರದಿಂದ ಉಪಾಸನಾ ಮಾಡಬೇಕೆಂದು ಆ ಉಕ್ತಿಯು ಸಾರ್ಥಕವಾಗುತ್ತದೆ. ಅಪರಿಚ್ಛಿನ್ನನೂ ಜೀವವಿಲಕ್ಷಣನೂ ಆದ ಬ್ರಹ್ಮನಲ್ಲಿ ಅಲ್ಪೌಕಸ್ತ್ವಾದ್ಯುಕ್ತಿಯು ಕೂಡುವುದಿಲ್ಲವೆಂದು ಹೇಳಕೂಡದು. ಸರ್ವಗತನಾದಾಗ್ಯೂ ಆಕಾಶದಂತೆ ಅಲ್ಪೌಕಸ್ತ್ವವೂ ಚಕ್ಷುರ್ಮಯತ್ವಾದಿಗಳೂ ಕೂಡುತ್ತವೆ. ಹೇಗೆ ವ್ಯಾಪ್ತವಾದ ಅವ್ಯಾಕೃತಾಕಾಶಕ್ಕೆ ಮಠಾಕಾಶ ಘಟಾಕಾಶಾದಿರೂಪವಾಗಿ ಮಠಾದ್ಯೇಕ ದೇಶದಲ್ಲಿ ಸ್ಥಿತಿಯಿದೆಯೋ ಹಾಗೆಯೇ ಬ್ರಹ್ಮನಿಗೆ ಭೂತಹೃದಯಾದಿಗಳಲ್ಲಿ ಸ್ಥಿತಿಯು ಕೂಡಬಹುದು. ಹೀಗೆಯೇ ವಿಷ್ಣುವು ಜೀವರಿಂದ ವಿಲಕ್ಷಣನಾದಾಗ್ಯೂ, ಜೀವರ ಇಂದ್ರಿಯ ಸ್ವಾಮಿತ್ವಾದಿ ಪ್ರಕಾರದಿಂದ ಚಕ್ಷುರ್ಮಯತ್ವಾ ದ್ಯುಕ್ತಿಯು ಉಪಪನ್ನವು. ॥ ೭ ॥

**ಪೀಠಿಕೆ ॥** ಪುನಃ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ ॥ ೮ ॥

**ಸೂತ್ರಾರ್ಥ ॥** ಹೀಗೆ ಒಬ್ಬ ಜೀವನು ಸರ್ವಶರೀರದಲ್ಲಿದ್ದರೆ ಸರ್ವಸಮಾನಭೋಗವು

ಪ್ರಾಪ್ತಿಯಾಗಬೇಕೆಂದು ಬಾಧಕ ಅನುಪಪತ್ತಿ ಸೂತ್ರದಲ್ಲಿ ಹೇಳಿದ್ದು ಇದೆಯೋ ಹಾಗೆಯೇ (ಈಶ್ವರನು ಸರ್ವಭೂತಗಳಲ್ಲಿದ್ದಾನೆಂದು ಅಂಗೀಕರಿಸಿಕೊಂಡು ಜೀವೇಶ್ವರರಿಬ್ಬರೂ ಒಂದೇ ಶರೀರದಲ್ಲಿದ್ದರೆ ಪರಮಾತ್ಮನಿಗೆ) ಜೀವನ ಸಮಾನ ಭೋಗ ಪ್ರಾಪ್ತಿರೂಪವಾದ (ಬಾಧಕವಿದೆ. ಆದುದರಿಂದ ಈಶ್ವರನು ಸರ್ವಭೂತಗಳಲ್ಲಿರತಕ್ಕವನಲ್ಲ.) ಎಂದರೆ ಹಾಗೆ ಹೇಳಕೂಡದು. (ಏಕೆಂದರೆ— ಈಶ್ವರನಿಗೆ ಸಮಾನಭೋಗ ಪ್ರಾಪ್ತಿಯಾಗದೆ ಇರಲಿಕ್ಕೆ ಜೀವನದೆಸೆಯಿಂದಲೂ) ವಿಶೇಷ ಸಾಮರ್ಥ್ಯವಿದೆ. (ಅಗ್ನಿ ಸ್ತಂಭನ ಶಕ್ತಿಯುಳ್ಳವನಿಗೆ ಅಗ್ನಿಯ ಮಧ್ಯದಲ್ಲಿದ್ದರೂ ದಾಹವು ಹೇಗೆ ಇಲ್ಲವೋ ಹಾಗೆಯೇ.)

**ಭಾಷ್ಯ ॥ ಜೀವಪರಯೋರೇಕಶರೀರಸ್ಥತ್ವೇ ಸಮಾನಭೋಗಪ್ರಾಪ್ತಿರಿತಿ ಚೇನ್ನ ಸಾಮರ್ಥ್ಯವೈಶೇಷಾತ್ ॥ ೨೦ ॥**

**ಭಾಷ್ಯಾರ್ಥ ॥** ಜೀವ ಪರಮಾತ್ಮರಿಬ್ಬರೂ ಒಂದೇ ಶರೀರದಲ್ಲಿದ್ದರೆ (ಅಂದರೆ ವಿಷ್ಣುವು ಸರ್ವರ ಶರೀರದಲ್ಲಿ ಇದ್ದರೆ ಜೀವನಿಂದ ಕೂಡಿಕೊಂಡು ಒಂದೇ ಶರೀರದಲ್ಲಿದ್ದಾನೆಂದು ಪ್ರಾಪ್ತವಾಗುವುದರಿಂದ) ಶ್ರೀಹರಿಗೆ ಜೀವನಭೋಗಕ್ಕೆ ಸಮಾನವಾದ ಜೀವನ ದುಃಖಾದಿಭೋಗವು ಪ್ರಾಪ್ತಿಯಾಗಬೇಕಾಗುವುದು. (ಇಂತಹ ಬಾಧಕವದೆ. ಆದಕಾರಣ ಜೀವಪಕ್ಷದಲ್ಲಿದ್ದಂತೆಯೇ ಈಶ್ವರಪಕ್ಷದಲ್ಲಿಯೂ ಬಾಧಕವು ಸಮಾನವಾದ ಪ್ರಯುಕ್ತ ಈಶ್ವರನು ಸರ್ವಗತನಲ್ಲ) ಎಂದರೆ — ಹಾಗೆ ಹೇಳಕೂಡದು. (ಈಶ್ವರನಿಗೆ ಸಮಾನ ಪ್ರಾಪ್ತಿಯಾಗುವುದಿಲ್ಲ ಏಕೆಂದರೆ — ಪರಮಾತ್ಮನಿಗೆ ಜೀವನ ಸಮಾನ ಭೋಗವು ಪ್ರಾಪ್ತಿಯಾಗದೆ ಇರಲಿಕ್ಕೆ ಜೀವರಕ್ಕಿಂತಲೂ) ಸಾಮರ್ಥ್ಯವಿಶೇಷವಿದ್ದ ಪ್ರಯುಕ್ತ

**ಪೀಠಿಕೆ ॥** ಸಮಾನ ಭೋಗ ಪ್ರಾಪ್ತಿಯಾಗದೆ ಇರಲಿಕ್ಕೆ ಕಾರಣವಾದ ಆ ಸಾಮರ್ಥ್ಯ ವಿಶೇಷವು ಯಾವುದು ಎಂದರೆ—

**ಭಾಷ್ಯ ॥ ಉಕ್ತಂ ಚ(ಹಿ)ಗಾರುಡೇ। ಸರ್ವಜ್ಞಾಲ್ಪಜ್ಞತಾಭೇದಾತ್ ಸರ್ವಶಕ್ತ್ಯಲ್ಪಶಕ್ತಿತಃ। ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ಸಂಭೋಗೋ ನೇಶಜೀವಯೋಃ॥ ಇತಿ(ಚ) ॥ ೨೦ ॥ ಸೂ.೮ ॥ ಅಧಿ.೧ ॥**

**ಭಾಷ್ಯಾರ್ಥ ॥** (ಜೀವೇಶ್ವರರಿಗೆ ಭೋಗಸಾಮರ್ಥ್ಯವಿಲ್ಲವೆಂದು ಸೂತ್ರದಲ್ಲಿ ಮಾತ್ರ ಹೇಳಿದ್ದಲ್ಲ ಮತ್ತೆ) ಗಾರುಡ ಪುರಾಣದಲ್ಲಿಯೂ (ಜೀವನಿಂದ ಈಶ್ವರನಿಗೆ ವಿಶೇಷ ಸಾಮರ್ಥ್ಯವು) ಹೇಳಲ್ಪಟ್ಟಿದೆ. ಸರ್ವಜ್ಞತ್ವ ಅಲ್ಪಜ್ಞತ್ವರೂಪಭೇದಕ ಧರ್ಮಗಳಿಂದಲೂ ಪೂರ್ಣಶಕ್ತಿ ಅಲ್ಪಶಕ್ತಿಗಳಿದ್ದ ಪ್ರಯುಕ್ತವೂ ಸರ್ವಸ್ವಾತಂತ್ರ್ಯ ಪಾರತಂತ್ರ್ಯರೂಪಧರ್ಮಗಳಿಂದಲೂ ಈಶ್ವರ ಜೀವರಿಗೆ ಸಮಾನಭೋಗವು ಇರುವುದಿಲ್ಲ ಎಂದು ಹೇಳಿದೆ.

**ವಿಶೇಷಾಂಶ ॥** (೧) ಈಶ್ವರನು ಜೀವನಿಂದ ಕೂಡಿಕೊಂಡು ಒಂದೇ ಶರೀರದಲ್ಲಿದ್ದರೂ ದುಃಖವನ್ನು ಬಿಟ್ಟು ಸುಖವನ್ನು ಮಾತ್ರ ಭೋಗಿಸುತ್ತಾನೆ ಎನ್ನುವಲ್ಲಿ ಸರ್ವ ಸ್ವಾತಂತ್ರ್ಯವು ಹೇತುವು. (೨) ಜೀವನು ಸುಖ ದುಃಖಗಳೆರಡನ್ನೂ ಅನುಭವಿಸುತ್ತಾನೆ ಎನ್ನುವಲ್ಲಿ ಪಾರತಂತ್ರ್ಯವು ಹೇತುವು ॥ ೮ ॥

## ಮಾಯಾವಾದಿರೀತ್ಯಾ

ವಿಚಾರ ॥ (೧) ಮಾಯಾವಾದಿಗಳು **ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ । ಅಥ ಖಲು ಕ್ರತುಮಯಃ ಪುರುಷೋ ಯಥಾ ಕ್ರತುರಸ್ಮಿಂಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ । ಸ ಕ್ರತುಂ ಕುರ್ವೀತ ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಕಾಮಃ ಸತ್ಯಸಂಕಲ್ಪಃ** ಎನ್ನುವ ಛಾಂದೋಗ್ಯ ವಾಕ್ಯದಲ್ಲಿ ಸ ಕ್ರತುಂ ಕುರ್ವೀತ ಎನ್ನುವ ಸಂಕಲ್ಪ(ಧ್ಯಾನ) ರೂಪವಾದ ಉಪಾಸನಾವಿಧಿಯಲ್ಲಿ ಮನೋಮಯತ್ವಾದಿಧರ್ಮಗಳಿಂದ ಜೀವನು ಉಪಾಸ್ಯನಾಗಿ ಉಪದೇಶಿಸಲ್ಪಡುತ್ತಾನೋ, ಅಥವಾ ಬ್ರಹ್ಮನೋ ಎಂದು ಸಂದೇಹ ಬರಲು **ಮನೋಮಯಃ** ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟವನು ಮನೋಮಯತ್ವಾದಿಗಳಿಂದ ವಿಶಿಷ್ಟನಾದವನು ಜೀವನೇ ಬ್ರಹ್ಮನಲ್ಲ. ಏಕೆಂದರೆ— ಜೀವನಿಗೇನೇ ಮನಃ ಪ್ರಾಣಾದಿಗಳ ಸಂಬಂಧವು ಪ್ರಸಿದ್ಧವಾಗಿದೆ. ಬ್ರಹ್ಮನಿಗಾದರೂ **ಅಪ್ರಾಣೋ ಹ್ಯಮನಾಃ ಶುಭ್ರಃ** ಇದು ಮೊದಲಾದ ಶ್ರುತಿಗಳಿಂದ ಮನಃಪ್ರಾಣಾದಿ ಸಂಬಂಧವು ಇಲ್ಲ. ಹೀಗೆ ಪೂರ್ವಪಕ್ಷಮಾಡಿಕೊಂಡು ಸತ್ಯಕಾಮತ್ವ ಜ್ಯಾಯಸ್ತ್ವ ಮೊದಲಾದ ಬ್ರಹ್ಮಲಿಂಗಗಳು ಇದ್ದುದರಿಂದ ಬ್ರಹ್ಮನೇ ಮನೋಮಯತ್ವಾದಿಗಳಿಂದ ಉಪಾಸ್ಯನು. ಮನೋಮಯತ್ವ ಅಣೀಯಸ್ತ್ವ ಮೊದಲಾದ ಜೀವಧರ್ಮಗಳಾದರೂ ಜೀವಾಭಿನ್ನವಾದ ಬ್ರಹ್ಮನಲ್ಲಿ ಕೂಡಬಹುದು. ಬ್ರಹ್ಮಧರ್ಮವಾದರೂ ಬ್ರಹ್ಮನಲ್ಲಿ ಅಧ್ಯಸ್ತನಾದ ವಿಶಿಷ್ಟ ಚೈತನ್ಯರೂಪನಾದ ಜೀವನಲ್ಲಿ ಕೂಡಲಾರದು. ರಜ್ಜುವಿನಲ್ಲಿ ಆರೋಪಿತ (ಅಧ್ಯಸ್ತ) ಸರ್ಪದ ಅಸಾಧಾರಣ ಧರ್ಮಭೂತಗಳಾದ ಭಯಜನಕತ್ವಾದಿ ಧರ್ಮಗಳ ಜ್ಞಾನವು ಅಧಿಷ್ಠಾನ ಭೂತವಾದ ರಜ್ಜುವಿನಲ್ಲಿ ಬರುವಂತೆಯೇ ರಜ್ಜು (ಹಗ್ಗ) ಧರ್ಮಭೂತವಾದ ಗ್ರಾಹ್ಯತ್ವ ಮೊದಲಾದ ಧರ್ಮಗಳ ಜ್ಞಾನವು ರಜ್ಜುವಿನಲ್ಲಿ ಆರೋಪಿತವಾದ ಹಾವಿನಲ್ಲಿ ಬರುವುದಿಲ್ಲ. ಆದಕಾರಣ ಬ್ರಹ್ಮಧರ್ಮಗಳಾದ ಸತ್ಯಕಾಮತ್ವಾದಿಗಳು ಬ್ರಹ್ಮಾಭಿನ್ನವಾದ ಜೀವನಲ್ಲಿ ಕೂಡಲಾರವು. ಈ ಪ್ರಮೇಯವು ಭಾಮತಿಯಲ್ಲಿ ಹೇಳಲ್ಪಟ್ಟಿದೆ. **ಸಮಾರೋಪ್ಯಸ್ಯ ರೂಪೇಣ ವಿಷಯೋ ರೂಪವಾನ್ ಭವೇತ್। ವಿಷಯಸ್ಯ ತು ರೂಪೇಣ ಸಮಾರೋಪ್ಯಂ ನ ರೂಪವತ್॥** ಹೀಗೆ ಸಿದ್ಧಾಂತ ಮಾಡಿರುವರು. (೨) ಮತ್ತು **ಸರ್ವತ್ರ ಪ್ರಸಿದ್ಧೋಪದೇಶಾತ್** ಎನ್ನುವ ಅಧ್ಯಸೂತ್ರಕ್ಕೆ ವೇದಾಂತಗಳಲ್ಲಿ ಪರಮಾತ್ಮ ಪರವಾಗಿ ಪ್ರಸಿದ್ಧವಾದ ಬ್ರಹ್ಮಶಬ್ದಕ್ಕೆ ಉಪದೇಶವಿದ್ದ ಪ್ರಯುಕ್ತ ಎಂದು ಸೂತ್ರಾರ್ಥವು ಎಂದೂ ಸಿದ್ಧಾಂತ ಪಡಿಸಿರುವರು. ಇದು ಅಯುಕ್ತವು. ಏಕೆಂದರೆ ಅಧಿಷ್ಠಾನವು ಆದರಲ್ಲಿರತಕ್ಕ ಅಸಾಧಾರಣಧರ್ಮದಿಂದ ತೋರದಿದ್ದ ಕಾಲದಲ್ಲಿ ಅದು ಆರೋಪ್ಯದಲ್ಲಿದ್ದ ಧರ್ಮವುಳ್ಳದ್ದಾಗಿ ತೋರಿದರೂ ಅಧಿಷ್ಠಾನವು ಆದರಲ್ಲಿರತಕ್ಕ ಅಸಾಧಾರಣಧರ್ಮದಿಂದ ತೋರಿದಾಗ ಅದು ಆರೋಪ್ಯ ಧರ್ಮವುಳ್ಳದ್ದಾಗಿ ತೋರುವುದಿಲ್ಲ. **ಸರ್ವಂ ಖಲ್ವಿದಂ ಬ್ರಹ್ಮ** ಎನ್ನುವ ಪ್ರತ್ಯೇಕ ವಾಕ್ಯದಲ್ಲಿ ಆದರೂ, ಅಧಿಷ್ಠಾನವೆಂದು ಒಪ್ಪಿದ ಬ್ರಹ್ಮನು ಸತ್ಯಕಾಮತ್ವ ಮೊದಲಾದ ಅಸಾಧಾರಣಧರ್ಮದಿಂದ ತೋರುತ್ತಾನೆ. ಆದಕಾರಣ ಜೀವಧರ್ಮಗಳಾದ ಮನೋಮಯತ್ವಾದಿಗಳಿಗೆ ಅಧಿಷ್ಠಾನಭೂತನಾದ ಬ್ರಹ್ಮನಲ್ಲಿ ಭಾನವನ್ನು ಒಪ್ಪಿ ಸಿದ್ಧಾಂತ ಮಾಡಿದ್ದು ಯುಕ್ತವಲ್ಲ. ಇದೇ ಅಭಿಪ್ರಾಯವನ್ನು **ತತ್ವತೋ ಭಾತ್ಯಧಿಷ್ಠಾನೇನಾರೋಪ್ಯ ಗತಧರ್ಮಧೀಃ। ಬ್ರಹ್ಮಣಶ್ಚ ತಥಾ ಭಾನಂ ತ್ವಯಾಪ್ಯತ್ರಾಭ್ಯುಪೇಯತೇ॥** ಹೀಗೆ ನಿರೂಪಿಸಿರುವರು. (೩) ಮತ್ತು ಅದ್ವೈತಿಗಳ

ಮತದಲ್ಲಿ ಈ ವಾಕ್ಯವು ಸತ್ಯಸಂಕಲ್ಪಾದಿಗಳಿಂದ ಯುಕ್ತವಾದ ಸಗುಣಬ್ರಹ್ಮವಿಷಯಕವು. ಜೀವ ಸಗುಣಬ್ರಹ್ಮಗಳಿಬ್ಬರಿಗೂ ನಿರ್ಗುಣನಲ್ಲಿ ಅಧ್ಯಾಸವು. ಜೀವನಿಗೂ ಸಗುಣಬ್ರಹ್ಮನಿಗೂ ಪರಸ್ಪರವಾಗಿ ಅಧಿಷ್ಠಾನ ಅಧ್ಯಸ್ತ ಭಾವವೇ ಕೂಡಲಾರದು. ಈ ವಿಷಯವನ್ನು **ಸ್ವಾಜ್ಞಾನಕಲ್ಪಿತಜಗತ್ಪರಮೇಶ್ವರತ್ವಜೀವತ್ವ ಭೇದಕಲುಷೀಕೃತಭೂರಿಭಾವಾ। ಸ್ವಾಭಾವಿಕಸ್ವಮಹಿಮಸ್ಥಿತಿರಸ್ತಮೋಹಾ ಪ್ರತ್ಯಕ್ಚಿತಿರ್ವಿಜಯತೇ ಭುವನೈಕಯೋನಿಃ ॥** ಎಂದು ಪರಮೇಶ್ವರತ್ವ ಜೀವತ್ವಾದಿಗಳು ನಿರ್ಗುಣಬ್ರಹ್ಮನಲ್ಲಿ ಆರೋಪಿತ (ಕಲ್ಪಿತ) ಗಳೆಂದು ಸಂಕ್ಷೇಪ ಶಾರೀರಿಕ ದಲ್ಲಿ ಹೇಳಿರುತ್ತಾರೆ. ಆದಕಾರಣ ಜೀವನಿಗೆ ಸಗುಣಬ್ರಹ್ಮನಲ್ಲಿ ಅಧ್ಯಾಸವೇ ಇಲ್ಲದಿರುವುದರಿಂದ ಜೀವಧರ್ಮಭೂತಗಳಾದ ಮನೋಮಯತ್ವಾದಿಗಳಿಗೆ ಪ್ರಕೃತವಾಕ್ಯ ಪ್ರತಿಪಾದ್ಯನಾದ ಸಗುಣಬ್ರಹ್ಮನಲ್ಲಿ ಭಾನವನ್ನು ಒಪ್ಪಿಕೊಂಡು ಸಿದ್ಧಾಂತ ಮಾಡಿದ್ದು ಯುಕ್ತವಲ್ಲ. (೪) ಮತ್ತು ಒಂದನೇ ಸೂತ್ರದಲ್ಲಿ ಹೇತುವನ್ನು ಮಾತ್ರ ಹೇಳಿದುದರಿಂದ ಮನೋಮಯತ್ವಾದಿನಾ ಬ್ರಹ್ಮ ಉಪಾಸ್ಯಂ ಎನ್ನುವ ಪ್ರತಿಜ್ಞಾಂಶವನ್ನು ಅಧ್ಯಾಹಾರ ಮಾಡಬೇಕಾಗುವುದು. ೨ನೇ ಸೂತ್ರದಲ್ಲಿ ಅದ್ವೈತಿರೀತ್ಯಾ ಸತ್ಯಕಾಮತ್ವಾದಿಮಿಥ್ಯಾಭೂತಗುಣಗಳಲ್ಲಿ ಶ್ರುತಿತಾತ್ಪರ್ಯವೂ ಉಪಪತ್ತಿಯೂ ಇಲ್ಲದಿರುವುದರಿಂದ ವಿವಕ್ಷಿತಪದವೂ ಉಪಪತ್ತಿ ಪದವೂ ಅಯುಕ್ತ ವಾಗುವುದು, ಇತ್ಯಾದಿ ಪ್ರಕಾರ ಪ್ರತಿ ಸೂತ್ರಾರ್ಥಗಳಲ್ಲಿಯೂ ಅನುಪಪತ್ತಿಯು ಇದೆ. (೫) ಮತ್ತು **ಅನುಪಪತ್ತೇಸ್ತು ನ ಶಾರೀರಃ** ಇತ್ಯಾದಿಗಳಿಂದ ಜೀವಬ್ರಹ್ಮಭೇದವನ್ನು ವಿವಕ್ಷಿತಗುಣ ಎನ್ನುವುದರಿಂದ ಬ್ರಹ್ಮಗುಣಗಳನ್ನು ಹೇಳಿದುದರಿಂದ ಜೀವಬ್ರಹ್ಮೈಕ್ಯಕ್ಕೂ ಬ್ರಹ್ಮನಿರ್ಗುಣತ್ವಕ್ಕೂ ಈ ಅಧಿಕರಣವು ಅದ್ವೈತಿಗಳಿಗೆ ಪ್ರತಿಕೂಲವೇ ಆಗಿರುತ್ತದೆ. ಆದಕಾರಣ ಅವರ ವ್ಯಾಖ್ಯಾನವು ಸರ್ವಥಾ ಯುಕ್ತವಲ್ಲ.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ (೧) ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ವಾಕ್ಯವು ಬ್ರಹ್ಮವಿಷಯಕವು. ಮನೋಮಯ ವಾಕ್ಯವಾದರೂ ಜೀವವಿಷಯಕವು ಎಂದು ಪರಕೀಯರು ಭಿನ್ನಭಿನ್ನ ವಿಷಯಕವೆಂದು ಮಾಡಿಕೊಂಡ ಪೂರ್ವಪಕ್ಷವು ಅಯುಕ್ತವು. ಏಕವಿಷಯತ್ವವೇ ಎರಡು ವಾಕ್ಯಕ್ಕೂ ಕೂಡಬಹುದು ಎನ್ನುವ ಅಭಿಪ್ರಾಯದಿಂದ ಸರ್ವಂ ಖಲ್ವಿದಂ ಬ್ರಹ್ಮ ಎನ್ನುವಲ್ಲಿದ್ದ ಬ್ರಹ್ಮಪದದಿಂದ ನಿರ್ದಿಷ್ಟನಾದವನು ಜೀವನೋ ಪರಮಾತ್ಮನೋ ಎಂದು ಸಂದೇಹ ಬಂದರೆ ಸರ್ವಂ ಖಲ್ವಿದಂ ಬ್ರಹ್ಮ ಎನ್ನುವಲ್ಲಿದ್ದ ಬ್ರಹ್ಮಪದನಿರ್ದಿಷ್ಟನು ಜೀವನೇ. ಇಲ್ಲಿ ಬ್ರಹ್ಮಪದದಿಂದ ಬ್ರಹ್ಮನನ್ನುದ್ದೇಶಿಸಿ ಇದಂ ಸರ್ವ ಖಲು ಎಂದು ಹೇಳಿದ ಸರ್ವಾತ್ಮಕತ್ವವು ಅಂದರೆ ಚತುರ್ಮುಖನನ್ನು ಆರಂಭಿಸಿ ತೃಣಪರ್ಯಂತವಾದ ಸರ್ವಜಗದಾತ್ಮಕತ್ವವು ಹೇಳಲ್ಪಟ್ಟಿದೆ. ಅದು ಅನಾದಿಯಾದ ಸಂಸಾರದಲ್ಲಿ ಅವಿದ್ಯಾಕರ್ಮಗಳ ವಶದಿಂದ ಜೀವನಿಗೆ ನಾನಾಯೋನಿಗಳಲ್ಲಿ ಉತ್ಪತ್ತಿಯೂ ಕೂಡುವುದರಿಂದ ಜೀವನಲ್ಲಿಯೇ ಸಂಭವಿಸುವುದು. ಸರ್ವದೋಷವಿದೂರನಾದ ಪರಮಾತ್ಮನಲ್ಲಿ ಕೂಡಲಾರದು. ತಜ್ಜಲಾನ್ ಎಂದು ಹೇಳಿದ ಜಗಜ್ಜನ್ಮಾದಿಕಾರಣತ್ವವು ಅದೃಷ್ಟದ್ವಾರಾ ಜೀವನಲ್ಲಿಯೂ ಕೂಡಬಹುದು, ಬ್ರಹ್ಮಶಬ್ದಕ್ಕೆ ಜೀವನಲ್ಲಿಯೂ ಪ್ರಯೋಗವದೆ ಎಂದು ಪೂರ್ವಪಕ್ಷ ಮಾಡಿಕೊಂಡು ರಾಮಾನುಜಾಚಾರ್ಯರು ಜೀವನಿಗೆ ಜೀವಾಂತರಾತ್ಮಕತ್ವವು ಇಲ್ಲದಿರುವುದರಿಂದ ಸರ್ವಾತ್ಮಕತ್ವವು ಕೂಡಲಾರದು. ಇಲ್ಲಿ ಹೇಳಿದ ಸರ್ವಾತ್ಮಕತ್ವವೆಂದರೆ ಸರ್ವಪ್ರಕಾರಕತ್ವವು. (ಸರ್ವವಿಶೇಷಣಕತ್ವವು) ಅಂದರೆ ದೇವ ತಿರ್ಯಕ್

ಮನುಷ್ಯ ಶರೀರಕತ್ವವು, ಎಂದು ಸ್ವೀಕಾರಮಾಡಿದ್ದರಿಂದ ಪ್ರಕಾರಭೂತಗಳಾದ ಶರೀರದಲ್ಲಿರತಕ್ಕ ದೋಷಗಳು ಪ್ರಕಾರಿಯಾದ ಬ್ರಹ್ಮನಲ್ಲಿ ಸರ್ವಥಾ ಕೂಡಲಾರವು ಮತ್ತು ಬ್ರಹ್ಮಶಬ್ದವೂ ಜನ್ಮಾದಿಕಾರಣತ್ವವೂ ಜೀವನಲ್ಲಿ ಮುಖ್ಯತಃ ಕೂಡದಿರುವುದರಿಂದ ಬ್ರಹ್ಮನೇ ಸರ್ವಾತ್ಮಕನೆಂದು ಸಿದ್ಧಾಂತ ಮಾಡಿರುವರು. (೨) ಮತ್ತು **ಸರ್ವತ್ರ ಪ್ರಸಿದ್ಧೋಪದೇಶಾತ್** ಎನ್ನುವ ಸೂತ್ರಕ್ಕೆ, ಸರ್ವತ್ರ=ಸರ್ವಂ ಖಲ್ವಿದಂ ಎಂದು ನಿರ್ದಿಷ್ಟವಾದ ಜಗತ್ತಿನಲ್ಲಿ ಬ್ರಹ್ಮಶಬ್ದದಿಂದ ಜಗದಾತ್ಮಕನಾಗಿ ಹೇಳಲ್ಪಟ್ಟವನು ಪರಬ್ರಹ್ಮನೇ. **ಖಲು** ಶಬ್ದದಿಂದ ಸರ್ವಾತ್ಮಕತ್ವಕ್ಕೂ, **ತಜ್ಜಲಾನಿತಿ** ಎಂದು ಹೇತುತ್ವಾರ್ಥಕವಾದ ಇತಿ ಶಬ್ದದಿಂದ ಜನ್ಮಾದಿ ಕಾರಣತ್ವಕ್ಕೂ ಪ್ರಸಿದ್ಧತ್ವದಿಂದ ಉಪದೇಶವಿದ್ದ ಪ್ರಯುಕ್ತ (೩) **ಆನಂದಾದ್ಧ್ಯೇವ ಖಲ್ವಿಮಾನಿ, ಯತೋ ವಾ ಇಮಾನಿ ಭೂತಾನಿ ಜಾಯಂತೇ** ಎನ್ನುವ ಶ್ರುತ್ಯಂತರಗಳಲ್ಲಿ ಬ್ರಹ್ಮನಲ್ಲಿ ಪ್ರಸಿದ್ಧವೇ ಆದ ಜಗತ್ಕಾರಣವನ್ನು ಇಲ್ಲಿ ಹೇಳಿದ್ದರಿಂದ ವಿವಕ್ಷಿತ ಗುಣಗಳು ಉಪಪನ್ನಗಳಾಗುವುದರಿಂದ ಇಲ್ಲಿ ಹೇಳಿದ ಸರ್ವಾತ್ಮಕನು ಬ್ರಹ್ಮನು ಎಂದೇ ಸಿದ್ಧಾಂತ ಮಾಡಿರುವರು. ಇದೇ ಅಭಿಪ್ರಾಯವು **ಸರ್ವತ್ವಂ ಕರ್ಮಭಿಃ ಸ್ಫುರ್ಜನಿಮಿತಿಘಟಿತೇ ಬ್ರಹ್ಮಶಬ್ದೋಽತ್ರ ಚೈವೇತ್ಯಲ್ಪಸ್ಥಾನೋಽಲ್ಪ ಮಾನಃ ಸುಖಿತದಿತರಭುಗ್ಜೀವ ಏವೇತಿ ಚೇನ್ನ ತಜ್ಜತ್ವಾದೇರನೂಕ್ತೇರ್ವಿವಿಧ-ಗುಣಭಿದಾ ದರ್ಶನಾತ್ಸರ್ವತಾದೇರಸ್ವಾರಸ್ಯಾದಪ್ಯನುತ್ವಂ ಹ್ಯುಪಧಿಕೃತಮಿಹೋ ಪಾಸ್ತಯೇ ಜ್ಯಾಯಸೀ ಸ್ಯಾತ್ ॥** ಎಂದು ಅಧಿಕರಣ ಸಾರಾವಳಿಯಲ್ಲಿ ಉಕ್ತ ವಾಗಿದೆ. ಹೀಗೆ ಸಿದ್ಧಾಂತ ಮಾಡಿದ್ದು ಅಯುಕ್ತವು. ಏಕೆಂದರೆ— ರಾಮಾನುಜಾಚಾರ್ಯರ ಮತದಲ್ಲಿ ಅಂತರಧಿಕರಣದಲ್ಲಿ **ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ** ಎಂದು ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಆದಿತ್ಯಾಂತಸ್ಥನು ಜೀವನಾದರೆ **ಯಶ್ಚಾಸಾವಾದಿತ್ಯೇ** ಎಂದು ಆನಂದವಲ್ಲಿಯಲ್ಲಿ ಹೇಳಲ್ಪಟ್ಟ ಆದಿತ್ಯಾಂತ್ಯಸ್ಥನೂ ಜೀವನಾಗಬೇಕು ಎಂದು ಪೂರ್ವಪಕ್ಷಮಾಡಿಕೊಂಡಂತೆಯೇ **ಸರ್ವಂ ಖಲ್ವಿದಂ ಬ್ರಹ್ಮ** ಎನ್ನುವಲ್ಲಿ ಹೇಳಲ್ಪಟ್ಟ ಜಗತ್ಕಾರಣನು ಜೀವನಾದರೆ **ಯತೋ ವಾ ಇಮಾನಿ** ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಜಗತ್ಕಾರಣನೂ ಜೀವನಾಗಬೇಕು ಎಂದು ಪೂರ್ವಪಕ್ಷವು ಕೂಡುವುದರಿಂದ **ಯತೋ ವಾ** ಇತ್ಯಾದಿ ವಾಕ್ಯಾಂತರಗಳಲ್ಲಿ ಜಗತ್ಕಾರಣತ್ವವು ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ ಎಂದು ಹೇಳಿದ್ದು ಕೂಡುವುದಿಲ್ಲ (೩) ಮತ್ತು **ಸರ್ವಂ ಖಲ್ವಿದಂ** ಎನ್ನುವ ವಿಷಯವಾಕ್ಯದಲ್ಲಿದ್ದ ಖಲು ಶಬ್ದದಿಂದ ಸೂಚಿತವಾದ ಪ್ರಸಿದ್ಧ್ಯರ್ಥವಾಗಿ **ಯತೋ ವಾ** ಇತ್ಯಾದಿ ಶ್ರುತ್ಯಂತರವನ್ನು ಅನುಸರಣ ಮಾಡುವುದಾದರೆ ಆನಂದಾದ್ಧ್ಯೇವ ಖಲು ಎನ್ನುವಲ್ಲಿಯೂ ಶ್ರುತ್ಯಂತರಪ್ರಸಿದ್ಧಿ ದ್ಯೋತಕವಾದ ಹಿ ಶಬ್ದ ಖಲು ಶಬ್ದಗಳೂ ಮಸ್ತು **ಯತೋ ವಾ ಇಮಾನಿ ಆತ್ಮಾ ವಾ ಇದಂ** ಇತ್ಯಾದಿಗಳಲ್ಲಿ ಪ್ರಸಿದ್ಧ್ಯರ್ಥಕವಾದ ವೈಶಬ್ದಾದಿಗಳೂ ಶ್ರುತಗಳಾಗಿರುವುದರಿಂದ ಅಲ್ಲಿಯೂ ಶ್ರುತ್ಯಂತರ ಪ್ರಸಿದ್ಧಿಯನ್ನು ಅಪೇಕ್ಷಿಸಬೇಕಾಗುವುದು. (೫) ಮತ್ತು **ಅನ್ನಾದ್ಧ್ಯೇವ ಖಲ್ವಿಮಾನಿ, ಪ್ರಾಣಾದ್ಧ್ಯೇವ ಖಲ್ವಿಮಾನಿ** ಇತ್ಯಾದಿಗಳಲ್ಲಿ ಖಲು ಶಬ್ದಾದಿಗಳು ಇದ್ದರೂ ರಾಮಾನುಜಾಚಾರ್ಯರು ಅನ್ನಾದಿಗಳಿಗೆ ಬ್ರಹ್ಮತ್ವವನ್ನು ಹೇಗೆ ಅಂಗೀಕಾರ ಮಾಡಲಿಲ್ಲವೋ ಹಾಗೆಯೇ ಇಲ್ಲಿಯೂ ಖಲು ಶಬ್ದಾದಿಗಳಿದ್ದರೂ ಈ ವಾಕ್ಯಗಳು ಬ್ರಹ್ಮಪರಗಳಲ್ಲವೆಂದು ಏಕೆ ಆಗಬಾರದು? (೬) ಮತ್ತು ಬ್ರಹ್ಮಶಬ್ದಾಭಿಧೇಯಕ್ಕೆ ಪರಬ್ರಹ್ಮತ್ವವೂ ಸರ್ವಾತ್ಮಕತ್ವವೂ ಎರಡೂ ಸಾಧ್ಯವೆಂದು ಅಭಿಮತವಾಗಿದ್ದರೆ **ಸರ್ವಂ ಬ್ರಹ್ಮ** ಎಂದು ಹೇಳಬೇಕತ್ತು. ಸರ್ವಂ ಖಲ್ವಿದಂ ಬ್ರಹ್ಮ ಎನ್ನುವ ಶ್ರುತ್ಯನುಗಮವೂ ಬರುತ್ತಿತ್ತು. ಅಂತೂ ಸೂತ್ರದಲ್ಲಿ ಸರ್ವಂ ಎಂದೇ ನಿರ್ದೇಶವಿರಬೇಕಿತ್ತು. ಸರ್ವತ್ರ ಎಂದು ನಿರ್ದೇಶವು ಕೂಡದೇ

ಹೋಗುವುದು. ಸರ್ವತ್ರ ಎನ್ನುವುದರಿಂದ ಸರ್ವಾತ್ಮಕತ್ವವು ಲಬ್ಧವಾಗುವುದಿಲ್ಲ, ಸರ್ವಗತತ್ವವೇ ಲಬ್ಧವಾಗುತ್ತದೆ. ಮತ್ತು ಸೂತ್ರದಲ್ಲಿದ್ದ ಪ್ರಸಿದ್ಧ ಶಬ್ದಕ್ಕೆ ಪ್ರಸಿದ್ಧತ್ವಾತ್ ಎಂದು ಭಾವಪ್ರಧಾನಕತ್ವವನ್ನು ಕಲ್ಪಿಸಬೇಕಾಗುವುದು. ಇದು ಮೊದಲಾದ ಅನೇಕ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶವು

(೧) ಐತರೇಯದಲ್ಲಿ **ಚತ್ವಾರಃ ಪುರುಷಾ ಬಾಧ್ವ** ಎನ್ನುವ ಖಂಡದಲ್ಲಿ **ತಸ್ಯೈತ ಸ್ಯಾಸಾವಾದಿತ್ಯೋರಸಃ** ಎಂದು ಉಪಕ್ರಮಿಸಿಕೊಂಡು. ಏತಂ **ಹ್ಯೇವ ಬಹ್ವೃಚಾಃ ಮಹತ್ಯುಕ್ಥೇ ಮೀಮಾಂಸಂತೇ** ಇತ್ಯಾದಿಗಳಿಂದ ಉಕ್ಥ ಅಗ್ನಿ ಇತ್ಯಾದಿಗಳಲ್ಲಿ ಇದ್ದಾನೆಂದು ಹೇಳಿ **ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ।** ಇತ್ಯಾದಿ ವಾಕ್ಯದಿಂದ ಸರ್ವಭೂತಗಳಲ್ಲಿರತಕ್ಕವನು ಒಬ್ಬನು ಹೇಳಲ್ಪಡುತ್ತಾನೆ. ಆ ಸರ್ವತ್ರ ಶ್ರುತನಾದವನು ಆದಿತ್ಯನೋ, ಸರ್ವಜೀವರೋ, ವಿಷ್ಣುವೋ ಎಂದು ಸಂದೇಹವು. ಆದಿತ್ಯನೆಂದು ಪೂರ್ವಪಕ್ಷವು ಹೇಗೆಂದರೆ— ಪ್ರಥಮತಃ ಶ್ರುತವಾದ ಆದಿತ್ಯಪದದಿಂದ ಹೇಳಲ್ಪಟ್ಟವನಿಗೇನೇ ಏತಂ ಎಂದು ಪರಾಮರ್ಶಮಾಡಿ ಅವನಿಗೇನೇ **ತಸ್ಯೈತಸ್ಯಾಸಾವಾದಿತ್ಯೋ ರಸಃ** ಎನ್ನುವ ವಾಕ್ಯದಿಂದ ಪ್ರಸ್ತುತನಾದ ಸಂವತ್ಸರನ ದೆಸೆಯಿಂದ ಸಾರತ್ವ (ಶ್ರೇಷ್ಠತ್ವ) ರೂಪಲಿಂಗವನ್ನು ಹೇಳಿದುದರಿಂದಲೂ ಸೂರ್ಯಪರವೆಂದು ಪ್ರಸಿದ್ಧವಾದ **ಚಿತ್ರಂ ದೇವಾನಾಂ** ಎನ್ನುವ ಸೌರಮಂತ್ರವನ್ನುದಾಹರಿಸಿರುವುದರಿಂದಲೂ ಸಜಾತೀಯಗಳಾದ ಚಂದ್ರ ನಕ್ಷತ್ರಾದಿಗಳಲ್ಲಿದ್ದಾನೆಂದು ಹೇಳಿ ಆದಿತ್ಯನಲ್ಲಿದ್ದಾನೆಂದು ಹೇಳದೆ ಇದ್ದುದರಿಂದಲೂ ಇಲ್ಲಿ ಹೇಳಿದ ಸರ್ವಗತನು ಆದಿತ್ಯನೇ, ಅಥವಾ **ಚಕ್ಷುರ್ಮಯಃ ಶ್ರೋತ್ರಮಯಃ** ಇತ್ಯಾದಿ ಶ್ರುತವಾಕ್ಯದಿಂದ ತೋರುವ ಚಕ್ಷುರಾದಿ ಸಂಬಂಧರೂಪವಾದ ಜೀವಲಿಂಗದಿಂದಲೂ **ಭೂತೇಷ್ವೇತಂ** ಎಂದು ಭೂತಪದವನ್ನು ತೆಗೆದುಕೊಂಡದರಿಂದ ಭೂತಗಳು ಹೊರತು ಬೇರೆ ಕಡೆಗಳಲ್ಲಿ ಇಲ್ಲವೆಂದು ತೋರುವುದರಿಂದ ಲಬ್ಧವಾದ ಅಲ್ಪಸ್ಥಾನಸ್ಥಿತಿರೂಪ ಲಿಂಗದಿಂದಲೂ ಕೂಡ ಸರ್ವಜೀವರಾಗಲೀ ಸರ್ವಗತರು. ಹಿಂದೆ ಹೇಳಿದ ಶ್ರುತಿಲಿಂಗಗಳು ವಿಷ್ಣುವಿನಲ್ಲಿ ಕೂಡದೆ ಇರುವುದರಿಂದ ವಿಷ್ಣುವು ಸರ್ವಗತನಾಗಲಾರನು ಎಂದು ಪೂರ್ವಪಕ್ಷವು ಬಂದರೆ, ವಿಷ್ಣುವೇ ಸರ್ವಗತನು. ಆದಿತ್ಯನಾಗಲೀ ಸರ್ವಜೀವರಾಗಲೀ ಸರ್ವಗತರಲ್ಲ. ಏಕೆಂದರೆ ಏತಮೇವ ಬ್ರಹ್ಮೇತ್ಯಾಚಕ್ಷತೇ ಎಂದು ಇಲ್ಲಿ ಬ್ರಹ್ಮಶಬ್ದ ಏದೆ. ಅದು ತದೇವ **ಬ್ರಹ್ಮ ಪರಮಂ ಕವೀನಾಂ** ಇತ್ಯಾದಿ ಶ್ರುತಿಗಳಿಂದ ವಿಷ್ಣುವಿನಲ್ಲಿಯೇ ಪ್ರಸಿದ್ಧವು. ಜೀವಾದಿಗಳು ಬ್ರಹ್ಮಪದದಿಂದ ಮುಖ್ಯವಾಚ್ಯರಲ್ಲ. ವಿಷ್ಣುವೇ ಬ್ರಹ್ಮಪದ ಮುಖ್ಯವಾಚ್ಯನು. ಆದಕಾರಣ ಏತಮೇವ ಎನ್ನುವ ಅವಧಾರಣಬಲದಿಂದ ಬ್ರಹ್ಮಪದದಿಂದ ಮುಖ್ಯಾರ್ಥವನ್ನೇ ಇಟ್ಟುಕೊಳ್ಳಬೇಕು. **ಸ ಯೋಽಽತೋಽಶ್ರುತಃ** ಇದು ಮೊದಲಾದ ಉತ್ತರವಾಕ್ಯದಲ್ಲಿ ಹೇಳಲ್ಪಟ್ಟ ಅಶ್ರುತತ್ವಾದಿ ಲಿಂಗಗಳೂ ವಿಷ್ಣುವಿನಲ್ಲಿಯೇ ಇರತಕ್ಕವುಗಳು ಮತ್ತು **ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ** ಎನ್ನುವ (ಗೀತಾ.ಅ.೧೦.ಶ್ಲೋ.೨೦) ಸ್ಮೃತಿಸಮಾಖ್ಯೆಯೂ ಇದೆ. (೨) **ಸಂವತ್ಸರೋ ವೈ ಪ್ರಜಾಪತಿಃ, ತತ್ರ ಸಂವತ್ಸರಂ** ನಾಮ ಬ್ರಹ್ಮಾಣಮಸೃಜತ್ಪ್ರಭುಃ ಇದು ಮೊದಲಾದ ಶ್ರುತಿಸ್ಮೃತಿಗಳಿಂದ ಸಂವತ್ಸರಪದ ವಾಚ್ಯನಾದ ಚತುರ್ಮುಖನಿಂದುತ್ತಮತ್ವವೂ ವಿಷ್ಣುವಿನಲ್ಲಿಯೇ ಕೂಡುವುದು. ಸರ್ವಗತತ್ವವಿದ್ದ

ಪ್ರಯುಕ್ತವೇ ಏಕತ್ರಾಪ್ಯನವಸ್ಥಾನೇ ಸರ್ವತ್ರಾವಸ್ಥಿತಿಃ ಕಥಂ। ಏಕತ್ರೈವ ತು ಸಂಸ್ಥಾನಂ ನೈವಾತ್ರ ಪ್ರತಿಪಾದ್ಯತೇ॥ ಎನ್ನುವ ನ್ಯಾಯದಿಂದ ಸರ್ವಗತನಲ್ಲಿಯೂ ಆಕಾಶದಂತೆಯೇ ಅಲ್ಪಸ್ಥಾನಸ್ಥಿತಿಯೂ ಕೂಡುವುದು. (೩.) ಅಂತರಧಿಕರಣ ನ್ಯಾಯದಿಂದ ಆದಿತ್ಯಶಬ್ದವು ವಿಷ್ಣುವಿನಲ್ಲಿಯೇ ಸಾವಕಾಶವಾಗಿದೆ. (೪) ಚಕ್ಷುರಾದಿ ಸ್ವಾಮಿತ್ವಾದಿರೂಪವಾದ ಚಕ್ಷುರ್ಮಯತ್ವಾದಿಗಳೂ ವಿಷ್ಣುವಿ ನಲ್ಲಿಯೇ ಕೂಡುವುದರಿಂದ ಬಾಧಕಗಳು ಯಾವುದೂ ಇರುವುದಿಲ್ಲ. ಅಣುವಾದ ಜೀವನಿಗಾಗಲೀ ಸರ್ವಗತತ್ವಾದಿಗಳು ಕೂಡದೆ ಇರುವುದರಿಂದ ಪರಪಕ್ಷದಲ್ಲಿ ಬಾಧಕಗಳಿವೆ. ಆದಕಾರಣ ಪೃಥಿವ್ಯಾದಿಗಳಲ್ಲಿ ಸರ್ವತ್ರ ಹೇಳಲ್ಪಡತಕ್ಕವನು ಅಂದರೆ ಸರ್ವಗತನಾದವನು ವಿಷ್ಣುವೇ. ಅಧಿಕರಣ ॥ ೧ ॥

**ಸರ್ವಗತತ್ವಾಧಿಕರಣವು ಸಮಾಪ್ತವಾಯಿತು.**

# ೨. ಅತ್ತೃತ್ವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಲೋಕವ್ಯವಹಾರದಿಂದ ಅನ್ಯತ್ರ ಪ್ರಸಿದ್ಧವಾದ ಅದಿತಿಶಬ್ದ ದಿಂದ ಕೂಡಿ ಹೇಳಿದ ಅತ್ತೃತ್ವಲಿಂಗಕ್ಕೆ ಶ್ರೀಹರಿಯಲ್ಲಿ ಸಮನ್ವಯವನ್ನು ಮಾಡುತ್ತಾರೆ. ಶ್ರುತ್ಯಾದಿ ಸಂಗತಿಯನ್ನು ವಿಷಯವಾಕ್ಯವನ್ನುದಾಹರಿಸಿ ವಿಷಯಸಂಶಯಗಳನ್ನು ಸಯುಕ್ತಿಕವಾದ ಪೂರ್ವಪಕ್ಷವನ್ನು ಸೂಚಿಸುತ್ತಾರೆ—

**ಭಾಷ್ಯ ॥ ಜನ್ಮಾದ್ಯಸ್ಯ ಯತ ಇತ್ಯುಕ್ತಂ। ತತ್ರಾತ್ತೃತ್ವಂ ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ** (ಬೃ.ಉ.೩..೨.೫.) **ಇತ್ಯದಿತೇಃ ಪ್ರತೀಯತೇ ॥ ೧ ॥**

**ಭಾಷ್ಯಾರ್ಥ ॥** ಜನ್ಮಾದಿ ಸೂತ್ರದಲ್ಲಿ ವಿಷ್ಣುವಿಗೆ ಜಗಜ್ಜನ್ಮಾದಿ ಕರ್ತೃತ್ವವು ಹೇಳಲ್ಪಟ್ಟಿದೆ. ಹೇಳಿದ ಲಕ್ಷಣಗಳ ಮಧ್ಯದಲ್ಲಿ ಪ್ರವಿಷ್ಟವಾದ ಸಂಹರ್ತೃತ್ವರೂಪವಾದ ಅತ್ತೃತ್ವವು ಸ ಯದ್ಯದೇವಾಸೃಜತ ಎನ್ನುವ ಶ್ರುತಿಯಿಂದ ದೇವಮಾತೆಯಾದ ಅದಿತಿಗೆ ತೋರುತ್ತದೆ. ಪೂರ್ವಪಕ್ಷರೀತ್ಯಾ ಶ್ರುತ್ಯರ್ಥವು— ಸಃ = ದೇವಮಾತೆಯಾದ ಅದಿತಿಯು, ಸಂವತ್ಸರನಾಮಕ ಚತುರ್ಮುಖದ್ವಾರಾ ಯಾವುದು ಯಾವುದನ್ನು ಸೃಷ್ಟಿಸಿದಳೋ, ಅದನ್ನು ತಿನ್ನಲಿಕ್ಕೆ ಮನಸ್ಸನ್ನು ಮಾಡಿದಳು. ತಿಂದಳು. ಯಾವ ಕಾರಣದಿಂದ ಅದಿತಿಯು ಸರ್ವವನ್ನು ತಿನ್ನುತ್ತಾಳೋ ಆ ಕಾರಣದಿಂದ ಅದೇವೇ ದೇವಮಾತೆಯಾದ ಅದಿತಿಗೆ ಅದಿತಿಶಬ್ದವಾಚ್ಯತ್ವದಲ್ಲಿ ನಿಮಿತ್ತವು. ಸಿದ್ಧಾಂತರೀತ್ಯಾ ಶ್ರುತ್ಯರ್ಥವು— ಸಂವತ್ಸರನಾಮಕನಾದ ಚತುರ್ಮುಖನು ಯಾವುದು ಯಾವುದನ್ನು ಸೃಷ್ಟಿಮಾಡಿದನೋ, ಅದೆಲ್ಲವನ್ನೂ ಸಂಹರಿಸಲಿಕ್ಕೆ ಮೃತ್ಯುನಾಮಕನಾದ ಜನಾರ್ದನನು ಮನಸ್ಸನ್ನು ಮಾಡಿದನು. ಮತ್ತು ತಿಂದನು. ಸರ್ವವನ್ನು ಸಂಹರಿಸುವುದರಿಂದಲೇ ಶ್ರೀಹರಿಗೆ * ಅದಿತಿಶಬ್ದವಾಚ್ಯತ್ವವು.

★ ಸ ಸರ್ಗಕಾಲೇ ಚ ಕರೋತಿ ಸರ್ವಂ ಸಂಹಾರಕಾಲೇ ತುತದತ್ತಿ ಭೂಯಃ ॥ ಪ್ರಪ್ಯಾಪಾತಾತಥೈವಾತ್ತಾ ಇತ್ಯಾದಿಗಳಲ್ಲಿ ಅದಿಧಾತುಪ್ರಕೃತಿಕವಾದ ಸಂಹರ್ತೃ ತದ್ರೂಪವಾದ ಅತ್ತೃತ್ವವು ಕಂಡದೆ.)

**ವಿಶೇಷಾಂಶ ||** (೧) ಬೃಹದಾರಣ್ಯಕ ವಾಕ್ಯದಲ್ಲಿ ತೋರತಕ್ಕ ಅತ್ತೃತ್ವವು ದೇವಮಾತೆಯಾದ ಅದಿತಿಗೇನೇ ಆಗುವುದು ಅದಿತಿಶ್ರುತಿಯಿಂದಲೂ, ಅದಿತ್ವಲಿಂಗದಿಂದಲೂ. (೨) ಸಿದ್ಧಾಂತರೀತ್ಯಾ— ವಿಷ್ಣುವಿಗೆ ಸರ್ವಸಂಹರ್ತೃತ್ವವು ಹೇಗೆ ಅಂದರೆ ಅದಿತಿಶಬ್ದದಿಂದಲೇ. **ಅದಿತಿರ್ಹಿ ಇದಂ ಸರ್ವಂ ಯದಿದಂ ಕಿಂ ಚ** (ತೈ.೨.೬.) **ಅದಿತಿರ್ದೇವತಾಮಯೀ** (ಕಠ.೪.೭.) ಎನ್ನುವ ಶ್ರುತ್ಯಂತರಗಳಲ್ಲಿ ಬ್ರಹ್ಮನಲ್ಲಿ ಅದಿತಿಶಬ್ದ ಪ್ರಯೋಗವಿದೆ. ಅದರಿಂದಲೂ ವಿಷ್ಣುವಿಗೆ ಸರ್ವಾತ್ತೃತ್ವವು ಹೇಗೆ ಎಂದರೆ— ಸರ್ವವನ್ನು ಸಂಹರಿಸುತ್ತಾನೆ ಎನ್ನುವುದು ಯಾವುದೋ ಅದೇವೇ ಸ್ತ್ರೀಲಿಂಗ ಅದಿತಿಶಬ್ದವಾಚ್ಯನಿಗೆ ಅದಿತಿಶಬ್ದವಾಚ್ಯತ್ವವು. ಇಲ್ಲವಾದರೆ ನಿರ್ನಿಮಿತ್ತವಾಗಬೇಕಾಗುವುದು. (೩) ಇದರಿಂದ ವಿಷ್ಣುವಿಗೆ ಸರ್ವಸಂಹರ್ತೃತ್ವದಲ್ಲಿ ಶ್ರುತ್ಯಂತರದಲ್ಲಿದ್ದ ಅದಿತಿಶಬ್ದವು ಹೇತುವು ಎಂದುಕತವಾಯಿತು. (೪) ಋಗ್ಭಾಷ್ಯದಲ್ಲಿ **ಅತ್ತಿ ವಿಶ್ವಂ ತೇನ ಚೈವಾದಿತಿರಿತಿ ವಿಷ್ಣುः** ಎಂದೂ **ಗುಣತಃ ಕಾಲತಶ್ಚಾನಂತ್ಯರೂಪಮ ಖಂಡಿತತ್ವಂ ಚಾದಿತಿಶಬ್ದಪ್ರವೃತ್ತಿನಿಮಿತ್ತಂ** ಎಂದು ಹೇಳಿದೆ.

**ಪೀಠಿಕೆ ||** ಅತ್ತೃತ್ವವು ಅದಿತಿಗೆ ಎಂದಾದರೆ ಅದಿತಿಯಲ್ಲಿ ಸಃ ಎನ್ನುವ ಪುಲ್ಲಿಂಗ ಪ್ರಯೋಗವು ಹೇಗೆ ಕೂಡುವುದು? ಆದಕಾರಣ ಅದರಿಂದ ಶ್ರುತ್ಯಾದಿಬಾಧವು. ಎಂದರೆ—

**ಭಾಷ್ಯ || ಸ ಯದ್ಯದೇವಾಸೃಜತೇತಿ ಪುಲ್ಲಿಂಗಂ ಚ ಕೂಟಸ್ಥೋಽಕ್ಷರ ಉಚ್ಯತೇ (ಗೀ.ಅ.೧೫.ಶ್ಲೋ.೧೬) ಇತಿ(ಇತ್ಯಾದಿ)ವತ್ (ಇತಿ) || ೨ ||**

**ಭಾಷ್ಯಾರ್ಥ ||** ಸ ಯದ್ಯದೇವಾಸೃಜತ ಎನ್ನುವ ವಾಕ್ಯದಲ್ಲಿ ಶ್ರುತವಾದ ಪುಲ್ಲಿಂಗವಾದ ಸಃ ಎನ್ನುವ ತತ್ ಶಬ್ದವಾದರೂ ಕೂಟಸ್ಥಃ = ಆಕಾಶದಂತೆ ನಿರ್ವಿಕಾರವಾಗಿ ಇರತಕ್ಕ ಚಿತ್ಪ್ರಕೃತಿಯು, ಅಕ್ಷರಃ= ದೇಹತೋಽಪಿ ನಾಶರಹಿತಳಾದ ಪ್ರಯುಕ್ತ ಅಕ್ಷರಳೆಂದು ಹೇಳಲ್ಪಡುತ್ತಾಳೆ. ಇತ್ಯಾದಿ ವಾಕ್ಯದಲ್ಲಿದ್ದ ಪುಲ್ಲಿಂಗ ಪ್ರಯೋಗದಂತೆ ಕೂಡುತ್ತದೆ.

**ವಿಶೇಷಾಂಶ ||** ಆದಿಪದದಿಂದ **ಸೋಽಹಂ ವಾಯುಂ ದಿಶಾಂ ವತ್ಸಂ ವೇದ** ಆ ಈ ನಾನು ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿರತಕ್ಕ ಭಗವದ್ವ್ಯಾಹುಗಳಿಂದ ಹುಟ್ಟಿದ ಮುಖ್ಯಪ್ರಾಣನನ್ನು ತಿಳಿಯುತ್ತೇನೆ. ಎಂದು ಛಾಂದೋಗ್ಯದಲ್ಲಿ ಲಕ್ಷ್ಮೀವಾಕ್ಯವು. (ಇಲ್ಲಿಯೂ ಸ್ತ್ರೀಯಲ್ಲಿ 'ಸಃ' ಎನ್ನುವ ಪುಲ್ಲಿಂಗಪ್ರಯೋಗವಿದೆ.)

**ಪೀಠಿಕೆ ||** ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಹೇಳಿ ಅವತಾರಿಕೆ ಕೊಡುತ್ತಾರೆ—

**ಭಾಷ್ಯ || ಅತೋಽಚ್ಯತೇ- || ೩ ||**

**ಸೂತ್ರ || ಓಂ ಅತ್ತಾ ಚರಾಚರಗ್ರಹಣಾತ್ ಓಂ || ೯ ||**

**ಸೂತ್ರಾರ್ಥ ||** ಹಿಂದೆ ಹೇಳಿದ ಪೂರ್ವಪಕ್ಷದಲ್ಲಿ (ಸೂತ್ರಕಾರರಿಂದ ಸಮಾಧಾನವು) ಹೇಳಲ್ಪಡುತ್ತದೆ. ಈ ವಾಕ್ಯದಲ್ಲಿ ಯಾವನು ಸಂಹಾರಕನು ಹೇಳಲ್ಪಡುತ್ತಾನೋ ಆತನು ವಿಷ್ಣುವೇ. (ಏಕೆಂದರೆ) ಸರ್ವಂ ವಾ ಅತ್ತಿ ಎಂದು ಚೇತನಾಚೇತನರೂಪವಾದ ಜಗತ್ತಿಗೆ ಸಂಹಾರ್ಯತ್ವೇನ ಗ್ರಹಣವಿದ್ದಪ್ರಯುಕ್ತ (ಅಂದರೆ ಚರಾಚರ ಸರ್ವಾತ್ತೃತ್ವ ಲಿಂಗವಿದ್ದಪ್ರಯುಕ್ತ)

ಪೀಠಿಕೆ ॥ ಚೇತನಾಚೇತನಾತ್ಮಕ ಜಗತ್ತನ್ನೇ ಸಂಹಾರ್ಯವಾಗಿ ಇಟ್ಟುಕೊಂಡರೂ ಅದಿತಿಗೆ ಅತ್ತೃತ್ವವು ಏಕೆ ಇಲ್ಲ. ಲಿಂಗವು ಸಾವಕಾಶವಾಗಬಹುದು ಎನ್ನುವ ಶಂಕೆಯನ್ನು ನಿರಾಕರಿಸುತ್ತಾರೆ—

**ಭಾಷ್ಯ ॥ ನ ಹಿ ಚರಾಚರಸ್ಯ ಸರ್ವಸ್ಯಾತ್ತೃತ್ವಮದಿತೇಃ ॥ ೪ ॥**

ಭಾಷ್ಯಾರ್ಥ ॥ ಚೇತನಾಚೇತನಾತ್ಮಕವಾದ ನಿಖಿಲ ಜಗತ್ತಿನ ಅತ್ತೃತ್ವವು ದೇವಮಾತೆಯಾದ ಅದಿತಿಗೆ ಇಲ್ಲ.

ಪೀಠಿಕೆ ॥ ಹಾಗಾದರೆ ಚರಾಚರಾತ್ತೃತ್ವವು ವಿಷ್ಣುವಿಗೂ ಹೇಗೆ ಸಿದ್ಧವಾಗುತ್ತದೆ ಎಂದರೆ—

**ಭಾಷ್ಯ ॥ ಸ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈಕ ಏವ ತು। ವಾಸುದೇವಃ ಪ(ವೋ ವ)ರಃ ಪುಂಸಾಮಿತರೇಽಲ್ಪಸ್ಯ ವಾ ನವೇತಿ ಸ್ಕಾಂದೇ ॥ ೫ ॥**

ಭಾಷ್ಯಾರ್ಥ ॥ ಪುರುಷರಿಂದುತ್ತಮನಾದ ಶ್ರೀಕೃಷ್ಣನೊಬ್ಬನೇ ನಿಖಿಲ ಜಗತ್ತಿಗೂ ಸ್ವತಂತ್ರನಾಗಿ ಸೃಷ್ಟಿಕರ್ತನು. ಹಾಗೆಯೇ ರಕ್ಷಕನು. ಸಂಹಾರಕನು. ಶ್ರೀ ಕೃಷ್ಣನಿಂದ ಇತರರಾದ ಬ್ರಹ್ಮಾದಿದೇವತೆಗಳಾದರೂ ಜಗತ್ತಿನ ಏಕದೇಶಕ್ಕೆ ಅಸ್ವಾತಂತ್ರ್ಯದಿಂದ ಸೃಷ್ಟ್ಯಾದಿಕರ್ತರು ಆಗುವರು. ಸ್ವಾತಂತ್ರ್ಯಾ ಪೇಕ್ಷಯಾ ಸೃ ಷ್ಟ್ಯಾದಿಕರ್ತರು ಆಗುವುದಿಲ್ಲ. ಎಂದು ಸ್ಕಾಂದದಲ್ಲಿ ಹೇಳಿದೆ.

ಪೀಠಿಕೆ ॥ ಸ್ಪಷ್ಟಾರ್ಥಕವಾದುದರಿಂದ ಪ್ರಥಮತಃ ಸ್ಮೃತಿಯನ್ನುದಾಹರಿಸಿ ಇದೇ ಅರ್ಥದಲ್ಲಿ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಏಕಃ ಪುರಸ್ತಾದ್ಯ ಇದಂ ಬಭೂವ ಯತೋ ಬಭೂವ ಭುವನಸ್ಯ ಗೋಪ್ತಾ(ಪಾಃ)। ಯಮಪ್ಯೇತಿ ಭುವನಃ ಸಾಂಪರಾಯೇ ಸ ನೋ ಹರಿರ್ಘೃತಮಿಹಾಯುಷೇಽತ್ತು ದೇವಃ (ಘೃತಸೂಕ್ತ ತೈ.) ಇತಿ ಚ ಶ್ರುತಿಃ ॥ ೬ ॥**

ಭಾಷ್ಯಾರ್ಥ ॥ ಯಾವನೊಬ್ಬನು ಈ ಜಗತ್ತಿನ ಪ್ರಲಯಕಾಲದಲ್ಲಿದ್ದನೋ, ಯಾರ ದೆಸೆಯಿಂದ ಸೃಷ್ಟಿ ಕಾಲದಲ್ಲಿ ಈ ಜಗತ್ತು ಉಂಟಾಯಿತೋ, ಯಾವನೊಬ್ಬನೇ ಜಗತ್ತಿಗೆ ರಕ್ಷಕನು ಆದನೋ, ಯಾರನ್ನೇ ಮುಕ್ತಿಪ್ರಲಯಗಳಲ್ಲಿ ಜಗತ್ತು ಪ್ರವೇಶಿಸುತ್ತದೋ, ಅಂತಹ ಹರಿಯು, ನಮ್ಮ ಆಯುಷ್ಯಕ್ಕೋಸ್ಕರ, ಯಜ್ಞಸ್ಥಾನಕ್ಕೆ ಬಂದು ಆಹುತಿರೂಪವಾಗಿ ಕೊಟ್ಟ ಘೃತವನ್ನು ಸ್ವೀಕರಿಸಲಿ, ಎಂದು ತೈತ್ತಿರೀಯ ಶ್ರುತಿಯು. (ಮಂತ್ರದ್ರಷ್ಟ್ರ ಋಷಿವಾಕ್ಯವಿದು. ಯಾವ ಕಾರಣದಿಂದ ಹೀಗೆ ಇದೆಯೋ ಆದುದರಿಂದಲೂ ವಿಷ್ಣುವಿಗೆ ಚರಾಚರ ಸರ್ವಾತ್ತೃತ್ವವು ಸಿದ್ಧವಾಯಿತು.)

ಪೀಠಿಕೆ ॥ ನಿರವಕಾಶವಾದ ಸರ್ವಾತ್ತೃತ್ವ ಲಿಂಗಮಾತ್ರದಿಂದಲೇ ಅತ್ತೃಶಬ್ದವಾಚ್ಯನು ವಿಷ್ಣುವೇ ಎಂದು ಯಾವಾಗ ಸಿದ್ಧವಾಗುತ್ತದೋ ಆಗ ನಿರವಕಾಶವಾದ ಪ್ರಕರಣವಿಶಿಷ್ಟವಾದ ಲಿಂಗದಿಂದ ಸಿದ್ಧವಾಗುತ್ತದೆಂದು ಏನು ಹೇಳಬೇಕು ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಪಠನಮಾಡಿ ವ್ಯಾಖ್ಯಾನಮಾಡುತ್ತಾರೆ—

**ಸೂತ್ರ ॥ ಓಂ ಪ್ರಕರಣಾಚ್ಚ ಓಂ ॥ ೧೦ ॥**

**ಸೂತ್ರಾರ್ಥ** ॥ ನೈವೇಹ ಕಿಂಚನ ಎನ್ನುವ ನಿರವಕಾಶವಾದ ವಿಷ್ಣುಪ್ರಕರಣ ಬಲದಿಂದಲೂ ಅತ್ರಶಬ್ದವಾಚ್ಯನು ವಿಷ್ಣುವೇ.

**ಪೀಠಿಕೆ** ॥ ಪ್ರಕರಣಕ್ಕೆ ವೈಷ್ಣವತ್ವಸಿದ್ಧಿಯನ್ನು ಆಶಂಕಿಸಿಕೊಂಡು ಹೇಳುತ್ತಾರೆ—

**ಭಾಷ್ಯ** ॥ **ಅಪ್ಸಂವತ್ಸರಸೃಷ್ಟ್ಯಾದಿನಾ ತತ್ಪ್ರಕರಣಾ(ಣತ್ವಾ)ಚ್ಚ** ॥ ೮ ॥

**ಭಾಷ್ಯಾರ್ಥ** ॥ ಅಪ್ (ಜಲ) ಸೃಷ್ಟಿಯು, ಸಂವತ್ಸರನಾಮಕ ಚತುರ್ಮುಖ ಸೃಷ್ಟಿಯು ಇದೇ ಮೊದಲಾದವುಗಳಿಂದ (ಆದಿಪದದಿಂದ ಚತುರ್ಮುಖಭಕ್ಷಣೋದ್ಯೋಗ ಮೊದಲಾದ ಲಿಂಗ) (ಈ ಪ್ರಕರಣಕ್ಕೆ) ವಿಷ್ಣುಪ್ರಕರಣತ್ವವಿದ್ದಪ್ರಯುಕ್ತ ವೂ, ಈ ಪ್ರಕರಣದಲ್ಲಿ ಹೇಳಿದ ಅತ್ರಶಬ್ದವಾಚ್ಯನು ವಿಷ್ಣುವೇ ಹೇಳಲ್ಪಡುತ್ತಾನೆ.

**ವಿಶೇಷಾಂಶ** ॥ (೧) ಪ್ರಕರಣವೆಂದರೆ— ಒಂದು ಪ್ರಮೇಯವನ್ನು ಪ್ರತಿಪಾದಿಸತಕ್ಕ ಅನೇಕ ವಾಕ್ಯಗಳು. (೨) ಬೃಹದಾರಣ್ಯಕದಲ್ಲಿ **ನೈವೇಹ ಕಿಂಚನಾಗ್ರ ಆಸೀತ್** ಪ್ರಲಯಕಾಲದಲ್ಲಿ ಅಸ್ವತಂತ್ರವರ್ಗದಲ್ಲಿ ಜೀವಜಡರೂಪವಾದ ಯಾವುದೊಂದು ವಸ್ತುವೂ ಇರಲಿಲ್ಲ (ಹಾಗಾದರೆ **ಸರ್ವಸಂಹಾರಕಂ ವಿಷ್ಣುಂ ದೇವೀಂ ಜೀವಾಂಸ್ತ ಥೈವ ಚ। ಕಾಲಂ ತ್ರಿಗುಣಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಂ। ಸಂಸ್ಕಾ ರಂ ಚೈವ ವೇದಾಂಶ್ಚ ನರ್ತೇ ಕಿಂಚಿಲ್ಲಯೇ ತ್ವಭೂತ್॥** ಎಂದು ಬೃಹದ್ಭಾಷ್ಯ ದಲ್ಲಿದ್ದ ವಚನದಿಂದ ನಿತ್ಯರಾದ ಜೀವರೂ ಇದ್ದ ಪ್ರಯುಕ್ತ ಈ ಉಕ್ತಿಯು ಹೇಗೆ ಕೂಡುತ್ತದೆ ಎಂದರೆ) ಯಾವುದೂ ಇರಲಿಲ್ಲ ಎನ್ನುವ ಉಕ್ತಿಯು ಅನಾವೃತವಾಗಿ ಇರಲಿಲ್ಲ ಎನ್ನುವ ಅಭಿಪ್ರಾಯದಿಂದ ಹೇಳಿದ್ದು **ಮೃತ್ಯುನೈವೇದಮಾವೃತಮಾಸೀತ್ ಅಶನಾಯಯಾ**=ಈ ಜೀವಾದಿಗಳು ಮೃತ್ಯುನಾಮಕ ಜನಾರ್ದನನಿಂದ ಆಚ್ಛಾದಿತವಾದುವು. **ಅಶನಾಯಾ ಹಿ ಮೃತ್ಯುಃ** = ಜನಾರ್ದನನು ಜಗತ್ಸೇರಕನು, **ತನ್ಮನೋಽಕುರುತ ಆತ್ಮನ್ವೀ ಸ್ಯಾಮಿತಿ**=ಏಕಾಕಿಯಾದುದರಿಂದ ಜನಾರ್ದನನು ಜಗದ್ರೂಪಶರೀರವುಳ್ಳವನು ಆಗುವೆನು ಎಂದು ಇಚ್ಛಿಸಿದನು. **ಸೋಽರ್ಚನ್ನಚರತ್ ತಸ್ಯಾರ್ಚತ ಆಪೋಽ ಜಾಯಂತ**=ಆ ಮೃತ್ಯುವು ತನ್ನನ್ನು ಪೂಜಿಸುವವನಾಗಿ ಸಂಚರಿಸಿದನು. ಆತನಿಂದ ಜಲಗಳು ಹುಟ್ಟಿದವು. **ಸಂವತ್ಸರೋಽಭವತ್**= ಆ ಮೇಲೆ ಬ್ರಹ್ಮನು ಹುಟ್ಟಿದನು ಎಂದು ವಿಷ್ಣುವಿಷಯಕಗಳಾದ ಅನೇಕ ವಾಕ್ಯಗಳು ಶ್ರುತಗಳಾಗಿವೆ.

**ಪೀಠಿಕೆ** ॥ ಅಪ್ ಸಂವತ್ಸರ ಸೃಷ್ಟ್ಯಾದಿಗಳನ್ನು ಇಲ್ಲಿ ಹೇಳಿದರೂ ಇದು ವಿಷ್ಣುಪ್ರಕರಣವೆಂದು ಹೇಗೆ ನಿಶ್ಚಯವಾಗುತ್ತದೆ ಎಂದರೆ ಅಪ್‌ಸಂವತ್ಸರಸೃಷ್ಟ್ಯಾದಿಗಳು ವಿಷ್ಣುಲಿಂಗವಾಗಿವೆ ಎನ್ನುವ ಅಭಿಪ್ರಾಯದಿಂದ. ಅದು ವಿಷ್ಣುಲಿಂಗವಾಗಿದೆ ಎನ್ನುವ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ** ॥ **ನೇಹಾಸೀತ್ ಕಿಂಚನಾಪ್ಯಾದೌ ಮೃತ್ಯುರಾಸೀದ್ಧರಿಸ್ತದಾ। ಸೋಽಽತ್ಮನೋ ಮನಸಾಽಸ್ರಾಕ್ಷೀದಪ ಏವ ಜನಾರ್ದನಃ ॥ ಶಯಾನಸ್ತಾಸು ಭಗವಾನ್ನಿ ರ್ಮಮೇಽಂಡಂ ಮಹತ್ತರಂ। ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜತ್ಪ್ರಭುಃ। ತಮತ್ತುಂ ವ್ಯಾದದಾದಾಸ್ಯಂ ತದಾಽಸೌ ವಿರುರಾವ ಹ ॥ ಅಥ ತಂ ಕೃ(ತತ್ಕೃ)ಪಯಾ ವಿಷ್ಣುಃ ಸೃಷ್ಟಿಕರ್ಮಣ್ಯಯೋಜಯತ್ । ಸೋಽಸೃಜದ್ಭುವನಂ**

**ವಿಶ್ವಮ್(ಸರ್ವಮಾ)ದ್ಯಾರ್ಥಂ ಹರಯೇ ವಿಭುಃ ॥ ಇತಿ(ಚ)ಬ್ರಹ್ಮವೈವರ್ತೇ ॥ ೯ ॥ ಸೂ.೧೦ ॥ ಅಧಿ. ೨ ॥**

**ಭಾಷ್ಯಾರ್ಥ ॥** ಪ್ರಲಯಕಾಲದಲ್ಲಿ ಈ ಅಸ್ವತಂತ್ರವರ್ಗದಲ್ಲಿ ಜೀವನಾಗಲೀ ಜಡವಾಗಲೀ ಇರಲಿಲ್ಲ (ಹಾಗಾದರೆ ಇದು ಅಯುಕ್ತವು) ನಿತ್ಯಭೂತರಾದ ಜೀವಾದಿಗಳು ಇದ್ದಾರೆ ಎಂದರೆ) ಪ್ರಲಯಕಾಲದಲ್ಲಿ ಮೃತ್ಯುನಾಮಕನಾದ ಹರಿಯು ಜೀವಾದ್ಯಾವರಕನಾಗಿ ಇದ್ದನು. (ಆವೃತವಾಗಿ ಇದ್ದಪ್ರಯುಕ್ತವೇ ನಾಸೀತ್ ಎಂದು ಹೇಳಿದ್ದು. ಆದಕಾರಣ ಅನುಪಪತ್ತಿಯು ಇಲ್ಲ) ಆ ಪ್ರಭುವಾದ ವಿಷ್ಣುವು ತನ್ನ ಇಚ್ಛೆಯಿಂದಲೇ ಜಲಗಳನ್ನು ಸೃಷ್ಟಿಸಿದನು. ಆ ಜಲಗಳಲ್ಲಿ ಮಲಗೊಂಡವನಾಗಿ ಸ್ಥೂಲವಾದ ಬ್ರಹ್ಮಾಂಡವನ್ನು ನಿರ್ಮಿಸಿದನು. ಆ ಬ್ರಹ್ಮಾಂಡದಲ್ಲಿ ಸಂವತ್ಸರನಾಮಕ ಬ್ರಹ್ಮನನ್ನು ಸೃಷ್ಟಿಸಿದನು. ಆ ಚತುರ್ಮುಖನನ್ನು ಭಕ್ಷಿಸುವುದಕ್ಕಾಗಿ ಮುಖ ವನ್ನು ವಿವರಿಸಿದನು. ಆಗ ಬ್ರಹ್ಮನು ಭಾಣ್ ಎನ್ನುವ ಶಬ್ದವನ್ನು ಮಾಡಿದನು. ಈ ಅರ್ಥವು ಶ್ರುತಿಪ್ರಸಿದ್ಧವಾಗಿದೆ. ಕೂಗಿದ ಮೇಲೆ ಚತುರ್ಮುಖನಲ್ಲಿ ಕೃಪೆಯಿಂದ ಶ್ರೀವಿಷ್ಣುವು (ಆತನನ್ನು ಭಕ್ಷಿಸದೆ) ಸೃಷ್ಟಿಕ್ರಿಯೆಯಲ್ಲಿ ಯೋಜಿಸಿದನು. ಆ ಪ್ರಭುವಾದ ಚತುರ್ಮುಖನು ಪರಮಾತ್ಮನಿಗೆ ಭಕ್ಷಿಸುವುದಕ್ಕಾಗಿ ಜಗತ್ತನ್ನು ಸೃಷ್ಟಿಸಿದನು. ಅಥವಾ ಸೃಷ್ಟವಾದ ಜಗತ್ತನ್ನು ಶ್ರೀಹರಿಗೆ ಅರ್ಪಿಸಿದನು. ಹೀಗೆ ಬ್ರಹ್ಮವೈವರ್ತದಲ್ಲಿ (ಹೇಳಿದ ಪ್ರಯುಕ್ತ ಅಪ್‌ಸಂವತ್ಸರಸೃಷ್ಟ್ಯಾದಿಗಳು ವಿಷ್ಣು ಲಿಂಗಗಳೆಂದು ಸಿದ್ಧಿಸುತ್ತವೆ.)

**ವಿಶೇಷಾಂಶ ॥** (೧) **ಸೋಽಽತ್ಮನಃ** ಎನ್ನುವಲ್ಲಿ **ಸಃ ಆತ್ಮನಃ** ಎಂದು ಪದಚ್ಛೇದವು. **ಮಂತ್ರೇಷ್ವಾಙ್ಯಾದೇರಾತ್ಮನಃ** ಎನ್ನುವುದರಿಂದ ಆ ಎನ್ನುವುದು ಲೋಪವು. (೨) **ಸಮ್ಯಕ್ ವತ್ಸಭೂತಾನ್ ದೇವಾದೀನ್ ರಮಯತಿ** ಎನ್ನುವ ವ್ಯುತ್ಪತ್ತಿಯಿಂದ ಸಂವತ್ಸರಶಬ್ದವು ಚತುರ್ಮುಖನಲ್ಲಿ ಪ್ರಸಿದ್ಧವು ॥ ೧೦ ॥

## ಮಾಯಾವಾದಿರೀತ್ಯಾ

**ವಿಚಾರ ॥** (೧) **ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ। ಮೃತ್ಯುರ್ಯಸ್ಯೋಪಸೇಚನಂ** ಎನ್ನುವ ಕಾಠಕವಾಕ್ಯದಲ್ಲಿ ಓದನ ಉಪಸೇಚನ (ಪಲ್ಯಕಾಯಿ ಮೊದಲಾದುದು ವ್ಯಂಜನಪದಾರ್ಥವು) ಪದಗಳಿಂದ ಸೂಚಿತನಾದವನು ಅತ್ತೃಶಬ್ದಪ್ರತಿಪಾದ್ಯನು ಜೀವನೇ. ಬ್ರಹ್ಮನಲ್ಲ. ಏಕೆಂದರೆ— ಅತ್ತೃತ್ವವು ಭೋಜ್ಯವಾಗಿ ಪ್ರಸಿದ್ಧ ವಾದ ಓದನ (ಅನ್ನ) ಸಂಬಂಧದಿಂದ ಭೋಕ್ತೃತ್ವರೂಪವಾಗಿದೆ. ಬ್ರಹ್ಮನಿಗೆ ಭೋಕ್ತೃತ್ವವಿಲ್ಲ ಎಂದು ಮಾಯಾವಾದಿಗಳು ಪೂರ್ವಪಕ್ಷಮಾಡಿಕೊಂಡು, ಬ್ರಹ್ಮನಿಗೆ ಭೋಕ್ತೃತ್ವವಿಲ್ಲದಿದ್ದರೂ ಅತ್ತೃಶಬ್ದಪ್ರತಿಪಾದ್ಯನು ಬ್ರಹ್ಮನೇ. ಅತ್ತೃತ್ವವೆಂದರೆ ಸಂಹರ್ತೃತ್ವವು. (ಸಂಹಾರಮಾಡುವಿಕೆಯು.) ಅದು ನಿರ್ವಿಕಾರನಾದ ಶುದ್ಧಬ್ರಹ್ಮ ನಲ್ಲಿ ಕೂಡದಿದ್ದರೂ ಮಾಯೋಪಾಧಿಕನಾದ ಬ್ರಹ್ಮನಲ್ಲಿ ಕೂಡುವುದು. ಅಲ್ಲದೆ ಅತ್ತೃಶಬ್ದದಿಂದ ಜೀವನನ್ನು ಇಟ್ಟುಕೊಂಡರೆ ಬ್ರಹ್ಮಕ್ಷತ್ರಾದಿ ಸರ್ವಸಂಹರ್ತೃತ್ವವು ಜೀವನಿಗೆ ಕೂಡದೆ ಇರುವುದರಿಂದ ಬ್ರಹ್ಮಕ್ಷತ್ರಾದಿ ಪದಗಳಿಗೆ ಮುಖ್ಯಾರ್ಥತ್ಯಾಗವು ಬರುವುದು. ಬ್ರಹ್ಮನನ್ನು ಇಟ್ಟುಕೊಂಡರೆ ಮುಖ್ಯಾರ್ಥತ್ಯಾಗವಿಲ್ಲ. ಯಾರೊಬ್ಬ ಜೀವನೂ ಎಲ್ಲಾ ಬ್ರಾಹ್ಮಣ ಕ್ಷತ್ರಿಯರಿಗೂ ಮೃತ್ಯುವಿಗೂ ಭೋಕ್ತನು ಆಗುವುದಿಲ್ಲ ಎಂದು

ಸಿದ್ಧಾಂತಮಾಡಿರುವರು. ಇದು ಅಯುಕ್ತವು. **ಭೋಕ್ತೃತಾಽಪಿ ವಿಶಿಷ್ಟೇಽಸ್ತು ಯಥಾ ಸಂಹರ್ತೃತಾ ತವ ಅಭೋಕ್ತೃತ್ವಂ ಶುದ್ಧೇ ಕೌಟಸ್ಥ್ಯಮಸ್ತುಖಂ।** ಅಂದರೆ **ಅನಶ್ನನ್ನನ್ಯ:** ಎನ್ನುವ ಅನಶನಶ್ರುತಿಗೆ ನಿರ್ವಿಕಾರಶ್ರುತಿಯಂತೆ ಶುದ್ಧಬ್ರಹ್ಮವಿಷಯಕತ್ವವು ಕೂಡುವುದರಿಂದ ಮಾಯೋಪಾಧಿಕನಾದ ಬ್ರಹ್ಮನಲ್ಲಿ ಸಂಹರ್ತೃತ್ವವು ಇದೆ ಎಂದು ಹೇಳಿದಂತೆಯೇ ಭೋಕ್ತೃತ್ವವೂ ಬರಬಹುದು. ಹೀಗೆ ಹೇಳಿದರೆ ಬ್ರಹ್ಮಕ್ಷತ್ರಾದಿ ಭೋಕ್ತೃತ್ವವು ಬ್ರಹ್ಮನಲ್ಲಿ ಸಂಭವಿಸುವುದರಿಂದ ಬ್ರಹ್ಮ ಕ್ಷತ್ರಾದಿಪದಗಳಿಗೆ ಮುಖ್ಯಾರ್ಥವೇ ಲಬ್ಧವಾಗುವುದು. (೨) ಮತ್ತು ಸರ್ವಂ ವಾ ಅತ್ತಿ ಎಂದು ನಾವು ಉದಾಹರಿಸಿರುವ ವಿಷಯವಾಕ್ಯದಲ್ಲಿ ಅತ್ತೃತ್ವವು ಸಾಕ್ಷಾತ್ ಶ್ರುತವಾಗಿದೆ. ಅದ್ವೈತಿಗಳು ಉದಾಹರಿಸಿರುವ ವಿಷಯವಾಕ್ಯದಲ್ಲಿ ಓದನ ಉಪಸೇಚನಶಬ್ದಗಳಿಂದ ಅತ್ತಾ ಎನ್ನುವುದು ಉಪಲಕ್ಷಣೀಯವೆಂದು ಹೇಳಿದುದರಿಂದ ಅತ್ತೃತ್ವವು ಸಾಕ್ಷಾತ್ ಶ್ರುತವಾದುದಲ್ಲ. ಮತ್ತು ಬ್ರಹ್ಮಕ್ಷತ್ರಾದಿಪದಗಳಿಂದ ಲಕ್ಷಣಯಾ ಚರಾಚರಗ್ರಹಣವೆಂದು ಹೇಳಿದುದರಿಂದ ಹೇತೂಕೃತವಾದ ಚರಾ ಚರಗ್ರಹಣವೂ ಕೂಡ ಸಾಕ್ಷಾತ್ ಶ್ರುತವಾಗಲಿಲ್ಲ. ಆದಕಾರಣ ನಮ್ಮ ಉದಾಹರಣವೇ ಸೂತ್ರಾನುಗುಣವಾದುದರಿಂದ ಯುಕ್ತವು. (೩) ಮತ್ತು ಪ್ರಕರಣಾತ್ ಎನ್ನುವ ೨ನೇ ಸೂತ್ರಕ್ಕೆ ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ಎಂದು ಪರಮಾತ್ಮನೇ ಪ್ರಕೃತನಾದುದರಿಂದ ಆತನೇ ಅತ್ತನು ಎಂದು ಸೂತ್ರಾರ್ಥವು ಎಂದು ಸಿದ್ಧಾಂತಮಾಡಿರುವರು. ಅದೂ ಅಯುಕ್ತವು. **ನ ಜಾಯತೇ** ಎನ್ನುವುದರಿಂದ ಮೇಲಿನ ವಾಕ್ಯದಲ್ಲಿ ನ ಹನ್ಯತೇ **ಹನ್ಯಮಾನೇಽಪಿ ದೇಹೇ** ಎಂದು ದೇಹಸಂಬಂಧವೂ **ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಂ। ಉಭೌ ತೌ ನ ವಿಜಾನೀತಃ** ಎಂದು ಹಂತೃತ್ವಾದಿ ಭ್ರಾಂತಿಯೂ ಕೂಡ ಜೀವಲಿಂಗವುತೋರುವುದರಿಂದ ನ ಜಾಯತೇ ಎನ್ನುವುದು ಜೀವವಿಷಯಕವಾಗಿದೆ. (೪) ಈ ಅಧಿಕರಣದಲ್ಲಿ ಯೂ ಕೂಡ ಅತ್ತನು ಜೀವನಲ್ಲವೆಂದು ನಿಷೇಧಿಸಿ ಬ್ರಹ್ಮನು ಎಂದು ಹೇಳಿದುದರಿಂದ ಅದು ಜೀವಬ್ರಹ್ಮೈಕ್ಯಕ್ಕೆ ಪ್ರತಿಕೂಲವೇ ಆಗಿದೆ. ಅಂತೂ ಅವರ ಮತವು ಸರ್ವಥಾ ಯುಕ್ತವಲ್ಲ.

## ಅಧಿಕರಣ ಸಾರಾಂಶ

ಬೃಹದಾರಣ್ಯಕದಲ್ಲಿ ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ **ಅತ್ತೀತಿ ತದದಿತೇರದಿತಿತ್ವಂ** ಎಂದು ಅತ್ತೃತ್ವವು ಶ್ರುತವಾಗಿದೆ. ಅಂತಹ ಅತ್ತೃತ್ವವು ದೇವಮಾತೆಯಾದ ಅದಿತಿಗೋ ವಿಷ್ಣುವಿಗೋ ಎಂದು ಸಂದೇಹವು. **ತದದಿತೇರದಿತಿತ್ವಂ** ಎನ್ನುವ ಅದಿತಿಶ್ರುತಿಯಿಂದಲೂ ಅದಿತಿತ್ವಲಿಂಗದಿಂದಲೂ ಅದಿತಿಯೇ ಅತ್ತೃಶಬ್ದವಾಚ್ಯಳು. ವಿಷ್ಣುವಲ್ಲ ಎಂದು ಪೂರ್ವಪಕ್ಷವು ಬಂದರೆ— **ಸರ್ವಂ ವಾ ಅತ್ತಿ** ಎಂದು ಹೇಳಿದ ಸರ್ವಾತೃತ್ವರೂಪ ಸಂಹರ್ತೃತ್ವವು, **ಯಮಷ್ಯೇತಿ ಭುವನಂ ಸಾಂ ಪರಾಯೇ, ಸ್ವಷ್ಟಾಪಾತಾತಥೈವಾತ್ತಾ, ಅದ್ಯತೇಽತ್ತಿ ಚ ಭೂತಾನಿ, ಸ ಸರ್ಗ ಕಾಲೇ ಚ ಕರೋತಿ ಸರ್ವಂ ಸಂಹಾರಕಾಲೇ ತು ತದತ್ತಿ ಭೂಯಃ॥** ಇತ್ಯಾದಿ ಶ್ರುತಿ ಸ್ಮೃತಿಗಳಿಂದ ವಿಷ್ಣುವಿನಲ್ಲಿ ಮಾತ್ರ ಇರತಕ್ಕುದು. ಅದಿತಿತ್ವಲಿಂಗವೂ ಅದಿತಿಶ್ರುತಿಯೂ ಕೂಡ ವಿಷ್ಣುವಿನಲ್ಲಿ **ಅದಿತಿರ್ದೇವತಾಮಯೀ** ಇತ್ಯಾದಿ ಶ್ರುತಿಗಳಿಂದ ಸಾವಕಾಶವಾಗಿದೆ. **ನೈವೇಹ ಕಿಂಚನಾಗ್ರ ಆಸೀತ್ ಮೃತ್ಯುನೈವೇದಮಾ ವೃತಮಾಸೀತ್** ಎಂದು ನಿರವಕಾಶವಾದ ಬ್ರಹ್ಮ ಪ್ರಕರಣದಿಂದಲೂ ಕೂಡ ಅತ್ತೃಶಬ್ದವಾಚ್ಯನು ವಿಷ್ಣುವೇ. **ತಥಾಚ ಸರ್ವಾತ್ತೃತ್ವಾದಿಕಂ ನೈವ ವಿಷ್ಣೋರನ್ಯಸ್ಯ ಯುಜ್ಯತೇ । ವಿಷ್ಣಾವದಿತಿಶಬ್ದಸ್ತು ಶ್ರುತ: ಶ್ರುತ್ಯಂತರೇ**

ಸ್ಫುಟಂ ॥ ಅಂತೂ ಭಾಷ್ಯದಲ್ಲಿ ಉಕ್ತವಾದ ಶ್ರುತ್ಯಾದಿಗಳಿಂದ ಸರ್ವಾತ್ತೃತ್ವವು ಅನ್ಯತ್ರ ನಿರವಕಾಶ ವಾಗಿರುವುದರಿಂದ ವಿಷ್ಣುವೇ ಸರ್ವಾತ್ತನು. ॥ ೨ ॥

ಅತ್ತೃತ್ವಾಧಿಕರಣವು ಸಮಾಪ್ತವಾಯಿತು.

## ೩. ಗುಹಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಲೋಕವ್ಯವಹಾರದಿಂದ ಅನ್ಯತ್ರ ಪ್ರಸಿದ್ಧವಾದ ಕರ್ಮಫಲ ಭೋಕ್ತೃತ್ವರೂಪವಾದ ಕ್ರಿಯಾಲಿಂಗಕ್ಕೆ ವಿಷ್ಣುವಿನಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಪೂರ್ವಾಧಿಕರಣ ಶ್ರುತಿಸಂಗತಿಯನ್ನು ವಿಷಯವಾಕ್ಯವನ್ನುದಾಹರಿಸುತ್ತಾ ವಿಷಯವನ್ನು ಸೂಚಿಸುತ್ತಾರೆ-

**ಭಾಷ್ಯ ॥ ಸರ್ವಾತ್ತೈಕಃ ಪರ ಉಕ್ತಃ । ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ। ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ (ಕಠ.೧.೩.೧.) ॥ ಇತಿ ಪಿಬಂತೌ ಪ್ರತೀಯೇತೇ। ತೌ ಕಾವಿತಿ ॥ ಉಚ್ಯ(ಚ್ಯೇ)ತೆ ॥ ೧ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಪರಮಾತ್ಮನು ಏಕತ್ವಸಂಖ್ಯಾಯುಕ್ತನೂ ಸರ್ವ ಸಂಹಾರಕನೂ ಆಗಿರುತ್ತಾನೋ (ಆದುದರಿಂದ ಪ್ರಕೃತಿ ಪ್ರತ್ಯಯಾರ್ಥಗಳು ಅಲ್ಲಿ ಕೂಡುವುದರಿಂದ ಸರ್ವಾತ್ತಾ ಇದು ಮೊದಲಾದ ಕ್ರಿಯಾಲಿಂಗವನ್ನು ಬೋಧಿಸತಕ್ಕ ಶಬ್ದದಿಂದ ವಾಚ್ಯನೆಂದು ಹೇಳಲ್ಪಟ್ಟಿದ್ದಾನೆ. ಸರ್ವಾತ್ತಾ ಎನ್ನುವ ಉಕ್ತಿಯಿಂದಲೇ ಅರ್ಥಾತ್ ಪಾತಾ ಎಂದು ಉಕ್ತವಾಗಿದೆ. ಅದರಿಂದ ಏನಾಯಿತೆಂದರೆ) ಸುಕೃತ ನಿರ್ಮಿತವಾದ ಪುಣ್ಯಕಾರ್ಯದಲ್ಲಿ ಅಥವಾ (ತತ್ವಪ್ರದೀಪಿಕಾ ರೀತಿಯಾಗಿ) ಸುಕೃತನಿರ್ಮಿತವಾದ ಶರೀರದಲ್ಲಿ ಹೃದಯಗುಹೆಯನ್ನು ಪ್ರವೇಶ ಮಾಡಿದ (ಹೃದ ಯಗುಹೆಯಲ್ಲಿಯೂ) ಸರ್ವಜೀವೋತ್ತಮರಾದ ರುದ್ರಾದಿಗಳಿಂದ ಅತಿಪೂರ್ಣರಾದ ವಾಯುದೇವರಲ್ಲಿ ಪ್ರವೇಶಮಾಡಿದ (ಅಂದರೆ ಹೃದಯಗುಹೆಯನ್ನು ಆಶ್ರಯಿಸಿದ ವಾಯ್ವಧಿಷ್ಠಾನಭೂತರಾದ) ಅಥವಾ **ಸಹಾಯಸ್ತಃ ಪಿತುರರ್ಥಮೇಯಾಯ** ಎಂದು ತತ್ವಪ್ರದೀಪದಲ್ಲಿ ಉದಾಹೃತವಾದ ಶ್ರುತಿಯಿಂದ ಪರಬ್ರಹ್ಮನಿಗೆ ಆವಾಸಭೂತವಾದುದರಿಂದಲೂ ಇತರ ಜೀವರಿಂದ ಅಭಿಮನ್ಯಮಾನವಾದ ಪ್ರಯುಕ್ತವೂ ಪರಾರ್ಧವು ಶರೀರವು. ಅಂತಹ ಶರೀರದಲ್ಲಿ (ಋತಂ=) **ಋತಂ ಸತ್ಯಂ ತಥಾ ಧರ್ಮಃ ಸುಕೃತಂ ಚಾಭಿಧೀಯತೇ। ಋತಂ ತು ಮಾನಸೋ ಧರ್ಮಃ** ಎಂದು ಗೀತಾಭಾಷ್ಯದಲ್ಲಿ ಉದಾಹೃತವಾದ ಸ್ಮೃತಿಯಿಂದ ಶಾಸ್ತ್ರವಿಹಿತಗಳಾದ ಕರ್ಮಗಳಿಂದುಂಟಾದ ಫಲವನ್ನು ಉಣ್ಣುವ, ಯಾವ ಆತ್ಮ ಅಂತರಾತ್ಮ ಎನ್ನುವ ಭಗವದ್ರೂಪವಿಶೇಷಗಳು ಇರುತ್ತಾವೋ, ಅವುಗಳನ್ನು ಬ್ರಹ್ಮಜ್ಞಾನಿಗಳು, ದೇವ ಪಿತೃ ಭೂತ ಮನುಷ್ಯ ಬ್ರಹ್ಮಯಜ್ಞ ಎನ್ನುವ ಐದು ಮಹಾಯಜ್ಞವುಳ್ಳವರು, ಅಥವಾ **ಸ ಏಷ ಯಜ್ಞಃ ಪಂಚವಿಧೋಽಗ್ನಿಹೋತ್ರಂದರ್ಶಪೂರ್ಣಮಾಸೌ ಚಾತುರ್ಮಾಸ್ಯಾನಿ ಪಶುಃ ಸೋಮಃ** ಎನ್ನುವ ಐದು ಮಹಾಯಜ್ಞವುಳ್ಳವರು, ಅಥವಾ ದ್ಯು ಪರ್ಜನ್ಯ ಧರಾ ಪುಂ ಸ್ತ್ರೀ ಎಂಬ ಐದು ಅಗ್ನಿವಿದ್ಯೆಗಳಲ್ಲಿ ಆಸಕ್ತರಾದವರು, ತ್ರಿನಾಚಿಕೇತಾಃ = ನಚಿಕೇತಸಃ ಇದಂ ನಾಚಿಕೇತಂ, ನಚಿಕೇತ

ಋಷಿಯ ಸಂಬಂಧಿಯಾದ ಅಗ್ನಿಚಯನ ವಿಶೇಷವು. ತಥಾಚ ಮೂರಾವರ್ತಿ ಮಾಡಲ್ಪಟ್ಟ ನಾಚಿಕೇತೇಷ್ಟಕಾಚಯನವುಳ್ಳವರು ಯಾರು ಇರುತ್ತಾರೋ ಅವರೂ ಕೂಡ, ಛಾಯಾತಪೌ= ವಿದ್ವಾಂಸರಿಗೂ ಪಾಪಿಷ್ಠರಿಗೂ ಕ್ರಮದಿಂದ ಸುಖದುಃಖಕಾರಣಭೂತರನ್ನಾಗಿ ಹೇಳುತ್ತಾರೆ. ಈ ವಾಕ್ಯದಲ್ಲಿ ಪಿಬಂತೌ ಎಂದು ಉಣ್ಣುವವರು ಕರ್ಮಫಲಭೋಕ್ತೃಗಳಾಗಿ ಯಾರು ಇಬ್ಬರು ತೋರುತ್ತಾರೋ, ಅವರು ಯಾರು? ಎಂದು ಸಂಶಯವೂ ಜೀವಸಹಿತ ಈಶ್ವರನು ಕರ್ಮಫಲಭೋಕ್ತನು ಎಂದು ಪೂರ್ವಪಕ್ಷವು ಬರುತ್ತಿರಲು ಸಮಾಧಾನವು ಹೇಳಲ್ಪಡುತ್ತದೆ.

ವಿಶೇಷಾಂಶ ॥ (೧) ಸರ್ವಾತ್ಮತ್ವ ಮಧ್ಯದಲ್ಲಿ ಪ್ರವಿಷ್ಟವಾದ ಕರ್ಮಫಲಸಾರಭೋಕ್ತೃತ್ವ ರೂಪವಾದ ಪಾತತ್ವವು ಕಾಠಕವಾಕ್ಯದಲ್ಲಿ ಪಿಬಂತೌ ಎಂದು ಉಕ್ತವಾಗಿದೆ. ದ್ವಿವಚನದಿಂದ ದ್ವಿತ್ವವು ತಿಳಿಯುತ್ತದೆ. (೨) ಇದರಿಂದ **ಅತ್ತಾ ಚರಾಚರಗ್ರಹಣಾತ್** ಎನ್ನುವಲ್ಲಿ ಶ್ರೀಹರಿಯಲ್ಲಿ ಪ್ರಕೃತಿಪ್ರತ್ಯಯಾರ್ಥಗಳು ಎರಡೂ ಕೂಡುವುದರಿಂದ ಅತ್ತೃತ್ವವು ಯುಕ್ತವು. ಇಲ್ಲಿಯಾದರೂ ಕರ್ಮಬಂಧ ವಿಲ್ಲದಿರುವ ಶ್ರೀಹರಿಯಲ್ಲಿ ಪ್ರಕೃತ್ಯರ್ಥವೂ, ನಿರ್ಭಿನ್ನನಲ್ಲಿ ಪ್ರತ್ಯಯಾರ್ಥವೂ ಕೂಡದಿರುವುದರಿಂದ ಶ್ರೀಹರಿಗೆ ದ್ವಿವಚನಾಂತವಾದ ಪಿಬಂತೌ ಎನ್ನುವ ಶಬ್ದವಾಚ್ಯತ್ವವು ಕೂಡಲಾರದು ಎಂದಾಕ್ಷೇಪಿಸುವುದರಿಂದ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು. ಪಾತೃತ್ವಾಖ್ಯವಿಷಯವೂ ಸೂಚಿತವಾಯಿತು. (೩) ಛಾಯಾತಪೌ ಎನ್ನುವುದಕ್ಕೆ **ಅಮರಾಣಾಮಾಹ್ಲಾದಕೌ ಅಸುರಾಣಾಂ ತಾಪಕೌ** ಎಂದು ತತ್ತ್ವಪ್ರದೀಪದಲ್ಲಿ ಅರ್ಥವು ಹೇಳಿದೆ. (೪) ಪಿಬಂತೌ ಎಂದು ಹೇಳಿದ ಕರ್ಮಫಲಭೋಕ್ತೃಗಳು ಜೀವ ಪರಮಾತ್ಮರೋ, (ಆತ್ಮಾ ಅಂತರಾತ್ಮ ಎನ್ನುವ) ಪರಬ್ರಹ್ಮರೂಪ ವಿಶೇಷಗಳೋ ಎಂದು ಸಂದೇಹವು. (೫) **ಜೀವಸಹಿತಃ ಈಶ್ವರಃ ಪಾತಾ** ಎಂದು ಪೂರ್ವಪಕ್ಷವು.

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ ॥ ೧೧ ॥

**ಸೂತ್ರಾರ್ಥ** ॥ ಆತ್ಮಾನೌ=ಅದೇಯಂ ಸುಖಂ ಮಾತಃ ಅನುಭವತಃ ಎನ್ನುವ ವ್ಯುತ್ಪತ್ತಿಯಿಂದ ಆತ್ಮಶಬ್ದದಿಂದ ಹೇಳಲ್ಪಟ್ಟ ಶುಭಕರ್ಮಫಲವನ್ನು ಭೋಗಿಸುವವರು. ಆತ್ಮಾನೌ ಹಿ=ಆತ್ಮ ಅಂತರಾತ್ಮಾಖ್ಯ ವಿಷ್ಣುರೂಪಗಳೇ, (ಜೀವೇಶ್ವರ ರಲ್ಲ) ಹಿ = ಯಾವ ಕಾರಣದಿಂದ, ಗುಹಾಂ ಪ್ರವಿಷ್ಟೌ = ಹೃದಯಗುಹೆಯನ್ನು ಪ್ರವೇಶಮಾಡಿದ್ದಾರೋ, (ಆದಪ್ರಯುಕ್ತ) (ಹಾಗಾದರೆ ವಿಷ್ಣುವಿನಲ್ಲಿ ಪಿಬಂತೌ ಎಂದು ದ್ವಿವಚನವು ಕೂಡಲಾರದು. ಎರಡು ರೂಪಗಳು ಇವೆ ಎನ್ನುವ ಅಭಿಪ್ರಾಯ ದಿಂದ ಅದು ಕೂಡುತ್ತದೆ ಎಂದು ಹೇಳಕೂಡದು. ಶ್ರೀಹರಿಯು ಸರ್ವಶರೀರಗಳಲ್ಲಿ ಒಂದೇ ರೂಪದಿಂದ ಪ್ರವೇಶಿಸುವುದರಿಂದ ಎರಡು ರೂಪಗಳಿಂದ ಪ್ರವೇಶಿಸಿದ್ದಾನೆನ್ನುವುದು ಸಿದ್ಧವಾಗಲಿಲ್ಲ ಎಂದಾಶಂಕಿಸಿ ಕೊಂಡು ಹೇಳುತ್ತಾರೆ) ತದ್ದರ್ಶನಾತ್=ಶ್ರೀಹರಿಯು ಎರಡು ರೂಪಗಳಿಂದ ಶರೀರ ಹೃದಯಗುಹೆ ಯಲ್ಲಿದ್ದಾನೆಂದು **ಛರ್ಮಾ** ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಯುಕ್ತ

ವಿಶೇಷಾಂಶ ॥ ಜೀವನಲ್ಲಿಯೂ ಹೃದಯಗುಹಾನಿವಿಷ್ಟತ್ವ ಲಿಂಗವು ಕೂಡುತ್ತದೆಂದು ಹೇಳಕೂಡದು. ಅದು ಶ್ರುತ್ಯಾದಿಗಳಲ್ಲಿ ಅಪ್ರಸಿದ್ಧವಾಗಿದೆ. ಶ್ರುತಿಪ್ರಸಿದ್ಧವಾದುದನ್ನೇ ಇಟ್ಟುಕೊಳ್ಳಬೇಕು. ವಿಷ್ಣುವಿಗಾದರೂ **ಯೋ ವೇದ ನಿಹಿತಂ ಗುಹಾಯಾಂ** ಎನ್ನುವ ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟ ಪ್ರಯುಕ್ತ.

**ಭಾಷ್ಯ ॥ ಗುಹಾಂ ಪ್ರವಿಷ್ಟೌ ಪಿಬಂತೌ ವಿಷ್ಣುರೂಪೇ ಏವ। ಘರ್ಮಾ ಸಮಂತಾ ತ್ರಿ(ತ್ರಿ)-ವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ** (ಋ.೧೦.೧೧೪.೧.)। **ಇತ್ಯಾದಿನಾ ತದ್ದರ್ಶನಾತ್ ॥ ೨ ॥**

ಭಾಷ್ಯಾರ್ಥ ॥ (ಸುಕೃತಫಲವನ್ನು) ಉಣ್ಣುವವುಗಳು ವಿಷ್ಣುರೂಪಗಳೇ ಹೃದಯ ಗುಹೆಯನ್ನು ಪ್ರವೇಶಮಾಡಿದ್ದರಿಂದ (ದ್ವಿವಚನವು ಎರಡು ರೂಪಗಳನ್ನು ವಿವಕ್ಷಾಮಾಡಿಕೊಂಡು ಸಾವಕಾಶವಾಗುತ್ತದೆಂದು ಹೇಳುವುದಕ್ಕಾಗಿ ವಿಷ್ಣೂ ಎಂದು ಹೇಳುವ ಬದಲಿಗೆ ವಿಷ್ಣುರೂಪೇ ಏವ ಎಂದು ಹೇಳಿರುತ್ತಾರೆ.) (ಹಾಗಾದರೆ ವಿಷ್ಣುವು ಸರ್ವಶರೀರಗಳಲ್ಲಿ ಒಂದೊಂದೇ ರೂಪದಿಂದ ಪ್ರವೇಶಮಾಡುವುದರಿಂದ ಎರಡು ರೂಪಗಳ ಅಭಿಪ್ರಾಯದಿಂದಲೂ ದ್ವಿವಚನವು ಹೇಗೆ ಕೂಡುತ್ತದೆ ಎಂದರೆ) ಘರ್ಮಾ=ಪ್ರಕಾಶಮಾನಗಳಾದ, ಸಮಂತಾತ್=(ವಿದ್ಯಮಾನೌ) ವಾ ಸಮಂತಾ= ವ್ಯಾಪ್ತಗಳಾದ (ಅಂದರೆ ಪ್ರಕೃತಿ ಪುರುಷ ಕಾಲಗಳನ್ನು ವ್ಯಾಪಿಸಿಕೊಂಡಿರುವ) ದೇಶತಃ ಕಾಲತಃ ಶಕ್ತಿಯಿಂದಲೂ ಸಂಪೂರ್ಣಗಳಾದ ಭಗವದ್ರೂಪವಿಶೇಷಗಳು, ತ್ರಿವೃತಂ=ತೇಜೋಽಬನ್ನಾತ್ಮಕ ಶರೀರವನ್ನು ವ್ಯಾಪತುಃ = ವಿಶೇಷವಾಗಿ ಶರೀರ ಹೃದಯಗುಹಾಸ್ಥಾನವನ್ನು ಹೊಂದಿದವು. ತಯೋಃ= ರೂಪವಿಶೇಷಗಳ, ಜುಷ್ಟಿಂ=ಸೇವೆಯನ್ನು ಮಾಡುವುದಕ್ಕಾಗಿ, ಮಾತರಿಶ್ವಾ=ಮುಖ್ಯವಾಯುದೇವರೂ ಕೂಡ, ಜಗಾಮ=ಶರೀರವನ್ನು ಹೊಂದಿರುವರು. ಇತ್ಯಾದಿಗಳಿಂದ ಗುಹಾಪ್ರವಿಷ್ಟತ್ವವು ಕಾಣುವುದರಿಂದಲೂ ಒಬ್ಬನಿಗೇನೇ ಅನೇಕನಾಮರೂಪಗಳು ಕಾಣುವುದರಿಂದಲೂ.

ವಿಶೇಷಾಂಶ ॥ (೧) ಘರ್ಮಾ ಎನ್ನುವ ಶ್ರುತಿಯ ಉತ್ತರಾರ್ಧವು. **ದಿವಃ ಸ್ತನ್ಯಂ ದಿಧಿಷಾಣೋಽವೇಷನ್ ವಿದುರ್ದೇವಾಸ್ಸಹಸಾಮಾನಮರ್ಕಂ** । ಇದರ ಅರ್ಥವು— ದಿವಃ= ವಾಯುಪತ್ನಿಯಾದ ಭಾರತಿಯ, ಸ್ತನ್ಯಂ=ಸ್ತನಕ್ಷೀರವನ್ನು, ದಿಧಿಷಾಣಃ=ಪಾನಮಾಡಲಿಚ್ಛಿಸಿದ ದೇವತೆಗಳು, ಎರಡು ರೂಪಗಳನ್ನು ಹೊಂದಿದ ಆ ಶ್ರೀಹರಿಯನ್ನು ಅವೇಷನ್=ತಿಳಿದರು. ತಂ ಅರ್ಕಂ=ಆ ಅತ್ಯಂತ ಸುಖಸ್ವರೂಪನಾದ, ಸಹಸಾಮಾನಂ=ವಾಯುವಿನಿಂದ ಕೂಡಿದ ಶ್ರೀಹರಿಯನ್ನು ವಿದುಃ=ತಿಳಿದರು. (೨) ಆದಿಪದದಿಂದ— **ಏಕಃ ಸುಪರ್ಣಃ ಸ ಸಮುದ್ರಮಾವಿವೇಶ, ಏಕಂ ಸಂತಂ ಬಹುಧಾ ಕಲ್ಪಯಂತಿ** । ಇತ್ಯಾದಿ ಶ್ರುತಿಗಳನ್ನು ಇಟ್ಟುಕೊಳ್ಳಬೇಕು.

ಪೀಠಿಕೆ ॥ ಹಾಗಾದರೆ ವಿಷ್ಣುವಿನಲ್ಲಿ ಎರಡು ರೂಪಗಳನ್ನು ವಿವಕ್ಷಾ ಮಾಡಿಕೊಂಡು ಪ್ರತ್ಯಯಾರ್ಥವು ಕೂಡಿದರೂ ಪ್ರಾತಿಪದಿಕದ ಅರ್ಥವಾದ ಕರ್ಮಫಲ ಭೋಕ್ತೃತ್ವವು ಕೂಡದಿರುವುದರಿಂದ ಶ್ರೀಹರಿಗೆ ಋತಂ ಪಿಬಂತೌ ಎನ್ನುವ ವಾಕ್ಯಪ್ರತಿಪಾದ್ಯತ್ವವು ಇಲ್ಲ ಎಂದರೆ—

**ಭಾಷ್ಯ ॥ ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾಸ್ಥಿತಃ। ನವಿಷ್ಣೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಂ ॥ ಇತಿ ಬೃಹತ್ಸಂಹಿತಾಯಾಂ ॥ ३ ॥**

ಭಾಷ್ಯಾರ್ಥ ॥ ಒಬ್ಬನೇ ಶ್ರೀಹರಿಯು (ದೇಹ ಜೀವ ಎಂದು ಉಪಾಧಿಭೇದದಿಂದ) ಆತ್ಮಾ ಅಂತರಾತ್ಮಾ ಎಂದು ರೂಪಭೇದದಿಂದ ಎರಡು ಪ್ರಕಾರದಿಂದ ಇದ್ದಾನೆ. ದೇಹ ಜೀವರ ಹೃದಯದಲ್ಲಿ ಪ್ರವಿಷ್ಟನಾಗಿದ್ದಾನೆ. ಅಥವಾ (ಟೀಕಾರೀತಿಯಾಗಿ ಉಪಾಧಿಭೇದವನ್ನು ವಿವಕ್ಷಾ ಮಾಡಿಕೊಳ್ಳದೆ ಎರಡು ರೂಪಗಳಿಂದಲೇ) ಹೃದಯದಲ್ಲಿ ಪ್ರವಿಷ್ಟನಾಗಿದ್ದಾನೆ. ಶುಭಕರ್ಮಜನ್ಯವಾದ ಫಲವನ್ನು ನಿಯಮದಿಂದ ಉಣ್ಣುತ್ತಾನೆ ಎಂದು ಬೃಹತ್ಸಂಹಿತೆಯಲ್ಲಿ ಹೇಳಿದೆ.

ವಿಶೇಷಾಂಶ ॥ (೧) ರಸಶಬ್ದದಿಂದ, ಜೀವರಿಂದ ಅಭೋಗ್ಯವಾದ ಗುಣಗಳನ್ನೇ ಈಶ್ವರನು ಭೋಗಿಸುವವನು. ಜೀವರಿಂದ ಭೋಗ್ಯವಾದ ದ್ರವ್ಯವನ್ನು ಭೋಗಿಸತಕ್ಕವನಲ್ಲ ಎನ್ನುವ ಪ್ರಮೇಯವು ಸೂಚಿತವಾಯಿತು. (೨) ಬೃಹತ್ಸಂಹಿತೆಯಲ್ಲಿ ಮಾತ್ರ ಹೇಳಿದ್ದಲ್ಲ, ಮತ್ತೆ **ಚಕ್ಷುಃ ಶ್ರೋತ್ರಂ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ । ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥** ಎನ್ನುವ ಗೀತೆಯಲ್ಲಿಯೂ ಕರ್ಮಫಲ ಭೋಗವನ್ನು ಹೇಳಿದ್ದಾರೆ.

ಪೀಠಿಕೆ ॥ ಹಾಗಾದರೆ ಈಶ್ವರನು (೧) ದುಃಖರೂಪವಾದ ಪಾಪಕರ್ಮಫಲವನ್ನುಣ್ಣುತ್ತಾನೋ, (೨) ಪುಣ್ಯಜನ್ಯವಾದ ಸುಖವನ್ನುಣ್ಣುತ್ತಾನೋ, ಪೂರ್ಣಾನಂದನಾದ ಪ್ರಯುಕ್ತ ಎರಡು ಕಲ್ಪಗಳೂ ಕೂಡುವುದಿಲ್ಲ ಎಂದರೆ—

**ಭಾಷ್ಯ ॥ ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್। ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್॥ ಇತಿ ಪಾದ್ಮೇ ॥ ೪ ॥**

ಭಾಷ್ಯಾರ್ಥ ॥ ಅಸೌ=ಸರ್ವ ಶರೀರದಲ್ಲಿರತಕ್ಕ ಪ್ರಾಣನಲ್ಲಿರತಕ್ಕ, ಹರಿಃ=ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸತಕ್ಕ ಪಾಪಪರಿಹಾರಕನಾದ ಶ್ರೀಹರಿಯು, ನಿತ್ಯಂ=ನಿಯಮದಿಂದ, ಶುಭಂ= ಶುಭಕರ್ಮ ಫಲವನ್ನೇ, ಪಿಬತಿ=ಉಣ್ಣುತ್ತಾನೆ. ಆತನು ಅಶುಭಕರ್ಮ ಫಲವನ್ನೇ ಉಣ್ಣುವುದಿಲ್ಲ (ಪೂರ್ಣಾನಂದನಿಗೆ ಸುಖಭೋಗವು ಕೂಡಲಾರದು ಎನ್ನುವ ಎರಡನೇ ಪಕ್ಷದ ದೂಷಣವನ್ನು ಪರಿಹರಿಸುತ್ತಾರೆ.) ಪೂರ್ಣಾನಂದರೂಪನಾದ ಈ ವಿಷ್ಣುವಿನ ಐಶ್ವರ್ಯವು ಯಾವ ಕಾಲದಲ್ಲಿಯೂ ಯಾವ ದೇಶದಲ್ಲಿಯೂ (ಯಾರಿಂದಲೂ ಸಂಪೂರ್ಣವಾಗಿ ಆಲೋಚಿಸಲ್ಪಡುವುದಿಲ್ಲ) ಎಂದು ಪಾದ್ಮಪುರಾಣದಲ್ಲಿದೆ.

ವಿಶೇಷಾಂಶ ॥ (೧) ಪುಣ್ಯಮೇವಾಮುಂ ಗಚ್ಛತಿ, ಪರಮೇ ಪರಾರ್ಧೇ ಇತ್ಯಾದಿ ಶ್ರುತಿಗಳಿಂದ ಅಶುಭಕರ್ಮಫಲವನ್ನುಣ್ಣುವುದಿಲ್ಲವೆಂದು ಸಿದ್ಧಿಸುತ್ತದೆ. (೨) ಪಿಬತಿ ಎನ್ನುವುದರಿಂದ ಋತಪಾನವನ್ನು ಮಾಡುವವನು ಅದ್ವಿತೀಯನೆಂದು ಅಭಿಪ್ರೇತವಾಯಿತು. ಇದರಿಂದ ೨ನೇ ಪಕ್ಷವನ್ನು ಅಂಗೀಕರಿಸಿಕೊಂಡು ೧ನೇ ಪಕ್ಷವನ್ನು ಅಂಗೀಕರಿಸುವುದಿಲ್ಲವೆಂದು ಹೇಳಿದ ಹಾಗಾಯಿತು. (೩) ತಾದಾತ್ಮ್ಯಾರ್ಥದಲ್ಲಿ ಮಯಟ್ ಪ್ರತ್ಯಯವು. ತಥಾಚ ಐಶ್ವರ್ಯಬಲದಿಂದ ಪೂರ್ಣಾನಂದನಿಗೂ ಸುಖಾಭೋಗವು ಯುಕ್ತವು ಎಂದು ಸಿದ್ಧವಾಯಿತು. (೪) ಅಥವಾ ವಿಷ್ಣುವಿಗೆ ಭೋಕ್ತೃತ್ವವನ್ನು ಅಂಗೀಕರಿಸಿದರೆ **ಅನಶ್ನನ್ನನ್ಯಃ** ಎನ್ನುವ ಶ್ರುತಿವಿರೋಧವು ಎಂದರೆ **ಶುಭಂ ಪಿಬತಿ** ಎನ್ನುವ ವಾಕ್ಯಬಲದಿಂದ ಅನಶ್ನನ್ನನ್ಯಃ ಎನ್ನುವ ಶ್ರುತಿಯು ಪರಾಧೀನವಾದ ಭೋಗವು ಇಲ್ಲವೆಂದು ಹೇಳುತ್ತದೆ.

ವಾ ಅಶುಭವಾದ ಭೋಗವು ಇಲ್ಲ ವೆಂದು ಹೇಳುತ್ತದೆ ಎಂದು ಹೇಳತಕ್ಕದ್ದು. (೫) ಹಾಗಾದರೆ— **ಸುಖಭೋಗವೂ ಉಚ್ಚತ್ವರೂಪವಾದ ಪ್ರಯುಕ್ತ ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ । ನಾಸೌ ನೀಚೋಚ್ಚತಾಂ ಯಾತಿ** ಎನ್ನುವ ವಾಕ್ಯವಿರೋಧವೆಂದು ಹೇಳಕೂಡದು. ಶ್ರೀಹರಿಯು ಜೀವನಲ್ಲಿರತಕ್ಕ ಭೋಗವನ್ನು ಸ್ವೀಕರಿಸುತ್ತಾನೆಂದು ಅಂಗೀಕರಿಸಿದ್ದರಿಂದ ಉಚ್ಚತ್ವಾ ಸಂಪಾದಕವಾದ ವಿಕಾರವಿಶೇಷವನ್ನು ಅಂಗೀಕರಿಸುವುದಿಲ್ಲ. ಈ ಪ್ರಮೇಯವು ತತ್ವಪ್ರದೀಪದಲ್ಲಿ ಹೇಳಿದೆ. ಅನಶ್ನನ್ನನ್ಯಃ ಎನ್ನುವ ಶ್ರುತಿವಿರೋಧವಿಲ್ಲ. ವಿಷ್ಣುವಿಗೆ ಪರಾಧೀನವಾದ ಭೋಗವೂ ಇಲ್ಲ. ಅಪ್ರಿಯವಾದ ಭೋಗವೂ ಇಲ್ಲ. ತನ್ನಿಮಿತ್ತವಾದ ಉಚ್ಚತ್ವ ನೀಚತ್ವವೂ ಇಲ್ಲ. ಮತ್ತೆ ಜೀವ ಸಮವೇತವಾದ ಭೋಗವನ್ನು ಸ್ವೀಕಾರಮಾತ್ರ ಮಾಡುತ್ತಾನೆ. (೬) ಅಥವಾ ನೀಚತ್ವವನ್ನೂ ಉಚ್ಚತ್ವವನ್ನೂ ಸಂಪಾದಿಸಿಕೊಡತಕ್ಕುದು ವಿಶೇಷತಃ ತನ್ನದ್ದೇ ಎಂದು ಅಭಿಮಾನದಿಂದೊಡಗೂಡಿದ ಭೋಗವು ಈಶ್ವರನಲ್ಲಿಲ್ಲ. ಆದುದರಿಂದ ಶ್ರುತಿ ವಿರೋಧವಿಲ್ಲ. ತಥಾಚ ಶ್ರುತಿ ಯುಕ್ತಿವಿರೋಧವಿಲ್ಲ.

**ಪೀಠಿಕೆ ॥** ಹಾಗಾದರೆ ಹೃದಯಗುಹಾಪ್ರವೇಶರೂಪವಾದ ಲಿಂಗದಿಂದ ಪಾನಮಾಡುವವನು ವಿಷ್ಣುವೆಂದು ಹೇಗೆ ನಿಶ್ಚಯವಾಗುತ್ತದೆ? ಆ ಲಿಂಗವು ಜೀವನಲ್ಲಿಯೂ ಕೂಡಬಹುದು ಎಂದರೆ—

**ಭಾಷ್ಯ ॥ ಯೋ ವೇದ ನಿಹಿತಂ ಗುಹಾಯಾಂ (ತೈ.ಉ.೨.೧.)। ಇತ್ಯಾದಿನಾ ಪ್ರಸಿದ್ಧಂ ಹಿ ಶಬ್ದೇನ ದರ್ಶಯತಿ ॥ ೧೧ ॥ ೫ ॥**

**ಭಾಷ್ಯಾರ್ಥ ॥** ಯಾವಾತನು ಹೃದಯಗುಹೆಯಲ್ಲಿ ಇರುವವನನ್ನು ತಿಳಿಯುತ್ತಾನೋ ಇದು ಮೊದಲಾದ ಶ್ರುತಿಗಳಿಂದ (ಆದಿಶಬ್ದದಿಂದ **ಆತ್ಮಾಂತರಾತ್ಮಾ ಶ್ರೋತ್ರಂ ಚಕ್ಷುಃ, ಅಹಂ ವೈಶ್ವಾನರೋ ಭೂತ್ವಾ** ಇತ್ಯಾದಿ ಸ್ಮೃತಿಗಳನ್ನು ಇಟ್ಟುಕೊಳ್ಳಬೇಕು.) (ವಿಷ್ಣುವಿಗೇನೇ) ಗುಹಾನಿಹಿತತ್ವವು ಪ್ರಸಿದ್ಧವೆಂದು (ಸೂತ್ರ ಕಾರರು) ತೋರಿಸುತ್ತಾರೆ.

**ವಿಶೇಷಾಂಶ ॥** ಹೃದಯಗುಹಾಸ್ಥತ್ವಮಾತ್ರವು ಜೀವನಲ್ಲಿ ಕೂಡಿದರೂ ಅಂತಹುದು ಹೇತು ವೆಂದು ಇಲ್ಲಿ ಇಟ್ಟುಕೊಳ್ಳುವುದಿಲ್ಲ. ಮತ್ತೆ ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾದ ಮೋಕ್ಷಜನಕಜ್ಞಾನ ವಿಷಯೀಭೂತವಾದ ಪ್ರಾಧಾನ್ಯೇನ ಹೃದಯಗುಹಾನಿಹಿತತ್ವವೇ. ಅದು ಜೀವನಲ್ಲಿ ನಿರವಕಾಶವಾಗಿದೆ. ತಥಾಚ ಆತ್ಮಶಬ್ದದಿಂದ ಹೇಳಲ್ಪಟ್ಟ ಶುಭಕರ್ಮಫಲವನ್ನು ಉಣ್ಣುವವರು ಆತ್ಮ ಅಂತರಾತ್ಮ ಎನ್ನುವ ವಿಷ್ಣುರೂಪಗಳೇ. ಜೀವೇಶ್ವರರಲ್ಲ. ಏಕೆಂದರೆ ಹೃದಯಗುಹೆಯಲ್ಲಿ ಇಬ್ಬರೂ ಪ್ರವಿಷ್ಟರಾಗಿದ್ದಾರೆ. ಜೀವನಲ್ಲಿಯೂ ಗುಹಾನಿವಿಷ್ಟತ್ವಲಿಂಗವು ಕೂಡುತ್ತದೆಂದು ಹೇಳಕೂಡದು. ಜೀವನು ಹೃದಯಗುಹಾನಿವಿಷ್ಟನೆಂದು ಶ್ರುತ್ಯಾದಿಗಳಲ್ಲಿ ಅಪ್ರಸಿದ್ಧನು. ಶ್ರುತ್ಯಾದಿಗಳಲ್ಲಿ ಪ್ರಸಿದ್ಧನನ್ನೇ ಇಟ್ಟುಕೊಳ್ಳಬೇಕು. ವಿಷ್ಣುವಾದರೂ **ಯೋ ವೇದ ನಿಹಿತಂ ಗುಹಾಯಾಂ** ಇತ್ಯಾದಿ ಶ್ರುತ್ಯಾದಿಗಳಲ್ಲಿ ಪ್ರಸಿದ್ಧನು. ಹಾಗಾದರೆ ವಿಷ್ಣುವಿನಲ್ಲಿ ಪಿಬಂತೌ ಎಂದು ದ್ವಿವಚನವು ಕೂಡಲಾರದು. ಎರಡು ರೂಪಗಳಿಂದ ಪ್ರವೇಶವು ಎಂದೂ ಹೇಳಕೂಡದು. ವಿಷ್ಣುವಿಗೆ ಸರ್ವಶರೀರಗಳಲ್ಲಿ ಒಂದೇ ರೂಪ ದಿಂದ ಪ್ರವೇಶವಿದ್ದ ಪ್ರಯುಕ್ತ ಎರಡು ರೂಪಗಳಿಂದ ಪ್ರವೇಶವು ಸಿದ್ಧವಾಗಲಿಲ್ಲ ವೆಂದರೆ— ಶ್ರೀಹರಿಯು ಎರಡು ರೂಪಗಳಿಂದ ಪ್ರವೇಶಿಸುತ್ತಾನೆನ್ನುವುದು **ಘರ್ಮಾ ಸಮಂತಾ** ಎನ್ನುವ ಶ್ರುತಿಯಲ್ಲಿ

ಉಕ್ತವಾಗಿದೆ. **ಅದೇಯಂ ಮಾತಿ** ಎನ್ನುವ ವ್ಯುತ್ಪತ್ತಿಯಿಂದ ಆತ್ಮಶಬ್ದದಿಂದ ಹೇಳಲ್ಪಟ್ಟ ಶುಭಭೋಕ್ತೃತ್ವವು ಮೂಲಯುಕ್ತಿಯು ಎಂದು ಚಂದ್ರಿಕಾಗ್ರಂಥದಲ್ಲಿ ಹೇಳಿದೆ. ॥ ೧೧ ॥

**ಪೀಠಿಕೆ ॥** ನಿರವಕಾಶವಾದ ಗುಹಾನಿಹಿತತ್ವಲಿಂಗಕ್ಕೆ ಸಾವಕಾಶವಾದ ದ್ವಿವಚನಶ್ರುತಿಯಿಂದಲೂ ಪ್ರಾಬಲ್ಯವಿದ್ದ ಪ್ರಯುಕ್ತವೂ ವಿಷ್ಣುವಿಗೆ ಭೋಕ್ತೃತ್ವವು ಕೂಡುವುದರಿಂದಲೂ ವಿಷ್ಣುವೇ ಕರ್ಮಫಲಭೋಕ್ತನೆಂದು ಯಾವಾಗ ಸಿದ್ಧಿಸುತ್ತದೋ, ಆಗ ಪುನಃ ನಿರವಕಾಶವಾದ ಶ್ರುತಿಯಿಂದಲೂ ಸಿದ್ಧವಾಗುತ್ತದೆಂದು ಸುತರಾಂ ಸಿದ್ಧವಾಗುತ್ತದೆನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ವಿಶೇಷಣಾಚ್ಚ ಓಂ ॥ ೧೨ ॥

**ಸೂತ್ರಾರ್ಥ ॥ ಯಃ ಸೇತುಃ** ಎನ್ನುವ ಶ್ರುತಿಯಲ್ಲಿ ಕರ್ಮಫಲವನ್ನುಣ್ಣುವವರಿಗೆ ಏಕವಚನದಿಂದ ಬೋಧ್ಯವಾದ ಏಕತ್ವದಿಂದ ವಿಶೇಷಣವಿದ್ದಪ್ರಯುಕ್ತ ಒಬ್ಬನೇ ಕರ್ಮಫಲಭೋಕ್ತನು.

**ವಿಶೇಷಾಂಶ ॥** (೧) ಆತನು ಯಜಮಾನಸೇತುತ್ವ, ಪರಬ್ರಹ್ಮತ್ವ, ಅಕ್ಷರತ್ವ ಮೊದಲಾದವು ಗಳಿಂದ ವಿಶೇಷಣವಿದ್ದಪ್ರಯುಕ್ತ ವಿಷ್ಣುವೇ, ಜೀವನಲ್ಲ. ಈ ಲಿಂಗಗಳಿಂದ ಮಾತ್ರವಲ್ಲ ಮತ್ತೆ ಶ್ರುತಿಗಳಿಂದಲೂ ಕೂಡ ವಿಷ್ಣುವೇ ಎಂದು ಚ ಶಬ್ದಾರ್ಥವು.

**ಭಾಷ್ಯ ॥ ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ತ(ಯ)ತ್ಪರಂ** (ಕಠ.೧. ೨.೨.) **। ಇತಿ ॥ ॥ ೬ ॥**

**ಭಾಷ್ಯಾರ್ಥ ॥** ಯಃ=ಯಾವ ಆತ್ಮ ಅಂತರಾತ್ಮ ಎನ್ನುವ ಎರಡು ರೂಪಗಳಿಂದ ದೇಹದಲ್ಲಿರುವ ಹರಿಯು, ಈಜಾನಾನಾಂ=ವಿಷ್ಣುವನ್ನುದ್ದೇಶಿಸಿ ಯಾಗವನ್ನು ಮಾಡುವವರಿಗೆ, ಸೇತುಃ = ಆಶ್ರಯನೋ, ಯತ್ಅಕ್ಷರಂ=ನಾಶರಹಿತನೇ, ಪರಂ ಬ್ರಹ್ಮ=ಸರ್ವೋತ್ತಮನಾದ ಬ್ರಹ್ಮನೋ, (ಅಂತಹವನನ್ನು ಧ್ಯಾನಮಾಡುವುದಕ್ಕಾಗಿ ನಚಿಕೇತನನ್ನು ಕುರಿತು ಸಾಧನವನ್ನು ಹೇಳುವುದಕ್ಕೆ ಶಕ್ತರಾಗಿರುತ್ತೇವೆ.) ಎಂದು ಕಾಠಕದಲ್ಲಿ ಹೇಳಿದೆ.

**ಪೀಠಿಕೆ ॥** ಬ್ರಹ್ಮಶಬ್ದವು ಶ್ರೀಪರಬ್ರಹ್ಮನನ್ನು ಮಾತ್ರ ಹೇಳುತ್ತದೆ ಎನ್ನುವುದನ್ನು ಸ್ಮೃತಿಯಿಂದ ತೋರಿಸುತ್ತಾರೆ—

**ಭಾಷ್ಯ ॥ ಪೃಥಗ್ವಕ್ತುಂ ಗುಣಾಸ್ತಸ್ಯ ನ ಶಕ್ಯಂತೇಽಮಿತತ್ವತಃ। ಯತೋಽತೋ ಬ್ರಹ್ಮಶಬ್ದೇನ ಸರ್ವೇಷಾಂ ಗ್ರಹಣಂ(ವಚನಂ)ಭವೇತ್ ॥ ಏತಸ್ಮಾದ್ಬ್ರ ಹ್ಮಶಬ್ದೋಽಯಂ ವಿಷ್ಣೋರೇವ ವಿಶೇಷಣಂ । ಅಮಿತಾ ಹಿ ಗುಣಾ ಯಸ್ಮಾನ್ನಾನ್ಯೇಷಾಂ ತಮೃತೇ ವಿಭುಃ ॥ ಇತಿ ಬ್ರಾಹ್ಮೇ ॥ ॥ ೭ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಆ ವಿಷ್ಣುವಿನ ಗುಣಗಳು ಅಪರಿಮಿತಗಳಾದ ಪ್ರಯುಕ್ತ ಪ್ರತ್ಯೇಕವಾಗಿ ಒಂದೊಂದನ್ನು ಬಿಡಿಸಿ ಹೇಳಲಿಕ್ಕೆ ಶಕ್ಯಗಳಾಗುವುದಿಲ್ಲವೋ, (ಮತ್ತು ಎಲ್ಲಾ ಅಧಿಕಾರಿ ಗಳಿಂದಲೂ ಎಲ್ಲಾ ಗುಣಗಳೂ ತಿಳಿಯಲ್ಪಡತಕ್ಕವುಗಳೂ ಆಗಿವೆಯೋ) ಯಾವ ಕಾರಣದಿಂದ

ಬ್ರಹ್ಮಶಬ್ದದಿಂದ ಸಮಸ್ತಗುಣಗಳ ಜ್ಞಾನವಾಗುವುದೋ, (ಆದುದರಿಂದ ಸರ್ವಗುಣಗಳ ಜ್ಞಾನಕ್ಕಾಗಿ ಆ ವಿಷ್ಣುವಿನಲ್ಲಿ) ಬ್ರಹ್ಮಶಬ್ದವು (ಪ್ರಯೋಗಿಸಲ್ಪಡುತ್ತದೆ. ಬ್ರಹ್ಮಶಬ್ದದಿಂದ ಸರ್ವಗುಣಗಳ ಗ್ರಹಣ ವಾಗುವುದರಿಂದ ಬ್ರಹ್ಮಶಬ್ದವು ಸರ್ವಗುಣವಾಚಕವಾಗುತ್ತದೆ. ಅಲ್ಲಿ ಶಕ್ತಿಯಿಲ್ಲದೆ ಆ ಜ್ಞಾನವನ್ನು ಹುಟ್ಟಿಸುತ್ತದೆಂದು ಕೂಡಲಾರದು.) ಯಾವ ಕಾರಣದಿಂದ ಆ ಸಮರ್ಥನಾದ ವಿಷ್ಣುವನ್ನು ಹೊರತು ಜೀವರಿಗೆ ಅಪರಿಮಿತಗುಣಗಳು ಇಲ್ಲವೋ, (ವಿಷ್ಣುವಿಗೇನೇ ಪ್ರಮಾಣಸಿದ್ಧವಾಗಿದೆಯೋ,) ಈ ಕಾರಣದಿಂದ ಈ ಬ್ರಹ್ಮಶಬ್ದವು ವಿಷ್ಣುವಿಗೇನೇ ವಿಶೇಷಣಂ=ಮುಖ್ಯವಾಚಕವು. ಇತರರಿಗೆ ಅಲ್ಲ ಎಂದು ಬ್ರಾಹ್ಮ ಪುರಾಣದಲ್ಲಿ (ಬ್ರಹ್ಮಶಬ್ದವು ಶ್ರೀಹರಿಯೊಬ್ಬನನ್ನೇ ಹೇಳುತ್ತದೆಂದು ಹೇಳಿದೆ.)

**ಪೀಠಿಕೆ ॥** ಇಲ್ಲಿ ಪರರು ಋತಂ ಪಿಬಂತೌ ಎನ್ನುವ ವಾಕ್ಯಪ್ರತಿಪಾದ್ಯನು ಕರ್ಮ ಫಲವನ್ನುಣ್ಣುವವನು ಬುದ್ಧಿ ಜೀವರು ಎಂದು ಪೂರ್ವಪಕ್ಷಮಾಡಿಕೊಂಡು ಜೀವೇಶ್ವರರೇ ಎಂದು ಸಿದ್ಧಾಂತಮಾಡಿರುವರು. ಅದನ್ನು ನಿರಾಕರಿಸುತ್ತಾರೆ—

**ಭಾಷ್ಯ ॥ ನ ಚ ಜೀವೇ ಸಮನ್ವಯೋಽಭಿಧೀಯತೇ ॥ ೮ ॥**

**ಭಾಷ್ಯಾರ್ಥ ॥** (ಜೀವನು ಈ ವಾಕ್ಯದಲ್ಲಿ ಪ್ರತಿಪಾದ್ಯನು ಎಂದು ಒಪ್ಪಿದರೆ ಜೀವನಲ್ಲಿ ಸಮನ್ವಯವನ್ನು ಹೇಳಿದಂತೆ ಆಯಿತು. ಅದು ಆಯುಕ್ತವು. ಏಕೆಂದರೆ) ಈ ಅಧ್ಯಾಯದಲ್ಲಿ ಜೀವನಲ್ಲಿ ಶಬ್ದಗಳಿಗೆ ಸಮನ್ವಯವು ಹೇಳಲ್ಪಡುವುದಿಲ್ಲ.

**ಪೀಠಿಕೆ ॥** ಹಾಗಾದರೆ ಇಲ್ಲಿ ಜೀವನಲ್ಲಿ ಸಮನ್ವಯವನ್ನು ಹೇಳಿದ್ದು ಅಸಂಗತವಲ್ಲ. ಜೀವೇಶ್ವರಭೇದವು ಅಸತ್ಯವಾದ ಪ್ರಯುಕ್ತ ಜೀವೇಶ್ವರರಿಗೆ ಐಕ್ಯವು. ಜೀವಸಮನ್ವಯ ರೂಪವಾಗಿದೆ ಎಂದರೆ—

**ಭಾಷ್ಯ ॥ ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ ಮೈವಾರುವಣ್ಯೋ ಮೈವಾರುಣ್ಯೋ ಮೈವಾರುವಣ್ಯಃ। ಇತಿ ಪೈಂಗಿಶ್ರುತಿಃ(ತೇ) ॥ ೯ ॥**

**ಭಾಷ್ಯಾರ್ಥ ॥** ಆತ್ಮನು ಸತ್ಯನು. ಜೀವನು ಸತ್ಯನು. ಭೇದವು ಸತ್ಯವು. ಶ್ರೀಹರಿಯು ದೋಷಿಗಳಿಂದ ಸರ್ವಥಾ ಭಜನೀಯನಲ್ಲ. ಹೀಗೆ ಪೈಂಗಿಶ್ರುತಿಯ ದೆಸೆಯಿಂದ.

**ವಿಶೇಷಾಂಶ ॥** (೧) ಯದ್ಯಪಿ ಇಲ್ಲಿ ಆತ್ಮಜೀವರಿಗೆ ಸತ್ಯತ್ವವನ್ನು ಹೇಳಿದ್ದರಿಂದಲೇ ಆತ್ಮಜೀವಸ್ವರೂಪಭೇದಕ್ಕೂ ಸತ್ಯತ್ವವು ಉಕ್ತವಾಯಿತು. ಆದಾಗ್ಯೂ ಪುನಃ ಶಪಥಪೂರ್ವಕವಾಗಿ ಮೂರಾವರ್ತಿ ಸತ್ಯಂ ಭಿದಾ ಎಂದು ಹೇಳಿದ್ದು ಆಪಾತತಃ ಪ್ರತೀತವಾದ ಅಭೇದಪ್ರತೀತಿಯನ್ನು ನಿರಾಕರಿಸುವುದರಲ್ಲಿ ತಾತ್ಪರ್ಯವಿದೆ ಎಂದು ತೋರಿಸುವುದಕ್ಕಾಗಿ, (೨) ಭೇದವು ಅಸತ್ಯವೆಂದು ಹೇಳುವವರಿಗೆ ಮಹಾದೋಷವನ್ನು ಶ್ರುತಿಯು ಹೇಳುತ್ತದೆ. ಆದುದರಿಂದ ಸರ್ವಥಾ ಭೇದವು ಅಸತ್ಯವಲ್ಲ. (೩) ಯದ್ಯಪಿ ಭಾಗವತ ತಾತ್ಪರ್ಯದಲ್ಲಿ ಸತ್ಯತ್ವಂ ಚ ಭೇದಸ್ಯೋಕ್ತಂ ಭಾಲ್ಲವೇಯ ಶ್ರುತೌ ಸ್ಥಾಣುರ್ಹೋಚ್ಚಕ್ರಾಮ ಸ ಪ್ರಜಾಪತಿಮುವಾಚ ಕೋಽಪಿ ಕೇ ಸ್ಥಃ ಕಃ ಸ ಇತಿ। ಸ ಹೋವಾಚ

**ಯೋऽಸ್ಮಿಯೇ ಸ್ಥ ಯಃ ಸ ಇತಿ। ಅಥೈನಮುಪಾಕ್ರೋಶತ್ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ** ಇತ್ಯಾದಿ. ರುದ್ರನು ಮೇಲಕ್ಕೆ ಹೋದನು. ಆ ರುದ್ರನು ಬ್ರಹ್ಮನ ಹತ್ತಿರ ಹೇಳಿದನು. ನೀನು ಎಂತಹವನು, ನಾವು ಎಂತಹವರು, ಆ ವಿಷ್ಣುವು ಎಂತಹವನು. (ಅಂದರೆ ಭಿನ್ನನೋ ಅಭಿನ್ನನೋ.) (ಉತ್ತರವನ್ನು ಹೇಳುತ್ತಾರೆ.) ನಾನು ಮೊದಲು ಹೇಗೆ ಇದ್ದೆನೋ ಅಂತಹವನು ಆಗಿದ್ದೇನೆ. ನೀವು ಮೊದಲು ಎಂತಹವರೋ ಅಂತಹವರಾಗಿತ್ತೀರಿ. ಆ ವಿಷ್ಣುವು ಮೊದಲು ಹೇಗೆ ನನ್ನಿಂದಲೂ ನೀವೇ ಮೊದಲಾದವರಿಂದಲೂ ಭಿನ್ನನೋ, ಅಂತಹವನೇ ಎಂದು ಶ್ರುತ್ಯರ್ಥವು. ಹೀಗೆ ಸತ್ಯಂ ಭಿದಾ ಎನ್ನುವ ಶ್ರುತಿಯು ಭಾಲ್ಲವೇಯ ಶ್ರುತ್ಯಂತರ್ಗತವೆಂದು ಉಕ್ತವಾಗಿದೆ. ಆದರೂ ಭಾಷ್ಯೋದಾಹೃತ ವಾದ ಸತ್ಯ ಆತ್ಮಾ ಎನ್ನುವ ಪೈಂಗೀಶ್ರುತಿಗೆ ಸಮಾಖ್ಯಾರೂಪವಾದ ಭಾಲ್ಲವೇಯಶ್ರುತಿಯು ಭಾಗವತ ತಾತ್ಪರ್ಯದಲ್ಲಿ ಉಕ್ತವಾಗಿದೆ ಎಂದು ತಿಳಿಯತಕ್ಕದು.

**ಭಾಷ್ಯ ॥ ಆತ್ಮಾ ಹಿ ಪರಮಃ ಸ್ವತಂತ್ರೋऽಧಿಗುಣೋ ಜೀವೋऽಲ್ಪಶಕ್ತಿರಸ್ವತಂತ್ರೋऽವರಃ ಇತಿ ಭಾಲ್ಲವೇಯಶ್ರುತಿಃ ॥ ೧೦ ॥**

ಭಾಷ್ಯಾರ್ಥ ॥ ಪರಮಾತ್ಮನು ಸರ್ವೋತ್ತಮನು, ಸ್ವತಂತ್ರನು, ಪೂರ್ಣಶಕ್ತಿಯುಳ್ಳವನು, ಜೀವನು ಅಲ್ಪ ಶಕ್ತಿಯುಳ್ಳವನು, ಅಸ್ವತಂತ್ರನು, ನಿಕೃಷ್ಟನು ಎಂದೂ ಭಾಲ್ಲವೇಯ ಶ್ರುತಿಯು.

ಪೀಠಿಕೆ ॥ ಇದೇ ಅರ್ಥದಲ್ಲಿ ಪುರಾಣವಾಕ್ಯಗಳನ್ನು ಹೇಳುತ್ತಾರೆ—

**ಭಾಷ್ಯ ॥ (೧) ಯಥೇಶ್ವರಸ್ಯ ಜೀವಸ್ಯ ಭೇದಸ್ಸತ್ಯೋ ವಿನಿಶ್ಚಯಾತ್। ಏವ ಮೇವ ಹಿ ಮೇ ವಾಚಂ ಸತ್ಯಾಂ ಕರ್ತುಮಿಹಾರ್ಹಸಿ ॥ (೨) ಯಥೇಶ್ವರಶ್ಚ ಜೀವಶ್ಚ ಸತ್ಯಭೇದೌ ಪರಸ್ಪರಂ। ತೇನ ಸತ್ಯೇನ ಮಾಂ ದೇವಾಸ್ತ್ರಾಯಂತು ಸಹಕೇಶವಾಃ। ಇತ್ಯಾದೇರ್ನಾಸತ್ಯೋ ಭೇದಃ॥ ಸೂ.೧೨ ॥ ಅಧಿ.೩ ॥ ॥ ೧೧ ॥**

ಭಾಷ್ಯಾರ್ಥ ॥ (೧) ಹೇಗೆ ಈಶ್ವರನಿಗೂ ಜೀವನಿಗೂ ಭೇದವು ನಿಶ್ಚಯವಾಗಿಯೂ ಸತ್ಯವಾಗಿದೆಯೋ, ಹೀಗೆಯೇ ನನ್ನ ಮಾತನ್ನು ಸತ್ಯವನ್ನಾಗಿ ಮಾಡಲಿಕ್ಕೆ ಯೋಗ್ಯನಾಗಿರುತ್ತಿ (೨) ಹೇಗೆ ಈಶ್ವರನು ಜೀವನೂ ಕೂಡ ಪರಸ್ಪರವಾಗಿ ಸತ್ಯ ಭೇದವುಳ್ಳವರೋ ಅಂತಹ ಭೇದ ಸತ್ಯತ್ವ ಜ್ಞಾನದಿಂದ ಶ್ರೀಹರಿಯಿಂದ ಕೂಡಿದ ದೇವತೆಗಳು ನನ್ನನ್ನು ರಕ್ಷಿಸಲಿ. ಇತ್ಯಾದಿ ಪ್ರಮಾಣಗಳಿಂದ ಭೇದವು ಅಸತ್ಯವಲ್ಲ.

ವಿಶೇಷಾಂಶ ॥ (೧) ೧ನೇ ವಾಕ್ಯವು ಪಾದ್ಮದಲ್ಲಿದ್ದುದು. ೨ನೇದ್ದು ಸ್ಕಾಂದ ದಲ್ಲಿದ್ದುದು, ಎಂದು ತತ್ವಪ್ರದೀಪದಲ್ಲಿದೆ. (೨) ಆದಿಪದದಿಂದ ತತ್ವಪ್ರದೀಪದಲ್ಲಿ ಉದಾಹೃತಗಳಾದ ವಾಕ್ಯಗಳು. ೧. **ದ್ವೌಭೂತಸರ್ಗೌ** (ಗೀ.೧೬.೬.)— **ತಾನಹಂ ದ್ವಿಷತಃ ಕ್ರೂರಾನ್** (ಗೀ.೧೬.೧೯.) ೨. **ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ** (ಗೀ.೧೬.೮.)। **ತ ಅಸುರಾಃ ಸ್ವಯಂ ನಷ್ಟಾಃ ಜಗತಃ ಕ್ಷಯಕಾರಿ ಣಃ॥** ಎಂದು ವ್ಯಾಸಸ್ಮೃತಿಯು. ೩. **ಇಂದ್ರಸೋಮಾ ತಪತಂ ರಕ್ಷ ಉಜ್ಞತಂ ನ್ಯರ್ಪಯಂತಂ ವೃಷಣಾ ತಮೋವೃದಃ। ಪರಾ ಶೃಣೀತಮಚಿತೋನ್ಯೋಷತಂ ನುದೇಥಾಂ ನಿಶಿತೀತಮತ್ರಿಣಃ ॥**

ಋ.೭.೧೦೪.೧.) ೪. **ಇಂದ್ರಸೋಮಾವರ್ತಯತಂ ದಿವಸ್ಪರ್ಯಗ್ನಿತಪ್ತೇಭಿರ್ಯುವಮಶ್ಮಹನ್ಮಭಿಃ। ತಪುರ್ವಧೇಭಿರಜರೇಭಿರತ್ರಿಣಃ ॥** (ಋ.೭.೧೦೪.೫.) ಇದು ಮೊದಲಾದ ಶ್ರುತಿಯು ಜೀವೇಶ್ವರರಿಗೆ ಭೇದವನ್ನೇ ಪ್ರತಿಪಾದಿಸುತ್ತದೆ. ೫. **ಏಷಾಂ ಭಿಜ್ಞಗದೀಶ್ವರಜೀವಾನಾಂ ನಾಸ್ತಿತೇಽತ್ರಿಣಃ । ಸ್ವಾಜ್ಞಾನಕಲ್ಪಿತ ಜಗತ್ಪರಮೇಶ್ವರಸ್ಯ ಜೀವಸ್ಯ ಭೇದಕಲುಷೀಕೃತಭೂಮ ಭಾವೇ॥** ಮತ್ತೂ **ಆಚ್ಛಾದ್ಯ ವಿಕ್ಷಿಪತಿ ಸಂಸ್ಫುರದಾತ್ಮತತ್ತ್ವಂ । ಜೀವೇಶ್ವರಸ್ಯ ಜಗದಾಕೃತಿತನ್ಮೃಷೈವ ॥** ಎಂದೂ ಮಾಯಾವಾದಿಗಳು ಜಗತ್ತು ಈಶ್ವರ ಜೀವರಿಗೆ ಭೇದವಿಲ್ಲ, ಮಿಥ್ಯಾಭೂತವು ಎಂದು ಹೇಳುತ್ತಾರೆ. ಇದು ಅತ್ಯಂತ ಅಯುಕ್ತವು. ಏಕೆಂದರೆ— ೬. **ತ್ರಿರ್ಯಾತುಧಾನಃ ಪ್ರಸಿತಿಂ ತಯೇತ್ವೃತಂ** (ಋ.೧೦. ೮೭.೧೫.) ೭. **ಅಥ ಜ್ಞಾನೋಪಸರ್ಗಃ —** ಎಂದಾರಂಭಿಸಿ **ಯೇ ಚಾನ್ಯೇ ಮಿಥ್ಯಾ ತರ್ಕೈಃ ದೃಷ್ಟಾಂತೈಃ ಕುಹಕೇಂದ್ರಜಾಲೈಃ ವೈದಿಕೇಷು ಪರಿಸ್ಥಾತುಮಿಚ್ಛಂತಿ ತೈಃ ಸಹ ನ ಸಂವಸೇತ್ । ಪ್ರಕಾಶಾ ಹ್ಯೇತೇ ತಸ್ಕರಾಃ ಅಸ್ವರ್ಗ್ಯಾಃ** (ಮೈತ್ರಿ. ೭.೮.) ಇದು ಮೊದಲಾದ ಅನೇಕ ಶ್ರುತಿಗಳಿಂದ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವ ಮಾಯಾವಾದಿಗಳಿಗೆ ಅಂಧಂತಮಸ್ಸೇ ಗತಿಯೆಂದು ನಿಶ್ಚಿತವಾಗುತ್ತದೆ. ಹೀಗೆಯೇ ಸ್ಕಾಂದಪುರಾಣದಲ್ಲಿ ಹೇಳಿದೆ. **ಸರ್ವ ಬ್ರಹ್ಮತ್ವವೇತ್ತಾರಃ ಜೀವಬ್ರಹ್ಮತ್ವವೇದಿನಃ । ಅನ್ಯಸಾಮ್ಯವಿದೋ ವಿಷ್ಣೋಃ ವಿಷ್ಣುದ್ವೇಷ್ಟಾರ ಏವ ಚ। ಸರ್ವೇ ಯಾಂತಿ ತಮೋ ಘೋರಂ ನ ತೇಷಾಮುತ್ಥಿತಿಃ ಕ್ವಚಿತ್॥** ಎಂದು. ॥ ೧೧ ॥ ಸೂ. ॥ ೧೨ ॥ ಅಧಿ. ೩ ॥

## ಮಾಯಾವಾದಿರೀತ್ಯಾ

ವಿಚಾರ—(೧) **ಋತಂ ಪಿಬಂತೌ ಸುಕೃತಸ್ಯ ಲೋಕೇ** ಎನ್ನುವ ಕಾಠಕವಾಕ್ಯದಲ್ಲಿ ಋತಂ ಪಿಬಂತೌ ಎನ್ನುವುದರಿಂದ ಕರ್ಮಫಲವನ್ನುಣ್ಣುವವರು ಇಬ್ಬರು ತೋರುತ್ತಾರೆ. ಅವರು ಬುದ್ಧಿ ಜೀವರೋ, ಜೀವೇಶ್ವರರೋ ಎಂದು ಸಂದೇಹವು ಬಂದರೆ ಸರ್ವಗತನಾದ ಬ್ರಹ್ಮನಲ್ಲಿ ಅಲ್ಪವಾದ ಹೃದಯಗುಹಾಪ್ರವಿಷ್ಟತ್ವವು ಕೂಡದೆ ಇರುವುದರಿಂದಲೂ ನಿಯಮೇನ ಹೃದಯಗುಹಾಪ್ರವೇಶವು ಪರಿಚ್ಛಿನ್ನರಾದ ಬುದ್ಧಿಜೀವರಿಗೇನೇ ಕೂಡುವುದರಿಂದಲೂ ಬುದ್ಧಿಜೀವರೇ, ಬುದ್ಧಿಗೆ ಕರ್ಮಫಲಭೋಕ್ತೃತ್ವವಿಲ್ಲದಿದ್ದರೂ ಭೋಗಸಾಧನತ್ವವಿದ್ದುದರಿಂದ ಕರ್ಮಫಲ ಭೋಕ್ತನಾದ ಜೀವನ ಸಾಹಚರ್ಯದಿಂದ **ಛತ್ರಿಣೋ ಗಚ್ಛಂತಿ** ಎನ್ನುವ ನ್ಯಾಯದಂತೆ ಉಪಪನ್ನವಾಗುವುದರಿಂದ ಬುದ್ಧಿಜೀವರೇ ಕರ್ಮಫಲ ಭೋಕ್ತೃಗಳು ಎಂದು ಮಾಯಾವಾದಿಗಳು ಪೂರ್ವಪಕ್ಷ ಮಾಡಿಕೊಂಡು ಜೀವೇಶ್ವರರೇ ಎಂದು ಸಿದ್ಧಾಂತ ಮಾಡಿರುವರು. ಹೇಗೆಂದರೆ— ಕರ್ಮಫಲ ಪಾನರೂಪ ಲಿಂಗದಿಂದ ಒಬ್ಬನು ಜೀವನು ಎಂದು ನಿಶ್ಚಯವಾಗೋಣ ಎರಡನೇಯವನು ಸಜಾತೀಯನಾದ ಚೇತನನಾದ ಪರಮಾತ್ಮನೇ ಎಂದು ಹೇಳಲೇಬೇಕು. ಜಡವಾದ ಬುದ್ಧಿಯು ಆಗಲಾರದು. **ಅಸ್ಯ ಗೋರ್ದ್ವಿತೀಯೇನ ಭಾವ್ಯಂ** ಎಂದು ಹೇಳಿದರೆ ಮತ್ತೊಂದು ಗೋವೇ ಆಗಬೇಕಲ್ಲದೆ ಅಶ್ವಾದಿಗಳು ಆಗಲಾರವಷ್ಟೆ. ಏವಂ ಚ ಪ್ರಥಮತಃ ಅವಗತವಾದ ಕರ್ಮಫಲಭೋಕ್ತೃಗಳು ಜೀವಾತ್ಮ ಪರಮಾತ್ಮರೆಂದು ನಿಶ್ಚಯವಾಗೋಣ ಅಂತಿಮವಾದ ಹೃದಯಗುಹಾಪ್ರವಿಷ್ಟತ್ವಾದಿಗಳು ಕೂಡುತ್ತವೆ. ಬ್ರಹ್ಮನಿಗೆ ಪಾತೃತ್ವವಿಲ್ಲದಿದ್ದರೂ ಛತ್ರಿನ್ಯಾಯದಿಂದ ಪಿಬಂತೌ ಎನ್ನುವ ಶಬ್ದವು ಕೂಡುತ್ತದೆ. ಹೀಗೆ ಸಿದ್ಧಾಂತ ಮಾಡಿರುವರು. ಇದು ಅಯುಕ್ತವು. ಹೇಗೆಂದರೆ — **ಬುದ್ಧಿಸ್ಥತ್ವಾದ್ಭೋಕ್ತೃತಾದೇಃ ಪಿಬನ್ ಸ್ಯಾಚ್ಚೇತನಃ ಕಥಂ । ಚಿತ್ತ್ವೇಽಪಿ**

**ದ್ವಿತ್ವಪೂರ್ವಸ್ಯಾಬಾಧಾರ್ಥಂ ಸದ್ವಿತೀಯತಾ ॥ ವಿರೂಪಯಾಪಿ ಬುದ್ಧ್ಯಾಸ್ತು ಕಿಂ ಚ ಬುದ್ಧೇಃ ಸ್ವರೂಪತಾ। ವರ್ತತೇ ಸಹ ಜೀವೇನ ಪಾರತಂತ್ರ್ಯಾದಿರೂಪತಃ ॥** ಅಂದರೆ ಮಾಯಾವಾದಿಗಳ ಮತದಲ್ಲಿ ಜಪಾಕುಸುಮ (ಕೆಂಪು ದಾಸನ ಹೂವು)ದಲ್ಲಿರತಕ್ಕ ಲೌಹಿತ್ಯವು ಸ್ಫಟಿಕಮಣಿಯಲ್ಲಿ ತೋರುವಂತೆ ಬುದ್ಧಿಯಲ್ಲಿರತಕ್ಕ ಕರ್ತೃತ್ವಾದಿಗಳು ಜೀವನಲ್ಲಿ ಅಧ್ಯಸ್ತಗಳೆಂದು ಹೇಳಿರುವುದರಿಂದ ಪಾತೃತ್ವಲಿಂಗದಿಂದ ಒಬ್ಬನಿಗೂ ಕೂಡ ಚೇತನತ್ವವು ಕೂಡಲಾರದು. ಅವನ ಸಾಜಾತ್ಯದಿಂದ ಎರಡನೆಯವನು ಚೇತನನೇ ಆಗಬೇಕೆಂದು ಹೇಳಿದ್ದು ಸರ್ವಥಾ ಯುಕ್ತವಲ್ಲ. ಲೋಕದಲ್ಲಿ **ಅಹಂ ಕೃಶಃ** ಇತ್ಯಾದಿಗಳಲ್ಲಿ ದೇಹದಲ್ಲಿ ಆತ್ಮತ್ವವು ಅಧ್ಯಸ್ತವಾಗಿದೆ ಎಂದು ಇಟ್ಟುಕೊಂಡು ಆತ್ಮಾ ದ್ರಷ್ಟವ್ಯಃ ಇತ್ಯಾದಿ ಶ್ರುತಿಗಳಲ್ಲಿ ಆತ್ಮಶಬ್ದವು ದೇಹ ಪರವಾಗಲಾರದಷ್ಟೆ. ಭೋಕ್ತೃತ್ವಾದಿಗಳು ಚೇತನಾಚೇತನಗಳಿಂದ ಮಿಶ್ರಭೂತವಾದ ವಸ್ತುವಿನ ಧರ್ಮಗಳು ಎಂದು ಇಟ್ಟುಕೊಂಡರೆ **ಅನ್ಯೋನ್ಯಸ್ಮಿನ್ನನ್ಯೋನ್ಯಾತ್ಮಕತಾಮನ್ಯೋನ್ಯಧರ್ಮಾಂಶ್ಚಾಧ್ಯಸ್ಯ** ಎನ್ನುವ ಪರಭಾಷ್ಯೋಕ್ತಿಯು ಅಯುಕ್ತವಾಗಬೇಕಾಗುವುದು. ಏವಂಚ ಪರರ ಮತದಲ್ಲಿ ಬುದ್ಧಿಗೇನೇ ಪಾತೃತ್ವವಿದ್ದುದರಿಂದ ಪ್ರಕೃತ್ಯರ್ಥವು ಕೂಡುತ್ತದೆ. ಮತ್ತು ಜ್ಞಾನಶಕ್ತಿ ಕ್ರಿಯಾಶಕ್ತಿ ಈ ಎರಡ ರ ಭೇದದಿಂದ ಪ್ರತ್ಯಯಾರ್ಥವಾದ ದ್ವಿತ್ವವೂ ಕೂಡುವುದರಿಂದ ಪ್ರಾಣನಿಂದ ಯುಕ್ತವಾದ ಬುದ್ಧಿಯೇ, ಅಂದರೆ ಪ್ರಾಣ ಬುದ್ಧಿ ಇವು ಎರಡು ಕರ್ಮಫಲ ಭೋಕ್ತೃಗಳು ಎಂದು ಹೇಳಬಹುದಿತ್ತಷ್ಟೆ. (೨) ಶಕ್ತಿಭೇದವಿದ್ದರೂ ವ್ಯಕ್ತಿಭೇದವು ಇಲ್ಲದಿರುವುದರಿಂದ ದ್ವಿತ್ವವು ಸ್ವರಸವಾಗುವುದಿಲ್ಲವೆಂದರೆ ಹಾಗಾದರೆ ಬುದ್ಧಿಗೆ ದ್ವಿತೀಯನು ಆರೋಪಿತ ಪಾತೃತ್ವದಿಂದಲಾದರೂ ಯುಕ್ತನಾದ ಜೀವನೇ ಆಗಬಹುದು. ಆರೋಪಿತ ಪಾತೃತ್ವವೂ ಇಲ್ಲದಿರುವ ಬ್ರಹ್ಮನು ಸರ್ವಥಾ ಆಗಲಾರನು. ಅಂತೂ ಬುದ್ಧಿಜೀವರು ಎನ್ನುವುದನ್ನು ಬಿಟ್ಟು ಜೀವೇಶ್ವರರೇ ಎಂದು ಸಿದ್ಧಾಂತ ಮಾಡಿದ್ದು ಅಯುಕ್ತವು. (೩.) ಹಾಗಾದರೆ ಶ್ರುತಿಗೆ ಆರೋಪಿತ ವಿಷಯತ್ವವನ್ನು ಹೇಳುವುದು ಯುಕ್ತವಲ್ಲವೆಂದು ಅನ್ನುವುದಾದರೆ ಛತ್ರಿನ್ಯಾಯದಿಂದ ಪಾತೃತ್ವ ವಿಲ್ಲದಿರುವ ಸಜಾತೀಯವಾದ ಮತ್ತೊಂದು ಜಡಪದಾರ್ಥವೇ ಎರಡನೇದ್ದು ಆಗಬಹುದಷ್ಟೆ. ಚೇತನನಾದ ಪರಮಾತ್ಮನಿಗೆ ಹೇಗೂ ಗ್ರಹಣವು ಆಗಲಾರದು. (೪) ಮತ್ತೂ ಬ್ರಹ್ಮನಿಗೆ ಹೃದಯಗುಹಾನಿಹಿತತ್ವವು **ಯೋ ವೇದ ನಿಹಿತಂ ಗುಹಾಯಾಂ** ಇದು ಮೊದಲಾದ ಶ್ರುತಿಗಳಿಂದ ಸಿದ್ಧವಾದಾಗ್ಯೂ **ಸರ್ವಗತಸ್ಯ ಬ್ರಹ್ಮಣೋಽರ್ಭಕೌಕಸ್ತ್ವಂ ನ ಪಾರಮಾರ್ಥಿಕಂ** ಎಂದು ಹೇಳತಕ್ಕ ಅದ್ವೈತಿಗಳ ಮತದಲ್ಲಿ ಅದು ತಾತ್ವಿಕವಲ್ಲ. ಮತ್ತು ಪೂರ್ವಪಕ್ಷದಲ್ಲಿ ಬುದ್ಧಿಯಲ್ಲಿಯೂ ಸಿದ್ಧಾಂತದಲ್ಲಿ ಬ್ರಹ್ಮ ನಲ್ಲಿಯೂ ಭೋಕ್ತೃತ್ವಕ್ಕೆ ಛತ್ರಿನ್ಯಾಯದಿಂದ ಲಕ್ಷಣಾವೃತ್ತಿಯನ್ನೇ ಒಪ್ಪಿರುವುದರಿಂದ ಪಾತೃತ್ವವು ಇಬ್ಬರಲ್ಲಿಯೂ ಇಲ್ಲ. ಭೋಕ್ತನು ಜೀವನೇ ಎಂದು ಸಿದ್ಧಾಂತಮಾಡಿರುವುದರಿಂದ **ಮಾತ್ರಯಾಽಪಿ ಪ್ರಮೇಯಸ್ಯ ಭೇದಾಭಾವೇ ಹಿ ವಾದಿನೋಃ। ಶಬ್ದಮಾತ್ರಾಯ ಕಲಹೋ ನ ಯುಕ್ತೋ ಮೂರ್ಖಯೋರಿವ ॥** ಎಂದು ಹೇಳಿದ ಪ್ರಕಾರ ಬುದ್ಧಿಜೀವರು ಎನ್ನುವ ಪೂರ್ವಪಕ್ಷದಿಂದ ವ್ಯರ್ಥವಾಗುವು ದು. (೫) ಮತ್ತು ಪಿಬಂತೌ ಎನ್ನುವುದರ ಉತ್ತರವಾಕ್ಯದಲ್ಲಿ **ಆತ್ಮಾನಂ ರಥಿನಂ ವಿದ್ಧಿ** ಎಂದು ಜೀವನಿಗೆ ಗಂತೃತ್ವದಿಂದ (ಅಂದರೆ ಜೀವನು ಹೊಂದುವವನು) **ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ** ಎಂದು ಪರಮಾತ್ಮನಿಗೆ ಗಮ್ಯತ್ವದಿಂದಲೂ (ಪರಮಾತ್ಮನು ಹೊಂದಲರ್ಹನು) ವಿಶೇಷಣವಿದ್ದಪ್ರಯುಕ್ತ ಜೀವ ಪರಮಾತ್ಮರೇ ಭೋಕ್ತೃಗಳು ಎಂದು **ವಿಶೇಷಣಾಚ್ಚ**

ಎನ್ನುವ ಸೂತ್ರಕ್ಕೆ ಅರ್ಥವು. ಹೀಗೆ ಮಾಯಾವಾದಿಗಳು ಹೇಳಿರುವರು. ಅದೂ ಅಯುಕ್ತವು. ಏಕೆಂದರೆ ಜೀವನಿಗೆ **ಆತ್ಮಾನಂ ರಥಿನಂ ವಿದ್ಧಿ** ಎಂದು ರಥಿತ್ವದಿಂದಲೂ **ಬುದ್ಧಿಂ ತು ಸಾರಥಿಂ ವಿದ್ಧಿ** ಎಂದು ಬುದ್ಧಿಗೆ ಸಾರಥಿತ್ವದಿಂದಲೂ ವಿಶೇಷಣವಿದ್ದ ಪ್ರಯುಕ್ತ ಅಂದರೆ ಜೀವನು ರಥಿಕನು. ಬುದ್ಧಿಯು ಸಾರಥಿಯು ಎಂದು ವಿಶೇಷಣವಾಗಿ ಹೇಳಿದ್ದರಿಂದ ಬುದ್ಧಿಜೀವರೇ ಭೋಕ್ತೃಗಳು ಎಂದೂ ಹೇಳಲೂ ಶಕ್ಯವಾಗುವುದು. (೬) ಮತ್ತು ಪಿಬಂತೌ ಎನ್ನುವುದಕ್ಕೆ ಲಕ್ಷಣಯಾ ಬ್ರಹ್ಮಪರತ್ವವಿದ್ದರೂ ಜೀವಪರತ್ವವೂ ಇದ್ದುದರಿಂದ ಈ ಒಂದನೇ ಅಧ್ಯಾಯದಲ್ಲಿ **ಈಕ್ಷತೇರ್ನಾಶಬ್ದಂ** ಇತ್ಯಾದಿ ಸೂತ್ರಗಳಲ್ಲಿ ಸದಾದಿಶಬ್ದಗಳಿಗೆ ಅನ್ಯಪರತ್ವವನ್ನು ನಿರಾಕರಿಸಿ ಬ್ರಹ್ಮಪರತ್ವವನ್ನೇ ಹೇಳಿದ್ದರಿಂದ ಬ್ರಹ್ಮನಲ್ಲಿಯೇ ಸಮನ್ವಯವನ್ನು ಹೇಳುವ ಅಧ್ಯಾಯದಲ್ಲಿ ಈ ಅಧಿಕರಣಕ್ಕೆ ಅಂತರ್ಭಾವಸಂಗತಿಯು ಇಲ್ಲವೆಂದಾಗುವುದು.

## ರಾಮಾನುಜಾಚಾರ್ಯರೀತ್ಯಾ

ವಿಚಾರ॥ (೧) ರಾಮಾನುಜಾಚಾರ್ಯರೂ ಮಾಯಾವಾದಿಗಳಂತೆಯೇ ಅದೇ ವಿಷಯ ವಾಕ್ಯವನ್ನು ಇಟ್ಟುಕೊಂಡು ಹಾಗೆಯೇ ಪೂರ್ವಪಕ್ಷಮಾಡಿಕೊಂಡು ಪರಮಾತ್ಮನೇ ಅತ್ತನು ಎಂದೇ ಸಿದ್ಧಾಂತ ಮಾಡಿರುವರು. ಆದರೆ **ಅತ್ತಾ ಚರಾಚರಗ್ರಹಣಾತ್** ಇದು ಮೊದಲಾದುದು ನಾಲ್ಕು ಸೂತ್ರಗಳು ಒಂದೇ ಅಧಿಕರಣವು. ಎರಡು ಅಧಿಕರಣಗಳು ಎಂದು ಹೇಳಿದ್ದು ಅಯುಕ್ತವು. ಏಕೆಂದರೆ ಒಂದು ಪ್ರಕರಣದಲ್ಲಿದ್ದ ವಾಕ್ಯವಿಶೇಷಗಳ ಅರ್ಥಗಳನ್ನು ನಿರ್ಣಯಿಸತಕ್ಕ ಪಾದಾಂತರ ವ್ಯವಧಾನವಾಗಲೀ ಅಧಿಕರಣಾಂತರ ವ್ಯವಧಾನವಾಗಲೀ ಇಲ್ಲದಿದ್ದವುಗಳು ಉಪಜೀವ್ಯ ಉಪಜೀವಕಭಾವದಿಂದ ಪರಸ್ಪರ ಅನ್ವಿತಾರ್ಥವುಳ್ಳವುಗಳುಆದ ಸೂತ್ರಗಳಿಗೆ ವಿಷಯವಾಕ್ಯಗಳಿಗೆ ಭೇದವಿದ್ದರೂ ಭಿನ್ನಾಧಿಕರಣತ್ವವು ಕೂಡಲಾರದು. ಹೇಗೆಂದರೆ ಅತ್ತಾ ಇತ್ಯಾದಿ ಎರಡು ಸೂತ್ರಗಳಿಗೆ **ಯಸ್ಯ ಬ್ರಹ್ಮ ಚ ಕ್ಷತ್ರಂ** ಇತ್ಯಾದಿ ವಾಕ್ಯವು ವಿಷಯವಾಕ್ಯವು. **ಗುಹಾಂ ಪ್ರವಿಷ್ಟಾ** ಇತ್ಯಾದಿ ಎರಡು ಸೂತ್ರಗಳಿಗೆ ವಿಷಯವಾಕ್ಯವು ಋತಂ ಪಿಬಂತೌ ಇತ್ಯಾದಿ ವಾಕ್ಯವು. ಇವೆರಡು ವಾಕ್ಯವೂ ಕಾಠಕದಲ್ಲಿ ಒಂದೇ ಪ್ರಕರಣ ದಲ್ಲಿರತಕ್ಕುದು. ಉಪಜೀವ್ಯ ಉಪಜೀವಕಭಾವದಿಂದ ಅನ್ವಿತಾರ್ಥವುಳ್ಳದ್ದೂ ಆಗಿದೆ. ಏವಂಚ ನಾಲ್ಕು ಸೂತ್ರಗಳೂ ಒಂದೇ ಅಧಿಕರಣವು. ಭಿನ್ನಾಧಿಕರಣವಲ್ಲ. ಹೀಗೆ ರಾಮಾನುಜಾಚಾರ್ಯರು ಹೇಳಿರುವರು. ಅದು ಅಯುಕ್ತವು. ಏಕೆಂದರೆ— ಅತ್ತಾ ಇತ್ಯಾದಿ ಮೊದಲಿನ ಎರಡು ಸೂತ್ರಗಳಿಗೆ ಬೃಹದಾರಣ್ಯಕದಲ್ಲಿದ್ದ ಸ ಯದ್ಯದೇವಾಸೃಜತ ಇತ್ಯಾದಿ ವಾಕ್ಯವು ವಿಷಯವಾಕ್ಯವು. ಗುಹಾಂ ಪ್ರವಿಷ್ಟೌ ಇತ್ಯಾದಿ ಎರಡು ಸೂತ್ರಗಳಿಗೆ ಕಾಠಕದಲ್ಲಿದ್ದ ಋತಂ ಪಿಬಂತೌ ಇತ್ಯಾದಿ ವಾಕ್ಯವು ವಿಷಯ ವಾಕ್ಯವು. ಆದಕಾರಣ ವಿಷಯವಾಕ್ಯಗಳು ಒಂದು ಪ್ರಕರಣದಲ್ಲಿದ್ದವುಗಳಲ್ಲ. ಅದ್ವೈತಿಗಳು ಉದಾಹರಿಸಿರುವ **ಯಸ್ಯ ಬ್ರಹ್ಮ ಚ** ಇತ್ಯಾದಿ ಕಾಠಕವಾಕ್ಯದಲ್ಲಿ ಆದರೂ ಸೂತ್ರದಲ್ಲಿ ಉಕ್ತವಾದ ಕರ್ಮಫಲಭೋಕ್ತನು ಸಾಕ್ಷಾತ್ ಶ್ರುತನಾಗಲಿಲ್ಲ. ನಾವು ಹೇಳಿದ ಬೃಹದಾರಣ್ಯಕದಲ್ಲಿರುವ ಸರ್ವಂ ವಾ **ಅತ್ತಿ** ಎನ್ನುವ ವಾಕ್ಯದಲ್ಲಿ ಕರ್ಮಫಲಭೋಕ್ತನು ಸಾಕ್ಷಾತ್ ಶ್ರುತನಾಗಿದ್ದಾನೆ. ಆದಕಾರಣ ಈ ವಿಷಯವಾಕ್ಯವೇ ಸೂತ್ರಾನುಗುಣವಾದುದು. (೨) ಮತ್ತು ಅದೃಶ್ಯತ್ವಾಧಿಕರಣ ದ್ಯುಭ್ವಾದ್ಯಧಿಕರಣ ಗಳಿಗೆ **ಯತ್ತದದ್ರೇಶ್ಯಂ, ಯಸ್ಮಿನ್ ದ್ಯೌಃ** ಇತ್ಯಾದಿ ಏಕಪ್ರಕರಣದಲ್ಲಿರುವ ವಾಕ್ಯಾರ್ಥ

ನಿರ್ಣಾಯಕತ್ವವಿದ್ದರೂ ಉಪಜೀವ್ಯ ಉಪಜೀವಕ ಭಾವದಿಂದ ಅನ್ವಿತಾರ್ಥಕತ್ವವಿದ್ದರೂ ಭಿನ್ನಾಧಿಕರಣತ್ವವನ್ನು ಒಪ್ಪಿದಂತೆಯೇ ಇಲ್ಲಿಯೂ ಭಿನ್ನಾಧಿಕರಣತ್ವವನ್ನು ಒಪ್ಪಿರಬಹುದಷ್ಟೆ ಹೀಗೆಯೇ ಅನೇಕ ದೋಷಗಳು ಬರುವುದರಿಂದ ರಾಮಾನುಜಾಚಾರ್ಯರು ಹೇಳಿದ್ದು ಅಯುಕ್ತವು.

## ಅಧಿಕರಣ ಸಾರಾಂಶ

(೧) ಕಾಠಕದಲ್ಲಿ ೩ನೇ ವಲ್ಲಿಯಲ್ಲಿ **ಋತಂ ಪಿಬಂತೌ** ಎನ್ನುವುದರಿಂದ ಉಕ್ತರಾದ ಕರ್ಮಫಲಭೋಕ್ತೃಗಳು ಜೀವೇಶ್ವರರೋ, ಈಶ್ವರರೂಪವಿಶೇಷಗಳೋ ಎಂದು ಸಂದೇಹವು. ಜೀವೇಶ್ವರರೇ ಎಂದು ಪೂರ್ವಪಕ್ಷವು. ಏಕೆಂದರೆ ಪಿಬಂತೌ ಎನ್ನುವ ದ್ವಿವಚನಶ್ರುತಿಯು ದ್ವಿತ್ವವಾಚಕವು. ದ್ವಿತ್ವವು ನಿರ್ಭಿನ್ನನಾದ ಬ್ರಹ್ಮನಲ್ಲಿ ಕೂಡಲಾರದು. ಕರ್ಮಬಂಧ ರಹಿತನಾದ ಬ್ರಹ್ಮನಲ್ಲಿ ಪ್ರಕೃತ್ಯರ್ಥಭೂತವಾದ ಕರ್ಮಫಲ ಭೋಕ್ತೃತ್ವವೂ ಕೂಡಲಾರದು. ಈಶ್ವರನಿಗೆ ಭೋಕ್ತೃತ್ವವಿಲ್ಲದಿದ್ದರೂ ಛತ್ರಿನ್ಯಾಯದಿಂದ ಭೋಕ್ತೃತ್ವವ್ಯಪದೇಶವು. ಹೃದಯಗುಹಾಪ್ರವಿಷ್ಟತ್ವವೂ ಬ್ರಹ್ಮಶಬ್ದವೂ ಜೀವನಲ್ಲಿಯೂ ಕೂಡುತ್ತದೆ. ಆದಕಾರಣ ಕರ್ಮಫಲ ಭೋಕ್ತೃಗಳು ಜೀವೇಶ್ವರರೇ. ಎಂದು ಪೂರ್ವಪಕ್ಷ ಬಂದರೆ ಆತ್ಮಾ ಅಂತರಾತ್ಮಾ ಎನ್ನುವ ಈಶ್ವರರೂಪವಿಶೇಷಗಳೇ, ಎಂದು ಸಿದ್ಧಾಂತವು. ಹೇಗೆಂದರೆ— **ಗುಹಾವೇಶಾದ್ಬ್ರಹ್ಮಶಬ್ದಾತ್ತೇತುತ್ವಾದಕ್ಷರತ್ವತಃ। ಪಾರತ್ವಾದಭಯತ್ವಾಚ್ಚ ಬ್ರಹ್ಮೈವಾತ್ರ ನಿಗದ್ಯತೇ॥** ಗುಹಾಂಪ್ರವಿಷ್ಟೌ ಎಂದು ಹೇಳಿದ ಗುಹಾನಿಹಿತತ್ವಲಿಂಗವು **ಯೋ ವೇದ ನಿಹಿತಂ ಗುಹಾಯಾಂ, ಗುಹಾಹಿತಂ ಗಹ್ವರೇಷ್ಠಂ ಪುರಾಣಂ, ಗುಹಾಂ ಪ್ರವಿಶ್ಯ ತಿಷ್ಠಂತಂ,** ಇದು ಮೊದಲಾದ ಶ್ರುತಿಗಳಲ್ಲಿ ಬ್ರಹ್ಮನಲ್ಲಿಯೇ ಪ್ರಸಿದ್ಧವಾದುದರಿಂದ ಬ್ರಹ್ಮತ್ವವು ಸಿದ್ಧವಾಗುತ್ತದೆ. **ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಂ। ಅಭಯಂ ತಿತೀರ್ಷತಾಂ ಪಾರಂ** ಎನ್ನುವ ಉತ್ತರವಾಕ್ಯದಲ್ಲಿ ಶ್ರುತವಾದ ಪರತ್ವ ವಿಶೇಷಣಯುಕ್ತವಾದ ಬ್ರಹ್ಮಶಬ್ದದಿಂದಲೂ **ಏಷ ಸೇತುರ್ವಿಧೃತಿಃ** ಇದು ಮೊದಲಾದ ಶ್ರುತ್ಯಂತರ ಸಿದ್ಧಗಳಾದ ಸೇತುತ್ವ (ಸರ್ವಾಶ್ರಯತ್ವ) ಅಭಯತ್ವ ಮೊದಲಾದ ಲಿಂಗಗಳಿಂದಲೂ ಪರಬ್ರಹ್ಮನೇ ಇಲ್ಲಿ ಪ್ರತಿಪಾದ್ಯನು. (೨) **ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ** ಇತ್ಯಾದಿ ಸ್ಮೃತಿಗಳಿಂದ ನಿರ್ಭಿನ್ನನಾದ ಶ್ರೀಹರಿಗೆ ಆತ್ಮಾ ಅಂತರಾತ್ಮಾ ಎನ್ನುವ ರೂಪವಿಶೇಷದಿಂದ ದ್ವಿತ್ವವು ಯುಕ್ತವಾಗುವುದು. (೩) ಮತ್ತೂ **ಯಥೈಕಸ್ಮಿನ್ನೇವ ಪಾಶೇsದಿತಿಃ ಪಾಶಾನಿತಿ ಶ್ರುತಿಃ। ತಥೈಕಸ್ಮಿನ್ನೀಶ್ವರೇsಸ್ತು ಪಿಬಂತಾವಿತಿ ವಾಗಪಿ ॥** ಅಗ್ನೀಷೋಮೀಯ ಪಶುಸಂಬಂಧಿಯಾದ ಒಂದೇ ಪಾಶದಲ್ಲಿ **ಅದಿತಿಃ ಪಾಶಾನ್ ಪ್ರಮೋಕ್ತು ದೇವಃ** ಎಂದು ಅಗ್ನೀಷೋಮೀಯಪಶುಪ್ರಕರಣದಲ್ಲಿದ್ದ ಮಂತ್ರದಲ್ಲಿದ್ದ ಬಹುವಚನವೋ, ಹಾಗೆಯೇ ನಿರ್ಭಿನ್ನನಾದ ಈಶ್ವರನಲ್ಲಿ ಪಿಬಂತೌ ಎನ್ನುವ ದ್ವಿವಚನಾಂತವಾದ ಶ್ರುತಿಯು ಉಪಪನ್ನವಾಗಿರುತ್ತದೆ. (೪) **ಅನ್ಯೂನಾನಧಿಕತ್ವಾಚ್ಚ ಪೂರ್ಣಸ್ವಾನಂದಭೋಜನಾತ್। ವಿರಾಗಾಚ್ಚ ಪರಸ್ಯಾಸ್ಯ ಭೋಕ್ತೃತ್ವಪ್ರತಿಷೇಧನಂ ॥** ಇತ್ಯಾದಿ ಸ್ಮೃತಿಗಳಿಂದ ಅಭೋಕ್ತೃತ್ವ ಶ್ರುತಿಗೆ ಗತಿಯನ್ನು ಹೇಳಿ, **ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್** ಇತ್ಯಾದಿ ಶ್ರುತಿಗಳಿಂದ ಶುಭಫಲ ಭೋಕ್ತೃತ್ವವು ಕೂಡುವುದರಿಂದಲೂ, **ಕ್ರೀಡಾಭೋಗೋ ನ ಚಾನ್ಯಥಾ** ಇತ್ಯಾದಿ ಶ್ರುತಿಗಳಿಂದ ಕ್ರೀಡಾರೂಪವಾದ ಭೋಗವನ್ನು ಹೇಳಿದ್ದರಿಂದಲೂ ಅನಶನಶ್ರುತಿಯು ಅಶುಭಭೋಗಾಭಾವ ವಿಷಯಕವಾಗಿರುವುದರಿಂದ **ಅನಶ್ನನ್ನನ್ಯಃ** ಇತ್ಯಾದಿ ಶ್ರುತಿವಿರೋಧವಿಲ್ಲ. ಆದುದರಿಂದ **ಋತಂ**

ಪಿಬಂತೌ ಇತ್ಯಾದಿ ವಾಕ್ಯಪ್ರತಿಪಾದ್ಯರಾದ ಶುಭ ಕರ್ಮಫಲ ಭೋಕ್ತೃಗಳು ಆತ್ಮಾ ಅಂತರಾತ್ಮಾ ಎನ್ನುವ ಭಗವದ್ರೂಪವಿಶೇಷಗಳೇ. ಅಧಿ. ॥ ೩ ॥

**ಗುಹಾಧಿಕರಣವು ಸಮಾಪ್ತವಾಯಿತು.**

## ೪ ಅಂತರಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಚಕ್ಷುರಂತಸ್ಥತ್ವ ಲಿಂಗಕ್ಕೆ ಸಮನ್ವಯವು. ಶ್ರುತ್ಯಾದಿ ಸಂಗತಿಯನ್ನೂ ವಿಷಯವಾಕ್ಯವನ್ನೂ ವಿಷಯಸಂಶಯಗಳನ್ನೂ ಸಯುಕ್ತಿಕವಾಗಿ ಪೂರ್ವಪಕ್ಷವನ್ನೂ ಕೂಡ ತೋರಿಸುತ್ತಾರೆ—

**ಭಾಷ್ಯ ॥ ಆದಿತ್ಯೇ . ವಿಷ್ಣುರಿತ್ಯುಕ್ತಂ। ಯ ಏಷ ಆದಿತ್ಯೇ ಪುರುಷಃ ಸೋऽಹಮಸ್ಮಿ ಸ ಏವಾಹಮಸ್ಮಿ ( ಛಾ.೪.೧೧.)। ಇತ್ಯಾದಾವಗ್ನೀನಾಮೇವಾದಿತ್ಯಾದಿ ಸ್ಥತ್ವಮುಚ್ಯತೇ ॥ ೧ ॥**

**ಭಾಷ್ಯಾರ್ಥ** ॥ ಯಶ್ಚಾಸಾವಾದಿತ್ಯೇ ಎಂದು ಆನಂದಮಯಾಧಿಕರಣದಲ್ಲಿ ಉದಾಹೃತವಾದ ಶ್ರುತಿಯಲ್ಲಿಯೂ, ಹಾಗೆಯೇ ಅಂತರಾದಿತ್ಯೇ ಎಂದು ಅಂತರಧಿಕರಣದಲ್ಲಿ ಉದಾಹೃತವಾದ ಶ್ರುತಿಯಲ್ಲಿಯೂ ಆನಂದಮಯನೂ ಅಂತಸ್ಥನೂ ಆದ ವಿಷ್ಣುವು ಆದಿತ್ಯನಲ್ಲಿದ್ದಾನೆಂದು ಹೇಳಲ್ಪಟ್ಟಿದೆ. ಛಾಂದೋಗ್ಯಶ್ರುತಿಯಲ್ಲಿ ಯಾವ ಈ ಪುರುಷನು ಆದಿತ್ಯನಲ್ಲಿದ್ದಾನೋ, ಅವನು ನಾನು, ಅವನೇ ನಾನಾಗಿರುತ್ತೇನೆ. ಇದುಮೊದಲಾದವಾಕ್ಯಗಳಲ್ಲಿ ಅಗ್ನಿಗಳಿಗೇನೇ ಆದಿತ್ಯಾದಿಗಳಲ್ಲಿ ಸ್ಥಿತಿಯು ಹೇಳಲ್ಪಡುತ್ತದೆ.

ವಿಶೇಷಾಂಶ ॥ (೧) ಪ್ರಥಮಾದಿಪದದಿಂದ, ೧) ಅಥೈನಮನ್ವಾಹಾರ್ಯಪಚನೋऽನುಶಶಾಸ। ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ। ಸೋऽಹಮಸ್ಮಿ ಸ ಏವಾಹಮಸ್ಮಿ ೨) ಅಥೈನಮಾಹವನೀಯೋऽನುಶಶಾಸ ಯ ಏಷ ವಿದ್ಯುತಿ ॥ ಎನ್ನುವ ಎರಡು ವಾಕ್ಯಗಳನ್ನು ಇಟ್ಟುಕೊಳ್ಳಬೇಕು. (೨) ಎರಡನೇ ಆದಿಪದದಿಂದ ಚಂದ್ರವಿದ್ಯುತ್‌ಗಳನ್ನು ಇಟ್ಟುಕೊಳ್ಳಬೇಕು. (೩) ಪೂರ್ವಪಕ್ಷದಲ್ಲಿ ಗಾರ್ಹಪತ್ಯಮೊದಲಾದ ಬಹ್ವಗ್ನಿಶ್ರುತಿರೂಪವಾದ ಯುಕ್ತಿಯನ್ನು ಸೂಚಿಸುವುದಕ್ಕಾಗಿ ಎರಡು ಆದಿಶಬ್ದಗಳೂ, ಬಹುವಚನವೂ.

**ಭಾಷ್ಯ ॥ ಅತೋऽಕ್ಷ್ಯಾದಿತ್ಯಯೋರೈಕ್ಯಾತ್— ಯ ಏಷೋऽಂತರಕ್ಷಿಣಿ ಪುರುಷೋ ದೃಶ್ಯತೇ ( ಛಾ.೪.೧೫.)। ಇತ್ಯತ್ರಾಪ್ಯಗ್ನಿರೇವೋಚ್ಯತೇ ॥ ೨ ॥**

ಭಾಷ್ಯಾರ್ಥ ॥ (ಯಾವ ಕಾರಣದಿಂದ ಆನಂದಮಯಾಖ್ಯ ವಿಷ್ಣುವಿನಲ್ಲಿರತಕ್ಕುದೆಂದು ಹೇಳಲ್ಪಟ್ಟ ಆದಿತ್ಯಸ್ಥತ್ವವು ಛಾಂದೋಗ್ಯದಲ್ಲಿ ಯ ಏಷ ಆದಿತ್ಯೇ ಪುರುಷಃ ಸೋऽಹಮಸ್ಮಿ ಇತ್ಯಾದಿಗಳಲ್ಲಿ ಅಗ್ನಿಗಳಲ್ಲಿ ಗಾರ್ಹಪತ್ಯಾಖ್ಯ ಅಗ್ನಿಗೇನೇ ತೋರುತ್ತದೋ, ವಿಷ್ಣುವಿಗೆ ತೋರುವುದಿಲ್ಲವೋ, ಏಕೆಂದರೆ

ಇಲ್ಲ ಗಾರ್ಹಪತ್ಯ, ದಕ್ಷಿಣಾಗ್ನಿ ಆಹವನೀಯ ಎಂಬುವ ಮೂರು ಅಗ್ನಿಗಳು ಕ್ರಮದಿಂದ ಆದಿತ್ಯ, ಚಂದ್ರ ವಿದ್ಯುತ್ ಇವುಗಳಲ್ಲಿ ಇರುತ್ತವೆ ಎಂದು ಹೇಳಲ್ಪಡುತ್ತದೋ ಗಾರ್ಹಪತ್ಯಾಖ್ಯ ಅಗ್ನಿಗೇನೇ ಆದಿತ್ಯಸ್ಥತ್ವವು ಹೇಳಲ್ಪಡುತ್ತದೋ ಆದುದರಿಂದ **ಆದಿತ್ಯಶ್ಚಕ್ಷುರ್ಭೂತ್ವಾ ಅಕ್ಷಿಣೀ ಪ್ರಾವಿಶತ್** ಎಂದು ಐತರೇಯ ಶ್ರುತಿಯ ದೆಶೆಯಿಂದ ಅಚೇತನವಾದ ಅಕ್ಷಿ ಆದಿತ್ಯಮಂಡಲಗಳಿಗೆ ಆದಿತ್ಯ ಚಕ್ಷುಃಪದಗಳಿಂದ ಹೇಳಲ್ಪಟ್ಟ ಏಕಚೇತನಾಧಿಷ್ಠಿತತ್ವರೂಪವಾದ ಒಂದು ಧರ್ಮದಿಂದ ಏಕವಿಧತ್ವವಿದ್ದಪ್ರಯುಕ್ತ ಯಾವ ಈ ಪುರುಷನು ಕಣ್ಣಿನ ಒಳಗೆ ಕಾಣಲ್ಪಡುತ್ತಾನೋ ಎಂದು ಹೇಳುವ ವಾಕ್ಯದಲ್ಲಿಯೂ ಅಕ್ಷಿಸ್ಥನಾಗಿ ಗಾರ್ಹಪತ್ಯಾಗ್ನಿಯೇ ಹೇಳಲ್ಪಡುತ್ತಾನೆ.

**ವಿಶೇಷಾಂಶ** ॥ (೧) ಪೂರ್ವಪಕ್ಷ ಶ್ರುತಿಯಲ್ಲಿದ್ದ ಅಹಂ ಶಬ್ದವು ಅಗ್ನಿಯಲ್ಲಿಯೇ ಮುಖ್ಯವು. ಆದಕಾರಣ ಅದಕ್ಕೇನೇ ಗ್ರಹಣವು. (೨) ಅಥವಾ **ಆದಿತ್ಯಸ್ತ್ವೃದಿವ ವೈ ಚಕ್ಷುಃ ಶುಕ್ಲಂ ಕೃಷ್ಣಂ ಕನೀನಿಕಾ** ಎನ್ನುವ ಶ್ರುತ್ಯನುಸಾರವಾಗಿ ಆದಿತ್ಯ ಚಕ್ಷುಸ್ಸುಗಳಿಗೆ ತ್ರಿವೃತ್ವರೂಪಧರ್ಮದಿಂದ ಏಕವಿಧತ್ವವಿದ್ದ ಪ್ರಯುಕ್ತ ತಥಾಚ ಆದಿತ್ಯನಲ್ಲಿ ಇದ್ದಾನೆ ಎಂದು ಹೇಳಿದ್ದರಿಂದ ಅರ್ಥಾತ್ ಅಕ್ಷಿಯಲ್ಲಿವೆ ಎಂದೂ ಹೇಳಲ್ಪಟ್ಟಂತೆ ಆಯಿತು. (೩) ಯದ್ಯಪಿ **ಸ ಯಶ್ಚಾಯಂ** ಎಂದು ಪೂರ್ವೋದಾಹೃತ ತೈತ್ತಿರೀಯ ಶ್ರುತಿಯಲ್ಲಿದ್ದ ಆದಿತ್ಯಶಬ್ದವು ಉತ್ಕೃಷ್ಟಚೇತನಮಾತ್ರಕ್ಕೆ ಉಪಲಕ್ಷಕವೆಂದು ವ್ಯಾಖ್ಯಾತವಾಗಿದೆ. ಆದಾಗ್ಯೂ ಈ ಅಧಿಕರಣದಲ್ಲಿ ಸೂರ್ಯಾಭಿಮನ್ಯಮಾನವಾದ ಆದಿತ್ಯಮಂಡಲಪರತ್ವವನ್ನು ಅಂಗೀಕರಿಸಿಕೊಂಡು ಆಕ್ಷೇಪಪರಿಹಾರಗಳನ್ನು ಮಾಡಿರುವರು. ಆದಪ್ರಯುಕ್ತವೇ ಟೀಕೆಯಲ್ಲಿ **ಅಕ್ಷ್ಯಾದಿತ್ಯಯೋರೇಕ ವಿಧತ್ವಾತ್** ಎಂದು ಹೇಳಿರುವರು. (೪) ತತ್ವಪ್ರದೀಪದಲ್ಲಿ ಆದರೂ ಅಕ್ಷಿರೂಪ ಇಂದ್ರಿಯಪ್ರೇರಕನಿಗೂ ಆದಿತ್ಯನಿಗೂ ಏಕತ್ವವಿದ್ದಪ್ರಯುಕ್ತ ಎಂದು ಮುಖ್ಯಾರ್ಥವನ್ನು ಇಟ್ಟುಕೊಂಡೇ ವ್ಯಾಖ್ಯಾನ ಮಾಡಿರುವರು. (೫) ಚಂದ್ರಿಕಾ ಗ್ರಂಥದಲ್ಲಿಯೂ ತತ್ವಪ್ರದೀಪವನ್ನನುಸರಿಸಿಕೊಂಡು ಅಕ್ಷ್ಯಾದಿಪದವು ದೇವತಾಪರವೆಂದು ವ್ಯಾಖ್ಯಾನ ಮಾಡಿರುವರು. ಆದುದರಿಂದಲೇ ಭಾಷ್ಯದಲ್ಲಿಯೂ ಸನ್ನ್ಯಾಯರತ್ನಾವಳಿಯಲ್ಲಿಯೂ **ಅಕ್ಷ್ಯಾದಿತ್ಯಯೋರೈಕ್ಯಾತ್** ಎಂದೇ ಹೇಳಿರುವರು. **ಏಕವಿಧತ್ವಾತ್** ಎಂದು ಹೇಳಲಿಲ್ಲ. (೬) **ಅಕ್ಷ್ಯಾದಿಯೋರೇಕವಿಧತ್ವಾತ್** ಎನ್ನುವ ಟೀಕೆಯನ್ನು ಭಾಷ್ಯವನ್ನನುಸರಿಸಿ ಪ್ರಕಾರಭೇದವನ್ನು ನಿಷೇಧಿಸುತ್ತಾ ಪ್ರಕಾರೈಕ್ಯಪರವನ್ನಾಗಿ ಇಟ್ಟುಕೊಳ್ಳಬೇಕು. (೭) ತಥಾಚ ಛಂದೋಗ ಶ್ರುತಿಯಲ್ಲಿದ್ದ ಅಕ್ಷಿಸ್ಥತ್ವಕ್ಕೆ ಅನ್ಯನಿಷ್ಠತ್ವವನ್ನು ಆಕ್ಷೇಪಿಸಿಕೊಂಡು ಆನಂದಮಯಾಧಿಕರಣದಲ್ಲಿ ಉದಾಹೃತವಾದ ತೈತ್ತಿರೀಯ ಶ್ರುತಿಯಲ್ಲಿ ಅರ್ಥಾದುಕ್ತವಾದ ಆದಿತ್ಯಸ್ಥತ್ವವನ್ನು ಕಂಠತಃ ಹೇಳಿದ್ದರಿಂದ ಆದಿತ್ಯಸ್ಥನೇ ಅಕ್ಷಿಸ್ಥನಾಗಿರುವುದರಿಂದ ಅಕ್ಷಿಸ್ಥತ್ವಕ್ಕೂ ಕೂಡ ಅನ್ಯನಿಷ್ಠತ್ವವನ್ನು ಆಕ್ಷೇಪಿಸಿಕೊಂಡದ್ದರಿಂದ ಆ ಆನಂದಮಯಾಧಿಕರಣದಿಂದ ಇದಕ್ಕೆ ಆಕ್ಷೇಪಿಕೀಸಂಗತಿಯನ್ನು ಹೇಳಿದ ಹಾಗಾಯಿತು. ಅಕ್ಷಿಸ್ಥತ್ವವು ವಿಷಯವು. ಅಗ್ನಿಗೋ ವಿಷ್ಣುವಿಗೋ ಎಂದು ಸಂದೇಹವು. ಅಗ್ನಿಗಳಿಗೇನೇ ಅಕ್ಷಿಸ್ಥತ್ವವು ಎಂದು ಪೂರ್ವಪಕ್ಷವು. ಈ ವಿಷಯದಲ್ಲಿ ಆದಿತ್ಯಸ್ಥತ್ವರೂಪವಾದ ಯುಕ್ತಿಯೂ ಉಕ್ತವಾಯಿತು. (೮) ಯದ್ಯಪಿ **ನೇತರೋಽನುಪಪತ್ತೇಃ** ಇತ್ಯಾದಿಗಳಲ್ಲಿ ವಿಷ್ಣುಜ್ಞಾನದಿಂದ ಮೋಕ್ಷವಾಗುತ್ತದೆಂದು ಉಕ್ತವಾಗಿದೆ. ಆ ಮೋಕ್ಷವು ತದ್ಯಥಾ ಎನ್ನುವ ವಾಕ್ಯದಿಂದ **ಯ ವಿಷೋಽಂತರಕ್ಷಿಣಿ** ಎಂದು ಹೇಳಿದ ಅಕ್ಷಿಸ್ಥನಾದ ಅಗ್ನಿಯ ಜ್ಞಾನದಿಂದ ಆಗುತ್ತದೆಂದು ತೋರುತ್ತದೆ. ಹೀಗೆ ಋಜುಸಂಗತಿಯಿಂದಲೇ

ಅಧಿಕರಣವನ್ನು ಆರಂಭಿಸಬಹುದಿತ್ತು. ಆದಾಗ್ಯೂ ಇಲ್ಲಿ ಯ ಏಷ ಆದಿತ್ಯೇ ಪುರು ಷಃ ಯ ಏಷೋಽಂತರಕ್ಷಿಣಿ ಪುರುಷಃ । ಎನ್ನುವ ವಾಕ್ಯಗಳಿಗೆ ಆದಿತ್ಯಕ್ಷಿಕ್ಷುರ್ಭೂತ್ವಾ ಎನ್ನುವ ವಾಕ್ಯದ್ವಾರಾ ಏಕಾರ್ಥತ್ವವನ್ನು ಇಟ್ಟುಕೊಂಡು ತದ್ವಾರಾ ಯ ಏಷ ಆದಿತ್ಯೇ ಎನ್ನುವ ವಾಕ್ಯದಿಂದ ಯಶ್ಚಾಸಾವಾದಿತ್ಯೇ ಎನ್ನುವ ವಾಕ್ಯಕ್ಕೆ ಸಂಗತಿಯನ್ನು ಸಂಪಾದಿಸಿ ತದ್ವಾರಾ ಅರ್ಥಾಕ್ಷಿಪ್ತವಾದ ಯ ಏಷೋಽಂತರಕ್ಷಿಣಿ ಎನ್ನುವ ವಾಕ್ಯಕ್ಕೂ ಅದರಿಂದ ಸಂಗತಿಯಿದೆ ಎಂದು ವಕ್ರಸಂಗತಿಯಿಂದ ಈ ಅಧಿಕರಣವನ್ನು ಆರಂಭಿಸಿದ್ದು ಆದಿತ್ಯಸ್ಥತ್ವ ರೂಪವಾದ ಲಿಂಗಕ್ಕೂ ಸಮನ್ವಯವು ಸಿದ್ಧಿಸುವುದಕ್ಕಾಗಿ ಎಂದು ತಿಳಿಯತಕ್ಕುದು.

ಪೀಠಿಕೆ ॥ ಅಗ್ನಿಗೆ ಅಕ್ಷಿಸ್ಥತ್ವವು ಸಿದ್ಧವಾದರೆ ಕೇವಲ ಆನಂದಮಯತ್ವವು ಪ್ರಾಪ್ತವಾಗುತ್ತದೆ ಎಂದಲ್ಲ, ಮತ್ತೆ ಮೊದಲು ನೇತರಃ ಇತ್ಯಾದಿಗಳಲ್ಲಿ ವಿಷ್ಣುಜ್ಞಾನದಿಂದ ಮೋಕ್ಷವಾಗುತ್ತದೆ ಎಂದು ಹೇಳಿದ್ದೂ ಬಾಧಿತವಾಗುವುದು ಎನ್ನುತ್ತಾರೆ—

**ಭಾಷ್ಯ ॥ ಅತಃ ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ (ಛಾ.೪.೧೪.)। ಇತ್ಯಗ್ನಿಜ್ಞಾನಾದೇವ ಸರ್ವಪಾಪಾ ಶ್ಲೇಷಾನ್ಮೋಕ್ಷೋಪಪತ್ತಿರಿತಿ ॥ ೩ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಅಗ್ನಿಯು ಅಕ್ಷಿಯಲ್ಲಿದ್ದಾನೋ ಆದುದರಿಂದ ಅಗ್ನಿಯ ಜ್ಞಾನದಿಂದಲೇ ಮೋಕ್ಷವೂ ಆಗುವುದು. (ವಿಷ್ಣುಜ್ಞಾನದಿಂದ ಅಲ್ಲ, ಏಕೆಂದರೆ) ಅಕ್ಷಿಯಲ್ಲಿದ್ದ ಅಗ್ನಿಜ್ಞಾನದಿಂದ ಸಮಸ್ತ ಪಾಪಗಳೂ ಸಂಬದ್ಧಗಳಾಗುವುದಿಲ್ಲ (ಅದು ಅಸಿದ್ಧವಲ್ಲ) ಯಥಾ=ಹೇಗೆ, ಪುಷ್ಕರಪಲಾಶೇ=ಕಮಲದ ಎಲೆಯಲ್ಲಿ ಜಲಗಳು ಸಂಬದ್ಧಗಳಾಗುವುದಿಲ್ಲವೋ, ಹೀಗೆಯೇ ಜ್ಞಾನಿಯಲ್ಲಿ ಪಾಪಕರ್ಮವು ಸಂಬದ್ಧವಾಗುವುದಿಲ್ಲ ಎನ್ನುವ ಅರ್ಥವಾದವಾಕ್ಯದಲ್ಲಿ ಅಗ್ನಿಜ್ಞಾನದಿಂದಲೇ ಸಮಸ್ತಪಾಪಗಳೂ ಸಂಬದ್ಧಗಳಾಗುವುದಿಲ್ಲ ಎಂದು ಹೇಳಿಯದೆ. ಅಗ್ನಿಯ ಜ್ಞಾನದಿಂದ ಸರ್ವಪಾಪಗಳ ಅಸಂಬಂಧದಿಂದ ಮೋಕ್ಷವು ಹೇಗೆ ಎಂದು ಹೇಳಕೂಡದು. ಮೋಕ್ಷವಾಗದೆ ಸರ್ವಪಾಪಗಳ ಅಸಂಬಂಧವು ಕೂಡದೆ ಇರುವುದರಿಂದ ಅನ್ಯಥಾನುಪಪತ್ತಿಯಿಂದಲೇ ಮೋಕ್ಷವು ಕೂಡುತ್ತದೆ.

ವಿಶೇಷಾಂಶ ॥ (೧) ಪೂರ್ವಪಕ್ಷದಲ್ಲಿ ಅಗ್ನಿಯು ಅಕ್ಷಿಯಲ್ಲಿದ್ದ ಪ್ರಯುಕ್ತ ತದ್ಯಥಾ ಎಂದು ಅಕ್ಷಿಸ್ಥನಿಗೆ ಹೇಳಿದ ಮುಕ್ತಿಹೇತುಜ್ಞಾನವಿಷಯತ್ವವೂ ಕೂಡ ಅಗ್ನಿಗೇನೇ ಪ್ರಾಪ್ತವಾಗುವುದರಿಂದ ನೇತರಃ ಎಂದು ವಿಷ್ಣುವಿಗೇನೇ ಮೋಕ್ಷಜನಕಜ್ಞಾನವಿಷಯತ್ವವು ಎಂದು ಆಕ್ಷೇಪಿಸಿದುದರಿಂದ ಹೇಳಿದ್ದು ಆಯುಕ್ತವು. ಋಜುಸಂಗತಿಯೂ ತೋರಿಸಲ್ಪಟ್ಟಿತು. (೨) ಛಾಂದೋಗ್ಯದಲ್ಲಿ ಹೀಗೆ ಆಖ್ಯಾಯಿಕೆಯು. ಕಮಲಾಯನನ ಮಗನಾದ ಉಪಕೋಸಲನು ಸತ್ಯಕಾಮಾಖ್ಯನಾದ ಗುರುವಿನಲ್ಲಿ ವೇದಾಧ್ಯಯನವನ್ನುದ್ದೇಶಿಸಿ ಆವಾಸ ಮಾಡಿದನು. ಆತನು ತನ್ನ ಗುರುಗಳಿಂದ ಉಪಾಸ್ಯಗಳಾದ ಗಾರ್ಹಪತ್ಯ ಮೊದಲಾದ ಅಗ್ನಿಗಳನ್ನೇ ೧೨ ವರ್ಷ ಪರ್ಯಂತ ಸೇವಿಸುತ್ತಾ ಇದ್ದನು. ಆಗ ಸತ್ಯಕಾಮಾಖ್ಯ ಗುರುಗಳು ಅನೇಕ ಇತರ ಶಿಷ್ಯರಿಗೆ ಅಧ್ಯಯನ ಮಾಡಿಸಿದಾಗ್ಯೂ ಉಪಕೋಸಲನಿಗೆ ಮಾತ್ರ ಕಲಿಸಲಿಲ್ಲ. ಪುನಃ ಪುನಃ ಸತ್ಯಕಾಮರ ಹೆಂಡತಿಯು ಉಪಕೋಸಲನಿಗೆ ವೇದಾಧ್ಯಯನವನ್ನು ಮಾಡಿಸಬೇಕೆಂದು ಹೇಳಿದಾಗ್ಯೂ ವಿದ್ಯೆಯನ್ನುಪದೇಶ ಕೊಡದೇನೇ ದೇಶಾಂತರಕ್ಕೆ ಹೋದರು. ಆಗ

ಉಪಕೋಸಲನು ವಿದ್ಯಾಪ್ರಾಪ್ತಿಯಾಗಲಿಲ್ಲ ಎನ್ನುವ ವ್ಯಥೆಯಿಂದ ವ್ಯಾಧಿಗ್ರಸ್ತನಾಗಿ ಭೋಜನಮಾಡು ಎಂದು ಗುರುಗಳ ಹೆಂಡತಿಯು ಎಷ್ಟು ಹೇಳಿದಾಗ್ಯೂ ಭೋಜನ ಮಾಡಲೇ ಇಲ್ಲ. ಹೀಗೆ ಬ್ರಹ್ಮಚಾರಿಯು ಉಣ್ಣದೆ ಸುಮ್ಮನೆ ಇರಲು ಗಾರ್ಹಪತ್ಯ ಮೊದಲಾದ ಅಗ್ನಿಗಳು ಅತನಲ್ಲಿ ಕೃಪೆಯಿಂದ ಈ ಬ್ರಹ್ಮಚಾರಿಗೆ ವಿದ್ಯೆಯನ್ನು ನಾವು ಉಪದೇಶಿಸುತ್ತೇವೆಂದು ಪ್ರತಿಜ್ಞೆಮಾಡಿ **ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ** ಇತ್ಯಾದಿ ಪ್ರಕಾರ ಬ್ರಹ್ಮನನ್ನು ಉಪದೇಶಿಸಿದರು. ಹೀಗೆ ಮೂರು ಅಗ್ನಿಗಳು ಕೂಡಿ ಉಪದೇಶಿಸಿದ ಮೇಲೆ ಪುನಃ ಈತನಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಅಗ್ನಿಗಳು ಉಪದೇಶಕೊಟ್ಟವು. **ಅಥ ಹೈನಂ ಗಾರ್ಹಪತ್ಯೋಽನುಶಶಾಸ** ಇತ್ಯಾದಿ ಪ್ರಕಾರ. ಹೀಗೆ ಮೂರು ಅಗ್ನಿಗಳು ಪ್ರತ್ಯೇಕವಾಗಿ ಉಪದೇಶಿಸಿ ನಾವು ಹೇಳಿದ್ದನ್ನು ತಿಳಿಯಬೇಕು. ಅಲ್ಲದೆ ಉಪಾಸನಾ ಮಾಡತಕ್ಕುದಲ್ಲ. ಉಪಾಸನಾಮಾಡತಕ್ಕದ್ದನ್ನು ನಿನ್ನ ಗುರುಗಳು ಬಂದು ಉಪದೇಶಿಸುವರು ಎಂದು ಉಪಕೋಸಲನ ಹತ್ತಿರ ಅಗ್ನಿಗಳು ಹೇಳಿದರು. ಆಮೇಲೆ ಆಚಾರ್ಯರಾದ (ಗುರುಗಳಾದ) ಸತ್ಯಕಾಮರು ಬಂದರು. ಬಂದು ಉಪಕೋಸಲನು ಹೇಳಿದ್ದನ್ನು ಕೇಳಿ ಪ್ರತ್ಯುತ್ತರ ಕೊಟ್ಟರು. ಎಲೋ ಉಪಕೋಸಲನೇ ಅಗ್ನಿಗಳು ನಿನಗೆ ಉಪದೇಶಿಸಿದ್ದನ್ನು ತಿಳಿಯಬೇಕು. ಅಲ್ಲದೆ ಉಪಾಸನಾಮಾಡಲರ್ಹವಲ್ಲ. ಉಪಾಸ್ಯವಾದ ತತ್ವವನ್ನು ನಾನು ಉಪದೇಶಿಸುವೆನು ಎಂದು ಹೇಳಿ ಆ ಪ್ರಮೇಯದಲ್ಲಿ ಆದರವು ಉಂಟಾಗುವುದಕ್ಕಾಗಿ **ಯಥಾ ಪುಷ್ಕರಪಲಾಶೇ ಆಪೋ ನ ಶ್ಲಿಷ್ಯಂತೇ** ಎಂದು ಮೇಲೆ ಹೇಳುವ ಅರ್ಥವನ್ನು ಸ್ತುತಿಸಿದರು. ಹೀಗೆ ಸತ್ಯಕಾಮರು ಸ್ತೋತ್ರಮಾಡಿ ಉಪಕೋಸಲನಿಗೆ ವಿದ್ಯೆಯನ್ನು ಉಪದೇಶಿಸಿದರು. **ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ** ಎಂದು ಹೀಗೆ ಉಪದೇಶಿಸಿದ ಮೇಲೆ ಈ ಉಪಕೋಸಲನಿಗೆ ಗಾರ್ಹಪತ್ಯನು 'ಪೃಥಿವೀ ಅಗ್ನಿ ಅನ್ನಾಖ್ಯನಾದವನು ಬ್ರಹ್ಮನು' ಎಂದುಪದೇಶಿಸಿದನು. ಹೀಗೆ ವ್ಯಾಪ್ತವಿದ್ಯೆಯನ್ನು ಹೇಳಿ ಅಂತರ್ಯಾಮಿವಿದ್ಯೆಯನ್ನು ಯ ಏಷೋಽಂತರಕ್ಷಿಣಿ ಇತ್ಯಾದಿಗಳಿಂದ ಹೇಳಿದರು. ॥ ೧೨ ॥

**ಟೀಕೆ** ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಟ್ಟು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅತೋಽಬ್ರವೀತ್ (ಬ್ರವೀತಿ)** ॥ ೪ ॥

## ಸೂತ್ರ ॥ ಓಂ ಅಂತರ ಉಪಪತ್ತೇಃ ಓಂ ॥ ೧೩ ॥

**ಭಾಷ್ಯ ॥ ಚಕ್ಷುರಂತಸ್ಥೋ ವಿಷ್ಣುರೇವ** ॥ ೫ ॥

ಭಾಷ್ಯಾರ್ಥ ॥ ಹೀಗೆ ಸಂಗತಿಯು ಕೂಡುವುದರಿಂದಲೂ ಹೀಗೆ ಬಂದ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರಕಾರರು ಉತ್ತರವನ್ನು ಹೇಳಿದರು. ಅಂತರಃ=ಚಕ್ಷುಸ್ಸಿನ ಒಳಗೆ ಇರುವವನು, ತತ್ತು= ವಿಷ್ಣುವೇ, (ಅಂದರೆ ಅವಾವ ಜೀವರಿಗೆ ಪ್ರೇರಕನಾಗಿ ಅವರವರ ಕಣ್ಣಿನ ಒಳಗೆ ಇರುವವನು ವಿಷ್ಣುವೇ, ಅಗ್ನಿಯಲ್ಲ) **ಏತದಮೃತಮಭಯಮೇತದ್ಬ್ರಹ್ಮ ಏಷ ಆತ್ಮಾ** ಎಂದು ಅಮೃತತ್ವ ಅಭಯತ್ವ ಮೊದಲಾದ ಲಿಂಗಗಳು ಶ್ರುತಗಳಾಗಿರುವುದರಿಂದಲೂ ಬ್ರಹ್ಮಾದಿ ಶಬ್ದಗಳು ಶ್ರುತಗಳಾದ ಪ್ರಯುಕ್ತವೂ (ಅವುಗಳು ವಿಷ್ಣುವಿನಲ್ಲಿಯೇ ಕೂಡುತ್ತವೆ. ಇತರರಲ್ಲಿ ಕೂಡಲಾರವು.)

**ಪೀಠಿಕೆ ॥ ಉಪಪತ್ತೇಃ** ಎನ್ನುವುದನ್ನು ಅನೇಕ ಲಿಂಗಪರವಾಗಿಯೂ, ಲಿಂಗಗಳಿಗೆ ನಿರವಕಾಶತ್ವ ಪರವಾಗಿಯೂ ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತ್ರಿಪಾದಸ್ಯಾಮೃತಂ ದಿವಿ (ಋ.೧೦.೯೦.೩.)। ಇತ್ಯಾದಿನಾ ತಸ್ಯೈವಾಮೃತತ್ವಾದ್ಯುಪಪತ್ತೇಃ ॥ ೬ ॥**

**ಭಾಷ್ಯಾರ್ಥ ॥** ಶ್ರೀಹರಿಯ ಮರಣವಿಲ್ಲದಿರುವ (ನಿತ್ಯಮುಕ್ತನಾದ) ಪಾದತ್ರಯವು ಅಂದರೆ ಸ್ವರೂಪಭೂತವಾದ ನಾರಾಯಣ ವಾಸುದೇವ ವೈಕುಂಠಾಖ್ಯ ರೂಪತ್ರಯವು ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿ ಇದೆ. ಇದು ಮೊದಲಾದ ವಾಕ್ಯಗಳಿಂದ ಹೇಳಲ್ಪಟ್ಟ ಆ ವಿಷ್ಣುವಿಗೇನೇ ಅಮೃತತ್ವ ಅಭಯತ್ವಾದಿಗಳು ಕೂಡುವುದರಿಂದ. (ಅಮೃತತ್ವ ಅಭಯತ್ವಾದಿಗಳು ವಿಷ್ಣುವಿನಲ್ಲಿಯೇ ಕೂಡುತ್ತವೆ. ಇತರರಲ್ಲಿ ಕೂಡುವುದಿಲ್ಲ)

**ವಿಶೇಷಾಂಶ ॥** (೧) ಒಂದನೇ ಆದಿಪದದಿಂದ ೧ **ಅಭಯಂ ತಿತೀರ್ಷತಾಂ ಪಾರಂ, ೨ ಅಮೃತೈವೈಷಾ ದೇವತಾ, ೩ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ** ಇತ್ಯಾದಿ ವಾಕ್ಯವನ್ನು ಇಟ್ಟುಕೊಳ್ಳಬೇಕು. (೨) ಎರಡನೇ ಆದಿಪದದಿಂದ ಅಭಯತ್ವಾದಿಗಳನ್ನು ಇಟ್ಟುಕೊಳ್ಳಬೇಕು. (೩.) ಲಿಂಗವು ನಿರವಕಾಶವಾಗಿದೆ. ಅನೇಕವೂ ಇದೆ. ಆದ ಪ್ರಯುಕ್ತ ಪ್ರಬಲವೇ ಆಗಿದೆ.

**ಪೀಠಿಕೆ ॥** ಹೀಗೆ ನಿರವಕಾಶತ್ವ ಅನೇಕತ್ವಗಳಿಂದ ಪ್ರಬಲವಾದ ಲಿಂಗಬಲದಿಂದ ಚಕ್ಷುರಂತಸ್ಥನಿಗೆ ವಿಷ್ಣುತ್ವ ನಿಶ್ಚಯವಾಗುವಾಗ ಸ್ವಭಾವ ನಿರವಕಾಶತ್ವ ಈ ಎರಡರಿಂದಲೂ ಅನೇಕತ್ವ ದಿಂದಲೂ ಪ್ರಬಲವಾದ ಶ್ರುತಿಯೂ ಇರುವಾಗ ಸುತರಾಂ ವಿಷ್ಣುವೆಂದು ನಿಶ್ಚಯವಾಗುತ್ತದೆ ಎನ್ನುವ ಅಭಿಪ್ರಾಯದಿಂದ ಸೂತ್ರದಲ್ಲಿದ್ದ **ಉಪಪತ್ತೇಃ** ಎನ್ನುವ ಅಂಶವನ್ನು ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಬ್ರಹ್ಮ(.ಆತ್ಮ)ಶಬ್ದಾದ್ಯುಪಪತ್ತೇಶ್ಚ ॥ ೭ ॥**

**ಭಾಷ್ಯಾರ್ಥ ॥** (ಈ ಪ್ರಕರಣದಲ್ಲಿ ಶ್ರುತವಾದ) ಬ್ರಹ್ಮಶಬ್ದ ಆತ್ಮಶಬ್ದ ಪುರುಷಶಬ್ದ ಮೊದಲಾದವುಗಳು ವಿಷ್ಣುವಿನಲ್ಲಿಯೇ ಕೂಡುವುದರಿಂದಲೂ, (ಇತರರಿಗೆ ಕೂಡದಿರುವುದರಿಂದಲೂ, ಚಕ್ಷುರಂತಸ್ಥನು ವಿಷ್ಣುವೇ.)

**ವಿಶೇಷಾಂಶ ॥** ಗುಣಪೂರ್ತಿವಾಚಕ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೂ ಮುಖ್ಯವಾದದ್ದು **ಆದೇಯಂ ಉಪಾದೇಯಂ ಸುಖಂ ಮಾತಿ ಅನುಭವತಿ** ಪೂರ್ಣ ಸುಖವನ್ನು ಅನುಭವಿಸುವವನು ಎನ್ನುವ ವ್ಯುತ್ಪತ್ತಿಯಿಂದ ಆತ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾದದ್ದು.

**ಪೀಠಿಕೆ ॥** ನಿರವಕಾಶವಾದ ಶ್ರುತಿಲಿಂಗಬಲದಿಂದ ಅಕ್ಷಿಸ್ಥನು ವಿಷ್ಣುವೇ ಎಂದಾಗುವುದಾದರೆ ಆದಿತ್ಯಸ್ಥನೂ ಅವನೇ ಆಗಬೇಕಾಯಿತು. ಹಾಗಾದರೆ **ಸೋಽಹಮಸ್ಮಿ** ಇತ್ಯಾದಿ ಅಗ್ನಿಗಳು ಹೇಳುವ ವಾಕ್ಯಗಳು ಪರಮಾತ್ಮನಲ್ಲಿ ಹೇಗೆ ಉಪಪನ್ನಗಳಾಗುತ್ತವೆ ಎಂದರೆ—

**ಭಾಷ್ಯ ॥ ಸೋಽಹಮಸ್ಮಿ ಇತ್ಯಾದಿ ತ್ವಂತರ್ಯಾಮ್ಯಪೇಕ್ಷಯಾ ॥ ೮ ॥**

**ಭಾಷ್ಯಾರ್ಥ ॥** ಸೋಽಹಮಸ್ಮಿ ಇದು ಮೊದಲಾದ ವಾಕ್ಯಗಳಲ್ಲಿದ್ದ ಅಹಂ ಮೊದಲಾದ ಪದಸಮುದಾಯವು ಅಗ್ನ್ಯಂತರ್ಗತನಾದ ಶ್ರೀಹರಿಯನ್ನು ಅಪೇಕ್ಷಿಸಿ ಪ್ರವೃತ್ತ ವಾದುದು.

**ಪೀಠಿಕೆ ॥** ಅಂತರ್ಯಾಮಿಯಲ್ಲಿ ಅಹಂ ಮೊದಲಾದ ಶಬ್ದಪ್ರವೃತ್ತಿಯು ಸ್ಮೃತಿಸಿದ್ಧವೆನ್ನುತ್ತಾರೆ.

**ಭಾಷ್ಯ ॥ ಅಂತರ್ಯಾಮಿಣಮೀಶೇಶಮಪೇಕ್ಷ್ಯಾಹಂ ತ್ವಮಿತ್ಯಪಿ। ಸರ್ವೇ(ರ್ವ) ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇಽಪಿ ವಸ್ತುಷು॥ ಇತಿ ಮಹಾಕೌರ್ಮೇ (ಕೌರ್ಮೇ) ॥ ೧೩ ॥ ॥ ೯ ॥**

**ಭಾಷ್ಯಾರ್ಥ ॥** ಅಗ್ನಿ ಮೊದಲಾದ ಜೀವರಲ್ಲಿ (ಈಶ್ವರನಿಂದ ಭೇದವಿದ್ದರೂ ಜೀವೇಶ್ವರರಿಗೆ) ಅಭೇದಬೋಧಕಗಳಂತೆ ತೋರುವ ಅಹಂ ತ್ವಂ ಇದು ಮೊದಲಾದ ಎಲ್ಲಾ ಶಬ್ದಗಳೂ ಬ್ರಹ್ಮಾದಿಗಳಿಗೂ ನಿಯಾಮಕನಾದ ಸರ್ವಾಂತರ್ಯಾಮಿಯಾದ ಶ್ರೀಹರಿ ಯನ್ನು ಅಪೇಕ್ಷಿಸಿಯೇ ಪ್ರವೃತ್ತಗಳಾಗಿವೆ ಎಂದು ಮಹಾಕೌರ್ಮದಲ್ಲಿ ಹೇಳಿದೆ.

**ವಿಶೇಷಾಂಶ ॥** (೧) ಅಂತರ್ಯಾಮಿಯನ್ನು ಅಪೇಕ್ಷಿಸಿಯೇ ಈ ಶಬ್ದಗಳು ಪ್ರಯೋಗಿಸಲ್ಪಡುತ್ತವೆ. ಇದರಿಂದ ಅಗ್ನ್ಯಾದಿ ಜೀವರಿಗೆ ಈಶ್ವರಾಭೇದವನ್ನು ಶಂಕಿಸಕೂಡದು. ಏಕೆಂದರೆ ಆ ಅಂತರ್ಯಾಮಿಯು ಬ್ರಹ್ಮಾದಿಗಳಿಂದೆಲ್ಲಾ ಉತ್ತಮನೇ ಆಗಿದ್ದಾನೆ. ॥ ೧೩ ॥

**ಪೀಠಿಕೆ ॥** ಯುಕ್ತ್ಯಂತರದಿಂದ ವಿಷ್ಣುವಿಗೆ ಚಕ್ಷುರಂತಸ್ಥತ್ವವನ್ನು ಸಾಧಿಸತಕ್ಕ ಸೂತ್ರವನ್ನುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಸ್ಥಾನಾದಿವ್ಯಪದೇಶಾಚ್ಚ ಓಂ ॥ ೧೪ ॥

**ಸೂತ್ರಾರ್ಥ ॥** ಅಸಂಗತ್ವಾಖ್ಯ ಸ್ಥಾನಶಕ್ತಿ ಆತ್ಮಶಕ್ತಿ ಮೊದಲಾದವುಗಳನ್ನು ವ್ಯಪದೇಶಮಾಡಿದ ಪ್ರಯುಕ್ತವೂ ಚಕ್ಷುರಂತಸ್ಥನು ವಿಷ್ಣುವೇ.

**ಭಾಷ್ಯ ॥ ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ (ಛಾ.ಉ.೪.೧೫.) ಇತ್ಯಾದಿಸ್ಥಾನಶಕ್ತಿಃ। ವಾಮನಿರ್ಭಾಮನಿರಿತ್ಯಾದ್ಯಾತ್ಮಶಕ್ತಿಶ್ಚೋಚ್ಯತೇ। ತಸ್ಯ ಹ್ಯೇತಲ್ಲಿಂಗಂ ॥ ೧೦ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಅಸಂಗನಾದ ಪುರುಷನು ಕಣ್ಣಿನಲ್ಲಿ ನಿಯಾಮಕನಾಗಿ ಇದ್ದಾನೋ ಆದುದರಿಂದ ಈ ಕಣ್ಣಿನಲ್ಲಿ ಒಳಗೆ ತುಪ್ಪವನ್ನಾಗಲೀ ನೀರನ್ನಾಗಲೀ ಯಾರಾದರೊಬ್ಬರು ಸೇಚನಮಾಡಿದರೆ ಎರಡು ಮಾರ್ಗಗಳನ್ನು ಕುರಿತು ಹೋಗುತ್ತದೆ. (ಚಕ್ಷುಸ್ಸನ್ನು ಮುಟ್ಟುವುದಿಲ್ಲ) ಇತ್ಯಾದಿಗಳಲ್ಲಿ (ಬ್ರಹ್ಮನ ಸ್ಥಾನಭೂತಗಳಾದ ಕಣ್ಣುಗಳಿಗೆ ಅಕ್ಷಿಯಲ್ಲಿರತಕ್ಕ ಪರಮಪುರುಷನ ಸಂಬಂಧದಿಂದ) ಅಸಂಗತ್ವಾಖ್ಯಶಕ್ತಿಯು (ಹೇಳಲ್ಪಡುತ್ತದೆ) (ಯಾವ ಕಾರಣದಿಂದ ಎಲ್ಲಾ ಸ್ತ್ರೀ ರೂಪಗಳು ವಾಮನಾಖ್ಯವಿಷ್ಣುವನ್ನು ಹೊಂದುತ್ತವೋ ಆದಕಾರಣ ಚಕ್ಷುಸ್ಸಿನಲ್ಲಿರತಕ್ಕ ವಾಮನಾಖ್ಯ ವಿಷ್ಣುವನ್ನೇ ಸಂಯದ್ವಾಮ ಎಂದು ಹೇಳುತ್ತಾರೆ. ಇದರಿಂದ **ಸಂಯಂತಿ ವಾಮಾನಿ ಏವಂ** ಎಂಬ

ವಿಗ್ರಹವನ್ನು ತೋರಿಸಿದರು.) (ಯಾವ ಕಾರಣದಿಂದ ಶ್ರೀಹರಿಯು ಎಲ್ಲಾ ಸುಂದರಗಳಾದ ರಮಾದಿ ಸ್ತ್ರೀರೂಪಗಳನ್ನು ಪ್ರೇರಿಸುತ್ತಾನೋ ಆದಕಾರಣ ಚಕ್ಷುರ್ಗತನಾದ ಈ ಶ್ರೀಹರಿಯು ಮುಖ್ಯವಾಗಿ) ವಾಮನಿಃ ಎನ್ನಿಸಿಕೊಳ್ಳುತ್ತಾನೆ. (ಯಾವ ಕಾರಣದಿಂದ ಶ್ರೀಹರಿಯು ಎಲ್ಲಾ ಪುರುಷರಲ್ಲಿಯೂ ಆವರವರ ತೇಜಸ್ಸಿಗೆ ಪ್ರಕಾಶಕನಾಗಿ ತಾನೂ ಪ್ರಕಾಶಿಸುತ್ತಾನೋ, ಆದುದರಿಂದ ಕಣ್ಣಿನಲ್ಲಿದ್ದ ಈ ಶ್ರೀಹರಿಯೇ) ಭಾಮನಿಃ ಎನ್ನಿಸಿಕೊಳ್ಳುತ್ತಾನೆ. ಇತ್ಯಾದಿಗಳಲ್ಲಿ ಆತ್ಮಶಕ್ತಿಯೂ ಹೇಳಲ್ಪಡುತ್ತದೆ. (ಈ ಎರಡು ಲಿಂಗಗಳು ಇದ್ದರೂ ಅಕ್ಷಿಸ್ಥನಿಗೆ ವಿಷ್ಣುತ್ವನಿಶ್ಚಯವು ಹೇಗೆ ಆಗುತ್ತದೆ ಎಂದರೆ) ಯಾವ ಕಾರಣದಿಂದ ಆ ವಿಷ್ಣುವಿಗೆ ಅಕ್ಷಿಗಳಿಗೆ ಅಸಂಗತ್ವಾಪಾದಕತ್ವವು ಸರ್ವಸೌಂದರ್ಯಾಧಿಷ್ಠಾನ ಸ್ತ್ರೀರೂಪನೇತೃತ್ವವೂ ಕೂಡ ಅಸಾಧಾರಣ ಧರ್ಮವಿದೆಯೋ, (ಆದುದರಿಂದ ಅಪ್ರಯೋಜಕತ್ವವಿಲ್ಲ. ಆದಪ್ರಯುಕ್ತ ವಿಷ್ಣುವೆಂದು ನಿಶ್ಚಯವಾಗುತ್ತದೆ.)

ವಿಶೇಷಾಂಶ ॥ ವಾಮಂ ಸೌಂದರ್ಯಂ, ಭಾಮಂ ತೇಜಃ ತತ್ಪ್ರಧಾನತ್ವಾತ್ ಸ್ತ್ರೀ ಪುರುಷಾಃ ವಾಮಭಾಮಶಬ್ದಿತಾಃ ತನ್ನೇತಾ ವಾಮನಿಃ ಭಾಮನಿಃ ಎಂದು ತತ್ತ್ವ ಪ್ರದೀಪದಲ್ಲಿ ಹೇಳಿದೆ.

**ಭಾಷ್ಯ ॥ ಸ ಈಶಃ ಸೋಽಸಪತ್ನಃ ಸ ಹರಿಃ ಸ ಪರಃ ಸಪರೋವರೀಯಾನ್ ಯದಿದಂ ಚಕ್ಷುಷಿ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ಸ ವಾಮನಃ ಸ ಭಾಮನಃ ಸ ಆನಂದಃ ಸೋಽಚ್ಯುತಃ । ಇತಿ(ಹಿ)ಚತುರ್ವೇದಶಿಖಾಯಾಂ ॥ ೧೧ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಯಾರ ಸಾಮರ್ಥ್ಯದಿಂದ, ಈ ಕಣ್ಣಿನಲ್ಲಿ ಘೃತವನ್ನು ನೀರನ್ನಾಗಲೀ ಯಾರಾದರೂ ಒಬ್ಬನು ಸೇಚನಮಾಡಿದ ಪಕ್ಷದಲ್ಲಿ ಮಾರ್ಗಗಳನ್ನೇ ಕುರಿತು ಹೋಗುತ್ತವೆ. ಆತನು ಸರ್ವಸಮರ್ಥನು ಆತನು ಶತ್ರುರಹಿತನು. ಆತನು ಲೋಕವಿಲಕ್ಷಣನು. ರುದ್ರಾದಿಗಳಿಂದ ಉತ್ತಮಳಾದ ಸರಸ್ವತಿಯಿಂದುತ್ತಮನಾದ ಚತುರ್ಮುಖನಿಂದುತ್ತಮಳಾದ ಲಕ್ಷ್ಮೀದೇವಿಯಿಂದಲೂ ಉತ್ತಮನು. ಆತನೇ ವಾಮನ ಭಾಮನ ಆನಂದ ಅಚ್ಯುತ ಶಬ್ದಗಳಿಂದ ವಾಚ್ಯನು ಎಂದು ಚತುರ್ವೇದಶಿಖೆಯಲ್ಲಿ ಹೇಳಿದೆ.

ವಿಶೇಷಾಂಶ ॥ ಲಿಂಗವು ವಿಷ್ಣುವಿನಲ್ಲಿ ಇರತಕ್ಕುದೆಂದು ತಿಳಿಸುವುದಕ್ಕಾಗಿ ಸ ಹರಿಃ ಇತ್ಯಾದಿಗಳನ್ನು ಸೋಽಚ್ಯುತಃ ಎನ್ನುವ ಅಂಶವನ್ನೂ ಹೇಳಿದ್ದು.

ಪೀಠಿಕೆ ॥ ಲಿಂಗಸ್ವರೂಪವೂ ಅದು ವಿಷ್ಣುವಿನಲ್ಲಿ ಇರತಕ್ಕುದು ಎನ್ನುವುದೂ ಶ್ರುತಿ ಯಲ್ಲಿ ಸ್ಪಷ್ಟವಾಗಿ ಇಲ್ಲದಿರುವುದರಿಂದ ಅದರ ಅರ್ಥವನ್ನೂ ಈ ಅರ್ಥದಲ್ಲಿ ಸ್ಮೃತಿ ಯನ್ನೂ ಹೇಳುತ್ತಾರೆ.

**ಭಾಷ್ಯ ॥ ಯತ್ಸ್ಥಾನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಭಿಃ। ಸ ವಾಮನಃ ಪರೋಽಸ್ಮಾಕಂ ಗತಿರಿತ್ಯೇವ ಚಿಂತಯೇತ್॥ ಇತಿ(ಚ)ವಾಮನೇ ॥ ೧೪ ॥ ೧೨ ॥**

ಭಾಷ್ಯಾರ್ಥ ॥ ಯಾವ ವಿಷ್ಣುವಿಗೆ ಸ್ಥಾನವಾದುದರಿಂದ ಈ ಚಕ್ಷುಸ್ಸು ಘೃತ ಮೊದಲಾದ ಸರ್ವವಸ್ತುಗಳಿಂದ ಸಂಬಂಧವಿಲ್ಲದಿರುವುದೋ ಮತ್ತು ಸುಂದರ ಸ್ತ್ರೀಯರಿಗೆ ಪ್ರೇರಕನಾದುದರಿಂದ

ವಾಮನ ಎಂದು ಹೆಸರುಳ್ಳ ವಿಷ್ಣುವೇ ಭಕ್ತರಾದ ನಮಗೆ ಮುಖ್ಯಪ್ರಾಪ್ಯನು ಎಂದು ಚಿಂತಿಸಬೇಕು, ಎಂದು ವಾಮನ ಪುರಾಣದಲ್ಲಿದೆ. ॥ ೧೪ ॥

**ಪೀಠಿಕೆ ॥** ಪ್ರಕರಣ ಬಲದಿಂದ ವಿಷ್ಣುವು ಚಕ್ಷುಸ್ಸಿನ ಒಳಗೆ ಇರತಕ್ಕವನು ಎಂದು ಪ್ರತಿಪಾದಿಸತಕ್ಕ ಸೂತ್ರವನ್ನುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಸುಖವಿಶಿಷ್ಟಾಭಿಧಾನಾದೇವ ಚ ಓಂ ॥ ೧೫ ॥

**ಸೂತ್ರಾರ್ಥ ॥** ಪೂರ್ಣ ಸುಖವನ್ನು ಹೇಳಿದ್ದರಿಂದಲೇ ಚಕ್ಷುರಂತಸ್ಥನು ವಿಷ್ಣುವೇ.

**ಭಾಷ್ಯ ॥ ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ (ಛಾ.ಉ.೪.೧೦.)। ಇತಿ ॥ ೧೩ ॥**

**ಭಾಷ್ಯಾರ್ಥ ॥** ಈ ಪ್ರಕರಣದಲ್ಲಿ ಮುಖ್ಯಪ್ರಾಣನು ಎಲ್ಲಾ ಜೀವರಿಂದ ಪೂರ್ಣನು (ಎಂದು ಮುಖ್ಯಪ್ರಾಣನಿಗೆ ಪೂರ್ಣತ್ವವನ್ನು ಹೇಳಿ) ಸುಖವು ಪೂರ್ಣವು, ಜ್ಞಾನವೂ ಪೂರ್ಣವು (ಎಂದು ಸುಖಜ್ಞಾನಗಳಿಗೂ ಪೂರ್ಣತ್ವವು ಹೇಳಲ್ಪಡುತ್ತದೆ.)

**ವಿಶೇಷಾಂಶ ॥** (೧) ಹಿಂದೆ ಹೇಳಿದ ಹೇತುಬಲದಿಂದ ಮಾತ್ರ ಚಕ್ಷುರಂತಸ್ಥನು ವಿಷ್ಣುವೆಂದಲ್ಲ, ಮತ್ತೆ ವಿಷ್ಣುಪ್ರಕರಣಬಲದಿಂದಲೂ ಉಪಕ್ರಮದಲ್ಲಿ ಪೂರ್ಣಸುಖರೂಪವಾದ ವಿಷ್ಣುಲಿಂಗವನ್ನು ಹೇಳಿದುದರಿಂದ ಈ ಪ್ರಕರಣಕ್ಕೆ ವೈಷ್ಣವತ್ವವು ಸಿದ್ಧಿಸುತ್ತದೆ. (೨) ಉಪಕ್ರಮದಲ್ಲಿ ಕಂ ಬ್ರಹ್ಮ ಎಂದು ಪೂರ್ಣಸುಖವನ್ನು ಹೇಳಿದುದರಿಂದಲೇ ಪ್ರಕರಣಕ್ಕೆ ವೈಷ್ಣವತ್ವವು ಸಿದ್ಧಿಸುವಾಗ ಖಂ ಬ್ರಹ್ಮ ಎಂದು ಪೂರ್ಣಜ್ಞಾನವನ್ನು ಹೇಳಿದುದರಿಂದ ಸುತರಾಂ ವೈಷ್ಣವತ್ವವು ಸಿದ್ಧಿಸುತ್ತದೆ ಎನ್ನುವ ಕೈಮುತ್ಯನ್ಯಾಯವನ್ನು ಸೂಚಿಸುವುದಕ್ಕಾಗಿ ಸೂತ್ರದಲ್ಲಿ ಏವಕಾರವು. (೩) ಯದ್ಯಪಿ ಛಾಂದೋಗ್ಯ ಭಾಷ್ಯದಲ್ಲಿ ಪ್ರಾಣೋ ಬ್ರಹ್ಮ=ಬಲರೂಪನು ಬ್ರಹ್ಮನು. ಕಂ=ಪೂರ್ಣಾನಂದರೂಪನು ಬ್ರಹ್ಮನು, ಖಂ= ಪೂರ್ಣಜ್ಞಾನರೂಪನು ಬ್ರಹ್ಮನು ಎಂದು ವ್ಯಾಖ್ಯಾನ ಮಾಡಿರುವರು. ಆದಾಗ್ಯೂ ಬ್ರಹ್ಮಶಬ್ದವು ಪರಬ್ರಹ್ಮ ಅಪರಬ್ರಹ್ಮರಲ್ಲಿ ರೂಢವಾಗಿದೆ ಎಂದು ಇಟ್ಟುಕೊಂಡದ್ದು ವ್ಯಾಖ್ಯಾನಾಂತರವು.

**ಪೀಠಿಕೆ ॥** ಉಪಕ್ರಮದಲ್ಲಿ ಪೂರ್ಣಸುಖಜ್ಞಾನಗಳನ್ನು ಹೇಳಿದಾಗ್ಯೂ ಈ ಪ್ರಕರಣಕ್ಕೆ ವೈಷ್ಣವತ್ವವು ಹೇಗೆ ಎಂದಾಶಂಕಿಸಿ ಅವುಗಳು ವಿಷ್ಣುಲಕ್ಷಣಗಳಾಗಿವೆ. ವಿಷ್ಣುರೂಪಗಳೂ ಆಗಿವೆ. ಉಪಕ್ರಮದಲ್ಲಿ ಅವುಗಳನ್ನು ಹೇಳಿದರೆ ಬ್ರಹ್ಮನೇ ಉಪಕ್ರಾಂತನಾಗುವನು ಎನ್ನುವ ಅಭಿಪ್ರಾಯದಿಂದ ಪೂರ್ಣಸುಖಜ್ಞಾನಗಳು ಬ್ರಹ್ಮಲಕ್ಷಣಗಳು ಎನ್ನುವುದನ್ನು ಶ್ರುತಿಯಿಂದ ತೋರಿಸುತ್ತಾರೆ—

**ಭಾಷ್ಯ ॥ ವಿಜ್ಞಾನಮಾನಂದಂ ಬ್ರಹ್ಮ (ಬೃ.ಉ.೫.೯.೨೮.)। ಆನಂದೋ ಬ್ರಹ್ಮೇತಿ ವ್ಯಜಾನಾತ್ (ತೈ.ಉ.೩.೬.)। ಇತ್ಯಾದೇಸ್ತಸ್ಯೈವ ಹಿ ತಲ್ಲಕ್ಷಣಂ ॥ ೧೪ ॥**

**ಭಾಷ್ಯಾರ್ಥ ॥** ಬ್ರಹ್ಮನು ಪೂರ್ಣಜ್ಞಾನರೂಪನು, ಪೂರ್ಣಾನಂದರೂಪನು, ಬ್ರಹ್ಮನು ಆನಂದರೂಪನೆಂದು ತಿಳಿದನು ಎನ್ನುವ ತೈತ್ತಿರೀಯವಾಕ್ಯದಿಂದಲೂ (ಅಥೈಷ ಏವ ಪರಮ ಆನಂದಃ, ಸತ್ಯಂ ಜ್ಞಾನಂ ಇದು ಮೊದಲಾದ ವಾಕ್ಯಗಳಿಂದಲೂ) ಆ ಬ್ರಹ್ಮನಿಗೆ ಪೂರ್ಣಾನಂದಾದಿಗಳು ಸ್ವಲಕ್ಷಣವೆಂದು ತಿಳಿಯಲ್ಪಡುತ್ತದೆ.

**ವಿಶೇಷಾಂಶ ॥** ಶ್ರುತ್ಯಂತರದಲ್ಲಿ ಬ್ರಹ್ಮಲಕ್ಷಣಗಳೆಂದು ತಿಳಿಯಲ್ಪಟ್ಟ ಪೂರ್ಣಜ್ಞಾನಸುಖಗಳನ್ನು ಈ ಪ್ರಕರಣದಲ್ಲಿ ಹೇಳಿದುದರಿಂದ ಇದು ವಿಷ್ಣುಪರವೆಂದು ಸಿದ್ಧಿಸುತ್ತದೆ.

**ಪೀಠಿಕೆ ॥** ಹಾಗಾದರೆ ಎಲ್ಲಾ ಚೇತನರಿಗೂ ಪೂರ್ಣಾನಂದವಿದ್ದ ಪ್ರಯುಕ್ತ ಇದು ವಿಷ್ಣು ಲಕ್ಷಣವು ಹೇಗೆ ಆಗುವುದು ಎಂದರೆ—

**ಭಾಷ್ಯ ॥ ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ। ಅವ್ಯಕ್ತಾದಿ ತೃಣಾಂತಾಸ್ತು ವಿಷ್ಣ್ವಾನಂದಭಾಗಿನಃ ॥ ಇತಿ ಬ್ರಹ್ಮವೈವರ್ತೇ ॥ ೧೫ ॥**

**ಭಾಷ್ಯಾರ್ಥ ॥** ನಿರವಧಿಕ ಪೂರ್ಣಾನಂದವೇ ಇಲ್ಲಿ ಲಕ್ಷಣವಾಗಿ ಅಭಿಮತವಾಗಿದೆ. (ಸಾವಧಿಕ ಪೂರ್ಣಾನಂದವಲ್ಲ) ನಿರವಧಿಕಪೂರ್ಣಾನಂದವು ವಿಷ್ಣುವಿಗೇನೇ. (ಇತರರಿಗೆ ಇಲ್ಲ. ಇತರರಿಗಾದರೂ ಆಪೇಕ್ಷಿಕವೇ ಪೂರ್ಣಸುಖವು. ವಿಷ್ಣುವಿನಂತೆ ನಿರವಧಿಕಪೂರ್ಣಸುಖವಿಲ್ಲ. ಏಕೆಂದರೆ) ಶ್ರೀತತ್ವವನ್ನು ಆರಂಭಿಸಿ ಮನುಷ್ಯೋತ್ತಮಪರ್ಯಂತರಾದ ಚೇತನರಾದರೂ ಅಲ್ಪಾನಂದಭಾಗಿಗಳು. ಅಂದರೆ—ಬ್ರಹ್ಮಾನಂದ ಪ್ರತಿಬಿಂಬಭೂತವಾದ ಆಪೇಕ್ಷಿಕಆನಂದವುಳ್ಳವರು, ಸಂದೇಹವೇ ಇಲ್ಲ ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. (ಆದಕಾರಣ ವಿಷ್ಣುವಿಗೇನೇ ಈ ಲಕ್ಷಣವು.)

**ಪೀಠಿಕೆ ॥** ಅಗ್ನ್ಯಾದಿಗಳ ಸುಖಕ್ಕೂ ಆಪೇಕ್ಷಿಕಪೂರ್ಣತ್ವವಿದ್ದಪ್ರಯುಕ್ತ ಅವರ ಪೂರ್ಣ ಸುಖವೆಂದೇ ಏಕೆ ಆಗಲಾರದು. ಹಾಗೆಯೇ ಅವರ ಲಕ್ಷಣವೆಂದೂ ಏಕೆ ಆಗ ಲಾರದು. ಅಲ್ಲದೆ ಅವರದ್ದೇ ಪ್ರಕರಣವೆಂದೇ ಏಕೆ ಆಗಲಾರದು. ಎಂದರೆ—

**ಭಾಷ್ಯ ॥ ನ ಚ ಮುಖ್ಯೇ ಸತ್ಯಮುಖ್ಯಂ ಯುಜ್ಯತೇ ॥ ೧೫ ॥ ॥ ೧೬ ॥**

**ಭಾಷ್ಯಾರ್ಥ ॥** ನಿರವಧಿಕ ಪೂರ್ಣತ್ವವು ಕಂ ಬ್ರಹ್ಮ ಎನ್ನುವ ಶ್ರುತ್ಯರ್ಥವಾಗಿ ವಿಷ್ಣುಲಕ್ಷಣವೆಂದು ಕೂಡುವಾಗ ಆಪೇಕ್ಷಿಕವಾದ ಅನ್ಯಾಧೀನವಾದ ಪೂರ್ಣತ್ವವು ಕೂಡುವುದಿಲ್ಲ ॥ ೧೫ ॥

**ಪೀಠಿಕೆ ॥** ಹಾಗಾದರೆ ಉಪಕ್ರಮದಲ್ಲಿ ಸುಖಜ್ಞಾನಗಳನ್ನು ಹೇಳಿದಾಗ್ಯೂ ಆಕ್ಷಿಪ್ತ ಪ್ರಕರಣವು ವಿಷ್ಣುವಿಗೆ ಸಂಬಂಧಪಟ್ಟದ್ದಲ್ಲ. ಛಾಂದೋಗ್ಯದಲ್ಲಿ ಪ್ರಾಣೋ ಬ್ರಹ್ಮ ಕಂ ಎನ್ನುವ ವಿದ್ಯೆಯನ್ನು ಯ ಏಷ **ಆದಿತ್ಯೇ ಪುರುಷಃ** ಎನ್ನುವ ವಿದ್ಯೆಯನ್ನು ಹೇಳಿ ಅಗ್ನಿಗಳು ಉಪಕೋಸಲನನ್ನು ಕುರಿತು **ಉಪಕೋಸಲೈಷಾ ಸೌಮ್ಯತೇಽಸ್ಮದ್ವಿದ್ಯಾ ಚಾತ್ಮವಿದ್ಯಾ ಚೋಕ್ತಾ** ಎಂದು ಹೇಳಿದ್ದರಿಂದ ಕಂ ಎನ್ನುವ ಆದ್ಯವಿದ್ಯೆಯು ವಿಷ್ಣುವಿಷಯಕವು. **ಯ ಏಷಃ** ಎನ್ನುವ ಎರಡನೇ ವಿದ್ಯೆಯು ಅಗ್ನಿ ವಿಷಯಕವೆನ್ನುವುದೇ ಯುಕ್ತವಾಗುವುದು. ಅಸ್ಮದ್ವಿದ್ಯಾ ಎಂದು ಹೇಳಿದ ಆದಿತ್ಯವಿದ್ಯೆಗೆ ಅಗ್ನಿವಿಷಯಕತ್ವವಿದ್ದರೂ ಆಕ್ಷಿಪ್ತವಿದ್ಯೆಗೆ ಅದು ಯುಕ್ತವಾಗಲಾರದು ಎಂದು ಹೇಳಕೂಡದು. **ಯ ಏಷೋಽಂತರಕ್ಷಿಣಿ** ಎನ್ನುವ ಆಕ್ಷಿಪ್ತವಿದ್ಯೆಯೂ ಆದಿತ್ಯವಿದ್ಯೆಯೂ ಒಂದೇ ಅರ್ಥವುಳ್ಳದ್ದು. ಹೀಗಾದರೆ ವಿಷ್ಣೂಪಕ್ರಮದಿಂದ ವಿರೋಧ ಬರುತ್ತದೆ ಎಂದೂ ಹೇಳಕೂಡದು. ಹೇಗೆ **ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ** ಎನ್ನುವಲ್ಲಿ ಅಗ್ನಿಗೆ ಉಪಕ್ರಮವಿದ್ದರೂ **ಸವಿತಾರಮೂತಯೇ, ಹಿರಣ್ಮಯೇನ ಸವಿತಾ ರಥೇನ** ಇದು ಮೊದಲಾದ ಸವಿತೃಶ್ರುತಿಲಿಂಗಾದಿಗಳಿಂದ ಆ ಪ್ರಕರಣವನ್ನು ಸಾವಿತ್ರವೆಂದು ಹೇಳಿದ್ದಾರೋ. ಹಾಗೆಯೇ ಬ್ರಹ್ಮನನ್ನು ಉಪಕ್ರಮಿಸಿದಾಗ್ಯೂ

ಅಸ್ಮದ್ವಿದ್ಯಾ ಎಂದು ಅಗ್ನಿಯನ್ನು ಅಸ್ಮತ್ ಶಬ್ದದಿಂದ ಹೇಳಿದ್ದರಿಂದ ಅಗ್ನಿಗಳದ್ದೇ ಈ ಪ್ರಕರಣವು. ವಿಷ್ಣುಪ್ರಕರಣವಲ್ಲ. ಅಸ್ಮದ್ವಿದ್ಯಾ ಎನ್ನುವುದನ್ನು ಅಂತರ್ಯಾಮಿಯಾದ ವಿಷ್ಣುಪರವೆನ್ನಕೂಡದು. ಹಾಗಿದ್ದರೆ ಆತ್ಮವಿದ್ಯಾ ಎಂದು ಪ್ರತ್ಯೇಕ ಉಕ್ತಿಯು ಕೂಡಲಾರದು. ಆದಕಾರಣ ಚಕ್ಷುರಂತಸ್ಥವಿದ್ಯೆಯು ಅಗ್ನಿವಿಷಯಕವೇ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಪಠನಮಾಡಿ ಅಲ್ಲಿ ಹೇಳಿದ ಶ್ರುತಿಯನ್ನೇ ಉದಾಹರಿಸುತ್ತಾರೆ—

## ಸೂತ್ರ ॥ ಓಂ ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ಓಂ ॥ ೧೬ ॥

**ಸೂತ್ರಾರ್ಥ** ॥ ಶ್ರವಣಮನನನಿದಿಧ್ಯಾಸನಮಾಡಲ್ಪಟ್ಟ ಉಪನಿಷತ್ತುಗಳುಳ್ಳ (ಅಂದರೆ ಉಪನಿಷತ್ತುಗಳನ್ನು ಶ್ರವಣ ಮನನ ನಿದಿಧ್ಯಾಸನ ಮಾಡಿದ) ಪುರುಷರಿಗೆ ವಾಯುದೇವರಿಂದ ಕಂ ಬ್ರಹ್ಮ ಎನ್ನುವ ವಾಕ್ಯದಿಂದ ಬೋಧಿಸಲ್ಪಟ್ಟ ಬ್ರಹ್ಮಪ್ರಾಪ್ತಿಯನ್ನು ಸ ಏನಾನ್ ಬ್ರಹ್ಮ ಗಮಯತಿ ಎಂದು ಉಪಸಂಹಾರದಲ್ಲಿ ಹೇಳಿದ್ದರಿಂದ, ಅಕ್ಷಿಸ್ಥವಿದ್ಯೆಯು ವಿಷ್ಣುವಿಷಯಕವೇ. ಅಗ್ನಿವಿಷಯಕವಲ್ಲ. ಅಥವಾ ಉಪನಿಷತ್ತನ್ನು ಶ್ರವಣಮಾಡಿದ ಉಪಕೋಸಲನಿಗೆ ಅಗ್ನಿಗಳು ಈ ವಿದ್ಯೆಗೆ ಫಲವಾಗಿ ಬ್ರಹ್ಮಗತಿಯನ್ನು ಹೇಳಿದ್ದರಿಂದ ಈ ಪ್ರಕರಣವು ವಿಷ್ಣುವಿಷಯಕವೇ. ಅಗ್ನಿವಿಷಯಕವಲ್ಲ.

**ಭಾಷ್ಯ ॥ ಸ ಏನಾನ್ ಬ್ರಹ್ಮ ಗಮಯತಿ (ಛಾ.ಉ.೪.೧೫.)॥ ಇತಿ ॥ ೧೭ ॥**

**ಭಾಷ್ಯಾರ್ಥ** ॥ ವಾಯುದೇವರು ಮುಕ್ತಿಯೋಗ್ಯ ಜೀವರನ್ನು ಪರಬ್ರಹ್ಮನನ್ನು ಹೊಂದಿಸಿ ಕೊಡುತ್ತಾರೆ.

**ವಿಶೇಷಾಂಶ** ॥ (೧) ತತ್ತ್ವಪ್ರದೀಪದಲ್ಲಿ ಆದರೂ ಉಪನಿಷತ್ತನ್ನು ಶ್ರವಣಮಾಡಿ ಅದರ ಅರ್ಥವನ್ನು ಉಪಾಸನೆ ಮಾಡುವವರಿಗೆ ಬ್ರಹ್ಮಗತಿಯನ್ನು ಹೇಳಿದ್ದರಿಂದಲೂ ಅಂತರ್ಗತನು ವಿಷ್ಣುವೇ. ಅಸ್ಯಾಂ ನಿಷೀದತಿ ಬ್ರಹ್ಮ ಎನ್ನುವ ವ್ಯುತ್ಪತ್ತಿಯಿಂದ ಉಪನಿಷತ್ = ಉಪಾಸನೆಯು, ಶಥಾಚ ಉಪನಿಷತ್ ಶಬ್ದವು ಮತಿಧ್ಯಾನರೂಪಉಪಾಸನಾಪರವು. (೨) ಟೀಕಾಕಾರರ ಪಕ್ಷದಲ್ಲಿ ವಿದ್ಯಾಪರವು. ಶ್ರುತಪದವು ಮನನನಿದಿಧ್ಯಾಸನಗಳಿಗೆ ಉಪಲಕ್ಷಣವು (೩.) ಅಥ ಯದು ಚೈವಾಸ್ಮಿನ್ ಶವ್ಯಂ ಕರ್ಮ ಕುರ್ವಂತಿ ಯದಿ ಚ ನಾರ್ಚಿಷಮೇವಾಭಿ ಸಂಭವಂತಿ ಅರ್ಚಿಷೋऽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ ಷಡುದಙೇತಿ ಮಾಸಾನ್ ಮಾಸೇಭ್ಯಃ ಸಂವತ್ಸರಂ ಸಂವತ್ಸರಾದಾದಿತ್ಯಮಾದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮಗಮಯತಿ ಅಪರೋಕ್ಷಜ್ಞಾನಿವಿಷಯದಲ್ಲಿ ಪುತ್ರಾದಿಗಳು ಶವಯೋಗ್ಯವಾದ ದಹನಾದಿ ಕರ್ಮವನ್ನು ಮಾಡಿದರೂ ಮಾಡದ ಇದ್ದರೂ ಅರ್ಚಿರ್ನಾಮಕದೇವಲೋಕವನ್ನು ಜ್ಞಾನಿಗಳು ಹೊಂದಿಯೇ ಹೊಂದುತ್ತಾರೆ. ಅರ್ಚಿರ್ಲೋಕದಿಂದ ಅಹರ್ಲೋಕವನ್ನು ಅಹರ್ಲೋಕದಿಂದ ಶುಕ್ಲಪಕ್ಷಾಭಿಮಾನಿಯಾದ ದೇವತಾಲೋಕವನ್ನು. ಆದರಿಂದ ಸೂರ್ಯನು ಯಾವ ಆರುತಿಂಗಳಿನಲ್ಲಿ ಉತ್ತರಾಭಿಮುಖಿವಾಗಿ ಹೋಗುತ್ತಾನೋ ಅಂತಹ ಉತ್ತರಾಯಣಾಭಿಮಾನಿಯಾದ ದೇವಲೋಕವನ್ನು, ಆದರಿಂದ ಸಂವತ್ಸರಾಭಿಮಾನಿಯಾದ ದೇವತಾಲೋಕವನ್ನು, ಆದರಿಂದ ಆದಿತ್ಯಲೋಕವನ್ನು, ಆದರಿಂದ ಚಂದ್ರಲೋಕವನ್ನು, ಆದರಿಂದ ವಿದ್ಯುಲ್ಲೋಕವನ್ನು ಕ್ರಮದಿಂದ ಹೊಂದುತ್ತಾರೆ. ಆ ಮೇಲೆ

ವಿದ್ಯುತ್‌ನಾಮಕಳಾದ ಭಾರತಿಗೆ ಪತಿಯೂ, ಮನುನಾಮಕನಾದ ವಿಷ್ಣುವಿಗೆ ಪ್ರಿಯನೂ ಆದ ಮುಖ್ಯವಾಯುವನ್ನು ಹೊಂದುತ್ತಾರೆ. ಆ ವಾಯುವು ತನ್ನನ್ನು ಹೊಂದಿರತಕ್ಕ ಪ್ರತೀಕಾಲಂಬನರನ್ನು (ತಮ್ಮ ಶರೀರದಲ್ಲಿಯೇ ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿ ಕೊಂಡವರನ್ನು) ಚತುರ್ಮುಖಾಖ್ಯ ಕಾರ್ಯಬ್ರಹ್ಮನನ್ನೂ ಅಪ್ರತೀಕಾಲಂಬನರನ್ನು (ವ್ಯಾಪ್ತ್ಯೋಪಾಸಕರಾದ ದೇವಾದಿಗಳನ್ನು) ಪರಬ್ರಹ್ಮನನ್ನೂ ಹೊಂದಿಸಿ ಕೊಡುತ್ತಾರೆ.

ಟೀಕಿಕೆ ॥ ಈ ವಿದ್ಯೆಗೆ ಬ್ರಹ್ಮಪ್ರಾಪ್ತಿಯೇ ಫಲವೆಂದು ಹೇಳಿದ್ದಾಗಲಿ, ಆದಾಗ್ಯೂ ಈ ವಿದ್ಯೆಯು ಏಕೆ ಅಗ್ನಿವಿಷಯಕವಾಗುವುದಿಲ್ಲ ಎಂದರೆ—

## ಭಾಷ್ಯ ॥ ★ನ ಹ್ಯನ್ಯ ವಿದ್ಯಯಾ ಅನ್ಯಗತಿರ್ಯುಕ್ತಾ ॥ ೧೮ ॥

ಭಾಷ್ಯಾರ್ಥ ॥ ಏಕೆಂದರೆ— ಅಗ್ನಿವಿದ್ಯೆಯಿಂದ ಬ್ರಹ್ಮಪ್ರಾಪ್ತಿಯು ಯುಕ್ತವಾಗಲಾರದು. (ಇಲ್ಲಿ ಪರಬ್ರಹ್ಮಪ್ರಾಪ್ತಿಯು ಫಲವೆಂದು ಹೇಳಿರುವುದರಿಂದ ಇದು ಅಗ್ನಿವಿದ್ಯೆಯಲ್ಲ, ಬ್ರಹ್ಮವಿದ್ಯೆಯೇ.)

ವಿಶೇಷಾಂಶ ॥ ಅಸ್ಮದ್ವಿದ್ಯಾ ಎನ್ನುವುದು ಅಂತರ್ಯಾಮಿವಿಷಯಕವು. ಆತ್ಮವಿದ್ಯಾ ಎನ್ನುವುದು ಸರ್ವಗತಬ್ರಹ್ಮಪರವು. ಹೀಗೆ ಎರಡು ವಿದ್ಯೆಗಳೂ ಬ್ರಹ್ಮಪರಗಳೇ ಆಗಿರುವುದರಿಂದ ವಿದ್ಯಾಭೇದೋಕ್ತಿಯಿಂದ ವಿರೋಧವಿಲ್ಲ. ॥ ೧೬ ॥

ಟೀಕಿಕೆ ॥ ಹೀಗೆ ಉಪಪತ್ತ್ಯಾದಿಗಳಿಂದ ವಿಷ್ಣುವಿಗೆ ಅಕ್ಷಿಸ್ಥತ್ವವನ್ನು ಪ್ರತಿಪಾದಿಸಿ ಅಗ್ನಿಗೆ ಅಕ್ಷಿಸ್ಥತ್ವವನ್ನು ಹೇಳಿದರೆ ಬಾಧಕವಿದೆ ಎಂದು ಹೇಳುತ್ತಾ ಅದನ್ನು ಸಮರ್ಥಿಸತಕ್ಕ ಸೂತ್ರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಅನವಸ್ಥಿತೇರಸಂಭವಾಚ್ಚ ನೇತರಃ ಓಂ ॥ ೧೭ ॥

## ಭಾಷ್ಯ ॥ ಜೀವಸ್ಯ ಜೀವಾಂತರನಿಯಾಮಕತ್ವೇ ಅನವಸ್ಥಿತೇಃ। ಸಾಮ್ಯದಸಂಭವಾಚ್ಚ ನ ಜೀವಃ ॥ ೧೯ ॥

ಭಾಷ್ಯಾರ್ಥ ॥ ಆವಾವ ಜೀವಪ್ರೇರಕನಾಗಿ ಆವಾವ ಚಕ್ಷುಸ್ಸಿನ ಒಳಗೆ ಇರತಕ್ಕವನು ಅಗ್ನಿಯಲ್ಲ. ಜೀವನಿಗೆ ಜೀವಾಂತರಪ್ರೇರಕತ್ವವಿದ್ದರೆ (ಪ್ರೇರಕಜೀವನಿಗೂ ಜೀವತ್ವವು) ಸಮಾನವಾದುದರಿಂದ (ಆತನಿಗೂ ಜೀವಾಂತರನು ನಿಯಾಮಕನೆಂದು ಹೇಳಬೇಕು.) ಹೀಗೆ ಆತನಿಗೆ ಮತ್ತೊಬ್ಬನು, ಹೀಗೆ ಅಪ್ರಾಮಾಣಿಕವಾದ ಅಪರ್ಯವಸಿತವಾದ ಪ್ರೇರಕಪರಂಪರಾಕಲ್ಪನಾರೂಪವಾದ ಅನವಸ್ಥಾಖ್ಯ ಅನಿಷ್ಟವು ಬರುವುದರಿಂದ ಮತ್ತು ಜೀವನಿಗೆ ಜೀವಾಂತರನಿಯಾಮಕತ್ವವು ಕೂಡದಿರುವುದ ರಿಂದಲೂ ಅಗ್ನಿಗೆ ಪ್ರೇರಕತ್ವ ಹೇಳಿದರೆ ಪ್ರೇರ್ಯಜೀವಾಂತರದಿಂದ ಕೂಡಿಕೊಂಡು ಪರತಂತ್ರ ರೂಪವಾದ ಜೀವತ್ವವು ಸಮಾನವಾದುದರಿಂದ ಅಗ್ನ್ಯಾಖ್ಯಜೀವನಿಗೆ ಪ್ರೇರಕತ್ವವೇ ಕೂಡುವುದಿಲ್ಲ.

★ ಹಿ ಶಬ್ದದಿಂದ ಹೀಗೆ ಅಂಗೀಕರಿಸದೆ ಇದ್ದರೆ ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ಎನ್ನುವ ಸ್ಮೃತಿವಿಶೇಷವನ್ನೂ ಸೂಚಿಸಿದರು.

ಪೀಠಿಕೆ ॥ ಹಾಗಾದರೆ—ಜೀವಪ್ರೇರಕನಾದ ಅಗ್ನಿಗೆ ಸ್ವಾತಂತ್ರ್ಯವನ್ನು ಅಂಗೀಕರಿಸಿರುವುದರಿಂದ ಅನವಸ್ಥೆಯಿಲ್ಲ. ಹೀಗಾದರೆ— ಜೀವತ್ವವು ಸಮಾನವಾದುದರಿಂದ ಜೀವಾಂತರನಿಗೂ ಸ್ವಾತಂತ್ರ್ಯವು ಬರಬೇಕಾಗುವುದು ಎಂದು ಹೇಳಕೂಡದು. ಜೀವತ್ವವು ಸಮಾನವಾದರೂ ಅಗ್ನಿಗೇನೇ ಸ್ವಾತಂತ್ರ್ಯವು, ಇತರರಿಗೆ ಅಲ್ಲ ಎನ್ನುವ ವಿಷಯವನ್ನು ಅಂಗೀಕರಿಸಿದುದರಿಂದ ಎಂದರೆ—

## ಭಾಷ್ಯ ॥ ನಿಯಮೇ (ಮ)ಪ್ರಮಾಣಾಭಾವಾತ್। ಅನೀಶ್ವರಾಪೇಕ್ಷತ್ವಾಚ್ಚ ॥ ೨೦ ॥ ೧೭ ॥ ೪ ॥

ಭಾಷ್ಯಾರ್ಥ ॥ ಜೀವತ್ವವು ಸಮಾನವಾದಾಗ್ಯೂ ಅಗ್ನಿಗೇನೇ ಸ್ವಾತಂತ್ರ್ಯವು ಇತರರಿಗೆ ಅಲ್ಲ ಎನ್ನುವ ನಿಯಮದಲ್ಲಿ ಪ್ರಮಾಣವಿಲ್ಲದಿರುವುದರಿಂದ (ಆದಕಾರಣ ಅಗ್ನಿಗೆ ಸ್ವಾತಂತ್ರ್ಯವು ಕೂಡದಿರುವುದರಿಂದ ಹಿಂದೆ ಹೇಳಿದ ಅನವಸ್ಥಾ ತಪ್ಪಿದ್ದಲ್ಲ) (ಹಾಗಾದರೆ ಅಗ್ನಿಗೆ ಅಸ್ವಾತಂತ್ರ್ಯ ವಿರಲಿ. ಆದಾಗ್ಯೂ ಅಗ್ನಿಗೆ ಪ್ರೇರಕನಾದ ಈಶ್ವರನಿಗೆ ಸ್ವಾತಂತ್ರ್ಯವು ಕೂಡುವುದರಿಂದ ಅನವಸ್ಥಾದೋಷ ವಿಲ್ಲವೆಂದರೆ) ಪೂರ್ವ ಪಕ್ಷಿಯು ಜಗತ್ಪ್ರೇರಕನಾದ ಈಶ್ವರನು ಒಬ್ಬ ಇದ್ದಾನೆಂದು ಒಪ್ಪದೆ ಇರುವುದರಿಂದ ಪರತಂತ್ರತ್ವವು ಸಮಾನವಾದಾಗ್ಯೂ ಜೀವರಿಗೆ ಜೀವಾಂತರನಿಯಾಮಕತ್ವವು ಲೋಕದಲ್ಲಿ ಕಂಡಿರುವುದರಿಂದ ಕೂಡುವುದಿಲ್ಲವೆಂದು ಹಿಂದೆ ಹೇಳಿದ್ದು ಹೇಗೆ ಎಂದರೆ ಈಶ್ವರಾಪೇಕ್ಷೆಯಿಲ್ಲದಿರುವುದರಿಂದ. ತಥಾಚ ನಮ್ಮಪಕ್ಷದಲ್ಲಿ ಮಂಡಲಾಧಿಪತಿಯಾದ ರಾಜನು ಇರುವಾಗ ಪ್ರಜೆಗಳಿಗೆ ರಾಜನ ಶಕ್ತಿಯಿಂದ ನಿಯಮ್ಯನಿಯಾಮಕಭಾವವು ಕೂಡುವಂತೆ ಈಶ್ವರನ ಶಕ್ತಿಯಿಂದ ಜೀವರಿಗೆ ಜೀವಾಂತರನಿಯಾಮಕತ್ವವು ಕೂಡುವುದು. ಪೂರ್ವಪಕ್ಷಿಯು ಈಶ್ವರನನ್ನೇ ಅಂಗೀಕರಿಸದೆ ಇದ್ದುದರಿಂದ ಹಾಗೆ ಪರರ ಪಕ್ಷದಲ್ಲಿ ಕೂಡುವುದಿಲ್ಲ.

## ಮಾಯಾವಾದಿರೀತ್ಯಾ

ವಿಚಾರ ॥ (೧) ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಎನ್ನುವಲ್ಲಿ ಶ್ರುತನಾದ ಅಕ್ಷಿಸ್ಥನು ಛಾಯಾಪುರುಷನೋ ಅಥವಾ ಬ್ರಹ್ಮನೋ ಎಂದು ಸಂದೇಹವು ಬಂದರೆ ದೃಶ್ಯತೇ ಎಂದು ಪ್ರತ್ಯಕ್ಷ ವಿಷಯತ್ವವನ್ನು ಹೇಳಿದ್ದರಿಂದ ಅದು ಛಾಯೆಯಲ್ಲಿಯೇ ಕೂಡುವುದರಿಂದಲೂ ದೃಷ್ಟಿಗೆ ಅಗೋಚರನಾದ ಬ್ರಹ್ಮನಲ್ಲಿ ಕೂಡದೆ ಇರುವುದರಿಂದಲೂ ಛಾಯಾಪುರುಷನೇ ಎಂದು ಪೂರ್ವಪಕ್ಷವು. ದೃಶ್ಯತ್ವದಿಂದ ಛಾಯಾಪುರುಷನೇ ಅಕ್ಷಿಸ್ಥನೆಂದು ಪ್ರಥಮತಃ ಅವಗತವಾದ ಮೇಲೆ ಅಮೃತತ್ವಅಭಯತ್ವಾದಿಗಳು ಸ್ತುತಿರೂಪಗಳು ಎಂದು ಕಥಂಚಿತ್ ಛಾಯಾಪುರುಷನಲ್ಲಿಯೇ ಕೂಡಬಹುದು. ಆದಕಾರಣ ಛಾಯಾಪುರುಷನೇ ಅಕ್ಷಿಸ್ಥನು ಎಂದು ಪೂರ್ವಪಕ್ಷವನ್ನು ಮಾಯಾವಾದಿಗಳು ಮಾಡಿಕೊಂಡು ಅಮೃತತ್ವ ಅಭಯತ್ವಾದಿಗಳು ಪರಬ್ರಹ್ಮನಲ್ಲಿಯೇ ಮುಖ್ಯವಾಗಿ ಕೂಡುವುದರಿಂದ ಬ್ರಹ್ಮನೇ ಅಕ್ಷಿಸ್ಥನು ಎಂದು ಸಿದ್ಧಾಂತಮಾಡಿರುವರು. ಛಾಯಾಪುರುಷನಿಗೆ ಜ್ಞಾಪಕವಾದ ದೃಶ್ಯತೇ ಎನ್ನುವುದಕ್ಕಿಂತಲೂ ಮೊದಲು ಇರುವ ಚೇತನವಾಚಕವಾದ ಪುರುಷಪದದಿಂದ ಪರಮಾತ್ಮನೇ ಎಂದು ನಿಶ್ಚಯವಾಗುತ್ತದೆ. ಆದಕಾರಣ ಅಂತಸ್ಥನು ಪರಬ್ರಹ್ಮನೇ ಎಂದು ಮಾಯಾವಾದಿಗಳ ಸಿದ್ಧಾಂತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥ (೧)** ಅಕ್ಷಿಸ್ಥನಾದ ಪುರುಷನು ''ಪ್ರತಿಬಿಂಬಭೂತರು ಜೀವರು ದೇವತೆಗಳು ಇವರ ಮಧ್ಯದಲ್ಲಿ'' ಒಬ್ಬನೋ, ಪರಮಾತ್ಮನೋ ಎಂದು ಸಂದೇಹವು ಬಂದರೆ ಯ ಏಷಃ ಎನ್ನುವ ಎರಡು ಪದಗಳಿಂದ ಪ್ರಸಿದ್ಧನೆಂದು ಹೇಳಿದ್ದರಿಂದಲೂ ದೃಶ್ಯತೇ ಎಂದು ಪ್ರತ್ಯಕ್ಷವಿಷಯತ್ವವನ್ನು ಹೇಳಿದ್ದರಿಂದಲೂ ಉಪಕ್ರಮಾನುಸಾರವಾಗಿ ಉತ್ತರತ್ರ ಹೇಳುವ ಅಮೃತತ್ವಅಭಯತ್ವಾದಿಗಳು ಸ್ತುತ್ಯರ್ಥಗಳಾಗಿ ಕೂಡುವುದರಿಂದ ಪ್ರತಿಬಿಂಬಾದಿಗಳಲ್ಲಿ ಅನ್ಯತಮನು ಎಂದು ರಾಮಾನುಜಾಚಾರ್ಯರು ಪೂರ್ವಪಕ್ಷಮಾಡಿಕೊಂಡು ಪರಮಾತ್ಮನೇ ಎಂದು ಸಿದ್ಧಾಂತಮಾಡಿರುವರು. ಹೇಗೆಂದರೆ ನಿರುಪಾಧಿಕಗಳಾದ ಅಮೃತತ್ವ ಆತ್ಮತ್ವ ಅಭಯತ್ವ ಬ್ರಹ್ಮತ್ವಸಂಯದ್ವಾಮತ್ವಾದಿಗಳು ಪರಮಾತ್ಮನಲ್ಲಿಯೇ ಕೂಡುವುದರಿಂದಲೂ ಯಶ್ಚಕ್ಷುಷಿ ತಿಷ್ಠನ್ ಇದು ಮೊದಲಾದ ಶ್ರುತ್ಯಂತರಗಳಲ್ಲಿ ಅಂತಸ್ಥತ್ವವು ಶ್ರೀಹರಿಯಲ್ಲಿಯೇ ಪ್ರಸಿದ್ಧವಾಗಿರುವುದರಿಂದಲೂ ಪರಮಾತ್ಮನೇ ಅಕ್ಷಿಸ್ಥನು' ಎಂದು ಸಿದ್ಧಾಂತ ಮಾಡಿರುವರು. ಇವರಿಬ್ಬರು ಸಿದ್ಧಾಂತ ಮಾಡಿದ್ದೂ ಅಯುಕ್ತವು. ಏಕೆಂದರೆ— ಇಬ್ಬರ ಮತದಲ್ಲಿಯೂ ಈ ಅಧಿಕರಣವು **ಅಂತಸ್ತದ್ಧರ್ಮೋಪದೇಶಾತ್** ಎನ್ನುವುದರಿಂದ ಗತಾರ್ಥವಾಗಿದೆ. ಆ ಅಧಿಕರಣದಲ್ಲಿ ಆದಿತ್ಯಸ್ಥತ್ವವನ್ನು ಹೇಳಿದಂತೆಯೇ ಅಕ್ಷಿಸ್ಥತ್ವವನ್ನು ಹೇಳಿರುತ್ತಾರೆ. ಹಾಗಾದರೆ ಆ ಅಧಿಕರಣದಲ್ಲಿ ಉದ್ಗೀಥೋಪಾಸನದಲ್ಲಿ ಇರುವ ಅಕ್ಷಿವಾಕ್ಯವು ವಿಷಯವು. ಈ ಅಧಿಕರಣದಲ್ಲಿ ಉಪಕೋಸಲವಿದ್ಯೆಯಲ್ಲಿರತಕ್ಕ ಅಕ್ಷಿವಾಕ್ಯವು ವಿಷಯವು. ಇಷ್ಟರಿಂದಲೇ ಗತಾರ್ಥವಾಗುವುದಿಲ್ಲವೆನ್ನಕೂಡದು. ಆ ಅಧಿಕರಣದಲ್ಲಿದ್ದಂತೆಯೇ ಇಲ್ಲಿಯೂ ಅನ್ಯತ್ರ ನಿರವಕಾಶಗಳಾದ ಅಮೃತತ್ವ ಮೊದಲಾದ ಬ್ರಹ್ಮಧರ್ಮಗಳು ಇವೆ. ಬ್ರಹ್ಮಶಬ್ದ ಸಹ ಅಧಿಕವಾಗಿ ಇದೆ. ಹಾಗಾದರೆ ಅಲ್ಲಿ ಅಕ್ಷಿಸ್ಥನು ಜೀವವಿಶೇಷನು ಎಂದು ಪೂರ್ವಪಕ್ಷವು. ಈ ಅಧಿಕರಣದಲ್ಲಿ ಛಾಯಾ (ಪ್ರತಿಬಿಂಬವು) ಎಂದು ಪೂರ್ವಪಕ್ಷವು. ತಥಾಚ ಜೀವವಿಶೇಷವೂ ಕೂಡ ಬ್ರಹ್ಮನಂತೆ ಪರೋಕ್ಷವಾಗಿರುವುದರಿಂದ ಅಲ್ಲಿ ದೃಶ್ಯತ್ವಾದಿಗಳು ಅಯುಕ್ತವು. ಛಾಯೆ (ಪ್ರತಿಬಿಂಬ)ಯಲ್ಲಿ ದೃಶ್ಯತ್ವಾದಿಗಳು ಯುಕ್ತವು. ಹೀಗೆ ಅಧಿಕರಣದಲ್ಲಿ ಅಭ್ಯಧಿಕಾಶಂಕೆಯು ಇದೆ ಎಂದೂ ಹೇಳಕೂಡದು. ಏಕೆಂದರೆ ದೃಶ್ಯತ್ವವು ಕೂಡದಿರುವುದರಿಂದ ಜೀವಪಕ್ಷವನ್ನು ಬಿಡುವುದಾದರೆ ಛಾಯಾಪುರುಷನಲ್ಲಿ ವಿಷಯವಾಕ್ಯದಲ್ಲಿದ್ದ ಪುರುಷತ್ವ ಅಮೃತತ್ವಾದಿಗಳೂ, ಏವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ ಎಂದು ಅಕ್ಷಿಸ್ಥನ ಜ್ಞಾನದಿಂದ ಪಾಪಾಶ್ಲೇಷವಾಗುತ್ತದೆ ಎಂದು ಪೂರ್ವವಾಕ್ಯದಲ್ಲಿ ಹೇಳಿದ್ದೂ, ಉತ್ತರವಾಕ್ಯದಲ್ಲಿ ಹೇಳಿದ ಸಂಯದ್ವಾಮತ್ವಾದಿಗಳೂ ಸರ್ವಥಾ ಕೂಡದಿರುವುದರಿಂದ ಛಾಯಾಪುರುಷನೆನ್ನುವ ಪಕ್ಷವನ್ನು ಸರ್ವಥಾ ಬಿಡಬೇಕಾಗುವುದು. ಸ್ತುತಿಸುವುದಕ್ಕಾಗಿ ಛಾಯಾಪುರುಷನಲ್ಲಿ ಅಮೃತತ್ವಾದಿಗಳನ್ನೇ ಹೇಳಿದ್ದು ಎಂದು ಹೇಳುವುದಾದರೆ ಸ್ತುತ್ಯರ್ಥವಾಗಿಯೇ ಜೀವನಲ್ಲಿಯೂ ದೃಶ್ಯತ್ವಾದಿಗಳನ್ನು ಹೇಳಿದ್ದು ಎಂದಾಗ ಬಹುದು. ಆದಕಾರಣ ಪರಮತದಲ್ಲಿ ಪೂರ್ವಪಕ್ಷವನ್ನು ಮಾಡಿಕೊಂಡದ್ದು ಯುಕ್ತವಾಗುವುದಿಲ್ಲ ನಮ್ಮಮತದಲ್ಲಿ ಆದರೂ ''ಅಂತಸ್ತದ್ಧರ್ಮ'' ಎನ್ನುವಲ್ಲಿ ಇಂದ್ರಾದಿಶ್ರುತಿಯಿಂದ ಇಂದ್ರಾದಿಗಳಿಗೆ ಅಂತಸ್ಥತ್ವವು ಎಂದು ಪೂರ್ವಪಕ್ಷವು ಬಂದರೆ ಅಲ್ಲವೆಂದು ಸಿದ್ಧಾಂತವು. ಈ ಅಧಿಕರಣದಲ್ಲಿ ಅಭ್ಯಾಸ ಅರ್ಥವಾದ ಸಹಿತಗಳಾದ ಬಹುಶ್ರುತಿಗಳಿಂದ ಅಗ್ನಿಗೆ ಚಕ್ಷುರಂತಸ್ಥತ್ವವು

ಎಂದು ಪೂರ್ವಪಕ್ಷವು ಬಂದರೆ ಅಲ್ಲವೆಂದು ಸಿದ್ಧಾಂತವು. ಏವಂಚ ಅಲ್ಲಿ ಅಂತಸ್ಸತ್ವಸಾಮಾನ್ಯವು, ಇಲ್ಲಿ ಚಕ್ಷುರಂತಸ್ಸತ್ವವು. ಅಲ್ಲಿ ಇಂದ್ರಾದಿಗಳು ಅನೇಕಮಂದಿ ಇಲ್ಲಿ ಅಗ್ನಿಮಾತ್ರ. ಅಲ್ಲಿ ಶ್ರುತಿಮಾತ್ರದಿಂದ, ಇಲ್ಲಿ ಅಭ್ಯಾಸಾದಿಗಳು, ಹೀಗೆ ಮಹಾಭೇದವಿದೆ. (೨) ಪರರ ಸಿದ್ಧಾಂತವೂ ಅಯುಕ್ತವು. ಏಕೆಂದರೆ— **ಕಾರ್ಯಬ್ರಹ್ಮಪರತ್ವೇ ಚೇದಮೃತತ್ವಾದ್ಯಸಂಭವಃ । ಅಕಾರ್ಯ ಪರತಾ ಚೇತ್ಸ್ಯಾದರ್ಚಿರಾದೇರಸಂಭವಃ ॥** ಈ ವಾಕ್ಯವು ಕಾರ್ಯಬ್ರಹ್ಮನಾದ ಚತುರ್ಮುಖಪರವೆಂದು ಹೇಳಿದರೆ ಅಮೃತತ್ವ ಅಭಯತ್ವ ಅಪರಿಚ್ಛಿನ್ನ ಸುಖತ್ವ ಮೊದಲಾದುದು ಹೇತುಗಳು ಅವನಲ್ಲಿ ಕೂಡಲಾರವು. ಮತ್ತು ಆ ಅಮೃತತ್ವಾದಿಹೇತುಗಳಿಂದ ಸಾಧ್ಯವಾದ ಚಕ್ಷುರಂತಸ್ಸತ್ವವು ಕಾರ್ಯಬ್ರಹ್ಮನಿಗೆ ಕೂಡಲಾರದು. ಏಕೆಂದರೆ— **ಯಶ್ಚಕ್ಷುಷಿ ತಿಷ್ಠನ್** ಇತ್ಯಾದಿಶ್ರುತಿಗಳಿಂದ ಚಕ್ಷುರಂತಸ್ಸತ್ವವು ಅಕಾರ್ಯಬ್ರಹ್ಮಭೂತನಾದ ಅಂತರ್ಯಾಮಿಯ ಧರ್ಮವಾಗಿದೆ. (೩) ಅಕಾರ್ಯಬ್ರಹ್ಮಪರವೆಂದು ಇಟ್ಟುಕೊಂಡರೆ **ತೇಽರ್ಚಿಷಮಭಿಸಂಭವಂತಿ** ಎನ್ನುವ ಶ್ರುತಿಯಲ್ಲಿಯೂ **ಶ್ರುತೋಪನಿಷತ್ಕಗತ್ಯಭಿಧಾನಾಚ್ಚ** ಎನ್ನುವ ಸೂತ್ರದಲ್ಲಿಯೂ ಅರ್ಚಿರಾದಿ ಮಾರ್ಗವನ್ನು ಹೇಳಿದ್ದು ಕೂಡದೆ ಹೋಗಬೇಕಾಗುವುದು. ಅದ್ವೈತಿಗಳ ಮತದಲ್ಲಿ ಅರ್ಚಿರಾದಿಗಳು ಕಾರ್ಯಬ್ರಹ್ಮನ ಮಾರ್ಗಗಳಾಗಿವೆ. ಅದ್ವೈತಿಗಳು ಹೇಳಿದಂತೆಯೇ ರಾಮಾನುಜಾಚಾರ್ಯರೂ ಈ ಅಧಿಕರಣದ ಅರ್ಥವನ್ನು ಹೇಳಿದ್ದರಿಂದ ರಾಮಾನುಜಾಚಾರ್ಯರ ಮತವೂ ಆ ದೂಷಣದಿಂದಲೇ ದೂಷಿತಪ್ರಾಯವಾಯಿತು. ಹೀಗೆ ಇತರ ಸೂತ್ರಗಳ ಅರ್ಥಗಳೂ ಅನುಪಪನ್ನಗಳಾಗಿರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಛಾಂದೋಗ್ಯದಲ್ಲಿ ನಾಲ್ಕನೇ ಅಧ್ಯಾಯದಲ್ಲಿಯ **ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ಬ್ರಹ್ಮ** ಎನ್ನುವಲ್ಲಿ ಶ್ರುತನಾದ ಅಕ್ಷ್ಯಂತಸ್ಸನಾದ ಆತ್ಮನು ಅಗ್ನಿಯೋ ವಿಷ್ಣುವೋ ಎಂದು ಸಂದೇಹವು. ಅಗ್ನಿಯೇ ಎಂದು ಪೂರ್ವಪಕ್ಷವು. ಏಕೆಂದರೆ— **ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ** ಎಂದು ಗಾರ್ಹಪತ್ಯಾಗ್ನಿಯು ಆದಿತ್ಯನಲ್ಲಿರತಕ್ಕವನು ತಾನೆಂದು ಹೇಳಿರುತ್ತಾನೆ. **ಆದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್** ಸೂರ್ಯನು ಚಕ್ಷುರಭಿಮಾನಿಯಾಗಿ ಅಕ್ಷಿಗೋಲಕದಲ್ಲಿ ಪ್ರವೇಶಮಾಡಿದನು. ಇತ್ಯಾದಿಶ್ರುತಿಯಿಂದ ಚಕ್ಷುರಭಿಮಾನಿಗೂ ಆದಿತ್ಯನಿಗೂ ಐಕ್ಯವಿರುವದರಿಂದ ಆದಿತ್ಯಸ್ಥನಾದ ಅಗ್ನಿಯೇ ಚಕ್ಷುರಂತಸ್ಥನು. ಮತ್ತು **ಅಗ್ನೀನ್ ಪರಿಚರ ಅಥ ಹಾಗ್ನಯಃ ಸಮೂದಿರೇ** ಇತ್ಯಾದಿ ಅನೇಕಾವರ್ತಿಬಹುವಚನಾಂತವಾದ ಅಗ್ನಿಶ್ರುತಿಯು ಈ ಪ್ರಕರಣದಲ್ಲಿ ಬಹಳ ಇದೆ. **ಅಥ ಹೈನಂ ಗಾರ್ಹಪತ್ಯೋಽನುಶಶಾಸ** ಇತ್ಯಾದಿಗಳಿಂದ ಗಾರ್ಹಪತ್ಯಾದಿ ಅಗ್ನಿವಿಶೇಷಗಳನ್ನು ಪ್ರತಿಪಾದಿಸುವ ಬಹ್ವಗ್ನಿಶ್ರುತಿಗಳೂ ಇವೆ. ಹಾಗಾದರೆ ಅಗ್ನಿಗಳೇ ಉಪದೇಶಮಾಡತಕ್ಕವುಗಳಾದಾಗ್ಯೂ **ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ** ಎನ್ನುವ ಸಮಾಖ್ಯಾಬಲದಿಂದಲೂ ಶಾಸ್ತ್ರದೃಷ್ಟ್ಯಾ ಎನ್ನುವ ನ್ಯಾಯದಿಂದಲೂ ಅಗ್ನಿಯಲ್ಲಿ ಪ್ರಯುಕ್ತವಾದ ಅಹಂ ಶಬ್ದವು ಅಗ್ನಿಯಲ್ಲಿರತಕ್ಕ (ಅಂತರ್ಯಾಮಿಯಾದ) ವಿಷ್ಣುಪರವು ಎಂದು ಹೇಳಕೂಡದು. **ಸೋಽಹಮಸ್ಮಿ ಸ ಏವಾಹಮಸ್ಮಿ** ಎನ್ನುವ ಅಭ್ಯಾಸದಿಂದ ಸಮಾಖ್ಯೆಯು ಬಾಧಿತ ವಾಗುತ್ತದೆ. ಆದಕಾರಣ ಅಗ್ನಿಯೇ ಎಂದು ಪೂರ್ವಪಕ್ಷವು ಬಂದರೆ ಪರಬ್ರಹ್ಮನೇ ಎಂದು ಸಿದ್ಧಾಂತವು— ಹೇಗೆಂದರೆ

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** (೧) ಅಕ್ಷಿಸ್ಥನಾದ ಪುರುಷನು ''ಪ್ರತಿಬಿಂಬಭೂತರು ಜೀವರು ದೇವತೆಗಳು ಇವರ ಮಧ್ಯದಲ್ಲಿ'' ಒಬ್ಬನೋ, ಪರಮಾತ್ಮನೋ ಎಂದು ಸಂದೇಹವು ಬಂದರೆ ಯ ಏಷಃ ಎನ್ನುವ ಎರಡು ಪದಗಳಿಂದ ಪ್ರಸಿದ್ಧನೆಂದು ಹೇಳಿದ್ದರಿಂದಲೂ ದೃಶ್ಯತೇ ಎಂದು ಪ್ರತ್ಯಕ್ಷವಿಷಯತ್ವವನ್ನು ಹೇಳಿದ್ದರಿಂದಲೂ ಉಪಕ್ರಮಾನುಸಾರವಾಗಿ ಉತ್ತರತ್ರ ಹೇಳುವ ಅಮೃತತ್ವಅಭಯತ್ವಾದಿಗಳು ಸ್ತುತ್ಯರ್ಥಗಳಾಗಿ ಕೂಡುವುದರಿಂದ ಪ್ರತಿಬಿಂಬಾದಿಗಳಲ್ಲಿ ಅನ್ಯತಮನು ಎಂದು ರಾಮಾನುಜಾಚಾರ್ಯರು ಪೂರ್ವಪಕ್ಷಮಾಡಿಕೊಂಡು ಪರಮಾತ್ಮನೇ ಎಂದು ಸಿದ್ಧಾಂತಮಾಡಿರುವರು. ಹೇಗೆಂದರೆ ನಿರುಪಾಧಿಕಗಳಾದ ಅಮೃತತ್ವ ಅಕ್ಷತ್ವ ಅಭಯತ್ವ ಬ್ರಹ್ಮತ್ವಸಂಯದ್ವಾಮತ್ವಾದಿಗಳು ಪರಮಾತ್ಮನಲ್ಲಿಯೇ ಕೂಡುವುದರಿಂದಲೂ ಯಶ್ಚಕ್ಷುಷಿ ತಿಷ್ಠನ್ ಇದು ಮೊದಲಾದ ಶ್ರುತ್ಯಂತರಗಳಲ್ಲಿ ಅಂತಸ್ಸತ್ವವು ಶ್ರೀಹರಿಯಲ್ಲಿಯೇ ಪ್ರಸಿದ್ಧವಾಗಿರುವುದರಿಂದಲೂ ಪರಮಾತ್ಮನೇ ಅಕ್ಷಿಸ್ಥನು ಎಂದು ಸಿದ್ಧಾಂತ ಮಾಡಿರುವರು. ಇವರಿಬ್ಬರು ಸಿದ್ಧಾಂತ ಮಾಡಿದ್ದೂ ಅಯುಕ್ತವು. ಏಕೆಂದರೆ— ಇಬ್ಬರ ಮತದಲ್ಲಿಯೂ ಈ ಅಧಿಕರಣವು **ಅಂತಸ್ತದ್ಧರ್ಮೋಪದೇಶಾತ್** ಎನ್ನುವುದರಿಂದ ಗತಾರ್ಥವಾಗಿದೆ. ಆ ಅಧಿಕರಣದಲ್ಲಿ ಆದಿತ್ಯಸ್ಥತ್ವವನ್ನು ಹೇಳಿದಂತೆಯೇ ಅಕ್ಷಿಸ್ಥತ್ವವನ್ನು ಹೇಳಿರುತ್ತಾರೆ. ಹಾಗಾದರೆ ಆ ಅಧಿಕರಣದಲ್ಲಿ ಉದ್ಗೀಥೋಪಾಸನದಲ್ಲಿ ಇರುವ ಅಕ್ಷಿವಾಕ್ಯವು ವಿಷಯವು. ಈ ಅಧಿಕರಣದಲ್ಲಿ ಉಪಕೋಸಲವಿದ್ಯೆಯಲ್ಲಿರತಕ್ಕ ಅಕ್ಷಿವಾಕ್ಯವು ವಿಷಯವು. ಇಷ್ಟರಿಂದಲೇ ಗತಾರ್ಥವಾಗುವುದಿಲ್ಲವೆನ್ನಕೂಡದು. ಆ ಅಧಿಕರಣದಲ್ಲಿದ್ದಂತೆಯೇ ಇಲ್ಲಿಯೂ ಅನ್ಯತ್ರ ನಿರವಕಾಶಗಳಾದ ಅಮೃತತ್ವ ಮೊದಲಾದ ಬ್ರಹ್ಮಧರ್ಮಗಳು ಇವೆ. ಬ್ರಹ್ಮಶಬ್ದ ಸಹ ಅಧಿಕವಾಗಿ ಇದೆ. ಹಾಗಾದರೆ ಅಲ್ಲಿ ಅಕ್ಷಿಸ್ಥನು ಜೀವವಿಶೇಷನು ಎಂದು ಪೂರ್ವಪಕ್ಷವು. ಈ ಅಧಿಕರಣದಲ್ಲಿ ಛಾಯಾ (ಪ್ರತಿಬಿಂಬವು) ಎಂದು ಪೂರ್ವಪಕ್ಷವು. ತಥಾಚ ಜೀವವಿಶೇಷವೂ ಕೂಡ ಬ್ರಹ್ಮನಂತೆ ಪರೋಕ್ಷವಾಗಿರುವುದರಿಂದ ಅಲ್ಲಿ ದೃಶ್ಯತ್ವಾದಿಗಳು ಅಯುಕ್ತವು. ಛಾಯೆ (ಪ್ರತಿಬಿಂಬ)ಯಲ್ಲಿ ದೃಶ್ಯತ್ವಾದಿಗಳು ಯುಕ್ತವು. ಹೀಗೆ ಅಧಿಕರಣದಲ್ಲಿ ಅಭ್ಯಧಿಕಾಶಂಕೆಯು ಇದೆ ಎಂದೂ ಹೇಳಕೂಡದು. ಏಕೆಂದರೆ ದೃಶ್ಯತ್ವವು ಕೂಡದಿರುವುದರಿಂದ ಜೀವಪಕ್ಷವನ್ನು ಬಿಡುವುದಾದರೆ ಛಾಯಾಪುರುಷನಲ್ಲಿ ವಿಷಯವಾಕ್ಯದಲ್ಲಿದ್ದ ಪುರುಷತ್ವ ಅಮೃತತ್ವಾದಿಗಳೂ, ಏವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ ಎಂದು ಅಕ್ಷಿಸ್ಥನ ಜ್ಞಾನದಿಂದ ಪಾಪಾಶ್ಲೇಷವಾಗುತ್ತದೆ ಎಂದು ಪೂರ್ವವಾಕ್ಯದಲ್ಲಿ ಹೇಳಿದ್ದೂ, ಉತ್ತರವಾಕ್ಯದಲ್ಲಿ ಹೇಳಿದ ಸಂಯದ್ವಾಮತ್ವಾದಿಗಳೂ ಸರ್ವಥಾ ಕೂಡದಿರುವುದರಿಂದ ಛಾಯಾಪುರುಷನನ್ನುವ ಪಕ್ಷವನ್ನು ಸರ್ವಥಾ ಬಿಡಬೇಕಾಗುವುದು. ಸ್ತುತಿಸುವುದಕ್ಕಾಗಿ ಛಾಯಾಪುರುಷನಲ್ಲಿ ಅಮೃತತ್ವಾದಿಗಳನ್ನೇ ಹೇಳಿದ್ದು ಎಂದು ಹೇಳುವುದಾದರೆ ಸ್ತುತ್ಯರ್ಥವಾಗಿಯೇ ಜೀವನಲ್ಲಿಯೂ ದೃಶ್ಯತ್ವಾದಿಗಳನ್ನು ಹೇಳಿದ್ದು ಎಂದಾಗ ಬಹುದು. ಆದಕಾರಣ ಪರಮತದಲ್ಲಿ ಪೂರ್ವಪಕ್ಷವನ್ನು ಮಾಡಿಕೊಂಡದ್ದು ಯುಕ್ತವಾಗುವುದಿಲ್ಲ. ನಮ್ಮಮತದಲ್ಲಿ ಆದರೂ ''ಅಂತಸ್ತದ್ಧರ್ಮ'' ಎನ್ನುವಲ್ಲಿ ಇಂದ್ರಾದಿಶ್ರುತಿಯಿಂದ ಇಂದ್ರಾದಿಗಳಿಗೆ ಅಂತಸ್ಸತ್ವವು ಎಂದು ಪೂರ್ವಪಕ್ಷವು ಬಂದರೆ ಅಲ್ಲವೆಂದು ಸಿದ್ಧಾಂತವು. ಈ ಅಧಿಕರಣದಲ್ಲಿ ಅಭ್ಯಾಸ ಅರ್ಥವಾದ ಸಹಿತಗಳಾದ ಬಹುಶ್ರುತಿಗಳಿಂದ ಅಗ್ನಿಗೆ ಚಕ್ಷುರಂತಸ್ಸತ್ವವು

ಎಂದು ಪೂರ್ವಪಕ್ಷವು ಬಂದರೆ ಅಲ್ಲವೆಂದು ಸಿದ್ಧಾಂತವು. ಏವಂಚ ಅಲ್ಲಿ ಅಂತಸ್ಥತ್ವಸಾಮಾನ್ಯವು, ಇಲ್ಲಿ ಚಕ್ಷುರಂತಸ್ಥತ್ವವು. ಅಲ್ಲಿ ಇಂದ್ರಾದಿಗಳು ಅನೇಕಮಂದಿ ಇಲ್ಲಿ ಅಗ್ನಿಮಾತ್ರ. ಅಲ್ಲಿ ಶ್ರುತಿಮಾತ್ರದಿಂದ, ಇಲ್ಲಿ ಅಭ್ಯಾಸಾದಿಗಳು, ಹೀಗೆ ಮಹಾಭೇದವಿದೆ. (೨) ಪರರ ಸಿದ್ಧಾಂತವೂ ಅಯುಕ್ತವು. ಏಕೆಂದರೆ— **ಕಾರ್ಯಬ್ರಹ್ಮಪರತ್ವೇ ಚೇದಮೃತತ್ವಾದ್ಯಸಂಭವಃ। ಅಕಾರ್ಯ ಪರತಾ ಚೇತ್ಸ್ಯಾದರ್ಚಿರಾದೇರಸಂಭವಃ॥** ಈ ವಾಕ್ಯವು ಕಾರ್ಯಬ್ರಹ್ಮನಾದ ಚತುರ್ಮುಖಪರವೆಂದು ಹೇಳಿದರೆ ಅಮೃತತ್ವಅಭಯತ್ವಅಪರಿಚ್ಛಿನ್ನ ಸುಖಿತ್ವ ಮೊದಲಾದುದು ಹೇತುಗಳು ಅವನಲ್ಲಿ ಕೂಡಲಾರವು. ಮತ್ತು ಆ ಅಮೃತತ್ವಾದಿಹೇತುಗಳಿಂದ ಸಾಧ್ಯವಾದ ಚಕ್ಷುರಂತಸ್ಥತ್ವವು ಕಾರ್ಯಬ್ರಹ್ಮನಿಗೆ ಕೂಡಲಾರದು. ಏಕೆಂದರೆ— **ಯಶ್ಚಕ್ಷುಷಿ ತಿಷ್ಠನ್** ಇತ್ಯಾದಿಶ್ರುತಿಗಳಿಂದ ಚಕ್ಷುರಂತಸ್ಥತ್ವವು ಅಕಾರ್ಯಬ್ರಹ್ಮಭೂತನಾದ ಅಂತರ್ಯಾಮಿಯ ಧರ್ಮವಾಗಿದೆ. (೨.) ಅಕಾರ್ಯಬ್ರಹ್ಮಪರವೆಂದು ಇಟ್ಟುಕೊಂಡರೆ **ತೇಽರ್ಚಿಷಮಭಿಸಂಭವಂತಿ** ಎನ್ನುವ ಶ್ರುತಿಯಲ್ಲಿಯೂ **ಶ್ರುತೋಪನಿಷತ್ಕಗತ್ಯಭಿಧಾನಾಚ್ಚ** ಎನ್ನುವ ಸೂತ್ರದಲ್ಲಿಯೂ ಅರ್ಚಿರಾದಿ ಮಾರ್ಗವನ್ನು ಹೇಳಿದ್ದು ಕೂಡದೆ ಹೋಗಬೇಕಾಗುವುದು. ಅದ್ವೈತಿಗಳ ಮತದಲ್ಲಿ ಅರ್ಚಿರಾದಿಗಳು ಕಾರ್ಯಬ್ರಹ್ಮನ ಮಾರ್ಗಗಳಾಗಿವೆ. ಅದ್ವೈತಿಗಳು ಹೇಳಿದಂತೆಯೇ ರಾಮಾನುಜಾಚಾರ್ಯರೂ ಈ ಅಧಿಕರಣದ ಅರ್ಥವನ್ನು ಹೇಳಿದ್ದರಿಂದ ರಾಮಾನುಜಾಚಾರ್ಯರ ಮತವೂ ಆ ದೂಷಣದಿಂದಲೇ ದೂಷಿತಪ್ರಾಯವಾಯಿತು. ಹೀಗೆ ಇತರ ಸೂತ್ರಗಳ ಅರ್ಥಗಳೂ ಅನುಪಪನ್ನಗಳಾಗಿರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಛಾಂದೋಗ್ಯದಲ್ಲಿ ನಾಲ್ಕನೇ ಅಧ್ಯಾಯದಲ್ಲಿಯ **ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ಬ್ರಹ್ಮ** ಎನ್ನುವಲ್ಲಿ ಶ್ರುತನಾದ ಅಕ್ಷ್ಯಂತಸ್ಥನಾದ ಆತ್ಮನು ಅಗ್ನಿಯೋ ವಿಷ್ಣುವೋ ಎಂದು ಸಂದೇಹವು. ಅಗ್ನಿಯೇ ಎಂದು ಪೂರ್ವಪಕ್ಷವು. ಏಕೆಂದರೆ— **ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ** ಎಂದು ಗಾರ್ಹಪತ್ಯಾಗ್ನಿಯು ಆದಿತ್ಯನಲ್ಲಿರತಕ್ಕವನು ತಾನೆಂದು ಹೇಳಿರುತ್ತಾನೆ. **ಆದಿತ್ಯಶ್ಚಕ್ಷುರ್ಭೂತ್ವಾಕ್ಷಿಣಿ ಪ್ರಾವಿಶತ್** ಸೂರ್ಯನು ಚಕ್ಷುರಭಿಮಾನಿಯಾಗಿ ಅಕ್ಷಿಗೋಲಕದಲ್ಲಿ ಪ್ರವೇಶಮಾಡಿದನು. ಇತ್ಯಾದಿಶ್ರುತಿಯಿಂದ ಚಕ್ಷುರಭಿಮಾನಿಗೂ ಆದಿತ್ಯನಿಗೂ ಐಕ್ಯವಿರುವದರಿಂದ ಆದಿತ್ಯಸ್ಥನಾದ ಅಗ್ನಿಯೇ ಚಕ್ಷುರಂತಸ್ಥನು. ಮತ್ತು **ಅಗ್ನೀನ್ ಪರಿಚೇರು ಅಥ ಹಾಗ್ನಯಃ ಸಮೂದಿರೇ** ಇತ್ಯಾದಿ ಅನೇಕಾವರ್ತಿಬಹುವಚನಾಂತವಾದ ಅಗ್ನಿಶ್ರುತಿಯು ಈ ಪ್ರಕರಣದಲ್ಲಿ ಬಹಳ ಇದೆ. **ಅಥ ಹೈನಂ ಗಾರ್ಹಪತ್ಯೋಽನುಶಶಾಸ** ಇತ್ಯಾದಿಗಳಿಂದ ಗಾರ್ಹಪತ್ಯಾದಿ ಅಗ್ನಿವಿಶೇಷಗಳನ್ನು ಪ್ರತಿಪಾದಿಸುವ ಬಹ್ವಗ್ನಿಶ್ರುತಿಗಳೂ ಇವೆ. ಹಾಗಾದರೆ ಅಗ್ನಿಗಳೇ ಉಪದೇಶಮಾಡತಕ್ಕವುಗಳಾದಾಗ್ಯೂ **ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ** ಎನ್ನುವ ಸಮಾಖ್ಯಾಬಲದಿಂದಲೂ ತಾಸ್ಯ ದೃಷ್ಟ್ಯಾ ಎನ್ನುವ ನ್ಯಾಯದಿಂದಲೂ ಅಗ್ನಿಯಲ್ಲಿ ಪ್ರಯುಕ್ತವಾದ **ಅಹಂ** ಶಬ್ದವು ಅಗ್ನಿಯಲ್ಲಿರತಕ್ಕ (ಅಂತರ್ಯಾಮಿಯಾದ) ವಿಷ್ಣುಪರವು ಎಂದು ಹೇಳಕೂಡದು. **ಸೋಽಹಮಸ್ಮಿ ಸ ಏವಾಹಮಸ್ಮಿ** ಎನ್ನುವ ಅಭ್ಯಾಸದಿಂದ ಸಮಾಖ್ಯೆಯು ಬಾಧಿತ ವಾಗುತ್ತದೆ. ಆದಕಾರಣ ಅಗ್ನಿಯೇ ಎಂದು ಪೂರ್ವಪಕ್ಷವು ಬಂದರೆ ಪರಬ್ರಹ್ಮನೇ ಎಂದು ಸಿದ್ಧಾಂತವು— ಹೇಗೆಂದರೆ

ಏತದಮೃತಂ ಇತ್ಯಾದಿಗಳಿಂದ ಹೇಳಲ್ಪಟ್ಟ ಅಮೃತತ್ವಅಭಯತ್ವಾದಿಗಳು ಪರಿ ಹ್ಯೇನಂ ಮ್ರಿಯಂತೇ ವಿದ್ಯುದ್ವೃಷ್ಟಿಶ್ಚಂದ್ರಮಾ ಆದಿತ್ಯೋಽಗ್ನಿಃ ಭೀಷಾಸ್ಮಾದಗ್ನಿಶ್ಚ ಭಯಾದಗ್ನಿಸ್ತಪತಿ ಇತ್ಯಾದಿಶ್ರುತಿಸ್ಮೃತಿಗಳಿಂದ ಮೃತಿಭಯ ಮೊದಲಾದವುಗಳುಳ್ಳ ಅಗ್ನಿಯಲ್ಲಿ ಕೂಡಲಾರವು. ಬ್ರಹ್ಮಶಬ್ದ ಆತ್ಮಶಬ್ದಗಳು ವಿಷ್ಣುವಿನಿಂದ ಇತರರಲ್ಲಿ ನಿರವಕಾಶವಾಗಿರುವುದರಿಂದ ಕೂಡಲಾರವು. ಮತ್ತು ಕಂ ಬ್ರಹ್ಮ ಖಂ ಬ್ರಹ್ಮ ಎಂದು ಬ್ರಹ್ಮಪ್ರಕರಣವಾಗಿರುವುದರಿಂದಲೂ ಸ ಏನಾನ್ ಬ್ರಹ್ಮ ಗಮಯತಿ ಎಂದು ವಿದ್ಯೆಯನ್ನು ಶ್ರವಣಮಾಡಿದವರಿಗೆ ಬ್ರಹ್ಮಗತ್ಯಾಖ್ಯಲಿಂಗವು ಶ್ರುತವಾದುದರಿಂದಲೂ, ಅಗ್ನಿಯಲ್ಲಿ ಪ್ರಯುಕ್ತವಾದ ಅಹಂ ಶಬ್ದವು ಅಂತರ್ಯಾಮಿಪರವಾದುದರಿಂದ ಅಭ್ಯಾಸ ಅರ್ಥವಾದಗಳು ವಿಷ್ಣುಪರಗಳೇ ಆಗಿರುವುದರಿಂದಲೂ ಮತ್ತು ಅಗ್ನಿಯೂ ಜೀವನಾಗಿರುವುದರಿಂದ ಅವನಿಗೆ ಪ್ರೇರಕನು ಮತ್ತೊಬ್ಬಜೀವನು ಇರಬೇಕಾಗಿರುವುದರಿಂದ ಅನವಸ್ಥಾ ದೋಷವು ಬರುವುದರಿಂದಲೂ ಅಸ್ಮದ್ವಿದ್ಯಾ ಆತ್ಮವಿದ್ಯಾ ಎಂದು ಹೇಳಿದ ಎರಡು ವಿದ್ಯೆಗಳಲ್ಲಿ ಪ್ರತಿಪಾದ್ಯನಾದವನು ಸರ್ವಸ್ವತಂತ್ರನಾದ ವಿಷ್ಣುವೇ. **ಧರ್ಮ್ಯೈಕ್ಯೇಽಪಿ ಭವತ್ಯೇವ ವಿದ್ಯಾಭೇದಃ ಪ್ರಕಾರಯೋಃ। ಭೇದಮಾತ್ರೇಣಾಪಿ ಯಥಾದಹರಪ್ರಾಣವಿದ್ಯಯೋಃ ॥** ಹೇಗೆ ಬ್ರಹ್ಮವಿಷಯಕಗಳಾದ ದಹರವಿದ್ಯಾ ಪ್ರಾಣವಿದ್ಯಾ ವೈಶ್ವಾನರ ಮೊದಲಾದ ವಿದ್ಯೆಗಳಿಗೆ ದಹರ ಹೃತ್ಪದ್ಮಸ್ಥತ್ವ ಪ್ರಾಣಸ್ಥತ್ವ ವಿಶ್ವನರಾಂತರತ್ವ ಮೊದಲಾದ ಪ್ರಕಾರಗಳ ಭೇದದಿಂದ ಪ್ರತ್ಯೇಕ ಉಕ್ತಿಯಿದೆಯೋ, ಹಾಗೆಯೇ ಅಸ್ಮದ್ವಿದ್ಯಾ ಆತ್ಮವಿದ್ಯಾ ಎಂದು ಹೇಳಿದ ಎರಡು ವಿದ್ಯೆಗಳಿಗೂ ಬ್ರಹ್ಮ ವಿದ್ಯಾತ್ವವಿದ್ದರೂ ಕೂಡ ಒಂದನೇದ್ದು ಅಗ್ನ್ಯಂತರ್ಯಾಮಿಪರವು. ಎರಡನೇದ್ದು ಸರ್ವಗತಪರವು. ಹೀಗೆ ಪ್ರಕಾರಭೇದದಿಂದಲೇ ವಿದ್ಯಾಭೇದವು ಕೂಡುತ್ತದೆ. ಆದ ಕಾರಣ ವಿಷ್ಣುವೇ ಅಕ್ಷಿಸ್ಥನು. ॥ ೪ ॥

**ಅಂತರಾಧಿಕರಣವು ಸಮಾಪ್ತವಾಯಿತು.**

## ೫ ಅಂತರ್ಯಾಮ್ಯಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಅಂತಸ್ಥತ್ವರೂಪಭಾವಸಹಿತವಾದ ನಿಯಮನ ಕ್ರಿಯಾತ್ಮಕವಾದ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯಮಾಡುತ್ತಾರೆ. ವಿಷಯವಾಕ್ಯವನ್ನುದಾಹರಿಸುತ್ತಾ ವಿಷಯವನ್ನು ತೋರಿಸುತ್ತಾರೆ—

**ಭಾಷ್ಯ ॥ ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ★ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾಂಽತರ್ಯಾಮ್ಯಮೃತಃ (ಬೃ.ಉ.೫.೭.೩..) ॥ ಇತ್ಯಾದಿನಾಽಂತರ್ಯಾ (ದ್ಯಂತರ್ಯಾ)ಮ್ಯುಚ್ಯತೇ ॥ ೧ ॥**

---

★ ಸ್ವತೋ ನಿತ್ಯತೃಪ್ತಃ ಸೋಽಂತರಃ ಸ್ವಪರತ್ವತಃ। ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ॥ ಎಂದು ಬೃಹದ್ಭಾಷ್ಯದಲ್ಲಿ ಹೇಳಿದೆ. ಅಥವಾ ಅತಿಪ್ರಿಯತ್ವಾತ್ತು ಹರೇರಂತರತ್ವಮುದಾಹೃತಂ॥ ಎಂದೂ ಅಲ್ಲಿ ಹೇಳಿದೆ.

**ಭಾಷ್ಯಾರ್ಥ** ॥ (ಬೃಹದಾರಣ್ಯಕದಲ್ಲಿ ಉದ್ದಾಲಕರನ್ನು ಕುರಿತು ಯಾಜ್ಞವಲ್ಕ್ಯರು ಹೇಳಿದ ಮಾತು) ಯಾವಾತನು ಪೃಥುಶಬ್ದವಾಚ್ಯನಾದ ವಿಷ್ಣುವನ್ನು ಹೊತ್ತುಕೊಂಡು ಹೋಗತಕ್ಕ ಗರುಡನಲ್ಲಿ ಇರುತ್ತಾನೋ, ಪೃಥಿವ್ಯಭಿಮಾನಿಯಾದ ಚೇತನದೆಸೆಯಿಂದ ಭಿನ್ನನೋ, ಯಾರನ್ನು ಪೃಥಿವ್ಯಭಿಮಾನಿಯಾದ ಚೇತನನು ಸಂಪೂರ್ಣವಾಗಿ ತಿಳಿಯುವುದಿಲ್ಲವೋ, ಯಾರಿಗೆ ಪೃಥಿವಿಯು (ಆತನ ಅಧೀನದಲ್ಲಿದ್ದ ಪ್ರಯುಕ್ತ ಶರೀರದಂತೆ ಇರತಕ್ಕದ್ದೋ ಮತ್ತು) ಯಾವಾತನು ಪೃಥಿವಿಯನ್ನು ಒಳಗೆ ಇದ್ದು ಬಾಹ್ಯವಿಷಯಾಪೇಕ್ಷೆಯಿಲ್ಲದೇನೇ ರಮಿಸುವನೋ, (**ಪ್ರೇಯಃ ಪುತ್ರಾತ್** ಇತ್ಯಾದಿ ಶ್ರುತಿಗಳಿಂದ ಅತ್ಯಂತ ಪ್ರೇಯೋರೂಪನಾದುದರಿಂದ) ಅಂತರಃ=ಅತಿಪ್ರಿಯನಾಗಿ, ಪೃಥಿವೀಂ=ಗರುಡನನ್ನು ಯಮಯತಿ=ನಿಯಮಿಸುತ್ತಾನೋ, ಏಷಃ=ಈತನು, ತೇ=ನಿನಗೆ, ಅಂತರ್ಯಾಮ್ಯಾತ್ಮಾ=ನಿಯಾಮಕ ಪುರುಷನು, ಅಮೃತಃ=ನಿತ್ಯನು, ಇದು ಮೊದಲಾದ ವಾಕ್ಯಗಳಲ್ಲಿ (ಆದಿ ಪದದಿಂದ **ಯೋಽಪ್ಸು ತಿಷ್ಠನ್, ಯೋ ಭೂತೇ ತಿಷ್ಠನ್**) ಅಂತರ್ಯಾಮಿಯು ಹೇಳಲ್ಪಡುತ್ತಾನೆ.

**ಪೀಠಿಕೆ** ॥ ಪೂರ್ವಾಧಿಕರಣದಿಂದಲೂ ಅದರ ವಿಷಯವಾಕ್ಯದಿಂದ ಸಂಗತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ತತ್ರ ಚ ಏತದಮೃತಂ** (ಛಾ. ಉ. ೪.೧೫.೧.)**। ಇತ್ಯುಕ್ತಮಮೃತತ್ವಮುಚ್ಯತೇ। ಸ ಚ ಯಸ್ಯ ಪೃಥಿವೀ ಶರೀರಂ ಇತ್ಯಾದಿನಾ ಸರ್ವಾತ್ಮಕತ್ವಾತ್ ಪ್ರಕೃತಿಸ್ತತ್ತಜ್ಜೀವೋ ವಾ ಯುಕ್ತಃ ॥ ೨ ॥**

**ಭಾಷ್ಯಾರ್ಥ** ॥ (ತತ್ವಪ್ರದೀಪದಲ್ಲಿ ಹೇಳಿದ ಯೋಜನೆಯು) **ತತ್ರ** ಚ=**ಯಃ ಪೃಥಿವ್ಯಾಂ ತಿಷ್ಠನ್** ಇತ್ಯಾದಿ ವಾಕ್ಯಗಳಲ್ಲಿ (ಅಂತರ್ಯಾಮಿಯು ಹೇಳಲ್ಪಡುತ್ತಾನೆ. ತತ್ರ ಚ=ಆ ವಾಕ್ಯಗಳಲ್ಲಿಯೇ ಆ ಅಂತರ್ಯಾಮಿಯಲ್ಲಿಯೇ **ಏತದಮೃತಂ ಏತದಭಯಂ** ಎಂದು ಪೂರ್ವಾಧಿಕರಣದಲ್ಲಿ ಉದಾಹೃತವಾದ ಛಾಂದೋಗ್ಯವಾಕ್ಯದಲ್ಲಿ ಹೇಳಿದ ಅಕ್ಷಿಸ್ಥಪುರುಷನಿಗೆ) ಉಕ್ತಂ=ಹೇಳಲ್ಪಟ್ಟ, ಅಮೃತತ್ವಂ=ನಿತ್ಯತ್ವವು, (**ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ** ಎನ್ನುವ ವಾಕ್ಯದಿಂದ) ಉಚ್ಯತೇ= ಹೇಳಲ್ಪಡುತ್ತದೆ. (ನಯುಕ್ತಿಕವಾಗಿ ಪೂರ್ವಪಕ್ಷಿಸುತ್ತಾರೆ.) ಸ ಚ=ಆ ಅಂತರ್ಯಾಮಿಯು (ಸರ್ವಾತ್ಮಕತ್ವವಿದ್ದುದರಿಂದ) **ಯಸ್ಯ ಪೃಥಿವೀ ಶರೀರಂ ಯಸ್ಯಾಪಃ ಶರೀರಂ** ಇತ್ಯಾದಿ ವಾಕ್ಯದಿಂದ ಜಡಚೇತನ ಉಭಯರೂಪವಾದ ಪ್ರಕೃತಿಯು ಪೃಥಿವ್ಯಾದ್ಯಭಿಮಾನಿಗಳಾದ ಆವಾವ ಜೀವರಾಗಲೀ ಆಗಬೇಕು.

**ವಿಶೇಷಾಂಶ** ॥ (೧) ಏವಂಚ ಇಲ್ಲಿ ಹೇಳಿದ ಅಂತರ್ಯಾಮಿಯು ವಿಷ್ಣುವಿನಿಂದ ಭಿನ್ನನಾಗಿರುವುದರಿಂದ ಅಲ್ಲಿ ತೋರುವ ಅಮೃತತ್ವವೂ ಅನ್ಯಧರ್ಮವಾಗಿರುವುದರಿಂದ ಅಮೃತತ್ವರೂಪ ಲಿಂಗದಿಂದ ಪೂರ್ವಾಧಿಕರಣದಲ್ಲಿ ಚಕ್ಷುರಂತಸ್ಥನಿಗೆ ವಿಷ್ಣುತ್ವವನ್ನು ಸಾಧಿಸಿದ್ದು ಅಯುಕ್ತವೆಂದು ಆಕ್ಷೇಪಿಸಿದ್ದರಿಂದ ಈ ಅಧಿಕರಣಕ್ಕೆ ಪೂರ್ವಾಧಿಕರಣದಿಂದ ಆಕ್ಷೇಪಿಕೀಸಂಗತಿಯು ಉಕ್ತವಾಯಿತು. (೨) ಶ್ರೌತ ಶರೀರ ಶಬ್ದಕ್ಕೆ **ಇದಂ ಪೂರ್ವಪಕ್ಷ ಶರೀರಂ** ಇತ್ಯಾದಿಗಳಲ್ಲಿದ್ದಂತೆಯೇ ಸ್ವರೂಪಾರ್ಥಕತ್ವವು. (೩.) ಜಡಪ್ರಕೃತಿಯು ಸರ್ವಕ್ಕೂ ಉಪಾದಾನಕಾರಣವಾಗಿರುವುದರಿಂದ ಸರ್ವಾತ್ಮಕವು. (೪) ಚಿತ್ಪ್ರಕೃತಿಯಾದರೂ ಸರ್ವಕ್ಕೂ ಅಭಿಮಾನಿಯಾದುದರಿಂದ ಸರ್ವಾತ್ಮಕವು. (೫) ಪೃಥಿವ್ಯಾದ್ಯಭಿಮಾನಿ

ಜೀವರಿಗೆ ಪೃಥಿವ್ಯಾದಿಸರ್ವಶರೀರತ್ವವಿದೆ. ಆದಕಾರಣ ಯಸ್ಯ ಪೃಥಿವೀ ಶರೀರಂ ಇತ್ಯಾದಿಗಳಿಂದ ಹೇಳಿದ ಪೃಥಿವ್ಯಾದಿಶರೀರತ್ವವು ಚೇತನಾಚೇತನಪ್ರಕೃತಿಗೂ ತತ್ತದಭಿಮಾನಿಜೀವರಿಗೂ ಯುಕ್ತವಾಗುವುದು.

**ಪೀಠಿಕೆ ॥** ಹೇಗೆ ಸರ್ವಾತ್ಮಕತ್ವಾದಿರೂಪವಾದ ಪ್ರಕೃತ್ಯಾದಿಲಿಂಗದಿಂದ ಪ್ರಕೃತ್ಯಾದಿಗಳಿಗೆ ಅಂತರ್ಯಾಮಿತ್ವವಿದೆ ಎಂದು ಹೇಳುತ್ತೀರೋ, ಹಾಗೆಯೇ ಅಮೃತತ್ವರೂಪವಾದ ವಿಷ್ಣುಲಿಂಗದಿಂದ ವಿಷ್ಣುವಿಗೆ ಅಂತರ್ಯಾಮಿತ್ವವು ಏಕೆ ಆಗಲಾರದೆಂದರೆ—

**ಭಾಷ್ಯ ॥ ನ ಹಿ ವಿಷ್ಣೋಃ ಪೃಥಿವ್ಯಾದಿಶರೀರತ್ವಮಂಗೀಕ್ರಿಯತೇ। ಇತಿ ॥ ೩ ॥**

**ಭಾಷ್ಯಾರ್ಥ ॥** ಪ್ರಾಕೃತ ಶರೀರವಿಲ್ಲದಿರುವ ವಿಷ್ಣುವಿಗೆ ಪೃಥಿವೀಮೊದಲಾದ ಶರೀರವುಳ್ಳತನವು (ಸಿದ್ಧಾಂತಿಗಳಿಂದ) ಅಂಗೀಕರಿಸಲ್ಪಡುವುದಿಲ್ಲ. ಹಿ = ವಿಷ್ಣುವಿಗೆ ಪೃಥಿವೀ ಮೊದಲಾದ ಜಡಭಿನ್ನವಾದ ಚಿದಾನಂದಾತ್ಮಕಶರೀರವೇ ಇರುವುದು ಎನ್ನುವುದು ಪ್ರಸಿದ್ಧವು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಅವತರಿಸಿಕೊಂಡು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಅತ ಆಹ ॥ ೪ ॥**

## ಸೂತ್ರ ॥ ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಓಂ ॥ ೧೮ ॥

**ಭಾಷ್ಯ ॥ ಯಂ ಪೃಥಿವೀ ನ ವೇದ ಯಃ ಪೃಥಿವ್ಯಾ ಅಂತರಃ (ಬೃ.ಉ.೫.೭. ೩..)। ಇತ್ಯಾದಿನಾ ಆಧಿದೈವಾದಿಷು ತದ್ಧರ್ಮವ್ಯಪದೇಶಾದ್ವಿಷ್ಣುರೇವಾಂತರ್ಯಾಮೀ ॥ ೫ ॥**

**ಭಾಷ್ಯಾರ್ಥ ॥** (೧) ಹೀಗೆ ಶಂಕೆಯು ಬಂದರೆ (ಉತ್ತರವನ್ನು) ಹೇಳುತ್ತಾರೆ. ಏಷ ತ ಆತ್ಮಾ ಎಂದು ಹೇಳಲ್ಪಟ್ಟ ಅಂತರ್ಯಾಮಿಯು ವಿಷ್ಣುವೇ. ಅಧಿದೈವಮೊದಲಾದ ಪ್ರಕರಣದಲ್ಲಿ ವಿಷ್ಣುವಿನ ಅವಿದಿತತ್ವ ಅಂತರತ್ವ ಮೊದಲಾದ ಧರ್ಮವನ್ನು ಯಂ ಪೃಥಿವೀ ನ ವೇದ ಇತ್ಯಾದಿವಾಕ್ಯದಿಂದ ಹೇಳಲ್ಪಟ್ಟ ಪ್ರಯುಕ್ತ (೨) ಯಾರನ್ನು ಗರುಡನು ಚೆನ್ನಾಗಿ ತಿಳಿಯುವುದಿಲ್ಲವೋ, ಯಾರು ಗರುಡನಿಂದ ಅಂತರನೋ, ಗರುಡನ ಒಳಗೆ ಇದ್ದು ರಮಿಸುವನೋ, ಇದು ಮೊದಲಾದ ವಾಕ್ಯದಿಂ ದ ಅಧಿದೈವ ಮೊದಲಾದ ಪ್ರಕರಣಗಳಲ್ಲಿ ವಿಷ್ಣುಧರ್ಮಗಳನ್ನು ಹೇಳಿದುದರಿಂದ ಅಂತರ್ಯಾಮಿಯು ವಿಷ್ಣುವೇ.

**ವಿಶೇಷಾಂಶ ॥** (೧) ಅಧಿದೈವಾದಿಷು ಎನ್ನವುಲ್ಲಿದ್ದ ಆದಿಶಬ್ದದಿಂದ ಮೂರು ಪ್ರಕರಣಗಳಲ್ಲಿದ್ದ ವಾಕ್ಯಗಳನ್ನು ಇಟ್ಟುಕೊಳ್ಳಬೇಕು. (೨) ಅದರಲ್ಲಿ ಯಃ ಪೃಥಿವ್ಯಾಂ ತಿಷ್ಠನ್ ಎನ್ನುವುದು ಅಧಿದೈವತಪ್ರಕರಣವು ಯಸ್ಸರ್ವೇಷು ಭೂತೇಷು ತಿಷ್ಠನ್ ಎನ್ನುವುದು ಅಧಿಭೂತಪ್ರಕರಣವು. ಯಃ ಪ್ರಾಣೇ ತಿಷ್ಠನ್ ಎನ್ನುವುದು ಅಧ್ಯಾತ್ಮಪ್ರಕರಣವು. (೩.) ಸೂತ್ರದಲ್ಲಿಯೂ ಭಾಷ್ಯದಲ್ಲಿಯೂ ಅಧಿದೈವ ಎನ್ನುವ ಉಕ್ತಿಯಿಂದ ಪೃಥಿವ್ಯಾದಿಗಳು ಜಡಗಳಾದುದರಿಂದ ಸರ್ವಕ್ಕೂ ಅವಿದಿತತ್ವವು ಕೂಡುತ್ತದೆ ಎನ್ನುವ ಶಂಕೆಯು ಪಾರಿತವಾಯಿತು. (೪) ಇಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿಗಳು ಅಧಿದೈವ

(ಅಭಿಮಾನಿದೇವತೆ)ಗಳಾದುದರಿಂದ ಚೇತನಗಳಾಗಿವೆ. ಪ್ರಾಣೇ ಎನ್ನುವ ಶ್ರುತಿಯಲ್ಲಿ ಪ್ರಾಣಶಬ್ದವು ಪ್ರಾಣವಾಯು ದೇವತಾಪರವು. (೫) ಅಧಿದೈವಾದಿಷು ಎಂದು ಅನೇಕಪ್ರಕರಣಗಳನ್ನು ಗ್ರಹಣಮಾಡಿದುದರಿಂದ ಒಂದು ಕಡೆ ಮಾತ್ರ ವಿಷ್ಣುಧರ್ಮಗಳನ್ನು ಹೇಳಿದ್ದಲ್ಲ. ಮತ್ತೆ ಅನೇಕಸ್ಥಳಗಳಲ್ಲಿ ಎಂದು ಸೂಚಿತ ವಾಯಿತು.

ಪೀಠಿಕೆ ॥ ಅವಿದಿತತ್ವಾದಿಗಳು ಹೇಗೆ ವಿಷ್ಣುಧರ್ಮವು ಎಂದರೆ—

**ಭಾಷ್ಯ ॥ ಸ ಹಿ ನ ತೇ ವಿಷ್ಣೋ ಜಾಯಮಾನೋ ನ ಜಾತಃ(ದೇವಮಹಿಮ್ನಃ ಪರಮಂತಮಾಪ) (ಋ.೭.೯೯.೨.)। ಸ ಯೋಽತೋಽಶ್ರುತೋಽಗತೋಽಮತೋಽನತೋಽದೃಷ್ಟೋಽವಿಜ್ಞಾತೋಽನಾದಿಷ್ಟಃ ಸರ್ವೇಷಾಂ ಭೂತಾನಾಮಂತರ ಪುರುಷಃ (ಐ.ಆ.೨.೨.೪.)। ಇತ್ಯಾದಿನಾಽವಿದಿತೋಽಂತರಶ್ಚ॥ ೧೮ ॥ ॥ ೬ ॥**

ಭಾಷ್ಯಾರ್ಥ ॥ ಆ ವಿಷ್ಣುವು ನ ತೇ ವಿಷ್ಣೋ ಜಾಯಮಾನೋ ನ ಜಾತಃ, ಸ ಯೋಽತೋಽಶ್ರುತೋಽಗತಃ ಇದು ಮೊದಲಾದ ವಾಕ್ಯಗಳಿಂದ, ಅವಿದಿತಃ=ಸಂಪೂರ್ಣವಾಗಿ ತಿಳಿಯಲ್ಪಡದೆ ಇದ್ದವನು, ಅಂತರಃ=ಒಳಗೆ ಇದ್ದು ಬಾಹ್ಯಾಪೇಕ್ಷೆ ಯಿಲ್ಲದೆ ರಮಿಸುವವನು ಎಂದು ಪ್ರಸಿದ್ಧನು.

ವಿಶೇಷಾಂಶ ॥ ಆದಿಪದದಿಂದ ದಿವ್ಯೋ ದೇವ ಏಕೋ ನಾರಾಯಣಃ ಎಂದುಪಕ್ರಮಿಸಿ ಕೊಂಡು ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೇ ಸಂಚರನ್ ಯಂ ಪೃಥಿವೀ ನ ವೇದ ಏಷ ಸರ್ವಭೂತಾಂತರಾತ್ಮಾ ಅಪಹತಪಾಪಾ ದಿವ್ಯೋ ದೇವ ಏಕೋ ನಾರಾಯಣಃ ಎಂದು ಉಪಸಂಹಾರ ಮಾಡಿಕೊಂಡು ಅಧೀತವಾದ ನಾರಾಯಣನೇ ಅಂತರ್ಯಾಮಿಯು ಎಂದು ಹೇಳತಕ್ಕ ಶ್ರುತ್ಯಂತರವನ್ನು ಇಟ್ಟುಕೊಳ್ಳಬೇಕು. ॥ ೧೮ ॥

ಪೀಠಿಕೆ ॥ ಹೀಗೆ ನಿರವಕಾಶವಾದ ಲಿಂಗದಿಂದ ವಿಷ್ಣುವಿಗೆ ಅಂತರ್ಯಾಮಿತ್ವವನ್ನು ಸಮರ್ಥಿಸಿ ಪೂರ್ವಪಕ್ಷಿಯು ಪ್ರಕೃತ್ಯಾದಿಗಳಿಗೆ ಹೇಳಿದ ಅಂತರ್ಯಾಮಿತ್ವವನ್ನು ಯುಕ್ತಿಯಿಂದ ನಿರಾಕರಿಸತಕ್ಕ ಸೂತ್ರವನ್ನುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಓಂ ॥ ೧೯ ॥

ಸೂತ್ರಾರ್ಥ ॥ ಅಂತರ್ಯಾಮಿಯು ವಿಷ್ಣುವೇ. ಸ್ಮಾರ್ತಂ = ಪೃಥಿವ್ಯಾದ್ಯಾತ್ಮಕವಾಗಿ ಸ್ಮೃತಿಯಲ್ಲಿ ಪ್ರತಿಪಾದಿಸಲ್ಪಟ್ಟ ಪ್ರಧಾನವು ಮತ್ತು (ಶಾರೀರಃ) ಜೀವನೂ ಕೂಡ, ನ ಚ=ಅಲ್ಲ. ಏಕೆಂದರೆ— ಅತದ್ಧರ್ಮಾಭಿಲಾಪಾತ್=ತ್ರಿಗುಣತ್ವ ಸಂಸಾರಿತ್ವಾದಿರೂಪವಾದ ಪ್ರಧಾನಧರ್ಮ ಜೀವಧರ್ಮಗಳನ್ನು ಹೇಳದೆ ಇದ್ದುದರಿಂದ. ತತ್ವಪ್ರದೀಪದಲ್ಲಿ ಆದರೂ— ಅತದ್ಧರ್ಮ ಎನ್ನುವಲ್ಲಿದ್ದ ನಞಗೆ ವಿರುದ್ಧಾರ್ಥತ್ವವನ್ನು ಆಶ್ರಯಿಸಿಕೊಂಡು ಅಕ್ಷತತ್ವ ಅಮೃತತ್ವ ಅದೃಷ್ಟತ್ವ ದ್ರಷ್ಟೃತ್ವ ಮೊದಲಾದ ಪ್ರಕೃತ್ಯಾದಿಗಳ ಧರ್ಮಕ್ಕೆ ವಿರುದ್ಧಗಳಾದ ಧರ್ಮಗಳನ್ನು ಹೇಳಿದ್ದರಿಂದ. ಎಂದು ಹೇತುವಾಕ್ಯಕ್ಕೆ ಅರ್ಥಾಂತರವೂ ಹೇಳಲ್ಪಟ್ಟಿದೆ.

**ಭಾಷ್ಯ ॥ ತ್ರಿಗುಣತ್ವಾದಿಪ್ರಧಾನಧರ್ಮಾನುಕ್ತೇರ್ನ ಸ್ಮೃತ್ಯುಕ್ತಂ ಪ್ರಧಾನಮಂತರ್ಯಾಮಿ (ಮೀ) ॥ ೧೯ ॥**

**ಭಾಷ್ಯಾರ್ಥ ॥** ಸತ್ವಾದಿರೂಪಾಃ ತ್ರಯಃ ಗುಣಾಃ ಯಸ್ಯ ಕಾರ್ಯಭೂತಾಃ ತತ್ ತ್ರಿಗುಣಂ, ತಸ್ಯ ಭಾವಃ ತ್ರಿಗುಣತ್ವಂ ಎನ್ನುವ ವ್ಯುತ್ಪತ್ತಿಯಿಂದ ತ್ರಿಗುಣತ್ವ ಉಪಾದಾನತ್ವ ಜಡತ್ವಮೊದಲಾದ ಪ್ರಕೃತಿಯ ಧರ್ಮಗಳನ್ನೂ ಸಂಸಾರಿತ್ವಮೊದಲಾದ ಜೀವಧರ್ಮಗಳನ್ನೂ ಹೇಳದೆ ಇದ್ದುದರಿಂದ, ಪೃಥಿವ್ಯಾದ್ಯಾತ್ಮಕವಾಗಿ ಕಾಪಿಲಸ್ಮೃತಿಯಲ್ಲಿ ಪ್ರತಿಪಾದಿಸಲ್ಪಟ್ಟ (ಇದು ಸ್ಮೃತ್ಯುಕ್ತವೇ ಶ್ರುತ್ಯುಕ್ತವಲ್ಲ) ಪ್ರಧಾನವು ಶರೀರದಲ್ಲಿದ್ದಜೀವನೂ ಕೂಡ ಅಂತರ್ಯಾಮಿಯಲ್ಲ ॥ ೧೯ ॥

**ಪೀಠಿಕೆ ॥** ಜೀವನು ಅಂತರ್ಯಾಮಿಯು ಎನ್ನುವಲ್ಲಿ ಸಾಧಕವಿಲ್ಲವೆಂದು ಹೇಳಿ ಪುನಃ ಬಾಧಕಾಖ್ಯವಿಶೇಷಯುಕ್ತಿಯಿಂದಲೂ ಜೀವನಿಗೆ ಅಂತರ್ಯಾಮಿತ್ವವನ್ನು ನಿರಾಕರಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ.

## ಸೂತ್ರ ॥ ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ ॥ ೨೦ ॥

**ಸೂತ್ರಾರ್ಥ ॥** ಹಿ=ಯಾವ ಕಾರಣದಿಂದ, ಉಭಯೇಽಪಿ = ಕಾಣ್ವರು ಮಾಧ್ಯಂದಿನಾಯನರು ಇಬ್ಬರೂ ಏನಂ=ಈ ಜೀವನನ್ನು, ಭೇದೇನ=ಅಂತರ್ಯಾಮಿಯ ಸಕಾಶದಿಂದ ಬೇರೆಯಾಗಿ, ಅಧೀಯತೇ=ತಿಳಿಯುತ್ತಾನೋ, ಅಂತಹ ಬಾಧಕದೆಶೆಯಿಂದ, ಅಂತರ್ಯಾಮೀ=ಅಂತರ್ಯಾಮಿಯು, ಶಾರೀರಶ್ಚ=ಶರೀರಾಭಿಮಾನಿಯಾದ ಜೀವನು, ನ=ಆಗುವುದಿಲ್ಲ

**ವಿಶೇಷಾಂಶ ॥** ತತ್ವಪ್ರದೀಪದಲ್ಲಿ ಆದರೂ ಚಿತ್ಪ್ರಕೃತಿಗೂ ಪೂರ್ವಪಕ್ಷವಿಷಯತ್ವವನ್ನು ಆಶ್ರಯಿಸಿಕೊಂಡು ಶ್ರೀ ಭೂ ದುರ್ಗರೂಪಳಾದ ಲಕ್ಷ್ಮಿಗೆ ಯಸ್ತೇಜಸಿ ತಿಷ್ಠನ್ (ಬೃ.ಕ.೭.೧೪.) ಯಸ್ತಮಸಿ ತಿಷ್ಠನ್ (ಬೃ.ಕ.೭.೧೩.) ಇತ್ಯಾದಿವಾಕ್ಯಗಳಿಂದ ಅಂತರ್ಯಾಮಿಯ ಸಕಾಶದಿಂದ ಭೇದವನ್ನು ಹೇಳಿದ ಪ್ರಯುಕ್ತ ಆ ಲಕ್ಷ್ಮಿಯೂ ಅಂತರ್ಯಾಮಿಯೂ ಅಲ್ಲ. ಈ ಅಭಿಪ್ರಾಯದಿಂದಲೇ ಚ ಶಬ್ದವು, ಎಂದು ಹೇಳಿರುವರು.

**ಭಾಷ್ಯ ॥ ಯ ಆತ್ಮನಿ ತಿಷ್ಠನ್ನಾತ್ಮನೋಽಂತರೋ ಯಮಾತ್ಮಾ ನ ವೇದ ಯಸ್ಯಾಽತ್ಮಾಶರೀರಂ ಯ ಆತ್ಮಾನಮಂತರೋ ಯಮಯತ್ಯೇಷ ತ ಆತ್ಮಾಂಽತರ್ಯಾಮ್ಯಮೃತಃ (ಬೃ.ಕ.೭.೨೨.)। ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋಽಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಂ ಶರೀರಂ (ಬೃ.ಉ.ಕ.೭.೨೨.)। ಇತ್ಯುಭಯೇಽಪಿ ಹಿ ಶಾಖಿನೋ ಭೇದೇನೈನಂ ಜೀವಮಧೀಯತೇ॥ ೮ ॥**

**ಭಾಷ್ಯಾರ್ಥ ॥** ಯಾವಾತನು ಜೀವನಲ್ಲಿ ಇರುತ್ತಾನೋ ಜೀವನಿಂದ ಭಿನ್ನನೋ, ಯಾರನ್ನು ಜೀವನು ತಿಳಿಯುವುದಿಲ್ಲವೋ ಯಾರಿಗೆ ಜೀವನು ಶರೀರಭೂತನೋ, ಯಾರು ಜೀವನನ್ನು ಒಳಗೆ ಇದ್ದು ನಿಯಮಿಸುತ್ತಾನೋ, ಈತನು ನಿನಗೆ ಸ್ವಾಮಿಯು, ಅಂತರ್ಯಾಮಿಯು, ನಿತ್ಯನು. (ಹೀಗೆ

ಮಾಧ್ಯಂದಿನರು.) ಯಾವನು ಜೀವನಲ್ಲಿ ಇರುವನೋ, ಜೀವನಿಂದ ಭಿನ್ನನೋ, ಯಾರನ್ನು ಜೀವನು ತಿಳಿಯುವುದಿಲ್ಲವೋ, ಯಾರಿಗೆ ಜೀವನು ಶರೀರವೋ, (ಹೀಗೆ ಕಾಣ್ವರು.) ಹೀಗೆ ಮಾಧ್ಯಂದಿನ ಕಾಣ್ವರಿಬ್ಬರೂ ಶಾಖಿಗಳು ಈ ಜೀವನನ್ನು ಬೇರೆಯಾಗಿಯೇ ಹೇಳುತ್ತಾರೆ.

**ವಿಶೇಷಾಂಶ ॥** ಶ್ರುತಿಯಲ್ಲಿ **ಯಃ ಪೃಥಿವ್ಯಾಂ ತಿಷ್ಠನ್** ಎನ್ನುವ ವಾಕ್ಯವು ಆದಿಯಲ್ಲಿ ಇದ್ದಾಗ್ಯೂ ಅದನ್ನು ಬಿಟ್ಟು ಆತ್ಮ ವಿಜ್ಞಾನವಾಕ್ಯಗಳು ಚೇತನಪರಗಳಾಗಿ ಐಕ್ಯಾರ್ಥವಿದ್ದ ಪ್ರಯುಕ್ತ ಅವುಗಳನ್ನು ಇಲ್ಲಿ ಉದಾಹರಿಸಿರುತ್ತಾರೆ.

**ಪೀಠಿಕೆ ॥** ವಿಷ್ಣುವಿಗೆ ಅಂತರ್ಯಾಮಿತ್ವವು ಯುಕ್ತವಲ್ಲ. ಪ್ರಧಾನಧರ್ಮವಾದ ಪೃಥಿವ್ಯಾದಿ ಶರೀರತ್ವವನ್ನು ಇಲ್ಲಿ ಹೇಳಿರುತ್ತದೆ. ಅದು ವಿಷ್ಣುವಿನಲ್ಲಿ ಕೂಡಲಾರದು. ಎಂದರೆ—

**ಭಾಷ್ಯ ॥ ಶೀರ್ಯತೇ ನಿತ್ಯಮೇವಾಸ್ಮಾದ್ವಿಷ್ಣೋಸ್ತು ಜಗದೀದೃಶಂ । ರಮತೇ ಚ ಪರೋಹ್ಯಸ್ಮಿನ್ ಶರೀರಂ ತಸ್ಯ ತಜ್ಜಗತ್ । ಇತಿ ವಚನಾನ್ನ ಶರೀರತ್ವವಿರೋಧಃ ॥ ೯ ॥ ಸೂ.೨೦ ॥ ಅಧಿ. ೫ ॥**

**ಭಾಷ್ಯಾರ್ಥ ॥** ಹಿಃಯಾವ ಕಾರಣದಿಂದ, ಈದೃಶಂಃವರ್ತಮಾನ ಜಗತ್ತಿಗೆ ಸದೃಶವಾದ, ಅಥವಾ ಕಾಲತ್ರಯದಲ್ಲಿಯೂ ಅಬಾಧ್ಯವಾದ, ಜಗತ್=ಪೃಥಿವ್ಯಾದಿ ಜಗತ್ತು, ಅಸ್ಮಾತ್ ವಿಷ್ಣೋಸ್ತು= ಈ ವಿಷ್ಣುವಿನಿಂದಲೇ, ನಿತ್ಯಮೇವ=ಪ್ರತಿಕಲ್ಪದಲ್ಲಿಯೂ, ಶೀರ್ಯತೇ=ನಷ್ಟವಾಗುತ್ತದೋ, (ಚೇತನರಿಗೂ ದೇಹದ್ವಾರಾ ನಾಶವು ಸತ್ಯವೇ) ಹಿಃಯಾವ ಕಾರಣದಿಂದ, ಪರಃ=ಪರಮಾತ್ಮನು, ಅಸ್ಮಿನ್=ಈ ಜಗತ್ತಿನಲ್ಲಿ, ರಮತೇ ಚಃಇದ್ದು ರಮಿಸುತ್ತಾನೋ, ತತ್=ಆದುದರಿಂದಲೇ, ತಸ್ಯ=ಆ ವಿಷ್ಣುವಿಗೆ, ಜಗತ್=ಪೃಥಿವೀ ಮೊದಲಾದುದು, ಶರೀರಂ=ಶರೀರವೆನ್ನಿಸುತ್ತದೆ (ರೂಢಿಯಿಂದಲ್ಲ) ಈ ವಚನ ಬಲದಿಂದ ಯೌಗಿಕವಾದ ಪೃಥಿವ್ಯಾದಿಶರೀರತ್ವವು ವಿಷ್ಣುವಿಗೆ ಕೂಡುವುದರಿಂದ ಪೃಥಿವ್ಯಾದಿ ಶರೀರತ್ವದಿಂದ ವಿರೋಧವಿಲ್ಲ.

**ವಿಶೇಷಾಂಶ ॥** (೧) ವಿಷ್ಣುವಿಗೆ ಪೃಥಿವ್ಯಾದ್ಯಭಿನ್ನತ್ವ ಪೃಥಿವೀಶರೀರತ್ವ ಇವುಗಳಿಂದ ಪೃಥಿವ್ಯಾದಿ ಶರೀರತ್ವವು ಕೂಡದೆ ಇದ್ದರೂ ಶರೀರಶಬ್ದಕ್ಕೆ ಪೃಥಿವ್ಯಾದಿಗಳಲ್ಲಿ ಇಲ್ಲಿ ಹೇಳಿದ ಯೋಗವೃತ್ತಿಯನ್ನು ಆಶ್ರಯಿಸಿಕೊಂಡು ವಿಷ್ಣುವಿನಲ್ಲಿ ಪೃಥಿವ್ಯಾದಿಶರೀರತ್ವವ್ಯಪದೇಶವು ಕೂಡುತ್ತದೆ. (೨) ಪೃಥಿವ್ಯಾದ್ಯಾ ದೇವತಾಸ್ತು ದೇಹವದ್ವ್ಯದ್ವಶತ್ವತಃ॥ ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋಃ ಮಹಾತ್ಮ ನಃ । ಎನ್ನುವ ಪ್ರಮಾಣಾನುಸಾರವಾಗಿ ಪೃಥಿವ್ಯಾದಿಗಳು ಬ್ರಹ್ಮಶರೀರವೆಂದು ಹೇಳಿದ್ದು ಗೌಣವೆಂದು ಬೃಹದ್ಭಾಷ್ಯದಲ್ಲಿ ಹೇಳಿಯದೋ, ಅದು ಪುರಾಣಾದಿಗಳಲ್ಲಿ "ಪ್ರಪಂಚವು ಬ್ರಹ್ಮಶರೀರವೆಂದು" ಹೇಳಿದ ವಚನವನ್ನು ಸಮರ್ಥಿಸುವುದಕ್ಕಾಗಿ. ಆದಕಾರಣ ಆದರಿಂದ ವಿರೋಧವಿಲ್ಲ ॥ ೨೦ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** (೧) ಅಂತರ್ಯಾಮಿಯು, ೧. ಪ್ರಧಾನವೋ ೨. ಪೃಥಿವ್ಯಾದ್ಯಭಿಮಾನಿ ದೇವತೆಯೋ, ೩. ಅಣಿಮಾದ್ಯೈಶ್ವರ್ಯವನ್ನು ಹೊಂದಿದ ಯೋಗಿಜೀವನೋ, ೪ ಪರಮಾತ್ಮನೋ

ಎಂದು ಸಂದೇಹಪು ಬಂದರೆ ೧. ಅಚೇತನವಾದ ಪ್ರಧಾನದಲ್ಲಿ ದ್ರಷ್ಟೃತ್ವ ಶ್ರೋತೃತ್ವ ವಿಜ್ಞಾತೃತ್ವಾದಿಗಳೂ ಏಷ ತ ಆತ್ಮಾ ಎಂದು ಹೇಳಿದ ಆತ್ಮತ್ವವೂ ಕೂಡಲಾರದು. ೨. ಪೃಥಿವ್ಯಾದ್ಯಭಿಮಾನಿದೇವತೆಗೆ **ಯಸ್ಸರ್ವಾನ್ ಲೋಕಾನಂತರೋ ಯಮಯತಿ, ಯಸ್ಸರ್ವಾಣಿ ಭೂತಾನ್ಯಂತರೋ ಯಮಯತಿ** ಎಂದು ಹೇಳಿದ ಸರ್ವಲೋಕಭೂತಗಳನಿಯಮನವು ಕೂಡಲಾರದು. ೩. ಯೋಗಿಜೀವನಿಗೆ **ಜಗದ್ವ್ಯಾಪಾರವರ್ಜ್ಯಂ** ಎಂದು ಹೇಳಿದ ಪ್ರಕಾರ ನಿಯಮನಾದಿವ್ಯಾಪಾರವು ಕೂಡಲಾರದು. ಆದಕಾರಣ ಕೇವಲ ಜೀವನೇ, ಕೇವಲ ಚೇತನನಿಗೆ ತನ್ನ ಶರೀರಇಂದ್ರಿಯಾದಿಗಳಲ್ಲಿ ನಿಯಮನಾದಿ ಕಾರ್ಯಗಳು ಕಂಡಿವೆ. ಮತ್ತು ಶರೀರಇಂದ್ರಿಯಾದಿಗಳು ಇವೆ. ದ್ರಷ್ಟೃತ್ವಾದಿಗಳೂ ಕೂಡುತ್ತವೆ. ಅದೃಷ್ಟಾದಿದ್ವಾರಾ ಸರ್ವಲೋಕಾದಿ ನಿಯಂತೃತ್ವವೂ ಕೂಡಬಹುದು. ಬ್ರಹ್ಮನಿಗೆ ಶರೀರಾದಿಗಳು ಇಲ್ಲದಿರುವುದರಿಂದ ಘಟಪಟಾದಿಗಳಂತೆಯೇ ನಿಯಂತೃತ್ವವು ಕೂಡಲಾರದು. ಆದಕಾರಣ ಜೀವನೇ ಅಂತರ್ಯಾಮಿಯು ಎಂದು ಮಾಯಾವಾದಿಗಳು ಪೂರ್ವಪಕ್ಷ ಮಾಡಿಕೊಂಡು ೪ ಪರಮಾತ್ಮನೇ ಎಂದು ಸಿದ್ಧಾಂತ ಮಾಡಿರುವರು. ಹೇಗೆಂದರೆ ಬ್ರಹ್ಮನಿಗೆ ಶರೀರಾದಿಗಳು ಇಲ್ಲವೆನ್ನುವುದು ಸಿದ್ಧವಲ್ಲ. ಚೈತ್ರಕರ್ಮದಿಂದ ನಿರ್ಮಿತವಾದುದಕ್ಕೆ ಚೈತ್ರಶರೀರತ್ವವಿದ್ದಂತೆಯೇ ಬ್ರಹ್ಮವಿಷಯಕವಾದ ಅವಿದ್ಯಾ ಕಲ್ಪಿತವಾದ ಜಗತ್ತು ಬ್ರಹ್ಮನಿಗೆ ಶರೀರೇಂದ್ರಿಯಾದಿಸ್ಥಾನವಾಗಿದೆ. **ದೇಹೇಂದ್ರಿಯಾದಿನಿಯಮೇನಾಸ್ಯ ದೇಹೇಂದ್ರಿಯಾಂತರಂ। ತತ್ಕರ್ಮೋಪಾರ್ಜಿತಂ ತಚ್ಚೈತ್ರದವಿದ್ಯಾರ್ಜಿತಂ ಜಗತ್ ॥** ಈ ಜೀವನಿಗೆ ತನ್ನ ಶರೀರೇಂದ್ರಿಯಾದಿಗಳನ್ನು ನಿಯಮಿಸುವ ವಿಷಯದಲ್ಲಿ ದೇಹಾಂತರ ಇಂದ್ರಿಯಾಂತರಾದಿಗಳು ಇಲ್ಲ. ಜೀವನಿಗೆ ಶರೀರಾದಿಗಳು ತನ್ನ ಕರ್ಮಗಳಿಂದ ಸಂಪಾದಿತಗಳೆಂದಾದರೆ ಜಗತ್ತು ಈಶ್ವರನ ಅವಿದ್ಯಾಕಲ್ಪಿತವಾಗಿದೆ. ಜಗತ್ತು ಈಶ್ವರನ ಶರೀರವು. ಏವಂಚ ಆತ್ಮತ್ವ ಅಮೃತತ್ವ ಮೊದಲಾದ ಧರ್ಮಗಳನ್ನು ಹೇಳಿದ್ದರಿಂದ ಅಧಿದೈವಾದಿಗಳಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು ಬ್ರಹ್ಮನೇ ಎಂದು ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. ಏಕೆಂದರೆ ಬ್ರಹ್ಮನಅವಿದ್ಯಾಕಲ್ಪಿತವಾದ ಜಗತ್ತೂ ಬ್ರಹ್ಮನ ಶರೀರವೆಂದು ಹೇಳುವುದಾದರೆ ಬ್ರಹ್ಮನಂತೆಯೇ ಸ್ವತಃ ಶರೀರಶೂನ್ಯವಾದ ಶುಕ್ತಿ ಸ್ಥಾಣುವು ಮೊದಲಾದವುಗಳ ಅಜ್ಞಾನದಿಂದ ಕಲ್ಪಿತವಾದ ರೂಪ್ಯದೇಹ ಮೊದಲಾದವುಗಳು ಶುಕ್ತಿಸ್ಥಾಣ್ವಾದಿಗಳ ಶರೀರಗಳಾಗಬೇಕಾಗುವವು. ಮತ್ತೂ ಅಸ್ಮದಾದಿಗಳ ಸಂಸಾರವು ಬ್ರಹ್ಮನ ಅವಿದ್ಯಾಕಲ್ಪಿತವಾದುದರಿಂದ ಬ್ರಹ್ಮನಿಗೂ ನಮ್ಮಂತೆಯೇ ಸಂಸಾರಿತಬರಬೇಕಾಗುವುದು. ಮತ್ತು ಜಗತ್ತನ್ನು ಸೃಷ್ಟಿಸುವುದಕ್ಕಿಂತ ಮೊದಲು ಶರೀರವಿಲ್ಲದಿರುವುದರಿಂದ ಅಶರೀರನಿಗೇನೇ ಸ್ರಷ್ಟೃತ್ವವಿದ್ದಂತೆಯೇ ಶರೀರಾದಿರಹಿತನಿಗೂ ನಿಯಂತೃತ್ವವೂ ಕೂಡಬಹುದು. (೨) ಶರೀರವಿಲ್ಲದಿರುವುದರಿಂದ ನಿಯಂತೃತ್ವವು ಕೂಡಲಾರದು ಎಂದು ಶಂಕಿಸಿದ್ದಕ್ಕೆ ಗೌಣಶರೀರವಿದೆ ಎಂದು ಹೇಳಿದ್ದು ಯುಕ್ತವಲ್ಲ. ಮತ್ತು ಶುದ್ಧಬ್ರಹ್ಮನು ನಿರ್ವಿಕಾರನಾದುದರಿಂದ ಆತನಿಗೆ ನಿಯಂತೃತ್ವವೇ ಕೂಡಲಾರದು. ವಿಶಿಷ್ಟಬ್ರಹ್ಮನಾದರೂ ಅವಿದ್ಯಾಕಲ್ಪಿತನಾದುದರಿಂದ ಅವಿದ್ಯೆಗೆ ವಿಷಯನು ಆಗಲಾರನು. ಆದಕಾರಣ ಜಗತ್ತು ವಿಶಿಷ್ಟಬ್ರಹ್ಮವಿಷಯಕವಾದ ಅವಿದ್ಯಾರ್ಜಿತವಾಗದಿರುವುದರಿಂದ ಜಗತ್ತು ಆತನಿಗೆ ಶರೀರವಾಗಲಾರದು. **ಆಶ್ರಯತ್ವ ವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ। ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ**

**ಭವತಿ ನಾಪಿ ಗೋಚರಃ ॥** ಎಂದು ಅವರ ಪ್ರಕ್ರಿಯೆಯು. (೩) ಮತ್ತು ದೇಹಾದಿಗಳಿಗೆ ನಿಯಾಮಕನಾದ ಜೀವನಿಗೂ ಮತ್ತೊಬ್ಬ ನಿಯಾಮಕನಿಯಮ್ಯತ್ವವಿದ್ದರೆ ಆತನಿಗೆ ನಿಯಾಮಕನಾದ ಈಶ್ವರನಿಗೂ ಮತ್ತೊಬ್ಬ ನಿಯಾಮಕ ನಿಯಮ್ಯತ್ವವಿರಬೇಕಾಗಿರುವುದರಿಂದ ಅನವಸ್ಥಾದೋಷವು ಬರಬೇಕಾಗುವುದು. ಆದಕಾರಣ ನಿಯಾಮಕನಾದ ಬ್ರಹ್ಮನು ನಿಯಮ್ಯನಾದ ಜೀವನಿಂದ ಅಭಿನ್ನನು ಎಂದು ಪರರು ಹೇಳಿರುವರು. ಅದು ಅಯುಕ್ತವು. ಬ್ರಹ್ಮನಿಗೆ ಜೀವಾಭೇದವಿದ್ದರೆ ಸುತರಾಂ ನಿಯಂತೃತ್ವವು ಕೂಡಲಾರದು. ಮತ್ತು ಶ್ರುತಿಸೂತ್ರಗಳಲ್ಲಿ ಭೇದೋಕ್ತಿಯೂ ಕೂಡದೆ ಹೋಗಬೇಕಾಗುವುದು. ಕಾಲ್ಪನಿಕ ಭೇದದಿಂದ ನಿಯಂತೃತ್ವಾದಿಗಳು ಕೂಡಬಹುದೆಂದರೆ ದೇಹಾದಿಗಳಿಗೆ ನಿಯಾಮಕನಾದ ಜೀವನಿಗೆ ವ್ಯಾವಹಾರಿಕಭೇದವುಳ್ಳ ಈಶ್ವರನು ನಿಯಾಮಕನೆಂದು ಹೇಗೆ ಹೇಳುತ್ತೀರೋ ಹಾಗೆಯೇ ಈಶ್ವರನಿಗೂ ವ್ಯಾವಹಾರಿಕಭೇದವುಳ್ಳ ಮತ್ತೊಬ್ಬನು ನಿಯಾಮಕನಾಗಬಹುದಷ್ಟೆ. ಹೀಗೆ ವ್ಯಾವಹಾರಿಕಭೇದವುಳ್ಳ ನಿಯಂತೃಪರಂಪರೆಯಿಂದ ಅನವಸ್ಥಾ ದೋಷವು ಬರಬೇಕಾಗುವುದು. (೪) ಹಾಗಾದರೆ ಅನವಸ್ಥಾದೋಷ ಪರಿಹಾರಕ್ಕಾಗಿ ನಿಯಂತೃಗಳಿಗೆ ಅಭೇದವನ್ನು ಹೇಳುವುದಿಲ್ಲ (೫) ಮತ್ತು ಒಂದು ಶರೀರದಲ್ಲಿ ಎರಡು ಪ್ರತ್ಯಕ್ ಚೈತನ್ಯಗಳು ಕೂಡಲಾರದು. ಎಂದು ಹೇಳಿದ್ದು ಅಯುಕ್ತವು. ಏಕೆಂದರೆ ಪಿತಾಚಾದಿಗಳಿಂದ ಆವಿಷ್ಟವಾದ ಶರೀರದಲ್ಲಿ ಅಹಮರ್ಥರೂಪಗಳಾದ ಎರಡು ಪ್ರತ್ಯಕ್ ಚೈತನ್ಯಗಳು ಕಂಡಿವೆ. ಮತ್ತು (೧) **ಹಂತಾಸ್ಮಾಚ್ಛರೀರಾದುತ್ಕ್ರಾಮಾಮ ತದ್ವಸ್ಮಿನ್ನ ಉತ್ಕ್ರಾಂತೇ (೨) ಹಂತೇದಂ ಪುನಃ ಶರೀರಂ ಪ್ರವಿಶಾಮ. ತದ್ವಸ್ಮಿನ್ನಃ ಪ್ರಪನ್ನೇ** ಇತ್ಯಾದಿಗಳಲ್ಲಿ ಒಂದೇ ಶರೀರದಲ್ಲಿ ಚಕ್ಷುರಾದಿ ಇಂದ್ರಿಯಗಳಿಗೆ ಅಭಿಮಾನಿಗಳಾದ ಅನೇಕ ಮಂದಿ ದೇವತಾರೂಪಅಹಮರ್ಥಗಳು ಶ್ರುತವಾಗಿವೆ. (೬) ಮತ್ತು ಹೀಗೆ ಅದ್ವೈತಿಗಳ ಮತದಲ್ಲಿ ಅಧಿಕರಣಪ್ರಮೇಯವನ್ನು ನಿರಾಕರಿಸಿ ಅದ್ವೈತಿಗಳ ಮತದಲ್ಲಿಯೂ ರಾಮಾನುಜಾಚಾರ್ಯರ ಮತದಲ್ಲಿಯೂ ಸೂತ್ರಾಕ್ಷರಾರ್ಥವು ಅನುಪಪನ್ನವೆನ್ನುತ್ತಾರೆ. ಮಾಯಾವಾದಿಗಳೂ ರಾಮಾನುಜಾಚಾರ್ಯರೂ ಇಬ್ಬರೂ ಒಂದನೇ ಸೂತ್ರದಲ್ಲಿ ಅಧಿದೈವಾದಿಷು=ದೇವತೆಗಳಲ್ಲಿ ಯಾರು ಅಂತರ್ಯಾಮಿಯೋ ಆತನು ಪರಮಾತ್ಮನು ಎಂದು ಸೂತ್ರಕ್ಕೆ ಅರ್ಥವನ್ನು ಹೇಳುತ್ತಾರೆ. ಇದೂ ಅಯುಕ್ತವು. ಏಕೆಂದರೆ— ಹಾಗಿದ್ದರೆ .ಅಧಿದೈವಾದಿಷು ಎನ್ನುವುದು ವ್ಯರ್ಥವಾಗಬೇಕಾಗುವುದು. ವಿಷಯವಾಕ್ಯವನ್ನು ಸೂಚಿಸುವುದಕ್ಕಾಗಿ ಅಧಿದೈವಾದಿಷು ಎಂದು ಹೇಳಿದ್ದು ಎಂದು ಹೇಳಕೂಡದು. ಅದು ಅಂತರ್ಯಾಮಿ ಪದದಿಂದಲೇ ಸಿದ್ಧಿಸುವುದು. ಇಲ್ಲವಾದರೆ **ಅಂತಸ್ತದ್ಧರ್ಮೋ ಪದೇಶಾತ್** ಇತ್ಯಾದಿಗಳಲ್ಲಿ **ಆದಿತ್ಯಾದಿಷು ಅಂತಃ** ಎಂದು ಸಾಧ್ಯವನ್ನು ನಿರ್ದೇಶ ಮಾಡಬೇಕಾಗುವುದು. ಆದಕಾರಣ ನಾವು ಹೇಳಿದ ಪ್ರಕಾರ ಅಧಿದೈವಾದಿಪ್ರಕರಣಗಳಲ್ಲಿ ಎಂದೇ ಅರ್ಥವು ಪ್ರಶಸ್ತವಾಗುವುದು. ಮಾಯಾವಾದಿಗಳು ಹೇಳಿದ ಅಧಿಕರಣಶರೀರದಂತೆಯೇ ರಾಮಾನುಜಾ ಚಾರ್ಯರೂ ಸಾಮಾನ್ಯತಃ ಅಧಿಕರಣಶರೀರವನ್ನು ಹೇಳಿರುವುದರಿಂದ ಅದನ್ನು ಪ್ರತ್ಯೇಕ ದೂಷಿಸಲಿಲ್ಲ. ಹೀಗೆಯೇ ಎರಡನೇ ಸೂತ್ರದಲ್ಲಿ ತದ್ಧರ್ಮಾಭಿಲಾಪವೆಂದು ಪ್ರಧಾನಧರ್ಮಗಳಿಗೆ ವಿರುದ್ಧವಾದ ಧರ್ಮವನ್ನು ಹೇಳುವುದು ಎಂದು ಇಬ್ಬರು ಹೇಳುವುದೂ ಅಯುಕ್ತವು. ಒಂದನೇ ಸೂತ್ರದಲ್ಲಿದ್ದ ತದ್ಧರ್ಮವ್ಯಪದೇಶಾತ್ ಎನ್ನುವುದರಿಂದ ಪುನರುಕ್ತವಾಗುವುದು

ಬ್ರಹ್ಮಧರ್ಮಗಳು ಪ್ರಧಾನಧರ್ಮಗಳಿಗೆ ವಿರುದ್ಧಗಳೇ ಆಗಿವೆ. ಆದಕಾರಣ ತ್ರಿಗುಣತ್ವ ಮೊದಲಾದ ಧರ್ಮಗಳನ್ನು ಹೇಳದೆ ಇರುವುದರಿಂದ ಎಂದೇ ನಾವು ಹೇಳಿದ ಅರ್ಥವು ಯೋಗ್ಯವು. (೭) ಮತ್ತು **ಭೇದವ್ಯಪದೇಶಾತ್, ಭೇದವ್ಯಪದೇಶಾಚ್ಚಾನ್ಯಃ, ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್, ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ. ಭೇದವ್ಯಪ ದೇಶಾತ್** ಇದು ಮೊದಲಾದ ಅತೀತ ವರ್ತಮಾನ ಆಗಾಮಿಸೂತ್ರಗಳ ಸಮುದಾಯವನ್ನು ಅದ್ವೈತಿಗಳು ಸಿದ್ಧಾಂತಸೂತ್ರಗಳನ್ನಾಗಿ ವ್ಯಾಖ್ಯಾನ ಮಾಡಿರುವರು. ಇದು ಅವರಿಗೆ ಅತ್ಯಂತ ಪ್ರತಿಕೂಲವಾದುದು. **ಅದ್ವೈತಿಭಿರ್ವ್ಯಾಕ್ರಿಯತೇ ಕಥಮದ್ವೈತದೂಷಕಂ। ಸೂತ್ರಜಾತಂ ಸ್ವಸಿದ್ಧಾಂತತಯಾಲಜ್ಜಾಂ ವಿನೈವ ತು ॥ ೧ । ಯದಿ ಮಿಥ್ಯಾರ್ಥವಾದೀನಿ ಸೂತ್ರಾಣೀತ್ಯೇವ ಕೀರ್ತನಂ। ಸೂತ್ರವ್ಯಾಖ್ಯಾ ತರ್ಹಿ ವೇದಬೋಧ್ಯಮಿಥ್ಯಾತ್ವಬೋಧಕಃ ॥ ೨ ॥ ಬೌದ್ಧಾಗಮೋಽಪಿ ವೇದಸ್ಯ ವ್ಯಾಖ್ಯಾರೂಪಃ ಪ್ರಸಜ್ಯತೇ । ಬೌದ್ಧೋಽಪಿ ಬ್ರಹ್ಮಸೂತ್ರಾಣಿ ವ್ಯಾಖ್ಯಾಯಾಂತೇ ಭವಾನಿವ ॥ ೩ ॥ ಮಿಥ್ಯೈಷೋಽರ್ಥಃ ಕಿಂತು ತತ್ತ್ವಂ ಶೂನ್ಯಮೇವೇತಿ ಕೀರ್ತಯೇತ್ ॥ ಅಸದ್ವೇತ್ಯಾದಿವಚನಂ ತಸ್ಯ ಸ್ಯಾತ್ತತ್ತ್ವವೇದಕಂ ॥ ೪ ॥ ಅಸಕೃಚ್ಛ್ರುತಿಭಿಃ ಸೂತ್ರೇ ಭೇದೋ ಯತ್ನೇನ ಸಾಧಿತೇ । ಮಿಥ್ಯಾರ್ಥತಾಂ ಕಥಂಬ್ರೂಯಾತ್ತೂತ್ರಾಣಾಂ ಭಾಷ್ಯಕೃತ್ತ್ವಯಂ ॥ ೫ ॥ ಸೌಗತಾ ವೇದಬಾಹ್ಯಾ ಹಿ ವೇದಾಪ್ರಾಮಾಣ್ಯವಾದಿನಃ। ಅವೈದಿಕಾ ಇತಿ ಜ್ಞಾತ್ವಾ ವೈದಿಕೈಃ ಪರಿವರ್ಜಿತಾಃ॥ ೬ ॥ ವೇದಾನ್ ಪ್ರವಿಶ್ಯ ವೇದಾನಾಮಪ್ರಾಮಾಣ್ಯಂ ಪ್ರಸಾಧಯನ್। ಮಾಯೀ ತು ಯತ್ನತಸ್ತ್ಯಾಜ್ಯೋ ವೈದಿಕೈರ್ಹಿತ ಶತ್ರುವತ್ ॥ ೭ ॥** ಅದ್ವೈತಿಗಳು ಅದ್ವೈತವನ್ನು (ಐಕ್ಯವನ್ನು) ದೂಷಿಸತಕ್ಕ (ಅಂದರೆ ಭೇದಪ್ರತಿಪಾದಕವಾದ) ಸೂತ್ರಸಮುದಾಯವನ್ನು ತಮ್ಮ ಸಿದ್ಧಾಂತ ಸೂತ್ರವೆಂದು ಹೇಗೆ ವ್ಯಾಖ್ಯಾನ ಮಾಡುವರು. ॥ ೧ ॥ ಆ ಸೂತ್ರಗಳು ಎಲ್ಲಾ ಮಿಥ್ಯಾಭೇದವನ್ನೇ ಹೇಳತಕ್ಕ ವುಗಳು ಎಂದೇ ಸೂತ್ರಕ್ಕೆ ಅರ್ಥ ಹೇಳಿದ್ದು ಎಂದಾದರೆ ಸೂತ್ರವ್ಯಾಖ್ಯಾನವು ವೇದಬೋಧ್ಯವಾದುದಕ್ಕೆ ಮಿಥ್ಯಾತ್ವವನ್ನು ಬೋಧಿಸುತ್ತದೆ ಎನ್ನಬೇಕಾಗುವುದು ॥ ೨ ॥ ಹೀಗಾದರೆ ಬೌದ್ಧಾಗಮವೂ ಕೂಡ ವೇದಕ್ಕೆ ವ್ಯಾಖ್ಯಾನರೂಪವಾಗಬೇಕಾಗುವುದು. ಹೇಗೆಂದರೆ ಬೌದ್ಧನೂ ಕೂಡ ಬ್ರಹ್ಮಸೂತ್ರಗಳನ್ನು ವ್ಯಾಖ್ಯಾನ ಮಾಡಿ ಅಂತ್ಯದಲ್ಲಿ ಅದ್ವೈತಿಗಳಂತೆಯೇ ಈ ಅರ್ಥವೆಲ್ಲವೂ ಮಿಥ್ಯಾಭೂತವಾದುದು, ಶೂನ್ಯವೇ ತತ್ವವು ಎಂದು ಹೇಳಿಯಾನು (ಬೌದ್ಧನಿಗೆ ತತ್ತ್ವಾವೇದಕವಾದ ವೇದವಾಕ್ಯವಿಲ್ಲ. ಅದ್ವೈತಿಗಳಿಗೆ ಸದೇವೇದಮಗ್ರ ಆಸೀತ್ ಇದು ಮೊದಲಾದುದು ತತ್ತ್ವಾವೇದಕವೇದವಾಕ್ಯವಿದೆ ಎಂದರೆ ಅಸದ್ವಾ ಇದಮಗ್ರ ಆಸೀತ್ ಇದು ಮೊದಲಾದ ವಚನವು ಬೌದ್ಧರಿಗೆ ತತ್ತ್ವಾವೇದಕವಾಕ್ಯವಾಗುವುದು. ॥ ೩, ೪ ॥ ಬಹುಶ್ರುತಿಗಳಿಂದಲೂ ಸೂತ್ರಗಳಿಂದಲೂ ಸೂತ್ರದಲ್ಲಿ ಬಹುಧಾಭೇದವೇ ಸಾಧಿಸಲ್ಪಡುತ್ತಿರಲು ಸೂತ್ರಕ್ಕೆ ಭಾಷ್ಯಕಾರನೆಂದು ಅನ್ನಿಸಿಕೊಂಡ ತಾನೇ ಸೂತ್ರದಲ್ಲಿ ಹೇಳುವ ಅರ್ಥವೆಲ್ಲವೂ ಸುಳ್ಳು ಎಂದು ಹೇಳುವುದು ಅಯುಕ್ತವು. ॥ ೫ ॥ ಬೌದ್ಧರು ವೇದಬಾಹ್ಯರು ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳುವವರು. ಅವೈದಿಕರು ಎಂದು ಅವರನ್ನು ವೈದಿಕರು ತಿಳಿದುಬಿಟ್ಟಿದ್ದಾರೆ. ॥೬॥ ವೇದಾರ್ಥಗಳನ್ನು ಹೇಳುತ್ತೇನೆಂದು ಪ್ರವೃತ್ತಿ ಮಾಡಿ ವೇದಗಳಿಗೇನೇ ಅಪ್ರಾಮಾಣ್ಯವನ್ನು ಸಾಧಿಸತಕ್ಕ ಮಾಯಿಯನ್ನು ವೈದಿಕರು ಹಿತಶತ್ರುವಿನಂತೆ ಪ್ರಯತ್ನಮಾಡಿ ಬಿಡಲೇಬೇಕು. ॥೭॥ ಆದಕಾರಣ ಮಾಯಾವಾದಿಗಳ ಮತ್ತು ರಾಮಾನುಜಾಚಾರ್ಯರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

(೧) ಬೃಹದಾರಣ್ಯಕದಲ್ಲಿ ಏಷ ತ ಆತ್ಮಾ ಅಂತರ್ಯಾಮ್ಯಮೃತಃ ಎನ್ನುವಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು, ಪ್ರಕೃತಿಯೋ, ಜೀವನೋ, ವಿಷ್ಣುವೋ ಎಂದು ಸಂದೇಹವು. ಯಸ್ಯ ಪೃಥಿವೀ ಶರೀರಂ ಇತ್ಯಾದಿಗಳಿಂದ ಅಂತರ್ಯಾಮಿಯಲ್ಲಿ ಶ್ರುತವಾದ ಪೃಥಿವ್ಯಾದ್ಯಾತ್ಮಕತ್ವರೂಪವಾದ ಪೃಥಿವ್ಯಾದಿಶರೀರಕತ್ವವು ಪೃಥಿವ್ಯಾದಿಗಳಿಗೆ ಉಪಾದಾನಕಾರಣವಾದ ಪ್ರಕೃತಿಯಲ್ಲಿ ಕೂಡುವುದರಿಂದ ಪ್ರಕೃತಿಯು ಎಂದು ಪೂರ್ವಪಕ್ಷವು. ವ್ಯಾಪ್ತಂ ಕಾರ್ಯೇಷು ಕಾರಣಂ ಎನ್ನುವ ಉಕ್ತಿಯಿಂದಲೂ, ಪಟೀ ತಂತವಃ ಇತ್ಯಾದಿ ಪ್ರತೀತಿಯಿಂದಲೂ ಕಾರಣವೂ ಕಾರ್ಯದಲ್ಲಿ ಇದ್ದುದರಿಂದ ಯಃ ಪೃಥಿವ್ಯಾಂ ತಿಷ್ಠನ್ ಇತ್ಯಾದಿಗಳು ಸಂಗತಗಳಾಗುತ್ತವೆ. ಕಾರ್ಯಕಾರಣಗಳಿಗೆ ಭೇದಾಭೇದವಿದ್ದುದರಿಂದ ಅಭೇದವಿದ್ದುದರಿಂದ ತದಾತ್ಮಕತ್ವ (ತಾದಾತ್ಮ್ಯ)ವೂ ಭೇದವಿದ್ದುದರಿಂದ ತತ್ಸತ್ತ್ವವೂ (ಆದರಲ್ಲಿವಿಕೆಯೂ) ಉಪಪನ್ನವು. ಕಾರ್ಯವು ಕಾರಣದ ಅಧೀನವಾದುದರಿಂದ ಯಃ ಪೃಥಿವೀಮಂತರೋ ಯಮಯತಿ ಇತ್ಯಾದಿಗಳಿಂದ ಹೇಳಲ್ಪಟ್ಟ ನಿಯಮ್ಯತ್ವವು ಗೌಣವು. (೨) ಅಥವಾ ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವನೇ ಅಂತರ್ಯಾಮಿಯು ಎಂದು ಪೂರ್ವಪಕ್ಷವು. ಏಕೆಂದರೆ ಪೃಥಿವ್ಯಾದ್ಯಭಿಮಾನಿಜೀವರಿಗೆ ಪೃಥಿವ್ಯಾದಿಗಳು ಸ್ಥೂಲಶರೀರಗಳಾಗಿವೆ. ವಿಷ್ಣುವಿಗೆ ಪೃಥಿವ್ಯಾದ್ಯಾತ್ಮಕತ್ವವೂ ಪೃಥಿವ್ಯಾದಿಗಳು ದೇಹ ಎನ್ನುವುದೂ ಕೂಡಲಾರದು. ಆದಕಾರಣ ಜೀವನೇ ಎಂದು ಪೂರ್ವಪಕ್ಷವು. ವಿಷ್ಣುವೇ ಎಂದು ಸಿದ್ಧಾಂತವು. ಹೇಗೆಂದರೆ ಪೃಥಿವ್ಯಾದೇರ್ಜಡತ್ವೇ ಸ್ಯಾದಪ್ರಸಕ್ತನಿರಾಕ್ರಿಯಾ। ಚಿತ್ವೇ ತು ತೇ ನ ಕಾರ್ತ್ಸ್ನ್ಯೇನಾವೇದ್ಯತ್ವಂ ನೇಶ್ವರಂ ವಿನಾ॥ ಯಂ ಪೃಥಿವೀ ನ ವೇದ ಇತ್ಯಾದಿಗಳಲ್ಲಿದ್ದ ಪೃಥಿವ್ಯಾದಿಗಳು ಜಡಭೂತವಾದುದು ಇಟ್ಟುಕೊಂಡರೆ ಜಡದಲ್ಲಿ ಜ್ಞಾನಪ್ರಸಕ್ತಿಯೇ ಇಲ್ಲದಿರುವುದರಿಂದ ಪ್ರಸಕ್ತವಾಗದ ಇದ್ದುದಕ್ಕೆ ಪ್ರತಿಷೇಧವು ಬರಬೇಕಾಗುವುದು. ಪೃಥಿವ್ಯಾದ್ಯಭಿಮಾನಿ ಚೇತನವೆಂದು ಇಟ್ಟುಕೊಂಡರೆ, ಅಂತಹ ಜೀವನಿಂದ ಸಾಕಲ್ಯೇನ ಅವೇದ್ಯತ್ವವು ಭಾಷ್ಯೋಕ್ತಶ್ರುತಿಸ್ಮೃತಿಗಳಿಂದ ಶ್ರೀಹರಿಗೇನೇ ಇರತಕ್ಕುದು ಇತರರಿಗೆ ಸರ್ವಥಾ ಇಲ್ಲ. ಮತ್ತು ಜಡವೆಂದು ಇಟ್ಟುಕೊಂಡರೆ ಜಡವು ಯಾವುದನ್ನೂ ತಿಳಿಯದೆ ಇರುವುದರಿಂದ ನ ವೇದ ಎಂದಿಷ್ಟೇ ಹೇಳಬೇಕಿತ್ತು. ಯಂ ನ ವೇದ ಎಂದು ವ್ಯರ್ಥವು. ಯಮಾತ್ಮಾ ನ ವೇದ ಎನ್ನುವುದು ಕೂಡಲಾರದು. (೩) ಮತ್ತು ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ । ಆತಿಪ್ರಿಯಾತ್ವಾಚ್ಚ ಹರೇರಂತರತ್ವಮುದಾಹೃತಂ॥ ಎನ್ನುವ ಸ್ಮೃತಿಯಲ್ಲಿ ಹೇಳಿದ ಪ್ರಕಾರ ಅಂತರತ್ವವು ಸ್ವತ ಏವ ನಿತ್ಯತೃಪ್ತನಾದುದರಿಂದಲೂ, ಪ್ರೇಯಃ ಪುತ್ರಾತ್ ಇತ್ಯಾದಿ ಸ್ಮೃತಿಯಿಂದ ಪರಮಪ್ರೇಯೋರೂಪನಾದುದರಿಂದಲೂ ಕೇವಲ ವಿಷ್ಣುಧರ್ಮವೇ ಆಗಿರುತ್ತದೆ. (೪) ಮತ್ತು ಸುಬಾಲೋಪನಿಷತ್ತಿನಲ್ಲಿ ದಿವ್ಯೋ ದೇವ ಏಕೋ ನಾರಾಯಣಃ ಎಂದುಪಕ್ರಮಿಸಿ ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಮಂತರೇ ಸಂಚರನ್ಯಂ ಪೃಥಿವೀ ನ ವೇದ ಇತ್ಯಾದಿಗಳನ್ನು ಹೇಳಿ ಏಷ ಸರ್ವಭೂತಾಂತರಾತ್ಮಾಽಪ ಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ ಎಂದು ಉಪಸಂಹಾರ ಮಾಡಿದ್ದರಿಂದ ನಾರಾಯಣನೇ ಅಂತರ್ಯಾಮಿಯು (೫) ಮತ್ತು ತ್ರಿಗುಣತ್ವ ಸಂಸಾರಿತ್ವ ಮೊದಲಾದ ಪ್ರಕೃತಿ ಜೀವರ ಅಸಾಧಾರಣಧರ್ಮವನ್ನು ಇಲ್ಲಿ ಹೇಳದೆ ಇರುವುದರಿಂದಲೂ, ಯ ಆತ್ಮನೋಽಂತರಃ

ಬ್ರಹ್ಮಧರ್ಮಗಳು ಪ್ರಧಾನಧರ್ಮಗಳಿಗೆ ವಿರುದ್ಧಗಳೇ ಆಗಿವೆ. ಆದಕಾರಣ ತ್ರಿಗುಣತ್ವ ಮೊದಲಾದ ಧರ್ಮಗಳನ್ನು ಹೇಳದೆ ಇರುವುದರಿಂದ ಎಂದೇ ನಾವು ಹೇಳಿದ ಅರ್ಥವು ಯೋಗ್ಯವು. (೭) ಮತ್ತು **ಭೇದವ್ಯಪದೇಶಾತ್, ಭೇದವ್ಯಪದೇಶಾಚ್ಚಾನ್ಯಃ, ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್, ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ. ಭೇದವ್ಯಪ ದೇಶಾತ್** ಇದು ಮೊದಲಾದ ಅತೀತ ವರ್ತಮಾನ ಆಗಾಮಿಸೂತ್ರಗಳ ಸಮುದಾಯವನ್ನು ಅದ್ವೈತಿಗಳು ಸಿದ್ಧಾಂತಸೂತ್ರಗಳನ್ನಾಗಿ ವ್ಯಾಖ್ಯಾನ ಮಾಡಿರುವರು. ಇದು ಅವರಿಗೆ ಅತ್ಯಂತ ಪ್ರತಿಕೂಲವಾದುದು. **ಅದ್ವೈತಿಭಿರ್ವ್ಯಾಕ್ರಿಯತೇ ಕಥಮದ್ವೈತದೂಷಕಂ। ಸೂತ್ರಜಾತಂ ಸ್ವಸಿದ್ಧಾಂತತಯಾಲಜ್ಜಾಂ ವಿನೈವ ತು ॥ ೧ । ಯದಿ ಮಿಥ್ಯಾರ್ಥವಾದೀನಿ ಸೂತ್ರಾಣೀತ್ಯೇವ ಕೀರ್ತನಂ। ಸೂತ್ರವ್ಯಾಖ್ಯಾ ತರ್ಹಿ ವೇದಬೋಧ್ಯಮಿಥ್ಯಾತ್ವಬೋಧಕಃ ॥ ೨ ॥ ಬೌದ್ಧಾಗಮೋಽಪಿ ವೇದಸ್ಯ ವ್ಯಾಖ್ಯಾರೂಪಃ ಪ್ರಸಜ್ಯತೇ । ಬೌದ್ಧೋಽಪಿ ಬ್ರಹ್ಮಸೂತ್ರಾಣಿ ವ್ಯಾಖ್ಯಾಯಾಂತೇ ಭವಾನಿವ ॥ ೩ ॥ ಮಿಥ್ಯೈಷೋಽರ್ಥಃ ಕಿಂತು ತತ್ತ್ವಂ ಶೂನ್ಯಮೇವೇತಿ ಕೀರ್ತಯೇತ್ ॥ ಅಸದ್ವೇತ್ಯಾದಿವಚನಂ ತಸ್ಯ ಸ್ಯಾತ್ತತ್ತ್ವವೇದಕಂ ॥ ೪ ॥ ಅಸಕೃಚ್ಛ್ರುತಿಭಿಃ ಸೂತ್ರೇ ಭೇದೋ ಯತ್ನೇನ ಸಾಧಿತೇ । ಮಿಥ್ಯಾರ್ಥತಾಂ ಕಥಂಬ್ರೂಯಾತ್ಸೂತ್ರಾಣಾಂ ಭಾಷ್ಯಕೃತ್ತ್ವಯಂ ॥ ೫ ॥ ಸೌಗತಾ ವೇದಬಾಹ್ಯಾ ಹಿ ವೇದಾಪ್ರಾಮಾಣ್ಯವಾದಿನಃ। ಅವೈದಿಕಾ ಇತಿ ಜ್ಞಾತ್ವಾ ವೈದಿಕೈಃ ಪರಿವರ್ಜಿತಾಃ॥ ೬ ॥ ವೇದಾನ್ ಪ್ರವಿಶ್ಯ ವೇದಾನಾಮಪ್ರಾಮಾಣ್ಯಂ ಪ್ರಸಾಧಯನ್। ಮಾಯೀ ತು ಯತ್ನತಸ್ತ್ಯಾಜ್ಯೋ ವೈದಿಕೈರ್ಹಿತ ಶತ್ರುವತ್ ॥ ೭ ॥** ಅದ್ವೈತಿಗಳು ಅದ್ವೈತವನ್ನು (ಐಕ್ಯವನ್ನು) ದೂಷಿಸತಕ್ಕ (ಅಂದರೆ ಭೇದಪ್ರತಿಪಾದಕವಾದ) ಸೂತ್ರಸಮುದಾಯವನ್ನು ತಮ್ಮ ಸಿದ್ಧಾಂತ ಸೂತ್ರವೆಂದು ಹೇಗೆ ವ್ಯಾಖ್ಯಾನ ಮಾಡುವರು. ॥ ೧ ॥ ಆ ಸೂತ್ರಗಳು ಎಲ್ಲಾ ಮಿಥ್ಯಾಭೇದವನ್ನೇ ಹೇಳತಕ್ಕ ವುಗಳು ಎಂದೇ ಸೂತ್ರಕ್ಕೆ ಅರ್ಥ ಹೇಳಿದ್ದು ಎಂದಾದರೆ ಸೂತ್ರವ್ಯಾಖ್ಯಾನವು ವೇದಬೋಧ್ಯವಾದುದಕ್ಕೆ ಮಿಥ್ಯಾತ್ವವನ್ನು ಬೋಧಿಸುತ್ತದೆ ಎನ್ನಬೇಕಾಗುವುದು ॥ ೨ ॥ ಹೀಗಾದರೆ ಬೌದ್ಧಾಗಮವೂ ಕೂಡ ವೇದಕ್ಕೆ ವ್ಯಾಖ್ಯಾನರೂಪವಾಗಬೇಕಾಗುವುದು. ಹೇಗೆಂದರೆ ಬೌದ್ಧನೂ ಕೂಡ ಬ್ರಹ್ಮಸೂತ್ರಗಳನ್ನು ವ್ಯಾಖ್ಯಾನ ಮಾಡಿ ಅಂತ್ಯದಲ್ಲಿ ಅದ್ವೈತಿಗಳಂತೆಯೇ ಈ ಅರ್ಥವೆಲ್ಲವೂ ಮಿಥ್ಯಾಭೂತವಾದುದು, ಶೂನ್ಯವೇ ತತ್ತ್ವವು ಎಂದು ಹೇಳಿಯಾನು (ಬೌದ್ಧನಿಗೆ ತತ್ತ್ವಾವೇದಕವಾದ ವೇದವಾಕ್ಯವಿಲ್ಲ, ಅದ್ವೈತಿಗಳಿಗೆ ಸದೇವೇದಮಗ್ರ ಆಸೀತ್ ಇದು ಮೊದಲಾದುದು ತತ್ತ್ವಾವೇದಕವೇದವಾಕ್ಯವಿದೆ ಎಂದರೆ ಅಸದ್ವಾ ಇದಮಗ್ರ ಆಸೀತ್ ಇದು ಮೊದಲಾದ ವಚನವು ಬೌದ್ಧರಿಗೆ ತತ್ತ್ವಾವೇದಕವಾಕ್ಯವಾಗುವುದು. ॥ ೩, ೪ ॥ ಬಹುಶ್ರುತಿಗಳಿಂದಲೂ ಸೂತ್ರಗಳಿಂದಲೂ ಸೂತ್ರದಲ್ಲಿ ಬಹುಧಾಭೇದವೇ ಸಾಧಿಸಲ್ಪಡುತ್ತಿರಲು ಸೂತ್ರಕ್ಕೆ ಭಾಷ್ಯಕಾರನೆಂದು ಅನ್ನಿಸಿಕೊಂಡ ತಾನೇ ಸೂತ್ರದಲ್ಲಿ ಹೇಳುವ ಅರ್ಥವೆಲ್ಲವೂ ಸುಳ್ಳು ಎಂದು ಹೇಳುವುದು ಅಯುಕ್ತವು. ॥ ೫ ॥ ಬೌದ್ಧರು ವೇದಬಾಹ್ಯರು ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳುವವರು. ಅವೈದಿಕರು ಎಂದು ಅವರನ್ನು ವೈದಿಕರು ತಿಳಿದುಬಿಟ್ಟಿದ್ದಾರೆ. ॥೬॥ ವೇದಾರ್ಥಗಳನ್ನು ಹೇಳುತ್ತೇನೆಂದು ಪ್ರವೃತ್ತಿ ಮಾಡಿ ವೇದಗಳಿಗೇನೇ ಅಪ್ರಾಮಾಣ್ಯವನ್ನು ಸಾಧಿಸತಕ್ಕ ಮಾಯಿಯನ್ನು ವೈದಿಕರು ಹಿತಶತ್ರುವಿನಂತೆ ಪ್ರಯತ್ನಮಾಡಿ ಬಿಡಲೇಬೇಕು. ॥೭॥ ಆದಕಾರಣ ಮಾಯಾವಾದಿಗಳ ಮತ್ತು ರಾಮಾನುಜಾಚಾರ್ಯರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

(೧) ಬೃಹದಾರಣ್ಯಕದಲ್ಲಿ ಏಷ ತ **ಆತ್ಮಾ ಅಂತರ್ಯಾಮ್ಯಮೃತಃ** ಎನ್ನುವಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು, ಪ್ರಕೃತಿಯೋ, ಜೀವನೋ, ವಿಷ್ಣುವೋ ಎಂದು ಸಂದೇಹವು. ಯಸ್ಯ ಪೃಥಿವೀ **ಶರೀರಂ** ಇತ್ಯಾದಿಗಳಿಂದ ಅಂತರ್ಯಾಮಿಯಲ್ಲಿ ಶ್ರುತವಾದ ಪೃಥಿವ್ಯಾದ್ಯಾತ್ಮಕತ್ವರೂಪವಾದ ಪೃಥಿವ್ಯಾದಿಶರೀರಕತ್ವವು ಪೃಥಿವ್ಯಾದಿಗಳಿಗೆ ಉಪಾದಾನಕಾರಣವಾದ ಪ್ರಕೃತಿಯಲ್ಲಿ ಕೂಡುವುದರಿಂದ ಪ್ರಕೃತಿಯು ಎಂದು ಪೂರ್ವಪಕ್ಷವು. **ವ್ಯಾಪ್ತಂ ಕಾರ್ಯೇಷು ಕಾರಣಂ** ಎನ್ನುವ ಉಕ್ತಿಯಿಂದಲೂ, **ಪಟೇ ತಂತವಃ** ಇತ್ಯಾದಿ ಪ್ರತೀತಿಯಿಂದಲೂ ಕಾರಣವೂ ಕಾರ್ಯದಲ್ಲಿ ಇದ್ದುದರಿಂದ **ಯಃ ಪೃಥಿವ್ಯಾಂ ತಿಷ್ಠನ್** ಇತ್ಯಾದಿಗಳು ಸಂಗತಗಳಾಗುತ್ತವೆ. ಕಾರ್ಯಕಾರಣಗಳಿಗೆ ಭೇದಾಭೇದವಿದ್ದುದರಿಂದ ಅಭೇದವಿದ್ದುದರಿಂದ ತದಾತ್ಮಕತ್ವ (ತಾದಾತ್ಮ್ಯ)ವೂ ಭೇದವಿದ್ದುದರಿಂದ ತತ್ತತ್ವವೂ (ಅದರಲ್ಲಿಪ್ರಿಕೆಯೂ) ಉಪಪನ್ನವು. ಕಾರ್ಯವು ಕಾರಣದ ಅಧೀನವಾದುದರಿಂದ **ಯಃ ಪೃಥಿವೀಮಂತರೋ ಯಮಯತಿ** ಇತ್ಯಾದಿಗಳಿಂದ ಹೇಳಲ್ಪಟ್ಟ ನಿಯಮ್ಯತ್ವವು ಗೌಣವು. (೨) ಅಥವಾ ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವನೇ ಅಂತರ್ಯಾಮಿಯು ಎಂದು ಪೂರ್ವಪಕ್ಷವು. ಏಕೆಂದರೆ ಪೃಥಿವ್ಯಾದ್ಯಭಿಮಾನಿಜೀವರಿಗೆ ಪೃಥಿವ್ಯಾದಿಗಳು ಸ್ಥೂಲಶರೀರಗಳಾಗಿವೆ. ವಿಷ್ಣುವಿಗೆ ಪೃಥಿವ್ಯಾದ್ಯಾತ್ಮಕತ್ವವೂ ಪೃಥಿವ್ಯಾದಿಗಳು ದೇಹ ಎನ್ನುವುದೂ ಕೂಡಲಾರದು. ಆದಕಾರಣ ಜೀವನೇ ಎಂದು ಪೂರ್ವಪಕ್ಷವು. ವಿಷ್ಣುವೇ ಎಂದು ಸಿದ್ಧಾಂತವು. ಹೇಗೆಂದರೆ **ಪೃಥಿವ್ಯಾದೇರ್ಜಡತ್ವೇ ಸ್ಯಾದಪ್ರಸಕ್ತನಿರಾಕ್ರಿಯಾ। ಚಿತ್ವೇ ತು ತೇ ನ ಕಾರ್ತ್ಸ್ನ್ಯೇನಾವೇದ್ಯತ್ವಂ ನೇಶ್ವರಂ ವಿನಾ॥ ಯಂ ಪೃಥಿವೀ ನ ವೇದ** ಇತ್ಯಾದಿಗಳಲ್ಲಿದ್ದ ಪೃಥಿವ್ಯಾದಿಗಳು ಜಡಭೂತವಾದುದು ಇಟ್ಟುಕೊಂಡರೆ ಜಡದಲ್ಲಿ ಜ್ಞಾನಪ್ರಸಕ್ತಿಯೇ ಇಲ್ಲದಿರುವುದರಿಂದ ಪ್ರಸಕ್ತವಾಗದ ಇದ್ದುದಕ್ಕೆ ಪ್ರತಿಷೇಧವು ಬರಬೇಕಾಗುವುದು. ಪೃಥಿವ್ಯಾದ್ಯಭಿಮಾನಿ ಚೇತನವೆಂದು ಇಟ್ಟುಕೊಂಡರೆ, ಅಂತಹ ಜೀವನಿಂದ ಸಾಕಲ್ಯೇನ ಅವೇದ್ಯತ್ವವು ಭಾಷ್ಯೋಕ್ತಶ್ರುತಿಸ್ಮೃತಿಗಳಿಂದ ಶ್ರೀಹರಿಗೇನೇ ಇರತಕ್ಕುದು ಇತರರಿಗೆ ಸರ್ವಥಾ ಇಲ್ಲ. ಮತ್ತು ಜಡವೆಂದು ಇಟ್ಟುಕೊಂಡರೆ ಜಡವು ಯಾವುದನ್ನೂ ತಿಳಿಯದೆ ಇರುವುದರಿಂದ ನ ವೇದ ಎಂದಿಷ್ಟೇ ಹೇಳಬೇಕಿತ್ತು. ಯಂ ನ ವೇದ ಎಂದು ವ್ಯರ್ಥವು. ಯಮಾತ್ಮಾ ನ ವೇದ ಎನ್ನುವುದು ಕೂಡಲಾರದು. (೩) ಮತ್ತು **ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ । ಅತಿಪ್ರಿಯಾತ್ವಾಚ್ಚ ಹರೇರಂತರತ್ವಮುದಾಹೃತಂ॥** ಎನ್ನುವ ಸ್ಮೃತಿಯಲ್ಲಿ ಹೇಳಿದ ಪ್ರಕಾರ ಅಂತರತ್ವವು ಸ್ವತ ಏವ ನಿತ್ಯತೃಪ್ತನಾದುದರಿಂದಲೂ, **ಪ್ರೇಯಃ ಪುತ್ರಾತ್** ಇತ್ಯಾದಿ ಸ್ಮೃತಿಯಿಂದ ಪರಮಪ್ರೇಯೋರೂಪನಾದುದರಿಂದಲೂ ಕೇವಲ ವಿಷ್ಣುಧರ್ಮವೇ ಆಗಿರುತ್ತದೆ. (೪) ಮತ್ತು ಸುಬಾಲೋಪನಿಷತ್ತಿನಲ್ಲಿ **ದಿವ್ಯೋ ದೇವ ಏಕೋ ನಾರಾಯಣಃ** ಎಂದುಪಕ್ರಮಿಸಿ **ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಮಂತರೇ ಸಂಚರನ್ಯಂ ಪೃಥಿವೀ ನ ವೇದ** ಇತ್ಯಾದಿಗಳನ್ನು ಹೇಳಿ **ಏಷ ಸರ್ವಭೂತಾಂತರಾತ್ಮಾಽಪ ಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ** ಎಂದು ಉಪಸಂಹಾರ ಮಾಡಿದ್ದರಿಂದ ನಾರಾಯಣನೇ ಅಂತರ್ಯಾಮಿಯು (೫) ಮತ್ತು ತ್ರಿಗುಣತ್ವ ಸಂಸಾರಿತ್ವ ಮೊದಲಾದ ಪ್ರಕೃತಿ ಜೀವರ ಅಸಾಧಾರಣಧರ್ಮವನ್ನು ಇಲ್ಲಿ ಹೇಳದೆ ಇರುವುದರಿಂದಲೂ, **ಯ ಆತ್ಮನೋಽಂತರಃ**

ವಿಜ್ಞಾನಾದಂತರೋ ವಿವಿಕ್ತಃ ಎಂದು ಜೀವನದೆಸೆಯಿಂದ ಅಂತರ್ಯಾಮಿಗೆ ಭೇದವನ್ನು ಹೇಳಿದ್ದ ರಿಂದಲೂ ಅಂತರ್ಯಾಮಿಯು ವಿಷ್ಣುವೇ । ಅಧಿ. ೫ ॥

**ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು.**

## ೬ ಅದೃಶ್ಯತ್ವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ದೃಶ್ಯತ್ವಾದ್ಯಭಾವಾಖ್ಯವಾದ ಲಿಂಗಕ್ಕೆ ಬ್ರಹ್ಮನಲ್ಲಿ ಸಮನ್ವಯವು. ಪೂರ್ವಾಧಿಕರಣಸಂಗತಿ ವಿಷಯವಾಕ್ಯಗಳನ್ನುದಾಹರಿಸುತ್ತಾ ವಿಷಯ ಸಂಶಯಗಳನ್ನು ಸಯುಕ್ತಿಕವಾಗಿ ಪೂರ್ವಪಕ್ಷವನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ಅದೃಶ್ಯತ್ವಾದಿಗುಣಾ ವಿಷ್ಣೋರುಕ್ತಾಃ ॥ ೧ ॥**

**ಭಾಷ್ಯಾರ್ಥ ॥** ಅದೃಶ್ಯತ್ವಮೊದಲಾದ ಶುಭಧರ್ಮಗಳು ವಿಷ್ಣುವಿಗೆ ಹೇಳಲ್ಪಟ್ಟಿವೆ.

**ವಿಶೇಷಾಂಶ ॥** ಆನಂದಮಯನಿಗೆ ಅದೃಶ್ಯೇ ಎನ್ನುವ ವಾಕ್ಯದಿಂದಲೂ, ಅಂತಸ್ಥನಿಗೆ ನ ವಿಜಾನಂತಿ ಎನ್ನುವ ವಾಕ್ಯದಿಂದಲೂ, ಸರ್ವಗತನಿಗೆ ಸ ಯೋಽತೋಽಶ್ರುತಃ ಎನ್ನುವ ವಾಕ್ಯದಿಂದಲೂ, ಅಂತರ್ಯಾಮಿಗೆ ಅವ್ಯವಹಿತ ಪೂರ್ವಾಧಿಕರಣದಲ್ಲಿ ಉದಾಹೃತವಾದ ಯಂ ಪೃಥಿವೀ ನ ವೇದ ಎನ್ನುವ ವಾಕ್ಯದಿಂದಲೂ ವಿಷ್ಣುವಿಗೆ ಶುಭಧರ್ಮಗಳು ಹೇಳಲ್ಪಟ್ಟಿವೆ.

**ಭಾಷ್ಯ ॥ ತತ್ರ ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯ ದ್ಭೂತಯೋನಿಂ ಪರಿಪಶ್ಯಂತಿ ಧೀರಾಃ (ಮು.ಉ.೧.೧.೬.)। ಇತ್ಯುಕ್ತ್ವಾ ॥ ೨ ॥**

**ಭಾಷ್ಯಾರ್ಥ ॥** ತತ್ರ=ಅಥರ್ವಣದಲ್ಲಿ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರವಿಷಯದಲ್ಲಿ, ಯತ್= ಯಾವ ಪರವಿದ್ಯಾಗಮ್ಯವಾದ ಅಕ್ಷರವೋ, ತತ್=ಅದು, ಅದ್ರೇಶ್ಯಂ=ಚಕ್ಷುರಾದಿಜ್ಞೇಯಭಿನ್ನವು. ಅಗ್ರಾಹ್ಯಂ=ಮನೋಗ್ರಾಹ್ಯಭಿನ್ನವಾದುದು. ಅಗೋತ್ರಂ=ವಸಿಷ್ಠ ಮೊದಲಾದ ಗೋತ್ರವಿಲ್ಲದಿರುವುದು, ಅವರ್ಣಂ=ಪ್ರಾಕೃತಶುಕ್ಲಾದಿವರ್ಣವಿಲ್ಲದಿರುವುದು, (ಅದೃಶ್ಯತ್ವಾದಿಶಬ್ದೈರ್ದೃಶ್ಯಾದ್ಯನ್ಯೋನ್ಯಾ-ಭಾವೋಽಭಿಧೀಯತೇ ಎಂದು ಸುಧಾದಲ್ಲಿ ಹೇಳಿದಪ್ರಯುಕ್ತ) ದೃಶ್ಯಭಿನ್ನ ಗೋತ್ರಭಿನ್ನ ವರ್ಣಭಿನ್ನ ಎಂದೂ ಅರ್ಥವು. ಯತ್=ಯಾವುದು, ಅಚಕ್ಷುಃಶ್ರೋತ್ರಂ=ಪ್ರಾಕೃತ ಜ್ಞಾನೇಂದ್ರಿಯಶೂನ್ಯವೋ, ತತ್=ಅದು, ಅಪಾಣಿಪಾದಂ=ಪ್ರಾಕೃತಕರ್ಮೇಂದ್ರಿಯಶೂನ್ಯವು. ನಿತ್ಯಂ=ಸ್ವರೂಪನಾಶವಿಲ್ಲದಿರು ವುದು. ಇಂತಹ ವಿಭುಂ=ಸಮರ್ಥವಾದ, ಸರ್ವಗತಂ=ಸರ್ವತ್ರ ವ್ಯಾಪ್ತವಾದ, ಸುಸೂಕ್ಷ್ಮಂ= ಅತ್ಯಂತಾವ್ಯಕ್ತವಾದ, ಯತ್=ಯಾವುದನ್ನು ಭೂತಯೋನಿಂ=ಸರ್ವಪ್ರಾಣಿಗಳಿಗೂ ಕಾರಣವನ್ನಾಗಿ, ಧೀರಾಃ=ಜ್ಞಾನಿಗಳು, ಪರಿಪಶ್ಯಂತಿ=ತಿಳಿಯುತ್ತಾರೋ, ತತ್=ಅದು, ಅಕ್ಷರಂ=ದೇಹತಃ ನಾಶಶೂನ್ಯ ವಾದುದು. ಇತಿ=ಹೀಗೆ, ಉಕ್ತ್ವಾ=ಹೇಳಿ, (ಆಮ್ನಾತಃ=ಪ್ರತಿಪಾದಿತವಾಗಿದೆ.)

ವಿಶೇಷಾಂಶ ॥ (೧) ಮೊದಲು ವಿಷ್ಣುವಿಗೆ ಅದೃಶ್ಯತ್ವ ಮೊದಲಾದ ಗುಣಗಳು ಹೇಳಲ್ಪಟ್ಟಿವೆ. ಅವುಗಳು ಅಥರ್ವಣದಲ್ಲಿ ಅಕ್ಷರನಿಗೆ ಹೇಳಲ್ಪಟ್ಟಿವೆ. ಆ ಅಥರ್ವಣದಲ್ಲಿ ಅದೃಶ್ಯತ್ವಮೊದಲಾದ ಗುಣಗಳುಳ್ಳ ಅಕ್ಷರವಿಷಯದಲ್ಲಿ **ಯತ್ತದದ್ರೇಶ್ಯಮಗ್ರಾಹ್ಯಂ** ಇತ್ಯಾದಿಗಳನ್ನು ಹೇಳಿ ಅಲ್ಲಿಯೇ **ಯಥೋರ್ಣನಾಭಿಃ ಸೃಜತೇ** ಎಂದಾರಂಭಿಸಿ **ವಿಶ್ವಂ** ಎನ್ನುವ ಪರ್ಯಂತ ವಾಕ್ಯವನ್ನು ಹೇಳಿ ಆ ಮೇಲೆ **ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ। ಅಪ್ರಾಣೋ ಹ್ಯಮನಾಃ ಶುಭ್ರೋ ಅಕ್ಷರಾತ್ಪರತಃ ಪರಃ॥** ಎನ್ನುವ ಉತ್ತರವಾಕ್ಯದಲ್ಲಿ ಪ್ರಕೃತಅಕ್ಷರದಿಂದಲೂ ಉತ್ತಮನು ಒಬ್ಬನು ಪ್ರತಿಪಾದ್ಯನೆಂದು ತಿಳಿಯಲ್ಪಡುತ್ತದೆ. (೨) ಪೂರ್ವೋಕ್ತಅದೃಶ್ಯತ್ವವು ವಿಷ್ಣುವ್ಯತಿರಿಕ್ತದಲ್ಲಿದೆ ಎಂದು ಆಕ್ಷೇಪಿಸುವುದರಿಂದ ಮೊದಲಿನ ಆನಂದಮಯಾದ್ಯಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. (೩) ಅದೃಶ್ಯತ್ವಾದಿಗಳು ವಿಷಯವು. ಅದು ವಿಷ್ಣುವಿಗೋ ಇತರರಿಗೂ ಎಂದು ಸಂದೇಹವು. ವಿಷ್ಣುವಿಗೆ ಅದೃಶ್ಯತ್ವಾದಿಗಳು ಇಲ್ಲವೆಂದು ಪೂರ್ವಪಕ್ಷವು. ಅದೃಶ್ಯತ್ವಾದಿವಿಶಿಷ್ಟನಲ್ಲಿ **ಅಕ್ಷರಾತ್ಸಂಭವತಿ** ಎಂದು ಅಕ್ಷರತ್ವವು ಹೇಳಿ ವಿಷ್ಣುವಿಗೆ ಈ ಅಕ್ಷರದಿಂದಲೂ ಪರತ್ವವನ್ನು ಹೇಳಿದ್ದರಿಂದ ಅದೃಶ್ಯತ್ವಾದಿಗುಣವುಳ್ಳ ಅಕ್ಷರತ್ವವು ವಿಷ್ಣುವಿಗೆ ನಿರವಕಾಶವಾಗಿದೆ ಎನ್ನುವ ಪೂರ್ವಪಕ್ಷಯುಕ್ತಿಯೂ ಸೂಚಿತವಾಯಿತು. (೪) ಸತ್ತರ್ಕದೀಪಾವಳಿಯಲ್ಲಿ **ಭೂತಯೋನಿಂ** ಎನ್ನುವುದಕ್ಕೆ ಆಕಾಶಾದಿ ಭೂತಗಳಿಗೆ ಬ್ರಹ್ಮಾದಿಕೆಲವು ಚೇತನರಿಗಾಗಲೀ ಸ್ತ್ರೀವ್ಯವಧಾನವಿಲ್ಲದೆ ತಂತಮ್ಮದೇಹದಿಂದಲೇ ಉತ್ಪಾದಕನೆಂದು ವ್ಯಾಖ್ಯಾತವಾಗಿದೆ.

ಪೀಠಿಕೆ ॥ ಇದನ್ನೇ ದೃಷ್ಟಾಂತವನ್ನು ಹೇಳಿ ಸ್ಪಷ್ಟೀಕರಿಸುತ್ತಾರೆ—

**ಭಾಷ್ಯ ॥ ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ। ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾಕ್ಷರಾತ್ ಸಂಭವತೀಹ ವಿಶ್ವಂ** (ಮು.೧.೧.೭.)॥ **ಇತ್ಯುಕ್ತ್ವಾ ತಸ್ಮಾಚ್ಚ ಅಕ್ಷರಾತ್ಪರತಃ ಪರಃ** (ಮು.ಉ.೨.೧.೨.)। **ಇತಿ ಪರಃ ಪ್ರತೀಯತೇ ॥ ೩ ॥**

ಭಾಷ್ಯಾರ್ಥ ॥ ಹೇಗೆ ಜಾಡರಹುಳುವು ಸೃಜತೇ=ತನ್ನಿಂದ ಉಪಭುಕ್ತಗಳಾದ ವಸ್ತುಗಳನ್ನು ತಂತುರೂಪವಾಗಿ ಪರಿಣತಗಳಾದವುಗಳನ್ನು ತನ್ನ ಶರೀರದಿಂದ ಹೊರಡಿಸುತ್ತದೋ, ಗೃಹ್ಣತೇ ಚ= ಚಕ್ರಾದ್ಯಾಕಾರವಾಗಿ ಹೊರಗೆ ನಿಷ್ಕಾಸಿತವಾದ ವಸ್ತುವನ್ನು ಪುನಃ ತನ್ನ ಹೊಟ್ಟೆಯೊಳಗೆ ಸ್ವೀಕರಿಸುತ್ತದೋ, ಹಾಗೆಯೇ ವಿಶ್ವಂ=ಪ್ರಲಯಕಾಲದಲ್ಲಿ ನುಂಗಲ್ಪಟ್ಟಜಗತ್ತೂ ಅಕ್ಷರಾತ್= ಶ್ರೀಹರಿಯಿಂದ, ಸಂಭವತಿ=ಹುಟ್ಟುತ್ತದೆ. ಯಥಾ=ಹೇಗೆ, ಪೃಥಿವ್ಯಾಂ=ಭೂಮಿಯಲ್ಲಿ, ಓಷಧಯಃ= ಅಂಕುರಾದಿಗಳು, ಸಂಭವಂತಿ=ಹುಟ್ಟುತ್ತವೋ, ಯಥಾ=ಹೇಗೆ, ಸತಃ=ಜೀವವುಳ್ಳ, ಪುರುಷಾತ್= ಶರೀರದಿಂದ, ಕೇಶಲೋಮಾನಿ=ಶಿರಸ್ಸಿನಲ್ಲಿರತಕ್ಕ ಕೂದಲುಗಳೂ, ಇತರ ಲೋಮಗಳೂ ಹುಟ್ಟುತ್ತವೋ, ಹಾಗೆ ಇಹ=ಲೋಕದಲ್ಲಿ ವಿಶ್ವಂ=ನಾನಾವಿಧವಾದ ಕಾರ್ಯವು, ಸಂಭವತಿ= ಹುಟ್ಟುತ್ತದೆ. ಇತಿ= ಹೀಗೆ, ಉಕ್ತ್ವಾ=ಹೇಳಿ, ಉತ್ತರವಾಕ್ಯದಲ್ಲಿ ತಸ್ಮಾಚ್ಚ= ಆ ಅಕ್ಷರದಿಂದಲೂ, ಪರತಃ ಅಕ್ಷರಾತ್= ಉತ್ತಮವಾದ ಚಿತ್ಪ್ರಕೃತಿರೂಪವಾದ ಅಕ್ಷರದಿಂದಲೂ, ಪರಃ=ಉತ್ತಮರು, ಇತಿ=ಎಂದು, ಪರಃ= ಉತ್ತಮನು, ಪ್ರತೀಯತೇ=ಪ್ರತಿಪಾದ್ಯನಾಗಿ ತಿಳಿಯಲ್ಪಡುತ್ತಾನೆ.

ವಿಶೇಷಾಂಶ ॥ (೧) ಇಲ್ಲಿ ಬ್ರಹ್ಮನಿಗೆ ಭೂತಕಾರಣತ್ವವೆಂದರೆ ನಿಖಿಲಭೂತಗಳ ಕರ್ತೃತ್ವರೂಪವಾದುದು. ಉಪಾದಾನ ಕಾರಣತ್ವವಲ್ಲ ಎಂದು ಹೇಳುವುದಕ್ಕಾಗಿ ಒಂದನೇ ದೃಷ್ಟಾಂತವು. (೨) ಅಂಕುರಾದಿಗಳ ಉತ್ಪತ್ತಿಗೆ ಪೃಥಿವಿಯು ಬೀಜವನ್ನು ಅಪೇಕ್ಷಿಸುವಂತೆ ಪರಬ್ರಹ್ಮನು ಸರ್ವಜಗತ್ತಿನ ಸೃಷ್ಟಿಗೆ ಆವರವರ ಕರ್ಮವನ್ನು ಅಪೇಕ್ಷಿಸುತ್ತಾನೆ ಎಂದು ಹೇಳುವುದಕ್ಕಾಗಿ ಎರಡನೇ ದೃಷ್ಟಾಂತವು. (೩) ಅನಾಯಸೇನ ಸೃಷ್ಟಿಮಾಡುತ್ತಾನೆಂದು ಹೇಳುವುದಕ್ಕಾಗಿ ಕೇಶಲೋಮಾನಿ ಎಂದು ಮೂರನೇ ದೃಷ್ಟಾಂತವು. (೪) ದಿವ್ಯಃ ಇತ್ಯಾದಿ ಶ್ರುತ್ಯರ್ಥವು—ದಿವ್ಯಃ=ಅದ್ಭುತನು, ಅಮೂರ್ತಃ= ನಿಯತ ಪರಿಚ್ಛಿನ್ನ ಪರಿಮಾಣರಹಿತನು, ಬಾಹ್ಯಾಭ್ಯಂತರಃ=ಸರ್ವವಸ್ತುಗಳ ಹೊರಗೂ ಒಳಗೂ ಇರುವವನು, ಅಪ್ರಾಣೋಹ್ಯಮನಾಃ=ಷೋಡಶಕಲಾರಹಿತನು, ಶುಭ್ರಃ=ಶುದ್ಧನು, ಪರತಃ= ಜಡಪ್ರಕೃತಿಯಿಂದ ಉತ್ತಮವಾದ, ಅಕ್ಷರಾತ್=ಚಿತ್ಪ್ರಕೃತಿಯಿಂದ, ಪರಃ=ಉತ್ತಮನು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋಽಬ್ರವೀತ್(ಬ್ರವೀತಿ) ॥ ೪ ॥**

## ಸೂತ್ರ ॥ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ॥ ೨೧ ॥

**ಸೂತ್ರಾರ್ಥ ॥** ಹೀಗೆ ಸಂಗತಿಯಿದ್ದ ಪ್ರಯುಕ್ತವೂ ಅದಕ್ಕೆ ಉತ್ತರರೂಪವಾದ ಸೂತ್ರವನ್ನು ಹೇಳುತ್ತಾರೆ. ಅದೃಶ್ಯತ್ವ ಅಕ್ಷರತ್ವ ಮೊದಲಾದ ಶುಭಧರ್ಮಗಳುಳ್ಳವನು ವಿಷ್ಣುವೇ, ಧರ್ಮೋಕ್ತೇಃ = ಈ ಪ್ರಕರಣದಲ್ಲಿ ಅಥ ಪರಾ ಯಯಾ ತದಕ್ಷರಮಧಿಗಮ್ಯತೇ, ತದೇತದಕ್ಷರಂ ಬ್ರಹ್ಮ, ಪುರುಷ ಏವೇದಂ ವಿಶ್ವಂ, ಕರ್ಮ ತಪೋ ಬ್ರಹ್ಮ ಪರಾಮೃತಂ, ಇತ್ಯಾದಿ ವಾಕ್ಯಗಳಲ್ಲಿ ಅದೃಶ್ಯತ್ವಾದಿಗುಣಗಳುಳ್ಳವನಿಗೆ ಪರವಿದ್ಯಾವಿಷಯತ್ವ ಮೊದಲಾದ ಧರ್ಮವನ್ನು ಹೇಳಿದ ಪ್ರಯುಕ್ತ.

**ಪೀಠಿಕೆ ॥** ಅದೃಶ್ಯತ್ವ ಮೊದಲಾದ ಗುಣಗಳು ಪ್ರಕೃತ್ಯಾದಿಗಳಿಗೆ ಎನ್ನುವ ಪೂರ್ವಪಕ್ಷವನ್ನು ಹೇಳುತ್ತಾರೆ—

**ಭಾಷ್ಯ ॥ ಪೃಥಿವ್ಯಾದಿದೃಷ್ಟಾಂತಮುಕ್ತ್ವಾ ಅಕ್ಷರಾತ್ಸಂಭವತೀಹ ವಿಶ್ವಂ (ಮು.೧.೧.೭.) ಇತ್ಯತಃ ಪರಂ ತತ್ಪರತಃ ಪರಾಭಿಧಾನಾತ್ । ಕೂಟಸ್ಥೋಽಕ್ಷರ ಉಚ್ಯತೇ (ಭ.ಗೀ.೧೫.೧೬.) ಇತಿ ಸ್ಮೃತೇಶ್ಚ ಪ್ರಕೃತೇಃ ಪ್ರಾಪ್ತಿಃ ॥ ೫ ॥**

**ಭಾಷ್ಯಾರ್ಥ ॥** ಪೃಥಿವ್ಯಾದಿದೃಷ್ಟಾಂತವನ್ನು ಹೇಳಿ (ಅನಂತರದಲ್ಲಿ ಹೇಳಲ್ಪಟ್ಟ) **ಅಕ್ಷರಾತ್ಸಂಭವತೀಹ ವಿಶ್ವಂ** ಎನ್ನುವ ವಾಕ್ಯದೆಶೆಯಿಂದ ಮೇಲೆ (ಹೇಳಲ್ಪಟ್ಟ **ಅಕ್ಷರಾತ್ಪರತಃ ಪರಃ** ಎನ್ನುವ ವಾಕ್ಯದಿಂದ) ತತ್ಪರತಃ = ಕಾರಣೀಭೂತವಾದ ಉತ್ತಮವಾದ ಅಕ್ಷರದೆಶೆಯಿಂದ, ಪರಾಭಿಧಾನಾತ್ = ಉತ್ತಮ ವಸ್ತುವನ್ನು ಹೇಳಿದ್ದರಿಂದಲೂ **ಕೂಟಸ್ಥೋಽಕ್ಷರ ಉಚ್ಯತೇ** ಎನ್ನುವ ಸ್ಮೃತಿಯಿಂದಲೂ, ಜಡ ಪ್ರಕೃತಿಗೂ ಚಿತ್ಪ್ರಕೃತಿಗೂ ಕೂಡ ಪ್ರಾಪ್ತಿಃ = ಅದೃಶ್ಯತ್ವಾದಿಗಳ ಪ್ರಾಪ್ತಿಯು ಆಗುತ್ತದೆ.

ವಿಶೇಷಾಂಶ ॥ (೧) ಶ್ರುತಿಯಲ್ಲಿ ಊರ್ಣನಾಭಿದೃಷ್ಟಾಂತವನ್ನು ಮೊದಲು ಹೇಳಿದಾಗ್ಯೂ, ಅಲ್ಲಿ ಸೃಜತೇ ಎನ್ನುವದರಿಂದ ಕರ್ತೃತ್ವಮಾತ್ರ ತೋರುತ್ತದೆ. ಪೂರ್ವಪಕ್ಷಕ್ಕೆ ಅನುಕೂಲವಾದ

ಜಗದುಪಾದಾನಕಾರಣತ್ವವು ತೋರುವುದಿಲ್ಲ. ಆದಕಾರಣ ಅದನ್ನು ಬಿಟ್ಟು ಪೃಥಿವ್ಯಾದಿ ಎಂದು ಹೇಳಿದ್ದಾರೆ.

ಪೀಠಿಕೆ ॥ ಪೂರ್ವಪಕ್ಷಾಂತರವನ್ನು ವ್ಯಕ್ತೀಕರಿಸುತ್ತಾರೆ.

**ಭಾಷ್ಯ ॥ ಬ್ರಹ್ಮಶಬ್ದಾತ್ತತ್ಪರತಃ ಪರಾಭಿಧಾನಾದೇವ ಚ ಹಿರಣ್ಯಗರ್ಭಸ್ಯ ॥ ೬ ॥**

ಭಾಷ್ಯಾರ್ಥ ॥ ಸ ಬ್ರಹ್ಮವಿದ್ಯಾಂ ಇತ್ಯಾದಿಗಳಲ್ಲಿ ಶ್ರುತವಾದ ಬ್ರಹ್ಮಶಬ್ದದಿಂದಲೂ (ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾದುದರಿಂದ ವಿಷ್ಣುವಿಗೇನೇ ಸಾಧಕವು. ಈ ಬ್ರಹ್ಮಶಬ್ದವು ಚತುರ್ಮುಖ ಪರವಲ್ಲವೆಂದರೆ) ತತ್ಪರತಃ-ಹಿರಣ್ಯಗರ್ಭಾಖ್ಯಅಕ್ಷರನಿಂದ ಉತ್ತಮವಾದ ಶ್ರೀತತ್ತ್ವದಿಂದ, ಉತ್ತಮನಾದ ಶ್ರೀವಿಷ್ಣುವನ್ನು (ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನಿಂದ ಉತ್ತಮನೆಂದು ಪ್ರತ್ಯೇಕ ಹೇಳಿದುದರಿಂದ) ಚತುರ್ಮುಖನಿಗೆ (ಅದೃಶ್ಯತ್ವಾದಿಗಳ) ಪ್ರಾಪ್ತಿಯೂ ಆಗುತ್ತದೆ. (ಅಂದರೆ ಇಲ್ಲಿದ್ದ ಬ್ರಹ್ಮಶಬ್ದವು ಚತುರ್ಮುಖಪರವೇ ಆಗುವುದು. ಆದುದರಿಂದ ಚತುರ್ಮುಖನಿಗೇನೇ ಅದೃಶ್ಯತ್ವಾದಿ ಗುಣಕಾಕ್ಷರತ್ವವು ಎಂದು ಪೂರ್ವಪಕ್ಷವು.

ವಿಶೇಷಾಂಶ ॥ (೧) ಏವ ಶಬ್ದದಿಂದ ಹೇತುವು ನಿರವಕಾಶವಾಗಿದೆ. ಬೇರೆ ಹೇತುವನ್ನು ಹುಡುಕಬೇಕಾಗಿಲ್ಲವೆಂದು ಸೂಚಿತವಾಯಿತು. (೨) ಉಪಲಕ್ಷಣವೆಂದು ಇಟ್ಟುಕೊಂಡು ಕರ್ತಾರ ಮೀಶಂ ಎಂದು ಈಶಶಬ್ದವು ಶ್ರುತವಾದ ಪ್ರಯುಕ್ತ ರುದ್ರನಿಗೂ ಅದೃಶ್ಯತ್ವಾದಿಗಳು ಪ್ರಾಪ್ತವಾಗಬಹುದು.

ಪೀಠಿಕೆ ॥ ಹೀಗೆ ಪ್ರಾಪ್ತವಾದ ಪೂರ್ವಪಕ್ಷವನ್ನು ತಿರಸ್ಕರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತಮೇವಂ ವಿದ್ವಾನಮೃತ ಇಹ ಭವತಿ (ತೈ.ಆ.೩.೧೨.೭.) । ತತ್ಕರ್ಮ ಹರಿತೋಷಂ ಯತ್ ಸಾ ವಿದ್ಯಾ ತನ್ಮತಿರ್ಯಯಾ। (ಸ್ಮೃತಿಃ) ಅಥ ದ್ವೇ ವಾವ ವಿದ್ಯೇ ವೇದಿತವ್ಯೇ ಪರಾ ಚೈವಾ (ಪರಾ ಚಾಪರಾ)ಪರಾ ಚ। ತತ್ರ ಯೇ ವೇದಾ ಯಾನ್ಯಂಗಾನಿ ಯಾನ್ಯುಪಾಂಗಾನಿ ಯಾನಿ ಪ್ರತ್ಯಂಗಾನಿ ಸಾಽಪರಾ । ಅಥ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರಮಾತ್ಮಾ (ಶ್ರುತ್ಯಂತರಂ) ಇತ್ಯಾದಿನಾ ತದ್ಧರ್ಮತ್ವೇನಾವಗತಪರವಿದ್ಯಾವಿಷಯತ್ವೋಕ್ತೇರ್ವಿಷ್ಣುರೇವಾದೃಶ್ಯತ್ವಾದಿಗುಣಕಃ ॥ ೨೧ ॥ ॥ ೭ ॥**

ಭಾಷ್ಯಾರ್ಥ ॥ (೧) ಆ ಪರಮಾತ್ಮನನ್ನು ಹೀಗೆ ತಿಳಿದವನು ಮುಕ್ತನಾಗುತ್ತಾನೆ. (೨) ಯಾವುದು ಶ್ರೀಪರಮಾತ್ಮನಿಗೆ ತುಷ್ಟಿಯನ್ನು ಮಾಡುವುದೋ, ಅದೇವೇ ಕರ್ಮವು. ಯಾವುದರಿಂದ ಶ್ರೀಹರಿಯ ಜ್ಞಾನವು ಆಗುತ್ತದೋ, ಅದೇವೇ ವಿದ್ಯೆಯು. (೩) ಪರಾ ಅಪರಾ ಎಂದು ಎರಡು ವಿದ್ಯೆಗಳು ತಿಳಿಯಲ್ಪಡಬೇಕು. ಪರಾಽಪರಾ ಎನ್ನುವ ಎರಡು ವಿದ್ಯೆಗಳಮಧ್ಯದಲ್ಲಿ ಯಾವುವು ಋಗಾದಿಗಳೋ, ಯಾವುವು ಶಿಕ್ಷಾದಿ ಷಡಂಗಗಳೋ ಯಾವುವು ಆಯುರ್ವೇದ ಧನುರ್ವೇದ ಗಾಂಧರ್ವ ಮೊದಲಾದ

ವಿಶೇಷಾಂಶ ॥ (೧) ಇಲ್ಲಿ ಬ್ರಹ್ಮನಿಗೆ ಭೂತಕಾರಣತ್ವವೆಂದರೆ ನಿಖಿಲಭೂತಗಳ ಕರ್ತೃತ್ವರೂಪವಾದುದು. ಉಪಾದಾನ ಕಾರಣತ್ವವಲ್ಲ ಎಂದು ಹೇಳುವುದಕ್ಕಾಗಿ ಒಂದನೇ ದೃಷ್ಟಾಂತವು. (೨) ಅಂಕುರಾದಿಗಳ ಉತ್ಪತ್ತಿಗೆ ಪೃಥಿವಿಯು ಬೀಜವನ್ನು ಅಪೇಕ್ಷಿಸುವಂತೆ ಪರಬ್ರಹ್ಮನು ಸರ್ವಜಗತ್ತಿನ ಸೃಷ್ಟಿಗೆ ಅವರವರ ಕರ್ಮವನ್ನು ಅಪೇಕ್ಷಿಸುತ್ತಾನೆ ಎಂದು ಹೇಳುವುದಕ್ಕಾಗಿ ಎರಡನೇ ದೃಷ್ಟಾಂತವು. (೩) ಅನಾಯಸೇನ ಸೃಷ್ಟಿಮಾಡುತ್ತಾನೆಂದು ಹೇಳುವುದಕ್ಕಾಗಿ ಕೇಶಲೋಮಾನಿ ಎಂದು ಮೂರನೇ ದೃಷ್ಟಾಂತವು. (೪) ದಿವ್ಯಃ ಇತ್ಯಾದಿ ಶ್ರುತ್ಯರ್ಥವು—ದಿವ್ಯಃ=ಅದ್ಭುತನು, ಅಮೂರ್ತಃ= ನಿಯತ ಪರಿಚ್ಛಿನ್ನ ಪರಿಮಾಣರಹಿತನು, ಬಾಹ್ಯಾಭ್ಯಂತರಃ=ಸರ್ವವಸ್ತುಗಳ ಹೊರಗೂ ಒಳಗೂ ಇರುವವನು, ಅಪ್ರಾಣೋಹ್ಯಮನಾಃ=ಷೋಡಶಕಲಾರಹಿತನು, ಶುಭ್ರಃ=ಶುದ್ಧನು, ಪರತಃ= ಜಡಪ್ರಕೃತಿಯಿಂದ ಉತ್ತಮವಾದ, ಅಕ್ಷರಾತ್=ಚಿತ್ಪ್ರಕೃತಿಯಿಂದ, ಪರಃ=ಉತ್ತಮನು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋಽಬ್ರವೀತ್(ಬ್ರವೀತಿ) ॥ ೪ ॥**

## ಸೂತ್ರ ॥ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ॥ ೨೧ ॥

**ಸೂತ್ರಾರ್ಥ ॥** ಹೀಗೆ ಸಂಗತಿಯಿದ್ದ ಪ್ರಯುಕ್ತವೂ ಅದಕ್ಕೆ ಉತ್ತರರೂಪವಾದ ಸೂತ್ರವನ್ನು ಹೇಳುತ್ತಾರೆ. ಅದೃಶ್ಯತ್ವ ಅಕ್ಷರತ್ವ ಮೊದಲಾದ ಶುಭಧರ್ಮಗಳುಳ್ಳವನು ವಿಷ್ಣುವೇ, ಧರ್ಮೋಕ್ತೇಃ = ಈ ಪ್ರಕರಣದಲ್ಲಿ ಅಥ ಪರಾ ಯಯಾ ತದಕ್ಷರಮಧಿಗಮ್ಯತೇ, ತದೇತದಕ್ಷರಂ ಬ್ರಹ್ಮ, ಪುರುಷ ಏವೇದಂ ವಿಶ್ವಂ, ಕರ್ಮ ತಪೋ ಬ್ರಹ್ಮ ಪರಾಮೃತಂ, ಇತ್ಯಾದಿ ವಾಕ್ಯಗಳಲ್ಲಿ ಅದೃಶ್ಯತ್ವಾದಿಗುಣಗಳುಳ್ಳವನಿಗೆ ಪರವಿದ್ಯಾವಿಷಯತ್ವ ಮೊದಲಾದ ಧರ್ಮವನ್ನು ಹೇಳಿದ ಪ್ರಯುಕ್ತ.

**ಪೀಠಿಕೆ ॥** ಅದೃಶ್ಯತ್ವ ಮೊದಲಾದ ಗುಣಗಳು ಪ್ರಕೃತ್ಯಾದಿಗಳಿಗೆ ಎನ್ನುವ ಪೂರ್ವಪಕ್ಷವನ್ನು ಹೇಳುತ್ತಾರೆ—

**ಭಾಷ್ಯ ॥ ಪೃಥಿವ್ಯಾದಿದೃಷ್ಟಾಂತಮುಕ್ತ್ವಾ ಅಕ್ಷರಾತ್ಸಂಭವತೀಹ ವಿಶ್ವಂ (ಮು.೧.೧.೭.) ಇತ್ಯತಃ ಪರಂ ತತ್ಪರತಃ ಪರಾಭಿಧಾನಾತ್ । ಕೂಟಸ್ಥೋಽಕ್ಷರ ಉಚ್ಯತೇ (ಭ.ಗೀ.೧೫.೧೬.) ಇತಿ ಸ್ಮೃತೇಶ್ಚ ಪ್ರಕೃತೇಃ ಪ್ರಾಪ್ತಿಃ ॥ ೫ ॥**

**ಭಾಷ್ಯಾರ್ಥ ॥** ಪೃಥಿವ್ಯಾದಿದೃಷ್ಟಾಂತವನ್ನು ಹೇಳಿ (ಅನಂತರದಲ್ಲಿ ಹೇಳಲ್ಪಟ್ಟ) **ಅಕ್ಷರಾತ್ಸಂಭವತೀಹ** ವಿಶ್ವಂ ಎನ್ನುವ ವಾಕ್ಯದೇಶೆಯಿಂದ ಮೇಲೆ (ಹೇಳಲ್ಪಟ್ಟ **ಅಕ್ಷರಾತ್ಪರತಃ ಪರಃ** ಎನ್ನುವ ವಾಕ್ಯದಿಂದ) ತತ್ಪರತಃ = ಕಾರಣೀಭೂತವಾದ ಉತ್ತಮವಾದ ಅಕ್ಷರದೆಶೆಯಿಂದ, ಪರಾಭಿಧಾನಾತ್ = ಉತ್ತಮ ವಸ್ತುವನ್ನು ಹೇಳಿದ್ದರಿಂದಲೂ **ಕೂಟಸ್ಥೋಽಕ್ಷರ ಉಚ್ಯತೇ** ಎನ್ನುವ ಸ್ಮೃತಿಯಿಂದಲೂ, ಜಡ ಪ್ರಕೃತಿಗೂ ಚಿತ್ಪ್ರಕೃತಿಗೂ ಕೂಡ ಪ್ರಾಪ್ತಿಃ = ಅದೃಶ್ಯತ್ವಾದಿಗಳ ಪ್ರಾಪ್ತಿಯು ಆಗುತ್ತದೆ.

ವಿಶೇಷಾಂಶ ॥ (೧) ಶ್ರುತಿಯಲ್ಲಿ ಊರ್ಣನಾಭಿದೃಷ್ಟಾಂತವನ್ನು ಮೊದಲು ಹೇಳಿದಾಗ್ಯೂ ಅಲ್ಲಿ ಸೃಜತೇ ಎನ್ನುವದರಿಂದ ಕರ್ತೃತ್ವಮಾತ್ರ ತೋರುತ್ತದೆ. ಪೂರ್ವಪಕ್ಷಕ್ಕೆ ಅನುಕೂಲವಾದ

ಜಗದುಪಾದಾನಕಾರಣತ್ವವು ತೋರುವುದಿಲ್ಲ. ಆದಕಾರಣ ಅದನ್ನು ಬಿಟ್ಟು ಪೃಥಿವ್ಯಾದಿ ಎಂದು ಹೇಳಿದ್ದಾರೆ.

ಪೀಠಿಕೆ ॥ ಪೂರ್ವಪಕ್ಷಾಂತರವನ್ನು ವ್ಯಕ್ತೀಕರಿಸುತ್ತಾರೆ.

**ಭಾಷ್ಯ ॥ ಬ್ರಹ್ಮಶಬ್ದಾತ್ತತ್ಪರತಃ ಪರಾಭಿಧಾನಾದೇವ ಚ ಹಿರಣ್ಯಗರ್ಭಸ್ಯ ॥ ೬ ॥**

ಭಾಷ್ಯಾರ್ಥ ॥ ಸ ಬ್ರಹ್ಮವಿದ್ಯಾಂ ಇತ್ಯಾದಿಗಳಲ್ಲಿ ಶ್ರುತವಾದ ಬ್ರಹ್ಮಶಬ್ದದಿಂದಲೂ (ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾದುದರಿಂದ ವಿಷ್ಣುವಿಗೇ ಸಾಧಕವು. ಈ ಬ್ರಹ್ಮಶಬ್ದವು ಚತುರ್ಮುಖ ಪರವಲ್ಲವೆಂದರೆ) ತತ್ಪರತಃ-ಹಿರಣ್ಯಗರ್ಭಾಖ್ಯಅಕ್ಷರನಿಂದ ಉತ್ತಮವಾದ ಶ್ರೀತತ್ವದಿಂದ, ಉತ್ತಮನಾದ ಶ್ರೀವಿಷ್ಣುವನ್ನು (ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನಿಂದ ಉತ್ತಮನೆಂದು ಪ್ರತ್ಯೇಕ ಹೇಳಿದುದರಿಂದ) ಚತುರ್ಮುಖನಿಗೆ (ಅದೃಶ್ಯತ್ವಾದಿಗಳ) ಪ್ರಾಪ್ತಿಯೂ ಆಗುತ್ತದೆ. (ಅಂದರೆ ಇಲ್ಲಿದ್ದ ಬ್ರಹ್ಮಶಬ್ದವು ಚತುರ್ಮುಖಪರವೇ ಆಗುವುದು. ಆದುದರಿಂದ ಚತುರ್ಮುಖನಿಗೇನೇ ಅದೃಶ್ಯತ್ವಾದಿ ಗುಣಕಾಕ್ಷರತ್ವವು ಎಂದು ಪೂರ್ವಪಕ್ಷವು.

ವಿಶೇಷಾಂಶ ॥ (೧) ಏವ ಶಬ್ದದಿಂದ ಹೇತುವು ನಿರವಕಾಶವಾಗಿದೆ. ಬೇರೆ ಹೇತುವನ್ನು ಹುಡುಕಬೇಕಾಗಿಲ್ಲವೆಂದು ಸೂಚಿತವಾಯಿತು. (೨) ಉಪಲಕ್ಷಣವೆಂದು ಇಟ್ಟುಕೊಂಡು ಕರ್ತಾರ ಮೀಶಂ ಎಂದು ಈಶಶಬ್ದವು ಶ್ರುತವಾದ ಪ್ರಯುಕ್ತ ರುದ್ರನಿಗೂ ಅದೃಶ್ಯತ್ವಾದಿಗಳು ಪ್ರಾಪ್ತವಾಗಬಹುದು.

ಪೀಠಿಕೆ ॥ ಹೀಗೆ ಪ್ರಾಪ್ತವಾದ ಪೂರ್ವಪಕ್ಷವನ್ನು ತಿರಸ್ಕರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತಮೇವಂ ವಿದ್ವಾನಮೃತ ಇಹ ಭವತಿ (ತೈ.ಆ.೩.೧೨.೭.) । ತತ್ಕರ್ಮ ಹರಿತೋಷಂ ಯತ್ ಸಾ ವಿದ್ಯಾ ತನ್ಮತಿರ್ಯಯಾ। (ಸ್ಮೃತಿಃ) ಅಥ ದ್ವೇ ವಾವ ವಿದ್ಯೇ ವೇದಿತವ್ಯೇ ಪರಾ ಚೈವಾ (ಪರಾ ಚಾಪರಾ)ಪರಾ ಚ। ತತ್ರ ಯೇ ವೇದಾ ಯಾನ್ಯಂಗಾನಿ ಯಾನ್ಯುಪಾಂಗಾನಿ ಯಾನಿ ಪ್ರತ್ಯಂಗಾನಿ ಸಾಽಪರಾ । ಅಥ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರ ಮಾತ್ಮಾ (ಪ್ರುತ್ಯಂತರಂ) ಇತ್ಯಾದಿನಾ ತದ್ಧರ್ಮತ್ವೇನಾವಗತಪರವಿದ್ಯಾವಿಷಯ ತ್ವೋಕ್ತೇರ್ವಿಷ್ಣೋರೇವಾದೃಶ್ಯತ್ವಾದಿಗುಣಕಃ ॥ ೨೧ ॥ ॥ ೭ ॥**

ಭಾಷ್ಯಾರ್ಥ ॥ (೧) ಆ ಪರಮಾತ್ಮನನ್ನು ಹೀಗೆ ತಿಳಿದವನು ಮುಕ್ತನಾಗುತ್ತಾನೆ. (೨) ಯಾವುದು ಶ್ರೀಪರಮಾತ್ಮನಿಗೆ ತುಷ್ಟಿಯನ್ನು ಮಾಡುವುದೋ, ಅದೇವೇ ಕರ್ಮವು. ಯಾವುದರಿಂದ ಶ್ರೀಹರಿಯ ಜ್ಞಾನವು ಆಗುತ್ತದೋ, ಅದೇವೇ ವಿದ್ಯೆಯು. (೩) ಪರಾ ಅಪರಾ ಎಂದು ಎರಡು ವಿದ್ಯೆಗಳು ತಿಳಿಯಲ್ಪಡಬೇಕು. ಪರಾಽಪರಾ ಎನ್ನುವ ಎರಡು ವಿದ್ಯೆಗಳಮಧ್ಯದಲ್ಲಿ ಯಾವುವು ಋಗಾದಿಗಳೋ, ಯಾವುವು ಶಿಕ್ಷಾದಿ ಷಡಂಗಗಳೋ ಯಾವುವು ಆಯುರ್ವೇದ ಧನುರ್ವೇದ ಗಾಂಧರ್ವ ಮೊದಲಾದ

ಉಪಾಂಗಗಳೋ, ಯಾವುವು ಶಿಷ್ಟಗಳಾದ ಕಲಾವಿದ್ಯೆಗಳೋ, ಅದು ಅಪರವಿದ್ಯೆಯು. ಯಾವಾತನು ದೃಶ್ಯದಿಂದ ಭಿನ್ನನೋ, ನಿರ್ಗುಣಃ=ಸತ್ವಾದಿಗುಣರಹಿತನೋ, ಪರಃ=ವಿಲಕ್ಷಣನೋ, ಪರಮಾತ್ಮಾ= ಸರ್ವೋತ್ತಮನಾದ ವ್ಯಾಪ್ತನೋ, ಆ ಹರಿಯು, ಯಾವ ವಿದ್ಯೆಯಿಂದ ತಿಳಿಯಲ್ಪಡಬೇಕೋ, ಅದು ಋಗಾದಿರೂಪವಾದ ಪರವಿದ್ಯೆಯು, ಇದು ಮೊದಲಾದ ಶ್ರುತಿಯಿಂದ (ಆದಿಪದದಿಂದ ತದೇತದ್ಬ್ರಹ್ಮ ತ್ರಿಪಾದಸ್ಯಾಮೃತಂ ದಿವಿ ಇತ್ಯಾದಿವಾಕ್ಯದಿಂದ) ವಿಷ್ಣುಧರ್ಮವೆಂದು ಪ್ರಸಿದ್ಧವಾದ ಪರವಿದ್ಯಾವಿಷಯತ್ವ ಅಮೃತತ್ವ ಮೊದಲಾದವುಗಳನ್ನು ಹೇಳಿದುದರಿಂದ ಅದೃಶ್ಯತ್ವಾದಿಗುಣಗಳುಳ್ಳವನು ವಿಷ್ಣುವೇ.

**ವಿಶೇಷಾಂಶ ॥** (೧) ವಿಷ್ಣುವಿಗೆ ಪರವಿದ್ಯಾವಿಷಯತ್ವರೂಪಧರ್ಮವನ್ನು ಹೇಳಿಯದೆ. ಪರವಿದ್ಯಾವಿಷಯತ್ವವನ್ನು ಹೇಳಿದಾಗ್ಯೂ ವಿಷ್ಣುತ್ವವು ಹೇಗೆ ಎಂದು ಹೇಳಕೂಡದು. ತಮೇವಂ ಎನ್ನುವ ಶ್ರುತಿಯಲ್ಲಿ ಮೋಕ್ಷಸಾಧನಜ್ಞಾನವಿಷಯತ್ವವನ್ನು ಹೇಳಿದುದರಿಂದ ವಿಷ್ಣುವಿಗೆ ಪರವಿದ್ಯಾವಿಷಯತ್ವವು ಹೇಳಲ್ಪಟ್ಟಿದೆ. ಮೋಕ್ಷಸಾಧನವಿದ್ಯೆಯೇ ಪರವಿದ್ಯಾ ಎನ್ನಿಸುತ್ತದೆ. (೨) ತತ್ಕರ್ಮ ಎನ್ನುವ ಸ್ಮೃತಿಯಲ್ಲಿಯೂ ವಿಷ್ಣುವಿಗೆ ಪರವಿದ್ಯಾವಿಷಯತ್ವವು ಹೇಳಲ್ಪಡುತ್ತದೆ. (೩.) ದ್ವೇ ವಿದ್ಯೇ ವೇದಿತವ್ಯೇ ಎನ್ನುವಲ್ಲಿಯೂ ವಿಷ್ಣುವಿಗೆ ಪರವಿದ್ಯಾವಿಷಯತ್ವವು ಹೇಳಲ್ಪಡುತ್ತದೆ. (೪) ಹೇಗೆ ಸಕಾಮತ್ವ ನಿಷ್ಕಾಮತ್ವರೂಪಉಪಾಧಿಭೇದದಿಂದ ಒಂದೇ ಕರ್ಮವು ಪ್ರವೃತ್ತಕರ್ಮ, ನಿವೃತ್ತಕರ್ಮ ಎನ್ನಿಸುತ್ತದೋ, ಹಾಗೆಯೇ ವಿಷ್ಣುವಿಷಯಕತ್ವ ಕರ್ಮಾದಿವಿಷಯಕತ್ವರೂಪಉಪಾಧಿಭೇದದಿಂದ ಋಗಾದಿಗಳೇ ಪರವಿದ್ಯೆಯೆಂದು ಅಪರ ವಿದ್ಯೆಯೆಂದೂ ಎನ್ನಿಸಿಕೊಳ್ಳುತ್ತವೆ. ॥ ೨೧ ॥

**ಪೀಠಿಕೆ ॥** ಪ್ರಕೃತಿ ವಿರಿಂಚರಿಗೂ ಅದೃಶ್ಯತ್ವಾದಿಗುಣಗಳಿವೆ ಎಂದು ಹೇಳಿದ್ದನ್ನು ಪರವಿದ್ಯಾವಿಷಯತ್ವರೂಪವಾದ ಹೇತುವು ವಿಷ್ಣ್ವಿತರರಲ್ಲಿ ಇಲ್ಲದಿರುವುದರಿಂದ ನಿರಾಕರಿಸಿದಾಗ್ಯೂ ಪುನಃ ವಿಶೇಷಯುಕ್ತಿಯಿಂದ ನಿರಾಕರಿಸತಕ್ಕ ಸೂತ್ರವನ್ನು ಪಠನಮಾಡಿ ವ್ಯಾಖ್ಯಾನ ಮಾಡುತ್ತಾರೆ.

## ಸೂತ್ರ ॥ ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ ॥ ೨೨ ॥

ಸೂತ್ರಾರ್ಥ ॥ (ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನಿಗೆ ಯಃ ಸರ್ವಜ್ಞಃ ಎನ್ನುವ ವಾಕ್ಯದಲ್ಲಿ ವಿಶೇಷಣ ಭೇದವ್ಯಪದೇಶಾಭ್ಯಾಂ ಚ=ಸಾರ್ವಜ್ಞಾದಿ ವಿಶೇಷಣವನ್ನು ಹೇಳಿದ್ದರಿಂದಲೂ, (ತಸ್ಮಾತ್ ಎನ್ನುವ ವಾಕ್ಯದಲ್ಲಿ ವಿರಿಂಚನಿಗೆ ಆ ಅಕ್ಷರದಿಂದ) ಜನ್ಯತ್ವರೂಪವಾದ ಭೇದಕ ಧರ್ಮದ ಉಕ್ತಿಯಿಂದ ಭೇದವನ್ನು ಹೇಳಿದ್ದರಿಂದಲೂ ಇತರೌ = ಜಡಪ್ರಕೃತಿಯೂ ವಿರಿಂಚನೂ ಅದೃಶ್ಯತ್ವಾದಿ ಗುಣವುಳ್ಳವರು ಅಲ್ಲ.

**ಭಾಷ್ಯ ॥ ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ। (ಮು.೧.೧. ೧೦.) ಇತಿ ವಿಶೇಷಣಾನ್ನ ಪ್ರಕೃತಿಃ। ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ । (ಮು.೧.೧.೧೦.) ಇತಿ ಭೇದವ್ಯಪದೇಶಾನ್ನ ವಿರಿಂಚಃ ॥ ೮ ॥**

ಭಾಷ್ಯಾರ್ಥ ॥ ಯಾವಾತನು ಸರ್ವವಿಷಯಕ ಸಾಮಾನ್ಯಜ್ಞಾನವುಳ್ಳವನೋ, ಸರ್ವ ವಿಷಯಕ ವಿಶೇಷಜ್ಞಾನವುಳ್ಳವನೋ, ಯಾವಾತನ, ತಪಃ=ಆಲೋಚನಕ್ರಿಯೆಯು ಜ್ಞಾನಮಯಂ=

ಜ್ಞಾನಾತ್ಮಕವೇ. (ಸಂಶಯಾತ್ಮಕವಲ್ಲ) ಹೀಗೆ ಸಾರ್ವಜ್ಞಾದಿವಿಶೇಷಣವನ್ನು ಹೇಳಿದ್ದರಿಂದ ಜಡಪ್ರಕೃತಿಯು (ದೃಶ್ಯತ್ವಾದಿಗುಣಗಳುಳ್ಳದ್ದು) ನಃಅಲ್ಲ. ಆ ಅಕ್ಷರದೆಶೆಯಿಂದ ಚತುರ್ಮುಖಾಖ್ಯ ಬ್ರಹ್ಮನೂ ಶಬ್ದಪ್ರಪಂಚ, ಅರ್ಥಪ್ರಪಂಚ ಪೃಥಿವಿಯೂ ತದಭಿಮಾನಿದೇವತೆಗಳೂ ಹುಟ್ಟುತ್ತಾರೆ. ಹೀಗೆ ಜನ್ಯತ್ವರೂಪವಾದ ಭೇದಕಧರ್ಮವನ್ನು ಹೇಳುತ್ತಾ ಭೇದವನ್ನು ಹೇಳಿದುದರಿಂದ ಬ್ರಹ್ಮನೂ ಅಲ್ಲ.

ವಿಶೇಷಾಂಶ ॥ (೧) ಅಥರ್ವಣದಲ್ಲಿ ಯಃ ಸರ್ವಜ್ಞಃ ಸರ್ವವಿತ್ ಎನ್ನುವುದಕ್ಕಿಂತ ಮೊದಲಿನದ್ದಾದ ತಪಸಾ ಚೀಯತೇ ಬ್ರಹ್ಮ ಎನ್ನುವಲ್ಲಿ ಪರಬ್ರಹ್ಮನು ತಪಸ್ಸಿನಿಂದ ಸಂಬದ್ಧನಾಗುತ್ತಾನೆ ಎಂದು ಹೇಳಿದೆ. ಅಲ್ಲಿ ತಪಃ ಶಬ್ದಕ್ಕೆ ಆಲೋಚನವೆನ್ನುವ ಅರ್ಥವಿದ್ದುದರಿಂದ ಅಜ್ಞಾನವು ಪ್ರತೀತವಾಗಲು ಅದನ್ನು ನಿರಾಕರಿಸುವುದಕ್ಕಾಗಿ ಯಸ್ಯ ಜ್ಞಾನಮಯಂ ತಪಃ ಎನ್ನುವ ವಾಕ್ಯಾಂತರವು ಪ್ರವೃತ್ತವಾಗಿದೆ. ತಪಸ್ಸು ಸಂತಾಪಾತ್ಮಕವಾದುದಲ್ಲ. ಪೂರ್ಣಯಥಾರ್ಥಜ್ಞಾನಾತ್ಮಕವು. ಹೇಗೆ ಎಂದರೆ ಈಶ್ವರನು ಸರ್ವಜ್ಞನೂ ಆಪ್ತತಮನೂ ಆಗಿದ್ದಾನೆ ಎನ್ನುವುದನ್ನು ತೋರಿಸುವುದಕ್ಕಾಗಿ ಯಃ ಸರ್ವಜ್ಞಃ ಎನ್ನುವ ಪೂರ್ವವಾಕ್ಯವನ್ನು ಹೇಳಿದ್ದು. (೨) ಸರ್ವವಿತ್=ಸರ್ವವನ್ನು ಹೊಂದಿದವನು, ಸತ್ಯಕಾಮನು, ಅಥವಾ ಸರ್ವೋತ್ಪಾದಕನು. (೩) ತತ್ತ್ವಪ್ರದೀಪದಲ್ಲಿ ಆದರೂ ವಿದ ಸತ್ತಾಯಾಂ ಎನ್ನುವ ಧಾತುವ್ಯಾಖ್ಯಾನದಿಂದ ಸರ್ವತ್ರ ವಿದ್ಯತೇ ಎಂದು ಸರ್ವವಿತ್ ಎಂದು ಹೇಳಿರುವರು.

ಪೀಠಿಕೆ ॥ ಹಾಗಾದರೆ ವಿಷ್ಣುವಿಗೆ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರತ್ವವಿದೆ ಎನ್ನುವುದು ಯುಕ್ತವಲ್ಲ. ಏಕೆಂದರೆ ವಿಷ್ಣುವಿಗೆ ಅಕ್ಷರನಿಂದ ಪರತಃ ಪರತ್ವವನ್ನು ಹೇಳಿದೆ. ಎಂದರೆ— ವಿಶೇಷಣಭೇದವ್ಯಪದೇಶಾಭ್ಯಾಂ ಎನ್ನುವ ಸೂತ್ರಖಂಡಕ್ಕೆ ಅರ್ಥಾಂತರವನ್ನು ಹೇಳುತ್ತಾರೆ—

**ಭಾಷ್ಯ ॥ ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ । ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ ॥ ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಂ । ಹರಿಮೇವಾಖಿಲಗುಣಮಕ್ಷರತ್ರಯಮೀರಿತಂ ॥ ಇತಿ ಸ್ಕಾಂದೇ ॥ ತ್ರ್ಯಕ್ಷರಾಭಿಧಾನಾದಕ್ಷರಾತ್ ಪರತಃ ಪರ ಇತ್ಯಪಿ ವಿಶೇಷಣಮೇವ ॥ ೯ ॥**

ಭಾಷ್ಯಾರ್ಥ ॥ ಅಕ್ಷರದ ಮೂರು ಅಂದರೆ ಮೂರುವಿಧವಾದ ಅಕ್ಷರವು ಹೇಳಲ್ಪಟ್ಟಿದೆ. (ಮೂರು ಪ್ರಕಾರಗಳನ್ನೂ ವ್ಯಕ್ತಿನಿರ್ದೇಶಪೂರ್ವಕವಾಗಿ ತೋರಿಸುತ್ತಾರೆ) ಯಾವುದು ಅಪರಾಕ್ಷರವೋ ಅದು ಜಡರೂಪಿಯಾದ ಪ್ರಕೃತಿಯೇ. ಯಾವುದು ವಿಷ್ಣುವೇ ಆಶ್ರಯವಾಗಿ ಉಳ್ಳದ್ದೋ, ಉತ್ತಮವಾದುದೋ, ಪ್ರಕೃತಿರೂಪವೋ ಲಕ್ಷ್ಮೀರೂಪವು (ಎಂದುವ್ಯದ್ದರಿಂದ) ಕರೆಯಲ್ಪಟ್ಟಿದೋ, ಅದನ್ನು ಪರಾಕ್ಷರವನ್ನಾಗಿ (ಜ್ಞಾನಿಗಳು) ಹೇಳುತ್ತಾರೆ. ಯಾವುದು ಪರತಃ ಪರಾಕ್ಷರವೆಂದು ಹೇಳಲ್ಪಟ್ಟಿದೋ, ಅದನ್ನು ಜಡಪ್ರಕೃತಿಯಿಂದ ಉತ್ತಮವಾದ ಶ್ರೀತತ್ತ್ವದಿಂದ ಹೆಚ್ಚುಗುಣಗಳುಳ್ಳ ಶ್ರೀಹರಿಯನ್ನಾಗಿಯೇ ಹೇಳುತ್ತಾರೆ. ಹೀಗೆ ಸ್ಕಾಂದಪುರಾಣದಲ್ಲಿ ಅಕ್ಷರತ್ರೈವಿಧ್ಯವನ್ನು ಹೇಳಿದ್ದರಿಂದ ಅಕ್ಷರಾತ್ಪರತಃ ಪರಃ ಎನ್ನುವ ವಾಕ್ಯದಲ್ಲಿ ಹೇಳಲ್ಪಟ್ಟ ಅಕ್ಷರಾತ್ಪರತಃ ಪರತ್ವವೂ ಕೂಡ ವಿಷ್ಣುವಿಗೆ ವಿಶೇಷಣವೇ.

ವಿಶೇಷಾಂಶ ॥ (೧) ಸಾರ್ವಜ್ಞ ಮಾತ್ರ ವಿಶೇಷಣವಲ್ಲ. ಮತ್ತೆ ಅಕ್ಷರಾತ್ಪರತಃ ಪರತ್ವವೂ ಕೂಡ

ವಿಷ್ಣ್ವಾಖ್ಯಪ್ರಕೃತಾಕ್ಷರನಿಗೇನೇ ವಿಶೇಷಣವು. ಅದೃಶ್ಯತ್ವಾದಿಗುಣವುಳ್ಳ ಅಕ್ಷರವನ್ನು ಅವಧೀಕರಿಸಿಕೊಂಡು ಬೇರೆ ಯಾರಿಗೂ ಅಕ್ಷರಾತ್ಪರತಃ ಪರತ್ವವನ್ನು ಹೇಳಿದ್ದಲ್ಲ. ಅಕ್ಷರಶ್ರುತಿಗೆ ವಿಷ್ಣುವಿನಲ್ಲಿ ಅವಕಾಶವಿಲ್ಲದಿರುವುದು ಹೇಗೆ? ಅಕ್ಷರಶಬ್ದವಾಚ್ಯನಿಗೆ ಅಕ್ಷರಾತ್ಪರತಃ ಪರತ್ವವು ವಿರುದ್ಧವೆನ್ನಕೂಡದು. ಅಪರಂ ಎನ್ನುವ ಸ್ಕಾಂದವಾಕ್ಯದಲ್ಲಿ ಅಕ್ಷರತ್ರಯವನ್ನು ಹೇಳಿದ್ದರಿಂದ ಈ ಅಕ್ಷರನಿಗೆ ಇತರಾಕ್ಷರಗಳಿಂದ (ಜಡ ಪ್ರಕೃತಿಯಿಂದ) ಉತ್ತಮವಾದ ಶ್ರೀತತ್ವದಿಂದ ಪರತ್ವವು ಕೂಡುತ್ತದೆ. (೨) ಪ್ರಮೇಯದೀಪದಲ್ಲಿ ಆದರೂ ಅಕ್ಷರಾತ್=ಶ್ರೀ ತತ್ವದಿಂದ, ಪರತಃ ಪರಃ=ಅತ್ಯುತ್ತಮನು ಎಂದು ಶ್ರುತ್ಯರ್ಥವನ್ನು ಹೇಳಿದ್ದಾರೆ. ಇದರಿಂದ ಅಕ್ಷರಾತ್ಪರತಃ ಪರಃ ಎನ್ನುವುದೂ ಅವನಿಗೇನೇ ವಿಶೇಷಣವು. ಇತರರಿಗೆ ಅಲ್ಲ. ಅಕ್ಷರಾತ್ಪರತಃ ಪರತ್ವವು ವಿರುದ್ಧವೆಂದು ಹೇಳಕೂಡದು. ಅಕ್ಷರತ್ರಯಮೀರಿತಂ ಎಂದು ಅಕ್ಷರಗಳಿಗೆ ಅವಾಂತರ ಭೇದವನ್ನು ಹೇಳಿದುದರಿಂದ ಪಾಂಡುಪುತ್ರನಾದ ಅರ್ಜುನನಿಗೆ ಸ್ವಾಧಮಕಾರ್ತವೀರ್ಯಾರ್ಜುನಾದಿಗಳಿಂದ ಪರತ್ವವು ಇದ್ದಂತೆಯೇ ಅಕ್ಷರಾಂತರದಿಂದ ಈ ಅಕ್ಷರನಿಗೆ ಪರತ್ವವು ಕೂಡುತ್ತದೆ, ಹೀಗೆ ಸೂತ್ರಖಂಡಕ್ಕೆ ಅರ್ಥಾಂತರವು ಉಕ್ತವಾಯಿತು.

ಪೀಠಿಕೆ ॥ ಹಾಗಾದರೆ ಅನ್ಯಮೀಶಂ ಎಂದು ಈಶಶಬ್ದವು ಶ್ರುತವಾದ ಪ್ರಯುಕ್ತ ರುದ್ರನು ಅದೃಶ್ಯತ್ವಾದಿಗುಣಗಳುಳ್ಳವನು ಏಕೆ ಆಗಲಾರನು ಎನ್ನುವ ಶಂಕೆಗೆ ಉತ್ತರರೂಪವಾಗಿ ಭೇದವ್ಯಪದೇಶಾನ್ನೇತರಃ ಎನ್ನುವ ಸೂತ್ರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ★ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತ ಶೋಕಃ (ಮು.೩.೧.೨.) ಇತಿ ಭೇದವ್ಯಪದೇಶಾದೀಶಪದ(ಶಬ್ದ)ಪ್ರಾಪ್ತೋऽಪಿ ನ ರುದ್ರಃ ॥ ೨೨ ॥ ೧೦ ॥**

ಭಾಷ್ಯಾರ್ಥ ॥ ಅಪಿ=ಯದ್ಯಪಿ, ರುದ್ರೋऽಪಿ=ರುದ್ರನೂ ಕೂಡ, ಈಶಪದಪ್ರಾಪ್ತಃ= ಈಶಶಬ್ದದಿಂದ (ಅದೃಶ್ಯತ್ವಾದಿ ಗುಣಗಳುಳ್ಳವನೆಂದು) ಆಪಾತತಃ ಇತಿ=ಜುಷ್ಟಂ ಎನ್ನುವ ವಾಕ್ಯದಲ್ಲಿ ಪ್ರವೃತ್ತನಾದ ವಿಷ್ಣ್ವಾಖ್ಯಅಕ್ಷರನಿಗೆ, ಭೇದವ್ಯಪದೇಶಾದಪಿ=ಹಿಂದೆ ಹೇಳಿದ ಹೇತುವಿನಿಂದ ಮಾತ್ರವಲ್ಲ, ಮತ್ತೆ ಈಶಶಬ್ದವಾಚ್ಯನಾದ ರುದ್ರನಿಂದ ಭೇದವನ್ನು ಹೇಳಿದ್ದರಿಂದಲೂ, ರುದ್ರಃ=ರುದ್ರನು, ನ=ಅದೃಶ್ಯತ್ವಾದಿ ಗುಣಗಳುಳ್ಳವನು ಅಲ್ಲ.

ವಿಶೇಷಾಂಶ ॥ ಇತರಶಬ್ದಕ್ಕೆ ಜಡಪ್ರಕೃತಿ, ವಿರಿಂಚ ರುದ್ರಪರತ್ವವಿದ್ದರೆ ದ್ವಿವಚನವು ಕೂಡಲಿಕ್ಕಿಲ್ಲವೆಂದು ಹೇಳಕೂಡದು. ವಿರಿಂಚ ರುದ್ರರು ಚೇತನರಾದುದರಿಂದ ಅವರಿಬ್ಬರನ್ನು ಏಕೀಕರಿಸಿಕೊಂಡು ಪ್ರವೃತ್ತವಾಗಿದೆ. ॥ ೨೨ ॥

ಪೀಠಿಕೆ ॥ ಯುಕ್ತ್ಯಂತರದಿಂದ ವಿಷ್ಣುವೇ ಅದೃಶ್ಯತ್ವಾದಿಗುಣಗಳುಳ್ಳವನ್ನು ಎಂದು ಸಾಧಿಸತಕ್ಕ ಸೂತ್ರವನ್ನು ಹೇಳಿ ಅಲ್ಲಿ ಹೇಳಿದ ಶ್ರುತಿಯನ್ನೇ ಉದಾಹರಿಸುತ್ತಾರೆ—

**ಸೂತ್ರ ॥ ಓಂ ರೂಪೋಪನ್ಯಾಸಾಚ್ಚ ಓಂ ॥ ೨೩ ॥**

★ ಈ ಶ್ರುತಿಯು ಆನಂದಮಯಾಧಿಕರಣದಲ್ಲಿ ಪು. ೧೦೧ರಲ್ಲಿ ವ್ಯಾಖ್ಯಾತವಾಗಿದೆ.

ಸೂತ್ರಾರ್ಥ ॥ (ಹಿಂದೆ ಹೇಳಿದ ಧರ್ಮಗಳಿಂದ ಮಾತ್ರ ಅಲ್ಲ ಮತ್ತೆ ಅದೃಶ್ಯತ್ವಾದಿ ಗುಣಗಳುಳ್ಳವನಿಗೆ ಯದಾ ಎನ್ನುವ ಶ್ರುತಿಯಲ್ಲಿ) ರೂಪೋಪನ್ಯಾಸಾಚ್ಚ= ಶುದ್ಧವಾದ ರುಗ್ಮರೂಪವನ್ನು ಹೇಳಿದ್ದರಿಂದಲೂ (ಅದೃಶ್ಯತ್ವಾದಿ ಗುಣಗಳುಳ್ಳವನು ವಿಷ್ಣುವೇ)

**ಭಾಷ್ಯ ॥ ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ** (ಮು.೩..೧.೩.) । ಇತಿ ॥ ೧೧ ॥

ಭಾಷ್ಯಾರ್ಥ ॥ (ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ಎನ್ನುವ ವಾಕ್ಯಶೇಷದಿಂದ ಅನ್ವಯವು) ಶುದ್ಧವಾದ ಸುವರ್ಣದಂತೆ ವರ್ಣವುಳ್ಳ, ಹಿರಣ್ಯಗರ್ಭನಿಗೆ ಕಾರಣೀಭೂತನೂ, ಜಗತ್ತಿಗೆ ಕರ್ತನೂ, ಪೂರ್ಣಷಡ್ಗುಣಗಳುಳ್ಳವನೂ, ತನಗೆ ನಿಯಾಮಕನೂ ಆದ ಶ್ರೀ ವಿಷ್ಣುವನ್ನು ಜೀವನು ಯಾವಾಗ ನೋಡುತ್ತಾನೋ, ಆಗ ಜೀವನ್ಮುಕ್ತನು ಅಪ್ರಾರಬ್ಧಗಳಾದ ಅನಿಷ್ಟ ಪುಣ್ಯಗಳನ್ನೂ ನಿಖಿಲ ಪಾಪಗಳನ್ನೂ ಬಿಟ್ಟು (ನಿರಂಜನಃ) ಜ್ಞಾನವು ಹುಟ್ಟಿದ ಮೇಲೆ ವಿಕರ್ಮಗಳಿಂದ ಮಾಡಲ್ಪಟ್ಟ ಅಶುಚಿತ್ವಮೊದಲಾದ ದೋಷಗಳಿಂದ ವಿರಹಿತನಾಗಿ ಅಥವಾ **ಅಂಜನಾಖ್ಯ ಅವಿದ್ಯಾರಹಿತಃ** ಎಂದು ಸುಧಾದಲ್ಲಿ ಹೇಳಿದ್ದರಿಂದ ಅಜ್ಞಾನರಹಿತನಾಗಿ (ವಿಷ್ಣುವಿನಿಂದ) ಸ್ವಯೋಗ್ಯ ಪೂರ್ಣಾನಂದತ್ವಾದಿಸಾಮ್ಯವನ್ನು ಅಥವಾ ನಿರ್ದುಃಖತ್ವಾದಿಸಾಮ್ಯವನ್ನು ಹೊಂದುತ್ತಾನೆ. ಎಂದು ಶ್ರುತ್ಯರ್ಥವು.

ಪೀಠಿಕೆ ॥ ಹಾಗಾದರೆ ಬ್ರಹ್ಮಾದಿಗಳಿಗೂ ರೂಪವಿದ್ದ ಪ್ರಯುಕ್ತ ರೂಪೋಪನ್ಯಾಸದಿಂದ ವಿಷ್ಣುವೇ ಎಂದು ನಿಶ್ಚಯವು ಹೇಗೆ ಆಗುತ್ತದೆ ಎಂದರೆ—

**ಭಾಷ್ಯ ॥ ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ । ಸ ಮುನಿರ್ಭೂತ್ವಾ ಸಮಚಿಂತಯತ್ । ತತ ಏತೇ ವ್ಯಜಾಯಂತ। ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮೋ ವರುಣರುದ್ರೇಂದ್ರಾ ಇತಿ। ತಸ್ಯ ಹೈತಸ್ಯ ಪರಮಸ್ಯ ನಾರಾಯಣಸ್ಯ ಚತ್ವಾರಿ ರೂಪಾಣಿ ಶುಕ್ಲಂ ರಕ್ತಂ ರೌಗ್ಮಂ ಕೃಷ್ಣಂ ಇತಿ। ಸ ಏತಾನ್ಯೇತೇಭ್ಯೋವ್ಯ(ಭ್ಯ)ಚೀಕ್ಲೃಪತ್ । ಏಮಿಶ್ರಾಣಿ ವ್ಯಮಿಶ್ರಯತ್** ॥ ೧೨ ॥

ಭಾಷ್ಯಾರ್ಥ ॥ (ಪ್ರಲಯಕಾಲದಲ್ಲಿ) ನಾರಾಯಣನೊಬ್ಬನೇ ಸರ್ವಸ್ವತಂತ್ರನಾಗಿ ಇದ್ದನು. ಚತುರ್ಮುಖನೂ ರುದ್ರನೂ (ತಂತಮ್ಮ ವ್ಯಾಪಾರಗಳನ್ನು ಮಾಡಿಕೊಂಡು ಇರಲಿಲ್ಲ) ಆ ವಿಷ್ಣುವು ಮನನಶೀಲನು ಅಥವಾ ಮೌನಿಯು ಆಗಿ ಇವರು ಹುಟ್ಟಲಿ ಎಂದು ಧ್ಯಾನರೂಪವಾದ ಚಿಂತೆಯನ್ನು ಮಾಡಿದನು. ಆತನ ಚಿಂತೆಯಿಂದ ಇವರು ಹುಟ್ಟಿದರು. (ಯಾರೆಂದರೆ) (ವಿಶ್ವಃ) ವಾಯುದೇವರು, ಬ್ರಹ್ಮದೇವರು, ಅಗ್ನಿಯು, ಯಮನು, ವರುಣನು, ರುದ್ರ, ಇಂದ್ರರು ಎಂದು. ಶ್ರುತ್ಯಾದಿ ಪ್ರಸಿದ್ಧನಾದ, ಸರ್ವಜೀವರ ಶರೀರದಲ್ಲಿರತಕ್ಕ ಸರ್ವೋತ್ತಮನಾದ ನಾರಾಯಣನಿಗೆ ಶುಕ್ಲ ರಕ್ತ ರೌಗ್ಮ ಕೃಷ್ಣ ಎನ್ನುವ ನಾಲ್ಕು ಶುದ್ಧವರ್ಣಗಳು ಇರುತ್ತವೆ. ನಾರಾಯಣನು ಮೊದಲೇ ತನ್ನಿಂದ ಮಿಶ್ರೀಕೃತಗಳಾದ ರೂಪಗಳನ್ನು ವಾಯುಮೊದಲಾದ ದೇವತೆಗಳಿಗೋಸ್ಕರ ಕ್ಲೃಪ್ತಗಳನ್ನಾಗಿ ಮಾಡಿದನು. ವಿಮಿಶ್ರ

ಗಳಾದವುಗಳನ್ನು ಪುನರಪಿ ಮಾನುಷಾದಿಗಳಲ್ಲಿ ವಿಶೇಷವಾಗಿ ಮಿಶ್ರೀಕರಿಸಿದನು. (ಶುದ್ಧರೂಪ ಗಳನ್ನಾದರೂ ತನಗೇನೇ ಇಟ್ಟುಕೊಂಡನು.)

**ಭಾಷ್ಯ ॥ ಅತ ಏತಾದೃಗೇತದ್ರೂಪಮಿತಿ ತಸ್ಯೈವ ಹಿ ರೂಪಾಣ್ಯಭಿಧೀಯಂತೇ**

**॥ ೧೩ ॥ ೨೩ ॥**

**ಭಾಷ್ಯಾರ್ಥ ॥** ಅನ್ಯತ್ರ ಮಿಶ್ರಿಕರಿಸಿದ ಪ್ರಯುಕ್ತ ವಿಷ್ಣುವಿನ ರೂಪವು ಶುದ್ಧವಾದ ಶುಕ್ಲಾದಿ ಸ್ವರೂಪವೇ. (ವಾಯು ಮೊದಲಾದವರ ರೂಪದಂತೆ ಮಿಶ್ರವಾದುದಲ್ಲ) ಹಿ=ಯಾವ ಕಾರಣದಿಂದ, ಇತಿ=ಉದಾಹೃತವಾಕ್ಯದಿಂದ, ರೂಪಾಣಿ=ಶುದ್ಧರೌಗ್ಮಾದಿರೂಪಗಳು, ತಸ್ಯೈವ=ವಿಷ್ಣುವಿಗೇನೇ, ಹೇಳಲ್ಪಡುತ್ತವೋ, (ಇತರರಿಗೆ ಹೇಳಲ್ಪಡುವುದಿಲ್ಲ. ಆದಪ್ರಯುಕ್ತ ಅಪ್ರಯೋಜಕತ್ವವನ್ನು ಶಂಕಿಸ ಕೂಡದು.)

**ವಿಶೇಷಾಂಶ ॥** (೧) ಯದ್ಯಪಿ ಇಲ್ಲಿ ಪ್ರಕೃತೋಪಯುಕ್ತವಾದ ಪ್ರಯುಕ್ತ ತಸ್ಯ ಹೈತಸ್ಯ ಇತ್ಯಾದಿಗಳನ್ನೇ ಉದಾಹರಿಸಬೇಕಿತ್ತು, ಏಕೋ ನಾರಾಯಣಃ ಇತ್ಯಾದಿಗಳನ್ನು ಉದಾಹರಿಸಬೇಕಾಗಿಲ್ಲ, ಆದಾಗ್ಯೂ ಏತೇಭ್ಯಃ ಎನ್ನುವ ಅರ್ಥದಲ್ಲಿ ವಿಶ್ವಾಸವು ಹುಟ್ಟುವುದಕ್ಕಾಗಿ ಆ ಅಂಶವನ್ನುದಾಹರಿಸಿದ್ದಾರೆ. (೨) ಸೂತ್ರದಲ್ಲಿ ಸಾಮಾನ್ಯತಃ ಹೇಳಿದರೂ ರೂಪಶಬ್ದವು ಶುದ್ಧರೂಪಪರವು. ಬೇರೆಕಡೆಗಳಲ್ಲಿ ಶುದ್ಧರೂಪವಿಲ್ಲ.

## ಮಾಯಾವಾದಿರೀತ್ಯಾ

**ವಿಚಾರ ॥** (೧) ಅದೃಶ್ಯತ್ವಾದಿಗುಣಗಳುಳ್ಳ ಭೂತಯೋನಿಯು (ಸರ್ವಪದಾರ್ಥಗಳಿಗೆ ಕಾರಣಭೂತವಾದುದು) ೧ ಪ್ರಧಾನವೋ, ೨ ಜೀವನೋ, ೩..ಪರಮಾತ್ಮನೋ ಎಂದು ಸಂದೇಹ ಬಂದರೆ— ಚಿನ್ನದ ಪರಿಣಾಮವಾದ ಒಡ್ಯಾಣಮೊದಲಾದವುಗಳಲ್ಲಿ ಚಿನ್ನದ ಸಾರೂಪ್ಯವು ಕಂಡದ್ದರಿಂದಲೂ, ರಜ್ಜುವಿವರ್ತ (ಹಗ್ಗದಲ್ಲಿ ಆರೋಪಿತ)ವಾದ ಸರ್ಪಾದಿಗಳಲ್ಲಿ ರಜ್ಜು ಸಾರೂಪ್ಯವು ಕಂಡದ್ದರಿಂದಲೂ ಜಡಭೂತವಾದ ಜಗತ್ತಿನಲ್ಲಿ ಚೇತನನಾದ ಬ್ರಹ್ಮನ ಸಾರೂಪ್ಯವು ಕೂಡದೆ ಇರುವುದರಿಂದ ಬ್ರಹ್ಮಪರಿಣಾಮವೂ ವಿವರ್ತತ್ವವೂ ಕೂಡದೆ ಇರುವುದರಿಂದ **ಅಕ್ಷರಾತ್ಸಂಭವತೀಹ ವಿಶ್ವಂ** ಎನ್ನುವ ಶ್ರುತಿಯಲ್ಲಿ ಅಚೇತನವಾದ ಪ್ರಧಾನವೇ ಜಗತ್ತಿಗೆ ಉಪಾದಾನಕಾರಣವಾಗಿ ಹೇಳಲ್ಪಡುತ್ತದೆ. (೨) ಅಥವಾ ಭೂತಯೋನಿಃ=ಸರ್ವ ವಸ್ತುಗಳಿಗೆ ನಿಮಿತ್ತಕಾರಣನು ಎಂದು ಯೋನಿಶಬ್ದಕ್ಕೆ ನಿಮಿತ್ತಕಾರಣನೆಂದು ಅರ್ಥ ಹೇಳುವುದಾದರೆ ಜೀವನೇ ಅದೃಷ್ಟದ್ವಾರಾ ಜಗತ್ತಿಗೆ ಕಾರಣನೆಂದು ಹೇಳಲ್ಪಡುತ್ತಾನೆ. ಹೀಗೆ ಮಾಯಾವಾದಿಗಳು ಪೂರ್ವಪಕ್ಷಮಾಡಿಕೊಂಡು ಬ್ರಹ್ಮನೇ ಎಂದು ಸಿದ್ಧಾಂತ ಮಾಡಿರುವರು. ಹೇಗೆಂದರೆ— ಜಗತ್ತು ಬ್ರಹ್ಮನ ವಿಕಾರವಲ್ಲ, ಬ್ರಹ್ಮವಿವರ್ತವು. ರಜ್ಜು (ಹಗ್ಗ)ವಿನಲ್ಲಿ ಸರ್ಪವು ಹೇಗೆ ಆರೋಪಿತವೋ, ಹಾಗೆಯೇ ಜಗತ್ತೂ ಬ್ರಹ್ಮನಲ್ಲಿ ಆರೋಪಿತವು. ಅಧಿಷ್ಠಾನಕ್ಕೂ ಅಧ್ಯಸ್ಯಮಾನವಾದ ವಸ್ತುವಿಗೂ ಸಾರೂಪ್ಯವು ಬೇಕೆನ್ನುವ ನಿಯಮವಿಲ್ಲ. ವಿವರ್ತಸ್ತು **ಪ್ರಪಂಚೋಽಯಂ ಬ್ರಹ್ಮಣೋಽಪರಿಣಾಮಿನಃ। ಅನಾದಿವಾಸನೋದ್ಭೂತೋ ನ ಸಾರೂಪ್ಯಮಪೇಕ್ಷತೇ॥**

ಈ ಜಗತ್ತು ಅಪರಿಣಾಮಿಯಾದ ಬ್ರಹ್ಮನಲ್ಲಿ ಆರೋಪಿತವು. ಆದಕಾರಣ ಸರ್ವವಸ್ತುಗಳಿಗೆ ಕಾರಣೀಭೂತನಾದ ಅಕ್ಷರನನ್ನು ಉಪಕ್ರಮಿಸಿಕೊಂಡು ವಾಕ್ಯಶೇಷದಲ್ಲಿ **ಯಃ ಸರ್ವಜ್ಞಃ ಸರ್ವವಿತ್ ಯಸ್ಯ ಜ್ಞಾನಮಯಂ ತಪಃ। ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ॥** ಎಂದು ಸರ್ವಜ್ಞನಾದವನೇ ಜಗತ್ತಿಗೆ ಕಾರಣೀಭೂತನೆಂದು ಅವಗತವಾಗುವುದರಿಂದ ಜಡವಾದ ಪ್ರಧಾನವು ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನು ಶುದ್ಧಬ್ರಹ್ಮನೇ. ಪ್ರಧಾನವಾಗಲೀ ಜೀವಾತ್ಮನಾಗಲೀ ಅಲ್ಲ ಎಂದು ಸಿದ್ಧಾಂತ ಮಾಡಿರುವರು. ಇದು ಅಯುಕ್ತವು. ಏಕೆಂದರೆ— ನಿರ್ವಿಶೇಷಬ್ರಹ್ಮ ಪರವಾದರೆ ಸವಿಶೇಷ ಬ್ರಹ್ಮನನ್ನು ಪ್ರತಿಪಾದಿಸುವ ೨ನೇಪಾದದಲ್ಲಿ ಸಂಗತಿಯೇ ಇಲ್ಲದೆ ಹೋಗಬೇಕಾಗುವುದು. ಅಂದರೆ ಮೂರನೇ ಪಾದದಲ್ಲಿ ಸೇರಿಸಬೇಕಿತ್ತು. ಮತ್ತು ಅವರ ಮತದಲ್ಲಿ **ತದನನ್ಯತ್ವಮಾರಂಭಣಶಬ್ದಾದಿಭ್ಯಃ** ಇತ್ಯಾದಿಗಳಲ್ಲಿ (ಪ್ರಕೃತ್ಯಧಿಕರಣ ಮೊದಲಾದವುಗಳಲ್ಲಿ) ಜಗತ್ತಿಗೆ ಬ್ರಹ್ಮವಿವರ್ತತ್ವವನ್ನು ಹೇಳಿರುವುದರಿಂದ ಜಗತ್ತು ಬ್ರಹ್ಮವಿಕಾರವೆಂದು ಆಶ್ರಯಿಸಿಕೊಂಡು ಪೂರ್ವಪಕ್ಷವೇ ಉಂಟಾಗದೇ ಹೋಗುವುದು. ಮತ್ತು ಜಗತ್ತು ಬ್ರಹ್ಮವಿವರ್ತತ್ವವು ಎಂದು ಹೇಳುವುದಾದರೆ ಶ್ರುತಿಯಲ್ಲಿ ರಜ್ಜುಸರ್ಪಾದಿದೃಷ್ಟಾಂತವನ್ನೇ ಹೇಳಬೇಕಿತ್ತು. **ಯಥೋರ್ಣನಾಭಿಃ ಸೃಜತೇ** ಎಂದು ಊರ್ಣನಾಭ್ಯಾದಿ ದೃಷ್ಟಾಂತವನ್ನು ಹೇಳಿದ್ದು ಕೂಡದೆ ಹೋಗಬೇಕಾಗುವುದು. ಮತ್ತು ವಿವರ್ತಪರತ್ವವಿದ್ದರೆ ಶ್ರುತಿಗೆ ಅಪ್ರಾಮಾಣ್ಯವೇ ಬರಬೇಕಾಗುವುದು. ಅಲ್ಲದೆ, **ಯದ್ಭೂತಯೋನಿಂ** ಎನ್ನುವಲ್ಲಿ ಯೋನಿಪದಾದಿಗಳೂ ಕೂಡದೆ ಹೋಗುವುದು. ಸರ್ಪಾರೋಪಾಧಿಷ್ಠಾನವಾದ ರಜ್ಜುವು ಸರ್ಪಕ್ಕೆ ಯೋನಿಯೆಂದು ಅನ್ನಿಸಿಕೊಳ್ಳುವುದಿಲ್ಲ. ಸರ್ಪವು ರಜ್ಜುವಿನಿಂದ ಹುಟ್ಟಿದ್ದು ಎಂದೂ ಹೇಳುವುದಿಲ್ಲ. (೨) ಮತ್ತು ೨ನೇ ಸೂತ್ರದಲ್ಲಿ **ದಿವ್ಯೋಹ್ಯಮೂರ್ತಃ** ಎಂದು ದಿವ್ಯತ್ವಾದಿವಿಶೇಷಣವು ಬ್ರಹ್ಮನಿಗೆ ಜೀವನಿಂದ ಭೇದಸಾಧಕವು ಎಂದು ಹೇಳಿರುತ್ತಾರೆ. ಇದೂ ಅಯುಕ್ತವು. ಏಕೆಂದರೆ ಅವರ ಮತದಲ್ಲಿ ಮುಮುಕ್ಷುವಿಗೆ ಭೇದಭ್ರಾಂತಿಯನ್ನು ನಿರಾಕರಿಸುವುದಕ್ಕಾಗಿ ಅಭೇದವನ್ನೇ ಹೇಳಬೇಕಾಗಿರುವುದರಿಂದ ಸೂತ್ರದಲ್ಲಿ ಭೇದ ಭೇದಕಗಳ ಉಕ್ತಿಯೇ ಕೂಡದೆಹೋಗುವುದು. (೩.) ಮತ್ತು ೩.ನೇ ಸೂತ್ರದಲ್ಲಿ **ಪುರುಷ ಏವೇದಂ ವಿಶ್ವಂ** ಎಂದು ಸರ್ವಾತ್ಮಕತ್ವವು ರೂಪಶಬ್ದಾರ್ಥವು ಎಂದು ಹೇಳಿರುವರು. ಅದೂ ಅಯುಕ್ತವು. ನಾವು ಹೇಳಿದ ರುಗ್ವರ್ಣದಲ್ಲಿ ರೂಪಶಬ್ದಪ್ರಯೋಗವಿದ್ದಂತೆಯೇ ಸರ್ವಾತ್ಮಕತ್ವದಲ್ಲಿ ರೂಪಶಬ್ದಪ್ರಯೋಗವು ಎಲ್ಲಿಯೂ ಇಲ್ಲ. (೪) ಅದೃಶ್ಯತ್ವಾದಿಗುಣಕಃ ಎಂದು ಗುಣಗಳನ್ನು ಹೇಳಿದ್ದರಿಂದಲೂ ವಿಶೇಷಣಭೇದವ್ಯಪದೇಶಾಭ್ಯಾಂ ಎನ್ನುವಲ್ಲಿ ಜೀವಾದಿಗಳಿಂದ ಭೇದವನ್ನು ಹೇಳಿದ್ದರಿಂದಲೂ ಪರರಿಂದ ಅಂಗೀಕೃತಗಳಾದ ನಿರ್ಗುಣತ್ವ ಐಕ್ಯಗಳಿಗೆ ಈ ಸೂತ್ರಗಳು ಪ್ರತಿಕೂಲಗಳೇ ಆಗಿವೆ. ಆದಕಾರಣ ಅವರ ಮತವು ಅತ್ಯಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ— (1) **ಅಥ ಪರಾ** ಇತ್ಯಾದಿ ವಾಕ್ಯದಲ್ಲಿ ಪ್ರಧಾನಪುರುಷರು ಪ್ರತಿಪಾದ್ಯ ರಾಗುತ್ತಾರೋ ಪರಮಾತ್ಮನೋ ಎಂದು ಸಂದೇಹ ಬಂದರೆ **ಯತ್ತದದ್ರೇಶ್ಯಂ** ಇತ್ಯಾದಿಗಳಿಂದ ಪೃಥಿವೀ ಮೊದಲಾದ ಅಚೇತನಗಳಲ್ಲಿರತಕ್ಕ ದೃಶ್ಯತ್ವಾದಿಗಳನ್ನು ಪ್ರತಿಷೇಧ ಮಾಡಿದ್ದರಿಂದ ತಜ್ಜಾತೀಯವಾದ ಅಚೇತನವಾದ ಪ್ರಧಾನವೇ ಅದೃಶ್ಯತ್ವಾದಿಗುಣಗಳುಳ್ಳ, ಸರ್ವಭೂತಗಳಿಗೂ ಕಾರಣವಾದ ಅಕ್ಷರವು. **ಅಕ್ಷರಾತ್ಪರತಃ**

ಪರಃ ಎನ್ನುವುವಲ್ಲಿದ್ದ ಪರತ್ವವಾದರೂ ಪ್ರಧಾನಕ್ಕೆ ಅಧಿಷ್ಠಾನಆದ ಜೀವನಿಗೆ. ತಥಾಚ ಪ್ರಕೃತಿ ಜೀವರೇ ಪ್ರತಿಪಾದ್ಯರು ಎಂದು ಪೂರ್ವಪಕ್ಷಮಾಡಿಕೊಂಡು, (ಅದೃಶ್ಯತ್ವಾದಿಗುಣಕತ್ವವೂ ಅಕ್ಷರಾತ್ಪರತಃ ಪರತ್ವವೂ ಎರಡೂ ಪರಮಾತ್ಮನಿಗೇನೇ ಎಂದು ಸಿದ್ಧಾಂತಮಾಡಿರುವರು.) ಹೇಗೆಂದರೆ—ಪ್ರಕೃತಿ ಪುರುಷರಲ್ಲಿ ಅಸಂಭಾವಿತವಾದ ಸಾರ್ವಜ್ಞಾದಿ ಧರ್ಮವನ್ನು ಹೇಳಿದ್ದರಿಂದಲೂ, (ಅಕ್ಷರಾತ್=) ಅವ್ಯಾಕೃತವಾದ ಭೂತಸೂಕ್ಷ್ಮದಿಂದ (ಪರತಃ=)ಪರವಾದ ಸಮಷ್ಟಿಪುರುಷನ ದೆಶೆಯಿಂದಲೂ (ಪರಃ=) ಪರನು ಎಂದು ಭೇದವನ್ನು ಹೇಳಿದ್ದರಿಂದಲೂ, ಅಗ್ನಿರ್ಮೂರ್ಧಾ ಇತ್ಯಾದಿಗಳಿಂದ ಜಗದ್ರೂಪವನ್ನು ಹೇಳಿದ್ದರಿಂದಲೂ, ಪ್ರಕೃತಿಜೀವರು ಹೇಳಲ್ಪಡುವುದಿಲ್ಲ, ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನು ಪರಮಾತ್ಮನೇ ಹೇಳಲ್ಪಡುತ್ತಾನೆ, ಎಂದು ಹೇಳಿರುವರು. ಇದು ಅಯುಕ್ತವು. ಏಕೆಂದರೆ— **ದಿವ್ಯೋ ಹ್ಯಮೂರ್ತ ಪುರುಷಃಸ ಬಾಹ್ಯಾಭ್ಯಂತರೋ ಹ್ಯಜಃ । ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ** ಎನ್ನುವ ಶ್ರುತಿಯಲ್ಲಿ ಅಕ್ಷರಾತ್ಪರತಃ ಪರನಲ್ಲಿ ಅಮೂರ್ತತ್ವ, ವ್ಯಾಪ್ಯತ್ವ, ಅಪ್ರಾಣತ್ವಾದಿಗಳು ತೋರುವುದರಿಂದ ಜೀವನೆನ್ನುವ ಶಂಕೆಯು ಬರಲಾರದು. ಮತ್ತು ನಿರವಕಾಶವಾದ ಉಪಾದಾನಕಾರಣತ್ವಾದಿಗಳಿಂದ ಪ್ರಧಾನವೇ ಅಕ್ಷರವು ಎನ್ನುವ ಪೂರ್ವಪಕ್ಷವು ಕೂಡುವಾಗ ಸಾವಕಾಶವಾದ ದೃಶ್ಯತ್ವಾದಿಗಳ ನಿಷೇಧದಿಂದ ನಿಯಮೇನ ಅಚೇತನೋಪಸ್ಥಿತಿಯು ಬರಲಾರದು. ಆದಕಾರಣ ಅವರ ಪೂರ್ವಪಕ್ಷ ಸಿದ್ಧಾಂತಗಳೆರಡೂ ಅಯುಕ್ತವು.

## ಅಧಿಕರಣ ಸಾರಾಂಶ

(೧) ಅಥರ್ವಣದಲ್ಲಿ ದ್ವೇ ವಿದ್ಯೇ ವೇದಿತವ್ಯೇ ಎಂದುಪಕ್ರಮಿಸಿಕೊಂಡು **ಅಥ ಪರಾ ಯಯಾತದಕ್ಷರಮಧಿಗಮ್ಯತೇ, ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಂ** ಇತ್ಯಾದಿಗಳಿಂದ ಹೇಳಲ್ಪಟ್ಟ ಅದೃಶ್ಯತ್ವಾದಿ ಗುಣಗಳುಳ್ಳ, **ಅಕ್ಷರಾತ್ಸಂ** ಭವತೀಹ ವಿಶ್ವಂ ಎಂದು ಜಗತ್ತಿಗೆ ಕಾರಣವಾಗಿ ಶ್ರುತವಾದ ಅಕ್ಷರವು ಚಿತ್ಪ್ರಕೃತಿ, ಅಚಿತ್ಪ್ರಕೃತಿ, ಬ್ರಹ್ಮ ರುದ್ರರೋ, ಅಥವಾ ವಿಷ್ಣುವೋ ಎಂದು ಸಂದೇಹವು. ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರದಲ್ಲಿ **ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ** ಎಂದು ಪೃಥಿವ್ಯಾದಿ ದೃಷ್ಟಾಂತಪೂರ್ವಕವಾಗಿ **ತಥಾಽಕ್ಷರಾತ್ಸಂಭವತೀಹ ವಿಶ್ವಂ** ಎಂದು ಸರ್ವಜಗದುಪಾದಾನಕಾರಣತ್ವ ರೂಪಲಿಂಗದಿಂದ ಅದೃಶ್ಯತ್ವಾದಿಗುಣಗಳುಳ್ಳದ್ದು ಜಡಪ್ರಕೃತಿಯೇ ಎಂದು ಪೂರ್ವಪಕ್ಷವು. (೨) ಅಥವಾ **ಕೂಟಸ್ಥೋ ಽಕ್ಷರ ಉಚ್ಯತೇ** ಎನ್ನುವ ಸ್ಮೃತಿಯಲ್ಲಿ ಅಕ್ಷರಶಬ್ದಕ್ಕೆ ಚಿತ್ಪ್ರಕೃತಿಯಲ್ಲಿ (ಶ್ರೀ ತತ್ವದಲ್ಲಿ) ಪ್ರಯೋಗವಿದ್ದುದರಿಂದ, ಸರ್ವಕ್ಕೂ ಉಪಾದಾನಕಾರಣವಾದ ಜಡಪ್ರಕೃತಿಗೆ ಅಭಿಮಾನಿಯಾದುದ ರಿಂದ ಉಪಾದಾನ ಕಾರಣತ್ವವೂ ಕೂಡುವುದರಿಂದ ಚಿತ್ಪ್ರಕೃತಿಯೇ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರವು ಎಂದು ಪೂರ್ವಪಕ್ಷವು. (೩) ಅಥವಾ ಸ ಬ್ರಹ್ಮವಿದ್ಯಾಂ ಎಂದು ಉಪಕ್ರಮದಲ್ಲಿ ಬ್ರಹ್ಮಶಬ್ದವಿದ್ದುದರಿಂದ ಚತುರ್ಮುಖನೇ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನು ಎಂದು ಪೂರ್ವಪಕ್ಷವು. (೪) ಅಥವಾ **ಕರ್ತಾರಮೀಶಂ** ಎಂದು ಉತ್ತರತ್ರವು ಈಶಶಬ್ದವು ಶ್ರುತವಾದುದರಿಂದ ರುದ್ರನಾಗಲೀ ಅದೃಶ್ಯತ್ವಾದಿ ಗುಣಗಳುಳ್ಳವನು, ಎಂದು ಪೂರ್ವಪಕ್ಷವು. ಇಲ್ಲಿ ಅಕ್ಷರಾದಿಶಬ್ದಗಳು ವಿಷ್ಣುವಿನಲ್ಲಿಯೂ ಕೂಡಬಹುದು ಎಂದು ಹೇಳಕೂಡದು. **ಅಕ್ಷರಾತ್ಪರತಃ ಪರಃ** ಎನ್ನುವಲ್ಲಿ ಅಕ್ಷರವು ನಿಕೃಷ್ಟವಾಗಿ ಶ್ರುತವಾದುದರಿಂದ ಬ್ರಹ್ಮನು ಆಗಲಾರನು, ಎಂದು ಪೂರ್ವಪಕ್ಷವು ಬಂದರೆ— ವಿಷ್ಣುವೇ ಎಂದು ಸಿದ್ಧಾಂತ

ಮಾಡಿರುವರು. ಹೇಗೆಂದರೆ— **ಅಥ ಪರಾ ಯಯಾ ಸ ಹರಿರ್ವೇದಿತವ್ಯಃ ಸಾ ವಿದ್ಯಾ ತನ್ಮತಿರ್ಯಯಾ** ಇದು ಮೊದಲಾದ ಶ್ರುತಿಸ್ಮೃತಿಗಳಿಂದ ಪರವಿದ್ಯಾವಿಷಯತ್ವವು ವಿಷ್ಣುವಿನಲ್ಲಿ ಮಾತ್ರ ಇರತಕ್ಕುದು. **ಪ್ರವೃತ್ತಂ ಚ ನಿವೃತ್ತಂ ಚ ಯಥೈಕಂ ಕರ್ಮ ಕಥ್ಯತೇ। ಉಪಾಧಿಭೇದಾದ್ವಿದ್ಯಾಽಪಿ ತಥೈವೈಕಾ ಪರಾಽಪರಾ।** ಹೇಗೆ ಒಂದೇ ಕರ್ಮವು ಫಲಕಾಮನೆಯಿಂದ ಮಾಡಿದರ ಪ್ರವೃತ್ತಕರ್ಮವೆನಿಸುತ್ತದೋ, ಕಾಮನಾವಿಲ್ಲದೆ ಜ್ಞಾನಪೂರ್ವಕವಾಗಿ ಮಾಡಿದರೆ ನಿವೃತ್ತಕರ್ಮವೆನ್ನಿಸುತ್ತದೋ, ಹಾಗೆಯೇ ಋಗಾದಿರೂಪವಾದ ಒಂದೇ ವಿದ್ಯೆಯು ಸನ್ನ್ಯಾಯಗಳಿಂದ ಪ್ರಮಿತವಾದ ಬ್ರಹ್ಮವಿಷಯಕಶಕ್ತಿ ತಾತ್ಪರ್ಯರೂಪ ಉಪಾಧಿಗಳಿಂದ, ಮೋಕ್ಷ ಸಾಧನವಾದ ಜ್ಞಾನಕ್ಕೆ ಹೇತುವಾಗಿರುವುದರಿಂದ ಪರವಿದ್ಯೆಯೆನಿಸುತ್ತದೆ. ಸನ್ನ್ಯಾಯಗಳಿಂದ ಉಪಬೃಂಹಿತವಾಗದಿದ್ದರೆ ಮೋಕ್ಷಸಾಧನಜ್ಞಾನಕ್ಕೆ ಹೇತುವಾಗದೆ ಇರುವುದರಿಂದ ಅಪರವಿದ್ಯೆಯೆನ್ನಿಸುತ್ತದೆ. **ಋಗಾದ್ಯಾ ಅಪರಾ ವಿದ್ಯಾಃ ಯದಾ ವಿಷ್ಣೋರ್ನ ವಾಚಕಾಃ। ತಾ ಏವ ಪರಮಾ ವಿದ್ಯಾಃ ಯದಾ ವಿಷ್ಣೋಸ್ತು ವಾಚಕಾಃ॥** ಎಂದು. (೫) **ಸರ್ವ ವಿದ್ಯಾಪ್ರತಿಷ್ಠಾಂ, ಯೇನಾಕ್ಷರಂ ಪುರುಷಂ ವೇದ ಸತ್ಯಂ** ಎಂದು ಪರವಿದ್ಯಾ ವಿಷಯತ್ವಾದಿ ಬ್ರಹ್ಮಲಿಂಗದಿಂದ ಸ ಬ್ರಹ್ಮನಿದ್ಯಾಂ ಎನ್ನುವಲ್ಲಿ ದ್ದ ಬ್ರಹ್ಮಶಬ್ದವು ಚತುರ್ಮುಖ ಪರವಾಗಲಾರದು. ವಿಷ್ಣುವಿನಲ್ಲಿಯೇ ಮುಖ್ಯವು. (೬) ರುದ್ರನು ಚತುರ್ಮುಖನಿಂದ ಹುಟ್ಟಿದವನಾದುದರಿಂದ ಚತುರ್ಮುಖನಿಗೆ ಜನಕನು ಆಗಲಾರನು. ಆದುದರಿಂದ **ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ** ಎನ್ನುವಲ್ಲಿದ್ದ ಈಶ ಶಬ್ದವು ರುದ್ರಪರವಾಗಲಾರದು, ವಿಷ್ಣುವಿನಲ್ಲಿಯೇ ಮುಖ್ಯವು. (೭) ಮತ್ತೂ **ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ** ಎಂದು ರುಗ್ಮರೂಪವನ್ನು ಹೇಳಿದ್ದರಿಂದಲೂ **ವಿಮಿಶ್ರಾಣಿ ವ್ಯಮಿಶ್ರಯತ್** ಇತ್ಯಾದಿ ಶ್ರುತಿಯಿಂದ ಇತರರಿಗೆ ಮಿಶ್ರರೂಪವಿರುವುದರಿಂದ ಶುದ್ಧರೂಪವು ವಿಷ್ಣುವಿನಲ್ಲಿ ಮಾತ್ರ ಇರ ತಕ್ಕುದು. (೮) **ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ। ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾಚೇತನಾ ವಿಷ್ಣುಸಂಶ್ರಯಾ॥ ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಂ। ಹರಿಮೇವಾಖಿಲಗುಣಮಕ್ಷರತ್ರಯಮೀರಿತಂ॥** ಎನ್ನುವ ಶ್ರುತಿಯಿಂದ ಅಕ್ಷರವ್ಯಕ್ತಿಗಳಿಗೆ ಭೇದವನ್ನು ಹೇಳಿದ್ದಾರೆ. (೯) ಪೃಥಿ ವ್ಯಾದಿ ದೃಷ್ಟಾಂತಗಳಿಗೆ ಕಾರಣತ್ವಮಾತ್ರದಲ್ಲಿ ತಾತ್ಪರ್ಯವಿರುವಿದಲ್ಲದೆ ಉಪಾದಾನಕಾರಣತ್ವದಲ್ಲಿ ತಾತ್ಪರ್ಯವಿಲ್ಲ. (೧೦) ಪ್ರಧಾನ (ಪ್ರಕೃತಿ)ವೆಂದು ಇಟ್ಟು ಕೊಂಡರೆ ಯಃ ಸರ್ವಜ್ಞಃ ಎಂದು ಹೇಳಿದ ಸರ್ವಜ್ಞತ್ವರೂಪವಿಶೇಷಣವು ಕೂಡಲಾರದು. (೧೧) **ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ. ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ** ಎಂದು ಬ್ರಹ್ಮ ರುದ್ರರಿಗೆ ಅಕ್ಷರನಿಂದ ಭೇದವನ್ನು ಹೇಳಿದ್ದ ರಿಂದ ಅದೃಶ್ಯತ್ವಾದಿಗುಣಗಳುಳ್ಳ ಪರತಃ ಪರನೆಂದು ಶ್ರುತನಾದ ಅಕ್ಷರನು ವಿಷ್ಣುವೇ. ॥ ೬ ॥

**ಅದೃಶ್ಯತ್ವಾದಿಕರಣವು ಸಮಾಪ್ತವಾಯಿತು.**

# ೭ ವೈಶ್ವಾನರಾಧಿಕರಣವು

ಪೀಠಿಕೆ ॥ (೧) ಈ ಅಧಿಕರಣದಲ್ಲಿ ಪಾಚಕತ್ವ ಮೊದಲಾದ ಅನೇಕ ಲಿಂಗಗಳಿಗೆ ಸಮನ್ವಯವು ಸಿದ್ಧಿಸುವುದಕ್ಕಾಗಿ ಬ್ರಹ್ಮನಲ್ಲಿ ವೈಶ್ವಾನರನಾಮಕ್ಕೆ ಸಮನ್ವಯವನ್ನು ಮಾಡುತ್ತಾರೆ. (೨) ಪೂರ್ವಾಧಿಕರಣ ಸಂಗತಿಯನ್ನು ವಿಷಯವಾಕ್ಯವನ್ನುದಾಹರಿಸುತ್ತಾ ವಿಷಯಾದಿಗಳನ್ನು ಸೂಚಿಸುತ್ತಾರೆ—

**ಭಾಷ್ಯ ॥ ಅದೃಶ್ಯತ್ವಾದಿಗುಣೇಷು ಸರ್ವಗತತ್ವಮುಕ್ತಂ(ಸರ್ವಗತತ್ವಂ)। ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾತ್ಮಾನಂ ವೈಶ್ವಾನರಮುಪಾಸ್ತೇ (ಛಾ.೫.೧೮.೧.)। ಇತಿ ವೈಶ್ವಾನರಸ್ಯೋಕ್ತಂ । ಇತಿ ॥ ೧ ॥**

ಭಾಷ್ಯಾರ್ಥ ॥ (ಅತೀತಾಧಿಕರಣದಲ್ಲಿ ಉದಾಹೃತವಾದ ಮುಂಡಕಶ್ರುತಿಯಲ್ಲಿ ಹೇಳಿದ) ಅದೃಶ್ಯತ್ವಾದಿಗುಣಗಳ ಮಧ್ಯದಲ್ಲಿ (ನಿತ್ಯಂ ವಿಭುಂ ಸರ್ವಗತಂ ಎನ್ನುವುದರಿಂದ ಯಾವುದು) ಸರ್ವಗತತ್ವವು (ಹೇಳಲ್ಪಟ್ಟದೋ ಅದು ಛಂದೋಗಶ್ರುತಿಯಲ್ಲಿ) ಯಾವಅಧಿಕಾರಿಯು ದೇಹ ಹೃದಯದಲ್ಲಿ ಪ್ರಾದೇಶಪರಿಮಾಣವುಳ್ಳ (ಅಥವಾ ತತ್ವಪ್ರದೀಪಿಕಾರೀತಿಯಾಗಿ ಆಯಾಯ ಅಧಿಕಾರಿ ಯನ್ನು ಅಪೇಕ್ಷಿಸಿ) ಪ್ರಾದೇಶಮಾತ್ರ ಪರಿಮಾಣವುಳ್ಳ, ಸರ್ವಗತನಾದ ವ್ಯಾಪ್ತಗುಣಗಳುಳ್ಳ ಶರೀರದಲ್ಲಿರತಕ್ಕ ವೈಶ್ವಾನರಾಖ್ಯವಿಷ್ಣುವನ್ನು ಮುಂದೆ ಹೇಳುವರೀತಿಯಾಗಿ ಉಪಾಸನೆ ಮಾಡುತ್ತಾನೋ, (ಆತನು ಸ್ವಯೋಗ್ಯಭೋಗವನ್ನು ಅನುಭವಿಸುತ್ತಾನೆ.) ಎನ್ನುವ ವಾಕ್ಯದಿಂದ ವೈಶ್ವಾನರನಿಗೆ ಹೇಳಲ್ಪಟ್ಟದೆ.

ವಿಶೇಷಾಂಶ ॥ (೧) ಛಂದೋಗಶ್ರುತಿಯಲ್ಲಿರತಕ್ಕ ವೈಶ್ವಾನರಶಬ್ದವು ಅಗ್ನಿ ಮೊದಲಾದ ಇತರರಲ್ಲಿರತಕ್ಕುದೆಂದು ಆಕ್ಷೇಪಿಸುತ್ತಾ ಹಿಂದೆ ಹೇಳಿದ ಸರ್ವಗತತ್ವಾದಿಗಳೂ ಇತರರಲ್ಲಿರತಕ್ಕುದೆಂದು ಆಕ್ಷೇಪಿಸಿದುದರಿಂದ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು. (೨) ವೈಶ್ವಾನರ ಶಬ್ದವಾಚ್ಯನು ವಿಷಯವು, ವಿಷ್ಣುವೋ, ಮತ್ತೊಬ್ಬನೋ ಎಂದು ಸಂದೇಹವೂ ಸೂಚಿತವಾಯಿತು.

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆಯನ್ನು ಕೊಡುತ್ತಾರೆ—

**ಭಾಷ್ಯ ॥ ಅತ ಆಹ ॥ ೨ ॥**

**ಸೂತ್ರ ॥ ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ ॥ ೨೪ ॥**

**ಭಾಷ್ಯ ॥ ಅಗ್ನಾವಿಷ್ಣ್ವೋಃ ಸಾಧಾರಣಸ್ಯ (ಸಾಧಾರಣ) ವೈಶ್ವಾನರಶಬ್ದಸ್ಯ ವಿಷ್ಣಾವೇವ ಪ್ರಸಿದ್ಧಾತ್ಮಶಬ್ದೇನ ವಿಶೇಷಣಾದ್ವೈಶ್ವಾನರೋ ವಿಷ್ಣುರೇವ ॥ ೨೪ ॥ ॥ ೩ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರವನ್ನು ಕೊಡುತ್ತಾರೆ. ಸಾಧಾರಣ ಶಬ್ದವಿಶೇಷಾತ್ = ಅಗ್ನಿಯಲ್ಲಿ ವಿಷ್ಣುವಿನಲ್ಲಿ ಇಬ್ಬರಲ್ಲಿಯೂ ಸಮವೆಂದು ತೋರುವ ವೈಶ್ವಾನರ ಶಬ್ದಕ್ಕೆ ವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ಆತ್ಮಶಬ್ದದಿಂದ ವಿಶೇಷಣವಿದ್ದ ಪ್ರಯುಕ್ತ ವೈಶ್ವಾನರಶಬ್ದವಾಚ್ಯನು ವಿಷ್ಣುವೇ.

ವಿಶೇಷಾಂಶ ॥ (೧) ಯದ್ಯಪಿ ಅಗ್ನಿ ವಿಷ್ಣುಗಳು ಪ್ರತಿಜ್ಞಾವಿಷಯರು. ಆದಾಗ್ಯೂ ಪೂರ್ವಪಕ್ಷ ಸಾಧಕವಾದ ವೈಶ್ವಾನರಶಬ್ದವು ನಿರವಕಾಶತ್ವರೂಪಪ್ರಕಾರದಿಂದ ಸಿದ್ಧಾಂತಸಾಧಕವಾದ ಲಿಂಗದಿಂದ ಸಮವಾಗಿದೆ. ಶ್ರುತಿಲಿಂಗದಿಂದ ನಿವರಕಾಶವಾದ ಪ್ರಯುಕ್ತ ಸಮಗಳಾದಾಗ್ಯೂ ಲಿಂಗಕ್ಕಿಂತ ಶ್ರುತಿಯು ಪ್ರಬಲವಾದಪ್ರಯುಕ್ತ ಅಗ್ನಿಯೇ ಎಂದು ಪೂರ್ವಪಕ್ಷವು ಪ್ರಾಪ್ತವಾಯಿತು. ಆದಾಗ್ಯೂ ವೈಶ್ವಾನರ ಶಬ್ದವು ಉಭಯಸಾಧಾರಣವಾದಾಗ್ಯೂ ವಿಷ್ಣುವಿನಲ್ಲಿಮಾತ್ರ ಇರತಕ್ಕುದೆಂದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾದ ಆತ್ಮಶಬ್ದದಿಂದ **ಆತ್ಮಾನಂ ವೈಶ್ವಾನರಂ** ಎಂದು ವಿಶೇಷಿತವಾದ ಪ್ರಯುಕ್ತ ವಿಷ್ಣುಪರತ್ವವು ಕೂಡುತ್ತದೆ. ಅಗ್ನ್ಯಾದಿಗಳಲ್ಲಿ ಪ್ರಸಿದ್ಧ್ಯಾದಿಗಳು ಮುಂದೆ ಹೇಳುವ ರೀತಿಯಿಂದ ಅನ್ಯಥಾ ಉಪಪನ್ನಗಳಾಗುವುದರಿಂದ ಪೂರ್ವಪಕ್ಷ ನಿರ್ಣಾಯಕ ವಿಶೇಷಕಾರಣವಿಲ್ಲದಿರುವ ಪ್ರಯುಕ್ತ ವಿಷ್ಣುತ್ವ ನಿರ್ಣಾಯಕ ಆತ್ಮಶಬ್ದವಿದ್ದ ಪ್ರಯುಕ್ತ ವೈಶ್ವಾನರನು ವಿಷ್ಣುವೇ. ಅಗ್ನಿರೂಪದೇವತೆಯಾಗಲೀ ಭೂತಾಗ್ನಿಯಾಗಲೀ ಅಲ್ಲ ॥ ೨೪ ॥

**ಪೀಠಿಕೆ** ॥ ಹಾಗಾದರೆ ಆತ್ಮಶಬ್ದಕ್ಕೆ ಅಗ್ನ್ಯಾದಿಗಳಲ್ಲಿ ಅಮುಖ್ಯತ್ವವನ್ನು ಅಂಗೀಕರಿಸಿಕೊಂಡು ಅಗ್ನ್ಯಾದಿಗಳಿಗೇನೇ ವೈಶ್ವಾನರಶಬ್ದವಾಚ್ಯವೆನ್ನುವುದು ಏಕೆ ಆಗಲಾರದು ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸಮಾಖ್ಯಾರೂಪ ಹೇತ್ವಂತರದಿಂದ ವೈಶ್ವಾನರನಿಗೆ ವಿಷ್ಣುತ್ವವನ್ನು ನಿಶ್ಚಯಿಸತಕ್ಕ ಸೂತ್ರವನ್ನು ಪಠನ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ಮರ್ಯಮಾಣಮನುಮಾನಂ ಸ್ಯಾದಿತಿ ಓಂ ॥ ೨೫ ॥

**ಭಾಷ್ಯ ॥ ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।** (ಭ.ಗೀ.೧೫.೧೪.)
**ಇತಿ ಸ್ಮರ್ಯಮಾಣಮತ್ರಾಪಿ ಸ ಏವೋಚ್ಯತ ಇತ್ಯಸ್ಯಾನುಮಾಪಕಂ ॥ ೪ ॥**

ಭಾಷ್ಯಾರ್ಥ ॥ ಸ್ಮರ್ಯಮಾಣಂ= ನಾನು ವೈಶ್ವಾನರನು ಆಗಿ ಪ್ರಾಣಗಳ ದೇಹವನ್ನು ಆಶ್ರಯಿಸಿಕೊಂಡಿದ್ದೇನೆ ಎನ್ನುವ ಗೀತಾಸ್ಮೃತಿಯಲ್ಲಿ ಹೇಳಲ್ಪಟ್ಟದ್ದು ವಿಷ್ಣುವಿಗೆ ವೈಶ್ವಾನರತ್ವವು, ಅತ್ರಾಪಿ= ವೈಶ್ವಾನರವಿದ್ಯೆಯಲ್ಲಿಯೂ, ಸ ಏವ= ಗೀತೆಯಲ್ಲಿ ಪ್ರತಿಪಾದಿಸಲ್ಪಟ್ಟ ಭಗವಂತನೇ, ಉಚ್ಯತೇ= (ವೈಶ್ವಾನರಪದದಿಂದ) ಹೇಳಲ್ಪಡುತ್ತಾನೆ, ಇತ್ಯಸ್ಯ=ಈ ಅರ್ಥಕ್ಕೆ, ಅನುಮಾನಂ ಸ್ಯಾತ್=ಅನುಮಾಪಕ ವಾಗುವುದು.

**ಪೀಠಿಕೆ** ॥ ಹಾಗಾದರೆ ಅಹಂ ಎಂದು ವಿಷ್ಣುವಾದ ಶ್ರೀಕೃಷ್ಣನು ಹೇಳಿದುದರಿಂದ ಸ್ಮೃತಿಯಲ್ಲಿ ಹೇಳಲ್ಪಟ್ಟ ವೈಶ್ವಾನರನಿಗೆ ವಿಷ್ಣುತ್ವವಿದ್ದರೂ ಛಂದೋಗ್ಯಶ್ರುತಿಯಲ್ಲಿ ಹೇಳಲ್ಪಟ್ಟ ವೈಶ್ವಾನರನಿಗೆ ವಿಷ್ಣುತ್ವವು ಹೇಗೆ ಎಂದರೆ—

**ಭಾಷ್ಯ ॥ ಸಮಾಖ್ಯಾನಾತ್। ಇತಿ ಶಬ್ದಃ ಸಮಾಖ್ಯಾಪ್ರದರ್ಶಕಃ ॥ ೨೫ ॥ ॥ ೫ ॥**

ಭಾಷ್ಯಾರ್ಥ ॥ ಗೀತಾಸ್ಮೃತಿಗೆ ವೈಶ್ವಾನರವಿದ್ಯಾಸಮಾನೋಕ್ತಿರೂಪತ್ವವಿದ್ದ ಪ್ರಯುಕ್ತ ಈ ವೈಶ್ವಾನರವಿದ್ಯೆಗೆ ಗೀತಾಸಮಾಖ್ಯೆಯು ಇದ್ದ ಪ್ರಯುಕ್ತ ಇಲ್ಲಿ ಹೇಳಿದ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯವಾಗುತ್ತದೆ. (ಸಮಾಖ್ಯಾರೂಪಯುಕ್ತಿಯು ಸೂತ್ರದಲ್ಲಿ ಹೇಳಲಿಲ್ಲವೆಂದರೆ) ಇತಿ

ಸ್ಮರ್ಯಮಾಣಂ ಎನ್ನುವುದಕ್ಕೆ ಇತಿಸಮಾಖ್ಯಾಯಮಾನಂ ಎನ್ನುವ ಅರ್ಥವನ್ನು ಅಂಗೀಕರಿಸಿದುದರಿಂದ ಇತಿಶಬ್ದವು ಸಮಾನೋಕ್ತಿರೂಪವಾದ ಸಮಾಖ್ಯಾರೂಪಲಿಂಗಜ್ಞಾಪಕವು. ॥ ೨೫ ॥

ಪೀಠಿಕೆ ॥ ವೈಶ್ವಾನರನಿಗೆ ವಿಷ್ಣುತ್ವವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ಶಬ್ದಾದಿಭ್ಯೋಽಂತಃ ಪ್ರತಿಷ್ಠಾನನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ಪುರುಷವಿಧಮಪಿ ಚೈನಮಧೀಯತೇ ಓಂ ॥ ೨೬ ॥**

ಸೂತ್ರಾರ್ಥ ॥ ಶಬ್ದಾದಿಭ್ಯಃ=ಅಯಮಗ್ನಿರ್ವೈಶ್ವಾನರಃ ಇದುಮೊದಲಾದ ಅಗ್ನ್ಯಾದಿಶ್ರುತಿಯಿಂದಲೂ, ಹೃದಯಂ ಗಾರ್ಹಪತ್ಯಃ ಇತ್ಯಾದಿಗಳಿಂದ ಹೋಮಾದ್ಯಾಧಾರತ್ವ ಗಾರ್ಹಪತ್ಯಾದ್ಯಂಗವತ್ವಾದಿಲಿಂಗಗಳಿಂದಲೂ, ಅಂತಃ ಪ್ರತಿಷ್ಠಾನ್=ಯೋಽಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ ಎಂದು ಪಾಚಕನಾಗಿ ಒಳಗೆ ಇದ್ದ ಪ್ರಯುಕ್ತ ವೈಶ್ವಾನರನು ವಿಷ್ಣುವೇ ಎನ್ನುವ ನಿಶ್ಚಯವು ಕೂಡುವುದಿಲ್ಲ ಎಂದರೆ— ಹಾಗೆ ಹೇಳಕೂಡದು. (ಅಗ್ನಿ ಶ್ರುತಿಲಿಂಗಾದಿಗಳು ವಿಷ್ಣುವಿನಲ್ಲಿ ಸಾವಕಾಶಗಳಾದುದರಿಂದ ಆತ್ಮಶಬ್ದಾದಿಗಳಿಂದ ವಿಷ್ಣುವೆಂದೇ ನಿಶ್ಚಯವು ಆಗುವುದು. ಅಗ್ನಿ ಶ್ರುತಿಲಿಂಗಗಳಿಗೆ ಸಾವಕಾಶತ್ವವು ಹೇಗೆಂದರೆ) ತಥಾದೃಷ್ಟ್ಯುಪದೇಶಾತ್=ಅಗ್ನ್ಯಾದಿನಾಮಲಿಂಗ ಕರ್ಮಗಳಿವೆ ಎಂದು ಶ್ರೀವಿಷ್ಣುವಿನ ಉಪಾಸನೆಯನ್ನು ಉಪದೇಶಿಸಿದ್ದರಿಂದ. (ಆತ್ಮಶಬ್ದಾದಿಗಳಿಗೆ ಅನ್ಯತ್ರ ಅವಕಾಶವಿಲ್ಲ) ಆತ್ಮತ್ವಾದಿಗಳು ಇತರತ್ರ ಕೂಡಲಾರವು. ಅಥವಾ ಕೋ ನ ಆತ್ಮಾ ಕಿಂ ಬ್ರಹ್ಮ ಎಂದು ಉಪಕ್ರಮದಲ್ಲಿ ಹೇಳಲ್ಪಟ್ಟ ಆತ್ಮತ್ವಾದಿಗಳು ಕೂಡಲಾರವು. (ಕೇವಲ ಆತ್ಮಶಬ್ದ ಸ್ಮೃತಿಸಮಾಖ್ಯಾದಿಂದ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯವಾಗುವುದಿಲ್ಲ. ಕೋ ನ ಆತ್ಮಾ ಕಿಂ ಬ್ರಹ್ಮ ಎಂದು ವಿಚಾರಪೂರ್ವಕಾಗಿ ಇದು ಆರಭ್ಯಾಧೀತವಾಗಿದೆ. ಉಪಕ್ರಮದಲ್ಲಿ ಆತ್ಮತ್ವ ಬ್ರಹ್ಮತ್ವಗಳು ಇದ್ದರೂ ಇದಕ್ಕೆ ವಿಷ್ಣುಪರತ್ವವು ಹೇಗೆ ಎನ್ನಕೂಡದು. ಆತ್ಮತ್ವಬ್ರಹ್ಮತ್ವಗಳು ಅಗ್ನ್ಯಾದಿಗಳಲ್ಲಿ ಕೂಡಲಾರವು.) (ಕೇವಲ ಸ್ಮೃತಿಸಮಾಖ್ಯಾಪ್ರಕರಣಬಲದಿಂದ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯವಾಗುವದಲ್ಲ. ಮತ್ತೆ ಪುರುಷಸೂಕ್ತದಲ್ಲಿ) ಪುರುಷನಾಮಕ ಪರಮಾತ್ಮನು ಯಾವ ಪ್ರಕಾರ ಇರತಕ್ಕವನೆಂದು ಹೇಳಲ್ಪಟ್ಟಿದ್ದಾನೋ ಆ ಪ್ರಕಾರ ಇರತಕ್ಕವನನ್ನಾಗಿಯೇ, ಏನಂ=ಈ ವೈಶ್ವಾನರನನ್ನು (ಮೂರ್ಧೈವ ಸುತೇಜಾಃ ಇತ್ಯಾದಿಗಳಿಂದ) ಅಧೀಯತೇ=(ಛಂದೋಗರು) ಅಧ್ಯಯನ ಮಾಡುತ್ತಾರೆ. (ಆದಕಾರಣ ಪುರುಷಸೂಕ್ತಸಮಾಖ್ಯೆಯಿಂದಲೂ ಚ ಶಬ್ದದಿಂದ ಈ ಪುರುಷಸೂಕ್ತಕ್ಕೆ ವಿಷ್ಣುಪರತ್ವವು ಬಹುಪ್ರಮಾಣಸಿದ್ಧವೆಂದು ದ್ಯೋತಿತವಾಯಿತು.)

ಭಾಷ್ಯ ॥ **ಅಯಮಗ್ನಿರ್ವೈಶ್ವಾನರಃ** (ಬೃ.೭.೯.೧.) । **ವೈಶ್ವಾನರಮೃತ ಆ ಜಾತಮಗ್ನಿಂ** (ಋ.೬.೭.೧.) । **ಇತ್ಯಾದಿಶ(ಶ್ರು)ಬ್ದಃ ವೈಶ್ವಾನರೇ ತದ್ದು ತಂ ಭವತಿ** (ಛಾ.೫.೨೪.೪.) **ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯ ಪಚನ ಆಸ್ಯಮಾಹವನೀಯಃ** (ಛಾ.೫.೧೮.೨.) । **ಇತ್ಯಾದ್ಯಗ್ನಿಲಿಂಗಮಾದಿಶಬ್ದೋ ಕ್ತಂ । ಯೇನೇದಮನ್ನಂ ಪಚ್ಯತೇ** (ಬೃ.೭.೯.೧.)। **ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ** (ಛಾ.೫.೧೯.೧.)।

**ಇತ್ಯಾದಿನಾ ಪಾಚಕತ್ವೇ ನಾಂತಃ ಪ್ರತಿಷ್ಠಾನಂ ಚ ಪ್ರತೀಯತೇ। ತಸ್ಮಾನ್ನ ವಿಷ್ಣುರಿತಿ ಚೇತ್ ॥ ೬ ॥**

**ಭಾಷ್ಯಾರ್ಥ ॥** (೧) **(ಅಯಮಗ್ನಿರ್ವೈಶ್ವಾನರಃ ಯೋಽಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ** (ಬೃ.೭.೯.೧.) (ಯಾವ ಈ ಪುರುಷನ ಒಳಗೆ ಇರತಕ್ಕ ಶ್ರೀಹರಿಯೋ) ಈತನು ಲಿಂಗಶಬ್ದವಾಚ್ಯನಾದ ಶರೀರಕ್ಕೆ ಪ್ರೇರಕನಾದುದರಿಂದ ಅಗ್ನಿಶಬ್ದವಾಚ್ಯನು. ಸರ್ವಗುಣ ಸಂಬಂಧವುಳ್ಳವನೂ ನಾಶ ವಿಲ್ಲದವನೂ ಆದಪ್ರಯುಕ್ತ ವೈಶ್ವಾನರಶಬ್ದವಾಚ್ಯನು. (ಯಾವ ಈ ಅನ್ನವು ಪ್ರಾಣಿಗಳಿಂದ ಭಕ್ಷಿಸಲ್ಪಡುತ್ತದೋ, ಈ ಅನ್ನವು ಶ್ರೀಹರಿಯಿಂದ ಪಚನಮಾಡಲ್ಪಡುತ್ತದೆ.) (೨) **(ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರ ಮೃತ ಆ ಜಾತಮಗ್ನಿಂ। ಕವಿಂ ಸಂರಾಜಮತಿಥಿಂ ಜನಾನಾಮಾಸನ್ನಾ ಪಾತ್ರಂ ಜನಯಂತ ದೇವಾಃ ॥** (ಋ.೬.೭.೧.) ದಿವಃ=ಸ್ವರ್ಗಲೋಕಕ್ಕೆ, ಮೂರ್ಧಾನಂ=ಕಾರಣೀಭೂತವಾದ ಶಿರಸ್ಸುಳ್ಳ, ಪೃಥಿವ್ಯಾಃ=ಭೂಮಿಗೆ, ಅರತಿಂ=ಕಾರಣೀಭೂತವಾದ ಪಾದವುಳ್ಳ) ಆ ಋತೇ=ಜನರ ಸಮ್ಯಕ್‌ಜ್ಞಾನಕ್ಕಾಗಿ, ಜಾ ತಂ=ಅಭಿವ್ಯಕ್ತನಾದ, (ಕವಿಂ=ಸರ್ವಜ್ಞನಾದ, ಸಮ್ರಾಜಂ=ಅಖಂಡೇಶನಾದ, ಅತಿಥಿಂ=ಅನ್ನಂ ಥಂ ಎನ್ನುವ ಶ್ರುತಿಯಿಂದ ಥ ಶಬ್ದವಾಚಕವು. ಅತಿಶಯಾರ್ಥದಲ್ಲಿ ಮೂರನೇ ಅಕ್ಷರವಾದ ಇಕಾರವು. ತಥಾಚ=ಅತಿಶಯ ಅನ್ನವುಳ್ಳ, ಜನಾನಾಂ ಪಾತ್ರಂ = ಜನರಿಗೆ ರಕ್ಷಕನಾದ,) ವೈಶ್ವಾನರಂ=ಸರ್ವ ಜೀವರ ಒಳಗೆ ನಿಯಾಮಕನಾಗಿದ್ದುದರಿಂದ ವೈಶ್ವಾನರ ಶಬ್ದವಾಚ್ಯನಾದ, ಅಗ್ನಿಂ=ಸರ್ವಾಂಗಗಳಿಗೆ ಪ್ರೇರಕನಾದ ವಿಷ್ಣುವನ್ನು ಪ್ರಸಿದ್ಧಾಗ್ನಿಯನ್ನೂ ಕೂಡ, (ದೇವಾ=ದೇವತೆಗಳು, ಆಸನ್=ತಮ್ಮ ಮುಖವನ್ನಾಗಿ, ಆ ಜನಯಂತ=ಚೆನ್ನಾಗಿ ಸರ್ವ ಕರ್ಮಗಳಲ್ಲಿ ಮಾಡಿಕೊಂಡರು. ತತ್ವಪ್ರದೀಪದಲ್ಲಿ ಆದರೂ— ವೈಶ್ವಾನರಂ=ಎಲ್ಲಾ ಮನುಷ್ಯರಲ್ಲಿ ಇರತಕ್ಕ, ಋತೇ=ವೇದದಲ್ಲಿ, ಆಜಾತಂ = ಚೆನ್ನಾಗಿ ಅಭಿವ್ಯಕ್ತನಾದ, ಅಗ್ನಿಂ=ಅಂಗಗಳಿಗೆ ಪ್ರೇರಕನಾದ, ಸಂರಾಜಂ=ಚೆನ್ನಾಗಿ ಪ್ರಕಾಶಿಸಿಕೊಂಡಿರುವ, ಅತಿಥಿಂ=ಎಲ್ಲರನ್ನು ಅತಿಕ್ರಮಿಸಿಕೊಂಡು ಇರತಕ್ಕ, ಪಾತ್ರಂ=ರಕ್ಷಕನಾದ, ಅಗ್ನಿಂ=ಅಗ್ನಿಯನ್ನು, ಜನಾನಾಂ=ಜನರಿಗೆ, ಆಸನ್=ಆಶ್ರಯನನ್ನಾಗಿ, ಆ ಜನಯಂತ ದೇವಾಃ=ಅಗ್ನ್ಯಾದಿ ದೇವತೆಗಳು ಚೆನ್ನಾಗಿ ಹುಟ್ಟಿಸಿದರು. ಇತ್ಯಾದಿಶಬ್ದ=ಇತ್ಯಾದಿರೂಪವಾದ ಶಬ್ದವು ಸೂತ್ರದಲ್ಲಿದ್ದ ಶಬ್ದಪದದಿಂದ ಹೇಳಲ್ಪಟ್ಟಿದೆ. ಅಥವಾ ಇತ್ಯಾದಿ=ಇದೇ ಮೊದಲಾದ ವಾಕ್ಯ ಸಮುದಾಯವು, ಶಬ್ದಃ=ಸೂತ್ರದಲ್ಲಿದ್ದ ಶಬ್ದಪದದಿಂದ ಗೃಹೀತವಾಗಿದೆ. ಆದಿಶಬ್ದದಿಂದ ಏತಜ್ಜಾತೀಯಕವಾದ ಶ್ರುತ್ಯಂತರವಾಕ್ಯವನ್ನು ಇಟ್ಟುಕೊಳ್ಳಬೇಕು. (೩.) **ವೈಶ್ವಾನರೇ ತದ್ಧುತಂ ಭವತಿ ತಸ್ಮಾದುಹೈವಂ ವಿದ್ಯದ್ಯಪಿ ಚಂಡಾಲಾಯೋಚ್ಛಿಷ್ಟಂ ಪ್ರಯಚ್ಛೇದಾತ್ಮನಿ ಹೈವಾಸ್ಯ ವೈಶ್ವಾನರೇ ಹುತಂ ಸ್ಯಾತ್**(ಛಾ.೫.೨೪. ४.) ಹಿಂದೆ ಹೇಳಿದ ಪ್ರಕಾರ ವೈಶ್ವಾನರಜ್ಞಾನಿಯು ಉಚ್ಛಿಷ್ಟಾದಿಗಳಿಗೆ ಅನರ್ಹನಾದಾಗ್ಯೂ ಚಂಡಾಲನಿಗೋಸ್ಕರ ಉಚ್ಛಿಷ್ಟವನ್ನು ಕೊಟ್ಟ ಪಕ್ಷದಲ್ಲಿ ಆ ಕೊಡಲ್ಪಟ್ಟ ಉಚ್ಛಿಷ್ಟವು ಚಂಡಾಲಾಂತರ್ಯಾಮಿಯಾದ ವೈಶ್ವಾನರನಲ್ಲಿ ಹುತವಾಗುವುದು. (ಪಾಪಕರವಾಗಲಾರದು. ಪ್ರತ್ಯುತ ಮಹಾಫಲದಾಯಕನೇ ಆಗುವುದು. ಇದರಿಂದ ಅಹುತಿಸ್ಥಾನತ್ವಲಿಂಗವು ಉಕ್ತವಾಯಿತು.) (४) ಹೃದಯದಲ್ಲಿದ್ದ ವಿಷ್ಣುವು ಗಾರ್ಹಪತ್ಯಪದವಾಚ್ಯನು. ಮನಸ್ಸಿನಲ್ಲಿದ್ದ ವಿಷ್ಣುವು ಅನ್ವಾಹಾರ್ಯಪಚನಃ=ಅನ್ವಾಹಾರ್ಯಃ ಓದನಃ ಅತ್ರ ಪಚ್ಯತೇ ಎನ್ನುವ ವ್ಯುತ್ಪತ್ತಿಯಿಂದ ದಕ್ಷಿಣಾಗ್ನಿಶಬ್ದವಾಚ್ಯನು.

ಅಸ್ಯಂ=ಅಸ್ಯದಲ್ಲಿದ್ದ ವಿಷ್ಣುವು, ಆಹವನೀಯಃ=ಆಹವನೀಯಶಬ್ದವಾಚ್ಯನು, ಇತ್ಯಾದ್ಯಗ್ನಿಲಿಂಗಂ=ಇದು ಮೊದಲಾದ ವಾಕ್ಯಗಳಿಂದ ಹೇಳಲ್ಪಟ್ಟ ಅಗ್ನಿಲಿಂಗವು (ಆದಿಶಬ್ದದಿಂದ **ನಾಭಿಂ ಯಜ್ಞಾನಾಂ ಸದನಂ ರಯೀಣಾಂ** (ಋ. ೬.೭.೨.) ಇತ್ಯಾದಿವಾಕ್ಯಗಳಲ್ಲಿ ಹೇಳಿದ್ದನ್ನು ಇಟ್ಟು ಕೊಳ್ಳಬೇಕು.) ಆದಿಶಬ್ದೋಕ್ತಂ=ಸೂತ್ರದಲ್ಲಿದ್ದ ಆದಿಶಬ್ದದಿಂದ ಹೇಳಲ್ಪಟ್ಟಿದೆ. (೫) ಇದಂ ಅನ್ನಂ= ತಿಂದ ಅನ್ನವು ಯಾರಿಂದ ಪಚನಮಾಡಲ್ಪಡುತ್ತದೋ, (ಬೃ೭.೯.೧.) ತತ್=ಭೋಜನವೇಳೆಯಲ್ಲಿ, ಯದ್ಯದ್ಭಕ್ತಂ= ಯಾವಯಾವ ಅನ್ನವು, ಪ್ರಥಮಂ ಆಗಚ್ಛೇತ್=ಪ್ರಥಮದಲ್ಲಿ ಪ್ರಾಣನಿಗೆ ಆಹುತಿರೂಪದಿಂದ ಆಸ್ಯವನ್ನು ಕುರಿತು ಬರುತ್ತದೋ, ತತ್=ಅದು ಹೋಮೀಯಂ=ಪಾಚಕನಾಗಿ ಒಳಗೆ ಇರತಕ್ಕ ಅಗ್ನಿಗೆ ಹೋಮ ದ್ರವ್ಯವು. (ಛಾಂ.೫.೧೯.೧.) ಇತ್ಯಾ ದಿನಾ=ಇದು ಮೊದಲಾದ ವಾಕ್ಯದಿಂದ, ಪಾಚಕತ್ವೇನಾಂತಃಪ್ರತಿಷ್ಠಾನಂ ಚ=ಪಾಚಕನಾಗಿ ಒಳಗೆ ಇದ್ದಾನೆಂದು ತೋರುತ್ತದೆ. ತಸ್ಮಾತ್ ನ ವಿಷ್ಣುಃ= ಯಾವ ಕಾರಣದಿಂದ ಹೀಗೆ ಅಗ್ನಿ ಪಕ್ಷದಲ್ಲಿಯೂ ಶ್ರುತಿಲಿಂಗಾದಿಗಳು ಇವೆಯೋ, ವಿಷ್ಣು ಪಕ್ಷದಲ್ಲಿಯೂ ಆತ್ಮಶಬ್ದವೂ ಸಮಾಖ್ಯಾನವೂ ಉಕ್ತವಾಗಿದೆಯೋ, ಆದಕಾರಣ ಎರಡು ಪಕ್ಷದಲ್ಲಿಯೂ ಶ್ರುತ್ಯಾದಿಗಳು ಸಮಾನಗಳಾದ ಪ್ರಯುಕ್ತ ವೈಶ್ವಾನರನು ವಿಷ್ಣುವೇ ಎನ್ನುವ ನಿಶ್ಚಯವು ಕೂಡುವುದಿಲ್ಲ, ಇತಿ ಚೇತ್=ಎಂದರೆ.

**ವಿಶೇಷಾಂಶ ॥** (೧) ಕುರುಪಾಂಡವ ನ್ಯಾಯದಿಂದ **ಸರ್ವಕರ್ಮಾ ಸರ್ವಲಿಂಗಃ** ಎನ್ನುವ ಶ್ರುತ್ಯನುಸಾರವಾಗಿ ಆದಿಪದದಿಂದ ಹೇಳಲ್ಪಟ್ಟ ಲಿಂಗದಿಂದ ಪ್ರತ್ಯೇಕವಾಗಿ ಕರ್ಮವನ್ನು ಬೋಧಿಸುವುದಕ್ಕಾಗಿ ಸೂತ್ರದಲ್ಲಿ ಅಂತಃಪ್ರತಿಷ್ಠಾನಾತ್ ಎಂದು ಹೇಳಿರುವರು. (೨) ಅಥವಾ **ಪಾಚಕತ್ವೇನಾಂತಃಪ್ರತಿಷ್ಠಾನಂ ಪ್ರಧಾನಲಿಂಗತ್ವೇನಾಭಿಮತತ್ವಾತ್ ಪೃಥಗುಕ್ತಂ** ಎಂದು ತತ್ವಪ್ರದೀಪದಲ್ಲಿ ಹೇಳಿದ್ದರಿಂದ ಪ್ರಧಾನಲಿಂಗವಾದ ಪ್ರಯುಕ್ತ ಇದು ಪ್ರತ್ಯೇಕವಾಗಿ ಹೇಳಲ್ಪಟ್ಟಿದೆ, ಎನ್ನುವ ಅಭಿಪ್ರಾಯ ದಿಂದ ಅಗ್ನಿಯ ಕರ್ಮವನ್ನು ಹೇಳಿ ಅಗ್ನಿಯ ಲಿಂಗವನ್ನು ಪಾಚಕತ್ವೇನ ಎನ್ನುವುದರಿಂದ ತೋರಿಸಿದರು. (೩) ಹಾಗಾದರೆ **ಯಸ್ತ್ವೇತಂ** ಎನ್ನುವ ವಿಚಾರವಾಕ್ಯದಲ್ಲಿ ವೈಶ್ವಾನರಶಬ್ದದಿಂದ ಕೂಡಿದ ಅಗ್ನಿಶಬ್ದವಿಲ್ಲದಿದ್ದರೂ ಇಲ್ಲಿ ಸರ್ವ ವೈಶ್ವಾನರ ವಿದ್ಯೆಗಳೂ ವಿಚಾರ್ಯಗಳಾಗಿವೆ. ವಾಕ್ಯಾಂತರದಲ್ಲಿರತಕ್ಕ ವೈಶ್ವಾನರಶಬ್ದದಿಂದ ಪೂರ್ವಪಕ್ಷಹೇತುತ್ವವು ಯುಕ್ತವು. ಆದ ಪ್ರಯುಕ್ತವೇ ಅನೇಕವಾಕ್ಯಗಳನ್ನು ಹೇಳಿದ್ದು. ಅಥವಾ ಪೂರ್ವಪಕ್ಷದಲ್ಲಿಯೂ ಸಿದ್ಧಾಂತದಲ್ಲಿದ್ದಂತೆಯೂ ಸಮಾಖ್ಯಾ ವನ್ನು ತೋರಿಸುವುದಕ್ಕಾಗಿ ಸಮಾಖ್ಯಾರೂಪದಿಂದ ಆವಾವವಾಕ್ಯವನ್ನು ಹೇಳಿದ್ದು. (೪) **ಮೂರ್ಧತ್ವಂ ವಿಷ್ಣೋರಂಗಾಂಗ್ಯಭೇದಾತ್** ಎಂದು ತತ್ವಪ್ರದೀಪದಲ್ಲಿ ಹೇಳಿದ್ದರಿಂದ **ಮೂರ್ಧಾನಮರತಿಂ** ಎಂದು ಅಭೇದೋಕ್ತಿಯು. (೫) ಲೋಕದಲ್ಲಿ ಗಮನದಿಂದ ದುಃಖವು ಕಂಡದ್ದರಿಂದ ರತಿವಿರುದ್ಧವಾದ ಗತಿಗೆ ಸಾಧನವಾದ ಪ್ರಯುಕ್ತ ಗೌಣೀವೃತ್ತಿಯಿಂದ ಅರತಿಃ=ಪಾದವು. (೬) **ಅರಮಲಮತತಿ ಗಚ್ಛತಿ ಯೇನ ಪುರುಷಃ ಸೋಽರತಿಃ ಪಾದಃ** ಎಂದು ತತ್ವಪ್ರದೀಪದಲ್ಲಿ ಹೇಳಿದ್ದರಿಂದ ಮುಖ್ಯವೃತ್ತಿಯಿಂದ ಅರತಿಃ = ಪಾದವು. (೭) ತತ್ವಪ್ರದೀಪದಲ್ಲಿ ಅರಶಬ್ದೋಪಪದವಾದ ಅತತಿಧಾತುವಿನಿಂದ ಅರತಿಶಬ್ದವು ನಿಷ್ಪನ್ನವೆನ್ನುತ್ತಾರೆ (೮) ಚಂದ್ರಿಕಾ ದಲ್ಲಿ ನಞ್ ಉಪಪದವಾದ ರಮಧಾತುವಿನಿಂದ ನಿಷ್ಪನ್ನವೆಂದು ಹೇಳಿದ್ದಾರೆ. (೯) ಪೂರ್ವಪಕ್ಷಿಯು ಶ್ರುತಿಯಲ್ಲಿರತಕ್ಕ ಅಗ್ನ್ಯಾದಿ ಶಬ್ದಗಳನ್ನು ಅಗ್ನಿಪರಗಳನ್ನಾಗಿಯೇ

ತಿಳಿದಿರುತ್ತಾನೆ. (೧೦) **ತದ್ಧದ್ಧಕ್ಷಂ** ಎನ್ನುವುದರಿಂದ ಅಗ್ನಿಯಲ್ಲಿ ಹೋಯಮಾನವಾದ ದ್ರವ್ಯಕ್ಕೆ ಅಗ್ನಿಯು ಪಾಚಕನು ಎಂದು ಸಿದ್ಧಿಸುವುದರಿಂದ ಪಾಚಕತ್ವಾಖ್ಯಲಿಂಗವು ಉಕ್ತವಾಯಿತು. ಯದ್ಯಪಿ **ಯೇನೇದಂ** ಎನ್ನುವ ಪೂರ್ವವಾಕ್ಯದಲ್ಲಿ ಅಯಮಗ್ನಿಃ ಎನ್ನುವ ತನ್ನ ಪೂರ್ವವಾಕ್ಯವಿದ್ದ ಪ್ರಯುಕ್ತ ಪಾಚಕನಾಗಿ ಒಳಗೆ ಇದ್ದಾನೆಂದು ತೋರಿದಾಗ್ಯೂ **ಯದ್ಧದ್ಧಕ್ಷಂ** ಎನ್ನುವ ವಾಕ್ಯದಲ್ಲಿ ಅದು ತೋರುವುದಿಲ್ಲ. ಆದಾಗ್ಯೂ **ತದ್ಧೋಮೀಯಂ** ಎನ್ನುವುದರಿಂದ ಅಂತಸ್ಥನಿಗೆ ಹೋಮದ್ರವ್ಯವು ಎಂದು ಹೇಳಿದ ಪ್ರಯುಕ್ತ ಆ ಅರ್ಥಕ್ಕೆ ಜ್ಞಾಪಕವಾಗುವುದು.

**ಪೀಠಿಕೆ** ॥ ಪರಿಹಾರ ಸೂತ್ರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ । ಅಥ ಹೇಮಮಾತ್ಮಾನಮಣೋರಣೀಯಾಂಸಂ ಪರತಃ ಪರಂ ವಿಶ್ವಂ ಹರಿಮುಪಾಸೀತ । ಇತಿ ॥ ಸರ್ವನಾಮಾ ಸರ್ವಕರ್ಮಾ ಸರ್ವಲಿಂಗಃ ಸರ್ವಗುಣಃ ಸರ್ವಕಾಮಃ ಸರ್ವಧರ್ಮಃ ಸರ್ವರೂಪಃ । ಇತಿ ॥ ೭ ॥**

**ಭಾಷ್ಯಾರ್ಥ** ॥ ವಿಷ್ಣುವಲ್ಲವೆಂದು ಹೇಳಕೂಡದು. (ಅಗ್ನ್ಯಾದಿಗಳು ಎನ್ನುವ ವಿಷಯದಲ್ಲಿಯೂ ಪ್ರತ್ಯಾದಿಗಳು ಇದ್ದ ಪ್ರಯುಕ್ತ ನಿರ್ಣಯವಾಗುವುದಿಲ್ಲವೆನ್ನಕೂಡದು. ಅವುಗಳು ವಿಷ್ಣುವಿನಲ್ಲಿಯೇ ಸಾವಕಾಶಗಳಾಗುತ್ತವೆ.) (ಅಗ್ನ್ಯಾದಿನಾಮಕರ್ಮಗಳಿಗೆ ವಿಷ್ಣುವಿನಲ್ಲಿಯೇ ಸಾವಕಾಶತ್ವವು ಹೇಗೆ ತಿಳಿಯುತ್ತದೆ ಎಂದರೆ ಹೇತುಸಮರ್ಪಕವಾದ **ತಥಾ ದೃಷ್ಟ್ಯುಪದೇಶಾತ್** ಎನ್ನುವ ಅಂಶವನ್ನು ಉಪದೇಶಪದೋಕ್ತವಾದ ಶ್ರುತಿಯನ್ನುದಾಹರಿಸುತ್ತಾ ವ್ಯಾಖ್ಯಾನ ಮಾಡುತ್ತಾರೆ.) ಅಥಃ=ಪ್ರಕರಣಾಂತವು ಆರಂಭಿಸಲ್ಪಡುತ್ತದೆ. ಇಮಮಾತ್ಮಾನಂ=ಸ್ವೀಕಾರಾದಿಗಳನ್ನು ಮಾಡತಕ್ಕ, ಅಣೋರಣೀಯಾಂಸಂ =ಸೂಕ್ಷ್ಮದಿಂದಲೂ ಸೂಕ್ಷ್ಮನಾದ, ಪರತಃ ಪರಂ=ಮಹತ್ತಿನಿಂದಲೂ ಶ್ರೇಷ್ಠನಾದ, ವಿಶ್ವಂ= ಪೂರ್ಣನಾದ, ಹರಿಂ=ಶ್ರೀಹರಿಯನ್ನು, ಉಪಾಸೀತ=ಉಪಾಸನಾಮಾಡತಕ್ಕದ್ದು. ನ ಋತೇ ತ್ವತ್ಕ್ರಿಯತೇ ಇತ್ಯಾದಿಗಳಿಂದ ಸರ್ವಸ್ವತಂತ್ರನಾಗಿ ಸರ್ವಕ್ರಿಯೆಗಳನ್ನು ಮಾಡತಕ್ಕವನೆಂದು ಉಪಾಸನಾ ಮಾಡತಕ್ಕದ್ದು. ವಜ್ರಧರತ್ವ ಮೊದಲಾದ ಸರ್ವಲಿಂಗಗಳುಳ್ಳವನೆಂದು ಉಪಾಸನಾಮಾಡತಕ್ಕದ್ದು. ಜ್ಞಾನ ಆನಂದ ಮೊದಲಾದ ಸರ್ವಗುಣಪೂರ್ಣನೆಂದು ಉಪಾಸನಾಮಾಡತಕ್ಕದ್ದು. ಈತನ ಇಚ್ಛೆಯಿಂದಲೇ ಸರ್ವವೂ ಆಗುವುದರಿಂದ ಪೂರ್ಣಕಾಮನೆಂದು ಉಪಾಸನಾ ಮಾಡತಕ್ಕದ್ದು. ಭೇದ ಸಂಯೋಗ ವಿಭಾಗ ಮೊದಲಾದ ಸರ್ವ ಧರ್ಮಗಳೂ ಈತ್ವರಾಧೀನಗಳು, ಅಥವಾ ಸರ್ವಜ್ಞತ್ವ ಮೊದಲಾದ ಧರ್ಮಗಳುಳ್ಳವನು ಆದಕಾರಣ ಸರ್ವಧರ್ಮ ಎಂದು ಉಪಾಸನಾಮಾಡತಕ್ಕದ್ದು. ಎಲ್ಲಾ ಕಡೆಗಳಲ್ಲಿಯೂ ಈತನ ರೂಪವಿದೆ ಅಥವಾ ಇಡೀ ಜಗತ್ತು ಶ್ರೀ ಹರಿಗೆ ಪ್ರತಿಮಾಸ್ಥಾನವು ಆದ ಪ್ರಯುಕ್ತ ಸರ್ವರೂಪನೆಂದು ಉಪಾಸನಾಮಾಡತಕ್ಕದ್ದು.

**ಪೀಠಿಕೆ** ॥ ಹೀಗೆ ಉಪಾಸಕನಿಗೆ ಫಲವನ್ನು ಹೇಳುತ್ತಾರೆ—

**ಭಾಷ್ಯ ॥ ಸ ಯ ಏತಮೇವಮಾತ್ಮಾನಂ ವಿಶ್ವಂ ಹರಿಮಾದರಮುಪಾಸ್ತೇ । ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷು ದೇವೇಷು ಸರ್ವೇಷು**

**ವೇದೇಷು ಕಾಮಚಾರೋ ಭವತಿ। ಇತಿ ತತ್ತನ್ನಾಮಲಿಂಗಾದಿನಾ ತಸ್ಯೈವ ದೃಷ್ಟ್ಯುಪದೇಶಾತ್ । ಮಹೋಪನಿಷದಿ ॥ ೮ ॥**

ಭಾಷ್ಯಾರ್ಥ ॥ ಸಃ=ಪ್ರಸಿದ್ಧನಾದ, ಯಃ=ಯಾವ ಅಧಿಕಾರಿಯು, ಏತಮಾತ್ಮಾನಂ=ಈ ಆತ್ಮಶಬ್ದವಾಚ್ಯನಾದ, ವಿಶ್ವಂ = ಸರ್ವಗುಣಪರಿಪೂರ್ಣನಾದ, ಹರಿಮೇವ=ಶ್ರೀಹರಿಯನ್ನೇ, ಅರಾತ್= ಸಮೀಪದಲ್ಲಿ ತನ್ನ ಹೃದಯದಲ್ಲಿ, ಅರಂ=ಅತ್ಯಂತವಾಗಿ, ಉಪಾಸ್ತೇ=ಉಪಾಸನಾ ಮಾಡುತ್ತಾನೋ, ತಸ್ಯ ಏವಂ=ಹೀಗೆ ಅವ್ಯಾಪ್ತನಲ್ಲಿ ವ್ಯಾಪ್ತರೂಪವನ್ನುಪಾಸನಾಮಾಡತಕ್ಕವನಿಗೆ, ಸರ್ವೇಷು ಲೋಕೇಷು = ಎಲ್ಲಾ ಲೋಕಗಳಲ್ಲಿ, ಸರ್ವೇಷು ಭೂತೇಷು=ಎಲ್ಲಾ ಪ್ರಾಣಗಳಲ್ಲಿ ಅಥವಾ ಸರ್ವಲೋಕಗಳಲ್ಲಿದ್ದ ಪ್ರಾಣಗಳಲ್ಲಿ, ಸರ್ವೇಷು ದೇವೇಷು=ಎಲ್ಲಾ ದೇವತೆಗಳಲ್ಲಿಯೂ, ಸರ್ವೇಷು ವೇದೇಷು=ಎಲ್ಲಾ ವೇದಗಳಲ್ಲಿಯೂ, ಕಾಮಚಾರಃ ಭವತಿ=ಯಥೇಷ್ಟ ಸಂಚರಣ ಸರ್ವಪೂಜ್ಯತ್ವ ಸರ್ವಜ್ಞತ್ವಾದಿಗಳುಳ್ಳವನೂ ಆಗುತ್ತಾನೆ. ಇತಿ = ಹೀಗೆ, ಮಹೋಪನಿಷದಿ = ಮಹೋಪನಿಷತ್ತಿನಲ್ಲಿದೆ. (ಸೂತ್ರದಲ್ಲಿದ್ದ ತಥಾ ಶಬ್ದಾರ್ಥವನ್ನು ಹೇಳುತ್ತಾರೆ.) ತತ್ತನ್ನಾಮಲಿಂಗಾದಿನಾ=ಅಗ್ನ್ಯಾದಿನಾಮಲಿಂಗ ಆಯಾಯ ಕರ್ಮಾದಿಗಳಿಂದ ತಸ್ಯೈವ=ಆ ವಿಷ್ಣುವಿಗೇನೇ, (ಅಗ್ನ್ಯಾದಿಗಳಿಗೆ ಅಲ್ಲ) ದೃಷ್ಟ್ಯುಪದೇಶಾತ್= ಉಪಾಸನೆಯನ್ನು ಉಪದೇಶಿಸಿದುದರಿಂದ.

ವಿಶೇಷಾಂಶ ॥ ಶ್ರುತಿಯಲ್ಲಿ ಹರಿಮೇವ ಉಪಾಸ್ತೇ ಎನ್ನುವ ಅವಧಾರಣದಿಂದ ಶ್ರೀ ವಿಷ್ಣುವಿಗೇನೇ ಮುಖ್ಯವಾಗಿ ಅಗ್ನ್ಯಾದಿನಾಮವಿರುವುದೆಂದು ಅವಗತವಾಗುತ್ತದೆ.

ಪೀಠಿಕೆ ॥ ಹೀಗೆ ಅನ್ಯಶ್ರುತಿಲಿಂಗಾದಿಗಳು ವಿಷ್ಣುವಿನಲ್ಲಿ ಸಾವಕಾಶಗಳಾಗಿವೆ ಎಂದುಪಪಾದಿಸುವದಕ್ಕಾಗಿ ತಥಾ ಎನ್ನುವ ಅಂಶವನ್ನು ವ್ಯಾಖ್ಯಾನ ಮಾಡಿ ಆತ್ಮಶಬ್ದಾದಿಗಳೂ ಅನ್ಯತ್ರ ನಿರವಕಾಶಗಳಾಗಿವೆ ಎನ್ನುವುದಕ್ಕಾಗಿ ಅಸಂಭವಾತ್ ಎನ್ನುವ ಅಂಶವನ್ನು ಪ್ರಮಾಣವನ್ನುದಾಹರಿಸುತ್ತಾ ವ್ಯಾಖ್ಯಾನ ಮಾಡುತ್ತಾರೆ. ಅಥವಾ ಆತ್ಮಶಬ್ದಶ್ರುತಿಸಮಾಖ್ಯೆಗಳಿಂದ ಮಾತ್ರ ಅಲ್ಲ, ಮತ್ತೆ ಪ್ರಕರಣಬಲದಿಂದಲೂ ವೈಶ್ವಾನರನಿಗೆ ವಿಷ್ಣುತ್ವ ನಿಶ್ಚಯವಾಗುತ್ತದೆ ಎನ್ನುತ್ತಾರೆ—

**ಭಾಷ್ಯ ॥ ಅನಾತ್ಮತ್ವಾದನಾತ್ಮಾನ ಊನತ್ವಾದ್ಗುಣರಾಶಿತಃ । ಅಬ್ರಹ್ಮಾಣಃ ಪರೇ ಸರ್ವೇ ಬ್ರಹ್ಮಾತ್ಮ ವಿಷ್ಣುರೇವ ಹಿ ॥ ಇತ್ಯಾದಿನಾ ಕೋ ನ ಆತ್ಮಾ ಕಿಂ ಬ್ರಹ್ಮ (ಛಾ.ಉ.೫.೧೧.೧.) ಇತ್ಯಾರಂಭಾಚ್ಚಾನ್ಯೇಷಾಮಸಂಭವಾದ್ವಿಷ್ಣು ರೇವ ವೈಶ್ವಾನರಃ ॥ ೯ ॥**

ಭಾಷ್ಯಾರ್ಥ ॥ ಕೋ ನ ಆತ್ಮಾ ಕಿಂ ಬ್ರಹ್ಮ (ಎಂದು ವಿಚಾರಮಾಡುತ್ತಿರುವ, ಪ್ರತಿ ಸಂವತ್ಸರದಲ್ಲಿಯೂ ಯಜ್ಞವನ್ನು ಮಾಡುವುದರಿಂದ ಮಹಾಶಾಲ ಎಂದು ಹೆಸರುಳ್ಳ ಮಹಾಮುನಿಗಳು ಐವರಿಂದ ಪ್ರಶ್ನಿಸಲ್ಪಟ್ಟ ಅಶ್ವಪತಿನಾಮಕರಾಜನು ವೈಶ್ವಾನರನನ್ನು ಉಪದೇಶ ಮಾಡಿರುವನು.) ನಃ= ನಮ್ಮಿಂದ ಉಪಾಸ್ಯನಾದ, ಆತ್ಮಾ=ಆತ್ಮನು, ಕಃ=ಎಂತಹ ಲಕ್ಷಣಗಳುಳ್ಳವನು, ಬ್ರಹ್ಮ=ಪರಬ್ರಹ್ಮನು, ಕಿಂ = ಎಂತಹ ಲಕ್ಷಣಗಳುಳ್ಳವನು? ಇತ್ಯಾರಂಭಾಚ್ಚ=ಎಂದು ಆರಂಭಿಸಿ ಅಧ್ಯಯನ ಮಾಡಿದುದರಿಂದಲೂ (ಪ್ರಕರಣದಿಂದಲೂ) ವೈಶ್ವಾನರನು ವಿಷ್ಣುವೇ. (ಇದರ ಉಪಕ್ರಮದಲ್ಲಿ ಬ್ರಹ್ಮಆತ್ಮಶಬ್ದಗಳು

ಶ್ರುತಗಳಾದಾಗ್ಯೂ ಈ ವೈಶ್ವಾನರ ವಿದ್ಯೆಗೆ ವಿಷ್ಣುಪ್ರಕರಣತ್ವವು ಹೇಗೆಂದರೆ) ಹಿ = ಯಾವಕಾರಣದಿಂದ, ಪರೇ=ವಿಷ್ಣುವಿನಿಂದ ಇತರರಾದ, ಸರ್ವೇ=ಎಲ್ಲರೂ, ಅನಾತ್ತತ್ವಾತ್=ಗುಣಗಳಿಂದ ಅವ್ಯಾಪ್ತರಾದುದರಿಂದ, ಸರ್ವೋತ್ಕೃಷ್ಟರೆಂದು ವೈದಿಕರಿಂದ ಸ್ವೀಕರಿಸಿಲ್ಪಡದೆ ಇದ್ದುದರಿಂದಲೂ, ಅನಾತ್ಮಾನಃ=ಅನಾತ್ಮಶಬ್ದಮುಖ್ಯಾರ್ಥರು, ಹಿ=ಯಾವ ಕಾರಣದಿಂದ, ಗುಣರಾಶಿತಃ=ಬ್ರಹ್ಮಶಬ್ದ ವಾಚ್ಯರಲ್ಲ ತಸ್ಮಾತ್=ಆದುದರಿಂದ, ಬ್ರಹ್ಮ=ಬ್ರಹ್ಮಶಬ್ದವಾಚ್ಯನು, ಆತ್ಮಾ=ಆತ್ಮಶಬ್ದವಾಚ್ಯನು, ವಿಷ್ಣುರೇವ= ವಿಷ್ಣುವೇ ಸಿದ್ಧನಾಗುತ್ತಾನೆ. ಇತ್ಯಾದಿನಾ=ಇದೇ ಮೊದಲಾದ ಪ್ರಮಾಣದಿಂದ (ಆದಿಪದದಿಂದ ಬ್ರಹ್ಮಶಬ್ದಃ ಪರೇ ವಿಷ್ಣೌ ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.) ಅನ್ಯೇಷಾಂ=ವಿಷ್ಣುವ್ಯತಿರಿಕ್ತರಿಗೆ, ಅಸಂಭವಾತ್=ಆತ್ಮ ಶಬ್ದಾರ್ಥವಾದ ವ್ಯಾಪ್ತತ್ವ ಬ್ರಹ್ಮಶಬ್ದಾರ್ಥವಾದ ಗುಣಪೂರ್ಣತ್ವಗಳು ಕೂಡದಿರುವುದರಿಂದ ಅಥವಾ ಅನಾತ್ತತ್ವಾತ್ ಇತ್ಯಾದಿ ಪ್ರಮಾಣಗಳಿಂದ ವಿಷ್ಣುವ್ಯತಿರಿಕ್ತರಿಗೆ ಆತ್ಮತ್ವ ಬ್ರಹ್ಮತ್ವಗಳು ಕೂಡುವುದಿಲ್ಲವೆಂದು ಹೇಳಿದ್ದರಿಂದ ವೈಶ್ವಾನರನು ವಿಷ್ಣುವೇ.

**ವಿಶೇಷಾಂಶ ॥** ಆತ್ಮಶಬ್ದಾದಿಗಳು ಅನ್ಯತ್ರ ಅನವಕಾಶಗಳಾಗಿವೆ ಎನ್ನುವುದಕ್ಕೆ ಸಾಧಕವಾಗಿರು ವುದರಿಂದ ಎರಡು ಕಡೆಗಳಲ್ಲಿಯೂ ಸಂಭವಾತ್ ಎನ್ನುವ ಹೇತುವನ್ನು ಇಟ್ಟುಕೊಳ್ಳಬೇಕು ಎಂದು ಉಕ್ತವಾಯಿತು.

**ಪೀಠಿಕೆ ॥** ಶ್ರುತಿಸಮಾಖ್ಯೆಯಿಂದಲೂ ವೈಶ್ವಾನರನಿಗೆ ವಿಷ್ಣುತ್ವವನ್ನು ಉಪಪಾದಿಸುವುದಕ್ಕಾಗಿ ಪ್ರವೃತ್ತವಾದ ಪುರುಷವಿಧಮಪ್ಯೇನಮಧೀಯತೇ ಎನ್ನುವ ಅಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಚಂದ್ರಮಾ ಮನಸೋ ಜಾತಶ್ಚಕ್ಷೋಃಸೂರ್ಯೋ ಅಜಾಯತ** (ತೈ. ಆ.೩.೧೨.)
**ಇತ್ಯಾದಿನಾ ಯಃ ಪುರುಷಾಖ್ಯೋ ವಿಷ್ಣುರಭಿಹಿತಃ ತದ್ವಿಧಮೇವಾ ತ್ರ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ** (ಛಾ. ಉ.೫.೧೮.೨.)
**ಇತ್ಯಾದಿನ್ಯೆನಂ ವೈಶ್ವಾನರಮಧೀಯತೇ ॥ ೧೦ ॥**

**ಭಾಷ್ಯಾರ್ಥ ॥** (ಹಿ=ಯಾವಕಾರಣದಿಂದ ಪುರುಷಸೂಕ್ತದಲ್ಲಿ) ಮನಸಃ=ಮನಸ್ಸಿನಿಂದ, ಚಂದ್ರಮಾಃ=ಚಂದ್ರನು, ಜಾತಃ= ಹುಟ್ಟಿದನು, ಚಕ್ಷೋಃ=ಚಕ್ಷುಸ್ಸಿನಿಂದ, ಸೂರ್ಯಃ=ಸೂರ್ಯನು ಅಜಾಯತ=ಹುಟ್ಟಿದನು, ಇತ್ಯಾದಿನಾ=ಇದು ಮೊದಲಾದಶಬ್ದದಿಂದ, (ಆದಿಪದದಿಂದ ಶೀರ್ಷ್ಣೋದ್ಯೌಃ ಸಮವರ್ತ ತ, ಪ್ರಾಣಾದ್ವಾಯುರಜಾಯತ, ಪದ್ಭ್ಯಾಂ ಭೂಮಿಃ ಇತ್ಯಾದಿಗಳನ್ನು ಇಟ್ಟು ಕೊಳ್ಳಬೇಕು.) ಯಃ ಪುರುಷಾಖ್ಯಃ ವಿಷ್ಣುಃ=ವಿಷ್ಣುವು ದ್ಯುಭ್ವಾದಿಗಳನ್ನು ಹುಟ್ಟಿಸತಕ್ಕ ಎಂತಹ ಶೀರ್ಷಾದಿಗಳುಳ್ಳವನಾಗಿ, ಅಭಿಹಿತಃ = ಹೇಳಲ್ಪಟ್ಟಿದ್ದಾನೋ, ತದ್ವಿಧಮೇವ =ಅಂತಹ ದ್ಯುಭ್ವಾದಿಜನಕ ಶೀರ್ಷಾದಿಮತ್ವಪ್ರಕಾರಗಳಿಂದ ಯುಕ್ತನಾದವನನ್ನೇ, ಅತ್ರ=ಛಾಂದೋಗ್ಯದಲ್ಲಿ ಮೂರ್ಧೈವ ಸುತೇಜಾಃ=ಇತ್ಯಾದಿವಾಕ್ಯದಿಂದ, (ಆದಿಪದದಿಂದ ಸಂದೇಹೋ ಬಹುಲೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದೌ ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.) ಏನಂ ವೈಶ್ವಾನರಂ = ಈ ವೈಶ್ವಾನರನನ್ನಾಗಿ, ಅಧೀಯತೇ=ಛಂದೋಗರು ಅಧ್ಯಯನ ಮಾಡುತ್ತಾರೋ, (ಆದಪ್ರಯುಕ್ತ ಪುರುಷಸೂಕ್ತ ಸಮಾಖ್ಯೆಯಿಂದಲೂ ವೈಶ್ವಾನರನು ವಿಷ್ಣುವೇ.)

**ವೇದೇಷು ಕಾಮಚಾರೋ ಭವತಿ ಇತಿ ತತ್ತನ್ನಾಮಲಿಂಗಾದಿನಾ ತಸ್ಯೈವ ದೃಷ್ಟ್ಯುಪದೇಶಾತ್ । ಮಹೋಪನಿಷದಿ ॥ ೮ ॥**

ಭಾಷ್ಯಾರ್ಥ ॥ ಸಃ=ಪ್ರಸಿದ್ಧನಾದ, ಯಃ=ಯಾವ ಅಧಿಕಾರಿಯು, ಏತಮಾತ್ಮಾನಂ=ಈ ಆತ್ಮಶಬ್ದವಾಚ್ಯನಾದ, ವಿಶ್ವಂ = ಸರ್ವಗುಣಪರಿಪೂರ್ಣನಾದ, ಹರಿಮೇವ=ಶ್ರೀಹರಿಯನ್ನೇ, ಆರಾತ್= ಸಮೀಪದಲ್ಲಿ ತನ್ನ ಹೃದಯದಲ್ಲಿ, ಅರಂ=ಅತ್ಯಂತವಾಗಿ, ಉಪಾಸ್ತೇ=ಉಪಾಸನಾ ಮಾಡುತ್ತಾನೋ, ತಸ್ಯ ಏವಂ=ಹೀಗೆ ಅವ್ಯಾಪ್ತನಲ್ಲಿ ವ್ಯಾಪ್ತರೂಪವನ್ನುಪಾಸನಾಮಾಡತಕ್ಕವನಿಗೆ, ಸರ್ವೇಷು ಲೋಕೇಷು = ಎಲ್ಲಾ ಲೋಕಗಳಲ್ಲಿ, ಸರ್ವೇಷು ಭೂತೇಷು=ಎಲ್ಲಾ ಪ್ರಾಣಗಳಲ್ಲಿ ಅಥವಾ ಸರ್ವಲೋಕಗಳಲ್ಲಿದ್ದ ಪ್ರಾಣಗಳಲ್ಲಿ, ಸರ್ವೇಷು ದೇವೇಷು=ಎಲ್ಲಾ ದೇವತೆಗಳಲ್ಲಿಯೂ, ಸರ್ವೇಷು ವೇದೇಷು=ಎಲ್ಲಾ ವೇದಗಳಲ್ಲಿಯೂ, ಕಾಮಚಾರಃ ಭವತಿ=ಯಥೇಷ್ಟ ಸಂಚರಣ ಸರ್ವಪೂಜ್ಯತ್ವ ಸರ್ವಜ್ಞತ್ವಾದಿಗಳುಳ್ಳವನೂ ಆಗುತ್ತಾನೆ. ಇತಿ = ಹೀಗೆ, ಮಹೋಪನಿಷದಿ = ಮಹೋಪನಿಷತ್ತಿನಲ್ಲಿದೆ. (ಸೂತ್ರದಲ್ಲಿದ್ದ ತಥಾ ಶಬ್ದಾರ್ಥವನ್ನು ಹೇಳುತ್ತಾರೆ.) ತತ್ತನ್ನಾಮಲಿಂಗಾದಿನಾ=ಅಗ್ನ್ಯಾದಿನಾಮಲಿಂಗ ಆಯಾಯ ಕರ್ಮಾದಿಗಳಿಂದ ತಸ್ಯೈವ=ಆ ವಿಷ್ಣುವಿಗೇನೇ, (ಅಗ್ನ್ಯಾದಿಗಳಿಗೆ ಅಲ್ಲ) ದೃಷ್ಟ್ಯುಪದೇಶಾತ್= ಉಪಾಸನೆಯನ್ನು ಉಪದೇಶಿಸಿರುದುದರಿಂದ.

ವಿಶೇಷಾಂಶ ॥ ಶ್ರುತಿಯಲ್ಲಿ ಹರಿಮೇವ ಉಪಾಸ್ತೇ ಎನ್ನುವ ಅವಧಾರಣದಿಂದ ಶ್ರೀ ವಿಷ್ಣುವಿಗೇನೇ ಮುಖ್ಯವಾಗಿ ಅಗ್ನ್ಯಾದಿನಾಮವಿರುವುದೆಂದು ಅವಗತವಾಗುತ್ತದೆ.

ಪೀಠಿಕೆ ॥ ಹೀಗೆ ಅನ್ಯಶ್ರುತಿಲಿಂಗಾದಿಗಳು ವಿಷ್ಣುವಿನಲ್ಲಿ ಸಾವಕಾಶಗಳಾಗಿವೆ ಎಂದುಪಪಾದಿಸುವದಕ್ಕಾಗಿ ತಥಾ ಎನ್ನುವ ಅಂಶವನ್ನು ವ್ಯಾಖ್ಯಾನ ಮಾಡಿ ಆತ್ಮಶಬ್ದಾದಿಗಳೂ ಅನ್ಯತ್ರ ನಿರವಕಾಶಗಳಾಗಿವೆ ಎನ್ನುವುದಕ್ಕಾಗಿ ಅಸಂಭವಾತ್ ಎನ್ನುವ ಅಂಶವನ್ನು ಪ್ರಮಾಣವನ್ನುದಾಹರಿಸುತ್ತಾ ವ್ಯಾಖ್ಯಾನ ಮಾಡುತ್ತಾರೆ. ಅಥವಾ ಆತ್ಮಶಬ್ದಶ್ರುತಿಸಮಾಖ್ಯೆಗಳಿಂದ ಮಾತ್ರ ಅಲ್ಲ, ಮತ್ತೆ ಪ್ರಕರಣಬಲದಿಂದಲೂ ವೈಶ್ವಾನರನಿಗೆ ವಿಷ್ಣುತ್ವ ನಿಶ್ಚಯವಾಗುತ್ತದೆ ಎನ್ನುತ್ತಾರೆ—

**ಭಾಷ್ಯ ॥ ಅನಾತ್ಮತ್ವಾದನಾತ್ಮಾನ ಊನತ್ವಾದ್ಗುಣರಾಶಿತಃ । ಅಬ್ರಹ್ಮಾಣಃ ಪರೇ ಸರ್ವೇ ಬ್ರಹ್ಮಾತ್ಮ ವಿಷ್ಣುರೇವ ಹಿ ॥ ಇತ್ಯಾದಿನಾ ಕೋ ನ ಆತ್ಮಾ ಕಿಂ ಬ್ರಹ್ಮ (ಛಾ.ಉ.೫.೧೧.೧.) ಇತ್ಯಾರಂಭಾಚ್ಚಾನ್ಯೇಷಾಮಸಂಭವಾದ್ವಿಷ್ಣು ರೇವ ವೈಶ್ವಾನರಃ ॥ ೯ ॥**

ಭಾಷ್ಯಾರ್ಥ ॥ ಕೋ ನ ಆತ್ಮಾ ಕಿಂ ಬ್ರಹ್ಮ (ಎಂದು ವಿಚಾರಮಾಡುತ್ತಿರುವ, ಪ್ರತಿ ಸಂವತ್ಸರದಲ್ಲಿಯೂ ಯಜ್ಞವನ್ನು ಮಾಡುವುದರಿಂದ ಮಹಾಶಾಲ ಎಂದು ಹೆಸರುಳ್ಳ ಮಹಾಮುನಿಗಳು ಐವರಿಂದ ಪ್ರಶ್ನಿಸಲ್ಪಟ್ಟ ಅಶ್ವಪತಿನಾಮಕರಾಜನು ವೈಶ್ವಾನರನನ್ನು ಉಪದೇಶ ಮಾಡಿರುವನು.) ನಃ= ನಮ್ಮಿಂದ ಉಪಾಸ್ಯನಾದ, ಆತ್ಮಾ=ಆತ್ಮನು, ಕಃ=ಎಂತಹ ಲಕ್ಷಣಗಳುಳ್ಳವನು, ಬ್ರಹ್ಮ=ಪರಬ್ರಹ್ಮನು, ಕಿಂ = ಎಂತಹ ಲಕ್ಷಣಗಳುಳ್ಳವನು? ಇತ್ಯಾರಂಭಾಚ್ಚ=ಎಂದು ಆರಂಭಿಸಿ ಅಧ್ಯಯನ ಮಾಡಿದುದರಿಂದಲೂ (ಪ್ರಕರಣದಿಂದಲೂ) ವೈಶ್ವಾನರನು ವಿಷ್ಣುವೇ. (ಇದರ ಉಪಕ್ರಮದಲ್ಲಿ ಬ್ರಹ್ಮಆತ್ಮಶಬ್ದಗಳು

ಶ್ರುತಗಳಾದಾಗ್ಯೂ ಈ ವೈಶ್ವಾನರ ವಿದ್ಯೆಗೆ ವಿಷ್ಣುಪ್ರಕರಣತ್ವವು ಹೇಗೆಂದರೆ) ಹಿ = ಯಾವಕಾರಣದಿಂದ, ಪರೇ= ವಿಷ್ಣುವಿನಿಂದ ಇತರರಾದ, ಸರ್ವೇ= ಎಲ್ಲರೂ, ಅನಾತ್ಮತ್ವಾತ್= ಗುಣಗಳಿಂದ ಅಪ್ರಾಪ್ತರಾದುದರಿಂದ, ಸರ್ವೋತ್ಕೃಷ್ಟರೆಂದು ವೈದಿಕರಿಂದ ಸ್ವೀಕರಿಸಲ್ಪಡದೆ ಇದ್ದುದರಿಂದಲೂ, ಅನಾತ್ಮಾನಃ= ಅನಾತ್ಮಶಬ್ದಮುಖ್ಯಾರ್ಥರು, ಹಿ= ಯಾವ ಕಾರಣದಿಂದ, ಗುಣರಾಶಿತಃ= ಬ್ರಹ್ಮಶಬ್ದ ವಾಚ್ಯರಲ್ಲ ತಸ್ಮಾತ್= ಆದುದರಿಂದ, ಬ್ರಹ್ಮ= ಬ್ರಹ್ಮಶಬ್ದವಾಚ್ಯನು, ಆತ್ಮಾ= ಆತ್ಮಶಬ್ದವಾಚ್ಯನು, ವಿಷ್ಣುರೇವ= ವಿಷ್ಣುವೇ ಸಿದ್ಧನಾಗುತ್ತಾನೆ. ಇತ್ಯಾದಿನಾ= ಇದೇ ಮೊದಲಾದ ಪ್ರಮಾಣದಿಂದ (ಆದಿಪದದಿಂದ ಬ್ರಹ್ಮಶಬ್ದಃ ಪರೇ ವಿಷ್ಣೌ ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.) ಅನ್ಯೇಷಾಂ= ವಿಷ್ಣುವ್ಯತಿರಿಕ್ತರಿಗೆ, ಅಸಂಭವಾತ್= ಆತ್ಮ ಶಬ್ದಾರ್ಥವಾದ ವ್ಯಾಪ್ತತ್ವ ಬ್ರಹ್ಮಶಬ್ದಾರ್ಥವಾದ ಗುಣಪೂರ್ಣತ್ವಗಳು ಕೂಡದಿರುವುದರಿಂದ ಅಥವಾ ಅನಾತ್ಮತ್ವಾತ್ ಇತ್ಯಾದಿ ಪ್ರಮಾಣಗಳಿಂದ ವಿಷ್ಣುವ್ಯತಿರಿಕ್ತರಿಗೆ ಆತ್ಮತ್ವ ಬ್ರಹ್ಮತ್ವಗಳು ಕೂಡುವುದಿಲ್ಲವೆಂದು ಹೇಳಿದ್ದರಿಂದ ವೈಶ್ವಾನರನು ವಿಷ್ಣುವೇ.

ವಿಶೇಷಾಂಶ ॥ ಆತ್ಮಶಬ್ದಾದಿಗಳು ಅನ್ಯತ್ರ ಅನವಕಾಶಗಳಾಗಿವೆ ಎನ್ನುವುದಕ್ಕೆ ಸಾಧಕವಾಗಿರುವುದರಿಂದ ಎರಡು ಕಡೆಗಳಲ್ಲಿಯೂ ಸಂಭವಾತ್ ಎನ್ನುವ ಹೇತುವನ್ನು ಇಟ್ಟುಕೊಳ್ಳಬೇಕು ಎಂದು ಉಕ್ತವಾಯಿತು.

ಪೀಠಿಕೆ ॥ ಶ್ರುತಿಸಮಾಖ್ಯೆಯಿಂದಲೂ ವೈಶ್ವಾನರನಿಗೆ ವಿಷ್ಣುತ್ವವನ್ನು ಉಪಪಾದಿಸುವುದಕ್ಕಾಗಿ ಪ್ರವೃತ್ತವಾದ ಪುರುಷವಿಧಮಪ್ಯೇನಮಧೀಯತೇ ಎನ್ನುವ ಅಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಚಂದ್ರಮಾ ಮನಸೋ ಜಾತಶ್ಚಕ್ಷೋಸ್ಸೂರ್ಯೋ ಅಜಾಯತ** (ತೈ. ಆ.೩.೧೨.)
**ಇತ್ಯಾದಿನಾ ಯಃ ಪುರುಷಾಖ್ಯೋ ವಿಷ್ಣುರಭಿಹಿತಃ ತದ್ವಿಧಮೇವಾ ತ್ರ ಮೂರ್ಧೈವ**
**ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ** (ಛಾ. ಉ.೫.೧೮.೨.)
**ಇತ್ಯಾದಿನೈನಂ ವೈಶ್ವಾನರಮಧೀಯತೇ** ॥ ೧೦ ॥

ಭಾಷ್ಯಾರ್ಥ ॥ (ಹಿ= ಯಾವಕಾರಣದಿಂದ ಪುರುಷಸೂಕ್ತದಲ್ಲಿ) ಮನಸಃ= ಮನಸ್ಸಿನಿಂದ, ಚಂದ್ರಮಾಃ= ಚಂದ್ರನು, ಜಾತಃ= ಹುಟ್ಟಿದನು, ಚಕ್ಷೋಃ= ಚಕ್ಷುಸ್ಸಿನಿಂದ, ಸೂರ್ಯಃ= ಸೂರ್ಯನು ಅಜಾಯತ= ಹುಟ್ಟಿದನು, ಇತ್ಯಾದಿನಾ= ಇದು ಮೊದಲಾದಶಬ್ದದಿಂದ, (ಆದಿಪದದಿಂದ **ಶೀರ್ಷ್ಣೋ ದ್ಯೌಃ ಸಮವರ್ತ ತ, ಪ್ರಾಣಾದ್ವಾಯುರಜಾಯತ, ಪದ್ಭ್ಯಾಂ ಭೂಮಿಃ** ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.) ಯಃ ಪುರುಷಾಖ್ಯಃ ವಿಷ್ಣುಃ= ವಿಷ್ಣುವು ದ್ಯುಭ್ವಾದಿಗಳನ್ನು ಹುಟ್ಟಿಸತಕ್ಕ ಎಂತಹ ಶೀರ್ಷಾದಿಗಳುಳ್ಳವನಾಗಿ, ಅಭಿಹಿತಃ = ಹೇಳಲ್ಪಟ್ಟಿದ್ದಾನೋ, ತದ್ವಿಧಮೇವ = ಅಂತಹ ದ್ಯುಭ್ವಾದಿಜನಕ ಶೀರ್ಷಾದಿಮತ್ವಪ್ರಕಾರಗಳಿಂದ ಯುಕ್ತನಾದವನನ್ನೇ, ಅತ್ರ= ಛಾಂದೋಗ್ಯದಲ್ಲಿ ಮೂರ್ಧೈವ ಸುತೇಜಾಃ= ಇತ್ಯಾದಿವಾಕ್ಯದಿಂದ, (ಆದಿಪದದಿಂದ **ಸಂದೇಹೋ ಬಹುಲೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದೌ** ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.) ಏನಂ ವೈಶ್ವಾನರಂ = ಈ ವೈಶ್ವಾನರನ್ನಾಗಿ, ಅಧೀಯತೇ= ಛಂದೋಗರು ಅಧ್ಯಯನ ಮಾಡುತ್ತಾರೋ, (ಆದಪ್ರಯುಕ್ತ ಪುರುಷಸೂಕ್ತ ಸಮಾಖ್ಯೆಯಿಂದಲೂ ವೈಶ್ವಾನರನು ವಿಷ್ಣುವೇ.)

**ವಿಶೇಷಾಂಶ ॥** ಇಲ್ಲಿ ಚಂದ್ರಮಾಃ ಎನ್ನುವ ವಾಕ್ಯವು ಪ್ರತೀತಿತ್ವೇನ ಗೃಹೀತವಾಗಿದೆ. **ಚಕ್ಷೋಃ ಸೂರ್ಯೋ ಅಜಾಯತ** ಎನ್ನುವುದು ಉದಾಹರಣವಾಕ್ಯವು.

**ಪೀಠಿಕೆ ॥** ಹಾಗಾದರೆ ಪುರುಷಸೂಕ್ತವು ವಿಷ್ಣುಪರವಾಗಿದ್ದರೆ ಅದರ ಸಮಾಖ್ಯೆಯಿಂದ ಈ ವಿದ್ಯೆಯು ವಿಷ್ಣುಪರವಾಗಬಹುದಿತ್ತು. ಅದೇವೇ ಹೇಗೆಂದರೆ—

**ಭಾಷ್ಯ ॥ ಚಶಬ್ದೇನ ಸಕಲವೇದತಂತ್ರಪುರಾಣಾದಿಷು ವಿಷ್ಣುಪರತ್ವಂ ಪುರುಷಸೂಕ್ತಸ್ಯ ದರ್ಶಯತಿ ॥ ೧೧ ॥**

**ಭಾಷ್ಯಾರ್ಥ ॥** ಸೂತ್ರಘಟಕ ಚ ಶಬ್ದದಿಂದ ಸಕಲವೇದತಂತ್ರಪುರುಣಾದಿಗಳಲ್ಲಿ ಪುರುಷಸೂಕ್ತಕ್ಕೆ ವಿಷ್ಣುಪರತ್ವವು ಪ್ರಸಿದ್ಧವೆಂದು (ಸೂತ್ರಕಾರರು) ಸೂಚಿಸುತ್ತಾರೆ.

**ವಿಶೇಷಾಂಶ ॥** (೧) ಶ್ರುತಿಗೆ ಸರ್ವಕ್ಕಿಂತಲೂ ಆಧಿಕ್ಯವಿದ್ದುದರಿಂದ ಪ್ರಥಮತಃ ಪ್ರತಿಜ್ಞೆ ಮಾಡಿದ್ದು. (೨) ಆತ್ಮಶಬ್ದಸ್ಮೃತಿ ಸಮಾಖ್ಯಾ ಪ್ರಕರಣಗಳ ಸಮುಚ್ಚಯದಂತೆಯೇ ಪ್ರಕರಣ ಶ್ರುತಿಗಳ ಸಮುಚ್ಚಯವೂ ಅಪಿ ಪದದಿಂದಲೇ ಸಿದ್ಧವಾದ ಪ್ರಯುಕ್ತ ಚ ಶಬ್ದವು ಆ ಅರ್ಥದಲ್ಲಿ ಕುಂಠಿತ ಶಕ್ತಿಯುಳ್ಳದ್ದು ಅಲ್ಲ.

**ಪೀಠಿಕೆ ॥** ಆ ವೇದಾದಿಗಳು ಯಾವವು ಎಂದರೆ— ಶ್ರುತಿಯು ಸಾಕ್ಷಾತ್ ಪ್ರತಿಜ್ಞಾತವಾದ ಅರ್ಥವನ್ನು ಸಾಧಿಸದೆ ಇರುವುದರಿಂದ ಪ್ರತಿಜ್ಞಾಕ್ರಮವನ್ನು ಅತಿಕ್ರಮಿಸಿ ಸಾಕ್ಷಾತ್ ಪ್ರತಿಜ್ಞಾತವಾದ ಅರ್ಥಕ್ಕೇನೇ ಸಾಧಕವಾಗಿರುವುದರಿಂದ ಆದಿಯಲ್ಲಿ ಪುರಾಣವಾಕ್ಯವನ್ನು ಹೇಳುತ್ತಾರೆ.

**ಭಾಷ್ಯ ॥ ತಥಾ ಚ ಬ್ರಾಹ್ಮೇ— ಯಥೈವ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಂ ।
ತಥೈವ ಮೇ ಮನೋ ನಿತ್ಯಂ ಭೂಯಾದ್ವಿಷ್ಣುಪರಾಯಣಂ ॥ ಇತಿ ॥ ೧೨ ॥**

**ಭಾಷ್ಯಾರ್ಥ ॥** ತಥಾ ಬ್ರಾಹ್ಮೇ ಚ ಸೂತ್ರದಲ್ಲಿ ಪುರುಷಸೂಕ್ತಕ್ಕೆ ವಿಷ್ಣುಪರತ್ವವು ಸಿದ್ಧವಾಗಿದೆ ಎಂದು ಹೇಗೆ ಹೇಳಲ್ಪಟ್ಟಿದೆಯೋ ಹಾಗೆಯೇ ಬ್ರಾಹ್ಮಪುರಾಣದಲ್ಲಿಯೂ ಹೇಳಲ್ಪಟ್ಟಿದೆ. ಹೇಗೆ ಪುರುಷಸೂಕ್ತವು ನಿಯಮದಿಂದ ವಿಷ್ಣುವಿನಲ್ಲಿಯೇ ಮಹಾತಾತ್ಪರ್ಯವುಳ್ಳದ್ದೋ, ಹಾಗೆಯೇ ನನ್ನ ಮನಸ್ಸು ಯಾವಾಗಲೂ ವಿಷ್ಣುವಿನಲ್ಲಿ ತಾತ್ಪರ್ಯವುಳ್ಳದ್ದು ಆಗಲಿ ಹೀಗೆ ಬ್ರಾಹ್ಮಪುರಾಣದಲ್ಲಿ ಹೇಳಿದೆ.

**ವಿಶೇಷಾಂಶ ॥** ಪೂರ್ವದಲ್ಲಿ ಸಿದ್ಧವಾದ ಅರ್ಥವೇ ದೃಷ್ಟಾಂತವಾಗುವುದರಿಂದ ಈ ಬ್ರಾಹ್ಮವಚನದಿಂದ ವಿವಕ್ಷಿತಾರ್ಥವು ತಿಳಿಯಲ್ಪಡುತ್ತದೆ.

**ಪೀಠಿಕೆ ॥** ಪ್ರತಿಜ್ಞಾತವಾದ ಶ್ರುತಿಯನ್ನು ತೋರಿಸುವುದಕ್ಕಾಗಿ ಪ್ರಥಮದಲ್ಲಿಯೇ ಸ್ಥಾನವನ್ನು ಹೇಳುತ್ತಾರೆ—

**ಭಾಷ್ಯ ॥ ಚತುರ್ವೇದಶಿಖಾಯಾಂ— ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರ-ಪಾತ್ ಇತಿ ಏಷ ಹ್ಯೇವಾಚಿಂತ್ಯಃ ಪರಃ ಪರಮೋ ಹರಿರಾದಿರನಾದಿರನಂತೋಽನಂತಶೀರ್ಷೋಽನಂತಾಕ್ಷೋಽನಂತಬಾಹುರನಂತಗುಣೋಽನಂತರೂಪಃ । ಇತಿ ॥ ೧೩ ॥**

ಭಾಷ್ಯಾರ್ಥ ॥ ಚತುರ್ವೇದಶಿಖಾದಲ್ಲಿಯೂ ಉಕ್ತವಾಗಿದೆ. (ಇಲ್ಲಿ ಚತುರ್ವೇದ ಶಿಖಾಶ್ರುತಿಯು ಸಹಸ್ರಎಂದಾರಂಭಿಸಿ ಸಹಸ್ರಾಪಾತ್‌ಎನ್ನುವತನಕ ಪುರುಷಸೂಕ್ತವನ್ನು ಉಪನ್ಯಾಸಮಾಡಿಕೊಂಡು ವಿಷ ಹ್ಯೇವ ಎನ್ನುವುದರಿಂದ ಸಹಸ್ರ ಶೀರ್ಷಾ ಪುರುಷಃ ಎಂದು ಹೇಳಲ್ಪಟ್ಟನು ಶ್ರೀಹರಿಯೇ. ಮತ್ತೊಬ್ಬನಲ್ಲ ಎನ್ನುವ ಸೂಕ್ತವನ್ನು ವಿಷ್ಣುಪರವನ್ನಾಗಿ ವ್ಯಾಖ್ಯಾನ ಮಾಡುತ್ತದೆ.) ವಿಷಃ ಸಹಸ್ರಶೀರ್ಷಾ ಪುರುಷ ಎಂದು ಹೇಳಲ್ಪಟ್ಟವನು, ಹರಿರೇವ = ಶ್ರೀಹರಿಯೇ (ಮತ್ತೊಬ್ಬನಲ್ಲ) ಪರಃ = ವಿಲಕ್ಷಣನು, ಅಚಿಂತ್ಯಃ=ಮನಸ್ಸಿನಿಂದಲೂ ಆಲೋಚಿಸಲಶಕ್ಯನು, ಪರಮಃ = ಉತ್ತಮನು, ಆದಿಃ= ಕಾರಣಭೂತನು, ಅನಾದಿಃ = ಉತ್ಪತ್ತಿಶೂನ್ಯನು, ಅನಂತಃ = ನಾಶಶೂನ್ಯನು, ಅಥವಾ ಸ್ವರೂಪತಃ ಅಪರಿಚ್ಛಿನ್ನನು, ಹಿ = ಯಾವಕಾರಣದಿಂದ, ಅನಂತಶೀರ್ಷಃ = ಅಪರಿಮಿತ ಶಿರಸ್ಸುಗಳುಳ್ಳವನೋ (ಅದಪ್ರಯುಕ್ತ) ಸಹಸ್ರಶೀರ್ಷಾ = ಸಹಸ್ರ ಶಿರಸ್ಸುಗಳುಳ್ಳವನು. ಯಾವ ಕಾರಣದಿಂದ ಶ್ರೀಹರಿಯು, ಅನಂತಾಕ್ಷಃ = ಅನಂತಾನಂತ ಕಣ್ಣುಗಳುಳ್ಳವನೋ. (ಅದಪ್ರಯುಕ್ತ) ಸಹಸ್ರಾಕ್ಷಃ = ಸಹಸ್ರ ಕಣ್ಣುಗಳುಳ್ಳವನು ಹಿಃ ಯಾವ ಕಾರಣದಿಂದ, ಅನಂತಬಾಹುಃ = ಅನಂತಾನಂತ ಭುಜ ಮತ್ತು ಪಾದ ಗಳುಳ್ಳವನೋ, (ಅದಪ್ರಯುಕ್ತ) ಸಹಸ್ರಪಾತ್ = ಸಹಸ್ರಪಾದಭುಜಗಳುಳ್ಳವನು, ಯಾವ ಕಾರಣದಿಂದ ಅನಂತಾನಂತ ಗುಣಗಳುಳ್ಳವನೋ, ಅನಂತಾಕಾರಗಳುಳ್ಳವನೋ, (ಅದಪ್ರಯುಕ್ತ ಆತನೇ ಭೂಮ್ಯಾಕಾಶಗಳನ್ನು ಅತಿಕ್ರಮಿಸಿಕೊಂಡಿದ್ದಾನೆ) ಎಂದು ಚತುರ್ವೇದ ಶಿಖೆಯಲ್ಲಿ ಹೇಳಿದೆ.

ಪೀಠಿಕೆ ॥ ಪುರುಷಸೂಕ್ತವು ಲಕ್ಷಣಯಾ ವಿಷ್ಣುಪರವೆಂದು ಇಟ್ಟುಕೊಂಡರೂ ಇತರ ಪರವೆಂದು ಇಟ್ಟುಕೊಂಡರೂ ಬ್ರಾಹ್ಮವಾಕ್ಯವು ಸಾವಕಾಶವಾಗುವುದರಿಂದ ಅದು ಪ್ರತಿಜ್ಞಾತವಾದ ಅರ್ಥಕ್ಕೆ ನಿಶ್ಚಾಯಕವಾಗುವುದಿಲ್ಲ ಎಂದರೆ ವ್ಯಾಖ್ಯಾನವ್ಯಾಖ್ಯೇಯಭಾವವಿಲ್ಲದೇನೇ ಪುರುಷಸೂಕ್ತವು ಮುಖ್ಯವಾಗಿ ವಿಷ್ಣುವನ್ನೇ ಪ್ರತಿ ಪಾದಿಸುತ್ತದೆ, ಎಂದು ಸಾಕ್ಷಾತ್ ಪ್ರತಿಜ್ಞಾತವಾದ ಅರ್ಥವನ್ನು ಸಾಧಿಸತಕ್ಕ ಸ್ಮೃತಿವಾಕ್ಯವನ್ನು ಸ್ಥಾನನಿರ್ದೇಶಪೂರ್ವಕವಾಗಿ ಹೇಳುತ್ತಾರೆ—

**ಭಾಷ್ಯ ॥ ಬೃಹತ್ಸಂಹಿತಾಯಾಂ ಚ—ಯಥಾ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಂ। ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ॥ ಇತ್ಯಾದಿ (ಇತಿ) ॥ ೧೪ ॥**

ಭಾಷ್ಯಾರ್ಥ ॥ ಹೇಗೆ ಪುರುಷಸೂಕ್ತವು ವಿಷ್ಣುವನ್ನೇ ಪ್ರತಿಪಾದಿಸುತ್ತದೋ, ಹಾಗೆಯೇ ಸಮಸ್ತವೇದಗಳೂ ಶಿಕ್ಷಾದಿ ವೇದಾಂಗಗಳೂ ಕೇವಲ ವಿಷ್ಣುಪ್ರತಿಪಾದಕಗಳಲ್ಲ. ಹೀಗೆ ನಾರದರನ್ನು ಕುರಿತು (ಬ್ರಹ್ಮನ ವಾಕ್ಯವು) ಇದೇ ಮೊದಲಾದುದು ಬೃಹತ್ಸಂಹಿತಾದಲ್ಲಿಯೂ ಇದೆ (ಆದಿಪದದಿಂದ ಸರ್ವತಃ ಪೌರುಷೇ ಸೂಕ್ತೇ ಗುಣಾ ವಿಷ್ಣೋರುದೀರಿತಾಃ ಎಂದು ಬ್ರಹ್ಮತರ್ಕಾದಿ ವಾಕ್ಯಗಳನ್ನು ಇಟ್ಟುಕೊಳ್ಳಬೇಕು.)

ಪೀಠಿಕೆ ॥ ಹಾಗಾದರೆ ಪುರುಷಸೂಕ್ತದಲ್ಲಿ ಪುರುಷನಿಗೆ ದ್ಯುಭ್ವಾದಿಜನಕ ಶಿರಸ್ಸು ಮೊದಲಾದುದು ಇದೆ ಎಂದು ಹೇಳಲ್ಪಡುತ್ತದೆ. ವೈಶ್ವಾನರ ವಿದ್ಯೆಯಲ್ಲಿ ಆದರೂ ವೈಶ್ವಾನರನ ಶಿರಸ್ಸು ಮೊದಲಾದವುಗಳಿಗೆ ದ್ಯುಭ್ವಾದ್ಯಭೇದವು ಹೇಳಲ್ಪಡುತ್ತದೆ. ಎರಡಕ್ಕೂ ವಿರುದ್ಧವಾದ ಅರ್ಥವಿದ್ದ ಪ್ರಯುಕ್ತ ಇದು ಸಮಾಖ್ಯೆಯಾಗುವುದಿಲ್ಲವೆಂದರೆ—

**ಭಾಷ್ಯ ॥ ಯಸ್ಮಾದ್ಯಜ್ಜಾಯತೇ ಚಾಂಗಾಲ್ಲೋಕವೇದಾ(ದೇವಾ)ದಿಕಂಹರೇಃ। ತನ್ನಾಮವಾಚ್ಯಮಂಗಂ ತದ್ಯಥಾ ಬ್ರಹ್ಮಾದಿಕಂ ಮುಖಂ। ಇತಿ ನಾರದೀಯವಚ ನಾನ್ನಾಭೇದೋಕ್ತಿವಿರೋಧಃ ॥ ೨೬ ॥ ॥ ೧೫ ॥**

**ಭಾಷ್ಯಾರ್ಥ ॥** ಶ್ರೀಹರಿಯ ಯಾವ ಅಂಗದೆಶೆಯಿಂದ, ಯಾವ, ಸ್ವರ್ಗಾದಿಲೋಕವು, ಋಗಾದಿವೇದವೇ ಮೊದಲಾದುದು ಹುಟ್ಟುತ್ತದೋ, ಯಾವುದನ್ನು ಆಶ್ರಯಿಸಿಕೊಂಡು ಇರುತ್ತದೋ, ಎಲ್ಲಿ ಲಯವನ್ನು ಹೊಂದುತ್ತದೋ ಆ ಅಂಗವು ಆ ಲೋಕಾದಿಗಳಿಗೆ ವಾಚಕವಾದುದು ಯಾವ ಶಬ್ದವೋ ಅದರಿಂದ ಮುಖ್ಯವಾಚ್ಯವಾಗುತ್ತದೆ. (ಅದರಿಂದ ಅಭಿನ್ನವಾಗಿ ತೋರುತ್ತದೆ. ಅವುಗಳಿಗೆ ಅಭೇದವನ್ನು ತಿಳಿಯಕೂಡದು.) ಯಥಾ = ಹೇಗೆ, ಮುಖಂ = ಭಗವನ್ಮುಖಾದಿಯು, ಬ್ರಹ್ಮಾದಿಕಂ = ಬ್ರಾಹ್ಮಣಾದಿ ಜಾತಿಯನ್ನು ಹುಟ್ಟಿಸುವುದರಿಂದ ಬ್ರಾಹ್ಮಣಾದಿನಾಮದಿಂದ (ಹೇಳಲ್ಪಡುತ್ತದೆ.) **ಬ್ರಾಹ್ಮಣೋऽಸ್ಯ ಮುಖಮಾಸೀತ್** ಇತ್ಯಾದಿಗಳಲ್ಲಿ ಹೀಗೆ, ನಾರದೀಯಪುರಾಣವಚನದಿಂದ ಜನ್ಯಜನಕಭಾವವನ್ನು ಹೊಂದಿದ ವಸ್ತುಗಳಿಗೆ ಅಭೇದೋಕ್ತಿಯಿಂದ ವಿರೋಧವಿಲ್ಲ.

**ವಿಶೇಷಾಂಶ ॥** (೧) ಶ್ರೀಹರಿಯ ಮೂರ್ಧಾ = ಶಿರಸ್ಸು, ಸುತೇಜಸ್ತ್ವ ಮೊದಲಾದ ಗುಣಗಳ ಯೋಗದಿಂದ ಸುತೇಜಶ್ಶಬ್ದವಾಚ್ಯವಾದ ಸ್ವರ್ಗವನ್ನು ಹುಟ್ಟಿಸುವುದರಿಂದ ಸುತೇಜಾಃ ಎನ್ನಿಸುತ್ತದೆ. (೨) ಚಕ್ಷುರ್ವಿಶ್ವರೂಪಃ ಸರ್ವಪ್ರಕಾರತ್ವಗುಣಯೋಗದಿಂದ ವಿಶ್ವರೂಪಶಬ್ದವಾಚ್ಯನಾದ ಸೂರ್ಯನನ್ನು ಹುಟ್ಟಿಸುವುದರಿಂದ ವಿಶ್ವರೂಪಃ ಎನ್ನಿಸುತ್ತದೆ. (೩.) **ಪ್ರಾಣಃ ಪೃಥಗ್ವರ್ತ್ಮಾತ್ಮಾ** ವಾಯುವನ್ನು ಹುಟ್ಟಿಸುವುದರಿಂದ ಪೃಥಗ್ವರ್ತ್ಮಾ ಎನ್ನಿಸುತ್ತದೆ. (೪) ಛಾಂದೋಗ್ಯಭಾಷ್ಯದಲ್ಲಿ **ಮೂರ್ಧಾ ವಿಷ್ಣೋಃ ಶಿರಃ ಸ್ವರ್ಗಾಧಾರಂ ದ್ಯುನಾಮಕಂ ಅತಿತೇಜಸಾ ಸುತೇಜೋನಾಮಕಂ ಚ ವಿಶ್ವಾನಿ ರೂಪಾಣಿ ವಿಷಯತ್ವೇನ ಯಸ್ಯ** ಎನ್ನುವ ವ್ಯುತ್ಪತ್ತಿಯಿಂದ ಸರ್ವರೂಪಗಳನ್ನು ಅತಿಕ್ರಮಿಸಿ ನೋಡುವುದರಿಂದ ಚಕ್ಷುಸ್ಸು ವಿಶ್ವರೂಪವೆನ್ನಿಸುತ್ತದೆ. ಹೀಗೆ ವ್ಯಾಖ್ಯಾತವಾಗಿದೆ. ॥ ೨೬ ॥

**ಪೀಠಿಕೆ ॥** ಹಾಗಾದರೆ ವೈಶ್ವಾನರಶಬ್ದವು ದೇವತೆಯಲ್ಲಿಯೂ ಭೂತದಲ್ಲಿಯೂ ಪ್ರಸಿದ್ಧವಾದ ಪ್ರಯುಕ್ತ ದೇವತಾಭೂತಗಳ ಪರವು ಏಕೆ ಆಗಲಾರದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅತ ಏವ ನ ದೇವತಾ ಭೂತಂ ಚ ಓಂ ॥ ೨೭ ॥

**ಭಾಷ್ಯ ॥ ಅಗ್ನಿವೈಶ್ವಾನರಾದಿಶಬ್ದಸ್ತೇಜಸಿ ಭೂತೇऽಗ್ನಿದೇವತಾಯಾಂ ಚ ಪ್ರಸಿದ್ಧೋऽಪ್ಯತಃ ಪೂರ್ವೋಕ್ತಹೇತುತ ಏವಾತ್ರ ನ ಸಾ ತಚ್ಛಾಭಿಧೀಯತೇ ॥ ೨೭ ॥ ॥ ೧೬ ॥**

**ಭಾಷ್ಯಾರ್ಥ ॥** ಅಗ್ನಿ ವೈಶ್ವಾನರ ಜಾತವೇದಃ ಮೊದಲಾದ ಶಬ್ದವು ತೇಜೋರೂಪವಾದ ಭೂತದಲ್ಲಿಯೂ, ಅಗ್ನಿದೇವತೆಯಲ್ಲಿಯೂ, ಪ್ರಸಿದ್ಧವಾದಾಗ್ಯೂ, ಅತ ಏವಃ ಹಿಂದೆ ಹೇಳಿದ ಆತ್ಮಶಬ್ದ ಮೊದಲಾದ ಹೇತುಗಳಿಂದಲೇ, ವೈಶ್ವಾನರ ವಿದ್ಯೆಯಲ್ಲಿಯೂ ಸಮಾನಾರ್ಥವುಳ್ಳ ವಿದ್ಯಾಂತರದಲ್ಲಿಯೂ ಕೂಡ ಆ ಅಗ್ನಿದೇವತೆಯು ತೇಜೋಭೂತವೂ ಕೂಡ (ವೈಶ್ವಾನರಾದಿಶಬ್ದದಿಂದ) ಹೇಳಲ್ಪಡುವುದಿಲ್ಲ ॥ ೨೭ ।

**ಪೀಠಿಕೆ ॥** ಹಾಗಾದರೆ ಪೌರುಷೇಯ ಗ್ರಂಥದಲ್ಲಿಯೂ ಅಪೌರುಷೇಯವಾದ ವೇದದಲ್ಲಿಯೂ ಅಗ್ನ್ಯಾದಿಪದಗಳಿಗೆ ಈಶ್ವರನಿಂದ ಬೇರೆ ಕಡೆಗಳಲ್ಲಿಯೂ ವ್ಯವಹಾರಸಿದ್ಧಿಯಿದೆ. ಅದಕ್ಕೆ ಬೇರೆ ಕಾರಣಗಳಿಲ್ಲ. ಆದರಿಂದ ಇತರಗಳೂ ವಾಚ್ಯಗಳೆಂದು ಅಂಗೀಕರಿಸಬೇಕು. ಇಲ್ಲವಾದರೆ ಆದರಿಂದ ವಿರೋಧವು ಬರುವುದು. ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ ॥ ೨೮ ॥

**ಭಾಷ್ಯ ॥ ನಾಗ್ನ್ಯಾದಯಃ ಶಬ್ದಾ ಅಗ್ನ್ಯಾದಿವಾಚಕಾಃ । ತಥಾಪಿ ಸಾಕ್ಷಾದೇವಾನನ್ಯಯೋಗೇನ ಬ್ರಹ್ಮವಾಚಕೈಃ ಶಬ್ದೈರ್ವ್ಯವಹಾರಾರ್ಥ-ಮನಭಿಜ್ಞಾನಾಚ್ಚಾನ್ಯತ್ರ ವ್ಯವಹರಂತೀತ್ಯಭ್ಯುಪಗಮೇಽವಿರೋಧಂ ಜೈಮಿನಿರ್ವಕ್ತಿ ॥ ೧೭ ॥**

**ಭಾಷ್ಯಾರ್ಥ ॥** ಯದ್ಯಪಿ ಅಗ್ನಿ ಶಬ್ದವೇ ಮೊದಲಾಗಿ ಉಳ್ಳ ಶಬ್ದಗಳು ಅಗ್ನ್ಯಾದಿಗಳಿಗೆ ವಾಚಕಗಳಲ್ಲ. ಆದಾಗ್ಯೂ ಸಾಕ್ಷಾದೇವ=ಅರ್ಥಾಂತರ ವ್ಯವಧಾನವಿಲ್ಲದೆ ಅಂದರೆ ವಾಚ್ಯಾಂತರ ಸಂಬಂಧವಿಲ್ಲದೆ ಅಂದರೆ ಲಕ್ಷಣಾವಿಲ್ಲದೆ ಮುಖ್ಯವೃತ್ತಿಯಿಂದ ಅಥವಾ ತತ್ತ್ವಪ್ರದೀಪಿಕಾ ರೀತಿಯಾಗಿ ಬೇರೆ ಕಡೆ ಯೋಗವೃತ್ತಿಯಿಲ್ಲದಿರುವುದರಿಂದ ಬ್ರಹ್ಮನಲ್ಲಿ ಯೋಗದಿಂದಲೇ ಬ್ರಹ್ಮವಾಚಕಗಳಾದ ಅಗ್ನ್ಯಾದಿ ಶಬ್ದಗಳಿಂದ ಹಾನ ಉಪಾದಾನಾದಿ ವ್ಯವಹಾರಸಿದ್ಧಿಗಾಗಿ ಮುಖ್ಯವಾಚ್ಯ ಜ್ಞಾನವಿಲ್ಲದಿರುವುದರಿಂದ ಅಗ್ನ್ಯಾದಿಗಳಲ್ಲಿ ಆ ಶಬ್ದಗಳನ್ನು (ಜ್ಞಾನಿಗಳೂ ಅಜ್ಞಾನಿಗಳೂ) ವ್ಯವಹರಿಸುತ್ತಾರೆ. ಹೀಗೆ ಅಂಗೀಕಾರ ಮಾಡಿದ ಪ್ರಯುಕ್ತ ಜ್ಞಾನಿ ಅಜ್ಞಾನಿಗಳ ವ್ಯವಹಾರಕ್ಕೆ ವಿರೋಧಾಭಾವವನ್ನು ಜೈಮಿನಿ ಆಚಾರ್ಯರು ಹೇಳುತ್ತಾರೆ.

**ವಿಶೇಷಾಂಶ ॥** (೧) **ಯತ್ರಾನವಸರಃ** ಎನ್ನುವ ವಚನದಿಂದ ವಕ್ತಿ ಎಂದು ಅಧ್ಯಾಹಾರ ಮಾಡಿರುವರು. (೨) ಇದರಿಂದ ಅಗ್ನ್ಯಾದಿ ಶಬ್ದಗಳು ಅಗ್ನ್ಯಾದಿ ವಾಚಕಗಳಲ್ಲ. ಮತ್ತೆ ಪರಮಮುಖ್ಯ ವೃತ್ತಿಯಿಂದ ಬ್ರಹ್ಮವಾಚಕಗಳೇ. ಆದಾಗ್ಯೂ ಅನ್ಯತ್ರಪ್ರಸಿದ್ಧಿವಿರೋಧವಿಲ್ಲ. (೩.) ಅಥವಾ ಅನ್ಯಥಾನುಪಪತ್ತಿಯಿಂದ ಇತರರಿಗೆ ವಾಚ್ಯತ್ವವನ್ನು ಕಲ್ಪಿಸಲಿಕ್ಕೂ ಕೂಡದು. ಏಕೆಂದರೆ— ವಾಚ್ಯಾರ್ಥ ಧೀವ್ಯವಹಿತವಾದ ಲಕ್ಷಣಾದಿಗಳನ್ನು ಹೊರತು ಸಾಕ್ಷಾತ್ತಾಗಿ ಮುಖ್ಯ ವೃತ್ತಿಯಿಂದಲೂ ಮುಖ್ಯಾರ್ಥಜ್ಞಾನಿಗಳು ಅಗ್ನ್ಯಾದಿ ಶಬ್ದಗಳನ್ನು ಬ್ರಹ್ಮವಾಚಕಗಳನ್ನಾಗಿ ಹೇಳುತ್ತಾರೆ. ಮುಖ್ಯಾರ್ಥಜ್ಞಾನವಿಲ್ಲದವರು ಜ್ಞಾನವಿಲ್ಲದಿರುವುದರಿಂದಲೇ ಅಜಾಮಿಳನ ಅಂತಿಮಪುತ್ರನಲ್ಲಿ ನಾರಾಯಣಶಬ್ದವನ್ನೆಂಬಂತೆ ಹಾನೋಪಾದಾನ ವ್ಯವಹಾರಸಿದ್ಧಿಗಾಗಿ ಅಗ್ನ್ಯಾದಿಶಬ್ದಗಳನ್ನು ಅಗ್ನ್ಯಾದಿಗಳಲ್ಲಿ ವ್ಯವಹರಿಸುತ್ತಾರೆ ಎಂದು ಅಂಗೀಕರಿಸಿದ್ದರಿಂದ ಅನ್ಯತ್ರವ್ಯವಹಾರಕ್ಕೆ ವಿರೋಧವಿಲ್ಲ. ಪ್ರಸಿದ್ಧಿಗೆ ಲೋಪವಿಲ್ಲ ಎಂದು ಜೈಮಿನ್ಯಾಚಾರ್ಯರ ಅಭಿಪ್ರಾಯವು.

**ಪೀಠಿಕೆ ॥** ಹಾಗಾದರೆ— ಜೈಮಿನ್ಯಾದಿ ಮತಗಳು ಶ್ರೀವ್ಯಾಸರ ಮತಕ್ಕೆ ವಿರುದ್ಧಗಳಾಗದಿದ್ದರೆ

ಜೈಮಿನ್ಯಾದಿಗಳನ್ನು ಗ್ರಹಣಮಾಡಿದ್ದೂ ವ್ಯರ್ಥವು. ವಿರುದ್ಧಗಳಾದರೆ ವಿರುದ್ಧರಾದ್ಧಾಂತದಿಂದ ಪರಿಹರಿಸಿದ್ದು ಹೇಗೆ ಎಂದರೆ—

ಭಾಷ್ಯ ॥ ವ್ಯಾಸಚಿತ್ತಸ್ಥಿತಾಕಾಶಾದವಚ್ಛಿನ್ನಾನಿ ಕಾನಿಚಿತ್। ಅನ್ಯೇ ವ್ಯವಹರಂತ್ಯೇತಾನ್ಯೂರೀಕೃತ್ಯ ಗೃಹಾದಿವತ್ ॥ ಇತಿ ಸ್ಕಾಂದವಚನಾನ್ನ ಮತಾನಾಂ ಪರಸ್ಪರ ವಿರೋಧಃ ॥ ೨೮ ॥ ॥ ೧೮ ॥

ಭಾಷ್ಯಾರ್ಥ ॥ ವ್ಯಾಸರ ಮನಸ್ಸಿನಲ್ಲಿರತಕ್ಕ ಮತರೂಪವಾದ ಜ್ಞಾನಾಖ್ಯಮಹಾಕಾಶವನ್ನು ಅಪೇಕ್ಷಿಸಿ ಗೃಹಾದ್ಯವಚ್ಛಿನ್ನವಾದ ಆಕಾಶದಂತೆ ವಿವಿಕ್ತಗಳಾದ ಪರಿಮಿತ ವಿಷಯಗಳುಳ್ಳ ಕೆಲವು ಮತಗಳನ್ನು ಅಂಗೀಕರಿಸಿಕೊಂಡು ಇತರರಾದ ಜೈಮಿನ್ಯಾದಿಗಳು ವ್ಯವಹರಿಸುತ್ತಾರೆ. ಹೀಗೆ ಸ್ಕಾಂದ ಪುರಾಣದ ವಚನಾನುಸಾರವಾಗಿ ಜೈಮಿನ್ಯಾದಿಗಳ ಮತಗಳಿಗೂ ವ್ಯಾಸರ ಮತಕ್ಕೂ ವಿರೋಧವಿಲ್ಲ.

ವಿಶೇಷಾಂಶ ॥ (೧) ಸತ್ತರ್ಕದೀಪಾವಳಿಯಲ್ಲಿ ಆಕಾಶದಂತೆಯೇ ವ್ಯಾಪ್ತವಾದ ಪ್ರಯುಕ್ತವೂ ಪ್ರಕಾಶಮಾನವಾದ ಪ್ರಯುಕ್ತವೂ ವ್ಯಾಸರ ಚಿತ್ತದಲ್ಲಿರತಕ್ಕ ಮತಾಖ್ಯಆಕಾಶದಿಂದ ತಮ್ಮತಮ್ಮ ಮತಿಯಿಂದ ವಿವಿಕ್ತಗಳಾದ ಆ ಮತಗಳನ್ನು ಇದು ನನ್ನದು ಇದು ನನ್ನದು ಎಂದು ಅಂಗೀಕರಿಸಿಕೊಂಡು ಇತರರು ವ್ಯವಹರಿಸುತ್ತಾರೆ. ಹೇಗೆ, ಗೃಹ ನಗರ ಮಠ ಇತ್ಯಾದಿಗಳಿಂದ ಆಕಾಶಪ್ರದೇಶಗಳನ್ನು ಇದು ನನ್ನ ಪ್ರದೇಶವು ಇದು ನನ್ನ ಪ್ರದೇಶವು ಎಂದು ಜನರು ವ್ಯವಹರಿಸುತ್ತಾರೋ, ಹಾಗೆಯೇ. ತಥಾಚ ಜೈಮಿನ್ಯಾದಿಗಳ ಮತಗಳಿಗೆ ವ್ಯಾಸರಮತದಿಂದಲೂ ಪರಸ್ಪರವಾಗಿಯೂ ವಿರೋಧವಿಲ್ಲ. ॥ ೨೮ ॥

ಪೀಠಿಕೆ ॥ ಲೌಕಿಕ ಪ್ರಸಿದ್ಧಿಗೆ ಅಜ್ಞಾನಾದಿಗಳು ಮೂಲವಾದುದರಿಂದ ಅನ್ಯಥೋಪಪತ್ತಿಯು ಕೂಡಿದರೂ ವೈದಿಕ ಅಗ್ನ್ಯಾದಿ ಸೂಕ್ತ ಅಗ್ನ್ಯಾದಿಮಂತ್ರಾದಿ ಪ್ರಸಿದ್ಧಿಗಳಿಗೆ ಅನ್ಯಥಾನುಪಪತ್ತಿಯದ್ದುದರಿಂದ ಅಗ್ನ್ಯಾದಿಗಳಿಗೆ ಸೂಕ್ತಾದಿಗಳಲ್ಲಿರತಕ್ಕ ಅಗ್ನ್ಯಾದಿಶಬ್ದವಾಚ್ಯತ್ವವು ಇರಲೇಬೇಕು. ಅಲ್ಲಿ ಅಜ್ಞಾನಾದಿಮೂಲಕತ್ವವನ್ನು ಕಲ್ಪಿಸಲಿಕ್ಕೆ ಕೂಡದಿರುವುದರಿಂದ ಅನ್ಯಥೋಪಪತ್ತಿಯಿಲ್ಲ. ಅನಾದಿಯಾದುದರಿಂದ ವ್ಯವಹಾರಾರ್ಥವಾಗಿ ಅನ್ಯಥೋಪಪತ್ತಿಯೂ ಇಲ್ಲ. ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ ॥ ೨೯ ॥

ಭಾಷ್ಯ ॥ ತತ್ರ ತತ್ರ ಪ್ರಸಿದ್ಧಾವಪ್ಯಗ್ನ್ಯಾದಿಷು ಬ್ರಹ್ಮಣೋಽಭಿವ್ಯಕ್ತೇರಗ್ನ್ಯಾದಿ ಸೂಕ್ತನಿಯಮಃ । ಇತ್ಯಾಶ್ಮರಥ್ಯಃ ॥ ೨೯ ॥ ॥ ೧೯ ॥

ಭಾಷ್ಯಾರ್ಥ ॥ ಆವಾವ ಸೂಕ್ತಾದಿಗಳಲ್ಲಿ ಬ್ರಹ್ಮನಿಗೇನೇ ಮುಖ್ಯತಃ ಪ್ರತಿಪಾದ್ಯತ್ವವಿದ್ದರೂ, (ಅಗ್ನ್ಯಾದಿಗಳಿಗೆ ಪ್ರತಿಪಾದ್ಯತ್ವವಿಲ್ಲದಿದ್ದರೂ ವಿರೋಧವಿಲ್ಲ) ಅಗ್ನ್ಯಾದಿಸೂಕ್ತನಿಯಮಃ=ಇದು ಅಗ್ನಿಸೂಕ್ತವು, ಇದು ವಾಯುಸೂಕ್ತವು ಇದು ಮೊದಲಾದ ಸೂಕ್ತನಿಯಮವೂ, ಇದು ಅಗ್ನಿವಿದ್ಯೆಯು, ಇದು ವಾಯುವಿದ್ಯೆಯು ಇದು ಮೊದಲಾದ ವಿದ್ಯಾನಿಯಮವೂ ಕೂಡುತ್ತದೆ. (ಹೇಗೆಂದರೆ— ಆ ಅಗ್ನ್ಯಾದಿ ಸೂಕ್ತಗಳಿಂದ ಅಂದರೆ ಆ ಸೂಕ್ತಗಳಲ್ಲಿ ಹೇಳಲ್ಪಟ್ಟ ಗುಣಗಳಿಂದ) ಬ್ರಹ್ಮನ (ಉಪಾಸನೆಯು

ಮಾಡಲ್ಪಡುತ್ತಿರಲು) ಅಗ್ನ್ಯಾದಿಗಳಲ್ಲಿಯೇ ಬ್ರಹ್ಮನಿಗೆ ಅಭಿಃಸ್ವೇಚ್ಛೆಯಿಂದ, ಅಭಿವ್ಯಕ್ತಿನಿಯಮವಿದ್ದುದರಿಂದ (ಆ ಅಭಿಪ್ರಾಯದಿಂದ ಆ ಪ್ರಸಿದ್ಧಿಯೂ ಕೂಡುವುದು. ಹೀಗೆ ವೇದದಲ್ಲಿದ್ದ ಅಗ್ನ್ಯಾದಿ ಸೂಕ್ತಾದಿಗಳಿಂದ ಪ್ರಸಿದ್ಧಿಗೆ ವಿರೋಧವಿಲ್ಲವೆಂದು) ಅಶ್ಮರಥ್ಯಾಚಾರ್ಯರು ಹೇಳುತ್ತಾರೆ. ॥ ೨೯ ॥

ಟೀಕಿಕೆ ॥ ಸೂಕ್ತಾದಿನಿಯಮವು ಪ್ರಕಾರಾಂತರದಿಂದ ಅನ್ಯಥಾ ಉಪಪನ್ನವಾಗುತ್ತದೆ ಎಂದು ಹೇಳತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನುಸ್ಮೃತೇರ್ಬಾದರಿಃ ಓಂ ॥ ೩೦ ॥

**ಭಾಷ್ಯ ॥ ತತ್ರ ತತ್ರೋಕ್ತಸ್ಯ ವಿಷ್ಣೋರಗ್ನ್ಯಾದಿಷ್ವನುಸ್ಮರ್ಯಮಾಣತ್ವಾತ್ತನ್ನಿಯಮಃ । ಇತಿ ಬಾದರಿಃ ॥ ೩೦ ॥ ॥ ೨೦ ॥**

ಭಾಷ್ಯಾರ್ಥ ॥ ಶ್ರೀವಿಷ್ಣುವಿಗೇನೇ ಅಗ್ನ್ಯಾದಿ ವಿದ್ಯೆಗಳಲ್ಲಿ (ಪ್ರತಿಪಾದ್ಯತ್ವವಿದ್ದರೂ) ಆವಾವ ಅಗ್ನ್ಯಾದಿವಿದ್ಯೆಗಳಲ್ಲಿ ಪ್ರತಿಪಾದಿಸಲ್ಪಟ್ಟ ವಿಷ್ಣುವಿಗೆ (ಆವಾವ ಸೂಕ್ತಾದ್ಯುಪಾಸಕರಿಂದ) ಆ ಅಗ್ನ್ಯಾದಿಗಳಲ್ಲಿಯೇ, ಅನುಸ್ಮೃತೇಃ=ಅನುಸ್ಮರ್ತವ್ಯತ್ವವಿದ್ದ ಪ್ರಯುಕ್ತ ಅಂದರೆ ತಿಳಿಯಲ್ಪಡಬೇಕಾಗಿ ಇರುವುದರಿಂದ ಅಗ್ನ್ಯಾದಿಸೂಕ್ತವ್ಯವಸ್ಥೆಯು (ಕೂಡುತ್ತದೆ. ಆ ಕಾರಣ ಈ ಸೂಕ್ತಾದಿ ಪ್ರಸಿದ್ಧ್ಯನ್ಯಥಾನುಪಪತ್ತಿಯಿಂದ ಇತರರು ವಾಚ್ಯರೆಂದು ಕಲ್ಪಿಸಕೂಡದು.) ಹೀಗೆ ಸೂಕ್ತಾದಿ ಪ್ರಸಿದ್ಧ್ಯವಿರೋಧವನ್ನು ಬಾದರಿಃ = ಶುಕಾಚಾರ್ಯರು, (ಹೇಳುತ್ತಾರೆ.) ॥ ೩೦ ॥

ಟೀಕಿಕೆ ॥ ಪುನಃ ರೀತ್ಯಂತರದಿಂದ ಸೂಕ್ತಾದಿ ನಿಯಮಕ್ಕೆ ಅನ್ಯಥೋಪಪತ್ತಿಯನ್ನು ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ ॥ ೩೧ ॥

ಸೂತ್ರಾರ್ಥ ॥ ಅಗ್ನ್ಯಾದಿ ಸೂಕ್ತದಲ್ಲಿ ಹೇಳಿದ ಗುಣವುಳ್ಳವನನ್ನಾಗಿ ಪರಮಾತ್ಮನಲ್ಲಿ ಉಪಾಸನಾ ಮಾಡಿದವರಿಗೆ ಸಂಪತ್ತೇಃ=ಅಗ್ನ್ಯಾದಿಗಳಲ್ಲಿರುವ ಪರಮಾತ್ಮನ ಪ್ರಾಪ್ತಿನಿಮಿತ್ತವಾಗಿ ಅಗ್ನ್ಯಾದಿ ಸೂಕ್ತಾದಿ ನಿಯಮವು ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ. ತಂ ಯಥಾ ಯಥಾ ಉಪಾಸತೇ ಹಾಗೆಯೇ ಆಗುತ್ತದೆ ಎಂದು ಶ್ರುತಿಯು ತೋರಿಸುತ್ತದೆ.

ಟೀಕಿಕೆ ॥ ಜೈಮಿನ್ಯಾಚಾರ್ಯರ ಮತವನ್ನು ಪೂರ್ವದಲ್ಲಿ ಉಪನ್ಯಾಸ ಮಾಡಿದ್ದರಿಂದ ಪುನಃ ಹೇಳಿದ್ದು ಏಕೆ ಎನ್ನುವ ಅಜ್ಞರ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ವಿಷಯಭೇದವನ್ನು ತೋರಿಸಿಕೊಂಡು ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.

**ಭಾಷ್ಯ ॥ ಸಾಕ್ಷಾದಪ್ಯವಿರೋಧಂ ವದನ್ ಜೈಮಿನಿಃ ಸೂಕ್ತಾದಿನಿಯಮಮಗ್ನ್ಯಾದಿಸಂಪ್ರಾಪ್ತ್ಯಾ ಮನ್ಯತೇ। ತಂ ಯಥಾ ಯಥೋಪಾಸತೇ ತದೇವ ಭವತಿ । ಇತಿ(ಹಿ)ದರ್ಶಯತಿ ॥ ೩೧ ॥ ॥ ೨೧ ॥**

ಭಾಷ್ಯಾರ್ಥ ॥ ಅಗ್ನ್ಯಾದಿಶಬ್ದಗಳಿಗೆ ಮುಖ್ಯವಾಗಿ ಬ್ರಹ್ಮವಾಚಕತ್ವವಿದ್ದಾಗ್ಯೂ (ಹಾನಾದಿ

ವ್ಯವಹಾರಸಿದ್ಧಿಗಾಗಿ ಅನ್ಯತ್ರ ವ್ಯವಹಾರವಿದ್ದುದರಿಂದ) ಲೌಕಿಕವ್ಯವಹಾರವಿರೋಧಾಭಾವವನ್ನು ಹೇಳತಕ್ಕ ಜೈಮಿನ್ಯಾಚಾರ್ಯರು ಸೂಕ್ತಾದಿಗಳ ನಿಯಮವನ್ನು (ವ್ಯವಸ್ಥೆಯನ್ನು) ಅಗ್ನ್ಯಾದಿಗಳಲ್ಲಿದ್ದ ಪರಮಾತ್ಮನ ಪ್ರಾಪ್ತಿ ನಿಮಿತ್ತವಾಗಿ ತಿಳಿಯುತ್ತಾರೆ. ಆ ಪರಮಾತ್ಮನನ್ನು ಯಾವ ಯಾವ ಪ್ರಕಾರದಿಂದ (ಅಧಿಕಾರಿಗಳು) ಉಪಾಸನೆ ಮಾಡುತ್ತಾರೋ ಆ ಪ್ರಕಾರದಿಂದ ಅದೇ ರೂಪವನ್ನು ಹೊಂದುತ್ತಾರೆ.

**ವಿಶೇಷಾಂಶ ॥** (೧) ಅಗ್ನ್ಯಾದಿಗಳಲ್ಲಿ ಶ್ರೀಹರಿಯನ್ನು ಉಪಾಸನೆ ಮಾಡಿದರೆ ಅಗ್ನ್ಯಾದಿಗಳಲ್ಲಿದ್ದ ಪರಮಾತ್ಮನ ಪ್ರಾಪ್ತಿಯಾಗುತ್ತದೆ ಎನ್ನುವಲ್ಲಿ ಸೂತ್ರಸೂಚಿತವಾದ ಶ್ರುತಿಯನ್ನುದಾಹರಿಸಿದರು. (೨) ತತ್ವಪ್ರದೀಪಕಾರೀತಿಯಾಗಿ ಅಗ್ನ್ಯಾದಿಸೂಕ್ತಾದಿಗಳಲ್ಲಿ ಮುಖ್ಯವಾಗಿ ಪರಬ್ರಹ್ಮನಿಗೆ ಪ್ರತಿಪಾದ್ಯತ್ವವಿದ್ದರೂ ಸೂಕ್ತಾದಿ ನಿಯಮವು ಕೂಡುತ್ತದೆ. ಅನ್ಯಥಾನುಪಪತ್ತಿಯಿಂದ ಇತರರು ವಾಚ್ಯರೆಂದು ತಿಳಿಯಕೂಡದು. ಏಕೆಂದರೆ ಅಗ್ನ್ಯಾದಿಸೂಕ್ತಾದಿಗಳಿಂದ ಅಗ್ನ್ಯಾದಿಗಳಲ್ಲಿ ಭಗವದುಪಾಸಕರಿಗೆ ಅಗ್ನ್ಯಾದಿಪ್ರಾಪ್ತಿಯಾಗುತ್ತದೆ. ಅದು ಅಸಿದ್ಧವಲ್ಲ. **ತಂ ಯಥಾ** ಎಂದು ಪ್ರಸಿದ್ಧವಾದ ಶ್ರುತಿಯು ಅಗ್ನ್ಯಾದಿಗಳಲ್ಲಿ ಉಪಾಸನೆ ಮಾಡಿದ್ದರಿಂದ ಅಗ್ನ್ಯಾದಿಗಳಲ್ಲಿದ್ದ ಪರಬ್ರಹ್ಮನ ಪ್ರಾಪ್ತಿಯಾಗುತ್ತದೆ ಎಂದು ಪ್ರತಿಪಾದಿಸುತ್ತದೆ. (೩) ಯದ್ಯಪಿ ಹಿಂದಿನ ಎರಡು ಸೂತ್ರಗಳಲ್ಲಿ ಸಾಧಕವ್ಯಾಪಾರವನ್ನು ಹೇಳಿದ್ದರಿಂದಲೂ ಅಲ್ಪಾಕ್ಷರತ್ವವಿದ್ದುದರಿಂದಲೂ **ದೃಷ್ಟೇಃ** ಎಂದು ಹೇಳಬೇಕಿತ್ತು. **ಅಭಿವ್ಯಕ್ತೇಃ** ಎಂದು ಹೇಳಬಾರದಿತ್ತು. ಅಭಿವ್ಯಕ್ತಿಯು ಈಶ್ವರವ್ಯಾಪಾರವಾಗಿದೆ. ಆದಾಗ್ಯೂ ಅಭಿವ್ಯಕ್ತಿಯು ಇಲ್ಲದೆ ದೃಷ್ಟಿಯು (ಪ್ರತ್ಯಕ್ಷವು) ಕೂಡದಿರುವುದರಿಂದ **ಅಭಿವ್ಯಕ್ತೇಃ** ಎಂದು ಹೇಳಿದ್ದರಿಂದ ಎರಡೂ ಸಿಗುವುದರಿಂದ ಪ್ರಧಾನವಾದ ಪ್ರಯುಕ್ತ ಈಶ್ವರವ್ಯಾಪಾರವನ್ನೇ ಹೇಳಿರುತ್ತಾರೆ. (೪) ಯದ್ಯಪಿ ಅನುಸ್ಮೃತಿಶಬ್ದವಾಚ್ಯವಾದ ಉಪಾಸನೆ ಮಾಡಿದ ಮೇಲೆ ಅಭಿವ್ಯಕ್ತಿಯು. ಆಮೇಲೆ ಆತನ ಪ್ರಾಪ್ತಿಯು. ಆದುದರಿಂದ ಪ್ರಥಮದಲ್ಲಿ ಅನುಸ್ಮೃತೇಃ ಎಂದು ಹೇಳಬೇಕಿತ್ತು. ಆದಾಗ್ಯೂ ಅಭಿವ್ಯಕ್ತಿ ಪ್ರಾಪ್ತಿ ಇವೆರಡು ಆದಮೇಲೆಯೂ ಉಪಾಸನೆಯನ್ನು ಮಾಡಬೇಕೆಂದು ತೋರಿಸುವುದಕ್ಕಾಗಿ ಅನುಸ್ಮೃತಿಯನ್ನು ಮಧ್ಯದಲ್ಲಿ ಹೇಳಿದ್ದು. (೫) ಯದ್ಯಪಿ ಋಗ್ಭಾಷ್ಯದಲ್ಲಿ **ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾನಿ ತು। ಅಗ್ನ್ಯಾದಿಶಬ್ದವಾಚ್ಯಾನಿ ನಾಮ್ನಾ ಸೂಕ್ತಾಭಿದಾ ಭವೇತ್ ॥** ಎಂದು ಅಗ್ನ್ಯಾದ್ಯಂತರ್ಗತವಾದ ವಿಷ್ಣುವಾಚಕವಾದ ಅಗ್ನ್ಯಾದಿ ಶಬ್ದಯೋಗವು ಸೂಕ್ತವ್ಯವಸ್ಥಾಪಕವಾಗಿದೆ ಎಂದು ಹೇಳಿದೆ. ತಥಾಚ ಅಗ್ನ್ಯಾದಿ ಶಬ್ದಗಳು ಆವಾವ ಸೂಕ್ತಗಳೂ ಕೂಡ ಅಗ್ನ್ಯಾದಿಗಳಲ್ಲಿರತಕ್ಕ ಬ್ರಹ್ಮರೂಪಗಳಲ್ಲಿಯೇ ಮುಖ್ಯಗಳು. ಹೀಗೆಯೇ ಬಹಿರ್ಗತ ರೂಪಗಳಲ್ಲಿ ಮುಖ್ಯಗಳು. ಅತೀತ ಅನಾಗತ ವರ್ತಮಾನಗಳಾದ ಅಗ್ನ್ಯಾದಿಗಳಲ್ಲಿ ಅಮುಖ್ಯಗಳು ಎನ್ನುವ ವ್ಯವಸ್ಥೆಯು ಸಿದ್ಧಿಸುತ್ತದೆ. ಆದಾಗ್ಯೂ ಇಲ್ಲಿ ಅಭಿವ್ಯಕ್ತಿಯಾಗಲೀ ಅಗ್ನ್ಯಾದಿ ಸೂಕ್ತೋಪಾಸಕರಿಂದ ಅಗ್ನ್ಯಾದಿಗಳಲ್ಲಿ ಇದ್ದಾನೆಂದು ಸ್ಮರಿಸಬೇಕೆಂದು ಆಗಲೀ ಸಂಪ್ರಾಪ್ತಿಯಾಗುತ್ತದೆಂದಾಗಲೀ ಆವಾವ ಸೂಕ್ತವ್ಯವಸ್ಥಾಪಕವು ಎಂದು ಅನುಷ್ಠಾನವಿಶೇಷಕ್ಕೆ ಉಪಯೋಗಿಯಾಗಿಯೂ ಮತ್ತು ಸೌರ ಸಾವಿತ್ರ ವಾಮನ ವಿಷ್ಣ್ವಾದಿ ಸೂಕ್ತಾದಿ ವ್ಯವಸ್ಥೆಗಾಗಿಯೂ ವ್ಯವಸ್ಥಾಪಕಾಂತರವನ್ನು ಹೇಳಿದ ಪ್ರಯುಕ್ತ ವಿರೋಧವಿಲ್ಲ.

**ಪೀಠಿಕೆ ॥** ಅಗ್ನ್ಯಾದಿ ಸೂಕ್ತಾದಿಗಳಿಂದ ಬ್ರಹ್ಮನನ್ನು ಧ್ಯಾನ ಮಾಡಿದವರಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುತ್ತದೆಂದು ಯಾವುದು ಹೇಳಿಯದೋ, ಅದು ಶ್ರುತಿಯಲ್ಲಿ ಉಕ್ತವಾದಾಗ್ಯೂ ಅಯುಕ್ತವು.

ಮದ್ಭಕ್ತಾ ಯಾಂತಿ ಮಾಮಪಿ ಇತ್ಯಾದಿಗಳಿಂದ ಒಬ್ಬನನ್ನು ಧ್ಯಾನಮಾಡಿದವರಿಗೆ ಅನ್ಯಪ್ರಾಪ್ತಿಯು ಕೂಡಲಾರದು. ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ಇತ್ಯಾದಿಗಳಲ್ಲಿ ಆ ಅರ್ಥವನ್ನು ಅಂಗೀಕರಿಸಲೂ ಇಲ್ಲ ಎನ್ನುವ ಅಭಿಪ್ರಾಯದಿಂದ ಆಶಂಕಿಸಿಕೊಂಡು ಅದಕ್ಕೆ ಪರಿಹಾರಕವಾಗಿ ಸೂತ್ರವನ್ನು ಅವತಾರಿಕೆ ಕೊಟ್ಟು ವ್ಯಾಖ್ಯಾನ ಮಾಡುತ್ತಾರೆ.

**ಭಾಷ್ಯ ॥ ನ ಹ್ಯನ್ಯೋಪಾಸಕೋಽನ್ಯಂ ಪ್ರಾಪ್ನುತ ಇತಿ ಯುಜ್ಯತೇ। ಇತ್ಯತ ಆಹ ॥ ೨೩ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಒಬ್ಬನನ್ನು ಧ್ಯಾನ ಮಾಡಿದವನು ಮತ್ತೊಬ್ಬನನ್ನು ಹೊಂದುತ್ತಾನೆ ಎನ್ನುವುದು ಪ್ರಮಾಣ ವಿರೋಧದಿಂದ ಕೂಡುವುದಿಲ್ಲವೋ, (ಆದುದರಿಂದ ಹೇಳಿದ್ದು ಅಯುಕ್ತವು.) ಎಂದು ಶಂಕಾರೂಪವಾದ ಸೂತ್ರಾವತಾರಿಕೆಯನ್ನು ಕೊಟ್ಟು ಉತ್ತರ ಹೇಳುತ್ತಾರೆ.

## ಸೂತ್ರ ॥ ಓಂ ಆಮನಂತಿ ಚೈನಮಸ್ಮಿನ್ ಓಂ ॥ ೩೨ ॥

**ಭಾಷ್ಯ ॥ ಏನಂ ವಿಷ್ಣುಮಸ್ಮಿನ್ನಗ್ನ್ಯಾದಾವಾಮನಂತಿ ॥ ೨೪ ॥**

ಸೂತ್ರಾರ್ಥ ॥ ಏನಂ=ಈ ವಿಷ್ಣುವನ್ನು, ಅಸ್ಮಿನ್=ಅಗ್ನ್ಯಾದಿಗಳಲ್ಲಿ ಆಮನಂತಿ ಚ= (ಶ್ರುತಿಗಳು) ಪ್ರತಿಪಾದಿಸುತ್ತವೆ.

ವಿಶೇಷಾಂಶ ॥ (೧) ಚ ಶಬ್ದವು ವಿಷ್ಣೂಪಾಸಕನಿಗೆ ಅಗ್ನ್ಯಾದಿಪ್ರಾಪ್ತಿಯು ಅಯುಕ್ತವೆಂದು ಪೂರ್ವಪಕ್ಷಿಯು ಶಂಕೆಯನ್ನು ವ್ಯಾವರ್ತಿಸತಕ್ಕದು. ಆದರಿಂದ ಸಿದ್ಧಾಂತಿಯ ಪ್ರತಿಜ್ಞೆಯೂ, ಅಗ್ನ್ಯಾದಿಪ್ರಾಪ್ತಿಪದದಿಂದ ಅಗ್ನ್ಯಾದಿಗಳಲ್ಲಿ ಅಂತರ್ಗತವಾದ ಭಗವತ್ಪ್ರಾಪ್ತಿಯೂ ವಿವಕ್ಷಿತವಾಗಿದೆ, ಎನ್ನುವ ಸಾಕ್ಷಾದ್ಧೇತುವೂ ಸೂಚಿತವಾಗಿದೆ. (೨) ತತ್ತ್ವಪ್ರದೀಪದಲ್ಲಿ ಆದರೂ, ಕೇವಲ ಒಂದೇ ಕಡೆಯಲ್ಲಿ ವಾಜಸನೇಯರು ಹೇಳುವುದಲ್ಲ. ಮತ್ತೆ ಸ ಯಶ್ಚಾಯಮಸ್ಮಿನ್, ಯ ಏಷ ಏತಸ್ಮಿನ್. ಏತಸ್ಯಾಂ ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ಇತ್ಯಾದಿಗಳಲ್ಲಿ ಹೇಳುತ್ತಾರೆ. ಅಲ್ಲದೆ ಸ್ಮೃತಿಕರ್ತರೂ ಯಚ್ಚಂದ್ರಮಸಿ ಯಚ್ಚಾಗ್ನೌ ಇತ್ಯಾದಿ ಪ್ರಕಾರ ಸ್ಮರಿಸುತ್ತಾರೆ, ಎಂದು ಸಮುಚ್ಚಾಯಕವೆಂದು ಹೇಳಿದ್ದಾರೆ.

ಪೀಠಿಕೆ ॥ ಆ ಶ್ರುತಿಗಳನ್ನು ತೋರಿಸುತ್ತಾರೆ.

**ಭಾಷ್ಯ ॥ ಯೋಽಗ್ನೌ ತಿಷ್ಠನ್(ನ್ನಗ್ನೇರಂತರಃ) (ಬೃ.೫.೭.೫.) । ಯ ಏಷ ಏತಸ್ಮಿನ್ನಗ್ನೌ ತೇಜೋಮಯೋಽಮೃತಮಯಃ ಪುರುಷಃ (ಬೃ.೪.೫.೨..) । ಇತ್ಯಾದಿನಾ ॥ ೩೨ ॥ ೨೫ ॥ ಅ.೭ ॥**

ಭಾಷ್ಯಾರ್ಥ ॥ (೧) ಯಾವಾತನು ಅಗ್ನಿಯಲ್ಲಿ ಇರುತ್ತಾನೋ, (೨) ಯಾವ ಈತನು ಈ ಅಗ್ನಿಯಲ್ಲಿ ತೇಜೋರೂಪನೋ, ನಿತ್ಯಾತ್ಮನೋ ಪೂರ್ಣಷಡ್ಗುಣಗಳುಳ್ಳವನೋ, ಇದು ಮೊದಲಾದ ಏತಮಗ್ನಾವಧ್ವರ್ಯವಃ ಇತ್ಯಾದಿ ವಾಕ್ಯದಿಂದ (ಶ್ರುತಿಗಳು ಪ್ರತಿಪಾದಿಸುತ್ತವೆ.)

ವಿಶೇಷಾಂಶ ॥ ವಿಷ್ಣೂಪಾಸಕನಿಗೆ ಅಗ್ನ್ಯಾದಿಪ್ರಾಪ್ತಿಯು ಅಯುಕ್ತವಲ್ಲ. ಅಗ್ನ್ಯಾದಿಪ್ರಾಪ್ತಿಪದದಿಂದ ಅಗ್ನ್ಯಾದಿಗಳಲ್ಲಿ ಅಂತರ್ಗತವಾದ ಭಗವತ್ಪ್ರಾಪ್ತಿಯು ವಿವಕ್ಷಿತವಾಗಿದೆ.

ಶ್ರೀವಿಷ್ಣುವಿಗೆ ಅಗ್ನ್ಯಾದ್ಯಂತರ್ಗತತ್ವವು ಅಸಿದ್ಧವೆಂದಲ್ಲ. ವಿಷ್ಣು ವನ್ನು ಅಗ್ನ್ಯಾದಿಗಳಲ್ಲಿ ಅಂತರ್ಗತನನ್ನಾಗಿ ಶ್ರುತಿಗಳು ಹೇಳುತ್ತವೆ.

## ಮಾಯಾವಾದಿರೀತ್ಯಾ

ವಿಚಾರ ॥ (೧) **ಆತ್ಮಾನಂ ವೈಶ್ವಾನರಮುಪಾಸ್ತೇ** ಎನ್ನುವಲ್ಲಿ ವೈಶ್ವಾನರನು, ೧ ಜಾಠರಾಗ್ನಿಯೋ, ೨ ಭೂತಾಗ್ನಿಯೋ, ೩ ದೇವತೆಯೋ, ೪ ಜೀವಾತ್ಮನೋ, ೫ ಪರಮಾತ್ಮನೋ ಎಂದು ಸಂದೇಹ ಬಂದರೆ ೧ **ಅಯಮಗ್ನಿರ್ವೈಶ್ವಾನರೋ ಯೋಽಯಮಂತಃ ಪುರುಷೇ** ಎಂದು ಜಾಠರಾಗ್ನಿಯಲ್ಲಿಯೂ, ೨ **ವಿಶ್ವಸ್ಮಾ ಅಗ್ನಿಂ ಭುವನಾಯ ವೈಶ್ವಾನರಂ** ಎಂದು ಬಾಹ್ಯವಾದ ಭೂತಾಗ್ನಿಯಲ್ಲಿಯೂ, ೩ **ವೈಶ್ವಾನರಸ್ಯ ಸುಮತೌ ಸ್ಯಾಮ** ಎಂದು ದೇವತೆಯಲ್ಲಿಯೂ, ಪ್ರಯೋಗವಿದ್ದುದರಿಂದ ವೈಶ್ವಾನರಶಬ್ದವು ಮೂರರಲ್ಲಿಯೂ ಸಾಧಾರಣವಾಗಿರುವುದರಿಂದ ಜಾಠರಾಗ್ನ್ಯಾದಿಗಳೇ ಎಂದು ಪೂರ್ವಪಕ್ಷವು. ಅಥವಾ ಆತ್ಮಶಬ್ದವು ಜೀವನಲ್ಲಿ ರೂಢವಾಗಿರುವುದರಿಂದ ಜೀವನೇ ವೈಶ್ವಾನರನು ಎಂದು ಪೂರ್ವಪಕ್ಷಮಾಡಿಕೊಂಡು ಮಾಯಾವಾದಿಗಳು ಬ್ರಹ್ಮನೇ ಎಂದು ಸಿದ್ಧಾಂತಮಾಡಿರುವರು. ಹೇಗೆಂದರೆ— **ಏತಸ್ಯಾತ್ಮನೋ ವೈಶ್ವಾನರಸ್ಯ ದ್ಯೌರ್ಮೂರ್ಧೈವ ಸುತೇಜಾಃ** ಇತ್ಯಾದಿಗಳಿಂದ ದ್ಯು (ಸ್ವರ್ಗ) ಮೂರ್ಧತ್ವಾದಿಗಳು ಶ್ರುತಗಳಾಗಿವೆ. **ಕೋ ನ ಆತ್ಮಾ ಕಿಂ ಬ್ರಹ್ಮ** ಎಂದು ಬ್ರಹ್ಮ ಶಬ್ದವು ಶ್ರುತವಾಗಿರುವುದರಿಂದ ಅದು ಅನ್ಯತ್ರ ಕೂಡಲಾರದು. ವಿಶ್ವಶ್ಚಾಸೌ ನರಶ್ಚ ವಿಶ್ವನರಃ ಸರ್ವಾತ್ಮಕನಾದ ಪುರುಷನು, ವಿಶ್ವನರ ಏವ ವೈಶ್ವಾನರಃ ಎನ್ನುವ ಯೋಗವೃತ್ತಿಯಿಂದ ವೈಶ್ವಾನರಶಬ್ದವು ಬ್ರಹ್ಮನಲ್ಲಿ ಸಂಗತವಾಗುವುದು. ಆತ್ಮಶಬ್ದವು ಜೀವನಂತೆಯೇ ಬ್ರಹ್ಮನಲ್ಲಿಯೂ ಕೂಡುವುದರಿಂದ ವೈಶ್ವಾನರನು ಬ್ರಹ್ಮನೇ ಎಂದು ಸಿದ್ಧಾಂತಮಾಡಿರುವರು. ಇದು ಅಯುಕ್ತವು. **ಸೋಽಯಮಾತ್ಮಾ ಚತುಷ್ಪಾತ್ ಸ್ಥೂಲಭುಗ್ವೈಶ್ವಾನರಃ** ಎಂದು ಆತ್ಮ(ಪರಮಾತ್ಮ)ನಲ್ಲಿಯೂ ವೈಶ್ವಾನರಶಬ್ದವು ಕಾಣುವುದರಿಂದ ಜಾಠರಾಗ್ನ್ಯಾದಿ ಮೂರರಲ್ಲಿ ಸಾಧಾರಣವು ಎನ್ನುವ ಉಕ್ತಿಯು ಕೂಡಲಾರದು. ಮತ್ತು ಜಾಠರಾಗ್ನಿಯೂ ಭೂತಜಾತಿಯಲ್ಲಿಯೇ ಸೇರಿದುದರಿಂದ ಅದನ್ನು ಪ್ರತ್ಯೇಕ ಹೇಳಿದ್ದು ಅಯುಕ್ತವು. ಮತ್ತು ಆತ್ಮಶಬ್ದವು ಬ್ರಹ್ಮನಲ್ಲಿಯೇ ಮುಖ್ಯವಾಗಿರುವುದರಿಂದ ಜೀವ ಸಾಧಾರಣವಲ್ಲ. ಅಲ್ಲದೆ ದ್ಯುಭ್ವಾದ್ಯಾಯತನಂ ಎನ್ನುವಲ್ಲಿ ಆತ್ಮಶಬ್ದವು ಬ್ರಹ್ಮನಲ್ಲಿ ಅಸಾಧಾರಣವಾದುದು ಎಂದು ಮಾಯಾವಾದಿಗಳೇ ಅಂಗೀಕರಿಸಿರುವರು ಆದಕಾರಣ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ (೧) ವೈಶ್ವಾನರನು ಪರಮಾತ್ಮನೆಂದು ನಿರ್ಣಯಿಸಲಿಕ್ಕೆ ಶಕ್ಯವಾಗುತ್ತದೋ ಇಲ್ಲವೋ ಎಂದು ಸಂದೇಹವು ಬಂದರೆ ನಿರ್ಣಯಿಸಲು ಶಕ್ಯವಾಗುವುದಿಲ್ಲವೆಂದು ಪೂರ್ವಪಕ್ಷವು. ಇಲ್ಲಿ ಜೀವಪರಮಾತ್ಮರಲ್ಲಿ ಸಾಧಾರಣವಾದ ಆತ್ಮಶಬ್ದವು ಇದ್ದರೂ **ವೈಶ್ವಾನರಮಾತ್ಮಾನಂ** ಎಂದು ಜೀವನಲ್ಲಿ ಅಪ್ರಸಿದ್ಧವಾದ ವೈಶ್ವಾನರಶಬ್ದವನ್ನು ವಿಶೇಷಣ ಕೊಟ್ಟ ಪ್ರಕಾರ ಜೀವನೆನ್ನುವ ಶಂಕೆಯು ಹುಟ್ಟಲಾರದು. ಜಾಠರಾಗ್ನಿ ಭೂತಾಗ್ನಿ ದೇವತೆ ಇವುಗಳಲ್ಲಿಯೂ, **ತದಾತ್ಮನ್ಯೇವ ಹೃದಯೇ ವೈಶ್ವಾನರೇ ಪ್ರಾಸ್ಯತ್** ಎಂದು ಪರಮಾತ್ಮನಲ್ಲಿಯೂ ವೈಶ್ವಾನರಶಬ್ದಕ್ಕೆ ಶ್ರುತಿಯಲ್ಲಿ ಪ್ರಯೋಗವು ಕಂಡದ್ದರಿಂದ ವೈಶ್ವಾನರಶಬ್ದವು

ಜಾಠರಾಗ್ನ್ಯಾದಿ ನಾಲ್ಕರಲ್ಲಿಯೂ ಸಾಧಾರಣವಾಗಿದೆ ಎಂಧು ಪೂರ್ವಪಕ್ಷಮಾಡಿಕೊಂಡು, **ಕೋ ನ ಆತ್ಮಾ ಕಿಂ ಬ್ರಹ್ಮ** ಎಂದು ಸರ್ವಜೀವರಿಗೆ ಆತ್ಮಭೂತನಾದ ಬ್ರಹ್ಮನು ಯಾರು ಎಂದು ಪ್ರಶ್ನೆ ಮಾಡಿದ್ದರಿಂದಲೂ, ಉತ್ತರದಲ್ಲಿ **ಆತ್ಮಾನಂ ವೈಶ್ವಾನರಂ** ಎಂದು ಬ್ರಹ್ಮ ಶಬ್ದಾನ್ಯಾನದಲ್ಲಿ ಸರ್ವತ್ರ ವೈಶ್ವಾನರಶಬ್ದವನ್ನು ಪ್ರಯೋಗಿಸಿದ್ದರಿಂದಲೂ ಈ ವೈಶ್ವಾನರನು ಪರಮಾತ್ಮನೇ ಎಂದು ನಿರ್ಣಯಿಸಲು ಶಕ್ಯವಾಗುತ್ತದೆ. ವೈಶ್ವಾನರಶಬ್ದವು ನಾಲ್ಕರಲ್ಲಿ ಸಾಧಾರಣವಾದುದಾಗ್ಯೂ ಈ ಪ್ರಕರಣದಲ್ಲಿ ಮುಮುಕ್ಷುಗಳಾದ ಔಪಮನ್ಯವಮೊದಲಾದವರಿಂದ ಜಿಜ್ಞಾಸ್ಯತ್ವ ಸರ್ವಾತ್ಮಕತ್ವ ಮೊದಲಾದ ಬ್ರಹ್ಮಧರ್ಮಗಳಿಂದ ವೈಶ್ವಾನರನಲ್ಲಿ ವಿಶೇಷಣಕೊಟ್ಟಿರುವುದರಿಂದ ನಿರ್ಣಯಿಸಲು ಶಕ್ಯವಾಗುತ್ತದೆ ಎಂದು ಹೇಳಿರುವರು. ಇದು ಅಯುಕ್ತವು. ಜಾಠರಾಗ್ನಿಯನ್ನು ಪ್ರತ್ಯೇಕ ಹೇಳಿದ್ದೂ ಆಯುಕ್ತವು. ಮತ್ತು ಆತ್ಮಾನಂ ವೈಶ್ವಾನರಂ ಎಂದು ಸಾಕ್ಷಾತ್ತಾಗಿ ವೈಶ್ವಾನರನಲ್ಲಿ ವಿಶೇಷಣೀಭೂತವಾದ ಆತ್ಮಶ್ರುತಿಯನ್ನೇ ಹೇಳಲಿಕ್ಕೆ ಬರುವಾಗ ಪ್ರಕರಣತಃ ಪ್ರಾಪ್ತವಾದ ಲಿಂಗರೂಪವಿಶೇಷಣದಿಂದ ಪರಮಾತ್ಮನನ್ನು ತೆಗೆದುಕೊಳ್ಳಬೇಕೆಂದು ಹೇಳಿದ್ದೂ ಅಯುಕ್ತವು. (೨) ಮತ್ತು **ಯಸ್ಯಾ ಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ । ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರಂ** ಇತ್ಯಾದಿಗಳಿಂದ ಈಶ್ವರನಲ್ಲಿ ಸ್ಮರ್ಯಮಾಣವಾದ ತ್ರೈಲೋಕ್ಯಾತ್ಮಕವಾದ ರೂಪವು ಮೂಲಭೂತವಾದ ಶ್ರುತಿಯನ್ನು ಅನುಮೇಯಿಸಿಕೊಡುವಂಥಾದ್ದು ಸಮಾನವಿಷಯವುಳ್ಳ **ಮೂರ್ಧೈವ ಸುತೇಜಾಃ** ಇದು ಮೊದಲಾದ ವೈಶ್ವಾನರವಿದ್ಯೆಯನ್ನು ಅನುಮೇಯಿಸಿಕೊಡುವುದಾಗಿ ಬ್ರಹ್ಮನಿಗೆ ವೈಶ್ವಾನರತ್ವವಿದೆ ಎನ್ನುವಲ್ಲಿ ಲಿಂಗವು, ಹೀಗೆ ೨ನೇ ಸೂತ್ರದ ಅರ್ಥವು ಎಂದು ಮಾಯಾವಾದಿ ರಾಮಾನುಜಾಚಾರ್ಯರು ಇಬ್ಬರೂ ಹೇಳುವರು. ಇದೂ ಅಯುಕ್ತವು. **ಚಕ್ಷುಷೀ ಚಂದ್ರ ಸೂರ್ಯೌ ದಿಶಃ ಶ್ರೋತ್ರಂ** ಇದು ಮೊದಲಾದ ಶ್ರುತ್ಯಂತರಗಳಿಗೂ ಸ್ಮೃತಿಮೂಲತ್ವವು ಕೂಡುವುದರಿಂದ ವೈಶ್ವಾನರವಿದ್ಯೆಗೆ ಮಾತ್ರ ಆ ಸ್ಮೃತಿಮೂಲತ್ವವು ಸಿದ್ಧಿಸಲಾರದು. ಮತ್ತು **ಅಹಂ ವೈಶ್ವಾನರೋ ಭೂತ್ವಾ** ಎಂದು ಸಾಕ್ಷಾತ್ತಾಗಿಯೇ ಈಶ್ವರನಿಗೆ ವೈಶ್ವಾನರತ್ವವನ್ನು ಬೋಧಿಸತಕ್ಕ ಸ್ಮೃತಿಯು ಇರುವಾಗ ಈ ರೀತಿಯಾಗಿ ಕ್ಲಿಷ್ಟಕಲ್ಪನೆಯು ಅತ್ಯಯುಕ್ತವು. ಆದಕಾರಣ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಛಾಂದೋಗ್ಯದಲ್ಲಿ **ಅಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ** ಎಂದು, ಬೃಹದಾರಣ್ಯಕದಲ್ಲಿ **ಅಯಮಗ್ನಿರ್ವೈಶ್ವಾನರೋ ಯೋಽಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ** ಎಂದೂ ಹಾಗೆಯೇ **ವೈಶ್ವಾನರಮೃತ ಆಜಾತಮಗ್ನಿಂ** ಇದು ಮೊದಲಾದ ಸೂಕ್ತಗಳಲ್ಲಿರತಕ್ಕ ವೈಶ್ವಾನರನು ಭೂತಾಗ್ನಿಯೋ, ಭೂತಾಭಿಮಾನಿದೇವತೆಯೋ, ವಿಷ್ಣುವೋ ಎಂದು ಸಂದೇಹವು ಬಂದರೆ— ವೈಶ್ವಾನರನು ಭೂತಾಗ್ನಿಯು ಅಥವಾ ಭೂತಾಗ್ನಿಗೆ ಅಭಿಮಾನಿಯಾದ ದೇವತೆಯು ಎಂದು ಪೂರ್ವಪಕ್ಷವು. ಹೇಗೆಂದರೆ ವೈಶ್ವಾನರ ಅಗ್ನಿ ಮೊದಲಾದ ಶಬ್ದಗಳಿಗೆ ಅಗ್ನಿಯಲ್ಲಿಯೇ ಲೋಕಪ್ರಸಿದ್ಧಿಯಿರುವುದು. ಮತ್ತು ಛಾಂದೋಗ್ಯದಲ್ಲಿ **ವೈಶ್ವಾನರೇ ತದ್ಧುತಂ ಭವತಿ ಹೃದಯಂ ಗಾರ್ಹಪತ್ಯ** ಇತ್ಯಾದಿಗಳಿಂದ ಹೋಮಾದ್ಯಾಧಾರತ್ವಗಾರ್ಹಪತ್ಯಾದ್ಯಂಗತ್ವರೂಪಲಿಂಗವೂ ಕಾಣ್ವಶ್ರುತಿಯಲ್ಲಿ ಪಾಚಕತ್ವಾದಿರೂಪ ಲಿಂಗವೂ ಶ್ರುತವಾಗಿದೆ. ಅವುಗಳು ವಿಷ್ಣುವಿನಲ್ಲಿಯೇ ಮುಖ್ಯಗಳೆಂದಾದರೆ ಲೋಕದಲ್ಲಿ ವ್ಯವಹಾರವೇ

ಇಲ್ಲವೆಂದಾಗಬೇಕಾಗುವುದು. ಮತ್ತು ಸರ್ವವಿದ್ಯೆಗಳೂ ವಿಷ್ಣುಪ್ರತಿಪಾದಕಗಳೆಂದಾದರೆ ಇದು ಅಗ್ನಿ ವಿದ್ಯೆಯು, ಇದು ಸೂರ್ಯವಿದ್ಯೆಯು ಇತ್ಯಾದಿ ವ್ಯವಸ್ಥೆಯೇ ಕೂಡದೆ ಹೋಗುವುದು. ಆದಕಾರಣ ಭೂತವೆಂದಾಗಲೀ ಅಗ್ನಿಯೆಂದಾಗಲೀ ಅಭಿಮಾನಿ ದೇವತೆಯೆಂದಾಗಲೀ ಹೇಳಬೇಕು ಎಂದು ಪೂರ್ವಪಕ್ಷವು ಬಂದರೆ— ವೈಶ್ವಾನರನು ವಿಷ್ಣುವೇ ಎಂದು ಸಿದ್ಧಾಂತವು. ಹೇಗೆಂದರೆ— **ಅಜ್ಞಾಸ್ತ್ವಜ್ಞಾನತಃ ಶಬ್ದಾನನ್ಯತ್ರೈವ ಪ್ರಯುಂಜತೇ । ಜ್ಞಾನಿನೋಽಪಿ ಚ ಹಾನಾದಿವ್ಯವಹಾರಪ್ರಸಿದ್ಧಯೇ ।** ಅಜ್ಞರು ಅಜ್ಞಾನದಿಂದಲೇ ಅನ್ಯತ್ರದಲ್ಲಿಯೇ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಜ್ಞಾನಿಗಳಾದರೂ ಎಲ್ಲಾ ಶಬ್ದಗಳೂ ಪರಬ್ರಹ್ಮನಲ್ಲಿಯೇ ಮುಖ್ಯಗಳಾದಾಗ್ಯೂ ಹಾನೋಪಾದಾನ ಮೊದಲಾದ ವ್ಯವಹಾರಸಿದ್ಧಿಗಾಗಿ ಅನ್ಯತ್ರವೂ ಪ್ರಯೋಗ ಮಾಡುತ್ತಾರೆ. **ಆತ್ಮಾನಂ ವೈಶ್ವಾನರಂ** ಎನ್ನುವ ಸ್ಮೃತಿಸಮಾಖ್ಯೆಯಿಂದಲೂ **ಕೋ ನ ಆತ್ಮಾ ಕಿಂ ಬ್ರಹ್ಮ** ಎಂದು ವಿಚಾರಪೂರ್ವಕವಾಗಿ ಉಪಕ್ರಮಿಸಿಕೊಂಡು ಈ ವಿದ್ಯೆಯನ್ನು ಹೇಳಿದ್ದರಿಂದ ಬ್ರಹ್ಮಪ್ರಕರಣವಾಗಿರುವುದರಿಂದಲೂ ವೈಶ್ವಾನರನು ವಿಷ್ಣುವೇ. ಮತ್ತು **ಶೀರ್ಷ್ಣೋ ದ್ಯೌಃ ಸಮವರ್ತತ** ಎಂದು ಪುರುಷಸೂಕ್ತದಲ್ಲಿ ಹೇಳಿದ ದ್ಯು(ಸ್ವರ್ಗ)ಭ್ವಾದಿಜನಕ ಶಿರಸ್ಸು ಮೊದಲಾದ ಅವಯವವನ್ನೇ **ಮೂರ್ಧೈವ ಸುತೇಜಾಃ** ಎಂದು ಈ ವಿದ್ಯೆಯಲ್ಲಿ ಹೇಳಿದ್ದರಿಂದ ಪುರುಷಸೂಕ್ತಸಮಾಖ್ಯೆಯಿಂದಲೂ ಕೂಡ ನಿರವಕಾಶವಾದ ಸಾಧಕವಿದ್ದುದರಿಂದಲೂ ವಿಷ್ಣುವೇ. ಮತ್ತು ವೈಶ್ವಾನರಾದಿ ಶಬ್ದವಾಚ್ಯತ್ವದಿಂದಲೂ ಪಾಚಕತ್ವಾದಿ ಲಿಂಗಗಳಿಂದಲೂ ವಿಷ್ಣುವನ್ನು ಉಪಾಸನಾ ಮಾಡಬೇಕೆಂದು ಹೇಳಿರುವುದರಿಂದ ಅನ್ಯಶ್ರುತ್ಯಾದಿಗಳು ವಿಷ್ಣುವಿನಲ್ಲಿ ಸಾವಕಾಶಗಳು ಮತ್ತು ಅಗ್ನ್ಯಾದಿ ವಿದ್ಯಾದಿಗಳಿಂದ ಬ್ರಹ್ಮನನ್ನು ಉಪಾಸನಾ ಮಾಡುವಾಗ ಅಗ್ನ್ಯಾದಿಗಳಲ್ಲಿಯೇ ವಿಷ್ಣುವು ಅಭಿವ್ಯಕ್ತನು ಅನುಸ್ಮರಣೀಯನು ಪ್ರಾಪ್ಯನೂ ಆಗುತ್ತಾನೆ. ಈ ನಿಮಿತ್ತಗಳಿಂದ ಅಗ್ನ್ಯಾದಿ ವಿದ್ಯೆಗಳ ವ್ಯವಸ್ಥೆಯೂ ಕೂಡಬಹುದು. ತಥಾಚ ಬಾಧಕಗಳು ಯಾವುದೂ ಇಲ್ಲದಿರುವುದರಿಂದಲೂ ಸಾಧಕಗಳು ಇದ್ದುದರಿಂದಲೂ ವೈಶ್ವಾನರನು ವಿಷ್ಣುವೇ ಎಂದು ಸಿದ್ಧಾಂತವು. ॥ ೩೨ ॥ ಅಧಿ. ೭ ॥

## ವೈಶ್ವಾನರಾಧಿಕರಣವು ಸಮಾಪ್ತವಾಯಿತು.

## ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ(ಪಾದ) ವಿರಚಿತೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ ॥ ೧-೨ ॥

ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಒಂದನೇ ಅಧ್ಯಾಯದಲ್ಲಿ ಎರಡನೇ ಪಾದವು ಸಮಾಪ್ತವಾಯಿತು.

**ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿದಃ ।**
**ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ ॥**
**॥ ಶ್ರೀಕೃಷ್ಣಾರ್ಪಣಮಸ್ತು ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಪ್ರಥಮಾಧ್ಯಾಯ ೩ನೇ ಪಾದ

## ಉಭಯತ್ರಪ್ರಸಿದ್ಧನಾಮಲಿಂಗಪಾದಃ

## ೧. ದ್ಯುಭ್ವಾದ್ಯಧಿಕರಣವು

ಪೀಠಿಕೆ ॥ ಈ ಪಾದದಲ್ಲಿ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ—

**ಭಾಷ್ಯ ॥ ಓಂ ॥ ತತ್ರ ಚಾನ್ಯತ್ರ ಚ ಪ್ರಸಿದ್ಧಾನಾಂ ಶಬ್ದಾನಾಂ ವಿಷ್ಣೌ ಸಮನ್ವಯಂ ಪ್ರಾಯೇಣಾಸ್ಮಿನ್ಪಾದೇ ದರ್ಶಯತಿ। ವಿಷ್ಣೋಃ ಪರವಿದ್ಯಾವಿಷಯತ್ವಮುಕ್ತಂ ॥ ೧ ॥**

ಭಾಷ್ಯಾರ್ಥ ॥ ಹೆಚ್ಚಾಗಿ ಈ ಮೂರನೇಪಾದದಲ್ಲಿ ಆ ಶ್ರೀಹರಿಯಲ್ಲಿಯೂ, ರುದ್ರಪ್ರಕೃತ್ಯಾದಿಗಳಲ್ಲಿಯೂ ಶ್ರುತಿಲಿಂಗಾದಿಗಳಿಂದ ಪ್ರಸಿದ್ಧಗಳಾದ ನಾಮಾತ್ಮಕಲಿಂಗಾತ್ಮಕಶಬ್ದಗಳಿಗೆ ವಿಷ್ಣುವಿನಲ್ಲಿ ಪರಮಮುಖ್ಯವೃತ್ತಿಯಿಂದ ತಾತ್ಪರ್ಯವನ್ನು ಪ್ರಬಲಹೇತುಗಳಿಂದ ಸೂತ್ರಕಾರರು ಪ್ರತಿಪಾದಿಸುತ್ತಾರೆ. (ಶ್ರುತ್ಯಾದಿಸಂಗತಿಯನ್ನೂ ವಿಷಯವಾಕ್ಯವನ್ನೂದಾಹರಿಸಿ ವಿಷಯಸಂಶಯ ಸಯುಕ್ತಿಕ ಪೂರ್ವಪಕ್ಷಗಳನ್ನು ತೋರಿಸುತ್ತಾರೆ.) (ಅದೃಶ್ಯತ್ವಾಧಿಕರಣದಲ್ಲಿ) ವಿಷ್ಣುವಿಗೆ ಪರವಿದ್ಯಾವಿಷಯತ್ವವು ಉಕ್ತವಾಗಿದೆ.

**ಭಾಷ್ಯ ॥ ತತ್ರ (೧) ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ। ತಮೇವೈಕಂ ಜಾನಥ ಆತ್ಮಾನಂ (ಮು.೨.೨.೫.) ಇತ್ಯತ್ರ (೨) ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ (ತೈ.ಉ. ಮ.೩೫.) (೩) ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ (ತೈ.ಉ.ಘೃತಸೂಕ್ತ) ಇತ್ಯಾದಿನಾ ರುದ್ರಸ್ಯ ಪ್ರಾಣಾಧಾರತ್ವ ಪ್ರತೀತೇಃ। (೪) ಸ ಏಷೋಽನ್ತಶ್ಚರತೇ ಬಹುಧಾ ಜಾಯಮಾನಃ (ಮು.೨.೨.೬.) ಇತಿ ಜೀವಲಿಂಗಾಚ್ಚ ತಯೋಃ ಪ್ರಾಪ್ತಿರಿತಿ ॥ ೨ ॥**

ಭಾಷ್ಯಾರ್ಥ ॥ (ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರಶಬ್ದವಾಚ್ಯನಾದ ವಿಷ್ಣುವಿಗೆ ಪರವಿದ್ಯಾ ವಿಷಯತ್ವವು ಎಲ್ಲಿ ಹೇಳಲ್ಪಟ್ಟಿದೆಯೋ) ತತ್ರ=ಆ ಆಥರ್ವಣದಲ್ಲಿ ಇರತಕ್ಕ (೧) ಯಸ್ಮಿನ್=ಯಾವ ಶ್ರೀಹರಿಯಲ್ಲಿ ದ್ಯೌಃ=ದ್ಯುಲೋಕವು, ಪೃಥಿವೀ=ಪೃಥಿವೀಲೋಕವು, ಅಂತರಿಕ್ಷಂ ಚ=ಅಂತರಿಕ್ಷ ಲೋಕವೂ, ಮನಃ=ಮನೋಽಭಿಮಾನಿಯೂ, ಸರ್ವೈಃ ಪ್ರಾಣೈಃ=ಎಲ್ಲಾ ಇಂದ್ರಿಯಗಳಿಂದಲೂ, ಇಂದ್ರಿಯಾಭಿಮಾನಿದೇವತೆಗಳಿಂದಲೂ ಕೂಡ, ಸಹ=ಕೂಡಿಕೊಂಡು, ಓತಂ=ಪ್ರವಿಷ್ಟವಾಗಿಯದೋ, ತಮೇವ ಆತ್ಮಾನಂ=ಆ ಪರಮಾತ್ಮನನ್ನೇ, ಏಕಂ=ಪ್ರಧಾನನನ್ನಾಗಿ, ಜಾನಥ=ತಿಳಿಯಿರಿ. (ಇತರ ವಿಷಯಕ

ಮಾತನ್ನು ಬಿಡಿರಿ. ಈತನೇ ಮುಕ್ತರ ವರ್ಗಕ್ಕೂ ಆಶ್ರಯನು.) ಇತ್ಯತ್ರ=ಈ ವಾಕ್ಯದಲ್ಲಿ, ತತ್ರ= ದ್ಯುಭ್ವಾದ್ಯಾಶ್ರಯನಲ್ಲಿ (ಪರವಿದ್ಯಾವಿಷಯತ್ವವು ಉಕ್ತವಾಗಿದೆ.) ತತ್ರ=ದ್ಯುಭ್ವಾದ್ಯಾಯತನತ್ವದಲ್ಲಿ ತಯೋಃ = ರುದ್ರಜೀವರಿಗೆ, ಪ್ರಾಪ್ತಿಃ=ಪ್ರಾಪ್ತಿಯಿದೆ. (ಅಂದರೆ ಈ ದ್ಯುಭ್ವಾದ್ಯಾಯತನನು ರುದ್ರನು ವಾ ಜೀವನು ಎಂದು ಪೂರ್ವಪಕ್ಷವು) (೨) ಉ ರುದ್ರ=ಎಲೋ ರುದ್ರನೇ, ತ್ವಂ=ನೀನು, ಪ್ರಾಣಾನಾಂ= ಇಂದ್ರಿಯಗಳಿಗೆ, ಗ್ರಂಥಿಃ=ಆಶ್ರಯನು, ಅಂತಕಃ=ಸಂಹಾರಕನೂ ಕೂಡ, ಅಸಿ=ಆಗಿರುತ್ತಿ (ಸ ತ್ವಂ= ಅಂತಹ ನೀನು) ಮಾ=ನನ್ನನ್ನು, ಆವಿಶ=ಪ್ರವೇಶ ಮಾಡು. (ನನ್ನಲ್ಲಿ ಸನ್ನಿಹಿತನಾಗು.) ಅಥವಾ ಸಂಹಾರಕನಾಗಿ ನೀನು ನನ್ನನ್ನು ಪ್ರವೇಶಮಾಡಬೇಡ. (ನಾನು ಕೊಟ್ಟ ಆಹುತಿರೂಪವಾದ ಅನ್ನದಿಂದ ನನ್ನನ್ನು ಸುಖಪಡಿಸು.) (ಮಹಾನಾಮ್ನೀ ಋ.೩.೫.) ಎನ್ನುವ ತೈತ್ತಿರೀಯವಾಕ್ಯದಿಂದಲೂ (೩) (**ಯೋ ಬ್ರಹ್ಮಾ ಬ್ರಹ್ಮಣ ಉಜ್ಜಹಾರ ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ । ಈಶಾನೋ ದೇವಃ ಸ ನ ಆಯುರ್ದಧಾತು ।** ಯಃ=ಯಾವಾತನು, ಬ್ರಹ್ಮಣೇ=ಚತುರ್ಮುಖನಿಗೋಸ್ಕರ, ಬ್ರಹ್ಮ=ವೇದಗಳನ್ನು ಉಜ್ಜಹಾರ=ಉಪದೇಶಿಸಿದನೋ, ಸಃ=ಆದಾವ) ಪ್ರಾಣೇಶ್ವರಃ=ಇಂದ್ರಿಯಗಳಿಗೆ ಅಧಿಪತಿಯಾದ, ಕೃತ್ತಿವಾಸಾಃ=ಚರ್ಮವೇ ವಸ್ತ್ರವಾಗಿ ಉಳ್ಳ, ಪಿನಾಕೀ=ಪಿನಾಕಾಖ್ಯ ಆಯುಧವುಳ್ಳ, (ಈಶಾನಃ ದೇವಃ = ರುದ್ರದೇವರು, ನಃ=ನಮಗೆ, ಆಯುಃ=ಆಯುಷ್ಯವನ್ನು, ದಧಾತು=ಹೆಚ್ಚಿಸಲಿ.) (ಸಿದ್ಧಾಂತರೀತಿಯಾಗಿ ರುದ್ರಾದಿಶಬ್ದಗಳು ವಿಷ್ಣುಪರಗಳಾಗಿವೆ.) ಇತ್ಯಾದಿನಾ=ಖಿಲಸಂಹಿತಾವಾಕ್ಯದಿಂದಲೂ, (ಆದಿಶಬ್ದ ದಿಂದ **ರುದ್ರೋ ವಾವ ಲೋಕಾಧಾರಃ** ಇತ್ಯಾದಿವಾಕ್ಯಗಳನ್ನು ಇಟ್ಟುಕೊಳ್ಳಬೇಕು.) ರುದ್ರಸ್ಯ= ರುದ್ರನಿಗೆ, ಪ್ರಾಣಾಧಾರತ್ವಪ್ರತೀತೇಃ = ಇಂದ್ರಿಯಾಶ್ರಯತ್ವವು ತೋರುವುದರಿಂದ (೪) ಸ ಏಷಃ= ಆ ಈ ಜೀವನು, ಬಹುಧಾ=ಬಹುಶರೀರದಿಂದ, ಜಾಯಮಾನಃ=ಹುಟ್ಟತಕ್ಕವನಾಗಿ, ಅಂತಃ= ಶರೀರದ ಒಳಗೆ, ಚರತೇ=ಸಂಚರಿಸುತ್ತಾನೆ. ಇತಿ=ಹೀಗೆ, ಜೀವಲಿಂಗಾಚ್ಚ=ಜಾಯಮಾನತ್ವರೂಪ ಜೀವರ ಲಿಂಗವು ಶ್ರುತವಾದ ಪ್ರಯುಕ್ತವೂ, ರುದ್ರ ಜೀವರಿಗೆ ಪ್ರಾಪ್ತಿಯು.

**ವಿಶೇಷಾಂಶ ॥** (೧) ತಮೇವಂ ಇತ್ಯಾದಿ ವಾಕ್ಯದಿಂದ ಪ್ರತೀತವಾದ ಮೋಕ್ಷಜನಕ ಜ್ಞಾನವಿಷಯತ್ವರೂಪವಾದ ಪರವಿದ್ಯಾವಿಷಯತ್ವವು ವಿಷ್ಣುವಿನಿಂದ ಇತರರಲ್ಲಿದೆ ಎಂದು ಆಕ್ಷೇಪಿಸಿದ್ದರಿಂದ ಅದೃಶ್ಯತ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. ದ್ಯುಭ್ವಾದ್ಯಾಯತನತ್ವವು ವಿಷಯವು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಅವತಾರಿಸಿ ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಅತ ಆಹ (ಉಚ್ಯತೇ)** ॥ ೩ ॥

## ಸೂತ್ರ ॥ ಓಂ ಧ್ಯುಧ್ವಾದ್ಯಾಯತನಂ ಸ್ವಶಬ್ದಾತ್ ಓಂ ॥ ೧ ॥

**ಸೂತ್ರಾರ್ಥ ॥** ಸ್ವಶಬ್ದಾತ್=ವಿಷ್ಣುವಾಚಕವಾದ ಸ್ವಶಬ್ದಪರ್ಯಾಯವಾದ ಆತ್ಮಶಬ್ದವು ಶ್ರುತವಾದುದರಿಂದ, ದ್ಯುಭ್ವಾದ್ಯಾಯತನಂ=ಸ್ವರ್ಗ ಭೂಮಿ ಮೊದಲಾದ ಸರ್ವವಸ್ತುಗಳಿಗೆ ಆಶ್ರಯ ನಾದವನು, ತತ್=ವಿಷ್ಣುವೇ.

**ವಿಶೇಷಾಂಶ** ॥ (೧) ಸೂತ್ರದಲ್ಲಿದ್ದ ಸ್ವಶಬ್ದಕ್ಕೆ **ಸ್ವಶಬ್ದಪರ್ಯಾಯಾತ್ಮಶಬ್ದಾತ್** ಎಂದು ವಿಷ್ಣುತತ್ವನಿರ್ಣಯದಲ್ಲಿ ಹೇಳಿದೆ. (೨) ಸ್ವೇತಿ ಶಬ್ದಃ ಸ್ವಶಬ್ದಃ ಎನ್ನುವ ವ್ಯುತ್ಪತ್ತಿಯಿಂದ **ಸ್ವಶಬ್ದಪರ್ಯಾಯಾತ್ಮಶಬ್ದಗ್ರಾಹಿತ್ವಂ** ಈ ಆತ್ಮಶಬ್ದವು ಸಾಕ್ಷಾತ್ ವಿಷ್ಣುವಿನ ಸ್ವರೂಪವನ್ನೇ ಹೇಳುತ್ತದೆ ಎಂದು ತತ್ವಪ್ರದೀಪದಲ್ಲಿ ಹೇಳಿದೆ. (೩) ಅಥವಾ ಸ್ವಸ್ಯ ಶಬ್ದಃ ವಿಷ್ಣುವನ್ನೇ ಹೇಳತಕ್ಕ ಶಬ್ದವು ಎನ್ನುವ ವಿಗ್ರಹಾಶ್ರಯಣದಿಂದಲೂ ಆತ್ಮಶಬ್ದಾತ್ ಎಂದು ವ್ಯಾಖ್ಯಾತವಾಗಿದೆ.

**ಭಾಷ್ಯ ॥ ತಮೇವೈಕಂ ಜಾನಥ ಆತ್ಮಾನಂ (ಮು.೨.೨.೫.) ಇತ್ಯಾತ್ಮಶಬ್ದಾದ್ ದ್ಯುಭ್ವಾದ್ಯಾ(ಯತನಂ) ಪ್ರಯೋ ವಿಷ್ಣುರೇವ ॥ ೪ ॥**

**ಭಾಷ್ಯಾರ್ಥ** ॥ ಆ ಆತ್ಮಶಬ್ದವಾಚ್ಯನಾದ ಶ್ರೀಪರಮಾತ್ಮನನ್ನೊಬ್ಬನನ್ನೇ ತಿಳಿಯಿರಿ ಎನ್ನುವಲ್ಲಿ ಸ್ವಶಬ್ದಪರ್ಯಾಯವಾದ ಆತ್ಮಶಬ್ದವು ಶ್ರುತವಾದ ಪ್ರಯುಕ್ತ ಸ್ವರ್ಗಾದಿಗಳಿಗೆ ಆಶ್ರಯನಾದವನು ವಿಷ್ಣುವೇ.

**ಪೀಠಿಕೆ** ॥ ಆತ್ಮಶಬ್ದವಿದ್ದಾಗ್ಯೂ ಈತನು ವಿಷ್ಣುವೇ ಏಕೆ ಆಗಬೇಕು ಎಂದರೆ—

**ಭಾಷ್ಯ ॥ ಆತ್ಮಬ್ರಹ್ಮಾದಯಃ ಶಬ್ದಾಸ್ತಮೃತೇ ವಿಷ್ಣುಮವ್ಯಯಂ। ನ ಸಂಭವಂತಿ ಯಸ್ಮಾತ್ತೈರ್ನೈವಾಪ್ತಾ ಗುಣಪೂರ್ಣತಾ ॥ ಇತಿ(ಹಿ)ಬ್ರಹ್ಮವೈವರ್ತೇ ॥ ೧ ॥ ೫ ॥**

**ಭಾಷ್ಯಾರ್ಥ** ॥ ಯಾವಕಾರಣದಿಂದ ವಿಷ್ಣುವಿನಿಂದ ಇತರರಾದ ಚತುರ್ಮುಖಾದಿಜೀವರಿಂದ ಗುಣಪರಿಪೂರ್ಣತ್ವವು ಸರ್ವಥಾ ಹೊಂದಲ್ಪಡಲಿಲ್ಲವೋ ಆದುದರಿಂದ ಆತ್ಮ ಬ್ರಹ್ಮ ಮೊದಲಾದ ಶಬ್ದಗಳು ನಿತ್ಯನಿರತಿಶಯ ಗುಣಪರಿಪೂರ್ಣತ್ವರೂಪ ಪ್ರವೃತ್ತಿ ನಿಮಿತ್ತವುಳ್ಳ ವಿಷ್ಣುವನ್ನು ಹೊರತು ಅಂದರೆ ವಿಷ್ಣುವಿನಿಂದ ಇತರರಾದವರನ್ನು ಮುಖ್ಯವಾಗಿ ಹೇಳುವುದಿಲ್ಲ.

**ವಿಶೇಷಾಂಶ** ॥ ಇದರಿಂದ ಆತ್ಮಶಬ್ದಕ್ಕೂ ಗುಣಪೂರ್ತಿಯೇ ಅರ್ಥವೆಂದು ಉಕ್ತವಾಯಿತು. ॥೧॥

**ಪೀಠಿಕೆ** ॥ ವಿಷ್ಣುವಿನಲ್ಲಿ ಆತ್ಮಶಬ್ದವು ಮುಖ್ಯವಾದಾಗ್ಯೂ ಜಾಯಮಾನತ್ವರೂಪವಾದ ಜೀವಲಿಂಗಬಲದಿಂದ ಅಮುಖ್ಯಾರ್ಥವು ಏಕೆ ಆಗಲಾರದು. ತಥಾಚ ಆದರಿಂದ ವಿಷ್ಣುವಿಗೆ ದ್ಯುಭ್ವಾದ್ಯಾಯತನತ್ವ ನಿರ್ಣಯವು ಆಗಲಾರದೆನ್ನುವ ಸಂದೇಹವನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸಮಾಡಿಕೊಂಡು ಅಲ್ಲಿ ಹೇಳಿದ ಶ್ರುತಿಯನ್ನೇ ಉದಾಹರಿಸುತ್ತಾರೆ—

## ಸೂತ್ರ ॥ ಓಂ ಮುಕ್ತೋಪಸೃಪ್ಯವ್ಯಪದೇಶಾತ್ ಓಂ ॥ ೨ ॥

**ಭಾಷ್ಯ ॥ ಅಮೃತಸ್ಯೈಷ ಸೇತುಃ (ಮು.೨.೨.೫.) ॥ ೬ ॥**

**ಭಾಷ್ಯಾರ್ಥ** ॥ ಈ ಶ್ರೀಹರಿಯು ಮುಕ್ತವರ್ಗಕ್ಕೆ ಆಶ್ರಯನು. ಎಂದು ಸ್ವರ್ಗ ಭೂಮ್ಯಾದಿಗಳಿಗೆ ಆಶ್ರಯಭೂತನಾದವನಿಗೆ ಮುಕ್ತಪ್ರಾಪ್ಯತ್ವವನ್ನು ಹೇಳಿದ್ದರಿಂದ ಈತನು ವಿಷ್ಣುವೆಂದು ನಿಶ್ಚಯವಾಗುವುದರಿಂದ ಅಲ್ಲಿರತಕ್ಕ ಆತ್ಮಶಬ್ದಕ್ಕೆ ಅಮುಖ್ಯಾರ್ಥತ್ವವನ್ನು ಆಶ್ರಯಿಸಿಕೊಂಡು ಆಕಾಶಾದಿಗಳಿಗೆ ಆಶ್ರಯವಾದುದು ವಿಷ್ಣುವಿನಿಂದ ಇತರವಾದುದು ಎಂದು ಕಲ್ಪಿಸಕೂಡದು.

**ವಿಶೇಷಾಂಶ ॥** ಉಪಸೃಪ್ಯತ್ವವೆಂದರೆ—ಪ್ರಾಪ್ಯವಾದುದು ಬೇರೆ ಇಲ್ಲದೆ ಇದ್ದು ಪ್ರಾಪ್ಯವಾದುದು ಹೀಗೆ ಇಟ್ಟುಕೊಳ್ಳಬೇಕು. ಇಂತಹ ಮುಖ್ಯ ಉಪಸೃಪ್ಯತ್ವ ವು ಅರ್ಚಿರಾದಿಲೋಕಗಳಿಗೆ ಇರುವುದಿಲ್ಲ.

**ಪೀಠಿಕೆ ॥** ಸ್ವರ್ಗಾದ್ಯಾಶ್ರಯನಿಗೆ ಮುಕ್ತಪ್ರಾಪ್ಯತ್ವವು ಹೇಗೆ ವಿಷ್ಣುತ್ವ ನಿಶ್ಚಾಯಕವಾಗುತ್ತದೆ ಎನ್ನುವ ಸಂದೇಹವನ್ನು ಪರಿಹರಿಸತಕ್ಕುದಾಗಿಯೂ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ (೧) ಬ್ರಹ್ಮವಿದಾಪ್ನೋತಿ ಪರಂ(ತೈ.೨.೧.)। (೨) ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ (ತೈ.ಉ.ಮ.೧೧.)। ಮುಕ್ತಾನಾಂ ಪರಮಾ ಗತಿಃ (ಸಹಸ್ರನಾಮ)। (೪) ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ (ತೈ.೨.೮.)। ಇತ್ಯಾದಿನಾ ತಸ್ಯೈವ ಮುಕ್ತಪ್ರಾಪ್ಯತ್ವ ವ್ಯಪದೇಶಾತ್ ॥ ೭ ॥**

**ಭಾಷ್ಯಾರ್ಥ ॥** (೧) ವಿಷ್ಣುಜ್ಞಾನಿಯು ಮುಕ್ತನಾಗಿ ಪರಬ್ರಹ್ಮನನ್ನು ಹೊಂದುತ್ತಾನೆ. (೨) ಜಗತ್ತು ಶ್ರೇಷ್ಠನಾದ ಜ್ಞೇಯನಾದ ಅಥವಾ ಪೂಜ್ಯರಿಂದ ತಿಳಿಯಲ್ಪಡತಕ್ಕ ಸರ್ವಜಗತ್ತಿಗೂ ಸ್ವಾಮಿಯಾದ ಮುಕ್ತರಿಗೆ ಆಶ್ರಯನಾದ ಶ್ರೀಹರಿಯನ್ನುಪಜೀವಿಸಿಕೊಂಡಿದೆ. (೩) ಮುಕ್ತರಿಗೆ ಮುಖ್ಯವಾಗಿ ಆಶ್ರಯನು. (೪) ಈ ಆನಂದಮಯನಾದ ಶ್ರೀಹರಿಯನ್ನು ಹೊಂದುತ್ತಾನೆ. ಇದು ಮೊದಲಾದ ವಾಕ್ಯಗಳಿಂದ ಶ್ರೀವಿಷ್ಣುವಿಗೇನೇ ಮುಕ್ತಪ್ರಾಪ್ಯತ್ವವನ್ನು ಹೇಳಿದ್ದರಿಂದ (ಆತನೇ ಸ್ವರ್ಗಾದಿಗಳಿಗೆ ಆಶ್ರಯನು.)

**ಪೀಠಿಕೆ ॥** ಹಾಗಾದರೆ ಈ ವಾಕ್ಯಗಳಿಂದ ವಿಷ್ಣುವಿಗೆ ಮುಕ್ತಪ್ರಾಪ್ಯತ್ವವು ತೋರಿದರೂ ವಿಷ್ಣುವಿನಂತೆಯೇ ಇತರರಿಗೂ ಮುಕ್ತಪ್ರಾಪ್ಯತ್ವವು ಏಕೆ ಇರಲಾರದು, ಎಂದು ಆಶಂಕಿಸಿಕೊಂಡು ಮುಕ್ತಪ್ರಾಪ್ಯತ್ವವು ವಿಷ್ಣುಲಿಂಗವೇ ಎನ್ನುವುದನ್ನು ಪ್ರಮಾಣದಿಂದ ಪ್ರತಿಪಾದಿಸುತ್ತಾರೆ—

**ಭಾಷ್ಯ ॥ ಬಹುನಾತ್ರ ಕಿಮುಕ್ತೇನ ಯಾವಚ್ಚೈತಂ ನ ಗಚ್ಛತಿ । ಯೋಗೀ ತಾವನ್ನ ಮುಕ್ತಃ ಸ್ಯಾದೇಷ ಶಾಸ್ತ್ರ(ವಿನಿ)ಸ್ಯ ನಿರ್ಣಯಃ॥ ಇತ್ಯಾದಿತ್ಯಪುರಾಣೇ ॥ ೨ ॥ ॥ ೮ ॥**

**ಭಾಷ್ಯಾರ್ಥ ॥** ಅತ್ರ=ಪ್ರಾಪ್ಯವಾದ ಮೋಕ್ಷ ಮೋಕ್ಷಸಾಧನವಿಷಯದಲ್ಲಿ ಪ್ರತ್ಯೇಕವಾಗಿ ಅನೇಕ ಮಾತುಗಳಿಂದ ಏನು ಪ್ರಯೋಜನವು, (ಏನೂ ಪ್ರಯೋಜನವಿಲ್ಲ ಮತ್ತೆ ವಚನಗೌರವವೇ. ಹಾಗಾದರೆ ನಿರ್ಣಯವು ಹೇಗೆ ಎಂದರೆ—) ಶ್ವೇತದ್ವೀಪಾಖ್ಯವಾದ ವಿಷ್ಣುಸ್ಥಾನವನ್ನು ಎಷ್ಟರತನಕ ಹೊಂದುವುದಿಲ್ಲವೋ (ಅಂದರೆ ಅಲ್ಲಿರತಕ್ಕ ವಿಷ್ಣುವನ್ನು ನೋಡುವುದಿಲ್ಲವೋ) ಅಷ್ಟರತನಕ ಅಪರೋಕ್ಷಜ್ಞಾನಾಖ್ಯ ಉಪಾಯವುಳ್ಳವನು ಮುಕ್ತನು ಆಗಲಾರನು. (ಅಂದರೆ ಶ್ರೀಹರಿಯ ಇಚ್ಛಾರೂಪವಾದ ಆವರಣದಿಂದ ಮುಕ್ತನಾಗಿ ಚೆನ್ನಾಗಿ ಆವಿರ್ಭೂತವಾದ ಜ್ಞಾನ ಆನಂದಾದಿಗಳುಳ್ಳವನು ಆಗಲಾರನು.) ಈ ಉಪದೇಶವು ಶಾಸ್ತ್ರ ತತ್ತ್ವವಿಷಯಕವಾದ ನಿರ್ಣಯಸಾಧನವು. ಅಥವಾ ಶಾಸ್ತ್ರಜನ್ಯನಿರ್ಣಯವಿಷಯವು. ಹೀಗೆ ಆದಿತ್ಯಪುರಾಣದಲ್ಲಿ (ವಿಷ್ಣುವಿಗೇನೇ ಮುಕ್ತಪ್ರಾಪ್ಯತ್ವವನ್ನು ಹೇಳಿದ್ದರಿಂದ.)

**ವಿಶೇಷಾಂಶ ॥** (೧) ಭಾವಬೋಧದಲ್ಲಿ ಸೂತ್ರದಲ್ಲಿಯೂ ಪುರಾಣವಾಕ್ಯದಲ್ಲಿಯೂ

ಮುಕ್ತಪದದಿಂದ ಲಿಂಗಭಂಗವುಳ್ಳವನನ್ನು ಇಟ್ಟುಕೊಳ್ಳಬೇಕು ಎಂದುಕ್ತವಾಗಿದೆ. (೨) ಶ್ವೇತದ್ವೀಪಕ್ಕೆ ಬರತಕ್ಕವನು ಅಮುಕ್ತನೆಂದು ಹೇಳಿದ್ದರಿಂದ ಶ್ವೇತದ್ವೀಪವನ್ನು ಹೊಂದಿದವನಿಗೇನೇ ಮುಕ್ತತ್ವವೆಂದು ತಿಳಿಯುತ್ತದೆ. ॥ ೨ ॥

**ಪೀಠಿಕೆ ॥** ಹಿಂದೆ ಹೇಳಿದ ಪ್ರಕಾರ ರುದ್ರಪ್ರಕೃತಿಗಳಿಗೆ ದ್ಯುಭ್ವಾದ್ಯಾಯತನತ್ವವು ಏಕೆ ಆಗಲಾರದು ಎಂದರೆ ಅದಕ್ಕೆ ಸಾಧಕವಾದುದು ಇಲ್ಲದಿರುವುದರಿಂದ ಅದು ಯುಕ್ತವಲ್ಲವೆಂದು ಸೂತ್ರಕಾರರು ಹೇಳುತ್ತಾರೆ—

## ಸೂತ್ರ ॥ ಓಂ ನಾನುಮಾನಮತಚ್ಛಬ್ದಾತ್ ಓಂ ॥ ೩ ॥

**ಸೂತ್ರಾರ್ಥ ॥** ಅನುಮಾನಂ=ಅನುಮಾನಸಿದ್ಧಪ್ರಾಮಾಣ್ಯವುಳ್ಳ ಪಾಶುಪತಾದ್ಯಾಗಮದಿಂದ ಪ್ರತಿಪಾದ್ಯರಾದ ರುದ್ರಾದಿಗಳು, ನ=ದ್ಯುಭ್ವಾದ್ಯಾಯತನರಲ್ಲ (ಯಸ್ಮಿನ್ ಇತ್ಯಾದಿಪ್ರಕರಣದಲ್ಲಿ ಸರ್ವಾಶ್ರಯರಾಗಿ ಪ್ರತಿಪಾದ್ಯರಲ್ಲ ಏಕೆಂದರೆ) ಅತಚ್ಛಬ್ದಾತ್=ರುದ್ರಪ್ರಧಾನಾದಿಗಳಿಗೆ ಸಾಧಕಗಳಾದ ಶ್ರುತಿಲಿಂಗಾದಿಗಳು ಇಲ್ಲದಿರುವುದರಿಂದ.

**ಪೀಠಿಕೆ ॥** ನಾನುಮಾನಂ ಎನ್ನುವ ಸಾಧ್ಯಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ನಾನುಮಾನಾತ್ಮಕಾಗಮಪರಿಕಲ್ಪಿತರುದ್ರೋಽತ್ರ ವಾಚ್ಯಃ ॥ ೯ ॥**

**ಭಾಷ್ಯಾರ್ಥ ॥ ಅನುಮಾನಪ್ರಾಪ್ತಪ್ರಾಮಾಣ್ಯಾಸದಾಗಮೋಽನುಮಾನಾತ್ಮಕಃ** ಎಂದು ತತ್ತ್ವಪ್ರದೀಪದಲ್ಲಿ ಹೇಳಿದ್ದರಿಂದ ಅನುಮಾನಾತ್ಮಕವಾದ ಅನುಮಾನಸಿದ್ಧ ಪ್ರಾಮಾಣ್ಯವುಳ್ಳ ಪಾಶುಪತಾದ್ಯಾಗಮದಲ್ಲಿ ಸರ್ವಾಶ್ರಯನಾಗಿ ಬೋಧಿಸಲ್ಪಟ್ಟ ರುದ್ರನು (ಪ್ರಕೃತ್ಯಾದಿಗಳಾಗಲೀ) ಈ ದ್ಯುಭ್ವಾದ್ಯಾಯತನಪ್ರಕರಣದಲ್ಲಿ (ಸರ್ವಾಶ್ರಯರಾಗಿ) ಪ್ರತಿಪಾದ್ಯರಲ್ಲ.

**ಪೀಠಿಕೆ ॥** ಅತಚ್ಛಬ್ದಾತ್ ಎನ್ನುವ ಹೇತ್ವಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಭಸ್ಮಧರೋಗ್ರತ್ವಾದಿತಚ್ಛಬ್ದಾಭಾವಾತ್ ॥ ೧೦ ॥**

**ಭಾಷ್ಯಾರ್ಥ ॥** ಭಸ್ಮಧರಉಗ್ರತ್ವಮೊದಲಾದ ಧರ್ಮವಿಶಿಷ್ಟ ಧರ್ಮಿಬೋಧಕವಾದ ಭಸ್ಮಧರಉಗ್ರಮೊದಲಾದ ಶಬ್ದಗಳು ಇಲ್ಲದಿರುವುದರಿಂದ.

**ವಿಶೇಷಾಂಶ ॥** (೧) ಭಸ್ಮಧರ ಎನ್ನುವುದರಿಂದ ರುದ್ರವಾಚಕವಾದ ನಾಮಾತ್ಮಕಶಬ್ದವನ್ನು ಇಟ್ಟುಕೊಳ್ಳಬೇಕು. (೨) ಉಗ್ರತ್ವಪದದಿಂದ ಉಗ್ರತ್ವರೂಪವಾದ ಲಿಂಗಾತ್ಮಕಶಬ್ದವನ್ನು ಇಟ್ಟುಕೊಳ್ಳಬೇಕು. (೩) ಆದಿಪದದಿಂದ ನಾಮಲಿಂಗಾತ್ಮಕಶಬ್ದಾಂತರಗಳನ್ನು ಇಟ್ಟುಕೊಳ್ಳಬೇಕು. ತಥಾಚ ಭಸ್ಮಧರಾದಿರುದ್ರಶ್ರುತಿಗಳೂ ಉಗ್ರತ್ವಾದಿರೂಪಗಳಾದ ರುದ್ರಲಿಂಗಗಳೂ, ರುದ್ರಪ್ರಾಪಕ ಸಮಾಖ್ಯಾದಿಗಳೂ ಇರುವುದಿಲ್ಲ (೪) ರುದ್ರಶಿವಾದಿತಚ್ಛಬ್ದಾಭಾವಾತ್ ಎಂದು ಹೇಳದೆ ಭಸ್ಮಧರೋಗ್ರ ಎಂದು ಹೇಳಿದ್ದು, ರುದ್ರೋ ಭಸ್ಮಧರೋ ನಗ್ನಃ ಎನ್ನುವ ವಿಶೇಷ ನಾಮಾಭಿಪ್ರಾಯದಿಂದ. ಆದುದರಿಂದಲೇ ಆದಿಪದದಿಂದ ನಗ್ನಾದಿಶಬ್ದಗಳನ್ನು ಇಟ್ಟುಕೊಳ್ಳಬೇಕು. (೫) ಅನುಮಾನಂ =

ಅನುಮಾನ ಸಂಬಂಧಿ ಎಂದು ಸತ್ತರ್ಕದೀಪಾವಳಿಯಲ್ಲಿ ಹೇಳಿದ್ದರಿಂದ ಅನುಮಾನಸಿದ್ಧ ಪ್ರಾಮಾಣ್ಯವುಳ್ಳ ಪಾಶುಪತಾದ್ಯಾಗಮಗಳಿಂದ ಸಿದ್ಧವಾದ ರುದ್ರಪ್ರಧಾನಾದಿಗಳು ಎಂದರ್ಥ. ಅಥವಾ ಪ್ರಮಾಣತ್ವೇನ ಅನುಮೀಯತೇ ಇತಿ, ಅನುಮಾನಂ=ಪಾಶುಪತಾದ್ಯಾಗಮವು ಎಂದರ್ಥ.

**ಪೀಠಿಕೆ ॥** ಹಾಗಾದರೆ ಆಥರ್ವಣದಲ್ಲಿ ರುದ್ರಾದಿಗಳಿಗೆ ಜ್ಞಾಪಕವಾದುದು ಇಲ್ಲದಿದ್ದರೂ ಇಲ್ಲಿ ಹೇಳಿದ ಪ್ರಾಣಾಧಾರತ್ವಪ್ರತಿಪಾದಕವಾದ ಪ್ರಾಣಾನಾಂ ಗ್ರಂಥಿರಸಿ ರುದ್ರ ಇತ್ಯಾದಿ ಸಮಾಖ್ಯಾ ಶ್ರುತಿಯಲ್ಲಿದ್ದ ರುದ್ರಾದಿಶಬ್ದಗಳನ್ನು ಅಂತಕತ್ವಾದಿಲಿಂಗಗಳನ್ನೂ ಹೇಳಿದ್ದರಿಂದ ಅದರ ಸಾಮರ್ಥ್ಯದಿಂದ ಅಲ್ಲಿ ಹೇಳಿದ ದ್ಯುಭ್ವಾದ್ಯಾಯತನತ್ವವು ರುದ್ರಾದಿಗಳಿಗೆ ಏಕೆ ಆಗಲಾರದು ಎಂದರೆ—

**ಭಾಷ್ಯ ॥ ಸೋಽಂತಕಃ ಸ ರುದ್ರಃ ಸ ಪ್ರಾಣಭೃತ್ಸ ಪ್ರಾಣನಾಯಕಃ ಸ ಈಶೋ ಯೋ ಹರಿರ್ಯೋಽನಂತೋ ಯೋ ವಿಷ್ಣುರ್ಯಃ ಪರಃ ಪರೋವರೀಯಾನಿತ್ಯಾದಿನಾ ಪ್ರಾಣಗ್ರಂಥಿರುದ್ರತ್ವಾದೇರ್ವಿಷ್ಣೋರೇವೋಕ್ತತ್ವಾತ್ ॥ ೧೧ ॥**

**ಭಾಷ್ಯಾರ್ಥ ॥** ಯಾರು ಸಂಹಾರಕನೋ ಆತನೇ ಅಂತಕಶಬ್ದವಾಚ್ಯನಾಗಿ ಶ್ರುತನಾಗಿದ್ದಾನೆ. ಆತನು ವಿಷ್ಣುವೇ. ಯಾರು ರುದ್ರಶಬ್ದವಾಚ್ಯನಾಗಿ ಶ್ರುತನಾಗಿದ್ದಾನೋ, ಆತನೂ ವಿಷ್ಣುವೇ. ಯಾರು ಪ್ರಾಣಭೃತ್ = ಪ್ರಾಣಾಧಾರತ್ವಬೋಧಕ ಪ್ರಾಣಗ್ರಂಥಿಶಬ್ದವಾಚ್ಯನೋ, ಆತನು ವಿಷ್ಣುವೇ. ಯಃ ಪ್ರಾಣನಾಯಕಃ=ಯಾರು ಪ್ರಾಣಗಳಿಗೆ ಸ್ವಾಮಿಯಾಗಿ ಪ್ರಾಣೇಶಶಬ್ದವಾಚ್ಯನೋ ಆತನೂ ವಿಷ್ಣುವೇ. ಯಾರು ಈಶಶಬ್ದವಾಚ್ಯನೋ ಆತನೂ ವಿಷ್ಣುವೇ. ಯಾರು ಅನಂತಶಬ್ದವಾಚ್ಯನೋ ಅವನೂ ಕೂಡ ತ್ರಿವಿಧಪರಿಚ್ಛೇದರಹಿತನಾದುದರಿಂದ ವಿಷ್ಣುವೇ. (ಶೇಷನಲ್ಲ) ಯಾರು ಪರೋವರೀಯಾನ್ ಶಬ್ದವಾಚ್ಯನೋ ಆತನೂ ಕೂಡ ರುದ್ರಾದಿಗಳಿಂದ ಉತ್ತಮರಾದ ಸರಸ್ವತ್ಯಾದಿಗಳಿಂದುತ್ತಮನಾದ ಬ್ರಹ್ಮನಿಂದ ಉತ್ತಮಳಾದ ಪ್ರಕೃತಿಯಿಂದ ಉತ್ತಮನಾದ ಪ್ರಯುಕ್ತ ಶ್ರೀಹರಿಯೇ. ಇದು ಮೊದಲಾದ ಶ್ರುತ್ಯಂತರವಾಕ್ಯದಿಂದ ಪ್ರಾಣಾಶ್ರಯತ್ವ, ರುದ್ರಶಬ್ದವಾಚ್ಯತ್ವ ಮೊದಲಾದುದು ಆ ವಿಷ್ಣುವಿಗೇನೇ ಉಕ್ತವಾಗಿದೆ. (ಪ್ರಾಣೇಶ್ವರಾದಿ ಶಬ್ದವಾಚ್ಯತ್ವವೂ ಅಂತಕತ್ವಾದಿಲಿಂಗವೂ ಕೂಡ ಆದಿಶಬ್ದಾರ್ಥವು.) ಆದಕಾರಣ ರುದ್ರಾದಿ ಶ್ರುತಿಗಳಿಂದಲೂ ಲಿಂಗದಿಂದಲೂ ವಿರೋಧವಿಲ್ಲ.

**ಪೀಠಿಕೆ ॥** ಆದರೂ ಪ್ರಾಣಧಾರತ್ವ, ದ್ಯುಭ್ವಾದ್ಯಾಯತನತ್ವಗಳನ್ನು ಬೋಧಿಸತಕ್ಕ ಸಮಾಖ್ಯಾಶ್ರುತಿಯಲ್ಲಿ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು ನಿಶ್ಚಯವಾಗುವುದಿಲ್ಲ. ಅಲ್ಲಿರತಕ್ಕ ರುದ್ರಾದಿಶಬ್ದಗಳು ಪಾಶುಪತ್ಯಾದಿಗಳಲ್ಲಿಯೇ ರೂಢಗಳಾಗಿವೆ. ವಿಷ್ಣುವಿನಲ್ಲಿ ರೂಢಗಳಲ್ಲ. ವಿಷ್ಣುವಿನಲ್ಲಿ ಯೋಗಪ್ರವೃತ್ತಿಯು ಕೂಡಿದಾಗ್ಯೂ ಅದು ರೂಢಿಗಿಂತ ದುರ್ಬಲವಾದ ಪ್ರಯುಕ್ತ ನಿಶ್ಚಾಯಕವಾಗುವುದಿಲ್ಲ. ಎಂದರೆ—

**ಭಾಷ್ಯ ॥ ಬ್ರಹ್ಮಾಂಡೇ ಚ— ರುಜಂ ದ್ರಾವಯತೇ ಯಸ್ಮಾದ್ರುದ್ರಸ್ತಸ್ಮಾಜ್ಜ ನಾರ್ದನಃ । ಈಶನಾದೇವ ಚೇಶಾನೋ ಮಹಾದೇವೋ ಮಹತ್ತ್ವತಃ ॥ ಪಿಬಂತಿ ಯೇ ನರಾ ನಾಕಂ ಮುಕ್ತಾಸ್ಸಂಸಾರಸಾಗರಾತ್ । ತದಾಧಾರೋ ಯತೋ ವಿಷ್ಣುಃ ಪಿನಾಕೀತಿ ತತಃ ಸ್ಮೃ(ಶ್ರು)ತಃ ॥ ಶಿವಃ ಸುಖಾತ್ಮಕತ್ವೇನ ಶರ್ವಃ ಶಂರೋಧನಾದ್ಧರಿಃ ।**

**ಕೃತ್ತಾ ್ಯತ್ಮಕಮಿದಂ (ಮಂ) ದೇಹಂ ಯತೋ ವಸ್ತೇ ಪ್ರವರ್ತಯನ್ ॥ ಕೃತ್ತಿವಾಸಾಸ್ತತೋ ದೇವೋ ವಿರಿಂಚಶ್ಚ ವಿರೇಚನಾತ್। ಬೃಂಹಣಾದ್ಬ್ರಹ್ಮನಾಮಾ— ಸಾವೈಶ್ವರ್ಯಾದಿಂದ್ರ ಉಚ್ಯತೇ ॥ ೧೨ ॥**

**ಭಾಷ್ಯಾರ್ಥ ॥** ಬ್ರಹ್ಮಾಂಡಪುರಾಣದಲ್ಲಿ ಉಕ್ತವಾಗಿದೆ. (ರುದ್ರಾದಿಶಬ್ದಗಳಿಗೆ ಮಹಾಯೋಗ ವಿದ್ವದ್ರೂಢಿಗಳನ್ನು ಪ್ರತಿಪಾದಿಸತಕ್ಕ ವಾಕ್ಯವನ್ನು ಹೇಳುತ್ತಾರೆ.) ಯಾವ ಕಾರಣದಿಂದ ಜನನವನ್ನು ಮರ್ದಿಸತಕ್ಕ ಜನಾರ್ದನರೂಪಿಯಾದ ಶ್ರೀಹರಿಯು (ಭಕ್ತರ) ರೋಗವನ್ನು ಉತ್ಪತ್ತ್ಯಾದಿಗಳನ್ನು ಹೋಗಲಾಡಿಸುತ್ತಾನೋ ಆದುದರಿಂದ ರುದ್ರಃ ಎನ್ನಿಸುತ್ತಾನೆ. ಈಶನಾತ್=ನಿಯಾಮಕರಾದ ಬ್ರಹ್ಮಾದಿಗಳಿಗೆ ಚೇಷ್ಟಕನಾದ ಪ್ರಯುಕ್ತವೇ ಈಶಾನಃ ಎನ್ನಿಸುತ್ತಾನೆ. ಸರ್ವಶ್ರೇಷ್ಠನಾದ ಪ್ರಯುಕ್ತವೂ ಕ್ರೀಡಾದಿಗುಣವಿಶಿಷ್ಟನಾದ ಪ್ರಯುಕ್ತವೂ ಮಹಾದೇವಃ ಎನ್ನಿಸಿಕೊಳ್ಳುತ್ತಾನೆ. ಯಾವ ಜನರು ಸಂಸಾರಸಾಗರದಿಂದ ಮುಕ್ತರಾಗಿ ನಾಕಂ=ಪರಮ ಸುಖವನ್ನು ಅನುಭವಿಸುತ್ತಾರೋ, (ಅವರು ಪಿನಾಕಾಃ ಎನ್ನಿಸುತ್ತಾರೆ.) ಶ್ರೀ ಹರಿಯು ಯಾವ ಕಾರಣದಿಂದ ಅವರಿಗೆ ಆಧಾರಭೂತನಾಗಿದ್ದಾನೋ ಆದುದರಿಂದ ಪಿನಾಕೀ ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ. ಸುಖರೂಪನಾದುದರಿಂದ ಶಿವಃ ಎನ್ನಿಸಿಕೊಳ್ಳುತ್ತಾನೆ. ಶ್ರೀಹರಿಯು ಮುಕ್ತಿಪರ್ಯಂತವಾಗಿ ಸ್ವರೂಪಭೂತವಾದ ಸುಖವನ್ನೇ ತಡೆದು ಇರುವುದರಿಂದ ಅಥವಾ ಅಸುರಸುಖವನ್ನು ತಡೆದು ಇರುವುದರಿಂದ ಶರ್ವಃ ಎನ್ನಿಸಿಕೊಳ್ಳುತ್ತಾನೆ. ಯಾವ ಕಾರಣದಿಂದ ಚರ್ಮಮಯವಾದ ಈ ಶರೀರವನ್ನು ಸೃಷ್ಟಿಸುತ್ತಾ ಅಥವಾ ನಿಯಮಿಸುತ್ತಾ (ಅದರಿಂದ ತನ್ನನ್ನು ಜೀವನನ್ನಾಗಲೀ) ಆಚ್ಛಾದಿಸಿಕೊಳ್ಳುತ್ತಾನೋ ಅದರೊಳಗೆ ಇರುತ್ತಾನೋ ಅಥವಾ ದೇಹದಲ್ಲಿ ನಿಯಾಮಕನಾಗಿರುತ್ತಾನೋ ಆದುದರಿಂದ ಕೃತ್ತಿವಾಸಾಃ ಎನ್ನಿಸಿಕೊಳ್ಳುತ್ತಾನೆ. ಜಗತ್ತನ್ನು ಸೃಷ್ಟಿಸುವುದರಿಂದ ಶ್ರೀಹರಿಯು ವಿರಿಂಚಿಃ ಎನ್ನಿಸಿಕೊಳ್ಳುತ್ತಾನೆ. ಅಭಿವೃದ್ಧನಾದ ಪ್ರಯುಕ್ತ ಬ್ರಹ್ಮನೆಂದು ಹೆಸರುಳ್ಳವನು. ಈ ಶ್ರೀಹರಿಯು ಪರಮೈಶ್ವರ್ಯಸಂಪನ್ನನಾದುದರಿಂದ ಇಂದ್ರಃ ಎನ್ನಿಸಿಕೊಳ್ಳುತ್ತಾನೆ.

**ಪೀಠಿಕೆ ॥** ಈ ರೀತಿಯಾಗಿ ವಿಷ್ಣುವಿನಲ್ಲಿ ರುದ್ರಾದಿಶಬ್ದಗಳಿಗೆ ಮಹಾಯೋಗವನ್ನು ಹೇಳಿ ವಿದ್ವದ್ರೂಢಿಯನ್ನು ಹೇಳುತ್ತಾರೆ—

**ಭಾಷ್ಯ ॥ ಏವಂ ನಾನಾವಿಧೈಃ ಶಬ್ದೈರೇಕ ಏವ ತ್ರಿವಿಕ್ರಮಃ। ವೇದೇಷು ಸ ಪುರಾಣೇಷು ಗೀಯತೇ ಪುರುಷೋತ್ತಮಃ ॥ ಇತಿ ॥ ॥ ೧೩ ॥**

**ಭಾಷ್ಯಾರ್ಥ ॥** ಹಿಂದೆ ಹೇಳಿದ ರೀತಿಯಾಗಿ ನಾನಾವಿಧ ನಿಮಿತ್ತಗಳಿಂದ ಪುರಾಣಸಹಿತಗಳಾದ ವೇದಗಳಲ್ಲಿ ಇರತಕ್ಕ ಈ ನಾನಾವಿಧ ಶಬ್ದಗಳಿಂದ ಶ್ರೀ ವಿಷ್ಣು ಒಬ್ಬನೇ ಮುಖ್ಯವಾಗಿ ಹೇಳಲ್ಪಡುತ್ತಾನೆ. (ಅನ್ಯತ್ರ ಅದೃಷ್ಟವಾದ ಸರ್ವಶಬ್ದಮುಖ್ಯವಾಚ್ಯತ್ವವು ಈತನಿಗೆ ಹೇಗೆ ಕೂಡುತ್ತದೆ ಎಂದರೆ) ತ್ರಿವಿಕ್ರಮನು ತ್ರಿಭುವನಗಳಲ್ಲಿರತಕ್ಕ ಅರ್ಥಗಳನ್ನು ಶಬ್ದಗಳನ್ನು ವ್ಯಾಪಿಸಿಕೊಂಡಿರುವನು. ಸರ್ವ ಪುರುಷನಿಂದುತ್ತಮನು ಸರ್ವಸ್ವಾಮಿಯು.

**ವಿಶೇಷಾಂಶ ॥** ಇದರಿಂದ ಶ್ರೀವಿಷ್ಣುವಿನಲ್ಲಿ ರುದ್ರಾದಿಶಬ್ದಗಳಿಗೆ ಮಹಾಯೋಗವಿದ್ವದ್ರೂಢಿ ಗಳನ್ನು ಹೇಳಿದ್ದರಿಂದ ಮಹಾಯೋಗ ವಿದ್ವದ್ರೂಢಿಗಳಿಗೆ ಕೇವಲ ರೂಢಿಗಿಂತ ಪ್ರಾಬಲ್ಯವಿದ್ದುದರಿಂದ

ಸಮಾಖ್ಯಾ ಶ್ರುತ್ಯಂತರದಲ್ಲಿಯೂ ರುದ್ರಾದಿಶಬ್ದದಿಂದಲೂ ಪ್ರತಿಪಾದ್ಯನಾಗುತ್ತಾನೆಂದು ನಿಶ್ಚಯವಾಗುತ್ತದೆ.

**ಪೀಠಿಕೆ** ॥ ಹಾಗಾದರೆ ರುದ್ರಾದಿಶಬ್ದಗಳಿಗೆ ವಿಷ್ಣುಪರತ್ವವನ್ನು ಇಟ್ಟುಕೊಂಡು **ರುದ್ರೋ ಮಾವಿಶಾಂತಕಃ** ಇತ್ಯಾದಿಶ್ರುತಿಗಳು ರುದ್ರಾದಿಗಳಿಗೆ ನಿರ್ಣಾಯಕಗಳಾಗುವುದಿಲ್ಲ ಎಂದು ಹೇಳುವುದಾದರೆ ನಾರಾಯಣಾದಿ ನಾಮಗಳಿಗೂ ರುದ್ರಾದಿಪರತ್ವವನ್ನು ಇಟ್ಟುಕೊಂಡು **ನಾರಾಯಣಂ ಮಹಾಜ್ಞೇಯಂ** ಇತ್ಯಾದಿಶ್ರುತಿಗಳೂ ವಿಷ್ಣುವಿಗೆ ನಿರ್ಣಾಯಕಗಳಾಗದೆ ಹೋಗಬೇಕಾಗುವುದು ಎಂದರೆ—

**ಭಾಷ್ಯ ॥ ವಾಮನೇ ಚ — ನ ತು ನಾರಾಯಣಾದೀನಾಂ ನಾಮ್ನಾಮನ್ಯತ್ರ ಸಂಭವಃ ।**
**ಅನ್ಯನಾಮ್ನಾಂ ಗತಿರ್ವಿಷ್ಣುರೇಕ ಏವ ಪ್ರಕೀರ್ತಿತಃ ॥ ಇತಿ ॥ ॥ ೧೪ ॥**

**ಭಾಷ್ಯಾರ್ಥ** ॥ ವಾಮನಪುರಾಣದಲ್ಲಿಯೂ ನಾರಾಯಣ ಮೊದಲಾದ ನಾಮಗಳಿಗೆ ರುದ್ರಾದಿಗಳಲ್ಲಿ ಮುಖ್ಯ ವೃತ್ತಿಯು ಇಲ್ಲವೇ ಇಲ್ಲ. ಇತರಗಳಾದ ರುದ್ರಾದಿ ಶಬ್ದಗಳಿಗೆ ವಿಷ್ಣುವೊಬ್ಬನೇ ಮುಖ್ಯ ವಾಚ್ಯನಾಗಿ ಹೇಳಲ್ಪಡುತ್ತಾನೆ. ಹೀಗೆ ಇದೆ.

**ವಿಶೇಷಾಂಶ** ॥ ನಾರಾಯಣಾದಿ ನಾಮಗಳು ಬೇರೆ ಕಡೆಗಳಲ್ಲಿ ಅವಕಾಶವನ್ನು ಹೊಂದಲಾರವು ಎಂದು ಹೇಳಿದ್ದರಿಂದ ಶ್ರುತಿಗಳು ನಿರ್ಣಾಯಕಗಳೇ ಆಗಿವೆ.

**ಪೀಠಿಕೆ** ॥ ಎಲ್ಲವೂ ಭಗವಂತನ ನಾಮಗಳೇ ಆಗಿರುವುದರಿಂದ ರುದ್ರಾದಿ ನಾಮಗಳಂತೆಯೇ ನಾರಾಯಣಾದಿ ನಾಮಗಳೂ ರುದ್ರಾದಿಗಳಲ್ಲಿ ಇವೆ ಎಂದು ಏಕೆ ಆಗಲಾರವು ಎಂದರೆ—

**ಭಾಷ್ಯ ॥ ಸ್ಕಾಂದೇ ಚ— ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತ ಮಃ ।**
**ಪ್ರಾದಾದನ್ಯತ್ರ ಭಗವಾನ್ರಾಜೇವರ್ತೇ ಸ್ವಕಂ ಪುರಂ ॥ ಇತಿ ॥ ॥ ೧೫ ॥**

**ಭಾಷ್ಯಾರ್ಥ** ॥ ಸ್ಕಾಂದಪುರಾಣದಲ್ಲಿಯೂ ಶ್ರೀಹರಿಯು ನಾರಾಯಣವಿಷ್ಣುಮೊದಲಾದ ನಾಮಗಳನ್ನು ಹೊರತು ಇತರರಾದ ರುದ್ರಾದಿಗಳಿಗೋಸ್ಕರ, ಇತರಗಳಾದ ಕೆಲವು ಉಗ್ರ ಮೊದಲಾದ ಕೆಲವು ನಾಮಗಳನ್ನು ರಾಜನು ಹೇಗೆ ತನ್ನ ಪಟ್ಟಣವನ್ನು ಹೊರತು ಇತರವಾದುದನ್ನು ಮಂತ್ರಿ ಮೊದಲಾದವರಿಗೋಸ್ಕರ ಹೇಗೆ ಕೊಡುತ್ತಾನೋ ಹಾಗೆಯೇ (ವ್ಯವಹಾರಸಿದ್ಧಿಗಾಗಿ ಕೊಟ್ಟಿರುತ್ತಾನೆ.)

**ವಿಶೇಷಾಂಶ** ॥ ನಾರಾಯಣಾದಿ ನಾಮಗಳು ವಿಷ್ಣುವಿಗೇನೇ ಸರಿ ಎಂದು ಸ್ಕಾಂದ ಪುರಾಣದಲ್ಲಿ ಹೇಳಿದ್ದರಿಂದ ಸಾಮ್ಯವಲ್ಲ.

**ಪೀಠಿಕೆ** ॥ ರುದ್ರಾದಿಶಬ್ದಗಳು ವಿಷ್ಣುವನ್ನು ಮಾತ್ರ ಪ್ರತಿಪಾದಿಸತಕ್ಕವುಗಳು ಎಂದು ಹೇಳುವುದಾದರೆ ಭಸ್ಮಧರ ಉಗ್ರತ್ವಮೊದಲಾದವುಗಳು ರುದ್ರವಾಚಕಗಳೆಂದು ಹೇಗೆ ಹೇಳುವುದು? ಆ ನಾಮಗಳನ್ನು ಶ್ರೀವಿಷ್ಣುವು ಕೊಟ್ಟಿದ್ದ ಎಂದು ಹೇಳುವುದಾದರೆ ರುದ್ರಾದಿಶಬ್ದಗಳೂ ಕೂಡ ಅಂತಹುಗಳೇ. ಆದಕಾರಣ ಅವುಗಳಿಂದ ನಿರ್ಣಯವು ಏಕೆ ಆಗಲಾರದು ಎಂದರೆ—

**ಭಾಷ್ಯ ॥ ಚತುರ್ಮುಖಃ ಶತಾನಂದೋ ಬ್ರಹ್ಮಣಃ ಪದ್ಮಭೂರಿತಿ । ಉಗ್ರೋ ಭಸ್ಮಧರೋ**

**ನಗ್ನಃ ಕಪಾಲೀತಿ ಶಿವಸ್ಯ ಚ । ವಿಶೇಷನಾಮಾನಿ ದದೌ ಸ್ವಕೀಯಾ ನ್ಯಪಿ ಕೇಶವಃ ॥**
**ಇತಿ ಚ ಬ್ರಾಹ್ಮೇ ॥ ೩ ॥ ॥ ೧೬ ॥**

**ಭಾಷ್ಯಾರ್ಥ ॥** ಯದ್ಯಪಿ ಎಲ್ಲಾ ನಾಮಧೇಯಗಳೂ ಸ್ವಕೀಯಗಳೇ ಆಗಿವೆ. ಆದಾಗ್ಯೂ, ಕೇಶವಃ ಬ್ರಹ್ಮ ರುದ್ರರಿಗೆ ಪ್ರವರ್ತಕನಾದ ಶ್ರೀವಿಷ್ಣುವು ಮುಖ್ಯತಃ ಸ್ವವಾಚಕಗಳೇ ಆದ ಚತುರ್ಮುಖ, ಶತಾನಂದಃ, ಪದ್ಮಭೂಃ ಎನ್ನುವ ನಾಮ ವಿಶೇಷಗಳನ್ನೇ ಬ್ರಹ್ಮನಿಗೋಸ್ಕರ ಕೊಟ್ಟನು. ಉಗ್ರಃ, ಭಸ್ಮಧರಃ, ನಗ್ನಃ ದಿಗಂಬರಃ ಕಪಾಲೀ ಎನ್ನುವ ನಾಮವಿಶೇಷಗಳನ್ನು ರುದ್ರನಿಗೋಸ್ಕರ ಕೊಟ್ಟನು. ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

**ವಿಶೇಷಾಂಶ ॥** ಭಸ್ಮಧರ ಉಗ್ರತ್ವಾದಿಗಳು ವಿಷ್ಣುವಿನ ಸಕಾಶದಿಂದ ಪ್ರಾಪ್ತಗಳಾಗಿದ್ದುದರಿಂದ ಹಿಂದೆ ಹೇಳಿದ್ದು ಯುಕ್ತವು. ॥ ೬ ॥

**ಪೀಠಿಕೆ ॥** ಹಾಗಾದರೆ ಸ ಏಷೋಽನ್ತಶ್ಚರತೇ ಬಹುಧಾ ಜಾಯಮಾನಃ ಎಂದು ಜೀವಲಿಂಗವು ಶ್ರುತವಾದ ಪ್ರಯುಕ್ತವೂ ಪ್ರಾಣತ್ವಪ್ರಸಿದ್ಧಿಯಿದ್ದ ಪ್ರಯುಕ್ತವೂ ಜೀವಸಾಮಾನ್ಯರಾಗಲೀ, ವಿಷಯೀಭೂತವಾದ ಲೋಕಾಧಾರತ್ವವು ವಾಯುನಾ ವೈ ಗೌತಮ ಸೂತ್ರೇಣಾಯಂ ಲೋಕಃ ಪರಶ್ಚ ಲೋಕಃ ಎನ್ನುವ ಶ್ರುತ್ಯಂತರದಲ್ಲಿ ವಾಯುವಿನಲ್ಲಿರತಕ್ಕುದೆಂದು ಪ್ರಸಿದ್ಧವಾದ ಪ್ರಯುಕ್ತ ವಾಯು ವಾಗಲೀ ಈ ಪ್ರಕರಣದಲ್ಲಿ ಪ್ರತಿಪಾದ್ಯರೆಂದು ಏಕೆ ಆಗಲಾರರು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಪಠನಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಪ್ರಾಣಭೃಚ್ಚ ಓಂ ॥ ೪ ॥

**ಭಾಷ್ಯ ॥ ಏತೈರೇವ ಹೇತುಭಿರ್ನ ಜೀವೋ ವಾಯುಶ್ಚ ॥ ೧೭ ॥**

**ಭಾಷ್ಯಾರ್ಥ ॥** (ಆತ್ಮಶಬ್ದ ಮುಕ್ತೋಪಸೃಪ್ಯತ್ವ ಆತಚ್ಛಬ್ದ ರುದ್ರಾದಿ ಪ್ರಾಪಕ ಶ್ರುತಿಗಳಿಗೆ ವಿಷ್ಣುಪರತ್ವವು, ಎನ್ನುವ ಪೂರ್ವೋಕ್ತ ಹೇತುಗಳಿಂದಲೇ,) ಪ್ರಾಣಭೃಚ್ಚ ಜೀವನೂ ವಾಯುವೂ ಕೂಡ ದ್ಯುಭ್ವಾದ್ಯಾಯತನರೆಂದು ಪ್ರತಿಪಾದ್ಯರಾಗುವುದಿಲ್ಲ. ರುದ್ರನು ಮಾತ್ರ ಇಲ್ಲಿ ವಾಚ್ಯನು ಆಗುವುದಿಲ್ಲವೆಂದಲ್ಲ. ಜೀವ ವಾಯುಗಳೂ ವಾಚ್ಯರಾಗುವುದಿಲ್ಲ.

**ಪೀಠಿಕೆ ॥** ಹಾಗಾದರೆ ವಾಯುನಾ ವೈ ಗೌತಮ ಇತ್ಯಾದಿ ಶ್ರುತಿಯು ವಿಷ್ಣುಪರ ವಾದುದರಿಂದ ವಾಯುವಿಗೆ ಸಾಧಕವಾಗದಿದ್ದರೂ ಬಹುಧಾ ಜನ್ಮರೂಪವಾದ ಲಿಂಗದಿಂದ ಜೀವನು ಇಲ್ಲಿ ವಾಚ್ಯನೆಂದು ಏಕೆ ಆಗಲಾರದು, ಎಂದರೆ—

**ಭಾಷ್ಯ ॥ ಅಜಾಯಮಾನೋ ಬಹುಧಾ ವಿಜಾಯತೇ (ತೈ.ಆ.೩.೧೩.)। ಇತಿ ತಸ್ಯೈವ ಬಹುಧಾ ಜನ್ಮೋಕ್ತೇಃ ॥ ೪ ॥ ॥ ೧೮ ॥**

**ಭಾಷ್ಯಾರ್ಥ ॥** ದೇಹದಿಂದ ಜನನಾದಿರೂಪವಾದ ವಿಕಾರವಿಲ್ಲದಿರುವವನು ರಾಮಕೃಷ್ಣಾದಿ ರೂಪದಿಂದ ಅಲ್ಲಿ ಇಲ್ಲಿ ಪ್ರಾದುರ್ಭವಿಸುತ್ತಾನೆ, ಎನ್ನುವ ಪುರುಷಸೂಕ್ತದಲ್ಲಿರತಕ್ಕ ವಾಕ್ಯದಿಂದ

(ಯಾರಿಗೆ ಉತ್ಪತ್ತಿಯು ಕೂಡುವುದಿಲ್ಲವೆಂದು ಹೇಳಲ್ಪಟ್ಟದೋ) ಅಂತಹ ವಿಷ್ಣುವಿಗೇನೇ ರಾಮಕೃಷ್ಣಾದಿ ರೂಪದಿಂದ ಪ್ರಾದುರ್ಭಾವವನ್ನು ಹೇಳಿದೆ. ಆದುದರಿಂದ ಜಾಯಮಾನತ್ವಲಿಂಗವೂ ಕೂಡ ವಿಷ್ಣುವಿನಲ್ಲಿಯೇ ಸಾವಕಾಶವಾಗಿದೆ. ॥ ೪ ॥

**ಪೀಠಿಕೆ** ॥ ಹಾಗಾದರೆ ಹಿಂದೆ ಹೇಳಿದ ಆತ್ಮಶಬ್ದ ಮೊದಲಾದ ಹೇತುಗಳಿಂದ ವಿರೋಧವು ಎನ್ನಕೂಡದು. ಜೀವರಿಗೂ ಈಶ್ವರನಿಗೂ ಅಭೇದವು ಎನ್ನುವ ಅಭಿಪ್ರಾಯದಿಂದ ಜೀವನಲ್ಲಿಯೂ ಕೂಡ ಆತ್ಮಶಬ್ದಮೊದಲಾದ ಉಕ್ತಿಯು ಕೂಡಬಹುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಭೇದವ್ಯಪದೇಶಾತ್ ಓಂ ॥ ೫ ॥

**ಸೂತ್ರಾರ್ಥ** ॥ ಜುಷ್ಟಂ ಎನ್ನುವ ಶ್ರುತಿಯಲ್ಲಿ ಪಶ್ಯತಿ ಎಂದು ದರ್ಶನಕ್ಕೆ ಕರ್ತನಾಗಿ ಪ್ರಕೃತನಾದ ಜೀವನಿಗೆ ಈಶ್ವರನಿಂದ ಭೇದವನ್ನು ಹೇಳಿದ್ದರಿಂದ (ಐಕ್ಯವೆಂದು ಹೇಳಕೂಡದು.)

**ಭಾಷ್ಯ ॥ ನ ಚೈಕ್ಯಂ ವಾಚ್ಯಂ। ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ (ಮು.೩.೧.೨.)। ಇತಿ ಭೇದವ್ಯಪದೇಶಾತ್ ॥ ೫ ॥ ॥ ೧೯ ॥**

**ಭಾಷ್ಯಾರ್ಥ** ॥ (ಈ ಪ್ರಕರಣದಲ್ಲಿ ಜೀವೇಶ್ವರರಿಗೆ) ಐಕ್ಯವು (ಅಭಿಪ್ರೇತವೆಂದು ಹೇಳಕೂಡದು. (ಅವರಿಗೆ ಭೇದವನ್ನು ಹೇಳಿದ್ದರಿಂದ ಯಾವುದು ಭೇದವ್ಯಪದೇಶವೆಂದರೆ) ಯಾವಾಗ ಸರ್ವಸೇವ್ಯನಾದ ಸರ್ವನಿಯಾಮಕನಾದ ಶ್ರೀಹರಿಯನ್ನು ಜೀವರಿಂದ ಭಿನ್ನನೆಂದೂ ಮತ್ತು ಶ್ರೀಹರಿಯ ಸರ್ವಜ್ಞತ್ವಾದಿಮಹಿಮೆಯನ್ನು ನೋಡುತ್ತಾನೋ (ಆವಾಗ ಶೋಕರಹಿತನಾಗುತ್ತಾನೆ.) ಎನ್ನುವ ವಾಕ್ಯದಲ್ಲಿ ಪಶ್ಯತಿ ಎಂದು ದರ್ಶನಕರ್ತನಾಗಿ ಪ್ರಕೃತನಾದ ಜೀವನಿಗೆ ಈಶಪದದಿಂದ ಹೇಳಲ್ಪಟ್ಟ ಈಶ್ವರನಿಂದ ಭೇದವನ್ನು ಹೇಳಿದ್ದರಿಂದ (ಜೀವೇಶ್ವರರಿಗೆ ಐಕ್ಯವು ಅಭಿಪ್ರೇತವೆಂದು ಹೇಳಕೂಡದು.)

**ಪೀಠಿಕೆ** ॥ ಹಾಗಾದರೆ— ಇಲ್ಲಿ ಜೀವನಿಗೆ ಯಾರೋ ಒಬ್ಬ ಈಶನಿಂದ ಭೇದವು ಹೇಳಲ್ಪಡುತ್ತದೆ. ಪರಮಾತ್ಮನಿಂದ ಅಲ್ಲ. ಆದಕಾರಣ ಜೀವೇಶ್ವರರಿಗೆ ಭೇದವಿಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಪ್ರಕರಣಾತ್ ಓಂ ॥ ೬ ॥

**ಸೂತ್ರಾರ್ಥ** ॥ ದ್ವೇ ವಿದ್ಯೇ ವೇದಿತವ್ಯೇ ಎಂದು ಪರವಿದ್ಯಾವಿಷಯ ವಸ್ತುವನ್ನು ಇಲ್ಲಿ ಹೇಳಿದ್ದರಿಂದ ವಿಷ್ಣುವಿನ ಪ್ರಕರಣವಾದುದರಿಂದ ಈಶಪದದಿಂದ ಹೇಳಲ್ಪಟ್ಟ ಪರಮಾತ್ಮನಿಗೇನೇ ಭೇದವನ್ನು ಹೇಳಿದ್ದರಿಂದ ಜೀವ ಪರಮಾತ್ಮರಿಗೆ ಅಭೇದವು ಅಭಿಪ್ರೇತವೆಂದು ಹೇಳಕೂಡದು.)

**ಭಾಷ್ಯ ॥ ದ್ವೇ ವಿದ್ಯೇ ವೇದಿತವ್ಯೇ (ಮು.೧.೧.೪.) ಇತಿ ತಸ್ಯ ಹ್ಯೇ (ಸ್ಯೈ ವೈ)ತತ್ಪ್ರಕರಣಂ ॥ ೬ ॥ ॥ ೨೦ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಜುಷ್ಟಂ ಇತ್ಯಾದಿ ವಾಕ್ಯಸಮುದಾಯವು ದ್ವೇ ವಿದ್ಯೇ ವೇದಿತವ್ಯೇ ಎನ್ನುವ ಪರವಿದ್ಯಾವಿಷಯೀಭೂತನಾದ ಪರಮಾತ್ಮನದ್ದೇ ಪ್ರಕರಣವು. ಇತರರದ್ದು ಅಲ್ಲ ॥೬॥

**ಟೀಕಿ ॥** ಜುಷ್ಟಂ ಎನ್ನುವ ವಾಕ್ಯದಲ್ಲಿ ಭೇದಶ್ರುತಿಯಿದ್ದ ಪ್ರಯುಕ್ತ ಮಾತ್ರ ಜೀವೇಶ್ವರರಿಗೆ ಭೇದವು ವಿವಕ್ಷಿತವೆಂದು ಇಷ್ಟೇ ಅಲ್ಲ, ಮತ್ತೆ ಭೇದಜ್ಞಾಪಕವಾದ ಲಿಂಗವೂ ಅದೆ ಎಂದು ಸೂತ್ರಕಾರರು ಹೇಳುತ್ತಾರೆ.

## ಸೂತ್ರ ॥ ಓಂ ಸ್ಥಿತ್ಯದನಾಭ್ಯಾಂ ಚ ಓಂ ॥ ೭ ॥

**ಸೂತ್ರಾರ್ಥ ॥** (ದ್ವಾ ಸುಪರ್ಣಾ ಎನ್ನುವಲ್ಲಿ ಶ್ರುತಗಳಾದ) ಕರ್ಮಫಲವನ್ನುಣ್ಣದೆ ಇರುವಿಕೆ, ಕರ್ಮಫಲವನ್ನುಪಜೀವಿಸಿರುವಿಕೆ ಎನ್ನುವ ವಿರುದ್ಧಧರ್ಮಗಳನ್ನು ಹೇಳಿದ್ದರಿಂದಲೂ ಇಲ್ಲಿ ಜೀವೇಶ್ವರರಿಗೆ ಐಕ್ಯವು ಎಂದು ಹೇಳಕೂಡದು.

**ಭಾಷ್ಯ ॥ ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।**
**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ** (ಮು.೩.೧.೧.)॥
**ಇತೀಶಜೀವಯೋಃ ಸ್ಥಿತ್ಯದನೋಕ್ತೇಃ॥ ೭ ॥ ಅಧಿ.೧ ॥** ॥ ೨೦ ॥

**ಭಾಷ್ಯಾರ್ಥ ॥** ಸಯುಜಾ=ಉಪಕಾರ್ಯ ಉಪಕಾರಕ ಭಾವವುಳ್ಳತನದಿಂದ ಪರಸ್ಪರ ಬಿಡದೆ ಇರುವವರು, ಸಖಾಯಾ=ಪ್ರೀತಿಯಿಂದ ಏಕದೇಶದಲ್ಲಿರತಕ್ಕ, ದ್ವಾ ಸುಪರ್ಣಾ=ಚೆನ್ನಾಗಿ ಪರಮಾನಂದ ಸ್ವರೂಪರಾದ ಜೀವೇಶ್ವರರಿಬ್ಬರು, ಸಮಾನಂ ವೃಕ್ಷಂ=ದೇಹಾಖ್ಯವಾದ ಒಂದು ಅಶ್ವತ್ಥವೃಕ್ಷವನ್ನು ಪರಿಷಸ್ವಜಾತೇ=ಆಲಿಂಗಿಸಿದರು. ತಯೋಃ=ಆ ಸುಪರ್ಣಗಳ ಮಧ್ಯದಲ್ಲಿ ಅನ್ಯಃ=ಈಶ್ವರನಿಂದ ಭಿನ್ನನಾದ ಜೀವನು, ಪಿಪ್ಪಲಂ =ಅಶ್ವತ್ಥಫಲರೂಪವಾದ ದೇಹಜನಿತ ಕರ್ಮಫಲವನ್ನು ಸ್ವಾದು ಅತ್ತಿ = ಅಸ್ವಾದುವಾದುದನ್ನು ಸ್ವಾದುವಾಗಿಯೇ ಉಣ್ಣುತ್ತಾನೆ. ಅನ್ಯಃ=ಜೀವನಿಂದ ಭಿನ್ನನಾದ ಈಶ್ವರನಾದರೂ, ಅನಶ್ನನ್ = ಜೀವರು ತಿನ್ನತಕ್ಕುದನ್ನುಣ್ಣದೆ ಇದ್ದವನಾಗಿ, ಅಭಿಚಾಕಶೀತಿ=ಚೆನ್ನಾಗಿ ಪ್ರಕಾಶಿಸುತ್ತಾನೆ. (ತನ್ನ ಸ್ಥಿತಿಗಾಗಿ ಜೀವರಂತೆ ಕರ್ಮಫಲವನ್ನು ಅಪೇಕ್ಷಿಸುವುದಿಲ್ಲ) ಎಂದು ಈಶ ಜೀವರಿಗೆ, ಅನಶನದಿಂದ ಸ್ಥಿತಿಯನ್ನೂ ಅದನವನ್ನೂ ಹೇಳಿದ್ದರಿಂದ.

**ವಿಶೇಷಾಂಶ ॥** ಶ್ರುತಿಯಲ್ಲಿ ಅತ್ತಿ ಎಂದು ಅದನವು ಪ್ರಾಥಮಿಕವಾದಾಗ್ಯೂ ಸ್ಥಿತಿಯು ಈಶನಿಗೆ ಸಂಬಂಧಿಯಾದುದರಿಂದ ಅಭ್ಯರ್ಹಿತವಾಗಿರುವುದರಿಂದಲೂ ಅಲ್ಪಾಕ್ಷರವುಳ್ಳದ್ದಾದುದರಿಂದಲೂ ಸೂತ್ರದಲ್ಲಿಯೂ ಭಾಷ್ಯದಲ್ಲಿಯೂ ಶ್ರೌತಕ್ರಮವನ್ನುಲ್ಲಂಘಿಸಿ ಸ್ಥಿತಿಯನ್ನು ಮೊದಲು ಹೇಳಿದ್ದು ॥ ೭ ॥ ಅಧಿ. ೧ ॥

## ಮಾಯಾವಾದಿರೀತ್ಯಾ

ವಿಚಾರ ॥ (೧) ಅಮೃತಸ್ಯೈಷ ಸೇತುಃ ಎನ್ನುವುದರಿಂದ ದ್ಯುಭ್ವಾದ್ಯಾಯತನ ವಾದುದು ಅಮೃತ ಸಂಬಂಧಿಯೆಂದೂ ಸೇತು (ಆಶ್ರಯ) ವೆಂದೂ ಶ್ರುತವಾಗಿದೆ. ಬ್ರಹ್ಮನೇ ಅಮೃತನು. ಬ್ರಹ್ಮನಿಂದ

ಇತರವಾದುದು ಅಮೃತವಲ್ಲ. ಆದಕಾರಣ ಬ್ರಹ್ಮನು ಅಮೃತಸಂಬಂಧಿಯಾಗಲಾರನು. ಮತ್ತೂ ಸೇತುವು ಪಾರವುಳ್ಳದ್ದು. ಬ್ರಹ್ಮನಾದರೂ ಅಪಾರನಾಗಿದ್ದಾನೆ. ಆದುದರಿಂದ ದ್ಯುಭ್ವಾದ್ಯಾಯತನವಾದುದು ಬ್ರಹ್ಮವಲ್ಲ. ಮತ್ತೆ ರುದ್ರ, ವಾಯು, ಪ್ರಧಾನ,ಜೀವ, ಚತುರ್ಮುಖ ಇವರೇ ಆಗಬೇಕು. ಅಂತೂ ದ್ಯುಭ್ವಾದ್ಯಾಯತನರು ರುದ್ರಾದಿಗಳೇ, ಎಂದು ಮಾಯಾವಾದಿಗಳು ಪೂರ್ವಪಕ್ಷ ಮಾಡಿಕೊಂಡು ಪ್ರಧಾನಾದಿಗಳಲ್ಲಿಯೂ ಜಲವಿಧಾರಕತ್ವಾದಿಗಳು ಇಲ್ಲದಿರುವುದರಿಂದ ರೂಢವಾದ ಸೇತುತ್ವವಿಲ್ಲ. ಯೌಗಿಕವಾದ ಸೇತುತ್ವವಾದರೂ ಅಮೃತಶಬ್ದಾರ್ಥವಾದ ಮೋಕ್ಷಧಾರಕತ್ವವಿದ್ದುದರಿಂದ ಬ್ರಹ್ಮನಿಗೂ ಇದೆ. ಅಥವಾ **ಅಮೃತಸ್ಯೈಷ ಸೇತುಃ** ಎನ್ನುವಲ್ಲಿದ್ದ ಏತಚ್ಛಬ್ದವು ಬ್ರಹ್ಮಪರವಲ್ಲ. ಮತ್ತೆ **ತಮೇವೈಕಂ ಜಾನಥ** ಎನ್ನುವಲ್ಲಿ ಪ್ರಸ್ತುತವಾದ ಜ್ಞಾನಪರವು. ಜ್ಞಾನವು ಅಮೃತತ್ವ (ಮೋಕ್ಷ)ಕ್ಕೆ ಸಾಧನವಾಗಿರುವುದರಿಂದ ಗೌಣವಾದ ಮೋಕ್ಷಸೇತುತ್ವವು ಕೂಡಬಹುದು. ಅಂತೂ ದ್ಯುಭ್ವಾದ್ಯಾಯತನನು ಬ್ರಹ್ಮನು ಎಂದು ಸಿದ್ಧಾಂತ ಮಾಡಿರುವರು. ಇದು ಅಯುಕ್ತವು. ಬ್ರಹ್ಮನಲ್ಲಿ ಅತ್ಯಂತ ಅಯುಕ್ತವಾದ ಜಾಯಮಾನತ್ವ ಲಿಂಗದಿಂದಲೇ ಪೂರ್ವಪಕ್ಷವು ಉಚಿತವಾದುದರಿಂದ ಅವರು ಹೇಳಿರುವ ಪೂರ್ವಪಕ್ಷಯುಕ್ತಿಯು ಅಯುಕ್ತವು. **ಬ್ರಹ್ಮಣೋಽನ್ಯದಮೃತಂ** ನ=ಬ್ರಹ್ಮನಿಂದ ಇತರವಾದುದು ಅಮೃತವು ಇಲ್ಲ ಎನ್ನುವ ಪೂರ್ವಪಕ್ಷದಲ್ಲಿಯೂ ಅಮೃತಪದದಿಂದ ಹೇಳಲ್ಪಟ್ಟ ಬ್ರಹ್ಮನನ್ನು ಕುರಿತು ಸೇತುತ್ವವು ಜೀವಾದಿಗಳಲ್ಲಿಯೂ ಹೇಳಲಶಕ್ಯವು. ಆದುದರಿಂದ ಜೀವನೆನ್ನುವ ಪೂರ್ವಪಕ್ಷವೂ ಕೂಡುವುದಿಲ್ಲ. ಮತ್ತು ಸಿದ್ಧಾಂತದಲ್ಲಿ ಜಾಯಮಾನತ್ವ ಲಿಂಗಕ್ಕೆ ಗತಿಯನ್ನು ಹೇಳಲಿಲ್ಲ. **ಅವಿದ್ಯಾಸ್ತಮಯೋ ಮೋಕ್ಷಃ** ಸಾ ಸಂಸಾರ ಉದಾಹೃತಃ ಎನ್ನುವ ಉಕ್ತಿಯಿಂದ ಅವಿದ್ಯಾನಿವೃತ್ತಿಯೇ ಮೋಕ್ಷವು. ಅದು ಸತ್ಯವೆಂದು ಇಟ್ಟುಕೊಂಡರೆ ಅದ್ವೈತಿಗಳ ಮತದಲ್ಲಿ ಸತ್ಯವಾದ ಮೋಕ್ಷವು ಕೇವಲ ಬ್ರಹ್ಮರೂಪವಾಗಿರುವುದರಿಂದ ಬ್ರಹ್ಮನಿಗೆ ಅಮೃತಸ್ಯ ಸೇತುಃ ಎಂದು ಹೇಳಿದ ಮೋಕ್ಷಧಾರಕತ್ವವು ಕೂಡಲಾರದು. ನ ಸನ್ನಾಸನ್ನಸದಸನ್ನಾನಿರ್ವಾಚ್ಯಸ್ಯ ತತ್ಕ್ಷಯಃ ಎನ್ನುವ ಉಕ್ತಿಯಿಂದ ಮುಕ್ತಿಯು ಪಂಚ ಪ್ರಕಾರವುಳ್ಳದ್ದು ಎನ್ನುವ ಮತದಲ್ಲಿಯೂ ಭಾಮತೀರೀತಿಯಾಗಿ ಅವಿದ್ಯೆಯು ಜೀವಾಶ್ರಿತವಾದರೆ ಅವಿದ್ಯಾಧ್ವಂಸವೂ ಜೀವಾಶ್ರಿತವಾಯಿತು. ಬ್ರಹ್ಮಾಶ್ರಿತವಾಗಲಿಲ್ಲ. ವಿವರಣಕಾರನ ರೀತಿಯಾಗಿ ಚಿನ್ಮಾತ್ರಾಶ್ರಿತವಾದರೆ ಮೋಕ್ಷವೂ ಬಂಧಕ್ಕೆ ಆಶ್ರಯನಾದ ಜೀವಾಶ್ರಿತವಾಯಿತು. ಬಂಧವೂ ಚಿನ್ಮಾತ್ರಾಶ್ರಿತವಾದರೆ ಶ್ಯಾಮತ್ವಾದಿಗಳಂತೆಯೇ ಸಂಸಾರವು ಪ್ರತಿಬಿಂಬದಲ್ಲಿ ಇರತಕ್ಕದು ಎಂಬುವ ಉಕ್ತಿಯು ಕೂಡಲಾರದು. (೨) ಶ್ರುತಿಯಲ್ಲಿ ಏತತ್ ಶಬ್ದವು ಜ್ಞಾನಪರವು ಎಂದು ಹೇಳಿದ್ದು ಅಯುಕ್ತವು. ಏಷ ಸೇತುರ್ವಿಧೃತಿಃ ಎನ್ನುವ ಶ್ರುತ್ಯಂತರದಲ್ಲಿ (ಸೇತುತ್ವೇನ=) ಸರ್ವಾಶ್ರಯನೆಂದು ಪ್ರಸಿದ್ಧನಾದ ಬ್ರಹ್ಮನನ್ನು ಇಲ್ಲಿ ತೆಗೆದುಕೊಂಡದ್ದು. ಮತ್ತು ಈ ಆಥರ್ವಣದಲ್ಲಿಯೇ **ಸ ಏಷೋಽಂತಶ್ಚರತೇ** ಎಂದೂ **ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ** ಎಂದು ಉತ್ತರವಾಕ್ಯದಲ್ಲಿದ್ದ ಏತಚ್ಛಬ್ದಕ್ಕೆ ಬ್ರಹ್ಮಪರತ್ವವು ಕಂಡದೆ. ಮತ್ತು ಪುಲ್ಲಿಂಗವಾದ ಏತಚ್ಛಬ್ದಕ್ಕೆ **ತಮೇವೈಕಂ ಜಾನಥ ಆತ್ಮಾನಂ** ಎನ್ನುವಲ್ಲಿದ್ದ ತತ್ ಶಬ್ದದಿಂದಲೂ ಆತ್ಮಶಬ್ದದಿಂದಲೂ ಪರಮಾತ್ಮಪರತ್ವವು ಕೂಡುವಾಗ ಜ್ಞಾನಪರತ್ವವು ಕೂಡಲಾರದು. **ದ್ಯುಭ್ವಾದ್ಯಾಯತನಂ ಸ್ವಶಬ್ದಾತ್** ಎನ್ನುವಲ್ಲಿ ದ್ಯುಭ್ವಾದ್ಯಾಯತನತ್ವವೆಂದರೆ ಅದ್ವೈತಿಗಳ ಮತದಲ್ಲಿ ನಿರ್ವಿಶೇಷಬ್ರಹ್ಮನಿಗೆ ದ್ಯುಭ್ವಾದಿ ಭ್ರಮಾಧಿಷ್ಠಾನತ್ವವನ್ನೇ

ಹೇಳಬೇಕು. ಹಾಗಾದರೆ **ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ** ಎನ್ನುವ ಶ್ರುತಿಯಲ್ಲಿ ಓತ ಶಬ್ದವೂ ಸೂತ್ರದಲ್ಲಿ ಆಯತನ ಶಬ್ದವೂ ಅಯುಕ್ತವು. ಶುಕ್ತಿಯಲ್ಲಿ ರೂಪ್ಯವು ಓತವು (ಪ್ರವಿಷ್ಟ) ಎನ್ನಿಸಿಕೊಳ್ಳುವುದಿಲ್ಲ. ಮತ್ತೂ ಪರರು **ಸ್ವಶಬ್ದಾತ್** ಎನ್ನುವುದಕ್ಕೆ **ಆತ್ಮಶಬ್ದಾತ್** ಎಂದು ಅರ್ಥವು. ಅದು ಬ್ರಹ್ಮನ ಶಬ್ದವು ಎಂದು ಹೇಳಿರುವರು. ಇದೂ ಅಯುಕ್ತವು. ಏಕೆಂದರೆ ಆತ್ಮಶಬ್ದ ವಾಚ್ಯತ್ವವು ನಿರ್ವಿಶೇಷಬ್ರಹ್ಮನಲ್ಲಿ ಕೂಡಲಾರದು. ಆತ್ಮ ಶಬ್ದಲಕ್ಷ್ಯತ್ವವು ಪ್ರಧಾನಾದಿಗಳಲ್ಲಿಯೂ ಕೂಡಬಹುದು. ಆತ್ಮಶಬ್ದವಾಚ್ಯತ್ವವೂ ದ್ಯುಭ್ವಾದ್ಯಾಯತನತ್ವವೂ ಸವಿಶೇಷಬ್ರಹ್ಮನಲ್ಲಿ ಇದೆ ಎಂದರೆ ಸವಿಶೇಷ ಬ್ರಹ್ಮನಿಗೆ ಈ ಪಾದಪ್ರತಿಪಾದ್ಯತ್ವವೇ ಇಲ್ಲ. (೩) **ಮುಕ್ತೋಪಸೃಪ್ಯವ್ಯಪದೇಶಾತ್** ಎನ್ನುವ ಎರಡನೇ ಸೂತ್ರಕ್ಕೆ ಪರರು ರಾಗದ್ವೇಷಾದಿಗಳಿಂದ ಮುಕ್ತರಾದವರಿಂದ ಜ್ಞೇಯತ್ವವನ್ನು ಹೇಳಿದ್ದರಿಂದ ಅಥವಾ **ಅನ್ಯಾ ವಾಚೋ ವಿಮುಂಚಥ, ತಮೇವೈಕಂ ಜಾನಥ** ಎಂದು ಜ್ಞೇಯತ್ವವನ್ನು ಹೇಳಿದ್ದರಿಂದ ಅಥವಾ **ತಥಾ ವಿದ್ವಾನ್ನಾಮ ರೂಪಾದ್ವಿಮುಕ್ತಃ** ಪರಾತ್ಪರಂ ಪುರುಷಮುಪೈತಿ ದಿವ್ಯಂ ಎಂದು ಮುಕ್ತರಿಂದ ಪ್ರಾಪ್ಯತ್ವವನ್ನು ಹೇಳಿದ್ದರಿಂದ ಎಂದು ಅರ್ಥವನ್ನು ಹೇಳಿರುವರು. ಅದೂ ಅಯುಕ್ತವು. ನಿರುಪಪದವಾದ ಮುಕ್ತಶಬ್ದಕ್ಕೆ ಸಂಸಾರದಿಂದ ಮುಕ್ತನಾದವನಲ್ಲಿಯೇ ಪ್ರಸಿದ್ಧಿಯಿದ್ದುದರಿಂದ ಅದನ್ನು ಬಿಡುವುದು ಯುಕ್ತವಲ್ಲ. ಉಪಪೂರ್ವಕವಾದ ಸೃಪಿ ಧಾತುವಿಗೆ ಸಮೀಪಪ್ರಾಪ್ತಿ ಎನ್ನುವ ಅರ್ಥವಿದ್ದುದರಿಂದ ಜ್ಞಾನಾರ್ಥತ್ವವು ಕೂಡಲಾರದು. ಮತ್ತೂ ಅದ್ವೈತಿಗಳ ಮತದಲ್ಲಿ ಬ್ರಹ್ಮನಿಗೆ ಮುಕ್ತರಿಂದ ಅಭೇದವಿದ್ದುದರಿಂದ ಮುಕ್ತಪ್ರಾಪ್ಯತ್ವವು ಕೂಡಲಾರದು. ಸಗುಣ ಮೋಕ್ಷವನ್ನು ಹೇಳಿದರೆ ಪಾದಸಂಗತಿಯಿಲ್ಲ. (೪) **ನಾನುಮಾನಮತಚ್ಛಬ್ದಾತ್** ಎನ್ನುವ ಮೂರನೇ ಸೂತ್ರದಲ್ಲಿ ಅತಚ್ಛಬ್ದವೆಂದರೆ ತದ್ವಾಚಕ ಶಬ್ದಾಭಾವವೆಂದರೆ— ನಿರ್ವಿಶೇಷದಲ್ಲಿಯೂ ಸಮವಾಗಿದೆ. ಲಕ್ಷಕಶಬ್ದಾಭಾವವೆಂದರೆ ಪ್ರಧಾನಾದಿಗಳಲ್ಲಿಯೂ ಅಸಿದ್ಧವು. ಇತ್ಯಾದಿ ಅನೇಕ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ದ್ಯುಭ್ವಾದ್ಯಾಯತನನು, ಜೀವನೋ, ಪರಮಾತ್ಮನೋ ಎಂದು ಸಂದೇಹ ಬಂದರೆ— ಸರ್ವೇಂದ್ರಿಯಾಧಾರತ್ವ, ನಾಡೀಸಂಬಂಧ, ಜಾಯಮಾನತ್ವಾದಿ ಲಿಂಗಗಳು ಶ್ರುತಗಳಾಗಿರುವುದರಿಂದ ದ್ಯುಭ್ವಾದ್ಯಾಯತನನು ಜೀವನೇ ಎಂದು ಪೂರ್ವಪಕ್ಷಮಾಡಿಕೊಂಡು ರಾಮಾನುಜಾಚಾರ್ಯರು, **ತಮೇವೈಕಂ ಜಾನಥಾತ್ಮಾನಂ, ಅಮೃತಸ್ಯೈಷ ಸೇತುಃ, ಯಃ ಸರ್ವಜ್ಞಃ** ಇದು ಮೊದಲಾದ ಪರಮಾತ್ಮನಲ್ಲಿ ಅಸಾಧಾರಣವಾದ ಶಬ್ದವಿರುವುದರಿಂದಲೂ **ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ** ಎಂದು ನಾಮರೂಪಾತ್ಮಕ ಬಂಧದಿಂದ ಮುಕ್ತನಿಂದ ಪ್ರಾಪ್ಯತ್ವವನ್ನು ಹೇಳಿದ್ದರಿಂದಲೂ ಸರ್ವಾಧಾರನಾದ ಪರಮಾತ್ಮನಲ್ಲಿ ಸರ್ವೇಂದ್ರಿಯಾಧಾರತ್ವವು **ಸಂತತಂ ಸಿರಾಭಿಸ್ತೂಲಂಬತ್ಯಾಕೋಶಸನ್ನಿಭಂ** ಇತ್ಯಾದಿ ಶ್ರುತಿಯಿಂದ ನಾಡ್ಯಾಧಾರತ್ವವೂ **ಅಜಾಯಮಾನೋ ಬಹುಧಾ ವಿಜಾಯತೇ** ಎನ್ನುವ ಶ್ರುತಿಯಿಂದ ತನ್ನ ಇಚ್ಛೆಯಿಂದಲೇ ಸ್ವೀಕೃತವಾದ ದಿವ್ಯ ಶರೀರಯೋಗದಿಂದ ಜಾಯಮಾನತ್ವವೂ ಪರಮಾತ್ಮನಲ್ಲಿ ಕೂಡುವುದರಿಂದ ಶ್ರೀಹರಿಯೇ ದ್ಯುಭ್ವಾದ್ಯಾಯತನನು ಎಂದು ಸಿದ್ಧಾಂತಮಾಡಿರುವರು. ಇದು ಅಯುಕ್ತವು. ರುದ್ರಾದಿಗಳಿಗೆ

ಪ್ರಾಪಕಗಳಾಗದೆ ಇರುವ ಜೀವನಲ್ಲಿ ಮಾತ್ರ ಇರುವ ಪೂರ್ವಪಕ್ಷ ಲಿಂಗವನ್ನು ಹೇಳದೆ ಇರುವುದರಿಂದ ಜೀವನೇ ಎನ್ನುವ ಅವಧಾರಣವು ಕೂಡಲಾರದು. ಮತ್ತು **ನಾನುಮಾನಂ** ಎನ್ನುವ ಸೂತ್ರದಲ್ಲಿ ಪ್ರಧಾನವೆಂದು ಪೂರ್ವಪಕ್ಷವೇ ಮಾಡದೆ ಇರುವುದರಿಂದ ಪ್ರಧಾನ ನಿರಾಸವೂ ಕೂಡಲಾರದು. ಮತ್ತು **ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ** ಇತ್ಯಾದಿಗಳಲ್ಲಿ ಮುಕ್ತೋಪಸೃಪ್ಯತ್ವವು ಜೀವನಲ್ಲಿ ಇಲ್ಲವೆಂದು ಹೇಳಿದ್ದರಿಂದ ಮುಕ್ತೋಪಸೃಪ್ಯನೆಂದು ಹೇಳಿದ ಈ ದ್ಯುಭ್ವಾದ್ಯಾಯತನನು ಜೀವನು ಎನ್ನುವ ಪೂರ್ವಪಕ್ಷವೇ ಕೂಡುವುದಿಲ್ಲ. ಆದಕಾರಣ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಆಥರ್ವಣದಲ್ಲಿ **ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ತಮೇವೈಕಂ ಜಾನಥ ಆತ್ಮಾನಂ** ಎಂದು ಶ್ರುತನಾದ ದ್ಯುಭ್ವಾದ್ಯಾಯತನನು ರುದ್ರನೋ, ಪ್ರಧಾನನೋ, ವಾಯುವೋ, ಜೀವನೋ, ಪರಮಾತ್ಮನೋ ಎಂದು ಸಂದೇಹವು. ರುದ್ರಾದಿಗಳೇ ಎಂದು ಪೂರ್ವಪಕ್ಷವು ೧ **ರುದ್ರೋ ವಾವ ಲೋಕಾಧಾರಃ ಪ್ರಾಣಾನಾಂ ಗ್ರಂಥಿರಸಿ ರುದ್ರಃ** ೨ **ಭೂತಂ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ, ಆಕಾಶ ಏವ ತದೋತಂ ಚ ಪ್ರೋತಂ ಚ. ೩. ವಾಯುನಾ ವೈ ಗೌತಮಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ** ಇತ್ಯಾದಿ ರುದ್ರಾದಿ ಪ್ರಾಪಕ ಸಮಾಖ್ಯೆಯಿಂದಲೂ, ೪ **ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ** ಎಂದು ಜಾಯಮಾನತ್ವರೂಪ ಜೀವಲಿಂಗದಿಂದಲೂ ರುದ್ರಾದಿಗಳೇ ಎಂದು ಪೂರ್ವಪಕ್ಷವು. ವಿಷ್ಣುವೇ ಎಂದು ಸಿದ್ಧಾಂತವು. ಹೇಗೆಂದರೆ— **ಅಚೇತನಜನೇರನ್ಯಾ ಚೇತನಸ್ಯ ಜನಿರ್ಯಥಾ । ತತೋಭಯ ಜನೇರನ್ಯಾ ಬ್ರಹ್ಮಣೋಽಪಿ ಜನಿರ್ಮತಾ ।** ಅಜಾಯಮಾನೋ ಬಹುಧಾ ವಿಜಾಯತೇ ಎಂದು ಬ್ರಹ್ಮನಿಗೂ ಪ್ರಾದುರ್ಭಾವರೂಪಜನಿಯು ಶ್ರುತವಾದುದರಿಂದ ಪ್ರಸಿದ್ಧವಾದ ಚೇತನ ಅಚೇತನಗಳ ಉತ್ಪತ್ತಿಯಿಂದ ಇತರವಾದ ಪ್ರಾದುರ್ಭಾವರೂಪವಾದುದು ಬ್ರಹ್ಮನ ಜನಿಯು ಆಗಲಿ, **ಸ್ತ್ರೀಪುಂಮಲಾಭಿಯೋಗಾತ್ಮಾ ದೇಹೋ ವಿಷ್ಣೋರ್ನ ಜಾಯತೇ। ಕಿಂತು ನಿರ್ದೋಷಚೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಂ। ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋರ್ನ ಚಾಪರಾ॥ ತಥಾಪ್ಯಸುರಮೋಹಾಯ ಪರೇಷಾಂ ಚ ಕ್ವಚಿತ್ಕ್ವಚಿತ್॥ ದುಃಖಾಜ್ಞಾನಪ್ರಮಾದೀಂಶ್ಚ ದರ್ಶಯೇಚ್ಚುದ್ಧಸದ್ಗುಣಃ** ಇತ್ಯಾದಿ ಬ್ರಹ್ಮಾಂಡಪುರಾಣ ವಚನದಿಂದ ಸಿದ್ಧಿಸುವುದು. ತಥಾಚ, ಜಾನಥಾತ್ಮಾನಂ ಎಂದು ಆತ್ಮಶಬ್ದದಿಂದಲೂ, **ಅಮೃತಸ್ಯೈಷ ಸೇತುಃ** ಎಂದು ಮುಕ್ತಪ್ರಾಪ್ಯತ್ವರೂಪವಾದ ನಿರವಕಾಶ ವಿಷ್ಣುಲಿಂಗದಿಂದಲೂ ರುದ್ರಾದಿಗಳಲ್ಲಿ ಅಸಾಧಾರಣವಾದ ಭಸ್ಮಧರ ಉಗ್ರ ಮೊದಲಾದ ಶಬ್ದಗಳು ಇಲ್ಲದಿರುವುದರಿಂದಲೂ, ಸಮಾಖ್ಯೆಯಲ್ಲಿದ್ದ ರುದ್ರಾದಿಶಬ್ದಗಳಿಗೆ **ರುಜಂ ದ್ರಾವಯತೇ ಯಸ್ಮಾತ್** ಇತ್ಯಾದಿ ಸ್ಮೃತಿಗಳಿಂದ ಮಹಾಯೋಗ ರೂಢಿಗಳಿಂದ ವಿಷ್ಣುವಾಚಕತ್ವವಿದ್ದುದರಿಂದಲೂ ದ್ಯುಭ್ವಾದ್ಯಾಯತನನು ವಿಷ್ಣುವೇ. ಮತ್ತು **ದ್ವೇ ವಿದ್ಯೇ ವೇದಿತವ್ಯೇ** ಎಂದು ಪರವಿದ್ಯಾವಿಷಯನಾಗಿ ಪ್ರಕೃತನಾದ ಈಶ್ವರನಿಗೇನೇ **ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ** ಎಂದು ಜೀವನಿಂದ ಭೇದವನ್ನು ಹೇಳಿದ್ದರಿಂದಲೂ, **ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ** ಎಂದು ಜೀವೇಶರಿಗೆ ಕರ್ಮಫಲೋಪಜೀವನ, ಅದು ಇಲ್ಲದೇನೇ

ಇರುವಿಕೆ ಏತದ್ರೂಪವಾದ ಭೇದಕ ವಚನದಿಂದಲೂ ಜೀವೇಶರಿಗೆ ಐಕ್ಯವು ಕೂಡದೆ ಇರುವುದರಿಂದ ದ್ಯುಭ್ವಾದ್ಯಾಯತನನು ವಿಷ್ಣುವೇ. ॥ ೭೦.೧ ॥

## ದ್ಯುಭ್ವಾದ್ಯಧಿಕರಣವು ಸಮಾಪ್ತವಾಯಿತು.

# ೨ ಭೂಮಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಭೂಮನಾಮಕ್ಕೆ ವಿಷ್ಣುವಿನಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಭೂಮಶಬ್ದವು ಭೂಮ್ನಃ ಕ್ರತುವತ್ ಇತ್ಯಾದಿಗಳಲ್ಲಿ ಧರ್ಮವಾಚಕವಾದಾಗ್ಯೂ ಇಲ್ಲಿ ಪೂರ್ಣರೂಪವಾದ ಧರ್ಮಿವಾಚಕವಾಗಿದೆ. ಪೂರ್ಣತ್ವವೆಂದರೆ ಗುಣತಃ ಉತ್ತಮತ್ವವು. ಶ್ರುತ್ಯಾದಿ ಸಂಗತಿಯನ್ನು ವಿಷಯಾದಿಗಳನ್ನು ಸೂಚಿಸುತ್ತಾ ಸಯುಕ್ತಿಕವಾಗಿ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಭಾಷ್ಯ ॥ ಪ್ರಾಣೋ ವಾ ಆಶಾಯಾ ಭೂಯಾನಿತ್ಯುಕ್ತ್ವಾ ಯೋ ವೈ ಭೂಮಾ ತತ್ಸುಖಂ (ಛಾ. ಉ.೭.೨೩.) ಇತ್ಯುಕ್ತೇಸ್ತಸ್ಯೈವ ಭೂಮತ್ವಪ್ರಾಪ್ತಿಃ ॥ ೧ ॥**

**ಭಾಷ್ಯಾರ್ಥ** ॥ ಪ್ರಾಣಃ=ಮುಖ್ಯಪ್ರಾಣನು, ಆಶಾಯಾಃ=ಭಾರತಿಯಿಂದ, ಭೂಯಾನ್= ಗುಣಗಳಿಂದ ಜ್ಯೇಷ್ಠನು. (ಸಿದ್ಧಾಂತದಲ್ಲಿ ಮುಖ್ಯಪ್ರಾಣಾಂತರ್ಯಾಮಿಯು ಎಂದರ್ಥವು.) ಹೀಗೆ ಉಪಕ್ರಮಿಸಿಕೊಂಡು, (ಮುಖ್ಯಪ್ರಾಣನಿಗಿಂತ ಉತ್ತಮನನ್ನು ಹೇಳದೆ) ಯಃ ಸುಖಂ=ಯಾರು ಅನನ್ಯಾಧೀನ ಪೂರ್ಣಾನಂದ ಸುವಿಸ್ತರೂಪನೋ, ಸಃ=ಆತನು, ಭೂಮಾ= ಗುಣಪೂರ್ಣನಾದವನು ಹೀಗೆ ಹೇಳಿದ್ದರಿಂದ ಆ ಪ್ರಾಣನಿಗೇನೇ ಭೂಮತ್ವವು ಪ್ರಾಪ್ತಿಯಾಗುತ್ತದೆ.

**ವಿಶೇಷಾಂಶ** ॥ (೧) ಆನಂದಮಯಶಬ್ದದಿಂದ ಹೇಳಲ್ಪಟ್ಟ ಸಜಾತೀಯ ಉತ್ಕೃಷ್ಟತ್ವ ರೂಪವಾದ ಪೂರ್ಣತ್ವವನ್ನು ಇಲ್ಲಿ ವಾಯುವಿನಲ್ಲಿದೆ ಎಂದು ಹೇಳಿದ್ದರಿಂದ ಆನಂದಮಯಾಧಿಕರಣದಿಂದ ಆಕ್ಷೇಪಿಕೀ ಸಂಗತಿಯು. ಛಂದೋಗಶ್ರುತಿಯಲ್ಲಿ ಹೇಳಲ್ಪಟ್ಟ ಭೂಮಾಖ್ಯನು ವಿಷಯನು. ವಾಯುವೋ ವಿಷ್ಣುವೋ ಎಂದು ಸಂದೇಹವು. ವಾಯುವಿಗೇನೇ ಭೂಮತ್ವವು ಹೇಗೆ ಪ್ರಾಪ್ತವಾಗುತ್ತದೆ ಎಂದರೆ—

**ಭಾಷ್ಯ ॥ ಉತ್ಕ್ರಾಂತಪ್ರಾಣಾನ್ । (ಛಾ.ಉ.೭.೧೫.೩.) ಇತ್ಯಾದಿ ತಲ್ಲಿಂ (ದಿ ಲಿಂ) ಗಾತ್ಪ್ರಾಣಶಬ್ದಶ್ಚ ವಾಯುವಾಚೀತಿ ॥ ೨ ॥**

**ಭಾಷ್ಯಾರ್ಥ** ॥ ಈ ಪ್ರಕರಣದಲ್ಲಿರುವ ಪ್ರಾಣಶಬ್ದವು ವಾಯುವಾಚಕವೇ ಆಗಿದೆ. (ವಿಷ್ಣುವಾಚಕವಲ್ಲ.) ಏಕೆಂದರೆ—ಉತ್ಕ್ರಾಂತಪ್ರಾಣಾನ್=ಯಾರಿಂದ ಪ್ರಾಣವು ಹೊರಟು ಹೋಗಿಯದ್ದೋ ಶೂಲೇನ ಸಮಾಸಂ ವ್ಯತಿಷಂ ದಹೇತ್ ಇದು ಮೊದಲಾದ ವಾಕ್ಯಗಳಲ್ಲಿ ಆ ಪ್ರಾಣನಿಗೆ ಉತ್ಕ್ರಮಣಾದಿರೂಪವಾದ ಲಿಂಗವು ಶ್ರುತವಾದ ಪ್ರಯುಕ್ತ (ಈ ಉತ್ಕ್ರಮಣರೂಪ ಕ್ರಿಯೆಯು ಸರ್ವಗತನಾದ ಶ್ರೀಹರಿಯಲ್ಲಿ ಕೂಡಲಾರದು.

**ಭಾಷ್ಯ ॥ ಅತೋ ವಕ್ತಿ—** ॥ ೩ ॥

**ಸೂತ್ರ ॥ ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ ॥ ೮ ॥**

**ಭಾಷ್ಯ ॥ ಸಂಪ್ರಸಾದಾತ್ಪೂರ್ಣಸುಖಸ್ವರೂಪತ್ವಾತ್ । ಅಧ್ಯುಪದೇಶಾತ್ಸರ್ವೇಷಾಮುಪರ್ಯುಪದೇಶಾಚ್ಚ ವಿಷ್ಣುರೇವ ಭೂಮಾ** ॥ ೪ ॥

**ಭಾಷ್ಯಾರ್ಥ ॥** ಹೀಗೆ ಶಂಕಾ ಬಂದರೆ ಉತ್ತರ ಕೊಡುತ್ತಾರೆ. ಸಂಪ್ರಸಾದಾತ್=ಸಮ್ಯಕ್ ಪ್ರಸೀದತಿ ಅನೇನ ಜನಃ ಎನ್ನುವ ವ್ಯುತ್ಪತ್ತಿಯಿಂದ ಪೂರ್ಣಸುಖರೂಪತ್ವವಿದ್ದುದರಿಂದಲೂ, ಅಧ್ಯುಪದೇಶಾತ್= ನಾಮಾದಿಗಳನ್ನು ಎಲ್ಲವನ್ನು ಹೇಳಿದ ಮೇಲೆ ಅವುಗಳಿಂದ ಉತ್ತಮವೆಂದು ಹೇಳಿದ್ದರಿಂದಲೂ ಅಂದರೆ ಅಖಿಲೇಶ್ವರತ್ವವಿದ್ದುದರಿಂದಲೂ ವಿಷ್ಣುವೇ ಭೂಮಶಬ್ದವಾಚ್ಯನು.

**ಪೀಠಿಕೆ ॥** ಪೂರ್ಣಸುಖತ್ವಾದಿಗಳು ವಿಷ್ಣುತ್ವನಿಶ್ಚಾಯಕವು ಹೇಗೆ ಎಂದರೆ—

**ಭಾಷ್ಯ ॥ ಸಹಸ್ರಶೀರ್ಷಮ್ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ। ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಂ॥ ವಿಶ್ವತಃ ಪರಮಾಂ ನಿತ್ಯಂ** ( ಮಹಾನಾಮ್ನೀ ೧೧) **॥ ಇತಿ ಹಿ ಶ್ರುತಿಃ ॥** ॥ ೫ ॥

**ಭಾಷ್ಯಾರ್ಥ ॥** ಸಹಸ್ರಶೀರ್ಷಂ = ಅಮಿತ ಶಿರಸ್ಸುಗಳುಳ್ಳ, ದೇವಂ = ಪ್ರಕಾಶರೂಪನಾದ, ವಿಶ್ವಾಕ್ಷಂ = ಸರ್ವತ್ರ ನೋಡತಕ್ಕ ಕಣ್ಣುಗಳುಳ್ಳ, ವಿಶ್ವಶಂಭುವಂ = ಪೂರ್ಣ ಸುಖಾಶ್ರಯನಾದ, ವಿಶ್ವಂ = ಜಗತ್ತನ್ನು ಪ್ರವೇಶಿಸತಕ್ಕ, ನಾರಾಯಣಂ = ಮುಕ್ತರ ಸಂಘಕ್ಕೆ ಆಶ್ರಯನಾದ, ಅಕ್ಷರಂ = ಸ್ವರೂಪತಃ ನಾಶರಹಿತನಾದ, ಪರಮಂ = ಬ್ರಹ್ಮಾದಿಗಳಿಂದ ಅಧಿಕನೆಂದು ತಿಳಿಯಲ್ಪಡತಕ್ಕ, ಪದಂ = ಪ್ರಾಪ್ಯನಾದ, ವಿಶ್ವತಃ ಪರಮಾಂ = ಸರ್ವರಿಂದುತ್ತಮನಾದ ಅಕಾರವಾಚ್ಯನಾದ, ನಿತ್ಯಂ = ದೇಹತಃ ನಾಶರಹಿತನಾದ, ವಿಶ್ವಂ = ಗುಣಪೂರ್ಣನಾದ, ನಾರಾಯಣಂ = ಶ್ರೀನಾರಾಯಣನನ್ನು (ಜಗತ್ತೂ ಉಪಜೀವಿಸುತ್ತದೆ.) ಹಿ = ಯಾವ ಕಾರಣದಿಂದ, ಇತಿ = ಈ ಪ್ರಕಾರ, ಶ್ರುತಿಃ = ನಾರಾಯಣಾನುವಾಕ್ಯದಲ್ಲಿದ್ದ ಶ್ರುತಿ ಯು. (ಇದೆಯೋ ಆದುದರಿಂದ ಪೂರ್ಣ ಸುಖತ್ವವು ವಿಷ್ಣುತ್ವನಿಶ್ಚಾಯಕವು ಆಗುತ್ತದೆ.)

**ವಿಶೇಷಾಂಶ ॥** ಯದ್ಯಪಿ ವಿಶ್ವತಃ ಪರಮಂ ಎಂದು ದ್ರಾವಿಡ ಪಾಠವು. ಆದರೂ ಆಂಧ್ರಪಾಠವನ್ನು ಅನುಸರಿಸಿ ಪರಮಾಂ ಎಂದು ಹೇಳಿದ್ದು.

**ಪೀಠಿಕೆ ॥** ಇಲ್ಲಿ ಪ್ರಾಣಶಬ್ದದಿಂದ ವಿಷ್ಣುವು ವಾಚ್ಯನಾಗುತ್ತಾನೆಂದು ಅಂಗೀಕರಿಸಿ ದರೆ ಹಿಂದೆ ಹೇಳಿದ ಉತ್ಕ್ರಮಣಾದಿಲಿಂಗವಿರೋಧವೆಂದರೆ—

**ಭಾಷ್ಯ ॥ ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ** (ಬೃ.ಉ.೬.೪. ೨.) **। ಇತ್ಯಾದಿನಾ ನೋತ್ಕ್ರಮಣಾದಿಲಿಂಗವಿರೋಧೋಽಪಿ ॥ ೮ ॥ ೬ ॥**

**ಭಾಷ್ಯಾರ್ಥ ॥** (ಪ್ರಾಣಶಬ್ದವು) ವಿಷ್ಣುಪರವಾದ ಪ್ರಯುಕ್ತ ಉಪಕ್ರಮದಲ್ಲಿದ್ದ ಪ್ರಾಣಶಬ್ದದಿಂದ ವಿರೋಧವಿಲ್ಲವೆಂದು ಮಾತ್ರವಲ್ಲ, ಮತ್ತೆ ಇಲ್ಲಿದ್ದ ಪ್ರಾಣಶಬ್ದದಿಂದ ವಿಷ್ಣುವಿಗೆ ವಾಚ್ಯತ್ವವನ್ನು

ಅಂಗೀಕರಿಸಿದರೆ) ಉತ್ಕ್ರಮಣಾದಿಲಿಂಗವಿರೋಧವೂ ಇಲ್ಲ (ಏಕೆಂದರೆ) ಸರ್ವಗತನಾದ ವಿಷ್ಣುವಿನಲ್ಲಿಯೂ (ರೂಪವಿಶೇಷದಿಂದ ಉತ್ಕ್ರಮಣಾದಿಲಿಂಗವು) **ತಂ=ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ** ಇತ್ಯಾದಿಗಳಿಂದ ಪ್ರಸ್ತುತನಾದ. ಉತ್ಕ್ರಾಮಂತಂ=ದೇಹದಿಂದ ಹೊರಟುಹೋಗತಕ್ಕ ಶ್ರೀಹರಿಯನ್ನು ಅನು=ಅನುಸರಿಸಿ, ಪ್ರಾಣಃ=ಮುಖ್ಯಪ್ರಾಯುವು. ಉತ್ಕ್ರಾಮತಿ= ದೇಹದಿಂದ ಹೊರಟುಹೋಗುತ್ತಾನೆ. ಇತ್ಯಾದಿನಾ = ಇದು ಮೊದಲಾದ ಬೃಹದಾರಣ್ಯಕ ವಾಕ್ಯದಿಂದ ಸಿದ್ಧವಾದ ಪ್ರಯುಕ್ತ ॥ ೮ ।

**ಪೀಠಿಕೆ ॥** ಯಕ್ತ್ಯಂತರದಿಂದ ವಿಷ್ಣುವಿಗೆ ಭೂಮತ್ವವನ್ನು ಪ್ರತಿಪಾದಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಧರ್ಮೋಪಪತ್ತೇಶ್ಚ ಓಂ ॥ ೯ ॥

**ಭಾಷ್ಯ ॥ ಸರ್ವಗತತ್ವಾದಿಧರ್ಮೋಪಪತ್ತೇಶ್ಚ ॥ ಅಧಿ. ೨ ॥** ॥ ೭ ॥

**ಭಾಷ್ಯಾರ್ಥ ॥** (ಸಂಪ್ರಸಾದಾದಿರೂಪ ಹಿಂದೆ ಹೇಳಿದ ಯುಕ್ತಿಗಳಿಂದ ಮಾತ್ರ ವಿಷ್ಣುವು ಭೂಮಶಬ್ದವಾಚ್ಯನೆಂದಲ್ಲ ಮತ್ತೆ ಸ ಏವಾಧಸ್ತಾತ್ ಸ ಉಪರಿಷ್ಟಾತ್— ಸ ಏವೇದಂ ಸರ್ವಂ ಎನ್ನುವ ಛಾಂದೋಗ್ಯ ವಾಕ್ಯಶೇಷದಲ್ಲಿಯೂ, ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ಎನ್ನುವ ವಾಕ್ಯದಲ್ಲಿಯೂ, **ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ ಇತಿ ಸ್ವೇ ಮಹಿಮ್ನಿ** ಇತ್ಯಾದಿ ವಾಕ್ಯದಲ್ಲಿಯೂ) ಸರ್ವಗತತ್ವ, ಸ್ವಾತಂತ್ರ್ಯ, ಸ್ವಪ್ರತಿಷ್ಠಿತತ್ವ ಮೊದಲಾದ ಧರ್ಮವು ಶ್ರುತವಾದ ಪ್ರಯುಕ್ತವೂ ಭೂಮಶಬ್ದವಾಚ್ಯನು ವಿಷ್ಣುವೇ. (ಆ ಧರ್ಮಗಳು ವಿಷ್ಣುವಿನಲ್ಲಿಯೇ ಕೂಡುತ್ತವೆ.) ॥ ೯ ॥

## ಮಾಯಾವಾದಿರೀತ್ಯಾ

ವಿಚಾರ ॥ **ಭೂಮಾತ್ವೇವ ವಿಜಿಜ್ಞಾಸಿತವ್ಯಃ ಭೂಮಾನಂ ಭಗವೋ ವಿಜಿಜ್ಞಾಸೇ** ಇತ್ಯಾದಿಗಳಲ್ಲಿ ಶ್ರುತನಾದ ಭೂಮಶಬ್ದವಾಚ್ಯನು ಜಡವಾಯುವೋ ಬ್ರಹ್ಮನೋ ಎಂದು ಸಂದೇಹ ಬಂದರೆ **ಅಸ್ತಿ ಭಗವೋ ನಾಮ್ನಃ** ಎಂದಾರಂಭಿಸಿ ಪ್ರಾಣಪರ್ಯಂತವಾಗಿ ಪ್ರವೃತ್ತವಾದ ಶ್ರೇಷ್ಠವಿಷಯಕ ಪ್ರಶ್ನ ಪ್ರತಿವಚನವನ್ನು ಮುಗಿಸಿ, ಪ್ರಾಣಾನಂತರದಲ್ಲಿ ಪ್ರಶ್ನಪ್ರತಿವಚನಗಳು ಇಲ್ಲದೆ ಭೂಮನನ್ನು ಹೇಳಿದ್ದರಿಂದ ಭೂಮಶಬ್ದವಾಚ್ಯನು ಜಡರೂಪವಾದ ವಾಯುವೇ ಎಂದು ಮಾಯಾವಾದಿಗಳು ಪೂರ್ವಪಕ್ಷಮಾಡಿಕೊಂಡು **ಏಷ ತು ವಾ ಅತಿ ವದತಿ ಯಸ್ಸತ್ಯೇನಾತಿವದತಿ** ಎನ್ನುವಲ್ಲಿ ಅತಿಶಯಿತ ವಸ್ತುವಾದಿತ್ವಕ್ಕೆ ಹೇತುಭೂತವಾದ ಪ್ರಾಣನ ಉಪಾಸನವನ್ನು ತು ಶಬ್ದದಿಂದ ವ್ಯಾವರ್ತಿಸಿ ಬ್ರಹ್ಮನನ್ನು ಮುಖ್ಯಾತಿವಾದಿತ್ವಕ್ಕೆ ಹೇತುಭೂತವಾದ ಸತ್ಯಶಬ್ದದಿಂದ ಪೃಥಕ್ ಹೇಳಿದ್ದರಿಂದಲೂ, **ತರತಿ ಶೋಕಮಾತ್ಮವಿತ್** ಎನ್ನುವುದರಿಂದ ಪರಮಾತ್ಮನು ವೇದ್ಯನೆಂದು ಹೇಳಿದ್ದರಿಂದಲೂ, ನಿರ್ವಿಶೇಷ ಬ್ರಹ್ಮಜ್ಞಾನೋಪಯೋಗಿಯಾಗಿ ನಾಮಾದಿಅಬ್ರಹ್ಮೋಪದೇಶವು ಕೂಡುವುದರಿಂದಲೂ **ಯತ್ರ ನಾನ್ಯತ್ ಪಶ್ಯತಿ** ಎಂದು ದ್ವೈತವನ್ನು ನಿಷೇಧಿಸಿ ಭೂಮನಿಗೆ ಲಕ್ಷಣವನ್ನು ಹೇಳಿದ್ದರಿಂದ ದ್ವಿತೀಯನಾದ ನಿರ್ವಿಶೇಷನಾದ ಪರಮಾತ್ಮನೇ ಭೂಮನು ಎಂದು ಸಿದ್ಧಾಂತಮಾಡಿರುವರು. ಅದು ಅಯುಕ್ತವು.

ಹೇಗೆಂದರೆ ಜಡವಾಯುವಿನಲ್ಲಿ ತರತಿ ಶೋಕಮಾತ್ಮವಿತ್ ಎಂದು ಉಪಕ್ರಮದಲ್ಲಿದ್ದ ಆತ್ಮಶಬ್ದಾದಿಗಳೂ **ಭೂಮೈವ ಸುಖಂ** ಎಂದು ಹೇಳಿದ ಸುಖತ್ವವೂ ಕೂಡದೆ ಇರುವುದರಿಂದ ಅವರ ಪೂರ್ವಪಕ್ಷವೇ ಅತಿತುಚ್ಛವು. ಮತ್ತು **ತೇ ಹ ಪ್ರಾಣಾಃ ಅಹಂ ಶ್ರೇಯಸಿ ವ್ಯೂದಿರೇ, ಅಹಂ ಶ್ರೇಯಾನಸ್ಮ್ಯಹಂ ಶ್ರೇಯಾನಸ್ಮೀತಿ, ತಾನ್ವರಿಷ್ಠಃ ಪ್ರಾಣ ಉವಾಚ** ಇತ್ಯಾದಿಗಳಲ್ಲಿ ಅಭಿಮಾನಿದೇವತೆಗಳಲ್ಲಿಯೇ ಪ್ರಾಣಶಬ್ದವು ಪ್ರಸಿದ್ಧವಾಗಿದೆ. ಆದಕಾರಣ ಜಡವೆನ್ನುವ ಪೂರ್ವಪಕ್ಷವು ಅಯುಕ್ತವು. ಅಲ್ಲದೆ ಅವರ ಸಿದ್ಧಾಂತವೂ ಅಯುಕ್ತವು. ಗುಣಜ್ಯೇಷ್ಠತ್ವರೂಪವಾದ ಉತ್ತಮತ್ವವು (ಭೂಮತ್ವವು) ನಿರ್ಗುಣನಲ್ಲಿ ಕೂಡಲಾರದು. ಕಲ್ಪಿತ ಜ್ಯೇಷ್ಠತ್ವಕ್ಕೆ **ಭೂಮಾನಂ ಭಗವೋ ವಿಜಿಜ್ಞಾಸೇ** ಎಂದು ಹೇಳಿದ ಮುಮುಕ್ಷು ಜಿಜ್ಞಾಸ್ಯತ್ವವೂ ಅಯುಕ್ತವು. ಇತ್ಯಾದಿ ದೋಷಗಳು ಇದ್ದುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ॥ **ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ** ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಭೂಮನು ಪ್ರತ್ಯಗಾತ್ಮರೂಪನಾದ ಜೀವನೋ ಪರಮಾತ್ಮನೋ ಎಂದು ಸಂದೇಹ ಬಂದರೆ ನಾಮಾದಿಗಳಲ್ಲಿ ಪ್ರಶ್ನೋತ್ತರರೂಪವಾಗಿ ಪ್ರವೃತ್ತವಾದ ಭೂಯಸ್ತ್ವ(ಶ್ರೇಷ್ಠ್ಯ)ವಚನವನ್ನು ಪ್ರಾಣಪರ್ಯಂತ ಹೇಳಿ ಪ್ರಾಣನಿಂದ ಉತ್ತಮನನ್ನು ಹೇಳದೆ ಇದ್ದುದರಿಂದ ಭೂಮಶಬ್ದವಾಚ್ಯನು ಪ್ರಾಣನು. ಪ್ರಾಣಶಬ್ದವು ಪ್ರಾಣಸಾಹಚರ್ಯ ನಿಮಿತ್ತದಿಂದ ಲಕ್ಷಣಯಾ ಜೀವಪರವಾಗಿದೆ. ಏಕೆಂದರೆ **ಪ್ರಾಣೋ ವೈ ಪಿತಾ ಪ್ರಾಣೋ ವೈ ಮಾತಾ ಪ್ರಾಣೋ ಭ್ರಾತಾ** ಇತ್ಯಾದಿಗಳಿಂದ ಪ್ರಾಣನಿಗೆ ಪಿತೃತ್ವಾದಿಗಳನ್ನು ಹೇಳಿದ್ದರಿಂದಲೂ **ಪಿತೃಹಾ ವೈ ತ್ವಮಸಿ** ಇತ್ಯಾದಿಗಳಿಂದ ಪ್ರಾಣಸಹಿತವಾದ ಶರೀರಕ್ಕೆ ಹಿಂಸ್ಯತ್ವವನ್ನು ಹೇಳಿದ್ದರಿಂದಲೂ ಜೀವಪರವು. ಮತ್ತು ಕೇವಲ ಜಡಭೂತವಾದ ವಾಯುವಿಗೆ ಪಿತೃತ್ವಾದಿಗಳೂ ಹಿಂಸ್ಯತ್ವವೂ ಕೂಡಲಾರವು. ಎಂದು ಪೂರ್ವಪಕ್ಷಮಾಡಿಕೊಂಡು ಪ್ರಾಣ ಶಬ್ದವಾಚ್ಯನಾದ ಜೀವನಿಂದ ಉತ್ತಮತ್ವವನ್ನು ಹೇಳಿದ್ದರಿಂದ ಮತ್ತು ಅಮೃತತ್ವಾದಿಧರ್ಮಗಳು ಬ್ರಹ್ಮನಲ್ಲಿಯೇ ಕೂಡುವುದರಿಂದಲೂ ಭೂಮನು ಬ್ರಹ್ಮನೇ ಎಂದು ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. ಪ್ರಾಣಶಬ್ದವು ಪ್ರಸಿದ್ಧಿಯನ್ನು ಅನುಸರಿಸಿ ಪ್ರಾಣಾಭಿಮಾನಿದೇವತಾವಾಚಕವು, ಎಂದು ಅಂಗೀಕರಿಸಿದರು. **ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್** ಇತ್ಯಾದಿಗಳಿಂದ ಉಪಪಾದಿಸಿ ಕೊಳ್ಳಲ್ಪಟ್ಟ ಪಿತೃತ್ವಾದಿಗಳು ಕೂಡುವುದರಿಂದ ಜೀವನಲ್ಲಿ ಲಾಕ್ಷಣಿಕವು ಕೂಡಲಾರದು. ಮತ್ತು ಜೀವೋತ್ತಮತ್ವರೂಪವಾದ ಹೇತುವಿನಿಂದ ಬ್ರಹ್ಮನೆನ್ನುವ ಸಿದ್ಧಾಂತವೂ ಕೂಡಲಾರದು. ಆದಕಾರಣ ಅಯುಕ್ತವು.

## ಅಧಿಕರಣ ಸಾರಾಂಶ

**ಯೋ ವೈ ಭೂಮಾ ತತ್ಸುಖಂ** ಎಂದು ಛಾಂದೋಗ್ಯದಲ್ಲಿ ೭ನೇ ಅಧ್ಯಾಯದಲ್ಲಿ ಶ್ರುತನಾದ ಭೂಮನು ಮುಖ್ಯಪ್ರಾಣನೋ ವಿಷ್ಣುವೋ ಎಂದು ಸಂದೇಹವು. ಭೂಮಶಬ್ದವಾಚ್ಯನು ಪ್ರಾಣನು ಎಂದು ಪೂರ್ವಪಕ್ಷವು. ನಾಮವಾಕ್ ಮನಃ ಸಂಕಲ್ಪ ಚಿತ್ತ ಧ್ಯಾನ ವಿಜ್ಞಾನ ಬಲ ಅನ್ನ ಅಪ್ ತೇಜ ಆಕಾಶ ಸ್ಮರ ಆಶಾ ಪ್ರಾಣ ಇವರಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಪ್ರಶ್ನೋತ್ತರಪೂರ್ವಕವಾಗಿ

ಉತ್ತರೋತ್ತರರಿಗೆ ಆಧಿಕ್ಯವನ್ನು ಹೇಳಿ ಪ್ರಾಣನ ದೆಶೆಯಿಂದ ಶ್ರೇಷ್ಠನು ಇದ್ದಾನೋ ಎನ್ನುವ ಪ್ರಶ್ನೆ ಮಾಡಿ **ಭೂಮಾ ವಾವ ಪ್ರಾಣದ್ಭೂಯಾನ್**=ಭೂಮನು ಪ್ರಾಣನ ದೆಶೆಯಿಂದ ಶ್ರೇಷ್ಠನು, ಎನ್ನುವ ಪ್ರತ್ಯುತ್ತರವು ಇಲ್ಲದಿರುವುದರಿಂದ ಭೂಮನು ಪ್ರಾಣನ ದೆಶೆಯಿಂದ ಅಭಿನ್ನನು ಪ್ರಾಣನೇ ಭೂಮಶಬ್ದವಾಚ್ಯನು ಎಂದು ಪೂರ್ವಪಕ್ಷವು— **ಯೋ ವೈ ಭೂಮಾ ತತ್ಸುಖಂ** ಎಂದು ನಿರುಪಪದಸುಖಪದದಿಂದ ಹೇಳಲ್ಪಟ್ಟ ಪೂರ್ಣಸುಖತ್ವವೂ, ನಾಮಾದಿಗಳನ್ನು ಆರಂಭಿಸಿ ಸರ್ವಾಧಿಕನೆಂದು ಹೇಳಿದ್ದೂ **ಸ ಏವಾಧಸ್ತಾತ್** ಇತ್ಯಾದಿಗಳಿಂದ ಹೇಳಲ್ಪಟ್ಟ ಸರ್ವಗತತ್ವಾದಿಧರ್ಮಗಳೂ **ವಿಶ್ವಶಂಭುವಂ ವಿಶ್ವತಃ ಪರಮಾಂ** ಇತ್ಯಾದಿ ಶ್ರುತಿಗಳಿಂದ ಕೇವಲ ಬ್ರಹ್ಮನಲ್ಲಿಯೇ ಇರತಕ್ಕವು. ಇಬ್ಬರಿಗೆ ಸರ್ವೋತ್ಕೃಷ್ಟಆನಂದತ್ವವು ಸರ್ವೋತ್ತಮತ್ವವು ಕೂಡಲಾರದು. ವಿಷ್ಣುವಿನಲ್ಲಿ ಅಣುರೂಪವೂ ಇರುವುದರಿಂದ ಕ್ರಿಯೆಯೂ ಕೂಡುವುದು. **ಜಾತ್ಯಾದೇಃ ಸರ್ವಗಸ್ಯಾಪಿ ಪ್ರತಿವ್ಯಕ್ತಿಸಮಾಪ್ತಿವತ್। ಸರ್ವಗಸ್ಯಾಪೀಶ್ವರಸ್ಯ ಕ್ರಿಯಾಯಾ ಅಪಿ ಸಂಭವಾತ್** ಆದಕಾರಣ ಉತ್ಕ್ರಮಣಾದಿಗಳೂ ಸಂಭವಿಸುತ್ತವೆ. ಆದುದರಿಂದ ಭೂಮ ಶಬ್ದವಾಚ್ಯನು ವಿಷ್ಣುವೇ. ಎಂದು ಸಿದ್ಧಾಂತವು ॥ ೯ ॥ ಅಧಿ. ೨ ॥

ಭೂಮಾಧಿಕರಣವು ಸಮಾಪ್ತವಾಯಿತು.

## ೩. ಅಕ್ಷರಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಅಕ್ಷರನಾಮಕ್ಕೆ ಸಮನ್ವಯವನ್ನು ಮಾಡುತ್ತಾರೆ, ಶ್ರುತ್ಯಾದಿ ಸಂಗತಿಯನ್ನೂ ವಿಷಯವಾಕ್ಯವನ್ನುದಾಹರಿಸಿ ವಿಷಯಾದಿಗಳನ್ನು ಸೂಚಿಸುತ್ತಾ ಸಯುಕ್ತಿಕವಾಗಿ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಭಾಷ್ಯ ॥ ಅದೃಶ್ಯತ್ವಾದಿಗುಣಾಃ ವಿಷ್ಣೋರುಕ್ತಾಃ । ಅದೃಷ್ಟಂ ದ್ರಷ್ಟೃಶ್ರುತಂ ಶ್ರೋತೃ** (ಬೃ.೫.೮.೧೧.) **ಇತ್ಯಾದಿನಾ । ಅಹಂ ಸೋಮಮಾಹನಸಂ ಬಿಭರ್ಮಿ** (ಋ.೧೦.೧೨೫.೨.)**ಇತ್ಯಾದೇಸ್ತ(ದೇಶ್ವತ)ಸ್ಯಾಪಿ ಸಂಭವಾನ್ಮಧ್ಯಮಾಕ್ಷರಸ್ಯೋಕ್ತಾ ಇತಿ** ॥ ೧ ॥

**ಭಾಷ್ಯಾರ್ಥ** ॥ (ಮೊದಲು ಅದೃಶ್ಯತ್ವಾಧಿಕರಣದಲ್ಲಿ ಯಾವ) ಅದೃಶ್ಯತ್ವ ಮೊದಲಾದ ಗುಣಗಳು ಅಕ್ಷರಶಬ್ದವಾಚ್ಯನಾದ ವಿಷ್ಣುವಿಗೆ ಹೇಳಲ್ಪಟ್ಟಿವೆಯೋ,( ಅವುಗಳು ಬೃಹದಾರಣ್ಯಕದಲ್ಲಿ ತದ್ವಾ ಏತದಕ್ಷರಂ ಗಾರ್ಗಿ) ಅದೃಷ್ಟಂ ದ್ರಷ್ಟೃ ಇದು ಮೊದಲಾದ ವಾಕ್ಯದಿಂದ ಮಧ್ಯಮಾಕ್ಷರವಾದ ಶ್ರೀತತ್ವಕ್ಕೆ ಹೇಳಲ್ಪಡುತ್ತವೆ. ತಸ್ಯ=ಆ ಅದೃಶ್ಯತ್ವಾದಿ ಗುಣಗಳು, ತಸ್ಯಾಪಿ=ಮಧ್ಯಮಾಕ್ಷರವಾದ ಶ್ರೀತತ್ವ ದಲ್ಲಿಯೂ, ಸಂಭವಾತ್=ಕೂಡುವುದರಿಂದ, ತಸ್ಯಾಪಿ=ಚಂದ್ರದ್ಯಾಧಾರತ್ವ ಲಿಂಗಕ್ಕೂ ಕೂಡ **ಅಹಂ ಸೋಮಮಾಹನಸಂ** ಇದು ಮೊದಲಾದ ವಾಕ್ಯದಿಂದ ಆ ಅಕ್ಷರನಲ್ಲಿ ಕೂಡುವುದರಿಂದಲೂ ಅಕ್ಷರಶಬ್ದಕ್ಕೆ ಮಧ್ಯಮಾಕ್ಷರದಲ್ಲಿ ಪ್ರಸಿದ್ಧಿಯಿದ್ದುದರಿಂದಲೂ ಮಧ್ಯಮಾಕ್ಷರಕ್ಕೂ ಕೂಡ ಅಕ್ಷರನಾಮವಾಚ್ಯತ್ವವು ಪ್ರಾಪ್ತವಾಗುತ್ತದೆ.

ಹೇಗೆಂದರೆ ಜಡವಾಯುವಿನಲ್ಲಿ ತರತಿ ಶೋಕಮಾತ್ಮವಿತ್ ಎಂದು ಉಪಕ್ರಮದಲ್ಲಿದ್ದ ಆತ್ಮಶಬ್ದಾದಿಗಳೂ **ಭೂಮ್ಯೆವ ಸುಖಂ** ಎಂದು ಹೇಳಿದ ಸುಖತ್ವವೂ ಕೂಡದೆ ಇರುವುದರಿಂದ ಅವರ ಪೂರ್ವಪಕ್ಷವೇ ಅತಿತುಚ್ಛವು. ಮತ್ತು **ತೇ ಹ ಪ್ರಾಣಾಃ ಅಹಂ ಶ್ರೇಯಸಿ ವ್ಯೂದಿರೇ, ಅಹಂ ಶ್ರೇಯಾನಸ್ಮ್ಯಹಂ ಶ್ರೇಯಾನಸ್ಮೀತಿ, ತಾನ್ವರಿಷ್ಠಃ ಪ್ರಾಣ ಉವಾಚ** ಇತ್ಯಾದಿಗಳಲ್ಲಿ ಅಭಿಮಾನಿದೇವತೆಗಳಲ್ಲಿಯೇ ಪ್ರಾಣಶಬ್ದವು ಪ್ರಸಿದ್ಧವಾಗಿದೆ. ಆದಕಾರಣ ಜಡವೆನ್ನುವ ಪೂರ್ವಪಕ್ಷವು ಅಯುಕ್ತವು. ಅಲ್ಲದೆ ಅವರ ಸಿದ್ಧಾಂತವೂ ಅಯುಕ್ತವು. ಗುಣಜ್ಯೇಷ್ಠತ್ವರೂಪವಾದ ಉತ್ತಮತ್ವವು (ಭೂಮತ್ವವು) ನಿರ್ಗುಣನಲ್ಲಿ ಕೂಡಲಾರದು. ಕಲ್ಪಿತ ಜ್ಯೇಷ್ಠತ್ವಕ್ಕೆ **ಭೂಮಾನಂ ಭಗವೋ ವಿಜಿಜ್ಞಾಸೇ** ಎಂದು ಹೇಳಿದ ಮುಮುಕ್ಷು ಜಿಜ್ಞಾಸ್ಯತ್ವವೂ ಅಯುಕ್ತವು. ಇತ್ಯಾದಿ ದೋಷಗಳು ಇದ್ದುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ॥ ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ** ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಭೂಮನು ಪ್ರತ್ಯಗಾತ್ಮರೂಪನಾದ ಜೀವನೋ ಪರಮಾತ್ಮನೋ ಎಂದು ಸಂದೇಹ ಬಂದರೆ ನಾಮಾದಿಗಳಲ್ಲಿ ಪ್ರಶ್ನೋತ್ತರರೂಪವಾಗಿ ಪ್ರವೃತ್ತವಾದ ಭೂಯಸ್ತ್ವ(ಶ್ರೇಷ್ಠ್ಯ)ವಚನವನ್ನು ಪ್ರಾಣಪರ್ಯಂತ ಹೇಳಿ ಪ್ರಾಣನಿಂದ ಉತ್ತಮನನ್ನು ಹೇಳದೆ ಇದ್ದುದರಿಂದ ಭೂಮಶಬ್ದವಾಚ್ಯನು ಪ್ರಾಣನು. ಪ್ರಾಣಶಬ್ದವು ಪ್ರಾಣಸಾಹಚರ್ಯ ನಿಮಿತ್ತದಿಂದ ಲಕ್ಷಣಯಾ ಜೀವಪರವಾಗಿದೆ. ಏಕೆಂದರೆ **ಪ್ರಾಣೋ ವೈ ಪಿತಾ ಪ್ರಾಣೋ ವೈ ಮಾತಾ ಪ್ರಾಣೋ ಭ್ರಾತಾ** ಇತ್ಯಾದಿಗಳಿಂದ ಪ್ರಾಣನಿಗೆ ಪಿತೃತ್ವಾದಿಗಳನ್ನು ಹೇಳಿದ್ದರಿಂದಲೂ **ಪಿತೃಹಾ ವೈ ತ್ವಮಸಿ** ಇತ್ಯಾದಿಗಳಿಂದ ಪ್ರಾಣಸಹಿತವಾದ ಶರೀರಕ್ಕೆ ಹಿಂಸ್ಯತ್ವವನ್ನು ಹೇಳಿದ್ದರಿಂದಲೂ ಜೀವಪರವು. ಮತ್ತು ಕೇವಲ ಜಡಭೂತವಾದ ವಾಯುವಿಗೆ ಪಿತೃತ್ವಾದಿಗಳೂ ಹಿಂಸ್ಯತ್ವವೂ ಕೂಡಲಾರವು. ಎಂದು ಪೂರ್ವಪಕ್ಷಮಾಡಿಕೊಂಡು ಪ್ರಾಣ ಶಬ್ದವಾಚ್ಯನಾದ ಜೀವನಿಂದ ಉತ್ತಮತ್ವವನ್ನು ಹೇಳಿದ್ದರಿಂದ ಮತ್ತು ಅಮೃತತ್ವಾದಿಧರ್ಮಗಳು ಬ್ರಹ್ಮನಲ್ಲಿಯೇ ಕೂಡುವುದರಿಂದಲೂ ಭೂಮನು ಬ್ರಹ್ಮನೇ ಎಂದು ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. ಪ್ರಾಣಶಬ್ದವು ಪ್ರಸಿದ್ಧಿಯನ್ನು ಅನುಸರಿಸಿ ಪ್ರಾಣಾಭಿಮಾನಿದೇವತಾವಾಚಕವು, ಎಂದು ಅಂಗೀಕರಿಸಿದರು. **ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್** ಇತ್ಯಾದಿಗಳಿಂದ ಉಪಪಾದಿಸಿ ಕೊಳ್ಳಲ್ಪಟ್ಟ ಪಿತೃತ್ವಾದಿಗಳು ಕೂಡುವುದರಿಂದ ಜೀವನಲ್ಲಿ ಲಾಕ್ಷಣಿಕವು ಕೂಡಲಾರದು. ಮತ್ತು ಜೀವೋತ್ತಮತ್ವರೂಪವಾದ ಹೇತುವಿನಿಂದ ಬ್ರಹ್ಮನೆನ್ನುವ ಸಿದ್ಧಾಂತವೂ ಕೂಡಲಾರದು. ಆದಕಾರಣ ಅಯುಕ್ತವು.

## ಅಧಿಕರಣ ಸಾರಾಂಶ

**ಯೋ ವೈ ಭೂಮಾ ತತ್ಸುಖಂ** ಎಂದು ಛಾಂದೋಗ್ಯದಲ್ಲಿ ೭ನೇ ಅಧ್ಯಾಯದಲ್ಲಿ ಶ್ರುತನಾದ ಭೂಮನು ಮುಖ್ಯಪ್ರಾಣನೋ ವಿಷ್ಣುವೋ ಎಂದು ಸಂದೇಹವು. ಭೂಮಶಬ್ದವಾಚ್ಯನು ಪ್ರಾಣನು ಎಂದು ಪೂರ್ವಪಕ್ಷವು. ನಾಮವಾಕ್ ಮನಃ ಸಂಕಲ್ಪ ಚಿತ್ತ ಧ್ಯಾನ ವಿಜ್ಞಾನ ಬಲ ಅನ್ನ ಅಪ್ ತೇಜ ಆಕಾಶ ಸ್ಮರ ಆಶಾ ಪ್ರಾಣ ಇವರಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಪ್ರಶ್ನೋತ್ತರಪೂರ್ವಕವಾಗಿ

ಉತ್ತರೋತ್ತರರಿಗೆ ಆಧಿಕ್ಯವನ್ನು ಹೇಳಿ ಪ್ರಾಣನ ದೆಶೆಯಿಂದ ಶ್ರೇಷ್ಠನು ಇದ್ದಾನೋ ಎನ್ನುವ ಪ್ರಶ್ನೆ ಮಾಡಿ **ಭೂಮಾ ವಾವ ಪ್ರಾಣದ್ಭೂಯಾನ್**=ಭೂಮನು ಪ್ರಾಣನ ದೆಶೆಯಿಂದ ಶ್ರೇಷ್ಠನು, ಎನ್ನುವ ಪ್ರತ್ಯುತ್ತರವು ಇಲ್ಲದಿರುವುದರಿಂದ ಭೂಮನು ಪ್ರಾಣನ ದೆಶೆಯಿಂದ ಅಭಿನ್ನನು ಪ್ರಾಣನೇ ಭೂಮಶಬ್ದವಾಚ್ಯನು ಎಂದು ಪೂರ್ವಪಕ್ಷವು— **ಯೋ ವೈ ಭೂಮಾ ತತ್ಸುಖಂ** ಎಂದು ನಿರುಪಪದಸುಖಪದದಿಂದ ಹೇಳಲ್ಪಟ್ಟ ಪೂರ್ಣಸುಖತ್ವವೂ, ನಾಮಾದಿಗಳನ್ನು ಆರಂಭಿಸಿ ಸರ್ವಾಧಿಕನೆಂದು ಹೇಳಿದ್ದೂ **ಸ ಏವಾಧಸ್ತಾತ್** ಇತ್ಯಾದಿಗಳಿಂದ ಹೇಳಲ್ಪಟ್ಟ ಸರ್ವಗತತ್ವಾದಿಧರ್ಮಗಳೂ **ವಿಶ್ವಶಂಭುವಂ ವಿಶ್ವತಃ ಪರಮಾಂ** ಇತ್ಯಾದಿ ಶ್ರುತಿಗಳಿಂದ ಕೇವಲ ಬ್ರಹ್ಮನಲ್ಲಿಯೇ ಇರತಕ್ಕವು. ಇಬ್ಬರಿಗೆ ಸರ್ವೋತ್ಕೃಷ್ಟಆನಂದತ್ವವು ಸರ್ವೋತ್ತಮತ್ವವು ಕೂಡಲಾರದು. ವಿಷ್ಣುವಿನಲ್ಲಿ ಅಣುರೂಪವೂ ಇರುವುದರಿಂದ ಕ್ರಿಯೆಯೂ ಕೂಡುವುದು. **ಜಾತ್ಯಾದೇಃ ಸರ್ವಗಸ್ಯಾಪಿ ಪ್ರತಿವ್ಯಕ್ತಿಸಮಾಪ್ತಿವತ್। ಸರ್ವಗಸ್ಯಾಪೀಶ್ವರಸ್ಯ ಕ್ರಿಯಾಯಾ ಅಪಿ ಸಂಭವಾತ್** ಆದಕಾರಣ ಉತ್ಕ್ರಮಣಾದಿಗಳೂ ಸಂಭವಿಸುತ್ತವೆ. ಆದುದರಿಂದ ಭೂಮ ಶಬ್ದವಾಚ್ಯನು ವಿಷ್ಣುವೇ. ಎಂದು ಸಿದ್ಧಾಂತವು ॥ ೯ ॥ ಅಧಿ. ೨ ॥

**ಭೂಮಾಧಿಕರಣವು ಸಮಾಪ್ತವಾಯಿತು.**

## ೩. ಅಕ್ಷರಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಅಕ್ಷರನಾಮಕ್ಕೆ ಸಮನ್ವಯವನ್ನು ಮಾಡುತ್ತಾರೆ, ಶ್ರುತ್ಯಾದಿ ಸಂಗತಿಯನ್ನೂ ವಿಷಯವಾಕ್ಯವನ್ನುದಾಹರಿಸಿ ವಿಷಯಾದಿಗಳನ್ನು ಸೂಚಿಸುತ್ತಾ ಸಯುಕ್ತಿಕವಾಗಿ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಭಾಷ್ಯ ॥ ಅದೃಶ್ಯತ್ವಾದಿಗುಣಾಃ ವಿಷ್ಣೋರುಕ್ತಾಃ । ಅದೃಷ್ಟಂ ದ್ರಷ್ಟೃಶ್ರುತಂ ಶ್ರೋತೃ (ಬೃ.೫.೮.೧೧.) ಇತ್ಯಾದಿನಾ । ಅಹಂ ಸೋಮಮಾಹನಸಂ ಬಿಭರ್ಮಿ (ಋ.೧೦.೧೨೫.೨.)ಇತ್ಯಾದೇಸ್ತ(ದೇಶ್ಚತ)ಸ್ಯಾಪಿ ಸಂಭವಾನ್ಮಧ್ಯಮಾಕ್ಷರಸ್ಯೋಕ್ತಾ ಇತಿ ॥ ೧ ॥**

**ಭಾಷ್ಯಾರ್ಥ ॥** (ಮೊದಲು ಅದೃಶ್ಯತ್ವಾಧಿಕರಣದಲ್ಲಿ ಯಾವ) ಅದೃಶ್ಯತ್ವ ಮೊದಲಾದ ಗುಣಗಳು ಅಕ್ಷರಶಬ್ದವಾಚ್ಯನಾದ ವಿಷ್ಣುವಿಗೆ ಹೇಳಲ್ಪಟ್ಟಿವೆಯೋ,( ಅವುಗಳು ಬೃಹದಾರಣ್ಯಕದಲ್ಲಿ ತದ್ವಾ ಏತದಕ್ಷರಂ ಗಾರ್ಗಿ) ಅದೃಷ್ಟಂ ದ್ರಷ್ಟೃ ಇದು ಮೊದಲಾದ ವಾಕ್ಯದಿಂದ ಮಧ್ಯಮಾಕ್ಷರವಾದ ಶ್ರೀತತ್ವಕ್ಕೆ ಹೇಳಲ್ಪಡುತ್ತವೆ. ತಸ್ಯ=ಆ ಅದೃಶ್ಯತ್ವಾದಿ ಗುಣಗಳು, ತಸ್ಯಾಪಿ=ಮಧ್ಯಮಾಕ್ಷರವಾದ ಶ್ರೀತತ್ವ ದಲ್ಲಿಯೂ, ಸಂಭವಾತ್=ಕೂಡುವುದರಿಂದ, ತಸ್ಯಾಪಿ=ಚಂದ್ರದ್ಯಾಧಾರತ್ವಲಿಂಗಕ್ಕೂ ಕೂಡ **ಅಹಂ ಸೋಮಮಾಹನಸಂ** ಇದು ಮೊದಲಾದ ವಾಕ್ಯದಿಂದ ಆ ಅಕ್ಷರನಲ್ಲಿ ಕೂಡುವುದರಿಂದಲೂ ಅಕ್ಷರಶಬ್ದಕ್ಕೆ ಮಧ್ಯಮಾಕ್ಷರದಲ್ಲಿ ಪ್ರಸಿದ್ಧಿಯಿದ್ದುದರಿಂದಲೂ ಮಧ್ಯಮಾಕ್ಷರಕ್ಕೂ ಕೂಡ ಅಕ್ಷರನಾಮವಾಚ್ಯತ್ವವು ಪ್ರಾಪ್ತವಾಗುತ್ತದೆ.

**ವಿಶೇಷಾಂಶ ॥** (೧) ೧ನೇ ಆದಿಶಬ್ದದಿಂದ ಅಗ್ರಾಹ್ಯತ್ವಾದಿಗಳನ್ನು ಇಟ್ಟುಕೊಳ್ಳಬೇಕು. **ಗುಣಾ** ಎನ್ನುವುದರಿಂದ ಚಂದ್ರಾದಿತ್ಯಾದ್ಯಾಧಾರತ್ವಗುಣವೂ ಗ್ರಾಹ್ಯವು. ೨ನೇ ಆದಿಪದದಿಂದ **ಅಮತಂ ಮಂತ್ರವಿಜ್ಞಾತಂ ವಿಜ್ಞಾತೃ ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃ ನಾನ್ಯದತೋಽಸ್ತಿ ಮಂತೃ ನಾನ್ಯದತೋಽಸ್ತಿ ವಿಜ್ಞಾತೃ ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ** ಎನ್ನುವ ಶಿಷ್ಟವಾಕ್ಯವೂ ಹಾಗೆಯೇ **ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ** ಎನ್ನುವ ವಾಕ್ಯವೂ ಗ್ರಾಹ್ಯವು. ೩ನೇ ಆದಿಪದದಿಂದ (೧) **ಅಹಂ ತ್ವಷ್ಟಾರಮುತ ಪೂಷಣಂ ಭಗಂ** ಎನ್ನುವ ವಾಕ್ಯವೂ (೨) **ಯೇ ತ್ವಕ್ಷರಮನಿರ್ದೇಶ್ಯಂ** ಇತ್ಯಾದಿ ಗೀತಾವಾಕ್ಯವೂ **ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಂ । ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥** ಎನ್ನುವ ವಾಕ್ಯವೂ ಗ್ರಾಹ್ಯವು. (೨) ಅದೃಶ್ಯತ್ವಾಧಿಕರಣದಲ್ಲಿ ಹೇಳಿದ ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನು ವಿಷ್ಣುವಿನಿಂದ ಭಿನ್ನನೆಂದು ಆಕ್ಷೇಪಿಸಿದ್ದರಿಂದ ಅದೃಶ್ಯತ್ವಾಧಿಕರಣದಿಂದ ಈ ಅಕ್ಷರಾಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. ಅಕ್ಷರನು ವಿಷಯವು. ಚೇತನಪ್ರಕೃತಿಯೇ, ವಿಷ್ಣುವೋ ಎನ್ನುವ ಸಂಶಯವೂ ಸೂಚಿತ ವಾಯಿತು. ಯುಕ್ತಿಪೂರ್ವಕವಾಗಿ ಪೂರ್ವಪಕ್ಷವೂ ತೋರಿಸಲ್ಪಟ್ಟಿತು. (೩) **ತದ್ವಾ ಏತದಕ್ಷರಂ** ಇತ್ಯಾದಿಗಳ ಅರ್ಥವು, ತತ್=ಆಕಾಶಾಶ್ರಯವಾಗಿರುವ, ಅಕ್ಷರಂ=ಅಕ್ಷರಶಬ್ದವಾಚ್ಯನಾದ ಬ್ರಹ್ಮನು, ಏತತ್=ಈ ಲಕ್ಷಣಗಳುಳ್ಳವನು, ಅದೃಷ್ಟಂ=ಇತರರಿಂದ ಸಂಪೂರ್ಣವಾಗಿ ಕಾಣಲ್ಪಡದೆ ಇದ್ದವನು, ದ್ರಷ್ಟೃ=ತಾನು ಸರ್ವವನ್ನು ನೋಡತಕ್ಕವನು, ಈ ಅಕ್ಷರದಿಂದ ಇತರವಾದುದೂ ಸ್ವತಂತ್ರವಾಗಿ ನೋಡತಕ್ಕುದೂ ಕೇಳತಕ್ಕುದೂ ತಿಳಿಯತಕ್ಕುದೂ ಇಲ್ಲ. ಇಂತಹ ಅಕ್ಷರ ಶಬ್ದವಾಚ್ಯನಾದ ಬ್ರಹ್ಮನಲ್ಲಿ ಆಕಾಶಪದದಿಂದ ಹೇಳಲ್ಪಟ್ಟ ಶ್ರೀತತ್ವವು ಸರ್ವಾಕಾರದಿಂದಲೂ ಆಶ್ರಿತವೇ ಆಗಿದೆ. (೪) **ಏತಸ್ಯ ವಾ ಅಕ್ಷರಸ್ಯ ಆಜ್ಞಾ** ಮಾತ್ರದಿಂದ ಸೂರ್ಯಚಂದ್ರರು ವಿಶೇಷವಾಗಿ ಧೃತರಾಗಿರುತ್ತಾರೆ. (೫) ಅಹಂ=ನಾನು, ಆಹನಸಂ= ಯಜ್ಞಗಳಲ್ಲಿ ಹಿಂಡಲ್ಪಡತಕ್ಕ, ಸೋಮಂ = ಸೋಮಲತಾಭಿಮಾನಿಯಾದ ಚಂದ್ರನನ್ನು ತ್ವಷ್ಟೃ ಪೂಷಾ ಭಗಾಖ್ಯ ಸೂರ್ಯನನ್ನು ಧರಿಸುತ್ತೇನೆ, ತ್ವಷ್ಟ್ರಾದಿಗಳು ಸೂರ್ಯಪ್ರಭೇಧರು, ತತ್ವಪ್ರದೀಪ ಸತ್ತರ್ಕ ದೀಪಾವಳಿಯಲ್ಲಿ ಬೃಹದ್ಭಾಷ್ಯವನ್ನನುಸರಿಸಿ, ಸೋಮಂ=ಪಾರ್ವತೀ ಸಹಿತನಾದ, ಆಹನಸಂ=ಚೆನ್ನಾಗಿ ಸಂಹಾರಕನಾದ ರುದ್ರನನ್ನು, ಬಿಭರ್ಮಿ=ಧರಿಸುತ್ತೇನೆಂದು ವ್ಯಾಖ್ಯಾತವಾಗಿದೆ. ॥ ೧ ॥

**ಭಾಷ್ಯ ॥ ಅತೋ ಬ್ರೂತೇ ॥ ೨ ॥**

## ಸೂತ್ರ ॥ ಓಂ ಅಕ್ಷರಮಂಬರಾಂತಧೃತೇಃ ಓಂ ॥ ೧೦ ॥

**ಭಾಷ್ಯ ॥ ಏತಸ್ಮಿನ್(ನು)ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ (ಬೃ.೫,೮.೧೧.)। ಇತ್ಯಂಬರಾಂತಸ್ಯ ಸರ್ವಸ್ಯ ಧೃತೇರ್ಬ್ರಹ್ಮೈವಾಕ್ಷರಂ ॥ ೩ ॥**

**ಭಾಷ್ಯಾರ್ಥ ॥** ಹೀಗೆ ಶಂಕಾ ಬಂದರೆ ಉತ್ತರ ಕೊಡುತ್ತಾರೆ— **ಏತಸ್ಮಿನ್ ಖಲ್ವಕ್ಷರೇ** ಎನ್ನುವ ವಾಕ್ಯದಲ್ಲಿ ಅಂಬರಾಂತಧೃತೇಃ=ಆಕಾಶವೇ ಅಂತವಾಗಿಯುಳ್ಳ ಪೃಥಿವೀ ಮೊದಲಾದ ಸರ್ವವಸ್ತುಗಳ ಧಾರಕತ್ವವನ್ನು ಹೇಳಿದ್ದರಿಂದ ಅಕ್ಷರಶಬ್ದವಾಚ್ಯನು ಬ್ರಹ್ಮನೇ.

**ವಿಶೇಷಾಂಶ ॥** ಯದ್ಯಪಿ ಏತಸ್ಮಿನ್ ಎನ್ನುವ ಈ ವಾಕ್ಯದಲ್ಲಿ ಅಂಬರ (ಆಕಾಶ) ಧೃತಿ ಮಾತ್ರವು

ಹೇಳಲ್ಪಡುತ್ತದೆ. ಆಕಾಶಾಂತ ಸರ್ವ ವಸ್ತುಗಳ ಧೃತಿಯು ಹೇಳಲ್ಪಡುವುದಿಲ್ಲ. ಆದಾಗ್ಯೂ **ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾಃ ಯದಂತರಾ ದ್ಯಾವಾಪೃಥಿವೀ ಆಕಾಶ ಏವ ತದೋತಂ ಚ ಪ್ರೋತಂ ಚ** ಇತ್ಯಾದಿ ವಾಕ್ಯದಿಂದ ಆಕಾಶಶಬ್ದವಾಚ್ಯವಾದ ಚಿತ್ಪ್ರಕೃತಿಗೆ ಸರ್ವಾಧಾರಕತ್ವವನ್ನು ಹೇಳಿ ಆಮೇಲೆ ಏತಸ್ಮಿನ್ ಎನ್ನುವ ವಾಕ್ಯದಲ್ಲಿ ಅಕ್ಷರವು ಅಂತಹ ಪ್ರಕೃತಿಗೆ ಆಧಾರವೆಂದು ಹೇಳಿದ್ದರಿಂದ ಪ್ರಕೃತಿದ್ವಾರಾ ಅಕ್ಷರವು ಅಂಬರಾಂತ ಸರ್ವಾಧಾರವೇ ಆಗಿದೆ. ಆದ್ದರಿಂದ ಇಲ್ಲಿ ಹೇಳಿದ್ದು ಯುಕ್ತವೇ. ಸೂತ್ರದಲ್ಲಿ ಅಂಬರಾಂತ ಎನ್ನುವ ಪದಪ್ರಯೋಗದಿಂದ ಈ ಅರ್ಥವು ಸೂಚಿತವಾಯಿತು.

**ಪೀಠಿಕೆ ॥** ಸರ್ವಾಧಾರಕತ್ವವು ಹೇಗೆ ವಿಷ್ಣುತ್ವಸಿದ್ಧ್ಯಾಯಕವೆಂದರೆ—

**ಭಾಷ್ಯ ॥ ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ** (ಋ.೧.೧೫೪.೪.) ॥ ೪ ॥

**ಭಾಷ್ಯಾರ್ಥ ॥** ಈ ಶ್ರುತಿಯು ಜನ್ಮಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ. ಸರ್ವಾಧಾರತ್ವವು ವಿಷ್ಣುವಿನ ಲಿಂಗವೆಂದು ಶ್ರುತಿಸಿದ್ಧವಾಗಿದೆ.

**ಭಾಷ್ಯ ॥ ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ। ಏಕೋ ದೇವೋ ಬಹುಧಾ ನಿವಿಷ್ಟಃ। ಯದಾ ಭಾರಂ ತಂದ್ರಯತೇ ಸ ಭರ್ತುಂ ಪರಾಸ್ಯ ಭಾರಂ ಪುನರಸ್ತಮೇತಿ** (ತೈ.ಆ.೩.೧೪.) ॥ ೫ ॥

**ಭಾಷ್ಯಾರ್ಥ ॥** ದೇವಃ=ಪ್ರಾಣಾಭಿನ್ನನಾದ ಶ್ರೀಹರಿಯು, ಭ್ರಿಯಮಾಣಃ=ತಾನು ಜಗತ್ತಿನಿಂದ ಅಥವಾ ಜೀವನಿಂದ ಹೃದಯದಲ್ಲಿ ಧರಿಸಲ್ಪಟ್ಟವನಾಗಿ, ಬಿಭರ್ತಿ=ಧರಿಸುತ್ತಾನೆ ಮತ್ತು ಪೋಷಿಸುತ್ತಾನೆ. (ಹಾಗಾದರೆ ಜಗತ್ತಿಗೂ ಈಶ್ವರನಿಗೂ ಸಾಮ್ಯವು ಬರಬೇಕಾಗುವುದು. ಎಂದರೆ—) ಭರ್ತಾ ಸನ್= ಜಗತ್ತಿಗೆ ಮೂಲ ಭೂತನಾಗಿ ಪೋಷಿಸುವವನಾಗಿಯೇ (ಧರಿಸಲ್ಪಟ್ಟವನು. ತನ್ನ ಸ್ಥಿತಿಗಾಗಿ ಅಲ್ಲ) (ಹಾಗಾದರೆ ಶ್ರೀಹರಿಯೊಬ್ಬನಿಗೇನೇ ಭರ್ತಾ, ಭ್ರಿಯಮಾಣಃ, ಬಿಭರ್ತಿ ಎಂದು ಅನೇಕವಿಧ ವ್ಯವಹಾರ ವಿಷಯತ್ವವು ಹೇಗೆ ಎಂದರೆ) ಏಕಃ=ಒಬ್ಬನೇ ಆದಾಗ್ಯೂ, ಬಹುಧಾ=ಭರ್ತೃತ್ವಾದಿಗಳಿಂದಲೂ ಬಹುರೂಪದಿಂದಲೂ, ನಿವಿಷ್ಟಃ=ವ್ಯಾಪ್ತನಾಗಿ ಇದ್ದಾನೆ. ಅಥವಾ ಪ್ರವಿಷ್ಟನಾಗಿದ್ದಾನೆ. ಸಃ=ಆ ವಿಷ್ಣುವು, ಯದಾ=ಯಾವಾಗ, ಭಾರಂ=ಜಗದ್ಭಾರವನ್ನು ಪರಾಸ್ಯ=ಕೆಳಗಿಟ್ಟು, ಭರ್ತುಂ=ಪೋಷಿಸಲಿಕ್ಕೆ, ತಂದ್ರಯತೇ=ಆಲಸ್ಯಪಡುತ್ತಾನೋ, ಇಚ್ಛಿಸುವುದಿಲ್ಲವೋ, ಆಗ ಈ ಭಾರವು, ಅಸ್ತಮೇತಿ=ನಷ್ಟವಾಗುತ್ತದೆ.

**ಭಾಷ್ಯ ॥ ಯಸ್ಮಿನ್ನಿದಂ ಸಂ ಚ ವಿ ಚೈಧಿ ಸರ್ವಂ(ಚೈಧಿ)ಯಸ್ಮಿನ್ ದೇವಾ ಅಧಿ ವಿಶ್ವೇನಿಷೇದುಃ** (ಮಹಾನಾಮ್ನೀ ೧.೨.) ಇತ್ಯಾದಿಶ್ರುತೇಃ ॥ ೬ ॥

**ಭಾಷ್ಯಾರ್ಥ ॥** ಯಸ್ಮಿನ್=ಯಾವ ಶ್ರೀಹರಿಯಲ್ಲಿ, ಇದಂ ಸರ್ವಂ=ಈ ಎಲ್ಲಾ ಜಗತ್ತೂ, ಸಂ= ಚೆನ್ನಾಗಿ, ವಿ=ಅನೇಕ ವಿಧವಾಗಿ, ಚೈಧಿ=ಬೆಳೆಯಿತೋ, ಅಥವಾ ಬೆಳೆಯುತ್ತದೋ, ಯಸ್ಮಿನ್= ಯಾರಲ್ಲಿ ವಿಶ್ವೇ ದೇವಾಃ=ಎಲ್ಲಾ ದೇವತೆಗಳು, ಅಧಿನಿಷೇದುಃ=ಆಶ್ರಿತರಾಗಿರುತ್ತಾರೋ (ಆತನೇ ಪರಬ್ರಹ್ಮನು) ಇದು ಮೊದಲಾದ ಶ್ರುತಿಯಿಂದ.

**ವಿಶೇಷಾಂಶ** ॥ (೧) ಆದಿಶಬ್ದದಿಂದ (೧) **ಯೇನಾವೃತಂ ಖಂ ಚ ದಿವಂ ಮಹೀಂ ಚ ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ**, (೨) **ತಮೇವ ಮೃತ್ಯುಮಮೃತಂ ತಮಾಹುಸ್ತಂ ಭರ್ತಾರಂ ತಮು ಗೋಪ್ತಾರಮಾಹುಃ** ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು. ತಥಾಚ ವಿಷ್ಣುಲಿಂಗವೆಂದು ಶ್ರುತಿಸಿದ್ಧವಾದ ಸರ್ವಾಧಾರತ್ವದಿಂದ ವಿಷ್ಣುತ್ವನಿಶ್ಚಯಯವು ಆಗುತ್ತದೆ.

**ಪೀಠಿಕೆ** ॥ ವಿಷ್ಣುವಿನಂತೆ ಇತರರಿಗೂ ಸರ್ವಾಧಾರತ್ವವು ಏಕೆ ಆಗಲಾರದು? ಎಂದರೆ—

**ಭಾಷ್ಯ ॥ ಪೃಥಿವ್ಯಾದಿ ಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚ ಯತ್। ವಿಷ್ಣು ರೇಕೋ ಬಿಭರ್ತೀದಂ ನಾನ್ಯಸ್ತಸ್ಮಾತ್ ಕ್ಷಮೋ ಧೃತೌ॥ ಇತಿ(ಚ) ಸ್ಕಾಂದೇ ॥ ೧೦ ॥ ೭ ॥**

**ಭಾಷ್ಯಾರ್ಥ** ॥ ಪೃಥಿವಿಯನ್ನಾರಂಭಿಸಿ ಪ್ರಕೃತಿ ಪರ್ಯಂತವಾದ, ಅತೀತವಾದ, ಮುಂದೆ ಆಗುವ, ವರ್ತಮಾನಕಾಲದಲ್ಲಿರುವ ಯಾವ ಈ ಜಗತ್ತು ಇದೆಯೋ, ಅಂತಹ ಜಗತ್ತನ್ನು ವಿಷ್ಣುವೊಬ್ಬನೇ ಅಸಹಾಯಕನಾಗಿ ಧರಿಸುತ್ತಾನೆ. ಅದನ್ನು ಧರಿಸುವ ವಿಷಯದಲ್ಲಿ ವಿಷ್ಣುವಿನಿಂದ ಭಿನ್ನನಾದವನು ಸಮರ್ಥನು ಇಲ್ಲ. ಎಂದು ಸ್ಕಾಂದಪುರಾಣದಲ್ಲಿ (ಹೇಳಿದ್ದರಿಂದ ಸರ್ವಾಧಾರತ್ವ ಲಿಂಗವು ಅನ್ಯತ್ರ ಸಾವಕಾಶವಲ್ಲ) ॥ ೧೦ ॥

**ಪೀಠಿಕೆ** ॥ ಯುಕ್ತ್ಯಂತರದಿಂದ ವಿಷ್ಣುವಿಗೇನೇ ಅಕ್ಷರತ್ವವನ್ನು ಪ್ರತಿಪಾದಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಾ ಚ ಪ್ರಶಾಸನಾತ್ ಓಂ ॥ ೧೧ ॥

**ಭಾಷ್ಯ ॥ ಸಾ ಚ ಧೃತಿಃ ಪ್ರಶಾಸನಾದುಚ್ಯತೇ। ಏತಸ್ಯ ವಾ ಅಕ್ಷರಸ್ಯ ಪ್ರಶಾ ಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ (ಬೃ.ಶಿ.೮.೯.)। ಇತ್ಯಾದಿನಾ ॥ ೮ ॥**

**ಭಾಷ್ಯಾರ್ಥ** ॥ ಸಾ ಚಃಸರ್ವ ಧೃತಿಯೂ ಕೂಡ, ಎಲೋ ಗಾರ್ಗಿಯೇ, ಈ ಅಕ್ಷರಶಬ್ದವಾಚ್ಯನಾದ ವಿಷ್ಣುವಿನ, ಆಜ್ಞೆಯಾಗುತ್ತಿರಲು, ಆಜ್ಞಾಮಾತ್ರದಿಂದ ಸೂರ್ಯ ಚಂದ್ರರೂ ಕೂಡ ವಿಶೇಷವಾಗಿ ಧೃತರಾಗಿ ಇರುತ್ತಾರೆ. (ಹೀಗೆ ಯಾಜ್ಞವಲ್ಕ್ಯರು ತನ್ನ ಹೆಂಡತಿಯನ್ನು ಕುರಿತು ಹೇಳಿದ್ದು) ಇದು ಮೊದಲಾದ ವಾಕ್ಯದಿಂದ ಪ್ರಶಾಸನೆಯಿಂದ ಅಂದರೆ ಅಸಂಕುಚಿತ ವಿಷಯವುಳ್ಳ ಅನ್ಯಾಯತ್ತವಾಗದಿರುವ ಪ್ರಕೃಷ್ಟವಾದ ಆಜ್ಞಾಮಾತ್ರದಿಂದಲೇ ಧೃತಿಯು ಹೇಳಲ್ಪಡುತ್ತದೆ. (ಆದುದರಿಂದ ಅಕ್ಷರಶಬ್ದವಾಚ್ಯನು ಬ್ರಹ್ಮನು.)

**ಪೀಠಿಕೆ** ॥ ಸರ್ವಧೃತಿಗೆ ಕಾರಣವಾದ ಪ್ರಶಾಸನೆಯಿಂದ ಅಕ್ಷರನಿಗೆ ವಿಷ್ಣುತ್ವನಿಶ್ಚಯವು ಹೇಗೆ ಎಂದರೆ ವಿಷ್ಣುಕರ್ತೃಕವೇ ಇದು ಎನ್ನುತ್ತಾರೆ—

**ಭಾಷ್ಯ ॥ ತಚ್ಚ ಪ್ರಶಾಸನಂ ವಿಷ್ಣೋರೇವ ॥ ೯ ॥**

**ಭಾಷ್ಯಾರ್ಥ** ॥ ಸರ್ವಧೃತಿ ಕಾರಣವಾದ ಪ್ರಶಾಸನವಾದರೂ ವಿಷ್ಣುಕರ್ತೃಕವೇ ಆಗಿದೆ. (ಅನ್ಯಕರ್ತೃಕವಲ್ಲ)

**ಪೀಠಿಕೆ** ॥ ಇದು ಯಾವುದರಿಂದ ತಿಳಿಯುತ್ತದೆ ಎಂದರೆ— ತಚ್ಚ ಎಂದು ಪ್ರತಿಜ್ಞಾತವಾದ ಅರ್ಥದಲ್ಲಿ ಶ್ರುತಿಯನ್ನು ಪ್ರಮಾಣೀಕರಿಸುತ್ತಾರೆ—

**ಭಾಷ್ಯ ॥ ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ**
**(ಋ.೧.೧೬೪.೩೬.) ॥ ೧೦ ॥**

**ಭಾಷ್ಯಾರ್ಥ** ॥ ಅರ್ಧಗರ್ಭಾಃ=ಬ್ರಹ್ಮಾಂಡಾಖ್ಯ ಅತಿಸಮೃದ್ಧ ಗರ್ಭವುಳ್ಳ, ಭುವನಸ್ಯ= ಲೋಕಕ್ಕೆ, ರೇತಃ=ರತಿಪ್ರದಗಳಾದ, ಸಾರಭೂತಗಳಾದ, ಅಥವಾ ಭುವನಸ್ಯ=ಭೂಮತ್ವಾತ್ ಪೂರ್ಣನಾದುದರಿಂದ, ವನನೀಯತ್ವಾತ್=ಭಜಿಸಿಕೊಳ್ಳಲಿಕ್ಕೆ ಯೋಗ್ಯನಾದುದರಿಂದಲೂ ಭುವನಶಬ್ದ ವಾಚ್ಯನಾದ, ವಿಷ್ಣೋಃ=ಶ್ರೀಹರಿಗೆ, ರೇತಃ=ರೇತೋರೂಪಗಳಾದ, ಸಪ್ತ=ಮಹತತ್ತ್ವ, ಅಹಂಕಾರತತ್ತ್ವ, ಪಂಚ ಮಹಾಭೂತಾಖ್ಯಗಳಾದ ಬ್ರಹ್ಮಾದಿದೇವತೆಗಳು. ಭುವನಸ್ಯ ರೇತಃ=ಜಗತ್ತಿಗೆ ಸುಖವನ್ನು ಕೊಡತಕ್ಕ, ವಿಷ್ಣೋಃ =ಶ್ರೀಹರಿಯ, ಪ್ರದಿಶಾ=ಆಜ್ಞೆಯಿಂದ, ವಿಧರ್ಮಣಿ=ಅನೇಕ ವಿಧವಾದ ಜಗತ್ತನ್ನು ಧರಿಸುವ ವಿಷಯದಲ್ಲಿ ತಿಷ್ಠಂತಿ=ಇರುತ್ತಾರೆ. ವಿಶ್ವೇಶ್ವರತೀರ್ಥಿಯದಲ್ಲಿ ಆದರೂ, ವಿಷ್ಣುವಿನ ಗರ್ಭ ಸ್ಥಾನೀಯರಾದ ಏಳು ದೇವತೆಗಳು, ಜಗತ್ತಿಗೆ, ರೇತಃ=ಕಾರಣರು. ಈ ದೇವತೆಗಳು ವಿಷ್ಣುವಿನ ಆಜ್ಞೆಯಿಂದ ಅನೇಕವಿಧ ವ್ಯಾಪಾರಗಳಲ್ಲಿ ಇರುತ್ತಾರೆ. ಎಂದು ಹೇಳಿದೆ.

**ಭಾಷ್ಯ ॥ ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಂ ರವೀವಿಪತ್**
**(ಋ.೧.೧೫೫.೬.) । ಇತ್ಯಾದಿಶ್ರುತೇಃ ॥ ೧೧ ॥**

**ಭಾಷ್ಯಾರ್ಥ** ॥ (ಜನ್ಮಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.) ಇದು ಮೊದಲಾದ ಶ್ರುತಿಯಿಂದ ಪ್ರಕಾಶನವು ಕೇವಲ ವಿಷ್ಣುಕರ್ತೃಕವೆಂದು ತಿಳಿಯಲ್ಪಡುತ್ತದೆ.

**ಪೀಠಿಕೆ** ॥ ಸರ್ವಧೃತಿ ಕಾರಣವಾದ ಪ್ರಶಾಸನವು ವಿಷ್ಣುವಿಗೆ ಇದ್ದಂತೆ ಇತರರಿಗೂ ಏಕೆ ಆಗಲಾರದು ಎಂದರೆ—

**ಭಾಷ್ಯ ॥ ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ॥ ೧೨ ॥**

**ಭಾಷ್ಯಾರ್ಥ** ॥ (ಇದು ಭಾರತವಾಕ್ಯವು. ಸಭಾಪರ್ವದಲ್ಲಿದ್ದುದು.) ಶಾಸ್ತಾ = ಸರ್ವಧೃತಿ ಕಾರಣವಾದ ಆಜ್ಞಾ ಕರ್ತನು, ಏಕಃ = ಒಬ್ಬನೇ. ಎರಡನೇ ಶಾಸಕನು ಇಲ್ಲ. ಆತನು ವಿಷ್ಣುವೇ. **ಗರ್ಭೇ ಶಯಾನಂ ಪುರುಷಂ ಕೋಽಸ್ತಿ ಶಾಸ್ತಾ** ಎಂದು ಶಿಷ್ಟವಾಕ್ಯವು.

**ಭಾಷ್ಯ ॥ ಯೋ ಹೃಚ್ಛ್ರಯಸ್ತಮಹಮಿಹ ಬ್ರವೀಮಿ ॥ ೧೩ ॥**

**ಭಾಷ್ಯಾರ್ಥ** ॥ (ಇದು ಭಾಗವತ ವಾಕ್ಯವು.) ಯಾವಾತನು ಸರ್ವಧೃತಿಗೆ ಕಾರಣವಾದ ಪ್ರಶಾಸನಕ್ಕಾಗಿ ಸರ್ವರ ಹೃದಯದಲ್ಲಿ ಆವಾಸ ಮಾಡಿಕೊಂಡು ಇರುವವನೋ ಆತನನ್ನು ನಾನು ಈ ಸ್ಥಾನದಲ್ಲಿ ಹೇಳುತ್ತೇನೆ.

**ಭಾಷ್ಯ ॥ ನ ಕೇವಲಂ ಮೇ ಭವತಶ್ಚ ರಾಜನ್ ಸ ವೈ ಬಲಂ ಬಲಿನಾಂ ಚಾಪರೇಷಾಂ ।**
**ಇತ್ಯಾದೇಶ್ಚ ॥ ೧೧ ॥ ॥ ೧೪ ॥**

**ಭಾಷ್ಯಾರ್ಥ ॥** (ಹಿರಣ್ಯಕಶಿಪುವನ್ನು ಕುರಿತು ಪ್ರಹ್ಲಾದ ವಾಕ್ಯವು.) ಎಲೋ ರಾಜನೇ ನನಗೆ ಮಾತ್ರ ಬಲಪ್ರದನು ಅಲ್ಲ, ನಿನಗೂ ಕೂಡ ಆ ಶ್ರೀಹರಿಯೇ ಬಲಪ್ರದನು. ಧೃತಿಗೆ ಕಾರಣನು. ಮತ್ತೆ ಇತರರಾದ ಬಲಿಷ್ಠರಿಗೂ ಕೂಡ ಬಲಪ್ರದನು. ಇದು ಮೊದಲಾದ ಪ್ರಮಾಣದಿಂದಲೂ ಕೂಡ ಆ ಪ್ರಶಾಸನವು ವಿಷ್ಣುಕರ್ತೃಕವೇ ಎಂದು ತಿಳಿಯುತ್ತದೆ. ॥ ೧೧ ॥

**ಪೀಠಿಕೆ ॥** ಹೇತ್ವಂತರದಿಂದ ವಿಷ್ಣುವಿಗೇನೇ ಅಕ್ಷರತತ್ವವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಪಠನ ಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅನ್ಯಭಾವವ್ಯಾವೃತ್ತೇಶ್ಚ ಓಂ ॥ ೧೨ ॥

**ಸೂತ್ರಾರ್ಥ ॥** ಹಿಂದೆ ಹೇಳಿದ ಹೇತುಗಳಿಂದ ಮಾತ್ರ ಅಲ್ಲ, ಮತ್ತೆ ಇತರಗಳಾದ ಎಲ್ಲಾ ವಸ್ತುಗಳ ಸ್ವರೂಪಗಳಾದ ಪ್ರಾಕೃತ ಸ್ಥೌಲ್ಯಾದಿ ಧರ್ಮಗಳಿಗೆ ಅಭಾವವನ್ನು ಅಸ್ಥೂಲಂ ಇತ್ಯಾದಿಗಳಿಂದ ಅಕ್ಷರನಲ್ಲಿ ಹೇಳಿದ್ದರಿಂದಲೂ ಅಕ್ಷರಶಬ್ದವಾಚ್ಯನು ಬ್ರಹ್ಮನೇ.

**ಭಾಷ್ಯ ॥ ಅಸ್ಥೂಲಮನಣು (ಬೃ.೫.೮.೮.)। ಇತ್ಯಾದಿನಾ ಸ್ಥೂಲಾಣ್ವಾದೀನಾಮನ್ಯವಸ್ತುಸ್ವಭಾವಾನಾಂ ವ್ಯಾವೃತ್ತೇಶ್ಚ ॥ ೧೫ ॥**

**ಭಾಷ್ಯಾರ್ಥ ॥** ಏತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಸ್ನೇಹಮಚ್ಛಾಯಂ— ನ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ । ತತ್= ಆಕಾಶಾಶ್ರಯವಾದ, ಅಕ್ಷರಂ=ಅಕ್ಷರಶಬ್ದವಾಚ್ಯನಾದ ಬ್ರಹ್ಮನನ್ನು, ಬ್ರಾಹ್ಮಣಾಃ=ಜ್ಞಾನಿಗಳು, ಅಭಿವದಂತಿ =ಸಿದ್ಧಾಂತಪಡಿಸುತ್ತಾರೆ. ಅಸ್ಥೂಲಂ=ಪ್ರಾಕೃತ ಸ್ಥೌಲ್ಯ ರಹಿತನು, ಅನಣು=ಪ್ರಾಕೃತ ಸೂಕ್ಷ್ಮತ್ವ ರಹಿತನು. (ಪ್ರಸಿದ್ಧಸ್ಥೂಲಸೂಕ್ಷ್ಮಾದಿವೈಲಕ್ಷಣ್ಯಾಜ್ಜನಾರ್ದನಃ ಎಂದು ಬೃಹದ್ಭಾಷ್ಯದಲ್ಲಿ ಹೇಳಿದ ಪ್ರಕಾರ ಪ್ರಸಿದ್ಧ ಸ್ಥೂಲಾದಿ ವೈಲಕ್ಷಣ್ಯವು ಹೇಳಲ್ಪಡುತ್ತದೆ.) ಇದು ಮೊದಲಾದ ವಾಕ್ಯದಿಂದ ಇತರ ವಸ್ತುಗಳ ಸ್ವರೂಪಭೂತಗಳಾದ ಸ್ಥೌಲ್ಯ ಅಣುತ್ವ ಮೊದಲಾದ ಧರ್ಮಗಳಿಗೆ ಅಭಾವವನ್ನು ಹೇಳಿದ್ದರಿಂದಲೂ ಅಕ್ಷರ ಶಬ್ದವಾಚ್ಯನು ಬ್ರಹ್ಮನೇ.

**ಪೀಠಿಕೆ ॥** ಲೌಕಿಕ ಸ್ಥೌಲ್ಯಾದಿರಾಹಿತ್ಯವು ವಿಷ್ಣುತ್ವನಿಶ್ಚಾಯಕವು ಹೇಗೆ? ಅದು ವಿಷ್ಣುಧರ್ಮವೆಂದು ನಿಶ್ಚಿತವಾಗಲಿಲ್ಲ ಎಂದರೆ—

**ಭಾಷ್ಯ ॥ ಅಸ್ಥೂಲೋऽನಣುರಮಧ್ಯಮೋ ಮಧ್ಯಮೋऽವ್ಯಾಪಕೋ ವ್ಯಾಪಕೋ ಯೋऽಸೌ ಹರಿರಾದಿರನಾದಿರವಿಷ್ಣೋ ವಿಶ್ವಃ ಸಗುಣೋ ನಿರ್ಗುಣ ಇತ್ಯಾದೇರ್ವಿಷ್ಣೋರೇವ ಹಿ ತೇ ಧರ್ಮಾಃ ॥ ೧೬ ॥**

**ಭಾಷ್ಯಾರ್ಥ ॥** ಅಸ್ಥೂಲಃ=ಲೌಕಿಕ ಮಹತ್ವರಹಿತನು, ಅನಣುಃ=ಲೌಕಿಕ ಅಣುತ್ವ ರಹಿತನು, ಅಮಧ್ಯಮಃ=ಲೌಕಿಕ ಮಧ್ಯಮ ಪರಿಮಾಣರಹಿತನು, (ಪರಿಣಾಮಾದಿಗಳು ಇಲ್ಲವಾದರೆ ವಿಷ್ಣುವಿಗೆ ಅಸ್ವಭಾವತ್ವವು ಬರಬೇಕಾಗುವುದು ಎಂದು ಹೇಳಕೂಡದು. ಲೌಕಿಕ ಸ್ಥೌಲ್ಯಾದಿಗಳು ಇಲ್ಲದಿದ್ದರೂ

ಅಲೌಕಿಕ ಪರಿಮಾಣಾದಿಗಳು ಕೂಡಬಹುದು ಎನ್ನುತ್ತಾರೆ.) ಮಧ್ಯಮಃ=ಅಲೌಕಿಕ ಮಧ್ಯಮ ಪರಿಮಾಣವುಳ್ಳವನು.

**ವಿಶೇಷಾಂಶ** ॥ (೧) ಹಾಗಾದರೆ ವಿಷ್ಣುವಿಗೆ ಮಧ್ಯಮ ಪರಿಮಾಣವನ್ನು ಅಂಗೀಕರಿಸಿದರೆ ಅನಿತ್ಯತ್ವವು ಬರಬೇಕಾಗುವುದು ಎಂದು ಹೇಳಕೂಡದು. ಅನಿತ್ಯತ್ವವನ್ನು ಆಪಾದಿಸದೆ ಇರುವ ಅಲೌಕಿಕ ಮಧ್ಯಮ ಪರಿಮಾಣವನ್ನು ಅಂಗೀಕರಿಸಿರುವೆವು. ಅವ್ಯಾಪಕಃ = ಲೋಕವಿಲಕ್ಷಣವ್ಯಾಪಕನು. ವ್ಯಾಪಕಃ=ಸರ್ವದೇಶಗಳಲ್ಲಿಯೂಕಾಲಗಳಲ್ಲಿಯೂ ವ್ಯಾಪಿಸಿಕೊಂಡಿರುವವನು. ಆದಿಃ= ಕಾರಣಭೂತನು. ಅನಾದಿಃ=ಕಾರಣಶೂನ್ಯನು. ಅಥವಾ ಉತ್ಪತ್ತಿಶೂನ್ಯನು. ಅವಿಶ್ವಃ=ನ ವಿದ್ಯತೇ ವಿಶ್ವಃ ಪೂರ್ಣಃ ಯಸ್ಮಾತ್ ಎನ್ನುವ ವ್ಯುತ್ಪತ್ತಿಯಿಂದ ಇವನಿಂದ ಪೂರ್ಣವಾದ ಮತ್ತೊಂದು ವಸ್ತುವು ಇಲ್ಲದಿರುವವನು, ವಿಶ್ವಃ=ನಿರವಧಿಕಪೂರ್ಣತ್ವವುಳ್ಳವನು, ಸಗುಣಃ=ಜ್ಞಾನಾನಂದಾದಿಗುಣ ಗಳುಳ್ಳವನು, ನಿರ್ಗುಣಃ=ಸತ್ವಾದಿ ಗುಣಶೂನ್ಯನು, ಇತ್ಯಾದೇಃ=ಇದು ಮೊದಲಾದ ವಾಕ್ಯದಿಂದ, ತೇ= ಅಸ್ಥೂಲತ್ವಾದಿಗಳು, ವಿಷ್ಣೋರೇವ=ವಿಷ್ಣುವಿಗೇನೇ, ಧರ್ಮಾಃ=ಧರ್ಮಗಳು (ಎಂದು ಯಾವ ಕಾರಣದಿಂದ ನಿಶ್ಚಿತಗಳಾಗಿವೆಯೋ, ಆದಕಾರಣ ಅವುಗಳು ಅಕ್ಷರನಿಗೆ ವಿಷ್ಣುತ್ವನಿಶ್ಚಾಯಕಗಳು ಆಗುತ್ತವೆ.) (೨) ತತ್ವಪ್ರದೀಪದಲ್ಲಿ ಆದರೂ ಅಮಧ್ಯಮಃ = ಮಧ್ಯಮಪರಿಮಾಣನಿಯತಿವರ್ಜಿತನು, **ವ್ಯಾಪ್ತೋಽಣುರ್ಮಧ್ಯಮಸ್ತಥಾ** ಎಂದು ಹೇಳಿದೆ. (೩) ಆದಿಶಬ್ದದಿಂದ **ಅಣೋರಣೀಯಾನ್ ಮಹತೋ ಮಹೀಯಾನ್** ಎನ್ನುವ ಕಠಶ್ರುತಿಯನ್ನು ಇಟ್ಟುಕೊಳ್ಳಬೇಕು. (೪) ಆದಾಗ್ಯೂ ಅಸ್ಥೂಲತ್ವಾದಿ ಧರ್ಮಗಳು ಅಪ್ರಾಕೃತ ವಿಗ್ರಹವುಳ್ಳ ಮಧ್ಯಮಾಕ್ಷರವಾದ ಶ್ರೀತತ್ವದಲ್ಲಿಯೂ ಇದ್ದುದರಿಂದ ವಿಷ್ಣುವಿನ ಧರ್ಮಗಳೇ ಎನ್ನುವುದು ಹೇಗೆ ಎಂದರೆ- ಲಕ್ಷ್ಮಿಯಲ್ಲಿ ಆ ಧರ್ಮಗಳು ಶ್ರೀಹರಿಯ ಅಧೀನಗಳಾಗಿ ಇರುತ್ತವೆ. ಶ್ರೀವಿಷ್ಣುವಿನಲ್ಲಿ ಅನ್ಯಾನಪೇಕ್ಷಗಳಾದ ಧರ್ಮಗಳೇ ಹೇತುವೆಂದು ವಿವಕ್ಷಿತಗಳಾಗಿವೆ.

**ಪೀಠಿಕೆ** ॥ ಹಾಗಾದರೆ ಲೌಕಿಕ ಪರಿಮಾಣಾದಿರಾಹಿತ್ಯವು ವಿಷ್ಣುವಿಗೆ ಹೇಗೆ ಯುಕ್ತವಾಗುವುದು. ಲೋಕದಲ್ಲಿ ಸರ್ವಪದಾರ್ಥಗಳಲ್ಲಿ ಪ್ರಾಕೃತ ಪರಿಮಾಣವೇ ಕಂಡದೆ ಎಂದರೆ—

**ಭಾಷ್ಯ ॥ ಅಸ್ಥೂಲೋಽನಣುರೂಪೋಽಸಾವ(ಸೌ ಸ)ವಿಶ್ವೋ ವಿಶ್ವ ಏವ ಚ । ವಿರುದ್ಧಧರ್ಮರೂಪೋಽಸಾವೈಶ್ವರ್ಯಾತ್ಪುರುಷೋತ್ತಮಃ ॥ ಇತ್ಯಾದಿ(ಇತಿ ಚ) ಬ್ರಾಹ್ಮೇ ॥ ೧೨ ॥ ಅಧಿ. ೩ ॥ ॥ ೧೮ ॥**

**ಭಾಷ್ಯಾರ್ಥ** ॥ ಈ ಪುರುಷೋತ್ತಮನು, ಅಸ್ಥೂಲಃ ಅನಣುರೂಪಃ = ಪ್ರಾಕೃತ ಲೌಕಿಕ ಸ್ಥೂಲ ಅಣುತ್ವರೂಪ ಧರ್ಮರಹಿತವಾದ ಶರೀರವುಳ್ಳವನಾಗುತ್ತಾನೆ. ಅಸೌ = ಈತನು, ಅವಿಶ್ವಃ ವಿಶ್ವ ಏವ ಚ ಲೋಕಬಹಿರ್ಭೂತನೂ ಲೋಕಾಂತರ್ಗತನೂ ಆಗುತ್ತಾನೆ, ಅಸೌ = ಈತನು, ಐಶ್ವರ್ಯಾತ್ = ಅಚಿಂತ್ಯ ಐಶ್ವರ್ಯಸಾಮರ್ಥ್ಯದಿಂದ ವಿರುದ್ಧಧರ್ಮರೂಪಶ್ಚ = ಲೋಕದಲ್ಲಿ ಪರಸ್ಪರ ವಿರುದ್ಧಗಳಾದ ಸ್ಥೂಲತ್ವ ಅಣುತ್ವ ಮೊದಲಾದ ಧರ್ಮಗಳು ಯಾರಿಗೆ ಸ್ವರೂಪಭೂತಗಳೋ, ಅಂತಹವನು. ಹೀಗೆ ಬ್ರಾಹ್ಮಪುರಾಣದಲ್ಲಿ ಹೇಳಿದ್ದರಿಂದ ಆ ಲೌಕಿಕಸ್ಥೌಲ್ಯಾದಿರಾಹಿತ್ಯ ಧರ್ಮಗಳು ವಿಷ್ಣುವಿಗೆ ಯುಕ್ತಗಳಾಗಿವೆ.

**ವಿಶೇಷಾಂಶ** ॥ **ಐಶ್ವರ್ಯಾದೇವ** ಎಂದು ಹೇಳಿದ್ದರಿಂದ ಬೇರೆ ಉಪಪಾದನವನ್ನು ಹುಡುಕಬೇಕಾಗಿಲ್ಲ ॥ ೧೨ ॥

## ಮಾಯಾವಾದಿರೀತ್ಯಾ

**ವಿಚಾರ** ॥ (೧) **ಏತದ್ವೈತದಕ್ಷರಂ** ಎನ್ನುವಲ್ಲಿ ಶ್ರುತನಾದ ಅಕ್ಷರನು ವರ್ಣಗಳೋ ಬ್ರಹ್ಮನೋ ಎಂದು ಸಂದೇಹ ಬಂದರೆ— **ಅಕ್ಷರಸಮಾಮ್ನಾಯಃ** ಇತ್ಯಾದಿಗಳಲ್ಲಿ ವರ್ಣಗಳಲ್ಲಿ ಅಕ್ಷರಶಬ್ದಕ್ಕೆ ರೂಢಿಯಿರುವುದು. ಬ್ರಹ್ಮನಲ್ಲಿ ಅವಯವಪ್ರಸಿದ್ಧಿಯಿಂದ ಯೌಗಿಕವು. ಅವಯವಪ್ರಸಿದ್ಧಿಯಿಂದ ಸಮುದಾಯಪ್ರಸಿದ್ಧಿರೂಪವಾದ ರೂಢಿಯು ಬಲಿಷ್ಠವು. ವರ್ಣಗಳಲ್ಲಿ ಆಕಾಶಕ್ಕೆ ಓತತ್ವಾದಿಗಳು ಕೂಡಲಾರವು ಎನ್ನಕೂಡದು. ಎಲ್ಲಾ ಅಭಿಧೇಯವೂ **ಗೌರಯಂ ವೃಕ್ಷೋಽಯಂ** ಎಂದು ನಾಮಧೇಯ ತಾದಾತ್ಮ್ಯದಿಂದಲೇ ಪ್ರತೀತವಾಗುವುದರಿಂದ ವರ್ಣಮಾತ್ರವೇ ಅಕ್ಷರವು ಎಂದು ಪೂರ್ವಪಕ್ಷವು. ಬ್ರಹ್ಮವಿಕಾರವಾದ, ಭೂತಾಕಾಶಾಂತವಾದ ಪೃಥಿವ್ಯಾದಿಗಳೆಲ್ಲವನ್ನು ಧರಿಸುವುದರಿಂದಲೂ ನ ಕ್ಷರತಿ ಇತ್ಯಾದಿವ್ಯುತ್ಪತ್ತಿಯು ಕೂಡುವುದರಿಂದಲೂ ನಿರ್ವಿಶೇಷನಾದ ಬ್ರಹ್ಮನೇ ಅಕ್ಷರನು. ಅಂದರೆ— ಸರ್ವವೂ ಬ್ರಹ್ಮವಿಕಾರವಾದುದರಿಂದ ಬ್ರಹ್ಮನಲ್ಲಿಯೇ ಆಕಾಶಾದಿಗಳಿಗೆ ಓತತ್ವವು ಯುಕ್ತವು. ವರ್ಣಗಳಲ್ಲಿ ಅಲ್ಲ ನಾಮಧೇಯಾತ್ಮಕವೇ ರೂಪಧೇಯವು ಎಂದು ಹೇಳಿದ್ದರಿಂದ ವರ್ಣಗಳಲ್ಲಿಯೂ ಓತತ್ವವು ಯುಕ್ತವು ಎಂದು ಹೇಳಕೂಡದು. ಸ್ವರೂಪಭೇದವಿದ್ದುದರಿಂದಲೂ ಉಪಾಯ ಭೇದದಿಂದಲೂ ಅರ್ಥಕ್ರಿಯೆಗಳಿಗೆ ಭೇದವಿದ್ದುದರಿಂದಲೂ ನಾಮಧೇಯ ರೂಪಧೇಯಗಳಿಗೆ ಭೇದವು. ಆದಕಾರಣ ವರ್ಣಗಳಲ್ಲಿ ಆಕಾಶಾದಿಗಳಿಗೆ ಓತತ್ವಾದಿಗಳು ಕೂಡದೆ ಇರುವುದರಿಂದ ಬ್ರಹ್ಮನೇ ಅಕ್ಷರನು ಎಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ಏಕೆಂದರೆ— ಗೌಃ ಇತ್ಯಾದಿಗಳಲ್ಲಿ ಗೋತ್ವಾದಿಜಾತಿತಾದಾತ್ಮ್ಯವೂ ಗೋಶಬ್ದಾದಿವಾಚ್ಯತ್ವವೂ ತೋರಿದರೂ **ಕಸ್ಮಿನ್ನು ಖಲು ಆಕಾಶ ಓತಶ್ಚ ಪ್ರೋತಶ್ಚ** ಇತ್ಯಾದಿ ಶ್ರುತ್ಯುಕ್ತವಾದ ಆಕಾಶಾಶ್ರಯತ್ವವು ತೋರದಿರುವುದರಿಂದಲೂ ವರ್ಣಗಳಲ್ಲಿ ದ್ರಷ್ಟೃತ್ವಾದಿಗಳು ತೋರದಿರುವುದರಿಂದಲೂ ಪೂರ್ವಪಕ್ಷವೇ ಉಂಟಾಗಲಾರದು. ಸಿದ್ಧಾಂತವೂ ಅಯುಕ್ತವು. **ಆಕಾಶ ಏವ ತದೋತಂ ಚ ಪ್ರೋತಂ ಚ** ಎನ್ನುವ ಪೂರ್ವವಾಕ್ಯದಲ್ಲಿ ಕಾಲತ್ರಯದಲ್ಲಿರತಕ್ಕ ವಸ್ತುವನ್ನು ಆಶ್ರಯಿಸಿಕೊಂಡಿದೆ ಎಂದು ಉಕ್ತವಾದ ಆಕಾಶಕ್ಕೆ ಅನಿತ್ಯಭೂತವಾದ ಆಕಾಶತ್ವಕ್ಕೂ, ಹಾಗೆಯೇ ಅವಾಚ್ಯನಾದ ನಿರ್ವಿಶೇಷನಾದ ಬ್ರಹ್ಮನಲ್ಲಿನ ಕ್ಷರತಿ ಎಂದು ನೀನು ಹೇಳಿದ ಯೋಗವೂ ಹಾಗೆಯೇ **ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ** ಎಂದು ಶ್ರುತ್ಯುಕ್ತವಾದ ವಾಚ್ಯತ್ವವೂ ದ್ರಷ್ಟೃತ್ವಾದಿಗಳೂ ಕೂಡಲಾರವು. (೨) ಮತ್ತು ಒಂದನೇ ಸೂತ್ರದಲ್ಲಿ ಧೃತಿಪದವೂ ಅಯುಕ್ತವು. ಅದ್ವೈತಿಗಳ ಮತದಲ್ಲಿ ಭ್ರಮಕ್ಕೆ ಅಧಿಷ್ಠಾನವಾದುದರಿಂದ ಇತರವಾದ ಧಾರಣವೇ ಇಲ್ಲ. ಭ್ರಮಾಧಿಷ್ಠಾನತ್ವವು **ಆಕಾಶ ಏವ ತದೋತಂ** ಇತ್ಯಾದಿ ಪ್ರಕ್ರಮಕ್ಕೆ ಅನನುಗುಣವಾಗಿದೆ. ಆಕಾಶದಲ್ಲಿ ತ್ರೈಕಾಲಿಕ ವಸ್ತುವು ಅಧ್ಯಸ್ತವಲ್ಲ (೩) **ಸಾ ಚ ಪ್ರಶಾಸನಾತ್** ಎನ್ನುವ ಸೂತ್ರದಲ್ಲಿ ಹೇಳಿದ ಪ್ರಶಾಸನವೂ ಅಯುಕ್ತವು. ಏಕೆಂದರೆ— **ಅಧ್ಯಸ್ತಸ್ಯಾಂಬರಾಂತಸ್ಯ ಹ್ಯಧಿಷ್ಠಾನಾತ್ಮಿಕಾ ಚಿತಿಃ। ನ ಶಾಸ್ತ್ರೀ ನ ಹಿ ಶುಕ್ತ್ಯಾದಿ ಶಾಸ್ತಿ ರೂಪ್ಯಾದಿಕಂ ಕ್ವಚಿತ್॥** ಇಲ್ಲಿ ಸವಿಶೇಷ ಬ್ರಹ್ಮನು ಪ್ರತಿಪಾದ್ಯನಲ್ಲ. ನಿರ್ವಿಶೇಷನಲ್ಲಿ ವ್ಯಾವಹಾರಿಕ ಶಾಸ್ತೃತ್ವವೂ ಇಲ್ಲ. ಪ್ರಾತಿಭಾಸಿಕವಾದ ಶಾಸನವು ಪ್ರಧಾನದಲ್ಲಿಯೂ ಇದೆ. ಇದೇ ರೀತಿಯಾಗಿ ಇತರ

ಸೂತ್ರಾರ್ಥವೂ ಅಯುಕ್ತವು. ಈ ಅಧಿಕರಣದಲ್ಲಿಯೂ ಅದ್ವೈತಿಗಳ ಮತದಲ್ಲಿ **ಅನ್ಯಭಾವವ್ಯಾವೃತ್ತೇಃ** ಎನ್ನುವುದರಿಂದ ಜೀವರಿಂದ ಭೇದವನ್ನು ಹೇಳಿದ್ದರಿಂದ ಅಭೇದನಿಷೇಧವು ಸ್ಪಷ್ಟವೇ ಆಗಿದೆ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ॥ ಅಸ್ಥೂಲಮನಣು** ಇತ್ಯಾದಿಗಳಿಂದ ಹೇಳಲ್ಪಟ್ಟ ಅಕ್ಷರವು ಪ್ರಧಾನ ಜೀವರಲ್ಲಿ ಒಂದೋ, ಅಥವಾ ಬ್ರಹ್ಮನೋ ಎಂದು ಸಂದೇಹ ಬಂದರೆ ಅಕ್ಷರಶಬ್ದಕ್ಕೆ ವರ್ಣಗಳಲ್ಲಿ ರೂಢಿಯು ಕೂಡಿದಾಗ್ಯೂ **ಅಹ್ರಸ್ವಂ ಅದೀರ್ಘಂ** ಇತ್ಯಾದಿ ನಿಷೇಧವು ಕೂಡದೆ ಇರುವುದರಿಂದ ವರ್ಣಗಳ ವಿಷಯದಲ್ಲಿ ಶಂಕೆಯೇ ಬರಲಾರದು. ಪ್ರಧಾನವು ಸರ್ವವಿಕಾರಗಳಿಗೂ ಆಸ್ಪದವಾಗಿರುವುದರಿಂದ ಆಕಾಶ ಪೃಥಿವ್ಯಾದಿಗಳ ಧಾರಣವು ಕೂಡುವುದರಿಂದ ಪ್ರಧಾನವು. ಅಥವಾ ಚೇತನಕ್ಕೇನೇ ಅಚೇತನ ವಸ್ತುವಿನ ಆಧಾರತ್ವವು ಕೂಡುವುದರಿಂದ ಜೀವನು ಎಂದು ರಾಮಾನುಜಾಚಾರ್ಯರು ಪೂರ್ವಪಕ್ಷ ಮಾಡಿಕೊಂಡು ಪರಮಾತ್ಮನೇ ಅಕ್ಷರನು ಎಂದು ಸಿದ್ಧಾಂತ ಮಾಡಿರುವರು. ಹೇಗೆಂದರೆ— ಕಾಲತ್ರಯದಲ್ಲಿರತಕ್ಕ ಸಕಲ ವಸ್ತುಗಳಿಗೂ ಆಧಾರವಾಗಿ ಹೇಳಲ್ಪಟ್ಟದ್ದಕ್ಕೆ ಭೂತಾಕಾಶತ್ವವು ಕೂಡದೆ ಇರುವುದರಿಂದ ಅವ್ಯಾಕೃತಾಖ್ಯವಾದ ಪ್ರಧಾನ ಪರತ್ವವಿದ್ದುದರಿಂದ **ಅಕ್ಷರೇ ಗಾರ್ಗ್ಯಾಕಾಶ ಓತಃ** ಎಂದು ಹೇಳಿದ ಪ್ರಧಾನಾಧಾರತ್ವವು ಪ್ರಧಾನದಲ್ಲಿ ಕೂಡದೆ ಇರುವುದರಿಂದ ಅಕ್ಷರಶಬ್ದವಾಚ್ಯವು ಪ್ರಧಾನವಲ್ಲ. ೨ನೇ ಸೂತ್ರದಲ್ಲಿ ಹೇಳಿದ ಪ್ರಶಾಸನವು ಜೀವನಲ್ಲಿ ಕೂಡದೆ ಇರುವುದರಿಂದ ಜೀವ ನೂ ಅಕ್ಷರಶಬ್ದವಾಚ್ಯನು ಆಗಲಾರನು. ಪರಮಾತ್ಮನಿಂದ ಅನ್ಯತ್ವಕ್ಕೆ **ಅದೃಷ್ಟಂ ದ್ರಷ್ಟೃ** ಇತ್ಯಾದಿಗಳಿಂದ ಅಕ್ಷರನಿಗೆ ವ್ಯಾವೃತ್ತಿಯಿದ್ದಪ್ರಯುಕ್ತವೂ ಪರಮಾತ್ಮನೇ ಅಕ್ಷರನು ಎಂದು ಸಿದ್ಧಾಂತವೆಂದು ಹೇಳಿರುವರು. ಇದೂ ಅಯುಕ್ತವು. ಜಡಭೂತವಾದ ಪ್ರಧಾನಕ್ಕೆ ಶಾಸನ ದ್ರಷ್ಟೃತ್ವಾದಿಗಳೂ ಕೂಡದೆ ಇರುವುದರಿಂದ ಪೂರ್ವಪಕ್ಷವೇ ಹುಟ್ಟದಿರುವುದರಿಂದ ಜಡಭೂತವಾದ ಪ್ರಧಾನವೇ ಅಕ್ಷರವೆಂದು ಪೂರ್ವಪಕ್ಷ ಮಾಡಿದ್ದೂ ಅಯುಕ್ತವು. ಮತ್ತೂ ಶ್ರುತಿಯಲ್ಲಿ ಆಕಾಶಶಬ್ದವು ಪ್ರಧಾನಪರವೆಂದು ಇಟ್ಟುಕೊಂಡು ಸೂತ್ರದಲ್ಲಿದ್ದ ಅಂಬರಶಬ್ದವು ಭೂತಾಕಾಶಪರವು. ತಥಾಚ **ಅಂಬರಸ್ಯ ಅಂತಃ ಅವಧಿಃ** ಕಾರಣವೆಂದು ಇಟ್ಟುಕೊಂಡು ಅಂಬರಾಂತಪದವು ಪ್ರಧಾನಪರವೆಂದು ಹೇಳಿರುವರು. ಅದೂ ಅಯುಕ್ತವು. ಸೂತ್ರಕ್ಕೆ ಶ್ರುತ್ಯನುಸಾ ರಿತ್ವವೇ ನ್ಯಾಯವಾದುದು. ಅಂತಃಪದವಾದರೂ **ಅಂಬರಂ ಅಂತೋ ಯಸ್ಯ** ಎನ್ನುವ ವ್ಯುತ್ಪತ್ತಿಯಿಂದ ಪೃಥಿವ್ಯಾದಿ ಪರವಾಗಿ ಪೃಥಿವ್ಯಾದಿಗಳಿಗೂ ಪ್ರಕೃತಿದ್ವಾರಾ ಬ್ರಹ್ಮನೇ ಆಶ್ರಯನು ಎಂದು ಎಂದು ಸೂಚಿಸುವುದಕ್ಕಾಗಿ ಕೊಟ್ಟದ್ದು

## ಅಧಿಕರಣ ಸಾರಾಂಶ

ಕಾಣ್ವಶಾಖೆಯಲ್ಲಿ ಐದನೇ ಅಧ್ಯಾಯದಲ್ಲಿ **ಏತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯ ಸ್ಥೂಲಮನಣ್ವಹ್ರಸ್ವಂ** ಇತ್ಯಾದಿಗಳಿಂದ ಶ್ರುತವಾದ ಅಕ್ಷರವು ಚಿತ್ಪ್ರಕೃತಿಯೋ ಅಥವಾ ವಿಷ್ಣುವೋ ಎಂದು ಸಂದೇಹವು. **ಯೇ ತ್ವಕ್ಷರಮನಿರ್ದೇಶ್ಯಂ** ಇತ್ಯಾದಿಗಳಲ್ಲಿ ಅಕ್ಷರಶಬ್ದಕ್ಕೆ ಶ್ರೀತತ್ವದಲ್ಲಿ ಪ್ರಯೋಗವಿದ್ದುದ ರಿಂದಲೂ, ಅವಿನಾಶಿತ್ವರೂಪವಾದ ನಿಮಿತ್ತವಿದ್ದುದರಿಂದಲೂ, **ಅಹಂ ಸೋಮಮಾಹನಸಂ ಬಿಭರ್ಮಿ** ಎನ್ನುವ ಶ್ರುತ್ಯಂತರದಲ್ಲಿ ಶ್ರೀತತ್ವಧರ್ಮವಾಗಿ ಶ್ರುತವಾದ ಚಂದ್ರಾದ್ಯಾಧಾರತ್ವವು

**ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ** ಎಂದು ಶ್ರುತವಾದುದರಿಂದಲೂ **ಅದೃಷ್ಟಂ ದ್ರಷ್ಟೃಶ್ರುತಂ** ಇತ್ಯಾದಿಗಳಿಂದುಕ್ತವಾದ ಅದೃಶ್ಯತ್ವಾದಿಗಳಿಗೆ **ಯೇ ತ್ವಕ್ಷರಂ** ಇತ್ಯಾದಿ ಸ್ಮೃತಿಗಳಿಂದ ಶ್ರೀತತ್ವದಲ್ಲಿ ಕೂಡುವುದರಿಂದಲೂ ಅಕ್ಷರಶಬ್ದವಾಚ್ಯಳು ಚಿತ್ಪ್ರಕೃತಿಯೇ **ನ ತದಶ್ನಾತಿ ಕಿಂಚನ** ಎಂದು ಹೇಳಿದ ಅನಶನವು **ಅತ್ತಾ ಚರಾಚರಗ್ರಹಣಾತ್** ಎನ್ನುವಲ್ಲಿ ಅತ್ತನಾಗಿ ಹೇಳಲ್ಪಟ್ಟ ವಿಷ್ಣುವಿನಲ್ಲಿ ಕೂಡಲಾರದು. ಆದಕಾರಣ ಚಿತ್ಪ್ರಕೃತಿಯೇ ಎಂದು ಪೂರ್ವಪಕ್ಷವು. **ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ, ಆಕಾಶ ಏವ ತದೋತಂ** ಎಂದು ಆಕಾಶಾಖ್ಯ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ **ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ** ಎಂದು ಆಕಾಶಾಧಾರಕತ್ವಕ್ಕೇನೇ **ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ** ಇತ್ಯಾದಿಗಳಿಂದ ಹೇಳಲ್ಪಟ್ಟ ಸರ್ವಶಾಸನ ಲಿಂಗವೂ **ಅಸ್ಥೂಲಮನಣು** ಇತ್ಯಾದಿಗಳಿಂದ ಹೇಳಲ್ಪಟ್ಟ ಇತರಾಪೇಕ್ಷೆಯಿಲ್ಲದಿರುವ ಲಿಂಗವಾಗಲೀ **ಏಕೋ ದಾಧಾರ ಭುವನಾನಿ, ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ, ಅಸ್ಥೂಲೋಽನಣುರಮಧ್ಯಮೋ ಮಧ್ಯಮಃ** ಇದು ಮೊದಲಾದ ಶ್ರುತಿಗಳಿಂದ ವಿಷ್ಣುವಿನಲ್ಲಿ ಮಾತ್ರ ಇರತಕ್ಕವುಗಳು. **ಅನಿತ್ಯತ್ವಂ ದೇಹಹಾನಿರ್ದುಃಖ ಪ್ರಾಪ್ತಿರಪೂರ್ಣತಾ** ಇತ್ಯಾದಿ ಶ್ರುತಿಯಿಂದ ನಾಲ್ಕು ವಿಧ ನಾಶಗಳಿಲ್ಲದಿರುವ ವಿಷ್ಣುವಿನಲ್ಲಿಯೇ ಅಕ್ಷರಪದಪ್ರವೃತ್ತಿ ನಿಮಿತ್ತವಾದ ಪೌಷ್ಕಲ್ಯವು ಇದ್ದುದರಿಂದಲೂ **ತದಕ್ಷರಂ ತಸ್ಮಾದಕ್ಷರಂ** ಎಂದು ಪ್ರಯೋಗವಿದ್ದುದರಿಂದಲೂ ಅಕ್ಷರಶಬ್ದವಾಚ್ಯನು ವಿಷ್ಣುವೇ ಎಂದು ಸಿದ್ಧಾಂತವು. **ಅನಶ್ನನ್ನಃ** ಎನ್ನುವ ಅನಶನಶ್ರುತಿಯು ಜೀವನ ಸ್ವಭಾವಭೂತವಾದ ಉಪಜೀವನಾರ್ಥಕವಾದ ಅಶನವನ್ನು ನಿಷೇಧಮಾಡತಕ್ಕುದು. ಅಚಿಂತ್ಯಶಕ್ತಿಯಿದ್ದುದರಿಂದ ಅಣುತ್ವಮಹತ್ವಾದಿಗಳೂ ಸಂಗತಗಳಾಗಿವೆ. **ದರ್ವೀ ಹೋಮಾ ಯಥೈವಾನ್ಯೇ ಪ್ರಕೃತೇರ್ವಿಕೃತೇರಪಿ। ಈಶ್ವರೋಽಪಿ ತಥೈವಾನ್ಯೋ ಮಹತೋಽಪ್ಯಣುತೋಽಪಿ ಹಿ ॥** ದರ್ವೀಹೋಮಗಳು ಪ್ರಕೃತಿಯಿಂದಲೂ ವಿಕೃತಿಯಿಂದಲೂ ಹೇಗೆ ಭಿನ್ನಗಳೋ ಹಾಗೆಯೇ ಅಪ್ರಾಕೃತನಾದ ಬ್ರಹ್ಮನೂ ಪ್ರಾಕೃತ ಮಹತ್ಪರಿಮಾಣ ಅಣುಪರಿಮಾಣರಹಿತನು. **ಯಥೈಕಸ್ಯೈವ ದಧ್ಯಾದೇಃ ಕ್ರತ್ವರ್ಥಪುರುಷಾರ್ಥತೇ। ಅಣೀಯಸ್ತ್ವಮಹೀಯಸ್ತ್ವೇ ತಥೈಕಸ್ಯೈವಹೀಶಿತುಃ ॥** ದಧ್ಯಾದಿಗಳಿಗೆ ಕ್ರತ್ವರ್ಥತ್ವ ಪುರುಷಾರ್ಥತ್ವಗಳು ಇದ್ದಂತೆಯೇ ಶ್ರೀಹರಿಗೆ ಅಣುತ್ವ ಮಹತ್ವಗಳು ಸಂಗತಗಳು. **ಅಣೋರಣೀಯಾನ್ ಮಹತೋ ಮಹೀಯಾನ್** ಎನ್ನುವ ಆಗಮವೂ ಇದೆ. ॥ ಅಧಿ.೩॥

**ಅಕ್ಷರಾಧಿಕರಣವು ಸಮಾಪ್ತವಾಯಿತು.**

## ೪ ಸದಧಿಕರಣವು

**ಪೀಠಿಕೆ॥** ಈ ಅಧಿಕರಣದಲ್ಲಿ ಅನೇಕ ಪ್ರಕರಣಾತ್ಮಕವಾದ ಸದೇವ ಇತ್ಯಾದಿ ಸ್ಥಾನವನ್ನು ಸಮನ್ವಯಿಸುತ್ತಾರೆ. ಶ್ರುತ್ಯಾದಿಸಂಗತಿಯನ್ನು ವಿಷಯವಾಕ್ಯವನ್ನುದಾಹರಿಸಿ ವಿಷಯಾದಿಗಳನ್ನು ಸೂಚಿಸುತ್ತಾರೆ—

**ಭಾಷ್ಯ ॥ ಸದೇವ ಸೋಮ್ಯೇದಮಗ್ರ ಆಸೀತ್** (ಛಾ.ಉ.೬.೨.)। **ಇತ್ಯಾದಿನಾ ಸತಃ ಸ್ರಷ್ಟೃತ್ವಮುಚ್ಯತೇ** ॥ ೧ ॥

ಭಾಷ್ಯಾರ್ಥ ॥ ಭಕ್ತಿಜ್ಞಾನರೂಪಸೋಮಾರ್ಹನಾದ ಶ್ವೇತಕೇತುವೇ ಈ ಜಗತ್ತನ್ನು ಸೃಷ್ಟಿಸುವುದಕ್ಕಿಂತ ಮೊದಲು ಅಂದರೆ ಪ್ರಲಯಕಾಲದಲ್ಲಿ ಸಚ್ಛಬ್ದದಿಂದುಕ್ತನಾದ ಬ್ರಹ್ಮನೇ ಸ್ವತಂತ್ರನಾಗಿ ಇದ್ದನು. ಇದು ಮೊದಲಾದ ಛಾಂದೋಗ್ಯವಾಕ್ಯದಿಂದ ಸತ್ಪದಾರ್ಥಕ್ಕೇನೇ ಸ್ರಷ್ಟೃತ್ವವು (ಅನನ್ಯಾಧೀನ ಕಾರಣತ್ವವು) ಹೇಳಲ್ಪಡುತ್ತದೆ.

ವಿಶೇಷಾಂಶ ॥ (೧) ಮತ್ತು ಆದಿಶಬ್ದದಿಂದ ಸಂಗ್ರಹೀತಗಳಾದ ೧ ಏಕಮೇವಾದ್ವಿತೀಯಂ ೨ ತತ್ತೇಜೋSಸೃಜತ ೩ ಸನ್ಮೂಲಾಃ ಸೋಮ್ಯೇಮಾಃ ೪ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಇತ್ಯಾದಿ ಶ್ರುತಿಗಳಿಂದ ಉಕ್ತಗಳಾದ ಸರ್ವೋತ್ತಮತ್ವ ಸರ್ವಾಧಾರತ್ವ ಸುಪ್ತಿಗಮ್ಯತ್ವಾದಿಗಳೂ ಕೂಡ ಸತ್ ಶಬ್ದವಾಚ್ಯವಾದ ವಸ್ತುವಿನಲ್ಲಿ ಕಾಣುತ್ತವೆ. (೨) ಜನ್ಮಾಧಿಕರಣದಲ್ಲಿ ಹೇಳಿದ ಕಾರಣತ್ವವು ವಿಷ್ಣುವಿನಿಂದ ಇತರವಾದ ಪ್ರಧಾನದಲ್ಲಿದೆ ಎಂದು ಹೇಳಿದ್ದರಿಂದ ಜನ್ಮಾಧಿಕರಣದಿಂದ ಇದಕ್ಕೆ ಆಕ್ಷೇಪಿಕೀ ಸಂಗತಿಯು. ಸತ್‌ಶಬ್ದವಾಚ್ಯವಾದ ವಸ್ತುವು ವಿಷಯವು.

ಪೀಠಿಕೆ ॥ ಸಯುಕ್ತಿಕವಾಗಿ ಪೂರ್ವಪಕ್ಷಿಸುತ್ತಾರೆ.

**ಭಾಷ್ಯ ॥ ತಚ್ಚ ಸತ್। ★ ಬಹು ಸ್ಯಾಂ ಪ್ರಜಾಯೇಯ (ಛಾ.ಉ.೬.೨.)। ಇತಿ ಪರಿಣಾಮ ಪ್ರತೀತೇರ್ನ ವಿಷ್ಣುಃ ॥ ೨ ॥**

ಭಾಷ್ಯಾರ್ಥ ॥ ಛಾಂದೋಗ್ಯದಲ್ಲಿ ಶ್ರುತವಾದ ಸತ್ ಶಬ್ದ ವಾಚ್ಯವಾದುದು ಪ್ರಧಾನವೇ ಆಗಬೇಕು ವಿಷ್ಣುವಲ್ಲ. ಏಕೆಂದರೆ ಆ ಸತ್ ಶಬ್ದ ವಾಚ್ಯವಾದುದಕ್ಕೆ ಬಹು ಸ್ಯಾಂ ಪ್ರಜಾಯೇಯ ಎಂದು ಬಹುಭಾವಾಖ್ಯ ಪರಿಣಾಮರೂಪವಾದ ವಿಕಾರವು ತೋರುವುದರಿಂದ.

ಪೀಠಿಕೆ ॥ ವಿಕಾರಿತ್ವವು ತೋರಿದಾಗ್ಯೂ ವಿಷ್ಣುವು ಏಕೆ ಆಗುವುದಿಲ್ಲವೆಂದರೆ—

**ಭಾಷ್ಯ ॥ ಸ ಹಿ ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ ಇತ್ಯಾದಿನಾSವಿಕಾರಃ ಪ್ರಸಿದ್ಧಃ ಇತಿ ॥ ೩ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಆ ವಿಷ್ಣುವು ಯಾವಾಗಲೂ ವಿಕಾರವಿಲ್ಲದಿರುವವನು ಸದಾ ಶುದ್ಧನು (ನಿರ್ಮಲನು) ನಿತ್ಯನು ವ್ಯಾಪ್ತನು ಸರ್ವಪಾಪಪರಿಹಾರಕನು. ಇದು ಮೊದಲಾದ ಪ್ರಮಾಣಗಳಿಂದ ಅವಿಕಾರನೆಂದೇ ನಿಶ್ಚಿತನಾಗಿರುತ್ತಾನೋ. (ಆದಪ್ರಯುಕ್ತ ವಿಷ್ಣುವಿಗೆ ಪರಿಣಾಮರೂಪ ವಿಕಾರವು ಕೂಡದೆ ಇದ್ದಪ್ರಯುಕ್ತವೂ ಪ್ರಧಾನಕ್ಕೆ ಕೂಡುವುದರಿಂದಲೂ ಇಲ್ಲಿ ವಿಕಾರವೂ ಪ್ರತೀತವಾದ ಪ್ರಯುಕ್ತ ಆ ಸತ್ ಶಬ್ದವಾಚ್ಯವಾದುದು ವಿಷ್ಣುವಲ್ಲ ಮತ್ತೆ ಪ್ರಧಾನವೇ.

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಟ್ಟು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅತೋ ಬ್ರವೀತಿ ॥ ೪ ॥**

---

★ ಪ್ರಜಾಯೇಯ = ಜಗತ್ತನ್ನು ಸೃಷ್ಟಿಸುವೆನು, ಆದಕ್ಕಾಗಿ ಬಹುಸ್ಯಾಂ= ನಿಯಾಮಕ ಬಹುರೂಪವುಳ್ಳವನು ಆಗುವೆನು ಎಂದು ಸಿದ್ಧಾಂತರೀತ್ಯಾ ಅರ್ಥ.

**ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ** ಎಂದು ಶ್ರುತವಾದುದರಿಂದಲೂ **ಅದೃಷ್ಟಂ ದ್ರಷ್ಟೃಶ್ರುತಂ** ಇತ್ಯಾದಿಗಳಿಂದುಕ್ತವಾದ ಅದೃಶ್ಯತ್ವಾದಿಗಳಿಗೆ **ಯೇ ತ್ವಕ್ಷರಂ** ಇತ್ಯಾದಿ ಸ್ಮೃತಿಗಳಿಂದ ಶ್ರೀತತ್ತ್ವದಲ್ಲಿ ಕೂಡುವುದರಿಂದಲೂ ಅಕ್ಷರಶಬ್ದವಾಚ್ಯಳು ಚಿತ್ಪ್ರಕೃತಿಯೇ **ನ ತದಶ್ನಾತಿ ಕಿಂಚನ** ಎಂದು ಹೇಳಿದ ಅನಶನವು **ಅತ್ತಾ ಚರಾಚರಗ್ರಹಣಾತ್** ಎನ್ನುವಲ್ಲಿ ಅತ್ತನಾಗಿ ಹೇಳಲ್ಪಟ್ಟ ವಿಷ್ಣುವಿನಲ್ಲಿ ಕೂಡಲಾರದು. ಆದಕಾರಣ ಚಿತ್ಪ್ರಕೃತಿಯೇ ಎಂದು ಪೂರ್ವಪಕ್ಷವು. **ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ, ಆಕಾಶ ಏವ ತದೋತಂ** ಎಂದು ಆಕಾಶಾಖ್ಯ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ **ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ** ಎಂದು ಆಕಾಶಾಧಾರಕತ್ವಕ್ಕೇನೇ **ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ** ಇತ್ಯಾದಿಗಳಿಂದ ಹೇಳಲ್ಪಟ್ಟ ಸರ್ವಶಾಸನ ಲಿಂಗವೂ **ಅಸ್ಥೂಲಮನಣು** ಇತ್ಯಾದಿಗಳಿಂದ ಹೇಳಲ್ಪಟ್ಟ ಇತರಾಪೇಕ್ಷೆಯಿಲ್ಲದಿರುವ ಲಿಂಗವಾಗಲೀ **ಏಕೋ ದಾಧಾರ ಭುವನಾನಿ, ಸಪ್ತಾರ್ಥಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ, ಅಸ್ಥೂಲೋಽನಣುರಮಧ್ಯಮೋ ಮಧ್ಯಮಃ** ಇದು ಮೊದಲಾದ ಶ್ರುತಿಗಳಿಂದ ವಿಷ್ಣುವಿನಲ್ಲಿ ಮಾತ್ರ ಇರತಕ್ಕವುಗಳು. **ಅನಿತ್ಯತ್ವಂ ದೇಹಹಾನಿರ್ದುಃಖ ಪ್ರಾಪ್ತಿರಪೂರ್ಣತಾ** ಇತ್ಯಾದಿ ಶ್ರುತಿಯಿಂದ ನಾಲ್ಕು ವಿಧ ನಾಶಗಳಿಲ್ಲದಿರುವ ವಿಷ್ಣುವಿನಲ್ಲಿಯೇ ಅಕ್ಷರಪದಪ್ರವೃತ್ತಿ ನಿಮಿತ್ತವಾದ ಪೌಷ್ಕಲ್ಯವು ಇದ್ದುದರಿಂದಲೂ **ತದಕ್ಷರಂ ತಸ್ಮಾದಕ್ಷರಂ** ಎಂದು ಪ್ರಯೋಗವಿದ್ದುದರಿಂದಲೂ ಅಕ್ಷರಶಬ್ದವಾಚ್ಯನು ವಿಷ್ಣುವೇ ಎಂದು ಸಿದ್ಧಾಂತವು. **ಅನಶ್ನನ್ನನ್ಯಃ** ಎನ್ನುವ ಅನಶನಶ್ರುತಿಯು ಜೀವನ ಸ್ವಭಾವಭೂತವಾದ ಉಪಜೀವನಾರ್ಥಕವಾದ ಅಶನವನ್ನು ನಿಷೇಧಮಾಡತಕ್ಕುದು. ಅಚಿಂತ್ಯಶಕ್ತಿಯಿದ್ದುದರಿಂದ ಅಣುತ್ವಮಹತ್ವಾದಿಗಳೂ ಸಂಗತಗಳಾಗಿವೆ. **ದರ್ವೀ ಹೋಮಾ ಯಥೈವಾನ್ಯೇ ಪ್ರಕೃತೇರ್ವಿಕೃತೇರಪಿ। ಈಶ್ವರೋಽಪಿ ತಥೈವಾನ್ಯೋ ಮಹತೋಽಪ್ಯಣುತೋಽಪಿ ಹಿ ॥** ದರ್ವೀಹೋಮಗಳು ಪ್ರಕೃತಿಯಿಂದಲೂ ವಿಕೃತಿಯಿಂದಲೂ ಹೇಗೆ ಭಿನ್ನಗಳೋ ಹಾಗೆಯೇ ಅಪ್ರಾಕೃತನಾದ ಬ್ರಹ್ಮನೂ ಪ್ರಾಕೃತ ಮಹತ್ಪರಿಮಾಣ ಅಣುಪರಿಮಾಣರಹಿತನು. **ಯಥೈಕಸ್ಯೈವ ದಧ್ಯಾದೇಃ ಕ್ರತ್ವರ್ಥಪುರುಷಾರ್ಥತೇ। ಅಣೀಯಸ್ತ್ವಮಹೀಯಸ್ತ್ವೇ ತಥೈಕಸ್ಯೈವಹೀಶಿತುಃ ॥** ದಧ್ಯಾದಿಗಳಿಗೆ ಕ್ರತ್ವರ್ಥತ್ವ ಪುರುಷಾರ್ಥತ್ವಗಳು ಇದ್ದಂತೆಯೇ ಶ್ರೀಹರಿಗೆ ಅಣುತ್ವ ಮಹತ್ವಗಳು ಸಂಗತಗಳು. **ಅಣೋರಣೀಯಾನ್ ಮಹತೋ ಮಹೀಯಾನ್** ಎನ್ನುವ ಆಗಮವೂ ಇದೆ. ॥ ಅಧಿ.೩॥

**ಅಕ್ಷರಾಧಿಕರಣವು ಸಮಾಪ್ತವಾಯಿತು.**

# ೪ ಸದಧಿಕರಣವು

**ಪೀಠಿಕೆ॥** ಈ ಅಧಿಕರಣದಲ್ಲಿ ಅನೇಕ ಪ್ರಕರಣಾತ್ಮಕವಾದ ಸದೇವ ಇತ್ಯಾದಿ ಸ್ಥಾನವನ್ನು ಸಮನ್ವಯಿಸುತ್ತಾರೆ. ಶ್ರುತ್ಯಾದಿಸಂಗತಿಯನ್ನು ವಿಷಯವಾಕ್ಯವನ್ನುದಾಹರಿಸಿ ವಿಷಯಾದಿಗಳನ್ನು ಸೂಚಿಸುತ್ತಾರೆ—

**ಭಾಷ್ಯ ॥ ಸದೇವ ಸೋಮ್ಯೇದಮಗ್ರ ಆಸೀತ್** (ಛಾ.ಉ.೬.೨.)**। ಇತ್ಯಾದಿನಾ ಸತಃ ಸ್ರಷ್ಟೃತ್ವಮುಚ್ಯತೇ ॥ ೧ ॥**

ಭಾಷ್ಯಾರ್ಥ ॥ ಭಕ್ತಿಜ್ಞಾನರೂಪಸೋಮಾರ್ಹನಾದ ಶ್ವೇತಕೇತುವೇ ಈ ಜಗತ್ತನ್ನು ಸೃಷ್ಟಿಸುವುದಕ್ಕಿಂತ ಮೊದಲು ಅಂದರೆ ಪ್ರಲಯಕಾಲದಲ್ಲಿ ಸಚ್ಛಬ್ದದಿಂದುಕ್ತನಾದ ಬ್ರಹ್ಮನೇ ಸ್ವತಂತ್ರನಾಗಿ ಇದ್ದನು. ಇದು ಮೊದಲಾದ ಛಾಂದೋಗ್ಯವಾಕ್ಯದಿಂದ ಸತ್ತದಾರ್ಥಕ್ಕೇನೇ ಸ್ರಷ್ಟೃತ್ವವು (ಅನನ್ಯಾಧೀನ ಕಾರಣತ್ವವು) ಹೇಳಲ್ಪಡುತ್ತದೆ.

ವಿಶೇಷಾಂಶ ॥ (೧) ಮತ್ತು ಆದಿಶಬ್ದದಿಂದ ಸಂಗ್ರಹೀತಗಳಾದ ೧ ಏಕಮೇವಾದ್ವಿತೀಯಂ ೨ ತತ್ತೇಜೋಽಸೃಜತ ೩ ಸನ್ಮೂಲಾಃ ಸೋಮ್ಯೇಮಾಃ ೪ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಇತ್ಯಾದಿ ಶ್ರುತಿಗಳಿಂದ ಉಕ್ತಗಳಾದ ಸರ್ವೋತ್ತಮತ್ವ ಸರ್ವಾಧಾರತ್ವ ಸುಪ್ತಿಗಮ್ಯತ್ವಾದಿಗಳೂ ಕೂಡ ಸತ್ ಶಬ್ದವಾಚ್ಯವಾದ ವಸ್ತುವಿನಲ್ಲಿ ಕಾಣುತ್ತವೆ. (೨) ಜನ್ಮಾಧಿಕರಣದಲ್ಲಿ ಹೇಳಿದ ಕಾರಣತ್ವವು ವಿಷ್ಣುವಿನಿಂದ ಇತರವಾದ ಪ್ರಧಾನದಲ್ಲಿದೆ ಎಂದು ಹೇಳಿದ್ದರಿಂದ ಜನ್ಮಾಧಿಕರಣದಿಂದ ಇದಕ್ಕೆ ಆಕ್ಷೇಪಿಕೀ ಸಂಗತಿಯು. ಸತ್‌ಶಬ್ದವಾಚ್ಯವಾದ ವಸ್ತುವು ವಿಷಯವು.

ಪೀಠಿಕೆ ॥ ಸಯುಕ್ತಿಕವಾಗಿ ಪೂರ್ವಪಕ್ಷಿಸುತ್ತಾರೆ.

**ಭಾಷ್ಯ ॥ ತಚ್ಚ ಸತ್। ★ ಬಹು ಸ್ಯಾಂ ಪ್ರಜಾಯೇಯ (ಛಾ.ಉ.೬.೨.)। ಇತಿ ಪರಿಣಾಮ ಪ್ರತೀತೇರ್ನ ವಿಷ್ಣುಃ ॥ ೨ ॥**

ಭಾಷ್ಯಾರ್ಥ ॥ ಛಾಂದೋಗ್ಯದಲ್ಲಿ ಶ್ರುತವಾದ ಸತ್ ಶಬ್ದ ವಾಚ್ಯವಾದುದು ಪ್ರಧಾನವೇ ಆಗಬೇಕು ವಿಷ್ಣುವಲ್ಲ. ಏಕೆಂದರೆ ಆ ಸತ್ ಶಬ್ದ ವಾಚ್ಯವಾದುದಕ್ಕೆ ಬಹು ಸ್ಯಾಂ ಪ್ರಜಾಯೇಯ ಎಂದು ಬಹುಭಾವಾಖ್ಯ ಪರಿಣಾಮರೂಪವಾದ ವಿಕಾರವು ತೋರುವುದರಿಂದ.

ಪೀಠಿಕೆ ॥ ವಿಕಾರಿತ್ವವು ತೋರಿದಾಗ್ಯೂ ವಿಷ್ಣುವು ಏಕೆ ಆಗುವುದಿಲ್ಲವೆಂದರೆ—

**ಭಾಷ್ಯ ॥ ಸ ಹಿ ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ ಇತ್ಯಾದಿನಾಽವಿಕಾರಃ ಪ್ರಸಿದ್ಧಃ ಇತಿ ॥ ೩ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಆ ವಿಷ್ಣುವು ಯಾವಾಗಲೂ ವಿಕಾರವಿಲ್ಲದಿರುವವನು ಸದಾ ಶುದ್ಧನು (ನಿರ್ಮಲನು) ನಿತ್ಯನು ವ್ಯಾಪ್ತನು ಸರ್ವಪಾಪಪರಿಹಾರಕನು, ಇದು ಮೊದಲಾದ ಪ್ರಮಾಣಗಳಿಂದ ಅವಿಕಾರನೆಂದೇ ನಿಶ್ಚಿತನಾಗಿರುತ್ತಾನೋ. (ಆದಪ್ರಯುಕ್ತ ವಿಷ್ಣುವಿಗೆ ಪರಿಣಾಮರೂಪ ವಿಕಾರವು ಕೂಡದ ಇದ್ದಪ್ರಯುಕ್ತವೂ ಪ್ರಧಾನಕ್ಕೆ ಕೂಡುವುದರಿಂದಲೂ ಇಲ್ಲಿ ವಿಕಾರವೂ ಪ್ರತೀತವಾದ ಪ್ರಯುಕ್ತ ಆ ಸತ್ ಶಬ್ದವಾಚ್ಯವಾದುದು ವಿಷ್ಣುವಲ್ಲ ಮತ್ತೆ ಪ್ರಧಾನವೇ.

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಟ್ಟು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅತೋ ಬ್ರವೀತಿ ॥ ೪ ॥**

---

★ ಪ್ರಜಾಯೇಯ = ಜಗತ್ತನ್ನು ಸೃಷ್ಟಿಸುವೆನು, ಅದಕ್ಕಾಗಿ ಬಹುಸ್ಯಾಂ=ನಿಯಾಮಕ ಬಹುರೂಪವುಳ್ಳವನು ಆಗುವೆನು ಎಂದು ಸಿದ್ಧಾಂತರೀತ್ಯಾ ಅರ್ಥ.

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ಈಕ್ಷತಿಕರ್ಮವ್ಯಪದೇಶಾತ್ಸಃ ಓಂ ॥ ೧೩ ॥

ಸೂತ್ರಾರ್ಥ ॥ ಸದೇವ ಇತ್ಯಾದಿ ಸ್ಥಾನದಲ್ಲಿ ಸತ್ ಶಬ್ದದಿಂದ ಹೇಳಲ್ಪಟ್ಟವನು ಸಃ-ವಿಷ್ಣುವೇ. ಪ್ರಧಾನವಲ್ಲ. ತದೈಕ್ಷತ ಎಂದು ಜಡಪ್ರಕೃತಿಯಲ್ಲಿ ಕೂಡದೆ ಇದ್ದ ಈಕ್ಷಣಾಖ್ಯ ಕ್ರಿಯಾಕರ್ತೃತ್ವವು ಶ್ರುತವಾದುದರಿಂದಲೂ ಅಥವಾ ಈಕ್ಷತೃತ್ವ, ಸೃಷ್ಟ್ಯಾದಿಕರ್ತೃತ್ವವು ಶ್ರುತಗಳಾದ ಪ್ರಯುಕ್ತವೂ

ಭಾಷ್ಯ ॥ ತದೈಕ್ಷತೇತೀಕ್ಷತಿಕರ್ಮವ್ಯಪದೇಶಾತ್ಸ ಏವ ವಿಷ್ಣುರತ್ರೋಚ್ಯತೇ ॥ ೫ ॥

ಭಾಷ್ಯಾರ್ಥ ॥ ತದೈಕ್ಷತ ಎನ್ನುವ ಶ್ರುತಿಯಲ್ಲಿ ಈಕ್ಷಣಾಖ್ಯ ವ್ಯಾಪಾರದಲ್ಲಿ ಕರ್ತೃತ್ವವನ್ನು ಹೇಳಿದ್ದರಿಂದ ಅಥವಾ ಈಕ್ಷತಿಪೂರ್ವಕ ಸೃಷ್ಟ್ಯಾದಿಗಳನ್ನು ಹೇಳಿದ್ದರಿಂದ ಈ ಪ್ರಕರಣದಲ್ಲಿ ಸತ್ ಶಬ್ದದಿಂದ ಯಾರು ಹೇಳಲ್ಪಡುತ್ತಾನೋ ಅವನು ವಿಷ್ಣುವೇ (ಪ್ರಧಾನವಲ್ಲ)

ವಿಶೇಷಾಂಶ ॥ (೧) ಸಮನ್ವಯ ಸೂತ್ರದಿಂದ ತತ್ ಎನ್ನುವುದಕ್ಕೆ ಅನುಷಂಗವು ಕೂಡಿದಾಗ್ಯೂ ಏಕೋ ನಾರಾಯಣ ಆಸೀತ್ ನ ಮುನಿರ್ಭೂತ್ವಾ ಇದು ಮೊದಲಾದ ಶ್ರುತಿಸಮಾಖ್ಯೆಯನ್ನು ಪ್ರಮಾಣೀಕರಿಸುವುದಕ್ಕಾಗಿ ಸಃ ಎಂದು ಹೇಳಿರುತ್ತಾರೆ. ಅದನ್ನು ಅನುವಾದಮಾಡಿ ವಿಷ್ಣುಃ ಎಂದು ಹೇಳಿದ್ದು.

ಪೀಠಿಕೆ ॥ ಹಾಗಾದರೆ ಈಕ್ಷಣಕರ್ತೃತ್ವವು ವಿಷ್ಣುವಿನಂತೆ ಪ್ರಧಾನಕ್ಕೆ ಏಕೆ ಆಗಲಾರದು. ಎಂದರೆ— ಚೇತನಕ್ಕೆ ಸಹ ಮುಖ್ಯ ಈಕ್ಷಣವು ಕೂಡುವುದಿಲ್ಲವೆಂದಾದ ಮೇಲೆ ಜಡಕ್ಕೆ ಕೂಡವುದಿಲ್ಲವೆನ್ನುವುದು ಸುತರಾಂ ಸಿದ್ಧವು ಎನ್ನುವ ಅಭಿಪ್ರಾಯದಿಂದ ಪ್ರಮಾಣವನ್ನು ಹೇಳುತ್ತಾರೆ—

ಭಾಷ್ಯ ॥ ನಾನ್ಯೋಽತೋಽಸ್ತಿ ದ್ರಷ್ಟಾ (ಬೃ.ಉ.೫.೭.೨೩.)। ನಾನ್ಯದತೋಽಸ್ತಿ ದ್ರಷ್ಟೃ (ಬೃ.ಉ.೫.೮.೧೧.)। ಇತ್ಯಾದಿನಾ ತಸ್ಯೈವ ಹಿ ತಲ್ಲಕ್ಷಣಂ ॥ ೬ ॥

ಭಾಷ್ಯಾರ್ಥ ॥ ಬ್ರಹ್ಮನ ದೆಸೆಯಿಂದ ಮತ್ತೊಬ್ಬನು ಸ್ವತಂತ್ರವಾಗಿ ನೋಡತಕ್ಕವನು ಇಲ್ಲ. ನೋಡತಕ್ಕದೂ ಇಲ್ಲ. ಇದು ಮೊದಲಾದ ವಾಕ್ಯದಿಂದ ವಿಷ್ಣುವಿಗೇನೇ ಸ್ವಾತಂತ್ರ್ಯದಿಂದ ಈಕ್ಷಣಕರ್ತೃತ್ವರೂಪವಾದ ಲಿಂಗವು ಉಕ್ತವಾಗಿದೆ. (ಆದುದರಿಂದ ಲಿಂಗವು ಇತರರಲ್ಲಿರತಕ್ಕದೆಂದು ತಿಳಿಯ ಕೂಡದು.)

ಪೀಠಿಕೆ ॥ ಹಾಗಾದರೆ ವಿಷ್ಣುವಿಗೆ ವಿಕಾರವಿಲ್ಲವೆಂದು ಸಿದ್ಧವಾದ ಪ್ರಯುಕ್ತ ಬಹುಭಾವಾಖ್ಯವಿಕಾರವು ಕೂಡಲಾರದು. ನಿರವಕಾಶವಾದ ವಿಕಾರಿತ್ವಲಿಂಗದಿಂದ ಇಲ್ಲಿ ಈಕ್ಷತಿಯು ಗೌಣವೆಂದೇ ಇಟ್ಟುಕೊಳ್ಳಬೇಕು ಎಂದರೆ— ಸತ್ವಾತ್ ಸಂಜಾಯತೇ ಜ್ಞಾನಂ ಎನ್ನುವ ಸ್ಮೃತಿಯಿಂದ ಜ್ಞಾನಕ್ಕೆ ಕಾರಣವಾದ ಸತ್ವಗುಣಾತ್ಮಕಪ್ರಧಾನದಲ್ಲಿ ಗೌಣವಾಗಿ ಜ್ಞಾನಕರ್ತೃತ್ವವು ಕೂಡಬಹುದು.

ಭಾಷ್ಯ ॥ ಬಹುತ್ವಂ ಚಾವಿಕಾರೇಣೈವೋಕ್ತಂ। ಅಜಾಯಮಾನೋ ಬಹುಧಾ ವಿಜಾಯತೇ (ತೈ.ಆ.೩.೧೪.)। ಇತಿ ॥ ೧೩ ॥ ಅಧಿ.೪ ॥ ॥ ೭ ॥

**ಭಾಷ್ಯಾರ್ಥ** ॥ ವಿಕಾರವನ್ನು ಹೊಂದದೆ ಇರುವವನಾಗಿ ಬಹುರೂಪದಿಂದ ಪ್ರಾದುರ್ಭವಿಸುತ್ತಾನೆ. ಇತ್ಯಾದಿ ವಾಕ್ಯದಿಂದ ವಿಕಾರವಿಲ್ಲದೇನೇ ನಿಯಾಮಕರೂಪ ಬಹುತ್ವದಿಂದಲೇ ಬಹುಭಾವವು ವಿಷ್ಣುವಿನಲ್ಲಿ ಕೂಡುತ್ತದೆ. ತಥಾಚ ಬಹುಭಾವವು ಸಾವಕಾಶವಾದ ಪ್ರಯುಕ್ತ ಆದರ ಸಾಮರ್ಥ್ಯದಿಂದ ಈಕ್ಷತಿಯು ಗೌಣವೆಂದು ಕಲ್ಪಿಸಕೂಡದು. ॥ ೧೩. ॥

## ಮಾಯಾವಾದಿರೀತ್ಯಾ

ವಿಚಾರ ॥ **ಯಃ ಪುನರೇತಂ ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ** ಎನ್ನುವ ವಾಕ್ಯದಲ್ಲಿ ಧ್ಯಾನಿಸಿಕೊಳ್ಳಲಿಕ್ಕೆ ಯೋಗ್ಯವಾಗಿ ಹೇಳಲ್ಪಟ್ಟ ವಸ್ತುವು ಹಿರಣ್ಯಗರ್ಭರೂಪವಾದುದು ಅಪರಬ್ರಹ್ಮವೇ. **ತಸ್ಮಾದ್ವಿದ್ವಾನ್** ಎಂದು ಹೇಳಲ್ಪಟ್ಟ ಧ್ಯಾನಾರ್ಹವಸ್ತುವನ್ನು ತಿಳಿದವನಿಗೆ **ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ** ಎಂದು ದೇಶಪರಿಚ್ಛಿನ್ನ ಲೋಕಪ್ರಾಪ್ತಿರೂಪವಾದ ಫಲವನ್ನು ಹೇಳಿದ್ದಾರೆ. **ಬ್ರಹ್ಮ ವೇದ ಬ್ರಹ್ಮೈವ ಭವತಿ** ಎನ್ನುವ ಶ್ರುತಿಯಿಂದ ಸರ್ವತ್ರ ವ್ಯಾಪ್ತನಾದ ಪರಬ್ರಹ್ಮನನ್ನು ತಿಳಿದರೆ ಪರಬ್ರಹ್ಮಪ್ರಾಪ್ತಿಯೇ ಆಗುವುದರಿಂದ **ಸಾಮಭಿರುನ್ನೀಯತೇ ಬ್ರಹ್ಮಲೋಕಂ** ಎಂದು ಪರಿಚ್ಛಿನ್ನ ದೇಶವಿಶೇಷಪ್ರಾಪ್ತಿಯು ಕೂಡಲಾರದು, ಎಂದು ಪೂರ್ವಪಕ್ಷವು ಬಂದರೆ— **ಪರಾತ್ಪರಂ ಪುರಿಶಯಂ ಪುರುಷ ಮೀಕ್ಷತೇ** ಎಂದುತ್ತರವಾಕ್ಯದಲ್ಲಿ ಈಕ್ಷಣಕರ್ಮತ್ವವನ್ನು ಹೇಳಿದ್ದರಿಂದ ಅಭಿಧ್ಯಾತವ್ಯ ವಸ್ತುವು ಪರಬ್ರಹ್ಮವೇ. ಈಕ್ಷಣಕರ್ಮತ್ವವು ಪರಮಾರ್ಥವಸ್ತುವಿಗೇನೇ ಕೂಡುತ್ತದೆ. ಬ್ರಹ್ಮಾತಿರಿಕ್ತವಾದುದು ಪರಮಾರ್ಥವಸ್ತುವು ಇಲ್ಲ. ಈಕ್ಷಣೀಯನು ಪರಬ್ರಹ್ಮನೆಂದಾದಮೇಲೆ ಧ್ಯಾನಾರ್ಹನು, ಅಪರಬ್ರಹ್ಮನು ಆಗಲಾರನು. ಈಕ್ಷಣಧ್ಯಾನಗಳು ಏಕವಿಷಯಕಗಳಾಗಿವೆ. ನಿರುಪಾಧಿಕ ಬ್ರಹ್ಮಜ್ಞಾನಕ್ಕೇನೇ ಅಪರಿಚ್ಛಿನ್ನ ಫಲವಿರುವುದರಿಂದ ಇಲ್ಲಿ ತ್ರಿಮಾತ್ರಓಂಕಾರರೂಪ ಉಪಾಧಿಯನ್ನು ಹೇಳಿದ್ದರಿಂದ ಆ ಸೋಪಾಧಿಕ ಬ್ರಹ್ಮನಿಗೆ ಪರಿಚ್ಛಿನ್ನ ಫಲವನ್ನು ಹೇಳಿದ್ದು ಯುಕ್ತವು ಎಂದು ಸಿದ್ಧಾಂತವೆನ್ನುತ್ತಾರೆ. ಅದು ಅಯುಕ್ತವು. ನಿರವಕಾಶವೂ ಪ್ರಥಮವೂ ಆದ ಪರಾತ್ಪರತ್ವರೂಪವಾದ ಬ್ರಹ್ಮಲಿಂಗವನ್ನು ಬಿಟ್ಟು ಸೂತ್ರದಲ್ಲಿ ಅಂತಿಮವೂ ಸಾವಕಾಶವೂ ಆದ ಈಕ್ಷಣಕರ್ಮತ್ವೋಕ್ತಿಯು ಕೂಡಲಾರದು. ಅದ್ವೈತಿಗಳ ಮತದಲ್ಲಿ ಈಕ್ಷಣಕರ್ಮಕ್ಕೆ ಮಿಥ್ಯಾತ್ವವು ನಿಯತವಾದುದರಿಂದ ಈಕ್ಷಣಕರ್ಮತ್ವಕ್ಕೆ ಪರಮಾರ್ಥ ಸತ್ ಬ್ರಹ್ಮತ್ವದಲ್ಲಿ ಹೇತುತ್ವವೇ ಕೂಡಲಾರದು. ಮತ್ತು ಓಂಕಾರೋಪಾಧಿಕ ಧ್ಯಾನಫಲವು ಪರಿಚ್ಛಿನ್ನವೆಂದು ಹೇಳಿದ್ದು ಅಯುಕ್ತವುಲ. **ಓಂಕಾರೇಣೈವಾಯನೇ ನಾನ್ವೇತಿ ವಿದ್ವಾನ್ಯತ್ತಚ್ಛಾಂತಮಜರಮಮೃತಮಭಯಂ ಪರಂ ಚ** ಎಂದು ವಾಕ್ಯಶೇಷದಲ್ಲಿ ಈ ಧ್ಯಾನಕ್ಕೆ ಅಪರಿಚ್ಛಿನ್ನ ಫಲವನ್ನು ಹೇಳಿದ್ದಾರೆ. ಮತ್ತು **ಈಕ್ಷಣಸ್ಯಾನುಸಾರೇಣ ಧ್ಯಾನಂ ಸದ್ವಿಷಯಂ ಯದಿ । ತರ್ಹಿ ಧ್ಯಾನಾನುಸಾರೇ ಣಾಸ್ತ್ವೀಕ್ಷಣಂ ಕಲ್ಪಿತಾರ್ಥಕಂ ॥** ಅದ್ವೈತಿಗಳ ಮತದಲ್ಲಿ **ಯೋಷಿತಮಗ್ನಿಂ ಧ್ಯಾಯೀತ** ಇತ್ಯಾದಿಗಳಲ್ಲಿ ಧ್ಯಾನಕ್ಕೆ ಆರೋಪಿವಿಷಯತ್ವವು ಕ್ಲೃಪ್ತವಾಗಿದೆ. **ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ, ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ** ಇತ್ಯಾದಿಗಳಲ್ಲಿ ಈಕ್ಷಣವೂ ಅತಾತ್ವಿಕ ವಿಷಯಕವೇ ಆಗಿದೆ. ಇಲ್ಲಿಯೂ ಅದ್ವೈತಿಗಳ ಮತದಲ್ಲಿ ಈಕ್ಷತಿಕರ್ಮ ಎನ್ನುವ ಸೂತ್ರದಲ್ಲಿ ಜೀವೇಶರಿಗೆ ಕರ್ತೃಕರ್ಮಭಾವದಿಂದ ಭೇದವನ್ನು ಹೇಳಿದ್ದರಿಂದಲೂ ಬ್ರಹ್ಮನಿಗೆ ದೃಶ್ಯತ್ವವನ್ನು ಹೇಳಿದ್ದರಿಂದಲೂ ಪರರ ಮತಕ್ಕೆ ಈ ಸೂತ್ರವು ಪ್ರತಿಕೂಲವೇ ಆಗಿದೆ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥ ಪುರುಷಮೀಕ್ಷತೇ** ಎಂದು ಹೇಳಿದ ಈಕ್ಷಣಕರ್ಮಭೂತನಾದವನು ಪರಮಾತ್ಮನೇ. **ಏತದಮೃತಮಭಯಮೇತದ್ಬ್ರಹ್ಮ** ಇತ್ಯಾದಿಗಳಿಂದ ಪರಮಾತ್ಮನನ್ನೇ ವ್ಯಪದೇಶ ಮಾಡಿದ್ದರಿಂದ, ಎಂದು ಸೂತ್ರಾರ್ಥವು. ಯದ್ಯಪಿ ಈಕ್ಷತಿವಾಕ್ಯದಲ್ಲಿ ಪರಾತ್ಪರತ್ವ ಮೊದಲಾದ ಬ್ರಹ್ಮಧರ್ಮಗಳೂ **ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ** ಎನ್ನುವ ಪೂರ್ವವಾಕ್ಯದಲ್ಲಿ ತಜ್ಞಾನಿಗೆ ಪಾಪಾಲೇಪಾದಿಧರ್ಮಗಳೂ ಉತ್ತರವಾಕ್ಯದಲ್ಲಿ ಅಮೃತತ್ವ ಅಭಯತ್ವ ಮೊದಲಾದ ಬ್ರಹ್ಮಧರ್ಮಗಳೂ ಸ್ಫುಟವಾಗಿರುವುದರಿಂದ ಪೂರ್ವಪಕ್ಷವೇ ಉಂಟಾಗಲಾರದು. ಆದಾಗ್ಯೂ **ಸೋಽಂತರಿಕ್ಷಂ ಯಜುರ್ಭಿಃ** ಎಂದು ಪ್ರಾಕೃತವಾದ ಅಂತರಿಕ್ಷಲೋಕದ ಸನ್ನಿಧಾನದಿಂದ **ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ** ಎಂದು ಹೇಳಿದ ಬ್ರಹ್ಮಲೋಕವು ಚತುರ್ಮುಖ ಲೋಕವೆನ್ನುವ ಶಂಕೆಯಿಂದ ಪೂರ್ವಪಕ್ಷವು ಹುಟ್ಟುವುದು, ಎನ್ನುತ್ತಾರೆ. ಅದು ಅಯುಕ್ತವು. **ತದ್ಧರ್ಮೋಪದೇಶಾತ್ ಭೇದವ್ಯಪದೇಶಾತ್** ಇತ್ಯಾದಿಗಳಲ್ಲಿದ್ದಂತೆಯೇ ಸಿದ್ಧಾಂತಸಾಧಕವಾದ ಅರ್ಥವಿಶೇಷದಿಂದ ಕೂಡಿದ ವ್ಯಪದೇಶವನ್ನೇ ಹೇತುವನ್ನಾಗಿ ಮಾಡಬೇಕಿತ್ತು, ವ್ಯಪದೇಶಾತ್ ಎಂದು ಇಷ್ಟು ಮಾತ್ರ ಹೇಳಿದ್ದು ಯುಕ್ತವಲ್ಲ. ಮತ್ತು ರಾಮಾನುಜಾಚಾರ್ಯರ ರೀತಿಯಾಗಿ ಈ ಶಾಸ್ತ್ರದ ಪೂರ್ವಭಾಗವಾದ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಆನಂತರ್ಯಮಚೋದನಾ ಎನ್ನುವಲ್ಲಿ ಲಿಂಗಾದಿಗಳಿಂದ ಸನ್ನಿಧಾನ (ಸ್ಥಾನ) ಕ್ಕೆ ದೌರ್ಬಲ್ಯವನ್ನು ಹೇಳಿದ್ದರಿಂದ ಪುನಃ ಇಲ್ಲಿ ಅದಕ್ಕೆ ಪ್ರಾಬಲ್ಯ ಶಂಕೆಯೇ ಹುಟ್ಟಲಾರದು.

## ಅಧಿಕರಣ ಸಾರಾಂಶ

ಛಾಂದೋಗ್ಯದಲ್ಲಿ ಆರನೇ ಅಧ್ಯಾಯದಲ್ಲಿ **ಸದೇವ ಸೋಮ್ಯೇದಮಗ್ರ ಆಸೀತ್** ಎಂದುಪಕ್ರಮಿಸಿಕೊಂಡು **ತದೈಕ್ಷತ ಬಹು ಸ್ಯಾಂ ಪ್ರಜಾಯೇಯ** ಇತ್ಯಾದಿಗಳಿಂದ ಜಗತ್ಕಾರಣತ್ವಾದಿಗಳಿಂದುಕ್ತವಾದ **ಸತ್** ಪದ ವಾಚ್ಯವಾದುದು ಪ್ರಧಾನವೋ ಬ್ರಹ್ಮನೋ ಎಂದು ಸಂದೇಹವು. ಪ್ರಧಾನವೇ, ಬ್ರಹ್ಮನಲ್ಲವೆಂದು ಪೂರ್ವಪಕ್ಷವು. **ಬಹುಸ್ಯಾಂ ಪ್ರಜಾಯೇಯ** ಎಂದು ಸತ್ತಿನಲ್ಲಿ ತೇಜಃಪ್ರಭೃತಿ ಬಹುಭಾವವು ಶ್ರುತವಾಗಿದೆ. ಅದು ಪರಿಣಾಮವಿರುವ ಪ್ರಧಾನದಲ್ಲಿಯೇ ಕೂಡುವುದು. **ನಿರ್ವಿಕಾ ರೋಽಕರಃ ಶುದ್ಧಃ** ಇತ್ಯಾದಿ ಶ್ರುತಿಗಳಿಂದ ನಿರ್ವಿಕಾರನಾದ ಬ್ರಹ್ಮನಲ್ಲಿ ಕೂಡಲಾರದು. ಇಲ್ಲಿ ಸ್ವರೂಪಕ್ಕೇನೇ ಬಹುಭಾವವು ಉಕ್ತವಾಗಿದೆ. ತೇಜ ಆದಿರೂಪದಿಂದ ಬಹುಭಾವವು ಉಕ್ತವಾಗಲಿಲ್ಲ ಎಂದು ಹೇಳಕೂಡದು. ಹಾಗಾದರೆ **ತತ್ತೇ ಜೋಽಸೃಜತ** ಎನ್ನುವ ವಾಕ್ಯಶೇಷದಿಂದ ವಿರೋಧವು. ಸ್ವರೂಪಕ್ಕೆ ಬಹುಭಾವವನ್ನು ಸಂಕಲ್ಪಿಸಿ ತೇಜಸ್ಸು ಮೊದಲಾದುದನ್ನು ಸೃಷ್ಟಿಸುತ್ತಾನೆನ್ನುವುದು ಯುಕ್ತವಾಗಲಾರದು. ಜ್ಞಾನಕ್ಕೆ ಕಾರಣಭೂತವಾದ ಸತ್ವರೂಪಗುಣಸಂಬಂಧ ದಿಂದಲಾಗಲೀ ಪ್ರಧಾನಾಭಿಮಾನಿಗೆ ಈಕ್ಷಿತೃತ್ವವಿದ್ದುದರಿಂದಲಾಗಲೀ ಪ್ರಧಾನಕ್ಕೆ ಈಕ್ಷಣವು ಗೌಣವು. ಬ್ರಹ್ಮನೇ ಎಂದು ಸಿದ್ಧಾಂತವು. **ಈಕ್ಷತಿರ್ಬಹುಭಾವಶ್ಚ ಮುಖ್ಯೌ ಬ್ರಹ್ಮಪರಿಗ್ರಹೇ। ಪ್ರಧಾನಪಕ್ಷೇ ತು ತಯೋರಮುಖ್ಯತ್ವಂ ಪ್ರಸಜ್ಯತೇ ॥** ತದೈಕ್ಷತ ಎಂದು ಹೇಳಿದ ಈಕ್ಷಿತೃತ್ವಕ್ಕೆ ಮುಖ್ಯಾರ್ಥವು ಕೂಡುವಾಗ ಅಮುಖ್ಯಾರ್ಥ ಗ್ರಹಣವು ಕೂಡಲಾರದು. ಅಭಿಮಾನ್ಯಧಿಕರಣನ್ಯಾಯದಿಂದ ತತ್ತೇಜ ಐಕ್ಷತ,

ತದಪೋऽಸೃಜತ, ತಾ ಆಪ ಐಕ್ಷಂತ ಎಂದು ತೇಜಸ್ಸು ಮೊದಲಾದವುಗಳಿಗೆ ದೇವತಾತ್ವವಿದ್ದುದರಿಂದ ತದ್ರೂಪದಿಂದ ಬಹುಭಾವವು ಪ್ರಧಾನದಲ್ಲಿಯೂ ಕೂಡಲಾರದು. ನಿಯಾಮಕಸ್ವರೂಪ ಬಹುತ್ವಕ್ಕೆ ನಿಯಮ್ಯವಾದ ಸೃಷ್ಟಿಯ ಅಪೇಕ್ಷೆಯಿದ್ದುದರಿಂದ ಸ್ವರೂಪಬಹುಭಾವವನ್ನು ಸಂಕಲ್ಪಿಸಿಕೊಂಡು ನಿಯಮ್ಯವಾದ ತೇಜಸ್ಸು ಮೊದಲಾದುದನ್ನು ಸೃಷ್ಟಿಸುತ್ತಾನೆನ್ನುವುದು ಸಂಗತವಾಗುವುದು. ಒಬ್ಬ ಈಶ್ವರನಿಗೇನೇ ಗುಹಾಧಿಕರಣನ್ಯಾಯದಿಂದ ಬಹುತ್ವವೂ ದ್ಯುಭ್ವಾಧಿಕರಣನ್ಯಾಯದಿಂದ ಅಭಿವ್ಯಕ್ತಿರೂಪವಾದ ಜನನವೂ ಕೂಡುವುದು. **ಬಹು ಸ್ಯಾಮಿತಿ ಸಂಕಲ್ಪ್ಯ ತೇಜಃಪ್ರಭೃತಿ ಸರ್ಜನಂ। ಗುರುಃ ಸ್ಯಾಮಿತಿ ಸಂಕಲ್ಪ್ಯ ಶಿಷ್ಯಸಂಪಾದಿನಾದಿವತ್ ॥** ಅಂತೂ ಆವಾವ ನಿಯಾಮಕಸ್ವರೂಪದಿಂದ ಬಹುಭಾವಸಂಕಲ್ಪಾ ನಂತರದಲ್ಲಿ ನಿಯಮ್ಯಸೃಷ್ಟಿಯು ಯುಕ್ತವಾಗಿದೆ. ಗುರುತ್ವಾದಿಗಳಿಗೆ ಶಿಷ್ಯಾದಿಗಳ ಅಪೇಕ್ಷೆಯಿದ್ದಂತೆಯೇ ನಿಯಾಮಕತ್ವಕ್ಕೆ ನಿಯಮ್ಯದ ಅಪೇಕ್ಷೆಯಿದೆ. **ವಿಚಿತ್ರಶಕ್ತಿಯೋಗಿತ್ವನಿರುದ್ಧಗುಣಭಾಗಿತೇ। ಶ್ರೂಯತೇ ಬ್ರಹ್ಮಣೋ ಯದ್ವನ್ನ ತಥಾ ಪ್ರಕೃತೇಃ ಕ್ವಚಿತ್** ತಥಾಚ ಮುಖ್ಯೇಕ್ಷಿತೃತ್ವಲಿಂಗದಿಂದ ಕಾರಣತ್ವಾದಿಗಳಿಂದ ಸತ್ಪದವಾಚ್ಯನು ಬ್ರಹ್ಮನೇ ಎಂದು ಸಿದ್ಧಾಂತವು. ॥ ಅಧಿ.೪ ॥

**ಸದಧಿಕರಣವು ಸಮಾಪ್ತವಾಯಿತು.**

# ೫. ದಹರಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸರ್ವಾಧಾರವಾಗಿ ಹುಡುಕಲರ್ಹವಾಗಿ ಹೇಳಲ್ಪಟ್ಟ ಹೃತ್ಪದ್ಮಸ್ಥಲಿಂಗಕ್ಕೆ ಬ್ರಹ್ಮನಲ್ಲಿ ಸಮನ್ವಯವನ್ನು ಮಾಡುತ್ತಾರೆ. ಶ್ರುತ್ಯಾದಿ ಸಂಗತಿಯನ್ನು ವಿಷಯವಾಕ್ಯವನ್ನು ಉದಾಹರಿಸಿ ವಿಷಯಾದಿಗಳನ್ನು ಸೂಚಿಸುತ್ತಾ ಸಯುಕ್ತಿಕವಾಗಿ ಪೂರ್ವಪಕ್ಷಮಾಡುತ್ತಾರೆ—

**ಭಾಷ್ಯ ॥ ಚಂದ್ರಾದಿತ್ಯಾದ್ಯಾಧಾರತ್ವಂ ವಿಷ್ಣೋರುಕ್ತಂ। ತಚ್ಚ ಅಥ ಯದಿದಮಸ್ಮಿನ್ (ತಚ್ಚೈತಸ್ಮಿನ್) ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋऽಸ್ಮಿನ್ನಂತರ(ರಾ) ಆಕಾಶಃ ಕಿಂ ತದತ್ರ ವಿದ್ಯತೇ** (ಛಾ.ಉ.೮.೧.)। **ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ। ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ। ವಿದ್ಯುನ್ನಕ್ಷತ್ರಾಣಿ** (ಛಾ.ಉ.೮.೧.)। **ಇತ್ಯಾದಿ ನಾऽऽಕಾಶಸ್ಯ ಪ್ರತೀಯತೇ ॥ ೧ ॥**

**ಭಾಷ್ಯಾರ್ಥ ॥** (ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಇತ್ಯಾದಿ ವಾಕ್ಯದಿಂದ ಅಕ್ಷರಾಧಿಕರಣದಲ್ಲಿ ವಿಷ್ಣುವಿಗೆ ಚಂದ್ರ ಆದಿತ್ಯ (ದ್ಯಾವಾ ಪೃಥಿವೀ) ಮೊದಲಾದವುಗಳ ಆಧಾರತ್ವವು ಹೇಳಲ್ಪಟ್ಟಿದೆ. ಆ ಚಂದ್ರಾದಿತ್ಯಾಧಾರತ್ವದಿಂದ ಕೂಡಿದ ಹೃತ್ಪದ್ಮಸ್ಥತ್ವವು ಅಥ ಯದಿದಂ ಇತ್ಯಾದಿ ಛಾಂದೋಗ್ಯ ವಾಕ್ಯದಿಂದ ಆಕಾಶಕ್ಕೆ ತೋರುತ್ತದೆ. ಅಥ=ಪ್ರಮೇಯಾಂತರವು ಆರಬ್ಧವಾಗುತ್ತದೆ. ಬ್ರಹ್ಮಪುರೇ =ಬ್ರಹ್ಮನಿಗೆ ನಿವಾಸಸ್ಥಾನವಾದ ಶರೀರದಲ್ಲಿ (ಯದಿದಂ ಪುರಂ = ಯಾವ ಈ ಪೂರ್ಣನಾದ ಬ್ರಹ್ಮನು ಇದ್ದಾನೋ) ಅಸ್ಮಿನ್=ಈ ಬ್ರಹ್ಮನಿವಾಸಸ್ಥಾನವಾದ ಶರೀರದಲ್ಲಿ, ದಹರಂ=ಅಲ್ಪವಾದ, ಪುಂಡರೀಕ=ಕಮಲನು,

ವೇಶ್ಮ=ಆತನಿಗೆ ಗೃಹರೂಪವಾಗಿ ಇದೆ. ಅಸ್ಮಿನ್=ಇದರಲ್ಲಿ ಅಂತಃ=ಒಳಗೆ, ದಹರಃ=ಅಲ್ಪವಾದ, ಆಕಾಶಃ=ಭೂತಾಕಾಶವು ಇದೆ. (ತಸ್ಮಿನ್=ಆಕಾಶದಲ್ಲಿ ಅಂತಃ=ಒಳಗೆ ಯಾವುದು ಇದೆಯೋ, ತತ್=ಅದು, ಅನ್ವೇಷ್ಟವ್ಯಂ=ಹುಡುಕಬೇಕು, ತಿಳಿಯಬೇಕು, ಘಟಾದಿಗಳಂತೆ ಹುಡುಕಲು ಸಾಧ್ಯವಿಲ್ಲ ಪ್ರತ್ಯಕ್ಷವಾಗದೆ ಇದ್ದ ಪ್ರಯುಕ್ತ ಎಂದರೆ, ತದ್ವಾವ ವಿಜಿಜ್ಞಾಸಿತವ್ಯಂ=ಅದನ್ನೇ ವಿಚಾರಿಸತಕ್ಕುದು. ಎಂದು ಗುರುಗಳು ಹೇಳೋಣ ಆ ಗುರುಗಳನ್ನು ಕುರಿತು ಶಿಷ್ಯರು ಪ್ರಶ್ನಿಸಿದರೆ) ಅತ್ರ= ಭೂತಾಕಾಶದಲ್ಲಿ ಹುಡುಕಬೇಕು, ವಿಚಾರಿಸಬೇಕು ಎಂದು ಯಾವುದು ಹೇಳಲ್ಪಟ್ಟದೋ, ಆ ಆಧೇಯಸ್ವರೂಪವು, ಕಿಂ=ಯಾವುದು? ಯಾವ ಮಹಿಮೆಯುಳ್ಳದ್ದು (ಎಂದು ಶಿಷ್ಯರು ಪ್ರಶ್ನಿಸಿದರೆ ಗುರುಗಳು ಹೇಳುವರು.) (ಬಹಿಸ್ಥಿತನಾದ ಆಕಾಶಾಖ್ಯ ಪರಮಾತ್ಮನು ಗುಣದಿಂದಲೂ ಪರಿಮಾಣದಿಂದಲೂ ಎಂತಹವನೋ ಅಂತರ್ಗತನೂ ಅಂತಹವನೇ, ತಥಾಚ ಅಣುವಾದ ರೂಪದಲ್ಲಿಯೂ ಈಶ್ವರನ ಶಕ್ತಿಯಿಂದ ಮಹತ್ವವೂ ಕೂಡುವುದರಿಂದ ವ್ಯಾಪ್ತನಾದ ಈಶ್ವರನಿಗೆ ದ್ಯಾವಾಪೃಥಿವ್ಯಾದ್ಯನೇಕಾಧಾರತ್ವವು ಕೂಡುತ್ತದೆ.) (ಇತರರನ್ನು ಬಿಟ್ಟು ಈತನನ್ನೇ ಜಿಜ್ಞಾಸಾಮಾಡಲಿಕ್ಕೆ ಏನು ಹೇತುವು ಎಂದರೆ ಶ್ರೀಹರಿಗೆ ಸರ್ವಾಧಾರತ್ವ ರೂಪವಾದ ಮಹಿಮೆಯನ್ನು ಹೇಳುತ್ತಾರೆ.) ಅಸ್ಮಿನ್ ಅಂತರೇವ=ಇದರೊಳಗೇನೇ, ಉಭೇ ದ್ಯಾವಾಪೃಥಿವೀ=ಮುಕ್ತ ಅಮುಕ್ತರಾದ ದ್ಯಾವಾ ಪೃಥಿವ್ಯಭಿ ಮಾನಿಯರಾದ ದೇವಿಯರು, ಸಮಾಹಿತೇ=ಆಶ್ರಿತರಾಗಿರುತ್ತಾರೆ. ಉಭೌ ಅಗ್ನಿ ಶ್ಚ ವಾಯುಶ್ಚ=ಮುಕ್ತ ಅಮುಕ್ತರಾದ ಅಗ್ನಿ ವಾಯುದೇವತೆಗಳೂ, ಆಶ್ರಿತರಾಗಿರುತ್ತಾರೆ. ಉಭೌ ಸೂರ್ಯಾಚಂದ್ರಮಸೌ= ಮುಕ್ತ ಅಮುಕ್ತರಾದ ಸೂರ್ಯ ಚಂದ್ರರೂ ಆಶ್ರಿತರಾಗಿರುತ್ತಾರೆ. ವಿದ್ಯುನ್ನಕ್ಷತ್ರಾಣಿ=ಮಿಂಚು ಅಭಿಮಾನಿ, ನಕ್ಷತ್ರಾಭಿಮಾನಿ ದೇವತೆಗಳೂ ಆಶ್ರಿತರಾಗಿರುತ್ತಾರೆ. ಇತ್ಯಾದಿಗಳಿಂದ ಆಕಾಶಕ್ಕೆ ತೋರುತ್ತದೆ.

**ವಿಶೇಷಾಂಶ** ॥ (೧) ಯದ್ಯಪಿ ಬೃಹದ್ಭಾಷ್ಯದಲ್ಲಿ ಅಕ್ಷರಾಧಿಕರಣದಲ್ಲಿ ಉದಾಹೃತವಾದ ಬೃಹದಾರಣ್ಯಕಶ್ರುತಿಯಲ್ಲಿದ್ದ ಸೂರ್ಯಚಂದ್ರಪದಗಳು ಬ್ರಹ್ಮರುದ್ರಪರಗಳೆಂದು ವ್ಯಾಖ್ಯಾನಮಾಡಿದ್ದರಿಂದ ಇಲ್ಲಿ ಹೀಗೆ ಹೇಳಿದ್ದು ಅಯುಕ್ತವು. ಆದಾಗ್ಯೂ ಆ ಸೂರ್ಯಚಂದ್ರಪದಗಳು ಪ್ರಸಿದ್ಧ ಸೂರ್ಯಚಂದ್ರಪರಗಳೆಂದು ಸಮ್ಮತಗಳಾಗಿರುವುದರಿಂದ ಹೀಗೆ ಹೇಳಿದ್ದು. (೨) ಅಥವಾ ಇಲ್ಲಿ ಭಾಷ್ಯದಲ್ಲಿಯೂ ಚಂದ್ರ ಆದಿತ್ಯ ಪದಗಳು ರುದ್ರಬ್ರಹ್ಮಪರಗಳು. ಆದಪ್ರಯುಕ್ತವೇ ತತ್ವಪ್ರದೀಪದಲ್ಲಿ ಅಕ್ಷರಾಧಿಕರಣದಲ್ಲಿ ಅಹಂ ಸೋಮಂ ಎನ್ನುವ ವಚನದಲ್ಲಿ ಸೋಮಶಬ್ದವು ರುದ್ರಪರವೆಂದು ವ್ಯಾಖ್ಯಾತವಾಗಿದೆ. (೩.) ಅಕ್ಷರಾಧಿಕರಣದಲ್ಲಿ ಹೇಳಿದ ಚಂದ್ರ ಆದಿತ್ಯಾದ್ಯಾಧಾರತ್ವವು ಸಾಕ್ಷಾತ್ತಾಗಿ ಹೃತ್ಪದ್ಮದಲ್ಲಿರತಕ್ಕ ಆಕಾಶದಲ್ಲಿರತಕ್ಕುದೆಂದು ಆಕ್ಷೇಪಿಸಿದುದರಿಂದ ಅದರಿಂದ ಇದಕ್ಕೆ ಆಕ್ಷೇಪಿಕೀ ಸಂಗತಿಯು ಉಕ್ತವಾಯಿತು. (೪) ಸರ್ವಾಧಾರತ್ವವೂ ಅನ್ವೇಷ್ಟವ್ಯತ್ವವೂ ಇರುವ ಹೃತ್ಪದ್ಮಸ್ಥತ್ವವು ವಿಷಯವು. (೫) ಯದ್ಯಪಿ ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಃ ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ । ತಂ ಚೇದ್ಬ್ರೂಯುಃ ಕಿಂ ತದತ್ರ ವಿದ್ಯತೆ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ। ಸ ಬ್ರೂಯಾನ್ ಯಾವಾನ್ವಾ ಅಯಮಾಕಾಶ ಸ್ತಾವಾನೇಷೋಽಂತರ್ಹೃದಯ ಆಕಾಶಃ । ಉಭೇಽಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ। ಉಭಾವಗ್ನಿಶ್ಚ ವಾಯುಶ್ಚ

ಸೂರ್ಯಾಚಂದ್ರಮಸಾವು ಭೌ । ವಿದ್ಯುನ್ನಕ್ಷತ್ರಾಣಿ, ಇದು ಮೊದಲಾದ ಸಮಗ್ರವಾಕ್ಯವನ್ನುದಾಹರಿಸ ಬೇಕಿತ್ತು. ಆದಾಗ್ಯೂ ಅಪೇಕ್ಷಿತವಾದ ಅಂಶವನ್ನು ದಾಹರಿಸಿದುದರಿಂದಲೇ ಪೂರ್ತಿಯಾಗಿರುವುದರಿಂದ ವಿಷಯ ಪೂರ್ವಪಕ್ಷ ಯುಕ್ತ್ಯಾದಿಗಳನ್ನು ಇಷ್ಟರಿಂದಲೇ ತಿಳಿಯಲಿಕ್ಕೆ ಶಕ್ಯವಾಗುವುದರಿಂದ ಉಪಯುಕ್ತವನ್ನು ಮಾತ್ರ ಉದಾಹರಿಸಿದ್ದು.

ಪೀಠಿಕೆ ॥ ಆಕಾಶಕ್ಕೆ ಸರ್ವಾಧಾರತ್ವವಿದ್ದುದರಿಂದ ಹೃತ್ಪದ್ಮಸ್ಥತ್ವವಿರಲಿ. ಆ ಆಕಾಶಕ್ಕೆ ಆಕಾಶಸ್ತಲ್ಲಿಂಗಾತ್ ಎನ್ನುವ ನ್ಯಾಯದಿಂದ ವಿಷ್ಣುತ್ವವಿದ್ದುದರಿಂದ ವಿಷ್ಣುವಿಗೇನೇ ಹೃತ್ಪದ್ಮಸ್ಥತ್ವವು ಸಿದ್ಧವಾಗುತ್ತದೆ ಎಂದರೆ—

ಭಾಷ್ಯ ॥ ಸ ಚಾಕಾಶೋ ನ ವಿಷ್ಣುಃ। ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ (ಮಹಾನಾಮ್ನೀ ೧೧) । ಇತಿ ಶ್ರುತೇರಿತಿ(ಶ್ರುತೇಃ) ॥ ೨ ॥

ಭಾಷ್ಯಾರ್ಥ ॥ (ಸರ್ವಾಧಾರವೆಂದೂ ಹೃತ್ಪದ್ಮಸ್ಥವೆಂದೂ ಯಾವುದು ಶ್ರುತಿಯಲ್ಲಿ ಹೇಳಲ್ಪಟ್ಟದೋ.) ಅದು ಭೂತಾಕಾಶವೇ. ವಿಷ್ಣುವಲ್ಲ (ಏಕೆ ವಿಷ್ಣು ವಲ್ಲ ಎಂದರೆ) ತಸ್ಯ=ಪದ್ಮಕೋಶ ಪ್ರತೀಕಾಶಂ ಹೃದಯಂ ಚಾಪ್ಯಧೋಽಮುಖಂ ಎನ್ನುವ ಪೂರ್ವವಾಕ್ಯದಲ್ಲಿ ಪ್ರಕೃತವಾದ ಹೃತ್ಪದ್ಮಕೋಶದ, ಅಂತೇ=ಮಧ್ಯದಲ್ಲಿ ಸೂಕ್ಷ್ಮಂ=ಸೂಕ್ಷ್ಮವಾದ, ಸುಷಿರಂ=ಆಕಾಶವು, ಇದೆ. ಅದರಲ್ಲಿ ಸರ್ವಜಗತ್ತೂ ಆಶ್ರಿತವಾಗಿದೆ ಎನ್ನುವ ವಾಕ್ಯದಲ್ಲಿ ಸುಷಿರಪದವು ಶ್ರುತವಾದ ಪ್ರಯುಕ್ತ ಸುಷಿರರೂಪವಾದ ಪ್ರಸಿದ್ಧಾಕಾಶಕ್ಕೇನೇ ಸರ್ವಾಧಾರತ್ವವು ಶ್ರುತವಾಗಿದೆ. ಈ ಶ್ರುತಿಸಮಾಖ್ಯೆಯಿಂದ ಪ್ರಸಿದ್ಧಾಕಾಶಕ್ಕೇನೇ ಸರ್ವಾಧಾರತ್ವವು. ವಿಷ್ಣುವಿಗೆ ಅಲ್ಲ.

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

ಭಾಷ್ಯ ॥ ಅತ ಆಹ ॥ ೩ ॥

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ದಹರ ಉತ್ತರೇಭ್ಯಃ ಓಂ ॥ ೧೪ ॥

ಸೂತ್ರಾರ್ಥ ॥ ಉತ್ತರೇಭ್ಯಃ=ಯಃ ಆತ್ಮಾ ಇತ್ಯಾದಿ ದಹರವಾಕ್ಯದಿಂದ ಉತ್ತರವಾಕ್ಯದಲ್ಲಿ ಶ್ರುತಗಳಾದ ಅಪಹತಪಾಪ್ಮತ್ವಾದಿಗುಣಗಳಿಂದ, ದಹರೇ=ಹೃತ್ಪದ್ಮದಲ್ಲಿರತಕ್ಕ ಅಲ್ಪಾಕಾಶದಲ್ಲಿ ವಿಜಿಜ್ಞಾಸ್ಯನೆಂದು ಹೇಳಲ್ಪಟ್ಟವನು, ತತ್ತು=ವಿಷ್ಣುವೇ, ಭೂತಾಕಾಶಾದಿಗಳಲ್ಲ.

ಬಾಷ್ಯ ॥ ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘಿ ತ್ಸೋಽಪಿ ಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ (ಛಾ.ಉ.೮.೭.)। ಇತ್ಯಾದಿಭ್ಯ ಉತ್ತರೇಭ್ಯೋ ಗುಣೇಭ್ಯೋ ದಹರೇ ವಿಷ್ಣುರೇವ ॥ ೪ ॥

ಭಾಷ್ಯಾರ್ಥ ॥ ಯಃ ಆತ್ಮಾ=ಯಾವ ಹೃತ್ಪದ್ಮಾಕಾಶದಲ್ಲಿರತಕ್ಕ ಪರಮಾತ್ಮನು ನ ವಧೇನಾಸ್ಯಹನ್ಯತೇ

ಎಂದು ಶರೀರನಾಶದಿಂದಲೂ ಅವಧ್ಯನೆಂದು ಹೇಳಲ್ಪಟ್ಟಿದ್ದಾನೋ, ಆತನು ನಿರಂತರದಲ್ಲಿಯೂ ಸ್ವತಃ ಪಾಪಾತ್ಯಂತಾಭಾವವುಳ್ಳವನು, ಮುದಿತನವಿಲ್ಲದವನು, ಮರಣರಹಿತನು, ಶೋಕರಹಿತನು, ಬುಭುಕ್ಷಾರಹಿತನು, ಪಾನೇಚ್ಛೆಯಿಲ್ಲದವನು, ಆತನಿಗೆ ಇಷ್ಟವಾದುದು ತನ್ನಷ್ಟಕ್ಕೇನೇ ಆಗುವುದರಿಂದ ಸತ್ಯಕಾಮನಾವುಳ್ಳವನು, ಅಪ್ರತಿಹತವಾದ ಸಂಕಲ್ಪವುಳ್ಳವನು. ಅಂತಹವನು ಅನ್ವೇಷಣ ಮಾಡಲರ್ಹನು, ಆತನು ವಿಚಾರಾರ್ಹನು ಇತ್ಯಾದಿ ರೂಪಗಳಾದ ವಿಷಯವಾಕ್ಯದ ಅನಂತರದಲ್ಲಿರತಕ್ಕ ಗುಣಪ್ರತಿಪಾದಕಗಳಾದ ವಾಕ್ಯಗಳಿಂದ ಹೇಳಲ್ಪಟ್ಟ ಗುಣಗಳಿಂದ ಹೃತ್ಪದ್ಮದಲ್ಲಿರತಕ್ಕ ಅಲ್ಪಾಕಾಶದಲ್ಲಿ ಇರತಕ್ಕವನು ವಿಷ್ಣುವೇ.

**ಪೀಠಿಕೆ** ॥ ಅಪಹತಪಾಪ್ಮತ್ವಾದಿಗಳು ಹೇಗೆ ವಿಷ್ಣುತ್ವ ನಿಶ್ಚಾಯಕಗಳಾಗುತ್ತವೆ. ಅವುಗಳು ವಿಷ್ಣುವಿನಲ್ಲಿಯೇ ಇರತಕ್ಕವುಗಳೆಂದು ಸಿದ್ಧವಾಗಲಿಲ್ಲ ಎಂದರೆ—

**ಭಾಷ್ಯ ॥ (೧) ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ (ಬೃ.೫.೫.)। (೨) ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ (ಛಾ.೧.೬.೭.)। ಇತ್ಯಾದಿನಾ ವಿಷ್ಣೋರೇವ ಹಿ ತೇ ಗುಣಾಃ ॥ ೫ ॥**

**ಭಾಷ್ಯಾರ್ಥ** ॥ (೧) ಯಾವನು ಅಶನೇಚ್ಛಾ ಪಾನೇಚ್ಛೆಗಳನ್ನು ದುಃಖವನ್ನು ಮೂರ್ಛೆಯನ್ನು ಮುದಿತನವನ್ನು ಮರಣವನ್ನು ಅತಿಕ್ರಮಿಸಿ ಇರುತ್ತಾನೋ (ಇಲ್ಲಿದ್ದ ಯಃ ಎನ್ನುವುದಕ್ಕೆ ತಮಾತ್ಮಾನಂ ವಿದಿತ್ವಾ ಎನ್ನುವಲ್ಲಿದ್ದ ತತ್ ಶಬ್ದದಿಂದ ಅನ್ವಯವು.) (೨) ಆ ಈ ಶ್ರೀಪರಮಾತ್ಮನು ಎಲ್ಲಾ ಪಾಪಗಳಿಂದ ನಿರಂತರದಲ್ಲಿಯೂ ಸ್ವತ ಏವ ಉದ್ಗತನಾಗಿರುತ್ತಾನೆ. ಅಂದರೆ ಪಾಪಲೇಶರಹಿತನು, ಇದು ಮೊದಲಾದ ವಾಕ್ಯದಿಂದ ಯಾವ ಕಾರಣದಿಂದ ಅಪಹತಪಾಪ್ಮತ್ವಾದಿರೂಪಗಳಾದ ಉತ್ತರವಾಕ್ಯದಲ್ಲಿ ಹೇಳಲ್ಪಟ್ಟ ಗುಣಗಳು ವಿಷ್ಣುವಿಗೇನೇ ಸಿದ್ಧಗಳಾಗಿವೆಯೋ (ಆದಕಾರಣ ಅವುಗಳು ವಿಷ್ಣುವಿನ ಲಿಂಗಗಳೆಂದೇ ನಿಶ್ಚಯವಾಗುತ್ತವೆ.)

**ವಿಶೇಷಾಂಶ** ॥ (೧) ಆದಿಶಬ್ದದಿಂದ ಸತ್ಯಕಾಮತ್ವ ಮೊದಲಾದ ಗುಣಾಂತರಗಳನ್ನು ಬೋಧಿಸತಕ್ಕ ವಾಕ್ಯಗಳನ್ನು ಇಟ್ಟುಕೊಳ್ಳಬೇಕು. (೨) ಇತರರಲ್ಲಿ ಪಾಪಾದ್ಯಭಾವವು ಕಥಂಚಿತ್ ಕೂಡಿದರೂ ಸತ್ಯಕಾಮತ್ವಾದಿಗಳು ಸರ್ವಥಾ ಕೂಡುವುದಿಲ್ಲ ಎಂದು ತಿಳಿಸುವುದಕ್ಕಾಗಿ ಆದಿಶಬ್ದ ಮತ್ತು ಬಹುವಚನವನ್ನು ಹೇಳಿದ್ದು.

**ಪೀಠಿಕೆ** ॥ ಆದಾಗ್ಯೂ ಈ ಗುಣಗಳು ವಿಷ್ಣುವಿಗೇನೇ ಎನ್ನುವುದು ಕೂಡುವುದಿಲ್ಲ. ರಮಾದಿ ಗಳಲ್ಲಿಯೂ ಕೂಡಬಹುದು ಎಂದರೆ—

**ಭಾಷ್ಯ ॥ ನಿತ್ಯತೀರ್ಣಾಶನಾಯಾದಿರೇಕ ಏವ ಹರಿಃ ಸ್ವತಃ। ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ತರಂತಿ ಹಿ ॥ ಇತಿ ಪಾದ್ಮೇ ॥ ೬ ॥**

**ಭಾಷ್ಯಾರ್ಥ** ॥ ಸ್ವತಃ=ಇತರರ ಅಪೇಕ್ಷೆಯಿಲ್ಲದೆ ನಿರಂತರದಲ್ಲಿಯೂ ದಾಟಲ್ಪಟ್ಟ ಅಶನೇಚ್ಛೆ ಮೊದಲಾದವುಗಳುಳ್ಳವನು ಶ್ರೀಹರಿಯೊಬ್ಬನೇ, (ಮತ್ತೊಬ್ಬನಲ್ಲ) ಶ್ರೀಹರಿಯಿಂದ ಇತರರಾದ ರಮಾ ಬ್ರಹ್ಮಾದಿಗಳಾದರೂ ಅಶನ ಪಾನೇಚ್ಛಾ ಶೋಕ ಮೊದಲಾದ ದೋಷಗಳನ್ನು ಶ್ರೀಹರಿಯ ಅನುಗ್ರಹ

ದಿಂದಲೇ ಅತಿಕ್ರಮಿಸುತ್ತಾರೆ. (ಸ್ವತಃ ಅಲ್ಲ) ಪ್ರಸಿದ್ಧ ಹೀಗೆ ಪಾದ್ಮಪುರಾಣದಲ್ಲಿ (ಉಕ್ತವಾಗಿದೆ) (ಆದ ಕಾರಣ ನಿರಪೇಕ್ಷಗಳಾದ ಗುಣಗಳು ಇತರರಲ್ಲಿ ಕೂಡದಿರುವುದರಿಂದ ವಿಷ್ಣೋರೇವ ಎಂದು ಉಕ್ತವಾಗಿದೆ.)

**ಪೀಠಿಕೆ ॥** ಹಾಗಾದರೆ ರಮಾದಿಗಳಲ್ಲಿ ಅಪಹತಪಾಪ್ಮತ್ವಾದಿಗಳು ಇತರಾಧೀನಗಳಾಗಿ ಇಲ್ಲದಿದ್ದರೂ ಯಥಾ ಕಥಂಚಿತ್ ಇದ್ದಪ್ರಯುಕ್ತ ಇತರರಲ್ಲಿಯೂ ಇರುವ ಅಪಹತಪಾಪ್ಮತ್ವಾದಿಗಳಿಂದ ವಿಷ್ಣುವೆಂದು ನಿಶ್ಚಯವು ಹೇಗೆ ಆಗುತ್ತದೆ ಎಂದರೆ—

**ಭಾಷ್ಯ ॥ ಸಾಪೇಕ್ಷನಿರಪೇಕ್ಷಯೋಶ್ಚ ನಿರಪೇಕ್ಷಂ ಸ್ವೀಕರ್ತವ್ಯಂ ॥ ೬ ॥**

**ಭಾಷ್ಯಾರ್ಥ ॥** ಅನ್ಯಾಧೀನ, ಅನ್ಯಾನಧೀನ, ಇವುಗಳ ಮಧ್ಯದಲ್ಲಿ ನಿರಪೇಕ್ಷವೇ ಆದ ಅಪಹತಪಾಪ್ಮತ್ವಾದಿಗಳು (ಲಿಂಗವಾಗಿ) ಸ್ವೀಕರಿಸಲ್ಪಡಬೇಕು. (ತಥಾಚ ವಿವಕ್ಷಿತವಾದ ಲಿಂಗವು ಅನ್ಯತ್ರ ಇಲ್ಲದಿರುವುದರಿಂದ ಆದರಿಂದ ವಿಷ್ಣುವೆಂದು ನಿಶ್ಚಯವು ಆಗಿಯೇ ಆಗುತ್ತದೆ.)

**ಪೀಠಿಕೆ ॥** ಮತ್ತು ಅಭಾವರೂಪಗಳಾದ ಅಪಹತಪಾಪ್ಮತ್ವಾದಿಗಳು ಇತರವಾದ ಆಕಾಶಾದಿಗಳಲ್ಲಿ ಸಾಕ್ಷಾತ್ತಾಗಿ ಅಥವಾ ಅಭಿಮಾನಿಗಳ ದ್ವಾರಾ ಯಥಾ ಕಥಂಚಿತ್ ಕೂಡಿದಾಗ್ಯೂ ಇತರರಲ್ಲಿ ಸತ್ಯಕಾಮತ್ವಾದಿಗಳು ಇವೆ ಎನ್ನುವುದು ಸರ್ವಥಾ ಯುಕ್ತವಲ್ಲ. ಆದರಿಂದ ವಿಷ್ಣುವೆಂದು ನಿಶ್ಚಯವು ಆಗುತ್ತದೆ ಎನ್ನುತ್ತಾರೆ—

**ಭಾಷ್ಯ ॥ ಸತ್ಯಕಾಮಃ(ಮೋಽ)ಪರೋ ನಾಸ್ತಿ ತಮೃತೇ ವಿಷ್ಣುಮವ್ಯಯಂ।**
**ಸತ್ಯಕಾಮತ್ವಮನ್ಯೇಷಾಂ ಭವೇತ್ತತ್ಕಾಮ್ಯಕಾಮಿತಾ ॥ ಇತಿ(ಚ)ಸ್ಕಾಂದೇ ॥ ೧೪ ॥**
**॥ ೭ ॥**

**ಭಾಷ್ಯಾರ್ಥ ॥** ಅವ್ಯಯಂ = ಅಮೋಘ ಕಾಮನಾವುಳ್ಳ ಆ ವಿಷ್ಣುವನ್ನು ಹೊರತು ಮತ್ತೊಬ್ಬನು ಸತ್ಯಕಾಮನೂ ಸತ್ಯಸಂಕಲ್ಪನೂ ಇಲ್ಲ. (ಶ್ರೀವಿಷ್ಣುವಿನಲ್ಲಿ ಸತ್ಯಕಾಮನಾ ಇದೆ. ಇತರರಲ್ಲಿ ಇಲ್ಲವೆಂದು ಪ್ರತಿಪಾದಿಸುವುದಕ್ಕಾಗಿ ವಕ್ರೋಕ್ತಿಯು.) ವಿಷ್ಣುವ್ಯತಿರಿಕ್ತರಾದ ರಮಾದಿಗಳಿಗೆ (ಕೆಲವು ಆಗಮಗಳಲ್ಲಿ) ಸತ್ಯಕಾಮತ್ವವು ತೋರಿದಾಗ್ಯೂ ತತ್ಕಾಮ್ಯಕಾಮಿತಾ = ವಿಷ್ಣುವಿನ ಕಾಮನಾ ವಿಷಯವೇ ವಿಷಯವಾಗಿ ಉಳ್ಳ ಕಾಮನಾವತ್ವರೂಪವೇ ಆಗುವುದು. ಅಂದರೆ ಶ್ರೀಹರಿಯು ಇವರಿಗೋಸ್ಕರ ಯಾವುದನ್ನು ಕಾಮಿಸುವನೋ ಅದನ್ನೇ ಕಾಮಿಸುವುದರಿಂದ ಸತ್ಯಕಾಮರು ಎನ್ನಿಸುತ್ತಾರೆ. (ಮುಖ್ಯವಲ್ಲ) ಎಂದು ಸ್ಕಾಂದಪುರಾಣದಲ್ಲಿ ಹೇಳಿಯದೆ.

**ವಿಶೇಷಾಂಶ ॥** ತಥಾಚ ಅಪಹತಪಾಪ್ಮತ್ವವು ಸ್ವತಃ ಯಾ ಪರಾಧೀನವು ಎಂದು ಹೇಗೆ ಎರಡು ವಿಧವೋ ಹಾಗೆಯೇ ಸತ್ಯಕಾಮತ್ವವಲ್ಲ. ಮತ್ತೆ ಒಂದು ವಿಧವು. ಅದು ಮುಖ್ಯವು ವಿಷ್ಣುವಿನಲ್ಲಿಯೇ. ಇತರರಲ್ಲಿ ಪಾರಿಭಾಷಿಕವು. ಆದಕಾರಣ ಸತ್ಯಕಾಮತ್ವಾದಿಗಳನ್ನು ವಿವಕ್ಷಾ ಮಾಡಿಕೊಂಡು ಆ ಗುಣಗಳು ವಿಷ್ಣುವಿಗೇನೇ ಎಂದು ಹೇಳಿದ್ದು ಯುಕ್ತವು. ॥ ೧೪ ॥

**ಪೀಠಿಕೆ ॥** ಯುಕ್ತ್ಯಂತರದಿಂದ ವಿಷ್ಣುವಿಗೆ ಹೃತ್ಪದ್ಮಸ್ಥತ್ವವನ್ನು ಪ್ರತಿಪಾದಿಸತಕ್ಕ ಸೂತ್ರವನ್ನುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ ॥ ೧೫ ॥

**ಸೂತ್ರಾರ್ಥ ॥** ಹಿಂದೆ ಹೇಳಿದ ಗುಣಗಳಿಂದ ಮಾತ್ರ ಹೃತ್ಪದ್ಮಸ್ಥನು ಶ್ರೀಪರಮಾತ್ಮನು ಎಂದು ಅಲ್ಲ. ಮತ್ತೆ ಗತಿಶಬ್ದಾಭ್ಯಾಂ ಚ-ಅಹರಹಃ ಎನ್ನುವ ವಾಕ್ಯದಲ್ಲಿ ಹೃತ್ಪದ್ಮಸ್ಥನಲ್ಲಿ ಇರತಕ್ಕುದೆಂದು ಶ್ರುತಗಳಾದ ಸುಪ್ತಪ್ರಾಪ್ಯತ್ವ, ಬ್ರಹ್ಮಶಬ್ದ ಇವುಗಳಿಂದ ಕೂಡ ಹೃತ್ಪದ್ಮದಲ್ಲಿರತಕ್ಕ ಅಲ್ಪಾಕಾಶದಲ್ಲಿ ಇರತಕ್ಕವನು ವಿಷ್ಣುವೇ ಎಂದು ತಿಳಿಯುತ್ತದೆ. ಅಲ್ಲದೆ ಇವುಗಳಿಂದ ಮಾತ್ರವಲ್ಲ. ಮತ್ತೆ ಅರಶ್ಚ ಎನ್ನುವ ಶ್ರುತಿಯಲ್ಲಿ ಸುಪ್ತಪ್ರಾಪ್ಯತ್ವ, ಬ್ರಹ್ಮಶಬ್ದಗಳಂತೆ ವಿಷ್ಣುಲಿಂಗಗಳೆಂದು ಸ್ಮೃತಿಸಿದ್ಧವಾದ ಅರಣ್ಯ ಎನ್ನುವ ಸುಧಾಸಮುದ್ರಾಶ್ರಯ ಲೋಕವತ್ವರೂಪವಾದ ಲಿಂಗವು ದೃಷ್ಟವಾಗಿದೆ. ಹೇಗೆ ಬ್ರಹ್ಮಲೋಕಶಬ್ದವು ಶ್ರುತವಾದುದರಿಂದ ಸುಪ್ತಪ್ರಾಪ್ಯತ್ವವು ಬ್ರಹ್ಮಧರ್ಮವೋ ಹಾಗೆಯೇ ಇದೂ ಬ್ರಹ್ಮಧರ್ಮವೇ. ಆದುದರಿಂದಲೂ ದಹರಸ್ಥನು ವಿಷ್ಣುವೇ.

**ಪೀಠಿಕೆ ॥** ಅಸಿದ್ಧಿಪರಿಹಾರಕ್ಕಾಗಿ ಶ್ರುತಿಯನ್ನುದಾಹರಿಸುತ್ತಾರೆ—

**ಭಾಷ್ಯ ॥ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ** (ಛಾ.ಉ.೮. ೩.೨.) **। ಇತಿ ಸುಪ್ತಸ್ಯ ತದ್ಗತಿರ್ಬ್ರಹ್ಮಶಬ್ದಶ್ಚೋಚ್ಯತೇ ॥ ೮ ॥**

**ಭಾಷ್ಯಾರ್ಥ ॥** (ಈದಾವ ಸುಪ್ತರಾದ ಪ್ರಜೆಗಳು) ಪ್ರತಿದಿವಸದಲ್ಲಿಯೂ, ಈ ಶ್ರೀ ಹರಿಯನ್ನು ಹೊಂದುವವರಾಗಿ, ವಿಷ್ಣುವಿನ ಆವಾಸಸ್ಥಾನವಾದ ಹೃತ್ಪದ್ಮವನ್ನು ತದ್ವಾರಾ ಅಲ್ಲಿರತಕ್ಕ ಬ್ರಹ್ಮನನ್ನು ಬ್ರಹ್ಮಾಖ್ಯ ಆಶ್ರಯವನ್ನಾಗಲೀ ತಿಳಿಯುವುದಿಲ್ಲ (ಸ ಏಷಃ ಆತ್ಮಾ ಹೃದಿ) ಹೀಗೆ ಛಂದೋಗಶ್ರುತಿಯಲ್ಲಿ ಸುಪ್ತನಾದ ಜೀವನಿಗೆ ಪ್ರತಿನಿತ್ಯವೂ ಹೃದ್ಗತನಾದ ಬ್ರಹ್ಮನ ಪ್ರಾಪ್ತಿಯು ಹೇಳಲ್ಪಡುತ್ತದೆ. (ಹೊಂದಲ್ಪಡತಕ್ಕ ವಸ್ತುವಿನಲ್ಲಿ) ಬ್ರಹ್ಮಶಬ್ದವೂ ಶ್ರುತವಾಗಿದೆ. ಆದಕಾರಣ ದಹರಸ್ಥನು ವಿಷ್ಣುವೇ.

**ಪೀಠಿಕೆ ॥** ಸುಪ್ತಪ್ರಾಪ್ಯತ್ವವು ವಿಷ್ಣುತ್ವನಿಶ್ಚಾಯಕವು ಹೇಗೆ ಎಂದರೆ—

**ಭಾಷ್ಯ ॥ ಸತಾ ಸೋಮ್ಯ ತದಾ ಸಂಪನ್ನೋ ಭವತಿ** (ಛಾ.ಉ.೬.೮.)**। ಇತಿ ಶ್ರುತೇಸ್ತಂ ಹಿ ಸುಪ್ತೋ ಗಚ್ಛತಿ ॥ ೯ ॥**

**ಭಾಷ್ಯಾರ್ಥ ॥** ಭಕ್ತಿಜ್ಞಾನಾರ್ಹನಾದ ಶ್ವೇತುಕೇತುವೇ ಸುಪ್ತಿಕಾಲದಲ್ಲಿ (ಜೀವನು) ಸತ್ ಶಬ್ದವಾಚ್ಯನಾದ ಬ್ರಹ್ಮನಿಂದ ಸಂಗತನಾಗುತ್ತಾನೆ. (ಇದು ಉದ್ದಾಲಕರ ವಾಕ್ಯವು) ಹೀಗೆ ಶ್ರುತಿಯಿದ್ದ ಪ್ರಯುಕ್ತ ಸುಪ್ತನಾದವನು ವಿಷ್ಣುವನ್ನು ಹೊಂದುತ್ತಾನೆ. ಪ್ರಸಿದ್ಧವು.

**ವಿಶೇಷಾಂಶ ॥** ತಥಾಚ ಸುಪ್ತಪ್ರಾಪ್ಯತ್ವವು ವಿಷ್ಣುವಿನ ಲಿಂಗವೆಂದು ಶ್ರುತಿಯಲ್ಲಿ ಪ್ರಸಿದ್ಧಿಯಿದ್ದುದರಿಂದ ವಿಷ್ಣುವೇ ಎಂದು ನಿಶ್ಚಯವಾಗುತ್ತದೆ.

**ಪೀಠಿಕೆ ॥** ಲಿಂಗಂ ಚ ತಥಾ ಹಿ ದೃಷ್ಟಂ ಎನ್ನುವ ಸೂತ್ರಶೇಷವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ** (ಛಾ.ಉ.೮.೫.೩.) **। ಇತಿ ಲಿಂಗಂ ಚ ತಥಾ ಹಿ ದೃಷ್ಟಂ ॥ ೧೦ ॥**

**ಭಾಷ್ಯಾರ್ಥ ॥ ಅಹರಹಃ** ಎನ್ನುವ ಶ್ರುತಿಯಲ್ಲಿ (ಹೇಗೆ ಸುಪ್ತಗಮ್ಯತ್ವವು ಹೃತ್ಪದ್ಮಸ್ಥನಲ್ಲಿ ದೃಷ್ಟವಾಗಿದೆಯೋ) ಹಾಗೆಯೇ ವಿಷ್ಣುವಿನ ಲೋಕವಾದ ಶ್ವೇತದ್ವೀಪದಲ್ಲಿ ಅರ ಣ್ಯ ಎನ್ನುವ ಎರಡು ಅಮೃತ ಸಮುದ್ರಗಳು ಅಥವಾ ಸಮುದ್ರಸಮಾನಗಳಾದ ಸುಧಾಸಮುದ್ರಗಳು ಇರುತ್ತವೆ. ಅತಿಪ್ರಸಿದ್ಧ ಎನ್ನುವ ಛಂದೋಗಶ್ರುತಿಯಲ್ಲಿ (ಹೃತ್ಪದ್ಮಸ್ಥನಲ್ಲಿ) ಅರ ಣ್ಯ ಎನ್ನುವ ಎರಡು ಅಮೃತಸಮುದ್ರಗಳಿಗೆ ಆಶ್ರಯವಾದ ಲೋಕವತ್ವರೂಪವಾದ ಲಿಂಗವೂ ಕೂಡ ಶ್ರುತವಾಗಿದೆ. (ಆದಕಾರಣ ದಹರಸ್ಥನು ವಿಷ್ಣುವೇ.)

**ಪೀಠಿಕೆ ॥** ಹಾಗಾದರೆ ಅರ ಣ್ಯ ಎನ್ನುವ ಎರಡು ಅಮೃತ ಸಮುದ್ರಗಳಿಗೆ ಆಶ್ರಯ ವಾದ ಲೋಕವತ್ವಲಿಂಗವು ಹೃತ್ಪದ್ಮಸ್ಥನಲ್ಲಿ ಶ್ರುತವಾದಾಗ್ಯೂ ಈತನು ವಿಷ್ಣುವೆನ್ನುವುದು ಹೇಗೆ ಸಿದ್ಧಿಸುತ್ತದೆಂದರೆ ಸೂತ್ರದಲ್ಲಿದ್ದ ಹಿ ಶಬ್ದಸೂಚಿತವಾದ ಸ್ಮೃತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ ।**
**ಇತ್ಯಾದಿನಾ ತಸ್ಯೈವ ಹಿ ತಲ್ಲಕ್ಷಣತ್ವೇನೋಚ್ಯತೇ ॥ ೧೫ ॥ ॥ ೧೧ ॥**

**ಭಾಷ್ಯಾರ್ಥ ॥** ಅರ ಣ್ಯ ಎಂದು ಪ್ರಸಿದ್ಧಗಳಾದ ಎರಡು ಅಮೃತಸಮುದ್ರಗಳು ಕ್ಷೀರಸಮುದ್ರದ ಮಧ್ಯದಲ್ಲಿರುವ ವಿಷ್ಣುಲೋಕದಲ್ಲಿ ಸರ್ವರಿಗೂ ಇಷ್ಟಕರಗಳಾಗಿವೆ. ಇದು ಮೊದಲಾದ ಪುರುಷೋತ್ತಮಧ್ಯಾನಚಕ್ರವಾಕ್ಯದಿಂದ ವಿಷ್ಣುವಿಗೇನೇ ಸುಧಾಸಮುದ್ರಾಶ್ರಯಲೋಕವತ್ವವು ಲಿಂಗವಾಗಿ ಪ್ರತಿಪಾದಿಸಲ್ಪಡುತ್ತದೆ. (ಆದಕಾರಣ ಈ ಲಿಂಗಬಲದಿಂದ ವಿಷ್ಣುತ್ವನಿಶ್ಚಯವು ಯುಕ್ತವು.) ॥ ೧೫ ॥

**ಪೀಠಿಕೆ ॥** ಹೇತ್ವಂತರದಿಂದ ವಿಷ್ಣುವಿಗೆ ಹೃತ್ಪದ್ಮಸ್ಥತ್ವವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ಓಂ ॥ ೧೬ ॥

**ಸೂತ್ರಾರ್ಥ ॥** (ಹಿಂದೆ ಹೇಳಿದ ಹೇತುಗಳಿಂದ ಮಾತ್ರವಲ್ಲ ಮತ್ತೆ) ಧೃತೇಶ್ಚ=ಈ ಪ್ರಕರಣದಲ್ಲಿ **ಸ ಸೇತುರ್ವಿಧೃತಿಃ** ಎಂದು ಸರ್ವಾಧಾರತ್ವ ಲಿಂಗವು ಶ್ರುತ ವಾದಪ್ರಯುಕ್ತವೂ ದಹರಪದ್ಮಸ್ಥನು ವಿಷ್ಣುವೇ. (ಈತನು ಹೃತ್ಪದ್ಮಸ್ಥನು ಎನ್ನುವುದು ಹೇಗೆ? ಎಂದು ಹೇಳಕೂಡದು.) ಅಸ್ಯ=ಈ ವಿಷ್ಣುವಿನ, ಮಹಿಮ್ನಃ=**ಸರ್ವೇ ಪಾಪ್ಮಾನಃ ಅತೋ ನಿವರ್ತಂತೇ** ಎನ್ನುವ ಸರ್ವಪಾಪರಾಹಿತ್ಯಾದಿ ಮಹಿಮೆಗೆ, ಅಂದರೆ ಮಹಿಮೆಯು, ಉಪಲಬ್ಧೇಃ = ಹೃತ್ಪದ್ಮಸ್ಥನಲ್ಲಿ ಇರುತ್ತದೆ ಎಂದು ಶ್ರುತವಾದ ಪ್ರಯುಕ್ತ ಮತ್ತು **ಯ ಏಷೋಽಂತರ್ಹೃದಯ ಆಕಾಶಃ ತಸ್ಮಿನ್ ಶೇತೇ** ಎಂದು ಹೇಳಲ್ಪಟ್ಟ ಹೃತ್ಪದ್ಮಸ್ಥನಿಗೆ **ಏಷ ಸೇತುರ್ವಿಧರಣಃ** ಎಂದು ಸರ್ವಾಧಾರತ್ವವು ಶ್ರುತವಾದ ಪ್ರಯುಕ್ತ ಈ ಸಮಾಖ್ಯಾಗಮದಲ್ಲಿ ಬೃಹದಾರಣ್ಯಕದಲ್ಲಿ ವಿಷ್ಣುವಿಗೆ **ಏಷ ಸರ್ವೇಶ್ವರಃ** ಇತ್ಯಾದಿಗಳಿಂದ ಸರ್ವೇಶ್ವರತ್ವಾದಿ ಮಾಹಾತ್ಮ್ಯವು ದೃಷ್ಟವಾದ ಪ್ರಯುಕ್ತ ದಹರಸ್ಥನು ವಿಷ್ಣುವೇ.

**ಭಾಷ್ಯ ॥ ಏಷ *ಸೇತುರ್ವಿಧೃತಿಃ (ಛಾ.ಉ.೮.೪.)। ಇತಿ ಧೃತೇಃ ॥ ೧೨ ।**

**ಭಾಷ್ಯಾರ್ಥ ॥** ಹೃತ್ಪದ್ಮಸ್ಥನೆಂದು ಯಾವ ಆತ್ಮನು ಹೇಳಲ್ಪಟ್ಟಿದ್ದಾನೋ ಆ ಈ ಆತ್ಮನು (ಭೂರಾದಿ ಲೋಕಗಳ ಅಸಾಂಕರ್ಯಕ್ಕಾಗಿ ಅಥವಾ ವರ್ಣಾಶ್ರಮಗಳ ಸಾಂಕರ್ಯಾಭಾವಕ್ಕಾಗಿ) ಧಾರಣಪೋಷಣ ಸಮರ್ಥನು, ಸರ್ವಾಶ್ರಯನು.

**ವಿಶೇಷಾಂಶ ॥** ಯದ್ಯಪಿ ಛಾಂದೋಗಶ್ರುತಿಯಲ್ಲಿ ಸ ಸೇತುರ್ವಿಧೃತಿಃ ಎಂದು ಪಾಠವು. ಶಾಖಾಂತರಗಳಿಗೂ ಉಪಸಂಗ್ರಹಣಕ್ಕಾಗಿ ಏಷ ಸೇತುರ್ವಿಧೃತಿಃ ಎಂದು ಹೇಳಿದ್ದು.

**ಪೀಠಿಕೆ ॥** ಹೀಗೆ ಸೇತುಸಮುಚ್ಚಾಯಕವಾದ ಸೂತ್ರದಲ್ಲಿದ್ದ ಚ ಶಬ್ದಕ್ಕೆ ಯಥಾಶ್ರುತವಾದ ಅನ್ವಯದಿಂದ ಲಿಂಗೋಕ್ತಿಪರವಾಗಿ ಧೃತೇಶ್ಚ ಎನ್ನುವ ಅಂಶವನ್ನು ವ್ಯಾಖ್ಯಾನಮಾಡಿ ಈಗ ಸಮಗ್ರಸೂತ್ರವನ್ನು ಸಮಾಖ್ಯಾಪರವಾಗಿ ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಏಷ ಭೂತಾಧಿಪತಿರೇಷ ಭೂತಪಾಲಃ (ಬೃ.ಉ.೪.೨೨.)। ಇತ್ಯಾದ್ಯಸ್ಯ ಮಹಿಮ್ನೋಽಸ್ಮಿನ್ನುಪಲಬ್ಧೇಃ ॥ ೧೩ ॥**

**ಭಾಷ್ಯಾರ್ಥ ॥** (ಬೃಹದಾರಣ್ಯಕದಲ್ಲಿ ಯ ಏಷೋಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ ಇತ್ಯಾದಿಗಳನ್ನು ಹೇಳಿ ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ ಇತ್ಯಾದಿಗಳನ್ನು ಹೇಳಿದ್ದರಿಂದ ದಹರಸ್ಥನು ವಿಷ್ಣುವೇ.) ಅಸ್ಮಿನ್=ಈ ಬೃಹದಾರಣ್ಯಕದಲ್ಲಿ ಏಷಃ ಈ ಸರ್ವೇಶ್ವರನು ಸರ್ವಾಧಿಪತಿಯೂ ಪ್ರಸಿದ್ಧನೂ ಆದವನು, ಭೂತಾಧಿಪತಿಃ=ಅನಾದಿಕಾಲವನ್ನಾರಂಭಿಸಿಯೇ ಅಧಿಪತಿಯು, (ಈತನ ಆಧಿಪತ್ಯಕ್ಕೆ ಆದಿಯಿಲ್ಲ) ಭೂತಪಾಲಃ=ಅನಾದಿಕಾಲವನ್ನಾರಂಭಿಸಿಯೇ ಪಾಲಕನು, ಇದು ಮೊದಲಾದ ವಾಕ್ಯದಿಂದ, ಅಸ್ಯ=ಶ್ರೀವಿಷ್ಣುವಿನ, ಮಹಿಮ್ನಃ=ಭೂತಾಧಿಪತಿತ್ವಾದಿ ಮಹಿಮೆಗೆ, (ಅಂದರೆ ಮಹಿಮೆಯನ್ನು) ಅಸ್ಮಿನ್=ದಹರಾಕಾಶಗತವಾದ ವಸ್ತುವಿನಲ್ಲಿ ಉಪಲಬ್ಧೇಃ=ಹೇಳಿದ ಪ್ರಯುಕ್ತ.

**ವಿಶೇಷಾಂಶ ॥** ಆದಿಶಬ್ದದಿಂದ ಏಷ ಸರ್ವಸ್ಯ ವಶೀ ಎನ್ನುವ ಪೂರ್ವವಾಕ್ಯವನ್ನು ಏಷ ಸೇತುರ್ವಿಧರಣ ಎನ್ನುವ ಉತ್ತರವಾಕ್ಯವನ್ನು ಇಟ್ಟುಕೊಳ್ಳಬೇಕು. ಆದುದರಿಂದಲೇ ಮಧ್ಯದ ವಾಕ್ಯವನ್ನು ಇಟ್ಟುಕೊಂಡದ್ದು.

**ಪೀಠಿಕೆ ॥** ಸರ್ವಾಧಾರತ್ವಲಿಂಗವು ಶ್ರುತವಾದ ಪ್ರಯುಕ್ತ ಹೃತ್ಪದ್ಮಸ್ಥನು ವಿಷ್ಣುವೆಂದು ಯಾವುದು ಉಕ್ತವಾಗಿಯದೋ, ಅಲ್ಲಿ ಸರ್ವಾಧಾರತ್ವವು ವಿಷ್ಣುತ್ವ ನಿಶ್ಚಾಯಕವು ಹೇಗೆ ಎಂದರೆ—

**ಭಾಷ್ಯ ॥ ಏತಸ್ಮಿನ್(ನು)ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ (ಬೃ.ಉ.೫.೮.೧೧.)। ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ (ಬೃ. ಉ. ೫.೮.೯.) ॥ ೧೪ ॥**

---

★ ಶ್ರಿತಮಸ್ಮಿನ್ ಜಗತ್ಸರ್ವಮಿತಿ ಸೇತುರಿತೀರಿತಃ ಎಂದು ಹೇಳಿದ್ದರಿಂದ ಸೇತು ಶಬ್ದವು ಮುಖ್ಯಾರ್ಥಕವು.

ಭಾಷ್ಯಾರ್ಥ ॥ ★ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಎಂದು ಪ್ರತೀಕವನ್ನು ಗ್ರಹಣ ಮಾಡಿದ್ದರಿಂದ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ, ದ್ಯಾವಾಪೃಥಿವ್ಯೌ ಇದುಮೊದಲಾದ ಬಹು ವಾಕ್ಯಗಳನ್ನು ಸೂಚಿಸಿದರು.

ಪೀಠಿಕೆ ॥ ಹಾಗಾದರೆ ಸಮಾಖ್ಯಾಶ್ರುತಿಯಿಂದ ಅವಗತವಾದ ಸರ್ವೇಶ್ವರತ್ವಾದಿ ಮಹಿಮೆಯು ವಿಷ್ಣುಲಿಂಗವೆಂದು ಹೇಗೆ ಅವಗತವಾಗುತ್ತದೆ ಎಂದರೆ—

**ಭಾಷ್ಯ ॥ ಸ ಹಿ ಸರ್ವಾಧಿಪತಿಃ ಸ ಹಿ ಸರ್ವಪಾಲಃ ಸ ಈಶಃ ಸ ವಿಷ್ಣುಃ। ಪತಿಂ ವಿಶ್ವಸ್ಯಾತ್ಮೇಶ್ವರಂ (ಮಹಾನಾಮ್ನೀ ೧೧.)ಇತ್ಯಾದಿಶ್ರುತಿಭ್ಯಃ ತಸ್ಯ ಹ್ಯೇಷ ಮಹಿಮಾ ॥ ೧೫ ॥**

ಭಾಷ್ಯಾರ್ಥ ॥ (೧) ಆ ಶ್ರೀವಿಷ್ಣುವೇ ಸರ್ವರಿಗೂ ಅಧಿಪತಿಯು, ಸರ್ವಪಾಲಕನು, ಸರ್ವ ಸ್ವಾಮಿಯು. (೨) ವಿಶ್ವಸ್ಯ=ಅಚೇತನಪ್ರಪಂಚಕ್ಕೆ, ಪತಿಂ=ಸ್ವಾಮಿಯಾದ, ಆತ್ಮೇಶ್ವರಂ=ಚೇತನರಿಗೆ ಸ್ವಾಮಿಯಾದ ಶ್ರೀನಾರಾಯಣನನ್ನು (ಜಗತ್ತು ಉಪಜೀವಿಸುತ್ತಿದೆ, ಇದು ಮೊದಲಾದ ಶ್ರುತಿ ವಾಕ್ಯಗಳಿಂದ ಆ ವಿಷ್ಣುವಿಗೆ ಸರ್ವೇಶ್ವರತ್ವಾದಿ ಮಹಿಮೆಯು ಪ್ರಸಿದ್ಧವೆಂದು ಅವಗತವಾಗುತ್ತದೆ. ಆದ ಪ್ರಯುಕ್ತ ಇವುಗಳು ವಿಷ್ಣುತ್ವರೂಪ ಸಾಧ್ಯವನ್ನು ಸಾಧಿಸುವುದರಿಂದ ಅಸಿದ್ಧಿಯಿಲ್ಲ)

ಪೀಠಿಕೆ ॥ ಹಾಗಾದರೆ ಸರ್ವೇಶ್ವರತ್ವಾದಿಗಳು ವಿಷ್ಣುವಿನಂತೆ ಇತರರಿಗೂ ಏಕೆ ಇರಲಾರದೆಂದರೆ—

**ಭಾಷ್ಯ ॥ ಸರ್ವೇಶೋ ವಿಷ್ಣುರೇವೈಕೋ ನಾನ್ಯೋಽಸ್ತಿ ಜಗತಃ ಪತಿರಿತಿ(ಚ) ಸ್ಕಾಂದೇ ॥ ೧೬ ॥ ೧೬ ॥**

ಭಾಷ್ಯಾರ್ಥ ॥ ಶ್ರೀವಿಷ್ಣುವೊಬ್ಬನೇ ಚೇತನಾಚೇತನ ನಿಖಿಲ ಪ್ರಪಂಚಗಳಿಗೂ ಸ್ವಾಮಿಯು. ಅಂತಹ ಜಗತ್ತಿಗೆ ಪಾಲಕನೂ ಆಗಿರುತ್ತಾನೆ. ಮತ್ತೊಬ್ಬನಿಲ್ಲ ಎಂದು ಸ್ಕಾಂದಪುರಾಣದಲ್ಲಿ ಸರ್ವೇಶ್ವರತ್ವಾದಿ ಮಹಿಮೆಯು ವಿಷ್ಣುವಿಗೇನೆ ಹೇಳಿದೆ. (ಆದಪ್ರಯುಕ್ತ ಈ ಲಿಂಗಗಳು ಅನ್ಯತ್ರ ಸಾವಕಾಶಗಳಲ್ಲ) ॥ ೧೬ ।

ಪೀಠಿಕೆ ॥ ಸಮಾಖ್ಯಾಂತರರೂಪವಾದ ಯುಕ್ತ್ಯಂತರದಿಂದ ವಿಷ್ಣುವು ಹೃತ್ಪದ್ಮದಲ್ಲಿರತಕ್ಕ ಆಕಾಶದಲ್ಲಿರತಕ್ಕವನು ಎಂದು ಸಾಧಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಪ್ರಸಿದ್ಧೇಶ್ಚ ಓಂ ॥ ೧೭ ॥

ಸೂತ್ರಾರ್ಥ ॥ ಕೇವಲ ಬೃಹದಾರಣ್ಯಕ ಸಮಾಖ್ಯೆಯಿಂದಲ್ಲ ಮತ್ತೆ ತತ್ರಾಪಿ ದಹರಂ ಎನ್ನುವ ತೈತ್ತಿರೀಯ ವಾಕ್ಯದಲ್ಲಿ ಅಸ್ಯ=ಈ ಹೃತ್ಪದ್ಮಸ್ಥನಿಗೆ, ಪ್ರಸಿದ್ಧೇಶ್ಚ=ವಿಷ್ಣುತ್ವ ಪ್ರಸಿದ್ಧಿಯಿದ್ದುದರಿಂದಲೂ, ಅಥವಾ ದಿವ್ಯೇ ಬ್ರಹ್ಮಪುರೇ ಹ್ಯೇಷಃ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ । (ಮು.೨.೨.೭.) ಎಂದು

★ ಇವುಗಳು ಅಕ್ಷರಾಧಿಕರಣದಲ್ಲಿ ಪು. ೨೫೨ರಲ್ಲಿ ವ್ಯಾಖ್ಯಾತಗಳಾಗಿವೆ.

ಆಥರ್ವಣದಲ್ಲಿ ಪ್ರಸಿದ್ಧಿಯಿದ್ದುದರಿಂದಲೂ, **ಅಥವಾ ಯ ಏಷೋಽಂತರ್ಹೃದಯ ಆಕಾಶಃ** (ತೈ.೧.೬.೧.) ಎಂದು ತೈತ್ತಿರೀಯದಲ್ಲಿ ಪ್ರಸಿದ್ಧಿಯಿದ್ದುದರಿಂದಲೂ, ಸಮಾಖ್ಯೆಯಿಂದಲೂ ದಹರಪದ್ಮಸ್ಥನು ವಿಷ್ಣುವೇ.

**ಭಾಷ್ಯ ॥ ತತ್ರಾಪಿ ದಹರಂ(ದಹ್ರಂ) ಗಗನಂ ವಿಶೋಕಸ್ತಸ್ಮಿನ್ ಯದಂತಸ್ತದುಪಾಸಿತವ್ಯಂ (ಮಹಾನಾಮ್ನೀ ೧೦.) । ಇತಿ ಪ್ರಸಿದ್ಧೇಶ್ಚ ॥ ೧೭ ॥**

**ಭಾಷ್ಯಾರ್ಥ ॥ (ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ ।** ಎನ್ನುವ ವಾಕ್ಯದಲ್ಲಿ, ಯತ್ = ಯಾವುದು, ದಹರಂ = ಅಲ್ಪವಾದ, ಪರವೇಶ್ಮಭೂತಂ = ಪರಬ್ರಹ್ಮನಿಗೆ ಮಂದಿರಭೂತವಾದ, ವಿಪಾಪ್ಮಂ=ಪಾಪರಹಿತವಾದ, ಪುರುಮಧ್ಯಸಂಸ್ಥಂ= ದೇಹಾಖ್ಯಪುರಮಧ್ಯದಲ್ಲಿರತಕ್ಕ ಹೃದಯಕಮಲವೋ) ತತ್ರಾಪಿ=ಅಂತಹ ಕಮಲದಲ್ಲಿಯೂ, ಯತ್=ಯಾವ, ದಹರಂ= ಅಲ್ಪವಾದ, ಗಗನಂ=ಆಕಾಶವದೆಯೋ, ತಸ್ಮಿನ್ ಅಂತಃ=ಅದರೊಳಗೆ, ವಿಶೋಕಃ=ಶೋಕ ಜರಾದಿಶೂನ್ಯವಾದ, ಯತ್=ಯಾವ ಬ್ರಹ್ಮನು ಇದ್ದಾನೋ, ತತ್=ಅಂತಹ ಬ್ರಹ್ಮನು, ಉಪಾಸಿತವ್ಯಂ= ಉಪಾಸನಾ ಮಾಡಲ್ಪಡಬೇಕು. ವಿಶೋಕಃ ಎಂದು ಲಿಂಗವ್ಯತ್ಯಾಸವು ಛಾಂದಸವು.

**ಪೀಠಿಕೆ ॥** ಹಾಗಾದರೆ ಸಾಕ್ಷಾತ್ತಾಗಿ ಪದ್ಮದಲ್ಲಿರತಕ್ಕವನು ವಿಷ್ಣುವೆಂದು ಅಂಗೀಕರಿಸಿದರೆ **ತಸ್ಯಾಂತೇ ಸುಷಿರಂ ಸೂಕ್ಷ್ಮಂ** ಎನ್ನುವ ಶ್ರುತಿವಿರೋಧವು. ಹೀಗೆಯೇ ಪದ್ಮದಲ್ಲಿರತಕ್ಕ ಆಕಾಶವು ವಿಷ್ಣುಪರವೆಂದು ಅಂಗೀಕರಿಸಿದರೂ ಸುಷಿರಶ್ರುತಿವಿರೋಧವು. ಸುಷಿರಶಬ್ದವು ಆಕಾಶವಾಚಕವು. ಇದನ್ನು ಬಿಟ್ಟು ದಹರಪದ್ಮಕ್ಕೆ ಆಕಾಶತ್ವವೂ, ವಿಷ್ಣುವಿಗಾದರೂ ಆಕಾಶಗತತ್ವವೂ, ಆಕಾಶಕ್ಕೇನೇ ಸರ್ವಾಧಾರತ್ವವೂ ಹೀಗೆ ಅಂಗೀಕರಿಸಿದರೂ ಸುಷಿರಶ್ರುತಿವಿರೋಧವು. ಅಲ್ಲಿ ಸಾಕ್ಷಾತ್ತಾಗಿ ಸುಷಿರಕ್ಕೇನೇ ಸರ್ವಾಧಾರತ್ವವನ್ನು ಹೇಳಿದ್ದಾರೆ. ಎಂದರೆ—

**ಭಾಷ್ಯ ॥ ತದಂತಸ್ಥತ್ವಾಪೇಕ್ಷತ್ವಾನ್ನ ಸುಷಿರಶ್ರುತಿವಿರೋಧಃ ॥ ೧೭ ॥ ॥ ೧೮ ॥**

**ಭಾಷ್ಯಾರ್ಥ ॥** ಸುಷಿರಾಕಾಶಕ್ಕೇನೇ ಸಾಕ್ಷಾತ್ತಾಗಿ ಸರ್ವಾಧಾರತ್ವವನ್ನು ಪ್ರತಿಪಾದಿಸತಕ್ಕ **ತಸ್ಯಾಂತೇ** ಎಂದು ಸುಷಿರಪದಘಟಿತವಾದ ಶ್ರುತಿಗೆ ಪದ್ಮದಲ್ಲಿರತಕ್ಕ ಸುಷಿರಾಂತಸ್ಥನಾದ ಪರಮಾತ್ಮನಲ್ಲಿ ತಾತ್ಪರ್ಯವಿದ್ದುದರಿಂದ ಆತನಿಗೇನೇ ಸರ್ವಾಧಾರತ್ವವಿದ್ದ ಪ್ರಯುಕ್ತ ಸುಷಿರಶ್ರುತಿಯಿಂದ ವಿರೋಧವಿಲ್ಲ.

**ವಿಶೇಷಾಂಶ ॥** ಶ್ರೀಹರಿಗೆ ಹೃತ್ಪದ್ಮಸ್ಥತ್ವವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನುಪನ್ಯಾಸಮಾಡುತ್ತಾರೆ—

**ಸೂತ್ರ ॥ ಓಂ ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್ ಓಂ ॥ ೧೮ ॥**

**ಸೂತ್ರಾರ್ಥ ॥ ಪರಂ ಜ್ಯೋತಿಃ** ಎನ್ನುವ ವಾಕ್ಯದಲ್ಲಿ ಪ್ರಾಪ್ತಿ ಕರ್ಮೀಭೂತನಾದ ಬ್ರಹ್ಮನಿಂದ ಇತರನಾದ ಜೀವನಿಗೆ **ಯ ಆತ್ಮಾ** ಎಂದು ಹೇಳಲ್ಪಟ್ಟ ಹೃತ್ಪದ್ಮಸ್ಥ ಆತ್ಮತ್ವವನ್ನು ವಿಧಾನ ಮಾಡುವುದಕ್ಕಾಗಿ,

ಏಷಃ ಎನ್ನುವ ಏತಚ್ಛಬ್ದದಿಂದ ಜೀವನಿಗೆ ಪರಾಮರ್ಶವಿದ್ದುದರಿಂದ (ಅಂದರೆ ಜೀವಪರಾಮರ್ಶಕ ಏತಚ್ಛಬ್ದವು ಶ್ರುತವಾದ ಪ್ರಯುಕ್ತ) ದಹರಸ್ಥನು ಜೀವನೇ, ವಿಷ್ಣುವಲ್ಲ ಎಂದರೆ ಹಾಗೆ ಹೇಳಕೂಡದು. ಹೃತ್ಪದ್ಮಸ್ಥನು ಜೀವನಲ್ಲ. ಈ ಪ್ರಕರಣದಲ್ಲಿ ಅಪಹತಪಾಪ್ಮತ್ವಾದಿಗಳು ಶ್ರುತಗಳಾದ ಪ್ರಯುಕ್ತ, ಅಪಹತಪಾಪ್ಮತ್ವಾದಿಗಳು ಜೀವನಲ್ಲಿ ಸ್ವತಃ ಕೂಡಲಾರವು.

**ಭಾಷ್ಯ ॥ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ** (ಛಾ.ಉ.೮.೧೨.೩.) **ಏಷ ಆತ್ಮೇತಿ ಹೋವಾಚ** (ಛಾ.ಉ.೪.೧೫.೧.)**। ಇತಿ ಜೀವಪರಾಮರ್ಶಾತ್ ಸ ಇತಿ ಚೇನ್ನ। ತಸ್ಯ ಸ್ವತೋಽಪಹತಪಾಪ್ಮತ್ವಾದ್ಯಸಂಭವಾತ್ ॥ ೧೮ ॥** **॥ ೧೯ ॥**

ಭಾಷ್ಯಾರ್ಥ ॥ (೧) (ಚೆನ್ನಾಗಿ ವಿಷ್ಣುಪ್ರಸಾದವುಳ್ಳ ಜೀವನು ಈ ಚರಮ ಶರೀರದಿಂದ ಮುಕ್ತನಾಗಿ) ಜ್ಯೋತೀರೂಪನಾದ ಪರಬ್ರಹ್ಮನನ್ನು ಹೊಂದಿ ಸ್ವರೂಪಾನಂದಾವಿರ್ಭಾವದಿಂದ ಅಭಿವ್ಯಕ್ತನಾಗುತ್ತಾನೆ. (೨) ಏತಚ್ಛಬ್ದವಾಚ್ಯನು ಜೀವನೆಂದು ಹೇಳಿದನು, ಎಂದು ಜೀವನಿಗೆ ಪರಾಮರ್ಶವಿದ್ದುದರಿಂದ ಅಂದರೆ ಜೀವಪರಾಮರ್ಶಕವಾದ ಏತಚ್ಛಬ್ದವು ಶ್ರುತವಾದ ಪ್ರಯುಕ್ತ (ದಹರಸ್ಥನು) ಜೀವನೇ. (ವಿಷ್ಣುವಲ್ಲ) ಎಂದು ಶಂಕಿಸಿದರೆ (ಹೃತ್ಪದ್ಮಸ್ಥನು ಜೀವನು) ಅಲ್ಲ. ಜೀವನಿಗೆ ಸ್ವತಂತ್ರವಾಗಿ ಅಪಹತಪಾಪ್ಮತ್ವ ಸತ್ಯಕಾಮತ್ವಾದಿಗಳು ಕೂಡದ ಇದ್ದ ಪ್ರಯುಕ್ತ. ॥ ೧೮ ॥

ಪೀಠಿಕೆ ॥ ಜೀವನಿಗೆ ಅಪಹತಪಾಪ್ಮತ್ವಾದಿಗಳನ್ನು ಕೂಡುವುದಿಲ್ಲವೆನ್ನುವುದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಉಪನ್ಯಾಸಮಾಡುತ್ತಾರೆ—

## ಸೂತ್ರ ॥ ಓಂ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ಓಂ ॥ ೧೯ ॥

ಸೂತ್ರಾರ್ಥ ॥ ಅಸ್ಯ=ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಎಂದು ಹೇಳಲ್ಪಟ್ಟ ಜೀವನಿಗೆ, ಉತ್ತರಾತ್=ದಹರವಾಕ್ಯಕ್ಕಿಂತ ಅಥವಾ ಪರಾಮರ್ಶ ವಾಕ್ಯಕ್ಕಿಂತ ಮೇಲಿನದ್ದಾದ ಸ ತತ್ರ ಪರ್ಯೇತಿ ಇದು ಮೊದಲಾದ ವಚನದೆಶೆಯಿಂದ ಅಸ್ಮಿನ್=ಪೂರ್ವಪ್ರಕೃತನಾದ ಜೀವನಲ್ಲಿ, ಅಸ್ಯ=ಸತ್ಯಕಾಮತ್ವಕ್ಕೆ, ಉಪಲಬ್ಧೇಃ=ಪ್ರತೀತಿಯಿದ್ದುದರಿಂದ, ಅದರಿಂದಲೇ ಈತನಿಗೆ ವಿಶೋಕತ್ವಾದಿಗಳು ಸಿದ್ಧಿಸುವುದರಿಂದಲೇ ಜೀವನಿಗೆ ಹಿಂದೆ ಹೇಳಿದ ಗುಣಗಳು ಕೂಡುವುದರಿಂದ ಹೃತ್ಪದ್ಮಸ್ಥನು ಜೀವನೇ. ಈಶ್ವರನಲ್ಲವೆಂದರೆ— ಹಾಗೆ ಹೇಳಕೂಡದು. ಏಕೆಂದರೆ— ಅಲ್ಲಿ ಸ್ವೇನ ರೂಪೇಣ ಎನ್ನುವ ಉತ್ತರವಾಕ್ಯದ ಬಲದಿಂದ ಆವಿರ್ಭೂತಸ್ವರೂಪವುಳ್ಳ ಮುಕ್ತನು ಹೇಳಲ್ಪಡುತ್ತಾನೆ. ಆತನು ದೇಹಾಂತರ್ಗತನಾಗದೆ ಇದ್ದುದರಿಂದ ಹೃತ್ಪದ್ಮಸ್ಥನಾಗುವುದಿಲ್ಲ. ಹಾಗಾದರೆ ಮುಕ್ತನೂ ಜೀವನಾದ ಪ್ರಯುಕ್ತ ಹಿಂದಿನ ಸೂತ್ರದಲ್ಲಿ ಹೇಳಿದ ಅಪಹತಪಾಪ್ಮತ್ವಾದ್ಯಸಂಭವವು ಕೂಡುವುದಿಲ್ಲವೆಂದರೆ ಸ್ವೇನ ರೂಪೇಣಾಭಿನಿಷ್ಪದ್ಯತೇ ಎನ್ನುವ ವಾಕ್ಯದಲ್ಲಿ ಸ ತತ್ರ ಪರ್ಯೇತಿ ಎನ್ನುವ ಉತ್ತರವಾಕ್ಯದ ಬಲದಿಂದ ಮುಕ್ತನು ಪ್ರತಿಪಾದ್ಯನಾಗುವುದಾದರೂ ಯ ಆತ್ಮಾ ಇತ್ಯಾದಿ ವಾಕ್ಯವು ಮುಕ್ತಪರವಲ್ಲ. ಮುಕ್ತಿಯನ್ನು ಕೊಡತಕ್ಕ ಶ್ರೀಪರಮಾತ್ಮನಿಗೇನೇ ಪರಾಮರ್ಶವು. ಆದಕಾರಣ ಅಪಹತಪಾಪ್ಮತ್ವಾದಿಗಳೂ ಮುಖ್ಯವಾಗಿ ಪರಮಾತ್ಮಲಿಂಗವೇ ಆಗಿರುವುದರಿಂದ ಹೃತ್ಪದ್ಮಸ್ಥನು ಜೀವನಲ್ಲ.

**ಪೀಠಿಕೆ ॥** ಮುಕ್ತನ ವ್ಯಾಪಾರವನ್ನು ಹೇಳುತ್ತಾರೆ—

**ಭಾಷ್ಯ ॥ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ (ಸ್ತ್ರೀಭಿರ್ವಾ ಯಾನೈರ್ವಾಜ್ಞಾನಿಭಿರ್ವಾ)** (ಛಾ.೮.೧೨.೩.)**। ಇತ್ಯಾದ್ಯುತ್ತರವಚನಾಜ್ಜೀವ ಏವ । ಇತಿ ಚೇತ್ ॥ ೨೦ ॥**

**ಭಾಷ್ಯಾರ್ಥ ॥** ಶ್ರೀಹರಿಯ ಅನುಗ್ರಹದಿಂದ ಆನಂದಾವಿರ್ಭಾವವನ್ನು ಹೊಂದಿದ ಮುಕ್ತನು ಮುಕ್ತಿಸ್ಥಾನದಲ್ಲಿ ಶ್ರೀಹರಿಯ ಅನುಗ್ರಹದಿಂದಲೇ ಜಕ್ಷನ್=ತನಗೆ ಅಪೇಕ್ಷಿತವಾದುದನ್ನು ಭಕ್ಷಿಸುತ್ತಾ ಅಥವಾ ನೆಗಾಡುತ್ತಾ ಜ್ಞಾತಿ (ಈ ಕಲ್ಪದಲ್ಲಿ ಮುಕ್ತರಾದವರು)ಗಳಿಂದಲಾಗಲೀ, ಅಜ್ಞಾತಿ (ಪೂರ್ವಕಲ್ಪದಲ್ಲಿ ಮುಕ್ತರಾದವರು)ಗಳಿಂದಲಾಗಲೀ ಕೂಡಿಕೊಂಡು ಕ್ರೀಡಿಸುತ್ತಾ ಸ್ತ್ರೀಯರಿಂದ ರಮಿಸುತ್ತಾ ಪ್ರಾಕೃತವಾದ ಸ್ತ್ರ್ಯಾದಿ ಸೌಖ್ಯವನ್ನು ಅನುಭವಿಸುತ್ತಾ ಸುತ್ತಲೂ ಸಂಚರಿಸುತ್ತಾನೆ. ಇದು ಮೊದಲಾದ ದಹರವಾಕ್ಯಕ್ಕಿಂತ ಅಥವಾ ಪರಾಮರ್ಶವಾಕ್ಯಕ್ಕಿಂತ ಮೇಲಿನದ್ದಾದ ವಚನದೇಶೆಯಿಂದ (ಸತ್ಯಕಾಮತ್ವಕ್ಕೆ ಜೀವನಲ್ಲಿ ಪ್ರತೀತಿಯಿದ್ದುದರಿಂದ ಅದರಿಂದಲೇ ವಿಶೋಕತ್ವಾದಿಗಳು ಸಿದ್ಧಿಸುವುದರಿಂದ) ಹಿಂದೆ ಹೇಳಿದ ಗುಣಗಳು ಕೂಡುವುದರಿಂದ ಹೃತ್ಪದ್ಮಸ್ಥನು ಜೀವನೇ ಈಶ್ವರನಲ್ಲ ಎಂದರೆ—

**ಭಾಷ್ಯ ॥ ತತ್ರ ಹಿ ಪರಮೇಶ್ವರಪ್ರಸಾದಾದಾವಿರ್ಭೂತಸ್ವರೂಪೋ ಮುಕ್ತ ಉಚ್ಯತೇ ॥ ೨೧ ॥**

**ಭಾಷ್ಯಾರ್ಥ ॥** ಈ ವಾಕ್ಯಬಲದಿಂದ ಜೀವನಿಗೆ ಸತ್ಯಕಾಮತ್ವ ಮೊದಲಾದ ಗುಣಗಳನ್ನು ಸಂಭಾವನೆ ಮಾಡಿ ಹೃತ್ಪದ್ಮಸ್ಥತ್ವವನ್ನು ಹೇಳಕೂಡದು. ಏಕೆಂದರೆ ಉತ್ತರ ವಾಕ್ಯದಲ್ಲಿ ಸ್ವರೂಪಾವಿರ್ಭಾವವನ್ನು ಹೊಂದಿದ ಮುಕ್ತನೇ ಹೇಳಲ್ಪಡುತ್ತಾನೆ. ಇಲ್ಲಿ ಯಾವ ಮುಕ್ತನು ಹೇಳಲ್ಪಡುತ್ತಾನೋ, ಆತನು ಶ್ರೀಹರಿಯ ಅನುಗ್ರಹದಿಂದಲೇ ವ್ಯಕ್ತವಾದ ಅಪಹತಪಾಪ್ಮತ್ವಾದಿ ಸ್ವಧರ್ಮವುಳ್ಳವನು. ಆದಕಾರಣ ಸ್ವಾತಂತ್ರ್ಯದಿಂದ ಅಪಹತಪಾಪ್ಮತ್ವಾದಿಗುಣಗಳುಳ್ಳವನಲ್ಲ ಆದಪ್ರಯುಕ್ತ ದಹರಸ್ಥನು ಜೀವನಲ್ಲ.

**ವಿಶೇಷಾಂಶ ॥ ಸ್ವೇನ ರೂಪೇಣ** ಎಂದು ಜಡದೇಹವನ್ನು ಬಿಟ್ಟಮೇಲೆ ಸ್ವರೂಪಾಭಿವ್ಯಕ್ತಿಯು ಶ್ರುತವಾದುದರಿಂದ ಸ್ವೇನ ರೂಪೇಣ ಎನ್ನುವಲ್ಲಿ ಮುಕ್ತನನ್ನು ಹೇಳಿದ್ದರಿಂದ ಹೃತ್ಪದ್ಮವು ದೇಹದ ಮಧ್ಯದಲ್ಲಿದ್ದುದರಿಂದ ಜಡದೇಹದಿಂದ ಮುಕ್ತನಾದ ಜೀವನಿಗೆ ಹೃತ್ಪದ್ಮಸ್ಥತ್ವವು ಕೂಡಲಾದು. ಆದಕಾರಣ ಹೃತ್ಪದ್ಮಸ್ಥನು ಜೀವನಲ್ಲ.

**ಪೀಠಿಕೆ ॥** ಹಾಗಾದರೆ ಪರಂ ಜ್ಯೋತಿರುಪಸಂಪದ್ಯ ಎನ್ನುವಲ್ಲಿ ಮುಕ್ತನಿಗೆ ಪಾಪರಾಹಿತ್ಯಾದಿಗಳು ಅಭಿವ್ಯಕ್ತಗಳಾಗುತ್ತವೆ ಎಂದೇ ಹೇಳಲ್ಪಡುತ್ತದೆ. ಆ ಗುಣಗಳಿಗೆ ಪರಮೇಶ್ವರಾಧೀನತ್ವವು ಹೇಳಲ್ಪಡುವುದಿಲ್ಲ. ಆದಕಾರಣ ಅದು ಸ್ವತ ಏವ ಎಂದರೆ—

**ಭಾಷ್ಯ ॥ ಯತ್ಪ್ರಸಾದಾತ್ಸ ಮುಕ್ತೋ ಭವತಿ ಸ ಭಗವಾನ್ ಪೂರ್ವೋಕ್ತಃ ॥ ೧೯ ॥ ೨೨ ॥**

**ಭಾಷ್ಯಾರ್ಥ ॥** ಯಾವ ಶ್ರೀಹರಿಯ ಅನುಗ್ರಹದಿಂದ ಆ ಜೀವನು ಪಾಪಾರಾಹಿತ್ಯಾದಿ ಗುಣಗಳುಳ್ಳವನು ಆಗುತ್ತಾನೋ, ಆ ಗುಣಪ್ರದಾತನಾದ ಶ್ರೀಹರಿಯು **ಪರಂ ಜ್ಯೋತಿರುಪಸಂಪದ್ಯ** ಎನ್ನುವ ಪೂರ್ವವಾಕ್ಯದಲ್ಲಿ ಗುಣಪ್ರದಾತನೆಂದು ಹೇಳಲ್ಪಡುತ್ತಾನೆ.

**ವಿಶೇಷಾಂಶ ॥** (೧) ಪ್ರಸಾದವೆಂದರೆ— ಇಚ್ಛಾವಿಶೇಷವು. (೨) ಅಥವಾ ಜೀವನಲ್ಲಿ ಅನ್ಯಾಧೀನವಾದ ಗುಣಸಮುದಾಯವು ಇದ್ದುದರಿಂದ ಜೀವನೇ ಅಪಹತ ಪಾಪಾದಿಗಳುಳ್ಳವನೂ ಹೃತ್ಪದ್ಮಸ್ಥನೂ ಆಗಲಿ ಎಂದರೆ ಯಾರ ಅನುಗ್ರಹದಿಂದ ಜೀವನು ಜಡದೇಹದಿಂದ ಮುಕ್ತನಾಗಿ ಪಾಪಾದಿರಹಿತನು ಆಗುತ್ತಾನೋ ಅಂತಹ ಶ್ರೀಹರಿಯೇ **ಯ ಆತ್ಮಾ ಅಪಹತಪಾಪ್ಮಾ** ಇತ್ಯಾದಿ ಪೂರ್ವವಾಕ್ಯದಲ್ಲಿ ಪಾಪಲೇಶರಹಿತನೆಂದು ಉಕ್ತನಾಗಿದ್ದಾನೆ. ಜೀವನಲ್ಲ. ದಾತೃಪ್ರತಿಗ್ರಹೀತೃಗಳ ಮಧ್ಯದಲ್ಲಿ ದಾತೃಗೇನೇ ಮುಖ್ಯತ್ವವು. ಮುಖ್ಯ ಅಮುಖ್ಯಗಳ ಮಧ್ಯದಲ್ಲಿ ಮುಖ್ಯವಾದುದನ್ನೇ ಇಟ್ಟುಕೊಳ್ಳಬೇಕು. ॥ ೧೯ ॥

**ಪೀಠಿಕೆ ॥** ಹಾಗಾದರೆ ಏಷಃ ಎಂದು ಜೀವನನ್ನು ಪರಾಮರ್ಶಿಸಿಕೊಂಡು ಜೀವನಿಗೆ **ಆತ್ಮಾ** ಎಂದು ಹೃತ್ಪದ್ಮಸ್ಥ ಆತ್ಮತ್ವವನ್ನು ಹೇಳಿದ್ದರಿಂದ ಅಪಹತಪಾಪ್ಮತ್ವಾದಿ ಗುಣಗಳುಳ್ಳವನಾದಾಗ್ಯೂ ಜೀವನೇ ಏತಚ್ಛಬ್ದಪರಾಮರ್ಶಬಲದಿಂದ ಹೃತ್ಪದ್ಮಸ್ಥ ಆತ್ಮನು ಏಕೆ ಆಗಲಾರನು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ ॥ ೨೦ ॥

**ಸೂತ್ರಾರ್ಥ ॥** (ಜೀವನನ್ನು ಏಷಃ ಎಂದು ಪರಾಮರ್ಶ ಮಾಡಿ ಜೀವನಿಗೆ ಹೃತ್ಪದ್ಮಸ್ಥತ್ವವನ್ನು ವಿಧಾನ ಮಾಡಿದ್ದರಿಂದ ಹೃತ್ಪದ್ಮಸ್ಥನಾದ ಆತ್ಮನು ಜೀವನೇ ಈಶ್ವರನಲ್ಲವೆಂದರೆ ಹಾಗೆ ಹೇಳಕೂಡದು. ಏಕೆಂದರೆ) ಏಷಃ ಎನ್ನುವ ಪರಾಮರ್ಶವು ಜೀವವ್ಯತಿರಿಕ್ತನಾದ ಈಶ್ವರಾರ್ಥವೇ. ಜೀವಾರ್ಥಕವಲ್ಲ.

**ಭಾಷ್ಯ ॥ ಯಂ ಪ್ರಾಪ್ಯ ಸ್ವೇನ ರೂಪೇಣ ಜೀವೋಽಭಿನಿಷ್ಪದ್ಯತೇ ಸ ಏಷ ಆತ್ಮೇತಿ ಪರಮಾತ್ಮಾರ್ಥಶ್ಚ ಪರಾಮರ್ಶಃ ॥ ೨೩ ॥**

**ಭಾಷ್ಯಾರ್ಥ ॥** (ಜೀವನು ಪರಂಜ್ಯೋತಿಃ ಎಂದು ಹೆಸರುಳ್ಳ ಪರಮಾತ್ಮನನ್ನು ಹೊಂದಿ ಅಪರೋಕ್ಷವಾಗಿ ತಿಳಿದು ಆ ಮೇಲೆ ಸಮೀಪವನ್ನು ಹೊಂದಿ ಅವಿದ್ಯೆಯನ್ನು ಹೋಗಲಾಡಿಸಿ ಆನಂದ ಮೊದಲಾದ ತನ್ನ ರೂಪದಿಂದ ಸಂಪನ್ನನಾಗುತ್ತಾನೆ. ಆತನ ಸ್ವರೂಪಭೂತಗುಣಗಳು ಆವಿರ್ಭೂತ ಗಳಾಗುತ್ತವೆ.) ಯಾರ ಸಮೀಪವನ್ನು ಹೊಂದಿ ಜೀವನು ತನ್ನ ರೂಪದಿಂದ ಸಂಗತನಾಗುತ್ತಾನೋ ಆ ಈತನೇ ಹಿಂದೆ ಹೇಳಲ್ಪಟ್ಟ ಪರಮಾತ್ಮನು. (ಈ ಪ್ರಕಾರ ರಮಾದೇವಿಯು ಬ್ರಹ್ಮಾದಿಗಳನ್ನು ಕುರಿತು ಹೇಳಿದಳು. ಎಂದು ಪರಾಮರ್ಶಃ) ಏತಚ್ಛಬ್ದವು ಪರಮಾತ್ಮನೇ ವಾಚ್ಯವಾಗಿ ಉಳ್ಳದ್ದು. ಅಥವಾ ಏತಚ್ಛಬ್ದದಿಂದ ಪರಿಗ್ರಹಣವು ಶ್ರೀಹರಿಗೇನೇ ಆತ್ಮತ್ವವಿಧಾನವು ಪ್ರಯೋಜನವಾಗಿ ಉಳ್ಳದ್ದು ॥೨೦॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

ಪೀಠಿಕೆ ॥ ಮುಕ್ತನ ವ್ಯಾಪಾರವನ್ನು ಹೇಳುತ್ತಾರೆ—

**ಭಾಷ್ಯ ॥ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ (ಸ್ತ್ರೀಭಿರ್ವಾ ಯಾನೈರ್ವಾಜ್ಞಾನಿಭಿರ್ವಾ) (ಛಾ.೮.೧೨.೩.)। ಇತ್ಯಾದ್ಯುತ್ತರವಚನಾಜ್ಜೀವ ಏವ। ಇತಿ ಚೇತ್ ॥ ೨೦ ॥**

ಭಾಷ್ಯಾರ್ಥ ॥ ಶ್ರೀಹರಿಯ ಅನುಗ್ರಹದಿಂದ ಆನಂದಾವಿರ್ಭಾವವನ್ನು ಹೊಂದಿದ ಮುಕ್ತನು ಮುಕ್ತಿಸ್ಥಾನದಲ್ಲಿ ಶ್ರೀಹರಿಯ ಅನುಗ್ರಹದಿಂದಲೇ ಜಕ್ಷನ್=ತನಗೆ ಅಪೇಕ್ಷಿತವಾದುದನ್ನು ಭಕ್ಷಿಸುತ್ತಾ ಅಥವಾ ನೆಗಾಡುತ್ತಾ, ಜ್ಞಾತಿ (ಈ ಕಲ್ಪದಲ್ಲಿ ಮುಕ್ತರಾದವರು)ಗಳಿಂದಲಾಗಲೀ, ಅಜ್ಞಾತಿ (ಪೂರ್ವಕಲ್ಪದಲ್ಲಿ ಮುಕ್ತರಾದವರು)ಗಳಿಂದಲಾಗಲೀ ಕೂಡಿಕೊಂಡು ಕ್ರೀಡಿಸುತ್ತಾ ಸ್ತ್ರೀಯರಿಂದ ರಮಿಸುತ್ತಾ ಪ್ರಾಕೃತವಾದ ಸ್ತ್ರ್ಯಾದಿ ಸೌಖ್ಯವನ್ನು ಅನುಭವಿಸುತ್ತಾ ಸುತ್ತಲೂ ಸಂಚರಿಸುತ್ತಾನೆ. ಇದು ಮೊದಲಾದ ದಹರವಾಕ್ಯಕ್ಕಿಂತ ಅಥವಾ ಪರಾಮರ್ಶವಾಕ್ಯಕ್ಕಿಂತ ಮೇಲಿನದ್ದಾದ ವಚನದೆಶೆಯಿಂದ (ಸತ್ಯಕಾಮತ್ವಕ್ಕೆ ಜೀವನಲ್ಲಿ ಪ್ರತೀತಿಯಿದ್ದುದರಿಂದ ಅದರಿಂದಲೇ ವಿಶೋಕತ್ವಾದಿಗಳು ಸಿದ್ಧಿಸುವುದರಿಂದ) ಹಿಂದೆ ಹೇಳಿದ ಗುಣಗಳು ಕೂಡುವುದರಿಂದ ಹೃತ್ಪದ್ಮಸ್ಥನು ಜೀವನೇ ಈಶ್ವರನಲ್ಲ ಎಂದರೆ—

**ಭಾಷ್ಯ ॥ ತತ್ರ ಹಿ ಪರಮೇಶ್ವರಪ್ರಸಾದಾದಾವಿರ್ಭೂತಸ್ವರೂಪೋ ಮುಕ್ತ ಉಚ್ಯತೇ ॥ ೨೧ ॥**

ಭಾಷ್ಯಾರ್ಥ ॥ ಈ ವಾಕ್ಯಬಲದಿಂದ ಜೀವನಿಗೆ ಸತ್ಯಕಾಮತ್ವ ಮೊದಲಾದ ಗುಣಗಳನ್ನು ಸಂಭಾವನೆ ಮಾಡಿ ಹೃತ್ಪದ್ಮಸ್ಥತ್ವವನ್ನು ಹೇಳಕೂಡದು. ಏಕೆಂದರೆ ಉತ್ತರ ವಾಕ್ಯದಲ್ಲಿ ಸ್ವರೂಪಾವಿರ್ಭಾವವನ್ನು ಹೊಂದಿದ ಮುಕ್ತನೇ ಹೇಳಲ್ಪಡುತ್ತಾನೆ. ಇಲ್ಲಿ ಯಾವ ಮುಕ್ತನು ಹೇಳಲ್ಪಡುತ್ತಾನೋ, ಆತನು ಶ್ರೀಹರಿಯ ಅನುಗ್ರಹದಿಂದಲೇ ವ್ಯಕ್ತವಾದ ಅಪಹತಪಾಪ್ಮತ್ವಾದಿ ಸ್ವಧರ್ಮವುಳ್ಳವನು. ಆದಕಾರಣ ಸ್ವಾತಂತ್ರ್ಯದಿಂದ ಅಪಹತಪಾಪ್ಮತ್ವಾದಿಗುಣಗಳುಳ್ಳವನಲ್ಲ. ಆದಪ್ರಯುಕ್ತ ದಹರಸ್ಥನು ಜೀವನಲ್ಲ.

ವಿಶೇಷಾಂಶ ॥ ಸ್ವೇನ ರೂಪೇಣ ಎಂದು ಜಡದೇಹವನ್ನು ಬಿಟ್ಟಮೇಲೆ ಸ್ವರೂಪಾಭಿವ್ಯಕ್ತಿಯು ಶ್ರುತವಾದುದರಿಂದ ಸ್ವೇನ ರೂಪೇಣ ಎನ್ನುವಲ್ಲಿ ಮುಕ್ತನನ್ನು ಹೇಳಿದ್ದರಿಂದ ಹೃತ್ಪದ್ಮವು ದೇಹದ ಮಧ್ಯದಲ್ಲಿದ್ದುದರಿಂದ ಜಡದೇಹದಿಂದ ಮುಕ್ತನಾದ ಜೀವನಿಗೆ ಹೃತ್ಪದ್ಮಸ್ಥತ್ವವು ಕೂಡಲಾದು. ಆದಕಾರಣ ಹೃತ್ಪದ್ಮಸ್ಥನು ಜೀವನಲ್ಲ.

ಪೀಠಿಕೆ ॥ ಹಾಗಾದರೆ ಪರಂ ಜ್ಯೋತಿರುಪಸಂಪದ್ಯ ಎನ್ನುವಲ್ಲಿ ಮುಕ್ತನಿಗೆ ಪಾಪರಾಹಿತ್ಯಾದಿಗಳು ಅಭಿವ್ಯಕ್ತಗಳಾಗುತ್ತವೆ ಎಂದೇ ಹೇಳಲ್ಪಡುತ್ತದೆ. ಆ ಗುಣಗಳಿಗೆ ಪರಮೇಶ್ವರಾಧೀನತ್ವವು ಹೇಳಲ್ಪಡುವುದಿಲ್ಲ. ಆದಕಾರಣ ಅದು ಸ್ವತ ಏವ ಎಂದರೆ—

**ಭಾಷ್ಯ ॥ ಯತ್ಪ್ರಸಾದಾತ್ಸಮುಕ್ತೋ ಭವತಿ ಸ ಭಗವಾನ್ ಪೂರ್ವೋಕ್ತಃ ॥ ೧೯ ॥ ೨೨ ॥**

**ಭಾಷ್ಯಾರ್ಥ** ॥ ಯಾವ ಶ್ರೀಹರಿಯ ಅನುಗ್ರಹದಿಂದ ಆ ಜೀವನು ಪಾಪಾರಾಹಿತ್ಯಾದಿ ಗುಣಗಳುಳ್ಳವನು ಆಗುತ್ತಾನೋ, ಆ ಗುಣಪ್ರದಾತನಾದ ಶ್ರೀಹರಿಯು **ಪರಂ ಜ್ಯೋತಿರುಪಸಂಪದ್ಯ** ಎನ್ನುವ ಪೂರ್ವವಾಕ್ಯದಲ್ಲಿ ಗುಣಪ್ರದಾತನೆಂದು ಹೇಳಲ್ಪಡುತ್ತಾನೆ.

**ವಿಶೇಷಾಂಶ** ॥ (೧) ಪ್ರಸಾದವೆಂದರೆ— ಇಚ್ಛಾವಿಶೇಷವು. (೨) ಅಥವಾ ಜೀವನಲ್ಲಿ ಅನ್ಯಾಧೀನವಾದ ಗುಣಸಮುದಾಯವು ಇದ್ದುದರಿಂದ ಜೀವನೇ ಅಪಹತ ಪಾಪಾದಿಗಳುಳ್ಳವನೂ ಹೃತ್ಪದ್ಮಸ್ಥನೂ ಆಗಲಿ ಎಂದರೆ ಯಾರ ಅನುಗ್ರಹದಿಂದ ಜೀವನು ಜಡದೇಹದಿಂದ ಮುಕ್ತನಾಗಿ ಪಾಪಾದಿರಹಿತನು ಆಗುತ್ತಾನೋ ಅಂತಹ ಶ್ರೀಹರಿಯೇ **ಯ ಆತ್ಮಾ ಅಪಹತಪಾಪ್ಮಾ** ಇತ್ಯಾದಿ ಪೂರ್ವವಾಕ್ಯದಲ್ಲಿ ಪಾಪಲೇಶರಹಿತನೆಂದು ಉಕ್ತನಾಗಿದ್ದಾನೆ. ಜೀವನಲ್ಲ. ದಾತೃಪ್ರತಿಗ್ರಹೀತೃಗಳ ಮಧ್ಯದಲ್ಲಿ ದಾತೃಗೇನೇ ಮುಖ್ಯತ್ವವು. ಮುಖ್ಯ ಅಮುಖ್ಯಗಳ ಮಧ್ಯದಲ್ಲಿ ಮುಖ್ಯವಾದುದನ್ನೇ ಇಟ್ಟುಕೊಳ್ಳಬೇಕು. ॥ ೧೯ ॥

**ಪೀಠಿಕೆ** ॥ ಹಾಗಾದರೆ ಏಷಃ ಎಂದು ಜೀವನನ್ನು ಪರಾಮರ್ಶಿಸಿಕೊಂಡು ಜೀವನಿಗೆ **ಆತ್ಮಾ** ಎಂದು ಹೃತ್ಪದ್ಮಸ್ಥ ಆತ್ಮತ್ವವನ್ನು ಹೇಳಿದ್ದರಿಂದ ಅಪಹತಪಾಪ್ಮತ್ವಾದಿ ಗುಣಗಳುಳ್ಳವನಾದಾಗ್ಯೂ ಜೀವನೇ ಏತಚ್ಛಬ್ದಪರಾಮರ್ಶಬಲದಿಂದ ಹೃತ್ಪದ್ಮಸ್ಥ ಆತ್ಮನು ಏಕೆ ಆಗಲಾರನು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ ॥ ೨೦ ॥

**ಸೂತ್ರಾರ್ಥ** ॥ (ಜೀವನನ್ನು ಏಷಃ ಎಂದು ಪರಾಮರ್ಶ ಮಾಡಿ ಜೀವನಿಗೆ ಹೃತ್ಪದ್ಮಸ್ಥತ್ವವನ್ನು ವಿಧಾನ ಮಾಡಿದ್ದರಿಂದ ಹೃತ್ಪದ್ಮಸ್ಥನಾದ ಆತ್ಮನು ಜೀವನೇ ಈಶ್ವರನಲ್ಲವೆಂದರೆ ಹಾಗೆ ಹೇಳಕೂಡದು. ಏಕೆಂದರೆ) ಏಷಃ ಎನ್ನುವ ಪರಾಮರ್ಶವು ಜೀವವ್ಯತಿರಿಕ್ತನಾದ ಈಶ್ವರಾರ್ಥವೇ. ಜೀವಾರ್ಥಕವಲ್ಲ.

**ಭಾಷ್ಯ ॥ ಯಂ ಪ್ರಾಪ್ಯ ಸ್ವೇನ ರೂಪೇಣ ಜೀವೋಽಭಿನಿಷ್ಪದ್ಯತೇ ಸ ಏಷ ಆತ್ಮೇತಿ ಪರಮಾತ್ಮಾರ್ಥಶ್ಚ ಪರಾಮರ್ಶಃ ॥ ೨೩ ॥**

**ಭಾಷ್ಯಾರ್ಥ** ॥ (ಜೀವನು ಪರಂಜ್ಯೋತಿಃ ಎಂದು ಹೆಸರುಳ್ಳ ಪರಮಾತ್ಮನನ್ನು ಹೊಂದಿ ಅಪರೋಕ್ಷವಾಗಿ ತಿಳಿದು ಆ ಮೇಲೆ ಸಮೀಪವನ್ನು ಹೊಂದಿ ಅವಿದ್ಯೆಯನ್ನು ಹೋಗಲಾಡಿಸಿ ಆನಂದ ಮೊದಲಾದ ತನ್ನ ರೂಪದಿಂದ ಸಂಪನ್ನನಾಗುತ್ತಾನೆ. ಆತನ ಸ್ವರೂಪಭೂತಗುಣಗಳು ಆವಿರ್ಭೂತ ಗಳಾಗುತ್ತವೆ.) ಯಾರ ಸಮೀಪವನ್ನು ಹೊಂದಿ ಜೀವನು ತನ್ನ ರೂಪದಿಂದ ಸಂಗತನಾಗುತ್ತಾನೋ ಆ ಈತನೇ ಹಿಂದೆ ಹೇಳಲ್ಪಟ್ಟ ಪರಮಾತ್ಮನು. (ಈ ಪ್ರಕಾರ ರಮಾದೇವಿಯು ಬ್ರಹ್ಮಾದಿಗಳನ್ನು ಕುರಿತು ಹೇಳಿದಳು. ಎಂದು ಪರಾಮರ್ಶಃ) ಏತಚ್ಛಬ್ದವು ಪರಮಾತ್ಮನೇ ವಾಚ್ಯವಾಗಿ ಉಳ್ಳದ್ದು. ಅಥವಾ ಏತಚ್ಛಬ್ದದಿಂದ ಪರಿಗ್ರಹಣವು ಶ್ರೀಹರಿಗೇನೇ ಆತ್ಮತ್ವವಿಧಾನವು ಪ್ರಯೋಜನವಾಗಿ ಉಳ್ಳದ್ದು. ॥೨೦॥

**ಪೀಠಿಕೆ** ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅಲ್ಪಶ್ರುತೇರಿತಿ ಚೇತ್ತದುಕ್ತಂ ಓಂ ॥ ೨೧ ॥

**ಸೂತ್ರಾರ್ಥ ॥** ಅಲ್ಪಶ್ರುತೇಃ=ದಹರಃ ಎನ್ನುವ ವಾಕ್ಯದಲ್ಲಿ ಸರ್ವಗತವಾದ ವಸ್ತುವಿನಲ್ಲಿ ಅಲ್ಪಸ್ಥಾನ ಸ್ಥಿತಿಯು ಶ್ರುತವಾದ ಪ್ರಯುಕ್ತ (ಅದು ವಿಷ್ಣುವಿನಲ್ಲಿ ಕೂಡದೆ ಇದ್ದ ಕಾರಣ ವಿಷ್ಣುವಿಗೆ ದಹರಸ್ಥತ್ವವು ಅಯುಕ್ತವು. ಆದಪ್ರಯುಕ್ತ ದಹರಸ್ಥನು ವಿಷ್ಣುವಲ್ಲ. ಮತ್ತೆ ಜೀವನೇ) ಇತಿ ಚೇತ್=ಎಂದರೆ (ಹಾಗೆ ಹೇಳಕೂಡದು) ತದುಕ್ತಂ=ಸರ್ವಗತನಾದ ವಿಷ್ಣುವಿಗೂ ಮೊದಲು ನಿಚಾಯ್ಯತ್ವಾತ್ ಎಂದು ಆಕಾಶದಂತೆ ಅಲ್ಪಸ್ಥಾನಸ್ಥಿತತ್ವವು ಹಾಗೆ ಉಪಾಸನೆಗೋಸ್ಕರ ಯುಕ್ತವಾಗುವುದು. ಅಂಶದಿಂದಲೂ ಸರ್ವಗತನಾದುದರಿಂದ ಆತನಲ್ಲಿ ಅದು ಅನುಪಪನ್ನವೂ ಅಲ್ಲ ಎಂದು ಉಕ್ತವಾಗಿದೆ. ಮತ್ತು ಏಷ ಮ ಆತ್ಮಾ ಎನ್ನುವ ಛಂದೋಗಶ್ರುತಿಯಲ್ಲಿ ವಿಷ್ಣುವು ಸರ್ವಶ್ರೇಷ್ಠನೂ ಗುಣಪರಿಪೂರ್ಣನೂ ವ್ಯಾಪ್ತನೂ ಆಗಿ ಹೃದಯಾಕಾಶವೆಂಬ ಅಲ್ಪಸ್ಥಾನದಲ್ಲಿದ್ದಾನೆಂದು ಸ್ಮೃತ್ಯುಕ್ತವೂ ಆಗಿದೆ.

**ಭಾಷ್ಯ ॥ ದಹರಃ (ಛಾ.೮.೧.೧)। ಇತ್ಯಲ್ಪಶ್ರುತೇರ್ನೇತಿ ಚೇನ್ನ ನಿಚಾಯ್ಯ ತ್ವಾದೇವಂ ವ್ಯೋಮಚ್ಚ ಇತ್ಯುಕ್ತತ್ವಾತ್ ॥ ೨೪ ॥**

**ಭಾಷ್ಯಾರ್ಥ ॥** ದಹರೋಽಸ್ಮಿನ್ನಂತರ ಆಕಾಶಃ ಎನ್ನುವ ವಾಕ್ಯದಲ್ಲಿ ದಹರಗತ ವಾದ ವಸ್ತುವಿನಲ್ಲಿ ಅಲ್ಪಸ್ಥಾನಸ್ಥಿತಿರೂಪವಾದ ಲಿಂಗವು ಶ್ರುತವಾದ ಪ್ರಯುಕ್ತ ಅದು ಪರಮಾತ್ಮನಲ್ಲಿ ಕೂಡದೆ ಇದ್ದಪ್ರಯುಕ್ತ ಅಯುಕ್ತವಾಗುವುದು. ಆದಕಾರಣ ದಹರಸ್ಥನು ವಿಷ್ಣುವಲ್ಲ, ಜೀವನೇ ಎಂದರೆ ಹಾಗೆ ಹೇಳಕೂಡದು. ಏಕೆಂದರೆ ನಿಚಾಯ್ಯತ್ವಾತ್ ಎನ್ನುವಲ್ಲಿ ಸರ್ವಗತನಾದ ವಿಷ್ಣುವಿಗೂ ಆಕಾಶದಂತೆ ಅಲ್ಪಸ್ಥಾನ ಸ್ಥಿತಿಯು ಕೂಡಬಹುದು ಎಂದು ಉಕ್ತವಾದ ಪ್ರಯುಕ್ತ.

**ಪೀಠಿಕೆ ॥** ಹಾಗಾದರೆ ಆಕಾಶವು ಅಂಶತಃ ಅಪೂರ್ಣವಾದ ಪ್ರಯುಕ್ತ ಅದಕ್ಕೆ ಅಲ್ಪೌಕಸ್ತ್ವವು ಕೂಡಬಹುದು. ಬ್ರಹ್ಮನಾದರೂ ಅಂಶತೋಽಪಿ ಪೂರ್ಣನಾಗಿದ್ದಾನೆ. ಆದಕಾರಣ ಆತನಿಗೆ ಅಂಶತಃ ಅಲ್ಪೌಕಸ್ತ್ವವು ಹೇಗೆ ಕೂಡುತ್ತದೆ, ಎಂದರೆ ಸೂತ್ರ ವಿಶೇಷವನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.—

**ಭಾಷ್ಯ ॥ ಏಷ ಮ ಆತ್ಮಾಂಽತರ್ಹೃದಯೇ ಜ್ಯಾಯಾನ್ (ಛಾ.ಉ.೩.೧೪.೩.। ಇತಿ ಶ್ರುತ್ಯುಕ್ತತ್ವಾಚ್ಚ ॥ ೨೧ ॥ ಅಧಿ.೫ ॥ ॥ ೨೫ ॥**

**ಭಾಷ್ಯಾರ್ಥ ॥** ನನ್ನ ಹೃದಯದಲ್ಲಿ ಯಾವ ಪರಮಾತ್ಮನು ಇದ್ದಾನೋ, ಸರ್ವರ ಹೃದಯ ದಲ್ಲಿಯೂ ಯಾವನು ಇದ್ದಾನೆಯೋ, ಏಷಃ=ಹೃದಯದಲ್ಲಿದ್ದ ಅಂಶರೂಪನಾದ ಶ್ರೀಹರಿಯು, ಜ್ಯಾಯಾನ್=ದೇಶಕಾಲಗುಣಗಳಿಂದ ಪೂರ್ಣನು, (ಇದು ಉಪನಿಷದ್ದೃಷ್ಟ ಆದ ಋಷಿಯ ವಾಕ್ಯವು) ಎಂದು ಶ್ರುತಿಯಲ್ಲಿ ಹೇಳಿದ ಪ್ರಯುಕ್ತವೂ ಯುಕ್ತವೇ.

**ವಿಶೇಷಾಂಶ ॥** (೧) ಶ್ರುತಿಸೂತ್ರಗಳಲ್ಲಿ ಹೇಳಿದಾಗ್ಯೂ ಯುಕ್ತಿವಿರೋಧವಿದ್ದುದರಿಂದ ಇದನ್ನು ಹೇಗೆ ಅಂಗೀಕರಿಸಬಹುದು ಎಂದರೆ ಬ್ರಹ್ಮನಿಗೆ ಅಚಿಂತ್ಯಶಕ್ತಿಯಿದ್ದ ಪ್ರಯುಕ್ತ ಹಿಂದೆ ಹೇಳಿದ್ದು ಯುಕ್ತವಾಗಬಹುದು. (೨) ೧ ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ, ೨ ಯಸ್ಮಿನ್

ವಿರುದ್ಧಗತಯೋಽಪ್ಯನಿಶಂ ಪತಂತಿ ಇದು ಮೊದಲಾದ ವಚನಗಳಿಂದಲೂ ಲೋಕದೃಷ್ಟಿಯಿಂದ ವಿರುದ್ಧವಾದುದೂ ಈಶ್ವರನಲ್ಲಿ ಅಚಿಂತ್ಯ ಶಕ್ತಿಯಿದ್ದುದರಿಂದ ಕೂಡುತ್ತದೆ. ॥ ೨೧ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** (೧) **ಅಥ ಯದಿದಮಸ್ಮಿನ್** ಬ್ರಹ್ಮಪುರೇ ಎನ್ನುವ ವಾಕ್ಯದಲ್ಲಿ ಶ್ರುತವಾದ ದಹರಾಕಾಶವು ೧ ಭೂತಾಕಾಶವೋ ೨ ಜೀವನೋ ೩ ಬ್ರಹ್ಮನೋ ಎಂದು ಸಂದೇಹವು ಬಂದರೆ ಆಕಾಶಶಬ್ದಕ್ಕೆ ಭೂತಾಕಾಶದಲ್ಲಿ ರೂಢಿಯಿದ್ದುದರಿಂದಲೂ **ತಸ್ಮಿನ್ಯದಂತಸ್ತದನ್ವೇಷ್ಟವ್ಯಂ** ಎಂದು ಭೂತಾಕಾಶವನ್ನೇ ಹುಡುಕಬೇಕೆಂದು ಹೇಳಿದುದರಿಂದ ಭೂತಾಕಾಶವೇ ದಹರಾಕಾಶವು ಅಥವಾ ಬ್ರಹ್ಮಪುರೇ ಎನ್ನುವಲ್ಲಿದ್ದ ಬ್ರಹ್ಮಶಬ್ದವು ದೇಹವ್ಯಾಪ್ತಿಯಿಂದ ಜೀವನಲ್ಲಿ ಕೂಡುವುದರಿಂದಲೂ ಸಂಪ್ರಸಾದವಾಕ್ಯದಲ್ಲಿ ಜೀವನೆಂದು ತೋರುವುದರಿಂದಲೂ ಜೀವನಿಗಾಗಲೀ ದಹರಾಕಾಶತ್ವವು ಎಂದು ಪೂರ್ವಪಕ್ಷವು ಬಂದರೆ **ಉಪಲಬ್ಧೇರಧಿಷ್ಠಾನಂ ಬ್ರಹ್ಮಣೋ ದೇಹ ಇಷ್ಯತೇ। ತೇನಾಸಾಧಾರಣತ್ವೇನ ದೇಹೋ ಬ್ರಹ್ಮಪುರಂ ಭವೇತ್॥** ಎಂದು ಹೇಳಿದ ಪ್ರಕಾರ ಕಿಂ ತದತ್ರ ವಿದ್ಯತೇ ಎಂದು ಪ್ರಶ್ನೆ ಮಾಡುತ್ತಿರಲು **ಯಾವಾನ್ವಾ** ಎನ್ನುವ ವಾಕ್ಯವನ್ನು ಆರಂಭಿಸಿ **ಏತತ್ಸತ್ಯಂ ಬ್ರಹ್ಮಪುರಂ** ಇತ್ಯಂತ ವಾಕ್ಯದಿಂದ ದಹರಕ್ಕೆ ಅತಿಮಹತ್ವ ಸರ್ವಾಶ್ರಯತ್ವಾದಿಗಳನ್ನು ಹೇಳಿದ್ದರಿಂದಲೂ ಮತ್ತು **ಸತ್ಯಸಂಕಲ್ಪಃ** ಇತ್ಯಂತ ವಾಕ್ಯೋಕ್ತ ಸತ್ಯಸಂಕಲ್ಪಾದಿ ಗುಣಗಳಿಂದಲೂ ಆಕಾಶಶಬ್ದನಿರ್ದಿಷ್ಟನು ಬ್ರಹ್ಮನೇ ಭೂತಾಕಾಶವಲ್ಲ. (೨) ಮತ್ತು **ಕಿಂ** ತದತ್ರ ವಿದ್ಯತೇ ಎಂದು ಪ್ರಶ್ನಿಸುವಾಗ್ಯೇ **ಯಾವಾನ್ವಾ ಅಯಮಾಕಾಶಃ** ಎಂದಾರಂಭಿಸಿ **ಏತತ್ಸತ್ಯಂ ಬ್ರಹ್ಮಪುರಂ** ಏತತ್ಪರ್ಯಂತ ವಾಕ್ಯದಿಂದ ದಹರಕ್ಕೆ ಅತಿಮಹತ್ವ ಸರ್ವಾಶ್ರಯತ್ವಾದಿಗಳನ್ನು ಹೇಳಿ **ಏಷ ಆತ್ಮಾ ಅಪಹತಪಾಪ್ಮಾ** ಎಂದಾರಂಭಿಸಿ **ಸತ್ಯಸಂಕಲ್ಪಃ** ಎನ್ನುವ ತನಕ ಆಕಾಶಶಬ್ದನಿರ್ದಿಷ್ಟನು ಪರಮಾತ್ಮನು ಮತ್ತು ಜೀವನಲ್ಲಿ ಸರ್ವಥಾ ಕೂಡದಿರುವ ಜಗದ್ವಿಧಾರಣ, ಚೇತನ ಅಚೇತನ ಸರ್ವವಸ್ತುನಿಯಮನ, ಮೊದಲಾದ ಅನಂತಗುಣಗಳನ್ನು ದಹರಕ್ಕೆ ಹೇಳಿದ್ದರಿಂದ ದಹರವು ಜೀವನಲ್ಲ, ಬ್ರಹ್ಮನೇ ಎಂದು ಸಿದ್ಧಾಂತ ಮಾಡಿರುವರು. (೨) ಅದು ಅಯುಕ್ತವು. ಹೇಗೆಂದರೆ— ದಹರಾಕಾಶಕ್ಕೆ ಬ್ರಹ್ಮತ್ವವಿದ್ದರೆ **ತಸ್ಮಿನ್ಯದಂತಃ** ಎಂದು ದಹರಾಕಾಶಸ್ಥವನ್ನು ಹುಡುಕಬೇಕು. ಇತ್ಯಾದ್ಯುಕ್ತಿಯು ಕೂಡಲಾರದು. (೪) ಮತ್ತು ಪರರು **ತಸ್ಮಿನ್ಯದಂತಃ** ಎಂದು ತತ್ ಶಬ್ದದಿಂದ ಹೃತ್ಪುಂಡರೀಕವನ್ನೇ ಪರಾಮರ್ಶಮಾಡಿಕೊಂಡು ತದಂತರ್ಗತವಾದ ದಹರವನ್ನೇ ಅನ್ವೇಷಣ ಮಾಡಬೇಕು. ಇತ್ಯಾದಿ ಪ್ರಕಾರ ಹೇಳುವರು. ಅದೂ ಅಯುಕ್ತವು. ತಸ್ಮಿನ್ ಎನ್ನುವುದಕ್ಕೆ ಸನ್ನಿಹಿತವಾದ ದಹರವನ್ನು ಬಿಟ್ಟು ವ್ಯವಹಿತವಾದ ಪುಂಡರೀಕಪರತ್ವವು ಕೂಡಲಾರದು. (೫) ಮತ್ತು ದಹರವು ಹೃತ್ಪುಂಡರೀಕದಲ್ಲಿರತಕ್ಕುದೆಂದು **ದಹರೋಽಸ್ಮಿನ್** ಎನ್ನುವಲ್ಲಿಯೇ ಹೇಳಿದ್ದರಿಂದ ಪುನಃ ಆ ಮಾತು ವ್ಯರ್ಥವೇ. ಮತ್ತು **ಯದಂತಃ** ಎನ್ನುವಲ್ಲಿ ಯತ್ ಶಬ್ದಕ್ಕೂ ತದನ್ವೇಷ್ಟವ್ಯಂ ಎನ್ನುವಲ್ಲಿ ತತ್ ಶಬ್ದಕ್ಕೂ ದಹರಪರತ್ವವಿದ್ದರೆ ಪುಲ್ಲಿಂಗತ್ವವೂ ಬರಬೇಕಾಗುವುದು. ಇತ್ಯಾದ್ಯುಕ್ತಿಪ್ರಕಾರ ಅವರಿಬ್ಬರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

(೧) ಛಾಂದೋಗ್ಯದಲ್ಲಿ ಎಂಟನೇ ಅಧ್ಯಾಯದಲ್ಲಿ **ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ ತಂ ಚೇದ್ಬ್ರೂಯುರ್ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ, ಸ ಬ್ರೂಯಾತ್ ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ** ಇತ್ಯಾದಿಗಳಿಂದ ಸರ್ವಾಧಾರವಾಗಿ ಶ್ರುತವಾದ ಹೃತ್ಪದ್ಮಸ್ಥವು ೧ ಆಕಾಶವೋ, ೨ ಜೀವನೋ, ೩ ವಿಷ್ಣುವೋ, ಎಂದು ಸಂದೇಹವು. ಹೃತ್ಪದ್ಮಸ್ಥವು ಆಕಾಶವೇ. ಬ್ರಹ್ಮನಲ್ಲ ಎಂದು ಪೂರ್ವ ಪಕ್ಷವು. ಏಕೆಂದರೆ— ಗಗನದಲ್ಲಿ ಪ್ರಸಿದ್ಧವಾದ ಆಕಾಶಶಬ್ದಕ್ಕೇನೇ ಹೃತ್ಪದ್ಮಸ್ಥದಲ್ಲಿ ಪ್ರಯೋಗವಿದೆ. ಹೃತ್ಪದ್ಮಸ್ಥನಲ್ಲಿ ಸರ್ವಾಧಾರತ್ವರೂಪ ಬ್ರಹ್ಮಲಿಂಗವು ಶ್ರುತವಾದುದರಿಂದ ಹೃತ್ಪದ್ಮಸ್ಥನು ಬ್ರಹ್ಮನು ಎಂದು ಹೇಳಕೂಡದು. **ಪದ್ಮಕೋಶ ಪ್ರತೀಕಾಶಂ ಹೃದಯಂ** ಎಂದು ಪ್ರಕೃತವಾದ **ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ** ಎನ್ನುವ ಶ್ರುತ್ಯಂತರದಲ್ಲಿ ಸುಷಿರಶಬ್ದಿತವಾದ ಆಕಾಶಕ್ಕೇನೇ ಹೃತ್ಪದ್ಮಸ್ಥತ್ವ ಸರ್ವಾಧಾರತ್ವಗಳನ್ನು ಹೇಳಿದ್ದರಿಂದ ಬ್ರಹ್ಮನೆಂದಂಗೀಕರಿಸಿದರೆ ಆ ಸಮಾಖ್ಯಾವಿರೋಧವು ಬರುವುದು. (೨) ಮತ್ತು **ಕಿಂ ತದತ್ರ ವಿದ್ಯತೇ** ಎನ್ನುವ ಪ್ರಶ್ನೆಗೆ **ಬ್ರಹ್ಮವಿದ್ಯತೇ** ಎಂದೇ ಉತ್ತರವನ್ನು ಹೇಳಬೇಕಿತ್ತಲ್ಲದೆ **ಯಾವಾನ್ವಾ ಅಯಮಾಕಾಶಃ** ಇತ್ಯಾದಿಗಳಿಂದ ಹೃದಯದ ಒಳಗೆ ಇದ್ದ ಆಕಾಶಕ್ಕೆ ಬಾಹ್ಯಾಕಾಶ ಸಾಮ್ಯವನ್ನು ಹೇಳಿದ್ದು ಅಸಂಗತವಾಗುವುದು. (೩.) ಅಥವಾ ಜೀವನೇ ದಹರಾಕಾಶದೊಳಗೆ ಇರುವವನು ಎಂದು ಪೂರ್ವಪಕ್ಷವು ದಹರಾಕಾಶಸ್ಥನಲ್ಲಿ **ಯ ಆತ್ಮಾ ಅಪಹತಪಾಪ್ಮಾ** ಎನ್ನುವ ವಾಕ್ಯಶೇಷದಲ್ಲಿ ಆತ್ಮಶಬ್ದಪ್ರಯೋಗವಿದೆ. ಅದಕ್ಕೆ **ಏಷ ಆತ್ಮಾ** ಎನ್ನುವ ಉತ್ತರವಾಕ್ಯದಲ್ಲಿ ಮೊದಲು ಸಂಪ್ರಸಾದ ಪದದಿಂದ ಪ್ರಸ್ತುತನಾದ ಜೀವನನ್ನು ಏಷಃ ಎನ್ನುವ ಪುಲ್ಲಿಂಗವಾದ ಏತತ್ ಶಬ್ದದಿಂದ ಪರಾಮರ್ಶಮಾಡಿ ಆತ್ಮತ್ವವನ್ನು ವಿಧಾನಮಾಡಿದ್ದರಿಂದ ಜೀವಾರ್ಥಕವು. ದಹರಸ್ಥಲಿಂಗವೂ ಇದೆ. ಅದಾದರೂ ಸರ್ವಗತನಾದ ವಿಷ್ಣುವಿನಲ್ಲಿ ಕೂಡಲಾರದು, ಎಂದು ಪೂರ್ವಪಕ್ಷಮಾಡಿಕೊಂಡು, ಹೃದಯದಲ್ಲಿರತಕ್ಕ ದಹರಾಕಾಶಾಂತಸ್ಥನಾದ ಹೃತ್ಪದ್ಮಸ್ಥನು ಬ್ರಹ್ಮನೇ. ಏಕೆಂದರೆ— **ಯ ಆತ್ಮಾ ಅಪಹತಪಾಪ್ಮಾ** ಎನ್ನುವ ಉತ್ತರವಾಕ್ಯದಲ್ಲಿ ಶ್ರುತಗಳಾದ ಅಪಹತಪಾಪ್ಮತ್ವ, ವಿರಜತ್ವ, ವಿಮೃತ್ಯುತ್ವ, ವಿಶೋಕತ್ವ ಮೊದಲಾದ ಲಿಂಗಗಳು, **ಸ ಏಷಃ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ** ಇತ್ಯಾದಿಗಳಿಂದ ಕೇವಲ ವಿಷ್ಣುವಿನಲ್ಲಿ ಇರತಕ್ಕವುಗಳು. (೪) ಮತ್ತು **ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಂ ನ ವಿಂದಂತಿ** ಎಂದು ಶ್ರುತವಾದ ಸುಪ್ತಪ್ರಾಪ್ಯತ್ವ ಲಿಂಗವು **ಸತಾಸೋಮ್ಯ ತದಾ ಸಂಪನ್ನೋ ಭವತಿ** ಎನ್ನುವ ವಾಕ್ಯದಲ್ಲಿ ಬ್ರಹ್ಮಧರ್ಮವಾಗಿ ಶ್ರುತವಾಗಿದೆ. ಬ್ರಹ್ಮಲೋಕಂ ಎಂದು ಹೃತ್ಪದ್ಮ ಸ್ಥನಲ್ಲಿ ಬ್ರಹ್ಮಪದವು ಶ್ರುತವಾಗಿದೆ. ಮತ್ತು **ಅರಶ್ಚ ವೈ ಣ್ಯಶ್ಚ ಸುಧಾ ಸಮುದ್ರೌ** ಇತ್ಯಾದಿ ಶ್ರುತಿಯಿಂದ ಸುಧಾಸಮುದ್ರಾಶ್ರಯ ಲೋಕವತ್ವಲಿಂಗವು ವಿಷ್ಣುಧರ್ಮವಾಗಿದೆ. ಮತ್ತು **ಅಯಮಾತ್ಮಾ ಸ ಸೇತುಃ ವಿಧೃತಿರೇಷಾಂ ಲೋಕಾನಾಮಸಂಭೇದಾಯ** ಎಂದು ಹೃತ್ಪದ್ಮಸ್ಥನಲ್ಲಿ ಶ್ರುತವಾದ ಸರ್ವಾಧಾರತ್ವ ಲಿಂಗವು

ವಿಷ್ಣುಧರ್ಮವೆಂದು ನಿರ್ಣಯವಾಗಿದೆ. ಇತ್ಯಾದ್ಯನೇಕ ಸಾಧಕಗಳಿವೆ. **ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ತರಂತಿ ಹಿ** ಇತ್ಯಾದಿಗಳಿಂದ ಅಪಹತಪಾಪ್ಮತ್ವಾದಿಗಳು ಜೀವಾದಿಗಳಲ್ಲಿ ಸ್ವಾತಂತ್ರ್ಯೇಣ ಕೂಡಲಾರವು. ಸ ತತ್ರ ಪರ್ಯೇತಿ ಇತ್ಯಾದಿ ವಾಕ್ಯದಲ್ಲಿ ಮುಕ್ತನಿಗೆ ಸತ್ಯಕಾಮತ್ವಾದಿಗಳನ್ನು ಹೇಳಿದಾಗ್ಯೂ ಆತನಿಗೆ ಹೃತ್ಪದ್ಮಸ್ಥತ್ವವು ಕೂಡಲಾರದು. **ಪರಂ ಜ್ಯೋತಿರುಪಸಂಪದ್ಯ** ಎನ್ನುವಲ್ಲಿ ಉಕ್ತನಾದ ಜ್ಯೋತಿರೂಪಬ್ರಹ್ಮನಿಗೇನೇ ಹೃತ್ಪದ್ಮಸ್ಥ ಆತ್ಮತ್ವವನ್ನು ವಿಧಾನ ಮಾಡಿದ್ದು. ಅಚಿಂತ್ಯ ಶಕ್ತ್ಯಾದಿಗಳು ಇದ್ದುದರಿಂದ ಪೂರ್ಣನಿಗೂ ಅಲ್ಪೌಕಸ್ತ್ವವು ಉಪಪನ್ನವಾಗುತ್ತದೆ. ತಥಾಚ ಬಾಧಕಗಳು ಯಾವುದು ಇಲ್ಲದಿರುವುದರಿಂದಲೂ ಸಾಧಕಗಳು ಇದ್ದುದರಿಂದಲೂ ಸರ್ವಾಧಾರನಿಗೆ ಶ್ರುತನಾದ ಹೃತ್ಪದ್ಮಸ್ಥನು ಬ್ರಹ್ಮನೇ ಎಂದು ಸಿದ್ಧಾಂತವು. ಅಧಿ. ೫ ॥

**ದಹರಾಧಿಕರಣವು ಸಮಾಪ್ತವಾಯಿತು.**

## ೬ ಅನುಕೃತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಕಥಂ ನು ತದ್ವಿಜಾನೀಯಾಂ ಎನ್ನುವ ವಾಕ್ಯದಿಂದ ಹೇಳಲ್ಪಡತಕ್ಕ ಜ್ಞಾನಕ್ಕಾಗಿ ಜ್ಞೇಯಪ್ರಾರ್ಥನಾ ವಿಷಯತ್ವರೂಪವಾದ, ಆನುಕೂಲ್ಯೇನ ಗೃಹ್ಯಮಾಣತ್ವ ರೂಪವಾದ ಲಿಂಗಕ್ಕೆ ಬ್ರಹ್ಮನಲ್ಲಿ ಸಮನ್ವಯವನ್ನು ಮಾಡುತ್ತಾರೆ. ಶ್ರುತ್ಯಾದಿಸಂಗತಿಯನ್ನೂ ವಿಷಯಾದಿಗಳನ್ನೂ ಸೂಚಿಸುತ್ತಾ ಸಯುಕ್ತಿಕವಾಗಿ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಭಾಷ್ಯ ॥ ಅದೃಶ್ಯತ್ವಾದಯಃ ಪರಮೇಶ್ವರಗುಣಾ ಉಕ್ತಾಃ। ತೇಷಾಂ ಸುಖಂ ಶಾಶ್ವತಂ ನೇತರೇಷಾಂ। ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ (ಕಥಂ ನು ತದ್ವಿಜಾನೀಯಾಂ)** (ಕಠ.೫.೧೩..೧೪.) **ಇತ್ಯಾದಿನಾ ಜ್ಞಾನಿಸುಖಸ್ಯಾಪ್ಯ— ನಿರ್ದೇಶ್ಯತ್ವಮಜ್ಞೇಯತ್ವಂ ಚೋಚ್ಯತೇ ಇತಿ ॥ ೧ ॥**

**ಭಾಷ್ಯಾರ್ಥ ॥** (ಮೊದಲು ಆನಂದಮಯಾಧಿಕರಣದಲ್ಲಿ ಯಾವ) ಅದೃಶ್ಯತ್ವ ಮೊದ ಲಾದ ಗುಣಗಳು ಪರಮೇಶ್ವರನಿಗೆ ಹೇಳಲ್ಪಟ್ಟವೆಯೋ, (ಅವುಗಳನ್ನು ಪ್ರವಿಷ್ಟ ವಾದ) ಅನಿರ್ದೇಶ್ಯತ್ವವೂ ಅಜ್ಞೇಯತ್ವವೂ ಕೂಡ **ತೇಷಾಂ ಸುಖಂ** ಎಂದು ಆರಂಭಿಸಿ ಹೇಳಲ್ಪಟ್ಟ **ತದೇತತ್** ಇದು ಮೊದಲಾದ ಕಾಠಕವಾಕ್ಯದಿಂದ, ಸಮೀಪದಲ್ಲಿರತಕ್ಕ **ತತ್** ಶಬ್ದದಿಂದ ಪರಾಮೃಷ್ಟವಾದ ಜ್ಞಾನಿಸುಖಕ್ಕೇನೇ ಹೇಳಲ್ಪಡುತ್ತದೆ. (೧) **ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ। ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇ ಷಾಂ ॥** ಯಾವನು ಜ್ಞಾನಾನಂದಾದಿಗುಣಗಳಿಂದ ಅಭಿನ್ನನೋ, ಸರ್ವವನ್ನು ವಶೀಕರಿಸಿಕೊಂಡವನೋ, ಸರ್ವಪ್ರಾಣಿಗಳಿಗೆ ಅಂತರ್ನಿಯಾಮಕನೋ, ಒಂದಾದ ತನ್ನ ಸ್ವರೂಪವನ್ನು ಬಹುಪ್ರಕಾರ ಮಾಡುತ್ತಾನೋ, ಜೀವರ ಹೃದಯದಲ್ಲಿರತಕ್ಕ ಅಂತಹ ಶ್ರೀಹರಿಯನ್ನು ಯಾವಜ್ಞಾನಿಗಳು ನೋಡುತ್ತಾರೋ, ಅವರಿಗೇನೇ ಶಾಶ್ವತವಾದ ನಿತ್ಯಾಭಿವ್ಯಕ್ತವಾದ ಸೌಖ್ಯವು. ಇತರರಿಗೆ ಇಲ್ಲ (ಇದರಿಂದ ಬ್ರಹ್ಮಸಾಮರ್ಥ್ಯವು

ಉಕ್ತವಾಯಿತು.) ಇದೇ ರೀತಿಯಾಗಿ (ನಿತ್ಯೋ ನಿತ್ಯಾನಾಂ ಎನ್ನುವುದೂ ಬ್ರಹ್ಮಮಾಹಾತ್ಮ್ಯಪರವು.) (೨) ತತ್=ಗುಹ್ಯಂ ಬ್ರಹ್ಮ ಸನಾತನಂ ಎಂದು ಉಪಕ್ರಾಂತವಾದ, ರೂಪಂ ರೂಪಂ ಪ್ರತಿರೂಪೋ ಬಭೂವ ಎಂದು ಪ್ರತಿಬಿಂಬಭೂತನಾದ ಜೀವನಿಗೆ ಬಿಂಬಭೂತವಾದ ರೂಪಶಬ್ದದಿಂದ ಪ್ರಕೃತವಾದ ಏತತ್=ಏಕಂ ರೂಪಂ ಎನ್ನುವಲ್ಲಿ ಪ್ರಕೃತವಾದ ಭಗವದ್ರೂಪವನ್ನು (ಜ್ಞಾನಿಗಳು) ಅನಿರ್ದೇಶ್ಯಂ = ಹೀಗೆಯೇ ಎಂದು ಸಂಪೂರ್ಣವಾಗಿ ನಿರ್ವಚನ ಮಾಡಲಿಕ್ಕೆ ಅಶಕ್ಯವಾದ, ಪರಮಂ ಸುಖಂ = ಪೂರ್ಣ ಸುಖರೂಪವನ್ನಾಗಿ ತಿಳಿಯುತ್ತಾರೆ.

**ವಿಶೇಷಾಂಶ ॥** (೧) ಆನಂದಮಯಾಧಿಕರಣದಲ್ಲಿ ಹೇಳಿದ ಅದೃಶ್ಯತ್ವಾದಿಗಳು ವಿಷ್ಣುವಿನಲ್ಲಿಯೂ ಇತರರಲ್ಲಿಯೂ ಇದ್ದರೆ ಜ್ಞಾನಿಸುಖದಲ್ಲಿ ಅತಿವ್ಯಾಪ್ತಿಯೆಂದು ಆಕ್ಷೇಪಿಸುವುದರಿಂದಲೂ, ಇತರರಲ್ಲಿ ಮಾತ್ರ ಇದ್ದರೆ ಅಸಂಭವವೆಂದು ಆಕ್ಷೇಪಿಸುವುದರಿಂದಲೂ ಫಲತಃ ಆನಂದಮಯಾಧಿಕರಣದಿಂದ ಇದಕ್ಕೆ ಆಕ್ಷೇಪಿಕೀ ಸಂಗತಿಯು. (೨) ಚಶಬ್ದಸೂಚಿತವಾದ ಅನುಕೂಲ್ಯೇನ ಗೃಹ್ಯಮಾಣತ್ವವೇ ವಿಷಯವು, ವಿಷ್ಣುವಿಗೋ ಇತರರಿಗೋ ಎಂದು ಸಂದೇಹವು. ಜ್ಞಾನಿಸುಖಕ್ಕೇನೇ ಎಂದು ಪೂರ್ವಪಕ್ಷವು. ಅನಿರ್ದೇಶ್ಯತ್ವ ಅಜ್ಞೇಯತ್ವಗಳೂ ಜ್ಞಾನಿಸುಖಕ್ಕೇನೇ, ಸುಖಶ್ರುತಿಯೂ ತದೇತತ್ ಎಂದು ಪ್ರಕೃತತ್ವಾದಿರೂಪವಾದ ಯುಕ್ತಿಯೂ ಸೂಚಿತವಾಯಿತು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಅವತಾರಿಸಿ ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅತೋ ವಕ್ತಿ** ॥ ೨ ॥

## ಸೂತ್ರ ॥ ಓಂ ಅನುಕೃತೇಸ್ತಸ್ಯ ಚ ಓಂ ॥ ೨೨ ॥

**ಸೂತ್ರಾರ್ಥ ॥** ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ— ತತ್=ತದೇ ತದಿತಿ ಮನ್ಯಂತೇ **ಅನಿರ್ದೇಶ್ಯಂ ಪರಮಂ ಸುಖಂ। ಕಥಂ ನು ತದ್ವಿಜಾನೀಯಾಂ** ಎಂದು ಆನುಕೂಲ್ಯದಿಂದ ಗೃಹ್ಯಮಾಣವಾದ ತದೇತತ್ ಶಬ್ದಗಳಿಂದ ಪರಾಮೃಶ್ಯವಾದ ಅನಿರ್ದೇಶ್ಯಸುಖವು, ತತ್ತು=ವಿಷ್ಣುರೂಪವೇ. ಸಮೀಪೋಕ್ತವಾದ ಜ್ಞಾನಿಸುಖವಲ್ಲ. ಏಕೆಂದರೆ—ತಸ್ಯ=ಸೂರ್ಯಾದಿತೇಜಸ್ಸಿಗೆ, ತಸ್ಯ= ಆನುಕೂಲ್ಯದಿಂದ ಗೃಹ್ಯಮಾಣವಾದ ವಸ್ತುವಿನ, **ತಮೇವ ಭಾಂತಂ** ಎಂದು, ಅನುಕೃತೇಃ= ಅನುಭಾನವು, ಶ್ರುತವಾದ ಪ್ರಯುಕ್ತ ವಿಷ್ಣುವಿನ ಸುಖಕ್ಕೆ (ಇತರ ತೇಜೋನಿಯಂತೃತ್ವವು ಶ್ರುತವಾದ ಪ್ರಯುಕ್ತ)

**ವಿಶೇಷಾಂಶ ॥** (೧) ಅನುಭಾನವೆಂದರೆ ಆ ಶ್ರೀಹರಿಯ ಇಚ್ಛೆಯನ್ನು ಅನುಸರಿಸಿ ಇರುವಿಕೆ. ಕ್ರಿಯಾವಿಶೇಷವು. (೨) ಯದ್ಯಪಿ ಸೂತ್ರ ಭಾಷ್ಯಗಳಲ್ಲಿ **ಅನುಭಾತಿ** ಎನ್ನುವ ಶ್ರುತಿಯನ್ನು ಅನುಸರಿಸಿ **ಅನುಭಾನಾತ್** ಎಂದು ಹೇಳಬೇಕಿತ್ತು, ಆದಾಗ್ಯೂ **ತಾಪನೀ ಪಾಚನೀ ಚೈವ ಶೋಷಿಣೀ ಚ ಪ್ರಕಾಶಿನೀ। ಸೈವ ರಾಜನ್ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥** ಎಂದು ಐತರೇಯಾಭಾಷ್ಯದಲ್ಲಿ ಉದಾಹೃತವಾದ ಪಾದ್ಮವಚನವನ್ನು ಅನುಸರಿಸಿ ಸೂರ್ಯಾದಿಗಳಲ್ಲಿ ಇರತಕ್ಕ ಪ್ರತಪನಾದಿ ಕ್ರಿಯಾಂತರಗಳೂ ಕೂಡ ಪರಮಾತ್ಮನ ಅಧೀನವು ಎಂದು ತೋರಿಸುವುದಕ್ಕಾಗಿ **ಅನುಕೃತೇಃ** ಎಂದು ಹೇಳಿದ್ದಾರೆ. (೩)

ಸೂತ್ರದಲ್ಲಿಯೂ ತದನುಸಾರಿಯಾದ ಭಾಷ್ಯದಲ್ಲಿಯೂ ಇದ್ದ ಚಶಬ್ದವು ದ್ವಿತೀಯಸೂತ್ರದಲ್ಲಿ; ಹೇಳಲ್ಪಡತಕ್ಕ ಸರ್ವಜಗತ್ಪ್ರಕಾಶತ್ವರೂಪವಾದ ಹೇತುಸಮುಚ್ಚಾಯಕವು. ಅಥವಾ ಸೂರ್ಯಾದ್ಯಪ್ರಕಾಶ್ಯತ್ವರೂಪವಾದ ಅನುಕ್ತ ಹೇತುಸಮುಚ್ಚಾಯಕವು.

**ಭಾಷ್ಯ ॥ ತಮೇವ ಭಾಂತಮನುಭಾತಿ ಸರ್ವಂ ಇತ್ಯನುಕೃತೇಃ। ತಸ್ಯ ಭಾಸಾ ಸರ್ವಮಿದಂ ವಿಭಾತಿ (ಕಠ.೫.೧೫.)। ಇತಿ ವಚನಾಚ್ಚ ಪರಮಾತ್ಮೈವಾನಿರ್ದೇಶ್ಯ ಸುಖರೂಪಃ ॥ ೩ ॥**

ಭಾಷ್ಯಾರ್ಥ ॥ ಪ್ರಕಾಶಿಸಿಕೊಂಡಿರತಕ್ಕ ಶ್ರೀಹರಿಯನ್ನೇ ಅನುಸರಿಸಿ ಸರ್ವಜಗತ್ತೂ ಪ್ರಕಾಶಿಸುತ್ತದೆ, ಎನ್ನುವ ಅನುಕೃತಿಯಿಂದಲೂ, ಆ ಶ್ರೀಹರಿಯ ಪ್ರಕಾಶದಿಂದಲೇ ಈ ಸರ್ವಜಗತ್ತೂ ಪ್ರಕಾಶಿಸುತ್ತದೆ, ಎನ್ನುವ ವಚನದಿಂದಲೂ ಪರಮಾತ್ಮನು ಹೀಗೆಯೇ ಇದ್ದಾನೆಂದು ನಿರ್ದೇಶಮಾಡಲಿಕ್ಕೆ ಅಶಕ್ಯನೂ ಸುಖರೂಪನೂ ಆಗಿರುತ್ತಾನೆ.

ಪೀಠಿಕೆ ॥ ಹಾಗಾದರೆ ತಮೇವ ಭಾಂತಂ ಎನ್ನುವ ವಾಕ್ಯದಲ್ಲಿ ಸೂರ್ಯಮೊದಲಾದ ತೇಜಸ್ಸುಗಳಿಗೆ ಶ್ರೀಹರಿಯ ಅಧೀನವಾದ ಪ್ರಕಾಶಕರ್ತೃತ್ವವೂ ತಸ್ಯ ಭಾಸಾ ಎನ್ನುವ ವಾಕ್ಯದಲ್ಲಿಯೂ ಸರ್ವಜಗತ್ತಿಗೆ ಶ್ರೀಹರಿಯ ಪ್ರಭೆಯಿಂದ ಪ್ರಕಾಶ್ಯತ್ವವೂ ಶ್ರುತವಾಗಿದೆ ಎಂದು ಅಸಿದ್ಧಿಯನ್ನು ಪರಿಹರಿಸಿದ್ದರಿಂದ ಅವುಗಳಿಂದ ವಿಷ್ಣುತ್ವವನ್ನು ಸಾಧಿಸಿದರೆ ಅವುಗಳಿಗೆ ಜ್ಞಾನಿಸುಖದಲ್ಲಿ ವ್ಯಭಿಚಾರ ವಿಲ್ಲವೆಂದು ಹೇಳುತ್ತಾರೆ.

**ಭಾಷ್ಯ ॥ ನ ಹಿ ಜ್ಞಾನಿಸುಖಮನುಭಾತಿ ಸರ್ವಂ। ನ ಚ ತದ್ಭಾಸಾ ॥ ೪ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಸೂರ್ಯಾದಿ ತೇಜಸ್ಸು ಜ್ಞಾನಿಗಳ ಸುಖವನ್ನು ಅನುಸರಿಸಿ ಪ್ರಕಾಶಿಸುವುದಿಲ್ಲವೋ, ಹಾಗೆಯೇ ಜ್ಞಾನಿಸುಖದ ಪ್ರಕಾಶದಿಂದ ಸರ್ವಜಗತ್ತು ಪ್ರಕಾಶಿಸುವುದಿಲ್ಲ (ಮುಂದೆ ಹೇಳುವ ಪ್ರಮಾಣವಿರೋಧವು ಬರುವುದು. ಆದ ಪ್ರಯುಕ್ತ ಈ ಲಿಂಗದ್ವಯವೂ ಅನ್ಯತ್ರ ಅವಕಾಶವುಳ್ಳದ್ದಲ್ಲ)

ಪೀಠಿಕೆ ॥ ಹಾಗಾದರೆ ಸೂರ್ಯಾದ್ಯಪ್ರಕಾಶ್ಯತ್ವ ಸೂರ್ಯಾದಿಪ್ರಕಾಶಕತ್ವರೂಪ ಎರಡು ಲಿಂಗಗಳು ಶ್ರೀಹರಿಯಲ್ಲಿಯೇ ಇರತಕ್ಕವುಗಳು ಎನ್ನುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಅಹಂ ತತ್ತೇಜೋ ರಶ್ಮೀದಿತಿ ನಾರಾಯಣಭಾಸಾ ಹಿ ಸರ್ವಂ ಭಾತಿ ॥ ೨೨ ॥ ॥ ೫ ॥**

ಭಾಷ್ಯಾರ್ಥ ॥ ಅಹೇಯನು, ವ್ಯಾಪ್ತನು ತೇಜೋರೂಪನು ರಶ್ಮಿಗಳಿಗೆ ಪ್ರೇರಕನು, ಎನ್ನುವ ಶ್ರುತಿಯಿಂದ ನಾರಾಯಣನ ಅಧೀನವಾದ ಪ್ರಕಾಶದಿಂದ ಸೂರ್ಯಮೊದಲಾದ ತೇಜಸ್ಸು ಪ್ರಕಾಶಿಸುತ್ತದೆ. ಅಥವಾ ನಾರಾಯಣನ ಪ್ರಕಾಶದಿಂದ ಸರ್ವಜಗತ್ತು ಪ್ರಕಾಶಿಸಲ್ಪಡುತ್ತದೆ, ಎಂದು ತಿಳಿದುಬರುತ್ತದೆ.

**ವಿಶೇಷಾಂಶ ॥** ಶ್ರುತಿಯಲ್ಲಿ ರಶ್ಮೀತ್ ಎನ್ನುವುದರಿಂದ ಸೂರ್ಯ ಮೊದಲಾದ ತೇಜಸ್ಸುಗಳಿಗೆ ನಾರಾಯಣನ ಅಧೀನತ್ವವೂ, ತೇಜಃ ಎನ್ನುವುದರಿಂದ ಸರ್ವಪ್ರಕಾಶತ್ವವೂ ಉಕ್ತವಾಯಿತು. ॥೨೨॥

**ಪೀಠಿಕೆ ॥** ಯಾವಾಗ ಈ ಎರಡು ಲಿಂಗಗಳು ವಿಷ್ಣುವಿನಲ್ಲಿ ಇರತಕ್ಕವುಗಳೆಂದು ಅಹಂ ಎನ್ನುವ ಶ್ರುತಿಯಿಂದ ಉಪಪಾದಿಸಿರುವರೋ, ಅದನ್ನು ಸ್ಮೃತಿಯಿಂದಲೂ ಉದಾಹರಿಸತಕ್ಕ ಸೂತ್ರವನ್ನು ಹೇಳಿ ಆ ಸ್ಮೃತಿಯನ್ನುದಾಹರಿಸುತ್ತಾರೆ—

## ಸೂತ್ರ ॥ ಓಂ ಅಪಿ ಸ್ಮರ್ಯತೇ ಓಂ ॥ ೨೩ ॥

**ಸೂತ್ರಾರ್ಥ ॥** ಕೇವಲ ಅನುಕೃತ್ಯಾದಿಗಳು ಅಹಂ ತತ್ತೇಜಃ ಎನ್ನುವ ಶ್ರುತ್ಯಂತರದಲ್ಲಿ ತಮೇವ ಭಾಂತಮನುಭಾತಿ ಎನ್ನುವ ಆಥರ್ವಣಾದಿಗಳಲ್ಲಿ ವಿಷ್ಣುಧರ್ಮವೆಂದು ಶ್ರುತವಾಗುವುದಿಲ್ಲ. ಮತ್ತೆ ಯದಾದಿತ್ಯಗತಂ ಎನ್ನುವ ಸ್ಮೃತಿ ಸಿದ್ಧವೂ ಆಗಿದೆ.

**ಭಾಷ್ಯ ॥ ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ** (ಗೀ.೧೫.೧೨.)॥ ಇತಿ ॥ ೬ ॥

**ಭಾಷ್ಯಾರ್ಥ ॥** ಯಾವುದು ಆದಿತ್ಯನಲ್ಲಿರತಕ್ಕುದು ತೇಜಸ್ಸೋ, ಯಾವುದು ಚಂದ್ರನಲ್ಲಿ ಇರತಕ್ಕುದೋ, ಯಾವುದು ಅಗ್ನಿಯಲ್ಲಿರತಕ್ಕುದೋ, ಅಂತಹ ತೇಜಸ್ಸನ್ನು ನನ್ನ ಅಧೀನವನ್ನಾಗಿಯೂ ನನ್ನದನ್ನಾಗಿಯೂ ತಿಳಿ. (ಅಂದರೆ ನನ್ನ ತೇಜಸ್ಸೇ ಆದಿತ್ಯಾದಿಗಳಲ್ಲಿ ಪ್ರೇರಕನಾಗಿ ಇರುತ್ತದೆ.) ಅಂತಹ ತೇಜಸ್ಸೇ ಎಲ್ಲಾ ಜಗತ್ತನ್ನು ಪ್ರಕಾಶಪಡಿಸುತ್ತದೆ, ಎಂದು ಸ್ಮೃತಿಯು.

**ಪೀಠಿಕೆ ॥** ಮತ್ತು ಕಾಠಕದಲ್ಲಿ **ನ ತತ್ರ ಸೂರ್ಯೋ ಭಾತಿ, ನ ಚಂದ್ರತಾರಕಂ, ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ** ಎಂದು ಅನುಕೂಲ್ಯವಾಗಿ ಗ್ರಹಿಸಲ್ಪಡತಕ್ಕ ವಸ್ತುವು ಸೂರ್ಯಾದಿಗಳಿಂದ ಅಪ್ರಕಾಶ್ಯವೆಂದು ಹೇಳಲ್ಪಡುತ್ತದೆ. ಅದು ವಿಷ್ಣುವಿಗೇನೇ ಸ್ಮೃತಿಸಿದ್ಧವಾಗಿದೆ. ಆದಪ್ರಯುಕ್ತ ವಿಷ್ಣುವೇ **ತದೇತತ್** ಎನ್ನುವಲ್ಲಿ ಪ್ರತಿಪಾದ್ಯನು. ಜ್ಞಾನಿಸುಖವಲ್ಲ ಎಂದು ಸೂತ್ರಕ್ಕೆ ಅರ್ಥಾಂತರವನ್ನೂ ಅಪಿಪದಕ್ಕೆ ಯುಕ್ತಿಸಮುಚ್ಚಯಾರ್ಥವನ್ನೂ ಅಭಿಪ್ರಾಯ ಮಾಡಿಕೊಂಡು ಆ ಸ್ಮೃತಿಯನ್ನು ಉದಾಹರಿಸುತ್ತಾರೆ—

**ಭಾಷ್ಯ ॥ ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ। ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ** (ಗೀ.೧೫.೬.)॥ ಇತಿ ಚ ॥ ೨೩ ॥ ಅಧಿ.೬ ॥ ೭ ॥

**ಭಾಷ್ಯಾರ್ಥ ॥** (ಜ್ಞಾನಿಗಳು) ಯಾವುದನ್ನು ಹೊಂದಿ ಪುನಃ ಅದರಿಂದ ವಾಪಾಸು ಬರುವುದಿಲ್ಲವೋ ಅದು ನನ್ನ ಮುಖ್ಯವಾದ ಸ್ವರೂಪವು. ಅಂತಹ ಸ್ವರೂಪವನ್ನು ಸೂರ್ಯನು ಪ್ರಕಾಶಿಸುವುದಿಲ್ಲ. ಚಂದ್ರನೂ ಪ್ರಕಾಶಿಸುವುದಿಲ್ಲ (ಹೀಗೆ ಇರುವಾಗ ಅವರಿಂದ ಅಧಮನಾದ) ಅಗ್ನಿಯು ಸುತರಾಂ ಪ್ರಕಾಶಿಸುವುದಿಲ್ಲ. (ಎಂದು ಸೂರ್ಯಾದ್ಯಪ್ರಕಾಶ್ಯರೂಪ ಲಿಂಗವೂ ವಿಷ್ಣುವಿನಲ್ಲಿಯೇ ಇರತಕ್ಕುದು ಎಂದು ಸ್ಮೃತಿಸಿದ್ಧವೂ ಆಗಿದೆ.) ॥ ೨೩. ॥ ೭ ॥

## ಮಾಯಾವಾದಿರೀತ್ಯಾ

ವಿಚಾರ॥ ಸ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ಇತ್ಯಾದಿ ಆಥರ್ವಣದಲ್ಲಿ ಸೂರ್ಯಾದ್ಯಪ್ರಕಾಶ್ಯತ್ವಾದಿಗಳಿಂದ ತಿಳಿಯಲ್ಪಟ್ಟದ್ದು ತೇಜೋಂತರವೋ, ಬ್ರಹ್ಮನೋ ಎಂದು ಸಂದೇಹವು ಬಂದರೆ— ಸೂರ್ಯಾದಿಗಳಿಗೆ ಚಂದ್ರಾದಿ ಇತರ ತೇಜಸ್ಸುಗಳ ಅಭಿಭಾವಕತ್ವವು ಕಂಡದ್ದರಿಂದ ಸೂರ್ಯಾದಿ ತೇಜಸ್ಸುಗಳನ್ನು ತಿರಸ್ಕರಿಸತಕ್ಕ ತೇಜೋಂತರವೇ ಆಗಬೇಕು. ಬ್ರಹ್ಮನಲ್ಲ ಎಂದು ಪೂರ್ವಪಕ್ಷಮಾಡಿಕೊಂಡು ತಮೇವ ಭಾಂತಂ ಇತ್ಯಾದಿಗಳಲ್ಲಿ ಭಾರೂಪಸ್ಸತ್ಯಸಂಕಲ್ಪಃ ಎಂದು ಶ್ರುತಿಸಿದ್ಧ ವಾದ ಭಾರೂಪವಾದ ಬ್ರಹ್ಮಾರ್ಥಕತ್ವವು ಕೂಡುವಾಗ ಅಲೌಕಿಕವಾದ ತೇಜೋಂತರ ವನ್ನು ಕಲ್ಪಿಸುವುದು ಕೂಡದಿರುವುದರಿಂದ ಬ್ರಹ್ಮನೇ ಎಂದು ಮಾಯಾವಾದಿಗಳು ಸಿದ್ಧಾಂತಮಾಡಿರುವರು. ಅದು ಅಯುಕ್ತವು. ಏಕೆಂದರೆ— ಅದ್ವೈತಿಗಳೇ ಯತ್ತದ ದ್ರೇಶ್ಯಂ ಇತ್ಯಾದಿಪ್ರಕರಣಕ್ಕೆ ಬ್ರಹ್ಮಪರತ್ವವನ್ನು ಸಾಧಿಸತಕ್ಕ ಅದೃಶ್ಯತ್ವಾದ್ಯಧಿಕರಣದಿಂದಲೇ ಆ ಪ್ರಕರಣದಲ್ಲಿರತಕ್ಕ ಯಸ್ಮಿನ್ ದ್ಯೌಃ ಇತ್ಯಾದಿಗಳಿಗೂ ಬ್ರಹ್ಮಪರತ್ವವು ಸಿದ್ಧವಾಗುವಾಗ ದ್ಯುಭ್ವಾದ್ಯಧಿಕರಣವು ವ್ಯರ್ಥವೆಂದು ಶಂಕಿಸಿಕೊಂಡು ಯತ್ತದದ್ರೇಶ್ಯಂ ಇತ್ಯಾದಿ ಪ್ರಕರಣದಲ್ಲಿ ಯಸ್ಮಿನ್ ದ್ಯೌಃ ಇತ್ಯಾದಿ ವಾಕ್ಯವು ಇಲ್ಲವೆಂದು ಇಟ್ಟುಕೊಂಡು ದ್ಯುಭ್ವಾದ್ಯಧಿ ಕರಣವು ಪ್ರವೃತ್ತವಾಗಿದೆ ಎಂದು ಹೇಳಿರುತ್ತಾರೆ. ಆಥರ್ವಣದಲ್ಲಿದ್ದ ನ ತತ್ರ ಎನ್ನುವ ವಾಕ್ಯವು ಯತ್ತದದ್ರೇಶ್ಯಂ ಇತ್ಯಾದಿ ಪ್ರಕರಣದಲ್ಲಿ ದ್ಯುಭ್ವಾದಿಸೂತ್ರ, ಸ್ಥಿತ್ಯದನಸೂತ್ರಗಳಿಗೆ ವಿಷಯಭೂತಗಳಾದ ಯಸ್ಮಿನ್ ದ್ಯೌಃ ಅನಶ್ನನ್ನನ್ಯಃ ಎನ್ನುವಾಕ್ಯಗಳ ಮಧ್ಯದಲ್ಲಿಯೂ, ಇಲ್ಲವೆಂದು ಇಟ್ಟುಕೊಂಡು ಈ ಅಧಿಕರಣವನ್ನು ಹೇಳಿದ್ದೆಂದು ಅನ್ನಬೇಕು. ಇದು ಯುಕ್ತವಲ್ಲ. ಏಕೆಂದರೆ— ಏಕತ್ರಾಪಿ ಚ ನಾಸ್ತೀತಿ ಕೃತ್ವಾ ಚಿಂ ತಾ ನ ಯುಜ್ಯತೇ। ಅನೇಕಸ್ಮಿನ್ನಯುಕ್ತೇತಿ ಕಿಮು ಗತ್ಯಂತರೇ ಸತಿ ॥ ಬ್ರಹ್ಮಪ್ರಕರಣದಲ್ಲಿರುವ ಒಂದು ವಾಕ್ಯವನ್ನು ಆ ಪ್ರಕರಣದಲ್ಲಿ ಇಲ್ಲವೆಂದು ಇಟ್ಟು ಕೊಂಡು ವಿಚಾರ ಮಾಡಿದ್ದು ಎನ್ನುವುದೇ ಅಯುಕ್ತವು. ಪ್ರಕಾರಾಂತರದಿಂದ ಉಪಪತ್ತಿಯು ಇರುವ ಕಾಲದಲ್ಲಿ ಅನೇಕ ಬ್ರಹ್ಮಪ್ರಕರಣಗಳಲ್ಲಿಯೂ ಇಲ್ಲವೆಂದು ಇಟ್ಟುಕೊಂಡು ವಿಚಾರ ಮಾಡಿದ್ದು ಎಂದು ಹೇಳುವುದು ಅತ್ಯಂತ ಅಯುಕ್ತವು. ಇಲ್ಲಿ ಕಾಠಕದಲ್ಲಿರುವ ಕಥಂ ನು ತದ್ವಿಜಾನೀಯಾಂ ಇತ್ಯಾದಿ ವಾಕ್ಯರೂಪವಾದ ಗತ್ಯಂತರವು ಇದೆ. ಗತ್ಯಂತರವು ಇದ್ದರೂ ಇಲ್ಲವೆಂದು ಇಟ್ಟುಕೊಂಡು ವಿಚಾರ ಮಾಡಿದ್ದು ಎಂದು ಹೇಳುವುದಾದರೆ ಅತ ಏವ ಪ್ರಾಣಃ ಎನ್ನವುದಕ್ಕೆ ಪ್ರಾಣ ಬಂಧನಂ ಹಿ ಸೋಮ್ಯ ಮನಃ ಎನ್ನುವ ವಾಕ್ಯವು ಬ್ರಹ್ಮಪ್ರಕರಣದಲ್ಲಿದ್ದುದರಿಂದ ಸಂದಿಗ್ಧವಾಗದಿರುವ ಪ್ರಯುಕ್ತ ವಿಷಯವಲ್ಲ. ಮತ್ತೆ ಪ್ರಾಣ ಇತಿ ಹೋವಾಚ ಎನ್ನುವ ವಾಕ್ಯವೇ ಪ್ರಾಣಾಧಿಕರಣದಲ್ಲಿ ವಿಷಯವಾಕ್ಯವೆಂದು ಅದ್ವೈತಿಗಳು ಹೇಳಿದ್ದು ಅಯುಕ್ತವಾಗಬೇಕಾಗುವುದು. ಮತ್ತು ಆಥರ್ವಣದಲ್ಲಿ ನ ತತ್ರ ಸೂರ್ಯೋ ಭಾತಿ ಎನ್ನುವ ವಾಕ್ಯದಿಂದ ಪೂರ್ವವಾಕ್ಯದಲ್ಲಿ ವಿರಜಂ ಬ್ರಹ್ಮ ನಿಷ್ಕಲಂ ಇತ್ಯಾದಿಗಳೂ, ಪರದಲ್ಲಿ ಬ್ರಹ್ಮೈವೇದಮಮೃತಂ ಪುರಸ್ತಾತ್ ಇತ್ಯಾದಿ ಬ್ರಹ್ಮಶ್ರುತಿ ಲಿಂಗಾದಿಗಳು ಸ್ಪಷ್ಟಗಳಾಗಿರುವುದರಿಂದ ನಮ್ಮ ಪಕ್ಷದಂತೆ ದೃಢವಾದ ಪೂರ್ವಪಕ್ಷಹೇತುವು ಇಲ್ಲದಿರುವುದರಿಂದಲೂ ಮಧ್ಯಸ್ಥವಾದ ನ ತತ್ರ ಸೂರ್ಯೋಭಾತಿ ಎನ್ನು ವ ವಾಕ್ಯದಲ್ಲಿ ಸಂಶಯವಿಲ್ಲ. ಮತ್ತು ಪರಪಕ್ಷದಲ್ಲಿ ಬ್ರಹ್ಮನಿಗೆ ಭಾನಸ್ವರೂಪತ್ವ ಮಾತ್ರವಿದ್ದುದರಿಂದ ಭಾಂತಂ ಎನ್ನುವ ಶತ್ರಂತ ಶಬ್ದವೂ ತಸ್ಯ ಭಾಸಾ ಎನ್ನುವ ಭಾನಕ್ಕೂ ಬ್ರಹ್ಮನಿಗೂ ಸಂಬಂಧವನ್ನು ಹೇಳುವ ಷಷ್ಠೀವಿಭಕ್ತಿಯೂ ಅಯುಕ್ತವು.

ಮತ್ತು ಅವರ ಮತದಲ್ಲಿ ಪ್ರಪಂಚದಲ್ಲಿ ಬ್ರಹ್ಮಭಾನದಿಂದ ಇತರವಾದ ಭಾನವೇ ಇಲ್ಲದಿರುವುದರಿಂದ ಅನುಕಬ್ದವೂ ಕೂಡಲಾರದು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ॥** (೧) ಛಾಂದೋಗ್ಯದಲ್ಲಿ ಮೇಲಿನದ್ದಾದ **ಯ ಆತ್ಮಾ ಅಪಹತಪಾಪ್ಮಾ** ಇತ್ಯಾದಿ ಪ್ರಜಾಪತಿವಾಕ್ಯದಲ್ಲಿ ಕರ್ಮಾದಿಗಳಿಂದ ತಿರೋಹಿತವಾದ ಅಪಹತಪಾಪ್ಮತ್ವಾದಿ ಗುಣಕ್ಕೆ ಆವಿರ್ಭಾವವನ್ನು ಹೇಳಿದ್ದರಿಂದ ಅಪಹತಪಾಪ್ಮತ್ವಾದಿ ರೂಪದಿಂದ ಜೀವನು ಹೇಳಲ್ಪಡುತ್ತಾನೆ. ಪೂರ್ವದ್ದಾದ ದಹರವಾಕ್ಯದಲ್ಲಿ ಆದರೂ ತಿರೋಹಿತವಾಗದಿರುವ ಸ್ವಾಭಾವಿಕವೇ ಆಗಿರುವ ಅಪಹತಪಾಪ್ಮತ್ವಾದಿಗಳನ್ನು ಹೇಳಿದ್ದರಿಂದ ಬ್ರಹ್ಮನು ಹೇಳಲ್ಪಡುತ್ತಾನೆ. ಈ ರೀತಿಯಾಗಿ **ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು** ಎನ್ನುವ ಸೂತ್ರವನ್ನು ವ್ಯಾಖ್ಯಾನ ಮಾಡತಕ್ಕ ರಾಮಾನುಜಾಚಾರ್ಯರು **ಅನುಕೃತೇಃ** ಇತ್ಯಾದಿ ಎರಡು ಸೂತ್ರಗಳನ್ನು ತಸ್ಯ=ಬ್ರಹ್ಮನ, **ಅನುಕೃತೇಃ**=ಸಾದೃಶ್ಯದಿಂದಲೂ, **ಮಮ ಸಾಧರ್ಮ್ಯಮಾಗತಾಃ** ಎನ್ನುವ ಸ್ಮೃತಿಯಿಂದಲೂ ಪ್ರಜಾಪತಿವಾಕ್ಯದಲ್ಲಿ ಹೇಳಲ್ಪಟ್ಟವನು ಜೀವನು, ದಹರವಾಕ್ಯದಲ್ಲಿ ಹೇಳಲ್ಪಟ್ಟವನು ಬ್ರಹ್ಮನು ಎಂದು ಪೂರ್ವಾಧಿಕರಣವಿಶೇಷವಾಗಿ ವ್ಯಾಖ್ಯಾನಮಾಡಿರುತ್ತಾರೆ. ಅದು ಅಯುಕ್ತವು. ಪ್ರಜಾಪತಿ ವಾಕ್ಯದಲ್ಲಿಯೂ ಕೂಡ ದಹರವಾಕ್ಯದಲ್ಲಿ ಇದ್ದಂತೆಯೇ **ಯ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುಃ** ಇತ್ಯಾದಿಗಳೇ ಶ್ರುತಗಳಾಗಿರುವುದರಿಂದ ಅಲ್ಲಿಯೂ ಅಪಹತಪಾಪ್ಮತ್ವಾದಿ ಪ್ರಾದುರ್ಭಾವೋಕ್ತಿಯು ಇಲ್ಲ. **ಸ್ವೇನ ರೂಪೇಣಾಭಿನಿಷ್ಪದ್ಯತೇ** ಎನ್ನುವ ವಾಕ್ಯಶೇಷವಾದರೂ ಎರಡು ಕಡೆಗಳಲ್ಲಿಯೂ ಇದೆ. (೨) ಮತ್ತು ಅಪಹತಪಾಪ್ಮತ್ವಾದಿ ಗುಣಗಳುಳ್ಳ ಆತ್ಮನನ್ನು ಇಂದ್ರನು ಪುನಃಪುನಃ ಪ್ರಶ್ನೆ ಮಾಡುತ್ತಿರಲು ಪ್ರಜಾಪತಿಯು **ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ** ಎಂದು **ಯ ಏಷ ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮಾ** ಎಂದೂ **ಯತ್ರೈತತ್ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮಾ** ಎಂದೂ **ತದಸ್ಯಾಮತಸ್ಯ ಶರೀರಸ್ಯಾತ್ಮನೋಽಧಿಷ್ಠಾ** ನಂ ಎಂದೂ ಅನೇಕಧಾ ಉಪದೇಶ ಮಾಡಿರುವನು. ಅದರಲ್ಲಿ ಅಕ್ಷಿವಾಕ್ಯವು ಬ್ರಹ್ಮವಿಷಯಕವು. **ಅಂತಸ್ತದ್ಧರ್ಮೋಪದೇಶಾತ್ ಅಂತರ ಉಪಪತ್ತೇಃ** ಎನ್ನುವಲ್ಲಿಯೂ ನಿರ್ಣೀತವಾದ ಬ್ರಹ್ಮತ್ವವನ್ನೇ **ಯ ಏಷೋಽಂತರಕ್ಷಿಣಿ ಪುರುಷೋದೃಶ್ಯತೇ** ಎನ್ನುವ ಶ್ರುತ್ಯಂತರದಲ್ಲಿ ಹೇಳಲ್ಪಟ್ಟದ್ದನ್ನೇ ಇಲ್ಲಿ ಪ್ರತ್ಯಭಿಜ್ಞಾ ಮಾಡಿದ್ದಾರೆ. ಜೀವನು ಹೃದಯದಲ್ಲಿ ಇರತಕ್ಕವನಾದುದರಿಂದ ಅಕ್ಷಿಸ್ಥನಲ್ಲ. (೩) **ಸ್ವಪ್ನೇನ ಶಾರೀರಮಭಿಪ್ರಹೃತ್ಯಾಸುಪ್ತಃ ಸುಪ್ತಾನಭಿಚಾಕಶೀತಿ** ಎನ್ನುವ ಶ್ರುತ್ಯಂತರದಿಂದಲೂ ಮಹೀಯಮಾನತ್ವ ಲಿಂಗದಿಂದಲೂ ಸ್ವಪ್ನವಾಕ್ಯವೂ ಬ್ರಹ್ಮವಿಷಯಕವು **ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ** ಇತ್ಯಾದಿ ಶ್ರುತ್ಯಂತರದಿಂದಲೂ **ಯತ್ರ ಸುಪ್ತಃ** ಎಂದು ಯತ್ ಶಬ್ದದಿಂದ ಹೇಳಲ್ಪಟ್ಟ ಸಮಸ್ತಸುಪ್ತಾಧಾರಕ್ಕೇನೇ **ಏಷ ಆತ್ಮಾ** ಎಂದು ಏತತ್ ಶಬ್ದದಿಂದ ಪರಾಮರ್ಶವಿದ್ದುದರಿಂದಲೂ ಸುಪ್ತವಾಕ್ಯವೂ ಬ್ರಹ್ಮ ವಿಷಯಕವು. (೪) ಅಶರೀರವಾಕ್ಯವು ಈಶ್ವರವಿಷಯಕವು ಅಶರೀರಶಬ್ದದಿಂದ ನಿರಪೇಕ್ಷವಾದ ಸಾರ್ವಕಾಲಿಕವಾದ ಶರೀರರಾಹಿತ್ಯವು ಸ್ವರಸತಃ ತೋರುವುದು. ಅದು ಈಶ್ವರನಲ್ಲಿಯೇ ಕೂಡುವುದು. (೫) ಮತ್ತು ಅಕ್ಷ್ಯಾದಿ ವಾಕ್ಯಗಳಲ್ಲಿ ಪ್ರತಿವಾಕ್ಯದಲ್ಲಿಯೂ **ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮ** ಎಂದು

ಶ್ರುತವಾದುದರಿಂದ ಅವುಗಳಿಗೆ ಜೀವವಿಷಯತ್ವವು ಕೂಡಲಾರದು. ಮತ್ತು ಪ್ರಜಾಪತಿ ವಾಕ್ಯದಲ್ಲಿಯ ಆತ್ಮಾ ಅಪಹತಪಾಪ್ಮಾ ಎಂದು ಪ್ರಸಿದ್ಧಾರ್ಥವುಳ್ಳ, ಪ್ರಕೃತ ಪರಾಮರ್ಶಿಯಾದ **ಯಃ** ಎನ್ನುವ ಸರ್ವನಾಮದಿಂದ ಏಷ **ಆತ್ಮಾ ಅಪಹತಪಾಪ್ಮಾ** ಎಂದು ಪ್ರಸ್ತುತವಾದ ದಹರವಾಕ್ಯದಲ್ಲಿ ಪ್ರಸಿದ್ಧವಾದ ಈಶ್ವರನ ಪರಾಮರ್ಶವೇ ಯುಕ್ತವು. (೬) ಮತ್ತು **ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ** ಎಂದು ದಹರವಾಕ್ಯದಲ್ಲಿ ಹೇಳಿದ ಮೋಕ್ಷಾಖ್ಯಫಲವೇ **ತೇಷಾಂ ಸರ್ವಲೋಕಾ ಅಪ್ತಾಃ** ಎನ್ನುವ ಪ್ರಜಾಪತಿ ವಾಕ್ಯದಲ್ಲಿಯೂ ಶ್ರುತವಾಗಿದೆ. ಹಾಗೆಯೇ ದಹರವಾಕ್ಯದಲ್ಲಿ ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ಎಂದು ಉಕ್ತವಾದ ಅನ್ವೇಷ್ಟವ್ಯತ್ವಾದಿಗಳೇ ಪ್ರಜಾಪತಿವಾಕ್ಯದಲ್ಲಿ **ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ** ಎಂದು ಶ್ರುತವಾದುದರಿಂದಲೂ, **ಇಂದ್ರೋ ವಿರೋಚನಶ್ಚೈವ ಶ್ರುತ್ವಾ ತಂ ಬ್ರಹ್ಮಣೋಕ್ತಿಗಂ ।** ವಿಷ್ಣುಮಾನಂದರೂಪೇತಂ ಇತ್ಯಾದಿ ಸ್ಮೃತಿಗಳಿಂದಲೂ ಅವುಗಳಿಗೆ ಭಿನ್ನಾರ್ಥತ್ವವಿಲ್ಲ. ಆದಕಾರಣ ಅವರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

ಕಾಠಕದಲ್ಲಿ **ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ । ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ॥** ಎಂದು ಶ್ರುತವಾದ ಜ್ಞಾನಕ್ಕಾಗಿ ಪ್ರಾರ್ಥಿತತ್ವರೂಪವಾದ ಅನುಕೂಲ್ಯೇನ ಗೃಹ್ಯಮಾಣತ್ವವು ಜ್ಞಾನಿಸುಖಕ್ಕೋ, ವಿಷ್ಣುವಿಗೋ ಎಂದು ಸಂದೇಹವು. ಈ ಅನುಕೂಲ್ಯೇನ ಗೃಹ್ಯಮಾಣವಾದುದು ಜ್ಞಾನಿಸುಖವೇ, ಬ್ರಹ್ಮನಲ್ಲ. **ತದ್ವಿಜಾನೀಯಾಂ** ಎನ್ನುವ ತತ್ ಶಬ್ದಕ್ಕೆ **ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ।** ಎಂದು ಪ್ರಕೃತ ಸುಖಪರಾಮರ್ಶವಿರುವುದೂ ಅದು **ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ** ಎಂದು ಪೂರ್ವದಲ್ಲಿ ಪ್ರಕೃತವಾದ ಸನ್ನಿಹಿತವಾದ ಜ್ಞಾನಿ ಸುಖವನ್ನು ಪರಾಮರ್ಶ ಮಾಡತಕ್ಕ ತದೇತತ್ ಶಬ್ದಬಲದಿಂದಲೂ, ಪ್ರತ್ಯಭಿಜ್ಞೆಯ ನ್ನುಂಟುಮಾಡುವ ಸುಖಪದದಿಂದಲೂ ಜ್ಞಾನಿಸುಖವೇ ಆಗಿದೆ. **ಏಕೋ ವಶೀ** ಇತ್ಯಾದಿಗಳಿಂದ ಈಶ್ವರನು ಪ್ರಕೃತನಾದಾಗ್ಯೂ ವ್ಯವಧಾನವಿದ್ದುದರಿಂದ ಆತನನ್ನು ಬಿಟ್ಟು ಸನ್ನಿಹಿತವಾದ ಜ್ಞಾನಿಸುಖಕ್ಕೇನೇ ಪರಾಮರ್ಶವು ಎಂದು ಪೂರ್ವಪಕ್ಷವು. ಅನು ಕೂಲ್ಯೇನ ಗೃಹ್ಯಮಾಣನು ಬ್ರಹ್ಮನೇ ಎಂದು ಸಿದ್ಧಾಂತವು. ಹೇಗೆಂದರೆ— **ನ ತತ್ರ ಸೂರ್ಯೋ ಭಾತಿ, ತಮೇವ ಭಾಂತಮನುಭಾತಿ ಸರ್ವಂ, ತಸ್ಯ ಭಾಸಾ ಸರ್ವ ಮಿದಂ ವಿಭಾತಿ** ಎಂದು ಶ್ರುತಗಳಾದ ಸೂರ್ಯಾದ್ಯ ಪ್ರಕಾಶ್ಯತ್ವ, ಸೂರ್ಯಾದಿ ಪ್ರಕಾಶನ ಹೇತುತ್ವ, ಸರ್ವಜಗತ್ಪ್ರಕಾಶತ್ವ ಲಿಂಗಗಳು **ನ ತದ್ಭಾಸಯತೇ ಸೂರ್ಯಃ, ಅಹಂ ತತ್ತೇಜೋ ರಶ್ಮೀತ್, ಯದಾದಿತ್ಯಗತಂ ತೇಜಃ** ಇತ್ಯಾದಿ ವಚನಗಳಿಂದ ಈಶ್ವರನಲ್ಲಿ ಮಾತ್ರ ಇರತಕ್ಕವುಗಳು. (೨) **ಯತ್ ಅನಿರ್ದೇಶ್ಯಂ ಪರಮಂ ಸುಖಂ ಕಥಂ ನು ತದ್ವಿಜಾನೀಯಾಂ** ಎಂದು ವಿಜ್ಞಾನಕ್ಕಾಗಿ ಪ್ರಾರ್ಥಿಸುತ್ತಾರೋ, **ತತ್ ಅನಿರ್ದೇಶ್ಯಂ ಸುಖಂ ಏತತ್ಪ್ರಸ್ತುತ ಆತ್ಮರೂಪಂ** ಎಂದು ಯೋಜನಾ ಮಾಡಿಕೊಂಡರೆ ತತ್ ಶಬ್ದ ಏತತ್ ಶಬ್ದಗಳಿಗೂ ಕೂಡ ನಪುಂಸಕಲಿಂಗ ತ್ವವು ಕೂಡುತ್ತದೆ. (೩) **ಚೇತನಶ್ಚೇತನಾನಾಂ** ಎಂದು ಶ್ರೀಹರಿಯೂ ಕೂಡ ಸಮೀಪದಲ್ಲಿ ಪ್ರಕೃತನಾದುದರಿಂದ ಈಶ್ವರನಿಗೇನೇ ಅನುಕೂಲ್ಯೇನ ಗೃಹ್ಯಮಾಣ ತ್ವವು. ॥ ಅಧಿ. ೬ ॥

**ಅನುಕೃತ್ಯಧಿಕರಣವು ಸಮಾಪ್ತವಾಯಿತು.**

# ೭ ವಾಮನಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಈಶಾನನಾಮಕ್ಕೆ ಸಮನ್ವಯವನ್ನೂ ಶ್ರುತ್ಯಾದಿಸಂಗತಿಯನ್ನೂ ವಿಷಯಸಂಶಯಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ವಿಷ್ಣುರೇವ ಜಿಜ್ಞಾಸ್ಯ ಇತ್ಯುಕ್ತಂ। ತತ್ರ ಊರ್ಧ್ವಂ ಪ್ರಾಣಮುನ್ನ ಯತ್ಯಪಾನಂ ಪ್ರತ್ಯಗಸ್ಯತಿ । ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ(ಕಠ.೫.೩.) ಇತಿ ಸರ್ವದೇವೋಪಾಸ್ಯಃ ಕಶ್ಚಿತ್ಪ್ರತೀಯತೇ ॥ ೧ ।**

ಭಾಷ್ಯಾರ್ಥ ॥ ಅಥಾತೋ ಬ್ರಹ್ಮಜಿಜ್ಞಾಸಾ ಎಂದು ಮೊದಲು ವಿಷ್ಣುವಿಗೆ ಯಾವುದು ಜಿಜ್ಞಾಸ್ಯತ್ವವು ಹೇಳಲ್ಪಟ್ಟದ್ದೋ, (ತತ್ರ=) ಅಂತಹ ಜಿಜ್ಞಾಸ್ಯತ್ವದಲ್ಲಿ ತತ್ರ=ಈಶಾನೋ ಭೂತಭವ್ಯಸ್ಯ ಎಂದು ಹೇಳಿದ ಊರ್ಧ್ವಂ ಪ್ರಾಣಂ ಎನ್ನುವ ಕಾಠಕವಾಕ್ಯದಲ್ಲಿ ಯಾವನೊಬ್ಬ ಈಶಾನನು ಪ್ರತೀತನಾಗುತ್ತಾನೆ. ಏಕೆಂದರೆ ಈತನು ಸರ್ವದೇವತೆಗಳಿಂದ ಉಪಾಸ್ಯನು ಮತ್ತು ಅವರಿಂದ ಜಿಜ್ಞಾಸ್ಯನೆಂದೂ ಪ್ರತೀತನಾಗುತ್ತಾನೆ. ಯಾವಾತನು ಪ್ರಾಣಾಖ್ಯ ರೂಪದಿಂದ ಪ್ರಾಣಾಖ್ಯ ವಾಯುವನ್ನು ಊರ್ಧ್ವಗತಿಯುಳ್ಳವವನನ್ನಾಗಿ ಪ್ರೇರಿಸುತ್ತಾನೋ, ಯಾವ ಶ್ರೀ ಅಪಾನರೂಪಿಯಾದ ಶ್ರೀಹರಿಯು ಅಪಾನಾಖ್ಯ ವಾಯುವನ್ನು ಕೆಳಗೆ ಮಲಮೂತ್ರಾದಿಗಳ ನಿಷ್ಕಾಸನಕ್ಕೆ ಹೇತುವನ್ನಾಗಿ ಪ್ರೇರಿಸುತ್ತಾನೋ, ಅಂತಹ ದೇಹಮಧ್ಯಾಸವಾದ ಹೃದಯದಲ್ಲಿರತಕ್ಕ ವಾಮನನನ್ನು ಅಂದರೆ ಸೌಂದರ್ಯಪ್ರಧಾನರಾದ ಸ್ತ್ರೀಯರನ್ನು ಪ್ರೇರಿಸುವ ನಿಮಿತ್ತದಿಂದ ವಾಮನಶಬ್ದವಾಚ್ಯನಾದ ವಿಷ್ಣುವನ್ನು ಸಮಸ್ತ ದೇವತೆಗಳು ವಿಚಾರಮಾಡುತ್ತಾರೆ, ಎಂದು ಸರ್ವದೇವತೆಗಳಿಂದ ಉಪಾಸ್ಯನು ಒಬ್ಬಾನೊಬ್ಬನು ತೋರುತ್ತಾನೆ.

ವಿಶೇಷಾಂಶ ॥ ಈಶಾನಶಬ್ದವು ಇತರರಲ್ಲಿ ಇರತಕ್ಕುದೆಂದು ಆಕ್ಷೇಪಿಸಿಕೊಂಡು ಫಲತಃ ಮುಮುಕ್ಷುಗಳು ಮಾಡತಕ್ಕ ಜಿಜ್ಞಾಸ್ಯತ್ವವು ಇತರಲ್ಲಿರತಕ್ಕುದೆಂದು ಆಕ್ಷೇಪಿಸಿದ್ದರಿಂದ ಜಿಜ್ಞಾಸಾಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು ಉಕ್ತವಾಯಿತು. ಈಶಾನನು ವಿಷಯವೆಂದೂ ಸೂಚಿತವಾಯಿತು.

ಪೀಠಿಕೆ ॥ ಸಯುಕ್ತಿಕವಾಗಿ ಪೂರ್ವಪಕ್ಷ ಮಾಡುತ್ತಾರೆ—

**ಭಾಷ್ಯ ॥ ಸ ಚ (೧) ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ (ಪ್ರಶ್ನ.೩.೪.)। (೨) ಯೋಽಯಂ ಮಧ್ಯಮಃ ಪ್ರಾ ಣಃ (ಬೃ.೩.೫.೨೧.) (೩) ಕುವಿದಂಗ (ಋ.೭.೯೧.೧.)। ಇತ್ಯಾದಿನಾ ಪ್ರಾಣವ್ಯವಸ್ಥಾಪಕತ್ವಾನ್ಮಧ್ಯಮತ್ವಾತ್ ಸರ್ವದೇವೋಪಾಸ್ಯತ್ವಾಚ್ಚ ವಾಯು ರೇವೇತಿ ಪ್ರತೀಯತೇ ॥ ೨ ॥**

ಭಾಷ್ಯಾರ್ಥ ॥ ಸ ಚ = ಸರ್ವದೇವೋಪಾಸ್ಯನಾದ ಈಶಾನನು ವಾಯುರೇವ=ವಾಯುವೇ ಆಗಬೇಕು (ವಿಷ್ಣುವಲ್ಲ) (ಏಕೆಂದರೆ ಇಲ್ಲ) ಪ್ರಾಣವ್ಯವಸ್ಥಾಪಕತ್ವಾತ್=ಪ್ರಾಣಾದಿಗಳನ್ನು ನಿಯಮಿಸುವಿಕೆ ರೂಪವಾದ ವಾಯುಲಿಂಗವು ಶ್ರುತವಾದ ಪ್ರಯುಕ್ತವೂ, ಮಧ್ಯಮತ್ವಾತ್=

ಅವಾಂತರೇಶ್ವರತ್ವರೂಪವಾದ ಮಧ್ಯಮತ್ವವನ್ನು ಹೇಳಿದ್ದರಿಂದಲೂ, ಸರ್ವದೇವೋಪಾಸ್ಯತ್ವಾಚ್ಚ = ಸರ್ವದೇವತೆಗಳಿಂದ ಉಪಾಸ್ಯತ್ವವು ಇದ್ದ ಪ್ರಯುಕ್ತವೂ ಈಶಾನನು ವಾಯುವೇ ಎಂದು ಸಿದ್ಧವಾಗುತ್ತದೆ. ಈ ಲಿಂಗಗಳು ವಾಯುವಿನಲ್ಲಿ ಮಾತ್ರ ಇರತಕ್ಕುವಗಳೆಂದು ಏವಮೇವ ಇತ್ಯಾದಿ ವಾಕ್ಯಗಳಿಂದ ತಿಳಿದುಬರುವುದರಿಂದ ವಾಯುವಿನಲ್ಲಿ ಮಾತ್ರ ಇರತಕ್ಕವುಗಳೆಂದು ಸಿದ್ಧಿಸುವುದಿಲ್ಲವೆಂದು ಹೇಳಕೂಡದು. ಏಕೆಂದರೆ ಈ ವಾಯುವು (೧) ಏವಮೇವೈಷಃ (೨) **ಯೋಽಯಂ ಮಧ್ಯಮಃ, (೩) ಕುವಿದಂಗ** ಇತ್ಯಾದಿನಾ=ಇದು ಮೊದಲಾದ ವಾಕ್ಯದಿಂದ, ಸಃ = ಪ್ರಾಣವ್ಯವಸ್ಥಾಪಕತ್ವಾದಿ ಮಹಿಮೆಯುಳ್ಳವನು ಎಂದು, ಪ್ರತೀಯತೇ=ತೋರುತ್ತಾನೆ. (೧) (ಹೇಗೆ ಸಾರ್ವಭೌಮನು ಅಧಿಕಾರಿಗಳನ್ನು ಕುರಿತು ನೀನು ಈ ಪಾಟಲೀಪುತ್ರಾದಿಗ್ರಾಮಗಳ ಅಧಿಪತಿ ಯಾಗಿರು ಎಂದು ನಿಯೋಗಮಾಡುತ್ತಾನೋ.) ಏವಮೇವ=ಹೀಗೆಯೇ, ಏಷಃ ಪ್ರಾಣಃ=**ಆತ್ಮತ ಏಷ ಪ್ರಾಣೋ ಜಾಯತೇ** ಎಂದು ಹೇಳಲ್ಪಟ್ಟ ಮುಖ್ಯಪ್ರಾಣನು, ಇತರಾನ್ ಪ್ರಾಣಾನ್=ನಿಯಮ್ಯರಾದ ಪ್ರಾಣರನ್ನು ಪೃಥಕ್ ಪೃಥಗೇನ = ಹೃದಯ ಮೊದಲಾದ ಪ್ರತ್ಯೇಕ ಪ್ರತ್ಯೇಕ ಸ್ಥಾನಗಳಲ್ಲಿ ಸನ್ನಿಧತ್ತೇ = ಸ್ಥಾಪಿಸುತ್ತಾನೆ. (೨) ಯೋಽಯಂ ಮಧ್ಯಮಃ ಪ್ರಾಣಃ = ಯಾವಾತನು ಮಧ್ಯಮ ಪ್ರಾಣನೋ, (ಈತನು ಲಕ್ಷ್ಮೀದೇವಿಗೆ ಶಿಶುವು,) (೩) (**ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್। ತೇ ವಾಯವೇ ಮನವೇ ಬಾಧಿತಾಯಾವಾಸಯನ್ನುಷಸಂ ಸೂರ್ಯೇಣ ॥** ಯಾವ ದೇವತೆಗಳು ವಾಯುದೇವರ ನಮಸ್ಕಾರೋಪಯುಕ್ತವಾದ ಸೇವಾದಿಗಳಿಂದ ಜ್ಞಾನಾದಿಗುಣಗಳಿಂದ ಪೂರ್ಣರು, ಅಜ್ಞಾನರಾಗಮೊದಲಾದ ದೋಷರಹಿತರೂ ಮೊದಲು ಆಗಿರುವರೋ, ಅವರು) ಕುವಿತ್=ಎಲ್ಲಿಯೋ ರಹಸ್ಯಸ್ಥಾನದಲ್ಲಿ (ಸೂರ್ಯೇಣ=ಸೂರ್ಯನಿಂದ ಕೂಡಿಕೊಂಡು, ಜ್ಞಾನಿಯಾದ, ಸಂಸಾರಕ್ಲೇಶವುಳ್ಳವರಿಂದ ಶರಣು ಹೊಂದಿದ ವಾಯುವನ್ನು ಉದ್ದೇಶಿಸಿ ಬುದ್ಧಿಯನ್ನು ವಾಯುವಿಷಯಕವನ್ನಾಗಿ ಮಾಡಿದರು.)

**ವಿಶೇಷಾಂಶ ॥** (೧) ಮೊದಲು ವಾಗಾದಿಗಳು ಮೃತ್ಯುಗ್ರಸ್ತಗಳೆಂದು ಹೇಳಿ **ಅಥೈನಮೇವ ನಾಪ್ನೋತ್** ಎನ್ನುವುದರಿಂದ ಮುಖ್ಯಪ್ರಾಣನು ವಾಗಾದಿಗಳಿಂದ ಶ್ರೇಷ್ಠನು ಎಂದು ಹೇಳಿ **ಯೋಽಯಂ** ಎನ್ನುವುದರಿಂದ ಪ್ರಾಣಶಬ್ದವಾಚ್ಯರಾದ ವಿಷ್ಣು ವಾಯು ತದಿತರ ಚೇತನರಲ್ಲಿ ಮೂವರಲ್ಲಿ ವಿಷ್ಣುವು ಉತ್ತಮನು, ಇತರರು ಅಧಮರು, ವಾಯುವು ಮಧ್ಯಮನು. ಈ ನಿಮಿತ್ತದಿಂದಲಾಗಲೀ, ಅವಾಂತರೇಶ್ವರನು ಎನ್ನುವ ನಿಮಿತ್ತದಿಂದಲಾಗಲೀ ಮುಖ್ಯಪ್ರಾಣನು ಮಧ್ಯಸ್ಥನು, ಮಧ್ಯ ದೇಶಸ್ಥನಲ್ಲ. (೨) ಹಾಗೆಯೇ ನಾಲ್ಕನೇ ಅಧ್ಯಾಯದಲ್ಲಿ **ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ** ಎಂದು ಚಂದ್ರಿಕೋದಾಹೃತವಾದ ವಾಕ್ಯದಲ್ಲಿ ಸ್ಥೂಲದೇಹಾಖ್ಯವಾದ ವಿಸ್ತೃತಪ್ರದೇಶದಲ್ಲಿ ಇರತಕ್ಕ ಲಿಂಗಶರೀರ ರೂಪವಾದ ಗೃಹದಲ್ಲಿ ವಿಷ್ಣುರೂಪವಾದ ಸ್ಥೂಣಾದಲ್ಲಿ ಅನ್ನಾಖ್ಯವಾದ ಶ್ರೀರೂಪವಾದ ದಾಮ(ಹಗ್ಗ) ದಿಂದ ಕಟ್ಟಲ್ಪಟ್ಟ ಗೋವಿನ ವತ್ಸರೂಪವಾದ ವಾಯುವು ಮಧ್ಯಮನು ಎನ್ನಿಸಿ ಕೊಳ್ಳುತ್ತಾನೆ. ॥ ೨೩ ॥

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಟ್ಟು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅತೋಽಬ್ರವೀತ್** ॥ ೩ ॥

**ಭಾಷ್ಯಾರ್ಥ ॥** ಹೀಗೆ ಶಂಕಾ ಬಂದರೆ ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಶಬ್ದಾದೇವ ಪ್ರಮಿತಃ ಓಂ ॥ ೨೪ ॥

**ಸೂತ್ರಾರ್ಥ ॥ ಈಶಾನೋ ಭೂತಭವ್ಯಸ್ಯ** ಎಂದು ಶ್ರುತನಾದ ಈಶಾನನು, ತತ್ತು = ವಿಷ್ಣುವೇ ಎಂದು ಪ್ರಮಿತನಾಗಿದ್ದಾನೆ. ಏಕೆಂದರೆ— ವಿಷ್ಣುವಿನಲ್ಲಿಯೆ ಪ್ರಮಿತವಾದ ಮಹಾಯೋಗ ವಿದ್ವದ್ರೂಢಿಗಳಿಂದ ಪ್ರಸಿದ್ಧವಾದ ಅನ್ಯತ್ರನಿರವಕಾಶವಾದ **ಮಧ್ಯೇ ವಾಮನಮಾಸೀನಂ** ಎಂದು ಶ್ರುತವಾದ ಲಿಂಗದೆಶೆಯಿಂದ ಪ್ರಬಲವಾದ ವಾಮನಶ್ರುತಿಯೂ ಇದೆ. ಆ ವಾಮನಶ್ರುತಿಯಿಂದ.

**ಭಾಷ್ಯ ॥ ವಾಮನಶಬ್ದಾದೇವ ವಿಷ್ಣುರಿತಿ ಪ್ರಮಿತಃ ॥ ೪ ॥**

**ಭಾಷ್ಯಾರ್ಥ ॥** ಈಶಾನೋ ಭೂತಭವ್ಯಸ್ಯ ಎಂದು ಶ್ರುತನಾದ ಈಶಾನನು ವಿಷ್ಣುವೇ ಆಗಬೇಕು. ಏಕೆಂದರೆ—ವಿಷ್ಣುವಿನಲ್ಲಿಯೇ ಪ್ರಮಿತವಾದ ಅಂದರೆ ಮಹಾಯೋಗ ವಿದ್ವದ್ರೂಢಿ ಗಳಿಂದ ಪ್ರಸಿದ್ಧವಾದ ಅನ್ಯತ್ರ ನಿರವಕಾಶವಾದ ಮಧ್ಯೇ ವಾಮನ ಎಂದು ಶ್ರುತವಾದ ವಾಮನಶಬ್ದದಿಂದಲೇ.

**ವಿಶೇಷಾಂಶ ॥** (೧) ಕಾಠಕದಲ್ಲಿ **ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ** ಎನ್ನುವುದರಿಂದ ಶ್ರೀಹರಿಗೆ ಅಂಗುಷ್ಠಮಾತ್ರತ್ವವೂ ಪೂರ್ಣ ಷಡ್ಗುಣತ್ವವೂ ದೇಹಮಧ್ಯಸ್ಥತ್ವವೂ ಭೂತಭವಿಷ್ಯದ್ವರ್ತಮಾನ ನಿಯಾಮಕತ್ವವೂ ಇದು ಮೊದಲಾದ ಮಹಿಮೆಯನ್ನು ಹೇಳಿ ಈಶಾನಪದದಿಂದ ಆತನಿಗೇನೇ **ಊರ್ಧ್ವಂ** ಇತ್ಯಾದಿ ವಾಕ್ಯದಿಂದ ಮಹಿಮಾಂತರವು ಹೇಳಲ್ಪಟ್ಟಿತು. ಅಲ್ಲಿ ಮಧ್ಯಶಬ್ದವು ಊರ್ಧ್ವಂ ಪ್ರತ್ಯಕ್ ಶಬ್ದಗಳ ಸಮಭಿವ್ಯಾಹಾರದಿಂದ ದೇಶವಿಶೇಷ ವನ್ನು ಹೇಳತಕ್ಕುದು. ಅವಾಂತರ ಈಶ್ವರತ್ವಾದಿರೂಪವಾದ ಮಧ್ಯಮತ್ವಾರ್ಥವುಳ್ಳದ್ದಲ್ಲ. (೨) ವಾಯುಲಿಂಗವಿದ್ದುದರಿಂದ ವಾಯುವೇ ಈಶಾನನು ಏಕೆ ಆಗಲಾರನು ಎನ್ನುವ ಚೋದ್ಯವನ್ನು ಪರಿಹರಿಸುವುದಕ್ಕಾಗಿ ಲಿಂಗಗಳ ದೆಸೆಯಿಂದ ಶ್ರುತಿಗೆ ಪ್ರಾಬಲ್ಯವನ್ನು ಏವಶಬ್ದದಿಂದ ಹೇಳಿದರು. (೩.) ಪ್ರಮಿತಪದವು ವಾಮನ ಶ್ರುತಿಯು ನಿರವಕಾಶವು ಎಂದು ಸೂಚಿಸುತ್ತದೆ.

**ಪೀಠಿಕೆ ॥** ಸೂತ್ರದಲ್ಲಿ ಏವಕಾರಪ್ರಯೋಗದಿಂದ ಸೂಚಿತವಾದ ಶ್ರುತಿಯ ಪ್ರಾಬಲ್ಯವನ್ನು ಲಿಂಗಪ್ರಾಬಲ್ಯವನ್ನು ನಿಷೇಧಮಾಡಿಕೊಂಡು ತೋರಿಸುತ್ತಾರೆ—

**ಭಾಷ್ಯ ॥ ನ ಹಿ ಶ್ರುತೇರ್ಲಿಂಗಂ ಬಲವತ್ ॥ ೫ ॥**

**ಭಾಷ್ಯಾರ್ಥ ॥** ಹಿ=ಯಾವ ಕಾರಣದಿಂದ ಲಿಂಗವು ಶ್ರುತಿಯ ದೆಸೆಯಿಂದ ಪ್ರಬಲವಲ್ಲವೋ, (ಮತ್ತೆ ದುರ್ಬಲವೇ ಆಗಿಯದೋ) ಆದುದರಿಂದ ಲಿಂಗದೆಸೆಯಿಂದ ಪ್ರಬಲವಾದ ವಾಮನಶಬ್ದ ದಿಂದಲೇ ಈಶಾನನು ವಿಷ್ಣುವೇ.

**ಪೀಠಿಕೆ ॥** ಶ್ರುತಿಯ ದೆಸೆಯಿಂದ ಲಿಂಗವು ಏಕೆ ಬಲವಲ್ಲ ಎಂದರೆ, ಹಾಗಿದ್ದರೆ, ಲಿಂಗದೆಸೆಯಿಂದ ಶ್ರುತಿಯು ಪ್ರಬಲವು ಎಂದು ಹೇಳುವ ವಚನದಿಂದ ವಿರೋಧವು ಬರಬೇಕಾಗುವುದು ಎನ್ನುವ ಅಭಿಪ್ರಾಯದಿಂದ ಆ ಪ್ರಮಾಣವಾಕ್ಯವನ್ನು ಹೇಳುತ್ತಾರೆ—

**ಭಾಷ್ಯ ॥ ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ। ಪೂರ್ವಂ (ವರ್ಗ)**

**ಪೂರ್ವಂ ಬಲೀಯಃ ಸ್ಯಾದೇವಮಾಗಮನಿರ್ಣಯಃ ॥ ಇತಿ ಸ್ಕಾಂದೇ ॥ ೬ ॥**

**ಭಾಷ್ಯಾರ್ಥ** ॥ ಶ್ರುತಿಃ=ವಾಚಕಶಬ್ದವು, ಲಿಂಗಂ=ಅಸಾಧಾರಣಧರ್ಮವು ಅಥವಾ ಅಸಾಧಾರಣಬೋಧಕವಾದ ಶಬ್ದವು, ಸಮಾಖ್ಯಾ ಚ=ನಿರ್ಣೀತವಾದುದಕ್ಕೆ ಅನ್ಯತ್ರ ಸಮಾಸೋಕ್ತಿಯು, ವಾಕ್ಯಂ=ಸಮಭಿವ್ಯಾಹೃತ ಪದಗಳಿಂದಲೇ ಆಕಾಂಕ್ಷೆಯು ಪೂರ್ತಿಯಾಗುವಾಗ ಅದರ ಶಾಂತಿಗಾಗಿ ಪದಾಂತರ ನಿರಪೇಕ್ಷಗಳಾದ ಪದಗಳು, ಪ್ರಕರಣಂ=ಒಂದು ಪ್ರಮೇಯವನ್ನು ಪ್ರತಿಪಾದಿಸತಕ್ಕ ಅನೇಕ ವಾಕ್ಯಗಳು, ತಥಾ=ಹಾಗೆಯೇ, ಸ್ಥಾನಂ=ಅನೇಕ ಪ್ರಮೇಯಗಳನ್ನು ಪ್ರತಿ ಪಾದಿಸತಕ್ಕುದು ಏಕಾರ್ಥದಲ್ಲಿ ತಾತ್ಪರ್ಯಯುಕ್ತವಾದುದು, ಇವುಗಳಲ್ಲಿ ಪೂರ್ವ ಪೂರ್ವದಲ್ಲಿ ಉದ್ದಿಷ್ಟವಾದುದು ಅತಿಶಯವಾಗಿ ಸ್ವಭಾವತಃ ಬಲಿಷ್ಠವಾದುದು. (ಏಕತ್ರಕೂಡಿದರೆ ವಿರುದ್ಧವೂ ಆಗಿದೆ.) ಏವಂ=ಹೀಗೆ ವಿರುದ್ಧಗಳಾದ ಇವುಗಳು ಕೂಡಿದರೆ ಪ್ರಬಲವಾದ ಪೂರ್ವದಿಂದ ಮೇಲಿನದಕ್ಕೆ ಬಾಧವು ಬರುವಾಗ, ವಿಪ್ರತಿಪನ್ನವಾದ ಆಗಮಾರ್ಥಕ್ಕೆ ಇವುಗಳಿಂದ ನಿರ್ಣಯವು ಆಗುವುದು.

ವಿಶೇಷಾಂಶ ॥ (೧) ಅರ್ಥತಃ ಸಮಾಖ್ಯಾ, ಶಬ್ದತಃ ಸಮಾಖ್ಯಾ ಎಂದು ಸಮಾಖ್ಯೆಯು ಎರಡು ವಿಧವು. (೨) ಇಲ್ಲಿ **ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾ।** ಎನ್ನುವ ಅನುವ್ಯಾಖ್ಯಾನವನ್ನು ಅನುಸರಿಸಿ ಸಮಾಖ್ಯಾ ಶಬ್ದದಿಂದ ಸ್ಥಾನವನ್ನು ಇಟ್ಟುಕೊಳ್ಳಬೇಕು. ಇಲ್ಲಿ ಹೇಳಿದ ಕ್ರಮವನ್ನು ಅನುಸರಿಸಿ ವಾಕ್ಯಾದಿಗಳಿಗಿಂತ ಸಮಾಖ್ಯಾಕ್ಕೆ ಪ್ರಾಥಮ್ಯವಿಲ್ಲ. ಇಲ್ಲಿ ಹೇಳಿದ ಕ್ರಮಕ್ಕೆ ವಿವಕ್ಷಾವಿಲ್ಲ. (೩) **ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್।** ಎಂದು ಜೈಮಿನ್ಯಾಚಾರ್ಯರು ಹೇಳಿದ ಕ್ರಮವನ್ನು ಇಟ್ಟುಕೊಳ್ಳಬೇಕು. (೪) ಇದೇ ಅಧಿಕರಣದಲ್ಲಿ ಅನಂತರದಲ್ಲಿ ಹೇಳಿದ ಲಿಂಗಕ್ಕಿಂತ ಪೂರ್ವೋದ್ದಿಷ್ಟವಾದ ವಾಮನಶ್ರುತಿಯು ಸ್ವತಃ ಪ್ರಬಲವು. ವಾಕ್ಯಕ್ಕಿಂತ ಲಿಂಗವು ಪ್ರಬಲವು. ಹೇಗೆಂದರೆ— ದಹರಾಧಿಕರಣದಲ್ಲಿ ದಹರಾಕಾಶಕ್ಕೆ ಸಾಕ್ಷಾತ್ತಾಗಿ ಸರ್ವಾಧಾರತ್ವವನ್ನು ಹೊಂದಿಸಿಕೊಡತಕ್ಕ **ಕಿಂ ತದತ್ರ ವಿದ್ಯತೇ ಉಭೇ ಅಸ್ಮಿನ್ ದ್ಯಾವಾಪೃಥಿವೀ** ಎನ್ನುವ ವಾಕ್ಯಕ್ಕಿಂತ ವಿಷ್ಣುವಿಗೆ ಸರ್ವಾಧಾರತ್ವವನ್ನು ಹೊಂದಿಸಿಕೊಡತಕ್ಕ ಅಪಹತಪಾಪ್ಮತ್ವ ಮೊದಲಾದ ಲಿಂಗವು ಪ್ರಬಲವು. (೫) ಪ್ರಕರಣಕ್ಕಿಂತ ವಾಕ್ಯವು ಪ್ರಬಲವು. ಉದಾ— **ಜ್ಯೋತಿರ್ದರ್ಶನಾತ್** ಎನ್ನುವ ಅಧಿಕರಣದಲ್ಲಿ ಜೀವನಿಗೆ **ಹೃದ್ಯಂತರ್ಜ್ಯೋತಿಃ** ಎನ್ನುವ ವಾಕ್ಯದಿಂದ ತಿಳಿಯಲ್ಪಡತಕ್ಕ ಜ್ಯೋತಿಷ್ಟ್ವಸಾಧಕವಾದ ಜೀವಪ್ರಕರಣದಿಂದ ವಿಷ್ಣುವಿಗೆ ಜ್ಯೋತಿಷ್ಟ್ವವನ್ನು ಹೊಂದಿಸಿಕೊಡತಕ್ಕ **ಕತಮ ಆತ್ಮಾ** ಎನ್ನುವ ಪ್ರಶ್ನವಾಕ್ಯವು ಪ್ರಬಲವು. (೬) ಸ್ಥಾನಕ್ಕಿಂತ ಪ್ರಕರಣವು ಪ್ರಬಲವು. ಉದಾ— ಸಮಗ್ರ ಉಪನಿಷತ್ತಿಗೆ ಈಶ್ವರಪರತ್ವವನ್ನು ಸಾಧಿಸುವ ಷಟ್ಪ್ರಶ್ನರೂಪವಾದ ಸ್ಥಾನದೆಸೆಯಿಂದ **ಆತ್ಮತ ಏಷ ಪ್ರಾಣೋ ಜಾಯತೇ** ಎನ್ನುವ ಖಂಡರೂಪವಾದ ಮುಖ್ಯಪ್ರಾಣಪ್ರಕರಣವು ಪ್ರಬಲವು. ಆದಪ್ರಯುಕ್ತವೇ ಈ ಅಧಿಕರಣದಲ್ಲಿ ಷಟ್ಪ್ರಶ್ನದಲ್ಲಿ ಹೇಳಿದ ಪ್ರಾಣವ್ಯವಸ್ಥಾಪಕತ್ವ ಮೊದಲಾದವುಗಳು ಮುಖ್ಯಪ್ರಾಣಲಿಂಗವೆಂದು ಅಂಗೀಕರಿಸಿ ಶ್ರುತಿಯಿಂದ ಅದಕ್ಕೆ ಬಾಧಕವನ್ನು ಹೇಳಿರುತ್ತಾರೆ. (೭) ಸಮಾಖ್ಯೆಯಿಂದ ಸ್ಥಾನವು ಪ್ರಬಲವು. ಉದಾ—ಅನ್ನಮಾಯದಿ ಶಬ್ದಗಳಿಗೆ ಕೋಶಪರತ್ವವನ್ನು ಸಾಧಿಸಕೊಡತಕ್ಕ **ಅನ್ನಮಯಪ್ರಾಣಮಯಮನೋಮಯವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಂ** ಎನ್ನುವ ನಾರಾಯಣಾನುವಾಕ ಸಮಾಖ್ಯೆಗಿಂತ ಅನ್ನಮಯಾದಿಗಳಿಗೆ ವಿಷ್ಣುತ್ವವನ್ನು

ಸಾಧಿಸುವ ಬ್ರಹ್ಮಪರ ಅನೇಕ ಪ್ರಕರಣಸಂದರ್ಭರೂಪವಾದ ಸ್ಥಾನವು ಪ್ರಬಲವು. (೮) ಇವುಗಳೇ ಶ್ರುತ್ಯಾದಿಗಳಿಂದ ಅರ್ಥವನ್ನು ನಿರ್ಣಯಿಸುವ ಸ್ಥಳಗಳು. (೯) ಪುರುಷಸೂಕ್ತಸಮಾಖ್ಯೆಯಿಂದ ವೈಶ್ವಾನರನು ವಿಷ್ಣುವೆಂದು ನಿರ್ಣಯಿಸುವುದು **ಚಕ್ಷುರ್ವಿಶ್ವರೂಪಃ ಪ್ರಾಣಃ** ಎಂಬ ಶ್ರುತಿಯಲ್ಲಿ ಅರ್ಥತಃ ಸಮಾಖ್ಯೆಯಿಂದ. (೧೦) ಅಂಭ್ರಣೀಸೂಕ್ತಸಮಾಖ್ಯೆಯಿಂದ ವಿಶ್ವಕರ್ಮಸೂಕ್ತದಲ್ಲಿ ಹೇಳಲ್ಪಟ್ಟ ಅಜನು ವಿಷ್ಣುವೆಂದು ನಿರ್ಣಯಿಸುವುದು **ಪರೋ ದಿವಾ ಪರ ಏನಾ** ಎನ್ನುವ ಶಬ್ದತಃ ಸಮಾಖ್ಯೆಯಿಂದ, ಹೀಗೆ ತಿಳಿಯಬೇಕು.

**ಪೀಠಿಕೆ ॥** ಹಾಗಾದರೆ ಶ್ರುತಿಗೆ ಸ್ವಭಾವತಃ ಪ್ರಾಬಲ್ಯವಿರಲಿ. ಆದಾಗ್ಯೂ ಹೆಚ್ಚಾಗಿ ಪೂರ್ವಪಕ್ಷಿಯು ಹೇಳಿದ ಲಿಂಗಗಳೂ ಪ್ರಬಲಗಳಾಗಿರುವುದರಿಂದ ಸಾಮ್ಯದಿಂದ ಅನಿರ್ಣಯವೇ ಆಯಿತೆಂದರೆ—

**ಭಾಷ್ಯ ॥ ತಚ್ಚ ಲಿಂಗಂ ವಿಷ್ಣೋರೇವ। ತಸ್ಯೈವ ಪ್ರಾಣತ್ವೋಕ್ತೇಸ್ತದ್ಧ್ವೈ ತ್ವಂ ಪ್ರಾಣೋ ಅಭವಃ (ಣ) ಇತಿ॥ ೨೪ ॥ ॥ ೭ ॥**

**ಭಾಷ್ಯಾರ್ಥ ॥** ಪೂರ್ವಪಕ್ಷಿಯು ಹೇಳಿದ ಲಿಂಗಸಮುದಾಯವಾದರೂ ವಿಷ್ಣುವಿಗೇನೇ ಯುಕ್ತವು. (ವಾಯುವಿಗೆ ಯುಕ್ತವಲ್ಲ) (ತಥಾಚ ಲಿಂಗಗಳು ಹೆಚ್ಚು ಇದ್ದರೂ ಸಾವಕಾಶಗಳಾದುದರಿಂದ ಅವುಗಳಿಂದ ನಿರವಕಾಶವಾದ ಒಂದೇ ಶ್ರುತಿಯೂ ಕೂಡ ಪ್ರಬಲವಾದ ಪ್ರಯುಕ್ತ ನಿರ್ಣಯವಾಗುವುದು.) (ಹಾಗಾದರೆ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಲ್ಲ. ಪೂರ್ವಪಕ್ಷಿಯು ಹೇಳಿದ ಸಮಾಖ್ಯಾರೂಪವಾದ ಶ್ರುತ್ಯಂತರದಿಂದ ಲಿಂಗವು ಪ್ರಾಣನಲ್ಲಿಯೇ ಇರತಕ್ಕುದೆಂದೇ ಹೇಳಿದ ಎಂದರೆ) **ತದ್ಧೈತಂ ಪ್ರಾಣೋ ಅಭವಃ** ನೀನೇ ಪ್ರಾಣಶಬ್ದವಾಚ್ಯನಾಗಿರುತ್ತಿ ಎನ್ನುವ ತೈತ್ತಿರೀಯ ಶ್ರುತಿಯಲ್ಲಿ ವಿಷ್ಣುವಿಗೇನೇ ಪ್ರಾಣಶಬ್ದವಾಚ್ಯತ್ವವನ್ನು ಹೇಳಿದ್ದರಿಂದ.

**ವಿಶೇಷಾಂಶ ॥** (೧) ಸೂತ್ರಕಾರರು **ಅತ ಏವ ಪ್ರಾಣಃ** ಎನ್ನುವಲ್ಲಿ ಆಧ್ಯಾತ್ಮಿಕ ಪ್ರಾಣಾದ್ಯಶೇಷ ಶಬ್ದಗಳಿಗೆ ಸಮನ್ವಯವನ್ನು ಮಾಡಿದ್ದರಿಂದ ಪ್ರಾಣಶಬ್ದವು ವಿಷ್ಣುಪರವೆಂದು ನಿರ್ಣೀತವಾಗಿದೆ. ಜೀವಾದಿಲಿಂಗಗಳೂ ತತ್ತದಂತರ್ಯಾಮಿಯಾದ ವಿಷ್ಣುವಿನಲ್ಲಿಯೇ ಸಾವಕಾಶವೆನ್ನುವುದನ್ನು ಶಾಸ್ತ್ರದೃಷ್ಟ್ಯಾ ಎನ್ನುವ ಸೂತ್ರದಲ್ಲಿ ವ್ಯವಸ್ಥಾ ಮಾಡಿದ್ದಾರೆ. (೨) ಹಾಗಾದರೆ ಕುವಿದಂಗ ಎನ್ನುವ ಋಕ್ಕಿನಲ್ಲಿ ಲಿಂಗವು ವಾಯುವಿನಲ್ಲಿ ಇರತಕ್ಕುದೆಂದು ಹೇಳಿದ್ದರಿಂದ ವಿರೋಧವೆಂದರೆ— ವಾಯು ಶಬ್ದವಾಚ್ಯನೂ ಶ್ರೀಹರಿಯೇ ಎಂದುತ್ತರವು— ತಥಾಚ ಅಂತರಧಿಕರಣದಲ್ಲಿ ಆಧಿದೈವಿಕ ಎಲ್ಲಾ ಶಬ್ದಗಳಿಗೂ ಸಮನ್ವಯವನ್ನು ಹೇಳತಕ್ಕ ಸೂತ್ರಕಾರರು ವಿಷ್ಣುವಿಗೇನೇ ವಾಚ್ಯತ್ವವನ್ನು ಹೇಳಿದ್ದಾರೆ. ಆದರಿಂದ ವಿರೋಧವೂ ಇಲ್ಲ. ॥ ೨೪ ॥

**ಪೀಠಿಕೆ ॥** ಸರ್ವಗತನಾದ ಶ್ರೀಹರಿಯಲ್ಲಿ ಅಂಗುಷ್ಠಮಾತ್ರತ್ವೋಕ್ತಿಯು ಅನುಪಪನ್ನ ವಾಗುವುದರಿಂದ ಇಲ್ಲಿ ಈಶಾನನು ವಿಷ್ಣುವಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಉಪನ್ಯಾಸಮಾಡುತ್ತಾರೆ—

## ಸೂತ್ರ ॥ ಓಂ ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ಓಂ ॥ ೨೫ ॥

**ಸೂತ್ರಾರ್ಥ ॥** ತು = ಸರ್ವಗತನಾದಾಗ್ಯೂ ವಿಷ್ಣುವಿಗೆ ಅಂಗುಷ್ಠಮಾತ್ರತ್ವೋಕ್ತಿಯು ಕೂಡುತ್ತದೆ. ವಿರೋಧವಿಲ್ಲ. ಏಕೆಂದರೆ—ಹೃದ್ಯಪೇಕ್ಷಯಾ ತು:ಹೃದಯದಲ್ಲಿದ್ದ ಅವಕಾಶವನ್ನು ಅಪೇಕ್ಷಿಸಿಯೇ ಅಂಗುಷ್ಠಮಾತ್ರತ್ವೋಕ್ತಿಯು. (ಪರಿಚ್ಛಿನ್ನತ್ವದಿಂದ ಹಾಗೆ ಹೇಳಿದ್ದಲ್ಲ) (ಅದು ಮೂರ್ತಿವಿಶೇಷದಲ್ಲಿ ಅಂಗುಷ್ಠಮಾತ್ರತ್ವವು ಇದ್ದ ಪ್ರಯುಕ್ತ ಅಥವಾ ಉಪಚಾರದಿಂದ ಯುಕ್ತವಾಗುತ್ತದೆ) (ಹಾಗಾದರೆ ಅಂಗುಷ್ಠಮಾತ್ರತ್ವವು ವಿಷ್ಣುವಿಗೆ ಯುಕ್ತವಲ್ಲ. ಯತ್ಕಿಂಚಿತ್ ಅಂಗುಷ್ಠಮಾತ್ರತ್ವವನ್ನು ಹೇಳುವುದು ವ್ಯರ್ಥವು. ಅಸಂಭವವೂ ಆಗಿದೆ. ಆಯಾಯ ಅಂಗುಷ್ಠಮಾತ್ರತ್ವವನ್ನು ಹೇಳಬೇಕಾಯಿತು. ಅದಾದರೂ ಪಶ್ವಾದಿಗಳಲ್ಲಿ ಅಂಗುಷ್ಠವಿಲ್ಲದಿರುವುದರಿಂದ ಪಶ್ವಾದಿಗಳಲ್ಲಿ ಅಂತರ್ಗತನಾದ ವಿಷ್ಣುವಿನಲ್ಲಿ ಕೂಡಲಾರದು, ಎಂದು ಹೇಳಕೂಡದು.) ತು:ಇತರ ಪ್ರಾಣಿಗಳಿಗೆ ಅಂಗುಷ್ಠವಿಲ್ಲದಿದ್ದರೂ ಮನುಷ್ಯದೇಹದಲ್ಲಿರುವ ವಿಷ್ಣುವಿಗೆ ಆವಾವ ಅಂಗುಷ್ಠಮಾತ್ರತ್ವವನ್ನು ಹೇಳಿದರೆ ವಿರೋಧವೂ, ಅಸಂಭವವೂ ಇಲ್ಲ. ಏಕೆಂದರೆ—**ಅಂಗುಷ್ಠಮಾತ್ರಃ ಪುರುಷಃ** ಎಂದು ಬೋಧಿಸತಕ್ಕ ವಿದ್ಯೆಯು ಮನುಷ್ಯರನ್ನೇ ಅಧಿಕರಿಸಿಕೊಂಡು ಪ್ರವೃತ್ತವಾಗಿದೆ. ವೇದವಿದ್ಯೋಪಾಸನದಲ್ಲಿ ಮನುಷ್ಯರೇ ಅಧಿಕಾರಿಗಳು.

## ಭಾಷ್ಯ ॥ ಸರ್ವಗತಸ್ಯಾಪಿ ತಸ್ಯಾಂಗುಷ್ಠಮಾತ್ರತ್ವಂ ಹೃದ್ಯವಕಾಶಾಪೇಕ್ಷಯಾ ಯುಜ್ಯತೇ ॥ ೮ ॥

**ಭಾಷ್ಯಾರ್ಥ ॥** ಯದ್ಯಪಿ ವಿಷ್ಣುವು ಸರ್ವಗತನಾಗಿದ್ದಾನೆ. ಆದಾಗ್ಯೂ ಆತನಿಗೆ ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ಕೂಡುತ್ತದೆ. ಹೇಗೆಂದರೆ— ಹೃದಯದಲ್ಲಿರತಕ್ಕ ಅಂಗುಷ್ಠಪರಿಮಿತ ದೇಹವನ್ನು ಅಪೇಕ್ಷಿಸಿ, ಅಂದರೆ ಅಂಗುಷ್ಠಪರಿಮಿತವಾದ ದೇಶದಲ್ಲಿ ಅಭಿವ್ಯಕ್ತನಾಗುವ ಅಷ್ಟು ಪರಿಮಾಣವುಳ್ಳ ಭಗವನ್ಮೂರ್ತಿವಿಶೇಷವನ್ನು ಅಪೇಕ್ಷಿಸಿ ಆ ವಿಷ್ಣುವಿಗೆ ಅಂಗುಷ್ಠಮಾತ್ರತ್ವವು ಇದೆ. ಅಥವಾ ಹೃದಯದಲ್ಲಿದ್ದ ಅವಕಾಶವನ್ನು ಅಪೇಕ್ಷಿಸಿ ಅದರ ಸಂಬಂಧದಿಂದ ಶ್ರೀ ಹರಿಗೆ ಅಂಗುಷ್ಠಮಾತ್ರತ್ವ ವಚನವು ಯುಕ್ತವಾಗುತ್ತದೆ.

**ವಿಶೇಷಾಂಶ ॥** (೧) ೧ನೇ ಕಲ್ಪದಲ್ಲಿ ಅಪರಿಮಿತಶಕ್ತಿ ಇರತಕ್ಕ ಭಗವನ್ಮೂರ್ತಿವಿಶೇಷದಲ್ಲಿ ವ್ಯಕ್ತಾವ್ಯಕ್ತನಾ ಅಂಗುಷ್ಠಮಾತ್ರತ್ವವು ಮುಖ್ಯವು. ೨ನೇ ಕಲ್ಪದಲ್ಲಿ ಸ್ಥಾನ ಹೃದಯಾಕಾಶದಲ್ಲಿರತಕ್ಕ ಅಂಗುಷ್ಠಮಾತ್ರತ್ವಕ್ಕೆ ಸ್ಥಾನಿಯಾದ ಬ್ರಹ್ಮನಲ್ಲಿ ಅದರ ಸಂಬಂಧವಿದ್ದುದರಿಂದ ಔಪಚಾರಿಕ ಪ್ರಯೋಗವು. (೨) ಇಲ್ಲಿ ಟೀಕಾದಲ್ಲಿ ಹೃದ್ಯವಕಾಶಾಪೇಕ್ಷಯಾ ಎನ್ನುವ ಭಾಷ್ಯವನ್ನು ಸಾವಧಾರಣವನ್ನಾಗಿ ಮಾಡಿ ಸೂತ್ರದಲ್ಲಿದ್ದ ತು ಶಬ್ದವನ್ನು ಅವಧಾರಣಾರ್ಥಕವನ್ನಾಗಿ ವ್ಯಾಖ್ಯಾನ ಮಾಡಿದ್ದಾರೆ. ಅದರಿಂದ ವಿಷ್ಣುವಿಗೆ ಹೃದ್ಯಪೇಕ್ಷೆಯಿಂದಲೇ ಅಂಗುಷ್ಠಮಾತ್ರತ್ವವು, ಲೋಕದಂತೆ ಪರಿಚ್ಛಿನ್ನತ್ವವಿದ್ದ ಪ್ರಯುಕ್ತವಲ್ಲ, ಎಂದು ಹೇಳಿದ್ದಾರೆ. (೩) ಆವಾವ ಸ್ಥಾನಗಳಲ್ಲಿ ವ್ಯಕ್ತವಾದ ಮೂರ್ತಿವಿಶೇಷವನ್ನು ಅಪೇಕ್ಷಿಸಿ ಅಥವಾ ಉಪಚಾರದಿಂದ ಆವಾವ ಪರಿಮಾಣವನ್ನು ಹೇಳಿದ್ದರಿಂದ ೧) **ಯಸ್ತ್ವೇತಮೇವ ಪ್ರಾದೇಶಮಾತ್ರಂ** ಎಂದು ಛಾಂದೋಗ್ಯದಲ್ಲಿಯೂ, ೨) **ಪ್ರಾದೇಶಮಾತ್ರಂ ಪುರುಷಂ,** ೩) **ಪ್ರಾದೇಶಃ ಪುರುಷೋತ್ತಮಃ**

ಎಂದು ಬೇರೆ ಕಡೆಗಳಲ್ಲಿಯೂ ಹೃದ್ಗತನಾದ ವಿಷ್ಣುವಿಗೆ ಪ್ರಾದೇಶಪರಿಮಿತತ್ವವನ್ನು ಹೇಳಿದ್ದಾರೆ. (೪) (೧) **ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ** ಎಂದು ಮಹಾನಾಮ್ನೀ ಶ್ರುತಿಯಲ್ಲಿಯೂ, ೨) **ಅಂಗುಷ್ಠಮಾತ್ರಃ ಪುರುಷಃ** ಎಂದು ಕಠದಲ್ಲಿಯೂ, ೩) **ಅಂಗುಷ್ಠಮಾತ್ರಃ ಪುರುಷಃ** ಎಂದು ಬೇರೆ ಕಡೆಗಳಲ್ಲಿಯೂ ಅಂಗುಷ್ಠಪರಿಮಿತತ್ವವನ್ನು ಹೇಳಿದ್ದರಿಂದ ★**ಅಂಗುಷ್ಠಾಗ್ರಪ್ರಮಾಣಕಃ** ಎಂದು ಕೆಲವುಕಡೆ ಹೇಳಿದ್ದರಿಂದ ವಿರೋಧವೆನ್ನುವ ಚೋದ್ಯವು ಪರಿಹೃತವಾಯಿತು. ಹೇಗೆಂದರೆ— ೧) ದೇಹದಲ್ಲಿ ಹೃದಯಾಕಾಶದಲ್ಲಿ ಪ್ರಾದೇಶಪರಿಮಿತತ್ವರೂಪವಾದ ವಿಶೇಷವು ವ್ಯಕ್ತವಾಗುವುದು. ೨) ಹೃದಯದಲ್ಲಿರತಕ್ಕ ಕಮಲದ ಕರ್ಣಿಕಾಮೂಲದಲ್ಲಿದ್ದ ಆಕಾಶದಲ್ಲಿ ಅಂಗುಷ್ಠಾಗ್ರಪ್ರಮಾಣಕತ್ವ ರೂಪವಾದ ವಿಶೇಷವು ವ್ಯಕ್ತವಾಗುವುದು. ೩) ಕರ್ಣಿಕಾಗ್ರದಲ್ಲಿರತಕ್ಕ ಆಕಾಶದಲ್ಲಿ ಅಂಗುಷ್ಠಪರಿಮಿತತ್ವ ರೂಪವಾದ ವಿಶೇಷವೂ ವ್ಯಕ್ತವಾಗುವುದು. ಆಯಾಯ ಸ್ಥಾನಧರ್ಮಕ್ಕೆ ಸ್ಥಾನಿಯಲ್ಲಿ ಔಪಚಾರಿಕಪ್ರಯೋಗವು. (೩) ಈ ಅಭಿಪ್ರಾಯವನ್ನು ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿರುವರು. (೪) ಮೂಲೇಶ ವ್ಯಾಪೀ ಇವರ ಮಧ್ಯದಲ್ಲಿ ಅಂಗುಷ್ಠ ಮಾತ್ರತ್ವವಾದರೂ ದೇಹದಲ್ಲಿ ದೇಹಾಂಗುಷ್ಠಮಿತತ್ವವು. ಜೀವರ ಹೃದಯದಲ್ಲಿ ಜೀವಾಂಗುಷ್ಠಮಿತತ್ವವು ಹೀಗೆ ಇಟ್ಟುಕೊಳ್ಳಬೇಕು. (೫) **ಅಂಗುಷ್ಠಂ ಚ ಸಮಾಶ್ರಿತಃ** ಎನ್ನುವುದರಿಂದ ಕರ್ಮೇಂದ್ರಿಯಾಧಿಷ್ಠಾತೃತ್ವವು ಹೇಳಲ್ಪಡುತ್ತದೆ. (೬) ಹಾಗಾದರೆ **ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ** ಇದು ಮೊದಲಾದ ವಚನಗಳ ದೆಸೆಯಿಂದ ಜಾಗ್ರದಾದ್ಯವಸ್ಥೆಗಳಿಗೆ ಪ್ರೇರಕರಾದ ವಿಶ್ವ ತೈಜಸ ಪ್ರಾಜ್ಞರು ದಕ್ಷಿಣ ಅಕ್ಷಿ ಮೊದಲಾದವುಗಳಲ್ಲಿದ್ದಾರೆಂದು ಸಿದ್ಧವಾಗುವುದು. (೭) ಹೀಗಾದರೆ ಜೀವನೂ ಕೂಡ **ಹೃದಯಸ್ಥಾತ್ ಪರಾಜ್ಜೀವೋ ದೂರಸ್ಥೋ ಜಾಗ್ರದೇಕ್ಷತಿ** ಎನ್ನುವ ಉಕ್ತಿಯಿಂದ ಜಾಗ್ರದವಸ್ಥೆಯಲ್ಲಿ ದಕ್ಷಿಣಾಕ್ಷಿಯಲ್ಲಿ ಇದ್ದಾನೆ, ಸ್ವಪ್ನದಲ್ಲಿ ಕಂಠದೇಶದಲ್ಲಿದ್ದಾನೆ, ಸುಷುಪ್ತಿಯಲ್ಲಿ ಹೃದಯದಲ್ಲಿದ್ದಾನೆ. (೮) ತಥಾಚ ಹೃದಯವ್ಯಾಪ್ತ ಪ್ರಾದೇಶಪರಿಮಿತವಾದ ಭಗವದ್ರೂಪಕ್ಕೆ ಸರ್ವದಾ ಜೀವಸ್ಥಾನತ್ವವೂ ಹೇಗೆ? ಅಲ್ಲದೆ ಹೃತ್ಕರ್ಣಿಕಾ ಮೂಲದಲ್ಲಿದ್ದ ಭಗವದ್ರೂಪದಲ್ಲಿ ಸದಾ ಪ್ರತಿಷ್ಠಿತನಾದ ಜೀವನು ಸುಷುಪ್ತಿಕಾಲದಲ್ಲಿ ಹೃತ್ಕರ್ಣಿಕಾಗ್ರದಲ್ಲಿರ ತಕ್ಕ ಶ್ರೀಹರಿಯಲ್ಲಿ ಪ್ರವೇಶಿಸುತ್ತಾನೆ ಎನ್ನುವುದೂ ಹೇಗೆ? ಎಂದು ಹೇಳಕೂಡದು. ಏಕೆಂದರೆ— ಸರ್ವದಾ ಹೃದಯದಲ್ಲಿರತಕ್ಕ ಜೀವಸ್ವರೂಪವೇ ಜಾಗರಿತಾದಿಗಳಲ್ಲಿ ಕಣ್ಣು ಮೊದಲಾದ ಇಂದ್ರಿಯಗಳಲ್ಲಿಯೂ ವಿಶೇಷ ಸನ್ನಿಹಿತವಾಗಿದೆ. ದೀಪಪ್ರಕಾಶದಂತೆ ಎಂದಂಗೀಕೃತವಾಗಿದೆ. ಇದೇ ಅಭಿಪ್ರಾಯವು ಐತರೇಯಭಾಷ್ಯದಲ್ಲಿ ಹೇಳಿರುತ್ತಾರೆ. **ಹೃದಿ ಸ್ಥಿತಮೇವ ತಸ್ಯ ರೂಪಂ ಜಾಗರಿತೇಽಕ್ಷ್ಯಾದಿಷು ವಿಶೇಷಸನ್ನಿಹಿತಂ ಭವತಿ ।** ಹೃದಯದಲ್ಲಿರತಕ್ಕ ಶ್ರೀಹರಿಯ ರೂಪವೇ ಜಾಗ್ರದವಸ್ಥೆಯಲ್ಲಿ ಅಕ್ಷ್ಯಾದಿಗಳನ್ನು ವಿಶೇಷವಾಗಿ ಸನ್ನಿಹಿತವಾಗುತ್ತದೆ. ಒಬ್ಬ ಜೀವನಿಗೇನೇ ಸ್ಥಾಪನ, ಧೃತಾಖ್ಯ ಪ್ರತಿಷ್ಠಾಪನ, ಸುಷುಪ್ತಿಪ್ರಾಪಣ, ಎನ್ನುವ ಪ್ರಯೋಜನಗಳ ಭೇದದಿಂದ ಬಂದ ಶರೀರದಲ್ಲಿ

---

★ **ಹೃದಯೇ ಸರ್ವಶೋ ವ್ಯಾಪೀ ಪ್ರಾದೇಶಃ ಪುರುಷೋತ್ತಮಃ। ಜೀವಾನಾಂ ಸ್ಥಾನಮುದ್ದಿಷ್ಟಃ ಸರ್ವದೇವಸನಾತನಃ ॥ ಹೃತ್ಕರ್ಣಿಕಾಮೂಲಗತಃ ಸೋಽಂಗುಷ್ಠಾಗ್ರಪ್ರಮಾಣಕಃ। ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿ ತಾಃ ॥ ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇ ಹರೌ। ಪ್ರವಿಶಂತಿ ಸುಷುಪ್ತೌ ತು ಪ್ರಬುಧ್ಯಂತೇ ತತಸ್ತಥಾ ॥** ಎಂದು ಬೃಹದಾರಣ್ಯಕಭಾಷ್ಯ.

ಅನೇಕ ರೂಪದಿಂದ ಇರತಕ್ಕ ಭಗವನ್ಮೂರ್ತಿಗಳು ಶಕ್ತಿಯಿಂದ ಸರ್ವಗತಗಳಾದಾಗ್ಯೂ ಆ ಮೂರ್ತಿಗಳಿಗೆ ಅಲ್ಲಿ ವ್ಯಕ್ತಿ ರೂಪದಿಂದ ಅನೇಕ ಅಲ್ಪ ಪರಿಮಾಣತ್ವವೂ ಯುಕ್ತವಾಗುವುದು.

**ಪೀಠಿಕೆ ॥** ಆದಾಗ್ಯೂ ಶ್ರೀವಿಷ್ಣುವಿಗೆ ಅಂಗುಷ್ಠಪರಿಮಾಣವೆನ್ನುವುದು ಯುಕ್ತವಾಗಲಾರದು. ಏಕೆಂದರೆ (೧) ಆವಾವ ಅಂಗುಷ್ಠಪರಿಮಾಣವೆನ್ನುತ್ತೀರೋ, (೨) ಯತ್ಕಿಂಚಿತ್ ಅಂಗುಷ್ಠಪರಿಮಾಣವೆನ್ನುತ್ತೀರೋ, ಇವುಗಳಲ್ಲಿ ಆವಾವ ಅಂಗುಷ್ಠ ಪರಿಮಾಣವೆಂದು ಹೇಳುವುದಾದರೆ ಪಶ್ವಾದಿಗಳಿಗೆ ಅಂಗುಷ್ಠವೇ ಇಲ್ಲದಿರುವುದರಿಂದ ಪಶ್ವಾದಿಗಳಲ್ಲಿ ಅಂತರ್ಗತನಾದ ವಿಷ್ಣುವಿಗೆ ಅಂಗುಷ್ಠಪರಿಮಿತತ್ವವು ಕೂಡಲಾರದು. ೨ನೇದ್ದು ಯತ್ಕಿಂಚಿತ್ ಅಂಗುಷ್ಠಮಾತ್ರತ್ವವೆನ್ನುವುದೂ ಕೂಡುವುದಿಲ್ಲ. ಏಕೆಂದರೆ— ಅಂಗುಷ್ಠಮಾತ್ರಪರಿಮಾಣವೆಂದು ಆವಾವ ಅಧಿಕಾರಿಗಳು ಉಪಾಸನಾಮಾಡಬೇಕಾಗಿರುವುದರಿಂದ ಆ ಉಪಾಸನೆಯು ಅಂಗುಷ್ಠವ್ಯಕ್ತಿ ವಿಶೇಷ ನಿರ್ಧಾರಣೆಯಿಲ್ಲದೆ ಕೂಡದೆ ಇರುವುದರಿಂದ ಯತ್ಕಿಂಚಿತ್ ಅಂಗುಷ್ಠಮಾತ್ರ ಪರಿಮಾಣವೆನ್ನುವ ಉಕ್ತಿಯು ವ್ಯರ್ಥವಾಗುವುದು. ಅಲ್ಲದೆ ಪಿಪೀಲಿಕಾದಿಗಳ ಹೃದಯದಲ್ಲಿದ್ದವನಿಗೆ ಅಂಗುಷ್ಠಮಾತ್ರತ್ವ ಸಾಮಾನ್ಯವೂ ಕೂಡಲಾರದು. ಎನ್ನುವ ಆಶಂಕೆಯನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ಇತರಪ್ರಾಣಿನಾಮಂಗುಷ್ಠಾಭಾವೇಽಪಿ ಮನುಷ್ಯಾಧಿಕಾರತ್ವಾನ್ನ ವಿರೋಧಃ ॥ ೨೫ ॥ ಅಧಿ.೭ ॥** **॥ ೯ ॥**

**ಭಾಷ್ಯಾರ್ಥ ॥** ಅಪಿ=ಆವಾವ ಅಂಗುಷ್ಠ ಪರಿಮಾಣವನ್ನು ಅಂಗೀಕರಿಸಿದರೂ, ಇತರ-ಪ್ರಾಣಿನಾಂ= ಪಶುಮೊದಲಾದ ಇತರ ಪ್ರಾಣಿಗಳಿಗೆ, ಅಂಗುಷ್ಠಾಭಾವೇಽಪಿ=ಅಂಗುಷ್ಠವಿಲ್ಲದಿದ್ದಾಗ್ಯೂ, ಮನುಷ್ಯಾಧಿಕಾರತ್ವಾತ್=ಮನುಷ್ಯರನ್ನು ಅಧಿಕರಿಸಿಕೊಂಡು ಪ್ರವೃತ್ತವಾದುದರಿಂದ, (ಅದೂ ಹೇಗೆಂದರೆ—ವೇದವಿದ್ಯೋಪಾಸನೆಗೆ) ಮನುಷ್ಯಾಧಿಕಾರತ್ವಾತ್=ಮನುಷ್ಯರು ಮಾತ್ರ ಅಧಿಕಾರಿಗಳಾಗಿರುವುದರಿಂದ (ಮನುಷ್ಯರಹೃದಯದಲ್ಲಿದ್ದ ವಿಷ್ಣುವಿಗೆ ಅಂಗುಷ್ಠಪರಿಮಾಣವು ವಿರುದ್ಧವಲ್ಲ.

**ವಿಶೇಷಾಂಶ ॥** (೧) ಮನುಷ್ಯಾಣಾಂ ಅಧಿಕಾರಃ ಯಸ್ಮಿನ್, ಅಥವಾ ಅಧಿಕ್ರಿಯತೇ ಅತ್ರ ಇತ್ಯಧಿಕಾರಃ= ಉಪಾಸನಂ ಶಾಸ್ತ್ರಂ ವಾ, ಮನುಷ್ಯಾಣಾಮೇವ ಅಧಿಕಾರಃ=ಎಂದು ವಿಗ್ರಹವು. (೨) ಮನುಷ್ಯಪದವು ಮನನಾದಿಶೀಲವುಳ್ಳ ಚೇತನಪರವು. ಆದರಿಂದ ವೇದವಿದ್ಯೆಯಲ್ಲಿ ಅಧಿಕಾರವುಳ್ಳ ದೇವತೆಗಳಿಗೂ ಜರಿತಾರಿಮೊದಲಾದ ಪಕ್ಷಿಗಳಿಗೂ ಈ ವಿದ್ಯೆಯಲ್ಲಿ ಅಧಿಕಾರವು ಸಿದ್ಧಿಸುತ್ತದೆ. ಆದರಲ್ಲಿ ಜರಿತಾರಿಮೊದಲಾದ ಪಕ್ಷಿಗಳಿಗೆ ತಂತಮ್ಮ ಅಂಗುಷ್ಠಪರಿಮಾಣದಿಂದ ಭಗವದುಪಾಸನೆಯು ಕೂಡದೆ ಇರುವುದರಿಂದ ಅವುಗಳಿಗೆ ಈ ವಿದ್ಯೆಯಿಂದ ಹುಟ್ಟಿದ ವಾಕ್ಯಾರ್ಥಜ್ಞಾನದಲ್ಲಿಯೇ ಅಧಿಕಾರವು; ಉಪಾಸನೆಯಲ್ಲಿ ಅಧಿಕಾರವಿಲ್ಲ. ಆದಪ್ರಯುಕ್ತವೇ ಟೀಕಾದಲ್ಲಿ ಮನುಷ್ಯಾಣಾಮೇವ ವೇದವಿದ್ಯೋಪಸನಾಧಿಕಾರಿತ್ವೇನ ಎಂದು ಮನುಷ್ಯತ್ವವು ವ್ಯಾಪಕವೆಂದು ಉಕ್ತವಾಗಿದೆ. (೩) ಹಾಗಾದರೆ—ಅನಧಿಕಾರಿಗಳಾದ ಪಶ್ವಾದಿಗಳ ದೇಹದಲ್ಲಿರತಕ್ಕ ಶ್ರೀಹರಿಗೆ ಅಂಗುಷ್ಠಪರಿಮಾಣವಿಲ್ಲವೆಂದಾದರೆ—ಇತರ ಪರಿಮಾಣವನ್ನು ಹೇಳದೆ ಇದ್ದುದರಿಂದ ದ್ರವ್ಯತ್ವವೇ ಇಲ್ಲವೆಂದಾಗಬೇಕಾಗುವುದು. ಎಂದು ಹೇಳಕೂಡದು. ಪಶ್ವಾದಿಗಳ ದೇಹದಲ್ಲಿರತಕ್ಕ ಶ್ರೀಹರಿಗೆ

ಆವಾವ ಆಕಾರವಿದ್ದುದರಿಂದ ತದನುಸಾರಿಯಾದ ಪರಿಮಾಣವಿದೆ. ಇದೇ ಅಭಿಪ್ರಾಯವನ್ನು ಐತರೇಯಭಾಷ್ಯದಲ್ಲಿ ಹೇಳಿರುವರು. **ಸಂಕರ್ಷಣಶ್ಚ ಪ್ರದ್ಯುಮ್ನಸ್ತದಾಕಾರೌ ನೃಷು ಸ್ಥಿತೌ। ನಾರಾಯಣಾನಿರುದ್ಧೌ ತು ಪಶ್ವಾಕಾರೌ ಪಶುಸ್ಥಿತೌ ॥** ಎಂದು ॥ ೨೫ ॥

## ಮಾಯಾವಾದಿರೀತ್ಯಾ

ವಿಚಾರ ॥ **ಅಂಗುಷ್ಠಮಾತ್ರಃ ಪುರುಷಃ** ಎಂದು ಶ್ರುತನಾದ ಅಂಗುಷ್ಠಮಾತ್ರನು ಜೀವನು. ಬ್ರಹ್ಮನಲ್ಲ. ಪರಿಚ್ಛಿನ್ನನಾದ ಜೀವನಲ್ಲಿ ಅಂಗುಷ್ಠಮಾತ್ರತ್ವವು ಕೂಡುತ್ತದೆ. **ಈಶಾನೋ ಭೂತಭವ್ಯಸ್ಯ** ಎಂದು ಚರಮದಲ್ಲಿ ಶ್ರುತವಾದ ಈಶಾನತ್ವವನ್ನು ಪ್ರಥಮತಃ ಶ್ರುತವಾದ ಅಂಗುಷ್ಠಮಾತ್ರತ್ವವನ್ನು ಅನುಸರಿಸಿ ಸಂಕೋಚ ಮಾಡಬೇಕು. **ಅಲ್ಪಶ್ರುತೇಃ** ಎನ್ನುವ ನ್ಯಾಯದಿಂದ ಈಶ್ವರನಿಗೂ ಅಂಗುಷ್ಠಮಾತ್ರತ್ವವು ಕೂಡಬಹುದೆಂದು ಹೇಳಕೂಡದು. ಅಲ್ಲಿ ಹೃತ್ಪುಂಡರೀಕಾಖ್ಯ ಸ್ಥಾನವನ್ನು ನಿರ್ದೇಶಮಾಡಿದಂತೆಯೇ ಇಲ್ಲಿ ಸ್ಥಾನವಿಶೇಷವನ್ನು ನಿರ್ದೇಶಮಾಡಲಿಲ್ಲ ಎಂದು ಪೂರ್ವಪಕ್ಷವನ್ನು ಮಾಡಿಕೊಂಡು **ಅನ್ಯತ್ರ ಧರ್ಮಾದನ್ಯತ್ರಾಧರ್ಮಾದ ನ್ಯತ್ರಾಸ್ಮಾತ್ಕೃತಾಕೃತಾತ್। ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥** ಎಂದು ಮೊದಲು ಬ್ರಹ್ಮನನ್ನು ಪ್ರಶ್ನೆಮಾಡಿದ್ದರಿಂದ ಮೇಲಿನ ಗ್ರಂಥವು ಬ್ರಹ್ಮವಿಷಯಕಉತ್ತರವೆಂದು ಹೇಳುವುದೇ ಯುಕ್ತವಾಗಿರುವುದರಿಂದ ಭೂತಭವ್ಯೇಶಾನತ್ವವು ಅಸಂಕುಚಿತವೆಂದೇ ಹೇಳಬೇಕು. ಬ್ರಹ್ಮನಿಗೆ ಅಂಗುಷ್ಠ ಮಾತ್ರತ್ವೋಕ್ತಿಯಾದರೂ ಜೀವೈಕ್ಯಾಭಿಪ್ರಾಯದಿಂದ ಎಂದು ಸಿದ್ಧಾಂತ ಮಾಡಿರುವರು. ಇದು ಅಯುಕ್ತವು. ಏಕೆಂದರೆ— ಮಾಯಾವಾದಿಗಳು ಮಾಡಿಕೊಂಡ ಪೂರ್ವಪಕ್ಷವೇ ಅಯುಕ್ತವು. **ಈಶಾನೋ ಭೂತಭವ್ಯಸ್ಯ** ಎನ್ನುವುದು ಅಂಗುಷ್ಠವಾಕ್ಯದಿಂದ ಅಂತಿಮದ್ದಾದರೂ **ಈಶಾನಂ ಭೂತಭವಸ್ಯ** ಎನ್ನುವುದು ಪ್ರಥಮದಲ್ಲಿಯೇ ಇದ್ದುದರಿಂದ ಅಂಗುಷ್ಠವಾಕ್ಯವು ಪೂರ್ವೋತ್ತರಗಳಲ್ಲಿ ಈಶಾನಶ್ರುತಿಗಳಿಂದ ಸಂಬದ್ಧವಾಗಿದೆ. ಮತ್ತು **ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ, ಅಂಗುಷ್ಠ ಮಾತ್ರಃ ಪುರುಷೋ ಜ್ಯೋತಿರಿವ** ಎನ್ನುವ ಎರಡು ವಾಕ್ಯಗಳಲ್ಲಿ ಸ್ಥಾನವನ್ನು ನಿರ್ದೇಶಮಾಡದೆ ಇದ್ದರೂ **ಅಂಗುಷ್ಠಮಾತ್ರಃ ಪುರುಷೋಂಽತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ** ಎನ್ನುವ ಮೂರನೇ ವಾಕ್ಯದಲ್ಲಿ ಸ್ಥಾನವನ್ನು ನಿರ್ದೇಶಮಾಡಿದ್ದರಿಂದ ಇಲ್ಲಿ ಸ್ಥಾನವಿಶೇಷ ನಿರ್ದೇಶಮಾಡಲಿಲ್ಲವೆಂದು ಪೂರ್ವಪಕ್ಷದಲ್ಲಿ ಹೇಳಿದ್ದು ಅಯುಕ್ತವು. ಮತ್ತು ಅವರ ಸಿದ್ಧಾಂತವೂ ಅಯುಕ್ತವು. ಮಾಯನಾದಿಗಳ ಪಕ್ಷದಲ್ಲಿ **ಅನ್ಯತ್ರಧರ್ಮಾತ್** ಎನ್ನುವಲ್ಲಿ ಬ್ರಹ್ಮನನ್ನು ಪ್ರಶ್ನೆಮಾಡಿದಂತೆಯೇ **ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ** ಎನ್ನುವಲ್ಲಿ ಜೀವನನ್ನು ಪ್ರಶ್ನೆಮಾಡಿದ್ದರಿಂದ ಅಂಗುಷ್ಠವಾಕ್ಯಕ್ಕೆ ಜೀವಪರತ್ವವನ್ನು ಇಟ್ಟುಕೊಂಡರೂ ದೋಷವಿಲ್ಲ. ಮತ್ತು ನಿರ್ವಿಶೇಷ ಬ್ರಹ್ಮವೇ ಈ ಪಾದಪ್ರತಿಪಾದ್ಯವು. ಆದಕ್ಕೆ ಯಾವ ವಸ್ತುವನ್ನು ಕುರಿತೂ ಈಶಿತೃತ್ವ (ನಿಯಾಮಕತ್ವ)ವೇ ಇಲ್ಲ. ಜೀವನಿಗಾದರೂ ತನ್ನಿಂದ ನಿಯಮ್ಯವಾದ ದೇಹಾದಿಗಳನ್ನು ಕುರಿತು ನಿಯಾಮಕತ್ವವು ಇದೆ. ಏವಂಚ **ಈಶಾನೋ ಜೀವ ಏವ ಸ್ಯಾತ್ ಸ್ವದೇಹಾದೇರ್ನಿಯಾಮಕಃ। ನಿರ್ವಿಶೇಷಂ ತು ನೇಶಾನಮೇಕಸ್ಯಾಪ್ಯನಿಯಾಮಕಂ** ಜೀವನು ತನ್ನ ದೇಹಾದಿಗಳಿಗಾದರೂ ನಿಯಾಮಕನಾದುದರಿಂದ ಜೀವನೇ ಈಶಾನನು ಆಗಬೇಕು. ನಿರ್ವಿಶೇಷನಾದ ಬ್ರಹ್ಮನು ಒಂದಕ್ಕೂ ನಿಯಾಮಕನಾಗದಿರುವುದರಿಂದ ಈಶಾನನು ಆಗಲಾರನು. ಮತ್ತು ಅವರ ಮತದಲ್ಲಿ ಜೀವರಿಗೂ ಸ್ವತಃ

ಅಂಗುಷ್ಠಮಾತ್ರತ್ವವಿಲ್ಲ. ಮತ್ತೆ ಹೃದಯದಲ್ಲಿದ್ದ ಕಮಲಕೋಶವು ಅಂಗುಷ್ಠಮಾತ್ರವು. ಮನಸ್ಸು ಪ್ರಾಯೇಣ ಕಮಲಕೋಶದಲ್ಲಿದ್ದುದು. ಜೀವನು ತದವಚ್ಛಿನ್ನನು. ಹೀಗ್ಗೆ ಅಂಗುಷ್ಠಮಾತ್ರತ್ವವು ಔಪಾಧಿಕವು. ಏವಂಚ ಈಶ್ವರನಿಗೆ ಜೀವಾಭೇದವಿಲ್ಲದೇನೇ ದಹರಾಧಿಕರಣದಲ್ಲಿ ಹೇಳಿದ ಅಂಗುಷ್ಠಮಾತ್ರಹೃತ್ಕಮಲಕೋಶಸ್ಥತ್ವವಿದ್ದುದರಿಂದ ಅಂಗುಷ್ಠಮಾತ್ರತ್ವವು ಕೂಡುವಾಗ ಜೀವಾಭೇದಾಭಿಪ್ರಾಯದಿಂದ ಬ್ರಹ್ಮನಿಗೆ ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ಎನ್ನುವುದು ಅಯುಕ್ತವು. ಮತ್ತು ಪೂರ್ವದಲ್ಲಿ **ಆತ್ಮಾನಂ ಜೀವಮಂತಿಕಾತ್** ಎಂದು ತಂ **ದೇವಾಃ ಸರ್ವೇ ಅರ್ಪಿತಾಃ** ಎಂದು ಉತ್ತರದಲ್ಲಿಯೂ **ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ, ತಾದೃಗೇವ ಭವತಿ, ಇತರೇಣ ತು ಜೀವಂತಿ, ಸುಪ್ತೇಷು ಜಾಗರ್ತಿ, ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್, ತಮಾತ್ಮಸ್ಥಂ. ಭಯಾದಸ್ಯಾಗ್ನಿಸ್ತಪತಿ** ಇತ್ಯಾದ್ಯನೇಕ ವಾಕ್ಯಗಳಲ್ಲಿ ಜೀವನಿಂದ ಭೇದವೇ ಶ್ರುತವಾದುದರಿಂದ ಬ್ರಹ್ಮನಿಗೆ ಜೀವನಿಂದ ಅಭೇದಾಭಿಪ್ರಾಯದಿಂದ ಅಂಗುಷ್ಠಮಾತ್ರತ್ವವನ್ನು ಹೇಳಿದ್ದು ಎನ್ನುವುದು ಅಯುಕ್ತವು. ಮತ್ತು ಅಂಗುಷ್ಠಮಾತ್ರನಲ್ಲಿ ಶ್ರುತವಾದ ಸರ್ವದೇವೋಪಾಸ್ಯತ್ವವು ಪೂರ್ವಪಕ್ಷಕ್ಕೆ ಅನುಗುಣವಲ್ಲ. ಯಾವನೊಬ್ಬ ಜೀವನಿಗೂ ಸರ್ವದೇವೋಪಾಸ್ಯತ್ವವು ಕೂಡಲಾರದು. ಸಿದ್ಧಾಂತಕ್ಕೂ ಅನುಗುಣವಲ್ಲ. ಸಗುಣಬ್ರಹ್ಮನಿಗೇನೇ ಉಪಾಸ್ಯತ್ವವನ್ನು ಅಂಗೀಕರಿಸಿದುದರಿಂದ ಜ್ಞೇಯನಾದ ನಿರ್ವಿಶೇಷ ನಾದ ಬ್ರಹ್ಮನಲ್ಲಿ ಉಪಾಸ್ಯತ್ವವು ಕೂಡಲಾರದು. ಇತ್ಯಾದ್ಯನೇಕ ದೋಷಗಳು ಬರುವುದರಿಂದ ಅವರ ಮತವೂ ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥ ಪ್ರಾಣಾಧಿಪಃ ಸಂಚರತಿ ಸ್ವಕರ್ಮಭಿರಂಗುಷ್ಠಮಾತ್ರಃ** ಶ್ರುತ್ಯಂತರದಲ್ಲಿ ಜೀವನಿಗೆ ಅಂಗುಷ್ಠಮಾತ್ರತ್ವವು ಶ್ರುತವಾದುದರಿಂದಲೂ ಈಶ್ವರನಿಗೆ ಎಲ್ಲಿಯೂ ಶ್ರುತವಾಗದೆ ಇರುವುದರಿಂದಲೂ ಇಲ್ಲಿ ಅಂಗುಷ್ಠಮಾತ್ರನು ಜೀವನೇ ಎಂದು ಪೂರ್ವಪಕ್ಷ ಬಂದರೆ— ಅನ್ಯತ್ರ ಅಶ್ರುತವಾದಾಗ್ಯೂ ಕಾಠಕದಲ್ಲಿ ವಾಕ್ಯತ್ರಯದಲ್ಲಿ ಹೇಳಿದ ಅಂಗುಷ್ಠಮಾತ್ರತ್ವವು ಈಶ್ವರನಿಗೇನೇ, ಈಶಾನಶಬ್ದವಿದ್ದುದರಿಂದ ಎಂದು ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. **ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।ಹೃದಾಮನೀಷಾಮನ ಸಾಭಿಕ್ಲೃಪ್ತೋ ಯ ಏನಂ ವಿದುರಮೃತಾಸ್ತೇ ಭವಂತಿ** ಎಂದು ಶ್ವೇತಾಶ್ವತರ ದಲ್ಲಿಯೂ **ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ ॥ ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್** ಎಂದು ತೈತ್ತಿರೀಯದಲ್ಲಿಯೂ ಅನ್ಯತ್ರ ಈಶ್ವರನಿಗೂ ಅಂಗುಷ್ಠಮಾತ್ರತ್ವವು ಶ್ರುತವಾಗಿರುವುದರಿಂದ ಈಶ್ವರನಿಗೆ ಅನ್ಯತ್ರದಲ್ಲಿಯೂ ಅಂಗುಷ್ಠ ಮಾತ್ರತ್ವೋಕ್ತಿಯು ಶ್ರುತವಾಗಲಿಲ್ಲವೆಂದು ಪೂರ್ವಪಕ್ಷದಲ್ಲಿ ಹೇಳಿದ್ದು ಅಯುಕ್ತವು. ಶ್ವೇತಾಶ್ವತರಾದಿಗಳಿಗೆ ಈಶ್ವರವಿಷಯತ್ವದಲ್ಲಿ ಪೂರ್ವಪಕ್ಷಿಗೆ ವಿಪ್ರತಿಪತ್ತಿಯಿದ್ದರೆ **ಪ್ರಾಣಾಧಿಪಃ ಸಂಚರತಿ** ಇತ್ಯಾದಿಗಳಿಗೆ ಜೀವ ವಿಷಯತ್ವದಲ್ಲಿ ಸಿದ್ಧಾಂತಿಗೂ ಕೂಡ ವಿಪ್ರತಿಪತ್ತಿಯು ಇದೆ ಎಂದು ಏಕೆ ಹೇಳಲಾರದು. ಇತ್ಯಾದ್ಯನೇಕ ದೋಷಗಳು ಬರುವುದರಿಂದ ಅವರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ। ಈಶಾನೋ ಭೂತಭವ್ಯಸ್ಯ** ಎಂದು ಹೇಳಲ್ಪಟ್ಟ ಈಶಾನನು ಮುಖ್ಯವಾಯುವೋ, ವಿಷ್ಣುವೋ ಎಂದು ಸಂದೇಹವು. ವಾಯುವೆಂದು ಪೂರ್ವಪಕ್ಷವು. **ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ। ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ** ಎಂದು ಪ್ರಾಣಾದಿವ್ಯವಸ್ಥಾಪಕತ್ವ ಮಧ್ಯಮತ್ವ ಸರ್ವದೇವೋಪಾಸ್ಯತ್ವಗಳು ಶ್ರುತಗಳಾಗಿವೆ. ಅವುಗಳು **ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ** ಎಂದೂ **ಅಥೇಮಮೇವ ನಾಪ್ನೋದ್ಯೋऽಯಂ ಮಧ್ಯಮಃ ಪ್ರಾಣಃ** ಎಂದೂ **ಅಯಂ ವಾವ ಶಿಶುಃ ಯೋऽಯಂ ಮಧ್ಯಮಃ ಪ್ರಾಣಃ** (ಬೃಹದಾರಣ್ಯಕ) **ಕುವಿದಂಗನಮಸಾ** ಇತ್ಯಾದಿ ಅನೇಕ ಶ್ರುತಿಗಳಿಂದ ವಾಯುಧರ್ಮಗಳೆಂದು ಅವಗತಗಳಾಗಿವೆ. ವಿಷ್ಣುವಿನಲ್ಲಿ ಅಕ್ಷರಾಧಿಕರಣದಲ್ಲಿ ಅಣುತ್ವವನ್ನು ಹೇಳಿದರೂ ಅಂಗುಷ್ಠಪರಿಮಾಣವೇ ಇರುವುದು ಎಂದು ಹೇಳಿದ್ದು ಅಯುಕ್ತವು. ಮತ್ತು ಯತ್ಕಿಂಚಿತ್ ಅಂಗುಷ್ಠಪರಿಮಾಣವನ್ನು ಇಟ್ಟುಕೊಂಡರೆ ನಿರ್ಧಾರಣವು ಕೂಡದಿರುವುದರಿಂದ ಉಪಾಸನೆಯು ಕೂಡದೆ ಇರುವ ಪ್ರಯುಕ್ತ ಹಾಗೆ ಹೇಳಿದ್ದೇ ವ್ಯರ್ಥವು. ಆವಾವ ಅಂಗುಷ್ಠಪರಿಮಾಣವನ್ನು ಇಟ್ಟುಕೊಂಡರೆ ಪಶ್ವಾದಿಗಳಿಗೆ ಅಂಗುಷ್ಠವಿಲ್ಲದಿರುವುದರಿಂದ ಪಶ್ವಂತಸ್ಥನಿಗೆ ಅಂಗುಷ್ಠಪರಿಮಾಣತ್ವವು ಕೂಡಲಾರದು, ಆದಕಾರಣ ವಾಯುವೇ ಎಂದು ಪೂರ್ವಪಕ್ಷ ಬಂದರೆ— **ಸ ವಾಮನಃ** ಎಂದು ಶ್ರುತವಾದ ವಾಮನಶ್ರುತಿಯು **ಏಷ ಉ ಏವ ವಾಮನಿರೇಷ ಸರ್ವಾಣಿ ವಾಮಾನಿ ನಯತಿ, ಉಪೇಂದ್ರೋ ವಾಮನಃ ಪ್ರಾಂಶುಃ** ಇತ್ಯಾದಿ ಶ್ರುತಿಸ್ಮೃತಿಗಳಿಂದಲೂ, ವಿದ್ವತ್ಪ್ರಸಿದ್ಧಿಯಿಂದಲೂ ಯೋಗರೂಢಿಗಳಿಂದ ವಿಷ್ಣುವಿನಲ್ಲಿ ಮಾತ್ರ ಇರತಕ್ಕುದು, ಅನ್ಯತ್ರ ಅವಕಾಶವನ್ನು ಹೊಂದಲಾರದು. ಆದಕಾರಣ **ಸಹಸ್ರಾದಪಿ ಲಿಂಗಾನಾಂ ಶ್ರುತಿರ್ಬಲವತೀ ಸ್ಮೃತಃ। ಅವಕಾಶೋಜ್ಝಿತಾ ಸಾವಕಾಶಾತ್ತು ಕಿಮು ಲಿಂಗತಃ ॥** ಎಂದುಕ್ತವಾಗಿದೆ. ಪ್ರಾಣನಿಯಾಮಕತ್ವವು ಅಂತರ್ಯಾಮಿ ಅಧಿಕರಣ ನ್ಯಾಯದಿಂದ ಸರ್ವನಿಯಾಮಕನಾದ ಶ್ರೀಹರಿಯಲ್ಲಿ ಯುಕ್ತವು. ಅಂಗುಷ್ಠಮಾತ್ರತ್ವವು, ತತ್ತದಂಗುಷ್ಠಪರಿಮಿತವಾದ ರೂಪವಿಶೇಷ ವ್ಯಕ್ತರೂಪದಿಂದ ಉಪಪನ್ನವಾಗುತ್ತದೆ. ಅಥವಾ ಅಂತಹ ಹೃದಯರೂಪಸ್ಥಾನದಲ್ಲಿದ್ದ ಅಂಗುಷ್ಠಮಾತ್ರತ್ವಕ್ಕೆ ಸ್ಥಾನಿಯಾದ ಈಶ್ವರನಲ್ಲಿ ಔಪಚಾರಿಕವಾಗಿ ಯುಕ್ತವಾಗುವುದು. ಪಶ್ವಾದಿಗಳಿಗೆ ಅಂಗುಷ್ಠವಿಲ್ಲವಾದರೂ ಶಾಸ್ತ್ರಗಳಲ್ಲಿ ಮನುಷ್ಯರು ಅಧಿಕಾರಿಗಳಾದುದರಿಂದ ದೋಷವಿಲ್ಲ. ಆದಕಾರಣ ಈ ಈಶಾನಶಬ್ದವಾಚ್ಯನು ವಿಷ್ಣುವೇ ॥ ಅಧಿ. ೭ ॥

**ವಾಮನಾಧಿಕರಣವು ಸಮಾಪ್ತವಾಯಿತು.**

# ೮. ದೇವತಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವು ಸಮರ್ಥಿಸಲ್ಪಡುತ್ತದೆ. ಪ್ರಸಂಗಸಂಗತಿಯಿಂದ ಪ್ರಾಪ್ತವಾದ ಪ್ರಯುಕ್ತ ಅಧ್ಯಾಯಸಂಗತಿ ಪಾದಸಂಗತಿಗಳು ಇಲ್ಲ.

ಶ್ರುತ್ಯಾದಿಸಂಗತಿಗಳನ್ನೂ ವಿಷಯಸಂಶಯಗಳನ್ನೂ ಅವುಗಳ ಕಾರಣಗಳನ್ನೂ ತೋರಿಸುತ್ತಾರೆ—

**ಭಾಷ್ಯ ॥ ಮನುಷ್ಯಾಣಾಮೇವ ವೇದವಿದ್ಯಾ(ಯಾಮ)ಧಿಕಾರಃ ಇತ್ಯುಕ್ತಂ ॥ ೧ ॥**

ಭಾಷ್ಯಾರ್ಥ ॥ ಮನುಷ್ಯರಿಗೇನೇ ವೇದವಿದ್ಯೆಯನ್ನುಪಾಸನಾ ಮಾಡುವುದರಲ್ಲಿ ಅಧಿಕಾರವೆಂದು ಪೂರ್ವಸೂತ್ರದಲ್ಲಿ ಹೇಳಲ್ಪಟ್ಟಿದೆ. (ಇತರರಿಗೆ ಇಲ್ಲ)

ವಿಶೇಷಾಂಶ ॥ (೧) ದೇವತೆಗಳಿಗೆ ಅಧಿಕಾರವಿಲ್ಲವೆನ್ನುವ ದ್ವಾರಾ ವಿಶ್ವೇ ದೇವಾ ಉಪಾಸತೇ ಇದು ಮೊದಲಾದ ಪೂರ್ವೋದಾಹೃತ ಶ್ರುತ್ಯುಪಲಕ್ಷಿತಗಳಾದ ಎಲ್ಲಾ ಶ್ರುತಿಗಳಿಗೂ ಪ್ರಾಮಾಣ್ಯವನ್ನು ಆಕ್ಷೇಪಿಸಿದ್ದರಿಂದ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. ವೇದವಿದ್ಯಾಧಿಕಾರವೇ ವಿಷಯವು. ಅಂಗುಷ್ಠ ಮಾತ್ರಃ ಎನ್ನುವ ಶ್ರುತಿಗೆ ಮೂಲಭೂತವಾದ ಮನುಷ್ಯಾಣಾಮೇವ ಎನ್ನುವ ಉಕ್ತಿಯೂ, ವಿಶ್ವೇದೇವಾ ಉಪಾಸತೇ ಎನ್ನುವ ಶ್ರುತಿಯೂ ಕೋಟಿದ್ವಯಕ್ಕೆ ಉಪಸ್ಥಾಪಕವಾಗಿರುವುದರಿಂದ ಸಂದೇಹಕಾರಣಗಳಾದವು. ಆದಪ್ರಯುಕ್ತ ಅದರಿಂದಲೇ ದೇವತೆಗಳಿಗೆ ಅಧಿಕಾರವು ಇದೆಯೋ ಇಲ್ಲವೋ ಎಂದು ಸಂದೇಹವು. ನಾಸ್ತಿ ಎಂದು ಪೂರ್ವಪಕ್ಷವೂ ಸೂಚಿತವಾಯಿತು.

ಪೀಠಿಕೆ ॥ ಸಂಶಯಬೀಜವನ್ನು ತಿರಸ್ಕರಿಸುತ್ತಾ ಸಿದ್ಧಾಂತೀಕರಿಸುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ತಿರ್ಯಗಾದ್ಯಪೇಕ್ಷಯೈವ ಮನುಷ್ಯತ್ವವಿಶೇಷಣಮುಕ್ತಂ। ನ ತು ದೇವಾದ್ಯಪೇಕ್ಷಯಾ। ಇತ್ಯಾಹ ॥ ೨ ॥**

ಭಾಷ್ಯಾರ್ಥ ॥ ತಿರ್ಯಕ್ ಪ್ರಾಣ ಮೊದಲಾದವುಗಳನ್ನು ಅಪೇಕ್ಷಿಸಿಯೇ (ಪೂರ್ವಸೂತ್ರದಲ್ಲಿ) ಮನುಷ್ಯತ್ವ ವಿಶೇಷಣವು ಪ್ರಯುಕ್ತವಾಗಿದೆ. ದೇವಾದಿಗಳನ್ನು ಅಪೇಕ್ಷಿಸಿ ಅಲ್ಲ. ಅಂದರೆ ವಿಶಿಷ್ಟಬುದ್ಧ್ಯಾದಿಗಳಿಲ್ಲದಿರುವ ತಿರ್ಯಕ್ ಪ್ರಾಣ ಮೊದಲಾದವುಗಳನ್ನು ವ್ಯಾವರ್ತಿಸುವುದಕ್ಕಾಗಿ ಮನುಷ್ಯತ್ವವಿಶೇಷಣವು ಸಾವಧಾರಣವಾಗಿ ಅಭಿಪ್ರೇತವಾಗಿದೆ. ದೇವಾದಿಗಳನ್ನು ವ್ಯಾವರ್ತಿಸುವುದಕ್ಕಾಗಿ ಅಲ್ಲ ಎನ್ನುವ ಅಭಿಪ್ರಾಯದಿಂದ (ಸೂತ್ರಕಾರರು ದೇವತೆಗಳಿಗೆ ಅಧಿಕಾರವದೆ ಎಂದು) ಹೇಳುತ್ತಾರೆ.

## ಸೂತ್ರ ॥ ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ ॥ ೨೬ ॥

ಸೂತ್ರಾರ್ಥ ॥ (ದೇವಾದಿಪದಯೋಗ್ಯರಾದ ಜೀವರಿಗೆ ಮಾತ್ರ ಪದಪ್ರಾಪ್ತಿಯಾಗುವುದಕ್ಕಿಂತ ಮೊದಲು ಭೂಮಿಯಲ್ಲಿ ಕೆಲವು ಕಾಲ ಮನುಷ್ಯರಾಗಿರುವಾಗ ಮಾತ್ರ ಅಧಿಕಾರವು ಇರುವುದೆಂದಲ್ಲ. ಮತ್ತೆ) ತದುಪರ್ಯಪಿ = ಮನುಷ್ಯತ್ವಕ್ಕಿಂತ ಮೇಲೆ (ಅಂದರೆ ಅದನ್ನು ಅತಿಕ್ರಮಿಸಿ ವಿದ್ಯಾಕರ್ಮಗಳಿಂದ ದೇವಾದಿ ಭಾವವು ಪ್ರಾಪ್ತಿಯಾದ ಮೇಲೆಯೂ ಕೂಡ (ದೇವಭಾವವನ್ನು ಹೊಂದಿದವರಿಗೂ ಕೂಡ ವೇದ ವಿದ್ಯೆಯಲ್ಲಿ ಅಧಿಕಾರವು ಇದ್ದೇಇದೆ. ಅದಕ್ಕೆ ಕಾರಣವಿಲ್ಲವೆಂದಲ್ಲ.) ಸಂಭವಾತ್ = ಅಧಿಕಾರೋಪಯುಕ್ತಗಳಾದ ವಿಶಿಷ್ಟಬುದ್ಧ್ಯಾದಿಗಳು ಅವರಲ್ಲಿ ಕೂಡುವುದು. (ಹಾಗಾದರೆ ದೇವಾದಿಗಳಿಗೆ

ವಿಶಿಷ್ಟಬುದ್ಧಿಸಾಮರ್ಥ್ಯವಿದ್ದಾಗ್ಯೂ ಅರ್ಥಿತ್ವವಿಲ್ಲದಿರುವುದರಿಂದ ಅಧಿಕಾರವಿಲ್ಲವೆಂದು ಹೇಳ ಕೂಡದು. ಏಕೆಂದರೆ— ಸಂಭವಾತ್=ವಿದ್ಯಾ ಸಾಧ್ಯಗಳಾದ ಜ್ಞಾನಮೋಕ್ಷಗಳಲ್ಲಿ ಅರ್ಥಿತ್ವವು ಕೂಡುವುದರಿಂದ ಎಂದು ಬಾದರಾಯಣಾಚಾರ್ಯರು ತಿಳಿಯುತ್ತಾರೆ.

**ಭಾಷ್ಯ ॥ ತದುಪರಿ ಮನುಷ್ಯಾಣಾಂ ಸತಾಂ ದೇವಾದಿತ್ವಪ್ರಾಪ್ತ್ಯುಪರಿ। ಸಂಭವತಿ ಹಿ ತೇಷಾಂ ವಿಶಿಷ್ಟಬುದ್ಧ್ಯಾದಿಭಾವಾತ್ ॥ ೩ ॥**

**ಭಾಷ್ಯಾರ್ಥ ॥** ಸತಾಂ ಮನುಷ್ಯಾಣಾಂ=ದೇವತಾಪದಯೋಗ್ಯರಾದ ಜೀವರಿಗೆ ದೇವತಾಪದ ಪ್ರಾಪ್ತಿಯಾಗುವುದಕ್ಕಿಂತ ಮೊದಲು ಮನುಷ್ಯಶರೀರವನ್ನು ಹೊಂದುತ್ತಿರಲು ಸಜ್ಜನರಿಗೆ, ತದುಪರಿ= ಮನುಷ್ಯತ್ವದೆಶೆಯಿಂದ ಮೇಲೆ ಅಂದರೆ ಮನುಷ್ಯಶರೀರವು ಹೋಗಿ ದೇವಾದಿತ್ವಪ್ರಾಪ್ತ್ಯುಪರಿ =ದೇವ ಉಪದೇವ ಮೊದಲಾದ ಪದಪ್ರಾಪ್ತಿಯ ದೆಶೆಯಿಂದ ಮೇಲಿನ ಕಾಲದಲ್ಲಿಯೂ ದೇವಭಾವವನ್ನು ಹೊಂದಿದವರಿಗೆ ಸಹ ವೇದವಿದ್ಯಾಧಿಕಾರವು ಇದ್ದೇ ಇದೆ. ತೇಷಾಂ=ಯೋಗ್ಯ ಮನುಷ್ಯರಿಗೆ ವಿದ್ಯಾಕರ್ಮಗಳಿಂದ ದೇವಾದಿಭಾವವನ್ನು ಹೊಂದಿದವರಿಗೆ, ಸಂಭವಾತ್=ವಿಶಿಷ್ಟ ಬುದ್ಧ್ಯಾದಿಗಳು ಇದ್ದುದರಿಂದ ಅಂದರೆ— ಅರ್ಥಗ್ರಹಣಾನುಷ್ಠಾನಕ್ಕೆ ಉಪಯುಕ್ತವಾದ ಬುದ್ಧಿ ವಿಶೇಷ ಅರ್ಥಿತ್ವ ಸಾಮರ್ಥ್ಯ ಮೊದಲಾದವುಗಳು ಇದ್ದ ಪ್ರಯುಕ್ತ, ಸಂಭವತಿ ಹಿ=ವಿದ್ಯೆಗಳಿಂದ ಅವರಿಗೆ ಮೋಕ್ಷ ಸಿದ್ಧಿಯು ಕೂಡುತ್ತದೆ.

**ವಿಶೇಷಾಂಶ ॥** (೧) ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯರು, ಇದೆ ಎಂದು ಬಾದರಾಯಣಾಚಾರ್ಯರು. ಹೀಗೆ ಇವರ ಉಕ್ತಿಗಳಿಗೆ ವಿಪ್ರತಿಪತ್ತಿಯಿದೆ ಎಂದು ಸೂಚಿಸುವುದಕ್ಕಾಗಿ ಬಾದರಾಯಣಃ ಎಂದು ಹೇಳಿರುವರು. (೨) ವಿಶೇಷ ತಾತ್ಪರ್ಯವದೆ ಎಂದು ತಿಳಿಸುವುದಕ್ಕಾಗಿಯೂ, ಅಧಿಕಾರವು ಅಧಿಕವಾಗಿದೆ ಎನ್ನುವ ಜ್ಞಾನವು ದೃಢವಾಗುವುದಕ್ಕಾಗಿಯೂ ಬಾದರಾಯಣಾಚಾರ್ಯರು ತಾನೇ ಹೇಳುತ್ತಾರೆ ಎಂದು ಹೇಳಿರುವರು ಎಂದು ತತ್ವಪ್ರದೀಪಿಕಾದಲ್ಲಿ ಹೇಳಿರುವರು.

**ಪೀಠಿಕೆ ॥** ಹಾಗಾದರೆ ದೇವತೆಗಳು ವೇದವಿದ್ಯಾಧಿಕಾರಿಗಳಲ್ಲ, ಹಾಗಿದ್ದರೆ ಸೂತ್ರದಲ್ಲಿ ಮನುಷ್ಯೇತರರಿಗೆ ಮಾತ್ರ ವ್ಯಾವರ್ತಕವಾದ ಮನುಷ್ಯಪದವನ್ನು ಪ್ರಯೋಗಿಸಿದ್ದರಿಂದ ತಿರ್ಯಗಾದಿಗಳಂತೆ ದೇವತೆಗಳಿಗೂ ಮನುಷ್ಯತ್ವವಿಲ್ಲದಿರುವುದರಿಂದ **ನ ದೇವಾಃ ವೇದವಿದ್ಯಾಧಿಕಾರಿಣಃ** ಎನ್ನುವ ಅನುಮಾನವು ಸೂಚಿತವಾಗಿರುವುದರಿಂದ ಅನುಮಾನ ವಿರೋಧವು ಬರಬೇಕಾಗುವುದು ಎಂದರೆ—

**ಭಾಷ್ಯ ॥ ತಿರ್ಯಗಾದೀನಾಂ ತದಭಾವಾದಭಾವಃ ॥ ೪ ॥**

**ಭಾಷ್ಯಾರ್ಥ ॥** ತಿರ್ಯಕ್ ಪ್ರಾಣಿಗಳು ಸ್ಥಾವರಗಳು, ಮೂಢಮನುಷ್ಯರು ಇವರಿ ಗೆ ವಿಶಿಷ್ಟ ಬುದ್ಧ್ಯಾದಿಗಳು ಇಲ್ಲದಿರುವುದರಿಂದ ವೇದವಿದ್ಯಾಧಿಕಾರವಿಲ್ಲ.

**ವಿಶೇಷಾಂಶ ॥** (೧) ಇದರಿಂದ ಅಧಿಕಾರಾಭಾವದಲ್ಲಿ ವಿಶಿಷ್ಟಬುದ್ಧ್ಯಾದಿರಾಹಿತ್ಯವು ಪ್ರಯೋಜಕವೆಂದು ಹೇಳಿದ್ದರಿಂದ ಪರೋಕ್ತವಾದ **ಅಮನುಷ್ಯತ್ವಾತ್** ಎನ್ನುವ ಹೇತುವಿಗೆ

ಅಪ್ರಯೋಜಕತ್ವವನ್ನು ಹೇಳಿದ ಹಾಗಾಯಿತು. (೨) ಸೂತ್ರದಲ್ಲಿದ್ದ ಮನುಷ್ಯಪದವು ಮನನಾದಿ ಸ್ವಭಾವವುಳ್ಳ ಚೇತನಪರವಾಗಿ ವಿಶಿಷ್ಟಬುದ್ಧ್ಯಾದಿಗಳಿಲ್ಲದಿರುವ ಚೇತನರನ್ನೇ ವ್ಯಾವರ್ತಿಸುತ್ತದೆ. ಮನುಷ್ಯಭಿನ್ನರನ್ನೆಲ್ಲಾ ವ್ಯಾವರ್ತಿಸಿದ್ದಲ್ಲ. ಆದರಿಂದ ವಿರೋಧವಿಲ್ಲ.

**ಪೀಠಿಕೆ** ॥ ತಿರ್ಯಗಾದಿಗಳಿಗೆ ಅಧಿಕಾರವಿಲ್ಲವೆಂದು ಹೇಳಿದ ನಿಯಮವು ಸಾರ್ವತ್ರಿಕ ವಲ್ಲವೆಂದು ಹೇಳುತ್ತಾರೆ.

**ಭಾಷ್ಯ ॥ ತೇಷಾಮಪಿ ಯತ್ರ ವಿಶಿಷ್ಟಬುದ್ಧ್ಯಾದಿಭಾವಸ್ತತ್ರಾವಿರೋಧಃ ॥ ೫ ॥**

**ಭಾಷ್ಯಾರ್ಥ** ॥ ದೇವತೆಗಳಿಗೆ ಮಾತ್ರವಲ್ಲ ಮತ್ತೆ ತಿರ್ಯಕ್ ಪ್ರಾಣಿಗಳಿಗೂ ಕೂಡ ತಿರ್ಯಕ್ ಪ್ರಾಣಿಗಳ ಮಧ್ಯದಲ್ಲಿಯೂ ಯಾರಲ್ಲಿ ವಿಶಿಷ್ಟಬುದ್ಧಿ ಅರ್ಥಿತ್ವಾಖ್ಯವಾದ ರಾಗಾದಿಗಳು ಇವೆಯೋ ಅವರಲ್ಲಿಯೇ ಅಧಿಕಾರವಿದ್ದರೆ ಪ್ರಮಾಣಗಳಿಂದ ವಿರೋಧವಿಲ್ಲ. (ಅಂದರೆ ಸರ್ವತ್ರ ಬಾಧವಿಲ್ಲ)

**ವಿಶೇಷಾಂಶ** ॥ (೧) ಸೂತ್ರದಲ್ಲಿದ್ದ ಅಪಿ ಶಬ್ದವು ಜರಿತಾರ್ಯಾದಿಗಳಿಗೆ ಸಮುಚ್ಚಾಯಕವೆಂದು ಸೂಚಿತವಾಯಿತು. (೨) ತೇಷಾಮಪಿ ಇತ್ಯಾದಿಗಳು ಅಪಿಪದಕ್ಕೆ ವ್ಯಾಖ್ಯಾನವು ಎಂದು ಸೂಚಿತವಾಯಿತು ಎಂದು ತತ್ವಪ್ರದೀಪಿಕಾಕಾರರು ಹೇಳಿರುವರು. (೩) ಆನಂದಮಾಲಾಕಾರರೂ ಕೂಡ **ತಿರ್ಯಂಚೋಽಪಿ ಕೇಚಿತ್ ಅಪಿಶಬ್ದಗೃಹಿತಾಃ** ಎಂದು ಹೇಳಿರುವರು. ತಥಾಚ ಮನುಷ್ಯಭಿನ್ನರಾದ ತಿರ್ಯಕ್ ಪ್ರಾಣಿಗಳಲ್ಲಿಯೂ ಕೂಡ ಅಧಿಕಾರವಿದ್ದ ಪ್ರಯುಕ್ತ ವ್ಯಭಿಚಾರವು. ಆದುದರಿಂದ ಅಧಿಕಾರಾಭಾವದಲ್ಲಿ ಅಮನುಷ್ಯತ್ವವು ಹೇತುವಲ್ಲ. ಮತ್ತೆ ವಿಶಿಷ್ಟಬುದ್ಧ್ಯಾದಿರಾಹಿತ್ಯವೇ. ಆದುದರಿಂದಲೇ ಸೂತ್ರದಲ್ಲಿದ್ದ ಮನುಷ್ಯಪದದಿಂದ ವ್ಯಾವರ್ತ್ಯವಾದುದನ್ನು ಸಂಕೋಚ ಮಾಡಿಕೊಳ್ಳುವುದೂ ಯುಕ್ತವು.

**ಪೀಠಿಕೆ** ॥ ಹಾಗಾದರೆ— ತಿರ್ಯಕ್ ಪ್ರಾಣಿಗಳಿಗೂ ಕೂಡ ಅಧಿಕಾರವಿದ್ದರೂ ವಿರೋಧ ವಿಲ್ಲದಿರುವುದು ಹೇಗೆ? ತಿರ್ಯಕ್ ಪ್ರಾಣಿಗಳಿಗೆ ಅಧಿಕಾರವನ್ನು ನಿಷೇಧಿಸಿದರೂ ಅಧಿಕಾರವನ್ನು ಹೇಳಿದರೂ ವಿರುದ್ಧವಾಗಿದೆ ಎಂದರೆ—

**ಭಾಷ್ಯ ॥ ನಿಷೇಧಾಭಾವಾತ್ । ದೃಶ್ಯಂತೇ ಹಿ ಜರಿತಾರ್ಯಾದಯಃ ॥ ೨೬ ॥ ॥ ೬ ॥**

**ಭಾಷ್ಯಾರ್ಥ** ॥ ತಿರ್ಯಕ್ ಪ್ರಾಣಿಗಳಿಗೂ ಕೂಡ ಅಧಿಕಾರವಿಷಯದಲ್ಲಿ ನಿಷೇಧವು ಇಲ್ಲದಿರುವುದರಿಂದ (ಇದರಿಂದ ನಿಷೇಧವಿಲ್ಲದೆ ಇದ್ದು ವಿಶಿಷ್ಟಬುದ್ಧ್ಯಾದಿಗಳೇ ಅಧಿಕಾರದಲ್ಲಿ ಪ್ರಯೋಜಕವು. ಕೇವಲ ವಿಶಿಷ್ಟಬುದ್ಧ್ಯಾದಿಗಳೇ ಅಲ್ಲ ಆದಕಾರಣ ಶೂದ್ರಾದಿಗಳಲ್ಲಿ ವ್ಯಭಿಚಾರವಿಲ್ಲ) ಜರಿತಾರ್ಯಾದಿ ಪಕ್ಷಿಗಳು ವೇದಾಧಿಕಾರಿಗಳೆಂದು ಕಾಣಲ್ಪಡುತ್ತವೆ. ಪ್ರಸಿದ್ಧವು.

**ವಿಶೇಷಾಂಶ** ॥ (೧) ಹಿ ಶಬ್ದವು ಭಾರತಾದಿಗಳಲ್ಲಿ ಈ ವಿಷಯವು ಪ್ರಸಿದ್ಧವೆಂದು ಸೂಚಿಸುತ್ತದೆ. (೨) ಏವಮುಕ್ತೋ ಭ್ರಾತೃಭಿಸ್ತು ಜರಿತಾರಿರ್ವಿಭಾವಸುಂ। ತುಷ್ಟಾವ ಪ್ರಾಂಜಲಿರ್ಭೂತ್ವಾಯತ್ತಚ್ಛೃಣು ನರಾಧಿಪ ॥ ಇದು ಮೊದಲಾದ ಭಾರತವಾಕ್ಯದಿಂದ ಜರಿತಾರಿ ಸಾರಸೃಕ್ಕ ಸ್ತಂಬಮಿತ್ರದ್ರೋಣವೆನ್ನುವ ಪಕ್ಷಿಗಳ ಮಧ್ಯದಲ್ಲಿ ಅಗ್ರಜನಾದ ಜರಿತಾರಿಯನ್ನು ನಮ್ಮನ್ನು ಬಿಡಿಸು ಎಂದು ಸಹೋದರು

ಪ್ರಾರ್ಥಿಸುತ್ತಿರಲು ಆಗ ಜರಿತಾರಿಯು **ಅಯಮಗ್ನೇ ಜರಿತಾ** (ಋ.೧೦.೧೪೨. ೯.) ಎನ್ನುವ ಆಗ್ನೇಯಸೂಕ್ತದಿಂದ ಅಗ್ನಿಯನ್ನು ಸ್ತೋತ್ರಮಾಡಿ ಖಾಂಡವವನವು ಸುಟ್ಟುಹೋಗುವ ಕಾಲದಲ್ಲಿ ತನ್ನನ್ನು ತನ್ನ ಸಹೋದರರನ್ನು ಅಗ್ನಿದಾಹದಿಂದ ಬಿಡಿಸಿದನು ಎಂದು ತಿಳಿಯುತ್ತದೆ. (೩.) ಜರಿತಾರಿ ಎಂದೇ ಪಾಠವು ಪ್ರಶಸ್ತವು. ಜರಿತರಿ ಎಂದು ಅಲ್ಲ. ಭಾರತವಿರೋಧವೂ ತತ್ತ್ವಪ್ರದೀಪ ವಿರೋಧವೂ ಬರುವುದು. (೪) **ದೃಶ್ಯಂತೇ ಹಿ** ಎನ್ನುವುದರಿಂದ ದೇವಾಃ ವೇದವಿದ್ಯಾಧಿಕಾರಿಣಃ ನಿಷೇಧರಾಹಿತ್ಯೇಸತಿ ವಿಶಿಷ್ಟಬುದ್ಧ್ಯಾದಿಮತ್ತಾತ್ ತಾದೃಶಮರ್ತ್ಯವತ್ ಎಂದು ಸಿದ್ಧಾಂತಿಗಳಿಗೆ ಅಭಿಮತವಾದ ಅನುಮಾನದಲ್ಲಿ ಮನುಷ್ಯತ್ವವು ಉಪಾಧಿ(ದೋಷ)ಯಾಗುವುದಿಲ್ಲವೆಂದು ಹೇಳಿದ ಹಾಗಾಯಿತು. ॥ ೨೬ ॥

**ಪೀಠಿಕೆ** ॥ ದೇವತೆಗಳಿಗೆ ವೇದವಿದ್ಯಾಧಿಕಾರವು ಸಿದ್ಧಿಸುವುದಕ್ಕಾಗಿ ತದಪರಿ ಎನ್ನುವುದರಿಂದ ಹೇಳಲ್ಪಟ್ಟ ಸಾದಿತ್ವವನ್ನು ಆಕ್ಷೇಪಿಸಿದ್ದರಿಂದ ಸಮಾಧಾನ ಹೇಳತಕ್ಕ ಸೂತ್ರವನ್ನು ಪಠನಮಾಡುತ್ತಾರೆ.

## ಸೂತ್ರ ॥ ಓಂ ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್ ಓಂ ॥ ೨೭ ॥

**ಸೂತ್ರಾರ್ಥ** ॥ ತದುಪರಿ ಎನ್ನುವ ಸೂತ್ರದಲ್ಲಿ ಹೇಳಿದ ದೇವತೆಗಳ ಸಾದಿತ್ವವು ಅಯುಕ್ತವು. ಹಾಗಿದ್ದರೆ ಯಾವ ಕರ್ಮದಿಂದ ದೇವಾದಿಪದವನ್ನು ಸಾಧಿಸಬೇಕೆಂದು ಹೇಳಿಯದೋ ಅಂತಹ ಕರ್ಮದಲ್ಲಿಯೂ ಶಬ್ದದಲ್ಲಿಯೂ ಕೂಡ ವಿರೋಧವು. ಅಂದರೆ ಅದಕ್ಕೆ ವೈಯರ್ಥ್ಯವು ಬರಬೇಕಾಗುವುದು. ಅದಕ್ಕಿಂತ ಮೊದಲು ದೇವತೆಗಳು ಇಲ್ಲದಿರುವುದರಿಂದ, ಎಂದರೆ ಹಾಗೆ ಹೇಳಕೂಡದು. ಏಕೆಂದರೆ ಮೊದಲೂ ದೇವತೆಗಳು ಇಲ್ಲವೆಂದಲ್ಲ. ಅದು ಹೇಗೆಂದರೆ— ಈ ದೇವತೆಗಳು ಮೊದಲು ಇಲ್ಲದಿದ್ದರೂ ಇತರ ದೇವತೆಗಳು ಇದ್ದಪ್ರಯುಕ್ತ ಆ ವಿಷಯದಲ್ಲಿ ಪ್ರಮಾಣ ವಿಲ್ಲವೆಂದಲ್ಲ. ಅನೇಕಾನೇಕ ಯೋಗ್ಯ ಮನುಷ್ಯರಿಗೆ ಮೊದಲು ಮೊದಲು ಪದಪ್ರಾಪ್ತಿಯಾಗಿದೆಯೆಂದು ತೇ ಹ ನಾಕಂ ಎನ್ನುವಲ್ಲಿ ಹೇಳಿದ ಪ್ರಯುಕ್ತ

## ಭಾಷ್ಯ ॥ ಮನುಷ್ಯಾ ಏವ ದೇವಾದಯೋ ಭವಂತೀತಿ ತದುಪರೀತ್ಯುಕ್ತಂ। ತತ್ರ ಯದಿ ಮನುಷ್ಯಾಃ ಸಂತೋ ದೇವಾದಯೋಃ ಭವಂತಿ ತತ್ಪೂರ್ವಂ ದೇವತಾಭಾವಾದ್ದೇವತೋದ್ದಿಷ್ಟಕರ್ಮಣಿ ವಿರೋಧಃ । ಇತಿ ಚೇತ್ ॥ ೭ ॥

**ಭಾಷ್ಯಾರ್ಥ** ॥ ದೇವಾದಿಪದ ಯೋಗ್ಯರಾದ ಜೀವರು ಮೊದಲು ಭೂಮಿಯಲ್ಲಿ ಕೆಲವು ಕಾಲದಲ್ಲಿ ಮನುಷ್ಯರಾಗಿದ್ದವರಾಗಿಯೇ ದೇವಾದಿಗಳು ಆಗುತ್ತಾರೆ. ಮನುಷ್ಯಭಾವವನ್ನು ಹೊರತು ಅಲ್ಲ. ಹೀಗೆ ತದುಪರಿ ಎನ್ನುವ ಸೂತ್ರದಲ್ಲಿ ಹೇಳಲ್ಪಟ್ಟಿದೆ. (ಅದು ಅಯುಕ್ತವು. ಏಕೆಂದರೆ—) ಮೊದಲು ಮನುಷ್ಯರಾಗಿದ್ದವರೂ ಕೂಡ ದೇವಾದಿಗಳು ಆಗುತ್ತಾರೆ ಎಂದು ಹೇಳುವುದಾದರೆ ಅವರಿಗೆ ದೇವ ಗಂಧರ್ವಾದಿ ಪದಪ್ರಾಪ್ತಿಯಾಗುವುದಕ್ಕಿಂತ ಮೊದಲು ಸಾಧಕತ್ವಾವಸ್ಥೆಯಲ್ಲಿ ದೇವತೆಯು ಇಲ್ಲದಿರುವುದರಿಂದ ಯಾವ ಕರ್ಮದಿಂದ ದೇವಾದಿತ್ವವು ಸಾಧ್ಯವೆಂದು ಹೇಳಲ್ಪಟ್ಟಿದೋ, ಅದೇ ಪೂರ್ವಕಲ್ಪದಲ್ಲಿ ದೇವತೋದ್ದೇಶದಿಂದ ಪ್ರವೃತ್ತವಾದ ಕರ್ಮದಲ್ಲಿಯೂ ದೇವತಾವಾಚಕ

ಶಬ್ದದಲ್ಲಿಯೂ ವಿರೋಧ ಬರುವುದು. ಅಂದರೆ ಉದ್ದೇಶ್ಯವಿಲ್ಲದಿರುವುದರಿಂದಲೂ ವಾಚ್ಯವಾದ ಅರ್ಥವಿಲ್ಲದಿರುವುದರಿಂದಲೂ ಅವುಗಳಿಗೆ ವೈಯರ್ಥ್ಯವು ಬರುವುದು ಎಂದರೆ.

**ಪೀಠಿಕೆ ॥** ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ । ಅನೇಕೇಷಾಂ ದೇವತಾಪದಪ್ರಾಪ್ತೇ(ಪ್ರತಿಪತ್ತೇ)ರ್ದರ್ಶನಾತ್। ತೇ ಹ ನಾಕಂ ಮಹಿಮಾನಃ ಸಚಂತೇ(ತ) ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ । ಇತಿ ॥ ೨೭ ॥ ॥ ೮ ॥**

**ಭಾಷ್ಯಾರ್ಥ ॥** ಕರ್ಮದಲ್ಲಿ ವಿರೋಧವಿಲ್ಲ. ಏಕೆಂದರೆ— ಮೊದಲು ದೇವತೆಯಿಲ್ಲವೆಂ ದಲ್ಲ. ದೇವತೆಗಳಿಗೆ ಪ್ರವಾಹತಃ ಅನಾದಿತ್ವವಿದ್ದುದರಿಂದ ಈ ದೇವತೆಗಳು ಮೊದಲು ಇಲ್ಲದಿದ್ದರೂ ಬೇರೆ ದೇವತೆಗಳು ಇದ್ದಾರೆ. ಆ ವಿಷಯದಲ್ಲಿ ಪ್ರಮಾಣವಿಲ್ಲವೆಂದಲ್ಲ ಏಕೆಂದರೆ— ತೇ ಹ ನಾಕಂ ಎನ್ನುವ ಶ್ರುತಿಯಲ್ಲಿ ಒಂದೊಂದು ಗಣದಿಂದಲೂ ಅನಂತದೇವಾದಿ ಪದಗಳನ್ನು ಹೊಂದಲಿಕ್ಕೆ ಯೋಗ್ಯರಾದ ಮನುಷ್ಯರಿಗೆ ವಿದ್ಯಾಕರ್ಮಗಳಿಂದ ಮೊದಲು ಮೊದಲು ದೇವತಾಪದಪ್ರಾಪ್ತಿಯು ದೃಷ್ಟವಾದ ಪ್ರಯುಕ್ತ (**ಯಜ್ಞೇನ ಯಜ್ಞಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸನ್। ತೇಹ — ದೇವಾಃ** = ದೇವತ್ವಯೋಗ್ಯರಾದ ಯಾವ ಮನುಷ್ಯರು, ಯಜ್ಞೇನ = ಜ್ಞಾನ ಕರ್ಮಾತ್ಮಕ ಯಜ್ಞದಿಂದ, ಯಜ್ಞಂ = ವಿಷ್ಣುವನ್ನು, ಅಯಜಂತ = ಪೂಜಿಸಿದರೋ, ಅಂತಹ ಜ್ಞಾನಪೂರ್ವಕ ಕರ್ಮದಿಂದ ದೇವಪದವನ್ನು ಹೊಂದಿ, ಪ್ರಥಮಾನಿ = ಮುಖ್ಯಗಳಾದ, ಧರ್ಮಾಣಿ = ಲೋಕಧಾರಕರು, ಆಸನ್ = ಆದರು.) ಮಹಿಮಾನಃ =ಮಹಾನುಭಾವರಾದ, ತೇ = ಆ ದೇವತೆಗಳು, ಹ = ತಮ್ಮ ಅಧಿಕಾರಾವ ಸಾನದಲ್ಲಿ ನಾಕಂ = ಪೂರ್ಣಸುಖಾತ್ಮಕವಾದ ಮೋಕ್ಷವನ್ನು, ಸಚಂತೇ = ಹೊಂದಿದರು. ಯತ್ರ = ಯಾವ ಮೋಕ್ಷದಲ್ಲಿ, ಪೂರ್ವೇ = ಪೂರ್ವಕಲ್ಪದಲ್ಲಿ ಮುಕ್ತರಾದ, ಸಾಧ್ಯಾಃ ದೇವಾಃ = ಸಾಧ್ಯಾದಿ ದೇವತೆಗಳು, ಸಂತಿ = ಇರುತ್ತಾರೋ.

**ವಿಶೇಷಾಂಶ ॥** (೧) ಸಾಧ್ಯಾಃ ಎನ್ನುವಲ್ಲಿ ಬಹುವಚನವು ಆದ್ಯರ್ಥಕವು. **ಋಜವೋ ಬ್ರಹ್ಮ ಮುಖ್ಯಾ ಹಿ ಸುಪರ್ಣಶ್ಶೇಷ ಏವ ಚ। ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ ॥** ಎಂದು ಹೇಳಲ್ಪಟ್ಟ ಸಾಧ್ಯಾದಿದೇವತೆಗಳು. (೨) ವಸುರುದ್ರಾದಿತ್ಯಮರುತ್ಸಾಧ್ಯರಲ್ಲಿ ವಸುಗಳು ಆದಿಭೂತರಾದ ಪ್ರಯುಕ್ತ ಟೀಕಾದಲ್ಲಿ **ವಸ್ವಾದಿದೇವಾಃ** ಎಂದು ಹೇಳಬೇಕಿತ್ತು. ಸಾಧ್ಯಾದಿ ಎಂದಲ್ಲ. ಆದುದರಿಂದಲೇ ತತ್ವಪ್ರದೀಪದಲ್ಲಿ ಪೂರ್ವೇ ಸಾಧ್ಯಾಃ=ವಸು ಮೊದಲಾದ ದೇವತೆಗಳು, ಅಥವಾ ಪೂರ್ವಸಿದ್ಧರಾದ ಮುಕ್ತರು ಎಂದು ಹೇಳಿಯದೆ ಎಂದು ಹೇಳಕೂಡದು. ಸಾಧ್ಯಶಬ್ದವಾಚ್ಯರು ಪ್ರಧಾನರಾದ ಪ್ರಯುಕ್ತ ಕ್ರಮವನ್ನುಲ್ಲಂಘಿಸಿರುತ್ತಾರೆ. ಛಂದೋಗಶ್ರುತಿಕ್ರಮವನ್ನು ಅನುಸರಿಸಿ ತತ್ವಪ್ರದೀಪವು ಪ್ರವೃತ್ತವಾಗಿದೆ. (೩) ಹೀಗೆ ವ್ಯಾಖ್ಯಾನ ಮಾಡಿದರೆ ಪುರುಷಾರ್ಥಾಧಿಕರಣದಲ್ಲಿ ಇಂದ್ರಾದಿಪದವನ್ನು ಹೊಂದಿದ ದೇವತಾಪರವಾಗಿ ಈ ಶ್ರುತಿಯನ್ನುದಾಹರಿಸಿದ್ದೂ ಕೂಡಲಾರದು ಎಂದು ಹೇಳಕೂಡದು. ಯಾರು ಪದವನ್ನು ಹೊಂದಿ ಜಗದ್ಧಾರಕರಾಗಿರುವರೋ, ಅಂತಹ ದೇವತೆಗಳು ಯಜ್ಞದಿಂದ ಶ್ರೀಹರಿಯನ್ನು ಪೂಜಿಸಿದರು. ಅಂತಹವರು ಮೋಕ್ಷದಲ್ಲಿದ್ದ ಅತಿಶಯವನ್ನು ಹೊಂದುತ್ತಾರೆ ಎಂದು ಶ್ರುತಿಗೆ ಅರ್ಥಾಂತರವನ್ನು ವಿವಕ್ಷಾ ಮಾಡಿಕೊಂಡು ಉಪಪನ್ನವಾಗುವುದು. ॥ ೨೭ ॥

**ಪೀಠಿಕೆ ॥** ದೇವತೆಗಳಿಗೆ ಅಧಿಕಾರವು ಸಿದ್ಧಿಸುವುದಕ್ಕಾಗಿ ಹೇಳಿದ ಆದ್ಯಂತವತ್ತ್ವವನ್ನು ತದುಪರಿ **ಅನೇಕಪ್ರತಿಪತ್ತೇಃ** ಎನ್ನುವವುಗಳಿಂದ ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಪಠನ ಮಾಡುತ್ತಾರೆ—

## ಸೂತ್ರ ॥ ಓಂ ಶಬ್ದ ಇತಿ ಚೇನ್ನಾತಃ ಪ್ರಭವಾತ್ಪ್ರತ್ಯಕ್ಷಾನುಮಾನಾಭ್ಯಾಂ ಓಂ ॥ ೨೮ ॥

**ಸೂತ್ರಾರ್ಥ ॥** ದೇವತೆಗಳಿಗೆ ಅಧಿಕಾರವು ಸಿದ್ಧಿಸುವುದಕ್ಕಾಗಿ ಆದ್ಯಂತವತ್ತ್ವವನ್ನು ಅಂಗೀಕರಿಸುವುದಾದರೆ ಪೂರ್ವಸೂತ್ರದಲ್ಲಿ ಯಾವುದರ ಬಲದಿಂದ ಪೂರ್ವ ಪೂರ್ವ ದೇವತಾಪ್ರವಾಹಕ್ಕೆ ಅನಾದಿತ್ವವು ಹೇಳಲ್ಪಟ್ಟದೋ ಅಂತಹ ಶಬ್ದದಲ್ಲಿ ಅಂದರೆ ವಾಚಾ ವಿರೂಪ ನಿತ್ಯಯಾ ಇದು ಮೊದಲಾದ ಶ್ರುತಿರೂಪವಾದ ನಿತ್ಯವೆಂದು ಸಿದ್ಧವಾದ ವೇದದಲ್ಲಿಯೂ ಕರ್ಮದಲ್ಲಿಯೂ ಉತ್ತರಕಲ್ಪದಲ್ಲಿ ವಾಚ್ಯರಾದ ಉದ್ದೇಶ್ಯ ದೇವಾದಿಗಳು ಇಲ್ಲದಿರುವುದರಿಂದ ಅಪ್ರಾಮಾಣ್ಯಾಖ್ಯ ವಿರೋಧವು ಬರಬೇಕಾಗುವುದು ಎಂದರೆ ಹಾಗೆ ಹೇಳಕೂಡದು. ಪ್ರಭವಾತ್= ದೇವತೆಗಳಿಗೆ ಸರ್ವಕಲ್ಪಗಳಲ್ಲಿಯೂ ಉತ್ಪತ್ತಿನಿಯಮವಿದ್ದುದರಿಂದ, ಅಂದರೆ ದೇವತೆಗಳಿಗೆ ಪ್ರವಾಹತಃ ನಿತ್ಯತ್ವವಿದ್ದುದರಿಂದ ಉತ್ಪಾದಕರಿಲ್ಲವೆಂದು ಹೇಳಕೂಡದು. ಅತಃ=ವಿಷ್ಣುವಿನಿಂದಲೇ ಉತ್ಪತ್ತಿಯಾಗುವುದರಿಂದ, ಧಾತಾ ಯಥಾ ಪೂರ್ವಂ ಎನ್ನುವ ಶ್ರುತಿಯಿಂದಲೂ ಯಥೈವ ನಿಯಮಃ ಎನ್ನುವ ಸ್ಪಷ್ಟಶ್ರುತಿಯಿಂದಲೂ, ಹಾಗೆಯೇ, ಮಹತಾಂ=ಅತೀತಾನಾಗತಕಾಲಜ್ಞರಾದ ಯೋಗಿಗಳ, ಪ್ರತ್ಯಕ್ಷಾತ್=ಯಥರ್ತುಷು ಎನ್ನುವ ಪ್ರತ್ಯಕ್ಷವಚನದಿಂದ ಜ್ಞಾಪಿತವಾದ ಮಹಾತ್ಮರಿಗೆ ಅತೀತಾನಾಗತಕಾಲ ಗಳಲ್ಲಿ ದೇವತೆಗಳ ಉತ್ಪತ್ತಿನಿಯಮವನ್ನು ಗ್ರಹಿಸತಕ್ಕ ಪ್ರತ್ಯಕ್ಷವಿದ್ದುದರಿಂದ ಹಾಗೆಯೇ ಅಯೋಗಿಗಳಿಗೆ ಅನುಮಾನದಿಂದಲೂ ಅದು ಸಿದ್ಧಿಸುತ್ತದೆ.

**ಪೀಠಿಕೆ ॥** ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ವಾಚಾ ವಿರೂಪ ನಿತ್ಯಯಾ** (ಋ.೮.೬೪.೬.)। **ಇತ್ಯಾದಿಶ್ರುತೇರಾಪ್ಯನಿಶ್ಚಯಾನ್ನಿತ್ಯತ್ವಾಪೇಕ್ಷತ್ವಾಚ್ಚ ಮೂಲಪ್ರಮಾಣಸ್ಯ ॥ ೯ ॥**

**ಭಾಷ್ಯಾರ್ಥ ॥** ಅನೇಕ ಜನರಿಗೆ ಮೊದಲು ಮೊದಲು ದೇವತಾಪದಪ್ರಾಪ್ತಿಯು ಕಂಡದ್ದರಿಂದ ಕರ್ಮದಲ್ಲಿ ವಿರೋಧವಿಲ್ಲವೆಂದು ಹೇಳುವುದಾದರೆ, ಶಬ್ದೇ=ಅಲ್ಲಿಯೇ ದರ್ಶನಪದದಿಂದ ಹೇಳಲ್ಪಟ್ಟ ವೇದದಲ್ಲಿ ವಿರೋಧಃ=ಅಪ್ರಾಮಾಣ್ಯಾಖ್ಯ ವಿರೋಧವು (ಬರಬೇಕಾಗುವುದು.ಏಕೆಂದರೆ) ತದುದಿತಾನಾಂ=ವೇದದಲ್ಲಿ ಹೇಳಲ್ಪಟ್ಟ ದೇವಾನಾಂ=ದೇವತೆಗಳಿಗೆ, ಅನಿತ್ಯತ್ವಾತ್= ಅನಿತ್ಯತ್ವವಿದ್ದ ಪ್ರಯುಕ್ತ (ಅಂದರೆ ಅನೇಕಪ್ರತಿಪತ್ತೇಃ ಇತ್ಯಾದಿಗಳಿಂದ ದೇವತೆಗಳಿಗೆ ಅನಿತ್ಯತ್ವವನ್ನು ನಾಶವನ್ನು ಹೇಳಿದ್ದಾರೆ.) (ಹಾಗಾದರೆ ದೇವತೆಗಳಿಗೆ ಅನಿತ್ಯತ್ವವಿದ್ದರೂ ವೇದಗಳಿಗೆ ಅಪ್ರಾಮಾಣ್ಯವು ಹೇಗೆ ಎಂದರೆ— ಅನಿತ್ಯರಾದ ದೇವತೆಗಳನ್ನು ಹೇಳತಕ್ಕವುಗಳಾದುದರಿಂದ ವೇದಗಳಿಗೆ ಅಪ್ರಾಮಾಣ್ಯವು.) (ಹಾಗಾದರೆ ದೇವತೆಗಳಿಗೆ ಅನಿತ್ಯತ್ವವಿದ್ದಾಗ್ಯೂ ಆ ದೇವತೆಗಳನ್ನು ಹೇಳತಕ್ಕ ವೇದಕ್ಕೆ ವಾಚ್ಯಾರ್ಥರಾಹಿತ್ಯರೂಪವಾದ ಅಪ್ರಾಮಾಣ್ಯವು ಪ್ರಸಕ್ತವಾಗುವುದಿಲ್ಲ. ದೇವತೆಗಳಂತೆ,

ದೇವತೆಗಳನ್ನು ಹೇಳತಕ್ಕ ವೇದವೂ ಅನಿತ್ಯವಾದ ಪ್ರಯುಕ್ತ ಯಾವಾಗಲೂ ವಾಚ್ಯಾರ್ಥವೆವಿದ್ದಪ್ರಯುಕ್ತ ವಾಚ್ಯಾರ್ಥ ರಾಹಿತ್ಯವಿಲ್ಲವೆಂದರೆ) ವೇದಸ್ಯ=ವೇದಕ್ಕೆ, ನಿತ್ಯತ್ವಾತ್=ನಿತ್ಯತ್ವವಿದ್ದ ಪ್ರಯುಕ್ತ (ವೇದಕ್ಕೆ ನಿತ್ಯತ್ವವೇ ಹೇಗೆಂದರೆ) ವಿರೂಪ=ವಿರೂಪ ಋಷಿಯೇ, ನಿತ್ಯಯಾ = ನಿತ್ಯಭೂತವಾದ, ವಾಚಾ = ವೇದವಚನದಿಂದ, (ಸ್ತುತಿಸುತ್ತೇನೆ.) ನಿತ್ಯಯಾ ನಿತ್ಯಯಾ ಸ್ತೌಮಿ, ನಿತ್ಯಾ ವಾವ ಶ್ರುತಿಃ ಇತ್ಯಾದಿ ಶ್ರುತೇಃ = ಇದು ಮೊದಲಾದ ಶ್ರುತಿಗಳದೆಸೆಯಿಂದ, ವೇದಕ್ಕೆ ನಿತ್ಯತ್ವವಿದ್ದಪ್ರಯುಕ್ತ (ಹಾಗಾದರೆ ವೇದವು ನಿತ್ಯವಲ್ಲ, ಶ್ರುತಿವಿರೋಧವೂ ಇಲ್ಲ ಶ್ರುತಿಗೆ ಬಹುಕಾಲೀನತ್ವರೂಪವಾದ ನಿತ್ಯತ್ವಾರ್ಥಕತ್ವವಿದ್ದ ಪ್ರಯುಕ್ತ ಮುಖ್ಯಾರ್ಥಕವು ಎಂದರೆ) ಹಾಗಾದರೆ ವೇದವು ಅನಿತ್ಯವಾದಪ್ರಯುಕ್ತ ಅಪ್ರಾಮಾಣ್ಯಾಖ್ಯ ವಿರೋಧವು ಬರಬೇಕಾಗುವುದು. (ಹಾಗಾದರೆ ವೇದವು ಅನಿತ್ಯವಾದಾಗ್ಯೂ ಆಪ್ತಿಮೂಲಕ ವಾದುದರಿಂದ ಪ್ರಮಾಣವಾಗಬಹುದು ಎಂದರೆ—) ಆಪ್ತನಿಶ್ಚಯಾತ್=ವೇದಕರ್ತನಿಗೆ ಆಪ್ತಿನಿಶ್ಚಯ ವಿಲ್ಲದಿರುವುದರಿಂದ (ಅಂದರೆ— ಕರ್ತನು ಸರ್ವಜ್ಞನು ಇತ್ಯಾದಿ ವಿಷಯದಲ್ಲಿ ಪ್ರಮಾಣವಿಲ್ಲ ದಿರುವುದರಿಂದ ವೇದಕರ್ತನಿಗೆ ಸರ್ವಜ್ಞತ್ವಾದಿರೂಪ ಆಪ್ತಿ ನಿಶ್ಚಯವಿಲ್ಲದಿರುವುದರಿಂದ, ಅಥವಾ ಕರ್ತನಲ್ಲಿ ಆಪ್ತಿ ನಿಶ್ಚಯವಿರಲಿ, ಆದಾಗ್ಯೂ ವೇದದಲ್ಲಿ ಆಪ್ತಿಮೂಲಕತ್ವ ನಿಶ್ಚಯವಿಲ್ಲ ಎನ್ನುತ್ತಾರೆ.) ವೇದಸ್ಯ ಆಪ್ತನಿಶ್ಚ ಯಾತ್=ವೇದಕ್ಕೆ ಆಪ್ತಪ್ರಣೀತತ್ವರೂಪವಾದ ಆಪ್ತಿಮೂಲತ್ವ ನಿಶ್ಚಯವಿಲ್ಲ ದಿರುವುದರಿಂದ, (ಆದಪ್ರಯುಕ್ತ ಪ್ರಮಾಣವಿಲ್ಲದಿರುವುದರಿಂದ ಆಪ್ತಿ ಮೂಲತ್ವ ನಿಶ್ಚಯವಿಲ್ಲದಿರುವ ಪ್ರಯುಕ್ತ ವೇದವು ಅನಿತ್ಯವಾದರೆ ವೇದಕ್ಕೆ ಪ್ರಾಮಾಣ್ಯವು ಇಲ್ಲವೆಂದಾಗಬೇಕಾಗುವುದು. ಆದಪ್ರಯುಕ್ತ ನಿತ್ಯತ್ವಶ್ರುತಿಗೆ ಅಮುಖ್ಯಾರ್ಥತ್ವವನ್ನು ಹೇಳಕೂಡದು.) ಶ್ರುತಿಯಿಂದ ಮಾತ್ರ ವೇದಕ್ಕೆ ನಿತ್ಯತ್ವವು ಸಿದ್ಧಿಸುತ್ತದೆ ಎಂದಲ್ಲ. ಮತ್ತೆ ಪರಿಶೇಷ ಪ್ರಮಾಣದಿಂದಲೂ, ಅನುಮಾನದಿಂದಲೂ, ಸಿದ್ಧಿಸುತ್ತದೆ ಎನ್ನುತ್ತಾರೆ.) ಮೂಲಪ್ರಮಾಣಸ್ಯ=ಮೂಲಭೂತವಾದ ಪ್ರಮಾಣಕ್ಕೆ ನಿತ್ಯತ್ವದ ಅಪೇಕ್ಷೆಯಿದ್ದಪ್ರಯುಕ್ತ ಅಂದರೆ ವೇದಕ್ಕೆ ನಿತ್ಯತ್ವವು ತಿಳಿಯುವುದರಿಂದ.

**ವಿಶೇಷಾಂಶ ॥** (೧) ವೇದಕ್ಕೆ ಪ್ರಾಮಾಣ್ಯವು ಸಿದ್ಧಿಸುವುದಕ್ಕಾಗಿ ಆಪ್ತಪ್ರಣೀತತ್ವವನ್ನು ಹೇಳುವುದಾದರೆ ಮೂಲಪ್ರಮಾಣವು ಬೇಕು. ಪೌರುಷೇಯವಾದುದಕ್ಕೆಲ್ಲಾ ಮೂಲಪ್ರಮಾಣದ ಅಪೇಕ್ಷೆಯು ಇದ್ದೇ ಇದೆ. ಇಲ್ಲವಾದರೆ ಯಜ್ಞಾದಿಗಳಲ್ಲಿ ಆಶ್ವಾಸವು ಇಲ್ಲದಿದ್ದುದರಿಂದ ಪುಣ್ಯಸಾಧನತ್ವಾದಿಗಳನ್ನು ಬೋಧಿಸತಕ್ಕ ವೇದಕ್ಕೆ ಮೂಲಭೂತವಾದುದು ಪ್ರತ್ಯಕ್ಷ ಅನುಮಾನಗಳು ಕೂಡದೆ ಇದ್ದುದರಿಂದ ಪರಿಶೇಷತಃ ವಾಕ್ಯವೇ ಎಂದು ಹೇಳಬೇಕು. ಅದಕ್ಕೂ ಅನಿತ್ಯತ್ವವನ್ನು ಅಂಗೀಕರಿಸಿ ಮೂಲವನ್ನು ಅನ್ವೇಷಣ ಮಾಡುವುದಾದರೆ ಅನವಸ್ಥಾ ದೋಷವು ಬರುವುದರಿಂದ ನಿತ್ಯತ್ವವನ್ನೇ ಹೇಳಬೇಕು. ಅದಕ್ಕಿಂತ ವೇದಕ್ಕೇನೇ ಶ್ರುತಿಸಿದ್ಧವಾದ ನಿತ್ಯತ್ವ ವನ್ನು ಅಂಗೀಕರಿಸುವುದು ಪ್ರಶಸ್ತವು.

**ಪೀಠಿಕೆ ॥** ಹಾಗಾದರೆ ವೇದಕ್ಕೆ ಅನಿತ್ಯತ್ವವನ್ನು ಅಂಗೀಕರಿಸಿದರೆ ಆಪ್ತಿನಿಶ್ಚಯವಿಲ್ಲದಿರುವುದರಿಂದ ಪ್ರಾಮಾಣ್ಯವೇ ಇಲ್ಲವೆಂದು ಆಗಬೇಕಾದೀತು ಎಂದು ಹೇಗೆ ಬಾಧಕವನ್ನು ಹೇಳುತ್ತೀರೋ ಹಾಗೆಯೇ ವೇದಕ್ಕೆ ನಿತ್ಯತ್ವವನ್ನು ಅಂಗೀಕರಿಸಿದರೂ ಅಪೌರುಷೇಯತ್ವರೂಪವಾದ ಗುಣಜನ್ಯತ್ವವಿಲ್ಲ ದಿರುವುದರಿಂದ ಪ್ರಾಮಾಣ್ಯವು ಇಲ್ಲವೆಂದು ಆಗಬೇಕಾದೀತು, ಎಂದು ಬಾಧಕವು ಸಮವೇ ಎಂದರೆ—

**ಭಾಷ್ಯ॥ ಸ್ವತಃ ಪ್ರಾಮಾಣ್ಯ ಪ್ರಸಿದ್ಧೇಶ್ಚ ನಿತ್ಯತ್ವಾದ್ವೇದಸ್ಯ ತದುದಿತಾನಾಂ ದೇವಾನಾಮ ನಿತ್ಯತ್ವಾತ್ ॥ ೧೦ ॥**

ಭಾಷ್ಯಾರ್ಥ ॥ ವೇದಸ್ಯ=ವೇದಜನ್ಯವಾದ ಜ್ಞಾನದಲ್ಲಿರತಕ್ಕ ಯಥಾರ್ಥರೂಪವಾದ ಪ್ರಾಮಾಣ್ಯಕ್ಕೆ, ಸ್ವತ ಏವ=ಜ್ಞಾನಸಾಮಾನ್ಯ ಕಾರಣದಿಂದಲೇ, ಪ್ರಾಮಾಣ್ಯಕ್ಕೆ ಪ್ರಮಿತತ್ವವಿದ್ದ ಪ್ರಯುಕ್ತ ಅಥವಾ ವೇದದಲ್ಲಿರತಕ್ಕ ಯಥಾರ್ಥಜ್ಞಾನಕರಣತ್ವರೂಪವಾದ ಕರಣ ಪ್ರಾಮಾಣ್ಯಕ್ಕೆ ಸ್ವತ ಏವ ಜ್ಞಾನಕರಣತ್ವ ಸಹಜಶಕ್ತಿಭಿನ್ನವಾದ ಯಥಾರ್ಥಜ್ಞಾನಜನಕತ್ವ ಶಕ್ತಿರೂಪತ್ವದಿಂದಲೇ ಪ್ರಮಿತವಾದ ಪ್ರಯುಕ್ತ ಈ ವೇದಕ್ಕೂ ನಿತ್ಯತ್ವವು ಕೂಡುವುದು. ತಥಾಚ ವೇದವು ನಿತ್ಯವೆಂದು ಸಿದ್ಧವಾದ ಪ್ರಯುಕ್ತ ಆ ವೇದದಲ್ಲಿ ವಾಚ್ಯರಾದ ದೇವತೆಗಳಿಗೆ ಅನಿತ್ಯತ್ವವಿದ್ದರೆ ವಾಚ್ಯಾರ್ಥ ರಾಹಿತ್ಯರೂಪವಾದ ಅಪ್ರಾಮಾಣ್ಯವು ಬರಬೇಕಾಗುವುದು.

ಪೀಠಿಕೆ ॥ ಹಾಗಾದರೆ ಹೇಗೆ ಹಿಂದಿನ ಕಲ್ಪದಲ್ಲಿ ಒಬ್ಬದೇವತೆಯು ಇಲ್ಲದಿದ್ದರೂ ಮತ್ತೊಬ್ಬ ದೇವತೆಯು ಇದ್ದ ಪ್ರಯುಕ್ತ ಕರ್ಮದಲ್ಲಿ ಉದ್ದೇಶ್ಯಾಭಾವನಿಮಿತ್ತಕವಾದ ವಿರೋಧವಿಲ್ಲವೋ, ಹಾಗೆಯೇ ಇಲ್ಲಿಯೂ ಒಬ್ಬ ದೇವತೆಯು ಮುಕ್ತಿಯನ್ನು ಹೊಂದಿ ಆವಾವ ಪದದಲ್ಲಿ ಇಲ್ಲದಿದ್ದರೂ ಪುನಃ ಮತ್ತೊಬ್ಬ ದೇವತೆಯು ಆ ಪದಕ್ಕೆ ಬರುವುದರಿಂದ ವಾಚ್ಯಾರ್ಥ ರಾಹಿತ್ಯರೂಪವಾದ ವಿರೋಧವಿಲ್ಲವೆಂದರೆ—

**ಭಾಷ್ಯ ॥ ಪುನರನ್ಯಭಾವನಿಯಮಾಭಾವಾಚ್ಚ ಶಬ್ದೇ ವಿರೋಧಃ ಇತಿ ಚೇತ್ ॥ ೧೧ ॥**

ಭಾಷ್ಯಾರ್ಥ ॥ ಪುನಃ = ಪೂರ್ವಕಲ್ಪದಲ್ಲಿದ್ದ ದೇವತೆಗಳಿಗೆ ಮುಕ್ತಿಯಾದಮೇಲೆ ಉತ್ತರಕಲ್ಪದಲ್ಲಿ ಇತರರು ನಿಯಮೇನ ಹುಟ್ಟುತ್ತಾರೆ ಎನ್ನುವಲ್ಲಿ ಪ್ರಮಾಣ ವಿಲ್ಲದಿದ್ದ ಪ್ರಯುಕ್ತವೂ ಶಬ್ದದಲ್ಲಿ ವಿರೋಧವು ಎಂದರೆ—

ವಿಶೇಷಾಂಶ ॥ ೧.ಅತೀತ ದೇವತಾ ಪ್ರವಾಹದಲ್ಲಿ ಆದರೂ ಪ್ರಮಾಣವಿದೆ. ೨. **ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ। ವೃಷ್ಣೇ ಚೋದಸ್ವ ಸುಷ್ಟುತಿಂ॥** ವಿರೂಪ ಋಷಿಯೇ, ಅಭಿದ್ಯವೇ=ಸುತ್ತಲೂ ಪ್ರಕಾಶವುಳ್ಳ, ವೃಷ್ಣೇ = ಅಭೀಷ್ಟವನ್ನು ಕೊಡತಕ್ಕ, ಅಥವಾ ಅತಿ ಸಮರ್ಥನಾದ, ಅಥವಾ ಸರ್ವಶ್ರೇಷ್ಠನಾದ ತಸ್ಮೈ = ಆ ಶ್ರೀಹರಿಯನ್ನುದ್ದೇಶಿಸಿಕೊಂಡು, ನೂನಂ = ನಿಶ್ಚಯವಾಗಿ, ನಿತ್ಯಯಾ = ಅನಾದಿನಿತ್ಯವಾದ, ವಾಚಾ = ವೇದವಚನದಿಂದ, ಸುಷ್ಟುತಿಂ= ಶೋಭನ ವಾದ ಸ್ತುತಿಯನ್ನು ಚೋದಸ್ವ = ಪ್ರೇರಿಸು.

ಪೀಠಿಕೆ ॥ ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್ (ಮಹಾನಾ.೧.೩೮.) ಇತಿ। ಯಥೈವ ನಿಯಮಃ ಕಾಲೇ(ಕಾಲನಿಯಮಃ)ಸುರಾದಿ ನಿಯಮಸ್ತಥಾ। ತಸ್ಮಾನ್ನಾನೀದೃಶಂ ಕ್ವಾಪಿ ವಿಶ್ವಮೇತದ್ಭವಿಷ್ಯತಿ ॥ ಇತ್ಯಾ ದೇರತ ಏವ ಶಬ್ದಾತ್ತೇಷಾಂ ಪ್ರಭವನಿಯಮಾತ್। ಮಹತಾಂ ಪ್ರತ್ಯಕ್ಷಾತ್ ॥ ೧೨ ॥**

ಭಾಷ್ಯಾರ್ಥ ॥ ನ = ವೇದಕ್ಕೆ ವಾಚ್ಯಾರ್ಥರಾಹಿತ್ಯ ಪ್ರಯುಕ್ತವಾದ ಅಪ್ರಾಮಾಣ್ಯಾಖ್ಯ ವಿರೋಧವಿಲ್ಲ (ಏಕೆಂದರೆ) ಬ್ರಹ್ಮನು ಪೂರ್ವಕಲ್ಪದಲ್ಲಿ ಸೂರ್ಯಚಂದ್ರರನ್ನು ಹೇಗೆ ಸೃಷ್ಟಿಸಿರುವನೋ (ಹಾಗೆಯೇ ಈ ಕಲ್ಪದಲ್ಲಿಯೂ ಹೀಗೆ ಪ್ರತಿ ಕಲ್ಪದಲ್ಲಿಯೂ. ಹೀಗೆ ಶ್ರುತಿಯ ಬಲದಿಂದ ಉತ್ಪತ್ತಿಯನ್ನು ಹೇಳಿದರೆ ದೇವತೆಗಳಿಗೆ ಸರ್ವ ಕಲ್ಪಗಳಲ್ಲಿ ಉತ್ಪತ್ತಿಯು ಸಿದ್ಧಿಸುವುದು. (೨) ಹೇಗೆ ಪೂರ್ವಯುಗಾವಸಾನದಲ್ಲಿ ಅಥವಾ ಕಲ್ಪಾವಸಾನದಲ್ಲಿ ಪುನಃ ಯುಗಾಂತರ ಕಲ್ಪಾಂತರಗಳ ಉತ್ಪತ್ತಿಯಾಗುವುದು ಎಂದು ಕಾಲದಲ್ಲಿ ಉತ್ಪತ್ತಿ ನಿಯಮವದೆಯೋ, ಹಾಗೆಯೇ ದೇವಾದಿಗಳಿಗೂ ಉಪ ದೇವಾದಿಗಳಿಗೂ ಪೂರ್ವ ಪೂರ್ವ ಕಲ್ಪಾವಸಾನದಲ್ಲಿ ಪುನಃ ಅನ್ಯ ಉತ್ಪತ್ತಿ ನಿಯಮವಿದೆ. ಆದುದರಿಂದಲೇ ಪೂರ್ವ ಕಲ್ಪದಂತೆ ಉತ್ತರ ಕಲ್ಪದಲ್ಲಿಯೂ ಪೂರ್ವ ಕಲ್ಪಕ್ಕೆ ಸದೃಶವಾದ ಸರ್ವೋತ್ಪತ್ತಿ ನಿಯಮವಿದ್ದುದರಿಂದಲೇ ವಿಷ್ಣುವಿನ ಸಕಾಶದಿಂದ ಈ ಜಗತ್ತು ಎಲ್ಲಿಯೂ ಯಾವಾಗಲೂ ಪೂರ್ವ ಪೂರ್ವಕ್ಕೆ ವಿಸದೃಶವಾಗಿಯೂ ದೇವಪ್ರಭವ ಶೂನ್ಯವಾಗಿಯೂ ಆಗುವುದಿಲ್ಲ. ಮತ್ತೆ ಅದು ಉಂಟೆಂದೇ ಆಗುವುದು. ಅಥವಾ ಚೇತನಾಚೇತನಾತ್ಮಕವಾದ ಜಗತ್ತು ನಾಮ ರೂಪಗಳಿಂದ ಈದೃಶವಾಗಿಯೇ ಆಗುವುದು. ಇದು ಮೊದಲಾದ ಸ್ಪಷ್ಟವಾದ ಶ್ರುತ್ಯಂತರದಿಂದಲೂ (ದೇವತಾ ಪರಂಪರೆಗೆ ಸರ್ವ ಕಲ್ಪಗಳಲ್ಲಿ ಉತ್ಪತ್ತಿಯು ಸಿದ್ಧಿಸುವುದು.) ಅತ ಏವ ಶಬ್ದಾತ್ = ಯಾವುದರಲ್ಲಿ ವಿರೋಧವು ಶಂಕಿತವಾಗಿದೆಯೋ ಆ ಶಬ್ದದಿಂದಲೇ, ತೇಷಾಂ = ವೇದವಾಚ್ಯರಾದ ದೇವತೆಗಳಿಗೆ, ಪ್ರಭವನಿಯಮಾತ್ = ಪ್ರವಾಹತಃ ಉತ್ಪತ್ತಿಗೆ ನಿಯಮವಿದ್ದುದರಿಂದ (ಅಂದರೆ ಪ್ರತಿ ಕಲ್ಪದಲ್ಲಿಯೂ ನಿಯಮದಿಂದ ಉತ್ಪತ್ತಿಯು ಇದ್ದುದರಿಂದ, (ತಥಾಚ ದೇವತೆಗಳಿಗೆ ಸ್ವರೂಪತಃ ನಿತ್ಯತ್ವವಿಲ್ಲದಿದ್ದರೂ ಪ್ರವಾಹರೂಪದಿಂದ ನಿತ್ಯತ್ವವಿದ್ದುದರಿಂದ ಆ ದೇವತೆಗಳನ್ನು ಹೇಳತಕ್ಕ ವೇದಗಳಿಗೆ ಅಪ್ರಾಮಾಣ್ಯವಿಲ್ಲ) (ಹಾಗಾದರೆ ಶ್ರುತಿಯಲ್ಲಿ ಉಪಚಾರದಿಂದಲೂ ಉಕ್ತಿಯು ಕೂಡಬಹುದು, ಆ ಉಕ್ತಿಯಿಂದ ನಿಯಮದಿಂದ ದೇವತೆಗಳ ಉತ್ಪತ್ತಿಯಾಗುತ್ತದೆ ಎಂದು ನಿಶ್ಚಯವಿಲ್ಲವೆಂದರೆ) ಅತೀತಾ ನಾಗತ ಕಲ್ಪಗಳಲ್ಲಿಯೂ ದೇವತೆಗಳು ಇದ್ದಾರೆಂದು ಮಹಾನುಭಾವರ ಪ್ರತ್ಯಕ್ಷ ವಿದ್ದುದರಿಂದ.) (ಹಾಗಾದರೆ ಪರಪ್ರತ್ಯಕ್ಷವು ಪ್ರತ್ಯಕ್ಷವಾಗದೆ ಇರುವುದರಿಂದ ಅದು ನಿಶ್ಚಯವಾಗುವುದಿಲ್ಲವೆಂದರೆ—) **ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಾಯೇ । ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ॥** ಇತ್ಯಾದಿ ರೂಪವಾದ, ಭಾರತಾಚಾರ್ಯರ ಪ್ರತ್ಯಕ್ಷ ವಚನವಿದ್ದುದರಿಂದ.

ವಿಶೇಷಾಂಶ ॥ (೧) ತತ್ವಪ್ರದೀಪದಲ್ಲಿ ಆದರೂ ಈ ಶ್ರುತಿಯನ್ನು **ಯಥೈವ ಕಾಲ ನಿಯಮಃ** ಎಂದು ವ್ಯತ್ಯಾಸವಾಗಿ ಪಠನಮಾಡಿರುವರು. (೨) ಪೂರ್ವ ಪೂರ್ವ ಕಲ್ಪಾವಸಾನದಲ್ಲಿ ಪುನಃ ಇತರ ದೇವತೆಗಳು ಹುಟ್ಟುತ್ತಾರೆ ಎನ್ನುವ ನಿಯಮವದೆ ಎಂದು ಆಚಾರ್ಯರು ದ್ವಾದಶ ಸ್ತೋತ್ರದಲ್ಲಿ ಸ ಹಿ ವಿಶ್ವಸೃಜೋ ವಿಭುಶಂಭು ಪುರಂದರಸೂರ್ಯಮುಖಾನಪರಾನಪರಾನ್ । ಸೃಜತಿ ಇತ್ಯಾದಿ ಪ್ರಕಾರ ಹೇಳಿರುವರು.

ಪೀಠಿಕೆ ॥ ಹಾಗಾದರೆ ಅಯೋಗಿಗಳಿಗೆ ಶ್ರುತಿಪ್ರತ್ಯಕ್ಷಗಳಲ್ಲಿ ವಿಶ್ವಾಸವಿಲ್ಲದಿರುವುದ ರಿಂದ ಅವರಿಗೆ ದೇವತೆಗಳು ಹುಟ್ಟುತ್ತಾರೆ ಎನ್ನುವ ನಿಶ್ಚಯವು ಆಗಲಾರದು ಎಂದರೆ—

**ಭಾಷ್ಯ ॥ ಯಥೇದಾನೀಂ ತಥೋಪರ್ಯಪಿ ದೇವಾ ಭವಿಷ್ಯಂತೀತಿತರೇಷಾಮನುಮಾನಾಚ್ಚ ॥ ೨೮ ॥** ॥ ೧೩ ॥

**ಭಾಷ್ಯಾರ್ಥ ॥** ಈಗ ಹೇಗೆ ದೇವತೆಗಳು ಇರುತ್ತಾರೋ ಹಾಗೆಯೇ ಮುಂದಿನ ಕಾಲದಲ್ಲಿಯೂ ದೇವತೆಗಳು ಆಗುವರು ಎಂದು ಮಹಾನುಭಾವರಿಂದ ಇತರರಾದ ಆಯೋಗಿಗಳಿಗೆ ಅನುಮಾನ ದಿಂದಲೂ (ದೇವತೆಗಳು ನಿಯಮದಿಂದ ಹುಟ್ಟುತ್ತಾರೆ ಎನ್ನುವುದು ಸಿದ್ಧವಾಗುತ್ತದೆ.)

**ವಿಶೇಷಾಂಶ ॥** (೧) ದೇವತೆಗಳು ನಿಯಮದಿಂದ ಹುಟ್ಟುತ್ತಾರೆ ಎನ್ನುವ ವಿಷಯದಲ್ಲಿ ಶಬ್ದಪ್ರತ್ಯಕ್ಷ ಅನುಮಾನವೆನ್ನುವ ಪ್ರಮಾಣತ್ರಯಗಳೂ ಮುಂದೆ ಹೇಳುವ ಯುಕ್ತ್ಯಂತರವೂ ಇದೆ ಎಂದು ತೋರಿಸುವುದಕ್ಕಾಗಿ ಚ ಶಬ್ದವು. (೨) **ಉಪರಿತನಕಾಲಃ ದೇವವಾನ್ ಅಪ್ರಲಯಕಾಲತ್ವಾತ್ ಇದಾನೀಂತನಕಾಲವತ್** ಎನ್ನುವ ಅನುಮಾನವು ಸೂಚಿತವಾಯಿತು. ॥ ೨೮ ॥

**ಪೀಠಿಕೆ ॥** ಯುಕ್ತ್ಯಂತರದಿಂದ ದೇವಪ್ರವಾಹಕ್ಕೆ ನಿತ್ಯತ್ವವನ್ನು ಸಾಧಿಸತಕ್ಕ ಸೂತ್ರವನ್ನು ಪಠನ ಮಾಡುತ್ತಾರೆ—

## ಸೂತ್ರ ॥ ಓಂ ಅತ ಏವ ಚ ನಿತ್ಯತ್ವಂ ಓಂ ॥ ೨೯ ॥

**ಭಾಷ್ಯ ॥ ಅತ ಏವ ಶಬ್ದಸ್ಯ ನಿತ್ಯತ್ವಾದೇವ ಚ ದೇವಪ್ರವಾಹನಿತ್ಯತ್ವಂ ಯುಕ್ತಂ (ಭವತಿ) ॥ ೨೯ ॥ ॥ ೧೪ ॥**

**ಭಾಷ್ಯಾರ್ಥ ॥** ಅತ ಏವಃ ಅಂದರೆ, ಶಬ್ದಸ್ಯ ನಿತ್ಯತ್ವಾದೇವಃ ವೇದಕ್ಕೆ ನಿತ್ಯತ್ವವಿದ್ದ ಪ್ರಯುಕ್ತವೇ, ನಿತ್ಯತ್ವಂಃ ದೇವಪ್ರವಾಹಕ್ಕೆ ನಿತ್ಯತ್ವವು, ಯುಕ್ತಂಃ ವೇದನಿತ್ಯತ್ವಾನ್ಯಥಾನುಪಪತ್ತಿರೂಪವಾದ ಯುಕ್ತಿಸಿದ್ಧವು.

**ವಿಶೇಷಾಂಶ ॥** (೧) ದೇವಪ್ರವಾಹನಿತ್ಯತ್ವದಲ್ಲಿ ಯುಕ್ತ್ಯಂತರವನ್ನು ಹುಡುಕಬೇಕಾಗಿಲ್ಲ. ಮತ್ತೆ ಪೂರ್ವಪಕ್ಷಿಯು ಯಾವುದೊಂದು ವೇದನಿತ್ಯತ್ವವನ್ನು ಪ್ರಮಾಣಪೂರ್ವಕವಾಗಿ ಹೇಳಿರುತ್ತಾನೋ ಆದರಿಂದಲೇ ಆ ಅನ್ಯಥಾನುಪಪತ್ತಿಯಿಂದಲೇ ಇದು ಸಿದ್ಧವಾಗುತ್ತದೆ ಎಂದು ಏವಕಾರದಿಂದ ಸೂಚಿತವಾಯಿತು. (೨) ನಿತ್ಯತ್ವಾದೇವ ಎನ್ನುವುದು ಉಪಲಕ್ಷಣವು. ಪ್ರಾಮಾಣ್ಯವನ್ನು ಸಾಧಿಸಿದ್ದರಿಂದ ಅಪ್ರಾಮಾಣ್ಯವು ಇಲ್ಲದಿರುವ ಪ್ರಯುಕ್ತವೇ. ಎನ್ನುವುದು ಅತಃ ಶಬ್ದವ್ಯಾಖ್ಯಾನವು. ಇಲ್ಲವಾದರೆ ಪೂರ್ವಪಕ್ಷಿಯು ದೇವಪ್ರವಾಹಕ್ಕೆ ಅಪ್ರಾಮಾಣ್ಯದಿಂದಲೂ ಅನ್ಯಥೋಪಪತ್ತಿಯನ್ನು ಹೇಳಿಯಾನು. (೩) **ಸೂರ್ಯಾಚಂದ್ರಮಸೌ, ಯಥೈವ ನಿಯಮಃ ಕಾಲೇ, ಯಮಪ್ಯೇತಿ ಭುವನಂ ಸಾಂಪರಾಯೇ। ಯತ್ಪ್ರಯಂತ್ಯಭಿಸಂವಿಶಂತಿ** ಇದು ಮೊದಲಾದ ಬಹುಶ್ರುತಿಗಳಿಂದ ಸೂರ್ಯಾದಿ ದೇವತೆಗಳಿಗೆ ಉತ್ಪತ್ತಿಯೂ ನಾಶವೂ ಅವಗತವಾಗುವುದರಿಂದ ಪದಸ್ವರೂಪಕ್ಕೆ ನಿತ್ಯತ್ವವು ಕೂಡದೆ ಇರುವುದರಿಂದ ಪ್ರವಾಹರೂಪದಿಂದಲೇ ದೇವತೆಗಳಿಗೆ ನಿತ್ಯತ್ವವನ್ನು ಅವಶ್ಯವಾಗಿ ಅಂಗೀಕರಿಸಬೇಕಾಗಿ ರುವುದರಿಂದ, ಎಂದೂ ಅತಃ ಶಬ್ದಕ್ಕೇನೇ ವ್ಯಾಖ್ಯಾನವೆಂದು ಉಕ್ತವಾಯಿತು. ॥ ೨೯ ॥

**ಪೀಠಿಕೆ ॥** ಹಾಗಾದರೆ ದೇವತೆಗಳಿಗೆ ಪ್ರವಾಹನಿತ್ಯತ್ವದಿಂದಲೂ ಕೂಡ ವೇದಗಳಿಗೆ ಪ್ರಾಮಾಣ್ಯವು ಉಪಪನ್ನವಾಗುವುದಿಲ್ಲ. ಹೇಗೆಂದರೆ— ೧. ಪೂರ್ವ ಕಲ್ಪದಲ್ಲಿ ಮುಕ್ತರೇ ಆದ ದೇವತೆಗಳು ಉತ್ತರ ಕಲ್ಪದಲ್ಲಿ ಪುನಃ ಹುಟ್ಟುತ್ತಾರೋ, ೨ ಇತರರೋ, ಒಂದನೇದ್ದು ಕೂಡಲಾರದು.

ಮುಕ್ತಿಯು ಪುನರಾವರ್ತಿ ಶೂನ್ಯವಾದುದು. ಅಂದರೆ ಮುಕ್ತಿಯನ್ನು ಹೊಂದಿದವರು ಹಿಂದಕ್ಕೆ ಬರುವುದಿಲ್ಲ ೨ ಇತರರೂ ಎಂದೂ ಹೇಳಕೂಡದು. ಹಾಗಿದ್ದರೆ ಧರ್ಮಿಭೂತರಾದ ದೇವತೆಗಳಿಗೆ ಅನಿತ್ಯ ತ್ವಹೇತುಕವಾದ ವಿರೋಧವಿಲ್ಲದಿದ್ದರೂ ನಾಮರೂಪಾದಿ ಧರ್ಮವೈಚಿತ್ರ್ಯಪ್ರಯುಕ್ತವಾದ ವಿರೋಧವು ಬರಬೇಕಾಗುವುದು. ವಾಚಕವಾದ ವೇದವು ಪ್ರತಿಕಲ್ಪದಲ್ಲಿ ಪಾಠಭೇದವಿಲ್ಲದಿರುವುದರಿಂದ ಏಕವಿಧವಾಗಿದೆ. ಇಲ್ಲವಾದರೆ ನಿತ್ಯತ್ವವು ಇಲ್ಲವೆಂದಾಗುವುದು. ವಾಚ್ಯರಾದ ದೇವತೆಗಳಿಗೆ ನಾನಾ ವಿಧಗಳಾದ ನಾಮರೂಪಗಳಿವೆ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ ॥ ೩೦ ॥

**ಸೂತ್ರಾರ್ಥ ॥** (ಪ್ರಾಚೀನರಾದ ದೇವತೆಗಳಿಗೆ ಮುಕ್ತಿಯಾದುದರಿಂದ ತಮ್ಮಪದಗಳಲ್ಲಿ) ಅವೃತ್ತಾವಪಿ=ಇಲ್ಲದಿದ್ದರೂ, (ಇತರ ದೇವತೆಗಳು ಅಲ್ಲಿ ಇದ್ದಾಗ್ಯೂ ಅವರನ್ನು ಹೇಳತಕ್ಕ ಒಂದೇ ವಿಧವಾದ ವೇದದಲ್ಲಿ) ಅವಿರೋಧಃ=ಅಪ್ರಾಮಾಣ್ಯಾಖ್ಯ ವಿರೋಧವಿಲ್ಲ (ಏಕೆಂದರೆ ಪ್ರಾಚೀನರಿಗೂ ಇತರರಿಗೂ ಕೂಡ ಪರಸ್ಪರವಾಗಿ) ಸಮಾನನಾಮರೂಪತ್ವಾಚ್ಚ— ಸಮಾನಗಳಾದ ನಾಮರೂಪಗಳು ಇದ್ದುದರಿಂದಲೂ, ಅದಕ್ಕೆ ಯೋಗ್ಯಗಳಾದ ಕರ್ಮಧರ್ಮಗಳು ಇದ್ದುದರಿಂದಲೂ (ಹೇತುವು ಸಿದ್ಧವಾಗಲಿಲ್ಲವೆಂದು ಹೇಳಕೂಡದು.) ದರ್ಶನಾತ್ = ಯಥಾ ಪೂರ್ವಂ ಎನ್ನುವ ಶ್ರುತಿಯಿಂದಲೂ, ಸ್ಮೃತೇಶ್ಚ= ಅನಾದಿನಿಧನಾ ಎನ್ನುವ ಸ್ಮೃತಿಯಿಂದಲೂ, (ದೇವತಾ ಪ್ರವಾಹಕ್ಕೆ ನಿತ್ಯತ್ವವೂ ಸಿದ್ಧಿಸುತ್ತದೆ.)

**ಭಾಷ್ಯ ॥ ಅತೀತಾನಾಗತಾನಾಂ ದೇವಾನಾಂ ಸಮಾನನಾಮರೂಪತ್ವಾತ್ ಪ್ರಾಪ್ತಪದಾನಾಂ ಮುಕ್ತ್ಯಾऽವೃತ್ತಾವಪ್ಯವಿರೋಧಃ ॥ ೧೫ ॥**

**ಭಾಷ್ಯಾರ್ಥ ॥** ಪ್ರಾಪ್ತಪದಾನಾಂ=ಹೊಂದಲ್ಪಟ್ಟ ಪದವುಳ್ಳ ಪ್ರಾಚೀನ ದೇವತೆಗಳಿಗೆ, ಮುಕ್ತ್ಯಾ= ಮುಕ್ತಿಯನ್ನು ಹೊಂದಿದ ಕಾರಣ, (ಪುನಃ ಅವರಿಗೇನೇ ತಮ್ಮ ಪದಗಳಲ್ಲಿ) ಅವೃತ್ತಾವಪಿ = ಇಲ್ಲದಿದ್ದರೂ (ಇತರರು ಆ ಪದದಲ್ಲಿ ಇದ್ದಾಗ್ಯೂ) ಅವಿರೋಧಃ=(ಅವರನ್ನು ಹೇಳತಕ್ಕ ಶಬ್ದವು ಒಂದೇ ವಿಧವಾದಾಗ್ಯೂ ವೇದದಲ್ಲಿ) ಅಪ್ರಾಮಾಣ್ಯಾಖ್ಯ ವಿರೋಧವಿಲ್ಲ (ಏಕೆಂದರೆ— ವೇದದಲ್ಲಿ ವಾಚ್ಯರಾದಾಗ್ಯೂ) ಅತೀತಾನಾಗತಾನಾಂ ದೇವಾನಾಂ =ಪ್ರಾಚೀನರೂ ಭವಿಷ್ಯದ್ವರ್ತಮಾನರೂ ಆದ ದೇವತೆಗಳಿಗೆ, ಸಮಾನನಾಮರೂಪತ್ವಾತ್=ಪರಸ್ಪರವಾಗಿ ಏಕವಿಧಗಳಾದ ಇಂದ್ರಾದಿನಾಮ ಆಕಾರಗಳು ಇರುವುದರಿಂದ, (ಸಮಾನಗಳಾದ ಧರ್ಮಕರ್ಮಗಳು ಇದ್ದುದರಿಂದಲೂ.)

**ವಿಶೇಷಾಂಶ ॥** ಚಂದ್ರಿಕಾದಲ್ಲಿ ತತ್ವಪ್ರದೀಪವನ್ನನುಸರಿಸಿ ಸೂತ್ರದಲ್ಲಿಯೂ ಭಾಷ್ಯದಲ್ಲಿಯೂ ಆವೃತ್ತೌ ಎಂದು ವಿಚ್ಛೇದವೆಂದು ಭಾಷ್ಯದಲ್ಲಿ **ಮುಕ್ತ್ಯಾವೃತ್ತೌ** ಎಂದು ಒಂದೇ ಪದವೆಂದೂ ಆಶ್ರಯಿಸಿಕೊಂಡು ಒಬ್ಬನಿಗೆ ಪದಪ್ರಾಪ್ತಿಯಾಗುವಾಗ ಮತ್ತೊಬ್ಬನಿಗೆ ಮುಕ್ತಿಯು, ಪುನಃ ಆತನಗಿ ಮುಕ್ತಿಯಾಗುವಾಗ ಮತ್ತೊಬ್ಬನಿಗೆ ಪದಪ್ರಾಪ್ತಿಯು. ಹೀಗೆ ಕ್ರಮದಿಂದ ಮುಕ್ತಿಗೆ ಆವೃತ್ತಿಯಾಗುವಾಗ

ಎಂದಾಗಲೀ ತಂತಮ್ಮ ಪದಗಳಿಗೆ ಆವೃತ್ತಿ ಯಾಗುವಾಗ ಎಂದಾಗಲೀ ಟೀಕಾದಲ್ಲಿ ಹೇಳಿದ ರೀತಿಯಾಗಿ ವ್ಯಾಖ್ಯಾತವಾಗಿದೆ.

**ಪೀಠಿಕೆ ॥** ಹಾಗಾದರೆ ಸರ್ವದೇವತೆಗಳಿಗೆ ಸಮಾನ ನಾಮ ರೂಪಗಳಿವೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ ಹೇತವು ಅಸಿದ್ಧವಾಗಿದೆ, ಎಂದರೆ—

**ಭಾಷ್ಯ ॥ ಯಥಾ ಪೂರ್ವಂ** (ಮಹಾನಾ.೧.೩೮.) **ಇತಿ ದರ್ಶನಾತ್ ॥ ೧೬ ॥**

**ಭಾಷ್ಯಾರ್ಥ ॥ ಧಾತಾ ಯಥಾ ಪೂರ್ವಮಕಲ್ಪಯತ್** ಎನ್ನುವ ಶ್ರುತಿಯು ಕಂಡದೆ.

**ಪೀಠಿಕೆ ॥** ಹಾಗಾದರೆ ಈ ಶ್ರುತಿಗೆ ನಿಯಮದಿಂದ ಆವಾವ ಸ್ವರೂಪಕಲ್ಪನಾಪರತ್ವವೂ ಕೂಡಬಹುದು. ಆದುದರಿಂದ ಈ ಶ್ರುತಿಯಿಂದ ಸಮನನಾಮರೂಪಗಳಿವೆ ಎಂದು ನಿಶ್ಚಯವಾಗ ಲಾರದು. ಮತ್ತು ದೇವಪ್ರವಾಹಕ್ಕೆ ನಿತ್ಯತ್ವವಿದ್ದರೂ ದೇವತೆಗಳಿಗೆ ಸಮಾನನಾಮರೂಪಗಳು ಇದ್ದರೂ ಆ ದೇವತೆಗಳನ್ನು ಹೇಳುವುದರಿಂದ ನಿತ್ಯಭೂತವಾದ ವೇದಕ್ಕೆ ಪ್ರಾಮಾಣ್ಯವು ಕೂಡಲಿಕ್ಕಿಲ್ಲ. ಅಲ್ಲದೆ ವೇದಗಳು ದೇವತೆಗಳನ್ನು ಹೇಳುತ್ತವೆ ಎನ್ನುವುದೇ ಸರ್ವಥಾ ಕೂಡುವುದಿಲ್ಲ. ಏಕೆಂದರೆ— ವೇದವು ಅಪೌರುಷೇಯವಾದುದರಿಂದ ಇಷ್ಟು ಕಾಲತನಕ ಈ ದೇವತೆಯನ್ನು ಹೇಳಿದೆನು, ಇನ್ನು ಮುಂದಕ್ಕೆ ಇಂತಹವನನ್ನು ಹೇಳುತ್ತೇನೆ ಎನ್ನುವ ವಿಚಾರವೇ ಕೂಡಲಿಕ್ಕಿಲ್ಲ ಎಂದರೆ—

**ಭಾಷ್ಯ ॥ ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ । ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ ॥ ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ । ಇತಿ ಸ್ಮೃತೇಶ್ಚ ॥ ೩೦ ॥ ॥ ೧೭ ॥**

**ಭಾಷ್ಯಾರ್ಥ ॥** ಸೃಷ್ಟಿಕಾಲದಲ್ಲಿ ಸರ್ವಸ್ವತಂತ್ರನಾದ ವಿಷ್ಣುವಿನಿಂದ ಅನಾದಿನಿಧನಾ ನಿತ್ಯಾ= ಆದ್ಯಂತಗಳು ಇಲ್ಲದಿರುವುದರಿಂದಲೇ ನಿತ್ಯವಾದ (ಉಪಚಾರದಿಂದಲಾಗಲೀ, ಬಹುಕಾಲೀನತ್ವ ಮಾತ್ರದಿಂದಲಾಗಲೀ, ನಾಶವಿಲ್ಲದಿರೋಣದಿಂದಲಾಗಲೀ ನಿತ್ಯವಾದುದು ಎಂದಲ್ಲ) ಯಾವ ವೇದರೂಪವಾದ ಮಾತು ಎಚ್ಚರಸಲ್ಪಟ್ಟದ್ದೋ, ವೇದಗಳಲ್ಲಿ ಇರತಕ್ಕ ಆ ಶಬ್ದಗಳಿಂದಲೇ (ಇತರಗಳಿಂದ ಅಲ್ಲ) ಆ ವಿಷ್ಣುವು, ಋಷೀಣಾಂ = ಬ್ರಹ್ಮಾದಿಜ್ಞಾನಿಗಳ, ನಾಮಧೇಯಾನಿ=ನಾಮಗಳನ್ನು ನಿರ್ಮಮೇ = ನಿರ್ಮಿಸಿದನು. (ಅಂದರೆ ಆ ಶಬ್ದಗಳನ್ನೇ ಅವರಲ್ಲಿ ಸಂಕೇತಮಾಡಿದನು. (ಪ್ರತಿಕಲ್ಪದಲ್ಲಿಯೂ ಆ ಶಬ್ದವು ಇಲ್ಲಿ ಶಕ್ತವೆಂದು ತಿಳಿಸಿದನು.) ಋಷೀಣಾಂ=ದೇವತೆಗಳ, ವೇದೇಷು=ವೇದಗಳಲ್ಲಿ ಹೇಳಲ್ಪಟ್ಟ ಯಾಶ್ಚ ದೃಷ್ಟಯಃ=ಯಾವರೂಪಗಳೋ (ಅವುಗಳನ್ನು ಕೂಡ ಪೂರ್ವಕಲ್ಪದಲ್ಲಿದ್ದ ರೂಪಸಾದೃಶ್ಯ ದಿಂದಲೇ) ನಿರ್ಮಿಸಿದನು.

**ವಿಶೇಷಾಂಶ ॥** (೧) ಇಲ್ಲಿ ತತ್ವಪ್ರದೀಪದಲ್ಲಿ ಪ್ರಲಯಕಾಲದಲ್ಲಿ ಯಾವ ದೇವತೆಯೂ ಇಲ್ಲದಿರುವುದರಿಂದ ಆಗ ವೇದಕ್ಕೆ ವಾಚ್ಯಾರ್ಥರಾಹಿತ್ಯರೂಪವಾದ ಅಪ್ರಾಮಾಣ್ಯವನ್ನು ಆಶಂಕಿಸಿಕೊಂಡು ಭಗವನ್ಮಾತ್ರ ವಿಷಯಕವಾಗುತ್ತದೆ ಎಂದು ಸಮಾಧಾನವನ್ನು ಹೇಳಿರುವರು. ಆದುದರಿಂದಲೇ ಶಬ್ದೇ ಇತ್ಯಾದಿ ಸೂತ್ರಗಳನ್ನು ಭಗವತ್ಪರಗಳನ್ನಾಗಿ ವ್ಯಾಖ್ಯಾನಮಾಡಿರುವರು. (೨)

ವೇದದಲ್ಲಿ ವಾಚ್ಯಾರ್ಥರಾಹಿತ್ಯಪ್ರಯುಕ್ತವಾದ ಅಪ್ರಾಮಾಣ್ಯವಿಲ್ಲ. ಏಕೆಂದರೆ— ಮುಖ್ಯ ವಾಚ್ಯನಾದ ಶ್ರೀವಿಷ್ಣುವು ಸರ್ವದಾ ಇದ್ದಾನೆ. ಆ ದೇವತೆಗಳಿಗೆ ನಿಯಮೇನ ಉತ್ಪತ್ತ್ಯಾದಿಗಳನ್ನು ಮಾಡತಕ್ಕ ಶ್ರೀಹರಿಯು ಸದಾ ಇದ್ದಾನೆಂದು ಈ ವೇದದಿಂದಲೇ ಅವಗತವಾಗುತ್ತದೆ. ಮಹಾತ್ಮರಿಗೆ ಈಶನು ಸದಾ ಪ್ರತ್ಯಕ್ಷನೂ ಆಗಿರುತ್ತಾನೆ. ಹೇಗಂದರೆ— **ಪುರುಷಮೀಹತೇ ಕವಯೋ ವಯಂತಿ** ಇತ್ಯಾದಿ ಶ್ರುತಿಗಳಿಂದಲೇ, ಯಾವ ರೀತಿಯಾಗಿ ಈಗ ದೇವತೆಗಳು ಇರುತ್ತಾರೋ ಹಾಗೆಯೇ ಇತರ ಕಾಲದಲ್ಲಿಯೂ ಇರುತ್ತಾರೆ ಎಂದು ಇತರರಿಗೆ ಅನುಮಾನದಿಂದಲೂ, ಅವಗತವಾಗುತ್ತದೆ. ವೇದಕ್ಕೆ ನಿತ್ಯತ್ವವಿದ್ದ ಪ್ರಯುಕ್ತವೇ ದೇವಪ್ರವಾಹಕ್ಕೆ ನಿತ್ಯತ್ವವು. ಇತ್ಯಾದ್ಯರ್ಥವನ್ನು ಇಟ್ಟುಕೊಳ್ಳಬೇಕು. ॥ ೩೦ ॥

ಪೀಠಿಕೆ ॥ ದೇವತೆಗಳಿಗೆ ವೇದವಿದ್ಯಾಧಿಕಾರವು ಯುಕ್ತವಲ್ಲ. ಏಕೆಂದರೆ— ಆ ವೇದವಿದ್ಯೆಗಳು ೧ ಮುಕ್ತಿರೂಪಫಲವುಳ್ಳವುಗಳು, ೨ ಅವುಗಳಿಂದ ಇತರ ಫಲವುಳ್ಳವುಗಳು ಎಂದು ಎರಡು ವಿಧಗಳು. ಪುನಃ ಮೋಕ್ಷೇತರ ಫಲವುಳ್ಳವುಗಳೂ ೧ ಬ್ರಹ್ಮವಿದ್ಯಾ ೨ ಕರ್ಮವಿದ್ಯಾ ಭೇದದಿಂದ ಎರಡು ವಿಧಗಳು. ಅವುಗಳಲ್ಲಿಯೂ ಮಧುವಿದ್ಯಾದಿಗಳು ಬ್ರಹ್ಮವಿದ್ಯೆಯೆನ್ನಿಸುತ್ತವೆ. ಅಗ್ನಿಷ್ಟೋಮವಿದ್ಯಾದಿಗಳು ಕರ್ಮವಿದ್ಯೆಯೆನ್ನಿಸುತ್ತವೆ. ಅವುಗಳಲ್ಲಿ ದೇವತೆಗಳಿಗೆ ಮೋಕ್ಷೇತರ ಫಲವುಳ್ಳ ಎರಡು ವಿದ್ಯೆಗಳಲ್ಲಿಯೂ ಅಧಿಕಾರವು ಕೂಡುವುದಿಲ್ಲ. ಅವುಗಳಿಂದ ಸಾಧ್ಯಗಳಾಗುವ ಮೋಕ್ಷದಿಂದ ಇತರಗಳಾದ ಫಲಗಳ ಮಧ್ಯದಲ್ಲಿ ಕೆಲವು ಯೋಗ್ಯಫಲಗಳನ್ನು ಹೊಂದಿಯಾಗಿದೆ. ಅಯೋಗ್ಯ ಫಲಗಳನ್ನು ಹೊಂದಲು ಅಸಾಧ್ಯವಾದುದರಿಂದ ಅರ್ಥಿತ್ವವೇ ಇಲ್ಲ ಎಂದು ಜೈಮಿನ್ಯಾಚಾರ್ಯರ ಮತವನ್ನು ಅವಲಂಬಿಸಿಕೊಂಡು ಆಕ್ಷೇಪಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ.

## ಸೂತ್ರ ॥ ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ ॥ ೩೧ ॥

ಸೂತ್ರಾರ್ಥ ॥ ಮಧ್ವಾದಿಷು=ಅಸೌ ವಾ ಆದಿತ್ಯೋ ದೇವ ಮಧು ಇದು ಮೊದಲಾದ ಮಧುವಿದ್ಯೆಗಳಲ್ಲಿ (ದೇವತೆಗಳಿಗೆ) ಅನಧಿಕಾರಂ=ಅಧಿಕಾರಾಭಾವವನ್ನು ಜೈಮಿನಿಃ= ಜೈಮಿನ್ಯಾಚಾರ್ಯರು, (ತಿಳಿಯುತ್ತಾರೆ) ಅಸಂಭವಾತ್=ದೇವತೆಗಳಿಂದ ಆ ವಿದ್ಯೆಗಳಲ್ಲಿ ಹೇಳಲ್ಪಟ್ಟ ಫಲಗಳ ಮಧ್ಯದಲ್ಲಿ ಕೆಲವು ಯೋಗ್ಯಗುಣಗಳು ಪ್ರಾಪ್ತಗಳಾಗಿವೆ. ಕೆಲವು ಹೊಂದಲಿಕ್ಕೆ ಅಯೋಗ್ಯಗಳಾಗಿವೆ. ಆದಪ್ರಯುಕ್ತ ಆ ದೇವತೆಗಳಿಗೆ ಫಲಗಳಲ್ಲಿ ಅರ್ಥಿತ್ವವು ಕೂಡದಿರುವುದರಿಂದ ಎಂದು ಆಪ್ತತಮರಾದ ಜೈಮಿನ್ಯಾಚಾರ್ಯರು ತಿಳಿಯುತ್ತಾರೆ.

**ಭಾಷ್ಯ ॥ ವಸೂನಾಮೇವೈಕೋ ಭೂತ್ವಾ** (ಛಾ.೩.೬.೩.)। **ಇತ್ಯಾದಿನಾ ಪ್ರಾಪ್ಯಫಲತ್ವಾತ್ ಪ್ರಾಪ್ತಪದಾನಾಂ ದೇವಾನಾಂ ಮಧ್ವಾದಿವಿದ್ಯಾಸ್ವನಧಿಕಾರಂ ಜೈಮಿನಿರ್ಮನ್ಯತೇ ॥ ೩೧ ॥ ॥ ೧೮ ॥**

ಭಾಷ್ಯಾರ್ಥ ॥ ಮಧ್ವಾದಿವಿದ್ಯಾಸು=ಅಸೌ ವಾ ಆದಿತ್ಯೋ ದೇವಮಧು, ಇತ್ಯಾದಿ ಮಧುವಿದ್ಯೆಗಳಲ್ಲಿ ಅಂದರೆ ಈ ವಿದ್ಯೆಯನ್ನು ಪ್ರಸ್ತಾಪಿಸಿ ಹೇಳಲ್ಪಟ್ಟ, ವಸೂನಾಮೇವೈಕೋ ಭೂತ್ವಾ ಇತ್ಯಾದಿನಾ=ಸ ಏತದೇವಾಮೃತಂ ವೇದ ವಸೂ ನಾಮೇವೈಕೋ ಭೂತ್ವಾ ಅಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಇದು ಮೊದಲಾದ ವಾಕ್ಯದಿಂದ ಪದಾನಾಂ=ವಸ್ವಾದಿಪದಗಳಿಗೆ, ಪ್ರಾಪ್ಯಫಲತ್ವಾತ್=

ಮಧ್ವಾದಿವಿದ್ಯೆಗಳಲ್ಲಿ ಹೇಳಲ್ಪಟ್ಟ ಉಪಾಸನೆಯಿಂದ ಪ್ರಾಪ್ಯವಾದ ಫಲವು ಶ್ರುತವಾದುದರಿಂದ, ಪ್ರಾಪ್ತಪದಾನಾಂ=ಪ್ರಾಪ್ತವಾದ ವಸುತ್ವಾದಿಪದವುಳ್ಳ ವಸ್ವಾದಿ ದೇವತೆಗಳಿಗೆ, ಅಸಂಭವಾತ್= ತಂತಮ್ಮ ಪದವನ್ನು ಹೊಂದಿದ್ದರಿಂದ ಅದರಲ್ಲಿ ಅರ್ಥಿತ್ವವು ಕೂಡದಿರುವುದರಿಂದ, ದೇವಾನಾಂ=ದೇವತೆಗಳು ಹೊಂದಿದ ಪದಗಳಿಗೆ ಪುನಃ, ಅಪ್ರಾಪ್ಯಫಲತ್ವಾತ್=ಹೊಂದಲು ಅಯೋಗ್ಯ ಫಲತ್ವವಿದ್ದುದರಿಂದ ಮತ್ತು ಎರಡನೇ ವಿದ್ಯೆಯಾದ ಅಮೃತವಿದ್ಯಾಫಲಗಳಾದ ರುದ್ರಾದಿಪದಗಳನ್ನಾದರೂ ವಸ್ವಾದಿದೇವತೆಗಳಿಗೆ ಹೊಂದಲಿಕ್ಕೆ ಯೋಗ್ಯತೆಯಿಲ್ಲದಿರುವುದರಿಂದ ಅದರಲ್ಲಿಯೂ ಅರ್ಥಿತ್ವವು ಕೂಡದಿರುವುದರಿಂದ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರಾಭಾವವನ್ನು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ॥ ೩೧ ॥

**ವಿಶೇಷಾಂಶ ॥** (೧) ಜೈಮಿನಿ ಎಂದು ಗ್ರಹಣ ಮಾಡಿದ್ದರಿಂದ ಆಪ್ತತಮರಾದ ಜೈಮಿನ್ಯಾಚಾರ್ಯರಿಗೂ ಹೀಗೆ ಸಮ್ಮತವಾದುದರಿಂದಲೂ ದೇವತೆಗಳಿಗೆ ಅಧಿಕಾರವಿಲ್ಲ ವೆಂದು ಯುಕ್ತ್ಯಂತರವೂ ಸೂಚಿತವಾಯಿತು. (೨) ಪ್ರಥಮ ಆದಿಪದದಿಂದ ೧ **ದೇವೋ ಭೂತ್ವಾ ದೇವಾನಪ್ಯೇತಿ** ಎನ್ನುವ ಶಿಷ್ಟವಾಕ್ಯವೂ, ಹಾಗೆಯೇ **ಸ ಊರ್ಜಮುಪಗಚ್ಛತಿ** ಎನ್ನುವ ಶ್ರುತ್ಯಂತರ ವಾಕ್ಯವೂ, ಎರಡನೇ ಮಧುವಿದ್ಯಾಂತರ್ಗತವಾದ **ರುದ್ರಾಣಾಮೇವೈಕೋ ಭೂತ್ವಾ** ಇತ್ಯಾದಿ ವಾಕ್ಯವೂ ಗೃಹೀತವಾಗುತ್ತದೆ. (೩) ಎರಡನೇ ಆದಿಪದದಿಂದ ವಸ್ವಾದಿಪದಗಳೇ ಫಲವಾಗಿಉಳ್ಳ ಕರ್ಮವಿದ್ಯೆಗಳೂ ವಾಜಸನೇಯದಲ್ಲಿ ಹೇಳಲ್ಪಟ್ಟ ವಾಗಾದಿ ವಿದ್ಯೆಗಳೂ ಗೃಹೀತಗಳಾಗುತ್ತವೆ. (೪) ಯಾವ ದೇವತ್ವಯೋಗ್ಯನಾದ ಅಧಿಕಾರಿಯು, ಏತತ್ ಅಮೃತಂ = ಈ ವಾಸುದೇವಾಖ್ಯ ರೂಪವನ್ನು, ಏವಂ=ಹಿಂದೆ ಹೇಳಿದ ಪ್ರಕಾರ, ವೇದ=ತಿಳಿಯುತ್ತಾನೋ ಆತನು ವಸುಭೋಗ್ಯ ದೇಶಕಾಲಗಳಿಗೆ ಅಧಿಪನಾಗಿ, ಅಗ್ನಿನಾ ಮುಖೇನ= ಅಗ್ನಿಯ ಉಪದೇಶದಿಂದ, ಏತದೇವಾಮೃತಂ=ಈ ವಾಸುದೇವಾಖ್ಯ ರೂಪವನ್ನು ಸಾಕ್ಷಾತ್ಕರಿಸಿ ಕೊಂಡು, ತೃಪ್ಯತಿ=ಮುಕ್ತನಾಗುತ್ತಾನೆ. (೫) ಹೀಗೆಯೇ ದೇವತ್ವಯೋಗ್ಯನಾದ ಅಧಿಕಾರಿಯು ವಾಕ್ ಪ್ರಾಣ ಚಕ್ಷುಃ ಶ್ರೋತ್ರ ಮನಃ ಹೃದಯನಾಮಕನಾದ ಬ್ರಹ್ಮನನ್ನು ಉಪಾಸನಾ ಮಾಡುತ್ತಾನೋ, ಆತನು ದೇವತ್ವವನ್ನು ಹೊಂದುತ್ತಾನೆ. ಆಮೇಲೆ, ದೇವೋ ಭೂತ್ವಾ=ಸ್ವೋತ್ತಮದೇವತೆಗಳಲ್ಲಿ ಸಾಯುಜ್ಯವನ್ನು ಹೊಂದಿ, ದೇವಾನ್=ಶ್ವೇತದ್ವೀಪದಲ್ಲಿರತಕ್ಕ ಭಗವದ್ರೂಪವಿಶೇಷಗಳನ್ನು, ಅಪ್ಯೇತಿ=ಚತುರ್ಮುಖನಿಂದ ಕೂಡಿಕೊಂಡು ಹೊಂದುತ್ತಾನೋ, ಅಂತಹ ಅಧಿಕಾರಿಯು, ಊರ್ಜಂ=ಯಥೇಷ್ಟ ಅನ್ನವನ್ನು ಉಪಗಚ್ಛತಿ = ಹೊಂದುತ್ತಾನೆ. ॥ ೩೧ ॥

**ಪೀಠಿಕೆ ॥** ಹಾಗಾದರೆ ಮೋಕ್ಷೇತರ ಫಲವುಳ್ಳ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವು ಬೇಡ. ಆದಾಗ್ಯೂ ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ಮೋಕ್ಷಾರ್ಥ ವಿದ್ಯೆಗಳಲ್ಲಿ ಅಧಿಕಾರವು ಇರಬಹುದು. ಅದರಲ್ಲಿ ಅರ್ಥಿತ್ವವೂ ಕೂಡಬಹುದು, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಪಠನ ಮಾಡಿ ವ್ಯಾಖ್ಯಾನ ಮಾಡುತ್ತಾರೆ.

## ಸೂತ್ರ ॥ ಓಂ ಜ್ಯೋತಿಷಿ ಭಾವಾಚ್ಚ ಓಂ ॥ ೩೨ ॥

**ಸೂತ್ರಾರ್ಥ ॥** ಕೇವಲ ಮೋಕ್ಷೇತರಫಲಕ್ಕಾಗಿ ಮಧ್ವಾದಿವಿದ್ಯೆಗಳಲ್ಲಿ ದೇವತೆಗಳಿಗೆ

ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯರು ತಿಳಿಯುವುದಿಲ್ಲ. ಮತ್ತೆ ಸತ್ಯಂ ಜ್ಞಾನಂ ಎನ್ನುವ ಮೋಕ್ಷಾರ್ಥ ವಿದ್ಯೆಯಲ್ಲಿಯೂ ಅಧಿಕಾರವಿಲ್ಲ ಏಕೆಂದರೆ— ಜ್ಯೋತಿಷಿ ಇವ ಜ್ಯೋತಿಷಿ= ಆದಿತ್ಯಪ್ರಕಾಶ ದಲ್ಲಿದ್ದಂತೆಯೇ ದೇವತಾಜ್ಞಾನದಲ್ಲಿ ಸರ್ವವಸ್ತುಗಳಿಗೆ ವಿಷಯತ್ವೇನ, ಭಾವಾತ್= ಮೋಕ್ಷಸಾಧನ ಜ್ಞಾನಕ್ಕೆ ಸಿದ್ಧತ್ವವಿದ್ದ ಪ್ರಯುಕ್ತ ಆದಪ್ರಯುಕ್ತವೇ ಮೋಕ್ಷವೇ ಫಲವಾಗಿ ಉಳ್ಳ ವಿದ್ಯೆಯಲ್ಲಿಯೂ ಅಧಿಕಾರವಿಲ್ಲ. ಮತ್ತು ವಸ್ವಾದಿದೇವತೆಗಳಿಗೆ ವಸುತ್ವಾದಿರೂಪ ಪ್ರಾಪ್ತಫಲದಲ್ಲಿ ಅರ್ಥಿತ್ವವು ಇಲ್ಲದಿರುವುದರಿಂದ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರವಿಲ್ಲವೆಂದು ಮಾತ್ರ ಜೈಮಿನ್ಯಾಚಾರ್ಯರು ತಿಳಿಯುವುದಿಲ್ಲ. ಮತ್ತೂ ಮೋಕ್ಷರೂಪಫಲದಲ್ಲಿಯೂ ಅರ್ಥಿತ್ವವು ಕೂಡುವುದಿಲ್ಲ. ಏಕೆಂದರೆ— ದೇವತೆಗಳು ಸರ್ವಜ್ಞರು ಆದುದರಿಂದ ಮೋಕ್ಷಸಾಧನವಾದ ಬ್ರಹ್ಮಜ್ಞಾನವು ಮೊದಲೇ ಸಿದ್ಧವಾಗಿರುತ್ತದೆ.

**ಬಾಷ್ಯ ॥ ಜ್ಯೋತಿಷಿ ಸರ್ವಜ್ಞತ್ವೇ ಭಾವಾಚ್ಚ । ಆದಿತ್ಯಪ್ರಕಾಶೇऽಂತರ್ಭಾವವತ್ತಜ್ಜ್ಞಾನೇ ಸರ್ವವಸ್ತೂನಾಮಂತರ್ಭಾವಾನ್ನಿತ್ಯಸಿದ್ಧತ್ವಾಚ್ಚ ವಿದ್ಯಾನಾಂ ॥ ೩೨ ॥ ॥ ೧೯ ॥**

**ಭಾಷ್ಯಾರ್ಥ ॥** ಜ್ಯೋತಿಷಿ=ಅಂದರೆ ಸರ್ವವಿಷಯಕಜ್ಞಾನದಲ್ಲಿ ಭಾವಾಚ್ಚ=ಸರ್ವ ವಸ್ತುಗಳಿಗೆ ಅಂತರ್ಭಾವವು ಇರುವುದರಿಂದ, (ಮಧ್ವಾದಿವಿದ್ಯೆಗಳಲ್ಲಿ ಅಧಿಕಾರಾಭಾವವನ್ನು ತಿಳಿಯುತ್ತಾರೆ.) ಸರ್ವವಸ್ತೂನಾಂ=ಎಲ್ಲಾ ವಸ್ತುಗಳಿಗೆ, ಆದಿತ್ಯಪ್ರಕಾಶೇ=ಸೂರ್ಯನ ಪ್ರಕಾಶದಲ್ಲಿ ಅಂತರ್ಭಾವವತ್=ಅಂತರ್ಭಾವವಿರುವಂತೆ, (ಅಂದರೆ— ಸರ್ವವಸ್ತುಗಳೂ ಸೂರ್ಯಪ್ರಕಾಶ ದಿಂದ ಗೃಹೀತವಾಗುವುದರಂತೆ) ತಜ್ಜ್ಞಾನೇ=ತದುಪರಿ ಎಂದು ಪ್ರಸ್ತುತವಾದ ದೇವಜ್ಞಾನದಲ್ಲಿ ಸರ್ವವಸ್ತೂನಾಂ = ಎಲ್ಲಾ ವಸ್ತುಗಳಿಗೆ, ಅಂತರ್ಭಾವಾತ್=ವಿಷಯೀಭೂತತ್ವವಿದ್ದ ಪ್ರಯುಕ್ತ, ಅಂದರೆ ದೇವತೆಗಳು ಸರ್ವಜ್ಞರಾದುದರಿಂದ, ವಿದ್ಯಾನಾಂ=ಎಲ್ಲಾ ಬ್ರಹ್ಮವಿದ್ಯಾ, ಕರ್ಮವಿದ್ಯಾಸಾಧ್ಯ ಜ್ಞಾನಗಳಿಗೆ, ನಿತ್ಯಸಿದ್ಧತ್ವಾತ್ = ನಿಯಮೇನ ಪ್ರಾಪ್ತತ್ವವಿದ್ದ ಪ್ರಯುಕ್ತ ಅಂದರೆ ಅಂತಹ ಜ್ಞಾನಗಳನ್ನು ಮೊದಲೇ ಹೊಂದಿರುವುದರಿಂದ ವಿದ್ಯಾಸಾಧ್ಯಜ್ಞಾನದಲ್ಲಿಯೂ ಅರ್ಥಿತ್ವವು ಕೂಡುವುದಿಲ್ಲ ॥೩೨॥

**ಪೀಠಿಕೆ ॥** ಹೀಗೆ ದೇವತೆಗಳು ಮೋಕ್ಷೇತರ ಯೋಗ್ಯಫಲಗಳನ್ನು ಹೊಂದಿರುವುದರಿಂದಲೂ ಅಯೋಗ್ಯರಿಗೆ ಹೊಂದಲು ಸಾಧ್ಯವಿಲ್ಲದಿರುವುದರಿಂದಲೂ ಮೋಕ್ಷವೂ ಕೂಡ ಬ್ರಹ್ಮಜ್ಞಾನಿಗಳಾದುದರಿಂದ ಅರ್ಥಾತ್ ಲಬ್ಧವಾದುದರಿಂದ ಮೋಕ್ಷದಲ್ಲಿಯೂ ಅರ್ಥಿತ್ವವೇ ಇಲ್ಲದಿರುವುದರಿಂದ ದೇವತೆಗಳಿಗೆ ಯಾವ ವಿದ್ಯೆಗಳಲ್ಲಿಯೂ ಅಧಿಕಾರವಿಲ್ಲವೆಂದು ಜೈಮಿನಿಋಷಿಗಳ ಮತವನ್ನು ಅವಲಂಬಿಸಿದವನು ಸಮರ್ಥಿಸುತ್ತಿರಲು ಪುನಃ ಅಧಿಕಾರವನ್ನು ಸಮರ್ಥಿಸತಕ್ಕ ಸೂತ್ರವನ್ನು ಪಠನಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭಾವಂ ತು ಬಾದರಾಯಣೋऽಸ್ತಿ ಹಿ ಓಂ ॥ ೩೩ ॥

**ಸೂತ್ರಾರ್ಥ ॥** ವೇದವ್ಯಾಸರಾದರೂ ದೇವತೆಗಳಿಗೆ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರ ಎದೆ ಎಂದು ತಿಳಿಯುತ್ತಾರೆ. (ಅವರಿಗೆ ಜ್ಞಾನವಿಶೇಷವು) ಇದೆಯಷ್ಟೆ

**ಭಾಷ್ಯ ॥ ಫಲೇ ವಿಶೇಷಾ(ಷ) ಭಾವಾತ್ ಪ್ರಾಪ್ತಪದಾನಾಮಪಿ ದೇವಾನಾಂ ಮಧ್ವಾದಿಷ್ವ(ಪ್ಯ)ಧಿಕಾರಂ ಬಾದರಾಯಣೋ ಮನ್ಯತೇ। ಅಸ್ತಿ ಹಿ ಪ್ರಕಾಶ ವಿಶೇಷಃ ॥ ೨೦ ॥**

**ಭಾಷ್ಯಾರ್ಥ** ॥ ಬಾದರಾಯಣಃ=ವೇದವ್ಯಾಸರಾದರೂ, ದೇವಾನಾಂ=ದೇವತೆಗಳಿಗೆ, ಮಧ್ವಾದಿಷುಃ=ಮಧು ಮೊದಲಾದ ಎಲ್ಲಾ ವಿದ್ಯೆಗಳಲ್ಲಿ ಅಧಿಕಾರಂ=ಅಧಿಕಾರಸದ್ಭಾವವನ್ನು ಮನ್ಯತೇ= ತಿಳಿಯುತ್ತಾರೆ. (ವಸು ಮೊದಲಾದ ಪದರೂಪ ಫಲವನ್ನು ಮೊದಲೇ ಹೊಂದಿರುವುದರಿಂದ ಅಲ್ಲಿ ಅರ್ಥಿತ್ವಾಭಾವವು ದೋಷವಲ್ಲ. ಯದ್ಯಪಿ ದೇವತೆಗಳು ಪದವನ್ನು ಹೊಂದಿದವರು ಬ್ರಹ್ಮಜ್ಞಾನಿಗಳಾದುದರಿಂದ ಅಲ್ಲದೆ ಸಿದ್ಧವಾದ ಮೋಕ್ಷ ಮೋಕ್ಷೇತರ ಫಲವುಳ್ಳವರು, ಮತ್ತು ಅಯೋಗ್ಯ ಫಲವನ್ನು ಹೊಂದಲು ಅಯೋಗ್ಯರಾಗಿರುತ್ತಾರೆ. ಆದಾಗ್ಯೂ) **ಪ್ರಾಪ್ತಪದಾನಾಮಪಿ ದೇವಾನಾಂ** ದೇವತೆಗಳು ತಂತಮ್ಮ ಪದವನ್ನು ಹೊಂದಿದವರಾದಾಗ್ಯೂ ಅವರಿಗೆ, ಮಧ್ವಾದಿವಿದ್ಯೆಗಳಲ್ಲಿ(ಹೇಳಲ್ಪಟ್ಟ ಉಪಾಸನಾ, ಕರ್ಮಕರಣಗಳಿಂದ) ಫಲವಿಶೇಷಭಾವಾತ್=ತಂತಮಗೆ ಯೋಗ್ಯವಾದ ಜ್ಞಾನಮಾತ್ರದಿಂದ ಅಸಾಧ್ಯವಾದ ಮೋಕ್ಷಫಲದಲ್ಲಿ ಅತಿಶಯವು ಸಿದ್ಧಿಸುವುದರಿಂದ (ಅರ್ಥಿತ್ವವು ಕೂಡಬಹುದು. ಹಾಗಾದರೆ ಫಲದಲ್ಲಿ ಅತಿಶಯವು ಸಿದ್ಧವಾಗುವುದರಿಂದ ಅಲ್ಲಿ ಅರ್ಥಿತ್ವವು ಕೂಡಿದರೂ ಫಲಸಾಧನೀಭೂತಗಳಾದ ವಿದ್ಯೆಗಳು ನಿತ್ಯಸಿದ್ಧಗಳಾದುದರಿಂದ, ವಿದ್ಯಾವಿಚಾರವು ಜ್ಞಾನೋಪಯುಕ್ತವಾದುದರಿಂದ ಅದರಲ್ಲಿ ಅರ್ಥಿತ್ವವು ಕೂಡಲಾರದು ಎಂದು ಹೇಳಕೂಡದು. ಏಕೆಂದರೆ— ಶ್ರೀಹರಿಯ ಹೊರತು ಇತರದೇವತೆಗಳಿಗೆ ನಿರುಪಚರಿತಸಾರ್ವಜ್ಞವು ಇಲ್ಲದಿರುವುದರಿಂದ ವಿದ್ಯಾವಿಚಾರದಿಂದ) ಪ್ರಕಾಶವಿಶೇಷಃ=ಜ್ಞಾನವಿಶೇಷವು, ಅಸ್ತಿ ಹಿ =ಕೂಡುತ್ತದೆ. ಇಲ್ಲಿ ಬಾದರಾಯಣ ಪದವು ಪೂಜ್ಯತಾದ್ಯೋತಕವು.

**ಪೀಠಿಕೆ** ॥ ಹಾಗಾದರೆ ಆವಾವ ವಿದ್ಯೆಗಳಲ್ಲಿ ಹೇಳಲ್ಪಟ್ಟ ಉಪಾಸನ, ಕರ್ಮಕರಣಗಳಿಂದ ಆಯಾಯ ವಿದ್ಯೆಗಳಲ್ಲಿ ಹೇಳಲ್ಪಟ್ಟ ಫಲದಿಂದ ಇತರವಾದ ಫಲವೂ ಪ್ರಕಾಶ ವಿಶೇಷವೂ ಕೂಡ ದೇವತೆಗಳಿಗೆ ಆಗುವುದು, ಎನ್ನುವುದು ಯಾವುದರಿಂದ ತಿಳಿಯುತ್ತದೆ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಹಿ ಶಬ್ದಸೂಚಿತವಾದ ಸ್ಮೃತಿಯನ್ನು ತೋರಿಸುತ್ತಾರೆ.

**ಭಾಷ್ಯ ॥ ಯಾವತ್ಸೇವಾ ಪರೇ ತತ್ತ್ವೇತಾವಸ್ತುಖವಿಶೇಷತಾ। ಸಂಭವಾಚ್ಚ(ಚ್ಚಾ)ಪ್ರಕಾಶಸ್ಯ ಪರಮೇಕಮೃತೇ ಹರಿಂ॥ ತೇಷಾಂ ಸಾಮರ್ಥ್ಯಯೋಗಾಚ್ಚ ದೇವಾನಾಮಪ್ಯುಪಾಸನಂ। ಸರ್ವ ವಿಧೀಯತೇ ನಿತ್ಯಂ ಸರ್ವಯಜ್ಞಾದಿ ಕರ್ಮ ಚ ॥ ಇತಿ ಸ್ಕಾಂದೇ ॥ ೨೧ ॥**

**ಭಾಷ್ಯಾರ್ಥ** ॥ ಪರೇ ತತ್ತ್ವೇ=ಪರಮಾತ್ಮಸ್ವರೂಪದಲ್ಲಿ **ಅಸೌ ವಾ ಆದಿತ್ಯಃ** ಇತ್ಯಾದಿಗಳಿಂದ ಹೇಳಲ್ಪಟ್ಟ ವಿಷಯದಲ್ಲಿ ದೇವಾನಾಂ=ವಸ್ವಾದಿ ದೇವತೆಗಳಿಂದ, ಯಾವತ್=ಎಷ್ಟು ಅಧಿಕವಾಗಿ, ಸೇವಾ = ಏಷಾ ಸೇವೇತಿ ಸಂಪ್ರೋಕ್ತಾ ಇತ್ಯಾದ್ಯುಕ್ತವಾದ ಶ್ರವಣಾದಿರೂಪವಾದ ಉಪಾಸನೆಯು ಮಾಡಲ್ಪಡುತ್ತದೋ, ತಾವತ್ = ಅಷ್ಟಷ್ಟು ಅಧಿಕವಾಗಿ, ತೇಷಾಂ=ಆ ದೇವತೆಗಳಿಗೆ, ಸುಖವಿಶೇಷತಾ=

ಸ್ವರ್ಗಅಪವರ್ಗಾದಿಗಳಲ್ಲಿ ಸುಖದಲ್ಲಿ ಅತಿಶಯವು ತಂತಮಗೆ ಯೋಗ್ಯವಾದುದು ಜ್ಞಾನಮಾತ್ರದಿಂದ ಸಾಧ್ಯವಾದುದು ಸಿದ್ಧಿಸುತ್ತದೆ. (ಆದುದರಿಂದ) ಪರಂ=ಸ್ವತಂತ್ರನಾದ, ಹರಿಂ ಏಕಂ= ಶ್ರೀಹರಿಯೊಬ್ಬನನ್ನು ಋತೇ=ಹೊರತು (ಇತರರಿಗೆ, ಪ್ರಕಾಶಸ್ಯ ಅಸಂಭವಾತ್=ನಿರುಪಚರಿತ ಸಾರ್ವಜ್ಞ್ಯವಿಲ್ಲದಿರುವುದರಿಂದಲೂ) ಪ್ರಕಾಶಸ್ಯ ಸಂಭವಾಚ್ಚ=ವಿದ್ಯಾವಿಚಾರದಿಂದ ಸಾಧ್ಯವಾದ ಜ್ಞಾನವಿಶೇಷವು ಕೂಡುವುದರಿಂದಲೂ, (ಆದುದರಿಂದಲೇ ಅರ್ಥಿತ್ವವು ಕೂಡವುದರಿಂದಲೂ) ತೇಷಾಂ ದೇವಾನಾಂ=ಆ ದೇವತೆಗಳಿಗೆ, ಸಾಮರ್ಥ್ಯಯೋಗಾಚ್ಚ= ಸಾಮರ್ಥ್ಯವು ಕೂಡುವುದರಿಂದಲೂ, (ವಿದ್ವತ್ತಾ ಕೂಡುವುದರಿಂದಲೂ) ದೇವಾನಾಂ=ದೇವತೆಗಳು ಪದವನ್ನು ಹೊಂದಿದವರಾದಾಗ್ಯೂ ಅವರಿಂದಲೂ, ಸರ್ವಮಪ್ಯುಪಾಸನಂ=ಎಲ್ಲಾ ವಿದ್ಯೆಗಳಲ್ಲಿ ಹೇಳಲ್ಪಟ್ಟ ಉಪಾಸನೆಯೂ, ಸರ್ವಯಜ್ಞಾದಿಕರ್ಮ ಚ = ಎಲ್ಲಾ ಯಜ್ಞಾದಿಕರ್ಮವೂ, ನಿತ್ಯಂ=ನಿಯಮದಿಂದ, ವಿಧೀಯತೇ= ಶ್ರುತಿಗಳಲ್ಲಿ ಕರ್ತವ್ಯವಾಗಿ ಬೋಧಿಸಲ್ಪಡುತ್ತದೆ, ಎಂದು ಸ್ಕಾಂದದಲ್ಲಿ ಹೇಳಿಯದೆ.

**ಪೀಠಿಕೆ ॥** ಹಾಗಾದರೆ ಅಸಂಭವಾತ್ ಎಂದು ಹೇಳಿದ ಯುಕ್ತಿತಿರಸ್ಕಾರವಿರಲಿ, ಆದಾಗ್ಯೂ ದೇವತೆಗಳಿಗೆ ಅಧಿಕಾರವದೆ ಎಂದಂಗೀಕರಿಸಿದರೆ ಆಪ್ತಾಪ್ತರಾದ ಜೈಮಿನ್ಯಾಚಾರ್ಯರ ಮತವಿರೋಧವೆಂದರೆ—

**ಭಾಷ್ಯ ॥ ಉಕ್ತಫಲಾನಧಿಕಾರಮಾತ್ರಂ ಜೈಮಿನಿಮತಂ । ಅತೋ ನ ತ(ಮ) ನ್ಮತ ವಿರೋಧಃ ॥ ೨೨ ॥**

**ಭಾಷ್ಯಾರ್ಥ ॥** ಆವಾವ ವಿದ್ಯೆಯಲ್ಲಿ ಹೇಳಿದ ಫಲಕ್ಕಾಗಿಯೂ ಆ ವಿದ್ಯೆಯೇ ಫಲವುಳ್ಳ ಮೊದಲು ಹೇಳಿದ ಜ್ಞಾನಕ್ಕಾಗಿಯೂ, ಯಾವುದೊಂದು ಅಧಿಕಾರವೋ ಆ ಅಧಿಕಾರಾಭಾವಮಾತ್ರವು ಜೈಮಿನಿ ಋಷಿಗಳಿಗೆ ಅಭಿಮತವು. ಜೈಮಿನ್ಯಾಚಾರ್ಯರು ಹೇಳಿದ್ದನ್ನು ಸೂತ್ರಕಾರರೂ ಅಂಗೀಕರಿಸಿದ್ದರಿಂದ ಸೂತ್ರಕಾರರು ಹೇಳಿದ್ದನ್ನು ಜೈಮಿನ್ಯಾಚಾರ್ಯರು ನಿರಾಕರಿಸದೆ ಇದ್ದ ಪ್ರಯುಕ್ತ ಜೈಮಿನಿ ಬಾದರಾಯಣಾಚಾರ್ಯರ ಮತಗಳಿಗೆ ವಿರೋಧವಿಲ್ಲ.

**ಪೀಠಿಕೆ ॥** ಹಾಗಾದರೆ ಈ ಮತಗಳಿಗೆ ವಿಷಯವೈಲಕ್ಷಣ್ಯವನ್ನು ಕಲ್ಪಿಸಿದ್ದರಿಂದ ಏನು ಪ್ರಯೋಜನವು? ವಿರೋಧವೇ ಎಂದು ಏಕೆ ಆಗಬಾರದು ಎಂದರೆ—

**ಭಾಷ್ಯ ॥ ಸರ್ವಜ್ಞಸ್ಯೈವ ಕೃಷ್ಣಸ್ಯ ತ್ವೇಕದೇಶವಿಚಿಂತಿತಂ। ಸ್ವೀಕೃತ್ಯ ಮುನಯೋ ಬ್ರೂಯುಸ್ತನ್ಮತಂ ನ ವಿರುಧ್ಯತೇ ॥ ಇತಿ(ಚ)ಬ್ರಾಹ್ಮೇ ॥ ೩೩ ॥ ಅಧಿ. ೮ ॥ ೨೩ ॥**

**ಭಾಷ್ಯಾರ್ಥ ॥** ಯಾವ ಕಾರಣದಿಂದ ಜೈಮಿನ್ಯಾದಿ ಮುನಿಗಳು ನಿರುಪಚರಿತ ಸಾರ್ವಜ್ಞವುಳ್ಳ ವೇದವ್ಯಾಸರಿಂದ ತಿಳಿಯಲ್ಪಟ್ಟ ಅರ್ಥದ ಏಕದೇಶವನ್ನು ಅಂದರೆ ಆ ಮತದ ಏಕದೇಶವನ್ನೇ ಸ್ವೀಕರಿಸಿ ಅದನ್ನೇ ಹೇಳುವರು. ಬೇರೆಯಲ್ಲ. ಆದಪ್ರಯುಕ್ತ ವೇದವ್ಯಾಸರೂ ಮತ್ತು ಜೈಮಿನ್ಯಾದಿ ಋಷಿಗಳೂ ಇವರ ಮತವು ಪರಸ್ಪರವಾಗಿ ವಿರುದ್ಧವಾಗುವುದಿಲ್ಲ. ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. (ಆದ ಕಾರಣ ವಿಷಯವೈಲಕ್ಷಣ್ಯವನ್ನೇ ಕಲ್ಪಿಸಬೇಕು. ಮತಗಳಿಗೆ ವಿರೋಧವನ್ನು ಕಲ್ಪಿಸುವುದು ಅಲ್ಲ) ॥೩೩॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

**ವಿಚಾರ॥** ವೇದದಲ್ಲಿ ಮಂತ್ರ ಅರ್ಥವಾದ ವಿಧಿವಾಕ್ಯ ಎಂದು ಮೂರು ಭಾಗಗಳು. ಅವುಗಳಲ್ಲಿ ಮಂತ್ರವು ಅನುಷ್ಠೇಯವಾದ ದ್ರವ್ಯದೇವತಾ ಪ್ರಕಾಶನಪರವು. ಅರ್ಥವಾದವು ಅನುಷ್ಠೇಯಾರ್ಥಸ್ತುತಿಪರವು. ವಿಧಿಯು ವಿಧೇಯವಾದ ಯಾಗಾದ್ಯರ್ಥವನ್ನು ವಿಧಿಸತಕ್ಕುದು. ಆದಕಾರಣ ದೇವತಾವಿಗ್ರಹಾದಿಗಳಲ್ಲಿ ವೇದಗಳಿಗೆ ತಾತ್ಪರ್ಯವಿಲ್ಲದಿರುವ ಪ್ರಯುಕ್ತ ಅರ್ಥಾವಚ್ಛಿನ್ನ ಇಂದ್ರಾಯ ಇತ್ಯಾದಿ ಚತುರ್ಥ್ಯಂತಶಬ್ದಗಳೇ ದೇವತೆಗಳೆಂದು ಹೇಳಬೇಕಾಗಿರುವುದರಿಂದ ಅವುಗಳು ಜಡವಾದುದರಿಂದ ಸಾಮರ್ಥ್ಯವಿಲ್ಲದಿರುವ ಪ್ರಯುಕ್ತ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಪೂರ್ವಪಕ್ಷವು ಬಂದರೆ ಮಂತ್ರಾದಿಗಳಿಂದ ವಿಗ್ರಹಾದಿಗಳುಳ್ಳ ಚೇತನರೇ ದೇವತೆಗಳೆಂದು ತಿಳಿದುಬರುವುದರಿಂದ ದೇವತೆಗಳಿಗೆ ಅಧಿಕಾರವಿದೆ ಎಂದು ಆದ್ಯಸೂತ್ರದಲ್ಲಿ ಸಿದ್ಧಾಂತವೆಂದು ಮಾಯಾವಾದಿಗಳೂ ರಾಮಾನುಜಾಚಾರ್ಯರೂ ಹೇಳಿರುವರು. ಇದು ಅಯುಕ್ತವು. ಪೂರ್ವಸೂತ್ರದಲ್ಲಿದ್ದ ಮನುಷ್ಯಪದದಿಂದ ಇಲ್ಲಿ ತತ್ಸಜಾತೀಯವಾದ ಚೇತನಾಂತರಕ್ಕೇನೇ ಅಧಿಕಾರ ವಿಲ್ಲವೆಂದು ಶಂಕಾಹುಟ್ಟಬಹುದಲ್ಲದೆ ಅಚೇತನಕ್ಕೆ ಅಧಿಕಾರವಿಲ್ಲವೆನ್ನುವ ಪೂರ್ವಪಕ್ಷವೇ ಅಸಂಗತವು. ನಮ್ಮ ರೀತಿಯಾಗಿ ಅಭಿಮಾನಿವ್ಯಪದೇಶಸ್ತು ಎನ್ನುವ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ಮಂತ್ರಾದಿಗಳಿಗೆ ಸ್ವಾರ್ಥಪರತ್ವವಿದ್ದುದರಿಂದ ವಿಗ್ರಹಾದಿಗಳನ್ನು ಅಂಗೀಕರಿಸಿಕೊಂಡು ಪೂರ್ವಪಕ್ಷವು ಕೂಡವಾಗ ಅದನ್ನು ಅಂಗೀಕರಿಸದೆ ಜಡಕ್ಕೆ ಅಧಿಕಾರವಿಲ್ಲವೆನ್ನುವ ಪೂರ್ವಪಕ್ಷವು ಅಯುಕ್ತವು. ಮತ್ತು ವಿಗ್ರಹಾದಿಗಳು ಇಲ್ಲವೆನ್ನುವುದು ಅಸಿದ್ಧವೂ ಆಗಿದೆ. ಪೂರ್ವಪಕ್ಷದಲ್ಲಿ ಸ್ವಾರ್ಥದಲ್ಲಿ ಮಂತ್ರಾದಿಗಳಿಗೆ ಅಪ್ರಾಮಾಣ್ಯವಿದ್ದರೆ ಉಪನಿಷತ್ತುಗಳಿಗೂ ಸ್ವಾರ್ಥದಲ್ಲಿ ಪ್ರಾಮಾಣ್ಯವು ಇಲ್ಲವೆಂದು ಆದರೆ ಬ್ರಹ್ಮನೇ ಸಿದ್ಧಿಸದೆ ಹೋಗುವನು. ಇದ್ದರೆ ತಾ ಏತಾಃ ದೇವ ತಾಃ ಸೃಷ್ಟಾ **ಅಸ್ಮಿನ್ ಮಹತ್ಯರ್ಣವೇ ಪ್ರಾಪತಂಸ್ತಮಶನಾಯಾಪಿಪಾಸಾಭ್ಯಾಮನ್ವವಾರ್ಜತ್ತಾ** ಏನಮಬ್ರುವನ್ ಎಂದು **ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮೋ** ವರುಣರುದ್ರೇಂದ್ರಾಃ । ಇತ್ಯಾದ್ಯುಪನಿಷತ್ತುಗಳಿಂದಲೇ ವಿಗ್ರಹಾದಿಗಳುಳ್ಳ ಚೇತನರೂಪದೇವತೆಗಳು ಇದ್ದಾರೆಂದು ಸಿದ್ಧಿಸುತ್ತವೆ. (೧) (ಹೀಗೆ ಎರಡು ಮತಗಳಲ್ಲಿಯೂ ಪೂರ್ವಪಕ್ಷವನ್ನು ಸಾಧಾರಣದೋಷದಿಂದ ನಿರಾಕರಿಸಿ ಅದ್ವೈತಮತದಲ್ಲಿ ಸಿದ್ಧಾಂತವೂ ಅಯುಕ್ತವು ಎಂದು ಉಪಪಾದಿಸುತ್ತಾರೆ.) **ದೇವತಾವಿಗ್ರಹಾದಿಶ್ಚೇಚ್ಛ್ರುತಿ-ತಾತ್ಪರ್ಯಗೋಚರಃ। ಬಾಧ್ಯೋ ನ ಸ್ಯಾನ್ನ ಚೇನ್ನಸ್ಯಾದ್ವ್ಯಾವಹಾರಿಕಸನ್ನಪಿ ॥** ದೇವತಾ ವಿಗ್ರಹಾದಿಗಳು ಶ್ರುತಿ ತಾತ್ಪರ್ಯವಿಷಯವಾಗಿದ್ದರೆ ಬ್ರಹ್ಮನಂತೆ ಬಾಧ್ಯವಾಗದೆ ಹೋಗುವುದು. ಅಲ್ಲವಾದರೆ ವಿಗ್ರಹಾದಿಗಳು ವ್ಯಾವಹಾರಿಕ ಸತ್ಯಗಳೆಂದೂ ಆಗಲಾರವು. ಮತ್ತು ದೇವತೆಗಳಿಗೆ ದೇವತಾಂತರವು ಇಲ್ಲದಿರುವುದರಿಂದ ದೇವತೆಗಳನ್ನುದ್ದೇಶಿಸಿ ಹವಿಸ್ಸಾಗವು ಕೂಡುವುದರಿಂದಲೂ ಭೃಗು ಮೊದಲಾ ಋಷಿಗಳಿಗೆ ಬೇರೆ ಭೃಗುಗಳು ಇಲ್ಲದಿರುವುದರಿಂದ ಋಷಿಗಳ ವರಣವು ಕೂಡದಿರುವುದರಿಂದ ಯಜ್ಞಾದಿ ಕರ್ಮದಲ್ಲಿ ಅಧಿಕಾರವಿಲ್ಲದಿದ್ದರೂ ಬ್ರಹ್ಮವಿದ್ಯೆಗಳಲ್ಲಿ ಅಧಿಕಾರವಿದೆ ಎಂದು ಹೇಳಿರುವರು. ಅದು ಅಯುಕ್ತವು. ಏಕೆಂದರೆ— ೧ **ಯಜ್ಞೇನ ಯಜ್ಞಮಯಜಂತ ದೇವಾಃ, ೨ ದೇವಾ ವೈ ಸತ್ರಮಾಸತ, ೩ ದೇವಾ ಯಜ್ಞ ಮತನ್ವತ, ೪ ದೇವಾ ವೈ ಚತುರ್ಹೋತೃಭಿರ್ಯಜ್ಞಮತನ್ವತ, ೫ ಯದ್ವಿಶ್ವೇ ದೇವಾಃ**

**ಸಮಯಜಂತ ತದ್ವೈಶ್ವದೇವಸ್ಯ ವೈಶ್ವದೇವತ್ವಂ, ೬ ಪ್ರಜಾಪತಿರ್ವಾ ಏತೇನಾಗ್ರೇಽಯಜತ, ೭ ಇಂದ್ರೋಽಶ್ವ ಮೇಧಾನ್ ಶತಮಿಷ್ಟ್ವಾ ೮ ದೇವಾ ವೈ ವರುಣಮಯಾಜಯನ್ ಇತ್ಯಾದಿ ಶ್ರುತಿಗಳಿಂದಲೂ ತತಸ್ತು ದೇವತಾಃ ಸರ್ವಾ ಬ್ರಹ್ಮಾ ಚೈವ ಮಹರ್ಷಯಃ। ವೇದದೃಷ್ಟೇನ ವಿಧಿನಾ ವೈಷ್ಣವಂ ಕ್ರತುಮಾಹರನ್ ॥** ಇದು ಮೊದಲಾದ ಭಾರತಾದಿ ವಚನಗಳಿಂದಲೂ ದೇವತೆಗಳಿಗೂ ಕೂಡ ಯಜ್ಞಾದಿಗಳಲ್ಲಿ ಅಧಿಕಾರವಿದೆ ಎಂದು ತಿಳಿದುಬರುವುದರಿಂದ ಯಜ್ಞಾದಿ ಕರ್ಮದಲ್ಲಿ ಅಧಿಕಾರ ವಿಲ್ಲವೆಂದು ಹೇಳಿದ್ದು ಅಯುಕ್ತವು.

## ಅಧಿಕರಣ ಸಾರಾಂಶ

**ವಿಶ್ವೇ ದೇವಾ ಉಪಾಸತೇ** ಉಪಾಸಕರೆಂದು ಶ್ರುತರಾದ ದೇವತೆಗಳಿಗೆ ಉಪಾಸನಾದಿಗಳಲ್ಲಿ ಅಧಿಕಾರವು ಇದೆಯೋ ಇಲ್ಲವೋ ಎಂದು ಸಂದೇಹವು. ಇಲ್ಲವೆಂದು ಪೂರ್ವಪಕ್ಷವು. ಆವಾವ ಪದಗಳಿಂದ ವಿಶಿಷ್ಟರಾದ ದೇವತೆಗಳಿಗೆ ಉತ್ಪತ್ತಿ ವಿನಾಶಗಳು ಇದ್ದರೆ ಇಂದ್ರಾದಿ ಪದಗಳು ಪ್ರಾಪ್ತಿಯಾಗುವುದಕ್ಕಿಂತ ಮೊದಲೂ ಮೇಲೆಯೂ ಇಂದ್ರಾದಿ ದೇವತೆಗಳು ಇಲ್ಲದಿರುವುದರಿಂದ ಇಂದ್ರಾದಿ ದೇವತೆಗಳನ್ನುದ್ದೇಶಿಸಿ ದ್ರವ್ಯತ್ಯಾಗರೂಪ ಯಾಗಾದಿರೂಪವಾದ ಕರ್ಮವೂ ಕೂಡಲಾರದು. ಆವಾವ ದೇವತಾ ಬೋಧಕವಾದ ಅನಾದಿಯಾದ ನಿತ್ಯಭೂತವಾದ ವೇದಕ್ಕೆ ಅಪ್ರಾಮಾಣ್ಯವೂ ಬರಬೇಕಾಗುವುದು. ಮತ್ತು ಪೂರ್ವದಲ್ಲಿಯೂ ಮೇಲೆಯೂ ಮತ್ತೊಬ್ಬ ಇಂದ್ರರನ್ನು ಸ್ವೀಕರಿಸಿ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವನ್ನು ಅಂಗೀಕರಿಸಿದರೂ ಒಂದೇ ನಾಮರೂಪಗಳು ಇವೆ ಎನ್ನುವ ವಿಷಯದಲ್ಲಿ ಪ್ರಮಾಣವು ಇಲ್ಲದಿರುವುದರಿಂದ ನಾನಾನಾಮರೂಪಗಳು ಇದ್ದುದರಿಂದ ಒಂದೇ ರೂಪಾರ್ಥವನ್ನು ಬೋಧಿಸತಕ್ಕ ವೇದಕ್ಕೆ ಅಪ್ರಾಮಾಣ್ಯವು ತಪ್ಪಿದ್ದಲ್ಲ. ಮತ್ತೂ ವಸುಪದ ಮೊದಲಾದ ಫಲವುಳ್ಳ ಮಧುವಿದ್ಯಾದಿಗಳಲ್ಲಿ ವಸ್ವಾದಿ ದೇವತೆಗಳಿಗೆ ಅಧಿಕಾರವು ಕೂಡದಿರುವುದರಿಂದ ಸರ್ವವಿದ್ಯೆಗಳಲ್ಲಿ ಅಧಿಕಾರವಿಲ್ಲದಿರುವುದರಿಂದ ಮೋಕ್ಷಫಲಕ ವಿದ್ಯೆಗಳಲ್ಲಿಯೂ **ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ** ಇತ್ಯಾದಿಗಳಿಂದ ಅವರಿಗೆ ಜ್ಞಾನವು ಸಿದ್ಧವಾಗಿರುವುದರಿಂದ ಮೋಕ್ಷಕಾರಣವಾದ ಜ್ಞಾನಕ್ಕಾಗಿಯೂ ಅಧಿಕಾರವು ಕೂಡಲಾರದು. ಎಂದು ಪೂರ್ವಪಕ್ಷವು ಬಂದರೆ ದೇವತೆಗಳಿಗೂ ವಿಶಿಷ್ಟಬುದ್ಧ್ಯಾದಿಗಳು ಇದ್ದುದರಿಂದ, ಆದ್ಯಂತಗಳು ಇದ್ದರೂ ಮೋಕ್ಷದಲ್ಲಿ ಅರ್ಥಿತ್ವವೂ ಕೂಡುತ್ತದೆ. ಅವರಿಗೆ ಉತ್ಪತ್ತಿ ವಿನಾಶಗಳು ಇದ್ದರೂ **ತೇ ಹ ನಾಕಂ ಮಹಿಮಾನಃ ಸಚಂತೇ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ, ಧಾತಾ ಯಥಾ ಪೂರ್ವಮಕಲ್ಪಯತ್. ಯಥೈವ ನಿಯಮಃ ಕಾಲೇ ಋತಾದಿನಿಯಮಸ್ತಥಾ** ಇತ್ಯಾದಿ ವಚನಗಳಿಂದ ಪ್ರಮಾಣಭೂತವಾದ ವೇದಕ್ಕೆ ಅನಾದಿನಿತ್ಯತ್ವವಿದ್ದುದರಿಂದ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವನ್ನು ಅಂಗೀಕರಿಸಬೇಕು. ಆ ದೇವತೆಗಳಿಗೆ **ಯಥಾ ಪೂರ್ವಂ** ಎನ್ನುವ ಶ್ರುತಿಯಿಂದಲೂ **ಅನಾದಿನಿಧನಾ ನಿತ್ಯಾ** ಇತ್ಯಾದಿ ಸ್ಮೃತಿ ಯಿಂದಲೂ ಸಮಾನ ನಾಮರೂಪಗಳು ಇದ್ದುದರಿಂದ ವೇದಗಳಿಗೆ ಅಪ್ರಾಮಾಣ್ಯವು ಬರಲಾರದು. ಮಧುವಿದ್ಯಾದಿಗಳಿಗೆ ವಸ್ವಾದಿ ಪದಪ್ರಾಪ್ತಿಯು ಫಲಗಳಾಗಿದ್ದರೂ ವಸ್ವಾದಿಗಳಿಗೆ ಜ್ಞಾನದಲ್ಲಿಯೂ ಮೋಕ್ಷದಲ್ಲಿಯೂ ಅತಿಶಯಕ್ಕಾಗಿ ಅದರಲ್ಲಿ ಅರ್ಥಿತ್ವವು ಕೂಡುವುದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿದೆ. ತಥಾಚ, **ನ ದೇವಾನಾಮುಪಾಸಾಮರ್ಥ್ಯಂ ವರ್ತತೇ, ತಿರ್ಯಗಾದಿವತ್। ನ**

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

**ವಿಚಾರ॥** ವೇದದಲ್ಲಿ ಮಂತ್ರ ಅರ್ಥವಾದ ವಿಧಿವಾಕ್ಯ ಎಂದು ಮೂರು ಭಾಗಗಳು. ಅವುಗಳಲ್ಲಿ ಮಂತ್ರವು ಅನುಷ್ಠೇಯವಾದ ದ್ರವ್ಯದೇವತಾ ಪ್ರಕಾಶನಪರವು. ಅರ್ಥವಾದವು ಅನುಷ್ಠೇಯಾರ್ಥಸ್ತುತಿಪರವು. ವಿಧಿಯು ವಿಧೇಯವಾದ ಯಾಗಾದ್ಯರ್ಥವನ್ನು ವಿಧಿಸತಕ್ಕುದು. ಆದಕಾರಣ ದೇವತಾವಿಗ್ರಹಾದಿಗಳಲ್ಲಿ ವೇದಗಳಿಗೆ ತಾತ್ಪರ್ಯವಿಲ್ಲದಿರುವ ಪ್ರಯುಕ್ತ ಅರ್ಥಾವಚ್ಛಿನ್ನ ಇಂದ್ರಾಯ ಇತ್ಯಾದಿ ಚತುರ್ಥ್ಯಂತಶಬ್ದಗಳೇ ದೇವತೆಗಳೆಂದು ಹೇಳಬೇಕಾಗಿರುವುದರಿಂದ ಅವುಗಳು ಜಡವಾದುದರಿಂದ ಸಾಮರ್ಥ್ಯವಿಲ್ಲದಿರುವ ಪ್ರಯುಕ್ತ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಪೂರ್ವಪಕ್ಷವು ಬಂದರೆ ಮಂತ್ರಾದಿಗಳಿಂದ ವಿಗ್ರಹಾದಿಗಳುಳ್ಳ ಚೇತನರೇ ದೇವತೆಗಳೆಂದು ತಿಳಿದುಬರುವುದರಿಂದ ದೇವತೆಗಳಿಗೆ ಅಧಿಕಾರವಿದೆ ಎಂದು ಆದ್ಯಸೂತ್ರದಲ್ಲಿ ಸಿದ್ಧಾಂತವೆಂದು ಮಾಯಾವಾದಿಗಳೂ ರಾಮಾನುಜಾಚಾರ್ಯರೂ ಹೇಳಿರುವರು. ಇದು ಅಯುಕ್ತವು. ಪೂರ್ವಸೂತ್ರದಲ್ಲಿದ್ದ ಮನುಷ್ಯಪದದಿಂದ ಇಲ್ಲಿ ತತ್ಸಜಾತೀಯವಾದ ಚೇತನಾಂತರಕ್ಕೇನೇ ಅಧಿಕಾರ ವಿಲ್ಲವೆಂದು ಶಂಕಾಹುಟ್ಟಬಹುದಲ್ಲದೆ ಅಚೇತನಕ್ಕೆ ಅಧಿಕಾರವಿಲ್ಲವೆನ್ನುವ ಪೂರ್ವಪಕ್ಷವೇ ಅಸಂಗತವು. ನಮ್ಮ ರೀತಿಯಾಗಿ **ಅಭಿಮಾನಿವ್ಯಪದೇಶಸ್ತು** ಎನ್ನುವ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ಮಂತ್ರಾದಿಗಳಿಗೆ ಸ್ವಾರ್ಥಪರತ್ವವಿದ್ದುದರಿಂದ ವಿಗ್ರಹಾದಿಗಳನ್ನು ಅಂಗೀಕರಿಸಿಕೊಂಡು ಪೂರ್ವಪಕ್ಷವು ಕೂಡವಾಗ ಅದನ್ನು ಅಂಗೀಕರಿಸದೆ ಜಡಕ್ಕೆ ಅಧಿಕಾರವಿಲ್ಲವೆನ್ನುವ ಪೂರ್ವಪಕ್ಷವು ಅಯುಕ್ತವು. ಮತ್ತು ವಿಗ್ರಹಾದಿಗಳು ಇಲ್ಲವೆನ್ನುವುದು ಅಸಿದ್ಧವೂ ಆಗಿದೆ. ಪೂರ್ವಪಕ್ಷದಲ್ಲಿ ಸ್ವಾರ್ಥದಲ್ಲಿ ಮಂತ್ರಾದಿಗಳಿಗೆ ಅಪ್ರಾಮಾಣ್ಯವಿದ್ದರೆ ಉಪನಿಷತ್ತುಗಳಿಗೂ ಸ್ವಾರ್ಥದಲ್ಲಿ ಪ್ರಾಮಾಣ್ಯವು ಇಲ್ಲವೆಂದು ಆದರೆ ಬ್ರಹ್ಮನೇ ಸಿದ್ಧಿಸದೆ ಹೋಗುವನು. ಇದ್ದರೆ ತಾ ಏತಾಃ ದೇವ ತಾಃ ಸೃಷ್ಟಾ **ಅಸ್ಮಿನ್ ಮಹತ್ಯರ್ಣವೇ ಪ್ರಾಪತಂಸ್ತಮಶನಾಯಾಪಿಪಾಸಾಭ್ಯಾಮನ್ವವಾರ್ಜತ್ತಾ** ಏನಮಬ್ರುವನ್ ಎಂದು **ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮೋ** ವರುಣರುದ್ರೇಂದ್ರಾಃ । ಇತ್ಯಾದ್ಯುಪನಿಷತ್ತುಗಳಿಂದಲೇ ವಿಗ್ರಹಾದಿಗಳುಳ್ಳ ಚೇತನರೂಪದೇವತೆಗಳು ಇದ್ದಾರೆಂದು ಸಿದ್ಧಿಸುತ್ತವೆ. (೧) (ಹೀಗೆ ಎರಡು ಮತಗಳಲ್ಲಿಯೂ ಪೂರ್ವಪಕ್ಷವನ್ನು ಸಾಧಾರಣದೋಷದಿಂದ ನಿರಾಕರಿಸಿ ಅದ್ವೈತಮತದಲ್ಲಿ ಸಿದ್ಧಾಂತವೂ ಅಯುಕ್ತವು ಎಂದು ಉಪಪಾದಿಸುತ್ತಾರೆ.) **ದೇವತಾವಿಗ್ರಹಾದಿಶ್ಚೇಚ್ಛ್ರುತಿ-ತಾತ್ಪರ್ಯಗೋಚರಃ। ಬಾಧ್ಯೋ ನ ಸ್ಯಾನ್ನ ಚೇನ್ನಸ್ಯಾದ್ವ್ಯಾವಹಾರಿಕಸನ್ನಪಿ ॥** ದೇವತಾ ವಿಗ್ರಹಾದಿಗಳು ಶ್ರುತಿ ತಾತ್ಪರ್ಯವಿಷಯವಾಗಿದ್ದರೆ ಬ್ರಹ್ಮನಂತೆ ಬಾಧ್ಯವಾಗದೆ ಹೋಗುವುದು. ಅಲ್ಲವಾದರೆ ವಿಗ್ರಹಾದಿಗಳು ವ್ಯಾವಹಾರಿಕ ಸತ್ವಗಳೆಂದೂ ಆಗಲಾರವು. ಮತ್ತು ದೇವತೆಗಳಿಗೆ ದೇವತಾಂತರವು ಇಲ್ಲದಿರುವುದರಿಂದ ದೇವತೆಗಳನ್ನುದ್ದೇಶಿಸಿ ಹವಿಸ್ತ್ಯಾಗವು ಕೂಡುವುದರಿಂದಲೂ ಭೃಗು ಮೊದಲಾ ಋಷಿಗಳಿಗೆ ಬೇರೆ ಭೃಗುಗಳು ಇಲ್ಲದಿರುವುದರಿಂದ ಋಷಿಗಳ ವರಣವು ಕೂಡದಿರುವುದರಿಂದ ಯಜ್ಞಾದಿ ಕರ್ಮದಲ್ಲಿ ಅಧಿಕಾರವಿಲ್ಲದಿದ್ದರೂ ಬ್ರಹ್ಮವಿದ್ಯೆಗಳಲ್ಲಿ ಅಧಿಕಾರವಿದೆ ಎಂದು ಹೇಳಿರುವರು. ಅದು ಅಯುಕ್ತವು. ಏಕೆಂದರೆ— ೧ **ಯಜ್ಞೇನ ಯಜ್ಞಮಯಜಂತ ದೇವಾಃ, ೨ ದೇವಾ ವೈ ಸತ್ರಮಾಸತ, ೩ ದೇವಾ ಯಜ್ಞ ಮತನ್ವತ, ೪ ದೇವಾ ವೈ ಚತುರ್ಹೋತೃಭಿರ್ಯಜ್ಞಮತನ್ವತ, ೫ ಯದ್ವಿಶ್ವೇ ದೇವಾಃ**

ಸಮಯಜಂತ ತದ್ವೈಶ್ವದೇವಸ್ಯ ವೈಶ್ವದೇವತ್ವಂ, ೬ ಪ್ರಜಾಪತಿರ್ವಾ ಏತೇನಾಗ್ರೇಽಯಜತ, ೭ ಇಂದ್ರೋಽಶ್ವ ಮೇಧಾನ್ ಶತಮಿಷ್ಟ್ವಾ ೮ ದೇವಾ ವೈ ವರುಣಮಯಾಜಯನ್ ಇತ್ಯಾದಿ ಶ್ರುತಿಗಳಿಂದಲೂ ತತಸ್ತು ದೇವತಾಃ ಸರ್ವಾ ಬ್ರಹ್ಮಾ ಚೈವ ಮಹರ್ಷಯಃ । ವೇದದೃಷ್ಟೇನ ವಿಧಿನಾ ವೈಷ್ಣವಂ ಕ್ರತುಮಾಹರನ್ ॥ ಇದು ಮೊದಲಾದ ಭಾರತಾದಿ ವಚನಗಳಿಂದಲೂ ದೇವತೆಗಳಿಗೂ ಕೂಡ ಯಜ್ಞಾದಿಗಳಲ್ಲಿ ಅಧಿಕಾರವಿದೆ ಎಂದು ತಿಳಿದುಬರುವುದರಿಂದ ಯಜ್ಞಾದಿ ಕರ್ಮದಲ್ಲಿ ಅಧಿಕಾರ ವಿಲ್ಲವೆಂದು ಹೇಳಿದ್ದು ಅಯುಕ್ತವು.

## ಅಧಿಕರಣ ಸಾರಾಂಶ

ವಿಶ್ವೇ ದೇವಾ ಉಪಾಸತೇ ಉಪಾಸಕರೆಂದು ಶ್ರುತರಾದ ದೇವತೆಗಳಿಗೆ ಉಪಾಸನಾದಿಗಳಲ್ಲಿ ಅಧಿಕಾರವು ಇದೆಯೋ ಇಲ್ಲವೋ ಎಂದು ಸಂದೇಹವು. ಇಲ್ಲವೆಂದು ಪೂರ್ವಪಕ್ಷವು. ಆವಾವ ಪದಗಳಿಂದ ವಿಶಿಷ್ಟರಾದ ದೇವತೆಗಳಿಗೆ ಉತ್ಪತ್ತಿ ವಿನಾಶಗಳು ಇದ್ದರೆ ಇಂದ್ರಾದಿ ಪದಗಳು ಪ್ರಾಪ್ತಿಯಾಗುವುದಕ್ಕಿಂತ ಮೊದಲೂ ಮೇಲೆಯೂ ಇಂದ್ರಾದಿ ದೇವತೆಗಳು ಇಲ್ಲದಿರುವುದರಿಂದ ಇಂದ್ರಾದಿ ದೇವತೆಗಳನ್ನುದ್ದೇಶಿಸಿ ದ್ರವ್ಯತ್ಯಾಗರೂಪ ಯಾಗಾದಿರೂಪವಾದ ಕರ್ಮವೂ ಕೂಡಲಾರದು. ಆವಾವ ದೇವತಾ ಬೋಧಕವಾದ ಅನಾದಿಯಾದ ನಿತ್ಯಭೂತವಾದ ವೇದಕ್ಕೆ ಅಪ್ರಾಮಾಣ್ಯವೂ ಬರಬೇಕಾಗುವುದು. ಮತ್ತು ಪೂರ್ವದಲ್ಲಿಯೂ ಮೇಲೆಯೂ ಮತ್ತೊಬ್ಬ ಇಂದ್ರರನ್ನು ಸ್ವೀಕರಿಸಿ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವನ್ನು ಅಂಗೀಕರಿಸಿದರೂ ಒಂದೇ ನಾಮರೂಪಗಳು ಇವೆ ಎನ್ನುವ ವಿಷಯದಲ್ಲಿ ಪ್ರಮಾಣವು ಇಲ್ಲದಿರುವುದರಿಂದ ನಾನಾನಾಮರೂಪಗಳು ಇದ್ದುದರಿಂದ ಒಂದೇ ರೂಪಾರ್ಥವನ್ನು ಬೋಧಿಸತಕ್ಕ ವೇದಕ್ಕೆ ಅಪ್ರಾಮಾಣ್ಯವು ತಪ್ಪಿದ್ದಲ್ಲ. ಮತ್ತೂ ವಸುಪದ ಮೊದಲಾದ ಫಲವುಳ್ಳ ಮಧುವಿದ್ಯಾದಿಗಳಲ್ಲಿ ವಸ್ವಾದಿ ದೇವತೆಗಳಿಗೆ ಅಧಿಕಾರವು ಕೂಡದಿರುವುದರಿಂದ ಸರ್ವವಿದ್ಯೆಗಳಲ್ಲಿ ಅಧಿಕಾರವಿಲ್ಲದಿರುವುದರಿಂದ ಮೋಕ್ಷಫಲಕ ವಿದ್ಯೆಗಳಲ್ಲಿಯೂ ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ ಇತ್ಯಾದಿಗಳಿಂದ ಅವರಿಗೆ ಜ್ಞಾನವು ಸಿದ್ಧವಾಗಿರುವುದರಿಂದ ಮೋಕ್ಷಕಾರಣವಾದ ಜ್ಞಾನಕ್ಕಾಗಿಯೂ ಅಧಿಕಾರವು ಕೂಡಲಾರದು. ಎಂದು ಪೂರ್ವಪಕ್ಷವು ಬಂದರೆ ದೇವತೆಗಳಿಗೂ ವಿವಿಧಬುದ್ಧ್ಯಾದಿಗಳು ಇದ್ದುದರಿಂದ, ಆದ್ಯಂತಗಳು ಇದ್ದರೂ ಮೋಕ್ಷದಲ್ಲಿ ಅರ್ಥಿತ್ವವೂ ಕೂಡುತ್ತದೆ. ಅವರಿಗೆ ಉತ್ಪತ್ತಿ ವಿನಾಶಗಳು ಇದ್ದರೂ ತೇ ಹ ನಾಕಂ ಮಹಿಮಾನಃ ಸಚಂತೇ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ, ಧಾತಾ ಯಥಾ ಪೂರ್ವಮಕಲ್ಪಯತ್. ಯಥೈವ ನಿಯಮಃ ಕಾಲೇ ಸುರಾದಿನಿಯಮಸ್ತಥಾ ಇತ್ಯಾದಿ ವಚನಗಳಿಂದ ಪ್ರಮಾಣಭೂತವಾದ ವೇದಕ್ಕೆ ಅನಾದಿನಿತ್ಯತ್ವವಿದ್ದುದರಿಂದ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವನ್ನು ಅಂಗೀಕರಿಸಬೇಕು. ಆ ದೇವತೆಗಳಿಗೆ ಯಥಾ ಪೂರ್ವಂ ಎನ್ನುವ ಶ್ರುತಿಯಿಂದಲೂ ಅನಾದಿನಿಧನಾ ನಿತ್ಯಾ ಇತ್ಯಾದಿ ಸ್ಮೃತಿ ಯಿಂದಲೂ ಸಮಾನ ನಾಮರೂಪಗಳು ಇದ್ದುದರಿಂದ ವೇದಗಳಿಗೆ ಅಪ್ರಾಮಾಣ್ಯವು ಬರಲಾರದು. ಮಧುವಿದ್ಯಾದಿಗಳಿಗೆ ವಸ್ವಾದಿ ಪದಪ್ರಾಪ್ತಿಯು ಫಲಗಳಾಗಿದ್ದರೂ ವಸ್ವಾದಿಗಳಿಗೆ ಜ್ಞಾನದಲ್ಲಿಯೂ ಮೋಕ್ಷದಲ್ಲಿಯೂ ಅತಿಶಯಕ್ಕಾಗಿ ಅದರಲ್ಲಿ ಅರ್ಥಿತ್ವವು ಕೂಡುವುದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿದೆ. ತಥಾಚ, ನ ದೇವಾನಾಮಸಾಮರ್ಥ್ಯಂ ವರ್ತತೇ, ತಿರ್ಯಗಾದಿವತ್। ನ

**ಚಾಪಿ ಪ್ರತಿಷೇಧೋಽಸ್ತಿ ಶೂದ್ರಾದೇರಿವ ಕುತ್ರಚಿತ್। ಸ್ವಪದಾನಾಮನಿತ್ಯತ್ವಾನ್ನುಕ್ತಾವಸ್ಯರ್ಥಿತಾಪಿ ಚ। ಪ್ರವಾಹಾನಾದಿನಿತ್ಯಾಶ್ಚ ತುಲ್ಯರೂಪಾದಿಯೋಗಿನಃ॥ ದೇವಾ ನ ತೇನ ದೇವಾನಾಮಧಿಕಾರೇಽಸ್ತಿ ಬಾಧಕಂ। ಶ್ರೂಯತೇ ಚಾಧಿಕಾರೋಽಪಿ ದೇವಾನಾಂ ಶ್ರುತಿಷು ಸ್ಫುಟಂ ॥** ಎಂದು ಚಂದ್ರಿಕಾದಲ್ಲಿ ನಿರೂಪಿಸಿರುವರು. ॥ ಅಧಿ. ೮ ॥

**ದೇವಾತಾಧಿಕರಣವು ಸಮಾಪ್ತವಾಯಿತು.**

# ೯ ಅಪಶೂದ್ರಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಂದ ಇತರನಾದ ಶೂದ್ರನಿಗೆ ವೇದೋಕ್ತವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ನಿರಾಕರಿಸುತ್ತಾರೆ. ಪ್ರಸಂಗಸಂಗತಿಯಿಂದ ಪ್ರಾಪ್ತವಾದುದರಿಂದ ಅಧ್ಯಾಯ ಸಂಗತಿ ಪಾದಸಂಗತಿಗಳು ಇಲ್ಲ. ಶ್ರುತ್ಯಾದಿ ಸಂಗತಿಯನ್ನೂ ವಿಷಯಾದಿಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ಮನುಷ್ಯಾಧಿಕಾರತ್ವಾದಿತ್ಯುಕ್ತೇಽವಿಶೇಷಾಚ್ಛೂದ್ರಸ್ಯಾಪಿ ಅಹ ಹಾರೇ ತ್ವಾ ಶೂದ್ರ** (ಛಾ. ಉ.೪.೨.೩.)। **ಇತಿ ಪೌತ್ರಾಯಣೋಕ್ತೇರಧಿಕಾರ ಇತಿ ॥ ೧ ॥**

**ಭಾಷ್ಯಾರ್ಥ ॥** ಶೂದ್ರಸ್ಯಾಪಿ=ಶೂದ್ರನಿಗೂ ವೇದವಿದ್ಯಾಧಿಕಾರವು ಪ್ರಾಪ್ತವಾಗುತ್ತದೆ. ಏಕೆಂದರೆ— ಮನುಷ್ಯಾಧಿಕಾರತ್ವಾತ್=ಮನುಷ್ಯರಿಗೆ ಅಧಿಕಾರವಿದೆ ಎಂದು ಹೇಳಿದ್ದರಿಂದ. ಇತ್ಯುಕ್ತೇ ಅವಿಶೇಷಾತ್=ಅಧಿಕಾರೋಪಯೋಗಿಯಾಗಿ ಹೇಳಲ್ಪಟ್ಟ ಮನುಷ್ಯತ್ವದಲ್ಲಿ ಶೂದ್ರನಿಗೆ ಬ್ರಾಹ್ಮಣರಿಂದ ವಿಶೇಷವಿಲ್ಲದಿರುವುದರಿಂದ, (ಹಾಗಾದರೆ ಮನುಷ್ಯತ್ವವು ವೇದವಿದ್ಯಾಧಿಕಾರಕ್ಕೆ ಉಪಯೋಗಿ ಅಲ್ಲ ಮತ್ತೆ ವಿಶಿಷ್ಟ ಬುದ್ಧ್ಯಾದಿಗಳಿರುವಿಕೆಯೇ ಎಂದರೂ) ಅವಿಶೇಷಾತ್=ಶೂದ್ರನಿಗೆ ವಿಶಿಷ್ಟ ಬುದ್ಧ್ಯಾದಿಗಳು ಇವೆ ಎನ್ನುವಲ್ಲಿಯೂ ಇತರರಿಂದ ವಿಶೇಷವಿಲ್ಲದಿರುವುದರಿಂದ (ಹೀಗೆ ಅವಿಶೇಷಾಖ್ಯವಾದ ಯುಕ್ತಿಯನ್ನು ಹೇಳಿ ಶೂದ್ರನಿಗೆ ವೇದವಿದ್ಯಾಧಿಕಾರವು ಇದೆ ಎನ್ನುವಲ್ಲಿ ಶ್ರುತ್ಯುಕ್ತ ಜ್ಞಾಪಕವನ್ನು ಹೇಳುತ್ತಾರೆ.) ಪೌತ್ರಾಯಣೋಕ್ತೇಃ=ಛಾಂದೋಗ್ಯದಲ್ಲಿ ಪೌತ್ರಾಯಣನಿಗೆ ವೈದಿಕ ಸಂವರ್ಗ ವಿದ್ಯಾಧ್ಯಯನೋಕ್ತಿಯು ಕಂಡದ್ದರಿಂದ. (ಹಾಗಾದರೆ ಪೌತ್ರಾಯಣಾಖ್ಯ ಪುರುಷನಿಗೆ ಶೂದ್ರತ್ವವೇ ಹೇಗೆಂದರೆ—) ಅಹ ಶೂದ್ರ=ಎಲೋ ಶೂದ್ರನೇ, ಹಾರೇತ್ವಾ=ಕಂಠಮಾಲಾಖ್ಯ ಭೂಷಣವೂ ರಥವೂ (ಗೋವುಗಳಿಂದ ಕೂಡಿಕೊಂಡು ನಿನಗೇನೇ ಇರಲಿ.) ಇತಿ=ಎಂದು ಪೌತ್ರಾಯಣೋಕ್ತೇಃ=ಪೌತ್ರಾಯಣನನ್ನು ಕುರಿತು ರೈಕ್ವನು ಸಂಬೋಧನ ಮಾಡಿದ್ದರಿಂದ.

**ವಿಶೇಷಾಂಶ ॥** (೧) ಅಧಿಕಾರವಿಲ್ಲದಿದ್ದರೂ ಪೌತ್ರಾಯಣನು ವೇದವಿದ್ಯೆಯನ್ನು ವಿಚಾರ ಮಾಡಿದನು ಎಂದು ಏಕೆ ಆಗಲಾರದು ಎಂದರೆ— ನಿಸ್ಪೃಹರಾದ ರೈಕ್ವಮುನಿಗಳು ಪೌತ್ರಾಯಣನಿಗೆ ವೈದಿಕಸಂವರ್ಗ ವಿದ್ಯೆಯನ್ನು ಉಪದೇಶಿಸಿದ್ದಾರೆ. ಯೋಗ್ಯಮುನಿಗಳು ಅನಧಿಕಾರಿಗಳಿಗೆ ಉಪದೇಶಮಾಡಲಾರರು. ಅಲ್ಲದೆ ಪೌತ್ರಾಯಣನಿಗೆ ಅರ್ಥಾತ್ ಶ್ರುತಿಯಲ್ಲಿ ಅಧಿಕಾರವು

ಉಕ್ತವಾಯಿತು. (೨) ಹಿಂದೆ ಹೇಳಿದ ಪ್ರಕಾರ ಶೂದ್ರನಿಗೆ ವೇದವಿದ್ಯಾಧಿಕಾರವನ್ನು ಹೇಳಿದರೆ ಶ್ರುತ್ಯಾದಿಪ್ರಮಾಣಗಳಿಂದ ವಿರೋಧವು ಎಂದಾಕ್ಷೇಪಿಸಿದ್ದರಿಂದ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. ವೇದವಿದ್ಯಾಧಿಕಾರವು ವಿಷಯವು. (೩) ಛಾಂದೋಗ್ಯದಲ್ಲಿ ೪ನೇ ಅಧ್ಯಾಯದಲ್ಲಿ ಸಂವರ್ಗವಿದ್ಯಾಪ್ರಕರಣದಲ್ಲಿ ಹೀಗೆ ಕಥೆಯು ಇದೆ. ಪೌತ್ರಾಯಣನೆನ್ನುವ ರಾಜನು ಪ್ರಾಸಾದದಲ್ಲಿ ರಾತ್ರಿಕಾಲದಲ್ಲಿ ಮಲಗಿದ್ದನು. ಆಗ ಪ್ರಾಸಾದದ ಮೇಲುಭಾಗದಲ್ಲಿ ಹಂಸಪಕ್ಷಿಗಳು ಸಂಚರಿಸುತ್ತಿದ್ದವು. ಪರಸ್ಪರವಾಗಿ ವೃತ್ತಾಂತವನ್ನು ಹೇಳುತ್ತಿರುವ ಅವುಗಳ ಮಧ್ಯದಲ್ಲಿ ಎರಡು ಹಂಸಪಕ್ಷಿಗಳು ಮುಂದೆ ಹೋಗುತ್ತಿದ್ದವು. ಅವುಗಳಲ್ಲಿ ಒಂದು ಇನ್ನೊಂದು ಹಂಸದ ಹತ್ತಿರ ಹೇಳಿತು— ಎಲೋ ಹಂಸವೇ ಪೌತ್ರಾಯಣನ ತೇಜಸ್ಸನ್ನು ನೀನು ಹೊಂದಬೇಡ. ಆತನ ಸಂಬಂಧವಾದರೆ ಆತನ ತೇಜಸ್ಸು ನಿನ್ನನ್ನು ಸುಟ್ಟುಬಿಟ್ಟೀತು. ಹೀಗೆ ಹೇಳಿಸಿಕೊಳ್ಳಲ್ಪಟ್ಟ ಇನ್ನೊಂದು ಹಂಸವು ರಾಜನನ್ನು ಅನಾದರದಿಂದ ನಿರ್ಲಕ್ಷೀಕರಿಸಿ ರೈಕ್ವಮುನಿಯನ್ನೇ ಹೊಗಳಿತು. ಅದನ್ನು ಕೇಳಿ ರಾಜನು ಎದ್ದೊಡನೆ ದುಃಖಿತನಾಗಿ ತನ್ನ ಸಾರಥಿಯನ್ನು ಕರೆದು ರೈಕ್ವಮುನಿಗಳನ್ನು ಹುಡುಕುವುದಕ್ಕಾಗಿ ಅಪ್ಪಣೆಕೊಟ್ಟನು. ಆತನು ಅಲ್ಲಿ ಅಲ್ಲಿ ರೈಕ್ವರನ್ನು ಹುಡುಕುತ್ತಾ ನಾನು ತಿಳಿಯಲಿಲ್ಲವೆಂದು ಪ್ರಥಮತಃ ಬಂದನು. ಪುನಃ ಅವರ ಲಕ್ಷಣವನ್ನು ಹೇಳುತ್ತಾ ಅವರನ್ನು ಹುಡುಕುವುದಕ್ಕಾಗಿಯೇ ರಾಜನಿಂದ ಆದಿಷ್ಟನಾಗಿ ಪುನಃ ಹುಡುಕಿ ಒಂದು ಪ್ರದೇಶದಲ್ಲಿ ರೈಕ್ವರನ್ನು ನೋಡಿ ರಾಜನ ಸಮೀಪಕ್ಕೆ ಬಂದು ರೈಕ್ವರನ್ನು ತಿಳಿದೆನೆಂದು ಹೇಳಿದನು. ಆಗ ರಾಜನು ತನ್ನ ಸಾರಥಿಯಿಂದ ರೈಕ್ವರು ಇರುವ ಸ್ಥಾನವನ್ನು ನಿಶ್ಚಯಿಸಿಕೊಂಡು ಅವರಿಂದ ತತ್ವವನ್ನು ತಿಳಿಯಲಿಚ್ಛಿಸಿದವನಾಗಿ ಗುರುದಕ್ಷಿಣೆಯನ್ನು ಹಿಡಿದುಕೊಂಡು ಅವರ ಸಮೀಪಕ್ಕೆ ಹೋಗಿ ದ್ವಾರದಲ್ಲಿ ಶಕಟದ ಅಡಿಯಲ್ಲಿ ಇರತಕ್ಕ ರೈಕ್ವರನ್ನು ನೋಡಿ ರಥಾಭರಣಾದಿ ರೂಪ ಗುರುದಕ್ಷಿಣೆಯನ್ನು ಕೊಟ್ಟು ನನಗೆ ವಿದ್ಯೆಯನ್ನುಪದೇಶಿಸಬೇಕೆಂದು ಪ್ರಾರ್ಥಿಸಿದನು. ಆಗ ಆ ಪೌತ್ರಾಯಣನನ್ನು ರೈಕ್ವರು ಅಹ ಹಾರೇ ತ್ವಾ ಶೂದ್ರ ಎಲೈ ಶೂದ್ರನೇ ಎಂದು ಸಂಬೋಧಿಸಿ ಕಂಠಮಾಲಾಖ್ಯ ಆಭರಣವೂ ರಥವೂ (ವಾ ಶಕಟವು) ಗೋವುಗಳೂ ಎಲ್ಲವೂ ನಿನಗೇನೇ ಇರಲಿ. ಎಂದು ತಿರಸ್ಕರಿಸಿದರು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತ ಆಹ** ॥ ೨ ॥

**ಭಾಷ್ಯಾರ್ಥ ॥** ಹೀಗೆ ಶಂಕಾ ಬಂದರೆ ಸಿದ್ಧಾಂತ ಮಾಡುತ್ತಾರೆ.

## ಸೂತ್ರ ॥ ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ ॥ ೩೪ ॥

**ಸೂತ್ರಾರ್ಥ ॥** ತದಾದ್ರವಣಾತ್=ಶೋಕದಿಂದ ರೈಕ್ವರ ಸಮೀಪಕ್ಕೆ ಶೀಘ್ರದಲ್ಲಿ ಹೋದದ್ದರಿಂದಲೇ ಅಸ್ಯ=ಈ ಪೌತ್ರಾಯಣನಿಗೆ, (ಶೂದ್ರತ್ವಂ=ಶೂದ್ರ ಎಂದು ಸಂಬೋಧಿತತ್ವವು. ನಿಕೃಷ್ಟಜಾತಿ ನಿಮಿತ್ತಕವಾದುದಲ್ಲ) ಅಸ್ಯ=ಈ ಪೌತ್ರಾಯಣನಿಗೆ, ಶುಕ್=ಶೋಕವು, ತದನಾದರಶ್ರವಣಾತ್= ಹಂಸದಿಂದ ಮಾಡಲ್ಪಟ್ಟ ಅನಾದರವಾಕ್ಯಶ್ರವಣದಿಂದ ಉಂಟಾಗಿದೆ. (ಹಾಗಾದರೆ ಅನಾದರವನ್ನು

ಕೇಳಿದರೂ ಶೋಕವು ಉಂಟಾಯಿತೆಂದು ಹೇಗೆ ತಿಳಿಯುತ್ತದೆ. ಪರಬುದ್ಧಿಯು (ಶೋಕಪದೋಕ್ತ ದುಃಖಾನುಭವವು) ಅಪ್ರತ್ಯಕ್ಷವಾಗಿದೆ, ಎಂದರೆ ಹಿ=ಯಾವ ಕಾರಣದಿಂದ, ಮನಸ್ಸು ವ್ಯಗ್ರವಾಗಿ ಇದ್ದುದರಿಂದ ಅದಕ್ಕೆ ಕಾರಣವಾದ ಶುಕ್=ಶೋಕವು ಅಸ್ಯ=ಈ ಪೌತ್ರಾಯಣನಿಗೆ, ಸೂಚ್ಯತೇ= ತಿಳಿಯಲ್ಪಡುತ್ತದೆ.

**ಭಾಷ್ಯ ॥ ನಾಸೌ ಪೌತ್ರಾಯಣಃ ಶೂದ್ರಃ। ಶುಚಾಽದ್ರವಣಮೇವ ಶೂದ್ರತ್ವಂ (ಶೂದ್ರಶಬ್ದೇನೋಕ್ತಂ) ॥ ೩ ।**

**ಭಾಷ್ಯಾರ್ಥ ॥** ಅಸೌ=ರೈಕ್ವರಿಂದ ಸಂಬೋಧಿಸಲ್ಪಟ್ಟ, ಪೌತ್ರಾಯಣಃ=ಪೌತ್ರಾಯಣನು, ನ ಶೂದ್ರಃ=ಜಾತ್ಯಾ ಶೂದ್ರನಲ್ಲ. ಮತ್ತೆ ಕ್ಷತ್ರಿಯನು. (ಹಾಗಾದರೆ — ರೂಢಿಯಿಲ್ಲದಿರುವುದರಿಂದ ರಾಜನಿಗೆ ಶೂದ್ರ ಎಂದು ಸಂಬೋಧನೆಯು ಹೇಗೆ ಕೂಡುತ್ತದೆ, ಎಂದರೆ—) ಶುಚಾ=ಶೋಕದಿಂದ, ಅದ್ರವಣಮೇವ=ರೈಕ್ವರನ್ನು ಕುರಿತು ಶೀಘ್ರವಾಗಿ ಬರುವಿಕೆಯೇ, ಶೂದ್ರತ್ವಂ=ಶೂದ್ರ ಎಂದು ಸಂಬೋಧನದಲ್ಲಿ ನಿಮಿತ್ತವು. (ಜಾತಿಯಲ್ಲ)

**ವಿಶೇಷಾಂಶ ॥** ತಥಾಚ ಶೂದ್ರ ಎನ್ನುವ ಸಂಬೋಧನವು ಅನುಪಪನ್ನವಲ್ಲ. ಶೋಕದಿಂದ ತನ್ನ ಸಮೀಪಕ್ಕೆ ಬಂದಿರುವ ನಿಮಿತ್ತದಿಂದಲೇ ಶೂದ್ರನೆಂದು ಸಂಬೋಧಿಸಿದ್ದು. ಪೌತ್ರಾಯಣನು ಜಾತ್ಯಾ ಕ್ಷತ್ರಿಯನೇ.

**ಪೀಠಿಕೆ ॥** ಶೋಕಕ್ಕೆ ಕಾರಣವೇನೆಂದರೆ—

**ಭಾಷ್ಯ ॥ ಕಮ್ವರ ಏನಮೇತತ್ಸಂತಂ (ಛಾ.ಉ.೪.೧.೩.)। ಇತ್ಯನಾದರಶ್ರವಣಾತ್ ॥೪॥**

**ಭಾಷ್ಯಾರ್ಥ ॥** ಅರೇ=ಎಲೋ ಹಂಸವೇ, ಏತತ್=ಈ ವಚನವನ್ನು ಕಮು ಏನಂ= ಯಾರನ್ನುದ್ದೇಶಿಸಿಕೊಂಡು, ಆತ್ಥ=ಹೇಳಿದಿ. ಸಂತಂ=ನಿರ್ದುಷ್ಟನಾದ ಶಕಟದಿಂದೊಡಗೂಡಿದ ರೈಕ್ವನನ್ನೆಂಬಂತೆ, (ಉ=ನಿಂದಾರ್ಥಕವಾದ ನಿಪಾತವು.) ಈ ರಾಜನಲ್ಲಿ ಹೇಳಲಿಕ್ಕೆ ಇದು ಅಯೋಗ್ಯವು. ಹೀಗೆ ಹೇಳಲಿಕ್ಕೆ ರೈಕ್ವರೇ ಯೋಗ್ಯರು. ಇತಿ=ಹೀಗೆ, ಅನಾದರಶ್ರವಣಾತ್=ಇಂತಹ ಹಂಸಕೃತವಾದ ಅನಾದರ (ನಿಂದಾ) ಬೋಧಕವಾದ ವಾಕ್ಯವು ಅಥವಾ ಹಂಸದ್ವೆಶಿಯಿಂದ ತನಗೆ ಅನಾದರ ವಾಕ್ಯವು ಶ್ರುತವಾದ ಪ್ರಯುಕ್ತ (ಪ್ರಾಪ್ತವಾದ ಶೋಕದಿಂದ ಆದ್ರವಣತ್ವವೇ ಶೂದ್ರತ್ವವು.)

**ಪೀಠಿಕೆ ॥** ರಾಜನು ನಿಂದಿತನಾದಾಗ್ಯೂ ಶೋಕವು ಹುಟ್ಟಿತೆಂದು ಹೇಗೆ ತಿಳಿಯುತ್ತದೆ. ಪ್ರತ್ಯಕ್ಷದಿಂದ ನಿಶ್ಚಿತವಾಯಿತೆಂದು ಹೇಳಕೂಡದು. ಅನಾದರಶ್ರವಣರೂಪವಾದ ಪರರ ಬುದ್ಧಿಯು ಪ್ರತ್ಯಕ್ಷವಾಗದೆ ಇದ್ದುದರಿಂದ ಶೋಕೋತ್ಪತ್ತಿಯೂ ಪ್ರತ್ಯಕ್ಷವಾಗಲಾರದು. ಎಂದರೆ ಸೂಚ್ಯತೇ ಹಿ ಎನ್ನುವ ಸೂತ್ರಶೇಷವನ್ನು ವ್ಯಾಖ್ಯಾನ ಮಾಡುತ್ತಾರೆ.

**ಭಾಷ್ಯ ॥ ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚ (ಛಾ.ಉ.೪.೧.೫.)। ಇತಿ ಸೂಚ್ಯತೇ ಹಿ ॥ ೩೪ ॥ ॥ ೫ ॥**

**ಭಾಷ್ಯಾರ್ಥ ॥** ಸಃ=ನಿಂದೆಯನ್ನು ಹೇಳಿದ ಪೌತ್ರಾಯಣನು, ಸಂಜಹಾನ ಏವ=ಹಾಶಿಗೆಯಿಂದ ಏಳುವವನಾಗಿಯೇ, ಕ್ಷತ್ತಾರಂ=ಸಾರಥಿಯನ್ನು ಕುರಿತು, ಉವಾಚ=ರೈಕ್ವರನ್ನು ಹುಡುಕುವುದಕ್ಕಾಗಿ ಹೇಳಿದನು. ಇತಿ ಸೂಚ್ಯತೇ ಓ=ಈ ವಾಕ್ಯಾರ್ಥಾನ್ಯಥಾನುಪಪತ್ತಿಯಿಂದ ಜ್ಞಾತವಾದ ರೈಕ್ವರಲ್ಲಿ ವ್ಯಾಸಕ್ತವಾದ ಮನಸ್ಸು ಇದ್ದುದರಿಂದ ಅದಕ್ಕೆ ಕಾರಣವು ಶೋಕವೇ ಎಂದು ತಿಳಿಯಲ್ಪಡುತ್ತದೆ.

**ವಿಶೇಷಾಂಶ ॥** (೧) ಶೋಕದಿಂದ ಬಂದಿದ್ದಾನೆ ಎನ್ನುವುದು ರೈಕ್ವಮುನಿಗಳು ಸರ್ವಜ್ಞರಾದುದರಿಂದ ತಿಳಿದಿದ್ದಾರೆ. **ರಾಜಾ ಪೌತ್ರಾಯಣಃ ಶೋಕಾತ್ ಶೂದ್ರೇತಿ ಮುನಿನೋದಿತಃ । ಪ್ರಾಣವಿದ್ಯಾಮವಾಪ್ಯಾಸ್ಮಾದ್ವರಂ ಧರ್ಮಮವಾಪ್ತವಾನ್ ॥** ೩.೪ ॥

**ಪೀಠಿಕೆ ॥** ಹಾಗಾದರೆ ಈ ಶೂದ್ರಶಬ್ದವನ್ನು ಯೌಗಿಕವೆಂದು ಏಕೆ ಅಂಗೀಕರಿಸುವುದು ? ಅದು ರೂಢಾರ್ಥವೆಂದೇ ಏಕೆ ಆಗಲಾರದು. ಯೋಗರೂಢಿಗಳ ಮಧ್ಯದಲ್ಲಿ ರೂಢಿಯೇ ಪ್ರಬಲವು. ತಥಾಚ ಪೌತ್ರಾಯಣನ ದೃಷ್ಟಾಂತದಿಂದಲೇ ಶೂದ್ರನಿಗೆ ವೇದ ವಿದ್ಯಾಧಿಕಾರವು ಸಿದ್ಧಿಸುವುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರ ವಸ್ತುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಕ್ಷತ್ರಿಯತ್ವಾವ(ತ್ವ)ಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ಓಂ ॥ ೩೫ ॥

**ಸೂತ್ರಾರ್ಥ ॥** ಉತ್ತರತ್ರ = ಅತಿಶೀಘ್ರವಾಗಿ ಹೋದಮೇಲೆ ಅಥವಾ ಅರೇ ಎಂದು ಸಂಬೋಸಿದ ಮೇಲೆ ಅಯಮಶ್ವತರೀರಥಃ ಎಂದು ಶ್ರುತವಾದ, ಚೈತ್ರರಥೇ ನ ಲಿಂಗಾತ್=ಚಿತ್ರರಥಸಂಬಂಧಿತ್ವರೂಪವಾದ ಲಿಂಗದಿಂದ ಸ್ವಾಭಾವಿಕ ರಥರೂಪವಾದ ಲಿಂಗದಿಂದಲೂ ಬಹುದಾತೃತ್ವಾದಿರೂಪ ವಾದ ಲಿಂಗದಿಂದಲೂ, ಅಸ್ಯ=ಈ ಪೌತ್ರಾಯಣನಿಗೆ, ಕ್ಷತ್ರಿಯತ್ವಾವಗತೇಶ್ಚ=ಕ್ಷತ್ರಿಯತ್ವವು ಅವಗತವಾಗುವುದರಿಂದಲೂ.

**ಭಾಷ್ಯ ॥ ಅಯಮಶ್ವತರೀರಥಃ। ಇತಿ ಚಿತ್ರರಥಸಂಬಂಧಿತ್ವೇನ ಲಿಂಗೇನ ಪೌತ್ರಾಯಣಸ್ಯ ಕ್ಷತ್ರಿಯತ್ವಾವಗತೇಶ್ಚ ॥ ೬ ॥**

**ಭಾಷ್ಯಾರ್ಥ ॥** ಉತ್ತರತ್ರ=ರೈಕ್ವರನ್ನು ಕುರಿತು ಪೌತ್ರಾಯಣನು ಶೀಘ್ರ ವಾಗಿ ಹೊಂದಿದಮೇಲೆ, ಅಥವಾ ಶೂದ್ರನೆಂದು ಸಂಬೋಧನೆ ಮಾಡಿದಮೇಲೆ, ಅಯಂ ಅಶ್ವತರೀರಥಃ=ಗರ್ದಭಾತ್ ಅಶ್ವಾಯಾಂ ಜಾತಾಃ ಅಶ್ವತರ್ಯಃ=ಕತ್ತೆಯಿಂದ ಹೆಣ್ಣು ಕುದುರೆಯಲ್ಲಿ ಹುಟ್ಟಿದವುಗಳು ಅಶ್ವತರಿಗಳು ಎಂದು ತತ್ವಪ್ರದೀಪದಲ್ಲಿ, ಅಥವಾ ಗರ್ದಭೀಷು ಅಶ್ವೈರ್ಜಾತಾಃ ಅಶ್ವತರ್ಯಃ=ಹೆಣ್ಣು ಕತ್ತೆಗಳಲ್ಲಿ ಕುದುರೆಗಳಿಂದ ಹುಟ್ಟಿದವುಗಳು ಅಶ್ವತರಿಗಳು, ಎಂದು ವ್ಯಾಸತೀರ್ಥೀಯದಲ್ಲಿ, ಅವುಗಳಿಂದ ಯುಕ್ತವಾದ ರಥವು. ಅಶ್ವತರೀರಥವು, ನಿನಗೆ ದಕ್ಷಿಣೆಯಾಗಿ ಆದೆ. (ರೈಕ್ವರನ್ನು ಕುರಿತು ಪೌತ್ರಾಯಣರ ವಾಕ್ಯವು.) ಇತಿ=ಎಂದು, ಚಿತ್ರರಥ ಸಂಬಂಧಿತ್ವೇನ ಲಿಂಗೇನ = ಸ್ವಾಭಾವಿಕವಾದ ಚಿತ್ರರಥ ಸಂಬಂಧಿತ್ವ ರೂಪವಾದ ಲಿಂಗದಿಂದ, ಪೌತ್ರಾಯಣಸ್ಯ=ಪೌತ್ರಾಯಣನಿಗೆ, ಕ್ಷತ್ರಿಯತ್ವಾವಗತೇಶ್ಚ = ಕ್ಷತ್ರಿಯತ್ವವು ಅವಗತವಾಗುವುದರಿಂದಲೂ (ಶೋಕದಿಂದ ಶೀಘ್ರವಾಗಿ ಹೋದದ್ದರಿಂದಲೇ ಶೂದ್ರತ್ವವು, ರೂಢಿಯಿಂದ ಅಲ್ಲ)

**ವಿಶೇಷಾಂಶ ॥** (೧) ಪೌತ್ರಾಯಣನು ಕೊಡತಕ್ಕ ರಥವು ಮತ್ತೊಬ್ಬನದ್ದಲ್ಲ ಎಂದು ತೋರಿಸುವುದಕ್ಕಾಗಿ ಚಿತ್ರರಥೇನ ಎಂದು ಹೇಳಿದ್ದು (೨) ಅಥವಾ ರಥಿತ್ವದಿಂದಲೇ ಕ್ಷತ್ರಿಯತ್ವವು ನಿಶ್ಚಿತವಾಗುತ್ತದೆ. ಚಿತ್ರರಥಿತ್ವೇನ ಎನ್ನುವುದರಿಂದ ಸುತರಾಂ ನಿಶ್ಚಿತವಾಗುತ್ತದೆ ಎಂದು ಸೂಚಿಸುವುದಕ್ಕಾಗಿ ಚೈತ್ರರಥೇನ ಎನ್ನುವರು. (೩) ರೂಢಿಯೇ ಪ್ರಬಲವಾದಾಗ್ಯೂ ಇಲ್ಲಿ ಶ್ರುತಗಳಾದ ಕ್ಷತ್ರಿಯತ್ವ ಜ್ಞಾಪಕ ಅನೇಕ ಲಿಂಗರೂಪ ಬಾಧಕವಿದ್ದುದರಿಂದ ಶೂದ್ರಶಬ್ದಕ್ಕೆ ಯೋಗವೃತ್ತ್ಯಂಗೀಕಾರವೇ ಯುಕ್ತವು.

**ಪೀಠಿಕೆ ॥** ಹಾಗಾದರೆ—ಶ್ರುತಿಯಲ್ಲಿ ಅಶ್ವತರೀರಥಶಬ್ದಪ್ರಯೋಗವಿದ್ದುದರಿಂದ ಸೂತ್ರದಲ್ಲಿಯೂ ಹಾಗೆಯೇ ಪ್ರಯೋಗಿಸಬೇಕಿತ್ತು. ಸೂತ್ರಕಾರರು ಅದನ್ನು ಬಿಟ್ಟು ಚಿತ್ರರಥ ಶಬ್ದವನ್ನು ಹೇಗೆ ಪ್ರಯೋಗಿಸಿದರು. ಎಂದರೆ—

**ಭಾಷ್ಯ ॥ ರಥಸ್ತ್ವಶ್ವತರೀಯುಕ್ತಶ್ಚಿತ್ರ ಇತ್ಯಭಿಧೀಯತೇ। ಇತಿ(ಬ್ರಾಹ್ಮೇ) ಬ್ರಹ್ಮಾಂಡೇ ॥ ೭ ॥**

**ಭಾಷ್ಯಾರ್ಥ ॥** ಅಶ್ವತರೀಯುಕ್ತವಾದ ರಥವೇ ಚಿತ್ರ ಎನಿಸಿಕೊಳ್ಳಲ್ಪಡುತ್ತದೆ ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ಹೀಗೆ ಬ್ರಾಹ್ಮಪುರಾಣದಲ್ಲಿ ಹೇಳಿದ್ದರಿಂದ ಶ್ರುತಿಸೂತ್ರಗಳಿಂದ ವಿಸಂವಾದವಿಲ್ಲ.

**ಪೀಠಿಕೆ ॥** ಹೀಗೆ ಸಾಕ್ಷಾತ್ತಾಗಿಯೇ ಸ್ವಾಭಾವಿಕ ರಥದಿಂದ ಪೌತ್ರಾಯಣನಿಗೆ ಕ್ಷತ್ರಿಯತ್ವವು ಸಾಧಿತವಾಗಿದೆ. ಸ್ವಾಭಾವಿಕ ರಥವಿದ್ದರೂ ಈತನಿಗೆ ವರ್ಣಾವರತ್ವವು ಏಕೆ ಆಗಲಾರದು, ಎಂದಪ್ರಯೋಜಕತ್ವವನ್ನಾಶಂಕಿಸಿಕೊಂಡು ಹೀಗೆ ಹೇಳಕೂಡದು. ಆಗಂತುಕರಥವೂ ವೇದವಿಲ್ಲದೆ ಕೂಡಲಾರದು. ವೇದಾಧಿಕಾರವು ಶೂದ್ರನಲ್ಲಿ ಕೂಡಲಾರದು. ರಥಮಾತ್ರದಿಂದ ವೇದಾಧಿಕಾರವನ್ನು ಅನುಮೇಯಿಸಿ ಪೌತ್ರಾಯಣನಿಗೆ ಶೂದ್ರತ್ವಾಭಾವವು ಸಿದ್ಧಿಸುತ್ತದೆ, ಎನ್ನುವ ಅಭಿಪ್ರಾಯದಿಂದ ರಥದಿಂದ ವೇದಾನುಮಾನದಲ್ಲಿ ವ್ಯಭಿಚಾರಶಂಕೆಯನ್ನು ಪರಿಹರಿಸುವುದಕ್ಕಾಗಿ ಆಗಮದಿಂದ ಎರಡು ವ್ಯಾಪ್ತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ । ಇತಿ(ಚ) ಬ್ರಹ್ಮವೈವರ್ತೇ ॥ ೩೫ ॥ ॥ ೮ ॥**

**ಭಾಷ್ಯಾರ್ಥ ॥** ಎಲ್ಲಿ ವೇದವೋ ಅಲ್ಲಿಯೇ ರಥವೂ, ಎಲ್ಲಿ ವೇದವಿಲ್ಲವೋ, ಅಲ್ಲಿ ರಥವಿಲ್ಲ ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. (ಆದುದರಿಂದ ಪೌತ್ರಾಯಣನು ಶೂದ್ರನಲ್ಲ)

**ವಿಶೇಷಾಂಶ ॥** (೧) ಸ್ಮೃತಿಯಲ್ಲಿ ಆಗಂತುಕ ಸ್ವಾಭಾವಿಕ ಸಾಧಾರಣವಾದ ರಥಮಾತ್ರವು ವಿವಕ್ಷಿತವಾದ ಪ್ರಯುಕ್ತ ಸಮವ್ಯಾಪ್ತ್ಯಭಿಪ್ರಾಯದಿಂದಲಾಗಲೀ **ಯತ್ರ ವೇದಃ** ಎಂದು ಉಕ್ತಿಯು. (೨) **ಯತ್ರ ರಥಃ ತತ್ರ ವೇದಃ** ಎಂದು ಯೋಜನಾ ಇಟ್ಟುಕೊಂಡರೆ ಅನುಪಪತ್ತಿಯಿಲ್ಲ. ಇದರಿಂದ ವ್ಯಾಪ್ತಿನಿಶ್ಚಯವಾಗುವುದರಿಂದ ವ್ಯಭಿಚಾರಶಂಕೆಯು ಇಲ್ಲ. ರಥಮಾತ್ರದಿಂದ ವೇದವನ್ನು ಅನುಮೇಯಿಸಿ ಶೂದ್ರನಲ್ಲವೆಂದು ನಿಶ್ಚಯವಾಗುವುದರಿಂದ ಪೌತ್ರಾಯಣನಿಗೆ ವೇದಬಾಹ್ಯ

ವರ್ಣಾವರತ್ವವನ್ನು ಶಂಕಿಸಕೂಡದು. (೩) ಬ್ರಾಹ್ಮಣಾದಿಗಳಲ್ಲಿ ಸಾಧಾರಣವಾದ ರಥಿತ್ವದಿಂದ ಪೌತ್ರಾಯಣನು ವೈದಿಕನೆಂದು ನಿಶ್ಚಯವಾಗುವುದರಿಂದ ಶೂದ್ರನಲ್ಲವೆಂದು ಸಿದ್ಧಿಸುವುದಾದರೂ ಕ್ಷತ್ರಿಯನೆಂದು ಹೇಗೆ ನಿಶ್ಚಯವಾಗುವುದು, ಎನ್ನಕೂಡದು. ರಥಿತ್ವಮಾತ್ರವು ವೈದಿಕರಲ್ಲಿ ವ್ಯಾಪ್ತವಾದ ಪ್ರಯುಕ್ತ ಸ್ವಾಭಾವಿಕ ರಥವತ್ವವು ವೈದಿಕವಿಶೇಷರಾದ ಕ್ಷತ್ರಿಯರಲ್ಲಿ ವ್ಯಾಪ್ತವಾಗಿದೆ ಎಂದು ಶ್ರುತಿಗೆ ಅಭಿಪ್ರಾಯವು. (೪) ಹಾಗಾದರೆ ಅಪಲಾಯನಂ ಚ ಶೂದ್ರಸ್ಯ ಎನ್ನುವುದರಿಂದ ಶೂದ್ರನಿಗೂ ಯೋದ್ಧೃತ್ವವು ಪ್ರಾಪ್ತವಾಗುವುದರಿಂದ ತದನ್ಯಥಾನುಪಪತ್ತಿಯಿಂದ ಶೂದ್ರನಿಗೂ ರಥವು ತೋರುವುದರಿಂದ ಶೂದ್ರನಲ್ಲಿ ವ್ಯಭಿಚಾರವೆಂದು ಹೇಳಕೂಡದು. ಫಲಾಯನ ಮಾಡದೆ ಯೋದ್ಧೃತ್ವವು ಕಾಲಾಳುವಿನಲ್ಲಿಯೂ (ಶೂದ್ರನಲ್ಲಿಯೂ) ಕೂಡುವುದರಿಂದ ಇದರಿಂದ ಶೂದ್ರನಿಗೆ ರಥವದೆ ಎಂದು ಸಿದ್ಧವಾಗಲಾರದು. ॥ ೩೫ ॥

**ಪೀಠಿಕೆ ॥** ರಥವಿದ್ದ ಪ್ರಯುಕ್ತ ಪೌತ್ರಾಯಣನು ಕ್ಷತ್ರಿಯನೆಂದು ಅವಗತನಾಗುವುದರಿಂದ ಆ ಲಿಂಗದಿಂದ ಶೂದ್ರನಿಗೆ ವೇದಾಧಿಕಾರವು ಸಿದ್ಧಿಸುವುದಿಲ್ಲವೆಂದು ಯಾವುದು ಉಕ್ತವಾಗಿದೆಯೋ, ಅದು ಯುಕ್ತವಲ್ಲ. ಶೂದ್ರನಿಗೂ ರಥವಿರಬಹುದು. ರಥವು ಇರಬೇಕಾದರೆ ವೇದವು ಆವಶ್ಯಕವಾದುದರಿಂದ ಶೂದ್ರನಲ್ಲಿ ವೇದವು ಇಲ್ಲದಿರುವುದರಿಂದ ರಥವೂ ಇಲ್ಲವೆಂದು ಹೇಳಕೂಡದು. ಶೂದ್ರನಿಗೂ ವೇದಾಧಿಕಾರವನ್ನು ಅಂಗೀಕರಿಸುವೆವು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ ಓಂ ॥ ೩೬ ॥

**ಸೂತ್ರಾರ್ಥ ॥** ಸಂಸ್ಕಾರಪರಾಮರ್ಶಾತ್=ತಮಧ್ಯಾಪಯೀತ ಎನ್ನುವ ತಚ್ಛಬ್ದದಿಂದ ಪೂರ್ವಪ್ರಕೃತವಾದ ಉಪನಯನಾಖ್ಯ ಸಂಸ್ಕಾರಮಾತ್ರಕ್ಕೆ ಪರಾಮರ್ಶ ವಿದ್ದುದರಿಂದಲೂ, **ವೇದಃ ಕೃತ್ಸ್ನಃ** ಎನ್ನುವ ಶ್ರುತಿಯಿಂದಲೂ ಶೂದ್ರನಿಗೆ, ತದಭಾವಾಭಿಲಾಪಾಚ್ಚ=ನಾಗ್ನಿರ್ನ **ಯಜ್ಞಃ** ಎನ್ನುವ ಶ್ರುತಿಯಲ್ಲಿ ಉಪನಯನಾದಿಸಂಸ್ಕಾರವಿಲ್ಲವೆಂದು ಹೇಳಿದ್ದರಿಂದ ಶೂದ್ರನಿಗೆ ವೇದಾಧಿಕಾರವು ಇಲ್ಲ.

**ಪೀಠಿಕೆ ॥** ಅಷ್ಟವರ್ಷಂ ಬ್ರಾಹ್ಮಣಮುಪನಯೀತ । ತಮಧ್ಯಾಪಯೀತ ಎನ್ನುವ ಶ್ರುತಿಯಲ್ಲಿ ಬ್ರಾಹ್ಮಣನಿಗೇನೇ ಅಧ್ಯಯನದಲ್ಲಿ ಉಪನಯನರೂಪ ಸಂಸ್ಕಾರಾಪೇಕ್ಷೆಯು, ಇತರರಿಗೆ ಇಲ್ಲ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಪ್ರವೃತ್ತವಾದ ಸಂಸ್ಕಾರಪರಾಮರ್ಶಾತ್ ಎನ್ನುವ ಅಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅಷ್ಟವರ್ಷಂ ಬ್ರಾಹ್ಮಣಮುಪನಯೀತ । ತಮಧ್ಯಾಪಯೀತ (ಗೌ.ಸೂತ್ರ. ಅ.೧)। ಇತ್ಯಧ್ಯಯನಾರ್ಥಂ (ನಸ್ಯ) ಸಂಸ್ಕಾರಪರಾಮರ್ಶಾತ್ ॥ ೬ ॥**

**ಭಾಷ್ಯಾರ್ಥ ॥** ಎಂಟು ವರ್ಷವುಳ್ಳ ಬ್ರಾಹ್ಮಣನನ್ನು ಉಪನಯನಮಾಡಬೇಕು. (ಎಂದು ಉಪನಯನವನ್ನು ಹೇಳಿ) ಆ ಉಪನೀತನಾದ ಮಾಣವಕನನ್ನು (ತಾನು ಆಚಾರ್ಯನು ಆಗಬೇಕೆಂದು ಇಚ್ಛಿಸತಕ್ಕವನು) ಅಧ್ಯಯನ ಮಾಡಿಸಬೇಕು. ಎನ್ನುವ (ಶ್ರುತಿಯಲ್ಲಿ) ಅಧ್ಯಯನಕ್ಕೆ ಅಂಗವಾಗಿ ಉಪನಯನಾಖ್ಯ ಸಂಸ್ಕಾರವನ್ನು ಮಾತ್ರ ಹೇಳತಕ್ಕುದಾದುದರಿಂದ.

**ವಿಶೇಷಾಂಶ ॥** ಸೂತ್ರದಲ್ಲಿಯೂ ಭಾಷ್ಯದಲ್ಲಿಯೂ **ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋದ್ವಿಜನ್ಮನಾ** ಎನ್ನುವ ಸ್ಮೃತಿಸಮುಚ್ಚಾಯಕವಾದ ಚ ಶಬ್ದವು.

**ಪೀಠಿಕೆ ॥** ಹಾಗಾದರೆ ಅಧ್ಯಯನಕ್ಕೆ ಉಪನಯನಾಖ್ಯ ಸಂಸ್ಕಾರಸಾಪೇಕ್ಷತ್ವವು ಇರಲಿ. ಆದಾಗ್ಯೂ ಶೂದ್ರನಿಗೆ ವೇದಾಧ್ಯಯನವು ಇಲ್ಲವೆನ್ನುವುದು ಸಿದ್ಧಿಸಲಾರದು. ಶೂದ್ರನಿಗೂ ಸಂಸ್ಕಾರವು ಕೂಡಬಹುದು, ಎಂದರೆ—

**ಭಾಷ್ಯ ॥ ನಾಗ್ನಿರ್ನ ಯಜ್ಞೋ ನ ಕ್ರಿಯಾ ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ। ಇತಿ ಪೈಂಗಿಶ್ರುತೌ ಸಂಸ್ಕಾರಾಭಾವಾಭಿಲಾಪಾಚ್ಚ ॥ ೧೦ ॥**

**ಭಾಷ್ಯಾರ್ಥ ॥** ಶೂದ್ರನಿಗೆ ಶ್ರೌತವಾದ ಅಗ್ನಿಯೂ, ಸ್ಮಾರ್ತಾಗ್ನಿಯೂ ಇಲ್ಲ, ಅಗ್ನಿಹೋತ್ರಾದಿ ಯಜ್ಞವಾಗಲೀ, ದೈವ ಪಿತ್ರ್ಯಾದಿ ಯಜ್ಞವಾಗಲೀ ಇಲ್ಲ, ಸಂಧ್ಯಾವಂದನಾದಿರೂಪ ಕ್ರಿಯೆಯಾಗಲೀ, ಉತ್ತರ ಕ್ರಿಯೆಯಾಗಲೀ ಇಲ್ಲ, ಉಪನಯನಾದಿರೂಪ ಸಂಸ್ಕಾರವೂ ಇಲ್ಲ, ಕೃಚ್ಛ್ರಚಾಂದ್ರಾಯಣಾದಿ ವ್ರತಗಳೂ ಇಲ್ಲ, ಎನ್ನುವ ಪೈಂಗಿಶ್ರುತಿಯಲ್ಲಿ ಸಂಸ್ಕಾರವಿಲ್ಲವೆಂದು ಹೇಳಿದ್ದರಿಂದ (ಶೂದ್ರನಿಗೆ ವೇದಾಧಿಕಾರವಿಲ್ಲ, ರಥಿತ್ವವೂ ಇಲ್ಲ)

**ಪೀಠಿಕೆ ॥** ಹೀಗೆ ಉಪನಯನರೂಪ ಸಂಸ್ಕಾರವಿಲ್ಲದಿರುವುದರಿಂದ ವೇದದಲ್ಲಿ ಅಧಿಕಾರ ವಿಲ್ಲವೆಂದಾದರೆ ಉತ್ತಮ ಸ್ತ್ರೀಯರಿಗೂ ಸಂಸ್ಕಾರವಿಲ್ಲದಿರುವುದರಿಂದ ಅಧಿಕಾರವಿಲ್ಲವೆಂದಾಗ ಬೇಕಾಗುವುದು. ಸಂಸ್ಕಾರವಿಲ್ಲದಿದ್ದರೂ ಅವರಿಗೆ ಅಧಿಕಾರವಿದ್ದರೆ ಶೂದ್ರನಿಗೂ ಅಧಿಕಾರವು ಬರಬೇಕಾಗುವುದು, ಎಂದರೆ—

**ಭಾಷ್ಯ ॥ ಉತ್ತಮ(ಮಾನಾಂ ತು) ಸ್ತ್ರೀಣಾಂ ತು ನ(ಸ್ತ್ರೀಣಾಂ ನ) ಶೂದ್ರವತ್। ಸಪತ್ನೀಂ ಮೇ ಪರಾಧಮ। ಇತ್ಯಾದಿಷ್ವಧಿಕಾರದರ್ಶನಾತ್ ॥ ೧೧ ॥**

**ಭಾಷ್ಯಾರ್ಥ ॥** ಶಚೀ ಯಮೀ ಊರ್ವಶೀ ಮೊದಲಾದ ಉತ್ತಮ ಸ್ತ್ರೀಯರಿಗೆ ಶೂದ್ರರಂತೆ (ಉಪನಯನಾಖ್ಯ ಸಂಸ್ಕಾರವಿಲ್ಲದಿರುವುದರಿಂದ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು) ಹೇಳಕೂಡದು. (ಏಕೆಂದರೆ) ಸಪತ್ನೀಂ ಮೇ ಪರಾಧಮ ಇದು ಮೊದಲಾದ ವಿದ್ಯೆಗಳಲ್ಲಿ (ಉತ್ತಮಸ್ತ್ರೀಯರು ದ್ರಷ್ಟೃಗಳು ಆದುದರಿಂದ) ಅಧಿಕಾರವು ಕಾಣದ್ದರಿಂದ.

**ವಿಶೇಷಾಂಶ ॥ ಸಪತ್ನೀಂ ಮೇ ಪರಾಧಮ। ಪತಿಂ ಮೇ ಕೇವಲಂ ಕುರು। ಉತ್ತರಾಹಮುತ್ತರೇದುತ್ತರ ಉತ್ತರಾಭ್ಯಃ ।** ಇದು ಶಚೀವಾಕ್ಯವು. ಎಲೋ ಪೂಜ್ಯರೇ, ನನ್ನ ಸವತಿಯನ್ನು ಅಂದರೆ ನನ್ನಿಂದ ವ್ಯತಿರಿಕ್ತಳಾದ ನನ್ನ ಗಂಡನ ಪ್ರಿಯಳಾದವಳನ್ನು ತಿರಸ್ಕರಿಸು. ನನ್ನ ಗಂಡನನ್ನು ನನ್ನಲ್ಲಿಯೇ ಆಸಕ್ತನನ್ನಾಗಿ ಮಾಡು. ನಾನು ಸೌಂದರ್ಯದಿಂದ ಉತ್ಕೃಷ್ಟರಾದ ಸ್ತ್ರೀಯರಿಂದ ಉತ್ಕೃಷ್ಟಳಾಗಿ ಪ್ರಿಯೋತ್ತಮಳಾಗಿ ಸವತಿಕ್ಲೇಶದಿಂದ ದಾಟುವೆನು. ಆದಿಪದದಿಂದ **ಉದತೀ ಪಶ್ಯವಃ ಸೋಮ ಏಕೇಭ್ಯಃ ಪವತೇ। ಉದಸೌ ಸೂರ್ಯೋ ಅಗಾತ್।** ಇದು ಮೊದಲಾದ ದೇವಮಾತೃ ಯಮೀ ಇತ್ಯಾದಿಗಳಿಂದ ದೃಷ್ಟಗಳಾದ ಮಂತ್ರಗಳನ್ನು ಇಟ್ಟುಕೊಳ್ಳಬೇಕು.

**ಪೀಠಿಕೆ ॥** ಉತ್ತಮ ಸ್ತ್ರೀಯರಿಗೆ ವೇದಾಧಿಕಾರವು ಇರುವುದಾದರೆ ಉಪನಯನ ರೂಪ ಸಂಸ್ಕಾರವಿಲ್ಲದವರಿಗೆ ವೇದಾಧಿಕಾರ ಇಲ್ಲವೆಂದು ಹೇಳಿದ್ದು ಹೇಗೆ ಎಂದರೆ—

**ಭಾಷ್ಯ ॥ ಸಂಸ್ಕಾರಾಭಾವೇನಾಭಾವಸ್ತು ಸಾಮಾನ್ಯೇನ ॥ ೧೨ ॥**

**ಭಾಷ್ಯಾರ್ಥ ॥** ಸಂಸ್ಕಾರವಿಲ್ಲದಿರುವುದರಿಂದ ಸೂತ್ರದಲ್ಲಿ ವೇದಾಧಿಕಾರವಿಲ್ಲವೆಂದು ಹೇಳಿದ್ದು ಸಾಮಾನ್ಯನ್ಯಾಯದಿಂದ ಸಾಪವಾದ ನಿಯಮಾಭಿಪ್ರಾಯದಿಂದಲೇ (ನಿರಪವಾದ ನಿಯಮದಿಂದ ಅಲ್ಲ)

**ವಿಶೇಷಾಂಶ ॥** ತಥಾಚ ಸಂಸ್ಕಾರವಿಲ್ಲದಿದ್ದರೆ ವೇದದಲ್ಲಿ ಅಧಿಕಾರವಿಲ್ಲ ಎನ್ನುವ ಸಾಮಾನ್ಯ ವ್ಯಾಪ್ತಿಗೆ ಶಚ್ಯಾದಿಗಳಲ್ಲಿ ವೇದವಿದ್ಯಾಧಿಕಾರವು ಕಂಡದ್ದರಿಂದ ಅಪವಾದದಿಂದ ಭಂಗವಾದಾಗ್ಯೂ ಶೂದ್ರಾದಿಗಳಲ್ಲಿಯೂ ವ್ಯಾಪ್ತಿಗೆ ಭಂಗವನ್ನು ಕಲ್ಪಿಸಕೂಡದು. ಶೂದ್ರನಲ್ಲಿ ವೇದಾಧಿಕಾರವದೆ ಎನ್ನುವಲ್ಲಿ ವಿಶೇಷಪ್ರಮಾಣರೂಪವಾದ ಅಪವಾದಕವಿಲ್ಲ.

**ಪೀಠಿಕೆ ॥** ಸ್ತ್ರೀಯರಿಗೆ ಉಪನಯನವಿಲ್ಲದಿದ್ದರೂ ಹಿಂದಿನ ವ್ಯಾಪ್ತಿಯು ಸಾಮಾನ್ಯ ವಾದುದರಿಂದ ಬಾಧಕವಿದ್ದರೆ ಬಿಡತಕ್ಕದು. ಆದಕಾರಣ ಉತ್ತಮ ಸ್ತ್ರೀಯರಿಗೆ ವೇದಾಧಿಕಾರವು ಇದೆ ಎಂದು ಹೇಳಿದ್ದು ಈ ಉಪನಯನಾಖ್ಯ ಸಂಸ್ಕಾರವು ಇಲ್ಲ ದಿದ್ದರೂ ಉಪನಯನಪ್ರತಿನಿಧಿ ಸಂಸ್ಕಾರವಿದ್ದ ಪ್ರಯುಕ್ತವೂ ಅಧಿಕಾರವದೆ ಎನ್ನುತ್ತಾರೆ—

**ಭಾಷ್ಯ ॥ ಅಸ್ತಿ ಚ ತಾಸಾಂ ಸಂಸ್ಕಾರಃ। ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ । ಇತಿ ಸ್ಮೃತೇಃ ॥ ೩೬ ॥ ॥ ೧೩ ॥**

**ಭಾಷ್ಯಾರ್ಥ ॥** ಪುರುಷರಿಗೆ ಹೇಗೆ ಉಪನಯನ ಸಂಸ್ಕಾರವೋ, ಹಾಗೆಯೇ ಸ್ತ್ರೀಯರಿಗೆ ವಿವಾಹ ಕ್ರಿಯೆಯೇ ಸಂಸ್ಕಾರವು ಎನ್ನುವ ವ್ಯಾಸಸ್ಮೃತಿಯಿಂದ. (ಸ್ತ್ರೀಯರಿಗೆ ಅಧಿಕಾರವಿದೆ ಎಂದು ತಿಳಿಯುತ್ತದೆ.)

**ವಿಶೇಷಾಂಶ ॥** (೧) ಸಂಸ್ಕಾರಮಾತ್ರವೇ ವೇದದಲ್ಲಿ ಅಧಿಕಾರಕ್ಕೆ ಪ್ರಯೋಜಕವೆಂದು ಹೇಳುವುದಾದರೆ ಅಧಮ ಸ್ತ್ರೀಯರಿಗೂ ಸಂಸ್ಕಾರವಿದ್ದುದರಿಂದ ವೇದದಲ್ಲಿ ಅಧಿಕಾರವು ಬರಬೇಕಾಗು ವುದು. ಎಂದು ಹೇಳಕೂಡದು. ನಿಷೇಧವಿಲ್ಲದ ಇದ್ದು ಸಂಸ್ಕಾರವೇ ಅಧಿಕಾರಕ್ಕೆ ಪ್ರಯೋಜಕವು. (೨) ಹಾಗಾದರೆ ಉತ್ತಮ ಸ್ತ್ರೀಯರಿಗೆ ಸಂಸ್ಕಾರವಿದ್ದ ಪ್ರಯುಕ್ತವೇ ಅಧಿಕಾರವದೆ. ಹಿಂದೆ ಹೇಳಿದ ನ್ಯಾಯಕ್ಕೆ ಭಂಗವಿಲ್ಲವೆಂದು ಹೇಳಲಿಕ್ಕೆ ಬರುವುದರಿಂದ ಆ ಸ್ತ್ರೀಯರಲ್ಲಿ ಸಂಸ್ಕಾರವಿಲ್ಲವೆಂದು ಅಂಗೀಕರಿಸಿಕೊಂಡು ಹಿಂದೆ ಹೇಳಿದ ನ್ಯಾಯಕ್ಕೆ ಅಪವಾದವನ್ನು ಏಕೆ ಹೇಳಿದ್ದು ಎಂದರೆ ಗುರೂಪದೇಶಾದಿ ಗಳಿಲ್ಲದಿರುವ ಕೆಲವು ತಿರ್ಯಕ್ ಪ್ರಾಣಿ ಮೊದಲಾದವುಗಳಿಗೂ ಸಂಗ್ರಹವಾಗುವುದಕ್ಕಾಗಿ ಹೇಳಿದ್ದು. ತಿರ್ಯಕ್ ಪ್ರಾಣಿಗಳಿಗೂ ಆಯಮಗ್ನೇ ಜರಿತಾ ಇದು ಮೊದಲಾದ ವಿದ್ಯೆಗಳಲ್ಲಿ ಅಧಿಕಾರವು ಕಂಡದೆ. ॥ ೩೬ ॥

**ಪೀಠಿಕೆ ॥** ಹಾಗಾದರೆ ಶೂದ್ರನಲ್ಲಿ ಸಂಸ್ಕಾರವಿಲ್ಲದಿರುವುದರಿಂದ ವೇದವಿದ್ಯೆಯಲ್ಲಿ ಅಧಿಕಾರ

ವಿಲ್ಲವೆನ್ನುವುದು ಅಯುಕ್ತವು. ಶೂದ್ರಂ ನೋಪನಯೀತ ಎಂದು ನಿಷೇಧವಿಲ್ಲದಿರುವುದರಿಂದ ಶೂದ್ರನಿಗೂ ಸಂಸ್ಕಾರವು ಕೂಡಬಹುದು. ನಾಗ್ನಿರ್ನ ಯಜ್ಞಃ ಎನ್ನುವ ಶ್ರುತಿಯಲ್ಲಿ ಆದರೂ ಶೂದ್ರನಿಗೆ ಸಂಸ್ಕಾರಾಭಾವವೇ ಹೇಳಲ್ಪಡುತ್ತದೆ. ಶೂದ್ರನಿಗೆ ಉಪನಯನವನ್ನು ಮಾಡಬಾರದು ಎಂದು ನಿಷೇಧಿಸುವುದಿಲ್ಲ. ಆದಪ್ರಯುಕ್ತ ವಿರೋಧವಿಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ತದಭಾವನಿರ್ಧಾರಣೇ ಚ ಪ್ರವೃತ್ತೇಃ ಓಂ ॥ ೩೭ ॥

**ಸೂತ್ರಾರ್ಥ ॥** ಶ್ರುತಿಮಾತ್ರದಿಂದಲೇ ಶೂದ್ರನಿಗೆ ಸಂಸ್ಕಾರವಿಲ್ಲವೆಂದಲ್ಲ, ಮತ್ತೆ ಸಂಸ್ಕಾರ ನಿಷೇಧಜ್ಞಾಪಕಲಿಂಗದಿಂದಲೂ ತಥಾಚ ಸತ್ಯಕಾಮನಿಗೆ ಸತ್ಯವಚನದಿಂದ (ಅಂದರೆ— ಮನಸ್ಸು ವಚನ ಶರೀರ ಕರ್ಮಗಳಿಗೆ ವೈಪರೀತ್ಯವಿಲ್ಲದಿರುವುದು ಆರ್ಜವವು, ಅದೇವೇ ಸತ್ಯತ್ವವು. ಅಂತಹ ವಚನದಿಂದ ಜ್ಞಾಪಿತವಾದ ಋಜುತ್ವದಿಂದ) ಇಂತಹ ಸತ್ಯವಚನವನ್ನು ಅಬ್ರಾಹ್ಮಣನು ಹೇಳಲಾರನು ಎಂದು ತದಭಾವನಿರ್ಧಾರಣೇ ಚಃಸತ್ಯಕಾಮನಿಗೆ ಶೂದ್ರತ್ವಾಭಾವವನ್ನು ನಿರ್ಣಯಮಾಡಿಯೇ (ಶೂದ್ರ ನಲ್ಲವೆಂದು ಅನುಮೇಯಿಸಿಯೇ) ಸಮಿಧಂ ಸೋಮ್ಯೋಽಪಹರ ಉಪ ತ್ವಾ ನೇಷ್ಯೇ ಎಂದು ಸತ್ಯಕಾಮನಿಗೆ ಉಪನಯನಾಖ್ಯ ಸಂಸ್ಕಾರದಲ್ಲಿ ಗೌತಮ ಋಷಿಗಳಿಗೆ ಪ್ರವೃತ್ತಿಯು ಕಂಡದ್ದರಿಂದ ಶೂದ್ರನಿಗೆ ಸಂಸ್ಕಾರನಿಷೇಧಾಭಾವವಿಲ್ಲ. ಶೂದ್ರನಿಗೆ ಉಪನಯನನಿಷೇಧವಿಲ್ಲದಿದ್ದರೆ ಗೌತಮರು ಶೂದ್ರನಲ್ಲವೆಂದು ನಿಶ್ಚಯಿಸಿ ಕೊಂಡೇ ಏಕೆ ಪ್ರವರ್ತಿಸ್ಯಾರು? ಆದ ಪ್ರಯುಕ್ತ ನಿಷೇಧವದೆ ಎಂದು ತಿಳಿಯುತ್ತದೆ.

**ಭಾಷ್ಯ ॥ ನಾಹಮೇತದ್ವೇದ ಭೋ ಯದ್ಗೋತ್ರೋಽಹಮಸ್ಮಿ (ಛಾ.ಉ.೪.೪.) । ಇತಿ ಸತ್ಯವಚನೇನ ಸತ್ಯಕಾಮಸ್ಯ ಶೂದ್ರತ್ವಾಭಾವನಿರ್ಧಾರಣೇ ಹಾರಿದ್ರುಮತಸ್ಯ ನೈತದಬ್ರಾಹ್ಮಣೋ (ವಿ) ವಕ್ತುಮರ್ಹತಿ (ಛಾ.ಉ.೪.೪.)। ಇತಿ ತತ್ಸಂಸ್ಕಾರೇ ಪ್ರವೃತ್ತೇಶ್ಚ ॥ ೩೭ ॥ ॥ ೧೪ ॥**

**ಭಾಷ್ಯಾರ್ಥ ॥** ಭೋಃ=ಪೂಜ್ಯರಾದ ಗೌತಮರೇ, ಅಹಮಯಂ=ಈ ನಾನು, ಯದ್ಗೋತ್ರಃ ಅಸ್ಮಿ=ಯಾವ ಗೋತ್ರವುಳ್ಳವನು ಆಗಿರುತ್ತೇನೆ, ಏತತ್=ಈ ವೇದ್ಯವಾದುದನ್ನು ನ ವೇದ=ತಿಳಿಯಲಾರೆ, ಇತಿ=ಎಂದು ಸತ್ಯಕಾಮಾಖ್ಯ ಋಷಿಯ, ಸತ್ಯವಚನೇನ=ವಾಕ್ ಮನಸ್ಸುಗಳಲ್ಲಿ ಏಕರೂಪವಾದ ಯಥಾರ್ಥ ವಚನದಿಂದ ಜ್ಞಾಪಿತವಾದ ಆರ್ಜವದಿಂದ, ಏತತ್=ಆರ್ಜವ (ಸರಳ) ಸಂಯುಕ್ತವಾದ ಮಾತನ್ನು ಅಬ್ರಾಹ್ಮಣಃ=ತ್ರೈವರ್ಣಿಕರಿಂದ ಇತರನಾದ ಶೂದ್ರನು, ವಿವಕ್ತುಂ=ಸರ್ವಥಾ ಹೇಳಲಿಕ್ಕೆ, ನಾರ್ಹತಿ=ಯೋಗ್ಯನಾಗುವುದಿಲ್ಲ (ಆದಪ್ರಯುಕ್ತ ಹೀಗೆ ಹೇಳತಕ್ಕ ನೀನು ಬ್ರಾಹ್ಮಣನೇ ಆಗಿರುತ್ತಿ) ಎಂದು ಶೂದ್ರತ್ವಾಭಾವನಿರ್ಧಾರಣೇ=ಶೂದ್ರನಲ್ಲವೆಂದು ನಿಶ್ಚಯಿಸಿಕೊಂಡೇ, ತತ್ಸಂಸ್ಕಾರೇ= ಸತ್ಯಕಾಮನಿಗೆ ಉಪನಯನಾಖ್ಯ ಸಂಸ್ಕಾರದಲ್ಲಿ, ಹಾರಿದ್ರುಮತಸ್ಯ=ಹರಿದ್ರುಮತ ಎನ್ನುವ ಋಷಿಗಳ ಪುತ್ರರಾದ ಗೌತಮ ಋಷಿಗಳಿಗೆ, ಪ್ರವೃತ್ತೇಃ=ಸಂಸ್ಕಾರದಲ್ಲಿ ಪ್ರವೃತ್ತಿಯು ಕಂಡದ್ದರಿಂದ (ಶೂದ್ರನಿಗೆ ಸಂಸ್ಕಾರ ನಿಷೇಧಾಭಾವವಿಲ್ಲ)

**ವಿಶೇಷಾಂಶ** ॥ (೧) ಶ್ರುತಿಯಲ್ಲಿದ್ದ ಬ್ರಾಹ್ಮಣಶಬ್ದವು ಬ್ರಹ್ಮಜ್ಞಾನಕ್ಕೆ ಯೋಗ್ಯನಾದ ತ್ರೈವರ್ಣಿಕಪರವು (೨) ಛಾಂದೋಗ್ಯದಲ್ಲಿ ಹೀಗೆ ಆಖ್ಯಾಯಿಕೆಯು ಇದೆ. ಸತ್ಯಕಾಮನು ಜಬಾಲಾ ಎನ್ನುವ ತಾಯಿಯ ಸಮೀಪಕ್ಕೆ ಹೋಗಿ ಕೇಳವನು. ತಾಯಿಯೇ ತಾನು ವೇದಾಧ್ಯಯನ ಮಾಡುವುದಕ್ಕಾಗಿ ಆಚಾರ್ಯರ ಸಮೀಪಕ್ಕೆ ಹೋಗುವೆನು. ಅಧ್ಯಯನ ಮಾಡಿಸಬೇಕಾದರೆ ಉಪನಯನಾಖ್ಯ ಸಂಸ್ಕಾರದ ಅಪೇಕ್ಷೆಯಿದ್ದುದರಿಂದ ಉಪನಯನವಿಲ್ಲದೆ ಗುರುಗಳು ನನಗೆ ಅಧ್ಯಯನ ಮಾಡಿಸಲಾರರು. ಗೋತ್ರಾದಿಗಳನ್ನು ಹೇಳದೆ ಇದ್ದರೆ ಉಪನಯನವನ್ನು ಮಾಡಲಾರರು. ಆದ ಪ್ರಯುಕ್ತ ನನ್ನ ಗೋತ್ರ ಯಾವುದು? ಎಂದು ಕೇಳಿದಾಗ ತಾಯಿಯ ಮಗನಾದ ಸತ್ಯಕಾಮನ ಹತ್ತಿರ ಎಲೋ ಮಗನೇ ನಿನ್ನ ಗೋತ್ರವು ಯಾವುದು ಎನ್ನುವುದನ್ನು ನಾನು ತಿಳಿಯಲಾರೆ. ಎಂದು ಹೇಳಿದಾಗ ಸತ್ಯಕಾಮನು ಗೌತಮರ ಸಮೀಪಕ್ಕೆ ಹೋಗಿ ಪೂಜ್ಯರೇ ಬ್ರಹ್ಮಚರ್ಯಕ್ಕಾಗಿ ನಿಮ್ಮನ್ನು ಹೊಂದುವೆನು ಎಂದು ಹೇಳದನು. ಹೀಗೆ ಹೇಳಿಸಿಕೊಳ್ಳಲ್ಪಟ್ಟ ಗೌತಮರು ನಿನ್ನ ಗೋತ್ರವನ್ನು ಹೇಳು ಎಂದು ಹೇಳಿದರು. ಆಗ ಸತ್ಯಕಾಮನು ಪೂಜ್ಯರೇ ನನ್ನ ಗೋತ್ರವು ಯಾವುದು ಎನ್ನುವುದನ್ನು ನಾನು ತಿಳಿಯಲಾರೆ ಎಂದನು. ಹೀಗೆ ಸತ್ಯಕಾಮನ ಸತ್ಯವಚನದಿಂದ ಸರಳತನವನ್ನು ತಿಳಿದು ತ್ರೈವರ್ಣಿಕೇತರನು ಇಂತಹ ಸತ್ಯವಚನವನ್ನು ಹೇಳಲಾರನು. ಆದಪ್ರಯುಕ್ತ ಹೀಗೆ ಹೇಳತಕ್ಕ ನೀನು ಬ್ರಾಹ್ಮಣನೇ ಆಗಿರುತ್ತಿ. ಆದಪ್ರಯುಕ್ತ ಸಮಿಧೆಯನ್ನು ತಾ. ನಿನಗೆ ಉಪನಯನಮಾಡುವೆನು ಎಂದರು. (೩.) **ಆರ್ಜವಂ ಬ್ರಾಹ್ಮಣೇ ಸಾಕ್ಷಾತ್ ಶೂದ್ರೋ ನಾರ್ಜವಲಕ್ಷಣಃ** ಎಂದು ಸ್ಮೃತಿಯು. ॥೩೭॥

**ಪೀಠಿಕೆ** ॥ ಶೂದ್ರನಿಗೂ ಅಧಿಕಾರಪ್ರಯೋಜಕ ವಿಶಿಷ್ಟಬುದ್ಧ್ಯಾದಿಗಳು ಇದ್ದುದರಿಂದ ಅಧಿಕಾರವು ಸಿದ್ಧಿಸುವುದು ಇಲ್ಲವಾದರೆ ದೇವಾದಿಗಳಿಗೂ ಅಧಿಕಾರವು ಸಿದ್ಧಿಸದೆ ಹೋಗುವುದು ಎನ್ನುವ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ಓಂ ॥ ೩೮ ।

**ಸೂತ್ರಾರ್ಥ** ॥ ಶೂದ್ರನಿಗೆ ವೇದಶ್ರವಣ ವೇದಾಧ್ಯಯನ ವೇದಾರ್ಥಾವಧಾರಣ ಪ್ರತಿಷೇಧಕ ವಾದ ಶ್ರುತಿಯಿದ್ದುದರಿಂದಲೂ ನಾಗ್ನಿರ್ನ ಯಜ್ಞಃ ಎಂದು ಸ್ಪಷ್ಟವಾಗಿ ಶೂದ್ರನಿಗೇನೇ ವೇದಾಧ್ಯಯನ ವನ್ನು ನಿಷೇಧಮಾಡತಕ್ಕ ಸ್ಮೃತಿಯಿದ್ದುದರಿಂದಲೂ ಶೂದ್ರನಿಗೆ ವೇದಾಧ್ಯಯನ ನಿಷೇಧವಿದೆ.

**ಭಾಷ್ಯ ॥ ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಂ। ಅಧ್ಯಯನೇ ಜಿಹ್ವಾಚ್ಛೇದಃ। ಅರ್ಥಾವಧಾರಣೇ ಹೃದಯವಿದಾರಣಂ (ಗೌ.ಸೂ.೧೨.೪.೭.)। ಇತಿ ಪ್ರತಿಷೇಧಾತ್ ॥ ೧೫ ॥**

**ಭಾಷ್ಯಾರ್ಥ** ॥ ಶೂದ್ರನು ವೇದಶ್ರವಣ, ಮಾಡಿದರೆ ಕಾಯಿಸಲ್ಪಟ್ಟ— ಸೀಸ ಅರಗುಗಳಿಂದ ಆತನ ಕರ್ಣವಿವರಗಳನ್ನು (ರಾಜಭಟರು) ತುಂಬಿಸಬೇಕು. ವೇದಾಧ್ಯಯನ ಮಾಡಿದರ ನಾಲಿಗೆಯನ್ನು ಛೇದಿಸಬೇಕು. ವೇದದಿಂದ ವೇದಾರ್ಥವನ್ನು ನಿಶ್ಚಯ ಮಾಡಿಕೊಂಡರೆ ಹೃದಯವನ್ನು ಶೀಳಸಬೇಕು. ಎನ್ನುವ ಶ್ರುತಿಯಲ್ಲಿ (ಶೂದ್ರನಾಗಿ ವೇದಶ್ರವಣ ಅಧ್ಯಯನ ಅರ್ಥಾವಧಾರಣಗಳಿಗೆ) ನಿಷೇಧವಿದ್ದ ಪ್ರಯುಕ್ತ

**ವಿಶೇಷಾಂಶ** ॥ ತಥಾಚ ನಿಷೇಧ ಇಲ್ಲದೆ ಇದ್ದು ವಿಶಿಷ್ಟಬುದ್ಧ್ಯಾದಿಮತ್ತ್ವವೇ ವೇದದಲ್ಲಿ ಅಧಿಕಾರಕ್ಕೆ ಪ್ರಯೋಜಕವೆಂದು ಅಂಗೀಕರಿಸಿದ್ದರಿಂದ ಅಂತಹುದು ಶೂದ್ರನಲ್ಲಿ ಇಲ್ಲದಿರುವುದರಿಂದ ದೇವತೆಗಳಿಗೆ ಶೂದ್ರನಿಗೆ ವೇದಾಧಿಕಾರವಿದೆ ಎಂದು ಹೇಳಕೂಡದು.

**ಪೀಠಿಕೆ** ॥ ಶ್ರುತಿಯಲ್ಲಿ ಶೂದ್ರನು ಶ್ರವಣಮಾಡಿದರೆ ಎಂದು ಹೇಳದೆ ಇದ್ದುದರಿಂದ ಈ ಶ್ರುತಿಯು ವರ್ಣಬಾಹ್ಯ ಚಂಡಾಲಾದಿ ವಿಷಯಕವು ಎಂದು ಏಕೆ ಆಗಲಾರದು ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸ್ಮೃತಿಯನ್ನು ಹೇಳುತ್ತಾರೆ.

**ಭಾಷ್ಯ ॥ ನಾಗ್ನಿರ್ನ ಯಜ್ಞಃ ಶೂದ್ರಸ್ಯ ತಥೈವಾಧ್ಯಯನಂ ಕುತಃ। ಕೇವಲೈವ ತು ಶುಶ್ರೂಷಾ ತ್ರಿವರ್ಣಾನಾಂ ವಿಧೀಯತೇ ॥ ಇತಿ ಸ್ಮೃತೇಶ್ಚ ॥ ॥ ೧೬ ॥**

**ಭಾಷ್ಯಾರ್ಥ** ॥ ಹೇಗೆ ಶೂದ್ರನಿಗೆ ಅಗ್ನಿಯಿಲ್ಲವೋ, (ಅಂದರೆ ಶೂದ್ರನು ಅಗ್ನ್ಯಾಧಾನವನ್ನು ಹೇಗೆ ಸರ್ವಥಾ ಮಾಡಕೂಡದೋ) ಪಂಚವಿಧವಾದ ಯಜ್ಞವನ್ನು ಹೇಗೆ ಮಾಡಕೂಡದೋ ಹಾಗೆಯೇ ಅಧ್ಯಯನವೂ ಹೇಗೆ ಆಗುವುದು? (ಸರ್ವಥಾ ಯುಕ್ತವಲ್ಲ) (ಹಾಗಾದರೆ ಆತನು ಪರಲೋಕಸಾಧನ ವನ್ನು ಯಾವುದನ್ನು ಮಾಡಬೇಕು ಎಂದರೆ) ಬ್ರಾಹ್ಮಣ ಕ್ಷತ್ರಿಯ ವೈಶ್ಯ ಈ ಮೂವರ ಭೃತಿರಹಿತವಾದ ಸೇವೆಯೇ ಕಾರ್ಯವಾಗಿ ವಿಹಿತವಾಗಿದೆ, ಎನ್ನುವ ಸ್ಮೃತಿಯಿಂದ ಶೂದ್ರನಿಗೇನೇ ಅಧ್ಯಯನನಿಷೇಧವು ಅವಗತವಾಗುವುದರಿಂದ ಅಧ್ಯಯನ ನಿಷೇಧವು ಇದ್ದೇ ಇದೆ. ತಥಾಚ ಸ್ಪಷ್ಟವಾದ ಸ್ಮೃತಿಯ ಬಲದಿಂದ ಶ್ರುತಿಗೂ ಕೂಡ ಶೂದ್ರವಿಷಯತ್ವವನ್ನೇ ಇಟ್ಟುಕೊಳ್ಳಬೇಕು.

**ಪೀಠಿಕೆ** ॥ ಹಾಗಾದರೆ ಶೂದ್ರನಿಗೆ ವೇದಾರ್ಥಾವಧಾರಣಾದಿಗಳು ನಿಷಿದ್ಧಗಳಾದರೆ ವಿದುರಾದಿಗಳಿಗೆ ವೇದೋಕ್ತವಾದ ಅರ್ಥಾವಧಾರಣವು ಹೇಗೆ ಇರುವುದು? ಹೀಗೆಯೇ ಸಂಸ್ಕಾರವಿಲ್ಲದಿರುವುವರಿಗೆ ವೇದದಲ್ಲಿ ಅಧಿಕಾರವಿಲ್ಲವಾದರೆ ಕ್ಷತ್ರಿಯರ ಸಂಸ್ಕಾರದಿಂದ ವಿರಹಿತನಾದ ಕರ್ಣನು ಎಲ್ಲಾ ಶ್ರುತಿಗಳನ್ನು ಹೇಗೆ ಕಲತನು? ಕರ್ಣನು ಅಪವಾದ ವಿಷಯನು ಎನ್ನಕೂಡದು. ಉಪನಯನ ವಿಧಾನವಿಲ್ಲದೆ ಇದ್ದು ಅಧ್ಯಯನ ನಿಷೇಧವಿರತಕ್ಕ ಉತ್ತಮ ಸ್ತ್ರೀಯರು ತಿರ್ಯಕ್ ಪ್ರಾಣಿ ಮೊದಲಾದವುಗಳೇ ಅಪವಾದ ವಿಷಯಗಳಾದುದರಿಂದ ಅಧ್ಯಯನ ನಿಷೇಧವಿರತಕ್ಕ ಶೂದ್ರರು ಅಪವಾದ ವಿಷಯರಲ್ಲ ಎಂದರೆ—

**ಭಾಷ್ಯ ॥ ವಿದುರಾದೀನಾಂ ತೂತ್ಪನ್ನಜ್ಞಾನತ್ವಾತ್ ಕಶ್ಚಿದ್ವಿಶೇಷಃ ॥ ೩೮ ॥ ಅಧಿ.೯ ॥ ೧೭ ॥**

**ಭಾಷ್ಯಾರ್ಥ** ॥ ವಿದುರ ಧರ್ಮವ್ಯಾಧ ಮೊದಲಾದವರಿಗಾದರೂ ಜನ್ಮಾಂತರದಲ್ಲಿಯೇ ವೇದದಶೆಯಿಂದ ಪರಂಪರಯಾ ಅಪರೋಕ್ಷಜ್ಞಾನವು ಹುಟ್ಟಿರುವುದರಿಂದ ಅಸಾಧಾರ ಣವಾದ ಇತರ ಶೂದ್ರಾದಿಗಳಿಂದ ವ್ಯಾವೃತ್ತವಾದ ವಿಶೇಷವು (ಅವರಲ್ಲಿ ಯಾವ ಕಾರಣದಿಂದ ಇದೆಯೋ ಆದಕಾರಣ ಅವರಿಗೆ, ನಾಗ್ನಿಃ ಇತ್ಯಾದಿ ನಿಷೇಧ ಇಲ್ಲ. ಆದ ಪ್ರಯುಕ್ತ ವಿದುರಾದಿಗಳಂತೆ ಇತರ ಶೂದ್ರರಿಗೆ ವೇದಾಧಿ ಕಾರವನ್ನು ಶಂಕಿಸಕೂಡದು.) ॥ ೩೮ ॥

## ಮಾಯಾವಾದಿರೀತ್ಯಾ

**ವಿಚಾರ ॥** ಅಧ್ಯಯನವು ಪಿಂಡಪಿತೃಯಜ್ಞದಂತೆ ಸ್ವರ್ಗಾರ್ಥವಾಗಿ ಪುರುಷಾರ್ಥವಾದುದರಿಂದ ಸ್ವಾಧ್ಯಾಯಸಂಸ್ಕಾರವಾಗದಿರುವುದರಿಂದ ಅಧೀತವಾದ ಸ್ವಾಧ್ಯಾಯದಿಂದಲೇ ಉಂಟಾಗತಕ್ಕ ಬ್ರಹ್ಮಜ್ಞಾನದಿಂದ ಮೋಕ್ಷವೆನ್ನುವ ನಿಯಮವಿಲ್ಲದಿರುವುದರಿಂದ ಶೂದ್ರನಿಗೆ ಉಪನಯನವಿಲ್ಲದಿದ್ದರೂ ಪುಸ್ತಕಪಠಿತವಾದ ಸ್ವಾಧ್ಯಾಯದಿಂದುಂಟಾಗುವ ಬ್ರಹ್ಮಜ್ಞಾನದಿಂದ ಮೋಕ್ಷವು ಆಗುವುದು. ಆದಕಾರಣ ಶೂದ್ರನಿಗೂ ಬ್ರಹ್ಮವಿದ್ಯಾಧಿಕಾರವು ಇದೆ ಎಂದು ಪೂರ್ವಪಕ್ಷವು ಬಂದರೆ—ಅಧ್ಯಯನಕ್ಕೆ ಜ್ಞಾನರೂಪದೃಷ್ಟಾರ್ಥತ್ವವು ಕೂಡುವಾಗ ಅದೃಷ್ಟವನ್ನು ಕಲ್ಪಿಸಲು ಸಾಧ್ಯವಿಲ್ಲದಿರುವುದರಿಂದ ಅಧ್ಯಯನವು ಸ್ವಾಧ್ಯಾಯಕ್ಕೆ ಸಂಸ್ಕಾರವಾದುದರಿಂದ ಗುರುಮುಖದಿಂದಲೇ ಅಧೀತವಾದ ವೇದದಿಂದಲೇ ಉಂಟಾದ ಬ್ರಹ್ಮಜ್ಞಾನದಿಂದ ಮೋಕ್ಷವು ಎನ್ನುವ ನಿಯಮವು ಕೂಡುವ ಪ್ರಯುಕ್ತ ಪುಸ್ತಕಪಠಿತವಾದ ಸ್ವಾಧ್ಯಾಯದಿಂದುಂಟಾಗುವ ಜ್ಞಾನದಿಂದ ಮೋಕ್ಷವಾಗುವುದಿಲ್ಲ. ಆದಕಾರಣ ಶೂದ್ರನಿಗೆ ವೇದವಿದ್ಯಾಧಿಕಾರವು ಇಲ್ಲ ಎಂದು ಸಿದ್ಧಾಂತವೆಂದು ಹೇಳಿರುವರು. ಮತ್ತು ಈ ಅಧಿಕರಣಕ್ಕೆ ಪೂರ್ವಮೀಮಾಂಸಾದಲ್ಲಿರತಕ್ಕ ಶೂದ್ರಾಧಿಕರಣದಿಂದ ಗತಾರ್ಥತ್ವವನ್ನು ಶಂಕಿಸಿಕೊಂಡು ಅಲ್ಲಿ ಅಗ್ನ್ಯಾಧಾನವಿಲ್ಲದಿರುವ ಶೂದ್ರನಿಗೆ ಅಗ್ನಿ ಸಾಧ್ಯವಾದ ಕರ್ಮಾಧಿಕಾರವು ಇಲ್ಲವೆಂದು ಇಷ್ಟೇ ಹೇಳಿ ವಿದ್ಯಾಧಿಕಾರಾಭಾವವನ್ನು ಹೇಳದೆ ಇದ್ದುದರಿಂದ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಗತಾರ್ಥತಾ ಇಲ್ಲ ಎಂದೂ ಹೇಳಿರುವರು. ಅದು ಅಯುಕ್ತವು. ಪೂರ್ವಮೀಮಾಂಸಾದಲ್ಲಿದ್ದ ಅಪಶೂದ್ರಾಧಿಕರಣದಲ್ಲಿಯೂ **ಅವೈದ್ಯತ್ವಾದಭಾವಃ ಕರ್ಮಣಿ ಸ್ಯಾತ್** ಎನ್ನುವ ಸೂತ್ರದಲ್ಲಿ ಅವೈದ್ಯತ್ವಪದದಿಂದ ಶೂದ್ರನಿಗೆ ವಿದ್ಯಾಭಾವವನ್ನೇ ಹೇಳಿದ್ದಾರೆ. ಮತ್ತು ಸಿದ್ಧಾಂತದಲ್ಲಿ ತದಭಾವಾಭಿಲಾಪಾಚ್ಚ ಎನ್ನುವ ಸೂತ್ರದಲ್ಲಿ ಶೂದ್ರನಿಗೆ ಉಪನಯನಾಭಾವವನ್ನು ಶ್ರವಣಾಧ್ಯಯನಾರ್ಥಪ್ರತಿಷೇಧಾಚ್ಚ ಎನ್ನುವ ಸೂತ್ರದಲ್ಲಿ ಅಧ್ಯಯನಾಭಾವವನ್ನು ಹೇಳಿದ್ದರಿಂದ ಉಪನಯನ ಅಧ್ಯಯನಗಳನ್ನು ಇಟ್ಟುಕೊಂಡೇ ಪೂರ್ವಪಕ್ಷ ಮಾಡಬೇಕಿತ್ತು. ಇಟ್ಟುಕೊಳ್ಳದೆ ಪೂರ್ವಪಕ್ಷ ಮಾಡಿದ್ದು ಅಯುಕ್ತವು. ಮತ್ತು ಅವರ ಮತರೀತಿಯಾಗಿ ಮೋಕ್ಷಕ್ಕೆ ಕಾರಣಭೂತವಾದ ಶಾಬ್ದಾಪರೋಕ್ಷಜ್ಞಾನವು ಅಧ್ಯಯನ ಮಾಡದಿರುವ ವ್ಯುತ್ಪನ್ನವಾದ ಶೂದ್ರನಿಗೆ ವೇದದಿಂದಲೂ ಬರಬಹುದು. ಆದಕಾರಣ ಅವರ ಸಿದ್ಧಾಂತವು ಅಯುಕ್ತವು. **ದಶಮಸ್ತ್ವಮಸೀತ್ಯಾದಿವಾಕ್ಯಾದಿವ ಭವೇದ್ಧ್ರುವಂ । ತತ್ವಮಸ್ಯಾದಿವಾಕ್ಯಾಚ್ಚ ಶೂದ್ರಸ್ಯಾಪ್ಯಪರೋಕ್ಷಧೀಃ॥** ಇತ್ಯಾದ್ಯನಂತ ದೋಷಗಳು ಇರುವುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ॥** ಶೂದ್ರನಿಗೆ ಉಪನಯನ ಅಧ್ಯಯನಗಳು ಇಲ್ಲವಾದರೂ ಕರ್ಮಕಾಂಡದಲ್ಲಿದ್ದ ಅಪಶೂದ್ರಾಧಿಕರಣನ್ಯಾಯದಿಂದ ಕರ್ಮದಲ್ಲಿ ಅಧಿಕಾರವಿಲ್ಲದಿದ್ದರೂ ಅಧ್ಯಯನವು ಸ್ವಾಧ್ಯಾಯಕ್ಕೆ ಸಂಸ್ಕಾರವಾದುದರಿಂದ ಗುರುಮುಖದಿಂದ ಅಧ್ಯಯನ ಮಾಡದೇನೇ ಲಿಖಿತಪಾಠದಿಂದುಂಟಾದ ಜ್ಞಾನವು ಶ್ರೇಯಸ್ಸಾಧನವಾಗದಿದ್ದರೂ **ಶ್ರಾವಯೇಚ್ಚತುರೋ ವರ್ಣಾನ್** ಇತ್ಯಾದಿ ವಚನದಿಂದ ಇತಿಹಾಸಪುರಾಣಗಳನ್ನು ಕೇಳಲಿಕ್ಕೆ ಶೂದ್ರನಿಗೂ ಅಧಿಕಾರವಿದ್ದ ಪ್ರಯುಕ್ತ ಅದರಿಂದುಂಟಾದ

ಬ್ರಹ್ಮಜ್ಞಾನವು ಕೂಡುವುದರಿಂದ ಬ್ರಹ್ಮೋಪಾಸನದಲ್ಲಿ ಅಧಿಕಾರವಿದೆ ಎಂದು ಪೂರ್ವಪಕ್ಷವು ಬಂದರ **ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್** ಎನ್ನುವ ವಚನದಿಂದ ಇತಿಹಾಸಪುರಾಣಗಳು ವೇದೋಪಬೃಂಹಕ ಮಾತ್ರವಾದುದರಿಂದ ಸ್ವತಂತ್ರವಾಗಿ ಬ್ರಹ್ಮಜ್ಞಾನಕ್ಕೆ ಹೇತುವಾಗದಿರುವುದರಿಂದ ಶೂದ್ರನಿಗೆ ಬ್ರಹ್ಮಜ್ಞಾನದಲ್ಲಿ ಅಧಿಕಾರವಿಲ್ಲ ಎಂದು ಸಿದ್ಧಾಂತವೆಂದು ಹೇಳಿರವರು. ಅದರಲ್ಲಿ ಪೂರ್ವಪಕ್ಷದಲ್ಲಿ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಅಂಗೀಕರಿಸಿದ್ದು ಅಯುಕ್ತವು. ಶೂದ್ರನಿಗೆ ಅಗ್ನ್ಯಧಿಕಾರವು ವೇದಜನ್ಯವಾದ ಕರ್ಮವಿದ್ಯಾಧಿಕಾರವು ಕೂಡದಿದ್ದರೂ ಇತಿಹಾಸಾದಿಗಳಿಂದ ಬ್ರಹ್ಮಜ್ಞಾನ ಉಂಟಾಗುವಂತೆ ಸ್ಮೃತಿಗಳಿಂದ ಕರ್ಮಜ್ಞಾನವೂ ಕೂಡುವುದರಿಂದ ಅಗ್ನ್ಯಸಾಧ್ಯವಾದ ಸಂಧ್ಯೋಪಾಸನಾದಿ ಕರ್ಮಾಧಿಕಾರವು ಕೂಡುವುದು. ಮತ್ತು ಅವರ ಮತಪ್ರಕಾರ ಸೂತ್ರದಲ್ಲಿ ಇತಿಹಾಸಾದಿಗಳಿಗೆ ವೇದೋಪಬೃಂಹಕತ್ವವನ್ನೇ ಸಿದ್ಧಾಂತ ಹೇತುವನ್ನಾಗಿ ಹೇಳಬೇಕಿತ್ತು. ಶೂದ್ರನಿಗೆ ಉಪನಯನ ಅಧ್ಯಯನಾದಿಗಳು ಇಲ್ಲವೆಂದು ಹೇಳಿದ್ದು ಅಯುಕ್ತವು. ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಶೂದ್ರಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಇದೆಯೋ ಇಲ್ಲವೋ ಎಂದು ಸಂದೇಹವು. ವೈದಿಕ ಸಂವರ್ಗವಿದ್ಯೆಯನ್ನು ಕೇಳತಕ್ಕ ಪೌತ್ರಾಯಣನನ್ನು **ಅಹ ಹಾರೇತ್ವಾ ಶೂದ್ರ** ಎಂದು ರೂಢವಾದ ಶೂದ್ರಪದದಿಂದ ರೈಕ್ವರು ಸಂಬೋಧಿಸಿದ್ದರಿಂದಲೂ ವಿಶಿಷ್ಟಬುದ್ಧ್ಯಾದಿಗಳು ಇದ್ದುದರಿಂದಲೂ ದೇವಾದಿಗಳಂತೆಯೇ ಶೂದ್ರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆ ಎಂದು ಪೂರ್ವಪಕ್ಷವು ಬಂದರೆ ಅಯಮಶ್ವತರೀರಥಃ ಎಂದು ವಾಕ್ಯಶೇಷದಲ್ಲಿ ಹೇಳಿದ ರಥವತ್ವವು **ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ** ಎನ್ನುವ ಸ್ಮೃತಿಯಿಂದ ವೇದಾಧಿಕಾರವಿದ್ದಲ್ಲಿಯೇ ಇರತಕ್ಕುದಾದುದರಿಂದ ಶೂದ್ರನಲ್ಲಿ ವೇದಾಧಿಕಾರವು ಇಲ್ಲದಿರುವುದರಿಂದ ರಥವಿಲ್ಲ. ಕ್ಷತ್ರಿಯನಲ್ಲಿ ರಥವು ಸ್ವಾಭಾವಿಕವು. ಉತ್ತರದಲ್ಲಿ ಹೇಳಿದ ರಥ ರೂಪಲಿಂಗದಿಂದ ಪೌತ್ರಾಯಣನು ಕ್ಷತ್ರಿಯನೆಂದು ತಿಳಿಯುವುದರಿಂದ ಶೂದ್ರಶಬ್ದಕ್ಕೆ ರೂಢಾರ್ಥವನ್ನು ಬಿಟ್ಟು ಶುಚಾ ಆದ್ರವಣರೂಪವಾದ ಯೋಗಾರ್ಥವನ್ನು ಇಟ್ಟುಕೊಳ್ಳಬೇಕು. ತಥಾಚ ಅಧ್ಯಯನಕ್ಕೆ ಉಪನಯನಸಾಪೇಕ್ಷವಿದ್ದುದರಿಂದ ಶೂದ್ರನಿಗೆ ಉಪನಯನಾದಿ ಸಂಸ್ಕಾರ ವಿಲ್ಲದಿರುವುದರಿಂದ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ವಿದುರಾದಿಗಳಿಗೆ ಜನ್ಮಾಂತರದಲ್ಲಿ ಹುಟ್ಟಿದ ಜ್ಞಾನ ವಿದ್ದುದರಿಂದ ಇತರ ಶೂದ್ರರಿಗಿಂತ ವೈಲಕ್ಷಣ್ಯವಿದೆ ಎಂದು ಸಿದ್ಧಾಂತ ಮಾಡಿರುವರು. ॥ ಅಧಿ. ೯ ॥

**ಅಪಶೂದ್ರಾಧಿಕರಣವು ಸಮಾಪ್ತವಾಯಿತು.**

# ೧೦ ಕಂಪನಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ವಜ್ರನಾಮಕ್ಕೆ ಸಮನ್ವಯವು. ಶ್ರುತ್ಯಾದಿ ಸಂಗತಿಯನ್ನೂ ವಿಷಯಾದಿಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ಯದಿದಂ ಕಿಂ ಚ ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಂ। ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ (ಕಠ.೬.೨.)। ಇತ್ಯುದ್ಯತವಜ್ರಜ್ಞಾನಾನ್ಮೋಕ್ಷಃ ಶ್ರೂಯತೇ (ಪ್ರತೀಯತೇ)। ಇತಿ ॥ ೧ ॥**

**ಭಾಷ್ಯಾರ್ಥ ॥** ಯಾವುದೊಂದು ದೃಷ್ಟವೂ ಶ್ರುತವೂ ಆಗಿದೆಯೋ, ಯಾವುದೊಂದು ಸಮಸ್ತ ಜಗತ್ತು ಚೇಷ್ಟೆಯನ್ನು ಕೊಡುವುದರಿಂದ ಪ್ರಾಣಶಬ್ದವಾಚ್ಯನಾದ ಶ್ರೀಹರಿಯಲ್ಲಿ ಇರತಕ್ಕುದೋ, ಪ್ರಾಣಶಬ್ದವಾಚ್ಯನಾದ ಶ್ರೀಹರಿಯಿಂದಲೇ ಉತ್ಪನ್ನವಾಗಿದೆಯೋ, ಆ ಈ ಸರ್ವಜಗತ್ತೂ ಯಾರ ಪ್ರೇರಣೆಯಿಂದ ಚೇಷ್ಟೆಯನ್ನು ಮಾಡುತ್ತದೋ, ಅದು ಪೂಜ್ಯವಾದುದರಿಂದ ಮಹತ್ ಎನ್ನಿಸಿಕೊಂಡ, ದುಷ್ಟರನ್ನು ಬೆದರಿಸಲಿಕ್ಕೆ ಅಥವಾ ದುಷ್ಟರಿಗೆ ಭಯವನ್ನುಂಟುಮಾಡತಕ್ಕ (ಉದ್ಯತಂ) ಸರ್ವಪ್ರಯತ್ನವುಳ್ಳ, ದೋಷಗಳನ್ನು ಬಿಟ್ಟಿದ್ದರಿಂದಲೂ ಅಥವಾ ಅಪ್ರಿಯ ವಾದುದನ್ನು ಬಿಟ್ಟದ್ದರಿಂದ ವಜ್ರಶಬ್ದವಾಚ್ಯನಾದ ಈ ಶ್ರೀಹರಿಯನ್ನು ಯಾರು ಅಪರೋಕ್ಷವಾಗಿ ತಿಳಿಯುತ್ತಾರೋ, ಅವರು ಮುಕ್ತರಾಗುತ್ತಾರೆ. ಅಥವಾ ಪ್ರಾಣಃ ಎನ್ನುವುದು ಪ್ರಥಮಾಂತ ಪದವು. ತಥಾಚ ಮುಖ್ಯಪ್ರಾಣನೂ ಸರ್ವ ಜಗತ್ತೂ ಯಾವ ಶ್ರೀಹರಿಯಿಂದ ಹುಟ್ಟುತ್ತದೋ ಅಂತಹ ವಜ್ರನನ್ನು ಯಾರು ತಿಳಿಯುತ್ತಾರೋ, ಅಥವಾ ಸರ್ವಜಗತ್ತೂ ಯಾವ ಮುಖ್ಯಪ್ರಾಣನಿಂದ ಉತ್ಪನ್ನವಾಗುತ್ತದೋ, ಆ ಮುಖ್ಯಪ್ರಾಣನು ಯಾವ ಶ್ರೀಹರಿಯಿಂದ ಚೇಷ್ಟೆಯನ್ನು ಹೊಂದುತ್ತಾನೋ, ಅಂತಹ ವಜ್ರನನ್ನು ಯಾರು ತಿಳಿಯುತ್ತಾರೋ, ಅಂತಹವರು ಮುಕ್ತರಾಗುತ್ತಾರೆ. ಎನ್ನುವ ಶ್ರುತಿಯಲ್ಲಿ ಸರ್ವಪ್ರಯತ್ನವುಳ್ಳ ನಿರ್ದೋಷ ನಾದ ಶ್ರೀಹರಿಯ ಜ್ಞಾನದಿಂದ ಮೋಕ್ಷವು ಶ್ರುತವಾಗುತ್ತದೆ.

**ವಿಶೇಷಾಂಶ ॥** (೧) ಈ ಅಧಿಕರಣದಲ್ಲಿ ತ್ರೈವರ್ಣಿಕರಿಗೆ ವೇದದಿಂದುಂಟಾಗತಕ್ಕ ಬ್ರಹ್ಮಜ್ಞಾನವು ಮೋಕ್ಷವನ್ನು ಕೊಡತಕ್ಕುದೆಂದು ಮೊದಲು ಹೇಳಿದ್ದು ಆಯುಕ್ತವು. ಏಕೆಂದರೆ— **ಯದಿದಂ** ಎನ್ನುವ ಶ್ರುತಿಯಲ್ಲಿ ಉದ್ಯತ ವಜ್ರಜ್ಞಾನದಿಂದ ಮೋಕ್ಷವು ಶ್ರುತವಾಗಿದೆ. (೨) ಪೂರ್ವಾಧಿಕರಣದಲ್ಲಿ ತ್ರೈವರ್ಣಿಕರಿಗೆ ವೇದದಿಂದುಂಟಾಗತಕ್ಕ ಬ್ರಹ್ಮಜ್ಞಾನವು ಮೋಕ್ಷವನ್ನು ಕೊಡುತ್ತದೆಂದು ಯಾವುದು ಅಭಿಪ್ರೇತವಾಗಿದೆಯೋ, ಅದಕ್ಕೆ ಆನಂದಮಯಾಧಿಕರಣದಲ್ಲಿ ನೇತರಃ ಎನ್ನುವುದರಿಂದ ಹೇಳಲ್ಪಟ್ಟ ಮೋಕ್ಷಜನಕ ಜ್ಞಾನವಿಷಯತ್ವವು ವಿಷ್ಣುವಿಗಿಂತ ಇತರರಲ್ಲಿ ಇದೆ ಎಂದು ಹೇಳಿದ್ದರಿಂದ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. (೩) ವಜ್ರ ಶಬ್ದವು ವಿಷಯವು. ವಜ್ರಶ್ರುತಿಯು ಇಂದ್ರಾಯುಧದಲ್ಲಿ ರೂಢವಾದ ಪ್ರಯುಕ್ತವೂ ಹಾಗೆಯೇ **ಉದ್ಯತಾಯುಧದೋರ್ದಂಡಾಃ** ಇತ್ಯಾದಿ ಸ್ಮೃತಿಗಳಲ್ಲಿಯೂ, **ತೇನೇಂದ್ರೋ ವಜ್ರಮುದಯಚ್ಛತ್** ಎನ್ನುವ ಶ್ರುತಿಯಲ್ಲಿಯೂ ಆಯುಧದಲ್ಲಿ ಪ್ರಸಿದ್ಧವಾದ ಉದ್ಯತತ್ವರೂಪವಾದ ಲಿಂಗಬಲದಿಂದಲೂ ವಜ್ರವೆಂದರೆ ಇಂದ್ರಾಯುಧವೇ, ಎನ್ನುವ ಸಯುಕ್ತಿಕಾಪೂರ್ವಪಕ್ಷವೂ ಸೂಚಿತವಾಯಿತು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋಽಬ್ರವೀತ್ ॥ ೨ ॥**

**ಸೂತ್ರ ॥ ಓಂ ಕಂಪನಾತ್ ಓಂ ॥ ೩೯ ॥**

**ಭಾಷ್ಯ ॥ ಏಜತೀತಿ ಕಂಪನವಚನಾದುದ್ಯತವಜ್ರೋ ಭಗವಾನೇವ (ವಾನ್) ॥ ೩ ॥**

**ಭಾಷ್ಯಾರ್ಥ ॥** ಹೀಗೆ ಶಂಕೆಯು ಬಂದರೆ ಉತ್ತರವನ್ನು ಹೇಳಿದರು. ಏಜತಿ ಎಂದು ಸರ್ವ ಜಗಚ್ಚೇಷ್ಟಕತ್ವ ವಚನದೆಶೆಯಿಂದ, ಅಥವಾ (ಕಂಪನಸ್ಯ=) ಮುಖ್ಯಪ್ರಾಣನನ್ನು ಕುರಿತು ಶ್ರೀಹರಿಚೇಷ್ಟಕನೆಂದು ಹೇಳಿದ್ದರಿಂದಲೂ ಉದ್ಯತವಜ್ರ ಶಬ್ದವಾಚ್ಯನು ಶ್ರೀಹರಿಯೇ।

**ವಿಶೇಷಾಂಶ ॥** ಯದ್ಯಪಿ ವಜ್ರಃ ಭಗವಾನೇವ ಎಂದೇ ಹೇಳಬೇಕಿತ್ತು, ಉದ್ಯತಃ ಎನ್ನುವ ವಿಶೇಷಣವು ಬೇಕಾಗಿಲ್ಲ. ಆದಾಗ್ಯೂ ಪೂರ್ವಪಕ್ಷಿಯು ಹೇಳಿದ ಉದ್ಯತತ್ವರೂಪವಾದ ಲಿಂಗವು ಪ್ರಯತ್ನವತ್ವ ರೂಪವಾದ ಉದ್ಯತತ್ವಾರ್ಥಕವಾಗಿದೆ, ಆದಕಾರಣ ಸಾವಕಾಶವಾಗಿದೆ. ಎಂದು ತಿಳಿಸುವುದಕ್ಕಾಗಿ ಉದ್ಯತ ಎಂದು ಹೇಳಿರುವರು.

**ಪೀಠಿಕೆ ॥** ಹಾಗಾದರೆ ಶ್ರುತಿ ಲಿಂಗಗಳಿಂದ ಪೂರ್ವಪಕ್ಷ ಮಾಡಿದರೆ ಲಿಂಗಮಾತ್ರದಿಂದ ನಿರ್ಣಯವು ಹೇಗೆ ಎಂದರೆ—ಲಿಂಗವು ನಿರವಕಾಶವಾಗಿದೆ, ಎನ್ನುವ ಅಭಿಪ್ರಾಯದಿಂದ ಜಗಚ್ಚೇಷ್ಟಕತ್ವರೂಪವಾದ ಲಿಂಗವು ವಿಷ್ಣುವಿನಿಂದ ಇತರರಲ್ಲಿ ಇಲ್ಲ ಎಂದು ಶ್ರುತಿಯಿಂದ ತೋರಿಸುತ್ತಾರೆ—

**ಭಾಷ್ಯ ॥ ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾದ್ಯದೇಷ ಆಕಾಶ ಆನಂದೋ ನ ಸ್ಯಾತ್ (ತೈ.೨.೭.)। ಇತಿ ಹಿ ಶ್ರುತಿಃ ॥ ೪ ॥**

**ಭಾಷ್ಯಾರ್ಥ ॥** ಚೆನ್ನಾಗಿ ಪ್ರಕಾಶಿಸಿಕೊಂಡಿರತಕ್ಕ ಈ ಶ್ರೀಹರಿಯು ಪೂರ್ಣಾನಂದರೂಪನು ಆಗದೆ ಹೋದರೆ ಯಾರು ಸಾಮಾನ್ಯ ಚೇಷ್ಟೆಯನ್ನು ಮಾಡಿಯಾನು? ಯಾರು ವಿಶೇಷ ಚೇಷ್ಟೆಯನ್ನು ಮಾಡಿಯಾನು? ಎಂದು ಯಾವ ಕಾರಣದಿಂದ ಶ್ರುತಿಯು ಇದೆಯೋ, (ಆದಕಾರಣ ಲಿಂಗವು ಅನ್ಯತ್ರ ಇದೆ ಎಂದು ಶಂಕಿಸಕೂಡದು.)

**ಪೀಠಿಕೆ ॥** ಯಾವಾಗ ಸಾಮಾನ್ಯವಾಗಿ ಸರ್ವಜಗಚ್ಚೇಷ್ಟಕತ್ವವು ಕೇವಲ ವಿಷ್ಣುವಿನಲ್ಲಿ ಇರತಕ್ಕುದೋ, ಆಗ ವಜ್ರದಲ್ಲಿ ಶ್ರುತವಾದ ಸರ್ವಜಗತ್ಪ್ರವರ್ತಕ ಪ್ರಾಣಚೇಷ್ಟಕತ್ವ ಲಿಂಗವು ಕೇವಲ ವಿಷ್ಣುವಿನಲ್ಲಿ ಇರತಕ್ಕುದು ಎಂದು ಏನು ಹೇಳಬೇಕು? ಜಗಚ್ಚೇಷ್ಟಕತ್ವವು ಸರ್ವಥಾ ಅನ್ಯತ್ರ ಕೂಡಲಾರದು ಎನ್ನುವ ಅಭಿಪ್ರಾಯದಿಂದ ಶ್ರುತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ ॥ (ಬೃ.ಉ.೬.೪. ೧೮.) । ಇತಿ ಚ ॥ ೫ ॥**

**ಭಾಷ್ಯಾರ್ಥ ॥** ಸರ್ವಚೇಷ್ಟಕ ಮುಖ್ಯಪ್ರಾಣನಿಗೆ ಪ್ರಕೃಷ್ಟ ಚೇಷ್ಟಕತ್ವರೂಪವಾದ ಪ್ರಾಣತತ್ವವನ್ನು ಕೊಡತಕ್ಕ, ಹಾಗೆಯೇ ಚಕ್ಷುಸ್ಸಿಗೆ ದರ್ಶನಕರಣತ್ವರೂಪವಾದ ಚಕ್ಷುಷ್ಟ್ವವನ್ನು ಕೊಡತಕ್ಕ ಪರಮಾತ್ಮನನ್ನು ಯಾರು ತಿಳಿಯುತ್ತಾರೋ, (ಅಂತಹವರು ಬ್ರಹ್ಮನನ್ನು ಹೊಂದುವರು.) ಎಂದೂ (ಬೃಹದಾರಣ್ಯಕ ಶ್ರುತಿಯು.)

**ವಿಶೇಷಾಂಶ ॥** ಕಂಪನಾತ್ ಎನ್ನುವುದರಿಂದ ಹೇಳಲ್ಪಟ್ಟ ಜಗತ್ಪ್ರವರ್ತಕ ಪ್ರಾಣಚೇಷ್ಟಕತ್ವಾದಿ

ಲಿಂಗವು ವಿಷ್ಣುವಿನಲ್ಲಿ ಇರತಕ್ಕದೆನ್ನುವುದು ಅಸಿದ್ಧವು. ಎಂದರೆ ಅದನ್ನು ಪರಿಹರಿಸುವುದಕ್ಕಾಗಿ ಈ ಶ್ರುತಿಯನ್ನು ಪ್ರಮಾಣೀಕರಿಸಿದರು.

**ಪೀಠಿಕೆ ॥** ಶ್ರುತ್ಯುಕ್ತ ಪ್ರಾಣಚೇಷ್ಟಕತ್ವ ಲಿಂಗವನ್ನು ಹೇತುವನ್ನಾಗಿ ಇಟ್ಟುಕೊಂಡು ಪ್ರವೃತ್ತವಾದ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ನಭಸ್ವತೋಽಪಿ ಸರ್ವಾಃ ಸ್ಯುಶ್ಚೇಷ್ಟಾ ಭಗವತೋ ಹರೇಃ। ಕಿಮು ತಾನ್ಯಸ್ಯ ಜಗತೋ ಯಸ್ಯ ಚೇಷ್ಟಾ ನಭಸ್ವತಃ ॥ ಇತಿ ಚ(ಹಿ) ಸ್ಕಾಂದೇ ॥ ೬ ॥**

**ಭಾಷ್ಯಾರ್ಥ ॥** ನಭಸ್ವತೋಽಪಿ=ಸರ್ವ ಜಗತ್ಪ್ರೇರಕನಾದ ವಾಯುವಿನದ್ದು ಕೂಡ, ಸರ್ವಾಃ ಚೇಷ್ಟಾಃ=ಎಲ್ಲಾ ಚೇಷ್ಟೆಗಳೂ, ಯದಾ=ಯಾವಾಗ, ಭಗವತಃ=ಜ್ಞಾನಾದಿಗುಣಗಳಿಂದ ಪರಿಪೂರ್ಣನಾದ ಶ್ರೀಹರಿಯ ದೆಶೆಯಿಂದ, ಭವಂತಿ=ಆಗುತ್ತವೋ, ತದಾ=ಆಗ, ಅಸ್ಯ ಜಗತಃ ಶ್ರೀಹರಿಯಿಂದ ಪ್ರೇರ್ಯನಾದ ವಾಯುವಿನಿಂದಲೂ ಪ್ರೇರ್ಯವಾದ ಜಗತ್ತಿನ ಚೇಷ್ಟೆಯು, ಕಿಮುತ= ಶ್ರೀಹರಿಯಿಂದಲೇ, ಆಗುತ್ತವೆ ಎಂದು ಏನು ಹೇಳಬೇಕು. ಯಾವ ಜಗತ್ತಿನ ಸರ್ವಚೇಷ್ಟೆಗಳು ವಾಯುವಿನಿಂದ ಆಗುತ್ತವೋ, ಹೀಗೆ ಸ್ಕಾಂದದಲ್ಲಿ ಹೇಳಿಯದೆ. ಆದ ಪ್ರಯುಕ್ತವೂ ಲಿಂಗಕ್ಕೆ ಅನ್ಯತ್ರ ಅವಕಾಶವಿಲ್ಲ.

**ಪೀಠಿಕೆ ॥** ಹಾಗಾದರೆ ಉದ್ಧೃತತ್ವ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾದಾಗ್ಯೂ ವಜ್ರಶ್ರುತಿಯು ನಿರವಕಾಶವಾದುದರಿಂದಲೂ ಸ್ವಭಾವತಃ ಪ್ರಬಲವಾದುದರಿಂದಲೂ ಸರ್ವಚೇಷ್ಟಕತ್ವ ಲಿಂಗವು ನಿರವಕಾಶವಾದುದಾಗ್ಯೂ ಆದರಿಂದ ವಜ್ರನು ವಿಷ್ಣುವೇ ಎನ್ನುವ ನಿರ್ಣಯವು ಹೇಗೆ? ಎಂದರೆ ಶ್ರುತಿಗೆ ನಿರವಕಾಶತ್ವವೇ ಸಿದ್ಧವಾಗಲಿಲ್ಲ ಎನ್ನುವ ಅಭಿಪ್ರಾಯದಿಂದ ಪೂರ್ವಪಕ್ಷಿಗೆ ಅಭಿಮತವಾದ ವಜ್ರಶ್ರುತಿಗೂ ವಿಷ್ಣು ವಿನಲ್ಲಿ ಅವಕಾಶವನ್ನು ಸ್ಮೃತಿಯಿಂದ ತೋರಿಸುತ್ತಾರೆ—

**ಭಾಷ್ಯ ॥ ಚಕ್ರಂ ಚಂಕ್ರಮಣಾದೇಷ ವರ್ಜನಾದ್ವಜ್ರಮುಚ್ಯತೇ। ಖಂಡನಾತ್ಖಡ್ಗ ಏವೈಷ ಹೇತಿನಾಮಾ ಸ್ವಯಂ ಹರಿಃ ॥ ಇತಿ(ಹಿ)ಬ್ರಹ್ಮವೈವರ್ತೇ ॥ ೩೯ ॥ ಅಧಿ.೧೦ ॥೭॥**

**ಭಾಷ್ಯಾರ್ಥ ॥** ಏಷಃ=ಈ ಶ್ರೀಹರಿಯು, ಚಂಕ್ರಮಣಾತ್=ಸಂಸಾರದಲ್ಲಿ ಜೀವರನ್ನು ತಿರುಗಿಸುವುದರಿಂದ, ಚಕ್ರಂ=ಚಕ್ರನೆಂದು, ಉಚ್ಯತೇ=ಹೇಳಲ್ಪಡುತ್ತಾನೆ. (ಚಂಕ್ರಾಮಯತೀತಿ ಚಕ್ರಂ ಎಂದು ತತ್ವಪ್ರದೀಪದಲ್ಲಿ) ವರ್ಜನಾತ್=ದೈತ್ಯರಿಂದ ದೂರದಿಂದಲೇ ಬಿಡಲ್ಪಡುತ್ತಾನೆ. ಸನ್ಮುಖೀಕರಿಸಲ್ಪಡುವುದಿಲ್ಲ. ಆದುದರಿಂದ ಸರ್ವದೋಷಗಳನ್ನು ಬಿಟ್ಟದ್ದರಿಂದಲೂ ವಜ್ರಂ= ವಜ್ರನೆಂದು ಹೇಳಲ್ಪಡುತ್ತಾನೆ. ಖಂಡನಾತ್=ದುಷ್ಟರಅಂಗಗಳನ್ನು ಭೇದಿಸಿದ್ದರಿಂದಲೂ, ದುಷ್ಟರನ್ನು ನಿಗ್ರಹಿಸಿದ್ದರಿಂದಲೂ, ಏಷಃ=ಈ ಶ್ರೀಹರಿಯು, ಖಡ್ಗಃ=ಖಡ್ಗ ಎನ್ನಿಸುತ್ತಾನೆ. ಹೀಗೆ, ಹರಿಃ= ಶ್ರೀಹರಿಯು, ಸ್ವಯಂ=ಸಾಕ್ಷಾತ್ತಾಗಿ, (ಇತರ ಸಂಬಂಧವಿಲ್ಲದೆ) ಹೇತಿನಾಮಾ=ಚಕ್ರ ಮೊದಲಾದ ಎಲ್ಲಾ ಆಯುಧಗಳ ನಾಮಗಳುಳ್ಳವನು. ಅಂದರೆ ಅವುಗಳಿಂದ ಮುಖ್ಯವಾಚ್ಯನು. ಹೀಗೆ ಬ್ರಹ್ಮವೈವರ್ತದಲ್ಲಿ ಹೇಳಲ್ಪಟ್ಟಿದೆ.

**ವಿಶೇಷಾಂಶ ॥** (೧) ಹೇತಿ ಎಂದು ಸಾಮಾನ್ಯವಾಗಿ ಗ್ರಹಣ ಮಾಡಿದ್ದರಿಂದ ವಜ್ರಪದವು ಇತರ

ಆಯುಧಗಳಿಗೂ ಉಪಲಕ್ಷಕವೆಂದು ಉಕ್ತವಾಯಿತು. (೨) ಹೀಗಾದರೆ ಕಾಠಕ ಭಾಷ್ಯದಲ್ಲಿ **ವಜ್ರವದ್ಯುದಂ** ಎಂದು ವಜ್ರಶಬ್ದಕ್ಕೆ ವಿಷ್ಣುವಿನಲ್ಲಿ ಗೌಣತ್ವವನ್ನು ಹೇಳಿದ್ದರಿಂದ ವಿರೋಧವು ಎಂದು **ಹೇಳಕೂಡದು.** ಆ ವಾಕ್ಯಕ್ಕೆ ಯಥಾಕಥಂಚಿತ್ ಬ್ರಹ್ಮಪರತ್ವವು ಎನ್ನುವಲ್ಲಿಯೇ ತಾತ್ಪರ್ಯವು. ಬ್ರಹ್ಮಪರತ್ವವು ಗೌಣೇತರ ವೃತ್ತಿಯಿಂದಲೂ ಸಿದ್ಧಿಸುವುದರಿಂದ ಗೌಣೀವೃತ್ತಿಯಲ್ಲಿ ತಾತ್ಪರ್ಯವಿಲ್ಲ. ಇಲ್ಲಿಯಾದರೂ ಸಮನ್ವಯಸೂತ್ರದಲ್ಲಿ ಪ್ರತಿಜ್ಞಾತವಾದ ಮುಖ್ಯಾರ್ಥಕ್ಕಾಗಿ ಯೋಗರೂಢಿಗಳೇ ಉಕ್ತಗಳಾಗಿವೆ. ॥ ೩೯ ॥

## ಮಾಯವಾದಿರೀತ್ಯಾ

**ವಿಚಾರ॥ ಪ್ರಾಣ** ಏಜತಿ ಎನ್ನುವ ವಾಕ್ಯದಲ್ಲಿದ್ದ ಪ್ರಾಣನು ಪ್ರಸಿದ್ಧಿಯಿಂದ ವಾಯುವು ಎಂದು ಪೂರ್ವಪಕ್ಷ ಮಾಡಿಕೊಂಡು ಬ್ರಹ್ಮನೇ ಎಂದು ಮಾಯಾವಾದಿಗಳು ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. ಈ ಮೊದಲು ಸಮನ್ವಯ ಮಾಡದಿರುವ ಮತ್ತು ಉದ್ಯತವಜ್ರರೂಪ ಪೂರ್ವಪಕ್ಷ ಬೀಜವುಳ್ಳ ವಜ್ರಶಬ್ದಕ್ಕೆ ಸಮನ್ವಯವನ್ನು ಹೇಳಲಿಕ್ಕೆ ಬರುತ್ತಿರಲು **ಅತ ಏವ ಪ್ರಾಣಃ** ಇತ್ಯಾದಿ ಅನೇಕಾಧಿಕರಣಗಳಿಂದ ಸಮನ್ವಯ ಮಾಡಲ್ಪಟ್ಟ ಮತ್ತು ಪೂರ್ವಪಕ್ಷ ಬೀಜವೂ ಇಲ್ಲದಿರುವ ಪ್ರಾಣಶಬ್ದಕ್ಕೆ ಇಲ್ಲಿ ಸಮನ್ವಯವೆಂದು ಹೇಳಿದ್ದು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ॥ ಶಬ್ದಾದೇವ ಪ್ರಮಿತಃ** ಎನ್ನುವಲ್ಲಿ ಬ್ರಹ್ಮಪರವೆಂದು ನಿರ್ಣೀತಳಾದ **ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ । ಅಂಗುಷ್ಠಮಾತ್ರಃ ಪುರುಷೋಽನ್ತರಾತ್ಮಾ** ಸದಾ ಜನಾನಾಂ ಎನ್ನುವ ವಾಕ್ಯಗಳ ಮಧ್ಯದಲ್ಲಿರತಕ್ಕ **ಯದಿದಂ ಕಿಂ ಚ** ಎನ್ನುವ ವಾಕ್ಯದಲ್ಲಿ ಅನ್ಯಪರತ್ವಶಂಕೆಯು ಕೂಡದಿರುವುದರಿಂದ ಈ ಸೂತ್ರವು ಅಧಿಕರಣಾಂತರವಲ್ಲ. ಮತ್ತೆ ಅಂಗುಷ್ಠಮಾತ್ರಕ್ಕೆ ಬ್ರಹ್ಮತ್ವದಲ್ಲಿ ಹೇತ್ವಂತರವಾಗಿ **ಶಬ್ದಾದೇವ ಪ್ರಮಿತಃ** ಎನ್ನುವ ಅಧಿಕರಣಶೇಷವು ಎನ್ನುತ್ತಾರೆ. ಅದು ಅಯುಕ್ತವು. ಪ್ರಕರಣವನ್ನು ಬಾಧಿಸತಕ್ಕ ಶ್ರುತ್ಯಾದಿಗಳಿಂದ ಪೂರ್ವಪಕ್ಷವು ಹುಟ್ಟುತ್ತದೆಂದು ಉಕ್ತವಾಗಿದೆ. ಅಂಗುಷ್ಠವಾಕ್ಯಗಳೆರಡರ ಮಧ್ಯದಲ್ಲಿಯೇ **ಊರ್ಧ್ವಮೂಲೋಽವಾಕ್ ಶಾಖೋಽಶ್ವತ್ಥಃ ಸನಾತನಃ** ಎನ್ನುವ ಪ್ರಪಂಚವಾಕ್ಯವು ಕಂಡದ್ದರಿಂದ ಅದರಂತೆ ಅವುಗಳ ಮಧ್ಯದಲ್ಲಿರುವ **ಯದಿದಂ ಕಿಂ ಚ** ಎನ್ನುವ ವಾಕ್ಯವೂ ಅನ್ಯಪರವೆನ್ನುವ ಪೂರ್ವಪಕ್ಷವು ಯುಕ್ತವಾಗಬಹುದು. ಮತ್ತು ಇದು **ಶಬ್ದಾದೇವ** ಎನ್ನುವ ಅಧಿಕರಣದ ಶೇಷವಾಗಿದ್ದರೆ ಅದರ ಅನಂತರದಲ್ಲಿಯೇ ಇರಬೇಕಿತ್ತು. ಮತ್ತು ಚಶಬ್ದವೂ ಇರಬೇಕಿತ್ತು. ಆದುದರಿಂದ ಅವರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

**ಯದಿದಂ ಕಿಂ ಚ** ಜಗತ್ಸರ್ವಂ ಎನ್ನುವ ಕಾಠಕದಲ್ಲಿ ಶ್ರುತವಾದ ವಜ್ರವು ಇಂದ್ರಾಯುಧವೋ ವಿಷ್ಣುವೋ ಎಂದು ಸಂದೇಹವು. ರೂಢಿಯಿದ್ದುದರಿಂದ ಇಂದ್ರಾಯುಧವೇ ಎಂದು ಪೂರ್ವಪಕ್ಷವು ಬಂದರೆ— **ಜಗತ್ಸರ್ವಂ ಪ್ರಾಣ** ಏಜತಿ ಎಂದು ಶ್ರುತವಾದ ಸರ್ವಚೇಷ್ಟಕತ್ವವು **ಕೋ ಹ್ಯೇವಾನ್ಯಾತ್ಕಃ**

ಪ್ರಾಣ್ಯಾತ್ ಇತ್ಯಾದಿ ಶ್ರುತಿ ಸ್ಮೃತಿಗಳಿಂದ ವಿಷ್ಣುವಿನಿಂದ ಇತರರಲ್ಲಿ ಇರಲಾರದು. ವಜ್ರಶ್ರುತಿಯು ಸ್ಮೃತಿಯಲ್ಲಿ ಹೇಳಿದ ಪ್ರಕಾರ ನಿರವಕಾಶವಾದ ಯೋಗದಿಂದ ಆಯುಧಾನಾಮಹಂ ವಜ್ರಂ ಎನ್ನುವ ಪ್ರಯೋಗದಿಂದಲೂ ವಿಷ್ಣುವಿನಲ್ಲಿಯೇ ಇರತಕ್ಕುದು. ॥ ಅಧಿ. ೧೦ ॥

**ಕಂಪನಾಧದಿಕರಣವು ಸಮಾಪ್ತವಾಯಿತು.**

# ೧೧. ಜ್ಯೋತಿರಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ ಜ್ಯೋತಿರ್ನಾಮಕ್ಕೆ ಸಮನ್ವಯವು. ಶ್ರುತ್ಯಾದಿ ಸಂಗತಿಯನ್ನು ವಿಷಯಾದಿಗಳನ್ನು ತೋರಿಸುತ್ತಾರೆ—

**ಭಾಷ್ಯ ॥ ಹೃದಯ ಆಹಿತಂ ಜ್ಯೋತಿಃ ಪರಮಾತ್ಮೇತ್ಯುಕ್ತಂ । ತತ್ರ ಯೋಽ ಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ** (ಬೃ.ಉ. ೬.೩.೭.)। **ಇತ್ಯತ್ರೋಭೌ ಲೋಕಾವನುಸಂಚರತಿ** (ಬೃ.ಉ.೬.೩.೭.) **ಇತಿ ವಚನಾಜ್ಜೀವ ಇತಿ ಪ್ರತೀಯತೇ । ಇತಿ** ॥ ೧ ॥

**ಭಾಷ್ಯಾರ್ಥ** ॥ ಹೃದಯದಲ್ಲಿ ನಿಹಿತವಾದುದು ಯಾವುದು ಜ್ಯೋತಿಸ್ಸು ಇದೆಯೋ ಅಂತಹ ಜ್ಯೋತಿಶ್ಶಬ್ದವಾಚ್ಯನು ಪರಮಾತ್ಮನೆಂದು ಜ್ಯೋತಿರಧಿಕರಣದಲ್ಲಿ ಹೇಳಲ್ಪಟ್ಟಿದೆ. ಆ ಜ್ಯೋತಿರ್ವಿಷಯದಲ್ಲಿ ಯಃ=ಯಾವ ವಿಜ್ಞಾನಮಯಃ=ವಿಜ್ಞಾನ ಪೂರ್ಣನಾದ, ಪ್ರಾಣೇಷು= ಇಂದ್ರಿಯಗಳಲ್ಲಿ ಅಂತಃ=ಒಳಗೂ, ಹೃದ್ಯಂತಶ್ಚ=ಹೃದಯದೊಳಗೂ, ನಿಯಾಮಕನಾಗಿ ಇರತಕ್ಕ, ಜ್ಯೋತಿಃ=ಜೀವನಿಗೆ ಬುದ್ಧ್ಯಾದಿಗಳನ್ನು ತೋರಿಸಿಕೊಡತಕ್ಕ ಪುರುಷಃ=ಪೂರ್ಣಷಡ್ಗುಣಗಳುಳ್ಳ ಶ್ರೀಹರಿಯು, ಅಸ್ತಿ=ಇದ್ದಾನೋ, ಅಂತಹವನು ಆತ್ಮನು, ಇತಿ=ಹೀಗೆ (ಆತನ ಮಹಿಮೆಯನ್ನು ಹೇಳುತ್ತಾರೆ.) ಅತ್ರ=ಈ ವಾಕ್ಯದಲ್ಲಿ ಸಃ=ಪರಮಾತ್ಮನು, ಸಮಾನಃ ಸನ್=ನಿರ್ವಿಕಾರನಾಗಿ ಸರ್ವದಾ ಏಕರೂಪನಾಗಿ, ಉಭೌ ಲೋಕೌ=ಭೂಲೋಕದ್ಯುಲೋಕಗಳನ್ನು ಅಥವಾ ಜಾಗ್ರತ್ಸುಷುಪ್ತಿ ಅವಸ್ಥೆಗಳನ್ನು ಅನುಸಂಚರತಿ=ಪ್ರತಿಜೀವರನ್ನು ಹಿಡಿದುಕೊಂಡು ಆತನನ್ನು ಅನುಸರಿಸಿ ಸಂಚರಿಸುತ್ತಾನೆ.

**ವಿಶೇಷಾಂಶ** ॥ (೧) ಇಲ್ಲಿ ಶ್ರುತನಾದ ಜ್ಯೋತಿಶ್ಶಬ್ದವಾಚ್ಯನು ಜ್ಞಾನಾತ್ಮಕನಾದ ಜೀವನೇ ಎಂದು ಇಟ್ಟುಕೊಳ್ಳಬೇಕು. ಏಕೆಂದರೆ— **ಸ ಸಮಾನಃ ಸನ್ ಉಭೌ ಲೋಕಾವನುಸಂಚರತಿ** ಇದು ಮೊದಲಾದ ಕರ್ಮಾಧೀನ ಲೋಕಸಂಚರಣರೂಪವಾದ ಜೀವಲಿಂಗವನ್ನು ಹೇಳತಕ್ಕ ವಾಕ್ಯಶೇಷವಿದ್ದ ಪ್ರಯುಕ್ತ (೨) **ಹೃದ್ಯಂತರ್ಜ್ಯೋತಿಃ** ಎಂದು ಬೃಹದಾರಣ್ಯಕ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿಸ್ಸಿಗೆ ವಿಷ್ಣುತ್ವವನ್ನು ಆಕ್ಷೇಪಿಸಿಕೊಂಡು ಪೂರ್ವೋಕ್ತವಾದ ಜ್ಯೋತಿಸ್ಸಿಗೆ ವಿಷ್ಣುತ್ವವನ್ನು ಆಕ್ಷೇಪಿಸಿದ್ದರಿಂದ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. (೩) ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟ ಜ್ಯೋತಿಸ್ಸು ವಿಷಯವು ಜೀವನೇ ಈ ಜ್ಯೋತಿಸ್ಸೆಂದು ಪೂರ್ವಪಕ್ಷವು (೪) ಬೃಹದಾರಣ್ಯಕದಲ್ಲಿ

**ಅಯಂ ಪುರುಷಃ ಕಿಂ ಜ್ಯೋತಿಃ** = ಜೀವನಿಗೆ ಜ್ಞಾನಸಾಧನವಾದುದು ಯಾವುದು? ಎಂದು ಜನಕರಾಜನು ಯಾಜ್ಞವಲ್ಕ್ಯರ ಹತ್ತಿರ ಪ್ರಶ್ನೆ ಮಾಡೋಣ, **ಆದಿತ್ಯಜ್ಯೋತಿಸ್ಸಮ್ರಾಟ್ ಇತಿ ಹೋವಾಚ** ಜನಕರಾಜನೇ ಈ ಪುರುಷನು, ಆದಿತ್ಯಾಖ್ಯ ಜ್ಞಾನಸಾಧನವುಳ್ಳವನು ಎಂದು ಯಾಜ್ಞವಲ್ಕ್ಯರು ಉತ್ತರಕೊಟ್ಟರು. ಈ ಕ್ರಮದಿಂದ ಪ್ರಶ್ನೆ ಉತ್ತರಗಳಿಂದ ಜಾಗ್ರದ್ದೆಶೆಯಲ್ಲಿ ಆದಿತ್ಯ ಚಂದ್ರ ಅಗ್ನಿ ವಚನಗಳ ಮಧ್ಯದಲ್ಲಿ ಮೊದಲುಮೊದಲಿನದ್ದು ಅಸ್ತಮಾನವಾಗೋಣ ಜೀವನಿಗೆ ಮೇಲಿನಮೇಲಿದ್ದು ಜ್ಯೋತಿಸ್ಸು ಎಂದು ಹೇಳಿ ಪುನಃ ಸುಷುಪ್ತಿ ಸ್ವಪ್ನಗಳಲ್ಲಿ ಆದಿತ್ಯ ಮೊದಲಾದ ನಾಲ್ವರೂ ಅಸ್ತಮಿತರಾಗೋಣ **ಕಿಂ ಜ್ಯೋತಿರಯಂ ಪುರುಷಃ** ಎಂದು ಪುನಃ ಜನಕನು ಯಾಜ್ಞವಲ್ಕ್ಯರ ಹತ್ತಿರ ಪ್ರಶ್ನೆ ಮಾಡೋಣ, **ಆತ್ಮೈವಾಸ್ಯಜ್ಯೋತಿರ್ಭವತಿ** ಎಂದು ಸುಷುಪ್ತಿಸ್ವಪ್ನಗಳಲ್ಲಿ ಜೀವನಿಗೆ ಸ್ವಪ್ರಕಾಶ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳಿ ಪುನಃ **ಕತಮ ಆತ್ಮಾ** ಜ್ಯೋತಿಸ್ಸು ಎಂದು ಹೇಳಲ್ಪಟ್ಟ ಆತ್ಮನು ಎಂತಹವನು ಎಂದು ಪ್ರಶ್ನಿಸಲ್ಪಟ್ಟ ಯಾಜ್ಞವಲ್ಕ್ಯರು **ಯೋಽಯಂ ವಿಜ್ಞಾನಮಯಃ** ಎನ್ನುವುದರಿಂದ ಶ್ರೀಪರಮಾತ್ಮನು ಪೂರ್ಣಜ್ಞಾನವುಳ್ಳವನು ಮತ್ತು ಇಂದ್ರಿಯಗಳಿಗೆ ನಿಯಾಮಕನು ಎಂದುತ್ತರವನ್ನು ಹೇಳಿರುವರು. (ಹೀಗೆ ಸಿದ್ಧಾಂತಾರ್ಥವು.) (೫) ಪೂರ್ವಪಕ್ಷಿಯಾದರೂ ಆತ್ಮಪದವೂ, ಸಃ ಎನ್ನುವ ಪದವೂ ಕೂಡ ಜೀವಪರವು. ಉಭಯಲೋಕ ಸಂಚಾರವೂ ಕೂಡ ಕರ್ಮಾಧೀನವೆಂದು ಪೂರ್ವಪಕ್ಷಿಗೆ ವಿವಕ್ಷಿತವಾಗಿದೆ. ಆ ಲಿಂಗವು ಕರ್ಮವಶಾತ್ ಜೀವನಿಗೇನೇ ಎಂದು ತಿಳಿಯುತ್ತಾನೆ.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತ ಉಚ್ಯತೇ** ॥ ೨ ॥

## ಸೂತ್ರ ॥ ಓಂ ಜ್ಯೋತಿರ್ದರ್ಶನಾತ್ ಓಂ ॥ ೪೦ ॥

**ಸೂತ್ರಾರ್ಥ ॥** ಹೀಗೆ ಶಂಕೆಯು ಬಂದರೆ ಉತ್ತರವು ಹೇಳಲ್ಪಡುತ್ತದೆ. ದರ್ಶನಾತ್=ವಿಷ್ಣುರೇವ ಜ್ಯೋತಿಃ ಇತ್ಯಾದಿ ರೀತಿಯಾಗಿ ಚತುರ್ವೇದಶಿಖಾದಲ್ಲಿ ಹೇಳಲ್ಪಟ್ಟ ಪ್ರಯುಕ್ತ, ಜ್ಯೋತಿಃ= ಜ್ಯೋತಿಶ್ಶಬ್ದ ವಾಚ್ಯನು ವಿಷ್ಣುವೇ. (ಜೀವನಲ್ಲ)

**ಭಾಷ್ಯ ॥ ವಿಷ್ಣುರೇವ ಜ್ಯೋತಿರ್ವಿಷ್ಣು ರೇವಾತ್ಮಾ ವಿಷ್ಣುರೇವ ಬ್ರಹ್ಮ ವಿಷ್ಣು ರೇವ ಬಲಂ ವಿಷ್ಣುರೇವ ಯಶೋ ವಿಷ್ಣುರೇವಾನಂದ ಇತಿ ದರ್ಶನಾಚ್ಚತುರ್ವೇದ ಶಿಖಾಯಾಂ ಜ್ಯೋತಿರ್ವಿಷ್ಣುರೇವ** ॥ ೩ ॥

**ಭಾಷ್ಯಾರ್ಥ ॥** ವಿಷ್ಣುವೇ ಜ್ಯೋತಿಶ್ಶಬ್ದವಾಚ್ಯನು. ವಿಷ್ಣುವೇ ಆತ್ಮಶಬ್ದವಾಚ್ಯನು, ವಿಷ್ಣುವೇ ಬ್ರಹ್ಮನು, ವಿಷ್ಣುವೇ ಬಲಪ್ರದನು. (ಸ ವೈ ಬಲಂ ಬಲಿನಾಂ ಚಾಪರೇಷಾಂ ಎಂದು ಭಾಗವತದಲ್ಲಿ) ವಿಷ್ಣುವೇ ಯಶೋರೂಪನು (ತಸ್ಯ ನಾಮ ಮಹದ್ಯಶಃ ಎಂದು ಶ್ರುತಿಯು ಎಂದು ತತ್ವಪ್ರದೀಪದಲ್ಲಿ ಹೇಳಲ್ಪಟ್ಟಿದೆ.) ಶ್ರೀವಿಷ್ಣುವೇ ಆನಂದನು, ಎಂದು ಚತುರ್ವೇದಶಿಖಾದಲ್ಲಿ ವಿಷ್ಣುವೇ ಮುಖ್ಯವಾಗಿ ಜ್ಯೋತಿಶ್ಶಬ್ದವಾಚ್ಯನೆಂದು ಹೇಳಲ್ಪಟ್ಟ ಪ್ರಯುಕ್ತ ಜ್ಯೋತಿಶ್ಶಬ್ದವಾಚ್ಯನು ವಿಷ್ಣುವೇ. (ಜೀವನಲ್ಲ)

**ವಿಶೇಷಾಂಶ ॥** ಬ್ರಹ್ಮಾದಿಶಬ್ದಗಳಂತೆಯೇ ಜ್ಯೋತಿಶ್ಶಬ್ದವೂ ಕೂಡ ವಿಷ್ಣುವಿನಲ್ಲಿ ಮಾತ್ರ ಇರತಕ್ಕುದು ಎಂದು ತಿಳಿಸಕೊಡುವುದಕ್ಕಾಗಿ ಸಮಗ್ರವಾಕ್ಯವನ್ನುದಾಹರಿಸಿರುವರು.

ಪೀಠಿಕೆ ॥ ಜ್ಯೋತಿಸ್ಸು ವಿಷ್ಣುವೆಂದಾದರೆ ಉಭಯಲೋಕಸಂಚರಣ ಲಿಂಗವಿರೋಧವು ಎನ್ನುವ ಶಂಕೆಯನ್ನು ಕೂಡ ಸೂತ್ರದಲ್ಲಿದ್ದ ದರ್ಶನಪದದಿಂದ ಹೇಳಲ್ಪಟ್ಟ ಶ್ರುತಿಯಿಂದ ಪರಿಹರಿಸುತ್ತಾರೆ—

**ಭಾಷ್ಯ ॥ ಪ್ರಾಜ್ಞೇನಾತ್ಮನಾನ್ವಾರೂಢ ಉತ್ಸರ್ಜದ್ಯಾತಿ** (ಬೃ.ಉ.೬.೩.೩೫.) **। ಇತಿ ವಚನಾತ್ತಸ್ಯಾಪಿ ಲೋಕಸಂಚರಣಮಸ್ತ್ಯೇವ ॥ ೪೦ ॥ ಅಧಿ. ೧೧ ॥ ॥ ೪ ॥**

**ಭಾಷ್ಯಾರ್ಥ** ॥ (ಶರೀರದಲ್ಲಿದ್ದ ಆತ್ಮ(ಜೀವ)ನು ಮರಣಕಾಲದಲ್ಲಿ) ಸರ್ವಜ್ಞನಾದ ಶ್ರೀಪರಮಾತ್ಮನಿಂದ ಅಧಿಷ್ಠಿತನಾದ (ಜೀವಮಾರುಹ್ಯಗಚ್ಛತಿ ಭಗವಾನ್ ಜೀವನನ್ನು ಏರಿಕೊಂಡು ಶ್ರೀಹರಿಯು ಹೋಗುತ್ತಾನೆ ಎಂದು ಬೃಹದ್ಭಾಷ್ಯದಲ್ಲಿ ಹೇಳಿದ್ದರಿಂದ) ಶ್ರೀಹರಿಗೆ ವಾಹನಭೂತನಾದ ಜೀವನು, ಉತ್ಸರ್ಜತ್=ಮೊದಲಿನ ಶರೀರವನ್ನು ಬಿಟ್ಟವನಾಗಿ, ದೇಹಾಂತರವನ್ನು ಲೋಕಾಂತರವನ್ನು ಕೂಡ, ಹೋಗುತ್ತಾನೆ, ಎನ್ನುವ ಬೃಹದಾರಣ್ಯಕ ಶ್ರುತಿವಾಕ್ಯದಿಂದ ಶ್ರೀಪರಮಾತ್ಮನಿಗೂ ಕೂಡ (ಜೀವನಿಗೆ ಮಾತ್ರವಲ್ಲ) ಲೋಕಸಂಚಾರವು ಉಂಟೇ ಉಂಟು. (ಲೋಕ ಸಂಚಾರವು ಇಲ್ಲವೆಂದಲ್ಲ.) ತಥಾಚ ಲಿಂಗವು ಸಾವಕಾಶವಾದ ಪ್ರಯುಕ್ತ ಆದರಿಂದ ವಿರೋಧವಿಲ್ಲ.

## ಮಾಯಾವಾದಿರೀತ್ಯಾ

**ವಿಚಾರ ॥ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪ ಸಂಪದ್ಯ** ಎನ್ನುವ ವಾಕ್ಯದಲ್ಲಿದ್ದ ಜ್ಯೋತಿಸ್ಸು ಆದಿತ್ಯನೋ ಬ್ರಹ್ಮನೋ ಎಂದು ಸಂದೇಹವು, ಜ್ಯೋತಿಃ ಶ್ರುತಿಯು ಆದಿತ್ಯನಲ್ಲಿ ರೂಢವಾದುದರಿಂದ ಜ್ಯೋತಿಶ್ಶಬ್ದವಾಚ್ಯನು ಆದಿತ್ಯನು, ಎಂದು ಪೂರ್ವಪಕ್ಷ ಬಂದರೆ— **ಯ ಆತ್ಮಾ ಅಪಹತಪಾಪ್ಮಾ** ಇತ್ಯಾದಿಗಳಿಂದ ನಿರ್ಗುಣಬ್ರಹ್ಮನನ್ನು ಹೇಳಿ ಆ ಬ್ರಹ್ಮಜ್ಞಾನಫಲವನ್ನೇ ಹೇಳಿರುವುದರಿಂದ ಇಲ್ಲಿ ಹೇಳಿದ ಜ್ಯೋತಿಸ್ಸು ಬ್ರಹ್ಮನೇ, ಅಂತೂ ಇಲ್ಲಿ ಹೇಳಿದ ಶರೀರಾದುತ್ಥಾನವೆಂದರೆ ಶ್ರವಣಾದಿಗಳು, ಸ್ವರೂಪಾನಿಷ್ಪತ್ತಿಯೆಂದರೆ ಶ್ರವಣಾದಿಗಳಿಂದ ಉಂಟಾದ ಸಾಕ್ಷಾತ್ಕಾರವು. ಸಂಪತ್ತಿಯೆಂದರೆ ಸಾಕ್ಷಾತ್ಕಾರದಿಂದುಂಟಾದ ನಿರ್ಗುಣಬ್ರಹ್ಮಭಾವವು. ಹೀಗೆ ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. **ನಾರಾಯಣಃ ಪರೋ ಜ್ಯೋತಿಃ** ಇತ್ಯಾದಿ ಶ್ರುತಿಗಳಲ್ಲಿಯೂ **ಪರಂ ಜ್ಯೋತಿಃ ಪರಂ ಧಾಮ ಪವಿತ್ರಂ ಪರಮಂ ಭವಾನ್** ಇತ್ಯಾದಿ ಸ್ಮೃತಿಗಳಲ್ಲಿಯೂ ಪರಶಬ್ದಸಹಿತವಾದ ಜ್ಯೋತಿಶ್ಶಬ್ದವು ಪರಬ್ರಹ್ಮನಲ್ಲಿಯೇ ಪ್ರಸಿದ್ಧವಾದುದರಿಂದ ಈ ಜ್ಯೋತಿರ್ವಿಷಯ ದಲ್ಲಿ ಸಂಶಯ ಪೂರ್ವಪಕ್ಷಗಳು ಹುಟ್ಟಲಾರವು, ಮತ್ತು **ಪೂರ್ವಂ ಯತ್ಸತ್ಕಾಮಾದಿ ಪಶ್ಚಾದ್ಯತ್ ಕ್ರೀಡನಾದಿಕಂ ತದ್ದ್ವಯಂ ನಿರ್ಗುಣೇ ಮೋಕ್ಷೇ ಸರ್ವಥಾ ನೋಪಪದ್ಯತೇ ॥** ಈ ವಾಕ್ಯದಿಂದ ಮೊದಲು **ಯ ಆತ್ಮಾ ಅಪಹತಪಾಪ್ಮಾ** ಎಂದಾರಂಭಿಸಿ **ಸತ್ಯಕಾಮಃ ಸತ್ಯಸಂಕಲ್ಪಃ** ಎಂದು ಸವಿಶೇಷ ಬ್ರಹ್ಮನು ಶ್ರುತನಾಗಿದ್ದಾನೆ. ಉತ್ತರದಲ್ಲಿ **ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ತತ್ರ ಪರ್ಯೇತಿ ಜಕ್ಷನ್** ಎಂದು ಸಗುಣಮೋಕ್ಷವು ಶ್ರುತವಾದುದರಿಂದ ಇದು ನಿರ್ಗುಣಮೋಕ್ಷವಲ್ಲ. ಆದುದರಿಂದ ನಿರ್ಗುಣಬ್ರಹ್ಮ ಭಾವರೂಪವಾದ ಮೋಕ್ಷವು ಶ್ರುತವಾದುದರಿಂದ ಇಲ್ಲಿ ಹೇಳಿದ ಜ್ಯೋತಿಸ್ಸು ನಿರ್ಗುಣಬ್ರಹ್ಮನೇ ಎಂದು ಹೇಳಿದ್ದು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ಈ ಸೂತ್ರವು ಶಬ್ದಾದೇವ ಪ್ರಮಿತಃ ಎನ್ನುವ ಅಧಿಕರಣಕ್ಕೆ ಶೇಷಭೂತ ವಾಗಿ ಅಂಗುಷ್ಠಮಾತ್ರನು ಬ್ರಹ್ಮನು ಎನ್ನುವ ವಿಷಯದಲ್ಲಿ ಹೇತ್ವಂತರಪರವು. ಅಧಿಕರಣಾಂತರವಲ್ಲ. **ಜ್ಯೋತಿಶ್ಚರಣಾಭಿಧಾನಾತ್** ಎನ್ನುವಲ್ಲಿಯೇ ಜ್ಯೋತಿಶ್ಶಬ್ದಕ್ಕೆ ಸಮನ್ವಯವನ್ನು ಹೇಳಿಯದೆ. ಅಂಗುಷ್ಠಮಾತ್ರ ಪ್ರಕರಣದಲ್ಲಿ ನ ತತ್ರ **ಸೂರ್ಯೋ** ಭಾತಿ ಎಂದು ಬ್ರಹ್ಮರೂಪವಾದ ಜ್ಯೋತಿಸ್ಸು ದೃಷ್ಟವಾಗಿದೆ. ಎಂದು ಸೂತ್ರಾರ್ಥವು ಎನ್ನುತ್ತಾರೆ. ಅದು ಅಯುಕ್ತವು. ಆ ಅಧಿಕರಣದ ಶೇಷವಾಗಿದ್ದರೆ ಆ ಸೂತ್ರದ ಅನಂತರದಲ್ಲಿಯೂ ಈ ಸೂತ್ರವು ಇರಬೇಕಿತ್ತು. ಮತ್ತು ಚಶಬ್ದ ವೂ ಇರಬೇಕಿತ್ತು. ನ ತತ್ರ ಎನ್ನುವ ಶ್ರುತಿಯಲ್ಲಿ ಜ್ಯೋತಿಪದವು ಇಲ್ಲದಿರುವುದರಿಂದ ಸೂತ್ರಕ್ಕೆ ಶ್ರುತ್ಯಾನುಗುಣ್ಯವೂ ಇಲ್ಲದೆ ಹೋಗಬೇಕಾಗುವುದು. ಸೂತ್ರಾಂತರಗಳಲ್ಲಿ ಇದ್ದಂತೆಯೇ ಜ್ಯೋತಿರ್ದರ್ಶನಪದಗಳಿಗೆ ಪ್ರತಿಜ್ಞಾಹೇತುರೂಪತ್ವವು ಕೂಡುವಾಗ ಹೇತುಮಾತ್ರತ್ವವನ್ನು ಹೇಳಿದ್ದು ಕೂಡಲಾರದು.

## ಅಧಿಕರಣ ಸಾರಾಂಶ

ಕಾಣ್ವಶ್ರುತಿಯಲ್ಲಿ **ಯೋಽಯಂ** ವಿಜ್ಞಾನಮಯಃ **ಪ್ರಾಣೇಷು ಹೃದ್ಯಂತರ್ಜ್ಯೋತಿಃ** ಎಂದು ಶ್ರುತವಾದ ಜ್ಯೋತಿಸ್ಸು ಜೀವನೋ ಬ್ರಹ್ಮನೋ ಎಂದು ಸಂದೇಹವು. **ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ ಸ ವಾ ಅಯಂ ಪುರುಷೋ ಜಾಯಮಾನಃ ಪಾಪ್ಮಭಿಃ ಸಂಸೃಜ್ಯತೇ ಉತ್ಕ್ರಾಮನ್ ಮ್ರಿಯಮಾಣಃ** ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಕರ್ಮಾಧೀನ ಲೋಕಸಂಚರಣಾದಿ ಬಹು ಜೀವಲಿಂಗಗಳು ಇರುವುದರಿಂದ ಜೀವನೇ ಎಂದು ಪೂರ್ವಪಕ್ಷವು. ವಿಷ್ಣುರೇವ ಬ್ರಹ್ಮ ಎನ್ನುವ ಶ್ರುತಿಯಿಂದ ಜ್ಯೋತಿಶ್ಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾಗಿ ಇರತಕ್ಕುದು. ಆದುದರಿಂದ ಜ್ಯೋತಿಶ್ಶಬ್ದವಾಚ್ಯನು ವಿಷ್ಣುವೇ ಹೃದ್ಯಂತರ್ಜ್ಯೋತಿಃ ಎಂದು ಉಪಕ್ರಮದಲ್ಲಿಯೂ **ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ** ಎಂದು ಉಪಸಂಹಾರದಲ್ಲಿಯೂ ಶ್ರುತವಾದುದರಿಂದ ಉಪಕ್ರಮ ಉಪಸಂಹಾರಗಳಿಂದ ವಿಷ್ಣುಪರಗಳೆಂದು ನಿರ್ಣೀತಗಳಾದ ವಾಕ್ಯಗಳ ಮಧ್ಯದಲ್ಲಿ ಇದ್ದುದರಿಂದ ಹುಟ್ಟಿಸುತ್ತಾನೆ. ಮರಣವನ್ನು ಹೊಂದಿಸುತ್ತಾನೆ. ಜೀವನನ್ನು ಹಿಡಿದುಕೊಂಡು ಲೋಕಸಂಚರಣಾದಿಗಳನ್ನು ಮಾಡುತ್ತಾನೆ ಎನ್ನುವ ರೀತಿಯಾಗಿ ಹಿಂದೆ ಹೇಳಿದ ಜೀವಲಿಂಗಗಳು ಶ್ರೀಹರಿಯಲ್ಲಿ ಕೂಡುತ್ತವೆ. ॥ ಅಧಿ. ೧೧ ॥

**ಜ್ಯೋತಿರಧಿಕರಣವು ಸಮಾಪ್ತವಾಯಿತು.**

# ೧೨ ಆಕಾಶಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ ಆಕಾಶನಾಮಕ್ಕೆ ಬ್ರಹ್ಮನಲ್ಲಿ ಸಮನ್ವಯವು ಶ್ರುತ್ಯಾದಿ ಸಂಗತಿಯನ್ನೂ ವಿಷಯಾದಿಗಳನ್ನೂ ತೋರಿಸುತ್ತಾರೆ—

ಭಾಷ್ಯ ॥ ಸರ್ವಾಧಾರತ್ವಂ ವಿಷ್ಣೋರುಕ್ತಂ । ತಚ್ಚ—ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ (ತೇ ಯದಂತರಾ ತದ್ಬ್ರಹ್ಮ)(ಛಾ.೮.೧೪.೧.)। ಇತ್ಯತ್ರಾಕಾಶಸ್ಯ ಪ್ರತೀಯತೇ। ವೈ ನಾಮೇತಿ ಪ್ರಸಿದ್ಧೋಪದೇಶಾತ್ । ಪ್ರಸಿದ್ಧಾಕಾಶಶ್ಚಾಂಗೀಕರ್ತವ್ಯಃ। ಇತಿ ॥ ೧ ॥

ಭಾಷ್ಯಾರ್ಥ ॥ (ದ್ಯುಭ್ವಾದ್ಯಧಿಕರಣದಲ್ಲಿ) ಶ್ರೀವಿಷ್ಣುವಿಗೆ ಸರ್ವಾಧಾರತ್ವವು ಹೇಳಲ್ಪಟ್ಟಿದೆ. ಆ ಸರ್ವಾಧಾರತ್ವವೇ ಆಕಾಶವಾದರೂ ಶಬ್ದಾರ್ಥಪ್ರಪಂಚಗಳಿಗೆ ಆಶ್ರಯವು ಕರ್ತೃ ಆಗಿದೆ ಎನ್ನುವ ಛಂದೋಗ ವಾಕ್ಯದಲ್ಲಿ ಆಕಾಶಕ್ಕೆ ತೋರುತ್ತದೆ. ಛಂದೋಗ ಶ್ರುತ್ಯುಕ್ತವಾದ ಆಕಾಶವು ಪ್ರಸಿದ್ಧವಾದ ಸಾಕ್ಷಿಸಿದ್ಧವಾದ ಅವ್ಯಾಕೃತಾಕಾಶವೇ ಅಂಗೀಕರಿಸಲ್ಪಡಬೇಕು. (ಏಕೆಂದರೆ ಆಕಾಶಪದದಿಂದ ವೈ ನಾಮ ಎಂದು ಎರಡು ನಿಪಾತಗಳಿಂದ ದ್ಯೋತಿತವಾದ ಪ್ರಸಿದ್ಧಿಯುಳ್ಳ ಅರ್ಥವನ್ನು ಹೇಳಿದ್ದರಿಂದ.)

ವಿಶೇಷಾಂಶ ॥ (೧) ಇಲ್ಲಿ ಇದ್ದ ಆಕಾಶಶಬ್ದಕ್ಕೆ ವಿಷ್ಣ್ವನ್ಯಪರತ್ವವನ್ನು ಹೇಳುತ್ತಾ ಪೂರ್ವೋಕ್ತವಾದ ಸರ್ವಾಧಾರತ್ವವೂ ಕೂಡ ಇತರರಲ್ಲಿರತಕ್ಕದೆಂದು ಹೇಳಿದ್ದರಿಂದ ಅದರಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು ಉಕ್ತವಾಯಿತು. ಛಂದೋಗ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶವು ವಿಷಯವು.

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

ಭಾಷ್ಯ ॥ ಅತ ಉಚ್ಯತೇ ॥ ೨ ॥

## ಸೂತ್ರ ॥ ಓಂ ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ಓಂ ॥ ೪೧ ॥

ಸೂತ್ರಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರವು ಹೇಳಲ್ಪಡುತ್ತದೆ. ಈ ಆಕಾಶಶಬ್ದವಾಚ್ಯನು ಶ್ರೀಹರಿಯೇ. ಈ ಆಕಾಶಕ್ಕೆ ಅರ್ಥಾಂತರತ್ವಾದಿ ವ್ಯಪದೇಶಾತ್=ತೇ ಯದಂತರಾ ಎಂದು ನಾಮ ರೂಪರಾಹಿತ್ಯರೂಪವಾದ ವಿಲಕ್ಷಣಾರ್ಥತ್ವವನ್ನು ಹೇಳಿದ್ದರಿಂದಲೂ ಬ್ರಹ್ಮತ್ವವನ್ನು ಹೇಳಿದ್ದರಿಂದಲೂ.

ಭಾಷ್ಯ ॥ ತೇ ಯದಂತರಾ ತದ್ಬ್ರಹ್ಮ (ಛಾ.೮.೧೪.೧.)। ಇತ್ಯರ್ಥಾಂತರತ್ವಾದಿವ್ಯಪದೇಶಾದಾಕಾಶೋ ಹರಿರೇವ ॥ ೩ ॥

ಭಾಷ್ಯಾರ್ಥ ॥ ನಾಮರೂಪಗಳನ್ನು ಹೊರತು ಯಾವುದು ಇದೆಯೋ, ಅದು ಬ್ರಹ್ಮವು. ಎಂದು. ನಾಮರೂಪಾಭ್ಯಾಂ ಅನ್ಯಃ ಅರ್ಥಃ ಅರ್ಥಾಂತರಂ, ಅಥವಾ ತಾಭ್ಯಾಂ ವಿಲಕ್ಷಣಃ ಅರ್ಥಃ ಅರ್ಥಾಂತರಃ ತಸ್ಯ ಭಾವಃ ತತ್ವಂ ನಾಮರೂಪಾತ್ಮಕ ಪ್ರಪಂಚ ಭಿನ್ನತ್ವವು ಅಥವಾ ಪ್ರಾಕೃತ ನಾಮರೂಪರಾಹಿತ್ಯವು ಏವಂಚ ನಾಮರೂಪ ರಾಹಿತ್ಯಾಶ್ರಿವಾದ ಅರ್ಥಾಂತರವನ್ನೂ ಬ್ರಹ್ಮತ್ವವನ್ನೂ ಹೇಳಿದ್ದರಿಂದ, ಛಾಂದೋಗ್ಯದಲ್ಲಿ ಶ್ರುತನಾದ ಆಕಾಶಶಬ್ದವಾಚ್ಯನು ಶ್ರೀಹರಿಯೇ.

ಪೀಠಿಕೆ ॥ ಆಕಾಶದಲ್ಲಿ ಶ್ರುತವಾದ ನಾಮರೂಪತ್ವಾದಿ ಲಿಂಗದಿಂದ ವಿಷ್ಣುವೆಂದು ನಿಶ್ಚಯವು ಹೇಗೆ ಆಗುತ್ತದೆ ಎಂದರೆ—ಆ ಲಿಂಗವು ವಿಷ್ಣುವಿನಲ್ಲಿಯೇ ಇರತಕ್ಕುದು ಎನ್ನುವ ಅಭಿಪ್ರಾಯದಿಂದ ಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸುತ್ತಾರೆ.

**ಭಾಷ್ಯ ॥ ಅವರ್ಣಂ ಯತೋ ವಾಚೋ ನಿವರ್ತಂತೇ(ತೈ.೨.೪.)। ಇತ್ಯಾದಿ ಶ್ರುತೇಸ್ತಸ್ಯೈವ (ತಸ್ಯ) ಹಿ ತಲ್ಲಕ್ಷಣಂ ॥ ೪ ॥**

**ಭಾಷ್ಯಾರ್ಥ** ॥ ೧ ಅವರ್ಣಂ=ಪ್ರಾಕೃತ ಶುಕ್ಲಾದಿ ವರ್ಣರಹಿತನು, ಅಥವಾ ವರ್ಣಭಿನ್ನನು, ಅಥವಾ ವರ್ಣಿಸಲಿಕ್ಕೆ ಶಕ್ಯನಲ್ಲ, ವರ್ಣಾತ್ಮಕನೂ ಅಲ್ಲ, ೨ ಯತಃ=ಯಾವ ಬ್ರಹ್ಮನದೆಶೆಯಿಂದ, ವಾಚಃ=ನಾಮಗಳು, ನಿವರ್ತಂತೇ=ಹೊರಟು ಹೋಗುತ್ತಾವೋ, ಇದು ಮೊದಲಾದ **ಅಶಬ್ದಮಸ್ಪರ್ಶಮರೂಪಮವ್ಯಯಂ** ಇದು ಮೊದಲಾದ ಶ್ರುತಿಗಳ ದೆಶೆಯಿಂದ ಆ ವಿಷ್ಣುವಿಗೇನೇ, ಅಪರೂಪತ್ವಾದಿಗಳು ಅಸಾಧಾರಣಧರ್ಮವೆಂದು ತಿಳಿಯಲ್ಪಡುತ್ತದೆ.

**ವಿಶೇಷಾಂಶ** ॥ ಏವಶಬ್ದದಿಂದ ಈ ಲಕ್ಷಣವು ಬೇರೆಯವರಲ್ಲಿ ಇಲ್ಲವೆಂದು ಸಿದ್ಧವಾಯಿತು.

**ಪೀಠಿಕೆ** ॥ ಶ್ರೀಹರಿಯು ಸರ್ವಶಬ್ದ ವಾಚ್ಯನಾದುದರಿಂದಲೂ ರುಗ್ಮವರ್ಣಮೊದಲಾದ ರೂಪಗಳು ಉಳ್ಳವನಾದುದರಿಂದಲೂ ಶ್ರೀಹರಿಯು ನಾಮರೂಪರಹಿತನೆನ್ನುವುದು ಕೂಡುವುದಿಲ್ಲ ಎಂದರೆ—

**ಭಾಷ್ಯ ॥ ಅನಾಮಾ ಸೋऽಪ್ರಸಿದ್ಧತ್ವಾದರೂಪೋ ಭೂತವರ್ಜನಾತ್। ಇತಿ ಹಿ ಬ್ರಾಹ್ಮೇ ॥ ೫ ॥**

**ಭಾಷ್ಯಾರ್ಥ** ॥ ಶ್ರೀಹರಿಯು ಸಂಪೂರ್ಣವಾಗಿ ಇತರ ಶಬ್ದಾದಿಗಳಿಂದ ಪ್ರಮಿತನಾಗದೆ ಇದ್ದಪ್ರಯುಕ್ತ ಅನಾಮಾ ಎನ್ನಿಸಿಕೊಳ್ಳುತ್ತಾನೆ. ಭೌತಿಕ ಶರೀರರಹಿತನಾದ ಪ್ರಯುಕ್ತ ಅರೂಪಃ ಎನ್ನಿಸಿಕೊಳ್ಳುತ್ತಾನೆ, ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ॥ ೪೧ ॥

## ಮಾಯಾವಾದಿರೀತ್ಯಾ

**ವಿಚಾರ** ॥ **ಆಕಾಶಸ್ತಲ್ಲಿಂಗಾತ್** ಎನ್ನುವ ಅಧಿಕರಣದ ವಿಷಯವಾಕ್ಯದಲ್ಲಿ **ಆಕಾಶಾದೇವ ಸಮುತ್ಪದ್ಯಂತೇ** ಇತ್ಯಾದಿ ವಾಕ್ಯದಲ್ಲಿ ಬ್ರಹ್ಮಲಿಂಗವಿದ್ದಂತೆ ಈ ಸೂತ್ರದ ವಿಷಯವಾಕ್ಯವಾದ **ಆಕಾಶೋ ವೈ ನಾಮ** ಎನ್ನುವಲ್ಲಿ ಬ್ರಹ್ಮಲಿಂಗವು ಇಲ್ಲಿದಿರುವುದರಿಂದ ಪೂರ್ವಪಕ್ಷವು ಹುಟ್ಟುವುದರಿಂದ ಆ ಅಧಿಕರಣದಿಂದ ಗತಾರ್ಥತ್ವವು ಇಲ್ಲವೆನ್ನುತ್ತಾರೆ, ಅದು ಅಯುಕ್ತವು. ಇಲ್ಲಿಯೂ ನಾಮರೂಪನಿರ್ಭಹಿತೃತ್ವಾದಿ ಬ್ರಹ್ಮಲಿಂಗಗಳೂ, ಬ್ರಹ್ಮ ಆತ್ಮಾದಿ ಶ್ರುತಿಗಳೂ ಇವೆ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ** ॥ **ತಲ್ಲಿಂಗಾತ್** ಎನ್ನುವ ನ್ಯಾಯದಿಂದಲೇ ಈ ವಾಕ್ಯದಲ್ಲಿಯೂ ಆಕಾಶಕ್ಕೆ ಗಗನತ್ವವು ನಿರಾಸವಾಗಿರುವುದರಿಂದ ಗಗನವೆಂದು ಪೂರ್ವಪಕ್ಷದಲ್ಲಿ. ಮತ್ತೆ **ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ನಿರ್ಮುಕ್ತಃ** ಎಂದು ಮುಕ್ತನಿಗೆ ಪ್ರಕೃತತ್ವವಿದ್ದುದರಿಂದಲೂ ಬ್ರಹ್ಮತ್ವ ಅಮೃತತ್ವಾದಿಗಳು ಮುಕ್ತರಲ್ಲಿ ಕೂಡುವುದರಿಂದ ಮುಕ್ತ ಜೀವನೇ ಎಂದು ಪೂರ್ವಪಕ್ಷವು ಎನ್ನುತ್ತಾರೆ. ಅದು ಅಯುಕ್ತವು. ಈ ವಾಕ್ಯದಲ್ಲಿ ಬ್ರಹ್ಮಲಿಂಗವು ಅಸ್ಪುಟವಾಗಿದ್ದರೆ ಗಗನವೆಂದೇ ಪೂರ್ವಪಕ್ಷವು ಬರುವುದು.

ಬ್ರಹ್ಮಲಿಂಗವು ಸ್ಫುಟವಾಗಿದ್ದರೆ ಜೀವನೆನ್ನುವ ಪೂರ್ವಪಕ್ಷವೂ ಹುಟ್ಟಲಾರದು. ಜೀವನೆನ್ನುವ ಪೂರ್ವಪಕ್ಷವು ಜೀವಲಿಂಗಾದಿಗಳು ಇಲ್ಲದಿರುವುದರಿಂದ ನಿರ್ಬೀಜವು. ಆಕಾಶಶಬ್ದಕ್ಕೆ ಜೀವನಲ್ಲಿ ಪ್ರಸಿದ್ಧಿಯಿಲ್ಲ. ಪ್ರಸಿದ್ಧದ್ಯೋತಕ ವೈ ನಾಮ ಎನ್ನುವ ಶಬ್ದಗಳು ಜೀವಪಕ್ಷದಲ್ಲಿ ಕೂಡಲಾರವು.

## ಅಧಿಕರಣ ಸಾರಾಂಶ

**ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ** ಎನ್ನುವಲ್ಲಿ ಶ್ರುತವಾದ ಆಕಾಶವು ಅವ್ಯಾಕೃತಾಕಾಶವೋ ಬ್ರಹ್ಮನೋ ಎಂದು ಸಂದೇಹವು. ವೈ ನಾಮ ಎನ್ನುವ ಎರಡು ನಿಪಾತಗಳು ಪ್ರಸಿದ್ಧಾರ್ಥಕಗಳಾದುದರಿಂದ ಅವಕಾಶವೇ ಈ ಆಕಾಶವು ಎಂದು ಪೂರ್ವಪಕ್ಷವು ಬಂದರೆ ತೇ ಯದಂತರಾ ಎನ್ನುವ ವಾಕ್ಯದಲ್ಲಿ ನಾಮರೂಪಗಳನ್ನು ಹೊರತು ಯಾವುದು ಉಂಟೋ ಎಂದು ವಾಕ್ಯದಲ್ಲಿ ಹೇಳಿದ ಸಂಪೂರ್ಣವಾಗಿ ಶಬ್ದಾಗೋಚರತ್ವಾದಿಗಳು, **ಅರೂಪಮಸ್ಪರ್ಶಂ** ಇತ್ಯಾದಿ ಶ್ರುತಿಗಳಿಂದಲೂ, **ಅನಾಮಾ ಸೋಽಪ್ರಸಿದ್ಧಾತ್** ಇತ್ಯಾದಿ ಸ್ಮೃತಿಗಳಿಂದಲೂ, ಬ್ರಹ್ಮಶಬ್ದದಿಂದಲೂ, ಅಮೃತತ್ವಾದಿ ಲಿಂಗಗಳಿಂದಲೂ ಆಕಾಶಶಬ್ದವಾಚ್ಯನು ವಿಷ್ಣುವೇ ಎಂದು ಸಿದ್ಧಾಂತವು. ॥ ೧೨ ॥

**ಆಕಾಶಾಧಿಕರಣವು ಸಮಾಪ್ತವಾಯಿತು.**

# ೧೩. ಸುಷುಪ್ತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸ್ವಪ್ನಾದಿದ್ರಷ್ಟೃತ್ವರೂಪವಾದ ಲಿಂಗಕ್ಕೆ ಬ್ರಹ್ಮನಲ್ಲಿ ಸಮನ್ವಯವು. ಶ್ರುತ್ಯಾದಿ ಸಂಗತಿಯನ್ನೂ ವಿಷಯಾದಿಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ಅಸಂಗತ್ವಂ ಪರಮಾತ್ಮನ ಉಕ್ತಂ। ತಚ್ಚ ಸ ಯತ್ತತ್ರ ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತಿ ಅಸಂಗೋ ಹ್ಯಯಂ ಪುರುಷಃ (ಬೃ.ಉ.೬.೩.೧೫.)। ಇತಿ ಸ್ವಪ್ನಾ(ಸ್ವಾಪಾ)ದಿದ್ರಷ್ಟುಃ ಪ್ರತೀಯತೇ ॥ ೧ ॥**

**ಭಾಷ್ಯಾರ್ಥ ॥** (ಅಕ್ಷರಾಧಿಕರಣದಲ್ಲಿ ಉದಾಹೃತವಾದ **ಅಗಂಧಮರಸಂ** ಎನ್ನುವ ಬೃಹದಾರಣ್ಯಕವಾಕ್ಯದಲ್ಲಿ) ಶ್ರೀಪರಮಾತ್ಮನಿಗೆ ಅಸಂಗತ್ವವು ಹೇಳಲ್ಪಟ್ಟಿದೆ. ಸಃ=ಆ ಪರಮಾತ್ಮನು, ತತ್ರ= ಸ್ವಪ್ನಾವಸ್ಥೆಯಲ್ಲಿ, ಯತ್‌ಕಿಂಚಿತ್ = ಯಾವುದಾದರೂ ಅನಿಷ್ಟವನ್ನು, ಪಶ್ಯತಿ=ನೋಡುತ್ತಾನೋ, ತೇನ= ಅದರಿಂದುಂಟಾದ ಪಾಪಫಲವಾದ ದುಃಖದಿಂದ, ಅನನ್ವಾಗತಃ=ಅಸಂಸ್ಪೃಷ್ಟನು, ಭವತಿ=ಆಗುತ್ತಾನೆ. ಹಿ=ಏಕಂದರೆ, ಅಯಂ ಪುರುಷಃ=ಈ ಪುರುಷನು, ಅಸಂಗಃ=ತತ್ಕೃತವಾದ ಪಾಪಫಲಸಂಸರ್ಗ ಶೂನ್ಯನೆಂದು ಪ್ರಮಿತನಾಗಿರುತ್ತಾನೆ, ಇತಿ=ಇಂತಹ ಬೃಹದಾರಣ್ಯಕವಾಕ್ಯದಲ್ಲಿ ಸ್ವಪ್ನಾದಿಗಳನ್ನು ಕಾಣತಕ್ಕವನಿಗೆ ಆ ಅಸಂಗತ್ವವಾದರೂ ಪ್ರತೀತವಾಗುತ್ತದೆ.

**ವಿಶೇಷಾಂಶ ॥** (೧) ಸ್ವಪ್ನಾದಿದ್ರಷ್ಟೃತ್ವವು ಇತರರಲ್ಲಿ ಇರತಕ್ಕುದೆಂದು ಆಕ್ಷೇಪಿಸಿ ಹಿಂದೆ ಹೇಳಿದ

**ಭಾಷ್ಯ ॥ ಅವರ್ಣಂ ಯತೋ ವಾಚೋ ನಿವರ್ತಂತೇ(ತೈ.೨.೪.)। ಇತ್ಯಾದಿ ಶ್ರುತೇಸ್ತಸ್ಯೈವ (ತಸ್ಯ) ಹಿ ತಲ್ಲಕ್ಷಣಂ ॥ ೪ ॥**

**ಭಾಷ್ಯಾರ್ಥ** ॥ ೧ ಅವರ್ಣಂ=ಪ್ರಾಕೃತ ಶುಕ್ಲಾದಿ ವರ್ಣರಹಿತನು, ಅಥವಾ ವರ್ಣಭಿನ್ನನು, ಅಥವಾ ವರ್ಣಸಲಿಕ್ಕೆ ಶಕ್ಯನಲ್ಲ, ವರ್ಣಾತ್ಮಕನೂ ಅಲ್ಲ. ೨ ಯತಃ=ಯಾವ ಬ್ರಹ್ಮನದೆಶೆಯಿಂದ, ವಾಚಃ=ನಾಮಗಳು, ನಿವರ್ತಂತೇ=ಹೊರಟು ಹೋಗುತ್ತಾವೋ, ಇದು ಮೊದಲಾದ **ಅಶಬ್ದಮಸ್ಪರ್ಶಮರೂಪಮವ್ಯಯಂ** ಇದು ಮೊದಲಾದ ಶ್ರುತಿಗಳ ದೆಶೆಯಿಂದ ಆ ವಿಷ್ಣುವಿಗೇನೇ, ಅಪರೂಪತ್ವಾದಿಗಳು ಅಸಾಧಾರಣಧರ್ಮವೆಂದು ತಿಳಿಯಲ್ಪಡುತ್ತದೆ.

**ವಿಶೇಷಾಂಶ** ॥ ಏವಶಬ್ದದಿಂದ ಈ ಲಕ್ಷಣವು ಬೇರೆಯವರಲ್ಲಿ ಇಲ್ಲವೆಂದು ಸಿದ್ಧವಾಯಿತು.

**ಪೀಠಿಕೆ** ॥ ಶ್ರೀಹರಿಯು ಸರ್ವಶಬ್ದ ವಾಚ್ಯನಾದುದರಿಂದಲೂ ರುಗ್ಮವರ್ಣಮೊದಲಾದ ರೂಪಗಳು ಉಳ್ಳವನಾದುದರಿಂದಲೂ ಶ್ರೀಹರಿಯು ನಾಮರೂಪರಹಿತನೆನ್ನುವುದು ಕೂಡುವುದಿಲ್ಲ ಎಂದರೆ—

**ಭಾಷ್ಯ ॥ ಅನಾಮಾ ಸೋಽಪ್ರಸಿದ್ಧತ್ವಾದರೂಪೋ ಭೂತವರ್ಜನಾತ್। ಇತಿ ಹಿ ಬ್ರಾಹ್ಮೇ ॥ ೫ ॥**

**ಭಾಷ್ಯಾರ್ಥ** ॥ ಶ್ರೀಹರಿಯು ಸಂಪೂರ್ಣವಾಗಿ ಇತರ ಶಬ್ದಾದಿಗಳಿಂದ ಪ್ರಮಿತನಾಗದೆ ಇದ್ದಪ್ರಯುಕ್ತ ಅನಾಮಾ ಎನ್ನಿಸಿಕೊಳ್ಳುತ್ತಾನೆ. ಭೌತಿಕ ಶರೀರರಹಿತನಾದ ಪ್ರಯುಕ್ತ ಅರೂಪಃ ಎನ್ನಿಸಿಕೊಳ್ಳುತ್ತಾನೆ, ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ॥ ೪೧ ॥

## ಮಾಯಾವಾದಿರೀತ್ಯಾ

**ವಿಚಾರ** ॥ **ಆಕಾಶಸ್ತಲ್ಲಿಂಗಾತ್** ಎನ್ನುವ ಅಧಿಕರಣದ ವಿಷಯವಾಕ್ಯದಲ್ಲಿ **ಆಕಾಶಾದೇವ ಸಮುತ್ಪದ್ಯಂತೇ** ಇತ್ಯಾದಿ ವಾಕ್ಯದಲ್ಲಿ ಬ್ರಹ್ಮಲಿಂಗವಿದ್ದಂತೆ ಈ ಸೂತ್ರದ ವಿಷಯವಾಕ್ಯವಾದ **ಆಕಾಶೋ ವೈ ನಾಮ** ಎನ್ನುವಲ್ಲಿ ಬ್ರಹ್ಮಲಿಂಗವು ಇಲ್ಲಿದಿರುವುದರಿಂದ ಪೂರ್ವಪಕ್ಷವು ಹುಟ್ಟುವುದರಿಂದ ಆ ಅಧಿಕರಣದಿಂದ ಗತಾರ್ಥತ್ವವು ಇಲ್ಲವೆನ್ನುತ್ತಾರೆ, ಅದು ಅಯುಕ್ತವು. ಇಲ್ಲಿಯೂ ನಾಮರೂಪನಿರ್ವಹಿತೃತ್ವಾದಿ ಬ್ರಹ್ಮಲಿಂಗಗಳೂ, ಬ್ರಹ್ಮ ಇತ್ಯಾದಿ ಶ್ರುತಿಗಳೂ ಇವೆ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ** ॥ **ತಲ್ಲಿಂಗಾತ್** ಎನ್ನುವ ನ್ಯಾಯದಿಂದಲೇ ಈ ವಾಕ್ಯದಲ್ಲಿಯೂ ಆಕಾಶಕ್ಕೆ ಗಗನತ್ವವು ನಿರಾಸವಾಗಿರುವುದರಿಂದ ಗಗನವೆಂದು ಪೂರ್ವಪಕ್ಷದಲ್ಲ. ಮತ್ತೆ **ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ನಿರ್ಮುಕ್ತಃ** ಎಂದು ಮುಕ್ತನಿಗೆ ಪ್ರಕೃತತ್ವವಿದ್ದುದರಿಂದಲೂ ಬ್ರಹ್ಮತ್ವ ಅಮೃತತ್ವಾದಿಗಳು ಮುಕ್ತರಲ್ಲಿ ಕೂಡುವುದರಿಂದ ಮುಕ್ತ ಜೀವನೇ ಎಂದು ಪೂರ್ವಪಕ್ಷವು ಎನ್ನುತ್ತಾರೆ. ಅದು ಅಯುಕ್ತವು. ಈ ವಾಕ್ಯದಲ್ಲಿ ಬ್ರಹ್ಮಲಿಂಗವು ಅಸ್ಫುಟವಾಗಿದ್ದರೆ ಗಗನವೆಂದೇ ಪೂರ್ವಪಕ್ಷವು ಬರುವುದು.

ಬ್ರಹ್ಮಲಿಂಗವು ಸ್ಫುಟವಾಗಿದ್ದರೆ ಜೀವನೆನ್ನುವ ಪೂರ್ವಪಕ್ಷವೂ ಹುಟ್ಟಲಾರದು. ಜೀವನೆನ್ನುವ ಪೂರ್ವಪಕ್ಷವು ಜೀವಲಿಂಗಾದಿಗಳು ಇಲ್ಲದಿರುವುದರಿಂದ ನಿರ್ಬೀಜವು. ಆಕಾಶಶಬ್ದಕ್ಕೆ ಜೀವನಲ್ಲಿ ಪ್ರಸಿದ್ಧಿಯಿಲ್ಲ. ಪ್ರಸಿದ್ಧದ್ಯೋತಕ ವೈ ನಾಮ ಎನ್ನುವ ಶಬ್ದಗಳು ಜೀವಪಕ್ಷದಲ್ಲಿ ಕೂಡಲಾರವು.

## ಅಧಿಕರಣ ಸಾರಾಂಶ

**ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ** ಎನ್ನುವಲ್ಲಿ ಶ್ರುತವಾದ ಆಕಾಶವು ಅವ್ಯಾಕೃತಾಕಾಶವೋ ಬ್ರಹ್ಮನೋ ಎಂದು ಸಂದೇಹವು. ವೈ ನಾಮ ಎನ್ನುವ ಎರಡು ನಿಪಾತಗಳು ಪ್ರಸಿದ್ಧಾರ್ಥಕಗಳಾದುದರಿಂದ ಅವಕಾಶವೇ ಈ ಆಕಾಶವು ಎಂದು ಪೂರ್ವಪಕ್ಷವು ಬಂದರೆ ತೇ ಯದಂತರಾ ಎನ್ನುವ ವಾಕ್ಯದಲ್ಲಿ ನಾಮರೂಪಗಳನ್ನು ಹೊರತು ಯಾವುದು ಉಂಟೋ ಎಂದು ವಾಕ್ಯದಲ್ಲಿ ಹೇಳಿದ ಸಂಪೂರ್ಣವಾಗಿ ಶಬ್ದಾಗೋಚರತ್ವಾದಿಗಳು, **ಅರೂಪಮಸ್ಪರ್ಶಂ** ಇತ್ಯಾದಿ ಶ್ರುತಿಗಳಿಂದಲೂ, **ಅನಾಮಾ ಸೋಽಪ್ರಸಿದ್ಧತ್ವಾತ್** ಇತ್ಯಾದಿ ಸ್ಮೃತಿಗಳಿಂದಲೂ, ಬ್ರಹ್ಮಶಬ್ದದಿಂದಲೂ, ಅಮೃತತ್ವಾದಿ ಲಿಂಗಗಳಿಂದಲೂ ಆಕಾಶಶಬ್ದವಾಚ್ಯನು ವಿಷ್ಣುವೇ ಎಂದು ಸಿದ್ಧಾಂತವು. ॥ ೧೨ ॥

**ಆಕಾಶಾಧಿಕರಣವು ಸಮಾಪ್ತವಾಯಿತು.**

# ೧೩. ಸುಷುಪ್ತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸ್ವಪ್ನಾದಿದ್ರಷ್ಟೃತ್ವರೂಪವಾದ ಲಿಂಗಕ್ಕೆ ಬ್ರಹ್ಮನಲ್ಲಿ ಸಮನ್ವಯವು. ಶ್ರುತ್ಯಾದಿ ಸಂಗತಿಯನ್ನೂ ವಿಷಯಾದಿಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ಅಸಂಗತ್ವಂ ಪರಮಾತ್ಮನ ಉಕ್ತಂ। ತಚ್ಚ ಸ ಯತ್ತತ್ರ ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತಿ ಅಸಂಗೋ ಹ್ಯಯಂ ಪುರುಷಃ (ಬೃ.ಉ.೬.೩.೧೫.)। ಇತಿ ಸ್ವಪ್ನಾ(ಸ್ವಾಪಾ)ದಿದ್ರಷ್ಟುಃ ಪ್ರತೀಯತೇ ॥ ೧ ॥**

**ಭಾಷ್ಯಾರ್ಥ ॥** (ಅಕ್ಷರಾಧಿಕರಣದಲ್ಲಿ ಉದಾಹೃತವಾದ **ಅಗಂಧಮರಸಂ** ಎನ್ನುವ ಬೃಹದಾರಣ್ಯಕವಾಕ್ಯದಲ್ಲಿ) ಶ್ರೀಪರಮಾತ್ಮನಿಗೆ ಅಸಂಗತ್ವವು ಹೇಳಲ್ಪಟ್ಟಿದೆ. ಸಃ=ಆ ಪರಮಾತ್ಮನು, ತತ್ರ= ಸ್ವಪ್ನಾವಸ್ಥೆಯಲ್ಲಿ, ಯತ್ ಕಿಂಚಿತ್ = ಯಾವುದಾದರೂ ಅನಿಷ್ಟವನ್ನು, ಪಶ್ಯತಿ=ನೋಡುತ್ತಾನೋ, ತೇನ= ಅದರಿಂದುಂಟಾದ ಪಾಪಫಲವಾದ ದುಃಖದಿಂದ, ಅನನ್ವಾಗತಃ=ಅಸಂಸ್ಪೃಷ್ಟನು, ಭವತಿ=ಆಗುತ್ತಾನೆ. ಹಿ=ಏಕೆಂದರೆ, ಅಯಂ ಪುರುಷಃ=ಈ ಪುರುಷನು, ಅಸಂಗಃ=ತತ್ಕೃತವಾದ ಪಾಪಫಲಸಂಸರ್ಗ ಶೂನ್ಯನೆಂದು ಪ್ರಮಿತನಾಗಿರುತ್ತಾನೆ, ಇತಿ=ಇಂತಹ ಬೃಹದಾರಣ್ಯಕವಾಕ್ಯದಲ್ಲಿ ಸ್ವಪ್ನಾದಿಗಳನ್ನು ಕಾಣತಕ್ಕವನಿಗೆ ಆ ಅಸಂಗತ್ವವಾದರೂ ಪ್ರತೀತವಾಗುತ್ತದೆ.

**ವಿಶೇಷಾಂಶ ॥** (೧) ಸ್ವಪ್ನಾದಿದ್ರಷ್ಟೃತ್ವವು ಇತರರಲ್ಲಿ ಇರತಕ್ಕುದೆಂದು ಆಕ್ಷೇಪಿಸಿ ಹಿಂದೆ ಹೇಳಿದ

ಅಸಂಗತ್ವವೂ ಇತರರಲ್ಲಿ ಇರತಕ್ಕದೆಂದು ಹೇಳಿದ್ದರಿಂದ ಅಕ್ಷರಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯೂ ಸೂಚಿತವಾಯಿತು.

**ಪೀಠಿಕೆ ॥** ಸಯುಕ್ತಿಕವಾಗಿ ಪೂರ್ವಪಕ್ಷಿಸುತ್ತಾರೆ—

**ಭಾಷ್ಯ ॥ ಸ ಚ ಜೀವಃ ಪ್ರಸಿದ್ಧೇರಿತಿ ॥ ೨ ॥**

**ಭಾಷ್ಯಾರ್ಥ ॥** ಸ್ವಪ್ನಾದಿಗಳನ್ನು ಕಾಣತಕ್ಕವನು ಜೀವನೇ ಆಗಬೇಕು. ಸ್ವಪ್ನಾದಿದ್ರಷ್ಟೃತ್ವವು ಲೋಕದಲ್ಲಿ ಜೀವನಲ್ಲಿಯೇ ಪ್ರಸಿದ್ಧವಾದ ಪ್ರಯುಕ್ತ.

**ವಿಶೇಷಾಂಶ ॥** (೧) ಸಿದ್ಧಾಂತರೀತ್ಯಾ ಶ್ರುತಿಯಲ್ಲಿದ್ದ ಸಃ ಎನ್ನುವ ತತ್ ಶಬ್ದ ದಿಂದ **ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಸ್ವಪ್ನಾಯೈವ** ಎನ್ನುವ ಪೂರ್ವವಾಕ್ಯದಲ್ಲಿ ಪ್ರಕೃತನಾದ ಪರಮಾತ್ಮನು ಪರಾಮೃಷ್ಟನಾಗುತ್ತಾನೆ. ಆ ಪರಮಾತ್ಮನು ಸುಪ್ತಿಯಲ್ಲಿ ಕ್ರೀಡಿಸಿ ಜೀವನಲ್ಲಿರತಕ್ಕ ಪುಣ್ಯವನ್ನು ಪಾಪವನ್ನು ಕೂಡ ನೋಡಿಯೇ ಸಂಚರಿಸಿ ಪ್ರತಿನ್ಯಾಯಂ=ಅವಸ್ಥಾಂತರವನ್ನು ಹೊಂದಿಸಬೇಕೆನ್ನುವ ನ್ಯಾಯವನ್ನು ಅನುಸರಿಸಿ ಅಥವಾ ಅವರವರ ಕರ್ಮವನ್ನು ಅನುಸರಿಸಿ, ಪ್ರತಿಯೋನಿ=ಸರ್ವದೇಹಗಳಲ್ಲಿ ಸ್ವಪ್ನಾಯೈವ=ಜೀವನಿಗೆ ಸ್ವಪ್ನವನ್ನು ಹೊಂದಿಸಿಕೊಡುವುದಕ್ಕಾಗಿಯೇ, ಆದ್ರವತಿ=ಕಂಠದೇಶಕ್ಕೆ ಬರುತ್ತಾನೆ. ಅಂತಹ ಪರಮಾತ್ಮನು ಸ್ವಪ್ನಾವಸ್ಥೆಯಲ್ಲಿ ಅನಿಷ್ಟವನ್ನು ಕಂಡರೆ ತತ್ಕೃತವಾದ ಪಾಪಫಲವಾದ ದುಃಖದಿಂದ ಅಸಂಸ್ಪೃಷ್ಟನಾಗುತ್ತಾನೆ, ಎಂದು ಸಿದ್ಧಾಂತರೀತ್ಯಾ ಅರ್ಥವು. (೨) ಪೂರ್ವಪಕ್ಷಿಯಾದರೂ ಶ್ರುತಿಯಲ್ಲಿದ್ದ ಸಃ ಎನ್ನುವ ಶಬ್ದದಿಂದ ಜೀವನನ್ನು ಇಟ್ಟುಕೊಂಡು ಎಲ್ಲಾ ವಾಕ್ಯವೂ ಜೀವಪರವೆಂದು ವ್ಯಾಖ್ಯಾನ ಮಾಡುತ್ತಾನೆ.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋ ವಕ್ತಿ ॥ ೩ ॥**

## ಸೂತ್ರ ॥ ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ ॥ ೪೨ ॥

**ಸೂತ್ರಾರ್ಥ ॥** ಆದುದರಿಂದ ಉತ್ತರವನ್ನು ಹೇಳುತ್ತಾರೆ, ಸುಷುಪ್ತ್ಯುತ್ಕ್ರಾಂತ್ಯೋಃ= ಸುಷುಪ್ತಿಯಿಂದ ಯುಕ್ತನಾದ ಪ್ರಯುಕ್ತ ಸುಷುಪ್ತ= ಜೀವನು, ಉತ್ಕ್ರಮಣವನ್ನು ಮಾಡಿಸುವುದರಿಂದ, ಉತ್ಕ್ರಾಂತ್ಯೋಃ=ಉತ್ಕ್ರಾಂತಿ ಶಬ್ದವಾಚ್ಯನಾದ ಈಶ್ವರ ಇವರಿಗೆ, ಭೇದೇನ=ಭಿನ್ನತ್ವ ದಿಂದಲೇ, ವ್ಯಪದೇಶಾತ್=ಹೇಳಿದ್ದರಿಂದ ಜೀವ ಈಶ್ವರರಿಗೆ ಅಭೇದವಲ್ಲ, ಆದಪ್ರಯುಕ್ತ ಈಶ್ವರಾಭೇದದಿಂದಲೂ ಜೀವನಲ್ಲಿ ಅಸಂಗತ್ವೋಕ್ತಿಯು ಕೂಡುವುದಿಲ್ಲ ಮತ್ತೆ ಅಸಂಗತ್ವವು ಈಶ್ವರನಿಗೇನೇ ಹೇಳುವುದು ಯೋಗ್ಯವು. ಜೀವನಿಗೆ ಹೇಳಕೂಡದು.

**ಭಾಷ್ಯ ॥ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ** (ಬೃ.೬.೩.೨೧.)। **ಪ್ರಾಜ್ಞೇನಾತ್ಮನಾऽನ್ವಾರೂಢ ಉತ್ಸರ್ಜದ್ಯಾತಿ** (ಬೃ.೬.೩.೩೫.)।

**ಇತಿ ಭೇದವ್ಯಪದೇಶಾನ್ನ ಜೀವಃ ಪರ ಏವಾಸಂಗಃ ॥ ೪ ।**

**ಭಾಷ್ಯಾರ್ಥ ॥** ೧ ಸರ್ವಜ್ಞನಾದ ಪರಮಾತ್ಮನಿಂದ ಆಲಿಂಗಿಸಿಕೊಳ್ಳಲ್ಪಟ್ಟ ಸುಪ್ತನು ಮುಕ್ತನೂ ಕೂಡ ದೇಹದೆಶೆಯಿಂದ ಬಾಹ್ಯವಿಷಯಾದಿಗಳನ್ನು ಯಾವುದನ್ನು ತಿಳಿಯುವುದಿಲ್ಲ. ಅಂತರವಾದ ಯಾವ ವಿಷಯಾದಿಗಳನ್ನೂ ತಿಳಿಯುವುದಿಲ್ಲ. ೨ ಸರ್ವಜ್ಞನಾದ ಶ್ರೀಹರಿಯಿಂದ ಅಧಿಷ್ಠಿತನಾದ ಅಂದರೆ ಶ್ರೀಹರಿಗೆ ವಾಹನಭೂತನಾದ ಜೀವನು ಹಿಂದಿನ ದೇಹವನ್ನು ಬಿಟ್ಟವನಾಗಿ ದೇಹಾಂತರವನ್ನೂ ಲೋಕಾಂತರವನ್ನೂ ಹೊಂದುತ್ತಾನೆ, ಎಂದು ಜೀವೇಶ್ವರರಿಗೆ ಭೇದವನ್ನು ಹೇಳಿದ್ದರಿಂದಲೂ ಜೀವನಲ್ಲ, ಪರಮಾತ್ಮನೇ ಅಸಂಗನು.

**ವಿಶೇಷಾಂಶ ॥** (೧) ಸ್ವಪ್ನಾದಿದ್ರಷ್ಟೃತ್ವವು ಆ ಶ್ರೀಹರಿಗೇನೇ ಆಗುವುದು. ಜೀವನಿಗೆ ಅಲ್ಲ. ಏಕೆಂದರೆ— ಈತನು ಅಸಂಗನೆಂದು ಶ್ರುತನಾಗಿರುತ್ತಾನೆ. ಸ್ವಪ್ನಾದಿದ್ರಷ್ಟೃವಿಗೆ ಅಸಂಗತ್ವವು ಶ್ರುತವಾದಾಗ್ಯೂ ಈತನು ವಿಷ್ಣುವೆನ್ನುವುದು ಹೇಗೆ ಸಿದ್ಧಿಸುತ್ತದೆ ಎಂದು ಹೇಳಕೂಡದು. ಏಕೆಂದರೆ ಈ ಅಸಂಗನು ಕರ್ಮಬದ್ಧ ನಾಗದೆ ಇದ್ದ ಪ್ರಯುಕ್ತ ಪರಮಾತ್ಮನೇ ಜೀವನಲ್ಲ. (೨) ಹಾಗಾದರೆ ಜೀವೇಶ್ವರರಿಗೆ ಅಭೇದವಿದ್ದಪ್ರಯುಕ್ತ ಜೀವನಲ್ಲಿಯೂ ಅಸಂಗತ್ವೋಕ್ತಿಯು ಕೂಡಬಹುದು ಎಂದು ಹೇಳಕೂಡದು. ಪ್ರಾಜ್ಞೇನ ಇದು ಮೊದಲಾದ ಸುಷುಪ್ತಿಪ್ರಕರಣ ಉತ್ಕ್ರಾಂತಿ ಪ್ರಕರಣಗಳಲ್ಲಿರತಕ್ಕ ವಾಕ್ಯಗಳಲ್ಲಿ ಅಸಂಗನಾದ ಸ್ವಪ್ನಾದಿದ್ರಷ್ಟ ನಾದ ಈಶ್ವರನಿಂದ ಜೀವನಿಗೆ ಭೇದವನ್ನು ಹೇಳಿದ್ದಾರೆ.

**ಭಾಷ್ಯ ॥ ಸ್ವಪ್ನಾದಿದ್ರಷ್ಟೃತ್ವಂ ಚ ಸರ್ವಜ್ಞತ್ವಾತ್ತಸ್ಯೈವ ಯುಜ್ಯತೇ॥ ೪೨ ॥ ಅಧಿ. ೧೩ ॥೫॥**

**ಭಾಷ್ಯಾರ್ಥ ॥** ಕೇವಲ ಅಸಂಗತ್ವವು ಕರ್ಮಬದ್ಧನಾಗದೆ ಇದ್ದ ಪ್ರಯುಕ್ತ ಶ್ರೀಹರಿಗೇನೇ ಯುಕ್ತವಾಗುವುದು ಎಂದಲ್ಲ, ಮತ್ತೆ ಸ್ವಪ್ನಾದಿದ್ರಷ್ಟೃತ್ವವೂ ಕೂಡ ಶ್ರೀಹರಿಗೇನೇ ಜೀವನಕ್ಕಿಂತಲೂ ಮುಖ್ಯವಾಗಿ ಯುಕ್ತವಾಗುವುದು. ಆದುದರಿಂದ ಶ್ರೀಹರಿಗೇನೇ ಆ ಮಾತು ಯುಕ್ತವಾಗುವುದು. ಜೀವನಿಗೆ ಅಲ್ಲ, ಏಕೆಂದರೆ—ಶ್ರೀಹರಿಯೇ ಸರ್ವಜ್ಞನು, ಸತ್ಯವಾದ ಅಶೇಷಾರ್ಥಗಳ ಜ್ಞಾನವಿರುವವನು. ಹಾಗಾದರೆ ಅಶರೀರತ್ವರೂಪವಾದ ಲಿಂಗವು ಬಾಧಕವೆನ್ನಕೂಡದು. ಏಕೆಂದರೆ ಪ್ರಾಕೃತ ಶರೀರ ವಿಲ್ಲದಿದ್ದರೂ ಚಿದಾತ್ಮಕ ಶರೀರವುಳ್ಳ ಶ್ರೀಹರಿಗೇನೇ ಸ್ವಪ್ನಾದಿದ್ರಷ್ಟೃತ್ವವು ಹೇಳಲ್ಪಡುತ್ತದೆ. ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಇತ್ಯಾದಿಗಳು ಕೂಡಲಾರವು ಎಂದು ಹೇಳಕೂಡದು. ಏಕೆಂದರೆ— ಇಲ್ಲಿ ಆದಿಪದ ಗೃಹಿತಗಳಾದ ಪುಣ್ಯಪಾಪಾದಿ ದ್ರಷ್ಟೃತ್ವ ರೂಪವಾದ ಲಿಂಗಾಂತರವೂ ಶ್ರೀಹರಿಗೇನೇ ಉಪಪನ್ನವಾಗುವುದು. ॥ ೪೨ ॥

## ಅಧಿಕರಣ ಸಾರಾಂಶ

ಕಾಣ್ವಶ್ರುತಿಯಲ್ಲಿ ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಎನ್ನುವಲ್ಲಿ ಶ್ರುತನಾದ ಸ್ವಪ್ನಾದಿದ್ರಷ್ಟನು ಜೀವನೋ ಈಶನೋ ಎಂದು ಸಂದೇಹವು. ಲೋಕದಲ್ಲಿ ಜೀವನಲ್ಲಿಯೇ ಪ್ರಸಿದ್ಧಿಯಿದ್ದುದರಿಂದಲೂ ಈಶ್ವರನಿಗೆ ಶರೀರವಿಲ್ಲದಿರುವುದರಿಂದ ಸ್ವಪ್ನಾದಿದ್ರಷ್ಟೃತ್ವವು ಕೂಡದಿರುವುದರಿಂದಲೂ ಅಸಂಗತ್ವರೂಪವಾದ ಬ್ರಹ್ಮಲಿಂಗವು ಜೀವೇಶರಿಗೆ ಅಭೇದವಿದ್ದುದರಿಂದ

ಜೀವಚೈತನ್ಯದಲ್ಲಿಯೂ ಕೂಡುವುದರಿಂದಲೂ ಜೀವನೇ ಎಂದು ಪೂರ್ವಪಕ್ಷವು ಬಂದರೆ **ಅಸಂಗೋ ಹ್ಯಯಂ ಪುರುಷಃ** ಎಂದು ಶ್ರುತವಾದ ಅಸಂಗತ್ವವು ಅಸಂಗಮಸ್ಪರ್ಶಂ ಇತ್ಯಾದಿ ಶ್ರುತಿಯಿಂದ ಕೇವಲ ಈಶ್ವರಧರ್ಮವಾದುದರಿಂದಲೂ, ಸ್ವಪ್ನಾದಿಪದಾರ್ಥಗಳು ಸತ್ಯಗಳಾದುದರಿಂದ **ಯಃ ಸರ್ವಜ್ಞಃ** ಇತ್ಯಾದಿ ಶ್ರುತಿಯಿಂದಲೂ ಈಶ್ವರನು ಸರ್ವಗತನಾದುದರಿಂದಲೂ ಸರ್ವಸ್ವಪ್ನಾದಿದ್ರಷ್ಟೃತ್ವವು ಈಶ್ವರನಲ್ಲಿಯೇ ಮುಖ್ಯತಃ ಕೂಡುವುದು. ಸುಷುಪ್ತಿ ಉತ್ಕ್ರಾಂತಿ ಪ್ರಕರಣಗಳಲ್ಲಿ ಭೇದವನ್ನು ಹೇಳಿದ್ದರಿಂದ ಜೀವೇಶಾಭೇದವು ಸರ್ವಥಾ ಕೂಡಲಾರದು. **ಸ್ವಾಪ್ಯಯಸಂಪತ್ಯೋಃ** ಎನ್ನುವಲ್ಲಿ ಸುಷುಪ್ತಿ ಪ್ರಕರಣವು ಮುಕ್ತಿಪರವೆಂದು ಹೇಳಿದ್ದರಿಂದಲೂ ಭೇದವು ಮುಕ್ತಿಯಲ್ಲಿದ್ದುದರಿಂದ ಸತ್ಯವಾದುದರಿಂದಲೂ ಸ್ವಪ್ನಾದಿದ್ರಷ್ಟನು ವಿಷ್ಣುವೇ ಎಂದು ಸಿದ್ಧಾಂತವು. **ಕಾರ್ತ್ಸ್ನ್ಯೇನ ಸ್ವಾಪ್ನವಸ್ತೂನಾಂ ದ್ರಷ್ಟಾ ಸರ್ವಜ್ಞ ಈಶ್ವರಃ । ನ ಯುಜ್ಯತೇ ಚ ಸಂಕೋಚೋ ಹ್ಯಸಂಕೋಚಸ್ಯ ಸಂಭವೇ ॥ ಅಧಿ. ೧೩ ॥**

**ಸುಷುಪ್ತ್ಯಧಿಕರಣವು ಸಮಾಪ್ತವಾಯಿತು.**

## ೧೪ ಬ್ರಾಹ್ಮಣಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬ್ರಾಹ್ಮಣನಾಮಕ್ಕೆ ಸಮನ್ವಯವು. ಶ್ರುತ್ಯಾದಿಸಂಗತಿಯನ್ನೂ ವಿಷಯಾದಿಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ** (ಬೃ.ಉ.೬.೪.೨೩.)**। ಇತಿ ಬ್ರಾಹ್ಮಣಸ್ಯಾಪಿ ನಿತ್ಯಮಹಿಮಾ ಪ್ರತೀಯತೇ। ಸ ಚ ಬ್ರಾಹ್ಮಣಃ ಸ ವಾ ಏಷ ಮಹಾನ್ಯಜ ಆತ್ಮಾ** (ಬೃ.ಉ.೬.೪.೨೪.)**। ಇತ್ಯಜಶಬ್ದಾದ್ವಿರಿಂಚ ಇತಿ ಪ್ರಾಪ್ತಂ । ದೇವಾನಾಂ ಚ ವಿದ್ಯಾಕರ್ಮಣೋ ಪದಪ್ರಾಪ್ತಿಃ ಸೂಚಿತಾ ತದುಪರ್ಯಪೀತಿ ॥ ೧ ॥**

**ಭಾಷ್ಯಾರ್ಥ ॥** (ಜನ್ಮಾದ್ಯಧಿಕರಣದಲ್ಲಿ ಶ್ರೀವಿಷ್ಣುವಿಗೆ ಇತರಾಪೇಕ್ಷೆಯಿಲ್ಲದೆ ಸರ್ವಜಗತ್‌ಸ್ರಷ್ಟೃತ್ವ ವನ್ನು ಹೇಳಿದ್ದರಿಂದ ಲಬ್ಧವಾದ ಯಾವುದು) ನಿತ್ಯಮಹಿಮೆಯು ಇದೆಯೋ (ಅದು) ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ=ಈ ನಿತ್ಯವಾದ ಮಹಿಮೆಯ ಬ್ರಾಹ್ಮಣನಿಗೆ, ಇತಿ=ಎನ್ನುವ ಬೃಹದಾರಣ್ಯಕದಲ್ಲಿ ಉದಾಹರಿಸಿರುವ ಋಙ್ಮಂತ್ರದಲ್ಲಿ (ವಿಷ್ಣುವಿಗೆ ಮಾತ್ರವಲ್ಲ ಮತ್ತೆ ಒಬ್ಬಾನೊಬ್ಬ) ಬ್ರಾಹ್ಮಣನಿಗೂ ಪ್ರತೀತವಾಗುತ್ತದೆ. (ಸಯುಕ್ತಿಕವಾಗಿ ಪೂರ್ವಪಕ್ಷಿಸುತ್ತಾರೆ.) ಆ ಬೃಹದಾರಣ್ಯಕ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಾಹ್ಮಣನು, ಸ ಏಷಃ ಆತ್ಮಾ=ಆ ಈ ಶ್ರೀಪರಮಾತ್ಮನು, ಮಹಾನ್=ಅಪರಿಮಿತನು, ಅಜಃ= ಜನ್ಮರಹಿತನು, ಎನ್ನುವ ಪೂರ್ವೋತ್ತರ ವಾಕ್ಯಗಳಲ್ಲಿ ಶ್ರುತವಾದ ಅಜ ಶಬ್ದದೆಶೆಯಿಂದ ವಿರಿಂಚನೇ ಎಂದು ಪ್ರಾಪ್ತವಾಯಿತು. (ಹಾಗಾದರೆ ಬ್ರಾಹ್ಮಣಶಬ್ದವಾಚ್ಯನು ವಿರಿಂಚನು ಹೇಗೆ ಆಗುವನು? ತದುಪರಿ ಎನ್ನುವ ಸೂತ್ರದಲ್ಲಿ ದೇವತೆಗಳಿಗೆ ವಿದ್ಯಾಕರ್ಮಗಳಿಂದ ಪದಪ್ರಾಪ್ತಿಯನ್ನು ಸಮರ್ಥಿಸಿದ್ದರಿಂದ ಬ್ರಾಹ್ಮಣನಲ್ಲಿ ಶ್ರುತವಾದ ನಿತ್ಯಮಹಿಮೆಯು ಚತುರ್ಮುಖನಲ್ಲಿ ಕೂಡಲಾರದು. ಸಾದಿಪದವು ಅನಿತ್ಯವೆಂದು ನಿಯತವೇ ಆಗಿದೆ ಎಂದರೆ—) ತದುಪರಿ ಎನ್ನುವ

ಸೂತ್ರದಲ್ಲಿ ಚತುರ್ಮುಖನಿಂದ ಇತರರಾದ ದೇವತೆಗಳಿಗೇನೇ ವಿದ್ಯಾಕರ್ಮಗಳ ಸಕಾಶದೆಶೆಯಿಂದ ಪದಪ್ರಾಪ್ತಿಯು ಸಮರ್ಥಿಸಲ್ಪಟ್ಟಿದೆ. (ವಿರಿಂಚನಿಗೂ ಪದಪ್ರಾಪ್ತಿಯನ್ನು ಸಮರ್ಥಿಸಲಿಲ್ಲ. ವಿರಿಂಚನು ಈಶ್ವರಸ್ವರೂಪನಾದುದರಿಂದ ದೇವಕೋಟಿಯಲ್ಲಿ ಪ್ರವಿಷ್ಟನಾಗಲಿಲ್ಲ. ಆದಕಾರಣ ವಿರಿಂಚನಿಗೆ ನಿತ್ಯಮಹಿಮೆಯು ಯುಕ್ತವೇ ಆಗುವುದು.)

**ವಿಶೇಷಾಂಶ ॥** (೧) ಪೂರ್ವದಲ್ಲಿ ಹೇಳಲ್ಪಟ್ಟ ನಿತ್ಯಮಹಿಮೆಯು ವಿಷ್ಣುವಿನಿಂದ ಇತರರಿಗೂ ಇರಬಹುದೆಂದು ಹೇಳಿದ್ದರಿಂದ ಜನ್ಮಾದ್ಯಧಿಕರಣಗಳಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು. ಬ್ರಾಹ್ಮಣಾಖ್ಯ ವಿಷಯವೂ ಸೂಚಿತವಾಯಿತು. (೨) ಬ್ರಾಹ್ಮಣ ಅಜ ಶಬ್ದಗಳಿಂದ ವಾಚ್ಯನಾದವನು ವಿರಿಂಚನು ಎಂದು ಪೂರ್ವಪಕ್ಷಿಯ ಅಭಿಪ್ರಾಯವು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಅವತರಿಸುತ್ತಾರೆ—

**ಭಾಷ್ಯ ॥ ಅತೋ ಬ್ರವೀತಿ** ॥ ೨ ॥

## ಸೂತ್ರ ॥ ಓಂ ಪತ್ಯಾದಿಶಬ್ದೇಭ್ಯಃ ಓಂ ॥ ೪೩ ॥

**ಸೂತ್ರಾರ್ಥ ॥** ಹೀಗೆ ಶಂಕಾ ಬಂದರೆ ಉತ್ತರವನ್ನು ಹೇಳುತ್ತಾರೆ— ಈ ಬ್ರಾಹ್ಮಣಶಬ್ದವಾಚ್ಯನು ಶ್ರೀವಿಷ್ಣುವೇ ವಿರಿಂಚನಲ್ಲ. ಪತ್ಯಾದಿಶಬ್ದೇಭ್ಯಃ=ಸರ್ವಾಧಿಪತ್ಯಾದಿಗಳನ್ನು ಹೇಳತಕ್ಕ ಸರ್ವಾಧಿಪತ್ಯಾದಿ ಶಬ್ದಗಳು ಶ್ರುತಗಳಾದುದರಿಂದ. ಅಂತೂ ನಿತ್ಯಮಹಿಮೆಯುಳ್ಳವನು ವಿಷ್ಣುವೇ. ಬ್ರಹ್ಮಣಾ= ವೇದದಿಂದ, ಅಣ್ಯತೇ = ತಿಳಿಯಲ್ಪಡುತ್ತಾನೆ ಎನ್ನುವ ವ್ಯುತ್ಪತ್ತಿಯಿಂದ ವಿಷ್ಣುವು ವೇದೈಕಗಮ್ಯನು ಎನ್ನುವ ವ್ಯುತ್ಪತ್ತಿಯಿಂದ ಬ್ರಾಹ್ಮಣಶಬ್ದವಾಚ್ಯನು ವಿಷ್ಣುವೇ. ಶ್ರೀಪತಿಯು ವೇದಗಮ್ಯನು ಎನ್ನುವ ವಿಷಯದಲ್ಲಿ ಇತರರಕ್ಕಿಂತ ಆಧಿಕ್ಯವದೆ ಎಂದು ತಿಳಿಸಿಕೊಡುವುದಕ್ಕಾಗಿ ಬ್ರಹ್ಮಾಣಃ ಎಂದು ಹೇಳುವುದನ್ನು ಬಿಟ್ಟು ಬ್ರಾಹ್ಮಣಃ ಎಂದು ದೀರ್ಘವ್ಯತ್ಯಾಸವು. ತಥಾಚ ಬ್ರಾಹ್ಮಣ ಶಬ್ದ ವಾಚ್ಯನಾದ ಶ್ರೀ ವಿಷ್ಣುವಿಗೆ ಈ ಪೂರ್ವೋಕ್ತವಾದ ಮಹಿಮೆಯು ನಿತ್ಯವಾಗಿದೆ. ಏಕೆಂದರೆ— **ನ ಕರ್ಮಣಾ ವರ್ಧತೇ ನೋ ಕನೀಯಾನ್** ಶುಭಕರ್ಮಫಲಭೂತವಾದ ಸುಖದಿಂದ ಅಭಿವೃದ್ಧನಾಗುವುದಿಲ್ಲ. ಪಾಪಕರ್ಮ ಫಲಭೂತವಾದ ದುಃಖದಿಂದ ಹ್ರಾಸವನ್ನು ಹೊಂದುವುದಿಲ್ಲ.

**ಭಾಷ್ಯ ॥ ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ ಸ ವಾ ಏಷ ನೇತಿ ನೇತಿ** (ಬೃ.ಉ. ೬.೪.೨೨.)
**ಇತ್ಯಾದಿಶಬ್ದೇಭ್ಯೋ ನಿತ್ಯಮಹಿಮಾ ವಿಷ್ಣುರೇವ** ॥ ೩ ॥

**ಭಾಷ್ಯಾರ್ಥ ॥** ಸರ್ವಸ್ಯ=ಬ್ರಹ್ಮರುದ್ರಾದಿಗಳ ಸಕಾಶದೆಶೆಯಿಂದ, ಅಧಿಪತಿಃ=ಗುಣಗಳಿಂದ ಅಧಿಕನೂ ಸರ್ವರಿಗೆ ಪಾಲಕನೂ ಆಗಿರುತ್ತಾನೆ. ಸರ್ವಸ್ಯ=ಸರ್ವ ಜಗತ್ತಿಗೆ, ಈಶಾನಃ=ನಿಯಾಮಕರಾದ ಬ್ರಹ್ಮಾದಿಗಳಿಗೆ ಪ್ರೇರಕನು. (ಸ ವಾ ಏಷಃ ಎನ್ನುವುದು, ಬೃಹದಾರಣ್ಯಕ ಶ್ರುತಿಯು.) ಸ ವಾ ಏಷಃ= ಆ ಈ ಪ್ರಾಣಶಬ್ದದಿಂದ ಹೇಳಲ್ಪಟ್ಟ ಈಶಾನಶಬ್ದವಾಚ್ಯನು, ಆತ್ಮಾ=ಪರಮಾತ್ಮನು, ಇತಿ ನಃ= ದೃಷ್ಟಪದಾರ್ಥದಂತೆ ಅಲ್ಲ, ಇತಿ ನಃ=ಶ್ರುತವಾದ ವಸ್ತುವಿನಂತೆಯೂ ಅಲ್ಲ. ಮತ್ತೆ ದೃಷ್ಟಶ್ರುತ ವಿಲಕ್ಷಣನು. ವ್ಯ=ಪ್ರಸಿದ್ಧವು. (ಏಕೆಂದರೆ—**ಆತ್ಮಾSಗೃಹ್ಯಃ ನ ಹಿ ಗೃಹ್ಯತೇSಶೀರ್ಯೋ ನ ಹಿ ಶೀರ್ಯತೇSಸಂಗೋ**

**ನ ಹಿ ಸಜ್ಜತೇऽಸಿತೋ ನ ವ್ಯಥತೇ ನ ರಿಷ್ಯತಿ ... ಸ ಏಷ ಆತ್ಮಾऽಜರೋऽಮರೋऽ ಮೃತೋऽಭಯಃ =** ಸಾಕಲ್ಯವಾಗಿ ಅಗ್ರಾಹ್ಯನು, ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.) ಇತ್ಯಾದಿಶಬ್ದೇಭ್ಯಃ=ಇದು ಮೊದಲಾದ ಶ್ರುತಿಗಳಲ್ಲಿ ಶ್ರುತಗಳಾದ ಸರ್ವಾಧಿಪತ್ಯಾದಿಗಳನ್ನು ಹೇಳತಕ್ಕ ಯಾವ ಶಬ್ದಗಳು ಇವೆಯೋ, ಅವುಗಳಿಂದ ನಿತ್ಯಮಹಿಮೆಯುಳ್ಳವನು ಶ್ರೀವಿಷ್ಣುವೇ.

**ವಿಶೇಷಾಂಶ ॥** (೧) ಆದಿಪದದಿಂದ ಸರ್ವವಶಿತ್ವಾದಿಗಳನ್ನು ಹೇಳತಕ್ಕ ಶಬ್ದಗಳನ್ನು ಇಟ್ಟುಕೊಳ್ಳಬೇಕು. (೨) ಸೂತ್ರದಲ್ಲಿದ್ದ ಆದಿಶಬ್ದವು ಶಾಸ್ತ್ರಾಂತರದಲ್ಲಿ ಹೇಳಿದ ಸರ್ವೇಶಾನಾದಿ ಶಬ್ದಗಳಿಗೆ ಮಾತ್ರ ಗ್ರಾಹಕವಲ್ಲ, ಮತ್ತೆ ಬೃಹದಾರಣ್ಯಕದಲ್ಲಿ ಹೇಳಿದ ಸರ್ವವಿಲಕ್ಷಣತ್ವ ಸರ್ವವಶಿತ್ವ ಮೊದಲಾದ ಶಬ್ದಗಳಿಗೂ ಗ್ರಾಹಕವಾಗುವುದು.

**ಪೀಠಿಕೆ ॥** ಹಾಗಾದರೆ ಸರ್ವಾಧಿಪತ್ಯಾದಿಗಳನ್ನು ಹೇಳತಕ್ಕ ಶಬ್ದವು ಇದ್ದಾಗ್ಯೂ ಬ್ರಾಹ್ಮಣನು ವಿಷ್ಣುವೆಂದು ನಿಶ್ಚಯವಾಗುವುದು ಹೇಗೆ? ಎಂದರೆ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ (ತೈ.ಆ.ಶಿ. ೧೨.) ॥ ೪ ॥**

**ಭಾಷ್ಯಾರ್ಥ ॥** (**ಪುರುಷ ಏವೇದಂ ಸರ್ವಂ, ಯದ್ಭೂತಂ ಯಚ್ಚ ಭವ್ಯಂ ।** ಯಾವುದು ಅತೀತವಾದುದೋ, ಯಾವುದು ಭವಿಷ್ಯತ್ಕಾಲಿಕವೋ, ಯಾವುದು ವರ್ತಮಾನಕಾಲಿಕವೋ, ಅದೆಲ್ಲವೂ ಪರಮಪುರುಷಾಧೀನವೇ. ಏಕೆಂದರೆ—ಅಮುಕ್ತರಾದ ಸರ್ವರಿಗೆ ಅಧಿಪತಿಯು ಮಾತ್ರವಲ್ಲ ಮತ್ತೆ) ಅಮೃತತ್ವಸ್ಯೋತ=ಮುಕ್ತರ ಸಮುದಾಯಕ್ಕೂ ಕೂಡ, ಈಶಾನಃ = ಅಧಿಪತಿಯು. (ತತ್ವಪ್ರದೀಪದಲ್ಲಿ ಅಮೃತತ್ವಸ್ಯ=ಮೋಕ್ಷಕ್ಕೆ, ಈಶಾನಃ=ನಿಯಾಮಕನು, ಎಂದು ಅರ್ಥಾಂತರವೂ ಉಕ್ತವಾಗಿದೆ.) (ಹೇತುವನ್ನು ಹೇಳುತ್ತಾರೆ.) ಯತ್=ಯಾವ ಕಾರಣದೆಶೆಯಿಂದ, ಅನ್ನೇನ= ಮರ್ತ್ಯವಾದ ಸಂಸಾರಿಸಮೂಹವನ್ನು, ಅತಿರೋಹತಿ=ಅತಿಕ್ರಮಿಸುತ್ತಾನೋ, ಆದಪ್ರಯುಕ್ತ

**ವಿಶೇಷಾಂಶ ॥** ಮುಕ್ತಿಯಲ್ಲಿದ್ದವರು ಅಧೀನರಲ್ಲವೆಂದು ಆದರೆ ಸರ್ವಜ್ಞನಾದ ಶ್ರೀ ಹರಿಯು ತನ್ನ ಅಧೀನದಲ್ಲಿದ್ದ ಸಂಸಾರಿಗಳಿಗೆ ಮೋಕ್ಷವನ್ನು ಕೊಡುತ್ತಾನೆನ್ನುವುದು ಕೂಡದೆ ಹೋಗುವುದು.

**ಪೀಠಿಕೆ ॥** ಈಗ ಶ್ರೀಹರಿಯು ಸರ್ವಶಬ್ದ ಸಂಬಂಧವುಳ್ಳ ಈಶಾನಪದದಿಂದ ಹೇಳಲ್ಪಟ್ಟ ಸರ್ವಪ್ರೇರಕನೆನ್ನುವ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ ।** (ಋ.೧.೧೬೪.೩೬.)। **ಸ ಯೋऽತೋऽಶ್ರುತಃ** (ಐ.ಆ.೩.೨. ೪.) **। ಇತ್ಯಾದಿ ಶ್ರುತಿಭ್ಯಸ್ತಸ್ಯೈವ ಹಿ ತೇ ಶಬ್ದಾಃ ॥ ೪೩ ॥ ಅಧಿ.೧೪ ॥ ೫ ॥**

**ಭಾಷ್ಯಾರ್ಥ ॥** (೧) ಈ ಶ್ರುತಿಯು ಅಕ್ಷರಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ. (೨) ನೇತಿ ನೇತಿ ಎಂದು ಹೇಳಲ್ಪಟ್ಟ ದೃಷ್ಟ ಶ್ರುತ ಸರ್ವವಸ್ತುಗಳಿಂದಲೂ ವಿಲಕ್ಷಣನು ಎನ್ನುವ ವಿಷಯದಲ್ಲಿಯೂ ಶ್ರುತಿಯನ್ನು ಹೇಳುತ್ತಾರೆ. ಸ ಯಃ ಎನ್ನುವ ಶ್ರುತಿಯೂ ಸರ್ವತ್ರಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ. ಆದಿಪದದಿಂದ ಸರ್ವವಶಿತ್ವಾದಿಗಳಲ್ಲಿಯೂ ಇದೇ ಪ್ರಕಾರ ಶ್ರುತ್ಯಂತರಗಳನ್ನು ಉದಾಹರಿಸಬೇಕು

ಎಂದು ಸೂಚಿತವಾಯಿತು. ಇದು ಮೊದಲಾದ ಶ್ರುತಿಗಳ ದೆಶೆಯಿಂದ ಆ ವಿಷ್ಣುವಿಗೇನೇ, (ಇತರರಿಗೆ ಅಲ್ಲ) ಯಾವ ಕಾರಣದಿಂದ ಆ ಸರ್ವಾಧಿಪತ್ಯಾದಿ ಶಬ್ದಗಳು ತಿಳಿಯಲ್ಪಟ್ಟಿದ್ದಾವೋ, (ಆದುದರಿಂದ ನಿತ್ಯಮಹಿಮೆಯುಳ್ಳವನೂ ಬ್ರಾಹ್ಮಣಶಬ್ದವಾಚ್ಯನೂ ಪರಮಾತ್ಮನೇ) ॥ ೪೩ ॥

## ಮಾಯಾವಾದಿರೀತ್ಯಾ

**ವಿಚಾರ॥ ಕತಮ ಆತ್ಮಾ ಯೋಽಯಂ ವಿಜ್ಞಾನಮಯಃ** ಎನ್ನುವುದನ್ನು ಆರಂಭಿಸಿ **ಸ ವಾ ಏಷ ಮಹಾನಜ ಆತ್ಮಾ** ಎನ್ನುವ ತನಕವಿರುವ ಬೃಹದಾರಣ್ಯಕ ವಾಕ್ಯವು ಮಾನಾಂತರ ಪ್ರಾಪ್ತವಾದ ಸಂಸಾರಿ ಆತ್ಮಸ್ವರೂಪವನ್ನು ಅನುವಾದಮಾತ್ರ ಮಾಡತಕ್ಕದ್ದು. ಉಪಕ್ರಮ ಉಪಸಂಹಾರಗಳಲ್ಲಿ ಸಂಸಾರಿರೂಪವೇ ಪ್ರತೀತವಾಗುತ್ತದೆ ಎಂದು ಪ್ರಾಪ್ತವಾದರೆ **ಸ ವಾ ಅಯಂ ಪುರುಷೋ ಜಾಯಮಾನಃ** ಇತ್ಯಾದಿಗಳಿಂದ ಕಲ್ಪಿತ ಸಂಸಾರಿಸ್ವರೂಪವನ್ನು ಅನುವಾದ ಮಾಡಿ **ಸ ವಾ ಏಷ ಮಹಾನಜಃ** ಇತ್ಯಾದಿಗಳಿಂದ ಅಕಲ್ಪಿತವಾದ ಅಸಂಸಾರಿಯಿಂದ ಐಕ್ಯವು ಬೋಧಿಸಲ್ಪಡುತ್ತದೆ ಎಂದು ಸಿದ್ಧಾಂತವೆಂದೂ ಸುಷುಪ್ತಿ ಇತ್ಯಾದಿ ಎರಡುಸೂತ್ರಗಳು ಒಂದೇ ಅಧಿಕರಣವು ಎಂದೂ ಮಾಯಾವಾದಿಗಳು ಹೇಳುವರು. **ಯತ್ತತ್ವಮೈಕ್ಯಂ ತನ್ನೈವ ಕೀರ್ತ್ಯತೇ ಶ್ರುತಿಸೂತ್ರಯೋಃ । ತತ್ರ ಯಃ ಕೀರ್ತ್ಯತೇ ಭೇದಃ ತಚ್ಚ ತತ್ತ್ವಂ ನ ತೇ ಮತೇ॥** ಐಕ್ಯವು ತತ್ವವೆಂದು ನೀನು ಹೇಳತಕ್ಕದು. ಶ್ರುತಿಸೂತ್ರಗಳಲ್ಲಿ ಎಲ್ಲಿಯೂ ಹೇಳಲ್ಪಡುವುದಿಲ್ಲ. ಅಲ್ಲಿ ಹೇಳಲ್ಪಡತಕ್ಕ ಭೇದವು ಅವರ ಮತದಲ್ಲಿ ತತ್ವವಲ್ಲ. ಸುಷುಪ್ತ್ಯಾದಿ ಸೂತ್ರದಿಂದಲೂ ಅಲ್ಲಿ ಅವರು ಉದಾಹರಿಸಿರುವ **ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಪ್ರಾಜ್ಞೇನಾತ್ಮನಾನ್ವಾರೂಢಃ** ಎನ್ನುವ ಶ್ರುತಿಗಳಿಂದಲೂ ಜೀವರಿಂದ ಭೇದವೇ ಉಕ್ತವಾಗಿದೆ. ಹಾಗೆಯೇ ಪತ್ಯಾದಿ ಸೂತ್ರದಿಂದಲೂ, ಅಲ್ಲಿಯೇ ಅವರು ಉದಾಹರಿಸಿರುವ **ಏಷ ಲೋಕಾಧಿಪತಿಃ** ಇತ್ಯಾದಿ ಶ್ರುತಿಯಿಂದಲೂ ಜೀವರಿಂದ ಭೇದಕರ್ಮಗಳೇ ಹೇಳಲ್ಪಟ್ಟಿವೆ. ಅವರಿಗೆ ತತ್ವವೆಂದು ಅಭಿಪ್ರೇತವಾದ ಐಕ್ಯವು ಎಲ್ಲಿಯೂ ಹೇಳಲ್ಪಡಲಿಲ್ಲ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ॥** ಸುಷುಪ್ತಿ ಇತ್ಯಾದಿ ಎರಡು ಸೂತ್ರಗಳಿಗೆ ನಾವು ಹೇಳಿದ ವಿಷಯವಾಕ್ಯವನ್ನೇ ಇಟ್ಟುಕೊಂಡು ಎರಡು ಸೂತ್ರಗಳು ಮುಕ್ತಜೀವರಿಂದ ವಿಲಕ್ಷಣನಾದ ಬ್ರಹ್ಮನನ್ನು ಸಾಧಿಸತಕ್ಕುದಾಗಿ **ಆಕಾಶೋಽರ್ಥಾಂತರ** ಎನ್ನುವ ಅಧಿಕರಣದ ಶೇಷವು ಎನ್ನುತ್ತಾರೆ. ಅದು ಅಯುಕ್ತವು. **ಆಕಾಶೋ ವೈ ನಾಮ** ಎನ್ನುವಲ್ಲಿ ಆಕಾಶನು ಮುಕ್ತಜೀವನೇ ಬ್ರಹ್ಮನಲ್ಲ ಎಂದು ಹೇಳುವ ಪೂರ್ವಪಕ್ಷಿಗಳು ಅದೇ ಅಧಿಕರಣದಲ್ಲಿ ಆ ವಾಕ್ಯವಿಚಾರವನ್ನು ಬಿಟ್ಟು ತಮ್ಮ ಉಕ್ತಿಗೆ ವಿರುದ್ಧವಾದ ಮುಕ್ತ ಜೀವ ಬ್ರಹ್ಮೈಕ್ಯವನ್ನು ತತ್ವಮಸ್ಯಾದಿ ವಾಕ್ಯಾಂತರವನ್ನೇ ಆಶ್ರಯಿಸಿ ಶಂಕಿಸುತ್ತಾರೆ ಎನ್ನುವುದು ಅನುಚಿತವು.

## ಅಧಿಕರಣ ಸಾರಾಂಶ

ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ಎನ್ನುವಲ್ಲಿ ಶ್ರುತನಾದ ಬ್ರಾಹ್ಮಣನು ವಿರಿಂಚನೋ ಬ್ರಹ್ಮನೋ ಎಂದು ಸಂದೇಹವು. ಈ ಬ್ರಾಹ್ಮಣನು ವಿರಿಂಚನೇ **ಸ ವಾ ಏಷ ಮಹಾನಜ ಆತ್ಮಾ** ಎಂದು

ಅಜಶಬ್ದವಿದೆ. ಅಕಾರಶಬ್ದವಾಚ್ಯನಾದ ಈಶ್ವರನಿಂದ ಹುಟ್ಟಿದ್ದಾನೆನ್ನುವ ಯೋಗದಿಂದಲೂ ರೂಢಿಯಿಂದಲೂ ವಿರಿಂಚನಲ್ಲಿ ಕೂಡುವುದು. ಮಹತ್ತತ್ತ್ವಾಭಿಮಾನಿಯಾದುದರಿಂದ ಮಹಚ್ಛಬ್ದವೂ ಕೂಡುತ್ತದೆ. ಆತ್ಮಾ ವಿರಿಂಚಃ ಸುಮನಾಃ ಇತ್ಯಾದಿಗಳಿಂದ ಆತ್ಮಶಬ್ದವು ವಿರಿಂಚನಲ್ಲಿ ರೂಢವಾಗಿದೆ ಎಂದು ಪೂರ್ವಪಕ್ಷ ಬಂದರೆ ಸರ್ವಸ್ಯ ವಶೀಸರ್ವಸ್ಯೇಶಾನಃ ಇತ್ಯಾದಿಗಳಿಂದುಕ್ತವಾದ ಸರ್ವವಶಿತ್ವಾದಿಲಿಂಗಗಳು ಉತಾಮೃತತ್ವಸ್ಯೇಶಾನಃ ಇತ್ಯಾದಿ ಶ್ರುತಿಗಳಿಂದ ವಿಷ್ಣುಧರ್ಮಗಳೇ ಆಗಿವೆ. ಬ್ರಹ್ಮಣಾಃ ವೇದೇನ ಗಮ್ಯತೇ, ಜಾಯತೇ, ಇತ್ಯಾದಿ ಯೋಗಗಳಿಂದ ಬ್ರಾಹ್ಮಣ ಅಜಾದಿ ಶಬ್ದಗಳು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ತತ ಏತೇ ವ್ಯಜಾಯಂತ, ವಿಷ್ಣೋ ಹಿರಣ್ಯಗರ್ಭಃ ಇತ್ಯಾದಿ ವಚನಗಳಿಂದ ವಿರಿಂಚಬ್ರಹ್ಮಾಭೇದವು ಬಾಧಿತವಾಗಿರುವುದರಿಂದಲೂ ಅಭೇದವು ಕೂಡುವುದಿಲ್ಲ. ಆದಕಾರಣ ಈ ಬ್ರಾಹ್ಮಣ ಶಬ್ದವಾಚ್ಯನು ವಿಷ್ಣುವೇ ಎಂದು ಸಿದ್ಧಾಂತವು. ವಿರುದ್ಧೇಷ್ವಪ್ಯಭೇದಶ್ಚೇದ್ಯವ ವ್ರೀಹ್ಯಾದಿಕೇಷ್ವಪಿ। ಅಭೇದಃ ಸ್ವಾತ್ತತಃ ಕ್ವಾಪಿ ವಿಕಲ್ಪಾದ್ಯೇವ ನೋ ಭವೇತ್ ॥ ಅಧಿ. ೧೪ ॥

ಬ್ರಾಹ್ಮಣಾಧಿಕರಣವು ಸಮಾಪ್ತವಾಯಿತು.

ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ
ಭಗವತ್ಪಾದಾಚಾರ್ಯ(ಪಾದ)ವಿರಚಿತೇ ಪ್ರಥಮಾಧ್ಯಾಯಸ್ಯ
ತೃತೀಯಃ ಪಾದಃ ॥ ೧-೩ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀವೇದ ವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಒಂದನೇ ಅಧ್ಯಾಯದಲ್ಲಿ
ಮೂರನೇ ಪಾದವು ಸಮಾಪ್ತವಾಯಿತು. ॥ ೧-೩ ॥

ಕರೋತು ಮಮ ಕಲ್ಯಾಣಂ ಹರಿರ್ವಾಯುಮುಖಾಭಿಧಃ।
ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಪ್ರಥಮಾಧ್ಯಾಯ ೪ನೇ ಪಾದ

## ಅನ್ಯತ್ರೈವಪ್ರಸಿದ್ಧ ನಾಮಲಿಂಗಪಾದಃ

## ೧. ಆನುಮಾನಿಕಾಧಿಕರಣವು

ಪೀಠಿಕೆ ॥ ಈ ಪಾದದಲ್ಲಿ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ—

**ಭಾಷ್ಯ ॥ ಓಂ ॥ ಶ್ರುತಿಲಿಂಗಾದಿಭಿರನ್ಯತ್ರೈವ ಪ್ರಸಿದ್ಧಾನಾಮಪಿ ಶಬ್ದಾನಾಂ ಸಾಮಸ್ತ್ಯೇನ ವಿಶೇಷಹೇತುಭಿರ್ವಿಷ್ಣಾವೇವ ಪ್ರವೃತ್ತಿಂ ದರ್ಶಯತ್ಯಸ್ಮಿನ್ ಪಾದೇ ॥ ೧ ॥**

ಭಾಷ್ಯಾರ್ಥ ॥ ಪ್ರಬಲ ಶ್ರುತಿಲಿಂಗಾದಿಗಳಿಂದಲೇ (ಲೋಕಪ್ರಸಿದ್ಧಿಯಿಂದ ಅಲ್ಲ) ವಿಷ್ಣುವಿನಿಂದ ಇತರರಗಳಾದ ಪ್ರಕೃತಿ ಜೀವಾದಿಗಳಲ್ಲಿಯೇ, ರೂಢ್ಯಾದಿಗಳಿಂದ ಇತರತ್ರದಲ್ಲಿಯೇ ವಾಚಕಗಳಾಗಿ ಪ್ರಮಿತಗಳಾದ, (ಅಂದರೆ ಲೋಕಪ್ರಸಿದ್ಧಿಯಿಂದಾಗಲೀ ಶ್ರುತ್ಯಾದಿಗಳಿಂದಾಗಲೀ ಅನ್ಯತ್ರ ಪ್ರಸಿದ್ಧಗಳೂ ಉಭಯತ್ರ ಪ್ರಸಿದ್ಧಗಳೂ ಆದ ಶಬ್ದಗಳಿಗೆ ಮಾತ್ರ ವಿಷ್ಣುವಿನಲ್ಲಿ ಸಮನ್ವಯವಲ್ಲ ಮತ್ತೆ ಪ್ರಬಲ ಶ್ರುತಿ ಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳಿಗೂ ಎಂದು ಅಪಿ ಶಬ್ದಾರ್ಥವು.) ಎಲ್ಲಾ ನಾಮಲಿಂಗಾತ್ಮಕ ಶಬ್ದಗಳಿಗೆ ಪೂರ್ವಪಕ್ಷಿಯು ಹೇಳಿದ ಲಿಂದಾಗಿಗಳಿಕ್ಕಿಂತಲೂ ಪ್ರಬಲ ಹೇತುಗಳಿಂದ ಅಥವಾ ಹಿಂದೆ ಹೇಳದೆ ಇದ್ದ ಹೇತುಗಳಿಂದ ವಿಷ್ಣುವಿನಲ್ಲೇ ಸಮನ್ವಯವನ್ನು ಸೂತ್ರಕಾರರು ಹೇಳುತ್ತಾರೆ.

ವಿಶೇಷಾಂಶ ॥ (೧) ಅನ್ಯತ್ರೈವ ಎಂದು ಏವಕಾರವನ್ನು ಹೇಳಿದ್ದರಿಂದ ಉಭಯತ್ರ ಪ್ರಸಿದ್ಧಗಳಾದ ಶಬ್ದಗಳನ್ನು ವ್ಯಾವರ್ತಿಸಿದ್ದರಿಂದ ಮೂರನೇ ಪಾದ ಪ್ರತಿಪಾದ್ಯವಾದ ಅರ್ಥಕ್ಕಿಂತ ಈ ಪಾದಾರ್ಥಕ್ಕೆ ಭೇದವನ್ನು ತೋರಿಸಿದರು. (೨) ಹಿಂದಿನ ಮೂರು ಪಾದಗಳಲ್ಲಿ ಸ್ರಷ್ಟೃತ್ವಾದಿ ಗುಣಗಳನ್ನು ಹೇಳತಕ್ಕ ಆತ್ಮನ ಆಕಾಶಃ ಸಂಭೂತಃ ಇದು ಮೊದಲಾದ ಸೃಷ್ಟ್ಯಾದಿ ಪ್ರಕರಣಗಳಲ್ಲಿರುವ ಗುಣವಾಚಕ ಮತ್ತು ಗುಣವಾಚಕಗಳಾದ ಆನಂದ, ಆನಂದಮಯ, ಆಕಾಶ, ಇಂದ್ರ ಮೊದಲಾದ ಶಬ್ದಗಳಿಗೆ ಮಾತ್ರ ಸಮನ್ವಯವು ಹೇಳಲ್ಪಟ್ಟಿದೆ. ಈ ಪಾದದಲ್ಲಿ ಆದರೂ ಸ್ವರ, ವರ್ಣ, ಪದಸ್ವರೂಪಗಳಾದ ಎಲ್ಲಾ ಶಬ್ದಗಳಿಗೂ ಸಮನ್ವಯವನ್ನು ಹೇಳುವರು. ಆದುದರಿಂದಲೂ ಪೂರ್ವ ಪಾದಗಳಿಂದ ಈ ಪಾದಕ್ಕೆ ಭೇದವು ಇದೆ, ಎನ್ನುವ ಅಭಿಪ್ರಾಯದಿಂದ ಸಾಮಸ್ತ್ಯೇನ ಎಂದು ಹೇಳಿರುವರು.

## ಸೂತ್ರ ॥ ಓಂ ಅನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕ-ವಿನ್ಯಸ್ತಗೃಹೀತೇರ್ದರ್ಶಯತಿ ಚ ಓಂ ॥ ೧ ॥

**ಸೂತ್ರಾರ್ಥ ॥** ಅನುಮಾನಿಕಮಪಿ=ಸಾಂಖ್ಯಾನುಮಾನಸಿದ್ಧ ಪ್ರಧಾನಾದಿಯು, ಏಕೇಷಾಂ=ಕಠ ಮೊದಲಾದ ಕೆಲವು ಶಾಖಿಗಳ, (ಶಾಖೆಗಳಲ್ಲಿ ಅವ್ಯಕ್ತಾತ್ಪುರುಷಃ ಪರಃ ಎಂದು ಶ್ರುತಗಳಾದ ಅವ್ಯಕ್ತಾದಿ ಶಬ್ದಗಳಿಂದ ಹೇಳಲ್ಪಡುತ್ತದೆ. ವಿಷ್ಣುವಲ್ಲ. ಆದಕಾರಣ ತತ್ತು ಸಮನ್ವಯಾತ್ ಎಂದು ಸರ್ವಶಬ್ದವಾಚ್ಯತ್ವವನ್ನು ಹೇಳಿದ್ದು ಯುಕ್ತವಲ್ಲ) ಇತಿ ಚೇನ್ನ=ಹೀಗೆ ಹೇಳಕೂಡದು. (ಏಕೆಂದರೆ) ಶರೀರ ರೂಪಕವಿನ್ಯಸ್ತಗೃಹೀತೇಃ=ಹೇಗೆ ಪ್ರಸಿದ್ಧ ಶರೀರವು ಪುರುಷಾಧೀನವೋ, ಹಾಗೆಯೇ ಅವ್ಯಕ್ತವೂ, ಪರಮಾತ್ಮನ ಅಧೀನವೂ ಆಗಿರುವುದರಿಂದ ಶರೀರಕ್ಕೆ ಸದೃಶವಾದ ಪ್ರಧಾನಾದಿಗಳಲ್ಲಿ ಇರತಕ್ಕ ಶ್ರೀ ಪರಮಾತ್ಮನಿಗೆ ಅವ್ಯಕ್ತ ಮೊದಲಾದ ಶಬ್ದಗಳಿಂದ ವಾಚ್ಯತ್ವವನ್ನು ಅಂಗೀಕರಿಸಿದ್ದರಿಂದ. ಹಾಗಾದರೆ ಶ್ರೀಹರಿಯು ಪ್ರಧಾನಾದಿಗಳಲ್ಲಿ ಇದ್ದುದರಿಂದ ಮುಖ್ಯವೃತ್ತಿಯಿಂದ ಅವ್ಯಕ್ತಾದಿಶಬ್ದ ವಾಚ್ಯನೆನ್ನುವ ವಿಷಯವನ್ನು ಅವ್ಯಕ್ತಮಚಲಂ ಎನ್ನುವ ಶ್ರುತಿಯೂ, ಅವ್ಯಕ್ತೋऽಕ್ಷರಃ ಎನ್ನುವ ಸ್ಮೃತಿಯೂ ತೋರಿಸುತ್ತದೆ.

**ಪೀಠಿಕೆ ॥** ಶ್ರುತ್ಯಾದಿಸಂಗತಿಗಳನ್ನು ವಿಷಯಾದಿಗಳನ್ನೂ ಸೂಚಿಸುತ್ತಾ ಸೂತ್ರದಲ್ಲಿದ್ದ ಪೂರ್ವಪಕ್ಷಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತತ್ತು ಸಮನ್ವಯಾದಿತಿ ಸರ್ವಶಬ್ದಾನಾಂ ಪರಮೇಶ್ವರೇ ಸಮನ್ವಯ ಉಕ್ತಃ । ತನ್ನಯುಜ್ಯತೇ । ಯತಃ—ಅವ್ಯಕ್ತಾತ್ಪುರುಷಃ ಪರಃ (ಕಠ ೩.೧೧.)। ಇತಿ ಸಾಂಖ್ಯಾನುಮಾನಪರಿಕಲ್ಪಿತಂ ಪ್ರಧಾನಮಪ್ಯೇಕೇಷಾಂ ಶಾಖಿನಾಮುಚ್ಯತೇ । ಇತಿ ಚೇತ್ ॥ ೨ ॥**

**ಭಾಷ್ಯಾರ್ಥ ॥** ಯಾವುದೊಂದು ತತ್ತು ಸಮನ್ವಯಾತ್ ಎನ್ನುವ ಸೂತ್ರದಲ್ಲಿ ಎಲ್ಲಾ ಶಬ್ದಗಳಿಗೂ ಸರ್ವೋತ್ತಮನಾದ ಶ್ರೀಹರಿಯಲ್ಲಿ ಮುಖ್ಯವಾಗಿ ಪರಮಾತ್ಮಪರತ್ವವು ಹೇಳಲ್ಪಟ್ಟಿದೋ, ಅದು ಕೂಡುವುದಿಲ್ಲ. ಏಕೆಂದರೆ—ಸಾಂಖ್ಯ ಅನುಮಾನಾದಿಗಳಿಂದ ಪರಿಕಲ್ಪಿತ ಪ್ರಧಾನಾದಿಗಳೇ ಕಠ ಮೊದಲಾದ ಕೆಲವು ಶಾಖಿಗಳ (ಶಾಖೆಗಳಲ್ಲಿ) ಅವ್ಯಕ್ತಾತ್ಪುರುಷಃ ಪರಃ ಇತ್ಯಾದಿ ಶ್ರುತಿಗಳಲ್ಲಿ ಶ್ರುತಗಳಾದ ಅವ್ಯಕ್ತಾದಿ ಶಬ್ದಗಳಿಂದ ಹೇಳಲ್ಪಡುತ್ತವೆ. (ವಿಷ್ಣುವಲ್ಲ. ಅವ್ಯಕ್ತಾದಿ ಶಬ್ದಗಳಿಗೆ ಪ್ರಧಾನಾದಿಗಳಲ್ಲಿಯೇ ಪ್ರಸಿದ್ಧಿಯಿದ್ದುದರಿಂದ) ಎಂದರೆ—

**ವಿಶೇಷಾಂಶ ॥** (೧) ಜೀವಾ ಏವ ತು ದುಃಖಿನಃ ಎಂದು ಶ್ರುತ್ಯಂತರವಾಕ್ಯವು. (೨) **ಕಾರ್ಯ ಕಾರಣಬದ್ಧೌ ತೌ** (೩) ಸೋऽವರಃ, ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು. (೪) ಅನುಮಾನಿಕಂ ಎನ್ನುವುದಕ್ಕೆ ಸಾಂಖ್ಯಾನುಮಾನಪರಿಕಲ್ಪಿತಂ ಎನ್ನುವುದು ವ್ಯಾಖ್ಯಾನವು. **ಮಹದಾದಿಕಂ ಸ್ವಸದೃಶಕಾರಣಜನ್ಯಂ ಕಾರ್ಯತ್ವಾತ್ ಘಟವತ್** ಇದುಮೊದಲಾದ ಸಾಂಖ್ಯೋಕ್ತವಾದ ಅನುಮಾನದಿಂದ ಸಿದ್ಧವಾದುದು. (೫) ಸಮನ್ವಯಸೂತ್ರದಲ್ಲಿ ಹೇಳಿದ ವಿಷ್ಣುವಿನಲ್ಲಿ ಸರ್ವಶಬ್ದಗಳ

ಸಮನ್ವಯವನ್ನು ಇಲ್ಲಿ ಆಕ್ಷೇಪಿಸಿದ್ದರಿಂದ ಆದರಿಂದ ಇದಕ್ಕೆ ಆಕ್ಷೇಪಿಕೀಸಂಗತಿಯು. ಅವ್ಯಕ್ತ ಜೀವಾದಿ ಶಬ್ದವಾಚ್ಯವು ವಿಷಯವು. ಪ್ರಧಾನಾದಿಗಳೇ ಎಂದು ಪೂರ್ವಪಕ್ಷವು.

ಪೀಠಿಕೆ ॥ ಸಿದ್ಧಾಂತಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ । ತಸ್ಯೈವ ಪಾರತಂತ್ರ್ಯಾಚ್ಛರೀರರೂಪಕೇಽವ್ಯಕ್ತೇ ವಿನ್ಯಸ್ತಸ್ಯ ಪರಮಾತ್ಮನ ಏವಾವ್ಯಕ್ತಶಬ್ದೇನ ಗೃಹೀತೇಃ ॥ ೩ ॥**

ಭಾಷ್ಯಾರ್ಥ ॥ ನಃಸರ್ವಶಬ್ದಗಳಿಗೆ ಪರಮಾತ್ಮಪರತ್ವವು ಕೂಡುವುದಿಲ್ಲವೆಂದು ಯಾವುದು ಹೇಳಿಯದೋ ಅದು ಯುಕ್ತವಲ್ಲ. ಏಕೆಂದರೆ—ಯಾರಲ್ಲಿ ಸಮನ್ವಯವು ಪ್ರತಿಜ್ಞಾತವಾಗಿರುವುದೋ ಅಂತಹ, ಶ್ರೀಹರಿಗೆ ಅಧೀನವಾಗಿರುವುದರಿಂದ ಶರೀರದಂತೆ ಇರತಕ್ಕ ಪ್ರಧಾನಾದಿಗಳಲ್ಲಿರತಕ್ಕ ಪರಮಾತ್ಮನಿಗೇನೇ ಪ್ರಧಾನಾದಿಗಳಿಗೆ ಅಲ್ಲಿ ಅವ್ಯಕ್ತ ಮೊದಲಾದ ಶಬ್ದದಿಂದ ಗ್ರಹಣವು. (ಮುಖ್ಯವಾಗಿ ವಾಚ್ಯತ್ವವನ್ನು ಅಂಗೀಕರಿಸಿರುವೆವು.)

ವಿಶೇಷಾಂಶ ॥ (೧) ಶ್ರೀಹರಿಯೇ ಅವ್ಯಕ್ತ ಮೊದಲಾದ ಶಬ್ದಗಳಿಂದ ವಾಚ್ಯನೆಂದು ಆಗಿದ್ದರೆ ಪ್ರಧಾನಾದಿಗಳಲ್ಲಿ ಅವ್ಯಕ್ತಾದಿ ಶಬ್ದವ್ಯವಹಾರವು ಹೇಗೆ? ಎಂದರೆ—**ಶರೀರರೂಪಕೇ ಅವ್ಯಕ್ತೇ** ಇತ್ಯಾದಿ. ಅಂದರೆ—ಶ್ರೀಪರಮಾತ್ಮನೇ ಅವ್ಯಕ್ತ ಮೊದಲಾದ ಶಬ್ದಗಳಿಂದ ಮುಖ್ಯವಾಚ್ಯನಾದಾಗ್ಯೂ ಅವ್ಯಕ್ತಾದಿ ಗಳಲ್ಲಿ ಆ ವ್ಯವಹಾರವು ಕೂಡುವುದಿಲ್ಲವೆಂದು ಇಲ್ಲ. ಏಕೆಂದರೆ—ಅವ್ಯಕ್ತಾದಿಗಳಲ್ಲಿ ಶ್ರೀಪರಮಾತ್ಮನು ನಿಯಾಮಕನಾಗಿ ಇದ್ದುದರಿಂದ ಶ್ರೀಪರಮಾತ್ಮನ ಸಂಬಂಧದಿಂದಲೇ ಅವ್ಯಕ್ತಾದಿಗಳಲ್ಲಿಯೂ ಕೂಡ ಆ ಶಬ್ದಗಳು ಪ್ರವೃತ್ತಗಳಾಗುತ್ತವೆ. ಎಂದು ಸೂತ್ರಕಾರರ ಅಭಿಪ್ರಾಯವು. (೨) ಅವ್ಯಕ್ತಕ್ಕೆ ಶರೀರ ವಿಷಯದಲ್ಲಿ ನಿಮಿತ್ತತ್ವವು ಪಾರತಂತ್ರ್ಯಾತ್ ಎನ್ನುವುದು. ಅಂದರೆ ಹೇಗೆ ಲೋಕದಲ್ಲಿ ಶರೀರವು ಪುರುಷನ ಅಧೀನವೋ, ಹಾಗೆಯೇ ಅವ್ಯಕ್ತವೂ ಕೂಡ ಶ್ರೀಪರಮಾತ್ಮನ ಅಧೀನವಾಗಿರುವುದರಿಂದ ಪ್ರಸಿದ್ಧ ಶರೀರಾದಿಗಳಿಗೆ ಸದೃಶಗಳಾದವುಗಳು ಪ್ರಧಾನಾದಿಗಳು ಶರೀರರೂಪವೆನ್ನಿಸುತ್ತವೆ.

ಪೀಠಿಕೆ ॥ ಹಾಗಾದರೆ ಇಲ್ಲಿ ಪಾರತಂತ್ರ್ಯಾಭಿಪ್ರಾಯದಿಂದ ಪ್ರಧಾನಾದಿಗಳು ಪರಮಾತ್ಮನ ಶರೀರರೂಪವೆಂದು ಸೂತ್ರಕಾರರು ಹೇಳಿದ್ದಾರೆಂದು ಹೇಗೆ ತಿಳಿಯುತ್ತದೆ. ಮುಖ್ಯ ಶರೀರಾಭಿಪ್ರಾಯ ದಿಂದಲೇ ರೂಪಶಬ್ದವನ್ನು ಪ್ರಯೋಗಿಸಿದ್ದಾರೆಂದು ಏಕೆ ಹೇಳಬಾರದು ಎನ್ನುವ ಆಶಂಕೆಯನ್ನು ನಿವಾರಿಸುವುದಕ್ಕಾಗಿ ಸೂತ್ರಕಾರರು ಹೇಳದ ಕಪ್ರತ್ಯಯವನ್ನು ಮುಖ್ಯ ಶರೀರವಲ್ಲವೆನ್ನುವ ವಿಷಯದಲ್ಲಿ ಹೇತುಸಮರ್ಪಕವಾಗಿ ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಕಪ್ರತ್ಯಯಃ ಕುತ್ಸನೇ ॥ ೪ ॥**

ಭಾಷ್ಯಾರ್ಥ ॥ ಕ ಪ್ರತ್ಯಯವು ನಿಂದಾರೂಪವಾದ ಅರ್ಥದಲ್ಲಿ ವಾಚಕವಾಗಿ ಇದೆ.

ವಿಶೇಷಾಂಶ ॥ (೧) ಆದುದರಿಂದಲೇ ಪಾಣಿನಿಯೂ ಕೂಡ **ಕುತ್ಸನೇ ಕಃ** ಎಂದು ಹೇಳಿರುವನು. ತಥಾಚ ಪ್ರಧಾನವು ಜಡವಾಗಿರುವುದರಿಂದ ಕುತ್ಸಿತವಾದುದರಿಂದ ಚಿದಾನಂದಾತ್ಮಕ ಶರೀರವುಳ್ಳ ಈಶ್ವರನಿಗೆ ಇದು ಮುಖ್ಯ ಶರೀರವಲ್ಲ.

ಪೀಠಿಕೆ ॥ ಹಿಂದೆ ಹೇಳಿದ ಅಭಿಪ್ರಾಯವನ್ನೇ ವಿವರಿಸುತ್ತಾರೆ—

**ಭಾಷ್ಯ ॥ ಪರಮಾತ್ಮನ ಏವಾವ್ಯಕ್ತಶಬ್ದಃ । ತತ್ತಂತ್ರತ್ವೇನ ತಚ್ಛರೀರರೂಪತ್ವಾದಿತರಸ್ಯಾಪಿ ಅವ್ಯಕ್ತಶಬ್ದಃ ॥ ೫ ॥**

ಭಾಷ್ಯಾರ್ಥ ॥ ಯದ್ಯಪಿ ಪರಮಾತ್ಮನಿಗೇನೇ ಅವ್ಯಕ್ತ (ಜೀವಾದಿ) ಶಬ್ದವು ಮುಖ್ಯ ವಾಚಕವು. ಆದಾಗ್ಯೂ ಶ್ರೀಪರಮಾತ್ಮನ ಅಧೀನವಾದುದರಿಂದ ಪರಮಾತ್ಮನ ಶರೀರದಂತೆ ಇರುವ ಅವ್ಯಕ್ತಕ್ಕೂ ಕೂಡ ಅಮುಖ್ಯವಾಗಿ ಅವ್ಯಕ್ತಶಬ್ದವಾಚ್ಯತ್ವವಿರುವುದು. ಅಂದರೆ ಅವ್ಯಕ್ತಾದಿ ಶಬ್ದಗಳಿಗೆ ಮಹಾಯೋಗ ವಿದ್ವದ್ರೂಢಿಗಳಿಂದ ಶ್ರೀಹರಿಯಲ್ಲಿಯೇ ಮುಖ್ಯವಾಗಿ ವಾಚ್ಯತ್ವವು ಇರುವುದು.

ವಿಶೇಷಾಂಶ ॥ ಅವ್ಯಕ್ತಶಬ್ದವು ಜೀವ ದುಃಖಿ ಇತ್ಯಾದಿ ಶಬ್ದಗಳಿಗೆ ಉಪಲಕ್ಷಣವು.

ಪೀಠಿಕೆ ॥ ಹಾಗಾದರೆ ಪ್ರಧಾನಾದಿಗಳು ಪರತಂತ್ರಗಳು, ಪರಮಾತ್ಮನಾದರೂ ಸ್ವತಂತ್ರನು. ಪ್ರಧಾನಾದಿಗಳಲ್ಲಿ . ನಿಯಾಮಕನಾಗಿ ಇರತಕ್ಕವನು ಎಂದಾಗಿದ್ದರೆ ಶ್ರೀಪರಮಾತ್ಮನೇ ಅವ್ಯಕ್ತಾದಿಶಬ್ದಗಳಿಂದ ಮುಖ್ಯವಾಚ್ಯನು, ಪ್ರಧಾನಾದಿಗಳು ಶ್ರೀಹರಿಯ ಸಂಬಂಧದಿಂದ ಅಮುಖ್ಯವಾಗಿ ವಾಚ್ಯಗಳಾಗುತ್ತವೆ, ಎಂದು ಆಗಬಹುದಿತ್ತು ಅದೇವೇ ಹೇಗೆ ಸಿದ್ಧವಾಗುತ್ತದೆ ಎಂದರೆ ಅಲ್ಲಿ ಪ್ರಮಾಣವನ್ನು ಹೇಳುವುದಕ್ಕಾಗಿ ದರ್ಶಯತಿ ಎನ್ನುವ ಸೂತ್ರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತುಚ್ಛ್ಯೇನಾಭ್ವಪಿಹಿತಂ ಯದಾಸೀತ್ (ಋ.೧೦. ೧೨೯. ೩.)। ಇತಿ ದರ್ಶಯತಿ ಚ ॥ ೬ ।**

ಭಾಷ್ಯಾರ್ಥ ॥ ತುಚ್ಛ್ಯೇನ=ಪರಮಾತ್ಮನಕ್ಕಿಂತ, ಗುಣತಃ=ಅಲ್ಪವಾದ ಅಸ್ವತಂತ್ರವಾದ ಪ್ರಧಾನ ದಿಂದ, ಆಭು=ಚೆನ್ನಾಗಿ ಪೂರ್ಣವಾಗಿರುವುದರಿಂದ ವಿಭುವಾದ, ಯತ್=ಯಾವ ಪರಬ್ರಹ್ಮನು, ಅಪಿಹಿತಮಾಸೀತ್=ಅಚ್ಛಾದಿತನಾಗಿದ್ದನೋ, ತದೇವ=ಆತನೇ, ತಪಸಃ=ಜ್ಞಾನದ, ಮಹಿನಾ=ಮಹತ್ವ ದಿಂದ, ಏಕಂ=ಮುಖ್ಯನು, ಅಜಾಯತ=ಆದನು ಎನ್ನುವ ಶ್ರುತಿಯೂ ಕೂಡ, ದರ್ಶಯತಿ= ತೋರಿಸುತ್ತದೆ. (ಆದುದರಿಂದ ಹಿಂದೆ ಹೇಳಿದ್ದು ಯುಕ್ತವು.)

ವಿಶೇಷಾಂಶ ॥ (೧) ಚ ಶಬ್ದದಿಂದ ಆತ್ಮನಿ ತಿಷ್ಠನ್ ಆತ್ಮನೋಽಂತರಃ ಇತ್ಯಾದಿ ಶ್ರುತಿಗಳನ್ನು ಇಟ್ಟುಕೊಳ್ಳಬೇಕು. (೨) ಮೂಲದಲ್ಲಿದ್ದ ಶ್ರುತಿಯಿಂದ ಪ್ರಧಾನಕ್ಕೆ ಪಾರತಂತ್ರ್ಯವೂ, ಶ್ರೀಹರಿಗಾದರೂ ನಿಯಾಮಕತ್ವವಿದ್ದು ಪ್ರಧಾನಾದ್ಯಾಶ್ರಯತ್ವ ಪ್ರಯುಕ್ತ ನೀಚತ್ವಾಯೋಗ್ಯತ್ವರೂಪವಾದ ಸ್ವಾತಂತ್ರ್ಯವೂ, ಪ್ರಧಾನದಲ್ಲಿ ನಿಯಾಮಕನಾಗಿ ಇರುವಿಕೆಯೂ ಉಕ್ತವಾಯಿತು. (೩) ಯ ಆತ್ಮನಿ ಎನ್ನುವುದರಿಂದ ಜೀವನಿಗೆ ಅಸ್ವಾತಂತ್ರ್ಯವೂ ಶ್ರೀಹರಿಗಾದರೂ ಸ್ವಾತಂತ್ರ್ಯವೂ ಜೀವನಲ್ಲಿ ನಿಯಾಮಕನಾಗಿ ಇರುವಿಕೆಯೂ ಉಕ್ತವಾಯಿತು.

ಪೀಠಿಕೆ ॥ ಶ್ರೀಹರಿಯಲ್ಲಿಯೇ ಅವ್ಯಕ್ತಾದಿ ಶಬ್ದಗಳು ಮುಖ್ಯಗಳು ಎನ್ನುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಅವ್ಯಕ್ತಮಚಲಂ ಶಾಂತಂ ನಿಷ್ಕಲಂ ನಿಷ್ಕ್ರಿಯಂ ಪರಂ । ಯೋ ವೇದ ಹರಿಮಾತ್ಮಾನಂ ಸ ಭಯಾದನುಮುಚ್ಯತೇ ॥ ಇತಿ ಪಿಪ್ಪಲಾದಶಾಖಾಯಾಂ । ಅಕ್ಷರಂ ಬ್ರಹ್ಮ ಪರಮಮಿತ್ಯುಕ್ತ್ವಾ ಅವ್ಯಕ್ತೋऽಕ್ಷರ ಉಚ್ಯತೇ (ಇತ್ಯುಕ್ತಃ)** (ಗೀತಾ. ಅ. ೮. ಶ್ಲೋ.೩-೨೧.)**। ಇತಿ ವಚನಾಚ್ಚ ॥ ೧ ॥ ॥ ೭ ॥**

ಭಾಷ್ಯಾರ್ಥ ॥ (೧) ಯಃ=ಯಾವ ಅಧಿಕಾರಿಯು, ಅವ್ಯಕ್ತಂ=ತಿಳಿಯಲಿಕ್ಕೆ ಅಶಕ್ಯನಾದ ಪ್ರಯುಕ್ತ ಅವ್ಯಕ್ತಶಬ್ದವಾಚ್ಯನೂ, ಅಚಲಂ=ಈಶ್ವರಭಾವದಿಂದ ಚಲನವಿಲ್ಲದವನು, ಅಥವಾ ಯಾರಿಂದಲೂ ಹಂದಾಡಿಸಲಿಕ್ಕೆ ಅಶಕ್ಯನು, ಶಾಂತಂ=ನಿರ್ವಿಕಾರನೂ, ಅಥವಾ ಸುಖೋತ್ಕರ್ಷಕ್ಕೆ ಸೀಮಾಭೂತನಾದ, ಅಂದರೆ ಪೂರ್ಣಸುಖನಾದ, ನಿಷ್ಕಲಂ=ಷೋಡಶಕಲಾರಹಿತನಾದ, ನಿಷ್ಕ್ರಿಯಂ=ಪ್ರಾಕೃತಕ್ರಿಯಾ ರಹಿತನಾದ, ಅಥವಾ ಪ್ರಲಯದಲ್ಲಿ ಪ್ರಚುರವ್ಯಾಪಾರರಹಿತನಾದ, ಅಥವಾ ನಿಷ್ಕ್ರಿಯತೇ ನಿರ್ಣೀಯತೇ ಎನ್ನುವ ವ್ಯುತ್ಪತ್ತಿಯಿಂದ ಸರ್ವನಿರ್ಣಾಯಕನಾದ, ಪರಂ=ಸರ್ವೋತ್ತಮನಾದ, ಆತ್ಮಾನಂ=ಆದಾನಾದಿ ಕರ್ತನಾದ ಶ್ರೀಹರಿಯನ್ನು, ವೇದ=ತಿಳಿಯುತ್ತಾನೋ, ಸಃ=ಆತನು, ಅನು=ಜ್ಞಾನಾನಂತರದಲ್ಲಿ, ಭಯಾತ್=ಸಂಸಾರಭಯದೆಶೆಯಿಂದ, ಮುಚ್ಯತೇ=ಮುಕ್ತನಾಗುವನು. ಎಂದು ಪಿಪ್ಪಲಾದ ಋಷಿದೃಷ್ಟವಾದ ಶ್ರುತಿಯಲ್ಲಿ ಹೇಳಿದೆ. ತಥಾಚ ಪಿಪ್ಪಲಾದ ಋಷಿಗಳು ಹಿಂದೆ ಹೇಳಿದ ಅರ್ಥವನ್ನು ತೋರಿಸಿದರು. (೨) ಗೀತಾದಲ್ಲಿ ಅಕ್ಷರಂ ಬ್ರಹ್ಮಪರಮಂ ಎಂದು ಹೇಳಿ ಅಂದರೆ ಯಾವುದು ಅಕ್ಷರಶಬ್ದವಾಚ್ಯವೋ ಅದು ಪರಬ್ರಹ್ಮವು ಎಂದು (ಯಾವ ಅಕ್ಷರನಿಗೆ ಪರಬ್ರಹ್ಮತ್ವವು ಉಕ್ತವಾಗಿಯದೋ ಅಂತಹ ಅಕ್ಷರನಿಗೇನೇ) **ಅವ್ಯಕ್ತೋऽಕ್ಷರ ಉಚ್ಯತೇ** ಎನ್ನುವ ಉತ್ತರವಾಕ್ಯದಿಂದ ಅಕ್ಷರನು ಅವ್ಯಕ್ತನೆಂದು ಹೇಳಲ್ಪಡುತ್ತಾನೆಂದು ಅವ್ಯಕ್ತತ್ವವನ್ನು ಹೇಳಿದ್ದರಿಂದಲೂ.

ವಿಶೇಷಾಂಶ ॥ (೧) ಶ್ರೀಹರಿಗೆ ಜೀವಾದಿ ಶಬ್ದವಾಚ್ಯತ್ವವಿಷಯದಲ್ಲಿ ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ=ನಾನು ಸರ್ವಪ್ರಾಣಧಾರಕನಾದುದರಿಂದ ಜೀವಾಖ್ಯವಾದ ಅನಿರುದ್ಧರೂಪದಿಂದ ತೇಜಃ ಅಪ್ ಅನ್ನ ನಾಮಕರಾದ ದೇವತೆಗಳನ್ನು ಪ್ರವೇಶಮಾಡಿ ಶಬ್ದಾರ್ಥ ಪ್ರಪಂಚಗಳನ್ನು ಸೃಷ್ಟಿಮಾಡುವೆನು. ಎನ್ನುವ ಛಾಂದೋಗ್ಯ ವಾಕ್ಯವನ್ನು ಜೀವೋ ವಿನಯಿತಾ ಸಾಕ್ಷೀ ಎನ್ನುವ ಸಹಸ್ರನಾಮ ವಾಕ್ಯವನ್ನೂ ಪ್ರಮಾಣವನ್ನಾಗಿ ಇಟ್ಟುಕೊಳ್ಳಬೇಕು. ॥ ೧ ॥

ಪೀಠಿಕೆ ॥ ಹಾಗಾದರೆ ಶ್ರೌತ ಸ್ಮಾರ್ತ ಪ್ರಯೋಗಬಲದಿಂದ ಅವ್ಯಕ್ತ ಮೊದಲಾದ ಶಬ್ದಗಳಿಗೆ ಭಗವದ್ವಾಚಿತ್ವವು ಇರಲಿ, ಆದಾಗ್ಯೂ ಶ್ರೀಹರಿಯಲ್ಲಿ ಆ ಶಬ್ದಗಳಿಗೆ ಪರಮಮುಖ್ಯತ್ವವು ಹೇಗೆ ಸಿದ್ಧಿಸುವುದು? ಎಂದರೆ—

## ಸೂತ್ರ ॥ ಓಂ ಸೂಕ್ಷ್ಮಂ ತು ತದರ್ಹತ್ವಾತ್ ಓಂ ॥ ೨ ॥

**ಭಾಷ್ಯ ॥ ಸೂಕ್ಷ್ಮಮೇವಾ(ವಚಾ) ವ್ಯಕ್ತಶಬ್ದೇನೋಚ್ಯತೇ । ತದ್ಧಿ ಅವ್ಯಕ್ತತಾಮರ್ಹತಿ ॥೮॥**

ಭಾಷ್ಯಾರ್ಥ ॥ ಸೂಕ್ಷ್ಮಂ ತು=ಸೂಕ್ಷ್ಮವಾದುದೇ, ಅವ್ಯಕ್ತ ಎನ್ನುವ ಶಬ್ದದಿಂದ ಹೇಳಲ್ಪಡುತ್ತದೆ. (ರೂಢಿಯಿಂದ ಪ್ರಧಾನವಲ್ಲ) ಹಿ=ಯಾವ ಕಾರಣದಿಂದ, ತತ್=ಸೂಕ್ಷ್ಮವಾದ ಪರಮಾಣ್ವಾದಿ

ರೂಪವಾದ ವಸ್ತುವು, ಅವ್ಯಕ್ತತಾಂ=ನ ವ್ಯಜ್ಯತೇ ಎನ್ನುವ ವ್ಯುತ್ಪತ್ತಿಯಿಂದ ಅವ್ಯಕ್ತಶಬ್ದಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವವನ್ನು ಹೊಂದಲಿಕ್ಕೆ, ಅರ್ಹತಿ=ಯೋಗ್ಯವಾಗಿದೆಯೋ, ಆದುದರಿಂದ (ಯಾವುದು ಅವ್ಯಕ್ತಶಬ್ದದಿಂದ ಹೇಳಲ್ಪಡುತ್ತದೋ, ಅದು ಸೂಕ್ಷ್ಮವೇ ಎಂದು ಹೇಳಿದ್ದು ಯುಕ್ತವು.)

ಪೀಠಿಕೆ ॥ ಸೂಕ್ಷ್ಮವೇ ಅವ್ಯಕ್ತಶಬ್ದವಾಚ್ಯವಾಗುವುದಕ್ಕೆ ಅರ್ಹವಾಗಿರುವುದರಿಂದ ಅವ್ಯಕ್ತಶಬ್ದ ವಾಚ್ಯವಾಗಲಿ. ಆದಾಗ್ಯೂ ಪ್ರಕೃತಕ್ಕೆ ಏನಾಯಿತೆಂದರೆ—

**ಭಾಷ್ಯ ॥ ಸೂಕ್ಷ್ಮತ್ವಂ ಚ ಮುಖ್ಯಂ ತಸ್ಯೈವ ॥ ೯ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಅವ್ಯಕ್ತಶಬ್ದ ಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವಕ್ಕೆ ಉಪಯೋಗಿ ಯಾದ ಸೂಕ್ಷ್ಮತ್ವವಾದರೂ ಆ ವಿಷ್ಣುವಿಗೇನೇ ಮುಖ್ಯವಾಗಿ (ಅಂದರೆ ಅತಿಶಯಿತವಾಗಿಯೋ.) ಆದುದರಿಂದ ಆ ಅವ್ಯಕ್ತತ್ವವೂ ಕೂಡ ವಿಷ್ಣುವಿಗೇನೇ ಮುಖ್ಯವು. ಆದುದರಿಂದ ಅವ್ಯಕ್ತಶಬ್ದವಾಚ್ಯತ್ವ ದಲ್ಲಿ ನಿಮಿತ್ತವಾದ ಸೂಕ್ಷ್ಮತ್ವವು ಮುಖ್ಯವಾಗಿ ಶ್ರೀಹರಿಯಲ್ಲಿಯೇ ಇರುವುದರಿಂದ ಆ ಶ್ರೀಹರಿಯೇ ಪರಮಮುಖ್ಯವಾಗಿ ಅವ್ಯಕ್ತ ಜೀವ ಮೊದಲಾದ ಶಬ್ದಗಳಿಂದ ಹೇಳಲ್ಪಡುತ್ತಾನೆ.

ಪೀಠಿಕೆ ॥ ವಿಷ್ಣುವಿಗೆ ಮುಖ್ಯಸೂಕ್ಷ್ಮತ್ವವು ಇದೆ ಎನ್ನುವ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಯತ್ತತ್ಸೂಕ್ಷ್ಮಂ ಪರಮಂ ವೇದಿತವ್ಯಂ ನಿತ್ಯಂ ಪದಂ ವೈಷ್ಣವಂ ಹ್ಯಾಮನಂತಿ । ಯತ್ತಲ್ಲೋಕಾ ನ ವಿದುರ್ಲೋಕಸಾರಂ ವಿಂದಂತ್ಯೇತತ್ಕವಯೋ ಯೋಗನಿಷ್ಠಾಃ ಇತಿ ಚ ಪಿಪ್ಪಲಾದಶಾಖಾಯಾಂ ॥ ೧೦ ॥**

ಭಾಷ್ಯಾರ್ಥ ॥ ಯತ್ ಲೋಕಸಾರಂ=ಯಾವ ಲೋಕೋತ್ತಮವಾದುದು, ವೈಷ್ಣವಂ ಪದಂ=ವಿಷ್ಣು ಸ್ವರೂಪವೋ, ತತ್=ಅದು, ಪರಮಂ ಸೂಕ್ಷ್ಮಂ=ಮುಖ್ಯ ಸೂಕ್ಷ್ಮವು, ನಿತ್ಯಂ= ಅನಾದಿನಿತ್ಯವು, ವೇದಿತವ್ಯಂ=ತಿಳಿಯತಕ್ಕದೆಂದು, ಆಮನಂತಿ=ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ ಇತ್ಯಾದಿ ಅಥರ್ವಣಿಕರು ತಿಳಿಯುತ್ತಾರೆ. ಯಾವುದನ್ನು ಲೋಕಾಃ=ಪಾಮರರು, ನ ವಿದುಃ=ತಿಳಿಯುವು ದಿಲ್ಲವೋ, ತದೇತತ್=ಆ ವಿಷ್ಣುಸ್ವರೂಪವನ್ನು, ಯೋಗನಿಷ್ಠಾಃ=ಬ್ರಹ್ಮನಲ್ಲಿ ಮನೋಯೋಗದಲ್ಲಿ ಆಸಕ್ತರಾದ, ಉಪಾಯಸಿದ್ಧರಾದ, ಕವಯಃ=ಜ್ಞಾನಿಗಳು, ವಿಂದಂತಿ=ಸಾಕ್ಷಾತ್ಕರಿಸುತ್ತಾರೆ. ಹಿ=ಪ್ರಸಿದ್ಧವು. ಹೀಗೂ ಪಿಪ್ಪಲಾದ ಶಾಖೆಯಲ್ಲಿ (ಹೇಳಿದ ಪ್ರಯುಕ್ತ ಸೂಕ್ಷ್ಮತ್ವವು ಇದ್ದೇ ಇದೆ.)

ವಿಶೇಷಾಂಶ ॥ ಹೀಗೆಯೇ ಜೀವಾದಿ ಶಬ್ದಗಳ ಪ್ರವೃತ್ತಿನಿಮಿತ್ತಗಳಾದ ಪ್ರಾಣಧಾರಕತ್ವಾದಿಗಳು ಪರಮಾತ್ಮನಲ್ಲಿ ಮುಖ್ಯಗಳಾಗಿವೆ ಎನ್ನುವಲ್ಲಿ ಸ ಜೀವನಾಮಾ ಭಗವಾನ್ ಪ್ರಾಣಧಾರಣಹೇತುತಃ । ಉಪಚಾರೇಣ ಜೀವಾಖ್ಯಾ ಸಂಸಾರಿಣಿ ನಿಗದ್ಯತೇ ॥ ಇತ್ಯಾದಿ ಪ್ರಮಾಣಗಳನ್ನು ಇಟ್ಟುಕೊಳ್ಳಬೇಕು.

ಪೀಠಿಕೆ ॥ ಹಾಗಾದರೆ ಶ್ರೀ ವಿಷ್ಣುವಿನಲ್ಲಿ ಮುಖ್ಯವಾಗಿ ಅವ್ಯಕ್ತ ಮೊದಲಾದ ಶಬ್ದಪ್ರವೃತ್ತಿ ನಿಮಿತ್ತ ವಿರಲಿ, ಆದಾಗ್ಯೂ ಅವ್ಯಕ್ತಾತ್ಪುರುಷಃ ಪರಃ ಇತ್ಯಾದಿಗಳಲ್ಲಿ ವಿಷ್ಣುವಿಗೆ ವಾಚ್ಯತ್ವವಿಲ್ಲ, ಮತ್ತೆ ಅಮುಖ್ಯ ವಾದ ಅವ್ಯಕ್ತತ್ವಾದಿಗಳುಳ್ಳ ಪ್ರಧಾನಾದಿಗಳೇ ವಾಚ್ಯಗಳಾಗುತ್ತವೆ ಎಂದು ಏಕೆ ಆಗಬಾರದೆಂದರೆ—

## ಭಾಷ್ಯ ॥ ಮುಖ್ಯೇ ಚ ವಿದ್ಯಮಾನೇ ನಾಮುಖ್ಯಂ ಯುಕ್ತಂ ॥ ೨ ॥

ಭಾಷ್ಯಾರ್ಥ ॥ ಮುಖ್ಯೇ ಚ=ಮುಖ್ಯ ಪ್ರವೃತ್ತಿನಿಮಿತ್ತವುಳ್ಳ ವಿಷ್ಣುವು, ವಿದ್ಯಮಾನೇ=ಅವ್ಯಕ್ತಾದಿ ಶಬ್ದವಾಚ್ಯನೆಂಬುವುದು ಕೂಡುತ್ತಿರಲು (ಅದನ್ನು ಬಿಟ್ಟು) ಅಮುಖ್ಯಂ=ಅಮುಖ್ಯ ಪ್ರವೃತ್ತಿನಿಮಿತ್ತವುಳ್ಳ ಪ್ರಧಾನಾದಿಯು (ವಾಚ್ಯವೆಂದು ಹೇಳುವುದು) ನ ಯುಕ್ತಂ=ಯುಕ್ತವಲ್ಲ. (ಮುಖ್ಯಾರ್ಥವು ಕೂಡದಿದ್ದರೆ ಮಾತ್ರ ಗೌಣಾರ್ಥಗ್ರಹಣವು ಯುಕ್ತವಾಗುವುದು.)

ಪೀಠಿಕೆ ॥ ಹಾಗಾದರೆ ಅವ್ಯಕ್ತಾದಿ ಶಬ್ದಗಳು ವಿಷ್ಣುವಿನಲ್ಲಿಯೇ ಮುಖ್ಯಗಳಾಗಲಿ. ಆದಾಗ್ಯೂ ಅವ್ಯಕ್ತಾತ್ಪುರುಷಃ ಪರಃ ಇತ್ಯಾದಿಗಳಲ್ಲಿ ಅವ್ಯಕ್ತಾದಿ ಶಬ್ದಗಳಿಂದ ವಿಷ್ಣುವು ವಾಚ್ಯನಾಗುತ್ತಾನೆಂದು ಹೇಳುವುದು ಯುಕ್ತವಲ್ಲ. ಹಾಗೆ ಇದ್ದರೆ ೧ ಅವ್ಯಕ್ತಾತ್ ಎನ್ನುವ ಅವರತ್ವಾಕ್ಷೇಪಕವಾದ ಪರತ್ವಾವಧಿತ್ವವನ್ನು ಹೇಳುವ ಪಂಚಮೀ ಶ್ರುತಿಯೂ, ೨ ಸೋಽವರಃ ಎನ್ನುವ ಸಾಕ್ಷಾತ್ ಅವರತ್ವಶ್ರುತಿಯೂ, ೩ ಜೀವಾ ಏವ ತು ದುಃಖಿನಃ ೪ ಕಾರ್ಯಕಾರಣಬದ್ಧೌ ಇತ್ಯಾದಿ ಶ್ರುತಿಗಳಿಂದ ಹೇಳಲ್ಪಟ್ಟ ಅವರತ್ವ ದುಃಖಿತ್ವಬದ್ಧತ್ವಾದಿಗಳು ಸರ್ವೋತ್ತಮತ್ವ ನಿರ್ದುಃಖತ್ವ ನಿತ್ಯಮುಕ್ತತ್ವಾದಿಗಳನ್ನು ಹೇಳುವ ನಿರನಿಷ್ಟೋ ನಿರವದ್ಯಃ ಇದು ಮೊದಲಾದ ಪ್ರಮಾಣಗಳಿಂದ ವಿರುದ್ಧಗಳಾದ ಪ್ರಯುಕ್ತ ಶ್ರೀಪರಮಾತ್ಮನಲ್ಲಿ ಕೂಡಲಾರವು. ಆದಕಾರಣ ದುಃಖಿ ಬದ್ಧ ಅವರಾದಿ ಶಬ್ದಗಳು ಸರ್ವಥಾ ಶ್ರೀಹರಿಯಲ್ಲಿ ಕೂಡಲಾರವು, ಎನ್ನುವ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ತದಧೀನತ್ವಾದರ್ಥವತ್ ಓಂ ॥ ೩ ॥

ಸೂತ್ರಾರ್ಥ ॥ ಕೇವಲ ಅವ್ಯಕ್ತತ್ವಾದಿ ಪ್ರವೃತ್ತಿನಿಮಿತ್ತ ಆಧಿಕ್ಯವಿದ್ದುದರಿಂದಲೇ ಅವ್ಯಕ್ತತ್ವಾದಿ ಗುಣಗಳನ್ನು ಹೇಳತಕ್ಕ ಶಬ್ದಸಮುದಾಯವು ಪರಮಾತ್ಮನಲ್ಲಿ ಅರ್ಥವುಳ್ಳದ್ದಲ್ಲ, ಅಂದರೆ ಶ್ರೀ ಹರಿಗೇನೇ ವಾಚಕಗಳು ಎಂದು ಅಲ್ಲ. ಮತ್ತೆ ಅನ್ಯರಲ್ಲಿರುವ ಅವ್ಯಕ್ತತ್ವಾದಿ ಗುಣಗಳಿಗೂ ಅವರತ್ವ ದುಃಖಾದಿ ದೋಷಗಳಿಗೂ ತದಧೀನತ್ವಾತ್=ಈಶಾಧೀನತ್ವವಿದ್ದುದರಿಂದಲೂ ಅವ್ಯಕ್ತ ಮೊದಲಾದ ಶಬ್ದಗಳು ಈಶ್ವರನಿಗೇನೇ ಮುಖ್ಯ ವಾಚಕಗಳು. ಆದ ಕಾರಣ ದೋಷವಾಚಕ ಶಬ್ದಸಮುದಾಯವೂ ಕೂಡ, ಅರ್ಥವತ್=ಈಶ್ವರನಲ್ಲಿಯೇ ಪ್ರವೃತ್ತಿನಿಮಿತ್ತಾಖ್ಯ ಸ್ವಾತಂತ್ರ್ಯ ಅರ್ಥಯುಕ್ತವಾದುದು. ನಿರರ್ಥಕವಲ್ಲ.

## ಭಾಷ್ಯ ॥ ತದಧೀನತ್ವಾಚ್ಚಾವ್ಯಕ್ತತ್ವಾದೀನಾಂ ತಸ್ಯೈವಾವ್ಯಕ್ತತ್ವಪರಾವರತ್ವಾದಿಕಮರ್ಥವತ್ ॥ ೧೨ ॥

ಭಾಷ್ಯಾರ್ಥ ॥ (ಪ್ರಕೃತಿ ಜೀವಾದಿಗಳಲ್ಲಿರತಕ್ಕ ಗುಣಗಳಿಕ್ಕಿಂತ ನಿರವಧಿಕಗಳಾದ) ಅವ್ಯಕ್ತತ್ವಾದೀನಾಂ=ಅವ್ಯಕ್ತಪರತ್ವ ಜೀವತ್ವಾದಿಗಳಿಗೆ ತಸ್ಯೈವ ಅತಿಸೂಕ್ಷ್ಮತ್ವ ಉತ್ತಮತ್ವ ಪ್ರಾಣಧಾರಕತ್ವ ಮೊದಲಾದ ಗುಣಗಳಿಂದ ಯುಕ್ತನಾದ ಪರಮಾತ್ಮನಲ್ಲಿ ಸ್ಥಿತಿ ಇದ್ದಪ್ರಯುಕ್ತವೂ ಮತ್ತು ತದಧೀನತ್ವಾಚ್ಚ=ಅವ್ಯಕ್ತಾದಿಗಳಲ್ಲಿರತಕ್ಕ ಅವರತ್ವಾದಿ ಧರ್ಮಗಳಿಗೆ ಪರಮಾತ್ಮಾಧೀನತ್ವವಿದ್ದಪ್ರಯುಕ್ತವೂ (ಅಂದರೆ ಅವರತ್ವ ದುಃಖ ಮೊದಲಾದವುಗಳಿಗೆ ಶ್ರೀಹರಿಯು ನಿಯಾಮಕನಾದುದರಿಂದಲೇ ಅಂತೂ ಸ್ವಾಮಿತ್ವಾಸಂಬಂಧದಿಂದ ಅವುಗಳು ಶ್ರೀಹರಿಯಲ್ಲಿ

ಇದ್ದುದರಿಂದಲೂ, ಅವ್ಯಕ್ತತ್ವ ಪರಾವರತ್ವಾದಿಕಂ = ಆ ಅವ್ಯಕ್ತತ್ವ, ಪರತ್ವ ಅವರತ್ವ ಮೊದಲಾದ ಧರ್ಮಗಳನ್ನು ಹೇಳತಕ್ಕ ಶಬ್ದಸಮುದಾಯವು ಅರ್ಥವತ್=ಶ್ರೀಹರಿಗೆ ವಾಚಕಗಳಾಗುತ್ತವೆ.

**ವಿಶೇಷಾಂಶ ॥** ಇಲ್ಲಿ ಅವ್ಯಕ್ತತ್ವಪದ ಗ್ರಹಣದಿಂದ ಅವ್ಯಕ್ತತ್ವ ಮೊದಲಾದ ಗುಣವಾಚಕಶಬ್ದಗಳಲ್ಲಿ ಅನ್ಯರಲ್ಲಿದ್ದ ಪ್ರವೃತ್ತಿನಿಮಿತ್ತಕ್ಕೆ ನಿಯಂತೃತ್ವವೂ ತದಧಿಕರಣತ್ವವೂ ಎಂದು ಎರಡು ನಿಮಿತ್ತಗಳು. ಅವರ ದುಃಖಿ ಬದ್ಧ ಮೊದಲಾದ ದೋಷವಾಚಕಶಬ್ದಗಳಲ್ಲಿ ಆದರೂ ಅವರತ್ವಾದಿ, ಅನ್ಯರಲ್ಲಿರತಕ್ಕ ಪ್ರವೃತ್ತಿನಿಮಿತ್ತ ನಿಯಂತೃತ್ವರೂಪವಾದುದೇ ಒಂದು ನಿಮಿತ್ತವೆಂದು ಉಕ್ತವಾಯಿತು.

**ಪೀಠಿಕೆ ॥** ಅನ್ಯರಲ್ಲಿರತಕ್ಕ ಶಬ್ದಗಳ ಪ್ರವೃತ್ತಿನಿಮಿತ್ತ ಪ್ರೇರಕನಲ್ಲಿ ಈ ಅವರಾದಿಶಬ್ದಗಳು ವಾಚ್ಯಕಗಳಾಗಿ ಇವೆ ಎಂದು ಸಿದ್ಧವಾಗಿದ್ದರೆ ಈ ಪ್ರಧಾನಾದಿಗಳಲ್ಲಿರತಕ್ಕ ಶಬ್ದಗಳ ಪ್ರವೃತ್ತಿನಿಮಿತ್ತಕ್ಕೆ ಪ್ರೇರಕನಾದುದರಿಂದ ಈಶ್ವರನಿಗೆ ಅವರಾದಿಶಬ್ದವಾಚ್ಯತ್ವವು ಬರುವುದು. ಅದೇವೇ ಹೇಗೆ ಸಿದ್ಧವಾಗುವುದು ಎಂದರೆ— ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಯದಧೀನೋ ಗುಣೋ ಯ (ನ್ಯ) ಸ್ಯ ತದ್ಗುಣೇ ಸೋಽಭಿಧೀಯತೇ । ಯಥಾ ಜೀವಃ ಪರಾತ್ಮೇತಿ ಯಥಾ ರಾಜಾ ಜಯೀತ್ಯಪಿ ॥ ಇತಿ ಚ ಸ್ಕಾಂದೇ ॥ ೩ ॥ ೧೩ ॥**

**ಭಾಷ್ಯಾರ್ಥ ॥** ಧರ್ಮಿವಾಚಕವಾದ ಯಾವ ಶಬ್ದದ ಪ್ರವೃತ್ತನಿಮಿತ್ತರೂಪವಾದ ಗುಣವು ಯಾರ ಅಧೀನವೋ, ಆತನು ಆ ಗುಣವುಳ್ಳವನೆಂದು ತನ್ನಿಮಿತ್ತಕವಾದ ಆ ಶಬ್ದದಿಂದ ಹೇಳಲ್ಪಡುತ್ತಾನೆ. ಹೇಗೆ ಪರಮಾತ್ಮನು ಅನೇನ ಜೀವೇನ ಇತ್ಯಾದಿಗಳಲ್ಲಿ ಜೀವನಲ್ಲಿರತಕ್ಕ ಪ್ರಾಣಧಾರಣಾಖ್ಯವಾದ ಜೀವಶಬ್ದ ಪ್ರವೃತ್ತಿ ನಿಮಿತ್ತದ ಸ್ವಾತಂತ್ರ್ಯವಿದ್ದುದರಿಂದ ಜೀವಶಬ್ದದಿಂದ ಹೇಳಲ್ಪಡುತ್ತಾನೋ, ಹೇಗೆ ಜಯಿಶಬ್ದಪ್ರಯೋಗ ನಿಮಿತ್ತವಾದ ಭೃತ್ಯರಲ್ಲಿತಕ್ಕ ಜಯವು ರಾಜನ ಅಧೀನವಾದುದರಿಂದ ರಾಜಾ ಜಯೀ ಎಂದು ಹೇಳಲ್ಪಡುತ್ತಾನೆ. ಸ್ಕಾಂದವಚನವು ಹೇಳಿದಪ್ರಯುಕ್ತ ನಿಯಾಮಕನಲ್ಲಿ ಆ ಶಬ್ದವು ಇದೆ ಎನ್ನುವ ಮಾತ್ರದಿಂದ ಸಿದ್ಧಿಸುವುದಲ್ಲ ಮತ್ತೆ ಸ ಬದ್ಧಃ ಇದುಮೊದಲಾದ ಶ್ರುತಿಸಿದ್ಧವಾದ ಅವರಯತಿ ಇತ್ಯಾದಿ ವ್ಯುತ್ಪತ್ತಿಯಿಂದಲೂ, ಅವರಾದಿಶಬ್ದವಾಚ್ಯತ್ವವು ಸಿದ್ಧವಾಗುವುದು. ॥ ೩ ॥

**ಪೀಠಿಕೆ ॥** ಹೀಗೆ ಶ್ರೌತಸ್ಮಾರ್ತಪ್ರಯೋಗದಿಂದ ಅವ್ಯಕ್ತಾದಿಶಬ್ದಗಳು ಪರಮಾತ್ಮನಲ್ಲಿಯೇ ಮುಖ್ಯಗಳು, ಬಾಧಕವು ಇಲ್ಲದಿದ್ದರೆ ಮುಖ್ಯಾರ್ಥವನ್ನೇ ಇಟ್ಟುಕೊಳ್ಳಬೇಕು. ಮುಖ್ಯಾರ್ಥನಾದ ಪರಮಾತ್ಮನೇ ಅವ್ಯಕ್ತಾತ್ಪುರುಷಃ ಪರಃ ಇತ್ಯಾದಿಗಳಲ್ಲಿ ಅವ್ಯಕ್ತ ಮೊದಲಾದ ಶಬ್ದಗಳಿಂದ ಹೇಳಲ್ಪಡುತ್ತಾನೆ. ಪ್ರಧಾನಾದಿಗಳು ಮುಖ್ಯವಾಗಿ ಅಲ್ಲ ಎಂದು ಹಿಂದೆ ಹೇಳಿದೆ. ಅದನ್ನೇ ಯುಕ್ತ್ಯಂತರದಿಂದ ಉಪಪಾದಿಸತಕ್ಕ ಸೂತ್ರವನ್ನು ಹೇಳಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಜ್ಞೇಯತ್ವಾವಚನಾಚ್ಚ ಓಂ ॥ ೪ ॥

**ಸೂತ್ರಾರ್ಥ ॥** ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ. ಅಮೃತಸ್ಯೈಷ ಸೇತುಃ ಎನ್ನುವ ಶ್ರುತಿಯಿಂದ ಶ್ರೀವಿಷ್ಣುವೇ ಮುಮುಕ್ಷುಗಳಿಂದ ಮುಖ್ಯಜ್ಞೇಯನೆಂದೂ ಪ್ರಧಾನಾದಿಗಳಿಗೆ ಮುಖ್ಯವಾಗಿ ಜ್ಞೇಯತ್ವವಿಲ್ಲವೆಂದೂ ಹೇಳಿದ್ದರಿಂದ, (ಮೋಕ್ಷಫಲಕವೇದಗಳು ಮೋಕ್ಷಕ್ಕೆ

ಕಾರಣೀಭೂತನಾದ ಜ್ಞಾನವಿಷಯೀಭೂತನಾದ ಬ್ರಹ್ಮನನ್ನು ತಿಳಿಸುವುದಲ್ಲಿಯೇ ಪ್ರವೃತ್ತಗಳಾಗಿವೆ. ಪ್ರತಿವಾಕ್ಯಗಳೂ ಬ್ರಹ್ಮಪರಗಳು ಎನ್ನುವುದು ಆದಾವಂತೇ ಚ ಮಧ್ಯೇ ಚ ವಿಷ್ಣುಸ್ಸರ್ವತ್ರ ಗೀಯತೇ ಇತ್ಯಾದಿ ವಚನ ಸಿದ್ಧಗಳಾಗಿವೆ. ಸ್ವತ ಏವ ಪ್ರಾಪ್ತವಾದ ಮುಖ್ಯಾರ್ಥವನ್ನು ಬಿಡಲಿಕ್ಕೆ ಕಾರಣವೂ ಇಲ್ಲ ಆದಪ್ರಯುಕ್ತ ವಿಷ್ಣುವೇ ಅವ್ಯಕ್ತಾದಿ ಶಬ್ದಗಳಿಂದ ಮುಖ್ಯವಾಚ್ಯನು. ಪ್ರಧಾನಾದಿಗಳು) ಮುಖ್ಯವಾಗಿ ವಾಚ್ಯಗಳು ಅಲ್ಲ.

**ಭಾಷ್ಯ ॥ ಅನ್ಯಸ್ಯ ನ ವಾಚ್ಯತ್ವಂ ಯುಜ್ಯತೇ ॥ ೪ ॥**

**ಭಾಷ್ಯಾರ್ಥ ॥** ಪ್ರಧಾನಾದಿಗಳಿಗೆ ಅವ್ಯಕ್ತಾದಿ ಶಬ್ದವಾಚ್ಯತ್ವವು ಮುಖ್ಯವಾಗಿ ಕೂಡುವುದಿಲ್ಲ (ಶ್ರೀ ವಿಷ್ಣುವಿಗೇನೇ ಅವ್ಯಕ್ತಾದಿ ಶಬ್ದ ವಾಚ್ಯತ್ವವು ಉಪಪನ್ನವಾಗುವುದು.) ॥ ೪ ॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ವದತೀತಿ ಚೇನ್ನ ಪ್ರಾಜ್ಞೋ ಹಿ ಓಂ ॥ ೫ ॥

**ಸೂತ್ರಾರ್ಥ ॥** ಮೋಕ್ಷವಾಗುವುದಕ್ಕಾಗಿ ಇತರರಿಗೂ ಮಹತಃ ಪರಂ ಎನ್ನುವ ಶ್ರುತಿಯು ಜ್ಞೇಯತ್ವವನ್ನು ಹೇಳುತ್ತದೆ ಎಂದರೆ—ಈ ವಾಕ್ಯದ ಬಲದಿಂದ ಮೋಕ್ಷವಾಗುವುದಕ್ಕಾಗಿ ಇತರರಿಗೆ ಜ್ಞೇಯತ್ವವನ್ನು ಹೇಳುತ್ತದೆ ಎಂದು ತಿಳಿಯಕೂಡದು. ಆ ವಾಕ್ಯದಲ್ಲಿಯೂ ಪ್ರಾಜ್ಞನಾದ ಪರಮಾತ್ಮನೇ ಹೇಳಲ್ಪಡುತ್ತಾನೆ. ಪ್ರಧಾನವಲ್ಲ.

**ಪೀಠಿಕೆ ॥** ಆಕ್ಷೇಪಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ (ಕಠ ೩.೧೫)**
**ಇತಿ ಜ್ಞೇಯತ್ವಂ ವದತೀತಿ ಚೇತ್ ॥ ೧೫ ॥**

**ಭಾಷ್ಯಾರ್ಥ ॥** (ಮೋಕ್ಷಕ್ಕಾಗಿ ಪ್ರಧಾನಕ್ಕೆ ಜ್ಞೇಯತ್ವವಚನವು ಇಲ್ಲವೆಂದಲ್ಲ. ಏಕೆಂದರೆ, ಅನಾದ್ಯನಂತಂ ಮಹತಃ ಪರಂ ಎನ್ನುವ ವಚನವು (ಮಹತಃ ಪರಮವ್ಯಕ್ತಂ ಎನ್ನುವ ಪೂರ್ವವಾಕ್ಯದಲ್ಲಿ ಅವ್ಯಕ್ತ (ಪ್ರಧಾನ)ವು ಮಹತತ್ತ್ವ ದೆಶೆಯಿಂದ ಪರವೆಂದು ಉಕ್ತವಾದ ಪ್ರಯುಕ್ತ ಪ್ರಧಾನಕ್ಕೆ) ಜ್ಞೇಯತ್ವವನ್ನು ಹೇಳಿರುತ್ತದೆ ಎಂದರೆ.

**ವಿಶೇಷಾಂಶ ॥** ಅನಾದ್ಯನಂತಂ=ಉತ್ಪತ್ತಿ ಶೂನ್ಯನೂ ಗುಣ ದೇಶಗಳಿಂದ ಅಪರಿಚ್ಛಿನ್ನನೂ, ಮಹತಃ=ಎಲ್ಲಾ ಸ್ಥೂಲಪದಾರ್ಥ ದೆಶೆಯಿಂದಲೂ ಮಹತತ್ತ್ವದೆಶೆಯಿಂದಲೂ ಉತ್ತಮನೂ ಧ್ರುವಂ= ನಿತ್ಯನೂ ನಿರ್ವಿಕಾರನೂ ಆದ, ತಂ=ಅವ್ಯಕ್ತತತ್ತ್ವ ದೆಶೆಯಿಂದ ಉತ್ತಮನಾಗಿ ಪೂರ್ವಪ್ರಕೃತನಾದ ವಿಷ್ಣುವನ್ನು ನಿಚಾಯ್ಯ=ತಿಳಿದು, ಮೃತ್ಯುಮುಖಾತ್=ಸಂಸಾರಾಖ್ಯಮೃತ್ಯುಮುಖದಿಂದ, (ಅಧಿಕಾರಿಯು) ಪ್ರಮುಚ್ಯತೇ=ಬಿಡಲ್ಪಡುತ್ತಾನೆ ಎಂದು ಸಿದ್ಧಾಂತರೀತ್ಯಾ ಶ್ರುತ್ಯರ್ಥವು.

**ಪೀಠಿಕೆ ॥** ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ। ಪ್ರಾಜ್ಞಃ ಪರಮಾತ್ಮಾ ಹಿ ತತ್ರೋಚ್ಯತೇ। ಅಣೋರಣೀಯಾನ್ ಮಹತೋ ಮಹೀಯಾನ್ (ಕಠ ೨.೨೦.)। ಇತಿ ತಸ್ಯೈವ (ಸ್ಯ) ಹಿ ಮಹತೋ ಮಹತ್ತ್ವಂ। ಸರ್ವಸ್ಮಾತ್ಪರ (ಮ)ಸ್ಯ ಮಹತೋಽಪಿ ಪರತ್ವಂ ಯುಜ್ಯತೇ ॥ ೫ ॥ ॥ ೧೬ ॥**

ಭಾಷ್ಯಾರ್ಥ ॥ (ಈ ವಾಕ್ಯದ ಬಲದಿಂದ ಮೋಕ್ಷಕ್ಕಾಗಿ ಪ್ರಧಾನಕ್ಕೆ ಜ್ಞೇಯತ್ವವನ್ನು) ಹೇಳಿದೆ ಎಂದು ತಿಳಿಯಕೂಡದು. ಏಕೆಂದರೆ ಈ ವಾಕ್ಯದಲ್ಲಿ ಪ್ರಾಜ್ಞನಾದ ಪರಮಾತ್ಮನೇ ಹೇಳಲ್ಪಡುತ್ತಾನೆ. (ಪ್ರಧಾನವಲ್ಲ) (ಹಾಗಾದರೆ ಮಹತಃ ಪರತ್ವ ಲಿಂಗದಶೆಯಿಂದ ಪ್ರಧಾನವೇ ಇಲ್ಲಿ ಹೇಳಲ್ಪಡುತ್ತದೆ, ಎಂದರೆ- ಸೂಕ್ಷ್ಮದಶೆಯಿಂದಲೂ ಸೂಕ್ಷ್ಮನು, ಸ್ಥೂಲದಶೆಯಿಂದಲೂ ಸ್ಥೂಲನು, ಎನ್ನುವ ಕಠಶ್ರುತಿಯಲ್ಲಿ ಪ್ರಕೃತ ಪರಮಾತ್ಮನಿಗೇನೇ ಮಹತ್ತಾದ ವಸ್ತುವಿನ ದಶೆಯಿಂದ ಮಹತ್ವವು (ಹೇಳಲ್ಪಡುತ್ತದೆ. ಇತರರಿಗೆ ಅಲ್ಲ, ಆದಪ್ರಯುಕ್ತ ಮಹತ್ಪರತ್ವ ಲಿಂಗದಿಂದ ಅವ್ಯಕ್ತವು ಹೇಳಲ್ಪಡುವುದಿಲ್ಲ) (ಹಾಗಾದರೆ ಈ ಶ್ರುತಿಯಲ್ಲಿ ಶ್ರೀ ಹರಿಯು ಸೂಕ್ಷ್ಮದಶೆಯಿಂದಲೂ ಸೂಕ್ಷ್ಮನು, ಸ್ಥೂಲದಶೆಯಿಂದಲೂ ಸ್ಥೂಲನು, ಎಂದು ಪ್ರತಿಪಾದಿಸಿದ್ದರಿಂದ ಶ್ರೀಹರಿಗೆ ಸರ್ವಸ್ಥೂಲಗಳ ದಶೆಯಿಂದ ಪರತ್ವವನ್ನು ಹೇಳಿದಾಗ್ಯೂ ಮಹತ್ತತ್ವದಶೆಯಿಂದ ಪರತ್ವವನ್ನು ಹೇಳಲಿಲ್ಲ, ಆದುದರಿಂದ ಮಹತ್ಪರತ್ವ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಲ್ಲ ಎಂದರೆ—) ಎಲ್ಲಾ ವಸ್ತುಗಳಿಂದಲೂ ಪರನಾದ ವಿಷ್ಣುವಿಗೆ ಮಹತ್ತತ್ವದಶೆಯಿಂದ ಪರತ್ವವೂ ಕೂಡುತ್ತದೆ. ಅಂತೂ ಸರ್ವಸ್ಥೂಲಗಳಿಂದಲೂ ಪರನಾದವನಿಗೆ ಮಹತಃಪರತ್ವವು ಕೈಮುತ್ಯನ್ಯಾಯಸಿದ್ಧವು. ॥ ೫ ॥

ಪೀಠಿಕೆ ॥ ಹಾಗಾದರೆ ಮಹತ್ಪರತ್ವರೂಪವಾದ ಪ್ರಧಾನಲಿಂಗಕ್ಕೆ ಸರ್ವ ಸ್ಥೂಲಪರತ್ವರೂಪವಾದ ಅಮುಖ್ಯಾರ್ಥತ್ವವನ್ನು ಸ್ವೀಕಾರಮಾಡಿ ಅನಾದ್ಯನಂತಾದಿ ವಾಕ್ಯಕ್ಕೆ ವಿಷ್ಣುಪರತ್ವವನ್ನು ಇಟ್ಟುಕೊಳ್ಳಲಿಕ್ಕೆ ಕಾರಣವು ಇಲ್ಲದಿರುವುದರಿಂದ ಪ್ರಧಾನವೇ ಇಲ್ಲಿ ಹೇಳಲ್ಪಡುತ್ತದೆ, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಪ್ರಕರಣಾತ್ ಓಂ ॥ ೬ ॥

ಸೂತ್ರಾರ್ಥ ॥ ಶ್ರೀ ಹರಿಯ ಪ್ರಕರಣವಾಗಿರುವುದರಿಂದ ಶ್ರೀ ಪರಮಾತ್ಮನೇ ಹೇಳಲ್ಪಡುತ್ತಾನೆ. (ಇತರರು ಅಲ್ಲ)

**ಭಾಷ್ಯ ॥ ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ (ಕಠ ೧.೩.೯)। ಇತಿ ತಸ್ಯ ಹ್ಯೇತತ್ಪ್ರಕರಣಂ ॥ ೬ ॥**

ಭಾಷ್ಯಾರ್ಥ ॥ ಏತತ್=ಅನಾದ್ಯನಂತಂ ಇತ್ಯಾದಿ ವಾಕ್ಯವು, ತಸ್ಯ=ವಿಷ್ಣುವಿನ, ಪ್ರಕರಣಂ= ಪ್ರಕರಣವೆಂದು ಅವಗತವಾಗುತ್ತದೆ. ತಥಾಚ ಇಲ್ಲಿ ವಿಷ್ಣುವೆಂದು ಇಟ್ಟುಕೊಳ್ಳಲಿಕ್ಕೆ ಕಾರಣವಿಲ್ಲವೆಂದಲ್ಲ. ಏಕೆಂದರೆ ವಿಷ್ಣುವಿನ ಪ್ರಕರಣವಾಗಿದೆ. ಈ ಪ್ರಕರಣವು ವೈಷ್ಣವವೆಂದು ಹೇಗೆ ಸಿದ್ಧಿಸುವುದು? ಎಂದರೆ— (★ಇದೆಲ್ಲವೂ ತಾನೂ ಕೂಡ ಈಶ್ವರನ ಅಧೀನವೆಂದು ಯಾರು ತಿಳಿಯುತ್ತಾನೋ,)

★ ಸತ್ತರ್ಕದೀಪಾವಳಿಯಲ್ಲಿ ಹೇಳಿದ ಪ್ರುತ್ಯರ್ಥವು.

ಆತನು. ಸಂಸಾರಾಖ್ಯ ಮಾರ್ಗದ ವಿಶ್ರಾಂತಿಗೆ ಅವಧಿಭೂತವಾದ ಪಾರವನ್ನು ಹೊಂದುತ್ತಾನೆ. ಅಂತಹ ಪಾರವು ವಿಷ್ಣುವಿನ ಪರಮ ಸ್ಥಾನವು. ಕ್ಷೀರಸಮುದ್ರಾದಿಗಳಲ್ಲಿ ಮುಖ್ಯಪ್ರಾಪ್ಯವು, ಎನ್ನುವ ಕಠಶ್ರುತಿಯ ದಶೆಯಿಂದ ಇದು ವಿಷ್ಣುವಿನ ಪ್ರಕರಣವೆಂದು ಸಿದ್ಧಿಸುವುದು. ॥ ೬ ॥

ಪೀಠಿಕೆ ॥ ಹೇತ್ವಂತರದಿಂದ ಅನಾದ್ಯನಂತಾದಿ ವಾಕ್ಯದಲ್ಲಿ ಇತರರೂ ಪ್ರತಿಪಾದ್ಯರಾಗಿರುತ್ತಾರೆ, ಎನ್ನುವುದನ್ನು ತಿರಸ್ಕರಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ ಓಂ ॥ ೭ ॥

**ಭಾಷ್ಯ ॥ ತ್ರಯಾಣಾಮೇವ ಪಿತೃಸೌಮನಸ್ಯಸ್ವರ್ಗ್ಯಾಗ್ನಿಪರಮಾತ್ಮನಾಂ ಪ್ರಶ್ನ ಉಪನ್ಯಾಸಶ್ಚ ॥ ೧೮ ॥**

ಭಾಷ್ಯಾರ್ಥ ॥ (ಈ ಪ್ರಕರಣಕ್ಕೆ ವೈಷ್ಣವತ್ವವಿದ್ದ ಪ್ರಯುಕ್ತ ಮಾತ್ರ ಇಲ್ಲಿ ಪ್ರಧಾನವು ಪ್ರತಿಪಾದ್ಯವಲ್ಲವೆಂದು ಸಿದ್ಧಿಸುವುದಿಲ್ಲ. ಮತ್ತೆ ಈ ಪ್ರಕರಣದಲ್ಲಿ ಸೇರಿದ ಅನೇಕ ಪ್ರಕರಣಾತ್ಮಕವಾದ ಸ್ಥಾನರೂಪವಾದ ಈ ಉಪನಿಷತ್ತಿನಲ್ಲಿಯೂ ಕೂಡ) ಚಃ-ಯಾವ ಕಾರಣದಿಂದ, ಏವಂ-ಹೀಗೆ, ತ್ರಯಾಣಾಮೇವ-ಪಿತೃ ಸೌಮನಸ್ಯ, ಸ್ವರ್ಗ್ಯಾಗ್ನಿ ಪರಮಾತ್ಮರೂಪಗಳಾದ ಧರ್ಮಿಗಳಿಗೇನೇ ಪ್ರಶ್ನಃ-ಪ್ರಶ್ನೆಯು, ಆದುದರಿಂದಲೇ, ಉಪನ್ಯಾಸಶ್ಚ-ಪ್ರತಿವಚನವೂ ಇದೆ. (ಪ್ರಧಾನಾದಿಗಳದ್ದು ಅಲ್ಲ)

ವಿಶೇಷಾಂಶ ॥ ಯಮನು ಉದ್ದಾಲಕರ ಮಗನಾದ ನಚಿಕೇತಸರಿಗೆ ಪ್ರೀತನಾಗಿ ಬೇಕಾದ ಮೂರು ವರಗಳನ್ನು ಕೇಳಿಕೋ ಎಂದು ಹೇಳೋಣ. ನಚಿಕೇತಸರು, ಸಿಟ್ಟುಗೊಂಡ ತಂದೆಯವರು ಮೊದಲಿನಂತೆ ತನ್ನಲ್ಲಿ ಸೌಹಾರ್ದಯುಕ್ತರಾಗಬೇಕೆನ್ನುವ ಉದ್ದೇಶದಿಂದ ೧. ಪಿತೃ ಸೌಮನಸ್ಯವನ್ನು ಪ್ರಥಮ ವರವನ್ನಾಗಿಯೂ, ೨. ಸ್ವರ್ಗ ಸಾಧನೀಭೂತವಾದ ಅಗ್ನಿಯನ್ನು ತಿಳಿಸು ಎಂದು ಸ್ವರ್ಗಾಗ್ನಿ ವಿಷಯಕ ಎರಡನೇ ವರವನ್ನೂ, ೩. ಮೋಕ್ಷಸಾಧನಜ್ಞಾನವಿಷಯೀಭೂತವಾದ ಮೃತ, ಮುಕ್ತ ಜೀವನಿಯಮಾಕ ಪರಮಾತ್ಮಸ್ವರೂಪವನ್ನು ಮೂರನೇ ವರವನ್ನಾಗಿಯೂ ಬೇಡಿಕೊಂಡರು. ಆಗ ಯಮನು ವರತ್ರಯವನ್ನು ಕೊಟ್ಟನು.★

ಪೀಠಿಕೆ ॥ ಹಾಗಾದರೆ ಪಿತೃಸೌಮನಸ್ಯವು ವರವಾಗಿ ಪ್ರಾರ್ಥಿಸಲ್ಪಡುತ್ತದೆ. ಪ್ರಶ್ನಿಸುವುದಿಲ್ಲ. ಆದುದರಿಂದ ಪ್ರಾರ್ಥನೆಯು ಹೇಗೆ ಪ್ರಶ್ನೆಯು ಎಂದರೆ—

**ಭಾಷ್ಯ ॥ ಅವಿಜ್ಞಾತಪ್ರಾರ್ಥನಂ ಚ ಪ್ರಶ್ನ ಇತ್ಯಭಿಧೀಯತೇ । ಇತಿ ವಚನಾನ್ನ ವಿರೋಧಃ ॥ ೭ ॥**

ಭಾಷ್ಯಾರ್ಥ ॥ ಹೊಂದಲ್ಪಡುತ್ತದೋ ಇಲ್ಲವೋ ಎಂದು ತಿಳಿಯಲ್ಪಡದೆ ಇದ್ದುದು ವಾ ಸಂಧಿಗ್ಧವಾದುದು ಯಾವುದೋ ಅದರ ಪ್ರಾರ್ಥನೆಯೂ ಕೂಡ ಪ್ರಶ್ನೆಯು ಎಂದು ಪ್ರಾಮಾಣಿಕರಿಂದ

---

★ ಓಲ್ಲು ೧೦ರಲ್ಲಿ ಕಾಠಕದಲ್ಲಿ ವಿಶದವಾಗಿ ಈ ವಿಷಯವು ನಿರೂಪಿತವಾಗಿದೆ.

ಹೇಳಲ್ಪಡುತ್ತದೆ. ಎಂದು ಹೇಳಿದ್ದರಿಂದ ಪ್ರಾರ್ಥನೆಗೂ ಕೂಡ ಪ್ರಶಸ್ತ್ಯವು ಕೂಡುತ್ತದೆ. ಆದುದರಿಂದ ವಿರೋಧವಿಲ್ಲ. ॥ ೭ ॥

**ಪೀಠಿಕೆ ॥** ಅವ್ಯಕ್ತಾದಿ ಶಬ್ದಗಳಿಂದ ವಿಷ್ಣುವೇ ಮುಖ್ಯವಾಚ್ಯನೆಂದು ಹೇಳಿದ್ದು ಅಯುಕ್ತವು. ಅವುಗಳು ಪ್ರಧಾನಾದಿಗಳಲ್ಲಿಯೇ ಪ್ರಸಿದ್ಧಗಳು. ಅವ್ಯಕ್ತಾದಿ ಶಬ್ದಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿ ಮುಖ್ಯವಾದುದರಿಂದ ಆ ಶಬ್ದಗಳಿಗೆ ಅಲ್ಲಿಯೇ ಮುಖ್ಯತ್ವವು ಉಕ್ತವಾಗಿದೆ ಎಂದು ಹೇಳಕೂಡದು. ಶಬ್ದಕ್ಕೆ ಎಲ್ಲಿ ಪ್ರಸಿದ್ಧಿಯೋ ಅಲ್ಲಿಯೇ ಅದಕ್ಕೆ ಮುಖ್ಯತ್ವವು. ಎಲ್ಲಿ ಯಾವುದಕ್ಕೆ ಮುಖ್ಯಪ್ರವೃತ್ತಿನಿಮಿತ್ತವಿದೆಯೋ ಅದಕ್ಕೆ ಮುಖ್ಯತ್ವವು ಎನ್ನುವ ಅರ್ಥವು ಅದೃಷ್ಟಚರವು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಮಹದ್ವಚ್ಚ ಓಂ ॥ ೮ ॥

**ಭಾಷ್ಯ ॥ ಯಥಾ ಮಹಚ್ಛಬ್ದೋ ಮಹತ್ತತ್ವೇ ಪ್ರಸಿದ್ಧೋಽಪಿ ಪರಮಮಹತ್ವಾತ್ಪರಮಾತ್ಮನ ಏವ ಮುಖ್ಯಃ । ಏವಮಿತರೇಽಪಿ ॥ ೮ ॥ ॥ ೨೦ ॥**

**ಭಾಷ್ಯಾರ್ಥ ॥** ಯಥಾಃಹೇಗೆ, ಮಹತ್ ಶಬ್ದವು ಮಹಾಂತಂ ವಿಭುಮಾತ್ಮಾನಂ ಎಂದು ಕಠಶ್ರುತಿಯಲ್ಲಿ ಮಹತ್ತತ್ವದಲ್ಲಿ ಪ್ರಸಿದ್ಧವಾದಾಗ್ಯೂ ಪರಮಾತ್ಮನಿಗೇನೇ ಪರಮಮಹತ್ವಾತ್ಮು ಮುಖ್ಯ ಪ್ರವೃತ್ತಿ ನಿಮಿತ್ತವಿದ್ದುದರಿಂದ ಮುಖ್ಯವಾಗಿದೆ, ಅಂದರೆ ಮುಖ್ಯವಾಚಕವೇ ಎಂದು ಅಂಗೀಕರಿಸಲ್ಪಡುತ್ತದೋ, ಹಾಗೆಯೇ ಅವ್ಯಕ್ತ ಮೊದಲಾದ ಇತರ ಶಬ್ದಗಳೂ ಕೂಡ ಅನ್ಯತ್ರ ಪ್ರಸಿದ್ಧಗಳಾದಾಗ್ಯೂ ಪರಮಾತ್ಮನಿಗೇನೇ ಪರಮ ಅವ್ಯಕ್ತತ್ವಾದಿ ಪ್ರವೃತ್ತಿನಿಮಿತ್ತವಿದ್ದುದರಿಂದ ಪರಮ ಮುಖ್ಯವು. ॥ ೮ ॥

**ಪೀಠಿಕೆ ॥** ಅವ್ಯಕ್ತಾದಿ ಶಬ್ದಗಳಿಗೆ ಶ್ರೀಹರಿಯಲ್ಲಿ ಮುಖ್ಯತ್ವವು ಸಿದ್ಧವಾಗಿದ್ದರೆ ಪರಮ ಮುಖ್ಯತ್ವ ಚಿಂತೆಯು ಕೂಡಬಹುದಿತ್ತು, ಅದೇ ಕೂಡಲಾರದು. ಅವುಗಳು ಅನ್ಯತ್ರೈವ ಪ್ರಸಿದ್ಧಗಳಾಗಿವೆ. ಅವ್ಯಕ್ತಮಚಲಂ ಶಾಂತಂ ಇದುಮೊದಲಾದ ಶ್ರೌತ ಸ್ಮಾರ್ತ ಪ್ರಯೋಗದಿಂದ ಅವ್ಯಕ್ತಾದಿ ಶಬ್ದಗಳಿಗೆ ಶ್ರೀಹರಿಯಲ್ಲಿ ಶಕ್ತಿಯು ಅವಗತವಾಗುತ್ತದೆಂದು ಹೇಳಕೂಡದು. ಅಮುಖ್ಯವೃತ್ತಿಯಿಂದಲೂ ಪ್ರಯೋಗವು ಕೂಡಬಹುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಚಮಸವದವಿಶೇಷಾತ್ ಓಂ ॥ ೯ ॥

**ಭಾಷ್ಯ ॥ ಯಥಾ ಚಮಸಶಬ್ದೋಽನ್ಯತ್ರ ಪ್ರಸಿದ್ಧೋಽಪಿ ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ (ಬೃ.ಉ.೪.೨.೩.)। ಇತಿ ಶ್ರುತೇಃ ಶಿರೋವಾಚಕಃ। ಏವಮವ್ಯಕ್ತಾದಿಶಬ್ದಾಃ ಸರ್ವೇಽನ್ಯತ್ರ ಪ್ರಸಿದ್ಧಾ ಅಪಿ ★ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ ।**

★ ನಾಮಾನಿ ಸರ್ವಾಣಿ ಎನ್ನುವ ಶ್ರುತ್ಯರ್ಥವು ಹಿಂದೆ ವ್ಯಾಖ್ಯಾತವಾಗಿದೆ. ಆದಿಶಬ್ದದಿಂದ ಯೋ ದೇವಾನಾಂ ಇತ್ಯಾದಿಗಳನ್ನೂ ಇಟ್ಟುಕೊಳ್ಳಬೇಕು.

**ಇತ್ಯಾದಿಶ್ರುತೇಃ ಪರಮಾತ್ಮಾಭಿದಾಯಕಾ ಏವ । ಅವಿಶೇಷಾಚ್ಛ್ರುತೇಃ ॥ ೯ ॥ ಅಧಿ. ೧ ॥ ॥ ೨೧ ॥**

**ಭಾಷ್ಯಾರ್ಥ** ॥ ಹೇಗೆ ಚಮಸ ಶಬ್ದವು ಅನ್ಯತ್ರ ಅಂದರೆ ಚತುಷ್ಕೋಣ ಯಜ್ಞಪಾತ್ರದಲ್ಲಿ ಪ್ರಸಿದ್ಧವಾದಾಗ್ಯೂ ಇದಂ ತಚ್ಛಿರಃ ಎನ್ನುವ ಅನುಶಾಸನರೂಪ ಶ್ರುತಿಯಿಂದ ಶಿರೋವಾಚಕವೆಂದು ಅವಗತವೇ ಆಗಿದೆಯೋ ಹಾಗೆಯೇ ಎಲ್ಲಾ ಅವ್ಯಕ್ತ ಪುರುಷ ಮೊದಲಾದ ಶಬ್ದಗಳು ಅನ್ಯತ್ರ ಪ್ರಧಾನಾದಿಗಳಲ್ಲಿ ಪ್ರಸಿದ್ಧಗಳಾದಾಗ್ಯೂ ನಾಮಾನಿ ಸರ್ವಾಣಿ ಇತ್ಯಾದಿ ಶ್ರುತಿಗಳಿಂದ ಪರಮಾತ್ಮನನ್ನು ಶಕ್ತಿವೃತ್ತಿಯಿಂದ ಹೇಳತಕ್ಕವುಗಳೇ ಆಗಿವೆ. ಲಾಕ್ಷಣಿಕಗಳಲ್ಲ ಎಂದವಗತವಾಗುತ್ತದೆ. (ಹಾಗಾದರೆ ಇದಂ ತಚ್ಛಿರಃ ಎನ್ನುವುದಕ್ಕೆ ಶಕ್ತಿವೃತ್ತಿಯಿಂದ ವಾಚಕತ್ವವಿದ್ದಾಗ್ಯೂ ನಾಮಾನಿ ಸರ್ವಾಣಿ ಎನ್ನುವುದಕ್ಕೆ ಶಕ್ತಿವೃತ್ತ್ಯಾ ವಾಚಕತ್ವವಿಲ್ಲ. ವೃತ್ತ್ಯಂತರದಿಂದಲೂ ಈ ವಚನವು ಕೂಡಬಹುದು. ಎನ್ನುವ ಆಶಂಕೆಯನ್ನು ಪರಿಹರಿಸುತ್ತಾರೆ.) ನಾಮಾನಿ ಎನ್ನುವ ಶ್ರುತಿಗೆ ಇದಂ ತಚ್ಛಿರಃ ಎನ್ನುವ ಶ್ರುತಿಯ ದೆಸೆಯಿಂದ ವಿಶೇಷವಿಲ್ಲದಿರುವುದರಿಂದ. (ಆದುದರಿಂದ ಇದಂ ತಚ್ಛಿರಃ ಎನ್ನುವುದರಂತೆ ನಾಮಾನಿ ಎನ್ನುವ ಶ್ರುತಿಯೂ ಅನುಶಾಸನರೂಪವಾಗಿರುವುದರಿಂದ ಇದು ಶ್ರೀಹರಿಯನ್ನು ಶಕ್ತಿವೃತ್ತ್ಯಾ ಹೇಳುತ್ತದೆಂದು ನಿಶ್ಚಯವು ಆಗಿಯೇ ಆಗುತ್ತದೆ. (೧) ಬೃಹದಾರಣ್ಯಕದಲ್ಲಿ **ತದೇಷ ಶ್ಲೋಕೋ ಭವತಿ** ಎಂದು ಪ್ರತಿಜ್ಞಾಮಾಡಿ **ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ ತಸ್ಮಿನ್ ಯಶೋ ನಿಹಿತಂ ವಿಶ್ವರೂಪಂ** ಎನ್ನುವ ಮಂತ್ರವನ್ನುದಾಹರಿಸಿ **ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ** ಎನ್ನುವ ವಾಕ್ಯದಿಂದ ಮಂತ್ರದಲ್ಲಿದ್ದ ಒಂದು ಪಾದವನ್ನು ಪ್ರತೀಕಗ್ರಹಣ ಮಾಡಿ **ಇದಂ ತಚ್ಛಿರಃ** ಎನ್ನುವ ವಾಕ್ಯದಿಂದ ಆ ಮಂತ್ರವನ್ನು ವ್ಯಾಖ್ಯಾನ ಮಾಡಿರುವರು. **ಅರ್ವಾಗ್ಬಿಲಶ್ಚಮಸಃ** ಎನ್ನುವ ವ್ಯಾಖ್ಯೇಯ ಮಂತ್ರದಲ್ಲಿ ಯಾವ ವಸ್ತುವು ಉಕ್ತವಾಗಿಯದೋ,) ತದಿದಂ=ಆ ಈ ತೋರತಕ್ಕುದು. ಶಿರಃ=ಶಿರಸ್ಸು. ಹಿ=ಏಕೆಂದರೆ, ಏಷಃ=ಶಿರಸ್ಸು ಚಮಸಃ=ಚಮಸರೂಪವು, ಅರ್ವಾಗ್ಬಿಲಃ=ಅಧೋಭಾಗದಲ್ಲಿದ್ದ ಮುಖಾದಿಗಳುಳ್ಳದ್ದು ಊರ್ಧ್ವಬುಧ್ನಃ=ಮೇಲುಭಾಗದಲ್ಲಿದ್ದ ವರ್ತುಲ ಕಠಿಣಾಕಾರವುಳ್ಳದ್ದು. ॥ ೯ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ (೧) ಪ್ರಧಾನವು ಶಬ್ದಬೋಧ್ಯವಲ್ಲವೆಂದು ಈಕ್ಷತ್ಯಧಿಕರಣದಲ್ಲಿ ಹೇಳಿದ್ದು ಆಯುಕ್ತವು. ಮಹತಃ ಪರಮವ್ಯಕ್ತಂ ಎನ್ನುವ ವಾಕ್ಯದಲ್ಲಿ ಪ್ರಧಾನವು ಪ್ರತಿಪಾದ್ಯವಾಗಿದೆ ಎಂದು ಪೂರ್ವಪಕ್ಷವನ್ನು ಮಾಡಿಕೊಂಡು ಅವ್ಯಕ್ತವು ಪ್ರಧಾನವಲ್ಲ ಮತ್ತೆ ಶರೀರವೇ ಎಂದು ಇಬ್ಬರು ವಾದಿಗಳೂ ಸಿದ್ಧಾಂತಮಾಡಿರುವರು. ಇದು ಆಯುಕ್ತವು. ಆದರಲ್ಲಿ ಪ್ರಧಾನವು ಶಬ್ದಪ್ರತಿಪಾದ್ಯವೇ ಆಗುವುದಿಲ್ಲ ಎನ್ನುವುದನ್ನು ಇಲ್ಲಿ ನಿರಾಕರಿಸುತ್ತೇವೆ ಎನ್ನಕೂಡದು. ಆವರಿಬ್ಬರ ಮತದಲ್ಲಿಯೂ ಸಮನ್ವಯ ಸೂತ್ರದಲ್ಲಿ ಸರ್ವಸಮನ್ವಯವನ್ನು ಪ್ರತಿಜ್ಞಾ ಮಾಡದೆ ಇದ್ದುದರಿಂದ ಪ್ರಧಾನಕ್ಕೆ ಅವ್ಯಕ್ತಾದಿ ಶಬ್ದಾರ್ಥತ್ವವಿದ್ದರೂ ವಿರೋಧವಿಲ್ಲದಿರುವುದರಿಂದ ಅದನ್ನು ಮಾತ್ರ ನಿರಾಕರಿಸುವುದು ನಿಷ್ಫಲವಾಗಿದೆ. ಮತ್ತು ಪ್ರಧಾನಾದಿ ತತ್ವಗಳು ಪ್ರತ್ಯಾದಿಸಿದ್ಧಗಳೆಂದು ಮುಂದೆ ಹೇಳುವುದನ್ನು ನಿರಾಕರಿಸುವುದು ಅಶಕ್ಯವೂ ಆಗಿದೆ. (೨) ಪ್ರಧಾನಕ್ಕೆ ಜಗತ್ಕಾರಣತ್ವವನ್ನು ಹೇಳದೆ ಇದ್ದುದರಿಂದ ಕಾರಣತ್ವೇನ

ಶಬ್ದಬೋಧ್ಯತ್ವವು ನಿರಸ್ಯವು ಎಂದು ಹೇಳಕೂಡದು. ಆದಕಾರಣ ಪೂರ್ವಪಕ್ಷವೇ ಕೂಡಲಾರದು. ಮತ್ತು ಇಲ್ಲಿದ್ದ ಅವ್ಯಕ್ತ ಅಜಾದಿ ಶಬ್ದವಾಚ್ಯವು ಬ್ರಹ್ಮನು ಎಂದು ಹೇಳದೆ ಶರೀರ ಅವಿದ್ಯಾದಿಗಳು ಎಂದು ಸಿದ್ಧಾಂತಮಾಡಿರುವುದರಿಂದ ಬ್ರಹ್ಮನಲ್ಲಿ ಸಮನ್ವಯವನ್ನು ಹೇಳದೆ ಇದ್ದಪ್ರಯುಕ್ತ ಅಧ್ಯಾಯ ಸಂಗತಿಯು ಇಲ್ಲ. ಪ್ರಧಾನದಲ್ಲಿ ಬ್ರಹ್ಮಲಕ್ಷಣಕ್ಕೆ ಅತಿವ್ಯಾಪ್ತಿ ಪರಿಹಾರವಾದರೂ ಅವಿದ್ಯಾದಿಗಳಲ್ಲಿ ಅತಿವ್ಯಾಪ್ತಿ ಪರಿಹಾರವಾಗುವುದಿಲ್ಲ. **ಕಾರಣತ್ವಂ ಪ್ರಧಾನಸ್ಯ ನಿರಸ್ಯ ಸ್ಥಾಪಿತಂ ಯದಿ । ಅವಿದ್ಯಾದೇಸ್ತದಾ ಕೋ ನು ಲಾಭೋऽಸ್ತಿ ಬ್ರಹ್ಮವಾದಿನಃ । ವೃಕೇಣಾಪಹೃತಂ ಮೇಷಮಾದಾಯಾತಿಪ್ರಯತ್ನತಃ । ಸ ಚೇದ್ವ್ಯಾಘ್ರಾಯ ದೀಯೇತ ಕೋ ಲಾಭಸ್ತೇನ ಸಿಧ್ಯತಿ ॥** ಆದಕಾರಣ ಅವರಿಬ್ಬರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

**ಮಹತಃ ಪರಮವ್ಯಕ್ತಂ, ಜೀವಾ ಏವ ತು ದುಃಖಿನಃ, ಯೋನಿಮನ್ಯೇ ಪ್ರಪದ್ಯಂತೇ** ಇತ್ಯಾದಿಗಳಲ್ಲಿ ಶ್ರುತಗಳಾದ ಅವ್ಯಕ್ತ, ದುಃಖಿ ಬದ್ಧ ಅವರ ಮೊದಲಾದ ಶಬ್ದವಾಚ್ಯವು ಪ್ರಕೃತಿ ಜೀವಾದಿಗಳೋ, ಬ್ರಹ್ಮನೋ ಎಂದು ಸಂದೇಹವು. ಪ್ರಕೃತ್ಯಾದಿಗಳೇ, ಬ್ರಹ್ಮನಲ್ಲ. ಅವ್ಯಕ್ತಾದಿ ಶಬ್ದಗಳಿಗೆ ಪ್ರಕೃತ್ಯಾದಿಗಳಲ್ಲಿಯೇ ಪ್ರಸಿದ್ಧಿಯು. ಅವಕ್ತ್ಯಾದಿ ಶಬ್ದಗಳು ವಿಷ್ಣುವಾಚಕಗಳು ಎನ್ನುವಲ್ಲಿ ಪ್ರಮಾಣವಿಲ್ಲ. **ನಿರನಿಷ್ಟೋ ನಿರವದ್ಯಃ** ಇತ್ಯಾದಿ ಪ್ರಮಾಣ ವಿರೋಧದಿಂದಲೂ ಸರ್ವಾಧಿಪತಿತ್ವಾದಿ ವಿರೋಧದಿಂದಲೂ ದುಃಖಿತ್ವಾದಿಗಳು ವಿಷ್ಣುವಿನಲ್ಲಿ ಕೂಡಲಾರವು, ಎಂದು ಪೂರ್ವಪಕ್ಷವು. **ನಾಮಾನಿ ಸರ್ವಾಣಿ ಯಮಾವಿಶಂತಿ** ಇತ್ಯಾದಿ ಶ್ರುತಿಗಳಿಂದಲೂ **ಅವ್ಯಕ್ತಮಚಲಂ ಶಾಂತಂ, ಅನೇನ ಜೀವೇನಾತ್ಮನಾ** ಇತ್ಯಾದಿ ಶ್ರೌತ ಸ್ಮಾರ್ತ ಪ್ರಯೋಗಗಳಿಂದಲೂ ವಿಷ್ಣುವಿಗೇನೇ ಮುಖ್ಯವಾಚಿ ಅವ್ಯಕ್ತಾದಿ ಸರ್ವಶಬ್ದವಾಚ್ಯತ್ವವು. ಅವ್ಯಕ್ತಾದಿ ಪದಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವವೂ ಪ್ರಾಣಧಾರಣತ್ವಾದಿಗಳೂ **ಯತ್ತತ್ಸೂಕ್ಷ್ಮಂ ಪರಮಂ ವೇದಿತವ್ಯಂ** ಇತ್ಯಾದಿ ಶ್ರುತಿಗಳಿಂದ ಈಶ್ವರನಲ್ಲಿಯೇ ಮುಖ್ಯವು. ತಥಾಚ **ದುಃಖಾದೇರ್ಜೀವಗಸ್ಯಾಪಿ ಸ್ವಾಧೀನತ್ವೇನ ಹೇತುನಾ । ದುಃಖೀತಿ ಗೀಯತೇ ಬ್ರಹ್ಮ ಧನಸ್ವಾಮೀ ಧನೀ ಯಥಾ ॥** ಆದುದರಿಂದ ಅವ್ಯಕ್ತಾದಿ ಶಬ್ದವಾಚ್ಯನು ಹರಿಯೇ ಎಂದು ಸಿದ್ಧಾಂತವು. ॥ ಅಧಿ.೧ ॥

**ಆನುಮಾನಿಕಾಧಿಕರಣವು ಸಮಾಪ್ತವಾಯಿತು.**

# ೨ ಜ್ಯೋತಿರುಪಕ್ರಮಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಕರ್ಮ ಕರ್ಮಾಂಗಗಳಲ್ಲಿಯೇ ಪ್ರಸಿದ್ಧಗಳಾದ ಜ್ಯೋತಿಷ್ಟೋಮಾದಿ ಶಬ್ದಗಳಿಗೆ ಶ್ರೀ ಭಗವಂತನಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಶ್ರುತ್ಯಾದಿ ಸಂಗತಿಯನ್ನು ವಿಷಯಾದಿಗಳನ್ನೂ ಸೂಚಿಸುತ್ತಾರೆ—

**ಭಾಷ್ಯ ॥ ವಸಂತೇ ವಸಂತೇ ಜ್ಯೋತಿಷಾ ಯಜೇತ । ಇತ್ಯಾದಿಕರ್ಮಾಭಿಧಾಯಕಸ್ಯ ಕರ್ಮಕ್ರಮಾದಿವಿರೋಧಾನ್ನ ಯುಜ್ಯತೇ । ಇತಿ ॥ ೧ ॥**

ಭಾಷ್ಯಾರ್ಥ ॥ (ತತ್ತು ಸಮನ್ವಯಾತ್ ಎನ್ನುವಲ್ಲಿ ಹೇಳಿದ ಪರಮೇಶ್ವರನಲ್ಲಿ ಸರ್ವಶಬ್ದಗಳ

ಸಮನ್ವಯವು ಕೂಡುವುದಿಲ್ಲ. ವಸಂತೇ ವಸಂತೇ ಇದುಮೊದಲಾದ ಯಜ್ಞಾದಿಕರ್ಮ, ಕರ್ಮಾಂಗ, ಕಾಲಕ್ರಮ ಅಧಿಕಾರಿ, ಫಲ, ಋತ್ವಿಗಾದಿಗಳನ್ನು ಹೇಳತಕ್ಕ ಜ್ಯೋತಿರ್ವಸಂತಾದಿ ಶಬ್ದಸಮುದಾಯಕ್ಕೆ, ಭಗವದ್ವಾಚಕತ್ವವನ್ನು ಅಂಗೀಕರಿಸಿದರೆ ಕರ್ಮಾದ್ಯಭಿಧಾಯಕತ್ವವು ಇಲ್ಲದಿರುವುದರಿಂದ ಕರ್ಮ ಕ್ರಮಾದಿಗಳು ಇಲ್ಲವೆಂದಾಗುವಪ್ರಯುಕ್ತ ಜ್ಯೋತಿರಾದಿಶಬ್ದಗಳಿಗೆ ಭಗವದ್ವಾಚಕತ್ವವು ಕೂಡುವುದಿಲ್ಲ.

ವಿಶೇಷಾಂಶ ॥ (೧) ವಾಜಯೇಪೇಯನೇಷ್ಟ್ವಾ ಬೃಹಸ್ಪತಿಸವೇನ ಯಜೇತ, ವೇದಂ ಕೃತ್ವಾವೇದಿಂ ಕುರ್ಯಾತ್ ಇದುಮೊದಲಾದ ಕ್ರಮವಾಕ್ಯವು ಕರ್ಮಗಳಿಗೆ ತಾರತಮ್ಯವನ್ನು ಬೋಧಿಸುತ್ತದೆ. (೨) ವಸಂತಶಬ್ದವು ಕಾಲವಿಶೇಷವಾಚಕವು, ಜ್ಯೋತಿಶ್ಶಬ್ದವೂ ಜ್ಯೋತಿಷ್ಟೋಮಶಬ್ದವೂ ಕರ್ಮವಾಚಕವು. (೩.) ಸಮನ್ವಯಸೂತ್ರದಲ್ಲಿ ಹೇಳಿದ ಸರ್ವಶಬ್ದಗಳ ಸಮನ್ವಯವನ್ನು ಆಕ್ಷೇಪಿಸಿದ್ದರಿಂದ ಆ ಸಮನ್ವಯಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು, ಜ್ಯೋತಿಷ್ಟೋಮಾದಿಶಬ್ದವು ವಿಷಯವು. ಯಾಗವಾಚಕವೆಂದು ಪೂರ್ವಪಕ್ಷವು. ವಿಷ್ಣುವಾಚಕವೆಂದಂಗೀಕರಿಸಿದರೆ— ಕಾಲಕ್ರಮಾದಿ ವಿರೋಧವು ಬರುವ ಪ್ರಯುಕ್ತ ಎಂದು ಯುಕ್ತಿಯೂ ಸೂಚಿತವಾಯಿತು.

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

ಭಾಷ್ಯ ॥ ಅತ ಅಹ ॥ ೨ ॥

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರವನ್ನು ಹೇಳುತ್ತಾರೆ—

## ಸೂತ್ರ॥ ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ ॥ ೧೦॥

ಸೂತ್ರಾರ್ಥ ॥ ಬ್ರಹ್ಮನು ಅವ್ಯಕ್ತಾದಿ ಶಬ್ದವಾಚ್ಯನು ಮಾತ್ರ ಅಲ್ಲ. ಜ್ಯೋತಿಷ್ಟೋಮಾದಿಕರ್ಮ ವಾಚಕತ್ವೇನ ಪ್ರಸಿದ್ಧ ಶ್ರುತಿಯಲ್ಲಿದ್ದ ಜ್ಯೋತಿರಾದಿ ಶಬ್ದವಾಚ್ಯನೂ ಬ್ರಹ್ಮನೇ, (ಇತರವಾದ ಜ್ಯೋತಿಷ್ಟೋಮಾದಿಗಳಲ್ಲ ಏಕೆಂದರೆ—) ಕೆಲವು ಶಾಖಿಗಳು ತಾ ವಾ ಏತಾಃ ಎಂದು, ತಥಾ=ಸರ್ವಶಬ್ದವಾಚ್ಯನೆಂದು ಬ್ರಹ್ಮನನ್ನೇ ಅಧ್ಯಯನ ಮಾಡುತ್ತಾರೆ, ಬ್ರಹ್ಮನಲ್ಲಿ (ಶಕ್ತಿ ವೃತ್ತಿ) ಯಿಲ್ಲವೆಂದು ಹೇಳಕೂಡದು. ಏಕೆಂದರೆ— ಉಪಕ್ರಮಾತ್=ಏಷ ಇಮಂ ಎಂದು ಉಪಕ್ರಮಿಸಿ ಅಧೀತವಾದ ತಂ ಯಚ್ಚತಂ ಇತ್ಯಾದಿಗಳಿಂದ ನಾಮಗಳನ್ನು ನಿರ್ವಚನಮಾಡಿ ಪುನಃ ಸರ್ವ ವೇದಗಳನ್ನು ಮೊದಲುಗೊಂಡು ಸಮುದ್ರಘೋಷಪರ್ಯಂತ ಎಲ್ಲಾಶಬ್ದಗಳೂ ನಾರಾಯಣನಲ್ಲಿಯೇ ಇರುತ್ತವೆಂದು ತಿಳಿಯಬೇಕು ಎಂದು ತಾತ್ಪರ್ಯಪೂರ್ವಕವಾಗಿ ಐತರೇಯ ಶಾಖೆಯವರು ಅಧ್ಯಯನ ಮಾಡುತ್ತಾರೆ. ತಥಾಚ ಪರಬ್ರಹ್ಮನಲ್ಲಿ ಸರ್ವಶಬ್ದಗಳಿಗೂ ವಿದ್ವದ್ರೂಢಿ ಸಹಿತವಾದ ಮಹಾಯೋಗವನ್ನು ಹೇಳಿದ್ದರಿಂದ ಹಿಂದೆ ಹೇಳಿದ ದೋಷವಿಲ್ಲ.

ಭಾಷ್ಯ ॥ ಜ್ಯೋತಿರಾದಿಕರ್ಮವಾಚಕತ್ವೇನ ಪ್ರಸಿದ್ಧಾಭಿಧೇಯೋಽಪಿ ಸ ಏವ । ಏಷ ಇಮಂ ಲೋಕಮಭ್ಯಾರ್ಚದಿತ್ಯುಪಕ್ರಮ್ಯ ★ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈಕ ವ್ಯಾಹೃತಿಃ ಪ್ರಾಣ ಏವ ಪ್ರಾಣಋಚ ಇತ್ಯೇವ ವಿದ್ಯಾತ್ (ಐ.ಆ.೨.೨.೨.)। ಇತಿಹ್ಯಧೀಯತ ಏಕೇ ॥ ೧೦ ॥ ॥ ೩ ॥

★ ತಾ ವಾ ಏತಾಃ ಇತ್ಯಾದಿಗಳು ಉತ್ತರಪ್ರಾಣಾಧಿಕರಣದಲ್ಲಿ ವ್ಯಾಖ್ಯಾತಗಳಾಗಿವೆ.

ಭಾಷ್ಯಾರ್ಥ ॥ ಜ್ಯೋತಿಷ್ಟೋಮ ಮೊದಲಾದ ಕರ್ಮ ಕರ್ಮಾಂಗಾದಿಗಳನ್ನು ಹೇಳತಕ್ಕವುಗಳೆಂದು ಪ್ರಸಿದ್ಧಗಳಾದ ಜ್ಯೋತಿರಾದಿಶಬ್ದಗಳಿಂದ ವಾಚ್ಯನೂ ಶ್ರೀಹರಿಯೇ, ಅಪಿಃ ಎನ್ನುವುದರಿಂದ ಶ್ರೀಹರಿಯು ಸಿದ್ಧರೂಪದೇವತಾತತ್ತ್ವಮವಾಚಕಗಳಾದ ಇಂದ್ರಿಯೇಭ್ಯಃ ಪರಾಃ ಇದುಮೊದಲಾದ ಶಬ್ದಗಳಿಂದ ಮಾತ್ರ ವಾಚ್ಯನೆಂದಲ್ಲ, ಮತ್ತೆ ಸಾಧ್ಯಭೂತಕರ್ಮ ತತ್ತ್ವಮಾದಿ ಶಬ್ದಗಳಿಂದಲೂ ವಾಚ್ಯನು ಆಗುವನು ಎಂದು ಸಿದ್ಧಿಸುವುದು, ಏಷಃ=ನಾರಾಯಣನು, ಇಮಂ ಲೋಕಂ=ಬ್ರಹ್ಮಾದಿಗಳ ಶರೀರವನ್ನು, ಅಭ್ಯಾರ್ಚತ್=ಪುರುಷ ರೂಪದಿಂದ ಅಂತರ್ಯಾಮಿಯಾಗಿ ಪ್ರವೇಶಿಸಿದನು, ಎಂದುಪಕ್ರಮಿಸಿಕೊಂಡೇ ಅಥವಾ ಆರಂಭಿಸಿಕೊಂಡೇ (ತಂ ಯಚ್ಚತಂ ಇತ್ಯಾದಿಗಳಿಂದ ನಾಮಗಳನ್ನು ನಿರ್ವಚನಮಾಡಿ) ತಾ ವಾ ಏತಾಃ ಎಂದು ಸರ್ವಶಬ್ದಗಳಿಂದ ವಾಚ್ಯನೆಂದು ಶ್ರೀಹರಿಯನ್ನೇ ಯಾವಕಾರಣದಿಂದ ಕೆಲವು ಶ್ರೀಮನ್ನಹೈತರೇಯಶಾಖೆಯವರು ಶ್ರೀಹರಿಯನ್ನೇ ಅಧ್ಯಯನಮಾಡುತ್ತಾರೋ, ಆದುದರಿಂದ ಸರ್ವಶಬ್ದವಾಚ್ಯನು ಶ್ರೀಹರಿಯೇ. ॥೧೦॥

ಪೀಠಿಕೆ ॥ ಹಾಗಾದರೆ ಶ್ರೀಹರಿಗೆ ಜ್ಯೋತಿರಾದಿಶಬ್ದವಾಚ್ಯತ್ವವು ಹೇಗೆ ಕೂಡುತ್ತದೆ, ಹಾಗೆ ಇದ್ದರೆ ಕರ್ಮಕ್ರಮಾದಿ ವಿರೋಧವು ಬರಬೇಕಾಗುವುದು. ಮತ್ತು ಜ್ಯೋತಿಷ್ಟೋಮಾದಿ ಶಬ್ದಗಳಿಗೆ ಕರ್ಮಪರತ್ವವನ್ನು ಅಂಗೀಕರಿಸಿದರೆ ಶ್ರೀಹರಿಯಲ್ಲಿ ಅವುಗಳಿಗೆ ವೃತ್ತತ್ತಿಯೂ ಕೂಡಲಾರದು. ಎಂದರೆ—

## ಸೂತ್ರ ॥ ಓಂ ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ಓಂ ॥ ೧೧ ॥

**ಭಾಷ್ಯ ॥ ಮಧುವಿದ್ಯಾದಿವತ್ ಸರ್ವಶಬ್ದಾರ್ಥತ್ವೇನ ಪರಸ್ಯ ಕಲ್ಪನೋಪದೇಶಾಚ್ಚ (ಶಾನ್ನ) ನ ಕರ್ಮಕ್ರಮಾದಿವಿರೋಧಃ ॥ ೧೧ ॥ ಅಧಿ. ೨ ॥ ॥ ೪ ॥**

ಭಾಷ್ಯಾರ್ಥ ॥ ಹೇಗೆ ಮಧುವಿದ್ಯಾದಿಗಳಲ್ಲಿ ಅಸೌ ವಾ ಆದಿತ್ಯೋ ದೇವಮಧು ಇತ್ಯಾದಿಗಳಿಂದ ಮಧು ಮೊದಲಾದ ಪದಾರ್ಥವಾಗಿ ಶ್ರೀಹರಿಯ ಉಪಾಸನವನ್ನುಪದೇಶಿಸಿದರು. ಮಧು (ಜೇನು) ಮೊದಲಾದುದನ್ನು ಹೇಳತಕ್ಕ ಶಬ್ದವು ಇಲ್ಲದಿರುವುದರಿಂದ ಮಧ್ವಾದಿಗಳೇ ಇಲ್ಲವೆಂದಾಗಬೇಕಾಗು ವುದು ಎನ್ನುವುದು ಇಲ್ಲವೋ, ಅಂದರೆ ಮಧ್ವಾದಿ ಶಬ್ದಗಳು ಜೇನುತುಪ್ಪ ಮೊದಲಾದವುಗಳನ್ನು ಹೇಳುತ್ತವೆ. ಅಂತೂ ಅನ್ಯತ್ರ ರೂಢಿಯನ್ನು ಬಿಡದೇನೇ ಮಹಾಯೋಗ ವಿದ್ವದ್ರೂಢಿಗಳಿಂದ ಈಶ್ವರಾದಿಗಳನ್ನು ಹೇಳುತ್ತವೋ, ಹೀಗೆಯೇ ಕರ್ಮಕ್ರಮಾದಿಗಳಲ್ಲಿ ರೂಢಿಯೋಗಾದಿವೃತ್ತಿಗಳನ್ನು ಅಂಗೀಕರಿಸಿಕೊಂಡು ಸರ್ವಶಬ್ದಾರ್ಥಭೂತ ಗುಣಗಳು ಇವೆ ಎಂದು ಶ್ರೀಹರಿಯನ್ನುಪಾಸನಾ ಮಾಡುವುದಕ್ಕೋಸ್ಕರವೇ ಮಹಾಯೋಗವೃತ್ತಿಯಿಂದ ಸರ್ವ ಶಬ್ದವಾಚ್ಯತ್ವವನ್ನು ಉಪದೇಶಿಸಿದ್ದರಿಂದ ಈಶ್ವರನಿಗೆ ಸರ್ವಶಬ್ದವಾಚ್ಯತ್ವವನ್ನು ಅಂಗೀಕರಿಸಿದರೂ ಕರ್ಮಕ್ರಮಾದಿಗಳು ಇಲ್ಲವೆಂದಾಗಬೇಕಾಗುವುದು. ವೃತ್ತತ್ತ್ಯಸಂಭವವೆನ್ನುವುದೂ ಇಲ್ಲ.

ವಿಶೇಷಾಂಶ ॥ ಅಸೌ ವಾ ಆದಿತ್ಯೋ ದೇವಮಧು ಇತ್ಯಾದಿಗಳಿಂದ ಭಗವದುಪಾಸನೆಯನ್ನುಪದೇಶಿಸಿದರೂ ಮಧ್ವಾದಿಶಬ್ದಗಳಿಗೆ ಲೌಕಿಕ ಜೇನು ಮೊದಲಾದವುಗಳ

ವಾಚಕತ್ವವು ಇದೆ. ಹಾಗೆಯೇ ಜ್ಯೋತಿರಾದಿ ಶಬ್ದಗಳಿಗೆ ಉಪಾಸನಾ ಮಾಡುವುದಕ್ಕೋಸ್ಕರ ಭಗವತ್ಪರತ್ವವಿದ್ದರೂ ಕರ್ಮಕ್ರಮಾದಿ ಪರತ್ವವೂ ಇದೆ. ॥ ೧೧ ॥

## ಮಾಯಾವಾದಿರೀತ್ಯಾ

ವಿಚಾರ ॥ **ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ** ಎನ್ನುವ ಶ್ವೇತಾಶ್ವತರ ವಾಕ್ಯದಲ್ಲಿ ಪ್ರಜೆಗಳನ್ನು ಸೃಷ್ಟಿಸತಕ್ಕುದೆಂದು ಹೇಳಲ್ಪಟ್ಟ ಅಜಾ ಶಬ್ದವಾಚ್ಯವು ಸಾಂಖ್ಯರಿಗೆ ಅಭಿಮತವಾದ ಸತ್ವರಜಸ್ತಮೋಗುಣಗಳುಳ್ಳ ಪ್ರಕೃತಿಯು ಎಂದು ಪೂರ್ವಪಕ್ಷವು ಬಂದರೆ— ಈ ಅಜಾ ಶಬ್ದವಾಚ್ಯವು ಸಾಂಖ್ಯರಿಗೆ ಅಭಿಮತವೆಂದು ನಿಶ್ಚಯಿಸಲು ಶಕ್ಯವಲ್ಲ. ಎಲ್ಲಾ ಕಡೆಗಳಲ್ಲಿಯೂ ಕಥಂಚಿತ್ ಅಜಾತ್ವಾದಿಗಳನ್ನು ಸಂಪಾದಿಸಲು ಶಕ್ಯವಾಗುವುದು. ವಿಶೇಷ ಹೇತುವೂ ಇಲ್ಲ. ಹೇಗೆ **ಏಷ ಹ್ಯರ್ವಾಗ್ಬಿಲಶ್ಚಮಸಃ** ಎನ್ನುವಲ್ಲಿ **ಅಯಂ ನಾಮಾ** ಇದು ಚಮಸವೆಂದು ನಿಶ್ಚಯಿಸಲಿಕ್ಕೆ ಅಶಕ್ಯವೋ, ಅರ್ವಾಗ್ಬಿಲತ್ವಾದಿಗಳನ್ನು ಎಲ್ಲಾ ಕಡೆಗಳಲ್ಲಿಯೂ ಕಥಂಚಿತ್ ಸಂಪಾದಿಸಬಹುದು. ವಿಶೇಷ ಹೇತುವೂ ಇಲ್ಲ ಎಂದು ಚಮಸಸೂತ್ರದಿಂದ ಹೇಳಿ ಮತ್ತೆ ಜ್ಯೋತಿಸೂತ್ರದಿಂದ ಪ್ರಧಾನಭಿನ್ನವಾದ ಅಜಾಶಬ್ದ ವಾಚ್ಯವಾದುದನ್ನು ನಿರ್ಣಯಿಸಲಿಕ್ಕೆ ಶಕ್ಯವಾಗುತ್ತದೆ. ಈ ಅಜಾ ಶಬ್ದವಾಚ್ಯವು ಜ್ಯೋತಿ (ತೇಜ)ಜಲ, ಪೃಥಿವೀರೂಪವೇ ಆಗಿದೆ. ಸಾಂಖ್ಯರಿಗೆ ಅಭಿಮತ ಗುಣತ್ರಯ ರೂಪವಾದುದಲ್ಲ. **ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂಯತ್ಕೃಷ್ಣಂ ತದನ್ನಸ್ಯ** ಎನ್ನುವ ಶ್ರುತ್ಯಂತರದಲ್ಲಿ ತೇಜಸ್ಸು, ಅಬ್, ಅನ್ನ ಇವುಗಳಿಗೇನೇ ಲೋಹಿತ ಶುಕ್ಲ ಕೃಷ್ಣರೂಪಗಳಿವೆ ಎಂದು ಹೇಳಿದೆ. ಪ್ರಕೃತಿ ಎನ್ನುವ ಪಕ್ಷದಲ್ಲಿ ಲೋಹಿತ ಮೊದಲಾದ ಶಬ್ದಗಳಿಗೆ ರಜೋಗುಣ ಮೊದಲಾದವುಗಳಲ್ಲಿ ಗೌಣತ್ವವೂ ಬರಬೇಕಾಗುವುದು ಎಂದು ಸಮಾಧಾನ ಮಾಡಿರುವರು. ಚಮಸ ಸೂತ್ರವು ಜ್ಯೋತಿರಧಿಕರಣಶೇಷವು, ಎಂದು ಅದ್ವೈತಿಗಳು ಹೇಳುತ್ತಾರೆ. ಅದು ಅಯುಕ್ತವು. ಇದಂ ತಚ್ಛಿರಃ **ಏಷ ಹ್ಯರ್ವಾಗ್ಬಿಲಶ್ಚಮಸಃ** ಎನ್ನುವಲ್ಲಿ ಶಿರೋರೂಪವಾದ ವಿಶೇಷಪರತ್ವವು ಸ್ಫುಟವಾಗಿರುವುದರಿಂದ ಅವಿಶೇಷದಲ್ಲಿ ದೃಷ್ಟಾಂತತ್ವವೂ ಕೂಡಲಾರದು. ಬ್ರಹ್ಮಲಕ್ಷಣವಾದ ಕಾರಣತ್ವಕ್ಕೆ ಪ್ರಧಾನದಲ್ಲಿ ಅತಿವ್ಯಾಪ್ತಿಯೂ ಇಲ್ಲ. ಮತ್ತೆ ತೇಜಸ್ಸು ಜಲ ಪೃಥಿವಿಗಳಲ್ಲಿ ಅತಿವ್ಯಾಪ್ತಿಸಮರ್ಥನವು ವ್ಯರ್ಥವೂ ಆಗಿದೆ. ಮತ್ತು **ಅಜಾ ಚೇ ಜ್ಯೋತಿರಾದಿಃ ಸ್ಯಾದಜೈಕತ್ವಾದ್ಯಸಂಭವಃ । ಅವಿದ್ಯೇತಿ ತು ಪಕ್ಷೇ ಸ್ಯಾಲ್ಲೋಹಿತತ್ವಾದ್ಯಸಂಭವಃ॥** ಮತ್ತು ಈ ಅಜಾ ಶಬ್ದವಾಚ್ಯವು ಸಿದ್ಧಾಂತದಲ್ಲಿ ತೇಜೋಬಿನ್ನರೂಪವೋ, ಅಂದರೆ ಮಾಯಾ ಅವಿದ್ಯಾ ಶಬ್ದಿತ ಪರಮ ಪ್ರಕೃತಿಜನ್ಯ ಅವಾಂತರ ಪ್ರಕೃತಿರೂಪವೋ, ಅವಿದ್ಯಾರೂಪವೋ ಅಂದರೆ ತತ್ಕಾರಣವಾದ ಪರಮ ಪ್ರಕೃತಿರೂಪವೋ ತೇಜೋಬನ್ನಗಳಿಗೆ ಉತ್ಪತ್ತಿಯಿದ್ದುದರಿಂದಲೂ ಅನೇಕತ್ವವಿದ್ದುದರಿಂದಲೂ ತೇಜೋಬನ್ನ ರೂಪವೆಂದು ಹೇಳಕೂಡದು. ಅಜಾಮೇಕಾಂ ಇತ್ಯಾದಿಗಳೂ ಕೂಡದೆ ಹೋಗುವುವು. ೨ನೇದ್ದೂ ಅವಿದ್ಯಾ ಎನ್ನುವ ಪಕ್ಷವೂ ಕೂಡಲಾರದು. ಅದರಲ್ಲಿ ಲೋಹಿತಾದಿ ರೂಪಗಳು ಇಲ್ಲ ಇತ್ಯಾದಿ ದೋಷಗಳು ಇದ್ದುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಚಮಸ ಸೂತ್ರಕ್ಕೆ ಪರರು ಹೇಳಿದ್ದೇ ಅರ್ಥವು. ಜ್ಯೋತಿಸೂತ್ರದಲ್ಲಿ ಜ್ಯೋತಿಶ್ಶಬ್ದ

ವಾಚ್ಯನು ಬ್ರಹ್ಮನು. ಜ್ಯೋತಿಸ್ಸನ್ನುಪಕ್ರಮಿಸಿಕೊಂಡು ಹೇಳಿದ ಈ ಅಜಾ ಶಬ್ದವಾಚ್ಯಕ್ಕೆ ಬ್ರಹ್ಮನು ಕಾರಣನು. ತೈತ್ತಿರೀಯ ಶಾಖೆಯಲ್ಲಿ **ಅಣೋರಣೀಯಾನ್** ಇತ್ಯಾದಿಗಳಿಂದ ಬ್ರಹ್ಮನನ್ನು ಹೇಳಿ **ಸಪ್ತ ಪ್ರಾಣಃ ಪ್ರಭವಂತಿ ತಸ್ಮಾತ್** ಇತ್ಯಾದಿಗಳಿಂದ ಬ್ರಹ್ಮನಿಂದ ಸೃಷ್ಟಿಯನ್ನು ಹೇಳಿ **ಅಜಾಮೇಕಾಂ** ಎನ್ನುವ ಮಂತ್ರದಲ್ಲಿ ಬ್ರಹ್ಮನಿಂದ ಹುಟ್ಟಿದ ಅಜೆಯು ಹೇಳಲ್ಪಡುತ್ತದೆ ಎನ್ನುತ್ತಾರೆ. ಅದು ಅಯುಕ್ತವು. ಅಜಾಂ ಎನ್ನುವ ಮಂತ್ರದಲ್ಲಿ ಅಜಾ ಶಬ್ದವಾಚ್ಯವಾದುದಕ್ಕೆ ಬ್ರಹ್ಮಕಾರ್ಯತ್ವವು ತೋರಲಾರದು. ಮತ್ತು ಪ್ರಕೃತಿಯು ಕಾರ್ಯವಾದರೆ **ಗೌರನಾದ್ಯಂತವತೀ, ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ** ಇತ್ಯಾದಿ ಅನಾದಿತ್ವಪ್ರತಿಪಾದಕ ಶ್ರುತಿಸ್ಮೃತಿಗಳಿಂದ ವಿರೋಧವು. ಅಜಾತ್ವವೂ ವಿರುದ್ಧವಾಗುವುದು.

## ಅಧಿಕರಣ ಸಾರಾಂಶ

**ವಸಂತೇ ವಸಂತೇ ಜ್ಯೋತಿಷಾ ಯಜೇತ** ಎನ್ನುವ ವಾಕ್ಯದಲ್ಲಿ ಶ್ರುತಗಳಾದ ಜ್ಯೋತಿರಾದಿ ಶಬ್ದಗಳು ವಿಷ್ಣುವಾಚಕಗಳೋ ಕರ್ಮಾದಿ ವಾಚಕಗಳೋ ಎಂದು ಸಂದೇಹವು. ಜ್ಯೋತಿರಾದಿಶಬ್ದಗಳಿಗೆ ಜ್ಯೋತಿಷ್ಟೋಮಾದಿ ಕರ್ಮಾದಿಗಳಲ್ಲಿಯೇ ಪ್ರಸಿದ್ಧಿಯಿದ್ದುದರಿಂದ ಕರ್ಮಾದಿ ವಾಚಕಗಳೆಂದು ಪೂರ್ವಪಕ್ಷವು. ಪ್ರಸಿದ್ಧಿಯನ್ನು ಬಿಟ್ಟು ಬ್ರಹ್ಮವಾಚಕತ್ವವನ್ನು ಹೇಳಿದರೆ ಕರ್ಮ ಕರ್ಮಾಂಗಕ್ರಮ ದೇವತಾ ಕಾಲ ಅಧಿಕಾರ್ಯಾದಿ ಪ್ರಾಪಕವು ಇಲ್ಲದಿರುವುದರಿಂದ ನಿಯತವಾದ ಕರ್ಮಾನುಷ್ಠಾನಕ್ಕೆ ಲೋಪವು ಬರಬೇಕಾಗುವುದು. ಜ್ಯೋತಿಃಪರವಾಚ್ಯನಾದ ಈಶ್ವರನ ಸಂಬಂಧದಿಂದ ಕರ್ಮಾದಿಗಳಲ್ಲಿಯೂ ಜ್ಯೋತಿರಾದಿ ಶಬ್ದಗಳು ಇರುತ್ತವೆ ಎನ್ನುವುದು ಈಶ್ವರನಿಂದ ಇತರತ್ರ ಲಕ್ಷಣಾ ಬರಬೇಕಾಗುವುದರಿಂದ ಕೂಡಲಾರದು. ಮತ್ತು ಈಶ್ವರನಲ್ಲಿ ಅವುಗಳಿಗೆ ರೂಢಿಯು ಇಲ್ಲದಿರುವುದರಿಂದಲೂ ಗುಣಪೂರ್ತಿಯು ಇಲ್ಲವೆಂದಾಗಬೇಕಾಗುವುದರಿಂದಲೂ ಯೋಗವನ್ನೇ ಹೇಳಬೇಕಾಗುವುದು. ಆದುದರಿಂದಲೂ ಕರ್ಮದಲ್ಲಿ ರೂಢಿಯ ಪ್ರಬಲವು. ಸರ್ವಶಬ್ದವಾಚ್ಯತ್ವವು ಸಿದ್ಧಿಸುವುದಕ್ಕಾಗಿ ಜ್ಯೋತಿರಾದಿ ಪದಗಳ ಅವಯವಗಳಿಗೂ ಬ್ರಹ್ಮಪರತ್ವವನ್ನು ಹೇಳುವುದಾದರೆ ಸಮುದಾಯಕ್ಕೆ ತತ್ಪರತ್ವವು ಕೂಡದಿರುವುದರಿಂದ ಯೋಗವು ಕೂಡಲಾರದು ಎಂದು ಪೂರ್ವಪಕ್ಷವು ಬಂದರೆ ಹೀಗೆ ಸಿದ್ಧಾಂತ ಮಾಡಿರುವರು. **ತಂ ಯಚ್ಚತಂ ವರ್ಷಾಣ್ಯಭ್ಯಾರ್ಚತ್ ತಸ್ಮಾಚ್ಛತರ್ಚಿನಃ ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಏತಮೇವ ಸಂತಂ** ಇತ್ಯಾದಿಗಳಿಂದ ಉಪಲಕ್ಷಣವಾಗಿ ಶತರ್ಚ್ಯಾದಿ ಕೆಲವು ಶಬ್ದಗಳಿಗೆ ಮಹಾಯೋಗ ವಿದ್ವದ್ರೂಢಿಗಳಿಂದ ವಿಷ್ಣುಪರತ್ವವನ್ನು ಹೇಳಿ ಅಂತ್ಯದಲ್ಲಿ ತಾ ವಾ **ಏತಾಸ್ಸರ್ವಾ ಋಚಃ ಪ್ರಾಣ ಏವ** ಎಂದು ವಿಷ್ಣುವಿನಲ್ಲಿ ಸರ್ವಶಬ್ದ ಮುಖ್ಯಾರ್ಥತ್ವವನ್ನು ಹೇಳಿದ್ದರಿಂದ ಮಧ್ವಾದಿ ಶಬ್ದಗಳಿಗೆ ಜೇನುತುಪ್ಪ ಮೊದಲಾದವುಗಳಲ್ಲಿ ರೂಢಿಯನ್ನು ಬಿಡದೆ ಅದನ್ನು ಬಾಧಿಸದೆ **ಅಸಾವಾದಿತ್ಯೋ ದೇವ ಮಧು** ಇತ್ಯಾದಿಗಳಲ್ಲಿ ಮಹಾಯೋಗವೃತ್ತಿಯಿಂದ ಉಪಾಸನಕ್ಕಾಗಿ ಮಧ್ವಾದಿ ಶಬ್ದಾರ್ಥವನ್ನು ಹೇಳಿದಂತೆಯೇ ಜ್ಯೋತಿರಾದಿ ಪದಗಳಿಗೆ ಅನ್ಯತ್ರ ರೂಢಿವೃತ್ತಿಯನ್ನು ಬಾಧಿಸದೇನೇ ಮಹಾಯೋಗಾದಿ ವೃತ್ತಿಯಿಂದ ಈಶ್ವರಪರತ್ವವನ್ನು ಅಂಗೀಕರಿಸಿದ್ದರಿಂದ ಕರ್ಮಾದಿಗಳು ಸಿದ್ಧಿಸುವುದಿಲ್ಲವೆಂದಿಲ್ಲ. ಜ್ಯೋತಿರಾದಿ ಪದಗಳ ಅವಯವಗಳಿಗೆ ಅನ್ಯವಾಚಕತ್ವವನ್ನು

ಅಂಗೀಕರಿಸಿಯೇ ಸಮುದಾಯಕ್ಕೆ ಈಶ್ವರಪರತ್ವವನ್ನು ಅಂಗೀಕರಿಸಿ **ಜಾತಮೋತಂ ಹರೌ ಯಸ್ಮಾತ್ ಜ್ಯೋತಿಃ** ಇತ್ಯಾದ್ಯುಕ್ತವಾದ ಯೋಗವು ಕೂಡುವುದರಿಂದ ಜ್ಯೋತಿರಾದಿ ಶಬ್ದಮುಖ್ಯಾರ್ಥನು ಶ್ರೀಹರಿಯೇ. ॥ ಅಧಿ.೨ ॥

**ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು.**

## ೩. ನಸಂಖ್ಯೋಪಸಂಗ್ರಹಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬಹುತ್ವಸಂಖ್ಯೆಯುಳ್ಳ ವಸ್ತುವಾಚಕ ಶಬ್ದಗಳಿಗೂ ಆಧಾರಧೇಯ ವಾಚಕಶಬ್ದಗಳಿಗೂ ಸಮನ್ವಯವು ಮಾಡಲ್ಪಡುತ್ತದೆ—

### ಸೂತ್ರ ॥ ಓಂ ನ ಸಂಖ್ಯೋಪ ಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ಓಂ ॥ ೧೨ ॥

**ಸೂತ್ರಾರ್ಥ ॥** ಸಂಖ್ಯೋಪಸಂಗ್ರಹಾದಪಿ ವಿರೋಧಃ=ಯಸ್ಮಿನ್ ಇತ್ಯಾದಿಗಳಲ್ಲಿ ಸಂಕ್ಷೇಪತಃ ಬಹುತ್ವ ಸಂಖ್ಯಾವಿಶಿಷ್ಟಗಳಾದ ವಸ್ತುಗಳನ್ನು ಹೇಳಿದುದರಿಂದಲೂ, ಯಸ್ಮಿನ್ ಎಂದು ಆಧಾರಾಧೇಯ ಭಾವವು ಶ್ರುತವಾದುದರಿಂದಲೂ ಪ್ರಾಪ್ತವಾದ ಶ್ರೀಹರಿಗೆ ಅವಾವ ಶಬ್ದವಾಚ್ಯತ್ವವಿಲ್ಲವೆನ್ನುವ ಯಾವ ವಿರೋಧವೂ ಅದು, ನ=ಇಲ್ಲ (ಏಕೆಂದರೆ) ಅಪಿ=ಶ್ರೀಹರಿಯು ಒಬ್ಬನೇ ಆದಾಗ್ಯೂ ತನ್ನಲ್ಲಿ ಭೇದರಹಿತನಾದಾಗ್ಯೂ, ಆತನಿಗೆ, ನಾನಾಭಾವಾತ್=ಅನೇಕ ರೂಪಗಳು ಇದ್ದಪ್ರಯುಕ್ತ ಅತಿರೇಕಾಚ್ಚ=ಅಧಾರರೂಪಕ್ಕೆ ಅಧೇಯರೂಪಗಳಾದ ಆದರಿಂದ ಭೇದವಿದ್ದಪ್ರಯುಕ್ತವೂ.

**ಭಾಷ್ಯ ॥ ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ** (ಬೃ.ಉ.೬.೪.೧೭.)।
**ಇತ್ಯಾದಿಷು ಬಹುಸಂಖ್ಯೋಪಸಂಗ್ರಹೇऽಪಿ ನ ವಿರೋಧಃ ॥ ೧ ॥**

**ಭಾಷ್ಯಾರ್ಥ ॥ ಯಸ್ಮಿನ್ ಪಂಚ ಪಂಚಜನಾಃ (ತಮೇವಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋऽಮೃತಂ** ಎಂದು ಉತ್ತರಾರ್ಧವು) ಯಾವ ಶ್ರೀಹರಿಯಲ್ಲಿ **ಪ್ರಾಣಸ್ಯ ಪ್ರಾಣಂ** ಎಂದು ಹೇಳುವ ಚಕ್ಷುರಾದ್ಯಭಿಮಾನಿಗಳಾದ ಐವರು ಮೂಲಪ್ರಕೃತಿಯೂ ಕೂಡ ಆಶ್ರಿತರಾಗಿರುತ್ತಾರೋ (ಅಂತಹ ಶ್ರೀಹರಿಯನ್ನೇ ತಿಳಿಯುವೆನು.) ಯಾರ ಅನುಗ್ರಹದಿಂದ ಪ್ರಾಣಾದ್ಯಾಧಾರನಾದ ಬ್ರಹ್ಮನನ್ನು ತಿಳಿದವನು ಮುಕ್ತನಾಗುತ್ತಾನೆ. ಇತ್ಯಾದಿ ವಾಕ್ಯಗಳಲ್ಲಿ ಬಹುತ್ವಸಂಖ್ಯೆಯುಳ್ಳ ವಸ್ತುಗಳನ್ನು ಪಂಚ ಎನ್ನುವ ಪ್ರಾತಿಪದಿಕದಿಂದಲಾಗಲೀ **ಪಂಚಜನಾಃ** ಎನ್ನುವ ಬಹುವಚನಾಂತ ಒಂದು ಪದದಿಂದಲಾಗಲೀ ಸಂಕ್ಷೇಪದಿಂದ ಹೇಳಿದರೂ, ಒಂದರಲ್ಲಿ ಸರ್ವಥಾ ಕೂಡದಿರುವ **ಯಸ್ಮಿನ್** ಎಂದು ಆಧಾರಾಧೇಯ ಭಾವವನ್ನು ಹೇಳಿದ್ದರಿಂದಲೂ ವಿರೋಧವಿಲ್ಲ.

**ವಿಶೇಷಾಂಶ ॥ ಯಸ್ಮಿನ್** ಇತ್ಯಾದಿಗಳಲ್ಲಿ ಬಹುತ್ವ ಆಧಾರಾಧೇಯಭಾವಾದಿಗಳು, ಶ್ರುತಗಳಾದುದರಿಂದ ಶ್ರೀಹರಿಗೆ ಪಂಚಜನ ಆಕಾಶಾದಿ ಶಬ್ದವಾಚ್ಯತ್ವವೂ ಅನುಪಪನ್ನವಾಗುವುದಿಲ್ಲ

ಪೀಠಿಕೆ ॥ ಏಕೆ ವಿರೋಧವಿಲ್ಲವೆಂದರೆ—

ಭಾಷ್ಯ ॥ ತಸ್ಯೈವಾಕಾಶಾದಿಷು ನಾನಾಭಾವಾತ್ತದತಿರಿಕ್ತ ಸ್ವರೂಪ(ವ)ತ್ವಾಚ್ಚ ॥ ೧೨ ॥ ॥ ೨ ॥

ಭಾಷ್ಯಾರ್ಥ ॥ ತಸ್ಯೈವ=ಒಬ್ಬನೂ ಸ್ವಗತ ಭೇದಶೂನ್ಯನೂ ಆದ ಆ ಪರಮಾತ್ಮನಿಗೇನೇ ಪ್ರತಿಶರೀರದಲ್ಲಿ ಆಕಾಶಾದಿಗಳಲ್ಲಿ ಅನೇಕ ರೂಪಗಳು ಇದ್ದಪ್ರಯುಕ್ತ ಆಧಾರಭೂತವಾದ ಶರೀರನಿಯಾಮಕಭಗವದ್ರೂಪಕ್ಕೆ ಆಧೇಯಭೂತಗಳಾದ ಆಕಾಶಾದಿಗಳಲ್ಲಿ ಇರತಕ್ಕ ಆರು ರೂಪಗಳಿಂದ ಅಧಿಕ್ಯವಿದ್ದಪ್ರಯುಕ್ತವೂ ಭೇದವಿದ್ದ ಪ್ರಯುಕ್ತವೂ.

ವಿಶೇಷಾಂಶ ॥ ಆವಾವ ಶರೀರಾಂತರ್ಗತಗಳಾದ ನಿಯಮ್ಯಗಳಾದ ಆಕಾಶ ಪ್ರಾಣ ಮೊದಲಾದ ಪಂಚಜನಗಳಲ್ಲಿ ನಿಯಾಮಕವಾಗಿ ಇರತಕ್ಕ ಶ್ರೀಹರಿಗೆ ನಾನಾ ರೂಪಗಳು ನ್ಯಾಯಪ್ರಾಪ್ತಗಳಾಗಿವೆ. ಇದರಿಂದ ಒಬ್ಬನಲ್ಲಿ ಬಹುತ್ವ ಸಂಖ್ಯೆಯು ಅನುಪಪನ್ನವಲ್ಲವೆಂದುಕ್ತವಾಯ್ತು. ॥ ೧೨ ॥

ಪೀಠಿಕೆ ॥ ಪಂಚಜನ ಮೊದಲಾದ ಶಬ್ದವಾಚ್ಯಗಳು ಭಗವದ್ರೂಪಗಳು ಎನ್ನುವಲ್ಲಿ ವಿಶೇಷ ಹೇತುವಿರುತ್ತಿದ್ದರೆ ವಿಷ್ಣುವಿನಲ್ಲಿ ಬಹುತ್ವಾದಿಗಳು ಕೂಡುತ್ತವೆ ಎನ್ನುವ ಚಿಂತೆಯು ಯುಕ್ತವಾಗುತ್ತಿತ್ತು. ವಿಶೇಷ ಹೇತುವೇ ಇಲ್ಲ. ಸರ್ವೇ ವೇದಾಃ ಇದುಮೊದಲಾದ ಶ್ರುತ್ಯಂತರಗಳು ಸಾಧಾರಣಗಳಾಗಿವೆ. ಆದಕಾರಣ ಬಹುತ್ವಾದಿಗಳು ಕೂಡಿದರೂ ಶ್ರೀಹರಿಯು ಪಂಚಜನಾದಿಶಬ್ದವಾಚ್ಯನಲ್ಲ ಎನ್ನುವ ಶಂಕೆಯನ್ನು ಪರಿಹರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

ಭಾಷ್ಯ ॥ (ಪಂಚ) ಪಂಚಜನಾನಾಹ ॥ ೩ ॥

ಭಾಷ್ಯಾರ್ಥ ॥ ಸೂತ್ರಕಾರರು ಪಂಚಜನರನ್ನು ಹೇಳುತ್ತಾರೆ—

## ಸೂತ್ರ ॥ ಓಂ ಪ್ರಾಣಾದಯೋ ವಾಕ್ಯಶೇಷಾತ್ ಓಂ ॥ ೧೩ ॥

ಭಾಷ್ಯ ॥ ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚ ಕ್ಷುರುತ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಮನ ಇತಿ ವಾಕ್ಯಶೇಷಾತ್ ॥ ೧೩ ॥ ॥ ೪ ॥

ಭಾಷ್ಯಾರ್ಥ ॥ ಈ ಪಂಚಜನ ಶಬ್ದವಾಚ್ಯಗಳಾದ ಭಗವದ್ರೂಪವಿಶೇಷಗಳು, ಪ್ರಾಣಾದಯಃ= ಪ್ರಾಣಾದಿಗಳಲ್ಲಿದ್ದ ಪ್ರಾಣಾದಿಗಳಿಗೆ ಪ್ರಾಣತ್ವಾದಿಗಳನ್ನು ಕೊಡತಕ್ಕವುಗಳು. ಪ್ರಾಣಾದಿಗಳಿಗೆ ಪ್ರೇರಕಗಳು, ಪ್ರಾಣ ಮೊದಲಾದ ನಾಮವುಳ್ಳವುಗಳೂ ಆಗಿವೆ. ವಾಕ್ಯಶೇಷಾತ್=ಪ್ರಾಣಸ್ಯ= ಪ್ರಾಣನಿಗೆ, ಪ್ರಾಣಂ=ಪ್ರಾಣತ್ವವನ್ನು ಕೊಡತಕ್ಕುದು, ಉತ=ಮತ್ತು ಚಕ್ಷುಷಃ=ಚಕ್ಷುಸ್ಸಿಗೆ, ಚಕ್ಷುಃ= ದರ್ಶನಶಕ್ತಿಯನ್ನು ಕೊಡತಕ್ಕುದು, ಶ್ರೋತ್ರಸ್ಯ=ಶ್ರವಣೇಂದ್ರಿಯಕ್ಕೆ, ಶ್ರೋತ್ರಂ=ಶ್ರವಣಶಕ್ತಿಯನ್ನು ಕೊಡತಕ್ಕದು. ಅನ್ನಸ್ಯ=ಜ್ಯೋತಿಸ್ಸಿಗೆ, ಅನ್ನಂ=ಅನ್ನತ್ವವನ್ನು ಕೊಡತಕ್ಕುದು, ಮನಸಃ=ಮನಸ್ಸಿಗೆ, ಮನಃ=ಮನಸ್ತ್ವವನ್ನು ಕೊಡತಕ್ಕುದು, ಇತಿ=ಎನ್ನುವ ವಾಕ್ಯಶೇಷಾತ್=ವಾಕ್ಯಶೇಷದಿಂದ.

ವಿಶೇಷಾಂಶ ॥ ಪ್ರಾಣಾದಿಗಳಿಗೆ ಪ್ರಾಣತ್ವಾದಿಗಳನ್ನು ಕೊಡತಕ್ಕವುಗಳು ಭಗವದ್ರೂಪವಿಶೇಷ

ಗಳೇ ಇತರರಲ್ಲ. ವಿಶೇಷ ಹೇತುವಿಲ್ಲವೆಂದಲ್ಲ ಸ ಉ ಪ್ರಾಣಸ್ಯ ಪ್ರಾಣಃ ಎನ್ನುವ ತಳವಕಾರವಾಕ್ಯ ಶೇಷವಿದೆ. ಆದಕಾರಣ ಇಲ್ಲಿ ವಿಷ್ಣುಲಿಂಗವೆಂದು ಶ್ರುತ್ಯಂತರಸಿದ್ಧವಾದ ನಿರವಕಾಶವಾದ ಪ್ರಾಣಾದಿಗಳಿಗೆ ಪ್ರಾಣತ್ವಾದಿಗಳನ್ನು ಕೊಡುವಿಕೆ ರೂಪಲಿಂಗವು ಶ್ರುತವಾದಪ್ರಯುಕ್ತ ಶ್ರೀಹರಿಯೇ ಪಂಚಜನಶಬ್ದವಾಚ್ಯನು. ಷಷ್ಠೀನಿರ್ದಿಷ್ಟಪ್ರಾಣಾದಿಗಳಲ್ಲ. ಸರ್ವಶಬ್ದಸಮನ್ವಯ ವಿರೋಧವಿಲ್ಲ ॥ ೧೩. ॥

**ಪೀಠಿಕೆ ॥** ಹಾಗಾದರೆ-ಮಾಧ್ಯಂದಿನರ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಪ್ರಾಣಾದಿಗಳಿಗೆ ಪ್ರಾಣತ್ವಾದಿಗಳನ್ನು ಕೊಡತಕ್ಕವುಗಳು ವಿಷ್ಣುರೂಪಗಳಾದಾಗ್ಯೂ ಪಂಚಜನಶಬ್ದವಾಚ್ಯಗಳು ವಿಷ್ಣುರೂಪಗಳಲ್ಲ. ಏಕೆಂದರೆ— ಕಾಣ್ವರ ವಾಕ್ಯಶೇಷದಲ್ಲಿ ನಾಲ್ಕನ್ನೇ ಹೇಳಿದ್ದರಿಂದ ಈ ವಾಕ್ಯವು **ಯಸ್ಮಿನ್ ಪಂಚ ಪಂಚಜನಾಃ** ಎನ್ನುವ ಪೂರ್ವವಾಕ್ಯದಿಂದ ಭಿನ್ನವಿಷಯಕವು. ಇಲ್ಲಿಯೂ ಪ್ರಾಣಸ್ಯ ಪ್ರಾಣಂ ಎನ್ನುವ ವಾಕ್ಯಶೇಷಕ್ಕೆ **ಯಸ್ಮಿನ್ ಪಂಚ** ಎನ್ನುವುದರಿಂದ ಭಿನ್ನಾರ್ಥತ್ವವನ್ನು ಅವಶ್ಯವಾಗಿ ಒಡಂಬಡಬೇಕು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಪಠನಮಾಡಿ ಶ್ರುತಿಯನ್ನುದಾಹರಿಸುತ್ತಾ ಅಪೇಕ್ಷಿತವಾದ ಪದವನ್ನು ಅಧ್ಯಾಹರ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಜ್ಯೋತಿಷೈಕೇಷಾಮಸತ್ಯನ್ನೇ ಓಂ ॥ ೧೪ ॥

**ಸೂತ್ರಾರ್ಥ ॥** ಅನ್ನಸ್ಯಾನ್ನಂ ಎನ್ನುವ ವಾಕ್ಯವು ಕಾಣ್ವರ ಪಾಠದಲ್ಲಿ ಇಲ್ಲದಿದ್ದರೂ **ತದ್ದೇವಾ ಜ್ಯೋತಿಷಾಂ ಜ್ಯೋತಿಃ** ಎಂದು ಪೂರ್ವವಾಕ್ಯದಲ್ಲಿ ಪಠಿತವಾದ ಜ್ಯೋತಿಸ್ಸಿನಿಂದ ಪಂಚಕವನ್ನು ಪೂರ್ಣೀಕರಿಸಬೇಕು.

### ಭಾಷ್ಯ ॥ ತದ್ದೇವಾ ಜ್ಯೋತಿಷಾಂ ಜ್ಯೋತಿಃ (ಬೃ.ಉ.೬.೪.೧೬) । ಇತ್ಯನೇನ ಕಾಣ್ವಾನಾಂ ಪಂಚಕಂ (ಪಂಚತ್ವಂ) ॥ ೧೪ ॥ ಅಧಿ. ೩ ॥ ॥ ೫ ॥

**ಭಾಷ್ಯಾರ್ಥ ॥** ಕಾಣ್ವರ ವಾಕ್ಯಶೇಷದಲ್ಲಿ ನಾಲ್ಕನ್ನೇ ಹೇಳಿದ್ದರಿಂದ ಅದಕ್ಕೆ ಮೊದಲು ಹೇಳಿದಕ್ಕಿಂತ ಭಿನ್ನಾರ್ಥತ್ವವು ಇದ್ದಪ್ರಯುಕ್ತ ಏಕವಾಕ್ಯತ್ವಾಭಾವರೂಪವಿರೋಧವಿಲ್ಲ. ಏಕೇಷಾಂ=ಮಾಧ್ಯಂದಿನರ ಶಾಖೆಯಲ್ಲಿ ಐದನ್ನೂ ಹೇಳಿರುತ್ತಾರೆ. ಕಾಣ್ವರ ಶಾಖೆಯಲ್ಲಿ ಹೇಳದಿರುವುದರಿಂದ ವಾಕ್ಯಭೇದವು ಅವಶ್ಯಕವು ಎಂದು ಹೇಳಕೂಡದು. ಏಕೆಂದರೆ, ಏಕೇಷಾಂ ಕಾಣ್ವಾನಾಂ=ಕಾಣ್ವರ (ಶಾಖೆಯಲ್ಲಿ) ಅನ್ನೇ=ಅನ್ನಕ್ಕೆ ಅನ್ನತ್ವವನ್ನು ಕೊಡತಕ್ಕ ರೂಪವು, ಅಸತಿ=ಹೇಳಲ್ಪಡದೆ ಇದ್ದರೂ, ತದ್ದೇವಾಃ ಇತ್ಯನೇನ=ತದ್ದೇವಾಃ ಎನ್ನುವ ಪೂರ್ವೋಕ್ತವಾದ ವಾಕ್ಯದಿಂದ, ಜ್ಯೋತಿಷಾಂ=ಆದಿತ್ಯ ಮೊದಲಾದ ಜ್ಯೋತಿಸ್ಸುಗಳಿಗೆ ಜ್ಯೋತಿಷ್ಟ್ವವನ್ನು ಕೊಡುವ ಜ್ಯೋತಿರ್ನಾಮಕರೂಪದಿಂದ ಕೂಡಿಕೊಂಡು, ಪಂಚಕಂ=ಐದು, (ಹೇಳಲ್ಪಟ್ಟಿದೆ.)

**ವಿಶೇಷಾಂಶ ॥** (೧) ಇಲ್ಲಿ ಎರಡು ಶಾಖೆಗಳಲ್ಲಿಯೂ ಒಂದು ವಿಧವಾದ ಪಂಚಕವು ಆಗಬೇಕೆನ್ನುವ ಉದ್ದೇಶದಿಂದ ಜ್ಯೋತಿಶ್ಶಬ್ದಕ್ಕೂ ಅನ್ನಶಬ್ದಕ್ಕೂ ಏಕಾರ್ಥತ್ವವು. ಅಥವಾ ಅವುಗಳಿಗೆ ಭಿನ್ನವಾದ ಅರ್ಥವು ಬರುವುದಕ್ಕಾಗಿ ಶಾಖಾಭೇದದಿಂದ ಎರಡು ಪಂಚಕಗಳನ್ನು ಹೇಳಿದ್ದು ಎಂದು

ಟೀಕಾಭಿಪ್ರಾಯವು. (೨) ಯಸ್ಮಾದರ್ವಾಕ್ಸಂವತ್ಸರೋಽಹೋಭಿಃ ಪರಿವರ್ತತೇ। ತದ್ದೇವಾ ಜ್ಯೋತಿಷಾಂ ಜ್ಯೋತಿರ್ಹಾಯುರ್ಹೋಪಾಸತೇಽಮೃತಂ ॥ (ಬೃ.೬.೪.೧೬.) ಅಹೋಭಿಃ=ದಿವಸಗಳಿಂದ, ಸಂವತ್ಸರಃ=ಸಂವತ್ಸರವು, ಯಸ್ಮಾತ್=ಯಾವ ಕಾರಣದಿಂದ, ಅರ್ವಾಕ್ ಪರಿವರ್ತತೇ=ತಿರುಗುತ್ತದೋ, ಅಂದರೆ, ಯಾವುದರಲ್ಲಿ ತನ್ನ ವ್ಯಾಪಾರವಾದ ಆಯುರ್ಹ್ರಾಸಾದಿಗಳನ್ನು ಮಾಡಲಿಕ್ಕೆ ಸಮರ್ಥ ವಾಗುವುದಿಲ್ಲವೋ, ತತ್=ಅಂತಹ, ಜ್ಯೋತಿಷಾಂ=ಆದಿತ್ಯಾದಿಗಳಿಗೆ, ಜ್ಯೋತಿಃ=ಜ್ಯೋತಿಷ್ಟ್ವವನ್ನು ಕೊಡತಕ್ಕ, ಆಯುಃ=ಆಯುಸ್ಸನ್ನು ಕೊಡತಕ್ಕ, ಅಮೃತಂ=ನಿತ್ಯಮುಕ್ತವಾದ, ಬ್ರಹ್ಮಸ್ವರೂಪವನ್ನು ದೇವಾಃ=ದೇವತೆಗಳು, ಉಪಾಸತೇ=ಉಪಾಸನಾ ಮಾಡುತ್ತಾರೆ, ಹ=ಪ್ರಸಿದ್ಧವು.

## ಮಾಯಾವಾದಿರೀತ್ಯಾ

ವಿಚಾರ ॥ **ಯಸ್ಮಿನ್ ಪಂಚ ಪಂಚಜನಾಃ ಆಕಾಶಶ್ಚ ಪ್ರತಿಷ್ಠಿತಃ** ಎನ್ನುವ ಮಂತ್ರವು ಸಾಂಖ್ಯರಿಗೆ ಅಭಿಮತವಾದ ಪ್ರಧಾನಾದಿತತ್ವಪರವೋ ಅರ್ಥಾಂತರಪರವೋ ಎಂದು ಸಂದೇಹಪಟ್ಟು ಪೂರ್ವೋತ್ತರಪಕ್ಷಗಳನ್ನು ಹೇಳಿರುವರು. ಹೇಗೆಂದರೆ—**ಯಸ್ಮಿನ್ ಪಂಚ ಪಂಚಜನಾಃ** ಎನ್ನುವ ವಾಕ್ಯದಲ್ಲಿ ಸಮಾಸವನ್ನು ಹೊಂದಿ **ಪಂಚಜನಾಃ** ಎನ್ನುವ ಶಬ್ದದಿಂದ ಹೇಳಿದ **ಪಂಚಾನಾಂ ಜನಾನಾಂ ಸಮಾಹಾರಃ ಪಂಚಜನಾಃ** ಎನ್ನುವ ಸಮಾಹಾರಗಳಿಗೆ ಸಮಾಸದಲ್ಲಿ ಸೇರದೆ ಇದ್ದ ಮತ್ತೊಂದು ಪಂಚಶಬ್ದದಿಂದ ಪಂಚತ್ವಸಂಖ್ಯಾನ್ವಯವು ತೋರುತ್ತದೆ. ಐವಂಚ ಐದು ಐದಲಿ ಇಪ್ಪತ್ತೈದು ಎಂದು ತೋರುವುದು. **ಜಾಯಂತೇ ಇತಿ ಜನಾಃ** ಎಂದು ಕಲ್ಪತರು ಹೇಳಿದ ಯೋಗದಿಂದ ಜನಶಬ್ದವು ತತ್ವಪರವು. ಆದಕಾರಣ ಇಪ್ಪತ್ತೈದು ತತ್ತ್ವಗಳನ್ನು ಹೇಳಿದ್ದರಿಂದ ಪ್ರಧಾನಾದಿಗಳು ಶಬ್ದಬೋಧ್ಯವು. ತಥಾಚ ಅಶಬ್ದತ್ವವನ್ನು ಹೇಳಿದ್ದು ಅಯುಕ್ತವು, ಎಂದು ಪೂರ್ವಪಕ್ಷವು ಬಂದರೆ—ಹೀಗೆ ಸಿದ್ಧಾಂತಮಾಡಿರುವರು. ಶ್ರುತಿಸಿದ್ಧವಾದ ಸಂಖ್ಯೆಯಿಂದ ಸ್ಮೃತಿಸಿದ್ಧಗಳನ್ನು ಉಪಸಂಗ್ರಹ ಮಾಡಿದ್ದರಿಂದಲೂ ಪ್ರಧಾನಾದಿಗಳಿಗೆ ಶಬ್ದಬೋಧ್ಯತ್ವವಿಲ್ಲ ಏಕೆಂದರೆ, ನಾನಾಭಾವಾತ್=ಈ ಇಪ್ಪತ್ತೈದು ತತ್ವಗಳು ನಾನಾವಿಧಗಳಾಗಿವೆ. ಇವುಗಳಿಗೆ ಒಂದು ಸಾಧಾರಣಧರ್ಮವಿಲ್ಲ. ಇಪ್ಪತ್ತೈದರ ಮಧ್ಯದಲ್ಲಿ ಐದೈದು ಸಂಖ್ಯೆಗಳು ಸರ್ವಥಾ ನಿವೇಶವನ್ನು ಹೊಂದಲಾರವು. ಒಂದು ಪ್ರಬಲಕಾರಣವಿಲ್ಲದೆ ನಾನಾಭೂತಗಳಲ್ಲಿ ದ್ವಿತ್ವಾದಿಸಂಖ್ಯೆಯು ಕೂಡಲಾರದು. ಆತ್ಮ ಆಕಾಶಗಳು ಇಪ್ಪತ್ತೈದು ಸಂಖ್ಯೆಯಲ್ಲಿ ಸೇರುವುದಿಲ್ಲ ಸೇರುವುದಾದರೆ ಯಸ್ಮಿನ್ ಎನ್ನುವ ಅಧಿಕರಣೋಕ್ತಿಯಿಂದ ವಿರೋಧವು. ಆಕಾಶವನ್ನು ಪ್ರತ್ಯೇಕ ಹೇಳಿದ್ದು ಅಯುಕ್ತವಾಗುವುದು ಎಂದು ಮಾಯಾವಾದಿಗಳು ಹೇಳುವರು. ಅದು ಅಯುಕ್ತವು. **ಪಂಚವಿಂಶತಿ ತತ್ವಾನಿ ಶ್ರುತಿಸ್ಮೃತಿಸಮಾಜತಃ। ಪ್ರಮಿತಾನ್ಯಪಲಪ್ಯಂತೇ ಕಥಂ ವೈದಿಕಮಾನಿನಾ।** ಇಪ್ಪತ್ತೈದು (೨೫) ತತ್ತ್ವಗಳೇ ಅಪ್ರಾಮಾಣಿಕಗಳೋ, ಅಥವಾ ಈ ವಾಕ್ಯವು ಇಪ್ಪತ್ತೈದು ತತ್ತ್ವಪರಗಳಲ್ಲವೋ, ೧ನೇದ್ದು ಹೇಳಕೂಡದು. (೧) **ತಂ ಷಡ್ವಿಂಶಮಿತಿ ಪ್ರಾಹುಃ,** (೨) **ತನ್ಮಾತ್ರಾಣ** (ಶಬ್ದಾದಿಗಳು) **ಭೂತಾದೌಲೀಯಂ ತೇ ಭೂತಾದಿರ್ಮಹತಿ ಮಹಾನವ್ಯಕ್ತೇ ಲೀಯತೇ** (೩) **ಯಸ್ಯಾಹಂಕಾರಃ ಶರೀರಂ ಯೋಽಹಂಕಾರಮಂತರೇ ಸಂಚರನ್ನಮಹಂಕಾರೋ ನ ವೇದ** (೪) **ಯಸ್ಯ ಬುದ್ಧಿಃ ಶರೀರಂ ಯೋ ಬುದ್ಧಿಮಂತರೇ ಸಂಚರನ್ಯಂ ಬುದ್ಧಿರ್ನ ವೇದ** (೫) **ಯಸ್ಯ ಚಿತ್ತಂ ಶರೀರಂ ಯಶ್ಚಿತ್ತಮಂತರೇ ಸಂಚರನ್ ಯಂ ಚಿತ್ತಂ ನ ವೇದ** (೬) **ಯಸ್ಯಾವ್ಯಕ್ತಂ ಶರೀರಂ ಯೋಽವ್ಯಕ್ತಮಂತರೇ ಸಂಚರನ್ ಯಮವ್ಯಕ್ತಂ ನ**

**ವೇದ ।** ಇದುಮೊದಲಾದ ಶ್ರುತಿ (ಸುಬಾಲೋಪನಿಷತ್)ಗಳಿಂದಲೂ, (೧) **ಪಂಚಭಿಃ** (ಪೃಥಿವ್ಯಾದಿ ಐದು ಭೂತಗಳಿಂದ) **ಪಂಚಭಿಃ** (ಶಬ್ದಾದಿಗಳಿಂದ) **ಬ್ರಹ್ಮ ಚತುರ್ಭಿಃ** (ಮಹದಹಂಕಾರ ಮನೋಬುದ್ಧಿಗಳಿಂದ) **ದಶಭಿಸ್ತಥಾ** (ದಶೇಂದ್ರಿಯಗಳಿಂದಲೂ) (ಬ್ರಹ್ಮನು ಪೂರಿತನು.) **ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ** (ಈ ೨೪ ಗಣವನ್ನು ಪ್ರಧಾನಕಾರ್ಯವನ್ನಾಗಿ ಹೇಳುತ್ತಾರೆ.) (೨) **ತ್ರಿವಿಧೋऽಯಮಹಂಕಾರೋ ಮಹತ್ತತ್ತ್ವಾದಜಾಯತ** ಇದುಮೊದಲಾದ ಸ್ಮೃತಿಗಳಿಂದಲೂ ೨೫ ತತ್ತ್ವಗಳು ಪ್ರಮಿತಗಳಾಗಿವೆ. ೨ನೇದ್ದೂ ಅಂದರೆ ಈ ವಾಕ್ಯವು ೨೫ ತತ್ತ್ವಪರಗಳಿಲ್ಲವೆಂದೂ ಹೇಳಕೂಡದು. ನಮಗೆ ವಿರೋಧವಾಗುವುದಿಲ್ಲ. **ಯಸ್ಮಿನ್** ಎನ್ನುವ ವಾಕ್ಯಾಪ್ರತಿಪಾದ್ಯತ್ವಮಾತ್ರದಿಂದ ಪ್ರಧಾನಾದಿಗಳಿಗೆ ಅಶಬ್ದತ್ವವು ಸಿದ್ಧಿಸುವುದಿಲ್ಲ. **ನಾನಾಭಾವಾತ್** ಎಂದು ಹೇಳಿದ್ದೂ ಅಯುಕ್ತವು. ಪೃಥಿವ್ಯಾದಿಗಳಲ್ಲಿ ಭೂತತ್ವವೂ, ಶಬ್ದಾದಿಗಳಲ್ಲಿ ತನ್ಮಾತ್ರತ್ವವೂ ಪ್ರಾಣಾದಿಗಳಲ್ಲಿ ಬಾಹ್ಯಜ್ಞಾನೇಂದ್ರಿಯತ್ವವೂ ವಾಗಾದಿಗಳಲ್ಲಿ ಕರ್ಮೇಂದ್ರಿಯತ್ವವೂ ಮಹದಹಂಕಾರ ಮನಃ ಪ್ರಕೃತಿ ಪುರುಷರಲ್ಲಿ ಈ ವಿಂಶತ್ಯನ್ಯತ್ವವೂ ಎನ್ನುವ ಉಪಸಂಗ್ರಾಹಕಧರ್ಮವು ಇದೆ. ಇಲ್ಲವಾದರೆ **ಪಂಚಭಿಃ** ಇತ್ಯಾದಿ ಸ್ಮಾರ್ತ ನಿರ್ದೇಶವೂ ಕೂಡದೆ ಹೋಗುವುದು.

## ಅಧಿಕರಣ ಸಾರಾಂಶ

ಕಾಣ್ವಶ್ರುತಿಯಲ್ಲಿ **ತದೇವ ಜ್ಯೋತಿಷಾಂ ಜ್ಯೋತಿರಾಹುರ್ಹೋಪಾಸತೇऽಮೃತಂ । ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ। ತಮೇವಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಮೃತಂ** ಎಂದು ಶ್ರುತವಾದ ಪಂಚತ್ವಯುಕ್ತವಾದ ಜನಾದಿ ಶಬ್ದ ಮುಖ್ಯಾರ್ಥವು ೧. ವಾಕ್ಯಶೇಷದಲ್ಲಿ ಷಷ್ಠ್ಯಂತವಾದ ಪ್ರಾಣ ಚಕ್ಷುಃ ಶ್ರೋತ್ರ ಮನೋ ವಾಗಾದಿ ಶಬ್ದದಿಂದ ಹೇಳಲ್ಪಟ್ಟವುಗಳೋ, ೨. ಅಥವಾ ದ್ವಿತೀಯಾಂತವಾದ ಆವಾವ ಶಬ್ದದಿಂದ ಹೇಳಲ್ಪಟ್ಟ ಶ್ರೀಹರಿಯ ಸ್ವರೂಪಗಳೋ ಎಂದು ಸಂದೇಹವು. ವಿಷ್ಣುವಿನಿಂದ ಇತರರಾದ ಪ್ರಾಣಾದಿಗಳೇ ಪಂಚಜನಾದಿ ಶಬ್ದವಾಚ್ಯರು ಎಂದು ಪೂರ್ವಪಕ್ಷವು. **ಪಂಚಜನಾಃ** ಎನ್ನುವುದು ಬಹುತ್ವವಿಶಿಷ್ಟವಾದ ಅರ್ಥವನ್ನು ಹೇಳತಕ್ಕುದು. ಅದು **ಏಕಮೇವಾದ್ವಿತೀಯಂ** ಎನ್ನುವ ಉಕ್ತಿಯಿಂದ ವಿರೋಧವು ಬರುವುದರಿಂದ ಈಶ್ವರನಲ್ಲಿ ಕೂಡಲಾರದು. ರಾಜನು ಬಹುಜನರನ್ನು ವಶೀಕರಿಸಿಕೊಂಡವನಾದಾಗ್ಯೂ ಆತನಲ್ಲಿ ಬಹುತ್ವವಾಚಕವಾದ ಶಬ್ದವು ಕಾಣದೆ ಇರುವುದರಿಂದ ತದಧೀನತ್ವ, ನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ. ಮತ್ತು **ತಮೇಮನ್ಯ ಆತ್ಮಾನಂ** ಎಂದು ಆತ್ಮಪದ ಸಾಮಾನಾಧಿಕರಣ್ಯವಿದ್ದುದರಿಂದ **ಯಸ್ಮಿನ್** ಎನ್ನುವ ಶಬ್ದವಾಚ್ಯವು ಬ್ರಹ್ಮವಾದುದರಿಂದ ಅದನ್ನಾಶ್ರಯಿಸಿರುವ ಪಂಚಜನರಿಗೂ ಆಕಾಶಕ್ಕೂ ಬ್ರಹ್ಮತ್ವವಿದ್ದರೆ ಒಂದಕ್ಕೇನೇ ಆಧಾರಾಧೇಯ ಭಾವವು ಕೂಡಲಾರದು. ಹೀಗೆ ಪೂರ್ವಪಕ್ಷವು ಬಂದರೆ— **ಪ್ರಾಣಸ್ಯ ಪ್ರಾಣಂ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಮನಃ** ಎನ್ನುವ ವಾಕ್ಯಶೇಷದಲ್ಲಿ ದ್ವಿತೀಯಾಂತವಾಗಿ ಶ್ರುತಗಳಾದವುಗಳಿಗೆ ಪ್ರಾಣಾದಿ ನಿಯಂತೃತ್ವವ ಮೊದಲಾದ ವಿಷ್ಣುಲಿಂಗವು ಶ್ರುತವಾದುದರಿಂದ ಅವುಗಳು ವಿಷ್ಣುರೂಪಗಳು. ಅವುಗಳಿಗೆ ಷಷ್ಠ್ಯಂತ ನಿರ್ದಿಷ್ಟಗಳಾದ ಪ್ರಾಣಾದಿಗಳಿಕ್ಕಿಂತ ಶಬ್ದತಃ ಅರ್ಥತಶ್ಚ ಪ್ರಾಧಾನ್ಯವು ಇದೆ. **ನಾಮಾನಿ ಸರ್ವಾಣಿ, ತಾವಾ ಏತಾಃ** ಇತ್ಯಾದ್ಯುಕ್ತವಾದ ಸರ್ವಶಬ್ದವಾಚ್ಯತ್ವ, ಮುಮುಕ್ಷು ಜ್ಞೇಯತ್ವ ಮೊದಲಾದ ಹಿಂದೆ ಹೇಳಿದ ಹೇತುಗಳಿಂದಲೂ

ಒಬ್ಬನಿಗೂ ಬಹುರೂಪತ್ವವು ಕೂಡುವುದರಿಂದ ಪಂಚತ್ವ ಸಂಖ್ಯೆಯೂ ವಿಶೇಷ ಬಲದಿಂದ ಯಸ್ಮಿನ್ ಎಂದು ನಿರ್ದಿಷ್ಟವಾದ ಶರೀರಸ್ವರೂಪಕ್ಕೂ ಪಂಚಜನಾದಿ ರೂಪಗಳಿಗೂ ಆಧಾರಾಧೇಯಭಾವವು ಕೂಡುವುದು. ಮಾಧ್ಯಂದಿನ ಶಾಖೆಯಲ್ಲಿದ್ದಂತೆಯೇ ಕಾಣ್ವಶ್ರುತಿಯಲ್ಲಿ ಅನ್ನಾಖ್ಯ ರೂಪವನ್ನು ಹೇಳದ ಇದ್ದರೂ ಜ್ಯೋತಿಸ್ಸನ್ನು ಹೇಳಿದ್ದರಿಂದ ಪಂಚತ್ವವು ಕೂಡುವುದರಿಂದ ವಾಕ್ಯಶೇಷದಲ್ಲಿದ್ದ ದ್ವಿತೀಯಾಂತ ಪ್ರಾಣಾದಿ ಶಬ್ದವಾಚ್ಯ ಈಶ್ವರರೂಪ ವಿಶೇಷಗಳೇ ಪಂಚಜನ ಶಬ್ದವಾಚ್ಯಗಳು. **ದ್ವಿತೀಯಾಂತವಿನಿರ್ದಿಷ್ಟಂ ಪ್ರಧಾನಂ ಪ್ರಾಣಪೂರ್ವಕಂ। ಅರ್ಥತಃ ಶಬ್ದತಶ್ಚೈವ ನ ತು ಷಷ್ಠ್ಯಂತಶಬ್ದಿತಂ ॥ ಆಧಾರಾಧೇಯಭಾವೋ ಹಿ ಭೇದಾಭಾವೇऽಪಿ ಯುಜ್ಯತೇ । ಕಾಲಃ ಸದಾऽಸ್ತಿ ದೇಶೋऽಸ್ತಿ ಸರ್ವತ್ರೇತ್ಯಾದಿ ಭಾನತಃ ॥ ಅಧಿ.೩. ॥**

**ನಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು.**

## ೪ ಆಕಾಶಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಅವಾಂತರಕಾರಣವಾಚ್ಯಗಳಾದ ಆಕಾಶಾದಿ ಶಬ್ದಗಳಿಗೆ ಸಮನ್ವಯವನ್ನು ಮಾಡುವುದರಿಂದ ಶಾಸ್ತ್ರಾದಿಸಂಗತಿಯು ಇದೆ. ಇಲ್ಲಿಯೂ **ತತ್ತು ಸಮನ್ವಯಾತ್** ಎಂದು ಹೇಳಿದ ಸರ್ವ ಶಬ್ದಸಮನ್ವಯವು ಕೂಡುವುದಿಲ್ಲ. ಏಕೆಂದರೆ— ಅವಾಂತರಕಾರಣವಾಚ್ಯಗಳಾದ ಆಕಾಶಾದಿ ಶಬ್ದಗಳಿಂದ ವಿಷ್ಣುವಿನಿಂದ ಇತರವಾದ ವಸ್ತುವೇ ಹೇಳಲ್ಪಡುತ್ತದೆ, ವಿಷ್ಣುವಲ್ಲ. ವಿಷ್ಣುವಿನಲ್ಲಿ ಕಾರ್ಯತ್ವವು ಕೂಡಲಾರದು. ಸ್ವಕಾರ್ಯತ್ವವು ಸುತರಾಂ ಕೂಡಲಾರದು. ಎಂದಾಶಂಕಿಸಿದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅವಾಂತರಕಾರಣತ್ವೇನಾಪಿ ಸ ಏವೋಚ್ಯತೇ । ಇತಿ ವಕ್ತಿ ॥ ೧ ॥**

ಭಾಷ್ಯಾರ್ಥ ॥ ಕಾರ್ಯತ್ವೇ ಸತಿ ಕಾರಣತ್ವಂ ಅವಾಂತರಕಾರಣತ್ವಂ=ಕಾರ್ಯವಾಗಿಕೊಂಡು ಇದ್ದು ಕಾರಣವಾದುದು ಅವಾಂತರಕಾರಣವು. ಆ ಶ್ರೀಹರಿಯೇ ಮೂಲಕಾರಣವಾಚಕವಾದ ಆತ್ಮಶಬ್ದದಿಂದ ಮಾತ್ರ ಹೇಳಲ್ಪಡುವುದಲ್ಲ, ಮತ್ತೆ ಅವಾಂತರಕಾರಣವಾಗಿಯೂ (ಅವಾಂತರಕಾರಣ ವಾಚಕಗಳಾದ ಆಕಾಶಾದಿಶಬ್ದಗಳಿಂದಲೂ ಕೂಡ) ವಿಷ್ಣುವೇ ಮುಖ್ಯವಾಗಿ ಹೇಳಲ್ಪಡುತ್ತಾನೆ. (ಭೂತಾದಿಗಳು ಹೇಳಲ್ಪಡುವುದಿಲ್ಲ) ಎಂದು (ಸೂತ್ರಕಾರರು) ಹೇಳುತ್ತಾರೆ. ಅಥವಾ ಅವಾಂತರ ಕಾರಣಗಳಿಗೆ ನಿಯಾಮಕನಾಗಿ ತಾನೂ ಅವಾಂತರ ಕಾರಣೀಭೂತನಾಗಿಯೇ ಹೇಳಲ್ಪಡುತ್ತಾನೆ.

**ಸೂತ್ರ ॥ ಓಂ ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ಓಂ ॥ ೧೪ ॥**

ಸೂತ್ರಾರ್ಥ ॥ ಕೇವಲ ಮೂಲಕಾರಣವಾಚಕವಾದ ಆತ್ಮಶಬ್ದದಿಂದಲೇ ಹೇಳಲ್ಪಡುವುದಿಲ್ಲ ಮತ್ತೆ ಅವಾಂತರಕಾರಣವಾಗಿಯೂ ಅವಾಂತರಕಾರಣವಾಚ್ಯಗಳಾದ ಆಕಾಶಾದಿಶಬ್ದಗಳಿಂದಲೂ ಆ

ವಿಷ್ಣುವೇ ಹೇಳಲ್ಪಡುತ್ತಾನೆ. (ಭೂತಾದಿಗಳಲ್ಲ) ಉಕ್ತೇಃನಾಮಾನಿ ಸರ್ವಾಣಿ ಇದುಮೊದಲಾದ ಶ್ರುತಿಯಿಂದಲೇ, (ಕಾರ್ಯಕಾರಣಭಾವವಿರೋಧವೆನ್ನಕೂಡದು.) (ಏಕೆಂದರೆ) ಆಕಾಶಾದಿಷುಃ ಆಕಾಶ ಮೊದಲಾದವುಗಳಲ್ಲಿ ಕಾರಣತ್ವೇನ ಚಃಅವಾಂತರಕಾರಣರೂಪದಿಂದ (ಶ್ರೀಹರಿಯೇ ಇದ್ದಾನೆ.) (ಆಕಾಶಾದಿಗಳು ಹುಟ್ಟುವಾಗ ಅದರಲ್ಲಿನ ಶ್ರೀಹರಿಗೆ ಅಭಿವ್ಯಕ್ತರೂಪವಾದ ಉತ್ಪತ್ತಿಯು ಅವಶ್ಯವಾಗಿ ಇರಬೇಕಾಗಿರುವುದರಿಂದ ಕಾರ್ಯತ್ವವೂ, ಪೂರ್ವಪೂರ್ವದ್ದು ಉತ್ತರಾಭಿವ್ಯಕ್ತಿಗೆ ಅಂದರೆ ವಾಯ್ವಾದಿಗಳ ಸ್ವರೂಪಾಭಿವ್ಯಕ್ತಿಗೆ ಕಾರಣವಾಗಿರುವುದರಿಂದ ಕಾರಣತ್ವವೂ ಸಂಗತವಾಗುವುದು.) (ಶ್ರೀಹರಿಯು ಆಕಾಶಾದಿಗಳಲ್ಲಿ ಇದ್ದಾನೆನ್ನುವುದು ಅಸಿದ್ಧವೆನ್ನಕೂಡದು. ಯ **ಆಕಾಶೇ ತಿಷ್ಠನ್** ಇತ್ಯಾದಿ ಶ್ರುತಿಗಳಲ್ಲಿ ಶ್ರೀಹರಿಯು ಆಕಾಶಾದಿಗಳಲ್ಲಿದ್ದಾನೆಂದು ಹೇಳಿದೆ.) (ಅಲ್ಲಿಯೂ ವಿಷ್ಣುವೆಂದು ಹೇಗೆ ಸಿದ್ಧಿಸುತ್ತದೆ ಎಂದರೆ—) ಯಥಾವ್ಯಪದಿಷ್ಟೋಕ್ತೇಃಸಯೋಽತಃ ಇತ್ಯಾದಿ ಶ್ರುತ್ಯಂತರಗಳಲ್ಲಿ ಶ್ರೀಹರಿಯು ಯಾವ ಪ್ರಕಾರದಿಂದ ಹೇಳಲ್ಪಟ್ಟಿದ್ದಾನೋ, ಅದೇ ಪ್ರಕಾರ ಅವಿದಿತತ್ವ ಮೊದಲಾದ ಪ್ರಕಾರದಿಂದ ಯುಕ್ತನಾದ ಶ್ರೀಹರಿಯು ಆಕಾಶಾದಿಗಳಲ್ಲಿ ಯಮಾಕಾಶೋ ನ ವೇದ ಇತ್ಯಾದಿಗಳಿಂದ ಉಕ್ತನಾಗಿದ್ದಾನೆ.

**ಭಾಷ್ಯ ॥ ಆಕಾಶಾದಿಷ್ವವಾಂತರಕಾರಣತ್ವೇನ ಸ ಏವ ಸ್ಥಿತಃ । ಯಥಾವ್ಯಪದಿಷ್ಟಸ್ಯೈವ ಪರಸ್ಯ ಯ ಆಕಾಶೇ ತಿಷ್ಠನ್** (ಬೃ.ಉ.೫.೭.೧೨.)**। ಇತ್ಯಾದಿನಾ ಆಕಾಶಾದಿಷು ಉಕ್ತೇಃ ॥ ೧೫ ॥ ಅಧಿ. ೪ ॥** **॥ ೨ ॥**

**ಭಾಷ್ಯಾರ್ಥ ॥** ಆಕಾಶ ಮೊದಲಾದ ಭೂತಗಳಲ್ಲಿ ಕಾರ್ಯರೂಪದಿಂದಲೂ, ಕಾರಣರೂಪ ದಿಂದಲೂ ಆ ಶ್ರೀಹರಿಯೇ ಇದ್ದಾನೆ. ಯಥಾವ್ಯಪದಿಷ್ಟಸ್ಯಃವ್ಯಪದಿಷ್ಟಪ್ರಕಾರಮನತಿಕ್ರಾಂತಃ ಯಥಾವ್ಯಪದಿಷ್ಟಃ, ಅಥವಾ ಶ್ರುತ್ಯಂತರವ್ಯಪದಿಷ್ಟಾನುರೂಪಂ ಯಥಾವ್ಯಪದಿಷ್ಟಂ, ತಥಾಚ, ಐತರೇಯದಲ್ಲಿ **ಸ ಯೋಽತತೋಽಶ್ರುತಃ** ಇತ್ಯಾದಿಗಳಲ್ಲಿ ಪರಮಾತ್ಮನು ಯಾವ ಪ್ರಕಾರದಿಂದ ಶ್ರುತನಾಗಿದ್ದಾನೋ, ಹಾಗೆಯೇ ಶ್ರುತನಾದ, ಪರಸ್ಯಃಪರಮಾತ್ಮನಿಗೆ, ಯಃಯಾರು, ಆಕಾಶೇಃ ಆಕಾಶದಲ್ಲಿ ತಿಷ್ಠನ್ಃಇರುತ್ತಾನೋ, ಇತ್ಯಾದಿನಾಃ**ಯಮಾಕಾಶೋ ನ ವೇದ ಯೋ ವಾಯೌ ತಿಷ್ಠನ್** ಇದುಮೊದಲಾದ ವಾಕ್ಯದಿಂದ ಆಕಾಶಾದಿಷುಃಆಕಾಶ ಮೊದಲಾದವುಗಳಲ್ಲಿ ಉಕ್ತೇಃಸ್ಥಿತಿಯನ್ನು ಹೇಳಿದ್ದರಿಂದ.

**ವಿಶೇಷಾಂಶ ॥** ಆಕಾಶಾದಿಗಳಲ್ಲಿ ಅಂತರ್ಗತನಾಗಿ ತನಗೆ ಅಭಿವ್ಯಕ್ತಿಯಿರುವುದರಿಂದ ಕಾರ್ಯತ್ವವು ವಾಯ್ವಾದಿಗಳಲ್ಲಿರತಕ್ಕ ಸ್ವರೂಪದ ಅಭಿವ್ಯಕ್ತಿಗೆ ಹೇತುವಾಗಿರುವುದರಿಂದ ಕಾರಣತ್ವವು. ಹೀಗೆ ಅವಾಂತರ ಕಾರಣವಾಚಕಗಳಾದ ಆಕಾಶಾದಿಶಬ್ದಗಳಿಂದ ಶ್ರೀಹರಿಯೇ ಮುಖ್ಯವಾಗಿ ಹೇಳಲ್ಪಡುತ್ತಾನೆ. ॥ ೧೫ ॥

## ಮಾಯಾವಾದಿರೀತ್ಯಾ

ವಿಚಾರ ॥ ವೇದಾಂತಗಳಲ್ಲಿ ಕೆಲವುಕಡೆ **ಆತ್ಮನ ಆಕಾಶಃ ಸಂಭೂತಃ** ಎಂದು ಆಕಾಶ ಮೊದಲು ಗೊಂಡು ಸೃಷ್ಟಿಯು ಹೇಳಲ್ಪಟ್ಟಿದೆ. ಕೆಲವುಕಡೆ **ತತ್ತೇಜೋಽಸೃಜತ** ಎಂದು ತೇಜಸ್ಸನ್ನು ಮೊದಲುಗೊಂಡು

ಸೃಷ್ಟಿಯು ಹೇಳಲ್ಪಟ್ಟಿದೆ. ತಥಾಚ ವೇದಾಂತಗಳಿಗೆ ವಿರೋಧವು ಪ್ರಾಪ್ತವಾಯಿತೆಂದರೆ ಕಾರ್ಯಗಳಾದ ಆಕಾಶಾದಿಗಳಲ್ಲಿಯೇ ಸೃಷ್ಟಿಕ್ರಮಾದಿಗಳಲ್ಲಿ ವಿರೋಧವು. ಕಾರಣತ್ವವಿಷಯದಲ್ಲಿ ವಿರೋಧವಿಲ್ಲ. ಯಥಾವ್ಯಪದಿಷ್ಟೋಕ್ತೇಃ-ಹೇಗೆ ಒಂದೇ ವೇದಾಂತದಲ್ಲಿ ಚೇತನನು ಕಾರಣನೆಂದು **ಸೋಽಕಾಮಯತ ಬಹುಃ ಸ್ಯಾಂ** ಎಂದು ಹೇಳಲ್ಪಟ್ಟಿದ್ದಾನೋ ಹಾಗೆಯೇ **ತದೈಕ್ಷತ ತತ್ತೇಜೋಽಸೃಜತ** ಎಂದು ವೇದಾಂತಾಂತರಗಳಲ್ಲಿಯೂ ಹೇಳಲ್ಪಟ್ಟಿದೆ ಎಂದು ಸಿದ್ಧಾಂತವು. ಏವಂಚ ಸೂತ್ರದಲ್ಲಿ ಕಾರಣತ್ವೇನ ಎನ್ನುವುದನ್ನು ವಿಚ್ಛೇದಮಾಡಿ ಸಪ್ತಮ್ಯಂತವಾಗಿಯೂ ವಿಚ್ಛೇದಮಾಡದೆ ತೃತೀಯಾಂತವಾಗಿಯೂ ವ್ಯಾಖ್ಯಾನಮಾಡತಕ್ಕದು ಎನ್ನುವರು. ಅದು ಅಯುಕ್ತವು. ಸೂತ್ರದಲ್ಲಿದ್ದ ಚ ಶಬ್ದಕ್ಕೆ ತು ಶಬ್ದಾರ್ಥತ್ವವೂ ಕಾರಣತ್ವೇನ ಎನ್ನುವುದಕ್ಕೆ ವಿಚ್ಛೇದ ಅವಿಚ್ಛೇದಗಳಿಂದ ಉಭಯಪರತ್ವವೆನ್ನುವುದೂ ಕ್ಲಿಷ್ಟವಾಗಿದೆ. ಆಕಾಶಾದಿಷು ಎನ್ನುವುದಕ್ಕೆ ಅನ್ವಯಕ್ಕಾಗಿ ಸೃಷ್ಟಿಕ್ರಮಾದಿದ್ವಾರಕವಾದ ವಿಗಾನಶಬ್ದವನ್ನು ಅಧ್ಯಾಹಾರ ಮಾಡಬೇಕಾಗುವುದು. **ಅಧ್ಯಾಯಸಂಗತೇ ಪಾದಸಂಗತೇರಪ್ಯಭಾವತಃ । ಪೂರ್ವಪಕ್ಷಾನುತ್ಥಿತೇಶ್ಚ ಸಿದ್ಧಾಂತಸ್ಯಾಪ್ಯಯೋಗತಃ ॥** ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ **ತದ್ದೇದಂ ತರ್ಹ್ಯವ್ಯಾಕೃತಮಾಸೀತ್ ಅಸದ್ವಾ ಇದಮಗ್ರ ಆಸೀತ್** ಇತ್ಯಾದಿ ವಾಕ್ಯಗಳು ಪ್ರಧಾನಪರಗಳೆಂದು ಪೂರ್ವಪಕ್ಷ ಮಾಡಿಕೊಂಡು ಬ್ರಹ್ಮಪರಗಳೆಂದು ಸಿದ್ಧಾಂತವು ಎಂದು ರಾಮಾನುಜಾಚಾರ್ಯರು ಹೇಳುವರು. ಅದು ಅಯುಕ್ತವು. ಪೂರ್ವಪಕ್ಷವೇ ಹುಟ್ಟಲಾರದು. ಹೇಗೆಂದರೆ—ಅವ್ಯಾಕೃತಗಳಾದ ಅಸದಾದಿ ಶಬ್ದಗಳಿಗೆ ಪ್ರಧಾನದಲ್ಲಿ ರೂಢಿಯಿಲ್ಲ. ಯೋಗವೃತ್ತಿಯಾಗಲೀ ಗೌಣೀವೃತ್ತಿಯಾಗಲೀ ಪ್ರಧಾನದಲ್ಲಿ ಕೂಡುವಂತೆ ಬ್ರಹ್ಮನಲ್ಲಿಯೂ ಕೂಡಬಹುದು. ನಿರವಕಾಶಗಳಾದ ಪ್ರಧಾನಲಿಂಗಾದಿಗಳು ಇಲ್ಲ. ಮತ್ತೆ ಈಕ್ಷತ್ಯಧಿಕರಣನ್ಯಾಯದಿಂದ ಚೇತನಕ್ಕೇನೇ ಕಾರಣತ್ವವು ನಿರ್ಣಯವಾಗುವುದರಿಂದ ಅಸದಾದಿ ಶಬ್ದಗಳಿಗೆ ಚೇತನಪರತ್ವವೇ ನ್ಯಾಯವು. ಪಾದಸಂಗತಿಯು ಇಲ್ಲವೆನ್ನುವುದು ಸ್ಪಷ್ಟವೇ. **ಸ್ಪಷ್ಟಜೀವಾದಿಲಿಂಗ ಪ್ರತಿಪಾದನಛಾಯಾನುಸಾರೀಣಿ ವಾಕ್ಯಾನಿ ಚತುರ್ಥೇ ವಿಚಾರ್ಯಂತೇ** ಎಂದು ಅವರು ಹೇಳಿರುವುದರಿಂದ **ತದ್ದೇದಂ ತರ್ಹ್ಯವ್ಯಾಕೃತಮಾಸೀತ್** ಇದುಮೊದಲಾದ ವಾಕ್ಯಕ್ಕೆ **ಮಹತಃ ಪರಮವ್ಯಕ್ತಂ** ಇತ್ಯಾದಿಗಳಂತೆ ಪ್ರಧಾನವನ್ನು ಪ್ರತಿಪಾದಿಸುವ ಛಾಯಾನುಸಾರಿತ್ವವು ಇಲ್ಲ.

## ಅಧಿಕರಣ ಸಾರಾಂಶ

ತೈತ್ತಿರೀಯದಲ್ಲಿ **ಆತ್ಮನಃ ಆಕಾಶಃ ಸಂಭೂತಃ ಆಕಾಶಾದ್ವಾಯುಃ** ಇತ್ಯಾದಿ ವಾಕ್ಯದಲ್ಲಿ ಕಾರ್ಯಕಾರಣಗಳಾಗಿ ಶ್ರುತಗಳಾದ ಆಕಾಶಾದಿ ಶಬ್ದಗಳು (೧) ಮುಖ್ಯವಾಗಿ ವಿಷ್ಣುವಾಚಕಗಳೋ, (೨) ಅಥವಾ ಭೂತಾದಿ ವಾಚಕಗಳೋ ಎಂದು ಸಂದೇಹವು. ನ ಜಾಯತೇ ನ ಮ್ರಿಯತೇ ಇತ್ಯಾದಿ ಶ್ರುತಿಗಳಿಂದ ಅಕಾರ್ಯನಾದ ಬ್ರಹ್ಮನಲ್ಲಿ ಕಾರ್ಯತ್ವವೇ ವಿರುದ್ಧವಾದುದರಿಂದ ಸ್ವಕಾರ್ಯತ್ವವು ಸುತರಾಂ ವಿರುದ್ಧವು. ಅಲ್ಲದೆ ವ್ಯಂಗ್ಯ ವ್ಯಂಜಕ ಭಾವರೂಪವಾದ ಕಾರ್ಯಕಾರಣಭಾವವೂ ಒಂದರಲ್ಲಿ ವಿರುದ್ಧವು. ಪುತ್ರೋತ್ಪತ್ತಿಯು ತಂದೆಯ ಅಧೀನವಾದಾಗ್ಯೂ ತಂದೆಯಲ್ಲಿ ಜಾತ ಎನ್ನುವ

ಪದಪ್ರಯೋಗವು ಕಾಣದೆ ಇರುವುದರಿಂದ ತದಧೀನ ನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ. ನಾಮಾನಿ ಸರ್ವಾಣಿ ಎನ್ನುವ ಶ್ರುತಿಗೂ ಅವಶ್ಯವಾಗಿ ಸಂಕೋಚ ಮಾಡಬೇಕು. ಆಕಾಶಾದಿಗಳ ಉತ್ಪತ್ತಿಯು ಸಿದ್ಧಿಸದೆ ಹೋಗಬೇಕಾಗುವುದು. ಆಕಾಶಾದಿ ಶಬ್ದಗಳು ಅನ್ಯವಾಚಕಗಳೇ ಎಂದು ಪೂರ್ವಪಕ್ಷ ಮಾಡಿಕೊಂಡು ಹೀಗೆ ಸಿದ್ಧಾಂತ ಮಾಡಿರುವರು. ಹೇಗೆಂದರೆ—ಆಕಾಶಾದಿನಿಯಾಮಕ ಭಗವದ್ರೂಪಗಳು ಯ ಆಕಾಶೇ ತಿಷ್ಠನ್ ಇತ್ಯಾದಿ ಶ್ರುತಿಗಳಿಂದ ಅಕಾಶಾದಿಗಳಲ್ಲಿವೆ. ಆ ರೂಪಗಳಿಗೆ ಬಹುತ್ವವಿದ್ದುದರಿಂದ ವ್ಯಕ್ತಿ ಅವ್ಯಕ್ತ್ಯಪೇಕ್ಷೆಯಿಂದ ಪೌರ್ವಾಪರ್ಯವು ಕೂಡುವುದು ವಾಯ್ವಾದಿಗಳಿಗೆ ಉತ್ಪತ್ತಿಯಾಗುವಾಗ ಅದರಲ್ಲಿದ್ದ ರೂಪಕ್ಕೆ ವ್ಯಕ್ತಿಯಾಗುವುದರಿಂದ ವ್ಯಂಗ್ಯ ವ್ಯಂಜಕಭಾವರೂಪವಾದ ಕಾರ್ಯ ಕಾರಣಭಾವವೂ ಕೂಡುತ್ತದೆ. ನಾಮಾನಿ ಇತ್ಯಾದಿ ಶ್ರುತಿಗಳಿಗೆ ಸಂಕೋಚವು ಕೂಡದೆ ಇರುವುದರಿಂದ ಹಿಂದೆ ಹೇಳಿದ ಸಾಧಕಗಳೆಲ್ಲವೂ ಇವೆ. ಅನ್ಯತ್ರ ಆಕಾಶಾದಿಗಳಲ್ಲಿ ರೂಢಿಯನ್ನು ಅಂಗೀಕರಿಸಿದ್ದರಿಂದ ಆಕಾಶಾದ್ಯುತ್ಪತ್ತಿಯೂ ಅಸಿದ್ಧವಲ್ಲ. ಆದಕಾರಣ ಆಕಾಶಾದಿಶಬ್ದ ಮುಖ್ಯಾರ್ಥನು ಹರಿಯೇ ಎಂದು ಸಿದ್ಧಾಂತವು. ॥ ಅಧಿ.೪ ॥

**ಆಕಾಶಾಧಿಕರಣವು ಸಮಾಪ್ತವಾಯಿತು.**

## ೫ ಸಮಾಕರ್ಷಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಶ್ರೀವಿಷ್ಣುವಿನಲ್ಲಿ ರೀತ್ಯಂತರಿಂದ ಹಿಂದೆ ಹೇಳಿದ ಸರ್ವಶಬ್ದ ಸಮನ್ವಯವು ಕೂಡುವುದಿಲ್ಲವೆಂದಾಶಂಕಿಸಿಕೊಂಡು ಪರಿಹರಿಸುತ್ತಾರೆ. (೨) ಯದ್ಯಪಿ ಈ ಸಮಾಕರ್ಷಾತ್ ಎಂದು ಮೊದಲುಗೊಂಡು ಎಂಟು ಸೂತ್ರಗಳು ಪೂರ್ವಾಧಿಕರಣದ ಶೇಷವಾಗಿ ತತ್ತ್ವಪ್ರದೀಪದಲ್ಲಿ ವ್ಯಾಖ್ಯಾನ ಮಾಡಿರುವುದರಿಂದಲೂ, ಭಾಷ್ಯದಲ್ಲಿ ಪ್ರತ್ಯೇಕವಾಗಿ ಸಮನ್ವೇತವ್ಯವಾದ ಶಬ್ದಾಂತರವನ್ನು ಹೇಳದಿರುವುದರಿಂದಲೂ ಹಾಗೆಯೇ ವ್ಯಾಖ್ಯಾನಮಾಡುವುದು ಯುಕ್ತವು. ಆದಾಗ್ಯೂ ಇದು ಪ್ರತ್ಯೇಕ ನ್ಯಾಯಸೂಚಕವಾದುದರಿಂದ ಟೀಕಾದಲ್ಲಿ ಪ್ರತ್ಯೇಕ ಅಧಿಕರಣವೆಂದು ವ್ಯಾಖ್ಯಾತವಾಗಿದೆ. (೨) ಶ್ರುತ್ಯಾದಿ ಸಂಗತಿಗಳನ್ನು ತೋರಿಸುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಸರ್ವಶಬ್ದಾನಾಂ ಪರಮಾತ್ಮ (ಪರಮ) ವಾಚಕತ್ವೇ ಕಥಮನ್ಯತ್ರ ವ್ಯವಹಾರಃ ।**
**ಇತಿ । ಅತೋSಬ್ರವೀತ್ ॥ ೧ ॥**

ಭಾಷ್ಯಾರ್ಥ ॥ (ತತ್ತು ಸಮನ್ವಯಾತ್ ಎಂದು ಹೇಳಿದಪ್ರಕಾರ) ಸರ್ವ ಶಬ್ದಗಳಿಗೆ (ಮುಖ್ಯವಾಗಿ ಕೇವಲ) ಭಗವದ್ವಾಚಕತ್ವವಿರುವುದಾದರೆ ಶ್ರೀಹರಿಯಿಂದ ಇತರವಾದ ಜಗತ್ತಿನಲ್ಲಿ ಶಬ್ದಪ್ರಯೋಗರೂಪವಾದ ಅಥವಾ ಹಾನಾದಿರೂಪವಾದ ವ್ಯವಹಾರವು ಹೇಗೆ? (ಕೂಡುತ್ತದೆ.) (ಸರ್ವಥಾ ಕೂಡಲಾರದು. ಎಂದರೆ ಸೂತ್ರಕಾರರು ಹೇಳುತ್ತಾರೆ.)

ವಿಶೇಷಾಂಶ ॥ ಎಲ್ಲಾ ಶಬ್ದಗಳು ಮುಖ್ಯವಾಗಿ ಶ್ರೀಹರಿಯನ್ನು ಮಾತ್ರ ಹೇಳತಕ್ಕವುಗಳು

ಎಂದಾದರೆ ಅನ್ಯತ್ರ ವ್ಯವಹಾರವೇ ಇಲ್ಲವೆಂದಾಗಬೇಕಾಗುವುದು. ಅದು ಅನಿಷ್ಟವಾಗಿದೆ. ಆದಕಾರಣ ಶ್ರೀಹರಿಯೇ ಮುಖ್ಯವಾಗಿ ಸರ್ವಶಬ್ದವಾಚ್ಯನು ಎನ್ನುವ ಅವಧಾರಣವು ಕೂಡಲಾರದು.

## ಸೂತ್ರ ॥ ಓಂ ಸಮಾಕರ್ಷಾತ್ ಓಂ ॥ ೧೬ ॥

**ಭಾಷ್ಯ ॥ ಪರಮಾತ್ಮವಾಚಿನಃ ಶಬ್ದಾ ಅನ್ಯತ್ರ ಸಮಾಕೃಷ್ಯ ವ್ಯವಹ್ರಿಯಂತೇ ॥ ೨ ॥**

**ಭಾಷ್ಯಾರ್ಥ ॥** ಅನ್ಯಾಪೇಕ್ಷೆಯಿಲ್ಲದೆ ಮುಖ್ಯವೃತ್ತಿಯಿಂದ ಕೇವಲ ಪರಮಾತ್ಮನನ್ನು ಹೇಳುವ ಶಬ್ದಗಳು ಜಗತ್ತಿನಲ್ಲಿ ಸಮಾಕರ್ಷಾತ್=ಶ್ರೀಹರಿಯಿಂದ ಸೆಳೆದು, ವ್ಯವಹರಿಸಲ್ಪಡುತ್ತವೆ.

**ವಿಶೇಷಾಂಶ ॥** ಸರ್ವಶಬ್ದಗಳಿಗೆ ಭಗವದ್ವಾಚಕತ್ವವಿದ್ದರೂ ಜಗತ್ತಿನಲ್ಲಿ ವ್ಯವಹಾರವು ಕೂಡುವುದಿಲ್ಲವೆನ್ನಕೂಡದು. ಏಕೆಂದರೆ—ಜಗತ್ತಿನಲ್ಲಿಯೂ ವ್ಯವಹಾರಸಿದ್ಧಿಗಾಗಿ ರೂಢಗಳಾಗಿ ಸಂಕೇತಿತಗಳಾಗಿವೆ. ಹಾಗಾಗಿ ಎರಡನ್ನೂ ಮುಖ್ಯವೃತ್ತಿಯಿಂದ ಹೇಳುವುದಾದರೆ—ಸಾಮ್ಯವು ಬರಬೇಕಾಗುವುದು ಎಂದು ಹೇಳಕೂಡದು. ಏಕೆಂದರೆ ಎರಡರಲ್ಲಿಯೂ ಅನ್ಯೋನ್ಯ ನಿರಪೇಕ್ಷವಾದ ವೃತ್ತಿಯು ಇರುವುದಿಲ್ಲ. ಅದೂ ಹೇಗೆಂದರೆ—ಜಗತ್ತನ್ನು ಹೇಳುವುದಕ್ಕಾಗಿ ಸ್ವತಃ ಮುಖ್ಯವೃತ್ತಿಯಿಂದ ಕೇವಲ ಭಗವಂತನನ್ನೇ ಹೇಳುವ ಶಬ್ದಗಳನ್ನು ಶ್ರೀಹರಿಯಿಂದ ಸೆಳೆಕೊಂಡು ಜಗತ್ತಿನಲ್ಲಿ ರೂಢವಾಗಿ ಸಂಕೇತ ಮಾಡಿಕೊಂಡು ವ್ಯವಹರಿಸುವರು, ಅಂತೂ ಜಗತ್ತಿನಲ್ಲಿ ಪರಮ ಮುಖ್ಯವೃತ್ತಿಯಿಂದ ಭಿನ್ನವಾದ ಕೇವಲ ಮುಖ್ಯವೃತ್ತಿಯಿಂದ ಇರುವುದೆಂದು ಅಂಗೀಕೃತವಾಗಿದೆ.

**ಪೀಠಿಕೆ ॥** ಮುಖ್ಯವೃತ್ತಿಯಲ್ಲಿ ದ್ವೈವಿಧ್ಯವನ್ನು ಏಕೆ ಕಲ್ಪಿಸುವುದು? ಎರಡರಲ್ಲಿಯೂ ಅಕ್ಷ ಹರಿ ಮೊದಲಾದ ಶಬ್ದಗಳಂತೆಯೇ ಪರಸ್ಪರ ನಿರಪೇಕ್ಷವಾಗಿಯೇ ಶಬ್ದವೃತ್ತಿಯನ್ನು ಏಕೆ ಅಂಗೀಕರಿಸುವುದಿಲ್ಲ. ಎಂದರೆ—

**ಭಾಷ್ಯ ॥ ಪರಸ್ಯ ವಾಚಕಾಃ ಶಬ್ದಾಃ ಸಮಾಕೃಷ್ಯೇತರೇಷ್ವಪಿ । ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ ॥ ಇತಿ ಹಿ ಪಾದ್ಮೇ ॥ ೧೬ ॥ ॥ ೩ ॥**

**ಭಾಷ್ಯಾರ್ಥ ॥** (ಸತತಂ=) ಅನಾದಿಕಾಲದಿಂದ ವಿಚ್ಛೇದವಿಲ್ಲದೆ ಸ್ವಾಭಾವಿಕವಾಗಿ, ಶ್ರೀಹರಿಗೆ ವಾಚಕಗಳಾಗಿ ಇರುವ (ಶ್ರೀಹರಿಯನ್ನು ಹೇಳುವ) ಎಲ್ಲಾ ಶಬ್ದಗಳೂ (ಸಮಾಕೃಷ್ಯ=) ಪರಮಾತ್ಮ ಸಂಬಂಧದಿಂದ ಸಂಗ್ರಹಿಸಿ, ಹಾನಾದಿರೂಪ ಲೌಕಿಕವ್ಯವಹಾರ, ಸೂಕ್ತಾದಿರೂಪ ವೈದಿಕವ್ಯವಹಾರ ಸಿದ್ಧಿಯನ್ನು ಅನುಸರಿಸಿ ಅದಕ್ಕಾಗಿ ಇತರ ಪದಾರ್ಥಗಳಲ್ಲಿಯೂ ಕೂಡ (ವೈದಿಕರಿಂದ) ಕೇವಲ ರೂಢವಾಗಿ ಅಂಗೀಕರಿಸಲ್ಪಡುತ್ತವೆ. ಹೀಗೆ ಪಾದ್ಮಪುರಾಣದಲ್ಲಿ ಹೇಳಿರುವುದರಿಂದ (ಪರಸ್ಪರ ಅಪೇಕ್ಷೆ ಇಲ್ಲದೇನೇ ಶಬ್ದವೃತ್ತಿಯನ್ನು ಅಂಗೀಕರಿಸಬೇಕು.) ॥ ೧೬ ॥

**ಪೀಠಿಕೆ ॥** (ಮುಖ್ಯವಾಗಿ ಶ್ರೀಹರಿಯನ್ನು ಹೇಳತಕ್ಕ ಶಬ್ದಗಳು ಶ್ರೀಹರಿಯಿಂದ ಇತರ ಕಡೆಯಲ್ಲಿ ಸಮಾಕರ್ಷಣಮಾಡಿ ಪ್ರಯೋಗಿಸಲ್ಪಡುವುದಾದರೆ ಆ ಶಬ್ದಗಳು ಮುಖ್ಯಾರ್ಥನಾದ ಪರಮಾತ್ಮನನ್ನೇ ಹೇಳುತ್ತವೆ ಎಂದು ಪ್ರಸಿದ್ಧಿಯು ಇರಬೇಕಾಗುವುದು. ತಥಾಚ) ಆ ಶಬ್ದಗಳು ಅಮುಖ್ಯಾರ್ಥವಾದ ಜಗತ್ತನ್ನು ಹೇಳುತ್ತದೆ ಎಂದು ಪ್ರಸಿದ್ಧಿಯು ಹೇಗೆ ಬರುವುದು? (ಹೇಗೂ ಬರಲಾರದು.) ತಥಾಚ

ಪ್ರಸಿದ್ಧ್ಯನ್ಯಥಾನುಪಪತ್ತಿಯಿಂದ ಶ್ರೀಹರಿಯಿಂದ ಇತರವಾದುದೇ ಮುಖ್ಯವಾಚ್ಯವೆಂದು ಕಲ್ಪಿಸಲ್ಪಡಬೇಕು.) (ಹೀಗೆ ಶಂಕೆಯು ಬಂದರೆ ಸೂತ್ರಕಾರರು ಹೇಳುವರು)—

## ಸೂತ್ರ ॥ ಓಂ ಜಗದ್ವಾಚಿತ್ವಾತ್ ಓಂ ॥ ೧೭ ॥

ಸೂತ್ರಾರ್ಥ ॥ ಸರ್ವಶಬ್ದಗಳಿಗೆ ಜಗದ್ವಾಚಿತ್ವಾತ್=ಜಗತ್ತಿನಲ್ಲಿ ಅಜ್ಞ ಜನರ ವ್ಯವಹಾರವಿದ್ದ ಪ್ರಯುಕ್ತ ಜಗತ್ತನ್ನು ಹೇಳುತ್ತದೆ ಎನ್ನುವ ಜ್ಞಾನದಿಂದ ಜಗತ್ತಿನಲ್ಲಿಯೇ ವ್ಯುತ್ಪತ್ತಿಯು ಇದ್ದುದರಿಂದ (ಸರ್ವ ಶಬ್ದಗಳಿಗೆ ಜಗತ್ತಿನಲ್ಲಿ ಪ್ರಸಿದ್ಧಿಯು ಕೂಡುತ್ತದೆ.)

**ಭಾಷ್ಯ ॥ ಜಗತಿ (ಹಿ) ವ್ಯವಹಾರೋ ಲೋಕಸ್ಯ । ನ ತು ಪರಮಾತ್ಮನಿ ತಥಾ । ಅತೋ ಜಗತಿ ಪ್ರಸಿದ್ಧಿಃ ಶಬ್ದಾನಾಂ ॥ ೧೭ ॥ ॥ ೫ ॥**

ಭಾಷ್ಯಾರ್ಥ ॥ (ಯಾವ ಕಾರಣದಿಂದ ಬಾಲಕರಿಗೆ ಚಿತ್ರದಲ್ಲಿ ಬರೆಯಲ್ಪಟ್ಟ ಸಿಂಹ ಮೊದಲಾದವುಗಳಲ್ಲಿ ಇದ್ದಂತೆಯೇ.) (ಲೋಕಸ್ಯ=)ಮುಖ್ಯಾರ್ಥವನ್ನು ತಿಳಿಯದಿರುವ ಜನರಿಗೆ, ಜಗತ್ತಿನಲ್ಲಿಯೇ ವ್ಯವಹಾರಃ=ಬಹುಧಾ ಶಬ್ದಪ್ರಯೋಗವು ಇದೆ. ಹಾಗೆ ಪರಮಾತ್ಮನಲ್ಲಿ ಬಹುಲವ್ಯವಹಾರವು ಇಲ್ಲ. ಆದಕಾರಣ ಅದನ್ನು ಕೇಳುವವರಿಗೆ ಶಬ್ದಗಳಿಗೆ ಜಗತ್ತಿನಲ್ಲಿಯೇ ವಾಚಕತ್ವಪ್ರಸಿದ್ಧಿಯು (ಜಗದ್ವಾಚಿತ್ವವ್ಯವಹಾರವು) ಯುಕ್ತವಾಗುತ್ತದೆ. ಪರಮಾತ್ಮನಲ್ಲಿ ಅಲ್ಲ. ಆದಕಾರಣ ಇತರವಾದುದೇ ಮುಖ್ಯವಾಚ್ಯವೆಂದು ಕಲ್ಪಿಸಕೂಡದು. ॥ ೧೭ ॥

ಪೀಠಿಕೆ ॥ ವಿಷ್ಣುವಿಗೇನೇ ಮುಖ್ಯವಾಗಿ ಶಬ್ದವಾಚ್ಯತ್ವವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಜೀವಮುಖ್ಯಪ್ರಾಣಲಿಂಗಾದಿತಿ ಚೇತ್ತದ್ವ್ಯಾಖ್ಯಾತಂ ಓಂ ॥೧೮॥

ಸೂತ್ರಾರ್ಥ ॥ ಜೀವಮುಖ್ಯಪ್ರಾಣಲಿಂಗಾತ್=ಅಸ್ಯ ಯದೇಕಾಂ ಇತ್ಯಾದಿ ಶ್ರುತಿಗಳಿಂದ ಅವಗತವಾದ, ಜೀವಮುಖ್ಯಪ್ರಾಣರ ಲಿಂಗದಿಂದ ಸರ್ವವಸ್ತುವಿಗೂ ತದಧೀನತ್ವಾಖ್ಯನಿಮಿತ್ತದಿಂದ (ಜೀವಮುಖ್ಯಪ್ರಾಣರಿಗೂ ಕೂಡ ಆವಾವ ಶಬ್ದಗಳಿಂದ ಮುಖ್ಯವಾಚ್ಯತ್ವವು ಬರಬೇಕಾಗುವುದು.) ಇತಿಚೇತ್=ಎಂದರೆ, ನ=ಅಲ್ಲ (ಏಕೆಂದರೆ) ತತ್=ಉಪಾಸಾತ್ರೈವಿಧ್ಯಾತ್ ಎನ್ನುವುದರಿಂದ ಆವಾವ ಲಿಂಗವನ್ನು ಹೇಳತಕ್ಕ ಶ್ರುತಿಸಮುದಾಯವು ವ್ಯಾಖ್ಯಾತಂ=ಅಂತರ್ಯಾಮಿಯಾದ ಭಗವದ್ವಿಷಯಕ ವಾಗಿ ವ್ಯಾಖ್ಯಾನಮಾಡಲ್ಪಟ್ಟಿದೆ. ಮತ್ತು ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾಗಚ್ಛ ತ್ವಂ ಮಮ ತೇಜೋಽಂಶಸಂಭವಂ ಎನ್ನುವ ಸ್ಮೃತಿಯಿಂದಲೂ ಆ ಲಿಂಗಸಮುದಾಯವು ಭಗವತ್ಸಂಬಂಧಿಯೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ಪೀಠಿಕೆ ॥ ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ತದಧೀನತ್ವಾತ್ತಚ್ಛಬ್ದವಾಚ್ಯತ್ವಮಿತ್ಯುಕ್ತಂ । ತಜ್ಜೀವಮುಖ್ಯಪ್ರಾಣಯೋರ್ಲಿಂಗಂ। ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ (ಅಥ ಯಾನ್**

**ಜೀವೋ ಜಹಾತಿ ಸಾ ಶುಷ್ಯತಿ)। (ಛಾ.ಉ.೬.೧೧.೨)। ವಾಯುನಾಹಿ ಸರ್ವೇ ಲೋಕಾ ನೇನೀಯಂತೇ । ಇತ್ಯಾದಿಶ್ರುತಿಭ್ಯಃ ಇತಿ ಚೇತ್ ॥ ೬ ॥**

ಭಾಷ್ಯಾರ್ಥ ॥ (ಎಲ್ಲಾ ವಸ್ತುಗಳಿಗೆ) ಶ್ರೀಹರಿಯ ಅಧೀನತ್ವವಿದ್ದುದರಿಂದ ಶ್ರೀಹರಿಗೇನೇ, ಮುಖ್ಯವಾಗಿ ಅವಾವ ಶಬ್ದಗಳಿಂದ ವಾಚ್ಯತ್ವವು ಎಂದು ತದಧೀನತ್ವಾತ್ ಎನ್ನುವ ಸೂತ್ರದಲ್ಲಿ (ವಿಷ್ಣುವಿಗೆ ಅವ್ಯಕ್ತಾದಿಶಬ್ದ ವಾಚ್ಯತ್ವದಲ್ಲಿ ಸರ್ವವಸ್ತುಗಳಿಗೆ ವಿಷ್ಣುವಿನ ಅಧೀನತ್ವರೂಪವಾದ ನಿಮಿತ್ತವು) ಹೇಳಲ್ಪಟ್ಟಿದೆ. ಆ ನಿಮಿತ್ತವು ಜೀವಮುಖ್ಯಪ್ರಾಣರಲ್ಲಿ ಇದ್ದುದರಿಂದ ಜೀವ ಮುಖ್ಯಪ್ರಾಣರಿಗೂ ಕೂಡ ಮುಖ್ಯವಾಗಿ ಆವಾವ ಶಬ್ದವಾಚ್ಯತ್ವವು ಬರಬೇಕಾಗುವುದು. (ಅವರಲ್ಲಿ ಆ ಲಿಂಗವು ಅಸಿದ್ಧವು ಎಂದು ಹೇಳಕೂಡದು.) ಅಸ್ಯ ಇತ್ಯಾದಿ ಶ್ರುತಿಗಳಿಂದ ಜೀವ ಮುಖ್ಯಪ್ರಾಣರಲ್ಲಿ ಆ ಲಿಂಗವು (ಅವಗತವಾಗುತ್ತದೆ) ಎಂದರೆ (೧) ಜೀವಃ=ಅನಿರುದ್ಧಾಖ್ಯಪರಮಾತ್ಮನು, ಅಸ್ಯ=ಈ ಜೀವವೃಕ್ಷದ, ಯದಾ=ಯಾವಾಗ, ಏಕಾಂ ಶಾಖಾಂ=ಒಂದು ಗೆಲ್ಲನ್ನು, ಜಹಾತಿ=ಬಿಡುತ್ತಾನೋ, ಅಥ=ಆಗ, ಸಾ=ಆ.ಶಾಖೆಯು, ಶುಷ್ಯತಿ=ಒಣಗುತ್ತದೆ. (ಹೀಗೆಯೇ ೨ನೇ ಗೆಲ್ಲನ್ನು ಬಿಟ್ಟರೆ ಆಗ ಅದೂ ಒಣಗುತ್ತದೆ.) (೨) ವಾಯುನಾ=ಮುಖ್ಯಪ್ರಾಣನಿಂದ, ಸರ್ವೇ ಲೋಕಾಃ=ಎಲ್ಲಾ ಲೋಕಗಳೂ, ನೇನೀಯಂತೇ=ತಂತಮ್ಮ ಕರ್ಮಗಳಲ್ಲಿ ಅತ್ಯಂತವಾಗಿ ಪ್ರೇರಿಸಲ್ಪಡುತ್ತವೆ.

ವಿಶೇಷಾಂಶ ॥ ಪೂರ್ವಪಕ್ಷಿಯು ೧ನೇ ಶ್ರುತಿಯು ಪ್ರಥಿವ್ಯಾದ್ಯಭಿಮಾನಿ ಜೀವಪರವು. ೨ನೇ ಶ್ರುತಿಯು ಮುಖ್ಯಪ್ರಾಣಪರವೆಂದು ಹೇಳಿರುವರು. ಆದಿಶಬ್ದದಿಂದ **ವಾಯುನಾ ವೈ ಗೌತಮ ಸೂತ್ರೇಣ ಪ್ರಬದ್ಧಃ** ಇತ್ಯಾದಿ ಶ್ರುತಿಗಳನ್ನು ಇಟ್ಟುಕೊಳ್ಳಬೇಕು.

ಪೀಠಿಕೆ ॥ ಎನ್ನುವ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ । ಉಪಾಸಾತ್ರೈವಿಧ್ಯಾದಿತಿ ವ್ಯಾಖ್ಯಾತತ್ವಾತ್ ॥ ೧೮ ॥ ॥ ೭ ॥**

ಭಾಷ್ಯಾರ್ಥ ॥ ನ=ಸರ್ವವೂ ಜೀವ ಲಿಂಗದಿಂದ, ಮುಖ್ಯಪ್ರಾಣರ ಅಧೀನವು ಎನ್ನುವ, ಜೀವ ಮುಖ್ಯಪ್ರಾಣರಿಗೆ ಮುಖ್ಯವಾಗಿ ಅವಾವಶಬ್ದವಾಚ್ಯತ್ವವನ್ನು ಕಲ್ಪಿಸಕೂಡದು. (ಏಕೆಂದರೆ) **ಉಪಾಸಾತ್ರೈವಿಧ್ಯಾತ್** ಎನ್ನುವ ಸೂತ್ರಖಂಡದಿಂದ ಅನ್ಯರ ಲಿಂಗವನ್ನು ಹೇಳುವುದಾಗಿ ತೋರತಕ್ಕ ಶ್ರುತಿಗಳಿಗೆ ಅಂತರ್ಯಾಮಿ ಭಗವತ್ಸಂಬಂಧಿಯಾಗಿ ವ್ಯಾಖ್ಯಾನಮಾಡಲ್ಪಟ್ಟ ಪ್ರಯುಕ್ತ ॥ ೧೮ ॥

ಪೀಠಿಕೆ ॥ ಸರ್ವಶಬ್ದಗಳೂ ಅನ್ಯತ್ರ ಸಂಗ್ರಹಿಸಿ ವ್ಯವಹರಿಸಲ್ಪಡುತ್ತವೆ ಎಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ ಲೌಕಿಕಶಬ್ದಗಳಿಗೆ ಅನ್ಯತ್ರ ಜಗತ್ತಿನಲ್ಲಿ ವ್ಯವಹಾರವೇ ಸಮಾಕರ್ಷದಲ್ಲಿ ಪ್ರಯೋಜನವು. ವೈದಿಕ ಶಬ್ದಗಳಿಗೆ ಆದರೂ ಸಮಾಕರ್ಷದಲ್ಲಿ ಪ್ರಯೋಜನವಿಲ್ಲ. ಕರ್ಮ ದೇವತಾದಿಗಳ ಸಿದ್ಧಿಯೇ ಪ್ರಯೋಜನವು ಎಂದೂ ಹೇಳಕೂಡದು. ವೇದಗಳು ಜೀವರ ಮೋಕ್ಷಕ್ಕಾಗಿಯೇ ಪ್ರವೃತ್ತಗಳಾಗಿರುವುದರಿಂದ ಕಾಮ್ಯಫಲಕ್ಕಾಗಿ ಪ್ರವೃತ್ತಗಳಲ್ಲ. ಮೋಕ್ಷವಾದರೂ ವೇದಗಳಲ್ಲಿಯೂ ಸಾಕಲ್ಯೇನ ಹೇಳದಿರುವ ಅನಂತಗುಣಗಳುಳ್ಳ ಶ್ರೀಹರಿಯು ಸರ್ವೋತ್ಕೃಷ್ಟನು

ಎನ್ನುವ ಜ್ಞಾನದಿಂದಲೇ ಸಿದ್ಧಿಸುತ್ತದೆ ಆದಕಾರಣ ಕರ್ಮಾದಿಗಳಿಂದ ಪ್ರಯೋಜನವೂ ಇಲ್ಲ. ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ಓಂ ॥ ೧೮ ॥

ಸೂತ್ರಾರ್ಥ ॥ ವೈದಿಕಶಬ್ದಗಳಿಗೆ ಭಗವದ್ವಾಚಕತ್ವ ಮಾತ್ರವಲ್ಲ. ಕರ್ಮದೇವತಾದಿಜಗದ್ವಾಚಿತ್ವವೂ ಇದೆ. ಅದರಿಂದ ಮುಮುಕ್ಷುವಿಗೆ ಪ್ರಯೋಜನವಿಲ್ಲವೆಂದಲ್ಲ. ಶ್ರೀಹರಿಯಿಂದ ಸಮಾಕರ್ಷಿಸಿ ವೇದಗಳಿಗೆ ಕರ್ಮಾದಿಜಗದ್ವಾಚಿತ್ವವು ಜಗತ್ತಿನ ಜ್ಞಾನದ್ವಾರಾ ಪರಮಾತ್ಮನ ಜ್ಞಾನಕ್ಕಾಗಿಯೇ ಆಗುತ್ತದೆ ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. (ಕರ್ಮಾದಿಗಳ ಜ್ಞಾನವು ಪರಮಾತ್ಮನ ಜ್ಞಾನಕ್ಕೆ ಉಪಯುಕ್ತವಲ್ಲವೆಂದು ಹೇಳಕೂಡದು.) (೧) ಕಸ್ಮಿನ್ನು ಭಗವಃ, ದ್ವೇ ವಿದ್ಯೇ, (೨) ಕಥಂ ನು ಭಗವಃ ಯಥಾ ಸೌಮ್ಯ, ಇದುಮೊದಲಾದ ಪ್ರಶ್ನಪ್ರತ್ಯುತ್ತರರೂಪಲಿಂಗಗಳಿಂದ ಸಿದ್ಧಿಸುತ್ತದೆ. ಮತ್ತು ಇತರ ವಸ್ತುಗಳ ಜ್ಞಾನವು ಪರಮಾತ್ಮನ ಜ್ಞಾನಕ್ಕೆ ಉಪಯುಕ್ತವೆಂದು ಕೆಲವು ಶಾಖಿಗಳು ಸ್ಪಷ್ಟವಾಗಿ ಮುಖತಃ ಹೇಳುತ್ತಾರೆ. ಯಸ್ತಂ ನ ವೇದ ಇತ್ಯಾದಿ ಶ್ರುತಿಯೂ ಆದೆ.

### ಭಾಷ್ಯ ॥ ಪರಮಾತ್ಮಜ್ಞಾನಾರ್ಥಂ ಕರ್ಮಾದಿಕಮಪಿ ವದತೀತಿ ಜೈಮಿನಿಃ ॥ ೮ ॥

ಭಾಷ್ಯಾರ್ಥ ॥ ವೈದಿಕಶಬ್ದಗಳಿಗೆ ಕರ್ಮಾದಿಗಳಲ್ಲಿ ಸಮಾಕರ್ಷದಲ್ಲಿ ಪ್ರಯೋಜನವಿಲ್ಲವೆಂದಲ್ಲ ಶ್ರೀಹರಿಯ ಜ್ಞಾನವೇ ಪ್ರಯೋಜನವು. ಆದುದರಿಂದ ಜಗದ್ಭಿನ್ನನಾದ ಈಶ್ವರನ ಜ್ಞಾನಕ್ಕಾಗಿ ಜ್ಯೋತಿಷ್ಟೋಮ ಮೊದಲಾದ ಕರ್ಮವನ್ನು ರಮಾ ಚತುರ್ಮುಖ ರುದ್ರಾದಿದೇವತೆಗಳನ್ನೂ ಕೂಡ, (ವೇದವು) ಹೇಳುತ್ತದೆ, ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ಅಂತೂ ವೇದವು ಪರಮಾತ್ಮನನ್ನು ಮಾತ್ರ ಹೇಳುವುದಲ್ಲ ಮತ್ತೆ ಕರ್ಮಾದಿಗಳನ್ನು ಹೇಳುತ್ತದೆ.

ಪೀಠಿಕೆ ॥ ವೇದದಲ್ಲಿ ಹೇಳಲ್ಪಟ್ಟ ಕರ್ಮಾದಿಗಳ ಜ್ಞಾನವು ಪರಮಾತ್ಮನ ಜ್ಞಾನಕ್ಕಾಗಿ ಎನ್ನುವುದು ಹೇಗೆ ತಿಳಿಯುತ್ತದೆ, ಎಂದರೆ—

### ಭಾಷ್ಯ ॥ ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ । ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ (ಆ.ಉ.೧.೧.) ॥ ೯ ॥

ಭಾಷ್ಯಾರ್ಥ ॥ ಹೇ ಭಗವಃ=ಪೂಜ್ಯರಾದ ಅಂಗಿರಸ ಋಷಿಗಳೇ, ನು=ಈಗ, ಸರ್ವಮಿದಂ=ಈ ಕರ್ಮಾದಿಗಳೆಲ್ಲವೂ, ಕಸ್ಮಿನ್ ವಿಜ್ಞಾತೇ=ಯಾರು ತಿಳಿಯಲ್ಪಡುತ್ತಿರಲು, ವಿಜ್ಞಾತಂ=ತಿಳಿಯಲ್ಪಡುತ್ತವೆ. (ಅಂದರೆ ಕೇವಲ ಕರ್ಮಾದಿಗಳ ಜ್ಞಾನವು ಮುಮುಕ್ಷುಗಳಿಗೆ ನಿಷ್ಫಲವಾದುದರಿಂದ ಯಾರನ್ನು ತಿಳಿದರೆ ವಿಜ್ಞಾತವಾದ ಕರ್ಮಾದಿಗಳ ಫಲವು ಆಗುತ್ತದೆ.) ಇತಿ=ಎಂದು (ಅಂಗಿರಸ ಋಷಿಗಳ ಹತ್ತಿರ ಶೌನಕರು ಪ್ರಶ್ನೆ ಮಾಡುತ್ತಿರಲು ಹೀಗೆ ಪ್ರಶ್ನಿಸಲ್ಪಟ್ಟ ಅಂಗಿರಋಷಿಗಳು ಅಪರ ವಿದ್ಯೆಯಿಂದ ಕರ್ಮಾದಿಗಳೆಲ್ಲವೂ ವಿಜ್ಞಾತವಾಗುವುದು. ವಿಜ್ಞಾತವಾದುದು ಪರವಿದ್ಯಾವಿಷಯಕವಾದ ಭಗವಜ್ಞಾನದಿಂದ ಸಫಲವಾಗುತ್ತದೆ ಎನ್ನುವ ಉತ್ತರವನ್ನು ತದೇತತ್ ಇತ್ಯಾದಿಗಳಿಂದ ಮುಂದೆ ಹೇಳುವರು. ಅದಕೆ

ಉಪೋದ್ಘಾತರೂಪವಾಗಿ, ಎರಡು ವಿದ್ಯೆಗಳನ್ನು ಪ್ರಥಮತಃ ಸರ್ವರೂ ತಿಳಿಯಬೇಕು ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.) ದ್ವೇ ವಿದ್ಯೇ=ಎರಡು ವಿದ್ಯೆಗಳು, ವೇದತವ್ಯೇ=ತಿಳಿಯಲ್ಪಡಬೇಕು, ಎಂದು, ಸಃ=ಅಂಗಿರಋಷಿಗಳು, ತಸ್ಮೈ=ಆ ಶೌನಕರಿಗೋಸ್ಕರ, ಉವಾಚ=ಹೇಳಿದರು. ಹ=ಸಂತೋಷವು. ಅಥವಾ ಪ್ರಮಾಣಪ್ರಸಿದ್ಧವು.

**ಭಾಷ್ಯ ॥ ಕಥಂ ನು ಭಗವಃ ಸ ಆದೇಶೋ ಭವತೀತಿ । ಯಥಾ ಸೌಮ್ಯೈಕೇನ ಮೃತ್ಪಿಂಡೇನ (ಛಾ.ಉ.೬.೧) ಇತ್ಯಾದಿಪ್ರಶ್ನವ್ಯಾಖ್ಯಾನಾಭ್ಯಾಂ ॥ ೧೦ ॥**

**ಭಾಷ್ಯಾರ್ಥ ॥** (ಛಾಂದೋಗ್ಯದಲ್ಲಿ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಂ ಭವತ್ಯವಿಜ್ಞಾತಂ ವಿಜ್ಞಾತಂ ಭವತಿ ಎನ್ನುವ ವಾಕ್ಯದಿಂದ ಯಾವ ಪರಮಾತ್ಮನು ತಿಳಿಯಲ್ಪಟ್ಟರೆ, ತಿಳಿಯಲ್ಪಡದೆ ಇದ್ದ ಕರ್ಮಾದಿಗಳೂ ಆದರ ಜ್ಞಾನಫಲವು ಲಭಿಸಿರುವುದರಿಂದ ವಿಜ್ಞಾತವಾಗುತ್ತವೆ. ಶ್ರೀಹರಿಯು ತಿಳಿಯಲ್ಪಡದೆ ಇದ್ದರೆ ಕರ್ಮಾದಿಗಳು ತಿಳಿಯಲ್ಪಟ್ಟರೂ ಅವುಗಳ ಫಲವನ್ನು ಹೊಂದದೆ ಇರುವುದರಿಂದ ತಿಳಿಯಲ್ಪಡದೆ ಇದ್ದಂತೆಯೇ ಆಗುವುದು. ಆದಕಾರಣ ಶ್ರೀಹರಿಯ ಜ್ಞಾನಾದಿಗಳು ಇದ್ದರೇನೇ ಇತರವಾದುದು ಅಜ್ಞಾತವಾದಾಗ್ಯೂ ತಿಳಿಯಲ್ಪಟ್ಟಂತೆಯೇ ಆಗುವುದು. ಅಂತಹ ಆದೇಶ (ಶ್ರೀಹರಿಯ)ನನ್ನು ಕೇಳಿರುವಿಯೋ ಅಥವಾ ಕೇಳಲಿಲ್ಲವೋ ಎಂದು ಉದ್ದಾಲಕರಿಂದ ಹೇಳಲ್ಪಟ್ಟ ಶ್ವೇತಕೇತುವು ಉದ್ದಾಲಕರನ್ನು ಕುರಿತು ಪ್ರಶ್ನಿಸುತ್ತಾರೆ.) ಭಗವಃ=ಪೂಜ್ಯರಾದ ಉದ್ದಾಲಕರೇ, ಸಃ ಆದೇಶಃ=(ಯಾವ ಶ್ರೀಹರಿಯು ತಿಳಿಯಲ್ಪಟ್ಟರೇನೇ ಎಲ್ಲಾ ಕರ್ಮಾದಿಗಳೂ ಜ್ಞಾತಗಳಾದಾಗ್ಯೂ ಸಫಲವಾಗುವುವು. ಇಲ್ಲವಾದರೆ ಆಗಲಾರದೋ) ಅಂತಹ ಆದೇಶ (ಶ್ರೀಹರಿ) ವಿಷಯಕವಾದ ಉಪದೇಶವು, ಕಥಂ=ಯಾವ ಪ್ರಕಾರದಿಂದ ಉಪಪನ್ನವಾಗುವುದು. (ಅಂತಹ ಪ್ರಕಾರವನ್ನು ನಾನು)ನು=ಈಗ, ಕಥಂ=ಹೇಗೆ ತಿಳಿಯುವೆನು. ಇತಿ=ಹೀಗೆ, (ಪ್ರಶ್ನೆ ಮಾಡಲ್ಪಟ್ಟ ತಂದೆಯಾದ ಉದ್ದಾಲಕರು ಮಗನ ಅಭಿಪ್ರಾಯವನ್ನು ತಿಳಿದವರಾಗಿ ತನ್ನ ಅಭಿಪ್ರಾಯವನ್ನು ಪ್ರಕಟಿಸುತ್ತಾ ಉತ್ತರ ಕೊಡುತ್ತಾರೆ.) ಸೋಮ್ಯ=ಭಕ್ತಿಜ್ಞಾನಾದಿರೂಪವಾದ ಸೋಮಾರ್ಹನೇ, ಯಥಾ=ಹೇಗೆ, ಏಕೇನ ಮೃತ್ಪಿಂಡನ=ಒಂದು ಮೃಂತ್ಪಿಡವು ತಿಳಿಯಲ್ಪಡುವುದರಿಂದ, (ಅದರ ಸಾದೃಶ್ಯದಿಂದ ಇತರವಾದ ಮೃಣ್ಮಯವಾದ ಘಟಾದಿಗಳೂ ಅಜ್ಞಾತಗಳಾದಾಗ್ಯೂ ಜ್ಞಾತಫಲವು ವಿಶೇಷ ಜ್ಞಾನಾಖ್ಯ ಫಲವುಳ್ಳದ್ದು ಆಗುವುದೋ (ಅಂದರೆ ಮೃತ್ಪಿಂಡಜ್ಞಾನಾವಿಲ್ಲದೆ ಮೃಣ್ಮಯವಾನ ಘಟಾದಿಗಳಿಗೆ ಮೃತ್ಪಿಂಡಾದಿಗಳು ಕಾರಣಗಳು ಇತ್ಯಾದಿ ವಿಶೇಷಜ್ಞಾನವು ಉಂಟಾಗಲಾರದು.) (ಹೇಗೆ ಪರಮಾತ್ಮನು ತಿಳಿಯಲ್ಪಟ್ಟರೆ ಎಲ್ಲಾ ಕರ್ಮಾದಿಗಳ ಜ್ಞಾನವು ಸಫಲವು ಆಗುವುದು. ಏಕೆಂದರೆ ಪರಮಾತ್ಮನ ಜ್ಞಾನವೇ ತತ್ಪ್ರಯೋಜನವು) ಇತ್ಯಾದಿ ಪ್ರಶ್ನವ್ಯಾಖ್ಯಾನಾಭ್ಯಾಂ=ಇದೇ ಮೊದಲಾದ ಪ್ರಶ್ನೆ ಪ್ರತ್ಯುತ್ತರಗಳಿಂದ ಇತರ ಜ್ಞಾನವು ಭಗವಜ್ಜ್ಞಾನಕ್ಕೆ ಉಪಯುಕ್ತವೆನ್ನುವ ಅರ್ಥವು ಸಿದ್ಧಿಸುತ್ತದೆ.

**ಪೀಠಿಕೆ ॥** ಪ್ರಶ್ನ ವ್ಯಾಖ್ಯಾನರೂಪವಾದ ಲಿಂಗದಿಂದ ಮಾತ್ರ ಹೀಗೆ ಕರ್ಮಾದಿಗಳ ಜ್ಞಾನವು ಪರಮಾತ್ಮನ ಜ್ಞಾನಕ್ಕೆ ಉಪಯುಕ್ತವೆಂದು ಸಿದ್ಧಿಸುವುದಲ್ಲ. ಮತ್ತೆ ಸ್ಪಷ್ಟವಾಗಿ ಮುಖದಿಂದಲೂ ಹೀಗೆ ಋಗ್ಯಜುಸ್ಸಾಖಿಗಳು ಹೇಳುತ್ತಾರ ಎನ್ನುತ್ತಾರೆ—

**ಭಾಷ್ಯ ॥ ಏವಮಪಿ ಚೈಕೇ ಪಠಂತಿ । ಯಸ್ತಂ ನ ವೇದ ಕಿಮೃಚಾ ಕರಿಷ್ಯತಿ (ಋ.೧.೧೬೪.೩೯) । ಇತಿ ॥ ೧೯ ॥ ॥ ೧೧ ॥**

**ಭಾಷ್ಯಾರ್ಥ ॥** (ಕೇವಲವಾಗಿ ಅನ್ಯಥಾನುಪಪತ್ತಿಯಿಂದಲೇ ಸಿದ್ಧಿಸುವುದಲ್ಲ, ಮತ್ತು) ಅಪಿ=ಮುಖದಿಂದಲೂ, ಏವಂ=ಹೀಗೆ, ಅಂದರೆ ಅನ್ಯ ಜ್ಞಾನವು ಪರಮಾತ್ಮನ ಜ್ಞಾನಕ್ಕೆ ಉಪಯುಕ್ತವೆನ್ನುವುದನ್ನು ಏಕೇ=ಋಗ್ಯಜುಃಶಾಖಿಗಳು ಹೇಳುತ್ತಾರೆ. ಯಾವ ಪುರುಷನು ಆ ಪರಬ್ರಹ್ಮನನ್ನು ತಿಳಿಯುವುದಿಲ್ಲವೋ ಆತನು ಕರ್ಮಾದಿವಿಷಯಕ ಋಕ್ಕಿನಿಂದ ಏನು ಮಾಡುವನು?

**ವಿಶೇಷಾಂಶ ॥** (೧) ಕರ್ಮಾದಿಗಳ ಜ್ಞಾನವು ಬ್ರಹ್ಮಜ್ಞಾನಕ್ಕೆ ಕಾರಣವಾಗದಿದ್ದರೆ ಅದಕ್ಕಾಗಿ ಮಾಡತಕ್ಕ ವೇದಾಧ್ಯಯನವು ವ್ಯರ್ಥವೇ ಆಗುವುದು. (೨) **ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ। ಯಸ್ತಂ ನ ವೇದ ಕಿಮೃಚಾ ಕರಿಷ್ಯತಿ ಯಸ್ತದ್ವಿದುಸ್ತ ಇಮೇ ಸಮಾಸತೇ ॥** ಯಾರು ಅಕ್ಷರಶಬ್ದವಾಚ್ಯನಾದ ವಿಷ್ಣ್ವಾಖ್ಯ ಬ್ರಹ್ಮನನ್ನು ಸರ್ವ ವೇದಗಳಿಗೆ ಮುಖ್ಯಾರ್ಥನು ಎಂದು ತಿಳಿಯುವುದಿಲ್ಲವೋ (ಇತರರಾದ ದೇವತೆಗಳ ಸಾಮ್ಯವನ್ನಾಗಿಯೇ ತಿಳಿಯುತ್ತಾನೋ) ಆತನು ಬ್ರಹ್ಮಯಜ್ಞಾದಿ ರೂಪದಿಂದ ಅಧೀತಗಳಾದ ಕರ್ಮಾದಿಪರಗಳಾದ ವೇದಗಳಿಂದ ಏನು ಮಾಡುವನು. ಅಂತೂ ಇತರ ವಿಷಯಗಳಾಗಿ ಅಧೀತಗಳಾದ ವೇದಗಳಿಂದ ಪ್ರಯೋಜನವಿಲ್ಲ. (ಋತಃ=) ಬ್ರಾಹ್ಮಣ ಇತಿಹಾಸಾದಿ ಸಹಿತಗಳಾದ ಸಮಸ್ತ ವೇದಗಳು ಸರ್ವೋತ್ತಮನೂ ವ್ಯಾಪ್ತನೂ ಚತುರ್ವಿಧ ನಾಶರಹಿತನಾದುದರಿಂದ ಅಕ್ಷರಶಬ್ದವಾಚ್ಯನೂ ಆದ ವಿಷ್ಣುವಿನ (ಜ್ಞಾನಕ್ಕಾಗಿಯೇ) (ನಿಖಿಲ ಕರ್ಮಾದಿಗಳನ್ನು ಹೇಳುತ್ತವೆ.) ಎಲ್ಲಾ ದೇವತೆಗಳು ಬ್ರಹ್ಮನನ್ನು ಆಶ್ರಯಿಸಿಕೊಂಡು ಇರುತ್ತಾರೋ, ಯಾರು ಹೀಗೆ ಹಿಂದೆ ಹೇಳಿದ ಪ್ರಕಾರ ಅಕ್ಷರಶಬ್ದವಾಚ್ಯನನ್ನು ತಿಳಿಯುತ್ತಾರೋ ಆ ದೇವತೆಗಳು (ಸಮಾಸತೇ=) ಸಂಕಲ್ಪ ಮಾತ್ರದಿಂದಲೇ ಯಥೇಷ್ಟ ಭೋಗವುಳ್ಳವರಾಗಿ ಪರಮಾತ್ಮನನ್ನು ಪ್ರವೇಶ ಮಾಡುತ್ತಾರೆ ಎಂದು ಶ್ರುತ್ಯರ್ಥವು. ॥ ೧೯ ॥

**ಪೀಠಿಕೆ ॥** ಶ್ರೀಹರಿಯ ಜ್ಞಾನಕ್ಕಾಗಿ ಕರ್ಮಾದಿಗಳನ್ನು ವೇದದಿಂದ ಹೇಳಬೇಕಾಗಿಲ್ಲ, ಇತರ ವಾದುದನ್ನು ಹೇಳದೆ ವೇದದಿಂದ ಶ್ರೀಹರಿಯನ್ನು ಮಾತ್ರ ಹೇಳಿದರೂ ಶ್ರೀಹರಿಯ ಜ್ಞಾನವು ಕೂಡಬಹುದು. ಇತರವಾದುದನ್ನು ಹೇಳಿದರೆ ಪ್ರಯೋಜನವು ಇಲ್ಲದಿರುವುದರಿಂದ ಅಲ್ಲಿ ಸಮಾಕರ್ಷವು ಯುಕ್ತವಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ವಾಕ್ಯಾನ್ವಯಾತ್ ಓಂ ॥ ೨೦ ॥

**ಸೂತ್ರಾರ್ಥ ॥** ಉತ್ತಮಾಧಿಕಾರಿಗಳಿಂದ ಭಿನ್ನರಾದ ಅಧಿಕಾರಿಗಳಿಗೆ ಬ್ರಹ್ಮಜ್ಞಾನಕ್ಕಾಗಿ, ವಾಕ್ಯಾನ್ವಯಾತ್=ಕರ್ಮಾದಿಬೋಧಕ ವಾಕ್ಯಕ್ಕೆ ಶ್ರೀಹರಿಯ ಸಂಬಂಧವನ್ನು ಅಪೇಕ್ಷಿಸಿಕೊಂಡು ವೈದಿಕಶಬ್ದಗಳಿಗೆ ಸಮಾಕರ್ಷದಿಂದ ಜಗದ್ವಾಚಕತ್ವವು ಯುಕ್ತವು. ತಥಾಚ ವಾಕ್ಯಾನ್ವಯವನ್ನು ಅಂಗೀಕರಿಸದೆ ಇದ್ದರೆ ಮಧ್ಯಮಾಧ್ಯಧಿಕಾರಿಗಳಿಗೆ ಪದಸಮನ್ವಯದಲ್ಲಿ ಯೋಗ್ಯತೆಯು ಇಲ್ಲದಿರುವುದರಿಂದ ಬ್ರಹ್ಮಜ್ಞಾನವು ಆಗದೆ ಹೋಗುವುದು.

**ಭಾಷ್ಯ ॥ ವಾಕ್ಯಸ್ಯಾಪ್ಯೇವಮನ್ವಯೋ ಯುಜ್ಯತೇ ಪೃಥಕ್ ಪೃಥಕ್ ಸ್ಥಿತಸ್ಯಾಪಿ ಪರಮಾತ್ಮನಾ ॥ ೨೦ ॥ ॥ ೧೨ ॥**

**ಭಾಷ್ಯಾರ್ಥ ॥** (ವೈದಿಕ ಶಬ್ದಗಳಿಗೆ ಇತರ ವಸ್ತುಗಳ ಜ್ಞಾನಕ್ಕಾಗಿ ಜಗದ್ವಾಚಕತ್ವವು ಯುಕ್ತವೇ.) ಕೇವಲ ಸ್ವರವರ್ಣ ಪದಗಳಿಗೂ ಬ್ರಹ್ಮಕಾಂಡಕ್ಕೂ ಅಲ್ಲ ಮತ್ತೆ ಇತರ ವಸ್ತುಗಳಿಗೂ ವಾಚ್ಯತ್ವವನ್ನು ಅಂಗೀಕರಿಸಿದರೆ ಪೃಥಕ್ ಪೃಥಕ್=ಪ್ರತ್ಯೇಕ ಪ್ರತ್ಯೇಕವಾಗಿ ಅತ್ಯಂತ ಭಿನ್ನಾರ್ಥಗಳಾದ ಕರ್ಮಾದಿ ರೂಪಗಳಾದ ಅರ್ಥಗಳಲ್ಲಿ ವಾಚಕವಾಗಿ ಇರತಕ್ಕ ಅನ್ಯಪರವೆಂದು ಸಿದ್ಧವಾದಾಗ್ಯೂ ವಾಕ್ಯಸ್ಯಾಪಿ=ಕರ್ಮದೇವತಾದಿ ವೇದಭಾಗರೂಪ ವಾಕ್ಯಕ್ಕೂ ಪರಮಾತ್ಮನಾ=ಪರಮಾತ್ಮನಿಂದ, ಸಂಬಂಧವು ಕೂಡುತ್ತದೆ. ಅಂದರೆ ಪದಗಳಿಗೆ ಮಾತ್ರವಲ್ಲ ವಾಕ್ಯಕ್ಕೂ ಶ್ರೀಹರಿಯಿಂದ ಸಂಬಂಧವು ಅಂದರೆ ಅಂತತಃ ಭಗವತ್ಪರತ್ವವು ಕೂಡುತ್ತದೆ. ಅಂತೂ ಅಲ್ಲಿ ಹೇಳಿದ ಕರ್ಮಾದಿಗಳಿಂದ ಅಂತಃಕರಣ ಶುದ್ಧ್ಯಾದಿಗಳು ಆಗಿ ಭಗವಜ್ಜ್ಞಾನವು ಉಂಟಾಗುತ್ತದೆ.

**ವಿಶೇಷಾಂಶ ॥** ಪ್ರತ್ಯೇಕ ಪ್ರತ್ಯೇಕ ಅರ್ಥಗಳಲ್ಲಿ ಇರತಕ್ಕ ವೇದಗಳಿಗೆ ಪರಮಾತ್ಮನಿಂದ ಅನ್ವಯ ಪ್ರಕಾರವನ್ನು ವಿಷ್ಣುತತ್ವನಿರ್ಣಯ ಟೀಕೆಯಲ್ಲಿಯೂ ಸುಧಾದಲ್ಲಿಯೂ ವಿಸ್ತರಿಸಿರುವರು. ॥ ೨೦ ॥

**ಪೀಠಿಕೆ ॥** ಅನ್ಯವಚನವೂ ಶ್ರೀಹರಿಯ ಜ್ಞಾನಕ್ಕೆ ಉಪಯುಕ್ತವೆಂದು ಯಾವುದು ಹೇಳಲ್ಪಟ್ಟಿದೋ ಅದು ಯಾವ ಪ್ರಕಾರದಿಂದ ಎಂದಾಕಾಂಕ್ಷಾ ಬಂದರೆ ಅದನ್ನು ತೋರಿಸುವುದಕ್ಕಾಗಿ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ಓಂ ॥ ೨೧ ॥

**ಸೂತ್ರಾರ್ಥ ॥** (ವೈದಿಕಶಬ್ದಗಳಿಗೆ ಜಗದ್ವಾಚತ್ವವು) ಪ್ರತಿಜ್ಞಾಸಿದ್ಧೇಃ=ನಾನ್ಯಃ ಪಂಥಾಃ ಎಂದು ಅನ್ಯಮಾರ್ಗ ನಿಷೇಧಪೂರ್ವಕವಾಗಿ ಬ್ರಹ್ಮಜ್ಞಾನವು ಮೋಕ್ಷಕ್ಕೆ ಸಾಧನವು ಎಂದು ಪ್ರತಿಜ್ಞಾತವಾದ ಅರ್ಥನಿಶ್ಚಯಕ್ಕೆ, ಲಿಂಗಂ=ಹೇತುವು, (ಹೀಗೆ ಬ್ರಹ್ಮಜ್ಞಾನಕ್ಕಾಗಿ ಉಪಯುಕ್ತವಾಗುವುದು ಎಂದು) ಆಶ್ಮರಥ್ಯಾಚಾರ್ಯರು (ತಿಳಿಯುತ್ತಾರೆ.)

**ಭಾಷ್ಯ ॥ ನಾನ್ಯಃ ಪಂಥಾ ಅಯನಾಯ ವಿದ್ಯತೇ (ಶ್ವೆ.ಆ.೩.೧೩.)। ಇತಿ ಪ್ರತಿಜ್ಞಾಸಿದ್ಧೇರ್ಲಿಂಗತ್ವೇನ ಕರ್ಮಾದಿಕಮುಚ್ಯತೇ । ಇತ್ಯಾಶ್ಮರಥ್ಯಃ । ಯಸ್ಮಾದೇವಮನಿತ್ಯಫಲಮನ್ಯತ್ತಸ್ಮಾನ್ನಾನ್ಯಃ ಪಂಥಾಃ । ಇತಿ ॥ ೨೧ ॥ ॥ ೧೩ ॥**

**ಭಾಷ್ಯಾರ್ಥ ॥** ನಾನ್ಯಃ ಪಂಥಾ ಅಯನಾಯ ವಿದ್ಯತೇ ಎನ್ನುವ ಶ್ರುತಿಯಿಂದ ಮೋಕ್ಷಕ್ಕಾಗಿ ಜ್ಞಾನದಿಂದ ಇತರವಾದ ಮಾರ್ಗವು ಇಲ್ಲ, ಜ್ಞಾನವೇ ಮೋಕ್ಷಸಾಧನವು ಇತರವಾದುದಲ್ಲ ಎನ್ನುವ ಪ್ರತಿಜ್ಞಾತವಾದ ಅರ್ಥವು ಸಿದ್ಧಿಸುವುದರಿಂದ (ಅಂದರೆ ಸಿದ್ಧಿಯನ್ನಪೇಕ್ಷಿಸಿ ಅದಕ್ಕಾಗಿ) ಲಿಂಗತ್ವೇನ=ಜ್ಞಾನವೇ ಮೋಕ್ಷಸಾಧನವು ಏತಕ್ಕೆ ಆಗಬೇಕು, ಇತರವಾದುದು ಏಕೆ ಆಗುವುದಿಲ್ಲ ಎಂದು ಆಕಾಂಕ್ಷಾ ಬಂದರೆ ಹೇತುವಾಗಿ, (ವೇದದಿಂದ ಸವಿಸ್ತರವಾಗಿ ಸಪರಿಕರವಾಗಿ) ಕರ್ಮಾದಿಗಳು ಹೇಳಲ್ಪಡುತ್ತವೆ. (ಹೀಗೆ) ಆಶ್ಮರಥ್ಯಾಚಾರ್ಯರು (ತಿಳಿಯುತ್ತಾರೆ.) (ಆದುದರಿಂದ ಜಗದ್ವಾಚಿತ್ವವು

ಇದೆ.) (ಕರ್ಮಾದಿವಚನವು ಹೇಗೆ ಹೇತುವಾಗುವುದು ಎಂದರೆ) ಯಾವ ಕಾರಣದಿಂದ ಏವಂ=**ಅಮೃತೋ ವಾ ವ ಸೋಮಪೋ ಭವತಿ, ಯಾವದಿಂದ್ರಃ ಯಾವನ್ಮನುಃ** ಇತ್ಯಾದಿ ಉಕ್ತಪ್ರಕಾರದಿಂದ, ಅನೃತ್=ಕರ್ಮಾದಿಗಳು, ಅನಿತ್ಯಫಲಂ=ವಿನಾಶಫಲವುಳ್ಳದ್ದು ದುಃಖಮಿಶ್ರವಾದ ಫಲವುಳ್ಳದ್ದೋ, ಆದುದರಿಂದ, (ಅದು ಮೋಕ್ಷಸಾಧನವಲ್ಲ ಮೋಕ್ಷವು ದುಃಖಾಸಂಭಿನ್ನವಾದ ನಿತ್ಯ ಸುಖರೂಪವಾಗಿದೆ. ಆದುದರಿಂದ ಅಪರೋಕ್ಷಜ್ಞಾನದಿಂದ) ಇತರವಾದ ದಾರಿಯು ಮೋಕ್ಷಕ್ಕೆ ಇಲ್ಲ (ಎನ್ನುವ ಪ್ರತಿಜ್ಞೆಯು ಸಿದ್ಧಿಸುವುದಕ್ಕಾಗಿ ಲಿಂಗವಾಗಿ ವೇದದಿಂದ ಕರ್ಮಾದಿಗಳು ಹೇಳಲ್ಪಡುತ್ತವೆ.) ॥ ೨೦ ॥

**ಪೀಠಿಕೆ** ॥ ಪ್ರಕಾರಾಂತರದಿಂದಲೂ ಕರ್ಮಾದಿ ವಚನವು ಭಗವಜ್ಞಾನಕ್ಕೆ ಉಪಯುಕ್ತವು ಎನ್ನುವುದನ್ನು ತೋರಿಸುತ್ತಾ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ಓಂ ॥ ೨೨ ॥

**ಸೂತ್ರಾರ್ಥ** ॥ ಉತ್ಕ್ರಮಿಷ್ಯತಃ=ಜ್ಞಾನದಿಂದ ಬಂಧಮೋಕ್ಷವನ್ನು ಇಚ್ಛಿಸತಕ್ಕವನಿಗೆ, ಏವಂ=ಜ್ಞಾನ ದಂತೆಯೇ, ಕರ್ಮಾದಿಗಳಿಗೂ ಅಂತಃಕರಣ ಶುದ್ಧಿದ್ವಾರಾ ಮೋಕ್ಷಸಾಧನವಾದ ಭಗವಜ್ಞಾನಕ್ಕೆ ಸಾಧನತ್ವನಿಮಿತ್ತದಿಂದ, ಭಾವಾತ್=ಸಂಪಾದ್ಯತ್ವವಿದ್ದುದರಿಂದ, (ವೇದಗಳಿಗೆ ಕರ್ಮಾದಿ ವಾಚಿತ್ವವು.) ಏವಂ=ಹೀಗೆ ಮೋಕ್ಷಸಾಧನವಾದ ಜ್ಞಾನಕ್ಕೆ ಸಾಧನವಾದುದರಿಂದ ಕರ್ಮಾದಿಗಳು ಪರಮಾತ್ಮನ ಜ್ಞಾನಕ್ಕೆ ಉಪಯುಕ್ತವು, ಇತಿ=ಹೀಗೆ, ಔಡುಲೋಮಿಃ=ಔಡುಲೋಮ್ಯಾಚಾರ್ಯರು, (ತಿಳಿಯುತ್ತಾರೆ.)

**ಭಾಷ್ಯ ॥ ಉತ್ಕ್ರಮಿಷ್ಯತೋ ಮುಮುಕ್ಷೋಃ ಕರ್ಮಾದಿನಾ ಭಾವ್ಯಂ ಸಾಧನಸಾಧನತ್ವೇನ ।**
**ಅತಸ್ತದ್ವಕ್ತಿ । ಇತ್ಯೌಡುಲೋಮಿರ್ಮನ್ಯತೇ ॥ ೨೨ ॥** ॥ ೧೪ ॥

**ಭಾಷ್ಯಾರ್ಥ** ॥ ಸಂಸಾರದಿಂದ ಉತ್ಕ್ರಮಣವನ್ನು ಇಚ್ಛಿಸತಕ್ಕ ಅಂದರೆ ಜ್ಞಾನದಿಂದ ಬಂಧಮೋಕ್ಷ ವನ್ನು ಇಚ್ಛಿಸತಕ್ಕ ಮುಮುಕ್ಷುವಿಗೆ, ಸಾಧನಸಾಧನತ್ವೇನ=ಮೋಕ್ಷಕ್ಕೆ ಸಾಧನವಾದ ಜ್ಞಾನಕ್ಕೆ ಸಾಧನವಾಗಿ, (ಅಂದರೆ ಅಂತಃಕರಣ ಶುದ್ಧಿದ್ವಾರಾ ಜ್ಞಾನವು ಹುಟ್ಟಲಿಕ್ಕೆ ಉಪಯೋಗಿಯಾಗಿ) ಕರ್ಮಾದಿನಾ= ಕರ್ಮಾದಿಗಳಿಂದ, ಭಾವ್ಯಂ=ಇರಬೇಕು. (ಅಂದರೆ-ಮೋಕ್ಷವನ್ನು ಇಚ್ಛಿಸುವವನು ಜ್ಞಾನಸಾಧನವಾಗಿ ಕರ್ಮಾದಿಗಳನ್ನು ಅವಶ್ಯವಾಗಿ ಸಂಪಾದಿಸಬೇಕು.) ಅತಃ=ಆದುದರಿಂದ, ತತ್=ಕರ್ಮಾದಿಗಳನ್ನು, ವಕ್ತಿ=(ವೇದವು ಪರಮಾತ್ಮಜ್ಞಾನಕ್ಕಾಗಿ) ಹೇಳುತ್ತದೆ. ಹೀಗೆ ಔಡುಲೋಮ್ಯಾಚಾರ್ಯರು ತಿಳಿಯುತ್ತಾರೆ.

**ವಿಶೇಷಾಂಶ** ॥ ಕರ್ಮಾದಿಗಳಿಗೆ ಫಲಶ್ರುತಿಯನ್ನು ಹೇಳಿದ್ದರಿಂದ ಅದರಿಂದ ವಿರೋಧವು ಬಂತು ಎಂದು ಹೇಳಕೂಡದು. **ರೋಚನಾರ್ಥಂ ಫಲಶ್ರುತಿಃ** ಎಂದು ಹೇಳಿದ್ದರಿಂದ ಕರ್ಮದಲ್ಲಿ ಅಭಿರುಚಿಯನ್ನು ಹುಟ್ಟಿಸುವುದಕ್ಕಾಗಿ ಫಲಶ್ರುತಿಯನ್ನು ಹೇಳಿದ್ದು. ॥ ೨೨ ॥

**ಪೀಠಿಕೆ** ॥ ಪ್ರಕಾರಾಂತರದಿಂದ ಕರ್ಮಾದಿ ವಚನವು ಭಗವಜ್ಞಾನಕ್ಕೆ ಉಪಯೋಗಿಯಾದುದು ಎನ್ನುವುದನ್ನು ತೋರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅವಸ್ಥಿತೇರಿತಿ ಕಾಶಕೃತ್ಸ್ನಃ ಓಂ ॥ ೨೩ ॥

ಸೂತ್ರಾರ್ಥ ॥ ವೈದಿಕಶಬ್ದಗಳಿಗೆ ಭಗವದ್ವಾಚಿತ್ವವು ಯುಕ್ತವು. ಅವಸ್ಥಿತೇಃ-ಏಷ ಸೇತುರ್ವಿಧರಣಃ ಇತ್ಯಾದಿಗಳಲ್ಲಿ ಸರ್ವಜಗತ್ತು ಪರಮಾತ್ಮನಲ್ಲಿ ಇರುತ್ತದೆ ಎಂದು ಹೇಳಿದುದರಿಂದ ಬ್ರಹ್ಮನು ಸರ್ವಾಧಾರನೆಂದು ತಿಳಿಯಲ್ಪಡಬೇಕು ಎಂದು ಜ್ಞಾನಕ್ಕೆ ಉಪಯುಕ್ತವು. ಅದಕ್ಕಾಗಿ ವೇದದಿಂದ ಕರ್ಮಾದಿಗಳು ಹೇಳಲ್ಪಡುತ್ತವೆ ಎಂದು ಕಾಶಕೃತ್ಸ್ನಾಚಾರ್ಯರು ಹೇಳುತ್ತಾರೆ.

**ಭಾಷ್ಯ ॥ ಸರ್ವಂ ಪರಮಾತ್ಮನ್ಯವಸ್ಥಿತಮಿತಿ ವಕ್ತುಂ ತದ್ವಚನಂ । ಇತಿ ಕಾಶಕೃತ್ಸ್ನಃ ॥ ೧೫ ॥**

ಭಾಷ್ಯಾರ್ಥ ॥ ಸರ್ವಜಗತ್ತು ಕರ್ಮಾದಿಗಳೂ ಶ್ರೀಹರಿಯ ಅಧೀನದಲ್ಲಿರತಕ್ಕದ್ದು ಎಂದು (ಏಷ ಸೇತುರ್ವಿಧರಣಃ ಇತ್ಯಾದಿಗಳಲ್ಲಿ) ಹೇಳುವುದಕ್ಕಾಗಿ ಕರ್ಮಾದಿಗಳನ್ನು ಹೇಳಿದ್ದು ಅಂದರೆ ಆಧೇಯವಾದ ಕರ್ಮಾದಿಗಳ ಪ್ರತಿಪಾದನವು ವೇದದಿಂದ ಮಾಡಲ್ಪಡುತ್ತದೆ ಎಂದು ಕಾಶಕೃತ್ಸ್ನಾಚಾರ್ಯರು ಹೇಳುತ್ತಾರೆ.

ಪೀಠಿಕೆ ॥ ಹೀಗೆ ಜೈಮಿನ್ಯಾದಿಗಳ ಮತಗಳನ್ನು ಉಪನ್ಯಾಸಮಾಡಿ ತನ್ನ ಮತವನ್ನು ಏಕೆ ಹೇಳಲಿಲ್ಲ ಸೂತ್ರಕಾರರು. ಇವರ ಮತವೇ ತನ್ನ ಮತವಾಗಿದ್ದರೆ ಜೈಮಿನ್ಯಾದಿಗ್ರಹಣವು ವ್ಯರ್ಥವು. ಅಲ್ಲದೆ ವಿರುದ್ಧಗಳಾದವುಗಳು ಒಬ್ಬರ ಮತವು ಆಗಲಾರದು. ಒಂದೇ ವೇದಕ್ಕೆ ಅನೇಕಾಭಿಪ್ರಾಯವು ಕೂಡಲಾರದು. ವಿರೋಧವೇ ಇಲ್ಲದಿದ್ದರೆ ಮತಭೇದವೇ ಕೂಡಲಾರದು ಎಂದರೆ—

**ಭಾಷ್ಯ ॥ ಕೃಷ್ಣದ್ವೈಪಾಯನಮತಾದೇಕದೇಶವಿದಃ ಪರೇ । ವದಂತಿ ತೇ ಯಥಾಪ್ರಜ್ಞಂ ನ ವಿರೋಧಃ ಕಥಂಚನ ॥ ಇತಿ ಪಾದ್ಮೇ ॥ ೨೩ ॥ ಅಧಿ.೫ ॥ ॥ ೧೬ ॥**

ಭಾಷ್ಯಾರ್ಥ ॥ ಇತರರಾದ ಜೈಮಿನ್ಯಾದಿಗಳು ಯಾವ ಕಾರಣದಿಂದ ವೇದವ್ಯಾಸರ ಮತವನ್ನು ಅಪೇಕ್ಷಿಸಿ ತಮ್ಮ ಪ್ರಜ್ಞೆಯನ್ನು ಅನುಸರಿಸಿ ಅಂದರೆ ತಮ್ಮ ಬುದ್ಧ್ಯನುಸಾರವಾಗಿ ವ್ಯಾಸರಿಗೆ ಅಭಿಮತವಾದ ಅರ್ಥದ ಏಕದೇಶ ಜ್ಞಾನವುಳ್ಳವರು (ಅವರಿಗೆ ಅನಭಿಮತವಾದ ಅರ್ಥವನ್ನು ತಿಳಿದವರಲ್ಲ. ಅವರ ಮತಗಳು ವ್ಯಾಸರ ಮತಗಳೇ ಸರಿ. ಆದುದರಿಂದ ಪ್ರಸಿದ್ಧರಾದ ಜ್ಞಾನಿಗಳು ಯಾರನ್ನು ವ್ಯಾಸರ ಶಿಷ್ಯರೆಂದು) ಹೇಳುತ್ತಾರೆ. ಅವರಿಗೆ ಯಾವ ರೀತಿಯಿಂದಲೂ ಪರಸ್ಪರವಾಗಿ (ವೇದವ್ಯಾಸರಿಂದ ತಿಳಿಯಲ್ಪಟ್ಟ ಅರ್ಥಗಳಿಂದಲಾಗಲೀ ತಾತ್ಪರ್ಯದಿಂದಾಗಲೀ) ವಿರೋಧವಿಲ್ಲ ಎಂದು ಪಾದ್ಮಪುರಾಣದಲ್ಲಿ ಹೇಳಿದೆ.

ವಿಶೇಷಾಂಶ ॥ (೧) ಜೈಮಿನ್ಯಾದಿಗಳ ಮತಗಳೇ ವೇದವ್ಯಾಸರ ಮತಗಳಾಗಿದ್ದರೆ ಜೈಮಿನ್ಯಾದಿಗ್ರಹಣವು ವ್ಯರ್ಥವು, ಎಂದು ಹೇಳಕೂಡದು. ಶಿಷ್ಯರ ಪ್ರಸಿದ್ಧಿಗಾಗಿ ಹೇಳಿದ್ದು. (೨) ವಿಜ್ಞಾತಂ ತೈರ್ಜಗಾದಾತ್ರ ತಾರತಮ್ಯಂ ನೃಣಾಂ ವದನ್ ಎಂದು ಅನುವ್ಯಾಖ್ಯಾನದಲ್ಲಿಯೂ, ನೃಣಾಮಲ್ಪಾಧಿಕಾರಿಣಾಮವಸ್ಥಾ ತಾರತಮ್ಯಂ ವದನ್ ಎಂದು ಸುಧಾದಲ್ಲಿಯೂ ಹೇಳಿದ ಪ್ರಕಾರ. (೧) ಜೈಮಿನಿಋಷಿಗಳ ಮತವು ವಾಕ್ಯಸಮನ್ವಯಾರ್ಥವು ಆದುದರಿಂದ ಪದಸಮನ್ವಯಕ್ಕೆ ಅಯೋಗ್ಯರಾದ ಮಂದಾಧಿಕಾರಿ ವಿಷಯಕವು. (೨) ಆಶ್ಮರಥ್ಯಾಚಾರ್ಯರ ಮತವು ವೈರಾಗ್ಯ ಹುಟ್ಟುವುದಕ್ಕಿಂತ

ಪ್ರಾಕ್ಕಾಲದಲ್ಲಿ ಇರತಕ್ಕ ಸ್ವರ್ಗಾದಿಗಳನ್ನು ಅಪೇಕ್ಷಿಸತಕ್ಕ ಅಧಿಕಾರಿವಿಷಯಕವು. (೩.) ಔಡುಲೋಮ್ಯಾಚಾರ್ಯರ ಮತವು ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಇರತಕ್ಕ ಜಿಜ್ಞಾಸುಗಳಾದ ಅಧಿಕಾರಿ ವಿಷಯಕವು. (೪) ಕಾಶಕೃತ್ಸ್ನಾಚಾರ್ಯರ ಮತವು ಜ್ಞಾನಸಂಪತ್ತ್ಯವಸ್ಥಾ ವಿಶಿಷ್ಟ ಅಧಿಕಾರಿ ವಿಷಯಕವು. ಅಂತೂ ಮತಗಳು ಅನೇಕಾಧಿಕಾರಿ ವಿಷಯಕವು. ॥ ೨೩. ॥

## ಮಾಯಾವಾದಿರೀತ್ಯಾ

ವಿಚಾರ ॥ (೧) ಅಸದ್ವಾ ಇದಮಗ್ರ ಆಸೀತ್ ಎನ್ನುವಲ್ಲಿ ಅಸತ್ತೂ ಕಾರಣವೆಂದು ಹೇಳಲ್ಪಡುತ್ತದೆ ಎಂದು ಪೂರ್ವಪಕ್ಷವು ಬಂದರೆ **ಅಸ್ತಿ ಬ್ರಹ್ಮೇತಿ ಚೇದ್ವೇದ** ಎಂದು ಪೂರ್ವಪ್ರಕೃತನಾದ ಬ್ರಹ್ಮನೇ ಅಸದ್ವಾ ಎನ್ನುವಲ್ಲಿ ಸಮಾಕರ್ಷಿಸಿಕೊಳ್ಳಲ್ಪಡುತ್ತಾನೆ ಎಂದು **ಸಮಾಕರ್ಷಾತ್** ಎನ್ನುವ ಸೂತ್ರಾರ್ಥವು. ಈ ಸೂತ್ರವು **ಕಾರಣತ್ವೇನ** ಎನ್ನುವ ಅಧಿಕರಣವು ಶೇಷವು ಎಂದು ಅದ್ವೈತಿಗಳು ಹೇಳುವರು. ಅದು ಅಯುಕ್ತವು. ಹಾಗೆ ಇದ್ದರೆ—ಈ ಸೂತ್ರವು ಬ್ರಹ್ಮನಲ್ಲಿ ಅಸಚ್ಛಬ್ದಸಮನ್ವಯಕ್ಕೆ ಸಾಧಕವಾಗಿ ಸಮನ್ವಯ ಪರವಾದ ತ್ರಿಪಾದಿಯಲ್ಲಿಯೇ ಸಂಗತವಾಗುವುದರಿಂದ ಪ್ರಧಾನಕ್ಕೆ ಅಶಾಬ್ದತ್ವವನ್ನು ನಿರಾಕರಿಸತಕ್ಕ ಚತುರ್ಥಪಾದದಲ್ಲಿಯೂ ಸ್ವಪಕ್ಷವಾಕ್ಯವಿರೋಧನಿರಾಸಕವಾದ ಕಾರಣತ್ವೇನ ಎನ್ನುವ ಅಧಿಕರಣದಲ್ಲಿಯೂ ಅಸಂಗತವಾಗಬೇಕಾಗುವುದು. (೨) ಅಸದ್ವಾಕ್ಯಕ್ಕೆ ಸದೇವ ಸೌಮ್ಯ ಎನ್ನುವ ವಾಕ್ಯದಿಂದ ವಿರೋಧವನ್ನು ಸಮಾಕರ್ಷಸೂತ್ರದಲ್ಲಿ ಅರ್ಥಾತ್ ನಿರಾಕರಿಸಿದೆ ಎಂದರೆ **ಆಕಾಶಾದೇವ ಸಮುತ್ಪದ್ಯಂತೇ** ಇತ್ಯಾದಿ ವಾಕ್ಯಗಳಿಗೆ **ಯತೋ ವಾ ಇಮಾನಿ** ಇತ್ಯಾದಿ ವಾಕ್ಯಗಳಿಂದ ವಿರೋಧವನ್ನು **ಆಕಾಶಸ್ತಲ್ಲಿಂಗಾತ್** ಇತ್ಯಾದಿ ಸೂತ್ರಗಳಲ್ಲಿ ಅರ್ಥಾತ್ ನಿರಾಕರಿಸಿದ್ದರಿಂದ ಅವುಗಳಿಗೂ ಸಮನ್ವಯಪರತ್ವವು ಇಲ್ಲದೆ ಹೋಗಬೇಕಾಗುವುದು, ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ **ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ಚೈತತ್ಕರ್ಮ ಸ ವೇದಿತವ್ಯಃ** ಎನ್ನುವ ಕೌಷೀತಕೀ ಬ್ರಾಹ್ಮಣದಲ್ಲಿ ತಿಳಿಯಲ್ಪಡಲರ್ಹನು ಎಂದು ಹೇಳಿಸಿಕೊಳ್ಳಲ್ಪಟ್ಟವನು **ಯಸ್ಯ ಚೈತತ್ಕರ್ಮ** ಎಂದು ಧರ್ಮಾಧರ್ಮಾಖ್ಯಜೀವಲಿಂಗವಿದ್ದುದರಿಂದ ಜೀವನು ಎಂದಾಗಲೀ ಉತ್ತರ ವಾಕ್ಯದಲ್ಲಿ ಪ್ರಾಣ ಏವೈಕಧಾ ಭವತಿ ಎಂದು ಪ್ರಾಣ ಶಬ್ದಾದಿಗಳು ಇದ್ದುದರಿಂದ ಮುಖ್ಯಪ್ರಾಣನು ಎಂದಾಗಲೀ ಇಟ್ಟುಕೊಳ್ಳಬೇಕು ಎಂದು ಪೂರ್ವಪಕ್ಷವು ಬಂದರೆ ಏತತ್ಕರ್ಮ ಎನ್ನುವಲ್ಲಿ ಏತತ್ ಶಬ್ದಕ್ಕೆ ಪ್ರತ್ಯಕ್ಷಾದಿಸಿದ್ಧವಾದ ಜಗತ್ತೆಂದು ಅರ್ಥವಾದುದರಿಂದ ಕರ್ಮಶಬ್ದವು ಕ್ರಿಯತೇ ಎನ್ನುವ ವ್ಯುತ್ಪತ್ತಿಯಿಂದ ಕ್ರಿಯಮಾಣ=(ಮಾಡಲ್ಪಡತಕ್ಕುದು) ಎನ್ನುವ ಅರ್ಥವನ್ನು ಹೇಳುವ ಪ್ರಯುಕ್ತ ಅಂತೂ ಏತತ್ಕರ್ಮ ಎನ್ನುವುದಕ್ಕೆ ಅರ್ಥಭೂತವಾದ ಜಗತ್ಕರ್ತೃತ್ವವು ಜೀವಾದಿಗಳಲ್ಲಿ ಸರ್ವಥಾ ಕೂಡದೆ ಇರುವುದರಿಂದ ಬ್ರಹ್ಮನೇ ಎಂದು ಅದ್ವೈತಿ ರಾಮಾನುಜಾಚಾರ್ಯರಿಬ್ಬರೂ ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. ಹಿಂದಿನ ಮೂರು ಪಾದಗಳಲ್ಲಿ ಸಮನ್ವಯವನ್ನೂ ಈ ಪಾದದಲ್ಲಿರತಕ್ಕ ಆನುಮಾನಿಕಾದ್ಯಧಿಕರಣ ಮೂರರಲ್ಲಿ ಪ್ರಧಾನಕ್ಕೆ ಅಶಾಬ್ದತ್ವವನ್ನೂ ಕಾರಣತ್ವೇನ ಎನ್ನುವ ಅಧಿಕರಣದಲ್ಲಿ

ಶ್ರುತಿಗಳಿಗೆ ಪರಸ್ಪರ ಅವಿರೋಧವನ್ನೂ ಹೇಳಿ ಪುನಃ ಇಲ್ಲಿ ಸಮನ್ವಯೋಕ್ತಿಯು ಅಸಂಗತವಾಗುವುದು. ನಮ್ಮ ರೀತ್ಯಾ **ಸಮಾಕರ್ಷಾತ್** ಎನ್ನುವಲ್ಲಿ ಅನ್ವಿತಗಳಾದ ಶಬ್ದಗಳಿಗೇನೇ **ಜಗದ್ವಾಚಿತ್ವಾತ್** ಎನ್ನುವ ಸೂತ್ರದಲ್ಲಿಯೂ ಅನ್ವಯವು ಕೂಡುವಾಗ ಏತಚ್ಛಬ್ದಸ್ಯ ಎನ್ನುವ ಅಧ್ಯಾಹಾರವು ಕೂಡಲಾರದು. ಇತ್ಯಾದ್ಯನೇಕ ದೋಷಗಳು ಬರುವುದರಿಂದ ಅವರಿಬ್ಬರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

ಸರ್ವಶಬ್ದಗಳಿಗೆ ಈಶ್ವರನಲ್ಲಿಯೂ ಈಶ್ವರೇತರವಾದ ಜಗತ್ತಿನಲ್ಲಿಯೂ ಹೇಳಲ್ಪಟ್ಟ ಮುಖ್ಯತ್ವವು ೧ ಸಮಾನವೋ ೨ ಅಥವಾ ಈಶ್ವರನಲ್ಲಿ ಅಧಿಕವಾದ ಮುಖ್ಯತ್ವವು, ಅನ್ಯತ್ರ ಹೀನವಾದ ಮುಖ್ಯತ್ವವು ಎಂದೋ, ಎಂದು ಸಂದೇಹವು. ಅನೇಕಾರ್ಥಗಳನ್ನು ಹೇಳತಕ್ಕ ಅಕ್ಷಹರಿ ಮೊದಲಾದ ಶಬ್ದಗಳಿಗೆ ಅನೇಕ ಅರ್ಥಗಳಲ್ಲಿ ಮುಖ್ಯತ್ವವಿದ್ದಂತೆಯೇ ಸರ್ವಶಬ್ದಗಳಿಗೆ ಈಶ್ವರನಲ್ಲಿಯೂ ಈಶ್ವರೇತರವಾದ ಜಗತ್ತಿನಲ್ಲಿಯೂ ತುಲ್ಯವಾದ ಮುಖ್ಯತ್ವವೇ ಬರಬೇಕಾಗುವುದು. ಇಲ್ಲವಾದರೆ ಈಶ್ವರೇತರದಲ್ಲಿ ಹೀನವೃತ್ತಿಯೆಂದು ಹೇಳಿದರೆ ಲಕ್ಷಣಾವೃತ್ತಿಗೇನೇ ಮುಖ್ಯವೃತ್ತಿಯೆಂದು ಪರಿಭಾಷೆಯು ಎಂದು ಆಗುವುದು. ಈಶ್ವರನಲ್ಲಿ ಮುಖ್ಯತ್ವಕ್ಕೆ ಆಧಿಕ್ಯವಿದ್ದರೆ, ಅಲ್ಲಿಯೇ ಪ್ರಸಿದ್ಧಿಯು ಬರಬೇಕಾಗುವುದರಿಂದ ಜಗತ್ತಿನಲ್ಲಿ ಶಬ್ದಗಳಿಗೆ ಪ್ರಸಿದ್ಧಿಯು ಬಾರದೆ ಹೋಗಬೇಕಾಗುವುದು. ಈಶ್ವರಜ್ಞಾನದಿಂದಲೇ ಪುರುಷಾರ್ಥವು ಸಿದ್ಧಿಸುವುದರಿಂದ ಕರ್ಮದೇವತಾದಿಗಳಲ್ಲಿ ಶಬ್ದಗಳಿಗೆ ಫಲಾಂತರವನ್ನು ಇಚ್ಛಿಸದೆ ಇರುವ ಮುಮುಕ್ಷುವನ್ನು ಕುರಿತು ಹೀನವೃತ್ತಿಯಿಂದ ವ್ಯವಹಾರವು ವ್ಯರ್ಥವಾಗಬೇಕಾಗುವುದು. ಮತ್ತು ಶಬ್ದಪ್ರವೃತ್ತಿನಿಮಿತ್ತವು ಈಶ್ವರನಲ್ಲಿದ್ದಪ್ರಯುಕ್ತ ಅಲ್ಲಿ ಅಧಿಕ್ಯವು ಎನ್ನುವುದೂ ಯುಕ್ತವಲ್ಲ, ಇತರತ್ರವೂ ಶಬ್ದಪ್ರವೃತ್ತಿನಿಮಿತ್ತವು ಇದೆ. ಆದಕಾರಣ ಅನ್ಯತ್ರ ಹೀನವೃತ್ತಿಯೆಂದು ಹೇಳಿದ್ದು ಯುಕ್ತವಾಗಲಾರದು. ಎಂದು ಪೂರ್ವಪಕ್ಷ ಬಂದರೆ ಹೀಗೆ ಸಿದ್ಧಾಂತಮಾಡಿರುವರು. ಬ್ರಹ್ಮನಲ್ಲಿ ಸರ್ವಜಗತ್ತಿನಿಂದ ಅತ್ಯಧಿಕವಾಗಿಯೇ ಶಬ್ದಗಳಿಗೆ ಮುಖ್ಯತ್ವವು ಇತರತ್ರ ರೂಢಿಯಿದ್ದರೂ ವಿದ್ವದ್ರೂಢಿ ಅವಿದ್ವದ್ರೂಢಿಗಳಿಂದಲೂ, ಇತರತ್ರ ಯೋಗವಿದ್ದರೂ ಯೋಗಮಹಾಯೋಗಗಳಿಂದಲೂ, ತಾರತಮ್ಯವು ಕೂಡುವುದರಿಂದ ಮಹಾಯೋಗವಿದ್ವದ್ರೂಢಿಗಳಿಂದ ಪರಮಮುಖ್ಯವೃತ್ತಿಯಿಂದ ವಿಷ್ಣುವಿನಲ್ಲಿಯೇ ಇರತಕ್ಕ ಶಬ್ದಗಳನ್ನು ವಿಷ್ಣುವಿನಿಂದ ಸೆಳೆದು ಮುಖ್ಯವೃತ್ತಿಯಿಂದ ಅನ್ಯತ್ರ ಶಬ್ದಗಳಿಗೆ ವ್ಯವಹಾರವು. ಬಾಲಕರಿಗೆ ಚಿತ್ರದಲ್ಲಿ ಬರೆದ ಸಿಂಹಾದಿಗಳಲ್ಲಿ ವ್ಯವಹಾರವಿದ್ದಂತೆಯೇ ಜನರಿಗೆ ಅನ್ಯತ್ರದಲ್ಲಿಯೇ ಶಬ್ದವ್ಯವಹಾರವು ಇದ್ದಪ್ರಯುಕ್ತ ಅನ್ಯತ್ರ ಪ್ರಸಿದ್ಧಿಯು ಕೂಡಬಹುದು. ಕರ್ಮದೇವತಾದಿಗಳಿಗೆ ಆಧಾರನು ಇತ್ಯಾದಿ ಪ್ರಕಾರ ಈಶ್ವರನ ಜ್ಞಾನ ಬರುವುದಕ್ಕಾಗಿಯೇ ಕರ್ಮಾದಿಗಳಲ್ಲಿ ವೇದ ಗತಶಬ್ದಗಳಿಗೆ ವ್ಯವಹಾರವು ಕೂಡಬಹುದು. ॥ ೫ ॥

**ಸಮಾಕರ್ಷಾಧಿಕರಣವು ಸಮಾಪ್ತವಾಯಿತು.**

# ೬ ಪ್ರಕೃತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸ್ತ್ರೀತ್ವರೂಪಲಿಂಗದಿಂದ ಅನ್ಯತ್ರೈವ ಪ್ರಸಿದ್ಧಗಳಾದ

ಸ್ತ್ರೀಲಿಂಗಗಳಾದ ಸರ್ವಶಬ್ದಗಳಿಗೆ ಸಮನ್ವಯವನ್ನು ಮಾಡುತ್ತಾರೆ. ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಸ್ತ್ರೀಶಬ್ದಾ ಅಪಿ ತಸ್ಮಿನ್ನೇವ । ಇತ್ಯಾಹ ॥ ೧ ॥**

ಭಾಷ್ಯಾರ್ಥ ॥ (ಶ್ರೀಹರಿಯಲ್ಲಿ ಸ್ತ್ರೀತ್ವವು ಕೂಡದೆ ಇರುವುದರಿಂದ ಪ್ರಕೃತ್ಯಾದಿ ಸ್ತ್ರೀಲಿಂಗಶಬ್ದ ವಾಚ್ಯನು ಶ್ರೀಹರಿಯು ಆಗಲಾರನು ಎನ್ನುವ ಪೂರ್ವಪಕ್ಷವನ್ನು ತಿರಸ್ಕರಿಸುದಕ್ಕಾಗಿ) ಸ್ತ್ರೀಲಿಂಗಶಬ್ದಗಳೂ ಪರಮಾತ್ಮನಲ್ಲಿಯೇ ಕೂಡುತ್ತವೆ ಎಂದು ಸೂತ್ರಕಾರರು ಸಾಧಿಸುತ್ತಾರೆ.

ವಿಶೇಷಾಂಶ ॥ ಆನಂದಮಯ, ಇಂದ್ರ, ವರುಣ, ಸೂರ್ಯ, ಅಗ್ನಿ ಆಕಾಶ, ಪ್ರಾಣ ಮೊದಲಾದ ಪುಲ್ಲಿಂಗಶಬ್ದಗಳು, ಬ್ರಹ್ಮ ಅಕ್ಷರ ಜ್ಯೋತಿಃ ಮೊದಲಾದ ನಪುಂಸಕ ಶಬ್ದಗಳು ಮಾತ್ರವಲ್ಲ ಮತ್ತೆ **ಸರ್ವಾಯತನಾ ಪ್ರಕೃತಿಃ ಅವಿಕೃತಿಃ** ಇತ್ಯಾದಿ ವತ್ಸಶ್ರುತಿಯಲ್ಲಿಯೂ **ಯಾ ಪ್ರಾಣೇ ಸಂವಿಶತ್ಯದಿತಿರ್ದೇವತಾ ಮಾಯೀ** ಎಂದು ಕಾಠಕದಲ್ಲಿಯೂ ಇತರ ಕಡೆಗಳಲ್ಲಿಯೂ ಶ್ರುತಗಳಾದ ಎಲ್ಲಾ ಸ್ತ್ರೀಲಿಂಗಶಬ್ದಗಳೂ ಕೂಡ ಶ್ರೀಹರಿಯಲ್ಲಿಯೇ ಪರಮಮುಖ್ಯವೃತ್ತಿಯಿಂದ ವಾಚಕಗಳಾಗಿವೆ ಎಂದು ಅಪಿ ಶಬ್ದಾರ್ಥವು.

## ಸೂತ್ರ ॥ ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ ॥ ೨೪ ॥

ಸೂತ್ರಾರ್ಥ ॥ ಪ್ರಕೃತಿಶ್ಚ=ಏಷಾ ಹ್ಯೇವ ಪ್ರಕೃತಿಃ ಅವಿಕೃತಿಃ ಎನ್ನುವಲ್ಲಿಯೂ ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯೀ ಎನ್ನುವಲ್ಲಿಯೂ ಪ್ರಕೃತ್ಯಾದಿ ಸ್ತ್ರೀಲಿಂಗಶಬ್ದವಾಚ್ಯನೂ ಕೂಡ ಮುಖ್ಯತಃ ತತ್ತು=ವಿಷ್ಣುವೇ. ಶ್ರೀತತ್ತ್ವಾದಿಗಳಲ್ಲ. ಪ್ರತಿಜ್ಞಾದೃಷ್ಟಾಂತಾನುಪರೋಧಾತ್=ಹಂತೈತಮೇವ ಪುರುಷಂ ಇತ್ಯಾದಿ ಪ್ರತಿಜ್ಞಾ ಯಥಾ ನದ್ಯಃ ಸ್ಯಂದಮಾನಾಃ ಎನ್ನುವ ದೃಷ್ಟಾಂತ ಇವುಗಳ ಅನುಕೂಲ್ಯಸಿದ್ಧಿ ಇದ್ದುದರಿಂದ ವಾ ಅನುಸರಣದಿಂದ.

**ಭಾಷ್ಯ ॥ ಹಂತೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ (ವತ್ಸಶ್ರುತಿಃ) ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಾಣಾಃ ಸಮುದ್ರಮಭಿಸಂವಿಶಂತಿ । ಏವಮೇವೈತಾನಿ ನಾಮಾನಿ ಸರ್ವಾಣಿ ಪುರುಷಮಭಿಸಂವಿಶಂತಿ । ಇತಿ ಪ್ರತಿಜ್ಞಾ-ದೃಷ್ಟಾಂತಾನುಪರೋಧಾತ್ ಪ್ರಕೃತಿಶಬ್ದವಾಚ್ಯೋಽಪಿ ಸ ಏವ ॥ ೨೪ ॥ ॥ ೨ ॥**

ಭಾಷ್ಯಾರ್ಥ ॥ ಪುರುಷಂ=ಪೂರ್ಣಪ್ರವೃತ್ತಿನಿಮಿತ್ತವುಳ್ಳ ಈ ಪರಮಾತ್ಮನನ್ನೇ ಎಲ್ಲಾ ಶಬ್ದಗಳೂ ಪರಮಮುಖ್ಯವೃತ್ತಿಯಿಂದ ಹೇಳುತ್ತವೆ. ಹೇಗೆ ಹರಿಯುತ್ತಿರುವ, ಸಮುದ್ರವೇ ಆಶ್ರಯವಾಗಿ ಉಳ್ಳ ನದಿಗಳು ಸಮುದ್ರಕ್ಕೆ ಅಭಿಮುಖವಾಗಿ ಹೋಗಿ ಸಮುದ್ರವನ್ನು ಪ್ರವೇಶಮಾಡುತ್ತವೋ, ಹೀಗೆಯೇ ಪ್ರಮಿತಗಳಾದ ಎಲ್ಲಾ ನಾಮಗಳು ಆ ಪರಮಾತ್ಮನನ್ನೇ ವಾಚಕಗಳಾಗಿ ಪ್ರವೇಶಮಾಡುತ್ತವೆ. ಶ್ರೀಹರಿಯು ಅಶೇಷನಾಮವಾಚ್ಯನು ಎನ್ನುವ ವಿಷಯದಲ್ಲಿ ಇಂತಹ ಪ್ರತಿಜ್ಞಾ ದೃಷ್ಟಾಂತಗಳ ಆನುಕೂಲ್ಯದಿಂದ ಪ್ರಕೃತಿ ಮೊದಲಾದ ಸ್ತ್ರೀಶಬ್ದವಾಚ್ಯನೂ ಶ್ರೀಹರಿಯೇ.

ವಿಶೇಷಾಂಶ ॥ ಸ್ತ್ರೀಯರಲ್ಲಿ ಪ್ರಕೃತಿಯು (ಲಕ್ಷ್ಮಿಯು) ಪ್ರಧಾನಳಾದುದರಿಂದ ತದ್ವಾಚಕವಾದ ಪ್ರಕೃತಿ ಶಬ್ದವನ್ನು ಕಂಠತಃ ಹೇಳಿರುವರು. ॥ ೨೪ ॥

ಪೀಠಿಕೆ ॥ ಹೀಗೆ ಸಾಮಾನ್ಯಪ್ರಮಾಣದಿಂದ ಶ್ರೀಹರಿಗೆ ಪ್ರಕೃತಿ ಮೊದಲಾದ ಶಬ್ದವಾಚ್ಯತ್ವವನ್ನು ಪ್ರತಿಪಾದಿಸಿ ಈಗ ಎಲ್ಲಾ ಸ್ತ್ರೀಲಿಂಗಶಬ್ದಗಳಿಗೆ ಉಪಲಕ್ಷಕವಾದ ಪ್ರಕೃತಿಶಬ್ದ ವಾಚ್ಯತ್ವವಿಷಯದಲ್ಲಿಯೇ ವಿಶೇಷವಾಗಿ ಪ್ರಮಾಣವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಭಿಧ್ಯೋಪದೇಶಾಚ್ಚ ಓಂ ॥ ೨೫ ॥

ಸೂತ್ರಾರ್ಥ ॥ ಅಭಿಧ್ಯೇಗೆ=(ಇಚ್ಛೆಗೆ) ಪ್ರಕೃತಿಶಬ್ದ ವಾಚ್ಯತ್ವವನ್ನು ಹೇಳಿದ್ದರಿಂದ ಪ್ರಕೃತಿಯು ಅಭಿಧ್ಯಾಶಬ್ದವಾಚ್ಯವು. ಹೀಗೆಯೇ ಅಭಿಧ್ಯೇಗೆ ಪರಮೇಶ್ವರಸಂಬಂಧಿತ್ವವನ್ನು ಹೇಳಿದ್ದರಿಂದ ಅಭಿಧ್ಯೆಯೂ ಪರಮಾತ್ಮನದ್ದೇ. ಹೀಗೆಯೇ ಬ್ರಹ್ಮನಿಗೆ ಅಭಿಧ್ಯಾತ್ವವನ್ನು ಹೇಳಿದ್ದರಿಂದ ಅಂದರೆ ಇಚ್ಛಾರೂಪತ್ವವನ್ನು ಹೇಳಿದ್ದರಿಂದ ಸಿದ್ಧವಾದ ಅಭಿಧ್ಯೇಗೆ ಬ್ರಹ್ಮತ್ವವನ್ನು ಹೇಳಿದ್ದರಿಂದ ಅಭಿಧ್ಯೇಯು ಬ್ರಹ್ಮನೇ. ತಥಾಚ ಹಿಂದೆ ಹೇಳಿದ ಸಾಮಾನ್ಯಹೇತುವಿನಿಂದ ಮಾತ್ರವಲ್ಲ ಮತ್ತೆ ಪ್ರಕೃತಿಶಬ್ದ ವಾಚ್ಯವಾದ ಇಚ್ಛಾತ್ಮಕತ್ವವನ್ನು ಹೇಳಿದ್ದರಿಂದ ಪ್ರಕೃತಿಶಬ್ದವಾಚ್ಯನು ಬ್ರಹ್ಮನೇ.

**ಭಾಷ್ಯ ॥ ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ । (ಶ್ವೇತಾಶ್ವತರಶ್ರುತಿಃ ೪.೧೦)। ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ । ಪ್ರಕೃತಿರ್ವಾಸನೇತ್ಯೇವ ತವೇಚ್ಛಾನಂತ ಕಥ್ಯತೇ (ಸ್ಮೃತಿಃ)॥ ಇತಿ ವಚನಾತ್ತದಭಿಧ್ಯೈವ ಚ ಪ್ರಕೃತಿಶಬ್ದೇನೋಚ್ಯತೇ ॥ ೩ ॥**

ಭಾಷ್ಯಾರ್ಥ ॥ ಮಾಯೆ (ಇಚ್ಛೆ)ಯನ್ನಾದರೂ ಪ್ರಕೃತಿಯನ್ನಾಗಿ ತಿಳಿಯತಕ್ಕದ್ದು. ಮಾಯೆಯನ್ನು ಶ್ರೀಹರಿಯನ್ನಾಗಿ ತಿಳಿಯತಕ್ಕದ್ದು (ಈ ಶ್ರುತಿವಚನದಿಂದ) ಎಲೋ ಶ್ರೀಹರಿಯೇ ನಿನ್ನ ಇಚ್ಛೆಯೇ ಮಹಾಮಾಯಾ ಇತ್ಯಾದಿ ಶಬ್ದಗಳಿಂದ ಹೇಳಲ್ಪಡುತ್ತದೆ ಎನ್ನುವ ಸ್ಮೃತಿವಚನದಿಂದಲೂ ಈಶ್ವರನ ಇಚ್ಛೆಯೇ ಪ್ರಕೃತಿಪದದಿಂದ ಹೇಳಲ್ಪಡುತ್ತದೆ. (ಇತರವಾದುದು ಅಲ್ಲ)

ವಿಶೇಷಾಂಶ ॥ ಏವಂಚ ಯಾವುದು ಪ್ರಕೃತಿಪದದಿಂದ ಇಲ್ಲಿ ಹೇಳಲ್ಪಡುತ್ತದೋ ಅದು ಈಶ್ವರನ ಇಚ್ಛೆಯೇ, ಮತ್ತೊಬ್ಬನದ್ದಲ್ಲ.

ಪೀಠಿಕೆ ॥ ಹಾಗಾದರೆ ಇಚ್ಛೆಗೆ ಪ್ರಕೃತಿಶಬ್ದ ವಾಚ್ಯತ್ವವನ್ನು ಹೇಳಿದರೂ ಪರಮಾತ್ಮನಿಗೆ ಪ್ರಕೃತಿ ಶಬ್ದವಾಚ್ಯತ್ವವು ಹೇಗೆ ಎಂದರೆ—

**ಭಾಷ್ಯ ॥ ಸೋಽಭಿಧ್ಯಾ ಸ ಜ್ಯೋತಿಃ ಸ ಪ್ರಜ್ಞಾ ಸ ಆನಂದಃ । ಇತಿ ಶ್ರುತೇಃ ಅಭಿಧ್ಯಾ ಚ ಸ್ವರೂಪಮೇವ ॥ ೪ ॥**

ಭಾಷ್ಯಾರ್ಥ ॥ ಆ ಶ್ರೀಹರಿಯು ಇಚ್ಛಾಸ್ವರೂಪನು. (ಸರ್ವಪ್ರೇರಕರೂಪತ್ವಾಜ್ಜ್ಯೋತಿರಿತ್ಯ-

ಭಧೀಯತೇ। ಎಂದು ಹೇಳಿದ್ದರಿಂದ) ಜ್ಯೋತಿಃ=ಪ್ರೇರಣಾರೂಪನು, ಪ್ರಜ್ಞಾಸ್ವರೂಪನು, ಆನಂದಸ್ವರೂಪನು ಎನ್ನುವ ಶ್ರುತಿಯಿಂದ ಅಭಿಧ್ಯಾ (ಇಚ್ಛೆಯೂ ಕೂಡ) ಬ್ರಹ್ಮಸ್ವರೂಪವೇ. (ಭಿನ್ನವಲ್ಲವೆಂದು ತಿಳಿಯುತ್ತದೆ.)

**ಪೀಠಿಕೆ** ॥ ಹಾಗಾದರೆ ಇಚ್ಛೆಯು ಭಗವತ್ಸ್ವರೂಪವಲ್ಲ. ಮಾಯಿನಂ ಎನ್ನುವಲ್ಲಿದ್ದ ಇನಿ ಪ್ರತ್ಯಯದಿಂದಲೂ, ತವ ಎನ್ನುವ ಷಷ್ಠೀವಿಭಕ್ತಿಯಿಂದಲೂ ಭೇದಸಾಧಕ ಸಂಬಂಧವನ್ನು ಹೇಳಿದ್ದಾರೆ, ಎಂದರೆ—

**ಭಾಷ್ಯ ॥ ಧ್ಯಾಯತಿ ಧ್ಯಾನರೂಪೋಽಸೌ ಸುಖೀ ಸುಖಮತೀವ ಚ । ಪರಮೈಶ್ವರ್ಯಯೋಗೇನ ವಿರುದ್ಧಾರ್ಥತಯೇಷ್ಯತೇ ॥ ಇತಿ ಬ್ರಹ್ಮಾಂಡೇ ॥ ೨೫ ॥ ॥ ೫ ॥**

**ಭಾಷ್ಯಾರ್ಥ** ॥ ಈ ಶ್ರೀಹರಿಯು ಧ್ಯಾನಸ್ವರೂಪನಾದಾಗ್ಯೂ ಧ್ಯಾನಕರ್ತನೆಂದು ಹೇಳಲ್ಪಡುತ್ತಾನೆ. ಹೀಗೆಯೇ ಅತ್ಯಂತವಾಗಿ, (ಸುಖಂ=)ಸುಖಸ್ವರೂಪನಾಗಿ, ಅಂದರೆ ಸ ಆನಂದಃ ಎನ್ನುವ ಶ್ರುತಿಯಲ್ಲಿ ಸುಖರೂಪನೆಂದು ಹೇಳಲ್ಪಟ್ಟವನೇ ಸುಖೀ ಎಂದು (ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಡುತ್ತಾನೆ.) ಚ ಶಬ್ದವು **ಸೋಽಭಿಧ್ಯಾ** ಎಂದು ಮಾಯಾರೂಪನೆಂದು ಹೇಳಲ್ಪಟ್ಟವನೇ **ಮಾಯಿನಂ** ಇತ್ಯಾದಿಗಳಲ್ಲಿ ಮಾಯೀ ಎಂದು ಹೇಳಲ್ಪಡುತ್ತಾನೆ ಎನ್ನುವುದಕ್ಕೆ ಸಮುಚ್ಚಾಯಕವು. ಪರಮೈಶ್ವರ್ಯರೂಪವಾದ ಉಪಾಯದಿಂದ ವಿರುದ್ಧಧರ್ಮೋಪೇತನಾಗಿ (ಅಂದರೆ—ನಿರ್ಭಿನ್ನನಾದ ಬ್ರಹ್ಮನಲ್ಲಿ ವಿರುದ್ಧವಾಗಿ ಪ್ರತೀತವಾದ ಸುಖಿತ್ವ ಸುಖಿತ್ವ ಮೊದಲಾದ ಅರ್ಥವನ್ನು ತಿಳಿಸಿಕೊಡತಕ್ಕ ಶಬ್ದದಿಂದ ವಾಚ್ಯನೆಂದು) (ಪ್ರಾಮಾಣಿಕರಿಂದ) ಅಂಗೀಕೃತವಾಗಿದೆ. ಹೀಗೆ ಬ್ರಹ್ಮಾಂಡ ಪುರಾಣದಲ್ಲಿ (ಹೇಳಿದ್ದರಿಂದ ವಿರೋಧವಿಲ್ಲ) ॥ ೨೫ ॥

**ಪೀಠಿಕೆ** ॥ ಹಾಗಾದರೆ ಹಿಂದೆ ಹೇಳಿದ ಪ್ರಮಾಣಗಳಿಂದ ಸಾಮಾನ್ಯತಃ ಇಚ್ಛಾದ್ವಾರಾ ವಾ ಪ್ರಕೃತಿಶಬ್ದವಾಚ್ಯತ್ವವು ಪ್ರಾಪ್ತವಾಗುವುದಾದರೂ ಸಾಕ್ಷಾತ್ತಾಗಿ ಈಶ್ವರನಿಗೆ ಪ್ರಕೃತಿಶಬ್ದವಾಚ್ಯತ್ವವು ಪ್ರಾಪ್ತವಾಗುವುದಿಲ್ಲ ಎನ್ನುವ ಆಶಂಕೆಯನ್ನು ವಿಶೇಷಪ್ರಮಾಣವನ್ನು ಹೇಳಿ ಪರಿಹರಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸಾಕ್ಷಾಚ್ಚೋಭಯಾಮ್ನಾನಾತ್ ಓಂ ॥ ೨೬ ॥

**ಸೂತ್ರಾರ್ಥ** ॥ ಸಾಕ್ಷಾಚ್ಚ=ಅದ್ಯಸೂತ್ರೋಕ್ತವಾದ ಸಾಮಾನ್ಯರೂಪವಾದ ದ್ವಾರವನ್ನಾಗಲೀ, ದ್ವಿತೀಯ ಸೂತ್ರೋಕ್ತವಾದ ಪ್ರಕೃತಿಶಬ್ದವಾಚ್ಯವಾದ ಇಚ್ಛಾತ್ಮಕತ್ವರೂಪವಾದ ಪಾರಂಪರ್ಯರೂಪದ್ವಾರವನ್ನಾಗಲೀ ಅಪೇಕ್ಷಿಸದೆ ಸಾಕ್ಷಾತ್ತಾಗಿಯೇ ಉಭಯಾಮ್ನಾನಾತ್=ಪ್ರಕೃತ್ಯಾದಿ ಸ್ತ್ರೀಶಬ್ದವಾಚ್ಯತ್ವವನ್ನು ಪುರುಷಾದಿ ಪುಲ್ಲಿಂಗ ಶಬ್ದವಾಚ್ಯತ್ವವನ್ನು ಏಷಃ ಸ್ತ್ರೀ ಏಷ ಪುರುಷಃ ಎನ್ನುವ ಶ್ರುತಿಯಲ್ಲಿ ಹೇಳಿದ್ದರಿಂದ ಪ್ರಕೃತ್ಯಾದಿಶಬ್ದವಾಚ್ಯನು ವಿಷ್ಣುವೇ. (ಈಶ್ವರನಿಗೆ ಪ್ರಕೃತ್ಯಾದಿ ಶಬ್ದವಾಚ್ಯತ್ವವು ಇಲ್ಲವೆಂದು ಶಂಕಿಸಕೂಡದು.)

**ಭಾಷ್ಯ ॥ ಏಷಸ್ತ್ರ್ಯೇಷ ಪುರುಷ ಏಷ ಪ್ರಕೃತಿರೇಷ ಆತ್ಮೈಷ ಬ್ರಹ್ಮೈಷ ಲೋಕ ಏಷ ಆಲೋಕೋ ಯೋಽಸೌ ಹರಿರಾದಿರನಾದಿರನಂತೋಽನಂತಃ ಪರಮಃ ಪರಾದ್ವಿಶ್ವರೂಪಃ । ಇತಿ ಪೈಂಗಿಶ್ರುತೌ ಸಾಕ್ಷಾದೇವ ಪ್ರಕೃತಿಪುರುಷತ್ವಾಮ್ನಾನಾತ್ ॥ ೨೬ ॥ ॥ ೬ ॥**

ಭಾಷ್ಯಾರ್ಥ ॥ ಶ್ರೀಹರಿಯು (ಸತತಂ ರಮಣಾತ್ ಸ್ತ್ರೀ ಎಂದು ತತ್ವಪ್ರದೀಪದಲ್ಲಿ ಹೇಳಿದ ಪ್ರಕಾರ) ನಿರಂತರದಲ್ಲಿಯೂ ಕ್ರೀಡಿಸುವುದರಿಂದ ಸ್ತ್ರೀಲಿಂಗಶಬ್ದವಾಚ್ಯನು. ಈತನೇ ಪುರುಷಶಬ್ದ ವಾಚ್ಯನು, ಈತನು ಪ್ರಕೃತಿಶಬ್ದವಾಚ್ಯನು. ಆತ್ಮಶಬ್ದವಾಚ್ಯನು. ಈತನು ಸ್ತ್ರೀಪುರುಷದೋಷಗಳು ಇಲ್ಲದಿರುವುದರಿಂದ ಬ್ರಹ್ಮ ಮೊದಲಾದ ಸರ್ವ ನಪುಂಸಕ ಶಬ್ದವಾಚ್ಯನು. (ಶ್ರೀಹರಿಯು ವಿರುದ್ಧಗಳಾದ ಅನೇಕ ಶಬ್ದವಾಚ್ಯನು ಎನ್ನುವಲ್ಲಿ ನಿಮಿತ್ತವನ್ನು ಹೇಳುತ್ತಾರೆ.) ಲೋಕಃ=ಪ್ರಕೃತ್ಯಾದಿಗಳಿಗೆ ಆಧಾರನು, ಆಲೋಕಃ=ಪ್ರಕಾಶರೂಪನು, ಯಾವ ಈ ಶ್ರೀಹರಿಯು, ಆದಿಃ=ಜಗಜ್ಜನ್ಮಾದಿಗಳಿಗೆ ಕಾರಣನು, ವಿಶ್ವರೂಪಃ=ಸ್ತ್ರೀ ಮೊದಲಾದ ಸರ್ವ ವಸ್ತುಗಳಲ್ಲಿ ರೂಪವುಳ್ಳವನು. (ಹಾಗಾದರೆ ಆಧಾರಭೂತಗಳಾದ ವಸ್ತುಗಳ ಉತ್ಪತ್ತಿ ನಾಶಗಳಿಂದ ಶ್ರೀಹರಿಗೂ ಉತ್ಪತ್ತಿ ನಾಶಗಳು ಆಗುವುವು ಎಂದರೆ) ಅನಾದಿಃ ಅನಂತಃ=ಉತ್ಪತ್ತಿ ನಾಶಗಳು ಇಲ್ಲದಿರುವವನು, ಪರಾತ್‌ಪರಮಃ=ಉತ್ತಮವಾದ ಪ್ರಕೃತ್ಯಾದಿಗಳಿಂದಲೂ ಉತ್ತಮನು, ಅಂತಃ=ಅಂತಕನು, ಅಥವಾ ಪ್ರಕೃತ್ಯಾದಿಗಳ ಒಳಗೆ ಇರುವವನು, ಹೀಗೆ ಪೈಂಗಿಶ್ರುತಿಯಲ್ಲಿ ಸಾಕ್ಷಾತ್ತಾಗಿಯೇ (ಆ ಶ್ರೀಹರಿಗೆ) ಸ್ತ್ರೀಲಿಂಗ ಪುಲ್ಲಿಂಗ ಶಬ್ದ ವಾಚ್ಯತ್ವವನ್ನು ಹೇಳಿದ್ದರಿಂದ.

ವಿಶೇಷಾಂಶ ॥ ವಿಶ್ವರೂಪಃ ಎನ್ನುವುದರಿಂದ ಶ್ರೀಹರಿಯು ಆವಾವ ಶಬ್ದವಾಚ್ಯನು ಎನ್ನುವ ವಿಷಯದಲ್ಲಿ ಸಾಮಾನ್ಯವಾಗಿ ಆವಾವ ವಸ್ತುಗಳ ಆಶ್ರಯತ್ವ, ಆವಾವ ವಸ್ತುಗಳಲ್ಲಿ ಇರುವಿಕೆ, ಆವಾವ ವಸ್ತುಗಳನ್ನು ಪ್ರಕಾಶಪಡಿಸುವಿಕೆ, ಆವಾವ ವಸ್ತುಗಳ ಕಾರಣತ್ವ, ಆವಾವ ವಸ್ತುಗಳ ಆಕಾರತ್ವ, ನಿಯಾಮಕತ್ವ ಮೊದಲಾದ ನಿಮಿತ್ತಗಳು ಉಕ್ತಗಳಾದವು. ನಿಯಾಮಕ ರೂಪಬಾಹುಲ್ಯವಿದ್ದುದರಿಂದ ವಿರುದ್ಧ ಅನೇಕ ಶಬ್ದಗಳಿಂದ ವಾಚ್ಯನು ಎಂದೂ ಉಪಪನ್ನವಾಗುವುದು. ॥ ೨೬ ॥

ಪೀಠಿಕೆ ॥ ಸ್ತ್ರೀಲಿಂಗ ಶಬ್ದವಾಚ್ಯತ್ವಕ್ಕೆ ಉಪಲಕ್ಷಕವಾದ ಪ್ರಕೃತಿಶಬ್ದವಾಚ್ಯತ್ವವನ್ನು ಶ್ರೀಹರಿಗೆ ಶ್ರುತಿಯಲ್ಲಿ ಹೇಳಿದರೂ ಪ್ರವೃತ್ತಿನಿಮಿತ್ತವಿಲ್ಲದಿರುವುದರಿಂದ ಅದು ಹೇಗೆ ಕೂಡುತ್ತದೆ. ಕೇವಲ ಸಂಕೇತವನ್ನು ಸಿದ್ಧಾಂತಿಗಳು ಅಂಗೀಕರಿಸುವುದಿಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳಿ ಫಲಿತಾಂಶವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಆತ್ಮಕೃತೇಃ ಪರಿಣಾಮಾತ್ ಓಂ ॥ ೨೭ ॥

ಸೂತ್ರಾರ್ಥ ॥ (ಮೂಲಪ್ರಕೃತಿಗೆ) ಪರಿಣಾಮಾತ್=ಪರಿಣಾಮವನ್ನು ಮಾಡಿ ಪರಿಣತ ವಸ್ತುಗಳ ಸ್ಥಿತಿಗಾಗಿ ಪ್ರೇರಣಾಕ್ಕಾಗಿ, ಆತ್ಮಕೃತೇಃ=ತತ್ತದ್ವಸ್ತುಗಳಲ್ಲಿ ನಿಯಾಮಕ ಬಹುರೂಪವುಳ್ಳವನನ್ನಾಗಿ ಮಾಡಿದ್ದರಿಂದ ಪ್ರಕೃಷ್ಟಾ ಕೃತಿರ್ಯಸ್ಯ ಎನ್ನುವ ಯೋಗಬಲದಿಂದ ಪ್ರಕೃತಿಶಬ್ದವಾಚ್ಯನು ವಿಷ್ಣುವೇ.

**ಭಾಷ್ಯ ॥ ಪ್ರಕರ್ಷೇಣ ಕರೋತೀತಿ ಪ್ರಕೃತಿರಿತಿ ಯೋಗಾಚ್ಚ ॥ ೭ ॥**

ಭಾಷ್ಯಾರ್ಥ ॥ ಪ್ರಕರ್ಷೇಣ ಕರೋತೀತಿ ಪ್ರಕೃತಿಃ ಎನ್ನುವ ಯೋಗದಿಂದಲೂ ನಿರತಿಶಯ ಪ್ರವೃತ್ತಿನಿಮಿತ್ತವತ್ತ್ವರೂಪವಾದ ಮಹಾಯೋಗವಿದ್ದುದರಿಂದಲೂ ಶ್ರುತಿಯಲ್ಲಿ ಬಹುಲ ಪ್ರಯೋಗರೂಪವಾದ ವಿದ್ವದ್ರೂಢಿಯಿಂದಲೂ ಪ್ರಕೃತಿಶಬ್ದವಾಚ್ಯನು ವಿಷ್ಣುವೇ.

ಪೀಠಿಕೆ ॥ ಈಶ್ವರನಿಗೆ ಪ್ರಕೃಷ್ಟವಾದ ಕೃತಿಯು ಹೇಗೆ ಎಂದರೆ, ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಪ್ರಕೃತಾವನುಪ್ರವಿಶ್ಯ ತಾಂ ಪರಿಣಾಮ್ಯ ತತ್ಪರಿಣಾಮನಿಯಾಮಕತ್ವೇನ ತತ್ರಸ್ಥಿತ್ವಾ (ಪರಿಣಾಮೇಷು ಸ್ಥಿತ್ವಾ) ಆತ್ಮನೋ ಬಹುಧಾಕರಣಾತ್ ॥ ೮ ॥**

ಭಾಷ್ಯಾರ್ಥ ॥ (ಪ್ರಕೃತಿಗೆ ಸ್ವತಃ ಪರಿಣಾಮದಲ್ಲಿ ಸಾಮರ್ಥ್ಯವಿಲ್ಲದಿರುವುದರಿಂದ ಆ ಪರಿಣಾಮಕ್ಕೆ) ಅನುಃ ಅನುಕೂಲವಾಗಿ ಪ್ರಕೃತಿಯಲ್ಲಿ ಪ್ರವೇಶಮಾಡಿ ಆ ಪ್ರಕೃತಿಯನ್ನು ಪರಿಣಾಮೀಕರಿಸಿ (ಅಂದರೆ—ತಾನು ಅವಿಕಾರನಾಗಿಯೇ ಪ್ರಕೃತಿಯಲ್ಲಿದ್ದು ಮಹತ್ತತ್ತ್ವಾದಿ ರೂಪದಿಂದ ವಿಕಾರವನ್ನು ಮಾಡಿ ಆ ಮೇಲೆ) ಪ್ರಕೃತಿ ಪರಿಣಾಮಗಳಾದ ಮಹತ್ತತ್ತ್ವಾದಿಗಳಿಗೆ ಪ್ರೇರಕನಾಗಿ, ಪ್ರಕೃತಿ ಪರಿಣಾಮಗಳಾದ ಮಹತ್ತತ್ತ್ವಾದಿಗಳಲ್ಲಿ ಇದ್ದು (ಅವುಗಳ ಸ್ಥಿತಿಗಾಗಿ) ತನ್ನ ರೂಪಗಳನ್ನು ಬಹುಧಾ ವ್ಯಕ್ತೀಕರಿಸುವುದರಿಂದ (ಈಶ್ವರನ ಕೃತಿಯು ಪ್ರಕೃಷ್ಟವಾಗುವುದು.) (ಆದಕಾರಣ **ಪ್ರಕರ್ಷೇಣ ಕರೋತಿ** ಎನ್ನುವ ಯೋಗದಿಂದಲೂ ಪ್ರಕೃತಿಶಬ್ದವಾಚ್ಯನು ವಿಷ್ಣುವು.)

ಪೀಠಿಕೆ ॥ ತಾನು ಹೇಳಿದ ಸೂತ್ರಾರ್ಥದಲ್ಲಿ ದಾರ್ಢ್ಯ ಹುಟ್ಟುವುದಕ್ಕಾಗಿ ಶ್ರುತಿಸ್ಮೃತಿಗಳನ್ನು ಹೇಳುತ್ತಾರೆ—

**ಭಾಷ್ಯ ॥ ಅಥ ಹೈಷ ಆತ್ಮಾ ಪ್ರಕೃತಿಮನುಪ್ರವಿಶ್ಯಾತ್ಮಾನಂ ಬಹುಧಾ ಚಕಾರ । ತಸ್ಮಾತ್ಪ್ರಕೃತಿಸ್ತಸ್ಮಾತ್ಪ್ರಕೃತಿರಿತ್ಯಾಚಕ್ಷತೇ । ಇತಿ ಭಾಲ್ಲವೇಯಶ್ರುತಿಃ ॥ ೯ ॥**

ಭಾಷ್ಯಾರ್ಥ ॥ ಪ್ರಮೇಯಾಂತರವು ಆರಂಭಿಸಲ್ಪಡುವುದು. ಈ ಶ್ರೀಹರಿಯು (ಯಾವ ಕಾರಣದಿಂದ ಪ್ರಕೃತಿಗೆ ಸ್ವತಃ ಪರಿಣಾಮ ಸಾಮರ್ಥ್ಯವಿಲ್ಲದಿರುವ ಪರಿಣಾಮಕ್ಕೆ ಅನುಕೂಲವಾಗಿ ಪ್ರಕೃತಿಯನ್ನು ಪ್ರವೇಶಮಾಡಿ) ಅದನ್ನು ಪರಿಣಮಿಸಿ ಅದರ ಪರಿಣಾಮವಾದ ಮಹತ್ತತ್ತ್ವಾದಿಗಳಿಗೆ ಪ್ರೇರಕನಾಗಿ (ಅಲ್ಲಿ ಇರುವುದಕ್ಕಾಗಿ) ತನ್ನನ್ನು (ನಿಯಾಮಕ ರೂಪದಿಂದ) ಬಹುಪ್ರಕಾರ ಮಾಡಿಕೊಂಡನೋ, ಆದುದರಿಂದ ಪ್ರಕೃತಿಶಬ್ದವಾಚ್ಯನು. ಪ್ರಕೃತಿಶಬ್ದವಾಚ್ಯತ್ವವಿದ್ದುದರಿಂದ ಈ ಶ್ರೀಹರಿಯನ್ನು ಪ್ರಕೃತಿಯೆಂದು (ಜ್ಞಾನಿಗಳು) ಹೇಳುತ್ತಾರೆ. ಹೀಗೆ ಭಾಲ್ಲವೇಯಶ್ರುತಿಯು (ಹೇಳಿದ ಅರ್ಥದಲ್ಲಿ ಪ್ರಮಾಣವು.)

**ಭಾಷ್ಯ ॥ ಅವಿಕಾರೋऽಪಿ ಪರಮಃ ಪ್ರಕೃತಿಂ ತು ವಿಕಾರಿಣೀಂ । ಅನುಪ್ರವಿಶ್ಯ ಗೋವಿಂದಃ ಪ್ರಕೃತಿಶ್ಚಾಭಿಧೀಯತೇ । ಇತಿ ನಾರದೀಯೇ ॥ ೧೦ ॥**

**ಭಾಷ್ಯಾರ್ಥ ॥** ಯದ್ಯಪಿ ಶ್ರೀಹರಿಯು ಅತ್ಯಂತ ನಿರ್ವಿಕಾರನು ಅಥವಾ ಪ್ರಕೃತಿಯಿಂದ ಉತ್ತಮನು. ಆದಾಗ್ಯೂ (ಚ=) ಯಾವ ಕಾರಣದಿಂದ, (ವಿಕಾರಿಣೇಂ=) ವಿಕಾರಕ್ಕೆ ಅನುಕೂಲವಾಗಿ ಉಪಚಯಾಖ್ಯ ವಿಕಾರದಿಂದ ಯುಕ್ತವಾದ ಪ್ರಧಾನವನ್ನು ಪ್ರವೇಶಮಾಡಿ, (ಪ್ರಕೃತಿಯನ್ನು ಪರಿಣಾಮೀಕರಿಸಿ ಪ್ರಕೃತಿ ಪರಿಣಾಮವಾದ ಮಹತ್ತತ್ತ್ವಾದಿಗಳಿಗೆ ಪ್ರೇರಕನಾಗಿ ಅಲ್ಲಿ ಸ್ಥಿತಿಗಾಗಿ ತನ್ನನ್ನೂ ಕೂಡ ನಿಯಾಮಕ ಬಹುರೂಪಿಯನ್ನಾಗಿ ಮಾಡಿದನೋ, ಆದುದರಿಂದ) ಪ್ರಕೃತಿಶಬ್ದವಾಚ್ಯನು. ಆದುದರಿಂದ (ಜ್ಞಾನಿಗಳಿಂದ) ಪ್ರಕೃತಿಯೆಂದು ಹೇಳಲ್ಪಡುತ್ತಾನೆ. ಎಂದು ನಾರದೀಯ ಪುರಾಣದಲ್ಲಿ (ಉಕ್ತವಾಗಿದೆ.)

**ವಿಶೇಷಾಂಶ ॥ ಗೋವಿಂದಃ** ಎನ್ನುವುದರಿಂದ ನಿರ್ವಿಕಾರತ್ವವಿಷಯದಲ್ಲಿ **ನಿರ್ವಿಕಾರೋಽಕ್ಷರಃ ಶುದ್ಧಃ** ಎನ್ನುವ ವೇದಪ್ರತಿಪಾದ್ಯತ್ವರೂಪವಾದ ಹೇತುವು ಉಕ್ತವಾಯಿತು.

**ಪೀಠಿಕೆ ॥** ಪರರು ಮಾಡಿರುವ ಅಪವ್ಯಾಖ್ಯಾನವನ್ನು ದೂಷಿಸುತ್ತಾರೆ—

**ಭಾಷ್ಯ ॥ ನ ಚಾನ್ಯತ್ಕಲ್ಪ್ಯಂ । ಅಪ್ರಾಮಾಣಿಕತ್ವಾತ್ (ಅಪ್ರಮಾಣಾತ್ವಾತ್) ॥ ೨೭ ॥ ॥ ೧೧ ॥**

**ಭಾಷ್ಯಾರ್ಥ ॥** ನಾವು ಹೇಳಿದ ಅರ್ಥಕ್ಕಿಂತ ಇತರವಾದ, ಬ್ರಹ್ಮನು ಜಗತ್ತಿಗೆ ಉಪಾದಾನ ಕಾರಣನು ಎನ್ನುವುದು (ಪ್ರಕೃತಿಶ್ಚ ಇತ್ಯಾದಿ ಸೂತ್ರಕ್ಕೆ ಅರ್ಥವೆಂದು) ಕಲ್ಪಿಸಕೂಡದು. (ಏಕೆಂದರೆ) (ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನು ಎನ್ನುವುದಕ್ಕೆ) ಪ್ರಮಾಣವಿಲ್ಲದಿರುವುದರಿಂದಲೂ ಅವಿಕಾರಃ ಇತ್ಯಾದಿ ಪ್ರಮಾಣವಿರೋಧವಿದ್ದುದರಿಂದಲೂ ಸಮನ್ವಯಪ್ರತಿಪಾದಕವಾದ ಪ್ರಥಮಾಧ್ಯಾಯದಲ್ಲಿ ಸಂಗತಿಯಿಲ್ಲದಿರುವುದರಿಂದಲೂ. (ಪರರು ಹೇಳಿದ್ದು ಅಯುಕ್ತವೇ.) ॥ ೨೭ ॥

**ಪೀಠಿಕೆ ॥** ಆದಾಗ್ಯೂ ಪ್ರಕೃತಿಶಬ್ದವು ಸ್ತ್ರೀಲಿಂಗವಾಗಿದೆ. ಪರಮಾತ್ಮನು ಪುರುಷನಾದುದರಿಂದ ಅವನಲ್ಲಿ ಸ್ತ್ರೀತ್ವವಿಲ್ಲ. ಆದುದರಿಂದ ಶ್ರೀಹರಿಗೆ ಪ್ರಕೃತಿಶಬ್ದವಾಚ್ಯತ್ವವು ಕೂಡುವುದಿಲ್ಲ ಎನ್ನುವ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಯೋನಿಶ್ಚ ಹಿ ಗೀಯತೇ ಓಂ ॥ ೨೮ ॥

**ಸೂತ್ರಾರ್ಥ ॥** ಯದ್ಭೂತಯೋನಿಂ ಎನ್ನುವ ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಆ ವಿಷ್ಣುವು ಯೋನಿಃ=ತನ್ನ ಶರೀರದಿಂದಲೇ ಸರ್ವೋತ್ಪಾದಕನು ಎಂದೂ ಪ್ರಮಾಣಾಂತರದಲ್ಲಿ ಸ್ತ್ರೀತ್ವ ವುಳ್ಳವನೆಂದೂ (ಅಂದರೆ ಅವ್ಯವಧಾನೇನ ಉತ್ಪತ್ತಿದ್ವಾರತ್ವವುಳ್ಳವನೆಂದೂ) ಪ್ರತಿಪಾದಿಸಲ್ಪಡುತ್ತಾನೆ.

**ವಿಶೇಷಾಂಶ ॥** ಪ್ರಕೃಷ್ಟಕರಣನಿಮಿತ್ತದಿಂದ ಪ್ರಕೃತಿಶಬ್ದವಾಚ್ಯನೆಂದು ಮಾತ್ರವಲ್ಲ, ಮತ್ತೆ ವ್ಯವಧಾನವಿಲ್ಲದೆ ಉತ್ಪತ್ತಿದ್ವಾರತ್ವರೂಪವಾದ ಯೋನಿತ್ವನಿಮಿತ್ತದಿಂದಲೂ ಸ್ತ್ರೀರೂಪತ್ವವಿದ್ದುದ ರಿಂದಲೂ ಸ್ತ್ರೀಲಿಂಗಶಬ್ದವಾಚ್ಯನು ಆಗಿದ್ದಾನೆ. ಆದಕಾರಣ ಆತನಲ್ಲಿ ಸ್ತ್ರೀಲಿಂಗಪ್ರಯೋಗವು ಕೂಡುವುದಿಲ್ಲವೆಂದಾಗಲೀ ಪ್ರಕೃತ್ಯಾದಿ ಸ್ತ್ರೀಲಿಂಗಶಬ್ದಗಳಲ್ಲಿ ಪ್ರಕೃತ್ಯರ್ಥವು ಕೂಡುವುದಿಲ್ಲವೆಂದಾಗಲೀ ಹೇಳಕೂಡದು.

**ಭಾಷ್ಯ ॥ ಅವ್ಯವಧಾನೇನೋತ್ಪತ್ತಿದ್ವಾರತ್ವಂ ಪ್ರಕೃತಿತ್ವಂ । ತಚ್ಚಾಸ್ಯೈವ ಹಿ ಗೀಯತೇ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ (ಮು.೧.೧.೬)। ಇತಿ ॥ ೧೨ ॥**

**ಭಾಷ್ಯಾರ್ಥ ॥** ಸ್ತ್ರೀಮೊದಲಾದ ವ್ಯವಧಾನವಿಲ್ಲದೆ ಮಕ್ಕಳ ಉತ್ಪತ್ತಿದ್ವಾರವಿರುವಿಕೆಯು (ಅಂದರೆ ತನ್ನ ಶರೀರದಿಂದಲೇ ಅಪತ್ಯೋತ್ಪಾದಕತ್ವವು) ಸ್ತ್ರೀಶಬ್ದಪ್ರವೃತ್ತಿನಿಮಿತ್ತವು. **ಆತ್ಮಕೃತೇಃ** ಎನ್ನುವಲ್ಲಿ ಹೇಳಿದ ಪ್ರಕೃಷ್ಟಕರಣಮಾತ್ರವೇ ಪ್ರಕೃತಿಶಬ್ದಪ್ರವೃತ್ತಿನಿಮಿತ್ತವಲ್ಲ. ಮತ್ತೆ ಉಕ್ತಯೋನಿತ್ವವೂ ಕೂಡ ಪ್ರಕೃತ್ಯಾದಿ ಸ್ತ್ರೀಲಿಂಗಶಬ್ದಪ್ರವೃತ್ತಿನಿಮಿತ್ತವು ಎನ್ನುವ ಸಮುಚ್ಚಾಯಕವು ಚ ಶಬ್ದವು. ಆದಾದರೂ ಶ್ರೀಹರಿಗೇನೇ. (ಇತರರಿ ಅಲ್ಲ) ಹಿಃ ಯಾವ ಕಾರಣದಿಂದ, ಭೂತಯೋನಿಂಃ ಪ್ರಲಯಕಾಲದಲ್ಲಿ ತನ್ನ ಉದರದಲ್ಲಿ ಇಟ್ಟಿರುವ ಬ್ರಹ್ಮಾದಿ ಪ್ರಾಣಿಸಮುದಾಯಕ್ಕೆ ತನ್ನ ಶರೀರದಿಂದಲೇ ಉತ್ಪಾದಕವಾದ ಸೂಕ್ಷ್ಮಶರೀರವನ್ನುಂಟುಮಾಡತಕ್ಕ ಯಾರನ್ನು ಜ್ಞಾನಿಗಳು ತಿಳಿಯುತ್ತಾರೋ ಅಂತಹುದು ಅದೃಶ್ಯತ್ವಾದಿ ಗುಣಗಳುಳ್ಳದ್ದು. ಹೀಗೆ ಮುಖ್ಯವಾಗಿ ಪ್ರತಿಪಾದಿಸಲ್ಪಡುತ್ತದೋ, (ಆದಕಾರಣ ಆತನೇ ಪ್ರಕೃತಿ ಶಬ್ದವಾಚ್ಯನು.)

**ವಿಶೇಷಾಂಶ ॥ ಯದ್ಯಪಿ ಯೋನಿರ್ಭಾರ್ಯಾ ತಥಾ ಸ್ಥಾನಂ ಯೋನಿಃ ಕಾರಣಮೇವ ಚ ॥** ಎನ್ನುವ ಪ್ರಮಾಣದಿಂದ ಯೋನಿಶಬ್ದವು ಗುಹ್ಯಸ್ಥಾನರೂಪವಾದ ವ್ಯವಧಾನವಿಲ್ಲದೆ ಅಪತ್ಯೋತ್ಪಾದನ ದ್ವಾರದಲ್ಲಿ ರೂಢವಾಗಿದೆ. ಶ್ರೀಹರಿಯು ತನ್ನ ಶರೀರದಿಂದಲೇ ಬ್ರಹ್ಮಾದಿಗಳನ್ನು ಸೃಷ್ಟಿಸುವುದರಿಂದ ಇಂತಹ ಯೋನಿತ್ವವು ಶ್ರೀಹರಿಗೆ ಕೂಡುತ್ತದೆ.

**ಪೀಠಿಕೆ ॥** ವ್ಯವಧಾನವಿಲ್ಲದೆ ಉತ್ಪತ್ತಿದ್ವಾರತ್ವವು ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದ ಪ್ರಯೋಗ ದಲ್ಲಿ ನಿಮಿತ್ತವು ಎನ್ನುವುದು ಹೇಗೆ? ತನ್ನಿಮಿತ್ತ ಸ್ತ್ರೀಲಿಂಗಶಬ್ದವಾಚ್ಯತ್ವವು ವಿಷ್ಣುವಿಗೆ ಹೇಗೆ ತಿಳಿಯುತ್ತದೆ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ । ಸೂತಿರವ್ಯವಧಾನೇನ ಪ್ರಕೃತಿತ್ವಮಿತಿ ಸ್ಥಿತಿಃ (ಸೂತಿಮವ್ಯವಧಾನೇನ ಸ್ತ್ರೀತ್ವಮಾಹುರ್ಮನೀಷಿಣಃ)। ಉಭಯಾತ್ಮಕಸೂತಿತ್ವಾದ್ವಾಸುದೇವಃ ಪರಃ ಪುಮಾನ್ । ಪ್ರಕೃತಿಃ ಪುರುಷಶ್ಚೇತಿ ಶಬ್ದೈರೇಕೋಽಭಿಧೀಯತೇ । ಇತಿ ಬ್ರಹ್ಮಾಂಡೇ ॥ ಅಧಿ. ೬ ॥ ॥ ೨೮ ॥ ॥೧೩॥**

**ಭಾಷ್ಯಾರ್ಥ ॥** ಸ್ತ್ರೀ ಮೊದಲಾದ ವ್ಯವಧಾನದಿಂದ, ಸೂತಿಃ ಅಪತ್ಯೋತ್ಪಾದಕತ್ವವು, ಪುಲ್ಲಿಂಗ ಶಬ್ದಪ್ರವೃತ್ತಿನಿಮಿತ್ತವು, ಪ್ರಕೃತಿತ್ವಂ ತುಃ ಪ್ರಕೃತಿಶಬ್ದೋಪಲಕ್ಷಿತವಾದ ಎಲ್ಲಾ ಸ್ತ್ರೀಲಿಂಗ ಶಬ್ದಪ್ರವೃತ್ತಿ ನಿಮಿತ್ತವಾದರೂ, ಸ್ತ್ರೀ ಮೊದಲಾದ ವ್ಯವಧಾನವಿಲ್ಲದೆ, ಸೂತಿಃ ಅಪತ್ಯೋತ್ಪಾದಕತ್ವವು, ಹೀಗೆ ಸ್ಥಿತಿಃ ಪ್ರವೃತ್ತಿನಿಮಿತ್ತ ಸ್ಥಿತಿಯು ಜ್ಞಾನಿಗಳಿಂದ ಹೇಳಲ್ಪಡುತ್ತದೆ. ಹೀಗೆ ಎರಡು ವಿಧವಾದ ಪ್ರಸೂತಿ ಕರ್ತೃತ್ವವಿದ್ದುದರಿಂದ ಲೋಕವಿಕ್ಷಣಾದ ಪುರುಷಶಬ್ದ ವಾಚ್ಯನಾದ ವಾಸುದೇವನು ಒಬ್ಬನೇ ಪ್ರಕೃತಿಃ ಪುರುಷಃ ಇದು ಮೊದಲಾದ ಎಲ್ಲಾ ಪುಲ್ಲಿಂಗ ಸ್ತ್ರೀಲಿಂಗ ಶಬ್ದಗಳಿಂದ ಹೇಳಲ್ಪಡುತ್ತಾನೆ ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

**ವಿಶೇಷಾಂಶ** ॥ (೧) ಶ್ರೀಹರಿಗೆ ಅಪತ್ಯೋತ್ಪಾದಕತ್ವವೇ ಅಸಿದ್ಧವು. ಉಭಯವಿಧವಾದ ಅಪತ್ಯೋತ್ಪಾದಕತ್ವವು ಸುತರಾಂ ಕೂಡಲಾರದು ಎಂದರೆ—**ವಾನಾತ್ಸೂತೇರ್ದೇವನಾದ್ವಾಸುದೇವಃ ವಾಸಾತ್ ದ್ಯುತೇಃ ಛಾದನಾತ್ ಕ್ರೀಡಯಾ ಚ । ಬಲಾದಸುತ್ವಾದ್ಗಾತ್ರತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ** ॥ ಎನ್ನುವ ನಿರುಕ್ತಿಯಿಂದ ಪ್ರಸೂತಿಕರ್ತೃತ್ವವು ಸಿದ್ಧವಾಯಿತು. (೨) ಶ್ರೀಹರಿಗೆ ಸ್ತ್ರೀರೂಪತ್ವವಿದ್ದುದರಿಂದಲೂ ಸ್ತ್ರೀಶಬ್ದವಾಚ್ಯತ್ವವು ಎಂದು ಹೇಳುವುದು ಯುಕ್ತವಲ್ಲ. **ನೈನಂ ವಾಚಾ ಸ್ತ್ರಿಯಂ ಬ್ರುವನ್** ಎಂದು ನಿಷೇಧವಿದೆ ಎಂದು ಹೇಳಕೂಡದು. ಕೇವಲ ಸ್ತ್ರೀತ್ವವನ್ನಾಗಲೀ ಲೌಕಿಕ ಸ್ತ್ರೀತ್ವವನ್ನಾಗಲೀ ತಿಳಿಯಕೂಡದು ಎಂದು ಅದರ ಅರ್ಥವು. ಇಲ್ಲವಾದರೆ—**ನೈನಮಸ್ತ್ರೀಪುಮಾನ್** ಎನ್ನುವ ಉತ್ತರವಾಕ್ಯದಿಂದ ವಿರೋಧವು ಬರುವುದು. ॥ ೨೮ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಬ್ರಹ್ಮನು ಜಗತ್ತಿಗೆ ಕರ್ತನು (ಅಂದರೆ ನಿಮಿತ್ತಕಾರಣನು) ಮಾತ್ರನು ಎಂದಲ್ಲ, ಮತ್ತೆ ಪ್ರಕೃತಿಯೂ (ಉಪಾದಾನಕಾರಣನೂ) ಆಗಿರುತ್ತಾನೆ. ಹೀಗೆ ಹೇಳಿದರೆ **ಯೇನಾಶ್ರುತಂ ಶ್ರುತಂ ಭವತಿ** ಎನ್ನುವ ಒಂದರ ಜ್ಞಾನದಿಂದ ಸರ್ವವಿಜ್ಞಾನಪ್ರತಿಜ್ಞೆಯೂ **ಯಥಾ ಸೌಮ್ಯೈಕೇನ ಮೃತ್ಪಿಂಡೇನ** ಎನ್ನುವ ದೃಷ್ಟಾಂತವೂ ಕೂಡುವುದು ಎಂದು ಒಂದನೇ ಸೂತ್ರಾರ್ಥವು ಎಂದು ಮಾಯಾವಾದಿ ರಾಮಾನುಜಾಚಾರ್ಯರು ಇಬ್ಬರೂ ಹೇಳುವರು. ಇದು ಅಯುಕ್ತವು. ಸಮನ್ವಯವನ್ನೂ ಪ್ರಧಾನಕ್ಕೆ ಅಶಾಬ್ದತ್ವವನ್ನೂ ಇಲ್ಲಿ ಹೇಳದೆ ಇದ್ದುದರಿಂದ ಅಧ್ಯಾಯಾಂತರ್ಭಾವವೂ ಪಾದಾಂತರ್ಭಾವವೂ ಕೂಡದೆ ಹೋಗಬೇಕಾಗುವುದು. ಮತ್ತು ಸಾಂಖ್ಯರಿಗೆ ಅಭಿಮತವಾದ ಪ್ರಧಾನವು ಈ ಪಾದದ ಪ್ರಾಥಮಿಕ ಮೂರು ಅಧಿಕರಣಗಳಿಂದ ನಿರಸ್ತವಾಗುತ್ತಿರಲು ಜಗತ್ತಿಗೆ ಉಪಾದಾನಕಾರಣವೇ ಇಲ್ಲವೆಂದು ಆಗಬೇಕಾಗುವುದು ಎನ್ನುವ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಆ ಮೂರು ಅಧಿಕರಣಗಳನ್ನು ಹೇಳಿದೊಡನೆಯೇ ಇದನ್ನು ಹೇಳಬೇಕಿತ್ತು. **ಜಗದ್ವಾಚಿತ್ವಾತ್ ವಾಕ್ಯಾನ್ವಯಾತ್** ಎಂದು ಸಮನ್ವಯವನ್ನು ಹೇಳುವ ಅನೇಕ ಅಧಿಕರಣಗಳನ್ನು ಹೇಳಿ ಅನಂತರದಲ್ಲಿ ಹೇಳಿದ್ದು ಅಯುಕ್ತವಾಗುವುದು. ಮತ್ತು **ಏಕಜ್ಞಾನೇನ ಸರ್ವಸ್ಯ ವಿಜ್ಞಾನಾದ್ಬ್ರಹ್ಮ ಚೇದ್ಭವೇತ್ । ಉಪಾದಾನಂ ತರ್ಹಿ ಭವೇತ್ತತ ಏವಾನಿಮಿತ್ತತಾ॥** ಒಂದರ ಜ್ಞಾನದಿಂದ ಸರ್ವ ವಸ್ತುವಿನ ಜ್ಞಾನವಾಗುವುದರಿಂದ ಬ್ರಹ್ಮನು ಉಪಾದಾನ ಕಾರಣನೆಂದು ಆಗುವುದಾದರೆ ಅದೇ ಕಾರಣದಿಂದ ನಿಮಿತ್ತಕಾರಣನು ಅಲ್ಲವೆಂದೇ ಆಗುವನು. ಜಗತ್ತಿಗೆ ನಿಮಿತ್ತಕಾರಣನು ಆಗುವುದಾದರೆ ಜಗತ್ತಿನಿಂದ ಭೇದವು ಬರುವುದರಿಂದ ಏಕಜ್ಞಾನದಿಂದ ಸರ್ವವಿಜ್ಞಾನವು ಯುಕ್ತವಾಗಲಾರದು. ಮತ್ತು **ತದಾತ್ಮಾನಂ ಸ್ವಯಮಕುರುತ** ಎಂದು ಆತ್ಮನಿಗೇನೇ ಸೃಷ್ಟಿಯಲ್ಲಿ ಕರ್ಮತ್ವ ಕರ್ತೃತ್ವಗಳನ್ನು ಹೇಳಿದ್ದಾರೆ. **ಸಚ್ಚತ್ಯಚ್ಚಾಭವತ್** ಎಂದು ಪರಿಣಾಮವನ್ನು ಹೇಳಿದ್ದಾರೆ. **ಯದ್ಭೂತಯೋನಿಂ** ಎಂದು ಯೋನಿಶಬ್ದವು ಇದ್ದುದರಿಂದಲೂ ಬ್ರಹ್ಮನು ಉಪಾದಾನ ಕಾರಣನು (ಅಂದರೆ ಭ್ರಮಾಧಿಷ್ಠಾನನು) ಎಂದು ೪, ೫, ೬ವೇ ಸೂತ್ರಗಳ ಅರ್ಥವು ಎಂದು ಹೇಳಿರುವರು. ಅದು ಅಯುಕ್ತವು. ಸರ್ಪಭ್ರಮಾಧಿಷ್ಠಾನವಾದ ರಜ್ಜುವಿನಲ್ಲಿ **ರಜ್ಜುಃ ಸರ್ಪಂ ಕರೋತಿ** ಎಂದಾಗಲೀ **ಸರ್ಪೋಽಭವತ್** ಎಂದಾಗಲೀ **ಸರ್ಪಾತ್ಮನಾ ಪರಿಣತಾ** ಎಂದಾಗಲಿ **ಸರ್ಪಯೋನಿಃ** ಎಂದಾಗಲೀ ವ್ಯವಹಾರವಿರುವುದಿಲ್ಲ. ಆದಕಾರಣ ವಿವರ್ತಮತದಲ್ಲಿ (ಅಂದರೆ

ರಜ್ಜುವು ಸರ್ಪವೆಂದು ತೋರಿದಂತೆ ಬ್ರಹ್ಮನೇ ಜಗದ್ರೂಪದಿಂದ ತೋರುತ್ತಾನೆ ಎನ್ನುವ ಮತದಲ್ಲಿ) ಶ್ರುತಿಯಲ್ಲಿಯೂ ಸೂತ್ರದಲ್ಲಿಯೂ ಇದ್ದ ಪ್ರಕೃತಿ, ಪರಿಣಾಮ, ಯೋನಿಶಬ್ದಗಳು ಕೂಡಲಾರವು ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

**ಏಷಾ ಹ್ಯೇವ ಪ್ರಕೃತಿರವಿಕೃತಿಃ** ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಸ್ತ್ರೀಲಿಂಗಗಳಾದ ಪ್ರಕೃತ್ಯಾದಿ ಶಬ್ದಗಳು ವಿಷ್ಣುವಾಚಕಗಳೋ ಅನ್ಯವಾಚಕಗಳೋ ಎಂದು ಸಂದೇಹವು. ಅನ್ಯವಾಚಕಗಳು ಎಂದು ಪೂರ್ವಪಕ್ಷವು. ಏಕೆಂದರೆ ಅವುಗಳು ಅನ್ಯತ್ರೈವ ಪ್ರಸಿದ್ಧಗಳು. ಸ್ತ್ರೀಲಿಂಗಗಳೂ ಆಗಿವೆ. ಪರಮ ಪುರುಷನಲ್ಲಿ ಸ್ತ್ರೀತ್ವವು ಇಲ್ಲ. **ನೈನಂ ವಾಚಾ ಸ್ತ್ರಿಯಂ ಬ್ರುವನ್** ಎಂದು ಸ್ತ್ರೀತ್ವನಿಷೇಧವಿದ್ದುದರಿಂದ ರೂಪವಿಶೇಷದಿಂದ ಸ್ತ್ರೀತ್ವವು ಇದೆ ಎನ್ನುವುದೂ ಕೂಡಲಾರದು. ಬ್ರಹ್ಮ ಮೊದಲಾದ ನಪುಂಸಕಶಬ್ದವು ಕಲತ್ರಾದಿ ಶಬ್ದಗಳಂತೆಯೇ ಶಬ್ದಸಾಧುತ್ವ ಮಾತ್ರದಿಂದ ಯುಕ್ತವಾಗುವುದಾದರೂ ಕಲ್ಪಕವಿಲ್ಲದಿರುವುದರಿಂದ ಸ್ತ್ರೀಲಿಂಗ ಶಬ್ದವಿಷಯದಲ್ಲಿ ಹಾಗೆ ಹೇಳಕೂಡದು. **ನಾಮಾನಿ ಸರ್ವಾಣಿ** ಎನ್ನುವುದಕ್ಕೆ ಸಂಕೋಚವು ಕೂಡಬಹುದು. ಆದಕಾರಣ ಸ್ತ್ರೀಲಿಂಗ ಶಬ್ದಗಳೆಲ್ಲವೂ ಅನ್ಯವಾಚಕಗಳೇ ಎಂದರೆ—**ಹಂತೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ** ಇತ್ಯಾದಿ ಶ್ರುತಿಗಳಲ್ಲಿ ಸಾಮಾನ್ಯವಾಗಿ ಶ್ರೀಹರಿಗೆ ಸರ್ವಶಬ್ದ ವಾಚ್ಯತ್ವವನ್ನು ಹೇಳಿ ನದೀ ಸಮುದ್ರ ದೃಷ್ಟಾಂತವನ್ನುಪಪಾದಿಸಿದ್ದಾರೆ. **ಮಾಯಾಂ ತು ಪ್ರಕೃತಿಂ ವಿದ್ಯಾತ್, ಪ್ರಕೃತಿರ್ವಾಸನಾ** ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಇಚ್ಛೆಗೆ ಪ್ರಕೃತಿಪದವಾಚ್ಯತ್ವವಿದೆ. ಆ ಇಚ್ಛೆಗೆ **ಸೋऽಭಿಧ್ಯಾ ಸ ಜೂತಿಃ** ಇತ್ಯಾದಿ ಶ್ರುತಿಗಳಲ್ಲಿ ಈಶ್ವರಸ್ವರೂಪತ್ವವನ್ನು ಹೇಳಿದೆ. **ವಿಷ್ಣ್ವೇಷ ಪುರುಷಃ** ಎಂದು ಸಾಕ್ಷಾತ್ತಾಗಿ ಪ್ರಕೃತಿಶಬ್ದವಾಚ್ಯತ್ವವನ್ನು ಹೇಳಿದ್ದಾರೆ. ಪ್ರಕೃತಿಯನ್ನು ಪ್ರವೇಶಮಾಡಿ ಅದನ್ನು ಮಹತ್ತತ್ವಾದಿರೂಪದಿಂದ ಪರಿಣಾಮೀಕರಿಸಿ ಅದಕ್ಕೆ ನಿಯಾಮಕವಾಗಿ ತಾನೂ ಬಹುರೂಪವನ್ನು ತೆಗೆದುಕೊಂಡದ್ದರಿಂದ **ಪ್ರಕೃಷ್ಟಾ ಕೃತಿರ್ಯಸ್ಯ** ಎನ್ನುವ ಯೋಗವು ಕೂಡುವುದು. ವ್ಯವಧಾನವಿಲ್ಲದೆ ಸೂತಿಹೇತುತ್ವರೂಪವಾದ ಸ್ತ್ರೀತ್ವವು **ಯದ್ಭೂತಯೋನಿಂ** ಎನ್ನುವ ಶ್ರುತಿಯಲ್ಲಿ ಯೋನಿಶಬ್ದದಿಂದ ಹೇಳಿರುವರು. ಆದುದರಿಂದ ಪ್ರಕೃತ್ಯಾದಿ ಸರ್ವ ಸ್ತ್ರೀಲಿಂಗ ಶಬ್ದಮುಖ್ಯಾರ್ಥನು ಶ್ರೀಹರಿಯೇ ಎಂದು ಸಿದ್ಧಾಂತವು. ॥ ಅಧಿ.೬ ॥

ಪ್ರಕೃತ್ಯಧಿಕರಣವು ಸಮಾಪ್ತವಾಯಿತು.

## ೭ ಏತೇನ ಸರ್ವೇ ವ್ಯಾಖ್ಯಾತಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ನಿಷೇಧಮುಖ ವೇದ್ಯತ್ವ ನಿಸ್ಸ್ವರೂಪತ್ವಾದಿಗಳಿಂದ ಅನ್ಯತ್ರ ಅಸದಾದಿಗಳಲ್ಲಿ ಪ್ರಸಿದ್ಧಗಳಾದ ಅಸತ್ ಶೂನ್ಯ ಮೊದಲಾದ ಶಬ್ದಗಳಿಗೆ ಸಮನ್ವಯವನ್ನು ಮಾಡುತ್ತಾರೆ—

## ಸೂತ್ರ ॥ ಓಂ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ಓಂ ॥ ೨೯ ॥

**ಸೂತ್ರಾರ್ಥ ॥** ಏತೇನ=ಹಿಂದೆ ಹೇಳಿದ ತದಧೀನತ್ವ ಮೊದಲಾದ ಹೇತುವಿನಿಂದಲೇ, ಸರ್ವೇ=ಶೂನ್ಯಾದಿ ಶಬ್ದಗಳೆಲ್ಲವೂ (ಬ್ರಹ್ಮವಿಷಯಕಗಳಾಗಿವೆ ಎಂದು) ನಿರ್ಣೀತಗಳಾಗಿವೆ.

**ಪೀಠಿಕೆ ॥** ಯದ್ಯಪಿ ಭಾಷ್ಯದಲ್ಲಿ ವಿಷಯವಾಕ್ಯವನ್ನುದಾಹರಿಸಲಿಲ್ಲ, ಆದಾಗ್ಯೂ ಅಸತ್ ಮೊದಲಾದ ಶಬ್ದಗಳಿಂದ ಘಟಿತವಾದ ವಾಕ್ಯಾಂತರವನ್ನುದಾಹರಿಸಿಕೊಳ್ಳಬೇಕೆಂದು ಚಂದ್ರಿಕಾದಲ್ಲಿ ಹೇಳಿದ್ದರಿಂದ ತದ್ವೈಕ **ಆಹುಃ ಅಸೇದೇವೇದಮಗ್ರ ಆಸೀತ್** ಇತ್ಯಾದಿ ವಾಕ್ಯವು ವಿಷಯವಾಕ್ಯವು. ಇಲ್ಲಿಯೂ **ತತ್ತು ಸಮನ್ವಯಾತ್** ಎಂದು ಸರ್ವಶಬ್ದಗಳಿಗೆ ಪರಮಾತ್ಮನಲ್ಲಿ ಸಮನ್ವಯವನ್ನು ಹೇಳಿರುತ್ತಾರೆ. ಅದು ಕೂಡುವುದಿಲ್ಲ. ಏಕೆಂದರೆ ಅಸದಾದಿ ಶಬ್ದವಾಚ್ಯತ್ವವು ಕೂಡುವುದಿಲ್ಲ ಎಂದು ಶಂಕಾ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಏತೇನ ಸರ್ವೇ ಶೂನ್ಯಾದಿಶಬ್ದಾ ಅಪಿ ವ್ಯಾಖ್ಯಾತಾಃ । ಏಷ ಹ್ಯೇವ ಶೂನ್ಯ ಏಷಹ್ಯೇವ ತುಚ್ಛ ಏಷ ಹ್ಯೇವಾಭಾವ ಏಷ ಹ್ಲೇವಾವ್ಯಕ್ತೋಽದೃಶ್ಯೋಽಚಿಂತ್ಯೋ ನಿರ್ಗುಣಶ್ಚ । ಇತಿ (ಹಿ) ಮಹೋಪನಿಷದಿ ॥ ೧ ॥**

**ಭಾಷ್ಯಾರ್ಥ ॥** (೧) ತದಧೀನತ್ವ ಮೊದಲಾದ ಹಿಂದೆ ಹೇಳಿದ ಯುಕ್ತಿ ಸಮುದಾಯದಿಂದ, ಪೂರ್ವದಲ್ಲಿ ಸಮನ್ವಿತಗಳಾದವುಗಳು ಮಾತ್ರವಲ್ಲ, ಮತ್ತೆ ಅವಶಿಷ್ಟಗಳಾದ ಎಲ್ಲಾ ಅಸತ್ ಶೂನ್ಯ ಮೊದಲಾದ ಶಬ್ದಗಳೂ ಕೂಡ ಬ್ರಹ್ಮಪರಗಳೆಂದು ನಿರ್ಣೀತಗಳಾಗಿವೆ. (೨) (ಹಾಗಾದರೆ— ಅಸದಾದಿ ಶಬ್ದಗಳು ನಿಷೇಧಮುಖ ವೇದ್ಯ ವಸ್ತುಗಳನ್ನು ಹೇಳತಕ್ಕವುಗಳಾದುದರಿಂದ ಆ ಶಬ್ದಗಳಿಂದ ಪರಮಾತ್ಮನು ಹೇಗೆ ವಾಚ್ಯನಾಗುವನು, ಎಂದರೆ—) ಯಾವ ಕಾರಣದಿಂದ ಈ ಶ್ರೀಹರಿಯು ದುರ್ಜನರಿಂದ ಅವ್ಯಕ್ತನೋ, ಅದೃಶ್ಯನೋ, ಅಚಿಂತ್ಯನೋ, ನಿರ್ಗುಣನೋ, ಆದಕಾರಣ ಆತನೇ ಮುಖ್ಯವಾಗಿ ಅಸನ್, ತುಚ್ಛಃ, ಅಭಾವಃ ಎಂದೂ ಹೇಳಲ್ಪಡುತ್ತಾನೆ, ಎಂದು ಮಹೋಪನಿಷತ್ತಿನಲ್ಲಿ ಇದೆ.

**ವಿಶೇಷಾಂಶ ॥** ಅಸದಾದಿ ಶಬ್ದಗಳು ದುರ್ಜನರಿಗೆ ಅವ್ಯಕ್ತತ್ವ ಮೊದಲಾದ ನಿಮಿತ್ತದಿಂದ ಲಾಗಲೀ ವಿದ್ವದ್ರೂಢಿಯಿಂದಾಗಲೀ ಬ್ರಹ್ಮವಾಚಕಗಳೆಂದು ವ್ಯಾಖ್ಯಾತಗಳಾಗಿವೆ.

**ಪೀಠಿಕೆ ॥** ಏಷ ಹ್ಯೇವ ಎನ್ನುವುದರಿಂದಲೇ ಶೂನ್ಯಾದಿ ಶಬ್ದಗಳಿಗೆ ರೂಢಿಯನ್ನು ತೋರಿಸಿದ್ದರಿಂದ ಈಗ ಯೋಗವೃತ್ತಿಯನ್ನು ಕೂಡ ಸ್ಮೃತಿಯಿಂದ ತೋರಿಸುತ್ತಾರೆ—

**ಭಾಷ್ಯ ॥ ಶಮೂನಂ ಕುರುತೇ ವಿಷ್ಣು ರದೃಶ್ಯಃ ಸನ್ ಪರಃ ಸ್ವಯಂ । ತಸ್ಮಾಚ್ಛೂನ್ಯ ಇ(ಮಿತಿ)ತಿ ಪ್ರೋಕ್ತಸ್ತೋದನಾತ್ತುಚ್ಛ ಉಚ್ಯತೇ ॥ ನೈಷ ಭಾವಯಿತುಂ ಯೋಗ್ಯಃ ಕೇನಚಿತ್ಪುರುಷೋತ್ತಮಃ । ಅತೋಽಭಾವಂ ವದಂತ್ಯೇನಂ ನಾಶ್ಯತ್ವಾನ್ನಾಶ ಇ(ಮಿ)ತ್ಯಪಿ ॥ ೨ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ವಿಷ್ಣುವು (ಪರಃ ಸನ್=) ಸರ್ವೋತ್ತಮನಾಗಿಯೂ ಪೂರ್ಣ ಸುಖರೂಪಿಯಾಗಿಯೂ ಇರುವವನಾಗಿಯೇ ಇತರರ ಸುಖವನ್ನು ತಾನು ತನ್ನ ಸುಖದಿಂದ ಅಲ್ಲವನ್ನಾಗಿಯೇ ಮಾಡುತ್ತಾನೋ ಆದಕಾರಣ ಶೂನ್ಯನು ಎಂದು ಹೇಳಲ್ಪಟ್ಟಿದ್ದಾನೆ. ತಾನು (ದುರ್ಜನರಿಗೆ) ಅದೃಶ್ಯನಾಗಿಯೇ ದುಃಖವನ್ನುಂಟುಮಾಡುವುದರಿಂದ ತುಚ್ಛ ಎಂದು ಹೇಳಲ್ಪಡುತ್ತಾನೆ. ಈ ವಿಷ್ಣುವು ಯಾವ ಕಾರಣದಿಂದ (ಸರ್ವ ಜಗತ್ಕಾರಣನಾಗಿಯೂ ಅನಂತನಾಗಿಯೂ) ಪುರುಷೋತ್ತಮನು ಆಗಿದ್ದಾನೋ, ಆದುದರಿಂದ ಯಾರಿಂದಲೂ ಹುಟ್ಟಿಸಲಿಕ್ಕೆ ಆಗಲೀ ಸಂಪೂರ್ಣವಾಗಿ ಆಲೋಚಿಸಲಿಕ್ಕಾಗಲೀ ಯೋಗ್ಯನಲ್ಲ. ಆದಕಾರಣ ಈ ಹರಿಯನ್ನು ಅಭಾವನನ್ನಾಗಿ ಹೇಳುತ್ತಾರೆ. ಸರ್ವರಿಗೂ ಅಶ್ಯನಾಗದೆ ಇರುವುದರಿಂದ (ಅಭಕ್ಷ್ಯನಾದುದರಿಂದ) ನಾಶನು ಎಂದೂ ಹೇಳಲ್ಪಡುತ್ತಾನೆ.

**ಭಾಷ್ಯ ॥ ಸರ್ವಸ್ಯ ತದಧೀನತ್ವಾತ್ತತ್ತಚ್ಛಬ್ದಾಭಿಧೇಯತಾ । ಅನ್ಯೇಷಾಂ ವ್ಯವಹಾರಾರ್ಥ-ಮಿಷ್ಯತೇ ವ್ಯವಹರ್ತೃಭಿಃ ॥ ಇತಿ ಮಹಾಕೌರ್ಮೇ (ಕೌರ್ಮೇ) ॥ ೩ ॥**

ಭಾಷ್ಯಾರ್ಥ ॥ ಸ್ವಗತವಾದ ಅಥವಾ ಪರಗತವಾದ ಅಸತ್ ಶೂನ್ಯ ಮೊದಲಾದ ಶಬ್ದಗಳ ಪ್ರವೃತ್ತಿ ನಿಮಿತ್ತಕ್ಕೆ, ಪರಮಾತ್ಮನೇ ಸ್ವಾಮಿಯಾದುದರಿಂದ ಆ ಶ್ರೀಹರಿಗೇನೇ ಸರ್ವಶಬ್ದಾಭಿಧೇಯತ್ವವು. (ಆದುದರಿಂದಲೇ) ಅಸತ್, ಶೂನ್ಯ, ತುಚ್ಛ, ಅಭಾವ, ನಾಶ ಮೊದಲಾದ ಶಬ್ದಗಳಿಗೆ ಪರಮಮುಖ್ಯಾರ್ಥನು ಶ್ರೀಹರಿಯು. ಇತರ ವಸ್ತುಗಳಿಗಾದರೂ ಶ್ರೀಹರಿಯ ಅಧೀನವೇ ಆದ ಆವಾವ ಶಬ್ದಗಳ ಪರವೃತ್ತಿನಿಮಿತ್ತದಿಂದ ಹಾನಉಪಾದಾನ ಮೊದಲಾದ ವ್ಯವಹಾರಗಳ ಸಿದ್ಧಿಗಾಗಿ ಆವಾವ ಶಬ್ದಗಳನ್ನು ಪ್ರಯೋಗಿಸತಕ್ಕ ಆವಾವ ಶಬ್ದಗಳ ಮುಖ್ಯವಾಚ್ಯವಾದ ಅರ್ಥವನ್ನು ತಿಳಿಯುವವರಿಂದ. ಆವಾವ ಶಬ್ದಾರ್ಥತ್ವವು ಅಂಗೀಕರಿಸಲ್ಪಡುತ್ತದೆ, ಎಂದು ಮಹಾಕೌರ್ಮದಲ್ಲಿ ಹೇಳಿದೆ.

**ಭಾಷ್ಯ ॥ ಏತೇನ ತದಧೀನತ್ವಾದ್ಯುಕ್ತಯುಕ್ತಿಸಮುದಾಯೇನ ॥ ೪ ॥**

ಭಾಷ್ಯಾರ್ಥ ॥ ತದಧೀನತ್ವ (ತತ್ಸ್ವಾಮಿಕತ್ವ) ಮಹದ್ವಚ್ಚ ಮೊದಲಾದ ಹೇಳಲ್ಪಟ್ಟ ಯುಕ್ತಿಗಳ ಸಮೂಹದಿಂದ. (ಅಸದಾದಿ ಶಬ್ದಗಳು ವಿಷ್ಣುಪರಗಳೆಂದು ನಿಶ್ಚಿತಗಳಾಗುತ್ತವೆ.)

ಪೀಠಿಕೆ ॥ ಸೂತ್ರದಲ್ಲಿ ಅಲ್ಪಾಕ್ಷರತ್ವಕ್ಕೆ ವಿರೋಧಿಯಾದ ದ್ವಿರುಕ್ತಿಯು ಏತಕ್ಕೆ ಎಂದರೆ—

**ಭಾಷ್ಯ ॥ ಅವಧಾರಣಾರ್ಥಂ ಸರ್ವಸ್ಯಾಪ್ಯುಕ್ತಸ್ಯಾಧ್ಯಾಯಮೂಲತಃ । ದ್ವಿರುಕ್ತಂ ಕುರ್ವತೇ ಪ್ರಾಜ್ಞಾ ಅಧ್ಯಾಯಾಂತೇ ವಿನಿರ್ಣಯೇ ॥ ಇತಿ ವಾರಾಹಸಂಹಿತಾಯಾಂ (ವಾರಾಹೇ) ॥ ೨೯ ॥ ಅಧಿ.೭ ॥ ॥ ೫ ॥**

ಭಾಷ್ಯಾರ್ಥ ॥ ಅಧ್ಯಾಯದ ಆದಿಯನ್ನು ಪ್ರಾರಂಭಿಸಿ ಅಂತ್ಯಪರ್ಯಂತವಾಗಿ ಹೇಳಲ್ಪಟ್ಟ ಎಲ್ಲಾ ಅರ್ಥಗಳಿಗೂ ಅವಧಾರಣಕ್ಕಾಗಿಯೇ ಅಧ್ಯಾಯದ ಅಂತ್ಯದಲ್ಲಿ ವಿನಿರ್ಣಾಯಕ ಗ್ರಂಥದಲ್ಲಿ ದ್ವಿರುಕ್ತಿಯನ್ನು ಜ್ಞಾನಿಗಳು ಮಾಡುತ್ತಾರೆ. ಎಂದು ವಾರಾಹಸಂಹಿತಾ ಎನ್ನುವ ಗ್ರಂಥದಲ್ಲಿ ಹೇಳಿದೆ. (ಆದುದರಿಂದ ಅಸದಾದಿಸರ್ವಶಬ್ದವಾಚ್ಯತ್ವವು ಶ್ರೀಹರಿಗೆ ಉಪಪನ್ನವಾಗುವುದರಿಂದ

ಸರ್ವಶಾಸ್ತ್ರೈಕಸಮಧಿಗಮ್ಯತ್ವವು ಯುಕ್ತವು. ಆದಪ್ರಯುಕ್ತ ಶ್ರೀಹರಿಗೆ ಅನಂತಗುಣಪರಿಪೂರ್ಣತ್ವವು ಸಿದ್ಧವಾಯಿತು.)

ಅಪರ್ಯಾಯಾನಂತಶಬ್ದೈರ್ಯೋಗಿಕೈರ್ಗುಣವಾಚಕೈಃ। ವಾಚ್ಯತ್ವಾದ್ಬ್ರಹ್ಮಣಃ ಸಿದ್ಧಾ ಸಮಸ್ತಗುಣ ಪೂರ್ಣತಾ ॥ ೨೯ ॥

## ಮಾಯಾವಾದಿರೀತ್ಯಾ

ವಿಚಾರ ॥ (೧) ಪ್ರಧಾನವು ಕಾರಣವು ಎನ್ನುವ ವಾದವನ್ನು ನಿರಾಕರಿಸಿದ ನ್ಯಾಯದಿಂದ ಪರಮಾಣ್ವಾದಿಗಳು ಕಾರಣಗಳು ಎನ್ನುವ ವಾದಗಳೂ ನಿರಸ್ತಗಳಾದವು ಎಂದು ಸೂತ್ರಾರ್ಥವು ಎನ್ನುತ್ತಾರೆ. ಹಾಗೆ ಮಾಯಾವಾದಿಗಳು ಹೇಳುವುದು ಅಯುಕ್ತವು. ಪ್ರಧಾನ ಪರಮಾಣ್ವಾದಿ ಕಾರಣ ವಾದಗಳನ್ನು ಸಮಯ ಪಾದದಲ್ಲಿ ನಿರಾಕರಿಸುವರು. ಇಲ್ಲಿಯೂ ಅವುಗಳನ್ನೇ ನಿರಾಕರಿಸುತ್ತಾರೆ ಎಂದು ಹೇಳಿದರೆ ಪೌನರುಕ್ತ್ಯವು ಬರುವುದು. (೨) ವ್ಯಾಖ್ಯಾತಾಃ ಎನ್ನುವುದಕ್ಕೆ ನಿರಸ್ತಗಳು ಎನ್ನುವ ಅರ್ಥವೂ ಸ್ವರಸವಲ್ಲ. ಪಾದಭೇದದಂತೆಯೇ ಪ್ರಮೇಯ ವೈಲಕ್ಷಣ್ಯದಿಂದಲೇ ಅಧ್ಯಾಯಭೇದವನ್ನು ತಿಳಿಯಬಹುದು. ಇಲ್ಲವಾದರೆ ಪಾದದ ಅಂತ್ಯದಲ್ಲಿಯೂ ಅಭ್ಯಾಸವು ಇರಬೇಕಾಗುವುದು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಬ್ರಹ್ಮಕಾಂಡದಲ್ಲಿ ಒಂದೊಂದು ವಿದ್ಯಾವಿಶೇಷದಿಂದಲೇ ಮುಮುಕ್ಷುವಿಗೆ ಇಷ್ಟಸಿದ್ಧಿಯಾಗುವುದರಿಂದ ತಿಳಿಯಲರ್ಹವಾದುದು ಇನ್ನೊಂದು ಇಲ್ಲವೆಂದು ತೋರಿಸುವುದಕ್ಕಾಗಿ ಆವಾವ ವಿದ್ಯಾವಸಾನದಲ್ಲಿ ನ ಚ ಪುನರಾವರ್ತತೇ ನ ಚ ಪುನರಾವರ್ತತೇ ಇತ್ಯಾದಿ ಅಭ್ಯಾಸವು. (ದ್ವಿರುಕ್ತಿಯು) ಕರ್ಮಕಾಂಡದಲ್ಲಿಯಾದರೂ ಒಂದೊಂದರಿಂದಲೇ ರಾಗಿಯಾದವನಿಗೆ ಇಷ್ಟವು ಸಿದ್ಧಿಸುವುದಿಲ್ಲವೆಂದು ತೋರಿಸುವುದಕ್ಕಾಗಿ ಆವಾವ ಕರ್ಮಾವಸಾನದಲ್ಲಿ ಅಭ್ಯಾಸವು ಇರುವುದಿಲ್ಲ. ತಥಾಚ ನಿರ್ಣೀತವ್ಯವನ್ನು ಅನುಸರಿಸಿ ಬ್ರಹ್ಮಮೀಮಾಂಸಾ ಶಾಸ್ತ್ರದ ಅಧ್ಯಾಯಾಂತ್ಯದಲ್ಲಿ ಅಭ್ಯಾಸವು. ಕರ್ಮಮೀಮಾಂಸಾ ಶಾಸ್ತ್ರದಲ್ಲಿಯಾದರೂ ಅಭ್ಯಾಸ (ದ್ವಿರುಕ್ತಿ)ವಿಲ್ಲವೆನ್ನುತ್ತಾರೆ. ಅದು ಅಯುಕ್ತವು. ಹಾಗಿದ್ದರೆ ಪ್ರತಿ ಅಧಿಕರಣವೂ ಒಂದೊಂದು ವಿದ್ಯೆಗೆ ನಿರ್ಣಾಯಕವಾಗುವುದರಿಂದ ಅಲ್ಲಿಯೂ ಅಭ್ಯಾಸವು ಬರಬೇಕಾಗುವುದು. ೧ನೇ ಅಧ್ಯಾಯದಲ್ಲಿ ಅಭ್ಯಾಸ (ದ್ವಿರುಕ್ತಿ)ದಿಂದ ತಿಳಿಯತಕ್ಕುದು ಇನ್ನೊಂದು ಇಲ್ಲವೆಂದು ಸೂಚಿಸಿದ್ದರಿಂದ ೨ನೇ ಅಧ್ಯಾಯ ಮೊದಲಾದವುಗಳಿಗೆ ವೈಯರ್ಥ್ಯವು ಬರಬೇಕಾಗುವುದು. (೨) ಮತ್ತು ಸಂಧೀಯತೇ ಪ್ರಜಯಾ ಪಶುಭಿರ್ಯಶಸಾ ಬ್ರಹ್ಮ ವರ್ಚಸೇನ ಸ್ವರ್ಗೇಣ ಲೋಕೇನ ಸರ್ವಮಾಯುರೇತಿ ಸರ್ವಮಾಯುರೇತಿ ಇತ್ಯಾದಿಗಳಲ್ಲಿ ಪಶು ಮೊದಲಾದ ಫಲಗಳುಳ್ಳ ವಿದ್ಯಾವಸಾನದಲ್ಲಿಯೂ ಅಭ್ಯಾಸವು ಕಂಡದೆ. (೩) ಕರ್ಮಕಾಂಡದಲ್ಲಿಯೂ ಋಗ್ವೇದ ಬ್ರಾಹ್ಮಣಾದಿಗಳಲ್ಲಿ ಪ್ರತಿ ಅಧ್ಯಾಯದಲ್ಲಿ ಅಂತ್ಯದಲ್ಲಿ ಅಭ್ಯಾಸವು ಕಂಡದೆ.

## ಅಧಿಕರಣ ಸಾರಾಂಶ

ಅಸದ್ವಾ ಇದಮಗ್ರ ಆಸೀತ್ ಇತ್ಯಾದಿಗಳಲ್ಲಿ ಶ್ರುತಗಳಾದ ಅಸತ್ ಶೂನ್ಯ ಮೊದಲಾದ ಶಬ್ದಗಳು

ಈಶ್ವರವಾಚಕಗಳೋ ಅನ್ಯವಾಚಕಗಳೋ ಎಂದು ಸಂದೇಹವು. ಸ್ವರೂಪಹಾನ್ಯಾದಿರೂಪವಾದ ಬಾಧಕವು ಇಲ್ಲದಿರುವುದರಿಂದ ಬ್ರಹ್ಮನಿಗೆ ಹಿಂದೆ ಹೇಳಿದ ಸ್ತ್ರೀತ್ವವು ಕೂಡಬಹುದು. ಸ್ವರೂಪ ಹಾನಿಯು ಬರುವುದರಿಂದ ನಿಷೇಧ್ಯತ್ವಾದಿರೂಪವಾದ ಅಸದಾದಿ ಪದಪ್ರವೃತ್ತಿನಿಮಿತ್ತವು ಬ್ರಹ್ಮನಿಗೆ ಕೂಡಲಾರದು. ಅಸತ್ತು ನಿಸ್ಸ್ವರೂಪವಾದುದರಿಂದ ನಿಯಮನವು ಕೂಡದಿರುವ ಪ್ರಯುಕ್ತ ಅದಕ್ಕೆ ಈಶಾಧೀನತ್ವವು ಕೂಡಲಾರದು. ಆದುದರಿಂದ ತದಧೀನತ್ವ ನ್ಯಾಯಕ್ಕೂ ಅವಕಾಶವಿರುವುದಿಲ್ಲ ಆದಪ್ರಯುಕ್ತ ಅಸದಾದಿ ಶಬ್ದಗಳು ಅನ್ಯವಾಚಕಗಳೇ ಎಂದು ಪೂರ್ವಪಕ್ಷವು. ಪ್ರಸಿದ್ಧ ಶೂನ್ಯತ್ವಾದಿಗಳು ಈಶ್ವರನಲ್ಲಿ ಇಲ್ಲದಿದ್ದವುಗಳಾಗಾಗ್ಯೂ ಶಮೂನಂ ಕುರುತೇ ಇದುಮೊದಲಾದ ಸ್ಮೃತಿಯಲ್ಲಿ ಹೇಳಿದ ಯೋಗವು ಕೂಡುವುದರಿಂದಲೂ ಅಸತ್ತಿಗೂ ಅಸತ್ವಾದಿಗಳಿಂದ ನಿಯಮನವು ಕೂಡುವುದರಿಂದ ತದದೀನತ್ವ ಮೊದಲಾದ ಹೇಳಿದ ಸಾಧಕದಿಂದ ಅಸತ್ ಶೂನ್ಯ ಮೊದಲಾದ ಶಬ್ದಗಳಿಗೆ ಮುಖ್ಯವಾಚ್ಯನು ಶ್ರೀಹರಿಯೇ ಎಂದು ಸಿದ್ಧಾಂತವು. ಅಪರ್ಯಾಯಾನಂತಶಬ್ದೈರ್ಯೋಗಿತ್ವೈರ್ಗುಣವಾಚಕೈಃ । ವಾಚ್ಯತ್ವಾದ್ಬ್ರಹ್ಮಣಃ ಸಿದ್ಧಾ ಸಮಸ್ತಗುಣಪೂರ್ಣತಾ ॥ ಅಧಿ.೭ ॥

ಇತಿ ಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ
ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ಪಾದ)ವಿರಚಿತೇ
ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ ॥ ೧-೪ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಒಂದನೇ ಅಧ್ಯಾಯದಲ್ಲಿ
ನಾಲ್ಕನೇ ಪಾದವು ಸಮಾಪ್ತವಾಯಿತು. ॥ ೧-೪ ॥

ಜಯತಿ ಶ್ರೀರಮಾಕಾಂತಃ ಜಯತಿ ಶ್ರೀಶ್ಚ ತತ್ಪ್ರಿಯಾ ।
ಶ್ರೀಶ್ರೀಶಭಕ್ತೋ ಜಯತಿ ಮಧ್ವೋ ವಿಧ್ವಸ್ತಸಾಧಸಃ ॥

ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।
ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ ॥

## ಪ್ರಥಮಾಧ್ಯಾಯವು ಸಂಪೂರ್ಣವು

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ದ್ವಿತೀಯಾಧ್ಯಾಯ ೧ನೇ ಪಾದ

## ಯುಕ್ತಿಪಾದಃ

## ೧. ಸ್ಮೃತ್ಯಧಿಕರಣವು

ಪೀಠಿಕೆ ॥ ಪೂರ್ವಾಧ್ಯಾಯ ಸಂಗತವಾಗಿ ಈ ಅಧ್ಯಾಯದ ಅರ್ಥವನ್ನು ತೋರಿಸುತ್ತಾರೆ.

**ಭಾಷ್ಯ ॥ ಹರಿಃ ಓಂ ॥ ಉಕ್ತೇಽರ್ಥೇಽವಿರೋಧಂ ದರ್ಶಯತ್ಯನೇನಾಧ್ಯಾಯೇನ । ಪ್ರಥಮಪಾದೇ ಯುಕ್ತ್ಯವಿರೋಧಂ । ಪ್ರಥಮತಃ ಸ್ಮೃತ್ಯವಿರೋಧಂ ದರ್ಶಯತಿ ॥೧॥**

**ಭಾಷ್ಯಾರ್ಥ** ॥ (೧) ಹೇಳಿದ ಅರ್ಥದಲ್ಲಿ (ಅಂದರೆ ಶ್ರೀ ನಾರಾಯಣನಲ್ಲಿ ವೈದಿಕ ಅಪರ್ಯಾಯ ಅನಂತ ಶಬ್ದ ಸಮನ್ವಯದಿಂದ ಸರ್ವಜಗತ್ಕಾರಣತ್ವರೂಪವಾದ ಯಾವ ಅರ್ಥವು ೧ನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೋ, ಆ ಅರ್ಥದಲ್ಲಿ) (ಸೂತ್ರಕಾರರು) ಎರಡನೇ ಅಧ್ಯಾಯದಿಂದ ಯುಕ್ತ್ಯಾದಿಗಳಿಂದ ವಿರೋಧಾಭಾವವನ್ನು ಪ್ರತಿಪಾದಿಸುತ್ತಾರೆ. (೨) (ಈ ಪಾದ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ.) ೧ನೇ ಪಾದದಲ್ಲಿ ಹೇಳಿದ ಅರ್ಥದಲ್ಲಿ ಅನುಮಾನದಿಂದ ವಿರೋಧವಿಲ್ಲವೆನ್ನುವುದನ್ನು ಪ್ರತಿಪಾದಿಸುತ್ತಾರೆ. (೩) (ಈ ಪಾದದಲ್ಲಿದ್ದ ೧ನೇ ಅಧಿಕರಣದಲ್ಲಿ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ.) ೧ನೇ ಅಧಿಕರಣದಲ್ಲಿ ಅಲೌಕಿಕಾರ್ಥವಿಷಯ ಆಪ್ತವಾಕ್ಯರೂಪವಾದ ಪಾಶುಪತಾದಿ ಸ್ಮೃತಿಗಳಿಂದ ವಿರೋಧಾಭಾವವನ್ನು ಪ್ರತಿಪಾದಿಸುತ್ತಾರೆ.

**ವಿಶೇಷಾಂಶ** ॥ (೧) ಪೂರ್ವಾಧ್ಯಾಯವು ಸರ್ವಸಮನ್ವಯದ್ವಾರಾ ಜಗತ್ಕರ್ತೃತ್ವರೂಪವಾದ ಧರ್ಮವನ್ನೇ ತಿಳಿಸಿಕೊಡತಕ್ಕುದು, ಈ ಅಧ್ಯಾಯವು ವಿರೋಧನಿರಾಸದಿಂದ ಜಗತ್ಕರ್ತೃತ್ವದಲ್ಲಿ ಸ್ಥೈರ್ಯಸಾಧಕವಾಗಿ ಹೇತುವು ಆಗುವುದು. ಆದಕಾರಣ ಪೂರ್ವಾಧ್ಯಾಯಕ್ಕೂ ಈ ಅಧ್ಯಾಯಕ್ಕೂ ಹೇತುಹೇತುಮದ್ಭಾವರೂಪವಾದ ಸಂಗತಿಯು ಉಕ್ತವಾಯಿತು. (೨) ಪಾಶುಪತಾದಿ ಸ್ಮೃತಿಗಳು ಯುಕ್ತಿಗ್ರಂಥನರೂಪಗಳಾಗಿಯೂ ಇರುವುದರಿಂದ ಸ್ಮೃತಿವಿರೋಧಾಭಾವವನ್ನು ಪ್ರತಿಪಾದಿಸತಕ್ಕ ಈ ಅಧಿಕರಣವೂ ಯುಕ್ತ್ಯವಿರೋಧಪ್ರತಿಪಾದಕವೂ ಆಗಿರುವುದರಿಂದ ಈ ಪಾದದಲ್ಲಿ ಸೇರಿಸಿದ್ದು ಯುಕ್ತವು. (೩) ಇದರಿಂದ ಈ ಅಧಿಕರಣಕ್ಕೆ ಶಾಸ್ತ್ರಾದಿಸಂಗತಿಯು ಉಕ್ತವಾಯಿತು. **ಯುಕ್ತಿಭಿಃ ಸಮಯೈಃ ಶುದ್ಧವೇದೈರ್ಯುಕ್ತ್ಯುಪಬೃಂಹಿತೈಃ । ವೇದೈಶ್ಚಾಷ್ಟವಿರೋಧೋಽತ್ರ ಕ್ರಮಾತ್ಪಾದೇಷು ಕೀರ್ತ್ಯತೇ ॥** ೧ನೇ ಪಾದದಲ್ಲಿ ಯುಕ್ತ್ಯವಿರೋಧವೂ ೨ನೇ ಪಾದದಲ್ಲಿ ಅಲೌಕಿಕಾರ್ಥಗೋಚರ ಬಹುಜನಪರಿಗ್ರಹೀತವಾಕ್ಯ ಸಂದರ್ಭರೂಪವಾದ ಸಮಯಾವಿರೋಧವೂ ೩ನೇ ಪಾದದಲ್ಲಿ ಕೇವಲ ಶ್ರುತ್ಯವಿರೋಧವೂ, ೪ನೇ

ಪಾದದಲ್ಲಿ ಸಯುಕ್ತಿಕ ಶ್ರುತ್ಯವಿರೋಧವೂ ಪ್ರತಿಪಾದಿಸಲ್ಪಡುತ್ತದೆ. ಹೀಗೆ ವಿರೋಧಗಳು ಯುಕ್ತ್ಯಾದಿರೂಪದಿಂದ ನಾಲ್ಕು ವಿಧಗಳಾಗಿರುವುದರಿಂದ ಅವಿರೋಧವೂ ನಾಲ್ಕು ವಿಧವು.

ಪೀಠಿಕೆ ॥ ಪೂರ್ವಪಕ್ಷಾದಿಗಳನ್ನು ತೋರಿಸುವುದಕ್ಕಾಗಿ ಸೂತ್ರವನ್ನುಪನ್ಯಾಸಮಾಡುತ್ತಾರೆ.

**ಸೂತ್ರ ॥ ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ಓಂ ॥ ೧ ॥**

ಸೂತ್ರಾರ್ಥ ॥ (ಯಾವ ಕಾರಣದಿಂದ) ಸ್ಮೃತ್ಯನವಕಾಶದೋಷಪ್ರಸಂಗಃ=ನಿರವಕಾಶಗಳಾದ ಪಾಶುಪತಾದಿ ಇತರ ಸ್ಮೃತಿಗಳ ವಿರೋಧವಿದ್ದುದರಿಂದ ಶ್ರುತಿಗೆ ಅಪ್ರಾಮಾಣ್ಯಾಖ್ಯದೋಷವು ಬರುವುದೋ, (ಆದುದರಿಂದ ಶ್ರುತಿಗೆ ವಿಷ್ಣುಜಗತ್ಕರ್ತೃತಾಪರತ್ವವು ಯುಕ್ತವಲ್ಲ, ಆದಪ್ರಯುಕ್ತ ಶ್ರುತಿಯಿಂದ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲವಾದುದರಿಂದ ಪ್ರಮಾಣವಿಲ್ಲದಿರುವುದರಿಂದ ವಿಷ್ಣುವಿಗೆ ಜಗತ್ಕರ್ತೃವು ಯುಕ್ತವಲ್ಲ) ಇತಿ ಚೇತ್ ನಃ=ಎಂದರೆ ಹಾಗೆ ಹೇಳಕೂಡದು ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್=ಪಾಶುಪತಾದಿ ಸ್ಮೃತಿಗಳಿಗೆ ರುದ್ರಾದಿಗಳಿಕ್ಕಿಂತಲೂ ಪರಮಾಪ್ತರಾದ ವಿಷ್ಣ್ವಾದಿಗಳಿಂದ ಪ್ರಣೀತಗಳಾಗಿರುವ ಅರ್ಥಾಂತರದಲ್ಲಿ ನಿರವಕಾಶಗಳಾದ ಪಂಚರಾತ್ರಾದಿ ಸ್ಮೃತಿಗಳಿಂದೊಡಗೂಡಿದ ಶ್ರುತಿವಿರೋಧವಿದ್ದುದರಿಂದ ನಿತರಾಂ ಅಪ್ರಾಮಾಣ್ಯಾಖ್ಯದೋಷದಿಂದ ಪ್ರಕೃಷ್ಟ ಸಂಬಂಧವನ್ನು ಅಂಗೀಕರಿಸಿದರಿಂದ, (ಪಾಶುಪತಾದಿ ಸ್ಮೃತಿವಿರೋಧವು ಅಕಿಂಚಿತ್ಕರವು. ಆ ನಿಮಿತ್ತದಿಂದ ಶ್ರುತಿಗೆ ಅರ್ಥಾಂತರವನ್ನು ಕಲ್ಪಿಸಕೂಡದು.)

ಪೀಠಿಕೆ ॥ ಅನವಕಾಶ ಪದದಿಂದ ಲಬ್ಧಗಳಾದ ಹೇತುಗಳನ್ನು ತೋರಿಸುತ್ತಾ-

**ಭಾಷ್ಯ ॥ ಸರ್ವಜ್ಞಾ ಹಿ ರುದ್ರಾದಯ। ಅತಸ್ತೇಷಾಂ ವಚನವಿರೋಧೇಽಪ್ರಾಮಾಣ್ಯಮೇವಃ ಸ್ಯಾತ್ । ಇತಿ ಚೇತ್ ॥ ೨ ॥**

ಭಾಷ್ಯಾರ್ಥ ॥ ರುದ್ರ, ಕಪಿಲ, ಕಮಲಾಸನ ಮೊದಲಾದವರು ಸರ್ವಜ್ಞರು, (ಮತ್ತೂ ಜಗತ್ತಿಗೆ ಹಿತೋಪದೇಶಕರು ಎಂದು) ಪ್ರಸಿದ್ಧರು. (ಇದರಿಂದ ಆಪ್ತಿಮೂಲತ್ವ, ಪ್ರಾಬಲ್ಯ, ಅರ್ಥಾಂತರಪರತ್ವಾಸಂಭವರೂಪ ಅನವಕಾಶತ್ವರೂಪಗಳಾದ ಹೇತುಗಳು ತೋರಿಸಲ್ಪಟ್ಟವು.) ಆದಕಾರಣ ರುದ್ರಾದಿಗಳ ವಚನರೂಪವಾದ ಪಾಶುಪತ್ಯಾದ್ಯಾಗಮದಿಂದ ವಿರೋಧವು ಬಂದರೆ ವಿಷ್ಣುಕರ್ತೃತ್ವಪರವಾದ ಶ್ರುತಿಗೆ ಅಪ್ರಾಮಾಣ್ಯವೇ ಬರಬೇಕಾಗುವುದು ಎಂದರೆ.

ವಿಶೇಷಾಂಶ ॥ (೧) ರುದ್ರಾದಿಗಳು ಸಾರ್ವಜ್ಞಾದಿಗಳುಳ್ಳವರೆಂದು ಆಗಮಸಿದ್ಧರಾಗಿರುತ್ತಾರೆ. ಆದಕಾರಣ ಅವರ ವಚನಗಳಿಗೆ (ಅಂದರೆ ಆ ಸ್ಮೃತಿಗಳಿಗೆ) ಆಪ್ತಿಮೂಲತ್ವವೂ, ಪ್ರಾಬಲ್ಯವೂ, ನಿರವಕಾಶತ್ವವೂ ಸಿದ್ಧವಾಯಿತು. ಆದುದರಿಂದ ಯತೋ ವಾ ಇತ್ಯಾದಿ ಶ್ರುತಿಗೆ ವಿಷ್ಣು ಜಗತ್ಕರ್ತೃತ್ವಪರತ್ವವನ್ನು ಕಲ್ಪಿಸಿದರೆ ಪಾಶುಪತಾದಿ ಸ್ಮೃತಿಗಳಿಂದ ವಿರೋಧವೇ ಬರುವುದು. ಅವಿರೋಧವಿಲ್ಲ. ವಿರೋಧವು ಬಂದರೆ ವಿರೋಧ ನಿಮಿತ್ತವಾದ ಅಪ್ರಾಮಾಣ್ಯವೇ ಬರುವುದು.

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ದ್ವಿತೀಯಾಧ್ಯಾಯ ೧ನೇ ಪಾದ

## ಯುಕ್ತಿಪಾದಃ

## ೧. ಸ್ಮೃತ್ಯಧಿಕರಣವು

ಪೀಠಿಕೆ ॥ ಪೂರ್ವಾಧ್ಯಾಯ ಸಂಗತವಾಗಿ ಈ ಅಧ್ಯಾಯದ ಅರ್ಥವನ್ನು ತೋರಿಸುತ್ತಾರೆ.

**ಭಾಷ್ಯ ॥ ಹರಿಃ ಓಂ ॥ ಉಕ್ತೇಽರ್ಥೇಽವಿರೋಧಂ ದರ್ಶಯತ್ಯನೇನಾಧ್ಯಾಯೇನ । ಪ್ರಥಮಪಾದೇ ಯುಕ್ತ್ಯವಿರೋಧಂ । ಪ್ರಥಮತಃ ಸ್ಮೃತ್ಯವಿರೋಧಂ ದರ್ಶಯತಿ ॥ ೧ ॥**

ಭಾಷ್ಯಾರ್ಥ ॥ (೧) ಹೇಳಿದ ಅರ್ಥದಲ್ಲಿ (ಅಂದರೆ ಶ್ರೀ ನಾರಾಯಣನಲ್ಲಿ ವೈದಿಕ ಅಪರ್ಯಾಯ ಅನಂತ ಶಬ್ದ ಸಮನ್ವಯದಿಂದ ಸರ್ವಜಗತ್ಕಾರಣತ್ವರೂಪವಾದ ಯಾವ ಅರ್ಥವು ೧ನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೋ, ಆ ಅರ್ಥದಲ್ಲಿ) (ಸೂತ್ರಕಾರರು) ಎರಡನೇ ಅಧ್ಯಾಯದಿಂದ ಯುಕ್ತ್ಯಾದಿಗಳಿಂದ ವಿರೋಧಾಭಾವವನ್ನು ಪ್ರತಿಪಾದಿಸುತ್ತಾರೆ. (೨) (ಈ ಪಾದ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ.) ೧ನೇ ಪಾದದಲ್ಲಿ ಹೇಳಿದ ಅರ್ಥದಲ್ಲಿ ಅನುಮಾನದಿಂದ ವಿರೋಧವಿಲ್ಲವೆನ್ನುವುದನ್ನು ಪ್ರತಿಪಾದಿಸುತ್ತಾರೆ. (೩) (ಈ ಪಾದದಲ್ಲಿದ್ದ ೧ನೇ ಅಧಿಕರಣದಲ್ಲಿ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ.) ೧ನೇ ಅಧಿಕರಣದಲ್ಲಿ ಅಲೌಕಿಕಾರ್ಥವಿಷಯ ಆಪ್ತವಾಕ್ಯರೂಪವಾದ ಪಾಶುಪತಾದಿ ಸ್ಮೃತಿಗಳಿಂದ ವಿರೋಧಾಭಾವವನ್ನು ಪ್ರತಿಪಾದಿಸುತ್ತಾರೆ.

ವಿಶೇಷಾಂಶ ॥ (೧) ಪೂರ್ವಾಧ್ಯಾಯವು ಸರ್ವಸಮನ್ವಯದ್ವಾರಾ ಜಗತ್ಕರ್ತೃತ್ವರೂಪವಾದ ಧರ್ಮವನ್ನೇ ತಿಳಿಸಿಕೊಡತಕ್ಕುದು, ಈ ಅಧ್ಯಾಯವು ವಿರೋಧನಿರಾಸದಿಂದ ಜಗತ್ಕರ್ತೃತ್ವದಲ್ಲಿ ಸ್ಥೈರ್ಯಸಾಧಕವಾಗಿ ಹೇತುವು ಆಗುವುದು. ಆದಕಾರಣ ಪೂರ್ವಾಧ್ಯಾಯಕ್ಕೂ ಈ ಅಧ್ಯಾಯಕ್ಕೂ ಹೇತುಹೇತುಮದ್ಭಾವರೂಪವಾದ ಸಂಗತಿಯು ಉಕ್ತವಾಯಿತು. (೨) ಪಾಶುಪತಾದಿ ಸ್ಮೃತಿಗಳು ಯುಕ್ತಿಗ್ರಂಥನರೂಪಗಳಾಗಿಯೂ ಇರುವುದರಿಂದ ಸ್ಮೃತಿವಿರೋಧಾಭಾವವನ್ನು ಪ್ರತಿಪಾದಿಸತಕ್ಕ ಈ ಅಧಿಕರಣವೂ ಯುಕ್ತ್ಯವಿರೋಧಪ್ರತಿಪಾದಕವೂ ಆಗಿರುವುದರಿಂದ ಈ ಪಾದದಲ್ಲಿ ಸೇರಿಸಿದ್ದು ಯುಕ್ತವು. (೩) ಇದರಿಂದ ಈ ಅಧಿಕರಣಕ್ಕೆ ಶಾಸ್ತ್ರಾದಿಸಂಗತಿಯು ಉಕ್ತವಾಯಿತು. **ಯುಕ್ತಿಭಿಃ ಸಮಯೈಃ ಶುದ್ಧವೇದೈರ್ಯುಕ್ತ್ಯುಪಬೃಂಹಿತೈಃ । ವೇದೈಶ್ಚಾಪ್ಯವಿರೋಧೋಽತ್ರ ಕ್ರಮಾತ್ಪಾದೇಷು ಕೀರ್ತ್ಯತೇ ॥** ೧ನೇ ಪಾದದಲ್ಲಿ ಯುಕ್ತ್ಯವಿರೋಧವೂ ೨ನೇ ಪಾದದಲ್ಲಿ ಅಲೌಕಿಕಾರ್ಥಗೋಚರ ಬಹುಜನಪರಿಗೃಹೀತವಾಕ್ಯ ಸಂದರ್ಭರೂಪವಾದ ಸಮಯಾವಿರೋಧವೂ ೩ನೇ ಪಾದದಲ್ಲಿ ಕೇವಲ ಶ್ರುತ್ಯವಿರೋಧವೂ, ೪ನೇ

ಪಾದದಲ್ಲಿ ಸಯುಕ್ತಿಕ ಶ್ರುತ್ಯವಿರೋಧವೂ ಪ್ರತಿಪಾದಿಸಲ್ಪಡುತ್ತದೆ. ಹೀಗೆ ವಿರೋಧಗಳು ಯುಕ್ತ್ಯಾದಿರೂಪದಿಂದ ನಾಲ್ಕು ವಿಧಗಳಾಗಿರುವುದರಿಂದ ಅವಿರೋಧವೂ ನಾಲ್ಕು ವಿಧವು.

**ಪೀಠಿಕೆ** ॥ ಪೂರ್ವಪಕ್ಷಾದಿಗಳನ್ನು ತೋರಿಸುವುದಕ್ಕಾಗಿ ಸೂತ್ರವನ್ನುಪನ್ಯಾಸಮಾಡುತ್ತಾರೆ.

## ಸೂತ್ರ ॥ ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ಓಂ ॥ ೧ ॥

**ಸೂತ್ರಾರ್ಥ** ॥ (ಯಾವ ಕಾರಣದಿಂದ) ಸ್ಮೃತ್ಯನವಕಾಶದೋಷಪ್ರಸಂಗಃ=ನಿರವಕಾಶಗಳಾದ ಪಾಶುಪತಾದಿ ಇತರ ಸ್ಮೃತಿಗಳ ವಿರೋಧವಿದ್ದುದರಿಂದ ಶ್ರುತಿಗೆ ಅಪ್ರಾಮಾಣ್ಯಾಖ್ಯದೋಷವು ಬರುವುದೋ, (ಆದುದರಿಂದ ಶ್ರುತಿಗೆ ವಿಷ್ಣುಜಗತ್ಕರ್ತೃತಾಪರತ್ವವು ಯುಕ್ತವಲ್ಲ. ಆದಪ್ರಯುಕ್ತ ಶ್ರುತಿಯಿಂದ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲವಾದುದರಿಂದ ಪ್ರಮಾಣವಿಲ್ಲದಿರುವುದರಿಂದ ವಿಷ್ಣುವಿಗೆ ಜಗತ್ಕರ್ತೃವು ಯುಕ್ತವಲ್ಲ) ಇತಿ ಚೇತ್ ನ=ಎಂದರೆ ಹಾಗೆ ಹೇಳಕೂಡದು ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್=ಪಾಶುಪತಾದಿ ಸ್ಮೃತಿಗಳಿಗೆ ರುದ್ರಾದಿಗಳಿಕ್ಕಿಂತಲೂ ಪರಮಾಪ್ತರಾದ ವಿಷ್ಣ್ವಾದಿಗಳಿಂದ ಪ್ರಣೀತಗಳಾಗಿರುವ ಅರ್ಥಾಂತರದಲ್ಲಿ ನಿರವಕಾಶಗಳಾದ ಪಂಚರಾತ್ರಾದಿ ಸ್ಮೃತಿಗಳಿಂದೊಡಗೂಡಿದ ಶ್ರುತಿವಿರೋಧವಿದ್ದುದರಿಂದ ನಿತರಾಂ ಅಪ್ರಾಮಾಣ್ಯಾಖ್ಯದೋಷದಿಂದ ಪ್ರಕೃಷ್ಟ ಸಂಬಂಧವನ್ನು ಅಂಗೀಕರಿಸಿದರಿಂದ, (ಪಾಶುಪತಾದಿ ಸ್ಮೃತಿವಿರೋಧವು ಅಕಿಂತಿತ್ಕರವು. ಆ ನಿಮಿತ್ತದಿಂದ ಶ್ರುತಿಗೆ ಅರ್ಥಾಂತರವನ್ನು ಕಲ್ಪಿಸಕೂಡದು.)

**ಪೀಠಿಕೆ** ॥ ಅನವಕಾಶ ಪದದಿಂದ ಲಬ್ಧಗಳಾದ ಹೇತುಗಳನ್ನು ತೋರಿಸುತ್ತಾ-

**ಭಾಷ್ಯ** ॥ ಸರ್ವಜ್ಞಾ ಹಿ ರುದ್ರಾದಯ। ಅತಸ್ತೇಷಾಂ ವಚನವಿರೋಧೇऽಪ್ರಾಮಾಣ್ಯಮೇವಃ ಸ್ಯಾತ್ । ಇತಿ ಚೇತ್ ॥ ೨ ॥

**ಭಾಷ್ಯಾರ್ಥ** ॥ ರುದ್ರ, ಕಪಿಲ, ಕಮಲಾಸನ ಮೊದಲಾದವರು ಸರ್ವಜ್ಞರು, (ಮತ್ತೂ ಜಗತ್ತಿಗೆ ಹಿತೋಪದೇಶಕರು ಎಂದು) ಪ್ರಸಿದ್ಧರು. (ಇದರಿಂದ ಆಪ್ತಿಮೂಲತ್ವ, ಪ್ರಾಬಲ್ಯ, ಅರ್ಥಾಂತರಪರತ್ವಾಸಂಭವರೂಪ ಅನವಕಾಶತ್ವರೂಪಗಳಾದ ಹೇತುಗಳು ತೋರಿಸಲ್ಪಟ್ಟವು.) ಆದಕಾರಣ ರುದ್ರಾದಿಗಳ ವಚನರೂಪವಾದ ಪಾಶುಪತ್ಯಾದ್ಯಾಗಮದಿಂದ ವಿರೋಧವು ಬಂದರೆ ವಿಷ್ಣುಕರ್ತೃತ್ವಪರವಾದ ಶ್ರುತಿಗೆ ಅಪ್ರಾಮಾಣ್ಯವೇ ಬರಬೇಕಾಗುವುದು ಎಂದರೆ.

**ವಿಶೇಷಾಂಶ** ॥ (೧) ರುದ್ರಾದಿಗಳು ಸಾರ್ವಜ್ಞಾದಿಗಳುಳ್ಳವರೆಂದು ಆಗಮಸಿದ್ಧರಾಗಿರುತ್ತಾರೆ. ಆದಕಾರಣ ಅವರ ವಚನಗಳಿಗೆ (ಅಂದರೆ ಆ ಸ್ಮೃತಿಗಳಿಗೆ) ಆಪ್ತಿಮೂಲತ್ವವೂ, ಪ್ರಾಬಲ್ಯವೂ, ನಿರವಕಾಶತ್ವವೂ ಸಿದ್ಧವಾಯಿತು. ಆದುದರಿಂದ ಯತೋ ವಾ ಇತ್ಯಾದಿ ಶ್ರುತಿಗೆ ವಿಷ್ಣು ಜಗತ್ಕರ್ತೃತ್ವಪರತ್ವವನ್ನು ಕಲ್ಪಿಸಿದರೆ ಪಾಶುಪತಾದಿ ಸ್ಮೃತಿಗಳಿಂದ ವಿರೋಧವೇ ಬರುವುದು. ಅವಿರೋಧವಿಲ್ಲ. ವಿರೋಧವು ಬಂದರೆ ವಿರೋಧ ನಿಮಿತ್ತವಾದ ಅಪ್ರಾಮಾಣ್ಯವೇ ಬರುವುದು.

ಭಾಗವಿಶೇಷದಲ್ಲಿ ಪ್ರಾಮಾಣ್ಯವೂ ಇಲ್ಲ. ಎಲ್ಲಾ ದೇಶಗಳಲ್ಲಿ ಎಲ್ಲಾ ಕಾಲಗಳಲ್ಲಿಯೂ ರುದ್ರಾದಿಗಳೇ ಜಗತ್ಕರ್ತರು ಎಂದು ಪಾಶುಪತಾದ್ಯಾಗಮದಲ್ಲಿ ಹೇಳಿರುವುದರಿಂದ ದೇಶಕಾಲಭೇದದಿಂದ ಅವಿರೋಧವೂ ಇಲ್ಲ. ಆದಕಾರಣ ವಿರೋಧವನ್ನು ಪರಿಹರಿಸುವುದಕ್ಕಾಗಿ ಶ್ರುತಿಗೆ ವಿಷ್ಣುಜಗತ್ಕರ್ತೃತಾಪರತ್ವವನ್ನು ಬಿಟ್ಟು ರುದ್ರಾದಿರೂಪ ಅರ್ಥಾಂತರಪರತ್ವವನ್ನು ಹೇಳಬೇಕು. ಆದುದರಿಂದ ಪ್ರಮಾಣವಿಲ್ಲದಿರುವುದರಿಂದ ವಿಷ್ಣುವಿಗೆ ಜಗತ್ಕರ್ತೃವು ಸಿದ್ಧಿಸಲಾರದು. ಆದುದರಿಂದ ಜಿಜ್ಞಾಸ್ಯತ್ವವೂ ಇಲ್ಲ.

**ಪೀಠಿಕೆ ॥** ಸಿದ್ಧಾಂತಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

## ಭಾಷ್ಯ ॥ ನ । ಅನ್ಯಸ್ಮೃತೀನಾಂ ವಿಷ್ಣ್ವಾದಿಭಿರ್ನಿತರಾಂ ಸರ್ವಜ್ಞೈರೇವ ಕೃತತ್ವಾತ್ ಶ್ರುತೇರಾಧಿಕ್ಯಂ ಚ ಸಿದ್ಧ್ಯತಿ ॥ ೧ ॥ ॥ ೩ ॥

**ಭಾಷ್ಯಾರ್ಥ ॥** (ವಿಷ್ಣು ಜಗತ್ಕರ್ತೃತ್ವವು ಪ್ರಮಾಣವಿಲ್ಲದಿರುವುದರಿಂದ ಅಯುಕ್ತವು) ಅಲ್ಲ (ಮತ್ತೆ ಯುಕ್ತವೇ. ಏಕೆಂದರೆ) ಶ್ರುತೇಃಯತೋ ವಾ ಇತ್ಯಾದಿ ಶ್ರುತಿಸಿದ್ಧವಾದ ಪ್ರಯುಕ್ತ (ಶ್ರುತಿಗೆ ವಿಷ್ಣು ಜಗತ್ಕರ್ತೃತಾಪರತ್ವವಿದ್ದರೆ ಇತರ ಸ್ಮೃತಿವಿರೋಧದಿಂದ ಅಪ್ರಾಮಾಣ್ಯಾಖ್ಯ ದೋಷವು ಬರುವುದರಿಂದ ಶ್ರುತಿಗೆ ಅರ್ಥಾಂತರಪರತ್ವವು ಎಂದು ಹೇಳಕೂಡದು. ಏಕೆಂದರೆ) ಅನ್ಯಸ್ಮೃತೀನಾಂ= ಪಾಶುಪತಾದಿ ಸ್ಮೃತಿಗಳಿಗೇನೇ (ಅಪ್ರಾಮಾಣ್ಯವು. ಏಕೆಂದರೆ—ಶ್ರುತಿವಿರೋಧವಿದ್ದುದರಿಂದ) (ಶ್ರುತಿವಿರೋಧವಿದ್ದರೂ ಇತರ ಸ್ಮೃತಿಗಳಿಗೆ ಅಪ್ರಾಮಾಣ್ಯವು ಸಿದ್ಧಿಸುವುದಿಲ್ಲ. ಸ್ಮೃತಿಗಿಂತ ಶ್ರುತಿಗೆ ಅಧಿಕ್ಯವು ಸಿದ್ಧಿಸುವುದಿಲ್ಲ. ಅಧಿಕಬಲವಿರೋಧವೇ ಅಪ್ರಾಮಾಣ್ಯಕ್ಕೆ ಕಾರಣವು, ಎಂದು ಹೇಳಕೂಡದು.) ಅನ್ಯಸ್ಮೃತೀನಾಂ=ಪಾಶುಪತಾದಿಗಳಿಂದ ಇತರಗಳಾದ ವ್ಯಾಖ್ಯಾನರೂಪಗಳಾದ ಪಂಚರಾತ್ರಾದಿ ಸ್ಮೃತಿಗಳ ಸಹಾಯವಿದ್ದುದರಿಂದ, ಶ್ರುತೇಃ=ಶ್ರುತಿಗೆ, ಅಧಿಕ್ಯಂ ಚಃ=ಅಧಿಕ್ಯವೂ, ಸಿದ್ಧ್ಯತಿಃ=ಸಿದ್ಧಿಸುತ್ತದೆ, ಅನ್ಯಸ್ಮೃತೀನಾಂ=ಪಂಚರಾತ್ರಾದಿರೂಪಗಳಾದ ಇತರ ಸ್ಮೃತಿಗಳಿಗೆ, ರುದ್ರಾದಿಗಳಿಗಿಂತ ನಿತರಾಂ=ನಿರತಿಶಯವಾಗಿ ಅಥವಾ ನಿಸ್ಸಂದೇಹವಾಗಿ ಸರ್ವಜ್ಞೈರೇವಃ=ಸರ್ವಜ್ಞರೇ ಆದ, ವಿಷ್ಣ್ವಾದಿಭಿಃ=ವಿಷ್ಣು ಮನು ಮೊದಲಾದವರಿಂದ, ಕೃತತ್ವಾತ್=ಮಾಡಲ್ಪಟ್ಟ ಪ್ರಯುಕ್ತ.

**ವಿಶೇಷಾಂಕ ॥** (೧) ಪಾಶುಪತಾದಿ ಸ್ಮೃತಿಗೆ ಪಂಚರಾತ್ರಾದಿ ಸ್ಮೃತಿಸಹಿತ ಶ್ರುತ್ಯಾದಿಬಾಧವೂ ಉಕ್ತವಾಯಿತು. (೨) ಶ್ರುತಿಸಮನ್ವಯಕ್ಕೆ ಸ್ಮೃತಿವಿರೋಧವನ್ನು ಶಂಕಿಸುತ್ತಿರಲು ಶ್ರುತಿಯನ್ನು ಬಿಟ್ಟು ಕೇವಲ ಸ್ಮೃತಿವಿರೋಧವನ್ನು ಹೇಳಿದ್ದು ಅಯುಕ್ತವಾದುದರಿಂದ ಸ್ಮೃತಿಪದದಿಂದ ಸ್ಮೃತಿಸಹಿತ ಶ್ರುತಿವಿರೋಧವನ್ನು ಇಟ್ಟುಕೊಳ್ಳಬೇಕು. ॥ ೧ ॥

**ಪೀಠಿಕೆ ॥** ವೈಷ್ಣವಸ್ಮೃತಿಗಳನ್ನು ಪರಮಾತ್ಮನು ಮಾಡಿದ್ದರಿಂದ ಅವುಗಳ ಸಾಹಾಯ್ಯವುಳ್ಳ ಶ್ರುತಿಯು ಪ್ರಬಲವಾದುದರಿಂದ ಆದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುತ್ತದೆ ಎಂದು ಯಾವುದು ಹೀಗೆ ಹೇಳಲ್ಪಟ್ಟದೋ ಅದು ಯುಕ್ತವಲ್ಲ. ಹಾಗಿದ್ದರೆ ಪಾಶುಪತಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯವು ಬರಬೇಕಾಗುವುದು. ರುದ್ರಾದಿ ಆಪ್ತರಿಂದ ಹೇಳಲ್ಪಟ್ಟ ಪಾಶುಪತಾದಿ ಸ್ಮೃತಿಗಳಿಗೆ

ಅಪ್ರಾಮಾಣ್ಯವು ಕೂಡಲಾರದು, ಎನ್ನುವ ಅಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಇತರೇಷಾಂ ಚಾನುಪಲಬ್ಧೇಃ ಓಂ ॥ ೨ ॥

**ಸೂತ್ರಾರ್ಥ** ॥ ನಿರವಕಾಶವೆಂದು ಹೇಳಲ್ಪಟ್ಟ ಪಾಶುಪತಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯವು ಯುಕ್ತವು. ಅನುಪಲಬ್ಧೇಃ=ಪ್ರತ್ಯಕ್ಷಕ್ಕೆ ಅವಿಷಯವಾದ ಫಲವಿದ್ದುದರಿಂದ, ಇತರೇಷಾಂ ಚಃ=ಭಿನ್ನಗಳಾದ ಈ ಪಾಶುಪತಾದಿ ಸ್ಮೃತಿಗಳಲ್ಲಿ ಹೇಳಲ್ಪಟ್ಟ ಪ್ರತ್ಯಕ್ಷ ಯೋಗ್ಯ ಫಲಗಳಿಗೂ ಅನರ್ಥಗಳಿಗೂ ಹೆಚ್ಚಾಗಿ ಪ್ರತ್ಯಕ್ಷವಿಲ್ಲದಿರುವುದರಿಂದ, ಪಾಶುಪತಾದ್ಯಾಗಮಗಳಿಗೆ ಅಪ್ರಾಮಾಣ್ಯವು ಯುಕ್ತವಾಗಿದೆ.

**ಭಾಷ್ಯ ॥ ಇತರೇಷಾಂ (ಚ) ತಾಸು ಸ್ಮೃತಿಷೂಕ್ತಾನಾಂ ಫಲಾದೀನಾಂ (ಫಲಾನಾಂ) ಪ್ರತ್ಯಕ್ಷತೋಽನುಪಲಬ್ಧೇರಪ್ರಾಮಾಣ್ಯಂ ತಾಸಾಂ ಯುಕ್ತಂ ॥ ೪ ॥**

**ಭಾಷ್ಯಾರ್ಥ** ॥ ವೈಷ್ಣವ ಸ್ಮೃತಿಗಳಿಂದ ಇತರಗಳಾದ ಪಶುಪತ್ಯಾದಿಗಳಿಂದ ಮಾಡಲ್ಪಟ್ಟ ಸ್ಮೃತಿಗಳಲ್ಲಿ ಹೇಳಲ್ಪಟ್ಟ ಫಲಗಳಿಗೆ, ಅನುಪಲಬ್ಧೇಃ=ಪ್ರತ್ಯಕ್ಷದಿಂದ ಉಪಲಬ್ಧಿಯಿಲ್ಲದಿರುವುದರಿಂದಲೂ, ಪ್ರತ್ಯಕ್ಷಯೋಗ್ಯಗಳಾದ ಫಲ (ಪುರುಷಾರ್ಥ) ಅನರ್ಥ, ಇವುಗಳ ಮಧ್ಯದಲ್ಲಿ ಕೆಲವು ನಿಷ್ಫಲವಾಗಿ ಇರುವುದರಿಂದ, ಕೆಲವು ಆ ಸ್ಮೃತಿಗಳಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದರೂ ಪರಿತ್ಯಾಗ ಮಾಡಿದರೂ ಪ್ರತ್ಯಕ್ಷವಾಗಿ ಫಲವು ತೋರದೆ ಇದ್ದುದರಿಂದ, ತಾಸಾಂ=ಆ ಪಾಶುಪತಾದಿ ಸ್ಮೃತಿಗಳಿಗೆ, ಅಪ್ರಾಮಾಣ್ಯಂ=ಅಪ್ರಾಮಾಣ್ಯವು, ಯುಕ್ತಂ=ಉಪಪನ್ನವು.

**ಪೀಠಿಕೆ** ॥ ಪಾಶುಪತಾದಿ ಸ್ಮೃತಿಗಳಲ್ಲಿ ವಿಹಿತವಾದುದನ್ನು ಮಾಡಿದರೆ ಫಲವೂ, ನಿಷಿದ್ಧವಾದುದನ್ನು ಮಾಡಿದರೆ ಅನರ್ಥವೂ ತೋರಿಬರುವುದರಿಂದ ಫಲೋಪಲಬ್ಧಿಯಿಲ್ಲವೆಂದು ಸೂತ್ರಕಾರರು ಹೇಗೆ ಹೇಳಿದರು. ಎಂದರೆ—

**ಭಾಷ್ಯ ॥ ಚಶಬ್ದೇನ ಭಾಗೋಪಲಬ್ಧಿರಂಗೀಕೃತಾ ॥ ೨ ॥**

**ಭಾಷ್ಯಾರ್ಥ** ॥ ಚ ಶಬ್ದದಿಂದ ಭಾಗವಿಶೇಷದಲ್ಲಿ ಹೇಳಲ್ಪಟ್ಟ ಫಲಗಳಿಗೆ ಉಪಲಬ್ಧಿಯು ಅಂಗೀಕೃತವಾಗಿದೆ (ಎಂದು ಸೂತ್ರಕಾರರಿಂದ ಸೂಚಿತವಾಗಿದೆ.)

**ವಿಶೇಷಾಂಕ** ॥ (೧) ಕೆಲವು ಫಲಗಳಿಗೆ ಉಪಲಬ್ಧಿಯಿದ್ದುದರಿಂದಲೂ ಇನ್ನು ಇತರರಿಗೆ ಉಪಲಬ್ಧಿಯಿಲ್ಲದೆ ಇದ್ದುದರಿಂದಲೂ ಎಂದು ಸಮುಚ್ಚಯಾರ್ಥವು ಚ ಶಬ್ದವು ಎಂದುಕ್ತವಾಯಿತು. (೨) ತಥಾಚ ಇತರ ಸ್ಮೃತಿಗಳಲ್ಲಿ ಭಾಗವಿಶೇಷದಲ್ಲಿ ಹೇಳಲ್ಪಟ್ಟ ಫಲ ಅನರ್ಥಾದಿಗಳು ತೋರಿದರೂ ಅಲ್ಲಿ ಅಪ್ತೋಕ್ತತ್ವ ನಿಶ್ಚಯವು ಆಗಲಾರದು. ಅದೃಷ್ಟ ಫಲವುಳ್ಳ ಭಾಗಾಂತರದಂತೆ ಅನಾಪ್ತೋಕ್ತತ್ವವೂ ಕೂಡಬಹುದು. ॥ ೨ ॥

**ಪೀಠಿಕೆ** ॥ ಈ ನಿಮಿತ್ತದಿಂದ ಎಲ್ಲಾ ಅವೈಷ್ಣವ ಸ್ಮೃತಿಗಳಿಗೆ ಅಪ್ರಾಮಾಣ್ಯವು ಹೇಳಲಾಗುವುದಿಲ್ಲ. ಯೋಗಸ್ಮೃತಿಯಲ್ಲಿ ಹೇಳಿದ ಫಲಾದಿಗಳು ನಿಯಮೇನ ತೋರುವುದರಿಂದ ಅವುಗಳಿಗೆ ಆಪ್ತಪ್ರಣೀತತ್ವ

ನಿಶ್ಚಯವು ಕೂಡಬಹುದು ಎನ್ನುವ ಆ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಏತೇನ ಯೋಗಃ ಪ್ರತ್ಯುಕ್ತಃ ಓಂ ॥ ೩ ॥

**ಸೂತ್ರಾರ್ಥ ॥** ಯೋಗಶಾಸ್ತ್ರವು ಅಪ್ರಮಾಣವಾದುದರಿಂದ ನಿರಸ್ತವಾಯಿತು. ಹಿಂದೆ ಹೇಳಿದ ರೀತ್ಯಾಫಲವು ತೋರದಿರುವುದರಿಂದ.

**ಭಾಷ್ಯ ॥ ಯೋಗಫಲಂ ಪ್ರತ್ಯಕ್ಷತ ಉಪಲಭ್ಯತ (ಪ್ರತ್ಯಕ್ಷೋಪಲಭ್ಯಂ) ಇತಿ ನ ಮಂತವ್ಯಂ ॥ ಉಕ್ತಾಭ್ಯಾಸೇ ತತ್ಕಾಲ ಏವ ಫಲಾದೃಷ್ಟೇಃ ॥ ೩ ॥ ಅಧಿ. ೧ ॥ ॥ ೬ ॥**

**ಭಾಷ್ಯಾರ್ಥ ॥** ಏತೇನ=ಹಿಂದೆ ಹೇಳಿದ ಕ್ರಮದಿಂದ, ಉಕ್ತಾಭ್ಯಾಸೇ=ಅವಾವ ಫಲೋಪಾಯಗಳನ್ನು ಅಭ್ಯಾಸ ಮಾಡಿದಾಗ ಅಥವಾ ಶಾಸ್ತ್ರೋಕ್ತಪ್ರಕಾರವನ್ನು ಅಸಕೃತ್ ಅನುಷ್ಠಾನ ಮಾಡಿದರೆ, ತತ್ಕಾಲ ಏವ= ಆ ಕಾಲದಲ್ಲಿಯೇ, ಫಲಾದೃಷ್ಟೇಃ=ಅದರಲ್ಲಿ ಹೇಳಿದ ಕ್ರಮವಿಶಿಷ್ಟ ಫಲವು ಕಾಣದೆ ಇರುವುದರಿಂಜ, ಯೋಗಶಾಸ್ತ್ರದಲ್ಲಿ ಹೇಳಿದ ಯೋಗಾಭ್ಯಾಸದಿಂದ ಆಗುವ ಫಲವು, ಪ್ರತ್ಯಕ್ಷತಃ ಉಪಲಭ್ಯತೇ ಇತಿ=ನಿಯಮೇನ ಇಂದ್ರಿಯಗ್ರಾಹ್ಯವಾಗುತ್ತದೆ ಎಂದು, ನ ಮಂತವ್ಯಂ= ತಿಳಿಯಕೂಡದು. ಅಂತೂ ಯೋಗಶಾಸ್ತ್ರಕ್ಕೂ ಅಪ್ತೋಕ್ತತ್ವನಿಶ್ಚಯವು ನಿರಸ್ತವಾಯಿತು. ಯೋಗಶಾಸ್ತ್ರವೂ ಅಪ್ರಮಾಣವೆಂದೇ ನಿಶ್ಚಿತವಾಗುವುದು.

**ವಿಶೇಷಾಂಶ ॥** ಯೋಗಶಾಸ್ತ್ರೋಕ್ತಯೋಗಾಭ್ಯಾಸಕ್ಕೆ ಪ್ರಥಮಫಲವು ಸ್ವೇದನವು. ಎರಡನೇ ಫಲವು ಗಾತ್ರಭಂಜನವು ಈ ರೀತಿಯಾಗಿ ಕ್ರಮವಿಶಿಷ್ಟಫಲವುಳ್ಳದ್ದಾಗಿ ಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಸ್ವೇದನ ಗಾತ್ರಭಂಜನಾದಿರೂಪದ ಫಲೋಪಾಯಗಳನ್ನು ಮಾಡಿದರೆ ಅಭ್ಯಾಸಾವಸ್ಥೋತ್ಕರ್ಷ ಸಂಪತ್ತಿಕಾಲದಲ್ಲಿಯೇ ಸ್ವೇದನಾದಿಗಳು ಕಾಣುವುದಿಲ್ಲ. ಆದುದರಿಂದ ನಿಯಮೇನ ಫಲವು ಉಪಲಬ್ಧವಾಗುತ್ತದೆ ಎನ್ನುವ ಹೇತುವಿಗೆ ಅಸಿದ್ಧಿಯಿದ್ದುದರರಿಂದ ಅದರಿಂದ ಅಪ್ತೋಕ್ತತ್ವ ನಿಶ್ಚಯವು ಕೂಡಲಾರದು. ಆದಪ್ರಯುಕ್ತ ಯೋಗಸ್ಮೃತಿಗೂ ಅಪ್ರಾಮಾಣ್ಯವೇ. ಆದಕಾರಣ ಎಲ್ಲಾ ಅವೈಷ್ಣವ ಸ್ಮೃತಿಗಳಿಗೂ ಅಪ್ರಾಮಾಣ್ಯವು ಯುಕ್ತವೇ. ॥ ೩ ॥

## ಮಾಯಾವಾದರೀತ್ಯಾ

ವಿಚಾರ ॥ ೧ನೇ ಪಾದದಲ್ಲಿ ಸಾಂಖ್ಯಾದಿ ಸ್ಮೃತಿಗಳಿಂದಲೂ ಸ್ಮೃತ್ಯುನ್ನೀತ ತರ್ಕಗಳಿಂದಲೂ ತಮ್ಮ ಪಕ್ಷಕ್ಕೆ ವಿರೋಧಪರಿಹಾರವು. ೨ನೇ ಪಾದದಲ್ಲಿ ಸಾಂಖ್ಯಾದಿ ಮತಗಳಿಗೆ ದುಷ್ಟತ್ವೋಕ್ತಿಯು ೩ನೇ ಪಾದದಲ್ಲಿ ಪೂರ್ವಭಾಗದಲ್ಲಿ ಪಂಚಮಹಾಭೂತ ಶ್ರುತಿಗಳಿಗೂ, ಉತ್ತರಭಾಗದಲ್ಲಿ ಆದರೂ ಜೀವ ಶ್ರುತಿಗಳಿಗೂ ಪರಸ್ಪರ ವಿರೋಧಪರಿಹಾರವು. ೪ನೇ ಪಾದದಲ್ಲಿ ಲಿಂಗಶರೀರಶ್ರುತಿಗಳಿಗೆ ಪರಸ್ಪರ ವಿರೋಧ ಪರಿಹಾರವು. ಹೀಗೆ ಮಾಯಾವಾದಿಗಳು ಪಾದಾರ್ಥಗಳನ್ನು ಹೇಳುತ್ತಾರೆ. ಅದು ಅಯುಕ್ತವು. ೧ನೇ ಪಾದದಲ್ಲಿಯೂ ೨ನೇ ಪಾದದಲ್ಲಿಯೂ ಒಂದು ಉಪಾಧಿಯು ಇಲ್ಲ. ೧ನೇ

ಪಾದದಲ್ಲಿಯೂ ಇತರೇಷಾಂ ಚಾನುಪಲಬ್ಧೇಃ, ಏತೇನ ಯೋಗಃ ಪ್ರತ್ಯುಕ್ತಃ ಇತ್ಯಾದಿಗಳಲ್ಲಿ ಪರಮತಗಳಿಗೆ ದುಷ್ಟತ್ವೋಕ್ತಿಯು ಅದ್ವೈತಿಗಳಿಂದಲೂ ಸ್ವೀಕೃತವಾಗಿದೆ.

## ರಾಮಾನುಜಾಚಾರ್ಯರೀತ್ಯಾ

ವಿಚಾರ॥ (೧) ೧ನೇ ಪಾದದಲ್ಲಿ ತನ್ನ ಪಕ್ಷದಲ್ಲಿ ಕಾರಣವಿಷಯದಲ್ಲಿ ದೋಷೋದ್ಧಾರವು. ೨ನೇ ಪಾದದಲ್ಲಿ ಪರಪಕ್ಷದಲ್ಲಿ ಕಾರಣವಿಷಯದಲ್ಲಿ ದೋಷೋಕ್ತಿಯು. ೩ನೇ ೪ನೇ ಪಾದಗಳಲ್ಲಿ ಆದರೂ ಸ್ವಪಕ್ಷದಲ್ಲಿ ಕಾರ್ಯವಿಷಯದಲ್ಲಿ ದೋಷೋದ್ಧಾರವು. ಹೀಗೆ ರಾಮಾನುಜಾಚಾರ್ಯರು ಪಾದಾರ್ಥಗಳನ್ನು ಹೇಳುತ್ತಾರೆ. ಅದು ಅಯುಕ್ತವು. ೧ನೇ ಪಾದದಲ್ಲಿಯೂ ಸ್ವಪಕ್ಷದೋಷಾಚ್ಚ ಇತ್ಯಾದಿಗಳಲ್ಲಿ ಪರಪಕ್ಷದಲ್ಲಿ ದೋಷಗಳನ್ನು ಹೇಳಿದ್ದಾರೆ. ೨ನೇ ಪಾದದಲ್ಲಿಯೂ ಉತ್ಪತ್ತ್ಯಸಂಭವಾತ್ ಎನ್ನುವಲ್ಲಿ ಪಂಚರಾತ್ರಾಪ್ರಾಮಾಣ್ಯರೂಪವಾದ ಸ್ವಪಕ್ಷ ದೋಷೋದ್ಧಾರವು ಸ್ವೀಕೃತವಾಗಿದೆ. ೨ನೇ ಪಾದದಲ್ಲಿ ಆದರೂ ಸಮವಾಯಾಭ್ಯುಪಗಮಾಚ್ಚ ಇದು ಮೊದಲಾದ ಬಹುಸೂತ್ರಗಳಲ್ಲಿ ಪರಪಕ್ಷದಲ್ಲಿ ಕಾರಣದ್ದೆಶೆಯಿಂದ ಅನ್ಯತ್ರಾಪಿ ದೋಷಗಳನ್ನು ಹೇಳಿದ್ದಾರೆ. ೩ನೇ ಪಾದದಲ್ಲಿಯೂ ನಾತ್ಮಾ ಪ್ರಕರಣಾತ್ ಜ್ಞೋऽತ ಏವ ಇತ್ಯಾದಿಗಳಲ್ಲಿ ಅಕಾರ್ಯಭೂತವಾದ ಜೀವನ ವಿಷಯದಲ್ಲಿ ದೋಷಗಳನ್ನು ಪರಿಹರಿಸಿದ್ದಾರೆ. ೩-೪ನೇ ಪಾದಗಳಿಗೆ ಅರ್ಥಭೇದವನ್ನು ಹೇಳಲಿಲ್ಲ. ಆದಕಾರಣ ಪರರು ಹೇಳಿರುವ ಪಾದವ್ಯವಸ್ಥೆಯು ಯುಕ್ತವಾಗಲಾರದು.

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ॥ ವೇದಾಂತಗಳು ಚೇತನಕಾರಣತ್ವ ಅಚೇತನಕಾರಣತ್ವಾದ್ಯನೇಕಾರ್ಥಗಳನ್ನು ಹೇಳತಕ್ಕವುಗಳಾದುದರಿಂದ ಮಂದಬುದ್ಧಿಯುಳ್ಳ ಜನರಿಗೆ ಅವುಗಳಿಂದ ಶ್ರುತ್ಯಾದಿ ಸಹಾಯವಿಲ್ಲದೆ ಅರ್ಥ ನಿಶ್ಚಯವಾಗಲಾರದು. ಆದುದರಿಂದ ಸ್ಮೃತಿಯಿಂದ ವೇದಾಂತಾರ್ಥವು ನಿಶ್ಚಯಿಸ ಬೇಕಾಗಿರುವುದರಿಂದ ಸ್ಮೃತಿಗಳ ಮಧ್ಯದಲ್ಲಿ ಮನ್ವಾದಿಸ್ಮೃತಿಗಳು ಅನುಷ್ಠೇಯವಾದ ಧರ್ಮಾದಿಪರವಾಗಿರುವುರಿಂದ ಅದರಿಂದ ವೇದಾಂತಾರ್ಥ ನಿಶ್ಚಯವಾಗಲಾರದು. ಆದಪ್ರಯುಕ್ತ ಅದನ್ನು ಬಿಟ್ಟು ಸಿದ್ಧಾರ್ಥನಿಷ್ಠವಾದ ಮೋಕ್ಷಸಾಧನವಾದ ಸಮ್ಯಕ್ ಜ್ಞಾನವನ್ನು ಹುಟ್ಟಿಸಲಿಕ್ಕೆ ಪ್ರವೃತ್ತವಾದ ಕಾಪಿಲ ಸ್ಮೃತಿಗಳಾದರೂ ಅರ್ಥಾಂತರ ಪರತ್ವವು ಇಲ್ಲದಿರುವುದರಿಂದ ಕಾಪಿಲಸ್ಮೃತಿಯನ್ನು ಅನುಸರಿಸಿ ವೇದಾಂತಗಳು ಅಚೇತನ ಪ್ರಧಾನ ಕಾರಣ ಪರವಾಗಿ ವ್ಯಾಖ್ಯಾನಾರ್ಹಗಳು ಎಂದು ಪೂರ್ವಪಕ್ಷ ಬಂದರೆ ಮನ್ವಾದಿ ಸ್ಮೃತಿಗಳಲ್ಲಿಯೂ ಪುರಾಣಾದಿಗಳಲ್ಲಿಯೂ ಬ್ರಹ್ಮಕಾರಣತ್ವವನ್ನು ಹೇಳುವ ಬಹುವಾಕ್ಯಗಳು ಇರುವುದರಿಂದ ಅವುಗಳಿಗೆ ಅರ್ಥಾಂತರವನ್ನು ಹೇಳಲಿಕ್ಕೆ ಬಾರದೆ ಇರುವುದರಿಂದ ಅವುಗಳನ್ನು ಅನುಸರಿಸಿ ಚೇತನಕಾರಣಪರವಾಗಿಯೇ ವೇದಾಂತಗಳು ವ್ಯಾಖ್ಯಾನಾರ್ಹಗಳು, ಎಂದು ಅದ್ವೈತಿ ರಾಮಾನುಜಾಚಾರ್ಯರಿಬ್ಬರೂ ಸಿದ್ಧಾಂತ ಮಾಡಿರುವರು. ಅದು ಅಯುಕ್ತವು. ವೇದಾಂತಗಳು ಚೇತನಕಾರಣತ್ವವನ್ನೇ ಹೇಳುತ್ತವೆ ಎನ್ನುವ ವಿಷಯದಲ್ಲಿ ಐಕ ಮುಖ್ಯವನ್ನು ಗತಿಸಾಮಾನ್ಯಾತ್ ಎನ್ನುವ ಸೂತ್ರದಲ್ಲಿಯೇ ಹೇಳಿದ್ದರಿಂದಲೂ, ಸಮನ್ವಯಾಧ್ಯಾಯದಲ್ಲಿ ಉಪಪಾದನೆ ಮಾಡಿದ್ದರಿಂದಲೂ

ಚೇತನಾಚೇತನಾದ್ಯನೇಕಗಳಿಗೆ ಕಾರಣತ್ವವನ್ನು ಹೇಳುತ್ತವೆ ಎಂಬ ಶಂಕೆಯು ಹುಟ್ಟಲಾರದು. ಮತ್ತು **ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್** ಎನ್ನುವ ಸ್ಪರ್ಶದ ಶ್ರುತಿವಿರೋಧದಿಂದ **ಔದುಂಬರೀ ಸರ್ವಾ ವೇಷ್ಟಿತವ್ಯಾ** ಎಂಬ ಸರ್ವವೇಷ್ಟನ ಸ್ಮೃತಿಯು ಅಪ್ರಮಾಣವೆಂಬ ವಿಷಯವು ಪೂರ್ವಮೀಮಾಂಸದಲ್ಲಿಯೇ ಹೇಳಿದ್ದರಿಂದ ಇಲ್ಲಿ ಪುನಃ ಸ್ಮೃತಿವಿರೋಧದಿಂದ ಶ್ರುತ್ಯಪ್ರಾಮಾಣ್ಯ ಶಂಕೆಯೇ ಹುಟ್ಟಲಾರದು. ಇತ್ಯಾದ್ಯನೇಕ ದೋಷಗಳು ಬರುವುದರಿಂದ ಅವರಿಬ್ಬರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

ಸರ್ವ ಶ್ರುತಿಸಮನ್ವಯದಿಂದ ಹೇಳಲ್ಪಟ್ಟ ವಿಶ್ವಕರ್ತೃತ್ವವು ವಿಷ್ಣುವಿಗೆ ಯುಕ್ತವೋ ಅಲ್ಲವೋ ಎಂದು ಸಂದೇಹವು. ಯುಕ್ತವಲ್ಲವೆಂದು ಪೂರ್ವಪಕ್ಷವು. ಏಕೆಂದರೆ ಶಿವಾದಿಗಳಿಗೆ ಕರ್ತೃತ್ವವನ್ನು ಬೋಧಿಸತಕ್ಕ ಶೈವಾ (ಪಾಶುಪತಾ)ಗಮ ಸಾಂಖ್ಯ ಕಾಪಿಲಾದಿ ಸರ್ವಸ್ಮೃತಿಗಳಿಂದ ವಿರೋಧವಿದೆ. ಆ ಸ್ಮೃತಿಗಳು ಸರ್ವಜ್ಞತ್ವಾದಿಗಳಿಂದ ಪ್ರಸಿದ್ಧರಾದ ಶಿವಾದಿಗಳಿಂದ ಪ್ರಣೀತಗಳಾಗಿರುವುದರಿಂದ ಆಪ್ತಿರೂಪ ಗುಣದಿಂದ ಕೂಡಿರುವ ಪ್ರಯುಕ್ತ ಪ್ರಬಲಗಳಾಗಿವೆ. ಶ್ರುತಿಯು ಅಪೌರುಷೇಯವಾದುದರಿಂದ ನಿರ್ಮೂಲವಾದಪ್ರಯುಕ್ತ ದುರ್ಬಲವಾಗಿದೆ. ಆದಕಾರಣ ಆವಾವ ಸ್ಮೃತಿಯನ್ನು ಅನುಸರಿಸಿ ಶಿವಾದಿಗಳಿಗೆ ಜಗತ್ಕರ್ತೃವನ್ನು ಹೇಳಬೇಕು. ವಿಷ್ಣುವಿಗೆ ಕರ್ತೃತ್ವವು ಕೂಡಲಾರದು ಎಂದು ಪೂರ್ವಪಕ್ಷವು ಬಂದರೆ ಪಂಚರಾತ್ರಾದಿ ಸ್ಮೃತಿಗಳು ಸರ್ವಜ್ಞತಮ ವಿಷ್ಣ್ವಾದಿಗಳಿಂದ ಪ್ರಣೀತಗಳಾಗಿರುವುದರಿಂದಲೂ ಶ್ರುತ್ಯುಕ್ತ ಸಂವಾದದಿಂದಲೂ ಅದರ ಸಹಾಯದಿಂದ ವಿಸ್ಪಷ್ಟಾರ್ಥಗಳನ್ನು ಹೇಳುವುದರಿಂದಲೂ ಪ್ರಬಲಗಳಾಗಿರುವುದರಿಂದ ಅವುಗಳಿಂದ ಪಾಶುಪತಾದಿ ಸ್ಮೃತಿಗಳು ಬಾಧಿತಗಳಾಗಿರುತ್ತವೆ. ಮತ್ತು ಶೈವಾದಿ ಸ್ಮೃತಿಗಳಲ್ಲಿ ಹೇಳಿದ ಸಾಧನಗಳನ್ನು ಅನುಷ್ಠಾನ ಮಾಡಿದರೂ ಅದಕ್ಕೆ ಫಲವೆಂದು ಹೇಳಿದ್ದು ಪ್ರತ್ಯಕ್ಷಕ್ಕೆ ಯೋಗ್ಯವಾಗಿದ್ದು ಅದು ಉಪಲಬ್ಧವಾಗದೆ ಇರುವುದರಿಂದ, ಫಲ ವಿಸಂವಾದವಿದ್ದುದರಿಂದ ಆಪ್ತೋಕ್ತತ್ವವೂ ಇಲ್ಲದಿರುವುದರಿಂದ ಅವೈದಿಕ ಸ್ಮೃತಿಗಳಿಗೆ ಪ್ರಾಮಾಣ್ಯವೇ ಇಲ್ಲದಿರುವುದರಿಂದ ಸ್ಮೃತಿಸಮನ್ವಯದಿಂದ ಹೇಳಲ್ಪಟ್ಟ ವಿಶ್ವಕರ್ತೃತ್ವವು ವಿಷ್ಣುವಿಗೆ ಯುಕ್ತವು ಎಂದು ಸಿದ್ಧಾಂತವು. ॥ ಅಧಿ. ೧ ॥

**ಸ್ಮೃತ್ಯಧಿಕರಣವು ಸಮಾಪ್ತವಾಯಿತು.**

# ೨ ನ ವಿಲಕ್ಷಣತ್ವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ವಿಷ್ಣುವು ಜಗತ್ಕಾರಣನು ಎನ್ನುವ ವಿಷಯದಲ್ಲಿ ಪ್ರಮಾಣವಾಗಿ ಹೇಳಲ್ಪಟ್ಟ ವೇದಾದಿಗಳಿಗೆ ಅಪ್ರಾಮಾಣ್ಯ ಸಾಧಕವಾದ ಯುಕ್ತಿಯಿಂದ ವಿರೋಧವನ್ನು ಪರಿಹರಿಸುತ್ತಾರೆ. ವಿಷಯ ಪೂರ್ವಪಕ್ಷಾದಿಗಳನ್ನು ಸೂತ್ರದಲ್ಲಿಯೇ ಹೇಳಿದ್ದರಿಂದ ಅವುಗಳನ್ನು ಹೇಳದೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ ॥ ೪ ॥

ಸೂತ್ರಾರ್ಥ ॥ ಅಸ್ಯ=ಈ ಶ್ರುತ್ಯಾದಿಗಳಿಗೆ, ತಥಾತ್ವಂ=ಪಾಶುಪತಾದಿ ಸ್ಮೃತಿಗಳಂತೆಯೇ ಅಪ್ರಾಮಾಣ್ಯವು, ನ=ಇಲ್ಲ, ಏಕೆಂದರೆ ಈ ಶ್ರುತ್ಯಾದಿಗಳಿಗೆ, ನ ತಥಾತ್ವಂ=ದೋಷವು ಇಲ್ಲ, ಏಕೆಂದರೆ ವಿಲಕ್ಷಣತ್ವಾತ್=ಶ್ರುತಿಗೆ ನಿತ್ಯತ್ವಾಖ್ಯ ವೈಲಕ್ಷಣ್ಯವಿದ್ದುದರಿಂದಲೂ, ಸ್ಮೃತಿಗೆ ವೇದಾನುಸಾರಿತ್ವರೂಪವಾದ ವೈಲಕ್ಷಣ್ಯವಿದ್ದುದರರಿಂದಲೂ, (ಏವಂಚ ಕ್ವಚಿತ್ ಕರ್ತೃ-ಕರಣಾದಿ ವೈಗುಣ್ಯದಿಂದ ಫಲವು ಲಭಿಸದೆ ಇದ್ದರೂ ಅವೈಷ್ಣವ ಸ್ಮೃತಿಗಳಂತೆಯೇ ಅಪ್ರಾಮಾಣ್ಯವಿಲ್ಲ) ಅಸ್ಯ=ಈ ಶ್ರುತ್ಯಾದಿಗಳಿಗೆ, ವಿಲಕ್ಷಣತ್ವಾತ್=ಸ್ವತಃಪ್ರಾಮಾಣ್ಯವಿದ್ದುದರಿಂದ, ಅಸ್ಯ=ಈ ಶ್ರುತಿಗೆ, ತಥಾತ್ವಂ=ನಿತ್ಯತ್ವವಾದರೂ, ಶಬ್ದಾತ್=ವಾಚಾ ವಿರೂಪ ನಿತ್ಯಯಾ ಇದು ಮೊದಲಾದ ಶ್ರುತಿಯಿಂದಲೇ ಪ್ರತೀತವಾಗುವುದು. ಅನಾದಿ ನಿಧನಾ ನಿತ್ಯಾ ಇತ್ಯಾದಿ ಸ್ಮೃತಿಗಳಿಂದ ನಿತ್ಯತ್ವವು ಔಪಚಾರಿಕವು ಅಲ್ಲ. ಇದಕ್ಕೆ ಸ್ವತಃಪ್ರಾಮಾಣ್ಯವು ಅಸಿದ್ಧವೆನ್ನಕೂಡದು. ಸ್ವತಃಪ್ರಾಮಾಣ್ಯವು ನ ಚಕ್ಷುಃ ಇತ್ಯಾದಿ ಪ್ರಮಾಣಗಳಿಂದ ಸಿದ್ಧಿಸುತ್ತದೆ. ಅಸ್ಯ=ಈ ಪಾಶುಪತಾದಿಗಳಿಗಾದರೂ, ನ ತಥಾತ್ವಂ=ಫಲವ್ಯಭಿಚಾರವಿದ್ದರೂ ಪ್ರಾಮಾಣ್ಯಾದಿಗಳನ್ನು ಕಲ್ಪಿಸಕೂಡದು. ಏಕೆಂದರೆ—ಪಾಶುಪತಾದಿಗಳಿಗೆ ನಿರ್ದೋಷತ್ವವೂ, ಸ್ವತಃಪ್ರಾಮಾಣ್ಯಾದಿಗಳೂ ವೇದಾದಿಗಳಂತೆ ನಿಶ್ಚಿತಗಳಾಗಲಿಲ್ಲ.

**ಭಾಷ್ಯ ॥ ನೈವಂ ಶ್ರುತೇಸ್ತದನುಸಾರಿಸ್ಮೃತೇಶ್ಚ ತದುಕ್ತಾನುಪಲಬ್ಧೇರಪ್ರಾಮಾಣ್ಯಂ। ವಿಲಕ್ಷಣತ್ವಾತ್। ನಿತ್ಯತ್ವಾತ್ತದನುಸಾರಿತ್ವಾಚ್ಚ॥ ೧ ॥**

ಭಾಷ್ಯಾರ್ಥ ॥ ಹೀಗೆ ಶ್ರುತಿವಾಕ್ಯಕ್ಕೂ, ಶ್ರುತ್ಯನುಸಾರಿಯಾದ ಸ್ಮೃತಿವಾಕ್ಯಕ್ಕೂ (ಶ್ರುತಿಗಳಲ್ಲಿ ಹೇಳಿದ ಕಾರೀರೀಯಾಗ ಮೊದಲಾದ ಸಾಧನಗಳನ್ನು ಅನುಷ್ಠಾನ ಮಾಡಿದರೂ) ಶ್ರುತಿ, ಶ್ರುತ್ಯನುಸಾರಿಸ್ಮೃತಿಗಳಲ್ಲಿ ಹೇಳಿದ ವೃಷ್ಟಿ ಮೊದಲಾದ ಫಲಗಳು ತೋರದಿರುವುದರಿಂದ ಅಪ್ರಾಮಾಣ್ಯವು ಎಂದು ಹೇಳಕೂಡದು. ಶ್ರುತಿಗೆ ನಿತ್ಯತ್ವರೂಪವಾದ ವೈಲಕ್ಷಣ್ಯವಿದ್ದುದರಿಂದ, ಸ್ಮೃತಿಗಳಿಗೆ ಶ್ರುತ್ಯನುಸಾರಿತ್ವರೂಪವಾದ ವೈಲಕ್ಷಣ್ಯವಿದ್ದುದರಿಂದ (ಕ್ವಚಿತ್ ಫಲವ್ಯಭಿಚಾರವು ಕರ್ತೃಕರಣಾದಿ ವೈಗುಣ್ಯನಿಮಿತ್ತಕವೆಂದೇ ಕಲ್ಪಿಸಬೇಕು.)

ಪೀಠಿಕೆ ॥ ನಿತ್ಯತ್ವಾದಿಗಳು ಇದ್ದರೂ, ಅಪ್ರಾಮಾಣ್ಯವು ಏಕೆ ಇಲ್ಲ? ಅಪ್ರಾಮಾಣ್ಯ ಕಾರಣವಾದ ದೋಷದ ಅಭಾವದ ನಿಶ್ಚಯವಿಲ್ಲ ಎಂದರೆ—

**ಭಾಷ್ಯ ॥ ನ ಹಿ ನಿತ್ಯೇ ದೋಷಾಃ ಕಲ್ಪ್ಯಾಃ। ಸ್ವತಶ್ಚ ಪ್ರಾಮಾಣ್ಯಂ। ಅನ್ಯಥಾಽನವಸ್ಥಿತೇಃ ॥ ೨ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ನಿತ್ಯಭೂತವಾದ ವೇದದಲ್ಲಿಯೂ, ವೇದಾನುಸಾರಿ ಸ್ಮೃತಿಗಳಲ್ಲಿಯೂ (ಅಪ್ರಾಮಾಣ್ಯನಿಮಿತ್ತವಾದ) ವಕ್ತೃದೋಷಗಳು ಕಲ್ಪಿಸಲ್ಪಡಕೂಡದೋ, (ಆದ ಕಾರಣ ಅಪ್ರಾಮಾಣ್ಯವಿಲ್ಲ) ಯಾವ ಕಾರಣದಿಂದ ಶ್ರುತ್ಯಾದಿಗಳಿಗೆ, ಪ್ರಾಮಾಣ್ಯಂ=ಯಥಾರ್ಥ ಜ್ಞಾನಜನಕತ್ವ ರೂಪವಾದುದು, ಸ್ವತಃ=ಫಲೋಪಲಬ್ಧ್ಯಾದಿರೂಪವಾದ ಸಂವಾದನಿರಪೇಕ್ಷವಾದ

ಸ್ವರೂಪಗ್ರಾಹಕವಾದ ಸಾಕ್ಷಿಯಿಂದಲೇ (ಗೃಹೀತವಾಗುತ್ತದೋ ಆದುದರಿಂದ ಕ್ವಚಿತ್ ಫಲವ್ಯಭಿಚಾರ ವಿದ್ದರೂ ಅವೈಷ್ಣವ ಸ್ಮೃತಿಗಳಂತೆ ಅಪ್ರಾಮಾಣ್ಯವನ್ನು ಶಂಕಿಸಕೂಡದು.) ಅನ್ಯಥಾ=ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸದಿದ್ದರೆ ಸಂವಾದದಿಂದಲೇ ಗ್ರಾಹ್ಯತ್ವವನ್ನು ಅಂಗೀಕರಿಸಿದರೆ ಅನವಸ್ಥೆಯು ಬರುವುದರಿಂದ, ಅನ್ಯಥಾ=ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸದಿದ್ದರೆ, ಸಂವಾದದಿಂದಲೇ ಗ್ರಾಹ್ಯತ್ವವನ್ನು ಅಂಗೀಕರಿಸಿದರೆ, ಅನವಸ್ಥಿತೇಃ=ಫಲೋಪಲಬ್ಧಿರೂಪವಾದ ಸಂವಾದಗ್ರಾಹಕ ಪ್ರಾಮಾಣ್ಯವೂ ಕೂಡ ಸ್ವತ ಏವ ತಿಳಿಯುತ್ತದೆ ಎಂದು ಹೇಳುವುದಾದರೆ ಪರಂಪರಾಕಲ್ಪನೆಯು ವ್ಯರ್ಥವಾಗುವುದು. ಸಂವಾದಾನಂತರದಿಂದಲೇ ಗ್ರಾಹ್ಯವೆಂದು ಹೇಳುವುದಾದರೆ ಅನವಸ್ಥೆಯು ಬರುವುದರಿಂದ.

**ಪೀಠಿಕೆ ॥** ವೇದಗಳಿಗೆ ಸ್ವತಃ ಪ್ರಾಮಾಣ್ಯದಲ್ಲಿ ಸೂತ್ರಸೂಚಿತವಾದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ನ ಚಕ್ಷುರ್ನ ಶ್ರೋತ್ರಂ ನ ತರ್ಕೋ ನ ಸ್ಮೃತಿರ್ವೇದಾ ಹ್ಯೇವೈನಂ ವೇದಯಂತಿ ॥ ಇತಿ ಭಾಲ್ಲವೇಯಶ್ರುತೇಶ್ಚ ॥ ೩ ॥**

**ಭಾಷ್ಯಾರ್ಥ ॥** ಅಜ್ಞರ ಚಕ್ಷುಸ್ಸೂ ಈ ಶ್ರೀಹರಿಯನ್ನು ತಿಳಿಸಿಕೊಡುವುದಿಲ್ಲ, ಅಜ್ಞರ ಶ್ರೋತ್ರವೂ ತಿಳಿಸಿಕೊಡುವುದಿಲ್ಲ, ಶುಷ್ಕಾನುಮಾನವೂ ತಿಳಿಸಿಕೊಡುವುದಿಲ್ಲ, ವೇದಾನುಕೂಲ್ಯವಿಲ್ಲದಿರುವ ಸ್ಮೃತಿಯೂ ತಿಳಿಸಿಕೊಡುವುದಿಲ್ಲ, ಋಗ್ಯಜುಸ್ಸಾಮಾಥರ್ವರೂಪಗಳಾದ ವೇದಗಳೇ ಈ ಶ್ರೀಹರಿಯನ್ನು ಸ್ವತಃ ತಿಳಿಸಿ ಕೊಡುತ್ತವೋ (ಆದುದರಿಂದಲೇ ಋಗಾದಿಗಳು ವೇದಗಳು ಎನ್ನಿಸಿಕೊಳ್ಳುತ್ತವೆ.) ಎಂದು ಭಾಲ್ಲವೇಯ ಶ್ರುತಿಯಿಂದಲೂ.

**ವಿಶೇಷಾಂಶ ॥** ಇಲ್ಲಿ ಚಕ್ಷುರಾದಿಗಳು ಪರಬ್ರಹ್ಮನನ್ನು ತಿಳಿಸಿಕೊಡುವುದಿಲ್ಲ ಎಂದು ಹೇಳಿ ವೇದವೇ ತಿಳಿಸಿಕೊಡುತ್ತದೆ ಎಂದು ಹೇಳಿದ್ದರಿಂದ ಸಂವಾದದ ಅಪೇಕ್ಷೆಯಿಲ್ಲದೆ ಸ್ವತ ಏವ ಪ್ರಾಮಾಣ್ಯವು ಎಂದುಕ್ತವಾಯಿತು. ಸಂವಾದರೂಪವಾದ ಜ್ಞಾನವು ಚಕ್ಷುರಾದಿಗಳಿಂದಲೇ ಹುಟ್ಟತಕ್ಕುದು.

**ಪೀಠಿಕೆ ॥** ವೇದಕ್ಕೆ ಯಾವುದು ನಿತ್ಯತ್ವರೂಪವಾದ ವೈಲಕ್ಷಣ್ಯವು ಹೇಳಲ್ಪಟ್ಟಿದೋ, ಅದಕ್ಕೆ ಅಸಿದ್ಧಿಯನ್ನು ಆಶಂಕಿಸಿಕೊಂಡು ಅದಕ್ಕೆ ಉತ್ತರವಾಗಿ ಶಬ್ದಾತ್ ಎನ್ನುವ ಅಂಶವನ್ನು ಕೂಡಿಸುತ್ತಾರೆ—

**ಭಾಷ್ಯ ॥ ನಿತ್ಯತ್ವಂ ಚ ಶಬ್ದಾದೇವ ಪ್ರತೀಯತೇ । ವಾಚಾ ವಿರೂಪ ನಿತ್ಯಯಾ (ಋ.೮.೬೪.೬) ಇತ್ಯಾದೇಃ । ಅನಾದಿನಿಧನಾ ನಿತ್ಯಾ । ಇತಿ ಚ ಸ್ಮೃತಿಃ ॥ ೪ ॥ ೪ ॥**

**ಭಾಷ್ಯಾರ್ಥ ॥** ವಾಚಾ ವಿರೂಪ ನಿತ್ಯಯಾ ಇದು ಮೊದಲಾದ ವೇದವಾಕ್ಯದಿಂದಲೇ ನಿತ್ಯತ್ವವು ತೋರುತ್ತದೆ. ಅನಾದಿನಿಧನಾ ನಿತ್ಯಾ ಎಂದು ಸ್ಮೃತಿಯೂ ಇದೆ.

**ವಿಶೇಷಾಂಶ ॥** (೧) ಋಚಸ್ಸಾಮಾನಿ ಜಜ್ಞಿರೇ ಎಂದು ಉತ್ಪತ್ತಿ ಪ್ರತಿಪಾದಕ ಶ್ರುತಿಯಿದ್ದುದರಿಂದ ಬಹುಕಾಲೀನವಾದುದರಿಂದ ಮಾತ್ರ ನಿತ್ಯತ್ವೋಪಚಾರವು ಎಂದು ಏಕೆ ಆಗಲಾರದು, ಎಂದರೆ ಅದಕ್ಕೆ ಉತ್ತರವಾಗಿ ಸ್ಮೃತಿಯು. ಆದಕಾರಣ ವೇದನಿತ್ಯತ್ವವು ಔಪಚಾರಿಕವಲ್ಲ, ಉತ್ಪತ್ತಿಶ್ರುತಿಯು ಅಭಿವ್ಯಕ್ತಿಪರವು.(೨) ಈ ಶ್ರುತಿಸ್ಮೃತಿಗಳು ದೇವತಾಧಿಕರಣದಲ್ಲಿ ಕ್ರಮವಾಗಿ ವ್ಯಾಖ್ಯಾತಗಳಾಗಿವೆ.॥೪॥

ಪೀಠಿಕೆ ॥ ಶ್ರುತ್ಯಾದಿಗಳಿಗೆ ಸ್ವತಃ ಪ್ರಾಮಾಣ್ಯವನ್ನು ಹೇಳುವವರೂ ಕೂಡ ದೋಷಗಳನ್ನು ಕಂಡರೆ ಅಪ್ರಾಮಾಣ್ಯವನ್ನೇ ಅವಶ್ಯವಾಗಿ ಹೇಳಬೇಕಾಗಿರುವುದರಿಂದ, ವೇದದಲ್ಲಿಯೂ ಅಲ್ಲಿ ಹೇಳಿದ ಸಾಧನಾನುಷ್ಠಾನ ಮಾಡಿದರೂ ದೃಷ್ಟಫಲವು ಕಾಣದಿರುವುದರಿಂದ ಅಪ್ರಾಮಾಣ್ಯವನ್ನು ಹೇಳಬೇಕು, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ದೃಶ್ಯತೇ ತು ಓಂ ॥ ೫ ॥

**ಭಾಷ್ಯ ॥ ಅಧಿಕಾರಿಣಾಂ ಫಲಂ ॥ ೫ ॥**

ಭಾಷ್ಯಾರ್ಥ ॥ ಅಧಿಕಾರಿಗಳಿಗೆ (ಅಂದರೆ ಕರ್ಮವೈಗುಣ್ಯಶೂನತ್ವ, ಪ್ರತಿಬಂಧಶೂನ್ಯತ್ವ, ರೂಪಯೋಗ್ಯತ್ವವಿರುವವರಿಗೆ) ವೇದೋಕ್ತವಾದ ಕಾರೀರ್ಯಾದಿ ಯಾಗಸಾಧ್ಯವಾದ ವೃಷ್ಟ್ಯಾದಿಗಳು (ದ್ರಷ್ಟೃಗಳಿಂದ) ಕಾಣಲ್ಪಡುತ್ತವೆ. (ಆದಕಾರಣ ಫಲವು ಕಾಣುವುದಿಲ್ಲ ಎನ್ನುವ ಕಾರಣದಿಂದ ಶ್ರುತ್ಯಾದಿಗಳಿಗೆ ಅಪ್ರಾಮಾಣ್ಯವನ್ನು ಹೇಳಕೂಡದು.)

ಪೀಠಿಕೆ ॥ ಅಧಿಕರಣಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಭವಿಷ್ಯತ್ಪುರಾಣೇ ಚ । ಋಗ್ಯಜುಸ್ಸಾಮಾಥರ್ವಾಶ್ಚ (ಖ್ಯಾ) ಮೂಲರಾಮಾಯಣಂ ತಥಾ । ಭಾರತಂ ಪಂಚರಾತ್ರಂ ಚ ವೇದಾ ಇತ್ಯೇವ ಶಬ್ದಿತಾಃ ॥ ಪುರಾಣಾನಿ ಚ ಯಾನೀಹ ವೈಷ್ಣವಾನಿ ವಿದೋ ವಿದುಃ । ಸ್ವತಃ ಪ್ರಾಮಾಣ್ಯಮೇತೇಷಾಂ ನಾತ್ರ ಕಿಂಚಿದ್ವಿಚಾರ್ಯತೇ ॥ ೬ ॥**

ಭಾಷ್ಯಾರ್ಥ ॥ (ನ ಚಕ್ಷುಃ ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಮಾತ್ರ ವೇದಾದಿಗಳಿಗೆ ಸ್ವತಃ ಪ್ರಾಮಾಣ್ಯವು ಇದೆ ಎಂದು ಸಿದ್ಧಿಸುವುದಿಲ್ಲ. ಮತ್ತೆ) ಭವಿಷ್ಯತ್ಪುರಾಣದಲ್ಲಿಯೂ (ಉಕ್ತವಾಗಿದೆ.) ಋಗಾದಿಗಳು ಮೂಲ ರಾಮಾಯಣವು ಭಾರತವು ಪಂಚರಾತ್ರಾಗಮವೂ ಇವುಗಳು ವೇದಗಳು ಎಂದೇ ಹೇಳಲ್ಪಟ್ಟವೆ. (ವಿದಃ) ಜ್ಞಾನಿಗಳು ಪುರಾಣಗಳ ಮಧ್ಯದಲ್ಲಿ ಯಾವ ಪುರಾಣಗಳನ್ನು ವಿಷ್ಣುಪರಗಳನ್ನಾಗಿ ತಿಳಿಯುತ್ತಾರೋ ಇವುಗಳಿಗೆಲ್ಲಾ (ಸ್ವತಃ) ಫಲಸಂವಾದಾದಿಗಳ ಅಪೇಕ್ಷೆಯಿಲ್ಲದೆ ನಿರ್ದೋಷತ್ವದಿಂದಲೇ ಯಥಾರ್ಥಜ್ಞಾನಕರಣತ್ವರೂಪವಾದ ಪ್ರಾಮಾಣ್ಯವು (ಸಿದ್ಧಿಸುತ್ತದೆ.) ಸ್ವತಃ ಪ್ರಾಮಾಣ್ಯವಿಷಯದಲ್ಲಿ ಯಾವುದೊಂದು ನಿಮಿತ್ತವೂ ವಿಚಾರಿಸಲ್ಪಡುವುದಿಲ್ಲ. (ಅಂದರೆ ಯಾವುದೊಂದು ನಿಮಿತ್ತದಿಂದಲೂ ಸಂಶಯವಿಲ್ಲ) ಅಥವಾ ಅವುಗಳಿಗೆ ಪ್ರಾಮಾಣ್ಯಗ್ರಹಣದಲ್ಲಿ ಸಂವಾದಾದಿಗಳನ್ನು ಹುಡುಕಬೇಕಾಗಿಲ್ಲ.

ಪೀಠಿಕೆ ॥ ಅವುಗಳಲ್ಲಿ ಹೇಳಿದ ಫಲವು ಕ್ವಚಿತ್ ಕಾಣದೆ ಇರುವುದರಿಂದ ಅವುಗಳಿಗೆ ಅಪ್ರಾಮಾಣ್ಯವನ್ನು ಏಕೆ ಹೇಳಬಾರದು, ಎಂದರೆ-

**ಭಾಷ್ಯ ॥ ಯದ್ಯೇಷೂಕ್ತಂ ನ ದೃಶ್ಯೇತ ಪೂರ್ವಕರ್ಮಾತ್ರ ಕಾರಣಂ । ನಾಪ್ರಾಮಾಣ್ಯಂ ಭವೇದೇಷಾಂ ದೃಶ್ಯತೇ ಹ್ಯಧಿಕಾರತಃ ॥ ೭ ॥**

**ಭಾಷ್ಯಾರ್ಥ** ॥ ವೇದ, ವೇದಾನುಸಾರಿ ಗ್ರಂಥಗಳಲ್ಲಿ ಹೇಳಲ್ಪಟ್ಟ ಫಲವು (ಅದರಲ್ಲಿ ಹೇಳಿದ ಸಾಧನಗಳನ್ನು ಅನುಷ್ಠಾನ ಮಾಡಿದರೂ) ಕಾಣಲ್ಪಡದೆ ಇದ್ದರೆ ಜನ್ಮಾಂತರೀಯವಾದ ಫಲಪ್ರತಿಬಂಧಕ ದುರದೃಷ್ಟವಾಗಲೀ ಕರ್ತೃಕರಣಾದಿಕರ್ಮವೈಗುಣ್ಯವಾಗಲೀ ಪ್ರತಿಬಂಧಾದಿರೂಪ ಅಯೋಗ್ಯತ್ವವಾಗಲೀ ಫಲೋಪಲಬ್ಧಿಯಾಗದಿರುವಲ್ಲಿ ಕಾರಣವು, ಎಂದು ತಿಳಿಯತಕ್ಕುದು. ಫಲವು ಕಾಣದೆ ಇರುವುದರಲ್ಲಿ ಕಾರಣಾಂತರವಿದ್ದ ಪ್ರಯುಕ್ತ ಇವುಗಳಿಗೆ ಅಪ್ರಾಮಾಣ್ಯವು ಇರುವುದಿಲ್ಲ. ಮತ್ತು ಅಧಿಕಾರದಿಂದ (ಅಂದರೆ ಕರ್ತೃಕರಣಾದಿ ಕರ್ಮವೈಗುಣ್ಯ, ಪ್ರತಿಬಂಧಾದಿ ಶೂನ್ಯತ್ವರೂಪ ಫಲಯೋಗ್ಯತಾನಿಮಿತ್ತದಿಂದ) (ಫಲವು) ಕಾಣಲ್ಪಡುತ್ತದೆ.

**ಪೀಠಿಕೆ** ॥ ಹೀಗೆಯೇ ಅವೈಷ್ಣವಸ್ಮೃತಿಗಳಿಗೂ ಸ್ವತಃ ಪ್ರಾಮಾಣ್ಯವನ್ನು ಏಕೆ ಅಂಗೀಕರಿಸಬಾರದು, ಎಂದರೆ—

**ಭಾಷ್ಯ ॥ ಇತಃ ಪ್ರಾಮಾಣ್ಯಮನ್ಯೇಷಾಂ ನ ಸ್ವತಸ್ತು ಕಥಂಚನ । ಅದೃಶ್ಯೋಕ್ತೌ ತತಸ್ತೇಷಾಮಪ್ರಾಮಾಣ್ಯಂ ನ ಸಂಶಯಃ ॥ ಇತಿ ॥ ೫ ॥ ಅಧಿ. ೨ ॥ ॥ ೮ ॥**

**ಭಾಷ್ಯಾರ್ಥ** ॥ ಪಾಶುಪತಾದಿ ಆಗಮಗಳಿಗಾದರೂ ಫಲದರ್ಶನದಿಂದಲೇ ಪ್ರಾಮಾಣ್ಯವು ಸಿದ್ಧಿಸುತ್ತದೆ ಎಂದು ಹೇಳಬೇಕು. (ಸ್ವತಃ) ಫಲಸಂವಾದವಿಲ್ಲದೆ ಯಾವ ಉಪಾಯದಿಂದಲೂ ಸಿದ್ಧಿಸುವುದಿಲ್ಲ. ತೋರದೆ ಇರುವ ಫಲಸಾಧನವನ್ನು ಹೇಳಿದರೆ (ಅಂದರೆ ಪಾಶುಪತಾದ್ಯಾಗಮಗಳಿಗೆ ಫಲಸಂವಾದದಿಂದಲೇ ಪ್ರಾಮಾಣ್ಯವನ್ನು ಹೇಳುವುದರಿಂದ ಅಲ್ಲಿ ಹೇಳಿದ ಸಾಧನಾನುಷ್ಠಾನ ಮಾಡಿದರೂ ಫಲವು ಕಾಣದೆ ಹೋದರೆ) ಅವುಗಳಿಗೆ ಅಪ್ರಾಮಾಣ್ಯವೇ ನಿಶ್ಚಿತವಾಗುತ್ತದೆ. ಆ ವಿಷಯದಲ್ಲಿ ಸಂದೇಹವಿಲ್ಲ. ॥ ೫ ॥

## ಅಧಿಕರಣ ಸಾರಾಂಶ

ಶ್ರುತಿಯೂ ಶ್ರೌತಸ್ಮೃತಿಯೂ ಪ್ರಮಾಣವೋ ಅಲ್ಲವೋ ಎಂದು ಸಂದೇಹವು. ವೃಷ್ಟಿಕಾಮಃ ಕಾರೀರ್ಯಾ ಯಜೇತ ಇತ್ಯಾದಿ ವೇದಗಳಲ್ಲಿ ಹೇಳಿದ ಕಾರೀರ್ಯಾದಿ ಯಾಗಗಳನ್ನು ಮಾಡಿದರೂ ವೃಷ್ಟ್ಯಾದಿ ಫಲಗಳು ಕಾಣದೆ ಇದ್ದುದರಿಂದ ಶ್ರುತಿಯು ಅಪೌರುಷೇಯವಾದಾಗ್ಯೂ ಪಾಶುಪತಾದಿ ಸ್ಮೃತಿಗಳಂತೆಯೇ ಅಪ್ರಮಾಣವೇ. ಹೀಗೆ ಶ್ರೌತಸ್ಮೃತಿಯೂ ಪ್ರಮಾಣವಲ್ಲ. ಹೀಗೆ ಪೂರ್ವಪಕ್ಷ ಬಂದರೆ ವಾಚಾ ವಿರೂಪ ನಿತ್ಯಯಾ ಇದುಮೊದಲಾದ ವೇದವಚನದಿಂದಲೂ ಭಾಷ್ಯದಲ್ಲಿ ಹೇಳಿದ ಯುಕ್ತಿಯಿಂದಲೂ ಶ್ರುತಿಯು ಅಪೌರುಷೇಯವಾದುದರಿಂದಲೂ ಶ್ರೌತಸ್ಮೃತಿಯು ಶ್ರುತ್ಯನುಸಾರಿಯಾದುದರಿಂದಲೂ ದೋಷಶಂಕೆಯು ಇಲ್ಲದಿರುವುದರಿಂದ ಸಾಕ್ಷಿಯಂತೆಯೇ ಪ್ರಮಾಣವಾಗಿದೆ. (೨) ನ ಚಕ್ಷುಃ ನ ಶ್ರೋತ್ರಂ ಇತ್ಯಾದಿಗಳಿಂದ ವೇದಾರ್ಥವು ಚಕ್ಷುರಾದಿಗಳಿಗೆ ಅಯೋಗ್ಯವೆಂದು ಹೇಳಿದ್ದರಿಂದ ಸಂವಾದ ಅಪೇಕ್ಷೆಯಿಲ್ಲದೆ ಪ್ರಾಮಾಣ್ಯವು ಸ್ವತ ಏವ ಜ್ಞೇಯವಾಗಿದೆ. ಫಲವಿಸಂವಾದರೂಪವಾದ ಅಪವಾದವು ಕೆಲವು ಅಧಿಕಾರಿಗಳಿಗೆ ಫಲವು ಕಂಡದ್ದರಿಂದ

ಅಸಿದ್ಧವಾಗಿದೆ. ಕ್ವಚಿತ್ ಫಲವು ತೋರದಿರುವುದು ಕರ್ತ್ರಾದಿ ವೈಗುಣ್ಯನಿಮಿತ್ತವು. ತಥಾಚ ಶ್ರುತಿಗಳು ಶ್ರೌತಸ್ಮೃತಿಗಳೂ ಪ್ರಮಾಣಗಳೇ. ॥ ಅಧಿ. ೨ ॥

ನ ವಿಲಕ್ಷಣತ್ವಾಧಿಕರಣವು ಸಮಾಪ್ತವಾಯಿತು.

## ೩. ಅಭಿಮಾನ್ಯಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ವಿಷ್ಣುವಿಗೆ ಜಗತ್ಕರ್ತೃತ್ವಪ್ರತಿಪಾದಕ ವೇದಪ್ರಾಮಾಣ್ಯವಿಷಯದಲ್ಲಿ ದೃಢಯುಕ್ತಿಗಳಿಂದ ವಿರೋಧವು ಪರಿಹರಿಸಲ್ಪಡುತ್ತದೆ—

**ಭಾಷ್ಯ ॥ ಮೃದಬ್ರವೀತ್** (ಶ.ಬ್ರಾ.೬.೧.೩) **ಆಪೋಽಬ್ರುವನ್** (ಶ.ಬ್ರಾ.೬.೧.೩) **। ಇತ್ಯಾದಿವಚನಾದ್ಯುಕ್ತಿವಿರುದ್ಧೋ ವೇದಃ ಇತಿ । ಅತೋಽಬ್ರವೀತ್ ॥ ೧ ॥**

ಭಾಷ್ಯಾರ್ಥ ॥ ಮಣ್ಣು ಹೇಳಿತು, ಜಲಗಳು ಹೇಳಿದವು ಇದು ಮೊದಲಾದ ವಚನಗಳು ಮೃದಾದಿಗಳಿಗೆ ವಚನಾದಿ ಕರ್ತೃತ್ವವನ್ನು ಹೇಳುವುದರಿಂದ ಮೃದಬ್ರವೀತ್ ಇದು ಮೊದಲಾದ ವೇದವು ಮೃತ್ ನ ವಕ್ತ್ರೀ ಜಡತ್ವಾತ್ ಇತ್ಯಾದ್ಯನುಮಾನವಿರುದ್ಧವಾದ ಮೃದಾದಿ ವಕ್ತೃತ್ವವನ್ನು ಹೇಳುವುದರಿಂದ ಅಪ್ರಾಮಾಣವು. ಹೀಗೆ ಶಂಕೆಯು ಬಂದರೆ ಸೂತ್ರಕಾರರು ಉತ್ತರಿಸುತ್ತಾರೆ.

ವಿಶೇಷಾಂಶ ॥ ಮೃದಬ್ರವೀತ್ ಇತ್ಯಾದಿವೇದವು ಅಪ್ರಮಾಣವಾದುದರಿಂದ ಇದರಂತೆಯೇ ಇತರ ವೇದವೆಲ್ಲವೂ ಅಪ್ರಮಾಣವೇ. ಆದುದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲ.

**ಸೂತ್ರ ॥ ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ ॥ ೬ ॥**

ಸೂತ್ರಾರ್ಥ ॥ ಪೃಥಿವ್ಯಾದ್ಯಭಿಮಾನಿದೇವತೆಗಳಿಗೇನೇ ಮೃದಬ್ರವೀತ್ ಇತ್ಯಾದಿ ಶ್ರುತಿಗಳಲ್ಲಿದ್ದ ಮೃದಾದಿ ಶಬ್ದಗಳಿಂದ ಪ್ರತಿಪಾದವು, ಆ ದೇವತೆಗಳಿಗೇನೇ ವಕ್ತೃತ್ವಾದಿ ಶಕ್ತಿವಿಶೇಷವಿದ್ದುದರಿಂದಲೂ ಅಭಿಮನ್ಯಮಾನದಲ್ಲಿ ಸರ್ವತ್ರ ವ್ಯಾಪ್ತಿ ಇದ್ದುದರಿಂದಲೂ.

**ಭಾಷ್ಯ ॥ ಮೃದಾದ್ಯಭಿಮಾನಿದೇವತ್ವೈವ ತತ್ರ ವ್ಯಪದಿಶ್ಯತೇ । ತಾಸಾಂ ಚೇತರೇಭ್ಯೋ ವಿಶಿಷ್ಟಂ ಸಾಮರ್ಥ್ಯಮನುಗತಿಶ್ಚಸರ್ವತ್ರ । ಅತಸ್ತಾಸಾಂ ಸರ್ವಮುಕ್ತಂ ಯುಜ್ಯತೇ ॥ ೬ ॥ । ೨ ॥**

ಭಾಷ್ಯಾರ್ಥ ॥ ಮೃದಾದಿಗಳಿಗೆ ಅಭಿಮಾನಿಯಾದ ಧರಾದಿರೂಪವಾದ ದೇವತೆಯೇ ಮೃದಬ್ರವೀತ್ ಇತ್ಯಾದಿ ಸ್ಮೃತಿಗಳಲ್ಲಿ ಮೃದಾದಿ ಶಬ್ದಗಳಿಂದ ಮುಖ್ಯವೃತ್ತಿಯಿಂದ ಪ್ರತಿಪಾದಿಸಲ್ಪಡುತ್ತದೆ. (ಅಚೇತನಗಳಾದ ಮೃದಾದಿಗಳಲ್ಲ) (ಅಭಿಮಾನಿದೇವತೆಗಳು ಇದ್ದರೆ ಏಕೆ ತೋರುವುದಿಲ್ಲ ಅವರು ರಾಜಾದಿಗಳಂತೆಯೇ ಅಭಿಮತವಾದ ಏಕದೇಶದಲ್ಲಿ ಇದ್ದುದರಿಂದ ತೋರುವುದಿಲ್ಲ ಎಂದು

ಹೇಳಕೂಡದು. ಅಭಿಮಾನಿ ಇಲ್ಲದಿರುವ ದೇಶದಂತೆಯೇ ಇತರ ದೇಶಕ್ಕೂ ಅಭಿಮಾನಿಗಳನ್ನು ಹೊರತೇ ಅವಸ್ಥಿತಿಯು ಕೂಡುವಾಗ ವೈಯರ್ಥ್ಯವು ಎಂದರೆ) ಅಭಿಮಾನಿದೇವತೆಗಳಿಗೆ ಇತರ ಚೇತನರ ದೆಶೆಯಿಂದ ವಿಲಕ್ಷಣ ಸಾಮರ್ಥ್ಯವು. (ಅಂದರೆ ಆದರ್ಶನಾನುಕೂಲವಾದ ಅಂತರ್ಧಾನಶಕ್ತಿ ವಿಶೇಷವು ಇದೆ.) ತಂತಮ್ಮಿಂದ ಅಭಿಮನ್ಯಮಾನವಾದ ವಸ್ತುವಿನಲ್ಲಿ ವ್ಯಾಪ್ತಿಯು ಇದೆ. (ರಾಜಾದಿಗಳಂತೆ ಏಕದೇಶದಲ್ಲಿರುವುದಿಲ್ಲ) ವಿಗ್ರಹವು ಕೂಡ ಇದೆ. ಆದಕಾರಣ ಈ ಶ್ರುತಿಯಲ್ಲಿ ಮೃದಾದಿ ಶಬ್ದಗಳಿಂದ ಅಭಿಮಾನಿ ದೇವತೆಗಳಿಗೆ ವ್ಯಪದೇಶವಿದ್ದುದರಿಂದ ಆ ದೇವತೆಗಳಿಗೆ ಚೇತನತ್ವವಿದ್ದುದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ವಚನಕರ್ತೃತ್ವಾದಿಗಳು ಕೂಡುತ್ತವೆ. (ಆದಕಾರಣ ವೇದವು ಯುಕ್ತಿವಿರುದ್ಧವಾಗದೆ ಇರುವುದರಿಂದ ಅಪ್ರಮಾಣವಲ್ಲ) ಆದುದರಿಂದ ವೇದದಲ್ಲಿ ಹೇಳಿದ ಜಗತ್ಕರ್ತೃತ್ವವು ವಿಷ್ಣುವಿನಲ್ಲಿ ಯುಕ್ತವು. ॥ ೬ ॥

ಪೀಠಿಕೆ ॥ ಅಪ್ರಾಮಾಣಿಕ ದೇವತೆಗಳನ್ನೂ ಆ ದೇವತೆಗಳಿಗೆ ಇತರರಿಂದ ವಿಲಕ್ಷಣ ಸಾಮರ್ಥ್ಯವನ್ನೂ ಕಲ್ಪಿಸುವುದಕ್ಕಿಂತ ವೇದಗಳಿಗೆ ಅಪ್ರಾಮಾಣ್ಯವನ್ನು ಕಲ್ಪಿಸುವುದೇ ಶ್ರೇಷ್ಠವು, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ದೃಶ್ಯತೇ ಚ ಓಂ ॥ ೭ ॥

**ಭಾಷ್ಯ ॥ ತಾಸಾಂ ಸಾಮರ್ಥ್ಯಂ ಮಹದ್ಭಿಃ ॥ ೭ ॥**

ಭಾಷ್ಯಾರ್ಥ ॥ ಪೃಥಿವ್ಯಾದ್ಯಭಿಮಾನಿ ದೇವತೆಗಳ ಶಕ್ತಿಯು ಮಹಾನುಭಾವರಿಂದ ಕಾಣಲ್ಪಡುತ್ತದೆ. (ಆದಕಾರಣ ಅಭಿಮಾನಿ ದೇವತೆಗಳೂ ಅವರ ಸಾಮರ್ಥ್ಯವೂ ಅಪ್ರಮಾಣಿಕವಲ್ಲ ಮಹಾತ್ಮರ ಪ್ರತ್ಯಕ್ಷವೇ ಈ ವಿಷಯದಲ್ಲಿ ಪ್ರಮಾಣವು.)

ಪೀಠಿಕೆ ॥ ಪರಬುದ್ಧಿಯು ಅಪ್ರತ್ಯಕ್ಷವಾದುದರಿಂದ ಮಹಾತ್ಮರ ಪ್ರತ್ಯಕ್ಷವೇ ಪ್ರಮಾಣವೆನ್ನುವುದು ಹೇಗೆ ಕೂಡುತ್ತದೆ ಎಂದರೆ—

**ಭಾಷ್ಯ ॥ ಭವಿಷ್ಯತ್ಪುರಾಣೇ ಚ । ಪೃಥಿವ್ಯಾದ್ಯಭಿಮಾನಿನ್ಯೋ ದೇವತಾಃ ಪ್ರಥಿತೌಜಸಃ । ಅಚಿಂತ್ಯಾಃ ಶಕ್ತಯಸ್ತಾಸಾಂ ದೃಶ್ಯಂತೇ ಮುನಿಭಿಶ್ಚ ತಾಃ ॥ ತಾಶ್ಚ ಸರ್ವಗತಾ ನಿತ್ಯಂ ವಾಸುದೇವೈಕಸಂಶ್ರಯಾಃ ॥ ಇತಿ ॥ ೭ ॥ ಅಧಿ. ೩ ॥ ॥ ೮ ॥**

ಭಾಷ್ಯಾರ್ಥ ॥ (ಮಹಾತ್ಮರಿಂದ ಕಾಣಲ್ಪಟ್ಟದ್ದು ಮಾತ್ರವಲ್ಲ) ಭವಿಷ್ಯತ್ಪುರಾಣದಲ್ಲಿಯೂ ಹೇಳಲ್ಪಟ್ಟಿದೆ. ಅಥವಾ ದೇವತಾ, ಅವರ ಶಕ್ತಿ ಇವುಗಳು ಮಹಾನುಭಾವರ ಪ್ರತ್ಯಕ್ಷಸಿದ್ಧವೆಂದು ಸೂತ್ರಕಾರರು ಹೇಳಿದ್ದು ಮಾತ್ರವಲ್ಲ, ಮತ್ತೆ ಪುರಾಣದಲ್ಲಿಯೂ ಹೇಳಲ್ಪಟ್ಟಿದೆ. ಪ್ರಸಿದ್ಧ ಸಾಮರ್ಥ್ಯವುಳ್ಳ ಪೃಥಿವೀ ಜಲಾದಿಗಳಿಗೆ ಅಭಿಮಾನಿಗಳಾದ ಯಾವ ದೇವತೆಗಳೋ ಆ ದೇವತೆಗಳೂ ಅವರ ಅಚಿಂತ್ಯಗಳಾದ ಶಕ್ತಿಗಳೂ ಕೂಡ ಋಷಿಗಳಿಂದ ಕಾಣಲ್ಪಡುತ್ತವೆ. ಆ ದೇವತೆಗಳು ವಾಸುದೇವನೇ ಮುಖ್ಯವಾಗಿ ನಮಗೆ ರಕ್ಷಕನು ಎನ್ನುವ ಜ್ಞಾನವುಳ್ಳವರು. ನಿತ್ಯದಲ್ಲಿಯೂ ಸರ್ವಗತರು ಅಂದರೆ (ತಂತಮ್ಮಿಂದ ಅಭಿಮನ್ಯಮಾನ ವಸ್ತುಗಳಲ್ಲಿ ವ್ಯಾಪ್ತರೇ) ಆಗಿರುತ್ತಾರೆ. ॥ ೭ ॥

## ಅಧಿಕರಣ ಸಾರಾಂಶ

**ಮೃದಬ್ರವೀತ್, ಆಪೋಽಬ್ರುವನ್, ತತ್ತೇಜ ಐಕ್ಷತ** ಇತ್ಯಾದಿ ಶ್ರುತಿಯು ಪ್ರಮಾಣವೋ ಅಲ್ಲವೋ ಎಂದು ಸಂದೇಹವು. ಆದಿಕಾಲೀನ ಪೃಥಿವ್ಯಾದಿಗಳಿಗೆ ವಕ್ತೃತ್ವಾದಿಗಳನ್ನು ಹೇಳತಕ್ಕ ಶ್ರುತಿಯು ಪ್ರಮಾಣವಲ್ಲವೆಂದು ಪೂರ್ವಪಕ್ಷವು. **ಮೃನ್ನ ವಕ್ತ್ರೀ ಜಡತ್ವಾತ್** ಎನ್ನುವ ಯುಕ್ತಿವಿರುದ್ಧವಾಗಿದೆ. ಇಂದ್ರಿಯ ರಹಿತವಾದ ಜಡಭೂತವಾದ ಮಣ್ಣು ಮೊದಲಾದುದಕ್ಕೆ ವಕ್ತೃತ್ವ ಈಕ್ಷಿತೃತ್ವಾದಿಗಳು ಕೂಡಲಾರವು. ಏವಂಚ ಏಕದೇಶವು ಅಪ್ರಮಾಣವಾದುದರಿಂದ ಆದರಂತೆಯೇ ಎಲ್ಲಾ ವೇದಗಳೂ ಅಪ್ರಮಾಣವು, ಎಂದು ಪೂರ್ವಪಕ್ಷ ಬಂದರೆ ದೋಷಶಂಕೆಯು ಇಲ್ಲದಿರುವ ವೇದಕ್ಕೆ ಅಪ್ರಾಮಾಣ್ಯವು ಕೂಡಲಾರದು. ಜಡಕ್ಕೆ ವಕ್ತೃತ್ವಾದಿಗಳು ಕೂಡಲಾರವು. ಈ ಉಭಯಾನ್ಯಥಾನುಪಪತ್ತಿಯಿಂದಲೂ, ಸ್ಮೃತಿವಚನದಿಂದಲೂ, ಮಹಾನುಭಾವರ ಪ್ರತ್ಯಕ್ಷದಿಂದಲೂ ಮೃದಾದಿ ಶಬ್ದಗಳಿಂದ ಮೃದಾದ್ಯಭಿಮಾನಿ ಚೇತನರೂ, ಅವರಿಗೆ ವಕ್ತೃತ್ವಾದ್ಯುಪಯೋಗಿ ವಿಗ್ರಹಾದಿಮತ್ತ್ವವೂ, ಅಂತರ್ಧಾನಶಕ್ತಿಯೂ ಇತ್ಯಾದಿಗಳು ಸಿದ್ಧಗಳಾಗುತ್ತವೆ. ಆದಕಾರಣ ವೇದವು ಪ್ರಮಾಣವು. ॥ ಅಧಿ.೩. ॥

**ಅಭಿಮಾನ್ಯಧಿಕರಣವು ಸಮಾಪ್ತವಾಯಿತು.**

# ೪. ಅಸದಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬ್ರಹ್ಮನಿಗೆ ಜಗತ್ಕರ್ತೃತ್ವದಲ್ಲಿ ಶ್ರುತ್ಯುಪಸರ್ಜನ ಅಸತ್ಕರ್ತೃತ್ವಸಾಧಕ ಯುಕ್ತಿವಿರೋಧವು ನಿರಾಕರಿಸಲ್ಪಡುತ್ತದೆ—

**ಭಾಷ್ಯ ॥ ಅಸದೇವೇದಮಗ್ರ ಆಸೀತ್** (ಛಾ.೬.೨.೧)**। ಅಸತಃ ಸದಜಾಯತ** (ಋ.೧೦.೭೨.೨೩.)**॥ ಇತ್ಯಾದಿನಾಽಸತಃ ಕಾರಣತ್ವೋಕ್ತೇರ್ವಿರೋಧಃ ಇತಿ । ಅತೋ ವಕ್ತಿ ॥ ೧ ॥**

**ಭಾಷ್ಯಾರ್ಥ ॥ ಅಸದೇವೇದಮಗ್ರ ಆಸೀತ್** ಇದು ಮೊದಲಾದ ವಾಕ್ಯದಿಂದ, ಅಸತಃ=ಅಸತ್ತಿಗೆ (ವಿಶ್ವಪ್ರಾಗಭಾವಕ್ಕೆ) ಜಗತ್ಕರ್ತೃತ್ವವನ್ನು ಹೇಳಿದ್ದರಿಂದ (**ಯತೋ ವಾ** ಇತ್ಯಾದಿ ವಾಕ್ಯದಿಂದ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಹೇಳಿದ್ದರಿಂದ ಪರಸ್ಪರ ವಿರೋಧವು.) (ಆದಕಾರಣ ವೇದವು ವಿಷ್ಣುಜಗತ್ಕರ್ತೃತ್ವದಲ್ಲಿ ಪ್ರಮಾಣವಲ್ಲ) (೧) ಜಗತ್ಸೃಷ್ಟಿಯಿಂದ ಮೊದಲು ಪ್ರಲಯಕಾಲದಲ್ಲಿ **ನ ವಿದ್ಯತೇ ಷತ್ ಉತ್ತಮಂ ಯಸ್ಮಾತ್** ಎನ್ನುವ ವ್ಯುತ್ಪತ್ತಿಯಿಂದ ಸರ್ವೋತ್ತಮನಾದ ಬ್ರಹ್ಮನೇ ಇದ್ದನು. ಅವನದ್ದೆಸೆಯಿಂದ ಸನ್ನಾಮಕನಾದ ಮುಖ್ಯವಾಯುವು ಹುಟ್ಟಿದನು, ಎಂದು ಸಿದ್ಧಾಂತರೀತ್ಯಾ ಶ್ರುತ್ಯರ್ಥವು.

**ಸೂತ್ರ ॥ ಓಂ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ಓಂ ॥ ೮ ॥**

**ಸೂತ್ರಾರ್ಥ ॥** ಅಸತ್=ಅಸತ್ತು (ವಿಶ್ವಪ್ರಾಗಭಾವವು) ಜಗತ್ಕಾರಣವು ಬ್ರಹ್ಮನಲ್ಲ. ಅಸತ್

ಎನ್ನುವ ಶ್ರುತಿಯ ದೆಶೆಯಿಂದ, ಇತಿ ಚೇನ್ನ=ಹೀಗೆ ಹೇಳಕೂಡದು. ಪ್ರತಿಷೇಧಮಾತ್ರತ್ವಾತ್= ಅಭಾವರೂಪ ಧರ್ಮದ್ವಾರವಿಲ್ಲದೆ ಧರ್ಮಿಸ್ವರೂಪದಿಂದಲೇ ನಿಷೇಧಬುದ್ಧಿವಿಷಯತ್ವವಿದ್ದುದರಿಂದ, ಘಟಪ್ರಾಗಭಾವಾದಿಗಳಂತೆಯೇ.

## ಭಾಷ್ಯ ॥ ಪ್ರತಿಷೇಧಮಾತ್ರತ್ವಾನ್ನಾಸತಃ ಕಾರಣತ್ವಂ ಯುಕ್ತಂ ॥ ೨ ॥

ಭಾಷ್ಯಾರ್ಥ ॥ ಪ್ರಥಮಪ್ರತೀತಿಯಲ್ಲಿ ನಾಸ್ತಿ ಎನ್ನುವ ಬುದ್ಧಿವಿಷಯತ್ವವಿದ್ದುದರಿಂದ ಅಭಾವಕ್ಕೆ ಜಗತ್ಕರ್ತೃತ್ವವು ಯುಕ್ತವಲ್ಲ.

ಪೀಠಿಕೆ ॥ ಹಾಗಾದರೆ ಈ ಅಧಿಕರಣದಲ್ಲಿ ಅಸತ್ತು ಜಗತ್ಕಾರಣವು ಎಂದು ಹೇಳುವ ಶೂನ್ಯವಾದಿಗಳ ಸಮಯವು ನಿರಾಕರಿಸಲ್ಪಡುತ್ತದೆ. ಶ್ರುತಿಪ್ರಾಪ್ತವಾದ ಅಭಾವಕರ್ತೃತ್ವಮತವು ನಿರಾಕರಿಸಲ್ಪಡುದಲ್ಲ. ಆದಕಾರಣ ಏತೇನ ಸರ್ವೇ ಎನ್ನುವಲ್ಲಿ ಅಸದಾದಿಶಬ್ದಗಳಿಗೆ ಬ್ರಹ್ಮಪರತ್ವವನ್ನು ಹೇಳಿದ್ದರಿಂದ ಇಲ್ಲಿ ಶ್ರುತಿಯಿಂದ ಅಸತ್ತಿಗೆ ಪ್ರಾಪ್ತಿಯೇ ಇಲ್ಲದಿರುವುದರಿಂದ ಇದು ಅಪವ್ಯಾಖ್ಯಾನವು ಎಂದರೆ—

## ಭಾಷ್ಯ ॥ ಅಸತ್ ಕಾರಣತ್ವಾದ್ಯುಕ್ತಿವಿರುದ್ಧಂ ವೇದವಾಕ್ಯಂ । ಇತ್ಯೇತದತ್ರ ನಿಷಿಧ್ಯತೇ ॥ ೩॥

ಭಾಷ್ಯಾರ್ಥ ॥ ವಿಷ್ಣುಕರ್ತೃತ್ವಪ್ರತಿಪಾದಕವಾದ ಯತೋ ವಾ ಇತ್ಯಾದಿ ವೇದವಾಕ್ಯವು ಅಸತ್ತಿಗೆ (ವಿಶ್ವಪ್ರಾಗಭಾವಕ್ಕೆ) ಅಸದೇವೇದಮಗ್ರ ಆಸೀತ್ ಇತ್ಯಾದಿ ರೂಪವಾದ ಕಾರಣತ್ವೋಕ್ತಿಯು, ಪ್ರಲಯಸ್ಥಿತತ್ವ, ಮನಃಪೂರ್ವಕತ್ವ ಮೊದಲಾದ ಉಕ್ತಿಯಿಂದ ವಿರುದ್ಧವು. ಹೀಗೆ ಶ್ರುತಿಪ್ರಾಪ್ತವೇ ಆದ ಅಸನ್ಮತವು ಈ ಅಧಿಕರಣದಲ್ಲಿ ನಿರಾಕರಿಸಲ್ಪಡುತ್ತದೆ. (ತತ್ವಪ್ರದೀಪದಲ್ಲಿ) ಕ್ವಚಿತ್ ಅಸತ್ತಿಗೆ ಕಾರಣತ್ವವನ್ನು ಹೇಳಿದ್ದರಿಂದಲೂ ಕ್ವಚಿತ್ ಸತ್ತಿಗೆ ಕಾರಣತ್ವವನ್ನು ಹೇಳಿದ್ದರಿಂದಲೂ ವೇದವಾಕ್ಯಗಳ ಪರಸ್ಪರ ವಿರೋಧವು ನಿಷೇಧಿಸಲ್ಪಡುತ್ತದೆ. ಶೂನ್ಯಸಮಯವಲ್ಲ ಎಂದು ಹೇಳಿದೆ.

ಪೀಠಿಕೆ ॥ ಶ್ರುತ್ಯಾದಿಗಳಿಂದ ಅಸತ್ತಿಗೆ ಪ್ರಾಪ್ತಿಯಿಲ್ಲವೆಂದು ಉಕ್ತವಾಗಿದೆ ಎಂದರೆ—

## ಭಾಷ್ಯ ॥ ಸರ್ವಶಬ್ದಾನಾಂ ಬ್ರಹ್ಮಣಿ ಸಮನ್ವಯೇಽಪಿ ತದಧೀನತ್ವಾದರ್ಥವದಿತ್ಯಾದಿನಾ ಅಮುಖ್ಯತ್ವೇನಾಪ್ಯಸ್ಯಾಪಿ ವಾಚ್ಯತ್ವೇನಾಂಗೀಕಾರಾದಸತಃ ಪ್ರಾಪ್ತಿಃ । ತಥಾ ಶ್ರುತಿ ಪ್ರಾಪ್ತಮೇವಾಸನ್ಮತಮತ್ರ ನಿಷಿಧ್ಯತೇ । ಸಮಯಸ್ಯೋಪರಿ ನಿಷೇಧಾತ್ ॥ ೪ ॥

ಭಾಷ್ಯಾರ್ಥ ॥ ಎಲ್ಲಾ ಶಬ್ದಗಳಿಗೂ ಬ್ರಹ್ಮನಲ್ಲಿ ಪರಮಮುಖ್ಯತ್ವವು ಏತೇನ ಇತ್ಯಾದಿಗಳಿಂದ ಉಕ್ತವಾದಾಗ್ಯೂ ತದಧೀನತ್ವಾತ್ ಇತ್ಯಾದಿಗಳಿಂದ (ಸೂತ್ರಕಾರರಿಂದ) ಅಸದಾದಿಗಳಿಗೂ ಅಮುಖ್ಯ ವೃತ್ತಿಯಿಂದ (ಪರಮಮುಖ್ಯವೃತ್ತಿಯಿಂದ ಹೀನವೃತ್ತಿಯಿಂದ) ಅಸದಾದಿಶಬ್ದವಾಚ್ಯತ್ವವನ್ನು ಅಂಗೀಕರಿಸಿದ್ದರಿಂದ, ಅಸತ್ತಿಗೆ (ಕರ್ತೃತ್ವೇನ ಶ್ರುತಿಯಿಂದ) ಪ್ರಾಪ್ತಿಯು ಇದೆ. (ಹಾಗಾದರೆ ಅಸತ್ತಿಗೆ ಪ್ರಾಪ್ತಿಯು ಇರಲಿ. ಆದಾಗ್ಯೂ ಅಸತ್ಕರ್ತೃತ್ವಸಮಯವು ಇಲ್ಲಿ ನಿರಾಕರಿಸಲ್ಪಡುತ್ತದೆ ಎಂದು ಏಕೆ ಆಗಲಾರದು ಎಂದರೆ) ಶೂನ್ಯಕಾರಣತ್ವ ಸಮಯವನ್ನು ಮೇಲಿನ ಪಾದದಲ್ಲಿ ನಾಸತಃ ಎನ್ನುವುದರಿಂದ

ನಿರಾಕರಿಸುವುದರಿಂದ ಅಸತ್ತಿಗೆ ಮುಖ್ಯವಾಗಿ ಶ್ರುತಿಯಿಂದ ಪ್ರಾಪ್ತವೇ ಆದ ಸತ್ಕರ್ತೃತ್ವಮತವು ಈ ಅಧಿಕರಣದಲ್ಲಿ ನಿಷೇಧಿಸಲ್ಪಡುತ್ತದೆ. (ಸಮಯಪ್ರಾಪ್ತವಾದುದಲ್ಲ ಹೀಗೆಯೇ ಅಂಗೀಕರಿಸಬೇಕು) (ಇಲ್ಲವಾದರೆ—ಇಲ್ಲಿಯೂ ಸಮಯಪ್ರಾಪ್ತವಾದುದನ್ನೇ ನಿಷೇಧಿಸುವುದಾದರೆ ಪ್ರಾಗಭಾವಕರ್ತೃತ್ವ ಪ್ರಾಪಕ ಸಮಯವೇ ಇಲ್ಲದಿರುವುದರಿಂದ ಶೂನ್ಯಸಮಯ ನಿಷೇಧವೇ ಪ್ರಾಪ್ತವಾಗುವ ಪ್ರಯುಕ್ತ ಪೌನರುಕ್ತ್ಯವು ಬರಬೇಕಾಗುವುದು.)

**ಪೀಠಿಕೆ ॥** ಇಲ್ಲಿ ಬ್ರಹ್ಮನು ಜಗತ್ಕಾರಣನು ಎಂದು ಹೇಳುವ ಶ್ರುತಿಗೆ ಶ್ರುತಿಪ್ರಾಪ್ತವಾದ ಅಸನ್ಮತವಿರೋಧವು ನಿರಾಕರಿಸಲ್ಪಡುವುದಾದರೆ—ಈ ಅಧಿಕಣವನ್ನು ಮೂರನೇ ಪಾದದಲ್ಲಿ ಹೇಳ ಬೇಕಿತ್ತು. ಯುಕ್ತಿ ವಿರೋಧಪರಿಹಾರರೂಪವಾದ ಈ ಪಾದದಲ್ಲಿ ಹೇಳಿದ್ದು ಯುಕ್ತವಲ್ಲ. ಎಂದರೆ—

## ಭಾಷ್ಯ ॥ ಅರ್ಥಾದ್ಯುಕ್ತಿವಿರೋಧೋ ನಿರಾಕ್ರಿಯತೇ ॥ ೮ ॥

**ಭಾಷ್ಯಾರ್ಥ ॥** ಈ ಅಧಿಕರಣದಲ್ಲಿ ಪೂರ್ವಪಕ್ಷಿಯು ಯುಕ್ತಿಗೆ ಪ್ರಾಬಲ್ಯಬರುವುದಕ್ಕಾಗಿ ಹೇಳಿದ ಶ್ರುತಿ ವಿರೋಧ ಮಾತ್ರವಲ್ಲ, ಮತ್ತೆ ಅರ್ಥಾತ್=ಫಲತಃ ಯುಕ್ತಿವಿರೋಧವೂ ನಿರಾಕರಿಸಲ್ಪಡುತ್ತದೆ. ಆದಕಾರಣ ಯುಕ್ತಿವಿರೋಧನಿರಾಸಕವಾದ ಈ ಪಾದದಲ್ಲಿ ಅಂತರ್ಭಾವವು ಕೂಡಬಹುದು.

**ವಿಶೇಷಾಂಶ ॥ ಕಾರಣಂ ಪ್ರಲಯೇ ಅಸದ್ಯನಿತುಮರ್ಹತಿ ವಸ್ತುತ್ವಾತ್ಕಾರ್ಯವತ್** ಎಂದು ಅಸತ್ತಿಗೆ ಕಾರಣತ್ವ ಪ್ರತಿಪಾದಕವಾದ ಯುಕ್ತಿವಿರೋಧವೂ ನಿರಾಕರಿಸಲ್ಪಡುತ್ತದೆ. ಪೂರ್ವಪಕ್ಷಿಯು ತಾನು ಹೇಳಿದ ಯುಕ್ತಿಗೆ ಸಾಧಕವಾಗಿ ಶ್ರುತಿಯನ್ನು ಹೇಳಿದ್ರಿಂದ ಶ್ರುತಿವಿರೋಧವು ಪರಿಹೃತವಾಗೋಣ ನಿರ್ಮೂಲವಾದ ಯುಕ್ತಿಯು ಸ್ವತ ಏವ ಅಪ್ರಾಮಾಣವೇ ಆಗುವುದು. ಆದಕಾರಣ ಶ್ರುತಿವಿರೋಧ ಪರಿಹಾರವು ಯುಕ್ತಿ ವಿರೋಧಪರಿಹಾರಕ್ಕೆ ಅಂಗವಾದುದರಿಂದ ಅಸಂಗತಿಯು ಇಲ್ಲ. ॥ ೮ ॥

**ಪೀಠಿಕೆ ॥ ಪ್ರತಿಷೇಧಮಾತ್ರತ್ವಾತ್** ಎಂದು ಯುಕ್ತಿವಿರೋಧವಿದ್ದಪ್ರಯುಕ್ತ ಅಸತ್ತಿಗೆ ಕಾರಣತ್ವವಿಲ್ಲವೆಂದು ಯಾವುದು ಉಕ್ತವಾಗಿಯದೋ ಅದು ಯುಕ್ತವಲ್ಲ. ಯುಕ್ತಿವಿರುದ್ಧವಾದುದಕ್ಕೂ ಅಸದೇವ, ಇತ್ಯಾದಿ ಶ್ರುತಿಸಾಮರ್ಥ್ಯದಿಂದ ಕೆಲವು ಕಡೆ ಅಭಾವಕ್ಕೆ ಕರ್ತೃತ್ವವನ್ನು ಅಂಗೀಕರಿಸಿದರೆ ಬಾಧಕವಿಲ್ಲ. ಹಾಗಾದರೆ ಘಟಪ್ರಾಗಭಾವಾದಿಗಳಿಗೂ ಕರ್ತೃತ್ವವು ಬರಬೇಕಾಗುವುದು ಎಂದು ಹೇಳಕೂಡದು. ಭಾವಪದಾರ್ಥಗಳಲ್ಲಿ ಕೆಲವು ಭಾವಕ್ಕೆ ಕರ್ತೃತ್ವವು ಕೆಲವಕ್ಕೆ ಅಕರ್ತೃತ್ವವು ಎನ್ನುವ ವೈಲಕ್ಷಣ್ಯದಂತೆಯೇ ಅಭಾವಗಳಲ್ಲಿಯೂ ಘಟಪ್ರಾಗಭಾವಾದಿಗಳಿಗೆ ಅಕರ್ತೃತ್ವವು, ವಿಶ್ವಪ್ರಾಗಭಾವಕ್ಕೆ ಅಸದೇವ ಇತ್ಯಾದಿ ಶ್ರುತಿಬಲದಿಂದ ಕರ್ತೃತ್ವವು ಹೀಗೆ ವೈಲಕ್ಷಣ್ಯವು ಕೂಡಬಹುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅಪೀತೌ ತದ್ವತ್ಪ್ರಸಂಗಾದಸಮಂಜಸಂ ಓಂ ॥ ೯ ॥

**ಸೂತ್ರಾರ್ಥ ॥** ಅಸತ್ಪದಾರ್ಥದಿಂದ ಜಗತ್ತಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ, ಅಪೀತೌ= ಪ್ರಲಯಕಾಲದಲ್ಲಿ ತದ್ವತ್ಪ್ರಸಂಗಾತ್= ಅಸತ್ತು ಮಾತ್ರ ಉಳಿಯಬೇಕಾಗಿರುವುದರಿಂದ, ಅಸಮಂಜಸಂ= ಅಸತ್ಕರ್ತೃತ್ವ ಮತವು ಅಯುಕ್ತವು.

ಭಾಷ್ಯ ॥ ಅಸತ ಉತ್ಪತ್ತೌ ಪ್ರಲಯೇ ಸರ್ವಾಸತ್ತ್ವಮೇವ ಸ್ಯಾತ್ ॥ ೯ ॥ ॥ ೬ ॥

ಭಾಷ್ಯಾರ್ಥ ॥ ವಿಶ್ವಪ್ರಾಗಭಾವದೆಶೆಯಿಂದ ಸರ್ವಕಾರ್ಯಗಳಿಗೆ ಯಾ ಜಗತ್ತಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಪ್ರಲಯದಲ್ಲಿ (ಭಾವಪದಾರ್ಥಗಳು ಯಾವುದೂ ಇಲ್ಲವೆಂದು ಆದರೆ) ಸರ್ವಪದಾರ್ಥಕ್ಕೂ ಅಸತ್ವವೇ ಬರಬೇಕಾಗುವುದು. (ಅಂದರೆ ಅಸತ್ತು ಮಾತ್ರ ಉಳಿಯಬೇಕಾಗುವುದು.) ಕಾರ್ಯನಾಶವಾದರೆ— ಕಾರಣಮಾತ್ರ ಉಳಿಯತಕ್ಕದು. ॥ ೯ ॥

ಪೀಠಿಕೆ ॥ ಹಾಗಾದರೆ, ಪ್ರಲಯಕಾಲದಲ್ಲಿ ಅಸತ್ತು ಮಾತ್ರ ಉಳಿಯುತ್ತದೆ ಎಂದು ನಮಗೂ ಇಷ್ಟವಾದುದರಿಂದ ಇದು ಅನಿಷ್ಟಾಪಾದನವಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ನ ತು ದೃಷ್ಟಾಂತಭಾವಾತ್ ಓಂ ॥ ೧೦ ॥

ಭಾಷ್ಯ ॥ ಪ್ರಲಯೇ ಸರ್ವಾಸತ್ತ್ವಂ ಭಾವೇ ದೃಷ್ಟಾಂತಭಾವಾದೇವ ನ ಯುಜ್ಯತೇ । ಸತ ಉತ್ಪತ್ತಿಃ ಸವಿಶೇಷವಿನಾಶಶ್ಚ ಹಿ ಲೋಕೇ ದೃಷ್ಟಃ ॥ ೭ ॥

ಭಾಷ್ಯಾರ್ಥ ॥ ಪ್ರಲಯಕಾಲದಲ್ಲಿ (ಭಾವೇ) ಭಾವ ಪದಾರ್ಥಗಳು ಇವೆ ಎನ್ನುವ ವಿಷಯದಲ್ಲಿಯೇ, ದೃಷ್ಟಾಂತಭಾವಾತ್=ದೃಷ್ಟಾಂತಗೃಹೀತವ್ಯಾಪ್ತಿಯುಳ್ಳ ಅನುಮಾನವಿದ್ದಪ್ರಯುಕ್ತ ಸರ್ವಾಸತ್ವಂ=ಸರ್ವಪದಾರ್ಥಗಳಿಗೆ ಅಸತ್ವವು (ಅಸನ್ಮಾತ್ರಾವಿಶೇಷವು) ಕೂಡುವುದಿಲ್ಲ. ಭಾವಪದಾರ್ಥದೆಶೆಯಿಂದ ಉತ್ಪತ್ತಿಯು ಭಾವಪದಾರ್ಥದ ಅವಶೇಷವುಳ್ಳ ವಿನಾಶವೂ ಪಟಾದಿಗಳಲ್ಲಿ ದೃಷ್ಟವಾಗಿದೆ.

ವಿಶೇಷಾಂಶ ॥ (೧) ವಿಪ್ರತಿಪನ್ನಾ ಮಹದಾದಿಕಾರ್ಯೋತ್ಪತ್ತಿಃ ಭಾವಪದಾರ್ಥಾದ್ಭವಿತುಮರ್ಹತಿ ಉತ್ಪತ್ತಿತ್ವಾತ್ ಘಟೋತ್ಪತ್ತಿವತ್ ॥ (೨) ವಿಮತೋ ವಿನಾಶಃ ಸಶೇಷಃ ವಿನಾಶತ್ವಾತ್ ಪಟನಾಶವತ್ ॥ ಎನ್ನುವ ಪ್ರಯೋಗಗಳು ಸೂಚಿತಗಳಾದವು. ॥ ೧೦ ॥

ಪೀಠಿಕೆ ॥ ಪ್ರಾಮಾಣಿಕ ಪರಿತ್ಯಾಗವು ಪ್ರಾಪ್ತವಾಗುವುದರಿಂದ ಪ್ರಲಯಕಾಲದಲ್ಲಿ ಸರ್ವಾಸತ್ವವು ಅನಿಷ್ಟವೆಂದು ಮಾತ್ರವಲ್ಲ, ಮತ್ತೆ ಅಪ್ರಾಮಾಣಿಕವೂ ಆಗಿದೆ ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ವಪಕ್ಷದೋಷಾಚ್ಚ ಓಂ ॥ ೧೧ ॥

ಭಾಷ್ಯ ॥ ದೃಷ್ಟಾಂತಾಭಾವದೇವ ॥ ೧೧ ॥ ೮ ॥

ಭಾಷ್ಯಾರ್ಥ ॥ ಭಾವಪದಾರ್ಥವಿದೆ ಎನ್ನುವ ವಿಷಯದಲ್ಲಿ ದೃಷ್ಟಾಂತವಿದ್ದ ಪ್ರಯುಕ್ತವೆಂದು ಮಾತ್ರವಲ್ಲ, ಸ್ವಪಕ್ಷದಲ್ಲಿ (ಪ್ರಲಯಕಾಲದಲ್ಲಿ ಸರ್ವಾಭಾವವೇ ಇದೆ ಎನ್ನುವ ಪಕ್ಷದಲ್ಲಿ) ದೃಷ್ಟಾಂತವಿಲ್ಲದಿರುವುದರಿಂದ (ಅಂದರೆ ಪ್ರಮಾಣ ಸಾಮಾನ್ಯವಿಲ್ಲದಿರುವುದರಿಂದಲೇ.)

**ವಿಶೇಷಾಂಶ** ॥ (೧) ದೃಷ್ಟಾಂತಾಭಾವಾತ್=ದೃಷ್ಟಂ=ಪ್ರತ್ಯಕ್ಷವು, ಅಂತ=ನಿರ್ಣಯಜನಕವಾದ ಆಗಮವು, ಇವುಗಳ ಅಭಾವದಿಂದಲೇ, (೨) ದೋಷಪದದಿಂದ ಪ್ರತ್ಯಕ್ಷ ಆಗಮಗಳ ಅಭಾವವೂ, ಅನುಮಾನಕ್ಕೆ ದುಷ್ಟತ್ವವೂ, ದುಷ್ಟತ್ವಪ್ರಯೋಜಕವಾದ ದೃಷ್ಟಾಂತಾಭಾವವೂ ಇವುಗಳನ್ನು ಹೇಳುತ್ತದೆ ಎಂದು ಸೂಚಿತವಾಯಿತು. ತಥಾಚ ಪ್ರಲಯಕಾಲದಲ್ಲಿ ಸರ್ವಾಸತ್ವಪಕ್ಷವು ಅಪ್ರಾಮಾಣಿಕ ವಾದುದರಿಂದ ಅದನ್ನು ಅಂಗೀಕರಿಸುವುದು ಅನಿಷ್ಟವು. ॥ ೧೧ ॥

**ಪೀಠಿಕೆ** ॥ ತರ್ಕದಿಂದ ಸದಸತ್ತುಗಳಿಗೆ ಕಾರಣತ್ವ ಸಾಧನಬಾಧನಗಳನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನುಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ ಓಂ ॥ ೧೨ ॥

**ಸೂತ್ರಾರ್ಥ** ॥ ತರ್ಕಾಪ್ರತಿಷ್ಠಾನಾತ್=ಇಷ್ಟೇ ಪ್ರತಿತರ್ಕವು ಎನ್ನುವಲ್ಲಿ ನಿಯಾಮಕಪ್ರಮಾಣ ವಿಲ್ಲದಿರುವುದರಿಂದ (ಅಂದರೆ ಇದೇ ಪ್ರತಿತರ್ಕವು ಈ ತರ್ಕಕ್ಕೆ ವಿರೋಧಿಯು. ಇತರ ತರ್ಕಕ್ಕೆ ಅಲ್ಲ ಎನ್ನುವ ನಿರ್ಣಾಯಕವಿಲ್ಲದಿರುವುದರಿಂದ) ಅನ್ಯಥಾऽಪಿ=ಪ್ರಥಮತಃ ತರ್ಕದಿಂದ ಸಾಧಿತವಾದ ಪ್ರಮೇಯದಿಂದ ವಿರುದ್ಧವಾದುದೂ ಅನುಮೇಯಂ=ಅನುಮೇಯಿಸಲಿಕ್ಕಶಕ್ಯವು. ಆದಕಾರಣ, ತರ್ಕಾಪ್ರತಿಷ್ಠಾನಾತ್=ಅನುಮಾನ ಮಾತ್ರವು ಅಪ್ರಮಾಣವಾದುದರಿಂದಲೇ, ಏವಂ=ಅನುಮಾನ ದಿಂದ, ಸತ್ಪದಾರ್ಥಕ್ಕೆ ಕಾರಣತ್ವಸಾಧನವೂ ಅಸತ್ತಿಗೆ ಕಾರಣತ್ವಬಾಧನವೂ ಅಸಮಂಜಸವು, ಇತಿ ಚೇತ್=ಎಂದರೆ, ಏವಂ=ಹೀಗಾದರೆ, ಅಪಿ=ಪ್ರಮಾಣಸಿದ್ಧವಾದ ಮೋಕ್ಷವಿಷಯದಲ್ಲಿಯೂ, ಅನ್ಯಥಾऽಪಿ=ಇಲ್ಲವೆಂದೂ ಅನುಮೇಯಿಸಲು ಶಕ್ಯವಾಗುವುದರಿಂದ ಅನಿರ್ಮೋಕ್ಷಪ್ರಸಂಗಃ= ಮೋಕ್ಷಾಭಾವವು ಪ್ರಸಕ್ತವಾಗುವುದು.

**ಭಾಷ್ಯ** ॥ **ಏತಾವಾನೇವ ತರ್ಕ ಇತಿ ಪ್ರತಿಷ್ಠಾಪಕಪ್ರಮಾಣಾಭಾವಾದುಕ್ತಾದನ್ಯಥಾऽಪ್ಯ- ನುಮೇಯಮಿತಿ ಚೇತ್** ॥ ೯ ॥

**ಭಾಷ್ಯಾರ್ಥ** ॥ ತರ್ಕಃ=ಪ್ರತಿತರ್ಕವು, ಏತಾವಾನೇನ=ಇಂತಹ ಸ್ಥಾಪನಾನುಮಾನಕ್ಕೆ ವಿರೋಧಿ ಯಾಗಿ ಇದೆ. ಇಂತಹುದಕ್ಕೆ ವಿರೋಧಿಯಲ್ಲ ಎನ್ನುವ ಧರ್ಮದಿಂದ ಯುಕ್ತವೇ ಆಗಿದೆ ಎನ್ನುವಲ್ಲಿ ನಿಯಾಮಕ ಪ್ರಮಾಣವಿಲ್ಲದಿರುವುದರಿಂದ ಸರ್ವಾನುಮಾನಗಳಲ್ಲಿಯೂ ಪ್ರತಿತರ್ಕವನ್ನು ನಿವಾರಿಸಲಿಕ್ಕೆ ಸಾಧ್ಯವಿಲ್ಲದಿರುವುದರಿಂದ ಹೇಳಿದ್ದಕ್ಕಿಂತ, (ತರ್ಕದಿಂದ ಸಾಧಿತವಾದ ಪ್ರಮೇಯಕ್ಕಿಂತ) ಬೇರೆ ರೀತಿಯಾಗಿಯೂ ಯಾವ ಕಾರಣದಿಂದ ಪ್ರತಿತರ್ಕದಿಂದ ಅನುಮೇಯಿಸಲಿಕ್ಕೆ (ಸಾಧಿಸಲಿಕ್ಕೆ) ಶಕ್ಯವಾಗಿದೆಯೋ ಆದಕಾರಣ, ತರ್ಕಃ=ಎರಡೂ ಸೂತ್ರಗಳಲ್ಲಿ ಹೇಳಿದ ಸ್ಥಾಪನಾನುಮಾನವೂ ಕೂಡ, ಅನ್ಯಥಾ=ಅಪ್ರಮಾಣವು. ಏಕೆಂದರೆ—**ನ ತು ದೃಷ್ಟಾಂತಾಭಾವಾತ್, ಸ್ವಪಕ್ಷದೋಷಾಚ್ಚ** ಎಂದು ಹೇಳಿದ್ದಕ್ಕಿಂತ ಅನ್ಯಥಾಪಿ=ಅಭಾವ ಕಾರಣತ್ವ ಭಾವಾಕಾರಣತ್ವ ರೂಪದಿಂದಲೂ ಅನುಮೇಯಿಸಲಿಕ್ಕೆ ಶಕ್ಯವಾಗುತ್ತದೆ. (ಆದಕಾರಣ ತರ್ಕವು ಅಪ್ರಮಾಣವಾದುದರಿಂದ ತರ್ಕಬಲದಿಂದ ಸತ್ಪದಾರ್ಥಕ್ಕೆ ಕಾರಣತ್ವಸಾಧನವೂ ಅಸತ್ಪದಾರ್ಥಕ್ಕೆ ಕಾರಣತ್ವಬಾಧಕವೂ ಯುಕ್ತವಲ್ಲ) ಎಂದರೆ,

**ಪೀಠಿಕೆ ॥** ನ ಎನ್ನುವ ಪದವನ್ನು ಅಧ್ಯಾಹಾರ ಮಾಡಿಕೊಂಡು ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ । ಏವಂ ಪ್ರಮಾಣಸಿದ್ಧೇಽಪಿ ಮೋಕ್ಷೇಽನ್ಯಥಾಽಽಮೇಯತ್ವಾದನಿರ್ಮೋಕ್ಷಪ್ರಸಂಗಃ ॥ ೧೦ ॥**

**ಭಾಷ್ಯಾರ್ಥ ॥** (ಪ್ರತಿತರ್ಕದಿಂದ ಪರಾಹತವಾದ ಪ್ರಯುಕ್ತ ಸರ್ವತರ್ಕವೂ ಅಪ್ರಮಾಣವಾದುದರಿಂದ ಅದರಿಂದ ಸಾಧಿಸುವುದೂ ಬಾಧಿಸುವುದೂ ಯುಕ್ತವಲ್ಲವೆಂದು ಯಾವುದು ಪೂರ್ವಪಕ್ಷಿಯಿಂದ ಹೇಳಲ್ಪಟ್ಟದೋ, ಅದು ಯುಕ್ತ)ವಲ್ಲ. ಹೀಗಾದರೆ-ಆಗಮಕ್ಕೆ ಅಪ್ರಾಮಾಣ್ಯವನ್ನು ಹೇಳತಕ್ಕವನನ್ನು ಕುರಿತು ಅವಶ್ಯವಾಗಿ ಉಪನ್ಯಸನೀಯವಾದ ಅನುಮಾನಪ್ರಮಾಣದಿಂದ ಸತ್ ಎಂದೂ ನಿತ್ಯವೆಂದೂ ಸಿದ್ಧವಾದ ಮೋಕ್ಷವಿಷಯದಲ್ಲಿ (ಪ್ರಾಮಾಣಿಕ ಅತೀಂದ್ರಿಯಾರ್ಥ ಮಾತ್ರದಲ್ಲಿಯೂ) ಚಾರ್ವಾಕಾದಿಗಳಿಗೆ ಆಸ್ತಿಕರು ಹೇಳಿದ ಮೋಕ್ಷ ಅಸ್ತಿತ್ವ ನಿತ್ಯತ್ವಾದಿರೂಪಗಳಾದ ವಸ್ತುಗಳನ್ನು ಅನ್ಯಥಾ ಅನುಮೇಯಿಸಲಿಕ್ಕೆ ಶಕ್ಯವಾಗುವುದರಿಂದಲೂ ಮೋಕ್ಷಾದ್ಯಲೌಕಿಕಾರ್ಥ ವಿಷಯಕವಾದ ಅನುಮಾನವನ್ನು ಅಪ್ರಮಾಣವೆಂದು ಅನುಮೇಯಿಸಲಿಕ್ಕೆ ಶಕ್ಯವಾಗುವುದರಿಂದಲೂ ಶಾಸ್ತ್ರಕ್ಕೆ ಮಹಾಫಲವೆಂದು ಅಂಗೀಕೃತವಾದ ಆತ್ಯಂತಿಕ ದುಃಖನಿವೃತ್ತಿರೂಪವಾದ ಮೋಕ್ಷವೂ ಇಲ್ಲವೆಂದು ಆಗಬೇಕಾಗುವುದು. (ವಾದಿಯಿಂದು ಅಭಿಮಾನವಿದ್ದವನಿಗೆ ಮೋಕ್ಷವನ್ನು ಬಿಡಲು ಶಕ್ಯವಲ್ಲ)

**ಪೀಠಿಕೆ ॥** ಹೀಗೆ ಎಲ್ಲಾ ತರ್ಕಗಳಲ್ಲಿಯೂ ವಿರೋಧಿಯಾಗಿ ಪ್ರತಿತರ್ಕವು ಬರುತ್ತದೆ ಎಂದಂಗೀಕರಿಸಿದರೆ ಅತಿಪ್ರಸಂಗವನ್ನು ಹೇಳತಕ್ಕ ಸೂತ್ರಾಂಶವನ್ನು ವಿವರಿಸಿ ವಿಪರ್ಯಯ ಪರ್ಯವಸಾನವನ್ನು ತೋರಿಸುತ್ತಾರೆ—

**ಭಾಷ್ಯ ॥ ಅತೋ ಯಾವತ್ಪ್ರಮಾಣಸಿದ್ಧಂ ತಾವದೇವಾಂಗೀಕರ್ತವ್ಯಂ । ನಾತೋಽನ್ಯಚ್ಛಂಕ್ಯಂ ॥ ೧೧ ॥**

**ಭಾಷ್ಯಾರ್ಥ ॥** (ಯಾವ ಕಾರಣದಿಂದ ಹೀಗೆ ಪ್ರಾಮಾಣಿಕ ಅರ್ಥಸಾಧಕವಾದ ತರ್ಕಕ್ಕೂ ಪ್ರತಿತರ್ಕದಿಂದ ಬಾಧವನ್ನು ಅಂಗೀಕರಿಸಿದರೆ ಅತಿಪ್ರಸಂಗವು ಬರುತ್ತದೋ) ಆದಕಾರಣ ಯಾವ ವಸ್ತುವು ಪ್ರಮಾಣದಿಂದ ಸಿದ್ಧವಾಗುತ್ತದೋ, ಅಂತಹುದೇ ತರ್ಕದಿಂದ ಪಕ್ಷದಲ್ಲಿ ಸಾಧಿಸಲ್ಪಡುತ್ತದೆ; ಎಂದೇ ಅಂಗೀಕರಿಸಬೇಕು. ಪ್ರಮಾಣಸಿದ್ಧವಾದ ವಸ್ತುವಿನಿಂದ ಇತರವಾದ ಅಪ್ರಾಮಾಣಿಕವಾದುದನ್ನು ತರ್ಕದಿಂದ ಸಾಧಿಸಲಿಕ್ಕೆ ಶಕ್ಯವಲ್ಲ. ಪ್ರಮಾಣಾಸಿದ್ಧವಾದುದರದೆಶೆಯಿಂದ ಪ್ರಮಾಣಸಿದ್ಧವಾದುದನ್ನು ತರ್ಕದಿಂದ ನಿಷೇಧಿಸಲಿಕ್ಕೆ ಶಕ್ಯವಲ್ಲ.

**ವಿಶೇಷಾಂಶ ॥** ಯಾವುದು ಪ್ರಮಾಣಸಾಹಾಯ್ಯಯುಕ್ತವಾದ ಪ್ರತಿತರ್ಕವೋ ಅದೇವೇ ಅಪ್ರಾಮಾಣಿಕವಾದ ತರ್ಕವನ್ನು ಬಾಧಿಸುತ್ತದೆ. ಅಪ್ರಾಮಾಣಿಕವು ಪ್ರಾಮಾಣಿಕವನ್ನು ಬಾಧಿಸುವುದಿಲ್ಲ. ಸದಕಾರಣತ್ವ ಅಸತ್ಕಾರಣತ್ವ ಸಾಧಕತರ್ಕಗಳು ಅಪ್ರಾಮಾಣಿಕಗಳು. ಸತ್ಕಾರಣತ್ವ ಮೋಕ್ಷಾದಿಸಾಧಕವಾದ ಪ್ರತಿತರ್ಕವು ಪ್ರಾಮಾಣಿಕವು, ಆದಕಾರಣ ಅವುಗಳಿಂದ ನಿಷೇಧಿಸಲಿಕ್ಕೆ ಶಕ್ಯವಾಗುವುದಿಲ್ಲ.

ಪೀಠಿಕೆ ॥ ಈ ಅರ್ಥದಲ್ಲಿ ಅಪಿಶಬ್ದ ಸೂಚಿತವಾದ ಸ್ಮೃತಿಯನ್ನು ಸಮ್ಮತಿಯಾಗಿ ಹೇಳುತ್ತಾರೆ—

**ಭಾಷ್ಯ ॥ ಯಾವದೇವ ಪ್ರಮಾಣೇನ ಸಿದ್ಧಂ ತಾವದಹಾಪಯನ್ । ಸ್ವೀಕುರ್ಯಾನ್ನೈವ ಚಾನ್ಯತ್ರ ಶಂಕ್ಯಮಾನಮೃತೇ ಕ್ವಚಿತ್ ॥ ಇತಿ ವಾಮನೇ ॥ ೧೨ ॥**

ಭಾಷ್ಯಾರ್ಥ ॥ ಯಾವುದು ಪ್ರಮಾಣದಿಂದ ಸಿದ್ಧವಾದ ವಸ್ತುವೋ ಅದನ್ನೇ ಬಿಡದೆ ಇದ್ದವನಾಗಿ ತರ್ಕದಿಂದ ಸ್ವೀಕರಿಸಬೇಕು. (ಅಂದರೆ ತರ್ಕದಿಂದ ಸಾಧಿಸಬೇಕು.) ಪ್ರಾಮಾಣಿಕದಿಂದ ಇತರವಾದುದನ್ನು (ಅಂದರೆ ಅಪ್ರಾಮಾಣಿಕವಾದುದನ್ನು) ಸಾಧಿಸಬಾರದು. ಏಕೆಂದರೆ— ಅನುಗ್ರಾಹ್ಯ ಪ್ರಮಾಣ ಹೊರತು ತರ್ಕಮಾತ್ರದಿಂದ ಯಾವುದೊಂದು ವಸ್ತುವನ್ನೂ (ಸಾಧಿಸಲಿಕ್ಕಾಗಲೀ ನಿಷೇಧಿಸಲಿಕ್ಕಾಗಲೀ) ಶಕ್ಯವಲ್ಲ (ಅಂದರೆ ಪ್ರಮಾಣಸಾಹಾಯ್ಯಯುಕ್ತವಾದ ಪ್ರತಿತರ್ಕವು ಅಪ್ರಾಮಾಣಿಕತರ್ಕವನ್ನು ಬಾಧಿಸುತ್ತದೆ. ಅಪ್ರಾಮಾಣಿಕವು ಪ್ರಾಮಾಣಿಕವನ್ನು ಬಾಧಿಸುವುದಿಲ್ಲ) ಹೀಗೆ ವಾಮನಪುರಾಣದಲ್ಲಿ ಉಕ್ತವಾಗಿದೆ. ॥ ೧೨ ॥

ಪೀಠಿಕೆ ॥ ಅಸತ್ ಶಬ್ದದಿಂದ ಹೇಳಲ್ಪಟ್ಟ ಅಭಾವವು ಜಗತ್ತಿಗೆ ಕಾರಣವು ಆಗದಿದ್ದರೂ ಶ್ರೀಹರಿಯು ಜಗತ್ಕಾರಣನು ಎನ್ನುವುದು ಕೂಡುವುದಿಲ್ಲ. **ವಿಪ್ರತಿಪನ್ನಂ ಜಗತ್ ನಿಷ್ಕಾರಣಕಂ ಅಚೇತನಕಾರಣಕಂ ವಾ ಕಾರ್ಯತ್ವಾತ್ ಕೂಲಪತನವತ್ ದಧ್ಯಾದಿವತ್** ಎನ್ನುವ ನಿಷ್ಕಾರಣತ್ವಾದಿಗಳನ್ನು ಸಾಧಿಸುವ ಯುಕ್ತಿಯಿಂದ ವಿರೋಧವು ಬರುವುದು. ನಿರ್ಮೂಲಯುಕ್ತಿಯು ಸಾಧಕವಲ್ಲವೆಂದು ಹೇಳಕೂಡದು. ಅಕಾರಣತ್ವಾದಿಸಾಧಕವಾದ ಯುಕ್ತಿಯು **ಅಕಸ್ಮಾತ್** ಇತ್ಯಾದಿ ಶ್ರುತಿಮೂಲಕವಾಗಿದೆ, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ—

**ಸೂತ್ರ ॥ ಓಂ ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ ॥ ೧೩ ॥**

**ಭಾಷ್ಯ ॥ ಏತೇನ ದೃಷ್ಟಾಂತಭಾವೇನಾಭಾವೇನ ಚಾವಶಿಷ್ಟಾ ಅಪ್ಯಪರಿಗ್ರಹಾಃ ವಿರುದ್ಧಸಿದ್ಧಾಂತಾ ಅಕರ್ತೃಕತ್ವಾಚೇತನಕರ್ತೃಕತ್ವಜೀವಕರ್ತೃಕತ್ವಾದಯೋಽಪಿ ॥ ೧೩ ॥**

ಭಾಷ್ಯಾರ್ಥ ॥ ಏತೇನಃ-ಸತ್ಕಾರಣತ್ವವಾದದಲ್ಲಿ ದೃಷ್ಟಾಂತಮೂಲಕವಾದ ಅನುಮಾನವಿದ್ದುದರಿಂದಲೂ, ನಿಷ್ಕಾರಣತ್ವಾದಿಗಳಲ್ಲಿ ದೃಷ್ಟಾಂತಮೂಲಕ ಅನುಮಾನವಿಲ್ಲದಿರುವುದರಿಂದಲೂ, ಶಿಷ್ಟಾಃ-ಮೊದಲು ನಿರಾಕೃತವಾದ ಮತದಿಂದ ಅವಶಿಷ್ಟಗಳಾಗಿ ಪ್ರತೀತಗಳಾದ, ಅಪರಿಗ್ರಹಾ ಅಪಿಃ-ಶ್ರುತ್ಯರ್ಥಾಪರ್ಯಾಲೋಚನೆಯಿಂದ ಪ್ರಾಪ್ತಗಳಾದ ವೇದೋಕ್ತಪಕ್ಷವಿರುದ್ಧಪಕ್ಷಗಳು ಅಥವಾ ವೇದಗಳಲ್ಲಿ ಪರಿಗೃಹೀತಗಳಾಗದೆ ಇರುವ ಪಕ್ಷಗಳು (ಅಕರ್ತೃತ್ವವು) ಅಕಾರಣಕತ್ವಮತ, ಅಚೇತನಮಾತ್ರ ಕಾರಣಕತ್ವ, ಜೀವಮಾತ್ರಕಾರಣಕತ್ವ, (ಆದಯೋಽಪಿ) ಕಾಲ ಸ್ವಭಾವ ಕಾರಣತ್ವಾದಿವಾದಗಳೂ, ವ್ಯಾಖ್ಯಾತಾಃ-ನಿರಸ್ತಗಳಾದವು.

ಪೀಠಿಕೆ ॥ ನಿಷ್ಕಾರಣತ್ವ ವಿಷಯದಲ್ಲಿ ಪೂರ್ವಪಕ್ಷಿಗೆ ಅಭಿಪ್ರೇತವಾದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಅಕಸ್ಮಾದ್ದಿದಮಾವಿರಾಸೀದಕಸ್ಮಾತ್ತಿಷ್ಠತ್ಯಕಸ್ಮಾಲ್ಲಯಮಭ್ಯುಪೈತಿ ॥ ೧೪ ॥**

ಭಾಷ್ಯಾರ್ಥ ॥ ಈ ಜಗತ್ತು ಕಾರಣವಿಲ್ಲದೇನೇ ಹುಟ್ಟಿತು. ಕಾರಣವಿಲ್ಲದೇನೇ ಇರುತ್ತದೆ. ಹೀಗೆಯೇ ಲಯವನ್ನು ಹೊಂದುತ್ತದೆ.

ಪೀಠಿಕೆ ॥ ಅಚೇತನವು ಕಾರಣವು ಎನ್ನುವ ವಿಷಯದಲ್ಲಿ ಪೂರ್ವಪಕ್ಷಿಗೆ ಅಭಿಮತವಾದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಪ್ರಧಾನಾದಿದಮುತ್ಪನ್ನಂ ಪ್ರಧಾನಮಧಿತಿಷ್ಠತಿ । ಪ್ರಧಾನೇ ಲಯಮಭ್ಯೇತಿ ನ ಹ್ಯನ್ಯತ್ಕಾರಣಂ ಮತಂ ॥ ೧೫ ॥**

ಭಾಷ್ಯಾರ್ಥ ॥ ಈ ಜಗತ್ತು ಅಚೇತನ ಪ್ರಕೃತಿಯಿಂದ ಹುಟ್ಟಿತು. ಜಡಪ್ರಕೃತಿಯನ್ನೇ ಆಶ್ರಯಿಸಿಯದೆ. ಪ್ರಧಾನದಲ್ಲಿ ನಾಶವನ್ನು ಹೊಂದುತ್ತದೆ. (ಹಾಗಾದರೆ ಕಾರ್ಯಕ್ಕೆ ಕಾರಣವಿಲ್ಲದೆಯೇ ಲಯವು ಉಚಿತವಾದುದರಿಂದ ಪ್ರಧಾನದಿಂದ ಇತರವಾದುದೇ ಕಾರಣವಾದ ಪ್ರಯುಕ್ತ ಜಗತ್ತಿಗೆ ಪ್ರಧಾನದಲ್ಲಿ ಲಯವು ಹೇಗೆ? ಉತ್ಪತ್ತ್ಯಾದಿಗಳನ್ನು ಮಾಡತಕ್ಕದ್ದಾದುದರಿಂದ ಕಾರಣವು ಎಂದು ಹೇಳಕೂಡದು. ಉತ್ಪತ್ತ್ಯಾದಿಗಳನ್ನು ಮಾಡತಕ್ಕವನಿಂದ ಇತರವಾದುದೇ ಕಾರಣವು ಎಂದು ಕೂಡಬಹುದು ಎಂದರೆ) ಪ್ರಧಾನದಿಂದ ಇತರವಾದುದು ಕಾರಣವೆಂದು ಪ್ರಮಾಣಪ್ರಮಿತವಲ್ಲ (ಆದಕಾರಣ ಉತ್ಪತ್ತ್ಯಾದಿಕರ್ತನಿಂದ ಬೇರೆ ಕಾರಣವು ಎನ್ನುವುದು ಸಮ್ಮತವಲ್ಲ) ಆದಕಾರಣ ಪ್ರಧಾನಕ್ಕೇನೇ ಕಾರಣತ್ವವೂ ಲಯಾಧಿಕರಣತ್ವವೂ ಯುಕ್ತವು.

ಪೀಠಿಕೆ ॥ ಜೀವನು ಕಾರಣನು ಎನ್ನುವ ವಿಷಯದಲ್ಲಿ ಪೂರ್ವಪಕ್ಷಿಗೆ ಅಭಿಮತವಾದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಜೀವಾದ್ಭವಂತಿ ಭೂತಾನಿ ಜೀವೇ ತಿಷ್ಠಂತ್ಯಚಂಚಲಾಃ । ಜೀವೇ ತು ಲಯಮೃಚ್ಛಂತಿ ನ ಜೀವಾತ್ಕಾರಣಂ ಪರಂ ॥ ಇತ್ಯಾದಿಶ್ರುತಿಪ್ರಾಪ್ತ ನಿರಾಕೃತಾಃ ॥ ೧೬ ॥**

ಭಾಷ್ಯಾರ್ಥ ॥ ಪೃಥಿವ್ಯಾದಿ ಕಾರ್ಯಗಳು ಜೀವನಿಂದಲೇ ಹುಟ್ಟುತ್ತವೆ. ಅಚಂಚಲಗಳಾಗಿ ಜೀವನಲ್ಲಿ ಇರುತ್ತವೆ. (ಅಂದರೆ ಜೀವನಿಂದ ಧರಿಸಲ್ಪಡುತ್ತವೆ.) ಜೀವನಲ್ಲಿಯೇ ಲಯವನ್ನು ಹೊಂದುತ್ತವೆ. ಜೀವನಿಂದ ಇತರವಾದುದು ಕಾರಣವು ಇಲ್ಲ (ಈ ಪಾದದಲ್ಲಿ ನಿಷ್ಕಾರಣತ್ವಾದಿ ಮತಗಳನ್ನು ನಿರಾಕರಿಸುವುದಾದರೆ ಸಮಯಪಾದದಲ್ಲಿ ಚಾರ್ವಾಕ ಸಾಂಖ್ಯ ಪಕ್ಷಗಳನ್ನು ನಿಷೇಧಿಸುವುದರಿಂದ ಪೌನರುಕ್ತ್ಯವು ಬರಬೇಕಾಗುವುದು ಎಂದರೆ-) ಇದು ಮೊದಲಾದ ಶ್ರುತಿ ಮುಖ್ಯಾರ್ಥಾಪರಿಜ್ಞಾನ ಮೂಲಕ ಕಾರ್ಯತ್ವಾದಿ ಯುಕ್ತಿಗಳಿಂದ ಪ್ರಾಪ್ತಗಳಾದ ವಾದಗಳು ನಿರಸ್ತಗಳಾದುವು.

ವಿಶೇಷಾಂಶ ॥ (೧) ಸಮಯಪಾದದಲ್ಲಿ ಸಮಯಪ್ರಾಪ್ತವಾದುದನ್ನೇ ನಿರಾಕರಿಸುವುದರಿಂದ ಪೌನರುಕ್ತ್ಯವಿಲ್ಲ.

ಪೀಠಿಕೆ ॥ ಹಾಗಾದರೆ ಸತ್ಕಾರಣತ್ವಾದಿಗಳಲ್ಲಿ ಘಟಾದಿಗಳು, ದೃಷ್ಟಾಂತವಿರಲಿ. ನಿಷ್ಕಾರಣತ್ವಾದಿಗಳಲ್ಲಿ ದೃಷ್ಟಾಂತವಿಲ್ಲದೆ ಹೋಗಲಿ. ಆದಾಗ್ಯೂ ಜೀವಕರ್ತೃತ್ವವನ್ನು ನಿರಾಕರಿಸುವುದಕ್ಕಾಗಿ ಜೀವನು ಕರ್ತನು ಅಲ್ಲ ಎನ್ನುವಲ್ಲಿ ಏತೇನ ಎನ್ನುವುದರಿಂದ ಅತಿದಿಷ್ಟವಾದ ದೃಷ್ಟಾಂತಭಾವರೂಪವಾದ ಹೇತುವು ಹೇಗೆ ಸಿದ್ಧಿಸುತ್ತದೆ? ದೃಷ್ಟಾಂತವು ಕಾಣುವುದಿಲ್ಲ. ಮತ್ತು ಜೀವಕರ್ತೃತ್ವದಲ್ಲಿ ದೃಷ್ಟಾಂತಾಭಾವರೂಪವಾದ ಹೇತುವೂ ಸಿದ್ಧವಾಗಲಾರದು. ಘಟಾದಿಗಳಿಗೆ ಕುಲಾಲಾದಿಕರ್ತೃಕತ್ವವು ಕಂಡದ್ದರಿಂದ ಅವುಗಳೇ ದೃಷ್ಟಾಂತಗಳಾಗಬಹುದು ಎಂದರೆ—

**ಭಾಷ್ಯ ॥ ಯಥಾ ದುಃಖಾದಿಷು ಜೀವಸ್ಯಾಸ್ವಾತಂತ್ರ್ಯ (ಸ್ವತಂತ್ರತ್ವ) ಮೇವಮನ್ಯೇಷ್ವಪೀತಿ ದೃಷ್ಟಾಂತಃ ॥ ॥ ೧೭ ॥**

ಭಾಷ್ಯಾರ್ಥ ॥ ಹೇಗೆ ದುಃಖ ಮೊದಲಾದ ಕಾರ್ಯಗಳಲ್ಲಿ ಜೀವನಿಗೆ ಅಸ್ವಾತಂತ್ರ್ಯವೋ ಸ್ವತಂತ್ರ ಕರ್ತೃತ್ವಾಭಾವವೋ ಮತ್ತೆ ಈಶ್ವರನಿಗೇನೇ ಸ್ವತಂತ್ರ ಕರ್ತೃತ್ವವೋ, ಹೀಗೆಯೇ ಅಂತರಗಳಾದ ದುಃಖ ಮೊದಲಾದವುಗಳಿಂದ ಇತರಗಳಾದ ಘಟ ಮೊದಲಾದ ಬಾಹ್ಯ ಕಾರ್ಯಗಳಲ್ಲಿಯೂ ಜೀವನಿಗೆ ಸ್ವತಂತ್ರಕರ್ತೃತ್ವಾಭಾವವನ್ನು ಅನುಮೇಯಿಸಬೇಕು. (ಆದುದರಿಂದ ಜಗತ್ತಿಗೆ ಜೀವನು ಕರ್ತನಲ್ಲ ಎನ್ನುವಲ್ಲಿ ದುಃಖಾದಿಗಳು) ದೃಷ್ಟಾಂತವು. (ಹೀಗೆಯೇ ಜೀವಕರ್ತೃತ್ವಪಕ್ಷದಲ್ಲಿ ದೃಷ್ಟಾಂತವಿಲ್ಲ)

ವಿಶೇಷಾಂಶ ॥ ತಥಾಚ ಜೀವನು ಕರ್ತನಲ್ಲ ಎನ್ನುವ ಪಕ್ಷದಲ್ಲಿ ದೃಷ್ಟಾಂತಭಾವರೂಪವಾದ ಹೇತುವೂ; ಜೀವನು ಕರ್ತನು ಎನ್ನುವ ಪಕ್ಷದಲ್ಲಿ ದೃಷ್ಟಾಂತಾಭಾವರೂಪವಾದ ಹೇತುವೂ ಅಸಿದ್ಧವಲ್ಲ

ಪೀಠಿಕೆ ॥ ಹಾಗಾದರೆ—ಅಸತ್ತಿಗೆ ಕಾರಣತ್ವವಿಲ್ಲವಾದರೆ ಅಸದೇವ ಇತ್ಯಾದಿ ಶ್ರುತಿಗಳಿಗೆ ಏನು ಗತಿಯು (ಏನು ಅರ್ಥವು) ಎಂದರೆ—

**ಭಾಷ್ಯ ॥ ಶ್ರುತಿಗತಿಸ್ತು ಬ್ರಹ್ಮವಾಚಕತ್ವೇನ ಪ್ರದರ್ಶಿತಾ ॥ ೧೮ ॥**

ಭಾಷ್ಯಾರ್ಥ ॥ ಶ್ರುತಿಗಳಿಗೆ ವಿಷಯವಾದರೂ, ಅನಾಸಾದ್ಯನಾದುದರಿಂದ ಅಸತ್, ಅಶ್ನಾತ್ಸೌ ಕಃ ಸುಖರೂಪಶ್ಚ ಅಕಸ್ಮಾತ್=ಸುಖರೂಪನಾದ ಶ್ರೀಹರಿಯಿಂದ, ಪ್ರಧಾನಾತ್=ಸರ್ವಸ್ವಾಮಿಯಿಂದ, ಜೀವಾತ್=ಪ್ರಾಣಧಾರಕನಾದ ಶ್ರೀಹರಿಯಿಂದ, ಹೀಗೆ ಶ್ರುತಿಯಲ್ಲಿದ್ದ (ಅಸದಾದಿಶಬ್ದಗಳಿಗೆ) ಬ್ರಹ್ಮವಾಚಕತ್ವವಚನದಿಂದ (ಏತೇನ ಸರ್ವೇ ಎನ್ನುವಲ್ಲಿ ಸೂತ್ರಕಾರರಿಂದ) ತೋರಿಸಲ್ಪಟ್ಟಿದೆ.

ಪೀಠಿಕೆ ॥ ಶ್ರುತಿಗಳಿಗೆ ಪರಮಮುಖ್ಯವೃತ್ತಿಯಿಂದ ಬ್ರಹ್ಮವಾಚಕತ್ವವಿದ್ದರೂ ಅಸದಾದಿಗಳಿಗೂ ಮುಖ್ಯವೃತ್ತಿಯಿಂದ ವಾಚ್ಯತ್ವವಿದ್ದುದರಿಂದ ವಿಷ್ಣುಕಾರಣತ್ವಶ್ರುತಿಗೆ ಅದರಿಂದ ವಿರೋಧವು ಬರುವುದು ಎಂದರೆ—

**ಭಾಷ್ಯ ॥ ಯತ್ರಾನ್ಯವಾಚಕತ್ವೇಽಪ್ಯವಿರೋಧಸ್ತತ್ರಾನ್ಯದಮುಖ್ಯತಯೋಚ್ಯತೇ । ಯತ್ರ ವಿರೋಧಸ್ತತ್ರ ಬ್ರಹ್ಮೈವೋಚ್ಯತೇ । ಇತಿ ನಿಯಮಃ ॥ ೧೩ ॥ ಅಧಿ. ೪ ॥ ೧೯ ॥**

ಭಾಷ್ಯಾರ್ಥ ॥ (ಬ್ರಹ್ಮವಾಚಕತ್ವದಲ್ಲಿ ಮಾತ್ರವಲ್ಲ ಮತ್ತೆ) ಯಾವ ಶ್ರುತಿಯಲ್ಲಿ ಬ್ರಹ್ಮನಿಂದ

ಇತರವಾದ ಪ್ರಕೃತ್ಯಾದಿವಾಚಕತ್ವವು ಅಂಗೀಕೃತವಾದಾಗ್ಯೂ (ವಿಷ್ಣು ಕಾರಣತ್ವಕ್ಕೆ) ಬಾಧವಿಲ್ಲವೋ ಅಥವಾ ಪ್ರಮಾಣಾಂತರವಿರೋಧವಾಗಲೀ ಉಪಕ್ರಮೋಪಸಂಹಾರಾದಿ ವಿರೋಧವಾಗಲೀ ಅಥವಾ ಪೂರ್ವೋತ್ತರ ವಾಕ್ಯವಿರೋಧವಾಗಲೀ ಇಲ್ಲವೋ ಅಲ್ಲಿ(ಬ್ರಹ್ಮನಿಂದ) ಇತರವಾದುದು ಕೂಡ ಪರಮ ಮುಖ್ಯವೃತ್ತಿಯಿಂದ ಹೀನವಾದ ಮುಖ್ಯವೃತ್ತಿಯಿಂದ ಹೇಳಲ್ಪಡುತ್ತದೆ. ಎಲ್ಲ ವಿರೋಧವು ಇದೆಯೋ ಅಲ್ಲಿ ಬ್ರಹ್ಮನೇ ಹೇಳಲ್ಪಡುತ್ತಾನೆ ಎಂದು ನಿಯಮವು. (ಆದಕಾರಣ ವಿರೋಧವಿಲ್ಲ)

ವಿಶೇಷಾಂಶ ॥ (೧) ಹೇಗೆ (೧) ಪ್ರಧಾನಾದಿದಮುತ್ತಸ್ಥಂ ಇತ್ಯಾದಿಗಳಲ್ಲಿ ಸಿದ್ಧಾಂತದಲ್ಲಿ ಪ್ರಧಾನ ಶಬ್ದವು ಬ್ರಹ್ಮವಾಚಕವಾದಾಗ್ಯೂ ಉಪಾದಾನಕಾರಣವಾಗಿ ಪ್ರಧಾನಪದದಿಂದ ಪ್ರಕೃತಿಯೂ (೨) **ವಾಯುರ್ಭೂತಾನಾಮಧಿಪತಿಃ** ಇತ್ಯಾದಿಗಳಲ್ಲಿ ವಾಯುವೂ (೩) **ವಸಂತೇವಸಂತೇಜ್ಯೋತಿಷಾ** ಇತ್ಯಾದಿಗಳಲ್ಲಿ ಕಾಲಕರ್ಮಾದಿಗಳೂ (೪) **ಸೋಽರೋದೀತ್** ಇತ್ಯಾದಿಗಳಲ್ಲಿ ರುದ್ರಾದಿಗಳೂ ಹೇಳಲ್ಪಡುತ್ತಾರೋ (೨) (೧) **ವಿಶ್ವಸ್ಮಾದಿಂದ್ರ ಉತ್ತರಃ** (೨) **ನ ಕಿರಿಂದ್ರ ತ್ವದುತ್ತರಃ** (೩) **ನಿಷುಸೀದ ಗಣಪತೇ** ಇತ್ಯಾದಿಗಳಲ್ಲಿ ವಿಷ್ಣುವೇ ಹೇಳಲ್ಪಡುತ್ತಾನೋ ಹಾಗೆಯೇ ಇಲ್ಲಿಯೂ ಜಗತ್ಕಾರಣತ್ವವನ್ನು ಹೇಳುವ (೧) **ಅಸದೇವ** (೨) **ಅಕಸ್ಮಾದ್ದಿದಂ** (೩) **ಪ್ರಧಾನಾದಿದಂ** (೪) **ಜೀವಾದ್ಭವಂತಿ ಭೂತಾನಿ** ಇತ್ಯಾದಿಗಳಲ್ಲಿ ಇತರರಿಗೂ ವಾಚ್ಯತ್ವವಿದ್ದರೆ ಬಹುಪ್ರಮಾಣವಿರೋಧವು ಬರುವುದರಿಂದ ವಿಷ್ಣುವೇ ಅಸದಾದಿಶಬ್ದಗಳಿಂದ ಹೇಳಲ್ಪಡುತ್ತಾನೆ. ಪ್ರಾಗಭಾವಾದಿಗಳು ಅಲ್ಲ. ಆದುದರಿಂದ ವಿಷ್ಣುಜಗತ್ಕಾರಣತ್ವಶ್ರುತಿಗೆ ಇವುಗಳಿಂದ ವಿರೋಧವಿಲ್ಲ. ॥ ೧೩ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ (೧) ಮಾಯಾವಾದಿ ರಾಮಾನುಜಾಚಾರ್ಯರು ಇಬ್ಬರೂ ನ ವಿಲಕ್ಷಣತ್ವಾತ್ ಎನ್ನುವುದನ್ನು ಮೊದಲುಗೊಂಡು **ಏವಮಪ್ಯನಿರ್ಮೋಕ್ಷಪ್ರಸಂಗಃ** ಎನ್ನುವತನಕ ಎಂಟು ಸೂತ್ರಗಳು ಒಂದು ಅಧಿಕರಣವು. ನ ವಿಲಕ್ಷಣತ್ವಾತ್ ಎನ್ನುವ ಮೇಲೆ ದೃಶ್ಯತೇ ತು ಎನ್ನುವ ಸೂತ್ರವಾದರೂ ಇಲ್ಲವೇ ಇಲ್ಲ. ಈ ಜಗತ್ತು ಸ್ಥೌಲ್ಯ, ಸಾವಯವತ್ವ, ಅಚೇತನತ್ವ, ಪರಿಚ್ಛಿನ್ನತ್ವಾದಿಗಳಿಂದ ಬ್ರಹ್ಮನಕ್ಕಿಂತ ವಿಲಕ್ಷಣವಾದುದರಿಂದ ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನಲ್ಲ. ಈ ವೈಲಕ್ಷಣ್ಯವು **ವಿಜ್ಞಾನಂ ಚಾವಿಜ್ಞಾನಂ ಚ** ಇತ್ಯಾದಿ ಶಬ್ದಗಳಿಂದ ಸಿದ್ಧವಾಗಿದೆ ಎಂದು ಆದ್ಯಸೂತ್ರದಿಂದ ಹೇಳಿ **ಮೃದಬ್ರವೀತ್** ಇತ್ಯಾದಿ ಶ್ರುತಿಯಿಂದ ಜಗತ್ತೂ ಕೂಡ ಚೇತನರೂಪವೇ ಎಂದು ಶಂಕಿಸಿಕೊಂಡು ಅಲ್ಲಿ ಅಭಿಮಾನಿದೇವತಾ ವ್ಯಪದೇಶವಿದ್ದಪ್ರಯುಕ್ತ ಎಂದು ಎರಡನೇ ಸೂತ್ರದಲ್ಲಿ ಹೇಳಿದೆ. ಅಂತೂ ಈ ಎರಡು ಸೂತ್ರಗಳು ಪೂರ್ವಪಕ್ಷಸೂತ್ರಗಳು. ಹೀಗೆ ಪೂರ್ವಪಕ್ಷವು ಬಂದರೆ—ಗೋಮಯ ವೃಶ್ಚಿಕಾದಿಗಳಿಗೆ ವೈಲಕ್ಷಣ್ಯವು ಇದ್ದರೂ ಕಾರ್ಯಕಾರಣಭಾವವು ಕಾಣಲ್ಪಡುತ್ತದೆ ಎಂದು ಮೂರನೇ ಸೂತ್ರದಿಂದ ಸಿದ್ಧಾಂತ ಮಾಡಿರುವರು. ಇತ್ಯಾದಿ ರೀತಿಯಾಗಿ ಹೇಳಿರುವರು. ಅದು ಅಯುಕ್ತವು. ನಮ್ಮ ರೀತಿಯಾಗಿ ಅವಶ್ಯವಾಗಿ ಹೇಳಬೇಕಾದ ಯುಕ್ತಿ ಶ್ರುತಿಸಂವಾದಿಯುಕ್ತವಿರೋಧವನ್ನು ಹೇಳುವ **ಅಭಿಮಾನಿವ್ಯಪದೇಶಃ** ಇತ್ಯಾದಿಗಳು ಸಿದ್ಧಾಂತಸೂತ್ರವಾಗಿವೆ ಎಂದು ಇಟ್ಟುಕೊಂಡು ಪ್ರತ್ಯೇಕ ಅಧಿಕರಣವೆಂದು ಕೊಡುವಾಗ ೧, ೨, ೩ನೇ ಸೂತ್ರಗಳು ಪೂರ್ವಪಕ್ಷಸೂತ್ರಗಳೆಂದೂ ತೃತೀಯಾದಿ

ಸೂತ್ರಗಳು ವಿವರ್ತವಾದಿಗಳಾದ ಅದ್ವೈತಿಗಳಿಗೆ ಸಿದ್ಧಾಂತವಾಗಿ ಅನಭಿಪ್ರೇತವಾದ ಬ್ರಹ್ಮ ಜಗತ್ತುಗಳಿಗೆ ವಿಕಾರ ವಿಕಾರಿಭಾವವನ್ನು ಹೇಳುತ್ತವೆ ಎಂದು ಹೇಳಿ ಸಿದ್ಧಾಂತಮಾಡಿದ್ದು ಸರ್ವಥಾ ಯುಕ್ತವಲ್ಲ (೨) ಮತ್ತು **ಪೂರ್ವವಾದಿಮತಂ ಕಿಂಚಿತ್ ಕಿಂಚಿಚ್ಚಾತತ್ವವೇದಕಂ । ಉಪಾಸನಾಪರಂ ಕಿಂಚಿದಿತಿ ಕಸ್ಮಾದ್ವಿನಾಶ್ಯತೇ ॥** ಅಂದರೆ ಕೆಲವು ಸೂತ್ರಗಳು ಪೂರ್ವಪಕ್ಷಸೂತ್ರಗಳೆಂದೂ ಕೆಲವು ಅತತ್ವಾವೇದಕಗಳೆಂದೂ ಕೆಲವು ಉಪಾಸನಾಪರಗಳೆಂದೂ ಹೇಳಿ ಸಂಪೂರ್ಣ ಶಾಸ್ತ್ರವನ್ನೇ ಹಾಳು ಮಾಡುವುದು ಸರ್ವಥಾ ಯುಕ್ತವಲ್ಲ ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಶ್ರೀಹರಿಗೆ ಜಗತ್ಕರ್ತೃತ್ವವನ್ನು ತಿಳಿಸಿಕೊಡತಕ್ಕ **ಯತೋ ವಾ** ಇತ್ಯಾದಿ ವೇದವು ಪ್ರಮಾಣವೋ ಅಲ್ಲವೋ ಎಂದು ಸಂದೇಹವು. ಪ್ರಮಾಣವಲ್ಲವೆಂದು ಪೂರ್ವಪಕ್ಷವು. **ಅಸದೇವೇದಮಗ್ರ ಆಸೀತ್** ಎನ್ನುವ ಅಸತ್ ಶಬ್ದದಿಂದ ಹೇಳಲ್ಪಟ್ಟ ವಿಶ್ವಪ್ರಾಗಭಾವ ಹೇತುತ್ವಪರವಾದ ಶ್ರುತಿಯಿಂದ ಸಹಿತವಾದ **ಲಯವೃತ್ತಿವಿಶ್ವಪ್ರಾಗಭಾವಃ ವಿಶ್ವಹೇತುಃ ಅನನ್ಯಥಾಸಿದ್ಧನಿಯತಪೂರ್ವಕ್ಷಣವೃತ್ತಿತ್ವಾತ್ ಸಂಮತವತ್** ಎನ್ನುವ ಯುಕ್ತಿಯಿಂದ ಅದಕ್ಕೆ ಹೇತುತ್ವವು ಸಿದ್ಧವಾಗುವಾಗ **ವಿಮತಾಃ ಭಾವಾಃ ಪ್ರಲಯೇ ಅಸಂತಃ ಭಾವತ್ವಾತ್ ಕಾರ್ಯವತ್** ಎಂದು ಪ್ರಲಯಕಾಲದಲ್ಲಿ ಯಾವುದೊಂದು ಭಾವಪದಾರ್ಥವೂ ಸಿದ್ಧಿಸದೆ ಇರಲು ಕಾರ್ಯಕ್ಕೆ ಸಕರ್ತೃತ್ವವು ನಿಯತವಾದುದರಿಂದ ಅಭಾವರೂಪವಾದಾಗ್ಯೂ ಪ್ರಾಗಭಾವಕ್ಕೇನೇ ಕರ್ತೃತ್ವವು ಇದೆ ಎಂದು ಪ್ರಾಗಭಾವ ಕರ್ತೃತ್ವ ಸಾಧಕವಾದ ಅಸದೇವ ಸನ್ಮನೋSಕುರುತ ಇತ್ಯಾದಿ ಶ್ರುತಿಸಹಿತವಾದ ಯುಕ್ತಿಯಿಂದ ವಿರುದ್ಧವಾಗಿದೆ. ಮತ್ತು ಈಶ್ವರಕರ್ತೃತ್ವವು **ಅಕಸ್ಮಾದ್ದೀದಮಾವಿರಾಸೀತ್** ಇತ್ಯಾದಿ ಶ್ರುತಿಸಹಿತಗಳಾದ **ಕೂಲಪತನಮ್ ಅಕರ್ತೃಕಮೇವ ಜಗತ್ ಕಾರ್ಯತ್ವಾತ್ ಘಟವತ್ ಜೀವಕರ್ತೃಕಂ ವಾ ದಧ್ಯಾದಿವತ್ ಜಡಕರ್ತೃಕಂ ವಾ** ಇತ್ಯಾದಿ ಯುಕ್ತಿಗಳಿಂದ ವಿರುದ್ಧವೂ ಆಗಿದೆ ಎಂದು ಪೂರ್ವಪಕ್ಷವು. ಜ್ಞಾನಚಿಕೀರ್ಷಾದಿಘಟಿತರೂಪವಾದ ಕರ್ತೃತ್ವವು ವಿಷ್ಣುವಿಗೇನೇ ಕೂಡುವುದು. ಸ್ವರೂಪತಃ ನಿಷೇಧಾತ್ಮಕವಾದ ಅಭಾವದಲ್ಲಿ ಕೂಡಲಾರದು. ಮತ್ತು ಪ್ರಲಯಕಾಲದಲ್ಲಿ ಅಭಾವ ಮಾತ್ರ ಉಳಿಯುತ್ತದೆ ಎನ್ನುವುದು **ವಿಮತೋತ್ಪತ್ತಿಃ ಭಾವಾಧೀನಾ ಉತ್ಪತ್ತಿತ್ವಾತ್ ವಿಮತೋ ವಿನಾಶಃ ಸಶೇಷಃ ನಾಶತ್ವಾತ್ ಸಮ್ಮತವತ್** ಇದುಮೊದಲಾದ ಪ್ರಲಯಕಾಲದಲ್ಲಿ ಭಾವಪದಾರ್ಥಗಳು ಇವೆ ಎಂದು ತಿಳಿಸಿಕೊಡತಕ್ಕ ಯುಕ್ತಿಗಳಿಂದ ವಿರುದ್ಧವಾಗಿದೆ. ನಿಷ್ಕಾರಣತ್ವ ಜೀವಕಾರಣತ್ವಾದಿಗಳು ಹಿಂದೆ ಹೇಳಿದ ಯುಕ್ತಿವಿರೋಧದಿಂದಲೇ ಅಯುಕ್ತವು. **ಅಸದ್ವಾ** ಇತ್ಯಾದಿ ಶ್ರುತಿಗಳು ಈಶ್ವರಪರಗಳು. ಆದಕಾರಣ ವಿಷ್ಣುಕರ್ತೃತ್ವಶ್ರುತಿಯು ಪ್ರಮಾಣವೇ. ॥ಅಧಿ. ೪ ॥

**ಅಸದಧಿಕರಣವು ಸಮಾಪ್ತವಾಯಿತು.**

# ೫. ಭೋಕ್ತ್ರಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಬಹುಶ್ರುತಿಸಿದ್ಧವಾದುದರಿಂದ ಪ್ರಬಲವಾದ ದೃಢಯುಕ್ತಿಯಿಂದ ವಿರೋಧವನ್ನು ಪರಿಹರಿಸುತ್ತಾರೆ—

## ಸೂತ್ರ ॥ ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ಓಂ ॥ ೧೪ ॥

ಸೂತ್ರಾರ್ಥ ॥ ಭೋಕ್ತ್ರಾಪತ್ತೇಃ=ಸುಖದುಃಖಗಳನ್ನು ಭೋಗಿಸತಕ್ಕ ಜೀವನಿಗೆ ಮುಕ್ತಿಯಲ್ಲಿ ಪರಬ್ರಹ್ಮಪ್ರಾಪ್ತಿಯಾಗುತ್ತದೆ ಎಂದು ಹೇಳಿದ್ದರಿಂದ, ಅವಿಭಾಗಃ=ಜೀವೇಶ್ವರರಿಗೆ ಅಭೇದವು ಸಿದ್ಧವಾಯಿತು. ಚೇತ್=ಮುಕ್ತಿಯಲ್ಲಿ ಜೀವನಿಗೆ ಪರಬ್ರಹ್ಮನಿಂದ ಅಭೇದವಿದ್ದುದರಿಂದ ಸಂಸಾರದಲ್ಲಿಯೂ ಜೀವನಿಗೆ ಈಶ್ವರನಿಂದ ಅಭೇದವು ಪ್ರಾಪ್ತವಾಗುತ್ತದೆ. ಅಸರ್ವಕರ್ತೃ ಸಂಸಾರಿಜೀವನಿಂದ ಬ್ರಹ್ಮನಿಗೆ ಅಭೇದವಿದ್ದುದರಿಂದ ಜಗತ್ಕರ್ತೃತ್ವವು ಯುಕ್ತವಲ್ಲ ಎಂದರೆ—ನಃ=ಈಶ್ವರನಿಗೆ ಜಗತ್ಕಾರಣತ್ವಾದಿಗಳು ವಿರುದ್ಧವಲ್ಲ. ಏಕೆಂದರೆ—ನಾವಿಭಾಗಃ=ಜೀವೇಶ್ವರನಿಗೆ ಅಭೇದವಿಲ್ಲ. ಭೋಕ್ತ್ರಾಪತ್ತಿ ಪ್ರತಿಪಾದಕ ಶ್ರುತಿವಿರೋಧವೂ ಇಲ್ಲ. ಏಕೆಂದರೆ ಸ್ಯಾಲ್ಲೋಕವತ್=ಜಲದಲ್ಲಿ ಜಲಾಂತರಕ್ಕೆ ಏಕೀಭಾವೋಕ್ತಿಯಂತೆ ಭೇದವಿದ್ದಲ್ಲಿಯೂ ಐಕ್ಯವ್ಯವಹಾರವು ಕೂಡುತ್ತದೆ. ಭೇದವಿದ್ದಲ್ಲಿಯೂ ಐಕ್ಯೋಕ್ತಿಯಲ್ಲಿ ಕಾರಣವಿಲ್ಲವೆಂದಲ್ಲ. ಸ್ಯಾಲ್ಲೋಕವತ್=ಲೋಕದಲ್ಲಿ ಜಲದಲ್ಲಿ ಜಲಾಂತರಕ್ಕೆ ಏಕೀಭಾವೋಕ್ತಿಯಂತೆ ಜೀವಬ್ರಹ್ಮೈಕ್ಯೋಕ್ತಿಯು ಸ್ವರೂಪೈಕ್ಯವಿಲ್ಲದಿದ್ದರೂ ಸ್ಥಾನೈಕ್ಯಾದಿನಿಮಿತ್ತದಿಂದ ಕೂಡುತ್ತದೆ.

**ಭಾಷ್ಯ ॥ (೧) ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ (ಮು.೩.೨.೭) ಇತಿ ಮುಕ್ತಜೀವಸ್ಯ ಪರಾಪತ್ತಿರುಚ್ಯತೇ । (೨) ಅತಸ್ತಯೋರವಿಭಾಗಃ । (೩) ಅತಃ ಪೂರ್ವಮಪಿ ಸ ಏವ । (೪) ನ ಹ್ಯನ್ಯಸ್ಯಾನ್ಯತ್ವಂ ಯುಜ್ಯತೇ । ಇತಿ ಚೇತ್ ॥ ॥ ೧ ॥**

ಭಾಷ್ಯಾರ್ಥ ॥ (೧) (ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು। ಕರ್ಮಾಣಿ ಮುಕ್ತರಾದ ಪ್ರಾಣಾದಿ ಪಂಚದಶಕಲಾಭಿಮಾನಿದೇವತೆಗಳು, ಇತರರೂ ಕೂಡ ದೇವತಾಪ್ರತಿಬಿಂಬಭೂತರಾದ ಪ್ರಜೆಗಳಲ್ಲಿ ಪ್ರತಿಷ್ಠಾಃ=ಸ್ಥಿತಿಹೇತುಗಳಾದ ಮುಕ್ತರಾದ ಎಲ್ಲಾ ದೇವತೆಗಳೂ,) ಕರ್ಮಾಭಿಮಾನಿಯಾದ ಪುಷ್ಕರಾಖ್ಯದೇವತೆಯೂ, ವಿಜ್ಞಾನಮಯನಾದ ಜೀವನೂ ಕೂಡ ಇವರೆಲ್ಲರೂ ದೇಹತೋಽವಿನಾಶಶೂನ್ಯನಾದ ಪರಮಾತ್ಮನಲ್ಲಿ ಐಕ್ಯವನ್ನು ಹೊಂದುತ್ತಾರೆ, ಹೀಗೆ ಮುಕ್ತಜೀವನಿಗೆ ಪರಮಾತ್ಮತ್ವಪ್ರಾಪ್ತಿಯು ಶ್ರುತವಾಗುತ್ತದೆ. (೨) ಮುಕ್ತಜೀವನಿಗೆ ಪರಮಾತ್ಮತ್ವಪ್ರಾಪ್ತಿಯು ಶ್ರುತವಾಗುವುದರಿಂದ, ಮುಕ್ತಜೀವ ಈಶ್ವರರಿಗೆ ಅಭೇದವು ಸಿದ್ಧವಾಗುತ್ತದೆ. (ಯೋ ಯಥಾ ಶ್ರೂಯತೇ ಸ ತಥಾ ಎಂದು ವ್ಯಾಪ್ತಿಯು.) (೩) (ಬ್ರಹ್ಮನಿಗೆ ಮುಕ್ತಜೀವನಿಂದ ಅಭೇದವಿದ್ದಾಗ್ಯೂ ನಮಗೆ ಅನಿಷ್ಟವಿಲ್ಲ. ಸಂಸಾರಿಯಂತೆ ಮುಕ್ತನಿಗೆ ಸರ್ವಕರ್ತೃತ್ವವಿಷಯದಲ್ಲಿ ಪ್ರತ್ಯಕ್ಷವಿರೋಧವು ಇಲ್ಲದಿರುವುದರಿಂದ ಜೀವನಿಗೆ ಮೊದಲು ಕರ್ತೃತ್ವವಿಲ್ಲದಿದ್ದರೂ ಮುಕ್ತಿಯಲ್ಲಿ ಕರ್ತೃತ್ವವು ಕೂಡುವುದರಿಂದ ಮುಕ್ತನಿಂದ ಅಭಿನ್ನನಾದ ಬ್ರಹ್ಮನಿಗೆ ಕಾರಣತ್ವವು ಕೂಡಬಹುದು.

ಎಂದರೆ) ಮುಕ್ತಿಯಲ್ಲಿ ಜೀವನು ಈಶ್ವರನಿಂದ ಅಭಿನ್ನನಾದುದರಿಂದ ಸಂಸಾರದಲ್ಲಿಯೂ ಈಶ್ವನಿಂದ ಅಭಿನ್ನನೇ. (ಭಿನ್ನನಲ್ಲ. ಅಂತೂ ಮುಕ್ತಿಯಲ್ಲಿ ಮಾತ್ರವಲ್ಲ, ಮತ್ತೆ ಸಂಸಾರದಲ್ಲಿಯೂ ಅಭಿನ್ನನೇ.) (೪) (ಮುಕ್ತಿಯಲ್ಲಿ ಅಭೇದವಿದ್ದಾಗ್ಯೂ ಸಂಸಾರದಲ್ಲಿ ಭೇದವೇ ಇರಲಿ, **ತಥಾ ಚ ಮುಕ್ತೌ ಅಭಿನ್ನತ್ವಾತ್** ಎನ್ನುವ ಹೇತುವು ಅಪ್ರಯೋಜಕವು ಎಂದರೆ) ಸಂಸಾರದಲ್ಲಿ ಬ್ರಹ್ಮನಿಂದ ಭಿನ್ನನಾದವನಿಗೆ ಮುಕ್ತಿಯಲ್ಲಿ ಬ್ರಹ್ಮಾಭೇದವು ಕೂಡುವುದಿಲ್ಲ. ಘಟಾದಿಗಳಿಂದ ಭಿನ್ನವಾದ ಪಟಾದಿಗಳಿಗೆ ಘಟಾದಿತ್ವವು ಕಾಣಲ್ಪಡುವುದಿಲ್ಲವಷ್ಟೆ, ಎಂದರೆ.

ಪೀಠಿಕೆ ॥ ನ ಎನ್ನುವ ಪದವನ್ನು ಅಧ್ಯಾಹಾರ ಮಾಡಿ ಸಿದ್ಧಾಂತಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ನ । ಸ್ಯಾಲ್ಲೋಕವತ್ । ಯಥಾ ಲೋಕೇ ಉದಕೇ ಉದಕಾಂತರಸ್ಯೈಕೀಭಾವವ್ಯವಹಾರೇಽಪ್ಯಂತರ್ಭೇದೋಽಸ್ತ್ಯೇವ । ಏವಂ ಸ್ಯಾದತ್ರಾಪಿ ॥ ೨ ॥**

ಭಾಷ್ಯಾರ್ಥ ॥ ಈಶ್ವರನಿಗೆ ಜಗತ್ಕಾರಣತ್ವಾದಿಗಳು ವಿರುದ್ಧವಲ್ಲ. ಲೋಕಸಿದ್ಧ ಜಲೈಕ್ಯೋಕ್ತಿಯಂತೆ ಆಗಬಹುದು. ಒಂದು ಪಾತ್ರದಲ್ಲಿರತಕ್ಕ ಉದಕದಲ್ಲಿ ಪಾತ್ರಾಂತರದಲ್ಲಿರತಕ್ಕ ಉದಕವನ್ನು ಹಾಕಿದರೆ ಐಕ್ಯ ವ್ಯವಹಾರವಿದ್ದರೂ, ಹೇಗೆ ಜಲಗಳಿಗೆ ಅನ್ಯೋನ್ಯವಾಗಿ ಭೇದವು ಇದೆಯೋ ಹೀಗೆಯೇ ಇಲ್ಲಿಯೂ ಜೀವನಿಗೆ ಈಶ್ವರನಿಂದ ಐಕ್ಯವನ್ನು ಹೇಳಿದರೂ ಅಂತಃ ಪರಸ್ಪರವಾಗಿ ಭೇದವು ಇದ್ದೇ ಇದೆ. ಐಕ್ಯೋಕ್ತಿಯಿಂದ ವಿರೋಧವಿಲ್ಲ. ಸ್ಯಾತ್=ಉದಕದಲ್ಲಿ ಉದಕಾಂತರಕ್ಕೆ ಐಕ್ಯೋಕ್ತಿಯಂತೆ ಜೀವೇಶ್ವರೈಕ್ಯೋಕ್ತಿಯು ಸ್ಥಾನೈಕ್ಯ ಮತ್ಯೈಕ್ಯಾದಿ ನಿಮಿತ್ತಗಳಿಂದ ಲೋಕವ್ಯವಹಾರಾನುಸಾರವಾಗಿ ಔಪಚಾರಿಕವು.

ವಿಶೇಷಾಂಶ ॥ ಮೊದಲು ಭಿನ್ನಮತಿಗಳು ಈಗ ಈಶ್ವರನಿಂದ ಐಕಮತ್ಯವನ್ನು ಹೊಂದುತ್ತಾರೆ. ಅಂದರೆ ಏಕವಿಷಯಬುದ್ಧಿಯುಳ್ಳವರಾಗುತ್ತಾರೆ. ಅಥವಾ ಮೊದಲು ಈಶ್ವರನ ವ್ಯಕ್ತಿಸ್ಥಾನಗಿಂತ ಅನ್ಯತ್ರ ಇದ್ದವರು ಶ್ವೇತದ್ವೀಪಾದಿರೂಪ ಒಂದೇ ಸ್ಥಾನದಲ್ಲಿ ಮಿಲಿತರಾಗಿರುತ್ತಾರೆ.

ಪೀಠಿಕೆ ॥ ಶ್ರುತಿಗೆ ಸ್ವಾತಂತ್ರ್ಯೇಣ ಉಪಚರಿತಾರ್ಥವನ್ನು ಕಲ್ಪಿಸುವುದಿಲ್ಲ. ಮತ್ತೆ ಶ್ರುತಿಯಿಂದಲೂ ಹಾಗೆ ಉಕ್ತವಾಗಿ ಎನ್ನುತ್ತಾರೆ—

**ಭಾಷ್ಯಾ ॥ ತಥಾ ಚ ಶ್ರುತಿಃ । ಯಥೋದಕಂ ಶುದ್ಧೇ ಶುದ್ಧಮಾಸ್ತಿಕಂ ತಾದೃಗೇವ ಭವತಿ (ಕಠ.೪.೧೫) । ಇತಿ ॥ ೩ ॥**

ಭಾಷ್ಯಾರ್ಥ ॥ (ಹೇಗೆ ಸೂತ್ರಕಾರರು ಹೇಳಿರುವರೋ ಹಾಗೆಯೇ ಶ್ರುತಿಯೂ ಹೇಳುತ್ತದೆ. ನಚಿಕೇತಸನ್ನು ಕುರಿತು ಯಮನ ಮಾತು.) ಎಲೋ ನಚಿಕೇತಸರೇ, ಒಂದು ಪಾತ್ರದಲ್ಲಿರತಕ್ಕ ಜಲದಲ್ಲಿ ಪ್ರಕ್ಷಿಪ್ತವಾದ ಶುದ್ಧವಾದ ಜಲವು ಅದರಂತೆಯೇ ಆಗುತ್ತದೆ. (ಅದೇ ಆಗುವುದಿಲ್ಲ. ಹೀಗೆಯೇ ಬ್ರಹ್ಮನನ್ನು ತಿಳಿದ ಮುನಿವರ್ಗಕ್ಕೆ ಸ್ವಾಮಿಯಾದ ಹಿರಣ್ಯಗರ್ಭನು ಮುಕ್ತನಾಗಿ ಪರಮಾತ್ಮಸದೃಶನೇ ಆಗುತ್ತಾನೆ. ಪರಮಾತ್ಮನೇ ಆಗುವುದಿಲ್ಲ. ಇತರ ಜೀವರು ಆಗುವುದಿಲ್ಲವೆಂದು ಏನು ಹೇಳಬೇಕು.)

ಪೀಠಿಕೆ ॥ ಪರಸ್ಪರ ಸೇರಿದ ಜಲಗಳಿಗೆ ಐಕ್ಯವೇ ಇದೆ. ಆದಕಾರಣ ಹಿಂದೆ ಹೇಳಿದ ಶ್ರುತಿಯು ಆ ಅರ್ಥದಲ್ಲಿ ಪ್ರಮಾಣವಾಗಲಾರದು, ಎಂದರೆ—

**ಭಾಷ್ಯ ॥ ಸ್ಕಾಂದೇ ಚ । ಉದಕಂ ತೂದಕೇ ಸಿಕ್ತಂ ಮಿಶ್ರಮೇವ ಯಥಾ ಭವೇತ್ । ನ ಚೈತದೇವ ಭವತಿ ಯತೋ ವೃದ್ಧಿಃ ಪ್ರದೃಶ್ಯತೇ ॥ ಏವಮೇವ ಹಿ ಜೀವೋಽಪಿ ತಾದಾತ್ಮ್ಯಂ ಪರಮಾತ್ಮನಾ । ಪ್ರಾಪ್ತೋಽಪಿ ನಾಸೌ ಭವತಿ ಸ್ವಾತಂತ್ರ್ಯಾದಿವಿಶೇಷಣಾತ್ ॥ ಇತಿ ॥ ೪ ॥**

ಭಾಷ್ಯಾರ್ಥ ॥ ಸ್ಕಾಂದದಲ್ಲಿಯೂ (ಈ ಅರ್ಥವು ಹೇಳಲ್ಪಟ್ಟಿದೆ.) ಯಾವ ಕಾರಣದಿಂದ ಜಲಕ್ಕೆ ಜಲಾಂತರಮಿಶ್ರಣದಿಂದ ವೃದ್ಧಿಯು ಕಾಣಲ್ಪಡುತ್ತದೋ, ಆದಕಾರಣ ಜಲದಲ್ಲಿ ಪ್ರಕ್ಷಿಪ್ತವಾದ ಉದಕಾಂತರವು ಅದರಿಂದ ಸಂಯುಕ್ತವೇ ಹೇಗೆ ಆಗುವುದೋ. ಈ ನೀರೇ ಆಗುವುದಿಲ್ಲವೋ, ಹೀಗೆಯೇ ಮುಕ್ತನೂ ಶ್ರೀಹರಿಯ ಪ್ರಸಾದದಿಂದ ಮೋಕ್ಷವನ್ನು ಹೊಂದಿದವನಾದಾಗ್ಯೂ ಸ್ವಾತಂತ್ರ್ಯ ಸಾರ್ವಜ್ಞ್ಯ ಮೊದಲಾದ ಜೀವಭೇದಕ ಧರ್ಮಗಳಿಂದ ಪರಮಾತ್ಮಾಭಿನ್ನನು ಆಗುವುದಿಲ್ಲ.

**ಭಾಷ್ಯ ॥ ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ । ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ ॥ ಇತಿ ಚ ॥ ೫ ॥**

ಭಾಷ್ಯಾರ್ಥ ॥ ಎಲೋ ಶ್ರೀಹರಿಯೇ ಮುಕ್ತಾಮುಕ್ತ ಬ್ರಹ್ಮ ರುದ್ರ ಮೊದಲಾದ ದೇವತೆಗಳಿಂದ ಯಾವ ಸರ್ವೋತ್ತಮತ್ವವನ್ನು ಹೊಂದಲಿಕ್ಕೆ ಶಕ್ಯವಾಗುವುದಿಲ್ಲವೋ, ಅಂತಹ ಸರ್ವೋತ್ತಮತ್ವವು ಯಾರ ಸ್ವಭಾವಭೂತವಾದುದೋ, ಅಂತಹ ಸರ್ವೋತ್ತಮನಾದ ಶ್ರೀಹರಿಯು ನೀನೇ, ಹೀಗೂ ಸ್ಕಾಂದದಲ್ಲಿ ಹೇಳಿದೆ.

ಪೀಠಿಕೆ ॥ ಈ ಪ್ರಮೇಯದಲ್ಲಿ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ [1]ನ ತೇ ಮಹಿತ್ವಮನ್ವಶ್ನುವಂತಿ)** (ಋ.೭.೯೯.೧) **। [1]ನ ತೇ ವಿಷ್ಣೋ ಜಾಯಮಾನೋ ನ ಜಾತೋ (ದೇವ ಮಹಿಮ್ನಃ ಪರಮಂತಮಾಪ** (ಋ.೭.೯೯.೨) **ಇತ್ಯಾದಿ ಚ ॥ ೬ ॥**

ಭಾಷ್ಯಾರ್ಥ ॥ ಇತ್ಯಾದಿ ಶ್ರುತಿಗಳು ಹಿಂದಿನ ಅರ್ಥಲ್ಲಿ ಪ್ರಮಾಣವು.

ಪೀಠಿಕೆ ॥ ಮುಕ್ತೇಶ್ವರರಿಗೆ ಭೇದಸಮರ್ಥನವು ಫಲಾಧ್ಯಾಯದಲ್ಲಿ ಸಂಗತವು. ಆದಕಾರಣ ಇಲ್ಲಿ ಹೇಳಿದ್ದು ಸರಿಯಲ್ಲ ಎನ್ನುವ ಶಂಕೆಯನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ಫಲತ್ವೇಽಪಿ ಯುಕ್ತಿವಿರೋಧೇಽಂತರ್ಭಾವಾದತ್ರೋಕ್ತಂ ॥ ೧೪ ॥ ಅಧಿ. ೪ ॥ ೭ ॥**

---

೧. ಈ ಎರಡು ಶ್ರುತಿಗಳೂ ವ್ಯಾಖ್ಯಾತಗಳಾಗಿವೆ.

**ಭಾಷ್ಯಾರ್ಥ ॥** ಈ ಅಧಿಕರಣವು ಫಲಾಧ್ಯಾಯದಲ್ಲಿ ಸಂಗತವಾದಾಗ್ಯೂ ಯುಕ್ತಿವಿರೋಧವನ್ನು ಪರಿಹರಿಸಿದ್ದರಿಂದ ಈ ಪಾದದಲ್ಲಿ ಅಂತರ್ಭೂತವಾಗುವುದರಿಂದ ಇಲ್ಲಿ ಈ ಅಧಿಕರಣವು ಉಕ್ತವಾಗಿದೆ. ॥ ೧೪ ॥

## ಮಾಯಾವಾದಿರೀತ್ಯಾ

**ವಿಚಾರ ॥** ಬ್ರಹ್ಮನಿಗೆ ಉಪಾದಾನಕಾರಣತ್ವವಿದ್ದರೆ ಭೋಕ್ತೃ ಆದ ಶರೀರಕ್ಕೆ ಭೋಗ್ಯತ್ವವು ಬರಬೇಕಾಗಿರುವುದರಿಂದಲೂ ಭೋಗ್ಯವಾದ ಶಬ್ದಾದಿಗಳಿಗೆ ಭೋಕ್ತೃತ್ವವು ಬರಬೇಕಾಗಿರುವುದರಿಂದಲೂ ಅವುಗಳಿಗೆ ಅಭೇದವು ಬರಬೇಕಾಗುವುದು. ಎರಡೂ ಪರಮಕಾರಣನಾದ ಬ್ರಹ್ಮನಿಂದ ಅಭಿನ್ನಗಳಾಗಿವೆ ಎಂದು ಮಾಯಾವಾದಿಗಳು ಪೂರ್ವಪಕ್ಷ ಮಾಡಿಕೊಂಡು ಒಂದು ಸಮುದ್ರಕಾರ್ಯಗಳಾದ ಫೇನ ತರಂಗಾದಿಗಳಂತೆಯೇ ವಿಭಾಗವು ಕೂಡಬಹುದು ಎಂದು ಸಿದ್ಧಾಂತಮಾಡಿರುವರು. ಅದು ಅಯುಕ್ತವು. ವಿವರ್ತಸಿದ್ಧಾಂತದಲ್ಲಿ (ಅಂದರೆ ಬ್ರಹ್ಮನಲ್ಲಿ ಜಗತ್ತು ಆರೋಪಿತ ಎನ್ನುವ ಮತದಲ್ಲಿ) ಬ್ರಹ್ಮತಾದಾತ್ಮ್ಯರೂಪವಾದ ಶಂಕಾಬೀಜವಿಲ್ಲ. ಮತ್ತು ವಿವರ್ತವಾದದಲ್ಲಿ ಫೇನ ತರಂಗಾದಿರೂಪವಾದ ದೃಷ್ಟಾಂತವೂ ಕೂಡಲಾರದು. ಅಲ್ಲದೆ ಫೇನ ತರಂಗಾದಿಗಳಿಗೆ ಭಿನ್ನಗಳಾದ ಅನೇಕ ಜಲಾವಯವುಗಳು ಉಪಾದಾನಕಾರಣಗಳಾಗಿರುವುದರಿಂದ ಒಂದು ಸಮುದ್ರವೇ ಉಪಾದಾನಕಾರಣವೆಂದು ಹೇಳಿದ್ದೂ ಕೂಡುವುದಿಲ್ಲ. ಆದಕಾರಣ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ರಾಮಾನುಜಾಚಾರ್ಯರು ಬ್ರಹ್ಮನಿಗೆ ಶರೀರವಿದ್ದರೆ ಜೀವರಂತೆ ದುಃಖಾದಿಭೋಗಗಳು ಬರಬೇಕಾಗಿರುವುದರಿಂದ ಅಭೇದವು ಬರುವುದು ಎನ್ನುವ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಈ ಸೂತ್ರವು ಎನ್ನುತ್ತಾರೆ. ಅದು ಅಯುಕ್ತವು. ನಮ್ಮ ರೀತಿಯಾಗಿ ಭೋಕ್ತನಾದ ಜೀವನಿಗೆ ಬ್ರಹ್ಮತ್ವಾಪತ್ತೇಃ ಎಂದು ಬ್ರಹ್ಮತ್ವವೆನ್ನುವ ಅಲ್ಪಾಧ್ಯಾಹಾರದಿಂದಲೇ ಕೂಡುವಾಗ ಬ್ರಹ್ಮಣಃ ಶರೀರತ್ವೇ ಎಂದು ಆಪಾದಕಾಧ್ಯಾಹಾರವನ್ನೂ ಆಪಾದ್ಯದಲ್ಲಿ ದುಃಖಾದಿಪದಾಧ್ಯಾಹಾರವನ್ನೂ ಭೋಕ್ತೃಶಬ್ದದಲ್ಲಿ ಭೋಕ್ತೃತ್ವವೆನ್ನುವ ಭಾವಪ್ರಧಾನತ್ವವನ್ನೂ ಕಲ್ಪಿಸಿದ್ದರಿಂದ ಬಹು ಅಧ್ಯಾಹಾರಕಲ್ಪನಾದೋಷವು ಬರುವುದು.

## ಅಧಿಕರಣ ಸಾರಾಂಶ

ಶ್ರುತಿಸಮನ್ವಯದಿಂದ ಹೇಳಲ್ಪಟ್ಟ ವಿಶ್ವಕರ್ತೃತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹವು. ಯುಕ್ತವಲ್ಲವೆಂದು ಪೂರ್ವಪಕ್ಷವು. **ಪರೇಽವ್ಯಯೇ ಸರ್ವ ಏಕೀಭವಂತಿ** ಎನ್ನುವ ಶ್ರುತಿಯಿಂದ ಈಶ್ವರನಿಗೆ ಮುಕ್ತರಿಂದ ಐಕ್ಯವಿದ್ದುದರಿಂದ ಮೊದಲು ಭಿನ್ನನಾದವನಿಗೆ ಮತ್ತೆ ಇನ್ನೊಬ್ಬನಿಂದ ಐಕ್ಯವು ತೋರದಿರುವುದರಿಂದ ಮೊದಲು ಐಕ್ಯವು ಆವಶ್ಯಕವಾಗಿರುವುದಿರಂದ ಸಂಸಾರಿಜೀವರಿಂದ ಅಭಿನ್ನನು. ಹೀಗೆ ಶ್ರುತಿಸಿದ್ಧವಾದ ಅಭಿನ್ನತ್ವ ಯುಕ್ತಿವಿರುದ್ಧವಾಗಿದೆ ಎಂದು ಪೂರ್ವಪಕ್ಷಮಾಡಿಕೊಂಡು

ಸಿದ್ಧಾಂತ ಮಾಡಿರುವರು. ಐಕ್ಯಶ್ರುತಿಗೆ **ನಿರಂಜನಃ ಪರಮಂ ಸಾಮ್ಯಮುಪೈತಿ** ಎನ್ನುವ ಭೇದಪ್ರತಿಪಾದಕ ಪೂರ್ವವಾಕ್ಯದಿಂದಲೂ **ಪರಾತ್ಪರಂ ಪುರುಷಮುಪೈತಿ ದಿವ್ಯಂ** ಎನ್ನುವ ಉತ್ತರವಾಕ್ಯದಿಂದ **ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ** ಎನ್ನುವ ವಾಕ್ಯಾಂತರದಿಂದಲೂ, ವಿರೋಧವಿದ್ದುದರಿಂದ, ಮತ್ತೈಕ್ಯಪರವಾಗಿರುವುದರಿಂದ ಜೀವೈಕ್ಯವು ಆದರಿಂದ ಸಿದ್ಧಿಸದೆ ಇರುವುದರಿಂದ ವಿಷ್ಣುವಿಗೆ ವಿಶ್ವಕರ್ತೃತ್ವವು ಯುಕ್ತವು. ಏವಂಚ **ರಥ್ಯಾಜಲಂ ವಿಷ್ಣುಪದೀ ಜಲೇನೈಕತ್ವಮಾಗತಂ । ಇತಸ್ತತೋ ಗತಾ ಗಾವಃ ಸಾಯಮೇಕತ್ವಮಾಗತಾಃ ॥ ೧ ॥ ಏಕೀ ಭೂತಾ ತು ಸಾ ಸೇನಾ ಪಾಂಡವಾನಭ್ಯವರ್ತತ । ಇತ್ಯಾದಿವದ್ವಾದೇಕೀಭವಂತೀತ್ಯಾದಿವೇದವಾಕ್ ॥ ೨ ॥ ಕಿಂಚ ಮಾನಭೇದಾತ್ಕ್ಷೀರಸಪೂರ್ವ-ಭೇದಾಚ್ಚ ನೀರಯೋಃ । ಮೇಲನೇऽಪ್ಯಭಿದಾನಾಸ್ತಿ ಯಥೈವ ಕ್ಷೀರನೀರಯೋಃ ॥ ೩ ॥ ಮಾಷಾದಿವಚ್ಚ ರಾಶ್ಯಾದೌ ಸಭಾಧೌ ಬ್ರಾಹ್ಮಣಾದಿವತ್ । ಜಲೇ ಜಲಾಂತರಸ್ಯಾಪಿ ಸಂಶ್ಲೇಷೋ ನ ತ್ವಭಿನ್ನತಾ ॥ ೪ ॥ ಅಧಿ. ೫ ॥**

ಭೋಕ್ತ್ರಧಿಕರಣವು ಸಮಾಪ್ತವಾಯಿತು.

## ೬. ಆರಂಭಣಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ವಿಷ್ಣುವಿಗೆ ಜಗತ್ಕರ್ತೃತ್ವದಲ್ಲಿ ಬಹು ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ—

### ಸೂತ್ರ ॥ ಓಂ ತದನನ್ಯತ್ವಮಾರಂಭಣಶಬ್ದಾದಿಭ್ಯಃ ಓಂ ॥ ೧೫ ॥

ಸೂತ್ರಾರ್ಥ ॥ ಮಹದಾದಿ ಸೃಷ್ಟಿಯಲ್ಲಿ ಸ್ವತಂತ್ರ ಕಾರಣಕ್ಕೆ ಬ್ರಹ್ಮನಿಂದ ಅತ್ಯಂತಾಭೇದವು, ಆರಂಭಣ ಶಬ್ದಘಟಿತ ಕಿಂ ಸ್ವಿದಾಸೀತ್ ಇತ್ಯಾದಿ ಶ್ರುತಿಯು ಯುಕ್ತಿಯೂ ಇವುಗಳಿಂದ.

**ಭಾಷ್ಯ ॥ ಸ್ವತಂತ್ರಬಹುಸಾಧನಾ ಸೃಷ್ಟಿರ್ಲೋಕೇ ದೃಷ್ಟಾ ॥ ೧ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಲೋಕದಲ್ಲಿ ಘಟ ಪಟಾದಿಗಳ ಸೃಷ್ಟಿಯು ಕರ್ತೃವ್ಯತಿರಿಕ್ತ ಸ್ವತಂತ್ರ ಸತ್ತಾಶಕ್ತಿಪ್ರವೃತ್ತಿಯುಳ್ಳ ಅಧಿಷ್ಠಾನ ಕರಣಾದಿರೂಪವಾದ ಬಹು ಸಾಧನಸಾಪೇಕ್ಷವಾಗಿ ಕಂಡದೋ ಹೀಗೆಯೇ ಬ್ರಹ್ಮನ ದೆಶೆಯಿಂದ ಆಗತಕ್ಕ ಜಗತ್ಸೃಷ್ಟಿಯೂ ಕೂಡ ಸ್ವವ್ಯತಿರಿಕ್ತ ಸ್ವತಂತ್ರ ಬಹು ಸಾಧನವುಳ್ಳದ್ದಾಗಿ ಅನುಮೇಯವಾಗುವುದು. ಹೀಗೆ ಯುಕ್ತಿವಿರೋಧವಿದ್ದುದರಿಂದ ಬ್ರಹ್ಮನಿಗೆ ಜಗತ್ಕರ್ತೃತ್ವವು ಯುಕ್ತವಲ್ಲ ಎಂದರೆ.

ವಿಶೇಷಾಂಶ ॥ ಬ್ರಹ್ಮನಿಗೆ ಜಗತ್ಕರ್ತೃತ್ವವು ಕೂಡುವುದಿಲ್ಲ. ಏಕೆಂದರೆ—**ಮಹದಾದಿಸೃಷ್ಟ್ಯಾದಿಕಂ ಪ್ರತ್ಯೇಕಂ ಕರ್ತೃವ್ಯತಿರಿಕ್ತಬಹುಸಾಧನಸಾಪೇಕ್ಷಂ ಸೃಷ್ಟಿತ್ವಾತ್ ಸ್ಥಿತಿತ್ವಾತ್ ಸಂಹಾರತ್ವಾತ್ ಘಟಾದಿಸೃಷ್ಟ್ಯಾದಿವತ್** ಎಂದು ಬಹು ಯುಕ್ತಿವಿರೋಧವಿದ್ದುದರಿಂದ, ಎಂದು ಸಯುಕ್ತಿಕ ಪೂರ್ವಪಕ್ಷವು ತೋರಿಸಲ್ಪಟ್ಟಿತು.

**ಭಾಷ್ಯ ॥ ನೈವಂ ಬ್ರಹ್ಮಣಃ । ಕಿಂತು ಸ್ವರೂಪಸಾಮರ್ಥ್ಯಾದೇವ ತಸ್ಯ ಸೃಷ್ಟಿಃ ॥ ೨ ॥**

ಭಾಷ್ಯಾರ್ಥ ॥ ಘಟ ಸೃಷ್ಟ್ಯಾದಿ ದೃಷ್ಟಾಂತದಿಂದ ಬ್ರಹ್ಮನ ಜಗತ್ಸೃಷ್ಟಿಯು ಸ್ವತಂತ್ರ ಬಹುಸಾಧನ ಸಾಪೇಕ್ಷವಾಗಿ ಕಲ್ಪಿಸಲ್ಪಡಕೂಡದು. ಮತ್ತೆ ಅನನ್ಯ ಪ್ರಯತ್ನದಿಂದಲೇ (ಅಂದರೆ ಬ್ರಹ್ಮನ ಸ್ವರೂಪಭೂತವಾದ ಪ್ರಯತ್ನ ಶಕ್ತಿ ಜ್ಞಾನ ಇವುಗಳಿಂದಲೇ) ಜಗತ್ಸೃಷ್ಟಿಯು ಆಗುತ್ತದೆ. ಸಾಧನಾಂತರ ಸಾಮರ್ಥ್ಯ ಸಹಕಾರದಿಂದ ಅಲ್ಲ.

ಪೀಠಿಕೆ ॥ ಈ ವಿಷಯದಲ್ಲಿ ಹೇತುವಾಗಿ ಆರಂಭಣ ಇತ್ಯಾದ್ಯಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಥಾಸೀತ್** (ಋ.೧೦.೮೧.೨) **ಇತಿ ಹ್ಯಾಕ್ಷೇಪಃ ॥ ೩ ॥**

ಭಾಷ್ಯಾರ್ಥ ॥ ಕಿಂ ಸ್ವಿದಾಸೀತ್ ಎನ್ನುವ ಶ್ರುತಿಯಲ್ಲಿ ಯಾವ ಕಾರಣದಿಂದ ಅಧಿಷ್ಠಾನಾದಿಗಳ ಆಕ್ಷೇಪವು ಮಾಡಲ್ಪಡುತ್ತದೋ, ಆದಕಾರಣ (ಶ್ರೀಹರಿಯ ಸ್ವರೂಪಸಾಮರ್ಥ್ಯದಿಂದಲೇ ಸೃಷ್ಟಿಯು.) (ಪೂರ್ವಪಕ್ಷಿಯು ಹೇಳಿದ ಅನುಮಾನವು ಶ್ರುತಿವಿರೋಧದಿಂದ ಅಪ್ರಮಾಣವೇ.) (ಶ್ರುತ್ಯರ್ಥವು) (**ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿದ್ಯಾಮೋರ್ಣೋನ್ಮಹಿನಾ ವಿಶ್ವಚಕ್ಷಾಃ** ಎಂದು ಪೂರ್ವವಾಕ್ಯವು. ಜಗತ್ಕರ್ತನಾದ ಶ್ರೀಹರಿಯು ಸೃಷ್ಟಿಕಾಲದಲ್ಲಿ ಯಾವ ಅಧಿಷ್ಠಾನಾದಿಗಳಿಂದ ಭೂಮಿಯನ್ನೂ ಸ್ವರ್ಗವನ್ನೂ ಕೂಡ ಹುಟ್ಟಿಸುವವನಾಗಿ ಇರುತ್ತಾನೋ, ತನ್ನ ಮಹಿಮೆಯಿಂದ ಸಮಸ್ತ ಅವಯವಗಳಿಂದ ಅಥವಾ ಸರ್ವೇಂದ್ರಿಯಗಳಿಂದ ದರ್ಶನಶಕ್ತಿಯುಳ್ಳ ಶ್ರೀಹರಿಯು ಯಾವ ಅಧಿಷ್ಠಾನಾದಿಗಳಿಂದ ಭೂಮಿಯನ್ನೂ ಸ್ವರ್ಗವನ್ನೂ ಕೂಡ ಪ್ರಲಯಕಾಲದಲ್ಲಿ ಆವರಿಸಿರುವನೋ) ಅಂತಹ ಅಧಿಷ್ಠಾನವು ಸ್ವತಂತ್ರವಾಗಿ ಯಾವದಿತ್ತು. ಯಾವುದೂ ಇರಲಿಲ್ಲ. ಸ್ವತಂತ್ರವಾದ ಕರಣವಾಗಲೀ ಯಾವುದಿತ್ತು. ಯಾವುದೂ ಸ್ವತಂತ್ರವಾಗಿ ಇರಲಿಲ್ಲ. (ಸತ್ತರ್ಕದೀಪಾವಳಿಯಲ್ಲಿ) ಯಾವ ಕರಣಾದಿಗಳಿಂದ ಭೂಮಿಯನ್ನು ಹುಟ್ಟಿಸುತ್ತಾ ಶ್ರೀಹರಿಯು ಜಗತ್ತನ್ನು ನೋಡುತ್ತಾ ತನ್ನ ಮಾಹಾತ್ಮ್ಯದಿಂದ ಭೂಮಿಯನ್ನು ನಿರ್ಮಿಸಿರುವನೋ ಅಂತಹ ಅಧಿಷ್ಠಾನಗಳು ಪ್ರಲಯಕಾಲದಲ್ಲಿ ಯಾವದಿತ್ತು. ಯಾವುದೂ ಇರಲಿಲ್ಲ. ಪಾರ್ಥಿವ ಆಪ್ಯ ತೈಜಸ ವಾಯವೀಯ ವಸ್ತುಗಳು ಪ್ರಲಯಕಾಲದಲ್ಲಿ ಇರಲಿಲ್ಲ.

ಪೀಠಿಕೆ ॥ ಕಿಂ ಶಬ್ದವು ಪ್ರಶ್ನ ಆಕ್ಷೇಪಗಳಲ್ಲಿ ಸಮವಾದುದರಿಂದ ಇದು ಪ್ರಶ್ನೆಯು ಏಕೆ ಆಗಲಾರದು ಎಂದರೆ—

**ಭಾಷ್ಯ ॥ ಅಧಿಷ್ಠಾನಾದ್ಯನುಕ್ತೇಃ । ಆದಿಶಬ್ದಾದ್ಯುಕ್ತಿಶ್ಚ ॥ ೪ ॥**

ಭಾಷ್ಯಾರ್ಥ ॥ (ಪರಿಹಾರಕ್ಕಾಗಿ) ಅಧಿಷ್ಠಾನಾದಿಗಳನ್ನು ಉತ್ತರತ್ರ ಹೇಳದೆ ಇದ್ದುದರಿಂದ ಇದು ಪ್ರಶ್ನೆಯಲ್ಲ. ಮತ್ತೆ ಆಕ್ಷೇಪವು. ಪೂರ್ವಪಕ್ಷಿಯು ಹೇಳಿದ ಅನುಮಾನವು ಆಗಮವಿರುದ್ಧ ಮಾತ್ರವಲ್ಲ. ಮತ್ತೆ ಆದಿಶಬ್ದದಿಂದ ಗೃಹೀತಗಳಾದ (೧) **ಅಪರತಂತ್ರತ್ವಾತ್**, (೨) **ಸ್ವತಂತ್ರತ್ವಾತ್**, (೩) **ಸಾಧನ ಸತ್ತಾಪ್ರದತ್ವಾತ್** ಇತ್ಯಾದಿ ಯುಕ್ತಿವಿರುದ್ಧವೂ ಆಗಿದೆ.

ಪೀಠಿಕೆ ॥ ಹಿಂದೆ ಹೇಳಿದ ಯುಕ್ತಿಗಳಿಗೆ ಆಭಾಸತ್ವ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಆ ಯುಕ್ತಿಗಳು ಸ್ಮೃತಿಸಿದ್ಧಗಳೆನ್ನುತ್ತಾರೆ—

**ಭಾಷ್ಯ ॥ ಪರತಂತ್ರೋ ಹ್ಯಪೇಕ್ಷೇತ ಸ್ವತಂತ್ರಃ ಕಿಮಪೇಕ್ಷತೇ । ಸಾಧನಾನಾಂ ಸಾಧನತ್ವಂ ಯತಃ ಕಿಂ ತಸ್ಯ ಸಾಧನೈಃ ॥ ಇತ್ಯಾದಿಭಿಃ ॥ ೧೫ ॥ ॥ ೫ ॥**

ಭಾಷ್ಯಾರ್ಥ ॥ ಪರತಂತ್ರನಾದರೆ ಸಾಧನಾದಿಗಳನ್ನು ಅಪೇಕ್ಷಿಸಿಯಾನು. (ಇದರಿಂದ ಕರಣಾದಿಗಳಿಗೆ ಅಪರತಂತ್ರತ್ವಯುಕ್ತಿಯೂ ಸೂಚಿತವಾಯಿತು.) ಸ್ವತಂತ್ರನಾದರೆ ಅಪೇಕ್ಷಿಸುತ್ತಾನೋ ಏನು? ಅಪೇಕ್ಷಿಸುವುದಿಲ್ಲ. (ಇದರಿಂದ ಶ್ರೀಹರಿಗೆ ಸ್ವತಂತ್ರತ್ವಯುಕ್ತಿಯೂ ಸೂಚಿತವಾಯಿತು.) (ಏಕೆ ಅಪೇಕ್ಷಿಸುವುದಿಲ್ಲವೆಂದರೆ) ಸಾಧನಗಳಿಗೆ ಸಾಧನಶಕ್ತಿಯೂ ಯಾರಿಂದ ಆಗುತ್ತದೋ ಅಂತಹ ವಿಷ್ಣುವಿಗೆ ಅಧಿಷ್ಠಾನಾದಿ ಸಾಧನಗಳಿಂದ ಏನು ಕೃತ್ಯವು? ಇತ್ಯಾದಿಗಳಿಂದ.

ವಿಶೇಷಾಂಶ ॥ (೧) ಇತ್ಯಾದಿಭಿಃ=ಇತಿ ಆದೀಯಂತೇ ಉಪಾದೀಯಂತೇ ಎನ್ನುವ ವ್ಯುತ್ಪತ್ತಿಯಿಂದ ಈ ಶ್ರುತಿಜ್ಞಾಪಿತಗಳಾದ ಯುಕ್ತಿಗಳಿಂದ. (೨) ಅಥವಾ ಯುಕ್ತ್ಯಂತರಸೂಚಕವಾದ ಸ್ಮೃತ್ಯಂತರವನ್ನು ಸಂಗ್ರಹಿಸತಕ್ಕದ್ದು ಆದಿಶಬ್ದವು. ತಥಾಚ ಜಗತ್ಸೃಷ್ಟಿಯಲ್ಲಿ ಪರಮಾತ್ಮನೇ ಸ್ವತಂತ್ರ ಸಾಧನನು. ಶ್ರೀಹರಿಯಿಂದ ವ್ಯತಿರಿಕ್ತವಾದ ಸ್ವತಂತ್ರ ಸಾಧನವು ಯಾವುದೂ ಇಲ್ಲವೆಂದು ಸಿದ್ಧವಾಯಿತು. ॥ ೧೫ ॥

ಪೀಠಿಕೆ ॥ ಯುಕ್ತ್ಯಂತರದಿಂದ ಶ್ರೀಹರಿಯಿಂದ ವ್ಯತಿರಿಕ್ತ ಸ್ವತಂತ್ರಸಾಧನವನ್ನು ತಿರಸ್ಕರಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಭಾವೇ ಚೋಪಲಬ್ಧೇಃ ಓಂ ॥ ೧೬ ॥

**ಭಾಷ್ಯ ॥ ಸ್ವತಂತ್ರಸಾಧನಭಾವೇ ಪ್ರಮಾಣೈರುಪಲಭ್ಯೇತ ॥ ೬ ॥**

ಭಾಷ್ಯಾರ್ಥ ॥ ಭಗವತ್ಸೃಷ್ಟಿಯಲ್ಲಿ ಶ್ರೀಹರಿಯಿಂದ ಅತಿರಿಕ್ತವಾದ ಸ್ವತಂತ್ರವಾದ ಸಾಧನವು ಇದ್ದರೆ ವೇದಾದಿಪ್ರಮಾಣಗಳಿಂದ ತೋರಬೇಕಾಗುವುದು. ತೋರುವುದಿಲ್ಲ. ಆದಕಾರಣ ಬ್ರಹ್ಮನು ಹೊರತು ಸ್ವತಂತ್ರವಾದ ಸಾಧನಾಂತರವು ಇಲ್ಲ.

ಪೀಠಿಕೆ ॥ ವೇದ ಮೊದಲಾದ ಪ್ರಮಾಣಗಳಲ್ಲಿ ಹೇಳದೆ ಇದ್ದ ವಸ್ತುವೂ ಏಕೆ ಇರಲಾರದು, ಎಂದರೆ—

**ಭಾಷ್ಯ ॥ ಅನುಕ್ತಂ ಪಂಚಭಿರ್ವೇದೈರ್ನ ವಸ್ತ್ವಸ್ತಿ ಕುತಶ್ಚನ । ಅತೋ ವೇದತ್ವಮೇತೇಷಾಂ ಯತಸ್ತೇ ಸರ್ವವೇದಕಾಃ ॥ ಇತಿ ಸ್ಕಾಂದೇ ॥ ೧೬ ॥ ॥ ೭ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಇತಿಹಾಸ ಪುರಾಣ ಭಾರತಾದಿಗಳಿಂದ ಸಹಿತಗಳಾದ ವೇದಗಳು ಸರ್ವವಸ್ತುಪ್ರತಿಪಾದಕಗಳೋ, ಆದಕಾರಣ ಇವುಗಳಿಗೆ ವೇದಶಬ್ದವಾಚ್ಯತ್ವವು. ಆದುದರಿಂದ ಇತಿಹಾಸ ಪುರಾಣ ಸಹಿತಗಳಾದ ಐದು ವೇದಗಳಿಂದ ಪ್ರತಿಪಾದಿಸಿಕೊಳ್ಳಲ್ಪಡದೆ ಇದ್ದ ಭಗವದ್ಗುಣಗಳಿಂದ ಅತಿರಿಕ್ತವಾದ ವಸ್ತುವು ಸ್ವಲ್ಪವೂ ಕೂಡ ಇಲ್ಲ. ಹೀಗೆ ಸ್ಕಾಂದಪುರಾಣದಲ್ಲಿ ಹೇಳಿದೆ. ॥ ೧೬ ॥

**ಭಾಷ್ಯ ॥ ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ (ವಿಶ್ವಕರ್ಮಣಃ ಸಮವರ್ತತಾಧಿ) (ತೈ. ಆ. ೩. ೧೩.)। ಇತ್ಯಾದಿನಾ ಸಾಧನಾಂತರಪ್ರತೀತೇಃ ಕಥಮನುಪಲಬ್ಧಿರಿತಿ । ಅತ ಆಹ ॥ ೮ ॥**

ಭಾಷ್ಯಾರ್ಥ ॥ ವಿಶ್ವಕರ್ಮಣಃ ಸಮವರ್ತತಾಧಿ । ತಸ್ಯ ತ್ವಷ್ಟಾ ವಿದಧದ್ರೂಪಮೇತಿ । ತತ್ಪುರುಷಸ್ಯ ವಿಶ್ವಮಾಜಾನಮಗ್ರೇ ಯಾವ ತತ್ಪುರುಷನೆನ್ನುವ ಚತುರ್ಮುಖಬ್ರಹ್ಮನು ಶ್ರೀಹರಿಯಿಂದ ಜಲ ಮೊದಲಾದ ಪಂಚಮಹಾಭೂತಗಳಿಂದಲೂ ರಸ ಮೊದಲಾದ ಐದು ತನ್ಮಾತ್ರ (ಭೂತಸೂಕ್ಷ್ಮ)ಗಳಿಂದಲೂ ಯುಕ್ತನಾಗಿ (ಹುಟ್ಟಿದವನಾಗಿ ಅಧಿಕಾರ್ಯುತ್ತಮನಾಗಿ ಇರುತ್ತಿದ್ದನೋ, ಅಂತಹ ಚತುರ್ಮುಖನು ಹುಟ್ಟುವುದಕ್ಕಿಂತ ಮೊದಲೇ ಹುಟ್ಟಿರುವ ಬ್ರಹ್ಮಾಂಡಾಖ್ಯವಾದ ಚತುರ್ಮುಖವಿಗ್ರಹವನ್ನು ಮಹಾದೀಪ್ತಿಯುಳ್ಳ ಶ್ರೀಹರಿಯು ಧರಿಸುವವನಾಗಿ ಇರುತ್ತಾನೆ.) ಇದು ಮೊದಲಾದ ವಾಕ್ಯದಿಂದ (ಅಂದರೆ **ಅದ್ಭ್ಯಃ ಸಂಭೂತಃ, ಹಿರಣ್ಯಗರ್ಭಃ** (ಮಹಾನಾಮ್ನೀ. ೧.೧೧) ಈ ಋಕ್ಕಿನಿಂದಲೂ **ಪ್ರಕೃತಿಂ ಸ್ವಾಂ ಅವಷ್ಟಭ್ಯ** ಎನ್ನುವ ಗೀತಾವಾಕ್ಯದಿಂದಲೂ) ಶ್ರೀಹರಿಯಿಂದ ಇತರವಾದ ಸ್ವತಂತ್ರವಾದ ಸಾಧನವು ಇದೆ ಎಂದು ತೋರುವುದರಿಂದ ತೋರುವುದಿಲ್ಲವೆಂದು ಹೇಳಿದ್ದು ಹೇಗೆ? ಎಂದು ಶಂಕಾ ಬಂದರೆ ಸೂತ್ರಕಾರರು ಉತ್ತರ ಹೇಳುತ್ತಾರೆ.

## ಸೂತ್ರ ॥ ಓಂ ಸತ್ವಾಚ್ಚಾರವಸ್ಯ ಓಂ ॥ ೧೭ ॥

**ಭಾಷ್ಯ ॥ ಅವರಸ್ಯ ತದಧೀನಸ್ಯ ಸಾಧನಸ್ಯ ಸತ್ವಾತ್ ॥ ೯ ॥**

**ಸೂತ್ರಾರ್ಥ** ॥ (ವರಸ್ಯ=ಶ್ರೇಷ್ಠವಾದ ಸ್ವತಂತ್ರವೇ ಆದ ಸಾಧನವು ಇಲ್ಲವೆಂದು ಅಂಗೀಕರಿಸಿದ್ದರಿಂದಲೂ) ನಿಕೃಷ್ಟವಾದ ಅಸ್ವತಂತ್ರವಾದ ಶ್ರೀಹರಿಯ ಅಧೀನವಾದ ಸಾಧನವು ಇದೆ ಎಂದು ಅಗೀಕರಿಸಿದ್ದರಿಂದಲೂ **ಅದ್ಭ್ಯಃ ಸಂಭೂತಃ** ಎನ್ನುವ ವಾಕ್ಯವು ಅಸ್ವತಂತ್ರವಾದ ಸಾಧನವನ್ನು ಪ್ರತಿಪಾದಿಸತಕ್ಕುದು. ಆದಕಾರಣ ವಿರೋಧವಿಲ್ಲ

**ಪೀಠಿಕೆ** ॥ ಹಾಗಾದರೆ ಈ ಶ್ರುತಿಯಲ್ಲಿ ಸಾಧನಮಾತ್ರವು ತೋರುತ್ತದೆ. ಸಾಧನವು ಭಗವಂತನ ಅಧೀನವು ಎಂದು ತೋರುವುದಿಲ್ಲ. ಅಂತಹ ಸಾಧನವು ಲೋಕಾನುಸಾರವಾಗಿ ಸ್ವತಂತ್ರವೇ ಎಂದು ಏಕೆ ಆಗಲಾರದು. ಎಂದರೆ? ಚ ಶಬ್ದ ಸೂಚಿತವಾದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಕಾಲ ಆಸೀತ್ಪುರುಷ ಆಸೀತ್ಪರಮ ಆಸೀತ್ತದ್ಯದಾಸೀತ್ತದಾವೃತಮಾಸೀದಥ ಹ್ಯೇಕ ಏವ ಪರಮ ಆಸೀದ್ಯಸ್ಯೈತದಾಸೀನ್ನ ಹ್ಯೇತದಾಸೀತ್। ಇತಿ (ಹಿ) ಕಾಷಾಯಣಶ್ರುತಿಃ ॥ ೧೭ ॥ ॥ ೧೦ ॥**

ಭಾಷ್ಯಾರ್ಥ ॥ ಪ್ರಲಯಕಾಲದಲ್ಲಿ ಕಾಲವು ಇತ್ತು. ಜೀವನೂ ಪರಮಾತ್ಮನೂ ಇರುತ್ತಿದ್ದರು. ಆದಾಗ್ಯೂ ಪ್ರಲಯಕಾಲದಲ್ಲಿ ಯಾವುದು ಯಾವುದು ವಸ್ತುವು ಇರುತ್ತಿತ್ತೋ, ಅದೆಲ್ಲವೂ ಶ್ರೀಹರಿಯಿಂದ ಆವೃತವಾಗಿ ಶ್ರೀಹರಿಯ ಅಧೀನವೇ ಆಗಿತ್ತು. ಆದುದರಿಂದ ಒಬ್ಬನೇ ಸರ್ವೋತ್ತಮನು ಎಂದು ಹೇಳಲ್ಪಡುತ್ತಾನೆ. ಯಾವ ಶ್ರೀಹರಿಯಿಂದ ಈ ಜಗತ್ತು ಉಂಟಾಯಿತೋ, ಇಂತಹ ಜಗತ್ತೂ

ಸೃಷ್ಟಿಗಿಂತ ಮೊದಲು ಇರಲಿಲ್ಲ. ತಥಾಚ ಮೊದಲು ಇಲ್ಲದೆ ಇದ್ದುದಕ್ಕೆ ಉತ್ಪತ್ತಿಯು ಸಿದ್ಧವಾಗೋಣ ಉತ್ಪಾದಕನು ಮತ್ತೊಬ್ಬನು ಇಲ್ಲದಿರುವುದರಿಂದ ಶ್ರೀಹರಿಯೇ ಜಗತ್ಕರ್ತನು ಎಂದು ಸಿದ್ಧಿಸುತ್ತದೆ. ತತ್ವಪ್ರದೀಪದಲ್ಲಿ ಆದರೂ, ಒಬ್ಬನು ಸರ್ವೋತ್ತಮನಾಗಿಯೇ ಇದ್ದನು. ಇದು ಯಾರ ಅಧೀನವಾಗಿ ಇರುತ್ತಿತ್ತೋ, ಪರತಂತ್ರವಾದುದರಿಂದಲೇ ಅದು ಸ್ವತಂತ್ರವಾಗಿ ಇರಲಿಲ್ಲ. ಅಥವಾ ಭಗವಂತನು ಒಬ್ಬನೇ ಪ್ರಧಾನನಾಗಿದ್ದನು. ಇತರವಾದುದು ಪ್ರಧಾನವಾಗಿ ಇರಲಿಲ್ಲ. ಶ್ರೀಹರಿಯ ಅಧೀನವೇ ಆಗಿತ್ತು. ಎಂದು ಕಾಷಾಯಣಶ್ರುತಿಯು. ॥ ೧೭ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಅಪೇಕ್ಷಿಸಿಕೊಂಡು ಸಮಾಧಾನಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯ ಶೇಷಾತ್ ಓಂ ॥ ೧೮ ॥

ಸೂತ್ರಾರ್ಥ ॥ ನಾಸದಾಸೀತ್ ಎನ್ನುವ ಶ್ರುತಿಯಲ್ಲಿ ಸರ್ವವಸ್ತುಗಳಿಗೂ ಅಸತ್ವವನ್ನು ಹೇಳಿದ್ದರಿಂದ ಜಲ ಮೊದಲಾದ ಅಸ್ವತಂತ್ರ ಸಾಧನಕ್ಕೆ ಸತ್ವವೂ ಅದಕ್ಕೆ ಈಶ್ವರಾಧೀನತ್ವವೂ ಕೂಡ ಕೂಡುವುದಿಲ್ಲ ಎಂದರೆ, ಹೀಗೆ ಹೇಳಕೂಡದು. ಅವರತ್ವ ಮೊದಲಾದ ಧರ್ಮವಿಶೇಷಾಭಿಪ್ರಾಯ ದಿಂದ ಅಸತ್ವವು ಹೇಳಲ್ಪಡುತ್ತದೆ. ತಮ ಆಸೀತ್ ಇತ್ಯಾದಿ ವಾಕ್ಯ ಶೇಷಬಲದಿಂದ.

**ಭಾಷ್ಯ ॥ [1]ನಾಸದಾಸೀನ್ನೋ ಸದಾಸೀತ್ (ಋ.೧೦.೧೨೯.೧) ಇತಿ ಸರ್ವಸ್ಯಾಸತ್ತ್ವವ್ಯಪದೇಶಾನ್ನೇತಿ ಚೇನ್ನ । ಅವ್ಯಕ್ತತ್ವಪಾರತಂತ್ರ್ಯಾದಿ-ಧರ್ಮಾಂತರೇಣ ಹಿ ತದುಚ್ಯತೇ ॥ ೧೧ ॥**

ಭಾಷ್ಯಾರ್ಥ ॥ ನಾಸದಾಸೀತ್ ಎನ್ನುವ ಶ್ರುತಿಯಲ್ಲಿ ಪ್ರಲಯಕಾಲದಲ್ಲಿ ಸಾಧನಾಂತರಗಳಿಗೆ ಎಲ್ಲಾ ಅಸತ್ವವನ್ನು ಹೇಳಿದ್ದರಿಂದ ಸಾಧನಾಂತರವೇ ಇಲ್ಲದಿರುವುದರಿಂದ ಅದು ಈಶ್ವರಾಧೀನವು

---

೧ ಶ್ರುತ್ಯರ್ಥ ॥ ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾಪರೋ ಯತ್ । ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಂ ॥ ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ । ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚ ನಾಸ । (ಋ. ೧೦.೧೨೯.೨) ಪ್ರಲಯಕಾಲದಲ್ಲಿ ವಾಯ್ವಂತರಿಕ್ಷರೂಪವಾದ ಭೂತವು ಇರಲಿಲ್ಲ. ಪೃಥಿವೀ ಅಪ್ ತೇಜೋರೂಪವಾದ ಭೂತವೂ ಇರಲಿಲ್ಲ. ಸತ್ವರಜಸ್ತಮೋಗುಣಗಳೂ ಇರಲಿಲ್ಲ. ಮೂರ್ತ ಸಂಬಂಧವಿಲ್ಲದಿರುವುದರಿಂದ ಜಡಪ್ರಕೃತಿಯೂ ಇರಲಿಲ್ಲ. ಮರಣವಾಗಲೀ ಮರಣ ಸಾಧನವಾಗಲೀ ಇರಲಿಲ್ಲ. ಗೌಣ ಮೋಕ್ಷವಾಗಲೀ ಸ್ವರ್ಗಾದಿಗಳಾಗಲೀ ಇರಲಿಲ್ಲ. ಪ್ರಲಯ ಕಾಲದಲ್ಲಿ ಹಗಲು ರಾತ್ರಿಗಳ ಸಾಮರ್ಥ್ಯವೂ ಇರಲಿಲ್ಲ. ಇವುಗಳು ಇಲ್ಲದಿರುವುದರಿಂದ ಎಲ್ಲಿ ಯಾರ ಸುಖಕ್ಕಾಗಿ ಯಾವುದು ಇತ್ತು. ಅತಿ ಗಂಭೀರವಾದ ಚೇತನ ಪ್ರಕೃತಿರೂಪವಾದ ಜಲವು ಇತ್ತೋ ಏನು? ಇರಲಿಲ್ಲ. ಮತ್ತೆ ಬ್ರಹ್ಮನು ಒಬ್ಬನೇ ವಾಯುಪ್ರೇರಣೆಯಿಲ್ಲದೇನೇ ತನ್ನ ಸಾಮರ್ಥ್ಯದಿಂದಲೇ ಅಥವಾ ಸುಖದಿಂದಲೇ ಚೇಷ್ಟೆ ಮಾಡಿಕೊಂಡು ಇತ್ತು. (ನಿತ್ಯವಾದ ಕಾಲಾದಿಗಳನ್ನೂ ಪ್ರೇರಿಸುತ್ತಾ ಇತ್ತು) (ನ್ಯಾಯದೀಪಿಕೆಯಲ್ಲಿ) ಪರಬ್ರಹ್ಮನಿಂದ ಇತರನಾದ ಉತ್ತಮವಾದ ವಸ್ತುವು ಯಾವುದೂ ಸ್ವಾತಂತ್ರ್ಯ ಮೊದಲಾದ ಧರ್ಮಗಳಿಂದ ಕೂಡಿದ್ದಾಗಿ ಇರಲಿಲ್ಲ. ಪರಬ್ರಹ್ಮನೇ ಸರ್ವೋತ್ಕೃಷ್ಟನಾಗಿದ್ದನು.

ಆಗಿದೆ ಎನ್ನುವುದು ಕೂಡುವುದಿಲ್ಲ, ಎಂದರೆ—ಇಲ್ಲಿ ಸ್ವರೂಪವು ಅಸತ್ತು ಎನ್ನುವ ಅಭಿಪ್ರಾಯದಿಂದ ಸಾಧನಗಳಿಗೆ ಅಸತ್ವವನ್ನು ಹೇಳಿದ್ದಲ್ಲ. ಅವ್ಯಕ್ತತ್ವ, ಪರಾಧೀನತ್ವ, ಅವರತ್ವ, ಅವ್ಯತತ್ವ, ಕಾರ್ಯಾನಭಿಮುಖತ್ವ ಮೊದಲಾದ ಸ್ವರೂಪಾಸತ್ವದಿಂದ ಬೇರೆಯಾದ ಧರ್ಮವಿಶೇಷಾಭಿಪ್ರಾಯದಿಂದಲೇ (ಶ್ರುತಿಯಲ್ಲಿ) ಅಸತ್ವವು ಹೇಳಲ್ಪಡುತ್ತದೆ.

**ಪೀಠಿಕೆ** ॥ ಧರ್ಮಾಂತರದಿಂದ ಅಸತ್ವವನ್ನು ಹೇಳಿದ್ದು ಎನ್ನುವುದು ಹೇಗೆ? ಸ್ವರೂಪವು ಅಸತ್ತು ಎನ್ನುವ ಅಭಿಪ್ರಾಯದಿಂದಲೇ ಅಸತ್ವವನ್ನು ಹೇಳಿದ್ದು ಎಂದು ಏಕೆ ಆಗಲಾರದು, ಎಂದರೆ—

**ಭಾಷ್ಯ ॥ [1]ತಮ ಆಸೀತ್ (ಋ.೧೦.೧೨೯.೩) । ಇತಿ (ಇತ್ಯಾದಿ) ವಾಕ್ಯಶೇಷಾತ್ ॥ ೧೨ ॥**

**ಭಾಷ್ಯಾರ್ಥ** ॥ [1]ತಮ ಆಸೀತ್, ಆನೀದವಾತಂ ಇದು ಮೊದಲಾದ ವಾಕ್ಯಶೇಷದಿಂದ.

**ವಿಶೇಷಾಂಶ** ॥ (೧) **ನಾಸದಾಸೀತ್** ಎನ್ನುವ ನಿಷೇಧವಚನಕ್ಕೆ ಸಾಧನಗಳ ಸ್ವರೂಪವೇ ಅಸತ್ತು ಎನ್ನುವ ಅಭಿಪ್ರಾಯವಿರುವುದಾದರೆ ತಮ **ಆಸೀತ್** ಎನ್ನುವ ವಾಕ್ಯಶೇಷದಿಂದ ವಿರೋಧವು ಬರುವುದು. (೨) ಮತ್ತು ತಸ್ಮಾದ್ಧಾನ್ಯತ್ ಎನ್ನುವ ವಾಕ್ಯಶೇಷದಲ್ಲಿ ಪ್ರಲಯಕಾಲದಲ್ಲಿ ಇತರಕ್ಕ ಬ್ರಹ್ಮನಿಂದ ಇತರವಾದ ಪ್ರಕೃತ್ಯಾದಿಗಳಿಗೆ ಸ್ವಾತಂತ್ರ್ಯವನ್ನು ನಿಷೇಧಮಾಡಿದ್ದರಿಂದಲೂ ಸ್ವಾತಂತ್ರ್ಯಾದಿರೂಪ ಧರ್ಮಾಂತರ ನಿಷೇಧಪರತ್ವವನ್ನೇ ಅಂಗೀಕರಿಸಬೇಕು.

**ಪೀಠಿಕೆ** ॥ ಪರರು ಮಾಡಿರುವ ಅಪವ್ಯಾಖ್ಯಾನವನ್ನು ನಿರಾಕರಿಸುತ್ತಾರೆ—

**ಭಾಷ್ಯ ॥ ನ ಚಾನ್ಯತ್ರ ಪ್ರಮಾಣಮಸ್ತಿ ॥ ೧೩ ॥**

**ಭಾಷ್ಯಾರ್ಥ** ॥ ಈ ಅಧಿಕರಣದಲ್ಲಿ ಚೇತನಾಚೇತನ ಪ್ರಪಂಚಕ್ಕೆ ಪಾರಮಾರ್ಥಿಕವಾಗಿ ಬ್ರಹ್ಮಾಭೇದವು ಹೇಳಲ್ಪಡುತ್ತದೆ. ಏಕೆಂದರೆ **ವಾಚಾರಂಭಣಂ** ಇದು ಮೊದಲಾದ ಶ್ರುತಿಗಳ ದೆಸೆಯಿಂದ ಎಂದು ಯಾವುದು ಪರವ್ಯಾಖ್ಯಾನವೋ ಅದು ಅಯುಕ್ತವು. ಏಕೆಂದರೆ ಚೇತನಾಚೇತನಪ್ರಪಂಚವು ಬ್ರಹ್ಮನಿಂದ ಅಭಿನ್ನವು ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲ, ಮತ್ತು ಪ್ರಮಾಣವಿರೋಧವೂ ಇದೆ.

**ಪೀಠಿಕೆ** ॥ ಪರರ ವ್ಯಾಖ್ಯಾನವು ಅಪ್ರಾಮಾಣಿಕವೆಂದು ಮಾತ್ರವಲ್ಲ, ಮತ್ತೆ ಪ್ರಮಾಣವಿರುದ್ಧವೂ ಆಗಿದೆ ಎನ್ನುವುದನ್ನು ಉಪಪಾದಿಸುತ್ತಾರೆ—

**ಭಾಷ್ಯ ॥ ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ (ಮಹಾನಾಮ್ನಿ ೧೦.೫) ॥ ೧೪ ॥**

**ಭಾಷ್ಯಾರ್ಥ** ॥ (ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತೀಂ

---

೧ ತಮ ಆಸೀತ್ತಮಸಾ ಗೂಢಮಗ್ರೇ ಪ್ರಕೇತಂ ಸಲಿಲಂ ಸರ್ವಮಾ ಇದಂ । (ಋ.೧೦.೧೨೯.೩) ಪ್ರಲಯಕಾಲದಲ್ಲಿ ಚಿತ್ಕೃತ್ಯಾಖ್ಯವಾದ ಯಾವುದು ಅಪರತ್ವವೋ, ಅಪರಿಮಿತವಾದ ಅವಿಜ್ಞಾತವಾದ ಸಲಿಲವು ಆಗಿತ್ತೋ ಅಂತಹ ಸಲಿಲದಿಂದ ಈ ಜಗತ್ತು ಆಚ್ಛಾದಿತವಾಗಿತ್ತು.

**ಸರೂಪಾಂ। ಅಜೋ ಹ್ಯೇಕಃ** ರಜಃಸತ್ವತಮೋಗುಣಾತ್ಮಕವಾದ, ಬಹುಪ್ರಜೆಗಳನ್ನು ಸೃಷ್ಟಿಸತಕ್ಕ ತನಗೆ ಸದೃಶವಾದ, ಮಹದಾದಿಕಾರ್ಯಗಳನ್ನು ಸೃಷ್ಟಿಸತಕ್ಕ, ಹುಟ್ಟದಿರುವ ಪ್ರಕೃತಿಯನ್ನು) ಸಂಸಾರಿಜೀವನ ಸೇವಿಸುತ್ತಾ ಅನುಸರಿಸಿಕೊಂಡು ಇರುತ್ತಾನೆ. ಮುಕ್ತಿಯನ್ನು ಹೊಂದತಕ್ಕ ಜೀವನು ಹಿಂದೆ ಭೋಗಗಳನ್ನು ಭೋಗಿಸಿಕೊಂಡಿದ್ದ ಈ ಪ್ರಕೃತಿಯನ್ನು ಪ್ರಲಯಕಾಲದಲ್ಲಿ ಬಿಡುತ್ತಾನೆ.

**ವಿಶೇಷಾಂಶ ॥** ಇಲ್ಲಿ ಮುಕ್ತ ಅಮುಕ್ತರಿಗೆ ಭೇದವನ್ನು ಹೇಳಿದ್ರಿಂದ ಶ್ರೀಹರಿಗೂ ಸಂಸಾರಿಗಳಿಂದ ಭೇದವು ಹೇಳಲ್ಪಟ್ಟಿತು.

**ಪೀಠಿಕೆ ॥** ಹೀಗೆ ಪರೋಕ್ತವಾದ ಚೇತನರಿಗೆ ಬ್ರಹ್ಮನಿಂದ ಅಭೇದವು ಎನ್ನುವ ವಿಷಯದಲ್ಲಿ ಪ್ರಮಾಣ ವಿರೋಧವನ್ನು ಹೇಳಿ ಈಗ ಅಚೇತನ ಪ್ರಪಂಚವು ಬಾಧ್ಯವು, ಬ್ರಹ್ಮಾಭಿನ್ನವು ಎನ್ನುವ ವಿಷಯದಲ್ಲಿಯೂ ಪ್ರಮಾಣವಿರೋಧವನ್ನು ಹೇಳುತ್ತಾರೆ—

**ಭಾಷ್ಯ ॥ ಅನಾದ್ಯನಂತಂ ಜಗದೇತದೀದೃಕ್ಪ್ರವರ್ತತೇ ನಾತ್ರ ವಿಚಾರ್ಯಮಸ್ತಿ । ನ ಚಾನ್ಯಥಾ ಕ್ವಾಪಿ ಚ ಕಸ್ಯ ಚೇದಮಭೂತ್ಪುರಾ ನಾಪಿ ತಥಾ ಭವಿಷ್ಯತ್ ॥ ೧೫ ॥**

**ಭಾಷ್ಯಾರ್ಥ ॥** ಪ್ರವಾಹತಃ ಉತ್ಪತ್ತಿ ನಾಶಶೂನ್ಯವಾದ, ನಾನಾವಿಧವಾದ, ಪ್ರವಾಹರೂಪದಿಂದ ಇರತಕ್ಕ ಜಗತ್ತು ಪ್ರತಿಕಲ್ಪದಲ್ಲಿಯೂ ಪ್ರವೃತ್ತವಾಗುತ್ತದೆ. ಅನಾದಿತ್ವ ಅನಂತತ್ವ ಈದೃಕ್ತ್ವರೂಪಗಳಾದ ಅರ್ಥಗಳಲ್ಲಿ ನಿರ್ಣೇತವ್ಯವಾದುದು ಯಾವುದೂ ಇಲ್ಲ (ಎಲ್ಲವೂ ನಿರ್ಣೀತವೇ ಆಗಿದೆ.) ಈ ಜಗತ್ತು ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಯಾವ ಪುರುಷನಿಗೂ ಬಾಧಿತವಾಗಿ ಮೊದಲು ಇರಲಿಲ್ಲ, ಮುಂದೆಯೂ ಬಾಧ್ಯವು ಆಗಲಾರದು. ಇದರಿಂದ ಜಗತ್ತು ಪ್ರವಾಹತಃ ನಿತ್ಯವೂ ಅಬಾಧ್ಯವೂ ಎಂದುಕ್ತವಾಯಿತು.

**ಪೀಠಿಕೆ ॥** ಜಗತ್ತು ಮಿಥ್ಯಾಭೂತವಾದುದು ಎನ್ನುವ ಮತವು ಅಸುರರ ಮತವಾದುದರಿಂದ ಅಯುಕ್ತವೆಂದು ಗೀತಾವಾಕ್ಯದಿಂದ ತೋರಿಸುತ್ತಾರೆ—

**ಭಾಷ್ಯ ॥ ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ (ಗೀತಾ. ಅ. ೧೬.೮.) ॥ ೧೬ ॥**

**ಭಾಷ್ಯಾರ್ಥ ॥** ಅಸುರರು ಜಗತ್ತನ್ನು ಅಸತ್ಯವಾದುದರಿಂದ ಜ್ಞಾನಬಾಧ್ಯವನ್ನಾಗಿಯೂ ನಿಯಾಮಕರಹಿತವನ್ನಾಗಿಯೂ ಹೇಳುತ್ತಾರೆ. (ಜಗತ್ತಿಗೆ ಬಾಧ್ಯತ್ವಾದಿಗಳನ್ನು ಹೇಳತಕ್ಕ ವಾದಿಗಳಿಗೆ ಅಸುರತ್ವಾದಿಗಳನ್ನು ಹೇಳಿದ್ರಿಂದ ಜಗತ್ತು ಅಬಾಧ್ಯವೆಂದು ಅವಗತವಾಗುತ್ತದೆ.)

**ಪೀಠಿಕೆ ॥** ವಿಷ್ಣುಮಾಹಾತ್ಮ್ಯವಿರುದ್ಧವಾಗಿರುವುದರಿಂದ ಜಗತ್ತು ಮಿಥ್ಯೆಯು ಎನ್ನುವ ಮತವು ಆಸುರವು ಎನ್ನುವುದು ಯುಕ್ತವು ಎನ್ನುತ್ತಾರೆ—

**ಭಾಷ್ಯ ॥ ಅಸತ್ಯಮಾಹುರ್ಜಗದೇತದಜ್ಞಾಃ ಶಕ್ತಿಂ ಹರೇರ್ಯೇ ನ ವಿದುಃ ಪರಾಂ ಹಿ । ಯಃ ಸತ್ಯರೂಪಂ ಜಗದೇತದೀದೃಕ್ ಸೃಷ್ಟ್ವಾ ತ್ವಭೂತ್ಸತ್ಯಕರ್ಮಾ ಮಹಾತ್ಮಾ (ಸ್ಮೃತಿಃ) ॥ ೧೭ ॥**

ಭಾಷ್ಯಾರ್ಥ ॥ ಯಾರು ಈ ಜಗತ್ತನ್ನು ಅಸತ್ಯವನ್ನಾಗಿ ಹೇಳುತ್ತಾರೋ, ಅವರು ಅಜ್ಞರು. ಯಾವ ಮಹಾತ್ಮನು ಸತ್ಯರೂಪವೇ ಆದ ಈ ನಾನಾವಿಧವಾದ ಈ ಜಗತ್ತನ್ನು ಸೃಷ್ಟಿಮಾಡಿ ಸತ್ಯಕರ್ಮನಾಮಕನು ಆದನೋ, ಅಂತಹ ಶ್ರೀಹರಿಯ ಸರ್ವೋತ್ಕೃಷ್ಟವಾದ ಶಕ್ತಿಯನ್ನು ತಿಳಿಯುವುದಿಲ್ಲ.

ವಿಶೇಷಾಂಶ ॥ ವಿಷಯವು ಸತ್ಯವಾಗದೆ ಸೃಷ್ಟ್ಯಾದಿ ಕ್ರಿಯೆಗೆ ಸತ್ಯತ್ವವು ಕೂಡದೇ ಇರುವುದರಿಂದ ಸತ್ಯಕರ್ಮಾ ಎನ್ನುವ ಹೆಸರು ಕೂಡಲಾರದು. ಇದರಿಂದಲೂ ಜಗತ್ತಿಗೆ ಸತ್ಯತ್ವವು ಸಿದ್ಧಿಸುತ್ತದೆ.

**ಭಾಷ್ಯ ॥ ಅಥೈ (ಅಥ ಹೈ)ನಮಾಹುಃ ಸತ್ಯಕರ್ಮೇತಿ ಸತ್ಯಂ ಹ್ಯೇವೇದಂ ವಿಶ್ವಮಸೌ ಸೃಜತೇ । ಅಥೈ(ಅಥ ಹೈ)ನಮಾಹುರ್ನಿತ್ಯಕರ್ಮೇತಿ ನಿತ್ಯಂ ಹ್ಯೇವಾಸೌ ಕುರುತೇ ॥ ೧೮ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಶ್ರೀಹರಿಯು ಸತ್ಯವೇ ಆದ ಈ ಜಗತ್ತನ್ನು ಸೃಷ್ಟಿಸುತ್ತಾನೋ, ಆದಕಾರಣ ಈ ವಿಷ್ಣುವನ್ನು ಸತ್ಯಕರ್ಮನೆಂದು ಹೇಳುತ್ತಾರೆ. ಯಾವ ಕಾರಣದಿಂದ ಅಬಾಧಿತ ಕರ್ಮವುಳ್ಳ ಶ್ರೀಹರಿಯು ಅಬಾಧ್ಯವೇ ಆದ ಜಗತ್ತನ್ನು ಸೃಷ್ಟಿ ಮಾಡುತ್ತಾನೋ, ಆದುದರಿಂದಲೇ ಈ ಶ್ರೀಹರಿಯನ್ನು ನಿತ್ಯಕರ್ಮ ಎಂದು ಹೇಳುತ್ತಾರೆ.

**ಭಾಷ್ಯ ॥ ಯಚ್ಚಿಕೇತ ಸತ್ಯಮಿತ್ತನ್ನಮೋಘಂ (ಋ.೧೦.೫೫.೬.)। ಇತ್ಯಾದಿಶ್ರುತಿಸ್ಮೃತಿಭ್ಯಃ। (ಇತ್ಯಾದಿ ವಚನೇಭ್ಯಶ್ಚ) ॥ ೧೯ ॥**

ಭಾಷ್ಯಾರ್ಥ ॥ (ಸ್ಪೃಹಣೀಯವಾದ ಹವಿರಾದಿ ದ್ರವ್ಯವನ್ನು ಭಕ್ತರಿಂದ ಹೊಂದತಕ್ಕವನು. ಆದಾಗ್ಯೂ ಭಕ್ತರಿಗೋಸ್ಕರವೇ ಯಜ್ಞಾದಿ ಫಲವನ್ನು ಕೊಡತಕ್ಕವನು.) ಶ್ರೀಹರಿಯು ಯಾವ ಜಗತ್ತನ್ನು ಸೃಷ್ಟಿ ಮಾಡಿದನೋ, ಅದು ಸತ್ಯವೇ. ಮಿಥ್ಯೆಯಲ್ಲ (ಏಕೆಂದರೆ ಅದು ಅರ್ಥ ಕ್ರಿಯಾದಿಗಳಿಗೆ ಅನುಪಯುಕ್ತವಲ್ಲ. ಇದು ಮೊದಲಾದ ಶ್ರುತಿಸ್ಮೃತಿಗಳಿಂದ (ಜಗತ್ತು ಸತ್ಯವೆಂದು ಸಿದ್ಧವಾಗುತ್ತದೆ.) ಆದಿಪದದಿಂದ (೧) ಕವಿರ್ಮನೀಷೀ, (೨) ವಿಶ್ವಂ ಸತ್ಯಂ ಇದು ಮೊದಲಾದುದನ್ನು ಇಟ್ಟುಕೊಳ್ಳಬೇಕು.)

ಪೀಠಿಕೆ ॥ ಜೀವಃ ಬ್ರಹ್ಮಣಃ ನ ಭಿದ್ಯತೇ ಚೇತನತ್ವಾತ್ ಬ್ರಹ್ಮವತ್, ಪ್ರಪಂಚಃ ಬಾಧ್ಯಃ ದೃಶ್ಯತ್ವಾತ್ ಶುಕ್ತಿರಜತವತ್ ಇದುಮೊದಲಾದ ಯುಕ್ತಿಗಳು ಇದ್ದುದರಿಂದ ಜೀವೇಶ್ವರೈಕ್ಯಾದಿ ವಿಷಯದಲ್ಲಿ ಪ್ರಮಾಣವಿಲ್ಲವೆನ್ನುವುದು ಹೇಗೆ ಕೂಡುತ್ತದೆ, ಎಂದರೆ—

**ಭಾಷ್ಯ ॥ ಪರಸ್ಪರವಿರೋಧೇ ತು ವಾಕ್ಯಾನಾಂ ಯತ್ರ ಯುಕ್ತತಾ । ತದೈವಾರ್ಥಃ ಪರಿಜ್ಞೇಯೋ ನಾವಾಕ್ಯಾ ಯುಕ್ತಿರಿಷ್ಯತೇ ॥ ಇತಿ ಬೃಹತ್ಸಂಹಿತಾಯಾಂ ॥ ೨೦ ॥**

ಭಾಷ್ಯಾರ್ಥ ॥ ವಾಕ್ಯಗಳಿಗೆ ಪರಸ್ಪರ ವಿರೋಧವು ಪ್ರಾಪ್ತವಾದರೆ ಯಾವ ವಾಕ್ಯದಲ್ಲಿ ಯುಕ್ತಿಸಿದ್ಧಾರ್ಥತ್ವವದೆಯೋ, ಅಂತಹ ವಾಕ್ಯವನ್ನು ಅನುಸರಿಸಿಕೊಂಡು ಮತ್ತೊಂದು ವಾಕ್ಯದ ಅರ್ಥವನ್ನು ತಿಳಿಯಬೇಕು. ಶ್ರುತಿಸ್ಮೃತಿರೂಪವಾಕ್ಯಗಳ ಅನುಕೂಲ್ಯರಹಿತವಾದ ಕೇವಲ ಯುಕ್ತಿಯು

ವಾಕ್ಯಾರ್ಥನಿರ್ಣಯಕ್ಕಾಗಿ ಪ್ರಮಾಣ್ಯವೆಂದು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುವುದಿಲ್ಲ. ಎಂದು ಬೃಹತ್ಸಂಹಿತಾದಲ್ಲಿ ಹೇಳಿದೆ. ತಥಾಚ ಶುಷ್ಕಯುಕ್ತಿಸಿದ್ಧಾರ್ಥವನ್ನು ತಿಳಿಯಕೂಡದು.

**ಪೀಠಿಕೆ ॥** ಹೇಗೆ ಹಿಂದೆ ಹೇಳಿರುವ ಶ್ರುತ್ಯಾದಿಗಳು ಸತ್ಯತ್ವದಲ್ಲಿ ಪ್ರಮಾಣವೋ, ಹಾಗೆಯೇ ಅಚೇತನ ಪ್ರಪಂಚವು ಬಾಧ್ಯವು (ಬ್ರಹ್ಮಾಭಿನ್ನವು) ಎನ್ನುವ ವಿಷಯದಲ್ಲಿಯೂ ವಾಚಾರಂಭಣಂ ಇದುಮೊದಲಾದ ಶ್ರುತಿಸ್ಮೃತಿಗಳು ಪ್ರಮಾಣಗಳಾಗಲಿ, ಎಂದರೆ—

**ಭಾಷ್ಯ ॥ ವಿರುದ್ಧವತ್ಪ್ರತೀಯಂತೇ ಆಗಮಾ ಯತ್ರ ವೈ ಮಿಥಃ । ತತ್ರ ದೃಷ್ಟಾನುಸಾರೇಣ ತೇಷಾಮರ್ಥೋಽನ್ವವೇಕ್ಷ್ಯತೇ ॥ ಇತಿ ಚ ॥ ೨೧ ॥**

**ಭಾಷ್ಯಾರ್ಥ ॥** ಮಿಥ್ಯಾತ್ವ ಸತ್ಯತ್ವ ಮೊದಲಾದ ಎರಡರ್ಥಗಳನ್ನು ಬೋಧಿಸತಕ್ಕ ಆಗಮಗಳು ಯಾವಾಗ ಪರಸ್ಪರವಾಗಿ ವಿರೋಧ ಇದ್ದವುಗಳಂತೆ ತೋರುತ್ತಾವೋ, ಆಗ ಪ್ರತ್ಯಕ್ಷಾನುಸಾರವಾಗಿ ಅಥವಾ ಅತಿಬಲವುಳ್ಳ ಬಹುಪ್ರಮಾಣದರ್ಶನವನ್ನು ಅನುಸರಿಸಿ ಆಗಮಗಳಿಗೆ ಆಪಾತತಃ ಪ್ರತೀತವಾದ ಅರ್ಥಕ್ಕಿಂತ ಇತರವಾದ ಅರ್ಥವು ಮುಖ್ಯವೃತ್ತಿಯಿಂದ ತಿಳಿಯಲ್ಪಡುತ್ತದೆ. ಹೀಗೂ ಬ್ರಹ್ಮತರ್ಕದಲ್ಲಿ ಹೇಳಿದೆ.

**ವಿಶೇಷಾಂಶ ॥** (೧) ಪಾರಮಾರ್ಥಿಕ ವಿರೋಧವಿದ್ದರೆ ಅವುಗಳನ್ನು ಬಿಟ್ಟುಬಿಡಬೇಕು. ವ್ಯಾಖ್ಯಾನ ಮಾಡಕೂಡದು ಎನ್ನುವ ಅಭಿಪ್ರಾಯದಿಂದ **ವಿರುದ್ಧವತ್** ಎಂದು ಹೇಳಿರುವರು. (೨) ತಥಾಚ ಪ್ರಕೃತದಲ್ಲಿ ಸಾಕ್ಷಿಪ್ರತ್ಯಕ್ಷವನ್ನು ಅನುಸರಿಸಿ ಅನನ್ಯತ್ವಶ್ರುತ್ಯಾದಿಗಳನ್ನು ಅನ್ಯಥಾ ವ್ಯಾಖ್ಯಾನಮಾಡ ಬೇಕಾಗಿರುವುದರಿಂದ ಅವುಗಳು ಅನ್ಯತ್ರ ಐಕ್ಯಾದಿ ವಿಷಯದಲ್ಲಿ ಪ್ರಮಾಣವಾಗಲಾರವು.

**ಪೀಠಿಕೆ ॥** ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುವಂತೆ ತೋರುವ ಶ್ರುತ್ಯಾದಿಗಳಿಗೆ ಅನ್ಯಾರ್ಥವನ್ನು ಹೇಳಬೇಕು ಎನ್ನುವುದು ಸ್ಮೃತಿಸಿದ್ಧವೂ ಆಗಿದೆ ಎನ್ನುತ್ತಾರೆ—

**ಭಾಷ್ಯ ॥ ಈಶೋಽನೀಶೋ ಜಗನ್ಮಿಥ್ಯಾ ನ ಪೂಜ್ಯೋ ಗುರುರಿತ್ಯಪಿ। ಇತ್ಯಾದಿವದ್ವಿರುದ್ಧಾನಿ ವಚನಾನ್ಯಥ ಯುಕ್ತಯಃ ॥ ಪ್ರಮಾಣೈರ್ಬಹುಭಿರ್ಜ್ಞೇಯಾ ಆಭಾಸಾ ಇತಿ ವೈದಿಕೈಃ ॥ ೨೨ ॥**

**ಭಾಷ್ಯಾರ್ಥ ॥** ಈಶನು ನಿಯಾಮಕನಲ್ಲ. ಜಗತ್ತು ಮಿಥ್ಯೆಯು. ಗುರುಗಳು ಪೂಜ್ಯರಲ್ಲ. (ಒಬ್ಬನೇ ಚೇತನನು, ಪರಬ್ರಹ್ಮಭಾವವೇ ಮೋಕ್ಷವು.) ಇದುಮೊದಲಾದ ಅರ್ಥಗಳನ್ನು ಸಾಧಿಸತಕ್ಕ ವಚನಯುಕ್ತಿಗಳಂತೆ ಪ್ರಮಾಣಗಳೆಂದು ಪ್ರತೀತಗಳಾದ ವಚನಗಳೂ ಯುಕ್ತಿಗಳೂ ಕೂಡ ಅನೇಕ ವೈದಿಕಪ್ರಮಾಣಗಳಿಂದ ವಿರುದ್ಧಗಳಾಗಿದ್ದಾವೋ, ಆದಕಾರಣ ಆಭಾಸಗಳೆಂದು ವೇದಾರ್ಥ ಜ್ಞಾನವುಳ್ಳವರಿಂದ ತಿಳಿಯಲ್ಪಡಬೇಕು.

**ವಿಶೇಷಾಂಶ ॥** ವಚನಗಳಕ್ಕಿಂತ ವಿರೋಧಿಪ್ರಮಾಣಗಳು ಪ್ರಬಲಗಳು ನಿರವಕಾಶಗಳು ಎಂದು ಸಮರ್ಥಿಸುವುದಕ್ಕಾಗಿ ಬಹುಭಿಃ ಎಂದು ಹೇಳಿರುವರು. ಅವೈದಿಕ ವಚನಗಳಕ್ಕಿಂತಲೂ ಯುಕ್ತಿಗಿಂತಲೂ

ಪ್ರಬಲಗಳು ಎಂದು ಸೂಚಿಸುವುದಕ್ಕಾಗಿ **ಬಹುಭಿಃ** ಎಂದೂ **ವೈದಿಕೈಃ** ಎಂದೂ ಹೇಳಿರುವರು. ನಿರವಕಾಶಗಳೂ ಆಗಿವೆ, ಎಂದು ಉಕ್ತವಾಯಿತು.

**ಪೀಠಿಕೆ ॥** ಪ್ರಮಾಣವಿರುದ್ಧವಾದ ದೃಶ್ಯತ್ವಾನುಮಾನದಂತೆ ಆಗಮವನ್ನು ಅಪ್ರಮಾಣವೆಂದು ಬಿಡಕೂಡದು. ಮತ್ತೆ ಅದಕ್ಕೆ ಅರ್ಥಾಂತರವನ್ನು ಕಲ್ಪಿಸಬೇಕೆನ್ನುತ್ತಾರೆ—

**ಭಾಷ್ಯ ॥ ವೇದವೇದಾನುಸಾರೇಷು ವಿರೋಧೇಽನ್ಯಾರ್ಥಕಲ್ಪನಾ । ಅನ್ಯೇಷಾಂ ತು ವಿರುದ್ಧಾನಾಂ ವಿಪ್ರಲಂಭೋಽಥ ವಾ ಭ್ರಮಃ ॥ ಇತಿ(ಚ) ಭಾಗವತತಂತ್ರೇ ॥ ೨೩ ॥**

**ಭಾಷ್ಯಾರ್ಥ ॥** ವೇದಗಳು ಮತ್ತು ವೇದಾನುಸಾರಿಗಳಾದ ವಚನಗಳಲ್ಲಿ (ಪ್ರಬಲಪ್ರಮಾಣಗಳಿಂದ) ವಿರೋಧವು ಬಂದರೆ (ಅವುಗಳಿಗೆ ವಿರುದ್ಧವಾದ ಅರ್ಥವನ್ನು ಬಿಟ್ಟು) ಅವಿರುದ್ಧವಾದ ಅನ್ಯಾರ್ಥವನ್ನು ಕಲ್ಪಿಸಬೇಕು. ವೇದವೇದಾನುಸಾರಿಗಳಿಂದ ಇತರಗಳಾದ, ಪ್ರಮಾಣವಿರುದ್ಧಗಳಾದ ವಚನಗಳಿಗೆ ವಂಚನೆಯು ಕಾರಣವು. ಅಥವಾ ಭ್ರಮವು ಕಾರಣವು ಎಂದು ಕಲ್ಪಿಸಬೇಕು. (ಸರ್ವಥಾ ಅವುಗಳಿಗೆ ಅಭಾಸತ್ವವೇ) ಹೀಗೆ ಭಾಗವತತಂತ್ರದಲ್ಲಿ ಹೇಳಿದೆ. (ಇದರಿಂದ ವಿಪ್ರಲಂಭಾದಿಗಳು ಮೂಲವು ಎನ್ನುವ ವಿಷಯದಲ್ಲಿ ವಿರೋಧವು ಕಾರಣವು ಎಂದುಕ್ತವಾಯಿತು.)

**ಪೀಠಿಕೆ ॥** ಯುಕ್ತಿಯೂ ಪ್ರಮಾಣವೇ ಆಗಿರುವುದರಿಂದ ಸಾಧಕವು ಏಕೆ ಆಗಲಾರದು, ಎಂದರೆ—

**ಭಾಷ್ಯ ॥ ಶಾಸ್ತ್ರಾರ್ಥಯುಕ್ತೋಽ(ಕ್ತಾ)ನುಭವಃ ಪ್ರಮಾಣಂ ತೂತ್ತಮಂ ಮತಂ। ಮಧ್ಯಮಂ ತ್ವಾಗಮೋ ಜ್ಞೇಯಃ ಪ್ರತ್ಯಕ್ಷಮಧಮಂ ಸ್ಮೃತಂ ॥ ೨೪ ॥**

**ಭಾಷ್ಯಾರ್ಥ ॥** ಶಾಸ್ತ್ರಾರ್ಥವಿಷಯಕವಾಗಿ ಶಾಸ್ತ್ರಾನುಕೂಲವಾದ ಯಥಾರ್ಥಜ್ಞಾನರೂಪವಾದ ಕೇವಲ ಪ್ರಮಾಣವೇ (ಸಾಕ್ಷಾಜ್ಜ್ಞೇಯವಿಷಯೀಕಾರಿಯಾದುದರಿಂದ) ಉತ್ತಮಪ್ರಮಾಣವೆಂದು ಪ್ರಮಿತವಾಗಿದೆ. ಕೇವಲ ಪ್ರಮಾಣಕ್ಕೆ ಸಾಧನವಾದುದರಿಂದ ಅದಕ್ಕಿಂತ ನಿಕೃಷ್ಟವಾದುದರಿಂದಲೂ; ದೃಷ್ಟಾದೃಷ್ಟ ಸರ್ವವಿಷಯಕವಾದುದರಿಂದ ದೃಷ್ಟಮಾತ್ರವಿಷಯಕಪ್ರತ್ಯಕ್ಷಕ್ಕಿಂತ ಪೂರ್ವಭಾವಿಯಾದುದರಿಂದಲೂ, ಆಗಮವು ಮಧ್ಯಮ ಪ್ರಮಾಣವು. ಸರ್ವವಿಷಯಕವಾಗದೆ ಇರುವುದರಿಂದ ಪ್ರತ್ಯಕ್ಷವು ಅಧಮಪ್ರಮಾಣವೆಂದು ಸ್ಮೃತವಾಗಿದೆ.

**ಭಾಷ್ಯ ॥ ಪ್ರತ್ಯಕ್ಷಯೋರಾಗಮಯೋರ್ವಿರೋಧೇ ನಿಶ್ಚಯಾಯ ತು । ಅನುಮಾದ್ಯಾ ನ ಸ್ವತಂತ್ರಾಃ ಪ್ರಮಾಣ(ಪ್ರಾಮಾಣ್ಯ)ಪದವೀಂ ಯಯುಃ । ಇತಿ(ಚ) ಪುರುಷೋತ್ತಮತಂತ್ರೇ ॥ ೧೮ ॥ ॥ ೨೫ ॥**

**ಭಾಷ್ಯಾರ್ಥ ॥** ಅನುಪ್ರಮಾಣರೂಪಗಳಾದ ಅನುಮಾನ ಅರ್ಥಾಪತ್ತ್ಯಾದಿಗಳು, ಪ್ರತ್ಯಕ್ಷಗಳಿಗೂ ಆಗಮಗಳಿಗೂ ವಿರುದ್ಧವಾದರೆ (ಅಲ್ಲಿ ಒಂದು ಅರ್ಥವನ್ನು ನಿಶ್ಚಯಿಸುವುದಕ್ಕಾಗಿ ಸಹಾಯಕಗಳಾಗಿ ಯಾವ ಕಾರಣದಿಂದ ಅಪೇಕ್ಷಿಸಲ್ಪಡುತ್ತಾವೋ) ಆದುದರಿಂದ ಸ್ವತಂತ್ರವಾಗಿ ಪ್ರಮಾಣಭಾವವನ್ನು

ಹೊಂದಲಾರವು. (ಆದಕಾರಣ ಎಲ್ಲಾದಕ್ಕಿಂತಲೂ ನಿಕೃಷ್ಟಗಳು.) ಹೀಗೆ ಪುರುಷೋತ್ತಮ ತಂತ್ರದಲ್ಲಿ (ಕೇವಲ ಯುಕ್ತಿಗೆ ಅಸಾಧಕತ್ವವು ಉಕ್ತವಾಗಿದೆ.) ॥ ೧೮ ॥

**ಪೀಠಿಕೆ** ॥ ಸಾಧನಾಂತರಗಳನ್ನು ಅಂಗೀಕರಿಸಿಕೊಂಡು ಅವುಗಳಿಗೆ ಈಶ್ವರನ ಅಧೀನತ್ವವನ್ನು ಹೇಳುವುದಕ್ಕಿಂತ ಸಾಧನಗಳು ಇಲ್ಲವೆಂದು ಹೇಳುವುದೇ ಶ್ರೇಷ್ಠವು. ಸಾಧನಾದಿಗಳು ಇಲ್ಲದೇನೇ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು ಅಂಗೀಕರಿಸಿದರೆ ಮಹಿಮಾಧಿಕ್ಯವು ಸಿಗುತ್ತದೆ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ ॥ ೧೯ ॥

**ಸೂತ್ರಾರ್ಥ** ॥ (ನಿಕೃಷ್ಟವಾದ ಭಗವದಧೀನವಾದ ಪ್ರಕೃತ್ಯಾದಿ ಸಾಧನಗಳು ಇವೆ ಎಂದು ಅಂಗೀಕರಿಸುವುದೇ,) ಯುಕ್ತೇಃ ಯುಕ್ತವಾದುದರಿಂದ ಭಗವನ್ಮಹಿಮೆಗೆ ವಿರೋಧಿಯಾಗುವುದಿಲ್ಲವೆಂದೇ ಆಗಮಸಿದ್ಧವಾಗಿದೆ. ಅದ್ಭ್ಯಃ ಸಂಭೂತಃ ಹಿರಣ್ಯಗರ್ಭಃ ಎನ್ನುವ ಶ್ರುತಿಯಿಂದಲೂ.

**ಭಾಷ್ಯ ॥ (೧) ಸಾಧನಾನಾಂ ಸಾಧನತ್ವಂ ಯದಾತ್ಮಾಧೀನಮಿಷ್ಯತೇ । ತದಾ ಸಾಧನಸಂಪತ್ತಿರೈಶ್ವರ್ಯದ್ಯೋತಿಕಾ ಭವೇತ್ ॥ ಇತ್ಯಾದೇಃ ಸಾಧನಾಂತರೇಣ (ಹಿ) ಸೃಷ್ಟಿರ್ಯುಕ್ತಾ । (೨) ಅದ್ಭ್ಯಃ ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ (ಮಹಾನಾಮ್ನಿ ಋ.೧.೧೧)। ಇತ್ಯಾದಿಶಬ್ದಾಂತರಾಚ್ಚ॥ ೧೯ ॥ ॥ ೨೬ ॥**

**ಭಾಷ್ಯಾರ್ಥ** ॥ ಸಾಧನಗಳಿಗೆ ಕಾರ್ಯಜನನ ಸಾಮರ್ಥ್ಯವು ಯಾವಾಗ ಸ್ವಾಧೀನವಾಗಿಯೇ ಅಂಗೀಕರಿಸಲ್ಪಡುತ್ತದೋ ಆಗ ಸಾಧನಗಳ ಸಂಪಾದನೆಯು ತನ್ನ ಐಶ್ವರ್ಯಕ್ಕೆ ಜ್ಞಾಪಕವು ಆಗುವುದು. (ಐಶ್ವರ್ಯಕ್ಕೆ ಅವಿರೋಧಿಯು.) ಹೀಗೆ ತಿಳಿಯುತ್ತದೆ. ಇದುಮೊದಲಾದ ವಾಕ್ಯಗಳಿಂದ ಸಾಧನಾಂತರದಿಂದ ಸೃಷ್ಟಿಯು ಯುಕ್ತವಾಗುವುದು. (೨) ಚತುರ್ಮುಖನು ಜಲಮೊದಲಾದ ಪಂಚಭೂತಗಳಿಂದ ಹುಟ್ಟಿದನು. ಇಂದ್ರಾದ್ಯಷ್ಟದಿಕ್ಪಾಲಕರೂ ಹುಟ್ಟಿದರು. (ಎಂದು ತತ್ವಪ್ರದೀಪಟೀತ್ಯಾ ಶ್ರುತ್ಯರ್ಥವು) ತೈತ್ತಿರೀಯದಲ್ಲಿ ಅಷ್ಟೌ ಪುತ್ರಾ ಸೋಽದಿತೇಃ ಎಂದು ಹೇಳಿ ಮಿತ್ರಶ್ಚ ವರುಣಶ್ಚ ಧಾತಾ ಚಾರ್ಯಮಾ ಚಾಂಶುಶ್ಚ ಭಗಶ್ಚೇಂದ್ರಶ್ಚ ವಿವಸ್ವಾಂಶ್ಚ ಎನ್ನುವ ಎಂಟು ಮಂದಿ ದೇವತೆಗಳು ಉಕ್ತರಾಗಿರುವರು. ಇದುಮೊದಲಾದ ಶಬ್ದಾಂತರಗಳಿಂದಲೂ. ॥ ೧೯ ॥

**ಪೀಠಿಕೆ** ॥ ಸಾಧನಗಳು ಇವೆ ಎನ್ನುವುದು ಶ್ರುತಿಸಿದ್ಧ ಮಾತ್ರವಲ್ಲ, ಮತ್ತೆ ಯುಕ್ತಿಸಿದ್ಧಾಂತವೂ ಆಗಿದೆ ಎನ್ನುತ್ತಾರೆ—

## ಸೂತ್ರ ॥ ಓಂ ಪಟವಚ್ಚ ಓಂ ॥ ೨೦ ॥

**ಸೂತ್ರಾರ್ಥ** ॥ ಶ್ರುತಿಯಿಂದ ಮಾತ್ರವಲ್ಲ, ಮತ್ತೆ ವಿಪ್ರತಪನ್ನಾ ಸೃಷ್ಟಿಃ ಕರ್ತೃವ್ಯತಿರಿಕ್ತಸಾಧನಸಾಧ್ಯಾ ಸೃಷ್ಟಿತ್ವಾತ್ ಪಟಾದಿಸೃಷ್ಟಿವತ್ ಎನ್ನುವ ಅನುಮಾನದಿಂದ ಅವನ (ನಿಕೃಷ್ಟ) ಸಾಧನಗಳು ಇವೆ ಎಂದು ಸಿದ್ಧಿಸುತ್ತವೆ.

**ಭಾಷ್ಯ ॥ ಸಾಧನಾಂತರೇಣ ಹಿ ಪಟಾದಿಸೃಷ್ಟಿರ್ಲೋಕೇ ದೃಷ್ಟಾ॥ ೨೦ ॥ ॥ ೨೭ ॥**

ಭಾಷ್ಯಾರ್ಥ ॥ ಕರ್ತೃವ್ಯತಿರಿಕ್ತ ಸಾಧನದಿಂದ ಪಟಾದಿಸೃಷ್ಟಿಯು ಲೋಕದಲ್ಲಿ ದೃಷ್ಟವಾಗಿದೆ. ॥ ೨೦ ॥

ಪೀಠಿಕೆ ॥ ಹಾಗಾದರೆ ಸಾಧ್ಯದಲ್ಲಿ ಸ್ವತಂತ್ರಪದವನ್ನು ಸೇರಿಸಿ ಕರ್ತೃವ್ಯತಿರಿಕ್ತ ಸ್ವತಂತ್ರಸಾಧನಗಳ ಸಿದ್ಧಿಯೂ ಆಗಬೇಕಾಗುವುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಯಥಾ ಪ್ರಾಣಾದಿಃ ಓಂ ॥ ೨೧ ॥

ಸೂತ್ರಾರ್ಥ ॥ ವಿಪ್ರತಿಪನ್ನಂ ಸಾಧನಜಾತಂ ನ ಸ್ವತಂತ್ರಂ ಪ್ರೇರಣಾರ್ಥಮೀಶ್ವರೇಣಾನುಪ್ರವಿಷ್ಟತ್ವಾತ್ ಯಥಾ ಶರೀರೇಂದ್ರಿಯಪ್ರಾಣಾದಿಃ

**ಭಾಷ್ಯ ॥ ತಚ್ಚ ಸಾಧನಜಾತಂ ತೇನಾನುಪ್ರವಿಷ್ಟಮೇವ । ಯಥಾ ಶರೀರೇಂದ್ರಿಯಾದಿಃ ॥ ೨೮ ॥**

ಭಾಷ್ಯಾರ್ಥ ॥ ಪ್ರಲಯಕಾಲದಲ್ಲಿ ಇರತಕ್ಕ ಸಾಧನಗಳ ಸಮುದಾಯವು ಆ ಶ್ರೀಹರಿಯಿಂದ ಪ್ರವಿಷ್ಟವೇ ಆಗಿದೆ. ಯಃ ಪ್ರಾಣೇ ತಿಷ್ಠನ್ ಇತ್ಯಾದಿ ಶ್ರುತಿಗಳಿಂದ. ಶರೀರೇಂದ್ರಿಯ ಪ್ರಾಣಾದಿಗಳಂತೆ. (ಆದುದರಿಂದ ಅದು ಹೇಗೆ ಸ್ವತಂತ್ರವಲ್ಲವೋ ಹಾಗೆಯೇ ಈ ಸಾಧನಸಮುದಾಯವೂ ಸ್ವತಂತ್ರವಲ್ಲ)

ಪೀಠಿಕೆ ॥ ಸಾಧನಗಳು ಶ್ರೀಹರಿಯಿಂದ ಪ್ರವಿಷ್ಟಗಳು ಎನ್ನುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ । ಕ್ಷೋಭಯಾಮಾಸ ಭಗವಾನ್ ಸೃಷ್ಟ್ಯರ್ಥಂ ಜಗತೋ ವಿಭುಃ। ಇತಿ(ಚ)ಕೌರ್ಮೇ॥ ೨೧ ॥ ಅಧಿ.೬. ॥ ೨೯ ॥**

ಭಾಷ್ಯಾರ್ಥ ॥ ಸಮರ್ಥನಾದ ಪುರುಷೋತ್ತಮನಾದ ಶ್ರೀಹರಿಯು ಪ್ರಕೃತ್ಯಭಿಮಾನಿನಿಯಾದ ಸರಸ್ವತಿಯನ್ನು ಚತುರ್ಮುಖನನ್ನು ಅಥವಾ ಜಡಪ್ರಕೃತಿಯನ್ನು ಜೀವನನ್ನು ಅಥವಾ ಸ್ತ್ರೀಪುರುಷಾಖ್ಯ ಮಿಥುನವನ್ನು ಪ್ರವೇಶ ಮಾಡಿಯೇ ಜಗತ್ತಿನ ಸೃಷ್ಟಿಗಾಗಿ ಪ್ರಕೃತಿಪುರುಷರನ್ನು ಸೃಷ್ಟಿಯಲ್ಲಿ ಉದ್ಯುಕ್ತರನ್ನಾಗಿ ಮಾಡಿದನು. ಹೀಗೆ ಕೌರ್ಮಪುರಾಣದಲ್ಲಿ ಹೇಳಿದೆ. ॥ ೨೧ ॥

## ಮಾಯಾವಾದಿರೀತ್ಯಾ

ವಿಚಾರ—ಮೊದಲು ವ್ಯಾವಹಾರಿಕ ಭೇದವನ್ನು ಅಂಗೀಕರಿಸಿಕೊಂಡು ಸ್ಯಾಲ್ಲೋಕವತ್ ಎಂದು ಉಕ್ತವಾಗಿದೆ. ಇಲ್ಲಿ ಕಾರ್ಯಭೂತವಾದ ಜಗತ್ತಿಗೆ ಕಾರಣೀಭೂತನಾದ ಬ್ರಹ್ಮನಿಂದ ತತ್ತ್ವತಃ ಅಭೇದವು ವಾಚಾರಂಭಣಂ, ಇದಂ ಸರ್ವಂ ಯದಯಮಾತ್ಮಾ ಇದುಮೊದಲಾದ ಶ್ರುತಿಗಳಿಂದಲೇ ಹೇಳಲ್ಪಡುತ್ತದೆ

ಎಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ಅನೃತವಾದ ಜಗತ್ತಿಗೆ ಸತ್ಯಭೂತನಾದ ಬ್ರಹ್ಮನಿಂದ ಅಭೇದವು ಕೂಡಲಾರದು. ಮತ್ತು ಅದ್ವೈತಿಗಳು ಮಿಥ್ಯಾಭೂತವಾದ ಪ್ರಪಂಚದಿಂದ ಸತ್ಯಭೂತನಾದ ಬ್ರಹ್ಮನಿಂದ ಅಭೇದವನ್ನು ಅಂಗೀಕರಿಸಲೂ ಇಲ್ಲ. ಇತ್ಯಾದಿ ದೋಷಗಳಿಂದ ಅವರ ಮತವು ಸರ್ವಥಾ ಯುಕ್ತವಲ್ಲ.

## ರಾಮಾನುಜಾಚಾರ್ಯರೀತ್ಯಾ

ವಿಚಾರ—ಸೂಕ್ಷ್ಮಾವ್ಯಕ್ತಾದಿ ವಿಶಿಷ್ಟನಾದ ಕಾರಣೀಭೂತನಾದ ಬ್ರಹ್ಮನಿಗೆ ಸ್ಥೂಲ ಮಹದಾದಿ ವಿಶಿಷ್ಟನಾದ ಕಾರ್ಯಭೂತನಾದ ಬ್ರಹ್ಮನಿಂದ ಅಭೇದವು ಇಲ್ಲಿ ಹೇಳಲ್ಪಡುತ್ತದೆಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. ಶುದ್ಧಾಚೇತನಾತ್ಮಕವಾದ ವಿಶಿಷ್ಟರೂಪಕಾರ್ಯದಲ್ಲಿರತಕ್ಕ ವಿಶೇಷಣಾಂಶವಾದ ಮಹದಾದಿಗಳಿಗೆ ವಿಶಿಷ್ಟಚೇತನಕಾರ್ಯತ್ವ ವಿಲ್ಲದಿರುವುದರಿಂದ ವಿಶಿಷ್ಟಬ್ರಹ್ಮನಿಂದ ಅಭೇದವಿಲ್ಲದಿರುವುದರಿಂದ **ಇದಂ ಸರ್ವಂ ಯದಯಮಾತ್ಮಾ** ಇತ್ಯಾದಿ ಶ್ರುತಿನಿರ್ವಾಹವಾಗುವುದಿಲ್ಲ. ವಿಶಿಷ್ಟಬ್ರಹ್ಮನಿಗೆ ಕಾರ್ಯತ್ವವಿದ್ದರೆ **ತತ್ಸೃಷ್ಟ್ವಾ ತದೇವಾನುಪ್ರಾವಿಶತ್** ಇತ್ಯಾದಿಗಳು ಕೂಡಲಾರವು. ತಾನು ಕೂಡಿದ್ದರಲ್ಲಿ ಪುನಃ ತನ್ನ ಪ್ರವೇಶವು ಕೂಡಲಾರದು.

## ಅಧಿಕರಣ ಸಾರಾಂಶ

ಪೂರ್ವಾಧಿಕರಣದಲ್ಲಿ ಈಶ್ವರನು ವಿಶ್ವಕರ್ತನೇ ಅಲ್ಲ ಎನ್ನುವ ಶಂಕೆಯನ್ನು ನಿರಾಕರಿಸಿರುವರು. ಇಲ್ಲಿ ಶ್ರುತಿಸಿದ್ಧವಾದ ಜಗತ್ಕರ್ತೃತ್ವವನ್ನು ಅಂಗೀಕರಿಸಿಕೊಂಡು ಅದು ಸ್ವಾಧೀನಸತ್ತಾದಿಗಳಿಂದ ಯುಕ್ತವಾದ ಸಾಧನಗಳನ್ನು ಅಪೇಕ್ಷಿಸಿಕೊಂಡಿದೆ ಎನ್ನುವ ಶಂಕೆಯನ್ನು ಪರಿಹರಿಸುತ್ತಾರೆ. ವಿಷ್ಣುವಿಗೆ ಜನ್ಮಾದಿಸೂತ್ರದಲ್ಲಿ ಹೇಳಿದ ಸ್ವತಂತ್ರಕರ್ತೃತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹವು. ಯುಕ್ತವಲ್ಲವೆಂದು ಪೂರ್ವಪಕ್ಷವು. ಹೇಗೆಂದರೆ **ಮಹದಾದಿಸೃಷ್ಟಿಃ ಕರ್ತ್ರನ್ಯಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್ ಪಟಸೃಷ್ಟಿವತ್** ಇದುಮೊದಲಾದ ಬಹುಯುಕ್ತಿ ವಿರೋಧವಿದೆ. ಮತ್ತು **ಅದ್ಭ್ಯಃ ಸಂಭೂತಃ** ಎನ್ನುವ ಶ್ರುತ್ಯಂತರದಲ್ಲಿ ಅಬಾದಿ ಸ್ವತಂತ್ರ ಸಾಧನಾಂತರಗಳನ್ನು ಹೇಳಿದ್ದರಿಂದ ಅದರಿಂದಲೂ ವಿರೋಧವು, ಎಂದರೆ—ವಿಷ್ಣುವಿಗೆ ಸ್ವತಂತ್ರಕರ್ತೃತ್ವವು ಯುಕ್ತವೇ. **ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ** ಎನ್ನುವ ಶ್ರುತಿಯಲ್ಲಿ ಅಧಿಷ್ಠಾನ ಮೊದಲಾದ ಸಾಧನಗಳನ್ನು ಆಕ್ಷೇಪಿಸಿರುವುದರಿಂದಲೂ **ನಾಸದಾಸೀನ್ನೋ ಸದಾಸೀತ್** ಇತ್ಯಾದಿ ಶ್ರುತಿಗಳಲ್ಲಿ ಭೂತ ಮೊದಲಾದ ಸಾಧನಗಳು ಸ್ವತಂತ್ರವಾಗಿ ಇಲ್ಲವೆಂದು ಹೇಳಿದ್ದರಿಂದ ಆ ಶ್ರುತಿಯಿಂದಲೂ, **ವಿಮತಾ ಸೃಷ್ಟಿಃ ನ ಕರ್ತ್ರನ್ಯಸ್ವತಂತ್ರಸಾಧನಾಪೇಕ್ಷಾ ಪರತಂತ್ರಕರ್ತೃಕಾನ್ಯತ್ವೇ ಸತಿ ಸೃಷ್ಟಿತ್ವಾತ್** ಇದುಮೊದಲಾದ ಅನುಮಾನಗಳಿಂದಲೂ ವಿರುದ್ಧವಾಗಿರುವುದರಿಂದ, ಮತ್ತು ಪ್ರಾಣಾದಿಗಳು ಈಶ್ವರನಿಂದ ಪ್ರವಿಷ್ಟಗಳಾಗಿರುವುದರಿಂದ ಅವುಗಳಿಗೆ ಅಸ್ವಾತಂತ್ರ್ಯವಿದ್ದಂತೆಯೇ **ಪ್ರಕೃತಿಂ ಪುರುಷಂ ಚೈವ** ಎನ್ನುವ ಸ್ಮೃತಿಯಿಂದ ಈಶ್ವರನಿಂದ ಪ್ರವಿಷ್ಟಗಳಾಗಿರುವುದರಿಂದ ಸಾಧನಗಳಿಗೆ ಅಸ್ವಾತಂತ್ರ್ಯ ನಿಶ್ಚಯವಿದ್ದುದರಿಂದ ಹಿಂದೆ ಹೇಳಿದ ಅನುಮಾನಗಳು ಬಾಧಿತವಾಗಿವೆ. ಸರ್ವೇಶ್ವರನು ಜಗತ್ತನ್ನು

ಸೃಷ್ಟಿಸುವಾಗ ನಿಕೃಷ್ಟಗಳಾದ ಅಸ್ವತಂತ್ರಗಳಾದ ಸಾಧನಾಂತರಗಳನ್ನು ಲೀಲಾರ್ಥವಾಗಿ ಸ್ವೀಕರಿಸುವನು. ಏವಂಚ ಸ್ವತಂತ್ರಸಾಧನಾಪೇಕ್ಷಾ ಲೋಕೇ ಅಶಕ್ತಿ ನಿಬಂಧನಾ। ಈಶ್ವರಸ್ಯ ತ್ವಸಾಮರ್ಥ್ಯಂ ನ ಕುತ್ರಾಪೀಶ್ವರತ್ವತಃ ॥ ೧ ॥ ದ್ರವ್ಯಸ್ಯ ಕರ್ಮಕಾಲಾದೇಃ ಶ್ರೂಯತೇ ಚೇತತಂತ್ರತಾ । ನಾನಾಶಿಲ್ಪೇಷು ನಿಪುಣಃ ಸಾಧನಂ ಸ್ವಯಮೇವ ಹಿ ॥೨॥ ಸಂಪಾದ್ಯತೇನ ಕಾರ್ಯಾಣಿ ಕುರ್ವಂಲ್ಲೋಕೇऽಪಿ ದೃಶ್ಯತೇ । ಸ್ವಾಧೀನಸಾಧನಾದಾನಂ ತ್ವೀಶಸ್ಯ ನ ವಿರುಧ್ಯತೇ ॥೩॥ ಪ್ರಮಿತತ್ವಾಚ್ಚ ಲೀಲಾತ್ವಾದೀಶತ್ವಾಖ್ಯಾತಕತ್ವತಃ। ಲೀಲಯಾ ದಂಡಮಾಲಂಬ್ಯ ಗಚ್ಛನ್ ಕಿಂ ಪಂಗುತಾಂ ವ್ರಜೇತ್ ॥೪॥ ॥ ಅಧಿ.೬॥

ಆರಂಭಣಾಧಿಕರಣವು ಸಮಾಪ್ತವಾಯಿತು.

## ೭. ಇತರವ್ಯಪದೇಶಾಧಿಕರಣವು

**ಭಾಷ್ಯ ॥ ಜೀವಕರ್ತೃಕತ್ವಪಕ್ಷಃ ಶ್ರುತಿಪ್ರಾಪ್ತೋ ವಿಸ್ತರಾನ್ನಿರಾಕ್ರಿಯತೇ ॥ ೧ ॥**

**ಭಾಷ್ಯಾರ್ಥ ॥** ಜೀವಾದ್ಭವಂತಿ ಭೂತಾನಿ ಎನ್ನುವ ಶ್ರುತಿಯಿಂದ ಆಪಾತತಃ ಪ್ರಾಪ್ತವಾದ ಮತ್ತು ಸಾಕ್ಷ್ಯನುಭವಪ್ರಾಪ್ತವಾದ ಜೀವನೇ ಕರ್ತನು ಎನ್ನುವ ಮತವು ವಿಸ್ತಾರವಾಗಿ ನಿರಾಕರಿಸಲ್ಪಡುತ್ತದೆ.

**ವಿಶೇಷಾಂಶ ॥** (೧) ಸಮಯಪಾದದಲ್ಲಿ ಅನ್ಯಥಾನುಮಿತೌ ಎನ್ನುವಲ್ಲಿ ಜೀವರೇ ಜಗತ್ಕರ್ತರು ಎನ್ನುವ ಸಿದ್ಧಾಂತವನ್ನು ನಿರಾಕರಿಸುವುದರಿಂದ ಆದರಿಂದ ಇದು ಗತಾರ್ಥವಯಿತು. ಎಂದರೆ—**ಶ್ರುತಿಪ್ರಾಪ್ತಃ** ಎಂದು. ತಥಾಚ ಇಲ್ಲಿ ಶ್ರುತಿಮೂಲಕ ಯುಕ್ತಿಸಿದ್ಧವಾದ ಜೀವಕರ್ತೃಕತ್ವಪಕ್ಷವನ್ನು ನಿರಾಕರಿಸಿರುವುದು. ಉತ್ತರದಲ್ಲಿ ಸಮಯಪ್ರಾಪ್ತವಾದುದನ್ನು ನಿರಾಕರಿಸುವುದು. ಆದಕಾರಣ ಗತಾರ್ಥವಾಗುವುದಿಲ್ಲ. (೨) ಏತೇನ ಶಿಷ್ಟಾಃ ಎನ್ನುವಲ್ಲಿ ಸಂಕ್ಷೇಪದಿಂದ ನಿರಾಕರಿಸಿದ್ದನ್ನು ಇಲ್ಲಿ ವಿಸ್ತಾರವಾಗಿ ನಿರಾಕರಿಸಿದ್ದರಿಂದ. ಆದರಿಂದಲೂ ಗತಾರ್ಥವಾಗುವುದಿಲ್ಲ.

**ಪೀಠಿಕೆ—ಲೋಕದಲ್ಲಿ** ಘಟಾದಿ ಕಾರ್ಯಗಳಲ್ಲಿ ಜೀವನಿಗೇ ಕರ್ತೃತ್ವವು ಅನುಭವಸಿದ್ಧವಾದುದರಿಂದ ಲಾಘವಾತ್ ಸಮಸ್ತ ಜಗತ್ಕರ್ತೃತ್ವವೂ ಅವನಿಗೇನೇ ಉಚಿತವಾದುದರಿಂದಲೂ ಜೀವಾದ್ಭವಂತಿ ಎನ್ನುವ ಶ್ರುತ್ಯಾನುಕೂಲ್ಯವಿದ್ದುದರಿಂದಲೂ ಜೀವನೇ ಸ್ವತಂತ್ರಕರ್ತನು. ವಿಷ್ಣುವು ಜಗತ್ಕರ್ತನಲ್ಲ ಎಂದರೆ—

**ಸೂತ್ರ ॥ ಓಂ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ಓಂ ॥೨೨॥**

**ಸೂತ್ರಾರ್ಥ ॥** ಜೀವನೇ ಕರ್ತನು ಎಂದು ಜೀವಾದ್ಭವಂತಿ ಭೂತಾನಿ ಎನ್ನುವ ಶ್ರುತಿಯಲ್ಲಿ ಹೇಳಿದ್ದರಿಂದಲೂ, ಸಾಕ್ಷ್ಯನುಭವಸಿದ್ಧವಾದುದರಿಂದಲೂ ಜೀವನೇ ಸ್ವತಂತ್ರಕರ್ತನು ಎಂದು ಹೇಳುವುದಾದರೆ ತನಗೆ ಹಿತವನ್ನು ಮಾಡಿಕೊಳ್ಳದೆ ಇರುವುದು, ಅಹಿತವನ್ನು ಮಾಡಿಕೊಳ್ಳುವುದು ಇದು ಮೊದಲಾದವುಗಳು ದೋಷಗಳು ಆಗಬೇಕಾಗುವುವು. ಅಂದರೆ ಎರಡೂ ಕೂಡದೆ ಹೋಗಬೇಕಾಗುವುದು. ಸ್ವತಂತ್ರಕರ್ತನಿಗೆ ಆ ದೋಷಗಳು ಕೂಡಲಾರವು. ಜೀವನಲ್ಲಿ ಆ ದೋಷಗಳು ಇವೆ. ಆದುದರಿಂದ ಜೀವನು ಸ್ವತಂತ್ರಕರ್ತನಲ್ಲ.

**ಭಾಷ್ಯ ॥ ಜೀವಕರ್ತೃತ್ವಪಕ್ಷೇ(ತ್ವೇ)ಹಿತಾಕರಣಮಹಿತಕರಣಂ ಚ ನ ಸ್ಯಾತ್ ॥ ೨೨ ॥ ॥ ೨ ॥**

ಭಾಷ್ಯಾರ್ಥ ॥ ಈಶ್ವರನೇ ಇಲ್ಲ, ಸಮಸ್ತ ಕಾರ್ಯಗಳಲ್ಲಿಯೂ ಜೀವನೇ ಸ್ವತಂತ್ರ ಕರ್ತನು, ಎಂದು ಜೀವನಿಗೆ ಸ್ವತಂತ್ರ ಕರ್ತೃತ್ವಪಕ್ಷದಲ್ಲಿ ತನಗೆ ಹಿತವನ್ನು ಮಾಡಿಕೊಳ್ಳದೆ ಇರುವುದು, ಅಹಿತವನ್ನು ಮಾಡಿಕೊಳ್ಳುವುದು ಎರಡೂ ಕೂಡದೆಹೋಗುವುದು. ॥ ೨೨ ॥

**ಪೀಠಿಕೆ**— ಯತ್ಕಿಂಚಿದ್ದೋಷಗಳು ಇರೋಣ ಮಾತ್ರದಿಂದ ಜೀವಕರ್ತೃತ್ವವನ್ನು ನಿರಾಕರಿಸುವುದಾದರೆ— ಬ್ರಹ್ಮನಿಗೂ ಶ್ರಮಾದಿ ದೋಷಗಳು ಇದ್ದುದರಿಂದ ಬ್ರಹ್ಮನಿಗೂ ಕರ್ತೃತ್ವವು ಬಾರದೆ ಹೋಗುವುದು. ಏವಂಚ ಎರಡು ಪಕ್ಷಗಳಲ್ಲಿ ದೋಷವು ಸಮಾನವಾಗುವಾಗ ಅನುಭವ ಮತ್ತು ಶ್ರುತಿಸಿದ್ಧವಾದ ಜೀವಕರ್ತೃತ್ವವನ್ನೇ ಆಶ್ರಯಿಸಬೇಕು, ಎಂದರೆ—

## ಸೂತ್ರ ॥ ಓಂ ಅಧಿಕಂ ತು ಭೇದನಿರ್ದೇಶಾತ್ ಓಂ ॥ ೨೩ ॥

**ಸೂತ್ರಾರ್ಥ** ॥ ಆ ಬ್ರಹ್ಮನಿಗಾದರೂ ಶ್ರಮ, ಚಿಂತಾ ಮೊದಲಾದ ದೋಷಪ್ರಾಪ್ತಿಯಾಗುವುದಿಲ್ಲ. ಏಕೆಂದರೆ— ಆ ಬ್ರಹ್ಮನು ಜೀವರಿಂದ ಅಧಿಕ ಶಕ್ತಿಯುಳ್ಳವನು. ಶ್ರೋತಾ ಮಂತಾ ಇತ್ಯಾದಿಗಳಲ್ಲಿ ಜೀವರಿಂದ ಭೇದವನ್ನು ಹೇಳಿದ್ದರಿಂದ. ಇಂತಹವನಿಗೆ ಆ ದೋಷಗಳನ್ನು ಶಂಕಿಸಲಿಕ್ಕೂ ಕೂಡದು.

**ಭಾಷ್ಯ ॥ ನ ಚ ಬ್ರಹ್ಮಣಃ ಶ್ರಮಚಿಂತಾದಿದೋಷಪ್ರಾಪ್ತಿಃ । ಅಧಿಕಶಕ್ತಿತ್ವಾತ್। [1]ಶ್ರೋತಾಮಂತಾ ದ್ರಷ್ಟಾಽದೇಷ್ಟಾ ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾ ನಾಮಂತರ ಪುರುಷಃ (ಐ.ಆ.೨..೨.೪) [2]ಏಷ ತ ಆತ್ಮಾ ಸರ್ವಾಂತರಃ (ಬೃ.೫.೫.೧) [3]ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ (ಬೃ.೫.೫.೧) ಇತ್ಯಾದಿವಿಶೇಷನಿರ್ದೇಶಾತ್ ॥ ೨೩ ॥ ॥ ೩ ॥**

ಭಾಷ್ಯಾರ್ಥ ॥ ಬ್ರಹ್ಮನಿಗೆ ಶ್ರಮ ಚಿಂತಾ ಸಾಧನಾಸ್ಮರಣ ದುಃಖ ಮೊದಲಾದ ದೋಷಗಳಿಗೆ ಪ್ರಾಪ್ತಿಯಿಲ್ಲ. ಅಧಿಕ ಶಕ್ತಿಯುದ್ದುದರಿಂದ, ಅಂದರೆ— ನಿರ್ದೋಷ ಗುಣಪರಿಪೂರ್ಣತ್ವ ಮತ್ತು ಹೇಯ ಉಪಾದೇಯರಾಹಿತ್ಯವಿದ್ದುದಿಂದ (ಹೇತುವು ಅಸಿದ್ಧವು ಎಂದು ಹೇಳಕೂಡದು.) ಶ್ರೋತಾ ಇದು ಮೊದಲಾದ ಅಖಿಲಶ್ರೋತೃತ್ವ, ಅಂತರ್ಯಾಮಿತ್ವ, ಅಶನಾಯಾದ್ಯತೀತತ್ವಾದಿ ರೂಪವಾದ ಜೀವರಿಂದ ಅತಿಶಯವನ್ನು ಹೇಳಿದ್ದರಿಂದ. ॥ ೨೩ ॥

**ಪೀಠಿಕೆ** ॥ ಚೇತನತ್ವವಿದ್ದುದರಿಂದ ಈಶ್ವರನಂತೆಯೇ ಜೀವನೂ ಕೂಡ ಅನ್ಯನಿರಪೇಕ್ಷನಾಗಿಯೇ ಕರ್ತನೆಂದು ಏಕೆ ಆಗಲಾರನು? ಎಂದರೆ—

---

೧ ಶ್ರೋತಾ ಇತ್ಯಾದಿ ಶ್ರುತಿಯು ಸರ್ವತ್ರಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

೨ ಏಷ ತೇ ಆತ್ಮಾ ಯಾರು ನಿನಗೆ ಅಂತರ್ಯಾಮಿಯೋ ಇವನೇ ಸರ್ವಾಂತರ್ಯಾಮಿಯು, ಎಂದು ಬೃಹದಾರಣ್ಯಕದಲ್ಲಿ ಕಹೋಲರನ್ನು ಕುರಿತು ಯಾಜ್ಞವಲ್ಕ್ಯರ ಮಾತು.

೩ ಯೋಽಶನಾಯಾಪಿಪಾಸೇ ಇತ್ಯಾದಿ ಶ್ರುತಿಯು ದಹರಾಧಿಕರಣದಲ್ಲಿ ವ್ಯಾಖ್ಯಾತವಾಗಿವೆ.

## ಸೂತ್ರ ॥ ಓಂ ಅಶ್ಮಾದಿವಚ್ಚ ತದನುಪಪತ್ತಿಃ ಓಂ ॥ ೨೪ ॥

**ಭಾಷ್ಯ ॥ ಚೇತನತ್ವೇಽಪ್ಯಶ್ಮಾದಿವದಸ್ವತಂತ್ರತ್ವಾತ್ ಸ್ವತಃ ಕರ್ತೃತ್ವಾನುಪಪತ್ತಿರ್ಜೀವಸ್ಯ ॥೪॥**

ಭಾಷ್ಯಾರ್ಥ ॥ ಜೀವನಿಗೆ ಚೇತನತ್ವವಿದ್ದರೂ ಪಾಷಾಣ ಸ್ತಂಭ ಮೊದಲಾದವುಗಳಂತೆಯೇ ಸ್ವಾತಂತ್ರ್ಯವಿಲ್ಲದಿರುವುದರಿಂದ ಇತರರ ಅಪೇಕ್ಷೆಯಿಲ್ಲದೆ ಜೀವನಿಗೆ ಕರ್ತೃತ್ವವು ಕೂಡುವುದಿಲ್ಲ.

ಪೀಠಿಕೆ ॥ ಸೂತ್ರಾರ್ಥದಲ್ಲಿ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಯಥಾ ದಾರುಮಯೀಂ ಯೋಷಾಂ ನರಃ ಸ್ಥಿರಸಮಾಹಿತಃ । ಇಂಗಯತ್ಯಂಗಮಂಗಾನಿ ತಥಾ ರಾಜನ್ನಿಮಾಃ ಪ್ರಜಾಃ। ಇತಿಚ ಭಾರತೇ ॥ ೨೪ ॥ ॥ ೫ ॥**

ಭಾಷ್ಯಾರ್ಥ ॥ ಹೇಗೆ ಮನಸ್ಚಾಂಚಲ್ಯವಿಲ್ಲದೆ ಸ್ವಕಾರ್ಯ ಸಮಾಧಾನವುಳ್ಳ ಮನುಷ್ಯನು ದಾರ್ವಾತ್ಮಕಸ್ತ್ರೀಪ್ರತಿಮೆಯನ್ನು ಚೇಷ್ಟಿಸುತ್ತಾನೋ, ಹೇಗೆ ಮನುಷ್ಯನು ಹಸ್ತಾದಿಗಳನ್ನೂ ಅಂಗುಲ್ಯಾದಿಗಳನ್ನೂ ಕೂಡ ಚೇಷ್ಟಿಸುತ್ತಾನೋ ಹಾಗೆಯೇ ಜನಮೇಜಯನೇ ಈ ಪ್ರಜೆಗಳನ್ನು ಶ್ರೀಹರಿಯು ಚೇಷ್ಟಿಸುತ್ತಾನೆ. ಹೀಗೆ ಭಾರತದಲ್ಲಿ (ಜೀವರಿಗೆ ಅಸ್ವಾತಂತ್ರ್ಯವು ಉಕ್ತವಾಗಿದೆ.)

ಪೀಠಿಕೆ—ಜೀವನಿಗೆ ಸ್ವತಃ ಕರ್ತೃತ್ವಾಭಾವವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಉಪಸಂಹಾರದರ್ಶನಾನ್ನೇತಿ ಚೇತ್ ಕ್ಷೀರವದ್ಧಿ ಓಂ ॥ ೨೫ ॥

ಸೂತ್ರಾರ್ಥ ॥ ಜೀವನಲ್ಲಿ ಆರಬ್ಧ ಕಾರ್ಯಸಮಾಪ್ತಿಯು ಅನುಭೂತವಾಗುವುದರಿಂದ ಜೀವನಿಗೆ ಸ್ವತಂತ್ರ ಕರ್ತೃತ್ವವು ಕೂಡುವುದಿಲ್ಲವೆಂದಿಲ್ಲ. ಹೀಗೆ ಹೇಳಕೂಡದು. ಜೀವನಲ್ಲಿ ಕಾರ್ಯಸಮಾಪ್ತಿ ದರ್ಶನವು ಗೋವಿನಲ್ಲಿ ಕ್ಷೀರದರ್ಶನದಂತೆ ಕೂಡುತ್ತದೆ, ಪ್ರಸಿದ್ಧವು.

**ಭಾಷ್ಯ ॥ ಜೀವೇನ ಕಾರ್ಯೋಪಸಂಹಾರದರ್ಶನಾತ್ತಸ್ಯ ಕರ್ತೃತ್ವಮಿತಿ ಚೇನ್ನ । ಯಥಾ ಗೋಷು ಕ್ಷೀರಂ (ಕ್ಷೀರಂಗೋಷು) ದೃಶ್ಯಮಾನಮಪಿ ಪ್ರಾಣಾದೇವ ಜಾಯತೇ ॥ ೬ ॥**

ಭಾಷ್ಯಾರ್ಥ ॥ ಜೀವನಿಂದ ಈ ಕಾರ್ಯವನ್ನು ಸಮಾಪ್ತಿಸುತ್ತೇನೆ ಎನ್ನುವ ಬುದ್ಧಿಯಿಂದ ಹೇಳಲ್ಪಡುವುದರಿಂದ, ಹಾಗೆಯೇ ಜೀವಕರ್ತೃಕ ಕಾರ್ಯಸಮಾಪ್ತಿಯು ಇತರರಿಂದ ಕಾಣುವುದರಿಂದ ಜೀವನಿಗೆ ಜಗತ್ಕರ್ತೃತ್ವವು. ಎಂದರೆ—ಹೀಗೆ ಹೇಳಕೂಡದು ಹೇಗೆಂದರೆ ಗೋವುಗಳಲ್ಲಿ ಕ್ಷೀರವು ಕಾಣಲ್ಪಡುವುದಾದರೂ ಆ ಕ್ಷೀರವು ಮುಖ್ಯಪ್ರಾಣನಿಂದಲೇ ಹುಟ್ಟುತ್ತದೆ. ಗೋವಿನಿಂದ ಅಲ್ಲ.

ಪೀಠಿಕೆ ॥ ಕ್ಷೀರವು ಪ್ರಾಣನ ಅಧೀನವು ಹೇಗೆ ಎಂದರೆ—

**ಭಾಷ್ಯ ॥ ಅನ್ನಂ ರಸಾದಿರೂಪೇಣ ಪ್ರಾಣಃ ಪರಿಣಯತ್ಯಸೌ । ಇತಿ ವಚನಾತ್ । ಏವಂ**

**ಜೀವೇ ದೃಶ್ಯಮಾನೋಽಪಿ ಕಾರ್ಯೋಪಸಂಹಾರೋಽಸ್ವಾತಂತ್ರ್ಯಾತ್ಪರಕೃತ ಏವ ॥ ೭ ॥**

ಭಾಷ್ಯಾರ್ಥ ॥ ಸರ್ವಶರೀರ ಪ್ರೇರಕನಾಗಿ ಪ್ರಸಿದ್ಧನಾದ ಮುಖ್ಯಪ್ರಾಣನು ಗವಾದಿಗಳಿಂದ ಭುಕ್ತವಾದ ವಸ್ತುವನ್ನು ಈ ಕ್ಷೀರಾದಿರೂಪದಿಂದ ಪರಿಣಾಮಿಸುತ್ತಾನೆ. ಎನ್ನುವ ವಚನದಿಂದ. (ದಾರ್ಷ್ಟಾಂತಿಕವನ್ನು ತೋರಿಸುತ್ತಾರೆ) ಹೀಗೆಯೇ ಜೀವನಲ್ಲಿ ತನ್ನಿಂದ ಅನುಭವಿಸಲ್ಪಡತಕ್ಕ ಇತರರಿಂದ ಕಾಣಲ್ಪಡತಕ್ಕ ಪ್ರಾರಬ್ಧಕಾರ್ಯಸಮಾಪ್ತಿಯು. ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಪರಮೇಶ್ವರ ನಿಮಿತ್ತಕವೇ. ಜೀವಕೃತವಲ್ಲ.

ಪೀಠಿಕೆ ॥ ಜೀವನಿಗೆ ಅಸ್ವಾತಂತ್ರ್ಯವಿದ್ದುದರಿಂದ ಕಾರ್ಯೋಪಸಂಹಾರ ಕರ್ತೃತ್ವವಿಲ್ಲವಾದರೂ ಈಶ್ವರಕೃತವೆಂದು ಹೇಗೆ ತಿಳಿಯುತ್ತದೆ, ಎಂದರೆ—

**ಭಾಷ್ಯ ॥ ★ಯ ಆತ್ಮಾನಮಂತರೋ ಯಮಯತಿ (ಬೃ.ಶಿ.೭.೨೨)। ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ ॥ ಇತ್ಯಾದೇಃ ॥ ೨೫ ॥ ೮ ॥**

ಭಾಷ್ಯಾರ್ಥ ॥ (೧) ಯಾರು ಅಂತರ್ಗತನಾಗಿ ಜೀವನನ್ನು ನಿಯಮಿಸುತ್ತಾನೋ. (೨) ಯಾರು ನಿತ್ಯಸ್ವತಂತ್ರನೋ ಈಶ್ವರನೋ, ಅವನೇ ಜಗತ್ಕರ್ತನು ನಾನು ಅಲ್ಲ. ನೀನೂ ಅಲ್ಲ. ಇದುಮೊದಲಾದ ವಾಕ್ಯದಿಂದ ತಿಳಿಯುತ್ತದೆ.

ಪೀಠಿಕೆ ॥ ಈಶ್ವರನೇ ಇಲ್ಲದಿರುವುದರಿಂದ ಜೀವನಿಗೆ ಈಶ್ವರಾಧೀನ ಕರ್ತೃತ್ವವನ್ನು ಹೇಳಕೂಡದು. ದ್ಯಾವಾಭೂಮೀ ಜನಯನ್ ಇತ್ಯಾದಿ ಶ್ರುತಿಯಿಂದ ಈಶ್ವರನು ಸಿದ್ಧಿಸುತ್ತಾನೆಂದು ಹೇಳಕೂಡದು. ಈಶ್ವರಃ ಯದಿ ಸ್ಯಾತ್ತರ್ಹಿ ಉಪಲಭ್ಯೇತ ನೋಪಲಭ್ಯತೇ ತಸ್ಮಾನ್ನಾಸ್ತಿ, ಈಶ್ವರನು ಇದ್ದರೆ ತೋರುವನು. ತೋರುವುದಿಲ್ಲ. ಆದುದರಿಂದ ಇಲ್ಲ. ಎನ್ನುವ ಅನುಪಲಬ್ಧಿ ಲಿಂಗದಿಂದ ಈಶ್ವರನು ಇಲ್ಲವೆಂದು ನಿಶ್ಚಿತನಾಗುವನು. ಆದಾಗ್ಯೂ ಹಾಗ ಕಲ್ಪಿಸಿದರೆ ಗೌರವವು ಬರುವುದು. ಆದಕಾರಣ ಲಾಘವಾತ್ ಕ್ಲ್ಪಪ್ತನಾದ ಜೀವನೇ ಕರ್ತನು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡುತ್ತಾರೆ—

**ಸೂತ್ರ ॥ ಓಂ ದೇವಾದಿವದಪಿ ಲೋಕೇ ಓಂ ॥ ೨೬ ॥**

ಸೂತ್ರಾರ್ಥ ॥ ದೇವಾದಿಗಳಂತೆ ಈಶ್ವರನಿಗೆ ಅದೃಶ್ಯತ್ವ ಶಕ್ತಿಯಿದ್ದುದರಿಂದ, ಲೋಕದಲ್ಲಿ ಪಿಶಾಚಾದಿಗಳಿಗೂ ಅದೃಶ್ಯತ್ವ ಶಕ್ತಿಯಿದೆ.

**ಭಾಷ್ಯ ॥ ನ ಚ ಕರ್ತುರೀಶ್ವರಸ್ಯಾದೃಷ್ಟಿವಿರೋಧಃ। ದೇವಾದಿವದದೃಶ್ಯತ್ವಶಕ್ತಿಯೋಗಾತ್ । ಲೋಕೇಽಪಿ ಪಿಶಾಚಾದೀನಾಂ ತಾದೃಶೀ ಶಕ್ತಿರ್ದೃಷ್ಟಾ। ಕಿಮ್ವೀಶ್ವರಸ್ಯ ॥ ೯ ॥**

★ ಈ ಶ್ರುತಿಯು ಅಂತರ್ಯಾಮ್ಯಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಭಾಷ್ಯಾರ್ಥ ॥ ಜೀವನಿಂದ ಮಾಡಲ್ಪಡತಕ್ಕ ಕಾರ್ಯವನ್ನು ಮಾಡತಕ್ಕ (ಅಂದರೆ ಜೀವನಿಯಾಮಕನಾದ) ಈಶ್ವರನು ಇದ್ದಾನೆ ಎನ್ನುವ ವಚನಕ್ಕೆ ಈಶ್ವರನು ಕಾಣದೆ ಇರುವುದರಿಂದ ವಿರೋಧವಿಲ್ಲ. ಏಕೆ ಇಲ್ಲವೆಂದರೆ ಅದೃಶ್ಯತ್ವಶಕ್ತಿಯಿದ್ದುದರಿಂದ ಅದೃಷ್ಟರಾದ ದೇವತೆಗಳು ಉಪದೇವತೆಗಳು ಇದ್ದಂತೆ ಅದರ್ಶನಕ್ಕೆ ಅನುಕೂಲವಾದ ಅಂತರ್ಧಾನ ಶಕ್ತಿಯಿದ್ದಪ್ರಯುಕ್ತ ಅನುಪಲಬ್ಧಿಯು ಕೂಡಬಹುದು. ಲೋಕದಲ್ಲಿ ದೇವತೆಗಳಂತೆ ನಿಯಾಮಕಗಳಾಗದೆ ಇರುವ ಪಿಶಾಚಾದಿಗಳಿಗೂ ಅದೃಶ್ಯತ್ವಕ್ಕೆ ಅನುಕೂಲವಾದ ಅಂತರ್ಧಾನ ಸಾಮರ್ಥ್ಯವು ಕಂಡದೆ; ಹೀಗೆ ಇರುವಾಗ ಸರ್ವಶಕ್ತಿಯುಳ್ಳ ಈಶ್ವರನಿಗೆ ಅಂತಪ ಶಕ್ತಿಯು ಇದೆ ಎಂದು ಏನು ಹೇಳಬೇಕು.

ಟೀಕೆ ॥ ಶ್ರುತಿಸಿದ್ಧನಾದ ಪರಮೇಶ್ವರನು ಕಾಣದಿರುವುದರಿಂದ ನಿರಾಕಾರ್ಯನಲ್ಲ ಎಂದು ಯಾವುದು ಅಭಿಪ್ರೇತವಾಗಿದೆಯೋ ಆ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ನ ಯುಕ್ತಿಯೋಗಾದ್ವಾಕ್ಯಾನಿ ನಿರಾಕಾರ್ಯಾಣ್ಯಪಿ ಕ್ವಚಿತ್ । ವಿರೋಧ ಏವ ವಾಕ್ಯಾನಾಂ ಯುಕ್ತಯೋ ನ ತು ಯುಕ್ತಯಃ ॥ ಇತಿ ಬೃಹತ್ಸಂಹಿತಾಯಾಂ ॥ ೨೬ ॥ ೧೦ ॥**

ಭಾಷ್ಯಾರ್ಥ ॥ ಶ್ರುತಿಸ್ಮೃತಿರೂಪಗಳಾದ ವಾಕ್ಯಗಳು ಯುಕ್ತಿರೂಪವಾದ ಉಪಾಯದಶೆಯಿಂದ ಯಾವ ವಿಷಯದಲ್ಲಿಯೂ ಪ್ರಮಾಣಗಳಾಗಿ ಅಥವಾ ಅಸಾಧಕಗಳಾಗಿ ನಿರಾಕಾರ್ಯಗಳಲ್ಲ. ವಾಕ್ಯಗಳ ವಿರೋಧವು ಯುಕ್ತಿಗಳಿಗೆ ಪ್ರತೀತವಾಗುತ್ತಿರಲು ಅವುಗಳು ಯುಕ್ತಿಗಳೇ. ಸಮೀಚೀನಯುಕ್ತಿಗಳಲ್ಲ. ಆಭಾಸಗಳೇ. ಅಥವಾ ವಾಕ್ಯಗಳಿಗೆ ಪರಸ್ಪರ ವಿರೋಧವು ಉಂಟಾದರೆ ಏಕವಾಕ್ಯವನ್ನು ಅನುಸರಿಸಿಕೊಂಡಿರುವ ನ್ಯಾಯಗಳೇ ಅರ್ಥಸಾಧಕಗಳು. ಶುಷ್ಕಯುಕ್ತಿಗಳಲ್ಲ; ಹೀಗೆ ಬೃಹತ್ಸಂಹಿತೆಯಲ್ಲಿ ಹೇಳಿದೆ. ॥ ೨೬ ॥

ಟೀಕೆ ॥ ಯುಕ್ತ್ಯಂತರದಿಂದ ಜೀವನಿಗೆ ಸ್ವತಃ ಕರ್ತೃತ್ವವನ್ನು ನಿರಾಕರಿಸತಕ್ಕ ಸೂತ್ರವನ್ನು ಉಪನ್ಯಾಸಮಾಡುತ್ತಾರೆ—

## ಸೂತ್ರ ॥ ಓಂ ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ ಓಂ ॥ ೨೭ ॥

ಸೂತ್ರಾರ್ಥ ॥ ಜೀವನು ಸರ್ವಕಾರ್ಯಗಳಲ್ಲಿ (೧) ಸರ್ವಸಾಮರ್ಥ್ಯದಿಂದ ಪ್ರವೃತ್ತಿ ಮಾಡುತ್ತಾನೋ (೨) ಅಂಶದಿಂದ ಪ್ರವೃತ್ತಿಮಾಡುತ್ತಾನೋ. ೧ನೇದ್ದು ಕೂಡಲಾರದು. ಏಕೆಂದರೆ— ಕೃತ್ಸ್ನ ಪ್ರಸಕ್ತಿಃ=ಹಾಗೆ ಇದ್ದರೆ ಜೀವಗೆ ಸರ್ವವಿಷಯದಲ್ಲಿಯೂ ಪೂರ್ಣಶಕ್ತಿಯಿಂದ ಪ್ರವೃತ್ತಿಯು ಬರಬೇಕಾಗುವುದು. ೨ನೇದ್ದು ಕೂಡಲಾರದು. ಅವಯವವಿಲ್ಲದಿರುವುದರಿಂದ ಅಂಶವನ್ನು ಅಂಗೀಕರಿಸಿದರೆ ಅವಯವವಿಲ್ಲವೆಂದು ಹೇಳುವ ಶ್ರುತಿವಿರೋಧವು ಬರುವುದು. ತಥಾಚ ಜೀವನು ಸ್ವತಂತ್ರಕರ್ತನಲ್ಲ. ಅಥವಾ ಜೀವನಿಗೆ ಔಪಾಧಿಕ ಅಂಶವನ್ನು ಅಂಗೀಕರಿಸಿದರೆ—ಉಪಾಧಿಗೆ ಸರ್ವಜೀವಸಂಬಂಧವು ಬರಬೇಕಾಗುವುದು. ತಥಾಚ ಉಪಾಧಿಗ್ರಸ್ತಕ್ಕೂ ಉಪಾಧಿಕೃತಾಂಶಕ್ಕೂ ಭೇದವು ಇಲ್ಲದೆ ಹೋಗಬೇಕಾಗುವುದು. ಅಂಶಸಂಬಂಧವಿದ್ದರೂ ನಿರವಯವತ್ವ ಶ್ರುತಿವಿರೋಧವು ಬರುವುದು.

**ಭಾಷ್ಯ ॥ ಅಯಂ ಚ ದೋಷೋ ಜೀವಕರ್ತೃತ್ವಪಕ್ಷೇ । ಏಕೇನಾಂಗುಲಿಮಾತ್ರೇಣ ಪ್ರವರ್ತಮಾನೋಽಪಿ ಪೂರ್ಣಪ್ರವೃತ್ತಿಃ ಸ್ಯಾತ್। ನ ಚ ತದ್ಯುಜ್ಯತೇ। ಸಾಮರ್ಥ್ಯೈಕದೇಶದರ್ಶನಾತ್ ॥ ೧೧ ॥**

ಭಾಷ್ಯಾರ್ಥ ॥ ಜೀವನು ಸ್ವತಃ ಕರ್ತನು ಎನ್ನುವ ಪಕ್ಷದಲ್ಲಿ ಹಿತಾಕ್ರಿಯಾದಿದೋಷಗಳು ಮಾತ್ರ ಬರುವುದಿಲ್ಲ. ಮತ್ತೆ ಈ ದೋಷಗಳೂ ಬರುವುವು (ಜೀವನು (೧) ಸರ್ವಕಾರ್ಯಗಳಲ್ಲಿ ಸರ್ವ ಸಾಮರ್ಥ್ಯದಿಂದ ಪ್ರವರ್ತಿಸುತ್ತಾನೋ (೨) ಅಥವಾ ಅಂಶದಿಂದಲೋ ೧ನೇ ಪಕ್ಷವು ಅಯುಕ್ತವು.) ಒಂದು ಅಂಗುಲಿಮಾತ್ರದಿಂದ ತೃಣಾದಾನಾದಿಗಳಲ್ಲಿ ಪ್ರವೃತ್ತಿಮಾಡಿದವನೂ ಕೂಡ ಪೂರ್ಣಶಕ್ತಿಯಿಂದ ಪ್ರವೃತ್ತಿಯುಳ್ಳವನು ಆಗಬೇಕಾಗುವನು. ಆದಾದರೂ ಕೂಡಲಾರದು. ಜೀವನಿಗೆ ಕಾರ್ಯಗಳಲ್ಲಿ ಸ್ವರೂಪ ಸಾಮರ್ಥ್ಯೈಕದೇಶದಿಂದ ಪ್ರವೃತ್ತಿಯು ಅನುಭೂತವಾಗಿದೆ.

**ಪೀಠಿಕೆ ॥** ಅಂಶದಿಂದಲೋ ಎನ್ನುವ ಎರಡನೇ ಪಕ್ಷವನ್ನು ಅನುವಾದ ಮಾಡಿ ದೂಷಿಸುತ್ತಾರೆ—

**ಭಾಷ್ಯ ॥ ನ ಚೈಕದೇಶೇನ । ನಿರವಯವತ್ವಾತ್ । ಅಥ ಯಃ ಸ ಜೀವಃ ಸ ನಿತ್ಯೋ ನಿರವಯವೋ ಜ್ಞಾತಾಽಜ್ಞಾತಾ ಸುಖೀ ದುಃಖೀ ಶರೀರೇಂದ್ರಿಯಸ್ಥಃ । ಇತಿ (ಹಿ) ಭಾಲ್ಲವೇಯಶ್ರುತಿಃ ॥ ೧೨ ॥**

ಭಾಷ್ಯಾರ್ಥ ॥ ಜೀವನು ತನ್ನ ಸಾಮರ್ಥ್ಯೈಕದೇಶದಿಂದ ಆವಾವ ಕಾರ್ಯಗಳಲ್ಲಿ ಪ್ರವರ್ತಿಸುತ್ತಾನೆಂದು ಹೇಳಕೂಡದು (ಏಕೆ ಎಂದರೆ) ಜೀವನಿಗೆ ಅಂಶವಿಲ್ಲದಿರುವುದರಿಂದ. (ನಿರಂಶತ್ವವನ್ನೂ ಅಂಗೀಕರಿಸದಿದ್ದರೆ ನಿರಂಶತ್ವ ಪ್ರತಿಪಾದಕವಾದ ಶ್ರುತಿವಿರೋಧವನ್ನು ಹೇಳುತ್ತಾರೆ.) ಯಾರು ಇಂತಹವನೋ, ಅವನು ಜೀವನು, ನಿತ್ಯನು, ನಿರಂಶನು, ತಿಳಿಯತಕ್ಕವನು ಸಂಪೂರ್ಣವಾಗಿ ತಿಳಿಯದಿರುವವನು, ಸುಖವುಳ್ಳವನು, ದುಃಖವುಳ್ಳವನು, ಶರೀರೇಂದ್ರಿಯಗಳಿಗೆ ಅಧಿಷ್ಠಾತನು ಎಂದು ಭಾಲ್ಲವೇಯಶ್ರುತಿಯು.

**ಪೀಠಿಕೆ ॥** ಹಾಗಾದರೆ—ಏಕದೇಶೇನ ಎನ್ನುವ ಎರಡನೇ ಪಕ್ಷವನ್ನೇ ಆಶ್ರಯಿಸುತ್ತೇವೆ, ನಿರಂಶತ್ವ ಶ್ರುತಿವಿರೋಧವೂ ಇಲ್ಲ. ಸ್ವಾಭಾವಿಕಾಂಶಗಳು ಇಲ್ಲದಿದ್ದರೂ ಔಪಾಧಿಕ ಅಂಶಗಳು ಇರುತ್ತವೆ ಎಂದು ಅಂಗೀಕರಿಸಿರುವೆವು. ಶ್ರುತಿಯು ಸ್ವಾಭಾವಿಕ ಅಂಶವನ್ನೇ ನಿಷೇಧಿಸುತ್ತದೆ ಎಂದು ಆಶಂಕಿಸಿಕೊಂಡು ಜೀವಾಸಂಬದ್ಧವಾದ ಉಪಾಧಿಯು ಅಂಶಕಾರಕವಾದರೆ ಅತಿಪ್ರಸಂಗವು ಬರುವುದರಿಂದ ಜೀವಸಂಬದ್ಧವೇ ಅಂಶಕಾರಕವೆಂದು ಹೇಳಿದರೆ ಉಪಾಧಿಸಂಬಂಧವು (೧) ಸಮಗ್ರ ಜೀವನಿಗೋ (೨) ಜೀವಾಂಶಕ್ಕೋ ಎಂದು ವಿಕಲ್ಪಿಸಿಕೊಂಡು ಸಮಗ್ರಜೀವನಿಗೆ ಎನ್ನುವುದು ಕೂಡುವುದಿಲ್ಲವೆನ್ನುತ್ತಾರೆ—

**ಭಾಷ್ಯ ॥ ನ ಚೋಪಾಧಿಕೃತೋಽಂಶಃ ಸ ಏವ । ಅಂಶ ಉಪಸಹಿತ ಇತಿ ದ್ವಿತ್ವಾಪೇಕ್ಷತ್ವಾತ್ ॥ ೧೩ ॥**

ಭಾಷ್ಯಾರ್ಥ ॥ ಸಮಗ್ರಜೀವನು ಉಪಾಧಿಗ್ರಸ್ತನು, ಅಂಶದಲ್ಲಿ ಉಪಾಧಿಸಂಬಂಧವು

ಎನ್ನುವುದು ಅಲ್ಲ (ಏಕೆಂದರೆ) ಆ ಪಕ್ಷದಲ್ಲಿ ಅವನು ಉಪಾಧಿಕೃತವಾದ ಅಂಶವುಳ್ಳವನು ಆಗಲಾರನು. (ಅಂದರೆ—ಸಮಗ್ರ ಜೀವನೂ ಉಪಾಧಿಗ್ರಸ್ತನಾದುದರಿಂದ ಪುನಃ ಆ ಜೀವನಿಗೆ ಉಪಾಧಿಕೃತ ಅಂಶವತ್ತ್ವವು ಕೂಡಲಾರದು.) (ಜೀವಾಂಶಕ್ಕೋ ಎನ್ನುವ ೨ನೇದ್ದನ್ನು ನಿರಾಕರಿಸಿರುತ್ತಾರೆ) ಅಂಶವು ಉಪಾಧಿಗ್ರಸ್ತವು ಎನ್ನುವ ಎರಡನೇ ಪಕ್ಷವೂ ಕೂಡಲಾರದು. ಉಪಾಧಿ ಸಂಬಂಧಕ್ಕಾಗಿ ಸ್ವಾಭಾವಿಕವಾದ ಅಂಶಕ್ಕೆ ದ್ವಿತ್ವದ ಅಪೇಕ್ಷೆಯಿದ್ದುದರಿಂದ ತಥಾಚ ಸರ್ವತ್ರ ಉಪಹಿತ ಅನುಪಹಿತ ದ್ವಿರೂಪವನ್ನು ಅಪೇಕ್ಷಿಸಿಕೊಂಡೇ ಉಪಾಧಿಯು ಪ್ರವೃತ್ತವಾಗುವುದರಿಂದ ಅದಕ್ಕಾಗಿ ಸ್ವಾಭಾವಿಕ ಎರಡು ಅಂಶಗಳನ್ನು ಅಂಗೀಕರಿಸಿದರೆ ನಿರಂಶತ್ವಶ್ರುತಿವಿರೋಧವು. ಅದೂ ಔಪಧಿಕವಾದರೆ ಅನವಸ್ಥೆಯು ಬರುವುದು.

**ಪೀಠಿಕೆ ॥** ಹಾಗಾದರೆ ಜೀವನಿಗೆ ಕರ್ತೃತ್ವವು ಯುಕ್ತಿವಿರೋಧವಾದುದರಿಂದ ಅವಿಚಾರಿತ ರಮಣೀಯವಾದ ಅವಿದ್ಯಾನಿಮಿತ್ತಕವಾಗಲಿ, ಎಂದರೆ—

**ಭಾಷ್ಯ ॥ ನ ಚಾನ್ಯತ್ಕಲ್ಪ್ಯಂ । ಯದ್ಧಿ ಯುಕ್ತ್ಯಾ ವಿರುಧ್ಯೇತ ತದೀಶಕೃತಮೇವ ಹಿ । ಇತಿ ಗತ್ಯಂರೋಕ್ತೇಃ ॥ ೨೭ ॥ ಅಧಿ. ೭ ॥**

**ಭಾಷ್ಯಾರ್ಥ ॥** (ಅಪ್ರಾಮಾಣಕವಾದುದರಿಂದಲೂ ಅದರಿಂದ ನಿರ್ವಾಹವಾಗದೆ ಇರುವುದರಿಂದಲೂ ಅನಿರ್ವಾಚ್ಯ ಅವಿದ್ಯಾನಿಮಿತ್ತಕವಾದ ಜೀವಕರ್ತೃತ್ವವನ್ನು ಕಲ್ಪಿಸಲಿಕ್ಕೇ ಕೂಡದು.) (ಹಾಗಾದರೆ ಯುಕ್ತಿವಿರೋಧಪರಿಹಾರಕ್ಕಾಗಿ ಉಪಾಯವಿಲ್ಲದಿರುವುದರಿಂದ ಜೀವಕರ್ತೃತ್ವವು ಕೂಡುವುದಿಲ್ಲವೆಂದರೆ) ಯಾವುದು ಪ್ರತೀತವಾದಾಗ್ಯೂ ಗುಣಮೊದಲಾದ ವಸ್ತುವು ಯುಕ್ತಿಯಿಂದ ವಿರುದ್ಧವಾಗುತ್ತದೋ, ಅದು ಈಶ್ವರನ ಅಧೀನವೆಂದೇ ಕಲ್ಪಿಸಲ್ಪಡಬೇಕು. ಅಪ್ರಾಮಾಣಕ ಅವಿದ್ಯಾನಿಮಿತ್ತಕವೆಂದು ಕಲ್ಪಿಸಲ್ಪಡಕೂಡದು. ಹೀಗೆ ನ್ಯಾಯ ಸೂಚಕ ವಚನದಿಂದ ಗತ್ಯಂತರವನ್ನು ಹೇಳಿದ್ದರಿಂದ. ತಥಾಚ ಜೀವಕರ್ತೃತ್ವವು ಪ್ರಮಿತವಾಗೋಣ ಅಲ್ಲಿ ಯುಕ್ತಿವಿರೋಧಪರಿಹಾರಕ್ಕೆ ಈಶ್ವರಾಧೀನತ್ವರೂಪಉಪಾಯಾಂತರವನ್ನೇ ಹೇಳಿದೆ. ಆದಕಾರಣ ಅದು ಅನಿರ್ವಾಚ್ಯಾ ವಿದ್ಯಾಧೀನವೆಂದು ಕಲ್ಪಿಸಕೂಡದು.

## ಅಧಿಕರಣ ಸಾರಾಂಶ

ವಿಷ್ಣುವೇ ಸ್ವತಂತ್ರಕರ್ತನು ಎಂದು ಜನ್ಮಾದಿಸೂತ್ರದಲ್ಲಿ ಹೇಳಿದ್ದು ಯುಕ್ತವೋ ಅಯುಕ್ತವೋ ಎಂದು ಸಂದೇಹವು. ಜೀವಾದ್ಯನಂತಿ ಭೂತಾನಿ ಇತ್ಯಾದಿ ಶ್ರುತಿ ಮತ್ತು ಅಹಮಿದಂ ಕರೋಮಿ ಇತ್ಯಾದಿ ಸ್ವತಂತ್ರಕರ್ತೃತ್ವಾನುಭವ ಇವುಗಳ ಸಂವಾದವುಳ್ಳ ಜೀವಃ ಕರ್ತಾ ಚೇತನತ್ವಾತ್ ಈಶವತ್ ಎನ್ನುವ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧಿಸುವ ಯುಕ್ತಿಯಿಂದ ವಿಷ್ಣುವೇ ಸ್ವತಂತ್ರಕರ್ತನು ಎನ್ನುವುದು ವಿರುದ್ಧವಾಗಿದೆ. ಏವಂಚ ಘಟಾದಿಗಳಲ್ಲಿ ಜೀವನಿಗೇನೇ ಕರ್ತೃತ್ವವು ಸಿದ್ಧವಾಗೋಣ ಲಾಘವದಿಂದ ಮಹದಾದಿಗಳಲ್ಲಿಯೂ ಜೀವನೇ ಕರ್ತನು ಎನ್ನುವುದು ನ್ಯಾಯವಾಗಿದೆ. ಆದಕಾರಣ ಈಶ್ವರಕರ್ತೃತ್ವವು ಯುಕ್ತವಲ್ಲ. ಅಥವಾ ಮಹದಾದಿಕರ್ತೃತ್ವವು ಜೀವನಲ್ಲಿ ಅನುಭವವಿರುದ್ಧವಾದ ಪ್ರಯುಕ್ತ ಅದಕ್ಕೆ

ಈಶ್ವರನು ಕರ್ತನಾಗಲಿ, ಘಟಾದಿಗಳಿಗೆ ಅಲ್ಲ, ಘಟಾದಿಗಳಿಗೆ ಅನುಭವಸಿದ್ಧ ಜೀವನು ಮಾತ್ರ ಕರ್ತನು ಎಂದು ಇಟ್ಟುಕೊಂಡರೆ ಕಲ್ಪನಾಲಾಘವವು, ಎಂದು ಪೂರ್ವಪಕ್ಷಮಾಡಿಕೊಂಡು, ಜೀವನೇ ಸ್ವತಂತ್ರಕರ್ತನು ಎಂದಾದರೆ ಸ್ವಹಿತಾಕರಣವೂ ಸ್ವಾಹಿತಕರಣವೂ ಅನುಭವಸಿದ್ಧವಾದುದು ಕೂಡಲಾರದು. ತೃಣೋದ್ಧರಣಾದಿಗಳಲ್ಲಿ ಕೃತ್ಸ್ನಸಾಮರ್ಥ್ಯದಿಂದ ಪ್ರವೃತ್ತಿಯು ಅನುಭವವಿರುದ್ಧ ವಾದುದರಿಂದಲೂ ಏಕದೇಶದಿಂದ ಪ್ರವೃತ್ತಿಯು ಏಷ ನಿತ್ಯಃ ನಿರವಯವಃ ಎನ್ನುವ ಶ್ರುತಿಯಿಂದಲೂ ವಿರುದ್ಧವಾದುದರಿಂದ ಕೂಡಲಾರದು. ಸರ್ವದಾ ಸರ್ವತ್ರ ಇದ್ದು ಪ್ರವೃತ್ತಿ ಮಾಡತಕ್ಕ ಈಶ್ವರನಿಗಾದರೂ ದೇವಾದಿಗಳಂತೆಯೂ ಪಿಶಾಚಾದಿಗಳಂತೆಯೂ ಅಂತರ್ಧಾನಶಕ್ತಿಯಿದ್ದುದರಿಂದ ಪ್ರತ್ಯಕ್ಷಾಭಾವವು ಕೂಡುವುದರಿಂದ ಜೀವಾದ್ಯನಂತಿ ಇತ್ಯಾದಿ ಶ್ರುತಿಗಳಿಗೆ ಈಶ್ವರಪರತ್ವವು ಉಪಪನ್ನ. ತಥಾಚ ಜೀವನು ಸ್ವತಂತ್ರಕರ್ತನಲ್ಲ ಪ್ರಮಿತಈಶ್ವರನೇ ಘಟಾದಿಗಳಲ್ಲಿಯೂ, ಮಹದಾದಿಗಳಲ್ಲಿಯೂ ಸ್ವತಂತ್ರಕರ್ತನು ಎಂದಂಗೀಕರಿಸಿದರೆ ಯಾವ ದೋಷವೂ ಇಲ್ಲದಿರುವುದರಿಂದ ವಿಷ್ಣುವಿಗೇನೇ ಸ್ವತಂತ್ರ ಕರ್ತೃತ್ವವು ಯುಕ್ತವು. ತಥಾಚ ಕರ್ತೃತ್ವ ಮಾತ್ರಂ ಜೀವಸ್ಯ ಮಮಾಪೀಷ್ಟಂ ಘಟಾದಿಷು । ಅನನ್ಯಾಧೀನ ಕರ್ತೃತ್ವೇ ಸ್ಯಾದ್ಧಿತಾಕರಣಾದಿಕಂ ॥ ೧ ॥ ಕಥಂ ನ ಕುರ್ಯಾತ್ಸ್ವೈಕ್ಷಾವಾನ್ ಸ್ವತಂತ್ರಃ ಸ್ವಹಿತಂ ಸದಾ । ಕಥಂ ಚ ಸ್ವಾಹಿತಂ ಕುರ್ಯಾತ್ ತಥಾಚ ಸಕಲೋ ಜನಃ ॥ ೨ ।ಜ ಪೂರ್ಣಾನಂದಶ್ಚ ನಿರ್ದುಃಖಃ ಸರ್ವದೈವ ಪ್ರಸಜ್ಯತೇ । ಜೀವಸ್ತತೋ ದಾರುಯೋಷಾವದನ್ಯಾಧೀನಚೇಷ್ಟಿತಃ ॥ ಅಧಿ. ೭ ॥

ಇತರವ್ಯಪದೇಶಾಧಿಕರಣವು ಸಮಾಪ್ತವಾಯಿತು.

## ೮. ಶ್ರುತ್ಯಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ವಿಷ್ಣುವು ಸರ್ವಕರ್ತನು ಎನ್ನುವ ವಿಷಯದಲ್ಲಿ ಪ್ರಬಲ ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ. ಜೀವನು ಕರ್ತನು ಎನ್ನುವ ಪಕ್ಷದಲ್ಲಿ ಕೃತ್ಸ್ನಪ್ರಸಕ್ತಿ ಮೊದಲಾದ ಯಾವ ದೋಷಗಳು ಹೇಳಲ್ಪಟ್ಟವೆಯೋ ಅವುಗಳು ಈಶ್ವರಪಕ್ಷದಲ್ಲಿಯೂ ವಿಶೇಷ ಕಾಣದಿರುವುದರಿಂದ ಸಮಾನಗಳು ಆದಕಾರಣ ಈಶ್ವರನಿಗೆ ಜಗತ್ಕರ್ತೃತ್ವವು ಯುಕ್ತವಲ್ಲ. ಹೀಗೆ ಪ್ರಾಪ್ತವಾದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

### ಸೂತ್ರ ॥ ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ ॥ ೨೮ ॥

ಸೂತ್ರಾರ್ಥ ॥ ಈಶ್ವರನು ಸ್ವತಂತ್ರಕರ್ತನು ಎನ್ನುವ ಪಕ್ಷದಲ್ಲಿ ಕೃತ್ಸ್ನಪ್ರಸಕ್ತಿಯಾಗಲೀ ನಿರವಯವತ್ವ ಶಬ್ದಕೋಪವಾಗಲೀ ಇಲ್ಲ. ಯೋಽಸೌ ವಿರುದ್ಧಃ ಎನ್ನುವ ಶ್ರುತಿಯಿಂದಲೇ, ಈಶ್ವರನು ಆಗಮಗಳಿಂದಲೇ ತಿಳಿಯಲ್ಪಡತಕ್ಕವನಾದುದರಿಂದ. ಅಂತೂ ಆಗಮೈಕಪ್ರತಿಪಾದ್ಯನಾದ ಈಶ್ವರನಲ್ಲಿ ಲೌಕಿಕಯುಕ್ತಿವಿರೋಧವು ಅಪ್ರಯೋಜಕವು. ಆತನು ಲೋಕವಿಲಕ್ಷಣನಾಗಿಯೇ ಶ್ರುತ್ಯಾದಿಗಳಿಂದ ಸಿದ್ಧನಾಗಿರುವನು.

**ಭಾಷ್ಯ ॥ ನ ಚೇಶ್ವರಪಕ್ಷೇಽಯಂ ವಿರೋಧಃ । ಯೋಽಸೌ ವಿರುದ್ಧೋಽವಿರುದ್ಧೋ ಮನುರಮನುರವಾಗ್ವಾಗಿಂದ್ರೋಽನಿಂದ್ರಃ ಪ್ರವೃತ್ತಿರಪ್ರವೃತ್ತಿಃ ಸ ಪರಃ ಪರಮಾ(ಪರಾ)ತ್ಮಾ ॥ ಇತಿ ಪೈಂಗ್ಯಾದಿಶ್ರುತೇರೇವ ॥ ೧ ॥**

ಭಾಷ್ಯಾರ್ಥ ॥ ಈಶ್ವರನು ಕರ್ತನು ಎನ್ನುವ ಪಕ್ಷದಲ್ಲಿ ಜೀವಕರ್ತೃತ್ವಪಕ್ಷದಲ್ಲಿ ಹೇಳಿದ ಕೃತ್ಸ್ನಪ್ರಸಕ್ತ್ಯಾದಿರೂಪವಾದ ದೋಷವು ಇಲ್ಲ. ಏಕೆಂದರೆ—ಶ್ರುತೇಸ್ತು=ಲೋಕವಿರುದ್ಧ ಧರ್ಮಗಳು ಈಶ್ವರನಲ್ಲಿ ಅವಿರುದ್ಧವಾಗಿ ಇರುತ್ತವೆ ಎಂದು ಹೇಳತಕ್ಕ ಯೋಽಸೌ ಇತ್ಯಾದಿ ಪೈಂಗ್ಯಾದಿಗಳ ಶ್ರುತಿಯಿಂದಲೇ ಜೀವಪಕ್ಷದಲ್ಲಿ ಇದ್ದಂತೆಯೇ ಈಶ್ವರಪಕ್ಷದಲ್ಲಿ ಪ್ರತ್ಯಕ್ಷಾದಿವಿರೋಧವಿಲ್ಲ. ಯಾರು ಲೋಕದೃಷ್ಟಿಯಿಂದ ವಿರುದ್ಧನೋ ಅಂದರೆ ಲೌಕಿಕಕರ್ತೃವಿನಿಂದ ವಿರುದ್ಧಲಕ್ಷಣವುಳ್ಳವನೋ, ಪ್ರಮಾಣಗಳಿಂದ ವಸ್ತುತಃ ಅವಿರುದ್ಧನೋ, ಸಮಸ್ತವನ್ನು ತಿಳಿಯತಕ್ಕವನು, ಸ್ವತಂತ್ರವಾಗಿ ಮತ್ತೊಬ್ಬನು ತಿಳಿಯತಕ್ಕವನು ಇಲ್ಲದಿರುವವನು. ಸ್ವತಂತ್ರವಾಗಿ ವಕ್ತೃಂತರವಿಲ್ಲದಿರುವವನು. ಸ್ವತಂತ್ರವಾಗಿ ಹೇಳತಕ್ಕವನು. ಪರಮೇಶ್ವರನು ಮತ್ತೊಬ್ಬ ಸ್ವಾಮಿಯು ಇಲ್ಲದಿರುವವನು. ಸರ್ವಪ್ರವರ್ತಕನು. ಪ್ರವರ್ತಕಶೂನ್ಯನು. (ಸ ಪರಃ) ಲಕ್ಷ್ಮೀಸಹಿತನು. ಅಥವಾ ಸರ್ವೋತ್ತಮನು. ಶ್ರೀಪರಮಾತ್ಮನು ಎಂದು ಶ್ರುತ್ಯರ್ಥವು. ಅಂತೂ ಲೋಕವಿರುದ್ಧಧರ್ಮಗಳು ಈಶ್ವರನಲ್ಲಿ ಅವಿರುದ್ಧಗಳಾಗಿ ಇರುತ್ತವೆ ಎಂದು ಶ್ರುತಿಯಲ್ಲಿ ಹೇಳಿಯದೆ.

ಪೀಠಿಕೆ ॥ ನಿರವಯವನಾದ ಶ್ರೀಹರಿಗೆ ಏಕದೇಶದಿಂದ ಪ್ರವೃತ್ತ್ಯಾದಿ ಧರ್ಮಗಳನ್ನು ಶ್ರುತಿಯಲ್ಲಿ ಹೇಳಿದಾಗ್ಯೂ ಯುಕ್ತಿವಿರುದ್ಧವಾದುದರಿಂದ ಈಶ್ವರನಲ್ಲಿ ಅಂಗೀಕರಿಸಲಿಕ್ಕೆ ಆಗುವುದಿಲ್ಲವೆಂದು ಹೇಳಕೂಡದು. ಏಕೆಂದರೆ—

**ಭಾಷ್ಯ ॥ ಶಬ್ದಮೂಲತ್ವಾಚ್ಚ ನ ಯುಕ್ತಿವಿರೋಧಃ ॥ ೨ ॥**

ಭಾಷ್ಯಾರ್ಥ ॥ ಶ್ರೀಹರಿಗೆ ಅಥವಾ ಶ್ರೀಹರಿಯ ಧರ್ಮಸಮುದಾಯಕ್ಕೆ ಆಗಮವೇ ಗಮಕವಾಗಿರುವುದರಿಂದ ಅಂದರೆ ಆಗಮಸಿದ್ಧವಾದ ಅರ್ಥವನ್ನು ಬಾಧಿಸಲಿಕ್ಕೆ ಕೇವಲ ಯುಕ್ತಿಯು ಅಸಮರ್ಥವಾಗಿದೆ. ಆದಕಾರಣ ಯುಕ್ತಿವಿರೋಧವು ಅಕಿಂಚಿತ್ಕರವು.

ಪೀಠಿಕೆ ॥ ಕೇವಲ ಶಬ್ದೈಕ ಸಮಧಿಗಮ್ಯವಾದುದರಿಂದ (ಅಂದರೆ ಯುಕ್ತಿಗೆ ವಿಷಯನಾಗದೆ ಇರುವುದರಿಂದ) ಯುಕ್ತಿವಿರೋಧಪ್ರಸಕ್ತಿಯಿಲ್ಲವೆಂದಿಷ್ಟೇ ಅಲ್ಲ. ಮತ್ತೆ ಶಬ್ದೈಕಸಮಧಿಗಮ್ಯನಲ್ಲಿ ಈಶ್ವರನಲ್ಲಿ ಯುಕ್ತಿ ವಿರೋಧವು ಇಲ್ಲವೆನ್ನುವುದು ಸ್ಮೃತಿಸಿದ್ಧವೂ ಆಗಿದೆ ಎನ್ನುತ್ತಾರೆ—

**ಭಾಷ್ಯ ॥ ಯದ್ವಾಕ್ಯೋಕ್ತಂ ನ ತದ್ಯುಕ್ತಿರ್ವಿರೋದ್ಧುಂ ಶಕ್ನುಯಾತ್ಕ್ವಚಿತ್ । ವಿರೋಧೇ ವಾಕ್ಯಯೋಃ ಕ್ವಾಪಿ ಕಿಂಚಿತ್ಸಾಹಾಯ್ಯಕಾರಣಂ ॥ ಇತಿ ಪುರುಷೋತ್ತಮತಂತ್ರೇ ॥ ॥ ೨೮ ॥ ॥ ೩ ॥**

ಭಾಷ್ಯಾರ್ಥ ॥ ಶುಷ್ಕಾನುಮಾನವು ಆಗಮೋಕ್ತವಾದ ಪ್ರಮೇಯವನ್ನು ನಿಷೇಧಿಸಲಿಕ್ಕೆ ಶಕ್ತವಾಗಲಾರದು. ಕೆಲವುಕಡೆ ವಾಕ್ಯಗಳಿಗೆ ಪರಸ್ಪರ ವಿರೋಧವು ಪ್ರತೀತವಾಗುತ್ತಿರಲು

ಏಕವಾಕ್ಯಾನುಕೂಲವಾದ ಯುಕ್ತಿಯು ಆಗಮದಿಂದ ಅರ್ಥವನ್ನು ಸಾಧಿಸುವ ವಿಷಯದಲ್ಲಿ ಅದಕ್ಕೆ ವಿರೋಧವನ್ನು ಪರಿಹರಿಸುತ್ತಾ ಕಿಂಚಿತ್ ಸಾಹಾಯ್ಯವನ್ನು ಮಾಡತಕ್ಕುದು, ಅನುಗ್ರಾಹಕವು. ಅಂದರೆ ಆ ವಿಷಯವನ್ನು ವ್ಯವಸ್ಥೆಪಡಿಸುತ್ತದೆ. ಹೀಗೆ ಪುರುಷೋತ್ತಮತಂತ್ರ ಎನ್ನುವ ಗ್ರಂಥದಲ್ಲಿ ಹೇಳಿದೆ. ॥ ೨೮ ॥

ಪೀಠಿಕೆ ॥ ಜೀವಪಕ್ಷದಲ್ಲಿಯೇ ಯುಕ್ತಿವಿರೋಧವು, ಈಶ್ವರಪಕ್ಷದಲ್ಲಿ ಯುಕ್ತಿವಿರೋಧವಿಲ್ಲ ಎನ್ನುವ ಅರ್ಥವನ್ನು ಯುಕ್ತ್ಯಂತರದಿಂದ ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ಓಂ ॥ ೨೯ ॥

**ಭಾಷ್ಯ ॥ ಪರಮಾತ್ಮನೋ ವಿಚಿತ್ರಾಶ್ಚ ಶಕ್ತಯಃ ಸಂತಿ ನಾನ್ಯೇಷಾಂ ॥ ೪ ॥**

ಭಾಷ್ಯಾರ್ಥ ॥ ಈಶ್ವರಪಕ್ಷದಲ್ಲಿ ಶಬ್ದೈಕಸಮಧಿಗಮ್ಯತ್ವರೂಪವಾದ ವಿಶೇಷವಿದ್ದುದರಿಂದ ಯುಕ್ತಿವಿರೋಧವಿಲ್ಲವೆಂದು ಮಾತ್ರವಲ್ಲ, ಮತ್ತೆ ಈಶ್ವರನಲ್ಲಿ ಯಾವ ಕಾರಣದಿಂದ ವಿಚಿತ್ರಗಳಾದ (ಅಂದರೆ ಯುಕ್ತಿವಿರೋಧನಿರಾಸಕಗಳಾದ) ಶಕ್ತಿಗಳು ಇವೆಯೋ, (ಆದುದರಿಂದಲೂ ಯುಕ್ತಿವಿರೋಧವಿಲ್ಲ)

ಪೀಠಿಕೆ ॥ ಈಶ್ವರನಿಗೇನೇ ವಿಚಿತ್ರಶಕ್ತಿಗಳು, ಇತರರಿಗೆ ಇಲ್ಲ ಎಂದು ಹೇಳುವ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ । ಏಕೋ ವಶೀ ಸರ್ವಭೂತಾಂತರಾತ್ಮಾ ಸರ್ವಾನ್ದೇವಾನೇಕ ಏವಾನುವಿಷ್ಟಃ ॥ ಇತಿ ಶ್ವೇತಾಶ್ವತರಶ್ರುತಿಃ ॥ ೨೯ ॥ ॥ ೫ ॥**

ಭಾಷ್ಯಾರ್ಥ ॥ ವಿಚಿತ್ರಶಕ್ತಿಯುಳ್ಳ ಪುರಾತನನಾದ ಪುರುಷನು ಭಗವಂತನೇ, ಇತರ ಜೀವರಿಗೆ ಪರಮಾತ್ಮಶಕ್ತಿಸಮಾನಗಳಾದ ಅನ್ಯ ನಿರಪೇಕ್ಷಗಳೂ ಅನುಕ್ತವಿಷಯಗಳೂ ಆದ ಶಕ್ತಿಗಳು ಇಲ್ಲವೇ ಇಲ್ಲ. ಪ್ರಧಾನನು, ಸರ್ವವನ್ನು ವಶೀಕರಿಸಿಕೊಂಡಿರತಕ್ಕವನು. ಬ್ರಹ್ಮಾದಿಸರ್ವಚೇತನರಿಗೂ, ಭೂಮಿ ಮೊದಲಾದ ಸರ್ವಜಡಗಳಿಗೂ ಅಂತರ್ನಿಯಾಮಕನು. ಎಲ್ಲಾ ದೇವತೆಗಳನ್ನು ಅಭಿನ್ನರೂಪದಿಂದಲೇ ಪ್ರೇರಿಸುವುದಕ್ಕಾಗಿ ಪ್ರವೇಶ ಮಾಡಿರುತ್ತಾನೆ. ಹೀಗೆ ಶ್ವೇತಾಶ್ವತರಶ್ರುತಿಯು.

ವಿಶೇಷಾಂಶ ॥ ವಿಚಿತ್ರಶಕ್ತಿಯೆಂದರೆ ಅವಯವಭೇದವಿಲ್ಲದಿರುವುದಕ್ಕೂ ಏಕದೇಶದಿಂದ ಪ್ರವೃತ್ತ್ಯಾದಿ ರೂಪವಾದ ಅಘಟಿತ ವಿಚಿತ್ರಕಾರ್ಯವನ್ನು ಮಾಡುವಿಕೆ. ॥ ೨೯ ॥

ಪೀಠಿಕೆ ॥ ವಿಷ್ಣುವಿಗೆ ಶ್ರುತಿಮೂಲತ್ವವಿದ್ದುದರಿಂದಲೂ ವಿಚಿತ್ರಶಕ್ತಿಯಿದ್ದುದರಿಂದಲೂ ಅಲ್ಲಿ ಯುಕ್ತಿ ವಿರೋಧವು ದೋಷವಾಗುವುದಿಲ್ಲವೆಂದು ಹೇಗೆ ಹೇಳಲ್ಪಡುತ್ತದೋ ಹಾಗೆಯೇ ಜೀವನಲ್ಲಿಯೂ ಚೇತನತ್ವಾದಿಲಿಂಗದಿಂದ ಯುಕ್ತಿವಿರೋಧವು ದೋಷವಲ್ಲವೆಂದು ಏಕೆ ಹೇಳಲಾಗುವುದಿಲ್ಲವೆನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರಕ್ಕೆ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸ್ವಪಕ್ಷದೋಷಾಚ್ಚ ಓಂ ॥ ೩೦ ॥

**ಸೂತ್ರಾರ್ಥ** ॥ ಜೀವಕರ್ತೃತ್ವಪಕ್ಷದಲ್ಲಿಯೇ ದೋಷವಿದ್ದುದರಿಂದ.

**ಭಾಷ್ಯ ॥ ಯೇ ದೋಷಾ ಇತರತ್ರಾಪಿ ತೇ ಗುಣಾಃ ಪರಮೇ ಮತಾಃ । ನ ದೋಷ ಪರಮೇಕಶ್ಚಿದ್ಗುಣಾ ಏವ ನಿರಂತರಾಃ । ಇತಿ ವಚನಾಜ್ಜೀವಪಕ್ಷ ಏವ ದೋಷಃ ನ ಪರಪಕ್ಷೇ ॥ ೬ ॥**

**ಭಾಷ್ಯಾರ್ಥ** ॥ ಈಶ್ವರನಿಂದ ಇತರರಾದ ಜೀವರಲ್ಲಿ ಯಾವ ದೋಷಗಳು ಪ್ರತೀತಗಳಾಗುತ್ತವೋ ಅವುಗಳು ದೋಷಗಳೇ. (ಯಾವ ರೀತಿಯಿಂದಲೂ ಅವುಗಳನ್ನು ಅದೋಷಗಳನ್ನಾಗಿ ತಿಳಿಯ ಬಾರದು. ಜೀವರಲ್ಲಿ ದೋಷಗಳು ಕೂಡುವುದರಿಂದ ದೋಷವಿಲ್ಲವೆಂದು ಕಲ್ಪಿಸತಕ್ಕ ಪ್ರಮಾಣವಿಲ್ಲ) ಅಂತಹ ದೋಷಗಳೇ ಶ್ರೀಪರಮಾತ್ಮನಲ್ಲಿ (ಕಂಡರೆ ಅವುಗಳು ಶ್ರೀಹರಿಯಲ್ಲಿ ಅಚಿಂತ್ಯಶಕ್ತ್ಯಾದಿಗಳು ಇದ್ದುದರಿಂದ) ಗುಣಗಳಾಗಿಯೇ ಕಲ್ಪಿಸಲ್ಪಡಬೇಕು. ಏಕೆಂದರೆ ಪರಮಾತ್ಮನಲ್ಲಿ ಯಾವದೊಂದು ದೋಷವೂ ಇಲ್ಲ. ಗುಣಗಳೇ ಇರುತ್ತವೆ. ಆ ಗುಣಗಳು ಈಶ್ವರನಿಂದ ಭೇದಶೂನ್ಯಗಳು. ಅಂತೂ ಈಶ್ವರನಂತೆಯೇ ಈಶ್ವರಾಭಿನ್ನ ಗುಣಗಳಲ್ಲಿಯೂ ದೋಷವನ್ನಾಗಲೀ ನಾಶವನ್ನಾಗಲೀ ಶಂಕಿಸಕೂಡದು. ಈ ವಚನದರೆಯಿಂದ ಜೀವಪಕ್ಷದಲ್ಲಿಯೇ ಯುಕ್ತಿವಿರೋಧವು, ಪರಮಾತ್ಮಪಕ್ಷದಲ್ಲಿ ಯುಕ್ತಿವಿರೋಧವಿಲ್ಲ.

**ಪೀಠಿಕೆ** ॥ ಈಶ್ವರನಂತೆಯೆ ಜೀವನೂ ನಿರ್ದೋಷನಾದುದರಿಂದ ಅಲ್ಲಿ ಪ್ರತೀತಗಳಾದ ದೋಷಗಳನ್ನು ಅದೋಷಗಳನ್ನಾಗಿ ಹೇಳುವುದೇ ನ್ಯಾಯವು ಎಂದರೆ—

**ಭಾಷ್ಯ ॥ ಅಥ ಯಃ ಸದೋಷಃ ಸಾಂಜನಃ ಸಜನಿಃ ಸ ಜೀವೋಽಥ ಯಃ ಸ ನಿರ್ದೋಷೋ ನಿಷ್ಕಲಃ ಸಗುಣಃ ಪರಃ ಪರಮಾ(ರಾ)ತ್ಮಾ । ಇತಿ ಕಾಷಾಯಣಶ್ರುತಿಃ ॥ ೩೦ ॥ ॥ ೭ ॥**

**ಭಾಷ್ಯಾರ್ಥ** ॥ ಯಾವನು ಅಜ್ಞಾನಾದಿದೋಷಸಹಿತನೋ ಪುಣ್ಯಪಾಪಾದಿಲೇಪಯುಕ್ತನೋ ಉತ್ಪತ್ತಿಯುಳ್ಳವನೋ ಆತನು ಜೀವನು. ಯಾವನು ನಿರ್ದೋಷನೋ ಭಿನ್ನಾಂಶಶೂನ್ಯನೋ ಅಥವಾ ಪ್ರಾಣಾದಿಪ್ರಾಕೃತಷೋಡಶಕಲಾರಹಿತನೋ ಜ್ಞಾನಾನಂದಾದಿಗುಣಗಳುಳ್ಳವನೋ, ಸರ್ವೋತ್ತಮನೋ, ಅವನು ಪರಮಾತ್ಮನು. ಹೀಗೆ ಕಾಷಾಯಣಶ್ರುತಿಯು.

**ವಿಶೇಷಾಂಶ** ॥ ಶ್ರೀಹರಿಯು ದೋಷಲೇಶರಹಿತನು ಭೇದವಿಲ್ಲದೆ ಇರುವ ಗುಣವುಳ್ಳವನು ಎನ್ನುವ ವಿಷಯದಲ್ಲಿ೧ ನಿರನಿಷ್ಟೋ ನಿರವದ್ಯಃ ೨ ನೇಹನಾನಾಸ್ತಿ ಕಿಂಚನ ೩ ಏವಂ ಧರ್ಮಾನ್ ಪೃಥಕ್ ಪಶ್ಯನ್ ಇದುಮೊದಲಾದ ಶ್ರುತಿಗಳು ಇವೆ. ॥ ೩೦ ॥

**ಪೀಠಿಕೆ** ॥ ಹಾಗಾದರೆ ಈಶ್ವರನಿಗೆ ವಿಚಿತ್ರಶಕ್ತಿಗಳಿದ್ದರೂ ಅಂತಹ ಶಕ್ತಿಗಳು ಅಲ್ಪವಿಷಯಗಳಾದರೆ ಈಶ್ವರಪಕ್ಷದಲ್ಲಿಯೂ ಹಿಂದೆ ಹೇಳಿದ ದೋಷವನ್ನು ಪರಿಹರಿಸಲು ಸಾಧ್ಯವೇ ಇಲ್ಲವೆನ್ನುವ ಶಂಕೆಯನ್ನು ನಿವಾರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸರ್ವೋಪೇತಾ ಚ ತದ್ದರ್ಶನಾತ್ ಓಂ ॥ ೩೧ ॥

**ಸೂತ್ರಾರ್ಥ** ॥ ಪರದೇವತೆಯು (ಶ್ರೀಹರಿಯು) ಸರ್ವವಿಷಯಕ ಸರ್ವಕಾಲದಲ್ಲಿರತಕ್ಕ ಸಂಪೂರ್ಣ ಶಕ್ತಿಗಳಿಂದ ಯುಕ್ತವಾಗಿದೆ. ಸರ್ವೈರ್ಯುಕ್ತಾ ಎನ್ನುವ ಶ್ರುತಿಯಲ್ಲಿ ಹಾಗೆ ಕಂಡದ್ದರಿಂದ (ಅಂತೂ ಜೀವಪಕ್ಷದಲ್ಲಿಯೇ ದೋಷವು. ಶ್ರೀಹರಿಯು ಜಗತ್ಕರ್ತನು ಎನ್ನುವ ಪಕ್ಷದಲ್ಲಿ ಯಾವ ದೋಷವೂ ಇಲ್ಲ)

**ಭಾಷ್ಯ ॥ ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಂ । ನಿತ್ಯಾನಂದಾ ನಿತ್ಯರೂಪಾऽಜರಾ ಚ ಯಾ ಶಾಶ್ವತಾತ್ಮೇತಿ ಚ ಯಾಂ ವದಂತಿ । ಇತಿ(ಚ)ಚತುರ್ವೇದಶಿಖಾಯಾಂ ॥ ಅತೋ ನ ಕೇವಲಂ ವಿಚಿತ್ರಶಕ್ತಿಃ । ಕಿಂತು ಸರ್ವಶಕ್ತಿರೇವ ॥ ೩೧ ॥ ॥ ೮ ॥**

**ಭಾಷ್ಯಾರ್ಥ** ॥ ಯಾವ ದೇವತೆಯನ್ನು ಕವಿಗಳು ನಿರ್ವಿಕಾರಸ್ವರೂಪವುಳ್ಳದ್ದನ್ನಾಗಿಯೂ, ಮತ್ತು ನಿತ್ಯಶಕ್ತಿ ಉಳ್ಳದ್ದನ್ನಾಗಿಯೂ, ಹೇಳುತ್ತಾರೋ ಯಾವ ದೇವತೆಯು ನಿತ್ಯವಾದ ಆನಂದವುಳ್ಳದ್ದೋ, ನಿತ್ಯವಾದ ರೂಪವುಳ್ಳದ್ದೋ, ಮುಪ್ಪು ಇಲ್ಲದಿದ್ದದ್ದೋ ಅಂತಹ ಶ್ರೀಹರಿಯು ಸರ್ವಪದಾರ್ಥಗಳನ್ನೂ ವಿಷಯೀಕರಿಸತಕ್ಕ ಮತ್ತು ಸರ್ವಕಾಲದಲ್ಲಿರತಕ್ಕ ಶಕ್ತಿಗಳಿಂದ ಯುಕ್ತವಾದದ್ದು ಎಂದು ಚತುರ್ವೇದಶಿಖಾದಲ್ಲಿ ಹೇಳಿಯದೆ. ಆದಕಾರಣ ಶ್ರೀಹರಿಯು ವಿಚಿತ್ರಶಕ್ತಿಯುಳ್ಳವನು ಮಾತ್ರವಲ್ಲ ಮತ್ತೆ ಸರ್ವವಿಷಯಕಶಕ್ತಿಯುಳ್ಳವನೇ ಆಗಿರುತ್ತಾನೆ. ॥ ೩೧ ॥

**ಪೀಠಿಕೆ** ॥ ಶ್ರೀಹರಿಯು ಜಗತ್ಕಾರಣನು ಎನ್ನುವುದನ್ನು ಆಕ್ಷೇಪಿಸಿ ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ-

## ಸೂತ್ರ ॥ ಓಂ ವಿಕರಣತ್ವಾನ್ನೇತಿ ಚೇತ್ತದುಕ್ತಂ ಓಂ ॥ ೩೨ ॥

**ಸೂತ್ರಾರ್ಥ** ॥ ಈಶ್ವರನು ಜಗತ್ಕರ್ತನು ಅಲ್ಲ. **ಅಚಕ್ಷುಃ ಶ್ರೋತಂ** ಇದುಮೊದಲಾದ ಶ್ರುತಿಗಳಿಂದ ಹಸ್ತಪಾದಾದಿಸಾಧನಗಳು ಇಲ್ಲವೆಂದು ತಿಳಿಯುವುದರಿಂದ ಎಂದರೆ, ಆ ವಿಕರಣತ್ವವು **ಅಪಾಣಿಪಾದೋ** ಜವನೋ ಗೃಹೀತಾ ಇದುಮೊದಲಾದ ಶ್ರುತಿಗಳಿಂದ ಪಾಣಿಪಾದಾದಿಗಳು ಇಲ್ಲದಿದ್ದರೂ ವೇಗಾದಿಗಳನ್ನು ಹೇಳಿದೆ. ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ಎನ್ನುವ ಶ್ರುತಿಯಿಂದ ಪ್ರಾಕೃತ ಹಸ್ತಾದಿಗಳು ಇಲ್ಲವೆಂದು ವ್ಯಾಖ್ಯಾತವಾಗಿದೆ.

**ಭಾಷ್ಯ ॥ ನ ಚ ಕರಣಾಭಾವಾದನುಪಪತ್ತಿರಿತಿ ಯುಕ್ತಂ । ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ । ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಂ (ಶ್ವೇ.ಶ್ರು.೩.೧೯.) । ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ॥ ಪರಾऽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ (ಶ್ವೇ.ಶ್ರು.೬.೮.)। ಇತ್ಯಾದಿಶ್ರುತಿಭ್ಯಃ ॥ ೯ ॥**

**ಭಾಷ್ಯಾರ್ಥ ॥** (೧) ಈಶ್ವರನಿಗೆ ಹಸ್ತಪಾದಾದಿಕರಣಗಳಿಲ್ಲದಿರುವುದರಿಂದ ಜಗತ್ಕರ್ತೃತ್ವವು ಕೂಡುವುದಿಲ್ಲ ಎನ್ನುವುದು ಯುಕ್ತವಲ್ಲ (ಏಕೆ ಯುಕ್ತವಲ್ಲವೆಂದರೆ) ಶ್ರೀಹರಿಯು ಅಪ್ರಾಕೃತ ಹಸ್ತಪಾದಾದಿಗಳುಳ್ಳವನು, ಓಡತಕ್ಕವನು, ಹಿಡಿಯತಕ್ಕವನು, ಪ್ರಾಕೃತಭಿನ್ನವಾದ ಅಪ್ರಾಕೃತ ಕಣ್ಣುಗಳುಳ್ಳವನಾಗಿ ನೋಡುತ್ತಾನೆ. ಅಪ್ರಾಕೃತ ಕಿವಿಗಳುಳ್ಳವನಾಗಿ ಕೇಳುತ್ತಾನೆ. ಆ ಶ್ರೀಹರಿಯು ಭೂತಭವಿಷ್ಯದ್ವರ್ತಮಾನಗಳಾದ ಎಲ್ಲಾ ವಸ್ತುಗಳನ್ನೂ ತಿಳಿಯುತ್ತಾನೆ. ಆ ಹರಿಯನ್ನು ತಿಳಿಯತಕ್ಕವನು ಯಾರೊಬ್ಬನೂ ಇಲ್ಲ. ಇಂತಹ ಗುಣಗಳುಳ್ಳ ಸರ್ವಶ್ರೇಷ್ಠನಾದ ಮಹಾಪುರುಷನಾದ ಶ್ರೀಮನ್ನಾರಾಯಣನನ್ನಾಗಿ ಹೇಳುತ್ತಾರೆ. (೨) ಆ ಶ್ರೀಹರಿಗೆ ಪ್ರಕೃತಿಕಾರ್ಯವಾದ ಹಸ್ತಾದಿಇಂದ್ರಿಯಗಳು ಇಲ್ಲ. ಶ್ರೀಪರಮಾತ್ಮನಿಗೆ ಸಮಾನಿಕನೇ ಇಲ್ಲ. ಅಧಿಕನು ಹೇಗೆ ಸಿದ್ಧನಾಗುವನು. ಶ್ರೀಹರಿಯ ಶಕ್ತಿಯು ಉತ್ಕೃಷ್ಟವಾದುದು. ಸರ್ವವಿಷಯಕವಾದುದು. ದ್ರವ್ಯವಿರುವ ತನಕವಿರತಕ್ಕದು. ಜ್ಞಾನ ಬಲ ಕ್ರಿಯೆಗಳೂ ಹಾಗೇಯ ಇರತಕ್ಕುದು. ಇದು ಮೊದಲಾದ ಶ್ರುತಿಗಳಿಂದ.

**ವಿಶೇಷಾಂಶ ॥** (೧) ಈ ಅರ್ಥದಲ್ಲಿ ಅಭಿಪ್ರೇತಗಳಾದ ಶ್ರುತಿಗಳನ್ನು ಹೇಳುತ್ತಾರೆ- (೧) **ಅಪಾಣಿಪಾದಃ, (೨) ನ ತಸ್ಯ, (೩) ನ ತತ್ಸಮಃ, (೪) ಪರಾಸ್ಯ, ಅಪಾಣಿಪಾದಃ** ಎನ್ನುವ ಶ್ರುತಿಯಲ್ಲಿ ಹಸ್ತಾದಿಗಳು ಇಲ್ಲದಿದ್ದರೂ ಶ್ರೀಹರಿಗೆ ಗ್ರಹಣಾದಿಗಳನ್ನು ಹೇಳಿದ್ದರಿಂದ ಅರ್ಥಾತ್ ಅಪ್ರಾಕೃತ ಹಸ್ತಾದಿಗಳನ್ನೂ, **ನ ತಸ್ಯ ಕಾರ್ಯಂ** ಎನ್ನುವ ಶ್ರುತಿಯಿಂದ ಪ್ರಾಕೃತ ಹಸ್ತಾದಿರಾಹಿತ್ಯಗಳನ್ನೂ **ನ ತತ್ಸಮಃ** ಎನ್ನುವ ವಾಕ್ಯದಲ್ಲಿ ಸರ್ವೋತ್ತಮತ್ವವನ್ನೂ ಹೇಳಿದ್ದರಿಂದ ಪರಾಸ್ಯ ಎನ್ನುವಲ್ಲಿ ಪರಮಶಕ್ತಿಯನ್ನು ಹೇಳಿದ್ದರಿಂದಲೂ ಅಪ್ರಾಕೃತ ಕರಚರಣಾದಿಗಳು ಇವೆ ಎನ್ನುವುದನ್ನು ಸ್ಪಷ್ಟವಾಗಿಯೇ ಹೇಳಿಯದೆ.

**ಪೀಠಿಕೆ ॥ ಸರ್ವೋಪೇತಾ ಚ** ಎನ್ನುವ ಸೂತ್ರದಿಂದ ಸರ್ವಶಕ್ತಿಯನ್ನು ಶ್ರೀಹರಿಗೆ ಹೇಳಿದ್ದರಿಂದ ಕರಣ (ಇಂದ್ರಿಯ)ಗಳು ಇಲ್ಲವಾದರೂ ಸ್ವತಂತ್ರ ಕರ್ತೃತ್ವವು ಯುಕ್ತವೇ, ಎಂದರೆ-

**ಭಾಷ್ಯ ॥ ಸರ್ವೋಪೇತಾ ಚೇತಿ ಸಾಮಾನ್ಯಪರಿಹಾರೇऽಪಿ ವಿಶೇಷಯುಕ್ತ್ಯರ್ಥಂ ಪುನರಾಶಂಕಾ ॥ ೩೨ ॥ ಅಧಿ. ೮ ॥ ॥ ೧೦ ॥**

**ಭಾಷ್ಯಾರ್ಥ ॥ ಸರ್ವೋಪೇತಾ ಚ** ಎನ್ನುವ ಸೂತ್ರದಿಂದ ಸಾಮಾನ್ಯತಃ ಪ್ರಾಪ್ತವಾದ ಸರ್ವಯುಕ್ತಿವಿರೋಧವನ್ನು ಪರಿಹರಿಸಿದರೂ ವಿಕರಣತ್ವಾನ್ನ ಎನ್ನುವ ಚೋದ್ಯವನ್ನು ಪರಿಹರಿಸುವುದಕ್ಕಾಗಿ ಚಿದಾನಂದಾತ್ಮಕ ವಿಗ್ರಹಾದಿಮತ್ತ್ವರೂಪವಾದ ಯುಕ್ತಿಯನ್ನು ಬೋಧಿಸುವುದಕ್ಕಾಗಿ ಪುನಃ ಶಂಕೆಯು ತೋರಿಸಲ್ಪಟ್ಟಿತು.

**ವಿಶೇಷಾಂಶ ॥** ಸಿದ್ಧಾಂತದಲ್ಲಿ ಪ್ರಾಕೃತ ಶರೀರವಿಲ್ಲದಿದ್ದರೂ ಚಿದಾನಂದಾದ್ಯಾತ್ಮಕವಾದ ಶರೀರಾದಿರೂಪವಾದ **ಅಪಾಣಿಪಾದಃ** ಇತ್ಯಾದಿ ಪ್ರಮಾಣವಿಶೇಷರೂಪವಾದ, ಶಂಕಾಪರಿಹಾರಕ್ಕೆ ಉಪಾಯಭೂತವಾದ ವಿಶೇಷ ಯುಕ್ತಿಯು ಸೂತ್ರಕಾರರಿಂದ ತೋರಿಸಲ್ಪಟ್ಟಿತು. ॥ ೩೨ ॥

## ಮಾಯಾವಾದಿರೀತ್ಯಾ

**ವಿಚಾರ ॥** ಉಪಸಂಹಾರೇತ್ಯಾದಿ ಎರಡು ಸೂತ್ರಗಳು ಒಂದು ಅಧಿಕರಣವು. ಅವರಲ್ಲಿ

ಒಂದನೇ ಸೂತ್ರದಿಂದ ಹೇಗೆ ಕ್ಷೀರವು ಇತರವಾದುದನ್ನು ಅಪೇಕ್ಷಿಸದೆ ದಧಿಯಾಗಿ ಪರಿಣಾಮವನ್ನು ಹೊಂದುತ್ತದೋ, ಹಾಗೆಯೇ ಬ್ರಹ್ಮನು ಕೂಡ ಸ್ವಭಾವದಿಂದಲೇ ಜಗದಾತ್ಮನಾ ಪರಿಣತನು ಆಗುವನು. ಹಾಗಾದರೆ ಅಚೇತನವಾದ ಕ್ಷೀರಾದಿಗಳಿಗೆ ದಧಿರೂಪವಾಗಿ ಸ್ವತಃ ಪರಿಣಾಮ ಕೂಡಿದರೂ ಚೇತನನಾದ ಬ್ರಹ್ಮನಿಗೆ ಕೂಡಲಾರದು ಎಂದು ಶಂಕಿಸಿಕೊಂಡು **ದೇವಾದಿವದಪಿ ಲೋಕೇ** ಎನ್ನುವ ಸೂತ್ರದಿಂದ ಅಸಹಾಯನಾದ ಬ್ರಹ್ಮನಿಗೆ ಅಧಿಷ್ಠಾತೃತ್ವ ವಿಷಯದಲ್ಲಿ ದೇವ ಋಷ್ಯಾದಿಗಳು ಇತರವಾದ ಸಾಧವನ್ನು ಅಪೇಕ್ಷಿಸದೆ ಇಚ್ಛಾಮಾತ್ರದಿಂದಲೇ ಪ್ರಾಸಾದಾದಿಗಳನ್ನು ನಿರ್ಮಾಣಮಾಡುತ್ತಾರೋ, ಹಾಗೆಯೇ ಬ್ರಹ್ಮನು ಎಂದು ದೇವಾದಿಗಳನ್ನು ದೃಷ್ಟಾಂತವನ್ನಾಗಿ ಸೂತ್ರಕಾರರು ಹೇಳಿರುವರು ಎಂದು ಅದ್ವೈತಿಗಳು ಹೇಳುವರು. ಅದು ಅಯುಕ್ತವು. ಕ್ಷೀರಾದಿಗಳಿಗೂ ದಧಿಭಾವ ಬರಬೇಕಾದರೆ-ಕುದಿಸುವಿಕೆ, ಹೆಪ್ಪು ಹಾಕುವಿಕೆ ಇತ್ಯಾದಿಗಳ ಅಪೇಕ್ಷೆಯು ಇದ್ದುದರಿಂದ ಅನ್ಯನಿರಪೇಕ್ಷವಾಗಿ ದಧ್ಯಾತ್ಮನಾ ಪರಿಣಾಮವು ಕೂಡುವುದಿಲ್ಲ. ಅಲ್ಲದೆ **ಪಯೋಽಂಬುವತ್** ಎನ್ನುವಲ್ಲಿ ಕ್ಷೀರವು ದಧಿಯಾಗುವುದರಲ್ಲಿ ಈಶ್ವರನೇ ಕರ್ತನು ಎಂದು ಹೇಳುವುದರಿಂದ ಅದರಿಂದ ವಿರೋಧವೂ ಬರುವುದು. ಮತ್ತು ಕ್ಷೀರಾದಿ ದೃಷ್ಟಾಂತವು ವಿವರ್ತಮತಕ್ಕೆ (ಬ್ರಹ್ಮನಲ್ಲಿ ಜಗತ್ತಿಗೆ ಆರೋಪವು ಎನ್ನುವ ಮತಕ್ಕೆ) ಅನುಗುಣವೂ ಅಲ್ಲ. ಮತ್ತೂ ದೇವಾದಿಗಳು ಪ್ರಾಸಾದಾದಿಗಳನ್ನು ನಿರ್ಮಾಣಮಾಡುವಂತೆ ಈಶ್ವರನು ಜಗತ್ತನ್ನು ನಿರ್ಮಾಣಮಾಡುವುದಾದರೆ ಜಗತ್ತು ಮಿಥ್ಯೆಯು ಆಗದೆ ಹೋಗಬೇಕಾಗುವುದು. ಭಿನ್ನವಾದ ಪ್ರಕೃತಿ ರೂಪವಾದ ಉಪಾದಾನದಿಂದ ಇಚ್ಛಾಮಾತ್ರದಿಂದ ಈಶ್ವರನು ಸತ್ಯ ಜಗತ್ತನ್ನು ಸೃಷ್ಟಿಸುತ್ತಾನೆಂದು ಹೇಳತಕ್ಕ ನನಗೆ ದೇವಾದಿದೃಷ್ಟಾಂತವು ಅನುಗುಣವಾಗಿದೆ. ಜಗತ್ತು ಆರೋಪಿತವು ಎಂದು ಹೇಳುವ ಅದ್ವೈತಿಗಳಿಗೆ ಎರಡೂ ಪ್ರತಿಕೂಲವೇ, ಇತ್ಯಾದ್ಯನಂತ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ಕೃತ್ಸ್ನ ಇತ್ಯಾದಿ ಆರು ಸೂತ್ರಗಳು ಒಂದು ಅಧಿಕರಣವು. ಅವಯವವಿಲ್ಲದಿರುವುದ ರಿಂದ ಬ್ರಹ್ಮನು ಉಪಾದಾನ ಕಾರಣನಲ್ಲ ಎಂದು ಪ್ರಾಪ್ತವಾದರೆ ಆಗಮ ಪ್ರತಿಪಾದ್ಯನಾದುದರಿಂದಲೂ ಸರ್ವಶಕ್ತಿಗಳುಳ್ಳವನಾದುದರಿಂದಲೂ ತರ್ಕಮಾತ್ರದಿಂದ ನಿರಾಕರಣವು ಯುಕ್ತವಲ್ಲ ಎಂದು ಸಿದ್ಧಾಂತವು. ಹೀಗೆ ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. ಅವರ ಮತದಲ್ಲಿ ವಿಶಿಷ್ಟಕ್ಕೆ ಉಪಾದಾನ ಕಾರಣತ್ವವು ಎನ್ನುವುದನ್ನು ಪ್ರಕೃತ್ಯಧಿಕರಣಾದಿಗಳಲ್ಲಿ ಹೇಳಿರುವರು. **ನ ತುದೃಷ್ಟಾಂತಭಾವಾತ್** ಎನ್ನುವಲ್ಲಿ ಉಪಾದಾನತ್ವವನ್ನು ಬಾಲಯುವದೃಷ್ಟಾಂತದಿಂದ ಉಪಪಾದಿಸಿದ್ದ ರಿಂದ ಈ ಪೂರ್ವಪಕ್ಷವೇ ಹುಟ್ಟಲಾರದು. ಸಿದ್ಧಾಂತದಲ್ಲಿಯೂ ನಾನಾವಿಧ ಹೇಯರೂಪದಿಂದ ಪರಿಣಾಮನಿವಾರಣದಲ್ಲಿ ಅಶಕ್ತನಾದ ವಿಶಿಷ್ಟ ಬ್ರಹ್ಮನಿಗೆ ಸರ್ವಶಕ್ತಿಮತ್ತ್ವವು ಕೂಡಲಾರದು.

## ಅಧಿಕರಣ ಸಾರಾಂಶ

ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹವು. ವಿಷ್ಣುವು ತೃಣಾದಾನಾದ್ಯಲ್ಪ ಕಾರ್ಯದಲ್ಲಿಯೂ ಕೃತ್ಸ್ನಪ್ರಸಕ್ತಿಯಿಂದ ಪ್ರವೃತ್ತಿಯನ್ನು ಮಾಡುವುದಾದರೆ ಅವನಿಗ

ಪ್ರೇಕ್ಷಾವತ್ತ್ವವು ಇಲ್ಲದೆ ಹೋಗಬೇಕಾಗುವುದು. ಏಕದೇಶದಿಂದ ಪ್ರವೃತ್ತಿಯನ್ನು ಮಾಡುವುದಾದರೆ ನೇಹ ನಾನಾ ಇತ್ಯಾದಿ ನಿರಂಶತ್ವಪ್ರತಿಪಾದಕ ಶ್ರುತಿವಿರೋಧವು ಬರುವುದು. ತಥಾಚ ವಿಷ್ಣುವಿಗೆ ಕರ್ತೃತ್ವವು ಯುಕ್ತವಲ್ಲ ಎಂದರೆ **ಯೋಽಸೌ ವಿರುದ್ಧಃ** ಇತ್ಯಾದಿ ಶ್ರುತಿಗಳಲ್ಲಿ ಲೋಕದಲ್ಲಿ ವಿರುದ್ಧಧರ್ಮಗಳೂ ಈಶ್ವರನಲ್ಲಿ ಅವಿರುದ್ಧಗಳೆಂದು ಹೇಳಿವೆ. ಈಶ್ವರನು ಶಬ್ದೈಕಸಮಧಿಗಮ್ಯನು. ಶುಷ್ಕತರ್ಕಕ್ಕೆ ಅಗೋಚರನು. ವಿಚಿತ್ರಶಕ್ತಿಃ ಪುರುಷಃ ಪುರಾಣಃ ಇತ್ಯಾದಿ ಶ್ರುತಿಗಳಿಂದ ಅಘಟಿತ ಘಟಕಶಕ್ತಿಗಳು ಇರುವವನೆಂದು ಸಿದ್ಧಿಸುವನು. ಆದಕಾರಣ ಸರ್ವಕರ್ತೃತ್ವವು ಯುಕ್ತವು. ತಥಾಚ ॥ **ಶ್ರೋತ್ರಾದಿಗಮ್ಯಶಬ್ದಾದೌ ಚಕ್ಷುರಾದಿ ನ ಸಾಧಕಂ। ನ ಚಾಪಿ ಬಾಧಕಂ ಯದ್ವಚ್ಛುಷ್ಕತರ್ಕಸ್ತಥೇಶ್ವರೇ ॥ ೧ ॥ ಮನುಷ್ಯಾದಾವದೃಷ್ಟಂ ಚ ದೃಶ್ಯತೇ ದೇವತಾದಿಷು। ಅಸ್ಮದಾದಾವದೃಷ್ಟಂ ಚ ದೃಶ್ಯತೇ ಮನುಜಾಂತರೇ ॥ ೨ ॥ ಜ್ಞಾತುಂ ನ ಪಾರ್ಯತೇ ಯಸ್ಯ ಪಾರಮಪ್ಯಸ್ಮದಾದಿಭಿಃ । ಸ ಏವಾಂಭೋನಿಧಿಃ ಕುಂಭಜನ್ಮವಾಚುಲಕೀಕೃತಃ ॥ ೩ ॥ ವಿರುದ್ಧಮೇವಮನ್ಯತ್ರಾಪೀಶ್ವರೇ ನ ವಿರುಧ್ಯತೇ ॥ ಸ ವಿಚಿತ್ರಾಚಿಂತ್ಯಶಕ್ತ್ಯಾ ದುರ್ಘಟಂ ಘಟಯೇದ್ಯತಃ ॥ ೪ ॥** ಅಧಿ.೮ ॥

**ಶ್ರುತೇಸ್ತು ಶಬ್ದಮೂಲತ್ವಾಧಿಕರಣವು ಸಮಾಪ್ತವಾಯಿತು.**

# ೯ ನ ಪ್ರಯೋಜನವತ್ವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಈಶ್ವರನಿಗೆ ಜಗತ್ಕರ್ತೃತ್ವ ವಿಷಯದಲ್ಲಿ ಬರತಕ್ಕ ನಿಷ್ಫಲತ್ವಾದಿಯುಕ್ತಿ ವಿರೋಧವನ್ನು ಪರಿಹರಿಸುತ್ತಾರೆ. ಸಯುಕ್ತಿಕವಾಗಿ ಪೂರ್ವಪಕ್ಷ ಮಾಡುತ್ತಾರೆ—

**ಭಾಷ್ಯ ॥ ಯತ್ಪ್ರಯೋಜನಾರ್ಥಂ ಸೃಷ್ಟ್ಯಾದಿಸ್ತದೂನತ್ವಾದ(ನ್ನ)ಪೂರ್ಣತಾ ॥ ಇತಿ ॥೧॥**

**ಭಾಷ್ಯಾರ್ಥ ॥** ಪ್ರಯೋಜನೋದ್ದೇಶದಿಂದಲೇ (ಶ್ರೀಹರಿಗೆ) ಜಗತ್ಸರ್ಜನವಿಷಯಕ ಪ್ರವೃತ್ತಿಯು ಎಂದಂಗೀಕರಿಸುವುದಾದರೆ, ಯಾವ ಅಪೇಕ್ಷೆಯಿಂದ ಶ್ರೀಹರಿಯು ಸೃಷ್ಟ್ಯಾದಿಗಳನ್ನು ಮಾಡುವನೋ, ಆ ಪ್ರಯೋಜನವು ಮೊದಲು ಇಲ್ಲದಿರುವುದರಿಂದ ಅಪೂರ್ಣತ್ವವು (ಅಪಾಲಕತ್ವವೂ ಅಸರ್ವಕರ್ತೃತ್ವವೂ) ಬರಬೇಕಾಗುವುದು. ೨ ಪ್ರಯೋಜನಾಪೇಕ್ಷೆಯಿಲ್ಲದಿದ್ದರೆ ಸೃಷ್ಟ್ಯಾದಿಪ್ರವೃತ್ತಿಯೇ ಕೂಡಲಾರದು ಎಂದು ಉಭಯಥಾಪಿ ಪ್ರವೃತ್ತಿಯು ಕೂಡದಿರುವುದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲ

**ಪೀಠಿಕೆ ॥** ಹೀಗೆ ಪ್ರಾಪ್ತವಾದರೆ ಫಲೋದ್ದೇಶವಿಲ್ಲದೇನೇ ಸೃಷ್ಟ್ಯಾದಿ ಪ್ರವೃತ್ತಿಯು ಎನ್ನುವ ಎರಡನೇ ಪಕ್ಷವನ್ನು ಆಶ್ರಯಿಸಿ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತ ಆಹ ॥ ೨ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ.

**ಸೂತ್ರ ॥ ಓಂ ನ ಪ್ರಯೋಜನವತ್ವಾತ್ ಓಂ ॥ ೩೨ ॥**

ಸೂತ್ರಾರ್ಥ ॥ (ಈಶ್ವರನಿಗೆ ಸ್ವತಂತ್ರಕರ್ತೃತ್ವವು) ತನ್ನ ಪ್ರಯೋಜನವನ್ನುದ್ದೇಶಿಸಿ ಅಲ್ಲ. ಏಕೆಂದರೆ ಅಥೈಷ ಏವ ಪರಮಾನಂದಃ ಎನ್ನುವ ಶ್ರುತಿಯಿಂದ ಸ್ವತಃ ಸಿದ್ಧವಾದ ಪೂರ್ಣಕಾಮತ್ವ ವಿದ್ದುದರಿಂದ.

ಭಾಷ್ಯ ॥ ಅಥೈಷ ಏವ ಪರಮಾನಂದಃ (ಬೃ.೬.೩.೩೩.) । *ಇತ್ಯಾದಿನಾ ಕೃತಕೃತ್ಯತ್ವಾನ್ನ ಪ್ರಯೋಜನಾಯ ಸೃಷ್ಟಿಃ ॥ ೩೩ ॥ ॥ ೩ ॥

ಭಾಷ್ಯಾರ್ಥ ॥ ಈ ಶ್ರೀಹರಿಯೇ ಪೂರ್ಣಾನಂದನು, ಇದುಮೊದಲಾದ ಪೂರ್ಣಾನಂದತ್ವ ಪ್ರತಿಪಾದಕ ಶ್ರುತಿವಾಕ್ಯದಿಂದ ಹೊಂದತಕ್ಕದನ್ನು ಮೊದಲೇ ಹೊಂದಿರುವುದರಿಂದ ಶ್ರೀಹರಿಯ ಸೃಷ್ಟಿಯು ಪ್ರಯೋಜನಕ್ಕಾಗಿ ಅಲ್ಲ.

ವಿಶೇಷಾಂಶ ॥ ಶ್ರೀಹರಿಗೆ ಪ್ರಯೋಜನೋದ್ದೇಶದಿಂದ ಸೃಷ್ಟ್ಯಾದಿಪ್ರವೃತ್ತಿಯಿಲ್ಲ. ಆದಕಾರಣ ಅಪೂರ್ಣತ್ವಾದಿದೋಷವಿಲ್ಲ. ಆದುದರಿಂದಲೇ ಜಗತ್ಕರ್ತೃತ್ವವು ಅಯುಕ್ತವೆಂದೂ ಹೇಳಕೂಡದು. ॥ ೩೩ ॥

ಪೀಠಿಕೆ ॥ ಹಾಗಾದರೆ ಈಶ್ವರಃ ಫಲಾನುದ್ದೇಶೇನ ನ ಪ್ರವೃತ್ತಿಮಾನ್ ಚೇತನತ್ವಾತ್ ಯಜ್ಞದತ್ತವತ್=ಈಶ್ವರನು ಫಲೋದ್ದೇಶವಿಲ್ಲದೆ ಪ್ರವೃತ್ತಿಯುಳ್ಳವನಲ್ಲ. ಚೇತನತ್ವವಿದ್ದುದರಿಂದ ಯಜ್ಞದತ್ತನಂತೆ, ಎನ್ನುವ ಯುಕ್ತಿವಿರೋಧವಿದ್ದುದರಿಂದ ಈಶ್ವರನಿಗೆ ಫಲೋದ್ದೇಶವಿಲ್ಲದ ಪ್ರವೃತ್ತಿಯು ಹೇಗೆ ಎನ್ನುವ ಅಭಿಪ್ರಾಯದಿಂದ ಪ್ರಶ್ನಿಸುತ್ತಾರೆ—

ಭಾಷ್ಯ ॥ ಕಿಂತು ॥ ೪ ॥

ಭಾಷ್ಯಾರ್ಥ ॥ ಮತ್ತೆ ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.

## ಸೂತ್ರ ॥ ಓಂ ಲೋಕವತ್ತು ಲೀಲಾಕೈವಲ್ಯಂ ಓಂ ॥ ೩೪ ॥

ಸೂತ್ರಾರ್ಥ ॥ ಈಶ್ವರನಿಗೆ ಪ್ರಯೋಜನೋದ್ದೇಶದಿಂದ ಪ್ರವೃತ್ತಿಯಿಲ್ಲ. ಮತ್ತೆ ಲೋಕದಲ್ಲಿ ಉನ್ಮತ್ತನಿಗೆ ಸುಖೋದ್ರೇಕದಿಂದಲೇ ಪ್ರವೃತ್ತಿಯು ಅದು ಹೇಗೆ ಕೇವಲ ಲೀಲಾರೂಪವೋ, ಹಾಗೆಯೇ ಪರಮೇಶ್ವರನ ಪ್ರವೃತ್ತಿಯು ಲೀಲಾರೂಪವೇ. (ಪ್ರಯೋಜನಾಂತರಕ್ಕಾಗಿ ಅಲ್ಲ)

ಭಾಷ್ಯ ॥ ಯಥಾ ಲೋಕೇ ಮತ್ತಸ್ಯ ಸುಖೋದ್ರೇಕಾದೇವ ನೃತ್ತಗಾನಾದಿಲೀಲಾ । ನ ತು ಪ್ರಯೋಜನಾಪೇಕ್ಷಯಾ । ಏವಮೇವೇಶ್ವರಸ್ಯ ॥ ೫ ॥

ಭಾಷ್ಯಾರ್ಥ ॥ ಹೇಗೆ ಲೋಕದಲ್ಲಿ ಉನ್ಮತ್ತ ಜನರಿಗೆ ಉದ್ರಿಕ್ತ ಸುಖದಿಂದಲೇ ನರ್ತನ ಗಾನ ಮೊದಲಾದ ಕ್ರೀಡೆಯು ಕಾಣಲ್ಪಡುತ್ತದೋ ಪ್ರಯೋಜನಾಪೇಕ್ಷೆಯಿಂದ ಅಲ್ಲವೋ, ಹೀಗೆಯೇ ಪರಮೇಶ್ವರನ ಸಂಬಂಧಿಯಾದ ಸೃಷ್ಟ್ಯಾದಿಪ್ರವೃತ್ತಿಯು ಕೇವಲ ಲೀಲಾರೂಪವೇ.

---

* ಆದಿಶಬ್ದದಿಂದ (೧) ನಿರನಿಷ್ಟಃ ನಿರವದ್ಯಃ, (೨) ಸತ್ಯಕಾಮಃ ಸತ್ಯಸಂಕಲ್ಪಃ ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

ವಿಶೇಷಾಂಶ ॥ ಈಶ್ವರನ ಪ್ರವೃತ್ತಿಯು ಸ್ವಭಾವವೆಂದು ಶ್ರುತ್ಯಾದಿಸಿದ್ಧವಾದುದರಿಂದ ದಯಾಲುಗಳ ಪ್ರವೃತ್ತಿಯಂತೆ ಪ್ರಯೋಜನಾಪೇಕ್ಷೆಯಿಂದ ಅಲ್ಲ.

ಪೀಠಿಕೆ ॥ ಈ ಅರ್ಥದಲ್ಲಿಯೇ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ನಾರಾಯಣಸಂಹಿತಾಯಾಂ ಚ । ಸೃಷ್ಟ್ಯಾದಿಕಂ ಹರಿರ್ನೈವ ಪ್ರಯೋಜನಮಪೇಕ್ಷ್ಯ ತು । ಕುರುತೇ ಕೇವಲಾನಂದಾದ್ಯಥಾ ಮತ್ತಸ್ಯ ನರ್ತನಂ ॥ ಪೂರ್ಣಾನಂದಸ್ಯ ತಸ್ಯೇಹ ಪ್ರಯೋಜನಮತಿಃ ಕುತಃ । ಮುಕ್ತಾ ಅಪ್ಯಾಪ್ತಕಾಮಾಃ ಸ್ಯುಃ ಕಿಮು ತಸ್ಯಾಖಿಲಾತ್ಮನಃ ॥ ಇತಿ ॥ ॥ ೬ ॥**

ಭಾಷ್ಯಾರ್ಥ ॥ ಶ್ರೀಹರಿಯು ಜಗತ್ಸೃಷ್ಟ್ಯಾದಿಗಳನ್ನು ತನ್ನ ಪ್ರಯೋಜನವನ್ನುದ್ದೇಶಿಸಿಕೊಂಡು ಮಾಡುವುದಲ್ಲ. ಆದರೆ ಸ್ವರೂಪಾನಂದದಿಂದಲೇ ಮಾಡುತ್ತಾನೆ. ಹೇಗೆಂದರೆ ಉನ್ಮತ್ತನ ನರ್ತನದಂತೆ. (ಅಂದರೆ ಹೇಗೆ ಉನ್ಮತ್ತನು ಆನಂದದಿಂದಲೇ, ನರ್ತನಾದಿಗಳನ್ನು ಮಾಡುತ್ತಾನೋ ಹಾಗೆಯೇ ಪೂರ್ಣಾನಂದವುಳ್ಳ ಶ್ರೀಹರಿಗೆ ಸೃಷ್ಟ್ಯಾದಿವಿಷಯದಲ್ಲಿ ಇದರಿಂದ ನನಗೆ ಮುಂದಕ್ಕೆ ಪ್ರಯೋಜನವಾಗಲಿ ಎನ್ನುವ ಅಪೇಕ್ಷೆಯು ಹೇಗೆ? ಸರ್ವಥಾ ಇರಲಾರದು. ಏಕೆಂದರೆ ಮುಕ್ತರಾದ ಜೀವರೂ ಕೂಡ ಯಾವಾಗ ಆಪ್ತಕಾಮರಾಗುವರೋ, ಆಗ ಸರ್ವಸ್ವಾಮಿಯಾದ ವಿಷ್ಣುವಿಗೆ ಆಪ್ತಕಾಮತ್ವವನ್ನು ಏನು ಹೇಳಬೇಕು. ಎಂದೂ ನಾರಾಯಣಸಂಹಿತಾ ಎನ್ನುವ ಗ್ರಂಥದಲ್ಲಿ ಹೇಳಲ್ಪಟ್ಟಿದೆ.)

ಪೀಠಿಕೆ ॥ ವಿವಕ್ಷಿತವಾದ ಆಕ್ಷೇಪಾರ್ಥವನ್ನು ಪ್ರತಿಪಾದಿಸುವುದರಿಂದ ಪ್ರಥಮತಃ ಸ್ಮೃತಿಯನ್ನುದಾಹರಿಸಿ ಈಗ ಈ ಅರ್ಥದಲ್ಲಿ ಶ್ರುತಿಯನ್ನುದಾಹರಿಸುತ್ತಾರೆ—

**ಭಾಷ್ಯ ॥ ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ (ಮಾ.೨.೯.) ಇತಿ ಚ ಶ್ರುತಿಃ ॥ ೩೪ ॥ ಅಧಿ. ೯ ॥ ॥ ೭ ॥**

ಭಾಷ್ಯಾರ್ಥ ॥ ಶ್ರೀಹರಿಯ ಸೃಷ್ಟ್ಯಾದಿವಿಷಯಕವಾದ (ವಿಷಃ) ಇಚ್ಛೆಯು ಅಂದರೆ ಇಚ್ಛಾರೂಪ ಪ್ರವೃತ್ತಿಯು ಸ್ವಭಾವವೇ. (ಪ್ರಯೋಜನಕ್ಕಾಗಿ ಅಲ್ಲ) ಪೂರ್ಣಕಾಮನಿಗೆ ಫಲೇಚ್ಛೆಯು ಯಾವುದಿದೆ? (ಯಾವುದೂ ಇಲ್ಲ)

ವಿಶೇಷಾಂಶ ॥ ಕ್ರೀಡೈವ ಲೀಲಾ. ಕ್ರೀಡೆಯು ಸ್ವಭಾವವೇ. ಎಂದು ಹೇಳಿದ್ದರಿಂದ ಸಿದ್ಧಾಂತದಲ್ಲಿ ಕ್ರೀಡೆಯು ಪ್ರಯೋಜನವೆನ್ನುವುದು ಅಭಿಪ್ರೇತವಲ್ಲವೆಂದು ತಿಳಿಯುತ್ತದೆ. ತಸ್ಮಾಪಿ ವಿಷ್ಣೋಃ ಸೃಷ್ಟಿಂ ತು ಕೇಚಿದಾಹುರನ್ಯೈಪುಣಾಃ । ಆತ್ಮಪ್ತಸ್ಯೈವ ಭೋಗಾರ್ಥಂ ಕ್ರೀಡಾರ್ಥಂ ತು ವಿಷ್ಣುತಃ ॥ ಸಾ ಚ ಕ್ರೀಡಾ ಸ್ವಭಾವೋಽಸ್ಯ ಕುತೋಽತೃಪ್ತ್ಯಾ ಸ್ಪೃಹಾ ವಿಭೋಃ ॥ ಎಂದು ಮಾಂಡೂಕಭಾಷ್ಯದಲ್ಲಿ.

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಇತರ ಪ್ರಯೋಜನಗಳು ಇಲ್ಲವಾದರೂ ಲೀಲಾರ್ಥವಾಗಿ "ಮಹಾರಾಜನಿಗೆ

ಚೆಂಡು ಆಟ ಮೊದಲಾದವುಗಳಲ್ಲಿ ಪ್ರವೃತ್ತಿಯು ಇದ್ದಂತೆಯೇ ಲೀಲಾರ್ಥವಾಗಿಯೇ ಈಶ್ವರನ ಪರವೃತ್ತಿಯು ಎಂದು ಇಬ್ಬರೂ ಹೇಳುವರು. ಅದು ಅಯುಕ್ತವು. ಶ್ರುತಿಸೂತ್ರಗಳಿಂದ ವಿರೋಧವು ಬರುವುದು. ಶ್ರುತಿಯಲ್ಲಿ ಕ್ರೀಡಾರ್ಥಮಿತಿ ಚಾಪರೇ ಎಂದು ಲೀಲಾರೂಪಪ್ರಯೋಜನತ್ವವು ಮತಾಂತರವು ಎಂದು ಹೇಳಿ ದೇವಸ್ಯೈಷ ಸ್ವಭಾವೋಽಯಂ ಎಂದು ಸ್ವಭಾವತ್ವರೂಪ ಸ್ವಮತವು ಉಕ್ತವಾಗಿದೆ. ಸೂತ್ರದಲ್ಲಿಯೂ ಲೀಲಾರ್ಥ ಎಂದು ಹೇಳದೆ ಲೀಲಾಕೈವಲ್ಯಂ ಎಂದೇ ಹೇಳಿರುವರು. ಆದಕಾರಣ ಅವರಿಬ್ಬರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

ವಿಷ್ಣುವಿಗೆ ಸ್ರಷ್ಟೃತ್ವಾದಿಗಳು ಯುಕ್ತವೋ ಅಲ್ಲವೋ ಎಂದು ಸಂದೇಹವು. ಯುಕ್ತವಲ್ಲವೆಂದು ಪೂರ್ವಪಕ್ಷವು. ವಿಷ್ಣುವಿಗೆ ಪ್ರಯೋಜನೋದ್ದೇಶವಿದ್ದರೆ ಅಪೂರ್ಣತ್ವವು ಬರಬೇಕಾಗುವುದರಿಂದ ಸರ್ವಕರ್ತೃತ್ವವು ಕೂಡಲಾರದು. ಪ್ರಯೋಜನಾಪೇಕ್ಷೆಯು ಇಲ್ಲದಿದ್ದರೆ ಪ್ರೇಕ್ಷಾವಂತನಿಗೆ ಸೃಷ್ಟ್ಯಾದಿ ಪ್ರವೃತ್ತಿಯೇ ಕೂಡಲಾರದು, ಎಂದು ಪೂರ್ವಪಕ್ಷವು ಬಂದರೆ, ದೇವಸ್ಯೈಷ ಸ್ವಭಾವೋಽಯಂ ಎನ್ನುವ ಶ್ರುತಿಯಿಂದ ಜಗತ್ಸೃಷ್ಟ್ಯಾದಿಗಳು ಈಶ್ವರನ ಸ್ವಭಾವವೆಂದು ತಿಳಿದುಬರುತ್ತದೆ. ಜ್ಞಾನಿಗಳೂ ವ್ಯಾಖ್ಯಾನಾದಿಕಾಲಗಳಲ್ಲಿ ಹಸ್ತಾದಿಚಾಲನವನ್ನು ಫಲವಿಲ್ಲವಾದರೂ ಮಾಡುವುದರಿಂದ ಅನಾಯಾಸ ಸಾಧ್ಯವಾದುದರಿಂದ ಜಗತ್ಸೃಷ್ಟ್ಯಾದಿಗಳು ಶ್ರೀಹರಿಗೆ ಉಪಪನ್ನವು. ಅಸ್ವಭಾವ ಪ್ರವೃತ್ತೌ ಹಿ ಪ್ರಾಜ್ಞೋಽಪ್ಯಾಕಾಂಕ್ಷತೇ ಫಲಂ। ಸ್ವಾಭಾವಿಕನಿಮೇಷಾದ್ಯಾಃ ನ ಹ್ಯದೃಷ್ಟಪ್ರಯೋಜನಾಃ। ಸ್ವಭಾವ ಭೂತಾ ತ್ವೀಶಸ್ಯ ಕ್ರಮಾತ್ಸೃಷ್ಟ್ಯಾದಿಕರ್ತೃತಾ। ಚೂತಾದೀನಾಂ ವಸಂತದೌ ಪುಷ್ಪಿತತ್ವಾದಿಕಂ ಯಥಾ ॥ ದೇವಸ್ಯೈಷ ಸ್ವಭಾವೋಽಯಮಿತಿ ಹಿ ಶ್ರುತಿರಬ್ರವೀತ್ । ಗಾನವ್ಯಾಖ್ಯಾನಪೂರ್ವೇಷು ಶಿರೋಹಸ್ತಾದಿಚೇಷ್ಟಿತಂ । ಪ್ರಯೋಜನಮನುದ್ದಿಶ್ಯ ಪ್ರೇಕ್ಷಾವಂತೋಽಪಿ ಕುರ್ವತೇ ॥ ಅಧಿ.೯ ॥

ನ ಪ್ರಯೋಜನಾಧಿಕರಣವು ಸಮಾಪ್ತವಾಯಿತು.

# ೧೦ ವೈಷಮ್ಯನೈರ್ಘೃಣ್ಯಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಸರ್ವಕರ್ತೃತ್ವ ವಿಷಯದಲ್ಲಿ ವೈಷಮ್ಯಾದಿ ದೋಷಪ್ರಾಪ್ತಿ ರೂಪ ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ. ಸಯುಕ್ತಿಕವಾಗಿ ಪೂರ್ವಪಕ್ಷ ಮಾಡುತ್ತಾರೆ.

**ಭಾಷ್ಯ ॥ ಸರ್ವಕರ್ತೃತ್ವೇ ವೈಷಮ್ಯನೈರ್ಘೃಣ್ಯೇ ತಸ್ಯ । ಇತಿ ॥ ೧ ॥**

ಭಾಷ್ಯಾರ್ಥ ॥ ಈಶ್ವರನಿಗೆ (ಪರಪ್ರಯೋಜನಕ್ಕಾಗಿ ಪ್ರಾಣಿಕರ್ಮಾಪೇಕ್ಷೆಯಿಲ್ಲದೆ) ಸರ್ವಜಗತ್ಕರ್ತೃತ್ವವನ್ನು ಅಂಗೀಕರಿಸಿದರೆ ವೈಷಮ್ಯ ನೈರ್ಘೃಣ್ಯಗಳು ಬರಬೇಕಾಗುವುವು.

ವಿಶೇಷಾಂಶ ॥ ಪರರ ಪ್ರಯೋಜನಕ್ಕಾಗಿ ಪರಮಾತ್ಮನ ಸೃಷ್ಟಿಯು ಎಂದು ಹಿಂದೆ ಹೇಳಿದ್ದು

ಅಯುಕ್ತವು. ಆತನು ೧ ಅವರವರ ಕರ್ಮವನ್ನು ಕಾರಣವನ್ನಾಗಿ ಇಟ್ಟುಕೊಳ್ಳದೆ ಪರಪ್ರಯೋಜನಕ್ಕಾಗಿ ಸೃಷ್ಟಿಯನ್ನು ಮಾಡುತ್ತಾನೋ ೨ ಅಪೇಕ್ಷಿಸಿ ಮಾಡುತ್ತಾನೋ, ೧ನೇದ್ದು ಕೂಡಲಾರದು. ಹಾಗಿದ್ದರೆ ಸರ್ವರೂ ಸರ್ವದಾ ಸುಖಿಗಳೇ ಆಗಬೇಕಾಗುವರು. ಕೆಲವರು ಕೆಲವುವೇಳೆ ಸುಖಿಗಳು ಕೆಲವರು ದುಃಖಿಗಳು ಎನ್ನುವುದು ಕೂಡಲಾರದು. ಇಲ್ಲವಾದರೆ ಈಶ್ವರನು ನಿರ್ನಿಮಿತ್ತವಾಗಿ ಕೆಲವರಿಗೆ ಮಾತ್ರ ಸುಖಕೊಡುತ್ತ ನರಕದಲ್ಲಿ ಬಿದ್ದು ದುಃಖಪಡುವ ಕೆಲವರನ್ನು ಉದ್ಧರಿಸದಿದ್ದರೆ ವಿಷಮನೂ ನಿರ್ದಯನೂ ಆಗುವನು. ಅಲ್ಲದೆ ಸುಖಾದಿಗಳಿಗೆ ಕಾರಣವಾದ ಕರ್ಮವನ್ನು ಬೋಧಿಸತಕ್ಕ ವೇದಗಳಿಗೆ ಅಪ್ರಾಮಾಣ್ಯವೂ ಬರಬೇಕಾಗುವುದು. ಕರ್ಮವನ್ನು ಅಪೇಕ್ಷಿಸಿಕೊಂಡು ಸೃಷ್ಟಿ ಮಾಡುತ್ತಾನೆ ಎನ್ನುವ ೨ನೇ ಪಕ್ಷವೂ ಕೂಡಲಾರದು. ಹಾಗಿದ್ದರೆ ಅಸ್ವಾತಂತ್ರ್ಯವು ಬರಬೇಕಾಗುವುದು. ತಥಾಚ ಉಭಯತ್ರಾಽಪಿ ದೋಷಗಳು ಇದ್ದುದರಿಂದ ಈಶ್ವರನಿಗೆ ಸರ್ವಕರ್ತೃತ್ವವು ಯುಕ್ತವಲ್ಲ.

**ಭಾಷ್ಯ ॥ ಅತೋ ವಕ್ತಿ ॥ ೨ ॥**

ಭಾಷ್ಯಾರ್ಥ ॥ ಹೀಗೆ ಶಂಕಾ ಬಂದರೆ ಸೂತ್ರಕಾರರು ಉತ್ತರ ಹೇಳುತ್ತಾರೆ.

## ಸೂತ್ರ ॥ ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ಓಂ ॥ ೩೫ ॥

**ಸೂತ್ರಾರ್ಥ ॥** ಈಶ್ವರನಿಗೆ ಸರ್ವಸ್ವಾತಂತ್ರ್ಯವಿದ್ದರೂ ಕರ್ತೃತ್ವವಿದ್ದರೂ ವೈಷಮ್ಯ ನೈರ್ಘೃಣ್ಯಗಳು ಬರುವುದಿಲ್ಲ. ಫಲದಾನಾದಿ ವಿಷಯದಲ್ಲಿ ಜೀವಕರ್ಮಸಾಪೇಕ್ಷೆಯಿದೆ. ಅಂದರೆ ಅವರವರ ಕರ್ಮಗಳನ್ನು ಅನುಸರಿಸಿ ಫಲವನ್ನು ಕೊಡುವುದರಿಂದ. ಏಕೆಂದರೆ—ಪುಣ್ಯೇನ ಪುಣ್ಯಂ ಎನ್ನುವ ಶ್ರುತಿಯು ಹಿಂದೆ ಹೇಳಿದ ಪ್ರಕಾರ ತೋರಿಸುತ್ತದೆ.

**ಭಾಷ್ಯ ॥ ಕರ್ಮಾಪೇಕ್ಷಯಾ ಫಲದಾತೃತ್ವಾನ್ನ ತಸ್ಯ ವೈಷಮ್ಯನೈರ್ಘೃಣ್ಯೇ। ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ (ಪ್ರ.೩.೭) ಇತಿ ಹಿ ಶ್ರುತಿಃ ॥ ೩೫ ॥**

ಭಾಷ್ಯಾರ್ಥ ॥ ಜೀವರು ಮಾಡಿದ ಕರ್ಮಗಳನ್ನು ಅಪೇಕ್ಷಿಸಿ ಸುಖದುಃಖರೂಪಗಳಾದ ಫಲಗಳನ್ನು ಕೊಡುವುದರಿಂದ ಅಂದರೆ ಫಲಗಳನ್ನು ಕೊಡಲಿಕ್ಕೆ ಕರ್ಮಾಪೇಕ್ಷೆಯಿದ್ದುದರಿಂದ ಈಶ್ವರನಿಗೆ ವೈಷಮ್ಯನೈರ್ಘೃಣ್ಯಗಳು ಪ್ರಸಕ್ತಗಳಾಗುವುದಿಲ್ಲ. (ಈಶ್ವರನು) ಜೀವರ ಪುಣ್ಯವನ್ನು ನಿಮಿತ್ತೀಕರಿಸಿಕೊಂಡು ಪುಣ್ಯಸಾಧ್ಯವಾದ ಸ್ವರ್ಗಾದಿಲೋಕವನ್ನೂ (ಜ್ಞಾನದಿಂದ ಮೋಕ್ಷವನ್ನು ಜೀವನಿಗೆ) ಹೊಂದಿಸಿಕೊಡುತ್ತಾನೆ. ಜೀವರ ಪಾಪವನ್ನು ನಿಮಿತ್ತೀಕರಿಸಿಕೊಂಡು ದುಃಖಬಾಹುಲ್ಯವುಳ್ಳ ನರಕಾದಿಲೋಕವನ್ನು ಹೊಂದಿಸಿಕೊಡುತ್ತಾನೆ. (ಸಮಗಳಾದ ಪುಣ್ಯಪಾಪಗಳಿಂದ ಸಮದುಃಖವುಳ್ಳ ಮನುಷ್ಯಲೋಕವನ್ನು ಹೊಂದಿಸಿಕೊಡುತ್ತಾನೆ.) ಎಂದು ಶ್ರುತಿಯು.

ವಿಶೇಷಾಂಶ ॥ ಕರ್ಮಾದಿಗಳನ್ನು ಅಪೇಕ್ಷಿಸದೆ ನಿರ್ನಿಮಿತ್ತವಾಗಿ ಈಶ್ವರನು ಕೆಲವರಿಗೆ ಸುಖ, ಕೆಲವರಿಗೆ ದುಃಖಗಳನ್ನು ಕೊಡುವುದಾದರೆ ಕರ್ಮಾದಿಗಳು ಸುಖದುಃಖಗಳಿಗೆ ಸಾಧನಗಳು ಎಂದು

ಪ್ರತಿಪಾದಿಸತಕ್ಕ ಜ್ಯೋತಿಷ್ಟೋಮೇನ ಇತ್ಯಾದಿ ವೇದಗಳಿಗೆ ಅಪ್ರಾಮಾಣ್ಯವು ಬರಬೇಕಾಗುವುದರಿಂದ ವೇದಾಪ್ರಾಮಾಣ್ಯ ಕಾರಣಗಳಾದ ವೈಷಮ್ಯ ನಿರ್ದಯತ್ವಗಳು ಪ್ರಸಕ್ತಗಳಾಗುವುದಿಲ್ಲ. ॥ ೩೫ ॥

ಪೀಠಿಕೆ ॥ ಕರ್ಮವನ್ನು ಅಪೇಕ್ಷಿಸಿ ಫಲದಾತೃತ್ವಪಕ್ಷವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನುಪನ್ಯಾಸಮಾಡುತ್ತಾರೆ—

## ಸೂತ್ರ ॥ ಓಂ ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್ ಓಂ ॥ ೩೬ ॥

ಸೂತ್ರಾರ್ಥ ॥ ಈಶ್ವರನಿಗೆ ಫಲವನ್ನು ಕೊಡುವುದರಲ್ಲಿ ಅಪೇಕ್ಷಣೀಯವಾದ ಕರ್ಮವು ಸೃಷ್ಟಿಗಿಂತ ಮೊದಲು ಇಲ್ಲ, ಪೂರ್ವಕರ್ಮವು ಇದೆ ಎಂದಂಗೀಕರಿಸಿದರೆ, ಅದೂ ಭಗವದಧೀನವಾದುದರಿಂದ ಪುನಃ ವೈಷಮ್ಯ-ನೈರ್ಘೃಣ್ಯ ದೋಷಗಳು ತಪ್ಪುವುದಿಲ್ಲವೆಂದರೆ, ಹೀಗೆ ಹೇಳಕೂಡದು. ಕರ್ಮಕ್ಕೆ ಪ್ರವಾಹತಃ ಅನಾದಿತ್ವವಿದ್ದುದರಿಂದ.

**ಭಾಷ್ಯ ॥ ಯದಪೇಕ್ಷಯಾಽಸೌ ಫಲಂ ದದಾತಿ ನ ತತ್ಕರ್ಮ । ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ । ಏಷ ಉ ಏವಾಸಾಧು ಕರ್ಮ ಕಾರಯತಿ ತಂ ಯಮಧೋ ನಿನೀಷತೇ (ಕೌ.೩.೮)। ಇತಿ ಶ್ರುತೇಃ ಕರ್ಮಣೋಽಪಿ ತನ್ನಿಮಿತ್ತತ್ವಾದಿತಿ ಚೇತ್ ॥ ೪ ॥**

ಭಾಷ್ಯಾರ್ಥ ॥ ಈಶ್ವರನು ಯಾವ ಕರ್ಮವನ್ನು ಅಪೇಕ್ಷಿಸಿಕೊಂಡು ಫಲವನ್ನು ಕೊಡುತ್ತಾನೆಂದು ಹೇಳಲ್ಪಡುತ್ತದೋ, ಅವನಿಂದ ಅಪೇಕ್ಷಣೀಯವಾದ ಸ್ವತಂತ್ರ ಕರ್ಮವೇ ಇಲ್ಲ (ಪೂರ್ವಕರ್ಮವು ಇರಬಹುದಷ್ಟೆ ಎಂದರೆ) ಈ ಶ್ರೀಹರಿಯು ಯಾವಜೀವನನ್ನು ಈ ಭೂರ್ಭುವಃ ಸ್ವರಾಖ್ಯ ಲೋಕಗಳಿಂದ ಮೇಲಕ್ಕೆ ತೆಗೆದುಕೊಂಡು ಹೋಗಲಿಕ್ಕೆ ಇಚ್ಛಿಸುತ್ತಾನೋ, ಅಂತಹ ಯೋಗ್ಯ ಜೀವನನ್ನು ಜ್ಞಾನಾದಿಗಳನ್ನು ಸಂಪಾದಿಸಿಕೊಡುತ್ತಾನೆ. (ಅಂದರೆ ಅವನಿಂದ ಮಾಡಿಸುತ್ತಾನೆ.) (ಇದರಿಂದ ಮುಕ್ತಿಯು ಇಚ್ಛಾವಿಶೇಷರೂಪವಾದ ಈಶ್ವರಪ್ರಸಾದ ಸಾಧ್ಯವೆಂದು ಉಕ್ತವಾಯಿತು.) (ಏಷಃ ಉ=) ಈ ವಿಷ್ಣುವು ಯಾರನ್ನು ಈ ಲೋಕಗಳಿಂದ ಅಧೋಲೋಕ (ತಮೋಲೋಕ)ಕ್ಕೆ ಒಯ್ಯಲಿಕ್ಕೆ ಇಚ್ಛಿಸುತ್ತಾನೋ, ಅಂತಹ ಅಯೋಗ್ಯ ಜೀವನನ್ನು (ಜೀವನಿಂದ) ಅಸಾಧುಕರ್ಮವನ್ನು ಮಾಡಿಸುತ್ತಾನೆ, ಎನ್ನುವ ಶ್ರುತಿಯಿಂದ ಪೂರ್ವಕರ್ಮಕ್ಕೂ ಈಶ್ವರನಿಮಿತ್ತತ್ವವಿದ್ದುದರಿಂದ ಅಂದರೆ ಅಪೇಕ್ಷ್ಯವಾದ ಪೂರ್ವಕರ್ಮಕ್ಕೂ (ಫಲಕ್ಕೂ) ಭಗವದಧೀನತ್ವವಿದ್ದುದರಿಂದ, ಎಂದರೆ.

ಪೀಠಿಕೆ ॥ ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ । ತಸ್ಯಾಪಿ ಪೂರ್ವಕರ್ಮ ಕಾರಣಮಿತ್ಯನಾದಿತ್ವಾತ್ಕರ್ಮಣಃ ॥ ೫ ॥**

ಭಾಷ್ಯಾರ್ಥ ॥ ಅಪೇಕ್ಷ್ಯವಾದ ಕರ್ಮವು ಇಲ್ಲವೆಂದು ಹೇಳಕೂಡದು. ಏಕೆಂದರೆ— ಅಂತಹ ಪೂರ್ವ ಕರ್ಮವೂ ಇದೆ. (ಹಾಗಾದರೆ ಪೂರ್ವಕರ್ಮಕ್ಕೂ ಶ್ರೀಹರಿಯೇ ನಿಮಿತ್ತನಾದುದರಿಂದ ವೈಷಮ್ಯಾದಿಪರಿಹಾರಕ್ಕೆ ಹೇತುವೇ ಆಗದೆ ಇರುವುದರಿಂದ ಅಪೇಕ್ಷ್ಯತ್ವವೇ ಕೂಡುವುದಿಲ್ಲವೆಂದರೆ) ಆ ಅಪೇಕ್ಷ್ಯಕರ್ಮಕ್ಕೂ ಅದಕ್ಕಿಂತಲೂ ಪೂರ್ವಕರ್ಮವು ಕಾರಣವು ಎನ್ನುವ ಹೇತುವಿನಿಂದ ಅದೂ

ಅದಕ್ಕಿಂತ ಪೂರ್ವಕರ್ಮದಿಂದ ಕಾರಿತವಾಗಿದೆ. (ಹಾಗಾದರೆ ಪೂರ್ವತನಕ್ಕೂ ಈಶ್ವರನು ನಿಮಿತ್ತನಾದುದರಿಂದ ಪುನಃ ವೈಷಮ್ಯಾದಿ ದೋಷಗಳು ಬರುವುದರಿಂದ ಅನಪೇಕ್ಷ್ಯತ್ವವೇ ಎಂದರೆ) ಪೂರ್ವತನ ಕರ್ಮಕ್ಕೂ ಅದಕ್ಕಿಂತ ಪೂರ್ವತನ ಕರ್ಮವು ಕಾರಣವು. ಅದಕ್ಕೂ ಅದಕ್ಕಿಂತ ಪೂರ್ವತನ ಕರ್ಮವು ಕಾರಣವು ಹೀಗೆ ಅದೂ ಪೂರ್ವತನ ಕರ್ಮಕಾರಿತವು. (ಹಾಗಾದರೆ ಎಲ್ಲಿ ಕರ್ಮಪರಂಪರೆಗೆ ಪರ್ಯವಸಾನವೋ ಅದನ್ನಾರಂಭಿಸಿ ವೈಷಮ್ಯಾದಿ ದೋಷವು ಬಂದೇ ಬರುವುದು, ಎಂದರೆ) ಕರ್ಮಪರಂಪರೆಗೆ (ಕರ್ಮಸಮುದಾಯಕ್ಕೆ) ಅನಾದಿತ್ವವಿದ್ದುದರಿಂದ.

ಪೀಠಿಕೆ ॥ ಸೂತ್ರಕಾರರು ಹೇಳಿದ ಅರ್ಥದಲ್ಲಿ ಪುರಾಣಸಮ್ಮತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಭವಿಷ್ಯತ್ಪುರಾಣೇ ಚ। ಪುಣ್ಯಪಾಪಾದಿಕಂ ವಿಷ್ಣುಃ ಕಾರಯೇತ್ಪೂರ್ವಕರ್ಮಣಾ। ಅನಾದಿತ್ವಾತ್ಕರ್ಮಣಶ್ಚ ನ ವಿರೋಧಃ ಕಥಂಚನ । ಇತಿ ॥ ೩೬ ॥ ॥ ೬ ॥**

ಭಾಷ್ಯಾರ್ಥ ॥ ಶ್ರೀ ಹರಿಯು ತನ್ನಿಂದ ಅಪೇಕ್ಷ್ಯವಾದ ಪೂರ್ವಕರ್ಮವನ್ನು ನಿಮಿತ್ತೀಕರಿಸಿ ಕೊಂಡು (ಜೀವನಿಂದ) ಪುಣ್ಯ ಪಾಪ ತಪಸ್ಸು ಮೊದಲಾದವುಗಳಿಗೆ ಸಾಧನವಾದ ಕರ್ಮಾದಿಗಳನ್ನು ಮಾಡಿಸುವನು. ಸ್ವಾಪೇಕ್ಷ್ಯವಾದ ಕರ್ಮಕ್ಕೂ ಅದಕ್ಕಿಂತಲೂ ಪೂರ್ವತನ ಕರ್ಮಕ್ಕೂ, ತಥಾಚ ಕರ್ಮಪರಂಪರೆಗೆ ಅನಾದಿತ್ವವಿದ್ದುದರಿಂದ ಯಾವ ಪ್ರಕಾರದಿಂದಲೂ ಕಾರ್ಯಮೂಲಕವಾಗಿ ಆಗಲೀ, ಕಾರಣವಾದ ಕರ್ಮಮೂಲಕವಾಗಿಯಾಗಲೀ ವೈಷಮ್ಯ ದಯಾರಾಹಿತ್ಯರೂಪವಾದ ದೋಷವು ಇಲ್ಲ. ಹೀಗೆ ಭವಿಷ್ಯತ್ಪುರಾಣದಲ್ಲಿ ಇದೆ. ॥ ೩೬ ॥

ಪೀಠಿಕೆ ॥ ನಿಯಮದಿಂದ ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡುವುದಾದರೆ ಈಶ್ವರನಿಗೆ ಅಸ್ವಾತಂತ್ರ್ಯವು ಬರಬೇಕಾಗುವುದು. ಎನ್ನುವ ಶಂಕೆಯನ್ನು ನಿವಾರಿಸುವುದಕ್ಕಾಗಿ ಸೂತ್ರವನ್ನುಪನ್ಯಾಸ ಮಾಡುತ್ತಾರೆ—

## ಸೂತ್ರ ॥ ಓಂ ಉಪಪದ್ಯತೇ ಚಾಪ್ಯುಪಲಭ್ಯತೇ ಚ ಓಂ ॥ ೩೭ ॥

ಸೂತ್ರಾರ್ಥ ॥ ಈಶ್ವರನಿಗೆ ಫಲವನ್ನು ಕೊಡುವುದರಲ್ಲಿ ಸ್ವಾಧೀನವಾದ ಕರ್ಮದ ಅಪೇಕ್ಷೆಯಿದ್ದರೂ ಸ್ವಾತಂತ್ರ್ಯವು ಕೂಡಿಯೇ ಕೂಡುತ್ತದೆ. ವೈಷಮ್ಯನೈರ್ಘೃಣ್ಯಗಳಿಗೆ ಅದೋಷತ್ವವು ಸ ಕಾರಯೇತ್ ಎನ್ನುವ ಶ್ರುತಿಯಲ್ಲಿ ತಿಳಿದುಬರುತ್ತದೆ.

**ಭಾಷ್ಯ ॥ ನ ಚ ಕರ್ಮಾಪೇಕ್ಷತ್ವೇನೇಶ್ವರಸ್ಯಾಸ್ವತಂತ್ರ್ಯಂ ॥ ೭ ॥**

ಭಾಷ್ಯಾರ್ಥ ॥ ಈಶ್ವರನಿಗೆ ಕರ್ಮಾಪೇಕ್ಷೆಯಿದ್ದುದರಿಂದ ಸ್ವಾತಂತ್ರ್ಯಾನುಪಪತ್ತಿಯು ಇಲ್ಲ (ಮತ್ತೆ ಸ್ವಾತಂತ್ರ್ಯವು ಉಪಪನ್ನವೇ ಆಗುತ್ತದೆ.)

ಪೀಠಿಕೆ ॥ ಕರ್ಮಾಪೇಕ್ಷೆಯುಳ್ಳವನಿಗೆ ಸ್ವಾತಂತ್ರ್ಯವು ಹೇಗೆ ಕೂಡುತ್ತದೆ, ಎಂದರೆ—

**ಭಾಷ್ಯ ॥ ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ। ಯದನುಗ್ರಹತಃ ಸಂತಿನ**

**ಸಂತಿ ಯದುಪೇಕ್ಷಯಾ ॥ *ಇತ್ಯಾದಿನಾ (ಇತಿ) ಕರ್ಮಾದೀನಾಂ ಸತ್ವಸ್ಯಾಪಿ ತದಧೀನತ್ವಾತ್ (ತದಪೇಕ್ಷತ್ವಾತ್ ) ॥ ೮ ॥**

ಭಾಷ್ಯಾರ್ಥ ॥ ಪ್ರಕೃತ್ಯಾದಿ ತತ್ವವು, ಧರ್ಮ-ಅಧರ್ಮಗಳು, ಕಾಲಪ್ರವಾಹವು, ಪ್ರಕೃತಿ ಕರ್ಮಾದಿಗಳ ಪರಿಣಾಮ ಸತ್ವಾದಿಗಳು, (ಜೀವಃ) ಇವುಗಳ ಅಭಿಮಾನಿಯು— ಇವುಗಳೆಲ್ಲವೂ ಯಾವ ಶ್ರೀಹರಿಯ ಅನುಗ್ರಹದಿಂದಲೇ ಇರುತ್ತವೋ, ಯಾರ ಅನುಗ್ರಹವಿಲ್ಲದೆ ಇರುವುದಿಲ್ಲವೋ ಇತ್ಯಾದಿಗಳಿಂದ ಕರ್ಮಕಾಲಜೀವಾದಿಗಳ ಸತ್ವಾದಿಗಳೂ ಈಶ್ವರನ ಅಧೀನಗಳಾಗಿ ಉಪಲಬ್ಧಗಳಾಗಿರುವುದರಿಂದ.

ವಿಶೇಷಾಂಶ ॥ ಸ್ವೇಚ್ಛೆಯಿಂದ ನಿಯಮವಾಗಿ ಸ್ವಾಧೀನಸತ್ವಾದಿಗಳುಳ್ಳ (ಕರ್ಮವನ್ನು ಅಪೇಕ್ಷೆಯೆಂದರೆ ಅರ್ಥಾತ್ ಅನಪೇಕ್ಷೆಯೇ ಆಯಿತು. ತಥಾಚ ಪುನಃ ವೈಷಮ್ಯಾದಿಗಳು ಬರಬೇಕಾಗುವುವು. ಎಂದರೆ—

**ಭಾಷ್ಯ ॥ ನ ಚ ಪುನರ್ವೈಷಮ್ಯಾದ್ಯಾಪಾತೇನ ದೋಷಃ । ತಾದೃಶವೈಷಮ್ಯಾದೇರುಪಲಭ್ಯಮಾನತ್ವಾತ್ ॥ ೯ ॥**

ಭಾಷ್ಯಾರ್ಥ ॥ ಹೇಗೆ ಕರ್ಮಾಪೇಕ್ಷೆಯಿಲ್ಲದಿದ್ದರೆ ವೈಷಮ್ಯಾದಿಗಳು ಬರುತ್ತವೋ, ಹಾಗೆಯೇ ಪುನಃ ಪಕ್ಷಾಂತರದಲ್ಲಿಯೂ ಮೊದಲು ಇದ್ದ ಕರ್ಮವನ್ನು ಅನುಸರಿಸಿ ಕರ್ಮಾಂತರವನ್ನು ಮಾಡಿಸುತ್ತಾನೆ. ಹೀಗೆ ಕರ್ಮಾಪೇಕ್ಷೆಯಿದ್ದರೂ ಈಶ್ವರನಿಗೆ ವೈಷಮ್ಯಾದಿಗಳು ಬರುವುದರಿಂದ ದೋಷಿತ್ವವು ಬರಬೇಕಾಗುವುದು. ಎಂದೂ ಶಂಕಿಸಕೂಡದು. ಏಕೆಂದರೆ, ಅಂತಹ ವೇದಗಳಿಗೆ ಅಪ್ರಾಮಾಣ್ಯಕ್ಕೆ ಕಾರಣವಾಗದಿರುವ ಸ್ವಾಧೀನ ಕರ್ಮವನ್ನು ಅಪೇಕ್ಷಿಸಿ ವಿಷಮಫಲವನ್ನು ಕೊಡತಕ್ಕ ವೈಷಮ್ಯಾದಿಗಳಿಗೆ ದೋಷತ್ವವಿಲ್ಲವೆಂದು ಶ್ರುತಿಯಲ್ಲಿ ತೋರುವುದರಿಂದ. ತತ್ವಪ್ರದೀಪದಲ್ಲಿ ಅಂತಹ ವೈಷಮ್ಯಾದಿಗಳು ಉಪಪನ್ನವೇ ಆಗುತ್ತವೆ. ಅವುಗಳು ದೋಷಾಪಾದಕಗಳಲ್ಲ. ಶ್ರುತಿಯಲ್ಲಿ ಹಾಗೆ ತೋರುವುದರಿಂದ, ಎಂದುಕ್ತವಾಗಿದೆ. ಅಂತೂ ಶ್ರುತಿಯಲ್ಲಿ ವೇದಾಪ್ರಾಮಾಣ್ಯಕ್ಕೆ ಕಾರಣವಾಗದಿರುವ ವೈಷಮ್ಯವೂ ನೈರ್ಘೃಣ್ಯವೂ ದೋಷಗಳಲ್ಲವೆಂದು ಹೇಳಿದ್ದರಿಂದ ಈಶ್ವರನಲ್ಲಿ ಅವುಗಳು ದೋಷಗಳು ಆಗುವುದಿಲ್ಲ.

ಪೀಠಿಕೆ ॥ ಶ್ರುತಿಯು ಯಾವುದೆಂದರೆ—

**ಭಾಷ್ಯ ॥ ಸ ಕಾರಯೇತ್ಪುಣ್ಯಮಥಾಪಿ ಪಾಪಂ ನತಾವತಾ ದೋಷವಾನೀಶಿತಾಽಪಿ । ಈಶೋಯತೋ ಗುಣದೋಷಾದಿಸತ್ತ್ವೇ ಸ್ವಯಂ ಪರೋಽನಾದಿರಾದಿಃ ಪ್ರಜಾನಾಂ ॥ ಇತಿ ಚತುರ್ವೇದಶಿಖಾಯಾಂ ॥ ೩೭ ॥ ಅಧಿ. ೧೦ ॥ ॥ ೧೦ ॥**

ಭಾಷ್ಯಾರ್ಥ ॥ ಶ್ರೀಹರಿಯು (ಸ್ವಾಧೀನವಾದ ಪೂರ್ವಕರ್ಮವನ್ನು ಅಪೇಕ್ಷಿಸಿ ಜೀವರಿಂದ)

---

★ ಆದಿಶಬ್ದದಿಂದ ನ ಋತೇ ತ್ವತ್ಕ್ರಿಯತೇ ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.

ಪುಣ್ಯಕರ್ಮವನ್ನು ಮಾಡಿಸುವನು. ಪಾಪಕರ್ಮವನ್ನು ಮಾಡಿಸುವನು. ಆ ಕರ್ಮಕ್ಕೆ ಪ್ರೇರಕನೂ ಶ್ರೀಹರಿಯೇ. ಅಷ್ಟರಿಂದ ವೈಷಮ್ಯಾದಿ ದೋಷವುಳ್ಳವನಲ್ಲ (ತತ್ವಪ್ರದೀಪದಲ್ಲಿ ಆದರೂ) ಆ ಶ್ರೀಹರಿಯು ತಾನು ನಿಯಾಮಕನಾದಾಗ್ಯೂ ಅಂದರೆ—ಪುಣ್ಯಕ್ಕೆ ಶೋಭನವೇ ಫಲವು. ಪಾಪಕ್ಕೆ ವಿಪರೀತಫಲವೇ ಎನ್ನುವುದನ್ನು ಅನ್ಯಥಾ (ವ್ಯತ್ಯಾಸ) ಮಾಡಲಿಕ್ಕೆ ಸಮರ್ಥನಾದಾಗ್ಯೂ ಹಾಗೆ ಮಾಡುವುದು ಇಲ್ಲ ಮತ್ತೆ ಯೋಗ್ಯಜನರಿಂದ ಪುಣ್ಯ ಕರ್ಮವನ್ನು ಪಾಪಿಷ್ಠರಿಂದ ಪಾಪಕರ್ಮವನ್ನು (ಮಧ್ಯಮರಿಂದ ಮಿಶ್ರಕರ್ಮಗಳನ್ನು) ಮಾಡಿಸುವನು. ಅಷ್ಟರಿಂದ ವೈಷಮ್ಯಾದಿದೋಷಗಳುಳ್ಳವನು ಆಗಲಾರನು. ಏಕೆಂದರೆ, ಸರ್ವಸ್ವತಂತ್ರನಾದ ಆ ಶ್ರೀಹರಿಯು ಇತರರಲ್ಲಿ ಗುಣದೋಷಗಳ ಸಂಬಂಧವನ್ನು ಕೊಡುವ ವಿಷಯದಲ್ಲಿಯೂ ಗುಣದೋಷಾದಿಗಳಿಗೆ ಗುಣದೋಷತ್ವ ವಿಷಯದಲ್ಲಿಯೂ ತಾನೇ ಸಮರ್ಥನು. (ಅನಾದಿಃ) ಉತ್ಪಾದಕಶೂನ್ಯನು. ಪ್ರಜಾಮೊದಲಾದ ಸರ್ವಪದಾರ್ಥಗಳಿಗೂ ಸೃಷ್ಟಿಕರ್ತನು. ಹೀಗೆ ಚತುರ್ವೇದಶಿಖಾದಲ್ಲಿ ಉಕ್ತವಾಗಿದೆ.

**ವಿಶೇಷಾಂಶ ॥** ಯಾವ ಪುರುಷನಿಗೂ ತನಗೆ ದೋಷಗಳು ಇರಬೇಕೆನ್ನುವ ಇಚ್ಛೆಯು ಇರಲಾರದು. ಸರ್ವಕರ್ತನಿಗೆ ಇರಲಾರದು ಎನ್ನುವುದನ್ನು ಏನು ಹೇಳಬೇಕು. ಆದಕಾರಣ ಶ್ರೀಹರಿಯು ದೋಷಗಳುಳ್ಳವನಲ್ಲ. ಮತ್ತೆ ಪರಮೇಶ್ವರನು ಸರ್ವಸ್ವತಂತ್ರನಾದುದರಿಂದಲೂ ಸರ್ವಗುಣಗಳಿಂದ ಪರಿಪೂರ್ಣನಾದುದರಿಂದಲೂ ತಾನು ಯಾವ ದೋಷಗಳಿಂದಲೂ ಲಿಪ್ತನಾಗದೇನೇ ತ್ರಿವಿಧರಾದ ಜೀವರಿಂದ ತ್ರಿವಿಧಗತಿಗೆ ಸಾಧನಗಳಾದ ಕರ್ಮಾದಿಗಳನ್ನು ಮಾಡಿಸುತ್ತಾನೆಂದು ಅಂಗೀಕರಿಸಿದರೆ ಯಾವ ಅನುಪಪತ್ತಿಯೂ ಬರುವುದಿಲ್ಲ.

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ **ಸಸ್ಯಗಳಿಗೆ ಪರ್ಜನ್ಯನಂತೆ ಈಶ್ವರನು ಸಾಧಾರಣ ಕಾರಣನು. ಕರ್ಮಗಳಾದರೂ** ಬೀಜಗಳಂತೆ ಅಸಾಧಾರಣ ಕಾರಣಗಳು. ಬೀಜಗಳ ಶಕ್ತಿವೈಚಿತ್ರ್ಯವಿದ್ದುದರಿಂದಲೇ ವ್ರೀಹಿ ಯವಮೊದಲಾದ ಸಸ್ಯಗಳಲ್ಲಿ ವೈಚಿತ್ರ್ಯವು. ಆದುದರಿಂದ ಈಶ್ವರನಿಗೆ ವೈಷಮ್ಯಾದಿದೋಷಗಳು ಇಲ್ಲ ಎಂದು ಆದ್ಯಸೂತ್ರಾರ್ಥವು ಎನ್ನುತ್ತಾರೆ. ಅದು ಅಯುಕ್ತವು. ಕರ್ಮವು ಅಸಾಧಾರಣ ಕಾರಣವಾದಾಗ್ಯೂ ಏಷ ಹ್ಯೇವ ಸಾಧು ಇತ್ಯಾದಿ ಶ್ರುತಿಯಿಂದಲೂ ಪುಣ್ಯಪಾಪಾದಿಕಂ ವಿಷ್ಣುಃ ಇತ್ಯಾದಿ ಸ್ಮೃತಿಯಿಂದಲೂ ಕರ್ಮವನ್ನು ಈಶ್ವರನೇ ಮಾಡಿಸುವುದರಿಂದ ವೈಷಮ್ಯಾದಿದೋಷಗಳು ತಪ್ಪಲಾರವು. ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹವು. ಯುಕ್ತವಲ್ಲವೆಂದು ಪೂರ್ವಪಕ್ಷವು. ವಿಷ್ಣುವಿಗೆ ಪರಪ್ರಯೋಜನೋದ್ದೇಶದಿಂದ ಪ್ರವೃತ್ತಿಯನ್ನಂಗೀಕರಿಸಿದರೆ ಅವರವರ ಕರ್ಮವನ್ನು ಅಪೇಕ್ಷಿಸದೆ ಅವರವರಿಗೆ ಫಲವನ್ನು ಕೊಡುವುದಾದರೆ ನಿರ್ನಿಮಿತ್ತವಾಗಿ ಕೆಲವರಿಗೆ ಸುಖ

ಕೆಲವರಿಗೆ ದುಃಖ ಇತ್ಯಾದಿಗಳನ್ನು ಕೊಟ್ಟರೆ ವೈಷಮ್ಯನೈರ್ಘೃಣ್ಯಗಳು ಬರಬೇಕಾಗುವುವು. ಕರ್ಮವನ್ನು ಅಪೇಕ್ಷಿಸಿ ಫಲಕೊಡುವುದಾದರೂ ಕರ್ಮಗಳೂ ಈಶ್ವರನ ಅಧೀನಗಳಾಗಿರುವುದರಿಂದ ನಿರ್ನಿಮಿತ್ತವಾಗಿ ಸುಕೃತದುಷ್ಕೃತಕಾರಣಗಳಾದ ಕರ್ಮಗಳನ್ನು ಮಾಡಿಸುವವನಿಗೆ ಪುನಃ ವೈಷಮ್ಯಾದಿ ದೋಷಗಳು ತಪ್ಪಲಾರವು. ಎಂದರೆ— ಶ್ರೀಹರಿಯು ಅವರವರ ಪೂರ್ವಪೂರ್ವ ಕರ್ಮವನ್ನು ಅಪೇಕ್ಷಿಸಿಯೇ ಉತ್ತರೋತ್ತರದಲ್ಲಿ ಸುಕೃತಾದಿಕರ್ಮಗಳನ್ನು ಮಾಡಿಸಿ ಫಲವನ್ನು ಕೊಡುತ್ತಾನೆಂದು ಅಂಗೀಕರಿಸಿದ್ದರಿಂದ ನಿರ್ನಿಮಿತ್ತತ್ವವಿಲ್ಲ. **ಏಷ ಹ್ಯೇವ ಸಾಧು ಕರ್ಮ ಕಾರಯತಿ** ಎನ್ನುವ ಶ್ರುತಿಯಿಂದ ಕರ್ಮಗಳೂ ಸ್ವಾಧೀನಗಳೇ ಆಗಿರುವುದರಿಂದ ಅಸ್ವಾತಂತ್ರ್ಯವು ಬರುವುದಿಲ್ಲ. **ಸ ಕಾರಯೇತ್ಪುಣ್ಯಂ** ಎನ್ನುವ ಶ್ರುತಿಯಿಂದ ದೋಷಾಭಾವವೇ ಕೂಡುವುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವು. **ತಥಾಚ ಸ್ವಭಾವಮನ್ಯಥಾ ಕರ್ತುಂ ಯಃ ಶಕ್ತೋऽಪ್ಯನುವರ್ತತೇ । ನಾಸೌ ಲೋಕೋऽಪಿ ವಿಷಮೋ ನ ವಾ ನಿರ್ಘೃಣ ಉಚ್ಯತೇ ॥ ೧ ॥ ಸಮರ್ಥೋಽಪಿ ಹಿ ಹಂಸಾದೀನ್ ಕಾಕೀಕರ್ತುಂ ಚ ಯೋ ಮುನಿಃ । ನ ಕಾಕೀಕುರುತೇऽಯಂ ಕಿಂ ಲೋಕೇ ವಿಷಮ ಉಚ್ಯತೇ ॥ ೨ ॥ ಸಮರ್ಥೋऽಪಿ ಚ ಕಾಕಾದೀನ್ ಹಂಸೀಕರ್ತುಂ ಹಿ ಯೋ ಮುನಿಃ । ನ ಹಂಸೀಕುರುತೇऽಯಂ ಕಿಂ ಲೋಕೇ ನಿರ್ಘೃಣ ಉಚ್ಯತೇ ॥ ೩ ॥ ವಿಷಮತ್ವಂ ತು ದೋಷಾಯ ಶುಭಾಶುಭವಿಪರ್ಯಯೇ । ಶುಬಾಶುಭನಿಯಂತೃತ್ವಂ ನ ದೋಷೋ ಗುಣ ಏವ ಸಃ ॥ ೪ ॥ ಅಧಿ. ೧೦ ॥**

**ವೈಷಮ್ಯನೈರ್ಘೃಣ್ಯಾಧಿಕರಣವು ಸಮಾಪ್ತವಾಯಿತು.**

# ೧೧ ಸರ್ವಧರ್ಮೋಪಪತ್ತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಶ್ರೀಹರಿಯು ಸರ್ವಗುಣ ಪರಿಪೂರ್ಣನು ಸರ್ವದೋಷ ರಹಿತನು ಎನ್ನುವಲ್ಲಿ ಯುಕ್ತ್ಯವಿರೋಧವನ್ನು ಹೇಳುತ್ತಾರೆ. ಎಲ್ಲಾ ಯುಕ್ತಿವಿರೋಧಗಳನ್ನು ಪರಿಹರಿಸಿದ್ದರಿಂದ ಉತ್ತರ ಸೂತ್ರವು ಏಕೆ ಎಂದರೆ—

**ಭಾಷ್ಯ ॥ ಅವಶಿಷ್ಟೈರುಪಸಂಹರತಿ ॥ ೧ ॥**

ಭಾಷ್ಯಾರ್ಥ ॥ (ಮುಖತಃ ಪ್ರತಿಪಾದಿತಗಳಾದ ಸ್ರವೃತ್ತ್ವಾದಿ ಗುಣಗಳಿಂದ) ಅವಶಿಷ್ಟಗಳಾದ ಸ್ವಾತಂತ್ರ್ಯಾದಿ ಸರ್ವಗುಣಗಳನ್ನು ಪ್ರತಿಪಾದಿಸಿ ಗುಣಪೂರ್ಣತ್ವವನ್ನುಪಸಂಹಾರ ಮಾಡುತ್ತಾರೆ. (ಪ್ರಕರಣವನ್ನು ಸಮಾಪಿಸುತ್ತಾರೆ.)

ವಿಶೇಷಾಂಶ ॥ ಪೂರ್ವಾಧಿಕರಣಗಳಲ್ಲಿ ವಿಷ್ಣುವಿಗೆ ಪ್ರತ್ಯೇಕವಾಗಿ ಸರ್ವಕರ್ತೃತ್ವಾದಿ ಒಂದೊಂದು ಗುಣವಿಷಯದಲ್ಲಿಯೂ ದೋಷಾಭಾವವಿಷಯದಲ್ಲಿಯೂ ವಿರೋಧವನ್ನು ಪರಿಹರಿಸಿ ಗುಣಗಳನ್ನು ದೋಷಾಭಾವಗಳನ್ನು ಸಮರ್ಥಿಸಿರುತ್ತಾರೆ. ಈಗ ಶ್ರೀಹರಿಗೆ ಅವುಗಳಿಂದ ಅವಶಿಷ್ಟಗಳಾದ ಸರ್ವಗುಣ ಪರಿಪೂರ್ಣತ್ವ ಸರ್ವದೋಷರಾಹಿತ್ಯವಿಷಯದಲ್ಲಿ ಪ್ರಾಪ್ತವಾದ ಯುಕ್ತಿವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಾರೆ.

ಪೀಠಿಕೆ ॥ ಜೀವರಂತೆ ಚೇತನನಾದುದರಿಂದ ವಿಷ್ಣುವು ಸರ್ವಗುಣಪೂರ್ಣನು ಸರ್ವದೋಷ ವರ್ಜಿತನು ಎನ್ನುವುದು ಯುಕ್ತವಲ್ಲ. ಇಲ್ಲವಾದರೆ ಇತರರಿಗೂ ಸರ್ವಗುಣಪರಿಪೂರ್ಣತ್ವವೂ ಸರ್ವದೋಷಾಭಾವವೂ ಬರಬೇಕಾಗುವುದು, ಎಂದರೆ—

## ಸೂತ್ರ ॥ ಓಂ ಸರ್ವಧರ್ಮೋಪಪತ್ತೇಶ್ಚ ಓಂ ॥ ೩೮ ॥

ಸೂತ್ರಾರ್ಥ ॥ ಈಶ್ವರನು, ಸರ್ವಧರ್ಮಾಃ=ದೋಷಾಭಾವ, ಜ್ಞಾನ ಆನಂದ ಮೊದಲಾದ ಸರ್ವಗುಣಗಳುಳ್ಳವನು, ಸರ್ವಧರ್ಮೋಪಪತ್ತೇಶ್ಚ=ಸರ್ವಗುಣಗಳಿಗೂ ಸರ್ವದೋಷಾಭಾವ ಗಳಿಗೂ ಈಶ್ವರನಲ್ಲಿ ಉಪಪಾದಕಗಳಾದ ಸ್ವಾತಂತ್ರ್ಯಾದಿ ಯುಕ್ತಿಗಳು ಮಾತ್ರ ಇಲ್ಲ, ಮತ್ತೆ ಗುಣಾಃ ಶ್ರುತಾಃ ಎನ್ನುವ ಶ್ರುತಿಯದೆಶೆಯಿಂದಲೂ,

**ಭಾಷ್ಯ ॥ ಗುಣಾಃ ಶ್ರುತಾಃ ಸುವಿರುದ್ಧಾಶ್ಚದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।**
**ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ ॥**
**ಇತಿ ಸರ್ವಗುಣೋಪಪತ್ತಿಶ್ರುತೇಶ್ಚ ॥ ೩೮ ॥ ಅಧಿ. ೧೧ ॥ ॥ ೨ ॥**

ಭಾಷ್ಯಾರ್ಥ ॥ ವೇದದಲ್ಲಿ ಶ್ರುತಗಳಾದ ಅಣುತ್ವ ಮಹತ್ವ ಮೊದಲಾದ ಶುಭಧರ್ಮಗಳೂ ಲೋಕದೃಷ್ಟಿಯಿಂದ ಅತಿವಿರುದ್ಧಗಳಾಗಿ ಅನ್ಯತ್ರ ಒಟ್ಟಿಗೆ ಇಲ್ಲದೆ ಇದ್ದವುಗಳಾದಾಗ್ಯೂ ಶ್ರೀಹರಿಯಲ್ಲಿ ಇವೆ. ಹೀಗೆಯೇ ಶ್ರೀಹರಿಯಲ್ಲಿ ಅಶ್ರುತಗಳು ಅಂದರೆ ವೇದಾನುಕ್ತಗಳಾದಾಗ್ಯೂ ರಮಾ ಚತುರ್ಮುಖ ಸರಸ್ವತಿ ಇವರಿಂದ ಚಿಂತ್ಯಗಳಾದ ಗುಣಗಳು ಇವೆ. (ಹಾಗಾದರೆ ರಮಾದಿಗಳಿಂದ ಎಷ್ಟು ಗುಣಗಳು ಧ್ಯಾನಿಸಲಿಕ್ಕೆ ಶಕ್ಯಗಳಾಗುತ್ತವೋ ಅಷ್ಟೇ ಗುಣಗಳೋ ಎಂದರೆ) ರಮಾದಿಗಳಿಂದ ಹೇಗೆ ಚಿಂತ್ಯಗಳಾದ ಗುಣಗಳು ಇವೆಯೋ, ಹಾಗೆಯೇ ಅವರಿಂದ ಅಚಿಂತ್ಯಗಳಾದ ಗುಣಗಳೂ ಇವೆ. ಈ ವಿಷಯದಲ್ಲಿ ಸಂದೇಹ ಮಾಡಕೂಡದು. (ಹೇಗೆ ಶ್ರುತಗಳಾದ ಗುಣಗಳು ಚಿಂತ್ಯಗಳೂ ಅಚಿಂತ್ಯಗಳೂ ಆದವುಗಳು ದೇವರಲ್ಲಿ ಇವೆಯೋ ಹಾಗೆಯೇ ದೋಷಗಳೂ ಕೂಡ ಇವೆಯೋ ಏನು ಎಂದರೆ) ದೇವರಲ್ಲಿ ದೋಷಗಳು ಶ್ರುತಗಳಾಗಲೇ ಇಲ್ಲ. ಚಿಂತ್ಯಗಳೂ ಅಲ್ಲ. ಪುನಃ ಅಚಿಂತ್ಯಗಳಾದ ದೋಷಗಳು ಇಲ್ಲವೆಂದು ಏನು ಹೇಳಬೇಕು. (ಜನಿತೋಽತವಿಷ್ಣೋಃ ಇತ್ಯಾದಿಗಳಲ್ಲಿ ಶ್ರೀಹರಿಗೆ ಉತ್ಪತ್ತ್ಯಾದಿ ದೋಷಗಳು ಶ್ರುತಗಳಾಗಿರುವುದರಿಂದ ಶ್ರುತಗಳಾಗಲಿಲ್ಲವೆನ್ನುವುದು ಹೇಗೆ ಕೂಡುತ್ತದೆ, ಎಂದರೆ—) ಮಿಥ್ಯಾಜ್ಞಾನಿಗಳಿಂದಲೇ ಅಂದರೆ ಅವರಿಗೇನೇ ದೋಷಗಳು ಪ್ರತೀತಗಳಾಗುತ್ತವೆ. ಜ್ಞಾನಿಗಳಿಗೆ ಹಾಗೆ ಪ್ರತೀತಗಳಾಗುವುದಿಲ್ಲ. ಹೀಗೆ ಸರ್ವಧರ್ಮಗಳನ್ನು ಉಪಪಾದಿಸತಕ್ಕ ಶ್ರುತಿಯ ದೆಶೆಯಿಂದ.

ವಿಶೇಷಾಂಶ ॥ ಅಶ್ರುತಗಳಾದಾಗ್ಯೂ ರಮಾದಿಗಳಿಂದ ಚಿಂತ್ಯಗಳಾದವು ಇವೆ ಎಂದಾದರೆ— **ಆನುಕ್ತಂ ಪಂಚಭಿರ್ವೇದೈಃ ನ ವಸ್ತ್ವಸ್ತಿ ಕುತಶ್ಚನ** ಎನ್ನುವುದರಿಂದ ವಿರೋಧವೆಂದು ಹೇಳಕೂಡದು. ಸಾಮಾನ್ಯತಃ ಶ್ರುತಗಳು ವಿಶಿಷ್ಟ ಅಶ್ರುತಗಳು ಎನ್ನುವ ಅರ್ಥವನ್ನು ವಿವಕ್ಷಾ ಮಾಡಿದ್ದರಿಂದ ವಿರೋಧವಿಲ್ಲ ॥ ೩೮ ॥

## ಅಧಿಕರಣ ಸಾರಾಂಶ

ಶ್ರೀಹರಿಗೆ ಹೇಳಲ್ಪಟ್ಟ ನಿರ್ದೋಷ ಗುಣಪೂರ್ಣತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹವು. ಯುಕ್ತವಲ್ಲವೆಂದು ಪೂರ್ವಪಕ್ಷವು. ಶ್ರೀಹರಿಯು ನಿರ್ದೋಷನೂ ಅಲ್ಲ ಗುಣ ಪರಿಪೂರ್ಣನೂ ಅಲ್ಲ, ಚೇತನತ್ವವಿದ್ದ ಪ್ರಯುಕ್ತ ಚೈತ್ರಾದಿಗಳಂತೆ, ಎನ್ನುವ ಯುಕ್ತಿವಿರೋಧವು ಇದ್ದುದರಿಂದ, ದೋಷಗಳು ಇಲ್ಲವಾದರೆ ಗುಣಗಳೂ ಇರಲಾರವು, ಎಂದರೆ—ಬ್ರಹ್ಮನು ಸರ್ವದೋಷರಹಿತನು ದೋಷಗಳನ್ನು ಬಿಡಲಿಚ್ಛೆಯಿದ್ದು ಬಿಡಲಿಕ್ಕೆ ಶಕ್ತಿಯಿದ್ದುದರಿಂದ ಎನ್ನುವ ಯುಕ್ತಿಯಿಂದ ಅನುಗ್ರಹೀತವಾದ **ಗುಣಾಃ ಶ್ರುತಾಃ** ಇತ್ಯಾದಿ ಶ್ರುತಿಯಿಂದ ನಿರ್ದೋಷ ಗುಣಪೂರ್ಣತ್ವವು ಸಿದ್ಧವಾಗುತ್ತದೆ. ಚೇತನತ್ವಯುಕ್ತಿಯು ಅಪ್ರಯೋಜಕವು. ಆದಕಾರಣ ಶ್ರೀಹರಿಗೆ ನಿರ್ದೋಷ ಗುಣಪೂರ್ಣತ್ವವೂ ಸರ್ವದೋಷವರ್ಜಿತತ್ವವೂ ಯುಕ್ತವು. ತಥಾಚ **ನಿತ್ಯನಿರ್ಮುಕ್ತ ದೋಷಂ ಚಸದಾ ಸಂಪ್ರಾಪ್ತಸದ್ಗುಣಂ । ಪರಂ ಬ್ರಹ್ಮ ಭವೇತ್ತತ್ರ ಪ್ರೇಪ್ಸಾ ಶಕ್ತಿಯುತತ್ವತಃ ॥ ೧ ॥** ಅಧಿ. ೧೧ ॥

**ಸರ್ವಧರ್ಮೋಪಪತ್ತ್ಯಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ**
**ಶ್ರೀಮದನಾನಂದತೀರ್ಥಭಗವತ್ಪಾದಾಚಾರ್ಯ (ಪಾದ) ವಿರಚಿತೇ**
**ದ್ವಿತೀಯಾಧ್ಯಾಯಸ್ಯ(ಯೇ)ಪ್ರಥಮಃ ಪಾದಃ ॥ ೨-೧ ॥**

**ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಎರಡನೇ ಅಧ್ಯಾಯದಲ್ಲಿ ಒಂದನೇ ಪಾದವು ಸಮಾಪ್ತವಾಯಿತು. ॥ ೨-೧ ॥**

**ನಿರ್ದೋಷಗುಣಪೂರ್ಣೇನ ಶ್ರೀಪ್ರಾಣಪತಿನೇರಿತಃ ।**
**ಯದವೋಚಮಹಂ ತೇನ ಪ್ರೀಣಾತು ಪುರುಷೋತ್ತಮಃ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ದ್ವಿತೀಯಾಧ್ಯಾಯ ೨ನೇ ಪಾದ

## ಸಮಯಪಾದಃ

ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

## ೧. ರಚನಾಧಿಕರಣವು

ಪೀಠಿಕೆ ॥ ಈ ಪಾದಾರ್ಥವನ್ನು ತೋರಿಸುತ್ತಾರೆ—

**ಭಾಷ್ಯ ॥ ಓಂ ॥ ಇತರೇಷಾಂ ಚಾನುಪಲಬ್ಧೇರಿತಿ ಸಾಮಾನ್ಯತೋ (ನ್ಯನಿ) ನಿರಾಕರಣಂ ಸಮಯಾನಾಂ ಕೃತಂ । ವಿಶೇಷತೋ ನಿರಾಕರೋತ್ಯಸ್ಮಿನ್ಪಾದೇ ॥ ೧ ॥**

ಭಾಷ್ಯಾರ್ಥ ॥ ಇತರೇಷಾಂ ಚಾನುಪಲಬ್ಧೇಃ ಎನ್ನುವ ಸೂತ್ರದಲ್ಲಿ ಯಾವ ಸಮಯಗಳಿಗೆ ಅದರಲ್ಲಿ ಹೇಳಿದ ಫಲವು ತೋರದಿರುವುದರಿಂದಲೂ ಆಪ್ತೋಕ್ತವಾಗದಿರುವುದರಿಂದಲೂ ಸಾಮಾನ್ಯವಾಗಿ ಅಪ್ರಮಾಣವೆಂದು ನಿರಾಕರಣವು ಮಾಡಲ್ಪಟ್ಟದೋ, ಅಂತಹ ಕಪಿಲ ಕಣಾದಾದಿ ಸಮಯಗಳನ್ನು ವಿಶೇಷವಾಗಿ ಈ ಪಾದದಲ್ಲಿ ನಿರಾಕರಿಸುತ್ತಾರೆ.

ವಿಶೇಷಾಂಶ ॥ ಮೊದಲು ಸಾಮಾನ್ಯವಾಗಿ ಸಮಯಗಳನ್ನು ನಿರಾಕರಿಸಿರುವರು. ಇಷ್ಟರಿಂದ ಅಧಿಕಾರಿಗೆ ಶಾಸ್ತ್ರದಲ್ಲಿ ನಿಶ್ಶಂಕವಾಗಿ ಪ್ರವೃತ್ತಿಯು ಕೂಡುವುದಿಲ್ಲ. ಸಮಯಗಳು ಅನಾದಿಕಾಲದಿಂದ ಅನುವೃತ್ತಗಳಾಗಿವೆ. ಪ್ರತೀತಿಸುಂದರಗಳೂ ಆಗಿವೆ. ಆದಕಾರಣ ಅಧಿಕಾರಿಗೆ ನಿಶ್ಶಂಕವಾಗಿ ಪ್ರವೃತ್ತಿಗಾಗಿ ಮೊದಲು ನಿರಾಕರಿಸಿರುವ ಸಮಯಗಳನ್ನೇ ವಿಶೇಷವಾಗಿ ಒಂದೊಂದು ಮತವನ್ನು ಅನುವಾದಮಾಡಿಕೊಂಡು ಈ ಪಾದದಲ್ಲಿ ನಿರಾಕರಿಸುತ್ತಾರೆ.

ಪೀಠಿಕೆ ॥ ಈ ಪಾದದಲ್ಲಿರತಕ್ಕ ಒಂದನೇ ಅಧಿಕರಣಾರ್ಥವನ್ನು ತೋರಿಸುತ್ತಾರೆ—

**ಭಾಷ್ಯ ॥ ಅಚೇತನಪ್ರವೃತ್ತಿಮತಂ ಪ್ರಥಮತೋ ನಿರಾಕರೋತಿ ॥ ೨ ॥**

ಭಾಷ್ಯಾರ್ಥ ॥ ಈಶ್ವರನ ಅಪೇಕ್ಷೆಯಿಲ್ಲದೆ ಅಚೇತನವಾದ ಪ್ರಕೃತಿಯಿಂದಲೇ, (ಮಹದಾದಿ ಕಾರ್ಯವನ್ನು ಮಾಡುವ ವಿಷಯದಲ್ಲಿ) ಪ್ರವೃತ್ತಿಯು ಎಂದು ಯಾವುದು ನಿರೀಶ್ವರ ಸಾಂಖ್ಯಮತವೋ ಅದನ್ನು ಈ ಪಾದದ ಒಂದನೇ ಅಧಿಕರಣದಲ್ಲಿ (ಸೂತ್ರಕಾರರು) ನಿರಾಕರಿಸುತ್ತಾರೆ.

ವಿಶೇಷಾಂಶ ॥ ಈ ಸಮಯವು ಇತರ ಸಮಯಗಳಿಂದ ಪ್ರಬಲವೂ ಅತಿವಿರೋಧಿಯೂ ಅತಿತುಚ್ಛವೂ ಆಗಿದೆ. ಆದುದರಿಂದ ಪ್ರಥಮದಲ್ಲಿ ನಿರಾಕರಿಸಿದ್ದು.

## ಸೂತ್ರ ॥ ಓಂ ರಚನಾನುಪಪತ್ತೇಶ್ಚ ನಾನುಮಾನಂ ಓಂ ॥ ೧ ॥

ಭಾಷ್ಯ ॥ ಅಚೇತನಸ್ಯ ಸ್ವತಃ ಪ್ರವೃತ್ತ್ಯನುಪತ್ತೇರ್ನಾನುಮಾನಪರಿಕಲ್ಪಿತಂ ಪ್ರಧಾನಂ ಜಗತ್ಕರ್ತೃ ॥ ೩ ॥

ಭಾಷ್ಯಾರ್ಥ ॥ ಅನುಮಾನಂ=ಮಹದಾದಿಕಂ ಸ್ವಸದೃಶಕಾರಣಕಂ ಕಾರ್ಯತ್ವಾತ್ ಘಟವತ್ ಎನ್ನುವ ಅನುಮಾನದಿಂದ ಸಿದ್ಧವಾದ ಪ್ರಧಾನವು ಜಗತ್ಕರ್ತೃ ಅಲ್ಲ ಏಕೆಂದರೆ— ನ ರಚನಾ=ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯಿಲ್ಲ (ಅಂದರೆ-ಪ್ರಧಾನವು ಈಶ್ವರಾಪೇಕ್ಷೆಯಿಲ್ಲದೆ ಪ್ರವೃತ್ತಿಯುಳ್ಳದ್ದಲ್ಲ) ಅಚೇತನಸ್ಯ ರಚನಾನುಪಪತ್ತೇಃ=ಅಚೇತನಕ್ಕೆ ಸ್ವತಃ ಪ್ರವೃತ್ತಿಯು ಅಚೇತನತ್ವಯುಕ್ತಿಯಿಂದ ವಿರುದ್ಧವಾಗಿದೆ.

ಪೀಠಿಕೆ ॥ ಪ್ರಾಮಾಣಿಕವಾದ ಪ್ರಧಾನಕ್ಕೆ ಕರ್ತೃತ್ವವನ್ನು ಯುಕ್ತಿಯಿಂದ ನಿರಾಕರಿಸಲಿಕ್ಕೆ ಸಾಧ್ಯವಿಲ್ಲವೆಂದರೆ—

ಭಾಷ್ಯ ॥ ಚಶಬ್ದೇನ ಪ್ರಮಾಣಾಭಾವಂ ದರ್ಶಯತಿ ॥ ೧ ॥ ॥ ೪ ॥

ಭಾಷ್ಯಾರ್ಥ ॥ (ಅಚೇತನಕ್ಕೆ ಸ್ವತಃ ಪ್ರವೃತ್ತಿವಿಷಯದಲ್ಲಿಯೂ ಜಗತ್ಕರ್ತೃತ್ವವಿಷಯದಲ್ಲಿಯೂ ಸೂತ್ರಕಾರರು) ಚ ಶಬ್ದದಿಂದ ಪ್ರಮಾಣಾಭಾವವನ್ನು ತೋರಿಸುತ್ತಾರೆ.

ವಿಶೇಷಾಂಶ ॥ (೧) ಪ್ರಕೃತಿ ಕರ್ತೃತ್ವದಲ್ಲಿಯೂ ಸ್ವತಃ ಪ್ರವೃತ್ತಿಯಲ್ಲಿಯೂ ಪ್ರಮಾಣ ವಿರೋಧ ಮಾತ್ರವಲ್ಲ ಮತ್ತೆ ಪ್ರಮಾಣಭಾವವೂ ಅದೆ. (೨) ಅನುಮಾನವು ಪ್ರಮಾಣವಲ್ಲ. ಅನುಮಾನ ರಚನೆಯೇ ಕೂಡಲಾರದು. ಕಾರ್ಯತ್ವಾದ್ಯನುಮಾನವಾದರೂ ಪ್ರಧಾನಕ್ಕೆ ಕಾರಣತ್ವವನ್ನು ಮಾತ್ರ ಸಾಧಿಸುವುದರಿಂದ ಸಿದ್ಧಸಾಧಕವಾದುದರಿಂದ ಪ್ರಕೃತಕ್ಕೆ ಉಪಯುಕ್ತವಲ್ಲ. ॥ ೧ ॥

ಪೀಠಿಕೆ ॥ ಹೀಗೆ ಅಚೇತನತ್ವ, ಸ್ವತಃ ಪ್ರವೃತ್ತಿಶೂನ್ಯತ್ವ, ಪ್ರಮಾಣಾಭಾವಗಳಿಂದ ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯನ್ನೂ ಕರ್ತೃತ್ವವನ್ನೂ ನಿರಾಕರಿಸಿ ಯುಕ್ತ್ಯಂತರದಿಂದಲೂ ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಪ್ರವೃತ್ತೇಶ್ಚ ಓಂ ॥ ೨ ॥

ಭಾಷ್ಯ ॥ ಚೇತನಸ್ಯ ಸ್ವತಃ ಪ್ರವೃತ್ತಿದರ್ಶನಾಚ್ಚ ॥ ೨ ॥ ॥ ೫ ॥

ಭಾಷ್ಯಾರ್ಥ ॥ ಚೇತನರಾದ ಕುಲಾಲಾದಿಗಳಿಗೇನೇ (ಘಟಪಟಾದಿಗಳ ಸೃಷ್ಟಿಯಲ್ಲಿ) ಇತರಾಪೇಕ್ಷೆಯಿಲ್ಲದೇನೇ ವ್ಯಾಪಾರವು ದೃಷ್ಟವಾದುದರಿಂದ. ಅಂದರೆ ಅಹಂ ಕರೋಮಿ ಎಂದು ಕರ್ತೃತ್ವವು ಅನುಭವ ಸಿದ್ಧವಾದುದರಿಂದ ಸಾಧನವು ಕೂಡಬಹುದು. ॥ ೨ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪಯೋಽಮ್ಬುವಚ್ಚೇತ್ತತ್ರಾಪಿ ಓಂ ॥ ೩ ॥

**ಸೂತ್ರಾರ್ಥ** ॥ ಹೇಗೆ ಅಚೇತನವಾದ ಕ್ಷೀರಕ್ಕೆ ದಧ್ಯಾಕಾರೇಣ ಪರಿಣಾಮವದೆಯೋ, ಜಲಕ್ಕೆ ಗತಿಯು ಹೇಗೆ ದೃಷ್ಟವಾಗಿದೆಯೋ, ಹಾಗೆಯೇ ಪ್ರಧಾನವು ಅಚೇತನವಾದಾಗ್ಯೂ ಅದಕ್ಕೆ ಸ್ವತಃ ಪ್ರವೃತ್ತಿಯು ಕೂಡುತ್ತದೆ, ಎಂದರೆ—ಹೀಗೆ ಹೇಳಕೂಡದು. ಪ್ರಧಾನದಲ್ಲಿ ಮಾತ್ರವಲ್ಲ ಪಯೋಽಂಬ್ವಾದಿಗಳಲ್ಲಿಯೂ ಕೂಡ ಈಶ್ವರಾಖ್ಯ ಚೇತನಾಧೀನಪ್ರವೃತ್ತಿಯು ದೃಷ್ಟವಾಗಿದೆ.

**ಭಾಷ್ಯ** ॥ **ಪಯೋಽಂಬುವದಚೇತನಸ್ಯಾಪಿ ಪ್ರವೃತ್ತಿರ್ಯುಜ್ಯತೇ । ಇತಿ ನ ಯುಕ್ತಂ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾಯಾಂ ಯಾಂ ಚ ದಿಶಮನು (ಬೃ.೫.೮.೯) ಏತೇನ ಹ ವಾವ ಪಯೋ ಮಂಡಂ ಭವತಿ (ಬೃ.೫.೮.೬)। ಇತ್ಯಾದಿ ತತ್ರಾಪೀಶ್ವರನಿಮಿತ್ತಪ್ರವೃತ್ತಿಶ್ರುತೇಃ ॥ ೩ ॥ ॥ ೬ ॥**

**ಭಾಷ್ಯಾರ್ಥ** ॥ ಹಾಲು ಸ್ವತಃ ಮುಸುರು ಆಗುವಂತೆ, ನೀರು ಸ್ವತಃ ಹರಿಯುವಂತೆಯೇ ಪ್ರಧಾನವು ಅಚೇತನವಾದಾಗ್ಯೂ ಅದಕ್ಕೆ ಸ್ವತಃ ಪ್ರವೃತ್ತಿಯು ಕೂಡುವುದರಿಂದ ಕೂಡುವುದಿಲ್ಲವೆಂದು ಹೇಳಿದ್ದು ಯುಕ್ತವಲ್ಲ. (೧) ಪರಸ್ಪರ ವಿಲಕ್ಷಣಗಳಾದ ಪೂರ್ವದಿಕ್ಕಿನಲ್ಲಿರತಕ್ಕ ನದಿಗಳೋ, ಪಶ್ಚಿಮ ದಿಕ್ಕಿನಲ್ಲಿರತಕ್ಕ ಯಾವ ಕೆಲವು ನದಿಗಳೋ, ಅವುಗಳು ಶ್ವೇತನಾಮಕ ಪರ್ವತಗಳ ಸಕಾಶ ದೆಸೆಯಿಂದ ಹೊರಟವುಗಳಾಗಿ ಯಾವ ಯಾವ ದಿಕ್ಕನ್ನು ಅನುಸರಿಸಿ ಹರಿಯುತ್ತವೋ, ಆ ನದಿಗಳು ಎಲ್ಲವೂ ಎಲೋ ಗಾರ್ಗಿಯೇ ಈ ಅಕ್ಷರ ಶಬ್ದವಾಚ್ಯನಾದ ಶ್ರೀಹರಿಯ ಆಜ್ಞಾಮಾತ್ರದಿಂದಲೇ ಅವಾವ ದಿಕ್ಕನ್ನು ಅನುಸರಿಸಿ ಹರಿಯುತ್ತವೆ (೨) ಈ ಶ್ರೀಹರಿಯ ಪ್ರೇರಣೆಯಿಂದಲೇ ಹಾಲು ದಧಿಯಾಗುತ್ತದೆ. ಅಥವಾ ದಧಿಭಾವವನ್ನು ಹೊಂದುತ್ತದೆ. ಇತ್ಯಾದಿ ಶ್ರುತಿಗಳಲ್ಲಿ ಪಯೋಽಂಬ್ವಾದಿಗಳಲ್ಲಿಯೂ ಈಶ್ವರನಿಮಿತ್ತ ಪ್ರವೃತ್ತಿಯು, ಶ್ರುತವಾದುದರಿಂದ. ॥ ೩. ॥

**ಪೀಠಿಕೆ** ॥ ಶ್ರುತಿಸಾಮರ್ಥ್ಯದಿಂದ ಪಯೋಽಂಬುಗಳ ಪ್ರವೃತ್ತಿಯು ಈಶ್ವರಾಧೀನವಾದಾಗ್ಯೂ ಅಯಸ್ಕಾಂತ ಮೊದಲಾದ ಅಚೇತನಾಂತರಗಳ ಪ್ರವೃತ್ತಿಯು ಈಶ್ವರಾಧೀನವಾಗಲಾರದು ಎಂದರೆ—

**ಸೂತ್ರ ॥ ಓಂ ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ಓಂ ॥ ೪ ॥**

**ಭಾಷ್ಯ** ॥ ***ನ ಋತೇ ತ್ವತ್ಕ್ರಿಯತೇ ಕಿಂಚನಾರೇ (ಋ.೧೦.೧೧೨.೯) ಇತಿ ತದ್ವ್ಯತಿರೇಕೇಣ ಕಸ್ಯಾಪಿ ಕರ್ಮಣೋಽನವಸ್ಥಿತೇರನಪೇಕ್ಷಿತಮೇವಾಚೇತನವಾದಿಮತಂ ॥ ೪ ॥ ಅಧಿ. ೧ ॥ ॥ ೬ ॥**

---

★ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ । ನ ಋತೇ ತ್ವತ್ಕ್ರಿಯತೇ ಕಿಂ ಚ ನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥ ಇಂದ್ರಿಯಗಣಗಳಿಗೆ ಸ್ವಾಮಿಯಾದ ಯಶಸ್ಸುಳ್ಳ ಶ್ರೀಹರಿಯೇ ನೀನು ಅರ್ಚಕರ ಇಂದ್ರಿಯಗಳಲ್ಲಿ ಚೆನ್ನಾಗಿ ಇರು. ಅಲ್ಲಿ ಇದ್ದು ಪೂಜ್ಯನಾದ, ಪರಮಾನಂದಯುಕ್ತನಾದ ಆಶ್ಚರ್ಯತಮನಾದ ನಿನ್ನನ್ನು ನೀನೇ ಪೂಜಿಸು. ಏಕೆಂದರೆ ನಿನ್ನನ್ನೇ ಜ್ಞಾನಿಗಳಲ್ಲಿ ಪ್ರಕೃಷ್ಟತಮನನ್ನಾಗಿ ಕವಿಗಳು ಹೇಳುತ್ತಾರೆ. (ನಿನಗೇನೇ ಪೂಜ್ಯತ್ವವು. ಪೂಜಕತ್ವವೂ ನಿನಗೇನೇ.) ನೀನು ಹೊರತು ದೂರದಲ್ಲಿ ಆಗಲೀ ಸಮೀಪದಲ್ಲಿ ಆಗಲೀ ಯಾರಿಂದಲೂ ಚಲನೆಯು ಮಾಡಲ್ಪಡುವುದಿಲ್ಲ

**ಭಾಷ್ಯಾರ್ಥ ॥ ನ ಋತೇ** ಎನ್ನುವ ಶ್ರುತಿಯಿಂದ ಈಶ್ವರನ ಪ್ರೇರಣೆ ಹೊರತು ಯಾವ ಕರ್ಮವೂ ಇಲ್ಲದಿರುವುದರಿಂದ ಅಚೇತನಕರ್ತೃತ್ವವಾದಿಗಳ ಮತವು ಅನಪೇಕ್ಷಿತವೇ. (ಅಂದರೆ ಪ್ರಮಾಣವಿರುದ್ಧವೂ ಅಪ್ರಾಮಾಣಿಕವೂ ಆಗಿದೆ.) ಅನಪೇಕ್ಷಿತವಾದುದರಿಂದ ಸಜ್ಜನರಿಗೆ ಅನಾದರಣೀಯವೇ, ಆದಕಾರಣ, ಆ ಮತವು ಅನಾದರಣೀಯವಾದುದರಿಂದ ಪ್ರಕೃತಾರ್ಥಕ್ಕೆ ಇದರಿಂದ ವಿರೋಧವಿಲ್ಲ. ಅಥವಾ ಅಯಸ್ಕಾಂತಾದಿಗಳಿಗೂ ಪೂರ್ವಸೂತ್ರದಿಂದಲೇ ನಿರಾಸವಾದುದರಿಂದ ಈಶ್ವರನನ್ನು ಹೊರತು ಯಾವ ಚೇತನರ ಪ್ರವೃತ್ತಿಯೂ ಆಗಲಾರದು. ಜಡಪ್ರವೃತ್ತಿಯು ಆಗಲಾರದೆಂದು ಏನು ಹೇಳಬೇಕು. ಆದಕಾರಣ ಅಚೇತನ ಕರ್ತೃತ್ವವಾದಿಮತವು ಅನಪೇಕ್ಷಿತವೇ ಆಗಿದೆ. ॥ ೪ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ **ರಚನಾನುಪತ್ತೇಃ** ಎನ್ನುವುದನ್ನಾರಂಭಿಸಿ ವಿಪ್ರತಿಷೇಧಾತ್ ಎನ್ನುವ ತನಕ ಹತ್ತು ಸೂತ್ರಗಳು ಒಂದು ಅಧಿಕರಣವು. ಇದು ಚೇತನಾನಧಿಷ್ಠಿತವಾದ ಪ್ರಧಾನವು ಜಗತ್ತನ್ನು ನಿರ್ಮಿಸುತ್ತದೆ ಎನ್ನುವುದನ್ನು ನಿರಾಸಮಾಡುತ್ತದೆ ಎಂದು ಇಬ್ಬರು ವಾದಿಗಳೂ ಹೇಳುತ್ತಾರೆ. ಅದು ಅಯುಕ್ತವು. ನಮ್ಮ ರೀತಿಯಾಗಿ ೧ ನಿರೀಶ್ವರಸಾಂಖ್ಯ ವಿಂಧ್ಯಾದಿಮತದಲ್ಲಿ ಕೇವಲ ಅಚೇತನಕರ್ತೃತ್ವಮತವೂ, ೨ ಸೇಶ್ವರಸಾಂಖ್ಯಪಾತಂಜಾಲಾದಿಮತವೂ ೩. ಚಾರ್ವಾಕಮತವೂ ೪ ನಿರೀಶ್ವರಸಾಂಖ್ಯದಲ್ಲಿಯೂ ಪುರುಷೋಪಸರ್ಜನ ಪ್ರಕೃತಿ ಕರ್ತೃತ್ವಮತವೂ ೫. ಪ್ರಕೃತ್ಯುಪಸರ್ಜನ ಪುರುಷಕರ್ತೃತ್ವಮತವೂ ಇವುಗಳು ಪೂರ್ವಪೂರ್ವ ದೋಷೋದ್ಧಾರದಿಂದ ಪ್ರವೃತ್ತಗಳಾಗಿರುವುದರಿಂದ ಅವಶ್ಯವಾಗಿ ನಿರಸನೀಯಗಳಾದವುಗಳನ್ನು ಕ್ರಮದಿಂದ ನಿರಾಕರಿಸುವುದಕ್ಕಾಗಿ ಐದು ಅಧಿಕರಣಗಳೆಂದು ಕೂಡುವಾಗ ಅವುಗಳನ್ನು ನಿರಾಕರಿಸದೆ ಒಂದೇ ಅಧಿಕರಣವೆಂದು ಹೇಳುವುದು ಕೂಡಲಾರದು. ಮತ್ತು ೩.ನೇ ಅಧ್ಯಾಯದ ೩.ನೇ ಪಾದದಲ್ಲಿ **ಏಕ ಆತ್ಮನಃ ಶರೀರೇ ಭಾವಾತ್** ಎನ್ನುವ ಅಧಿಕರಣವು ಚಾರ್ವಾಕಮತ ನಿರಾಸಕವೆಂದು ವ್ಯಾಖ್ಯಾತವಾಗಿದೆ. ಅದಕ್ಕಿಂತ ಇಲ್ಲಿಯೇ ಮತಾಂತರಗಳನ್ನು ನಿರಾಕರಿಸುವ ಕಾಲದಲ್ಲಿಯೇ ಚಾರ್ವಾಕ ಮತವನ್ನು ನಿರಾಕರಿಸುವುದು ಯುಕ್ತವು. ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

### ಅಧಿಕರಣ ಸಾರಾಂಶ

ಜನ್ಮಾದಿಸೂತ್ರದಲ್ಲಿ ಹೇಳಿದ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವಲ್ಲ. ಸಾಂಖ್ಯ ಸಮಯದಲ್ಲಿ **ಮಹದಾದಿ ಕಂ ಸ್ವಸದೃಶಕಾರಣಜನ್ಯಂ ಕಾರ್ಯತ್ವಾತ್ ಘಟಾದಿವತ್** ಎನ್ನುವ ಅನುಮಾನದಿಂದ ಸಿದ್ಧವಾದ ಪ್ರಕೃತಿಗೇನೇ ಅನನ್ಯಾಧೀನಕರ್ತೃತ್ವವನ್ನು ಸಾಧಿಸತಕ್ಕ ನಿರೀಶ್ವರಸಾಂಖ್ಯಮತದಿಂದ ಈಶ್ವರಕರ್ತೃತ್ವಮತವು ವಿರುದ್ಧವು ಎಂದರೆ—ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವೇ. ಪ್ರಧಾನವು ಅಚೇತನವಾದಪ್ರಯುಕ್ತ ಸ್ವತಃ ಕಾರ್ಯಕರ್ತೃತ್ವವು ಕೂಡಲಾರದು. (೨) ಪಟಾದಿಸೃಷ್ಟಿಯು ಚೇತನೇಚ್ಛಾನುಸಾರಿಯಾದುದರಿಂದ ಮಹದಾದಿಸೃಷ್ಟಿಯನ್ನು ಹಾಗೆ ಅಂಗೀಕರಿಸಬೇಕು. (೩) **ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ** ಇತ್ಯಾದಿ ಶ್ರುತಿಗಳಿಂದ ಅಚೇತನಗಳ ಪ್ರವೃತ್ತಿಯಲ್ಲಿಯೂ ಈಶ್ವರನೇ

ನಿಮಿತ್ತನು ಎಂದು ತಿಳಿಯುತ್ತದೆ. (೪) ನ ಋತೇ ತ್ವತ್ಕ್ರಿಯತೇ ಎನ್ನುವ ಶ್ರುತಿಯಿಂದ ಸರ್ವಕ್ರಿಯೆಗಳಿಗೂ ಈಶ್ವರಾಧೀನತ್ವವು ಅವಗತವಾಗುತ್ತದೆ. ಆದಕಾರಣ ಅಪ್ರಾಮಾಣಿಕವಾದುದ ರಿಂದಲೂ ಪ್ರಮಾಣವಿರುದ್ಧವಾದುದರಿಂದಲೂ ಮಹಾಜನಪರಿಗ್ರಹೀತವಾಗದಿರುವುದರಿಂದ ಅನುಮಾನಪರಿಲ್ಪಿತವಾದ ಪ್ರಧಾನವು ಜಗತ್ಕರ್ತೃ ಅಲ್ಲ. ಆದಪ್ರಯುಕ್ತ ನಿರೀಶ್ವರಸಾಂಖ್ಯಮತ ಅಪ್ರಾಮಾಣಿಕವಾದುದರಿಂದ ಅದರಿಂದ ವಿರೋಧವು ಇಲ್ಲದಿರುವುದರಿಂದ ಜಗಜ್ಜನ್ಮಾದಿಕರಣತ್ವ ಲಕ್ಷಣವು ಯುಕ್ತವು. ॥ ಅಧಿ.೧ ॥

ರಚನಾಧಿಕರಣವು ಸಮಾಪ್ತವಾಯಿತು.

## ೨. ಅನ್ಯತ್ರಾಭಾವಾಧಿಕರಣವು

ಪೀಠಿಕೆ ॥ ಈ ಅಧಿಕರಣಾರ್ಥವನ್ನು ತೋರಿಸುತ್ತಾರೆ—

**ಭಾಷ್ಯ ॥ ಸೇಶ್ವರಸಾಂಖ್ಯಮತಂ ನಿರಾಕರೋತಿ ॥ ಯಥಾ ಪೃಥಿವ್ಯಾ ಏವ ಪರ್ಜನ್ಯಾನುಗೃಹೀತಂ ತೃಣಾದಿಕಮುತ್ಪದ್ಯತೇ ॥ ಏವಂ ಪ್ರಧಾನಾದೀಶ್ವರಾನುಗೃಹೀತಂ ಜಗದಿತಿ ॥ ೧ ॥**

ಭಾಷ್ಯಾರ್ಥ ॥ (೧) ಪ್ರಧಾನವೇ ಜಗತ್ಕರ್ತೃ, ಅದಕ್ಕೆ ಗುಣಭೂತನಾಗಿ ಈಶ್ವರನು ಇದ್ದಾನೆ ಎಂದು ಹೇಳುವವನು ಸೇಶ್ವರನು. ಅಂತಹ ಸಾಂಖ್ಯನ ಅಂದರೆ ಪತಂಜಲಿಯ ಮತವನ್ನು ಈ ಅಧಿಕರಣದಲ್ಲಿ ಸೂತ್ರಕಾರರು ನಿರಾಕರಿಸುತ್ತಾರೆ. (೨) ಹೇಗೆ ಕೇವಲ ಪೃಥಿವಿಯಿಂದಲೇ ಪರ್ಜನ್ಯನಿಂದ ಅನುಗೃಹೀತವಾಗಿ ಅಂಕುರಾದಿಗಳು ಹುಟ್ಟುತ್ತವೋ, ಹೀಗೆಯೇ ಈಶ್ವರನಿಂದ ಅನುಗೃಹೀತವಾಗಿ ಪ್ರಧಾನದಿಂದ ಜಗತ್ತು ಹುಟ್ಟುತ್ತದೆ.

ವಿಶೇಷಾಂಶ ॥ (೧) ಹೇಗೆ ಸ್ವಾಧೀನ ಉಪಾದಾನತ್ವಶಕ್ತಿಯಿರತಕ್ಕ ಕೇವಲ ಪೃಥಿವಿಯಿಂದಲೇ ಸ್ವಾಧೀನಬೀಜತ್ವಶಕ್ತಿಯುಕ್ತವಾದ ಕಲಮಾದಿಗಳಿಂದ ತಾನು ಹುಟ್ಟಲಿಕ್ಕೆ ಪೃಥಿವಿಗೆ ಅನುಗ್ರಾಹಕವಾದ ಅದರ ಸಾನ್ನಿಧ್ಯವುಳ್ಳ ಅದಕ್ಕೆ ಅನುಕೂಲವಾದ ಪರ್ಜನ್ಯನ ಅನುಗ್ರಹಸಹಿತವಾಗಿ ಅಂಕುರಾದಿಗಳು ಹುಟ್ಟುತ್ತವೋ ಹಾಗೆಯೇ ಸ್ವಾಧೀನ ಉಪಾದಾನತ್ವಶಕ್ತಿಯುಕ್ತವೇ ಆದ ಕೇವಲ ಪ್ರಧಾನದಿಂದಲೇ ಜಗತ್ತು ಹುಟ್ಟುತ್ತದೆ. ಪುನಃ ಈಶ್ವರಾಧೀನ ಶಕ್ತಿಯುಕ್ತವಾದುದರಿಂದ ಅಲ್ಲ. (೨) ತಥಾಚ ಈಶ್ವರನಿಗೆ ಪ್ರೇರಕತ್ವ ಬೀಜಾವಾಪಕರ್ತೃತ್ವಗಳು ಇಲ್ಲವಾದರೂ ಸನ್ನಿಧಿಮಾತ್ರದಿಂದ ಪ್ರಕೃತ್ಯನುಗ್ರಾಹಕತ್ವವು ಇದ್ದೇ ಇದೆ. ಅದಕ್ಕಾಗಿ ಈಶ್ವರನನ್ನು ಅಂಗೀಕರಿಸಲೇಬೇಕು. ವೈಯರ್ಥ್ಯಶಂಕೆಯು ಇಲ್ಲ. ಹೀಗೆ ಪತಂಜಲಿಯ ಅಭಿಪ್ರಾಯವು

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋ ಬ್ರವೀತಿ ॥ ೨ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ಅನ್ಯತ್ರಾಭಾವಾಚ್ಚ ನ ತೃಣಾದಿವತ್ ಓಂ ॥ ೫ ॥

**ಸೂತ್ರಾರ್ಥ** ॥ ಈಶ್ವರನು ಹೊರತು ಇತರಾಧೀನವಾಗಿ ಜಗತ್ತು ಇಲ್ಲವೆಂದು ತಿಳಿಯುವುದರಿಂದ ಅಂದರೆ ಈಶ್ವರಾಧೀನಸತ್ತಾ ಇದ್ದುದರಿಂದಲೂ ತೃಣಾದಿಗಳಂತೆ ಅನುಗ್ರಾಹಕಮಾತ್ರನು ಅಲ್ಲ (ಅಂದರೆ— ತೃಣಾದಿಗಳ ಉತ್ಪತ್ತಿಯಲ್ಲಿ ಹೇಗೆ ಪರ್ಜನ್ಯನು ಅನುಗ್ರಾಹಕನೇ ಸ್ವತಂತ್ರ ಉತ್ಪಾದಕನು ಅಲ್ಲವೋ ಹಾಗೆಯೇ ಜಗದುತ್ಪತ್ತಿಯಲ್ಲಿ ಈಶ್ವರನು ಅನುಗ್ರಾಹಕಮಾತ್ರನಲ್ಲ. ಮತ್ತೆ ಸ್ವತಂತ್ರವಾಗಿ ಜಗದುತ್ಪಾದಕನೇ.

**ಭಾಷ್ಯಾ ॥ (೧) ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಃ ಸ್ಥಿತಃ** (ತೈ.ಉ.ನಾರಾಯಣೋಪನಿಷತ್ ವ.೧೩.) ॥ **(೨) ಬ್ರಹ್ಮಣ್ಯೇವೇದಮಾವಿರಾಸೀದ್ಬ್ರಹ್ಮಣಿ ಸ್ಥಿತಂ ಬ್ರಹ್ಮನ್ ಲಯಮಭ್ಯುಪೈತಿ। (೩) ಬ್ರಹ್ಮೈವಾಧಸ್ತಾದ್ಬ್ರಹ್ಮೈವೋ(ಹ್ಯೋ) ಪರಿಷ್ಟಾದ್ಬ್ರಹ್ಮ ಮಧ್ಯತೋ ಬ್ರಹ್ಮ ಸರ್ವತಃ** (ಶ್ರುತಂತರಂ) **ಬ್ರಹ್ಮೈವೇದಂ ಸರ್ವಂ** (ಬೃ.೪.೫.೧)**। ಇತ್ಯಾದಿ ಶ್ರುತಿಭ್ಯೋಽನ್ಯತ್ರ ಜಗತೋಽಭಾವಾತ್ತೃಣಾದೀನಾಂ ಪರ್ಜನ್ಯವನ್ನಾನುಗ್ರಾಹಕತ್ವಮಾತ್ರಮೀಶ್ವರಸ್ಯ ॥ ೩ ॥**

ಭಾಷ್ಯಾರ್ಥ ॥ (೧) ಯಾವುದು ಕಾಣಲ್ಪಡುತ್ತದೋ, ಯಾವುದು ಕೇಳಲ್ಪಡುತ್ತದೋ ಆ ಎಲ್ಲಾ ಜಗತ್ತನ್ನು ಎಲ್ಲಾ ಪದಾರ್ಥಗಳ ಸತ್ತಾದಿಗಳನ್ನು ಕುರಿತು ಅಂದರೆ, ಎಲ್ಲಾ ಪದಾರ್ಥಗಳಿಗೆ ಸತ್ತಾದಿಗಳನ್ನು ಕೊಡುವುದಕ್ಕಾಗಿ ಶ್ರೀನಾರಾಯಣನು ವ್ಯಾಪಿಸಿಕೊಂಡು ಅಥವಾ ಅದನ್ನು ಉದ್ದೇಶಿಸಿ ಸರ್ವದಾ ದೇಶಕಾಲಗುಣಶಕ್ತಿಗಳಿಂದ ಸರ್ವವಸ್ತುಗಳನ್ನು ವ್ಯಾಪಿಸಿ (ಅವುಗಳಿಗೆ ಪ್ರೇರಕನಾಗಿ) ಇದ್ದಾನೆ. ಇಷ್ಟುಮಾತ್ರವಲ್ಲ ಮತ್ತೆ ಜಗತ್ತಿನ ಒಳಗೂ ಹೊರಗೂ ಅಂದರೆ ಆ ದೇಶದಲ್ಲಿಯೂ ಅದು ಇಲ್ಲದಿರುವ ದೇಶದಲ್ಲಿಯೂ, ಆ ಕಾಲದಲ್ಲಿಯೂ ಜಗದ್ರಹಿತ ಕಾಲದಲ್ಲಿಯೂ ವ್ಯಾಪಿಸಿಕೊಂಡು ಇದ್ದಾನೆಂದು ಶ್ರುತನಾಗಿರುತ್ತಾನೆ. (೨) ಈ ಜಗತ್ತು ಬ್ರಹ್ಮನಿಂದಲೇ ಹುಟ್ಟಿತು. ಬ್ರಹ್ಮನಲ್ಲಿಯೇ ಇರತಕ್ಕುದು. ಬ್ರಹ್ಮನಲ್ಲಿ ಲಯವನ್ನು ಹೊಂದುತ್ತದೆ. (ಇದರಿಂದ ಈಶ್ವರನ ಅಧೀನವಾದ ಉತ್ಪತ್ತಿಸತ್ತಾದಿಗಳು ಉಕ್ತವಾಯಿತು.) ಬ್ರಹ್ಮನೇ ಎಲ್ಲಾ ಪದಾರ್ಥಗಳ ಕೆಳಗೂ, ಮೇಲೆಯೂ, ಮಧ್ಯದಲ್ಲಿಯೂ ಇದ್ದಾನೆ. (ಇದರಿಂದ ಸರ್ವಗತತ್ವವು ಉಕ್ತವಾಯಿತು. ಈಶ್ವರಾಧೀನವಾದ ಸತ್ತಾವುಳ್ಳದ್ದಕ್ಕೆ ಈಶ್ವರಾಧೀನತ್ವವು ಸಿದ್ಧವೇ ಆಗಿದೆ.) ಮತ್ತು ಸರ್ವತ್ರ ಆಯಾವ ವಸ್ತುಗಳಿಗೆ ಸತ್ತಾದಿಗಳನ್ನು ಕೊಡುವುದಕ್ಕಾಗಿ ಅಲ್ಲಿ ಇಲ್ಲಿ ಇದ್ದಾನೆ. (೩.) ಈ ಜಗತ್ತು ಬ್ರಹ್ಮಾಧೀನವಾದ ಸತ್ತಾವುಳ್ಳದ್ದು. ಇದುಮೊದಲಾದ ಶ್ರುತಿಗಳಿಂದ ಜಗತ್ತು ಈಶ್ವರನು ಹೊರತು ಇತರರ ಅಧೀನವಾಗಿ ಇಲ್ಲದಿರುವುದರಿಂದ ತೃಣಾದಿಗಳಿಗೆ ಪರ್ಜನ್ಯನು ಹೇಗೆ ಅನುಗ್ರಾಹಕಮಾತ್ರನೋ, ಅದರಂತೆಯೇ ಈಶ್ವರನಿಗೆ ಅನುಗ್ರಾಹಕತ್ವಮಾತ್ರವಲ್ಲ. (ಸ್ವಾತಂತ್ರ್ಯೇಣ ಜಗದುತ್ಪಾದಕತ್ವವೇ.)

ಪೀಠಿಕೆ ॥ ಈಗ ಪ್ರಮಾಣದಿಂದ ಸೂತ್ರದಲ್ಲಿ ಚ ಶಬ್ದಾರ್ಥವನ್ನು ಹೇಳುತ್ತಾರೆ—

**ಭಾಷ್ಯ ॥ (೧) ಸ ಏವ ಭೂಯೋ ನಿಜವೀರ್ಯಚೋದಿತಾಂ ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಂ । ಅನಾಮರೂಪಾತ್ಮನಿ ರೂಪನಾಮನೀ ವಿಧಿತ್ಸಮಾನೋಽನುಸಸಾರ ಶಾಸ್ತ್ರಕೃತ್ । ಇತಿ ಭಾಗವತೇ** (ಸ್ಕಂ.೧. ಅಧ್ಯಾ.೧೦. ಶ್ಲೋ.೨೨)**॥ (೨) ದ್ರವ್ಯಂ ಕರ್ಮ ಚ ಕಾಲಶ್ಚ**(ಭಾಗವತ)**। ಇತ್ಯಾದಿ ಚ। ಚಶಬ್ದೇನ ಪ್ರಕೃತಿಸತ್ತಾದಿಪ್ರದತ್ವಂ ಚಾಂಗೀಕೃತಂ ॥ ೫ ॥ ಅಧಿ. ೨ ॥ ॥೪ ॥**

**ಭಾಷ್ಯಾರ್ಥ ॥** (೧) ಜಗತ್ಸೃಷ್ಟಿಕನಾದ ಶ್ರೀಹರಿಯೇ ಪ್ರಾಕೃತ ನಾಮರೂಪಗಳು ಇಲ್ಲದಿರುವ ತನ್ನಲ್ಲಿ (ತನ್ನ ಆಧಾರವಾಗಿ) ಅರ್ಥಪ್ರಪಂಚ ಶಬ್ದಪ್ರಪಂಚಗಳನ್ನು ಮತ್ತೂ ಮತ್ತೂ ಸೃಷ್ಟಿಮಾಡಲಿಕ್ಕೆ ಇಚ್ಛಿಸಿದವನಾಗಿ ತನ್ನ ಸಾಮರ್ಥ್ಯದಿಂದ ಪ್ರೇರಿಸಲ್ಪಟ್ಟ ಸ್ವಾಧೀನವಾದ ಜೀವಬಂಧಕವಾದ ಸೃಷ್ಟಿಯಲ್ಲಿ ಉದ್ಯುಕ್ತಳಾದ ಲಕ್ಷ್ಮಿಯನ್ನು ಅನುಗ್ರಹಿಸಿದನು. (ಸ ಏವ ಎನ್ನುವುದರಿಂದ ಈಶ್ವರಾಧೀನ ಉದ್ಬೋಧಕತ್ವವು ಪ್ರಕೃತಿಗೆ ಉಕ್ತವಾಯಿತು.) ಹೀಗೆ ಭಾಗವತದಲ್ಲಿದೆ. (೨) ದ್ರವ್ಯಂ ಕರ್ಮ ಚ ಎನ್ನುವುದು ವೈಷಮ್ಯಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ. ಚ ಶಬ್ದದಿಂದ ಸೂಚಿತವಾದ ಪ್ರಕೃತಿಗೆ ಸತ್ತಾ ಉದ್ಬೋಧಪ್ರವೃತ್ತ್ಯಾದಿಪ್ರದತ್ವವೂ ಕೂಡ ಅಂಗೀಕೃತವಾಗಿದೆ. ॥ ೫ ॥

## ಅಧಿಕರಣ ಸಾರಾಂಶ

(೧) ವಿಷ್ಣುವಿಗೆ ಸ್ವತಂತ್ರಕರ್ತೃತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹವು. ಯುಕ್ತವಲ್ಲವೆಂದು ಪೂರ್ವಪಕ್ಷವು. ಕೇವಲ ಅಚೇತನ ಪ್ರಧಾನಕ್ಕೆ ಪರಿಣಾಮವು ಕೂಡದಿದ್ದರೂ ಗುಣಭೂತ ಈಶ್ವರಾನುಗ್ರಹೀತವಾದ ಪರ್ಜನ್ಯನಿಂದ ಅನುಗ್ರಹೀತವಾದ ಪೃಥಿವ್ಯಾದಿಗಳಿಗೆ ತೃಣಾದಿರೂಪದಿಂದಲೆಂಬಂತೆ ಮಹದ್ರೂಪದಿಂದ ಪರಿಣಾಮವು ಕೂಡುತ್ತದೆ. ಹಿಂದಿನ ಶ್ರುತಿಗಳು ಗುಣಭೂತ ಈಶ್ವರಪರಗಳಾಗಿರುವುದರಿಂದ ಅದರಿಂದ ವಿರೋಧವಿಲ್ಲ ಎನ್ನುವ ಸೇಶ್ವರಸಾಂಖ್ಯಮತ ವಿರೋಧದಿಂದ ಈಶ್ವರಕರ್ತೃತ್ವವು ಯುಕ್ತವಲ್ಲ ಎಂದರೆ— **ಯಚ್ಚ ಕಿಂಚಿಜ್ಜಗತ್ಸರ್ವಂ** ಇತ್ಯಾದಿ ಶ್ರುತಿಗಳಲ್ಲಿ ಸರ್ವವಸ್ತುಗಳಿಗೆ ಸತ್ತಾದಿಗಳನ್ನು ಕೊಡುವುದಕ್ಕಾಗಿ ಸರ್ವಗತತ್ವವನ್ನು ಹೇಳಿದ್ದರಿಂದ ಈಶ್ವರಪ್ರೇರಣೆಯಿಲ್ಲದೆ ಯಾವ ವಸ್ತುಗಳಿಗೂ ಸತ್ವವೇ ಕೂಡಲಾರದು. (೨) **ಸ ಏವ ಭೂಯೋ ನಿಜವೀರ್ಯಚೋದಿತಾಂ** ಇತ್ಯಾದಿ ಸ್ಮೃತಿಗಳಲ್ಲಿ ಪ್ರಕೃತ್ಯಾದಿ ಕಾರಣಗಳ ಸತ್ತಾದಿಗಳೂ ಈಶ್ವರಾಧೀನಗಳೆಂದು ಹೇಳಿದ್ದರಿಂದ ಈಶ್ವರನು ಪರ್ಜನ್ಯನಂತೆ ಅನುಗ್ರಾಹಕಮಾತ್ರನಲ್ಲ. ಕಾರ್ಯಕಾರಣ ರೂಪಗಳಾದ ಸರ್ವವಸ್ತುಗಳಿಗೆ ಸತ್ತಾದಿಗಳನ್ನು ಕೊಡುವುದರಿಂದ. ಇತ್ಯಾದಿಗಳಿಂದ ಈಶ್ವರನಿಗೆ ಸ್ವಾತಂತ್ರ್ಯವು ಸಿದ್ಧಿಸುವುದರಿಂದ ಇಂತಹ ಸಾಂಖ್ಯಮತ ವಿರೋಧವು ಅಕಿಂಚಿತ್ಕರವಾದುದರಿಂದ ಈಶ್ವರನಿಗೆ ಜಗತ್ಕರ್ತೃತ್ವವು ಯುಕ್ತವು. ॥ ಅಧಿ. ೨ ॥

**ಅನ್ಯತ್ರಾಭಾವಾಧಿಕರಣವು ಸಮಾಪ್ತವಾಯಿತು.**

# ೩. ಅಭ್ಯುಪಗಮಾಧಿಕರಣವು

ಟೀಕಿಕೆ ॥ ಅಧಿಕರಣಾರ್ಥವನ್ನು ತೋರಿಸುತ್ತಾರೆ—

**ಭಾಷ್ಯ ॥ ಲೋಕಾಯತಿಕಪಕ್ಷಂ ನಿರಾಕರೋತಿ ॥ ೧ ॥**

ಭಾಷ್ಯಾರ್ಥ ॥ ಚಾರ್ವಾಕಸಂಬಂಧಿಯಾದ ಅಥವಾ ಚಾರ್ವಾಕನಿಂದ ಅಂಗೀಕೃತವಾದ ಸಮಯವನ್ನು ನಿರಾಕರಿಸುತ್ತಾರೆ.

ಟೀಕಿಕೆ ॥ ಪ್ರತ್ಯಕ್ಷ ಒಂದೇ ಪ್ರಮಾಣವೆಂದು ಹೇಳುವ ಚಾರ್ವಾಕನು ಧರ್ಮಾದ್ಯತೀಂದ್ರಿಯ ಪದಾರ್ಥಗಳನ್ನೂ, ಅವುಗಳನ್ನು ಸಾಧಿಸತಕ್ಕ ಶ್ರುತ್ಯಾದಿ ಪ್ರಮಾಣವನ್ನೂ ಅಂಗೀಕರಿಸದೆ ಇರುವುದರಿಂದ ಪ್ರಮಾಣವಿಲ್ಲದಿರುವುದರಿಂದ ಈಶ್ವರನೇ ಇಲ್ಲ. ಈಶ್ವರನನ್ನು ಹೊರತೇ ಪೂರ್ವಪೂರ್ವ ವಸ್ತುಗಳಿಂದ ಉತ್ತರೋತ್ತರ ವಸ್ತುಗಳಿಗೆ ಉತ್ಪತ್ತಿಯು ಕೂಡುವುದರಿಂದ ಶ್ರೀಹರಿಗೆ ಜಗತ್ಕಾರಣತ್ವವು ಯುಕ್ತವಲ್ಲ, ಎಂದರೆ—

## ಸೂತ್ರ ॥ ಓಂ ಅಭ್ಯುಪಗಮೇಽಪ್ಯರ್ಥಾಭಾವಾತ್ ಓಂ ॥ ೬ ॥

ಸೂತ್ರಾರ್ಥ ॥ ಚಾರ್ವಾಕನು ತನ್ನ ಪಕ್ಷಕ್ಕೆ ಸಿದ್ಧಾಂತತ್ವವನ್ನು ಅಂಗೀಕರಿಸಿದರೂ, ಧರ್ಮಾದಿವಿಷಯ, ಸ್ವರ್ಗಾದಿಪ್ರಯೋಜನಗಳೂ ಇಲ್ಲದಿರುವುದರಿಂದ (ಅನುಮಾನ, ಆಗಮಗಳಿಂದ ವಿರುದ್ಧವಾದ ಚಾರ್ವಾಕಶಾಸ್ತ್ರವು ಅಪ್ರಮಾಣವು.) ಅಥವಾ ತನ್ನ ಶಾಸ್ತ್ರಕ್ಕೆ ಸಿದ್ಧಾಂತತ್ವವನ್ನು ಅಂಗೀಕರಿಸದಿದ್ದರೆ ನಮ್ಮ ಇಷ್ಟವು ಸಿದ್ಧವಾಯಿತು. ಸಿದ್ಧಾಂತವೆಂದು ಅಂಗೀಕರಿಸಿದರೂ ಶಾಸ್ತ್ರಕ್ಕೆ ವಿಷಯ, ಪ್ರಯೋಜನಗಳು ಇಲ್ಲದಿರುವುದರಿಂದ ವ್ಯಾಹತಿಯು ಬರುವುದು. ಉಭಯಥಾಪಿ ಚಾರ್ವಾಕಸಿದ್ಧಾಂತವು ಯುಕ್ತವಲ್ಲ.

**ಭಾಷ್ಯ ॥ ಯಸ್ಯ ಧರ್ಮಾಧರ್ಮೌ ನ ಸ್ತಃ ತತ್ಸಿದ್ಧಾಂತೇ ಕಿಂ ಪ್ರಯೋಜನಂ । ಅತಃ ಸ್ವವ್ಯಾಹತೇರೇವೋಪೇಕ್ಷ್ಯಃ ॥ ೬ ॥ ಅಧಿ. ೩ ॥ ॥ ೨ ॥**

ಭಾಷ್ಯಾರ್ಥ ॥ ಯಾರ ಮತದಲ್ಲಿ ಧರ್ಮ=ಯಾಗಾದಿಜನ್ಯ ಅದೃಷ್ಟವು, ತತ್ಸಾಧ್ಯವಾದ ಸ್ವರ್ಗಾದಿಯು, ಅಧರ್ಮ=ಪಾಪ, ಪಾಪಸಾಧ್ಯವಾದ ನರಕವು, ಅಂತೂ ಅತೀಂದ್ರಿಯಸಾಮಾನ್ಯವು ಇಲ್ಲವೋ, ಅಂದರೆ, ಯಾರಿಂದ ಧರ್ಮ, ಅಧರ್ಮಾದ್ಯತೀಂದ್ರಿಯಸಾಮಾನ್ಯವು ಅಂಗೀಕೃತವಾಗ ಲಿಲ್ಲವೋ, ಅಂತಹ ವಾದಿಯ ಸಿದ್ಧಾಂತದಲ್ಲಿ ಅಂದರೆ, ಚಾರ್ವಾಕನಿಂದ ಸಿದ್ಧಾಂತವೆಂದು ಅಂಗೀಕೃತ ವಾದ ಶಾಸ್ತ್ರಕ್ಕೆ ಏನು ಪ್ರಯೋಜನವು? ಅಂದರೆ, ಪ್ರಯುಜ್ಯತೇ=ಪ್ರವರ್ತ್ಯತೇ ಶಾಸ್ತ್ರೇ ಅಧಿಕಾರೀ ಅನೇನ ಎನ್ನುವ ವ್ಯುತ್ಪತ್ತಿಯಿಂದ ವಿಷಯ ಪ್ರಯೋಜನಗಳು ಯಾವುವು? (ಯಾವುದೊಂದು ವಿಷಯಾದಿಗಳೂ ಅಂಗೀಕೃತಗಳಾಗಲಿಲ್ಲ.) ಆದಕಾರಣ, ಅಂದರೆ—ತನ್ನ ಶಾಸ್ತ್ರವು ಸಿದ್ಧಾಂತವೆಂದು ಅಂಗೀಕರಿಸಿದರೂ ಸಿದ್ಧಾಂತವು ಎಂದು ಆಗಬೇಕಾದರೆ ಆವಶ್ಯಕಗಳಾದ ವಿಷಯ ಪ್ರಯೋಜನಗಳು ಇಲ್ಲವೆಂದು ಅಂಗೀಕರಿಸಿದ್ದರಿಂದ ಯಾವುದು ಸಿದ್ಧಾಂತವೋ ಅದು ಪ್ರಯೋಜನಾದಿಗಳುಳ್ಳದ್ದು ಎನ್ನುವ

ನಿಯಮದಿಂದ ಸಿದ್ಧಾಂತವೆಂದು ಅಂಗೀಕೃತವಾದ ಶಾಸ್ತ್ರಕ್ಕೆ ಪ್ರಯೋಜನಾದಿಗಳು ಇಲ್ಲವೆಂದು ಅಂಗೀಕರಿಸಿದವನಿಗೆ ಮಾತಾ ವಂಧ್ಯಾ ಎನ್ನುವುದರಂತೆ ಸ್ವವಚನವಿರುದ್ಧವಾದಿತ್ವವು ಬರುವುದರಿಂದಲೇ ಆ ಚಾರ್ವಾಕನು ಅಥವಾ ಚಾರ್ವಾಕಸಿದ್ಧಾಂತವು ಉಪೇಕ್ಷಾರ್ಹವೇ ಆಗಿದೆ. ಆದರಣೀಯವಲ್ಲ, ಪರಿಹಾರಕ್ಕೆ ವಿಷಯವಲ್ಲ. ಆದುದರಿಂದ ಇಂತಹ ಅನುಪಪನ್ನವಾದ ಚಾರ್ವಾಕಮತದಿಂದ ವಿರೋಧವು ಅಕಿಂಚಿತ್ಕರವಾದುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ. ॥ ೬ ॥

## ಅಧಿಕರಣ ಸಾರಾಂಶ

ಪ್ರತ್ಯಕ್ಷದಿಂದ ಇತರವಾದ ಪ್ರಮಾಣವೇ ಇಲ್ಲದಿರುವುದರಿಂದ ಹಿಂದೆ ಹೇಳಿದ ಶ್ರುತ್ಯನುಮಾನಗಳ ವಿರೋಧವೂ ಇಲ್ಲದಿರುವ ಪ್ರಯುಕ್ತ ಧರ್ಮ, ಅಧರ್ಮ ಮೊದಲಾದ ಅದೃಷ್ಟವಸ್ತುಗಳನ್ನು ಅಂಗೀಕರಿಸಿರುವುದರಿಂದ ಶ್ರುತ್ಯಾದಿಗಳು ಅಪ್ರಮಾಣವಾದರೆ ಧರ್ಮಾದಿಗಳು ಇಲ್ಲವೆಂದು ಆಗಬೇಕಾಗುವುದು ಎನ್ನುವುದು ಇಷ್ಟವಾದಪ್ರಯುಕ್ತ ಈಶ್ವರನು ಇಲ್ಲ, ಈಶ್ವರಕರ್ತೃತ್ವವೂ, ಸ್ವಾತಂತ್ರ್ಯವೂ ಸುತರಾಂ ಕೂಡಲಾರದು. ಎಂದರೆ—ಪ್ರತ್ಯಕ್ಷದಿಂದ ಇತರವಾದುದು ಅಪ್ರಮಾಣವೆಂದಾದರೆ ಅದೃಷ್ಟವಸ್ತುವು ಇಲ್ಲವಾದರೆ ಚಾರ್ವಾಕಶಾಸ್ತ್ರಕ್ಕೆ ಅದೃಷ್ಟವಿಷಯವೂ ಅದೃಷ್ಟವಾದ ಪ್ರಯೋಜನವೂ ಇಲ್ಲವೆಂದಾಗುವುದು. ಧರ್ಮಾದ್ಯಭಾವವು ಪ್ರತ್ಯಕ್ಷಕ್ಕೆ ಅಯೋಗ್ಯವಾದುದರಿಂದ ಧರ್ಮಾದಿಕಂ ನಾಸ್ತಿ ಪ್ರತ್ಯಕ್ಷೇಣ ಅನುಪಲಂಭಾತ್ ಎನ್ನುವ ಅನುಮಾನಕ್ಕೆ ಚಾರ್ವಾಕನು ಪ್ರಾಮಾಣ್ಯವನ್ನು ಅಂಗೀಕರಿಸಲಿಲ್ಲ. ಧರ್ಮ, ಅಧರ್ಮಾದಿಗಳು ಇಲ್ಲವೆಂದಾದರೆ ಧರ್ಮ, ಸ್ವರ್ಗ, ಅಪವರ್ಗ ಮೊದಲಾದುದು ಪ್ರಯೋಜನವಿಲ್ಲ. ದೃಷ್ಟವಾದ ಧನಾದಿಗಳು ವ್ಯಾಪಾರ ಮೊದಲಾದ ಉಪಾಯಾಂತರಗಳಿಂದ ಸಾಧ್ಯವಾಗಿದೆ. ಧರ್ಮಾದಿಗಳು ಇಲ್ಲವೆಂದು ಜ್ಞಾನವಿರುವುದಾದರೆ ಪರಧನ, ಸ್ತ್ರೀ ಮೊದಲಾದುದಕ್ಕಾಗಿ ಪ್ರವರ್ತಿಸಿದಾಗ ಪರಸ್ಪರ ಹಿಂಸಾದಿಗಳಿಂದ ಅಪಕಾರವೇ ಪ್ರಾಪ್ತವಾಗುವುದು. ಆದಕಾರಣ ಅವರ ಮತವು ದುಷ್ಟವಾದಪ್ರಯುಕ್ತ ವಿಷ್ಣುವಿಗೆ ಕರ್ತೃತ್ವವು ಯುಕ್ತವು ॥ ಅಧಿ. ೨. ।ಜ

ಅಭ್ಯುಪಗಮಾಧಿಕರಣವು ಸಮಾಪ್ತವಾಯಿತು.

# ೪ ಪುರುಷಾಶ್ಮಾಧಿಕರಣವು

ಪೀಠಿಕೆ ॥ ಅಧಿಕರಣಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ—

**ಭಾಷ್ಯ ॥ ಪುರುಷೋಪಸರ್ಜನಪ್ರಕೃತಿಕರ್ತೃತ್ವವಾದಮಪಾಕರೋತಿ ॥ ೧ ॥**

ಭಾಷ್ಯಾರ್ಥ ॥ ಈ ಅಧಿಕರಣದಲ್ಲಿ ನಿರೀಶ್ವರಸಾಂಖ್ಯೈಕದೇಶಿಗಳಾದ ಚೇತನವೇ ಉಪಸರ್ಜನವಾಗಿ ಉಳ್ಳ ಆ ಚೇತನಪ್ರಕೃತಿಗೆ ಕರ್ತೃತ್ವವನ್ನು ಹೇಳುವವರ ಮತವನ್ನು (ಸೂತ್ರಕಾರರು) ನಿರಾಕರಿಸುತ್ತಾರೆ.

## ಸೂತ್ರ ॥ ಓಂ ಪುರುಷಾಶ್ಮವದಿತಿ ಚೇತ್ತಥಾಪಿ ಓಂ ॥ ೭ ॥

**ಸೂತ್ರಾರ್ಥ** ॥ ಜೀವಸಂಬಂಧದಿಂದ ದೇಹಕ್ಕೆ ಅಶ್ಮಾನಯನಪ್ರವೃತ್ತಿಯಂತೆ ಪುರುಷೋಪಸರ್ಜನ ಪ್ರಧಾನಕ್ಕೇನೇ ಮಹದಾದಿಕಾರ್ಯವನ್ನು ಮಾಡುವ ವಿಷಯದಲ್ಲಿ ಸ್ವತಃಪ್ರವೃತ್ತಿಯು ಕೂಡುತ್ತದೆ. ಈಶ್ವರನಿಗೆ ವೈಯರ್ಥ್ಯವು ಎಂದರೆ, ಹೀಗೆ ಹೇಳಕೂಡದು. ಶರೀರಸಂಬಂಧಿ ಅಶ್ಮಾನಯನಾದಿಗಳಲ್ಲಿಯೂ ಈಶ್ವರನಿಗೇನೇ ಪ್ರವೃತ್ತಿ ಇದ್ದುದರಿಂದ ನ ಋತೇ ಎನ್ನುವ ಶ್ರುತಿಯಿಂದ ಈಶ್ವರನಿಗೇನೇ ಕರ್ತೃತ್ವವು ಅವಗತವಾಗುತ್ತದೆ.

**ಭಾಷ್ಯ ॥ ಯಥಾ ಚೇತನಸಂಬಂಧಾದಚೇತನಮೇವ ಶರೀರಮಶ್ಮಾದಿಕಮಾದಾಯ ಗಚ್ಛತಿ । ಏವಮಚೇತನಾಽಪಿ ಪ್ರಕೃತಿಃ ಪುರುಷಸಂಬಂಧಾತ್ಪ್ರವರ್ತತೇ । ಇತಿ ಚೇತ್ । ನ। ನ ಋತೇ ತ್ವತ್ಕ್ರಿಯತೇ (ಋ.೧೦.೧೧೨.೯.)। ಇತಿ ತತ್ರಾಪಿ ತಥಾತ್ವೇ ದೃಷ್ಟಾಂತಾಭಾವಾತ್ ॥ ೭ ॥ ೨ ॥**

**ಭಾಷ್ಯಾರ್ಥ** ॥ ಹೇಗೆ ಜೀವಸನ್ನಿಧಾನದಿಂದ ಅಚೇತನವಾದ ಶರೀರವೇ ಕಲ್ಲು, ಮರ ಇತ್ಯಾದಿಗಳನ್ನು ಹಿಡಿದುಕೊಂಡು ಹೋಗುವ ಪ್ರವೃತ್ತಿಯನ್ನು ಮಾಡುತ್ತದೋ, ಹೀಗೆಯೇ ಅಚೇತನ ವಾದ ಪ್ರಕೃತಿಯೇ ಪುರುಷಸಂಬಂಧದಿಂದ ಪ್ರವರ್ತಿಸುತ್ತದೆ. ಎಂದರೆ— ಹೀಗೆ ಹೇಳಕೂಡದು. ನ ಋತೇ ಎನ್ನುವ ಶ್ರುತಿಯ ದೆಶೆಯಿಂದ ಅಶ್ಮಾನಯನಾದಿ ಶರೀರಪ್ರವೃತ್ತಿಯಲ್ಲಿಯೂ ಪರಮಾತ್ಮಾಧೀನತ್ವವು ಸಿದ್ಧವಾಗೋಣ ದೃಷ್ಟಾಂತವಿಲ್ಲದಿರುವುದರಿಂದ. (ಪುರುಷೋಪಸರ್ಜನ ಪ್ರಧಾನಕ್ಕೆ ಜಗತ್ಕಾರಣತ್ವದಲ್ಲಿ ಪ್ರಮಾಣವಿಲ್ಲದಿರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ.)

**ವಿಶೇಷಾಂಶ ॥ ಪ್ರಧಾನಂ ಚೇತನಸನ್ನಿಧಾನಾತ್ ಸ್ವತಃ ಪ್ರವೃತ್ತಿಮತ್ ಅಚೇತನತ್ವಾತ್ ಶರೀರವತ್** ಎನ್ನುವ ಅನುಮಾನದಿಂದ ಪ್ರಧಾನದಿಂದಲೇ ಜಗತ್ತಿಗೆ ಉತ್ಪತ್ತಿಯಾಗುವುದರಿಂದ ಈಶ್ವರನಿಗೆ ವೈಯರ್ಥ್ಯವು. ಆದಕಾರಣ ಈಶ್ವರನು ಇಲ್ಲ. ಈಶ್ವರನು ಇಲ್ಲದಿದ್ದರೆ ಈಶ್ವರನಿಗೆ ಜಗತ್ಕಾರಣತ್ವವು ಇಲ್ಲವೇ ಇಲ್ಲ. ಎಂದರೆ—ಹಿಂದೆ ಹೇಳಿದ ಅನುಮಾನದಿಂದ ಪ್ರಕೃತಿಗೆ ಸ್ವತ ಏವ ಪ್ರವೃತ್ತಿಯೆನ್ನುವುದು ಯುಕ್ತವಲ್ಲ. ಏಕೆಂದರೆ—ಮಹದಾದಿ ಕಾರ್ಯಕರಣಪ್ರವೃತ್ತಿಗೆ ಪುರುಷೋಪಸರ್ಜನ ಪ್ರಕೃತ್ಯಧೀನತ್ವವನ್ನು ಸಾಧಿಸುವುದರಲ್ಲಿಯೂ ದೃಷ್ಟಾಂತವಿಲ್ಲ. ಎಂದರೆ—**ವಿಮತಾ ಪ್ರವೃತ್ತಿಃ ಪುರುಷೋಪ ಸರ್ಜನಾಚೇತನನಿಮಿತ್ತಾ ಪ್ರವೃತ್ತಿತ್ವಾತ್ ಶರೀರಸಂಬಂಧ್ಯಶ್ಮಾನಯನಾದಿಪ್ರವೃತ್ತಿವತ್** ಎನ್ನುವ ಅನುಮಾನದಲ್ಲಿ ದೃಷ್ಟಾಂತವಾಗಿ ಹೇಳುವ ಶರೀರಪ್ರವೃತ್ತಿಯೂ ಕೂಡ ಈಶ್ವರಾಧೀನವಾಗಿರುವುದ ರಿಂದ ಅದು ದೃಷ್ಟಾಂತವಾಗುವುದಿಲ್ಲ. ॥ ೭ ॥

**ಪೀಠಿಕೆ** ॥ ಹೈತುಕನನ್ನು ಕುರಿತು ಶ್ರುತಿಯಿಂದ ದೃಷ್ಟಾಂತದೂಷಣವು ಯುಕ್ತವಲ್ಲ ಎಂದರೆ—

## ಸೂತ್ರ ॥ ಓಂ ಅಂಗಿತ್ವಾನುಪಪತ್ತೇಃ ಓಂ ॥ ೮ ॥

**ಸೂತ್ರಾರ್ಥ** ॥ ಅಶ್ಮಾನಯನಾದಿಗಳಲ್ಲಿ ಶರೀರಕ್ಕೆ ಕರ್ತೃತ್ವವಿದ್ದರೆ ಜೀವನಿಗೆ ಮುಖ್ಯತ್ವ ವ್ಯವಹಾರವು ಕೂಡದಿರುವುದರಿಂದ ಪುರುಷನೇ ಕರ್ತನು. ಶರೀರವು ಕರ್ತೃ ಅಲ್ಲ.

ಭಾಷ್ಯ ॥ ಶರೀರಪ್ರವೃತ್ತೌ ಪುರುಷಸ್ಯಾಂ(ಗ)ತ್ವಾತ್। ಅಂಗಮಂಗೀ ಸಮಾದಾಯ ಯಥಾಕಾರ್ಯಂ ಕರೋತ್ಯಸೌ। ಇತ್ಯಂ (ತ್ಯಾದಂ) ಗಿತ್ವವ್ಯವಹಾರೋಽನುಪಪನ್ನಃ ॥ ೮ ॥ ಅಧಿ. ೪ ॥ ॥ ೩ ॥

ಭಾಷ್ಯಾರ್ಥ ॥ ಪುರುಷ ಸಂಬಂಧ್ಧವಾದ ಶರೀರಕ್ಕೇನೇ ಸ್ವತಃ ಪ್ರವೃತ್ತಿಯನ್ನು ಹೇಳಿದರೆ ಪುರುಷನಿಗೆ ಅಂಗತ್ವವು (ಅಪ್ರಧಾನತ್ವವು) ಅವಶ್ಯವಾಗಿ ಅಂಗೀಕರಿಸಬೇಕಾಗಿರುವುದರಿಂದಲೂ ಶರೀರಕ್ಕೆ ಅಂಗಿತ್ವವು ಬರಬೇಕಾಗಿರುವುದರಿಂದ ಪ್ರಧಾನವಾದ ಪುರುಷನು ಗುಣಭೂತವಾದ ಶರೀರವನ್ನು ಸಂಗ್ರಹಿಸಿ ಹೇಗೆ ಆಶ್ಯಾದ್ಯಾನಯನಾದಿ ಕಾರ್ಯವನ್ನು ಮಾಡುತ್ತಾನೋ, ಹಾಗೆಯೇ ಶ್ರೀಹರಿಯು ಪ್ರಕೃತಿಯನ್ನು ಹಿಡಿದುಕೊಂಡು ಮಹದಾದಿ ಕಾರ್ಯವನ್ನು ಮಾಡುತ್ತಾನೆ. ಎನ್ನುವ ಸ್ಮೃತಿಯಲ್ಲಿ ಪುರುಷನಿಗೆ ಅಂಗಿತ್ವೇನ (ಪ್ರಧಾನತ್ವೇನ) ಲೌಕಿಕಪರೀಕ್ಷಕ ವ್ಯವಹಾರವು ಅಂದರೆ ಶರೀರವನ್ನು ಕುರಿತು ಪ್ರಾಧಾನ್ಯವ್ಯಪದೇಶವು ಶರೀರಕ್ಕೆ ಅಂಗತ್ವೇನ ವ್ಯವಹಾರವೂ ಅನುಪಪನ್ನವಾಗುವುದು. ॥ ೮ ॥

## ಅಧಿಕರಣ ಸಾರಾಂಶ

ಕೇವಲ ಜಡಕ್ಕೆ ಸ್ವತಃ ಪ್ರವೃತ್ತಿಮತ್ವರೂಪವಾದ ಕರ್ತೃತ್ವವು ಕೂಡದಿದ್ದರೂ ಲೋಕದಲ್ಲಿ ಜೀವಸಂಬಂಧದಿಂದ ದೇಹಕ್ಕೇನೇ ಅಶ್ವಾನಯನಾದಿ ಕಾರ್ಯಗಳಲ್ಲಿ ಪ್ರವೃತ್ತಿಯು ಕಂಡದ್ದರಿಂದ ಪೂರ್ವೋಕ್ತಾನುಮಾನದಿಂದ ಜೀವಗುಣಕ ಪ್ರಧಾನಕ್ಕೆ ಕರ್ತೃತ್ವವನ್ನು ಸ್ವೀಕರಿಸಿದರೆ ಬಾಧಕವಿಲ್ಲದಿರುವುದರಿಂದ ವಿಷ್ಣುವಿಗೆ ವಿಶ್ವಕರ್ತೃತ್ವವು ಯುಕ್ತವಲ್ಲ ಎಂದರೆ ನ ಋತೇ ಎನ್ನುವ ಶ್ರುತಿಯಿಂದ ಶರೀರ ಪ್ರವೃತ್ತಿಗೂ ಈಶಾಧೀನತ್ವವು ಸಿದ್ಧಿಸುವುದರಿಂದ ಜೀವನು ಪ್ರಧಾನನೆಂದೂ ದೇಹವು ಅಪ್ರಧಾನವೆಂದೂ ಲೌಕಿಕಪರೀಕ್ಷಕ ಸಿದ್ಧವಾದ ವ್ಯವಹಾರವು) ಕೂಡದಿರುವುದರಿಂದ ಜೀವಗುಣಕ ಪ್ರಧಾನಕರ್ತೃತ್ವವು ಅಪ್ರಾಮಾಣಿಕವಾದುದರಿಂದ ವಿಷ್ಣುವಿಗೆ ವಿಶ್ವಕರ್ತೃತ್ವವು ಯುಕ್ತವು. ॥ ಅಧಿ. ೪ ॥

ಪುರುಷಾಶ್ಮಾಧಿಕರಣವು ಸಮಾಪ್ತವಾಯಿತು.

# ೫ ಅನ್ಯಥಾನುಮಿತ್ಯಧಿಕರಣವು

ಭಾಷ್ಯ ॥ ಪ್ರಕೃತ್ಯುಪಸರ್ಜನಪುರುಷಕರ್ತೃತ್ವವಾದಮಪಾಕರೋತಿ ॥ ೧ ॥

ಭಾಷ್ಯಾರ್ಥ ॥ ಪ್ರಧಾನವೇ ಉಪಸರ್ಜನವಾಗಿ ಉಳ್ಳ ಚೇತನಕ್ಕೆ ಕರ್ತೃತ್ವವನ್ನು ಹೇಳುವ ನಿರೀಶ್ವರ ಸಾಂಖ್ಯೈಕದೇಶಿಗಳ ಮತವನ್ನು (ಈ ಅಧಿಕರಣದಲ್ಲಿ ಸೂತ್ರಕಾರರು) ನಿರಾಕರಿಸುತ್ತಾರೆ.

ಸೂತ್ರ ॥ ಓಂ ಅನ್ಯಥಾಽನುಮಿತೌ ಚ ಜ್ಞಶಕ್ತಿವಿಯೋಗಾತ್ ಓಂ ॥ ೯ ॥

**ಸೂತ್ರಾರ್ಥ** ॥ ಅನ್ಯಥಾ=ಪೂರ್ವಾಧಿಕರಣದಲ್ಲಿ ಹೇಳಿದ ಪುರುಷೋಪಸರ್ಜನ ಪ್ರಕೃತಿ ಕರ್ತೃತ್ವಕ್ಕಿಂತ ವಿಪರೀತವಾಗಿ ಅನುಮೇಯಿಸಿದರೂ (ಅಂದರೆ ವಿಮತಾ ಪ್ರವೃತ್ತಿಃ ಅಚೇತನೋಪಸರ್ಜನಕಪುರುಷಾಧೀನಾ ಪ್ರವೃತ್ತಿತ್ವಾತ್ ಅಶ್ಮಾನಯನಪ್ರವೃತ್ತಿವತ್ ಎನ್ನುವ ಅನುಮಾನದಲ್ಲಿಯೂ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು. ಹೇಗೆಂದರೆ ಜೀವನಿಗೆ ಅಂಗಪದೋಕ್ತ ಶರೀರಸಂಬಂಧಿತ್ವವು ಕೂಡಲಾರದು. ಅದೂ ಹೇಗೆಂದರೆ) ಅಂಗಸಂಬಂಧದಿಂದ ಜ್ಞಾತನಾದ ಜೀವನಿಗೆ ಶರೀರ ಸಂಬಂಧ ಪ್ರಯೋಜಕ ಶಕ್ತಿಯು ಸ್ವತಃ ಇಲ್ಲದಿರುವುದರಿಂದ. (ಅಂತೂ ಜೀವನಿಗೆ ಶರೀರ ಸಂಬಂಧಕ್ಕಾಗಿ ಈಶ್ವರನನ್ನು ಅಂಗೀಕರಿಸಲೇಬೇಕು.)

**ಭಾಷ್ಯ ॥ ಶರೀರಸಂಬಂಧಾತ್ಪುರುಷಃ ಪ್ರವರ್ತತೇ । ಇತ್ಯಂಗೀಕಾರೇಽಪಿ ಸ್ವತಸ್ತಸ್ಯಾಸಾಮರ್ಥ್ಯಾಚ್ಛರೀರಸಂಬಂಧ ಏವಾಯುಕ್ತಃ ॥ ೯ ॥ ॥ ೨ ॥**

**ಭಾಷ್ಯಾರ್ಥ** ॥ ಶರೀರ ಸಂಬಂಧದಿಂದ ಪುರುಷನು (ಪಾಷಾಣಾದಿಗಳನ್ನು ತರುವ ವಿಷಯದಲ್ಲಿ) ಪ್ರವರ್ತಿಸುತ್ತಾನೆ. ಹೀಗೆ ಅಂಗೀಕರಿಸಿಕೊಂಡು ಜೀವನಿಗೆ ಕರ್ತೃತ್ವವನ್ನು ಸಾಧಿಸಿದರೂ ಸ್ವಾತಂತ್ರ್ಯದಿಂದ ಪುರುಷನಿಗೆ ಶರೀರ ಸಂಬಂಧವಿಷಯದಲ್ಲಿಯೂ ಸಾಮರ್ಥ್ಯವಿಲ್ಲದಿರುವುದರಿಂದ ಶರೀರ ಸಂಬಂಧವೇ ಅಯುಕ್ತವು.

**ಪೀಠಿಕೆ** ॥ ಹೀಗೆ ಪ್ರತ್ಯೇಕ ದೂಷಿತಗಳಾದ ಅನೀಶ್ವರ ಮತಗಳನ್ನು ಸಾಮಾನ್ಯ ದೂಷಣದಿಂದಲೂ ನಿರಾಕರಿಸತಕ್ಕ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ವಿಪ್ರತಿಷೇಧಾಚ್ಚಾಸಮಂಜಸಂ ಓಂ ॥ ೧೦ ॥

**ಭಾಷ್ಯ ॥ ಸಕಲಶ್ರುತಿಸ್ಮೃತಿಯುಕ್ತಿವಿರುದ್ಧತ್ವಾಚ್ಚಾನೀಶ್ವರಮತಮಸಮಂಜಸಂ ॥ ೩ ॥**

**ಭಾಷ್ಯಾರ್ಥ** ॥ (ಹಿಂದೆ ಹೇಳಿದ ಯುಕ್ತಿ ವಿರುದ್ಧತ್ವದಿಂದ ಮಾತ್ರವಲ್ಲ ಮತ್ತೆ) ಎಲ್ಲಾ ಶ್ರುತಿಗಳೂ ಸ್ಮೃತಿಗಳೂ ಯುಕ್ತಿಗಳೂ ಇವುಗಳಿಂದ ವಿರೋಧವಿದ್ದುದರಿಂದ ಈಶ್ವರನು ಇಲ್ಲವೆಂದು ಹೇಳುವ ವಾದಿಗಳ ಮತವು ಅಯುಕ್ತವು.

**ಪೀಠಿಕೆ** ॥ ಈಶ್ವರನು ಇಲ್ಲವೆಂದು ಹೇಳುವ ಮತಗಳಿಗೆ ಶ್ರುತ್ಯಾದಿ ವಿರೋಧವು ಹೇಗೆಂದರೆ—

**ಭಾಷ್ಯ ॥ ಶ್ರುತಯಃ ಸ್ಮೃತಯಶ್ಚೈವ ಯುಕ್ತಯಶ್ಚೇಶ್ವರಂ ಪರಂ । ವದಂತಿ ತದ್ವಿರುದ್ಧಂ ಯೋ ವದೇತ್ತಸ್ಮಾನ್ನ ಚಾಧಮಃ ॥ ಇತಿ(ಚ)ಪಾದ್ಮೇ ॥ ೧೦ ॥ ಅಧಿ. ೫ ॥ ॥ ೪ ॥**

**ಭಾಷ್ಯಾರ್ಥ** ॥ ಶ್ರುತಯಃ=(೧)ದ್ಯಾವಾಭೂಮೀ ಜನಯನ್ (ಶ್ವೇ.೩.೩) (೨) ಯತೋವಾ (ತೈ.೩.೧.) (೩) ಯಃ ಸರ್ವಜ್ಞಃ (ಮು.೧.೧.೯) ಇದುಮೊದಲಾದ ಶ್ರುತಿಗಳೂ ಸ್ಮೃತಯಶ್ಚ ಉತ್ಪತ್ತಿಸ್ಥಿತಿಸಂಹಾರಾಃ, ಸ್ರಷ್ಟಾ ಪಾತಾ, ಇದು ಮೊದಲಾದ ಸ್ಮೃತಿಗಳೂ, ಈಶ್ವರನನ್ನೇ ಸ್ವತಂತ್ರನನ್ನಾಗಿ ಹೇಳುತ್ತವೆ. ಯುಕ್ತಯಶ್ಚ=ವಿಮತಂ ಸಕರ್ತೃಕಂ ಕಾರ್ಯತ್ವಾತ್, ಚೇಷ್ಟೇತ್ಯೇ ಕೇನಚಿನ್ನಿಯೇತೇ, ಇದು ಮೊದಲಾದ ಯುಕ್ತಿಗಳೂ ಹಾಗೆಯೇ ಸಾಧಿಸುತ್ತವೆ. ಶ್ರುತಿಸ್ಮೃತಿಯುಕ್ತಿಗಳಿಂದ ವಿರುದ್ಧವಾದ ಪ್ರಕೃತಿ

ಸ್ವಾತಂತ್ರ್ಯಾದಿರೂಪವಾದ ಅರ್ಥವನ್ನು ಯಾವ ಪುರುಷನು ಹೇಳುತ್ತಾನೋ, ಅವನಿಂದ ಇತರನಾದವನು ಅಯೋಗ್ಯರಲ್ಲಿ ಅಧಮನಾದವನು ಇಲ್ಲ. ಆತನೇ ಅಧಮನು. ಹೀಗೆ ಪಾದ್ಮ ಪುರಾಣದಲ್ಲಿ ಹೇಳಿದೆ. ॥ ೧೦ ॥

## ಅಧಿಕರಣ ಸಾರಾಂಶ

ಹಿಂದೆ ಹೇಳಿದ ಪ್ರಕಾರ ಅಶ್ಮಾನಯನಾದಿಗಳಲ್ಲಿ ದೇಹೋಪಸರ್ಜನ ಜೀವಕರ್ತೃತ್ವವು ಕಂಡದ್ದರಿಂದ ಆ ದೃಷ್ಟಾಂತದಿಂದ ವಿಮತಾ ಪ್ರಧಾನಪ್ರವೃತ್ತಿಃ ಅಚೇತನೋಪಸರ್ಜನಜೀವಾಧೀನಾ ಪ್ರವೃತ್ತಿತ್ವಾತ್ ಅಶ್ಮಾನಯನಾದಿಪ್ರವೃತ್ತಿವತ್ ಎನ್ನುವ ಅನುಮಾನದಿಂದ ಜೀವನೇ ಪ್ರಧಾನವಾಗಿ ಉಳ್ಳ ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯಾಗುತ್ತಿರಲು ಈಶ್ವರನಿಂದ ಕೃತ್ಯವು ಇಲ್ಲದಿರುವುದರಿಂದ ಈಶ್ವರನಿಗೆ ಕರ್ತೃತ್ವವು ಯುಕ್ತವಲ್ಲ ಎಂದರೆ ಜೀವನಿಗೆ ದೇಹವಿಲ್ಲದೇನೇ ಪ್ರವೃತ್ತಿಯಲ್ಲಿ ಶಕ್ತಿಯಿದ್ದರೆ ದೇಹವೈಯರ್ಥ್ಯವು. ಶಕ್ತಿಯಿಲ್ಲವಾದರೆ ದೇಹಸಂಬಂಧಾರ್ಥವಾದ ಪ್ರವೃತ್ತಿಯಲ್ಲಿಯೂ ಕೇವಲ ಜೀವನಿಗೆ ಶಕ್ತಿಯು ಇಲ್ಲದಿರುವುದರಿಂದ ಅಂಗಿತ್ವವೂ ಕೂಡಲಾರದು. ಪ್ರಕೃತಿ ಸಂಬಂಧವುಳ್ಳ ಜೀವನಿಗೆ ಶಕ್ತಿಯು ಇರುವುದಾದರೆ ಪ್ರಕೃತಿ ಸಂಬಂಧ ಪ್ರವೃತ್ತಿಯಲ್ಲಿಯೂ ಹೀಗೆಯೇ. ಹೀಗೆ ಅನವಸ್ಥಾ ದೋಷವು ಬರುವುದು. ಆದುದರಿಂದ ಸ್ವತಂತ್ರನಾದ ಈಶ್ವರನಿಂದಲೇ ದೇಹಸಂಬಂಧವನ್ನು ಹೇಳಬೇಕಾಗಿರುವುದರಿಂದ ಅಶ್ಮಾನಯನಾದಿ ಪ್ರವೃತ್ತಿಯೂ ಈಶ್ವರಾಧೀನವಾಗಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವಿಲ್ಲದಿರುವುದರಿಂದ ಅನುಮಾನವು ದುಷ್ಟವಾಯಿತು. ಸ್ವತಂತ್ರನಾದ ಈಶ್ವರನನ್ನು ಅಂಗೀಕರಿಸಿದರೆ ಸರ್ವವೂ ಸಮಂಜಸವಾಗುವುದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವು. ॥ ಅಧಿ. ೫ ॥

**ಅನ್ಯಾಥಾ ಅನುಮಿತ್ಯಧಿಕರಣವು ಸಮಾಪ್ತವಾಯಿತು.**

# ೬ ವೈಶೇಷಿಕಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಪ್ರತಿಪಾದ್ಯವಾದುದನ್ನು ಹೇಳುತ್ತಾರೆ—

**ಭಾಷ್ಯ ॥ ಪರಮಾಣ್ವಾರಂಭವಾದಮಪಾಕರೋತಿ ॥ ೧ ॥**

ಭಾಷ್ಯಾರ್ಥ ॥ ಪರಮಾಣುಗಳದೆಶೆಯಿಂದ ಜಗದಾರಂಭವು ಜಗತ್ತಿಗೆ ಉತ್ಪತ್ತಿಯು ಎಂದು ಹೇಳುವ ವೈಶೇಷಿಕಾದಿಗಳ ಮತವನ್ನು ಅಥವಾ ಪರಮಾಣುಗಳೇ ಜಗದಾರಂಭಕಗಳು ಎನ್ನುವ ವಾದವನ್ನು (ಈ ಅಧಿಕರಣದಲ್ಲಿ ಸೂತ್ರಕಾರರು) ನಿರಾಕರಿಸುತ್ತಾರೆ. ಅವರ ಮತ ನಿರಾಕರಣವು ಅವರ ಪ್ರಕ್ರಿಯೆಯನ್ನು ನಿರಾಕರಿಸಿದ್ದರಿಂದ ಆಗುತ್ತದೆ. ಎನ್ನುವ ಅಭಿಪ್ರಾಯದಿಂದ ಅವರು ಹೇಳುವ ಅಸಮವಾಯಿಕಾರಣವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನೇ ಹೇಳುತ್ತಾರೆ.

**ಸೂತ್ರ ॥ ಓಂ ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ ಓಂ ॥ ೧೧ ॥**

ಸೂತ್ರಾರ್ಥ ॥ ಮಹದ್ದೀರ್ಘವತ್=ತ್ರ್ಯಣುಕಾದಿ ಸಮವಾಯಿಕಾರಣಗಳಲ್ಲಿರತಕ್ಕ ಅಸಮವಾಯಿಕಾರಣೀಭೂತಗಳಾದ ಮಹತ್ವದೀರ್ಘತ್ವಗಳಿಂದ ಚತುರಣುಕಾದಿಕಾರ್ಯಗಳಲ್ಲಿರತಕ್ಕ ಮಹತ್ವದೀರ್ಘತ್ವರೂಪಕಾರ್ಯವು ಹುಟ್ಟುವಂತೆ ಹ್ರಸ್ವಪರಿಮಂಡಲಾಭ್ಯಾಂ: ಪರಮಾಣ್ವಾದಿಗಲ್ಲಿರತಕ್ಕ ಹ್ರಸ್ವತ್ವಪಾರಿಮಾಂಡಲ್ಯಗಳಿಂದ ಪರಮಾಣ್ವಾದಿಜನ್ಯ ಕಾರ್ಯಗಳಾದ ದ್ವ್ಯಣುಕಾದಿಗಳಲ್ಲಿ ಪರಿಮಾಣಾಖ್ಯ ಕಾರ್ಯವು ಹುಟ್ಟಬೇಕಾಗುವುದು. ಇಲ್ಲವಾದರೆ ಮಹತ್ವ ದೀರ್ಘತ್ವಗಳಿಗೂ ಪರಿಮಾಣೋತ್ಪಾದಕತ್ವವು ಇಲ್ಲದೆ ಹೋಗುವುದು. ಮತ್ತೆ ಸಂಖ್ಯಾದಿಗಳು ಹುಟ್ಟಿಸುತ್ತವೆ ಎಂದೇ ಸ್ವೀಕರಿಸಿದರೆ ಮಹತ್ವ ದೀರ್ಘತ್ವಗಳಿಂದಲೂ ಕಾರ್ಯವು ಹುಟ್ಟದೆ ಹೋಗುವುದು. ಅಲ್ಲಿಯೂ ತ್ರ್ಯಣುಕಾದಿಗಳಲ್ಲಿರತಕ್ಕ ಸಂಖ್ಯೆಯಿಂದಲೇ ಹುಟ್ಟಬೇಕಾಗುವುದು. ಏವಂಚ ಮಹತ್ವ, ದೀರ್ಘತ್ವಗಳಿಗೆ ಕಾರಣತ್ವವನ್ನು ಹೇಳಿದರೆ ಅತಿಪ್ರಸಕ್ತಿಯು ಬರುವುದರಿಂದ ಅಸಮವಾಯಿಕಾರಣವೇ ಸಿದ್ಧಿಸುವುದಿಲ್ಲ.

**ಭಾಷ್ಯ ॥ ಮಹತ್ವಾದ್ದೀರ್ಘತ್ವಾಚ್ಚ ಯಥಾ ಕಾರ್ಯಮುತ್ಪದ್ಯತೇ । ಏವಂ ಹ್ರಸ್ವತ್ವಾತ್ ಪಾರಿಮಾಂಡಲ್ಯಾಚ್ಚೋತ್ಪದ್ಯೇತ ॥ ೨ ॥**

ಭಾಷ್ಯಾರ್ಥ ॥ ವೈಶೇಷಿಕರ ಮತದಲ್ಲಿಯೂ ನೈಯಾಯಿಕರ ಮತದಲ್ಲಿಯೂ ಹೇಗೆ ಸಮವಾಯಿ ಕಾರಣೀಭೂತವಾದ ತ್ರ್ಯಣುಕ ಚತುರಣುಕಾದಿಗಳಲ್ಲಿ ಇರತಕ್ಕ ಮಹತ್ವಾಖ್ಯಪರಿಮಾಣದಿಂದಲೂ ದೀರ್ಘತ್ವಾಖ್ಯ ಪರಿಮಾಣದಿಂದಲೂ ಚತುರಣುಕ ಪಂಚಾಣುಕಾದಿಗಳಲ್ಲಿ ಇರತಕ್ಕ ಪರಿಮಾಣಾಖ್ಯ ಕಾರ್ಯವು ಹುಟ್ಟುತ್ತದೋ, ಹಾಗೆಯೇ ದ್ವ್ಯಣುಕದಲ್ಲಿರತಕ್ಕ ಹ್ರಸ್ವತ್ವದಿಂದಲೂ ಪರಮಾಣುವಿನಲ್ಲಿರತಕ್ಕ ಪಾರಿಮಾಂಡಿಲ್ಯರೂಪಪರಿಮಾಣ (ಅಣುತ್ವ) ದಿಂದಲೂ ತ್ರ್ಯಣುಕದ್ವ್ಯಣುಕಗಳಲ್ಲಿರತಕ್ಕ ಪರಿಮಾಣಾಖ್ಯ ಕಾರ್ಯವು ಹುಟ್ಟಬೇಕಾಗುವುದು.

ವಿಶೇಷಾಂಶ ॥ ಇದರಿಂದ ದ್ವ್ಯಣುಕ ಪರಮಾಣು ಪರಿಮಾಣಂ ಪರಿಮಾಣಾಂತರಾರಂಭಕಂ ದ್ರವ್ಯಸಮುದಾಯಿಕಾರಣಪರಿಮಾಣತ್ವಾತ್ ತ್ರ್ಯಣುಕಾದಿಪರಿಮಾಣವತ್ ಎಂದು ವೈಶೇಷಿಕಾದಿಗಳ ಮತಕ್ಕೆ ಪ್ರತಿಕೂಲಾನುಮಾನವು ಉಕ್ತವಾಯಿತು.

ಪೀಠಿಕೆ ॥ ತ್ರ್ಯಣುಕಾದಿಪರಿಮಾಣಕ್ಕೆ ಆರಂಭಕತ್ವವಿದ್ದರೂ ದ್ವ್ಯಣುಕಾದಿಗಳಲ್ಲಿರತಕ್ಕ ಪರಿಮಾಣಕ್ಕೆ ಆರಂಭಕತ್ವವು ಬೇಡ. ದೋಷವೇನು? ತ್ರ್ಯಣುಕಾದಿಗಳಲ್ಲಿರತಕ್ಕ ಪರಿಮಾಣಾರಂಭವಾದರೂ ದ್ವ್ಯಣುಕಾದಿಗಲ್ಲಿರತಕ್ಕ ತ್ರಿತ್ವರೂಪ ಸಂಖ್ಯೆಯಿಂದಲೇ ಆಗುವುದು. ಆದಕಾರಣ ಹೇತುವು ಅಪ್ರಯೋಜಕವು, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ವಾ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ವಾಶಬ್ದಾದನ್ಯಥೈತಯೋರಪಿ ನ ಸ್ಯಾತ್ । ವಿಶೇಷಕಾರಣಾಭಾವಾತ್ ॥ ೧೧ ॥ ॥ ೩ ॥**

ಭಾಷ್ಯಾರ್ಥ ॥ (ಅನ್ಯಥಾ:) ಎರಡಕ್ಕೂ ಕಾರಣಗಳಲ್ಲಿರತಕ್ಕ ಪರಿಮಾಣತ್ವದಿಂದ ವಿಶೇಷ ವಿಲ್ಲದಿದ್ದರೂ ಹ್ರಸ್ವತ್ವಾದಿಗಳಿಂದ ಕಾರ್ಯವು ಹುಟ್ಟುವುದಿಲ್ಲವೆಂದಾದರೆ, ಈ ತ್ರ್ಯಣುಕಾದಿಗಳಲ್ಲಿರತಕ್ಕ

ಮಹತ್ವ ದೀರ್ಘತ್ವಗಳಿಗೂ ಕಾರ್ಯಾರಂಭಕತ್ವವು ಆಗದೆ ಹೋಗಬೇಕಾಗುವುದು. (ವಿಶೇಷಕಾರಣವು ಇದ್ದರೆ ಪ್ರತಿಬಂಧೀಮಾತ್ರವು ಬಾಧಕವಲ್ಲ ಎಂದರೆ ಅದೇವೇ ಅಸಿದ್ಧವೆನ್ನುತ್ತಾರೆ.) ಪಕ್ಷ ದೃಷ್ಟಾಂತಗಳಲ್ಲಿ ವೈಷಮ್ಯ ಸಾಧಕರೂಪವಾದ ಅಥವಾ ಅದನ್ನಂಗೀಕರಿಸದಿದ್ದರೆ ಬಾಧಕರೂಪವಾದ ನಿಯಾಮಕ ವಿಶೇಷವು ಇಲ್ಲದಿರುವುದರಿಂದ. ಅಂದರೆ—ತ್ರ್ಯಣುಕಾದಿಗಳರತಕ್ಕ ಪರಿಮಾಣಕ್ಕೇನೇ ಚತುರಣುಕಾದಿಗಳಲ್ಲಿರತಕ್ಕ ಪರಿಮಾಣವನ್ನು ಕುರಿತು ಕಾರಣತ್ವವು. ಪರಮಾಣ್ವಾದಿಗತ ಪಾರಿಮಾಂಡಿಲ್ಯಾದಿಗಳಿಗೆ ದ್ವ್ಯಣುಕ, ತ್ರ್ಯಣುಕಾದಿಗತ ಪರಿಮಾಣಕಾರಣತ್ವವಿಲ್ಲ ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ. ಇದ್ದರೆ ಅದನ್ನು ಹೇಳಬೇಕಿತ್ತು. ಹೀಗೆ ವಾ ಶಬ್ದದಿಂದ ಸೂಚಿಸಲ್ಪಟ್ಟಿತು. ಏವಂಚ ಹ್ರಸ್ವತ್ವ, ಪಾರಿಮಾಂಡಿಲ್ಯಗಳಿಗೆ ಅಸಮವಾಯಿಕಾರಣತ್ವವಿಲ್ಲ, ಮಹತ್ವ, ದೀರ್ಘತ್ವಗಳಿಗೇನೇ ಅಸಮವಾಯಿಕಾರಣತ್ವವು ಎಂದು ವೈಶೇಷಿಕಾದಿಗಳು ಹೇಳಿದ್ದು ಅಯುಕ್ತವೇ. ಆದುದರಿಂದ ವೈಶೇಷಿಕರ ಮತವು ಅಯುಕ್ತವಾದುದರಿಂದ ಈಶ್ವರನು ಅನಂತಗುಣಗಳುಳ್ಳವನು ಎನ್ನುವುದು ಅನುಪಪನ್ನವಲ್ಲ. ॥ ೧೧ ॥

**ಪೀಠಿಕೆ ॥** ನಿಮಿತ್ತಕಾರಣವನ್ನು ನಿರಾಕರಿಸುವುದಕ್ಕಾಗಿ ಸೂತ್ರವು—

## ಸೂತ್ರ ॥ ಓಂ ಉಭಯಥಾಽಪಿ ನ ಕರ್ಮಾತಸ್ತದಭಾವಃ ಓಂ ॥ ೧೨ ॥

**ಸೂತ್ರಾರ್ಥ ॥** ಉಭಯಥಾಽಪಿ=ಈಶ್ವರನ ಇಚ್ಛೆಗೆ ನಿತ್ಯತ್ವವನ್ನು ಅಂಗೀಕರಿಸಿದರೂ ಅನಿತ್ಯತ್ವವನ್ನು ಅಂಗೀಕರಿಸಿದರೂ, ಅತಃ=ಇಚ್ಛಾಸಹಕಾರದೆಶೆಯಿಂದ, ಕರ್ಮ=ದ್ವ್ಯಣುಕಾರಂಭಕ ಪರಮಾಣುಕ್ರಿಯೆಯು, ನ=ಹುಟ್ಟುವುದಿಲ್ಲ. ಅತಃ=ಪರಮಾಣುಚೇಷ್ಟೆಯಿಲ್ಲದಿರುವುದರಿಂದ, (ಪ್ರಲಯಕಾಲದಲ್ಲಿ) ತದಭಾವಃ=ದ್ವ್ಯಣುಕಾದಿ ಕಾರ್ಯಾಭಾವವು ಪ್ರಸಕ್ತವಾಗುತ್ತದೆ.

**ಭಾಷ್ಯ ॥ ಈಶ್ವರೇಚ್ಛಾಯಾ ನಿತ್ಯತ್ವೇ ತದ್ಭಾವೇಽಪಿ ಪರಮಾಣುಕರ್ಮಾಭಾವಾನ್ನೇದಾನೀಮಪಿ ತತ್ಸ್ಯಾತ್ । ಅನಿತ್ಯತ್ವೇ ತತ್ಕಾರಣಾಭಾವಾತ್ । ಅತಃ ಪರಮಾಣುಚೇಷ್ಟಾಭಾವಾತ್ತತ್ಕಾರ್ಯಾಭಾವಃ ॥ ೪ ॥**

**ಭಾಷ್ಯಾರ್ಥ ॥** ಕಾರ್ಯಸಾಮಾನ್ಯಕ್ಕೆ ನಿಮಿತ್ತಕಾರಣವೆಂದು ಪರರು ಅಂಗೀಕರಿಸಿರುವ ಈಶ್ವರೇಚ್ಛೆಗೆ ಸದಾತನತ್ವವಿದ್ದರೆ ಕಾರಣವೆಂದು ಅಂಗೀಕರಿಸಿರುವ ಈಶ್ವರೇಚ್ಛೆಯು ಇದ್ದರೂ ಪ್ರಳಯಕಾಲದಲ್ಲಿ ಪರಮಾಣುಗಳಲ್ಲಿ ಕಾರ್ಯವೆಂದು ಒಪ್ಪಿರುವ ಚೇಷ್ಟೆಯು ಇಲ್ಲದಿರುವುದರಿಂದ ಈಶ್ವರೇಚ್ಛೆಯು ಕಾರಣವೆಂದು ಹೇಳಲಿಕ್ಕೆ ಆಗುವುದಿಲ್ಲ. ಆದಕಾರಣ ಈಶ್ವರೇಚ್ಛೆಗೆ ಚೇಷ್ಟಾಕಾರಣತ್ವವು ಇಲ್ಲದಿರುವುದರಿಂದ ಈಗಲೂ ಅಂದರೆ ಪ್ರಳಯಕಾಲದಿಂದ ಇತರವಾದ ಸೃಷ್ಟಿಕಾಲದಲ್ಲಿಯೂ ಈಶ್ವರೇಚ್ಛೆಯಿಂದ ಪರಮಾಣುಕರ್ಮವು ಹುಟ್ಟದೆ ಹೋಗಬೇಕಾಗುವುದು. ಈಶ್ವರೇಚ್ಛೆಗೆ ಅನಿತ್ಯತ್ವವಿದ್ದರೆ ಅದನ್ನು ಕಾರ್ಯವೆಂದು ಒಪ್ಪಬೇಕಾಗಿರುವುದರಿಂದ ಪ್ರಳಯಕಾಲದಲ್ಲಿ ಈಶ್ವರೇಚ್ಛೋತ್ಪಾದಕವಾದ ಸಾಮಗ್ರಿಯು ಇಲ್ಲದಿರುವುದರಿಂದ ಈಶ್ವರೇಚ್ಛೆಯು ಇಲ್ಲವೆಂದೇ ಆಗುವುದು. ಅಂತೂ ಕರ್ಮಕಾರಣೀಭೂತವಾದ ಈಶ್ವರೇಚ್ಛೆಯು ಇಲ್ಲದಿರುವುದರಿಂದ

ಪರಮಾಣುಗಳಲ್ಲಿ ಚೇಷ್ಟೆಯು ಇಲ್ಲದಿರುವ ಪ್ರಯುಕ್ತ ಪರಮಾಣುಕ್ರಿಯೆಗಳಿಂದುಂಟಾಗುವ ದ್ವ್ಯಣುಕಾದಿ ಕಾರ್ಯಾಭಾವವು ಬರಬೇಕಾಗುವುದು.

**ಪೀಠಿಕೆ ॥** ಈಶ್ವರೇಚ್ಛೆಗೆ ನಿಮಿತ್ತತ್ವನಿತ್ಯತ್ವಗಳನ್ನು ಸಿದ್ಧಾಂತಿಗಳೂ ಅಂಗೀಕರಿಸಿದ್ದರಿಂದ ೧ನೇ ಕಲ್ಪದಲ್ಲಿ ಹೇಳಿದ ದೂಷಣವು ಸಿದ್ಧಾಂತಿಗಳಿಗೂ ಸಮಾನವು ಎಂದರೇ—

**ಭಾಷ್ಯ ॥ ವೈದಿಕೇಶ್ವರಸ್ಯ ತು ವೇದೇನೈವ ಸರ್ವಶಕ್ತಿತ್ವೋಕ್ತೇಃ ಸರ್ವಮುಪಪದ್ಯತೇ । ಸ್ವತ ಏವ ಕಾಲೇ ವಿಶೇಷಾ(ಭೇದಾ)ಂಗೀಕೃತೇಶ್ಚ ॥ ೧೨ ॥**

**ಭಾಷ್ಯಾರ್ಥ ॥** ವೇದೈಕಗಮ್ಯನೆಂದು ಈಶ್ವರನನ್ನು ಅಂಗೀಕರಿಸಿದ ಸಿದ್ಧಾಂತಿಗಳ ಪಕ್ಷದಲ್ಲಿ ಕೇವಲ ವೇದರೂಪ ಪ್ರಮಾಣಗಳಿಂದ ಸಿದ್ಧನಾದ ಈಶ್ವರನಿಗೆ **ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ** ಇತ್ಯಾದಿ ವೇದದಿಂದಲೇ ಸರ್ವಶಕ್ತಿತ್ವವನ್ನು ಹೇಳಿದುದರಿಂದ ಹಿಂದೆ ಹೇಳಿದ ಕಾರ್ಯಾನುತ್ಪತ್ತ್ಯಾದಿಗಳು ಉಪಪನ್ನಗಳಾಗುತ್ತವೆ. (ನಮ್ಮ ಪಕ್ಷದಲ್ಲಿ ಈ ದೋಷವಿಲ್ಲವೆನ್ನುತ್ತಾರೆ.) ಕಾರ್ಯೋತ್ಪತ್ತಿಯಲ್ಲಿ ಕಾಲವೂ ನಿಮಿತ್ತಕಾರಣವು. ಪ್ರಲಯಕಾಲದಲ್ಲಿ ಸಾಮಾನ್ಯ ಕಾಲವಿದ್ದರೂ ಸೃಷ್ಟಿಗೆ ಕಾರಣವಾದ ವಿಶೇಷಕಾಲವು ಇಲ್ಲದಿರುವುದರಿಂದ ಸೃಷ್ಟಿಯಾಗುವುದಿಲ್ಲ.

**ವಿಶೇಷಾಂಶ ॥** (೧) ಈಶ್ವರನು ವೇದೈಕಗಮ್ಯನು ಎಂದು ಹೇಳುವ ನಮ್ಮ ಪಕ್ಷದಲ್ಲಿ ಆದರೂ ಈ ದೋಷವು ಇಲ್ಲ ಏಕೆಂದರೆ ಈಶ್ವರನ ಇಚ್ಛೆಯು ಇದ್ದರೂ ಕಾರ್ಯದ ಅನುತ್ಪತ್ತ್ಯಾದಿಗಳು ಈಶ್ವರನ ಅಚಿಂತ್ಯಶಕ್ತಿಯಿಂದಲೇ ಕೂಡುತ್ತವೆ. **ಪರಾಸ್ಯ ಶಕ್ತಿಃ** ಇತ್ಯಾದಿ ವೇದದಿಂದಲೇ ಈಶ್ವರನಿಗೆ ಸರ್ವವಿಷಯಕ ಶಕ್ತಿಯನ್ನು ಹೇಳಿದ್ದಾರೆ. ಆದಕಾರಣ ಆ ವಿಷಯದಲ್ಲಿ ಪ್ರಮಾಣಾಂತರವನ್ನು ಹುಡುಕಬೇಕಾಗುವುದಿಲ್ಲ (೨) ಪರರ ಪಕ್ಷದಲ್ಲಿಯೂ ಇದು ಸಮಾನವೆಂದು ಹೇಳಕೂಡದು. ಅವರಿಗೆ ಈಶ್ವರನು ಅನುಮಾನಮಾತ್ರದಿಂದ ಗಮ್ಯನಾದುದರಿಂದ ವೇದಗಮ್ಯತ್ವವನ್ನು ಅಂಗೀಕರಿಸಲಿಲ್ಲ (೩) ನಮ್ಮ ಪಕ್ಷದಲ್ಲಿ ಈಶ್ವರೇಚ್ಛಾರೂಪನಿಮಿತ್ತವಿದ್ದರೂ ಕಾಲಾಖ್ಯನಿಮಿತ್ತಾಂತರವು ಇಲ್ಲದಿರುವುದರಿಂದ ಕಾರ್ಯಾಭಾವವು ಅನ್ಯಥಾ ಉಪಪನ್ನವಾಗುವುದು. (೪) ಪ್ರಲಯಕಾಲದಲ್ಲಿ ಕಾಲವಿಶೇಷರೂಪವಾದ ನಿಮಿತ್ತವು ಇದೆ ಎಂದು ಹೇಳಕೂಡದು. ಆಗ ಸೃಷ್ಟಿಕಾಲಾಖ್ಯ ಕಾಲ ವಿಶೇಷವಿಲ್ಲ ಅದೇವೇ ಸೃಷ್ಟಿಗೆ ಕಾರಣವಾದುದು. ನಮ್ಮ ಮತದಲ್ಲಿಯೂ ಇದು ಸಮಾನವೆಂದು ಹೇಳಕೂಡದು. ನಾವು ಕಾಲದಲ್ಲಿ ಸ್ವತ ಏವ ಸೃಷ್ಟ್ಯಾದ್ಯುಪಾಧಿಯಿಲ್ಲದೇನೇ ಸ್ವಾಭಾವಿಕ ಸೃಷ್ಟಿಕಾಲತ್ವಾದಿ ಧರ್ಮಗಳನ್ನು ಅಂಗೀಕರಿಸಿರುವೆವು. ಪರರಾದರೂ **ಸೃಷ್ಟ್ಯವಚ್ಛಿನ್ನಃ ಕಾಲಃ ಸೃಷ್ಟಿಕಾಲಃ** ಎಂದು ಸೃಷ್ಟ್ಯಾದ್ಯುಪಾಧಿಯಿಂದಲೇ ಕಾಲದಲ್ಲಿ ವಿಶೇಷವನ್ನು ಅಂಗೀಕರಿಸಿದ್ದರಿಂದ ಅನೌಪಾಧಿಕ (ಸ್ವಾಭಾವಿಕ) ವಿಶೇಷವನ್ನು ಅಂಗೀಕರಿಸಲಿಲ್ಲ (೫) ಹಾಗಾದರೆ ಈಶ್ವರನ ಇಚ್ಛೆಯು ಇದ್ದರೂ ಸೃಷ್ಟಿಕಾಲವಿಲ್ಲದಿರುವುದರಿಂದ ಕಾರ್ಯಾಭಾವವನ್ನು ಅಂಗೀಕರಿಸಿದರೆ ಈಶ್ವರೇಚ್ಛೆಯು ವ್ಯರ್ಥವಾಗುವುದು, ಎಂದರೆ— ಈಶ್ವರೇಚ್ಛೆಯು ನಿತ್ಯವಾದುದಾಗ್ಯೂ ಸೃಷ್ಟಿಕಾಲದಲ್ಲಿಯೇ ಸ್ವತಃ ಅನೌಪಾಧಿಕಗಳಾದ ಸೃಷ್ಟಿವಿಷಯತ್ವಾದಿ ವಿಶೇಷಗಳು ಆವಿರ್ಭೂತಗಳಾಗುತ್ತವೆ ಎಂದಂಗೀಕರಿಸಿರುವೆವು. ಪರರು ಇಚ್ಛೆಯಲ್ಲಿ ಅನೌಪಾಧಿಕ ವಿಶೇಷಗಳನ್ನು ಅಂಗೀಕರಿಸದೆ ಇರುವುದರಿಂದ ಹೀಗೆ ಪರರಿಗೆ ಹೇಳಲು ಶಕ್ಯವಾಗುವುದಿಲ್ಲ ॥ ೧೨ ॥

ಪೀಠಿಕೆ ॥ ವೈಶೇಷಿಕಾದಿಗಳ ಮತದಲ್ಲಿ ನಿಮಿತ್ತಕಾರಣವು ಕೂಡುವುದಿಲ್ಲವೆಂದು ಹೇಳಿ ಸಮವಾಯಿ ಕಾರಣವನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ಓಂ ॥ ೧೩ ॥

ಸೂತ್ರಾರ್ಥ ॥ ಅತ್ಯಂತ ಭಿನ್ನಗಳೆಂದು ಅಂಗೀಕೃತಗಳಾದ ಪಟತಂತು ಮೊದಲಾದ ಕಾರ್ಯ ಕಾರಣಗಳಿಗೂ ಗುಣಗುಣ್ಯಾದಿಗಳಿಗೂ ಆಧಾರಾಧೇಯಭಾವ ನಿರ್ವಾಹಕ್ಕಾಗಿಯೂ ವಿಶಿಷ್ಟಬುದ್ಧಿ ನಿರ್ವಾಹಕ್ಕಾಗಿಯೂ, ಸಮವಾಯಾಭ್ಯುಪಗಮಾತ್=ಸಮವಾಯಾಖ್ಯ ನಿತ್ಯಸಂಬಂಧವನ್ನು ಸ್ವೀಕರಿಸಿದ್ದರಿಂದ, ಸಾಮ್ಯಾತ್=ಸಮವಾಯಕ್ಕೂ ಸಮವಾಯಿಗಳಿಂದ ಭಿನ್ನತ್ವವು ಸಮಾನವಾದುದ ರಿಂದಲೂ, ಅನವಸ್ಥಿತೇಃ=ಸಮವಾಯಪರಂಪರಾಂಗೀಕಾರಪ್ರಯುಕ್ತ ಅನವಸ್ಥಾದೋಷವು ಪ್ರಸಕ್ತವಾಗುವುದರಿಂದ ಸಮವಾಯಾಂಗೀಕಾರವು ಕೂಡುವುದಿಲ್ಲ.

**ಭಾಷ್ಯ ॥ ಕಾರ್ಯಕಾರಣಾದೀನಾಂ ಸಮವಾಯಸಂಬಂಧಾಂಗೀಕಾರಾತ್ತಸ್ಯ ಚ ಭಿನ್ನತ್ವ-ಸಾಮ್ಯಾತ್ಸಮವಾಯಾಂತರಾಪೇಕ್ಷಾಯಾಮ(ಕ್ಷಯಾ) ನವಸ್ಥಿತಿಃ ॥ ೬ ॥**

ಭಾಷ್ಯಾರ್ಥ ॥ ಅವಯವ ಅವಯವಿ, ಅನಿತ್ಯ ಗುಣಗುಣಿ, ಕ್ರಿಯಾಕ್ರಿಯಾವತ್ ಇವುಗಳಿಗೂ, (ಆದಿ ಪದದಿಂದ) ನಿತ್ಯಗುಣ ಗುಣಿ, ಜಾತಿ ವ್ಯಕ್ತಿ, ವಿಶೇಷ ನಿತ್ಯದ್ರವ್ಯ ಇವುಗಳಿಗೆ, (ದ್ವ್ಯಣುಕಾದಿ ಕಾರ್ಯಗಳಿಗೂ ಪರಮಾಣ್ವಾದಿಕಾರಣಗಳಿಗೂ ಪರಸ್ಪರ ಭೇದವನ್ನು ಅಂಗೀಕರಿಸಿ) ಸಮವಾಯಸಂಬಂಧವನ್ನು ಅಂಗೀಕರಿಸಿದ್ದರಿಂದ (ಸಮವಾಯಾಂಗೀಕಾರವು ಯುಕ್ತವಲ್ಲ. ಆದುದರಿಂದಲೇ ಸಮವಾಯಿಕಾರಣತ್ವವು ಯುಕ್ತವಲ್ಲ) (ಹಾಗಾದರೆ ಭಿನ್ನಗಳಿಗೆ ಅವಯವ ಅವಯವಿಭಾವ, ವಿಶೇಷಣ ವಿಶೇಷ್ಯಭಾವವು ಕೂಡುವುದಕ್ಕಾಗಿ ಸಮವಾಯಸಂಬಂಧವನ್ನು ಅಂಗೀಕರಿಸಲೇಬೇಕು. ಆದಕಾರಣ ಅದನ್ನು ಅಂಗೀಕರಿಸಿದರೆ ದೋಷವೇನು? ಎಂದರೆ) ತಸ್ಯ ಚ ಭಿನ್ನತ್ವಸಾಮ್ಯಾತ್=ಕಾರ್ಯಕಾರಣಾದಿಗಳಿಗೆ ಮಾತ್ರವಲ್ಲ, ಸಮವಾಯಕ್ಕು ಕೂಡ ಸಮವಾಯಿಗಳಿಂದ ಭೇದವು ಸಮಾನವಾದುದರಿಂದ, ಭಿನ್ನವಾದ ಸಮವಾಯಕ್ಕೆ ವಿಶೇಷಣವಿಶೇಷ್ಯಭಾವಾದಿಗಳ ಉಪಪತ್ತಿಗಾಗಿ ಸಮವಾಯಿಗಳಿಂದ ಸಮವಾಯಸಂಬಂಧವನ್ನು ಅಂಗೀಕರಿಸಿದ್ದರಿಂದ, ಆಸಮವಾಯಾಂತರಕ್ಕೂ ಆ ಸಮವಾಯ್ಯಂತರದಿಂದ ಭಿನ್ನತ್ವವು ಸಮಾನವಾದುದರಿಂದ ಭಿನ್ನವಾದ ಆ ಸಮವಾಯಾಂತರಕ್ಕೆ ಸಮವಾಯ್ಯಂತರದಿಂದ ವಿಶೇಷಣವಿಶೇಷ್ಯಭಾವಾದಿಗಳ ಉಪಪತ್ತಿಗಾಗಿ ಆ ಸಮವಾಯಾಂತರದಿಂದ ಸಮವಾಯಾಂತರವನ್ನು ಅಪೇಕ್ಷಿಸಿಕೊಂಡು ಅನವಸ್ಥಾದೋಷವು ಬರುವುದು.

ಪೀಠಿಕೆ ॥ ಪ್ರಾಮಾಣಕವಾದುದರಿಂದ ಅನವಸ್ಥಾದೋಷವು ಬರಲಾರದು, ಎಂದರೆ—

**ಭಾಷ್ಯ ॥ ನ ಚ ತತ್ಪ್ರಮಾಣಂ । ಪ್ರಥಮಸಂಬಂಧಾಸಿದ್ಧ್ಯೈವ ಚ ತದಸಿದ್ಧಿಃ । ಸ್ವನಿರ್ವಾಹಕತ್ವೇ ಸಮವಾಯ ಏವ ನ ಸ್ಯಾತ್ ॥ ೧೩ ॥ ॥ ೭ ॥**

ಭಾಷ್ಯಾರ್ಥ ॥ ಸಮವಾಯಾನಂತ್ಯದಲ್ಲಿ ಪ್ರಮಾಣವಿಲ್ಲ. (ಬೀಜಾಂಕುರಾದಿಗಳಂತೆ ಮೂಲಕ್ಷಯವಿಲ್ಲದಿರುವುದರಿಂದ ಅನವಸ್ಥೆಯು ದೂಷಣವಲ್ಲವೆಂದರೆ) ಪ್ರಮಾಣವಿಲ್ಲದಿರುವ ಪ್ರಯುಕ್ತ ಆದಿಸಮವಾಯವು ಸಿದ್ಧವಾಗದೆ ಇದ್ದಪ್ರಯುಕ್ತವೇ (ಅಂದರೆ ಮೂಲಭೂತವಾದ ಅವಯವ ಅವಯವ್ಯಾದಿ ಸಂಬಂಧವೇ ಸಿದ್ಧಿಸದೆ ಇರುವುದರಿಂದ) ಸಮವಾಯಪರಂಪರೆಯು ಸಿದ್ಧಿಸುವುದಿಲ್ಲ. (ಪ್ರಥಮಸಂಬಂಧವು ಸಿದ್ಧಿಸುವುದಕ್ಕಾಗಿ ಅಂಗೀಕರಿಸಬೇಕಾದ ಸಂಬಂಧಾಂತರಗಳು ಸುತರಾಂ ಸಿದ್ಧಿಸಲಾರವು. ತಥಾಚ ಸಮವಾಯಾನಂತ್ಯದಲ್ಲಿ ಪ್ರಮಾಣವು ಇಲ್ಲದಿರುವುದರಿಂದ ಪ್ರಥಮಸಂಬಂಧವೇ ಸಿದ್ಧಿಸದೆ ಇರುವುದರಿಂದ ಸಮವಾಯಪರಂಪರೆಯು ಸಿದ್ಧಿಸುವುದಿಲ್ಲ. ಆದುದರಿಂದ ಮೂಲಕ್ಷತಿಯು ಇದ್ದೇ ಇದೆ. ಅನವಸ್ಥಾದೂಷಣವೂ ಇದೆ.) (ಹಾಗಾದರೆ ಸಮವಾಯ ಪರಂಪರೆಯು ಬೇಡ. ಪ್ರಥಮ ಸಮವಾಯವೇ ಸ್ವನಿರ್ವಾಹಕವಾಗಲಿ ಎಂದರೆ) ಆ ಸಮವಾಯಕ್ಕೆ ತನ್ನಲ್ಲಿ ತನಗೇನೇ ವಿಶೇಷಣ ವಿಶೇಷ್ಯಭಾವಬುದ್ಧಿ ಜನಕತ್ವವನ್ನು ಅಂಗೀಕರಿಸಿದರೆ ಸಮವಾಯವೇ ಸಿದ್ಧಿಸದೆ ಹೋಗುವುದು. ಅಂದರೆ ಗುಣಗುಣ್ಯಾದಿಗಳಿಗೆ ಭೇದವನ್ನೂ ಅವುಗಳಿಗೆ ಸಮವಾಯವನ್ನೂ ಅಂಗೀಕರಿಸಿ ಅದಕ್ಕೆ ಸ್ವನಿರ್ವಾಹಕತ್ವವನ್ನು ಕಲ್ಪನಾಮಾಡುವುದಕ್ಕಿಂತ ಲಾಘವದಿಂದ ಗುಣಗುಣ್ಯಾದಿ ಗಳಿಗೆ ಅಭೇದವನ್ನು ಅಂಗೀಕರಿಸಿ ದ್ರವ್ಯಕ್ಕೇನೇ ಗುಣಗುಣ್ಯಾದಿರೂಪದಿಂದಲೂ ಸಂಬಂಧರೂಪದಿಂದಲೂ ಸ್ವನಿರ್ವಾಹಕತ್ವವು ಕೂಡುವಾಗ ಅಪ್ರಾಮಾಣಿಕವಾದ ಸಮವಾಯವನ್ನು ಕಲ್ಪಿಸುವುದು ವ್ಯರ್ಥವೇ ಆಗುವುದು. ॥ ೧೩ ॥

ಪೀಠಿಕೆ ॥ ಹೀಗೆ ಪರರ ಪಕ್ಷದಲ್ಲಿ ಸಮವಾಯಿ, ಅಸಮವಾಯಿ, ನಿಮಿತ್ತ ಮೂರು ಕಾರಣಗಳನ್ನು ನಿರಾಕರಿಸಿ ಸೃಷ್ಟಿಯನ್ನು ನಿರಾಕರಣ ಮಾಡಿ ಪ್ರಲಯವನ್ನು ನಿರಾಕರಿಸುವುದಕ್ಕಾಗಿ ಪ್ರವೃತ್ತವಾದ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ನಿತ್ಯಮೇವ ಚ ಭಾವಾತ್ ಓಂ ॥ ೧೪ ॥

ಸೂತ್ರಾರ್ಥ ॥ ಸಮವಾಯಿ ಕಾರಣೀಭೂತಗಳಾದ ಪರಮಾಣುಗಳು ನಿಮಿತ್ತಕಾರಣವಾದ ಈಶ್ವರೇಚ್ಛೆಯೂ, ಸತ್ತಾಸಮವಾಯರೂಪವಾದ ಉತ್ಪತ್ತಿಯೂ, ನಿತ್ಯಮೇವ ಭಾವಾತ್=ಸರ್ವಥಾ ಉಂಟೆಂದು ಅಂಗೀಕರಿಸಿದ್ದರಿಂದಲೇ, ದ್ವ್ಯಣುಕಾದಿಕಾರ್ಯವು, ದ್ವ್ಯಣುಕಾದ್ಯುತ್ಪತ್ತಿಯಾಗಲೀ ನಿತ್ಯದಲ್ಲಿಯೂ ಆಗಬೇಕಾಗುವುದು. (ಯಾವಾಗಲೂ ಪ್ರಲಯವು ಇಲ್ಲದೆ ಹೋಗುವುದು. ಇಲ್ಲವಾದರೆ ಯಾವಾಗಲೂ ಕಾರ್ಯವು ಆಗದೆ ಹೋಗುವುದು.)

### ಭಾಷ್ಯ ॥ ನಿತ್ಯತ್ವಾಚ್ಚ ಪರಮಾಣೂನಾಂ ಸಮವಾಯಸ್ಯ ಚ ತಸ್ಯೈವ ಜನಿತ್ವಾಂಗೀಕಾರಾ-ನ್ನಿತ್ಯಮೇವ ಕಾರ್ಯಂ ಸ್ಯಾತ್ । ಅನ್ಯಥಾ ನ ಕದಾಚಿತ್ ॥ ೧೪ ॥ ॥ ೮ ॥

ಭಾಷ್ಯಾರ್ಥ ॥ ಸಮವಾಯಿ ಕಾರಣಗಳಾದ ಪರಮಾಣುಗಳಿಗೂ, (ನಿಮಿತ್ತಕಾರಣವಾದ ಈಶ್ವರೇಚ್ಛೆಗೂ) ಸಮವಾಯಕ್ಕೂಸದಾತನತ್ವವು ಇದ್ದುದರಿಂದ, ಆ ಸಮವಾಯಕ್ಕೇನೇ ಜನಿತ್ವವನ್ನು ಅಂಗೀಕಸಿದ್ದರಿಂದ (ಅಂದರೆ—ಪ್ರಾಗ್ ಅಸತಃ ಸತ್ತಾ ಸಮವಾಯ ಏವ ಜನಿಃ ಎಂದು ಪರರು ಅಂಗೀಕರಿಸಿದ್ದರಿಂದ ಸರ್ವಕಾರ್ಯವು ನಿತ್ಯದಲ್ಲಿಯೂ ಉತ್ಪತ್ತಿಯುಳ್ಳದ್ದೇ ಆಗಬೇಕಾಗುವುದು. ಕೆಲವು

ವೇಳೆ ಹುಟ್ಟುವುದು ಎಂದಾಗದೆ ಹೋಗಬೇಕಾಗುವುದು.) (ಸಮವಾಯಿಕಾರಣಾದಿಗಳು ಇದ್ದರೂ ಕಾರ್ಯವು ಹುಟ್ಟದೆ ಇರುವುದಾದರೆ ಬಾಧಕವನ್ನು ಹೇಳುತ್ತಾರೆ.) ಸಕಲಕಾರಣಗಳು ಇದ್ದರೂ ಪ್ರಲಯಕಾಲದಲ್ಲಿ ಕಾರ್ಯೋತ್ಪತ್ತಿಯಾಗುವುದಿಲ್ಲವೆಂದಂಗೀಕರಿಸಿದರೆ ಯಾವಾಗಲೂ ಅಂದರೆ ಸೃಷ್ಟಿಕಾಲದಲ್ಲಿಯೂ ಅದರಿಂದ ಕಾರ್ಯೋತ್ಪತ್ತಿಯು ಆಗದೆ ಹೋಗಬೇಕಾಗುವುದು. (ಪುಷ್ಕಲಕಾರಣಗಳು ಇರುವಾಗ ಕಾರ್ಯವು ಹುಟ್ಟದೆ ಇದ್ದರೆ ಅದಕ್ಕೆ ಅದು ಕಾರಣವು ಎನ್ನುವುದೇ ಕೂಡದೆಹೋಗುವುದು.) ॥ ೧೪ ॥

ಪೀಠಿಕೆ ॥ ಹೀಗೆ ಪರಮಾಣುಗಳಿಗೆ ನಿತ್ಯತ್ವವನ್ನು ಅಂಗೀಕರಿಸಿ ಜಗತ್ತು ಹುಟ್ಟುತ್ತದೆ ಎನ್ನುವ ವಾದವನ್ನು ದೂಷಿಸಿದರು. ಈಗ ಪರಮಾಣುಗಳಿಗೆ ನಿತ್ಯತ್ವವನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ರೂಪಾದಿಮತ್ವಾಚ್ಚ ವಿಪರ್ಯಯೋ ದರ್ಶನಾತ್ ಓಂ ॥ ೧೫ ॥

ಭಾಷ್ಯ ॥ ರೂಪಾದಿಮತ್ವಾಚ್ಚ ಪರಮಾಣೂನಾಮನಿತ್ಯತ್ವಂ ತಥಾ ದೃಷ್ಟತ್ವಾಲ್ಲೋಕೇ ॥ ೧೫ ॥ ॥ ೯ ॥

ಭಾಷ್ಯಾರ್ಥ ॥ (ಪಾರ್ಥಿವ ಆಪ್ಯ ತೈಜಸ ಪರಮಾಣುಗಳಿಗೆ ಭೌತಿಕ ರೂಪ ರಸ ಗಂಧ ಸ್ಪರ್ಶಗಳು ಇದ್ದುದರಿಂದ ಅನಿತ್ಯತ್ವವೂ, ಸಾವಯತ್ವವೂ ಬರಬೇಕಾಗುವುದು. (ರೂಪಾದಿಗಳು ಇದ್ದರೂ ಅನಿತ್ಯತ್ವವು ಹೇಗೆಂದರೆ) ಲೋಕದಲ್ಲಿ ರೂಪಾದಿಗಳುಳ್ಳ ಘಟಾದಿಗಳಲ್ಲಿ ಅನಿತ್ಯತ್ವವು ದೃಷ್ಟವಾದುದರಿಂದ. ॥ ೧೫ ॥

ಪೀಠಿಕೆ ॥ ಪರಮಾಣುಗಳಿಗೆ ರೂಪಾದಿಗಳು ಇದ್ದರೂ ನಿತ್ಯತ್ವವು ಏಕೆ ಆಗಲಾರದು, ಎನ್ನುವ ಶಂಕೆಯನ್ನು ವಾರಣಮಾಡುವುದಕ್ಕಾಗಿ ಸೂತ್ರವು—

## ಸೂತ್ರ ॥ ಓಂ ಉಭಯಥಾ ಚ ದೋಷಾತ್ ಓಂ ॥ ೧೬ ॥

ಸೂತ್ರಾರ್ಥ ॥ ರೂಪಾದಿಗಳುಳ್ಳ ಪರಮಾಣುಗಳಿಗೆ ನಿತ್ಯತ್ವವಿದ್ದರೂ ಅನಿತ್ಯತ್ವವಿದ್ದರೂ ದೋಷವಿದ್ದುದರಿಂದ. ನಿತ್ಯತ್ವವಿದ್ದರೆ ಪರಮಾಣುವಿನಂತೆಯೇ ಸರ್ವವೂ ನಿತ್ಯವು ಆಗಬೇಕಾಗುವುದು. ರೂಪಾದಿಮತ್ವದಿಂದ ವಿಶೇಷವಿಲ್ಲದಿರುವ ಪ್ರಯುಕ್ತ. ಅನಿತ್ಯತ್ವವಿದ್ದರೆ ಪರಮಾಣುಗಳನ್ನು ಹುಟ್ಟಿಸತಕ್ಕ ಕಾರಣಾಂತರವೇ ಇಲ್ಲದಿರುವುದರಿಂದ ಪರಮಾಣುವೇ ಇಲ್ಲವೆಂದಾಗಬೇಕಾಗುವುದು ಎನ್ನುವ ದೋಷವು ಪ್ರಾಪ್ತವಾಗುವುದರಿಂದ ದ್ವ್ಯಣುಕಾದಿಕಾರ್ಯವೇ ಇಲ್ಲವೆಂದಾಗಬೇಕಾಗುವುದು.

ಭಾಷ್ಯ ॥ ನಿತ್ಯತ್ವೇ ಪರಮಾಣೂನಾಂ ತದ್ವತ್ಸರ್ವನಿತ್ಯತ್ವಂ ಸ್ಯಾತ್ । ವಿಶೇಷಪ್ರಮಾಣಾಭಾವಾತ್ । ಅನಿತ್ಯತ್ವೇ ಕಾರಣಾಭಾವಾತ್ತದುತ್ಪತ್ತ್ಯಭಾವಃ ॥ ೧೬ ॥ ॥ ೧೦ ॥

ಭಾಷ್ಯಾರ್ಥ ॥ ರೂಪಾದಿಗಳುಳ್ಳ ಪರಮಾಣುಗಳಿಗೆ ನಿತ್ಯತ್ವವಿದ್ದರೆ (ಅನಿತ್ಯತ್ವವಿಲ್ಲದಿದ್ದರೆ) ಪರಮಾಣುವಿನಂತೆಯೇ ಘಟ ಮೊದಲಾದವುಗಳಿಗೂ ನಿತ್ಯತ್ವವು ಬರಬೇಕಾಗುವುದು. (ಅನಿತ್ಯತ್ವವು ಇಲ್ಲದೆ ಹೋಗುವುದು.) (ಹಾಗಾದರೆ ಘಟಾದಿಗಳಿಗೆ ಅವಯವಿತ್ವವಿದ್ದುದರಿಂದಲೂ ಕೃತಕತ್ವವಿದ್ದುದರಿಂದಲೂ ಅನಿತ್ಯತ್ವವು ಇದೆ. ಪರಮಾಣುಗಳಿಗೆ ಅವಯವಿತ್ವವೂ ಕೃತಕತ್ವವೂ ಇಲ್ಲದಿರುವುದರಿಂದ ಅನಿತ್ಯತ್ವವಿಲ್ಲ. ಆದಕಾರಣ ರೂಪಾದಿಮತ್ತ್ವದಿಂದ ವಿಶೇಷವಿಲ್ಲದಿದ್ದರೂ ವಿಶೇಷ ಪ್ರಮಾಣಬಲದಿಂದ ಘಟಾದಿಗಳಿಗೆ ಅನಿತ್ಯತ್ವವು ಇರಲಿ, ಪರಮಾಣುಗಳಿಗೆ ಅನಿತ್ಯತ್ವವು ಇಲ್ಲ ಎನ್ನುವ ವೈಷಮ್ಯವನ್ನು ಆಶಂಕಿಸಿಕೊಂಡು ಹೇಳುತ್ತಾರೆ.) (ವಿಶೇಷಪ್ರಮಾಣವು ಇಲ್ಲದಿರುವುದರಿಂದ, ಅಂದರೆ—ಪರಮಾಣುಗಳಿಗೆ ಅನಿತ್ಯತ್ವಾಭಾವವನ್ನು ಸಾಧಿಸತಕ್ಕ ಅವಯವಿತ್ವಾಭಾವ ಕೃತಕತ್ವಾಭಾವಗಳು ಪಕ್ಷೀಭೂತಗಳಾದ ಪರಮಾಣುಗಳಲ್ಲಿ ಇದೆ ಎನ್ನುವ ವಿಷಯದಲ್ಲಿ ವಿಶೇಷ ಪ್ರಮಾಣವು ಇಲ್ಲದಿರುವುದರಿಂದ. ರೂಪಾದಿಗಳು ಇದ್ದುದರಿಂದಲೇ ಅನಿತ್ಯತ್ವವು ಸಿದ್ಧಿಸುತ್ತದೆ.) ಪರಮಾಣುಗಳಿಗೆ ಅನಿತ್ಯತ್ವವಿದ್ದರೆ, ಅವುಗಳಿಗೆ ಸಮವಾಯಿ, ಕಾರಣವು ಇಲ್ಲದಿರುವುದರಿಂದ ಉತ್ಪತ್ತಿಯು ಇಲ್ಲವೆಂದಾಗಬೇಕಾಗುವುದು. (ಆದಕಾರಣ ದ್ವ್ಯಣುಕಾದಿಗಳಿಗೆ ಸಮವಾಯಿ ಕಾರಣವಿಲ್ಲದಿರುವುದರಿಂದ ಪರರ ಪಕ್ಷದಲ್ಲಿ ಉತ್ಪತ್ತಿಯೂ ಇಲ್ಲವೆಂದಾಗಬೇಕಾಗುವುದು. ಆದುದರಿಂದ ತಾರ್ಕಿಕರ ಮತವು ಅಯುಕ್ತವು.) ॥ ೧೬ ॥

ಪೀಠಿಕೆ ॥ ಹೀಗೆ ಪರಮಾಣ್ವಾರಂಭವಾದವನ್ನು ವಿಸ್ತಾರವಾಗಿ ದೂಷಿಸಿ ಅದು ಅಪ್ರಾಮಾಣಿಕವಾದುದರಿಂದಲೂ ದುಷ್ಟವೆಂದು ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ಓಂ ॥ ೧೭ ॥

**ಭಾಷ್ಯ ॥ ಶ್ರುತಿಸ್ಮೃತ್ಯಪರಿಗೃಹೀತತ್ವಾಚ್ಚಾತಿಶಯೇನಾನಪೇಕ್ಷ್ಯತಾ ॥ ೧೧ ॥**

ಭಾಷ್ಯಾರ್ಥ ॥ (ಪರಮಾಣ್ವಾರಂಭವಾದಕ್ಕೆ ಹಿಂದೆ ಹೇಳಿದ ದೋಷಗಳಿಂದ ಮಾತ್ರ ದುಷ್ಟತ್ವವಲ್ಲ, ಮತ್ತೆ) ಅಪರಿಗ್ರಹಾಚ್ಚ=ಶ್ರುತಿ ಸ್ಮೃತಿಗಳ ಅನುಕೂಲ್ಯವು ಇಲ್ಲದಿರುವುದರಿಂದಲೂ, ಶ್ರುತಿಸ್ಮೃತಿಗಳಿಂದ ವಿರೋಧವಿದ್ದಪ್ರಯುಕ್ತವೂ (ಪ್ರಧಾನಕ್ಕೆ ಕಾರಣತ್ವವನ್ನು ಹೇಳತಕ್ಕ ವಾದಕ್ಕಿಂತ) ಅತ್ಯಂತವಾಗಿ ಅನಾದರಣೀಯತ್ವವು. (ಶಿಷ್ಟರಿಂದ ಅಂಗೀಕರಿಸತಕ್ಕದ್ದಲ್ಲ.)

ಪೀಠಿಕೆ ॥ ಶ್ರುತಿ ಸ್ಮೃತಿವಿರುದ್ಧತ್ವವೆನ್ನುವುದು ಸ್ಮೃತಿಸಿದ್ಧವೆನ್ನುತ್ತಾರೆ—

**ಭಾಷ್ಯ ॥ ಆನ್ವೀಕ್ಷಿಕೀಂ ತರ್ಕವಿದ್ಯಾಮನುರಕ್ತೋ ನಿರರ್ಥ(ರ್ಥಿ)ಕಾಂ । ಇತಿ (ಚ) ಮೋಕ್ಷಧರ್ಮೇ ॥ ೧೭ ॥ ಅಧಿ. ೬ ॥ ॥ ೧೨ ॥**

ಭಾಷ್ಯಾರ್ಥ ॥ (ಇಂದ್ರಃ ಸೃಗಾಲರೂಪೇಣ ಬಭಾಷೇ ಕ್ರುದ್ಧಮಾನಸಂ । ಅಹಮಾಸಂ ಪಂಡಿತಕೋ ಹೈತುಕೋ ವೇದನಿಂದಕಃ ॥ ಆನ್ವೀಕ್ಷಿಕೀಂ—ಯಾವ ಕಾರಣದಿಂದ ನಾನು, ಕುತ್ಸಿತನಾದ ವಿದ್ವಾಂಸನು, ಶುಷ್ಕಾನುಮಾನಕ್ಕೆ ಪ್ರಾಮಾಣ್ಯವನ್ನು ಹೇಳತಕ್ಕವನೋ ಆದುದರಿಂದಲೇ ತರ್ಕಕ್ಕೆ ವಿರುದ್ಧವಾದ ಸದಾಗಮಾರ್ಥಗಳನ್ನು ನಿಂದಿಸತಕ್ಕವನೂ ಆಗಿರುವೆನು. ಇಷ್ಟು ಮಾತ್ರವಲ್ಲ ಮತ್ತೆ)

ಆನ್ವೀಕ್ಷಿಕೀಂ=ಪ್ರತ್ಯಕ್ಷದಂತೆ ಉತ್ಪ್ರೇಕ್ಷಾ ರೂಪವಾದ, ನಿರರ್ಥಕಾಂ=ಪರಮಾತ್ಮನಿಗೆ ಉತ್ಕರ್ಷವನ್ನು ತಿಳಿಸದೆ ಇರುವುದರಿಂದ ನಿರ್ವಿಷಯಕವಾದ ಮೋಕ್ಷಕ್ಕೆ ಅಸಾಧಕವಾದುದರಿಂದ ನಿಷ್ಪ್ರಯೋಜನವಾದ ತರ್ಕವಿದ್ಯೆಯಲ್ಲಿ ಅತ್ಯಂತ ಆಸಕ್ತನಾಗಿರುವೆನು. (ಆದಕಾರಣ ಆ ತರ್ಕಾನುರಾಗಕ್ಕೆ ನೀಚವಾದ ಸೃಗಾಲಜನ್ಮವೇ ಫಲವು. ಹೀಗೆ ಇಂದ್ರನು ಸೃಗಾಲ (ನರಿ) ರೂಪದಿಂದ ಒಬ್ಬನನ್ನು ಕುರಿತು ಹೇಳಿದ್ದು.) ಹೀಗೆ ಮೋಕ್ಷ ಧರ್ಮದಲ್ಲಿ ತಾರ್ಕಿಕಮತಕ್ಕೆ ಶ್ರುತ್ಯಾದಿವಿರುದ್ಧತ್ವವು ಉಕ್ತವಾಗಿದೆ.

**ವಿಶೇಷಾಂಶ** ॥ ಇಂದ್ರನು ತರ್ಕವಿದ್ಯಾನುರಾಗವು ಜಂಬುಕ ಜನ್ಮಕ್ಕೆ ಹೇತುವು ಎಂದು ಹೇಳಿದ್ದರಿಂದಲೂ **ವೇದನಿಂದಕಃ** ಎನ್ನುವ ಉಕ್ತಿಯಿಂದಲೂ ತಾರ್ಕಿಕೋಕ್ತವಾದ ಪರಮಾಣ್ವಾರಂಭವಾದವು ಆತ್ಮನ ಆಕಾಶಃ ಸಂಭೂತಃ, ಉತ್ಪತ್ತಿಸ್ಥಿತಿಸಂಹಾರಾಃ, ಇದುಮೊದಲಾದ ಶ್ರುತಿಸ್ಮೃತಿಗಳಿಂದ ವಿರುದ್ಧವಾಗಿದೆ. ॥ ೧೭ ॥ ಅಧಿ.೬ ॥

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ (೧) ಮಹದ್ದೀರ್ಘವದ್ವಾ ಎನ್ನುವುದು ಒಂದು ಸೂತ್ರವು ಒಂದು ಅಧಿಕರಣವು. ಉಭಯಥಾ ಇತ್ಯಾದಿಗಳನ್ನು ಆರಂಭಿಸಿಕೊಂಡು ಆರು ಸೂತ್ರಗಳು ಮತ್ತೊಂದು ಅಧಿಕರಣವು. ಎಂದು ಮಾಯಾವಾದಿಗಳು ಹೇಳುವರು. ಅದು ಅಯುಕ್ತವು. ಇವೆರಡೂ ಎಂದರೆ—ಈ ಏಳು ಸೂತ್ರಗಳೂ ತಾರ್ಕಿಕಪ್ರಕ್ರಿಯಾನಿರಾಸಕಗಳಾಗಿವೆ. ವಿಜ್ಞಾನವಾದಿ, ಶೂನ್ಯವಾದಿಗಳಂತೆ ಇಲ್ಲಿ ಅವಾಂತರಪ್ರಮೇಯ ಭೇದವನ್ನು ದೂಷಣಮಾಡಲಿಲ್ಲ. ಆದುದರಿಂದ ಸಾಂಖ್ಯಾಧಿಕರಣಗಳಂತೆಯೇ ಒಂದು ಅಧಿಕರಣವೆಂದು ಹೇಳುವದೇ ನ್ಯಾಯವು. (೨) ಮತ್ತು ಮಹತ್ತೂ ದೀರ್ಘವೂ ಆದ ತ್ರ್ಯಣುಕಾದಿಗಳು ವಿಜಾತೀಯವಾದ ಹ್ರಸ್ವಾದಿರೂಪವಾದ ದ್ವ್ಯಣುಕಾದಿಗಳಿಂದಲೆಂಬಂತೆ ಚೇತನನಾದ ಬ್ರಹ್ಮನ ದೆಸೆಯಿಂದ ಅಚೇತನವಾದ ಜಗತ್ತು ಹುಟ್ಟುತ್ತದೆ ಎನ್ನುವ ತನ್ನ ಪಕ್ಷದಲ್ಲಿ ದೋಷವನ್ನು ಪರಿಹರಿಸುವುದಕ್ಕಾಗಿ ಒಂದನೇ ಅಧಿಕರಣವು ಎನ್ನುವರು. ಇದೂ ಅಯುಕ್ತವು. ಒಂದನೇ ಪಾದದಲ್ಲಿ ಸ್ವಪಕ್ಷದೋಷೋದ್ಧಾರವು. ಎರಡನೇ ಪಾದದಲ್ಲಿ ಪರಪಕ್ಷದೂಷಣವು ಎಂದು ಅದ್ವೈತಿಗಳು ಹೇಳುವುದರಿಂದ ಸ್ವಪಕ್ಷದೋಷೋದ್ಧಾರಕವಾದ ಈ ಅಧಿಕರಣಕ್ಕೆ ಈ ಎರಡನೇ ಪಾದದಲ್ಲಿ ಸಂಗತಿಯು ಕೂಡಲಾರದು. ನ ವಿಲಕ್ಷಣತ್ವಾತ್ ಎನ್ನುವಲ್ಲಿ ವಿಜಾತೀಯದಿಂದಲೂ ಉತ್ಪತ್ತಿಯನ್ನು ಹೇಳಿರುವುದರಿಂದ ಪುನರುಕ್ತಿಯೂ ಬರುವುದು. ಇತ್ಯಾದಿದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ (೧) ಪರಿಮಂಡಲವಾದ ಪರಮಾಣುವಿನ ದೆಸೆಯಿಂದ ಹ್ರಸ್ವವಾದ ದ್ವ್ಯಣುಕಕ್ಕೂ ಅದರಿಂದ ಮಹದ್ದೀರ್ಘವಾದ ತ್ರ್ಯಣುಕಾದಿಗಳಿಗೆ ಉತ್ಪತ್ತಿಯೂ ಆಗುತ್ತದೆ ಎನ್ನುವುದು ಅಯುಕ್ತವು. ಅಣುವಿಗೆ ಅಣ್ವಂತರ ಸಂಯೋಗವು ವ್ಯಾಪ್ಯವೃತ್ತಿಯೆಂದಾದರೆ ತತ್ಕಾರ್ಯವಾದ ಪರಿಮಾಣಕ್ಕೆ ಅಧಿಕ್ಯವು ಕೂಡಲಾರದು. ಏಕದೇಶದಲ್ಲಿ ಇರುವುದೆಂದಾರೆ ಅಣುವಿಗೆ ನಿರಂಶತ್ವ ಹಾನಿಯು.

ಸೂತ್ರದಲ್ಲಿದ್ದ ವಾಶಬ್ದವು ಸಮುಚ್ಚಯಾರ್ಥಕವು. ತಥಾಚ ಪರಮಾಣುಗಳ ದೆಶೆಯಿಂದ ದ್ವ್ಯಣುಕಾದಿ ಕ್ರಮದಿಂದ ಜಗತ್ತು ಹುಟ್ಟುವಂತೆ ವೈಶೇಷಿಕರಿಂದ ಅಂಗೀಕೃತವಾದ ಗಗನನಿತ್ಯತ್ವಾದಿ ಇತರ ಪ್ರಮೇಯವೂ ಅಸಮಂಜಸವು, ಹೀಗೆ ಸೂತ್ರಾರ್ಥವು ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. ಸೂತ್ರದಲ್ಲಿ ಪಂಚಮೀ ನಿರ್ದಿಷ್ಟವಾದ ಹ್ರಸ್ವಶಬ್ದದಲ್ಲಿ ಷಷ್ಠ್ಯಂತತ್ವವನ್ನೂ ಆವೃತ್ತಿಯನ್ನೂ ಕಲ್ಪಿಸಬೇಕಾಗುವುದು. (೨) ಮತ್ತು ವ್ಯಾಪ್ಯವೃತ್ತಿತ್ವ, ಅವ್ಯಾಪ್ಯವೃತ್ತಿತ್ವವಿಕಲ್ಪವು (೧) ದ್ವ್ಯಣುಕ ಸಂಯೋಗ ವಿಷಯಕವೋ, (೨) ಪರಮಾಣುಸಂಯೋಗ ಮಾತ್ರ ವಿಷಯಕವೋ, ಆದರಲ್ಲಿ (೧) ದ್ವ್ಯಣಕಸಂಯೋಗವಿಷಯಕವು ಎಂದು ಹೇಳಕೂಡದು. ದ್ವ್ಯಣುಕಸಂಯೋಗವು ಸಾಂಶವಾದುದರಿಂದ ಅದರ ಸಂಯೋಗಕ್ಕೆ ಏಕದೇಶವೃತ್ತಿತ್ವವು ಕೂಡುವುದು. (೨) ಪರಮಾಣು ಸಂಯೋಗವು ಮಾತ್ರ ವಿಷಯಕವು ಎಂದು ಹೇಳುವುದಾದರೆ ಪರಿಮಂಡಲಾದ್ವಸ್ವದ್ವಾ ಎಂದೇ ಸೂತ್ರವನ್ನು ಮಾಡಬೇಕಿತ್ತು, ಇತರವಾದುದು ನಿರರ್ಥಕವು. ಆದಕಾರಣ ಅವರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

(೧) ಶ್ರೀಹರಿಯು ಅನಂತ ಗುಣಗಳುಳ್ಳವನು ಎನ್ನುವುದು ಯುಕ್ತವಲ್ಲ, ಈಶ್ವರ ಜೀವರು ದ್ರವ್ಯರಾದುದರಿಂದ ಸಂಖ್ಯಾ ಪರಿಮಾಣ ಪೃಥಕ್ತ್ವ ಸಂಯೋಗ ವಿಭಾಗ ಎನ್ನುವ ಐದು ಸಾಮಾನ್ಯಗುಣಗಳೂ, ಕರ್ತೃತ್ವಕ್ಕೆ ಉಪಯೋಗಿಗಳಾದ, ಜ್ಞಾನ, ಇಚ್ಛಾ, ಪ್ರಯತ್ನ ಎನ್ನುವ ಮೂರು ವಿಶೇಷಗುಣಗಳೂ ಆವಶ್ಯಕಗಳಾಗಿರುವುದರಿಂದ ಎಂಟು ಗುಣಗಳಿಂದ ಹೆಚ್ಚು ಗುಣಗಳು ಈಶ್ವರನಿಗೆ ಇವೆ ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಜೀವರಂತೆ ಹದಿನಾಲ್ಕು ಗುಣಗಳೂ ಇಲ್ಲದಿರುವುದರಿಂದ ಅನಂತಗುಣಗಳು ಇವೆ ಎನ್ನುವುದು ದೂರತಃ ನಿರಸ್ತವಾಗಿದೆ, ಎನ್ನುವ ವೈಶೇಷಿಕಾದಿಗಳ ಮತದಿಂದ ವಿರೋಧವು ಬರುವುದು ಎಂದರೆ ವೈಶೇಷಿಕಾದಿಗಳು ಅಯುಕ್ತಭಾಷಿಗಳು ಆದುದರಿಂದ ಅಪ್ರಾಣಿಕ ಪ್ರಕ್ರಿಯೆಯನ್ನು ಬೋಧಿಸತಕ್ಕ ಅವರ ಮತವು ಅಯುಕ್ತವಾದುದರಿಂದ ಅನಂತ ಗುಣಗಳು ಇವೆ ಎನ್ನುವುದು ಯುಕ್ತವು. ತ್ರ್ಯಣುಕಾದಿ ಪರಿಮಾಣವು ಚತುರಣುಕಾದಿ ಪರಮಾಣಾಸಮವಾಯಿಕಾರಣವು. ಪರಮಾಣು ದ್ವ್ಯಣುಕ ಪರಿಮಾಣಗಳು ದ್ವ್ಯಣುಕ ತ್ರ್ಯಣುಕ ಪರಿಮಾಣಾಸಮವಾಯಿಕಾರಣಗಳು ಆಗಲಾರವು. ಮತ್ತೆ ಅದರಲ್ಲಿ ದ್ವಿತ್ವ ತ್ರಿತ್ವ ಸಂಖ್ಯೇ ಅಸಮವಾಯಿಕಾರಣವು ಎಂದು ಹೇಳುವರು. ಅದು ಅಯುಕ್ತವು. ತ್ರ್ಯಣುಕಾದಿಗಳಲ್ಲಿದ್ದ ಪರಿಮಾಣದಂತೆ ಪರಮಾಣ್ವಾದಿಗಳಲ್ಲಿದ್ದ ಪರಿಮಾಣಕ್ಕೂ ಕಾರ್ಯಗತ ಪರಿಮಾಣಕಾರಣತ್ವವು ಕೂಡಬಹುದು. ಅಣು, ಮಹತ್, ದೀರ್ಘಂ, ಹ್ರಸ್ವ ಎನ್ನುವ ಪರಿಮಾಣಾವಾಂತರ ಜಾತಿಯಲ್ಲಿ ಪ್ರಮಾಣವಿಲ್ಲದಿರುವುದರಿಂದ ಎಲ್ಲಾ ವಸ್ತುಗಳಿಗೂ ಆಪೇಕ್ಷಿಕಾಣುತ್ವ ಮಹತ್ವಗಳೂ ಪುರುಷ ವಿಶೇಷರನ್ನು ಕುರಿತು ಪ್ರತ್ಯಕ್ಷತ್ವ ಅಪ್ರತ್ಯಕ್ಷತ್ವಗಳೂ ಯುಕ್ತಗಳಾದುದರಿಂದ ಅತಿಪ್ರಸಂಗವಿಲ್ಲ. (೨) ಹೀಗೆಯೇ ವಿಪಕ್ಷಿತವಾದ ತಂತು ಸಂಯೋಗದಿಂದ ಭಿನ್ನವಾಗಿ ಪಟವು ತೋರದಿರುವುದರಿಂದ ತಂತುಸಂಯೋಗವು ಪಟಕ್ಕೆ ಹೇತುವೇ ಆಗದೆ ಇರುವುದರಿಂದ ಅಸಮವಾಯಿಕಾರಣ ಪ್ರಕ್ರಿಯೆಯೂ ಯುಕ್ತವಲ್ಲ. (೩) ಹೀಗೆಯೇ ನಿಮಿತ್ತಕಾರಣವೆಂದು ಅಂಗೀಕೃತವಾದ ಈಶ್ವರೇಚ್ಛೆಯು ನಿತ್ಯವಾದರೆ

ಈಶ್ವರೇಚ್ಛೆಯು ಇದ್ದರೂ ಪರಮಾಣುಚೇಷ್ಟೆಯು ಇಲ್ಲದಿರುವುದರಿಂದ ದ್ವ್ಯಣುಕಾದಿ ಕಾರ್ಯಗಳೇವೇ ಇಲ್ಲವೆಂದು ಆಗಬೇಕಾಗುವುದು. ಈಶ್ವರೇಚ್ಛೆಗೆ ಅನಿತ್ಯತ್ವವಿದ್ದರೆ ಇಚ್ಛೆ ಹುಟ್ಟುವುದರಲ್ಲಿ ಈಶ್ವರನ ಇಚ್ಛಾಂತರವನ್ನು ಅಪೇಕ್ಷಿಸುವುದಾದರೆ ಅಪ್ರಾಮಾಣಿಕ ವ್ಯಕ್ತಿಪರಂಪರೆಯಿಂದ ಅನವಸ್ಥೆಯು ಬರಬೇಕಾಗುವುದು. ಇಚ್ಛಾಂತರವನ್ನು ಅಪೇಕ್ಷಿಸದೆ ಇದ್ದರೆ ಅನ್ಯತ್ರಾಪಿ ಅದು ಹೇತುವು ಆಗದೆ ಹೋಗಬೇಕಾಗುವುದು. ಅಂತೂ ನಿಮಿತ್ತ ಕಾರಣವೂ ಅಯುಕ್ತವು. (೪) ಮತ್ತು ಗುಣ, ಗುಣ್ಯಾದಿಗಳಿಗೆ ಭೇದವನ್ನು ಅಂಗೀಕರಿಸಿ ವಿಶಿಷ್ಟ ಪ್ರತ್ಯಯಾದಿಗಳಿಗೋಸ್ಕರ ಅಂಗೀಕರಿಸಿದ ಸಮವಾಯವು ಸಮವಾಯಿಗಳಿಂದ ಭಿನ್ನವಾದರೆ ಅಲ್ಲಿಯೂ **ಇದಂ ಸಮವೇತಂ** ಎನ್ನುವ ವಿಶಿಷ್ಟ ಪ್ರತ್ಯಯಕ್ಕಾಗಿ ಸಮವಾಯಾಂತರವನ್ನು ಅಂಗೀಕರಿಸಿದರೆ ಅಲ್ಲಿಯೂ ಹೀಗೆ ಎಂದು ಅನವಸ್ಥಾದೋಷವು ಬರುವುದರಿಂದ ಸಮವಾಯವೇ ಕೂಡದೆ ಇರುವುದರಿಂದ **ಯತ್ಸಮವೇತಂ ಕಾರ್ಯಮುತ್ಪದ್ಯತೇ** ಎನ್ನುವ ಲಕ್ಷಣಯುಕ್ತವಾದ ಸಮವಾಯಿಕಾರಣವೂ ಅಯುಕ್ತವು. ಆದುದರಿಂದ ಅವರ ರೀತಿಯಾಗಿ ಜಗತ್ತಿನ ಸೃಷ್ಟಿಯೂ ಯುಕ್ತವಲ್ಲ. (೫) ಹಾಗೆಯೇ ಅವರ ಮತದಲ್ಲಿ ಪ್ರಲಯವೂ ಕೂಡಲಾರದು. ಸಮವಾಯಿಕಾರಣ ಪರಮಾಣುಗಳಿಗೂ ನಿಮಿತ್ತಭೂತ ಈಶ್ವರೇಚ್ಛಾದಿಗಳಿಗೂ ನಿತ್ಯತ್ವವಿದ್ದರೆ ಸದಾ ಕಾರ್ಯೋತ್ಪತ್ತಿಯು ಆಗಬೇಕಾಗುವುದು. ಮತ್ತೂ ಅವರ ಮತದಲ್ಲಿ **ಪರಮಾಣವಃ ಅನಿತ್ಯಾಃ ರೂಪಾದಿಮತ್ತ್ವಾತ್ ಘಟಾದಿವತ್** ಎನ್ನುವ ಅನುಮಾನ ವಿರುದ್ಧವಾದುದರಿಂದ ಪರಮಾಣುಗಳು ನಿತ್ಯಗಳೆನ್ನುವುದು ಕೂಡಲಾರದು. ಇಲ್ಲವಾದರೆ ಪಟಾದಿಗಳಿಗೂ ನಿತ್ಯತ್ವವು ಬರಬೇಕಾಗುವುದು. (೬) ಮತ್ತು ಆನ್ವೀಕ್ಷಿಕೀಂ ಎನ್ನುವ ಭಾರತದಲ್ಲಿ ಸೃಗಾಲರೂಪವಾದ ಇಂದ್ರನು ತರ್ಕವಿದ್ಯಾನುರಾಗಕ್ಕೆ ಸೃಗಾಲ ಜನ್ಮಹೇತುತ್ವನ್ನು ಹೇಳಿದ್ದರಿಂದ ಆ ಮತವು ನಿಂದಿತವೂ ಆಗಿದೆ. ಆದಕಾರಣ ವೈಶೇಷಿಕರ ಮತವು ಅತಿ ದುಷ್ಟವು. ॥ ಅಧಿ. ೬ ॥

**ವೈಶೇಷಿಕಾಧಿಕರಣವು ಸಮಾಪ್ತವಾಯಿತು.**

## ೭ ಸಮುದಾಯಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಪ್ರತಿಪಾದ್ಯವಾದುದನ್ನು ತೋರಿಸುತ್ತಾರೆ—

**ಭಾಷ್ಯ ॥ ಪರಮಾಣುಪುಂಜವಾದಿಮತಂ ನಿರಾಕರೋತಿ** ॥ ೧ ॥

ಭಾಷ್ಯಾರ್ಥ ॥ ಈ ಅಧಿಕರಣದಲ್ಲಿ ಪಾಷಂಡಿಪ್ರಭೇದರಾದ ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ, ಯೋಗಾಚಾರ ಎನ್ನುವ ಭೇದದಿಂದ ನಾಲ್ಕು ವಿಧರಾದ ಸೌಗತರ ಮಧ್ಯದಲ್ಲಿ ಪರಮಾಣುಗಳ ಸಮುದಾಯವೇ ಗೌಃ, ಘಟಃ ಇತ್ಯಾದಿ ಜ್ಞಾನಗಳಿಗೆ ವಿಷಯವಾದುದು. ಆದರಿಂದ ಅತಿರಿಕ್ತವಾದ ಅವಯವೀ ಎನ್ನುವುದು ಇಲ್ಲ ಎಂದು ಹೇಳುವ ವೈಭಾಷಿಕರ ಮತ್ತು ಸೌತ್ರಾಂತಿಕರ ಮತವನ್ನು (ಸೂತ್ರಕಾರರು) ನಿರಾಕರಿಸುತ್ತಾರೆ.

ಪೀಠಿಕೆ ॥ ಸರ್ವಜಗತ್ತೂ ಪರಮಾಣು ಸಮುದಾಯಮಾತ್ರವೇ. ಪರಮಾಣು ಪರಿಮಾಣವಾದ

ಅವಯವಿಯು ಅಥವಾ ಪರಮಾಣ್ವಾರಬ್ಧವಾದ ಅವಯವಿ ಎನ್ನುವುದೇ ಇಲ್ಲ. ಇದ್ದ ಎಲ್ಲಾ ವಸ್ತುವೂ ಕ್ಷಣಿಕವೇ. ಈ ಕಾರ್ಯವೆಲ್ಲವೂ ಕಾಲಕರ್ಮಾದಿ ನಿಮಿತ್ತದಿಂದಲೇ ಆಗುವುದು. ಆದಕಾರಣ ಈಶ್ವರನಿಂದ ಪ್ರಯೋಜನವಿಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ಓಂ ॥ ೧೮ ॥

**ಭಾಷ್ಯ ॥ ಸಮುದಾಯಸ್ಯೈಕಹೇತುಕತ್ವಂ ನ ಯುಜ್ಯತೇ । ಉಭಯಹೇತುಕೇಽಪ್ಯನ್ಯೋನ್ಯಾಶ್ರಯ ತ್ವಾ(ಯಾ)ತ್ತದಪ್ರಾಪ್ತಿಃ । ಅನ್ಯಥಾ ಸರ್ವದಾ ಸಮುದಾಯಸತ್ವಂ (ಸಮುದಾಯತ್ವಂ) ಸ್ಯಾತ್ ॥ ೧೮ ॥ ೨ ॥**

ಭಾಷ್ಯಾರ್ಥ ॥ ಅಪಿ=ಏಕದೇಶ ಸಂಯೋಗ ವಿಶೇಷರೂಪವಾದ ಪರಮಾಣು ಸಮುದಾಯಕ್ಕೆ ಏಕಪರಮಾಣುಜನ್ಯತ್ವವು ಅಯುಕ್ತವು. ಒಂದರಿಂದ ಸಮುದಾಯವು ಎನ್ನುವು ವ್ಯಾಹತವು. ಸಮುದಾಯೇ ಉಭಯ ಹೇತುಕೇऽಪಿ=ಪರಮಾಣು ಸಮುದಾಯವು ಮಿಲಿತ ಉಭಯಹೇತುಕವು. ಅಂದರೆ, ಏಕದೇಶದಲ್ಲಿರತಕ್ಕ ಅನೇಕ ಪರಮಾಣುಗಳಿಂದ ಹುಟ್ಟಿದ್ದೆಂದು ಅಂಗೀಕರಿಸಿದರೂ, ಮಿಲಿತ ಅನೇಕ ಪರಮಾಣುಗಳಿಂದ ಸಮುದಾಯವು ಸಿದ್ಧಿಸುತ್ತದೆ. ಸಮುದಾಯವಾದರೆ, ಮಿಲಿತಾನೇಕತ್ವವು ಸಿದ್ಧಿಸುತ್ತದೆ. ಹೀಗೆ, ಕಾರ್ಯಕಾರಣಗಳಾದ ಎರಡು ಮಿಲಿತಾನೇಕತ್ವ ಸಮುದಾಯಗಳಿಗೆ ಅನ್ಯೋನ್ಯಾಶ್ರಯವು ಬರಬೇಕಾಗಿರುವುದರಿಂದ ತದಪ್ರಾಪ್ತಿಃ=ಸಮುದಾಯಕ್ಕೆ ಅನುಪಪತ್ತಿಯೇ. (ಈಗ ಉಭಯಹೇತುಕೇ ಎನ್ನುವುದಕ್ಕೆ ವಿರಲಾನೇಕಹೇತುಕವು ಎನ್ನುವ ಅರ್ಥವನ್ನು ಇಟ್ಟುಕೊಂಡರೂ ಅಯುಕ್ತವೆನ್ನುತ್ತಾರೆ.) ಅನ್ಯಥಾ=ಸಮುದಾಯವು ಹಿಂದೆ ಹೇಳಿದ ಪ್ರಕಾರವೆಂದು ಅಂಗೀಕರಿಸದೆ ನಾನಾದೇಶಗಳಲ್ಲಿದ್ದ ಅನೇಕ ಪರಮಾಣುಗಳಿಂದ ಜನ್ಯವೆಂದು ಅಂಗೀಕರಿಸಿದರೂ ಸರ್ವದಾ ಇರತಕ್ಕ ಅಂತಹ ವಿರಲಾನೇಕ ಪರಮಾಣುಗಳಿಗೆ ಸರ್ವದಾ ಸಮುದಾಯೋತ್ಪಾದಕತ್ವವು ಬರಬೇಕಾಗುವುದು. ತತಶ್ಚ ಸಮುದಾಯಕ್ಕೂ ಸರ್ವದಾ ಸ್ಥಿತಿಯು ಇರಬೇಕಾಗುವುದು. (ತಥಾಚ ಪ್ರಲಯಾಂಗೀಕಾರವು ಅಯುಕ್ತವು.) ಏವಂಚ ಸಮುದಾಯವೇ ಕೂಡದಿರುವುದರಿಂದ ಪರಮಾಣು ಸಮುದಾಯವೇ ಗೌಃ, ಘಟಃ ಇತ್ಯಾದಿಬುದ್ಧಿ ವೇದ್ಯವು. ಅವಯವಿಯು ಇಲ್ಲ ಎನ್ನುವ ಪಕ್ಷವು ಅಯುಕ್ತವು. ॥ ೧೮ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್ ಓಂ ॥ ೧೯ ॥

ಸೂತ್ರಾರ್ಥ ॥ ಅನೇಕತ್ವ ಸಂಖ್ಯಾರೂಪವಾದ ವಿರಲಾನೇಕ ಪರಮಾಣುಗಳೇ ಹೇತುವಾಗಿಉಳ್ಳ ಸಮುದಾಯಕ್ಕೆ ನಿತ್ಯತ್ವವಿದ್ದರೂ ವಿಶ್ವಿ ವ್ಯವಹಾರಗಳು ಇರುವುದಿಲ್ಲ. ಅವುಗಳಿಗೆ ಇತರ ವಿಶಿಷ್ಟ ಇತರ

ವಿಷಯಕ ಅಪೇಕ್ಷಾಬುದ್ಧಿಯು ನಿಮಿತ್ತವಾಗಿದ್ದುದರಿಂದ, ಎಂದರೆ—ಹಾಗೆ ಹೇಳಕೂಡದು. ಒಂದಕ್ಕೆ ಮತ್ತೊಂದರ ಉತ್ಪತ್ತಿಯಲ್ಲಿ ಮಾತ್ರ ಕಾರಣತ್ವವಿದ್ದುದರಿಂದ, ಅಂದರೆ—ಪರಮಾಣುಗಳು ಒಂದು ಕಾರ್ಯವನ್ನು ಹುಟ್ಟಿಸುವುದರಲ್ಲಿಯೇ ನಿಮಿತ್ತಗಳು. ದ್ವಿತೀಯಾದಿಕ್ಷಣದಲ್ಲಿರತಕ್ಕ ದರ್ಶನ, ಅಪೇಕ್ಷಾಬುದ್ಧ್ಯಾದಿರೂಪ ಕಾರ್ಯಾಂತರೋತ್ಪತ್ತಿಯಲ್ಲಿ ನಿಮಿತ್ತಗಳಲ್ಲ. ಅವುಗಳು ಒಂದು ಸಮುದಾಯಾಖ್ಯ ಕಾರ್ಯವನ್ನು ಹುಟ್ಟಿಸಿ ನಷ್ಟಗಳಾಗುತ್ತವೆ. ಪುನಃ ಅವುಗಳಿಂದ ಕಾರ್ಯಾಂತರೋತ್ಪತ್ತಿಯು ಕೂಡಲಾರದು.

**ಭಾಷ್ಯ ॥ ಸರ್ವದಾ ವಿದ್ಯಮಾನೋಽಪಿ ಸಮುದಾಯಃ ಪರಸ್ಪರಾಪೇಕ್ಷಯಾ ವ್ಯವಹ್ರಿಯತೇ ಇತಿ ಚೇತ್ । ನ ಏಕಂ ಕಾರ್ಯಮುತ್ಪಾದ್ಯ ತಸ್ಯ ವಿನಷ್ಟತ್ವಾತ್ಪರಸ್ಪರಪ್ರತ್ಯಯಸ್ತದಪೇಕ್ಷಯಾ ವ್ಯವಹಾರ ಇತಿ ನ ಯುಜ್ಯತೇ ॥ ೩ ॥**

ಭಾಷ್ಯಾರ್ಥ ॥ ಯದ್ಯಪಿ (ವಿರಲಾನೇಕ ಪರಮಾಣುಗಳೇ ಹೇತುವಾಗಿ ಉಳ್ಳ) ಸಮುದಾಯವು ಸದಾ ಇರತಕ್ಕದೇ ನಿತ್ಯವೇ ಆಗಿರುತ್ತದೆ. (ಆದಾಗ್ಯೂ ಪ್ರಲಯವು ಕೂಡಲಾರದು ಎನ್ನುವ ದೋಷವಿಲ್ಲ, ಏಕೆಂದರೆ, ಅನೇಕತ್ವ ಸಂಖ್ಯಾರೂಪವಾದ ಸಮುದಾಯವು ಸರ್ವದಾ ವ್ಯವಹರಿಸಲ್ಪಡುವುದಿಲ್ಲ. ಪ್ರತೀತವೂ ಆಗುವುದಿಲ್ಲ. ಸರ್ವದಾ ಇದ್ದರೆ, ವ್ಯವಹಾರಾದ್ಯಭಾವಕ್ಕೆ ಕಾರಣವೇನು? ಎಂದು ಹೇಳಕೂಡದು. ಏಕೆಂದರೆ-) ಇದಂ ಚ ಇದಂ ಚ ಎಂದು ಪರಸ್ಪರ ಜ್ಞಾನಾಪೇಕ್ಷೆಯಿಂದಲೇ ವ್ಯವಹರಿಸಲ್ಪಡುತ್ತದೆ. ಅಂದರೆ, ಅಪೇಕ್ಷಾ ಬುದ್ಧಿಯಿಂದುಂಟಾದ ಅನೇಕತ್ವಜ್ಞಾನದಿಂದಲೂ ಅಂತಹ ವ್ಯವಹಾರದಿಂದಲೂ ವಿಷಯೀಕರಿಸಲ್ಪಡುತ್ತದೆ ಎಂದು ಹೇಳಕೂಡದು. (ಅಂದರೆ, ಅಪೇಕ್ಷಾಬುದ್ಧಿಯು ಇಲ್ಲದಿದ್ದರೆ, ಪ್ರತೀತವೂ ಆಗುವುದಿಲ್ಲ. ವ್ಯವಹಾರವೂ ಉಂಟಾಗುವುದಿಲ್ಲ. ಪ್ರಲಯಕಾಲದಲ್ಲಿ ಪರಸ್ಪರವಾಗಿ ಅಪೇಕ್ಷಾಬುದ್ಧಿಯು ಇಲ್ಲದಿರುವುದೂ ಹೇಗೆ ಎಂದು ಹೇಳಕೂಡದು. ಏಕೆಂದರೆ—ಪರಸ್ಪರಾಪೇಕ್ಷೆಯು ಮೇಲಿನ ರೂಪವಾದ ಪರಮಾಣುಸಾಮೀಪ್ಯವನ್ನು ಅಪೇಕ್ಷಿಸಿಯೇ ಉಂಟಾಗುತ್ತದೆ. ವಿಪ್ರಕೃಷ್ಟದಲ್ಲಿ ಇದಂ ಚ ಇದಂ ಚ ಎನ್ನುವ ಅಪೇಕ್ಷಾ ಬುದ್ಧಿಯು ಬರಲಾರದು. ಎನ್ನುವ ಪರಿಹಾರಾಂಶವನ್ನು ವ್ಯಾಖ್ಯಾನಮಾಡುತ್ತಾರೆ.) ಪರಸ್ಪರಪ್ರತ್ಯಯಃ=ಅಪೇಕ್ಷಾಬುದ್ಧಿಯು ಅದರ ಅಪೇಕ್ಷೆಯಿಂದ, ವ್ಯವಹಾರವು ವ್ಯವಹಾರಕಾರಣವಾದ ಜ್ಞಾನವೂ ಕೂಡುವುದಿಲ್ಲ. (ತಥಾಚ ಸಮುದಾಯವು ನಿತ್ಯವಾದಾಗ್ಯೂ ಅಪೇಕ್ಷಾಬುದ್ಧಿನಿಬಂಧನಗಳಾದ ಸಮುದಾಯದ ವಿತ್ತಿ ವ್ಯವಹಾರಗಳು ಕದಾಚಿತ್ ಇರತಕ್ಕವುಗಳಾದುದರಿಂದ ಪ್ರಲಯವು ಅನುಪಪನ್ನವು ಎನ್ನುವ ದೋಷವಿಲ್ಲ ಎನ್ನುವದು ಅಯುಕ್ತವು. ವಿರಲ ಅನೇಕ ಪರಮಾಣುಗಳಿಂದ ಉಂಟಾದ ಸಮುದಾಯಕ್ಕೆ ಒಂದೇ ಕಾರ್ಯವನ್ನು ಹುಟ್ಟಿಸಿ ನಾಶವಿದ್ದುದರಿಂದ.)

ವಿಶೇಷಾಂಶ ॥ ಪ್ರಥಮತಃ ವಿರಲ ಪರಮಾಣುಗಳಿಗೆ ಮಿಲಿತ ಪರಮಾಣೂತ್ಪಾದಕತ್ವವು. ಮಿಲಿತ ಪರಮಾಣುಗಳಿಗೆ ದರ್ಶನವು. ಆಮೇಲೆ ಇದಂ ಚ ಇದಂ ಚ ಎಂದು ಪರಸ್ಪರಾಪೇಕ್ಷಾ ಪ್ರತ್ಯಯವು. ಆಮೇಲೆ ವ್ಯವಹಾರಾದಿಗಳು. ಅಲ್ಲಿ ದ್ರಷ್ಟೃಪುರುಷನೂ ಪರಮಾಣುಗಳೂ ಕ್ಷಣಗಳು. ಅವುಗಳು ಒಂದೇ ಕಾರ್ಯವನ್ನು ಹುಟ್ಟಿಸಿ ನಷ್ಟಗಳಾಗುತ್ತವೆ. ಎಂದು ಅಂಗೀಕರಿಸತಕ್ಕ ಸೌಗತರ

ಮತದಲ್ಲಿ ಪ್ರಥಮದಲ್ಲಿ ಒಬ್ಬನಿಗೆ ಪರಮಾಣುದರ್ಶನವು. ಆತನಿಗೇನೇ ಅಪೇಕ್ಷಾಬುದ್ಧಿಯು. ಆತನಿಗೇನೇ ವ್ಯವಹಾರಾದಿಗಳು ಎನ್ನುವ ಕ್ರಮವು ಕೂಡುವುದಿಲ್ಲ. ಅವರ ಮತದಲ್ಲಿ ಸರ್ವ ವಸ್ತುಗಳೂ ಕ್ಷಣಿಕಗಳಾದುದರಿಂದ ದರ್ಶನ, ಬುದ್ಧಿ ವ್ಯವಹಾರಾದಿಗಳಿಗೆ ಏಕವಿಷಯತ್ವವೂ, ಏಕಾಧಿಕರಣತ್ವವೂ ಕೂಡಲಾರದು.

ಪೀಠಿಕೆ ॥ ವಿರಲ ಪರಮಾಣುಗಳಿಂದ ಹುಟ್ಟಿದ ಮಿಲಿತ ಪರಮಾಣುಗಳಿಗೆ ಸ್ಥಾಯಿತ್ವವನ್ನು ಅಂಗೀಕರಿಸುವುದರಿಂದ ಆ ವಿಷಯದಲ್ಲಿ ದರ್ಶನ, ಅಪೇಕ್ಷಾಬುದ್ಧಿ ವ್ಯವಹಾರಗಳು ಆಗುವುವು. ಆದಕಾರಣ, ದೋಷಗಳು ಇಲ್ಲ ಎಂದರೆ—

**ಭಾಷ್ಯ ॥ ಕಾರಣೇ ಸತಿ ಕಾರ್ಯಂ ಭವತ್ಯೇವೇತಿ (ಹಿ ತಸ್ಯ) ನಿಯಮಃ ॥ ೧೯ ॥ ೪ ॥**

ಭಾಷ್ಯಾರ್ಥ ॥ ಕಾರಣವಿದ್ದರೆ ಕಾರ್ಯವು ಆಗಿಯೇ ಆಗುತ್ತದೆ, ಎಂದು ಬೌದ್ಧರ ನಿಯಮವು ಇದೆ. (ಆದಕಾರಣ ಅವುಗಳಿಗೆ ಸ್ಥಾಯಿತ್ವವನ್ನು ಅಂಗೀಕರಿಸಿದರೆ, ಪ್ರತಿಕ್ಷಣದಲ್ಲಿಯೂ ಕಾರ್ಯವು ಹುಟ್ಟಬೇಕಾಗುವುದು.) ತಥಾಚ ಅಲ್ಪತರ ಕಾಲದಲ್ಲಿಯೂ ಒಂದೊಂದು ಪರಮಾಣುಪುಂಜರೂಪವಾದ ಘಟದಿಂದ ಅನೇಕ ಕಾರ್ಯಗಳು ಹುಟ್ಟಿ ಕುಲಾಲಶಾಲೆಯಲ್ಲಿ ಘಟಾದಿಕಾರ್ಯಗಳು ತುಂಬಬೇಕಾಗುವುವು. ॥ ೧೯ ॥

ಪೀಠಿಕೆ ॥ ಹೀಗೆ ವಿರಲ ಪರಮಾಣುಗಳ ದೆಶೆಯಿಂದ ಮಿಲಿತ ಪರಮಾಣುಗಳು ಉತ್ಪತ್ತಿಯನ್ನು ಅಂಗೀಕರಿಸಿ ವ್ಯವಹಾದಿಗಳು ಕೂಡಲಾರವು ಎಂದು ತೋರಿಸಿ, ಈಗ ವಿಸದೃಶ ಕಾರ್ಯೋತ್ಪತ್ತಿಯನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ಓಂ ॥ ೨೦ ॥

**ಭಾಷ್ಯ ॥ ಕಾರ್ಯೋತ್ಪತ್ತಾವೇವ ಕಾರಣಸ್ಯ ವಿನಾಶಾಚ್ಚ ನ ವಿಶೇಷಕಾರ್ಯೋತ್ಪತ್ತಿಃ ॥೨೦ ॥ ॥ ೫ ॥**

ಭಾಷ್ಯಾರ್ಥ ॥ ಕಾರಣಕ್ಕೆ ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವುದರಲ್ಲಿಯೇ ಸಾಮರ್ಥ್ಯವಿದ್ದುದರಿಂದ (ವಿಸದೃಶವಾದ ಕಾರ್ಯವು ಹುಟ್ಟುವುದರಲ್ಲಿ ಸಾಮರ್ಥ್ಯವಿಲ್ಲ) ಕಾರಣಕ್ಕೆ ವಿನಾಶ ವಿದ್ದುದರಿಂದ ವಿರಲಗಳಾದ ಪರಮಾಣುಗಳ ದೆಶೆಯಿಂದ ಮಿಲಿತ ಪರಮಾಣುರೂಪಗಳಾದ ವಿಸದೃಶ ಕಾರ್ಯೋತ್ಪತ್ತಿಯೂ ಯುಕ್ತವಲ್ಲ. (ವಿತ್ತಿ ವ್ಯವಹಾರಗಳು ಮಾತ್ರ ಕೂಡುವುದಿಲ್ಲವೆಂದಲ್ಲ.) ॥ ೨೦ ॥

ಪೀಠಿಕೆ ॥ ಹೀಗೆ ವಿಸದೃಶ ಕಾರ್ಯೋತ್ಪತ್ತಿ ನಿರಾಸದಿಂದ ವ್ಯವಹಾರಾದಿಗಳನ್ನು ನಿರಾಕರಿಸಿ ಈಗ ಪ್ರತಿಕ್ಷಣದಲ್ಲಿ ಕಾರ್ಯೋತ್ಪತ್ತಿಯನ್ನೇ ನಿರಾಕರಿಸತಕ್ಕ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ಓಂ ॥ ೨೧ ॥

**ಸೂತ್ರಾರ್ಥ** ॥ ಕಾರಣವು ಇಲ್ಲದಿರುವಾಗ ಕಾರ್ಯವು ಹುಟ್ಟುವುದಾದರೆ ಈ ಕಾರ್ಯವು ಆ ಕಾರಣದಿಂದ ಹುಟ್ಟಿದ್ದು ಎನ್ನುವ ಪ್ರತಿಜ್ಞೆ (ವ್ಯವಸ್ಥೆ)ಗೆ ವಿರೋಧವು ಬರುವುದು. ಕಾರ್ಯೋತ್ಪತ್ತಿ ಸಮಯದಲ್ಲಿ ಎರಡನೇ ಕ್ಷಣದಲ್ಲಿ ಕಾರಣವು ಇದ್ದು ಕಾರ್ಯವನ್ನು ಹುಟ್ಟಿಸುತ್ತದೆ ಎಂದಂಗೀಕರಿಸಿದರೆ ಕಾರಣ ಸಮಯದಲ್ಲಿ ಕಾರ್ಯ ಸ್ಥಿತಿಯನ್ನೂ ಅಂಗೀಕರಿಸಿ ಮೇಲಿನ ಎಲ್ಲಾ ಕಾರ್ಯಗಳಿಗೂ ವಿಚ್ಛೇದವಿಲ್ಲದೆ ಉತ್ಪತ್ತಿಯೂ ಏಕಕಾಲ ವೃತ್ತಿತ್ವವೂ ಬರಬೇಕಾಗುವುದು.

**ಭಾಷ್ಯ ॥ ಕಾರಣೇ ವಿನಷ್ಟೇ ಕಾರ್ಯಮುತ್ಪದ್ಯತೇ ಚೇತ್ತತ್ಕಾರ್ಯಮಿತಿ ಪ್ರತಿಜ್ಞಾಹಾನಿಃ। ತತ್ಕಾಲೇ ಕಾರಣಮಸ್ತಿ ಚೇದ್ವಿನಾಶಕಾರಣಾಭಾವಾದ್ಯೌಗಪದ್ಯಂ ಸರ್ವಕಾರ್ಯಾಣಾಂ ॥ ೨೦ ॥ ॥ ೬ ॥**

**ಭಾಷ್ಯಾರ್ಥ** ॥ (೧) ಕಾರಣವು ನಾಶವನ್ನು ಹೊಂದಿದ ಮೇಲೆ ಕಾರ್ಯವು ಹುಟ್ಟುತ್ತದೆ ಎಂದಾದರೆ ಈ ಕಾರ್ಯವು ಆ ಕಾರಣದಿಂದ ಹುಟ್ಟಿದ್ದು ಎನ್ನುವ ಪ್ರತಿಜ್ಞೆಗೆ ಅಂದರೆ ಸಿದ್ಧಾಂತದಲ್ಲಿರತಕ್ಕ ಪ್ರತಿಜ್ಞಾ ಪದಗಳಿಗೆ ವಿರೋಧವು ಬರುವುದು. ಅಂತೂ ಕಾರ್ಯಕಾಲದಲ್ಲಿ ಕಾರಣವು ಅವಶ್ಯವಾಗಿ ಇರಬೇಕಾದುದರಿಂದ ಅದನ್ನು ಅಂಗೀಕರಿಸಿದೆ ಇದ್ದರೆ ಅದು ಅದರಿಂದ ಹುಟ್ಟಿದ್ದು ಎನ್ನುವ ವ್ಯಪದೇಶವು ವಿರುದ್ಧವು. (೨) ಕಾರ್ಯೋತ್ಪತ್ತಿ ಕ್ಷಣದಲ್ಲಿ ಕಾರಣವು ಇರುವುದಾದರೆ ವಿನಾಶಕಾರಣವು ಇಲ್ಲದಿರುವುದರಿಂದ ಅಂದರೆ ಕಾರ್ಯೋತ್ಪತ್ತಿ ಕ್ಷಣರೂಪವಾದ ದ್ವಿತೀಯ ಕ್ಷಣದಲ್ಲಿ ಕಾರಣವು ಇದ್ದುದರಿಂದ ಅದು ಅದಕ್ಕೆ ವಿನಾಶಕವಾಗಲಾರದು. ವಿನಾಶಕಾಂತರವು ಇಲ್ಲ. ಹೀಗೆ ಎಲ್ಲಾ ಕಾರ್ಯಗಳಿಗೂ ಏಕಕಾಲದಲ್ಲಿ ಅಪಸ್ಥಿತಿಯು ಬರಬೇಕಾಗುವುದು.

**ವಿಶೇಷಾಂಶ** ॥ (೧) ಕಾರಣವು ನಷ್ಟವಾದ ಮೇಲೆ ಕಾರ್ಯವು ಹುಟ್ಟುತ್ತದೆ ಎನ್ನುವುದು ಕೂಡಲಾರದು. ಕಾರಣವು ಇರುವಾಗ ಕಾರ್ಯವು ಹುಟ್ಟಿದ್ದು ಎಂದಾದರೆ—ಒಂದು ಕ್ಷಣದಲ್ಲಿ ತಾನು ಸ್ವರೂಪವನ್ನು ಹೊಂದಿ ಕಾರ್ಯೋತ್ಪತ್ತಿ ಕ್ಷಣದಲ್ಲಿಯೂ ಅದು ಇರುವುದಾದರೆ ಕ್ಷಣಿಕವಾದುದು. ಎರಡು ಕ್ಷಣದಲ್ಲಿ ಇದ್ದರೆ ಆಮೇಲೆ ವಿನಾಶಕಾರಣವು ಇಲ್ಲದಿರುವುದರಿಂದ ಪುನಃ ಅದರಿಂದ ಕಾರ್ಯೋತ್ಪತ್ತಿಗಳಾಗುವವು. ಅವುಗಳಿಂದಲೂ ಪುನಃ ಕಾರ್ಯೋತ್ಪತ್ತಿಗಳಾಗುವವು. ಹೀಗೆ ಸರ್ವ ಕಾರ್ಯಗಳಿಗೂ ಏಕಕಾಲದಲ್ಲಿ ಸ್ಥಿತಿಯು ಬರಲೇಬೇಕಾಗುವುದು. ಅಂತೂ ಒಂದು ಘಂಟೆಯೊಳಗೆ ಕುಲಾಲನ ಶಾಲೆಯು ಕಾರ್ಯಗಳಿಂದ ತುಂಬಬೇಕಾಗುವುದು. ಆದಕಾರಣ ಪ್ರತಿಕ್ಷಣದಲ್ಲಿ ಕಾರ್ಯೋತ್ಪತ್ತಿಯು ಯುಕ್ತವಲ್ಲ. ॥ ೨೦ ॥

**ಪೀಠಿಕೆ** ॥ ಕ್ಷಣಿಕವಾದದಲ್ಲಿ ಕಾರ್ಯೋತ್ಪತ್ತಿಯನ್ನು ನಿರಾಕರಿಸಿ ವಿನಾಶವನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಸೂತ್ರ ॥ ಓಂ ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ಓಂ ॥ ೨೨ ॥**

**ಸೂತ್ರಾರ್ಥ** ॥ ಕಾರ್ಯಕ್ಕೆ ವಿರಾಮವು ಇಲ್ಲದಿರುವುದರಿಂದ ಬುದ್ಧಿಪೂರ್ವಕ ನಾಶವೂ ಅಬುದ್ಧಿಪೂರ್ವಕ ನಾಶವೂ ಕೂಡಲಾರದು.

**ಭಾಷ್ಯ ॥ ಕಾರಣೇ ಸತಿ ಕಾರ್ಯಂ ಭವತ್ಯೇವೇತಿ ನಿಯಮಾನ್ನಿಸ್ಸಂತಾನಃ ಸಸಂತಾನಶ್ಚ ವಿನಾಶೋ ನ ಯುಜ್ಯತೇ ॥ ೨೨ ॥ ॥ ೭ ॥**

**ಭಾಷ್ಯಾರ್ಥ** ॥ ಕಾರಣವು ಇರುವಾಗ ಕಾರ್ಯವು ಆಗಿಯೇ ಆಗುತ್ತದೆ ಎನ್ನುವ ನಿಯಮದೆಶೆಯಿಂದ **(ಅಪ್ರತಿಸಂಖ್ಯಾ)** ಪ್ರತಿಕ್ಷಣದಲ್ಲಿ ಉಂಟಾಗತಕ್ಕ ಅಬುದ್ಧಿಪೂರ್ವಕ ಕಾರ್ಯಪರಂಪರಾರಹಿತವಾದ ಕಾರಣ ಮಾತ್ರ ನಾಶವು. ಅಂದರೆ ಸಂತಾನವಿಲ್ಲದೆ ಇರುವ ವಿನಾಶವು. **(ಪ್ರತಿಸಂಖ್ಯಾ)** ಮುದ್ಗರಪಾತಾದಿಗಳಿಂದ ಉಂಟಾಗತಕ್ಕ ಬುದ್ಧಿಪೂರ್ವಕ ಕಾರ್ಯಪರಂಪರಾಸಹಿತ ಕಾರಣನಾಶವು ಅಂದರೆ ಸತಾನಸಹಿತವಾದ ನಾಶವೂ ಕೂಡುವುದಿಲ್ಲ. ಅಂದರೆ ಘಟಾದಿಗಳಿಗ ಪ್ರತಿಕ್ಷಣದಲ್ಲಿ ಆಗತಕ್ಕ ವಿನಾಶವು ಅಬುದ್ಧಿಪೂರ್ವಕವಾಗಿದೆ. ಮುಸಲ ಪ್ರಹಾರಾದಿಗಳಿಂದುಂಟಾಗತಕ್ಕುದು ಸಂತಾನದಿಂದೊಡಗೂಡಿ ಆಗತಕ್ಕ ಆತ್ಯಂತಿಕ ವಿಶಾನವು ಪ್ರಾಯಶಃ ಬುದ್ಧಿಪೂರ್ವಕವಾದುದು.

**ವಿಶೇಷಾಂಶ** ॥ (೧) ಕಾರಣವು ಪ್ರತಿಕ್ಷಣದಲ್ಲಿಯೂ ಕಾರ್ಯವನ್ನು ಹುಟ್ಟಿಸಿ ನಾಶ ಹೊಂದುತ್ತದೆ ಎಂದು ಬೌದ್ಧರು ಅಂಗೀಕರಿಸಿರುವರು. ಕಾರ್ಯೋತ್ಪತ್ತಿ ಕ್ಷಣವೇ ಕಾರ್ಯವಿಯೋಗ ಕ್ಷಣವಾದುದರಿಂದ ಆ ಕ್ಷಣದಲ್ಲಿ ಉತ್ಪಾದಕನಾಶಕಕಾರಣವು ಅವಶ್ಯವಾಗಿ ಇರಬೇಕಾಗಿರುವುದರಿಂದ ಸ್ವಕಾರ್ಯ ಧ್ವಂಸಕಾಲದಲ್ಲಿ ಕಾರಣವು ಇದ್ದೇ ಇದೆ. ಹೀಗೆ ಕಾರ್ಯವನ್ನು ಹುಟ್ಟಿಸುತ್ತದೆ. ಕಾರಣೇ ಸತಿ ಕಾರ್ಯಂ ಭವತ್ಯೇವ ಎನ್ನುವ ನಿಯಮದಿಂದ ಅದು ಹುಟ್ಟಿದ ಮೇಲೆಯೇ ಹೀಗೆ. ಆದಕಾರಣ ಪ್ರತಿಕ್ಷಣದಲ್ಲಿ ನಿಸ್ಸಂತಾನನಾಶವು ಹೇಗೆ ಕೂಡುವುದು? (೨) ಹೀಗೆಯೇ ಸಸಂತಾನನಾಶವೂ ಕೂಡಲಾರದು. ಕಾರ್ಯಪರಂಪರಾಸಹಿತ ನಾಶ ಕ್ಷಣದಲ್ಲಿ ಇರತಕ್ಕ ಕಾರ್ಯಪರಂಪರಾಸಹಿತ ಘಟಾದಿಗಳಿಗೆ ಆತ್ಯಂತಿಕ ನಾಶವು. ಇದೂ ಘಟಾದಿಕಾರ್ಯವನ್ನು ಹುಟ್ಟಿಸುತ್ತದೆ. ಹೀಗೆ ಸಂತಾನವೇ ಇದ್ದಪ್ರಯುಕ್ತ ಸಂತಾನಕ್ಕೆ ನಾಶಪ್ರಸಕ್ತಿಯೇ ಇರಲಾರದು. ॥ ೨೨ ॥

**ಪೀಠಿಕೆ** ॥ ಪದಾರ್ಥಗಳಿಗೆ ಅರ್ಥಕ್ರಿಯಾಕಾರಿತ್ವರೂಪವಾದ ಸತ್ವವನ್ನು ಅಂಗೀಕರಿಸಬೇಕು. ಅದು ಕ್ಷಣಿಕತ್ವವಿಲ್ಲದೆ ಸಿದ್ಧಿಸಲಾರದು. ಹೇಗೆಂದರೆ, ಆದ್ಯಕ್ಷಣದಲ್ಲಿ ಘಟವು ಘಟಾಂತರವನ್ನು ಹುಟ್ಟಿಸಿ ನಾಶವನ್ನು ಹೊಂದದೆ ಇದ್ದರೆ ಮತ್ತೊಂದು ಘಟವೂ ಹಾಗೆಯೇ, ಹೀಗೆ ಅನಂತ ಕಾರ್ಯೋತ್ಪತ್ತಿಯು ಆಗಬೇಕಾಗುವುದು. ಹೀಗೆಯೇ ಆದರೆ ಒಂದು ಕ್ಷಣದಲ್ಲಿ ಕುಲಾಲಶಾಲೆಯು ಘಟಾದಿ ಕಾರ್ಯಗಳಿಂದ ಪೂರ್ತಿಯಾಗಬೇಕಾಗುವುದು. ಆದಕಾರಣ ಪದಾರ್ಥಗಳಿಗೆ ಕ್ಷಣಿಕತ್ವವನ್ನು ಇಟ್ಟುಕೊಳ್ಳಲೇಬೇಕು, ಎನ್ನುವ ಶಂಕೆಯನ್ನು ಪರಿಹರಿಸುವದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಉಭಯಥಾ ಚ ದೋಷಾತ್ ಓಂ ॥ ೨೩ ॥

**ಸೂತ್ರಾರ್ಥ** ॥ ಕಾರಣೇ ಸತಿ ಕಾರ್ಯಂ ಭವತ್ಯೇವ ಎನ್ನುವ ನಿಯಮವಿದ್ದರೂ, ಇಲ್ಲವಾದರೂ, ಕಾರ್ಯಕಾರಣಭಾವವು ಇಲ್ಲವೆಂದಾಗಬೇಕಾಗುವದು ಎನ್ನುವ ದೋಷದಿಂದಲೂ ಕಾರ್ಯವು ಹುಟ್ಟದೆ ಹೋಗಬೇಕಾಗುವುದು ಎನ್ನುವ ದೋಷದಿಂದಲೂ ಕ್ಷಣಿಕ ಮತವು ಅಯುಕ್ತವು.

ಭಾಷ್ಯ ॥ (೧) ಕಾರಣೇ ಸತಿ ಕಾರ್ಯಂ ಭವತ್ಯೇವೇತಿ ನಿಯಮೇ ಸರ್ವದಾ ಕಾರ್ಯಭಾವಾನ್ನ ಕಾರ್ಯಕಾರಣವಿಶೇಷಃ। (೨) ಅನಿಯಮೇ ಕಾರ್ಯಾನುತ್ಪತ್ತಿಃ ॥ ೨೩ ॥ ॥ ೮ ॥

ಭಾಷ್ಯಾರ್ಥ ॥ (೧) ಕಾರಣವು ಇದ್ದರೆ ಕಾರ್ಯವು ಇದ್ದೇಇದೆ ಎಂದು ನಿಯಮವಿದ್ದರೆ ಸರ್ವದಾ ಕಾರ್ಯವು ಇದ್ದುದರಿಂದ (ಅಂದರೆ ಕ್ಷಣಿಕಮತದಲ್ಲಿ ಕಾರ್ಯವು ಕಾರಣವು ಇರುವ ತನಕ ಇರುವದರಿಂದ) ಕಾರ್ಯ ಕಾರಣಗಳಿಗೆ ವಿಶೇಷವಿಲ್ಲದೆ ಹೋಗುವದು. ಅಂತೂ ಸರ್ವತ್ರ ಕಾರ್ಯ ಕಾರಣಗಳಿಗೆ ಏಕಕಾಲದಲ್ಲಿ ಉತ್ಪತ್ತಿಯು ಬರುವುದರಿಂದ ಕಾರ್ಯಕಾರಣಭಾವವೇ ಇಲ್ಲದೆ ಹೋಗುವುದು. (೨) ನಿಯಮವಿಲ್ಲದಿದ್ದರೆ (ಕಾರಣವು ಇದ್ದರೂ ಕದಾಚಿತ್ ಕಾರ್ಯಾಭಾವವನ್ನು ಅಂಗೀಕರಿಸಿದರೆ ಆ ಕಾಲದಲ್ಲಿ ಕಾರಣಕ್ಕೆ ಅರ್ಥಕ್ರಿಯಾಕಾರಿತ್ವವು ಇಲ್ಲದಿರುವುದರಿಂದ ಅಸತ್ವವು ಬರಬೇಕಾಗುವುದು. ಅಸತ್ಕಾರಣದಿಂದ ಯಾವಾಗಲೂ) ಕಾರ್ಯೋತ್ಪತ್ತಿಯು ಆಗದೆ ಹೋಗುವುದು. ಏವಂಚ ಅನಿಯಮ ಪಕ್ಷದಲ್ಲಿ ಕಾರಣವಾದ ಘಟಾದಿಗಳಿಗೆ ಸತ್ವವಿಲ್ಲದಿರುವುದರಿಂದ ಅದರಿಂದ ಕಲ್ಪಿಸಲ್ಪಡತಕ್ಕ ಕ್ಷಣಿಕತ್ವವೂ ಸಿದ್ಧವಾಗಲಾರದು. ॥ ೨೩ ॥

ಪೀಠಿಕೆ ॥ ಅರ್ಥಾಪತ್ತಿಯಿಂದ ಕ್ಷಣಿಕತ್ವವು ಸಿದ್ಧಿಸದೆ ಇದ್ದರೂ ವಿಮತಂ ಕ್ಷಣಿಕಂ ಸತ್ವಾತ್ ಯತ್ಸತ್ ತತ್ ಕ್ಷಣಿಕಂ ಯಥಾ ದೀಪಾದಿ, ಸಂತಶ್ಚಾಮೀ ಭಾವಾಃ ಪದಾರ್ಥಾಃ ಎನ್ನುವ ಅನುಮಾನದಿಂದ ಸಿದ್ಧಿಸುವುದೆಂದರೆ—

## ಸೂತ್ರ ॥ ಓಂ ಆಕಾಶೇ ಚಾವಿಶೇಷಾತ್ ಓಂ ॥ ೨೪ ॥

ಭಾಷ್ಯ ॥ ದೀಪಾದಿಷು ವಿಶೇಷದರ್ಶನಾತ್ ಕ್ಷಣಿಕತ್ವೇನಾನ್ಯತ್ರಾಪಿ (ನ್ಯತ್ರ) ಕ್ಷಣಿಕತ್ವಮನುಮೀಯತೇ ಚೇದಾಕಾಶಾದಿಷ್ವವಿಶೇಷದರ್ಶನಾದನ್ಯತ್ರಾಪಿ ತದನುಮೀಯೇತ ॥ ೨೪ ॥ ॥ ೯ ॥

ಭಾಷ್ಯಾರ್ಥ ॥ ದೀಪ, ದೇಹ, ಫಲಗಳಲ್ಲಿ (ಪೂರ್ವೋತ್ತರಕ್ಷಣಗಳಲ್ಲಿ) ಪರಿಮಾಣವಿಶೇಷವು ಕಂಡದ್ದರಿಂದ (ಅದರಿಂದಲೇ ಭೇದವೂ ಸಿದ್ಧವಾಗುವುದರಿಂದ) ಕ್ಷಣಿಕತ್ವವು ನಿಶ್ಚಿತವಾಗುವ ಪ್ರಯುಕ್ತ (ಆ ದೃಷ್ಟಾಂತದಿಂದ) ದೀಪದಿಂದ ಇತರವಾದ ನೀಲ ಮೊದಲಾದ ಭಾವಪದಾರ್ಥದಲ್ಲಿಯೂ ಕ್ಷಣಿಕತ್ವವು ಅನುಮೇಯಿಸಲ್ಪಡುವುದಾದರೆ, ಆಕಾಶೇ ಚ=ಆಕಾಶ ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧಗಳಲ್ಲಿಯೂ, ಅವಿಶೇಷಾತ್=ಪರಿಮಾಮವಿಶೇಷವು ಕಾಣದೆ ಇದ್ದ ಪ್ರಯುಕ್ತ (ಅದರಿಂದಲೇ ಅಭೇದವು ಸಿದ್ಧವಾಗುವುದರಿಂದ) ಅಕ್ಷಣಿಕತ್ವವು (ಸ್ಥಾಯಿತ್ವವು) ನಿಶ್ಚಿತವಾಗುವುದರಿಂದ, ಆಕಾಶಾದಿಗಳಿಂದ ಇತರವಾದ ನೀಲ, ಘಟಾದಿಪ್ರಪಂಚದಲ್ಲಿಯೂ (ಆ ದೃಷ್ಟಾಂತದಿಂದ ಸತ್ವಹೇತುವಿನಿಂದಲೇ) ಅಕ್ಷಣಿಕತ್ವವೂ ಅನುಮೇಯಿಸಲ್ಪಡಬೇಕಾಗುವುದು. ಸತ್ವ ಹೇತುವಿಗೆ ಆಕಾಶದಲ್ಲಿಯೂ ದೀಪಾದಿಗಳಲ್ಲಿಯೂ ನೀಲಿಮಾದಿಗಳಲ್ಲಿಯೂ ವಿಶೇಷವಿಲ್ಲ. ॥ ೨೪ ॥

ಪೀಠಿಕೆ ॥ ಹೀಗೆ ಪ್ರತಿಪಕ್ಷದಿಂದ ಸತ್ವಾನುಮಾನವನ್ನು ನಿರಾಕರಿಸಿ ಪ್ರಮಾಣಬಾಧದಿಂದಲೂ ನಿರಾಕರಿಸುತ್ತಾರೆ—

## ಸೂತ್ರ ॥ ಓಂ ಅನುಸ್ಮೃತೇಶ್ಚ ಓಂ ॥ ೨೫ ॥

**ಭಾಷ್ಯ ॥ ತದೇವೇದಮಿತಿ ಪ್ರತ್ಯಭಿಜ್ಞಾನಾಚ್ಚ । ಪ್ರತ್ಯಭಿಜ್ಞಾಯಾ ಭ್ರಾಂತಿತ್ವೇ ವಿಶೇಷದರ್ಶನಸ್ಯಾಪಿ ಭ್ರಾಂತಿತ್ವಂ ॥ ೨೫ ॥ ಅಧಿ. ೭ ॥ ॥ ೧೦ ॥**

**ಭಾಷ್ಯಾರ್ಥ ॥** ಮೊದಲು ಕಂಡದ್ದೇ ಈ ಘಟಾದಿಯು ಎಂದು (ಪೂರ್ವೋತ್ತರ ದೇಶಕಾಲಸಂಬಂಧಿಗಳಿಗೆ) ಅನುಸ್ಮೃತೇಃ ಐಕ್ಯವಿಷಯಕ ಪ್ರತ್ಯಭಿಜ್ಞೆಯು ಇದ್ದುದರಿಂದ. (ಹಾಗಾದರೆ, ಕೂದಲು ಭಿನ್ನವಾಗಿ ಪುನಃ ಹುಟ್ಟಿದ ಕೂದಲು ಸಮೂಹದಲ್ಲಿ **ಸೋಽಯಂ ಕುಂತಲಕಲಾಪಃ** ಎನ್ನುವ ಪ್ರತ್ಯಭಿಜ್ಞೆಯಂತೆ ಈ ಪ್ರತ್ಯಭಿಜ್ಞೆಯೂ ಭ್ರಾಂತಿ ಎಂದು ಅಂಗೀಕರಿಸಿದ್ದರಿಂದ ಸತ್ವಾನುಮಾನಕ್ಕೆ ಆ ಪ್ರತ್ಯಭಿಜ್ಞೆಯಿಂದ ಬಾಧವಿಲ್ಲ ಎಂದರೆ—) ಪ್ರತ್ಯಭಿಜ್ಞೆಗೆ ಬಾಧಕವು ಇಲ್ಲದಿದ್ದರೂ ಭ್ರಾಂತಿತ್ವವನ್ನು ಕಲ್ಪಿಸುವುದಾದರೆ ದೀಪಾದಿಗಳಲ್ಲಿ ಕ್ಷಣಿಕತ್ವ ಸಾಧಕವಾಗಿ ಹೇಳಲ್ಪಟ್ಟ ಪರಿಮಾಣ ಭೇದಾದಿದರ್ಶನಕ್ಕೂ (ವಿಶೇಷವಿಲ್ಲದಿರುವುದರಿಂದ) ಭ್ರಾಂತಿತ್ವವು ಬರಬೇಕಾಗುವುದು. ॥ ೨೫ ॥

### ಅಧಿಕರಣ ಸಾರಾಂಶ

(೧) ವಿಷ್ಣುವಿಗೆ ಸರ್ವಜಗತ್ಕರ್ತೃತ್ವವು ಯುಕ್ತವಲ್ಲ. ಏಕೆಂದರೆ-ರೂಪ, ವಿಜ್ಞಾನ, ವೇದನಾ, ಸಂಜ್ಞಾ ಸಂಸ್ಕಾರರೂಪದಿಂದ ಇರತಕ್ಕ ಪರಮಾರ್ಥಸತ್ತಲ್ಲದೆ ಇದ್ದ ಸರ್ವಜಗತ್ತಿಗೆ ಪರಮಾಣುವೇ ಹೇತುವಾಗಿ ಉಳ್ಳ ಪರಮಾಣು ಸಮುದಾಯಮಾತ್ರತ್ವವು ಇದ್ದುದರಿಂದ ಅದರಿಂದಲೇ ಘಟ, ಪಟಾದಿಬುದ್ಧಿಯು ಕೂಡುವಾಗ ಅವಯವಿಯು ಪರಮಾಣುಪರಿಣಾಮವೆಂದಾಗಲೀ ಪರಮಾಣುವಿನಿಂದ ಆರಬ್ಧವೆಂದಾಗಲೀ ಅಂಗೀಕರಿಸುವುದು ವ್ಯರ್ಥವು. ೨) ಸತ್ತಾದ ವಸ್ತುವು ಸ್ಥಾಯಿಯೆಂದು ಹೇಳಿದರೆ ಅದರಿಂದ ಸಜಾತೀಯ ಘಟಾದಿಕಾರ್ಯಾಂತರವು. ಅದರಿಂದಲೂ ಹಾಗೆ. ಹೀಗೆ ಒಂದು ಕ್ಷಣದಲ್ಲಿಯೇ ಅನಂತಕಾರ್ಯಗಳು ಆಗಬೇಕಾಗಿರುವುದರಿಂದ ಅರ್ಥ ಕ್ರಿಯಾಕಾರಿತ್ವರೂಪವಾದ ಸತ್ವಾನ್ಯಥಾನುಪಪತ್ತಿಯಿಂದಲಾಗಲೀ **ಯತ್ಸತ್ ತತ್ ಕ್ಷಣಿಕಂ ಯಥಾ ದೀಪಾದಿ, ಸಂತಶ್ಚಾಮೀ ಭಾವಾಃ** ಎನ್ನುವ ಅನುಮಾನದಿಂದಲಾಗಲೀ ಜಗತ್ತಿಗೆ ಕ್ಷಣಿಕತ್ವವನ್ನು ಹೇಳಬೇಕು. ಇಂತಹುದಕ್ಕೆ ಕಾಲಕರ್ಮ ನಿಮಿತ್ತದಿಂದಲೇ ಉತ್ಪತ್ತಿಯು ಕೂಡುವುದರಿಂದ ಈಶ್ವರನಿಂದ ಕೃತ್ಯವಿಲ್ಲ. ಆಗಮಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ. ಹೀಗೆ, ವೈಭಾಷಿಕ, ಸೌತ್ರಾಂತಿಕರ ಮತದಿಂದ ವಿರುದ್ಧವಾದುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವಲ್ಲ ಎಂದು ಪೂರ್ವಪಕ್ಷ ಬಂದರೆ—ಆ ವೈಭಾಷಿಕ ಸೌತ್ರಾಂತಿಕರಿಬ್ಬರೂ ಅನುಪಪನ್ನಭಾಷಿಗಳಾದುದರಿಂದ ಅವರ ಮತವು ದುಷ್ಟವಾದಪ್ರಯುಕ್ತ ಆ ಮತಗಳ ವಿರೋಧವು ಅಕಿಂಚಿತ್ಕರವು. ಆದುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವು. ಹೇಗೆಂದರೆ—(೧) ಅಣುಹೇತುಕವಾದ ಅಣುಸಮುದಾಯವೇ ಘಟಾದಿಗಳು, ಎಂದು ಹೇಳಿದ್ದು ಅಯುಕ್ತವು. **ಏಕಸ್ಮಾತ್ ಸಮುದಾಯಃ** ಎನ್ನುವುದು ವ್ಯಾಹತವಾದುದರಿಂದ ಏಕ ಅಣುಹೇತುಕವಾದುದು ಅಣುಸಮುದಾಯವು ಎನ್ನುವುದು ಕೂಡಲಾರದು. (೨) **ಅನೇಕಾಣುಹೇತುಕಃ** ಎನ್ನುವ ಪಕ್ಷದಲ್ಲಿಯೂ ಅಣುಸಮುದಾಯವು ಅಮಿಲಿತಾನೇಕಾಣು ಹೇತುಕವು ಎಂದು ಹೇಳಿದರೆ ಅವುಗಳು ಸದಾ ಇದ್ದುದರಿಂದ ಸಮುದಾಯವು

ಸದಾ ಇರಬೇಕಾದಪ್ರಯುಕ್ತ ವಿನಾಶರೂಪವಾದ ಪ್ರಲಯವು ಕೂಡದೆ ಹೋಗಬೇಕಾಗುವುದು. (೩.) ಅಣುಸಮುದಾಯವು ವಿರಲಾನೇ ಕಾಣುಹೇತುಕವು ಎಂದು ಹೇಳಿದರೆ ಯಾವಾಗಲೂ ಸಮುದಾಯದಲ್ಲಿ ವಿತ್ತಿವ್ಯವಹಾರಗಳು ಇಲ್ಲದೆ ಹೋಗುವುವು. ಮತ್ತು ಅವರ ಮತದಲ್ಲಿ ಅಣುಗಳು ಸದೃಶಕಾರ್ಯವನ್ನು ಹುಟ್ಟಿಸುವ ಸ್ವಭಾವವಿರತಕ್ಕವುಗಳು ಎಂದಂಗೀಕರಿಸುವುದರಿಂದ ವಿರಲ ಪರಮಾಣುಗಳ ದೇಶೆಯಿಂದ ಮಿಲಿತಾಣುಗಳು ಹುಟ್ಟಲಾರವು. ಮತ್ತು ಕ್ಷಣಿಕತ್ವಪಕ್ಷದಲ್ಲಿ ಅಸತಿ ಪ್ರತಿಜ್ಞಾ ಇತ್ಯಾದಿ ಸೂತ್ರಗಳಲ್ಲಿ ಹೇಳಿದ ಪ್ರಕಾರ ಪ್ರತಿಕ್ಷಣದಲ್ಲಿ ಉತ್ಪತ್ತಿಯೂ ವಿನಾಶವೂ ಕೂಡದೆ ಇರುವುದರಿಂದ ಕ್ಷಣಿಕತ್ವವೂ ಕೂಡಲಾರದು. ಮತ್ತು ಹಿಂದೆ ಹೇಳಿದ ಅರ್ಥಾಪತ್ತಿಯು ಉಭಯಥಾ ಚ ಎನ್ನುವ ಸೂತ್ರದಲ್ಲಿ ಹೇಳಿದ ಪ್ರಕಾರ ದುಷ್ಟವಾಗಿದೆ, ಅನುಮಾನವು ತದೇವೇದಂ ಎನ್ನುವ ಪ್ರತ್ಯಭಿಜ್ಞೆಯಿಂದ ಬಾಧಿತವು. ಆದಕಾರಣ ಕ್ಷಣಿಕತ್ವವು ಅಪ್ರಾಮಾಣಿಕವೇ ಆಗಿದೆ. ॥ ಅಧಿ.೭ ॥

ಸಮುದಾಯಧಿಕರಣವು ಸಮಾಪ್ತವಾಯಿತು.

## ೮ ಅಸದಧಿಕರಣವು

ಭಾಷ್ಯ ॥ ಶೂನ್ಯವಾದಮಪಾಕರೋತಿ ॥ ೧ ॥

ಭಾಷ್ಯಾರ್ಥ ॥ ಶೂನ್ಯವೇ ಜಗತ್ಕಾರಣವು ಎಂದು ಹೇಳುವ ಮಾಧ್ಯಮಿಕರ ಸಮಯವನ್ನು (ಸೂತ್ರಕಾರರು) ನಿರಾಕರಿಸುತ್ತಾರೆ.

ಪೀಠಿಕೆ ॥ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸದೆ ಇದ್ದುದರಿಂದ ಶ್ರುತಿವಿರೋಧವು ಇಲ್ಲದಿರುವ ಪ್ರಯುಕ್ತ ಶೂನ್ಯತತ್ತ್ವವು ಅಸಂಗವಾದುದಾಗ್ಯೂ ಅದಕ್ಕೆ ಸಂವೃತಿಸಂಬಂಧದಿಂದ ಜಗತ್ಕಾರಣತ್ವವು ಕೂಡುವುದರಿಂದ ಶೂನ್ಯತತ್ತ್ವದಿಂದಲೇ ಜಗತ್ತಿಗೆ ಉತ್ಪತ್ತಿಯು ಕೂಡುವುದರಿಂದ ಈಶ್ವರನಿಂದ ಉಪಯೋಗವಿಲ್ಲ. ಆದಕಾರಣ ಈಶ್ವರನಿಗೆ ಜಗತ್ಕಾರಣತ್ವವು ಕೂಡಲಾರದು. ಅವನಿಗೇನೇ ಆ ಜಗತ್ಕಾರಣತ್ವಲಕ್ಷಣವು ಎನ್ನುವುದು ಸುತರಾಂ ಕೂಡಲಾರದು, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

### ಸೂತ್ರ ॥ ಓಂ ನಾಸತೋಽದೃಷ್ಟತ್ವಾತ್ ಓಂ ॥ ೨೬ ॥

ಭಾಷ್ಯ ॥ ಅದೃಷ್ಟತ್ವಾದಸತಃ ಕಾರಣತ್ವಂ ನ ಯುಜ್ಯತೇ ॥ ೨೬ ॥ ॥ ೨ ॥

ಭಾಷ್ಯಾರ್ಥ ॥ ಸರ್ವಧರ್ಮವಿಕಲತ್ವರೂಪವಾದ ಅಸತ್ವದಿಂದ ಕೂಡಿದ ಶೂನ್ಯಕ್ಕೆ ಜಗತ್ಕಾರಣತ್ವವು ಕೂಡುವುದಿಲ್ಲ (ಜಗತ್ಕಾರಣತ್ವದಲ್ಲಿ ಪ್ರಮಾಣವಿಲ್ಲದಿರುವುದರಿಂದ) ಹೇಗೆಂದರೆ ಶೂನ್ಯಕ್ಕೆ ಕಾರಣತ್ವವು ಪ್ರತ್ಯಕ್ಷವಾಗದೆ ಇದ್ದುದರಿಂದ. ಪ್ರತ್ಯಕ್ಷೋಪಜೀವಿಯಾದ ಅನುಮಾನಕ್ಕೂ ವಿಷಯವಲ್ಲ. ಶೂನ್ಯಕ್ಕೆ ಕಾರಣತ್ವವನ್ನು ತಿಳಿಸಿಕೊಡತಕ್ಕ ಆಗಮವೂ ಇಲ್ಲ. ॥ ೨೬ ॥

ಪೀಠಿಕೆ ॥ ಶೂನ್ಯಕ್ಕೆ ಜಗತ್ಕಾರಣತ್ವವು ಅದೃಷ್ಟವಾದಾಗ್ಯೂ ಅದನ್ನು ಅಂಗೀಕರಿಸಿದರೆ ದೋಷವೇನೆಂದರೆ—

## ಸೂತ್ರ ॥ ಓಂ ★ಉದಾಸೀನಾನಾಮಪಿ ಚೈವಂ ಸಿದ್ಧಿಃ ಓಂ ॥ ೨೭ ॥

**ಭಾಷ್ಯ ॥ ಅಸತಃ ಕಾರಣತ್ವೇ ಉದಾಸೀನಾನಾಂ ಹೇಯೋಪಾದೇಯಬುದ್ಧಿವರ್ಜಿತಾನಾಂ ಖಪುಷ್ಪಾದೀನಾಮಪಿ ಸಕಾಶಾತ್ಕಾರ್ಯಸಿದ್ಧಿಃ ॥ ೩ ॥**

ಭಾಷ್ಯಾರ್ಥ ॥ ಶೂನ್ಯವೇ ಪರಮಾರ್ಥ ಸತ್ತು ಎಂದು ಪರರು ಅಂಗೀಕರಿಸಿರುವುದರಿಂದ ಅಸತ್ತಿಗೆ (ಸರ್ವಧರ್ಮರಹಿತವಾದುದರಿಂದ ಅಸತ್ ಎನ್ನಿಸಿಕೊಳ್ಳುವ ಶೂನ್ಯಕ್ಕೆ) ಕಾರಣತ್ವವು ಅಂಗೀಕೃತವಾದರೆ, ಉದಾಸೀನಾನಾಮಪಿ=ಹೇಯತ್ವ ಉಪಾದೇಯತ್ವ ಉಪೇಕ್ಷಣೀಯತ್ವ ಬುದ್ಧಿವಿಷಯಗಳಾಗದೆ ಇರುವ ಗಗನಕುಸುಮ ಸಪ್ತಮರಸ ಮೊದಲಾದವುಗಳ ಸಕಾಶದೆಶೆಯಿಂದಲೂ (ಪರಾಭಿಮತವಾದ ಶೂನ್ಯದೆಶೆಯಿಂದ ಮಾತ್ರ ಕಾರ್ಯಸಿದ್ಧಿಯಾಗುವುದಿಲ್ಲ) ಸಿದ್ಧಿಃ=ಸೌರಭ್ಯ ಪೀನತಾದಿರೂಪವಾದ ಕಾರ್ಯೋತ್ಪತ್ತಿಯಾಗಬೇಕಾಗುವುದು.

ಪೀಠಿಕೆ ॥ ಗಗನಕುಸುಮಾದಿಗಳಿಗೆ ಕಾರಣತ್ವವು ಇಲ್ಲವಾದರೂ ದೋಷವು ಏನು ಎಂದರೆ—

**ಭಾಷ್ಯ॥ ಚ ಶಬ್ದಾನ್ನ ಚೇದನ್ಯತ್ರಾಪಿ ನ ಸ್ಯಾದವಿಶೇಷಾತ್ ॥ ೨೭ ॥ ॥ ೪ ॥**

ಭಾಷ್ಯಾರ್ಥ ॥ ಗಗನಕುಸುಮಾದಿಗಳ ದೆಶೆಯಿಂದ ಕಾರ್ಯಸಿದ್ಧಿಯು ಆಗುವುದಿಲ್ಲವೆಂದಾದರೆ ಖಪುಷ್ಪಾದಿಗಳಿಂದ ಇತರವಾದ ಬೌದ್ಧರಿಗೆ ಅಭಿಮತವಾದ ಶೂನ್ಯತತ್ವದಿಂದಲೂ, (ಅಪಿ) ಜಗದಾಖ್ಯಕಾರ್ಯೋತ್ಪತ್ತಿಯು ಆಗದೆ ಹೋಗಬೇಕಾಗುವುದು. ಶೂನ್ಯಕ್ಕೂ ಖಪುಷ್ಪಾದಿಗಳಿಗೂ ಅಸತ್ವದಿಂದ ವಿಶೇಷವಿಲ್ಲದಿರುವುದರಿಂದ (ಎಂದು) ಚ ಶಬ್ದದಿಂದ ಸಿದ್ಧಿಸುವುದು. ॥ ೨೭ ॥

ಪೀಠಿಕೆ ॥ ಮೃತ್ಪಿಂಡದಿಂದ ಘಟವು ಹುಟ್ಟುವಂತೆ ಪಾರಮಾರ್ಥಿಕವಾಗಿ ಶೂನ್ಯತತ್ವದಿಂದ ಜಗತ್ತು ಹುಟ್ಟುತ್ತದೆಂದು ಹೇಳುವುದಿಲ್ಲ. ಅಂದರೆ ಶೂನ್ಯತತ್ವಕ್ಕೆ ಜಗದಾಕಾರದಿಂದ ಪರಿಣಾಮವನ್ನು ಅಂಗೀಕರಿಸುವುದಿಲ್ಲ. ಮತ್ತೆ ಸಂವೃತಿ ಎನ್ನುವ ಅಜ್ಞಾನವಿಶೇಷದಿಂದ ಶುಕ್ತಿಯು ರಜತಾಕಾರವಾಗಿ ತೋರಿದಂತೆ ಶೂನ್ಯಕ್ಕೂ ಜಗದಾಕಾರದಿಂದ ಅವಭಾಸ (ಪ್ರತೀತಿ) ರೂಪವಾದ ವಿವರ್ತತ್ವವನ್ನು ಅಂಗೀಕರಿಸಿರುವೆವು. ಎಂದರೆ—

## ಸೂತ್ರ ॥ ಓಂ ನಾಭಾವ ಉಪಲಬ್ಧೇಃ ಓಂ ॥ ೨೮ ॥

**ಭಾಷ್ಯ ॥ ನ ಚ ಜಗದೇವ ಶೂನ್ಯಮಿತಿ ವಾಚ್ಯಂ। ದೃಷ್ಟತ್ವಾತ್ ॥ ೨೮ ॥ ೫ ॥**

ಭಾಷ್ಯಾರ್ಥ ॥ ಅಭಾವಃ=ಭವತೀತಿ ಭಾವಃ, ಸತ್, ನ ಭಾವಃ ಅಭಾವಃ=ಅಸತ್ತು ಎನ್ನುವ

★ ಉದಾಸೀನಾನಾಂ ಎನ್ನುವುದಕ್ಕೆ ಹೇಯೋಪಾದೇಯಬುದ್ಧಿವಿಷಯಾತ್ವಾತ್ ಉದ್ಗತ್ಯ ಆಸೀನಾನಾಂ ಎಂದು ತತ್ವಪ್ರದೀಪದಲ್ಲಿ ಹೇಳಿದೆ.

ವ್ಯತ್ಪತ್ತಿಯಿಂದ ಶೂನ್ಯರೂಪವಾದ ಅಸತ್ತೇ, ಜಗದಾಕಾರವಾಗಿ ತೋರುತ್ತದೆ. (ಪಾರಮಾರ್ಥಿಕವಾಗಿ ಜಗತ್ತು ಇಲ್ಲ) ಹೀಗೆ ಹೇಳಕೂಡದು. (ಇಷ್ಟು ಮಾತ್ರವಲ್ಲ ಮತ್ತೆ ಅಸತ್ತಾದ ಶುಕ್ತಿಯೇ ರಜತಾಕಾರವಾಗಿ ತೋರುತ್ತದೆ, ಎನ್ನುವ ವಚನವೂ ಯುಕ್ತವಲ್ಲ ಎಂದು ಚ ಶಬ್ದಾರ್ಥವು.) ಏಕೆಂದರೆ ಸತ್ ಎಂದು ತೋರುವುದರಿಂದ. (ಇದು ರಜತವಲ್ಲ ಶುಕ್ತಿಯೇ, ಎಂದು ಬಾಧವು ಇದ್ದುದರಿಂದ). ॥ ೨೮ ॥

ಪೀಠಿಕೆ ॥ ಸ್ವಾಪ್ನ ರಜ್ಜು ಭುಜಂಗಾದಿಗಳು ಸತ್ತೆಂದು ಕಾಣಲ್ಪಟ್ಟರೂ ಅವುಗಳಿಗೆ ಅಸತ್ವವು ತೋರಿದಂತೆ ಜಗತ್ತು ಸತ್ತೆಂದು ತೋರಿದರೂ ರಜ್ಜು ಭುಜಂಗಾದಿಗಳಂತೆಯೇ ಅಸತ್ವವು ಏಕೆ ಆಗಲಾರದು? ಎಂದರೆ—

## ಸೂತ್ರ ॥ ಓಂ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಓಂ ॥ ೨೯ ॥

ಭಾಷ್ಯ ॥ ನ ಚ ದೃಷ್ಟಸ್ಯಾಪಿ ಸ್ವಪ್ನಾದಿವದಭಾವಃ । ತಸ್ಯೋತ್ತರಕಾಲೇ ಸ್ವಪ್ನೋಽಯಂ ನಾಯಂ ಸರ್ಪಃ ಇತ್ಯಾದ್ಯನುಭವಾತ್ ॥ ೬ ॥

ಭಾಷ್ಯಾರ್ಥ ॥ (ಕಾಣಲ್ಪಡದೆ ಇದ್ದುದಕ್ಕೆ ಮಾತ್ರವಲ್ಲ) ಸತ್ತಾಗಿ ಕಾಣಲ್ಪಟ್ಟ ಜಗತ್ತಿಗೂ ಗಜ ತುರುಗಾದಿ ರೂಪವಾದ ಸ್ವಾಪ್ನ ಪದಾರ್ಥಾದಿಗಳಂತೆಯೇ ರಜ್ಜು ಭುಜಂಗಾದಿಗಳಂತೆಯೂ ಅಸತ್ವವನ್ನು ಶಂಕಿಸಕೂಡದು. (ಏಕೆಂದರೆ) ವೈಧರ್ಮ್ಯಾತ್=ದೃಷ್ಟಾಂತದಲ್ಲಿ ಸಾಧ್ಯವಿಲ್ಲದಿರುವುದರಿಂದ, (ಹಾಗಾದರೆ ಸ್ವಪ್ನವು ದೃಷ್ಟಾಂತವಲ್ಲ, ಸ್ವಪ್ನಜಾಗ್ರತ್ವವು ದೃಷ್ಟಾಂತವು. ಅದಕ್ಕೆ ಮಿಥ್ಯಾತ್ವವು ಇಬ್ಬರಿಗೂ ಸಮ್ಮತವಾದ ಪ್ರಯುಕ್ತ ಸಾಧ್ಯವೈಕಲ್ಯವಿಲ್ಲವೆಂದರೆ) ಸ್ವಾಪ್ನ ಜಾಗ್ರತ್ವಾದಿಗಳಿಗೆ ಆ ಜಗತ್ತಿನ ಸಕಾಶದೆಶೆಯಿಂದ ಭ್ರಾಂತ್ಯುತ್ತರ ಕಾಲದಲ್ಲಿ (ಅಂದರೆ ಎಚ್ಚೆತ್ತ ಮೇಲೆ) ಇದು ಸ್ವಪ್ನವೇ, ಜಾಗ್ರತ್ತಲ್ಲ. ಇದು ಸರ್ಪವಲ್ಲ ಮತ್ತೆ ರಜ್ಜುವು. ಇದು ಮೊದಲಾದ ಬಾಧಕ ಪ್ರಮಾಣವಿಷಯತ್ವರೂಪವಾದ ವೈಲಕ್ಷಣ್ಯರೂಪವಾದ ಅನುಭವದೆಶೆಯಿಂದ.

ಪೀಠಿಕೆ ॥ ಜಗತ್ತಿನಲ್ಲಿಯೂ ಸ್ವಪ್ನಾದಿಗಳಂತೆಯೇ ಬಾಧಕವಿದ್ದುದರಿಂದ ಅಸತ್ವವು ಏಕೆ ಆಗಲಾರದು? ಎಂದರೆ—

ಭಾಷ್ಯ ॥ ನ ಚಾತ್ರ ತಾದೃಶಂ (ಶ)ಪ್ರಮಾಣಮಸ್ತಿ ॥ ೨೯ ॥ ಅಧಿ.೮ ॥ ॥ ೭ ॥

ಭಾಷ್ಯಾರ್ಥ ॥ ಪ್ರಕೃತವಾದ ಜಗತ್ತಿನಲ್ಲಿ ದೃಷ್ಟಾಂತದಲ್ಲಿ ಉದಾಹೃತವಾದ ಬಾಧಕ ಪ್ರತ್ಯಕ್ಷಕ್ಕೆ ಸದೃಶವಾದ, ಜಗತ್ತಿಗೆ ಅಸತ್ವವನ್ನು ಗ್ರಹಿಸತಕ್ಕ ಬಾಧಕ ಪ್ರಮಾಣವು ಇಲ್ಲ. ಸ್ವಪ್ನಾದಿಗಳಿಗೆ ಬಾಧ್ಯತ್ವರೂಪವಾದ ಜಗದ್ವೈಧರ್ಮ್ಯದಿಂದ ಮಾತ್ರವಲ್ಲ ಜಗತ್ತಿನಲ್ಲಿ ಬಾಧಕವಿಲ್ಲದಿರುವುದರಿಂದಲೂ ಅಸತ್ವವಿಲ್ಲ ಎಂದು ಚ ಶಬ್ದಾರ್ಥವು ॥ ೨೯ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಸಮುದಾಯೇ ಎನ್ನುವುದನ್ನಾರಂಭಿಸಿ ಉದಾಸೀನಾನಾಂ ಎನ್ನುವ ಸೂತ್ರ ಪರ್ಯಂತ ಹತ್ತು ಸೂತ್ರಗಳು ಒಂದು ಅಧಿಕರಣವು ವೈಭಾಷಿಕ, ಸೌತ್ರಾಂತಿಕ ಮತಾಂತರ ನಿರಾಸಕವು, ಎಂದು

ಮಾಯಾವಾದಿ ರಾಮಾನುಜಾಚಾರ್ಯರು ಇಬ್ಬರೂ ಹೇಳುವರು. ಅದು ಅಯುಕ್ತವು. ನಮ್ಮ ರೀತಿಯಾಗಿ ನಾಸತಃ ಇತ್ಯಾದಿ ನಾಲ್ಕು ಸೂತ್ರಗಳು ಅವಶ್ಯನಿರಸನೀಯವಾದ ಶೂನ್ಯವಾದ ನಿರಾಸಕವಾಗಿ ಭಿನ್ನಾಧಿಕರಣವೆಂದು ಕೂಡುವಾಗ ಒಂದೇ ಅಧಿಕರಣವೆನ್ನುವುದು ಸರ್ವಥಾ ಕೂಡಲಾರದು.

## ಅಧಿಕರಣ ಸಾರಾಂಶ

ಪಾರಮಾರ್ಥಿಕವಾದ ದೇಶ ಕಾಲ ಪರಿಚ್ಛೇದಶೂನ್ಯವಾದ ಶೂನ್ಯತತ್ತ್ವದಿಂದಲೇ ಸಂವೃತಿ (ವಿಶ್ವಾರೋಪ ನಿಮಿತ್ತವಾದ ಅಜ್ಞಾನಸಂಬಂಧ)ದಿಂದ ಜಗತ್ತಿನ ಉತ್ಪತ್ತಿಯು ಕೂಡುವಾಗ ಶ್ರೀಹರಿಯಿಂದ ಕೃತ್ಯವಿಲ್ಲ. ಶ್ರುತ್ಯಾದಿಗಳಿಗೆ ಪ್ರಾಮಾಣ್ಯವನ್ನು ಒಡಂಬಡುವುದಿಲ್ಲ. ಹೀಗೆ ಶೂನ್ಯವಾದಿಮತದಿಂದ ವಿರೋಧವಿದ್ದುದರಿಂದ ಶ್ರೀಹರಿಗೆ ವಿಶ್ವಕರ್ತೃತ್ವವು ಯುಕ್ತವಲ್ಲ ಎಂದರೆ, ಸತ್ತ್ವಾದಿ ಸರ್ವಧರ್ಮವಿರಹಿತವಾದ ಅಸತ್ತಾದ ಶೂನ್ಯಕ್ಕೆ ಕಾರಣತ್ವವೇ ಅಪ್ರಾಮಾಣಿಕವು. ಶೂನ್ಯವೇ ಜಗದಾಕಾರವಾಗಿ ತೋರುವುದು, ವಸ್ತುತಃ ಜಗತ್ತು ಇಲ್ಲ ಎನ್ನುವುದೂ ಸನ್ ಘಟಃ ಇತ್ಯಾದಿ ಅಬಾಧಿತ ಪ್ರತ್ಯಕ್ಷಾದಿಗಳಿಂದ ಬಾಧಿತವಾದ ಪ್ರಯುಕ್ತ ಕೂಡಲಾರದು. ಆದಕಾರಣ ಅವರ ಮತವು ದುಷ್ಟವಾದ ಪ್ರಯುಕ್ತ ಅದರಿಂದ ವಿರೋಧವು ಇಲ್ಲದಿರುವುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವು. ॥ ಅಧಿ.೮ ॥

ಅಸದಧಿಕರಣವು ಸಮಾಪ್ತವಾಯಿತು.

# ೯ ಅನುಪಲಬ್ಧ್ಯಧಿಕರಣವು

**ಭಾಷ್ಯ ॥ ವಿಜ್ಞಾನವಾದಮಪಾಕರೋತಿ** ॥ ೧ ॥

ಭಾಷ್ಯಾರ್ಥ ॥ ನಾಲ್ಕು ವಿಧರಾದ ಸೌಗತರ ಮಧ್ಯದಲ್ಲಿ ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ ಈ ಮೂವರನ್ನು ನಿರಾಕರಿಸಿ, ಈಗ, ಜಗತ್ತು ವಿಜ್ಞಾನಪರಿಣತವು, ವಿಜ್ಞಾನರೂಪವೇ, ಅದರಿಂದ ಅತಿರಿಕ್ತವಲ್ಲವೆಂದು ಹೇಳತಕ್ಕ ಯೋಗಾಚಾರರ ಮತವನ್ನು (ಈ ಅಧಿಕರಣದಲ್ಲಿ ಸೂತ್ರಕಾರರು) ನಿರಾಕರಿಸುತ್ತಾರೆ.

ಪೀಠಿಕೆ ॥ ನಿತ್ಯವಾದ ನಿರಂಜನವಾದ ವಿಜ್ಞಾನತತ್ತ್ವವೇ ಇರತಕ್ಕದ್ದು. ಈ ಜಗತ್ತು ತದ್ರೂಪವೇ. ಅದರಿಂದ ಅತಿರಿಕ್ತವಲ್ಲ. ತಥಾಚ ಅದರಿಂದಲೇ ಜಗತ್ತು ಹುಟ್ಟುತ್ತದೆ. ಈಶ್ವರನಿಂದ ಕೃತ್ಯವಿಲ್ಲ. ಆದುದರಿಂದ ಈಶ್ವರನಿಗೆ ಜಗತ್ಕಾರಣತ್ವರೂಪಲಕ್ಷಣವು ಯುಕ್ತವಲ್ಲ ಎಂದರೆ—

## ಸೂತ್ರ ॥ ಓಂ ನ ಭಾವೋಽನುಪಲಬ್ಧೇಃ ಓಂ ॥ ೩೦ ॥

**ಭಾಷ್ಯ ॥ ನ ವಿಜ್ಞಾನಮಾತ್ರಂ ಜಗತ್ । ತಥಾಽನುಭವಾಭಾವಾತ್** ॥ ೩೦ ॥

ಭಾಷ್ಯಾರ್ಥ ॥ ಜಗತ್ತು ವಿಜ್ಞಾನರೂಪವೇ, ಅದರಿಂದ ಅತಿರಿಕ್ತವಲ್ಲ ಎನ್ನುವುದು ಯುಕ್ತವಲ್ಲ.

ವಿಜ್ಞಾನದಿಂದ ಅಭಿನ್ನವಾಗಿ ಜಗತ್ತಿನ ಪ್ರಮಿತಿ ಇಲ್ಲದಿರುವುದರಿಂದ. (ಮತ್ತೆ ಅದರಿಂದ ಭಿನ್ನವಾಗಿಯೇ ಅನುಭವವಿದ್ದುದರಿಂದ.) ॥ ೩೦ ॥

ಪೀಠಿಕೆ ॥ ಯುಕ್ತ್ಯಂತರದಿಂದಲೂ ಜಗತ್ತಿಗೆ ವಿಜ್ಞಾನಾತ್ಮಕತ್ವವನ್ನು ತಿರಸ್ಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಕ್ಷಣಿಕತ್ವಾಚ್ಚ ಓಂ ॥ ೩೧ ॥

**ಭಾಷ್ಯ ॥ ಜ್ಞಾನಂ ಕ್ಷಣಿಕಂ । ಅರ್ಥಾನಾಂ ಚ ಸ್ಥಾಯಿತ್ವಮುಕ್ತಂ । ಅತಶ್ಚ ನೈಕ್ಯಂ ॥ ೩೧ ॥ ॥ ೩ ॥**

ಭಾಷ್ಯಾರ್ಥ ॥ ಜ್ಞಾನಕ್ಕೆ ಕ್ಷಣಿಕತ್ವ (ಆಶುತರವಿನಾಶಿತ್ವ)ವಿದ್ದುದರಿಂದಲೂ ಅಯುಕ್ತವು. ಜ್ಞಾನವು ಆಶುತರವಿನಾಶಿಯು. ಘಟ, ಪಟಾದ್ಯರ್ಥಗಳಿಗೆ ಸ್ಥಾಯಿತ್ವವು ಉಕ್ತವಾಗಿದೆ. ಆದುದರಿಂದ, ಅಂದರೆ—ಪ್ರಮಾಣವಿಲ್ಲದಿರುವುದು ಮಾತ್ರವಲ್ಲ, ಮತ್ತೆ ವಿರುದ್ಧಧರ್ಮಾಧಿಕರಣತ್ವವಿದ್ದುದರಿಂದಲೂ (ವಿಜ್ಞಾನ, ಜಗತ್ತುಗಳಿಗೆ) ಐಕ್ಯವಲ್ಲ ॥ ೩೧ ॥

ಪೀಠಿಕೆ ॥ ಹೀಗೆ, ಪ್ರತ್ಯೇಕವಾಗಿ ವೈಭಾಷಿಕಾದಿ ಬೌದ್ಧಮತಗಳನ್ನು ದೂಷಿಸಿ, ಪುನಃ ಸಾಮಾನ್ಯ ದೂಷಣದಿಂದಲೂ ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸರ್ವಥಾಽನುಪಪತ್ತೇಶ್ಚ ಓಂ ॥ ೩೨ ॥

ಸೂತ್ರಾರ್ಥ ॥ ಸರ್ವಥಾ=ಸರ್ವಪ್ರಕಾರಗಳಲ್ಲಿಯೂ ಅಂದರೆ—ಪ್ರತ್ಯಕ್ಷಕ್ಕೆ ಕ್ಷಣಿಕತ್ವಕಲ್ಪನದಲ್ಲಿಯೂ, ಪರೋಕ್ಷ ಪ್ರತ್ಯಕ್ಷ ಬಿಂಬ, ಪ್ರತಿಬಿಂಬರೂಪ ಎರಡು ಜಗತ್ತುಗಳ ಕಲ್ಪನದಲ್ಲಿಯೂ, ಶೂನ್ಯಾದ್ವೈತ ಕಲ್ಪನದಲ್ಲಿಯೂ, ವಿಜ್ಞಾನಾದ್ವೈತ ಕಲ್ಪನದಲ್ಲಿಯೂ ಅನುಪಪತ್ತೇಶ್ಚ= ಪ್ರಮಾಣಸಾಮಾನ್ಯವಿಲ್ಲದಿರುವುದರಿಂದಲೂ, ಪ್ರಮಾಣವಿರೋಧವು ಇದ್ದುದರಿಂದಲೂ, ಸ್ಥಾಯಿಗಳಾದ ಜೀವೇಶ್ವರರನ್ನು ಅಂಗೀಕರಿಸದೆ ಇದ್ದುದರಿಂದಲೂ. (ಎಲ್ಲಾ ವೇದವಿದ್ವೇಷಿಗಳ ಮತಗಳು ಕೂಡುವುದಿಲ್ಲ)

**ಭಾಷ್ಯ ॥ ಪ್ರಮಾಣಾಭಾವತ್ ಸರ್ವಶ್ರುತಿಸ್ಮೃತಿಯುಕ್ತಿ ವಿರುದ್ಧತ್ವಾಚ್ಚ ನೈತೇ ಪಕ್ಷಾ ಗ್ರಾಹ್ಯಾಃ ॥ ೩೨ ॥ ಅಧಿ. ೯ ॥ ॥ ೪ ॥**

ಭಾಷ್ಯಾರ್ಥ ॥ ಯಾವುದೊಂದು ಪ್ರಮಾಣವು ಇಲ್ಲದಿರುವುದರಿಂದಲೂ, **ನ ಋತೇ ತ್ವತ್ಕ್ರಿಯತೇ, ಯಚ್ಚ ಕಿಂಚಿತ್** ಇದು ಮೊದಲಾದ ಬಹುಶ್ರುತಿಗಳೂ, **ಸ ಏವ ಭೂಯಃ** ಇದು ಮೊದಲಾದ ಬಹು ಸ್ಮೃತಿಗಳೂ, ಯುಕ್ತಿಗಳೂ ಇವುಗಳ ವಿರೋಧವಿದ್ದುದರಿಂದಲೂ, ವೇದವಿದ್ವೇಷಿಗಳಾದ ವೈಭಾಷಿಕಾದಿಗಳ ಮತಗಳು (ಜ್ಞಾನಿಗಳಿಂದ) ಸ್ವೀಕರಿಸಲ್ಪಡಬಾರದು. ॥ ೩೨ ॥

## ಮಾಯಾವಾದಿರೀತ್ಯಾ

**ವಿಚಾರ ॥ ನಾಭಾವ ಉಪಲಬ್ಧೇಃ** ಇತ್ಯಾದಿ ಐದು ಸೂತ್ರಗಳು ಒಂದು ಅಧಿಕರಣವು ವಿಜ್ಞಾನವಾದನಿರಾಸಕವು ಎಂದು ಮಾಯಾವಾದಿಗಳು ಹೇಳುವರು. ಅದು ಅಯುಕ್ತವು. ನಾಸತಃ ಇತ್ಯಾದಿ ಎರಡು ಸೂತ್ರಗಳಿಂದ ಶೂನ್ಯಪರಿಣಾಮವು ನಿರಸ್ತವಾಗೋಣ ಅವಶಿಷ್ಟವಾದ ಅವಶ್ಯ ನಿರಸನೀಯವಾದ ಶೂನ್ಯವಿವರ್ತತ್ವಮತವನ್ನು ನಿರಾಕರಿಸದೆ ಇತರ ಮತನಿರಾಸಕ್ಕೆ ಅವಸರವಿಲ್ಲ. ಮತ್ತು ಒಂದನೇ ಎರನೇ ಸೂತ್ರಗಳು **ಕಿಂ ಪುನಃ ವೈಧರ್ಮ್ಯಬಾಧಾಬಾಧಾವಿತಿ ಬ್ರೂಮಃ** ಇತ್ಯಾದಿಗಳಿಂದ ಜಗತ್ತಿಗೆ ಸತ್ಯತ್ವವನ್ನು ಸಾಧಿಸಿ ಅದ್ವೈತಿಗಳಿಂದ ವ್ಯಾಖ್ಯಾತಗಳಾಗಿವೆ. ಅವುಗಳು ಅದ್ವೈತಿಮತಕ್ಕೆ ವಿರುದ್ಧಗಳು. ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ನಿತ್ಯ ನಿರಂಜನ ಸದ್ರೂಪವಾದ ವಿಜ್ಞಾನತತ್ವದಿಂದಲೇ ಪಾರಮಾರ್ಥಿಕವಾಗಿ ವಿಜ್ಞಾನತತ್ವದಿಂದ ಅಭಿನ್ನವಾದ ಜಗತ್ತು ಹುಟ್ಟುವುದರಿಂದ ಈಶ್ವರನಿಂದ ಕೃತ್ಯವಿಲ್ಲದಿರುವುದರಿಂದ ವಿಜ್ಞಾನವಾದಿಮತ ದಿಂದ ವಿರೋಧವು ಎಂದರೆ—ವಿಜ್ಞಾನತತ್ವದಿಂದ ಬೇರೆ ಜಗತ್ತೇ ಇಲ್ಲ ಎನ್ನುವುದು ಸತ್ವಗ್ರಾಹಿ ಪ್ರತ್ಯಕ್ಷದಿಂದ ಬಾಧಿತವಾಗಿದೆ. ವಿಜ್ಞಾನತತ್ವಕ್ಕೂ, ಜಗತ್ತಿಗೂ ತಾದಾತ್ಮ್ಯವು ಅಬಾಧಿತವಾದ ಭೇದಪ್ರತೀತಿಯಿಂದ ವಿರುದ್ಧವು. ಮತ್ತು ವಿಜ್ಞಾನವು ಆಶುತರ ವಿನಾಶಿಯಾದುದರಿಂದ ಇಂತಹ ಜಗತ್ತಾದಾತ್ಮ್ಯವು ಕೂಡದೆ ಇದ್ದುದರಿಂದ ಅವರ ಮತವು ಅಯುಕ್ತವಾದಪ್ರಯುಕ್ತ ಆದರಿಂದ ವಿರೋಧವು ಇಲ್ಲದಿರುವುದರಿಂದ ವಿಷ್ಣುವಿಗೆ ವಿಶ್ವಕರ್ತೃತ್ವವು ಯುಕ್ತವು. ॥ ಅಧಿ. ೯ ॥

**ಅನುಪಲಬ್ಧ್ಯಧಿಕರಣವು ಸಮಾಪ್ತವಾಯಿತು.**

# ೧೦ ನೈಕಸ್ಮಿನ್ನಧಿಕರಣವು

**ಭಾಷ್ಯ ॥ ಸ್ಯಾದ್ವಾದಿಮತಂ ದೂಷಯತಿ (ನಿರಾಕರೋತಿ) ॥ ೧ ॥**

**ಭಾಷ್ಯಾರ್ಥ ॥** ಸೂತ್ರಕಾರರು ಸ್ಯಾದ್ವಾದಿಮತವನ್ನು ದೂಷಿಸುತ್ತಾರೆ.

**ಪೀಠಿಕೆ ॥** ಕಾಯಪರಿಮಾಣವುಳ್ಳ ಜೀವಾತ್ಮನಿಂದಲೂ, ದೃಷ್ಟಾದೃಷ್ಟ ಸಾಧನಗಳಿಂದಲೂ, ಸಪ್ತ (೭) ಪ್ರಕಾರವುಳ್ಳ ಜಗತ್ತು ಹುಟ್ಟುವುದರಿಂದ ಈಶ್ವರನಿಂದ ಕೃತ್ಯವಿಲ್ಲ. ಆದಕಾರಣ ಲಕ್ಷಣಸೂತ್ರವು ಅಯುಕ್ತವು, ಎಂದರೆ—

## ಸೂತ್ರ ॥ ಓಂ ನೈಕಸ್ಮಿನ್ನಸಂಭವಾತ್ ಓಂ ॥ ೩೩ ॥

**ಸೂತ್ರಾರ್ಥ ॥** (ಜನನಿಂದ ಹೇಳಲ್ಪಟ್ಟ ಜಗತ್ತಿಗೆ ಸಪ್ತಭಂಗಿತ್ವವು) ಒಂದು ವಸ್ತುವಿನಲ್ಲಿ ಸರ್ವಥಾ ಯುಕ್ತವಲ್ಲ. ಅಪ್ರಾಮಾಣಿಕವಾಗಿರುವುದರಿಂದ ಕೂಡದೆ ಇರುವ ಪ್ರಯುಕ್ತ.

ಭಾಷ್ಯ ॥ ಸತ್ಸ್ಯಾದಸತ್ಸ್ಯಾತ್ಸದಸತ್ಸ್ಯಾತ್ತತೋಽನ್ಯಚ್ಚ ಸ್ಯಾದಿತ್ಯೇತನ್ನೈಕಸ್ಮಿನ್ಯುಜ್ಯತೇ । ಅದೃಷ್ಟತ್ವೇನಾಸಂಭವಾತ್ ॥ ೩೩ ॥ ॥ ೨ ॥

ಭಾಷ್ಯಾರ್ಥ ॥ ಜಗತ್ತು(೧) ಸತ್ತು ಆಗುವುದು. (ಇದರಿಂದ ಸತ್ತ್ವಾಖ್ಯವಾದ ಒಂದು ಪ್ರಕಾರವು ಉಕ್ತವಾಯಿತು.) (೨) ಅಸತ್ತೂ ಆಗುವದು. (ಅಸತ್ವಾಖ್ಯಪ್ರಕಾರವು.) (೩.) ಸದಸತ್ ಆಗುವದು. (ಸದಸತ್ವರೂಪಪ್ರಕಾರವು) ಹೇಳಿದ ಮೂರು ಪಕ್ಷಗಳಿಂದ ಇತರವಾದುದೂ ಆಗುವುದು. (ಇದರಿಂದ ನಾಲ್ಕು ಪ್ರಕಾರಗಳು ಹೇಳಲ್ಪಟ್ಟವು. ಹೇಗೆಂದರೆ—) (೪) ಸದ್ಭ್ಯಾಂ ಅನ್ಯತ್ ಎನ್ನುವುದರಿಂದ ಸದಸದ್ವಿಲಕ್ಷಣತ್ವಪ್ರಕಾರವು. (೫) ಸತ್ ಸ್ಯಾತ್, ತತಃ ಅನ್ಯತ್ ಸ್ಯಾತ್ ಎನ್ನುವುದರಿಂದ ಸತ್ವೇ ಸತಿ ಸದಸದ್ವಿಲಕ್ಷಣತ್ವ ಪ್ರಕಾರವು. (೬) ಅಸತ್ ಸ್ಯಾತ್, ಅನ್ಯಚ್ಚ ಸ್ಯಾತ್ ಎನ್ನುವುದರಿಂದ ಅಸತ್ವೇ ಸತಿ ಅಸದ್ವಿಲಕ್ಷಣತತ್ವ ಪ್ರಕಾರವು. (೭) ಸದಸತ್ ಸ್ಯಾತ್, ಅನ್ಯತ್ ಸ್ಯಾತ್ ಎನ್ನುವುದರಿಂದ ಸದಸತ್ವೇ ಸತಿ ಸದಸದ್ವಿಲಕ್ಷಣತ್ವರೂಪವಾದ ಪ್ರಕಾರವು ಈ ರೀತಿಯಾಗಿ ಜನನಿಂದ ಹೇಳಲ್ಪಟ್ಟ ಜಗತ್ತಿಗೆ ಸಪ್ತಭಂಗಿತ್ವವು ಒಂದು ವಸ್ತುವಿನಲ್ಲಿ ಕೂಡುವುದಿಲ್ಲ. ದೇಶಕಾಲಾದಿಭೇದದಿಂದ ವ್ಯವಸ್ಥಿತವಾದ ಸತ್ ಅಸತ್ ಎರಡು ಪ್ರಕಾರಗಳಿಂದ ಅತಿರಿಕ್ತವಾದ ಪ್ರಕಾರವು ಕಾಣದೆ ಇರುವುದರಿಂದ ಅಪ್ರಾಮಾಣಿಕವಾಗಿರುವಪ್ರಯುಕ್ತ ಕೂಡಲಾರದು. ಅಂತೂ ಸದಸತ್ತುಗಳಿಂದ ಇತರ ಪ್ರಕಾರವೇ ಅಪ್ರಾಮಾಣಿಕವಾದುದರಿಂದ ಒಂದರಲ್ಲಿ ಸಪ್ತಪ್ರಕಾರಗಳು ಸುತರಾಂ ಅಪ್ರಾಮಾಣಿಕವು. ॥ ೩೩ ॥

ಪೀಠಿಕೆ ॥ ಜೀವನು ಅಣುವೆಂದು ಆದರೆ, ಕರ, ಚರಣ ಮೊದಲಾದ ಸರ್ವಾಂಗಗಳಲ್ಲಿ ಆಗತಕ್ಕ ವೇದನಾ (ನೋವು) ಅನುಸಂಧಾನವು ಕೂಡದೆಹೋಗುವುದು. ವ್ಯಾಪ್ತನೆಂದಾದರೆ ದೇಹಾಂತರದಲ್ಲಿದ್ದ ಸುಖದುಃಖಾದಿಗಳ ಅನುಭವವೂ ಬರಬೇಕಾಗುವುದು. ಆದಕಾರಣ, ಅವಾವ ಶರೀರಪರಿಮಾಣ ಉಳ್ಳವನು ಎಂದು ಜನನು ಹೇಳಿದ್ದು ಅಯುಕ್ತವೆನ್ನುತ್ತಾರೆ—

## ಸೂತ್ರ ॥ ಓಂ ಏವಂ ಚಾತ್ಮಾಕಾರ್ತ್ಸ್ನ್ಯಂ ಓಂ ॥ ೩೪ ॥

ಸೂತ್ರಾರ್ಥ ॥ ಆತ್ಮಾ=ಜೀವನು, ಏವಂ=ಹೀಗೆ ಅವಾವ ಶರೀರ ಪರಿಮಾಣ ಉಳ್ಳವನೆಂದು ಅಂಗೀಕರಿಸುವುದಾದರೆ, ಪಿಪೀಲಿಕಾ(ಇರುವೆ)ದಿ ಶರೀರದಲ್ಲಿದ್ದವನು ಪಿಪೀಲಿಕಾ ಪರಿಮಾಣ ಉಳ್ಳವನು ಗಜಾದಿಶರೀರವನ್ನು ಹೊಂದಿದರೆ, ಆಗ ಅಕಾರ್ತ್ಸ್ನ್ಯಂ=ಅಪೂರ್ಣತ್ವವನ್ನು ಹೊಂದಿಯಾನು. ಹೀಗೆ, ಗಜಾದಿಕಾಯ ಪರಿಮಾಣ ಉಳ್ಳವನು ಪಿಪಿಲೀಕಾದಿಗಳ ಶರೀರವನ್ನು ಹೊಂದಿದರೆ, ಆಗ ಅಲ್ಲಿ ಕಾರ್ತ್ಸ್ನ್ಯಂ=ಅಧಿಕ್ಯವನ್ನು ಹೊಂದಿಯಾನು.

ಭಾಷ್ಯ ॥ ಜೀವಸ್ಯ ಶರೀರಪರಿಮಿತತ್ವಾಂಗೀಕಾರೇಽಣ್ವಾದಿಶರೀರಸ್ಥಸ್ಯ ಹಸ್ತ್ಯಾದಿ-ಶರೀರೇಽಕಾರ್ತ್ಸ್ನ್ಯಂ ಸ್ಯಾತ್ ॥ ೩೪ ॥ ॥ ೩ ॥

ಭಾಷ್ಯಾರ್ಥ ॥ ಜೀವನಿಗೆ ಸರ್ವತ್ರ ಚೇಷ್ಟೆಯು ಉಂಟಾಗುವುದಕ್ಕಾಗಿ ಅವಾವ ಶರೀರ ಪರಿಮಾಣವನ್ನು ಅಂಗೀಕರಿಸಿದರೆ, ಪಿಪೀಲಿಕಾದಿ ಅಣು, ಹ್ರಸ್ವ ಶರೀರದಲ್ಲಿ ಇದ್ದವನಿಗೆ (ಅವಾವ ಪರಿಮಾಣವನ್ನು ಅವಶ್ಯವಾಗಿ ಹೇಳಬೇಕಾದುದರಿಂದ ಆತನಿಗೇನೇ ಕರ್ಮವಶಾತ್) ಗಜ,

ಗರ್ದಭಾದಿಶರೀರವು ಪ್ರಾಪ್ತವಾದರೆ, ಅಲ್ಲಿ ಅಪೂರ್ಣತ್ವವು ಬರುವುದು. (ಅಂತೂ, ಜೀವನಿಗೆ ಸರ್ವಶರೀರಾವಯವಗಳಲ್ಲಿ ಇರತಕ್ಕ ಚೇಷ್ಟೆಯು ಕೂಡಲಾರದು.) ಹೀಗೆಯೇ, ಗಜಾದಿಶರೀರದಲ್ಲಿ ಇದ್ದವನಿಗೆ ಪಿಪೀಲಿಕಾದಿಶರೀರವು ಪ್ರಾಪ್ತವಾದರೆ ಆಧಿಕ್ಯವು ಬರುವುದು. ಅಂದರೆ ಶರೀರದಿಂದ ಹೊರಗೂ ಇರಬೇಕಾಗುವುದು. ॥ ೩೪ ॥

ಪೀಠಿಕೆ ॥ ಜೀವನು ಯಾವಾಗ ಯಾವ ಶರೀರವನ್ನು ಹೊಂದುತ್ತಾನೋ ಆಗ, ಆ ಪರಿಮಾಣ ಉಳ್ಳವನು ಆಗುತ್ತಾನೆ. ಆದಕಾರಣ, ಹಿಂದೆ ಹೇಳಿದ ದೋಷವಿಲ್ಲ ಎಂದರೆ—

## ಸೂತ್ರ ॥ ಓಂ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ಓಂ ॥ ೩೫ ॥

ಸೂತ್ರಾರ್ಥ ॥ ಪರ್ಯಾಯಾದಪಿ=ಕ್ರಮದಿಂದ ಪರಿಮಾಣ ಪರಿವರ್ತನದಿಂದಲೂ (ಅಂದರೆ ಆವಾವ ಶರೀರದಲ್ಲಿ ಇದ್ದವನಿಗೆ ಆವಾವ ಪರಿಮಾಣದಿಂದಲೂ) ಅವಿರೋಧಃ= ವಿರೋಧಪರಿಹಾರವು ನ ಚ=ಯುಕ್ತವಲ್ಲ. ವಿಕಾರತ್ವಾದಿಗಳೂ ಬರಬೇಕಾಗಿರುವುದರಿಂದ.

**ಭಾಷ್ಯ ॥ ತತ್ತಚ್ಛರೀರಸ್ಥಸ್ಯ ತತ್ತತ್ಪರಿಮಾಣತ್ವಮಿತಿ ನ ಮಂತವ್ಯಂ(ವಾಚ್ಯಂ) । ವಿಕಾರಿತ್ವಾದನಿತ್ಯತ್ವಪ್ರಸಕ್ತೇಃ ॥ ೩೫ ॥ ॥ ೪ ॥**

ಭಾಷ್ಯಾರ್ಥ ॥ ಗಜ, ಗರ್ದಭಾದಿ ಶರೀರದಲ್ಲಿದ್ದ ಜೀವನಿಗೆ ಕ್ರಮದಿಂದ ಆವಾವ ದೇಹಪರಿಮಾಣವು (ಅಂದರೆ- ಯಾವಾಗ ಯಾವ ಶರೀರವು ಬರುತ್ತದೋ, ಆಗ ಆ ಪರಿಮಾಣವು) ಹೀಗೆ ಹೇಳಕೂಡದು. (ಹಾಗೆ ಇದ್ದರೆ) ವಿಕಾರಿತ್ವವು ಬರಬೇಕಾಗಿರುವುದರಿಂದ. ಅಂತೂ, ಅನಿತ್ಯತ್ವವು ಪ್ರಸಕ್ತವಾಗುವುದರಿಂದ. (ಇದರಿಂದ ಮೋಕ್ಷವೇ ಇಲ್ಲವೆಂದಾಗುವುದು. ತಥಾಚ, ಶಾಸ್ತ್ರಕ್ಕೆ ವೈಯರ್ಥ್ಯವು ಬರುವುದು.) ॥ ೩೫ ॥

ಪೀಠಿಕೆ ॥ ಜೀವನಿಗೆ ಶರೀರಸಂಬಂಧವಿಲ್ಲದೆ, ಸ್ವತಃ ಪರಿಮಾಣವು ಇಲ್ಲದಿರುವುದರಿಂದ ಅದಕ್ಕಾಗಿ, ಶರೀರಪರಿಮಾಣವನ್ನು ಅಂಗೀಕರಿಸುವುದು. ಆದಕಾರಣ, ದೋಷವಿಲ್ಲ. ಎಂದರೆ—

## ಸೂತ್ರ ॥ ಓಂ ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಾತ್ ಓಂ ॥ ೩೬ ॥

ಸೂತ್ರಾರ್ಥ ॥ (ಶರೀರಸಂಬಂಧವಿಲ್ಲದೆ ಜೀವನಿಗೆ ಪರಿಮಾಣವು ಇಲ್ಲದಿರುವುದರಿಂದ ಅವಚ್ಛೇದಕ ಶರೀರಸಮಾನ ಪರಿಮಾಣವನ್ನು ಅಂಗೀಕರಿಸಿದರೆ) ಅಂತ್ಯಾವಸ್ಥಿತೇಶ್ಚ=ಮುಕ್ತಿಯಲ್ಲಿದ್ದ ಆತ್ಮಪರಿಮಾಣದ ಅವಸ್ಥಿತಿಯನ್ನು ಅನುಸರಿಸಿ, ಅಂತ್ಯಾವಸ್ಥಿತಿಃ=ಮುಕ್ತಿಯಲ್ಲಿ ಶರೀರವು ಇರಬೇಕಾಗುವುದು. ಏವಂಚ, ಉಭಯನಿತ್ಯತ್ವಾತ್=ಮುಕ್ತಿಯಲ್ಲಿ ಶರೀರವು ಇದ್ದರೆ, ಆತ್ಮ, ದೇಹ ಎರಡಕ್ಕೂ ನಿತ್ಯತ್ವವು ಇದ್ದುದರಿಂದ, (ಸಂಸಾರಿಶರೀರಕ್ಕೂ ನಿತ್ಯತ್ವವು ಬರಬೇಕಾಗುವುದು.) ಅವಿಶೇಷಾತ್=ಪರಿಮಾಣಾವಚ್ಛೇದ ಶರೀರತ್ವದಿಂದ ವಿಶೇಷವಿಲ್ಲದಿರುವುದರಿಂದ.

**ಭಾಷ್ಯ॥ ಪರಿಮಾಣಾಭಾವೇ ಸ್ವರೂಪಾಭಾವಪ್ರಾಪ್ತ್ಯಾಂತ್ಯಪರಿಮಾಣಸ್ಥಿತೇಸ್ತದರ್ಥತ್ವೇನ**

**ಶರೀರಸ್ಥಿತೇರುಭಯನಿತ್ಯತ್ವಾದವಿಶೇಷೇಣ ಸರ್ವಶರೀರನಿತ್ಯತ್ವಂ ಸ್ಯಾತ್ ॥ ೩೬ ॥**
**ಅಧಿ. ೧೦ ॥ ॥ ೫ ॥**

**ಭಾಷ್ಯಾರ್ಥ ॥** ಜೀವನಿಗೆ ಮೋಕ್ಷದಲ್ಲಿ ಪರಿಮಾಣವು ಇಲ್ಲವಾದರೆ, ಸ್ವರೂಪವೇ ಇಲ್ಲವೆಂದು ಪ್ರಾಪ್ತವಾಗುವುದರಿಂದ ಅಂತ್ಯವಾದ ಮೋಕ್ಷದಲ್ಲಿದ್ದ ಆತ್ಮಪರಿಮಾಣವನ್ನು ಅಂಗೀಕರಿಸಬೇಕಾದುದರಿಂದ ಅದಕ್ಕಾಗಿ (ಮೋಕ್ಷದಲ್ಲಿದ್ದ ಪರಿಮಾಣವು ಶರೀರವು ಇಲ್ಲದೆ ಕೂಡದಿರುವುದರಿಂದ ಅದಕ್ಕಾಗಿ ಮೋಕ್ಷದಲ್ಲಿಯೂ) ಶರೀರವನ್ನು ಅಂಗೀಕರಿಸಬೇಕಾದುದರಿಂದ (ಅದು ಅನಿತ್ಯವಾದರೆ ಸಂಸಾರ ಸಮಾನಧರ್ಮವು ಬರಬೇಕಾಗಿರುವುದರಿಂದ ಆತ್ಮನಿಗೂ ಅನಿತ್ಯತ್ವವು ಬರಬೇಕಾಗುವುದು. ಆದಕಾರಣ, ಆತ್ಮನಂತೆ ಶರೀರಕ್ಕೂ ನಿತ್ಯತ್ವವನ್ನು ಅಂಗೀಕರಿಸಬೇಕಾದುದರಿಂದ ಮೋಕ್ಷದಲ್ಲಿ) ಉಭಯನಿತ್ಯತ್ವಾತ್=ಆತ್ಮನು, ದೇಹವು ಎರಡಕ್ಕೂ ನಿತ್ಯತ್ವವು ಬರುವುದರಿಂದ ಪರಿಮಾಣಾವಚ್ಛೇದಕ ಜಡಶರೀರತ್ವಾವಿಶೇಷದಿಂದ ಈಗ ಇದ್ದ ಸರ್ವ ಶರೀರಗಳಿಗೂ ನಿತ್ಯತ್ವವು ಬರಬೇಕಾಗುವುದು. ಆದುದರಿಂದ, ಶರೀರಪರಿಮಾಣತ್ವಪಕ್ಷವು ಯುಕ್ತವಲ್ಲ ॥ ೩೬ ॥

## ಮಾಯಾವಾದಿರೀತ್ಯಾ

**ವಿಚಾರ ॥** ಹೇಗೆ ಒಂದು ವಸ್ತುವಿನಲ್ಲಿ ಸಪ್ತಪ್ರಕಾರಗಳು ಕೂಡಲಾರವೋ, ಹೀಗೆಯೇ, ಆತ್ಮನಿಗೆ ದೇಹಪರಿಮಾಣವನ್ನು ಹೇಳಿದರೆ ಪರಿಚ್ಛಿನ್ನತ್ವವು ಬರುವುದು. ಅಂತೂ, ಅನಿತ್ಯತ್ವವು ಬರುವುದು ಎಂದು **ಏವಂ ಚಾತ್ಮಾ** ಎನ್ನುವ ಸೂತ್ರಾರ್ಥವು, ಎನ್ನುತ್ತಾರೆ. ಅದು ಅಯುಕ್ತವು. ನಮ್ಮ ಮತದಂತೆ ಸೂತ್ರದಲ್ಲಿ ಜೈನಮತಪ್ರಸಂಗದಿಂದ ಬಂದ ದೇಹಪರಿಮಾಣತ್ವರೂಪವನ್ನು ಆಪಾದನೆ ಮಾಡತಕ್ಕ ಸೂಚನೆಯು ಇಲ್ಲದಿರುವುದರಿಂದ ನ್ಯೂನತೆಯು ಬರುವುದು. ಜೈನಮತ ಪ್ರಸಂಗದಿಂದ ಬಂದುದರಿಂದ ಏವಂ ಶಬ್ದದಿಂದ ದೇಹಪರಿಮಾಣತ್ವ ಪರಾಮರ್ಶವೂ ಆಯುಕ್ತವು. ದೇಹಪರಿಮಾಣತ್ವದಿಂದಲೇ ಅನಿತ್ಯತ್ವವನ್ನು ಆಪಾದನೆ ಮಾಡಲಿಕ್ಕೆ ಬರುವುದರಿಂದ ಮಧ್ಯದಲ್ಲಿ ಆತ್ಮನಿಗೆ ಅಪೂರ್ಣತ್ವಾಪಾದನೆಯು ವ್ಯರ್ಥವೂ ಆಗುವುದು. ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಕಾಯಪರಿಮಾಣ ಉಳ್ಳ ಆತ್ಮನಿಂದಲೂ, ದೃಷ್ಟಾದೃಷ್ಟ ಸಾಧನಗಳಿಂದಲೂ, ಸತ್ವ, ಅಸತ್ವ, ಸದಸತ್ವ, ಸದಸದ್ವಿಲಕ್ಷಣತ್ವ, ಸತ್ವೇ ಸತಿ ಸದಸದ್ವಿಲಕ್ಷಣತ್ವ, ಅಸತ್ವೇ ಸತಿ ಅಸದ್ವಿಲಕ್ಷಣತ್ವ, ಸದಸತ್ವೇ ಸತಿ ಸದಸದ್ವಿಲಕ್ಷಣತ್ವ, ಹೀಗೆ ಅನಿಯತವಾದ ಏಳು ಪ್ರಕಾರ ಉಳ್ಳ ಜಗತ್ತಿಗೆ ಉತ್ಪತ್ತ್ಯಾದಿಗಳು ಕೂಡುವುದರಿಂದ ಈಶ್ವರನಿಂದ ಕೃತ್ಯವಿಲ್ಲ. ಹೀಗೆ, ಜೈನಮತದಿಂದ ವಿರೋಧವೆಂದು ಪೂರ್ವಪಕ್ಷವು ಬಂದರೆ-ಹೀಗೆ ಸಿದ್ಧಾಂತವು. ಸತ್ವ, ಅಸತ್ವ, ಅಥವಾ ಭಾವತ್ವ, ಅಭಾವತ್ವ ಇತ್ಯಾದಿ ಎರಡು ಪ್ರಕಾರಗಳಿಂದ ಇತರವಾದ ಪ್ರಕಾರವೇ ಅಪ್ರಾಮಾಣಿಕವು. ಒಂದೊಂದು ಪಕ್ಷದಲ್ಲಿ ಹೇಳಿದ ದೋಷಪರಿಹಾರೇಚ್ಛೆಯಿಂದ ಸಪ್ತ ಪ್ರಕಾರಗಳನ್ನು ಅಂಗೀಕರಿಸಿದರೆ, ಸರ್ವಪಕ್ಷದಲ್ಲಿ ಹೇಳಿದ

ದೋಷನಿವಾರಣೆಯು ಆಗುವುದಿಲ್ಲ. ಮಶಕ, ಗಜಾತಿ ಸೂಕ್ಷ್ಮ, ಸ್ಥೂಲ ಶರೀರಪ್ರಾಪ್ತಿಯಿಂದ ಜೀವನಿಗೆ ಅಪೂರ್ಣತ್ವವೂ, ಆಧಿಕ್ಯವೂ ಬರುವುದರಿಂದ ಕ್ರಮವಾಗಿ ಆವಾವ ಶರೀರಪ್ರಮಾಣವನ್ನು ಹೇಳಿದರೆ ವಿಕಾರವು ಬರುವದರಿಂದ ಅನಿತ್ಯತ್ವವು ಪ್ರಾಪ್ತವಾಗುವದರಿಂದ ಜೀವನಿಗೆ ಶರೀರಪರಿಮಾಣವು ಎನ್ನುವ ಪ್ರಕ್ರಿಯೆಯೇ ಅಪ್ರಾಮಾಣಿಕವು. ಹೀಗೆ ಜೈನಮತವು ದುಷ್ಟವಾದುದರಿಂದ ವಿಷ್ಣುವಿಗೆ ವಿಶ್ವಕರ್ತೃತ್ವವು ಯುಕ್ತವು. ॥ ಅಧಿ. ೧೦ ॥

ನೈಕಸ್ಮಿನ್ನಧಿಕರಣವು ಸಮಾಪ್ತವಾಯಿತು.

## ೧೧ ಪತ್ಯುರಧಿಕರಣವು

**ಭಾಷ್ಯ ॥ ಪಾಶುಪತಪಕ್ಷಂ ಅಪಾಕರೋತಿ** ॥ ೧ ॥

ಭಾಷ್ಯಾರ್ಥ ॥ ಪಶುಪತಿಯೇ ಜಗತ್ಕರ್ತನು ಎಂದು ಹೇಳುವವರ ಮತವನ್ನು ನಿರಾಕರಿಸುತ್ತಾರೆ.

ಟೀಕೆ ॥ ಸಾರ್ವಜ್ಞಾದಿಗುಣಗಳುಳ್ಳ ಪಶುಪತಿಯು ಮಾಯೆಯನ್ನು ಉಪಾದಾನೀಕರಿಸಿಕೊಂಡು ಹರಿ, ಹರ, ಹಿರಣ್ಯಗರ್ಭಾದಿರೂಪವಾದ ಜಗತ್ತಿನ ಉತ್ಪತ್ತ್ಯಾದಿಗಳನ್ನು ಮಾಡುತ್ತಾನೆ. ಆದಕಾರಣ, ಶ್ರೀಹರಿಗೆ ಜಗತ್ಕಾರಣತ್ವವಿಲ್ಲ ಎಂದರೆ—

### ಸೂತ್ರ ॥ ಓಂ ಪತ್ಯುರಸಾಮಂಜಸ್ಯಾತ್ ಓಂ ॥ ೩೭ ॥

ಸೂತ್ರಾರ್ಥ ॥ ಪಶುಪತಿಯಾದ ರುದ್ರನಿಗೆ ಜಗತ್ಕಾರಣತ್ವವು ಕೂಡುವುದಿಲ್ಲ. ಪಾರತಂತ್ರ್ಯ, ಜನನ ಮೊದಲಾದ ದೋಷಗಳು ಇದ್ದುದರಿಂದ ಆಯುಕ್ತವಾದ ಪ್ರಯುಕ್ತ ಅಸಾಮಂಜಸ್ಯಾತ್=ದೋಷಗಳು ಇದ್ದುದರಿಂದ.

**ಭಾಷ್ಯ ॥ (೧) ★ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ** (ಋ.೧೦.೧೨೫.೫)। **(೨) ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತ ವಾ ಉ** (ಋ.೧೦.೧೨೫.೬)। **(೩) ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ। ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್।** (ಋ.೭.೪೦.೫)। **(೪) ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನೇಶಾನೋ ನಾಗ್ನೀಷೋಮೌ** (ಮಹಾನಾ.ಋಕ್ ೧)। **ಇತ್ಯಾದಿಶ್ರುತೇಃ (ದಿನಾ) ಪಾರತಂತ್ರ್ಯೇಣಾಸಮಂಜಸತ್ವಾನ್ನ ಪಶುಪತಿರೀಶ್ವರೋ (ನ ಪತಿರೀಶ್ವರನಾಮಾ) ಜಗತ್ಕರ್ತಾ ॥ ೩೭ ॥ ॥೨ ॥**

ಭಾಷ್ಯಾರ್ಥ ॥ ಪಶುಗಳಿಗೆ ಪಾಶಬಂಧವಿಮೋಕ್ಷವನ್ನು ಕೊಟ್ಟಿರುವ ರುದ್ರನು ಜಗತ್ಕರ್ತನಲ್ಲ. ಏಕೆಂದರೆ—ಯಂ ಕಾಮಯೇ ಇತ್ಯಾದಿಶ್ರುತಿಗಳಿಂದ ಪಾರತಂತ್ರ್ಯ, ಜನನ, ಮರಣಾದಿದೋಷಗಳು

★ ಯಂ ಕಾಮಯೇ ಎನ್ನುವುದು ವ್ಯಾಖ್ಯಾತವಾಗಿದೆ.

ಇವೆಯೆಂದು ಶ್ರುತವಾದಪ್ರಯುಕ್ತ (ಸರ್ವಪದಾರ್ಥಗಳಿಗೂ ಕಾರಣನಾದವನಿಗೆ ದೋಷಗಳು ಇವೆಯೆನ್ನುವದು ಕೂಡಲಾರದು.) (೧) ಯಂ ಕಾಮಯೇ ಎನ್ನುವದು ವ್ಯಾಖ್ಯಾತವಾಗಿದೆ. (೨) ಬ್ರಹ್ಮದೇವರ ಐದನೇ ಮುಖವನ್ನು ಛೇದಿಸಿರುವ ಅಥವಾ ದಕ್ಷಪ್ರಜಾಪತಿಗೆ ದ್ವೇಷಿಯಾದ, ಹಿಂಸಾಶೀಲನಾದ, ಅಥವಾ ಬ್ರಹ್ಮದ್ವೇಷಿಗಳಾದ ದೈತ್ಯರಿಗೆ ಹಿಂಸಕನಾದ ರುದ್ರದೇವರನ್ನು ಕೊಲ್ಲುವದಕ್ಕಾಗಿಯೇ (ಹೆದರಿಸುವದಕ್ಕೆ ಮಾತ್ರವಲ್ಲ ಪ್ರಲಯಕಾಲದಲ್ಲಿ ದುರ್ಗಾರೂಪದಿಂದ ರುದ್ರದೇವರನ್ನು ಕೊಲ್ಲುವೆನು.) ನಾನು ಧನುಸ್ಸನ್ನು ಸನ್ನದ್ಧವನ್ನಾಗಿ ಮಾಡುತ್ತೇನೆ. (೩) ಪ್ರಮಿತನಾದ, ದ್ಯೋತನಾದಿಗುಣಗಳುಳ್ಳ, ಭಕ್ತರಿಗೆ ಅಭೀಷ್ಟವನ್ನು ಕೊಡತಕ್ಕ, ಸರ್ವೇಶನಾದ ಅಥವಾ ಇಚ್ಛಾರೂಪನಾದ ಅಂದರೆ ಸತ್ಯಕಾಮನಾದ ವಿಷ್ಣುವಿಗೆ ಕರ್ಮದಿಂದಲೂ, ಜ್ಞಾನದಿಂದಲೂ, ಧ್ಯಾನದಿಂದಲೂ ಪೂಜೆಯು ಹವಿಸ್ಸುಗಳಿಂದ ಮಾಡಲ್ಪಡುತ್ತಿರಲು, ಆತನ ಪ್ರಸಾದದಿಂದ ಅಹಂಕಾರರೂಪದಿಂದ ಜನರಿಗೆ ಬಂಧಕನಾದ ರುದ್ರನು, ರುದ್ರಸಂಬಂಧಿಯಾದ ಮಹಿಮೆಯನ್ನು ಅಂದರೆ ರುದ್ರಪದವಿಯನ್ನು ಹೇಗೆ ಹೊಂದಿರುವನೋ, ಹಾಗೆಯೇ, ಅಶ್ವಿನೀದೇವತೆಗಳಿರಾ! ನೀವೂ ಕೂಡ ವಿಷ್ಣುಪೂಜೆಯಿಂದಲೇ ಆತನ ಪ್ರಸಾದದಿಂದ ಅನ್ನ ಉಳ್ಳ ವರ್ತನವನ್ನು ಅಂದರೆ ಸಮಸ್ತ ಭೋಗ ಉಳ್ಳ ಪದವಿಯನ್ನು ಹೊಂದಿದವರಾಗುತ್ತೀರಿ. (೪) ಮಹಾಪ್ರಲಯಕಾಲದಲ್ಲಿ ನಾರಾಯಣನು ಒಬ್ಬನೇ ಇದ್ದನು. ಬ್ರಹ್ಮನಾಗಲೀ, ರುದ್ರನಾಗಲೀ ಇರಲಿಲ್ಲ ಅಗ್ನಿ ಸೋಮ ದೇವತೆಗಳೂ ಇರಲಿಲ್ಲ ಇತ್ಯಾದಿಶ್ರುತಿಗಳಿಂದ ಜ್ಞಾಪಿತವಾದ ಪರಾಧೀನತ್ವದಿಂದ ದೋಷಗಳು ಇದ್ದುದರಿಂದ ಪಶುಪತಿಯಾದ ರುದ್ರನು ಜಗತ್ಕರ್ತನಲ್ಲ.

**ವಿಶೇಷಾಂಶ ॥ ಯಂ ಕಾಮಯೇ** ಎನ್ನುವುದರಿಂದ ರುದ್ರನಿಗೆ ಜನನವೂ, ಅಹಂ ರುದ್ರಾಯ ಎನ್ನುವುದರಿಂದ ಮರಣವೂ, ಅಸ್ಯ ಎನ್ನುವದರಿಂದ ಪರಾಧೀನವಾದ ಪದಪ್ರಾಪ್ತಿಯೂ, **ಏಕೋ ನಾರಾಯಣಃ** ಎನ್ನುವುದರಿಂದ, ಪ್ರಲಯಕಾಲದಲ್ಲಿ ರುದ್ರನು ಇರಲಿಲ್ಲವೆಂದೂ ಉಕ್ತವಾಯಿತು. ॥೩೭॥

**ಪೀಠಿಕೆ ॥** ಯುಕ್ತ್ಯಂತರದಿಂದ ರುದ್ರನಿಗೆ ಜಗತ್ಕಾರಣತ್ವವನ್ನು ತಿರಸ್ಕರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸಂಬಂಧಾನುಪಪತ್ತೇಶ್ಚ ಓಂ ॥ ೩೮ ॥

**ಭಾಷ್ಯ ॥ ಅಶರೀರತ್ವಾತ್ತಸ್ಯ ಜಗತಾ ಸಂಬಂಧೋ ನ ಯುಜ್ಯತೇ । ಕರ್ತೃತ್ವೇನ ಮೃತಪುರುಷವತ್ ॥ ೩೮ ॥** ॥ ೩ ॥

ಭಾಷ್ಯಾರ್ಥ ॥ (ಅಸಾಮಂಜಸ್ಯದಿಂದ ಮಾತ್ರವಲ್ಲ ಮತ್ತೆ) ಆ ರುದ್ರನಿಗೆ ಶರೀರವಿಲ್ಲದಿರುವುದರಿಂದಲೂ ಜಗತ್ತಿನಿಂದ ಕರ್ತೃತ್ವೇನ ಸಂಬಂಧವು (ಅಂದರೆ ಕಾರ್ಯಕರ್ತೃಭಾವರೂಪವಾದ ಸಂಬಂಧವು) (ಅಂದರೆ ಜಗತ್ಕರ್ತೃತ್ವವು) ಕೂಡುವುದಿಲ್ಲ. ಸ್ಥೂಲದೇಹವಿಯುಕ್ತನಾದ ಪುರುಷನಂತೆ. (ಅಂದರೆ ಮೃತನಾದ ಪುರುಷನಿಗೆ ಹೇಗೆ ಕರ್ತೃತ್ವವು ಕೂಡುವುದಿಲ್ಲವೋ ಹಾಗೆಯೇ.)

ಪೀಠಿಕೆ ॥ ಹೇತ್ವಂತರದಿಂದ ಪಶುಪತಿಗೆ ಜಗತ್ಕರ್ತೃತ್ವವನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಧಿಷ್ಠಾನಾನುಪಪತ್ತೇಶ್ಚ ಓಂ ॥ ೩೯ ॥

**ಭಾಷ್ಯ ॥ ಪೃಥಿವ್ಯಾದ್ಯಧಿಷ್ಠಾನೇ ಸ್ಥಿತೋ ಹಿ ಕುಲಾಲಾದಿಃ ಕಾರ್ಯಂ ಕರೋತಿ । ನ ಚಾಸ್ಯ ತದಸ್ತಿ ॥ ೩೯ ॥ ॥ ೪ ॥**

ಭಾಷ್ಯಾರ್ಥ ॥ ರುದ್ರಃ ನ ಕರ್ತಾ ನಿರಧಿಷ್ಠಾನತ್ವಾತ್ ಅಧಿಕರಣವು ಇಲ್ಲದಿರುವುದರಿಂದ ಪಶುಪತಿಗೆ ಕರ್ತೃತ್ವವಿಲ್ಲ. (ಅಧಿಷ್ಠಾನಾಖ್ಯವ್ಯಾಪ್ಯಭಾವಾತ್ ಎನ್ನುವ ಉಕ್ತಿಯಿಂದ ಸೂಚಿತವಾದ ವ್ಯತಿರೇಕವ್ಯಾಪ್ತಿಯನ್ನು ತೋರಿಸುತ್ತಾರೆ.) ಭೂಮಿ ಮೊದಲಾದ ಅಧಿಕರಣಗಳಲ್ಲಿ ಇರತಕ್ಕ ಕುಲಾಲಾದಿಗಳು ಘಟಾದಿ ಕಾರ್ಯಗಳನ್ನು ಮಾಡುತ್ತಾರೆ. ಪ್ರಸಿದ್ಧವು. (ಇದರಿಂದ ಯಃ ಕರ್ತಾ ಸಃ ಸಾಧಿಷ್ಠಾನೋ ದೃಷ್ಟಃ ಯಥಾ ಕುಲಾಲಾದಿಃ ಎಂದುಕ್ತವಾಯಿತು.) ಈ ಪಶುಪತಿಗಾದರೂ ಅಧಿಷ್ಠಾನವೇ ಇಲ್ಲ. ॥ ೩೯ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಕರಣವಚ್ಚೇನ್ನ ಭೋಗಾದಿಭ್ಯಃ ಓಂ ॥ ೪೦ ॥

ಸೂತ್ರಾರ್ಥ ॥ ಕಾರಕಸಮುದಾಯರೂಪವಾದ ಜಗತ್ತು ಪಶುಪತಿಗೆ ನಮ್ಮ ಶರೀರದಂತೆ ಇರತಕ್ಕುದು. ಅಂದರೆ ಶರೀರರೂಪವೂ ಅಧಿಷ್ಠಾನರೂಪವೂ ಆಗುತ್ತದೆ, ಎಂದರೆ ಹಾಗೆ ಹೇಳಕೂಡದು. ಹಾಗಾದರೆ ಅವುಗಳಿಂದ ಆಗುವ ಸುಖ ದುಃಖಾದಿಭೋಗವು ಬರಬೇಕಾಗಿರುವುದರಿಂದ ಅದು ಶರೀರಸ್ಥಾನೀಯವೆಂದು ಹೇಳಕೂಡದು.

**ಭಾಷ್ಯ ॥ ಇದಮೇವ ಜಗತ್ತಸ್ಯ ಕರಣವದಧಿಷ್ಠಾನಾದಿರೂಪಂ । ನಿತ್ಯಸ್ಯಾಪಿ ಕಸ್ಯಚಿದ್ಭಾವಾದ್ಯುಜ್ಯತೇ । ಇತಿ ಚೇತ್ ॥ ॥ ೫ ॥**

ಭಾಷ್ಯಾರ್ಥ ॥ ಈ ಕಾರಕಸಮುದಾಯರೂಪವಾದ ಜಗತ್ತೇ ಆ ಪಶುಪತಿಗೆ ಸಾಕ್ಷಾತ್ತೃಯತ್ನಾಕ್ಷೇಯವಾದುದರಿಂದ ಅಸ್ಮಾದಾದಿ ಶರೀರದಂತೆಯೇ ಅಧಿಷ್ಠಾನರೂಪವೂ, ಶರೀರರೂಪವೂ ಆಗುತ್ತದೆ. (ಆದಕಾರಣ ಶರೀರ ಅಧೀಷ್ಠಾನಗಳು ಇಲ್ಲದಿರುವುದರಿಂದ ಕರ್ತೃತ್ವಾನುಪಪತ್ತಿಯೂ ಇಲ್ಲ) (ಹಾಗಾದರೆ ಪ್ರಲಯಕಾಲದಲ್ಲಿ ಸರ್ವವೂ ವಿನಾಶವನ್ನು ಹೊಂದುವುದರಿಂದ ಕಾರಕಸಮೂಹಕ್ಕೂ ಅಧಿಷ್ಠಾನತ್ವಾದಿಗಳು ಕೂಡುವುದಿಲ್ಲ ಎಂದರೆ) (ಪ್ರಲಯಕಾಲದಲ್ಲಿಯೂ) ನಿತ್ಯಭೂತವೇ ಆದ ಕೆಲವು ಮಾಯಾ ಮೊದಲಾದ ಕಾರಕಸಮುದಾಯವು ಇದ್ದುದರಿಂದ ಅದಕ್ಕೇನೇ ಅಧಿಷ್ಠಾನತ್ವಾದಿ ರೂಪತ್ವವು ಕೂಡುತ್ತದೆ, ಎಂದರೆ—

ಪೀಠಿಕೆ ॥ ಪರಿಹಾರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ—

ಭಾಷ್ಯ ॥ ನ। ಭೋಗಾದಿಪ್ರಾಪ್ತೇಃ। ಉತ್ಪತ್ತಿವಿನಾಶೌ ಸುಖದುಃಖಭೋಗಾಶ್ಚ ಪ್ರಾಪ್ಯಂತೇ ತದ್ಗತಾಃ ॥ ೪೦ ॥ ॥ ೬ ॥

ಭಾಷ್ಯಾರ್ಥ ॥ (ಕಾರಕಸಮುದಾಯಕ್ಕೇನೇ ಶರೀರಾದಿರೂಪತ್ವವನ್ನು ಅಂಗೀಕರಿಸಿದರೂ ಪಶುಪತಿಗೆ ಕರ್ತೃತ್ವವು) ಕೂಡುವುದಿಲ್ಲ. ಹಾಗೆ ಇದ್ದರೆ ಭೋಗಾದಿಗಳು ಪ್ರಾಪ್ತಗಳಾಗಬೇಕಾಗುವುವು. ಅಂದರೆ ಕಾರಕಸಮುದಾಯಕ್ಕೇನೇ ಸಾಕ್ಷಾತ್ತಯತ್ನಾಧಿಷ್ಠೇಯತ್ವವಿದ್ದುದರಿಂದ ಶರೀರಾದಿರೂಪತ್ವವು ಇರುವುದಾದರೆ ಶರೀರೋಪಾದಾನ ಹಾನ ನಿಮಿತ್ತಗಳಾದ ಜನನ ಮರಣಗಳು ಪಶುಪತಿಗೆ ಬರಬೇಕಾಗುವುವು. ತಥಾಚ ಶರೀರದಿಂದುಂಟಾಗುವ ಸುಖ ದುಃಖ ಭೋಗಗಳು ಪ್ರಾಪ್ತಗಳಾಗಬೇಕಾಗುವುವು (ಅಂತೂ ಕರ್ತೃತ್ವವು ಕೂಡುವುದಿಲ್ಲ) ॥ ೪೦ ॥

ಪೀಠಿಕೆ ॥ ಸಂಬಂಧಾನುಪಪತ್ತೇಃ, ಕರಣವಚ್ಚೇತ್ ಎನ್ನುವ ಎರಡು ಸೂತ್ರಗಳಲ್ಲಿ ಹೇಳಿದ ಶರೀರಭಾವ, ಶರೀರಾಭಾವ ಪಕ್ಷಗಳನ್ನೇ ರೀತ್ಯಂತರದಿಂದ ದೂಷಿಸುತ್ತಾರೆ—

## ಸೂತ್ರ ॥ ಓಂ ಅಂತವತ್ತ್ವಮಸರ್ವಜ್ಞತಾ ವಾ ಓಂ ॥ ೪೧ ॥

ಭಾಷ್ಯ ॥ ದೇಹವತ್ತ್ವೇಽಂತವತ್ತ್ವಮನ್ಯಥಾ ಜ್ಞಾನಾಭಾವಃ। ಶರೀರಿಣ ಏವ ಹಿ ಜ್ಞಾನೋತ್ಪತ್ತಿರ್ದೃಷ್ಟಾ(ಜ್ಞಾನದೃಷ್ಟೇಃ) ॥ ೭ ॥

ಭಾಷ್ಯಾರ್ಥ ॥ (ಪಶುಪತಿಗೆ) ದೇಹವಿದ್ದರೆ (ಯಜ್ಞದತ್ತನಂತೆ) ಅಂತವತ್ತ್ವಂ ಪರಿಚ್ಛಿನ್ನತ್ವವು (ನಾಶವು) ಬರಬೇಕಾಗುವುದು. ದೇಹವಿಲ್ಲವಾದರೆ ಜ್ಞಾನವೇ ಇಲ್ಲವೆಂದಾಗುವುದು. (ಸುತರಾಂ ಸಾರ್ವಜ್ಞ್ಯವು ಕೂಡಲಾರದು, ಉಭಯಥಾಪಿ ಜಗತ್ಕಾರಣತ್ವವು ಕೂಡಲಾರದು.) (ಶರೀರವು ಇಲ್ಲವಾದರೆ ಜ್ಞಾನವಿಲ್ಲದಿರುವುದು ಹೇಗೆಂದರೆ) ಶರೀರವಿದ್ದವನಿಗೇನೇ ಜ್ಞಾನೋತ್ಪತ್ತಿಯು (ಜ್ಞಾನವು) ದೃಷ್ಟವಾಗಿದೆ. (ಶರೀರವಿಲ್ಲದವನಿಗೆ ಜ್ಞಾನವು ಬರುವುದಿಲ್ಲ) ಪ್ರಸಿದ್ಧವು. ॥ ೪೧ ॥

ಪೀಠಿಕೆ ॥ ವಿಷ್ಣುವಿನಲ್ಲಿಯೂ ಈ ದೋಷಗಳು ಬರುವುದರಿಂದ ಆತನಿಗೂ ಕರ್ತೃತ್ವವು ಕೂಡಲಾರದು, ಎನ್ನುವ ಆಶಂಕೆಯನ್ನು ಸೂತ್ರಕಾರರು ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ಇತ್ಯಾದಿಗಳಿಂದ ಪರಿಹರಿಸಿದಾಗ್ಯೂ ಪುನಃ ಪ್ರಮಾಣವಿಶೇಷಗಳಿಂದ ಪರಿಹರಿಸುತ್ತಾರೆ—

ಭಾಷ್ಯ ॥ ವಿಷ್ಣೋಸ್ತು ಶ್ರುತ್ಯೈವ ಸರ್ವೇ ವಿರೋಧಾಃ ಪರಿಹೃತಾಃ। (೧) ಯದಾತ್ಮಕೋ ಭಗವಾಂಸ್ತದಾತ್ಮಿಕಾ(ಕೀ)ವ್ಯಕ್ತಿಃ। ಕಿಮಾತ್ಮಕೋ ಭಗವಾನ್ ಜ್ಞಾನಾತ್ಮಕ ಐಶ್ವರ್ಯಾತ್ಮಕಃ (ಏಕಾಯನಶ್ರುತಿಃ)। ಇತಿ। (೨) ಬುದ್ಧಿಮನೋಽಂಗಪ್ರತ್ಯಂಗವತ್ತಾಂ ಭಗವತೋ ಲಕ್ಷಯಾಮಹೇ। ಬುದ್ಧಿಮಾನ್ಮನೋವಾನಂಗಪ್ರತ್ಯಂಗವಾನ್। ಇತಿ ॥ (೩) ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ। ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃಪರಮೋಽ(ಮಾ)ಕ್ಷರಃ। ಇತ್ಯಾದಿಕಯಾ ॥ ೪೧ ॥ ಅ.೧೧ ॥ ೮ ॥

ಭಾಷ್ಯಾರ್ಥ ॥ ವಿಷ್ಣುವಿಗಾದರೂ (ದೇಹವದ ಇತ್ಯಾದಿಗಳನ್ನು ಇಟ್ಟುಕೊಂಡರೆ ಬರತಕ್ಕ)

ಅಂತವತ್ತ್ವ ಮೊದಲಾದ ಎಲ್ಲಾ ದೋಷಗಳೂ ಮುಂದೆ ಹೇಳುವ ನಿರವಕಾಶಗಳಾದ ಶ್ರುತಿಗಳಿಂದಲೇ ಪರಿಹರಿಸಲ್ಪಡುತ್ತದೆ. (ಆ ವಿಷಯದಲ್ಲಿ ಪ್ರಮಾಣಾಂತರವನ್ನು ಹುಡುಕಬೇಕಾಗಿಲ್ಲ) (೧) ಶ್ರೀಹರಿಯು ಯಾವ ಸ್ವರೂಪವುಳ್ಳವನೋ ಆ ಸ್ವರೂಪವುಳ್ಳದ್ದು ಶರೀರವು. ಭಗವಂತನು ಎಂತಹ ಸ್ವರೂಪವುಳ್ಳವನೆಂದರೆ ಜ್ಞಾನಸ್ವರೂಪನು ಐಶ್ವರ್ಯಸ್ವರೂಪನು ಶಕ್ತಿಸ್ವರೂಪನು. ಎಂದು, (ಇದರಿಂದ ಭಗವಂತನ ದೇಹಕ್ಕೆ ಭಗವತ್ಸ್ವರೂಪತ್ವ, ಜ್ಞಾನಾದ್ಯಾತ್ಮಕತ್ವಗಳನ್ನು ಹೇಳಿದ್ದರಿಂದ ಅಂತವತ್ವಾದಿದೋಷಗಳು ಪರಿಹೃತಗಳಾದುವು.) (೨) ಭಗವಂತನಿಗೆ ಬುದ್ಧಿ ಮನಃ ಅಂಗಪ್ರತ್ಯಂಗವತ್ತ್ವವನ್ನು ತಿಳಿಯುತ್ತೇವೆ. ಜ್ಞಾನವುಳ್ಳವನು, ಚೇತಸ್ಸುಳ್ಳವನು, ದೇಹವುಳ್ಳವನು, ಕರಚರಣಾದ್ಯವಯವಗಳುಳ್ಳವನು ಎಂದು. (ಈ ಶ್ರುತಿಯಿಂದ ಶ್ರೀಹರಿಗೆ ಅಪ್ರಾಕೃತ ಜ್ಞಾನಾನಂದಾದ್ಯಾತ್ಮಕ ಶರೀರವದೆ ಎಂದು ಹೇಳಿದ್ದರಿಂದ ಅಜ್ಞಾನಾದಿದೋಷಗಳು ಪರಿಹೃತ ಗಳಾದವು.) (೩) ಜನ್ಮಭೇದ ಮೊದಲಾದ ದೋಷರಹಿತನು, ಸುಖಾತ್ಮಕ ಗಂಧವುಳ್ಳವನು, ಜ್ಞಾನಾತ್ಮಕ ಕಾಂತಿಯುಳ್ಳವನು, ಅಪ್ರತಿಹತವಾದ ಪರಾಕ್ರಮವುಳ್ಳವನು, ಅತಿಶಯಿತ ಜ್ಞಾನಸ್ವರೂಪನು, (ಅಜ್ಞಾನಮಿಶ್ರ ಜ್ಞಾನವುಳ್ಳವನಲ್ಲ) ಅತಿಶಯಿತ ಸುಖಸ್ವರೂಪನು (ದುಃಖಮಿಶ್ರಿತ ಸುಖವುಳ್ಳವನಲ್ಲ) ಅಂತಹ ವಿಷ್ಣುವು ಜಡಪ್ರಕೃತಿಯಿಂದ ಉತ್ತಮವಾದ ಚಿತ್ಪ್ರಕೃತಿಯಿಂದ ಉತ್ತಮಾಕ್ಷರನು. (ಇದರಿಂದಲೂ ಅಂತವತ್ವಾದಿದೋಷಗಳು ಪರಿಹೃತಗಳಾದುವು.) ॥ ೪೧ ॥

## ಮಾಯಾವಾದಿರೀತ್ಯಾ

ವಿಚಾರ ॥ ಈಶ್ವರನಿಗೆ ಸರ್ವಗತತ್ವವಿದ್ದುದರಿಂದಲೂ ನಿರವಯತ್ವವಿದ್ದುದರಿಂದಲೂ ಪ್ರಧಾನಾದಿಗಳಿಂದ ಕೂಡಿಕೊಂಡು ಸಂಯೋಗವೂ ಆಶ್ರಯಾಶ್ರಯಿಭಾವವೂ ಇಲ್ಲದಿರುವುದರಿಂದ ಸಮವಾಯವೂ ಕೂಡದೆ ಇರುವುದರಿಂದ ಪ್ರಧಾನಾಧಿಷ್ಠಾತೃತ್ವವು ಇಲ್ಲ. ನಮಗಾದರೂ ಅನಿರ್ವಾಚ್ಯವಾದ ತಾದಾತ್ಮ್ಯರೂಪವಾದ ಸಂಬಂಧವು ಇದೆ, ಎಂದು ಅದ್ವೈತಿಗಳು ಹೇಳುತ್ತಾರೆ. ಅದು ಅಯುಕ್ತವು. ಸರ್ವಜ್ಞನಾದ ಈಶ್ವರನಿಗೆ ತನ್ನಲ್ಲಿ ಜಗತ್ತಾದಾತ್ಮ್ಯಭ್ರಮವೇ ಕೂಡಲಾರದು. ಆದಕಾರಣ ಅವರ ಮತವು ಅಯುಕ್ತವು.

## ಅಧಿಕರಣ ಸಾರಾಂಶ

ಸಾರ್ವಜ್ಞಾದಿಗುಣಗಳುಳ್ಳ ಪಶುಪತಿಯೇ ಮಾಯೆಯನ್ನು ಉಪಾದಾನಕಾರಣವನ್ನಾಗಿ ಇಟ್ಟುಕೊಂಡು ಹರಿ, ಹರ ಹಿರಣ್ಯಗರ್ಭಾದಿ ಜಗತ್ತನ್ನು ನಿರ್ಮಿಸುತ್ತಾನೆಂದು ಶ್ರುತಿ, ಸ್ಮೃತಿಗಳಿಂದ ತಿಳಿದು ಬರುವುದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಲ್ಲವೆಂದು ಪೂರ್ವಪಕ್ಷ ಬಂದರೆ- **ಯಂ ಕಾಮಯೇ ತಂ ತಮುಗ್ರಂ ಕೃಣೋಮಿ** ಇತ್ಯಾದಿ ಶ್ರುತ್ಯಾದಿಗಳಿಂದ ಶಿವನು ಪರತಂತ್ರನೆಂದು ತಿಳಿದುಬರುವ ಪ್ರಯುಕ್ತ ಮತ್ತು ಆತನಿಗೆ ಶರೀರವು ಇಲ್ಲದಿರುವುದರಿಂದ ಪ್ರಳಯಕಾಲದಲ್ಲಿ ಪಂಚಭೂತಗಳು ವಿಲೀನಗಳಾಗಿರುವ ಕಾರಣ ಸೃಷ್ಟಿಕಾಲದಲ್ಲಿ ಪೃಥಿವ್ಯಾದ್ಯಧಿಷ್ಠಾನಗಳೇ ಇಲ್ಲದಿರುವುದರಿಂದ ಕರ್ತೃತ್ವವು ಕೂಡಲಾರದು. ಕಾರಕಸಮುದಾಯವೇ ಸಾಕ್ಷಾತ್ಕರ್ತ್ರಯತ್ನಾಧಿಷ್ಠೇಯವಾದ ದೇಹಾದಿಗಳೆಂದು ಹೇಳಿದರೆ ವಿನಾಶವೂ, ದುಃಖಾದಿಭೋಗವೂ

ಪ್ರಾಪ್ತವಾಗಬೇಕಾಗುವುದು. ವಿಷ್ಣುವಿಗಾದರೂ ನಿತ್ಯ, ಸರ್ವವಿಷಯಕ ವಿಚಿತ್ರಶಕ್ತಿಯು ಇದೆಯೆಂದೂ ಜ್ಞಾನಾನಂದಾದಿಮಯ ದೇಹವಿದೆಯೆಂದೂ ಸರ್ವಶ್ರುತಿಗಳಿಂದ ಸಿದ್ಧವಾಗಿದೆ. ತಥಾಚ ಶಿವನು ಜಗತ್ಕರ್ತನು ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಆ ಮತವು ದುಷ್ಟವಾದಪ್ರಯುಕ್ತ ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವು. ॥ ಅಧಿ. ॥ ೧೧ ॥

**ಪತ್ಯುರಧಿಕರಣವು ಸಮಾಪ್ತವಾಯಿತು.**

## ೧೨ ಉತ್ಪತ್ತ್ಯಧಿಕರಣವು

**ಭಾಷ್ಯ ॥ ಶಕ್ತಿಪಕ್ಷಂ ದೂಷಯತಿ ॥ ೧ ॥**

ಭಾಷ್ಯಾರ್ಥ ॥ ಶಕ್ತಿಯಿಂದಲೇ ಜಗದುತ್ಪತ್ತಿಯು ಎಂದು ಹೇಳುವ ಮಹಾವಾಮ, ಮಧ್ಯವಾಮ, ಅಣುವಾಮ ಎಂದು ತ್ರಿವಿಧರಾದ ಶಾಕ್ತರ ಮತವನ್ನು ಅಸಾಧರಣದೋಷವನ್ನು ಹೇಳಿ ಪುನಃ ಈ ಅಧಿಕರಣದಲ್ಲಿ ಸೂತ್ರಕಾರರು ದೂಷಿಸುತ್ತಾರೆ.

ಪೀಠಿಕೆ ॥ ಶಕ್ತಿಯೇ ಸಾರ್ವಜ್ಞಾದಿಗುಣಗಳುಳ್ಳದ್ದು, ಸಕಲ ಜಗದುತ್ಪಾಕವು ಎಂದು ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳಲ್ಲಿ ಹೇಳಲ್ಪಡುತ್ತದೆ. ಆದುದರಿಂದ ಶ್ರೀಹರಿಗೆ ಜಗತ್ಕಾರಣತ್ವ ಲಕ್ಷಣವು ಯುಕ್ತವಲ್ಲ ಎಂದರೆ—

**ಸೂತ್ರ ॥ ಓಂ ಉತ್ಪತ್ತ್ಯಸಂಭವಾತ್ ಓಂ ॥ ೪೨ ॥**

ಸೂತ್ರಾರ್ಥ ॥ ಕೇವಲ ಶಕ್ತಿಯಿಂದ ಜಗದುತ್ಪತ್ತಿಯು ಕೂಡದ ಇರುವುದರಿಂದ ಜಗತ್ಕರ್ತೃತ್ವವು ಯುಕ್ತವಲ್ಲ

**ಭಾಷ್ಯ ॥ ನ ಹಿ ಪುರುಷಾನನುಗೃಹೀತಸ್ತ್ರೀಭ್ಯ ಉತ್ಪತ್ತಿರ್ದೃಶ್ಯತೇ ॥ ೪೨ ॥ ॥ ೨ ॥**

ಭಾಷ್ಯಾರ್ಥ ॥ ಪುರುಷರ ಸಂಪರ್ಕವಿಲ್ಲದೆ ಕೇವಲ ಸ್ತ್ರೀಯರಿಂದ ಎಲ್ಲಿಯಾದರೂ ಮಕ್ಕಳ ಉತ್ಪತ್ತಿಯು ಕಾಣಲಿಲ್ಲ. ಆದಕಾರಣ, ಪುರುಷಸಂಪರ್ಕವು ಇಲ್ಲದಿರುವುದರಿಂದ ಕೇವಲ ಶಕ್ತಿಗೆ ಜಗತ್ಕರ್ತೃತ್ವವು ಯುಕ್ತವಲ್ಲ. ॥ ೪೨ ॥

ಪೀಠಿಕೆ ॥ ಶಕ್ತ್ಯನುಗ್ರಾಹಕನಾದ ಸದಾಶಿವಾಖ್ಯ ಪುರುಷನು ಇದ್ದಾನೆ. ಆದಕಾರಣ, ಶಕ್ತಿಯಿಂದ ಜಗದುತ್ಪತ್ತಿಯು ಕೂಡುತ್ತದೆ, ಎಂದು ಹೇಳುವ ಮಧ್ಯಮವಾಮರ ಮತವನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ನ ಚ ಕರ್ತುಃ ಕರಣಂ ಓಂ ॥ ೪೩ ॥**

**ಭಾಷ್ಯ ॥ ಯದಿ ಪುರುಷೋಽಂಗೀಕ್ರಿಯತೇ (ಯೇತ) ತಸ್ಯಾಪಿ ಕರಣಾಭಾವಾದನುಪಪತ್ತಿಃ ॥ ೪೩ ॥ ॥ ೩ ॥**

ಭಾಷ್ಯಾರ್ಥ ॥ ಶಕ್ತ್ಯನುಗ್ರಾಹಕನಾದ ಪುರುಷನಿಗೆ ಉತ್ಪತ್ತ್ಯುಪಯೋಗಿಯಾದ ಸಾಧನವಿಲ್ಲ.

ಅಂದರೆ, ಶಕ್ತನುಗ್ರಾಹಕನಾದ ಸದಾಶಿವಾಖ್ಯ ಪುರುಷನನ್ನು ಅಂಗೀಕರಿಸುವುದಾದರೆ, ಶಕ್ತನುಗ್ರಾಹಕ ಪುರುಷನಿಗೂ ಉತ್ಪತ್ತ್ಯುಪಯೋಗಿಯಾದ ಜ್ಞಾನಾದಿಗಳೂ, ಜ್ಞಾನಸಾಧನ ಇಂದ್ರಿಯಾದಿಗಳೂ, ಜ್ಞಾನಕಾರಣವಾದ ಶರೀರವೂ ಇಲ್ಲದಿರುವುದರಿಂದ ಉತ್ಪತ್ತಿಯು ಕೂಡಲಾರದು. ಏವಂಚ, ಪುರುಷಾನುಗೃಹೀತ ಶಕ್ತಿಗೂ ಜಗತ್ಕರ್ತೃತ್ವವು ಕೂಡಲಾರದು. ॥ ೪೩ ॥

ಪೀಠಿಕೆ ॥ ಶಕ್ತನುಗ್ರಾಹಕನಾದ ಪುರುಷನಿಗೆ ಸಾರ್ವಜ್ಞಾದಿಗುಣಗಳು ಇದ್ದುದರಿಂದ ಶಕ್ತಿಯಿಂದ ಜಗದುತ್ಪತ್ತಿಯು ಕೂಡಬಹುದು. ಎಂದು ಹೇಳುವ ಅಣುವಾಮರ ಮತವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ಓಂ ॥ ೪೪ ॥

ಸೂತ್ರಾರ್ಥ ॥ ಪಶುಪತಿಗೆ ವಿಜ್ಞಾನಾದಿಗಳನ್ನು ಅಂಗೀಕರಿಸಿದರೆ, ಆ ಶಾಕ್ತೇಯನಿಂದ ಪಾಶುಪತ ಮತಕ್ಕೆ ಅಪ್ರತಿಷೇಧವು ಮಾಡಲ್ಪಟ್ಟತು. ಆತನಿಗೆ ಆ ಪಾಶುಪತಮತವೇ ಅನುಮತವೆಂದು ಆಗುವುದು. ಆ ಪಾಶುಪತಮತವನ್ನು ಹಿಂದೆಯೇ ನಿರಾಕರಿಸಿದ್ದರಿಂದ ಪುನಃ ನಿರಾಕರಿಸಬೇಕಾಗಿಲ್ಲ.

**ಭಾಷ್ಯ ॥ ಯದಿ ವಿಜ್ಞಾನಾದಿಕರಣಂ ತಸ್ಯಾಂಗೀಕ್ರಿಯತೇ। ತದಾ ತತ ಏವ ಸೃಷ್ಟ್ಯಾದ್ಯುಪಪತ್ತೇರೀಶ್ವರವಾದಾಂತರ್ಭಾವಃ ॥ ೪೪ ॥ ॥ ೪ ॥**

ಭಾಷ್ಯಾರ್ಥ ॥ ಶಕ್ತನುಗ್ರಾಹಕನಾದ ಈಶ್ವರನಿಗೆ ವಿಜ್ಞಾನ, ಉತ್ಪತ್ತ್ಯುಪಯೋಗಿಯಾದ ಶರೀರ, ಇಂದ್ರಿಯಾದಿ ಕರಣಗಳಿವೆ ಎಂದು ಅಂಗೀಕರಿಸುವದಾದರೆ, ಆಗ ಶಕ್ತನುಗ್ರಾಹಕ ಶಿವನಿಂದಲೇ (ಕರ್ತ್ರಂತರ ಅಪೇಕ್ಷೆ ಇಲ್ಲದೇನೇ) ಜಗದುತ್ಪತ್ತ್ಯಾದಿಗಳು ಕೂಡುವುದರಿಂದ (ಶಕ್ತಿಗೂ ಪೃಥಕ್ ಕರ್ತೃತ್ವವನ್ನು ಅಂಗೀಕರಿಸುವುದು ವ್ಯರ್ಥವಾದುದರಿಂದ) (ಶಾಕ್ತೇಯಮತಕ್ಕೆ) ಪಾಶುಪತಮತದಲ್ಲಿ ಅಂತರ್ಭಾವವು ಬರುವುದು. (ಪಾಶುಪತಮತವು ಮೊದಲೇ ನಿರಸ್ತವಾಗಿದೆ.) ॥ ೪೪ ॥

ಪೀಠಿಕೆ ॥ ಹೀಗೆ, ಶಾಕ್ತೇಯಮತತ್ರಯವನ್ನು ಪ್ರತ್ಯೇಕವಾಗಿ ನಿರಾಕರಿಸಿ ಸಾಧಾರಣ ದೂಷಣದಿಂದಲೂ ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ವಿಪ್ರತಿಷೇಧಾಚ್ಚ ಓಂ ॥

**ಭಾಷ್ಯ ॥ ಸಕಲಶ್ರುತ್ಯಾದಿವಿರುದ್ಧತ್ವಾಚ್ಚಾಸಮಂಜಸಂ ॥ ೪೫ ॥ ಅಧಿ.೧೨ ॥ ॥ ೫ ॥**

ಭಾಷ್ಯಾರ್ಥ ॥ ನ ಋತೇ, ಏಕೋ ನಾರಾಯಣಃ ಇದುಮೊದಲಾದ ಸರ್ವಶ್ರುತಿಗಳಿಗೂ, ಸ ಏವ ಇದುಮೊದಲಾದ ಸ್ಮೃತಿಗಳೂ, ಇತ್ಯಾದಿಗಳಿಂದ ವಿರುದ್ಧಗಳಾಗಿರುವುದರಿಂದಲೂ (ಶಿಷ್ಟಜನರಿಂದ ನಿಂದಿತವಾದುದರಿಂದಲೂ) ಶಕ್ತಿಕರ್ತೃತ್ವಮತವು ಅಯುಕ್ತವು. ॥ ೪೫ ॥

## ಮಾಯಾವಾದಿರೀತ್ಯಾ

ವಿಚಾರ ॥ (೧) ಪಂಚರಾತ್ರಾಗಮದಲ್ಲಿ ವಾಸುದೇವನ ದೆಸೆಯಿಂದ ಸಂಕರ್ಷಣನಾಮಕ

ಜೀವನು ಹುಟ್ಟುತ್ತಾನೆಂದು ಹೇಳಿದ್ದು ಅಯುಕ್ತವು. ಜೀವರು ಅನಾದಿಗಳೆಂದು ಶ್ರುತ್ಯಾದಿಸಿದ್ಧವಾಗಿದೆ. (೨) ಸಂಕರ್ಷಣಾಖ್ಯಜೀವನ ದೆಸೆಯಿಂದ ಪ್ರದ್ಯುಮ್ನನಾಮಕ ಮನಸ್ಸು ಹುಟ್ಟುತ್ತದೆಯೆಂದು ಹೇಳಿದ್ದು ಅಯುಕ್ತವು. ಕರ್ತನಾದ ಜೀವನ ದೆಸೆಯಿಂದ ಕರಣವಾದ ಮನಸ್ಸು ಹುಟ್ಟುತ್ತದೆಯೆಂದು ಹೇಳಿದ್ದು ಅಯುಕ್ತವು. ಕರ್ತನಾದ ಜೀವನ ದೆಸೆಯಿಂದ ಕರಣವಾದ ಮನಸ್ಸು ಹುಟ್ಟತಕ್ಕುದು ಕಾಣಲಿಲ್ಲ (೩) ಅಲ್ಲದೆ, ಸಂಕರ್ಷಣಾದಿಗಳು ಜೀವರೂಪರಲ್ಲ ಭಗವದ್ರೂಪರೇ. ಸಂಕರ್ಷಣಾದಿಗಳಿಗೂ ಶ್ರೀಹರಿಯಂತೆ ಜ್ಞಾನೈಶ್ವರ್ಯಾದಿಗಳು ಇವೆಯೆಂದು ಅಭಿಮತವಾದರೆ ಎಲ್ಲವೂ ಭಗವದ್ರೂಪಗಳಾದುದರಿಂದ ಅತಿಶಯವಿಲ್ಲದಿರುವುದರಿಂದ ಆ ರೂಪಗಳಿಗೆ ಉತ್ಪತ್ತಿಯು ಸರ್ವಥಾ ಕೂಡ ಬಾರದು. ಇತ್ಯಾದಿಪ್ರಕಾರ ಪಂಚರಾತ್ರಾಗಮೋಕ್ತ ಪ್ರಮೇಯವನ್ನು ದೂಷಿಸಿ ಈ ಅಧಿಕರಣವು ಪಂಚರಾತ್ರಾಗಮಕ್ಕೆ ಅಪ್ರಾಮಾಣ್ಯಪ್ರತಿಪಾದಕವು ಎಂದು ಮಾಯಾವಾದಿಗಳು ಹೇಳುವರು. ಅದು ಅಯುಕ್ತವು. ಪಂಚರಾತ್ರವು ಅಪ್ರಮಾಣವೆಂದು ಹೇಳಿದರೆ— (೧) **ಋಗ್ವೇದೋ ಯಜುರ್ವೇದಃ— ಶ್ಲೋಕಾಃ** ಇತ್ಯಂತಶ್ರುತಿಯಿಂದ (೨) **ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ** ಎನ್ನುವಲ್ಲಿ **ಶ್ಲೋಕಾಃ, ಇತಿಹಾಸಃ** ಎನ್ನುವ ಪದಗಳಿಂದ ಪಂಚರಾತ್ರವನ್ನು ಪ್ರಮಾಣವೆಂದು ಹೇಳಿದುದರಿಂದ ವಿರೋಧವು ಬರುವುದು. ಹೇಗೆಂದರೆ, (೩) **ಕೃತಂ ಶತಸಹಸ್ರಂ ಹಿ ಶ್ಲೋಕಾನಾಂ ಹಿತಮುತ್ತಮಂ ।** ಎಂದು ಭಾರತದಲ್ಲಿ ಪಂಚರಾತ್ರವನ್ನು ನಿರುಪಪದಶ್ಲೋಕಶಬ್ದದಿಂದ ಹೇಳಿರುವರು. (೪) **ಭಾರತಂ ಪಂಚರಾತ್ರಂ ಚ ಮೂಲರಾಮಾಯಣಂ ತಥಾ । ಇತಿಹಾಸ ಇತಿ ಪ್ರೋಕ್ತಂ ಬ್ರಾಹ್ಮಾದ್ಯಂ ತು ಪುರಾಣಕಂ ॥** ಎಂದು ಪಾದ್ಮದಲ್ಲಿ ಪಂಚರಾತ್ರಕ್ಕೆ ಇತಿಹಾಸತ್ವವನ್ನು ಹೇಳಿದೆ. (೫) **ವೇದೇನ ಪಂಚರಾತ್ರೇಣ ಭಕ್ತ್ಯಾ ಯಜ್ಞೇನಚೈವ ಹಿ । ದೃಶ್ಯೋಽಹಂ ನಾನ್ಯಥಾ ದೃಶ್ಯೋ ವರ್ಷಕೋಟಿಶತೈರಪಿ ॥** ಎಂದು ವಾರಾಹದಲ್ಲಿಯೂ, (೬) **ಋಗ್ಯಜುಃಸಾಮಾಥರ್ವಾಶ್ಚ** ಎಂದು ಸ್ಕಾಂದದಲ್ಲಿಯೂ, (೭) **ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಂ ।** ಎಂದು ಬ್ರಹ್ಮಾಂಡದಲ್ಲಿಯೂ, (೮) **ವೇದಾರ್ಥಪೂರಕಂ ಜ್ಞೇಯಂ ಪಂಚರಾತ್ರಂ ಯತೋಽಖಿಲಂ । ತತ್ ಸಂಕ್ಷೇಪಶ್ಚ ಗೀತೇಯಂ ತಸ್ಮಾನ್ನಾಸ್ಯಾಃ ಸಮಂ ಕ್ವಚಿತ್ ।** ಎಂದು ಬ್ರಹ್ಮವೈವರ್ತದಲ್ಲಿಯೂ, ಪಂಚರಾತ್ರಕ್ಕೆ ಸರ್ವೋತ್ತಮ ಪ್ರಾಮಾಣ್ಯವನ್ನು ಹೇಳಿರುವರು. (೯) ಮತ್ತು ಭಾರತದಲ್ಲಿ **ಸಾಂಖ್ಯಂ ಯೋಗಃ ಪಾಶುಪತಂ** ಇತ್ಯಾದಿಗಳಿಂದ ಸಾಂಖ್ಯಾದಿಗಳಿಗೆ ಪರಸ್ಪರ ವಿರೋಧವನ್ನು ಹೇಳಿ **ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ ।** ಎಂದು ವಿಶೇಷವನ್ನು ಹೇಳಿ ಸರ್ವತೋಽಪಿ ಪ್ರಾಮಾಣ್ಯವನ್ನು ಹೇಳಿರುವರು. ಹಾಗೆಯೇ, (೧೦) **ಅಸ್ಮಾತ್ಪ್ರಕೃತೇ ಧರ್ಮಾನ್ ಮನುಃ ಸ್ವಾಯಂಭುವಃ ಸ್ವಯಂ ।** ಎಂದು ಮನ್ವಾದಿಸ್ಮೃತಿಗಳಿಗೂ ಪಂಚರಾತ್ರ ಮೂಲಕತ್ವವನ್ನು (೧೧) **ವೇದೈಶ್ಚತುರ್ಭಿಃ ಸಮ್ಮಿತಂ ಕೃತಂ ಮೇರೌ ಮಹಾಗಿರೌ ।** ಇತ್ಯಾದಿಗಳಿಂದ ಪುಣ್ಯದೇಶದಲ್ಲಿ ಪ್ರವರ್ತಿತತ್ವವನ್ನು ಶಿಷ್ಟಜನ ಪರಿಗೃಹೀತತ್ವವನ್ನೂ ವಿಪ್ರಲಂಭಾದ್ಯಭಾವವನ್ನೂ ಹೇಳಿರುವರು. ವಸ್ತುತಸ್ತು ಹಿಂದೆ ಹೇಳಿದ ವಾಕ್ಯವು **ಜೀವಾಭಿಮಾನಿಶೇಷಸ್ಯ ನಾಮ್ನಾ ಸಂಕರ್ಷಣಸ್ಯ ಚ । ವಾಸುದೇವಾಜ್ಜನಿಃ ಪ್ರೋಕ್ತಾ** ಇತ್ಯಾದಿ ಪ್ರಕಾರ ಅವಿರುದ್ಧವಾದ ಅನ್ಯಾರ್ಥಪರವು. ಏವಂಚ, ಆವಾವ ಸೃಷ್ಟ್ಯಾದಿ ವ್ಯಾಪಾರಕ್ಕಾಗಿಯೂ, ಆವಾವ ಅಧಿಕಾರಿಗೆ ಉಪಾಸನೆಗಾಗಿಯೂ, ಅಚಿಂತ್ಯಶಕ್ತಿಯುಳ್ಳ ಶ್ರೀಹರಿಯು ಸ್ವೇಚ್ಛೆಯಿಂದಲೇ ಮತ್ಸ್ಯಾದಿ ಹತ್ತು (೧) ಕೇಶವಾದಿ ಇಪ್ಪತ್ತನಾಲ್ಕು, (೧೨) (೨೪) ಇತ್ಯಾದಿ ವ್ಯೂಹರೂಪದಿಂದಲೆಂಬಂತೆ ನಾಲ್ಕು

(೪) ವ್ಯೂಹರೂಪದಿಂದ ಇರುತ್ತಾನೆಂದು ಪ್ರತಿಪಾದಿಸಿದ್ದು ಯುಕ್ತವು. ಏವಂಚ, **ಶಾಕ್ತಪಕ್ಷೇ ಪಕ್ಷಪಾತಾತ್ ವಿದ್ವೇಷಾದ್ವೈಷ್ಣವೇ ಮತೇ । ಮಹಾಸುರೈಃ ಪಂಚರಾತ್ರ ನಿರಾಸ ಇಹ ಕಲ್ಪಿತಃ ॥**

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ಪ್ರಥಮ ಎರಡು ಸೂತ್ರಗಳಿಂದ ಜೀವೋತ್ಪತ್ತ್ಯಾದಿಗಳಿಂದ ಪಂಚರಾತ್ರಕ್ಕೆ ಅಪ್ರಾಮಾಣ್ಯವೆಂದು ಪೂರ್ವಪಕ್ಷ ಮಾಡಿಕೊಂಡು ಮೂರನೇ ಸೂತ್ರದಲ್ಲಿ ಸಂಕರ್ಷಣಾದಿಗಳಿಗೆ ವಿಜ್ಞಾನಂ ಚ ಆದಿ ಚ ಎನ್ನುವ ವಿಗ್ರಹದಿಂದ, ವಿಜ್ಞಾನಾದಿ ಭಾವೇ, ಬ್ರಹ್ಮತ್ವವೆನ್ನುವ ಅರ್ಥವನ್ನು ಇಟ್ಟುಕೊಂಡು ಅದನ್ನು ಪ್ರತಿಪಾದಿಸತಕ್ಕ ಶಾಸ್ತ್ರಕ್ಕೆ ಪ್ರಾಮಾಣ್ಯವು ಪ್ರತಿಷಿದ್ಧವಾಗುವುದಿಲ್ಲ. ಜೀವಾದಿಗಳು ಅಧಿಷ್ಠಾನರಾದುದರಿಂದ ಸಂಕರ್ಷಣಾದಿಗಳಲ್ಲಿ ಜೀವಾದಿ ಶಬ್ದಗಳು ಕೂಡುತ್ತವೆ. ಅಂತೂ ಜೀವೋತ್ಪತ್ತ್ಯಾದಿಗಳು ಅಸಿದ್ಧವೆಂದು ಹೇಳಿ ನಾಲ್ಕನೇ ಸೂತ್ರದಿಂದ ಪಂಚರಾತ್ರದಲ್ಲಿ ಜೀವೋತ್ಪತ್ತಿ ಹೇಳಿದ್ದು ಸ ಹ್ಯನಾದಿರನಂತಶ್ಚ ಇತ್ಯಾದಿಗಳಿಂದ ಪ್ರತಿಷಿದ್ಧವಾಗಿದೆ. ಎಂದು ಹೇಳಿ ಪ್ರಾಮಾಣ್ಯವು ಸಿದ್ಧಾಂತಿತವಾಗಿದೆ, ಎಂದು ರಾಮಾನುಜಾಚಾರ್ಯರು ಹೇಳುವರು. ಅದು ಅಯುಕ್ತವು. ಪರಮತನಿರಾಸಕವಾದ ಈ ಪಾದದಲ್ಲಿ ತನ್ನ ಮತವನ್ನು ಸಮರ್ಥಿಸುವುದು ಅಸಂಗತವು. ಜೀವಶಬ್ದಕ್ಕೆ ಅನಭಿಪ್ರೇತವಾದ ಅರ್ಥಾಂತರವನ್ನು ಕಲ್ಪಿಸಿಕೊಂಡು ಛಲೋತ್ತರದಿಂದ ಸೂತ್ರದಲ್ಲಿ ಪೂರ್ವಪಕ್ಷೋಕ್ತಿಯೂ ಕೂಡಲಾರದು. ವಿಜ್ಞಾನಾದಿ ಶಬ್ದಕ್ಕೆ ಬ್ರಹ್ಮ ಎನ್ನುವ ಅರ್ಥ ಹೇಳಿದ್ದು ಕ್ಲಿಷ್ಟವೂ ಆಗಿದೆ.

## ಅಧಿಕರಣ ಸಾರಾಂಶ

ಸಾರ್ವಜ್ಞಾದಿ ಗುಣಗಳುಳ್ಳ ಶಕ್ತಿಯಿಂದಲೇ ವಿಶ್ವಕರ್ತೃತ್ವವು ಕೂಡುವಾಗ ವಿಷ್ಣುವಿಗೆ ವಿಶ್ವಕರ್ತೃತ್ವವು ಯುಕ್ತವಲ್ಲ ಎಂದರೆ ಪುರುಷಾನುಗ್ರಹವಿಲ್ಲದೆ ಸ್ತ್ರೀಮಾತ್ರದಿಂದ ಅಪತ್ಯೋತ್ಪತ್ತಿಯು ಎಲ್ಲಿಯೂ ದೃಷ್ಟವಾಗಲಿಲ್ಲ. ಆದಕಾರಣ ಕೇವಲ ಶಕ್ತಿಗೆ ಬ್ರಹ್ಮಾದಿ ವಿಶ್ವಹೇತುತ್ವವು ಕೂಡಲಾರದು. ಶಿವಾನುಗ್ರಹೀತವಾದ ಶಕ್ತಿಯು ಜಗಜ್ಜನನಿಯು ಎನ್ನುವ ಮಧ್ಯಮವಾಮರ ಮತದಲ್ಲಿಯೂ ಶಿವನಿಗೆ ಸೃಷ್ಟ್ಯುಪಯುಕ್ತ ಜ್ಞಾನಾದಿಸಾಧನಗಳು ಇಲ್ಲದಿರುವುದರಿಂದ ಅನುಗ್ರಾಹಕತ್ವವು ಕೂಡಲಾರದು. ಜ್ಞಾನಾದಿ ಸಾಧನಗಳನ್ನು ಶಿವನಿಗೆ ಅಂಗೀಕರಿಸುತ್ತೇವೆ ಎಂದು ಹೇಳುವ ಆಣುವಾಮರ ಮತದಲ್ಲಿ ಅಂತಹ ಶಿವನಿಂದಲೇ ಜಗದುತ್ಪತ್ತಿಯಾಗುವಾಗ ಶಕ್ತಿಯಿಂದ ಜಗದುತ್ಪತ್ತ್ಯಂಗೀಕರಣವು ವ್ಯರ್ಥವು. ಹೀಗೆ ಮತ ತ್ರಯವೂ ಶ್ರುತ್ಯಾದಿಗಳಿಂದ ನಿಷಿದ್ಧವಾದುದರಿಂದ ವಿಷ್ಣುವಿಗೆ ವಿಶ್ವಕರ್ತೃತ್ವವು ಯುಕ್ತವು. ॥ಅಧಿ.೧೨ ॥

**ಉತ್ಪತ್ತ್ಯಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ಪಾದ) ವಿರಚಿತೇ ದ್ವಿತೀಯಾಧ್ಯಾಯಸ್ಯ(ಯೇ) ದ್ವಿತೀಯಃ ಪಾದಃ ॥ ೨-೨ ॥**

**ಬ್ರಹ್ಮಸೂತ್ರ ಭಾಷ್ಯದಲ್ಲಿ ಎರಡನೇ ಅಧ್ಯಾಯದಲ್ಲಿ ಎರಡನೇ ಪಾದವು ಸಮಾಪ್ತವಾಯಿತು. ॥೨-೨॥**

॥ ಓಂ ಆಕಾಶೋತ್ಪತ್ತಿ ಶ್ರುತ್ಯವಿರೋಧ ಪ್ರಯೋಜ್ಯ
ಸಮನ್ವಯಗೋಚರಾಯನಮಃ ಓಂ ॥

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ದ್ವಿತೀಯಾಧ್ಯಾಯ ೩ನೇ ಪಾದ

## ಶ್ರುತಿಪಾದಃ

ಓಂ ಜಯತಿ ಶ್ರೀರಮಾಕಾಂತಃ ಜಯತಿ ಶ್ರೀಶ್ಚ ತತ್ಪ್ರಿಯಾ ।
ಶ್ರೀಶ್ರೀಶಭಕ್ತೋ ಜಯತಿ ಮಧ್ವೋ ವಿಧ್ವಸ್ತಸಾಧ್ವಸಃ ॥

### ೧. ವಿಯದಧಿಕರಣವು

ಭಾಷ್ಯ ॥ ಜೀವಪರಮಾತ್ಮಾಧಿಭೂತಾಧಿದೈವೇಷು ಶ್ರುತೀನಾಂ ಪರಸ್ಪರವಿರೋಧ-
ಮಪಾಕರೋತ್ಯನೇನ ಪಾದೇನ ॥ ೧ ॥

ಭಾಷ್ಯಾರ್ಥ ॥ ಜೀವ, ಪರಮಾತ್ಮ, ಅಧಿಭೂತ, (ಸಕಾರಣ ಕಾರ್ಯಭೂತ) ಅಧಿದೈವ (ಅವುಗಳಿಗೆ ಅಭಿಮಾನಿ ದೇವತೆ) ವಿಷಯಕ ಶ್ರುತಿಗಳ ವಿಷಯದಲ್ಲಿ ಪರಸ್ಪರ ವಿರೋಧವನ್ನು ಈ ಪಾದದಲ್ಲಿ (ಸೂತ್ರಕಾರರು) ನಿರಾಕರಿಸುತ್ತಾರೆ.

ವಿಶೇಷಾಂಶ ॥ ಯದ್ಯಪಿ ಜ್ಯೋತಿ, ಏವ ಎನ್ನುವುದನ್ನು ಆರಂಭಿಸಿಕೊಂಡು ಪಾದ ಮುಗಿಯುವತನಕ ಜೀವವಿಚಾರವು. ಅಸಂಭವಸ್ತು, ನಾತ್ಮಾಶ್ರುತೇಃ ಎನ್ನುವ ಎರಡು ಅಧಿಕರಣಗಳಲ್ಲಿ ಪರಮಾತ್ಮವಿಚಾರವು. ಒಂದನೇ ಅಧಿಕರಣವನ್ನು ಆರಂಭಿಸಿಕೊಂಡು ಒಂದೊಂದೇ ಅಧಿಕರಣದಲ್ಲಿ ಅಧಿಭೂತಾದಿ ವಿಚಾರವು. ತಥಾಚ ಅಧಿಭೂತ ಅಧಿದೈವ ಪರಮಾತ್ಮ ಜೀವೇಷು ಎಂದು ಹೇಳಬೇಕಿತ್ತು. ಆದರೂ ಜೀವವಿಷಯದಲ್ಲಿ ಬಹುವಿಚಾರವಿದೆ ಎನ್ನುವ ಅಭಿಪ್ರಾಯದಿಂದ ಕ್ರಮವನ್ನು ಉಲ್ಲಂಘಿಸಿ ಜೀವ ಪರಮಾತ್ಮ ಎಂದು ಹೇಳಿರುವರು. ಒಂದನೇ ಅಧಿಕರಣದಲ್ಲಿ ಆಕಾಶಕ್ಕೆ ಉತ್ಪತ್ತಿವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ.

ಪೀಠಿಕೆ ॥ ಆತ್ಮನ ಆಕಾಶಃ ಸಂಭೂತಃ ಎನ್ನುವ ಶ್ರುತಿಯಿಂದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಿವಾಗ್ಯೂ ಅನಾದಿರ್ವಾ ಅಯಮಾಕಾಶಃ ಇತ್ಯಾದಿ ಬಹುಶ್ರುತಿ ವಿರೋಧವಿದ್ದುದರಿಂದಲೂ ಅನುಭವ ಯುಕ್ತಿ ವಿರೋಧವಿದ್ದುದರಿಂದಲೂ ಆಕಾಶವು ಉತ್ಪತ್ತಿಯುಳ್ಳದ್ದಲ್ಲ. ಅವಕಾಶರೂಪವಾದ ಆಕಾಶಕ್ಕೆ ಉತ್ಪತ್ತಿಯದೆ ಎನ್ನುವಲ್ಲಿ ಅನುಭವವೂ ಇಲ್ಲ. ಆಕಾಶಃ ನೋತ್ಪತ್ತಿಮಾನ್ ವಿಭುತ್ವಾತ್ ಇತ್ಯಾದಿ ಯುಕ್ತಿಯೂ ಇದೆ. ಆದಕಾರಣ ಆಕಾಶೋತ್ಪತ್ತಿಶ್ರುತಿಯು ಅಪ್ರಮಾಣವೇ, ಎಂದು ಪೂರ್ವಪಕ್ಷಬಂದರೆ ಸಿದ್ಧಾಂತಮಾಡತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ನ ವಿಯದಶ್ರುತೇಃ ಓಂ ॥ ೧ ॥

**ಭಾಷ್ಯ ॥ ನ ವಿಯದನುತ್ಪತ್ತಿಮತ್ । ತಥಾऽಶ್ರುತೇಃ ॥ ೧ ॥** ॥ ೨ ॥

**ಭಾಷ್ಯಾರ್ಥ ॥** ಆಕಾಶವು ಅನುತ್ಪತ್ತಿಯುಳ್ಳದ್ದಲ್ಲ. ಉತ್ಪತ್ತಿಯುಳ್ಳದ್ದೇ. ಹಾಗೆ ಅನುತ್ಪತ್ತಿಯಲ್ಲಿ ಶ್ರುತಿಯಿಲ್ಲದಿರುವುದರಿಂದ. ॥ ೧ ॥

**ಪೀಠಿಕೆ ॥** ಆಕಾಶಕ್ಕೆ ಉತ್ಪತ್ತಿವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಅನುತ್ಪತ್ತಿಯು ಸಿದ್ಧಿಸುವುದರಿಂದ ಆ ವಿಷಯದಲ್ಲಿ ಪ್ರತ್ಯೇಕ ಪ್ರಮಾಣವನ್ನು ನಿಯಮೇನ ಹೇಳಬೇಕಾಗಿಲ್ಲ ಎಂದರೆ—

## ಸೂತ್ರ ॥ ಓಂ ಅಸ್ತಿ ತು ಓಂ ॥ ೨ ॥

**ಭಾಷ್ಯ ॥ ಅಸ್ತ್ಯೇವ ಚೋತ್ಪತ್ತಿಶ್ರುತಿಃ । ಆತ್ಮನ ಆಕಾಶಃ ಸಂಭೂತಃ (ತೈ.ಉ.೨.೧.)। ಇತ್ಯಾದಿ ॥ ೨ ॥** ॥ ૩ ॥

**ಭಾಷ್ಯಾರ್ಥ ॥** ಆತ್ಮನ ದೆಶೆಯಿಂದ ಆಕಾಶವು ಹುಟ್ಟಿತು ಇದುಮೊದಲಾದ ಶ್ರುತಿಯು ಆಕಾಶೋತ್ಪತ್ತಿಯಲ್ಲಿ (ಪ್ರಮಾಣವಾಗಿ) ಇದ್ದೇ ಇದೆ. (ಆದಿಪದದಿಂದ). (೧) ಏತಸ್ಮಾಜ್ಜಾಯತೇ, (೨) ಖಂ ವಾಯುಃ (೩) ನಾಭ್ಯಾ ಆಸೀದಂತರಿಕ್ಷಂ, ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು. ॥ ೨ ॥

**ಪೀಠಿಕೆ ॥** ಹಾಗಾದರೆ **ಅನಾದಿರ್ವಾ ಅಯಮಾಕಾಶಃ** ಇತ್ಯಾದಿ ನಿತ್ಯತ್ವಪ್ರತಿಪಾದಕ ಶ್ರುತಿವಿರೋಧವು ಬರುತ್ತದೆ ಎಂದರೆ—

## ಸೂತ್ರ ॥ ಓಂ ಗೌಣ್ಯಸಂಭವಾತ್ ಓಂ ॥ ૩ ॥

**ಭಾಷ್ಯ ॥ ಅನಾದಿರ್ವಾ ಅಯಮಾಕಾಶಃ। ಶೂನ್ಯೋऽಲೌಕಿಕಃ । ಇತ್ಯಾದಿಶ್ರುತಿರ್ಗೌಣೀ । ಅನ್ಯಥೋತ್ಪತ್ತಿಶ್ರುತಿಬಾಹುಲ್ಯಾಸಂಭವಾತ್** ॥ ૩ ॥

**ಭಾಷ್ಯಾರ್ಥ ॥** ಈ ಆಕಾಶವು ಅನಾದಿಯಾಗಿದೆ. ಸೂಕ್ಷ್ಮವು (ಗಮನಾಗಮನಾದಿಗಳಿಗೆ ಪ್ರತಿಬಂಧಕವಾಗದೆ ಇರುವುದು) ಬಾಹ್ಯೇಂದ್ರಿಯಕ್ಕೆ ಅಗೋಚರವು. ಇತ್ಯಾದಿ ಶ್ರುತಿಯು ಗೌಣಾನಾದಿತ್ವಪರವು. ಮುಖ್ಯಾನಾದಿತ್ವಪರತ್ವವಿದ್ದರೆ ಉತ್ಪತ್ತಿಯನ್ನು ಹೇಳತಕ್ಕ ಬಹುಶ್ರುತಿಗಳಿಗೆ ವಿಷಯವೇ ಇಲ್ಲವೆಂದಾಗುವುದರಿಂದ ಅಪ್ರಾಮಾಣ್ಯವು ಬರಬೇಕಾಗುವುದು.

**ವಿಶೇಷಾಂಶ ॥** (೧) ಆಕಾಶಪದದಿಂದ ಭೂತಾಕಾಶ ಭೂತಾಕಾಶಾಭಿಮಾನಿ ಗಣಪತಿ. ಅವಕಾಶ, (ಅವ್ಯಾಕೃತಾಕಾಶ) ತದಭಿಮಾನಿ ಚಿತ್ಪ್ರಕೃತಿ ಹೀಗೆ ನಾಲ್ವರು ಹೇಳಲ್ಪಡುತ್ತಾರೆ. ಅದರಲ್ಲಿ ಭೂತಕ್ಕೆ ಸ್ವರೂಪತ ಏವ ಉತ್ಪತ್ತಿಯು. ಭೂತಾಭಿಮಾನಿ ಗಣಪತಿಗೂ ಶರೀರೋತ್ಪತ್ತಿದ್ವಾರಾ ಉತ್ಪತ್ತಿಯು. ಅವಕಾಶಕ್ಕೆ ಮೂರ್ತಪದಾರ್ಥಸಂಬಂಧರೂಪವಾದ ಉತ್ಪತ್ತಿಯು. ಅವಕಾಶಾಭಿಮಾನಿನಿಯಾದ ರಮಾದೇವಿಗೆ ಸಿಸೃಕ್ಷಾದಿರೂಪವಾದ ಉತ್ಪತ್ತಿಯು. ಹೀಗೆ ಸರ್ವವಿಷಯಕವಾದುದರಿಂದ ಉತ್ಪತ್ತಿಶ್ರುತಿಯೇ ಮುಖ್ಯಾರ್ಥವುಳ್ಳದ್ದು. ಅನಾದಿತ್ವಶ್ರುತಿಯಾದರೂ ಸರ್ವವಿಷಯಕವಲ್ಲ.

ಹೇಗೆಂದರೆ—ಗಣಪತಿ, ಅವ್ಯಾಕೃತಾಕಾಶ, ರಮಾ, ಇವರಲ್ಲಿ ಸ್ವರೂಪತಃ ಅನಾದಿತ್ವವಿದ್ದರೂ ಭೂತಾಕಾಶದಲ್ಲಿ ಅನಾದಿತ್ವವು ಸರ್ವಥಾ ಕೂಡಲಾರದು. ಆದಕಾರಣ ಅನಾದಿತ್ವ ಶ್ರುತಿಯು ಗೌಣಾರ್ಥಕವೇ. (೨) ಅಥವಾ ಅವ್ಯಾಕೃತಾಕಾಶ ಚಿತ್ಪ್ರಕೃತಿ. ಭೂತಾಭಿಮಾನಿ ಇವರಿಗೆ ಪರಾಧೀನ ವಿಶೇಷ ಲಾಭಾಭಾವರೂಪವಾದ ಮುಖ್ಯಾನಾದಿತ್ವವು ಕೂಡದಿರುವುದರಿಂದ ಅನಾದಿತ್ವಶ್ರುತಿಯು ತತ್ಸ್ವರೂಪಾನಾದಿತ್ವ ಪ್ರತಿಪಾದಕವು. ಭೂತಾಕಾಶದಲ್ಲಿ ಸ್ವರೂಪತಃ ಅನಾದಿತ್ವವೂ ಕೂಡದಿರುವುದರಿಂದ ಸೂಕ್ಷ್ಮರೂಪಕ್ಕೆ ಅನಾದಿತ್ವಪ್ರತಿಪಾದಕವು. ॥ ೩. ॥

ಪೀಠಿಕೆ ॥ ಹೇಳಿದ ಪ್ರಮೇಯವು ಶ್ರುತಿಸಿದ್ಧವೂ ಆಗಿದೆ ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಹೇಳಿ ಶ್ರುತಿಯನ್ನುಪಪಾದಿಸುತ್ತಾರೆ—

## ಸೂತ್ರ ॥ ಓಂ ಶಬ್ದಾಚ್ಚ ಓಂ ॥ ೪ ॥

ಸೂತ್ರಾರ್ಥ ॥ ಅಥ ಹ ವಾವ ಇತ್ಯಾದಿ ಶ್ರುತಿಯಿಂದಲೂ ಆಕಾಶಾನಾದಿತ್ವ ಶ್ರುತಿಯು ಗೌಣಾನಾದಿತ್ವ ಪರವು.

**ಭಾಷ್ಯ ॥ ಅಥ ಹ ವಾವ ನಿತ್ಯಾನಿ ಪುರುಷಃ ಪ್ರಕೃತಿರಾತ್ಮಾ ಕಾಲಃ । ಇತಿ ॥ ಅಥ ಯಾನ್ಯನಿತ್ಯಾನಿ ಪ್ರಾಣಃ ಶ್ರದ್ಧಾ ಭೂತಾನಿ ಭೌತಿಕಾನಿ । ಇತಿ ॥ ಯಾನಿ ಹ ವಾ ಉತ್ಪತ್ತಿಮಂತಿ ತಾನ್ಯನಿತ್ಯಾನಿ । ಯಾನಿ ಹ ವಾ ಅನುತ್ಪತ್ತಿಮಂತಿ ತಾನಿ ನಿತ್ಯಾನಿ । ನ ಹ್ಯೇತಾನಿ ಕದಾಚನೋತ್ಪದ್ಯಂತೇ ನ ವಿಲೀಯಂತೇ ಪುರುಷಃ ಪ್ರಕೃತಿರಾತ್ಮಾ ಕಾಲಃ । ಇತಿ ॥ ಅಥೈತಾನ್ಯುತ್ಪತ್ತಿಮಂತಿ ಚಾನುತ್ಪತ್ತಿಮಂತಿ ಚ ಪ್ರಾಣಃ ಶ್ರದ್ಧಾಽಽಕಾಶಃ । ಇತಿ ಭಾಗಶೋ ಹ್ಯುತ್ಪದ್ಯಂತೇ । ಇತಿ ಭಾಲ್ಲವೇಯಶ್ರುತೇಶ್ಚ ॥ ೪ ॥ ೫ ॥**

ಭಾಷ್ಯಾರ್ಥ ॥ ಪ್ರಮೇಯಾಂತರವು ಆರಂಭಿಸಲ್ಪಡುತ್ತದೆ. ಜೀವಚೈತನ್ಯವೂ (ತದಭಿಮಾನಿ ಬ್ರಹ್ಮನು) ಸತ್ವಾದಿ ಗುಣತ್ರಯಾತ್ಮಕ ಜಡರೂಪವಾದ ಪ್ರಧಾನ ಸ್ವರೂಪವೂ ತದಭಿಮಾನಿ ಶ್ರೀ, ಭೂ, ದುರ್ಗಾದೇವಿಯರು, ಪರಮಾತ್ಮನೂ, ಕಾಲಪ್ರವಾಹವೂ ತದಭಿಮಾನಿನಿಯಾದ ಚಿತ್ಪ್ರಕೃತಿಯೂ (ಲಕ್ಷ್ಮೀದೇವಿಯೂ) ಕೂಡ ನಿತ್ಯಭೂತರು. ಮುಖ್ಯವಾಯುವೂ, ಭಾರತಿಯೂ ಆಕಾಶಾದಿಗಳೂ ಘಟಪಟಾದಿಗಳೂ ಇವುಗಳೆಲ್ಲವೂ ಅನಿತ್ಯಗಳು. (ಈ ಎರಡು ಪ್ರತಿಜ್ಞೆಗಳನ್ನು ಸಮರ್ಥಿಸುವುದಕ್ಕಾಗಿ ವ್ಯಾಪ್ತಿಯು ಹೇಳಲ್ಪಡುತ್ತದೆ.) ಯಾವುಗಳು ಉತ್ಪತ್ತಿಯುಳ್ಳವುಗಳೋ, ಅವುಗಳು ಅನಿತ್ಯಗಳೇ. ಯಾವುವು ಉತ್ಪತ್ತಿಯಿಲ್ಲದಿದ್ದವುಗಳೋ ಅವುಗಳು ನಿತ್ಯಗಳೇ. (ನಿತ್ಯತ್ವವ್ಯಾಪ್ತವಾದ ಅನುತ್ಪತ್ತಿಮತ್ವರೂಪವಾದ ಅನಾದಿತ್ವ ಹೇತುವನ್ನು ನಿತ್ಯವಾದ ಪದಾರ್ಥದಲ್ಲಿ ತೋರಿಸುತ್ತಾರೆ.) ಜೀವಚೈತನ್ಯವು ಪ್ರಧಾನಸ್ವರೂಪವೂ ಪರಮಾತ್ಮನೂ ಕಾಲಪ್ರವಾಹವೂ ಇವುಗಳು ಯಾವಾಗಲೂ ಹುಟ್ಟುವುದೇ ಇಲ್ಲ. ಲಯವನ್ನು ಹೊಂದುವುದೇ ಇಲ್ಲ. (ಹೀಗೆ ಅನಿತ್ಯಗಳಲ್ಲಿಯೂ ಪ್ರಾಣಾದಿಗಳು ಉತ್ಪತ್ತಿಯುಳ್ಳವುಗಳು. ಆದುದರಿಂದ ಲಯವನ್ನು ಹೊಂದುತ್ತಾನೆ. ಹೀಗೆ ಕ್ರೋಡೀಕರಿಸಿ ಹೇಳಿದರು (ಪ್ರಾಣಾದಿಗಳಲ್ಲಿ ಎಲ್ಲಾದಕ್ಕೂ ಅನಿತ್ಯತ್ವವೇ ಹೇಳಲ್ಪಡುವುದಿಲ್ಲ. ಮತ್ತೆ) ಪ್ರಾಣನು, ಭಾರತೀ,

ಆಕಾಶವು ಇವುಗಳು ಉತ್ಪತ್ತಿಯುಳ್ಳವುಗಳು. ಮತ್ತು ಅನುತ್ಪತ್ತಿಯೂ ಉಳ್ಳವುಗಳು. (ಆದಕಾರಣ ನಿತ್ಯಾನಿತ್ಯಗಳು) ಬಹುಭಾಗಗಳಿಂದ ಹುಟ್ಟುತ್ತವೆ. ಪ್ರಸಿದ್ಧ. (ಕೆಲವು ಭಾಗಗಳಿಂದ ಹುಟ್ಟುವುದಿಲ್ಲ)

ವಿಶೇಷಾಂಶ ॥ (೧) ಪ್ರಾಣ ಭಾರತಿಯರು, ದೇಹ, ಇಂದ್ರಿಯಾದಿ ಬಹುಭಾಗಗಳಿಂದ ಹುಟ್ಟುತ್ತಾರೆ. ಸ್ವರೂಪಭಾಗದಿಂದಲೂ ಮನೋವೃತ್ತಿ ಜ್ಞಾನಭಾಗದಿಂದಲೂ ಹುಟ್ಟುವುದಿಲ್ಲ (೨) ಪರಾಧೀನ ವಿಶೇಷ ಲಾಭ ರೂಪವಾದ ಉತ್ಪತ್ತಿಯು ಈ ನಾಲ್ಕರಲ್ಲಿಯೂ ಇದ್ದುದರಿಂದ ಭೂತ, ತದಭಿಮಾನಿ ಗಣಪತಿ, ಅವ್ಯಾಕೃತಾಕಾಶ, ರಮಾ, ಹೀಗೆ ನಾಲ್ಕು ರೂಪವಾದ ಆಕಾಶವು ನಾಲ್ಕು ಭಾಗಗಳಿಂದಲೂ ಹುಟ್ಟುತ್ತದೆ. ಭೂತಾಕಾಶವು ಭೂತಸೂಕ್ಷ್ಮರೂಪದಿಂದಲೂ, ಅವ್ಯಾಕೃತಾಕಾಶವು ಅವಕಾಶಸ್ವರೂಪದಿಂದಲೂ, ತದಭಿಮಾನಿ ಗಣಪತಿ ರಮಾ ಇವರು ಚೈತನ್ಯಸ್ವರೂಪದಿಂದಲೂ ಹುಟ್ಟುವುದಿಲ್ಲ ॥ ೪ ॥

ಪೀಠಿಕೆ ॥ ಅನಾದಿತ್ವಶ್ರುತಿಯು ಗೌಣಾನಾದಿತ್ವಪರವಾಗಿದ್ದರೆ ಆಕಾಶಕ್ಕೆ ಅನಾದಿತ್ವವು ಗೌಣವು. ಉತ್ಪತ್ತಿಯು ಮುಖ್ಯತಃ ಎನ್ನುವ ವ್ಯವಸ್ಥೆಯು ಆಗುತ್ತಿತ್ತು. ಅನಾದಿತ್ವಶ್ರುತಿಯು ಗೌಣವಲ್ಲ. ನ ಜಾಯತೇ ಮ್ರಿಯತೇ ಇತ್ಯಾದಿಗಳಲ್ಲಿ ಅನುತ್ಪತ್ತಿಮಚ್ಛಬ್ದಕ್ಕೆ ಮುಖ್ಯಾರ್ಥತ್ವವು ಕಂಡದೆ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್ ಓಂ ॥ ೫ ॥

ಸೂತ್ರಾರ್ಥ ॥ ಒಂದೇ ಆಕಾಶಕ್ಕೆ ಗೌಣಾರ್ಥ ಮುಖ್ಯಾರ್ಥಗಳನ್ನು ಇಟ್ಟುಕೊಂಡು ಅನುತ್ಪತ್ತಿಯೂ ಉತ್ಪತ್ತಿಯೂ ಕೂಡುವುದು ಬ್ರಹ್ಮಶಬ್ದದಂತೆ. (ಅಂದರೆ, ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾದಾಗ್ಯೂ ಬ್ರಹ್ಮಾದಿಗಳಲ್ಲಿ ಅಮುಖ್ಯವಾಗಿದೆ, ಅದರಂತೆಯೇ.)

**ಭಾಷ್ಯ ॥ ಸ್ಯಾದೇವೈಕಸ್ಯೋತ್ಪತ್ತಿಮತ್ತ್ವಮನುತ್ಪತ್ತಿಮತ್ತ್ವಂ ಚ ಗೌಣಮುಖ್ಯತ್ವಾಪೇಕ್ಷಯಾ । ಯಥಾ ಬ್ರಹ್ಮಶಬ್ದಃ । ಅಥ ಕಸ್ಮಾದುಚ್ಯತೇ ಪರಂ ಬ್ರಹ್ಮೇತಿ । ಬೃಹತಿ ಬೃಂಹಯತಿ ಚ (ಅಥರ್ವ ಶಿರಃ) । ಇತಿ ಶ್ರುತೇಃ । ಪರೇ ಬ್ರಹ್ಮಣಿ ಮುಖ್ಯೋಽಪಿ ಗೌಣತ್ವೇನ ವಿರಿಂಚಾದಿಷ್ವಪಿ ವರ್ತತೇ । ಅತ ಏವಾಬ್ರಹ್ಮತ್ವಂ ಚ ತೇಷಾಂ । ಏವಮನ್ಯತ್ರಾ (ಮತ್ರಾ) ಪ್ಯನುತ್ಪತ್ತಿಮಚ್ಛಬ್ದಃ ॥ ೫ ॥ ॥ ೬ ॥**

ಭಾಷ್ಯಾರ್ಥ ॥ ಈ ಒಂದೇ ಆಕಾಶಕ್ಕೆ ಗೌಣಾರ್ಥ ಮುಖ್ಯಾರ್ಥಗಳನ್ನು ಇಟ್ಟುಕೊಂಡು ಅನುತ್ಪತ್ತಿಮತ್ತ್ವವೂ, ಉತ್ಪತ್ತಿಮತ್ತ್ವವೂ ಕೂಡಿಯೇ ಕೂಡುತ್ತದೆ. ಹೇಗೆಂದರೆ—ಬ್ರಹ್ಮಶಬ್ದವು ಒಬ್ಬ ಪರಬ್ರಹ್ಮನಲ್ಲಿ ಮಾತ್ರ ಮುಖ್ಯವಾದಾಗ್ಯೂ ವಿರಿಂಚಾದಿಗಳಲ್ಲಿಯೂ ಅಮುಖ್ಯವಾಗಿ ಇರುತ್ತದೆ. ಹೀಗೆಯೇ, ಅನುತ್ಪತ್ತಿಮಚ್ಛಬ್ದವು ಬ್ರಹ್ಮನಲ್ಲಿ ಮುಖ್ಯಾರ್ಥವಾದಾಗ್ಯೂ ಅನ್ಯತ್ರ ಆಕಾಶಾದಿಗಳಲ್ಲಿ ಅಮುಖ್ಯತ್ವವು ಕೂಡುತ್ತದೆ. (ಪರಬ್ರಹ್ಮನಲ್ಲಿ ಬ್ರಹ್ಮಶಬ್ದವು ಹೇಗೆ ಮುಖ್ಯವು ಎಂದರೆ) ವಿಷ್ಣುವು ಬ್ರಹ್ಮನೆಂದು ಯಾವುದರಿಂದ ಹೇಳಲ್ಪಡುತ್ತಾನೆ ಎಂದರೆ, ಯಾವ ಕಾರಣದಿಂದ ತಾನು ಗುಣ ಪರಿಪೂರ್ಣನಾಗಿರುತ್ತಾನೆ. ಇತರರನ್ನೂ ಕೂಡ ಅವರವರ ಯೋಗ್ಯತಾನುಸಾರವಾಗಿ ಪೂರ್ಣರನ್ನಾಗಿ

ಮಾಡುತ್ತಾನೋ, ಆದುದರಿಂದ ಬ್ರಹ್ಮನೆಂದು ಹೇಳಲ್ಪಡುತ್ತಾನೆ ಎಂದು ಶ್ರುತಿಯಲ್ಲಿ ಯೋಗವನ್ನು ತೋರಿಸಿದ್ದರಿಂದ. (ವಿರಿಂಚಾದಿಗಳಲ್ಲಿ ಗೌಣತ್ವವು ಯಾವುದರಿಂದ ಎಂದರೆ) ಬ್ರಹ್ಮಶಬ್ದಕ್ಕೆ ವಿರಿಂಚಾದಿಗಳಲ್ಲಿ ಅಮುಖ್ಯತ್ವವಿದ್ದುದರಿಂದಲೇ ಆ ವಿರಿಂಚಾದಿಗಳಿಗೆ ಅಪೂರ್ಣತ್ವವು. (ಇಲ್ಲವಾದರೆ ಅಪೂರ್ಣತ್ವವು ಬಾರದೆ ಹೋಗುವುದು. ॥ ೫ ॥

ಪೀಠಿಕೆ ॥ ಬ್ರಹ್ಮಶಬ್ದಕ್ಕೆ ಹಿಂದೆ ಹೇಳಿದ ಪ್ರಕಾರ ಮುಖ್ಯತ್ವ, ಅಮುಖ್ಯತ್ವವಿದ್ದರೂ, ಪ್ರಕೃತ ಅನುತ್ಪತ್ತಿಮಚ್ಛಬ್ದಕ್ಕೆ ಅಮುಖ್ಯತ್ವಾರ್ಥವನ್ನು ಹೇಳಲಿಕ್ಕೆ ಏನು ಕಾರಣವು? ಎಂದರೆ—

**ಸೂತ್ರ ॥ ಓಂ ಪ್ರತಿಜ್ಞಾಹಾನಿರವ್ಯತಿರೇಕಾಚ್ಛಬ್ದೇಭ್ಯಃ ಓಂ ॥ ೬ ॥**

**ಭಾಷ್ಯ ॥ ಬ್ರಹ್ಮಣೋಽನ್ಯಸ್ಯ ನಿತ್ಯತ್ವೇ (೧) ಸ ಇದಸರ್ವಮಸೃಜತ (ತೈ.೨.೬.)। ಇತ್ಯಾದಿ ಪ್ರತಿಜ್ಞಾಹಾನಿ। ಆಕಾಶಸ್ಯಾಪಿ ಸರ್ವಸ್ಮಾದವ್ಯತಿರೇಕಾತ್। (೨) ಆತ್ಮಾವಾ ಇದಮೇಕ ಏವಾಗ್ರ ಆಸೀತ್ (ಐ.ಆ.೧.೧.)। (೩) ಸದೇವ ಸೋಮ್ಯೇದಮಗ್ರ ಆಸೀತ್ । ಏಕಮೇವಾದ್ವಿತೀಯಂ (ಛಾ.೬.೨.೧.)। (೪) ಇದಂ ವಾ ಅಗ್ರೇ ನೈವ ಕಿಂಚ ನಾಸೀತ್ (ತೈ.ಆ.೨.೨.೯.)। ಇತ್ಯಾದಿಶ್ರುತಿಭ್ಯಃ ॥ ೬ ॥ ॥ ೭ ॥**

ಭಾಷ್ಯಾರ್ಥ ॥ ಬ್ರಹ್ಮನಿಂದ ಇತರವಾದ ಆಕಾಶಕ್ಕೆ ನಿತ್ಯತ್ವವನ್ನು ಹೇಳಿದರೆ, (ಅಂದರೆ ಬ್ರಹ್ಮ ಆಕಾಶ ಎರಡಕ್ಕೂ ಅನುತ್ಪತ್ತಿಮಚ್ಛಬ್ದದ ಮುಖ್ಯಾರ್ಥತ್ವವನ್ನು ಅಂಗೀಕರಿಸಿದರೆ (೧) ಬ್ರಹ್ಮನು ಈ ಸರ್ವ ಜಗತ್ತನ್ನು ಸೃಷ್ಟಿಸಿದನು ಎನ್ನುವ ಪ್ರತಿಜ್ಞೆಗೆ ಹಾನಿಯು ಬರಬೇಕಾಗುವುದು. ಆಕಾಶವೂ ಸರ್ವವಸ್ತುವಿನಿಂದ ಬೇರೆಯಲ್ಲ. (ಅಂದರೆ ಸರ್ವ ವಸ್ತುಗಳ ಮಧ್ಯದಲ್ಲಿ ಸೇರಿದೆ.) (೨) ಪರಮಾತ್ಮನು ಒಬ್ಬನೇ ಪ್ರಳಯಕಾಲದಲ್ಲಿ ಇರುತ್ತಿದ್ದನು. (ಬೇರೆ ಯಾವುದೂ ಇರಲಿಲ್ಲ) (೩) ಎಲೋ ಶ್ವೇತಕೇತುವೇ! ಪ್ರಳಯಕಾಲದಲ್ಲಿ ಸರ್ವೋತ್ತಮನಾದುದರಿಂದ ಸಚ್ಛಬ್ದ ವಾಚ್ಯನಾದ ಬ್ರಹ್ಮನೊಬ್ಬನೇ ಇರುತ್ತಿದ್ದನು. ಏಕಮೇವ=(ತನ್ನ ಅವಯವ, ಗುಣ, ಕ್ರಿಯಾದಿಗಳಿಂದ) ಅಭಿನ್ನನು. ಸಮಾನವಾದ ಎರಡನೇ ವಸ್ತುವು ಇಲ್ಲದಿರುವವನು. (೪) ಪ್ರಳಯಕಾಲದಲ್ಲಿ ಯಾವುದೂ ಇರಲಿಲ್ಲ. ಶ್ರೀಹರಿಯೊಬ್ಬನೇ ಇರುತ್ತಿದ್ದನು.

ವಿಶೇಷಾಂಶ ॥ (೧) ಭೇದಾಭೇದನಿವೃತ್ತ್ಯರ್ಥಮೇವಶಬ್ದೋಽವಧಾರಕಃ। ಸಮಾಧಿಕನಿವೃತ್ತ್ಯರ್ಥಮದ್ವಿತೀಯಪದಂ ತಥಾ॥ ಎಂದು. (೨) ಸರ್ವಸಂಹಾರಕಂ ವಿಷ್ಣುಂ ದೇವೀಂ ಜೀವಾಂಸ್ತಥೈವ ಚ । ಕಾಲಂ ತ್ರಿಗುಣಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಂ ॥ ಸಂಸ್ಕಾರಂ ಚೈವ ವೇದಾಂಸ್ತು ನರ್ತೇ ಕಿಂಚಿಲ್ಲಯೇ ತ್ವಭೂತ್ ॥ ೬ ॥

**ಸೂತ್ರ ॥ ಓಂ ಯಾವದ್ವಿಕಾರಂ ತು ವಿಭಾಗೋ ಲೋಕವತ್ ಓಂ ॥ ೭ ॥**

ಸೂತ್ರಾರ್ಥ ॥ ವಿಕಾರ (ಉತ್ಪತ್ತಿ) ಇದ್ದರೇನೇ ಅಲ್ಪಶಕ್ತಿಯು. (ಉತ್ಪತ್ತಿಯಿಲ್ಲವಾದರೆ ಅಲ್ಪಶಕ್ತಿ ಇಲ್ಲ.) ಲೋಕಸಿದ್ಧವಾದ ಘಟಾದಿಗಳಲ್ಲಿ ಇದ್ದಂತೆ.

**ಭಾಷ್ಯ ॥ ವಿಭಕ್ತತ್ವಾಚ್ಚ ವಿಕಾರಿತ್ವಂ ಯುಕ್ತಂ। ವಿಕಾರಿಣ ಏವ ಹಿ ವಿಭಕ್ತಾ ಲೋಕೇ ದೃಶ್ಯಂತೇ ॥ ೮ ॥**

ಭಾಷ್ಯಾರ್ಥ ॥ (ಹಿಂದೆ ಹೇಳಿದ ಶ್ರುತಿಗಳಿಂದ ಮಾತ್ರವಲ್ಲ ಮತ್ತೆ) ವಿಭಕ್ತ (ಅಲ್ಪಶಕ್ತಿಯುಳ್ಳದ್ದು)ವಾದುದರಿಂದಲೂ (ಆಕಾಶಕ್ಕೆ) ಉತ್ಪತ್ತಿಮತ್ತ್ವವು ಯುಕ್ತವು. ಉತ್ಪತ್ತಿಯುಳ್ಳ ಪದಾರ್ಥಗಳೇ ಲೋಕದಲ್ಲಿ ವಿಭಕ್ತಗಳಾಗಿ ಕಾಣಲ್ಪಡುತ್ತವೆ. (ಉತ್ಪತ್ತಿಯಿಲ್ಲದಿರುವ ಪದಾರ್ಥಗಳು ವಿಭಕ್ತಗಳಾಗಿ ಕಾಣಲ್ಪಡುವುದಿಲ್ಲ) (ಬ್ರಹ್ಮನಿಗಾದರೂ ಪೂರ್ಣಶಕ್ತಿಯುದ್ದುದರಿಂದ ಉತ್ಪತ್ತಿಯಿಲ್ಲವೆನ್ನುವುದು ಯುಕ್ತವು.) ॥ ೧೧ ॥

ಪೀಠಿಕೆ ॥ ಈ ವಿಷಯದಲ್ಲಿಯೇ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಏಕೋಽವಿಭಕ್ತಃ ಪರಮಃ ಪುರುಷೋ ವಿಷ್ಣುರುಚ್ಯತೇ । ಪ್ರಕೃತಿಃ ಪುರುಷಃ ಕಾಲಃ ತ್ರಯ ಏತೇ ವಿಭಾಗತಃ । ಚತುರ್ಥಸ್ತು ಮಹಾನ್ಪ್ರೋಕ್ತಃ ಪಂಚಮಾಽಹಂಕೃತಿರ್ಮತಾ । ತದ್ವಿಭಾಗೇನ ಜಾಯಂತೇ ಆಕಾಶಾದಾಃ ಪೃಥಕ್ ಪೃಥಕ್ । ಯೋ ವಿಭಾಗೀ ವಿಕಾರಃ ಸ ಸೋಽವಿಕಾರಃ ಪರೋ ಹರಿಃ । ಅವಿಭಾಗಾತ್ಪರಾನಂದೋ ನಿತ್ಯೋ ನಿತ್ಯಗುಣಾತ್ಮಕಃ । ವಿಭಾಗೋ ಹ್ಯಲ್ಪಶಕ್ತಿಃ । ಸ್ಯಾನ್ನ ತದಸ್ತಿ ಜನಾರ್ದನೇ (ನ ಹಿ ತತ್ಪರಮಾತ್ಮನಃ) ಇತಿ ಚ ಬೃಹತ್ಸಂಹಿತಾಯಾಂ ॥ ೭ ॥ ಅಧಿ. ೧ ॥ ೯ ॥**

ಭಾಷ್ಯಾರ್ಥ ॥ ಸರ್ವೋತ್ತಮನಾದ, ಪುರುಷಶಬ್ದ ವಾಚ್ಯನಾದ, ವಿಷ್ಣು ಒಬ್ಬನೇ ಅವಿಭಕ್ತನೆಂದು (ಪೂರ್ಣಶಕ್ತಿಯುಳ್ಳವನೆಂದು) ಹೇಳಲ್ಪಡುತ್ತಾನೆ. ಪ್ರಕೃತಿಯು, ಪುರುಷ, ಕಾಲಪ್ರವಾಹ ಈ ಮೂರು ಅಲ್ಪಶಕ್ತಿಯುಳ್ಳವುಗಳೆಂದು ಹೇಳಲ್ಪಟ್ಟವೆ. ನಾಲ್ಕನೇದ್ದಾದ ಮಹತ್ತತ್ತ್ವಾಭಿಮಾನಿಯೂ ಕೂಡ ಅಲ್ಪಶಕ್ತಿಯುಳ್ಳವನೆಂದೂ ಹೇಳಲ್ಪಟ್ಟಿದ್ದಾನೆ. ಐದನೇದ್ದಾದ ಅಹಂಕಾರತತ್ತ್ವಾಭಿಮಾನಿಯೂ ಕೂಡ ಅಲ್ಪಶಕ್ತಿಯುಳ್ಳವನೆಂದು ಸಮ್ಮತನಾಗಿದ್ದಾನೆ. ಆ ವಿಭಕ್ತತ್ತ್ವರೂಪ ಹೇತುವಿನಿಂದ ಆಕಾಶಾದಿಗಳೆಲ್ಲವೂ **ಆಕಾಶಾತ್ ವಾಯುಃ, ವಾಯೋರಗ್ನಿಃ** ಇತ್ಯಾದ್ಯುಕ್ತ ಪರಂಪರೆಯಿಂದ ಉತ್ಪತ್ತಿಯುಳ್ಳವುಗಳೆಂದು ಸಿದ್ಧಿಸುತ್ತವೆ. (ವಿಭಕ್ತತ್ವವಿದ್ದರೂ ಉತ್ಪತ್ತಿಮತ್ತ್ವವು ಹೇಗೆಂದರೆ) ಯಾವ ಪದಾರ್ಥವು ಅಲ್ಪಶಕ್ತಿಯುಳ್ಳದ್ದೋ ಅದು ಉತ್ಪತ್ತಿಯುಳ್ಳದ್ದು (ಎಂದು ನಿಯಮವು.) ಆ ಸರ್ವೋತ್ತಮನಾದ ಶ್ರೀಹರಿಯಾದರೂ ಪೂರ್ಣಶಕ್ತಿಯುಳ್ಳವನಾದುದರಿಂದ ಉತ್ಪತ್ತಿಯಿಲ್ಲದವನೆಂದು ಸಿದ್ಧನಾಗುವನು. ಪೂರ್ಣಾನಂದನು, ಅನಾದಿನಿತ್ಯನು, ನಿತ್ಯಗುಣಸ್ವರೂಪನು. (ದ್ರವ್ಯಮಾತ್ರದಲ್ಲಿ ವಿಭಾಗವು ನಿಯತವಾದುದರಿಂದ ಶ್ರೀಹರಿಗೆ ಅವಿಭಾಗವು ಹೇಗೆ? ಎಂದರೆ) ವಿಭಾಗವೆಂದರೆ ಅಲ್ಪಶಕ್ತಿಯು. ಅಲ್ಪಶಕ್ತಿಮತ್ತ್ವವು ಶ್ರೀಹರಿಯಲ್ಲಿ ಇಲ್ಲ ಎಂದು ಬೃಹತ್ಸಂಹಿತಾ ಎನ್ನುವ ಗ್ರಂಥದಲ್ಲಿ ಹೇಳಿದೆ. ॥ ೭ ॥

## ಮಾಯಾವಾದಿರೀತ್ಯಾ

ವಿಚಾರ ॥ ಆತ್ಮನ ಆಕಾಶಃ ಸಂಭೂತಃ ಎಂದು ತೈತ್ತಿರೀಯದಲ್ಲಿ ಆಕಾಶಕ್ಕೆ ಪ್ರಥಮತಃ ಉತ್ಪತ್ತಿಯು, ತತ್ತೇಜೋಽಸೃಜತ ಎಂದು ಛಾಂದೋಗ್ಯದಲ್ಲಿ ತೇಜಸ್ಸಿಗೆ ಪ್ರಥಮತಃ ಉತ್ಪತ್ತಿಯು, ತಥಾಚ ಅವುಗಳಿಗೆ ಪರಸ್ಪರ ವಿರೋಧವು, ಹೀಗೆ ಎರಡನೇ ಸೂತ್ರದಿಂದ ಪೂರ್ವಪಕ್ಷ ಮಾಡಿಕೊಂಡು ವಿಭುವಾದ

ಆಕಾಶಕ್ಕೆ ಉತ್ಪತ್ತಿಯು ಕೂಡದಿರುವುದರಿಂದಲೂ **ಆಕಾಶವತ್ಸರ್ವಗತಶ್ಚ ನಿತ್ಯಃ** ಇತ್ಯಾದಿಶ್ರುತಿಗಳಿಂದಲೂ ಆಕಾಶಕ್ಕೆ ಉತ್ಪತ್ತಿಯು ಶ್ರುತವಾಗುವುದಿಲ್ಲ. ಸಂಭೂತಶ್ರುತಿಯಾದರೂ **ಅಧುನಾ ಅವಕಾಶೋ ಜಾತಃ** ಎನ್ನುವುದರಂತೆ ಅಮುಖ್ಯಾರ್ಥಕವು. ಮತ್ತು ಆನಂದಮಯ ಪ್ರಕರಣದಲ್ಲಿ ಬ್ರಹ್ಮಶಬ್ದಕ್ಕೆ ಅನ್ನಾದಿಗಳಲ್ಲಿ ಗೌಣತ್ವವು ಆನಂದದಲ್ಲಿ ಮುಖ್ಯತ್ವವು ಇದ್ದಂತೆಯೇ. ಒಂದೇ ಸಂಭೂತಶಬ್ದಕ್ಕೆ ಆಕಾಶದಲ್ಲಿ ಗೌಣತ್ವವು, ವಾಯ್ವಾದಿಗಳಲ್ಲಿ ಆದರೂ ಮುಖ್ಯತ್ವವು, ಆದಕಾರಣ ಶ್ರುತಿಗಳಿಗೆ ವಿರೋಧವಿಲ್ಲ. ಹೀಗೆ ೧, ೩, ೪, ೫ನೇ ಸೂತ್ರಗಳಿಂದ ಸಿದ್ಧಾಂತಿಗಳ ಏಕದೇಶಿ ಮತವನ್ನು ಹೇಳಿ ಆಕಾಶವು ಬ್ರಹ್ಮಕಾರ್ಯವಾಗದೆ ಹೋದರೆ ಬ್ರಹ್ಮಭೇದವು ಬರಬೇಕಾಗುವುದರಿಂದ ಒಂದರ ಜ್ಞಾನದಿಂದ ಸರ್ವವಿಜ್ಞಾನ ಪ್ರತಿಜ್ಞೆಯು ಹಾನಿಯಾಗಬೇಕಾಗುವುದು. ಮತ್ತು **ಆಕಾಶಃ ವಿಕಾರಃ ಕಾರ್ಯಂ ವಿಭಕ್ತತ್ವಾತ್ ಭಿನ್ನತ್ವಾತ್ ಘಟವತ್** ಎಂದು ೬, ೭ನೇ ಸೂತ್ರಗಳಿಂದ ವೇದವ್ಯಾಸರು ಆಕಾಶಕ್ಕೆ ಉತ್ಪತ್ತಿಯದೆ ಎಂದು ಸಿದ್ಧಾಂತ ಮಾಡಿರುವರು, ಎಂದು ಅದ್ವೈತಿಗಳು ಹೇಳುವರು. ಆದರಲ್ಲಿ ವಿರೋಧದಿಂದ ಪೂರ್ವಪಕ್ಷವು ಎನ್ನುವುದೇ ಅಯುಕ್ತವು. ಛಾಂದೋಗ್ಯದಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಲಿಲ್ಲ, ಮಾತ್ರವಲ್ಲದೆ ಅನಾದಿತ್ವವನ್ನು ಹೇಳಲಿಲ್ಲ. ಉತ್ಪತ್ತ್ಯನುಕ್ತಿಯು ತೈತ್ತಿರೀಯದಲ್ಲಿರತಕ್ಕ ಉತ್ಪತ್ತ್ಯುಕ್ತಿಯಿಂದ ವಿರುದ್ಧವಲ್ಲ, ತೈತ್ತಿರೀಯದಲ್ಲಿ ಆಕಾಶಕ್ಕೆ ಮೊದಲು ಜನ್ಮವನ್ನು ಹೇಳಿದ್ದಾರೆ. ಛಾಂದೋಗ್ಯದಲ್ಲಿ ತೇಜಸ್ಸಿಗೆ, ಹೀಗೆ ವಿರೋಧವೆಂದು ಹೇಳಕೂಡದು. ಅದ್ವೈತಿಗಳ ಮತದಲ್ಲಿ ಜಗತ್ತು ಮಿಥ್ಯೆಯಾದುದರಿಂದ ಅತ್ಯಂತಾಭಾವಪ್ರತಿಯೋಗಿಗೆ ಉತ್ಪತ್ತಿಯು ಕೂಡಲಾರದು. ಆರೋಪಿತ ಜನ್ಮಾದಿಗಳು ಶ್ರುತಿಯಿಂದ ಬೋಧ್ಯಗಳಲ್ಲ. ಮತ್ತು **ಅನಾದಿರ್ವಾ ಅಯಮಾಕಾಶಃ, ಆಕಾಶವತ್ಸರ್ವಗತಶ್ಚ ನಿತ್ಯಃ, ಸ ಯಥಾ ನಂತೋಽಯಮಾಕಾಶಃ, ಆಕಾಶಃ ಸಂಭೂತಃ** ಎಂದು ಅನಾದಿತ್ವ ಸಾದಿತ್ವ ಶ್ರುತಿಗಳಿಗೆ ಸ್ಪಷ್ಟವಾಗಿ ವಿರೋಧವಿದ್ದುದರಿಂದ ಪೂರ್ವಪಕ್ಷವು ಕೂಡುವಾಗ ಅಸ್ಪಷ್ಟ ಶ್ರುತಿವಿರೋಧದಿಂದ ಪೂರ್ವಪಕ್ಷವು ಯುಕ್ತವಲ್ಲ. ಮತ್ತು ಆದ್ಯಸೂತ್ರದಿಂದ ಸಿದ್ಧಾಂತ್ಯೇಕದೇಶಿ ಮತವನ್ನು ಉಪಕ್ರಮಿಸಿಕೊಂಡು ೨ನೇ ಸೂತ್ರದಿಂದ ವಿರೋಧ ಪೂರ್ವಪಕ್ಷವನ್ನು ಹೇಳಿ ಪುನಃ ತೃತೀಯಾದಿ ಸೂತ್ರಗಳಿಂದ ಏಕದೇಶಿ ಮತವನ್ನು ವಿಕ್ಷಿಪ್ತ ಹೇಳಲಿಕ್ಕೆ ಕಾರಣವಿಲ್ಲ. ಮತ್ತು ನಮ್ಮ ರೀತಿಯಾಗಿ ಸ ಇದಂ ಸರ್ವಮಸೃಜತ ಎನ್ನುವ ಪ್ರತಿಜ್ಞೆಯಿಂದ ಸಾಕ್ಷಾತ್ತಾಗಿ ಸರ್ವೋತ್ಪತ್ತಿಯು ಸಿದ್ಧಿಸುವಾಗ ಏಕ ವಿಜ್ಞಾನದಿಂದ ಸರ್ವ ವಿಜ್ಞಾನವಾಗುತ್ತದೆ ಎನ್ನುವ ಪ್ರತಿಜ್ಞೆಯಿಂದ ಅರ್ಥಾತ್ ಸಿದ್ಧಿಸುತ್ತದೆ ಎನ್ನುವ ಉಕ್ತಿಯು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಆಕಾಶಕ್ಕೆ ಉತ್ಪತ್ತಿಯಿಲ್ಲವೆಂದು ಒಂದನೇ ಸೂತ್ರದಿಂದ ಪೂರ್ವಪಕ್ಷ ಮಾಡಿಕೊಂಡು ಉತ್ಪತ್ತಿಯದೆ ಎಂದು ಎರಡನೇ ಸೂತ್ರದಿಂದ ಸಿದ್ಧಾಂತವು. ಪುನಃ ಮೂರು ಸೂತ್ರಗಳಿಂದ ಉತ್ಪತ್ತಿ ಶ್ರುತಿಯು ಅಮುಖ್ಯವು ಎಂದು ಪೂರ್ವಪಕ್ಷ ಮಾಡಿಕೊಂಡು ಏಕವಿಜ್ಞಾನೇನ ಸರ್ವವಿಜ್ಞಾನಾದಿಯುಕ್ತಿಗಳಿಂದ ಉತ್ಪತ್ತಿಶ್ರುತಿಯು ಗೌಣಯಲ್ಲವೆಂದು ಸಿದ್ಧಾಂತವು. ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. ಜೀವ, ಪ್ರಕೃತಿ ಇತ್ಯಾದಿಗಳಂತೆಯೇ

ಆಕಾಶಕ್ಕೆ ಅನಾದಿತ್ವವನ್ನು ಇಟ್ಟುಕೊಂಡರೂ ಒಂದರ ಜ್ಞಾನದಿಂದ ಸರ್ವವಿಜ್ಞಾನವು ಉಪಪನ್ನವಾಗಬಹುದು. ಇತ್ಯಾದಿ ದೋಷಗಳು ಸಮಗಳೇ ಆಗಿವೆ.

## ಅಧಿಕರಣ ಸಾರಾಂಶ

ಆಕಾಶಕ್ಕೆ ಉತ್ಪತ್ತಿಯು ಇದೆಯೋ ಇಲ್ಲವೋ ಎಂದು ಸಂದೇಹವು. ಆಕಾಶಕ್ಕೆ ಉತ್ಪತ್ತಿಯಿಲ್ಲವೆಂದು ಪೂರ್ವಪಕ್ಷವು. ಆಕಾಶಕ್ಕೆ ಉತ್ಪತ್ತಿ ಇಲ್ಲವೆಂದೇ ಅನುಭವವಿದೆ. **ವಿಯತ್ ಅನುತ್ಪತ್ತಿಮತ್ ವಿಭುತ್ವಾತ್** ಎನ್ನುವ ಯುಕ್ತಿಯು. **ಅನಾದಿರ್ವಾ ಅಯಮಾಕಾಶಃ** ಎಂದು ಅನಾದಿತ್ವಪ್ರತಿಪಾದಕ ಶ್ರುತಿಯೂ ಇದೆ. ಇದಕ್ಕೆ ವಿರುದ್ಧವಾದ **ಆಕಾಶಃ ಸಂಭೂತಃ** ಎಂದು ಆಕಾಶಕ್ಕೆ ಉತ್ಪತ್ತಿ ಪ್ರತಿಪಾದಕವಾದ ಶ್ರುತಿಯು ಅಪ್ರಮಾಣವೇ. ಆದಕಾರಣ, ಅನುತ್ಪತ್ತಿಶ್ರುತಿಗೆ ಭಾಗಶಃ ಅನುತ್ಪತ್ತಿಯು ಎಂದು ಹೇಳಿದ್ದು ಕೂಡಲಾರದು. ಎಂದರೆ, **ಆತ್ಮನ ಆಕಾಶಃ ಸಂಭೂತಃ** ಇತ್ಯಾದಿ ಉತ್ಪತ್ತಿಶ್ರುತಿಯು ಎಂದು ಹೇಳಿದ್ದೂ ಕೂಡಲಾರದು. ಎಂದರೆ, ಆತ್ಮನ ಆಕಾಶಃ ಸಂಭೂತಃ ಇತ್ಯಾದಿ ಉತ್ಪತ್ತಿಶ್ರುತಿಯು ಹೆಚ್ಚು ಇದ್ದಪ್ರಯುಕ್ತ ಆಕಾಶವು ಉತ್ಪತ್ತಿಯುಳ್ಳದ್ದೇ. ಅನಾದಿತ್ವ ಪ್ರತಿಪಾದಕ ಶ್ರುತ್ಯಂತರ ವಿರೋಧವಿಲ್ಲ. ವಿಯಚ್ಛಬ್ದದಿಂದ ಹೇಳಲ್ಪಟ್ಟ ಭೂತಾಕಾಶ, ಅವ್ಯಾಕೃತಾಕಾಶ, ತದಭಿಮಾನಿಗಳಿಗೆ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಕೂಡುವುದರಿಂದ ಉತ್ಪತ್ತಿಶ್ರುತಿಗಳು ಸರ್ವವಿಷಯಕಗಳಾದುದರಿಂದ ಬಹುವಿಷಯಕಗಳಾಗಿರುವ ಪ್ರಯುಕ್ತ **ವಿಯತ್ ಉತ್ಪತ್ತಿಮತ್ ಅಲ್ಪಶಕ್ತಿತ್ವಾತ್ ಘಟವತ್** ಎನ್ನುವ ಅನುಮಾನಸಾಹಾಯ್ಯವು ಇದ್ದುದರಿಂದ ಪ್ರಬಲಗಳಾಗಿವೆ. ಅನಾದಿತ್ವಶ್ರುತಿಯು ಹೆಚ್ಚು ಇದ್ದರೂ ಭೂತಾಕಾಶದಲ್ಲಿ ಹೇಗೂ ಕೂಡದಿರುವುದರಿಂದ ಅಲ್ಪವಿಷಯವಾದುದರಿಂದ ದುರ್ಬಲವಾದಪ್ರಯುಕ್ತ ಭಾಕ್ತತ್ವವು ನ್ಯಾಯವಾದುದರಿಂದ **ಪ್ರಾಣಃ ಶ್ರದ್ಧಾ ಆಕಾಶಃ** ಇತ್ಯಾದಿ ಶ್ರುತಿಸಿದ್ಧವಾದುದರಿಂದಲೂ ಒಂದು ಅನುತ್ಪತ್ತಿ ಮಚ್ಛಬ್ದಕ್ಕೆ ಸ ಇದಂ ಸರ್ವಮಸೃಜತ ಎನ್ನುವ ಪ್ರತಿಜ್ಞಾವಿರೋಧದಿಂದಲೂ ಇದಮೇಕ ಏವಾಗ್ರ ಆಸೀತ್ ಇತ್ಯಾದಿ ಉತ್ಪತ್ತಿಶ್ರುತಿ ವಿರೋಧಬಾಹುಲ್ಯದಿಂದಲೂ ಮುಖ್ಯತ್ವಾಮುಖ್ಯತ್ವವು ಯುಕ್ತವು. ಹೀಗೆಯೇ, ಪ್ರಕೃತಿ, ಜೀವ, ಚೈತನ್ಯ, ಕಾಲ, ವೇದ, ಮಹತ್ತತ್ತ್ವ, ಅಹಂಕಾರತತ್ವ, ಮನಸ್ಸು, ಬುದ್ಧ್ಯಾದಿಗಳಿಗೂ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ತಿಳಿಯತಕ್ಕದ್ದು. ॥ ಅಧಿ. ೧ ॥

**ವಿಯದಧಿಕರಣವು ಸಮಾಪ್ತವಾಯಿತು.**

# ೨ ಮಾತರಿಶ್ವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಮುಖ್ಯ ವಾಯುದೇವರ ಉತ್ಪತ್ತಿವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋऽಬನ್ನಾನ್ಯಾಕಾಶ ಇತಿ । ತಾನ್ಯನಿತ್ಯಾನಿ ವಾಯುರ್ವಾವ ನಿತ್ಯೋ ವಾಯುನಾ ಹಿ ಸರ್ವಾಣಿ ಭೂತಾನಿ ನೇನೀಯಂತೇ**

**॥ ೧ ॥**

ಭಾಷ್ಯಾರ್ಥ ॥ ಪ್ರಕರಣಾಂತರವು ಆರಂಭಿಸಲ್ಪಡುತ್ತದೆ. ಅನಾದಿಪದಾರ್ಥಗಳೂ, ಸಾದಿಪದಾರ್ಥಗಳೂ ಹೇಳಲ್ಪಡುತ್ತದೆ. ತೇಜಸ್ಸು, ಜಲ, ಪೃಥಿವಿಗಳೂ, ಭೂತಾಕಾಶವೂ, ಅವುಗಳು ಅನಿತ್ಯಗಳು. ನಿತ್ಯನಾದವನು ವಾಯುವೇ. ವಾಯುವಿನಿಂದಲೇ ವಾಯುಭಿನ್ನ ಪೃಥಿವ್ಯಾದಿಗಳೆಲ್ಲವೂ, ತಮ್ಮತಮ್ಮ ಕಾರ್ಯಗಳಲ್ಲಿ ಚೆನ್ನಾಗಿ ಪ್ರೇರಿಸಲ್ಪಡುತ್ತವೆ.

**ಭಾಷ್ಯ ॥ ಅಥ ಹ ಚೇತನಾಶ್ಚಾಚೇತನಾಶ್ಚ ತೇಜೋಽಬನ್ನಾನ್ಯಾಕಾಶ ಇತಿ । ತಾನ್ಯಚೇತನಾನಿ ವಾಯುರ್ವಾವ ಚೇತನೋ ವಾಯುನಾ ಹಿ ಸರ್ವಾಣಿ ಭೂತಾನಿ ವಿಜ್ಞಾಯಂತೇ ॥ ೨ ॥**

ಭಾಷ್ಯಾರ್ಥ ॥ ಚೇತನಗಳೂ, ಅಚೇತನಗಳೂ ನಿರೂಪಿಸಲ್ಪಡುತ್ತವೆ. ತೇಜಸ್ಸು, ಜಲ, ಪೃಥಿವೀ, ಭೂತಾಕಾಶ, ಇವುಗಳು ಅಚೇತನಗಳು. ವಾಯುವೇ ಚೇತನನು. ವಾಯುವಿನಿಂದ ಎಲ್ಲಾ ಪಂಚಭೂತಗಳೂ ತಿಳಿಯಲ್ಪಡುತ್ತವೆ.

**ಭಾಷ್ಯ ॥ ★(೧)ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ । ತೇ ವಾಯವೇ ಮನವೇ ಬಾಧಿತಾಯಾಽವಾಸಯನ್ನುಷಸಂ ಸೂರ್ಯೇಣ । (ಋ.೭.೯೧.೧) ॥ (೨) ಸಾ ವಾ ಏಷಾ ದೇವತಾಽನಾದಿರ್ಯೋಽಯಂ ಪವತೇ । ಇತಿ ॥ (೩) ಯಸ್ಯ (ಸ್ಯಾ) ನಾದಿರ್ನ ಮಧ್ಯಂ ನಾಂತೋ ನೋದಯೋ ನ ನಿಮ್ಲೋಚಃ । ಇತ್ಯಾದಿಶ್ರುತಿಭ್ಯೋ ವಾಯೋರನುತ್ಪತ್ತಿಃ । ಇತಿ ॥ ೩ ॥**

ಭಾಷ್ಯಾರ್ಥ ॥ (೨) ಯಾವನು ಕಲ್ಪವನ್ನು ಶೋಧಿಸುತ್ತಾನೋ, ಇವನೇ ಬ್ರಹ್ಮನು. ಆ ಈ ದೇವತೆಯು ಅನಾದಿಯು. (೩) ಯಾರಿಗೆ ಉತ್ಪತ್ತಿಯಿಲ್ಲವೋ, ಮಧ್ಯಮವಯಸ್ಸು ಇಲ್ಲವೋ, ನಾಶವು ಇಲ್ಲವೋ, ಪ್ರಾದುರ್ಭಾವ ತಿರೋಭಾವಗಳಿಲ್ಲವೋ, ಇದು ಮೊದಲಾದ ಶ್ರುತಿಗಳಿಂದ ವಾಯುವಿಗೆ ಉತ್ಪತ್ತಿಯಿಲ್ಲ

ವಿಶೇಷಾಂಶ ॥ (೨) ತಾಸಾಂ ವಾಯುರ್ವತ್ಸಃ ಎನ್ನುವ ಶ್ರುತಿಯಿಂದ ವಾಯುವಿಗೆ ಉತ್ಪತ್ತಿಯು ತೋರಿದರೂ, ಸಾ ವಾ ಏಷಾ ದೇವತಾ ಅನಾದಿಃ ಇತ್ಯಾದಿಶ್ರುತಿಗಳಿಂದ ವಾಯುವಿಗೆ ಅನುತ್ಪತ್ತಿಯೇ. (೨) ಆಕಾಶಾನುತ್ಪತ್ತಿಶ್ರುತಿಯಂತೆ ಗೌಣಾರ್ಥತ್ವವನ್ನು ಹೇಳಕೂಡದು. ಹಾಗಿದ್ದರೆ, ಶ್ರುತಿಯಲ್ಲಿ ತೇಜೋ ಜಲ ಪೃಥಿವೀ ಆಕಾಶಗಳಿಗೆ ಅನಿತ್ಯತ್ವವನ್ನು ಹೇಳಿ ವಾಯುವಿಗೆ ಮಾತ್ರ ನಿತ್ಯತ್ವೋಕ್ತಿಯು ಅಯುಕ್ತವಾಗಬೇಕಾಗುವುದು. (೩) ಮತ್ತು ತೇಜಸ್ಸು ಮೊದಲಾದವುಗಳಿಗೆ ಅಚೇತನತ್ವವನ್ನು ಹೇಳಿ, ವಾಯುವಿಗೆ ಚೇತನತ್ವವನ್ನು ಹೇಳಿ, ಸರ್ವಭೂತಗಳ ವಿಜ್ಞಾನವಿದ್ದುದರಿಂದ ಚೇತನತ್ವವು ಉಪಪನ್ನವೆಂದು ಹೇಳಿರುವರು. (೪) ಮತ್ತು ಕುವಿದಂಗ ಎನ್ನುವ ಶ್ರುತಿಯಲ್ಲಿ ವಾಯುವಿಗೆ ಸರ್ವದೇವತೋಪಾಸ್ಯತ್ವವು ಹೇಳಲ್ಪಡುತ್ತದೆ. ಇದು ಉತ್ಪತ್ತಿಯಿದ್ದರೆ ಕೂಡಲಾರದು. ಯಸ್ಯಾನಾದಿಃ

★ ಈ ಮಂತ್ರವು ಶುದ್ಧಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಎನ್ನುವ ಶ್ರುತಿಯಲ್ಲಿ ವಾಯುವಿಗೆ ಉತ್ಪತ್ತ್ಯಾದಿಗಳು ಇಲ್ಲವೆಂದು ಹೇಳಿ ಉದಯಾಸ್ತಮಯಾಭಾವವೂ ಹೇಳಲ್ಪಡುತ್ತದೆ. ಉದಯಾದಿಗಳು ಇಲ್ಲವಾದರೆ ಸರ್ವಥಾ ಉತ್ಪತ್ತಿಯು ಕೂಡಲಾರದು. ಆದಕಾರಣ, ಬಹುಶ್ರುತಿ ಯುಕ್ತಿಗಳಿಂದ ವಿರೋಧವಿದ್ದುದರಿಂದ ವಾಯುವಿನ ಉತ್ಪತ್ತಿಶ್ರುತಿಯು ಅಪ್ರಮಾಣವೇ.

**ಭಾಷ್ಯ ॥ ಅತೋ ಬ್ರವೀತಿ ॥ ೪ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಸೂತ್ರಕಾರರು ಉತ್ತರಿಸುತ್ತಾರೆ.

## ಸೂತ್ರ ॥ ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ ॥ ೮ ॥

ಸೂತ್ರಾರ್ಥ ॥ ಹುಟ್ಟಲಿಲ್ಲವೆಂದು ಶ್ರುತವಾಗದಿದ್ದಪ್ರಯುಕ್ತವೂ, ಹುಟ್ಟಿದ್ದಾನೆಂದು ಶ್ರುತವಾದ ಪ್ರಯುಕ್ತವೂ, ಸಂಭವಶಬ್ದಾದಿ ಹೇತುವಿನಿಂದ ಮುಖ್ಯವಾಯುವೂ ಕೂಡ ಉತ್ಪತ್ತಿಯುಳ್ಳವನೆಂದು ತತ್ವತಃ ನಿಶ್ಚಿತನಾದನು.

**ಭಾಷ್ಯ ॥ ಏತೇನ ಮುಖ್ಯಾಮುಖ್ಯಾನುತ್ಪತ್ತಿ ವಚನೇನ ವಿಭಕ್ತತ್ವಾಚ್ಚ ವಾಯ್ವನುತ್ಪತ್ತಿಶ್ರುತಿರಪಿ ವ್ಯಾಖ್ಯಾತಾ ॥ ೫ ॥**

ಭಾಷ್ಯಾರ್ಥ ॥ (೧) ಅನುತ್ಪತ್ತಿಯು ಅಶ್ರುತವಾಗಿದೆ. ಆದುದರಿಂದ ಉತ್ಪತ್ತಿಶ್ರುತಿಯು ಇದೆ. ಉತ್ಪತ್ತಿಶ್ರುತಿಗಳು ಬಹಳ ಇದ್ದುದರಿಂದ ಅನಾದಿತ್ವಶ್ರುತಿಯು ಅಮುಖ್ಯಾರ್ಥಕವು. ಇದುಮೊದಲಾದ ಯುಕ್ತಿ ಸಮುದಾಯದ ದೆಶೆಯಿಂದ, (೨) ವಾಯುವಿಗೆ ಮುಖ್ಯೋತ್ಪತ್ತಿ ಅಮುಖ್ಯತಃ ಅನುತ್ಪತ್ತ್ಯಭಿಧಾಯಕ ವಚನದಿಂದ, ಮತ್ತು ಅನುತ್ಪತ್ತಿಶ್ರುತಿಯು ಬ್ರಹ್ಮನಲ್ಲಿಯೇ ಮುಖ್ಯವು, ಅನ್ಯತ್ರ ಅಮುಖ್ಯವು ಎನ್ನುವ ವಚನದಿಂದಲೂ, ಅಲ್ಪಶಕ್ತಿಯಿದ್ದುದರಿಂದಲೂ, ವಾಯುವಿಗೆ ಮುಖ್ಯಾನುತ್ಪತ್ತಿಯು ಕೂಡದಿರುವುದರಿಂದ ಅನುತ್ಪತ್ತಿ ಪ್ರತಿಪಾದಕ ಶ್ರುತಿಯೂ ಕೂಡ ಸ್ವರೂಪಕ್ಕೆ ಅನುತ್ಪತ್ತಿ ವಿಷಯಕವಾಗಿಯೂ, ಉತ್ಪತ್ತಿ ಶ್ರುತಿಯಾದರೂ ಮುಖ್ಯಾರ್ಥಕವಾಗಿಯೂ, ಆಕಾಶಕ್ಕೆ ಅನುತ್ಪತ್ತಿ ಪ್ರತಿಪಾದಕವಾದ ಶ್ರುತಿವ್ಯಾಖ್ಯಾನದಿಂದಲೇ ವ್ಯಾಖ್ಯಾತವಾಯಿತು.

ಪೀಠಿಕೆ ॥ ವಾಯುವಿಗೆ ಮುಖ್ಯವಾಗಿ ಅನುತ್ಪತ್ತಿಯಿಲ್ಲವಾದರೆ ಉತ್ಪತ್ತ್ಯನುತ್ಪತ್ತಿಗಳುಳ್ಳ ಆಕಾಶಾದಿಗಳಿಂದ ವಿಶೇಷಣ ಅನುತ್ಪತ್ತಿಶ್ರುತಿಯೂ, ಮುಖ್ಯಚೇತನತ್ವಾದಿಯುಕ್ತಿಯೂ ಕೂಡ ವಿರುದ್ಧವಾಗುವುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ನಿತ್ಯಃ ಪರಮನಿತ್ಯಶ್ಚ ತಥಾಽನಿತ್ಯಃ ಪರಸ್ತಥಾ । ಚತುರ್ಧೈತಜ್ಜಗತ್ಸರ್ವಂ ಪರಾನಿತ್ಯಂ ತು ಪಾರ್ಥಿವಂ॥ ಅನಿತ್ಯಾನಿ ತು ಭೂತಾನಿ ನಿತ್ಯೋ ವಾಯುರುದಾಹೃತಃ। ಪರಸ್ತು ನಿತ್ಯಃ ಪುರುಷಃ ಪ್ರಕೃತಿಃ ಕಾಲ ಏವ ಚ ॥ ೬ ॥**

ಭಾಷ್ಯಾರ್ಥ ॥ ಪ್ರಮಿತವಾದ ಈ ಎಲ್ಲಾ ಜಗತ್ತೂ ನಿತ್ಯವು. ಪರಮನಿತ್ಯವು, ಅನಿತ್ಯವು, ಪರಾನಿತ್ಯವು, ಹೀಗೆ ನಾಲ್ಕು ವಿಧವಾದುದು. ಆದರಲ್ಲಿ ಪರಾನಿತ್ಯವಾದರೂ, ಪೃಥಿವೀ ಮೊದಲಾದ ಭೂತ ಕಾರ್ಯವು, ಸಂಸೃಷ್ಟವಾದ ಅಂಡಾದಿಗಳು. ಅನಿತ್ಯಗಳಾದರೂ, ಅಸಂಸೃಷ್ಟದಲ್ಲಿ ಸೇರಿದ

ಆಕಾಶಾದಿಗಳು ಮತ್ತು ತದಭಿಮಾನಿಗಳಾದ ವಿನಾಯಕಾದಿಗಳು. ನಿತ್ಯವಾದರೂ ಮುಖ್ಯವಾಯುವು ಎಂದು (ಪ್ರಮಾಣಗಳಲ್ಲಿ ಹೇಳಲ್ಪಟ್ಟಿರುತ್ತಾನೆ.) (ಸ್ವರೂಪಾತಿರಿಕ್ತವಾದ ಪ್ರತಿಭೆಗೂ, ನಾಶವಿಲ್ಲದಿರುವುದರಿಂದ ನಿತ್ಯನು.) ಪರಮನಿತ್ಯವು (ಶರೀರತೋಽಪಿ ನಿತ್ಯವಾದುದು.) **ಪುರುಷಃ ಪ್ರಕೃತಿಃ ಕಾಲಃ** ಎನ್ನುವ ಶಬ್ದಗಳಿಂದ ವಾಚ್ಯವಾದ ಶ್ರೀ, ಭೂ, ದುರ್ಗಾತ್ಮಿಕ ಚಿತ್ಪ್ರಕೃತಿಯು ಹೇಳಲ್ಪಡುತ್ತದೆ.

**ಪೀಠಿಕೆ ॥** ಹೀಗೆ ಜಗತ್ತು ನಾಲ್ಕು ವಿಧವಾಗುವುದಾದರೆ ವಿಷ್ಣುವಿಗೆ ನಿತ್ಯತ್ವವು ಇಲ್ಲದೆ ಹೋಗುವುದು, ಎಂದರೆ ಇವುಗಳಿಂದಲೂ ಅತಿಶಯಿತ ನಿತ್ಯತ್ವವಿದೆ ಎನ್ನುತ್ತಾರೆ—

**ಭಾಷ್ಯ ॥ ಏತಚ್ಚತುಷ್ಟಯಂ ವಿಷ್ಣುಃ ಸ್ವಯಂ ನಿತ್ಯಃ ಪರಾತ್ಪರಃ । ಪ್ರತಿವ್ಯೂಹ್ಯ ವ್ಯೂಹ್ಯ ಚಾ ಸಾವತೀತ್ಯ ಚ ಜನಾರ್ದನಃ ॥ ಧಾರಯತ್ಯನಿಶಂ ದೇವೋ ನಿತ್ಯಾನಂದೈ ಕಲಕ್ಷಣಃ । ಇತಿ ಕೌರ್ಮೇ ॥ ೮ ॥ ಅಧಿ. ೨ ॥ ॥ ೭ ॥**

**ಭಾಷ್ಯಾರ್ಥ ॥** ವಿಷ್ಣುವಾದರೂ ಪರನಿತ್ಯವಾದ ಶ್ರೀತತ್ವದಿಂದಲೂ ಪರಮನಿತ್ಯನು, ಅಥವಾ ಸರ್ವಸ್ವತಂತ್ರನು, ನಿತ್ಯಾನಂದವೇ ಮುಖ್ಯವಾಗಿ ಸ್ವರೂಪವಾಗಿ ಉಳ್ಳವನು, ದ್ಯೋತನಾದಿಗುಣಗಳುಳ್ಳವನು, ಉತ್ಪತ್ತಿಯನ್ನು ನಾಶಪಡಿಸುವವನು, ಇಂತಹ ಶ್ರೀಹರಿಯು ನಿತ್ಯಾದಿ ನಾಲ್ಕು ವಿಧವಾದ ಜಗತ್ತನ್ನು, ಅನಿತ್ಯಾದಿ ಭೇದದಿಂದ ವಿಭಾಗಮಾಡಿ ಅಥವಾ ರಾಶೀಕರಿಸಿ ತನ್ನನ್ನೂ ಕೂಡ ನಿಯಾಮಕತ್ವೇನ ಪ್ರತಿವಸ್ತುಗಳಲ್ಲಿ ಇರಿಸಿ ಅವುಗಳಲ್ಲಿ ಪ್ರವೇಶಮಾಡಿ ಹಿಂದೆ ಹೇಳಿದ ನಾಲ್ಕುವಿಧವಾದ ಜಗತ್ತನ್ನು ತನ್ನ ಗುಣಗಳಿಂದ ಅಥವಾ ತನ್ನ ಶಕ್ತಿಯಿಂದ ಅತಿಕ್ರಮಿಸಿ ಪ್ರತಿಬಿಂಬಭೂತರಾದ ಜೀವರನ್ನು ಕುರಿತು ತನ್ನ ರೂಪವನ್ನು ವಿಭಾಗಮಾಡಿ ಜೀವರಲ್ಲಿ ನಿಯಾಮಕನಾಗಿ ಇದ್ದು ಅವರನ್ನು ತನ್ನ ಗುಣಗಳಿಂದ ಅತಿಕ್ರಮಿಸಿ ಜೀವರಕ್ಕಿಂತ ಉತ್ತಮೋತ್ತಮನಾಗಿ ಜೀವರ ಅಪೇಕ್ಷೆಯಿಲ್ಲದೇನೇ ಸದಾ ಈ ಜಗತ್ತನ್ನು ಸ್ವತಂತ್ರನಾಗಿಯೇ ಧರಿಸುತ್ತಾನೆ. ಮತ್ತೂ ಪೋಷಿಸುತ್ತಾನೆ. ಆದಕಾರಣ ಪರಾತ್ಪರನಿತ್ಯನು. ಹೀಗೆ ಕೌರ್ಮಪುರಾಣದಲ್ಲಿ ಹೇಳಿದೆ.

**ವಿಶೇಷಾಂಶ ॥** (೧) ಪರಾತ್ಪರ ನಿತ್ಯತ್ವವೆಂದರೆ ಸರ್ವಸ್ವಾತಂತ್ರ್ಯವು. (೨) ಪರನಿತ್ಯತ್ವವೆಂದರೆ ನಿರ್ವಿಕಾರವಾಗಿ ಆದ್ಯಂತಶೂನತ್ವವು. ಅದು ಜೀವಚೈತನ್ಯಾದಿಗಳಲ್ಲಿಯೂ ಅವುಗಳಿಗೆ ಅಭಿಮಾನಿನಿಯಾದ ಲಕ್ಷ್ಮಿಯಲ್ಲಿಯೂ ಇದೆ. (೩) ಅನಿತ್ಯತ್ವವೆಂದರೆ - ಉಪಾದಾನ ಹೊರತು ವಿನಾಶವತ್ವವು. (೪) ಪರಾನಿತ್ಯತ್ವವೆಂದರೆ ಉಪಾದಾನಸಹಿತವಾಗಿ ವಿನಾಶವುಳ್ಳದ್ದು. (೫) ವಾಯುವಿಗೆ ಪರತಂತ್ರತ್ವವಿದ್ದುದರಿಂದ ಈಶ್ವರನಂತೆ ಸ್ವಾತಂತ್ರ್ಯರೂಪವಾದ ಪರಾತ್ಪರ ನಿತ್ಯತ್ವವಿಲ್ಲ ದೇಹೋತ್ಪತ್ತಿಯಿದ್ದುದರಿಂದ ಚಿತ್ಪ್ರಕೃತಿಯಂತೆ ಪರನಿತ್ಯತ್ವವೂ ಇಲ್ಲ. ಆದರೂ ಪ್ರಲಯ ಕಾಲದಲ್ಲಿಯೂ ಜ್ಞಾನಕ್ಕೆ ಲೋಪವಿಲ್ಲದಿರುವುದರಿಂದ ಸ್ವರೂಪಾತಿರಿಕ್ತ ವೃತ್ತಿಜ್ಞಾನ ಪ್ರವಾಹಕ್ಕೆ ನಿತ್ಯತ್ವವದೆ ಎನ್ನುವ ಅಭಿಪ್ರಾಯದಿಂದ, ಆಕಾಶಾದಿಗಳಿಂದಲೂ ಆಕಾಶಾಭಿಮಾನಿ ವಿನಾಯಕಾದಿಗಳಿಂದಲೂ ಅತಿಶಯೇನ ನಿತ್ಯತ್ವವೂ ಸರ್ವಭೂತಗಳ ಜ್ಞಾನವಿದ್ದುದರಿಂದ ಮುಖ್ಯ ಚೇತನತ್ವವೂ, ಅವಾಂತರೇಶ್ವರನಾದುದ ರಿಂದ ಸರ್ವದೇವತೋಪಾಸ್ಯತ್ವವೂ ಹೇಳಲ್ಪಡುತ್ತದೆ. ಆದಕಾರಣ ಶ್ರುತಿವಿರೋಧವಾಗಲೀ ಯುಕ್ತಿವಿರೋಧವಾಗಲೀ ಇಲ್ಲ. ಆದುದರಿಂದ ಆಕಾಶದಂತೆ ವಾಯುವೂ ಉತ್ಪತ್ತಿಯುಳ್ಳವನೇ. ॥ ೮ ॥

## ಮಾಯಾವಾದಿರೀತ್ಯಾ

ವಿಚಾರ ॥ ಛಾಂದೋಗ್ಯದಲ್ಲಿ ಭೂತವಾಯುವಿಗೆ ಉತ್ಪತ್ತಿಯು ಶ್ರುತವಾಗದಿರುವುದರಿಂದ ತೈತ್ತಿರೀಯದಲ್ಲಿ ಉತ್ಪತ್ತಿಯು ಶ್ರುತವಾದುದರಿಂದ ಶ್ರುತಿಗಳಿಗೆ ವಿರೋಧವು, ಹೀಗೆ ಪೂರ್ವಪಕ್ಷವು ಎಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ಉಕ್ತಿಅನುಕ್ತಿಗಳಿಗೆ ವಿರೋಧವು ಇಲ್ಲ. ಈ ಅಧಿಕರಣವು ಭೂತಪರವಾಗಿದ್ದರೆ ಆಕಾಶಾದ್ವಾಯುಃ ಎಂದು ಆಕಾಶಜನ್ಯವಾದ ವಾಯುವಿನಲ್ಲಿ ಆಕಾಶಸಾಮ್ಯವೂ ಇಲ್ಲದಿರುವುದರಿಂದ ಸುತರಾಂ ಅಧಿಕಾಶಂಕೆಯು ಇಲ್ಲದಿರುವುದರಿಂದ ಅತಿದೇಶವೂ ಕೂಡಲಾರದು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಅಧಿಕಾಶಂಕೆಯು ಇಲ್ಲದಿರುವುದರಿಂದ ಇದು ಅಧಿಕರಣಾಂತರವಲ್ಲ. ಮತ್ತೆ ಪೂರ್ವಾಧಿಕರಣಕ್ಕೆ ಶೇಷಭೂತವಾಗಿ ಭೂತವಿಷಯಕವೇ ಎನ್ನುತ್ತಾರೆ. ಅದು ಅಯುಕ್ತವು. ನಮ್ಮ ರೀತಿಯಾಗಿ ಹಿಂದೆ ಹೇಳಿದ ಪ್ರಕಾರ ಅಧಿಕಾಶಂಕೆಯು ಇದೆ. ಸೈಷಾನಸ್ತಮಿತಾ ಎನ್ನುವ ಶ್ರುತಿಯಲ್ಲಿ ದೇವತಾಪದವು. ಕುವಿದಂಗ ಎನ್ನುವ ಋಕ್ಕಿನಲ್ಲಿ ದೇವೋಪಾಸ್ಯತ್ವವೂ ಶ್ರುತವಾಗಿದೆ.

## ಅಧಿಕರಣ ಸಾರಾಂಶ

ವಾಯುವಿಗೆ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಇದೆಯೋ ಇಲ್ಲವೋ ಎಂದು ಸಂದೇಹವು. ಉತ್ಪತ್ತಿಯಿಲ್ಲವೆಂದು ಪೂರ್ವಪಕ್ಷವು. ವಾಯುರ್ವಾವ ನಿತ್ಯಃ ಎನ್ನುವ ಶ್ರುತಿಯದೆ. ಆಕಾಶದಂತೆ ವಾಯುವಿಗೂ ಉತ್ಪತ್ತಿಯನ್ನೇ ಹೇಳಿದರೆ ತೇಜಸ್ಸು ಜಲ ಮೊದಲಾದವುಗಳಿಗೆ ಉತ್ಪತ್ತಿಪೂರ್ವಕವಾಗಿ ವಾಯುವಿಗೆ ನಿತ್ಯತ್ವ ಹೇಳಿದ್ದು ಕೂಡದೆ ಹೋಗುವುದು. ಮತ್ತು ವಾಯುರ್ವಾವ ಚೇತನಃ ಎನ್ನುವ ಶ್ರುತಿಯಲ್ಲಿ ವಿಶಿಷ್ಟ ಚೇತನತ್ವವನ್ನು ಹೇಳಿದ್ದರಿಂದ ಸರ್ವಜೀವಸಾಧಾರಣವಾದ ಸ್ವರೂಪನಿತ್ಯತ್ವವು ಕೂಡಲಾರದು. ಮತ್ತೂ ಕುವಿದಂಗ ಎನ್ನುವ ಮಂತ್ರದಲ್ಲಿ ಸರ್ವದೇವೋಪಾಸ್ಯತ್ವವನ್ನು ಹೇಳಿಯದೆ. **ವಾಯುರ್ನಜನಿಮಾನ್ ಪರಮನಿತ್ಯತ್ವಾತ್ ಪರಮಚೇತನತ್ವಾತ್ ಈಶವತ್** ಇತ್ಯಾದಿ ಯುಕ್ತಿಯೂ ಇದೆ. ಎಂದರೆ ವಾಯುವು ದೇಹ ಸಬಂಧ ರೂಪವಾದ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯುಳ್ಳವನು. ಪ್ರಾಣಾದ್ವಾಯುರಜಾಯತ ಇತ್ಯಾದಿ ಉತ್ಪತ್ತಿಶ್ರುತಿಯು ಇದೆ. ಅಲ್ಪಶಕ್ತಿಯೂ ಇರುವವನು. ವಾಯುವಿಗೂ ಜನಿಯನ್ನು ಹೇಳದೆ ಇದ್ದರೆ ಈಶನಂತೆ ಸ್ವಾತಂತ್ರ್ಯವು ಬರಬೇಕಾಗುವುದು. ॥ ಅಧಿ. ೨ ॥

**ಮಾತರಿಶ್ವಾಧಿಕರಣವು ಸಮಾಪ್ತವಾಯಿತು.**

**ಓಂ ಸೋತ್ಪತ್ತಿ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ**

## ೩. ಅಸಂಭವಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಶ್ರೀಹರಿಗೆ ಉತ್ಪತ್ತಿ ವಿಷಯದಲ್ಲಿ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

## ಸೂತ್ರ ॥ ಓಂ ಅಸಂಭವಸ್ತು ಸತೋऽನುಪಪತ್ತೇಃ ಓಂ ॥ ೯ ॥

**ಸೂತ್ರಾರ್ಥ ॥** ಸತ್ ಶಬ್ದವಾಚ್ಯನಾದ ಬ್ರಹ್ಮನಿಗೆ ಅನುತ್ಪತ್ತಿಯೇ ಕಾರಣವು ಇಲ್ಲದಿರುವುದರಿಂದ ಅಂದರೆ ಅಸತ್ತಿಗೆ ಕಾರಣತ್ವವು ಕೂಡದಿರುವುದರಿಂದಲೇ.

**ಭಾಷ್ಯ ॥ (೧) ಅಸದ್ವಾ ಇದಮಗ್ರ ಆಸೀತ್ತತೋ ವೈ ಸದಜಾಯತ (ತೈ.೨.೭)। ೨) ಅಸತಃ ಸದಜಾಯತ (ಋ.೧೦.೭೨.೨)। ಇತ್ಯಾದಿಶ್ರುತಿಭ್ಯಃ ಸತೋऽಪ್ಯುತ್ಪತ್ತಿಃ। ಇತಿ ಚೇತ್ ॥ ೧ ॥**

**ಭಾಷ್ಯಾರ್ಥ ॥** (೧) ಪ್ರಲಯಕಾಲದಲ್ಲಿ ಅಸತ್ತೇ ಇತ್ತು, ಅಸತ್ತಿನಿಂದ ಸತ್ತಾದ ಬ್ರಹ್ಮನು ಹುಟ್ಟಿದನು. (೨) ಅಸತ್ತಿನಿಂದ ಸತ್ ಹುಟ್ಟಿತು. ಇತ್ಯಾದಿ ಶ್ರುತಿಗಳಿಂದ ಸರ್ವಕಾರಣನಾದಾಗ್ಯೂ ಬ್ರಹ್ಮನಿಗೆ ಉತ್ಪತ್ತಿಯು (ಪರಾಧೀನ ವಿಶೇಷಾವಾಪ್ತಿರೂಪವಾದುದು) ಶ್ರುತವಾಗುತ್ತದೆ. (ಆದಕಾರಣ ಬ್ರಹ್ಮನಿಗೆ ಉತ್ಪತ್ತಿಯು ಇದ್ದೇ ಇದೆ.) ಎಂದರೆ—

**ಪೀಠಿಕೆ ॥** ಹೀಗೆ ಪೂರ್ವಪಕ್ಷವನ್ನು ಹೇಳಿ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ನ। ಅನುತ್ಪತ್ತಿರೇವ ಸತಃ। ತುಶಬ್ದೇನೋಕ್ತವ್ಯವಸ್ಥಾಮಪಾಕರೋತಿ ॥ ೨ ॥**

**ಭಾಷ್ಯಾರ್ಥ ॥** ಸಚ್ಛಬ್ದವಾಚ್ಯನಾದ ಬ್ರಹ್ಮನಿಗೆ ಉತ್ಪತ್ತಿಯು ಇಲ್ಲ. ಮತ್ತೆ ಸಚ್ಛಬ್ದವಾಚ್ಯನಾದ ಪರಬ್ರಹ್ಮನಿಗೆ ಅನುತ್ಪತ್ತಿಯೇ. (ಹಿಂದೆ ಹೇಳಿದ ಶ್ರುತಿಬಲದಿಂದ ಉತ್ಪತ್ತಿಯನ್ನು ಕಲ್ಪಿಸಕೂಡದು.) (ನಾನೂ ಕೂಡ ಆಕಾಶಾದಿಗಳಂತೆಯೇ ವ್ಯವಸ್ಥೆಯಿಂದ ಬ್ರಹ್ಮನಿಗೆ ಅನುತ್ಪತ್ತಿಯನ್ನು ಅಂಗೀಕರಿಸಿದ್ದರಿಂದ ಸಿದ್ಧಪ್ರತಿಜ್ಞೆಯಾಯಿತು ಎಂದರೆ) ತು ಶಬ್ದದಿಂದ ಬ್ರಹ್ಮನಿಗೆ ಆಕಾಶಾದಿಗಳಂತೆಯೇ ಸ್ವರೂಪಾನಾದಿತ್ವ ರೂಪವಾದ ವ್ಯವಸ್ಥೆಯನ್ನು (ಸೂತ್ರಕಾರರು) ನಿರಾಕರಿಸುತ್ತಾರೆ. ಮತ್ತೆ ಸರ್ವಾತ್ಮನಾ ಅನುತ್ಪತ್ತಯನ್ನೇ ಹೇಳುತ್ತಾರೆ.

**ವಿಶೇಷಾಂಶ ॥** ಆಕಾಶವಾಯುಗಳಿಗೆ ಬ್ರಹ್ಮನಂತೆ ಅನಾದಿತ್ವವಿದ್ದರೂ ಅಸ್ವಾತಂತ್ರ್ಯವಿದ್ದುದರಿಂದ ಉತ್ಪತ್ತಿಯು. ಬ್ರಹ್ಮನಿಗಾದರೂ ಸತ್ತ್ವಂ ಸ್ವಾತಂತ್ರ್ಯ ಮುದ್ದಿಷ್ಟಂ ಎನ್ನುವ ಭಾರತೋಕ್ತಿಯಿಂದ ಅಸ್ವಾತಂತ್ರ್ಯಾಭಾವ (ಸ್ವಾತಂತ್ರ್ಯ)ವಿದ್ದುದರಿಂದ ಅನುತ್ಪತ್ತಿಯೇ ಎಂದು ವೈಷಮ್ಯವು ಉಕ್ತವಾಯಿತು.

**ಪೀಠಿಕೆ ॥** ಹಾಗಾದರೆ ಅಸತಃ ಸದಜಾಯತ ಎನ್ನುವ ಶ್ರುತಿಯಲ್ಲಿ ಬ್ರಹ್ಮನಿಗೂ ಉತ್ಪತ್ತಿಯು ಶ್ರುತವಾದುದರಿಂದ ಸರ್ವಾತ್ಮನಾ ಅನುತ್ಪತ್ತಿಯು ಹೇಗೆಂದರೆ—

**ಭಾಷ್ಯ ॥ ನ ಹ್ಯತಸಃ ಸದುತ್ಪದ್ಯತೇ। ಅದೃಷ್ಟತ್ವಾದನುಪಪತ್ತೇಃ ॥ ೩ ॥**

**ಭಾಷ್ಯಾರ್ಥ ॥** ಈ ಶ್ರುತಿಯಿಂದ ಅಸತ್ತಿನಿಂದ ಸತ್ತಾದ ಬ್ರಹ್ಮನು ಹುಟ್ಟುತ್ತಾನೆಂದು ಅಂಗೀಕರಿಸ ಕೂಡದು. ಪ್ರಾತೀತಿಕಾರ್ಥವು ಕೂಡದಿರುವುದರಿಂದ. ಏಕೆಂದರೆ ಅಸತ್ತಿನಿಂದ ಪದಾರ್ಥೋತ್ಪತ್ತಿಯು ಕಾಣದಿರುವುದರಿಂದ.

ವಿಶೇಷಾಂಶ ॥ ಅಸತ್ತಿನಿಂದ ಸಚ್ಛಬ್ದಿತವಾದ ವಸ್ತುಮಾತ್ರೋತ್ಪತ್ತಿಯೇ ಅಪ್ರಾಮಾಣಿಕವು. ಆದುದರಿಂದಲೇ ಸಚ್ಛಬ್ದವಾಚ್ಯದಿಂದ ಬ್ರಹ್ಮನಿಗೆ ಉತ್ಪತ್ತಿಯು ಸುತರಾಂ ಅಪ್ರಾಮಾಣಿಕವು.

**ಭಾಷ್ಯ ॥ ತದ್ವಾ ಏತದ್ಬ್ರಹ್ಮಾಹುರ್ಬೃಹತಿ ಬೃಂಹಯತಿ ಚ । ಇತಿ ॥ ತದ್ವಾ ಏತದಸದಾಹುರ್ನ ಹ್ಯಾಸಾದಯತಿ ಕಶ್ಚನ । ಇತಿ ॥ ತದ್ವಾ ಏತತ್ಪರಮಾಹುಃ ಪರತೋ ಹಿ ತದುದೀಕ್ಷ್ಯತೇ । ಇತಿ ಶ್ರುತೇರಸಚ್ಛಬ್ದೋ ಬ್ರಹ್ಮವಾಚೀ ॥ ೪ ॥**

ಭಾಷ್ಯಾರ್ಥ ॥ ಆ ಈ ನಾರಾಯಣನನ್ನು ಬ್ರಹ್ಮನನ್ನಾಗಿ ಜ್ಞಾನಿಗಳು ಹೇಳುತ್ತಾರೆ. ಈತನು ಗುಣಪರಿಪೂರ್ಣನಾಗಿರುತ್ತಾನೆ. ಇತರರಾದ ತನ್ನ ಭಕ್ತರನ್ನು ಯಥಾಯೋಗ್ಯವಾಗಿ ಗುಣಪೂರ್ಣರನ್ನಾಗಿ ಮಾಡುತ್ತಾನೆ. ಯಾವಕಾರಣದಿಂದ ಈ ಬ್ರಹ್ಮನನ್ನು ಯಾವ ಪುರುಷನೂ ತನ್ನ ಸಾಮರ್ಥ್ಯದಿಂದ ಹೊಂದುವುದಿಲ್ಲವೋ ಆದುದರಿಂದ ಅಸತ್ ಶಬ್ದ ವಾಚ್ಯನನ್ನಾಗಿ ಹೇಳುತ್ತಾರೆ. ಯಾವ ಕಾರಣದಿಂದ ರಮಾದಿಗಳಿಂದ ಸರ್ವೋತ್ಕೃಷ್ಟನೆಂದು ಜ್ಞಾನಿಗಳಿಂದ ತಿಳಿಯಲ್ಪಡುತ್ತಾನೋ, ಆದುದರಿಂದ ಈ ಬ್ರಹ್ಮನನ್ನು ಸರ್ವೋತ್ತಮನನ್ನಾಗಿ ಹೇಳುತ್ತಾರೆ. ಈ ಶ್ರುತಿಯಿಂದ ಅಸತ್ ಶಬ್ದವು ಬ್ರಹ್ಮವಾಚಕವು.

ಪೀಠಿಕೆ ॥ ಅಸತ್ ಶಬ್ದಕ್ಕೆ ಬ್ರಹ್ಮಪರತ್ವವು ಇದ್ದರೂ ಸಂಪೂರ್ಣ ಶ್ರುತ್ಯರ್ಥವು ಯಾವುದೆಂದರೆ—

**ಭಾಷ್ಯ ॥ ದೇವಾನಾಂ ಪೂರ್ವ್ಯೇ ಯುಗೇಽಸತಃ ಸದಜಾಯತ । ಇತಿ ॥ ಬ್ರಹ್ಮ ವಾ ಅಸತ್ ಸದ್ವಾವ ಪ್ರಾಣಃ ಪ್ರಾಣೋ ವಾವ ಮಹಾನ್ ಸಹ ಓಜೋ ಬಲಂ । ಇತ್ಯಾಚಕ್ಷತೇ । ಇತಿ (ಚ) ಪೈಂಗಿಶ್ರುತಿಃ ॥ ೫ ॥**

ಭಾಷ್ಯಾರ್ಥ ॥ ಆದಿ ಸೃಷ್ಟಿಯಲ್ಲಿ ದೇವತೆಗಳ ಮಧ್ಯದಲ್ಲಿ ಪ್ರಥಮತಃ ಸತ್ ಶಬ್ದವಾಚ್ಯನಾದ ವಾಯುವು ಪರಬ್ರಹ್ಮನಿಂದ ಹುಟ್ಟಿದನು. ಬ್ರಹ್ಮನೇ ಅಸಚ್ಛಬ್ದವಾಚ್ಯನು. ಪ್ರಾಣನೇ ಸತ್ ಶಬ್ದವಾಚ್ಯನು. (ಮಹತ್ವಾದಿ ಸದ್ಗುಣ ಯುಕ್ತನಾದುದರಿಂದ ಪ್ರಾಣವನ್ನು ಸತ್‌ಶಬ್ದ ವಾಚ್ಯನೆನ್ನುತ್ತಾರೆ.) ಪ್ರಾಣನೇ ಸರ್ವಜೀವೋತ್ತಮನು ಸಹನಶಕ್ತಿಸ್ವರೂಪನು, ಅವಷ್ಟಂಭನ ಶಕ್ತಿರೂಪನು, ಶಾರೀರಶಕ್ತಿರೂಪನು, ಹೀಗೆ (ಜ್ಞಾನಿಗಳು) ಹೇಳುತ್ತಾರೆ ಹೀಗೆ ಪೈಂಗಿಶ್ರುತಿಯು.

ಪೀಠಿಕೆ ॥ ಸಚ್ಛಬ್ದವಾಚ್ಯನಾದ ವಾಯುವು ಬ್ರಹ್ಮನಿಂದ ಹುಟ್ಟಿರುವನು ಎನ್ನುವಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ತ್ವಂ ದೇವ ಶಕ್ತ್ಯಾಂ ಗುಣಕರ್ಮಯೋನೌ ರೇತಸ್ತ್ವಜಾಯಾಂ ಕವಿರಾದಧೇಽಜಃ । ತತೋ ವಯಂ ಸತ್ಪ್ರಮುಖಾ ಯದರ್ಥೇ ಬಭೂವಿಮಾಽತ್ಮನ್ ಕರವಾಮ ಕಿಂ ತೇ ॥ ಇತಿ (ಚ) ಭಾಗವತೇ** (ಸ್ಕಂ.೩.ಅ.೫.ಶ್ಲೋ.೪೯, ೫೦) ॥ ೬ ॥

ಭಾಷ್ಯಾರ್ಥ ॥ ಎಲೋ ಶ್ರೀಹರಿಯೇ ಸರ್ವಜ್ಞನೂ ದೇಹತೋಽಪಿ ಉತ್ಪತ್ತಿಶೂನ್ಯನೂ ಆದ

ನೀನು **ಶಕ್ತ್ಯಾತ್ಮಶಕ್ತಯೋ ಭಾರ್ಯಾಃ** ಎನ್ನುವ ವಚನದಿಂದ ಭಾರ್ಯಳಾದ, (ಗುಣಃ) ಜ್ಞಾನಾನಂದಾದಿ ಗುಣಗಳಿಗೆ ಅಥವಾ ಸತ್ವಾದಿಗುಣಗಳಿಗೆ, (ಕರ್ಮಃ) ಅದೃಷ್ಟಾದಿಗಳಿಗೂ ಹೇತುಭೂತಳಾದ ಜನನರಹಿತಳಾದ ಚಿತ್ಪ್ರಕೃತಿಯಲ್ಲಿ ರೇತಸ್ಸನ್ನು ಇಟ್ಟಿರುತ್ತಿ ಆ ರೇತಸ್ಸಿನಿಂದ ವಾಯುವೇ ಪ್ರಧಾನನಾಗಿ ಉಳ್ಳ ನಾವು ಹುಟ್ಟಿರುವೆವು. ನಾವು ಯಾವುದಕ್ಕೋಸ್ಕರ ಆಗಿರುವೆವೋ, ಅಂತಹ ನಾವು ನಿನ್ನ ಸೇವಾರೂಪವಾದ ಕರ್ಮವನ್ನು ಏನು ಮಾಡುವೆವು. (ಆದಕ್ಕೆ ಉಪಯುಕ್ತ ಜ್ಞಾನಾದಿಗಳು ಇಲ್ಲದಿರುವುದರಿಂದ ಏನು ಮಾಡಲಿಕ್ಕೂ ಶಕ್ತರಲ್ಲ) ಹೀಗೆ ಭಾಗವತದಲ್ಲಿ (ಹೇಳಿದೆ.)

**ಪೀಠಿಕೆ** ॥ ರಾಮ ಕೃಷ್ಣಾದಿರೂಪದಿಂದ ಶ್ರೀಹರಿಯು ಹುಟ್ಟಿರುವುದರಿಂದ ಹುಟ್ಟಿಲ್ಲವೆನ್ನುವುದು ಹೇಗೆ ಕೂಡುತ್ತದೆ, ಎಂದರೆ—

**ಭಾಷ್ಯ ॥ ★ಅಜಾಯಮಾನೋ ಬಹುಧಾ ವಿಜಾಯತೇ (ತೈ.ಆ.೩.೧೩) ಇತಿ ಚ ॥ ೭ ॥**

**ಭಾಷ್ಯಾರ್ಥ** ॥ (ಈ ಶ್ರುತಿಯು ಶ್ರೀಹರಿಗೆ ಉತ್ಪತ್ತಿಯಿಲ್ಲವೆನ್ನುವಲ್ಲಿ ಪ್ರಮಾಣವು.) ಆದಕಾರಣ ಶ್ರೀಹರಿಗೆ ಪ್ರಾದುರ್ಭಾವರೂಪವಾದ ಜನಿಯನ್ನು ಹೇಳಿದ್ದರಿಂದ ವಿರೋಧವಿಲ್ಲ.

**ಪೀಠಿಕೆ** ॥ ಹುಟ್ಟದೆ ಇದ್ದವನಿಗೆ ಎಂತಹ ಜನ್ಮವು, ಎಂದರೆ—

**ಭಾಷ್ಯ ॥ ಪ್ರತ್ಯಕ್ಷತ್ವಂ ಹರೇರ್ಜನ್ಮ ನ ವಿಕಾರಃ ಕಥಂಚನ । ಪುರುಷಃ ಪ್ರಕೃತಿಃ ಕಾಲೋ ಮಹಾನಿತ್ಯಾದಿಷು ಕ್ರಮಾತ್ ॥ ವಿಕಾರ ಏವ ಜನನಂ ಪುರುಷೇ ತದ್ವಿಶೇಷಣಂ । ಪರತಂತ್ರವಿಶೇಷೋ ಹಿ ವಿಕಾರ ಇತಿ ಕೀರ್ತಿತಃ ॥ ಇತಿ (ಚ) ಪಾದ್ಮೇ ॥ ೮ ॥**

**ಭಾಷ್ಯಾರ್ಥ** ॥ ಶ್ರೀಹರಿಯ ಜನ್ಮವೆಂದರೆ, ಅವತಾರಗಳಲ್ಲಿ ವ್ಯಕ್ತಿಯೇ, ಸ್ವರೂಪತಃ ದೇಹತಃ ವಿಶೇಷ ತೋ ವಾ ಯಾವ ಪ್ರಕಾರದಿಂದಲೂ ವಿಕಾರವಿಲ್ಲ. (ಜೀವಾದಿಗಳಲ್ಲಿಯೂ ಇಂತಹುದೇ ಜನನವಾದರೆ ಶ್ರೀಹರಿಗೆ ಏನು ವಿಶೇಷವು ಎಂದರೆ) ಚೇತನನು ಚಿತ್ಪ್ರಕೃತಿಯೂ ಜಡಪ್ರಕೃತಿ, ಕಾಲ, ಮಹತ್ತತ್ವ ಇತ್ಯಾದಿ ಶಬ್ದವಾಚ್ಯಗಳಾದ ಅಹಂಕಾರ ಮನಸ್ಸು ಬುದ್ಧಿ ಇಂದ್ರಿಯ, ಪಂಚಭೂತಾದಿಗಳಲ್ಲಿ ಪೂರ್ವ ಪೂರ್ವ ತತ್ವಕ್ಕಿಂತ ಉತ್ತರೋತ್ತರದಲ್ಲಿ ಹುಟ್ಟಿರುವ ತತ್ವಗಳಿಗೆ ಉಪಚಯ (ಸ್ಥೂಲಭಾವ) ಆಧಿಕ್ಯ (ಅತಿಶಯ)ದ ಕ್ರಮದಿಂದ (ತಾರತಮ್ಯಾನುಸಾರವಾಗಿ) ವಿಕಾರವೇ ಪ್ರಕೃತ್ಯಾದಿಗಳಲ್ಲಿ ಜನನವು. (ಪುರುಷನು ಚೇತನನಾದುದರಿಂದ ಆತನಿಗೆ ಹೇಗೆ ವಿಕಾರವು ಎಂದರೆ) ಜೀವನಲ್ಲಿ ಆ ವಿಕಾರದಿಂದ ವಿಶೇಷಿತ್ವವು. (ಅಂದರೆ ಸ್ವತಃ ವಿಕಾರವಿಲ್ಲವಾದರೂ ವಿಕಾರವುಳ್ಳ ದೇಹಸಂಬಂಧ ಜೀವನಿಗೆ ಆಗು ತ್ತದೆ.) (ಹಾಗಾದರೆ ಚೇತನನಿಗೆ ಉತ್ಪತ್ತಿಯಿಲ್ಲವೆಂದಾಯಿತು ಎಂದರೆ) ಪರಾಧೀನವಾದ ದೇಹ ಸಂಬಂಧಾದಿರೂಪವಾದ ವಿಶೇಷವೇ ವಿಕಾರವೆಂದು ಹೇಳಲ್ಪಡುತ್ತದೆ; ಎಂದು ಪಾದ್ಮಪುರಾಣದಲ್ಲಿದೆ.

**ವಿಶೇಷಾಂಶ** ॥ ಜಡಪ್ರಕೃತಿಯಲ್ಲಿ ಪರಿಣಾಮವು. ಚಿತ್ಪ್ರಕೃತಿಯಲ್ಲಿ ಸಿಸೃಕ್ಷಾವಿಷಯತ್ವಾದಿ

---

★ ಈ ಶ್ರುತಿಯು ದ್ಯುಭ್ವಾದ್ಯಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ರೂಪವಾದುದು, ಜೀವನದಲ್ಲಿ ದೇಹಸಂಬಂಧಾದಿರೂಪವಾದ ವಿಕಾರರೂಪವಿಶೇಷವು, ಕಾಲಕ್ಕೆ ನಿಮೇಷಾದಿರೂಪವಾದುದು, ಉತ್ಪತ್ತಿಯೇ ವಿಕಾರವು. ॥ ೮ ॥

ಪೀಠಿಕೆ ॥ ಘಟ ಕಾರಣವಾದ ಮೃದಾದಿಗಳಲ್ಲಿ ವಿಕಾರವು ಕಂಡದ್ದರಿಂದ ಜಗತ್ಕಾರಣನಾದ ಶ್ರೀಹರಿಗೆ ವಿಕಾರಾಭಾವವು ಹೇಗೆ, ಎಂದರೆ—

**ಭಾಷ್ಯ ॥ ಅವಿಕಾರೋಽಪಿ ಭಗವಾನ್ ಸರ್ವಶಕ್ತಿತ್ವಹೇತುತಃ । ವಿಕಾರಹೇತು ಕಂಸರ್ವಂ ಕುರುತೇ ನಿರ್ವಿಕಾರವಾನ್ ॥ ಶಕ್ತಿಶಕ್ತಿಮತೋಶ್ಚಾಪಿ ನ ವಿಭೇದಃ (ವಿಭಾಗಃ) ಕಥಂಚನ । ಅವಿಭಿನ್ನಾಽಪಿ ಸೇಚ್ಛಾದಿ ಭೇದೈರಪಿ ವಿಭಾವ್ಯ(ಷ್ಯ)ತೇ ॥ ಇತಿ ಭಾಗವತತಂತ್ರೇ ॥ ೯ ॥ ಅಧಿ.೩ ॥ ॥ ೯ ॥**

ಭಾಷ್ಯಾರ್ಥ ॥ ಕರ್ತೃತ್ವನಿಮಿತ್ತ ಸುಖದುಃಖಾನುಭವರೂಪ ವಿಕಾರರಹಿತನೇ ಆದ ನಿರ್ವಿಕಾರ ಧರ್ಮಾವಯವಾದಿಗಳುಳ್ಳ ಶ್ರೀಹರಿಯು ಸರ್ವಶಕ್ತ್ಯಾಖ್ಯ ಹೇತುವಿನಿಂದ ವಿಕ್ರಿಯಮಾಣ ಪ್ರಕೃತ್ಯಾದಿಗಳೇ ಉಪಾದಾನ ಕಾರಣವಾಗಿ ಉಳ್ಳ ಸರ್ವಜಗತ್ತನ್ನೂ ಸೃಷ್ಟಿಮಾಡುತ್ತಾನೆ. (ಇದರಿಂದ ಕುಲಾಲಾದಿಗಳಂತೆ ಈಶ್ವರನಿಗೆ ನಿಮಿತ್ತ ಕಾರಣತ್ವವು, ಉಪಾದಾನಕಾರಣತ್ವವಲ್ಲ, ಎಂದುಕ್ತವಾಯ್ತು.) (ಈಶ್ವರನಿಗೆ ಶಕ್ತಿಯಿಂದ ಜಗತ್ಕಾರಣತ್ವವೆಂದಾದರೆ ಶಕ್ತಿನಾಶವಾದರೆ ಜಗತ್ಕಾರಣತ್ವವು ಇಲ್ಲವೆಂದಾಗಬೇಕಾಗುವುದು. ಎಂದರೆ) ಶಕ್ತಿಗೂ ಶಕ್ತಿಮತ್ತಿಗೂ ಯಾವ ಪ್ರಕಾರದಿಂದಲೂ ಭೇದವಿಲ್ಲ (ಮತ್ತೆ ಅಭೇದವೇ.) (ಅಂದರೆ ಶಕ್ತಿಯುಳ್ಳ ಶ್ರೀಹರಿಗೆ ವಿನಾಶವಿಲ್ಲದಿರುವುದಿಂದ ಶ್ರೀಹರಿಯಿಂದ ಅಭಿನ್ನವಾದ ಶಕ್ತಿಗೂ ಅವಿನಾಶವೇ.) (ಇಚ್ಛಾ ಜ್ಞಾನಪ್ರಯತ್ನಗಳು ಕರ್ತೃತ್ವಕ್ಕೆ ಉಪಯುಕ್ತಗಳಾಗಿರುವುದರಿಂದ ಅವುಗಳು ಇಲ್ಲದೆ ಶಕ್ತಿಮಾತ್ರದಿಂದ ಹೇಗೆ ಕರ್ತೃತ್ವವು ಎಂದರೆ) ಆ ಶಕ್ತಿಯು ಒಂದೇ ಆದಾಗ್ಯೂ ಭೇದರಹಿತವಾದುದಾಗ್ಯೂ, ಇಚ್ಛಾಜ್ಞಾನ ಪ್ರಯತ್ನರೂಪ ಪ್ರಭೇದಗಳಿಂದ ಹೇಳಲ್ಪಡುತ್ತದೆ, ಎಂದು ಭಾಗವತತಂತ್ರದಲ್ಲಿದೆ. ॥ ೯ ॥

## ಮಾಯಾವಾದಿರೀತ್ಯಾ

ವಿಚಾರ ॥ **ಬ್ರಹ್ಮ ಕಾರ್ಯಂ ಕಾರಣತ್ವಾತ್ ಘಟಾದಿವತ್**, ಎಂದು ಪೂರ್ವಪಕ್ಷವು ಬಂದರೆ— ಬ್ರಹ್ಮನು ಸನ್ಮಾತ್ರನು. ಕೇವಲ, ಸದ್ರೂಪನಿಗೆ ಸನ್ಮಾತ್ರದಿಂದ ಉತ್ಪತ್ತಿಯಾಗಲಾರದು. ಸನ್ಮಾತ್ರಕ್ಕೆ ಅತಿಶಯವಿಲ್ಲದಿರುವುದರಿಂದ ಕಾರ್ಯ, ಕಾರಣಭಾವವು ಕೂಡಲಾರದು. ಸದ್ವಿಶೇಷದಿಂದ ಉತ್ಪತ್ತಿಯು, ಎಂದೂ ಹೇಳಕೂಡದು. ವಿಶೇಷದಿಂದ ಸಾಮಾನ್ಯಕ್ಕೆ ಉತ್ಪತ್ತಿಯು ಕೂಡಲಾರದು. ಸತ್ತಿಗೆ ಅಸತ್ತಿನಿಂದ ಉತ್ಪತ್ತಿಯೆಂದೂ ಹೇಳಕೂಡದು. ಅಸತ್ತು ನಿರಾತ್ಮಕವಾಗಿದೆ. ಹೀಗೆ, ಸಿದ್ಧಾಂತವೆಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ನಮ್ಮ ರೀತಿಯಾಗಿ **ಅಸತಃ ಸದಜಾಯತ** ಇತ್ಯಾದಿ ಶ್ರುತಿಯಿಂದ ಬ್ರಹ್ಮನಿಗೆ ಪಾದಸಂಗತವಾದ ಕಾರ್ಯತ್ವಶಂಕೆಯು ಕೂಡುವಾಗ (ಅಂದರೆ, ಶ್ರುತಿವಿಪ್ರತಿಷೇಧಶಂಕೆಯೇ ಪಾದಸಂಗತವಾದುದರಿಂದ) ಯುಕ್ತಿವಿರೋಧಶಂಕೆಯು ಅಸಂಗತವು. ಮತ್ತು ಬ್ರಹ್ಮನು ಸತ್ತಾಮಾನ್ಯರೂಪನು, ಎಂದು ಹೇಳಿದ್ದು ಅಯುಕ್ತವು. ಪರಮಾರ್ಥಸತ್ತಾದ ಬ್ರಹ್ಮನಿಗೆ

ವ್ಯಾವಹಾರಿಕವಾದ ಸದಾದ್ಯನುಗತಿಯು ಕೂಡಲಾರದು. ಪರಮಾರ್ಥಸತ್ತಿನಲ್ಲಿ ಸಾಮಾನ್ಯ ವಿಶೇಷಭಾವವೇ ಕೂಡಲಾರದು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಬ್ರಹ್ಮನಿಗೇನೇ ಅನುತ್ಪತ್ತಿಯು. ಬ್ರಹ್ಮನಿಂದ ಇತರವಾದ ಮಹದಾದಿಗಳು ಹುಟ್ಟುತ್ತವೆ, ಹೀಗೆ ಮಹದಾದಿಗಳಿಗೆ ಉತ್ಪತ್ತಿಯನ್ನು ಹೇಳುವುದಕ್ಕಾಗಿ ಈ ಸೂತ್ರವು ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಬೇಳಲು ಅಯೋಗ್ಯವಾದುದನ್ನು ಹೇಳಿದ್ದರಿಂದಲೂ, ಅವಶ್ಯವಾಗಿ ಹೇಳಬೇಕಾದುದನ್ನು ಹೇಳದಿದ್ದುದರಿಂದಲೂ, ಅದು ಅಯುಕ್ತವು. ಮತ್ತು ವಿಯದಧಿಕರಣದಲ್ಲಿ ಹೇಳಿದ ಒಂದರ ಜ್ಞಾನದಿಂದ ಸರ್ವವಿಜ್ಞಾನಾದಿ ನ್ಯಾಯಗಳಿಂದ ಸಿದ್ಧವಾದ ಮಹದಾದಿಗಳಲ್ಲಿ ಉತ್ಪತ್ತಿಯನ್ನು ಪ್ರತ್ಯೇಕ ಹೇಳಬೇಕಾಗಿಲ್ಲ. ಸದಜಾಯತ ಇತ್ಯಾದಿ ಶ್ರುತಿಗಳಿಗೆ ವಿರೋಧ ಬಾರದಿರುವುದಕ್ಕಾಗಿ, ಸತ್ತಿಗೆ ಅನುಪಪತ್ತಿಯನ್ನು ಅವಶ್ಯವಾಗಿ ಹೇಳಬೇಕು.

## ಅಧಿಕರಣ ಸಾರಾಂಶ

ಸರ್ವಕರ್ತನೆಂದು ಹೇಳಲ್ಪಟ್ಟ ವಿಷ್ಣುವು ಉತ್ಪತ್ತಿಯುಳ್ಳವನೋ ಅಲ್ಲವೋ ಎಂದು ಸಂದೇಹವು. **ಅಸತಃ ಸದಜಾಯತ** ಎಂದು ಸತ್ ಶಬ್ದವಾಚ್ಯನಾದ ಶ್ರೀಹರಿಗೆ ಉತ್ಪತ್ತಿಯು ಶ್ರುತವಾದುದರಿಂದ ಉತ್ಪತ್ತಿಯು ಇದೆ. ನ ಜಾಯತೇ ಮ್ರಿಯತೇ ಇತ್ಯಾದಿ ಅನಾದಿತ್ವ ಶ್ರುತಿವಿರೋಧವು, ಎಂದು ಹೇಳಕೂಡದು. ಈ ಶ್ರುತಿಯು ಸ್ವರೂಪಾನಾದಿತ್ವವನ್ನು ಬೋಧಿಸುತ್ತದೆ. ಜನಿಶ್ರುತಿಯು ಪರಾಧೀನ ವಿಶೇಷಾವಾಪ್ತಿ ಪರವಾದುದು, ಹೀಗೆ, ವ್ಯವಸ್ಥೆಯು ಕೂಡುವುದು, ಎಂದರೆ— ದೇಹಕ್ಕೆ ಅನಾದಿತ್ವಾದಿಗಳಿಂದ ಶ್ರೀಹರಿಯು ಚಿತ್ಪ್ರಕೃತಿಗೆ ಸಮನಾದಾಗ್ಯೂ, ಆತನು ಸರ್ವಸ್ವತಂತ್ರನು. ಮತ್ತು ಅಸತ್ತಿಗೆ ಕಾರಣತ್ವವು ಕೂಡಲಾರದು. ಸದಜಾಯತ ಎನ್ನುವ ಶ್ರುತಿಯು ಬ್ರಹ್ಮ ವಾ ಅಸತ್ ಸದ್ವಾವ ಪ್ರಾಣಃ ಎನ್ನುವ ಶ್ರುತಿಯಿಂದ ವಾಯುವು ಈಶನಿಂದ ಜನ್ಯನು, ಎಂದು ಬೋಧಿಸುವುದು. ಆದಕಾರಣ, ಶ್ರೀಹರಿಯು ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯುಳ್ಳವನಲ್ಲ. ॥ ಅಧಿ.೩ ॥

**ಅಸಂಭವಾಧಿಕರಣವು ಸಮಾಪ್ತವಾಯಿತು.**

ಓಂ ತೇಜೋ ಜನ್ಮಶ್ರುತ್ಯವಿರೋಧಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ

# ೪ ತೇಜೋಽಧಿಕರಣವು

ಪೀಠಿಕೆ ॥ ತೇಜಸ್ಸಿನ ಉತ್ಪತ್ತಿವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ವಾಯೋರಗ್ನಿಃ ಎನ್ನುವ ಶ್ರುತಿಯಿಂದ ತೇಜಸ್ಸು ವಾಯುವಿನಿಂದ ಹುಟ್ಟುತ್ತದೆ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ತೇಜೋಽತಸ್ತಥಾ ಹ್ಯಾಹ ಓಂ ॥ ೧೦ ॥**

ರೂಪವಾದುದು, ಜೀವನದಲ್ಲಿ ದೇಹಸಂಬಂಧಾದಿರೂಪವಾದ ವಿಕಾರರೂಪವಿಶೇಷವು, ಕಾಲಕ್ಕೆ ನಿಮೇಷಾದಿರೂಪವಾದುದು, ಉತ್ಪತ್ತಿಯೇ ವಿಕಾರವು. ॥ ೮ ॥

ಪೀಠಿಕೆ ॥ ಘಟ ಕಾರಣವಾದ ಮೃದಾದಿಗಳಲ್ಲಿ ವಿಕಾರವು ಕಂಡದ್ದರಿಂದ ಜಗತ್ಕಾರಣನಾದ ಶ್ರೀಹರಿಗೆ ವಿಕಾರಾಭಾವವು ಹೇಗೆ, ಎಂದರೆ—

**ಭಾಷ್ಯ ॥ ಅವಿಕಾರೋಽಪಿ ಭಗವಾನ್ ಸರ್ವಶಕ್ತಿತ್ವಹೇತುತಃ । ವಿಕಾರಹೇತು ಕಂಸರ್ವಂ ಕುರುತೇ ನಿರ್ವಿಕಾರವಾನ್ ॥ ಶಕ್ತಿಶಕ್ತಿಮತೋಶ್ಚಾಪಿ ನ ವಿಭೇದಃ (ವಿಭಾಗಃ) ಕಥಂಚನ । ಅವಿಭಿನ್ನಾಽಪಿ ಸೇಚ್ಛಾದಿ ಭೇದೈರಪಿ ವಿಭಾವ್ಯ(ಷ್ಯ)ತೇ ॥ ಇತಿ ಭಾಗವತತಂತ್ರೇ ॥ ೯ ॥ ಅಧಿ.೩ ॥ ॥ ೯ ॥**

ಭಾಷ್ಯಾರ್ಥ ॥ ಕರ್ತೃತ್ವನಿಮಿತ್ತ ಸುಖದುಃಖಾನುಭವರೂಪ ವಿಕಾರರಹಿತನೇ ಆದ ನಿರ್ವಿಕಾರ ಧರ್ಮಾವಯವಾದಿಗಳುಳ್ಳ ಶ್ರೀಹರಿಯು ಸರ್ವಶಕ್ತ್ಯಾಖ್ಯ ಹೇತುವಿನಿಂದ ವಿಕ್ರಿಯಮಾಣ ಪ್ರಕೃತ್ಯಾದಿಗಳೇ ಉಪಾದಾನ ಕಾರಣವಾಗಿ ಉಳ್ಳ ಸರ್ವಜಗತ್ತನ್ನೂ ಸೃಷ್ಟಿಮಾಡುತ್ತಾನೆ. (ಇದರಿಂದ ಕುಲಾಲಾದಿಗಳಂತೆ ಈಶ್ವರನಿಗೆ ನಿಮಿತ್ತ ಕಾರಣತ್ವವು, ಉಪಾದಾನಕಾರಣತ್ವವಲ್ಲ, ಎಂದುಕ್ತವಾಯ್ತು.) (ಈಶ್ವರನಿಗೆ ಶಕ್ತಿಯಿಂದ ಜಗತ್ಕಾರಣತ್ವವೆಂದಾದರೆ ಶಕ್ತಿನಾಶವಾದರೆ ಜಗತ್ಕಾರಣತ್ವವು ಇಲ್ಲವೆಂದಾಗಬೇಕಾಗುವುದು. ಎಂದರೆ) ಶಕ್ತಿಗೂ ಶಕ್ತಿಮತ್ತಿಗೂ ಯಾವ ಪ್ರಕಾರದಿಂದಲೂ ಭೇದವಿಲ್ಲ. (ಮತ್ತೆ ಅಭೇದವೇ.) (ಅಂದರೆ ಶಕ್ತಿಯುಳ್ಳ ಶ್ರೀಹರಿಗೆ ವಿನಾಶವಿಲ್ಲದಿರುವುದಿಂದ ಶ್ರೀಹರಿಯಿಂದ ಅಭಿನ್ನವಾದ ಶಕ್ತಿಗೂ ಅವಿನಾಶವೇ.) (ಇಚ್ಛಾ ಜ್ಞಾನಪ್ರಯತ್ನಗಳು ಕರ್ತೃತ್ವಕ್ಕೆ ಉಪಯುಕ್ತಗಳಾಗಿರುವುದರಿಂದ ಅವುಗಳು ಇಲ್ಲದೆ ಶಕ್ತಿಮಾತ್ರದಿಂದ ಹೇಗೆ ಕರ್ತೃತ್ವವು ಎಂದರೆ) ಆ ಶಕ್ತಿಯು ಒಂದೇ ಆದಾಗ್ಯೂ ಭೇದರಹಿತವಾದುದಾಗ್ಯೂ, ಇಚ್ಛಾಜ್ಞಾನ ಪ್ರಯತ್ನರೂಪ ಪ್ರಭೇದಗಳಿಂದ ಹೇಳಲ್ಪಡುತ್ತದೆ, ಎಂದು ಭಾಗವತತಂತ್ರದಲ್ಲಿದೆ. ॥ ೯ ॥

## ಮಾಯಾವಾದಿರೀತ್ಯಾ

ವಿಚಾರ ॥ ಬ್ರಹ್ಮ ಕಾರ್ಯಂ ಕಾರಣತ್ವಾತ್ ಘಟಾದಿವತ್, ಎಂದು ಪೂರ್ವಪಕ್ಷವು ಬಂದರೆ— ಬ್ರಹ್ಮನು ಸನ್ಮಾತ್ರನು. ಕೇವಲ, ಸದ್ರೂಪನಿಗೆ ಸನ್ಮಾತ್ರದಿಂದ ಉತ್ಪತ್ತಿಯಾಗಲಾರದು. ಸನ್ಮಾತ್ರಕ್ಕೆ ಅತಿಶಯವಿಲ್ಲದಿರುವುದರಿಂದ ಕಾರ್ಯ, ಕಾರಣಭಾವವು ಕೂಡಲಾರದು. ಸದ್ವಿಶೇಷದಿಂದ ಉತ್ಪತ್ತಿಯು, ಎಂದೂ ಹೇಳಕೂಡದು. ವಿಶೇಷದಿಂದ ಸಾಮಾನ್ಯಕ್ಕೆ ಉತ್ಪತ್ತಿಯು ಕೂಡಲಾರದು. ಸತ್ತಿಗೆ ಅಸತ್ತಿನಿಂದ ಉತ್ಪತ್ತಿಯೆಂದೂ ಹೇಳಕೂಡದು. ಅಸತ್ತು ನಿರಾತ್ಮಕವಾಗಿದೆ. ಹೀಗೆ, ಸಿದ್ಧಾಂತವೆಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ನಮ್ಮ ರೀತಿಯಾಗಿ ಅಸತಃ ಸದಜಾಯತ ಇತ್ಯಾದಿ ಶ್ರುತಿಯಿಂದ ಬ್ರಹ್ಮನಿಗೆ ಪಾದಸಂಗತವಾದ ಕಾರ್ಯತ್ವಶಂಕೆಯು ಕೂಡುವಾಗ (ಅಂದರೆ, ಶ್ರುತಿವಿಪ್ರತಿಷೇಧಶಂಕೆಯೇ ಪಾದಸಂಗತವಾದುದರಿಂದ) ಯುಕ್ತಿವಿರೋಧಶಂಕೆಯು ಅಸಂಗತವು. ಮತ್ತು ಬ್ರಹ್ಮನು ಸತ್ಸಾಮಾನ್ಯರೂಪನು, ಎಂದು ಹೇಳಿದ್ದು ಅಯುಕ್ತವು. ಪರಮಾರ್ಥಸತ್ತಾದ ಬ್ರಹ್ಮನಿಗೆ

ವ್ಯಾವಹಾರಿಕವಾದ ಸದಾದ್ಯನುಗತಿಯು ಕೂಡಲಾರದು. ಪರಮಾರ್ಥಸತ್ತಿನಲ್ಲಿ ಸಾಮಾನ್ಯ ವಿಶೇಷಭಾವವೇ ಕೂಡಲಾರದು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಬ್ರಹ್ಮನಿಗೇನೇ ಅನುತ್ಪತ್ತಿಯು. ಬ್ರಹ್ಮನಿಂದ ಇತರವಾದ ಮಹದಾದಿಗಳು ಹುಟ್ಟುತ್ತವೆ, ಹೀಗೆ ಮಹದಾದಿಗಳಿಗೆ ಉತ್ಪತ್ತಿಯನ್ನು ಹೇಳುವುದಕ್ಕಾಗಿ ಈ ಸೂತ್ರವು ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಹೇಳಲು ಅಯೋಗ್ಯವಾದುದನ್ನು ಹೇಳಿದ್ದರಿಂದಲೂ, ಅವಶ್ಯವಾಗಿ ಹೇಳಬೇಕಾದುದನ್ನು ಹೇಳದಿದ್ದುದರಿಂದಲೂ, ಅದು ಅಯುಕ್ತವು. ಮತ್ತು ವಿಯದಧಿಕರಣದಲ್ಲಿ ಹೇಳಿದ ಒಂದರ ಜ್ಞಾನದಿಂದ ಸರ್ವವಿಜ್ಞಾನಾದಿ ನ್ಯಾಯಗಳಿಂದ ಸಿದ್ಧವಾದ ಮಹದಾದಿಗಳಲ್ಲಿ ಉತ್ಪತ್ತಿಯನ್ನು ಪ್ರತ್ಯೇಕ ಹೇಳಬೇಕಾಗಿಲ್ಲ, ಸದಜಾಯತ ಇತ್ಯಾದಿ ಶ್ರುತಿಗಳಿಗೆ ವಿರೋಧ ಬಾರದಿರುವುದಕ್ಕಾಗಿ, ಸತ್ತಿಗೆ ಅನುಪಪತ್ತಿಯನ್ನು ಅವಶ್ಯವಾಗಿ ಹೇಳಬೇಕು.

## ಅಧಿಕರಣ ಸಾರಾಂಶ

ಸರ್ವಕರ್ತನೆಂದು ಹೇಳಲ್ಪಟ್ಟ ವಿಷ್ಣುವು ಉತ್ಪತ್ತಿಯುಳ್ಳವನೋ ಅಲ್ಲವೋ ಎಂದು ಸಂದೇಹವು. ಅಸತಃ ಸದಜಾಯತ ಎಂದು ಸತ್ ಶಬ್ದವಾಚ್ಯನಾದ ಶ್ರೀಹರಿಗೆ ಉತ್ಪತ್ತಿಯು ಶ್ರುತವಾದುದರಿಂದ ಉತ್ಪತ್ತಿಯು ಇದೆ. ನ ಜಾಯತೇ ಮ್ರಿಯತೇ ಇತ್ಯಾದಿ ಅನಾದಿತ್ವ ಶ್ರುತಿವಿರೋಧವು, ಎಂದು ಹೇಳಕೂಡದು. ಈ ಶ್ರುತಿಯು ಸ್ವರೂಪಾನಾದಿತ್ವವನ್ನು ಬೋಧಿಸುತ್ತದೆ. ಜನಿಶ್ರುತಿಯು ಪರಾಧೀನ ವಿಶೇಷಾವಾಪ್ತಿ ಪರವಾದುದು, ಹೀಗೆ, ವ್ಯವಸ್ಥೆಯು ಕೂಡುವುದು, ಎಂದರೆ— ದೇಹಕ್ಕೆ ಅನಾದಿತ್ವಾದಿಗಳಿಂದ ಶ್ರೀಹರಿಯು ಚಿತ್ಪ್ರಕೃತಿಗೆ ಸಮನಾದಾಗ್ಯೂ, ಆತನು ಸರ್ವಸ್ವತಂತ್ರನು. ಮತ್ತು ಅಸತ್ತಿಗೆ ಕಾರಣತ್ವವು ಕೂಡಲಾರದು. ಸದಜಾಯತ ಎನ್ನುವ ಶ್ರುತಿಯು ಬ್ರಹ್ಮ ವಾ ಅಸತ್ ಸದ್ಭಾವ ಪ್ರಾಣಃ ಎನ್ನುವ ಶ್ರುತಿಯಿಂದ ವಾಯುವು ಈಶನಿಂದ ಜನ್ಯನು, ಎಂದು ಬೋಧಿಸುವುದು. ಆದಕಾರಣ, ಶ್ರೀಹರಿಯು ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯುಳ್ಳವನಲ್ಲ ॥ ಅಧಿ.೩ ॥

**ಅಸಂಭವಾಧಿಕರಣವು ಸಮಾಪ್ತವಾಯಿತು.**

**ಓಂ ತೇಜೋ ಜನ್ಮಶ್ರುತ್ಯವಿರೋಧಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ**

## ೪ ತೇಜೋಽಧಿಕರಣವು

ಪೀಠಿಕೆ ॥ ತೇಜಸ್ಸಿನ ಉತ್ಪತ್ತಿವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ವಾಯೋರಗ್ನಿಃ ಎನ್ನುವ ಶ್ರುತಿಯಿಂದ ತೇಜಸ್ಸು ವಾಯುವಿನಿಂದ ಹುಟ್ಟುತ್ತದೆ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ತೇಜೋಽತಸ್ತಥಾ ಹ್ಯಾಹ ಓಂ ॥ ೧೦ ॥**

**ಭಾಷ್ಯ ॥ ವಾಯೋರಗ್ನಿಃ (ತೈ.೨.೧)। ಇತ್ಯಾದೇರ್ನಾನ್ಯತ ಉತ್ಪತ್ತಿರ್ಗ್ರಾಹ್ಯಾ। ಅತ ಏವ ಪರಾತ್ತದಪಿ ಜಾಯತೇ । ತತ್ತೇಜೋऽಸೃಜತ । ಇತಿ ಹ್ಯಾಹ ॥ ೧ ॥**

**ಸೂತ್ರಾರ್ಥ ॥ ವಾಯೋರಗ್ನಿಃ** ಇತ್ಯಾದಿ ಶ್ರುತಿಯಿಂದ ತೇಜಸ್ಸಿಗೆ ಬ್ರಹ್ಮನಿಂದ ಇತರವಾದ ವಾಯುವಿನಿಂದ ಉತ್ಪತ್ತಿಯನ್ನು ತಿಳಿಯಕೂಡದು. ಮತ್ತೆ ಅತಃ=ಸರ್ವೋತ್ತಮನಾದ ಪರಬ್ರಹ್ಮನಿಂದಲೇ, ತೇಜಃ=ತೇಜಸ್ಸೂ ಹುಟ್ಟುತ್ತದೆ. (ಆಕಾಶಾದಿಗಳು ಮಾತ್ರ ಹುಟ್ಟುವುದಲ್ಲ) ಹಿ=ಏಕೆಂದರೆ, ತತ್ತೋऽಸೃಜತ ಆ ಬ್ರಹ್ಮನು ತೇಜಸ್ಸನ್ನು ಸೃಷ್ಟಿಸಿದನು ಎನ್ನುವ ಶ್ರುತಿಯು, ತಥಾ=ತೇಜಸ್ಸು ಬ್ರಹ್ಮನಿಂದ ಹುಟ್ಟಿದ್ದೆಂದು, ಆಹ=ಹೇಳುತ್ತದೆ.

**ವಿಶೇಷಾಂಶ ॥ ವಾಯೋರಗ್ನಿಃ** ಇತ್ಯಾದಿ ಶ್ರುತಿವಿರೋಧವೆಂದು ಹೇಳಕೂಡದು. ವಾಯ್ವಾದಿಗಳಿಗೆ ಮುಖ್ಯ ಕಾರಣತ್ವವಿಲ್ಲವಾದರೂ ಬ್ರಹ್ಮನು ತನ್ನ ಇಚ್ಛೆಯಿಂದಲೇ ಲೀಲಯಾ ವಾಯುದ್ವಾರಾ ಸೃಷ್ಟಿಸುತ್ತಾನೆಂದು ಇಟ್ಟುಕೊಳ್ಳಬೇಕು.

**ಪೀಠಿಕೆ ॥** ಕಾರಣತ್ವೇನ ಚ ಎನ್ನುವ ಅಧಿಕರಣದಲ್ಲಿ ವಾಯು ಮೊದಲಾದ ಶಬ್ದಗಳಿಗೆ ಬ್ರಹ್ಮನಲ್ಲಿ ಸಮನ್ವಯವನ್ನು ಹೇಳಿದ್ದರಿಂದ ತೇಜಸ್ಸೂ ಬ್ರಹ್ಮನಿಂದಲೇ ಹುಟ್ಟಿದ್ದೆಂದು ಸಿದ್ಧವಾದಪ್ರಯುಕ್ತ ಪುನಃ ಏಕೆ ಹೇಳಿದ್ದು, ಎಂದರೆ—

**ಭಾಷ್ಯ ॥ ಕಾರಣತ್ವೇನೇತ್ಯುಕ್ತೇऽಪ್ಯಮುಖ್ಯತಯಾऽನ್ಯೇಷಾಮಪಿ ಶಬ್ದೋಕ್ತತ್ವಾತ್ಪುನರುಕ್ತಿ ರುಭಯಕಾರಣತ್ವನಿವೃತ್ತ್ಯರ್ಥಂ ॥ ೧೦ ॥ ಅಧಿ.೪ ॥ ॥ ೨ ॥**

**ಭಾಷ್ಯಾರ್ಥ ॥** ಕಾರಣತ್ವೇನ ಚಾಕಾಶಾದಿಷು ಎನ್ನುವ ಅಧಿಕರಣದಲ್ಲಿಯೇ ಬ್ರಹ್ಮನು ತೇಜಸ್ಸಿಗೆ ಕಾರಣನು ಎಂದು ಹೇಳಿದರೂ ಬ್ರಹ್ಮನಿಂದ ಇತರರಾದ ವಾಯ್ವಾದಿಗಳಿಗೂ ಪರಮ ಮುಖ್ಯವೃತ್ತಿಯಿಂದ ಭಿನ್ನವಾದ ಮುಖ್ಯವೃತ್ತಿಯಿಂದ ವಾಯ್ವಾದಿ ಶಬ್ದವಾಚ್ಯತ್ವವನ್ನು ಅಂಗೀಕರಿಸಿದ್ದರಿಂದ ಪುನರುಕ್ತಿಯು ಅಂದರೆ ತೇಜಸ್ಸಿಗೆ ವಾಯುವಿನಿಂದ ಉತ್ಪತ್ತಿಯು ಎನ್ನುವ ಶಂಕೆಯನ್ನು ಪರಿಹರಿಸುವುದಕ್ಕಾಗಿ ಪುನಃ ಬ್ರಹ್ಮನಿಂದ ತೇಜಸ್ಸಿಗೆ ಉತ್ಪತ್ತಿಯೆಂದು ಹೇಳಿದ್ದು, ಬ್ರಹ್ಮ ವಾಯುಗಳಿಬ್ಬರಿಗೂ ಸಾಮ್ಯದಿಂದ ಸ್ವತಂತ್ರ ಕಾರಣತ್ವ ಶಂಕಾ ನಿರಾಸಾರ್ಥಕವಾದುದು. (ಇಲ್ಲವಾದರೆ ಇಬ್ಬರಿಗೂ ಕಾರಣತ್ವವಿದೆ ಎನ್ನುವುದಕ್ಕೆ ಅವಕಾಶವಿದ್ದುದರಿಂದ ಅದು ನಿರಾಸವಾಗದೆ ಹೋಗುತ್ತಿತ್ತು.)

## ಅಧಿಕರಣ ಸಾರಾಂಶ

ತೇಜಸ್ಸಿಗೆ ಅಭಿಮಾನಿಯಾದ ದೇವತೆಯೂ, ತೇಜೋಭೂತವೂ ವಾಯುವಿನಿಂದ ಹುಟ್ಟುತ್ತದೋ, ಶ್ರೀಹರಿಯಿಂದಲೋ ಎಂದು ಸಂದೇಹವು. ವಾಯೋರಗ್ನಿಃ ಎನ್ನುವ ಶ್ರುತಿಯಿಂದ ವಾಯುವಿನಿಂದಲೇ ಹುಟ್ಟಿದ್ದೆಂದು ಪೂರ್ವಪಕ್ಷವು ಬಂದರೆ— ತತ್ತೇಜೋऽಸೃಜತ ಎನ್ನುವ ಶ್ರುತಿಯಿಂದ ಶ್ರೀಹರಿಯಿಂದಲೇ ಸ್ವತಂತ್ರವಾಗಿ ಹುಟ್ಟಿದ್ದು. ಇತರಾಪೇಕ್ಷೆಯಿಲ್ಲದೆ ಸೃಷ್ಟಿಮಾಡಲಿಕ್ಕೆ ಈಶ್ವರನಿಗೆ ಶಕ್ತಿಯಿದ್ದರೂ ಲೀಲಯಾ ವಾಯುಭೂತ, ವಾಯುದೇವತಾ ದ್ವಾರಾ, ತೇಜೋಭೂತ

ತೇಜೋ ದೇವತಾ ಸೃಷ್ಟಿಯು ಉಪಪನ್ನವಾಗುವುದರಿಂದ ವಾಯೋರಗ್ನಿಃ ಎನ್ನುವ ಶ್ರುತಿಗೆ ದ್ವಾರಮಾತ್ರ ಪರತ್ವವಿಟ್ಟುಕೊಂಡರೆ ಬಾಧಕವಿಲ್ಲದಿರುವುದರಿಂದ ಅದರಿಂದ ವಿರೋಧವಿಲ್ಲ. ॥ ಅಧಿ. ೪ ॥

ತೇಜೋಧಿಕರಣವು ಸಮಾಪ್ತವಾಯಿತು.

॥ ಓಂ ಅಬ್ಜನ್ಮಶ್ರುತ್ಯವಿರೋಧಪ್ರಯೋಜ್ಯಸಮನ್ವಯ ಗೋಚರಾಯನಮಃ ಓಂ ॥

## ೫ ಅಬಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಜಲಗಳಿಗೆ ಜನ್ಮವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಅಗ್ನೇರಾಪಃ ಎನ್ನುವ ಶ್ರುತಿಯಿಂದ ಜಲಗಳು ತೇಜಸ್ಸಿನಿಂದಲೇ ಹುಟ್ಟುತ್ತವೆ ಎಂದು ಪೂರ್ವಪಕ್ಷ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನುಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

ಸೂತ್ರ ॥ ಓಂ ಆಪಃ ಓಂ ॥ ೧೧ ॥

ಭಾಷ್ಯ ॥ ಬ್ರಹ್ಮೈವೇದಮಗ್ರ ಆಸೀತ್ತದಪೋಽಸೃಜತ ತದಿದಂ ಸರ್ವಂ (ಶ್ರುತ್ಯಂತರಂ)। ಇತಿ ಶ್ರುತೇಃ ಅಗ್ನೇರಾಪಃ (ತೈ.೨.೧) ಇತ್ಯುಕ್ತೇಽಪಿ ಬ್ರಹ್ಮಣ ಏವಾಬಾದಿಸೃಷ್ಟಿಃ ॥ ೧ ॥

ಭಾಷ್ಯಾರ್ಥ ॥ ಅಗ್ನೇರಾಪಃ ಎಂದು ಜಲಗಳಿಗೆ ಅಗ್ನಿಜಾತತ್ವವನ್ನು ಹೇಳಿದರೂ, ಪ್ರಲಯಕಾಲದಲ್ಲಿ ಬ್ರಹ್ಮನೇ ಇದ್ದನು, ಬ್ರಹ್ಮನು ಜಲಗಳನ್ನು ಸೃಷ್ಟಿಸಿದನು, ಆ ಬ್ರಹ್ಮನೇ ಈ ಎಲ್ಲಾ ಜಗತ್ತನ್ನು ಸೃಷ್ಟಿಸಿದನು ಎನ್ನುವ ಶ್ರುತಿಯಿಂದ, ಪರಬ್ರಹ್ಮನಿಂದಲೇ ಜಲ ಮೊದಲಾದವುಗಳ ಸೃಷ್ಟಿಯು ಆಗುತ್ತದೆ.

ಪೀಠಿಕೆ ॥ ವಾಯು ಮೊದಲಾದುದಕ್ಕೆ ಎಲ್ಲಾದಕ್ಕೂ ಬ್ರಹ್ಮಜಾತತ್ವವನ್ನು ಏಕೆ ಇಟ್ಟುಕೊಳ್ಳಬೇಕು, ಎಂದರೆ—

ಭಾಷ್ಯ ॥ ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ । ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ (ಮು.೨.೧.೩) ಇತ್ಯಾದಿ ಚ ॥ ॥ ೨ ॥

ಭಾಷ್ಯಾರ್ಥ ॥ ಈ ಪರಬ್ರಹ್ಮನಿಂದಲೇ ಮುಖ್ಯಪ್ರಾಣನೂ, ಜಡ ತದಭಿಮಾನಿ ಚೇತನ ಉಭಯ ರೂಪಗಳಾದ ಮನಸ್ಸೂ ಎಲ್ಲಾ ಇಂದ್ರಿಯಗಳೂ ಆಕಾಶವೂ ಭೂತವಾಯುವೂ ತೇಜಸ್ಸೂ ಜಲವೂ ಪೃಥಿವಿಯೂ ಕೂಡ ಹುಟ್ಟುತ್ತವೆ. ಇದುಮೊದಲಾದ ಶ್ರುತಿವಾಕ್ಯವೂ (ಬ್ರಹ್ಮನಿಂದಲೇ ಅಬಾದಿ ಸೃಷ್ಟಿಯನ್ನು ಹೇಳುತ್ತದೆ.)

ವಿಶೇಷಾಂಶ ॥ ಪೃಥಿವಿಯಲ್ಲಿರತಕ್ಕ ವಿಶ್ವಧಾರಕತ್ವವೂ ಈಶ್ವರನಿಂದಲೇ ಹುಟ್ಟಿದ್ದೆಂದು ತೋರಿಸುವುದಕ್ಕಾಗಿ ವಿಶ್ವಸ್ಯ ಧಾರಿಣೀ ಎಂದು ಹೇಳಿರುವರು.

ಪೀಠಿಕೆ ॥ ವಿಷ್ಣುವಿನಂತೆ ಇತರರಿಗೂ ಕಾರಣತ್ವವನ್ನು ಏಕೆ ಹೇಳಬಾರದು, ಎಂದರೆ—

**ಭಾಷ್ಯ ॥ ಕರ್ತಾ ಸರ್ವಸ್ಯ ವೈ ವಿಷ್ಣುರೇಕ ಏವ ನ ಸಂಶಯಃ । ಇತರೇಷಾಂ ತು ಸತ್ತಾದ್ಯಾ ಯತ ಏವ ತದಾಜ್ಞಯಾ ॥ ಇತಿ (ಚ) ಭವಿಷ್ಯತ್ಪುರಾಣೇ ॥ ೩ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ವಾಯ್ವಾದಿಗಳ ಸತ್ತಾ ಪ್ರತೀತಿ ಶಕ್ತಿಗಳು ಆ ವಿಷ್ಣುವಿನ ಆಜ್ಞಾಮಾತ್ರದಿಂದಲೇ ಆಗುತ್ತವೋ, ಆದಕಾರಣ ಶ್ರೀಹರಿಯು ಒಬ್ಬನೇ ಸರ್ವಜಗತ್ತಿಗೂ ಮುಖ್ಯ ಕರ್ತನು, (ಮತ್ತೊಬ್ಬನಿಲ್ಲ) ಸಂದೇಹವಿಲ್ಲ ಎಂದು ಭವಿಷ್ಯತ್ಪುರಾಣದಲ್ಲಿಯೂ (ಬ್ರಹ್ಮನಿಂದಲೇ ಅಬಾದಿ ಸೃಷ್ಟಿಯು ಉಕ್ತವಾಗಿದೆ.)

ಪೀಠಿಕೆ ॥ ಹಾಗಾದರೆ ಅಗ್ನೇರಾಪಃ ಎನ್ನುವ ಶ್ರುತಿಗೆ ಏನು ಅರ್ಥವು ಎಂದರೆ—

**ಭಾಷ್ಯ ॥ ವಾಮನೇ ಚ । ತತ್ರ ತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತೀಃ ಪ್ರಬೋಧಯನ್ । ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥ ಇತಿ ॥ ೪ ॥**

ಭಾಷ್ಯಾರ್ಥ ॥ ಪೂರ್ಣಸಾಮರ್ಥ್ಯೋಪೇತನಾದಾಗ್ಯೂ ವಿಷ್ಣುವು ಒಬ್ಬನೇ ಅನ್ಯಾಪೇಕ್ಷೆಯಿಲ್ಲದೇನೇ ಕ್ರೀಡೆಯಿಂದಲೇ ಅವಾವ ಅಗ್ನ್ಯಾದಿಗಳಲ್ಲಿ ಇದ್ದವನಾಗಿ, ಅಗ್ನ್ಯಾದಿಗಳಿಗೆ ಸಾಮರ್ಥ್ಯಗಳನ್ನು ಪ್ರಬೋಧಿಸುತ್ತಾ ತದ್ವಾರಾ ಎಲ್ಲಾ ವಸ್ತುಗಳನ್ನು ಚೆನ್ನಾಗಿ ಸೃಷ್ಟಿಸುತ್ತಾನೆ. ತಥಾಚ, ಅಗ್ನೇರಾಪಃ ಎನ್ನುವ ಶ್ರುತಿಯು ತೇಜಸ್ಸಿಗೆ ದ್ವಾರಕಾರಣತ್ವಪರವು.

ಪೀಠಿಕೆ ॥ ಹಾಗಾದರೆ, ಪೂರ್ವಾಧಿಕರಣನ್ಯಾಯದಿಂದಲೇ ಈ ಅರ್ಥವೂ ಸಿದ್ಧವಾದುದರಿಂದ ಈ ಅಧಿಕರಣವು ವ್ಯರ್ಥವೇ, ಎಂದರೆ—

**ಭಾಷ್ಯ ॥ ಘರ್ಮಾತ್ ಸ್ವೇದಾದಿದೃಷ್ಟೇಃ ಪುನಃ ಪ್ರತಿಷೇಧಃ (ಪ್ರತ್ಯಕ್ಷತ ಏವ ಘರ್ಮಾತ್ಸ್ವೇದಾದಿದೃಷ್ಟೇಃ ಆಪಃ ಇತಿ ಪ್ರತಿವಚನಂ) ॥ ೧೧ ॥ ಅಧಿ.೫ ॥ ॥ ೫ ॥**

ಭಾಷ್ಯಾರ್ಥ ॥ ಪ್ರತ್ಯಕ್ಷವಾಗಿಯೇ ಊಷ್ಮ, ಭಯ, ಶೋಕದಶೆಯಿಂದ ಸ್ವೇದ, ಬಾಷ್ಪಾದಿಗಳು ಕಂಡದ್ದರಿಂದ ಪುನಃ ಇಲ್ಲಿ ಅಗ್ನಿಯು ಜಲಕ್ಕೆ ಸ್ವತಂತ್ರಕಾರಣವು, ಎನ್ನುವುದರ ನಿಷೇಧವು ಮಾಡಲ್ಪಡುತ್ತದೆ. (ಅಪಃ ಎಂದು ಪ್ರತ್ಯೇಕ ಸೂತ್ರ ಹೇಳಿದ್ದು.)

ವಿಶೇಷಾಂಶ ॥ ವಾಯೋರಗ್ನಿಃ ಇತ್ಯಾದಿ ಶ್ರುತಿಪ್ರಾಪ್ತವಾದ ಉಭಯಕಾರಣತ್ವದಂತೆ ಅಗ್ನೇರಾಪಃ ಇತ್ಯಾದಿ ಶ್ರುತಿಪ್ರಾಪ್ತವಾದ ಉಭಯಕಾರಣತ್ವವನ್ನು ನಿರಾಕರಿಸಲಿಕ್ಕೆ ಈ ವಾಕ್ಯವು ಆಗುವುದಿಲ್ಲ ಎಂದು ವಿಶೇಷ ಆಶಂಕೆಯು ಹುಟ್ಟುತ್ತದೆ. ಅದು ಪೂರ್ವಾಧಿಕರಣದಿಂದ ನಿರಾಸವಾಗದೆ ಇದ್ದ ಪ್ರಯುಕ್ತ ಪುನಃ ಇಲ್ಲಿ ಪ್ರತಿಷೇಧವು. ಆದಕಾರಣ, ಈ ಅಧಿಕರಣವು ವ್ಯರ್ಥವಲ್ಲ. ॥ ೧೧ ॥

## ಮಾಯಾವಾದಿರೀತ್ಯಾ

ವಿಚಾರ ॥ ತೇಜಃ, ಆಪಃ ಎನ್ನುವ ಎರಡು ಅಧಿಕರಣಗಳಲ್ಲಿ ತೇಜೋಜಲಗಳಿಗೆ ಬ್ರಹ್ಮಕಾರ್ಯತ್ವವು, ಎಂದು ಪೂರ್ವಪಕ್ಷವು ಬಂದರೆ, ತೇಜಸ್ಸು ವಾಯುಕಾರ್ಯವು, ಜಲವು ತೇಜಃಕಾರ್ಯವು ಎಂದು ಸಿದ್ಧಾಂತವು. ಹೀಗೆ ಹೇಳಿದರೆ ಅಪಸಿದ್ಧಾಂತವು (ಅಂದರೆ, ಸರ್ವಕ್ಕೂ ಬ್ರಹ್ಮಕಾರ್ಯತ್ವವನ್ನು ಹೇಳುವ ಸಿದ್ಧಾಂತಕ್ಕೆ ವಿರೋಧವು) ಬಂತೆಂದು ಹೇಳಕೂಡದು.

ತೇಜೋಜಲಗಳಿಗೆ ವಾಯು ತೇಜೋಭಾವವನ್ನು ಹೊಂದಿದ ಬ್ರಹ್ಮಕಾರ್ಯತ್ವವನ್ನು ಒಪ್ಪಿಕೊಂಡು ಶುದ್ಧ ಬ್ರಹ್ಮಕಾರ್ಯತ್ವವನ್ನು ನಿಷೇಧಿಸಿದ್ದು ಎಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ಹಾಗೆ ಇದ್ದರೆ ಶುದ್ಧ ವಾಯ್ವಾದಿ ಕಾರ್ಯತ್ವವನ್ನು ಇಟ್ಟುಕೊಂಡು ಜನ್ಮಾದಿ ಸೂತ್ರವನ್ನು ವಿಯದಧಿಕರಣ ದಲ್ಲಿ ಹೇಳಿದ ಪ್ರತಿಜ್ಞಾಹಾನಿಯನ್ನೂ ಆಕ್ಷೇಪಿಸಿಕೊಂಡು ಪೂರ್ವಪಕ್ಷವೂ ತೇಜೋ ವಾಯುಭಾರವನ್ನು ಹೊಂದಿದ ಬ್ರಹ್ಮಕಾರ್ಯತ್ವವು ಎನ್ನುವ ಸಮಾಧಾನದಿಂದ ಸಿದ್ಧಾಂತವೂ ಕೂಡುವಾಗ ಅದರ ಆಕ್ಷೇಪಾದಿಗಳನ್ನು ಮಾಡದೆ ಪೂರ್ವಪಕ್ಷಾದಿಗಳನ್ನು ಮಾಡಿಕೊಂಡದ್ದು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥ ತೇಜಃ** ಇತ್ಯಾದಿ ಸೂತ್ರಗಳಿಂದ ತೇಜಸ್ಸು ಮೊದಲಾದವುಗಳಿಗೆ ಕೇವಲ ವಾಯ್ವಾದಿ ಜನ್ಯತ್ವವೆಂದು ಪೂರ್ವಪಕ್ಷ ಮಾಡಿಕೊಂಡು **ತದಭಿಧ್ಯಾನಾತ್** ಇತ್ಯಾದಿ ಸೂತ್ರಗಳಿಂದ **ಬಹು ಸ್ಯಾಂ** ಎಂದು ಅಭಿಧ್ಯಾನಾದಿಗಳಿಂದ ವಾಯ್ವಾದಿ ಶರೀರವುಳ್ಳ ಬ್ರಹ್ಮಜನ್ಯತ್ವವು ಎಂದು ಸಿದ್ಧಾಂತಿತವಾಗಿದೆ ಎನ್ನುತ್ತಾರೆ. ಅದು ಅಯುಕ್ತವು. ಅತಃಶಬ್ದಕ್ಕೆ ಅವ್ಯವಹಿತ ಪ್ರಕೃತ ಏಕ ಬ್ರಹ್ಮಪರತ್ವವನ್ನು ಇಟ್ಟುಕೊಂಡು ತೇಜಃ ಇತ್ಯಾದಿ ಸೂತ್ರಗಳಿಗೆ ಸಿದ್ಧಾಂತ ಸೂತ್ರತ್ವವನ್ನು ಇಟ್ಟುಕೊಂಡು ಅನೇಕಾಧಿಕರಣತ್ವವು ಕೂಡುವಾಗ ಅದನ್ನು ಬಿಟ್ಟು ತೇಜಃ ಇತ್ಯಾದಿಗಳಿಗೆ ಪೂರ್ವಪಕ್ಷ ಸೂತ್ರತ್ವಾದಿಗಳೂ ಕೂಡಲಾರವು. ತದಭಿಧ್ಯಾನಾತ್ ಎನ್ನುವ ಸೂತ್ರದಲ್ಲಿ ತು ಶಬ್ದವು ಕಂಡದ್ದರಿಂದ ಅದಕ್ಕಿಂತ ಹಿಂದಿನ ಸೂತ್ರಗಳು ಪೂರ್ವಪಕ್ಷ ಸೂತ್ರಗಳು. ಎಂದು ಹೇಳುವುದಾದರೆ ಅಸಂಭವಸ್ತು ಎನ್ನುವಲ್ಲಿಯೂ ತು ಶಬ್ದವು ಕಂಡದ್ದರಿಂದ ಅದಕ್ಕಿಂತ ಹಿಂದಿನ ಏತೇನ ಇತ್ಯಾದಿ ಸೂತ್ರಗಳೂ ಪೂರ್ವಪಕ್ಷ ಸೂತ್ರಗಳಾಗಬೇಕಾಗುವುವು.

## ಅಧಿಕರಣ ಸಾರಾಂಶ

ಅಬ್ದೇವತೆಯೂ, ಭೂತಜಲವೂ ಅಗ್ನಿದೇವತೆಯಿಂದ ಸ್ವತಂತ್ರವಾಗಿ ಹುಟ್ಟುತ್ತದೋ ಶ್ರೀಹರಿಯಿಂದಲೇ ಹುಟ್ಟುತ್ತದೋ ಎಂದು ಸಂದೇಹವು, **ಅಗ್ನೇರಾಪಃ** ಎನ್ನುವ ಶ್ರುತಿಯಿಂದ ಅಗ್ನಿಯಿಂದಲೇ ಉತ್ಪತ್ತಿಯೆಂದು ಪೂರ್ವಪಕ್ಷವು, **ಬ್ರಹ್ಮೈವೇದಮಗ್ರ ಆಸೀತ್** ಇತ್ಯಾದಿ ಶ್ರುತಿವಿರೋಧವು ಎಂದು ಹೇಳಕೂಡದು. ಸ್ವೇದವು ಘರ್ಮಜನ್ಯವೆನ್ನುವ ಅನುಭವದಿಂದಲೂ **ಆಪಸ್ತೇಜೋಜನ್ಯಾಃ ಅಪ್ತ್ವಾತ್ ಸ್ವೇದಾದಿವತ್** ಎನ್ನುವ ಯುಕ್ತಿಯಿಂದಲೂ **ತೇಜಸ ಏವ ತದ್ಧ್ಯಾಪೋ ಜಾಯಂತೇ** ಎನ್ನುವ ಶ್ರುತಿಯಿಂದಲೂ ಸಹಾಯವಿದ್ದುದರಿಂದ ಪ್ರಬಲವಾದ **ಅಗ್ನೇರಾಪಃ** ಎನ್ನುವ ಶ್ರುತಿಯಿಂದ ಬಾಧಿತವಾದುದರಿಂದ **ಬ್ರಹ್ಮೈವೇದಂ** ಎನ್ನುವ ಶ್ರುತಿಯು ಅಪ್ರಮಾಣವು, ಎಂದು ಪೂರ್ವಪಕ್ಷ ಬಂದರೆ ತದಪೋಽಸೃಜತ ಎನ್ನುವ ಶ್ರುತಿಯಿಂದ ಈಶ್ವರನಿಂದಲೇ ಉತ್ಪತ್ತಿಯು. **ಸ ಇದಂ ಸರ್ವಮಸೃಜತ, ಕರ್ತಾ ಸರ್ವಸ್ಯ ವೈ ವಿಷ್ಣುಃ** ಇತ್ಯಾದಿ ಶ್ರುತಿಸ್ಮೃತಿಗಳಲ್ಲಿರತಕ್ಕ ಸರ್ವಶಬ್ದಕ್ಕೆ ಮುಖ್ಯಾರ್ಥತ್ವವಿದ್ದುದರಿಂದಲೂ ಅಗ್ನ್ಯಾದಿಗಳಿಗೆ ಸ್ವತಃ ಶಕ್ತಿಯಿಲ್ಲದಿರುವುದರಿಂದಲೂ ಹಿಂದೆ ಹೇಳಿದ ಪ್ರಕಾರ ಶ್ರೀಹರಿಯು ಅಗ್ನ್ಯಾದಿಗಳಲ್ಲಿದ್ದು ಅಗ್ನ್ಯಾದಿಗಳಿಂದ ಜಲಾದಿಗಳನ್ನೇ ಸೃಷ್ಟಿಸುತ್ತಾನೆ. ಅಂತೂ **ಅಗ್ನೇರಾಪಃ** ಎನ್ನುವ ಶ್ರುತಿಯು ದ್ವಾರಕಾರಣ ಮಾತ್ರ ಬೋಧಕವು. ॥ ಅಧಿ. ೫ ॥

**ಅಬಧಿಕರಣವು ಸಮಾಪ್ತವಾಯಿತು.।**

॥ ಓಂ ದ್ವಾರವಿಷಯ ಶ್ರುತ್ಯವಿರೋಧ ಪ್ರಯೋಜ್ಯಸಮನ್ವಯ ಗೋಚರಾಯನಮಃ ಓಂ ॥

# ೬ ಪೃಥಿವ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ದ್ವಾರ ವಿಷಯಕವಾದ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಜಲಗಳು ಅನ್ನಕ್ಕೆ ದ್ವಾರಕಾರಣಗಳೋ ಪೃಥಿವಿಗೋ ಎಂದು ಸಂದೇಹವು ಬಂದರೆ ನಿರ್ಣಯವನ್ನು ಮಾಡುವುದಕ್ಕಾಗಿ ಸಂದೇಹ ಬೀಜವನ್ನು ತೋರಿಸುತ್ತಾ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಭಾಷ್ಯ ॥ ತಾ ಆಪ ಐಕ್ಷಂತ ಬಹ್ವ್ಯಃ ಸ್ಯಾಮ (ಮಃ) ಪ್ರಜಾಯೇಮಹಿ । ಇತಿ । ತಾ ಅನ್ನಮಸೃಜಂತ (ಛಾ.ಉ.೬.೨)। ಇತ್ಯದ್ಭ್ಯೋಽನ್ನಸೃಷ್ಟಿಃ ಶ್ರೂಯತೇ । ಅದ್ಭ್ಯಃಪೃಥಿವೀ (ತೈ.೨.೧)। ಇತಿ ಕುತ್ರಚಿತ್ಪೃಥಿವೀಸೃಷ್ಟಿಃ । ಅತೋ ವಿರುದ್ಧತ್ವಾದಪ್ರಾಮಾಣ್ಯಂ । ಇತಿ ॥ ॥ ೧ ॥**

**ಭಾಷ್ಯಾರ್ಥ ॥** *ತಾ ಅಪಃ=ತೇಜೋಭಿಮಾನಿನಿಯಾದ ರಮಾ ದೇವಿಯಿಂದ ಹುಟ್ಟಿದ ಭೂತ ಜಲಾಭಿಮಾನಿಯಾದ ಮುಖ್ಯಪ್ರಾಣನು, ಬಹ್ವ್ಯಃ ಸ್ಯಾಮಃ=ತೇಜಸ್ವಿನಂತೆ ನಾನು ಬಹುರೂಪವುಳ್ಳವನು ಆಗುವೆನು. ಅದಕ್ಕಾಗಿ, ಪ್ರಜಾಯೇಮಹಿ=ಸೃಜ್ಯವಾದ ಜಗತ್ತನ್ನು ಹುಟ್ಟಿಸುವೆನು. ಹೀಗೆ, ಐಕ್ಷಂತ=ಆಲೋಚಿಸಿದನು. ಅಂದರೆ (ಕಾರ್ಯ ಸೃಷ್ಟಿಯನ್ನು ಮಾಡಿ ಅದಕ್ಕೆ ನಿಯಾಮಕನಾಗಿ ಬಹುರೂಪವುಳ್ಳವನಾಗುವೆನು) ಇತಿ=ಹೀಗೆ ಆಲೋಚಿಸಿ, ತಾಃ=ಮುಖ್ಯಪ್ರಾಣನು, ಅನ್ನಂ ಅಸೃಜಂತ=ಅನ್ನನಾಮಕ ರುದ್ರನನ್ನೂ, ರುದ್ರನಿಂದ ಅಭಿಮನ್ಯಮಾನವಾದ ಪೃಥಿವ್ಯಾಖ್ಯ ಭೂತವನ್ನೂ ಸೃಷ್ಟಿಸಿದನು. ಹೀಗೆ ಜಲಗಳಿಂದ ಅನ್ನಸೃಷ್ಟಿಯು ಶ್ರುತವಾಗುತ್ತದೆ. ಅದ್ಭ್ಯಃ=ಜಲಗಳಿಂದ, ಪೃಥಿವೀ=ಪೃಥಿವಿಯು ಹುಟ್ಟಿತು. ಹೀಗೆ ತೈತ್ತಿರೀಯದಲ್ಲಿ ಪೃಥಿವೀ ಸೃಷ್ಟಿಯು ಶ್ರುತವಾಗುತ್ತದೆ. ಹೀಗೆ ಎರಡು ಶ್ರುತಿಗಳು ಪರಸ್ಪರ ವಿರುದ್ಧಗಳಾಗಿರುವುದರಿಂದ (ಜಲಗಳಿಗೆ ದ್ವಾರಕಾರಣತ್ವ ನಿರ್ಣಯವಾಗದಿರುವುದರಿಂದ) ಅಪ್ರಾಮಾಣ್ಯವು.

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋ ವಕ್ತಿ ॥ ೨ ॥**

**ಭಾಷ್ಯಾರ್ಥ ॥** ಹೀಗೆ ಶಂಕೆಯು ಬಂದರೆ ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ ॥ ೧೨ ॥

**ಸೂತ್ರಾರ್ಥ ॥** ಭೂತಸೃಷ್ಟಿ ಪ್ರಕರಣಸ್ವವಾದುದರಿಂದಲೂ, ಯತ್ಕೃಷ್ಣಂ ತದನ್ನಸ್ಯ ಎನ್ನುವ ಶ್ರುತಿಯಿಂದ ಕೃಷ್ಣರೂಪವುಳ್ಳದ್ದೆಂದು ಪ್ರತಿಪಾದಿಸಿದ್ದರಿಂದಲೂ, ಆಪಶ್ಚ ಪೃಥಿವೀಚಾನ್ನಂ ಇತ್ಯಾದಿ ಶ್ರುತ್ಯಂತರದಿಂದಲೂ, ವೇದೋ ನಾಪ್ರಮಾಣಂ ಅಪೌರುಷೇಯತ್ವಾತ್ ಇತ್ಯಾದಿ ಯುಕ್ತಿಗಳಿಂದಲೂ ತಾ ಅನ್ನಮಸೃಜಂತ ಎನ್ನುವ ಶ್ರುತಿಯಲ್ಲಿ ಅನ್ನಶಬ್ದ ವಾಚ್ಯವಾದುದು ಪೃಥಿವಿಯೇ.

---

★ ಇದು ಸಿದ್ಧಾಂತರೀತ್ಯಾ ಶ್ರುತ್ಯರ್ಥವು. ಪೂರ್ವಪಕ್ಷದಲ್ಲಿ ಅಬನ್ನಶಬ್ದಗಳು ಪ್ರಸಿದ್ಧ ಜಲ ಅನ್ನಪರಗಳೇ.

**ಭಾಷ್ಯ ॥ ಪೃಥಿವೀ ತತ್ರಾನ್ನಶಬ್ದೇನೋಚ್ಯತೇ । ಭೂತಾಧಿಕಾರತ್ವಾತ್ ॥ ೩ ॥**

**ಭಾಷ್ಯಾರ್ಥ ॥** ತಾಃ ಅನ್ನಂ ಎನ್ನುವ ವಾಕ್ಯದಲ್ಲಿ ಅನ್ನಶಬ್ದದಿಂದ ಪೃಥಿವಿಯೇ ಹೇಳಲ್ಪಡುತ್ತದೆ. ತತ್ತೇಜೋಽಸೃಜತ, ತದಪೋಽಸೃಜತ, ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್ ಇತ್ಯಾದಿ ಶ್ರುತಿಗಳಿಂದ ಈ ಪ್ರಕರಣವು ಭೂತವಿಷಯಕವೆಂದು ಅವಗತವಾಗುವುದರಿಂದ.

**ಪೀಠಿಕೆ ॥** ಅನ್ನ ಶ್ರುತಿಯು ಜಾಗರೂಕವಾಗಿರುವಾಗ ಪ್ರಕರಣಮಾತ್ರದಿಂದ ಹೇಗೆ ನಿರ್ಣಯವು ಎಂದರೆ—

**ಭಾಷ್ಯ ॥ ಕಾರ್ಷ್ಣ್ಯಪ್ರಚುರಾ ಚ ಪೃಥಿವೀ । ನಾನ್ನಸ್ಯ ತಥಾ ವಿಶೇಷಃ ॥ ೪ ॥**

**ಭಾಷ್ಯಾರ್ಥ ॥** ಯತ್ಕೃಷ್ಣಂ ತದನ್ನಸ್ಯ ಎನ್ನುವ ಶ್ರುತಿಯಲ್ಲಿ ಅನ್ನಕ್ಕೆ ಕೃಷ್ಣರೂಪವು ತೋರುತ್ತದೆ. ಪೃಥಿವಿಯೇ ಕಾರ್ಷ್ಣ್ಯರೂಪದಿಂದ ಪ್ರಚುರವಾದುದು. ಬಾಹುಲ್ಯೇನ ಕೃಷ್ಣವರ್ಣೋಪೇತವಾದುದು. (ಆದಕಾರಣ ಪ್ರಕರಣ ಲಿಂಗಗಳಿದ ಅನ್ನಶ್ರುತಿಗೆ ಬಾಧವು.) (ಅನ್ನದಲ್ಲಿಯೂ ಕಾರ್ಷ್ಣ್ಯವು ಕೂಡುವುದರಿಂದ ಪೃಥಿವೀ ಲಿಂಗವು ಹೇಗೆ ಆಗುವುದು, ಎಂದರೆ) ಅನ್ನಕ್ಕೆ ಪೃಥಿವಿಯಂತೆ ಕಾರ್ಷ್ಣ್ಯಪ್ರಾಚುರ್ಯರೂಪವಾದ ಧರ್ಮವು ಇಲ್ಲ.

**ಪೀಠಿಕೆ ॥** ಪ್ರಕರಣ ಲಿಂಗಬಲದಿಂದ ಮಾತ್ರ ಓೀಗೆ ಕಲ್ಪಿಸುವುದು ಅಲ್ಲ, ಮತ್ತೆ ಅನ್ನಪದಕ್ಕೆ ಶ್ರೌತ ಪ್ರಯೋಗಬಲದಿಂದ ಪೃಥಿವೀ ವಾಚಕತ್ವವೂ ಇದೆ ಎನ್ನುತ್ತಾರೆ—

**ಭಾಷ್ಯ ॥ (೧) ಆಪಶ್ಚ ಪೃಥಿವೀ ಚಾನ್ನಂ (ಐ.ಆ.೨.೩.೧)। (೨) ಪೃಥಿವೀಂ ವಾಽನ್ನಂ। (ತೈ.೩.೯.) (೩) ತಾ ಆಪೋಽನ್ನಮಸೃಜಂತ ಪೃಥಿವೀ ವಾ ಅನ್ನಂ । ಇತ್ಯಾದಿ ಶಬ್ದಾಂತರಾಚ್ಚ ॥ ೫ ॥**

**ಭಾಷ್ಯಾರ್ಥ ॥** (೧) ಆಪಃ ಪೃಥಿವೀ ಈ ಎರಡೂ ಅನ್ನಶಬ್ದ ವಾಚ್ಯವು. (೨) ಪೃಥಿವಿಯು ಅನ್ನ ಶಬ್ದ ವಾಚ್ಯವು. (೩) ಆ ಜಲಗಳು ಅನ್ನವನ್ನು ಸೃಷ್ಟಿಸಿದವು, ಅನ್ನವು ಪೃಥಿವಿಯೇ ಇದುಮೊದಲಾದ, ಅನ್ನಮಿತ್ಯಾದಿ ಶ್ರುತ್ಯಪೇಕ್ಷಯಾ ಇತರವಾದ ಶಾಖಾಂತರದಲ್ಲಿದ್ದ ಶ್ರುತಿವಾಕ್ಯದಿಂದ, ಅಥವಾ ಶಕ್ತಿಗ್ರಾಹಕ ಶಬ್ದವಿಶೇಷದಿಂದ ಪೃಥಿವಿಯೇ ಅನ್ನ ಶಬ್ದದಿಂದ ಶಕ್ತಿವೃತ್ತಿಯಿಂದಲೇ ಪ್ರತಿಪಾದಿಸಲ್ಪಡುತ್ತದೆ.

**ಪೀಠಿಕೆ ॥** ಅನ್ನಶ್ರುತಿಗೆ ಅರ್ಥಾಂತರವನ್ನು ಏಕೆ ಕಲ್ಪಿಸುವುದು. ಪರಸ್ಪರ ವಿರೋಧವಿದ್ದುದರಿಂದ ಎರಡು ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಏಕೆ ಅಂಗೀಕರಿಸಬಾರದು, ಎಂದರೆ—

**ಭಾಷ್ಯ ॥ ಆದಿಶಬ್ದಾದ್ಯುಕ್ತಿಃ । ಅಪೌರುಷೇಯತ್ವೇನಾದೋಷಸ್ಯ ವಾಕ್ಯಸ್ಯ ನಾಪ್ರಾಮಾಣ್ಯಮಿತ್ಯಾದಿ ॥ ೬ ॥**

**ಭಾಷ್ಯಾರ್ಥ ॥** ಪುರುಷರಿಂದ ಅಪ್ರಣೀತವಾದ ವಾಕ್ಯವಾದುದರಿಂದ ಅಪ್ರಾಮಾಣ್ಯ ಕಾರಣ ದೋಷ ಶೂನ್ಯವಾದ ವೇದವಾಕ್ಯಕ್ಕೆ ಅಪ್ರಾಮಾಣ್ಯವಿಲ್ಲ. ಇತ್ಯಾದ್ಯನುಮಾನವು ಆದಿಶಬ್ದದಿಂದ ಸೂಚಿತವಾಯ್ತು.

ವಿಶೇಷಾಂಶ ॥ (೧) ವೇದೋ ನಾಪ್ರಮಾಣಂ ಅಪ್ರಾಮಾಣ್ಯಕಾರಣದೋಷಶೂನ್ಯತ್ವಾತ್ ಪ್ರತ್ಯಕ್ಷವತ್ (೨) ವೇದಃ ಅಶೇಷದೋಷಶೂನ್ಯಃ ಅಪೌರುಷೇಯವಾಕ್ಯತ್ವಾತ್, ಮನ್ವಾದಿ ಸ್ಮೃತಿರೂಪಾಪ್ತವಾಕ್ಯಾನುಸಾರಿತ್ವಾಚ್ಚ ವ್ಯತಿರೇಕೇಣ ವಿಪ್ರಲಂಭಕವಾಕ್ಯವತ್ ಇತ್ಯಾದಿ ಯುಕ್ತಿಗಳೂ ಸೂಚಿತಗಳಾದವು. ಏವಂಚ ಯುಕ್ತಿಬಲದಿಂದ ವೇದಕ್ಕೆ ಪ್ರಾಮಾಣ್ಯವು ಸಿದ್ಧವಾಗುವಾಗ ಅಲ್ಲಿ ವಿರೋಧವು ತೋರಿದರೆ ಅವಿರುದ್ಧವಾದ ಅರ್ಥಾಂತರವನ್ನೇ ಕಲ್ಪಿಸಬೇಕು.

ಪೀಠಿಕೆ ॥ ಈ ವಿಷಯದಲ್ಲಿಯೇ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಕೌರ್ಮೇ ಚ । ವಿರೋಧೋ ವಾಕ್ಯಯೋರ್ಯತ್ರ ನಾಪ್ರಾಮಾಣ್ಯಂ ತದೇಷ್ಯತೇ । ಯಥಾ ವಿರುದ್ಧತಾ ನ ಸ್ಯಾ (ಯಥಾಽವಿರುದ್ಧತಾ ಚ ಸ್ಯಾ) ತ್ತಥಾರ್ಥಃ ಕಲ್ಪ್ಯ ಏತಯೋಃ ॥ ಇತಿ ॥ ೭ ॥**

ಭಾಷ್ಯಾರ್ಥ ॥ ಯಾವಾಗ ಯಾವ ವಿಷಯದಲ್ಲಿ ವಾಕ್ಯಗಳಿಗೆ ಆಪಾತತಃ ವಿರೋಧವು ತೋರುತ್ತದೋ, ಆಗ ಆ ವಿಷಯದಲ್ಲಿ ಅಪ್ರಾಮಾಣ್ಯವು ಅಂಗೀಕರಿಸಲ್ಪಡುವುದಿಲ್ಲ. ವಿರುದ್ಧವಾಗಿ ತೋರಿದ ವಾಕ್ಯಗಳಿಗೆ ಪರಸ್ಪರವಾಗಿಯೂ ಪ್ರಮಾಣಾಂತರದಿಂದಲೂ ವಿರೋಧವು ಹೇಗೆ ಬರಲಾರದೋ, ಹಾಗೆ ಆಪಾತತಃ ಪ್ರತೀತವಾದ ಅರ್ಥಕ್ಕಿಂತ ಬೇರೆ ಅರ್ಥವು ಕಲ್ಪಿಸಲ್ಪಡಬೇಕು. ಹೀಗೆ ಕೌರ್ಮಪುರಾಣದಲ್ಲಿ ಹೇಳಿದೆ.

ಪೀಠಿಕೆ ॥ ಪೃಥಿವಿಯು ಕೃಷ್ಣರೂಪವುಳ್ಳದ್ದೆಂದು ಹೇಳಿದ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ರಕ್ತೋಽಗ್ನಿರುದಕಂ ಶುಕ್ಲಂ ಕೃಷ್ಣೈವ ಪೃಥಿವೀ ಸ್ವತಃ । ನಾಭಿಪದ್ಮಾಭಿಸಂಬಂಧಾತ್ಪೀತಾ ಸೇತ್ಯಭಿಧೀಯತೇ ॥ ಕ್ಷತ್ರರಕ್ತಾಭಿಸಂಬಂಧಾದ್ರಕ್ತೋದಕಬಹುತ್ವತಃ । ಶುಕ್ಲತ್ವಮೇತ್ಯೇವಮೇವ ವರ್ಣಾಂತರಗತಿರ್ಭವೇತ್ ॥ ವಿಷ್ಣುವೀರ್ಯಾಭಿಯೋಗಾಚ್ಚ ಪೀತತ್ವಂ ಭುವ ಇಷ್ಯತೇ । ಸ್ವರ್ಣವೀರ್ಯೋ ಹಿ ಭಗವಾನನಾದಿಃ ಪರಮೇಶ್ವರಃ ॥ ಇತಿ (ಚ) ವ್ಯೋಮಸಂಹಿತಾಯಾಂ ॥ ೧೨ ॥ ಅಧಿ.೬ ॥ ॥ ೮ ॥**

ಭಾಷ್ಯಾರ್ಥ ॥ ತೇಜಸ್ಸು ರಕ್ತರೂಪವುಳ್ಳದ್ದು, ಜಲವು ಸ್ವತಃ ಶುಕ್ಲರೂಪವುಳ್ಳದ್ದು, ಪೃಥಿವಿಯು ನಿರುಪಾಧಿಕವಾಗಿ ಕೃಷ್ಣರೂಪವುಳ್ಳದ್ದೇ. ಶ್ರೀಹರಿಯ ★ನಾಭಿಯಲ್ಲಿರತಕ್ಕ ಪದ್ಮದ ಸಂಬಂಧದಿಂದ ಪೃಥಿವಿಯು ಪೀತರೂಪವುಳ್ಳದ್ದು ಎಂದು ಹೇಳಲ್ಪಡುತ್ತದೆ. ಮತ್ತು ಆ ಪೃಥಿವಿಯು ಪರಶುರಾಮ ದೇವರಿಂದ ಹತರಾದ ದುಷ್ಟ ಕ್ಷತ್ರಿಯರ ರಕ್ತಸಂಬಂಧದಿಂದ ರಕ್ತರೂಪವುಳ್ಳದ್ದು. ಜಲಸಂಬಂಧ ಬಾಹುಲ್ಯದಿಂದ ಶುಕ್ಲರೂಪವುಳ್ಳ ತನವನ್ನು ಹೊಂದುತ್ತದೆ. ಹೀಗೆಯೇ ಮುಂದೆ ಹೇಳುವ ಪ್ರಕಾರ ಪೃಥಿವಿಯಲ್ಲಿರತಕ್ಕ ಪೀತವರ್ಣ ವಿಶೇಷಕ್ಕೆ ಸ್ಥಿತಿಯು ಆಗುವುದು. (ನಾಭಿಪದ್ಮಸಂಬಂಧದಿಂದ

★ ಪದ್ಮವು ಸರ್ವಲೋಕಕ್ಕೆ ಆಧಾರವೂ ಪೀತರೂಪವುಳ್ಳದ್ದೂ ಆಗಿದೆ. ಹದಿನಾಲ್ಕು ದಲವುಳ್ಳ ನಾಭಿಪದ್ಮದಲ್ಲಿ ಒಂದು ದಲವು ಭೂಲೋಕಕ್ಕೆ ಉಪಾದಾನಕಾರಣವಾದುದರಿಂದ ಹೀಗೆ ಹೇಳಿದ್ದು.

ಮಾತ್ರವಲ್ಲ ಮತ್ತೆ ಶ್ರೀಹರಿಯ ವೀರ್ಯಸಂಬಂಧದಿಂದಲೂ (ಅಂದರೆ ವೀರ್ಯವಿಕಾರವಾದ ಅಂಡದ್ವಾರಾ) ಪೃಥಿವಿಗೆ ಪೀತರೂಪತ್ವವು ಅಂಗೀಕರಿಸಲ್ಪಡುತ್ತದೆ. (ವೀರ್ಯ ಸಂಬಂಧವಿದ್ದರೂ ಪೃಥಿವಿಗೆ ಪೀತತ್ವವು ಹೇಗೆ ಎಂದರೆ) ಅನಾದಿಯಾದ ಸರ್ವೇಶ್ವರನಾದ ಶ್ರೀಹರಿಯು ಹಿರಣ್ಮಾತ್ಮಕ ವೀರ್ಯವುಳ್ಳವನು, ಎಂದು ವ್ಯೋಮಸಂಹಿತೆಯಲ್ಲಿದೆ.

**ವಿಶೇಷಾಂಶ ||** (೧) ನಾಭಿಪದ್ಮಸಂಬಂಧದಿಂದ ಪೀತತ್ವವನ್ನು ಹೇಳಿದ್ದರಿಂದ ವಿಷ್ಣುವೀರ್ಯಕ್ಕೆ ವರ್ಣಾಂತರತ್ವವು ಹೇಗೆ ಎಂದರೆ ನಾಭಿಪದ್ಮಗತ ಪೀತತ್ವಕ್ಕಿಂತ ಸ್ವರ್ಣಗತ ಪೀತತ್ವವು ವಿಲಕ್ಷಣವು ಎನ್ನುವ ಅಭಿಪ್ರಾಯದಿಂದ ವರ್ಣಾಂತರತ್ವವನ್ನು ಹೇಳಿರುವರು. (೨) **ತದಂಡಮಭವದ್ಧೈಮಂ, ಶುಷ್ಮಂ ಹಿರಣ್ಮಾತ್ಮಕಂ** ಇತ್ಯಾದಿ ಪ್ರಮಾಣಗಳಿಂದ ಶ್ರೀಹರಿಗೆ ಸ್ವರ್ಣವೀರ್ಯತ್ವವು. || ೧೨ ||

## ಅಧಿಕರಣ ಸಾರಾಂಶ

ಜಲವು ಶ್ರೀಹರಿಗೆ ಅನ್ನಸೃಷ್ಟಿಯಲ್ಲಿ ದ್ವಾರವೋ, ಪೃಥಿವೀ ಸೃಷ್ಟಿಯಲ್ಲಿಯೋ, ಎಂದು ಸಂದೇಹವು. (೧) **ಅಪಃ ಐಕ್ಷಂತ ತಾ ಅನ್ನಮಸೃಜಂತ,** (೨) **ಅದ್ಭ್ಯಃ ಪೃಥಿವೀ,** ಎಂದು ಎರಡೂ ಶ್ರುತಿಗಳು ಪರಸ್ಪರ ವಿರುದ್ಧಾರ್ಥವುಳ್ಳವುಗಳು. ಎರಡೂ ನಿರವಕಾಶಗಳಾಗಿರುವುದರಿಂದ ನಿರ್ಣಯವು ಆಗದಿರುವುದರಿಂದ ಅಪ್ರಮಾಣವಾದ ಪ್ರಯುಕ್ತ ಜಲವು ಯಾವುದಕ್ಕೂ ದ್ವಾರವಲ್ಲ. ಏಕೆಂದರೆ **ಅದ್ಭ್ಯೋ ವಾ ಅನ್ನಮುತ್ಪದ್ಯತೇ, ತಾ ಅನ್ನಮಸೃಜಂತ, ಅದ್ಭ್ಯ ಏವ ತದನ್ನಾದ್ಯಂ ಜಾಯತೇ** ಇತ್ಯಾದಿ ಬಹುವಾಕ್ಯಗಳಿಗೆ ಪ್ರಸಿದ್ಧಾರ್ಥ ಪರತ್ವರೂಪವಾದ ಗುಣಲಾಭದಿಂದಲೂ **ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ ಅನ್ನಮಶಿತಂ ತ್ರೇಧಾ ವಿಧೀಯತೇ** ಎಂದು ವರ್ಷಜನ್ಯತ್ವರೂಪ ಲಿಂಗಾನುರೋಧದಿಂದ ಪ್ರಸಿದ್ಧ ಅನ್ನಪರತ್ವವಿದ್ದುದರಿಂದ ಅನ್ನಶ್ರುತಿಗೆ ಪೃಥಿವೀಪರತ್ವವು ಕೂಡಲಾರದು. ಅಲ್ಲದೆ **ಓಷಧೀಭ್ಯೋಽನ್ನಂ** ಎನ್ನುವ ಶ್ರುತಿವಿರೋಧವು ಬರುವುದರಿಂದಲೂ ಪೃಥಿವೀಪದದಿಂದ ಅನ್ನವನ್ನು ಇಟ್ಟುಕೊಳ್ಳಕೂಡದು. ಈ ಶ್ರುತಿವಿರೋಧದಿಂದಲೇ ಜಲವು ಅನ್ನಕ್ಕೂ ಪೃಥಿವಿಗೂ ಎರಡಕ್ಕೂ ದ್ವಾರವು ಎನ್ನುವುದೂ ಕೂಡಲಾರದು; ಎಂದು ಪೂರ್ವಪಕ್ಷವು ಕೂಡದಿರುವುದರಿಂದ ಅವಶ್ಯವಾಗಿ ಅರ್ಥಾಂತರವನ್ನು ಹೇಳಬೇಕು. **ತಾ ಅನ್ನಮಸೃಜಂತ** ಎನ್ನುವ ಶ್ರುತಿಯಿಂದ ಪೂರ್ವದಲ್ಲಿ **ತತ್ತೇಜೋಽಸೃಜತ, ತದಪೋಽಸೃಜತ** ಎಂದೂ, ಉತ್ತರದಲ್ಲಿ **ತಾಸಾಂ ತ್ರಿವೃತಂ ತ್ರಿವೃತಂ** ಎಂದು ಶ್ರುತವಾದುದರಿಂದ ಇದು ಭೂತ ಪ್ರಕರಣವಾಗಿದೆ. **ಯತ್ಕೃಷ್ಣಂ ತದನ್ನಸ್ಯ** ಎಂದು ಅನ್ನಕ್ಕೆ ಕೃಷ್ಣರೂಪವು ಶ್ರುತವಾಗಿದೆ. **ಕೃಷ್ಣೈವ ಪೃಥಿವೀ ಸ್ಮೃತಾ** ಎನ್ನುವ ಸ್ಮೃತಿಯಿಂದ ಕೃಷ್ಣರೂಪವು ಪೃಥಿವೀಲಿಂಗವು. ಲಿಂಗ, ಪ್ರಕರಣಗಳಿಂದಲೂ **ಆಪಶ್ಚ ಪೃಥಿವೀ ಚಾನ್ನಂ** ಎನ್ನುವ ಶ್ರೌತ ಪ್ರಯೋಗದಿಂದಲೂ ಅನ್ನಶಬ್ದವು ಪೃಥಿವೀಪರವು. **ಯತ್ರ ಕ್ವ ಚ ವರ್ಷತಿ** ಇತ್ಯಾದಿ ಎರಡು ವಾಕ್ಯಗಳಲ್ಲಿದ್ದು ಅನ್ನಶಬ್ದಕ್ಕೆ ಪಾರ್ಥಿವಪರತ್ವವು ಕೂಡುವುದರಿಂದ ಲಿಂಗವಿರೋಧವೂ ಇಲ್ಲ. ತಥಾಚ ಜಲಗಳು ಪೃಥಿವ್ಯುತ್ಪತ್ತಿಯಲ್ಲಿ ದ್ವಾರಭೂತಗಳಾಗಿವೆ. || ಅಧಿ.೬ ||

**ಪೃಥಿವ್ಯಧಿಕರಣವು ಸಮಾಪ್ತವಾಯಿತು.**

॥ ಓಂ ಸರ್ವಕರ್ತೃಕ ಜಗತ್ಸಂಹಾರ ಶ್ರುತ್ಯವಿರೋಧಪ್ರಯೋಜ್ಯಸಮನ್ವಗೋಚರಾಯನಮಃ ಓಂ ॥

## ೭ ತದಭಿಧ್ಯಾನಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಅಧಿಭೂತ. ಅಧಿದೈವ ಸಂಹಾರವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ । ತೇನಾನ್ನೇನಾಪ್ಯಾಯಸ್ವ (ಮಹಾನಾಮ್ನೀ ೧೬.೨)। ಇತ್ಯಾದಿನಾಽನ್ಯಃ ಸಂಹರ್ತಾ ಪ್ರತೀಯತೇ । ಇತಿ ॥ ೧ ॥**

ಭಾಷ್ಯಾರ್ಥ ॥ * ಪ್ರಾಣಾನಾಂ ಗ್ರಂಥಿಃ ಇತ್ಯಾದಿ ಶ್ರುತಿವಾಕ್ಯದಿಂದ ರುದ್ರನೇ ಸಂಹಾರಕನೆಂದು ತೋರುತ್ತದೆ. ಶ್ರುತಿಯಲ್ಲಿ ರುದ್ರನಿಗೆ ಅಂತಕತ್ವವು ಶ್ರುತವಾಗಿದೆ. ಲೋಕದಲ್ಲಿ ತಂದೆಯಿಂದ ಭಿನ್ನನೇ ಮಾರಕನೆಂದು ಪ್ರಸಿದ್ಧಿಯು. ವಿಷ್ಣುವು ಸೃಷ್ಟಿಕರ್ತನಾದುದರಿಂದ ಯತ್ಪ್ರಯಂತಿ ಎನ್ನುವ ಶ್ರುತಿಯು ವಿಷ್ಣುವಿಗೆ ಸಂಹರ್ತೃತ್ವವನ್ನು ಹೇಳತಕ್ಕುದು ಅಪ್ರಮಾಣವೇ. ಎಂದು ಶಂಕಾ ಬಂದರೆ—

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ ಅತ ಆಹ (ಅತೋ ಬ್ರೂತೇ) ॥ ೨ ॥**

ಭಾಷ್ಯಾರ್ಥ ॥ ಹೀಗೆ, ಶಂಕಾ ಬಂದರೆ, ಉತ್ತರವನ್ನು ಹೇಳುತ್ತಾರೆ.

**ಸೂತ್ರ ॥ ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ಸಃ ಓಂ ॥ ೧೩ ॥**

ಸೂತ್ರಾರ್ಥ ॥ ತಸ್ಯಾಭಿಧ್ಯಾನಾತ್ ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಶ್ರೀಹರಿಯ ಅನಾದಿಬಂಧ ಸಂಜಿಹೀರ್ಷಾರೂಪವಾದ ಸಾದಿ ಜಗತ್ಸಂಹರ್ತೃತ್ವ ಸಾಧಕಲಿಂಗದಿಂದ ಅಥವಾ ಅನಾದಿಬಂಧ ನಿವರ್ತಕನೆಂದು ತಸ್ಯಾಭಿಧ್ಯಾನಾತ್ ಎನ್ನುವ ಶ್ರುತಿಸಿದ್ಧವಾದಪ್ರಯುಕ್ತವೇ, ಸಾದಿಜಗತ್ಸಂಹರ್ತೃತ್ವ ಜ್ಞಾಪಕವಾದ ವಿಷ್ಣುವಿನ ಸಂಜಿಹೀರ್ಷಾರೂಪ ಇಚ್ಛೆಯಿಂದಲೇ ಯಮಪ್ಯೇತಿ ಭುವನಂ ಇತ್ಯಾದಿ ಸ್ಪಷ್ಟಶ್ರುತಿಗಳಿಂದಲೂ ಸಾದಿಯಾದ ಜಗತ್ತಿಗೆ ಸಂಹಾರಕನು ವಿಷ್ಣುವೇ.

**ಭಾಷ್ಯ ॥ ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ (ಶ್ವೇ.೧.೧೦) । ಇತಿ ಬಂಧಲಯಸ್ಯ ತದಭಿಧ್ಯಾನನಿಮಿತ್ತತ್ವಾತ್ತತ್ಕರ್ತೃತ್ವಂ ಪ್ರತೀಯತೇ । ಕಿಮು ಸಾದೇರ್ಜಗತಃ । ಇತ್ಯೇತಸ್ಮಾದೇವ ಸಂಹಾರಕರ್ತಾ ವಿಷ್ಣುರಿತಿ ಪ್ರತೀಯತೇ ॥ ೩ ॥**

ಭಾಷ್ಯಾರ್ಥ ॥ ಶ್ರೀಹರಿಯಲ್ಲಿ ಮನಸ್ಸನ್ನು ಇಟ್ಟಿದ್ದರಿಂದ ಮತ್ತೂಮತ್ತೂ ಯಥಾರ್ಥ ಜ್ಞಾನದಿಂದಲೂ ಯಥಾರ್ಥಧ್ಯಾನದಿಂದಲೂ ಉಂಟಾದ ಶ್ರೀಹರಿಯ ಇಚ್ಛೆಯಿಂದ ಪರಿಪಾಕ ಕಾಲದಲ್ಲಿ ಜಗದ್ಬಂಧಕವಾದ ಪ್ರಕೃತಿಯು ನಿರಾಸವು ಆಗುತ್ತದೆ, ಎನ್ನುವ ಶ್ರುತಿಯಲ್ಲಿ ಅನಾದಿಯಾದ

* ಈ ಶ್ರುತಿಯು ದ್ಯುಭ್ವಾದ್ಯಧಿಕರಣದಲ್ಲಿ ವ್ಯಾಖ್ಯಾತವಾಗಿದೆ. ಆದಿಶಬ್ದದಿಂದ ಇಂತಹ ಶ್ರುತ್ಯಂತರಗಳನ್ನೂ ಪಾತ್ರತ್ವಾದಿ ಯುಕ್ತಿಯನ್ನೂ ಇಟ್ಟುಕೊಳ್ಳಬೇಕು.

ಸಂಸಾರದ ಮೋಕ್ಷಕ್ಕೆ ಈಶ್ವರೇಚ್ಛಾನಿಮಿತ್ತತ್ವವು ಶ್ರುತವಾಗುತ್ತದೆ. ಆ ಲಿಂಗದಿಂದ ಜಗತ್ಸಂಹಾರಕ್ಕೆ ಭಗವತ್ ಕರ್ತೃತ್ವವು ಅಥವಾ ಶ್ರೀಹರಿಯ ಇಚ್ಛಾಧೀನತ್ವವು ಅನುಮಿತವಾಗುತ್ತದೆ. (ಅಂದರೆ, **ಬಂಧಲಯಃ ಭಗವತ್ಕೃತಃ ತದಿಚ್ಛಾಧೀನತ್ವಾತ್** ಎಂದು ಅನುಮಿತವಾಗುವುದು.) (ಹೀಗೆ ಶ್ರೀಹರಿಯು ಅನಾದಿಯಾದ ಬಂಧಕ್ಕೂ ಯಾವಾಗ ಲಯಕರ್ತನೋ, ಆಗ) ಸಾದಿಯಾದ ಜಗತ್ತಿಗೆ ಸಂಹಾರಕರ್ತನು ಎನ್ನುವ ಅರ್ಥವು ಸಿದ್ಧಿಸುತ್ತದೆ, ಎಂದು ಏನು ಹೇಳಬೇಕು? (ಹೀಗೆ, ವಿಷ್ಣುವಿಗೆ ಜಗತ್ಸಂಹಾರಕರ್ತೃತ್ವ ಸಾಮರ್ಥ್ಯವನ್ನು ಸಂಭಾವಿಸಿದರೂ, ಹೇಗೆ ಅದು ಸಿದ್ಧಿಸುತ್ತದೆ? ಎಂದರೆ) ಹಿಂದೆ ಹೇಳಿದ ಹೇತುವಿನಿಂದಲೇ, ಸರ್ವ ಸಂಹಾರಕರ್ತನು ವಿಷ್ಣುವೇ ಎಂದು ಪ್ರತೀತವಾಗುತ್ತದೆ. (**ಯಮಪ್ಯೇತಿ** ಇತ್ಯಾದಿ ಸ್ಪಷ್ಟಶ್ರುತಿಗಳಿಂದಲೂ ಈ ಅರ್ಥವನ್ನೇ ಸೂತ್ರದಲ್ಲಿದ್ದ ಏವಶಬ್ದವು ಸೂಚಿಸುತ್ತದೆ.)

**ಪೀಠಿಕೆ ॥** ಸೂತ್ರದಲ್ಲಿದ್ದ ಏವಶಬ್ದವನ್ನು ಕೈಮುತ್ಯಾಂತರ ಪರವಾಗಿ ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ ಕಿಮು (೧) ★ಯಮಪ್ಯೇತಿ ಭುವನಂ ಸಾಂಪರಾಯೇ ಸ ನೋ ಹರಿರ್ಘೃತಮಿಹಾಯುಷೇಽತ್ತು ದೇವಃ। (೨) ಯ ಇದಂ ಸರ್ವಂ ವಿಲಾಪ (ಯ) ಯತಿ ಸ ಹರಿಃ ಪರಃ ಪರ (ಪರಾ) ಮಾತ್ಮೇತ್ಯಾದಿಶ್ರುತಿಭ್ಯಃ ಇತ್ಯೇವಶಬ್ದಃ ॥ ೪ ॥**

**ಭಾಷ್ಯಾರ್ಥ ॥** (೧) ಪ್ರಳಯಕಾಲದಲ್ಲಿ ಲೋಕವು ಯಾರನ್ನು ಪ್ರವೇಶಮಾಡುತ್ತದೋ, ಅಂತಹ ಕ್ರೀಡಾದಿಗುಣ ವಿಶಿಷ್ಟನಾದ ಶ್ರೀಹರಿಯು ಇಲ್ಲಿ ನಾವು ಕೊಟ್ಟ ಆಹುತಿರೂಪವಾದ ಘೃತವನ್ನು ನಮ್ಮ ಆಯುಷ್ಯಕ್ಕೋಸ್ಕರ ಸ್ವೀಕರಿಸಲಿ! (೨) ಯಾವನು ಈ ಸರ್ವಜಗತ್ತನ್ನು ನಾಶಪಡಿಸುತ್ತಾನೋ, ಅಂತಹ ಪರಮಾತ್ಮನು ಅಥವಾ ಮಮತಾದಿ ದೋಷರಹಿತನಾದುದರಿಂದ ಲೋಕಪಿತೃ ವಿಲಕ್ಷಣನು. ಆತನೇ, ಸರ್ವೋತ್ಕೃಷ್ಟ ಚೇತನನು. ಸರ್ವಸಂಹಾರಕನಾದುದರಿಂದ ಶ್ರೀಹರಿಃ ಎನ್ನಿಸಿಕೊಳ್ಳುತ್ತಾನೆ, ಇತ್ಯಾದಿ ಶ್ರುತಿಗಳಿಂದ. ಕಿಮುಃ ಯಾವಾಗ ಒಂದೇ ಸ್ಪಷ್ಟ ಶ್ರುತಿಯಿಂದ ವಿಷ್ಣುವೇ ಸರ್ವಸಂಹಾರಕನೆಂದು ಸಿದ್ಧನಾಗುತ್ತಾನೋ, ಆಗ, ಬಹುಶ್ರುತಿಗಳಿಂದ ಸಿದ್ಧಿಸುತ್ತಾನೆಂದು ಏನು ಹೇಳಬೇಕು! ಈ ಅರ್ಥವನ್ನು ಏವ ಶಬ್ದವು (ಸೂಚಿಸುತ್ತದೆ.)

**ವಿಶೇಷಾಂಶ ॥** (೧) ಶ್ರೀಹರಿಯ ಅಪರೋಕ್ಷಜ್ಞಾನವು ಉಂಟಾದಮೇಲೆ ಕರ್ಮಕ್ಷಯಾಂತದಲ್ಲಿ ವಿಷ್ಣುಬಂಧಕ ಮಾಯಾನಿವೃತ್ತಿದ್ವಾರಾ ಮೋಕ್ಷವು ಆಗುತ್ತದೆ. ಮಾಯಾಶಬ್ದದಿಂದ ಮಾಯಾ, ಅವಿದ್ಯಾ, ಪ್ರಕೃತಿ, ಇತ್ಯಾದಿ ಶಬ್ದವಾಚ್ಯವಾದುದು ಅನಾದಿಯಾದ ದ್ರವ್ಯವಿಶೇಷವು. **ಅಜೇ ದ್ವೇ ಪ್ರಕೃತೀ ದುಷ್ಟೇ ನೃಪ ಪ್ರಾತಿಸ್ವಿಕಂ ಸ್ಥಿತೇ। ಸ್ವಗುಣಾಚ್ಛಾದಿಕಾ ತ್ವೇಕಾ ಪರಮಾಚ್ಛಾದಿಕಾ ಪರಾ ॥ ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ। ವ್ಯಾಘುಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ। ಅಜಾಮಜತದೋಷಮಗೃಹೀತಗುಣಾಂ** ಇತ್ಯಾದಿ ಸ್ಮೃತಿಗಳಿಂದ ಎರಡು ದುಷ್ಟಪ್ರಕೃತಿಗಳು ಜೀವಾವರಕಗಳೆಂದು ಸಿದ್ಧಗಳಾಗಿವೆ. ಈಶ್ವರನು ಸ್ವಪ್ರಕಾಶವಾದ ಸ್ವರೂಪಚೈತನ್ಯವನ್ನು ಮಹದಹಂಕಾರಾದಿ ಪ್ರಕೃತ್ಯಂಶಗಳಿಂದ ಸಂಯೋಜಿಸಿ, ಅವಿದ್ಯಮಾನವೇ ಆದ ಕರ್ತೃತ್ವ, ಸ್ವಾತಂತ್ರ್ಯಾದಿಗಳನ್ನು ತೋರಿಸಿ, ರಾಗಾದಿಗಳನ್ನು ಹುಟ್ಟಿಸಿ, ದುಃಖವನ್ನು ಅನುಭವಿಸಿಕೊಡುತ್ತಾನೆ. ಇವುಗಳು ಜೀವನಿಗೆ ದುಷ್ಟತ್ವ

★ ಯಮಪ್ಯೇತಿ ಎನ್ನುವ ಶ್ರುತಿಯು ಆತ್ಮಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಸಂಪಾದಕಗಳು. (೨) ಚಿತ್ಪ್ರಕೃತಿದ್ವಾರಾ ಜಡಪ್ರಕೃತಿಗೆ ಬಂಧಕತ್ವವು. (೩) ಅನಾದಿಪ್ರಕೃತಿಗೆ ಸ್ವರೂಪ ಧ್ವಂಸವೇ ವಿನಾಶವು. (೪) ಜೀವನಿಗೆ ಮಾಯಾ ಮಾತ್ರ ಆವರಣವಲ್ಲ ಇತರಾವರಣಗಳೂ ಇವೆ. ೧ ದೇಹವು. ೨ ಆಮೇಲೆ ಪ್ರಕೃತಿ ಬಂಧವು. ೩. ಸತ್ವಾದಿ ಗುಣಬಂಧವು. ೪ ಆ ಮೇಲೆ ಕರ್ಮಾದಿ ಬಂಧವು. ೫ ಆಮೇಲೆ ಲಿಂಗದೇಹವು. ೬ ಆ ಮೇಲೆ ಈಶ್ವರೇಚ್ಛೆಯು. (೫) ಶ್ರವಣಜನಿತ ಪರೋಕ್ಷಜ್ಞಾನದಿಂದ ಅಜ್ಞಾನಕ್ಕೆ ಶಿಥಿಲೀಭಾವರೂಪ ನಿವೃತ್ತಿಯು, ಅಪರೋಕ್ಷ ಜ್ಞಾನದಿಂದ ಆತ್ಯಂತಿಕೀ ನಿವೃತ್ತಿಯು. (೬) ಸ್ವರೂಪಜ್ಞಾನವು ಅವಿದ್ಯೆಯಿಂದ ಆವೃತವಾಗಿದೆ. ವೃತ್ತಿಜ್ಞಾನವು ಅವಿದ್ಯೆಯನ್ನು ಶಿಥಿಲೀಕರಿಸುತ್ತದೆ. ಬ್ರಹ್ಮನನ್ನು ಪ್ರಕಾಶಪಡಿಸುತ್ತದೆ.

**ಪೀಠಿಕೆ ॥** ವಿಷ್ಣುವೇ ಸಂಹಾರಕನೆಂದಾದರೆ ರುದ್ರೋ ಮಾ ವಿಶಾಂತಕಃ ಇತ್ಯಾದಿ ಶ್ರುತಿವಿರೋಧವು. ಎಂದರೆ—

**ಭಾಷ್ಯ ॥ ಸ್ರಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿರೀಶ್ವರಃ । ಸ್ರಷ್ಟೃತ್ವಾದಿಕಮನ್ಯೇಷಾಂ ದಾರುಯೋಷಾವದುಚ್ಯತೇ ॥ ಏಕದೇಶಕ್ರಿಯಾ ಚಾತ್ರ ನ ತು ಸರ್ವಾತ್ಮನೇ ರಿತಂ । ಸೃಷ್ಟ್ಯಾದಿಕಂ ಸಮಸ್ತಂ ತು ವಿಷ್ಣೋರೇವ ಪರಾದ್ಭವೇತ್ ॥ ಇತಿ (ಚ) ಸ್ಕಾಂದೇ ॥ ॥ ೫ ॥**

**ಭಾಷ್ಯಾರ್ಥ ॥** ಶ್ರೀಹರಿಯು ಬ್ರಹ್ಮಾದಿಗಳಿಂದಲೂ ಉತ್ತಮನಾದುದರಿಂದ ಒಬ್ಬನೇ ಮುಖ್ಯವಾಗಿ ಸೃಷ್ಟಿಸತಕ್ಕವನು, ರಕ್ಷಕನು, ಸಂಹಾರಕನೂ ಆಗಿರುತ್ತಾನೆ. ತದ್ವ್ಯತಿರಿಕ್ತವಾದ ಬ್ರಹ್ಮಾದಿಗಳಿಗೆ ಸ್ರಷ್ಟೃತ್ವ ಮೊದಲಾದುದು ದಾರುಮಯವಾದ ಸ್ತ್ರೀ ಪ್ರತಿಮೆಗೆ ನರ್ತನಾದಿಗಳು ಇದ್ದಂತೆ ಪರತಂತ್ರವೆಂದು ಹೇಳಲ್ಪಡುತ್ತದೆ. ಹೀಗೆ ಪರಾಧೀನರಾದ ಬ್ರಹ್ಮ ರುದ್ರಾದಿಗಳಲ್ಲಿ ಜಗದೇಕದೇಶ ವಿಷಯಕವೇ ಆದ ಸೃಷ್ಟ್ಯಾದಿ ಹೇಳಲ್ಪಡಲಿಲ್ಲ. ಸರ್ವ ಜಗತ್ಸಂಬಂಧಿಯಾದ ಸೃಷ್ಟ್ಯಾದಿಗಳಾದರೂ ಸರ್ವ ಸ್ವತಂತ್ರನಾದ ವಿಷ್ಣುವಿನಿಂದಲೇ ಆಗುತ್ತದೆ. (ಇತರರಿಂದ ಸರ್ವಥಾ ಆಗುವುದಿಲ್ಲ) ತಥಾಚ ಅಂತಕತ್ವ ಶ್ರುತಿಯು ಪರತಂತ್ರವಾದ ಜಗತ್ತಿನ ಏಕದೇಶ ಸಂಹಾರಕರ್ತೃತ್ವವನ್ನು ಬೋಧಿಸತಕ್ಕುದು.

**ಪೀಠಿಕೆ ॥** ರುದ್ರನಿಗೆ ಸಂಹಾರವಿಷಯದಲ್ಲಿ ಪಾರತಂತ್ರ್ಯವೆಂದರೆ, ವಿಷ್ಣುಕರ್ತೃಕವಾದ ಸಂಹಾರದಲ್ಲಿ ದ್ವಾರತ್ವವೇ ಎನ್ನುತ್ತಾರೆ—

**ಭಾಷ್ಯ ॥ ನಿಮಿತ್ತಮಾತ್ರಮೀಶಸ್ಯ ವಿಶ್ವಸರ್ಗನಿರೋಧಯೋಃ । ಹಿರಣ್ಯಗರ್ಭಃ ಶರ್ವಶ್ಚ ಕಾಲಾಖ್ಯಾರೂಪಿಣಸ್ತವ ಇತಿ(ಚ)ಭಾಗವತೇ ॥** (ಸ್ಕಂ.೧೦.ಅ.೭೧.ಶ್ಲೋ.೮) **॥ ೬ ॥**

**ಭಾಷ್ಯಾರ್ಥ ॥** ಕಾಲ ಎನ್ನುವ (ಸರ್ವ ಸಂಹರ್ತೃತ್ವಾದಿ ಗುಣಸಂಪನ್ನತ್ವವೇ ಕಾಲತ್ವವು) ನಾಮ ಮತ್ತು ರೂಪ (ಶರೀರ)ಗಳುಳ್ಳ ಸರ್ವೇಶ್ವರನಾದ ನಿನಗೆ ಜಗತ್ಸೃಷ್ಟಿ ಸಂಹಾರಗಳಲ್ಲಿ ಚತುರ್ಮುಖ ಬ್ರಹ್ಮನೂ ರುದ್ರನೂ ಕೂಡ ದ್ವಾರಮಾತ್ರರು. (ಸರ್ವಥಾ ಸ್ವತಂತ್ರ ಕಾರಣರಲ್ಲ. ಶ್ರೀಕೃಷ್ಣನನ್ನು ಕುರಿತು ಉದ್ಧವನ ಪ್ರಾರ್ಥನೆಯು.) ಹೀಗೆ ಭಾಗವತದಲ್ಲಿದೆ.

**ಪೀಠಿಕೆ ॥** ಭಾಗವತಕ್ಕೂ ಮೂಲಭೂತವಾದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಸ ಬ್ರಹ್ಮಣಾ ವಿಸೃಜತಿ ಸ ರುದ್ರೇಣ ವಿಲಾಪಯತಿ ಸೋಽನುತ್ಪತ್ತಿರಲಯ ಏಕ ಏವ ಹರಿಃ ಪರಃ ಪರಾನಂದಃ ॥ ಇತಿ ಚ ಮಹೋಪನಿಷದಿ ॥ ೧೩ ॥ ॥ ಅಧಿ.೭ ॥**

ಭಾಷ್ಯಾರ್ಥ ॥ ಆ ಪರಿಯು ದ್ವಾರಭೂತನಾದ ಬ್ರಹ್ಮನಿಂದ ಬಹು ರೀತಿಯಾಗಿ ಸೃಷ್ಟಿಸುತ್ತಾನೆ. ರುದ್ರನಿಂದ ವಿನಾಶಪಡಿಸುತ್ತಾನೆ. ಆ ಶ್ರೀಹರಿಯು ಉತ್ಪತ್ತಿ ನಾಶ ಶೂನ್ಯನು. ಒಬ್ಬನೇ ಸರ್ವ ಸಂಹಾರಕನು, ಲೋಕವಿಲಕ್ಷಣನು, ಪೂರ್ಣಾನಂದನು, ಹೀಗೆ ಮಹೋಪನಿಷತ್ತಿನಲ್ಲಿ ಬ್ರಹ್ಮ ರುದ್ರರಿಗೆ ದ್ವಾರತ್ವವೇ ಉಕ್ತವಾಗಿದೆ.

ವಿಶೇಷಾಂಶ ॥ ಮಮತಾ ದುಃಖಾದಿ ದೋಷಗಳು ಇಲ್ಲದಿರುವುದರಿಂದ ಶ್ರೀಹರಿಗೆ ಲೋಕಪಿತೃ ವೈಲಕ್ಷಣ್ಯವಿದ್ದುದರಿಂದ, ಲೋಕದಲ್ಲಿ ಜನಕನಿಂದ ಭಿನ್ನನಿಗೇನೇ ಮಾರಕತ್ವವು ಕಂಡಾಗ್ಯೂ ಪ್ರಕೃತದಲ್ಲಿ ಪಿತನೇ ಅಂದರೆ ಜನಕನೂ ರಕ್ಷಕನೂ ಆದ ವಿಷ್ಣುವಿಗೆ ಮಾರಕತ್ವವು ಯುಕ್ತವೇ. ॥ ೧೩. ॥

## ಮಾಯಾವಾದಿರೀತ್ಯಾ

ವಿಚಾರ ॥ **ಆಕಾಶಾದ್ವಾಯುಃ** ಇತ್ಯಾದಿಗಳಲ್ಲಿ ಈಶ್ವರಾನಧಿಷ್ಠಿತರಾದ ಸ್ವತಂತ್ರರೇ ಆದ ಆಕಾಶಾದ್ಯಭಿಮಾನಿ ದೇವತೆಗಳಿಗೆ ಉತ್ತರೋತ್ತರ ಭೂತ ಕರ್ತೃತ್ವವು ಹೇಳಲ್ಪಡುತ್ತದೆ, ಎಂದು ಶಂಕಿಸಿಕೊಂಡು ಈಶವರಾಧಿಷ್ಠಿತರಾದ ಪರತಂತ್ರರೇ ಆದ ಆಕಾಶಾದ್ಯಭಿಮಾನಿ ದೇವತೆಗಳಿಗೆ ಭೂತಕರ್ತೃತ್ವವು ಹೇಳಲ್ಪಡುತ್ತದೆ ಎಂದು ಅದ್ವೈತಿಗಳು ಹೇಳುತ್ತಾರೆ. ಅದು ಅಯುಕ್ತವು. ಅದ್ವೈತಿಗಳು ಆಕಾಶಾದಿ ಶಬ್ದಗಳಿಗೆ ಭೂತಾರ್ಥತ್ವವನ್ನೂ ಪಂಚಮಿಗೆ ಉಪಾದಾನಾರ್ಥತ್ವವನ್ನೂ ಹೇಳಿದ್ದರಿಂದ ಅಭಿಮಾನ್ಯರ್ಥತ್ವವೂ ನಿಮಿತ್ತಾರ್ಥತ್ವವೂ ಕೂಡಲಾರದು. ಅಭ್ಯುಪಗಮ್ಯ ಸಿದ್ಧಾಂತೋಕ್ತಿಯೂ ಕ್ಲಿಷ್ಟವು. ಮತ್ತು **ಯಃ ಪೃಥಿವೀಮಂತರೋ ಯಮಯತಿ** ಎಂದು ಅದ್ವೈತಿಗಳು ಹೇಳಿದ ನಿಯಂತೃತ್ವ ಲಿಂಗವು **ತಲ್ಲಿಂಗಾತ್** ಎನ್ನುವುದರಿಂದಲೇ ಉಕ್ತವಾಗಿದೆ. **ಸೋಽಕಾಮಯತ** ಎನ್ನುವ ಅಭಿಧ್ಯಾನಕ್ಕೆ ದೇವತೆಗಳಿಗೆ ಈಶ್ವರಾಧಿಷ್ಠಿತತ್ವದಲ್ಲಿ ಲಿಂಗತ್ವವು ಕೂಡಲಾರದು. ಆದಕಾರಣ ಸೂತ್ರದಲ್ಲಿ **ತದಭಿಧ್ಯಾನಾತ್** ಎನ್ನುವುದು ವ್ಯರ್ಥವು.

## ಅಧಿಕರಣ ಸಾರಾಂಶ

ರುದ್ರನು ಸಂಹಾರಕನೋ, ವಿಷ್ಣುವೋ ಎಂದು ಸಂದೇಹವು. ಸಂಹಾರಕನೆಂದು ರುದ್ರನಿಗೇನೇ ಪ್ರಸಿದ್ಧಿಯು. **ರುದ್ರೋ ಮಾ ವಿಶಾಂತಕಃ** ಎನ್ನುವ ಶ್ರುತಿಯಲ್ಲಿ ಅಂತಕಪದದಿಂದ ರುದ್ರನಿಗೇನೇ ಸಂಹರ್ತೃತ್ವವೂ ಹೇಳಿದೆ. **ಯತ್ಪ್ರಯಂತ್ಯಭಿಸಂವಿಶಂತಿ**—ಇದುಮೊದಲಾದ ವಿಷ್ಣುವು ಸಂಹಾರಕನು ಎಂದು ಹೇಳುವ ಶ್ರುತಿಯಾದರೂ, **ವಿಷ್ಣುಃ ನ ಮಾರಕಃ ಜನಕತ್ವಾತ್ ರಕ್ಷಕತ್ವಾತ್ ಪಿತ್ರಾದಿವತ್** ಇತ್ಯಾದಿ ಯುಕ್ತಿಸಾಹಾಯ್ಯವುಳ್ಳ ರುದ್ರ ಸಂಹರ್ತೃತ್ವಪ್ರತಿಪಾದಕ ಶ್ರುತಿವಿರೋಧದಿಂದ ಅಪ್ರಮಾಣವು, ಎಂದರೆ ವಿಷ್ಣುವೇ ಸರ್ವಸಂಹಾರಕನು. **ತಸ್ಯಾಭಿಧ್ಯಾನಾತ್** ಎನ್ನುವ ಶ್ರುತಿಯಲ್ಲಿ ಅನಾದಿಯಾದ ಬಂಧಲಯಕ್ಕೂ ವಿಷ್ಣುವಿನ ಅಧೀನತ್ವವನ್ನು ಹೇಳಿದ್ದರಿಂದ ಸಾದಿಜಗತ್ತಿನ ನಾಶವು ವಿಷ್ಣುವಿನ ಅಧೀನವೆನ್ನುವುದು ಕೈಮುತ್ಯನ್ಯಾಯಸಿದ್ಧವು. ಮತ್ತು (೧) **ಯಮಷ್ಠೇತಿ,** (೨) **ಯ ಇದಂ ಸರ್ವಂ,** (೩) **ಸ್ರಷ್ಟಾ ಪಾತಾ ಚ,** ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ವಿಷ್ಣುಸಂಹರ್ತೃತ್ವವು ಸ್ಪಷ್ಟವಾಗಿ ಪ್ರತೀತವಾಗುತ್ತದೆ. ರುದ್ರಸಂಹರ್ತೃತ್ವ

ಶ್ರುತಿಯಾದರೂ ನಿಮಿತ್ತಮಾತ್ರಮೀಶಸ್ಯ ಇತ್ಯಾದಿ ಸ್ಮೃತಿಯಿಂದ ಕೆಲವು ವಸ್ತುಗಳ ಸಂಹಾರದಲ್ಲಿ ರುದ್ರನಿಗೆ ದ್ವಾರತ್ವಬೋಧಕವು. ಲೋಕದಲ್ಲಿ ಪಿತ್ರಾದಿಗಳಿಗೆ ಮಕ್ಕಳನ್ನು ಕೊಲ್ಲದಿರುವಿಕೆಯು ಮಮತಾದೋಷಪ್ರಯುಕ್ತವು. ಪಿತೃತ್ವಾದಿಪ್ರಯುಕ್ತವಲ್ಲ. ನಿರ್ದೋಷನೂ ಲೋಕವಿಲಕ್ಷಣನೂ ಆದ ಶ್ರೀಹರಿಯಲ್ಲಿ ಮಮತಾದಿದೋಷಸಂಪರ್ಕವೇ ಇಲ್ಲ. ಆದಕಾರಣ ಯುಕ್ತಿ ವಿರೋಧವೂ ಇಲ್ಲ. ॥ ಅಧಿ. ೭ ॥

**ತದಭಿಧ್ಯಾನಾಧಿಕರಣವು ಸಮಾಪ್ತವಾಯಿತು.**

**॥ ಓಂ ಅಧಿಭೂತಾದಿ ಸಂಹಾರಕ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥**

## ೮ ವಿಪರ್ಯಯಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಅಧಿಭೂತಾದಿಸಂಹಾರಕ್ರಮವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಪ್ರಕೃತಾಧಿಭೂತಾದಿಗಳು ಉತ್ಪತ್ತಿಕ್ರಮವನ್ನು ಅನುಸರಿಸಿ ಶ್ರೀಹರಿಯಲ್ಲಿ ಲಯವನ್ನು ಹೊಂದುತ್ತಾರೋ, ವ್ಯುತ್ಕ್ರಮದಿಂದಲೋ ಎನ್ನುವ ಸಂದೇಹಕ್ಕೆ ಬೀಜಭೂತವಾದ ಶ್ರುತಿವಿರೋಧವನ್ನು ತೋರಿಸುತ್ತಾರೆ—

**ಭಾಷ್ಯ ॥ ಅತ ಏವ ಹೀದಂ ಪರಾತ್ಮಮಾದುತ್ಪದ್ಯತೇ ಕ್ರಮಾದ್ವಿಲೀಯತೇ ನಾಸಾವುದೇತಿ ನಾಸ್ತಮೇತಿ ॥ ಇತಿ ಭಾಲ್ಲವೇಯಶ್ರುತೌ ಕ್ರಮಾಲ್ಲಯಃ ಪ್ರತೀಯತೇ ॥ ಅಕ್ಷರಾತ್ಪರಮಾದೇವ ಸರ್ವಮುತ್ಪದ್ಯತೇ ಕ್ರಮಾತ್ । ವ್ಯುತ್ಕ್ರಮಾದ್ವಿಲಯಶ್ಚೈವ ತಸ್ಮಿನ್ನೇವ ಪರಾತ್ಮನಿ ॥ ಇತಿ ಚತುರ್ವೇದಶಿಖಾಯಾಂ ವ್ಯುತ್ಕ್ರಮಾಲ್ಲಯಃ ಪ್ರತೀಯತೇ ॥ ಇತಿ ॥** **॥ ೧ ॥**

ಭಾಷ್ಯಾರ್ಥ ॥ (೧) ಪೂರ್ವಪ್ರಕೃತನಾದ ಸರ್ವೋತ್ತಮನಾದ ಶ್ರೀಹರಿಯಿಂದಲೇ ಈ ಜಗತ್ತು ತತ್ತ್ವಾಭಿಮಾನಿ ದೇವತಾ ತಾರತಮ್ಯಕ್ರಮದಿಂದಲೇ ಹುಟ್ಟುತ್ತದೆ. ಕ್ರಮದಿಂದಲೇ ಲಯವನ್ನು ಹೊಂದುತ್ತದೆ. (ಜಗತ್ತಿನಂತೆ ಶ್ರೀಹರಿಯು ಉತ್ಪತ್ತಿನಾಶವುಳ್ಳವನಲ್ಲ ಎನ್ನುತ್ತಾರೆ.) ಈ ಶ್ರೀಹರಿಯು ಹುಟ್ಟುವುದಿಲ್ಲ. ನಾಶವನ್ನು ಹೊಂದುವುದಿಲ್ಲ. ಹೀಗೆ ಭಾಲ್ಲವೇಯ ಶ್ರುತಿಯಲ್ಲಿ ಕ್ರಮದಿಂದ ಲಯವು ತೋರುತ್ತದೆ. (೨) ಸರ್ವೋತ್ತಮನಾದ ಅಕ್ಷರಶಬ್ದವಾಚ್ಯನಾದ ಶ್ರೀಹರಿಯಿಂದಲೇ (ಶ್ರೀತತ್ತ್ವದಿಂದ ಅಲ್ಲ) ಸರ್ವಜಗತ್ತೂ ಕ್ರಮದಿಂದ ಹುಟ್ಟುತ್ತದೆ. ಆ ಶ್ರೀಹರಿಯಲ್ಲಿಯೇ (ಇತರರಲ್ಲಿ ಅಲ್ಲ) ವ್ಯುತ್ಕ್ರಮದಿಂದಲೇ ಲಯವು. ಹೀಗೆ ಚತುರ್ವೇದ ಶಿಖೆಯಲ್ಲಿ ವ್ಯುತ್ಕ್ರಮದಿಂದ ಲಯವು ಪ್ರತೀತವಾಗುತ್ತದೆ.

ಪೀಠಿಕೆ ॥ ತಥಾಚ ಅಧಿಭೂತಾದಿಗಳು ಉತ್ಪತ್ತಿಕ್ರಮದಿಂದಲೇ ಲಯವನ್ನು ಹೊಂದುತ್ತವೆ. ಲೋಕದಲ್ಲಿಯೂ ಪ್ರಾಯಶಃ ಉತ್ಪತ್ತಿಕ್ರಮದಿಂದಲೇ ಲಯವು ಕಂಡಿದೆ. ಆದಪ್ರಯುಕ್ತ ವ್ಯುತ್ಕ್ರಮಶ್ರುತಿಯು ಅಪ್ರಮಾಣವೇ. ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

ಭಾಷ್ಯ ॥ ಅತ ಆಹ ॥ ೨ ॥

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ಓಂ ॥ ೧೪ ॥

ಸೂತ್ರಾರ್ಥ ॥ ಮಹಾಪ್ರಲಯಕಾಲದಲ್ಲಿ ಕ್ರಮಾದ್ವಿಲೀಯತೇ ಎನ್ನುವ ಶ್ರುತ್ಯುಕ್ತ ಲಯಕ್ರಮವಾದರೂ ಸೃಷ್ಟಿಕ್ರಮದಿಂದ ವಿಪರೀತವಾಗಿ ಆಗುತ್ತದೆ. ಚತುರ್ವೇದಶಿಖಾದಲ್ಲಿ ವ್ಯುತ್ಕ್ರಮದಿಂದ ಲಯವನ್ನು ಪ್ರತಿಪಾದಿಸಿದ್ದರಿಂದ, ಪೂರ್ವದಲ್ಲಿ ಹುಟ್ಟಿದ ಪದಾರ್ಥಕ್ಕೆ ಸಾಮರ್ಥ್ಯಾಧಿಕ್ಯವಿದ್ದುದರಿಂದ ವ್ಯುತ್ಕ್ರಮವು ಉಪಪನ್ನವು ಆಗುವುದು.

ಭಾಷ್ಯ ॥ ಕ್ರಮವಚನಮಪಿ ವಿಪರೀತಕ್ರಮಾಪೇಕ್ಷಯಾ । ಕರ್ತಾ ಪ್ರಾಣಾದಿಕಸ್ಯಾಸ್ಯ ಹಂತಾ ಭೂಮ್ಯಾದಿಕಸ್ಯ ಚ । ಯಃ ಕ್ರಮಾದ್ವ್ಯುತ್ಕ್ರಮಾಚ್ಚೈವ ಸ ಹರಿಃ ಪರ ಉಚ್ಯತೇ ॥ ಇತ್ಯತ ಏವ ಭಾಲ್ಲವೇಯಶ್ರುತಿವಚನಾತ್ ॥ ೩ ॥

ಭಾಷ್ಯಾರ್ಥ ॥ ಕ್ರಮಾದ್ವಿಲೀಯತೇ ಎನ್ನುವ ಕ್ರಮವಚನವೂ ಕೂಡ ಉತ್ಪತ್ತಿಕ್ರಮಕ್ಕಿಂತ ವಿಪರೀತ ಕ್ರಮವನ್ನು ಅಪೇಕ್ಷಿಸಿಯೇ (ಪ್ರವೃತ್ತವಾಗಿದೆ.) ಯಾವ ಶ್ರೀಹರಿಯು ಬ್ರಹ್ಮನನ್ನು ಆರಂಭಿಸಿ ಭೂಮಿಪರ್ಯಂತವಾದ ಜಗತ್ತಿಗೆ ಕ್ರಮದಿಂದ ಸೃಷ್ಟಿಕರ್ತನೋ, ಭೂಮಿಯನ್ನು ಆರಂಭಿಸಿ ಬ್ರಹ್ಮಪರ್ಯಂತವಾದ ಜಗತ್ತಿಗೆ ವ್ಯುತ್ಕ್ರಮದಿಂದ ಲಯಕರ್ತನೋ, ಅಂತಹ ಶ್ರೀಹರಿಯೇ ಸರ್ವೋತ್ತಮನೆನ್ನಿಸಿಕೊಳ್ಳುತ್ತಾನೆ. (ಮತ್ತೊಬ್ಬನಲ್ಲ) ತನಗೆ ಸಾಧಕವೆಂದು ಪೂರ್ವಪಕ್ಷಿಯು ಉದಾಹರಿಸಿರುವ ಭಾಲ್ಲವೇಯ ಶ್ರುತಿವಚನದಿಂದಲೇ, (ಅಂದರೆ ಯಾವ ಶ್ರುತಿಯಲ್ಲಿ ಕ್ರಮದಿಂದ ಲಯವೆಂದು ಹೇಳಿಯದೋ, ಅದೇ ಶ್ರುತಿಯಲ್ಲಿ ವ್ಯುತ್ಕ್ರಮದಿಂದ ಲಯವು ಶ್ರುತವಾಗಿದೆ.) (ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ ಎನ್ನುವ ಮಂತ್ರೋಕ್ತವಾದುದೇ ಕ್ರಮವು.)

ಟೀಕೆ॥ ಎರಡೂ ಶ್ರುತಿಗಳಾಗಿರುವುದರಿಂದ ಕ್ರಮಶ್ರುತಿಯಿಂದ ವ್ಯುತ್ಕ್ರಮಶ್ರುತಿಗೇನೇ ಬಾಧವೆಂದು ಏಕೆ ಹೇಳಬಾರದು, ಎಂದರೆ—

ಭಾಷ್ಯ ॥ ಅನುರೂಪಃ ಕ್ರಮಃ ಸೃಷ್ಟೌ ಪ್ರತಿರೂಪೋ ಲಯೇ ಕ್ರಮಃ । ಇತಿ ಕ್ರಮೇಣ ಭಗವಾನ್ ಸೃಷ್ಟಿಸಂಹಾರಕೃದ್ಧರಿಃ ॥ ಇತಿ (ಚ) ಪಾದ್ಮೇ ॥ ೪ ॥

ಭಾಷ್ಯಾರ್ಥ ॥ ೧ ಅನುರೂಪವು ೨ ಪ್ರತಿರೂಪವೆಂದು, ಕ್ರಮವು ಎರಡುವಿಧವು. ಅದರಲ್ಲಿ ಸೃಷ್ಟಿಯಲ್ಲಿದ್ದ ಕ್ರಮವು, ಉತ್ತಮರನ್ನು ಆರಂಭಿಸಿ ತಾರತಮ್ಯ ಕ್ರಮವನ್ನು ಅನುಸರಿಸಿ ಕೊಂಡಿರುವುದರಿಂದ ಅನುರೂಪವೆನ್ನಿಸಿಕೊಳ್ಳುತ್ತದೆ. ಲಯದಲ್ಲಿದ್ದಕ್ರಮವು ಉತ್ತಮಾದಿತಾರತಮ್ಯಕ್ಕೆ ಪ್ರತಿಕೂಲವಾಗುವುದರಿಂದ ಪ್ರತಿರೂಪವೆನ್ನಿಸಿಕೊಳ್ಳುತ್ತದೆ. ಈ ಎರಡುವಿಧ ಕ್ರಮದಿಂದ ಸರ್ವಸಮರ್ಥನಾದ ಶ್ರೀಹರಿಯು ಸೃಷ್ಟಿಸಂಹಾರಗಳನ್ನು ಮಾಡತಕ್ಕವನು, ಎಂದೂ ಪಾದ್ಮದಲ್ಲಿದೆ.

ತಥಾಚ ವ್ಯುತ್ಕ್ರಮಕ್ಕೂ ಕ್ರಮತ್ವವಿದ್ದುದರಿಂದ ಕ್ರಮಶ್ರುತಿಗೆ ವ್ಯುತ್ಕ್ರಮಾರ್ಥತ್ವವು ಕೂಡುವುದರಿಂದ ಸಾವಕಾಶವಾದ ಪ್ರಯುಕ್ತ ಕ್ರಮಶ್ರುತಿಯು ನಿರವಕಾಶವಾದ ವ್ಯುತ್ಕ್ರಮಪದ ಘಟಿತವಾದ ಶ್ರುತಿಯಿಂದ ಬಾಧಿತವಾಗುವುದು.

ಪೀಠಿಕೆ ॥ ವ್ಯುತ್ಕ್ರಮದಿಂದ ಲಯವನ್ನು ಅಂಗೀಕರಿಸಿದರೆ ಲೋಕವಿರೋಧವೆಂದರೆ—

**ಭಾಷ್ಯ ॥ ಪೂರ್ವೇಷಾಂ ಪೂರ್ವೇಷಾಂ ಸಾಮರ್ಥ್ಯಾಧಿಕ್ಯಾದುಪಪದ್ಯತೇ ಚ ॥ ೫ ॥**

ಭಾಷ್ಯಾರ್ಥ ॥ (ಲೌಕಿಕರಿಗೆ ಪ್ರಾಯಶಃ ಶತವರ್ಷಜೀವಿತ್ವ ಬಲಜ್ಞಾನಾದಿರೂಪವಾದ ಸಾಮರ್ಥ್ಯವು ಸಮವಾದುದರಿಂದ ಉತ್ಪತ್ತಿಕ್ರಮದಿಂದ ಲಯವು ಕೂಡಿದಾಗ್ಯೂ ಲೌಕಿಕ ತತ್ವದೇವತಾಲಯದಲ್ಲಿ ಇದು ಕೂಡಲಾರದು. ಏಕೆಂದರೆ) ಅಬಾದಿಪ್ರಾಣಪರ್ಯಂತರಾದ ಮೊದಲು ಮೊದಲು ಹುಟ್ಟಿದವರಿಗೆ ಸಾಮರ್ಥ್ಯಾಧಿಕ್ಯವಿದ್ದುದರಿಂದಲೂ (ಉತ್ತರೋತ್ತರ ಹುಟ್ಟಿದವರಿಗೆ ಸಾಮರ್ಥ್ಯಾಧಿಕ್ಯವು ಇಲ್ಲದಿರುವುದರಿಂದಲೂ ವ್ಯುತ್ಕ್ರಮದಿಂದ ಲಯವು) ಯುಕ್ತವಾಗುತ್ತದೆ.

ಪೀಠಿಕೆ ॥ ಪೂರ್ವೋತ್ಪನ್ನರಿಗೆ ಸಾಮರ್ಥ್ಯಾಧಿಕ್ಯವೇ ಹೇಗೆಂದರೆ—

**ಭಾಷ್ಯ ॥ ವಾಮನೇ ಚ । ಪೂರ್ವೇ ಪೂರ್ವೇ ಯತೋ ವಿಷ್ಣೋಃ ಸನ್ನಿಧಾನಂ ಕ್ರಮಾಧಿಕಂ । ಸಾಮರ್ಥ್ಯಾಧಿಕ್ಯಮೇತೇಷಾಂ ಪಶ್ಚಾದೇವ ಲಯಸ್ತಥಾ ॥ ವ್ಯಾಪ್ತಿಶ್ಚಾಭ್ಯಧಿಕಾತೇಷಾಮತ ಏವ ನ ಸಂಶಯಃ । ಇತಿ ಚ ॥ ೧೪ ॥ ಅಧಿ. ೮ ॥ ॥ ೬ ॥**

ಭಾಷ್ಯಾರ್ಥ ॥ ಯಾವಕಾರಣದಿಂದ ಆದಿಸೃಷ್ಟಿಯಲ್ಲಿ ಪೂರ್ವಪೂರ್ವೋತ್ಪನ್ನರಾದ ಚತುರ್ಮುಖಾದಿ ತತ್ವದೇವತೆಗಳಲ್ಲಿ ವಿಷ್ಣುವಿನ ಸನ್ನಿಧಾನವು ತಾರತಮ್ಯಕ್ರಮದಿಂದ ಅಧಿಕವಾಗಿ ಯದೋ ಅಥವಾ ಪೂರ್ವ ಪೂರ್ವದಲ್ಲಿ ಹುಟ್ಟಿದ ತತ್ವದೇವತೆಗಳು ಶ್ರೀಹರಿಗೆ ಕ್ರಮದಿಂದ ಅಧಿಕ ಪ್ರತಿಮಾರೂಪರಾಗಿರುತ್ತಾರೋ ಆದುದರಿಂದಲೇ ಪೂರ್ವೋತ್ಪನ್ನರಿಗೆ ಮೇಲೆ ಹುಟ್ಟಿದವರಿಂದ ಬಲಜ್ಞಾನ ಶಕ್ತಿಗಳಿಂದ ಆಧಿಕ್ಯವೇ ಇದೆ. ಮತ್ತು ಅವರಿಗೆ ಬ್ರಹ್ಮಾಂಡದಿಂದ ಹೊರಗೂ ತಂತಮ್ಮಿಂದ ಅಭಿಮನ್ಯಮಾನವಾದ ವಸ್ತುಪರ್ಯಂತವಾಗಿ ದೇಹತಃವ್ಯಾಪ್ತಿಯೂ ತಾರತಮ್ಯಕ್ರಮದಿಂದ ಅಧಿಕವೇ ಆಗಿದೆ. (ನ್ಯೂನವೂ ಅಲ್ಲ ಸಮವೂ ಅಲ್ಲ) ಆದಕಾರಣ ಅವರಿಗೆ ಮೇಲೆಯೇ ಲಯವು. (ಯಾವಾಗಲೂ ಮೊದಲು ಆಗಲಾರದು.) ಆದುದರಿಂದಲೇ ಈ ವಿಷಯದಲ್ಲಿ ಸಂದೇಹವಿಲ್ಲ. ಹೀಗೆ ವಾಮನಪುರಾಣದಲ್ಲಿ ಉಕ್ತವಾಗಿದೆ. ॥ ೧೪ ॥

## ಮಾಯಾವಾದಿರೀತ್ಯಾ

ವಿಚಾರ ॥ ಯತ್ಪ್ರಯಂತಿ ಇತ್ಯಾದಿಗಳಲ್ಲಿ ಲಯವೇ ಶ್ರುತವಾದುದರಿಂದ ಸೃಷ್ಟಿಯಲ್ಲಿ ಇದ್ದಂತೆಯೇ ಲಯದಲ್ಲಿ ಕ್ರಮವು ಶ್ರುತವಾಗದೆ ಇದ್ದುದರಿಂದ ಕ್ರಮವನ್ನು ಅಪೇಕ್ಷಿಸಿದಾಗ ಶ್ರುತ್ಯುಕ್ತವಾದ ಲಯದಲ್ಲಿ ಶ್ರುತ್ಯುಕ್ತವಾದ ಸಜಾತೀಯವಾದ ಸೃಷ್ಟಿಕ್ರಮವನ್ನೇ ಇಟ್ಟುಕೊಳ್ಳಬೇಕು, ಎಂದು ಪೂರ್ವಪಕ್ಷ

ಮಾಡಿಕೊಂಡು ಲಯದಲ್ಲಿ ಸೃಷ್ಟಿಕ್ರಮವನ್ನು ಇಟ್ಟುಕೊಂಡರೆ ಉಪಾದಾನ ಕಾರಣಕ್ಕೆ ಲಯವಾಗುವಾಗ ಉಪಾದೇಯವು ಇರಬೇಕಾಗುವುದು, ಅದು ಅಯುಕ್ತವು. ಆದುದರಿಂದ ವಿಜಾತೀಯವಾದುದಾಗ್ಯೂ ಸೃಷ್ಟಿಗಿಂತ ವಿಪರೀತಕ್ರಮವನ್ನೇ ಇಟ್ಟುಕೊಳ್ಳಬೇಕು. ಮಣ್ಣಿನಿಂದ ಹುಟ್ಟಿದ ಘಟಕ್ಕೆ ಮಣ್ಣಿನಲ್ಲಿ ಲಯವು ಕಂಡದೆ ಎಂದು ಸಿದ್ಧಾಂತವೆಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ಈ ವಿಚಾರಕ್ಕೆ ಶ್ರುತಿಯಿಂದ ಶ್ರುತ್ಯಂತರ ವಿರೋಧನಿರಾಸಕತ್ವ ಯುಕ್ತಿಯಿಂದ ಕೂಡಿದ ಕ್ರಮಾದ್ವಿಲೀಯತೇ ಎನ್ನುವ ಭಾಷ್ಯೋಕ್ತಶ್ರುತಿಯಿಂದ, ವ್ಯುತ್ಕ್ರಮಾದ್ವಿಲಯಶ್ಚ ಎನ್ನುವ ಭಾಷ್ಯೋಕ್ತಶ್ರುತಿಗೆ ವಿರೋಧನಿರಾಸದಿಂದ ಸಾಕ್ಷಾತ್ ಸಂಗತಿಯು ಕೂಡುವಾಗ ಪ್ರಾಸಂಗಿಕತ್ವವು ಕೂಡಲಾರದು. ಮತ್ತು **ವ್ಯುತ್ಕ್ರಮಾದ್ವಿಲಯಶ್ಚ** ಎನ್ನುವ ಶ್ರುತಿಯಲ್ಲಿಯೂ, **ಜಗತ್ಪ್ರತಿಷ್ಠಾ ದೇವರ್ಷೇ ಪೃಥಿವ್ಯಪ್ಸು ಪ್ರಲೀಯತೇ। ಜ್ಯೋತಿಷ್ಯಾಪಃ ಪ್ರಲೀಯಂತೇ ಜ್ಯೋತಿರ್ವಾಯೌ ಪ್ರಲೀಯತೇ॥** ಎಂದು ಅದ್ವೈತಿಗಳು ಹೇಳಿದ ಸ್ಮೃತ್ಯನುಮಿತಶ್ರುತಿಯಲ್ಲಿಯೂ ಲಯದಲ್ಲಿ ಕ್ರಮವು ಶ್ರುತವಾದುದರಿಂದ ಅದು ಶ್ರುತವಾಗಲಿಲ್ಲವೆಂದು ಇಟ್ಟುಕೊಂಡು ಹೇಳಿದ ಪೂರ್ವೋತ್ತರ ಪಕ್ಷಗಳು ಕೂಡಲಾರವು. ಮತ್ತು ಭಸ್ಮೀಭೂತಗಳಾದ ಪಟಾದಿಗಳಿಗೆ ತಂತ್ವಾದಿಗಳಲ್ಲಿ ಲಯವು ಕಾಣದೆ ಇರುವುದರಿಂದ ಪ್ರತ್ಯಕ್ಷಾನುಸಾರವಾಗಿ ಕಾರ್ಯಕ್ಕೆ ಸಾಕ್ಷಾತ್ತಾಗಿ ಕಾರಣದಲ್ಲಿ ಲಯವು ಎನ್ನುವ ಸಿದ್ಧಾಂತೋಕ್ತಿಯು ಕೂಡಲಾರದು. ಅಲ್ಲದೆ ತೇಜಸ್ಸು ಮೊದಲಾದವುಗಳಿಗೆ ಈಕ್ಷಣಾದಿಗಳು ಇದ್ದುದರಿಂದ ಚೇತನತ್ವವಿದ್ದಪ್ರಯುಕ್ತ ಪಿತ್ರಾದಿಗಳಿಗೆ ಲಯವಾದ ಮೇಲೆಯೇ ಪ್ರಾಯಃ ಪುತ್ರಾದಿಗಳಿಗೆ ಲಯವು ಕಂಡದ್ದರಿಂದ ಪ್ರತ್ಯಕ್ಷಾನುಸಾರವಾಗಿ ತೇಜಸ್ಸು ಮೊದಲಾದವುಗಳಿಗೆ ಲಯವಾದ ಮೇಲೆಯೇ ಅಬಾದಿಗಳಿಗೆ ಲಯವು ಬರಬೇಕಾಗುವುದು.

## ಅಧಿಕರಣ ಸಾರಾಂಶ

ಪ್ರಕೃತಾಧಿಭೂತಾದಿಗಳು ಜನ್ಮಕ್ರಮವನ್ನು ಅನುಸರಿಸಿ ಲಯವನ್ನು ಹೊಂದುತ್ತವೋ ವ್ಯುತ್ಕ್ರಮದಿಂದಲೋ ಎಂದು ಸಂದೇಹವು. **ಕ್ರಮಾದುತ್ಪದ್ಯತೇ, ಕ್ರಮಾದ್ವಿಲೀಯತೇ, ಕ್ರಮೇಣೋತ್ಪತ್ತಿಃ ವಿಲಯಶ್ಚ ಕ್ರಮೇಣೈವಾಪ್ಯೋತ್ಪತ್ತಿಲಯೌ** ಇದುಮೊದಲಾದ ಕ್ರಮದಿಂದ ಲಯಪ್ರತಿಪಾದಕ ಶ್ರುತಿಗಳು ಬಹಳ ಇವೆ. **ವ್ಯುತ್ಕ್ರಮಾದ್ವಿಲಯಶ್ಚ** ಎನ್ನುವ ಶ್ರುತಿಯಾದರೂ ಲೋಕದಲ್ಲಿ ಪ್ರಾಯತಃ ಉತ್ಪತ್ತಿಕ್ರಮದಿಂದಲೇ ಲಯವು ಕಂಡದೆ ಎನ್ನುವ ಯುಕ್ತಿಯಿಂದ ಅನುಗೃಹೀತವಾದುದರಿಂದ ಪ್ರಬಲವಾದ ಕ್ರಮಲಯ ಶ್ರುತಿಯಿಂದ ಬಾಧಿತವಾದ ಪ್ರಯುಕ್ತ ಜನ್ಮಕ್ರಮಾನುಸಾರವಾಗಿಯೇ ಲಯವು ಎಂದು ಪೂರ್ವಪಕ್ಷವು ಬಂದರೆ **ವ್ಯುತ್ಕ್ರಮಾದ್ವಿಲಯಶ್ಚ** ಎನ್ನುವ ನಿರವಕಾಶವಾದ ಲಯಶ್ರುತಿಯಿಂದ ವ್ಯುತ್ಕ್ರಮದಿಂದಲೇ ಲಯವು. ಕ್ರಮಲಯ ಪ್ರತಿಪಾದಕ ಶ್ರುತಿಗಳಾದರೂ **ದ್ವಿವಿಧಃ ಕ್ರಮ ಉದ್ದಿಷ್ಟಃ ವ್ಯುತ್ಕ್ರಮೋಽನುಕ್ರಮಸ್ತಥಾ । ಸೃಷ್ಟಾವನ್ಯೋ ಲಯೇ ಚಾನ್ಯಃ** ಇತ್ಯಾದಿ ಶ್ರುತಿಗಳಿಂದ ವ್ಯುತ್ಕ್ರಮವೂ ಕ್ರಮವಾದುದರಿಂದ ಸಾವಕಾಶವಾಗಿದೆ. ಲೋಕದಲ್ಲಿ ಪೂರ್ವೋತ್ತರನ್ನರಿಗೆ ಪೂರ್ವನಾಶವು ಸಾಮರ್ಥ್ಯಾಭಾವನಿಮಿತ್ತವು. ತತ್ತ್ವದೇವತೆಗಳಲ್ಲಿ ಪೂರ್ವೋತ್ತರನ್ನರಿಗೆ ಸಾಮರ್ಥ್ಯಾಧಿಕ್ಯವಿದ್ದುದರಿಂದ ಉತ್ತರದಲ್ಲಿ ಲಯವು ಕೂಡುವುದರಿಂದ ಹಿಂದಿನ ಯುಕ್ತಿಯು ಅಪ್ರಯೋಜಕವಾಗಿರುವುದರಿಂದ ವ್ಯುತ್ಕ್ರಮಶ್ರುತಿಯನ್ನು ಬಾಧಿಸಲಾರದು. ॥ ಅಧಿ.೮ ॥

ವಿಪರ್ಯಯಾಧಿಕರಣವು ಸಮಾಪ್ತವಾಯಿತು.

**॥ ಓಂ ಅಧಿಭೂತಾದಿ ಲಯಕ್ರಮಶ್ರುತ್ಯವಿರೋಧಪ್ರಯೋಜ್ಯ ಸನನ್ವಯಗೋಚರಾಯನಮಃ ಓಂ ॥**

## ೯ ಅಂತರಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಅಧಿಭೂತಾದಿ ಲಯವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಪೂರ್ವಪಕ್ಷವನ್ನು ಸೂತ್ರದಲ್ಲಿಯೇ ಹೇಳಿರುವುದರಿಂದ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನ ಮಾಡುತ್ತಾರೆ–

**ಸೂತ್ರ ॥ ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ ॥ ೧೫ ॥**

**ಸೂತ್ರಾರ್ಥ ॥** ವಿಜ್ಞಾನತತ್ವ, ಮನಸ್ತತ್ವಗಳನ್ನು ಬಿಟ್ಟು ಬೇರೆ ವಸ್ತುಗಳಿಗೆ ವಿಪರ್ಯಯದಿಂದ ಲಯವು, ವಿಜ್ಞಾನತತ್ವ, ಮನಸ್ತತ್ವಗಳಿಗೆ ಪ್ರಾಣಾನ್ಮನಃ, ಮನಸಶ್ಚ ವಿಜ್ಞಾನಂ ಎಂದು ಉತ್ಪತ್ತಿಕ್ರಮದಿಂದ ಲಯವು, **ಯಚ್ಛೇದ್ವಾಙ್ಮನಸೀ** ಎನ್ನುವ ಶ್ರುತಿಯಲ್ಲಿ ವಿಜ್ಞಾನೋತ್ಪಾದಕ ಮನಸ್ಸಿಗೆ ವಿಜ್ಞಾನದಲ್ಲಿ ಲಯದರ್ಶನರೂಪಲಿಂಗದಿಂದ, ಎಂದರೆ ಹಾಗೆ ಹೇಳಕೂಡದು. ವಿಜ್ಞಾನ, ಮನಸ್ಸುಗಳಿಗೆ ಉತ್ಪತ್ತಿ ಕ್ರಮಾನುಸಾರವಾಗಿ ಲಯವು, ಎನ್ನುವ ವಿಶೇಷವಚನವಿಲ್ಲದಿರುವುದರಿಂದ.

**ಭಾಷ್ಯ ॥ *ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ । ಯಚ್ಛೇದ್ವಾಙ್ಮನಸೀ ಪ್ರಾಜ್ಞಾಸ್ತದ್ಯಚ್ಛೇಜ್ಞಾನ ಆತ್ಮನಿ** (ಕಠ.೩.೧೩.) **ಇತಿ ಲಿಂಗಾದ್ವಿಜ್ಞಾನಮನಸೀ ಅಂತರಾ ವಿಪರೀತಕ್ರಮಃ । ಇತಿ ಚೇತ್ । ನ । ವಿಶೇಷಪ್ರಮಾಣಾಭಾವಾತ್ ॥ ೧೫ ॥** ॥ ೧ ॥

**ಭಾಷ್ಯಾರ್ಥ ॥** (೧) ಪ್ರಾಣನ ದೆಶೆಯಿಂದ ಮನಸ್ತತ್ವವು ಹುಟ್ಟಿತು. ಆದರಿಂದ ವಿಜ್ಞಾನತತ್ವವು ಹುಟ್ಟಿತು. (ಎನ್ನುವ ಶ್ರುತಿಯಲ್ಲಿ ವಿಜ್ಞಾನತತ್ವವು ಮನಸ್ತತ್ವದಿಂದ ಹುಟ್ಟಿದ್ದೆಂದು ಶ್ರುತವಾಗುತ್ತದೆ.) ಮೇಲೆ ಹುಟ್ಟಿದ ವಿಜ್ಞಾನತತ್ವಕ್ಕೆ ಮೇಲೆಯೇ ಲಯವು. ಪೂರ್ವದಲ್ಲಿದ್ದ ಮನಸ್ತತ್ವಕ್ಕೆ ಪೂರ್ವದಲ್ಲಿಯೇ ಲಯವು, ಎಂದು ಶ್ರುತವಾಗುತ್ತದೆ. (೨) **ಯಚ್ಛೇದ್ವಾಕ್** ಎನ್ನುವ ಶ್ರುತಿಯಲ್ಲಿ ವಾಗಭಿಮಾನಿನಿಯಾದ ಪಾರ್ವತೀ ದೇವಿಯು ಮನೋಭಿಮಾನಿಯಾದ ರುದ್ರನಲ್ಲಿ ಲಯವನ್ನು ಹೊಂದುತ್ತಾಳೆ, ಎಂದು ಸ್ಮರಿಸತಕ್ಕದ್ದು. ಆ ರುದ್ರನು ವಿಜ್ಞಾನತತ್ವಕ್ಕೆ ಅಭಿಮಾನಿನಿಯಾದ ಸರಸ್ವತಿಯಲ್ಲಿ ಲಯ ಹೊಂದುತ್ತಾನೆ ಎಂದು ಸ್ಮರಿಸತಕ್ಕದ್ದು. ಹೀಗೆ, ಶ್ರುತ್ಯುಕ್ತವಾದ ಲಿಂಗದಿಂದ ವಿಜ್ಞಾನತತ್ವ, ಮನಸ್ತತ್ವಗಳನ್ನು ಹೊರತು ಇತರಗಳಿಗೆ ವ್ಯುತ್ಕ್ರಮದಿಂದ ಲಯವು. (ತಥಾಚ, ಲೋಕದಲ್ಲಿಯೂ ಕೆಲವರಿಗೆ ಕ್ರಮದಿಂದಲೂ, ಕೆಲವರಿಗೆ ವ್ಯುತ್ಕ್ರಮದಿಂದಲೂ ಲಯವು ಕಂಡದೆ.) ಆದಕಾರಣ, **ಅಕ್ಷರಾತ್ಪರಮಾದೇವ** ಎನ್ನುವ

---

* ಸಿದ್ಧಾಂತರೀತ್ಯಾ-ಮುಖ್ಯಪ್ರಾಣನ ದೆಶೆಯಿಂದ ಮನೋರೂಪ ಇಂದ್ರಿಯವು, ಆದರಿಂದ ವೃತ್ತಿರೂಪ ವಿಜ್ಞಾನವು ಹುಟ್ಟಿತು.

ಸರ್ವರಿಗೂ ವ್ಯುತ್ಕ್ರಮದಿಂದ ಲಯವು ಎಂದು ಪ್ರತಿಪಾದಿಸತಕ್ಕ ಶ್ರುತಿಯು ಅಪ್ರಮಾಣವೇ, ಎಂದರೆ ವಿಜ್ಞಾನತತ್ವ ಮನಸತ್ತ್ವಗಳನ್ನು ಹೊರತು ವಿಪರೀತಕ್ರಮದಿಂದ ಲಯವು ಎಂದು ಹೇಳಿದ್ದಲ್ಲ (ಮತ್ತೆ ಸರ್ವರಿಗೂ ವಿಪರೀತಕ್ರಮದಿಂದಲೇ ಲಯವು.) ಸಂಕೋಚಕ ಪ್ರಮಾಣವಿಲ್ಲದಿರುವುದರಿಂದ, ಅಥವಾ ವಿಜ್ಞಾನ ಮನಸತ್ತ್ವಗಳಿಗೆ ಉತ್ಪತ್ತ್ಯನುಸಾರೇಣ ಲಯವು, ಎನ್ನುವಲ್ಲಿ ವಿಶೇಷಪ್ರಮಾಣವು ಇಲ್ಲದಿರುವುದರಿಂದ. (ಮತ್ತು ಸರ್ವರಿಗೂ ವ್ಯುತ್ಕ್ರಮದಿಂದಲೇ ಲಯವು ಎನ್ನುವುದು ಶ್ರುತವಾದುದರಿಂದಲೂ.) ॥ ೧೫ ॥

ಪೀಠಿಕೆ ॥ ಶ್ರುತ್ಯುಕ್ತಲಿಂಗವೇ ಇದ್ದುದರಿಂದ ವಿಶೇಷಪ್ರಮಾಣವು ಇಲ್ಲವೆನ್ನುವುದು ಹೇಗೆ ಕೂಡುತ್ತದೆ, ಎಂಬುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾ—

## ಸೂತ್ರ ॥ ಓಂ ಚರಾಚರವ್ಯಪಾಶ್ರಯಸ್ತು ಸ್ಯಾತ್ತದ್ವ್ಯಪದೇಶೋ ಭಾಕ್ತಸ್ತದ್ಭಾವಭಾವಿತ್ವಾತ್ ಓಂ ॥ ೧೬ ॥

ಸೂತ್ರಾರ್ಥ ॥ ಯದ್ಯಪಿ ಮನಸಶ್ಚ ವಿಜ್ಞಾನಂ ಎಂದು ಮನೋವಿಜ್ಞಾನಗಳಿಗೆ ಕಾರ್ಯಕಾರಣ ವ್ಯಪದೇಶವಾದರೂ ಮನೋರೂಪವಾದ ಇಂದ್ರಿಯ, ತಜ್ಜನ್ಯಜ್ಞಾನ, ಮನಸತ್ತ್ವ, ವಿಜ್ಞಾನತತ್ವ ರಾಶಿದ್ವಯವಿಷಯಕವು. (ಅಂದರೆ, ಮನಃಶಬ್ದವು ಮನೋರೂಪಇಂದ್ರಿಯ, ಮನಸತ್ತ್ವಗಳನ್ನೂ, ವಿಜ್ಞಾನ ಶಬ್ದವು ಮನಸ್ಸಿನಿಂದ ಜನ್ಯವಾದ ಜ್ಞಾನ ವಿಜ್ಞಾನತತ್ವಗಳನ್ನೂ ಹೇಳತಕ್ಕದ್ದು) ಆದಾಗ್ಯೂ ಇಲ್ಲಿ **ಮನಸಶ್ಚ ವಿಜ್ಞಾನಂ** ಎನ್ನುವಲ್ಲಿದ್ದ ಮನೋವಿಜ್ಞಾನ ಶಬ್ದಗಳು ಮನೋರೂಪವಾದ ಇಂದ್ರಿಯ, ವೃತ್ತಿಜ್ಞಾನಾಖ್ಯ ಭಾಗವಿಷಯಕವೇ ಆಗುವುದು. ಮನಸತ್ತ್ವ, ವಿಜ್ಞಾನತತ್ವವಿಷಯಕಗಳಾಗುವುದಿಲ್ಲ. ಏಕೆಂದರೆ, ಜಂಗಮ, ಸ್ಥಾವರ ವಿಷಯಕ ಮನಸ್ಸಿನ ಆಲೋಚನೆಯಿಂದ ವೃತ್ತಿಜ್ಞಾನವು ಉಂಟಾಗುವುದರಿಂದ.

**ಭಾಷ್ಯ ॥ ಮನಸಶ್ಚ ವಿಜ್ಞಾನಮಿತಿ ವ್ಯಪದೇಶಶ್ಚರಾಚರೇಷ್ವಾಲೋಚನಾದ್ವಿಜ್ಞಾನಂ ಭವತೀತಿ ಭಾಗಾಪೇಕ್ಷಯಾ ಸ್ಯಾತ್ । ನ ವಿಜ್ಞಾನತತ್ತ್ವಾಪೇಕ್ಷಯಾ ॥ ೨ ॥**

ಭಾಷ್ಯಾರ್ಥ ॥ ಮನಸಶ್ಚ ವಿಜ್ಞಾನಂ ಎನ್ನುವ ಶ್ರೌತವ್ಯಪದೇಶವು (ಚರ=) ಚಂಚಲವಾದ ಅಂತಃಕರಣ, ಮತ್ತು ಅದರಿಂದ ಹುಟ್ಟಿದ ಜ್ಞಾನವೂ, (ಅಚರ=) ಮನಸತ್ತ್ವ, ವಿಜ್ಞಾನತತ್ವಗಳು ಮಧ್ಯದಲ್ಲಿ ಅಂತಃಕರಣಾವಬೋಧರೂಪವಾದ ಭಾಗವನ್ನು ಅಪೇಕ್ಷಿಸಿಯೇ ಆಗುವುದು. ವಿಜ್ಞಾನತತ್ವ, ಮನಸತ್ತ್ವಗಳನ್ನು ಅಪೇಕ್ಷಿಸಿ ಅಲ್ಲ (ಅಂದರೆ, ಮನಸತ್ತ್ವ, ವಿಜ್ಞಾನತತ್ವವಿಷಯಕವಾಗುವುದಿಲ್ಲ) ಅಂತಃಕರಣಾವಬೋಧರೂಪವಾದ ಭಾಗವಿಷಯಕತ್ವವನ್ನು ಅಂಗೀಕರಿಸಿದರೆ ಯಾವ ಅನುಪಪತ್ತಿಯೂ ಇಲ್ಲ. ಜಂಗಮ ಸ್ಥಾವರರೂಪವಾದ ಸರ್ವವಸ್ತುವಿಷಯದಲ್ಲಿ ಮನೋಧರ್ಮ ರೂಪವಾದ ಆಲೋಚನೆಯಿಂದ ಜ್ಞಾನವು ಉಂಟಾಗುತ್ತದೆ, ಎನ್ನುವ ಹೇತುವಿನಿಂದ. (ಆದಕಾರಣ, ಈ ಲಿಂಗವು ವಿಜ್ಞಾನತತ್ವ, ಮನಸತ್ತ್ವಗಳಿಗೆ ಕ್ರಮದಿಂದ ಲಯವು ಎನ್ನುವ ವಿಷಯದಲ್ಲಿ ವಿಶೇಷಪ್ರಮಾಣವಲ್ಲ.)

ಪೀಠಿಕೆ ॥ ಈ ವಾಕ್ಯವು ತತ್ವವಿಷಯಕವೇ ಎಂದು ಏಕೆ ಆಗಲಾರದು, ಎಂದರೆ—

**ಭಾಷ್ಯ ॥ ಸ್ಕಾಂದೇ ಚ । ಪರಾದವ್ಯಕ್ತಮುತ್ಪನ್ನಮವ್ಯಕ್ತಾತ್ತು ಮಹಾಂಸ್ತಥಾ। ವಿಜ್ಞಾನತತ್ತ್ವಂ ಮಹತಸ್ಸಮುತ್ಪನ್ನಂ ಚತುರ್ಮುಖಾತ್ ॥ ವಿಜ್ಞಾನತತ್ತ್ವಾತ್ತು ಮನೋ ಮನಸ್ತತ್ತ್ವಾತ್ತು(ಚ್ಚ) ಖಾದಿಕಂ । ಏವಂ ಬಾಹ್ಯಾ ಪರಾ ಸೃಷ್ಟಿರಂತಸ್ತದ್ವ್ಯಕ್ತ್ಯ-ಪೇಕ್ಷಯಾ। ವಿಪರೀತಕ್ರಮೋ ಜ್ಞೇಯೋ ಯಸ್ಮಾದಂತೇ ಹರೇರ್ದೃಶಿಃ । ಇತಿ ॥ ೧೬ ॥ ಅಧಿ.೯ ॥ ॥ ೩ ॥**

ಭಾಷ್ಯಾರ್ಥ ॥ ಶ್ರೀತತ್ತ್ವಾಭಿಮನ್ಯಮಾನವಾದ ಅವ್ಯಕ್ತಾಖ್ಯತತ್ತ್ವವು ಸರ್ವೋತ್ತಮನಾದ ಶ್ರೀಹರಿಯಿಂದ ಹುಟ್ಟಿತು. ಆ ಅವ್ಯಕ್ತದಿಂದ, ಚತುರ್ಮುಖನಿಂದ ಅಭಿಮನ್ಯಮಾನವಾದ ಮಹತ್ತತ್ತ್ವವು ಹುಟ್ಟಿತು. ಹಾಗೆಯೇ, ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನಿಂದ, ವಾಣಿಯಿಂದ ಅಭಿಮನ್ಯಮಾನವಾದ ವಿಜ್ಞಾನತತ್ತ್ವವು ಹುಟ್ಟಿತು. ವಿಜ್ಞಾನತತ್ತ್ವದಿಂದ, ರುದ್ರನಿಂದ ಅಭಿಮನ್ಯಮಾನವಾದ ಮನಸ್ತತ್ತ್ವವು ಹುಟ್ಟಿತು. ಮನಸ್ತತ್ತ್ವದಿಂದಲಾದರೂ ಆಕಾಶರೂಪವಾದ ಶ್ರೋತ್ರೇಂದ್ರಿಯಾದಿಗಳು ಹುಟ್ಟಿದವು. (ಎಲ್ಲಾ ಸೃಷ್ಟಿಯಲ್ಲಿಯೂ ಈ ಕ್ರಮವೇ ವಿವಕ್ಷಿತವೋ ಏನು, ಎಂದರೆ) ಬ್ರಹ್ಮಾಂಡದಿಂದ ಹೊರಗಡೆ ಉಂಟಾದ ಸೃಷ್ಟಿಯು ಏವಂ:ಪರಾದವ್ಯಕ್ತಂ ಎಂದು ಹೇಳಿದ ಪ್ರಕಾರ ಆಗುತ್ತದೆ. ಮುಖ್ಯವಾದುದು. ಅಂದರೆ ತಾರತಮ್ಯಜ್ಞಾಪಕವಾಗುತ್ತದೆ. (ಆದಕಾರಣ ಈ ವಾಕ್ಯವು ತತ್ತ್ವವಿಷಯಕವಲ್ಲ) (ಕ್ವಚಿತ್ ತತ್ತ್ವಗಳಿಗೇನೇ ಈ ಕ್ರಮವು ಶ್ರುತವಾದರೆ ಅದಕ್ಕೂ ಗತಿಯನ್ನು ತೋರಿಸುತ್ತಾರೆ.) ಬ್ರಹ್ಮಾಂಡದ ಅಥವಾ ದೇಹದ ಒಳಗೆ, ಪೂರ್ವದಲ್ಲಿ ಹುಟ್ಟಿದ ತತ್ತ್ವಗಳಿಗೆ ಮತ್ತು ತದಭಿಮಾನಿ ದೇವತೆಗಳಿಗೆ ವ್ಯಕ್ತ್ಯಪೇಕ್ಷೆಯಿಂದ ಭೂಮ್ಯಾದಿಪ್ರಾಣಾಂತ:ಕ್ರಮವು ತಿಳಿಯಲ್ಪಡತಕ್ಕದು. ಉತ್ಪತ್ತ್ಯಪೇಕ್ಷೆಯಿಂದ ಅಲ್ಲ. (ಇಲ್ಲಿ ವ್ಯಕ್ತಿಯೆಂದರೆ ನೋಡಲಿಕ್ಕೆ ಅನುಕೂಲವಾದ ಧರ್ಮವಿಶೇಷವು.) (ತಥಾಚ ಬ್ರಹ್ಮಾಂಡದ ಒಳಗೆ ಅಭಿವ್ಯಕ್ತಿಯಲ್ಲಿಯೂ ಜ್ಞಾನಿಗಳಿಗೆ ದೇಹದೊಳಗೆ ತತ್ತ್ವಾಪರೋಕ್ಷದಲ್ಲಿಯೂ ಈ ಕ್ರಮವನ್ನು ತಿಳಿಯತಕ್ಕದು. ಅದು ಹೇಗೆಂದರೆ) ಭೂಮ್ಯಾದಿ ಸರ್ವತತ್ತ್ವಗಳಿಗೆ ಕ್ರಮದಿಂದ ಅಪರೋಕ್ಷವು ಉಂಟಾಗುತ್ತಿರಲು ಅಂತ್ಯದಲ್ಲಿ ಸರ್ವೋತ್ತಮನಾದ ಶ್ರೀಹರಿಯ ದರ್ಶನವು ಆಗುತ್ತದೆ. (ಅಧಮರಿಗೇನೇ ಪ್ರಥಮತಃ ಅಭಿವ್ಯಕ್ತಿಯು.) (ಅಂದರೆ ದ್ವಾರಪಾಲಕರ ದರ್ಶನಾನಂತರದಲ್ಲಿ ರಾಜದರ್ಶನವಾಗುವಂತೆ ಅಧಮತತ್ತ್ವ ದೇವತೆಗಳ ದರ್ಶನಾನಂತರದಲ್ಲಿ ಅಂತ್ಯದಲ್ಲಿ ಶ್ರೀಹರಿಯ ದರ್ಶನವಾಗುತ್ತದೆ. ದರ್ಶನಕ್ಕೆ ಸಾಧನೀಭೂತವಾದ ಅಧಮತತ್ತ್ವ ದೇವತೆಗಳ ವ್ಯಕ್ತಿಯೂ ಆಗುತ್ತದೆ. ಹೀಗೆ ಸ್ಕಾಂದಪುರಾಣದಲ್ಲಿ ಹೇಳಿದೆ. ॥ ೧೬ ॥

## ಮಾಯಾವಾದಿರೀತ್ಯಾ

ವಿಚಾರ ॥ **ಆತ್ಮನ ಆಕಾಶಃ ಸಂಭೂತಃ** ಎನ್ನುವ ತೈತ್ತಿರೀಯ ಶ್ರುತಿಯು **ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ । ಖಂ ವಾಯುಃ** ಎನ್ನುವ ಆಥರ್ವಣ ಶ್ರುತಿಯಿಂದ ವಿರುದ್ಧವು. ಇಲ್ಲಿ ಆತ್ಮ ಭೂತಗಳ ಮಧ್ಯದಲ್ಲಿ ಇಂದ್ರಿಯ ಮನಸ್ಸುಗಳು ಆತ್ಮಜನ್ಯಗಳೆಂದು ಹೇಳಲ್ಪಟ್ಟಿವೆ. ಆದಕಾರಣ ತೈತ್ತಿರೀಯದಲ್ಲಿ ಹೇಳಿದ ಕ್ರಮಕ್ಕೆ ಭಂಗವು ಎಂದು ಪೂರ್ವಪಕ್ಷವು ಬಂದರೆ—**ಅನ್ನಮಯಂ ಹಿ ಸೌಮ್ಯ** ಇತ್ಯಾದಿ ಶ್ರುತಿಯಿಂದ ಕರಣಗಳು ಭೌತಿಕಗಳಾಗಿರುವುದರಿಂದ ಭೂತೋತ್ಪತ್ತ್ಯನಂತರದಲ್ಲಿಯೇ

ಕರಣಗಳಿಗೆ ಉತ್ಪತ್ತಿಯು. ಈ ಅರ್ಥಕ್ರಮವನ್ನು ಇಟ್ಟುಕೊಂಡು ಅಥರ್ವಣದಲ್ಲಿ ಹೇಳಿದ್ದು ಉತ್ಪತ್ತಿಕ್ರಮದಲ್ಲಿ ಆದಕಾರಣ ಭೂತೋತ್ಪತ್ತಿಕ್ರಮಕ್ಕೆ ಭಂಗವಿಲ್ಲ ಎಂದು ಸಿದ್ಧಾಂತವೆಂದು ಅದ್ವೈತಿಗಳು ಹೇಳುತ್ತಾರೆ. ಅದು ಅಯುಕ್ತವು. ಮನಸ್ತತ್ವಾಚ್ಚ ಖಾದಿಕಂ ಎಂದು ಭಾಷ್ಯೋಕ್ತ ಸ್ಮೃತಿಯಿಂದ. ಹಾಗೆಯೇ **ಆಕಾಶಾದೂರ್ಧ್ವಂ ತನ್ಮಾತ್ರಾಣಿ ಭೂತಾದೌ ಲೀಯತೇ । ಭೂತಾದಿರ್ಮಹತಿ ಲೀಯತೇ ಮಹಾನವ್ಯಕ್ತೇ ಲೀಯತೇ** ಇತ್ಯಾದಿ ಲಿಂಗಗಳಿಂದಲೂ ಹಾಗೆಯೇ ಅಥರ್ವಣದಲ್ಲಿಯೇ **ಖಂ ವಾಯುಃ** ಇತ್ಯಾದಿ ಉತ್ತರವಾಕ್ಯದಲ್ಲಿ ಇದ್ದಂತೆಯೇ **ಏತಸ್ಮಾಜ್ಜಾಯತೇ ಪ್ರಾಣಃ** ಇತ್ಯಾದಿಗಳಲ್ಲಿಯೂ ಪಾಠಕ್ರಮದಿಂದಲೇ ಮನಃ ಆದ್ಯನಂತರದಲ್ಲಿಯೇ ಆಕಾಶೋತ್ಪತ್ತಿಯು ಸಿದ್ಧಿಸುತ್ತದೆ. ಅನ್ನಮಯತ್ವ ಶ್ರುತಿಯಾದರೂ **ಅನ್ನಮಶಿತಂ ತ್ರೇಧಾ ವಿಧೀಯತೇ** ಎನ್ನುವ ವಾಕ್ಯಶೇಷದಿಂದ ಪಾರ್ಥಿವವಾದ ಅನ್ನದಿಂದ ಮನಸ್ಸಿಗೆ ಉಪಚಯವನ್ನು ಹೇಳುತ್ತದೆ. ಪೃಥಿವೀ ಭೂತದಿಂದ ಮನಸತ್ತ್ವೋತ್ಪತ್ತಿಯನ್ನು ಹೇಳುವುದಿಲ್ಲ.

## ಅಧಿಕರಣ ಸಾರಾಂಶ

(೧) ಅಧಿಭೂತಾದಿಗಳೆಲ್ಲವೂ ವ್ಯುತ್ಕ್ರಮದಿಂದಲೇ ಲಯವನ್ನು ಹೊಂದುತ್ತವೋ, ಅಥವಾ ಕೆಲವು ಕ್ರಮದಿಂದಲೇ ಲಯವನ್ನು ಹೊಂದುತ್ತವೋ, ಎಂದು ಸಂದೇಹವು. ಮನಸಶ್ಚ ವಿಜ್ಞಾನಂ ಎನ್ನುವ ಶ್ರುತಿಯಲ್ಲಿ ಹೇಳಿದ ಉತ್ಪತ್ತಿಕ್ರಮದಿಂದಲೇ ವಿಜ್ಞಾನಮನಸೀ ಪ್ರಾಜ್ಞಸ್ತದ್ವ್ಯಜ್ಞಾನ ಆತ್ಮನಿ ಎನ್ನುವ ಶ್ರುತಿಯಲ್ಲಿ ಉತ್ಪತ್ತಿಕ್ರಮದಿಂದಲೇ ಲಯವೆಂದು ಹೇಳಿಯದೆ. ಆದಕಾರಣ ಮನೋವಿಜ್ಞಾನತತ್ವಗಳನ್ನು ಹೊರತು ಇತರಗಳು ವ್ಯುತ್ಕ್ರಮದಿಂದ ಲಯವನ್ನು ಹೊಂದುತ್ತವೆ. (೨) ಮನಸಶ್ಚ ವಿಜ್ಞಾನಂ ಎನ್ನುವ ಮನೋವಿಜ್ಞಾನಶಬ್ದಗಳು ತತ್ವಪರಗಳಲ್ಲ. ಮತ್ತೆ ಅಂತಃಕರಣಾವಬೋಧಪರಗಳು ಎನ್ನುವುದು ಯುಕ್ತವಲ್ಲ. ಆ ಶಬ್ದಗಳು ಮನಸತ್ತ್ವ ವಿಜ್ಞಾನತತ್ವಗಳಲ್ಲಿಯೇ ಮುಖ್ಯಗಳಾಗಿರುವುದರಿಂದ ನಿರ್ನಿಮಿತ್ತವಾಗಿ ಮುಖ್ಯಾರ್ಥವನ್ನು ಬಿಡಲು ಯುಕ್ತವಲ್ಲ. ವ್ಯುತ್ಕ್ರಮಾದ್ವಿಲಯಶ್ಚ ಎಂದು ಸರ್ವರಿಗೂ ವ್ಯುತ್ಕ್ರಮದಿಂದ ಲಯವು ಎಂದು ಪ್ರತಿಪಾದಿಸತಕ್ಕ ಶ್ರುತಿಯಾದರೂ ಲೋಕದಲ್ಲಿ ಕೆಲವರಿಗೆ ಕ್ರಮದಿಂದಲೂ ಕೆಲವರಿಗೆ ವ್ಯುತ್ಕ್ರಮದಿಂದಲೂ ಲಯವು ಕಂಡದ್ದರಿಂದ ಲೋಕಾನುಸಾರಿತ್ವರೂಪವಾದ ಯುಕ್ತಿಯಿಂದ ಕೂಡಿದ ಮನೋವಿಜ್ಞಾನಗಳಿಗೆ ಕ್ರಮದಿಂದ, ಲಯವನ್ನು ಪ್ರತಿಪಾದಿಸತಕ್ಕ ಶ್ರುತಿಯಿಂದ ಬಾಧಿತವಾಗಿದೆ, ಎಂದು ಪೂರ್ವಪಕ್ಷವು ಬಂದರೆ— ಮನಸತ್ತ್ವ ಅಂತಃಕರಣಗಳಲ್ಲಿಯೂ ವಿಜ್ಞಾನತತ್ವ ಅವಬೋಧಗಳಲ್ಲಿಯೂ ಕ್ರಮದಿಂದ ಮನೋವಿಜ್ಞಾನಶಬ್ದಗಳಿಗೆ ಪ್ರಯೋಗವು ಕಂಡದ್ದರಿಂದ ತತ್ವಮಾತ್ರ ವಾಚಕತ್ವವಲ್ಲ. ಇಂದ್ರಿಯಾದಿಗಳಲ್ಲಿಯೂ ಮುಖ್ಯತ್ವವಿದೆ. ಮನಸಶ್ಚ ವಿಜ್ಞಾನಂ ಎನ್ನುವುದಕ್ಕೆ **ವಿಜ್ಞಾನತತ್ತ್ವಂ ಮಹತಃ ಸಮುತ್ಪನ್ನಂ ಚತುರ್ಮುಖಾತ್** ಎನ್ನುವುದರಿಂದ ವಿರೋಧವಿದ್ದುದರಿಂದ ತತ್ವವಿಷಯತ್ವವು ಕೂಡದಿರುವುದರಿಂದ ಅಂತರಿಂದ್ರಿಯ ತಜ್ಜನ್ಯ ಜ್ಞಾನಪರತ್ವವಿದ್ದುದರಿಂದ ಮನಸತ್ತ್ವವಿಜ್ಞಾನತತ್ವಗಳಿಗೆ ಉತ್ಪತ್ತ್ಯನುಸಾರವಾಗಿಯೇ ಲಯವು ಎನ್ನುವಲ್ಲಿ ವಿಶೇಷ ಪ್ರಮಾಣ ವಿಲ್ಲದಿರುವುದರಿಂದ **ಸರ್ವಂ ವಾ ಏತತ್ಕ್ರಮಾದುತ್ಪದ್ಯತೇ ವ್ಯುತ್ಕ್ರಮಾದ್ವಿಲೀಯತೇ** ಎಂದು ಸರ್ವಕ್ಕೂ ವ್ಯುತ್ಕ್ರಮದಿಂದಲೇ ಲಯವು ಎಂದು ಪ್ರತಿಪಾದಿಸತಕ್ಕ ಶ್ರುತಿಯಿದ್ದುದರಿಂದಲೂ ಎಲ್ಲವೂ ವ್ಯುತ್ಕ್ರಮದಿಂದಲೇ ಲಯವನ್ನು ಹೊಂದುತ್ತವೆ. ॥ ಅಧಿ. ೯ ॥

**ಅಂತರಾಧಿಕರಣವು ಸಮಾಪ್ತವಾಯಿತು.**

॥ ಓಂ ಸ್ವಲಯ ಶ್ರುತ್ಯವಿರೋಧಪ್ರಯೋಜ್ಯಸಮನ್ವಯಗೋಚರಾಯನಮಃ ಓಂ ॥

# ೧೦ ಆತ್ಮಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಪರಮಾತ್ಮಲಯ ವಿಷಯಕಶ್ರುತಿ ವಿರೋಧವನ್ನು ಪರಿಹರಿಸುತ್ತಾರೆ. ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾ—

## ಸೂತ್ರ ॥ ಓಂ ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ಓಂ ॥ ೧೭ ॥

**ಸೂತ್ರಾರ್ಥ** ॥ ವಿಷ್ಣುವು ಲಯವನ್ನು ಹೊಂದುವುದೇ ಇಲ್ಲ. ಎಲ್ಲಿಯೂ, ನಿರವಕಾಶವಾಗಿ ಬ್ರಹ್ಮನಿಗೆ ಲಯವು ಶ್ರುತವಾಗದೆ ಇದ್ದಪ್ರಯುಕ್ತವೂ, ನಿತ್ಯೋ ನಿತ್ಯಾನಾಂ ಇತ್ಯಾದಿ ಶ್ರುತಿಗಳಿಂದ ಆತ್ಮನಿಗೆ ನಿತ್ಯತ್ವವು ಅವಗತವಾಗುವುದರಿಂದಲೂ. ॥ ೧೭ ॥

**ಭಾಷ್ಯ** ॥ ಸ ಇದಂ ಸರ್ವಂ ವಿಲಾಪ್ಯಾಂತಸ್ತಮಸಿ ನಿಲೀನಸ್ತದ್ವಿಲಾಪ್ಯ ವೃತ್ತಿಷ್ಠತೇ । ಸ ಇದಂ ಸರ್ವಂ ವಿಸೃಜತಿ ವಿಲಾಪಯತಿ ವಿಸ್ಥಾಪಯತಿ ಪ್ರಸ್ಥಾಪಯತ್ಯಾಚ್ಛಾದಯತಿ ಪ್ರಕಾಶಯತಿ ವಿಮೋಚಯತ್ಯೇಕ ಏವ । ಇತಿ ಶ್ರುತೇಃ ಪರಮಾತ್ಮಾಽಪಿ ನ ಲೀಯತೇ । ಅಶ್ರುತತ್ವಾದ್ಬ್ರಹ್ಮಲಯಸ್ಯ ॥ ೧ ॥

**ಭಾಷ್ಯಾರ್ಥ** ॥ ಶ್ರೀಹರಿಯೊಬ್ಬನೇ ಈ ಎಲ್ಲಾ ಜಗತ್ತನ್ನೂ ಚಿತ್ಪ್ರಕೃತಿರೂಪ ಉದಾಕಾತ್ಮಕವಾದ ತಮಸ್ಸಿನಿಂದ ಆಚ್ಛಾದನೆಮಾಡಿ ಸಂಹರಿಸಿ, ತಾನು, ಪ್ರಕೃತಿಯಲ್ಲಿ ಆಚ್ಛಾದಿತನಾದವನಾಗಿ, ಆ ದುರ್ಗಾಭಿಮನ್ಯವಾದ ತಮಸ್ಸನ್ನು ಪಾನಮಾಡಿ, ತಾನು, ಆದರಿಂದ ಪ್ರಾದುರ್ಭವಿಸುತ್ತಾನೆ. ಆತನೇ, ಈ ಜಗತ್ತನ್ನು ಪುನಃ ವಿಶೇಷವಾಗಿ ಸೃಷ್ಟಿಸುತ್ತಾನೆ. ಸೃಷ್ಟಿ ಮಾಡಿ, ಅನೇಕ ಪ್ರಕಾರ ಸ್ಥಿತಿಯನ್ನು ಹೊಂದಿಸಿ ಕೊಡುತ್ತಾನೆ. ಸಂಹರಿಸುತ್ತಾನೆ. ಪ್ರೇರಿಸುತ್ತಾನೆ. ಅಜ್ಞಾನದಿಂದ ಆವೃತವನ್ನಾಗಿ ಮಾಡುತ್ತಾನೆ. ಜೀವಕರ್ತೃಕಾನುಭವದಿಂದ ಜೀವನನ್ನು ಕೂಡಿಸುತ್ತಾನೆ. ಸಂಸಾರದಿಂದ ಬಿಡಿಸುತ್ತಾನೆ. (ಸಂಸಾರದಿಂದ ಬಂಧಿಸುತ್ತಾನೆ.) ಈ ಶ್ರುತಿಯಿಂದ (ಪರಮಾತ್ಮನು ಲಯವನ್ನು ಹೊಂದುತ್ತಾನೆ. ಈ ಶ್ರುತಿಯಲ್ಲಿ ಅಂತಸ್ತಮಸಿ ನಿಲೀನಃ ಎಂದು ಶ್ರೀಹರಿಗೆ ಲಯವು ಶ್ರುತವಾಗಿದೆ. ಈ ಶ್ರುತಿಯಲ್ಲಿ ಜಗಜ್ಜನ್ಮಾದಿ ಕರ್ತೃತ್ವವು ಶ್ರುತವಾದುದರಿಂದ ಕೇವಲ ಭಗವತ್ಪರವೇ. ಚೇತನತ್ವವಿದ್ದುದರಿಂದ ಜೀವನಂತೆಯೇ ವಿಷ್ಣುವಿಗೂ ಲಯವು ಯುಕ್ತವು, ಎಂದರೆ, ಹಾಗೆ ಹೇಳಕೂಡದು.) ಪರಮಾತ್ಮನು ಲಯವನ್ನು ಹೊಂದುವುದೇ ಇಲ್ಲ. ಯಾವ ಶ್ರುತಿಯಲ್ಲಿಯೂ ಬ್ರಹ್ಮನಿಗೆ ಲಯವು ಶ್ರುತವಾಗದೆ ಇದ್ದುದರಿಂದ.

**ಪೀಠಿಕೆ** ॥ ಅಂತಸ್ತಮಸಿ ನಿಲೀನಃ ಎನ್ನುವ ಶ್ರುತಿಯಲ್ಲಿ ಲಯವು ಶ್ರುತವಾದುದರಿಂದ ಬ್ರಹ್ಮನಿಗೆ ಲಯವು ಅಶ್ರುತವು ಹೇಗೆ ಆಗುವುದು, ಎಂದರೆ—

**ಭಾಷ್ಯ** ॥ (೧) ನೀಲಿನಶಬ್ದೇನಾಪಿಹಿತತ್ವಮುಚ್ಯತೇ । (೨) ★ತುಚ್ಛೇನಾಭ್ವಪಿಹಿತಂ ಯದಾಸೀತ್ । (ಋ.೧೦.೧೨೯.೩.) । ಇತಿ ಶ್ರುತೇಃ । (೩) ಸ ಏತಸ್ಮಿಂಸ್ತಮಸಿ

★ ಈ ಶ್ರುತಿಯು ಅನುಮಾನಿಕಾಧಿಕರಣ ವ್ಯಾಖ್ಯಾತವಾಗಿದೆ.

**ನಿಲೀನಃ ಪ್ರಕೃತಿಂ ಪುರುಷಂ ಕಾಲಂ ಚಾನುಪಶ್ಯತಿ ನೈನಂ ಪಶ್ಯತಿ ಕಶ್ಚನ । ಇತಿ ಪೈಂಗಿಶ್ರುತಿಃ ॥ ೨ ॥**

ಭಾಷ್ಯಾರ್ಥ ॥ (೧) ನೀಲಿನಶಬ್ದದಿಂದ ಆಚ್ಛಾದಿತತ್ವವು (ಇತರಾದೃಶ್ಯತ್ವವೂ ಕೂಡ) ಹೇಳಲ್ಪಡುತ್ತದೆ. (ದೇಹವಿಯೋಗರೂಪವಾದ ಲಯವು ಹೇಳಲ್ಪಡುವುದಿಲ್ಲ, ಏಕೆಂದರೆ,) (೨) ತುಚ್ಛೇನ ಎನ್ನುವ ಶ್ರುತಿಯಲ್ಲಿ (ಪ್ರಳಯಕಾಲದಲ್ಲಿ ಬ್ರಹ್ಮನಿಗೆ ಪ್ರಕೃತ್ಯಾಚ್ಛಾದಿತತ್ವವನ್ನು ಹೇಳಿದುದರಿಂದ ಆ ಸಮಾಖ್ಯೆಯಿಂದ ಇಲ್ಲಿಯೂ ನೀಲಿನಶಬ್ದವು ಆಚ್ಛಾದಿತತ್ವಾರ್ಥಕವೇ.) (೩) (ಬ್ರಹ್ಮನಿಗೆ ನಿಲೀನತ್ವವೆಂದರೆ, ಅಪಿಹಿ ತತ್ವವೇ ಎನ್ನುವಲ್ಲಿ ಶ್ರುತಿಯನ್ನು ಹೇಳುತ್ತಾರೆ.) ಆ ಶ್ರೀಹರಿಯು ಪ್ರಕೃತಿರೂಪದಾ ತಮಸ್ಸಿನಲ್ಲಿ ಆಚ್ಛಾದಿತವಾಗಿ, ತಾನು, ಪ್ರಕೃತಿ, ಜೀವ, ಕಾಲಗಳನ್ನು ನೋಡುತ್ತಾನೆ. ಯಾರೊಬ್ಬನೂ ಈತನನ್ನು ನೋಡುವುದಿಲ್ಲ ಎಂದು ಪೈಂಗಿಶ್ರುತಿಯು. (ಈ ವಚನದಿಂದ ನಿಲೀನಶಬ್ದವು ಆಚ್ಛಾದಿತ ಎನ್ನುವ ಅರ್ಥದಲ್ಲಿ ಪ್ರಯುಕ್ತವಾಗಿದೆ, ಎಂದು ತಿಳಿಯುತ್ತದೆ.

ಪೀಠಿಕೆ ॥ ಸಮಾಖ್ಯಾದಿಗಳು ಶ್ರುತಿಯಿಂದ ದುರ್ಬಲಗಳಾಗಿರುವುದರಿಂದ ನಿಲೀನಶ್ರುತಿಗೆ ಲಯ ಎನ್ನುವ ಅರ್ಥವೇ ಏಕೆ ಆಗಲಾರದು, ಎಂದರೆ—

**ಭಾಷ್ಯ ॥ (೧) ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ (ಕಠ ೫.೧೩)। (೨) ಸ ನಿತ್ಯೋ ನಿರ್ಗುಣೋ ವಿಭುಃ ಪರಮಃ ಪರಮಾತ್ಮಾ । (೩) ನಿತ್ಯೋ ವಿಭುಃ ಕಾರಣೋ ಲೋಕಸಾಕ್ಷೀ ಪರೋ ಗುಣೈಃ ಸರ್ವದೃಕ್ ಶಾಶ್ವತಶ್ಚ ॥ ಇತ್ಯಾದಿಶ್ರುತಿಭ್ಯೋ ನಿತ್ಯತ್ವಾಚ್ಚ ॥ ೧೭ ॥ ಅಧಿ. ೧೦ ॥ ॥ ೩ ॥**

ಭಾಷ್ಯಾರ್ಥ ॥ (೧) ಸ್ವರೂಪತಃ ಅವಿನಾಶಿಗಳಾದ ವಸ್ತುಗಳಿಂದಲೂ ದೇಹತೋಽಪಿ ನಿತ್ಯನು. (ಪರಮನಿತ್ಯನು.) ಅಥವಾ ನಿತ್ಯಪದಾರ್ಥಗಳಿಗೆ ನಿತ್ಯತ್ವಪ್ರದನು. ಜ್ಞಾತೃಗಳಿಗೂ ಚೈತನ್ಯಪ್ರದನು. ಪರಮಚೇತನನು. (೨) ಆ ಶ್ರೀಹರಿಯು ದೇಹತೋಽಪಿ ನಿತ್ಯನು, ಸತ್ವಾದಿಗುಣರಹಿತನು, ವ್ಯಾಪ್ತನು, ವಿಲಕ್ಷಣನು, ಸರ್ವೋತ್ತಮನು. (೩.)ದೇಹಹಾನ್ಯಾದಿಗಳು ಇಲ್ಲದಿರುವವನು, ವ್ಯಾಪ್ತನು, ಜಗತ್ಕಾರಣನು, ಸರ್ವಲೋಕಗಳನ್ನು ಸಾಕ್ಷಾದ್ದ್ರಷ್ಟನು, ಸತ್ವಾದಿಗುಣಗಳಿಂದ ವಿಲಕ್ಷಣನು, (ಅಂದರೆ, ಸತ್ವಾದಿಗುಣಮಯ ದೇಹರಹಿತನು.) ಸರ್ವಜ್ಞನು, ನಿರ್ವಿಕಾರನು, (ಅಂದರೆ ವೃದ್ಧಿ ಹ್ರಾಸಗಳಿಲ್ಲದವನು.) ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗೆ ದೇಹತೋಽಪಿ ನಿತ್ಯತ್ವವು ಅವಗತವಾಗುವುದರಿಂದ. ತಥಾಚ, ನಿತ್ಯತ್ವ ಪ್ರತಿಪಾದಕ ಬಹುಶ್ರುತಿ ವಿರೋಧವಿದ್ದುದರಿಂದ ನೀಲಿನಶ್ರುತಿಯು ಅವಿಹಿತಾರ್ಥಪರವೇ. ॥ ೧೭ ॥

## ಮಾಯಾವಾದಿರೀತ್ಯಾ

ವಿಚಾರ ॥ (೧) ಚರಾಚರ ಎನ್ನುವ ಅಧಿಕರಣದಲ್ಲಿ ಚೈತ್ರೋ ಜಾತಃ ಎನ್ನುವ ವ್ಯಪದೇಶದಿಂದಲೂ, ಜಾತಕರ್ಮಾದಿಗಳನ್ನು ವಿಧಾನಮಾಡಿದ್ದರಿಂದಲೂ, ಪ್ರತಿಶರೀರದಲ್ಲಿಯೂ ಜೀವನು ಹುಟ್ಟುತ್ತಾನೆಂದು ಪೂರ್ವಪಕ್ಷವು ಬಂದರೆ, ಪ್ರತಿಶರೀರದಲ್ಲಿ ಜೀವನು ಹುಟ್ಟುವುದಾದರೆ,

ಶಾಸ್ತ್ರೋಕ್ತ ಸ್ವರ್ಗಾದಿಫಲವು ಕೂಡದಿರುವುದರಿಂದ ಜನ್ಮವ್ಯಪದೇಶವು, ಹುಟ್ಟತಕ್ಕ ಸ್ಥಾವರ, ಜಂಗಮಾತ್ಮಕ ಶರೀರಸಂಬಂಧದಿಂದ ಭಾಗತಃ ಇರತಕ್ಕುದು. ಗೌಣವು ಎಂದು ಸಿದ್ಧಾಂತವು. ನಾತ್ಮಾ ಎನ್ನುವ ಅಧಿಕರಣದಲ್ಲಿ ಆದರೂ **ಸರ್ವ ಏತೇ ಆತ್ಮಾನೋ ವ್ಯುಚ್ಚರಂತಿ** ಇತ್ಯಾದಿ ಶ್ರುತಿಯಿಂದ ಆಕಾಶಾದಿಗಳಂತೆ ಪ್ರತಿಸೃಷ್ಟಿಯಲ್ಲಿಯೂ ಬ್ರಹ್ಮನಿಂದ ಜೀವನು ಹುಟ್ಟುತ್ತಾನೆ, ಎಂದು ಪೂರ್ವಪಕ್ಷವು ಬಂದರೆ, **ತತ್ಸೃಷ್ಟ್ವಾ ತದೇವಾನುಪ್ರಾವಿಶತ್** ಇತ್ಯಾದಿ ಶ್ರುತಿಯಿಂದ ಸೃಷ್ಟ ಅನುಪ್ರವಿಷ್ಟ ಬ್ರಹ್ಮರೂಪನಾದ ಜೀವನಿಗೆ ನಿತ್ಯಭೂತವಾದ ಬ್ರಹ್ಮನಿಂದ ಭೇದವು ಕೂಡದಿರುವುದರಿಂದ ಕೃತಹಾನ್ಯಾದಿಗಳು ಪ್ರಸಕ್ತಗಳಾಗುವುದರಿಂದ ಉತ್ಪತ್ತಿಯಿಲ್ಲವೆಂದು ಸಿದ್ಧಾಂತವು. ಎನ್ನುತ್ತಾರೆ. ಅದು ಅಯುಕ್ತವು. ನಾತ್ಮಾ ಎನ್ನುವ ಅಧಿಕರಣದಲ್ಲಿ ಹೇಳಿದ ಸಿದ್ಧಾಂತದಿಂದ ಕೈಮುತ್ಯ ನ್ಯಾಯದಿಂದಲೇ ಹತವಾದ ಚರಾಚರಾಧಿಕರಣ ಪೂರ್ವಪಕ್ಷವೇ ಹುಟ್ಟಲಾರದು. **ತದ್ವ್ಯಪದೇಶಃ** ಎನ್ನುವ ಸೂತ್ರದ್ದಲ್ಲಿದ್ದ **ವಿಜ್ಞಾನಮನಸೀ** ಎಂದು ಪೂರ್ವಸೂತ್ರದಲ್ಲಿ ಪ್ರಕೃತವಾದ ವಿಜ್ಞಾನ ಮನಃಕ್ರಮವನ್ನು ಪರಾಮರ್ಶ ಮಾಡತಕ್ಕ ತಚ್ಛಬ್ದಕ್ಕೆ ಅಪ್ರಕೃತ ಜೀವಜನ್ಮ ವಿಷಯತ್ವವು ಕೂಡಲಾರದು. ಅದ್ವೈತ ರೀತ್ಯಾ ದೇಹಕ್ಕೂ ಆತ್ಮನಿಗೂ ಭೇದವನ್ನು ಸಾಧಿಸತಕ್ಕ ಏಕ **ಆತ್ಮನಃ ಶರೀರೇ ಭಾವಾತ್** ಎನ್ನುವ ಅಧಿಕರಣದಿಂದ ಒಂದನೇ ಅಧಿಕರಣವು ಗತಾರ್ಥವಾಗಿದೆ. (೨) ನಾತ್ಮಾ ಎನ್ನುವ ಅಧಿಕರಣದಲ್ಲಿ **ತತ್ ಸೃಷ್ಟ್ವಾ ತದೇವಾನುಪ್ರಾವಿಶತ್** ಎನ್ನುವ ಶ್ರುತಿಯಿಂದ ಸೃಷ್ಟಾನುಪ್ರವೇಶದಿಂದ ವಿಶೇಷವಾದುದಕ್ಕೇನೇ ಜೀವತ್ವವಿದ್ದುದರಿಂದ ನಿತ್ಯತ್ವೋಕ್ತಿಯೂ ಕೂಡಲಾರದು. ಚಿನ್ಮಾತ್ರಕ್ಕೆ ಅನಾದಿತ್ವವಾದರೂ ಅಸಂಭವಸ್ತು ಎನ್ನುವುದರಿಂದಲೇ ಸಿದ್ಧವಾಗಿದೆ. ಸಿದ್ಧಾಂತದಲ್ಲಿಯೂ ಕೂಡ ಸಾದಿಯಾದ ಅಂತಃಕರಣದಿಂದ ಕೂಡಿದ ಕರ್ತನಿಗೆ ಸಾದಿತ್ವವಿದ್ದುದರಿಂದ ಕೃತಹಾನ್ಯಾದಿಗಳು ಬರಬೇಕಾಗುವುವು.

## ಅಧಿಕರಣ ಸಾರಾಂಶ

ಸರ್ವೋತ್ಪತ್ತಿಲಯಕರ್ತನೆಂದು ಪ್ರಕೃತನಾದ ಶ್ರೀವಿಷ್ಣುವು ದೇಹನಾಶಾಖ್ಯ ಲಯವುಳ್ಳವನೋ ಅಲ್ಲವೋ ಎಂದು ಸಂದೇಹವು. **ಸ ಇದಂ ಸರ್ವಂ ವಿಲಾಪ್ಯಾಂತಸ್ತಮಸಿ ಲೀಯತೇ** ಎನ್ನುವ ಶ್ರುತಿಯಿಂದ ಲಯವುಳ್ಳವನು ಎಂದು ಪೂರ್ವಪಕ್ಷವು, ಹೇಗೆಂದರೆ **ನಿತ್ಯೋ ನಿತ್ಯಾನಾಂ** ಎನ್ನುವ ಶ್ರುತಿಯಾದರೂ **ವಿಷ್ಣುಃ ಲಯವಾನ್ ಚೇತನತ್ವಾತ್ ಜೀವವತ್** ಎನ್ನುವ ಯುಕ್ತ್ಯುಪೇತವಾದ ನೀಲಿನಶ್ರುತಿಯಿಂದ ಬಾಧಿತವು ಆಗುತ್ತದೆ. ಲಯಶ್ರುತಿಯು ಅಪಿಹಿತತ್ವಾರ್ಥಪರವೆಂದು ಹೇಳಕೂಡದು. ಹಾಗೆ ಕಲ್ಪಿಸಲಿಕ್ಕೆ ಪರಮಾಣವಿಲ್ಲ. **ಅಸಂಭವಸ್ತು** ಎನ್ನುವಲ್ಲಿ ಈಶ್ವರನಿಗೆ ಸರ್ವಸ್ವಾತಂತ್ರ್ಯವಿದ್ದುದರಿಂದ ಅನುತ್ಪತ್ತಿಯನ್ನು ಹೇಳಿದರೂ ಕ್ರೀಡೆಯಿಂದ ದೇಹದ ಉಪಾದಾನ ತ್ಯಾಗಗಳು ಸರ್ವಸ್ವಾತಂತ್ರ್ಯವಿದ್ದುದರಿಂದ ಅನುತ್ಪತ್ತಿಯನ್ನು ಹೇಳಿದರೂ ಕ್ರೀಡೆಯಿಂದ ದೇಹದ ಉಪಾದಾನ ತ್ಯಾಗಗಳು ಉಪಪನ್ನಗಳಾಗುವುವು. ಎಂದರೆ, ವಿಷ್ಣುವಿಗೆ ದೇಹನಾಶಾಖ್ಯ ಲಯವಿಲ್ಲ ಪ್ರಮಾಣವಿಲ್ಲದಿರುವುದರಿಂದ. **ತಮಸಿ ಲೀಯತೇ** ಎನ್ನುವ ಶ್ರುತಿಯಾದರೂ, **ತುಚ್ಛೇನಾಭ್ವಪಿಹಿತಂ** ಎನ್ನುವ ಶ್ರುತಿಯಿಂದಲೂ **ನಾಸದಾಸೀತ್** ಎನ್ನುವ ಶ್ರುತಿಯಲ್ಲಿ ಸರ್ವಕ್ಕೂ ಲಯವನ್ನು ಹೇಳಿ ತಮ **ಆಸೀತ್** ಎಂದು ಪ್ರಕೃತಿಗೆ ಸ್ಥಿತಿಯನ್ನು ಹೇಳಿ ಬ್ರಹ್ಮನಿಗೆ ಅಪಿಹಿತತ್ವವನ್ನೂ ಪುನಃ ಪ್ರಾದುರ್ಭಾದವವನ್ನೂ ಹೇಳಿದ್ದರಿಂದ ತಮಸಿ ನಿಲೀನಃ ಎನ್ನುವ

ಶ್ರುತ್ಯಂತರದಿಂದಲೂ ಅಪಿಹಿತತ್ವಾರ್ಥಕವು. ಅನ್ಯಥಾ ನಿತ್ಯೋ ನಿತ್ಯಾನಾಂ, ಸ ನಿತ್ಯೋ ನಿರ್ಗುಣಃ, ಸ ನಿತ್ಯೋ ವಿಭುಃ ಇತ್ಯಾದಿ ಬಹು ನಿತ್ಯತ್ವಶ್ರುತಿಗಳಿಂದ ವಿರೋಧವು ಬರುವುದು. ॥ ಅಧಿ. ೧೦ ॥

ಆತ್ಮಾಧಿಕರಣವು ಸಮಾಪ್ತವಾಯಿತು.

॥ ಓಂ ಜೀವಜನ್ಮಶ್ರುತ್ಯವಿರೋಧ ಪ್ರಂಯೋಜ್ಯಸಮನ್ವಯಗೋಚರಾಯನಮಃ ಓಂ ॥

## ೧೧ ಜ್ಞಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಜೀವಜನ್ಮವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಶ್ರುತಿವಿರೋಧವನ್ನೇ ತೋರಿಸುತ್ತಾರೆ—

**ಭಾಷ್ಯ ॥ ನಿತ್ಯೋ ನಿತ್ಯಾನಾಂ (ಕಠ ೫. ೧೩)। ಇತಿ ಜೀವಸ್ಯಾಪಿ ನಿತ್ಯತ್ವಮುಕ್ತಂ। ಸರ್ವ ಏತೇ ಚಿದಾತ್ಮನೋ (ಏತೇ ಆತ್ಮಾನೋ) ವ್ಯುಚ್ಚರಂತಿ। ಇತ್ಯುತ್ಪತ್ತಿರುಚ್ಯತೇ। ಅತೋ ವಿರೋಧಃ। ಇತಿ ॥ ೧ ॥**

ಭಾಷ್ಯಾರ್ಥ ॥ ನಿತ್ಯೋ ನಿತ್ಯಾನಾಂ ಎಂದು ಜೀವರಿಗೂ ನಿತ್ಯತ್ವವು ಹೇಳಲ್ಪಟ್ಟಿದೆ. (ನಿತ್ಯತ್ವವಿದ್ದುದರಿಂದಲೇ ಅನುತ್ಪತ್ತಿಯು) ಆ ಈ ಚಿದ್ರೂಪರಾದ ಜೀವರು ಮಾತ್ರದೇಹದಿಂದ ಹುಟ್ಟುತ್ತಾರೆ. ಈ ಶ್ರುತಿಯಿಂದ ಜೀವನಿಗೆ ಉತ್ಪತ್ತಿಯು ಹೇಳಲ್ಪಡುತ್ತದೆ. ಹೀಗೆ ಎರಡು ಶ್ರುತಿಗಳಿಂದ ವಿರುದ್ಧಗಳಾದ ಎರಡು ಅರ್ಥಗಳನ್ನು ಹೇಳಿದ್ದರಿಂದ ಶ್ರುತಿಗಳಿಗೆ ವಿರೋಧವು.

ಪೀಠಿಕೆ ॥ ಜೀವನು ಉತ್ಪತ್ತಿಯುಳ್ಳವನು. ನಿತ್ಯಾನಾಂ ಎನ್ನುವ ನಿತ್ಯತ್ವಪ್ರತಿಪಾದಕ ಶ್ರುತಿಯಿಂದಲೂ ಪ್ರಾಗಭಾವಶೂನ್ಯತ್ವಾದಿ ಯುಕ್ತಿಯಿಂದಲೂ. ಇದಕ್ಕೆ ವಿರುದ್ಧವಾದ ಉತ್ಪತ್ತಿಶ್ರುತಿಯು ಅಪ್ರಮಾಣವೇ, ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆಃ

**ಭಾಷ್ಯ ॥ ಅತ ಆಹ ॥ ೨ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾ—

**ಸೂತ್ರ ॥ ಓಂ ಜ್ಞೋಽತ ಏವ ಓಂ ॥ ೧೮ ॥**

**ಭಾಷ್ಯ ॥ ಜೀವೋಽಪ್ಯತ ಏವ ಪರಮೇಶ್ವರಾದುತ್ಪದ್ಯತೇ। ಶಬ್ದಾದೇವ। ತೇ ವಾ ಏತೇ ಚಿದಾತ್ಮಾನೋಽವಿನಷ್ಟಾಃ ಪರಂ ಜ್ಯೋತಿರ್ನಿವಿಶಂತ್ಯವಿನಷ್ಟಾ ಏವೋತ್ಪದ್ಯಂತೇ ನ ವಿನಶ್ಯಂತಿ ಕದಾಚನ। ಇತಿ (ಚ) ಕಾಷಾಯಣಶ್ರುತಿಃ ॥ ೧೮ ॥ ॥ ೩ ॥**

ಭಾಷ್ಯಾರ್ಥ ॥ (ಆಕಾಶಾದಿಗಳು ಮಾತ್ರವಲ್ಲ) ಜೀವನೂ ಕೂಡ ಪರಮೇಶ್ವರನಿಂದಲೇ ಹುಟ್ಟುತ್ತಾನೆ. ಈ ಶ್ರುತಿಯಿಂದಲೇ (ಅಂದರೆ ಯಾವ ಪ್ರಮಾಣದಿಂದ ಜೀವನಿಗೆ ನಿತ್ಯತ್ವವು

ಸಿದ್ಧಿಸುತ್ತದೋ ಅದೇ ಪ್ರಮಾಣದಿಂದಲೇ, ಉತ್ಪತ್ತಿಯೂ ಸಿದ್ಧಿಸುತ್ತದೆ. ಪುನಃ ಪ್ರಮಾಣಾಂತರವನ್ನು ಹುಡುಕಬೇಕಾಗಿಲ್ಲ) ಪ್ರಸಿದ್ಧರಾದ ಜೀವರು ಜ್ಞಾನಸ್ವರೂಪರು ಸ್ವರೂಪನಾಶರಹಿತರಾಗಿ ಪ್ರಕಾಶರೂಪನಾದ ಪರಬ್ರಹ್ಮನನ್ನು ಪ್ರಲಯ ಕಾಲದಲ್ಲಿ ಪ್ರವೇಶಮಾಡುತ್ತಾರೆ. ಪುನಃ ಸೃಷ್ಟಿಕಾಲದಲ್ಲಿ ಸ್ವರೂಪತಃ ಅನಾದಿನಿತ್ಯರಾದವರೇ ದೇಹಸಂಬಂಧದಿಂದ ಹುಟ್ಟುತ್ತಾರೆ. ಯಾವಾಗಲೂ ಮಹಾಪ್ರಲಯಕಾಲದಲ್ಲಿ ವಾ ಇತರ ಕಾಲದಲ್ಲಿ ಸ್ವರೂಪತಃ ನಾಶವನ್ನು ಹೊಂದುವುದಿಲ್ಲ ಎಂದು ಕಾಷಾಯಣ ಶ್ರುತಿಯು ಅದೆ. (ಏವಂಚ ಈ ಶ್ರುತಿಯಲ್ಲಿ ನಿತ್ಯತ್ವಕ್ಕೆ ವಿರೋಧವಿಲ್ಲದೇನೇ ಉತ್ಪತ್ತಿಯನ್ನು ಹೇಳಿದ್ದರಿಂದ ಅನಾದಿತ್ವ ಶ್ರುತ್ಯಾದಿಗಳಿಂದ ವಿರೋಧವಿಲ್ಲ ॥ ೧೮ ॥

ಪೀಠಿಕೆ ॥ ಅನಾದಿನಿತ್ಯನಾದ ಜೀವನಿಗೆ ಉತ್ಪತ್ತಿಯು ಹೇಗೆ ಕೂಡುತ್ತದೆ, ವ್ಯಾಹತವಾಗಿದೆ ಎಂದರೆ—

## ಸೂತ್ರ ॥ ಓಂ ಯುಕ್ತೇಶ್ಚ ಓಂ ॥ ೧೯ ॥

ಸೂತ್ರಾರ್ಥ ॥ ಅನಾದಿನಿತ್ಯನಾದಾಗ್ಯೂ ಜೀವನು ಹುಟ್ಟುತ್ತಾನೆ. ಪರಾಧೀನ ವಿಶೇಷರೂಪವಾದ ದೇಹಾದ್ಯುಪಾಧಿಯನ್ನು ಅಪೇಕ್ಷಿಸಿ ಉತ್ಪತ್ತಿಯು ಯುಕ್ತವಾಗುವುದರಿಂದ.

**ಭಾಷ್ಯ ॥ ನಿತ್ಯಸ್ಯಾಪಿ ಜೀವಸ್ಯೋಪಾಧ್ಯಪೇಕ್ಷಯೋತ್ಪತ್ತಿರ್ಯುಜ್ಯತೇ । ಉತ್ಪದ್ಯಂತೇ ಚಿದಾತ್ಮಾನೋ ನಿತ್ಯಾನಿತ್ಯಾತ್ಪ (ನಿತ್ಯಾನ್ನಿತ್ಯಾಃ ಪ)ರಾತ್ಮನಃ । ಉಪಾಧ್ಯಪೇಕ್ಷಯಾ ತೇಷಾಮುತ್ಪತ್ತಿರಪಿ ಗೀಯತೇ ॥ ಇತಿ (ಚ) ವ್ಯೋಮಸಂಹಿತಾಯಾಂ ॥ ೧೯ ॥**

**ಅಧಿ. ೧೧ ॥ ॥ ४ ॥**

ಭಾಷ್ಯಾರ್ಥ ॥ ಅನಾದಿನಿತ್ಯನಾದಾಗ್ಯೂ ಜೀವನಿಗೆ ಉಪಾಧಿಭೂತಶರೀರೋತ್ಪತ್ತಿಯನ್ನು ಅಪೇಕ್ಷಿಸಿ ಉತ್ಪತ್ತಿ ವಚನವು (ನವಶರೀರಯೋಗರೂಪವಾದ ಪರಾಧೀನ ವಿಶೇಷ ಲಾಭವೇ ಉತ್ಪತ್ತಿಯು.) ಯುಕ್ತವಾಗುತ್ತದೆ. (ಈ ವಿಷಯದಲ್ಲಿಯೇ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ.) ಅನಾದಿನಿತ್ಯರಾದ ಜೀವರು ದೇಹತೋಽಪಿ ನಿತ್ಯನಾದ ಶ್ರೀಹರಿಯಿಂದ ಹುಟ್ಟುತ್ತಾರೆ. ಬಾಹ್ಯವಾದ ಉಪಾಧ್ಯುತ್ಪತ್ತ್ಯಪೇಕ್ಷೆಯಿಂದ (ಅಂದರೆ ಉತ್ಪತ್ತಿಯುಳ್ಳ ಶರೀರರೂಪವಾದ ಉಪಾಧಿಸಂಬಂಧದಿಂದ. ಜೀವರಿಗೆ (ಅನಾದಿನಿತ್ಯತ್ವ ಮಾತ್ರವಲ್ಲ) ಉತ್ಪತ್ತಿಯೂ ಕೂಡ ಹೇಳಲ್ಪಡುತ್ತದೆ, ಎಂದು ವ್ಯೋಮಸಂಹಿತೆಯಲ್ಲಿ ಇದೆ. (ಆದಕಾರಣ ಅನಾದಿನಿತ್ಯರಾದ ಜೀವರಿಗೂ ಉತ್ಪತ್ತಿಯು ಯುಕ್ತವು. ॥ ೧೯ ॥

## ಮಾಯಾವಾದಿರೀತ್ಯಾ

ವಿಚಾರ ॥ ಘಟದಲ್ಲಿ ಲೌಹಿತ್ಯದ್ವಂತೆ ಇಂದ್ರಿಯ ಸನ್ನಿಕರ್ಷಾದಿರೂಪವಾದ ಹೇತ್ವಂತರವನ್ನು ಅನುಸರಿಸಿ ಇರುವುದರಿಂದ ಆತ್ಮನಿಗೆ ಜ್ಞಾನವು ಆಗಂತುಕವು, ಎಂದು ಪೂರ್ವಪಕ್ಷವು ಬಂದರೆ, ಆತ್ಮನು ಜ್ಞಾನರೂಪನು, ಅನುತ್ಪತ್ತಿಯಿದ್ದುದರಿಂದಲೂ ಮತ್ತು ಸ್ವಯಂ ಜ್ಯೋತಿಃ ಇತ್ಯಾದಿ ಶ್ರುತಿಯಿಂದಲೂ, ಇಂದ್ರಿಯ ಸನ್ನಿಕರ್ಷಾದಿಗಳಾದರೂ ವಿಷಯ ವಿಶೇಷಜ್ಞಾನವು ಹುಟ್ಟುವುದಕ್ಕಾಗಿಯೇ, ಹೀಗೆ ಸಿದ್ಧಾಂತವು ಎಂದು ಅದ್ವೈತಿಗಳು ಹೇಳುತ್ತಾರೆ. ಅದು ಅಯುಕ್ತವು. ಯುಕ್ತಿವಿರೋಧವನ್ನು

ಹೇಳುವುದು ಈ ಪಾದದಲ್ಲಿ ಸಂಗತವಲ್ಲ. ಜ್ಞಾತೃವಾಚಕವಾದ ಜ್ಞಶಬ್ದವು ಜ್ಞಾನತ್ವ ಎನ್ನುವ ಅರ್ಥವನ್ನು ಹೇಳಲಾರದು. ಅಂತ ಕರಣಾವಚ್ಛಿನ್ನಕ್ಕೆ ಜ್ಞಾತೃತ್ವವಿದ್ದರೂ ಅದು ಜನ್ಯವಾದುದರಿಂದ ಅನುತ್ಪತ್ತಿ ಜ್ಞತ್ವ (ಜ್ಞಾನತ್ವ)ಗಳಿಗೆ ಏಕಾಧಿಕರಣತ್ವವು ಸಿದ್ಧಿಸಲಾರದು. ಅನುತ್ಪತ್ತಿ ಮಾತ್ರದಿಂದ ಜ್ಞತ್ವವು ಸಿದ್ಧಿಸಲಾರದು.

## ಅಧಿಕರಣ ಸಾರಾಂಶ

ಜೀವನು ಉತ್ಪತ್ತಿಯುಳ್ಳವನೋ ಅಲ್ಲವೋ ಎಂದು ಸಂದೇಹವು. ನಿತ್ಯೋ ನಿತ್ಯಾನಾಂ ಎಂದು ಜೀವರಿಗೆ ನಿತ್ಯತ್ವವನ್ನು ಹೇಳಿದ್ದರಿಂದ ಉತ್ಪತ್ತಿಯಿಲ್ಲ. ಸರ್ವ ಏತೇ ಚಿದಾತ್ಮಾನೋ ವ್ಯುಚ್ಚರಂತಿ ಎನ್ನುವ ಉತ್ಪತ್ತಿ ಶ್ರುತಿಯಾದರೂ ಜೀವಸ್ವರೂಪೋತ್ಪತ್ತಿಗೆ ಕಾರಣವು ಇಲ್ಲದಿರುವುದರಿಂದ ಕಾರಣಶೂನ್ಯತ್ವಾದಿ ಯುಕ್ತ್ಯುಪೇತವಾದ ಜೀವನಿತ್ಯತ್ವಶ್ರುತಿಯಿಂದ ಬಾಧಿತವಾಗಿದೆ. ಎಂದರೆ ತೇ ವಾ ಏತೇ ಚಿದಾತ್ಮಾನಃ ಎನ್ನುವ ಶ್ರುತಿಯಲ್ಲಿ ವಿನಾಶವಿಲ್ಲದೇನೇ ಜೀವನಿಗೆ ಸ್ವರೂಪೇಣ ಉತ್ಪತ್ತಿಯಿಲ್ಲವಾದರೂ ಉಪಾಧಿಯಾದ ಶರೀರಕ್ಕೆ ಉತ್ಪತ್ತಿಯಿದ್ದುದರಿಂದ ಉತ್ಪತ್ತಿಯು ಕೂಡುತ್ತದೆ. ಆದಕಾರಣ ಶ್ರುತಿಗಳಿಗೆ ವಿರೋಧವಿಲ್ಲ. ಬ್ರಹ್ಮನಲ್ಲಿ ಪರಾಧೀನ ವಿಶೇಷಾವ್ಯಾಪಿತ ರೂಪವಾದ ಉತ್ಪತ್ತಿಶ್ರುತಿಯು ಇಲ್ಲದಿರುವುದರಿಂದ ಬ್ರಹ್ಮನಲ್ಲಿ ಅನುತ್ಪತ್ತಿಶ್ರುತಿಗೆ ಉತ್ಪತ್ತ್ಯಭಾವಪರತ್ವವನ್ನೇ ಇಟ್ಟುಕೊಳ್ಳಬೇಕು. ಜೀವಾದಿಗಳಲ್ಲಿ ಉತ್ಪತ್ತಿಶ್ರುತಿಯು ಇದ್ದುದರಿಂದ ಅನುತ್ಪತ್ತಿಶ್ರುತಿಗೆ ಉತ್ಪತ್ತ್ಯ ಭಾವಪರತ್ವವು ಕೂಡದಿರುವುದರಿಂದ ಅನೇಕಾರ್ಥತ್ವವು ನ್ಯಾಯವಾಗಿದೆ. ಆದಕಾರಣ ಜೀವನು ದೇಹಸಂಬಂಧಕ್ಕೆ ಆಶ್ರಯವಾದ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯುಳ್ಳವನೇ. ॥ ಅಧಿ.೧೧ ॥

ಜ್ಞಾಧಿಕರಣವು ಸಮಾಪ್ತವಾಯಿತು.

॥ ಓಂ ಜೀವಪರಿಮಾಣ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥

# ೧೨ ಉತ್ಕ್ರಾಂತ್ಯಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಜೀವಪರಿಮಾಣವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಶ್ರುತಿ ವಿರೋಧವನ್ನೇ ತೋರಿಸುತ್ತಾರೆ—

ಭಾಷ್ಯ ॥ (೧) ವ್ಯಾಪ್ತಾ ಹ್ಯಾತ್ಮಾನಶ್ಚೇತನಾ ನಿರ್ಗುಣಾಶ್ಚ ಸರ್ವಾತ್ಮಾನಃ ಸರ್ವರೂಪಾ ಅನಂತಾಃ। ಇತಿ ಕಾಷಾಯಣಶ್ರುತೌ ವ್ಯಾಪ್ತತ್ವಂ ಪ್ರತೀಯತೇ । (೨) ಅಣುರ್ಹ್ಯೇಷ ಆತ್ಮಾಯಂ ವಾ ಏತೇ ಸಿನೀತಃ ಪುಣ್ಯಂ ಚಾಪುಣ್ಯಂ ಚ । ಇತಿ ಗೌಪವನ (ಗೌತಮ) ಶ್ರುತಾವಣುತ್ವಮಿತ್ಯತೋ ವಿರೋಧ ಇತಿ । ಅತೋ ಬ್ರವೀತಿ ॥ ೧ ॥

ಭಾಷ್ಯಾರ್ಥ ॥ (೧) ಪರಮಾತ್ಮರೂಪವಿಶೇಷಗಳು, ಪರಮಮಹತ್ಪರಿಮಾಣವುಳ್ಳವುಗಳು, ಜ್ಞಾನಸ್ವರೂಪಗಳು, ಸತ್ವಾದಿಗುಣಶೂನ್ಯಗಳು, ಸರ್ವವಸ್ತುಗಳು ಆದಾನಾದಿಗಳನ್ನು ಮಾಡತಕ್ಕವುಗಳು.

ಪೂರ್ಣಸ್ವರೂಪವುಳ್ಳವುಗಳು, ಕಾಲತಃ ಗುಣತಶ್ಚ ಅಪರಿಚ್ಛಿನ್ನಗಳು. ಹೀಗೆ ಸಿದ್ಧಾಂತರೀತ್ಯಾ ಶ್ರುತ್ಯರ್ಥವು. (ಪೂರ್ವಪಕ್ಷ ರೀತ್ಯಾ ಶ್ರುತ್ಯರ್ಥವು) ಜೀವರು ಸರ್ವಜ್ಞರು ಸರ್ವವಸ್ತುಗಳ ಆದಾನಾದಿಗಳನ್ನು ಮಾಡತಕ್ಕವರು, ಪೂರ್ಣರು. (ಶ್ರುತಿಗೆ ಈಶ್ವರಪರತ್ವಜ್ಞಾಪನಕ್ಕಾಗಿ ವಾಕ್ಯಶೇಷೋದ್ಧಾರವು.) ಎನ್ನುವ ಕಾಶಾಯಣ ಶ್ರುತಿಯಲ್ಲಿ(ಜೀವನಿಗೆ ವ್ಯಾಪ್ತತ್ವವು ತೋರುತ್ತದೆ. (೨) ಯಾವ ಜೀವನನ್ನು ಈ ಪುಣ್ಯವೂ ಪಾಪವೂ ಸಂಬಂಧಿಸುತ್ತವೋ ಈ ಜೀವನು ಅಣುವೇ ಆಗಿರುತ್ತಾನೆ. (ಜೀವಪರತ್ವಜ್ಞಾಪನಕ್ಕಾಗಿ ಯಂ ವಾ ಏತೇ ಎನ್ನುವ ವಾಕ್ಯಶೇಷೋದ್ಧಾರವು ಎನ್ನುವ ಗೌಪವನ (ಗೌತಮ) ಶ್ರುತಿಯಲ್ಲಿ ಜೀವನಿಗೆ ಅಣುತ್ವವು ತೋರುತ್ತದೆ. ಆದಕಾರಣ ಶ್ರುತಿಗಳಿಗೆ ವಿರೋಧವು, ಎಂದರೆ—ತಥಾ ಚ ವ್ಯಾಪ್ತಾ ಹ್ಯಾತ್ಮಾನಃ ಎನ್ನುವ ಶ್ರುತಿಯಿಂದ ಜೀವನು ವ್ಯಾಪ್ತನೇ. ಬಹುವಚನವಿದ್ದುದರಿಂದ ಇದು ಈಶ್ವರವಿಷಯಕವೆಂದೂ ಹೇಳಕೂಡದು. ದೇಹದ ಸರ್ವಾವಯವಗಳಲ್ಲಿರತಕ್ಕ ಸ್ಪರ್ಶಾದಿ ಜ್ಞಾನವಿದ್ದುದರಿಂದ ಅಣುತ್ವಪ್ರತಿಪಾದಕ ಶ್ರುತಿವಿರೋಧವೂ ಇಲ್ಲ. ಕಾಯಪರಿಣಾಮವುಳ್ಳವನೆನ್ನುವ ಪಕ್ಷವು ಮೊದಲೇ ದೂಷಿತವಾಗಿದೆ. ತಥಾಚ ಅಣುತ್ವಶ್ರುತಿಯು ಅಪ್ರಮಾಣವೇ ಎಂದು ಪೂರ್ವಪಕ್ಷವು ಬಂದರೆ) ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ. ಹೀಗೆ ಶಂಕೆಯು ಬಂದರೆ ಉತ್ತರವನ್ನು ಕೊಡುತ್ತಾರೆ.

## ಸೂತ್ರ ॥ ಓಂ ಉತ್ಕ್ರಾಂತಿಗತ್ಯಾಗತೀನಾಂ ಓಂ ॥ ೨೦ ॥

**ಭಾಷ್ಯ ॥ ಹೇತೂನಾಂ ಸಕಾಶಾದಣುರೇವ ॥ ೨ ॥**

ಭಾಷ್ಯಾರ್ಥ ॥ ಜೀವನು ಅಣುವೇ. (ವ್ಯಾಪ್ತನಲ್ಲ) ಸೋಽಸ್ಮಾಚ್ಛರೀರಾತ್ ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಉತ್ಕ್ರಮಣ, ಗಮನ, ಆಗಮನರೂಪ ಹೇತುಗಳಿಂದ. (ತಥಾಚ, ವ್ಯಾಪ್ತದ್ರವ್ಯವಾದ ಆಕಾಶಾದಿಗಳಿಗೆ ಉತ್ಕ್ರಮಣಾದಿಗಳು ಕೂಡುವುದಿಲ್ಲ. ಮಧ್ಯಮಪರಿಮಾಣವು ಮೊದಲೇ ನಿರಾಕೃತವಾಗಿದೆ. ಪರಿಶೇಷಾತ್ ಜೀವರಿಗೆ ಅಣುತ್ವವೇ ಸಿದ್ಧಿಸುತ್ತದೆ.)

ಪೀಠಿಕೆ ॥ ಜೀವನಿಗೆ ಉತ್ಕ್ರಮಣಾದಿಗಳೇ ಹೇಗೆ ಸಿದ್ಧಿಸುತ್ತವೆ, ಎಂದರೆ—

**ಭಾಷ್ಯ ॥ ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮಭಿಗಚ್ಛತ್ಯಮುಷ್ಮಾದಿಮಂ ಲೋಕಮಾಗಚ್ಛತಿ ಸ ಗರ್ಭೀಭವತಿ ಸ ಪ್ರಸೂಯತೇ ಸ ಕರ್ಮ ಕುರುತೇ । ಇತಿ ಪೌಷ್ಯಾಯಣಶ್ರುತೇಃ ॥ ೨೦ ॥ ॥ ೩ ॥**

ಭಾಷ್ಯಾರ್ಥ ॥ ಆ ಜೀವನು ಈ ಬಾಹ್ಯಶರೀರಬಂಧದಿಂದ ಹೊರಟುಹೋಗಿ ಸ್ವರ್ಗಾದಿ ಲೋಕವನ್ನು ಕುರಿತು ಹೊಂದುತ್ತಾನೆ. ಸ್ವರ್ಗಲೋಕದಿಂದ ಭೂಲೋಕವನ್ನು ಕುರಿತು ಬರುತ್ತಾನೆ. ಅನಂತರದಲ್ಲಿ ಗರ್ಭಸ್ಥನಾಗುತ್ತಾನೆ. (ತಾಯಿಯ ಹೊಟ್ಟೆಯೊಳಗೆ ಪ್ರವೇಶಿಸುತ್ತಾನೆ.) ಆಮೇಲೆ ಹುಟ್ಟುತ್ತಾನೆ. ಆತನು ಪುಣ್ಯಪಾಪ ಸಾಧನವಾದ ಕರ್ಮವನ್ನು ಮಾಡುತ್ತಾನೆ. ಹೀಗೆ, ಪೌಷ್ಯಾಯಣ ಶ್ರುತಿಯಿಂದ. (ಉತ್ಕ್ರಾಂತ್ಯಾದಿ ಹೇತುಗಳು ಸಿದ್ಧಗಳಾಗಿವೆ.) ॥ ೨೦ ॥

ಪೀಠಿಕೆ ॥ ಹೀಗೆ, ಉತ್ಕ್ರಾಂತ್ಯಾದಿ ಹೇತುಗಳಿಂದ ಜೀವನಿಗೆ ಅಣುತ್ವವು ಸಿದ್ಧವಾಗುತ್ತಿರಲು, ಆ

ಉತ್ಕ್ರಾಂತ್ಯಾದಿಗಳು ಜೀವನಿಗೆ (೧) ಶ್ರೀಹರಿಯಿಂದಲೂ, (೨) ತನ್ನಷ್ಟಕ್ಕೇನೇ ಆಗುತ್ತವೋ, ಎಂದು ವಿಚಾರವು ಬಂದರೆ, ಉತ್ತರ ಸೂತ್ರಕ್ಕೆ ಅವತಾರಿಕೆ ಕೊಡುವುದಕ್ಕಾಗಿ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಭಾಷ್ಯ ॥ ತತ್ರ ಸ್ವಾತಂತ್ರ್ಯಪ್ರತೀತೇಃ । ಏಕಃ ಪ್ರಸೂಯತೇ ಜಂತುರೇಕ ಏವ ಪ್ರಮೀಯತೇ । ಏಕೋಽನುಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಂ । ಇತ್ಯಾದೇಶ್ಚ ಸ್ವಯಮೇವೇತಿ । ಅತೋ ವಕ್ತಿ ॥ ೪ ॥**

ಭಾಷ್ಯಾರ್ಥ ॥ ಆ ಉದಾಹೃತ ಶ್ರುತಿಯಲ್ಲಿ ಜೀವನಿಗೆ ಉತ್ಕ್ರಾಂತ್ಯಾದಿಗಳಲ್ಲಿ ಸ್ವಾತಂತ್ರ್ಯಾದಿಗಳು ತೋರುವುದರಿಂದ ತನ್ನಷ್ಟಕ್ಕೇನೇ ಉತ್ಕ್ರಮಣಾದಿಗಳು, ಈಶ್ವರನಿಂದ ಅಲ್ಲ (ಈ ಶ್ರುತಿಯಲ್ಲಿ ಜೀವನಿಗೆ ಉತ್ಕ್ರಮಣಾದಿಗಳೇ ತೋರುತ್ತವೆ. ಸ್ವಾತಂತ್ರ್ಯವು ತೋರುವುದಿಲ್ಲ ಎಂದರೆ,) ಸ್ವತಂತ್ರನಾದ ಜೀವನು ಹುಟ್ಟುತ್ತಾನೆ. ಸ್ವತಂತ್ರನೇ ನಾಶ ಹೊಂದುತ್ತಾನೆ. ಸ್ವತಂತ್ರನೇ ಸುಕೃತವನ್ನು ಉಣ್ಣುತ್ತಾನೆ. ಸ್ವತಂತ್ರನೇ ದುಷ್ಕೃತವನ್ನು ಉಣ್ಣುತ್ತಾನೆ, ಇದುಮೊದಲಾದ ಸ್ಮೃತಿವಚನದಿಂದಲೂ, ಸ್ವಾತಂತ್ರ್ಯವೇ ಸಿದ್ಧಿಸುತ್ತದೆ. (ತಥಾಚ, ಈ ಸ್ಮೃತ್ಯನುಸಾರವಾಗಿ ಹಿಂದಿನ ಶ್ರುತಿಗೂ ಪರಾಧೀನತ್ವವನ್ನು ನಿಷೇಧಿಸುವುದರಲ್ಲಿ ತಾತ್ಪರ್ಯವು) ಹೀಗೆ ಪೂರ್ವಪಕ್ಷವು ಬಂದರೆ, ಪರಿಹಾರಕ್ಕಾಗಿ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ಸ್ವಾತ್ಮನಾ ಚೋತ್ತರಯೋಃ ಓಂ ॥ ೨೧ ॥

ಸೂತ್ರಾರ್ಥ ॥ ಸೋಽಸ್ಮಾತ್ ಎಂದು ಉದಾಹೃತವಾದ ಸಾಧಾರಣ ವಾಕ್ಯದ ದೆಶೆಯಿಂದ ಮೇಲಿನದ್ದಾದ (೧) ಸ ಏತೇನ (೨) ಏಷ ಹ್ಯೇವ ಎನ್ನುವ ಎರಡು ವಾಕ್ಯಗಳಲ್ಲಿ ಪರಮಾತ್ಮಾಧೀನತ್ವವನ್ನೇ ಪ್ರತಿಪಾದಿಸಿದ್ದರಿಂದ ಜೀವನಿಗೆ ಪರಮಾತ್ಮನಿಂದಲೇ ಉತ್ಕ್ರಮಣಾದಿಗಳು, ಸ್ವತಃ ಅಲ್ಲ

**ಭಾಷ್ಯ ॥ (೧) ಸ ಏತೇನೈವ ಸ್ವಾತ್ಮನಾ ಪರೇಣೇಮಂ ಗರ್ಭಮನುಪ್ರವಿಶತಿ ಪರೇಣ ಜಾಯತೇ ಪರೇಣ ಕರ್ಮ ಕುರುತೇ ಪರೇಣ ನೀಯತೇ ಪರೇಣೋನ್ನೀಯತೇ ತಂ ವಾ ಏತಮಭಿವದಂತಿ ಸ್ವಾತ್ಮಾ । ಇತಿ ॥ (೨) ಏಷ ಹ್ಯೇವಾನಂದಮಾದತ್ತೇ ಏಷ ಹ್ಯೇನಂ ಜೀವಮಭಿಜೀವಯತ್ಯೇಷ ಉದ್ಗಮಯತ್ಯೇಷ (ಗಮಯತ್ಯೇಷ) ಆಗಮಯತಿ (ಪೌಷ್ಯಾಯಣಶ್ರುತಿಃ)। ಇತ್ಯುತ್ತರಯೋರ್ವಾಕ್ಯಯೋಃ ಪರಮಾತ್ಮನೈವೋತ್ಕ್ರಾಂತಾದಯಃ ॥ ೨೧ ॥ ॥ ೫ ॥**

ಭಾಷ್ಯಾರ್ಥ ॥ (೧) ಆ ಜೀವನು ತನ್ನಲ್ಲಿರತಕ್ಕ ಸ್ವರೂಪಭೂತ ಆನಂದವನ್ನು ಸ್ವೀಕರಿಸುವುದರಿಂದ ಸ್ವಾತ್ಮಶಬ್ದವಾಚ್ಯ ಶ್ರೀಹರಿಯಿಂದ ಅನುಗೃಹೀತನಾಗಿ ಮಾತೃದೇಹದಲ್ಲಿದ್ದ ಗರ್ಭವನ್ನು ಪ್ರವೇಶಿಸುತ್ತಾನೆ. ಪರಮಾತ್ಮನಿಂದ ಪ್ರೇರಿತನಾಗಿಯೇ ಹುಟ್ಟುತ್ತಾನೆ. ಪರಮಾತ್ಮನಿಂದ ಪ್ರೇರಿತನಾಗಿಯೇ ಕರ್ಮವನ್ನು ಮಾಡುತ್ತಾನೆ. ಪರಮಾತ್ಮನಿಂದಲೇ ಸ್ವರ್ಗಾದಿ ಲೋಕವನ್ನು ಒಯ್ಯಲ್ಪಡುತ್ತಾನೆ. ಮೋಕ್ಷಕ್ಕಾಗಿ ಮೇಲಕ್ಕೆ ಒಯ್ಯಲ್ಪಡುತ್ತಾನೆ. ಅಂತಹ ಈ ವಿಷ್ಣುವನ್ನು ಸ್ವಾತ್ಮಾ ಎಂದು (ವಿದ್ವಾಂಸರು) ಹೇಳುತ್ತಾರೆ. (೨) ಈ ಶ್ರೀಹರಿಯು ಜೀವಕೃತ ಶುಭಕರ್ಮಫಲವನ್ನು ಸ್ವೀಕರಿಸುತ್ತಾನೆ.

ಅಥವಾ ಸ್ವರೂಪಾನಂದವನ್ನು ಅನುಭವಿಸುತ್ತಾನೆ. ಈ ಶ್ರೀಹರಿಯೇ ಜೀವನನ್ನು ಬದುಕಿಸುತ್ತಾನೆ. ದೇಹದಿಂದ ಹೊರಡಿಸುತ್ತಾನೆ. (ಲೋಕಾಂತರಕ್ಕೆ ಕಳುಹಿಸುತ್ತಾನೆ.) ಶ್ರೀಹರಿಯೇ ದೇಹಕ್ಕೆ ಪ್ರವೇಶಮಾಡಿಸುತ್ತಾನೆ. ಅಥವಾ ಭೂಲೋಕಕ್ಕೆ ಹೊಂದಿಸಿಕೊಡುತ್ತಾನೆ, ಎಂದು **ಸೋಽಸ್ಮಾತ್** ಎನ್ನುವ ವಾಕ್ಯದಿಂದ ಮೇಲಿನದ್ದಾದ ಈ ವಾಕ್ಯಗಳಲ್ಲಿ (ಜೀವನಿಗೆ) ಪರಮಾತ್ಮನಿಂದಲೇ ಉತ್ಕ್ರಮಣಾದಿಗಳು, ಎಂದು. (ಪ್ರತಿಪಾದಿತಗಳಾಗಿವೆ.) ತಥಾಚ, **ಸೋಽಸ್ಮಾತ್** ಎನ್ನುವ ಪೂರ್ವವಾಕ್ಯಕ್ಕೂ ಈ ಅರ್ಥವನ್ನೇ ಮಾಡತಕ್ಕದ್ದು. ಸ್ಮೃತಿಯಾದರೂ, ದುಃಖಾನುಭವದಲ್ಲಿ ಪರಮಾತ್ಮದತ್ತ ಸ್ವಾತಂತ್ರ್ಯವನ್ನು ಹೇಳುತ್ತದೆ. ॥ ೨೧ ॥

**ಪೀಠಿಕೆ** ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್ ಓಂ ॥ ೨೨ ॥

**ಸೂತ್ರಾರ್ಥ** ॥ ಜೀವನು ಅಣುವಲ್ಲ, ಅಣುತ್ವವಿರುದ್ಧ ಮಹತ್ವವನ್ನು ಬೋಧಿಸತಕ್ಕ **ವ್ಯಾಪ್ತಾಹ್ಯಾತ್ಮಾನಃ** ಎನ್ನುವ ಶ್ರುತಿಯಿಂದ, ಎಂದರೆ, ಹಾಗೆ ಹೇಳಕೂಡದು. ಈ ವ್ಯಾಪಕತ್ವಶ್ರುತಿಗೆ ಜೀವಭಿನ್ನ ಪರಮಾತ್ಮ ಪ್ರಕರಣತ್ವವಿದ್ದುದರಿಂದ ಪರಮಾತ್ಮ ಪ್ರತಿಪಾದಕತ್ವವಿದ್ದುದರಿಂದ.

**ಭಾಷ್ಯ ॥ ವ್ಯಾಪ್ತಾ ಹ್ಯಾತ್ಮಾನಶ್ಚೇತನಾ ನಿರ್ಗುಣಾಶ್ಚ । ಇತಿ ವ್ಯಾಪ್ತಿಶ್ರುತೇರ್ನಾಣುರ್ಜೀವ ಇತಿ ಚೇತ್ । ನ ॥ ಸ ಆತ್ಮೇದಂ ಸೃಜತಿ ಸ ದ್ವಿಧೇದಂ ಬಿಭರ್ತ್ಯಂತರ್ಬಹಿಶ್ಚ ಸ ಬಹುಧೇದಮನುಪ್ರವಿಶ್ಯಾತ್ಮನೋಽಭಿನಯತಿ ಸ ಆತ್ಮಾ ಸ ಆತ್ಮಾನಸ್ಸ ಈಶಃ ಸ ವಿಷ್ಣುಃ ಸ ಪರಃ ಪರೋ ವರೀಯಾನ್ ಇತಿ ಪರಮಾತ್ಮಾಧಿಕಾರತ್ವಾತ್ ॥ ೬ ॥**

**ಭಾಷ್ಯಾರ್ಥ** ॥ ಜೀವನು ಅಣುವಲ್ಲ, ವ್ಯಾಪ್ತಾ ಹ್ಯಾತ್ಮಾನಃ ಎಂದು ವ್ಯಾಪ್ತ್ಯಭಿಧಾಯಕ ಶ್ರುತಿಯಿದ್ದುದರಿಂದ, ಎಂದರೆ, ಈ ಶ್ರುತಿಬಲದಿಂದ ಜೀವನಿಗೆ ವ್ಯಾಪ್ತತ್ವವನ್ನು ಹೇಳಕೂಡದು. ಸ ಆತ್ಮಾ ಎನ್ನುವ ಶ್ರುತಿಯಲ್ಲಿ ಪರಮಾತ್ಮನನ್ನು ಹೇಳಿದ್ದರಿಂದ ಇದು ಪರಮಾತ್ಮಾಧಿಕಾರವಾಗಿದೆ. ಈ ಶ್ರುತಿಯು ಪರಮಾತ್ಮ ಪ್ರಕರಣವಾಗಿರುವುದರಿಂದ ಪರಮಾತ್ಮ ವಿಷಯಕವೇ ಆಗಿದೆ. ಆದಕಾರಣ, ಸಾವಕಾಶವಾಗಿದೆ. ಆ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸುತ್ತಾನೆ. ಶ್ರೀಹರಿಯು ಅಂತರ್ಗತನು, ಬಹಿರ್ಗತನು, ಹೀಗೆ ಎರಡು ಪ್ರಕಾರವಾಗಿ ಅಂತರ, ಬಾಹ್ಯ ಜಗತ್ತನ್ನು ಅಂತಃ ಪುರುಷರೂಪದಿಂದಲೂ, ಬಹಿಃ ಕಾಲ ರೂಪದಿಂದಲೂ ಧರಿಸುತ್ತಾನೆ. ಆ ಶ್ರೀಹರಿಯು ಬಹುರೂಪಗಳುಳ್ಳವನಾಗಿ ಈ ಜಗತ್ತನ್ನು ಪ್ರವೇಶ ಮಾಡಿ ತನಗೆ ಸ್ವತಏವ ಅಭಿಮುಖವಾಗಿ ತನ್ನ ಕ್ರಿಯೆಗೆ ಅನುಕೂಲ ಕ್ರಿಯೆಯುಳ್ಳದ್ದನ್ನಾಗಿ ಮಾಡುತ್ತಾನೆ. ಆ ಶ್ರೀಹರಿಯು ಆತ್ಮಾ ಎನ್ನುವ ಏಕವಚನಾಂತ ಶಬ್ದದಿಂದಲೂ, ಆತ್ಮಾನಃ ಎನ್ನುವ ಬಹುವಚನಾಂತ ಶಬ್ದದಿಂದಲೂ ವಾಚ್ಯನು. ಆತನು ಸರ್ವಸ್ವಾಮಿಯು, ವ್ಯಾಪ್ತನು, ವಿಲಕ್ಷಣನು, ಸರ್ವೋತ್ತಮನು.

**ವಿಶೇಷಾಂಶ** ॥ ಸ ಆತ್ಮಾನಃ ಎನ್ನುವ ಶ್ರುತಿಯಲ್ಲಿ ರೂಪಬಹುತ್ವದಿಂದ ಬಹುವಚನವನ್ನು ಹೇಳಿದ್ದರಿಂದ ವ್ಯಾಪ್ತ ಹ್ಯಾತ್ಮಾನಃ ಇತ್ಯಾದಿ ಶ್ರುತಿಯಲ್ಲಿದ್ದ ಬಹುವಚನ ವಿರೋಧವು ಇಲ್ಲವೆಂದು

ಸೂಚಿತವಾಯಿತು. ಜೀವಪರತ್ವವಿಟ್ಟುಕೊಂಡರೆ, ನಿರ್ಗುಣತ್ವಾದಿ ವಿಶೇಷಣವೂ ಕೂಡಲಾರದು. ಚೇತನಪದದಿಂದ ಹೇಳಲ್ಪಟ್ಟ ಸರ್ವಜ್ಞತ್ವವೂ ಕೂಡಲಾರದು. ಚೇತನಪದದಲ್ಲಿ ಚೇತನತ್ವವು ಮಾತ್ರ ವಿವಕ್ಷಿತವೆಂದು ಹೇಳಕೂಡದು. ಅದು **ಆತ್ಮಾನಃ** ಎನ್ನುವುದರಿಂದಲೇ ಲಬ್ಧವಾಗಿದೆ.

**ಪೀಠಿಕೆ ॥** ಈಶ್ವರನಿಗೆ ಬಹುವಚನಾಂತ ಶಬ್ದ ವಾಚ್ಯತ್ವವಿದ್ದರೆ, ರೂಪಗಳಿಗೆ ಪರಸ್ಪರ ಭೇದವು ಬರಬೇಕಾಗುವುದು, ಎಂದರೆ—

**ಭಾಷ್ಯ ॥ ಏಕಶಬ್ದೈರ್ದ್ವಿಶಬ್ದೈಶ್ಚ ಬಹುಶಬ್ದೈಶ್ಚ ಕೇಶವಃ । ಏಕ ಏವೋಚ್ಯತೇ ವೇದೈಸ್ತಾವತಾ ನಾಸ್ಯ ಭಿನ್ನತಾ ॥ ಇತಿ (ಚ) ಭವಿಷ್ಯತ್ಪುರಾಣೇ ॥ ೭ ॥**

**ಭಾಷ್ಯಾರ್ಥ ॥** ಕೇಶವಃ=ಸೃಷ್ಟಿ, ಸಂಹಾರಗಳಲ್ಲಿ ಬ್ರಹ್ಮ, ರುದ್ರರಿಗೆ ನಿಯೋಜಕನಾದ ವಿಷ್ಣುವು ಎಲ್ಲಾ ರೂಪಗಳಿಂದ ಅಭಿನ್ನನೇ ಆದವನು. ಅನೇಕ ರೂಪಗಳು ಇದ್ದುದರಿಂದ ವೇದಗಳಲ್ಲಿರತಕ್ಕ ಏಕವಚನಾಂತ ಶಬ್ದಗಳಿಂದಲೂ, ದ್ವಿವಚನಾಂತ ಶಬ್ದಗಳಿದಲೂ, ಬಹುವಚನಾಂತ ಶಬ್ದಗಳಿಂದಲೂ ಹೇಳಲ್ಪಡುತ್ತಾನೆ. ಅಷ್ಟರಿಂದ ಈ ವಿಷ್ಣುವಿಗೆ ಭೇದವನ್ನು ಶಂಕಿಸಕೂಡದು. ಹೀಗೆ, ಭವಿಷ್ಯತ್ಪುರಾಣದಲ್ಲಿ ಹೇಳಿದೆ. (ಆದಕಾರಣ, ಭೇದಪ್ರಸಕ್ತಿ ದೋಷವಿಲ್ಲ)

**ಪೀಠಿಕೆ ॥** ಒಬ್ಬನಲ್ಲಿ ಅನೇಕವಚನ ಪ್ರಯೋಗವನ್ನು ದೃಷ್ಟಾಂತದಲ್ಲಿ ತೋರಿಸುತ್ತಾರೆ—

**ಭಾಷ್ಯ ॥ (೧) [೧]ತದಯಂ ಪ್ರಾಣೋಽಧಿತಿಷ್ಠತಿ । (೨) ತದುಕ್ತಮೃಷಿಣಾ । (೩) ಆತೇನ ಯಾತಂ (ಐ.ಆ.೨.೩.೮.) ಇತ್ಯಾದಿ ಚ ॥ ೨೨ ॥ ॥ ೮ ॥**

**ಭಾಷ್ಯಾರ್ಥ ॥** (ಈ ಶ್ರೀಹರಿಯು ಆ ಶರೀರದಲ್ಲಿ ಇರುತ್ತಾನೆ. ಹೀಗೆ, ಶ್ರೀಹರಿಯೊಬ್ಬನಿಗೇನೇ ಶರೀರಾಧಿಷ್ಠಾತೃತ್ವವನ್ನು ಹೇಳಿ ತದುಕ್ತಂ ಇತ್ಯಾದಿಗಳಿಂದ ದ್ವಿವಚನಯುಕ್ತ ಮಂತ್ರಗಳನ್ನು ಶ್ರುತಿಯು ಪ್ರಮಾಣೀಕರಿಸುತ್ತದೆ. ಆದಕಾರಣ, ಭೇದರಹಿತನಾದಾಗ್ಯೂ ಶ್ರೀಹರಿಯಲ್ಲಿ ಬಹುರೂಪತ್ವವನ್ನು ಇಟ್ಟುಕೊಂಡು ಬಹುವಚನವು ಯುಕ್ತವು.) (೧) ಶ್ರೀಹರಿಯೂ, ವಾಯುದೇವರೂ ಕೂಡ ಆ ಶರೀರದಲ್ಲಿರುತ್ತಾರೆ. (೨) ಪ್ರಾಣಾಖ್ಯ ಪರಮಾತ್ಮನಿಗೆ ಶರೀರಾಖ್ಯ ರಥಾಧಿಷ್ಠಾತೃತ್ವವು ಮಂತ್ರದ್ರಷ್ಟೃ ಆದ ಮಹಿದಾಸ ದೇವರಿಂದ ಹೇಳಲ್ಪಟ್ಟಿದೆ. (೩) **ಆತೇನ ಯಾತಂ ಮನಸೋ ಜವೀಯಸಾ ರಥಂ ಯಂ ವಾಮೃಭವಶ್ಚಕ್ರುರಶ್ವಿನಾ** (ಋ.೧೦.೩೯.೧೨.) ಆಶುಗತಿಯುಳ್ಳ ವಿಷ್ಣುವಾಯುಗಳಿರಾ ಎಲ್ಲಾ ದೇವತೆಗಳೂ ಯಾವ ರಥವನ್ನು ನಿಮಗೋಸ್ಕರ ಮಾಡಿರುವರೋ, (ಯಾವ ದೇಹಾಖ್ಯ ರಥದ ಯೋಗವಾಗೋಣ ಮನೋವಾಕ್ಕಾಯ ಕರ್ಮಗಳಿಗೆ ಭಗವದಧೀನತ್ವ ಜ್ಞಾನದಿಂದ ವಿಷ್ಣುವಿನ ಪ್ರಸಾದದಿಂದ ರಮಾಭಿಮನ್ಯಮಾನವಾದ ವಿದ್ಯೆಯಿಂದ ಹುಟ್ಟಿದ ಸರಸ್ವತ್ಯಭಿಮನ್ಯಮಾನವಾದ ವಿಷ್ಣುತತ್ತ್ವಾಪರೋಕ್ಷಜ್ಞಾನವು ಜೀವನಿಗೆ ಹುಟ್ಟುತ್ತದೋ ಹಾಗೆಯೇ ಜೀವನ್ಮುಕ್ತಿ ಮುಕ್ತ್ಯವಸ್ಥೆಗಳು ಉಂಟಾಗುತ್ತವೋ) ಅಂತಹ ಮನಸ್ಸಿನಿಂದಲೂ ಪಟುತರವಾದ ಶರೀರಾಖ್ಯವಾದ ರಥದಿಂದ ಬನ್ನಿರಿ.

---

೧ ಈ ಶ್ರುತಿಯು ಉತ್ತರಪ್ರಾಣಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

(ಅಂದರೆ ಶರೀರದಲ್ಲಿ ಸನ್ನಿಹಿತರಾಗಿರಿ.) (೪) [1]ನಿಮಿಷಶ್ಚಿಜ್ಜವೀಯಸಾ ರಥೇನಾಯಾತಮಶ್ವಿನಾ । **ಅಂತಿಷದ್ಭೂತ ವಾಮವಃ** (ಋ.೮.೬೨.೨) ಅಶ್ವಿನೀ ದೇವತೆಗಳಿರಾ ಚಕ್ಷುರ್ನಿಮೇಷದಿಂದಲೂ ಅತ್ಯಂತ ವೇಗವುಳ್ಳ ದೇಹಾಖ್ಯ ರಥದಿಂದ ಬನ್ನಿರಿ. (ಅವಃ) ಸಮೀಚೀನ ರಕ್ಷಣೆಯು ನಮ್ಮ ಸಮೀಪದಲ್ಲಿ ಆಗಲಿ. ॥ ೨೨ ॥

**ಪೀಠಿಕೆ ॥** ಈಶ್ವರಪ್ರಕರಣವಾದುದರಿಂದ ವ್ಯಾಪ್ತಿಶ್ರುತಿಯು ಈಶ್ವರವಿಷಯಕವೆಂದು ಹೇಳಿದ್ದು ಅಯುಕ್ತವು. ದುರ್ಬಲವಾದ ಪ್ರಕರಣ ಮಾತ್ರದಿಂದ ಬಹುವಚನ ಶ್ರುತಿಗೆ ಬಾಧವು ಕೂಡಲಾರದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ವಶಬ್ದೋನ್ಮಾನಾಭ್ಯಾಂ ಚ ಓಂ ॥ ೨೩ ॥

**ಸೂತ್ರಾರ್ಥ ॥** ಏಷೋ ಹ್ಯಾತ್ಮಾ ಎನ್ನುವ ವಾಕ್ಯಶೇಷದಲ್ಲಿದ್ದ ಸ್ವಶಬ್ದಪರ್ಯಾಯ ಆತ್ಮಶಬ್ದ ಪರಿಮಾಣಾತೀತತ್ವ ಲಿಂಗಗಳಿಂದ ವ್ಯಾಪಕತ್ವಶ್ರುತಿಯು ಪರಮಾತ್ಮ ಪ್ರತಿಪಾದಕವೇ.

**ಭಾಷ್ಯ ॥ ಏಷೋ ಹ್ಯಾತ್ಮಾಽಧ್ಯುದ್ಗತೋ ಮಾನಶಕ್ತೇಸ್ತಥಾಽಪಯಸೌ ಪ್ರಮಿತಿಂ ಯಾತಿ ವೇದ್ಯಃ । ಪೂರ್ಣೋಽಚಿಂತ್ಯಃ ಸರ್ವದೇವೈ (ವೇದೈ) ಕಯೋನಿಃ ಸರ್ವಾಧೀಶಃ ಸರ್ವವಿತ್ಸರ್ವ ಕರ್ತಾ ॥ ಇತಿ ವಾಕ್ಯಶೇಷೇ ಆತ್ಮಶಬ್ದೋನ್ಮಾನಾಭ್ಯಾಂ ಚ ॥ ೯ ॥**

**ಭಾಷ್ಯಾರ್ಥ ॥** ಯದ್ಯಪಿ ಶ್ರೀಹರಿಯು, ಗುಣಪೂರ್ಣನು, ಹೀಗೆಯೇ ಇದ್ದಾನೆಂದು ಧ್ಯಾನಮಾಡಿಸಿಕೊಳ್ಳಲಿಕ್ಕೆ ಅಶಕ್ಯನು. ಬ್ರಹ್ಮಾದಿ ದೇವತೆಗಳಿಗೆ ಮುಖ್ಯ ಕಾರಣನು (ಸರ್ವವೇದಗಳೇ ವ್ಯಕ್ತಿಕಾರಣಗಳಾಗಿ ಉಳ್ಳವನು, ಅಂದರೆ ವೇದೈಕವೇದ್ಯನು) ಸರ್ವನಿಯಾಮಕನು. ಸರ್ವಜ್ಞನು. ಸರ್ವಕರ್ತನು, ಪುರುಷರಲ್ಲಿರತಕ್ಕ ಪರಿಮಾಣಶಕ್ತಿಯಿಂದ ಮೀರಿದವನು, (ಅಂದರೆ ಪರಿಮಾಣಾತೀತನು) ಅಥವಾ ಸರ್ವರಿಂದಲೂ ಗುಣಾಧಿಕ್ಯವಿದ್ದುದರಿಂದ ಮಾನಶಕ್ತಿಯನ್ನು ಅತಿಕ್ರಮಿಸಿ ಇರತಕ್ಕವನು, ಅಥವಾ ವೇದದಲ್ಲಿರತಕ್ಕ ಯಥಾರ್ಥಜ್ಞಾನ ಜನನಶಕ್ತಿಗೆ ಅವಿಷಯನು, ಆದಾಗ್ಯೂ ಈ ಪರಮಾತ್ಮನು ವೇದಗಳಿಂದ ವಿಷಯತಯಾ ಪ್ರಮಿತಿಯನ್ನು ಹೊಂದುತ್ತಾನೆ. (ಅಂದರೆ ವೇದಜನ್ಯಜ್ಞಾನ ವಿಷಯನಾಗುತ್ತಾನೆ. ತಥಾಚ ವೇದಗಳಿಂದ ಶ್ರೀಹರಿಯ ಏಕ ದೇಶಜ್ಞಾನವು ಈಶ್ವರಪ್ರಸಾದದಿಂದ ಆಗುತ್ತದೆ.) ತಥಾಚ ಏಷೋ ಹ್ಯಾತ್ಮಾ ಎನ್ನುವ ವಾಕ್ಯಶೇಷದಲ್ಲಿ ಶ್ರುತಗಳಾದ, ಆತ್ಮಶಬ್ದ ಪರಿಮಾಣಾತೀತತ್ವ ಲಿಂಗಗಳಿಂದಲೂ ವ್ಯಾಪ್ತಿಶ್ರುತಿಗೆ ಈಶ್ವರಪರತ್ವವು.

---

೧ ರಥೇನ ತೇನ ದೇವೇಶೌ ವಿಷ್ಣುವಾಯೂ ಜಗತ್ಪತೀ। ಆಯಾತಮಿತಿ ಹ್ಯೆವೈತೌ ಪ್ರಾರ್ಥಯೇದ್ಯಜ್ಞ ಕರ್ಮಣಿ॥ ಎನ್ನುವ ಐತರೇಯ ಭಾಷ್ಯೋಕ್ತ ಪ್ರಮಾಣದಿಂದ ಈ ದ್ವಿವಚನಯುಕ್ತ ಮಂತ್ರಗಳು ವಿಷ್ಣು ವಾಯು ಉಭಯಪರಗಳಾಗಿರುವುದರಿಂದ ಇಲ್ಲಿ ಉದಾಹರಿಸಿದ್ದು ಹೇಗೆ ಕೂಡುತ್ತದೆ ಎಂದರೆ—ಮುಖ್ಯವಾಗಿ ಶ್ರೀಹರಿಯ ಎರಡು ರೂಪಗಳೇ ಇಲ್ಲಿ ಪ್ರತಿಪಾದ್ಯಗಳು. ಐಂದ್ರಾಗ್ನೇಯಾದಿಕಾಶ್ಚೈವ ಸರ್ವೇ ಮಂತ್ರಾ ಯಥಾಹರಿಂ । ವದಂತಿ ಮುಖ್ಯತೋ ನಾನ್ಯೋ ಸರ್ವನಾಮಾನಮಚ್ಯುತಂ । ಅಥವಾ ವಾಯುದೇಹಸ್ಥಂ ಪೃಥಕ್‌ಸಂಸ್ಥಂ ಚ ಕೇಶವಂ । ಮಂತ್ರೋ ದ್ವಿವಚನೋ ವಕ್ತಿ ಎನ್ನುವ ಪ್ರಮಾಣಾನುಸಾರವಾಗಿ ಭಗವದ್ರೂಪಪರತ್ವವೂ ಇದೆ.

ವಿಶೇಷಾಂಶ ॥ ಇಲ್ಲಿ ವಿಷೋ ಹ್ಯಾತ್ಮಾಧ್ಯುದ್ಗತೋ ಮಾನಸಕ್ತೇಃ ಎನ್ನುವ ಅಂಶವೇ ಉಪಯುಕ್ತವಾಗಿರುವುದಿರಂದ ಇತರಾಂಶೋದಾಹರಣವು ವ್ಯರ್ಥವೆಂದರೆ ೧ ಚೇತನಾಃ ಎನ್ನುವುದರಿಂದ ಸರ್ವಜ್ಞತ್ವವೂ, ೨ ನಿರ್ಗುಣಾಃ ಇತ್ಯಾದಿಗಳಿಂದ ಸರ್ವಾಧೀಶತ್ವವೂ, ೩ ಸರ್ವಾತ್ಮಾನಃ ಎನ್ನುವುದರಿಂದ ಸರ್ವಕರ್ತೃತ್ವವೂ, ೪ ಸರ್ವರೂಪಾಃ ಎನ್ನುವುದರಿಂದ ಪೂರ್ಣತ್ವವೂ, ೫ ಅನಂತಾಃ ಎನ್ನುವುದರಿಂದ ಅಪರಿಮಿತತ್ವೇನ ಅಚಿಂತ್ಯತ್ವವೂ ಉಕ್ತಗಳಾದವು. ಇವುಗಳು ಜೀವನಲ್ಲಿ ಕೂಡಲಾರವು. ಈಶ್ವರನಲ್ಲಿ ಆದರೂ ಸರ್ವವೇದ ಪ್ರಮಿತಗಳು. ಆದಕಾರಣ ಆ ಶ್ರುತಿಯು ಈಶ್ವರಪರವೇ, ಜೀವಪರವಾಗುವುದೇ ಇಲ್ಲ.

ಪೀಠಿಕೆ ॥ ಆತ್ಮಶ್ರುತಿಗೂ ಉನ್ಮಾನತ್ವಲಿಂಗಕ್ಕೂ ವಿಷ್ಣುವಿಷಯಕತ್ವವು ಹೇಗೆಂದರೆ—

**ಭಾಷ್ಯ ॥ ಆತ್ಮಾSಮೇಯಃ ಪರಂ ಬ್ರಹ್ಮ ಪರಾನಂದಾದಿಕಾಭಿಧಾಃ । ವದಂತಿ ವಿಷ್ಣುಮೇವೈಕಂ ನಾನ್ಯತ್ರಾಸಾಂಗತಿಃ ಕ್ವಚಿತ್ ॥ ಇತಿ (ಚ) ಕೌರ್ಮೇ ॥ ೨೩ ॥ ॥ ೧೦ ॥**

ಭಾಷ್ಯಾರ್ಥ ॥ ಆತ್ಮಾ, ಅಮೇಯ (ಅಪರಿಮಿತ) ಪರಂಬ್ರಹ್ಮ ಪರಾನಂದ ಮೊದಲಾದ ನಾಮಧೇಯಗಳು ವಿಷ್ಣು ಒಬ್ಬನನ್ನೇ ಮುಖ್ಯವಾಗಿ ಹೇಳುತ್ತವೆ. ಈ ಆತ್ಮಾದ್ಯಭಿಧಾಯಕ ಶಬ್ದಗಳಿಗೆ ವಿಷ್ಣುವಿನಿಂದ ಇತರರಾದ ಜೀವಾದಿಗಳಲ್ಲಿ ಎಲ್ಲಿಯೂ ಪ್ರವೃತ್ತಿಯು ಮುಖ್ಯವಾಗಿ ಇಲ್ಲ. ಹೀಗೆ ಕೌರ್ಮದಲ್ಲಿಯೂ (ವಿಷ್ಣುವಿನಲ್ಲಿ ಮಾತ್ರ ಇರತಕ್ಕವುಗಳೆಂದು ನಿಶ್ಚಿತಗಳಾದ ಆತ್ಮಶಬ್ದ ಉನ್ಮಾನಗಳಿಂದ ವ್ಯಾಪ್ತಶ್ರುತಿಗೆ ಈಶ್ವರಪರತ್ವವು.) ॥ ೨೩ ॥

ಪೀಠಿಕೆ ॥ ಆದಾಗ್ಯೂ ಜೀವನಿಗೆ ಅಣುತ್ವವು ಯುಕ್ತವಲ್ಲ. ಏಕೆಂದರೆ ದೇಹದ ಸರ್ವಾವಯವಗಳಲ್ಲಿರತಕ್ಕ ಸ್ಪರ್ಶಾದಿಜ್ಞಾನವು ಕೂಡದೆ ಹೋಗಬೇಕಾಗುವುದು. ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅವಿರೋಧಶ್ಚಂದನವತ್ ಓಂ ॥ ೨೪ ॥

**ಭಾಷ್ಯ ॥ ಅಣೋರಪಿ ಜೀವಸ್ಯ ಸರ್ವಶರೀರವ್ಯಾಪ್ತಿರ್ಯುಜ್ಯತೇ । ಯಥಾ ಹರಿಚಂದನವಿಪ್ಲುಷ ಏಕದೇಶಪತಿತಾಯಾಃ ಸರ್ವಶರೀರವ್ಯಾಪ್ತಿಃ ॥ ೧೧ ॥**

ಭಾಷ್ಯಾರ್ಥ ॥ ಜೀವನು ಅಣುವಾದಾಗ್ಯೂ ಆತನಿಗೆ, ಅವಿರೋಧಃ=ಅಣುತ್ವವ್ಯಾಪ್ತಿಯಿಂದ ವಿರೋಧವಿಲ್ಲ. ಅಂದರೆ ಅಣುತ್ವವಿದ್ದಾಗ್ಯೂ ಅಂಶಗಳಿಂದ ಸರ್ವಶರೀರವ್ಯಾಪ್ತಿಯು ಕೂಡುತ್ತದೆ. (ಆದಕಾರಣ ಅಲ್ಲಿ ಅಲ್ಲಿಯ ಪರಿಜ್ಞಾನವು ಕೂಡಲಿಕ್ಕೆ ಇಲ್ಲ ಎನ್ನುವ ವಿರೋಧವಿಲ್ಲ) ಹೇಗೆಂದರೆ ಅಂಶಗಳಿಂದ ಶರೀರದ ಏಕದೇಶದಲ್ಲಿ ಬಿದ್ದಿರತಕ್ಕ *ಹರಿಚಂದನ ಬಿಂದುವಿಗೆ ಶರೀರದ ಎಲ್ಲಾ ಅವಯವಗಳಲ್ಲಿ ವ್ಯಾಪ್ತಿಯು ಹೇಗೆ ಇದೆಯೋ ಹಾಗೆಯೇ.

---

* ಗಂಧಸಾರೋ ಮಲಯಜೋ ಹರಿಚಂದನಂ ಎಂದು ಹೇಳಿದ್ದರಿಂದ ಗಂಧಸಾರಾಖ್ಯ ಮಲಯಗಿರಿ ವೃಕ್ಷದ ಕಾಷ್ಠಕೃತ ದ್ರವ್ಯವು.

ಪೀಠಿಕೆ ॥ ಈ ವಿಷಯದಲ್ಲಿ ನಿಯಾಮಕ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಅಣುಮಾತ್ರೋಽಪ್ಯಯಂ ಜೀವಃ ಸ್ವದೇಹಂ ವ್ಯಾಪ್ಯ ತಿಷ್ಠತಿ । ಯಥಾ ವ್ಯಾಪ್ಯ ಶರೀರಾಣಿ ಹರಿಚಂದನವಿಪ್ರುಷಃ ॥ ಇತಿ (ಚ)ಬ್ರಹ್ಮಾಂಡಪುರಾಣೇ ॥ ೨೪ ॥**

॥ ೧೨ ॥

ಭಾಷ್ಯಾರ್ಥ ॥ ಈ ಜೀವನು ಅಣುಪರಿಮಾಣವುಳ್ಳವನಾದಾಗ್ಯೂ ಅಂಶಗಳಿಂದ ತನ್ನ ಶರೀರವನ್ನು ವ್ಯಾಪಿಸಿಕೊಂಡು ಇರುತ್ತಾನೆ. ಹೇಗೆ ಶರೀರಾಂಗಗಳನ್ನು ವ್ಯಾಪಿಸಿಕೊಂಡು ಹರಿಚಂದನದ ಬಿಂದುಗಳು ಏಕದೇಶದಲ್ಲಿ ಬಿದ್ದವುಗಳು ಇರುತ್ತವೋ, ಹಾಗೆಯೇ. ಹೀಗೆ ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿಹಿ ಓಂ ॥ ೨೫ ॥

**ಭಾಷ್ಯ ॥ ಸಮ್ಯಗಸಮ್ಯಗವಸ್ಥಾನವಿಶೇಷಾದ್ಯುಜ್ಯತೇ ಚಂದನಸ್ಯ । ಇತಿ ಚೇತ್ । ನ । ಹೃದಿಹ್ಯೇಷ ಆತ್ಮಾ (ಪ್ರ.೩.೬.) ಇತಿ ಜೀವಸ್ಯಾಪಿ ತಥಾಽಭ್ಯುಪಗಮಾತ್ ॥ ೨೫ ॥**

॥ ೧೩ ॥

ಭಾಷ್ಯಾರ್ಥ ॥ ಹರಿಚಂದನ ಬಿಂದುವಿಗೆ ಶರೀರೈಕ ದೇಶದಲ್ಲಿ ಸಮ್ಯಕ್ ಅವಸ್ಥಿತಿಯು. ಇತರ ಪ್ರದೇಶದಲ್ಲಿ ಸಮ್ಯಕ್ ಅವಸ್ಥಿತಿಯಿಲ್ಲದಿರುವುದು, ಎನ್ನುವ ವಿಶೇಷದಿಂದ, ಸ್ವರೂಪ, ಆದರ ಅಂಶಗಳಿಂದ ಶರೀರವ್ಯಾಪ್ತಿಯು ಕೂಡುತ್ತದೆ. (ಆತ್ಮನಿಗೆ ಶರೀರೈಕದೇಶದಲ್ಲಿ ಸಮ್ಯಕ್ ಅವಸ್ಥಿತಿಯು ಕ್ವಚಿತ್ ಸಮ್ಯಕ್ ಅವಸ್ಥಿತಿಯಿಲ್ಲದಿರುವುದು ಎನ್ನುವ ವಿಶೇಷವಿಲ್ಲದಿರುವುದರಿಂದ ಶರೀರವ್ಯಾಪ್ತಿಯು ಕೂಡುವುದಿಲ್ಲ) ಎಂದರೆ ಹಾಗೆ ಹೇಳಕೂಡದು. (ಅಂದರೆ ಆತ್ಮನಿಗೆ ಸಮ್ಯಕ್ ಅಸಮ್ಯಕ್ ಅವಸ್ಥಾನಾಭಾವವಿಲ್ಲ. ಸಮ್ಯಕ್ ಅಸಮ್ಯಕ್ ಅವಸ್ಥಿತಿ ವಿಶೇಷವೇ ಇದೆ. ಆದಕಾರಣ ದೃಷ್ಟಾಂತವು ವಿಷಮವು ಆಗುವುದಿಲ್ಲ) ಈ ಜೀವನು ಹೃದಯದಲ್ಲಿದ್ದಾನೆ, ಎನ್ನುವ ಶ್ರುತಿಯಿಂದ ಜೀವನಿಗೂ ಚಂದನಬಿಂದುವಿನಂತೆ ದೇಹದಲ್ಲಿ ಹೃದಯದಲ್ಲಿ ಸಮ್ಯಕ್ ಸ್ಥಿತಿಯನ್ನು ತದಿತರ ಸ್ಥಾನಗಳಲ್ಲಿ ಅಸಮ್ಯಕ್ ಅವಸ್ಥಿತಿಯನ್ನು ಅಂಗೀಕರಿಸಿದ್ದರಿಂದ ತಥಾಚ ಚಂದನ ಬಿಂದುವಿನಂತೆ ದೇವತಾದಿಗಳಿಗೆ ಸಾಂಶತ್ವವನ್ನು ಅಂಗೀಕರಿಸಿದ್ದರಿಂದ. ಸಾಂಶರಾದ ದೇವಾದಿಗಳಿಗೆ ಒಂದು ದೇಹದಲ್ಲಿ ಹೃದಯದಲ್ಲಿ ಬೆಣ್ಣೆಯ ಮುದ್ದೆಯಂತೆ ಸಾಂದ್ರದ್ರವ್ಯರೂಪದಿಂದ ಸಮ್ಯಕ್ ಅವಸ್ಥಿತಿಯು. ಅನ್ಯತ್ರ ಅಸಮ್ಯಕ್ ಅವಸ್ಥಿತಿಯು. **ಹೃದಯೇ ಸಂಸ್ಥಿತೋ ಜೀವಃ ವಿಶೇಷೇಣ ಹರಿಸ್ತಥಾ । ಚಕ್ಷುರಾದಿಷು ರೂಪಾಣಿ ಜಾಗ್ರತ್ಕಾಲೇ ತಯೋಸ್ಸದಾ । ಬಹೂನಿ ಸಂತಿ ತಾನ್ಯೇವ ಯದ್ಯೈಕೀಭಾವಮಾಪ್ನುಯುಃ ॥ ಹೃದಯಸ್ಥಿತೇನ ರೂಪೇಣ ॥** (ವಿಶೇಷೇಣ=ಸಾಂದ್ರದ್ರವ್ಯರೂಪದಿಂದ) ಎಂದು ಬೃಹದ್ಭಾಷ್ಯದಲ್ಲಿ. ॥ ೨೫ ॥

ಪೀಠಿಕೆ ॥ ಪ್ರಕಾರಾಂತರದಿಂದಲೂ ಆತ್ಮನಿಗೆ ಶರೀರವ್ಯಾಪ್ತಿ ಅವ್ಯಾಪ್ತ್ಯುಪಪಾದಕವಾದ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಗುಣಾದ್ವಾ ಲೋಕವತ್ ಓಂ ॥ ೨೬ ॥

ಸೂತ್ರಾರ್ಥ ॥ ಗುಣಯಾದ ಜೀನಿಗೆ ಅಣುತ್ವವಿದ್ದರೂ ಪ್ರದೀಪ ಪ್ರಕಾಶದಂತೆ ಚಿದ್ಗುಣದ ವ್ಯಾಪ್ತಿಯೋಗದಿಂದ, (ಅವಿರೋಧಃ) ಅಲ್ಲಿ ಅಲ್ಲಿ ಪರಿಜ್ಞಾನಯೋಗರೂಪವಾದ ವಿರೋಧವಿಲ್ಲ.

**ಭಾಷ್ಯ ॥ ಯಥಾऽऽಲೋಕಸ್ಯ ಪ್ರಕಾಶಗುಣೇನ ವ್ಯಾಪ್ತಿರ್ಜ್ಯೋತೀರೂಪೇಣಾ-ವ್ಯಾಪ್ತಿರೇವಂ ಚಿದ್ಗುಣೇನ ವ್ಯಾಪ್ತಿರ್ಜೀವರೂಪೇಣಾವ್ಯಾಪ್ತಿರಿತಿ ವಾ ॥ ೧೪ ॥**

ಭಾಷ್ಯಾರ್ಥ ॥ ಹೇಗೆ ಪರದೀಪಾದಿಗಳಿಗೆ ಪ್ರಕಾಶಾಖ್ಯಗುಣದಿಂದ ಮನೆಯೊಳಗೆ ವ್ಯಾಪ್ತಿಯು. ಪ್ರದೀಪ ರೂಪದಿಂದ ಅವ್ಯಾಪ್ತಿಯು (ಅಂದರೆ ದೀಪಕಾದಿಗಳಲ್ಲಿಯೇ ಸಮ್ಯಕ್ ಅವಸ್ಥಿತಿಯು ಅನ್ಯತ್ರ ಸಮ್ಯಕ್ ಅವಸ್ಥಿತ್ಯಭಾವವು.) ಹೀಗೆಯೇ ಅಣುವಾದ ಜೀವನಿಗೂ ಜ್ಞಾನಾಖ್ಯಗುಣದಿಂದ (ಶರೀರದಲ್ಲಿ) ವ್ಯಾಪ್ತಿಯು. ಜೀವರೂಪದಿಂದ ಅವ್ಯಾಪ್ತಿಯು ಕೂಡುತ್ತದೆ. ಹೀಗೆ ವ್ಯಾಪ್ತ್ಯವ್ಯಾಪ್ತಿ ವಿರೋಧವನ್ನು ಪರಿಹರಿಸಬೇಕು.

ಪೀಠಿಕೆ ॥ ಅಂಶಗಳಿಂದಲೂ ಗುಣದಿಂದಲೂ ವ್ಯಾಪ್ತಿಯು ಏಕತ್ರ ವಿರುದ್ಧವು ಎಂದರೆ—

**ಭಾಷ್ಯ ॥ ಸ್ಕಾಂದೇ ಚ । ಅಸಮ್ಯಕ್ಸಮ್ಯಗಿತಿ ಚ ಹೃವಸ್ಥಾಭೇದತಃ ಸುರಾಃ । ವ್ಯಾಪ್ತ್ಯವ್ಯಾಪ್ತಿಯುತಾಸ್ತ್ವನ್ಯೇ ಚಿದ್ಗುಣೇನೈವ ನಾನ್ಯಥಾ ॥ ಚಿದ್ಗುಣಸ್ಯ ಸ್ವರೂಪತ್ವಾತ್ತದ್ವ್ಯಾಪ್ತಿಶ್ಚೇತಿ ಯುಜ್ಯತೇ । ಶಕ್ತಿಯೋಗಾತ್ತುರಾಣಾಂ ತು ವಿವಿಧಾ ಚ ವ್ಯವಸ್ಥಿತಿರಿತಿ ॥ ೨೬ ॥ ಅಧಿ. ೧೨ ॥ ॥ ೧೫ ॥**

ಭಾಷ್ಯಾರ್ಥ ॥ ಯಾವಕಾರಣದಿಂದ ದೇವತೆಗಳಿಗೆ ಒಂದೇ ಶರೀರದಲ್ಲಿ ಹೃದಯದಿಂದ ಇತರ ಸ್ಥಾನಗಳಲ್ಲಿ ಅಂಶಗಳಿಂದ ಅಸಮ್ಯಕ್ ಅವಸ್ಥಿತಿಯು. ಹೃದಯದಲ್ಲಿ ಆದರೂ ಅಂಶಿಸ್ವರೂಪದಿಂದ ಸಮ್ಯಕ್ ಅವಸ್ಥಿತಿಯು ಎನ್ನುವ ಅವಸ್ಥಾಭೇದವನ್ನು ಅಪೇಕ್ಷಿಸಿಯೇ ದೇವತೆಗಳು ವ್ಯಾಪ್ತ್ಯವ್ಯಾಪ್ತಿಯುಕ್ತರು. ಹೀಗೆಯೇ ದೇವಾಂತರಾದ ಅರ್ಜುನಾದಿಗಳೂ ಪ್ರತ್ಯೇಕವಾಗಿ ಹೃದಯದಿಂದ ಇತರತ್ರ ಅಸಮ್ಯಕ್, ಹೃದಯದಲ್ಲಿ ಸಮ್ಯಕ್ ಅವಸ್ಥಿತಿಯಿಂದ ವ್ಯಾಪ್ತ್ಯವ್ಯಾಪ್ತಿಯುಕ್ತರು. ದೇವಾದಿಗಳಿಂದ ಇತರರಾದ ಮನುಷ್ಯರಾದರೂ (ನಿರಂಶರು) ಪ್ರಕಾಶ ಗುಣದಿಂದಲೇ ವ್ಯಾಪ್ತಿಯುತರು. ದೇವತೆಗಳಿಂದ ಸಾಂದ್ರವ್ಯಾಪ್ತಿಯನ್ನು ಹೊಂದಿದವರು ಅಲ್ಲ. ಅಥವಾ ಅಂಶರೂಪದಿಂದ ಅಲ್ಲ. (ಆದಕಾರಣ ಜೀವರು ಅಣುಗಳಾದಾಗ್ಯೂ ಅಲ್ಲಿ ಅಲ್ಲಿಯ ಪರಿಜ್ಞಾನವು ಬರುವುದಿಲ್ಲವೆಂದು ಹೇಳಕೂಡದು.) (ಗುಣಕ್ಕೆ ವ್ಯಾಪ್ತಿಯಿದ್ದರೂ ಗುಣಿಗೆ ವ್ಯಾಪ್ತಿಯು ಹೇಗೆಂದರೆ) ಜ್ಞಾನಾಖ್ಯ ಗುಣಕ್ಕೆ ಅಪಾಯವಿಲ್ಲದಿರುವುದರಿಂದ ಗುಣಿಯಿಂದ ಅಭಿನ್ನವಾದಪ್ರಯುಕ್ತ ಗುಣವ್ಯಾಪ್ತಿಯು ಗುಣಿವ್ಯಾಪ್ತಿಯು ಆಗುತ್ತದೆ. ಜ್ಞಾನಾಖ್ಯಗುಣಕ್ಕೆ ಸವಿಶೇಷಾಭೇದವಿದ್ದಪ್ರಯುಕ್ತ ವ್ಯವಹಾರಭೇದವೂ ಕೂಡುತ್ತದೆ. ದೇವತೆಗಳಿಗಳಾದರೂ ಗಂಧರ್ವಾದಿಗಳಿಂದ ಅಧಿಕಶಕ್ತ್ಯಾಖ್ಯ ಉಪಾಯದಶೆಯಿಂದ. ಅಂಶಾಂಶಿಭಾವದಿಂದ ಅಸಮ್ಯಕ್ತ್ವ

ಸಮ್ಯಕ್ತ್ವ ಭೇದದಿಂದ ಅನೇಕವಿಧವಾದ ವ್ಯವಸ್ಥೆಯು ಕೂಡುತ್ತದೆ. ತಥಾಚ ಅತಾತ್ವಿಕದೇವತೆಗಳಿಗೆ ಅಂಡಮಾತ್ರದಲ್ಲಿ ಯಥಾಕ್ರಮವಾಗಿ ಅಂಶವು ವ್ಯಾಪಕವಾಗಿದೆ. ತಾತ್ವಿಕದೇವತೆಗಳಿಗಾದರೂ ಯಥಾಕ್ರಮವಾಗಿ ಹೊರಗೂ ಕೂಡ ಅಂಶವು ವ್ಯಾಪಕವಾಗಿದೆ. ॥ ೨೬ ॥

## ಅಧಿಕರಣ ಸಾರಾಂಶ

(೧) ಜೀವನು ವ್ಯಾಪ್ತನೋ ಅಣುವೋ ಎಂದು ಸಂದೇಹವು. **ವ್ಯಾಪ್ತಾ ಹ್ಯಾತ್ಮಾನಃ** ಇತ್ಯಾದಿ ಆತ್ಮನಿಗೆ ವ್ಯಾಪ್ತತ್ವಪ್ರತಿಪಾದಕ ಶ್ರುತಿಯು ಜೀವಪರವಾಗಿರುವುದರಿಂದ ವ್ಯಾಪ್ತನು ಎಂದು ಪೂರ್ವಪಕ್ಷವು. ಹೇಗೆಂದರೆ **ಅಣುರ್ಹ್ಯೇಷ ಆತ್ಮಾ** ಎನ್ನುವ ಶ್ರುತಿಯಿಂದ ಜೀವನು ಅಣುವೆಂದಾದರೆ ದೇಹದ ಎಲ್ಲಾ ಅಂಗಗಳಲ್ಲಿ ಆಗತಕ್ಕ ಸ್ಪರ್ಶಾದಿಜ್ಞಾನವು ಕೂಡದಿರುವುದರಿಂದ, ಸರ್ವದೇಹಸಂಬಂಧ ಸ್ಪರ್ಶಾದಿಜ್ಞಾನರೂಪಯುಕ್ತಿಯಿಂದ ಕೂಡಿದ್ದರಿಂದ ಪ್ರಬಲವಾದ ವ್ಯಾಪ್ತತ್ವಶ್ರುತಿಯಿಂದ ಅಣುತ್ವಪ್ರತಿಪಾದಕ ಶ್ರುತಿಯು ವಿರುದ್ಧವಾಗಿರುವುದರಿಂದ ಅಪ್ರಮಾಣವು. ಅಂಶವ್ಯಾಪ್ತಿಯಿಂದ ಸ್ಪರ್ಶಾದಿ ಜ್ಞಾನವು ಕೂಡುವುದರಿಂದ ಯುಕ್ತಿಯು ಅಪ್ರಯೋಜಕವು ಎಂದು ಹೇಳಕೂಡದು. ಅಂಶಗಳೂ ಚೇತನಗಳಾಗಿರುವುದರಿಂದ ಏಕಕಾಲದಲ್ಲಿ ಅನೇಕಗಳಿಗೆ ಐಕಮತ್ಯವು ಕೂಡದಿರುವುದರಿಂದ ವಿರುದ್ಧಕ್ರಿಯೆಗಳು ಉಂಟಾಗಿ ದೇಹವು ಶೀಳಿಹೋಗಬೇಕಾಗುವುದು. ಅಥವಾ ದೇಹದಲ್ಲಿ ಕ್ರಿಯೆಯೇ ಇಲ್ಲದೆ ಹೋಗಬೇಕಾಗುವುದು. ಎಂದರೆ—**ಸೋಽಸ್ಮಾಚ್ಛರೀರಾದುತ್ಕ್ರಮ್ಯ** ಇತ್ಯಾದಿ ಶ್ರುತಿಗಳಲ್ಲಿ ಶ್ರುತಗಳಾದ ಉತ್ಕ್ರಮಣಾದಿಗಳು ಇದ್ದುದರಿಂದ ಪಕ್ಷಿಯಂತೆ ಜೀವನು ಅಣುವೇ. **ಅಣುರ್ಹ್ಯೇಷ ಆತ್ಮಾ** ಎನ್ನುವ ಶ್ರುತಿಯೂ ಇದೆ. **ವ್ಯಾಪ್ತಾ ಹ್ಯಾತ್ಮಾನಃ** ಎನ್ನುವ ಶ್ರುತಿಯಾದರೂ **ಸ ಆತ್ಮೇದಂ ಸೃಜತಿ** ಎನ್ನುವ ವಿಷ್ಣುಪ್ರಕರಣದಿಂದ **ವಿಷ್ಣೋ ಹ್ಯಾತ್ಮಾಧ್ಯುದ್ಗತೋ ಮಾನಶಕ್ತೇಃ** ಎನ್ನುವ ವಾಕ್ಯಶೇಷದಲ್ಲಿ ಶ್ರುತಗಳಾದ ಆತ್ಮಶ್ರುತಿ ಉನ್ಮಾನತ್ವ ಲಿಂಗಗಳಿಂದ ವಿಷ್ಣುಪರವೇ. ದೇಹದ ಏಕದೇಶದಲ್ಲಿರತಕ್ಕ ಚಂದನ ಬಿಂದುವಿಗೆ ತನ್ನ ಅಂಶಗಳಿಂದ ಸರ್ವದೇಹವ್ಯಾಪ್ತಿಯಿದ್ದಂತೆ ದೇವತೆಗಳಿಗೆ **ಹೃದಿ ಹ್ಯೇಷ ಆತ್ಮಾ** ಎನ್ನುವ ಶ್ರುತಿಯಿಂದ ಹೃದ್ದೇಶದಲ್ಲಿ ಸಮ್ಯಕಸ್ಥಿತಿಯೂ, ಸ್ವರೂಪಾಂಶಗಳಿಂದ ಸರ್ವದೇಹವ್ಯಾಪ್ತಿಯೂ, ಇದೆ. ಅಂಶತಃ ವ್ಯಾಪ್ತಿಶೂನ್ಯರಾದ ಮನುಷ್ಯರಿಗೆ ಪ್ರಕಾಶದಂತೆ ಚಿದ್ಗುಣದಂತೆ ಸರ್ವದೇಹವ್ಯಾಪ್ತಿಯು ಇದ್ದುದರಿಂದ ದೇಹದ ಸರ್ವಾವಯವಗಳ ಸ್ಪರ್ಶಾದಿಜ್ಞಾನವು ಕೂಡುವುದರಿಂದ ಯುಕ್ತಿಯು ಅಪ್ರಯೋಜಕವು. ॥ ಅಧಿ. ೧೨ ॥

**ಉತ್ಕ್ರಾಂತ್ಯಧಿಕರಣವು ಸಮಾಪ್ತವಾಯಿತು.**

**॥ ಓಂ ಜೀವಸಾಂಶತ್ವ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥**

# ೧೩. ವ್ಯತಿರೇಕಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಜೀವನಿಗೆ ಏಕರೂಪತ್ವ, ಅನೇಕ ರೂಪತ್ವವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ಸ ನಿತ್ಯೋ ನಿರವಯವಃ ಪುಣ್ಯಯುಕ್ಪಾಪಯುಕ್ಚ ಸ ಇಮಂ ಲೋಕಮಮುಂ ಚಾವರ್ತತೇ ಸ ವಿಮುಚ್ಯತೇ ಸ ಏಕಧಾ ನ ಸಪ್ತಧಾ ನ ದಶಧಾ ನ ಶತಧಾ । ಇತಿ ಗೌಪವನಶ್ರುತಾವೇಕಸ್ಯಾಬಹುತ್ವಂ ಪ್ರತೀಯತೇ ॥ ಸ ಪಂಚಧಾ ಸ ಸಪ್ತಧಾ ಸ ದಶಧಾ ಚ ಭವತಿ ಸ ಶತಧಾ (ಚ) ಸಹಸ್ರಧಾ ಸ ಗಚ್ಛತಿ ಸ ಮುಚ್ಯತೇ । ಇತಿ ಪಾರಾಶರ್ಯಾಯಣಶ್ರುತೌ ಬಹುರೂಪತ್ವಂ ಪ್ರತೀಯತೇ ॥ ೧ ॥**

ಭಾಷ್ಯಾರ್ಥ ॥ ಆ ಜೀವನು ನಿತ್ಯನು ನಿರಂಶನು ಪುಣ್ಯಫಲಭೋಕ್ತನು, ಪಾಪಫಲಭೋಕ್ತನು, ಆತನು (ಪುಣ್ಯಪಾಪಕ್ಷಯವಾದಮೇಲೆ ಪುನಃ ಪುನಃ) ಈ ಭೂಲೋಕಕ್ಕೆ ಬರುತ್ತಾನೆ. ಹಾಗೆಯೇ ಪರಲೋಕಕ್ಕೆ ಆಗಾಗ ಹೋಗುತ್ತಾನೆ. ಆತನು ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಆತನು ಏಕರೂಪನೇ ಆಗುತ್ತಾನೆ. ಅನೇಕ ರೂಪವುಳ್ಳವನಲ್ಲ. ಆತನು ಮನಸ್ಸು ಬುದ್ಧಿ ಕೂಡಿ ಏಳು ಜ್ಞಾನೇಂದ್ರಿಯಗಳಿಂದ ಆಯಾಯ ಕ್ರಿಯೆಗಳನ್ನು ಮಾಡುವವನಾದಾಗ್ಯೂ ಏಳು ರೂಪಗಳುಳ್ಳವನು ಆಗುವುದಿಲ್ಲ. ದಶೇಂದ್ರಿಯ ವ್ಯಾಪಾರಗಳುಳ್ಳವನಾದಾಗ್ಯೂ ದಶ (ಹತ್ತು) ರೂಪಗಳುಳ್ಳವನು ಆಗುವುದಿಲ್ಲ. ಹೀಗೆಯೇ ಶತರೂಪಗಳುಳ್ಳವನು ಆಗುವುದಿಲ್ಲ. ಹೀಗೆ ಗೌಪವನ ಶ್ರುತಿಯಲ್ಲಿ ಒಬ್ಬ ಜೀವನಿಗೆ ಅಬಹುರೂಪತ್ವವು (ಅಂದರೆ ಏಕರೂಪತ್ವವು) ತೋರುತ್ತದೆ. ಆ ಜೀವನು ಪಂಚರೂಪಗಳುಳ್ಳವನು, ಸಪ್ತರೂಪಗಳುಳ್ಳವನು, ದಶರೂಪಗಳುಳ್ಳವನು, ಶತ (೧೦೦) ರೂಪಗಳುಳ್ಳವನು. ಸಹಸ್ರರೂಪಗಳುಳ್ಳವನು ಆಗುತ್ತಾನೆ. ಕರ್ಮವಶಾತ್ ಸ್ವರ್ಗನರಕಗಳನ್ನು ಕುರಿತು ಹೋಗುತ್ತಾನೆ. ಆತನು ಮುಕ್ತನು ಆಗುತ್ತಾನೆ, ಎನ್ನುವ ಪಾರಾಶರ್ಯಾಯಣ ಶ್ರುತಿಯಲ್ಲಿ ಜೀವನಿಗೆ ಬಹುರೂಪತ್ವವು ತೋರುತ್ತದೆ.

ವಿಶೇಷಾಂಶ ॥ (೧) ೧ನೇ ಶ್ರುತಿಯಲ್ಲಿ ಸ ಏಕಧಾ ಇತ್ಯಾದ್ಯಂಶಕ್ಕೇನೇ ಉಪಯೋಗ ವಿರುವುದಾದರೂ ಆ ವಾಕ್ಯವು ಜೀವಪರವೇ ಎಂದು ತಿಳಿಸಿಕೊಡುವುದಕ್ಕಾಗಿ, **ಸ ನಿತ್ಯಃ ಪುಣ್ಯಯುಕ್** ಇತ್ಯಾದಿ ವಾಕ್ಯವನ್ನು ತೆಗೆದುಕೊಂಡದ್ದು, ಪುಣ್ಯಪಾಪಾದಿಗಳು ವಿಷ್ಣುವಿನಲ್ಲಿ ಕೂಡಲಾರವು. ೨ನೇ ಶ್ರುತಿಯಲ್ಲಿ ಸ ಪಂಚಧಾ ಇತ್ಯಾದ್ಯಂಶಕ್ಕೇನೇ ಉಪಯೋಗವಿರುವುದಾದರೂ ಆ ವಾಕ್ಯವು ಜೀವಪರವು ಎಂದು ತಿಳಿಸಿಕೊಡುವುದಕ್ಕಾಗಿ ಸ ಮುಚ್ಯತೇ ಎನ್ನುವುದನ್ನುದಾಹರಿಸಿದ್ದು.

ಪೀಠಿಕೆ ॥ ಜೀವನು ಏಕರೂಪನೇ. ಸ ಏಕಧಾ ಎನ್ನುವ ಶ್ರುತಿಯಿಂದ. ಜೀವನಿಗೆ ಅಂಶಬಾಹುಲ್ಯವಿದ್ದುದರಿಂದ ಬಹುರೂಪಗಳು ಇವೆ ಎಂದು ಹೇಳಕೂಡದು. ಆತನು ಸ ನಿತ್ಯೋ ನಿರವಯವಃ ಎನ್ನುವ ಶ್ರುತಿಯಿಂದ ನಿರವಯವನು. ಬಹುರೂಪತ್ವಶ್ರುತಿವಿರೋಧವೆಂದು ಹೇಳಕೂಡದು. ಅದು ಸಯುಕ್ತಿಕವಾದ ಏಕರೂಪತ್ವಶ್ರುತಿವಿರೋಧದಿಂದ ಅಪ್ರಮಾಣವು. ಬಹುರೂಪತ್ವಶ್ರುತಿಯು ಈಶ್ವರವಿಷಯಕವು ಎಂದು ಹೇಳಕೂಡದು. ಸ ಮುಚ್ಯತೇ ಎಂದು ಜೀವಲಿಂಗವಿದೆ. ಎಂದು ಪೂರ್ವಪಕ್ಷಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ.

**ಭಾಷ್ಯ ॥ ಅತೋ ವಿರೋಧಂ ಪರಿಹರತಿ** ॥ ೨ ॥

ಭಾಷ್ಯಾರ್ಥ ॥ ಒಬ್ಬ ಜೀವನಿಗೆ ಬಹುರೂಪತ್ವ ಅಬಹುರೂಪತ್ವಗಳನ್ನು ಪ್ರತಿಪಾದಿಸಿದ್ದರಿಂದ ಈ ಶ್ರುತಿಗಳಿಗೆ ಪ್ರಾಪ್ತವಾದ ವಿರೋಧವನ್ನು ಸಂಶಯನಿವೃತ್ತಿಗಾಗಿ ಪರಿಹರಿಸುತ್ತಾರೆ.

## ಸೂತ್ರ ॥ ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ ॥ ೨೭ ॥

**ಭಾಷ್ಯ ॥ ಯಥಾ ಪುಷ್ಪಾದ್ಗಂಧಃ ಪೃಥಗ್ಗಚ್ಛತಿ ಏವಮಂಶಿನೋ ಜೀವಾದಂಶಾಃ ಪೃಥಗ್ಗಚ್ಛಂತಿ ॥ ೩ ॥**

ಭಾಷ್ಯಾರ್ಥ ॥ ಹೇಗೆ ಗಂಧಾಖ್ಯಗುಣವು (ವಾಯುವಿನಿಂದ ಸೆಳೆಯಲ್ಪಟ್ಟದ್ದಾಗಿ) ಪುಷ್ಪವನ್ನು ಬಿಟ್ಟು ಪ್ರತ್ಯೇಕವಾಗಿ (ಪ್ರದೇಶಾಂತರದಲ್ಲಿರತಕ್ಕ ಘ್ರಾಣಪ್ರದೇಶವನ್ನು ಕುರಿತು) ಹೋಗುತ್ತದೋ, ಹಾಗೆಯೇ ಯೋಗಿ ಜೀವಾಂಶಗಳೂ ಅಂಶಿಯಾದ ಜೀವನಿಂದ ವಿಭಕ್ತಗಳಾಗಿ (ಅಲ್ಲಿ ಅಲ್ಲಿ ತಮ್ಮ ಕಾರ್ಯಕ್ಕಾಗಿ) ಹೋಗುತ್ತವೆ. ಅಂತೂ ಗಂಧದಂತೆ ಅಂಶಿಯಿಂದ ಅಂಶಗಳಿಗೆ ವ್ಯತಿರೇಕಃ=ಭೇದವು. ಹಾಗೆಯೇ ಶ್ರುತಿಯು ತೋರಿಸುತ್ತದೆ.

ಪೀಠಿಕೆ ॥ ವಿಭಕ್ತಾಂಶಗಳು ಬಹಳವಿದ್ದುದರಿಂದ ಜೀವನಿಗೆ ಬಹುರೂಪತ್ವವನ್ನು ಅಂಗೀಕರಿಸಿದರೂ ಸ ಏಕಧಾ ಎನ್ನುವ ಶ್ರುತಿವಿರೋಧವು ಎಂದರೆ—

**ಭಾಷ್ಯ ॥ ಅಥೈಕ ಏವ ಸನ್ ಗಂಧವದ್ವ್ಯತಿರಿಚ್ಯತೇ । ಅಥೈಕೀಭವತ್ಯಥ ಬಹ್ವೀಭವತಿ ತಂ ಯಥಾಯಥೇಶ್ವರಃ ಪ್ರಕುರುತೇ ತಥಾತಥಾ ಭವತಿ ಸೋಽಚಿಂತ್ಯಃ ಪರಮೋ ಗರೀಯಾನ್ । ಇತಿ ಶಾಂಡಿಲ್ಯಶ್ರುತಿಃ ॥ ೪ ॥**

ಭಾಷ್ಯಾರ್ಥ ॥ ಪ್ರಮೇಯಾಂತರವು ಆರಂಭಿಸಲ್ಪಡುತ್ತದೆ. ಜೀವನು ಸ್ವರೂಪತಃ ಒಬ್ಬನೇ ಆದಾಗ್ಯೂ ಗಂಧಾಖ್ಯಗುಣದಂತೆ ಅಂಶಿಯನ್ನು ಬಿಟ್ಟು ಅಂಶಗಳಿಂದ ಪ್ರತ್ಯೇಕ ಆಗುತ್ತಾನೆ. ಪುನಃ ಪುನಃ ಅಂಶಗಳಿಂದ ಐಕ್ಯವನ್ನು ಹೊಂದುತ್ತಾನೆ. ಅಂದರೆ ಅಂಶಿಯಿಂದ ಸಂಶ್ಲಿಷ್ಟನಾಗುತ್ತಾನೆ. ಯೋಗ ಸಂಪತ್ತಿನಿಂದ ಬಹುರೂಪಗಳುಳ್ಳವನಾಗುತ್ತಾನೆ. ಆ ಜೀವನನ್ನು ಹೇಗೆ ಹೇಗೆ ಈಶ್ವರನು ಮಾಡುತ್ತಾನೋ, ಹಾಗೆ ಹಾಗೆ ಆಗುತ್ತಾನೆ. ಆ ಈಶ್ವರನು ಅಚಿಂತ್ಯಶಕ್ತಿಯುಳ್ಳವನು, ಲೋಕೋತ್ತರನು, ಗುರುತಮನು, ಎಂದು ಶಾಂಡಿಲ್ಯಶ್ರುತಿಯು. (ಉಕ್ತಾರ್ಥದಲ್ಲಿ ಪ್ರಮಾಣವು.)

ವಿಶೇಷಾಂಶ ॥ ಏಕ ಏವ ಎನ್ನುವುದರಿಂದ ಸ್ವರೂಪೈಕ್ಯವೂ ಏಕೀಭವತಿ ಎನ್ನುವುದರಿಂದ ಭಿನ್ನಾಂಶ ಶೂನ್ಯತ್ವವೂ ಬಹ್ವೀಭವತಿ ಎನ್ನುವುದರಿಂದ ಬಹುರೂಪತ್ವವೂ, ಉಕ್ತವಾಯ್ತು. ತಂ ಯಥಾ ಇತ್ಯಾದಿಗಳಿಂದ ಯೋಗಿಗಳಿಗೆ ಬಹುರೂಪತ್ವಶಕ್ತಿಗೆ ಯೋಗಾರಾಧಿತೇಶ್ವರಪ್ರಸಾದಾಧೀನತ್ವವನ್ನು ಹೇಳಿದ್ದರಿಂದ ಈಶ್ವರಸಾಮ್ಯವು ನಿರಾಕೃತವಾಯ್ತು.

ಪೀಠಿಕೆ ॥ ಭಿನ್ನಾಂಶಶೂನ್ಯತ್ವವನ್ನು ಯೋಗಸಂಪದಾ ಎನ್ನುವುದನ್ನೂ ಶ್ರುತಿಯಲ್ಲಿ ಕಂಠತಃ ಹೇಳದೆ ಇದ್ದುದರಿಂದ ಆ ವಿಷಯದಲ್ಲಿ ಚ ಶಬ್ದಸೂಚಿತವಾದ ಸ್ಮೃತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ಅಚಿಂತ್ಯಯೇಶಶಕ್ತ್ಯೈವ ಹ್ಯೇಕೋಽವಯವವರ್ಜಿತಃ। ಆತ್ಮಾನಂ ಬಹುಧಾ ಕೃತ್ವಾ ಕ್ರೀಡತೇ ಯೋಗಸಂಪದಾ ॥ ಇತಿ ಚ ಪಾದ್ಮೇ ॥ ೨೭ ॥ ಅಧಿ.೧೩ ॥ ॥ ೫ ॥**

**ಭಾಷ್ಯಾರ್ಥ ॥** ಸ್ವರೂಪತಃ ಒಬ್ಬ ಜೀವನೇ ಭಿನ್ನಾಂಶಶೂನ್ಯನಾದಾಗ್ಯೂ ಅಚಿಂತ್ಯವಾದ ಈಶ್ವರಶಕ್ತಿಯಿಂದ ಲಬ್ಧವಾದ ಪರಮಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಯೋಗಾಖ್ಯಸಂಪತ್ತಿನಿಂದ (ಅಂದರೆ ಅಚಿಂತ್ಯಶಕ್ತಿಯುಳ್ಳ, ಈಶ್ವರಪ್ರಸಾದದಿಂದ ಪ್ರಾಪ್ತವಾದ ಧ್ಯಾನೋಪಾಯರೂಪ ಸಂಪತ್ತಿನಿಂದ) ತನ್ನನ್ನು ಬಹುರೂಪಿಯನ್ನು ಮಾಡಿಕೊಂಡು ಕ್ರೀಡಿಸುತ್ತಾನೆ, ಎಂದೂ ಪಾದ್ಮದಲ್ಲಿದೆ.

**ವಿಶೇಷಾಂಶ ॥** (೧) ತಥಾಚ ಸಾಂಶಜೀವನಿಗೆ ಬಹುರೂಪತ್ವವಿದೆ. ನಿರವಯವತ್ವ ಶ್ರುತಿಯು ಸ್ವರೂಪೈಕ್ಯ ವಿಷಯಕವು. ಭಿನ್ನಾಂಶವಿಲ್ಲವಾದರೂ ಯೋಗಸಂಪತ್ತಿನಿಂದ ಅಂಶಭೇದವು ಕೂಡ ಬಹುದು. ಅಂತಹ ಯೋಗಸಂಪತ್ತು ಭಗವತ್ಪ್ರಸಾದಲಬ್ಧವು. ಶ್ರೀಹರಿಗಾದರೂ ಅಚಿಂತ್ಯಶಕ್ತಿಯಿದ್ದುದ ರಿಂದ ಅಶಕ್ಯವಾದುದು ಯಾವುದೂ ಇಲ್ಲ ಇಲ್ಲಿ ಯೋಗಿಜೀವನು ಪ್ರತಿಪಾದ್ಯನು. (೨) ಏತೇನ ಯೋಗಃ ಎನ್ನುವಲ್ಲಿ ದೃಷ್ಟಾರ್ಥವಿಷಯದಲ್ಲಿ ಇತರ ಯೋಗಶಾಸ್ತ್ರಕ್ಕೇನೆ ಅಪ್ರಾಮಾಣ್ಯವನ್ನು ಹೇಳಿದ್ದು ಪರಮ ಯೋಗಶಾಸ್ತ್ರಕ್ಕೆ ಅಪ್ರಾಮಾಣ್ಯವನ್ನು ಹೇಳಲಿಲ್ಲ ಎಂದು ತತ್ತ್ವಪ್ರದೀಪದಲ್ಲಿ ಉಕ್ತವಾಗಿದೆ ॥೨೭॥

## ಅಧಿಕರಣ ಸಾರಾಂಶ

ಜೀವನು ಏಕರೂಪನೋ ಅನೇಕ ರೂಪನೋ ಎಂದು ಸಂದೇಹವು. ಸ ಏಕಧಾ ನ ಸಪ್ತಧಾ ಎನ್ನುವ ಶ್ರುತಿಯಿಂದ ಏಕರೂಪನು. ಆತ್ಮನು ವಿಭುವಾಗಿ ಇರುತ್ತಿದ್ದರೆ ಯೋಗಪ್ರಭಾವದಿಂದ ದೇಹಬಾಹುಲ್ಯದಿಂದ ಬಹುರೂಪಗಳು ಕೂಡಿದರೂ ಅಣುವಾದ ಜೀವನಲ್ಲಿ ಬಹುರೂಪವು ಕೂಡಲಾರದು, ಎನ್ನುವ ಯುಕ್ತಿಯು. ಅಣುವಾದಾಗ್ಯೂ ಅಂಶಗಳಿಂದ ಬಹುರೂಪತ್ವವು ಎನ್ನುವುದೂ ಸ ನಿತ್ಯೋ ನಿರವಯವಃ ಎನ್ನುವ ನಿರವಯತ್ವಶ್ರುತಿ ವಿರೋಧದಿಂದ ಕೂಡಲಾರದು. ಯೋಗಿಗೆ ಅಘಟತಘಟಕ ಶಕ್ತಿಯಿಂದ ಸಮುದ್ರಪಾನದಂತೆ ಬಾಹುರೂಪ್ಯವು ಕೂಡಬಹುದು ಎನ್ನುವುದು ಈಶ್ವರಸಾಮ್ಯವು ಬರಬೇಕಾಗಿರುವುದರಿಂದ ಅಯುಕ್ತವು. ಸ ಪಂಚಧಾ ಸ ಸಪ್ತಧಾ ಎನ್ನುವ ಬಹುರೂಪ್ಯಶ್ರುತಿಯು ಸಯುಕ್ತಿಕ ಏಕರೂಪ್ಯಶ್ರುತಿಯಿಂದ ಬಾಧಿತವಾಗಿದೆ, ಎಂದರೆ ಭಿನ್ನಾಂಶ ಶೂನ್ಯನಾದಾಗ್ಯೂ ಅಣುವಾದ ಜೀವನಿಗೆ ಯೋಗಾರಾಧಿತ ಅಚಿಂತ್ಯಶಕ್ತಿಯುಳ್ಳ ಈಶ್ವರಪ್ರಸಾದ ಲಬ್ಧ ಸಾಮರ್ಥ್ಯದಿಂದ ಬಾಹುರೂಪ್ಯವು ಕೂಡುವುದರಿಂದ ಜೀವನು ಬಹುರೂಪವುಳ್ಳವನು. ಏಕರೂಪ್ಯ ಶ್ರುತಿಯು ಸ್ವರೂಪೈಕ್ಯಪರವು. ನಿರವಯವತ್ವಶ್ರುತಿಯು ಭಿನ್ನಾಂಶರಾಹಿತ್ಯಪರವು. ॥ ಅಧಿ. ೧೨. ॥

**ವ್ಯತಿರೇಕಾಧಿಕರಣವು ಸಮಾಪ್ತವಾಯಿತು.**

### ॥ ಓಂ ಜೀವೈಕ್ಯಶ್ರುತ್ಯವಿರೋಧಪ್ರಯೋಜ್ಯಸಮಸ್ತಸುಗೋಚರಾಯನಮಃ ಓಂ ॥

## ೧೪ ಪೃಥಗಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಜೀವನಿಗೆ ಪರಮಾತ್ಮಾಭಿನ್ನತ್ವ ಭಿನ್ನತ್ವ ವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಆ ಶ್ರುತಿವಿರೋಧವನ್ನೇ ತೋರಿಸುತ್ತಾರೆ—

**ಭಾಷ್ಯ ॥ ★ತತ್ತ್ವಮಸಿ (ಛಾ.೬.೮.೭.)। ಅಹಂ ಬ್ರಹ್ಮಾಸ್ಮಿ (ಬೃ.೩.೪.೧೦.)। ಇತ್ಯಾದಿಷು ಜೀವಸ್ಯ ಪರೇಣಾಭೇದಃ ಪ್ರತೀಯತೇ । ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ (ಶ್ವೇ.೬.೧೩.)। ದ್ವಾ ಸುಪರ್ಣಾ (ಶ್ವೇ. ೪.೬)। ಇತ್ಯಾದಿಷು ಭೇದಃ ॥ ೧ ॥**

ಭಾಷ್ಯಾರ್ಥ ॥ ತತ್ತ್ವಮಸಿ ಇತ್ಯಾದಿ ಶ್ರುತಿವಾಕ್ಯಗಳಲ್ಲಿ (ಆದಿಶಬ್ದದಿಂದ ಬ್ರಹ್ಮವೇದ ಬ್ರಹ್ಮೈವ ಭವತಿ (ಮು.೩..೨.೯.) ಏಕಮೇವಾದ್ವಿತೀಯಂ ಇತ್ಯಾದಿಗಳು) ಪರಮಾತ್ಮನಿಂದ ಜೀವನಿಗೆ ಅಭೇದವು ತೋರುತ್ತದೆ. ನಿತ್ಯೋ ನಿತ್ಯಾನಾಂ ಇತ್ಯಾದಿ ಶ್ರುತಿಗಳಲ್ಲಿ ಭೇದವು ತೋರುತ್ತದೆ.

ಪೀಠಿಕೆ ॥ ತಥಾಚ ಅದ್ವೈತ ಶ್ರುತಿಗೆ ಉಪಕ್ರಮಾದಿ ಷಡ್ವಿಧ ತಾತ್ಪರ್ಯಲಿಂಗಗಳು ಇದ್ದುದರಿಂದ ಪ್ರಬಲವಾದ ಪ್ರಯುಕ್ತ ಜೀವನು ಪರಮಾತ್ಮನಿಂದ ಅಭಿನ್ನನು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತ ಉಚ್ಯತೇ ॥ ೨ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ.

## ಸೂತ್ರ ॥ ಓಂ ಪೃಥಗುಪದೇಶಾತ್ ಓಂ ॥ ೨೮ ॥

**ಭಾಷ್ಯ ॥ ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್ಪೂರ್ಣಃ ಪರೋ ಜೀವಸಂಘೋ ಹ್ಯಪೂರ್ಣಃ। ಯತಸ್ತ್ವಸೌ ನಿತ್ಯಮುಕ್ತೋ ಹ್ಯಯಂ ಚ ಬಂಧಾನ್ಮೋಕ್ಷಂ ತತ ಏವಾಭಿವಾಂಛೇತ್ ॥ ಇತಿ ಸೋಪಪತ್ತಿಕಕೌಶಿಕಶ್ರುತೇರ್ಭಿನ್ನ ಏವ ಜೀವಃ ॥ ೨೮ ॥ ॥ ೩ ॥**

ಭಾಷ್ಯಾರ್ಥ ॥ ಸಾಕಲ್ಯೇನ ಅಚಿಂತ್ಯನಾದ ಪರಮಾತ್ಮನು ಜೀವರ ಸಮುದಾಯದಿಂದ ಉತ್ತಮ ಗುಣ ಪರಿಪೂರ್ಣನು, ಜೀವಸಮೂಹವಾದರೂ ಅಪೂರ್ಣವೇ ಆಗಿದೆ. ಅನುಭವಾದಿಸಿದ್ಧವು. ಯಾವಕಾರಣದಿಂದ ಶ್ರೀಹರಿಯು ನಿತ್ಯಮುಕ್ತನೇ ಆಗಿರುತ್ತಾನೋ, ಈ ಸಂಸಾರಿಯಾದ ಜೀವನು ಶ್ರೀಹರಿಯಿಂದಲೇ ಸಂಸಾರ ಬಂಧದಿಂದ ಬಿಡುಗಡೆಯನ್ನು ತನಗೆ ಇಚ್ಛಿಸುತ್ತಾನೆ. ಹೀಗೆ ಸಯುಕ್ತಿಕ ಕೌಶಿಕಶ್ರುತಿಯಿಂದ ಜೀವೇಶ್ವರರಿಗೆ ಭೇದೋಪಾದಕವಾದ ವಿರುದ್ಧ ಧರ್ಮಾಧಿಕರಣತ್ವರೂಪವಾದ ಯುಕ್ತಿಸಹಿತ ಶ್ರುತಿಯಿಂದ ಶ್ರೀಹರಿಯಿಂದ ಜೀವನು ಭಿನ್ನನೇ. ॥ ೨೮ ॥

ಪೀಠಿಕೆ ॥ ಹೀಗಾದರೆ ಅದ್ವೈತ ಶ್ರುತಿಗೆ ವಿಷಯವೇ ಇಲ್ಲದಿರುವುದರಿಂದ ಅಪ್ರಾಮಾಣ್ಯವು ಬರಲೇ ಬೇಕಾಗುವುದು ಎಂದರೆ—

## ಸೂತ್ರ ॥ ಓಂ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ಓಂ ॥ ೨೯ ।

★ ೧ ತತ್ತ್ವಮಸಿ, ೨ ಅಹಂ ಬ್ರಹ್ಮಾಸ್ಮಿ ಎನ್ನುವುದು ಆನಂದಮಯಾಧಿಕರಣ ಪುಟ ೧೦೮ರಲ್ಲಿಯೂ ೩ ನಿತ್ಯೋ ನಿತ್ಯಾನಾಂ ಎನ್ನುವುದು ನಾತ್ಮಾಧಿಕರಣ ಪುಟ ೫೧೬ರಲ್ಲಿಯೂ, ೪ ದ್ವಾ ಸುಪರ್ಣಾ ಎನ್ನುವುದು ದ್ಯುಭ್ವಾದ್ಯಧಿಕರಣದಲ್ಲಿ ಪುಟ ೨೪೪ರಲ್ಲಿಯೂ ವ್ಯಾಖ್ಯಾತವಾಗಿದೆ.

**ಭಾಷ್ಯ ॥ ಜ್ಞಾನಾನಂದಾದಿಬ್ರಹ್ಮಗುಣಾ ಏವಾಸ್ಯ ಯತಃ ಸಾರಃ ಸ್ವರೂಪಂ ಅತೋಽಭೇದವ್ಯಪದೇಶಃ। ಯಥಾ ಸರ್ವಗುಣಾತ್ಮಕತ್ವಾತ್ಸರ್ವಾತ್ಮಕತ್ವಂ ಬ್ರಹ್ಮಣ ಉಚ್ಯತೇ। ಸರ್ವಂ ಖಲ್ವಿದಂ ಬ್ರಹ್ಮ (ಛಾ.೩.೧೪.೧.)। ಇತಿ ॥ ೪ ॥**

ಭಾಷ್ಯಾರ್ಥ ॥ ಜ್ಞಾನ ಆನಂದ ಮೊದಲಾದ ಯಾವ ಬ್ರಹ್ಮಗುಣಗಳೋ ಅವುಗಳಿಗೆ ಸದೃಶಗಳಾದ ಜ್ಞಾನಾನಂದಾದಿ ಗುಣಗಳೇ ಜೀವನಿಗೆ ಯಾವ ಕಾರಣದಿಂದ ಸ್ವರೂಪವೊ ಆದಕಾರಣ ಗೌಣೀವೃತ್ತಿಯಿಂದ, ತದ್ವ್ಯಪದೇಶಃ-ತತ್ತ್ವಮಸೀತ್ಯಾದಿ ಪರಮಾತ್ಮಾಭೇದವ್ಯಪದೇಶವು. ಪ್ರಾಜ್ಞವತ್- ಹೇಗೆ ಸಮಸ್ತ ಜಗದ್ಗುಣ ಸದೃಶವಾದ ಗುಣಸ್ವರೂಪತ್ವವನ್ನು ಅಪೇಕ್ಷಿಸಿ ಸರ್ವಂ ಖಲ್ವಿದಂ ಬ್ರಹ್ಮ ಎನ್ನುವ ಛಂದೋಗಶ್ರುತಿಯಲ್ಲಿ ಪ್ರಕರ್ಷೇಣ ಜ್ಞಾತೃತ್ವನಿಮಿತ್ತದಿಂದ ಪ್ರಾಜ್ಞ ಶಬ್ದದಿಂದ ಹೇಳಲ್ಪಟ್ಟ ಬ್ರಹ್ಮನಿಗೆ ಸರ್ವಾತ್ಮಕತ್ವವು ಅಂದರೆ ಜಡಭೂತವಾದ ಜಗತ್ತಿನಿಂದ ಅಭೇದವು ಹೇಳಲ್ಪಡುತ್ತದೋ ಹಾಗೆಯೇ.

**ಟೀಕಿಕೆ ॥ ಈ ವಿಷಯದಲ್ಲಿಯೂ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ—**

**ಭಾಷ್ಯ ॥ ಭವಿಷ್ಯತ್ಪರ್ವಣಿ ಚ। ಭಿನ್ನಾಃ ಜೀವಾಃ ಪರೋ ಭಿನ್ನಸ್ತಥಾಽಪಿ ಜ್ಞಾನರೂಪತಃ। ಪ್ರೋಚ್ಯಂತೇ ಬ್ರಹ್ಮರೂಪೇಣ ವೇದವಾದೇಷು ಸರ್ವಶಃ। ಇತಿ ॥ ೨೯ ॥ ಅ.೧೪॥ ॥ ೫ ॥**

ಭಾಷ್ಯಾರ್ಥ ॥ ಜೀವರು ಶ್ರೀಹರಿಯಿಂದ ಭಿನ್ನರು. ಶ್ರೀಹರಿಯು ಜೀವರಿಂದ ಭಿನ್ನನು. ಆದಾಗ್ಯೂ ಜೀವರು ಜ್ಞಾನಾನಂದಾದಿ ಬ್ರಹ್ಮಗುಣಸದೃಶ ಗುಣಸ್ವರೂಪತ್ವವಿದ್ದುದರಿಂದ ಎಲ್ಲಾ ತತ್ತ್ವಮಸಿ ಇತ್ಯಾದಿ ವೇದವಾಕ್ಯಗಳಲ್ಲಿ ಪರಬ್ರಹ್ಮಾಭೇದದಿಂದ ಹೇಳಲ್ಪಡುತ್ತಾರೆ. ಹೀಗೆ ಭವಿಷ್ಯತ್ಪರ್ವದಲ್ಲಿದೆ. ಇದರಿಂದ ಜೀವಬ್ರಹ್ಮಾಭೇದೋಕ್ತಿಗೆ ಚಿತ್ತ್ವಾದಿಸಾಮ್ಯವು ನಿಮಿತ್ತವೆಂದು ಉಕ್ತವಾಯಿತು. ॥ ೨೯ ॥

## ಅಧಿಕರಣ ಸಾರಾಂಶ

ಜೀವನು ಶ್ರೀಹರಿಯಿಂದ ಭಿನ್ನನೋ ಅಭಿನ್ನನೋ ಎಂದು ಸಂದೇಹವು. ತತ್ತ್ವಮಸಿ ಇತ್ಯಾದಿ ಐಕ್ಯಶ್ರುತಿಯಿಂದ ಅಭಿನ್ನನು ಎಂದು ಪೂರ್ವಪಕ್ಷವು. ಹೇಗೆಂದರೆ—ಜೀವಪರೈಕ್ಯ ಶ್ರುತಿಗೆ ಏಕಮೇವಾದ್ವಿತೀಯಂ ಎನ್ನುವ ಉಪಕ್ರಮದಿಂದಲೂ, ತತ್ತ್ವಮಸಿ ಎನ್ನುವ ಉಪಸಂಹಾರದಿಂದಲೂ ತತ್ತ್ವಮಸಿ ಎಂದು ಒಂಭತ್ತಾವರ್ತಿ ಅಭ್ಯಾಸದಿಂದಲೂ ಐಕ್ಯವು ಪ್ರಮಾಣಾಂತರದಿಂದ ಪ್ರಾಪ್ತವಾಗದೆ ಇದ್ದುದರಿಂದ ಅಪೂರ್ವತಾ ಇದ್ದುದರಿಂದಲೂ ತಸ್ಯ ತಾವದೇವ ಚಿರಂ ಎಂದು ಫಲವಿದ್ದುದರಿಂದಲೂ, **ಯೇನಾಶ್ರುತಂ ಶ್ರುತಂ** ಎನ್ನುವ ಅರ್ಥವಾದದಿಂದಲೂ ಮೃಣ್ಮಯಾದಿ ದೃಷ್ಟಾಂತದಿಂದ ಉಪಪಾದಿಸಿದ್ದರಿಂದಲೂ ಹೀಗೆ ಷಡ್ವಿಧ ತಾತ್ಪರ್ಯಲಿಂಗಗಳು ಇದ್ದುದರಿಂದಲೂ ಪ್ರಬಲವಾದ ಪ್ರಯುಕ್ತ ದ್ವಾ ಸುಪರ್ಣಾ ಇತ್ಯಾದಿ ಶ್ರುತಿಯು ಅಪ್ರಮಾಣವೇ. ಇಲ್ಲವಾದರೆ ಐಕ್ಯಶ್ರುತಿಗೆ ವಿಷಯವೇ ಇಲ್ಲವೆಂದಾಗಬೇಕಾಗುವುದು. ಎಂದರೆ—ಭಿನ್ನೋಽಚಿಂತ್ಯಃ ಇತ್ಯಾದಿ ಭೇದಶ್ರುತಿಯು ವಿರುದ್ಧ ಧರ್ಮಾಧಿಕರಣತ್ವರೂಪ ಯುಕ್ತಿಯಿಂದ ಕೂಡಿದ ಪ್ರಯುಕ್ತ ಉಪಜೀವ್ಯತ್ವೇನ ಪ್ರಬಲವು. ಆದರ

ವಿರೋಧದಿಂದಲೂ ಅನುಭವ ವಿರೋಧದಿಂದಲೂ **ತತ್ತ್ವಮಸಿ** ಇತ್ಯಾದಿಗಳಿಗೆ ಶ್ರೀಹರಿಯ ಜ್ಞಾನಾನಂದಾದಿ ಗುಣಗಳಿಗೆ ಸದೃಶಗುಣಗಳು ಇದ್ದುದರಿಂದ ಶ್ವೇತಕೇತುವೇ ನೀನು ಬ್ರಹ್ಮಸದೃಶನು ಆಗಿರುತ್ತಿ ಎನ್ನುವ ಅರ್ಥವು ಕೂಡುವುದರಿಂದ ಐಕ್ಯಪರತ್ವವು ಕೂಡಲಾರದು. ಉಪಕ್ರಮಾದಿಗಳು ಪ್ರಮಾಣಾಂತರಾವಿರುದ್ಧವಾದ ಅರ್ಥದಲ್ಲಿಯೇ ತಾತ್ಪರ್ಯಜ್ಞಾಪಕಗಳು. ಆದಕಾರಣ ಜೀವನು ಈಶನಿಂದ ಭಿನ್ನನೇ. ॥ ಅಧಿ.೧೪ ॥

**ಪೃಥಗಧಿಕರಣವು ಸಮಾಪ್ತವಾಯಿತು.**

**॥ ಓಂ ಜೀವನಿತ್ಯತ್ವ ಶ್ರುತ್ಯವಿರೋಧ ಸಮನ್ವಯ ಗೋಚರಾಯನಮಃ ಓಂ ॥**

## ೧೫ ಯಾವದಧಿಕರಣವು

**ಪೀಠಿಕೆ ॥** ಜೀವನಿತ್ಯತ್ವವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ಜೀವಸ್ಯಾಪ್ಯುತ್ಪತ್ತಿರುಕ್ತಾ । ಅತಸ್ತಸ್ಯ ★ಸೋऽನಾದಿನಾ ಪುಣ್ಯೇನ ಪಾಪೇನ ಚಾನುಬದ್ಧಃ ಪರೇಣ ನಿರ್ಮುಕ್ತ ಆನಂತ್ಯಾಯ ಕಲ್ಪ(ಲ್ಪ್ಯ)ತೇ। ಇತ್ಯನಾದಿಕರ್ಮ-ಸಂಬಂಧ ಆನಂತ್ಯಾವಾಪ್ತಿಶ್ಚ ನ ಯುಜ್ಯತೇ । ಇತಿ ॥ ಅತ ಆಹ ॥ ॥ ೧ ॥**

**ಭಾಷ್ಯಾರ್ಥ ॥** (ಆಕಾಶಾದಿಗಳಂತೆಯೇ) ಜೀವನಿಗೂ ಜ್ಯೋऽತ ಏವ ಎನ್ನುವುದರಿಂದ ಉತ್ಪತ್ತಿಯು ಉಕ್ತವಾಗಿದೆ. ಉಪಾಧಿಗೇನೇ ಉತ್ಪತ್ತಿಯನ್ನು ಹೇಳಿದಾಗ್ಯೂ ಜೀವನಿಗೂ ಉತ್ಪತ್ತಿಯು ಉಕ್ತಪ್ರಾಯವೇ. (ಉಪಾಧಿಗೆ ಉತ್ಪತ್ತಿಯಿದ್ದರೆ ಪ್ರತಿಬಿಂಬಕ್ಕೆ ಉತ್ಪತ್ತಿಯು ನಿಯತವು. ಉತ್ಪತ್ತಿಯಿದ್ದುದಕ್ಕೆ ಅನಿತ್ಯತ್ವವೂ ನಿಯತವೇ. ಬ್ರಹ್ಮನ್ ಲಯಮಭ್ಯುಪೈತಿ ಎಂದು ವಿನಾಶಶ್ರುತಿಯೂ ಇದೆ.) ಉತ್ಪತ್ತಿಯಿದ್ದ ಕಾರಣ ಆ ಜೀವನಿಗೆ ಸೋऽನಾದಿನಾ ಇತ್ಯಾದಿ ಶ್ರುತಿವಾಕ್ಯದಿಂದ ಶ್ರೂಯಮಾಣವಾದ ಅನಾದಿಕರ್ಮ ಬಂಧವೂ ಕಥಾಪಿ ನಾಶರಹಿತವಾದ ಮೋಕ್ಷಪ್ರಾಪ್ತಿಯೂ ಕೂಡ ಕೂಡುವುದಿಲ್ಲ (ಆದಕಾರಣ ಈ ಶ್ರುತಿಯು ಅಪ್ರಮಾಣವೇ.) ಹೀಗೆ ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ.

**ಸೂತ್ರ ॥ ಓಂ ಯಾವದಾತ್ಮಭಾವಿತ್ವಾಚ್ಚನ ದೋಷಸ್ತದ್ದರ್ಶನಾತ್ ಓಂ ॥೩೦॥**

**ಸೂತ್ರಾರ್ಥ ॥** ಜೀವನಿಗೂ ಜೀವಸ್ವರೂಪಭೂತವಾದ ಉಪಾಧಿಗೂ ಶ್ರೀಹರಿಯು ಇರುವ ತನಕ ಇರುವಿಕೆಯಿದ್ದುದರಿಂದ ಅಂದರೆ ಅನಾದಿನಿತ್ಯತ್ವವಿದ್ದುದರಿಂದ ಸೋऽನಾದಿನಾ ಇತ್ಯಾದಿ

---

★ ಈ ಜೀವನು ಅನಾದಿಯಾದ ಬಂಧಕವಾದ ಪುಣ್ಯದಿಂದಲೂ ಪಾಪದಿಂದಲೂ ಶ್ರೀಹರಿಯಿಂದ ಬದ್ಧನಾಗಿ, ಶ್ರೀಹರಿಯಿಂದಲೇ ಬಂಧಕ ಕರ್ಮದಿಂದ ಬಿಡಲ್ಪಟ್ಟವನಾಗಿ ನಾಶರಹಿತವಾದ ಮೋಕ್ಷಕ್ಕಾಗಿ ಸಮರ್ಥನಾಗುತ್ತಾನೆ, ಅಂದರೆ ಮೋಕ್ಷವನ್ನು ಹೊಂದುತ್ತಾನೆ, ಎಂದು ಶ್ರುತ್ಯರ್ಥವು.

ಶ್ರುತ್ಯಪ್ರಾಮಾಣ್ಯರೂಪದೋಷವು ಇಲ್ಲ. ನಿತ್ಯಃ ಪರಃ ಎನ್ನುವ ಶ್ರುತಿಯೂ, ಆತ್ಮಾ ನಿತ್ಯಃ ಎನ್ನುವ ಸ್ಮೃತಿಯೂ ಇದ್ದುದರಿಂದ.

**ಭಾಷ್ಯ ॥ ಯಾವತ್ಪರಮಾತ್ಮಾ ತಿಷ್ಠತ್ಯನಾದ್ಯನಂತತ್ವೇನ । ಏವಂ ಜೀವೋಽಪಿ ॥ ១ ॥**

ಭಾಷ್ಯಾರ್ಥ ॥ (ಪರಮಾತ್ಮ ಜೀವರಿಗೆ ಬಿಂಬಪ್ರತಿಬಿಂಬಭಾವವು ಇದೆ. ಅದರಲ್ಲಿ ಬಿಂಬಭೂತನಾದ) ಪರಮಾತ್ಮನು ಎಷ್ಟು ಕಾಲ ಉತ್ಪತ್ತಿನಾಶಶೂನ್ಯನಾಗಿ ಇರುತ್ತಾನೋ, ಅಷ್ಟು ಕಾಲ ಉತ್ಪತ್ತಿನಾಶಶೂನ್ಯನಾಗಿ ಪರಮಾತ್ಮನಿಗೆ ಪ್ರತಿಬಿಂಬಭೂತನಾದ ಜೀವನೂ ಇರುತ್ತಾನೆ. ಜೀವಸ್ವರೂಪಭೂತವಾದ ಉಪಾಧಿಯೂ ಇರುತ್ತದೆ.

ವಿಶೇಷಾಂಶ ॥ ಪರಮಶ್ಚಾಸೌ ಆತ್ಮಾ ಚ ಎಂದು ಆತ್ಮಶಬ್ದಗ್ರಹಣದಿಂದ, ಆತತತ್ವಾತ್ ಆತ್ಮಾ ಎನ್ನುವ ನಿರ್ವಚನದಿಂದ ಶ್ರೀಹರಿಗೆ ಸರ್ವಗತತ್ವವನ್ನು ಹೇಳಿದುದರಿಂದ ಬಿಂಬೋಪಾಧಿ ಸನ್ನಿಧಿ ನಾಶದಿಂದಲೂ ಜೀವನಿಗೆ ನಾಶವಿಲ್ಲವೆಂದು ಸೂಚಿತವಾಯಿತು. ಸರ್ವಗತ ಬಿಂಬಕ್ಕೆ ಉಪಾಧಿಸನ್ನಿಧಿ ವಿನಾಶವೇ ಕೂಡಲಾರದು. ಆದಕಾರಣ ಜೀವನಿಗೆ ಅನಾದಿಕರ್ಮಸಂಬಂಧವೂ ಮೋಕ್ಷಪ್ರಾಪ್ತಿಯೂ ಉಪಪನ್ನವಾಗುತ್ತದೆ.

ಪೀಠಿಕೆ ॥ ಈ ವಿಷಯದಲ್ಲಿ ಪ್ರಮಾಣವನ್ನುದಾಹರಿಸುತ್ತಾರೆ—

**ಭಾಷ್ಯ ॥ ನಿತ್ಯಃ ಪರೋ ನಿತ್ಯೋ ಜೀವೋಽನಿತ್ಯಾಸ್ತಸ್ಯ ಧಾತವಃ । ಅತ ಉತ್ಪದ್ಯತೇ ಚ ಮ್ರಿಯತೇ ಚ ವಿಮುಚ್ಯತೇ ಚ । ಇತ್ಯಾಗ್ನಿವೇಶ್ಯಶ್ರುತಿಃ ॥ ೩ ॥**

ಭಾಷ್ಯಾರ್ಥ ॥ ಬಿಂಬಭೂತನಾದ ಪರಮಾತ್ಮನು ಅನಾದಿನಿತ್ಯನು. ಹಾಗೆಯೇ ಜೀವನೂ ಪ್ರತಿಬಿಂಬದಿಂದ ಉಪಾಧಿಭೂತವಾದ ಜೀವಸ್ವರೂಪಪ್ರಕಾಶವು ಶ್ರೀಪರಮಾತ್ಮನು ಇರುವ ತನಕ ಇರತಕ್ಕುದು. ಜೀವನ ಬಾಹ್ಯದೇಹಗಳು ಅನಿತ್ಯಗಳು, ಮತ್ತು ಸಾದಿಗಳು. ಹೀಗೆ ಶರೀರಗಳು ಅನಿತ್ಯಗಳೂ, ಸಾದಿಗಳೂ ಆದುದರಿಂದ ಜೀವನು ಅನಾದಿನಿತ್ಯನಾದಾಗ್ಯೂ ಶ್ರೀಪರಮಾತ್ಮನಿಂದಲೇ ಶರೀರಸಂಯೋಗದಿಂದ ಉತ್ಪತ್ತಿಯನ್ನು ಹೊಂದುತ್ತಾನೆ. ಶರೀರವಿಯೋಗದಿಂದ ಮೃತನಾಗುತ್ತಾನೆ. ಆತನ ಪ್ರಸಾದದಿಂದಲೇ ಮುಕ್ತನಾಗುತ್ತಾನೆ. ಎಂದು ಆಗ್ನಿವೇಶ್ಯಶ್ರುತಿಯು.

ವಿಶೇಷಾಂಶ ॥ ಅನಿತ್ಯಾಸ್ತಸ್ಯ ಧಾತವಃ ಎನ್ನುವುದರಿಂದ ಬ್ರಹ್ಮನ್ ಲಯಮಭ್ಯುಪೈತಿ ಎನ್ನುವ ಶ್ರುತಿಯು ಬಾಹ್ಯೋಪಾಧಿ ವಿಷಯಕವು, ಎಂದು ಸೂಚಿತವಾಯಿತು.

**ಭಾಷ್ಯ ॥ (೧) ಆತ್ಮಾ ನಿತ್ಯಃ ಸುಖದುಃಖೇ ತ್ವನಿತ್ಯೇ । (೨) ಜೀವೋ ನಿತ್ಯೋ ಧಾತುರಸತ್ವನಿತ್ಯಃ । ಇತಿ ಚ ಭಾರತೇ ॥ ೩೦ ॥ ಅಧಿ. ೧೫ ॥ ॥ ೪ ॥**

ಭಾಷ್ಯಾರ್ಥ ॥ (೧) ಜೀವನು ನಿತ್ಯನು, ಸುಖದುಃಖಗಳು ಅನಿತ್ಯಗಳು. (೨) ಜೀವನು ನಿತ್ಯನು, ಜೀವನ ಶರೀರವು ಅನಿತ್ಯವು. ಹೀಗೆ ಭಾರತದಲ್ಲಿದ್ದ ಎರಡು ಪ್ರಮಾಣಗಳಿಂದ ಜೀವನಿಗೆ ಅನಾದಿನಿತ್ಯತ್ವವು ಸಿದ್ಧಿಸುತ್ತದೆ. ॥ ೩೦ ॥

## ಅಧಿಕರಣ ಸಾರಾಂಶ

ಜೀವನು ನಿತ್ಯನೋ ಅನಿತ್ಯನೋ ಎಂದು ಸಂದೇಹವು ಬ್ರಹ್ಮನ್ ಲಯಮಭ್ಯುಪೈತಿ ಎನ್ನುವ ಶ್ರುತಿಯಿಂದ ಜ್ಯೋಽತ ಏವ ಎನ್ನುವಲ್ಲಿ ಉಪಾಧಿಗೆ ಜನ್ಮವನ್ನು ಹೇಳಿದ್ದರಿಂದ ಪ್ರತಿಬಿಂಬಕ್ಕೆ ಜನ್ಮವು ಅವಶ್ಯಕವಾದುದರಿಂದ ಜೀವನು ಅನಿತ್ಯನು ಎಂದು ಪೂರ್ವಪಕ್ಷವು. ಹೇಗೆಂದರೆ— ಉತ್ಪತ್ತಿಯಿದ್ದವನಿಗೆ ವಿನಾಶವು ನಿಯತವು ಎಂದು ಯುಕ್ತಿಯು ಇದೆ. ದೇಹಾಖ್ಯ ಉಪಾಧಿಗೆ ಉತ್ಪತ್ತಿಯಿದ್ದರೂ ಜೀವೋಪಾಧಿಯ ಅನಾದಿನಿತ್ಯವು ಎನ್ನುವಲ್ಲಿ ಕಲ್ಪಕಪ್ರಮಾಣವಿಲ್ಲ. ಹೀಗೆ ಜೀವನಿಗೆ ಅನಾದಿಕರ್ಮಸಂಬಂಧವನ್ನೂ ಮೋಕ್ಷಪ್ರಾಪ್ತಿಯನ್ನೂ ಹೇಳಿದ್ದರಿಂದ ಜೀವರಿಗೆ ಅನಾದಿತ್ವ ಪ್ರತಿಪಾದಕ ಶ್ರುತಿಯು ಸಯುಕ್ತಿಕ ಅನಿತ್ಯತ್ವ ಶ್ರುತಿ ವಿರೋಧವಿದ್ದುದರಿಂದ ಅಪ್ರಮಾಣವೇ ಎಂದರೆ—ನಿತ್ಯಃ ಪರಃ ಇತ್ಯಾದಿ ಶ್ರುತಿಸ್ಮೃತ್ಯನ್ಯಥಾನುಪಪತ್ತಿಯಿಂದ ಅನಾದಿನಿತ್ಯವಾದ ಉಪಾಧಿಯನ್ನು ಅವಶ್ಯವಾಗಿ ಕಲ್ಪಿಸಬೇಕಾಗಿರುವುದರಿಂದಲೂ ಜೀವೋಪಾಧಿರ್ದ್ವಿಧಾ ಇತ್ಯಾದಿ ವಚನಗಳಿಂದಲೂ ಸ್ವರೂಪೋಪಾಧಿಯು ಅನಾದಿನಿತ್ಯವಾದುದರಿಂದ ಜೀವನೂ ಅನಾದಿನಿತ್ಯನು ಲಯಶ್ರುತಿಯಾದರೂ ಬಾಹ್ಯೋಪಾಧಿ ಪರವಾದುದು. ॥ ಅಧಿ.೧೫ ॥

**ಯಾವದಧಿಕರಣವು ಸಮಾಪ್ತವಾಯಿತು.**

**॥ ಓಂ ಜೀವಸ್ವರೂಪ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥**

# ೧೬ ಪುಂಸ್ತ್ವಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಸಜ್ಜೀವರಿಗೆ ಆನಂದಾದಿರೂಪತ್ವ ತದಭಾವ ಪ್ರತಿಪಾದಕ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ (ಪ್ರ.೪.೧೧)। (೨) ಸ ಆನಂದಃ ಸ ಬಲಃ ಸ ಓಜಃ ಸ ಪರೇಣಾಮುಂ ಲೋಕಂ ನೀಯತೇ ಸ ವಿಮುಚ್ಯತೇ (ಶ್ರುತ್ಯಂತರಂ)। ಇತಿ ಜೀವಸ್ಯ ಜ್ಞಾನಾನಂದಾದಿರೂಪತ್ವಮುಚ್ಯತೇ । (೩) ಸ ದುಃಖಾದ್ವಿಮುಕ್ತ ಆನಂದೀಭವತಿ ಸೋಽಜ್ಞಾನಾದ್ವಿಮುಕ್ತೋ ಜ್ಞಾನೀಭವತಿ ಸೋಽಬಲಾದ್ವಿಮುಕ್ತೋ ಬಲೀಭವತಿ ಸ ನಿತ್ಯೋ ನಿರಾತಂಕೋಽವತಿಷ್ಠತೇ। ಇತಿ ಪೈಂಗಿಶ್ರುತೌ ಅನಾನಂದಾದಿರೂಪತ್ವಂ ಪ್ರತೀಯತೇ ಇತಿ। (೪) ಅತ ಆಹ ॥ ೧ ॥**

ಭಾಷ್ಯಾರ್ಥ ॥ (೧) ವಿಜ್ಞಾನಸ್ವರೂಪನಾದ ಸಜ್ಜೀವನು (ಚಕ್ಷುರಾದಿಗಳೂ ರೂಪಾದಿಗಳೂ ಪೃಥಿವ್ಯಾದಿಗಳೂ) ಅಭಿಮಾನಿಗಳಾದ ಸೂರ್ಯಾದಿ ದೇವತೆಗಳಿಂದ ಕೂಡಿಕೊಂಡು (ಯಾವ ಪರಬ್ರಹ್ಮನಲ್ಲಿ ಇರುತ್ತಾರೋ ಅಂತಹವನನ್ನು ತಿಳಿದವನು ಸರ್ವಜ್ಞನಾಗಿ ಪರಬ್ರಹ್ಮನನ್ನು ಹೊಂದುತ್ತಾನೆ.) (೨) ಜೀವನು ಆನಂದರೂಪನು, ಆತನು ಪರಮಾತ್ಮನಿಂದ ಪರಲೋಕಕ್ಕೆ ಒಯ್ಯಲ್ಪಡುತ್ತಾನೆ.

ದೇಹಸಂಬಂಧದಿಂದ ಬಿಡಿಸಲ್ಪಡುತ್ತಾನೆ. ಹೀಗೆ ಜೀವನಿಗೆ ಜ್ಞಾನಾನಂದಾದಿರೂಪತ್ವವು ಹೇಳಲ್ಪಡುತ್ತದೆ. (೩.) ಆ ಜೀವನು ದುಃಖದಿಂದ ಬಿಡಲ್ಪಟ್ಟವನಾಗಿ ಆನಂದವುಳ್ಳವನಾಗುತ್ತಾನೆ. (ಅಂದರೆ ಪೂರ್ವದಲ್ಲಿ ಅನಭಿವ್ಯಕ್ತವಾದ ಆನಂದರೂಪವುಳ್ಳವನು ಮುಕ್ತಿಯಲ್ಲಿ ಅಭಿವ್ಯಕ್ತವಾದ ಆನಂದರೂಪವುಳ್ಳವನಾಗುತ್ತಾನೆ.) ಅಜ್ಞಾನದಿಂದ ಬಿಡಲ್ಪಟ್ಟವನು ಜ್ಞಾನವುಳ್ಳ ಮುಕ್ತಿಯಲ್ಲಿ ಅಭಿವ್ಯಕ್ತವಾದ ಆನಂದರೂಪವುಳ್ಳವನಾಗುತ್ತಾನೆ.) ಅಜ್ಞಾನದಿಂದ ಬಿಡಲ್ಪಟ್ಟವನು ಜ್ಞಾನವುಳ್ಳವನು ಆಗುತ್ತಾನೆ. ಆ ಬಲದಿಂದ ಬಿಡಲ್ಪಟ್ಟವನು ಬಲವುಳ್ಳವನಾಗುತ್ತಾನೆ. ಜೀವನು ನಿತ್ಯನು, ನಿರ್ಭಯನಾಗಿ ಮುಕ್ತಿಯಲ್ಲಿ ಇರುತ್ತಾನೆ. ಹೀಗೆ ಪೈಂಗಿಶ್ರುತಿಯಲ್ಲಿ ಜೀವನಿಗೆ ಆನಂದಾದಿರೂಪತ್ವಾಭಾವವು ತೋರುತ್ತದೆ. (ತಥಾಚ ಪೈಂಗಿಶ್ರುತಿಯಲ್ಲಿ ಆನಂದೀ ಜ್ಞಾನೀ ಬಲೀ ಎಂದು ಆನಂದಾದಿಗಳು ಇವೆ ಎಂದು ಹೇಳಿದ್ದರಿಂದ ಆನಂದಾದಿರೂಪತ್ವಾಭಾವವು ತೋರುತ್ತದೆ. ಅಂತೂ ಈ ಶ್ರುತಿಬಲದಿಂದ ಸ್ವರೂಪಭೂತಗುಣಗಳಿಗೆ ಅನುಭವವು ಕೂಡದೆ ಇದ್ದುದರಿಂದಲೂ ಜೀವನಿಗೆ ಆನಂದಾದಿರೂಪತ್ವವಿದ್ದರೆ ಮೋಕ್ಷಕ್ಕಾಗಿ ಪ್ರಯತ್ನವೇ ಕೂಡದೆ ಇದ್ದಪ್ರಯುಕ್ತವೂ ಜೀವನು ಜ್ಞಾನಾದಿರೂಪನಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ.) (೪) ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ ॥೩೧॥

**ಸೂತ್ರಾರ್ಥ ॥** ಪುಂಸ್ತ್ವಾದಿವತ್=ಪುರುಷರು ಸ್ತ್ರೀಯರು ಇತ್ಯಾದಿಗಳಿಗೆ ಅಪತ್ಯೋತ್ಪಾದನ ಶಕ್ತಿಯು ಸ್ವರೂಪವಾದುದಾಗ್ಯೂ ಯೌವನದಲ್ಲಿ ಅಭಿವ್ಯಕ್ತಿಯು ಇತರ ಕಾಲದಲ್ಲಿ ಅನಭಿವ್ಯಕ್ತಿಯು ಇದ್ದಂತೆಯೇ, ಅಸ್ಯ=ಜೀವನಿಗೆ, ಮುಕ್ತಿಗಿಂತಲೂ ಮೊದಲು, ಸತಃ=ಇದ್ದ ಜ್ಞಾನಂದಾದಿಗುಣ ಸಮುದಾಯಕ್ಕೆ, (ಮುಕ್ತಿಯಲ್ಲಿ) ಸತಃ=ಪ್ರಸನ್ನನಾದ ಶ್ರೀಹರಿಯ ಅನುಗ್ರಹದಿಂದ, ಅಭಿವ್ಯಕ್ತಿಯೋಗಾತ್=ಸಮ್ಯಕ್ ಅಭಿವ್ಯಕ್ತಿರೂಪವಾದ ನಿಮಿತ್ತದಿಂದಲೇ ಆನಂದೀಭವತಿ ಇತ್ಯಾದಿ ವ್ಯಪದೇಶವು.

## ಭಾಷ್ಯ ॥ ಯಥಾ ಬಾಲಸ್ಯ ಸದೇವ ಪುಂಸ್ತ್ವಂ ಯೌವನೇಽಭಿವ್ಯಜ್ಯತೇ। ಏವಂ ಸತಾಮೇವಾನಂದಾದೀನಾಂ ವ್ಯಕ್ತ್ಯಪೇಕ್ಷಯಾ ತದುಕ್ತಿಃ ॥ ೨ ॥

**ಭಾಷ್ಯಾರ್ಥ ॥** ಸ್ತ್ರೀಪುರುಷರೂಪ ಜೀವನಿಗೆ ಬಾಲ್ಯದಲ್ಲಿ ಇದ್ದ ಪುಂಸ್ತ್ವವು (ಸ್ತ್ರೀತ್ವವೂ ಕೂಡ) ಅಂದರೆ ಅಪತ್ಯೋತ್ಪಾದನ ಶಕ್ತಿಯು, ತಾರುಣ್ಯಾವಸ್ಥೆಯಲ್ಲಿ ಅಭಿವ್ಯಕ್ತವಾಗುತ್ತದೆ. (ಅಂತೂ ಇವನು ಪೂರ್ವದಲ್ಲಿ ಪುರುಷನು ಅಲ್ಲ, ಈಗ ಪುಂಸ್ತ್ವವುಳ್ಳವನು ಇತ್ಯಾದಿ ವ್ಯವಹಾರವು ಕೂಡುತ್ತದೆ.) ಹೀಗೆಯೇ ಜೀವಸ್ವರೂಪಗಳಾಗಿರುವುದರಿಂದ ಮುಕ್ತಿಯಿಂದ ಮೊದಲೂ ಇದ್ದ ಆನಂದಾದಿಗಳಿಗೆ ಈಶ್ವರಪ್ರಸಾದದಿಂದ ಮುಕ್ತಿಯಲ್ಲಿ ಸಮ್ಯಕ್ ಅಭಿವ್ಯಕ್ತಿನಿಮಿತ್ತದಿಂದಲೇ ಆನಂದೀಭವತಿ ಇತ್ಯಾದ್ಯುಕ್ತಿಯು ಕೂಡುತ್ತದೆ. (ತಥಾಚ ಈ ಶ್ರುತಿವಿರೋಧವಿಲ್ಲದಿರುವುದರಿಂದ ಜೀವನು ಜ್ಞಾನಾದಿರೂಪನೇ.)

**ಪೀಠಿಕೆ ॥** ಈ ಶ್ರುತಿಯು ಮೊದಲು ಇಲ್ಲದೆ ಇದ್ದ ಆನಂದಾದಿಗಳಿಗೆ ಉತ್ಪತ್ತಿಯನ್ನು ಹೇಳುತ್ತದೆ ಎಂದು ಏಕೆ ಹೇಳಬಾರದೆಂದರೆ—

**ಭಾಷ್ಯ ॥ ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಂ। ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥ ಇತಿ ಚ ಗೌಪವನಶ್ರುತಿಃ ॥ ೩೧ ॥ ॥ ೩ ॥**

ಭಾಷ್ಯಾರ್ಥ ॥ ಸಾಮರ್ಥ್ಯವು ಆನಂದವೂ, ಪರಾಕ್ರಮವೂ, ಸಹನಶಕ್ತಿಯೂ ಸಂಶಯ ವಿಪರ್ಯಯ ರಹಿತವಾದ ಜ್ಞಾನವೂ ಇವುಗಳು ಜೀವನ ಸ್ವರೂಪಗಳೇ, ಸರ್ವೋತ್ತಮನಾದ ಶ್ರೀಹರಿಯ ಪ್ರಸಾದದಿಂದ ಅಭಿವ್ಯಕ್ತಗಳಾಗುತ್ತದೆ. (ಮೊದಲು ಇಲ್ಲದಿದ್ದವುಗಳು ಅಪೂರ್ವವಾಗಿ ಹುಟ್ಟುವುದಲ್ಲ) ಹೀಗೆ ಗೌಪವನ ಶ್ರುತಿಯು. (ಇದು ಸಜ್ಜೀವ ವಿಷಯಕವು. ತಮೋಯೋಗ್ಯರಿಗೆ ದುಃಖಾದಿರೂಪತ್ವವನ್ನು ನಿತ್ಯಸಂಸಾರಿಗಳಿಗೆ ಸುಖದುಃಖರೂಪತ್ವವನ್ನು ತಿಳಿಯತಕ್ಕದ್ದು. ॥ ೩೧ ॥

ಪೀಠಿಕೆ ॥ ಜೀವಸ್ವರೂಪವು ನಿತ್ಯದಲ್ಲಿ ಅಭಿವ್ಯಕ್ತವಾದುದರಿಂದ ಜೀವಸ್ವರೂಪಭೂತಗಳಾದ ಆನಂದಾದಿಗಳಿಗೆ ಈಶ್ವರಪ್ರಸಾದದಿಂದ ಅಭಿವ್ಯಕ್ತಿಯೆಂದು ಹೇಳಲಿಕ್ಕೆ ಶಕ್ಯವಾಗುವುದಿಲ್ಲ. ಆವರಣವೇ ಇಲ್ಲದಿರುವುದರಿಂದ ಆವರಣನಿವೃತ್ತಿರೂಪವಾದ ಅಭಿವ್ಯಕ್ತಿಯನ್ನು ಅಂಗೀಕರಿಸುವುದು ಕೂಡಲಾರದು, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋಽನ್ಯತರನಿಯಮೋ ವಾಽನ್ಯಥಾ ಓಂ ॥ ೩೨ ॥

**ಭಾಷ್ಯ ॥ (೧) ವ್ಯಕ್ತ್ಯನಂಗೀಕಾರೇ ದೇವಾನಾಂ ನಿತ್ಯೋಪಲಬ್ಧಿರಾನಂದಾದೀನಾಂ। (೨) ಅಸುರಾಣಾಂ ನಿತ್ಯಾನುಪಲಬ್ಧಿಃ (೩) ಮನುಷ್ಯಾಣಾಂ ಚ ನಿತ್ಯೋಪಲಬ್ಧ್ಯನುಪಲಬ್ಧೀ ಚ ಪ್ರಸಜ್ಯೇ (ಜ್ಯಂ) ತೇ ॥ ॥ ೪ ॥**

ಭಾಷ್ಯಾರ್ಥ ॥ (೧) ಜೀವನಿಗೆ ಆನಂದಾದಿ ರೂಪತ್ವವನ್ನು ಅಂಗೀಕರಿಸಿ ಜೀವಸ್ವರೂಪಕ್ಕೆ ಆವರಣವು ಇಲ್ಲದಿರುವುದರಿಂದ ಮೋಕ್ಷವು ಆವರಣ ನಿವೃತ್ತಿರೂಪವಾದ ವ್ಯಕ್ತಿಯನ್ನು ಅಂಗೀಕರಿಸ ದಿದ್ದರೆ, ಅಥವಾ ಮೊದಲು ಇದ್ದಾಗ್ಯೂ ಅವ್ಯಕ್ತವಾಗಿರತಕ್ಕ ಜ್ಞಾನಾನಂದಾದಿಗಳಿಗೆ ಪಶ್ಚಾತ್ ವ್ಯಕ್ತಿಯು ಎಂದು ಅಂಗೀಕರಿಸದಿದ್ದರೆ ದೇವತೆಗಳಿಗೆ ಅಂತೂ ಮೋಕ್ಷಯೋಗ್ಯರಾದ ಜೀವರಿಗೆ ಆನಂದ ಜ್ಞಾನ ಮೊದಲಾದ ಯಾವ ಗುಣಗಳೋ ಅವುಗಳಿಗೆ ನಿತ್ಯದಲ್ಲಿಯೂ ಅನುಭವವು ಬರಬೇಕಾಗುವುದು. (೨) ವ್ಯಕ್ತಿಯನ್ನು ಅಂಗೀಕರಿಸದೆ ಇದ್ದರೆ ಮೋಕ್ಷಕ್ಕೆ ಅಯೋಗ್ಯರಾದ ಅಸುರರಿಗೆ ಆನಂದಾದಿಗಳಿಗೆ ನಿತ್ಯದಲ್ಲಿಯೂ ಅನುಪಲಬ್ಧಿಯು ಬರಬೇಕಾಗುವುದು. ಅಂದರೆ ಆನಂದಾದಿಗಳ ಉಪಲಬ್ಧಿಗೆ ವಿರುದ್ಧವಾದ ದುಃಖಾದ್ಯುಪಲಬ್ಧಿಯು ಅಂತೂ ನಿತ್ಯದಲ್ಲಿಯೂ ಸ್ವರೂಪದುಃಖೋಪ ಲಬ್ಧಿಯೇ ಬರಬೇಕಾಗಿರುವುದು. ವಿಷಯಸುಖಾದ್ಯನುಭವವೂ ಬಾರದೆ ಹೋಗಬೇಕಾಗುವುದು. ತಥಾಚ ಅಸುರರಿಗೆ ಆವರಣವಿಲ್ಲವಾದರೆ ದುಃಖಾದ್ಯನುಭವವೇ ಬರಬೇಕಾಗುವುದು. ಅಸುರರ ಸ್ವರೂಪವೂ ದುಃಖಾದ್ಯಾತ್ಮಕವೇ ಆಗಿದೆ. ಆದರಿಂದ ಆನಂದಾದಿಗಳಿಗೆ ನಿತ್ಯಾನುಪಲಬ್ಧಿಯು ಬರಬೇಕಾಗುವುದು. (೩) ಮಧ್ಯಮ ಜೀವರಿಗೆ ಆದರೂ (ಅನ್ಯತರನಿಯಮಃ) ಆನಂದಾದಿಗಳಿಗೆ ನಿತ್ಯದಲ್ಲಿಯೂ ಉಪಲಬ್ಧಿಯೂ, ದುಃಖೋಪಲಬ್ಧಿಯೂ ಏಕಕಾಲದಲ್ಲಿ ಬರಬೇಕಾಗುವುದು. ಕದಾಚಿತ್ ಆನಂದಾದಿ

ಗಳಿಗೇನೇ ಉಪಲಬ್ಧಿಯು, ಕದಾಚಿತ್ ಅವಿದ್ಯಾಖ್ಯ ಆವರಣವು ಇದ್ದೇ ಇದೆ. ಭಗವತ್ಪ್ರಸಾದದಿಂದ ಆವರಣ ನಿವೃತ್ತಿಯೂ ಆಗುತ್ತದೆ. ಏವಂಚ ಮಧ್ಯಮ ಮನುಷ್ಯರು ಮಿಶ್ರರೂಪರಾದುದರಿಂದ ಜೀವರಿಗೆ ಆವರಣವಿಲ್ಲವಾದರೆ ಸ್ವರೂಪಭೂತವಾದ ಸುಖದ ಮತ್ತು ದುಃಖದ ಉಪಲಬ್ಧಿಯು ಯಾವಾಗಲೂ ಆಗಬೇಕಾಗುವುದು.

ಪೀಠಿಕೆ ॥ ಜೀವರಿಗೆ ಆನಂದಾದಿರೂಪತ್ವವು ಇರುವುದಾದರೆ ಸಂಸಾರದಲ್ಲಿ ಅದರ ಅನಭಿವ್ಯಕ್ತಿಗಾಗಿ ಜ್ಞಾನಾಭಾವಾತಿರಿಕ್ತವಾದ ಅವಿದ್ಯೆಯು ಆವರಣವೆಂದೂ ಭಗವತ್ಪ್ರಸಾದದಿಂದ ಅದರ ನಿವೃತ್ತಿಯೆಂದೂ ಅಂಗೀಕರಿಸಬಹುದಿತ್ತು. ಆನಂದಾದಿರೂಪತ್ವವನ್ನು ಅಂಗೀಕರಿಸದಿದ್ದರೆ ದೋಷವು ಇಲ್ಲದಿರುವುದರಿಂದ ಆನಂದಾದಿ ರೂಪತ್ವವೇ ಇಲ್ಲ ಎನ್ನುವ ಆಶಂಕೆಯನ್ನು ನಿರಾಕರಿಸುತ್ತಾರೆ—

**ಭಾಷ್ಯ ॥ ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ (ಪರಾತ್ಮಾ) ನೈವಮಸುರಾ ಏವಮನೇವಂ ಚ ಮನುಷ್ಯಾಃ । ಇತಿ ಹ್ಯಾಗ್ನಿವೇಶ್ಯಶ್ರುತಿಃ ॥ ೫ ॥**

ಭಾಷ್ಯಾರ್ಥ ॥ ಉತ್ತಮ ಜೀವರು ನಿತ್ಯದಲ್ಲಿಯೂ ಆನಂದರೂಪರು, ಯಥಾರ್ಥಜ್ಞಾನ ರೂಪರು. ನಿತ್ಯಬಲಸ್ವರೂಪರು ತಮೋಯೋಗ್ಯರು ಮುಕ್ತಿಯೋಗ್ಯರಂತೆ ಅಲ್ಲ ಮತ್ತೆ ತದ್ವಿರುದ್ಧವಾದ ದುಃಖ ಮಿಥ್ಯಾಜ್ಞಾನ ಸ್ವರೂಪರು. ಮಧ್ಯಮರಾದರೂ ಆನಂದಾದಿರೂಪರೂ ದುಃಖಸ್ವರೂಪರೂ ಆಗಿರುತ್ತಾರೆ. ಪ್ರಸಿದ್ಧವು. ಹೀಗೆ ಅಗ್ನಿವೇಶ್ಯಶ್ರುತಿಯು (ಸಜ್ಜೀವನಿಗೆ ಆನಂದಾದಿರೂಪತ್ವವನ್ನು ಹೇಳುತ್ತದೆ.) (ಅಂತೂ ಜೀವರಿಗೆ ಆನಂದಾದಿರೂಪತ್ವವನ್ನು ಅಂಗೀಕರಿಸದಿದ್ದರೆ ಶ್ರುತಿರೋಧವು ಬರಬೇಕಾಗುವುದು.)

ಪೀಠಿಕೆ ॥ ಅಧಿಕರಣಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಭವಿಷ್ಯತ್ಪರ್ವಣಿ ಚ । (೧) ನಿತ್ಯಾನಂದಜ್ಞಾನಬಲಾ ದೇವಾ ನೈವಂ ತು ದಾನವಾಃ। ದುಃಖೋಪಲಬ್ಧಿ ಮಾತ್ರಾಸ್ತೇ ಮಾನುಷಾಸ್ತೂಭಯಾತ್ಮಕಾಃ॥ (೨) ತೇಷಾಂ ಯದನ್ಯಥಾ ದೃಶ್ಯಂ ತದುಪಾಧಿಕೃತಂ ಮತಂ । ವಿಜ್ಞಾನೇನಾತ್ಮಯೋಗ್ಯೇನ ನಿಜರೂಪೇ ವ್ಯವಸ್ಥಿತಿಃ ॥ (೩) ಸಮ್ಯಗ್ಜ್ಞಾನಂ ತು ದೇವಾನಾಂ ಮನುಷ್ಯಾಣಾಂ ವಿಮಿಶ್ರಿತಂ। ವಿಪರೀತಂ ತು (೪) ದೈತ್ಯಾನಾಂ ಜ್ಞಾನಸ್ಯೈವಂ ವ್ಯವಸ್ಥಿತಿಃ ॥ ಇತಿ ॥ ೩೨ ॥ ಅಧಿ. ೧೬ ॥ ॥ ೬ ॥**

ಭಾಷ್ಯಾರ್ಥ ॥ (೧) ಮುಕ್ತಿಯೋಗ್ಯರು ನಿತ್ಯವಾದ ಆನಂದ ಜ್ಞಾನ ಬಲವುಳ್ಳವರು. ತಮೋಯೋಗ್ಯರು ದೇವತೆಗಳಂತೆ ಅಲ್ಲ. ಮತ್ತೆ ಅವರು ದುಃಖಾನುಭವಮಾತ್ರಯೋಗ್ಯರು. ಮಧ್ಯಮ ಮನುಷ್ಯರಾದರೂ ಸುಖದುಃಖಮಿಶ್ರಸ್ವರೂಪರು. (೨) ಅವರಿಗೆ ಯಾವುದು ಸ್ವರೂಪದಿಂದ ಇತರವಾದುದು ದೃಶ್ಯವಾದ ದುಃಖಾದಿಗಳೋ, (ಅಂದರೆ ದೇವತೆಗಳಿಗೆ ದುಃಖಾದಿಗಳೋ ದಾನವರಿಗೆ ಆನಂದಾದಿಗಳೋ ಮಧ್ಯಮರಿಗೆ ಕೇವಲ ಸುಖವು ಅಥವಾ ಕೇವಲ ದುಃಖವೋ, ಅವುಗಳು) ಜೀವಸ್ವರೂಪಭೂತವಾದ ಉಪಾಧಿಯಿಂದ ಅತಿರಿಕ್ತವಾದ ಬಾಹ್ಯದೇಹನಿಮಿತ್ತಕವು, ಎಂದು ಸಮ್ಮತವು. (ಉಪಾಧಿನಿವೃತ್ತಿಯು ಯಾವುದರಿಂದ ಎಂದರೆ) ಸ್ವಯೋಗ್ಯವಾದ ವಿಶೇಷಜ್ಞಾನದಿಂದ

ಆವರಣನಿವೃತ್ತಿಯೂ ಆವಿರ್ಭೂತವಾದ ಸ್ವಸ್ವರೂಪದಿಂದ ಸ್ಥಿತಿಯೂ ಆಗುತ್ತದೆ. (ಇದರಿಂದ ಆವರಣನಿವೃತ್ತಿಯಿಂದ ನಿತ್ಯಸಂಸಾರಿಗಳಿಗೂ ಕೂಡ ಸ್ವರೂಪಾವಿರ್ಭಾವವು ಆಗುತ್ತದೆ, ಎಂದು ಸಂಚಿತ ವಾಯಿತು. (೩) (ಆ ನಿಜರೂಪವು ಯಾವುದೆಂದರೆ) ಮುಕ್ತಿಯೋಗ್ಯ ಜೀವರಿಗೆ ಯಥಾರ್ಥ ಜ್ಞಾನವೇ. ಮಧ್ಯಮರಿಗೆ ಸುಖದುಃಖಮಿಶ್ರವೇ. ದೈತ್ಯರಿಗಾದರೂ ದುಃಖ ಮಿಥ್ಯಾಜ್ಞಾನಸ್ವರೂಪವೇ. ಸ್ವರೂಪಜ್ಞಾನಕ್ಕೆ ಹಿಂದೆ ಹೇಳಿದ ಪ್ರಕಾರ ಸ್ಥಿತಿಯು. ಹೀಗೆ ಭವಿಷ್ಯತ್ಪರ್ವದಲ್ಲಿದೆ. ॥ ೩.೨ ॥

## ಮಾಯಾವಾದಿರೀತ್ಯಾ

ವಿಚಾರ ॥ **ಉತ್ಕ್ರಾಂತಿ** ಇತ್ಯಾದಿ ಒಂಭತ್ತು ಸೂತ್ರಗಳಿಂದ ಜೀವರಿಗೆ ಅಣುತ್ವವೆಂದು ಪೂರ್ವಪಕ್ಷ ಮಾಡಿಕೊಂಡು ತದ್ಗುಣೇತ್ಯಾದಿ ನಾಲ್ಕು ಸೂತ್ರಗಳಿಂದ ಮಹತ್ವವಿದೆ ಎಂದು ಮಾಯಾವಾದಿಗಳು ಸಿದ್ಧಾಂತಮಾಡಿರುವರು. ಅದು ಅಯುಕ್ತವು. ಸೂತ್ರಕಾರರು ವೈರಾಗ್ಯಪಾದದಲ್ಲಿ **ತದಂತರಪ್ರತಿಪತ್ತೌ** ಇತ್ಯಾದಿ ಸೂತ್ರಗಳಿಂದ ಜೀವನಿಗೆ ಆಯಾ ಕರ್ಮಫಲದ ಅನುಭವಕ್ಕಾಗಿ ದೇಹಾಂತರಗತಿಯನ್ನು **ಯಥೇತಮನೇವಂ ಚ** ಇತ್ಯಾದಿ ಸೂತ್ರಗಳಿಂದ ಸುಕೃತಫಲಭೋಗಕ್ಕಾಗಿ ಧೂಮಾದಿಮಾರ್ಗದಿಂದ ಗತಿಯನ್ನೂ, **ಸಂಯಮನೇ ತ್ವನುಭೂಯ** ಇತ್ಯಾದಿ ಸೂತ್ರಗಳಿಂದ ದುಷ್ಕೃತಫಲಭೋಗಕ್ಕಾಗಿ ಸಂಯಮನೀಮಾರ್ಗದಿಂದ ಗತಿಯನ್ನು, ಅರ್ಚಿರಾದಿಪಾದದಲ್ಲಿ ಮೋಕ್ಷಕ್ಕಾಗಿ ಅರ್ಚಿರಾದಿ ಮಾರ್ಗ ದಿಂದ ಗತಿಯನ್ನೂ ಆಯಾ ಅಧಿಕರಣಗಳಲ್ಲಿ ಉದಾಹೃತಗಳಾದ ಅನೇಕಶ್ರುತಿಸ್ಮೃತಿತಾತ್ಪರ್ಯ ನಿರ್ಣಾ ಯಕ ನ್ಯಾಯಗಳಿಂದ ಸಿದ್ಧಾಂತ ಮಾಡಿರುವುದರಿಂದ ಉತ್ಕ್ರಾಂತ್ಯಾದಿ ಸೂತ್ರಗಳು ಪೂರ್ವಪಕ್ಷ ಸೂತ್ರ ಗಳೆಂದು ಹೇಳಿದ್ದು ಅತ್ಯಂತ ಅಯುಕ್ತವು. ಮತ್ತೂ **ಅಣುರ್ಹ್ಯೇಷ ಆತ್ಮಾಷೋಽಸ್ಮಾಚ್ಛರೀರಾದುತ್ಕ್ರಮ್ಯ** ಇತ್ಯಾದಿ ಭಾಷ್ಯೋದಾಹೃತ ಶ್ರುತಿಸ್ಮೃತಿಗಳಿಗ ಅನುಗುಣವಾದ, ಮತ್ತೂ ಮುಂದೆ ಹೇಳುವ ನ್ಯಾಯಗಳಿಂದ ಕೂಡಿರುವ ಶಂಕಾಲಿಂಗಗಳು ಇಲ್ಲದಿರುವ ಉತ್ಕ್ರಾಂತ್ಯಾದಿ ಸೂತ್ರಗಳಿಗೆ ಶಂಕಾಸೂತ್ರತ್ವವು ಕೂಡಲಾರದು. ಮತ್ತೂ **ನಾಣುರತಚ್ಛ್ರುತೇಃ** ಎಂದು ಶಂಕಾಲಿಂಗಸಹಿತ ಸೂತ್ರದಲ್ಲಿ ಹೇಳಲ್ಪಟ್ಟ ಉಕ್ತಶ್ರುತ್ಯಾದಿ ವಿರುದ್ಧವಾದ ಮಹತ್ವಕ್ಕೆ ಸಿದ್ಧಾಂತತ್ವವು ಕೂಡಲಾರದು. ಆದ ಕಾರಣ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ **ಜ್ಞೋಽತ ಏವ** ಎನ್ನುವುದನ್ನು ಆರಂಭಿಸಿಕೊಂಡು **ನಿತ್ಯೋಪಲಬ್ಧಿ** ಎನ್ನುವ ತನಕ ಹದಿನಾಲ್ಕು (೧೪) ಸೂತ್ರಗಳು ಒಂದು ಅಧಿಕರಣವು. ಅದರಲ್ಲಿ ಜೀವನಿಗೆ ಜ್ಞಾತೃತ್ವವು ಸ್ವಾಭಾವಿಕವು. ತಾರ್ಕಿಕ ಮತದಂತೆ ಆಗಂತುಕವಲ್ಲ. ಸೌಗತಮತದಂತೆ ಜ್ಞಾನಸ್ವಭಾವತ್ವವೂ ಅಲ್ಲ ಎಂದು **ಜ್ಞೋಽತಃ** ಎನ್ನುವ ಸೂತ್ರಾರ್ಥವು. **ಉತ್ಕ್ರಾಂತಿ** ಇತ್ಯಾದಿ ಸೂತ್ರಗಳಾದರೂ ಅದಕ್ಕೆ ಉಪಯೋಗಿಯಾಗಿ ಜೀವನಿಗೆ ಅಣುತ್ವವನ್ನು ಪ್ರತಿಪಾದಿಸತಕ್ಕವುಗಳಾಗಿ ಸಿದ್ಧಾಂತ ಸೂತ್ರಗಳೇ. ಜ್ಞಾತೃಸ್ವಭಾವನಾದ ಜೀವನಿಗೆ ಸರ್ವಗತತ್ವವಿದ್ದರೆ ಅದರ ಸಂಬಂಧದಿಂದ ಸರ್ವವೂ ಸದಾ ತಿಳಿಯಲ್ಪಡಬೇಕಾಗುವುದು. ಇತ್ಯಾದಿ ಪ್ರಕಾರ ರಾಮಾನುಜಾಚಾರ್ಯರು ಹೇಳುವರು. ಅದು ಅಯುಕ್ತವು. **ಸ್ವರೂಪಾಣ್ಯೇವ ಜೀವಸ್ಯ, ವಿಜ್ಞಾನಘನ ಏವ** ಇತ್ಯಾದಿ ಶ್ರುತಿಯಿಂದಲೂ, **ಜ್ಞಾನಸ್ವರೂಪಮತ್ಯಂತನಿರ್ಮಲಂ ಪರಮಾರ್ಥತಃ** ಇತ್ಯಾದಿ

ಸ್ಮೃತಿಯಿಂದಲೂ ವಿರುದ್ಧವಾದುದರಿಂದ ಜ್ಞಾನಸ್ವಭಾವತ್ವವನ್ನು ನಿರಾಕರಿಸಲಿಕ್ಕೆ ಸಾಧ್ಯವಿಲ್ಲ. ಜ್ಞಾತೃಸ್ವಭಾವನಾದ ಆತ್ಮನಿಗೆ ಅಣುತ್ವವಿದ್ದರೂ ಆತ್ಮಸಂಬಂಧ್ರವಾದ ವಿಭುವಾದ ಆಕಾಶ ಈಶ್ವರಾದಿಗಳಿಗೆ ನಿತ್ಯದಲ್ಲಿಯೂ ಅಪ್ರಕಾಶದಂತೆ ವಿಭುವೆನ್ನುವ ಪಕ್ಷದಲ್ಲಿಯೂ ಆತ್ಮಸಂಬದ್ಧವಾದುದಕ್ಕೆ ಅಪ್ರಕಾಶವು ಕೂಡುವುದರಿಂದ ಅಣುತ್ವವು ಜ್ಞಾತೃಸ್ವಭಾವತ್ವದಲ್ಲಿ ಅನುಪಯುಕ್ತವು. ಮತ್ತು ಆನಂದಾದಿಗಳಿಗೆ ಸ್ವಾಭಾವಿಕತ್ವವನ್ನು ಹೇಳದೆ ಜ್ಞಾನಕ್ಕೇನೇ ಸ್ವಾಭಾವಿಕತ್ವವನ್ನು ಹೇಳಲಿಕ್ಕೆ ವಿಶೇಷ ಹೇತುವೂ ಇಲ್ಲ. ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವೂ ಅಯುಕ್ತವು.

## ಅಧಿಕರಣ ಸಾರಾಂಶ

ಜೀವನು ಜ್ಞಾನಾನಂದಾದಿರೂಪನೋ ಅಲ್ಲವೋ ಎಂದು ಸಂದೇಹವು ಸ **ದುಃಖಾದ್ವಿಮುಕ್ತಃ ಆನಂದೀಭವತಿ** ಇತ್ಯಾದಿ ಶ್ರುತಿಯಿಂದ ಈಗ ಜ್ಞಾನಾನಂದಾದಿರೂಪತ್ವವು ತೋರದಿರುವುದರಿಂದ ಜ್ಞಾನಾನಂದಾದಿ ರೂಪನಲ್ಲ ಎಂದು ಪೂರ್ವಪಕ್ಷವು, ಹೇಗೆಂದರೆ ಆನಂದಾದಿರೂಪತ್ವವಿರುವುದಾದರೆ ಮೋಕ್ಷಕ್ಕಾಗಿ ಪ್ರಯತ್ನವೇ ವ್ಯರ್ಥವಾಗುವುದು. ವಿಜ್ಞಾನಾತ್ಮಾ ಇತ್ಯಾದಿ ಶ್ರುತಿಯಾದರೂ ಅನುಪಲಬ್ಧಿಯುಕ್ತ್ಯುಪೇತವಾದ ಆನಂದಾದಿಶ್ರುತಿಯಿಂದ ಬಾಧಿತವಾದ ಪ್ರಯುಕ್ತ ಪ್ರಮಾಣವಲ್ಲ ಎಂದರೆ-**ನಿತ್ಯಾನಂದಃ ನಿತ್ಯಾನಂದಜ್ಞಾನಬಲಾಃ** ಇತ್ಯಾದಿ ಶ್ರುತಿಸ್ಮೃತಿಗಳಿಂದ ಜೀವನಿಗೆ ಜ್ಞಾನಾದಿರೂಪತ್ವವನ್ನು ಹೇಳಿರುತ್ತಾರೆ. ಬಾಲ್ಯಾವಸ್ಥೆಯಲ್ಲಿ ಅಭಿವ್ಯಕ್ತವಾಗದಿರುವ ಅಪತ್ಯೋತ್ಪಾದನ ಶಕ್ತಿಯು ತಾರುಣ್ಯದಲ್ಲಿ ಅಭಿವ್ಯಕ್ತವಾಗುವುದರಿಂದ ಆಗ ಪುಮಾನ್ (ಪುಂಸ್ತ್ವವಿರತಕ್ಕವನು) ಎನ್ನುವ ಉಕ್ತಿಯಂತೆ ಮೊದಲು ಇರತಕ್ಕ ಜ್ಞಾನಾನಂದಾದಿಗಳಿಗೇನೇ ಮೇಲೆ ಅಭಿವ್ಯಕ್ತಿಯಾಗುವುದರಿಂದ ಆನಂದೀಭವತಿ ಇತ್ಯಾದಿ ಭೇದವ್ಯಪದೇಶವು ಪುತ್ರಾದಿಗಳಲ್ಲಿ ಕೂಡಬಹುದು. ಜ್ಞಾನಾನಂದಾದಿ ಸ್ವರೂಪನಾದವನಿಗೆ ಆವರಣವನ್ನು ಅಂಗೀಕರಿಸದ್ದಿದರೆ ನಿತ್ಯದಲ್ಲಿಯೂ ಅದು ತೋರಬೇಕಾಗುವುದ ರಿಂದ ಅವಶ್ಯವಾಗಿ ಅಂಗೀಕರಿಸಬೇಕಾದ ಆವರಣ ವಿಶೇಷಶಕ್ತಿಯಿಂದ ಅನುಪಲಬ್ಧಿಯೂ ಸಮ್ಯಕ್ ಅಭಿವ್ಯಕ್ತಿಗಾಗಿ ಪ್ರಯತ್ನವೂ ಕೂಡುವುದರಿಂದ ಜೀವನು ಜ್ಞಾನಾದಿರೂಪನೇ. ॥ ಅಧಿ. ೧೬ ॥

**ಪುಂಸ್ತ್ವಾಧಿಕರಣವು ಸಮಾಪ್ತವಾಯಿತು.**

**॥ ಓಂ ಜೀವಕರ್ತೃತ್ವಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥**

## ೧೭ ಕರ್ತೃತ್ವಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಜೀವಕರ್ತೃತ್ವವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಶ್ರುತಿ ವಿರೋಧವನ್ನು ತೋರಿಸುತ್ತಾರೆ-

**ಭಾಷ್ಯ ॥ (೧) ಈಶ್ವರಸ್ಯೈವ ಕರ್ತೃತ್ವಮುಕ್ತಂ। (೨) ಯತ್ಕರ್ಮ ಕುರುತೇ ತದಭಿಸಂಪದ್ಯತೇ (ಬೃ.೬.೪.೫)। ಇತಿ ಜೀವಸ್ಯಾಪ್ಯು(ಸ್ಯೋ)ಪಲಭ್ಯತೇ (೩) ಅತ ಆಹ ॥ ೧ ॥**

ಭಾಷ್ಯಾರ್ಥ ॥ (೧) (ನಾನ್ಯಃ ಕರ್ತಾ ಇತ್ಯಾದಿ ಶ್ರುತಿಬಲದಿಂದ ಇತರವ್ಯಪದೇಶಾತ್ ಇತ್ಯಾದಿಗಳಲ್ಲಿ) ಈಶ್ವರನಿಗೇನೇ ಕರ್ತೃತ್ವವು ಹೇಳಲ್ಪಟ್ಟಿದೆ. (೨) (ಜೀವನು) ಯಾವುದನ್ನು ಉದ್ದೇಶಿಸಿಕೊಂಡು ಕರ್ಮವನ್ನು ಮಾಡುತ್ತಾನೋ, ಅಂತಹ ಫಲವನ್ನು ಹೊಂದುತ್ತಾನೆ, ಎನ್ನುವ ಶ್ರುತಿಯಲ್ಲಿ ಜೀವನಿಗೂ ಕರ್ತೃತ್ವವು ತೋರುತ್ತದೆ. (ಆದಕಾರಣ ಶ್ರುತಿಗಳಿಗೆ ವಿರೋಧವು.) (ಈಶ್ವರನಿಗೆ ಕರ್ಮಫಲಪ್ರಾಪ್ತಿಯಿಲ್ಲ. ತಥಾಚ ಈಶ್ವರನೊಬ್ಬನಿಗೇನೇ ಕರ್ತೃತ್ವವನ್ನು ಅಂಗೀಕರಿಸಿದರೆ ನಾನ್ಯಃ ಕರ್ತಾ ಇತ್ಯಾದಿ ಶ್ರುತ್ಯಾನುಗುಣ್ಯದಿಂದಲೂ ಲಾಘವ ರೂಪ ಗುಣಲಾಭದಿಂದಲೂ, ಯತ್ಕರ್ಮ ಕುರುತೇ ಎನ್ನುವ ಶ್ರುತ್ಯುಕ್ತವಾದಾಗ್ಯೂ ಜೀವಕರ್ತೃತ್ವವನ್ನು ಅಂಗೀಕರಿಸಕೂಡದು. ಶ್ರುತಿಯುಕ್ತಿ ವಿರೋಧದಿಂದ ಕೇವಲ ಶ್ರುತಿಗೆ ಅಪ್ರಾಮಾಣ್ಯವು ಕೂಡಬಹುದು, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ.) (೩.) ಹೀಗೆ ಶಂಕಾ ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ ॥ ೩೩ ॥

ಭಾಷ್ಯ ॥ ಜೀವಸ್ಯ ಕರ್ತೃತ್ವಾಭಾವೇ ಶಾಸ್ತ್ರಸ್ಯಾಪ್ರಯೋಜಕತ್ವಪ್ರಾಪ್ತೇರ್ಜೀವೋಽಪಿ ಕರ್ತಾ ॥ ೩೩ ॥ ॥ ೨ ॥

ಭಾಷ್ಯಾರ್ಥ ॥ ಜೀವನಿಗೆ ಕರ್ತೃತ್ವ ಸಾಮಾನ್ಯವಿಲ್ಲವಾದರೆ ವಿಧಿನಿಷೇಧರೂಪ ಶಾಸ್ತ್ರಕ್ಕೆ ವೈಯರ್ಥ್ಯವು ಬರಬೇಕಾಗಿರುವುದರಿಂದ ಈಶ್ವರನು ಮಾತ್ರ ಕರ್ತನಲ್ಲ. ಜೀವನೂ ಕರ್ತನೇ. (ಅಕರ್ತನೆಂದು ಅಂಗೀಕರಿಸಕೂಡದು. ಜೀವನಿಗೆ ಕರ್ತೃತ್ವವು ಇಲ್ಲವಾದರೆ ಅರಣ್ಯದಲ್ಲಿ ಕೂಗುವಂತೆ ಇರತಕ್ಕ ಶಾಸ್ತ್ರಕ್ಕೆ ಸಾರ್ಥಕ್ಯವು ಬರಲಾರದು.) ಅಂತೂ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಿದರೇನೇ ಯಜೇತ ಸ್ವರ್ಗಕಾಮಃ, ಬ್ರಾಹ್ಮಣೋ ನ ಹಂತವ್ಯಃ ಇತ್ಯಾದಿ ವಿಧಿನಿಷೇಧರೂಪ ಶಾಸ್ತ್ರಕ್ಕೆ ಅರ್ಥವತ್ತ್ವವು ಸಿದ್ಧಿಸುವುದು. ಅನ್ಯಥಾ ಸಿದ್ಧವಾಗಲಾರದು. ॥ ೩೩ ॥

ಪೀಠಿಕೆ ॥ ಜೀವನಿಗೆ ಸ್ವತಃ ಕರ್ತೃತ್ವವು ಇಲ್ಲವಾದರೂ ಪರಮಾತ್ಮಗತ ಕರ್ತೃತ್ವದಲ್ಲಿ ತಾನು ಮಾಡಿದ್ದು ಎನ್ನುವ ವಿವೇಕಾಗ್ರಹವು ಇದ್ದೇ ಇದೆ. ಆದಕಾರಣ ಹೀಗೆ ಕಾಲ್ಪನಿಕ ಕರ್ತೃತ್ವವುಳ್ಳ ಜೀವನನ್ನು ಕುರಿತು ವಿಧಿನಿಷೇಧಶಾಸ್ತ್ರವು ಪ್ರವೃತ್ತವಾಗಲಿ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ-

## ಸೂತ್ರ ॥ ಓಂ ವಿಹಾರೋಪದೇಶಾತ್ ಓಂ ॥ ೩೪ ॥

ಭಾಷ್ಯ ॥ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾಽಜ್ಞಾತಿಭಿರ್ವಾ (ಛಾ.೮.೧೨.೩.)॥ ಇತ್ಯಾದಿನಾ ಮೋಕ್ಷೇಽಪಿ (ಇತ್ಯಾದಿ) ॥ ೩೪ ॥ ॥ ೩ ॥

ಭಾಷ್ಯಾರ್ಥ ॥ ಸ್ತ್ರೀಯರಿಂದ ವಾ. ಯಾನಗಳಿಂದ. ಸಹಮುಕ್ತರಾದವರಿಂದಲೂ ಪೂರ್ವದಲ್ಲಿ ಮುಕ್ತರಾದವರಿಂದಲೂ ರಮಿಸುತ್ತಾ ಇರುತ್ತಾನೆ. ಇತ್ಯಾದಿ ವಾಕ್ಯದಿಂದ (ಆದಿಪದದಿಂದ ಸೋಽಶ್ನುತೇ ಸರ್ವಾನ್ ಇತ್ಯಾದಿ) ಮೋಕ್ಷದಲ್ಲಿಯೂ ಸಂಚರಣ ಕ್ರೀಡಾ ಕಾಮ್ಯಪ್ರಾಪ್ತ್ಯಾದಿ ಕರ್ತೃತ್ವವನ್ನು ಉಪದೇಶ

ಮಾಡಿದ್ದರಿಂದ ಜೀವನು ಸ್ವಭಾವತ ಏವಕರ್ತನು. ಆತನಿಗೆ ಕಾಲ್ಪನಿಕ ಕರ್ತೃತ್ವವಲ್ಲ. (ಭ್ರಮಲೇಶವೂ ಇಲ್ಲದಿರುವ ಮೋಕ್ಷದಲ್ಲಿ ಪರಗತಕರ್ತೃತ್ವದಲ್ಲಿ ತನ್ನದ್ದು ಎನ್ನುವ ಭ್ರಮೆಯು ಸರ್ವಥಾ ಕೂಡಲಾರದು.) ॥ ೩೪ ॥

**ಪೀಠಿಕೆ ॥** ಮೋಕ್ಷದಲ್ಲಿ ಜೀವನಿಗೆ ಕರ್ತೃತ್ವವು ಸ್ವಾಭಾವಿಕವಾದಾಗ್ಯೂ ಸಂಸಾರದಲ್ಲಿ ಕಾಲ್ಪನಿಕ ಕರ್ತೃತ್ವವೆಂದು ಏಕೆ ಆಗಲಾರದು ಎಂದರೆ-

## ಸೂತ್ರ ॥ ಓಂ ಉಪಾದಾನಾತ್ ಓಂ ॥ ೩೫ ॥

**ಭಾಷ್ಯ ॥ ಸಾಧನಾದ್ಯುಪಾದಾನಪ್ರತೀತೇಶ್ಚ ॥ ೩೫ ॥** ॥ ೪ ॥

**ಭಾಷ್ಯಾರ್ಥ ॥** (ಮೋಕ್ಷ ಸ್ವರ್ಗಾದಿಗಳಿಗಾಗಿ ಜೀವನಿಗೆ) ವೇದವಿಚಾರ ಯಾಗಾದಿರೂಪವಾದ ಸಾಧನಾದಿಗಳ ಸಂಪಾದನವು ಪ್ರತ್ಯಕ್ಷ ಸಿದ್ಧವಾದುದರಿಂದಲೂ ಫಲವು ಕಂಡದ್ದರಿಂದಲೂ (ಸಂಸಾರದಲ್ಲಿಯೂ ಕರ್ತೃತ್ವವು ಕಾಲ್ಪನಿಕವಲ್ಲ. ಮತ್ತೆ ಪಾರಮಾರ್ಥಿಕವೇ. ಪರರು ಮಾಡಿರುವ ಸಾಧನಗಳಲ್ಲಿ ತಮ್ಮದ್ದೆಂದು ಕಲ್ಪನ ಮಾತ್ರದಿಂದ ಫಲಪ್ರಾಪ್ತಿಯು ಆಗುವುದಿಲ್ಲ. ॥ ೩೫ ॥

**ಪೀಠಿಕೆ ॥** ಹೀಗೆ ಸಂಸಾರದಶೆಯಲ್ಲಿ ಶಾಸ್ತ್ರಕ್ಕೆ ಸಾರ್ಥಕ್ಯರೂಪವಾದ ಯುಕ್ತಿಯಿಂದಲೂ ಸಾಧನಾದ್ಯುಪಾದಾನಪ್ರತ್ಯಕ್ಷದಿಂದಲೂ ಸಾಧಿತವಾದ ಜೀವಕರ್ತೃತ್ವವನ್ನು ಶ್ರುತಿಯಿಂದಲೂ ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ-

## ಸೂತ್ರ ॥ ಓಂ ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ ಓಂ ॥ ೩೬ ॥

**ಭಾಷ್ಯ ॥ ಆತ್ಮಾನಮೇವ ಲೋಕಮುಪಾಸೀತ (ಬೃ.೩.೪.೧೫)। ಇತಿ ಕ್ರಿಯಾಯಾಂ ವ್ಯಪದೇಶಾಚ್ಚ। ಅನ್ಯಥಾಽಽತ್ಮೈವ ಲೋಕಂ। ಇತಿ ನಿರ್ದೇಶಃ ಸ್ಯಾತ್ ॥ ೩೬ ॥** ॥ ೫ ॥

**ಭಾಷ್ಯಾರ್ಥ ॥** ಶ್ರೀ ಪರಮಾತ್ಮನನ್ನೇ ಸರ್ವಾಶ್ರಯನನ್ನಾಗಿ ಉಪಾಸನಾ ಮಾಡಬೇಕು, ಎನ್ನುವ ಶ್ರುತಿಯಲ್ಲಿ ಉಪಾಸನಾದಿಕ್ರಿಯೆಯಲ್ಲಿ ಜೀವನಿಗೆ (ಕರ್ತೃತ್ವೇನ) ವ್ಯಪದೇಶವಿದ್ದಪ್ರಯುಕ್ತವೂ, ಚಃ=ಯುಕ್ತಿ ಪ್ರತ್ಯಕ್ಷಗಳಿಂದ ಮಾತ್ರವಲ್ಲ, ಈ ಶ್ರುತಿಯಿಂದಲೂ (ಜೀವನೂ ಕರ್ತನೇ.) ನ ಚೇತ್=ಜೀವನು ಉಪಾಸನಾ ಕ್ರಿಯೆಯಲ್ಲಿ ಕರ್ತನೆಂದು ಶ್ರುತ್ಯಭಿಪ್ರಾಯವಿಲ್ಲವಾದರೆ, ಮತ್ತು ಕ್ರಿಯೆಗಳಿಗೆ ಅಕರ್ತೃಕತ್ವವೂ ಜಡಕರ್ತೃಕತ್ವವೂ ಕೂಡದಿರುವ ಪ್ರಯುಕ್ತ ಶ್ರುತಿಗೆ ವೈಯರ್ಥ್ಯವು ಬಾರದಿರುವುದಕ್ಕಾಗಿ ಪರಮಾತ್ಮನೇ ಕ್ರಿಯಾಕರ್ತನು ಎಂದು ಶ್ರುತ್ಯಭಿಪ್ರೇತವಾಗಿದ್ದರೆ (ಪರಮಾತ್ಮನೇ ಕರ್ತೃತ್ವೇನ ಅಭಿಪ್ರೇತನಾಗುವನು. ತಥಾಚ ಪರಮಾತ್ಮನಿಗೆ) ಆತ್ಮೈವ ಲೋಕಂ (ಪರಮಾತ್ಮನೇ ತನ್ನನ್ನು ವಾ ಇತರರನ್ನು ಸರ್ವಾಶ್ರಯನನ್ನಾಗಿ ಉಪಾಸನಮಾಡಬೇಕು) ಎಂದು (ಕರ್ತೃತ್ವೇನ) ನಿರ್ದೇಶವು ಬರಬೇಕಾಗುವುದು. (ಆತ್ಮಾನಂ ಎಂದು ಕರ್ಮತ್ವೇನ ನಿರ್ದೇಶವು ಬಾರದೆ ಹೋಗಬೇಕಾಗುವುದು.) ಆದಕಾರಣ ಜೀವನಿಗೇ ಕರ್ತೃತ್ವವು ಹೇಳಲ್ಪಡುತ್ತದೆ. ॥ ೩೬ ॥

ಪೀಠಿಕೆ ॥ ಜೀವನಿಗೂ ಕರ್ತೃತ್ವವಿದ್ದರೆ ನಾನ್ಯಃ ಕರ್ತಾ ಇತ್ಯಾದಿಗಳಲ್ಲಿ ಈಶ್ವರನಿಗೇನೇ ಕರ್ತೃತ್ವ ಸಮರ್ಥನಮಾಡಿದ್ದು ಹೇಗೆ ಕೂಡುತ್ತದೆ. ಎನ್ನುವ ಆಶಂಕಾಪರಿಹಾರಕ್ಕಾಗಿ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ-

**ಭಾಷ್ಯ ॥ ತರ್ಹಿ ಕಥಮೀಶ್ವರಸ್ಯೈವ ಕರ್ತೃತ್ವಮಿತಿ । ಅತೋ ವಕ್ತಿ ॥ ೬ ॥**

ಭಾಷ್ಯಾರ್ಥ ॥ ಜೀವನಿಗೂ ಕರ್ತೃತ್ವವಿದ್ದರೆ ನಾನ್ಯಃ ಕರ್ತಾ ಎನ್ನುವ ಶ್ರುತಿಯಲ್ಲಿ ಅಥವಾ ಇತರ ವ್ಯಪದೇಶಾತ್ ಇತ್ಯಾದಿಗಳಲ್ಲಿ ಈಶ್ವರನಿಗೇನೇ ಕರ್ತೃತ್ವ ಸಮರ್ಥನವು ಹೇಗೆ ಕೂಡುತ್ತದೆ ಎಂದು ಶಂಕಾ ಬಂದರೆ ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಉಪಲಬ್ಧಿವದನಿಯಮಃ ಓಂ ॥ ೩೭ ॥

**ಭಾಷ್ಯ ॥ ಯಥಾ ಜ್ಞಾನೇ 'ಇದಂ ಜ್ಞಾಸ್ಯಾಮಿ' ಇತಿ ಅನಿಯಮಃ ಪ್ರತೀಯತೇ । ಏವಂ ಕರ್ಮಣ್ಯಾಪಿ ಜೀವಸ್ಯ । ಯ ಆತ್ಮಾನಮಂತರೋ ಯಮಯತಿ (ಬೃ.ಶ್ರುತಿಃ) । ಇತಿ ಚ ಶ್ರುತಿಃ ॥ ೩೭ ॥**

ಭಾಷ್ಯಾರ್ಥ ॥ ನಾನು ಈ ಸುರೂಪವನ್ನು ಸುಗಂಧವನ್ನು ಸುಸ್ವರವನ್ನಾಗಲೀ ತಿಳಿಯುತ್ತೇನೆ, (ವಿಪರೀತವಾಗಿ ನೋಡಲಾರೆ, ಗಂಧವನ್ನು ಸ್ವೀಕರಿಸಲಾರೆ, ಕೇಳಲಾರೆ, ಹೀಗೆ ಇಚ್ಛೆಸತಕ್ಕ ಜೀವನಿಗೆ) ಉಪಲಬ್ಧೌ ಇವಃ-ಹೇಗೆ ಜ್ಞಾನದಲ್ಲಿ ಅನಿಯಮಃ=ಸ್ವೇಚ್ಛಾನುಸಾರವಾಗಿ ಜ್ಞಾನಲಾಭವು ಆಗುವುದಿಲ್ಲವೋ ಹೀಗೆಯೇ ಕರ್ಮದಲ್ಲಿಯೂ ಅಂದರೆ ಮಾಡುವೆನು ಸಂಕಲ್ಪಿತವಾದ ವ್ಯಾಪಾರದಲ್ಲಿಯೂ ಅನಿಯಮವನ್ನು ತಿಳಿಯತಕ್ಕದು. (ಈಶ್ವರನಿಗಾದರೂ ಜ್ಞಾನದಲ್ಲಿಯೂ ಕರ್ಮದಲ್ಲಿಯೂ ನಿಯಮವೇ. ಆದುದರಿಂದ ಸತ್ಯಸಂಕಲ್ಪನು ಎನ್ನುವ ಅಭಿಪ್ರಾಯದಿಂದ ಶ್ರೀಹರಿಯೇ ಕರ್ತನು, ಭ್ರಷ್ಟಸಂಕಲ್ಪನಾದುದರಿಂದ ಜೀವನು ಅಲ್ಲ ಎಂದು ಮೊದಲು ಹೇಳಿದ್ದು. ಜೀವನಿಗೆ ಸರ್ವಥಾ ಕರ್ತೃತ್ವವೇ ಇಲ್ಲ ಎನ್ನುವ ಅಭಿಪ್ರಾಯದಿಂದ ಹೇಳಿದ್ದಲ್ಲ) (ಈಶ್ವರನಿಗೇನೇ ನಿಯಮೇನ ಕರ್ತೃತ್ವವು ಜೀವನಿಗೆ ಅಲ್ಲ ಎನ್ನುವಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಯಾವಾತನು ಚತುರ್ಮುಖಾದಿ ಜೀವರನ್ನು ಅವರವರಲ್ಲಿ ಅಂತರ್ಗತನಾಗಿ ನಿಯಮಿಸುತ್ತಾನೋ, ಈ ಪರಮಾತ್ಮನು ನಿನ್ನ ಅಂತರ್ಯಾಮಿಯು ಎಂದೂ ಶ್ರುತಿಯು. (ಇಲ್ಲಿ ಈಶ್ವರನು ಜೀವರಿಗೆ ನಿಯಾಮಕನು ಎಂದು ಹೇಳಿದ್ದರಿಂದ ಈಶ್ವರಪ್ರೇರಣೆಯಿಲ್ಲದೆ ಜೀವರಿಗೆ ನಿಯಮೇನ ಕರ್ತೃತ್ವಾಭಾವವು ಸ್ವೇಚ್ಛಾನುಸಾರವಾಗಿ ಕರ್ತೃತ್ವಾಭಾವವು. ಈಶ್ವರನಿಗಾದರೂ ಸರ್ವನಿಯಾಮಕತ್ವವಿದ್ದುದರಿಂದ ಸ್ವೇಚ್ಛಾನುಸಾರಿ ಕರ್ತೃತ್ವವಿದೆ ಎಂದೂ ಅವಗತವಾಗುವುದು.

ಪೀಠಿಕೆ ॥ ಇದನ್ನೇ ವಿಷದೀಕರಿಸುವುದಕ್ಕಾಗಿ ಉತ್ತರ ಸೂತ್ರಕ್ಕೆ ಅವತಾರಿಕಾ ಕೊಡುತ್ತಾರೆ-

**ಭಾಷ್ಯ ॥ ಕುತಃ ॥ ೮ ॥**

ಭಾಷ್ಯಾರ್ಥ ॥ ಜೀವೇಶರಿಬ್ಬರಿಗೂ ಕರ್ತೃತ್ವದಲ್ಲಿ ವಿಶೇಷವಿಲ್ಲವಾದರೂ ಈಶ್ವರನಿಗೇನೇ ನಿಯಮೇನ ಕರ್ತೃತ್ವವು ಜೀವನಿಗೆ ಅಲ್ಲ ಎನ್ನುವ ವೈಲಕ್ಷಣ್ಯವು ಯಾವ ನಿಮಿತ್ತದಿಂದ. ನಿಯಮ

ಅನಿಯಮಗಳು ಸ್ವಾತಂತ್ರ್ಯ ಪಾರತಂತ್ರ್ಯ ನಿಮಿತ್ತಕಗಳು ಎನ್ನುವ ಪರಿಹಾರವನ್ನು ಹೇಳುವುದಕ್ಕಾಗಿ ಈಶ ಜೀವರಿಗೆ ಸ್ವಾತಂತ್ರ್ಯ ಪಾರತಂತ್ರ್ಯಗಳನ್ನು ಸಾಧಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.

## ಸೂತ್ರ ॥ ಓಂ ಶಕ್ತಿವಿಪರ್ಯಯಾತ್ ಓಂ ॥ ೩೮ ॥

**ಭಾಷ್ಯ ॥ ಅಲ್ಪಶಕ್ತಿತ್ವಾಜ್ಜೀವಸ್ಯ ॥ ೩೮ ॥** ॥ ೯ ॥

ಭಾಷ್ಯಾರ್ಥ ॥ ಜೀವನಿಗೆ ಈಶ್ವರನಕ್ಕಿಂತ ಅಲ್ಪಶಕ್ತಿಯಿದ್ದ ಪ್ರಯುಕ್ತ ಪಾರತಂತ್ರ್ಯವು. (ಈಶ್ವರನಿಗಾದರೂ ಪೂರ್ಣಶಕ್ತಿಯಿದ್ದುದರಿಂದ ಸ್ವಾತಂತ್ರ್ಯವು. ॥ ೩೮ ॥

ಪೀಠಿಕೆ ॥ ಯುಕ್ತ್ಯಂತರದಿಂದ ಈಶಜೀವರಿಗೆ ಸ್ವಾತಂತ್ರ್ಯ ಪಾರತಂತ್ರ್ಯಗಳನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಮಾಧ್ಯಭಾವಾಚ್ಚ ಓಂ ॥ ೩೯ ॥

**ಭಾಷ್ಯ ॥ ಸಮಾಧಾನಾಭಾವಾಚ್ಚಾಸ್ವಾತಂತ್ರ್ಯಂ ಪ್ರತೀಯತೇ । ಅತಃ ॥ ೩೯ ॥** ॥೧೦॥

ಭಾಷ್ಯಾರ್ಥ ॥ ಜೀವನಿಗೆ ಅಲ್ಪಶಕ್ತಿಯಿರುವುದರಿಂದ ಮಾತ್ರ ಪಾರತಂತ್ರ್ಯವಲ್ಲ. ಮತ್ತೆ ಅಲಂಬುದ್ಧಿಯಿಲ್ಲದಿರುವುದರಿಂದಲೂ ಅಸ್ವಾತಂತ್ರ್ಯವು ಪ್ರತೀತಿಸಿದ್ದವು. ಈಶ್ವರನಿಗೆ ಅಲಂಬುದ್ಧಿ ಯಿದ್ದುದರಿಂದ ಸರ್ವಾಸ್ವಾತಂತ್ರ್ಯವು. ಅತಃ=ಈಶಜೀವನಿಗೆ ಸ್ವಾತಂತ್ರ್ಯ ಪಾರತಂತ್ರ್ಯಗಳು ಇದ್ದುದರಿಂದ. ಕರ್ಮದಲ್ಲಿ ನಿಯಮಾನಿಯಮಗಳನ್ನು ತಿಳಿಯತಕ್ಕುದು. ತತ್ವಪ್ರದೀಪದಲ್ಲಿ ಆದರೂ ಅತಃ ಎನ್ನುವುದಕ್ಕೆ ಮೇಲಿನ ಸೂತ್ರದಿಂದ ಅನ್ವಯವೆಂದು ಇಟ್ಟುಕೊಂಡು, ಅತಃ=ಅಸ್ವಾತಂತ್ರ್ಯ ಪ್ರಮಾಣಗಳಿಂದಲೂ ಕರ್ತೃತ್ವಸಾಧಕ ಪ್ರಮಾಣಗಳಿಂದಲೂ ತಕ್ಷಣ ಉಭಯಥಾವ್ಯಪದೇಶಿಸಲ್ಪಡು ವಂತೆ ಜೀವನು ಅಸ್ವತಂತ್ರನು ಕರ್ತನು ಎಂದೂ ಹೇಳಲ್ಪಡುತ್ತಾನೆ. ಎಂದು ಹೇಳಿದೆ. ॥ ೩೯ ॥

ಪೀಠಿಕೆ ॥ ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವಿಲ್ಲ ಈಶ್ವರೇಚ್ಛೆಯಿಂದಲೇ ಕರ್ತೃತ್ವವು ಎಂದಾದರೆ ಕರ್ತನೆಂದು ಹೇಗೆ ಹೇಳಲ್ಪಡುತ್ತಾನೆ. ಸ್ವತಂತ್ರನಾದವನೇ ಕರ್ತನಷ್ಟೆ, ಎನ್ನುವ ಆಶಂಕೆಯನ್ನು ಪರಿಹಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಯಥಾ ಚ ತಕ್ಷೋಭಯಥಾ ಓಂ ॥ ೪೦ ॥

**ಭಾಷ್ಯ ॥ ಯಥಾ ತಕ್ಷ್ಣಃ ಕಾರಯಿತೃನಿಯತತ್ವಂ ಕರ್ತೃತ್ವಂ ಚ ವಿದ್ಯತೇ । ಏವಂ ಜೀವಸ್ಯಾಪಿ ॥ ೪೦ ॥** ॥ ೧೧ ॥

ಭಾಷ್ಯಾರ್ಥ ॥ ಹೇಗೆ ಬಡಗಿಗೆ ಪ್ರಾಸಾದಾದಿಗಳನ್ನು ನಿರ್ಮಾಣಮಾಡಿಸತಕ್ಕ ರಾಜಾದಿಗಳಿಂದ ಪ್ರೇರಿತತ್ವವೂ ಪ್ರಾಸಾದಾದಿ ಕರ್ತೃತ್ವವೂ ಇದೆಯೋ, ಹೀಗೆಯೇ ಸರ್ವಕಾರಯಿತೃ ಶ್ರೀಹರಿಯಿಂದ ನಿಯತನಾದಾಗ್ಯೂ ಜೀವನಿಗೆ ಕರ್ತೃತ್ವವೂ ಇದೆ (ಎಂದು ಹೇಳಲಿಕ್ಕೆ ಶಕ್ಯವಾಗುತ್ತದೆ.) ॥ ೪೦ ॥

ಪೀಠಿಕೆ ॥ ಬಡಗಿಯಂತೆ ಎಂದಾದರೆ—ಜೀವನಿಗೆ ಕರ್ತೃತ್ವಶಕ್ತಿಯೂ ಜೀವಾಧೀನವೇ ಆಯಿತು.

ಈಶ್ವರಾಧೀನವಲ್ಲವೆಂದು ಪ್ರಾಪ್ತವಾಯಿತು, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪರಾತ್ತು ತಚ್ಛ್ರುತೇಃ ಓಂ ॥ ೪೧ ॥

**ಭಾಷ್ಯ ॥ (೧) ಸಾ ಚ ಕರ್ತೃತ್ವಶಕ್ತಿಃ ಪರಾದೇವ। (೨) ಕರ್ತೃತ್ವಂ ಕರಣತ್ವಂ ಚ ಸ್ವಭಾವಶ್ಚೇತನಾ ಧೃತಿಃ। ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ॥ ಇತಿ (೩) ಪೈಂಗಿಶ್ರುತಿಃ ॥ ೪೧ ॥ ॥ ೧೨ ॥**

ಭಾಷ್ಯಾರ್ಥ ॥ (೧) ಜೀವನಿಗೆ ಆ ಕರ್ತೃತ್ವಶಕ್ತಿಯೂ ಪರಮಾತ್ಮನ ಪ್ರಸಾದದಿಂದಲೇ ಬಂದದ್ದು. ಪರಮಾತ್ಮನ ಅಧೀನವೇ ಜೀವಾಧೀನವಲ್ಲ. ಈಶಾಧೀನತ್ವ ಪ್ರತಿಪಾದಕ ಶ್ರುತಿಯಿದ್ದಪ್ರಯುಕ್ತವೇ. (೨) ಜೀವಗತವಾದ ಕರ್ತೃತ್ವವೂ, ಮನಸ್ಸು ಮೊದಲಾದವುಗಳಲ್ಲಿರತಕ್ಕ ಕರಣತ್ವವೂ, ಪ್ರಕೃತ್ಯಾದಿಗಳ ಪರಿಣಾಮಾದಿಗಳೂ ಅಥವಾ ಅಲ್ಪಜ್ಞತ್ವ ಅಲ್ಪಶಕ್ತಿತ್ವಾದಿರೂಪವಾದುದೂ, ಚಿತ್ತವ್ಯಾಪ್ತಿಯು ಅಥವಾ **ಬಹುಸ್ಮರಣ ಶಕ್ತಿಸ್ತು ಚೇತನೇತ್ಯಭಿಧೀಯತೇ** ಎನ್ನುವ ವಚನದಿಂದ ಚೈತನ್ಯವು, ದೇಹಾದಿಧಾರಣ ಸಾಮರ್ಥ್ಯವೂ, ಈ ಧರ್ಮಗಳೆಲ್ಲವೂ ಯಾವ ಶ್ರೀಹರಿಯ ಅನುಗ್ರಹದಿದಲೇ ಇಚ್ಛೆಯಿಂದಲೇ ಇರುತ್ತವೆ. ಯಾವ ಶ್ರೀಹರಿಯ ಕಟಾಕ್ಷವಿಲ್ಲವಾದರೆ ಇರುವುದಿಲ್ಲ, ಹೀಗೆ ಯಾವ ಕಾರಣದಿಂದ ಪೈಂಗಿಶ್ರುತಿಯು ಹೇಳುವುದೋ (ಆದಕಾರಣ ಶ್ರೀಹರಿಯ ಪ್ರಸಾದದಿಂದಲೇ ಕರ್ತೃತ್ವವು.) (ಏವಂಚ ಈಶ್ವರನಿಗೆ ಮಾಡಲಿಕ್ಕೂ ಮಾಡದಿರಲಿಕ್ಕೂ ವ್ಯತ್ಯಾಸಮಾಡಲಿಕ್ಕೂ ಸಾಮರ್ಥ್ಯವಿದೆ. ಸಂಕಲ್ಪವಿಲ್ಲದಿರುವ ಪ್ರಯುಕ್ತವೇ ಹಾಗೆ ಮಾಡುವುದಿಲ್ಲ, ಎಂದು ಉಕ್ತವಾಯಿತು.) ॥ ೪೧ ॥

ಪೀಠಿಕೆ ॥ ಕರ್ತೃತ್ವಶಕ್ತಿಯು ಈಶ್ವರಾಧೀನವೆಂದಾದರೆ ಈಶ್ವರನಿಗೇನೇ ಕರ್ತೃತ್ವವು ಪ್ರಾಪ್ತವಾಯಿತು, ಜೀವನಿಗೆ ಅಲ್ಲ. ಹೀಗೆ ಪುನಃ ಶಾಸ್ತ್ರಕ್ಕೆ ವೈಯರ್ಥ್ಯವೇ, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾವೈಯರ್ಥ್ಯಾದಿಭ್ಯಃ ಓಂ ॥ ೪೨ ॥

ಸೂತ್ರಾರ್ಥ ॥ (ಜೀವಶಕ್ತಿಯು ಈಶ್ವರಾಧೀನವಾದುದಾಗ್ಯೂ ಶಾಸ್ತ್ರಕ್ಕೆ ವೈಯರ್ಥ್ಯವು ಬರುವುದಿಲ್ಲ. ಏಕೆಂದರೆ—ಶ್ರೀಹರಿಯು) ವಿಧಿನಿಷೇಧ ಶಾಸ್ತ್ರಗಳಿಗೆ ವೈಯರ್ಥ್ಯವು ಬರಬಾರದು ಎನ್ನುವುದಕ್ಕಾಗಿಯೇ (ತನ್ನ ಸಹಾಯಕ್ಕಾಗಿ ಅಲ್ಲ. ಮತ್ತು ತನಗೆ ವೈಷಮ್ಯ ನೈರ್ಘೃಣ್ಯದೋಷ ಪರಿಹಾರಕ್ಕಾಗಿಯೂ) ಜೀವನ ಅನಾದಿ ಕರ್ಮಪ್ರಯತ್ನಗಳನ್ನು ಅಪೇಕ್ಷೆಯುಳ್ಳವನಾಗಿಯೇ (ಜೀವನನ್ನು ಭೋಗದಲ್ಲಿ ಪ್ರೇರಿಸುತ್ತಾನೆ. ಜೀವನ ಯೋಗ್ಯತೆಯನ್ನು ಅಪೇಕ್ಷಿಸಿಕೊಂಡೇ ಕರ್ಮದಲ್ಲಿ ಪ್ರೇರಿಸುತ್ತಾನೆ. ಯೋಗ್ಯತೆಯನ್ನು ಅಪೇಕ್ಷಿಸದೆ ಅಲ್ಲ.)

**ಭಾಷ್ಯ ॥ ತತೋಽಪ್ರಯೋಜಕತ್ವಂ ಶಾಸ್ತ್ರಸ್ಯ ನಾಪದ್ಯತೇ । ಕೃತಪ್ರಯತ್ನಾಪೇಕ್ಷತ್ವಾತ್ತ-ತ್ಪ್ರೇರಕತ್ವಸ್ಯ । ಆದಿಶಬ್ದೇನಾವೈಷಮ್ಯಾದಿ ॥ ೧೩ ॥**

ಭಾಷ್ಯಾರ್ಥ ॥ ಕರ್ತೃತ್ವಶಕ್ತಿಯು ಈಶ್ವರಾಧೀನವಾದುದರಿಂದಲೂ ವಿಧಿನಿಷೇಧಾತ್ಮಕ ಶಾಸ್ತ್ರಕ್ಕೆ ವೈಯರ್ಥ್ಯವು ಪ್ರಸಕ್ತವಾಗುವುದಿಲ್ಲ ವೈಯರ್ಥ್ಯವು ಬರಲಾರದು ಎನ್ನುವುದಕ್ಕಾಗಿಯೇ, ಜೀವಪ್ರೇರಕನಾದ ಪರಮಾತ್ಮನಿಗೆ ಅನಾದಿಯಾದ ಪುಣ್ಯಪಾಪಾದಿರೂಪವಾದ ಕರ್ಮಸಾಧನ ಗೋಚರವಾದ ಪ್ರಯತ್ನ ಯೋಗ್ಯತಾ ಇವುಗಳ ಅಪೇಕ್ಷೆಯಿದ್ದುದರಿಂದ ಆದಿಶಬ್ದದಿಂದ ಅವೈಷಮ್ಯವೂ ಅನೈರ್ಘೃಣ್ಯವೂ ಸಂಗೃಹೀತವಾಯಿತು. (ತಥಾಚ ಶಾಸ್ತ್ರಗಳಿಗೆ ವೈಯರ್ಥ್ಯವು ಬರಬಾರದು ಎನ್ನುವುದಕ್ಕಾಗಿಯೇ ತನಗೆ ವೈಷಮ್ಯಾದಿದೋಷ ಪರಿಹಾರಕ್ಕಾಗಿಯೂ ಜೀವನ ಅನಾದಿಯಾದ ಕರ್ಮಾದಿಗಳನ್ನು ಅಪೇಕ್ಷಿಸಿಕೊಂಡೇ ಜೀವನನ್ನು ಶ್ರೀಹರಿಯು ಪ್ರೇರಿಸುತ್ತಾನೆ. ಅಪೇಕ್ಷಿಸದೆ ಅಲ್ಲ)

ಪೀಠಿಕೆ ॥ ಸೂತ್ರಾರ್ಥದಲ್ಲಿ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ—

**ಭಾಷ್ಯ ॥ (೧) ಪೂರ್ವಕರ್ಮ ಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯ ತು । ಈಶ್ವರಃ ಕಾರಯೇತ್ಸರ್ವಂ ತಚ್ಚೇಶ್ವರಕೃತಂ ಸ್ವಯಂ ॥ ಅನಾದಿತ್ವಾದದೋಷಶ್ಚ ಪೂರ್ಣ ಶಕ್ತಿತ್ವತೋ ಹರೇಃ । ಇತಿ ಭವಿಷ್ಯತ್ಪರ್ವಣಿ ॥ (೨) ಏತದೇವಂ ನ ಚಾಪ್ಯೇವ ಮೇತದಸ್ತಿ ನ ಚಾಸ್ತಿ (ಚ ನಾಸ್ತಿ) ಚ । ಇತಿ (ಚ) ಮೋಕ್ಷಧರ್ಮೇ ॥ ೪೨ ॥ ಅಧಿ.೧೭ ॥ ॥ ೧೪ ॥**

ಭಾಷ್ಯಾರ್ಥ ॥ (೧) ಅನಾದಿಕರ್ಮವನ್ನು ಸಾಧನಗೋಚರ ಪ್ರಯತ್ನವನ್ನೂ ಯೋಗ್ಯತೆಯನ್ನೂ ಅಪೇಕ್ಷಿಸಿಕೊಂಡೇ ಈಶ್ವರನು ಪುಣ್ಯಪಾಪಾದಿರೂಪವಾದ ಕರ್ಮವನ್ನು (ಜೀವನಿಂದ) ಮಾಡಿಸುವನು. (ಅಂದರೆ ಕರ್ಮಮಾಡುವುದಕ್ಕಾಗಿ ಜೀವನನ್ನು ಪ್ರೇರಿಸುತ್ತಾನೆ.) ಈಶ್ವರನು ಜೀವರ ಕರ್ಮವನ್ನು ಅಪೇಕ್ಷಿಸಿ ಪ್ರೇರಿಸುವುದಾದರೆ ಈಶ್ವರನಿಗೆ ಕರ್ಮಾಕರ್ತೃತ್ವವು ಬರಬೇಕಾಗುವುದು ಎಂದರೆ) ಅಪೇಕ್ಷ್ಯವಾದ ಆ ಪೂರ್ವಕರ್ಮವು ಕೂಡ ಈಶ್ವರಕೃತವೆಂದು ಮತವು. (ಹಾಗಾದರೆ ಜೀವನನ್ನು ಪ್ರೇರಿಸಲಿಕ್ಕೆ ಶ್ರೀಹರಿಗೆ ಯಾವುದರ ಅಪೇಕ್ಷೆಯು ಇಲ್ಲದಿರುವುದರಿಂದ ಪುನಃ ವೈಷಮ್ಯಾದಿ ದೋಷಗಳು ಬರಬೇಕಾಗುವುವು ಎಂದರೆ— (ಕಾರ್ಯಕಾರಣೀಭೂತವಾದ ಕರ್ಮಪರಂಪರೆಗೆ ಪ್ರವಾಹತಃ ಅನಾದಿತ್ವವಿದ್ದುದರಿಂದ (ಪೂರ್ವಪೂರ್ವ ಕರ್ಮವನ್ನು ಅಪೇಕ್ಷಿಸಿಕೊಂಡೇ ಉತ್ತರೋತ್ತರ ಕರ್ಮಗಳನ್ನು ಈಶ್ವರನು ಮಾಡಿಸುವುದರಿಂದ ಈಶ್ವರನಿಗೆ) ವೈಷಮ್ಯಾದಿ ದೋಷವು ಪ್ರಸಕ್ತವಾಗುವುದಿಲ್ಲ (ಹಾಗಾದರೆ ಕರ್ಮಗಳು ಅನಂತಗಳಾದುದರಿಂದ ಆ ಕರ್ಮಗಳನ್ನು ಈಶ್ವರನು ಮಾಡಿಸುತ್ತಾನೆ ಎನ್ನುವುದು ಹೇಗೆ ಕೂಡುತ್ತದೆ, ಎಂದರೆ—) ಶ್ರೀಹರಿಗೆ ಅಮಿತ ಶಕ್ತಿಯಿದ್ದುದರಿಂದ (ಅನಂತಕರ್ಮ ಕಾರಯಿತೃತ್ವವು ಉಪಪನ್ನವೇ ಆಗುತ್ತದೆ. ದೋಷವಿಲ್ಲ) ಎಂದು ಭವಿಷ್ಯತ್ಪರ್ವದಲ್ಲಿ (ಸೂತ್ರಾರ್ಥವು ಉಕ್ತವಾಗಿದೆ.) (೨) (ಈ ಅಧಿಕರಣಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—) ಜೀವನಿಗೆ ಕರ್ತೃತ್ವವು ಪ್ರಾಮಾಣಿಕವೇ. ಆದಾಗ್ಯೂ(ಏವಂ)ಈಶ್ವರನಂತೆ ಸ್ವಾತಂತ್ರ್ಯದಿಂದ ಕರ್ತೃತ್ವವು ಇಲ್ಲವೇ ಇಲ್ಲ. ಆದಕಾರಣ ಈ ಕರ್ತೃತ್ವವು ಅಸ್ವಾತಂತ್ರ್ಯದಿಂದ ಇದೆ. ಸ್ವಾತಂತ್ರ್ಯವಿವಕ್ಷಯಾ ಇಲ್ಲವೆಂದು ನಾನ್ಯಃ ಕರ್ತಾ ಎನ್ನುವ ಶ್ರುತಿಯಲ್ಲಿ ಹೇಳಲ್ಪಡುತ್ತವೆ. ಹೀಗೆ ಮೋಕ್ಷಧರ್ಮದಲ್ಲಿ (ಈ ಅಧಿಕರಣಾರ್ಥವೇ ಉಕ್ತವಾಗಿದೆ.) ॥ ೪೨ ॥

## ಮಾಯಾವಾದಿರೀತ್ಯಾ

**ವಿಚಾರ ||** **ಕರ್ತಾ** ಇತ್ಯಾದಿ ಏಳು ಸೂತ್ರಗಳು ಒಂದು ಅಧಿಕರಣವು. ಸಾಂಖ್ಯರೀತ್ಯಾ ಬುದ್ಧಿಗೆ ಕರ್ತೃತ್ವವು ಎಂದು ಪೂರ್ವಪಕ್ಷ ಮಾಡಿಕೊಂಡು ಜೀವನಿಗೆ ಎಂದು ಸಿದ್ಧಾಂತವು. **ಯಥಾ ಚ ತಕ್ಷಾ** ಎನ್ನುವ ಸೂತ್ರವು ಅಧಿಕರಣಾಂತರವು. ಅದರಲ್ಲಿ ಅಗ್ನಿಗೆ ಔಷ್ಣ್ಯದಂತೆ ಜೀವನಿಗೆ ಕರ್ತೃತ್ವವು ಸ್ವಾಭಾವಿಕವು, ಎಂದು ಪ್ರಾಪ್ತವಾದರೆ ಬಡಗಿಗೆ ಕರ್ತೃತ್ವವು ವಾಸ್ಯಾದ್ಯುಪಾಧಿಯಿಂದ (ಆಯುಧವಿಶೇಷದಿಂದ) ಎಂಬಂತೆ ಅಂತಃಕರಣಾದ್ಯುಪಾಧಿಯಿಂದ ಕಲ್ಪಿತವೆಂದು ಸಿದ್ಧಾಂತವು. **ಪರಾತ್ತು** ಇತ್ಯಾದಿ ಎರಡು ಸೂತ್ರಗಳು ಅಧಿಕರಣಾಂತರವು. ಅದರಲ್ಲಿ ಜೀವನಿಗೆ ಹೇಳಿದ ಕರ್ತೃತ್ವಕ್ಕೆ ಈಶ್ವರಾಪೇಕ್ಷೆಯಿಲ್ಲವೆಂದು ಪ್ರಾಪ್ತವಾದರೆ ಈಶ್ವರಾಪೇಕ್ಷೆಯುಳ್ಳದ್ದು ಎಂದು ಸಿದ್ಧಾಂತವು ಎನ್ನುತ್ತಾರೆ. ಅದು ಅಯುಕ್ತವು. ಜೀವಕರ್ತೃತ್ವಾಕರ್ತೃಕತ್ವ ಶ್ರುತಿಗಳ ವಿರೋಧವನ್ನು ಭೋಕ್ತೃತ್ವಾಭೋಕ್ತೃತ್ವ ಶ್ರುತಿಗಳ ವಿರೋಧವನ್ನೆಂಬಂತೆ ಅದ್ವೈತಿಗಳು ಹೇಳಿದ **ತದ್ಗುಣಸಾರತ್ವಾತ್** ಎನ್ನುವ ನ್ಯಾಯದಿಂದಲೇ ಔಪಾಧಿಕವಿಷಯಕವಾಗಿ· ನಿರಾಕರಿಸಿದ್ದರಿಂದ ಈ ಅಧಿಕರಣವು ವ್ಯರ್ಥವು. ಸಾಂಖ್ಯ ಸ್ಮೃತಿವಿರೋಧವನ್ನು ಆದ್ಯಪಾದದಲ್ಲಿ ನಿರಾಕರಿಸಿದ್ದರಿಂದ ಇಲ್ಲಿ ಅಸಂಗತವು.

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

**ವಿಚಾರ||** **ವಿಜ್ಞಾನಾತ್ಮಾ ಪುರುಷಃ** ಇತ್ಯಾದಿ ಕರ್ತೃತ್ವಪ್ರತಿಪಾದಕವಾದ ಮತ್ತು **ಯಜೇತ** ಇತ್ಯಾದಿ ವಿಧಿನಿಷೇಧರೂಪ ಶಾಸ್ತ್ರಕ್ಕೆ ಸಾರ್ಥಕ್ಯವಿದ್ದುದರಿಂದಲೂ, **ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ** ಎಂದು ಸಂಚಾರ-ವಿಹಾರ ಕ್ರಿಯೆಗಳನ್ನು ಹೇಳಿದ್ದರಿಂದಲೂ, **ಪ್ರಾಣಾನ್ ಗೃಹೀತ್ವಾ** ಎಂದು ಇಂದ್ರಿಯೋಪಾದಾನದಲ್ಲಿ ಸ್ವಾತಂತ್ರ್ಯವು ತೋರಿದ್ದರಿಂದಲೂ, **ವಿಜ್ಞಾನಂ ಯಜ್ಞಂ ತನುತೇ** ಎಂದು ಕ್ರಿಯೆಗಳಲ್ಲಿ ಕರ್ತೃತ್ವವನ್ನು ಹೇಳಿದ್ದರಿಂದಲೂ ಜೀವನು ಕರ್ತನು. ಇಲ್ಲಿ ವಿಜ್ಞಾನಶಬ್ದಕ್ಕೆ ಬುದ್ಧಿಪರತ್ವವಿದ್ದರೆ **ತದೇತೇಷಾಂ ಪ್ರಾಣಿನಾಂ ವಿಜ್ಞಾನೇನ** ಎನ್ನುವ ಶ್ರುತ್ಯಂತರದಲ್ಲಿದ್ದಂತೆ ಕರ್ತೃತ್ವವಿಪರೀತವಾದ ಕರಣತ್ವದಿಂದ ನಿರ್ದೇಶವು ಬರಬೇಕಾಗುವುದು ಎಂದು **ಕರ್ತಾ** ಇತ್ಯಾದಿ ನಾಲ್ಕು ಸೂತ್ರಗಳ ಅರ್ಥವು, ಎನ್ನುತ್ತಾರೆ. ಅದು ಅಯುಕ್ತವು. ಆದ್ಯ ಸೂತ್ರದಲ್ಲಿದ್ದ ಶಾಸ್ತ್ರಶಬ್ದದಿಂದಲೇ **ಯತ್ಕರ್ಮ ಕುರುತೇ ತದಭಿಸಂಪದ್ಯತೇ, ಸಾಧುಕಾರೀ ಸಾಧುರ್ಭವತಿ** ಇತ್ಯಾದಿಗಳಲ್ಲಿ ಇದ್ದಂತೆಯೇ **ಯಥಾಕಾಮಂ** ಇತ್ಯಾದಿಗಳಿಗೂ ಕರ್ತೃತ್ವ ಪ್ರತಿಪಾದಕವಾದ ಶಾಸ್ತ್ರವನ್ನು ತೆಗೆದುಕೊಳ್ಳಲಿಕ್ಕೆ ಬರುವುದರಿಂದ ದ್ವಿತೀಯಾದಿ ಮೂರು ಸೂತ್ರಗಳಿಗೆ ವೈಯರ್ಥ್ಯವು ಬರುವುದು. ಬುದ್ಧಿಗೆ ಕರ್ತೃತ್ವವಾದಿಯನ್ನು ಕುರಿತು ಶ್ರುತ್ಯಂತರದಲ್ಲಿ ಕರಣತ್ವೋಕ್ತಿ ವಿರೋಧವನ್ನು ಹೇಳಬೇಕಾದುದರಿಂದ **ವಿಜ್ಞಾನಂ** ಎನ್ನುವ ಶ್ರುತಿಯನ್ನು ಬುದ್ಧಿಯನ್ನು ಹೇಳಿದರೆ ಕರ್ತೃತ್ವ ವಿಪರೀತ ಕರಣತ್ವೋಕ್ತಿಯು ಬರಬೇಕಾಗುವುದು. ಎಂದು ಆಪಾದನವು ಅಸಂಗತವಾಗುವುದು.

## ಅಧಿಕರಣ ಸಾರಾಂಶ

ಜೀವನು ಕರ್ತನೋ ಅಲ್ಲವೋ ಎಂದು ಸಂದೇಹವು. ನಾನ್ಯಃ **ಕರ್ತಾ** ಎನ್ನುವ ಶ್ರುತಿಯಿಂದ

ಕರ್ತನಲ್ಲವೆಂದು ಪೂರ್ವಪಕ್ಷವು. ಹೇಗೆಂದರೆ—ಸರ್ವತ್ರ ಈಶ್ವರನಿಗೇನೇ ಕರ್ತೃತ್ವವನ್ನು ಅಂಗೀಕರಿಸಿದರೆ ಲಾಘವವಿದೆ. **ಇತರವ್ಯಪದೇಶಾತ್** ಇತ್ಯಾದಿಗಳಲ್ಲಿ ಜೀವಕರ್ತೃತ್ವವನ್ನು ನಿಷೇಧಿಸಿದ್ದಾರೆ. ಶ್ರುತಿಸೂತ್ರಗಳಲ್ಲಿ ಸ್ವತಂತ್ರ ಕರ್ತೃತ್ವವನ್ನು ನಿಷೇಧಿಸಿದರೂ ಪರತಂತ್ರವಾದ ಕರ್ತೃತ್ವವು ಬರಲಿ ಎಂದು ಹೇಳಕೂಡದು. ಪರಾಧೀನವಾದ ಕರ್ತೃತ್ವಶಕ್ತಿಗೆ ಸ್ವಾಧೀನತ್ವವಿದ್ದಾಗ್ಯೂ ಒಡಗಿಗೆ ಪ್ರಾಸಾದಕಾರಯಿತೃ ಪುರುಷಾಧೀನತ್ವವಿದ್ದಂತೆಯೇ ವೇತನದಾನಾದಿಗಳಿಂದ ಈಶಾಧೀನರೂಪತ್ವವೆಂದಾದರೆ **ಆತ್ಮಾನಮಂತರೋ ಯಮಯತಿ** ಎನ್ನುವ ಶ್ರುತಿ ವಿರೋಧವಿದ್ದುದರಿಂದ ಮರದ ಗೊಂಬೆಯಂತೆ ಈಶ್ವರಾಧೀನವಾದ ಚೇಷ್ಟೆಯೆಂದು ಹೇಳಿದರೆ ಕರ್ತೃತ್ವವು ಅಕರ್ತೃತ್ವದಲ್ಲಿಯೇ ಪರ್ಯವಸಾನವನ್ನು ಹೊಂದುವುದರಿಂದ ವಿಧಿನಿಷೇಧ ಶಾಸ್ತ್ರಗಳಿಗೆ ಅವಿಷಯನಾಗಬೇಕಾಗುವನು. ಹೀಗೆ ಸಯುಕ್ತಿಕವಾದ ಅಕರ್ತೃತ್ವ ಶ್ರುತಿವಿರೋಧವಿದ್ದುದರಿಂದ **ಯತ್ಕರ್ಮ ಕುರುತೇ** ಎಂದು ಜೀವಕರ್ತೃತ್ವ ಶ್ರುತಿಯು ಅಪ್ರಮಾಣವು. ಎಂದರೆ—ಜಡ ಈಶ ಮುಕ್ತರಲ್ಲಿ ಪ್ರವೃತ್ತವಾಗದಿರುವ ವಿಧಿನಿಷೇಧರೂಪವಾದ ಶಾಸ್ತ್ರಕ್ಕೆ ಅರ್ಥವತ್ವರೂಪವಾದ ಅನ್ಯಥಾನುಪಪತ್ತಿರೂಪವಾದ ಯುಕ್ತಿಯಿಂದಲೂ ಮೋಕ್ಷ ಸ್ವರ್ಗಾದಿಗಳಿಗಾಗಿ ಸಾಧನಾನುಷ್ಠಾನದರ್ಶನರೂಪ ಪ್ರತ್ಯಕ್ಷದಿಂದಲೂ **ಆತ್ಮಾನಮೇವ ಲೋಕಮುಪಾಸೀತ** ಇತ್ಯಾದಿ ಉಪಾಸನಾ ಕ್ರಿಯೆಯಲ್ಲಿ ಜೀವನಿಗೆ ಕರ್ತೃತ್ವವು ಶ್ರುತವಾದುದರಿಂದಲೂ ಕರ್ತೃತ್ವವು ಸಿದ್ಧಿಸುವುದರಿಂದ, ಅಪೂರ್ಣಶಕ್ತಿತ್ವ ಅಪೂರ್ಣಕಾಮತ್ವಗಳಿಂದಲೂ **ಕರ್ತೃತ್ವಂ ಕರಣತ್ವಂ ಚ** ಎನ್ನುವ ಶ್ರುತಿಯಿಂದಲೂ ಜೀವನಿಗೆ ಪಾರತಂತ್ರ್ಯವು ಸಿದ್ಧಿಸುವುದರಿಂದ ಮರದ ಗೊಂಬೆಯಂತೆ ಈಶಾಧೀನ ಚೇಷ್ಟಕತ್ವ ರೂಪವಾದ ಪರತಂತ್ರಕರ್ತೃತ್ವವನ್ನೇ ಅಂಗೀಕರಿಸಿದ್ದರಿಂದ ಹಿಂದೆ ಹೇಳಿದ ಶ್ರುತಿಸ್ಮೃತಿಗಳ ವಿರೋಧವು ಇಲ್ಲದಿರುವುದರಿಂದ ವಿಧಿನಿಷೇಧ ಶಾಸ್ತ್ರಗಳಿಗೆ ವೈಯರ್ಥ್ಯವು ಬಾರದಿರುವುದಕ್ಕಾಗಿ ಜೀವನು ಕರ್ತನು. ॥ ಅಧಿ. ೧೭ ॥

**ಕರ್ತೃತ್ವಾಧಿಕರಣವು ಸಮಾಪ್ತವಾಯಿತು.**

**॥ ಓಂ ಜೀವೇಶಾಂಶತ್ವ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥**

## ೧೮ ಅಂಶಾಧಿಕರಣವು

ಪೀಠಿಕೆ ॥ ಜೀವನಿಗೆ ಈಶ್ವರನ ಅಂಶತ್ವ ಅನಂಶತ್ವವಿಷಯಕ ಶ್ರುತಿವಿರೋಧಪರಿಹಾರಕ್ಕಾಗಿ ಶ್ರುತಿವಿರೋಧವನ್ನು ತೋರಿಸುತ್ತಾರೆ—

**ಭಾಷ್ಯ ॥ (೧) ಅಂಶಾ ಏವ ಹೀಮೇ ಜೀವಾ ಅಂಶೀ ಹಿ ಪರಮೇಶ್ವರಃ । ಸ್ವಯಮಂಶೈರಿದಂ ಸರ್ವಂ ಕಾರಯತ್ಯಚಲೋ ಹರಿಃ ॥ ಇತಿ ಗೌಪವನಶ್ರುತಾವಂಶತ್ವಂ ಜೀವಸ್ಯೋಪಲಭ್ಯತೇ ॥ (೨) ನೈವಾಂಶೋ ನ ಸಂಬಂಧೋ ನಾಪೇಕ್ಷ್ಯೋ ಜೀವಃ ಪರಸ್ಯ । ತಥಾऽಪಿ ತು ಯಥಾಯೋಗಂ**

**ಫಲದಃ ಪ್ರಭುರೇಕರಾಟ್ । ನ ನಿಯಮ್ಯಃ ಸ ಕಸ್ಯಾಪಿ ಸ ಸರ್ವಸ್ಯ ನಿಯಾಮಕಃ ॥**
**ಇತಿ (ಚ) ಭಾಲ್ಲವೇಯಶ್ರುತೌ ಅತೋ ಬ್ರವೀತಿ ॥ ೧ ॥**

ಭಾಷ್ಯಾರ್ಥ ॥ (೧) ಪ್ರಮಿತರಾದ ಜೀವನು ಪಿತೃ ಪುತ್ರಾದಿ ಸಂಬಂಧಗಳಿಂದ ಶ್ರೀಹರಿಯನ್ನು ಉಪಜೀವಿಸಿಕೊಂಡು ಶ್ರೀಹರಿಗೆ ಅಂಶಭೂತರೇ ಆಗಿದ್ದಾರೆ. ಪ್ರಸಿದ್ಧ ಪರಮೇಶ್ವರನು ಅಂಶಿಯಾಗಿರುತ್ತಾನೆ. ಪ್ರಸಿದ್ಧ ಶ್ರೀಹರಿಯು ಸ್ವರೂಪಾಂಶಗಳಾದ ಅನಿರುದ್ಧಾದಿ ರೂಪಗಳಿಂದ ಅಥವಾ ಭಿನ್ನಾಂಶರಾದ ಚತುರ್ಮುಖಾದಿಗಳಿಂದ ಸರ್ವ ಜಗತ್ತನ್ನು ಸೃಷ್ಟಿಸುತ್ತಾನೆ. ಹೀಗೆ ಗೌಪವನ ಶ್ರುತಿಯಲ್ಲಿ ಜೀವರಿಗೆ ಅಂಶತ್ವವು ತೋರುತ್ತದೆ. (ಹೀಗೆ ಅಂಶತ್ವ ಶ್ರುತಿಯನ್ನುದಾಹರಿಸಿ ಅನಂಶತ್ವ ಶ್ರುತಿಯನ್ನು ಹೇಳುತ್ತಾರೆ.) (೨) ಜೀವನು ಪರಮಾತ್ಮನಿಗೆ ಅಂಶನಲ್ಲ (ಅನಂಶನೇ.) (ಏಕೆಂದರೆ—) ಲೋಕಪಿತೃಗಳಂತೆ ಶ್ರೀಹರಿಯಿಂದ ಪೋಷ್ಯತ್ವಾದಿರೂಪ ಸಂಬಂಧರಹಿತನು. ಜೀವನು ಪರಮಾತ್ಮನಿಗೆ ಉಪಕರ್ತನೂ ಅಲ್ಲ. ಆದಾಗ್ಯೂ ಜೀವನಿಂದ ಈಶ್ವರನಿಗೆ ಉಪಕಾರವಿಲ್ಲವಾದರೂ ಆ ಈಶನು ಜೀವರ ಸಮುದಾಯಕ್ಕೆ ಅವರವರ ಯೋಗ್ಯತಾನುಸಾರವಾಗಿ ಸ್ವರ್ಗ ಮೋಕ್ಷಾದಿ ರೂಪವಾದ ಫಲವನ್ನು ಕೊಡತಕ್ಕವನು ಆಗಿಯೇ ಆಗುತ್ತಾನೆ. ಸರ್ವಸ್ವತಂತ್ರನು. ಸರ್ವಸಮರ್ಥನು. (ತಥಾಚ ಸ್ವಾಧೀನವಾದ ಯೋಗ್ಯತೆಯನ್ನು ಅಪೇಕ್ಷಿಸಿದರೆ ಸ್ವಾತಂತ್ರ್ಯಹಾನಿಯಿಲ್ಲ) ಆ ಈಶನು ಯಾರಿಂದಲೂ ಉಪಕಾರ್ಯನಾಗುವುದಿಲ್ಲ. ಸರ್ವರಿಗೂ ನಿಯಾಮಕನು. ಎಂದು ಭಾಲ್ಲವೇಯ ಶ್ರುತಿಯಲ್ಲಿ (ಅನಂತತ್ವವು ತೋರುತ್ತದೆ) (ತಥಾಚ ಜೀವರು ಅಂಶರೇ, ಜೀವನು ಅನಂಶನೇ, ಎಂದು ಆಪಾತತಃ ವಿರುದ್ಧಾರ್ಥಪ್ರತಿಪಾದಕಗಳಂತೆ ತೋರುವ ಎರಡು ಶ್ರುತಿಗಳೂ ಸಾವಧಾರಣಗಳಾಗಿರುವುದರಿಂದ ನಿರವಕಾಶಗಳಾದ ಪ್ರಯುಕ್ತ ಅಂಶತ್ವ ಅನಂಶತ್ವನಿರ್ಣಯವು ಆಗದಿರುವುದರಿಂದ ಅಪ್ರಾಮಾಣ್ಯವೇ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ.) ಎರಡು ಶ್ರುತಿಗಳಲ್ಲಿ ಸಂಶಯಕ್ಕೆ ಕಾರಣವಾದ ವಿರುದ್ಧೋಕ್ತಿಯನ್ನು ಪರಿಹರಿಸುವುದಕ್ಕಾಗಿ ಅನ್ಯತರಕೋಟಿ ನಿರ್ಣಯರೂಪವಾದ ಸಿದ್ಧಾಂತವನ್ನು ಸೂತ್ರಕಾರರು ಹೇಳುತ್ತಾರೆ.

## ಸೂತ್ರ ॥ ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ ಓಂ ॥ ೪೩ ॥

ಸೂತ್ರಾರ್ಥ ॥ ಪಿತೃತ್ವ ಪುತ್ರತ್ವಾದಿ ನಾನಾಪ್ರಕಾರದಿಂದ ಜೀವನು ಪರಮಾತ್ಮನಿಂದ ಉಪಕರ್ತವ್ಯನಾದುದರಿಂದ ಜೀವನಿಗೆ ಈಶಸಂಬಂಧಿತ್ವವನ್ನು ಹೇಳಿದ್ದರಿಂದಲೂ ಅನ್ಯಥಾಚ, ನ ಸಂಬಂಧಃ ಪರಸ್ಯ, ನಾ ಸಾವಸ್ಯ ಎಂದು ಸಂಬಂಧಾಭಾವವನ್ನು ಹೇಳಿದ್ದರಿಂದಲೂ ಜೀವನು ಪರಮಾತ್ಮನಿಗೆ ಅಂಶದಂತೆ ಇರತಕ್ಕವನು. ಶ್ರೀಹರಿಗೆ ಉಪಜೀವಿಯಾಗಿ ಅವನ ಅಂಶಭೂತನು. ಮತ್ತು ಕೆಲವು ಶಾಖಿಗಳು ಮುಂದೆ ಹೇಳುವ ಅಭೇದಕ್ಕಿಂತ ಪ್ರಕಾರಾಂತರದಿಂದ ಪರಮಾತ್ಮನಿಂದ ಭೇದದಿಂದ ಈ ಜೀವನನ್ನು ಹೇಳುತ್ತಾರೆ. ಹೀಗೆಯೇ ಕೆಲವು ಶಾಖಿಗಳು ಪರಬ್ರಹ್ಮನಿಗೆ ದಾಶಕಿತವದಾಸಾದಿರೂಪ ಜೀವಭಾವವನ್ನು ದಾಶಾದಿಗಳಿಗೆ ಬ್ರಹ್ಮಾಭೇದವನ್ನು ಹೇಳುತ್ತಾರೆ. ಆದುದರಿಂದಲೂ ಜೀವನು

ಪರಮಾತ್ಮನಿಗೆ ಅಂಶನು. (ಪರಮಾತ್ಮಾಧೀನನಾಗಿ ಪರಮಾತ್ಮ ಸದೃಶತ್ವರೂಪವಾದ ಅಂಶತ್ವೋಪೇತನು.)

**ಭಾಷ್ಯ ॥ (೧) ಮಾಂ ರಕ್ಷತು ವಿಭುರ್ನಿತ್ಯಂ ಪುತ್ರೋಽಹಂ ಪರಮಾತ್ಮನಃ (ಸ್ಮೃತಿಃ)। (೨) ಅವಃ ಪರೇಣ ಪಿತರಂ ಯೋ ಅಸ್ಯಾನುವೇದ ಪರಏನಾವರೇಣ (ಋ.೧.೧೬೪.೧೮)। (೩) ಯಸ್ತದ್ವೇದ ಸ ಪಿತುಷ್ಪಿತಾಽಸತ್ (ಮಹಾನಾಮ್ನೀ ೧.೧೪)। (೪) ಯಸ್ತಾ ವಿಜಾನಾತ್ಸ ಪಿತುಷ್ಪಿತಾಽಸತ್ (ಋ.೧.೧೬೪.೧೬)। (೫) ದ್ವಾ ಸುಪರ್ಣಾ ಸಯುಜಾ ಸಖಾಯಾ (ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ) ॥ (ಮು.೩.೧.೧)। ಇತ್ಯಾದಿನಾ ನಾನಾವ ಪದೇಶಾತ್ । ಅಂಶೋ ಜೀವಃ ॥ ೨ ॥**

ಭಾಷ್ಯಾರ್ಥ ॥ (೧) ಶ್ರೀಹರಿಯು ನಿತ್ಯದಲ್ಲಿಯೂ ನನ್ನನ್ನು ರಕ್ಷಿಸಲಿ. ನಾನು ಪರಮಾತ್ಮನ ಮಗನು. (೨) ಪರಮಾತ್ಮನ ದೆಶೆಯಿಂದ, ಅಧಮನಾದ ಯಾವ ಜೀವನು, ತನಗೆ ಯಾ ಜಗತ್ತಿಗೆ ತಂದೆಯಾದ ಶ್ರೀಹರಿಯನ್ನು ಯಥಾರ್ಥವಾಗಿ ತಿಳಿಯುತ್ತಾನೋ, ಈ ಪರಮಾತ್ಮನು (ಎನಾ) ಈ ಅವರನಾದ ಜೀವನಿಂದ ಉತ್ಪನ್ನನು ಎಂದು ಹೇಳಲ್ಪಡುತ್ತಾನೆ. (೩) ತ್ರೀಣಿ ಪದಾ ನಿಹಿತಾ ಗುಹಾಸು ಯಸ್ತದ್ವೇದ= ಯಾವ ಶ್ರೀಹರಿಯ ನಾರಾಯಣ ವಾಸುದೇವ ವೈಕುಂಠಾಖ್ಯರೂಪಗಳು ತ್ರೈತ್ವದ್ವೀಪಾದಿಗಳಲ್ಲಿ ನಿಹಿತಗಳಾಗಿವೆಯೋ ಆ ಬ್ರಹ್ಮನನ್ನು ಯಾವಾತನು ತಿಳಿಯುತ್ತಾನೋ ಆತನು ಜಗಜ್ಜನಕನಾದ ಶ್ರೀಹರಿಗೆ (ವ್ಯಂಜಕನಾದುದರಿಂದ ಪಿತನು ಆದನು) (೪) (ಸ್ತ್ರಿಯಃ ಸತೀಸ್ತಾ ಉ ಮೇ ಪುಂಸ ಆಹುಃ। ಪಶ್ಯ ದಕ್ಷಣ್ವಾನ್ನವಿಚೇತದಂಧಃ। ಕವಿರ್ಯಃ ಪುತ್ರಃ ಸ ಇಮಾಽಚಿಕೇತ ಯಸ್ತಾಃ= ಯಾವ ಭಗವನ್ಮೂರ್ತಿಗಳು ನನ್ನಿಂದ ಉಪಾಸ್ಯಗಳೋ ಸ್ತ್ರೀ ಲಿಂಗಶಬ್ದವಾಚ್ಯಗಳೋ ನಿರ್ದೋಷಗಳೋ, ಆ ಭಗವನ್ಮೂರ್ತಿಗಳನ್ನು ಪರಮಪುರುಷರನ್ನಾಗಿ ಹೇಳುತ್ತಾರೆ. ಯಾವಾತನು ಅವುಗಳನ್ನು ನೋಡುತ್ತಾನೋ ಅವನೇ ಚಕ್ಷುಸ್ಸುಳ್ಳವನು. ಯಾವನು ತಿಳಿಯುವುದಿಲ್ಲವೋ, ಅವನು ಅಂಧನು. ಸರ್ವಜ್ಞನಾದ ಶ್ರೀಹರಿಯ ಪುತ್ರನಾದ ವಿರಿಂಚನೇ ಚೆನ್ನಾಗಿ ತಿಳಿಯುತ್ತಾನೆ.) ಯಾವನು ಅವುಗಳನ್ನು ತಿಳಿಯುತ್ತಾನೋ ಅವನು ಶ್ರೀಹರಿಗೆ ಅಭಿವ್ಯಂಜಕನಾದುದರಿಂದ ಪಿತನು ಆದನು. (೫) ★ದ್ವಾಸುಪರ್ಣಾ ಇತ್ಯಾದಿ ವಾಕ್ಯಗಳಿಂದ ಪುತ್ರತ್ವ ಪಿತೃತ್ವಾದಿ ನಾನಾಪ್ರಕಾರಗಳಿಂದ ಜೀವನಿಗೆ ಈಶ ಸಂಬಂಧಿತ್ವವನ್ನು ಹೇಳಿದ್ದರಿಂದ ಜೀವನು ಪರಮಾತ್ಮನ ಅಂಶನು.

ವಿಶೇಷಾಂಶ ॥ (೧) ಉಪಜೀವಕತ್ವರೂಪ ಶ್ರೀಭಗವಚ್ಛೇಷ. (೨) ಶ್ರೀಹರಿಯಿಂದ ನ್ಯೂನತೆಯಿದ್ದು ಶ್ರೀಹರಿಯ ಸದೃಶತ್ವವು ಎಂದು ಅಂಶತ್ವವು ಎರಡು ವಿಧವು.

ಟೀಕಿಕೆ ॥ ನಾನಾವ್ಯಪದೇಶಾತ್ ಅಂಶೋ ಜೀವಃ ಎನ್ನುವಲ್ಲಿ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ತಥಾ ಚ ಪಾರಾಶರ್ಯಾಯಣಶ್ರುತಿಃ । ಅಂಶೋ ಹ್ಯೇಷ ಪರಸ್ಯ ಯೋಽಯಂ**

★ ಈ ಶ್ರುತಿಯು ಮುಖ್ಯಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

**ಪುಮಾನುತ್ಪದ್ಯತೇ ಚ ಮ್ರಿಯತೇ ಚ ನಾನಾ ಹ್ಯೇನಂ ವ್ಯಪದಿಶಂತಿ ಪಿತೇತಿ ಪುತ್ರೇತಿ ಭ್ರಾತೇತಿ ಸಖೇತಿ ಚ । ಇತಿ ॥ ೩ ॥**

ಭಾಷ್ಯಾರ್ಥ ॥ ಉತ್ಪತ್ತಿ ನಾಶವುಳ್ಳವನೆಂದು ಪ್ರಸಿದ್ಧನಾದ ಪುರುಷನು ಪರಮಾತ್ಮನ ಅಂಶನು. ಏಕೆಂದರೆ—ಈ ಜೀವನನ್ನು ಪರಮಾತ್ಮನಿಗೆ ಪಿತನೆಂದೂ ಪುತ್ರನೆಂದೂ ಭ್ರಾತನೆಂದೂ ಸಖಿಯೆಂದೂ ನಾನಾ ಪ್ರಕಾರವಾಗಿ ವೇದಗಳು ಹೇಳುತ್ತವೆ. (ಹೀಗೆ ಪಾರಾಶರ್ಯಾಯಣ ಶ್ರುತಿಯು ಜೀವನಿಗೆ ಪರಮಾತ್ಮನ ಅಂಶತ್ವವನ್ನು ಪ್ರತಿಪಾದಿಸುತ್ತದೆ.)

ಪೀಠಿಕೆ ॥ ಹೇತ್ವಂತರದಿಂದ ಅಂಶತ್ವವನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ ಅನ್ಯಃ ಪರೋಽನ್ಯೋ ಜೀವೋ ನಾಸಾವಸ್ಯ ಕುತಶ್ಚನ । ನಾಯಂ ತಸ್ಯಾಪಿ ಕಶ್ಚನ ಇತ್ಯನ್ಯಥಾ ಚ ಕಾಷಾಯಣಶ್ರುತಿಃ ॥ ೪ ॥**

ಭಾಷ್ಯಾರ್ಥ ॥ ಈ ಶ್ರೀಪರಮಾತ್ಮನು ಜೀವನಿಗೆ ಸಂಬಂಧಿಯು ಯಾವ ಪ್ರಕಾರದಿಂದಲೂ ಅಲ್ಲ. ಈ ಜೀವನೂ ಕೂಡ ಪರಮಾತ್ಮನಿಗೆ ಪಿತ್ರಾದ್ಯನುಬಂಧಿಗಳಲ್ಲಿ ಯಾರೂ ಇಲ್ಲ. ಅನ್ಯಥಾಚ=ಜೀವನನ್ನು ಪರಮಾತ್ಮನಿಂದ ಭಿನ್ನನನ್ನಾಗಿಯೂ ಕಾಷಾಯಣ ಶ್ರುತಿಯು ಹೇಳುತ್ತದೆ.

ಪೀಠಿಕೆ ॥ ಅಭೇದವ್ಯಪದೇಶವನ್ನು ತೋರಿಸುತ್ತಾರೆ—

**ಭಾಷ್ಯ ॥ ಬ್ರಹ್ಮ ದಾಶಾ ಬ್ರಹ್ಮ ಕಿತವಾ ಬ್ರಹ್ಮೈವೇಮೇ ದಾಶಾ (ಸಾ) ಇತ್ಯಭೇದೇನಾ-ಪ್ಯೇಕೇಽಧೀಯತೇ ॥ ೫ ॥**

ಭಾಷ್ಯಾರ್ಥ ॥ ಮತ್ಸ್ಯಗ್ರಾಹಿಗಳಾದ ಕೈವರ್ತರು ಬ್ರಹ್ಮನೇ, ವಂಚಕರೂ ಬ್ರಹ್ಮನೇ ಎಂದು ಕೈವರ್ತ ಮೊದಲಾದ ನೀಚಜೀವರೂ ಕೂಡ ಬ್ರಹ್ಮಭೂತರೇ, ಉತ್ತಮ ಜೀವರು ಬ್ರಹ್ಮಭೂತರು ಎಂದು ಸುತರಾಂ ಸಿದ್ಧವಾಗುತ್ತದೆ. ಎನ್ನುವ ಅಭಿಪ್ರಾಯದಿಂದ ಸರ್ವಜೀವರನ್ನೂ ಕೂಡ ಕೆಲವು ಶಾಖಿಗಳು ಬ್ರಹ್ಮನಿಂದ ಅಭಿನ್ನರನ್ನಾಗಿ ಹೇಳುತ್ತಾರೆ (ತಥಾಚ ಎರಡು ಶ್ರುತಿಗಳಿಂದ ಹೇಳಲ್ಪಡತಕ್ಕ ಭೇದಾಭೇದಗಳು ಪರಸ್ಪರ ವಿರುದ್ಧಗಳಾಗಿರುವುದರಿಂದ ತದನ್ಯಥಾನುಪಪತ್ತಿಯಿಂದ ಜೀವನು ಈಶನಿಂದ ಭಿನ್ನನೆಂದು ಅಂಗೀಕರಿಸಿಕೊಂಡು ಅಭೇದಸ್ಥಾನದಲ್ಲಿ ಅಂಶತ್ವವನ್ನು ಹೇಳಬೇಕು.

ಪೀಠಿಕೆ ॥ ಭೇದಾಭೇದೋಕ್ತ್ಯನ್ಯಥಾನುಪಪತ್ತಿಯಿಂದ ಜೀವನು ಅಂಶನು ಎನ್ನುವಲ್ಲಿಯೂ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ತಥಾ ಚಾಗ್ನಿವೇಶ್ಯಶ್ರುತಿಃ । ಅಂಶೋ ಹ್ಯೇಷ ಪರಸ್ಯ ಭಿನ್ನಂ ಹ್ಯೇನಮಧೀಯಿ-ರೇಽಭಿನ್ನಂ ಹ್ಯೇನಮಧೀಯಿರೇ । ಇತಿ ॥ ೬ ॥**

ಭಾಷ್ಯಾರ್ಥ ॥ ಜೀವನು ಪರಮಾತ್ಮನ ಅಂಶನು, ತಥಾಚ ಈ ಜೀವನನ್ನು ಶ್ರೀಹರಿಯಿಂದ ಭಿನ್ನನನ್ನಾಗಿಯೂ ಅಭಿನ್ನನನ್ನಾಗಿಯೂ ಕೆಲವು ಶಾಖಿಗಳು ಹೇಳುತ್ತಾರೆ. ॥ ೬ ॥

ಪೀಠಿಕೆ ॥ ಸಮಸ್ತಸೂತ್ರಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

ಭಾಷ್ಯ ॥ ವಾರಾಹೇ ಚ । (೧) ಪುತ್ರಭ್ರಾತೃಸಖಿತ್ವೇನ ಸ್ವಾಮಿತ್ವೇನ ಯತೋ ಹರಿಃ । ಬಹುಧಾ ಗೀಯತೇ ವೇದೈರ್ಜೀವೋಽಶಸ್ತಸ್ಯ ತೇನ ತು ॥ (೨) ಯತೋ ಭೇದೇನ ತಸ್ಯಾಯಮಭೇದೇನ ಚ ಗೀಯತೇ । ಅತಶ್ಚಾಂಶತ್ವಮುದ್ದಿಷ್ಟಂ ಭೇದಾಭೇದೌ ನ ಮುಖ್ಯತಃ ॥ ಇತಿ ॥ ೪೩ ॥ ॥ ೭ ॥

ಭಾಷ್ಯಾರ್ಥ ॥ (೧) ಯಾವಕಾರಣದಿಂದ ಶ್ರೀಹರಿಯು ಜೀವನಿಗೆ ಪುತ್ರನೆಂದು ಭ್ರಾತನೆಂದೂ ಸಖಿಯೆಂದೂ ಸ್ವಾಮಿಯೆಂದೂ ಬಹುಧಾ, ವೇದಗಳಿಂದ ಹೇಳಲ್ಪಡುತ್ತಾನೋ, ಆದಕಾರಣ ಜೀವನು ಶ್ರೀಹರಿಗೆ ಅಂಶನು. (೨) ಯಾವಕಾರಣದಿಂದ ಈ ಜೀವನು ಶ್ರೀಹರಿಯಿಂದ ಭೇದದಿಂದಲೂ (ಭಿನ್ನನೆಂದೂ) ಅಭೇದದಿಂದಲೂ (ಅಭಿನ್ನನೆಂದೂ) ಪ್ರತಿಪಾದಿಸಿಕೊಳ್ಳಲ್ಪಡುತ್ತಾನೋ, ಆದಕಾರಣ ಜೀವನಿಗೆ ಅಂಶತ್ವವೂ ಹೇಳಲ್ಪಟ್ಟಿದೆ. ಮುಖ್ಯವಾಗಿ (ವಿರೋಧವಿದ್ದುದರಿಂದ) ಮುಖ್ಯವಾಗಿ ಭೇದವೂ ಅಭೇದವೂ ಅಲ್ಲ (ಅಂದರೆ ಮುಖ್ಯವಾಗಿ ಭೇದವೆಂದರೆ ಘಟಪಟಗಳಂತೆ ಸಂಬಂಧಶೂನ್ಯವಾದ ಭೇದವು. ಅಭೇದವೆಂದರೆ—ಸ್ವರೂಪತಃ ಅಭೇದವು. ಅಂತಹುಗಳಲ್ಲ) ॥ ೪೩ ॥

ಪೀಠಿಕೆ ॥ ಶ್ರುತಿಯಿಂದಲೂ ಈ ಅರ್ಥವನ್ನು ಸಾಧಿಸತಕ್ಕ ಸೂತ್ರವನ್ನುಪನ್ಯಾಸಮಾಡಿ ಶ್ರುತಿಯನ್ನು ಉದಾಹರಿಸುತ್ತಾರೆ—

## ಸೂತ್ರ ॥ ಓಂ ಮಂತ್ರವರ್ಣಾತ್ ಓಂ ॥ ೪೪ ॥

ಭಾಷ್ಯ ॥ ಪಾದೋಽಸ್ಯ ವಿಶ್ವಾ ಭೂತಾನಿ (ಋ.೧೦.೯೦.೩)। ಇತಿ ॥ ೪೪ ॥ ॥ ೮ ॥

ಭಾಷ್ಯಾರ್ಥ ॥ ಎಲ್ಲಾ ಜೀವರೂ ಪರಮಾತ್ಮನ ಅಂಶಭೂತರು ಎನ್ನುವ ಪುರುಷಸೂಕ್ತದಲ್ಲಿದ್ದ ಮಂತ್ರವರ್ಣದಿಂದಲೂ (ಹಿಂದಿನ ಯುಕ್ತಿಯಿಂದ ಮಾತ್ರವಲ್ಲ) ಜೀವನು ಪರಮಾತ್ಮನ ಅಂಶನು. ॥ ೪೪ ॥

ಪೀಠಿಕೆ ॥ ಸ್ಮೃತಿಯಿಂದಲೂ ಜೀವನಿಗೆ ಪರಮಾತ್ಮನ ಅಂಶತ್ವವನ್ನು ಸಾಧಿಸತಕ್ಕ ಸೂತ್ರವನ್ನು ಹೇಳಿ ಸ್ಮೃತಿಯನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅಪಿ ಸ್ಮರ್ಯತೇ ಓಂ ॥ ೪೫ ॥

ಭಾಷ್ಯ ॥ ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ (ಗೀ.ಅ.೧೫.ಶ್ಲೋ.೭) ಇತಿ ॥ ೪೫ ॥ ॥ ೯ ॥

ಭಾಷ್ಯಾರ್ಥ ॥ ಜೀವಚ್ಛರೀರವಲ್ಲಿರತಕ್ಕ ನಿತ್ಯವಾದ ಜೀವಾಖ್ಯವಾದ ಬ್ರಹ್ಮಾದಿ ಚೇತನರಾಶಿಯು ನನ್ನ ಅಂಶವೇ. (ನನ್ನ ಅಧೀನವಾಗಿ ಇದ್ದು ನನ್ನ ಸದೃಶವೇ ಅಭಿನ್ನಾಂಶವಲ್ಲ. ಅನಂಶವೂ ಅಲ್ಲ) ಎಂದು (ಜೀವನಿಗೆ ಪರಮಾತ್ಮಾಂಶತ್ವವು ಶ್ರುತಿಯಲ್ಲಿ ಮಾತ್ರ ಹೇಳಲ್ಪಟ್ಟಿದ್ದಲ್ಲ) ಸ್ಮೃತಿಯಿಂದಲೂ ಹೇಳಲ್ಪಡುತ್ತದೆ. ॥ ೪೫ ॥

ಪೀಠಿಕೆ ॥ ಜೀವನಿಗೆ ಈಶ್ವರಾಂಶತ್ವವು ಯುಕ್ತವಲ್ಲ. ಹಾಗೆ ಇದ್ದರೆ ಅಂಶತ್ವವು ಸಮಾನವಾದ

ಪ್ರಯುಕ್ತ ಮತ್ಸ್ಯಾದಿಭಗವದ್ರೂಪಗಳ ಸಾಮ್ಯವು ಬರಬೇಕಾಗುವುದು. ಅನಂಶತ್ವ ಶ್ರುತಿವಿರೋಧವೂ ಆದೆ, ಎನ್ನುವ ಆಶಂಕೆಯನ್ನು ಪರಿಹಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ (೧) ಅನಂತಶ್ಚಶ್ರುತೇರ್ಗತಿಂ ಚಾಹ ॥ ೧೦ ॥**

## ಸೂತ್ರ ॥ ಓಂ ಪ್ರಕಾಶಾದಿವನ್ನೈವಂ ಪರಃ ಓಂ ॥ ೪೬ ॥

**ಭಾಷ್ಯ ॥ (೨) ಅಂಶತ್ವೇಽಪಿ ನ ಮತ್ಸ್ಯಾದಿರೂಪೀ ಪರ ಏವಂವಿಧಃ ॥ ೧೧ ॥**

ಭಾಷ್ಯಾರ್ಥ ॥ (೧) ನೈವಾಂಶಃ ಇತ್ಯಾದ್ಯನಂಶತ್ವ ಶ್ರುತಿಗೆ ವಿಷಯವನ್ನು ಮತ್ಸ್ಯಾದಿಭಗವದ್ರೂಪಗಳಿಂದ ಅಸಾಮ್ಯವನ್ನೂ ಅಂಶತ್ವಶ್ರುತಿಗೆ ವಿರೋಧಪರಿಹಾರಕ್ಕಾಗಿ ಹೇಳುತ್ತಾರೆ. (೨) ಜೀವರಿಗೂ ಮತ್ಸ್ಯಾದಿ ಭಗವದ್ರೂಪಗಳಿಗೂ ಅಂಶತ್ವವಿದ್ದರೂ ಮತ್ಸ್ಯಾದಿರೂಪಿಯಾದ ಪರಮಾತ್ಮನು ಜೀವನಿಂದ ಸರ್ವಥಾ ಸದೃಶನಲ್ಲ. ಜೀವನಂತೆ ಭಿನ್ನಾಂಶವಲ್ಲ. ಮತ್ತೆ ಸ್ವರೂಪಾಂಶನು. (ಅಂದರೆ ಮತ್ಸ್ಯಾದಿಭಗವದ್ರೂಪಗಳು ಸ್ವರೂಪಾಂಶಗಳು. ಜೀವರು ಭಿನ್ನಾಂಶರು.) ಹೇಗೆಂದರೆ, ಪ್ರಕಾಶಾದಿವತ್=ತೇಜಸ್ಸು ಮೊದಲಾದವುಗಳ ಅಂಶಗಳೇ ಆದ ಕಾಲಾಗ್ನಿ ಖದ್ಯೋತಾದಿಗಳಲ್ಲಿ ಅಭಿನ್ನತ್ವ ಭಿನ್ನತ್ವ ವೈಷಮ್ಯವಿದ್ದಂತೆಯೇ.

ಪೀಠಿಕೆ ॥ ಜೀವರಿಗೂ ಮತ್ಸ್ಯಾದಿಗಳಿಗೂ ಅಂಶತ್ವವಿದ್ದರೆ ಜೀವರಲ್ಲಿ ಭೇದವೇ, ಮತ್ಸ್ಯಾದಿಗಳಲ್ಲಿ ಅಭೇದವೇ ಎನ್ನುವ ವೈಷಮ್ಯವು ಹೇಗೆ ಕೂಡುತ್ತದೆ ಎಂದರೆ—

**ಭಾಷ್ಯ ॥ ಯಥಾ ತೇಜೋಽಂಶಸ್ಯೈವ ಕಾಲಾಗ್ನೇಃ ಖದ್ಯೋತಸ್ಯ ಚ ನೈಕಪ್ರಕಾರತಾ। ಯಥಾ ಜಲಾಂಶಸ್ಯಾಮೃತಸಮುದ್ರಸ್ಯ ಮೂತ್ರಾದೇಶ್ಚ । ಯಥಾ ಪೃಥಿವ್ಯಂಶಸ್ಯ ಮೇರೋರ್ವಿಷ್ಠಾದೇಶ್ಚ ॥ ೧೨ ॥**

ಭಾಷ್ಯಾರ್ಥ ॥ ಅಗ್ನ್ಯಂಶವಾದ ಕಾಲಾಗ್ನಿಗೂ, ಖದ್ಯೋತಕ್ಕೂ (ಮಿಂಚುಹುಳಕ್ಕೂ) ಅಂಶತ್ವವಿದ್ದರೂ ಎರಡಕ್ಕೂ ಭಿನ್ನಾಂಶತ್ವ ಅಥವಾ ಅಭಿನ್ನಾಂಶತ್ವರೂಪವಾದ ಏಕಪ್ರಕಾರತ್ವವಲ್ಲ. (ಮತ್ತೆ ಪ್ರಲಯಕಾಲೀನಾಗ್ನಿಗೆ ಅಭಿನ್ನಾಂಶತ್ವವು, ಖದ್ಯೋತಕ್ಕೆ ಭಿನ್ನಾಂಶತ್ವವು. ಹೀಗೆ ಬೇರೆ ಬೇರೆ ಪ್ರಕಾರಗಳೇ.) ಹೇಗೆ ಬ್ರಹ್ಮಾಂಡದಿಂದ ಬಾಹ್ಯವಾದ ಉದಕದ ಅಂಶಭೂತವಾದ ಶುದ್ಧೋದಕ ಸಮುದ್ರಕ್ಕೂ, ಮೂತ್ರಾದಿಗಳಿಗೂ ಏಕಪ್ರಕಾರತ್ವವಲ್ಲ. (ಅಮೃತಸಮುದ್ರಕ್ಕೆ ಅಭಿನ್ನಾಂಶತ್ವವು, ಮೂತ್ರಾದಿಗಳಿಗೆ ಭಿನ್ನಾಂಶತ್ವವು.) ಹೇಗೆ ಪೃಥಿವಿಯ ಅಂಶಭೂತವಾದ ಮೇರುಪರ್ವತಕ್ಕೂ ವಿಷ್ಠಾದಿಗಳಿಗೂ ಏಕಪ್ರಕಾರತಾ ಅಲ್ಲವೋ, (ಅಂದರೆ ಮೇರುಪರ್ವತಕ್ಕೆ ಪೃಥಿವಿಯಿಂದ ಅಭಿನ್ನಾಂಶತ್ವವು ವಿಷ್ಠಾದಿಗಳಿಗೆ ಭಿನ್ನಾಂಶತ್ವವೇ.) ಹಾಗೆಯೇ ಪ್ರಕೃತದಲ್ಲಿಯೂ ಭೇದಾಭೇದಗಳು ಉಪಪನ್ನಗಳಾಗುತ್ತವೆ. ತಥಾಚ, ಅಭಿನ್ನಾಂಶಾಸ್ತು ಮತ್ಸ್ಯಾದ್ಯಾಃ ತೇಜಸಃ ಕಾಲವಹ್ನಿವತ್ । ಜೀವಾಃ ಭಿನ್ನಾಂಶಕಾಸ್ತತ್ರ ತೇಜಸಃ ಪ್ರತಿಬಿಂಬವತ್ ॥ ಎಂದು ತತ್ವಪ್ರದೀಪದಲ್ಲಿ ಹೇಳಿರುವರು.

ಪೀಠಿಕೆ ॥ ತೇಜಸ್ಸು ಮೊದಲುಗೊಂಡು ಭೂತಕಾರ್ಯಗಳಾದ ಕಾಲಾಗ್ನಿ ಖದ್ಯೋತಾದಿಗಳು

ಎರಡಕ್ಕೂ ಕಾರಣಗಳಿಂದ ಕೂಡಿಕೊಂಡು ಭಿನ್ನಾಭಿನ್ನತ್ವವು ಸಮಾನವಾದುದರಿಂದ ಕಾಲಾಗ್ನ್ಯಾದಿಗಳಿಗೆ ಅಭೇದವೂ ಖದ್ಯೋತಾದಿಗಳಿಗೆ ಭೇದವೂ ಹೇಗೆ ಕೂಡುತ್ತದೆ ಎಂದರೆ—

**ಭಾಷ್ಯ ॥ ಅಭಿಮಾನಿದೇವತಾಪೇಕ್ಷಯೈತತ್ ॥ ೪೬ ॥ ॥ ೧೩ ॥**

**ಭಾಷ್ಯಾರ್ಥ ॥** ತೇಜೋ ಜಲ ಪೃಥಿವಿಗಳಿಗೆ ಅಭಿಮಾನಿಗಳಾದ ಸೂರ್ಯ ವರುಣ ಧರಾದೇವಿಯರಿಗೆ ಕಾಲಾಗ್ನಿ ಅಮೃತಸಮುದ್ರ, ಮೇರುಗಳಿಗೆ ಅಭಿಮಾನಿಗಳಾದ ಅವರ ಅಂಶಭೂತರಾದ ಸೂರ್ಯಾದಿಗಳಿಗೆ ಅಭೇದವಿದ್ದಪ್ರಯುಕ್ತವೂ, ಮತ್ತು ಖದ್ಯೋತ, ಮೂತ್ರ, ವಿಷ್ಠಾದಿಗಳಿಗೆ ಅಭಿಮಾನಿಗಳಾದ ಅಪಭ್ರಷ್ಟ ದೇವತೆಗಳಿಗಾದರೂ ತೇಜೋ ಜಲ ಪೃಥ್ವ್ಯಭಿಮಾನಿ ದೇವತೆಗಳಿಂದ ಭೇದವಿದ್ದಪ್ರಯುಕ್ತವೂ ಅದನ್ನು ಅಪೇಕ್ಷಿಸಿಯೇ ಅದನ್ನು ದೃಷ್ಟಾಂತೀಕರಿಸಿದ್ದು. ಜಡವನ್ನು ವಿವಕ್ಷಿಸಿ ಅಲ್ಲ ॥ ೪೬ ॥

**ಪೀಠಿಕೆ ॥** ಹಾಗಾದರೆ ದೃಷ್ಟಾಂತಮಾತ್ರವು ನಿರ್ಣಾಯಕವಾಗದೆ ಇರುವುದರಿಂದ ಅಲ್ಲಿ ಹಾಗೆ ಇದ್ದರೂ ಜೀವರಿಗೂ ಮತ್ಸ್ಯಾದಿಗಳಿಗೂ ಸ್ವರೂಪಾಂಶತ್ವವು ಅಭೇದವೂ ಏಕೆ ಆಗಲಾರದು. ಎಂದರೆ ಸ್ಮೃತಿಗಳಿಂದ ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಸ್ಮರಂತಿ ಚ ಓಂ ॥ ೪೭ ॥

**ಸೂತ್ರಾರ್ಥ ॥** ದೃಷ್ಟಾಂತಮಾತ್ರದಿಂದ ಇದನ್ನು ಹೇಳುವುದಲ್ಲ. ಮತ್ತೆ ಸ್ಮೃತಿಕರ್ತೃಗಳೂ ಜೀವರಿಗೆ ಭಿನ್ನಾಂಶತ್ವವನ್ನೂ ಮತ್ಸ್ಯಾದಿಗಳಿಗೆ ಅಭಿನ್ನಾಂಶತ್ವವನ್ನೂ ಹೇಳುತ್ತಾರೆ.

**ಪೀಠಿಕೆ ॥** ಸೂತ್ರಕಾರರಿಗೆ ಅಭಿಪ್ರೇತಗಳಾದ ಸ್ಮೃತಿಗಳನ್ನು ಹೇಳುತ್ತಾರೆ—

**ಭಾಷ್ಯ ॥ (೧) ಏತೇ ಸ್ವಾಂಶಕಲಾಃ ಪುಂಸಃ ★ಕೃಷ್ಣಸ್ತು ಭಗವಾನ್ ಸ್ವಯಂ। (೨) ಇಂದ್ರಾರಿವ್ಯಾಕುಲಂ ಲೋಕಂ ಮೃಡಯಂತಿ ಯುಗೇಯುಗೇ** (ಭಾ.ಸ್ಕ.೧.ಅಧ್ಯಾ.೩. ಶ್ಲೋ.೨೮)। ॥ ೧೪ ॥

**ಭಾಷ್ಯಾರ್ಥ ॥** (೧) (ಸ ಏವ ಪ್ರಥಮಂ ದೇವಃ ಕೌಮಾರಂ ಸರ್ಗಮಾಸ್ಥಿತಃ) ಭಾ.ಸ್ಕ.೧.ಅ.೩. ಶ್ಲೋ.೬.) ಇತ್ಯಾದಿಗಳಿಂದ ಜನಿತಾ ವಿಷ್ಣುಯಶಸೋ ನಾಮ್ನಾ ಕಲ್ಕೀ ಜಗತ್ಪತಿಃ (ಶ್ಲೋ.೨೫.) (ಎನ್ನುವ ಪರ್ಯಂತ ಹೇಳಲ್ಪಟ್ಟ) ಈ ವರಾಹಾದ್ಯವತಾರಗಳು ಪರಮಪುರುಷನಾದ ಶ್ರೀನಾರಾಯಣನ ಸ್ವರೂಪಾಂಶರೂಪಗಳೇ ವಿಭಾಗಗಳು. ಭಿನ್ನಾಂಶಗಳಲ್ಲ. ಅಂದರೆ ಈ ವರಾಹಾದ್ಯವತಾರಗಳು ಸ್ವರೂಪಾಂಶ ರೂಪಗಳೆಂದು ಮಾತ್ರವಲ್ಲ. ಮತ್ತೆ ಸಾಕ್ಷಾತ್ ಷಡ್ಗುಣಸಂಪನ್ನನಾದ ಮೂಲರೂಪಿಯೇ (ಮೂಲರೂಪಿಯಾದ ನಾರಾಯಣನಿಂದ ಅತ್ಯಂತಾಭಿನ್ನಗಳೇ.) (೨) ಆದಿಸೃಷ್ಟಿಯಲ್ಲಿ ಅವತರಿಸಿರುವ ಈ ವರಾಹಾದ್ಯವತಾರಗಳೇ ದೈತ್ಯರಿಂದ ಪೀಡಿತರಾದ ಜನರನ್ನು ಪ್ರತಿಯುಗದಲ್ಲಿಯೂ ಪುನಃ ಅವತರಿಸಿ ರಕ್ಷಿಸುತ್ತಾನೆ. ಮತ್ತು ಸುಖಪಡಿಸುತ್ತಾನೆ.

---

★ ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ಇತ್ಯಾದಿಗಳಲ್ಲಿದ್ದಂತೆಯೇ ಕೃಷ್ಣಶಬ್ದಕ್ಕೆ ಮೂಲರೂಪಿಯಾದ ನಾರಾಯಣನು ಎಂದರ್ಥವು.

**ಪೀಠಿಕೆ ॥** ಹೀಗೆ ವರಾಹಾದ್ಯವತಾರಗಳು ಸ್ವರೂಪಾಂಶಗಳೆಂದು ಹೇಳಿ **ಋಷಯೋ ಮನವೋ ದೇವಾಃ ಮನುಪುತ್ರಾ ಮಹೌಜಸಃ । ಕಲಾಃ ಸರ್ವೇ ಹರೇರೇವ ಸಪ್ರಜಾತಪಚತಯಃ ಸ್ಮೃತಾಃ ॥** (ಭಾ.ಸ್ಕ.೧.ಅ.೩. ಶ್ಲೋ.೨೭) ಇತ್ಯಾದಿಗಳಿಂದ ಶ್ರೀಹರಿಯ ಅಂಶಭೂತರೆಂದು ಹೇಳಿದವರಿಗೆ ಭಿನ್ನಾಂಶತ್ವವನ್ನು ಹೇಳುತ್ತಾರೆ—

**ಭಾಷ್ಯ ॥ ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಂ । ಅದೃಷ್ಟಾಶ್ರುತವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ** (ಭಾ.ಸ್ಕ.೧.ಅ.೩ ಶ್ಲೋ.೩೨) **॥ ೧೫ ॥**

**ಭಾಷ್ಯಾರ್ಥ ॥** ಪರಮಪುರುಷನಿಂದಲೂ ಜಡದಿಂದಲೂ ಭಿನ್ನವಾದ, ಅಕಾರ್ಯವಾದ ಅಥವಾ ಸೂಕ್ಷ್ಮವಾದ ಅನಾದಿಕಾಲವನ್ನಾರಂಭಿಸಿ ಯಾವಾಗಲಾದರೂ ಚ್ಯುತಿಯಿಲ್ಲದಿರುವ ಸತ್ವ ಮೊದಲಾದ ಗುಣಗಳಿಂದ ಕೂಡಿರುವ ಯಾವುದು ಚೈತನ್ಯವೋ ಅದು ಜೀವವು. ಮತ್ತು ಪರಮಾತ್ಮ ಸ್ವರೂಪವನ್ನು ಶ್ರವಣ ಮನನ ಉಪಾಸನಾ ಸಾಕ್ಷಾತ್ಕಾರಗಳನ್ನು ಮಾಡದೆ ಇದ್ದುದರಿಂದ ಪುನಃಪುನಃ ಹುಟ್ಟತಕ್ಕವನು. (ಮರಣವನ್ನು ಹೊಂದತಕ್ಕವನು) ಯಾವ ಸಂಸಾರಿಯೋ ಆತನೇ ಜೀವನು. (ಹೀಗೆ ಭಾಗವತದಲ್ಲಿ ಹೇಳಿದೆ.) ತಥಾಚ ಏತೇ ಎನ್ನುವ ಆದ್ಯ ವಾಕ್ಯದಲ್ಲಿ ವರಾಹಾದ್ಯವತಾರಗಳಿಗೆ ಸ್ವರೂಪಾಂಶತ್ವವನ್ನು ಹೇಳಿ **ಅತಃ ಪರಂ** ಎನ್ನುವ ಎರಡನೇ ವಾಕ್ಯದಲ್ಲಿ **ಕಲಾಃ ಸರ್ವೇ ಹರೇರೇವ** ಎಂದು ಅಂಗತ್ವೇನ ಉಕ್ತರಾದ ಜೀವರಿಗೆ ಭೇದವನ್ನು ಹೇಳಿದ್ದರಿಂದ ಜೀವರಿಗೆ ಮತ್ಸ್ಯಾದಿಗಳಂತೆಯೇ ಸ್ವರೂಪಾಂಶತ್ವವಲ್ಲವೆಂದುಕ್ತವಾಯಿತು.

**ಪೀಠಿಕೆ ॥** ಮತ್ಸ್ಯಾದಿಗಳಿಗೆ ಸ್ವರೂಪಾಂಶತ್ವ ಜೀವರಿಗೆ ಅಸ್ವರೂಪಾಂಶತ್ವರೂಪ ಲಕ್ಷಣವಿದ್ದ ಪ್ರಯುಕ್ತವು ಅಂಶಿಯಿಂದ ಭೇದಾಭೇದಗಳು ಎನ್ನುವ ಅಭಿಪ್ರಾಯದಿಂದ ಅವರಿಗೆ ಲಕ್ಷಣವನ್ನು ಸ್ಮೃತಿಯಿಂದ ಹೇಳುತ್ತಾರೆ—

**ಭಾಷ್ಯ ॥ ಸ್ವಾಂಶಶ್ಚಾಥೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೇ । ಅಂಶಿನೋ ಯತ್ತು ಸಾಮರ್ಥ್ಯಂ ಯತ್ ಸ್ವರೂಪಂ ಯಥಾ ಸ್ಥಿತಿಃ । ತದೇವ ನಾಣುಮಾತ್ರೋಽಪಿ ಭೇದಃ ಸ್ವಾಂಶಾಂಶಿನೋಃ ಕ್ವಚಿತ್ । ವಿಭಿನ್ನಾಂಶೋಽಲ್ಪಶಕ್ತಿಃ ಸ್ಯಾತ್ಕಿಂಚಿತ್ಸಾದೃಶ್ಯಮಾತ್ರಯುಕ್॥ ಇತಿ ವಾರಾಹೇ ॥ ೧೬ ॥**

**ಭಾಷ್ಯಾರ್ಥ ॥** ಸ್ವರೂಪಾಂಶವು ಅಥವಾ ಭಿನ್ನಾಂಶವು ಹೀಗೆ ಅಂಶವು ಎರಡು ವಿಧವಾಗಿ ಅಂಗೀಕೃತವಾಗುತ್ತದೆ. ಅಂಶಿಗೆ ಯಾವುದು ಜಗತ್ಸೃಷ್ಟ್ಯಾದಿರೂಪವಾದ ಸಾಮರ್ಥ್ಯವೋ, ಯಾವುದು ಜ್ಞಾನಾನಂದಾದಿ ಸ್ವರೂಪವೋ, ಸರ್ವೋತ್ತಮತ್ವಾದಿರೂಪವಾದ ಯಾವುದು ಸ್ಥಿತಿಯೋ, ಅಥವಾ ದೇಶಕಾಲಗುಣಗಳಿಂದ ವ್ಯಾಪ್ತವಾಗಿರುವಿಕೆಯೋ, (ಅದೇ ಸ್ವರೂಪಾಂಶಕ್ಕೂ ಆಗುತ್ತದೆ. ಆದರಿಂದ ಭಿನ್ನವಾದುದು ಅಲ್ಲ ಏಕೆಂದರೆ ಸ್ವರೂಪಾಂಶಕ್ಕೂ ಅಂಶಿಗೂ ಯಾವ ಕಾಲದಲ್ಲಿಯೂ ಅತ್ಯಲ್ಪವಾದ (ಅಂದರೆ ಅಭೇದಸಹಿತವಾದ ಭೇದವೂ ಇಲ್ಲ (ವಿಭಿನ್ನಾಂಶದ ಲಕ್ಷಣವನ್ನು ಹೇಳುತ್ತಾರೆ—) ಅಲ್ಪಶಕ್ತಿಯುಳ್ಳದ್ದು ವಿಭಿನ್ನಾಂಶವು. (ಅಲ್ಪಶಕ್ತಿಯು ಇರುವುದಾದರೆ ಅಂಶತ್ವವೂ ಹೇಗೆಂದರೆ—)

ಅಲ್ಪವಾದ ಜ್ಞಾನಾನಂದಾದಿಮತ್ವದಿಂದ, ಅಥವಾ ಚಿತ್ತ್ವಾದಿರೂಪದಿಂದ ಕಿಂಚಿತ್ ಸಾದೃಶಮಾತ್ರ ಯುಕ್ತವಾದುದು. ಮತ್ತೂ ಅಂಶಿಶಬ್ದ ಮುಖ್ಯವಾಚ್ಯರಾದ ಮತ್ಸ್ಯಾದಿಗಳಿಂದ ಮತ್ಸ್ಯಾದಿಗಳ ಸತ್ತಾದಿಂದಲೇ ಸತ್ತಾವತ್ವರೂಪವಾದ ಕಿಂಚಿತ್ಸಾದೃಶ್ಯವನ್ನು ಹೊಂದಿರುತ್ತದೆ, ಎಂದು ವಾರಾಹದಲ್ಲಿದೆ. ಮಾತ್ರಶಬ್ದದಿಂದ ಜೀವನಿಗೆ ಪರಮಾತ್ಮನಿಂದ ಸರ್ವಪ್ರಕಾರದಿಂದ ಸಾದೃಶ್ಯವಾಗಲೀ ಅಭೇದವಾಗಲೀ ಭೇದಾಭೇದಗಳಾಗಲೀ ನಿರಸ್ತಗಳಾದವು.

ಪೀಠಿಕೆ ॥ ಈ ಸ್ವರೂಪಾಂಶತ್ವ ಲಕ್ಷಣವು ಕೃಷ್ಣಾದ್ಯವತಾರಗಳಲ್ಲಿದೆ ಎಂದು ಸ್ಮೃತಿಯಿಂದ ಹೇಳುತ್ತಾರೆ—

**ಭಾಷ್ಯ ॥ ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ (ಗೀ.೧೧.೪೩.)। ಇತಿ ಚ (ಇತ್ಯಾದಿ)॥ ॥ ४೭ ॥ ॥ ೧೭ ॥**

ಭಾಷ್ಯಾರ್ಥ ॥ ನಿನಗೆ ಸಮಾನಿಕನು ಮತ್ತೊಬ್ಬನಿಲ್ಲ, ಅಧಿಕನು ಹೇಗೆ ಆದಾನು. (ಶ್ರೀಕೃಷ್ಣನನ್ನು ಕುರಿತು ಅರ್ಜುನನ ವಾಕ್ಯವು) (ನ ಗುರುರ್ನ ಚ ದೇವೋಽಸ್ತಿ ರಾಮದೇವಸ್ಯ ಕುತ್ರಚಿತ್ ಇತ್ಯಾದಿ ಸ್ಮೃತ್ಯಂತರಗಳನ್ನು ಇಟ್ಟುಕೊಳ್ಳಬೇಕು.) ಜೀವರಲ್ಲಿ ಅಲ್ಪಶಕ್ತ್ಯಾದಿಗಳು ವಿಭಿನ್ನಾಂಶಕ್ಕೆ ಲಕ್ಷಣವೆಂದು ಅನುಭವಸಿದ್ಧವು.) ॥ ४೭ ॥

ಪೀಠಿಕೆ ॥ ಯುಕ್ತ್ಯಂತರದಿಂದ ಜೀವರಿಗೂ ಮತ್ಸ್ಯಾದಿಗಳಿಗೂ ಏಕವಿಧತ್ವವನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನುಜ್ಞಾಪರಿಹಾರೌ ದೇಹಸಂಬಂಧಾಜ್ಜ್ಯೋತಿರಾದಿವತ್ ಓಂ ॥ ४೮ ॥

**ಭಾಷ್ಯ ॥ ಪರಾನುಜ್ಞಯಾ ಪ್ರವೃತ್ತಿಃ ಪರತೋ ಬಂಧನಿವೃತ್ತಿಶ್ಚ ಜೀವಸ್ಯ ಪ್ರತೀಯ(ಯೇ)-ತೇ । ಅಂಶತ್ವೇಽಪಿ ದೇಹಸಂಬಂದಾತ್ ॥ ೧೮ ॥**

ಭಾಷ್ಯಾರ್ಥ ॥ ಪರಮಾತ್ಮನ ಪ್ರೇರಣೆಯಿಂದಲೇ ಪ್ರವೃತ್ತಿಯು, ಪರಮಾತ್ಮನ ಪ್ರಸಾದದಿಂದಲೇ ಬಂಧನಿವೃತ್ತಿಯೂ ಜೀವನಿಗೆ ತೋರುತ್ತದೆ. ಆದಕಾರಣ ಜೀವರಿಗೂ ಮತ್ಸ್ಯಾದಿಗಳಿಗೂ ಅಂಶತ್ವವು ಇರುವುದಾದರೂ ಏಕವಿಧತ್ವವು ಇಲ್ಲ. ಜ್ಯೋತಿರಾದಿಗಳಂತೆಯೇ. (ಯಾವುದರಿಂದ ತೋರುತ್ತದೆ ಎಂದರೆ) ತನ್ನ ಅಂಶಿಕರ್ಮದಿಂದ ಅನಿರ್ಮಿತವಾದ ದೇಹಸಂಬಂಧವಿದ್ದುದರಿಂದ (ಜೀವನಿಗೆ ಅಂಸ್ಯಧೀನವಾದ ಪ್ರವೃತ್ತ್ಯಾದಿಮತ್ವವು ಅನುಮಿತವಾಗುತ್ತದೆ.)

ಪೀಠಿಕೆ ॥ ಜೀವನಿಗೆ ಶ್ರೀಹರಿಯ ಪ್ರೇರಣೆಯಿಂದಲೇ ಪ್ರವೃತ್ತಿಯು, ಶ್ರೀಹರಿಯ ಪ್ರಸಾದದಿಂದಲೇ ಬಂಧನಿವೃತ್ತಿಯು ಎನ್ನುವಲ್ಲಿ ಕ್ರಮದಿಂದ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ (೧) ಯ ಆತ್ಮಾನಮಂತರೋ ಯಮಯತಿ (ಮಾಧ್ಯಂದಿನಶಾಖಾ)। (೨) ತಮೇವಂ ವಿದ್ವಾನ್ (ಅಮೃತ ಇಹಭವತಿ) (ತೈ.ಆ.೩.೧೨.)। ಇತ್ಯಾದಿನಾ । ನ ತು ಪರಸ್ಯ ॥ ೧೯ ॥**

ಭಾಷ್ಯಾರ್ಥ ॥ (೧) [೧]ಯ ಆತ್ಮಾನಂ ಇತ್ಯಾದಿಶ್ರುತಿಗಳಿಂದ (ಜೀವನಿಗೆ ಶ್ರೀಹರಿಯಿಂದಲೇ ಪ್ರವೃತ್ತ್ಯಾದಿಗಳೆಂದು ತೋರುತ್ತವೆ.) (೨) (ಮತ್ಸ್ಯಾದಿಗಳಿಗೂ ಪ್ರವೃತ್ತಿ ಮೋಕ್ಷಗಳು ಈಶ್ವರನ ಅಧೀನಗಳಾಗಿರುವುದರಿಂದ ಜೀವಸಾಮ್ಯವು ಏಕೆ ಇಲ್ಲ ಎಂದರೆ) ಮತ್ಸ್ಯಾದಿಗಳಿಗಾದರೂ ಪರಮಾತ್ಮಪ್ರೇರಣೆಯಿಂದ ಪ್ರವೃತ್ತಿಯೂ ಪರಮಾತ್ಮಪ್ರಸಾದದಿಂದ ಬಂಧನಿವೃತ್ತಿಯೂ ಅಲ್ಲ.

ಪೀಠಿಕೆ ॥ ಅದು ಹೇಗೆಂದರೆ—

**ಭಾಷ್ಯ ॥ ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನೋನಿರುದ್ಧೋಽಹಂ ಮತ್ಸ್ಯಃ ಕೂರ್ಮೋವರಾಹೋ ನಾರಸಿಂಹೋ ವಾಮನೋ ರಾಮೋ ರಾಮಃ ಕೃಷ್ಣೋ ಬುದ್ಧಃ ಕಲ್ಕಿರಹಂ ಶತಧಾಽಹಂ ಸಹಸ್ರಧಾಽಹಮಮಿತೋಽಹಮನಂತೋಽಹಂ ನೈವೈತೇ ಜಾಯಂತೇ ನ ಮ್ರಿಯಂತೇ ನೈಷಾಮಜ್ಞಾನ ಬಂಧೋ ನ ಮುಕ್ತಿಃ ಸರ್ವ ಏವ ಹ್ಯೇತೇ ಪೂರ್ಣಾ ಅಜರಾ ಅಮೃತಾಃ ಪರಮಾಃ ಪರಾನಂದಾಃ । ಇತಿ (ಹಿ) ಚತುರ್ವೇದಶಿಖಾಯಾಂ ॥ ೨೦ ॥**

ಭಾಷ್ಯಾರ್ಥ ॥ ನಾನು ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂದು ನಾಲ್ಕು ಮೂರ್ತಿಯುಳ್ಳವನು. ಮತ್ಸ್ಯ ಕೂರ್ಮ ನರಸಿಂಹ ವಾಮನ ಪರಶುರಾಮ ದಾಶರಥಿರಾಮ ಶ್ರೀಕೃಷ್ಣ ಬುದ್ಧ ಕಲ್ಕಿ ಎಂದು ಹತ್ತು ಮೂರ್ತಿಯುಳ್ಳವನು, ನಾನು ನಾರಾಯಣ ನರ ಶೌರ್ಯಾದಿ ಶತರೂಪಗಳುಳ್ಳವನು. ವಿಶ್ವಾದಿ ಸಹಸ್ರರೂಪಗಳುಳ್ಳವನು, ಪರಾದಿ ಬಹುರೂಪಗಳುಳ್ಳವನು, ಅಜಿತಾದಿ ಅನಂತರೂಪಗಳುಳ್ಳವನು. ಈ ವಾಸುದೇವಾದಿಗಳು ಹುಟ್ಟುವುದೇ ಇಲ್ಲ, ಮರಣವನ್ನು ಹೊಂದುವುದೇ ಇಲ್ಲ. ಈ ವಾಸುದೇವಾದಿಗಳಿಗೆ ಶ್ರೀಹರಿಯ ಅನುಜ್ಞೆಯಿಂದ ಪ್ರವೃತ್ತಿಯು ಅಲ್ಲ. ಸಂಸಾರಬಂಧವೂ ಇಲ್ಲ. ಬಂಧದಿಂದ ಮುಕ್ತಿಯೂ ಇಲ್ಲ. ಈ ರೂಪಗಳೆಲ್ಲವೂ ಪೂರ್ಣಗಳು. ಜರಾ ಇಲ್ಲದಿದ್ದವುಗಳು ಮರಣವಿಲ್ಲದವುಗಳು. ಸರ್ವೋತ್ತಮಗಳು. ಪೂರ್ಣಾನಂದಗಳು ಎಂದು ಚತುರ್ವೇದಶಿಖಾದಲ್ಲಿ ಪರಮಾತ್ಮನ ಪ್ರಸಾದದಿಂದ ಮತ್ಸ್ಯಾದಿಗಳಿಗೆ ಅನುಜ್ಞಾಪರಿಹಾರಗಳು ಇಲ್ಲವೆಂದು ಉಕ್ತವಾಯಿತು. (ಇದು ವಿಷ್ಣುವಿನ ವಾಕ್ಯವು.)

ಪೀಠಿಕೆ ॥ ಜೀವನು ಅಂಶ್ಯಧೀನ ಪ್ರವೃತ್ತಿಯುಳ್ಳವನು ದೇಹಸಂಬಂಧವಿದ್ದುದರಿಂದ ಎಂದು ಯಾವುದು ಉಕ್ತವಾಗಿಯದೋ. ಅದು ವ್ಯಾಪ್ತಿಯಿಲ್ಲದಿರುವುದರಿಂದ ಕೂಡುವುದಿಲ್ಲ. ಎಂದರೆ—

**ಭಾಷ್ಯ ॥ ಯುಜ್ಯತೇ ಚ ಜ್ಯೋತಿರಾದಿವತ್ । ಯಥಾಽಽದಿತ್ಯೋ ವಿಯದ್ಗತಸ್ತತ್ರಕಾಶಶ್ಚೈಕ ಪ್ರಕಾರಃ ॥ ೨೧ ॥**

ಭಾಷ್ಯಾರ್ಥ ॥ (ಈ ಸಾಧನವು) ಜ್ಯೋತಿರಾದಿಗಳಂತೆಯೇ ಕೂಡುತ್ತದೆ. ಹೇಗೆ ಅಂತರಿಕ್ಷ ಲೋಕದಲ್ಲಿರತಕ್ಕ ಸೂರ್ಯಮಂಡಲಾಭಿಮಾನಿಯಾದ ಅಂಶಿಯಾದ ಸೂರ್ಯನೂ ಸೂರ್ಯ

(೧) ಯ ಆತ್ಮಾನಂ ಎನ್ನುವುದಕ್ಕೆ ಕರ್ತೃತ್ವಾಧಿಕರಣ (೨) ತಮೇವಂ ಎನ್ನುವುದು ಜಿಜ್ಞಾಸಾಧಿಕರಣ ವ್ಯಾಖ್ಯಾತಗಳಾಗಿವೆ.

ಪ್ರಕಾಶಾಭಿಮಾನಿಯಾದ ಸೂರ್ಯಾಂಶವೂ ಕೂಡ ಏಕಪ್ರಕಾರವಾಗಿಯದೋ, ಹಾಗೆಯೇ ಮತ್ಸ್ಯಾದಿಗಳೂ ಏಕಪ್ರಕಾರಗಳಾದವುಗಳು. ತಥಾಚ ಮತ್ಸ್ಯಾದಿಃ ಸ್ವಾಂಶ್ಯಧೀನಪ್ರವೃತ್ತಿರ್ನ ಭವತಿ ಸ್ವಾಂಶಿಕರ್ಮಾನಿರ್ಮಿತದೇಹಾ ಸಂಬಂಧಿತ್ವಾತ್ ವಿಯದ್ಗತಪ್ರಕಾಶಾದ್ಯಭಿಮಾನಿವತ್ ಎನ್ನುವ ಪ್ರಯೋಗವು ಉಕ್ತವಾಯಿತು.

**ಭಾಷ್ಯ ॥ ಶುಕ್ಲಂ ಕೃಷ್ಣಂ ಕನೀನಿಕಾ (ಐ. ಆ. ೨. ೧. ೫.)। ಇತಿ॥ ತದಂಶಸ್ಯಾಪ್ಯಕ್ಷ್ಣೋ ದೇಹಸಂಬಂಧಾನ್ನತಾದೃಶೀ ಶಕ್ತಿಃ। ತದನುಗ್ರಾಹ್ಯತ್ವಂ ತೇನೈವಾವೃತಿಪರಿಹಾರಶ್ಚ ॥ ೨೨ ॥**

ಭಾಷ್ಯಾರ್ಥ ॥ (ತ್ರಿವೃದಿವ ವೈ ಚಕ್ಷುಃ ಎನ್ನುವ ಬೃಹದಾರಣ್ಯಕ ಶ್ರುತಿಯಲ್ಲಿ ಅಕ್ಷಿಗೆ ಶುಕ್ಲಾದಿ ಭೇದದಿಂದ ತ್ರೈವಿಧ್ಯವನ್ನು ಹೇಳಿದ್ದರಿಂದ ಸೂರ್ಯಮಂಡಲಕ್ಕೂ ಅದರ ಸಾಮ್ಯದಿಂದ ಸೂರ್ಯಾಂಶತ್ವವು ಸಿದ್ಧವಾಗಿ ಚಕ್ಷುರಭಿಮಾನಿಗೆ ಸೂರ್ಯಮಂಡಲಾಭಿಮಾನ್ಯಂಶತ್ವವು ಸಿದ್ಧಿಸುತ್ತದೆ. ಅಂತೂ ಈ ಶ್ರುತಿಯ ಬಲದಿಂದ ಸೂರ್ಯಮಂಡಲಾಭಿಮಾನಿಯ ಅಂಶಭೂತವಾದಾಗ್ಯೂ ಅಕ್ಷಿಗೆ ಅಮುಖ್ಯವಾಗಿ ಅಭಿಮಾನಿಯಾದ ಅಪಭ್ರಷ್ಟದೇವತೆಗೆ ದೇಹಸಂಬಂಧದಿಂದ ಅಂದರೆ ದೇಹದ ದೋಷದಿಂದ ಸಂಬಂಧ್ದವಾದ ಪ್ರಯುಕ್ತ ಅಂಶಿಯಾದ ಸೂರ್ಯನ ಶಕ್ತಿಗೆ ಸದೃಶವಾದ ಶಕ್ತಿಯು ಇಲ್ಲ. ಮತ್ತೆ ತದಧೀನ ಪ್ರವೃತ್ತಿತ್ವವೂ ಅದರಿಂದಲೇ ಆವರಣವಾದ ತಮಸ್ಸಿಗೆ ಪರಿಹಾರವೂ ಆಗುತ್ತದೆ. ಹಾಗೆಯೇ ಜೀವರಿಗೂ ದೇಹಸಂಬಂಧದಿಂದ ಮತ್ಸ್ಯಾದಿಗಳಂತೆ ಶಕ್ತಿಯಿಲ್ಲ. ಈಶ್ವರಾನುಗ್ರಾಹ್ಯತ್ವವು ಈಶ್ವರನಿಂದಲೇ ಬಂಧನಿವೃತ್ತಿಯೂ ಆಗುವುದು.

ಪೀಠಿಕೆ ॥ ಸೂತ್ರದಲ್ಲಿದ್ದ ಆದಿಶಬ್ದದಿಂದ ಗೃಹೀತವಾದ ದೃಷ್ಟಾಂತವನ್ನು ವಿವರಿಸುತ್ತಾರೆ—

**ಭಾಷ್ಯ ॥ ಯಥಾ ಬಾಹ್ಯಾಮೃತಜಲಸ್ಯಾಮೃತಜಲಸ್ಯ ಚೈಕತ್ವಂ ತದಂಶಸ್ಯಾಪಿ ಶ್ಲೇಷ್ಮಣ-ಸ್ತದನುಗ್ರಾಹ್ಯತ್ವಂ ತೇನೈವ ವಿರೋಧಿನಿವೃತ್ತಿಶ್ಚ ॥ ೨೩ ॥**

ಭಾಷ್ಯಾರ್ಥ ॥ ಹೇಗೆ ಬ್ರಹ್ಮಾಂಡದಿಂದ ಬಾಹ್ಯವಾದ ಶುದ್ಧ ಜಲಾಭಿಮಾನಿಯಾದ ಅಂಶಿಯಾದ ವರುಣನಿಗೂ, ವರುಣನ ಅಂಶಭೂತವಾದ ಬ್ರಹ್ಮಾಂಡದ ಒಳಗೆ ಶುದ್ಧೋದಕವಾದ ಏಳನೇ ಸಮುದ್ರಾಭಿಮಾನಿಗೂ ಏಕಪ್ರಕಾರತ್ವವೋ, ಏಕವಿಧವಾದ ಶಕ್ತಿಯಿಂದ ಯುಕ್ತತ್ವವಿದೆಯೋ, (ಅಂದರೆ ಅನುಜ್ಞಾದಿರಾಹಿತ್ಯವಿದೆಯೋ.) ಬಾಹ್ಯಜಲಾಭಿಮಾನಿಯಾದ ವರುಣನ ಭಿನ್ನಾಂಶಭೂತವಾದ ಶ್ಲೇಷ್ಮ (ಕಫ)ಕ್ಕೆ ಅಭಿಮಾನಿಯಾದ ಅಪಭ್ರಷ್ಟದೇವತೆಗಳಿಗೆ ಆ ವರುಣನಿಂದಲೇ ಅನುಗ್ರಾಹ್ಯತ್ವವಿದೆಯೋ, ಆತನಿಂದಲೇ ಕಫ ವಿರೋಧಿಯಾದ ಪಿತ್ತಧಾತುವಿಗೆ ನಿವೃತ್ತಿಯೂ ಆಗುತ್ತದೋ, (ಕಫವು ಪಿತ್ತಧಾತುವಿಗೆ ವಿರೋಧಿಯು. ಪಿತ್ತವು ಕಫಕ್ಕೆ ವಿರೋಧಿಯು.) ಹಾಗೆಯೇ ಜೀವದಲ್ಲಿಯೂ. ತಥಾಚ ಅಪಭ್ರಷ್ಟದೇವತೆಗಳಲ್ಲಿ ದೇಹಸಂಬಂಧವಿದ್ದುದರಿಂದ ಅಂಶ್ಯಧೀನ ಪ್ರವೃತ್ತ್ಯಾದಿಗಳು ಇದ್ದುದರಿಂದ ಅದರಂತೆಯೇ ಜೀವನಲ್ಲಿಯೂ ಪರಮಾತ್ಮನ ಅನುಜ್ಞೆಯಿಂದಲೇ ಪ್ರವೃತ್ತ್ಯಾದಿಗಳೆಂದು ಸಾಧಿಸಿದ್ದು ಯುಕ್ತವು.

ಪೀಠಿಕೆ ॥ ಮತ್ಸ್ಯಾದಿಗಳಿಗೆ ಅಂಶ್ಯಧೀನ ಪ್ರವೃತ್ತ್ಯಾದಿಗಳು ಇಲ್ಲವೆಂದು ಹೇಳಿದ್ದು ಅಯುಕ್ತವು. ಅವುಗಳಿಗೂ ದೇಹಸಂಬಂಧವಿದೆ ಎಂದರೆ—

**ಭಾಷ್ಯ ॥ ಮೋಕ್ಷಧರ್ಮೇ ಚ । ಯತ್ಕಿಂಚಿದಿಹ ಲೋಕೇಽಸ್ಮಿನ್ ದೇಹಬದ್ಧ ವಿಶಾಂಪತೇ। ಸರ್ವಂ ಪಂಚಭಿರಾವಿಷ್ಟಂ ಭೂತೈರೀಶ್ವರಬುದ್ಧಿಜೈಃ ॥ ಈಶ್ವರೋ ಹಿ ಮಹದ್ಭೂತಂ ಪ್ರಭುರ್ನಾರಾಯಣೋ ವಿರಾಟ್ । ಭೂತಾಂತರಾತ್ಮಾ ವಿಜ್ಞೇಯಃ ಸಗುಣೋ-ನಿರ್ಗುಣೋಽಪಿ ಚ ॥ ಭೂತಪ್ರಲಯಮವ್ಯಕ್ತಂ ಶುಶ್ರೂಷುರ್ನೃಪಸತ್ತಮ ॥ ಇತಿ ॥ ॥ ೨೪ ॥**

ಭಾಷ್ಯಾರ್ಥ ॥ ಪ್ರಜೆಗಳಿಗೆ ಅಧಿಪತಿಯಾದ ಧರ್ಮರಾಜನೇ, ಈ ಲೋಕದಲ್ಲಿ ಚೇತನವರ್ಗದಲ್ಲಿ ಯಾವ ಜೀವಸಮುದಾಯವು ದೇಹಸಂಬಂಧವಾಗಿಯದೆಯೋ, ಅದೆಲ್ಲವೂ, ಈಶ್ವರನೇ ನಿಮಿತ್ತವಾಗಿ ಉಳ್ಳ ಪಂಚಭೂತಗಳಿಂದ ಸಂಬದ್ಧವಾಗಿದೆ. (ಈಶ್ವನಿಗಾದರೂ ಭೌತಿಕ ದೇಹಸಂಬಂಧವಿಲ್ಲವೆನ್ನುತ್ತಾರೆ.) ಈಶ್ವರನಾದರೂ ಸರ್ವಪೂಜ್ಯನು, ಅಥವಾ ಅಪರಿಚ್ಛಿನ್ನನು, ಸದಾ ನಿರ್ವಿಕಾರನಾಗಿ ಇರತಕ್ಕವನು. ಸರ್ವಸಮರ್ಥನು, ಮುಕ್ತರಿಗೆ ಆಶ್ರಯನು, ನಿತ್ಯದಲ್ಲಿಯೂ ಅಭಿವ್ಯಕ್ತಸ್ವರೂಪನು, ಸರ್ವಜೀವಾಂತರ್ಯಾಮಿಯು, ಮೋಕ್ಷವನ್ನು ಕೊಡತಕ್ಕವನು, ಸ್ವಾತಂತ್ರ್ಯಾದಿ ಗುಣೋಪೇತನು, ಸತ್ವಾದಿಗುಣಶೂನ್ಯನು. ರಾಜಶ್ರೇಷ್ಠನೇ ಪ್ರಾಣಿಗಳಿಗೆ ಲಯಾಶ್ರಯವಾದ ಅವ್ಯಕ್ತತತ್ವಾಭಿಮಾನಿನಿಯಾದ ರಮಾದೇವಿಯು ಆ ನಾರಾಯಣನಿಗೆ ಸೇವಾಮಾಡತಕ್ಕವಳು; ಹೀಗೆ ಮೋಕ್ಷಧರ್ಮದಲ್ಲಿ ಹೇಳಿದೆ.

ವಿಶೇಷಾಂಶ ॥ ತಥಾಚ ಶರೀರಿಗಳು ಭೌತಿಕಗಳಾದುದರಿಂದ ಭೂತಗಳು ಈಶ್ವರ ಜನ್ಯಗಳಾದುದರಿಂದ ಈಶ್ವರನು ಮಹಾಮಹಿಮೋಪೇತನಾದ ಪ್ರಯುಕ್ತ ಅಂತಹ ಈಶ್ವರಜನ್ಯಗಳಾದ ಭೂತಗಳು ದೇಹಸಂಬಂಧದಿಂದ ಸರ್ವೇಶ್ವರನನ್ನು ಸರ್ವಥಾ ಬಂಧಿಸಲಾರವು. ಆದಕಾರಣ ಮತ್ಸ್ಯಾದಿಗಳಿಗೆ ಭೌತಿಕ ದೇಹಸಂಬಂಧವಿಲ್ಲದಿರುವುದರಿಂದ ಆಕಾಶಗತ ಪ್ರಕಾಶಾದ್ಯಭಿಮಾನಿಗಳಂತೆ ಅಂಶ್ಯಧೀನ ಪ್ರವೃತ್ತ್ಯಾದ್ಯಭಾವವು ಯುಕ್ತವೇ ಆಗಿದೆ.

ಪೀಠಿಕೆ ॥ ಸೂತ್ರಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ವಾರಾಹೇ ಚ । ಅಂಶಾಶ್ಚ ದೇಹಯೋಗ್ಯತ್ವಾಜ್ಜೀವಾ ಬಂಧಾದಿಸಂಯುತಾಃ । ಅನುಗ್ರಾಹ್ಯಾಶ್ಚೇಶ್ವರೇಣ ನ ತು ಮತ್ಸ್ಯಾದಿಕೋ ಹರಿಃ ॥ ಅದೇಹಬಂಧಯೋಗ್ಯ-ತ್ವಾದ್ಯಥಾ ಸೂರ್ಯಪ್ರಭಾಽಕ್ಷಿಣೇ। ಯಥಾಽಮೃತಸಮುದ್ರಸ್ಯ ಶ್ಲೇಷ್ಮಾದೇಶ್ಚದ್ವಿರೂಪತಾ॥ ಅನುಗ್ರಾಹ್ಯತ್ವಮನ್ಯಸ್ಯ ತೇನೈವಾವೃತಿರೋಧನಂ ॥ ಇತಿ ॥ ೪೮ ॥ ॥ ೨೫ ॥**

ಭಾಷ್ಯಾರ್ಥ ॥ ಜೀವರೂ ಈಶ್ವರನ ಅಂಶರಾದಾಗ್ಯೂ ದೇಹಸಂಬಂಧಕ್ಕೆ ಯೋಗ್ಯರಾದುದರಿಂದ ಬಂಧಮೋಕ್ಷಗಳಿಂದ ಯುಕ್ತರಾಗಿರುತ್ತಾರೆ. ಈಶ್ವರಾಧೀನ ಪ್ರವೃತ್ತಿಯುಳ್ಳವರೂ ಆಗಿರುತ್ತಾರೆ. ಭೌತಿಕದೇಹ ಸಂಬಂಧಾಯೋಗ್ಯತ್ವವಿದ್ದುದರಿಂದ ಮತ್ಸ್ಯಾದಿರೂಪಿಯಾದ ಶ್ರೀಹರಿಯ ಸ್ವರೂಪಾಂಶ

ಗಳು ಬಂಧಾದಿಗಳಿಂದ ಯುಕ್ತಗಳಾಗುವುದಿಲ್ಲ (ಆದಕಾರಣ ಜೀವರಮಾತ್ರರಿಗೆ ಸಾಮ್ಯವಿಲ್ಲ) (ಆ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ.) ಪ್ರಭಾಭಿಮಾನಿಯಾದ ಸೂರ್ಯಾಂಶನೂ ಅಕ್ಷ್ಯಭಿಮಾನಿಯಾದ ಅಪಭ್ರಷ್ಟದೇವತೆಯೂ (ಏಕವಿಧವಾದ ಶಕ್ತಿಯುಳ್ಳವರಲ್ಲ) ಶುದ್ಧೋದಕ ಸಮುದ್ರಾಭಿಮಾನಿಗೂ ಶ್ಲೇಷ್ಮಾದ್ಯಭಿಮಾನಿಗೂ ಭಿನ್ನವಾದ ಪ್ರಕಾರವೋ, ಭಿನ್ನವಾದ ಅಕ್ಷಿಶ್ಲೇಷ್ಮಾದ್ಯಭಿಮಾನಿಯಾದ ಅಪಭ್ರಷ್ಟದೇವತೆಗೆ ಆ ಅಂಶಿಯಾದ ಸೂರ್ಯನಿಂದಲೇ ಅನುಗ್ರಹಿಸಿಕೊಳ್ಳಲ್ಪಡುವಿಕೆಯು (ಅಂದರೆ ಸೂರ್ಯಾಧೀನವಾದ ಪ್ರವೃತ್ತಿಯುಳ್ಳತನವು.) ಆ ಅಂಶಿಯಿಂದಲೇ ಆವರಣಭೂತವಾದ ತಮಸ್ಸು ಪಿತ್ತಾದಿಗಳ ನಿವೃತ್ತಿಯು ಆಗುತ್ತದೋ, ಹಾಗೆಯೇ ಪ್ರಕೃತದಲ್ಲಿಯೂ. ಹೀಗೆ ವರಾಹದಲ್ಲಿ (ಸೂತ್ರದಲ್ಲಿ ಹೇಳಲ್ಪಟ್ಟ ಪ್ರಮೇಯವು ಹೇಳಿದೆ.)

ಪೀಠಿಕೆ ॥ ಯುಕ್ತ್ಯಂತರದಿಂದ ಮತ್ಸ್ಯಾದಿಗಳಿಗೂ ಜೀವರಿಗೂ ಏಕಪ್ರಕಾರತ್ವವನ್ನು ನಿರಾಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಸಂತತೇಶ್ಚಾವ್ಯತಿಕರಃ ಓಂ ॥ ೪೯ ॥

**ಭಾಷ್ಯ ॥ ಅಪೂರ್ಣಶಕ್ತಿತ್ವಾಚ್ಚ ಜೀವಸ್ಯ ನ ಮತ್ಸ್ಯಾದಿಸಾಮ್ಯಂ ॥ ೨೬ ॥**

ಭಾಷ್ಯಾರ್ಥ ॥ ಜೀವರಿಗೆ ಸಮ್ಯಕ್ ಶಕ್ತಿಯಿಲ್ಲದಿರುವುದರಿಂದಲೂ (ಮತ್ಸ್ಯಾದಿಗಳಿಗಾದರೂ ಸಂಪೂರ್ಣ ಶಕ್ತಿಯಿದ್ದುದರಿಂದಲೂ) ಜೀವರಿಗೆ ಮತ್ಸ್ಯಾದಿಗಳಿಂದ ಸರ್ವಸಾಮ್ಯವಿಲ್ಲ ॥ ೪೯ ॥

ಪೀಠಿಕೆ ॥ ಮತ್ಸ್ಯಾದಿಗಳಿಗೆ ಪೂರ್ಣಶಕ್ತಿಯು, ಜೀವನಿಗೆ ಪೂರ್ಣಶಕ್ತಿಯಿಲ್ಲ ಎನ್ನುವುದು ಯಾವುದರಿಂದ ಸಿದ್ಧವಾಗುತ್ತದೆ ಎಂದರೆ—

**ಭಾಷ್ಯ ॥ ತಥಾ ಚ ಚತುರ್ವೇದಶಿಖಾಯಾಂ । ತಸ್ಯ ಹ ವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣೋ ರಾಮಃ ಕಪಿಲ ಇತಿ । ತಸ್ಯ ಹ ವಾ ಏತಸ್ಯ ಪಂಚ ರೂಪಾಣಿ ದಶ ರೂಪಾಣಿ ಶತರೂಪಾಣಿ ಸಹಸ್ರರೂಪಾಣ್ಯಮಿತರೂಪಾಣಿ ತಾನಿ ಹ ವಾ ಏತಾನಿ ಸರ್ವಾಣಿ ಪೂರ್ಣಾನಿ ಸರ್ವಾಣ್ಯನಂತಾನಿ ಸರ್ವಾಣ್ಯಸಮ್ಮಿತಾನಿ । ಅಥಾವರಾಃ ಸರ್ವ ಏವಾಪೂರ್ಣಾಃ ಸರ್ವ ಏವ ಬಧ್ಯಂತೇಽಥ ಮುಚ್ಯಂತೇ ಚ ಕೇಚನ । ಇತಿ ॥ ೪೯ ॥ ॥ ೨೭ ॥**

ಭಾಷ್ಯಾರ್ಥ ॥ ಪ್ರಸಿದ್ಧನಾದ ಸರ್ವೋತ್ತಮನಾದ ಶ್ರೀನಾರಾಯಣನಿಗೆ ಕೃಷ್ಣ ರಾಮ ಕಪಿಲ ಎಂದು ಮೂರು ರೂಪಗಳು. (ಅಂದರೆ ಇದೊಂದು ವ್ಯೂಹವು.) ಆ ಶ್ರೀಪರಮಾತ್ಮನಿಗೆ ನಾರಾಯಣಾದ್ಯ ನಿರುದ್ಧಾಂತ ಐದು ರೂಪಗಳು ವ್ಯೂಹವು. (ಸಮೂಹವು) ಮತ್ಸ್ಯಾದಿ ಹತ್ತು ರೂಪಗಳು ವ್ಯೂಹವು. ನಾರಾಯಣಾದ್ಯಷ್ಟೋತ್ತರ ಶತನಾಮವಾಚ್ಯಗಳು ವ್ಯೂಹವು. ವಿಶ್ವಾದಿ ಸಹಸ್ರರೂಪಗಳು ವ್ಯೂಹವು. ಅಜಿತಾದಿ ಅನಂತರೂಪಗಳು ವ್ಯೂಹವು. ಆ ಈ ಎಲ್ಲಾ ರೂಪಗಳೂ ಗುಣಪೂರ್ಣಗಳಾಗಿವೆ. ಎಲ್ಲಾ ರೂಪಗಳೂ ದೇಶಕಾಲಗಳಿಂದ ಅವಿನಾಶಿಗಳಾಗಿವೆ. ಎಲ್ಲಾ ರೂಪಗಳೂ ಸದೃಶ ವಸ್ತ್ವಂತರವಿಲ್ಲದವು ಗಳು. ಎಲ್ಲಾ ರೂಪಗಳೂ ಅಮಿತಗಳಾಗಿವೆ. ಇನ್ನು ಅವರರಾದ ಚೇತನರು ಹೇಳಲ್ಪಡುತ್ತಾರೆ. ಎಲ್ಲಾ

ಜೀವರೂ ದೇಶಕಾಲಗುಣಗಳಿಂದ ಅಪೂರ್ಣಶಕ್ತಿಯುಳ್ಳವರು. ಎಲ್ಲರೂ (ಪಂಚಭೂತಗಳಿಂದ) ಕಲ್ಪಿಸಿಕೊಳ್ಳಲ್ಪಡುತ್ತಾರೆ. ಮೋಕ್ಷಯೋಗ್ಯರು. ಪಂಚಭೂತಗಳಿಂದ ಮುಕ್ತರಾಗುತ್ತಾರೆ. ಹೀಗೆ ಚತುರ್ವೇದಶಿಖಾದಲ್ಲಿ ಹೇಳಿದೆ. ॥ ೪೯ ॥

ಪೀಠಿಕೆ ॥ ಯುಕ್ತ್ಯಂತರದಿಂದ ಈ ಅರ್ಥವನ್ನು ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆಭಾಸ ಏವ ಚ ಓಂ ॥ ೫೦ ॥

**ಭಾಷ್ಯ ॥ ರೂಪಂರೂಪಂ ಪ್ರತಿರೂಪೋ ಬಭೂವ (ಋ.೬.೪೭.)। ಇತಿ ಪ್ರತಿಬಿಂಬತ್ವಾಚ್ಚ ನ ಸಾಮ್ಯಂ ॥ ೨೮ ॥**

ಭಾಷ್ಯಾರ್ಥ ॥ (೧) ಜೀವನು ಪರಮಾತ್ಮನ ಅಧೀನವಾದ ಸತ್ತಾಪ್ರತೀತ್ಯಾದಿಮತ್ವರೂಪವಾದ ಪ್ರತಿಬಿಂಬತ್ವದಿಂದ ಮುಕ್ತನೇ ಆಗಿರುತ್ತಾನೆ. (೨) **ರೂಪಂ ರೂಪಂ ಪ್ರತೀರೂಪೋ ಬಭೂವ (ತದಸ್ಯ ರೂಪಂ ಪ್ರತಿಚಕ್ಷಣಾಯ)।** (ತ್ರಿವಿಧಜೀವಸಮೂದಾಯವು) ಪರಮೇಶ್ವರ ಬಿಂಬರೂಪವನ್ನು ಕುರಿತು ಪ್ರತಿಬಿಂಬವಾಗಿ ಇರುತ್ತದೆ. (ಆ ಬಿಂಬರೂಪವು ಪ್ರತಿಬಿಂಬನೆಂದು ಹೇಳಲ್ಪಟ್ಟ ಯೋಗ್ಯ ಜೀವನಿಗೆ ಮುಕ್ತಿಗಾಗಿ ಸಾಕ್ಷಾತ್ಕಾರವಿಷಯವಾಗುತ್ತದೆ. ಆ ಶ್ರೀಹರಿಯು ತನ್ನ ಸಾಮರ್ಥ್ಯಗಳಿಂದ ಅನಂತಜೀವರಿಗೆ ಬಿಂಬರೂಪನಾಗಿ ತಿಳಿಯಲ್ಪಡುತ್ತಾನೆ. ಶ್ರೀಹರಿಗೆ ಹರಿನಾಮಕಗಳಾದ ಅನಂತಾನಂತರೂಪಗಳು ವ್ಯೂಹಗಳಾಗಿವೆ.) ಈ ಶ್ರುತಿಯಿಂದ ಜೀವರಿಗೆ ಪ್ರತಿಬಿಂಬಾಂಶತ್ವವಿದ್ದುದರಿಂದ (ಮತ್ಸ್ಯಾದಿಗಳಿಗೆ ಪ್ರತಿಬಿಂಬಾಂಶತ್ವವಿಲ್ಲದಿರುವುದರಿಂದಲೂ ಅಂಶತ್ವವಿದ್ದರೂ ಜೀವರಿಗೆ ಮತ್ಸ್ಯಾದಿಗಳಿಂದ) ಸಾಮ್ಯವಿಲ್ಲ.

ಪೀಠಿಕೆ ॥ ಸೂತ್ರಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ವಾರಾಹೇ ಚ । ದ್ವಿರೂಪಾವಂಶಕೌ ತಸ್ಯ ಪರಮಸ್ಯ ಹರೇರ್ವಿಭೋಃ । ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ ॥ ಪ್ರತಿಬಿಂಬಾಂಶಕಾ ಜೀವಾಃ ಪ್ರಾದುರ್ಭಾವಾಃ ಪರೇ ಸ್ಮೃತಾಃ । ಪ್ರತಿಬಿಂಬೇಷ್ವಲ್ಪಸಾಮ್ಯಂ ಸ್ವರೂಪಾಣೀತರಾಣಿ ತು ॥ ಇತಿ ॥ ೨೯ ॥**

ಭಾಷ್ಯಾರ್ಥ ॥ ಸರ್ವೋತ್ತಮನಾದ ವಿಭುವಾದ ಶ್ರೀಹರಿಗೆ ಪ್ರತಿಬಿಂಬಾಂಶಕ ಸ್ವರೂಪಾಂಶಗಳೆಂದು ಎರಡು ಅಂಶಗಳು. ಜೀವರೆಲ್ಲರೂ ಪ್ರತಿಬಿಂಬಾಂಶಕರು. ಸ್ವರೂಪಾಂಶಗಳು ಮತ್ಸ್ಯಾದ್ಯವತಾರಗಳೆಂದು ಹೇಳಲ್ಪಟ್ಟಿವೆ. (ಜೀವರಿಗೆ ಪ್ರತಿಬಿಂಬಾಶತ್ವವು ಮತ್ಸ್ಯಾದಿಗಳಿಗಾದರೂ ಸ್ವರೂಪಾಂಶತ್ವವೆಂದು ಏಕೆ ಇಟ್ಟುಕೊಳ್ಳಬೇಕು. ಎಲ್ಲರಿಗೂ ಸ್ವರೂಪಾಂಶತ್ವವನ್ನೇ ಏಕೆ ಹೇಳಬಾರದೆಂದರೆ) ಪ್ರತಿಬಿಂಬಗಳಲ್ಲಿ ಅತ್ಯಲ್ಪವಾದ ಸಾಮ್ಯವೇ. ಮತ್ಸ್ಯಾದಿಪ್ರಾದುರ್ಭಾವರೂಪಗಳಾದರೂ ಸ್ವರೂಪಾಂಶರೂಪಗಳೇ. (ಆದಕಾರಣ) ಸರ್ವ ಸಾಮ್ಯಗಳಿಂದ ಕೂಡಿರುತ್ತವೆ ಎಂದು ವಾರಾಹಪುರಾಣದಲ್ಲಿ (ಸೂತ್ರಾರ್ಥವು ಉಕ್ತವಾಗಿದೆ.)

**ಪೀಠಿಕೆ** ॥ ಜೀವರಿಗೆ ಪರಮಾತ್ಮನ ಪ್ರತಿಬಿಂಬಾಂಶತ್ವವು ಯುಕ್ತವಲ್ಲ. ಜೀವಾತಿರಿಕ್ತ ಉಪಾಧಿಯು ಇಲ್ಲದಿರುವುದರಿಂದ, ಎಂದರೆ—

**ಭಾಷ್ಯ ॥ ಸೋಪಾಧಿರನುಪಾಧಿಶ್ಚ ಪ್ರತಿಬಿಂಬೋ ದ್ವಿಧೇಯತೇ । ಜೀವ ಈಶ(ಜೀವಃ ಪರ) ಸ್ಯಾನುಪಾಧಿರಿಂದ್ರಚಾಪೋ ಯಥಾ ರವೇಃ ॥ ಇತಿ ಪೈಂಗಿಶ್ರುತಿಃ ॥ ೩೦ ॥**

**ಭಾಷ್ಯಾರ್ಥ** ॥ ಪ್ರತಿಬಿಂಬವು ಸೋಪಾಧಿಯು ಅನುಪಾಧಿಯು ಎಂದು ಎರಡು ವಿಧವೆಂದು ತಿಳಿಯಲ್ಪಡುತ್ತದೆ. ವೃಷ್ಟಿಸೂಚಕವಾದ ಧನುಸ್ಸಿನ ಆಕಾರವಾದ ಇಂದ್ರಚಾಪವು ಬಿಂಬಾತಿರಿಕ್ತವಾದ ಉಪಾಧಿಯಿಲ್ಲದಿರುವುದರಿಂದ ಸೂರ್ಯನ ತೇಜಸ್ಸಿಗೆ ಹೇಗೆ ನಿರುಪಾಧಿ ಪ್ರತಿಬಿಂಬವೋ (ಆದುದರಿಂದಲೇ ಇಂದ್ರಚಾಪಕ್ಕೆ ಸೂರ್ಯನಿಂದ ಅತ್ಯಂತ ಸಾದೃಶ್ಯವಿಲ್ಲವೋ) ಹಾಗೆಯೇ ಜೀವನು ಶ್ರೀಹರಿಗೆ ಜೀವಸ್ವರೂಪಾತಿರಿಕ್ತವಾದ ಉಪಾಧಿಯಿಂದ ರಹಿತಪ್ರತಿಬಿಂಬನು. (ಇಲ್ಲಿ ದೃಷ್ಟಾಂತದಲ್ಲಿ ಬಿಂಬಾತಿರಿಕ್ತ ಉಪಾಧಿಯಿಲ್ಲದಿರುವುದು. ದಾರ್ಷ್ಟಾಂತಿಕದಲ್ಲಿ ಪ್ರತಿಬಿಂಬಾತಿರಿಕ್ತ ಉಪಾಧಿಯಿಲ್ಲ ದಿರುವುದು. ಅಂತೂ ಅತಿರಿಕ್ತ ಉಪಾಧ್ಯಭಾವವು ಉಭಯತ್ರ ಸಮವೇ ಆಗಿದೆ.)

**ವಿಶೇಷಾಂಶ** ॥ (೧) ಇಂದ್ರಚಾಪವು ಸೋಪಾಧಿಪ್ರತಿಬಿಂಬಕ್ಕೆ ಉದಾಹರಣವು. ಅದಕ್ಕೆ ಮೇಘಮಂಡಲವು ವಾ ಸೂರ್ಯತೇಜಸ್ಸು ಉಪಾಧಿಯು. ಅದೇವೇ ಉಪಾದಾನ ಕಾರಣವು. (೨) ಜೀವನು ನಿರುಪಾಧಿ ಪ್ರತಿಬಿಂಬಕ್ಕೆ ಉದಾಹರಣನು. ಹೀಗೆ ಯಥಾಶಬ್ದವನ್ನು ಆವೃತ್ತಿಮಾಡಿಕೊಂಡು ವಾಕ್ಯದ್ವಯವೂ ದೃಷ್ಟಾಂತ ಪರವಾದುದು ಎಂದು ಇಟ್ಟುಕೊಳ್ಳಬೇಕು.

**ಪೀಠಿಕೆ** ॥ ಜೀವನು ನಿರುಪಾಧಿಪ್ರತಿಬಿಂಬನು ಎನ್ನುವಲ್ಲಿ ದೃಷ್ಟಾಂತಾಂತರವನ್ನು ಹೇಳುತ್ತಾರೆ—

**ಭಾಷ್ಯ ॥ ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಂ (ಪ್ರ.೩.೩)। ಇತಿ ಚ ಶ್ರುತಿಃ ॥ ೫೦ ॥ ಅಧಿ. ೧೮ ॥ ॥ ೩೧ ॥**

**ಭಾಷ್ಯಾರ್ಥ** ॥ ಹೇಗೆ ದೇಹದ ನೆರಳು ದೇಹದಲ್ಲಿ ವ್ಯಾಪ್ತವಾಗಿದೆಯೋ, ದೇಹಾಧೀನನಾಗಿದೆಯೋ (ದೇಹದ ಪ್ರತಿರೂಪವಾಗಿದೆಯೋ) ಹಾಗೆಯೇ ಪ್ರತಿಬಿಂಬರೂಪವಾದ ಈ ಜೀವರ ಸಮುದಾಯವು ಪುರೋಷತ್ತಮನಾದ ವಿಷ್ಣುವಿನ ಅಧೀನವಾಗಿದೆ, ಎಂದೂ ಶ್ರುತಿಯು.

**ವಿಶೇಷಾಂಶ** ॥ ಇದೂ ಅನುಪಾಧಿಪ್ರತಿಬಿಂಬಕ್ಕೇನೇ ಉದಾಹರಣವು. ತಥಾಚ ಅತಿರಿಕ್ತ ಉಪಾಧಿ ಯಿಲ್ಲವಾದರೂ ಇಂದ್ರಚಾಪ ವಾಯ್ವಾದಿಗಳಂತೆ ಜೀವನಿಗೆ ಪ್ರತಿಬಿಂಬಾಂಶತ್ವವು ಯುಕ್ತವಾಗುತ್ತದೆ. (೧) **ಜೀವೋಪಾಧಿರ್ದ್ವಿಧಾ ಪ್ರೋಕ್ತಃ ಸ್ವರೂಪಂ ಬಾಹ್ಯ ಏವ ಚ । ಬಾಹ್ಯೋಪಾದಿರ್ಲಯಂ ಯಾತಿ ಮುಕ್ತಾವನ್ಯಸ್ಯ ತು ಸ್ಥಿತಿಃ ॥ ಸರ್ವೋಪಾಧಿವಿನಾಶೇ ತು ಪ್ರತಿಬಿಂಬಃ ಕಥಂ ಭವೇತ್ ॥** ಇತ್ಯಾದಿ ಪ್ರಮಾಣಾಂತರಗಳಿಂದ ಸೋಪಾಧಿಪ್ರತಿಬಿಂಬತ್ವವನ್ನು ವಿಧಿಸಿದ್ದರಿಂದ ವಿರೋಧವೆಂದು ಹೇಳಕೂಡದು. ಜೀವಪ್ರತಿಬಿಂಬತ್ವ ಸ್ವರೂಪೋಪಾಧಿಪ್ರಯೋಜನತ್ವವಿದ್ದರೂ ಬಾಹ್ಯೋಪಾಧಿ ಪ್ರಯೋಜ್ಯತ್ವವಿಲ್ಲ ಎನ್ನುವ ಅಭಿಪ್ರಾಯದಿಂದಲೇ ಇಲ್ಲಿ ಅನುಪಾಧಿತ್ವವನ್ನು ಹೇಳಿದ್ದು. (೨) ಹೀಗೆಯೇ **ಪ್ರಕಾಶಾದಿವತ್** ಇತ್ಯಾದಿ ಐದು ಸೂತ್ರಗಳಿಂದ ಜೀವರಿಗೆ ಈಶ್ವರಾಂಶತ್ವವಿದ್ದರೂ ಮತ್ಸ್ಯಾದಿಗಳಂತೆ

ಜೀವರೂ ದೇಶಕಾಲಗುಣಗಳಿಂದ ಅಪೂರ್ಣಶಕ್ತಿಯುಳ್ಳವರು. ಎಲ್ಲರೂ (ಪಂಚಭೂತಗಳಿಂದ) ಕಲ್ಪಿಸಿಕೊಳ್ಳಲ್ಪಡುತ್ತಾರೆ. ಮೋಕ್ಷಯೋಗ್ಯರು. ಪಂಚಭೂತಗಳಿಂದ ಮುಕ್ತರಾಗುತ್ತಾರೆ. ಹೀಗೆ ಚತುರ್ವೇದಶಿಖಾದಲ್ಲಿ ಹೇಳಿದೆ. ॥ ೪೯ ॥

**ಪೀಠಿಕೆ ॥** ಯುಕ್ತ್ಯಂತರದಿಂದ ಈ ಅರ್ಥವನ್ನು ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆಭಾಸ ಏವ ಚ ಓಂ ॥ ೫೦ ॥

**ಭಾಷ್ಯ ॥ ರೂಪಂರೂಪಂ ಪ್ರತಿರೂಪೋ ಬಭೂವ (ಋ.೬.೪೭.)। ಇತಿ ಪ್ರತಿಬಿಂಬತ್ವಾಚ್ಚ ನ ಸಾಮ್ಯಂ ॥ ೨೮ ॥**

**ಭಾಷ್ಯಾರ್ಥ ॥** (೧) ಜೀವನು ಪರಮಾತ್ಮನ ಅಧೀನವಾದ ಸತ್ತಾಪ್ರತೀತ್ಯಾದಿಮತ್ವರೂಪವಾದ ಪ್ರತಿಬಿಂಬತ್ವದಿಂದ ಮುಕ್ತನೇ ಆಗಿರುತ್ತಾನೆ. (೨) **ರೂಪಂ ರೂಪಂ ಪ್ರತೀರೂಪೋ ಬಭೂವ (ತದಸ್ಯ ರೂಪಂ ಪ್ರತಿಚಕ್ಷಣಾಯ)**। (ತ್ರಿವಿಧಜೀವಸಮೂದಾಯವು) ಪರಮೇಶ್ವರ ಬಿಂಬರೂಪವನ್ನು ಕುರಿತು ಪ್ರತಿಬಿಂಬವಾಗಿ ಇರುತ್ತದೆ. (ಆ ಬಿಂಬರೂಪವು ಪ್ರತಿಬಿಂಬನೆಂದು ಹೇಳಲ್ಪಟ್ಟ ಯೋಗ್ಯ ಜೀವನಿಗೆ ಮುಕ್ತಿಗಾಗಿ ಸಾಕ್ಷಾತ್ಕಾರವಿಷಯವಾಗುತ್ತದೆ. ಆ ಶ್ರೀಹರಿಯು ತನ್ನ ಸಾಮರ್ಥ್ಯಗಳಿಂದ ಅನಂತಜೀವರಿಗೆ ಬಿಂಬರೂಪನಾಗಿ ತಿಳಿಯಲ್ಪಡುತ್ತಾನೆ. ಶ್ರೀಹರಿಗೆ ಪರಿನಾಮಕಗಳಾದ ಅನಂತಾನಂತರೂಪಗಳು ವ್ಯೂಹಗಳಾಗಿವೆ.) ಈ ಶ್ರುತಿಯಿಂದ ಜೀವರಿಗೆ ಪ್ರತಿಬಿಂಬಾಂಶತ್ವವಿದ್ದುದರಿಂದ (ಮತ್ಸ್ಯಾದಿಗಳಿಗೆ ಪ್ರತಿಬಿಂಬಾಂಶತ್ವವಿಲ್ಲದಿರುವುದರಿಂದಲೂ ಅಂಶತ್ವವಿದ್ದರೂ ಜೀವರಿಗೆ ಮತ್ಸ್ಯಾದಿಗಳಿಂದ) ಸಾಮ್ಯವಿಲ್ಲ.

**ಪೀಠಿಕೆ ॥** ಸೂತ್ರಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ವಾರಾಹೇ ಚ । ದ್ವಿರೂಪಾವಂಶಕೌ ತಸ್ಯ ಪರಮಸ್ಯ ಹರೇರ್ವಿಭೋಃ । ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ ॥ ಪ್ರತಿಬಿಂಬಾಂಶಕಾ ಜೀವಾಃ ಪ್ರಾದುರ್ಭಾವಾಃ ಪರೇ ಸ್ಮೃತಾಃ । ಪ್ರತಿಬಿಂಬೇಷ್ವಲ್ಪಸಾಮ್ಯಂ ಸ್ವರೂಪಾಣೇತರಾಣಿ ತು ॥ ಇತಿ ॥ ೨೯ ॥**

**ಭಾಷ್ಯಾರ್ಥ ॥** ಸರ್ವೋತ್ತಮನಾದ ವಿಭುವಾದ ಶ್ರೀಹರಿಗೆ ಪ್ರತಿಬಿಂಬಾಂಶಕ ಸ್ವರೂಪಾಂಶಗಳೆಂದು ಎರಡು ಅಂಶಗಳು. ಜೀವರೆಲ್ಲರೂ ಪ್ರತಿಬಿಂಬಾಂಶಕರು. ಸ್ವರೂಪಾಂಶಗಳು ಮತ್ಸ್ಯಾದ್ಯವತಾರಗಳೆಂದು ಹೇಳಲ್ಪಟ್ಟಿವೆ. (ಜೀವರಿಗೆ ಪ್ರತಿಬಿಂಬಾಂಶತ್ವವು ಮತ್ಸ್ಯಾದಿಗಳಿಗಾದರೂ ಸ್ವರೂಪಾಂಶತ್ವವೆಂದು ಏಕೆ ಇಟ್ಟುಕೊಳ್ಳಬೇಕು. ಎಲ್ಲರಿಗೂ ಸ್ವರೂಪಾಂಶತ್ವವನ್ನೇ ಏಕೆ ಹೇಳಬಾರದೆಂದರೆ) ಪ್ರತಿಬಿಂಬಗಳಲ್ಲಿ ಅತ್ಯಲ್ಪವಾದ ಸಾಮ್ಯವೇ. ಮತ್ಸ್ಯಾದಿಪ್ರಾದುರ್ಭಾವರೂಪಗಳಾದರೂ ಸ್ವರೂಪಾಂಶರೂಪಗಳೇ. (ಆದಕಾರಣ) ಸರ್ವ ಸಾಮ್ಯಗಳಿಂದ ಕೂಡಿರುತ್ತವೆ ಎಂದು ವಾರಾಹಪುರಾಣದಲ್ಲಿ (ಸೂತ್ರಾರ್ಥವು ಉಕ್ತವಾಗಿದೆ.)

ಪೀಠಿಕೆ ॥ ಜೀವರಿಗೆ ಪರಮಾತ್ಮನ ಪ್ರತಿಬಿಂಬಾಂಶತ್ವವು ಯುಕ್ತವಲ್ಲ. ಜೀವಾತಿರಿಕ್ತ ಉಪಾಧಿಯು ಇಲ್ಲದಿರುವುದರಿಂದ, ಎಂದರೆ—

**ಭಾಷ್ಯ ॥ ಸೋಪಾಧಿರನುಪಾಧಿಶ್ಚ ಪ್ರತಿಬಿಂಬೋ ದ್ವಿಧೇಯತೇ । ಜೀವ ಈಶ(ಜೀವಃ ಪರ) ಸ್ಯಾನುಪಾಧಿರಿಂದ್ರಚಾಪೋ ಯಥಾ ರವೇಃ ॥ ಇತಿ ಪೈಂಗಿಶ್ರುತಿಃ ॥ ೩೦ ॥**

ಭಾಷ್ಯಾರ್ಥ ॥ ಪ್ರತಿಬಿಂಬವು ಸೋಪಾಧಿಯು ಅನುಪಾಧಿಯು ಎಂದು ಎರಡು ವಿಧವೆಂದು ತಿಳಿಯಲ್ಪಡುತ್ತದೆ. ವೃಷ್ಟಿಸೂಚಕವಾದ ಧನುಸ್ಸಿನ ಆಕಾರವಾದ ಇಂದ್ರಚಾಪವು ಬಿಂಬಾತಿರಿಕ್ತವಾದ ಉಪಾಧಿಯಿಲ್ಲದಿರುವುದರಿಂದ ಸೂರ್ಯನ ತೇಜಸ್ಸಿಗೆ ಹೇಗೆ ನಿರುಪಾಧಿ ಪ್ರತಿಬಿಂಬವೋ (ಆದುದರಿಂದಲೇ ಇಂದ್ರಚಾಪಕ್ಕೆ ಸೂರ್ಯನಿಂದ ಅತ್ಯಂತ ಸಾದೃಶ್ಯವಿಲ್ಲವೋ) ಹಾಗೆಯೇ ಜೀವನು ಶ್ರೀಹರಿಗೆ ಜೀವಸ್ವರೂಪಾತಿರಿಕ್ತವಾದ ಉಪಾಧಿಯಿಂದ ರಹಿತಪ್ರತಿಬಿಂಬನು. (ಇಲ್ಲಿ ದೃಷ್ಟಾಂತದಲ್ಲಿ ಬಿಂಬಾತಿರಿಕ್ತ ಉಪಾಧಿಯಿಲ್ಲದಿರುವುದು. ದಾರ್ಷ್ಟಾಂತಿಕದಲ್ಲಿ ಪ್ರತಿಬಿಂಬಾತಿರಿಕ್ತ ಉಪಾಧಿಯಿಲ್ಲ ದಿರುವುದು. ಅಂತೂ ಅತಿರಿಕ್ತ ಉಪಾಧ್ಯಭಾವವು ಉಭಯತ್ರ ಸಮವೇ ಆಗಿದೆ.)

ವಿಶೇಷಾಂಶ ॥ (೧) ಇಂದ್ರಚಾಪವು ಸೋಪಾಧಿಪ್ರತಿಬಿಂಬಕ್ಕೆ ಉದಾಹರಣವು. ಅದಕ್ಕೆ ಮೇಘಮಂಡಲವು ವಾ ಸೂರ್ಯತೇಜಸ್ಸು ಉಪಾಧಿಯು. ಅದೇವೇ ಉಪಾದಾನ ಕಾರಣವು. (೨) ಜೀವನು ನಿರುಪಾಧಿ ಪ್ರತಿಬಿಂಬಕ್ಕೆ ಉದಾಹರಣನು. ಹೀಗೆ ಯಥಾಶಬ್ದವನ್ನು ಆವೃತ್ತಿಮಾಡಿಕೊಂಡು ವಾಕ್ಯದ್ವಯವೂ ದೃಷ್ಟಾಂತ ಪರವಾದುದು ಎಂದು ಇಟ್ಟುಕೊಳ್ಳಬೇಕು.

ಪೀಠಿಕೆ ॥ ಜೀವನು ನಿರುಪಾಧಿಪ್ರತಿಬಿಂಬನು ಎನ್ನುವಲ್ಲಿ ದೃಷ್ಟಾಂತಾಂತರವನ್ನು ಹೇಳುತ್ತಾರೆ—

**ಭಾಷ್ಯ ॥ ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಂ (ಪ್ರ.೩.೩)। ಇತಿ ಚ ಶ್ರುತಿಃ ॥ ೫೦ ॥ ಅಧಿ. ೧೮ ॥ ॥ ೩೦ ॥**

ಭಾಷ್ಯಾರ್ಥ ॥ ಹೇಗೆ ದೇಹದ ನೆರಳು ದೇಹದಲ್ಲಿ ವ್ಯಾಪ್ತವಾಗಿದೆಯೋ, ದೇಹಾಧೀನನಾಗಿದೆಯೋ (ದೇಹದ ಪ್ರತಿರೂಪವಾಗಿದೆಯೋ) ಹಾಗೆಯೇ ಪ್ರತಿಬಿಂಬರೂಪವಾದ ಈ ಜೀವರ ಸಮುದಾಯವು ಪುರೋಷತ್ತಮನಾದ ವಿಷ್ಣುವಿನ ಅಧೀನವಾಗಿದೆ, ಎಂದೂ ಶ್ರುತಿಯು.

ವಿಶೇಷಾಂಶ ॥ ಇದೂ ಅನುಪಾಧಿಪ್ರತಿಬಿಂಬಕ್ಕೇನೇ ಉದಾಹರಣವು. ತಥಾಚ ಅತಿರಿಕ್ತ ಉಪಾಧಿ ಯಿಲ್ಲವಾದರೂ ಇಂದ್ರಚಾಪ ವಾಯ್ವಾದಿಗಳಂತೆ ಜೀವನಿಗೆ ಪ್ರತಿಬಿಂಬಾಂಶತ್ವವು ಯುಕ್ತವಾಗುತ್ತದೆ. (೧) ಜೀವೋಪಾಧಿರ್ದ್ವಿಧಾ ಪ್ರೋಕ್ತಃ ಸ್ವರೂಪಂ ಬಾಹ್ಯ ಏವ ಚ । ಬಾಹ್ಯೋಪಾಧಿರ್ಲಯಂ ಯಾತಿ ಮುಕ್ತಾವನ್ಯಸ್ಯ ತು ಸ್ಥಿತಿಃ ॥ ಸರ್ವೋಪಾಧಿವಿನಾಶೇ ತು ಪ್ರತಿಬಿಂಬಃ ಕಥಂ ಭವೇತ್ ॥ ಇತ್ಯಾದಿ ಪ್ರಮಾಣಾಂತರಗಳಿಂದ ಸೋಪಾಧಿಪ್ರತಿಬಿಂಬತ್ವವನ್ನು ವಿಧಿಸಿದ್ದರಿಂದ ವಿರೋಧವೆಂದು ಹೇಳಕೂಡದು. ಜೀವಪ್ರತಿಬಿಂಬತ್ವ ಸ್ವರೂಪೋಪಾಧಿಪ್ರಯೋಜನತ್ವವಿದ್ದರೂ ಬಾಹ್ಯೋಪಾಧಿ ಪ್ರಯೋಜ್ಯತ್ವವಿಲ್ಲ ಎನ್ನುವ ಅಭಿಪ್ರಾಯದಿಂದಲೇ ಇಲ್ಲಿ ಅನುಪಾಧಿತ್ವವನ್ನು ಹೇಳಿದ್ದು. (೨) ಹೀಗೆಯೇ ಪ್ರಕಾಶಾದಿವತ್ ಇತ್ಯಾದಿ ಐದು ಸೂತ್ರಗಳಿಂದ ಜೀವರಿಗೆ ಈಶ್ವರಾಂಶತ್ವವಿದ್ದರೂ ಮತ್ಸ್ಯಾದಿಗಳಂತೆ

ಸ್ವರೂಪಾಂಶತ್ವವಿಲ್ಲ ಎನ್ನುವ ಉಕ್ತಿಯಿಂದ ಅನಂಶತ್ವಶ್ರುತಿಗೆ ಗತಿಯು ಉಕ್ತವಾಯಿತು. ಅಂಶತ್ವವೆಂದರೆ ಬ್ರಹ್ಮನ ಪ್ರತಿಬಿಂಬಭೂತನಾದ ಜೀವನಿಗೆ ಬ್ರಹ್ಮನಿಂದ ನ್ಯೂನತ್ವವಿದ್ದು ಕಿಂಚಿದ್ಬ್ರಹ್ಮಸಾದೃಶ್ಯವು. ಪ್ರತಿಬಿಂಬತ್ವವೆಂದರೆ ಬ್ರಹ್ಮನ ಅಧೀನತ್ವವಿದ್ದು ಬ್ರಹ್ಮನ ಯತ್ಕಿಂಚಿತ್ ಸಾದೃಶ್ಯವಿಶೇಷವು. ॥ ೫೦ ॥

## ಮಾಯಾವಾದಿರೀತ್ಯಾ

**ವಿಚಾರ ॥** ಜೀವಬ್ರಹ್ಮರಿಗೆ ಭೇದ, ಮತ್ತೂ ಅಭೇದಪ್ರತಿಪಾದಕ ಶ್ರುತಿಗಳಿಗೆ ವಿರೋಧವು ಎಂದು ಪೂರ್ವಪಕ್ಷವು ಬಂದರೆ ಜೀವಬ್ರಹ್ಮಭೇದವು ಪ್ರತ್ಯಕ್ಷಾದಿಗಳಿಂದ ಪ್ರಾಪ್ತವಾದ ಪ್ರಯುಕ್ತ ಶ್ರುತಿಗೆ ಅಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಭೇದವು ಮಿಥ್ಯೆಯು. ಅಭೇದವು ಪ್ರಮಾಣಾಂತರದಿಂದ ಪ್ರಾಪ್ತವಾಗದೆ ಇದ್ದಪ್ರಯುಕ್ತ ಶ್ರುತಿಗೆ ಅಭೇದದಲ್ಲಿ ತಾತ್ಪರ್ಯವಿದ್ದುದರಿಂದ ಅಭೇದವು ಸತ್ಯವು ಎಂದು ಸಿದ್ಧಾಂತವು. ಹೀಗೆ ಅಧಿಕರಣದ ತಾತ್ಪರ್ಯವೆಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ನಮ್ಮ ರೀತಿಯಾಗಿ ಅಂಶಾನಂಶತ್ವಶ್ರುತಿಗಳಿಗೆ ವಿರೋಧವು ಪ್ರಾಪ್ತವಾದರೆ ಆ ಶ್ರುತಿಗಳಿಗೆ ವಿರೋಧಪರಿಹಾರಕ್ಕಾಗಿ ಅನಂಶತ್ವಶ್ರುತಿಗೆ ಗತಿಯನ್ನು ಹೇಳಿ ಅಂಶತ್ವವನ್ನು ಹೇಳುವುದೇ **ಅಂಶೋ ನಾನಾವ್ಯಪದೇಶಾತ್** ಎನ್ನುವ ಸೂತ್ರಾಕ್ಷರಕ್ಕೆ ಅನುಸಾರಿಯಾಗಿದೆ. ಇಲ್ಲವಾದರೆ ಅಂಶಪದಸ್ಥಾನದಲ್ಲಿ ಅಭಿನ್ನ ಎನ್ನುವ ಪದವನ್ನೇ ಪ್ರಯೋಗಿಸಬೇಕಿತ್ತು. ಮತ್ತೂ ಅದ್ವೈತಮತದಲ್ಲಿ ಸೂತ್ರೋಕ್ತವಾದ ಜೀವನಿಗೆ ಅಂಶತ್ವವೆಂದರೆ—ಆರಂಭಕತ್ವವೆಂದು ಹೇಳಕೂಡದು. ಬ್ರಹ್ಮನು ಅನಾದಿಯಾಗಿರುತ್ತಾನೆ. ಅಚ್ಛೇದ್ಯವಾದುದರಿಂದ ಖಂಡತ್ವವೆಂದೂ ಹೇಳಕೂಡದು. ಸಮುದಾಯಿತ್ವವೆಂದೂ ಹೇಳಕೂಡದು. ಒಬ್ಬೊಬ್ಬ ಜೀವರಿಗೆ ಮುಕ್ತಿಯಾದ ಕೂಡಲೆ ಒಂದೊಂದು ಕಂಥಾ (ಹರ್ಕುಬಟ್ಟೆ) ಭಾಗವು ಹೋದರೆ ಬಟ್ಟೆಗೆ ಹ್ರಾಸಬರುವಂತೆ ಬ್ರಹ್ಮನಿಗೆ ಹ್ರಾಸವು ಬರಬೇಕಾಗುವುದು. ಮತ್ತು ಪ್ರತಿಬಿಂಬತ್ವವನ್ನು ಒಪ್ಪಿದ್ದರಿಂದ ಜೀವರಿಗೆ ಬ್ರಹ್ಮಸಮುದಾಯಿತ್ವವನ್ನು ಮಿಥ್ಯಾತ್ವವಾದಿಗಳು ಅಂಗೀಕರಿಸಲೂ ಇಲ್ಲ ಇತ್ಯಾದಿ ದೋಷಗಳು ಬರುವುದರಿಂದ ಅವರ ಮತವು ಅಯುಕ್ತವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ಒಂದು ವಸ್ತುವಿನ ಏಕದೇಶತ್ವವು ಅಂಶತ್ವವು. ಜೀವಶಿಷ್ಟನಾದ ಬ್ರಹ್ಮನನ್ನು ಕುರಿತು ವಿಶೇಷಣನಾದ ಜೀವನಿಗೆ ಆ ಅಂಶತ್ವವು ಇದೆ ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಅದು ಅಯುಕ್ತವು. **ಶುಕ್ಲಃ ಪಟಃ ಪಟಸ್ಯ ಶೌಕ್ಲ್ಯಂ** ಎನ್ನುವಂತೆ ವಿಶೇಷಣ ವಿಶೇಷ್ಯಭಾವವು ಕಾಮಚಾರಿಯಾದುದರಿಂದ ಬ್ರಹ್ಮ ವಿಶಿಷ್ಟನಾದ ಜೀವನನ್ನು ಕುರಿತು ವಿಶೇಷಣನಾದ ಬ್ರಹ್ಮನೂ ಅಂಶನಾಗಬೇಕಾಗುವನು. ಜಡವಿಶಿಷ್ಟ ಬ್ರಹ್ಮನ ಏಕದೇಶವಾದ ಜಡಕ್ಕೂ ಕೂಡ ಬ್ರಹ್ಮಾಂಶತ್ವವೂ ಬರಬೇಕಾಗುವುದು. ವಿಶಿಷ್ಟದಲ್ಲಿ ಅಂತರ್ಗತನಾದ ವಿಶೇಷ್ಯನಾದ ಬ್ರಹ್ಮನಿಗೂ ಅಂಶತ್ವವು ಬರಬೇಕಾಗುವುದು.

## ಅಧಿಕರಣ ಸಾರಾಂಶ

(೧) ಜೀವನು ಈಶ್ವರನ ಅಂಶನೆಂದು ವಾ ಅನಂಶನೆಂದು ನಿರ್ಣಯಿಸಲಿಕ್ಕೆ ಶಕ್ಯವೋ

ಅಲ್ಲವೋ ಎಂದು ಸಂದೇಹವು. ಶಕ್ಯನಲ್ಲವೆಂದು ಪೂರ್ವಪಕ್ಷವು. ಹೇಗೆಂದರೆ **ನೈವಾಂಶೋ ನ ಸಂಬಂಧಃ ಪರಸ್ಯ** ಎನ್ನುವ ಅನಂಶತ್ವ ಶ್ರುತಿಯಿಂದ ಅಂಶತ್ವವನ್ನು ನಿರ್ಣಯಿಸಲು ಶಕ್ಯವಲ್ಲ. ಜೀವನಿಗೂ ಈಶ್ವರಾಂಶತ್ವವಿದ್ದರೆ ಮತ್ಸ್ಯಾದಿ ಸಾಮ್ಯವು ಬರಬೇಕಾಗುವುದು. **ಅಂಶ ಏವ ಹೀಮೇ ಜೀವಾಃ** ಎನ್ನುವ ಅಂಶತ್ವಶ್ರುತಿಯಿದ್ದುದರಿಂದ ಅನಂಶವೆಂದೂ ನಿರ್ಣಯಿಸಲು ಶಕ್ಯವಲ್ಲ. ಎಂದರೆ—ಪಿತ್ರಾದಿಗಳಿಂದ ಪುತ್ರಾದಿಗಳು ಹೇಗೆ ಪೋಷ್ಯರಾಗುತ್ತಾರೋ ಹಾಗೆಯೇ ಜೀವರು ಈಶ್ವರನಿಂದ ಪೋಷ್ಯರಾದುದರಿಂದ ಈಶ್ವರನಿಂದ ಉಪಜೀವ್ಯರಾದುದರಿಂದ ಈಶ್ವರನಿಂದ ನ್ಯೂನತೆಯನ್ನು ಕಿಂಚಿತ್ಸಾದೃಶ್ಯರೂಪವಾದ ಈಶ್ವರನ ಅಂಶತ್ವವುಳ್ಳವರೇ ಆಗಿರುತ್ತಾರೆ. **ಅಂಶೋ ಹ್ಯೇಷ ಪರಸ್ಯ** ಎಂದು ಉಪಕ್ರಮಿಸಿಕೊಂಡು **ನಾನಾ ಹ್ಯೇನಂ ವ್ಯಪದಿಶಂತಿ ಪಿತೇತಿ ಪುತ್ರೇತಿ** ಎಂದು ನಾನಾಪ್ರಕಾರವಾಗಿ ಸಂಬಂಧವನ್ನು ಹೇಳಿದ್ದರಿಂದಲೂ ಹಾಗೇ **ಅನ್ಯಃ ಪರೋಽನ್ಯೋ ಜೀವಃ, ಬ್ರಹ್ಮದಾಶಾಃ ಬ್ರಹ್ಮಕಿತವಾಃ** ಎನ್ನುವ ಎರಡು ಶ್ರುತಿಗಳಲ್ಲಿ ಭೇದಾಭೇದೋಕ್ತ್ಯನ್ಯಥಾನುಪಪತ್ತಿಯಿಂದ ಸ್ವರೂಪಾಂಶ ಭಿನ್ನಾಂಶ ಎಂದು ಎರಡು ಅಂಶಗಳು ಸಿದ್ಧಿಸುತ್ತವೆ. **ಪಾದೋಽಸ್ಯ ವಿಶ್ವಾ ಭೂತಾನಿ** ಎನ್ನುವ ಮಂತ್ರವರ್ಣದಿಂದಲೂ **ಮಮೈವಾಂಶೋ ಜೀವಲೋಕೇ** ಎನ್ನುವ ಸ್ಮೃತಿಯಿಂದಲೂ ಅನಂಶತ್ವಶ್ರುತಿಯು ಸ್ವರೂಪಾಂಶತ್ವ ನಿಷೇಧಪರವಾದುದು. ತೇಜೋಽಭಿಮಾನಿಯ ಅಂಶಗಳಾದ ಕಾಲಾಗ್ನಿ ಖದ್ಯೋತಾಭಿಮಾನಿಗಳಂತೆ ಸ್ವರೂಪಾಂಶತ್ವ ಭಿನ್ನಾಂಶತ್ವಗಳಿಂದಲೂ, ಸೂರ್ಯಾಂಶಗಳಾದ ಪ್ರಭಾಭಿಮಾನಿ ಅಪಭ್ರಷ್ಟಾಭಿಮಾನಿಗಳಂತೆ ಸ್ವಾಧೀನ ಪ್ರವೃತ್ತಿರಾಹಿತ್ಯ ಸ್ವಾಧೀನ ಪ್ರವೃತ್ತಿಗಳಿಂದಲೂ ಪೂರ್ಣಶಕ್ತಿತ್ವ ಪೂರ್ಣ ಶಕ್ತ್ಯಭಾವಗಳಿಂದೂ ಈಶ್ವರನ ಅಪ್ರತಿಬಿಂಬತ್ವ ಈಶ್ವರನ ಪ್ರತಿಬಿಂಬತ್ವಗಳಿಂದಲೂ ಮತ್ಸ್ಯ ಮೊದಲಾದ ಈಶಾವತಾರ ಜೀವರಿಗೆ ಈಶನ ಅಂಶತ್ವವಿದ್ದರೂ ಸಾಮ್ಯವಿಲ್ಲ. ಅಂತೂ ಮತ್ಸ್ಯಾದಿಗಳು ಸ್ವರೂಪಾಂಶರು. ಜೀವರು ಭಿನ್ನಾಂಶರು. ॥ ಅಧಿ. ೧೮ ॥

**ಅಂಶಾಧಿಕರಣವು ಸಮಾಪ್ತವಾಯಿತು.**

**॥ ಓಂ ಜೀವಪ್ರತಿಬಿಂಬತ್ವ ಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥**
**ಓಂ ಇತಿ ಶ್ರುತಿಪರಸ್ಪರ ವಿರೋಧ ಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥**

# ೧೯ ಅದೃಷ್ಟಾಧಿಕರಣವು

**ಪೀಠಿಕೆ ॥** ಜೀವರಿಗೆ ಈಶ್ವರಪ್ರತಿಬಿಂಬತ್ವವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಜೀವರು ಭಗವತ್ಪ್ರತಿಬಿಂಬರಲ್ಲ. ಹಾಗೆ ಶ್ರುತಿಯಿದ್ದುದರಿಂದ, ಅಲ್ಲದೆ ಸುರ ಅಸುರ ನರ ತಿರ್ಯಗಾದಿ ಭೇದದಿಂದ ಮಿಥಃ ವಿಚಿತ್ರರಾದ ಜೀವರಿಗೆ ಏಕಪ್ರತಿಬಿಂಬತ್ವವೂ ಕೂಡಲಾರದು. **ರೂಪಂ ರೂಪಂ** ಎನ್ನುವ ಪ್ರತಿಬಿಂಬಿತ ಪ್ರತಿಪಾದಕ ಶ್ರುತಿಯು ಈ ಶ್ರುತಿ ಯುಕ್ತಿಗಳಿಂದ ವಿರುದ್ಧವಾದ ಪ್ರಯುಕ್ತ ಅಪ್ರಮಾಣವೇ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಪ್ರತಿಬಿಂಬಾನಾಂ ಮಿಥೋ ವೈಚಿತ್ರ್ಯೇ ಕಾರಣಮಾಹ ॥ ೧ ॥**

**ಭಾಷ್ಯಾರ್ಥ ॥** ಪ್ರತಿಬಿಂಬರೆಂದು ಹೇಳಲ್ಪಟ್ಟ ಜೀವರಿಗೆ (ಪ್ರತಿಬಿಂಬತ್ವವನ್ನು ಅಂಗೀಕರಿಸಿ) ಅವರಿಗೆ ಪರಸ್ಪರವಾಗಿ ಸುರ ನರ ತಿರ್ಯಗಾದಿ ರೂಪಭೇದದಲ್ಲಿ ಬಿಂಬವೈಚಿತ್ರ್ಯದಿಂದ ಇತರವಾದ ಕಾರಣವನ್ನು ಸೂತ್ರಕಾರರು ಹೇಳುತ್ತಾರೆ.

## ಸೂತ್ರ ॥ ಓಂ ಅದೃಷ್ಟಾನಿಯಮಾತ್ ಓಂ ॥ ೫೧ ॥

**ಭಾಷ್ಯ ॥ ಅನಾದಿವಿದ್ಯಾಕರ್ಮಾದಿವೈಚಿತ್ರ್ಯಾದ್ವೈಚಿತ್ರ್ಯಂ ॥ ೫೧ ॥ ॥ ೨ ॥**

**ಭಾಷ್ಯಾರ್ಥ ॥** ವಿದ್ಯಾ ಕರ್ಮಾದಿರೂಪವಾದ ಅದೃಷ್ಟಕ್ಕೆ ನಿಯಮವಿಲ್ಲದಿರುವುದರಿಂದ ಅಂದರೆ ವೈಚಿತ್ರ್ಯವಿದ್ದುದರಿಂದ. ತಥಾಚ (ಅಶೇಷ ಜೀವರಿಗೆ ಒಬ್ಬ ಶ್ರೀಹರಿಯ ಪ್ರತಿಬಿಂಬತ್ವವಿದ್ದರೂ ಪ್ರವಾಹತಃ) ಅನಾದಿಯಾದ ವಿದ್ಯಾ (ಜ್ಞಾನ) ಕರ್ಮ ಕಾಮ ಮೊದಲಾದ ವೈಚಿತ್ರ್ಯಗಳು ಇದ್ದುದರಿಂದ ದೇವ ದಾನವ ಮಾನವ ಮೊದಲಾದ ವೈಚಿತ್ರ್ಯವು ಉಪಪನ್ನವಾಗುತ್ತದೆ. ॥ ೫೧ ॥

**ಪೀಠಿಕೆ ॥** ದೇವದಾನವಾದಿ ವೈಚಿತ್ರ್ಯಕ್ಕೆ ರಾಗ ದ್ವೇಷ ಮೋಹಾಖ್ಯ ದೋಷಗಳೇ ನಿಮಿತ್ತವೆಂದು ಕೂಡುವುದರಿಂದ ಅದೃಷ್ಟವು ಕಾರಣವು ಎಂದು ಏಕೆ ಕಲ್ಪಿಸುವುದು ಎಂದರೆ—

## ಸೂತ್ರ ॥ ಓಂ ಅಭಿಸಂಧ್ಯಾದಿಷ್ವಪಿ ಚೈವಂ ಓಂ ॥ ೫೨ ॥

**ಭಾಷ್ಯ ॥ ಇಚ್ಛಾದ್ವೇಷಸುಖದುಃಖಾದಿವೈಚಿತ್ರ್ಯಂ ಚಾದೃಷ್ಟಾದೇವ । ಚಶಬ್ದೇನ ಪ್ರತಿಕ್ಷಣವೈಚಿತ್ರ್ಯಂ ಚ ॥ ೫೨ ॥**

**ಭಾಷ್ಯಾರ್ಥ ॥** ಅಭಿಸಂಧ್ಯಾದಿಷ್ವಪಿ=ರಾಗರೂಪವಾದ ಇಚ್ಛಾದಿಗಳಲ್ಲಿಯೂ ವೈಚಿತ್ರ್ಯವು. ಹೀಗೆಯೇ ವಿದ್ಯಾದೃಷ್ಟ ವೈಚಿತ್ರ್ಯದಿಂದಲೇ, ಅಂದರೆ—(೧) ರಾಗರೂಪವಾದ ಇಚ್ಛೆಯೂ ದ್ವೇಷ ಸುಖ ದುಃಖ ಮೋಹ ಮೊದಲಾದವುಗಳಲ್ಲಿ ವೈಚಿತ್ರ್ಯವೂ ವಿದ್ಯಾ ಮೊದಲಾದ ಅದೃಷ್ಟ ವೈಚಿತ್ರ್ಯದಿಂದಲೇ (ಅಂಗೀಕರಿಸತಕ್ಕುದು) (ಅಂತೂ ಅದರಿಂದಲೇ ಜೀವವೈಚಿತ್ರ್ಯವು ಕೂಡುವಾಗ ದೋಷವೈಚಿತ್ರ್ಯವನ್ನು ಕಾರಣವೆಂದು ಹೇಳಕೂಡದು.) (೨) (ಪೂರ್ವಪೂರ್ವ ದೋಷವೈಚಿತ್ರ್ಯವೇ ಉತ್ತರೋತ್ತರ ದೋಷ ವೈಚಿತ್ರ್ಯಕ್ಕೆ ಕಾರಣವೆಂದು ಕೂಡುವಾಗ ಅದೃಷ್ಟ ವೈಚಿತ್ರ್ಯವನ್ನು ಏಕೆ ಹೇಳುವುದು ಎಂದರೆ—) ಚ ಶಬ್ದದಿಂದ ಪುರುಷವಿಶೇಷರಲ್ಲಿತಕ್ಕ ಪ್ರತಿಕ್ಷಣ ವೈಚಿತ್ರ್ಯವೂ ಸಂಗ್ರಹೀತವಾಯಿತು. ತಥಾಚ ಪ್ರತಿಕ್ಷಣದಲ್ಲಿ ದೋಷವೈಚಿತ್ರ್ಯವು ಇಲ್ಲದಿದ್ದರೂ ಒಬ್ಬ ಪುರುಷನಲ್ಲಿಯೇ ಪ್ರತಿಕ್ಷಣದಲ್ಲಿಯೂ ವೈಚಿತ್ರ್ಯವು ಕಾಣುತ್ತದೆ. ಆದಕಾರಣ ಅದೃಷ್ಟವೈಚಿತ್ರ್ಯವನ್ನೇ ಅಂಗೀಕರಿಸಬೇಕಾಗಿರುವುದರಿಂದ ಅದೇವೇ ಜೀವರ ವೈಚಿತ್ರ್ಯದಲ್ಲಿಯೂ ಕಾರಣವು. ॥ ೫೨ ॥

**ಪೀಠಿಕೆ ॥** ಸ್ವರ್ಗಸ್ಥರು ದೇವತೆಗಳು, ಭೂಮಿಯಲ್ಲಿರತಕ್ಕವರು ಮನುಷ್ಯರು, ಇತ್ಯಾದಿ ಸ್ಥಾನವೈಚಿತ್ರ್ಯದಿಂದಲೇ ಸುರನರಾದಿ ವೈಚಿತ್ರ್ಯವು ಕೂಡುವುದರಿಂದ ಅದೃಷ್ಟವೈಚಿತ್ರವನ್ನು ಏಕೆ ಅಂಗೀಕರಿಸುವುದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರದೇಶಾದಿತಿ ಚೇನ್ನಾಂತರ್ಭಾವಾತ್ ಓಂ ॥ ೫೩ ॥

ಭಾಷ್ಯ ॥ ನ ಸ್ವರ್ಗಭೂಮ್ಯಾದಿಪ್ರದೇಶವೈಚಿತ್ರ್ಯಾ(ವಿಶೇಷಾ)ದ್ವೈಚಿತ್ರ್ಯಂ। ತತ್ಪ್ರಾಪ್ತೇ-ರಪ್ಯದೃಷ್ಟಾಪೇಕ್ಷತ್ವಾತ್ । ಏಕದೇಶಸ್ಥಿತಾನಾಮೇವವೈಚಿತ್ರ್ಯದರ್ಶನಾಚ್ಚ ॥ ೫೩ ॥
ಅಧಿ. ೧೯ ॥ ॥ ೪ ॥

ಭಾಷ್ಯಾರ್ಥ ॥ (೧) ಸ್ವರ್ಗ ನರಕ ಭೂಮಿ ಮೊದಲಾದ ಸ್ಥಾನವೈಚಿತ್ರ್ಯದಿಂದ (ಪ್ರತಿಬಿಂಬಭೂತರಾದ ಜೀವರಿಗೆ) ಸುರ ನರಾದಿ ಭೇದವು ಎಂದರೆ ಹಾಗೆ ಹೇಳಕೂಡದು. (೨) ಪ್ರದೇಶ ವೈಚಿತ್ರ್ಯಕಾರಣವು ಅದೃಷ್ಟದಲ್ಲಿಯೇ ಅಂತರ್ಭೂತವಾಗುವುದರಿಂದ, ಅಂದರೆ—ಸ್ವರ್ಗಾದಿ ಸ್ಥಾನಪ್ರಾಪ್ತಿಗೂ ವಿದ್ಯಾ ಮೊದಲಾದ ಅದೃಷ್ಟದ ಅಪೇಕ್ಷೆಯಿದ್ದುದರಿಂದ, (ಅದೃಷ್ಟ ವೈಚಿತ್ರ್ಯ ಹೊರತು ಬೇರೆ ಯಾವುದೂ ವಿಚಿತ್ರವಾದ ಸ್ವರ್ಗಾದಿಸ್ಥಾನ ಪ್ರಾಪ್ತಿಗೆ ಕಾರಣವೆನ್ನುವುದು ಕೂಡುವುದಿಲ್ಲ) (೩) ಮತ್ತು ಅಂತರ್ಭಾವಾತ್=ಏಕಸ್ಥಾನದಲ್ಲಿದ್ದವರಿಗೆ ಮಿಥಃ ವೈಚಿತ್ರ್ಯಕಾರಣವು ಅದೃಷ್ಟದಲ್ಲಿಯೇ ಅಂತರ್ಭೂತವಾಗಿರುವುದರಿಂದ. ಅಂದರೆ—ಒಂದೇ ಸ್ಥಾನದಲ್ಲಿ ಇರತಕ್ಕ ಸುರ ನರಾದಿ ಜೀವರಿಗೇನೇ ಪರಸ್ಪರವಾಗಿ ವೈಚಿತ್ರ್ಯವು ಕಂಡದ್ದರಿಂದಲೂ ಆ ಸುರನರಾದಿ ವೈಚಿತ್ರ್ಯಕ್ಕೆ ಸ್ಥಾನ ವೈಚಿತ್ರ್ಯವು ನಿಮಿತ್ತವೆನ್ನುವುದು ಕೂಡುವುದಿಲ್ಲ ಆದಕಾರಣ ಅದೃಷ್ಟವೈಚಿತ್ರ್ಯವನ್ನೇ ಕಾರಣವೆಂದು ಅಂಗೀಕರಿಸಬೇಕು. ತಥಾಚ ನ ಸಂಬಂಧಃ ಎಂದು ಪ್ರತಿಬಿಂಬತ್ವವನ್ನು ನಿಷೇಧಿಸತಕ್ಕ ಶ್ರುತಿಯು ಸ್ವರೂಪಾತಿರಿಕ್ತವಾದ ಉಪಾಧಿನಿಮಿತ್ತಕವಾದ ಪ್ರತಿಬಿಂಬತ್ವಾಭಾವ ವಿಷಯಕವು. ಎಂದುಕ್ತವಾಯಿತು. ॥ ೫೩ ॥

## ಮಾಯಾವಾದಿರೀತ್ಯಾ

ವಿಚಾರ ॥ ಅದೃಷ್ಟೇತ್ಯಾದಿ ಮೂರು ಸೂತ್ರಗಳಿಂದ ಅನೇಕಾತ್ಮವಾದಿಗಳಿಂದ ಸಾಂಖ್ಯಾದಿಗಳ ಮತದಲ್ಲಿಯೇ ಅವ್ಯವಸ್ಥೆಯು ಹೇಳಲ್ಪಡುತ್ತದೆ ಎಂದು ಮಾಯಾವಾದಿಗಳು ಹೇಳುವರು. ಅದು ಅಯುಕ್ತವು. ನಮ್ಮ ರೀತ್ಯಾ **ಅದೃಷ್ಟಾನಿಯಮಾತ್** ಎನ್ನುವ ಹೇತುವಿಗೆ, **ಆಭಾಸ ಏವ ಚ** ಎಂದು ಶ್ರುತವಾದ ಸಾಧ್ಯದಿಂದ ಅನ್ವಯವು ಕೂಡುವಾಗ ಸಾಂಖ್ಯಾದಿ ಮತದಲ್ಲಿ **ಭೋಗಾದ್ಯವ್ಯವಸ್ಥಾ** ಎನ್ನುವ ಸಾಧ್ಯಾಧ್ಯಾಹಾರವು ಕೂಡಲಾರದು. ಮತ್ತು ಆತ್ಮರಿಗೆ ಭೇದವಿದ್ದರೆ ಸುಖದುಃಖ ಭೋಗ ವ್ಯವಸ್ಥೆಯಾಗುವುದಿಲ್ಲ. ಐಕ್ಯವಿದ್ದರೆ ಸುಖದುಃಖ ಭೋಗ ವ್ಯವಸ್ಥೆಯು ಆಗುತ್ತದೆ ಎನ್ನುವುದು ಅತ್ಯಂತ ವಿರುದ್ಧವಾಗಿದೆ.

## ಅಧಿಕರಣ ಸಾರಾಂಶ

ಜೀವನು ಈಶ್ವರನಿಗೆ ಪ್ರತಿಬಿಂಬನೋ ಅಲ್ಲವೋ ಎಂದು ಸಂದೇಹವು. ನ ಸಂಬಂಧಃ ನಾಪೇಕ್ಷ್ಯಃ ಪರಸ್ಯ ಎನ್ನುವ ಶ್ರುತಿಯಿಂದ ಪ್ರತಿಬಿಂಬನಲ್ಲವೆಂದು ಪೂರ್ವಪಕ್ಷವು. ಹೇಗೆಂದರೆ— ಸುರನರಾದಿ ವೈಚಿತ್ರ್ಯಯುಕ್ತರಾದುದರಿಂದ ಜೀವರು ಘಟಾದಿಗಳಂತೆಯೇ ಒಬ್ಬನಿಗೆ ಪ್ರತಿಬಿಂಬಭೂತರಾಗುವುದಿಲ್ಲ ಎನ್ನುವ ಯುಕ್ತಿಯೂ ಇದೆ. ರೂಪಂ ರೂಪಂ ಎನ್ನುವ ಶ್ರುತಿಯಾದರೂ ಸಯುಕ್ತಿಕವಾದ

ನ ಸಂಬಂಧಃ ಎನ್ನುವ ಪೂರ್ವಶ್ರುತಿವಿರೋಧದಿಂದ ಅಪ್ರಮಾಣವು ಎಂದರೆ—ಬಿಂಬವು ಒಂದೇ ರೀತಿಯಾಗಿ ಇದ್ದರೂ ಜೀವನ ಅನಾದಿಯಾದ ಸ್ವರೂಪೋಪಾಧಿ ಅವಿದ್ಯಾ ಕರ್ಮಾದಿಗಳ ವೈಚಿತ್ರ್ಯದಿಂದ ಜೀವರೂಪ ಪ್ರತಿಬಿಂಬದಲ್ಲಿ ವೈಚಿತ್ರ್ಯವು ಕೂಡುತ್ತದೆ. **ರೂಪಂ ರೂಪಂ** ಎನ್ನುವ ಶ್ರುತಿಯಿಂದ ಜೀವನು ಪ್ರತಿಬಿಂಬನು. **ನ ಸಂಬಂಧಃ** ಎನ್ನುವ ಶ್ರುತಿಯು ಭಿನ್ನವಾದ ಉಪಾಧ್ಯಧೀನತ್ವರೂಪವಾದ ಪ್ರತಿಬಿಂಬತ್ವವನ್ನು ನಿಷೇಧಿಸತಕ್ಕುದು. ॥ ಅಧಿ. ೧೯ ॥

## ಅದೃಷ್ಟಾಧಿಕರಣವು ಸಮಾಪ್ತವಾಯಿತು.

## ತೃತೀಯ ಪಾದದ ಸಾರಾಂಶ

ಈ ಪಾದದಲ್ಲಿ ೧ನೇ ಅಧಿಕರಣದಲ್ಲಿ ಆಕಾಶಕ್ಕೂ ೨ನೇ ಅಧಿಕರಣದಲ್ಲಿ ವಾಯುವಿಗೂ ಉತ್ಪತ್ತಿಯಿದೆ ಎಂದೂ, ೩.ನೇ ಅಧಿಕರಣದಲ್ಲಿ ಬ್ರಹ್ಮನಿಗೆ ಉತ್ಪತ್ತಿಯಿಲ್ಲವೆಂದೂ ಸಿದ್ಧಾಂತವು. ೪ನೇ ೫ನೇ ೬ನೇ ಅಧಿಕರಣಗಳಲ್ಲಿ ತೇಜಸ್ಸು ಮೊದಲಾದವುಗಳಿಗೆ ಬ್ರಹ್ಮನಿಂದ ಉತ್ಪತ್ತಿಯನ್ನು ಸ್ವೀಕರಿಸಿ ಆದರಲ್ಲಿ ೪-೫ರಲ್ಲಿ ಉತ್ಪಾದಕ ವಿಶೇಷ ವಿಷಯವಿರೋಧವನ್ನು ನಿರಾಕರಿಸಿ ಸಿದ್ಧಾಂತವು. ೬ನೇ ಅಧಿಕರಣದಲ್ಲಿ ಆದರೂ ಉತ್ಪಾದ್ಯ ವಿಶೇಷವು ವಿಶೇಷ ವಿಷಯನಿರಾಸದಿಂದ ಸಿದ್ಧಾಂತವು. ೭ನೇ ಅಧಿಕರಣದಲ್ಲಿ ಸಂಹರ್ತೃವಿಷಯಕ ವಿರೋಧನಿರಾಸವು. ೮ನೇ ೯ನೇ ಅಧಿಕರಣಗಳಲ್ಲಿ ಸಂಹಾರಕ್ರಮ ವಿಷಯಕ ವಿರೋಧನಿರಾಸವು ೧೦ನೇ ಅಧಿಕರಣದಲ್ಲಿ ಬ್ರಹ್ಮವಿಷಯಕ ಸಂಹಾರ ವಿರೋಧಪರಿಹಾರವು. ೧೧ನೇ ಅಧಿಕರಣವನ್ನು ಆರಂಭಿಸಿ ೯ ಅಧಿಕರಣಗಳಲ್ಲಿ ಕ್ರಮವಾಗಿ ಜೀವನಿಗೆ ೧೧ ಸಾದಿತ್ವ, ೧೨ ಅಣುತ್ವ, ೧೩. ಅನೇಕ ದೇಹಸ್ಥಿತತ್ವ, ೧೪ ಈಶ್ವರ ಭಿನ್ನತ್ವ, ೧೫ ಅನಂತತ್ವ ೧೬ ಜ್ಞಾನಾನಂದಾದಿ ರೂಪತ್ವ, ೧೭ ಪರತಂತ್ರಕರ್ತೃತ್ವ, ೧೮ ಈಶ್ವರಾಂಶತ್ವ, ೧೯ ಈಶ್ವರಪ್ರತಿಬಿಂಬತ್ವ ರೂಪಗಳಾದ ಒಂಭತ್ತು ಪ್ರಮೇಯಗಳನ್ನು ಪ್ರತಿಪಾದಿಸಿರುವರು.

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ**
**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ದ)ವಿರಚಿತೇ**
**ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ ॥ ೨-೩ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದಲ್ಲಿ ಎರಡನೇ ಅಧ್ಯಾಯದಲ್ಲಿ ಮೂರನೇ ಪಾದವು ಸಮಾಪ್ತವಾಯಿತು. ॥ ೨-೩. ॥

**ಅನಿಂದ್ಯಾಯ ಸುರಶ್ರೇಣೀವಂದ್ಯಾಯ ಗುಣಸಿಂಧವೇ ।**
**ಹಯಗ್ರೀವಾಯ ಮಹತೇ ಹಯಗ್ರೀವಾಯ ತೇ ನಮಃ ॥**

ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟ ದೈವಂ ಶ್ರಿಯಃ ಪತಿಃ
**ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತುಮೇ ಜನ್ಮಜನ್ಮನಿ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

॥ ಓಂ ಇಂದ್ರಿಯೋತ್ಪತ್ತಿ ಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ದ್ವಿತೀಯಾಧ್ಯಾಯ ೪ನೇ ಪಾದ

## ನ್ಯಾಯೋಪೇತ ಶ್ರುತಿಪಾದಃ

**ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥**

## ೧ ಪ್ರಾಣೋತ್ಪತ್ತ್ಯಧಿಕರಣವು

ಪೀಠಿಕೆ ॥ ನಾಲ್ಕನೇ ಪಾದದ ಅರ್ಥವನ್ನು ತೋರಿಸುತ್ತಾರೆ—

**ಭಾಷ್ಯ ॥ (೧) ಯುಕ್ತಿಸಹಿತಶ್ರುತಿವಿರೋಧಂ ಶ್ರುತೀನಾಮಪಾಕರೋತ್ಯನೇನ ಪಾದೇನ । (೨) ಪ್ರಾಣಾ ಏವೇದಮಗ್ರ ಆಸುಸ್ತೇಭ್ಯೋ ಭೂತಾನಿ ಜಜ್ಞಿರೇ । ಭೂತೇಭ್ಯೋಽಡ ಮಂಡಸ್ಯಾಂತಸ್ತ್ವಿಮೇ ಲೋಕಾಃ । ಅಥ ಪ್ರಾಣಾ ಏವಾನಾದಯಃ ಪ್ರಾಣಾ ನಿತ್ಯಾಃ । ಇತಿ ಕಾಷಾಯಣಶ್ರುತೌ ಪ್ರಾಣಾನಾಮನುತ್ಪತ್ತಿಃ ಶ್ರೂಯತೇ ॥ ೧ ॥**

ಭಾಷ್ಯಾರ್ಥ ॥ (೧) ಸಿದ್ಧಾಂತಿಗಳಿಂದ ಹೇಳಲ್ಪಟ್ಟ ಶ್ರುತಿಗಳಿಗೆ ಶ್ರುತ್ಯಾದಿ ಸಿದ್ಧಗಳಾದುದರಿಂದ ಪ್ರಬಲಗಳಾದ ಯುಕ್ತಿಗಳಿಂದ ಸಹಿತಗಳಾದ ಅಧ್ಯಾತ್ಮವಿಷಯಗಳಾದ ಶ್ರುತಿಗಳಿಂದ ವಿರೋಧವನ್ನು ಈ ನಾಲ್ಕನೇ ಪಾದದಲ್ಲಿ ಸೂತ್ರಕಾರರು ನಿರಾಕರಿಸುತ್ತಾರೆ. (೨) (ಈ ಅಧಿಕರಣದಲ್ಲಿ ಇಂದ್ರಿಯಗಳ ಉತ್ಪತ್ತಿ ವಿಷಯದಲ್ಲಿ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಾರೆ. ಆದಕ್ಕಾಗಿ ಶ್ರುತಿವಿರೋಧವನ್ನು ತೋರಿಸುತ್ತಾ ಪೂರ್ವಪಕ್ಷವನ್ನು ಸೂಚಿಸುತ್ತಾರೆ.) ಪ್ರಳಯಕಾಲದಲ್ಲಿ ತತ್ತ್ವರೂಪ ಇಂದ್ರಿಯಗಳೇ ಇರುತ್ತಿದ್ದವು. ಇಂದ್ರಿಯಗಳಿಂದ ಆಕಾಶಾದಿ ಪಂಚಭೂತಗಳು ಹುಟ್ಟಿದವು. ಅವುಗಳಿಂದ ಬ್ರಹ್ಮಾಂಡವು ಹುಟ್ಟಿತು. ಬ್ರಹ್ಮಾಂಡದ ಒಳಗೆ ಈ ಹದಿನಾಲ್ಕು ಲೋಕಗಳು ಆದವು. ಆದಕಾರಣ ಸರ್ವಕ್ಕೂ ಕಾರಣವಾಗಿ ಪ್ರಲಯಕಾಲದಲ್ಲಿ ಇದ್ದುದರಿಂದ ಇಂದ್ರಿಯಗಳು ಉತ್ಪತ್ತಿಶೂನ್ಯಗಳೇ. ಆದುದರಿಂದಲೇ ಇಂದ್ರಿಯಗಳು ನಿತ್ಯಗಳು, ಹೀಗೆ ಕಾಷಾಯಣಶ್ರುತಿಯಲ್ಲಿ ಇಂದ್ರಿಯಗಳಿಗೆ ಅನುತ್ಪತ್ತಿಯು ಶ್ರುತವಾಗುತ್ತದೆ. ॥ ೧ ॥

ಪೀಠಿಕೆ ॥ ಇಂದ್ರಿಯಗಳಿಗೆ ಅನುತ್ಪತ್ತಿಶ್ರುತಿಯನ್ನು ಹೇಳಿ ಆ ಶ್ರುತಿಗೆ ಪ್ರಾಬಲ್ಯವು ಬರುವುದಕ್ಕಾಗಿ ಇಂದ್ರಿಯಾಣಿ ಅನುತ್ಪತ್ತಿಮಂತಿ ಉಪಾದಾನಶೂನ್ಯತ್ವಾತ್ ಎನ್ನುವ ಯುಕ್ತಿಯನ್ನು ಇಟ್ಟುಕೊಂಡು ಆ ಯುಕ್ತಿಗೆ ಅಸಿದ್ಧ್ಯಾದಿ ದೋಷಪರಿಹಾರಕ್ಕಾಗಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ (೧) ನೋಪಾದಾನಂ ಹೀಂದ್ರಿಯಾಣಾಮತೋಽನುತ್ಪತ್ತಿರಿಷ್ಯತೇ। ಉಪಾದಾನ ಕೃತಾ ಸೃಷ್ಟಿಃ ಸರ್ವಲೋಕೇಷು ದೃಶ್ಯತೇ ॥ ಇತಿ ಭವಿಷ್ಯತ್ಪರ್ವಣಿ ॥ (೨) ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ (ಮು.೨.೧.೩) ಇತಿ ಚ ॥ ॥ ೨ ॥**

ಭಾಷ್ಯಾರ್ಥ ॥ (೧) ಯಾವ ಕಾರಣಗಳಿಂದ ಇಂದ್ರಿಯಗಳಿಗೆ ಪರಿಣಾಮಿಕಾರಣವು ಇಲ್ಲವೋ, ಆದುದರಿಂದ ಉಪಾದಾನಕಾರಣವು ಇಲ್ಲದಿರುವುದರಿಂದ (ಬ್ರಹ್ಮನಂತೆ) ಅನುತ್ಪತ್ತಿಯು ಇಷ್ಟವಾಗಿದೆ. (ಹೀಗೆ ಇಲ್ಲಿ ಅನ್ವಯದೃಷ್ಟಾಂತವು ಕೂಡಿದರೂ ವ್ಯತಿರೇಕವ್ಯಾಪ್ತಿಯಿಲ್ಲದೆ ವ್ಯಭಿಚಾರ (ಹೇತುವು ಸಾಧ್ಯವಿಲ್ಲದಿರುವುದು) ಶಂಕೆಯು ನಿರಾಸವಾಗದೆ ಇದ್ದುದರಿಂದ ವ್ಯತಿರೇಕವ್ಯಾಪ್ತಿಯನ್ನು ಹೇಳುತ್ತಾರೆ.) ಉಪಾದಾನ ನಿಮಿತ್ತಕವಾದ ಘಟಾದಿ ಭಾವಪದಾರ್ಥಗಳ ಸೃಷ್ಟಿಯು ಸರ್ವ ಲೋಕಗಳಲ್ಲಿಯೂ ಘಟಾದಿ ಕಾರ್ಯಗಳಲ್ಲಿ ಕಾಣಲ್ಪಡುತ್ತದೆ ಎಂದು ಹಿಂದೆ ಹೇಳಿದ ಯುಕ್ತಿಗೆ **ಯದುತ್ಪತ್ತಿಮತ್ ತತ್ಸೋಪಾದಾನಂ ಯಥಾ ಘಟಾದಿ** ಎಂದು ವ್ಯತಿರೇಕವ್ಯಾಪ್ತಿಯು ಭವಿಷ್ಯತ್ಪರ್ವದಲ್ಲಿ ಹೇಳಿದೆ. (೨) ★ಏತಸ್ಮಾಜ್ಜಾಯತೇ ಎನ್ನುವ ಶ್ರುತಿಯಲ್ಲಿ ಇಂದ್ರಿಯಗಳಿಗೆ ಉತ್ಪತ್ತಿಯು ಶ್ರುತವಾಗುತ್ತದೆ.

ಪೀಠಿಕೆ ॥ ಹೀಗೆ ಪರಸ್ಪರವಾಗಿ ಶ್ರುತಿಗಳಿಗೆ ವಿರೋಧವು ಪ್ರಾಪ್ತವಾದರೆ ಕೇವಲ ಉತ್ಪತ್ತಿಶ್ರುತಿಗಿಂತ ಸ್ಮೃತಿಗೃಹೀತ ಯುಕ್ತಿಯುಕ್ತವಾದ ಅನುತ್ಪತ್ತಿಶ್ರುತಿಯು ಪ್ರಬಲವಾದಪ್ರಯುಕ್ತ ಅದಕ್ಕೆ ವಿರುದ್ಧವಾದ ಉತ್ಪತ್ತಿಶ್ರುತಿಯು ಅಪ್ರಮಾಣವೇ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತ ಉಚ್ಯತೇ ॥ ೩ ॥**

ಭಾಷ್ಯಾರ್ಥ ॥ ಸಂಶಯಕಾರಣವಾದ ಶ್ರುತಿವಿರೋಧವಿದ್ದಪ್ರಯುಕ್ತ ಅದನ್ನು ಪರಿಹರಿಸುವುದಕ್ಕಾಗಿ ಸೂತ್ರಕಾರರಿಂದ ಸಿದ್ಧಾಂತವು ಹೇಳಲ್ಪಡುತ್ತದೆ. ॥ ೩ ॥

## ಸೂತ್ರ ॥ ಓಂ ತಥಾ ಪ್ರಾಣಾಃ ಓಂ ॥ ೧ ॥

**ಭಾಷ್ಯಾ ॥ ಯಥಾಽಽಕಾಶಾದಯಃ ಪರಮಾತ್ಮನ ಉತ್ಪದ್ಯಂತೇ ತಥಾ ಪ್ರಾಣಾ ಅಪಿ ॥ ೧ ॥ ೪ ॥**

ಭಾಷ್ಯಾರ್ಥ ॥ ಯಾವ ಯುಕ್ತಿಸಮುದಾಯದಿಂದ ಆಕಾಶಾದಿಗಳು ಉತ್ಪತ್ತಿಯುಳ್ಳವುಗಳೆಂದು ಸಿದ್ಧಗಳಾಗಿವೆಯೋ ಆ ಹೇತುಗಳಿಂದಲೇ ಇಂದ್ರಿಯಗಳೂ ಕೂಡ ಪರಾಧೀನ ವಿಶೇಷವ್ಯಾಪ್ತಿ ರೂಪವಾದ ಉತ್ಪತ್ತಿಯುಳ್ಳವುಗಳೆಂದೇ ಸಿದ್ಧಿಸುತ್ತದೆ. (ವಿಯದಧಿಕರಣದಲ್ಲಿಯೇ ಹೇತುಗಳು ಉಕ್ತಗಳಾಗಿವೆ.) ॥ ೧ ॥ ॥ ೪ ॥

ಪೀಠಿಕೆ ॥ ಆಕಾಶಕ್ಕೆ ಉತ್ಪತ್ತಿಸಿದ್ಧಿಗಾಗಿ ನ ವಿಯದಶ್ರುತೇಃ ಎನ್ನುವುದರಿಂದ ಅನುತ್ಪತ್ತಿಯಲ್ಲಿ

★ ಈ ಶ್ರುತಿಯು ಅಬಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಶ್ರುತಿಯಿಲ್ಲದಿರುವುದರಿಂದ, ಎನ್ನುವ ಹೇತುವು ಹೇಳಲ್ಪಟ್ಟಿದೆ. ಪ್ರಾಣಾ ಏವಾನಾದಯಃ ಎನ್ನುವ ಶ್ರುತಿಯಿಂದ ಶ್ರುತ್ಯಭಾವಾತ್ ಎನ್ನುವ ಹೇತುವು ಹೇಗೆ ಕೂಡುತ್ತದೆ, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಗೌಣ್ಯಸಂಭವಾತ್ ಓಂ ॥ ೨ ॥

**ಭಾಷ್ಯ ॥ ಅನಾದಿತ್ವಶ್ರುತಿರ್ಗೌಣಾನಾದಿತಾಪೇಕ್ಷಯಾ ॥ ಮುಖ್ಯಾಸಂಭವಾತ್ ॥ ೫ ॥**

ಭಾಷ್ಯಾರ್ಥ ॥ ಪ್ರಾಣಾಃ ಅನಾದಯಃ ಎನ್ನುವ ಅನಾದಿತ್ವಪ್ರತಿಪಾದಕ ಶ್ರುತಿಯು, ಅಮುಖ್ಯಾನಾದಿತ್ವವನ್ನು ವಿವಕ್ಷಾ ಮಾಡಿಕೊಂಡು ಪ್ರವೃತ್ತವಾಗಿದೆ. (ಆದಕಾರಣ ಮುಖ್ಯಾನುತ್ಪತ್ತಿಯಲ್ಲಿ ಶ್ರುತಿಯಿಲ್ಲ) ಶ್ರುತಿಗೆ ಮುಖ್ಯಾನುತ್ಪತ್ತಿವಾಚಕತ್ವವು ಕೂಡದೆ ಇದ್ದಪ್ರಯುಕ್ತ (ಅದು ಹೇಗೆಂದರೆ—) ಇಂದ್ರಿಯಗಳಿಗೆ ಮುಖ್ಯಾನುತ್ಪತ್ತಿಯು ಕೂಡದೆ ಇದ್ದಪ್ರಯುಕ್ತವೂ ಏತಸ್ಮಾಜ್ಜಾಯತೇ ಇತ್ಯಾದಿ ಶ್ರುತ್ಯಂತರವು ಕೂಡದೆ ಇದ್ದಪ್ರಯುಕ್ತವೂ ಆಕಾರವಾಚ್ಯನಾದ ವಿಷ್ಣುವಿನಿಂದ ಉತ್ಪತ್ತಿಯು ಕೂಡುವುದರಿಂದಲೂ. ॥೨ ॥ ॥ ೫ ॥

ಪೀಠಿಕೆ ॥ ಪ್ರಾಣಗಳಿಗೆ ಗೌಣಾನಾದಿತ್ವವೆಂದರೆ ಅದು ಎಂತಹದು? ಮುಖ್ಯಾಸಂಭವವೂ ಹೇಗೆ? ಮತ್ತೆ ಉಪಾದಾನ ಕಾರಣವಿಲ್ಲದಿರುವುದರಿಂದ ಉತ್ಪತ್ತಿಯೇ ಕೂಡುವುದಿಲ್ಲವೆಂದರೆ—

**ಭಾಷ್ಯ ॥ ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ ಹೀಂದ್ರಿಯಾಣಿ ತು ಸರ್ವಶಃ। ತೇಷಾಂ ಭೂತೈರುಪಚಯಃ ಸೃಷ್ಟಿಕಾಲೇ ವಿಧೀಯತೇ । ಪರೇಣ ಸಾಮ್ಯಸಂಪ್ರಾಪ್ತೇಃ ಕಸ್ಯ ಸ್ಯಾನ್ಮುಖ್ಯನಿತ್ಯತಾ । ಇತಿ ಹಿ ಭವಿಷ್ಯತ್ಪರ್ವಣಿ ॥ ೨ ॥ ॥ ೬ ॥**

ಭಾಷ್ಯಾರ್ಥ ॥ ಎಲ್ಲಾ ಇಂದ್ರಿಯಗಳೂ (ಪ್ರಲಯಕಾಲದಲ್ಲಿಯೂ ಇದ್ದುದರಿಂದ) ಸೂಕ್ಷ್ಮ (ಅನುಪಚಿತ) ರೂಪದಿಂದ ನಿತ್ಯಗಳೂ (ಅನಾದಿಗಳೂ) ಆಗಿವೆ. (ಇದೇವೇ ಗೌಣಾನಾದಿತ್ವವು.) ಏಕೆಂದರೆ—ಇಂದ್ರಿಯಗಳಿಗೆ ಸೃಷ್ಟಿಕಾಲದಲ್ಲಿ ಪಂಚಮಹಾಭೂತಗಳಿಂದ ವೃದ್ಧಿಯು (ಸ್ಥೂಲಭಾವವು) ಶ್ರೀಹರಿಯಿಂದ ಮಾಡಲ್ಪಡುತ್ತದೆ. ಪರಮಾತ್ಮನಿಂದ (ಸ್ವಾತಂತ್ರ್ಯ ಅವಿಭಕ್ತತ್ವ ಮೊದಲಾದ ಧರ್ಮದಿಂದ) ಸಾಮ್ಯವು ಬರಬೇಕಾಗಿರುವುದರಿಂದ ಯಾರಿಗೆ ಮುಖ್ಯನಿತ್ಯತ್ವವು ಅಂದರೆ ಪರಾಧೀನ ವಿಶೇಷ ಲಾಭರಾಹಿತ್ಯರೂಪವಾದ ನಿತ್ಯತ್ವವೂ ಅಥವಾ ದೇಹಸ್ವರೂಪ ವಿಶೇಷಗಳಿಂದ ಅವಿಕೃತತ್ವರೂಪವಾದ ಮುಖ್ಯಾನಾದಿತ್ವವೂ ಬರುವುದು. (ಇದರಿಂದ ಮುಖ್ಯ ಅನುತ್ಪತ್ತಿಯೂ ಕೂಡುವುದಿಲ್ಲವೆಂದುಕ್ತವಾಯಿತು) ಎಂದು ಭವಿಷ್ಯತ್ಪರ್ವದಲ್ಲಿದೆ.

ವಿಶೇಷಾಂಶ ॥ (೧) ಪ್ರಲಯಕಾಲದಲ್ಲಿ ಉಪಚಾಯಕಭೂತಗಳಿಂದ ವಿಯುಕ್ತಗಳಾದ ಇಂದ್ರಿಯಗಳಿಗೆ ಪ್ರತಿಕಲ್ಪದಲ್ಲಿ ಸೃಷ್ಟಿಕಾಲವು ಪ್ರಾಪ್ತವಾಗುವಾಗ ಅವುಗಳಿಗೆ ಭೂತಗಳಿಂದ. ಉಪಚಯನವು ವಿಧಿಸಲ್ಪಡುತ್ತದೆ ಎನ್ನುವುದರಿಂದ ಉಪಾದಾನ ಕಾರಣವಿಲ್ಲವಾದರೂ ಉಪಚಾಯಕವು ಇದ್ದುದರಿಂದ ಉಪಚಿತತ್ವರೂಪವಾದ ಉತ್ಪತ್ತಿಯು ಕೂಡುತ್ತದೆ. (೨) ಜೀವರಲ್ಲಿ ಪ್ರತ್ಯೇಕ ಪ್ರತ್ಯೇಕ ಇರತಕ್ಕ ಇಂದ್ರಿಯಗಳು (೧) ತತ್ವರೂಪಗಳೋ (೨) ಅಧ್ಯಾತ್ಮರೂಪಗಳೋ,

೧ನೇದ್ದು ಕೂಡಲಾರದು. ಅಧ್ಯಾತ್ಮವಿಚಾರಪರವಾದ ಈ ಪಾದದಲ್ಲಿ ಬ್ರಹ್ಮಾಂಡದಿಂದ ಬಾಹ್ಯವಾದ ತತ್ತ್ವವಿಚಾರವು ಕೂಡಲಾರದು. ೨ನೇದ್ದೂ ಕೂಡಲಾರದು. **ತೇಭ್ಯೋ ಭೂತಾನಿ ಜಜ್ಞಿರೇ ಭೂತೇಭ್ಯೋಽಂಡಂ** ಇತ್ಯಾದಿ ಭೂತಾಂಡಾದಿ ಜನಕತ್ವೋಕ್ತಿಯು ಕೂಡಲಾರದು, ಎಂದರೆ ಹಾಗೆ ಹೇಳಕೂಡದು. ತತ್ತ್ವರೂಪಗಳಾದ ಇಂದ್ರಿಯಗಳನ್ನೇ ಇಲ್ಲಿ ಇಟ್ಟುಕೊಳ್ಳಬೇಕು. ೧ಂದೆ ಹೇಳಿದ ದೋಷವಿಲ್ಲ. ಇಂದ್ರಿಯಗಳು ಅಧ್ಯಾತ್ಮೇಂದ್ರಿಯಗಳಿಂದ ಅಂಶತಃ ಸರ್ವದೇಹಗಳಲ್ಲಿ ಸಂಕಲಿತವಾಗಿ ಇದ್ದುದರಿಂದ ಅವುಗಳಿಗೆ ಅಧ್ಯಾತ್ಮರೂಪತ್ವವೂ ಇದೆ. (೨.) **ಪ್ರಾಣಾ ಏವೇದಮಗ್ರ ಆಸುಃ ತೇಭ್ಯೋ ಭೂತಾನಿ ಜಜ್ಞಿರೇ** ಎಂಬ ಭೂತಗಳಿಗೆ ಪ್ರಾಣಗಳು ಕಾರಣಗಳು ಎಂದು ಶ್ರುತಗಳಾದ ಪ್ರಯುಕ್ತ ಪ್ರಾಣಗಳಿಗೆ ಭೂತಗಳಿಂದ ಉಪಚಯವು ಹೇಗೆ ಕೂಡುತ್ತದೆ, ಎಂದರೆ ಹಾಗೆ ಹೇಳಕೂಡದು. ಪ್ರಾಣಗಳಲ್ಲಿ ದ್ವೈವಿಧ್ಯವನ್ನು ಅಂಗೀಕರಿಸಿರುವೆವು. ಅಧ್ಯಾತ್ಮ ಪ್ರಾಣಗಳಿಂದ ಸಂಕಲಿತಗಳಾಗದೆ ಇರುವ ಕೇವಲ ತತ್ತ್ವರೂಪಗಳಾದ ಸೂಕ್ಷ್ಮ ಪ್ರಾಣಗಳು ಭೂತಗಳ ಉಪಚಯಕ್ಕೆ ಕಾರಣವಾಗಿರುವಪ್ರಯುಕ್ತ **ತೇಭ್ಯೋ ಭೂತಾನಿ ಜಜ್ಞಿರೇ** ಎಂದು ಉಕ್ತಿಯು. ತದ್ವ್ಯತಿರಿಕ್ತಗಳಾದ ಸಂಕಲಿತ ಪ್ರಾಣಗಳಿಗೆ ಭೂತಗಳಿಂದ ಉಪಚಯವು. ಆದಕಾರಣ ವಿರೋಧವಿಲ್ಲ. ॥ ೨ ॥

**ಪೀಠಿಕೆ ॥** ಪ್ರತಿಜ್ಞಾಹಾನಿಯುಕ್ತಿಯಿಂದ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರತಿಜ್ಞಾನುಪರೋಧಾಚ್ಚ ಓಂ ॥ ೩ ॥

**ಭಾಷ್ಯ ॥ ★ಸ ಇದಂ ಸರ್ವಮಸೃಜತ (ತೈ.೨.೬.) ಇತಿ॥ ೩ ॥ ಅಧಿ.೧ ॥ ॥ ೭ ॥**

**ಭಾಷ್ಯಾರ್ಥ ॥** (ಸರ್ವಾಂತಃಪಾತಿಯಾದ ಪ್ರಾಣಗಳಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೇನೇ) ಸ ಇದಂ ಎನ್ನುವ ಪ್ರತಿಜ್ಞೆಗೆ ವಿರೋಧವು ಬಾರದಿರುವುದಕ್ಕಾಗಿಯೇ (ಅಂದರೆ ಪ್ರತಿಜ್ಞಾನುಸಾರವಾಗಿ) ಪ್ರಾಣಗಳು ಉತ್ಪತ್ತಿಯುಳ್ಳವುಗಳು. ॥ ೩ ॥

## ಅಧಿಕರಣ ಸಾರಾಂಶ

ಪ್ರಾಣಗಳು ಉತ್ಪತ್ತಿಯುಳ್ಳವುಗಳೋ ಅಲ್ಲವೋ ಎಂದು ಸಂದೇಹವು. **ಪ್ರಾಣಾ ಏವೇದಮಗ್ರ ಆಸುಃ** ಎಂದು ಅನಾದಿತ್ವಪ್ರತಿಪಾದಕ ಶ್ರುತಿಯಿಂದ ಉತ್ಪತ್ತಿಯುಳ್ಳವುಗಳಲ್ಲ ಎಂದು ಪೂರ್ವಪಕ್ಷವು. ಹಾಗಾದರೆ **ಸ ಇದಂ ಸರ್ವಂ** ಎನ್ನುವ ಶ್ರುತಿವಿರೋಧವೆಂದು ಹೇಳಕೂಡದು. ಅನಾದಿತ್ವಪ್ರತಿಪಾದಕ ವಿಶೇಷ ಶ್ರುತಿಯಿಂದ ಸಾಮಾನ್ಯ ಶ್ರುತಿಗೆ ಬಾಧವು. **ಏತಸ್ಮಾಜ್ಜಾಯತೇ ಪ್ರಾಣಃ** ಎನ್ನುವ ವಿಶೇಷ ಶ್ರುತಿಯಿಂದ ವಿರೋಧವೆಂದು ಹೇಳಕೂಡದು. **ನೋಪಾದಾನಂ ಹೀಂದ್ರಿಯಾಣಾಂ** ಎನ್ನುವ ಸ್ಮೃತ್ಯುಕ್ತ ನಿರುಪಾದಾನತ್ವ ಯುಕ್ತಿಯಿಂದ ಶ್ರುತಿಗೆ ಬಾಧವು ಇದ್ದಪ್ರಯುಕ್ತ ಅಪ್ರಮಾಣವು ಎಂದರೆ—**ಸ ಪ್ರಾಣಮಸೃಜತ, ಸ ಪ್ರಾಣಾನ್, ಏತಸ್ಮಾಜ್ಜಾಯತೇ** ಇತ್ಯಾದಿ ವಿಶೇಷ ಶ್ರುತಿಯಿಂದಲೂ **ಸ ಇದಂ ಸರ್ವಂ** ಎನ್ನುವ ಸಾಮಾನ್ಯ ಶ್ರುತಿಸಾಹಾಯ್ಯವುಳ್ಳ ವಿಯದಧಿಕರಣದಲ್ಲಿ ಹೇಳಿದ ಯುಕ್ತಿಯಿಂದಲೂ

★ ಸ ಇದಂ ಎನ್ನುವ ಶ್ರುತಿಯು ವಿಯದಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಇಂದ್ರಿಯಗಳಿಗೆ ಉತ್ಪತ್ತಿಯು ಸಿದ್ಧಿಸುತ್ತದೆ. ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ ಎಸ್ನುವ ಸ್ಮೃತಿಯಿಂದ ಸೂಕ್ಷ್ಮರೂಪದಿಂದ ಅನಾದಿತ್ವ ನಿರುಪಾದಾನತ್ವಗಳಿದ್ದರೂ ಸೃಷ್ಟಿಕಾಲದಲ್ಲಿಯೂ ಭೂತಾದ್ಯವಯವಗಳಿಂದ ಉಪಚಯವು ಇದ್ದುದರಿಂದ ಜನ್ಮವು ಕೂಡುವುದರಿಂದ ಸಾವಕಾಶವಾದ ಅನಾದಿತ್ವ ಶ್ರುತಿಯುಕ್ತಿಗಳಿಂದ ಬಾಧವು ಇಲ್ಲದಿರುವುದರಿಂದ ಇಂದ್ರಿಯಗಳು ಉತ್ಪತ್ತಿಯುಳ್ಳವುಗಳು. ॥ ಅಧಿ.೧ ॥

**ಪ್ರಾಣೋತ್ಪತ್ತ್ಯಧಿಕರಣವು ಸಮಾಪ್ತವಾಯಿತು.**

**॥ ಓಂ ಮನೋಜನ್ಮ ಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥**

## ೨ ತತ್ಪ್ರಾಗಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಮನೋಜನ್ಮವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ದ್ವಿಧಾ ಹ್ಯೇವೇಂದ್ರಿಯಾಣಿ ನಿತ್ಯಾನಿ ಚಾನಿತ್ಯಾನಿ ಚ । ತತ್ರ ನಿತ್ಯಂ ಮನೋಽನಾದಿತ್ವಾನ್ನ ಹ್ಯಮನಾಃ ಪುಮಾಂಸ್ತಿಷ್ಠತ್ಯನಿತ್ಯಾನ್ಯನ್ಯಾನಿ ಇತಿ ಗೌಪವನಶ್ರುತೌ ಮನಸೋಽನುತ್ಪತ್ತಿಃ ಸಯುಕ್ತಿಕಾ ಶ್ರೂಯತೇ ॥ ೧ ॥**

**ಭಾಷ್ಯಾರ್ಥ ॥** ನಿತ್ಯಗಳು ಅನಿತ್ಯಗಳೆಂದು ಇಂದ್ರಿಯಗಳು ಎರಡು ಪ್ರಕಾರಗಳು. ಅದರಲ್ಲಿ ಮನಸ್ಸು ನಿತ್ಯವು, ಅನಾದಿಯಾದುದರಿಂದ ಜೀವನು ಯಾವಾಗಲೂ ಅನಾದಿಯಾದ ಸಂಸಾರದಲ್ಲಿ ಮನಸ್ಸು ಇಲ್ಲದವನಾಗಿ ಇರುವುದಿಲ್ಲ (ಮನಸ್ಸೇ ಸಂಸಾರಕ್ಕೆ ಕಾರಣವು.) ಇತರೇಂದ್ರಿಯಗಳು ಅನಿತ್ಯಗಳು ಎಂದು ಗೌಪವನಶ್ರುತಿಯಲ್ಲಿ ಸಯುಕ್ತಿಕವಾಗಿ ಮನಸ್ಸಿಗೆ ಅನುತ್ಪತ್ತಿಯು ಪ್ರತಿಪಾದಿಸಲ್ಪಡುತ್ತದೆ.

**ವಿಶೇಷಾಂಶ ॥** ತಥಾಚ, ಮನಃ ನೋತ್ಪತ್ತಿಮತ್, ನಿತ್ಯಂ ಮನೋಽನಾದಿತ್ವಾತ್ ಎನ್ನುವ ಶ್ರುತಿಯಿಂದಲೂ, ಇತರ ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳಿ ವಿಶಿಷ್ಯ ಮನಸ್ಸಿಗೆ ನಿತ್ಯತ್ವವನ್ನು ಹೇಳಿದ್ದಾರೆ. ಅನಾದಿಯಾದ ಸಂಸಾರದಲ್ಲಿ ಮನಸ್ಸು ಇಲ್ಲದೆ ಪುರುಷರು ಇರಲಾರರು. ಆದಕಾರಣ, ಮನಃ ಸರ್ವೇಂದ್ರಿಯಾಣಿ ಚ ಎಂದು ಮನಸ್ಸಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಅಪ್ರಮಾಣವೇ. ॥ ೧ ॥

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತ ಆಹ ॥ ೨ ॥**

**ಭಾಷ್ಯಾರ್ಥ ॥** ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ. ॥ ೨ ॥

**ಸೂತ್ರ ॥ ಓಂ ತತ್ಪ್ರಾಕ್ ಶ್ರುತೇಶ್ಚ ಓಂ ॥ ೪ ॥**

**ಸೂತ್ರಾರ್ಥ ॥** ಮನೋರೂಪವಾದ ಇಂದ್ರಿಯವು ಹುಟ್ಟುತ್ತದೆ. ಇತರ ಇಂದ್ರಿಯಗಳ

ಉತ್ಪತ್ತಿಗಿಂತ ಮೊದಲು ಉತ್ಪತ್ತಿ ಪ್ರತಿಪಾದಕವಾದ ಮನಃ ಸರ್ವೇಂದ್ರಿಯಾಣಿ ಚ ಎನ್ನುವ ಶ್ರುತಿಯಿಂದಲೂ ಪೂರ್ವಂ ಮನಃ ಸಮುತ್ಪನ್ನಂ ಎನ್ನುವ ಸ್ಮೃತಿಯಿಂದಲೂ.

**ಭಾಷ್ಯ ॥ ಮನಃ ಸರ್ವೇಂದ್ರಿಯಾಣಿ ಚ (ಮು.೨.೧.೩)। ಇತಿ ಪೂರ್ವೋಕ್ತತ್ವಾನ್ನಾನುತ್ಪತ್ತಿರ್ಮನಸೋ ಯುಜ್ಯತೇ ॥ ೩ ॥**

**ಭಾಷ್ಯಾರ್ಥ ॥** ಇತರ ಇಂದ್ರಿಯಗಳಿಂದಲೂ ಮನಸ್ಸು ಮೊದಲು ಹುಟ್ಟಿಯದೆ ಎಂದು ಹೇಳಿದ್ದರಿಂದ ಮನಸ್ಸಿಗೆ ಅನುತ್ಪತ್ತಿಯೂ ಕೂಡುವುದಿಲ್ಲ.

**ಪೀಠಿಕೆ ॥** ಮನಸ್ಸು ಮೊದಲು ಹುಟ್ಟಿಯದೆಯೆಂದು ಹೇಳುವುದು ಹೇಗೆ, ಉತ್ಪತ್ತಿಯನ್ನು ಅಂಗೀಕರಿಸಿದರೆ ಶ್ರುತಿಯುಕ್ತ ವಿರೋಧ ಪರಿಹಾರವು ಹೇಗೆ ಎಂದರೆ—

**ಭಾಷ್ಯ ॥ ಪೂರ್ವಂ ಮನಃ ಸಮುತ್ಪನ್ನಂ ತತೋಽನ್ಯೇಷಾಂ ಸಮುದ್ಭವಃ । ತದನುತ್ಪತ್ತಿವಚನಮಲ್ಪೋಪಚಯಕಾರಣಾತ್ । ಇತಿ ವಾಯುಪ್ರೋಕ್ತವಚನಂ ಚ ಶಬ್ದೇನ ಗೃಹೀತಂ ॥ ೪ ॥ ಅಧಿ.೨ ॥ ॥ ೪ ॥**

**ಭಾಷ್ಯಾರ್ಥ ॥** ಇತರೇಂದ್ರಿಯಗಳಿಂದ ಮೊದಲು ಮನಸ್ಸು ಉಪಚಿತರೂಪದಿಂದ ಹುಟ್ಟಿಯದೆ. ಮನಸ್ಸು ಹುಟ್ಟಿದ ಮೇಲೆ ಮನೋಭಿನ್ನೇಂದ್ರಿಯಗಳಿಗೆ ಸಮುತ್ಪತ್ತಿಯು. ಮನಸ್ಸಿಗೆ ಅನುತ್ಪತ್ತಿ ವಚನವು (ನಿತ್ಯತ್ವವಚನವು) ಅಥವಾ ಅನಾದಿತ್ವ ವಚನವು ಇತರೇಂದ್ರಿಯಗಳಂತೆ ಮನಸ್ಸಿಗೆ ಭೂತಾದಿ ಬಹುಭಾಗಗಳಿಂದ ಉಪಚಯವು ಇಲ್ಲದಿರುವುದರಿಂದ, ಅಂತೂ ಇತರೇಂದ್ರಿಯಗಳಂತೆ ಪ್ರಲಯಕಾಲದಲ್ಲಿಯೂ ಸೂಕ್ಷ್ಮರೂಪದಿಂದ ಇದ್ದಪ್ರಯುಕ್ತ ಉಪಪನ್ನವಾಗುತ್ತದೆ ಎನ್ನುವ ವಾಯುಪ್ರೋಕ್ತಾಖ್ಯ ಗ್ರಂಥವಚನವು ಸೂತ್ರದಲ್ಲಿದ್ದ ಚ ಶಬ್ದದಿಂದ ಸಂಗೃಹೀತವಾಯಿತು. ॥ ೪ ॥

**ವಿಶೇಷಾಂಶ ॥** (೧) ಮನಸ್ಸು ಪೂರ್ವೋತ್ಪನ್ನವು ಎನ್ನುವ ವಿಷಯದಲ್ಲಿ ವಾಯುಪ್ರೋಕ್ತವಚನವೇ ಪ್ರಮಾಣವು. (೨) ಮನಸ್ಸಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ, **ನಿತ್ಯಂ ಮನೋಽನಾದಿತ್ವಾತ್** ಎನ್ನುವ ಶ್ರುತಿವಿರೋಧವಿಲ್ಲ. ಪ್ರಲಯಕಾಲದಲ್ಲಿಯೂ ಇತರೇಂದ್ರಿಯಗಳಂತೆ ಸೂಕ್ಷ್ಮರೂಪದಿಂದ ಮನಸ್ಸು ಇದೆ. ಇಲ್ಲವಾದರೆ ಉಪಚಯೋಕ್ತಿಯು ಕೂಡಲಾರದು. ಮೊದಲು ಇದ್ದುದಕ್ಕೇನೇ ಉಪಚಯವು. ವಿಶಿಷ್ಟ ಮನಸ್ಸಿಗೆ ನಿತ್ಯತ್ವೋಕ್ತಿಯಿಂದ ವಿರೋಧವೂ ಇಲ್ಲ. ಇತರೇಂದ್ರಿಯಗಳಿಂದ ಅಲ್ಪ ಉಪಚಯವಿದ್ದ ಪ್ರಯುಕ್ತ ಅನುತ್ಪತ್ತಿವಚನವು ಕೂಡುತ್ತದೆ. ಪ್ರಲಯಕಾಲದಲ್ಲಿಯೂ ಮನಸ್ಸಿಗೆ ಸತ್ತಾವನ್ನು ಅಂಗೀಕಸಿಸಿದ್ದರಿಂದ **ನ ಹ್ಯಮನಾಃ ಪುಮಾನ್ ತಿಷ್ಠತಿ** ಎನ್ನುವ ಯುಕ್ತಿವಿರೋಧವೂ ಇಲ್ಲ. ॥ ೪ ॥

## ಅಧಿಕರಣ ಸಾರಾಂಶ

ಮನಸ್ಸಿಗೆ ಉತ್ಪತ್ತಿಯು ಇದೆಯೋ ಇಲ್ಲವೋ ಎಂದು ಸಂದೇಹವು. ಉತ್ಪತ್ತಿಯಿಲ್ಲವೆಂದು ಪೂರ್ವಪಕ್ಷವು ಹೇಗೆಂದರೆ ನಿತ್ಯ ಮನೋಽನಾದಿತ್ವಾತ್ ಎನ್ನುವ ಶ್ರುತಿಯಿಂದ ಇತರೇಂದ್ರಿಯಗಳಿಗೆ

ಅನಿತ್ಯತ್ವವನ್ನು ಹೇಳಿ ಮನಸ್ಸಿಗೆ ವಿಶಿಷ್ಟ ನಿತ್ಯತ್ವವನ್ನು ಹೇಳಿದ್ದರಿಂದ ವಿಶೇಷ ಶ್ರುತಿಯಾದುದರಿಂದ ವಿರೋಧವಿದ್ದ ಪ್ರಯುಕ್ತ ಉತ್ಪತ್ತಿಯು ಅಯುಕ್ತವು. ಮತ್ತು ಮನಸ್ಸು ಸಾದಿಯಾದರೆ ತನ್ಮೂಲಕವಾದ ಸಂಸಾರಕ್ಕೂ ಸಾದಿತ್ವವೂ ಬರಬೇಕಾಗಿರುವುದರಿಂದ ಉತ್ಪತ್ತಿಶ್ರುತಿಯು ಅಪ್ರಮಾಣವು ಎಂದರೆ— **ಮನಃ ಸರ್ವೇಂದ್ರಿಯಾಣಿ ಚ** ಎಂದು ಇಂದ್ರಿಯಗಳಿಂದ ಪ್ರತ್ಯೇಕವಾಗಿ ಮನಸ್ಸಿಗೆ ಉತ್ಪತ್ತಿಯನ್ನು ಹೇಳಿದ್ದರಿಂದ ವಿಶೇಷ ಶ್ರುತಿಯಿಂದ ಮನಸ್ಸಿಗೆ ಉತ್ಪತ್ತಿಯು ಸಿದ್ಧಿಸುತ್ತದೆ. **ಅಲ್ಪೋಪಚಯಕಾರಣಾತ್** ಎನ್ನುವ ಸ್ಮೃತಿಯಿಂದ ಇತರೇಂದ್ರಿಯಗಳ ಉಪಚಯದಿಂದ ಮನಸ್ಸಿಗೆ ಅನಾದಿತ್ವವನ್ನು ವಿಧಿಸಿದ್ದು ಅಲ್ಪೋಪಚಯ ಹೇತುವಿನಿಂದ ನಿತ್ಯಂ ಮನಃ ಇತ್ಯಾದಿ ಶ್ರುತಿಯು ಉಪಪನ್ನವಾಗುತ್ತದೆ. ಆದಕಾರಣ ಬಂಧಕ್ಕೆ ಸಾದಿತ್ವಾಪತ್ತಿಯು ಇಲ್ಲದಿರುವುದರಿಂದಲೂ ಮನಸ್ಸು ಉತ್ಪತ್ತಿಯುಳ್ಳದ್ದೇ. ॥ ಅಧಿ.೨ ॥

**ತತ್ಪ್ರಾಗಧಿಕರಣವು ಸಮಾಪ್ತವಾಯಿತು.**

**॥ ಓಂ ವಾಗುತ್ಪತ್ತಿ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥**

## ೩ ತತ್ಪೂರ್ವಕತ್ವಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಉತ್ಪತ್ತಿ ವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ನಿತ್ಯಯಾಽನಿತ್ಯಯಾ ಸ್ತೌಮಿ ಪರಮಾತ್ಮಾನಮಚ್ಯುತಂ । ಇತಿ (೨) ವಾಗ್ವಾವ ನಿತ್ಯಾ ನ ಹ್ಯೇಷೋತ್ಪದ್ಯತೇಽಸ್ಯಾಂ ಹಿ ಪ್ರುತಿರವತಿಷ್ಠತೇ । ಇತಿ ಸಯುಕ್ತಿ ಕಂ ಪೌಷ್ಯಾಯಣಾಶ್ರುತೌ ವಾಚೋಽನುತ್ಪತ್ತಿರುಚ್ಯತೇ ॥ ೧ ॥**

ಭಾಷ್ಯಾರ್ಥ ॥ (೧) ನಿತ್ಯಾಶ್ರಯತ್ವದಿಂದ ನಿತ್ಯವಾದ ವಾಗಿಂದ್ರಿಯದಿಂದಲೂ ಅನಿತ್ಯಸೃಷ್ಟ್ಯಾದ್ಯಾಶ್ರಯತ್ವದಿಂದ ಅನಿತ್ಯವಾದ ವಾಗಿಂದ್ರಿಯದಿಂದಲೂ ನಾಶರಹಿತನಾದ ಪರಮಾತ್ಮನನ್ನು ಸ್ತೋತ್ರಮಾಡುತ್ತೇನೆ, ಎಂದು. (೨) ವಾಗಿಂದ್ರಿಯವು ನಿತ್ಯವು. ಏಕೆಂದರೆ—ಈ ವಾಗಿಂದ್ರಿಯವು ಹುಟ್ಟುವುದಿಲ್ಲ. ಹೇಗೆಂದರೆ—ಈ ಶ್ರುತ್ಯಾಶ್ರಯತ್ವವು ಕೂಡುವುದಿಲ್ಲ. ಅನಾದ್ಯಾಶ್ರಯವಾದುದು ಸಾದಿಯಾದುದು ಎಲ್ಲಿಯೂ ದೃಷ್ಟವಾಗಲಿಲ್ಲ ಎನ್ನುವ) ಶ್ರುತ್ಯಾಶ್ರಯತ್ವ ಯುಕ್ತಿಸಹಿವಾದ ಪೌಷ್ಯಾಯಣ ಶ್ರುತಿಯಲ್ಲಿ ವಾಗಿಂದ್ರಿಯಕ್ಕೆ ಅನುತ್ಪತ್ತಿಯು ಹೇಳಲ್ಪಡುತ್ತದೆ. (ಆದಕಾರಣ ಸರ್ವೇಂದ್ರಿಯಾಣಿ ಚ ಎಂದು ಸಾಮಾನ್ಯವಾಗಿ ವಾಗಿಂದ್ರಿಯಕ್ಕೆ ಉತ್ಪತ್ತಿ ಪ್ರತಿಪಾದಕ ಶ್ರುತಿಯು ಅಪ್ರಮಾಣವೇ.)

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋ ಬ್ರವೀತಿ ॥ ೨ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ. ॥ ೨ ॥

**ಸೂತ್ರ ॥ ಓಂ ತತ್ಪೂರ್ವಕತ್ವಾದ್ವಾಚಃ ಓಂ ॥ ೫ ॥**

**ಸೂತ್ರಾರ್ಥ ॥** ವಾಗಿಂದ್ರಿಯಕ್ಕೆ ಮನೋಜನ್ಯತ್ವವನ್ನು ಹೇಳಿದ್ದರಿಂದ ವಾಗಿಂದ್ರಿಯವು ಹುಟ್ಟುತ್ತದೆ.

**ಭಾಷ್ಯ ॥ (೧) ತಸ್ಮಾನ್ಮನ ಏವ ಪೂರ್ವರೂಪಂ ವಾಗುತ್ತರರೂಪಂ (ಐ.ಆ.೩.೧.೧.)। ಇತಿ ಮನಃಪೂರ್ವಕತ್ವಾದ್ವಾಚೋ ನಾನುತ್ಪತ್ತಿಃ॥ (೨) ವಾಗಿಂದ್ರಿಯಸ್ಯ ನಿತ್ಯತ್ವಂ ಶ್ರುತಿಸನ್ನಿಧಿಯೋಗ್ಯತಾ । ಉತ್ಪತ್ತಿರ್ಮನಸೋ ಯಸ್ಮಾನ್ನ ನಿತ್ಯತ್ವಂ ಕುತಶ್ಚನ॥ ಇತಿ ವಾಯುಪ್ರೋಕ್ತೇ ॥ ೫ ॥ ಅಧಿ. ೩ ॥ ॥ ೩ ॥**

**ಭಾಷ್ಯಾರ್ಥ ॥** (೧) (ಮನಸಾ ಅಗ್ರೇ ಸಂಕಲ್ಪಯತಿ ಅಥ ವಾಚಾ ವ್ಯಾಹರತಿ ಆದುದರಿಂದ) ಮನಸ್ಸೇ ಕಾರಣವು. ವಾಗಿಂದ್ರಿಯವು ಕಾರ್ಯವು ಎನ್ನುವ ಐತರೇಯ ಶ್ರುತಿಯಲ್ಲಿ ವಾಗಿಂದ್ರಿಯಕ್ಕೆ ಮನಸ್ಸು ಕಾರಣವೆಂದು ಶ್ರುತವಾದುದರಿಂದ ಕಾರಣವತ್ತಿಗೆ ಕಾರ್ಯತ್ವವು ನಿಯತವಾದುದರಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯು ಇಲ್ಲ (೨) (ಹಾಗಾದರೆ ಶ್ರುತ್ಯಾದಿ ವಿರೋಧವೆಂದರೆ) ವಾಗ್ವಾವ ನಿತ್ಯಾ ಇತ್ಯಾದಿಗಳಲ್ಲಿ ಹೇಳಲ್ಪಡತಕ್ಕ ವಾಗಿಂದ್ರಿಯಕ್ಕೆ ನಿತ್ಯತ್ವವೆಂದರೆ ಶ್ರುತಿಸನ್ನಿಧಿಯೋಗ್ಯತ್ವವೇ. (ಅಂದರೆ ನಿತ್ಯಭೂತವಾದ ಶ್ರುತಿ ಸನ್ನಿಧಾನಪಾತ್ರವಾದುದರಿಂದ ನಿತ್ಯತ್ವವು ಔಪಚಾರಿಕವು.) (ಏಕೆಂದರೆ) ಮನಸ್ಸಿನಿಂದ ಯಾವ ಕಾರಣದಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯದೆಯೋ ಆದುದರಿಂದ ಯಾವುದರಿಂದಲೂ ಶ್ರುತಿಬಲದಿಂದಲೂ ನಿತ್ಯವಾದ ಶ್ರುತ್ಯಾತ್ರಯತ್ವಯುಕ್ತಿಯಿಂದಲಾಗಲೀ ನಿತ್ಯತ್ವವು (ಅನಾದಿತ್ವವು) ಇಲ್ಲ ಎಂದು ವಾಯುಪ್ರೋಕ್ತದಲ್ಲಿ ಹೇಳಿದೆ. ॥ ೨ ॥

## ಮಾಯಾವಾದಿರೀತ್ಯಾ

**ವಿಚಾರ ॥** ತಥಾ ಪ್ರಾಣಾಃ ಎನ್ನುವುದನ್ನು ಆರಂಭಿಸಿ ತತ್ಪೂರ್ವಕತ್ವಾತ್ ಎನ್ನುವ ಪರ್ಯಂತ ಸೂತ್ರಗಳು ಒಂದು ಅಧಿಕರಣವು. ಅದರಲ್ಲಿ ಪ್ರಾಣಗಳು ಅನಾದಿಗಳು, ತತ್ತೇಜೋಽಸೃಜತ ಎಂದು. ಛಾಂದೋಗ್ಯದಲ್ಲಿ ಸೃಷ್ಟಿಪ್ರಕರಣದಲ್ಲಿ ಪ್ರಾಣಗಳಿಗೆ ಉತ್ಪತ್ತಿಯು ಶ್ರುತವಾಗಿಲ್ಲ ಎಂದರೆ— ಏತಸ್ಮಾಜ್ಜಾಯತೇ ಪ್ರಾಣಃ ಇತ್ಯಾದಿಗಳಲ್ಲಿ ಜನ್ಮವು ಶ್ರುತವಾದುದರಿಂದ ಅಸದ್ವಾ ಇತ್ಯಾದಿಗಳು ಅವಾಂತರ ಪ್ರಲಯಪರವಾದ ಪ್ರಯುಕ್ತ ಸಾದಿಗಳು ಎಂದು ಸಿದ್ಧಾಂತವು ಎಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವು. ಏತಸ್ಮಾತ್ ಎನ್ನುವ ಶ್ರುತಿಯಲ್ಲಿ ಪ್ರಾಣಗಳಿಗೆ ಉತ್ಪತ್ತಿಯು ಶ್ರುತವಾಗಿದ್ದರೂ ಕ್ವಚಿತ್ ಶ್ರುತವಾಗಲಿಲ್ಲವೆನ್ನುವುದರಿಂದ ಮಾತ್ರ ಪೂರ್ವಪಕ್ಷವೇ ಹುಟ್ಟಲಾರದು. ಮತ್ತು ಪ್ರಾಣಗಳಿಗೆ ಸ್ವರೂಪೇಣ ಸಾದಿತ್ವ ಸಿದ್ಧಾಂತವು ನಿತ್ಯಾನ್ಯೇತಾನಿ ಪೌಕ್ಷ್ಮೇಣ ಇತ್ಯಾದಿ ಭಾಷ್ಯೋಕ್ತ ಸ್ಮೃತಿವಿರುದ್ಧವು.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ಜೀವನು ಹೇಗೆ ಅನಾದಿಯೋ ಹಾಗೆಯೇ ಪ್ರಾಣಗಳೂ ಅನಾದಿಗಳು. ಪ್ರಾಣಾ ವಾ ವ ಋಷಯಃ ಎನ್ನುವ ಶ್ರುತಿಯಿಂದ ಎಂದರೆ—ತಥಾ ಪ್ರಾಣಃ ಎನ್ನುವ ಸೂತ್ರದಿಂದ ಪೂರ್ವಪಕ್ಷ ಮಾಡಿಕೊಂಡು, ಅದರಲ್ಲಿ ಪ್ರಾಣಶಬ್ದವು ಬ್ರಹ್ಮಪರವು. ಬ್ರಹ್ಮನಲ್ಲಿ ಬಹುತ್ವವು ಕೂಡದಿರುವುದರಿಂದ

ಪ್ರಾಣಾಃ ಎನ್ನುವ ಬಹುವಚನ ಶ್ರುತಿಯಾದರೂ ಗೌಣಿಯು. ಎಂದು ಗೌಣ ಇತ್ಯಾದಿ ಸೂತ್ರಗಳಿಂದ ಸಿದ್ಧಾಂತ ಮಾಡಿರುತ್ತಾರೆ, ಎಂದು ಹೇಳುತ್ತಾರೆ. ಅದು ಅಯುಕ್ತವು. ಜೀವಾನುತ್ಪತ್ತಿಗೂ ವಿಯದಾದ್ಯುತ್ಪತ್ತಿಗೂ ಬಹುವ್ಯವಧಾನವು ಸಮಾನವಾದಾಗ್ಯೂ ಜಡಗಳಾದ ಪ್ರಾಣಗಳಲ್ಲಿ ಮುಖ್ಯವಾದ ಉತ್ಪತ್ತಿಮತ್ತ್ವೇನ ವಿಯದಾದಿಜಡ ಸಾಮ್ಯವನ್ನು ಹೇಳಿ ಸಿದ್ಧಾಂತತ್ವವು ಕೂಡುವಾಗ ಉತ್ತರಸೂತ್ರದಲ್ಲಿ ಸಿದ್ಧಾಂತದ್ಯೋತಕ ತು ಶಬ್ದಾದಿಗಳು ಇಲ್ಲವಾದರೂ ತಥಾ ಇತ್ಯಾದಿ ಸೂತ್ರಕ್ಕೆ ಪೂರ್ವಪಕ್ಷತ್ವವೇ ಕೂಡಲಾರದು. ಪ್ರಾಣಾ ವಾ ಋಷಯಃ ಎನ್ನುವ ವಾಕ್ಯದಲ್ಲಿ ಬಹುತ್ವವು ಗೌಣವೆಂದಾದರೂ ಪ್ರಾಣಾ ಏವಾನಾದಯಃ ಎಂದು ಪ್ರಾಣಾನಾದಿತ್ವ ಶ್ರುತಿಗೆ ಗೌಣತ್ವವನ್ನು ಹೇಳದೆ ಇಂದ್ರಿಯಗಳಿಗೆ ಉತ್ಪತ್ತಿಯು ಸಿದ್ಧಿಸದೆ ಇದ್ದುದರಿಂದ ಗೌಣೀ ಎನ್ನುವ ಸೂತ್ರದಲ್ಲಿ ಅನಾದಿತ್ವ ಶ್ರುತಿಯು ಗೌಣೀ ಎಂದೇ ಹೇಳತಕ್ಕುದು.

## ಅಧಿಕರಣ ಸಾರಾಂಶ

ವಾಗಿಂದ್ರಿಯವು ಉತ್ಪತ್ತಿಯುಳ್ಳದ್ದೋ ಅಲ್ಲವೋ ಎಂದು ಸಂದೇಹವು ಬಂದರೆ—ವಾಗ್ವಾವ ನಿತ್ಯಾ ಎನ್ನುವ ಶ್ರುತಿಯಿಂದಲೂ ಸದಾ ವೇದೋಚ್ಚಾರಣ ಸಾಮರ್ಥ್ಯರೂಪವಾದ ಶ್ರುತ್ಯಾಶ್ರಯತ್ವರೂಪವಾದ ವಾಕ್ಯಶೇಷೋಕ್ತಯುಕ್ತಿಯಿಂದಲೂ ಉತ್ಪತ್ತಿಯುಳ್ಳದ್ದಲ್ಲ. ಆದುದರಿಂದ ಸರ್ವೇಂದ್ರಿಯಾಣಿ ಚ ಎನ್ನುವ ವಾಕ್ಕಿಗೆ ಜನ್ಮಪ್ರತಿಪಾದಕ ಶ್ರುತಿಯು ಅಪ್ರಮಾಣವು ಎಂದು ಪೂರ್ವಪಕ್ಷವು ಬಂದರೆ— ಮನಃ ಪೂರ್ವರೂಪಂ, ವಾಗುತ್ತರರೂಪಂ, ಎನ್ನುವ ಶ್ರುತಿಯಲ್ಲಿ ವಾಗಿಂದ್ರಿಯಕ್ಕೆ ಮನಸ್ಸು ಕಾರಣವೆಂದು ಶ್ರುತವಾಗಿದೆ. ವಾಕ್ ಶಬ್ದವು ವಾಚಾ ವೃಚ್ಛರತಿ ಎನ್ನುವ ಪೂರ್ವವಾದ ವಾಕ್ ಶಬ್ದದಿಂದ, ಮನಸೋ ವಾವ ವಾಗುತ್ಪದ್ಯತೇ, ವಾಚೋ ವ್ಯಾಹರಣಂ ಎನ್ನುವ ಶ್ರುತ್ಯಂತರದಲ್ಲಿಯೂ ಉಕ್ತವಾದ ವಾಕ್ ಶಬ್ದದಿಂದ ಇಂದ್ರಿಯ ಪರವಾಗಿದೆ. ವಾಗಿಂದ್ರಿಯಸ್ಯ ನಿತ್ಯತ್ವಂ ಶ್ರುತಿಸನ್ನಿಧಿಯೋಗ್ಯತಾ ಎನ್ನುವ ಸ್ಮೃತಿಯಿಂದ ನಿತ್ಯವಾದ ವೇದಸನ್ನಿಧಿಮಾತ್ರಾಭಿಪ್ರಾಯದಿಂದ ಅಮುಖ್ಯವಾಗಿ ನಿತ್ಯತ್ವಶ್ರುತಿಯು ಕೂಡುವುದರಿಂದ ಜನ್ಮಶ್ರುತಿಯಿಂದ ವಾಗಿಂದ್ರಿಯವು ಉತ್ಪತ್ತಿಯುಳ್ಳದ್ದೇ. ॥ ಅಧಿ.೨. ॥

**ತತ್ಪೂರ್ವಕತ್ವಾಧಿಕರಣವು ಸಮಾಪ್ತವಾಯಿತು.**

**॥ ಓಂ ಪ್ರಾಣಸಂಖ್ಯಾ ಶ್ರುತ್ಯವಿರೋಧ ಸಮನ್ವಯ ಗೋಚರಾಯನಮಃ ಓಂ ॥**

## ೪ ಸಪ್ತಗತ್ಯಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಪ್ರಾಣಸಂಖ್ಯಾವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಶ್ರುತಿ ವಿರೋಧವನ್ನು ತೋರಿಸುತ್ತಾ ಪೂರ್ವಪಕ್ಷವನ್ನು ಸೂಚಿಸುತ್ತಾರೆ—

**ಭಾಷ್ಯ ॥ (೧) ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್ (ಮು.೨.೧.೮) । ಇತಿ ಶ್ರುತಿಃ ॥ (೨) ಸಪ್ತೈವ ಮಾರುತಾ ಬಾಹ್ಯೇ ಪ್ರಾಣಾಃ ಸಪ್ತ ತಥಾಽತ್ಮನಿ । ಆಧಿದೈವೇ ತಥಾಽಧ್ಯಾತ್ಮೇ ಸಂಖ್ಯಾಸಾಮ್ಯಂ ವಿದೋ ವಿದುಃ ॥ ಇತಿ ಚ ಸ್ಕಾಂದೇ ॥ ೧ ॥**

**ಭಾಷ್ಯಾರ್ಥ ॥** (೧) ಪರಮಾತ್ಮನ ದೆಶೆಯಿಂದ ಏಳು ಇಂದ್ರಿಯಗಳು ಹುಟ್ಟುತ್ತವೆ, ಎನ್ನುವ ಅಥರ್ವಣ ಶ್ರುತಿಯು (ಪ್ರಾಣಗಳಿಗೆ ಸಪ್ತತ್ವವನ್ನು ಹೇಳುತ್ತದೆ.) (೨) ದೇಹದಿಂದ ಹೊರಗೆ ಇರತಕ್ಕ ಮರುತ್ಸಂಜ್ಞಕಗಳಾದ ಇಂದ್ರಿಯಾಭಿಮಾನಿ ದೇವತೆಗಳು, ಏಳೇ. ಹಾಗೆಯೇ ದೇಹದಲ್ಲಿರತಕ್ಕ ಅಭಿಮನ್ಯಮಾನ್ಯಗಳಾದ ಪ್ರಾಣಗಳೂ ಏಳೇ. ತಥಾಚ ಅಧಿದೈವೇ=ದೇಹದಿಂದ ಬಹಿರ್ಗತರಾದ ಅಭಿಮಾನಿದೇವತೆಗಳಲ್ಲಿಯೂ, ಅಧ್ಯಾತ್ಮೇ=ದೇಹಾಂತರ್ಗತಗಳಾದ ಅಭಿಮನ್ಯಮಾನಗಳಾದ ಪ್ರಾಣಗಳಲ್ಲಿಯೂ ಜ್ಞಾನಿಗಳು ಸಮಸಂಖ್ಯಾಕತ್ವವನ್ನು ತಿಳಿಯುತ್ತಾರೆ, ಎಂದು ಸ್ಕಾಂದಪುರಾಣದಲ್ಲಿದೆ.

**ಭಾಷ್ಯ ॥ ದ್ವಾದಶ ವಾ ಏತೇ ಪ್ರಾಣಾ ದ್ವಾದಶ ಮಾಸಾ ದ್ವಾದಶಾದಿತ್ಯಾ ದ್ವಾದಶ ರಾಶಯೋ ದ್ವಾದಶಗ್ರಹಾಃ★ । ಇತಿ ಕೌಂಡಿನ್ಯಶ್ರುತೌ ದ್ವಾದಶ ಪ್ರಾಣಾ ದೃಶ್ಯಂತೇ ॥ ೨ ॥**

**ಭಾಷ್ಯಾರ್ಥ ॥** ಇಂದ್ರಿಯಗಳೂ ಹನ್ನೆರಡು. ಮಾಸಗಳೂ ಹನ್ನೆರಡು. ರಾಶಿಗಳೂ ಹನ್ನೆರಡು. ಗ್ರಹಗಳು (ಚೈತ್ರಾದಿ ಹನ್ನೆರಡು ಮಾಸದೇವತೋದ್ದೇಶ್ಯಕ ಯಾಗಾರ್ಥಗಳಾದ ಸೋಮರಸಗ್ರಹಣಕ್ಕೆ ಉಪಯುಕ್ತಗಳಾದ ಸೂಕ್ಷ್ಮವಾದ ಉಲೂಖಲಾಕಾರಗಳಾದ ಪಾತ್ರವಿಶೇಷಗಳು) ಹನ್ನೆರಡು ಪ್ರಾಣ (ಇಂದ್ರಿಯ)ಗಳು ಕಾಣಲ್ಪಡುತ್ತವೆ.

**ವಿಶೇಷಾಂಶ ॥** (೧) ಸಪ್ತ ಪ್ರಾಣಾಃ ಎನ್ನುವ ಶ್ರುತಿಯಿಂದಲೂ ಪ್ರಾಣಾಭಿಮಾನಿಗಳು ಏಳು ಮಂದಿಯಾದ ಪ್ರಯುಕ್ತವೂ ಪ್ರಾಣ (ಇಂದ್ರಿಯ)ಗಳು ಏಳೇ. ೨ ಅಥವಾ **ದ್ವಾದಶ ವಾ ಏತೇ ಪ್ರಾಣಾಃ** ಎನ್ನುವ ಶ್ರುತಿಯಿಂದಲೂ ಪ್ರಾಣಾಭಿಮಾನಿಗಳಾದ ಆದಿತ್ಯರೂ ಹನ್ನೆರಡು ಆದಪ್ರಯುಕ್ತವೂ ಪ್ರಾಣಗಳು ಹನ್ನೆರಡು. ಆದಕಾರಣ ಎರಡು ಶ್ರುತಿಗಳು ಸಮಾನಗಳಾದುದರಿಂದ ಪರಸ್ಪರ ವಿರೋಧದಿಂದ ಅಪ್ರಾಮಾಣ್ಯವು. ॥ ೨ ॥

**ಪೀಠಿಕೆ ॥** ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತೋ ವಕ್ತಿ ॥ ೩ ॥**

**ಭಾಷ್ಯಾರ್ಥ ॥** ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ. ॥ ೩ ॥

## ಸೂತ್ರ ॥ ಓಂ ಸಪ್ತಗತೇರ್ವಿಶೇಷಿತತ್ವಾಚ್ಚ ಓಂ ॥ ೬ ॥

**ಭಾಷ್ಯ ॥ ಜ್ಞಾನೇಂದ್ರಿಯಾಪೇಕ್ಷಯಾ ಸಪ್ತತ್ವಂ । ಗುಹಾಶಯಾಂ ನಿಹಿತಾಃ ಸಪ್ತಸಪ್ತ (ಮು.೨.೧.೮.)। ಇತಿ ವಿಶೇಷಾತ್ ॥ ೩ ॥**

**ಭಾಷ್ಯಾರ್ಥ ॥** ಗತೇಃ=ಚಕ್ಷುಃ ಶ್ರೋತ್ರ ಸ್ಪರ್ಶನ ರಸನ ಘ್ರಾಣ ಮನೋ ಬುದ್ಧಿ ಎನ್ನುವ ಏಳು ಜ್ಞಾನಕರಣಗಳಾದ ಇಂದ್ರಿಯಗಳನ್ನು ಅಪೇಕ್ಷಿಸಿಯೇ ಇಂದ್ರಿಯಗಳಿಗೆ ಸಪ್ತತ್ವವು (ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ವಸ್ತುತಃ ಇಂದ್ರಿಯಗಳು ಹನ್ನೆರಡೇ ಆದಕಾರಣ ವಿರೋಧವಿಲ್ಲ) (ಈ ಏಳು

★ ಗ್ರಹಾಃ ಸೋಮಸ್ಯ ದ್ವಾದಶ ಋತುಯಾಜಗ್ರಹಾಃ ಮಧ್ವಾದಿದ್ವಾದಶಮಾಸೋದ್ದೇಶ್ಯಾಃ ಎಂದು ತತ್ವಪ್ರದೀಪದಲ್ಲಿ.

ಇಂದ್ರಿಯಗಳಿಗೆ ಜ್ಞಾನೇಂದ್ರಿಯತ್ವವು ಹೇಗೆ ಎಂದರೆ—) **ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್ ಸಪ್ತಾರ್ಚಿಷಃ ಸಮಿಧಃ ಸಪ್ತ ಹೋಮಾಃ । ಸಪ್ತೇಮೇ ಲೋಕಾಃ ಯೇಷು ಚರಂತಿ ಪ್ರಾಣಾಃ ಗುಹಾಶಯಾಂ ನಿಹಿತಾಃ ಸಪ್ತ ಸಪ್ತ ॥** ರಮಾದೇವಿಯಲ್ಲಿ ಗರ್ಭಾಧಾನವನ್ನು ಮಾಡತಕ್ಕ ಶ್ರೀಹರಿಯಿಂದ ಏಳು ಇಂದ್ರಿಯಗಳು ಹುಟ್ಟಿದವು. ಏಳು ಇಂದ್ರಿಯ ವ್ಯಾಪಾರಗಳು ಹುಟ್ಟಿದವು. ವಿಷಯಗಳೂ ಸಪ್ತವಿಷಯೇಂದ್ರಿಯ ಸಂಬಂಧಗಳೂ ಹುಟ್ಟಿದವು. ಪ್ರತಿಶರೀರದಲ್ಲಿ ಜ್ಞಾನಾರ್ಥವಾಗಿ ಶ್ರೀಹರಿಯಿಂದ ಸ್ಥಾಪಿತಗಳಾದ ಏಳೇಳು ಇಂದ್ರಿಯಗಳು. (ಯಾವ ಗೋಳಕಗಳಲ್ಲಿ ಸಂಚರಿಸುತ್ತವೋ ಆ ಲೋಕಗಳೂ ಏಳು.) ಎಂದು ಏಳು ಇಂದ್ರಿಯಗಳಿಗೆ ಜ್ಞಾನಾರ್ಥತ್ವ ವಿಶೇಷಣದಿಂದ ವಿಶೇಷಿತತ್ವವಿದ್ದಪ್ರಯುಕ್ತ.

**ಪೀಠಿಕೆ ॥ ಸಪ್ತ ಪ್ರಾಣಾಃ** ಎನ್ನುವ ಶ್ರುತಿಗೆ ಸಾವಕಾಶತ್ವವಿದ್ದರೂ ಇಂದ್ರಿಯಗಳು ಹನ್ನೆರಡು ಎನ್ನುವುದು ಹೇಗೆ ಎಂದರೆ—

**ಭಾಷ್ಯ ॥ ಸಪ್ತ ಪ್ರಾಣಾಸ್ತ್ವಗತೇಃ ಪಂಚ ಪ್ರಾಣಾಶ್ಚ ಕರ್ಮಣಃ । ಏವಂ ಪ್ರಾಣದ್ವಾ-ದಶಕಂ ಶರೀರೇ ನಿತ್ಯಸಂಸ್ಥಿತಂ ॥ ಇತಿ ಭವಿಷ್ಯತ್ಪರ್ವವಚನಂ ಚ ಶಬ್ದಾತ್ ॥ ೬ ॥ ॥ ೪ ॥**

**ಭಾಷ್ಯಾರ್ಥ ॥** ಜ್ಞಾನಸಂಬಂಧಿಗಳಾದ ಇಂದ್ರಿಯಗಳು ಏಳು. ಕ್ರಿಯಾರೂಪಕರ್ಮಜನಕಗಳಾದ ಇಂದ್ರಿಯಗಳು ಐದು. ಹೀಗೆ ಹನ್ನೆರಡು ಇಂದ್ರಿಯಗಳು ಪ್ರತಿಶರೀರದಲ್ಲಿ ನಿಯಮೇನ ಇರತಕ್ಕದ್ದು. ಹೀಗೆ ಭವಿಷ್ಯತ್ಪರ್ವವಚನವು ಚ ಶಬ್ದದಿಂದ ಸಂಗ್ರಹೀತವಾಯಿತು. ॥ ೩. ॥

**ಪೀಠಿಕೆ ॥** ಏಳು ಇಂದ್ರಿಯಗಳಿಂದ ಇತರ ಇಂದ್ರಿಯಗಳು ಇಲ್ಲ. ಇದ್ದರೆ ಸಹಪಾಠವು ಬರಬೇಕಿತ್ತು. ಆದುದರಿಂದ ಆಥರ್ವಣದಲ್ಲಿ ಸಹಪಾಠವಿಲ್ಲದಿರುವುದರಿಂದ ಅವುಗಳು ಇಲ್ಲವೇ ಇಲ್ಲ ಎಂದರೆ—

## ಸೂತ್ರ ॥ ಓಂ ಹಸ್ತಾದಯಸ್ತು ಸ್ಥಿತೇಽತೋ ನೈವಂ ಓಂ ॥ ೭ ॥

**ಭಾಷ್ಯ ॥ ಹಸ್ತಾದೀನಾಂ ಕರ್ಮವಿಷಯತ್ವಾನ್ನ ಸಹಪಾಠಃ ॥ ೪ ॥**

**ಭಾಷ್ಯಾರ್ಥ ॥** ಪಾಣಿ ಪಾದ ಪಾಯು ಗುಪ್ತ ವಾಕ್ಕುಗಳು, ಕರ್ಮಾರ್ಥವಾಗಿ. ಆದಕಾರಣ ಅಂದರೆ ಹಸ್ತಾದಿಗಳಿಗೆ ಕರ್ಮಕರಣತ್ವವಿದ್ದುದರಿಂದ (ಏಳು ಇಂದ್ರಿಯಗಳಿಂದ ಕೂಡಿಕೊಂಡು ಶ್ರುತಿಯಲ್ಲಿ) ಸಹಪಾಠವಿಲ್ಲ. (ಅಂತೂ ಸಹಪಾಠಾಭಾವಕ್ಕೆ ಕಾರಣಾಂತರವಿದ್ದುದರಿಂದ ಏಳರಿಂದ ಅತಿರಿಕ್ತ ಇಂದ್ರಿಯಗಳು ಇಲ್ಲವೆನ್ನುವುದು ಇದರಿಂದ ಸಿದ್ಧಿಸುವುದಿಲ್ಲ)

**ಪೀಠಿಕೆ ॥** ಗತಿ ಸ್ಥಿತಿಶಬ್ದಗಳು ಜ್ಞಾನಕರ್ಮಾರ್ಥಕಗಳು ಹೇಗೆ ಆಗುವುದು ಎಂದರೆ—

**ಭಾಷ್ಯ ॥ ಸಂಸಾರಸ್ಥಿತಿಹೇತುತ್ವಾತ್ ಸ್ಥಿತಂ ಕರ್ಮ ವಿದೋ ವಿದುಃ । ತಸ್ಮಾದುದ್ಗತಿಹೇತು-ತ್ವಾಜ್ಜ್ಞಾನಂ ಗತಿರಿಹೋಚ್ಯತೇ ॥ ಇತಿ ಚವಾಯುಪ್ರೋಕ್ತೇ ॥ ೭ ॥ ಅಧಿ.೪ ॥ ॥ ೫ ॥**

**ಭಾಷ್ಯಾರ್ಥ ॥** ಕರ್ಮಗಳು ಪುರುಷರ ಸಂಸಾರಸ್ಥಿತಿಯಲ್ಲಿ ಕಾರಣವಾಗಿರುವುದರಿಂದ ಜ್ಞಾನಿಗಳು ಮಾನುಷಕರ್ತೃಕ ಪ್ರವೃತ್ತಿಕರ್ಮವನ್ನು ಸ್ಥಿತಶಬ್ದವಾಚ್ಯವನ್ನಾಗಿ ತಿಳಿಯುತ್ತಾರೆ. ಸಂಸಾರದಿಂದ ಬಿಡುಗಡೆಗೆ ಕಾರಣವಾಗಿರುವುದರಿಂದ ಈ ಸೂತ್ರದಲ್ಲಿಯೂ ಈ ಪ್ರಮಾಣದಲ್ಲಿಯೂ ಬ್ರಹ್ಮಜ್ಞಾನವು ಗತಿಯೆಂದು ಹೇಳಲ್ಪಡುತ್ತದೆ, ಎಂದು ವಾಯುಪ್ರೋಕ್ತದಲ್ಲಿ ಹೇಳಿದೆ.

**ವಿಶೇಷಾಂಶ ॥** ಯದ್ಯಪಿ ಪ್ರವೃತ್ತ ಕರ್ಮವೇ ಸಂಸಾರಸ್ಥಿತಿಗೆ ಕಾರಣವು. ಬ್ರಹ್ಮಜ್ಞಾನವೇ ಸಂಸಾರದಿಂದ ಬಿಡುಗಡೆಗೆ ಕಾರಣವು. ಆದಾಗ್ಯೂ ಪ್ರವೃತ್ತಕರ್ಮ ಸಜಾತೀಯವಾದ ನಿವೃತ್ತ ಕರ್ಮದಲ್ಲಿ ಸ್ಥಿತಶಬ್ದವೂ ಬ್ರಹ್ಮಜ್ಞಾನಕ್ಕೆ ಸಜಾತೀಯವಾದ ಘಟಾದಿಜ್ಞಾನದಲ್ಲಿ ಗತಿಶಬ್ದವೂ ಅಮುಖ್ಯವಾಗಿ ಉಪಪನ್ನವಾಗುತ್ತವೆ. ॥ ೭ ॥ ॥ ೫ ॥

## ಮಾಯಾವಾದಿರೀತ್ಯಾ

**ವಿಚಾರ ॥** **ಸಪ್ತ ಪ್ರಾಣಾಃ** ಇತ್ಯಾದಿ ಶ್ರುತಿಗಳಲ್ಲಿ ಸಪ್ತತ್ವವು ತಿಳಿಯುವುದರಿಂದಲೂ **ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ** ಎಂದು ವಿಶೇಷಣದಿಂದ ಕೂಡಿದ ಪ್ರಯುಕ್ತವೂ ಪ್ರಾಣಗಳು ಏಳೇ ಎಂದು ಸಪ್ತ ಎನ್ನುವ ಸೂತ್ರದಿಂದ ಪೂರ್ವಪಕ್ಷ ಮಾಡಿಕೊಂಡು **ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ** ಎನ್ನುವ ಶ್ರುತಿಯಿಂದ ಏಕಾದಶ (೧೧) ಎಂದು ಹಸ್ತ ಎನ್ನುವ ಸೂತ್ರದಿಂದ ಸಿದ್ಧಾಂತ ಮಾಡಲ್ಪಟ್ಟಿದೆ. ಅಂದರೆ—ಹಸ್ತಾದಿರೂಪಗಳಾದ ಇಂದ್ರಿಯಗಳು ಇವೆ. ಆದಕಾರಣ ಪ್ರಾಣಗಳಿಗೆ ಏಕಾದಶತ್ವವು ಇರುತ್ತಿರಲು, ಹೀಗೆ ಸಪ್ತತ್ವವು ಇಲ್ಲ ಎಂದು ಸಿದ್ಧಾಂತಪಡಿಸಿರುತ್ತಾರೆ. ಅದು ಅಯುಕ್ತವು; ನಮ್ಮ ರೀತಿಯಾಗಿ ಇಂದ್ರಿಯಗಳಿಗೆ ಏಳರಿಂದ ಅಧಿಕಸಂಖ್ಯೆಯು ಇರುತ್ತಿರಲು **ಸಪ್ತ ಪ್ರಾಣಾಃ** ಎನ್ನುವ ಶ್ರುತಿಯು ಅಯುಕ್ತವಾಗುವುದು. ದೊಡ್ಡ ಸಂಖ್ಯೆಯಲ್ಲಿ ಅವಚ್ಛೇದಕ ವಿಶೇಷವಿಲ್ಲದ ಅಲ್ಪಸಂಖ್ಯಾ ವ್ಯವಹಾರವು ಕೂಡುವುದಿಲ್ಲ ಎಂದು ಶಂಕಾ ಬಂದರೆ ಘ್ರಾಣ ರಸನ ಚಕ್ಷುಃ ತ್ವಕ್ ಶ್ರೋತ್ರ ಮನಃ ಬುದ್ಧಿಗಳಲ್ಲಿ ಜ್ಞಾನೇಂದ್ರಿಯತ್ವರೂಪವಾದ ವಿಶೇಷವು **ಗುಹಾಶಯಾಂ** ಎನ್ನುವ ವಾಕ್ಯದಲ್ಲಿ ಸೂಚಿತವಾದುದು ಅವಚ್ಛೇದಕ ವಿಶೇಷವು ಇದೆ ಎಂದು ಅವಶ್ಯವಾಗಿ ಹೇಳಬೇಕಾದ ಪರಿಹಾರೋಕ್ತಿಯಿಂದ ಸಪ್ತ ಎನ್ನುವ ಸೂತ್ರಕ್ಕೆ ಸಿದ್ಧಾಂತತ್ವವು ಕೂಡುವಾಗ ಪೂರ್ವಪಕ್ಷಪರತ್ವವೇ ಕೂಡಲಾರದು. ಮತ್ತು ಶ್ರುತಿಯಲ್ಲಿದ್ದ ಅವಗತಿವಾಚಕವಾದ ಸೂತ್ರದಲ್ಲಿದ್ದ ಗತಿಶಬ್ದದಿಂದಲೇ **ಸಪ್ತ ಪ್ರಾಣಾಃ** ಎನ್ನುವುದರಂತೆ, **ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ** ಎನ್ನುವುದಕ್ಕೂ ಶ್ರುತಿಯಲ್ಲಿದ್ದ ಅವಗತಿಯನ್ನು ಹೇಳಲಿಕ್ಕೆ ಶಕ್ಯವಾಗುವುದರಿಂದ **ವಿಶೇಷಿತತ್ವಾಚ್ಚ** ಎನ್ನುವ ಸೂತ್ರಾಂಶವು ವ್ಯರ್ಥವಾಗುವುದು. ಮತ್ತು ನಮ್ಮ ಮತದಲ್ಲಿ ಏಳರಲ್ಲಿ ಜ್ಞಾನೇಂದ್ರಿಯತ್ವವಿದ್ದಂತೆಯೂ ಹಸ್ತಾದಿಗಳಲ್ಲಿ ಕರ್ಮೇಂದ್ರಿಯತ್ವ ವಿದ್ದಂತೆಯೂ ಅದ್ವೈತಿಗಳ ಮತದಲ್ಲಿ ಒಂದು ಅವಚ್ಛೇದಕವೂ ಇಲ್ಲದಿರುವುದರಿಂದ ಆದಿಸೂತ್ರದಲ್ಲಿ ಸಪ್ತಶಬ್ದವೂ ಎರಡನೇ ಸೂತ್ರದಲ್ಲಿ ಆದಿಶಬ್ದವೂ ಕೂಡಲಾರದು. ಮತ್ತು (೧) **ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ** (೨) **ಇಂದ್ರಿಯಾಣಿ ಹಯಾನಾಹುಃ** (೩) **ಯದಾ ಪಂಚಾವತಿಷ್ಠಂತೇ ಜ್ಞಾನಾನಿ** (೪) **ದ್ವಾದಶ ವಾ ಏತೇ ಪ್ರಾಣಾಃ** (೫) **ದ್ವಾದಶೈವೇಂದ್ರಿಯಾಣ್ಯಾಹುಃ** ಇತ್ಯಾದಿ ಶ್ರುತಿಗಳಲ್ಲಿಯೂ (೧) **ಸಪ್ತ ಪ್ರಾಣಾಸ್ತ್ವವಗತೇಃ ಪಂಚ ಪ್ರಾಣಾಶ್ಚ ಕರ್ಮಣಃ** (೨) **ಶ್ರೋತ್ರಾದೀನಿ ತು ಪಂಚೈವ** ಇತ್ಯಾದಿ ಸ್ಮೃತಿಗಳಲ್ಲಿಯೂ ಪ್ರಾಣಗಳು ಅಹತ್ರ ದ್ವಾದಶ ಎಂದು ಪ್ರತಿಪಾದಿತವಾಗಿದೆ. (೨) ಯದ್ಯಪಿ **ದಶೇಮೇ ಪುರುಷೇ ಪ್ರಾಣಾಃ**

**ಆತ್ಮೈಕಾದಶಃ** ಇತ್ಯಾದಿ ಶ್ರುತಿಗಳಲ್ಲಿಯೂ **ಇಂದ್ರಿಯಾಣಿ ದಶೈಕಂ ಚ** ಇತ್ಯಾದಿ ಸ್ಮೃತಿಗಳಲ್ಲಿಯೂ ಬುದ್ಧಿ ಮನಸ್ಸುಗಳಿಗೆ ಅಭೇದವನ್ನು ಆಶ್ರಯಿಸಿಕೊಂಡು ಏಕಾದಶತ್ವವನ್ನು ಹೇಳಿದ್ದು. ಆದಾಗ್ಯೂ ಇಲ್ಲಿ ಸೂತ್ರದಲ್ಲಿ ಜ್ಞಾನೇಂದ್ರಿಯಗಳು ಏಳು ಎಂದು ಹೇಳಿ ಪುನಃ ಕರ್ಮೇಂದ್ರಿಯಗಳು ಐದು ಎಂದು ಹೇಳಿದ್ದರಿಂದ ಬುದ್ಧಿ ಮನಸ್ಸುಗಳಿಗೆ ಭೇದವನ್ನು ಇಟ್ಟುಕೊಂಡು ದ್ವಾದಶತ್ವವನ್ನು ಹೇಳಿದ್ದು.

## ಅಧಿಕರಣ ಸಾರಾಂಶ

ಇಂದ್ರಿಯಗಳು ಏಳು ವಾ ಹನ್ನೆರಡು ಎಂದು ನಿರ್ಣಯವು ಆಗುವುದಿಲ್ಲವೋ, ಅಥವಾ ಹನ್ನೆರಡು ಎಂದು ನಿರ್ಣಯವು ಆಗುತ್ತದೋ ಎಂದು ಸಂದೇಹವು ಬಂದರೆ— **ಸಪ್ತ ಪ್ರಾಣಾಃ ಪ್ರಭವಂತಿ** ಎಂದು ದ್ವಾದಶ ವಾ ಏತೇ ಪ್ರಾಣಾಃ ಎಂದು ವಿರುದ್ಧ ಸಂಖ್ಯೆಯನ್ನು ತಿಳಿಸಿಕೊಡತಕ್ಕ ಎರಡು ಶ್ರುತಿಗಳು ಇದ್ದಪ್ರಯುಕ್ತ ನಿರ್ಣಯವಾಗುವುದಿಲ್ಲವೆಂದು ಪೂರ್ವಪಕ್ಷವು. ಹೇಗೆಂದರೆ— ಇಂದ್ರಿಯಗಳಿಗೆ ದ್ವಾದಶತ್ವವಿದ್ದರೂ ಶತೇ ಪಂಚಾಶನ್ನ್ಯಾಯದಿಂದ ಸಪ್ತತ್ವಶ್ರುತಿಯು ಕೂಡುತ್ತದೆ ಎಂದು ಹೇಳಕೂಡದು. ಅವಚ್ಛೇದಕವು ಇಲ್ಲದೆ ಸಪ್ತತ್ವಾದ್ಯುಕ್ತಿಯು ಕೂಡಲಾರದು. ಮತ್ತು ಏಳರ ಒಟ್ಟಿಗೆ ಐದನ್ನು ಹೇಳದಿರಲಿಕ್ಕೆ ಹೇತುವು ಇಲ್ಲದಿರುವುದರಿಂದ ಹನ್ನೆರಡು ಇಲ್ಲವೆಂದೇ ಪ್ರತೀತವಾಗುತ್ತದೆ. ಮತ್ತು (೧) **ಸಪ್ತೈವ ಮಾರುತಾಃ ಬಾಹ್ಯೇ** ಎನ್ನುವ ಶ್ರುತಿಯಿಂದ ಅಭಿಮಾನಿಗಳು ಏಳು ಮಂದಿಯಾದುದರಿಂದ ಅಭಿಮನ್ಯಮಾನಗಳೂ ಏಳೇ ಎನ್ನುವುದು. **ಅಭಿಮಾನ್ಯಭಿಮನ್ಯಮಾನಯೋಸ್ಸಮಸಂಖ್ಯಾಕತ್ವ ನಿಯಮಾತ್** ಎನ್ನುವ ಯುಕ್ತಿಯಿಂದ ಸಪ್ತತ್ವಶ್ರುತಿಯು ಪ್ರಬಲವು. ದ್ವಾದಶತ್ವಶ್ರುತಿಯೂ **ದ್ವಾದಶ ಮಾಸಾಃ** ಇತ್ಯಾದಿ ವಾಕ್ಯಶೇಷೋಕ್ತ ಯುಕ್ತಿಯಿಂದ ಯುಕ್ತವಾದುದರಿಂದ ಪ್ರಬಲವಾದ ಪ್ರಯುಕ್ತ ಆ ವಾಕ್ಯಶೇಷದಲ್ಲಿ ಹೇಳಿದವುಗಳಿಗೆ ದ್ವಾದಶ ಆದಿತ್ಯಾದಿ ದೇವತಾಕತ್ವವಿದ್ದುದರಿಂದ ಇಂದ್ರಿಯಗಳಿಗೂ ಆದಿತ್ಯಾದಿಗಳೇ ದೇವತೆಗಳು ಎನ್ನುವ ಅಭಿಪ್ರಾಯದಿಂದಲೇ **ದ್ವಾದಶ ಮಾಸಾಃ** ಇತ್ಯಾದ್ಯುಕ್ತಿಯು. ಎಂದರೆ—ಇಂದ್ರಿಯಗಳು ಹನ್ನೆರಡು ಆದಾಗ್ಯೂ **ಗುಹಾಶಯಾಂ ನಿಹಿತಾಃ** ಸಪ್ತ ಸಪ್ತ ಎನ್ನುವ ವಾಕ್ಯಶೇಷದಲ್ಲಿ ಹೇಳಿದ ಜ್ಞಾನೇಂದ್ರಿಯತ್ವರೂಪ ಅವಚ್ಛೇದಕವನ್ನು ವಿವಕ್ಷಾಮಾಡಿಕೊಂಡು ಶ್ರೋತ್ರಾದಿಗಳಿಗೆ ಸಪ್ತತ್ವೋಕ್ತಿಯು ಉಪಪನ್ನವಾಗುತ್ತದೆ. ಹಸ್ತಾದಿಗಳಿಗೆ ಕರ್ಮೇಂದ್ರಿಯತ್ವರೂಪ ವೈಲಕ್ಷಣ್ಯದಿಂದ ಸಪ್ತತ್ವಶ್ರುತಿಯಲ್ಲಿ ಏಳರ ಒಟ್ಟಿಗೆ ಪಾಠ ಮಾಡಲಿಲ್ಲ. ಆದುದರಿಂದ ದ್ವಾದಶಶ್ರುತಿಯಿಂದ ಇಂದ್ರಿಯಗಳು ಜ್ಞಾನೇಂದ್ರಿಯಗಳು ಏಳು, ಕರ್ಮೇಂದ್ರಿಯಗಳು ಐದು, ಆಹತ್ಯ ಹನ್ನೆರಡು ಎಂದು ನಿರ್ಣಯವು ಆಗುವುದು. ॥ ಅಧಿ.೪ ॥

ಸಪ್ತಗತ್ಯಧಿಕರಣವು ಸಮಾಪ್ತವಾಯಿತು.

**॥ ಓಂ ಪ್ರಾಣಪರಿಮಾಣ ಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥**

# ೫ ಅಣ್ವಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಪ್ರಾಣಪರಿಮಾಣವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಶ್ರುತಿವಿರೋಧವನ್ನು ತೋರಿಸುತ್ತಾ ಪೂರ್ವಪಕ್ಷವನ್ನು ಸೂಚಿಸುತ್ತಾರೆ—

**ಭಾಷ್ಯ ॥ ದಿವೀವ ಚಕ್ಷುರಾತತಂ (ಋ.೧.೨೨.೨೦) । ಇತಿ ವ್ಯಾಪ್ತಿಃ ಪ್ರತೀಯತೇ । ದೂರಶ್ರವಣದರ್ಶನಾದಿಯುಕ್ತಿಶ್ಚ ॥ ೧ ॥**

ಭಾಷ್ಯಾರ್ಥ ॥ ಆಕಾಶದಲ್ಲಿ ಚಕ್ಷುಸ್ಸಿನಂತೆ (ಚಕ್ಷುರಾದಿ ಇಂದ್ರಿಯಗಳಂತೆ) ಸರ್ವತ್ರ ವ್ಯಾಪ್ತವಾದ (ವಿಷ್ಣುವಿನ ಪರಮಸ್ಥಾನವನ್ನು ಸದಾ ಜ್ಞಾನಿಗಳು ನೋಡುತ್ತಾರೆ) ಎನ್ನುವ ಶ್ರುತಿಯಿಂದ (ಇಂದ್ರಿಯಗಳಿಗೆ) ವ್ಯಾಪ್ತಿಯು ಪ್ರತೀತವಾಗುತ್ತದೆ. (ವಿಷ್ಣುವು ವ್ಯಾಪ್ತನು ಎನ್ನುವ ವಿಷಯದಲ್ಲಿ ದೃಷ್ಟಾಂತವಾಗಿ ಚಕ್ಷುರ್ವ್ಯಾಪ್ತಿಯು ಇಲ್ಲಿಯೂ ಉಕ್ತವಾಗಿದೆ.) (೨) ದೂರ ಶ್ರವಣ ದರ್ಶನಾದಿ ಯುಕ್ತಿಯೂ (ಈ ಅರ್ಥದಲ್ಲಿ ಇದೆ.) (ಅಂದರೆ—ದೂರಸ್ಥವಾದ ಶಬ್ದವು ಶ್ರುತವಾಗುತ್ತದೆ. ದೂರಸ್ಥಗಳಾದ ಘಟಾದಿಗಳು ಕಾಣಲ್ಪಡುತ್ತವೆ. ಮತ್ತು ಸ್ಪೃತಗಳಾಗುತ್ತವೆ. ಇಂದ್ರಿಯಗಳಿಗೆ ವ್ಯಾಪ್ತಿಯಿಲ್ಲದೆ ದೂರದಲ್ಲಿದ್ದ ವಸ್ತುಗಳ ಶ್ರವಣ ದರ್ಶನಾದಿಗಳು ಅವುಗಳಿಂದ ಸಿದ್ಧಸಲಾರವು. ಇಂದ್ರಿಯಗಳು ವಸ್ತುಗಳನ್ನು ಹೊಂದಿ ಜ್ಞಾನಾದಿರೂಪ ಕಾರ್ಯವನ್ನು ಮಾಡತಕ್ಕವುಗಳು. ಇಲ್ಲವಾದರೆ ಕರಣತ್ವವೇ ಕೂಡಲಾರದು.)

ಪೀಠಿಕೆ ॥ ವ್ಯಾಪ್ತಿಶ್ರುತಿಯನ್ನು ಹೇಳಿ ಅಣುತ್ವವಿಷಯದಲ್ಲಿಯೂ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ (೧) ಅಣುಭಿಃ ಪಶ್ಯತ್ಯಣುಭಿಃ ಕೃಣೋತಿ ಪ್ರಾಣಾ ವಾ ಅಣವಃ ಪ್ರಾಣೈರ್ಹ್ಯೇತದ್ಭವತಿ । ಇತಿ ಚ ಕೌಂಡಿನ್ಯಶ್ರುತಿಃ । (೨) ಅತೋ ವಕ್ತಿ ॥ ೨ ॥**

ಭಾಷ್ಯಾರ್ಥ ॥ (೧) ಪುರುಷನು ಅಣುಗಳಾದ ಜ್ಞಾನೇಂದ್ರಿಯಗಳಿಂದ ಆಯಾಯ ಇಂದ್ರಿಯಯೋಗ್ಯವಾದ ವಸ್ತುವನ್ನು ತಿಳಿಯುತ್ತಾನೆ. ಕರ್ಮೇಂದ್ರಿಯಗಳಿಂದ ತತ್ತದ್ಯೋಗ್ಯವಾದ ಕಾರ್ಯವನ್ನು ಮಾಡುತ್ತಾನೆ. ಇಂದ್ರಿಯಗಳು ಅಣುಗಳು. ಏಕೆಂದರೆ—ಈ ಜ್ಞಾನಕರ್ಮಾಖ್ಯ ಕಾರ್ಯವು ಇಂದ್ರಿಯಗಳಿಂದಲೇ ಉಂಟಾಗುತ್ತದೆ. (ಅಂದರೆ—ಜ್ಞಾನಕರ್ಮಕರಣತ್ವರೂಪ ಪ್ರಾಣಲಿಂಗವು ಅಣುಗಳಲ್ಲಿ ಇದ್ದಪ್ರಯುಕ್ತ ಎಂದು) ಕೌಂಡಿನ್ಯಶ್ರುತಿಯು (ಇಂದ್ರಿಯಗಳಿಗೆ ಅಣುತ್ವವನ್ನು ಹೇಳುತ್ತದೆ. ತಥಾಚ ಸಯುಕ್ತಿಕ ವ್ಯಾಪ್ತಿ ಶ್ರುತಿವಿರೋಧದಿಂದ ಅಣುತ್ವಶ್ರುತಿಯು ಅಪ್ರಮಾಣವೇ.) (೨) ಹೀಗೆ ಶಂಕೆಯು ಬಂದರೆ ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಅಣವಶ್ಚ ಓಂ ॥ ೮ ॥

ಸೂತ್ರಾರ್ಥ ॥ ಇಂದ್ರಿಯಗಳು ಸ್ವರೂಪತಃ ಅಣುಗಳೇ, ಆದಾಗ್ಯೂ ಪ್ರಕಾಶದಿಂದ ವ್ಯಾಪ್ತಗಳೂ ಆಗಿವೆ. ಆದಕಾರಣ ಹಿಂದೆ ಹೇಳಿದ ವ್ಯಾಪ್ತಿಶ್ರುತಿಯುಕ್ತಿಗಳಿಂದ ವಿರೋಧವಿಲ್ಲ.

ಪೀಠಿಕೆ ॥ ಈ ವಿಷಯದಲ್ಲಿ ಶ್ರುತಿಯನ್ನುದಾಹರಿಸುತ್ತಾರೆ—

**ಭಾಷ್ಯ ॥ ತದ್ಯಥಾ ಹ್ಯ(ಹಾ)ಣುನಶ್ಚಕ್ಷುಃ ಪ್ರಕಾಶೋ ವ್ಯಾತತ ಏವಮೇವಾಸ್ಯ ಪುರುಷಸ್ಯ ಪ್ರಕಾಶೋ ವ್ಯಾತತಃ । ಅಣುರ್ಹ್ಯೇವೈಷ ಪುರುಷೋ ಭವತಿ । ಇತಿ ಶಾಂಡಿಲ್ಯಶ್ರುತಿಃ(ತೇಃ) ॥ ೮ ॥ ಅಧಿ. ೫ ॥ ॥ ೩ ॥**

**ಭಾಷ್ಯಾರ್ಥ॥** ದೃಷ್ಟಾಂತವು ಹೇಗೆಂದರೆ—ಸ್ವರೂಪತಃ ಅಣುವಾದ ಚಕ್ಷುಸ್ಸಿನ ಪ್ರಕಾಶವು (ತೇಜಸ್ಸು) ವ್ಯಾಪ್ತವಾಗಿಯದೋ ಹೀಗೆಯೇ ಈ ಜೀವನ ಪ್ರಕಾಶವು ವ್ಯಾಪ್ತವಾಗಿದೆ. ಈ ಪುರುಷನು ಅಣುವೇ ಆಗಿರುತ್ತಾನೆ. ಹೀಗೆ ಈ ಶಾಂಡಿಲ್ಯಶ್ರುತಿಯು (ಚಕ್ಷುರಾದಿ ಎಲ್ಲಾ ಇಂದ್ರಿಯಗಳಿಗೂ ಅಣುತ್ವವನ್ನೂ ಪ್ರಕಾಶವ್ಯಾಪ್ತಿಯನ್ನೂ ಹೇಳುತ್ತದೆ.)

**ವಿಶೇಷಾಂಶ॥** (೧) ತಥಾಚ ವ್ಯಾಪ್ತಿಶ್ರುತಿಯೂ ಯುಕ್ತಿಯೂ ಪ್ರಕಾಶತಃ ವ್ಯಾಪ್ತಿಪರವಾದುದರಿಂದ ಸಾವಕಾಶವಾದ ಪ್ರಯುಕ್ತ ಅಣುತ್ವಶ್ರುತಿಗೆ ವ್ಯಾಪ್ತಿಶ್ರುತಿಯಿಂದ ವಿರೋಧವಿಲ್ಲ. (೨) ಅತಿ ಸುದೃಢವಾದುದನ್ನು ದೃಷ್ಟಾಂತವಾಗಿ ತೆಗೆದುಕೊಳ್ಳುವುದರಿಂದ ವಿಷ್ಣುವು ವ್ಯಾಪ್ತನು ಎನ್ನುವ ವಿಷಯದಲ್ಲಿ ದೃಷ್ಟಾಂತವಾಗಿ ಚಕ್ಷುರ್ವ್ಯಾಪ್ತಿಯನ್ನು ಹೇಳಿದ್ದರಿಂದ ವ್ಯಾಪ್ತಿಶ್ರುತಿಯು ಪ್ರಬಲವು ಎಂದು ಹೇಳಕೂಡದು. ಅಣುತ್ವಶ್ರುತಿಯಲ್ಲಿ ಜೀವಾಣುತ್ವಾದಿಗಳಲ್ಲಿ ಚಕ್ಷುಸ್ಸನ್ನು ದೃಷ್ಟಾಂತವಾಗಿ ಹೇಳಿದ್ದರಿಂದಲೂ ವಿಶೇಷ ಶ್ರುತಿಯಾದುದರಿಂದಲೂ ಅದೇ ಪ್ರಬಲವು. ॥ ೮ ॥

## ಮಾಯಾವಾದಿರೀತ್ಯಾ

**ವಿಚಾರ॥** ಸಾಂಖ್ಯಮತದಲ್ಲಿ ಇಂದ್ರಿಯಗಳು ಅಹಂಕಾರಜನ್ಯಗಳು, ಅಹಂಕಾರವು ಜಗನ್ಮಂಡಲವನ್ನೇ ವ್ಯಾಪಿಸಿಕೊಂಡಿದ್ದ ಪ್ರಯುಕ್ತ ಇಂದ್ರಿಯಗಳು ಸರ್ವತ್ರ ವ್ಯಾಪ್ತಗಳು ಎಂದು ಪೂರ್ವಪಕ್ಷ ಮಾಡಿರುವರು. ಅದು ಅಯುಕ್ತವು. ಶ್ರುತಿಗಳಿಗೆ ಪರಸ್ಪರ ವಿರೋಧವನ್ನು ನಿರಾಕರಿಸತಕ್ಕ ಈ ಪಾದದಲ್ಲಿ ಸಾಂಖ್ಯಸ್ಮೃತಿವಿರೋಧ ನಿರಾಸವು ಅಸಂಗತವು. ಅದ್ವೈತಿಗಳ ಮತದಲ್ಲಿ ಕಾರಣನಾದ ಶುದ್ಧಬ್ರಹ್ಮನಿಗೂ ಅವಿದ್ಯಾವಚ್ಛಿನ್ನ ಬ್ರಹ್ಮನಿಗೂ ಅವಿದ್ಯೆಗೂ ಅಣುತ್ವವಿಲ್ಲವಾದರೂ ಕಾರ್ಯವಾದ ಮನಸ್ಸಿಗೆ ಅಣುತ್ವದಂತೆ ಕಾರಣವಾದ ಅಹಂಕಾರಕ್ಕೆ ವ್ಯಾಪಕತ್ವವಿದ್ದರೂ ಕಾರ್ಯಗಳಾದ ಪ್ರಾಣಗಳಿಗೆ ಅಣುತ್ವವು ಕೂಡುವುದರಿಂದ ಪೂರ್ವಪಕ್ಷವೇ ಹುಟ್ಟಲಾರದು.

## ಅಧಿಕರಣ ಸಾರಾಂಶ

ಪ್ರಾಣಗಳು ಅಣುಗಳೋ ವ್ಯಾಪ್ತಗಳೋ ಎಂದು ಸಂದೇಹವು. **ದಿವೀವ ಚಕ್ಷುರಾತತಂ** ಎನ್ನುವ ಶ್ರುತಿಯಿಂದ ವ್ಯಾಪ್ತಗಳೆಂದು ಪೂರ್ವಪಕ್ಷವು. ಹೇಗೆಂದರೆ— ವ್ಯಾಪ್ತತ್ವ ವಿಷಯದಲ್ಲಿ ದೃಷ್ಟಾಂತವಾಗಿ ಚಕ್ಷು ರ್ವ್ಯಾಪ್ತಿಯನ್ನು ಹೇಳಿದ್ದರಿಂದಲೂ, ದೂರಶ್ರವಣ ದರ್ಶನ ಸ್ಮರಣಾದಿ ಯುಕ್ತಿಗಳಿಂದಲೂ ವ್ಯಾಪ್ತತ್ವ ಶ್ರುತಿಯು ಪ್ರಬಲವು. ಅತಿ ಸುದೃಢವಾದುದನ್ನೇ ದೃಷ್ಟಾಂತೀಕರಿಸುವರು. ಅಣುತ್ವಶ್ರುತಿಯಾದರೂ ಪ್ರಬಲವಾದ ವ್ಯಾಪ್ತತ್ವಶ್ರುತಿಯಿಂದ ಬಾಧಿಸಲ್ಪಟ್ಟಪ್ರಯುಕ್ತ ಅಪ್ರಮಾಣವು. ಎಂದರೆ—**ತದ್ಯಥಾ ಹ್ಯಣುನಃ ಚಕ್ಷುಷಃ** ಎನ್ನುವ ಶ್ರುತಿಯಿಂದ ಆತ್ಮನು ಅಣುವು ಇತ್ಯಾದಿಗಳಲ್ಲಿ ಚಕ್ಷುಸ್ಸನ್ನು ದೃಷ್ಟಾಂತವಾಗಿ ಹೇಳಿದ್ದರಿಂದಲೂ ವಿಶೇಷ ಶ್ರುತಿಯಾದುದರಿಂದಲೂ ಪ್ರಬಲವಾದ ಪ್ರಯುಕ್ತ ಇಂದ್ರಿಯಗಳಿಗೆ ಅಣುತ್ವವು ಕೂಡುತ್ತದೆ. ಸ್ವರೂಪತಃ ಪ್ರಾಣಗಳಿಗೆ ಅಣುತ್ವವಿದ್ದರೂ ತೇಜಸ್ಸಿನಿಂದ ವ್ಯಾಪ್ತತ್ವವನ್ನು ಹೇಳಿದ್ದರಿಂದ ದೂರ ಶ್ರವಣ ದರ್ಶನಾದಿಗಳು ಉಪಪನ್ನಗಳಾಗುತ್ತವೆ. ಸಾಮಾನ್ಯತಃ ವ್ಯಾಪ್ತತ್ವಶ್ರುತಿಗೆ ಪ್ರಕಾಶವ್ಯಾಪ್ತಿಪರತ್ವವು ಕೂಡುತ್ತದೆ. ಪ್ರಾಣಗಳು ಸ್ವರೂಪತಃ ವ್ಯಾಪ್ತಗಳಾಗಿದ್ದರೆ

ಸರ್ವದಾ ಅಪರೋಕ್ಷಜ್ಞಾನವಿರಬೇಕಾಗುವುದರಿಂದ ಸುಷುಪ್ತಿಯೇ ಇಲ್ಲವೆಂದಾಗಬೇಕಾದುದ ರಿಂದಲೂ ಪ್ರಾಣಗಳು ಅಣುಗಳು. ॥ ಅಧಿ. ೫ ॥

ಅಣ್ವಧಿಕರಣವು ಸಮಾಪ್ತವಾಯಿತು.

॥ ಓಂ ಮುಖ್ಯಪ್ರಾಣಜನ್ಮ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥

## ೬ ಶ್ರೇಷ್ಠಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಮುಖ್ಯಪ್ರಾಣನ ಜನ್ಮವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ. ಆ ಶ್ರುತಿವಿರೋಧವನ್ನೇ ತೋರಿಸುತ್ತಾ ಪೂರ್ವಪಕ್ಷವನ್ನು ಸೂಚಿಸುತ್ತಾರೆ—

**ಭಾಷ್ಯ ॥ ನೈಷ ಪ್ರಾಣ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾ ಅಥೈನಮಾಹು- ರ್ಮಧ್ಯಮ ಇತಿ ॥ ಇತಿ ಮುಖ್ಯಪ್ರಾಣಸ್ಯಾನುತ್ಪತ್ತಿಃ ಶ್ರೂಯತೇ ॥ ೧ ॥**

ಭಾಷ್ಯಾರ್ಥ ॥ ಈ ಮುಖ್ಯಪ್ರಾಣನು ಹುಟ್ಟುವುದಿಲ್ಲ. ನಾಶವನ್ನು ಹೊಂದುವುದಿಲ್ಲ. ಏಕಪ್ರಕಾರನಾಗಿಯೇ ಜನನ ಮರಣಗಳ ಮಧ್ಯಾವಸ್ಥೆಯಲ್ಲಿ ಅಥವಾ ಯೌವನದಲ್ಲಿ ಅಥವಾ ದೇಹಮಧ್ಯದಲ್ಲಿ ಇರುವವನು. ಮಧ್ಯಾವಸ್ಥೆಯನ್ನು ಹೊಂದಿದ ಪ್ರಯುಕ್ತ ಈ ಮುಖ್ಯಪ್ರಾಣನನ್ನು (ವಿದ್ವಾಂಸರು) ಮಧ್ಯಮನನ್ನಾಗಿ ಹೇಳುತ್ತಾರೆ. ಹೀಗೆ ಈ ಶ್ರುತಿಯಲ್ಲಿ ಮುಖ್ಯಪ್ರಾಣನಿಗೆ ಅನುತ್ಪತ್ತಿಯು ಶ್ರುತವಾಗುತ್ತದೆ.

ವಿಶೇಷಾಂಶ ॥ ಹಿತೇನ ಎನ್ನುವ ಅಧಿಕರಣದಲ್ಲಿ ಬಾಹ್ಯ ಮುಖ್ಯವಾಯುವಿನ ಉತ್ಪತ್ತಿವಿಚಾರವು ಮಾಡಲ್ಪಟ್ಟಿದೆ. ಇಲ್ಲಿ ಸರ್ವರ ಉತ್ಪತ್ತಿಗೂ ಮರಣಕ್ಕೂ ಕಾರಣನಾದ ಆಧ್ಯಾತ್ಮಿಕ ಮುಖ್ಯವಾಯುವಿನ ಉತ್ಪತ್ತಿವಿಚಾರವು. ಅಥವಾ ಅಲ್ಲಿ ಭೂತಪ್ರಕರಣವಾಗಿರುವುದರಿಂದ ಭೂತ ಮುಖ್ಯವಾಯುವಿನ ವಿಚಾರವು. ಇಲ್ಲಿ ಮುಖ್ಯ ವಾಯು ವಿಷಯಕ ವಿಚಾರವು, ಎಂದು ತತ್ವಪ್ರದೀಪದಲ್ಲಿ ಹೇಳಿದೆ.

**ಭಾಷ್ಯ ॥ (೧) ಯತ್ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ । ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ ॥ ಇತಿ ಚ ಯುಕ್ತಿರ್ವಾಯುಪ್ರೋಕ್ತೇ ॥ (೨) ಆತ್ಮತ ಏಷ ಪ್ರಾಣೋ ಜಾಯತೇ (ಪ್ರ.೩.೩.)। ಇತಿ ಚ ಅತ ಆಹ ॥ ೨ ॥**

ಭಾಷ್ಯಾರ್ಥ ॥ (೧) ಯಾವಾಗ ಯಾವ ಜೀವನ ದೇಹಕ್ಕೆ ಮುಖ್ಯಪ್ರಾಣನ ಸಂಯೋಗವಾಗು ತ್ತದೋ, ಆಗ ಅದು ಆ ಜೀವನಿಗೆ ಉತ್ಪತ್ತಿಯು. ಕಾರಣವು. ಯಾವಾಗ ಯಾವ ಜೀವನ ದೇಹಕ್ಕೆ ಪ್ರಾಣನ ಪರಿತ್ಯಾಗವೋ, ಅದೇನೇ ಆ ಜೀವನಿಗೆ ಮರಣವು. ಅಂತಹ ಅಖಿಲಜೀವರ ಉತ್ಪತ್ತಿಮರಣ ಗಳಿಗೆ ಕಾರಣಭೂತನಾದ ಮುಖ್ಯಪ್ರಾಣನಿಗೆ ಉತ್ಪತ್ತಿಯೂ ಮರಣವೂ ಹೇಗೆ ಕೂಡುತ್ತದೆ. ಹೇಗೂ ಕೂಡಲಾರದು. ತಥಾಚ ಮುಖ್ಯಪ್ರಾಣಃ ನೋತ್ಪತ್ತಿಮಾನ್ ಅಖಿಲೋತ್ಪತ್ತಿಮರಣಕಾರಣತ್ವಾತ್ ಎನ್ನುವ ಯುಕ್ತಿಯು ವಾಯುಪ್ರೋಕ್ತದಲ್ಲಿ ಹೇಳಿದೆ. (೨) (ಉತ್ಪತ್ತಿಶ್ರುತಿಯನ್ನು ತೋರಿಸುತ್ತಾರೆ.) ಈ

ಮುಖ್ಯಪ್ರಾಣನು ಪರಮಾತ್ಮನಿಂದ ಹುಟ್ಟುತ್ತಾನೆ, ಎಂದು ಪ್ರಾಣನಿಗೆ ಉತ್ಪತ್ತಿಯು ಶ್ರುತವಾಗುತ್ತದೆ. (ತಥಾಚ ನೈಷ ಪ್ರಾಣ ಉದೇತಿ ಎನ್ನುವ ಶ್ರುತಿಯಿಂದಲೂ ವಾಯುಪ್ರೋಕ್ತದಲ್ಲಿ ಹೇಳಿದ ಯುಕ್ತಿಯಿಂದಲೂ ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲ, ಆದುದರಿಂದ ಅದಕ್ಕೆ ವಿರುದ್ಧವಾದ ಉತ್ಪತ್ತಿಶ್ರುತಿಯು ಅಪ್ರಮಾಣವೇ.) (೩) ಹೀಗೆ ಶಂಕೆಯು ಬಂದರೆ ಉತ್ತರವನ್ನು ಹೇಳುತ್ತಾರೆ. ॥ ೮ ॥

## ಸೂತ್ರ ॥ ಓಂ ಶ್ರೇಷ್ಠಶ್ಚ ಓಂ ॥ ೯ ॥

ಸೂತ್ರಾರ್ಥ ॥ ಹೇಗೆ ಇತರ ಪ್ರಾಣಗಳು ಶ್ರೀಹರಿಯಿಂದ ಹುಟ್ಟುತ್ತಾವೋ, ಹಾಗೆಯೇ ಮುಖ್ಯಪ್ರಾಣನು ಹುಟ್ಟುತ್ತಾನೆ. (ಚ=) ಹುಟ್ಟುವುದೂ ಇಲ್ಲ.

ಪೀಠಿಕೆ ॥ ಮುಖ್ಯಪ್ರಾಣನಿಗೆ ಉತ್ಪತ್ತಿಯು ಹೇಗೆ, ಉತ್ಪತ್ತಿಯನ್ನು ಅಂಗೀಕರಿಸಿದರೆ—ಅನಾದಿತ್ವ ಶ್ರುತಿವಿರೋಧವು ಎಂದರೆ—

**ಭಾಷ್ಯ॥ ಸೌಕ್ಷ್ಮ್ಯೇಣ ಹ ವಾ ಏಷೋಽವತಿಷ್ಠತೇ ಸ್ಥೂಲತ್ವೇನೋದೇತಿ ಸೂಕ್ಷ್ಮಶ್ಚಾಥೋ ಸ್ಥೂಲಶ್ಚ ಪ್ರಕೃತಿತಃ ಸೂಕ್ಷ್ಮೋಽನ್ಯತಃ ಸ್ಥೂಲೋಽಥೈನಮಾಹುಃ ಸಾದಿರನಾದಿಃ । ಇತಿ ಗೌಪವನಶ್ರುತೇಃ ॥ ೯ ॥ ॥ ೩ ॥**

ಭಾಷ್ಯಾರ್ಥ ॥ ಈ ಮುಖ್ಯಪ್ರಾಣನು ಸೂಕ್ಷ್ಮರೂಪದಿಂದ ಸರ್ವದಾ ಇರುತ್ತಾನೆ. ಸ್ಥೂಲರೂಪದಿಂದ ಕದಾಚಿತ್ ಹುಟ್ಟುತ್ತಾನೆ. ಆದುದರಿಂದ ಅಂದರೆ ಸೂಕ್ಷ್ಮರೂಪದಿಂದ ಸರ್ವದಾ ಇದ್ದ ಪ್ರಯುಕ್ತವೂ ಸ್ಥೂಲರೂಪದಿಂದ ಕದಾಚಿತ್ ಹುಟ್ಟುವುದರಿಂದಲೂ ಈ ಮುಖ್ಯಪ್ರಾಣನು ಸೂಕ್ಷ್ಮನೆಂದು ಹೇಳಲ್ಪಡುತ್ತಾನೆ. (ಸ್ಥೂಲಾದಿಭಾವವು ಸ್ವರೂಪವಾದಪ್ರಯುಕ್ತ ಅವನಿಗೆ ಉತ್ಪತ್ತ್ಯಾದಿಗಳು ಹೇಗೆ ಕೂಡುತ್ತವೆ, ಎಂದರೆ—) ಸ್ವಭಾವದಿಂದ ಸೂಕ್ಷ್ಮನು. ಶರೀರಾದಿಗಳಿಂದ ಸ್ಥೂಲನು. (ಸ್ಥೌಲ್ಯಾದಿಗಳು ಸ್ವರೂಪವಲ್ಲ) ಹೀಗೆ ಸ್ವರೂಪದಿಂದ ಉತ್ಪತ್ತಿಯಿಲ್ಲದಿರುವುದರಿಂದಲೂ ಸ್ಥೂಲರೂಪದಿಂದ ಉತ್ಪತ್ತಿಯಿದ್ದುದರಿಂದಲೂ ಈ ಮುಖ್ಯಪ್ರಾಣನನ್ನು ಸಾದಿಯೆಂದೂ ಅನಾದಿಯೆಂದೂ ಹೇಳುತ್ತಾರೆ, ಎನ್ನುವ ಗೌಪವನಶ್ರುತಿಯಿಂದ (ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೂ ಅನಾದಿತ್ವ ಶ್ರುತಿವಿರೋಧವಿಲ್ಲ. ಏವಂಚ ಉತ್ಪತ್ತಿಯೂ ಅನುತ್ಪತ್ತಿಯೂ ತಿಳಿಯಲ್ಪಡುತ್ತದೆ.) ॥ ೯ ॥ ॥ ೩ ॥

ಪೀಠಿಕೆ ॥ ಆತ್ಮತ ಏಷ ಪ್ರಾಣೋ ಜಾಯತೇ ಎನ್ನುವ ಶ್ರುತಿಯು ಬಾಹ್ಯವಾಯು ಚೇಷ್ಟಾವಿಷಯಕವೆಂದು ಏಕೆ ಆಗಲಾರದು. ಹಾಗೆ ಇದ್ದರೆ ನೈಷ ಪ್ರಾಣ ಉದೇತಿ ಎನ್ನುವ ಅನಾದಿತ್ವಶ್ರುತಿವಿರೋಧವೇ ಇಲ್ಲದಿರುವುದರಿಂದ ಅನ್ಯಥಾ ವ್ಯಾಖ್ಯಾನವು ಏಕೆ, ಎಂದರೆ—

## ಸೂತ್ರ ॥ ಓಂ ನ ವಾಯುಕ್ರಿಯೇ ಪೃಥಗುಪದೇಶಾತ್ ಓಂ ॥ ೧೦ ॥

ಸೂತ್ರಾರ್ಥ ॥ ಆತ್ಮತ ಏಷ ಪ್ರಾಣೋಽಜಾಯತ, ಸ ಪ್ರಾಣಮಸೃಜತ ಎನ್ನುವ ಶ್ರುತಿಗಳಲ್ಲಿ ಪ್ರಾಣಶಬ್ದ ವಾಚ್ಯಗಳು, ಬಾಹ್ಯ ಜಡವಾಯು, ಚೇಷ್ಟಾರೂಪ ಕ್ರಿಯೆಗಳು, ಎಂದರೆ ಹೀಗೆ ಹೇಳಕೂಡದು. ಆ ಶ್ರುತಿಗಳಲ್ಲಿ ವಾಯು ಕ್ರಿಯೆಗಳಿಗೆ ಮುಖ್ಯಪ್ರಾಣನಿಂದ ಖಂ ವಾಯುಃ ಎಂದೂ ಕರ್ಮ ಎಂದೂ ಪ್ರತ್ಯೇಕ ಗ್ರಹಣ ಮಾಡಿದುದರಿಂದ.

**ಭಾಷ್ಯ ॥ (೧) ಚೇಷ್ಟಾಯಾಂ ಬಾಹ್ಯವಾಯೌ ಚ ಮುಖ್ಯಪ್ರಾಣೇ ಚ ಗೀಯತೇ । ಪ್ರಾಣಶಬ್ದಸ್ತ್ರಿಷು ಹ್ಯೇಷು ಮುಖೇ ಮುಖ್ಯಃ ಪ್ರಕೀರ್ತಿತಃ ॥ ಇತಿ ವಾಯುಕ್ರಿಯಯೋರಪಿ ವ್ಯಪದೇಶಾದುತ್ಪತ್ತಿಸ್ತಯೋರ್ನ ಸ್ಯಾತ್ ॥ (೨) ಸ ಪ್ರಾಣಮಸೃಜತ ಖಂ ವಾಯುರ್ಜ್ಯೋತಿರಾಪಃ ತಪೋ ಮಂತ್ರಾಃ ಕರ್ಮ (ಪ್ರ.೬.೪)॥ ಇತಿ ಪೃಥಗುಪದೇಶಾತ್ ॥ ೪ ॥**

ಭಾಷ್ಯಾರ್ಥ ॥ (೧) ಪ್ರಾಣಶಬ್ದವು ಚೇಷ್ಟಾರೂಪ ಕ್ರಿಯೆಯಲ್ಲಿಯೂ ಭೂತವಾಯುವಿನಲ್ಲಿಯೂ ಮುಖ್ಯಪ್ರಾಣನಲ್ಲಿಯೂ ಪ್ರಯೋಗಿಸಲ್ಪಡುತ್ತದೆ. ಈ ಮೂರರ ಮಧ್ಯದಲ್ಲಿ ಮುಖ್ಯಪ್ರಾಣನಲ್ಲಿ ಮುಖ್ಯಪ್ರವೃತ್ತಿಯುಳ್ಳದ್ದಾಗಿ (ವೃದ್ಧರಿಂದ) ಹೇಳಲ್ಪಟ್ಟಿದೆ, ಎಂದು ಬಾಹ್ಯವಾಯು ಚೇಷ್ಟಾರೂಪ ಕ್ರಿಯೆಗಳಲ್ಲಿ(ಪ್ರಾಣಶಬ್ದಕ್ಕೆ) ವೃತ್ತಿಯನ್ನು ಹೇಳಿದುದರಿಂದ ಪ್ರಾಣೋऽಜಾಯತ ಎನ್ನುವ ಉತ್ಪತ್ತಿವಾಕ್ಯವು ಬಾಹ್ಯವಾಯು ಚೇಷ್ಟೆಗಳಿಗೆ ಉತ್ಪತ್ತಿಯನ್ನು ಹೇಳತಕ್ಕುದು ಆಗಲಿ ಎನ್ನುವುದು ಕೂಡುವುದಿಲ್ಲ (೨) ಶ್ರೀಹರಿಯು ಜೀವಕಲಾಭಿಮಾನಿಯಾದ ಪ್ರಾಣವನ್ನು ಸೃಷ್ಟಿಸಿದನು. (ಪ್ರಾಣನನ್ನು ನಿಮಿತ್ತೀಕರಿಸಿಕೊಂಡು ಆಸ್ತಿಕ್ಯಾಭಿಮಾನಿಯಾದ ಭಾರತಿಯನ್ನು) ಆದರಿಂದ ಆಕಾಶವನ್ನು ವಾಯುವನ್ನು ತೇಜಸ್ಸನ್ನು ಜಲವನ್ನು (ಪೃಥಿವಿ ಹೀಗೆ ಶರೀರಕ್ಕೆ ಉಪಾದಾನಭೂತಗಳಾದ ಪಂಚಭೂತಗಳಲ್ಲಿ ಸೃಷ್ಟಿಸಿದನು. ಆದರಿಂದ ಜೀವನ ಪ್ರವೃತ್ತಿಗೆ ಉಪಕರಣಗಳಾದ ಚಕ್ಷುರಾದಿ ಇಂದ್ರಿಯಗಳನ್ನು ಪ್ರಧಾನಕರಣವಾದ ಮನಸ್ಸನ್ನು ಮನಸ್ಸಿನ ಸ್ಥಿತಿಗೆ ಕಾರಣವಾದ ಅನ್ನವನ್ನು ಸೃಷ್ಟಿಸಿದನು. ಅನ್ನವನ್ನು ನಿಮಿತ್ತೀಕರಿಸಿ ಶರೀರಕ್ಕೆ ಹೇತುಭೂತವಾದ ರೇತಸ್ಸನ್ನು ಸೃಷ್ಟಿಸಿದನು.) ಆದರಿಂದ ಜೀವನಿಗೆ ಸಾಕ್ಷಾತ್ತಾಗಿ ಜ್ಞಾನಾದಿಗಳಿಗೆ ಹೇತುಗಳಾದ ಋಗಾದಿಗಳನ್ನು ಸುಖಾದಿನಿಮಿತ್ತವಾದ ಪುಣ್ಯಾಪುಣ್ಯರೂಪ ಕರ್ಮವನ್ನು ಸೃಷ್ಟಿಸಿದನು. ಹೀಗೆ ಆತ್ಮತಃ ಎನ್ನುವ ವಾಕ್ಯದಿಂದ ಇತರವಾದ ಸ ಪ್ರಾಣಂ ಎನ್ನುವ ಸ್ಪಷ್ಟ ವಾಕ್ಯದಿಂದ ಪ್ರಾಣನ ದೆಸೆಯಿಂದ ವಾಯು, ಕರ್ಮಗಳನ್ನು ಪ್ರತ್ಯೇಕ ಹೇಳಿದುದರಿಂದ. (ಅನ್ಯಥಾ ಪುನರುಕ್ತಿಯು ಬರಬೇಕಾಗುವುದು.) ॥ ೪ ॥

ಪೀಠಿಕೆ ॥ ಶ್ರುತ್ಯರ್ಥನಿಶ್ಚಾಯಕವಾದ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಭೂತಾನಿ ಚೇಷ್ಟಾ ಮಂತ್ರಾಶ್ಚ ಮುಖ್ಯಪ್ರಾಣಾದಿದಂ ಜಗತ್ । ಮುಖ್ಯಪ್ರಾಣಃ ಪರಸ್ಮಾಚ್ಚ ನ ಪರಃ ಕಾರಣಾನ್ವಿತಃ ॥ ಇತಿ ಚ ವಾಯುಪ್ರೋಕ್ತೇ ॥ ೧೦ ॥ ಅಧಿ.೬ ॥ ॥ ೫ ॥**

ಭಾಷ್ಯಾರ್ಥ ॥ ಆಕಾಶಾದಿ ಭೂತಗಳು ಕ್ರಿಯೆಗಳು ಋಗಾದಿ ವೇದಗಳು ಇತ್ಯಾದಿ ಜಗತ್ತು ಮುಖ್ಯಪ್ರಾಣನಿಂದ ಹುಟ್ಟಿದ್ದು. ಆ ಮುಖ್ಯಪ್ರಾಣನು ಪರಮಾತ್ಮನಿಂದ ಹುಟ್ಟಿದನು. ಪರಮಾತ್ಮನು ಕಾರಣದಿಂದ ಮುಕ್ತನಲ್ಲ. ಅಂದರೆ ಜನ್ಯನಲ್ಲ ಎಂದು ವಾಯುಪ್ರೋಕ್ತದಲ್ಲಿ ಹೇಳಿದೆ. ತಥಾಚ ಮುಖ್ಯಪ್ರಾಣನು ಸರ್ವೋತ್ಪತ್ತಿಕಾರಣನಾದಾಗ್ಯೂ ತತೋಽಪಿ ಅತಿಮಾಹಾತ್ಮ್ಯವುಳ್ಳ ವಿಷ್ಣುವಿನಿಂದ ಆತನಿಗೆ ಉತ್ಪತ್ತಿಯು ಕೂಡುವುದರಿಂದ ತಸ್ಮೋತ್ಪತ್ತಿಃ ಎನ್ನುವುದಕ್ಕೆ ವಿಷ್ಣುವಿನಿಂದ ಇತರರಿಂದ ಉತ್ಪತ್ತಿಯು ಇಲ್ಲವೆಂದು ಇಟ್ಟುಕೊಂಡು ಯುಕ್ತಿವಿರೋಧವನ್ನು ಪರಿಹರಿಸಬೇಕು. ॥ ೧೦ ॥ ॥ ೬ ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

**ವಿಚಾರ ॥ ಅನೀದವಾತಂ** ಎನ್ನುವ ಶ್ರುತಿಯಲ್ಲಿ ಮಹಾಪ್ರಲಯದಲ್ಲಿ ಮುಖ್ಯಪ್ರಾಣನ ವ್ಯಾಪಾರಭೂತವಾದ ಚೇಷ್ಟೆಯು ಶ್ರುತವಾದುದರಿಂದ ಇಲ್ಲಿ ಮುಖ್ಯಪ್ರಾಣನ ವಿಷಯದಲ್ಲಿ ಅಧಿಕಾಶಂಕೆಯು ಹುಟ್ಟುತ್ತದೆ ಎಂದರೆ ಹಾಗೆ ಹೇಳಕೂಡದು. **ಕೋ ಹ್ಯೇವಾನ್ಯಾತ್** ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮನಿಗೂ ಚೇಷ್ಟೆಯು ಶ್ರುತವಾದುದರಿಂದ ಇಲ್ಲಿ **ಅವಾತಂ** ಎಂದು ನಿಷೇಧವಿದ್ದಪ್ರಯುಕ್ತ ಆದರಿಂದ ಅಧಿಕಾಶಂಕೆಯು ಕೂಡಲಾರದು.

## ಅಧಿಕರಣ ಸಾರಾಂಶ

ಮುಖ್ಯಪ್ರಾಣನು ಉತ್ಪತ್ತಿಯುಳ್ಳವನೋ ಅಲ್ಲವೋ ಎಂದು ಸಂದೇಹವು. ಉತ್ಪತ್ತಿಯುಳ್ಳವನಲ್ಲವೆಂದು ಪೂರ್ವಪಕ್ಷವು ಹೇಗೆಂದರೆ, **ನೈಷ ಪ್ರಾಣ ಉದೇತಿ** ಎನ್ನುವ ಶ್ರುತಿಯು **ಯತ್ನಾಪ್ಪಿರ್ಯತ್ವರಿತ್ಯಾಗಃ** ಎನ್ನುವ ಸ್ಮೃತ್ಯುಕ್ತವಾದ ಅಖಿಲೋತ್ಪತ್ತಿ ಮೃತ್ಯುಪ್ರದತ್ವರೂಪವಾದ ಯುಕ್ತಿಯಿಂದ ಕೂಡಿದ್ದರಿಂದ ಈ ಶ್ರುತಿಯು ಸ ಪ್ರಾಣಮಸೃಜತ ಇತ್ಯಾದಿ ಕೇವಲ ಜನಿಶ್ರುತಿಯಿಂದ ಪ್ರಬಲವು. **ಚೇಷ್ಟಾಯಾಂ ಬಾಹ್ಯವಾಯೌ ಚ** ಇತ್ಯಾದಿ ಪ್ರಮಾಣಗಳಿಂದ ಪ್ರಾಣಪದರವು ಚೇಷ್ಟಾದಿ ವಾಚಕವಾಗಿರುವುದರಿಂದಲೂ ಜನಿಶ್ರುತಿಯು ಉಪಪನ್ನವಾಗುವುದು. ಎಂದರೆ **ಸೌಕ್ಷ್ಮೇಣ ಹ ವಾ ಏಷೋಽವತಿಷ್ಠತೇ** ಎನ್ನುವ ಶ್ರುತಿಯಲ್ಲಿ ಸೂಕ್ಷ್ಮರೂಪದಿಂದ ಅನುತ್ಪತ್ತಿಯನ್ನೂ ಸ್ಥೂಲರೂಪದಿಂದ ಉತ್ಪತ್ತಿಯನ್ನೂ ಹೇಳಿದ್ದರಿಂದ ಉತ್ಪತ್ತಿ ಅನುತ್ಪತ್ತಿ ಪ್ರತಿಪಾದಕ ಶ್ರುತಿಗಳಿಗೆ ವಿರೋಧವಿಲ್ಲ. ಜನ್ಮಶ್ರುತಿಯಲ್ಲಿದ್ದ ಪ್ರಾಣಪದಕ್ಕೆ ಆ ವಾಕ್ಯಶೇಷದಲ್ಲಿ **ಪ್ರಾಣಾಚ್ಛ್ರದ್ಧಾಂ ಖಂ ವಾಯುಃ** ಎಂದು ವಾಯುಕ್ರಿಯೆಗಳನ್ನು ಪ್ರತ್ಯೇಕ ಹೇಳಿದ್ದರಿಂದ ಚೇಷ್ಟಾದಿಪರತ್ವವು ಕೂಡದಿರುವುದರಿಂದ ಮುಖ್ಯಪ್ರಾಣಪರವಾದ ಪ್ರಯುಕ್ತ ಮುಖ್ಯಪ್ರಾಣನಿಗೂ ಉತ್ಪತ್ತಿಯು ಉಂಟೋ ಉಂಟು. ಅಂತಹನಿಗೂ ಅವನಕ್ಕಿಂತಲೂ ಅತಿ ಮಾಹಾತ್ಮ್ಯವುಳ್ಳ ವಿಷ್ಣುವಿನಿಂದ ಉತ್ಪತ್ತಿಯು ಯುಕ್ತವಾಗುವುದು. ॥ ಅಧಿ. ೬ ॥

### ಶ್ರೇಷ್ಠಾಧಿಕರಣವು ಸಮಾಪ್ತವಾಯಿತು

**॥ ಓಂ ಮುಖ್ಯಪ್ರಾಣಪಾರತಂತ್ರ್ಯಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥**

## ೭ ಚಕ್ಷುರಾದ್ಯಧಿಕರಣವು

ಪೀಠಿಕೆ ॥ ಮುಖ್ಯಪ್ರಾಣನಿಗೆ ಪಾರತಂತ್ರ್ಯವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ಪ್ರಾಣಾದಿದಮಾವಿರಾಸೀತ್ಪ್ರಾಣೋ ಧತ್ತೇ ಪ್ರಾಣೇ ಲಯಮಭ್ಯುಪೈತಿ ನ ಪ್ರಾಣಃ ಕಂಚಿದಾಶ್ರಿತಃ ॥ ಇತ್ಯಾಗ್ನಿವೇಶ್ಯಶ್ರುತೌ ॥ (೨) ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್ । ಯಥಾ ಪ್ರಾಣಸ್ತಥಾ ರಾಜಾ ಸರ್ವಸ್ಯೈಕಾಶ್ರಯೋ ಭವೇತ್ ॥ ಇತಿ ಚ ಯುಕ್ತಿರ್ಭಾರತೇ ॥ (೩) ಪ್ರಾಣಸ್ಯೈತದ್ವಶೇ**

**ಸರ್ವಂ ಪ್ರಾಣಃ ಪರವಶೇ ಸ್ಥಿತಃ । ನ ಪರಃ ಕಂಚಿದಾಶ್ರಿತ್ಯ ವರ್ತತೇ ಪರಮೋಯತಃ ॥ ಇತಿ ಪೈಂಗಿಶ್ರುತಿಃ ॥ ೧ ॥**

ಭಾಷ್ಯಾರ್ಥ ॥ (೧) ಮುಖ್ಯಪ್ರಾಣನಿಂದ ಈ ಜಗತ್ತು ಹುಟ್ಟಿತು. ಮುಖ್ಯಪ್ರಾಣನೇ ಜಗತ್ತನ್ನು ಧರಿಸುತ್ತಾನೆ. ಮುಖ್ಯಪ್ರಾಣನಲ್ಲಿ ನಾಶವನ್ನು ಹೊಂದುತ್ತದೆ. ಪ್ರಾಣನು ಯಾವುದನ್ನೂ ಆಶ್ರಯಿಸುವುದಿಲ್ಲ ಎಂದು ಅಗ್ನಿ ವೇಶ್ಯಶ್ರುತಿಯಲ್ಲಿ (ಪ್ರಾಣನಿಗೆ ಸ್ವಾತಂತ್ರ್ಯವು ತೋರುತ್ತದೆ.) (೨) ಯಾವ ಮುಖ್ಯಪ್ರಾಣನ ಆಶ್ರಯದಿಂದ ಜಗತ್ತಿಗೆ ಚೇಷ್ಟೆಯು ಆಗುತ್ತದೋ ಅಂತಹ ಮುಖ್ಯಪ್ರಾಣನು ಮತ್ತೊಬ್ಬನನ್ನು ಹೇಗೆ ಆಶ್ರಯಿಸುವನು? (ಆದಕಾರಣ ಪ್ರಾಣನು ಸ್ವಾತಂತ್ರ್ಯದಿಂದ ಸರ್ವಾಶ್ರಯನು) ಹೇಗೆ ಪ್ರಾಣನು ಸರ್ವರಿಗೂ ಮುಖ್ಯಾಶ್ರಯನೋ, ಹಾಗೆಯೇ ರಾಜನೂ ಸರ್ವರಿಗೂ ಮುಖ್ಯಾಶ್ರಯನು ಆಗುವನು ಎನ್ನುವ ಯುಕ್ತಿಯು ಭಾರತದಲ್ಲಿ ಉಕ್ತವಾಗಿದೆ. (೩.) ಈ ಜಗತ್ತು ಎಲ್ಲವೂ ಮುಖ್ಯಪ್ರಾಣನ ಅಧೀನದಲ್ಲಿದೆ. ಮುಖ್ಯಪ್ರಾಣನು ಪರಮಾತ್ಮನ ಅಧೀನದಲ್ಲಿರತಕ್ಕವನು. ಪರಮಾತ್ಮನು ಸರ್ವೋತ್ತಮನಾದುದರಿಂದ ಯಾವುದನ್ನೂ ಆಶ್ರಯಿಸಿಕೊಂಡು ಇರುವುದಿಲ್ಲ ಎಂದು ಪೈಂಗಿಶ್ರುತಿಯು. (ಪ್ರಾಣನಿಗೆ ಪಾರತಂತ್ರ್ಯವನ್ನು ಹೇಳುತ್ತದೆ.) (ತಥಾಚ, **ನ ಪ್ರಾಣಃ ಕಿಂಚಿದಾಶ್ರಿತಃ** ಎನ್ನುವ ಶ್ರುತಿಯಿಂದ ಅಖಿಲ ಜಗಚ್ಚೇಷ್ಟಕನಾದುದರಿಂದಲೂ ಅನನ್ಯಾಶ್ರಯತ್ವಯುಕ್ತಿಯಿಂದಲೂ ಮುಖ್ಯಪ್ರಾಣನು ಸ್ವತಂತ್ರನೇ. ಆದಕಾರಣ ಪಾರತಂತ್ರ್ಯ ಶ್ರುತಿಯು ಅಪ್ರಮಾಣವೇ ಎಂದರೆ.) ॥ ೧ ॥

**ಭಾಷ್ಯ ॥ ಅತ ಆಹ ॥ ೨ ॥**

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರವನ್ನು ಹೇಳುತ್ತಾರೆ. ॥ ೨ ॥

## ಸೂತ್ರ ॥ ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ ॥ ೧೧ ॥

ಸೂತ್ರಾರ್ಥ ॥ ಮುಖ್ಯಪ್ರಾಣನು ಚಕ್ಷುರಾದಿಗಳಂತೆಯೇ ಸರ್ವಾತ್ಮನಾ ಪರಮಾತ್ಮನ ವಶನೇ. (ಸ್ವತಂತ್ರನಲ್ಲ) ಸರ್ವಂ ಎನ್ನುವ ಶ್ರುತಿಯಲ್ಲಿ ಮುಖ್ಯಪ್ರಾಣನಿಗೆ ಚಕ್ಷುರ್ಘ್ರಾಣಾದಿಗಳಿಂದ ಕೂಡಿಕೊಂಡು ಪರಾಧೀನತ್ವವನ್ನೇ ಪ್ರತಿಪಾದಿಸಿದ್ದರಿಂದ.

**ಭಾಷ್ಯ ॥ (೧) ಚಕ್ಷುರಾದಿವನ್ಮುಖ್ಯಪ್ರಾಣೋಽಪಿ ಪರಮಾತ್ಮವಶ ಏವ । (೨) ಸರ್ವಂ ಹ್ಯೇ ವೈತತ್ಪರಮೇಽವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ ಸ ಹ್ಯೇಕ ಏವೈತಾನ್ನ ಯತ್ಯುನ್ನಯತಿ ವಶೀಕರೋತಿ । ಇತಿ ಗೌಪವನಶ್ರುತೌ ಚಕ್ಷುರಾದಿಭಿಃ ಸಹ ತದ್ವಶತ್ವೇನೈವ ಶಂ(ಶಾ) ಸನಾತ್ ॥ ೩ ॥**

ಭಾಷ್ಯಾರ್ಥ ॥ (೧) ಚಕ್ಷುರಾದಿಗಳಂತೆಯೇ ಮುಖ್ಯಪ್ರಾಣನೂ ಕೂಡ ಸರ್ವಪ್ರಕಾರದಿಂದಲೂ ಪರಮಾತ್ಮನ ಅಧೀನನೇ. (ಸ್ವತಂತ್ರನಲ್ಲ) (೨) ಮುಖ್ಯಪ್ರಾಣನೂ, ಚಕ್ಷುರಾದೀಂದ್ರಿಯಗಳೂ, ಜೀವರೂ ಇವೆಲ್ಲವೂ ಸರ್ವೋತ್ತಮನಾದ ಶ್ರೀಹರಿಯಲ್ಲಿ ಇರುತ್ತವೆ, ಏಕೆಂದರೆ ಪರಮಾತ್ಮನು ಒಬ್ಬನೇ ಸ್ವತಂತ್ರನಾಗಿಯೇ ಪ್ರಾಣಾದಿಗಳಿಗೆ ಜನ್ಮಾದಿಗಳನ್ನು ಹೊಂದಿಸಿಕೊಡುತ್ತಾನೆ. (ಪ್ರವರ್ತಿಸುತ್ತಾನೆ.) ಊರ್ಧ್ವಲೋಕಕ್ಕೆ ಒಯ್ಯುತ್ತಾನೆ. ತನ್ನ ಅಧೀನದಲ್ಲಿ ಇರತಕ್ಕವರನ್ನಾಗಿ ಮಾಡುತ್ತಾನೆ. ಹೀಗೆ

ಗೌಪವನಶ್ರುತಿಯಲ್ಲಿ ಚಕ್ಷುರಾದಿ ಇಂದ್ರಿಯಗಳಿಂದ ಕೂಡಿಕೊಂಡು (ಅವುಗಳಿಂದ ವಿಶೇಷವಿಲ್ಲದೆ) ಪರಮಾತ್ಮನ ಅಧೀನತ್ವಪ್ರಕಾರದಿಂದಲೇ ಹೇಳಿದ್ದರಿಂದ.)

ಪೀಠಿಕೆ ॥ ಸ್ವಾತಂತ್ರ್ಯದಲ್ಲಿ ಯುಕ್ತಿಯುಕ್ತವಾದ ಶ್ರುತಿಯು ಇದ್ದುದರಿಂದ ಶ್ರುತಿಮಾತ್ರದಿಂದ ಪಾರತಂತ್ರ್ಯನಿರ್ಣಯವು ಆಗಲಾರದು, ಎಂದರೆ—

**ಭಾಷ್ಯ ॥ (೧) ಸರ್ವಕರ್ತಾऽಪಿ ಸನ್ಪ್ರಾಣಃ ಪರಮಾಧಾರತಃ ಸ್ಥಿತಃ । ಕಥಮೇವಾನ್ಯಥಾ ಸ ಸ್ಯಾದ್ಯತೋ ನೈವೇಶ್ವರದ್ವಯಂ ॥ (೨) ಅವಾಂತರೇಶ್ವರತ್ವೇನ ತಸ್ಯೇಶ್ವರವಚೋ ಭವೇತ್ । ಅತೋ ಮಧ್ಯಮತಾಮಾಹುಸ್ತಸ್ಯ ವೇದೇಷು ವೇದಿನಃ ॥ (೩) ಅನನ್ಯೇಶ್ವರತಾ ಪ್ರಾಣೇ ತದನ್ಯೇಶ್ವರವರ್ಜನಾತ್(ನಂ)। ಯತೋ ವಿಶೇಷವಾಕ್ಯೇನ ಹ್ರಿಯತೇ ಸಮತಾವಚಃ ॥ ೪ ॥**

ಭಾಷ್ಯಾರ್ಥ ॥ (೧) ಮುಖ್ಯಪ್ರಾಣನು ಸರ್ವಕ್ಕೂ ಕರ್ತನಾದಾಗ್ಯೂ ಪರಮಾತ್ಮಾಧಾರನಾಗಿಯೇ ಇರುತ್ತಾನೆ. (ಮುಖ್ಯಪ್ರಾಣನು ಶ್ರೀಹರಿಯ ಅಧೀನನೆನ್ನುವುದು ಬಹು ಶ್ರುತಿಸ್ಮೃತಿಯುಕ್ತ ಸಿದ್ಧವಾದುದರಿಂದ ನಿರ್ಣಯವು ಆಗುತ್ತದೆ.) ಪರಮಾತ್ಮಾಧಾರತ್ವವಿಲ್ಲದೆ ಮುಖ್ಯಪ್ರಾಣನು ಸ್ವತಂತ್ರನು ಹೇಗೆ ಆದಾನು? (ಹೇಗೂ ಆಗಲಾರನು) ಅಥವಾ ಶ್ರೀಹರಿಯೇ ಆಧಾರನಾಗಿ ಸ್ಥಿತಿಯು ಇಲ್ಲವಾದರೆ ಪ್ರಾಣನ ಸತ್ತಾನೇ ಕೂಡಲಾರದು. (ಶ್ರೀಹರಿಯಂತೆ ಅನನ್ಯಾಧಾರನಾಗಿ ಸ್ಥಿತಿಯು ಏಕೆ ಆಗಲಾರದೆಂದರೆ) ನಿಯಾಮಕರಿಬ್ಬರು ಎನ್ನುವುದು ಸರ್ವಥಾ ಕೂಡಲಾರದು. (ತಥಾಚ ಈಶ್ವರದ್ವಯಾನುಪಪತ್ತಿರೂಪ ಯುಕ್ತಿವಿರೋಧದಿಂದ ಸರ್ವೇಶ್ವರತ್ವ ಅನನ್ಯೇಶ್ವರತ್ವಶ್ರುತಿಯು ಬಾಧಿತವಾಗುತ್ತದೆ.) (೨) ಮಧ್ಯಮೇಶ್ವರತ್ವ ನಿಮಿತ್ತದಿಂದ ಮುಖ್ಯಪ್ರಾಣನಿಗೆ ಈಶ್ವರತ್ವ ಬೋಧಕವಾದ ಪ್ರಾಣೋಧತ್ತೇ ಇತ್ಯಾದಿ ಸರ್ವಕರ್ತೃತ್ವವಚನವು ಆಗುವುದು. ಅವಾಂತರೇಶ್ವರತ್ವದಿಂದಲೇ ಜ್ಞಾನಿಗಳು ಮಧ್ಯಮಃ ಪ್ರಾಣಃ ಇತ್ಯಾದಿ ವೇದಗಳಲ್ಲಿ ಮುಖ್ಯಪ್ರಾಣನಿಗೆ ಮಧ್ಯಮತ್ವವನ್ನು ಹೇಳುತ್ತಾರೆ. (೩) ಭಗವದ್ವ್ಯತಿರಿಕ್ತ ಈಶ್ವರರು ಇಲ್ಲದಿರುವುದೇ ಮುಖ್ಯಪ್ರಾಣನಲ್ಲಿ ಅನನ್ಯೇಶ್ವರತ್ವವು (ಅಂದರೆ ಮುಖ್ಯಪ್ರಾಣನು ಭಗವದ್ವ್ಯತಿರಿಕ್ತವಾದುದನ್ನು ಆಶ್ರಯಿಸಿಕೊಂಡು ಇಲ್ಲ ಎಂದರ್ಥವು.) ಏಕೆಂದರೆ ಪ್ರಾಣಸ್ಯೈತದ್ವಶೇ ಸರ್ವಂ ಎನ್ನುವ ವಿಶೇಷವಾಕ್ಯದಿಂದ (ಪ್ರಾಣಾತ್ ಇದಮಾವಿರಾಸೀತ್ ಇತ್ಯಾದಿ) ಸಾಧಾರಣವಾದ ವಚನವು ಬಾಧಿಸಲ್ಪಡುತ್ತದೆ. ಅಂದರೆ ಅವಾಂತರೇಶ್ವರತ್ವಾದ್ಯರ್ಥಾಂತರ ಪರವಾಗಿ ಒಯ್ಯಲ್ಪಡುತ್ತದೆ.

ಪೀಠಿಕೆ ॥ ಸೌತ್ರ ಆದಿಶಬ್ದದಿಂದ ಗೃಹೀತವಾದುದನ್ನುದಾಹರಿಸುತ್ತಾರೆ—

**ಭಾಷ್ಯ ॥ (೧) ನಾನ್ಯೋऽತೋಽಸ್ತಿ ದ್ರಷ್ಟಾ (ಬೃ.ಉ.೭.೨೩.) । (೨) ನಾನ್ಯದತೋऽಸ್ತಿ ದ್ರಷ್ಟೃ (ಬೃ.ಉ.೮.೧೧.) ಇತ್ಯಾದಿವಚನಯುಕ್ತಯಶ್ಚಾ(ಆ)ದಿಶಬ್ದೋಕ್ತಾ ॥ ೧೧ ॥ ॥ ೫ ॥**

ಭಾಷ್ಯಾರ್ಥ ॥ (೧) ಶ್ರೀಹರಿಯಿಂದ ಇತರನಾದವನು ಸ್ವತಂತ್ರನಾಗಿ ನೋಡತಕ್ಕವನು ಇಲ್ಲ

(೨) ಶ್ರೀಹರಿಯಿಂದ ಇತರವಾದ ವಸ್ತುವು ಸ್ವತಂತ್ರವಾಗಿ ನೋಡತಕ್ಕುದು ಇಲ್ಲ ಇದುಮೊದಲಾದ ವಚನಗಳೂ ಯುಕ್ತಿಗಳೂ ಅಥವಾ ವಚನಗಳಿಂದ ಹೇಳಲ್ಪಟ್ಟ ಯುಕ್ತಿಗಳೂ ಆದಿಶಬ್ದದಿಂದ ಹೇಳಲ್ಪಟ್ಟವುಗಳು. ॥ ೧೧ ॥

**ಪೀಠಿಕೆ ॥** ಚಕ್ಷುರಾದಿಗಳಂತೆಯೇ ಮುಖ್ಯಪ್ರಾಣನಿಗೂ ಈಶ್ವರಾಧೀನತ್ವವಿರುವುದಾದರೆ ಅವಾಂತರೇಶ್ವರತ್ವಾದಿಗಳೂ ಕೂಡದಿರುವುದರಿಂದ ಆತನಿಗೆ **ನ ಪ್ರಾಣಃ ಕಿಂಚಿದಾಶ್ರಿತಃ** ಎನ್ನುವ ಸ್ವಾತಂತ್ರ್ಯ ಶ್ರುತಿಯು ವ್ಯರ್ಥವಾಗುವುದು ಎಂದರೆ—

## ಸೂತ್ರ ॥ ಓಂ ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ ಓಂ ॥೧೨॥

**ಭಾಷ್ಯ ॥ (೧) ಇತರೇಷಾಂ ಪ್ರಾಣಾನಾಂ ಕರಣತ್ವಾನ್ಮುಖ್ಯಸ್ಯ ಚಾಕರಣತ್ವಾತ್ತಸ್ಯಾನ್ಯೇಭ್ಯ ಉತ್ತಮತ್ವಂ ಯುಜ್ಯತೇ। ಮಾಂಡವ್ಯಶ್ರುತಿಶ್ಚ। (೨) ತಾನಿ ಹ ವಾ ಏತಾನಿ ಸರ್ವಾಣಿ ಕರಣಾನ್ಯಥ ಪ್ರಾಣ ಏವಾಕರಣಸ್ತಸ್ಮಾನ್ಮುಖ್ಯಸ್ತಸ್ಮಾನ್ಮುಖ್ಯ ಇತ್ಯಾ ಚಕ್ಷತೇ । ಇತಿ ॥ ೧೨ ॥ ಅಧಿ. ೭ ॥ ॥ ೬ ॥**

ಭಾಷ್ಯಾರ್ಥ ॥ (೧) ಈಶ್ವರವಶತ್ವವು ಸಮಾನವಾದಾಗ್ಯೂ ಚಕ್ಷುರಾದಿ ಇಂದ್ರಿಯಗಳಿಗೆ ಕರ್ತೃ ಪ್ರಯೋಜ್ಯತ್ವವಿದ್ದುದರಿಂದಲೂ, ಮುಖ್ಯಪ್ರಾಣನಿಗೆ, ಅಕರಣತ್ವಾಚ್ಚ=ಆವಾವ ಶರೀರದಲ್ಲಿ ಅಧಿಷ್ಠಿತ ಜೀವಕರ್ತೃಪ್ರಯೋಜ್ಯತ್ವವಿಲ್ಲದಿರುವುದರಿಂದಲೂ, ಮುಖ್ಯಪ್ರಾಣನಿಗೆ ಇತರರಿಂದ ಅವಾಂತರೇಶ್ವರ ತ್ವಾದ್ಯತಿಶಯವು ಯುಕ್ತವಾಗುತ್ತದೆ. ಆದಕಾರಣ, ನ ದೋಷಃ=ವೈಯರ್ಥ್ಯಾಖ್ಯ ದೋಷವಿಲ್ಲ. ತಥಾ ಹಿ ದರ್ಶಯತಿ=ಹಾಗೆಯೇ ಮಾಂಡವ್ಯಶ್ರುತಿಯು ತೋರಿಸುತ್ತದೆ. (೨) ಆ ಈ ಚಕ್ಷುರಾದಿ ಇಂದ್ರಿಯ ಗಳೆಲ್ಲವೂ ಕರ್ತೃಪ್ರಯೋಜ್ಯಗಳೇ. ಆದಕಾರಣ ಮುಖ್ಯಪ್ರಾಣನೊಬ್ಬನೇ ಕರ್ತೃಪ್ರಯೋಜ್ಯನು. ಮುಖ್ಯತ್ವವಿದ್ದುದರಿಂದಲೇ ಈ ಪ್ರಾಣನನ್ನು ಮುಖ್ಯನನ್ನಾಗಿ ಹೇಳುತ್ತಾರೆ. ಹೀಗೆ ಮಾಂಡವ್ಯರ ಶ್ರುತಿಯು ಇದೆ. ಏವಂಚ ಸುಷುಪ್ತಿಕಾಲದಲ್ಲಿ ಜೀವಪ್ರಯತ್ನವಿಲ್ಲದಿರುವಾಗ ಚಕ್ಷುರಾದಿಗಳಿಗೆ ವ್ಯಾಪಾರವು ಕಾಣದಿರುವುದರಿಂದ ಚಕ್ಷುರಾದಿಗಳಿಗೆ ಜೀವಪ್ರಯೋಜ್ಯತ್ವವು. ಮುಖ್ಯಪ್ರಾಣನಿಗಾದರೂ ಸುಷುಪ್ತಿ ಕಾಲದಲ್ಲಿ ವ್ಯಾಪಾರವು ಕಂಡದ್ದರಿಂದ ಜೀವಾಪ್ರಯೋಜ್ಯತ್ವವು. ॥ ೧೨ ॥ ॥ ೬ ॥

### ಅಧಿಕರಣ ಸಾರಾಂಶ

ಮುಖ್ಯಪ್ರಾಣನು ಸ್ವತಂತ್ರನೋ ಪರತಂತ್ರನೋ ಎಂದು ಸಂದೇಹವು. **ನ ಪ್ರಾಣಃ ಕಿಂಚಿದಾಶ್ರಿತಃ** ಎನ್ನುವ ಶ್ರುತಿಯಿಂದ ಸ್ವತಂತ್ರನೆಂದು ಪೂರ್ವಪಕ್ಷವು. ಹೇಗೆಂದರೆ **ಯದಾಶ್ರಯಾದಸ್ಯ ಚೇಷ್ಟಾ** ಎನ್ನುವ ಪ್ರಮಾಣದಿಂದ ಅಖಿಲ ಜಗಚ್ಚೇಷ್ಟಕತ್ವ ಮಾಹಾತ್ಮ್ಯವಿದ್ದಪ್ರಯುಕ್ತ ಅನನ್ಯಾಶ್ರಯತ್ವ ರೂಪ ಯುಕ್ತಿಯಿಂದ ಕೂಡಿದಪ್ರಯುಕ್ತ **ನ ಪ್ರಾಣಃ ಕಿಂಚಿದಾಶ್ರಿತಃ** ಎನ್ನುವ ಶ್ರುತಿಯು **ಪ್ರಾಣಃ ಪರವಶೇ ಸ್ಥಿತಃ** ಎನ್ನುವ ಶ್ರುತಿಯಿಂದ ಪ್ರಬಲವು. **ಸ್ಥೂಲತ್ವೇನೋದೇತಿ** ಎನ್ನುವ ಶ್ರುತಿಯು ಲೀಲಾರ್ಥವಾಗಿ ವಿಗ್ರಹವನ್ನು ಸ್ವೀಕರಿಸುತ್ತಾನೆ ಎನ್ನುವ ರೀತಿಯಾಗಿಯೂ ಕೂಡಬಹುದು. ಎಂದರೆ **ಸರ್ವಂಹ್ಯೇವೈತತ್ಪರಮೇಽವತಿಷ್ಠತೇ** ಇತ್ಯಾದಿ ಈಶಾಧೀನತ್ವ ಪ್ರತಿಪಾದಕಶ್ರುತಿಯಿಂದ ಮುಖ್ಯಪ್ರಾಣನು ಪರಮಾತ್ಮಾಧೀನನೇ. ಈ ಶ್ರುತಿಯು

ಯತೋ ನೈವೇಶ್ವರದ್ವಯಂ ಎನ್ನುವ ವಚನದಲ್ಲಿ ಹೇಳಿದ ಈಶ್ವರದ್ವಯಾಯೋಗರೂಪ ಯುಕ್ತಿಯಿಂದ ಕೂಡಿದಪ್ರಯುಕ್ತ ಪ್ರಬಲವು. ಸ್ವಾತಂತ್ರ್ಯಶ್ರುತಿಯುಕ್ತಿಗಳು ಮತ್ತೊಬ್ಬ ಈಶ್ವರನು ಇಲ್ಲವೆಂದು ಅವಾಂತರೇಶ್ವರನೆಂದೂ ಪ್ರತಿಪಾದಿಸುತ್ತವೆ. ಚಕ್ಷುರಾದಿಗಳಿಗೂ ಮುಖ್ಯಪ್ರಾಣನಿಗೂ ಈಶ್ವರಾಧೀನತ್ವವು ಸಮಾನವಾದಾಗ್ಯೂ ಸುಷುಪ್ತಿಯಲ್ಲಿ ಜೀವರ ಪ್ರಯತ್ನವಿಲ್ಲದಿರುವಾಗ ಚಕ್ಷುರಾದಿಗಳಲ್ಲಿ ವ್ಯಾಪಾರವು ಕಾಣದಿರುವುದರಿಂದಲೂ ಮುಖ್ಯಪ್ರಾಣನ ವ್ಯಾಪಾರವು ಕಾಣುವುದರಿಂದಲೂ ಕರ್ತೃಪ್ರಯೋಜ್ಯತ್ವ ಅಪ್ರಯೋಜ್ಯತ್ವಗಳು ಕಾಣುವುದರಿಂದಲೂ ತಾನಿ ಹ ವಾ ಏತಾನಿ ಕರಣಾನಿ ಇತ್ಯಾದಿ ಶ್ರುತಿಯಿಂದಲೂ ಕರಣತ್ವ ಅಕರಣತ್ವರೂಪ ವೈಲಕ್ಷಣ್ಯಾತಿಶಯವಿದ್ದುದರಿಂದ ಅವಾಂತರೇಶ್ವರತ್ವವು ಉಪಪನ್ನವಾಗುತ್ತದೆ. ॥ ಅಧಿ. ೭ ॥

**ಚಕ್ಷುರಾದ್ಯಧಿಕರಣವು ಸಮಾಪ್ತವಾಯಿತು.**

**॥ ಓಂ ದಾಸಪ್ರಾಣ ಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥**

## ೮ ಪಂಚವೃತ್ತ್ಯಧಿಕರಣವು

ಪೀಠಿಕೆ ॥ ಪ್ರಾಣಾಪಾನಾದಿಗಳಿಗೆ ಮುಖ್ಯಪ್ರಾಣ ಸ್ವರೂಪತ್ವ. ಮುಖ್ಯಪ್ರಾಣ ದಾಸತ್ವ ವಿಷಯದಲ್ಲಿ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ಸರ್ವೇ ವಾ ಏತೇ ಮುಖ್ಯದಾಸಾಃ ಪ್ರಾಣೋಽಪಾನೋ ವ್ಯಾನ ಉದಾನ। ಸಮಾನಃ। ಇತಿ। ಅಥ ಪ್ರಾಣೋ ವಾ ವ ಸಮ್ರಾಟ್(ಳ್)। ಇತಿ ಕೌಂಡಿನ್ಯಶ್ರುತಿಃ। (೨) ಪ್ರಾಣಾಪಾನಾದಯಃ ಸರ್ವೇ ಮುಖ್ಯದಾಸಾ ಯತೋಽನಿಶಂ। ಅತಸ್ತದಾಜ್ಞಯಾ ನಿತ್ಯಂ ಸ್ವಾನಿ ಕರ್ಮಾಣಿ ಕುರ್ವತೇ ॥ ಇತಿ ಯುಕ್ತಿರ್ವಾಯುಪ್ರೋಕ್ತೇ ॥ ೧ ॥**

ಭಾಷ್ಯಾರ್ಥ ॥ (೧) ಪ್ರಾಣಾದಿ ಈ ಐವರು ಮುಖ್ಯಪ್ರಾಣನ ದಾಸರೇ, ಆದಕಾರಣ ಮುಖ್ಯಪ್ರಾಣನೇ ಸರ್ವೇಶ್ವರನಾಗಿ ಪ್ರಕಾಶಿಸಿಕೊಂಡಿರತಕ್ಕವನು, ಎನ್ನುವ ಕೌಂಡಿನ್ಯಶ್ರುತಿಯು (ದಾಸತ್ವವನ್ನು ಹೇಳುತ್ತದೆ.) (೨) ಯಾವ ಕಾರಣದಿಂದ ಪ್ರಾಣಾದಿಗಳೆಲ್ಲರೂ ನಿರಂತರದಲ್ಲಿಯೂ ಮುಖ್ಯಪ್ರಾಣನ ದಾಸರೋ, ಆದಕಾರಣ ಮುಖ್ಯಪ್ರಾಣನ ಆಜ್ಞೆಯಿಂದ ನಿರಂತರದಲ್ಲಿಯೂ ತಮ್ಮತಮ್ಮ ಕರ್ಮಗಳನ್ನು ಮಾಡುತ್ತಾರೆ, ಎನ್ನುವ ಯುಕ್ತಿಯು (ಅಂದರೆ ಪ್ರಾಣಾದಯಃ ಮುಖ್ಯದಾಸಾಃ ತದಾಜ್ಞಯಾ ಕರ್ಮಕಾರಿತ್ವಾತ್ ಎನ್ನುವ ಯುಕ್ತಿಯು) ವಾಯುಪ್ರೋಕ್ತದಲ್ಲಿ ಹೇಳಲ್ಪಟ್ಟಿದೆ. ॥ ೧ ॥

ಪೀಠಿಕೆ ॥ ಹೀಗೆ ದಾಸತ್ವವಿಷಯದಲ್ಲಿ ಶ್ರುತಿಯನ್ನು ಹೇಳಿ ಪ್ರಾಣಾದಿಗಳಿಗೆ ಮುಖ್ಯಸ್ವರೂಪತ್ವ ದಲ್ಲಿಯೂ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ (೧) ಮುಖ್ಯಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ ಪಂಚ ವಾಯವಃ । ಸ ಏವ ಪ್ರಾಣನಾಂ ದೇಹೇ ಪಂಚಧಾ ವರ್ತತೇಽನಿಶಂ ॥ ಇತಿ ಚ ಗೌಪವನಶ್ರುತಿಃ (೨)**

**ಅತೋವಕ್ತಿ । ॥ ೨ ॥**

ಭಾಷ್ಯಾರ್ಥ ॥ (೧) ಪ್ರಾಣಾದಿ ಐದು ವಾಯುಗಳು ಮುಖ್ಯಪ್ರಾಣನದ್ದೇ ಸ್ವರೂಪಗಳು. ಆ ಮುಖ್ಯಪ್ರಾಣನೇ ಪ್ರಾಣಗಳ ಶರೀರದಲ್ಲಿ ನಿರಂತರದಲ್ಲಿಯೂ ಐದು ಪ್ರಕಾರದಿಂದ ಇದ್ದಾನೆ. ಎಂದು ಗೌಪವನ ಶ್ರುತಿಯು, (ಸ್ವರೂಪತ್ವವನ್ನು ಹೇಳುತ್ತದೆ.) (ಇಲ್ಲಿ ದಾಸತ್ವ ಶ್ರುತಿಗೆ ತದಾಜ್ಞಯಾ ಕರ್ಮಕಾರಿತ್ವರೂಪ ಯುಕ್ತಿಸಾಹಿತ್ಯವೂ ಸ್ವರೂಪತ್ವಶ್ರುತಿಗೆ ವ್ಯಕ್ತಸದ್ಗುಣತ್ವಾದಿ ಯುಕ್ತಿಸಾಹಿತ್ಯವೂ ಇದ್ದಪ್ರಯುಕ್ತ ಎರಡು ಶ್ರುತಿಗಳೂ ಸಮಬಲಗಳಾಗಿವೆ. ತಥಾಚ ಶ್ರುತಿಗಳಿಗೆ ಪರಸ್ಪರ ವಿರೋಧವಿದ್ದುದರಿಂದ ಪ್ರಾಣಾದಿ ಐದಕ್ಕೆ ದಾಸತ್ವವನ್ನಾಗಲೀ ಸ್ವರೂಪತ್ವವನ್ನಾಗಲೀ ನಿರ್ಣಯಿಸಲಿಕ್ಕೆ ಶಕ್ಯವಾಗುವುದಿಲ್ಲ. ಆದಕಾರಣ ಎರಡು ಶ್ರುತಿಗಳೂ ಅಪ್ರಮಾಣವೇ.) (೨) ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ.

## ಸೂತ್ರ ॥ ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ ॥ ೧೩ ॥

ಸೂತ್ರಾರ್ಥ ॥ ಹೇಗೆ ಅಂತಃಕರಣವು ಮನ ಆದಿ ಪಂಚರೂಪಗಳುಳ್ಳದ್ದು ಐದು ದಾಸ (ಭೃತ್ಯ)ರುಳ್ಳದ್ದಾಗಿ ವ್ಯಪದೇಶಿಸಲ್ಪಡುತ್ತದೋ, ಹೀಗೆಯೇ ಮುಖ್ಯಪ್ರಾಣನೂ ಪ್ರಾಣಾದಿ ಪಂಚಸ್ವರೂಪಗಳುಳ್ಳವನು ಐದು ದಾಸರುಳ್ಳವನು ಎಂದು ಹೇಳಲ್ಪಡುತ್ತಾನೆ.

**ಭಾಷ್ಯ ॥ (೧) ಅಥ ಪಂಚವೃತ್ತ್ಯೈತತ್ಪ್ರವರ್ತತೇ ಪ್ರಾಣೋ ವಾ ವ ಪಂಚವೃತ್ತಿಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಃ । ಇತಿ । ತೇಭ್ಯೋ ವಾ ಏತೇಭ್ಯಃ ಪಂಚದಾಸಾಃ ಪ್ರಜಾಯಂತೇ । (೨) ಪ್ರಾಣಾದ್ವಾ ವ ಪ್ರಾಣೋಽ-ಪಾನಾದಪಾನೋವ್ಯಾನದ್ವ್ಯಾನ ಉದಾನಾದುದಾನಃ ಸಮಾನಾದೇವ ಸಮಾನೋ (೩) ಯಥಾ ಹ ವೈಮನಃ ಪಂಚಧಾ ವ್ಯಪದಿಶ್ಯತೇ । ಮನೋ ಬುದ್ಧಿರಹಂಕಾರಶ್ಚಿತ್ತಂ ಚೇತನಾ ಇತಿ ತೇಭ್ಯೋ ವಾ ಏತೇಭ್ಯಃ ಪಂಚ ದಾಸಾಃ ಪ್ರಜಾಯಂತೇ । ಮನಸೋ ವಾ ವ ಮನೋ ಬುದ್ಧೇರ್ಬುದ್ಧಿರಹಂಕಾರಾ-ದಹಂಕಾರಶ್ಚಿತ್ತಾಚ್ಚಿತ್ತಂ ಚೇತನಾಯಾ ಏವ ಚೇತನೈವಮಿತಿ । ಇತಿ ॥ ೧೩ ॥**
**ಅಧಿ.೮ ॥ ॥ ೩ ॥**

ಭಾಷ್ಯಾರ್ಥ ॥ (೧) ಈ ಶರೀರವು ಐದು ಸ್ವರೂಪದಿಂದ ಪ್ರವರ್ತಿಸುತ್ತದೆ. ಪ್ರಾಣನು ಐದು ಸ್ವರೂಪಗಳುಳ್ಳವನು-ಪ್ರಾಣ ಅಪಾನ ವ್ಯಾನ ಉದಾನ ಸಮಾನ ಎಂದು. ಈ ಐವರಿಂದ ಐದು ಭೃತ್ಯರು ಹುಟ್ಟುತ್ತಾರೆ. (೨) ಪ್ರಾಣನಿಂದ ಪ್ರಾಣನು, ಅಪಾನನಿಂದ ಅಪಾನನು, ವ್ಯಾನನಿಂದ ವ್ಯಾನನು, ಉದಾನನಿಂದ ಉದಾನನು, ಸಮಾನನಿಂದಲೇ ಸಮಾನನು. (೩) ಹೇಗೆಂದರೆ—ಮನಸ್ಸು ಮನೋಬುದ್ಧ್ಯಾದಿ ಭೇದದಿಂದ ಐದು ಪ್ರಕಾರವಾಗಿ ಹೇಗೆ ಹೇಳಲ್ಪಡುತ್ತದೋ ಹಾಗೆಯೇ, ೧ ಸಂಕಲ್ಪವಿಕಲ್ಪಾತ್ಮಕವಾದುದು ಮನಸ್ಸು. ಕರಿಷ್ಯೇ ಇತ್ಯಾದಿ ಕ್ರಿಯೆಗಳಿಗೆ ಹೇತುಭೂತವಾದ ಕಾಮವು ಸಂಕಲ್ಪವು. ಆ ಕಾಮವೇ ನಾನಾರ್ಥ ವಿಷಯಕವಾದರೆ ವಿಕಲ್ಪವು. ೨ ನಿಶ್ಚಯರೂಪವಾದುದು

ಬುದ್ಧಿಯು. ೩. ಅಸ್ವರೂಪವಾದ ಸ್ವಾತಂತ್ರ್ಯಾದಿ ಅಸ್ವಧರ್ಮದಲ್ಲಿ ಸ್ವರೂಪತ್ವಮತಿಯು ಅಂದರೆ—ಸ್ವಧರ್ಮಕ್ಕೆ ಬುದ್ಧಿಯು ಅಹಂಕಾರವು ಅಭಿಮಾನವು. ೪ ಸ್ಮರಣಕ್ಕೆ ಕಾರಣವು ಚಿತ್ತವು. ೫ ಚೇತಸ್ಸಿಗೆ ಬಹುಸ್ಮರಣಶಕ್ತಿಯು ಚೇತನಾ ಎನ್ನಿಸಿಕೊಳ್ಳುತ್ತದೆ. ಆ ಈ ಇವರಿಂದ ಐದು ಮಂದಿ ದಾಸರು ಹುಟ್ಟಿದರು. ಮನಸ್ಸಿನಿಂದ ಮನಸ್ಸು, ಬುದ್ಧಿಯಿಂದ ಬುದ್ಧಿಯು ಅಹಂಕಾರದಿಂದ ಅಹಂಕಾರವು, ಚಿತ್ತದಿಂದ ಚಿತ್ತವು, ಚೇತನೆಯಿಂದಲೇ ಚೇತನವು, ಎಂದು. ಅಂದರೆ—ಇವುಗಳಿಗೆ ಅಭಿಮಾನಿಯಾದ ರುದ್ರನಿಗೆ ಮನ ಆದಿ ಪಂಚಸ್ವರೂಪತ್ವವೂ ಮನ ಆದಿ ಪಂಚದಾಸವತ್ವವು ಹೇಗೆ ಕೂಡುತ್ತದೋ ಹಾಗೆಯೇ. ॥ ೧೩. ॥ ॥ ೩. ॥

## ಮಾಯಾವಾದಿ ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ನ ವಾಯುಕ್ರಿಯೇ ಎನ್ನುವುದನ್ನು ಆರಂಭಿಸಿ ಅಣುಶ್ಚ ಎನ್ನುವುದರಿಂದ ಹಿಂದಿನ ಸೂತ್ರಗಳು ಒಂದು ಅಧಿಕರಣವು. ಅದರಲ್ಲಿ ಮುಖ್ಯಪ್ರಾಣನು ವಾಯುಮಾತ್ರವಲ್ಲ, ಸಾಂಖ್ಯರೀತ್ಯಾ ಸಮಸ್ತಕರಣ ಕ್ರಿಯೆಯೂ ಅಲ್ಲ. **ಏತಸ್ಮಾಜ್ಜಾಯತೇ ಪ್ರಾಣಃ** ಎನ್ನುವ ಶ್ರುತಿಯಲ್ಲಿ ವಾಯುಕರ್ಮಶಬ್ದಗಳಿಂದ ಪ್ರಾಣನ ದೆಶೆಯಿಂದ ಅವುಗಳನ್ನು ಪ್ರತ್ಯೇಕ ಹೇಳಿದ್ದರಿಂದ. ಮತ್ತೆ ಆಧ್ಯಾತ್ಮಿಕ ವಾಯುವಿಕಾರ ವಿಶೇಷವಾದ ಮುಖ್ಯಪ್ರಾಣನು ಎಂದು **ನ ವಾಯುಕ್ರಿಯೇ** ಎನ್ನುವ ಸೂತ್ರಾರ್ಥವು, ಎನ್ನುತ್ತಾರೆ. ಅದು ಅಯುಕ್ತವು. ಸಾಂಖ್ಯ ಮತನಿರಾಸವು ಇಲ್ಲಿ ಅಸಂಗತವು. ಮತ್ತು ನಮ್ಮ ರೀತಿಯಾಗಿ ಅವಶ್ಯ ನಿರಸನೀಯವಾದ ಪೂರ್ವೋಕ್ತ ಪ್ರಾಣೋತ್ಪತ್ತಿ ಶ್ರುತಿಗೆ ವಾಯ್ವಾದಿಪರತ್ವವನ್ನು ಇಲ್ಲಿ ನಿರಾಕರಿಸುವುದರಿಂದ ನ ವಾಯು ಎನ್ನುವುದಕ್ಕೆ ಸೂತ್ರಾಕ್ಷರಾನುಸಾರವಾಗಿ ಪೂರ್ವಶೇಷತ್ವವು ಕೂಡುವಾಗ ಪ್ರಾಣಸಂವಾದಾದಿಗಳಿಂದ ಚೇತನನೆಂದು ನಿರ್ಣೀತನಾದ ಮುಖ್ಯಪ್ರಾಣನಲ್ಲಿ ಜಡತ್ವವನ್ನು ಅಂಗೀಕರಿಸಿ ವಾಯುಕ್ರಿಯಾತ್ವ ಪೂರ್ವಪಕ್ಷವೂ ವಾಯುವಿಕಾರತ್ವ ಸಿದ್ಧಾಂತವೂ ಅಯುಕ್ತವು. ಶ್ರುತಿಗಳಲ್ಲಿ ಜಡದಲ್ಲಿ ಎಲ್ಲಿಯೂ ಮುಖ್ಯಪ್ರಾಣ ಶಬ್ದವು ದೃಷ್ಟವಾಗಲಿಲ್ಲ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** ಕಾಮಾದಿಗಳು ಹೇಗೆ ಮನಸ್ಸಿನ ವೃತ್ತಿವಿಶೇಷಗಳೋ, ತತ್ತ್ವಾಂತರವಲ್ಲವೋ, ಹಾಗೆಯೇ ಪ್ರಾಣಾಪಾನಾದಿಗಳೂ ಪ್ರಾಣನ ವೃತ್ತಿವಿಶೇಷಗಳು. ತತ್ತ್ವಾಂತರವಲ್ಲ ಎಂದು **ಪಂಚವೃತ್ತಿಃ** ಎನ್ನುವ ಸೂತ್ರಾರ್ಥವು ಎನ್ನುತ್ತಾರೆ. ಅದು ಅಯುಕ್ತವು. ಪ್ರಾಣನಿಗೆ ಪ್ರಾಣವೃತ್ತಿತ್ವವು ಕೂಡಲಾರದು. **ಕಾಮಃ ಸಂಕಲ್ಪೋ ವಿಚಿಕಿತ್ಸಾ ಸರ್ವಂ** ಮನ ಏವ ಎನ್ನುವ ಶ್ರುತಿಯಿಂದ ಕಾಮಾದಿಗಳಿಗೆ ಹೆಚ್ಚಾದ ಐದು ರೂಪದಿಂದ ಮನಸ್ಸಿಗೆ ದೃಷ್ಟಾಂತತ್ವವು ಕೂಡಲಾರದು.

## ಅಧಿಕರಣ ಸಾರಾಂಶ

ಪ್ರಾಣಾದಿಗಳು ಐವರು ಮುಖ್ಯಪ್ರಾಣನ ದಾಸರೆಂದಾಗಲೀ ಸ್ವರೂಪರೆಂದಾಗಲೀ ನಿರ್ಣಯಿಸಲಿಕ್ಕೆ ಶಕ್ಯವಾಗುತ್ತದೋ ಇಲ್ಲವೋ ಎಂದು ಸಂದೇಹವು. ಶಕ್ಯವಲ್ಲವೆಂದು ಪೂರ್ವಪಕ್ಷವು. **ಸರ್ವೇ ವಾ ಏತೇ ಮುಖ್ಯದಾಸಾಃ** ಎನ್ನುವ ದಾಸತ್ವಶ್ರುತಿಯು, **ಏಷ ಪ್ರಾಣಃ ಇತರಾನ್ ಪ್ರಾಣಾನ್**

ಇತ್ಯಾದಿ ಶ್ರುತಿಯಿಂದಲೂ **ಪ್ರಾಣಾಪಾನಾದಯಃ ಸರ್ವೇ** ಇತ್ಯಾದಿ ಸ್ಮೃತಿಯಿಂದಲೂ **ತದಾಜ್ಞಯಾ ಕರ್ಮಕಾರಿತ್ವಾತ್** ಎನ್ನುವ ಯುಕ್ತಿಯಿಂದೊಡಗೂಡಿದ ಪ್ರಯುಕ್ತ ಪ್ರಬಲವು. **ಮುಖ್ಯಸ್ಯೈವ ಸ್ವರೂಪಾಣಿ** ಎನ್ನುವ ಸ್ವರೂಪತ್ವಶ್ರುತಿಯೂ ಕೂಡ ಸ್ವರೂಪತ್ವಸಾಧಕ ವ್ಯಕ್ತಸದ್ಗುಣತ್ವ ಯುಕ್ತಿಯಿಂದ ಕೂಡಿದ ಪ್ರಯುಕ್ತ ಪ್ರಬಲವಾಗಿದೆ. ಹೀಗೆ ಶ್ರುತಿಗಳಿಗೆ ವಿರುದ್ಧಾರ್ಥಗಳಿದ್ದ ಪ್ರಯುಕ್ತ ಅಪ್ರಮಾಣವು ಎಂದರೆ— **ಅಥ ಪಂಚವೃತ್ತ್ಯೈತತ್ಪ್ರವರ್ತತೇ** ಇತ್ಯಾದಿ ಶ್ರುತಿಗಳಲ್ಲಿ ಮನೋದೃಷ್ಟಾಂತದಿಂದ ಐದು ಸ್ವರೂಪಗಳಿಂದ ಮುಖ್ಯಪ್ರಾಣನನ್ನು ಹೇಳಿದ್ದರಿಂದ ಪ್ರತ್ಯೇಕ ಉಭಯವಿಧವನ್ನು ಅಂಗೀಕರಿಸಿದ್ದರಿಂದ ಯುಕ್ತಿಯುಕ್ತಗಳಾದ ಶ್ರುತಿಗಳಿಗೆ ವಿರೋಧವಿಲ್ಲದಿರುವುದರಿಂದ ಅಪ್ರಾಮಾಣ್ಯವಿಲ್ಲ. **ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ । ತದ್ದಾಸಾಃ ಪಂಚ ಚಾನ್ಯೇऽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ॥** ಎನ್ನುವ ಶ್ರುತಿಯಿಂದ ಸ್ವರೂಪ ದಾಸರಿಗೆ ತಾರತಮ್ಯವು ಕೂಡುವುದರಿಂದ ಸ್ವಾಮಿ ಭೃತ್ಯಭಾವಕ್ಕೆ ವಿರೋಧವಿಲ್ಲ. **ಪ್ರಾಣಾಪಾನವಿಡಾಯಾಂ ಚ ಪಿಂಗಲಾಯಾಂ ಚ ವರ್ತತಃ ॥ ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ॥ ಸರ್ವತ್ರೈವ ಸಮಾನಸ್ತು ಸಮಂ ಚರತಿ ಸರ್ವಗಃ** ಎನ್ನುವ ಭಾರತವಚನದಿಂದ ಪ್ರಾಣಾದಿಗಳ ಕರ್ಮಗಳನ್ನು ತಿಳಿಯತಕ್ಕದು. ॥ ಅಧಿ.೮ ॥

**ಪಂಚವೃತ್ತ್ಯಧಿಕರಣವು ಸಮಾಪ್ತವಾಯಿತು.**

**॥ ಓಂ ಪ್ರಾಣಾಣುತ್ವಶ್ರುತ್ಯವಿರೋಧ ಸಮನ್ವಯ ಗೋಚರಾಯನಮಃ ಓಂ ॥**

## ೯ ಅಣ್ವಧಿಕರಣವು

**ಪೀಠಿಕೆ ॥** ಮುಖ್ಯಪ್ರಾಣ ಪರಿಮಾಣವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ಪ್ರಾಣ ಏವಾಧಸ್ತಾತ್ಪ್ರಾಣ ಉಪರಿಷ್ಟಾತ್ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ ಪ್ರಾಣ ಏವೇದಂ ಸರ್ವಂ ಇತಿ ಪ್ರಾಣಸ್ಯ ವ್ಯಾಪ್ತಿಃ ಪ್ರತೀಯತೇ। (೨) ಯತಃ ಸರ್ವಂ ಜಗದ್ವ್ಯಾಪ್ಯ ತಿಷ್ಠತಿ ಪ್ರಾಣ ಏವ ತು । ಅತೋ ಧೃತಂ ಜಗತ್ಸರ್ವಮನ್ಯಥಾ ಕೇನ ಧಾರ್ಯತೇ ॥ ಇತಿ ಚ ಯುಕ್ತಿರ್ವಾಯುಪ್ರೋಕ್ತೇ ॥ ೧ ॥**

**ಭಾಷ್ಯಾರ್ಥ ॥** (೧) ಪ್ರಾಣನೇ ಕೆಳಗೆ ಇದ್ದಾನೆ, ಪ್ರಾಣನೇ ಮೇಲೆಯೂ ಇದ್ದಾನೆ, ಮಧ್ಯದಲ್ಲಿಯೂ ಇದ್ದಾನೆ. ಪ್ರಾಣನು ಸರ್ವ ದಿಕ್ಕುಗಳಲ್ಲಿ ಇದ್ದಾನೆ. ಪ್ರಾಣನೇ ಈ ಎಲ್ಲಾ ಜಗತ್ತಿಗೆ ಸತ್ತಾಪ್ರದನು. ಹೀಗೆ ಶ್ರುತಿಯಲ್ಲಿ ಪ್ರಾಣನಿಗೆ ವ್ಯಾಪ್ತಿಯು ತೋರುತ್ತದೆ. (೨) ಪ್ರಾಣನೇ ಯಾವ ಕಾರಣದಿಂದ ಸರ್ವಜಗತ್ತನ್ನು ವ್ಯಾಪಿಸಿಕೊಂಡು ಇದ್ದಾನೋ, ಆದಕಾರಣ ಆತನಿಂದಲೇ ಸರ್ವಜಗತ್ತು ಧೃತವಾಗಿದೆ. ಪ್ರಾಣನಿಗೆ ಸರ್ವತ್ರವ್ಯಾಪ್ತಿಯಿಲ್ಲವಾದರೆ (ಪ್ರಾಣನು ಧರಿಸಲಾರನು.) ಪ್ರಾಣನಿಗೆ ವ್ಯಾಪ್ತಿಯಿಲ್ಲವಾದರೆ ಸರ್ವಜಗತ್ತು ಯಾರಿಂದ ಧರಿಸಲ್ಪಡುತ್ತದೆ? ಎಂದೂ ಯುಕ್ತಿಯು (ಅಂದರೆ **ಮುಖ್ಯಪ್ರಾಣಃ ವ್ಯಾಪ್ತಃ ಸರ್ವಜಗದ್ಧಾರಕತ್ವಾತ್** ಎನ್ನುವ ಯುಕ್ತಿಯು) ವಾಯುಪ್ರೋಕ್ತದಲ್ಲಿ ಹೇಳಿದೆ. (ಮಾತ್ರವಲ್ಲ **ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ** ಎಂದು ಹರಿವಂಶದಲ್ಲಿಯೂ ಹೇಳಿದೆ.) ॥ ೧ ॥

ಪೀಠಿಕೆ ॥ ಹೀಗೆ ವ್ಯಾಪ್ತಿಶ್ರುತಿಯನ್ನು ಹೇಳಿ ಅಣುತ್ವಶ್ರುತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ (೧) ಅಣುನೈತತ್ಸೃಜ್ಯತೇऽಣುನೈತದ್ಧಾರ್ಯತೇ ಅಣೌ ಲಯಮಭ್ಯುಪೈತಿ ಪ್ರಾಣೋ ವಾ ಅಣುಃ ಪ್ರಾಣೈರ್ಹ್ಯೇ (ಪ್ರಾಣೇ ಹ್ಯೇ) ತದ್ಭವತಿ । ಇತಿ ಚ ಸೌತ್ರಾಯಣಶ್ರುತಿಃ ॥ (೨) ಅತ ಆಹ ॥ ೨ ॥**

ಭಾಷ್ಯಾರ್ಥ ॥ ಅಣುವಿನಿಂದ ಈ ಜಗತ್ತು ಸೃಷ್ಟಿಸಲ್ಪಡುತ್ತದೆ. ಅಣುವಿನಿಂದಲೇ ಧರಿಸಲ್ಪಡುತ್ತದೆ. ಅಣುವಿನಲ್ಲಿಯೇ ಲಯವನ್ನು ಹೊಂದುತ್ತದೆ. ಪ್ರಾಣನೇ ಅಣುವು. ಪ್ರಾಣಗಳಿಂದಲೇ ಈ ಜಗತ್ಸೃಷ್ಟ್ಯಾದಿಗಳು ಆಗುತ್ತವೆ ಎನ್ನುವ ಸೌತ್ರಾಯಣಶ್ರುತಿಯು ಅಣುತ್ವವನ್ನು ಹೇಳುತ್ತದೆ. (ತಥಾಚ ಸಯುಕ್ತಿಕವ್ಯಾಪ್ತಿಶ್ರುತಿ ವಿರೋಧದಿಂದ ಅಣುತ್ವಶ್ರುತಿಯು ಅಪ್ರಮಾಣವೇ.) (೨) ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ. ॥ ೨ ॥

## ಸೂತ್ರ ॥ ಓಂ ಅಣುಶ್ಚ ಓಂ ॥ ೧೪ ॥

ಸೂತ್ರಾರ್ಥ ॥ ಮುಖ್ಯಪ್ರಾಣನು ಅಣುವೇ ಆಗಿರುತ್ತಾನೆ. (ಶ್ರುತ್ಯಾದಿ ವಿರೋಧವಿಲ್ಲ) ದೇಹದಿಂದ ಹೊರಗೆ ಇರತಕ್ಕ ಮುಖ್ಯವಾಯುರೂಪದಿಂದ ವ್ಯಾಪ್ತನೂ ಆಗಿರುತ್ತಾನೆ.

**ಭಾಷ್ಯ ॥ ಸ ವಾ ಏಷ ಪ್ರಾಣೋऽಣುರ್ಮಹಾನ್ನಾಮಾಂತರ್ವಾऽಣುರ್ಬಹಿರ್ಮಹಾನ್ಪ್ರಾಣೋ ವಾ ಈಶಿತವ್ಯೇಶ ಈಶೋ ಹ್ಯಸೌ ಸರ್ವಸ್ಯೇಶಿತವ್ಯಶ್ಚ ಪರಸ್ಯ । ಇತಿ ಹಿ ಕೌಂಡಿನ್ಯಶ್ರುತಿಃ ॥ ೧೪ ॥ ಅಧಿ.೯ ॥ ॥ ೩ ॥**

ಭಾಷ್ಯಾರ್ಥ ॥ ಆ ಈ ಮುಖ್ಯಪ್ರಾಣನು ಅಣುವೂ ಆಗಿರುತ್ತಾನೆ, ವ್ಯಾಪ್ತನೂ ಆಗಿರುತ್ತಾನೆ. (ಹೃದಯಕಮಲವು ಸೂಕ್ಷ್ಮವಾದುದರಿಂದ) ದೇಹದೊಳಗೆ ಅಣುವಾಗಿರುತ್ತಾನೆ. (ತಥಾಚ ಅಧ್ಯಾತ್ಮದಲ್ಲಿರತಕ್ಕ ಪ್ರಾಣರೂಪದಿಂದ ಅಣುವಾಗಿರುತ್ತಾನೆ.) ದೇಹದಿಂದ ಹೊರಗೆ ವ್ಯಾಪ್ತನು. (ಅಂದರೆ ಅಧಿದೈವಗತ ವಾಯುರೂಪದಿಂದ ವ್ಯಾಪ್ತನು.) (ಅಂತೂ ಹೊರಗೆ ದೇಹದಿಂದಲೇ ವ್ಯಾಪ್ತಿಯು. ಒಳಗೆ ದೇಹತೋऽಪಿ ಅಣುತ್ವವು.) ಪ್ರಾಣನಾದರೂ ನಿಯಮ್ಯನೂ ನಿಯಾಮಕನೂ ಆಗಿರುತ್ತಾನೆ. ಹೇಗೆಂದರೆ ಈ ಮುಖ್ಯಪ್ರಾಣನು ಪರಮಾತ್ಮಾತಿರಿಕ್ತವಾದ ಸರ್ವಜಗತ್ತಿಗೆ ಸ್ವಾಮಿಯು. ಪರಮಾತ್ಮನಿಗೆ ಭೃತ್ಯನು ಹೀಗೆ ಕೌಂಡಿನ್ಯಶ್ರುತಿಯು. (ಈ ರೂಪಭೇದದಿಂದ ವ್ಯಾಪ್ತತ್ವ ಅಣುತ್ವರೂಪವಿಶೇಷವನ್ನು ಹೇಳುತ್ತದೆ.) ॥ ೧೪ ॥ ॥ ೩ ॥

## ಮಾಯಾವಾದಿರೀತ್ಯಾ

ವಿಚಾರ ॥ ಸಮ ಏಭಿಸ್ತ್ರಿಭಿರ್ಲೋಕೈಃ ಎಂದು ಪ್ರಾಣನಿಗೆ ಆಧಿದೈವಿಕ ಹಿರಣ್ಯಗರ್ಭಪ್ರಾಣರೂಪದಿಂದ ಸರ್ವಗತತ್ವಶ್ರುತಿಯು. ಆಧ್ಯಾತ್ಮಿಕ ಪ್ರಾಣರೂಪದಿಂದ ಪರಿಚ್ಛಿನ್ನತ್ವವು ಎನ್ನುತ್ತಾರೆ. ಅದು ಅಯುಕ್ತವು. ಹಿರಣ್ಯಗರ್ಭನಿಗಾಗಲೀ ಆತನ ಬುದ್ಧಿಗಾಗಲೀ ಪರಿಚ್ಛಿನ್ನತ್ವವು ಇದ್ದುದರಿಂದ ಸರ್ವಗತತ್ವೋಕ್ತಿಯು ಕೂಡಲಾರದು.

ಇತ್ಯಾದಿ ಶ್ರುತಿಯಿಂದಲೂ **ಪ್ರಾಣಾಪಾನಾದಯಃ ಸರ್ವೇ** ಇತ್ಯಾದಿ ಸ್ಮೃತಿಯಿಂದಲೂ **ತದಾಜ್ಞಯಾ ಕರ್ಮಕಾರಿತ್ವಾತ್** ಎನ್ನುವ ಯುಕ್ತಿಯಿಂದೊಡಗೂಡಿದ ಪ್ರಯುಕ್ತ ಪ್ರಬಲವು. **ಮುಖ್ಯಸ್ಯೈವ ಸ್ವರೂಪಾಣಿ** ಎನ್ನುವ ಸ್ವರೂಪತ್ವಶ್ರುತಿಯೂ ಕೂಡ ಸ್ವರೂಪತ್ವಸಾಧಕ ವ್ಯಕ್ತಸದ್ಗುಣತ್ವ ಯುಕ್ತಿಯಿಂದ ಕೂಡಿದ ಪ್ರಯುಕ್ತ ಪ್ರಬಲವಾಗಿದೆ. ಹೀಗೆ ಶ್ರುತಿಗಳಿಗೆ ವಿರುದ್ಧಾರ್ಥಗಳಿದ್ದ ಪ್ರಯುಕ್ತ ಅಪ್ರಮಾಣವು ಎಂದರೆ— **ಅಥ ಪಂಚವೃತ್ತ್ಯೈತತ್ಪ್ರವರ್ತತೇ** ಇತ್ಯಾದಿ ಶ್ರುತಿಗಳಲ್ಲಿ ಮನೋದೃಷ್ಟಾಂತದಿಂದ ಐದು ಸ್ವರೂಪಗಳಿಂದ ಮುಖ್ಯಪ್ರಾಣನನ್ನು ಹೇಳಿದ್ದರಿಂದ ಪ್ರತ್ಯೇಕ ಉಭಯವಿಧವನ್ನು ಅಂಗೀಕರಿಸಿದ್ದರಿಂದ ಯುಕ್ತಿಯುಕ್ತಗಳಾದ ಶ್ರುತಿಗಳಿಗೆ ವಿರೋಧವಿಲ್ಲದಿರುವುದರಿಂದ ಅಪ್ರಾಮಾಣ್ಯವಿಲ್ಲ. **ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ । ತದ್ದಾಸಾಃ ಪಂಚ ಚಾನ್ಯೇಽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ॥** ಎನ್ನುವ ಶ್ರುತಿಯಿಂದ ಸ್ವರೂಪ ದಾಸರಿಗೆ ತಾರತಮ್ಯವು ಕೂಡುವುದರಿಂದ ಸ್ವಾಮಿ ಭೃತ್ಯಭಾವಕ್ಕೆ ವಿರೋಧವಿಲ್ಲ. **ಪ್ರಾಣಾಪಾನವಿಡಾಯಾಂ ಚ ಪಿಂಗಲಾಯಾಂ ಚ ವರ್ತತಃ ॥ ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ॥ ಸರ್ವತ್ರೈವ ಸಮಾನಸ್ತು ಸಮಂ ಚರತಿ ಸರ್ವಗಃ** ಎನ್ನುವ ಭಾರತವಚನದಿಂದ ಪ್ರಾಣಾದಿಗಳ ಕರ್ಮಗಳನ್ನು ತಿಳಿಯತಕ್ಕುದು. ॥ ಅಧಿ.೮ ॥

**ಪಂಚವೃತ್ತ್ಯಧಿಕರಣವು ಸಮಾಪ್ತವಾಯಿತು.**

**॥ ಓಂ ಪ್ರಾಣಾಣುತ್ವ ಶ್ರುತ್ಯವಿರೋಧ ಸಮನ್ವಯ ಗೋಚರಾಯನಮಃ ಓಂ ॥**

## ೯ ಅಣ್ವಧಿಕರಣವು

**ಪೀಠಿಕೆ ॥** ಮುಖ್ಯಪ್ರಾಣ ಪರಿಮಾಣವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ಪ್ರಾಣ ಏವಾಧಸ್ತಾತ್ಪ್ರಾಣ ಉಪರಿಷ್ಟಾತ್ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ ಪ್ರಾಣ ಏವೇದಂ ಸರ್ವಂ ಇತಿ ಪ್ರಾಣಸ್ಯ ವ್ಯಾಪ್ತಿಃ ಪ್ರತೀಯತೇ। (೨) ಯತಃ ಸರ್ವಂ ಜಗದ್ವ್ಯಾಪ್ಯ ತಿಷ್ಠತಿ ಪ್ರಾಣ ಏವ ತು । ಅತೋ ಧೃತಂ ಜಗತ್ಸರ್ವಮನ್ಯಥಾ ಕೇನ ಧಾರ್ಯತೇ ॥ ಇತಿ ಚ ಯುಕ್ತಿರ್ವಾಯುಪ್ರೋಕ್ತೇ ॥ ೧ ॥**

**ಭಾಷ್ಯಾರ್ಥ ॥** (೧) ಪ್ರಾಣನೇ ಕೆಳಗೆ ಇದ್ದಾನೆ, ಪ್ರಾಣನೇ ಮೇಲೆಯೂ ಇದ್ದಾನೆ, ಮಧ್ಯದಲ್ಲಿಯೂ ಇದ್ದಾನೆ. ಪ್ರಾಣನು ಸರ್ವ ದಿಕ್ಕುಗಳಲ್ಲಿ ಇದ್ದಾನೆ. ಪ್ರಾಣನೇ ಈ ಎಲ್ಲಾ ಜಗತ್ತಿಗೆ ಸತ್ತಾಪ್ರದನು. ಹೀಗೆ ಶ್ರುತಿಯಲ್ಲಿ ಪ್ರಾಣನಿಗೆ ವ್ಯಾಪ್ತಿಯು ತೋರುತ್ತದೆ. (೨) ಪ್ರಾಣನೇ ಯಾವ ಕಾರಣದಿಂದ ಸರ್ವಜಗತ್ತನ್ನು ವ್ಯಾಪಿಸಿಕೊಂಡು ಇದ್ದಾನೋ, ಆದಕಾರಣ ಆತನಿಂದಲೇ ಸರ್ವಜಗತ್ತು ಧೃತವಾಗಿದೆ. ಪ್ರಾಣನಿಗೆ ಸರ್ವತ್ರವ್ಯಾಪ್ತಿಯಿಲ್ಲವಾದರೆ (ಪ್ರಾಣನು ಧರಿಸಲಾರನು.) ಪ್ರಾಣನಿಗೆ ವ್ಯಾಪ್ತಿಯಿಲ್ಲವಾದರೆ ಸರ್ವಜಗತ್ತು ಯಾರಿಂದ ಧರಿಸಲ್ಪಡುತ್ತದೆ? ಎಂದೂ ಯುಕ್ತಿಯು (ಅಂದರೆ **ಮುಖ್ಯಪ್ರಾಣಃ ವ್ಯಾಪ್ತಃ ಸರ್ವಜಗದ್ಧಾರಕತ್ವಾತ್** ಎನ್ನುವ ಯುಕ್ತಿಯು) ವಾಯುಪ್ರೋಕ್ತದಲ್ಲಿ ಹೇಳಿದೆ. (ಮಾತ್ರವಲ್ಲ **ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ** ಎಂದು ಹರಿವಂಶದಲ್ಲಿಯೂ ಹೇಳಿದೆ.) ॥ ೧ ॥

ಪೀಠಿಕೆ ॥ ಹೀಗೆ ವ್ಯಾಪ್ತಿಶ್ರುತಿಯನ್ನು ಹೇಳಿ ಅಣುತ್ವಶ್ರುತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ (೧) ಅಣುನೈತತ್ಸೃಜ್ಯತೇಽಣುನೈತದ್ಧಾರ್ಯತೇ ಅಣೌ ಲಯಮಭ್ಯುಪೈತಿ ಪ್ರಾಣೋ ವಾ ಅಣುಃ ಪ್ರಾಣೈರ್ಹ್ಯೇ (ಪ್ರಾಣೇ ಹ್ಯೇ) ತದ್ಭವತಿ । ಇತಿ ಚ ಸೌತ್ರಾಯಣಶ್ರುತಿಃ ॥ (೨) ಅತ ಆಹ ॥ ೨ ॥**

ಭಾಷ್ಯಾರ್ಥ ॥ ಅಣುವಿನಿಂದ ಈ ಜಗತ್ತು ಸೃಷ್ಟಿಸಲ್ಪಡುತ್ತದೆ. ಅಣುವಿನಿಂದಲೇ ಧರಿಸಲ್ಪಡುತ್ತದೆ. ಅಣುವಿನಲ್ಲಿಯೇ ಲಯವನ್ನು ಹೊಂದುತ್ತದೆ ಪ್ರಾಣನೇ ಅಣುವು. ಪ್ರಾಣಗಳಿಂದಲೇ ಈ ಜಗತ್ಸೃಷ್ಟ್ಯಾದಿಗಳು ಆಗುತ್ತವೆ ಎನ್ನುವ ಸೌತ್ರಾಯಣಶ್ರುತಿಯು ಅಣುತ್ವವನ್ನು ಹೇಳುತ್ತದೆ. (ತಥಾಚ ಸಯುಕ್ತಿಕವ್ಯಾಪ್ತಿಶ್ರುತಿ ವಿರೋಧದಿಂದ ಅಣುತ್ವಶ್ರುತಿಯು ಅಪ್ರಮಾಣವೇ.) (೨) ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ. ॥ ೨ ॥

## ಸೂತ್ರ ॥ ಓಂ ಅಣುಶ್ಚ ಓಂ ॥ ೧೪ ॥

ಸೂತ್ರಾರ್ಥ ॥ ಮುಖ್ಯಪ್ರಾಣನು ಅಣುವೇ ಆಗಿರುತ್ತಾನೆ. (ಶ್ರುತ್ಯಾದಿ ವಿರೋಧವಿಲ್ಲ) ದೇಹದಿಂದ ಹೊರಗೆ ಇರತಕ್ಕ ಮುಖ್ಯವಾಯುರೂಪದಿಂದ ವ್ಯಾಪ್ತನೂ ಆಗಿರುತ್ತಾನೆ.

**ಭಾಷ್ಯ ॥ ಸ ವಾ ಏಷ ಪ್ರಾಣೋಽಣುರ್ಮಹಾನ್ನಾಮಾಂತರ್ವಾಽಣುರ್ಬಹಿರ್ಮಹಾನ್ಪ್ರಾಣೋ ವಾ ಈಶಿತವ್ಯೇಶ ಈಶೋ ಹ್ಯಸೌ ಸರ್ವಸ್ಯೇಶಿತವ್ಯಶ್ಚ ಪರಸ್ಯ । ಇತಿ ಹಿ ಕೌಂಡಿನ್ಯಶ್ರುತಿಃ ॥ ೧೪ ॥ ಅಧಿ.೯ ॥ ॥ ೩ ॥**

ಭಾಷ್ಯಾರ್ಥ ॥ ಆ ಈ ಮುಖ್ಯಪ್ರಾಣನು ಅಣುವೂ ಆಗಿರುತ್ತಾನೆ, ವ್ಯಾಪ್ತನೂ ಆಗಿರುತ್ತಾನೆ. (ಹೃದಯಕಮಲವು ಸೂಕ್ಷ್ಮವಾದುದರಿಂದ) ದೇಹದೊಳಗೆ ಅಣುವಾಗಿರುತ್ತಾನೆ. (ತಥಾಚ ಅಧ್ಯಾತ್ಮದಲ್ಲಿರತಕ್ಕ ಪ್ರಾಣರೂಪದಿಂದ ಅಣುವಾಗಿರುತ್ತಾನೆ.) ದೇಹದಿಂದ ಹೊರಗೆ ವ್ಯಾಪ್ತನು. (ಅಂದರೆ ಅಧಿದೈವಗತ ವಾಯುರೂಪದಿಂದ ವ್ಯಾಪ್ತನು.) (ಅಂತೂ ಹೊರಗೆ ದೇಹದಿಂದಲೇ ವ್ಯಾಪ್ತಿಯು. ಒಳಗೆ ದೇಹತೋಽಪಿ ಅಣುತ್ವವು.) ಪ್ರಾಣನಾದರೂ ನಿಯಮ್ಯನೂ ನಿಯಾಮಕನೂ ಆಗಿರುತ್ತಾನೆ. ಹೇಗೆಂದರೆ ಈ ಮುಖ್ಯಪ್ರಾಣನು ಪರಮಾತ್ಮಾತಿರಿಕ್ತವಾದ ಸರ್ವಜಗತ್ತಿಗೆ ಸ್ವಾಮಿಯು. ಪರಮಾತ್ಮನಿಗೆ ಭೃತ್ಯನು ಹೀಗೆ ಕೌಂಡಿನ್ಯಶ್ರುತಿಯು. (ಈ ರೂಪಭೇದದಿಂದ ವ್ಯಾಪ್ತತ್ವ ಅಣುತ್ವರೂಪವಿಶೇಷವನ್ನು ಹೇಳುತ್ತದೆ.) ॥ ೧೪ ॥ ॥ ೩ ॥

## ಮಾಯಾವಾದಿರೀತ್ಯಾ

ವಿಚಾರ ॥ ಸಮ ಏಭಿಸ್ತ್ರಿರ್ಲೋಕೈಃ ಎಂದು ಪ್ರಾಣನಿಗೆ ಆಧಿದೈವಿಕ ಹಿರಣ್ಯಗರ್ಭಪ್ರಾಣರೂಪದಿಂದ ಸರ್ವಗತತ್ವಶ್ರುತಿಯು. ಆಧ್ಯಾತ್ಮಿಕ ಪ್ರಾಣರೂಪದಿಂದ ಪರಿಚ್ಛಿನ್ನತ್ವವು ಎನ್ನುತ್ತಾರೆ. ಅದು ಅಯುಕ್ತವು. ಹಿರಣ್ಯಗರ್ಭನಿಗಾಗಲೀ ಆತನ ಬುದ್ಧಿಗಾಗಲೀ ಪರಿಚ್ಛಿನ್ನತ್ವವು ಇದ್ದುದರಿಂದ ಸರ್ವಗತತ್ವೋಕ್ತಿಯು ಕೂಡಲಾರದು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಪ್ರಾಣನು ಸರ್ವಪ್ರವೃತ್ತಿಗೆ ಕಾರಣನಾದುದರಿಂದ ಸರ್ವಗತತ್ವೋಕ್ತಿಯು ಎನ್ನುತ್ತಾರೆ. ಅದು ಅಯುಕ್ತವು. **ಅಂತರ್ವಾ ಅಣುಃ ಬಹಿರ್ಮಹಾನ್** ಎನ್ನುವ ಶ್ರುತ್ಯುಕ್ತವಾದ ಸಮಾಧಾನವಿರುವಾಗ ಮನ ಆದಿಗಳಲ್ಲಿರತಕ್ಕ ಸರ್ವಪ್ರವೃತ್ತಿ ಹೇತುತ್ವರೂಪಹೇತುವಿನಿಂದ ಸರ್ವಗತತ್ವೋಕ್ತಿಯು ಕೂಡಲಾರದು.

## ಅಧಿಕರಣ ಸಾರಾಂಶ

ಪ್ರಾಣನು ವ್ಯಾಪ್ತನೋ ಅಣುವೋ ಎಂದು ಸಂದೇಹವು ಬಂದರೆ—ವ್ಯಾಪ್ತನೆಂದು ಪೂರ್ವಪಕ್ಷವು. ಹೇಗೆಂದರೆ—**ಯತಃ ಸರ್ವಂ ಜಗದ್ವ್ಯಾಪ್ಯ** ಇತ್ಯಾದಿ ಸ್ಮೃತ್ಯುಕ್ತ ಸರ್ವಜಗದ್ವ್ಯಾಪಕತ್ವ ಯುಕ್ತಿಯಿಂದ ಯುಕ್ತವಾದ, **ಪ್ರಾಣೋ ವಾ ಅಣುಃ** ಎನ್ನುವ ಅಣುತ್ವಶ್ರುತಿಯಿಂದ ಪ್ರಬಲವಾದ ಪ್ರಾಣ ಏವಾಧಸ್ತಾತ್ ಇತ್ಯಾದಿ ವ್ಯಾಪ್ತತ್ವಶ್ರುತಿಯಿಂದಲೂ ಮತ್ತು ಮಹಾನ್ಹಿ **ಮುಖ್ಯಪ್ರಾಣಃ ಯೇನ ವ್ಯಾಪ್ತಂ ಚರಾಚರಂ** ಇತ್ಯಾದಿ ಶ್ರುತ್ಯಂತರಗಳಲ್ಲಿ ಸ್ಪಷ್ಟವಾಗಿ ಮುಖ್ಯಪ್ರಾಣನಿಗೆ ವ್ಯಾಪ್ತತ್ವಪ್ರತೀತಿಯಿಂದಲೂ ವ್ಯಾಪ್ತನೇ ಎಂದು ಪೂರ್ವಪಕ್ಷ ಬಂದರೆ— **ಏಷ ಪರಾಣೋಽಣುರ್ಮಹಾನ್ವಾಮ** ಇತ್ಯಾದಿ ಶ್ರುತಿಗಳಿಂದ ದೇಹದೊಳಗೆ ಇರತಕ್ಕ ಪ್ರಾಣರೂಪದಿಂದ ಅಣುತ್ವವು, ಹೊರಗೆ ಇರತಕ್ಕ ವಾಯುರೂಪದಿಂದ ಮಹತ್ವವು ಹೀಗೆ ವ್ಯವಸ್ಥೆಯು ಕೂಡುವುದರಿಂದ ಪ್ರಾಣನು ಅಣುವೇ. **ಅಣುರ್ವೈ ಮುಖ್ಯಪ್ರಾಣೋ ಯದುತ್ಕ್ರಾಮತಿ ನಾಡೀಭಿಃ** ಎನ್ನುವ ಅಣುತ್ವಶ್ರುತಿಯೂ ಕೂಡ ನಾಡೀಸಂಚಾರಿತ್ವ ಯುಕ್ತಿಯಿಂದ ಯುಕ್ತವಾದುದರಿಂದ ಪ್ರಬಲವು. ॥ ಅಧಿ.೯ ॥

**ಅಣ್ವಧಿಕರಣವು ಸಮಾಪ್ತವಾಯಿತು.**

**॥ ಓಂ ಜೀವಕರಣತ್ವಶ್ರುತ್ಯವಿರೋಧಪ್ರಯೋಜ್ಯ ಸಮನ್ವಯ ಗೋಚರಾಯನಮಃ ಓಂ ॥**

# ೧೦ ಜ್ಯೋತಿರಾದ್ಯಧಿಕರಣವು

ಪೀಠಿಕೆ ॥ ಇಂದ್ರಿಯವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ಕರಣತ್ವಂ ಪ್ರಾಣಾನಾಮುಕ್ತಂ । (೨) ಜೀವಸ್ಯ ಕರಣಾನ್ಯಾಹುಃ ಪ್ರಾಣಾನೇತಾಂಸ್ತು ಸರ್ವಶಃ। ಯಸ್ಮಾತ್ತದ್ವಶಗಾ ಏತೇ ದೃಶ್ಯಂತೇ ಸರ್ವದೇಹಿಷು ॥ ಇತಿ ಸೌತ್ರಾಯಣಶ್ರುತೌ ಸಯುಕ್ತಿಕಂ ಜೀವಕರಣತ್ವಂ ಪ್ರತೀಯತೇ । (೩) ಬ್ರಹ್ಮಣೋ ವಾ ಏತಾನು ಕರಣಾನಿ ಚಕ್ಷುಃ ಶ್ರೋತ್ರಂ ಮನೋ ವಾಗಿತಿ ತದ್ವ್ಯೇತ್ಯೈಃ ಕಾರಯತಿ । ಇತಿ (ಚ) ಕಾಷಾಯಣಶ್ರುತೌ ॥ ೧ ॥**

ಭಾಷ್ಯಾರ್ಥ ॥ (೧) ಇಂದ್ರಿಯಗಳಿಗೆ ಕರಣತ್ವವು (ಅಕರಣತ್ವಾಚ್ಚ ಎನ್ನುವಲ್ಲಿದ್ದ ಚ ಶಬ್ದದಿಂದ) ಉಕ್ತವಾಗಿದೆ. (೨) ಯಾವ ಕಾರಣದಿಂದ ಈ ಇಂದ್ರಿಯಗಳು ಸರ್ವಶರೀರಗಳಲ್ಲಿ

(ಸರ್ವಪ್ರಾಣಗಳಿಂದ) ಜೀವರ ಅಧೀನದಲ್ಲಿಯೇ ಇರತಕ್ಕವುಗಳಾಗಿ (ತಂತಮ್ಮ ಅಧೀನಗಳಾಗಿಯೇ) ಅನುಭವಿಸಲ್ಪಡುತ್ತವೋ, ಆದುದರಿಂದ ಜ್ಞಾನಿಗಳು ಎಲ್ಲಾ ಈ ಇಂದ್ರಿಯಗಳನ್ನು ಜೀವನಿಗೇನೇ ಕರಣಗಳನ್ನಾಗಿ (ಜೀವರನ್ನು ಅಪೇಕ್ಷಿಸಿಯೇ ಜೀವಪ್ರಯೋಜನ್ಯಗಳನ್ನಾಗಿ) ಹೇಳುತ್ತಾರೆ. ಹೀಗೆ ಸೌತ್ರಾಯಣ ಶ್ರುತಿಯಲ್ಲಿ ಸಯುಕ್ತಿಕವಾಗಿ ಜೀವಾಧೀನ ಕರಣತ್ವವು ತೋರುತ್ತದೆ. (೨.) (ಅದಕ್ಕೆ ವಿರುದ್ಧವಾದ ಶ್ರುತಿಯನ್ನು ಹೇಳುತ್ತಾರೆ.) ಚಕ್ಷುಃ ಶ್ರೋತ್ರ ಮನಸ್ಸು ವಾಕ್ ಇವುಗಳು ಬ್ರಹ್ಮಾಧೀನ ಕರಣಗಳು. ಹೇಗೆಂದರೆ—ಆ ಬ್ರಹ್ಮನು ಈ ಇಂದ್ರಿಯಗಳಿಂದ ಜೀವನಿಗೆ ದರ್ಶನಾದಿಗಳನ್ನು ಮಾಡಿಸುತ್ತಾನೆ. ಅಂದರೆ—ಇಂದ್ರಿಯಗಳು ಕರ್ಮವನ್ನು ಮಾಡಿಸುತ್ತವೆ. ಅವುಗಳಿಂದ ಬ್ರಹ್ಮನು ಮಾಡಿಸುತ್ತಾನೆ. ಅಂತೂ ಇಂದ್ರಿಯಗಳಿಂದ ಬ್ರಹ್ಮನು ಮಾಡುತ್ತಾನೆ, ಎಂದು ಕಾಷಾಯಣ ಶ್ರುತಿಯಲ್ಲಿ (ಬ್ರಹ್ಮಾಧೀನಕರಣತ್ವವು ಪ್ರತೀತವಾಗುತ್ತದೆ.) ತಥಾಚ ಜೀವರ ವಶವಾಗಿ ದೃಶ್ಯಮಾನತ್ವ ಯುಕ್ತಿ ಸಹಿತವಾದ ಜೀವಸ್ಯ ಕರಣಾನ್ಯಾಹುಃ ಎನ್ನುವ ಶ್ರುತಿಯ ಬಲದಿಂದ ಇಂದ್ರಿಯಗಳಿಗೆ ಜೀವಾಧೀನ ಕರಣತ್ವವು ಸಿದ್ಧವಾಗುತ್ತಿರಲು ಇದಕ್ಕೆ ವಿರುದ್ಧವಾದ ಬ್ರಹ್ಮಾಧೀನಕರಣತ್ವ ಶ್ರುತಿಯು ಅಪ್ರಮಾಣವೇ. ॥ ೧ ॥

ಪೀಠಿಕೆ ॥ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅತ ಆಹ** ॥ ೨ ॥

ಭಾಷ್ಯಾರ್ಥ ॥ ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ.

## ಸೂತ್ರ ॥ ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ ॥ ೧೫ ॥

**ಭಾಷ್ಯ ॥ (೧) ಯಜ್ಜ್ಯೋತಿರಾದ್ಯಧಿಷ್ಠಾನಂ ಬ್ರಹ್ಮ ತದೇವೈತೈಃ ಕರಣೈಃ ಪ್ರವರ್ತಯತಿ (ತೇ) ॥ (೨) ಯಃ ಪ್ರಾಣೇ ತಿಷ್ಠನ್** (ಬೃ.೫.೭.೧೬)**। ಇತ್ಯಾದಿ ತದಾಮನನಾತ್ ॥ ೧೫ ॥** ॥ ೩ ॥

ಭಾಷ್ಯಾರ್ಥ ॥ (೧) ಯಾವುದು ತೇಜಸ್ಸು ಮೊದಲಾದ ಭೂತಗಳಿಗೆ ಪ್ರೇರಕವಾದ ಬ್ರಹ್ಮವೋ ಅದೇವೇ ತೇಜಸ್ಸು ಮೊದಲಾದ ಭೂತಾಂಶಗಳಾದ ಚಕ್ಷುರಾದಿಕರಣಗಳಿಂದ ದರ್ಶನಾದಿಗಳನ್ನು ಮಾಡಿಸುತ್ತದೆ. (ಆದಕಾರಣ ಬ್ರಹ್ಮಾಧೀನಗಳಾದ ಕರಣಗಳೇ ಜೀವಾಧೀನ ಕರಣಗಳಲ್ಲ. ಜ್ಯೋತಿರಾದಿ ಭೂತಗಳಿಗೆ ಪ್ರೇರಕವಾದುದೇ ಜ್ಯೋತಿರಾದಿಗಳಿಗೆ ಅಂಶಭೂತಗಳಾದ ಚಕ್ಷುರಾದಿಗಳಿಗೆ ಪ್ರವರ್ತಕವೆನ್ನುವುದು ಉಚಿತವು.) (೨) ಯಾವಾತನು ಮುಖ್ಯಪ್ರಾಣನಲ್ಲಿ ಇದ್ದವನಾಗಿ ಮುಖ್ಯಪ್ರಾಣನನ್ನು ನಿಯಮಿಸುತ್ತಾನೋ ಎಂದು ಸರ್ವೇಂದ್ರಿಯಗಳಿಗೂ ಪ್ರೇರಕನಾದ ಮುಖ್ಯಪ್ರಾಣನಿಗೂ ಶ್ರೀಹರಿಯು ಪ್ರೇರಕನೆಂದು ಶ್ರುತಿಯಲ್ಲಿ ಹೇಳಿದ್ದರಿಂದ ಆದಿಪದದಿಂದ, **ಯಶ್ಚಕ್ಷುಷಿ ತಿಷ್ಠನ್** ಇತ್ಯಾದಿ ಶ್ರುತಿಗಳಲ್ಲಿ ಚಕ್ಷುರಾದಿ ಇಂದ್ರಿಯಗಳಿಗೆ ಪ್ರೇರಕತ್ವವನ್ನು ಹೇಳಿದ್ದರಿಂದಲೂ. ॥ ೧೫ ॥

ಪೀಠಿಕೆ ॥ ಇಂದ್ರಿಯಗಳಿಗೆ ಬ್ರಹ್ಮಕರಣತ್ವವಾದರೆ ಜೀವಾಧೀನಕರಣತ್ವ ಶ್ರುತಿಯು ಹೇಗೆ ಕೂಡುತ್ತದೆ ಎಂದಾಶಂಕಿಸಿಕೊಂಡು ಅದಕ್ಕೆ ಪರಿಹಾರವಾಗಿ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಕಥಂ ಜೀವಕರಣತ್ವಶ್ರುತಿಃ॥ ಇತ್ಯತೋ ವಕ್ತಿ ॥ ೪ ॥**

ಭಾಷ್ಯಾರ್ಥ ॥ (ಇಂದ್ರಿಯಗಳು ಬ್ರಹ್ಮಾಧೀನಕರಣಗಳೆಂದಾದರೆ) ಜೀವಾಧೀನಕರಣತ್ವ ಶ್ರುತಿಯು ಹೇಗೆ ಕೂಡುತ್ತದೆ (ಬ್ರಹ್ಮಾಧೀನಕರಣತ್ವಕ್ಕೆ ಜೀವಾಧೀನಕರಣತ್ವ ಶ್ರುತಿಯಿಂದ ವಿರೋಧವೇ ಬರುವುದು) ಹೀಗೆ ಶಂಕೆಯು ಬಂದರೆ ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಪ್ರಾಣವತಾ ಶಬ್ದಾತ್ ಓಂ ॥ ೧೬ ॥

**ಭಾಷ್ಯ ॥ ಜೀವೇನೈವ ಸ್ವಕರಣೈಃ ಕಾರಯತಿ ಪರಮಾತ್ಮಾ । ಅತೋ ನ ವಿರೋಧಃ ॥೫॥**

ಭಾಷ್ಯಾರ್ಥ ॥ ಪರಮಾತ್ಮನು ತನ್ನ ಅಧೀನ ಕರಣಗಳೇ ಆದ ಇಂದ್ರಿಯಗಳಿಂದ ಅಮುಖ್ಯಕರ್ತನಾದ ಜೀವನಿಂದ ದರ್ಶನಾದಿ ಕರ್ಮಗಳನ್ನು ಮಾಡಿಸುತ್ತಾನೆ. ಆದಕಾರಣ ಇಂದ್ರಿಯಗಳು ಬ್ರಹ್ಮಾಧೀನಕರಣಗಳು ಎಂದಂಗೀಕರಿಸಿದರೂ ಜೀವಾಧೀನಕರಣತ್ವ ಶ್ರುತಿಯಿಂದ ವಿರೋಧವಿಲ್ಲ (ಜೀವಾಧೀನಕರಣತ್ವ ಶ್ರುತಿಗೂ ಈ ಅರ್ಥವೇ ಉಪಪನ್ನವಾಗುವುದು.) ॥ ೫ ॥

ಟೀಕೆ ॥ ಬ್ರಹ್ಮನು ಇಂದ್ರಿಯಗಳಿಂದ ಜೀವನಿಂದ ದರ್ಶನಾದಿಗಳನ್ನು ಮಾಡಿಸುತ್ತಾನೆ ಎನ್ನುವುದು ಯಾವುದರಿಂದ ಸಿದ್ಧವಾಗುತ್ತದೆ ಎಂದರೆ—

**ಭಾಷ್ಯ ॥ ಏಷ ಹ್ಯೇನೇನಾತ್ಮನಾ ಚಕ್ಷುಷಾ ದರ್ಶಯತಿ ಶ್ರೋತ್ರೇಣ ಶ್ರಾವಯತಿ ಮನಸಾ ಮನಯತಿ ಬುದ್ಧ್ಯಾ ಬೋಧಯತಿ ತಸ್ಮಾದೇತಾವಾಹುಃ ಸ್ಮೃತಿರಸ್ಮೃತಿರಿತಿ । ಇತಿ ಭಾಲ್ಲವೇಯಶ್ರುತೇಃ ॥ ೬ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಪರಮಾತ್ಮನು ಈ ಅಮುಖ್ಯ ಕರ್ತನಾದ ಜೀವನಿಂದ ಕರಣಭೂತವಾದ ಚಕ್ಷುರಿಂದ್ರಿಯದಿಂದ (ರೂಪಾದಿಗಳನ್ನು) ತೋರಿಸುತ್ತಾರೆ. ಕಿವಿಯಿಂದ ಕೇಳಿಸುತ್ತಾನೆ. ಮನಸ್ಸಿನಿಂದ ಸಾಮಾನ್ಯವಾಗಿ ತಿಳಿಯುತ್ತಾನೆ. ಅಥವಾ ವಿಚಾರ ಮಾಡುತ್ತಾನೆ. ಬುದ್ಧೀಂದ್ರಿಯದಿಂದ ವಿಶೇಷ ಜ್ಞಾನವನ್ನು ಹುಟ್ಟಿಸುತ್ತಾನೆ. ಅಥವಾ ತಿಳಿಸುತ್ತಾನೋ, ಆದಕಾರಣ ಪರಮಾತ್ಮ ಜೀವರನ್ನು ಸ್ಮೃತಿಃ=ಸ್ವಾತಂತ್ರ್ಯೇಣ ಪ್ರವೃತ್ತಿಯುಕ್ತನನ್ನಾಗಿಯೂ, ಅಸ್ಮೃತಿಃ=ಸ್ವಾತಂತ್ರ್ಯೇಣ ಪ್ರವೃತ್ತಿರಹಿತನನ್ನಾಗಿಯೂ ಹೇಳುತ್ತಾರೆ, ಎನ್ನುವ ಭಾಲ್ಲವೇಯ ಶ್ರುತಿಯಿಂದ. (ಜೀವನಿಂದ ಮಾಡಿಸುತ್ತಾನೆಂದು ತಿಳಿಯುತ್ತದೆ.) ॥ ೬ ॥

ಟೀಕೆ ॥ ಪರಮಾತ್ಮನು ಜೀವನಿಂದ ಶ್ರೋತ್ರಾದಿಕರಣಗಳಿಂದ ಮಾಡಿಸುತ್ತಾನೆಂದು ಇರಲಿ. ಆದಾಗ್ಯೂ ಜೀವಾಧೀನಕರಣತ್ವ ಶ್ರುತಿಗೆ ಅದೇವೇ ಅರ್ಥವೆನ್ನುವುದು ಹೇಗೆ ಸಿದ್ಧವಾಗುತ್ತದೆ ಎಂದರೆ—

**ಭಾಷ್ಯ ॥ ಕರಣೈಃ ಕಾರಣಂ ಬ್ರಹ್ಮ ಪುರುಷಾಪೇಕ್ಷಯಾಽಖಿಲಂ । ಶ್ರೋತ್ರಾದಿಭಿಃ ಕಾರಯತಿ ಕರಣಾನೀತ್ಯತೋ ವಿದುಃ ॥ ೭ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಸರ್ವಕಾರಣನಾದ ಬ್ರಹ್ಮನು ವಸ್ತುತಃ ಶ್ರೀಹರಿಯ

ಇಚ್ಛೆಯಿಂದ ಜೀವರ ಪ್ರಯತ್ನವನ್ನು ಅಪೇಕ್ಷಿಸಿ ಶ್ರೋತ್ರಾದಿಕರಣಗಳಿಂದ ಜೀವನಿಂದ ಶ್ರವಣಾದಿಗಳೆಲ್ಲವೂ ಮಾಡಿಸುತ್ತಾನೋ ಆದಕಾರಣ ಜೀವನಿಗೆ ಕರಣಗಳನ್ನಾಗಿ ತಿಳಿಯುತ್ತಾರೆ.

ಪೀಠಿಕೆ ॥ ಇವುಗಳು ಬ್ರಹ್ಮಾಧೀನಕರಣಗಳೆಂದಾದರೆ—ಮುಖ್ಯಪ್ರಾಣನಿಗೂ ಬ್ರಹ್ಮಕರಣತ್ವವು ಕೂಡುವುದರಿಂದ ಅಂಕರಣತ್ವಾತ್ ಎಂದು ಹೇಳಿದ್ದು ಅಯುಕ್ತವು ಆಗುವುದು ಎಂದರೆ—

**ಭಾಷ್ಯ ॥ ನ ಜೀವಾಪೇಕ್ಷಯಾ ಮುಖ್ಯಂ ಕಾರಯೇತ್ಪರಮೇಶ್ವರಃ । ಕೇವಲಾತ್ಮೇಚ್ಛಯಾ ತಸ್ಮಾನ್ಮುಖ್ಯತ್ವಂ ತಸ್ಯ ನಿಶ್ಚಿತಂ ।! ಇತಿ (ಚ) ವಾರಾಹೇ ॥ ೧೬ ॥ ॥ ೮ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ಶ್ರೀಹರಿಯು ಮುಖ್ಯಪ್ರಾಣನನ್ನು ಜೀವಪ್ರಯತ್ನ ಇಚ್ಛೆಗಳಿಂದ ಪ್ರಯೋಜ್ಯನನ್ನಾಗಿ ಮಾಡುವುದಿಲ್ಲವೋ ಮತ್ತೆ ತನ್ನ ಇಚ್ಛಾಪ್ರಯತ್ನ ಮಾತ್ರ ಪ್ರಯೋಜ್ಯನನ್ನಾಗಿ ಮಾಡುವನೋ ಆದಕಾರಣ ಜೀವಾಪೇಕ್ಷೆಯೂ ಬ್ರಹ್ಮಕರಣತ್ವವೂ ಇಲ್ಲದಿರುವುದರಿಂದ ಅಕರಣತ್ವ ಹೇತುವಿನಿಂದ ಮುಖ್ಯಪ್ರಾಣನಿಗೆ ಮುಖ್ಯತ್ವವು ಅವಿರುದ್ಧವು. ಎಂದು ವಾರಾಹದಲ್ಲಿ ಇದೆ. ॥ ೧೬ ॥ ॥ ೮ ॥

ಪೀಠಿಕೆ ॥ ಜೀವಕರಣತ್ವ ಶ್ರುತಿಗೆ ಅರ್ಥಾಂತರ ಪ್ರತಿಪಾದಕವಾದ ಸೂತ್ರವನ್ನು ಪಠನ ಮಾಡಿ ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತಸ್ಯ ಚ ನಿತ್ಯತ್ವಾತ್ ಓಂ ॥ ೧೭ ॥

**ಭಾಷ್ಯ ॥ ಅನಾದಿನಿತ್ಯತ್ವಾಚ್ಚ ಜೀವಕರಣಸಂಬಂಧಸ್ಯ ಯುಜ್ಯತೇ ತತ್ಕರಣತ್ವಶ್ರುತಿಃ ॥ ೯ ॥**

ಭಾಷ್ಯ ॥ ಜೀವಕರಣ ಸಂಬಂಧಕ್ಕೆ ಅನಾದಿನಿತ್ಯತ್ವವಿದ್ದುದರಿಂದ, ಅಂದರೆ—ಅನಾದಿ ಕಾಲವನ್ನಾರಂಭಿಸಿ ಇದ್ದುದರಿದಲೇ (ಅಂದರೆ ಮುಕ್ತಿಪರ್ಯಂತ ಇದ್ದುದರಿಂದ) (ಇಂದ್ರಿಯಗಳಿಗೆ ಬ್ರಹ್ಮಕರಣತ್ವವಿದ್ದರೂ) ಜೀವಕರಣತ್ವ ಶ್ರುತಿಯು ಯುಕ್ತವಾಗುತ್ತದೆ.

ವಿಶೇಷಾಂಶ ॥ ಪರಕೀಯವಾದುದಾಗ್ಯೂ ಬಹುಕಾಲ ಸಂಬಂಧವುಳ್ಳ ವಸ್ತುವಿನಲ್ಲಿ ಅಮುಖ್ಯವಾಗಿ ಅವನದ್ದೆನ್ನುವ ವ್ಯವಹಾರವು ಇದ್ದಪ್ರಯುಕ್ತ ಇಲ್ಲಿಯೂ ಭಗವತ್ಸಂಬಂಧಿಯಾದ ಇಂದ್ರಿಯಗಳಲ್ಲಿಯೂ ಬಹು ಕಾಲೀನವಾದ ಜೀವಸಂಬಂಧವನ್ನು ಇಟ್ಟುಕೊಂಡು ಕರಣಶ್ರುತಿಯು ಪ್ರವೃತ್ತವಾಗಿದೆ ಎಂದು ಶ್ರುತಿಗೆ ಅಮುಖ್ಯಾರ್ಥತ್ವವು. ॥ ೯ ॥

ಪೀಠಿಕೆ ॥ ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಅಥಾವಿಯೋಗಿನಿ । ಕರಣೈರ್ವಾ ವ ನ ವಿಯುಜ್ಯತೇ ದೇಹೇನೈವ ವಿಯುಜ್ಯತ ಇತ್ಯೇತದ್ವಾ ವ ಕರಣಾನಾಂ ಕರಣತ್ವಂ ಯದ್ವಾ ವ ನ ವಿಯುಜ್ಯತೇ । ಇತಿ ಗೌಪವನಶ್ರುತಿಃ । ॥ ೧೦ ॥**

ಭಾಷ್ಯಾರ್ಥ ॥ ಆ ಮೇಲೆ ಮುಕ್ತಿಪರ್ಯಂತ ಅನಾದಿತಃ ಜೀವನಿಂದ ವಿಯುಕ್ತಗಳಾಗದೆ

ಇರುವವುಗಳು (ನಿರೂಪಿಸಲ್ಪಡುತ್ತವೆ.) ಅವುಗಳು ಕರಣಗಳೇ. ಜೀವನು ಕರಣಗಳಿಂದಲೇ ವಿಯುಕ್ತನಾಗುವುದಿಲ್ಲ, ಶರೀರದಿಂದಲೇ ವಿಯುಕ್ತನಾಗುತ್ತಾನೆ. ಈ ರೀತಿಯಾಗಿ ಜೀವಕರಣ ಸಂಬಂಧಕ್ಕೆ ಅನಾದಿನಿತ್ಯತ್ವವೇ, ಇಂದ್ರಿಯಗಳಿಗೆ ಜೀವಕರಣತ್ವ ವ್ಯವಹಾರದಲ್ಲಿ ನಿಮಿತ್ತವು. ಹೀಗೆ ಗೌಪವನ ಶ್ರುತಿಯು (ಯಾವ ಕಾರಣದಿಂದ ಇದೆಯೋ, ಆದಕಾರಣ ಜೀವಕರಣ ಸಂಬಂಧಕ್ಕೆ ಅನಾದಿ ನಿತ್ಯತ್ವವಿದ್ದ ಪ್ರಯುಕ್ತ ಕರಣತ್ವ ಶ್ರುತಿಯು ಯುಕ್ತವಾಗುತ್ತದೆ.)

**ಟೀಕಿ ॥** ಪ್ರಾಣವತಾ ಎನ್ನುವಲ್ಲಿ ಜೀವನು ಪ್ರಕೃತನಾದುದರಿಂದ ಜೀವಪರಾಮರ್ಶವೇ ಯುಕ್ತವು. ಜೀವಕರಣ ಸಂಬಂಧಕ್ಕೆ ಪರಾಮರ್ಶವು ಹೇಗೆ ಕೂಡುತ್ತದೆಂದರೆ—

**ಭಾಷ್ಯ ॥ ಚ ಶಬ್ದಃ ಕರಣಸಂಬಂಧಗ್ರಾಹೀ ॥ ೧೭ ॥** **॥ ೧೧ ॥**

**ಭಾಷ್ಯಾರ್ಥ ॥** ಸೂತ್ರದಲ್ಲಿದ್ದ ಚ ಶಬ್ದವು ಇಂದ್ರಿಯಗಳಿಗೂ ಇಂದ್ರಿಯಗಳ ಸಂಬಂಧಕ್ಕೂ ಸಮುಚ್ಚಾಯಕವು.

**ವಿಶೇಷಾಂಶ ॥** ತಥಾಚ ತಸ್ಯ ಎನ್ನುವುದರಿಂದ ಜೀವಪರಾಮರ್ಶವೇ. ಸಂಬಂಧಪರಾಮರ್ಶ ವಲ್ಲ. ಚ ಶಬ್ದದಿಂದಲಾದರೂ ಪ್ರಾಣವತಾ ಎನ್ನುವ ಪದದಿಂದ ಲಬ್ಧವಾದ ಪ್ರಾಣಗಳೂ ಪ್ರಾಣ ಸಂಬಂಧವೂ ಸಮುಚ್ಚಿತಗಳಾಗುತ್ತವೆ. ಪ್ರಾಣಗಳನ್ನು ಪ್ರಾಣಸಂಬಂಧವನ್ನು ಹೊರತು ಪ್ರಾಣವುಳ್ಳವ ನಾಗುವುದಿಲ್ಲ. ಆದಕಾರಣ ತಸ್ಯ ಚ ಎನ್ನುವ ಎರಡು ಪದಗಳಿಗೆ ಜೀವಕರಣಸಂಬಂಧಸ್ಯ ಎನ್ನುವ ವ್ಯಾಖ್ಯಾನವು ಯುಕ್ತವೇ. ಅಂದರೆ ಜೀವನಿಗೆ ಕರಣಗಳಿಗೂ ತತ್ಸಂಬಂಧಕ್ಕೂ ಎಂದರ್ಥವು. ॥ ೧೭ ॥

## ಮಾಯಾವಾದಿರೀತ್ಯಾ

**ವಿಚಾರ ॥** ವಾಗಾದಿ ಇಂದ್ರಿಯಗಳ ಸಮುದಾಯವು ತಮ್ಮ ಶಕ್ತಿಯಿಂದಲೇ ವ್ಯವಹಾರಾದಿಗಳನ್ನು ಮಾಡತಕ್ಕುದು. ಹೀಗೆ ಪೂರ್ವಪಕ್ಷವು ಬಂದರೆ— ಅಗ್ನ್ಯಾದ್ಯಭಿಮಾನಿ ದೇವತೆಗಳಿಂದ ಅಧಿಷ್ಠಿತವಾಗಿಯೇ ಇಂದ್ರಿಯ ಸಮುದಾಯವು ಕಾರ್ಯಕಾರಿಯು. **ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್** ಇತ್ಯಾದಿ ಶ್ರುತಿಯಿಂದ ಎಂದು ಸಿದ್ಧಾಂತವೆಂದು ಮಾಯಾವಾದಿಗಳು ಹೇಳುತ್ತಾರೆ. ಆದು ಅಯುಕ್ತವು. **ಅಭಿಮಾನಿವ್ಯಪದೇಶಸ್ತು** ಎನ್ನುವಲ್ಲಿಯೇ ಅಭಿಮಾನಿದೇವತೆಗಳನ್ನು ಸಮರ್ಥಿಸಿರುವರು. ಅದ್ವೈತಿಗಳ ಮತದಲ್ಲಿ ಅದು ಪೂರ್ವಪಕ್ಷ ಸೂತ್ರವಾದಾಗ್ಯೂ ಸಿದ್ಧಾಂತದಲ್ಲಿ ಅದನ್ನು ನಿರಾಕರಿಸದೆ ಇದ್ದುದರಿಂದ ಅದು ಅನುಮತವೇ ಆಗಿದೆ.

## ರಾಮಾನುಜಾಚಾರ್ಯರೀತ್ಯಾ

**ವಿಚಾರ ॥** **ಜ್ಯೋತಿಃ** ಎನ್ನುವ ಸೂತ್ರವನ್ನು ಪ್ರಾಣವತಾ ಎನ್ನುವ ಸೂತ್ರವನ್ನು ಏಕೀಕರಿಸಿ ಜೀವನಿಂದ ಕೂಡಿಕೊಂಡು ಜ್ಯೋತಿರಾದಿ ದೇವತೆಗಳಿಗೆ ಇಂದ್ರಿಯ ನಿಯಮಾದಿಗಳು, ಭಗವತ್ಸಂಕಲ್ಪದಿಂದ, ಎಂದು **ಯ ಆತ್ಮಾನಮಂತರೋ ಯಮಯತಿ, ಯೋऽಗ್ನಿಮಂತರೋ ಯಮಯತಿ** ಎನ್ನುವ ಶ್ರುತಿಯಿಂದ ಎಂದು ಸೂತ್ರಾರ್ಥವು ಎನ್ನುತ್ತಾರೆ, ಅದು ಅಯುಕ್ತವು. ಪರಾತ್ತು

ತಚ್ಚುತ್ತೇ ಎನ್ನುವಲ್ಲಿಯೇ ಯ ಆತ್ಮಾನಂ ಇತ್ಯಾದಿ ಶ್ರುತಿಯಿಂದ ಜೀವಕರ್ತೃತ್ವವು ಈಶನಿಯಮ್ಯವು ಎಂದು ಹೇಳಿದೆ. ಮತ್ತೂ ಪ್ರಾಣವತಾ ಎನ್ನುವ ತೃತೀಯ ವಿಭಕ್ತಿಗೆ ಕಾರಕವಿಭಕ್ತಿತ್ವವು ಕೂಡುವಾಗ ಸಹಯೋಗ ಸಾಪೇಕ್ಷಿತವಾದ ಉಪಪದ ವಿಭಕ್ತಿತ್ವ ಕಲ್ಪನೆಯು ಕೂಡಲಾರದು.

## ಅಧಿಕರಣ ಸಾರಾಂಶ

ಚಕ್ಷುರಾದೀಂದ್ರಿಯಗಳು ಜೀವಾಧೀನಕರಣಗಳೋ, ಬ್ರಹ್ಮಾಧೀನಕರಣಗಳೋ ಎಂದು ಸಂದೇಹವು ಜೀವವಶಗಳೆಂದು ಅನುಭೂಯಮಾನತ್ವ ಯುಕ್ತಿಯುಕ್ತವಾದುದರಿಂದ ಬ್ರಹ್ಮಣೋ ವಾ ಏತಾನಿ ಕರಣಾನಿ ಎನ್ನುವ ಬ್ರಹ್ಮಕರಣತ್ವ ಶ್ರುತಿಗಿಂತ ಪ್ರಬಲವಾದ ಜೀವಸ್ಯ ಕರಣಾನ್ಯಾಹುಃ ಎನ್ನುವ ಶ್ರುತಿಯಿಂದ ಜೀವಕರಣಗಳೆಂದು ಪೂರ್ವಪಕ್ಷವು ಬಂದರೆ—ಯಶ್ಚಕ್ಷುಷಿ ತಿಷ್ಠನ್ ಇತ್ಯಾದಿ ಶ್ರುತಿಯಿಂದ ಚಕ್ಷುರಾದೀಂದ್ರಿಯಗಳಿಗೆ ಬ್ರಹ್ಮಾಧಿಷ್ಠಾನತ್ವವನ್ನು ಹೇಳಿದ್ದರಿಂದಲೂ ಯಸ್ತೇಜಸಿ ತಿಷ್ಠನ್ ಇತ್ಯಾದಿಗಳಿಂದ ತೇಜಸ್ಸು ಮೊದಲಾದ ಭೂತಗಳಿಗೆ ಪ್ರೇರಕನೆಂದು ಹೇಳಿದ್ದರಿಂದ ತೇಜಸ್ಸಿನ ಅಂಶಭೂತಗಳಾದ ಚಕ್ಷುರಾದೀಂದ್ರಿಯಗಳಿಗೂ ಬ್ರಹ್ಮಪ್ರಯೋಜ್ಯತ್ವವು ಎನ್ನುವ ಯುಕ್ತಿಯ ಬಲದಿಂದಲೂ ಯಃ ಪ್ರಾಣೇ ತಿಷ್ಠನ್ ಇತ್ಯಾದಿ ಶ್ರುತಿಗಳಿಂದ ಸರ್ವೇಂದ್ರಿಯಗಳಿಗೆ ಪ್ರೇರಕನಾದ ಪ್ರಾಣನಿಗೂ ಪ್ರೇರಕನು ಎನ್ನುವ ಯುಕ್ತಿಯ ಬಲದಿಂದಲೂ ಇಂದ್ರಿಯಗಳು ಬ್ರಹ್ಮಾಧೀನ ಕರಣಗಳೇ. ಮುಖ್ಯಪ್ರಾಣನಿಗೆ ಈಶಪ್ರಯೋಜ್ಯತ್ವವಿದ್ದರೂ ನ ಜೀವಾಪೇಕ್ಷಯಾ ಮುಖ್ಯಂ ಎನ್ನುವ ಸ್ಮೃತಿಯಿಂದ ಜೀವನನ್ನು ಕುರಿತು ಅಕರಣತ್ವವು ಯುಕ್ತವು. ಇಂದ್ರಿಯಗಳಿಗೆ ಜೀವಾಧೀನ ಕರಣತ್ವಶ್ರುತಿಯಾದರೂ ಏಷ ಹ್ಯೇನೇನಾತ್ಮನಾ ಇತ್ಯಾದಿ ಶ್ರುತಿಯಲ್ಲಿಯೂ ಕರಣೈಃ ಕಾರಣಂ ಎನ್ನುವ ಸ್ಮೃತಿಯಲ್ಲಿಯೂ ಬ್ರಹ್ಮನು ತನ್ನ ಕರಣವೇ ಆದ ಚಕ್ಷುರಾದೀಂದ್ರಿಯಗಳಿಂದ ಜೀವನಿಗೆ ದರ್ಶನಾದಿಗಳನ್ನು ಮಾಡಿಸುತ್ತಾನೆ ಎನ್ನುವ ಉಕ್ತಿಯಿಂದ ಕ್ರಿಯಾಸಾಧನತ್ವ ಮಾತ್ರಾಭಿಪ್ರಾಯವುಳ್ಳದ್ದು. ಕರಣೈರ್ವಾ ವ ನ ವಿಯುಜ್ಯತೇ ಎನ್ನುವ ಶ್ರುತಿಯಿಂದ ಜೀವಕರಣ ಸಂಬಂಧಕ್ಕೆ ಅನಾದಿನಿತ್ಯತ್ವವಿದ್ದುದರಿಂದ ಅಮುಖ್ಯವಾಗಿ ಜೀವಕರಣತ್ವಾಭಿಪ್ರಾಯವುಳ್ಳದ್ದು. ॥ ಅಧಿ.೧೦ ॥

**ಜ್ಯೋತಿರಾದ್ಯಧಿಕರಣವು ಸಮಾಪ್ತವಾಯಿತು.**

॥ ಓಂ ಮುಖ್ಯಪ್ರಾಣಸ್ಯೇಂದ್ರಿಯತ್ವ ಶ್ರುತ್ಯವಿರೋಧ ಪ್ರಯೋಜ್ಯ ಸಮನ್ವಯಗೋಚರಾಯನಮಃ ಓಂ ॥

# ೧೧ ತ ಇದ್ರಿಯಾಣ್ಯಧಿಕರಣವು

ಪೀಠಿಕೆ ॥ ಮುಖ್ಯಪ್ರಾಣನಿಗೆ ಇಂದ್ರಿಯತ್ವ ಅನಿಂದ್ರಿಯತ್ವಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ಅಥೇಂದ್ರಿಯಾಣಿ ಪ್ರಾಣಾ ವಾ ಇಂದ್ರಿಯಾಣಿ ಪ್ರಾಣಾ ಹೀದಂ ದ್ರವಂತಿ । ಇತಿ ಸಯುಕ್ತಿಕಾ ಪೌತ್ರಾಯಣಶ್ರುತಿಃ ಸಾಮಾನ್ಯೇನ ಪ್ರಾಣಾನಾಮಿಂದ್ರಿಯತ್ವಂ ವಕ್ತಿ॥**

**(೨) ದ್ವಾದಶೈವೇಂದ್ರಿಯಾಣ್ಯಾಹುರ್ಮನೋಬುದ್ಧೀ ತು ದ್ವಾದಶ । ಇತಿ ಚ**

**ಕಾಷಾಯಣಶ್ರುತಿಃ ॥ (೩) ಅತಃ ಕಸ್ಯೇಂದ್ರಿಯತ್ವಂ ನಿವಾರ್ಯಂ (ರ್ಯತೇ)॥ ಇತಿ ॥ (೪) ಅತೋ ವಕ್ತಿ ॥ ॥ ೧ ॥**

ಭಾಷ್ಯಾರ್ಥ ॥ (೧) ಆಮೇಲೆ ಇಂದ್ರಿಯಗಳು ನಿರೂಪಿಸಲ್ಪಡುತ್ತವೆ. ಯಾವ ಕಾರಣದಿಂದ ಇಂದ್ರಿಯಗಳು ವಿಷಯಸಮುದಾಯವನ್ನು ಓಡುತ್ತವೋ ಆದಕಾರಣ ಪ್ರಾಣಶಬ್ದವಾಚ್ಯಗಳು ಇಂದ್ರಿಯಗಳು. ಹೀಗೆ ದ್ರವಣಯೋಗದಿಂದ ಇಂದ್ರಿಯಶಬ್ದವಾಚ್ಯತ್ವರೂಪ ಯುಕ್ತಿ ಸಹಿತವಾದ ಪ್ರಾಣಗಳಿಗೆ ಇಂದ್ರಿಯತ್ವವನ್ನು ಹೇಳತಕ್ಕ ಪೌತ್ರಾಯಣಶ್ರುತಿಯು **ಪ್ರಾಣಾ ವಾ ಇಂದ್ರಿಯಾಣಿ** ಎಂದು ಸಾಮಾನ್ಯವಾಗಿ ಪ್ರವೃತ್ತವಾದುದರಿಂದ ಪ್ರಾಣಶಬ್ದವಾಚ್ಯಗಳಾದ ಮುಖ್ಯಪ್ರಾಣನಿಂದ ಕೂಡಿಕೊಂಡು ಹದಿಮೂರಕ್ಕೂ ಇಂದ್ರಿಯತ್ವವನ್ನು ಹೇಳುತ್ತದೆ. (೨) ಹನ್ನೆರಡೇ ಇಂದ್ರಿಯಗಳೆಂದು ಹೇಳುತ್ತಾರೆ. ಚಕ್ಷುರಾದಿಗಳು ಐದು, ವಾಗಾದಿಗಳು ಐದು. ಮನಸ್ಸು ಬುದ್ಧಿಗಳು ಹನ್ನೊಂದು ಹನ್ನೆರಡನೇದ್ದು ಹೀಗೆ ಕಾಷಾಯಣಶ್ರುತಿಯು (ಹನ್ನೆರಡಕ್ಕೇನೇ ಇಂದ್ರಿಯತ್ವವನ್ನು ಹೇಳುತ್ತದೆ.) (೩) ಆದಕಾರಣ ಹದಿಮೂರು ಪ್ರಾಣಗಳಲ್ಲಿ ಯಾವುದಕ್ಕೆ ಇಂದ್ರಿಯತ್ವವನ್ನು ನಿವಾರಣ ಮಾಡಲಿಕ್ಕೆ ಶಕ್ಯವಾಗುವುದು (ಯಾವುದಕ್ಕೂ ಆಗಲಾರದು.) ಆದಕಾರಣ ಪ್ರಾಣದ್ವಾದಶತ್ವಶ್ರುತಿಗೆ ಸಯುಕ್ತಿಕ ಪ್ರಾಣತ್ರಯೋದಶತ್ವಶ್ರುತಿಯಿಂದ ವಿರೋಧವಿದ್ದುದರಿಂದ ಅದು ಅಪ್ರಮಾಣವೇ. (೪) ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ. ॥ ೧ ॥

## ಸೂತ್ರ ॥ ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ ॥ ೧೮ ॥

**ಭಾಷ್ಯ ॥ ಮುಖ್ಯಪ್ರಾಣಮೃತೇ ತ ಏವೇಂದ್ರಿಯಾಣಿ ॥ ೨ ॥**

ಭಾಷ್ಯಾರ್ಥ ॥ ಆ ಪ್ರಾಣಗಳು ಮುಖ್ಯಪ್ರಾಣನೊಬ್ಬನನ್ನು ಹೊರತು ಇತರ ಹನ್ನೆರಡೇ ಇಂದ್ರಿಯಗಳು. (ಎಲ್ಲಾ ಪ್ರಾಣಗಳು ಅಲ್ಲ) **ದ್ವಾದಶೈವೇಂದ್ರಿಯಾಣ್ಯಾಹುಃ** ಎನ್ನುವ ಶ್ರುತಿಯಿಂದ. (ಮುಖ್ಯಪ್ರಾಣನು ಇಂದ್ರಿಯನಲ್ಲ) ॥ ೨ ॥

**ಭಾಷ್ಯ ॥ ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಂ। ದ್ರವತಾಂ ಹೀಂದ್ರಿಯಾಣಾಂ ತು ನಿಯಂತಾ ಪ್ರಾಣ ಏಕರಾಟ್ ॥ ಇತಿ ಪೌತ್ರಾಯಣಶ್ರುತಿಃ ॥ ೩ ॥**

ಭಾಷ್ಯಾರ್ಥ ॥ ಹನ್ನೆರಡೇ ಇಂದ್ರಿಯಗಳು. ಮುಖ್ಯಪ್ರಾಣನಾದರೂ ಇಂದ್ರಿಯನಲ್ಲ. ವಿಷಯಾಭಿಮುಖವಾಗಿ ಹೋಗತಕ್ಕ ಇಂದ್ರಿಯಗಳಿಗೆ ನಿಯಾಮಕನೇ. ಸರ್ವಸ್ವತಂತ್ರನು, ಎಂದು ಪೌತ್ರಾಯಣ ಶ್ರುತಿಯು. ॥ ೩ ॥

**ಭಾಷ್ಯ ॥ ಶ್ರೋತ್ರಾದೀನಿ ತು ಪಂಚೈವ ತಥಾ ವಾಗಾದಿಪಂಚಕಂ । ಮನೋಬುದ್ಧಿ ಸಹಾಯಾನಿ ದ್ವಾದಶೈವೇಂದ್ರಿಯಾಣಿ ತು ॥ ವಿಷಯದ್ರವಣಾತ್ತೇಷಾಮಿಂದ್ರಿಯತ್ವ-**

**ಮುದಾಹೃತಂ । ತೇಷಾಂ ನಿಯಾಮಕಃ ಪ್ರಾಣಃ ಸ್ಥಿತ ಏವಾಖಿಲಪ್ರಭುಃ ॥ ಇತಿ ಬೃಹತ್ಸಂಹಿತಾಯಾಂ ॥ ೧೮ ॥ ॥ ೪ ॥**

ಭಾಷ್ಯಾರ್ಥ ॥ ಶ್ರೋತ್ರಾದಿ ಜ್ಞಾನೇಂದ್ರಿಯಗಳು ಐದು. ಹಾಗೆಯೇ ವಾಗಾದಿ ಕರ್ಮೇಂದ್ರಿಯಗಳು ಐದು. ಹೀಗೆ ಜ್ಞಾನಕರ್ಮೇಂದ್ರಿಯಗಳು ಮನಸ್ಸು ಬುದ್ಧಿಗಳಿಂದ ಕೂಡಿದರೆ ಹನ್ನೆರಡು ಆಗುತ್ತವೆ. ಹೀಗೆ ಇಂದ್ರಿಯಗಳು ಹನ್ನೆರಡೇ. ಬೇರೆ ಇಲ್ಲ. ವಿಷಯಗಳ ಅಭಿಮುಖವಾಗಿ ಓಡುವುದರಿಂದ ಅವುಗಳಿಗೆ ಇಂದ್ರಿಯತ್ವವು ಹೇಳಲ್ಪಟ್ಟಿದೆ. ಅವುಗಳಿಗೆ ನಿಯಾಮಕನಾದ ಪ್ರಾಣನು ತನ್ನ ಸ್ಥಾನದಲ್ಲಿಯೇ ಇದ್ದಾನೆ. (ವಿಷಯಗಳನ್ನು ಕುರಿತು ತಾನು ಓಡುವುದಿಲ್ಲ) ಆತನು ಅಖಿಲೇಂದ್ರಿಯಗಳಿಗೂ ಸ್ವಾಮಿಯು ಆಗಿರುತ್ತಾನೆ. (ಪ್ರಭುಗಳು ಭೃತ್ಯರನ್ನು ಅನುಸರಿಸುವುದು ಅಯುಕ್ತವಷ್ಟೆ.) ಹೀಗೆ ಬೃಹತ್ಸಂಹಿತಾದಲ್ಲಿ ಹೇಳಿದೆ. ॥ ೧೮ ॥

ಪೀಠಿಕೆ ॥ ಮುಖ್ಯಪ್ರಾಣನು ಇಂದ್ರಿಯನಾಗದೆ ಇದ್ದರೆ ಚಕ್ಷುಸ್ಸೂ ಇಂದ್ರಿಯವಾಗದೆ ಹೋಗಬೇಕಾಗುವುದು. ಚಕ್ಷುರಾದಿ ಇಂದ್ರಿಯ ಮುಖ್ಯಪ್ರಾಣರಿಗೆ ಸರ್ವಥಾ ವಿಶೇಷವಿಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭೇದಶ್ರುತೇಃ ಓಂ ॥ ೧೯ ॥

ಸೂತ್ರಾರ್ಥ ॥ ಮುಖ್ಯಪ್ರಾಣನಿಂದ ಇತರರಾದ ಪ್ರಾಣಗಳು ಇಂದ್ರಿಯಗಳು. ಮುಖ್ಯಪ್ರಾಣ, ತದಿತರರಿಗೆ ಭೇದಕ ಸರ್ವಕಾರ್ಯ ಕರ್ತೃತ್ವ, ಸರ್ವನಿಯಾಮಕತ್ವ, ಸರ್ವನಿಯಾಮಕತ್ವಾದ್ಯಭಾವವನ್ನು ಬೋಧಿಸತಕ್ಕ ಸ್ಥಿತ ಏವ ಎನ್ನುವ ಶ್ರುತಿಯಿಂದ.

**ಭಾಷ್ಯ ॥ ಸ್ಥಿತ ಏವ ಹೀದಂ ಮುಖ್ಯಃ ಪ್ರಾಣಃ ಕರೋತಿ ಕಾರಯತಿ ಬಲತಿ ಬಾಲಯತಿ ಧತ್ತೇ ಧಾರಯತಿ ಪ್ರಭುಂ ವಾ ಏನಮಾಹುರಥೇಂದ್ರಿಯಾಣಿ ನ ಸ್ಥಿತಾನಿ ನ ಕುರ್ವಂತಿ ನ ಕಾರಯಂತಿ ನ ಬಲಂತಿ ನ ಬಾಲಯಂತಿ ನ ದಧತೇ ನ ಧಾರಯಂತಿ ತಾನಿ ಹ ವಾ ಏತಾನ್ಯಬಲಾನಿ ತಸ್ಮಾದಾಹುರಿಂದ್ರಿಯಾಣಿ ಕರಣಾನಿ ॥ ಇತಿ ಪೌತ್ರಾಯಣ ಶ್ರುತೇಃ ॥ ೧೯ ॥ ॥ ೫ ॥**

ಭಾಷ್ಯಾರ್ಥ ॥ ಮುಖ್ಯಪ್ರಾಣನು ತನ್ನ ಸ್ಥಾನದಲ್ಲಿ ಇದ್ದವನಾಗಿಯೇ (ವಿಷಯದ್ರವಣ ಶೂನ್ಯನಾಗಿಯೇ) ಈ ಎಲ್ಲಾ ಕಾರ್ಯವನ್ನು ತಾನು ಮಾಡುತ್ತಾನೆ. ಇತರರಿಂದ ಮಾಡಿಸುತ್ತಾನೆ. ಬಲಕರ್ತನು ಆಗುತ್ತಾನೆ. ಬಲಯುಕ್ತರನ್ನಾಗಿ ಮಾಡುತ್ತಾನೆ. ತಾನು ಎಲ್ಲವನ್ನು ಧರಿಸುತ್ತಾನೆ. ಇತರರಿದ ಧಾರಣಕ್ರಿಯೆಯನ್ನು ಮಾಡಿಸುತ್ತಾನೆ. ಈ ಮುಖ್ಯಪ್ರಾಣನನ್ನು ಸರ್ವಸ್ವಾಮಿಯನ್ನಾಗಿ ಹೇಳುತ್ತಾರೆ. (ಇಂದ್ರಿಯಸ್ವಾಮಿಯ ಸ್ಥಿತಿಯನ್ನು ಹೇಳಿದ ಮೇಲೆ ತದಧೀನಗಳಾದ ಇಂದ್ರಿಯಗಳ ಲಕ್ಷಣಗಳನ್ನು ಹೇಳುತ್ತಾರೆ.) ಇಂದ್ರಿಯಗಳಾದರೂ ಏಕತ್ರ ಇರತಕ್ಕವುಗಳಲ್ಲ. ವಿಷಯಗಳನ್ನು ಕುರಿತು ಓಡತಕ್ಕವುಗಳೇ. ಕಾರ್ಯವನ್ನು ಮಾಡುವುದಿಲ್ಲ. ಇತರರಿಂದ ಮಾಡಿಸುವುದಿಲ್ಲ. ಬಲಯುಕ್ತರಂತೆ ಮಾಡುವುದಿಲ್ಲ. ಬಲಯುಕ್ತರನ್ನಾಗಿ ಮಾಡುವುದಿಲ್ಲ. ಧರಿಸುವುದಿಲ್ಲ. ಆ ಈ ಇಂದ್ರಿಯಗಳು ಕರಣ ಕಾರಣ ಧಾರಣ

ಪೋಷಣಾದಿಗಳಲ್ಲಿ ಅತ್ಯಂತ ಅಸಮರ್ಥಗಳು. ಆದಕಾರಣ ಕರ್ತೃತ್ವಾದಿಗಳು ಇಲ್ಲದಿರುವುದರಿಂದ ಇಂದ್ರಿಯಗಳನ್ನು ಜೀವಪ್ರಯೋಜ್ಯಗಳನ್ನಾಗಿ ಹೇಳುತ್ತಾರೆ ಎನ್ನುವ ಪೌತ್ರಾಯಣ ಶ್ರುತಿಯಿಂದ. (ಮುಖ್ಯಪ್ರಾಣನು ಸರ್ವವನ್ನು ಮಾಡಿಸತಕ್ಕವನಾದುದರಿಂದ ಈಶ್ವರನ ಸಾಮ್ಯವನ್ನೂ ಚಕ್ಷುರಾದೀಂದ್ರಿಯಗಳು ಕಾರ್ಯವನ್ನು ಮಾಡಿಸದೆ ಇರತಕ್ಕವುಗಳಾದುದರಿಂದ ಈಶ್ವರಸಾಮ್ಯ ಭಾವವನ್ನೂ ಶ್ರುತಿಯು ಹೇಳುವುದರಿಂದ ಮುಖ್ಯಪ್ರಾಣನಿಗೂ ಚಕ್ಷುರಾದೀಂದ್ರಿಯಗಳಿಗೂ ಅವಿಶೇಷವನ್ನು ತಿಳಿಯಕೂಡದು. ॥ ೧೯ ॥

**ಪೀಠಿಕೆ** ॥ ಮುಖ್ಯಪ್ರಾಣನು ಪರಮಾತ್ಮನ ಅಧೀನನೋ ಅಲ್ಲವೋ, ಅಧೀನನಾದರೆ ಇಂದ್ರಿಯಗಳಿಗೂ ಮುಖ್ಯಪ್ರಾಣನಿಗೂ ಈಶವಶತ್ವವು ಸಮಾನವಾದುದರಿಂದ ಅನಿಂದ್ರಿಯತ್ವವು ಸಿದ್ಧಿಸುವುದಿಲ್ಲ. ಅಧೀನನು ಅಲ್ಲವಾದರೆ—**ಚಕ್ಷುರಾದಿವತ್** ಎಂದು ಹೇಳಿದ್ದು ಅಯುಕ್ತವು, ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ವೈಲಕ್ಷಣ್ಯಾಚ್ಚ ಓಂ ॥ ೨೦ ॥

**ಸೂತ್ರಾರ್ಥ** ॥ ಇಂದ್ರಿಯಗಳಿಗೂ ಮುಖ್ಯಪ್ರಾಣನಿಗೂ ಈಶಾಧೀನತ್ವವು ಸಮಾನವಾದಾಗ್ಯೂ ಮುಖ್ಯಪ್ರಾಣನಿಂದ ಇತರಗಳಾದ ಪ್ರಾಣಗಳು ಇಂದ್ರಿಯಗಳು, ಮುಖ್ಯಪ್ರಾಣ ತದಿತರರಿಗೆ ಈಶಮಾತ್ರಾಧೀನ ಪ್ರವೃತ್ತಿಮತ್ವ, ಈಶಜೀವೋಭಯಾಪೇಕ್ಷಪ್ರವೃತ್ತಿಮತ್ವರೂಪ ವೈಲಕ್ಷಣ್ಯವಿದ್ದುದರಿಂದ.

**ಭಾಷ್ಯ ॥ (೧) ಪುರುಷಾಪೇಕ್ಷಯಾ ಪ್ರವೃತ್ತಿರಿಂದ್ರಿಯಾಣಾಂ ದೃಶ್ಯತೇ ನ ಮುಖ್ಯಸ್ಯ। (೨) ಪ್ರಾಣಾಗ್ನಯ ಏವೈತಸ್ಮಿನ್ಪುರೇ ಜಾಗ್ರತಿ (ಪ್ರ.೪.೩.)॥ ಇತಿ ಚ ಶ್ರುತಿಃ ॥ ೨೦ ॥ ಅಧಿ. ೧೧ ॥ ॥ ೬ ॥**

**ಭಾಷ್ಯಾರ್ಥ** ॥ (೧) ಮುಖ್ಯಪ್ರಾಣ ತದಿತರ ಇಂದ್ರಿಯಗಳಿಗೆ ಈಶ್ವರಾಧೀನತ್ವವು ಸಮಾನವಾದಾಗ್ಯೂ ಜೀವರ ಪ್ರಯತ್ನವನ್ನು ಅಪೇಕ್ಷಿಸಿಯೇ ಚಕ್ಷುರಾದೀಂದ್ರಿಯಗಳಿಗೆ ವಿಷಯಗಳಲ್ಲಿ ಪ್ರವೃತ್ತಿಯು ಕಾಣಲ್ಪಡುತ್ತದೆ. ಮುಖ್ಯಪ್ರಾಣನ ಪ್ರವೃತ್ತಿಯು ಹಾಗಲ್ಲ, ಮತ್ತೆ ಕೇವಲ ಈಶ್ವರೇಚ್ಛಾಧೀನವೇ ಆದ ಪ್ರವೃತ್ತಿಯು. ಆದಕಾರಣ ವೈಲಕ್ಷಣ್ಯವಿದ್ದುದರಿಂದ ಮುಖ್ಯಪ್ರಾಣನಿಗೆ ಇಂದ್ರಿಯತ್ವವು ಇಲ್ಲವೇ ಇಲ್ಲ. (೨) (ಮುಖ್ಯಪ್ರಾಣನ ಪ್ರವೃತ್ತಿಯು ಪುರುಷಪ್ರಯತ್ನಾಪೇಕ್ಷಿತವಲ್ಲ ಎನ್ನುವುದು ಹೇಗೆ ಎಂದರೆ ಚ ಶಬ್ದದಿಂದ ಸೂಚಿತವಾದ ಶ್ರುತಿಯನ್ನು ಹೇಳುತ್ತಾರೆ.) (ಷಟ್ಪ್ರಶ್ನೋಪನಿಷತ್ತಿನಲ್ಲಿ ಏಷ **ಪುರುಷೋ ನ ಶೃಣೋತಿ** ಇತ್ಯಾದಿಗಳಿಂದ ಸುಪ್ತಿಯಲ್ಲಿ ಶ್ರೋತ್ರಾದಿ ದಶೇಂದ್ರಿಯಗಳಿಗೆ ಪ್ರವೃತ್ತ್ಯಭಾವವನ್ನು ಹೇಳಿ) ಈ ಶರೀರದಲ್ಲಿ ಅಂಗಗಳಿಗೆ ಪ್ರೇರಕಗಳಾಗಿರುವುದರಿಂದ ಅಗ್ನಿಶಬ್ದವಾಚ್ಯಗಳಾದ ಪ್ರಾಣ ಅಪಾನ ಮೊದಲಾದ ಮುಖ್ಯಪ್ರಾಣರೂಪ ವಿಶೇಷಗಳೇ ಶರೀರಧಾರಣಾದಿರೂಪ ವ್ಯಾಪಾರವನ್ನು ಮಾಡುತ್ತವೆ. (ಎಂದು ಹೇಳಿದ್ದರಿಂದ ಮುಖ್ಯಪ್ರಾಣನ ಪ್ರವೃತ್ತಿಯು ಜೀವಪ್ರಯತ್ನಾಪೇಕ್ಷಿತವಲ್ಲ. ಸುಷುಪ್ತನಿಗೆ ಪ್ರಯತ್ನವಿಲ್ಲವಷ್ಟೆ. ಮತ್ತೆ ಆತನ ಪ್ರವೃತ್ತಿಯು ಕೇವಲ ಭಗವದಧೀನವೇ) ಎನ್ನುವ ಶ್ರುತಿಯಿಂದ. ॥ ೨೦ ॥ ॥ ೬ ॥

## ಮಾಯಾವಾದಿರೀತ್ಯಾ

ವಿಚಾರ ॥ ಪ್ರಕೃತ ವಾಗಾದಿಪ್ರಾಣಗಳು ಪ್ರಾಣ ಅಪಾನಾದಿಗಳಂತೆಯೇ ಮುಖ್ಯಪ್ರಾಣನ ವೃತ್ತಿ ಪ್ರಭೇದಗಳು ಎಂದು ಪೂರ್ವಪಕ್ಷ ಬಂದರೆ ಏತಸ್ಮಾಜ್ಜಾಯತೇ ಪ್ರಾಣಃ ಇತ್ಯಾದಿಗಳಲ್ಲಿ ಭೇದವನ್ನು ಹೇಳಿದ್ದರಿಂದ ತತ್ತ್ವಾಂತರಗಳೆಂದು ಸಿದ್ಧಾಂತವು ಎಂದು ಹೇಳಿರುವರು. ಅದು ಅಯುಕ್ತವು. ಹಾಗಾದರೆ ತತ್ತ್ವಾಂತರಾಣಿ ಎಂದು ಪ್ರತಿಜ್ಞೆಯನ್ನು ಅಧ್ಯಾಹಾರಮಾಡಬೇಕಾಗುವುದು. ತದ್ವ್ಯಪದೇಶಾತ್ ಎನ್ನುವುದಕ್ಕೆ ಭೇದಶ್ರುತೇಃ ಎನ್ನುವುದರಿಂದ ಪೌನರುಕ್ತ್ಯವೂ ಬರುವುದು. ತಚ್ಛಬ್ದಕ್ಕೆ ಅಧ್ಯಾಹೃತ ತತ್ತ್ವಾಂತರ ಪರತ್ವವು ಎಂದು, ಇತ್ಯಾದಿ ದೋಷಗಳು ಬರುವುವು. ಹೀಗೆ ಭಾಮತೀಕಾರನು ತನ್ನ ಮತವನ್ನೇ ದೂಷಿಸಿರುವನು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ ಮುಖ್ಯಪ್ರಾಣನೂ ಇಂದ್ರಿಯನು ಎಂದು ಪೂರ್ವಪಕ್ಷವು ಬಂದರೆ ಮುಖ್ಯಪ್ರಾಣನನ್ನು ಬಿಟ್ಟು ಹನ್ನೊಂದೇ ಇಂದ್ರಿಯಗಳು ಎಂದು ಸಿದ್ಧಾಂತಮಾಡಿರುವರು. ಹನ್ನೊಂದು ಇಂದ್ರಿಯಗಳಲ್ಲವೆಂದು ಸಪ್ತಗತೇಃ ಎನ್ನುವಲ್ಲಿಯೇ ನಿರಸ್ತವಾಗಿದೆ.

## ಅಧಿಕರಣ ಸಾರಾಂಶ

ಇಂದ್ರಿಯತ್ವವು ಎಲ್ಲಾ ಪ್ರಾಣಗಳಿಗೋ ಅಥವಾ ಪ್ರಾಣನಿಂದ ಇತರಗಳಾದ ಹನ್ನೆರಡಕ್ಕೋ, ಎಲ್ಲಾದಕ್ಕೂ ಇಂದ್ರಿಯತ್ವವು ಎಂದು ಪೂರ್ವಪಕ್ಷವು. ಹೇಗೆಂದರೆ ಪ್ರಾಣಾ ವಾ ಇಂದ್ರಿಯಾಣಿ ಎಂದು ಸಾಮಾನ್ಯತಃ ಸರ್ವಕ್ಕೂ ಇಂದ್ರಿಯತ್ವವು ಶ್ರುತವಾಗಿದೆ. ಆ ಶ್ರುತಿಯು ಸಾಮಾನ್ಯವಾದಾಗ್ಯೂ ಇದಂ ದ್ರವಣರೂಪಯುಕ್ತಿಯಿಂದ ಕೂಡಿದ್ದರಿಂದ ದ್ವಾದಶೈವೇಂದ್ರಿಯಾಣ್ಯಾಹುಃ ಎನ್ನುವ ವಿಶೇಷ ಶ್ರುತಿಯಿಂದಲೂ ಪ್ರಬಲವಾಗಿದೆ. ಸರ್ವಕ್ಕೂ ಈಶ್ವರವಶತ್ವವು ಸಮಾನವಾದುದರಿಂದ ಹದಿಮೂರರಲ್ಲಿ ಒಂದಕ್ಕೆ ಇಂದ್ರಿಯತ್ವವನ್ನು ನಿವಾರಿಸಲು ಸಾಧ್ಯವಿಲ್ಲ ಎಂದರೆ—ಮುಖ್ಯಪ್ರಾಣನನ್ನು ಬಿಟ್ಟು ಹನ್ನೆರಡೇ ಇಂದ್ರಿಯಗಳು. ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಃ ಇತ್ಯಾದಿ ವಿಶೇಷಶ್ರುತಿಯು ಇದೆ. ಯುಕ್ತ್ಯುಪೇತವಾದ ಸಾಮಾನ್ಯ ಶ್ರುತಿಯು ಮುಖ್ಯಪ್ರಾಣೇತರ ವಿಷಯಕವು ವಿಷಯಗಳನ್ನು ಕುರಿತು ಓಡತಕ್ಕ ಸರ್ವ ಪ್ರಾಣಗಳಿಗೆ ನಿಯಾಮಕನಾದುದರಿಂದಲೂ ಸರ್ವವನ್ನು ಮಾಡಿಸತಕ್ಕವನಾದುದರಿಂದಲೂ ಮುಖ್ಯಪ್ರಾಣನಿಗೆ ಚಕ್ಷುರಾದಿ ಇಂದ್ರಿಯಗಳಿಂದ ವಿಶೇಷವಿದೆ. ಸ್ಥಿತ ಏವ ಹೀದಂ ಸರ್ವಂ ಇತ್ಯಾದಿ ಶ್ರುತಿಸಿದ್ಧವೂ ಆಗಿದೆ. ಮುಖ್ಯಪ್ರಾಣನಿಗೆ ಇತರ ಇಂದ್ರಿಯಗಳಂತೆಯೇ ಈಶಾಧೀನತ್ವವಿದ್ದರೂ ಕೇವಲ ಈಶ್ವರೇಚ್ಛಾಧೀನವಾದ ಪ್ರವೃತ್ತಿಯು, ಇತರೇಂದ್ರಿಯಗಳಿಗೆ ಜೀವಪ್ರಯತ್ನಾಪೇಕ್ಷೆಯಿಂದಲೇ ಪ್ರವೃತ್ತಿಯು, ಹೀಗೆ ವೈಲಕ್ಷಣ್ಯವು ಇದೆ. ॥ ಅಧಿ. ೧೧ ॥

**೩ ಇಂದ್ರಿಯಾಣ್ಯಾಧಿಕರಣವು ಸಮಾಪ್ತವಾಯಿತು.**

॥ ಓಂ ಪ್ರಪಂಚ ಪ್ರಸ್ಪ್ರತ್ಯ ಶ್ರುತಿವಿರೋಧಪ್ರಯೋಜ್ಯಸಮನ್ವಯಗೋಚರಾಯ ನಮಃ ಓಂ ॥

## ೧೨ ಸಂಜ್ಞಾಧಿಕರಣವು

ಪೀಠಿಕೆ ॥ ಶರೀರಾದಿ ವಿಷಯಕ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ ವಿದಧಾತಿ ಬ್ರಹ್ಮಾ ವಾ ವ ವಿರಿಂಚ ಏತಸ್ಮಾದ್ಧೀಮೇ ರೂಪನಾಮನೀ ॥ ಇತಿ ಗೌಪವನಶ್ರುತಿಃ ॥ (೨) ಯಸ್ಮಾದ್ವಿರೇಚಯೇತ್ಸರ್ವಂ ವಿರಿಂಚಸ್ತೇನ ಭಣ್ಯತೇ । ಏಕೋ ಹಿ ಕರ್ತಾ ಜಗತೋ ಬ್ರಹ್ಮೈವ ಚ ಚತುರ್ಮುಖಃ ॥ ಇತಿ ಚ ಯುಕ್ತಿರ್ಬ್ರಾಹ್ಮೇ ॥ ೧ ॥**

ಭಾಷ್ಯಾರ್ಥ ॥ (೧) ವಿರಿಂಚನೇ ಈ ನಾಮರೂಪಾತ್ಮಕ ಪ್ರಪಂಚವನ್ನು ಸೃಷ್ಟಿಸುತ್ತಾನೆ. ವಿಶೇಷವಾಗಿ ಧರಿಸುತ್ತಾನೆ. ಮತ್ತು ನಿಯೋಜಿಸುತ್ತಾನೆ. ಚತುರ್ಮುಖಬ್ರಹ್ಮನೇ ವಿರಿಂಚನು. ಈ ಬ್ರಹ್ಮನಿಂದಲೇ ಈ ★ನಾಮರೂಪಾತ್ಮಕ ಪ್ರಪಂಚಗಳು ಹುಟ್ಟುತ್ತವೆ, ಎಂದು ಗೌಪವನಶ್ರುತಿಯು ವಿರಿಂಚನಿಗೆ ನಾಮರೂಪಕರ್ತೃತ್ವವನ್ನು ಹೇಳುತ್ತದೆ. (೨) ಯಾವ ಕಾರಣದಿಂದ ನಾಮರೂಪಾತ್ಮಕ ಪ್ರಪಂಚವೆಲ್ಲವನ್ನು ಬ್ರಹ್ಮನು ಸೃಷ್ಟಿಸುತ್ತಾನೋ, ಆ ಕಾರಣದಿಂದ ವಿರಿಂಚನೆಂದು ಹೇಳಲ್ಪಡುತ್ತಾನೆ. ಆ ಕಾರಣದಿಂದ ಪ್ರಸಿದ್ಧನಾದ ಚತುರ್ಮುಖಬ್ರಹ್ಮನೇ ಜಗತ್ತಿಗೆ ಮುಖ್ಯಕರ್ತನು. (ದ್ವಾರಭೂತನಲ್ಲ) ಎನ್ನುವ ಯುಕ್ತಿಯು ಬ್ರಾಹ್ಮಪುರಾಣದಲ್ಲಿದೆ.

ಪೀಠಿಕೆ ॥ ಹೀಗೆ ವಿರಿಂಚ ಕರ್ತೃತ್ವದಲ್ಲಿ ಶ್ರುತಿಯನ್ನು ಹೇಳಿ ಪರಮಾತ್ಮಕರ್ತೃತ್ವದಲ್ಲಿಯೂ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ (೧) ಅಥ ಕಸ್ಮಾದುಚ್ಯತೇ ಪರಮ ಇತಿ ಪರಮಾದ್ವ್ಯೇತೇ ನಾಮರೂಪೇ ವ್ಯಾಕ್ರಿಯೇತೇ ತಸ್ಮಾದೇನಮಾಹುಃ ಪರಮಃ । ಇತಿ ॥ ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹತ್ವಾದ್ಬೃಂಹಿತತ್ವಾ (ಬೃಂಹಣಾ)ಚ್ಚ ಇತ್ಯಾಗ್ನಿವೇಶ್ಯಶ್ರುತಿಃ॥ (೨) ಅತ ಆಹ ॥ ೨ ॥**

ಭಾಷ್ಯಾರ್ಥ ॥ (೧) ವಿಷ್ಣುವು ಸರ್ವೋತ್ತಮನೆಂದು ಯಾವುದರಿಂದ ಹೇಳಲ್ಪಡುತ್ತಾನೆ. (ಎನ್ನುವ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ.) ಯಾವ ಕಾರಣದಿಂದ ನಾಮರೂಪಗಳು ಸರ್ವೋತ್ತಮನಾದ ವಿಷ್ಣುವಿನಿಂದಲೇ ಸೃಷ್ಟಿಸಲ್ಪಡುತ್ತವೋ, ಆದುದರಿಂದ ನಾಮರೂಪಕರ್ತನನ್ನು ಸರ್ವೋತ್ತಮನನ್ನಾಗಿ ಹೇಳುತ್ತಾರೆ ಎನ್ನುವ (ಶ್ರುತಿಯು ವಿರಿಂಚನೇ ನಾಮರೂಪಕರ್ತನೆಂದು

---

★ ಇಲ್ಲಿ ರೂಪಂ ಚ ತದಪೇಕ್ಷಯಾ ಇತಿ ಸ್ಮೃತೇಃ ಅಯೋಗಿಪ್ರತ್ಯಕ್ಷಗಮ್ಯಂ ರೂಪಂ ತ್ರಿವೃತ್ಕೃತ್ಯಾಪೇಕ್ಷಯಾ ಭವತಿ । ನಾಮ ಚ ತದ್ವ್ಯವಹಾರ್ಯಂ ತದಪೇಕ್ಷಂ ಭವತಿ ಎಂದು ತತ್ತ್ವಪ್ರದೀಪದಲ್ಲಿ ಹೇಳಿದ್ದರಿಂದ ಅಯೋಗಿ ಪ್ರತ್ಯಕ್ಷ ಗಮ್ಯವಾದ ಅಸ್ಮದಾದಿ ಶರೀರವೇ ರೂಪವೆನಿಸುತ್ತದೆ. ಅಯೋಗಿಗಳಿಂದ ವ್ಯವಹಾರ್ಯವಾದುದೇ ನಾಮವೆನಿಸುತ್ತದೆ.

ಹೇಳುತ್ತದೆ.) (ನಾಮರೂಪ ಕರ್ತೃತ್ವವು ಪರಮತ್ವದಲ್ಲಿ ಮಾತ್ರ ಹೇತುವಲ್ಲ, ಮತ್ತೆ ವಿಷ್ಣುವಿಗೆ ಬ್ರಹ್ಮತ್ವದಲ್ಲಿಯೂ ಹೇತುವು ಎಂದು ಸೂಚಿಸುವುದಕ್ಕಾಗಿ ಬ್ರಹ್ಮಶಬ್ದವನ್ನು ಪ್ರಶ್ನೆಪೂರ್ವಕವಾಗಿ ನಿರ್ವಚನ ಮಾಡುತ್ತಾರೆ.) ಬ್ರಹ್ಮನೆಂದು ಯಾವುದರಿಂದ ಹೇಳಲ್ಪಡುತ್ತಾನೆ. ಪೂರ್ಣತ್ವವಿದ್ದುದರಿಂದಲೂ ನಾಮರೂಪಾತ್ಮಕ ಪ್ರಪಂಚವನ್ನು ಸೃಷ್ಟ್ಯಾದಿಗಳಿಂದ ಪೂರ್ಣೀಕರಿಸಿದ್ದರಿಂದಲೂ ಬ್ರಹ್ಮನೆಂದು ಹೇಳಲ್ಪಡುತ್ತಾನೆ. ಹೀಗೆ ಅಗ್ನಿ ವೇಶ್ಯ ಶ್ರುತಿಯು (ವಿಷ್ಣುವಿಗೆ ನಾಮರೂಪಕರ್ತೃತ್ವವನ್ನು ಹೇಳುತ್ತದೆ. ತಥಾಚ **ವಿರಿಂಚೋ ವಾ ಇದಂ** ಎನ್ನುವ ಶ್ರುತಿಯಿಂದಲೂ **ವಿರೇಚಕತ್ವಾದ್ವಿರಿಂಚಃ** ಎನ್ನುವ ಯುಕ್ತಿಯಿಂದಲೂ ವಿರಿಂಚನಿಗೇನೇ ದೇಹಾದಿಕರ್ತೃತ್ವವು. **ಅಥ ಕಸ್ಮಾತ್** ಎನ್ನುವ ಶ್ರುತಿಯಾದರೂ ಇದಕ್ಕೆ ವಿರುದ್ಧವಾದ ಪ್ರಯುಕ್ತ ಅಪ್ರಮಾಣವೇ.) (೨) ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ. ॥ ೨ ॥

## ಸೂತ್ರ ॥ ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ಓಂ ॥ ೨೧ ॥

**ಸೂತ್ರಾರ್ಥ ॥** ನಾಮರೂಪಾತ್ಮಕ ಶರೀರ ಇಂದ್ರಿಯಾದಿ ಪ್ರಪಂಚ ಸೃಷ್ಟಿಯು ಪೃಥಿವ್ಯಪ್ತೇಜಸ್ಸುಗಳಿಗೆ ಮಿಶ್ರೀಭಾವವನ್ನು ಮಾಡತಕ್ಕ ಪರಮಾತ್ಮನಿಂದಲೇ ಆಗುತ್ತದೆ. ಸರ್ವಾಣಿ ರೂಪಾಣಿ ಎನ್ನುವ ಶ್ರುತಿಯಿಂದ.

**ಭಾಷ್ಯ ॥ (೧) ನಾಮರೂಪಕ್ಲೃಪ್ತಿಃ ಪರಾದೇವ । (೨) ಸರ್ವಾಣಿ ರೂಪಾಣಿ ವಿಚಿತ್ಯಧೀರೋ ನಾಮಾನಿ ಕೃತ್ವಾಽಭಿವದನ್ಯದಾ(ನ್ಯ ಅ)ಸ್ತೇ** (ತೈ. ಆ. ೩.೧೨.)**। ಇತಿ ಶ್ರುತೇಃ । (೩) ತ್ರಿವೃತ್ಕುರ್ವತಃ ಇತಿ ಹೇತುಗರ್ಭಃ ॥ (೪) ತ್ರಿವೃತ್ಕರಣಾಪೇಕ್ಷತ್ವಾನ್ನಾಮರೂಪಯೋಃ ॥ ೩ ॥**

**ಭಾಷ್ಯಾರ್ಥ ॥** (೧) ನಾಮರೂಪಾತ್ಮಕ ದೇಹಾದಿ ಪ್ರಪಂಚದ ಸೃಷ್ಟಿಯು ಪರಮಾತ್ಮನಿಂದಲೇ ಆಗುತ್ತದೆ. (ಬ್ರಹ್ಮನಿಂದ ಅಲ್ಲ) (೨) ಪರಮ ಧೈರ್ಯಶೀಲನಾದ ಶ್ರೀಹರಿಯು ಎಲ್ಲಾ ಶರೀರಾದಿಗಳನ್ನು ನಿರ್ಮಾಣ ಮಾಡಿ ಅವುಗಳಿಗೆ ವಾಚಕಶಬ್ದಗಳನ್ನು ಮಾಡಿ ಆ ನಾಮಗಳಿಂದ ವ್ಯವಹಾರ ಮಾಡುತ್ತಾ ಇರುತ್ತಾನೆ ಎನ್ನುವ ಪುರುಷಸೂಕ್ತಶ್ರುತಿಯಿಂದ. (೩) (ನಾಮರೂಪಗಳು ವಿರಿಂಚ ಸೃಷ್ಟಗಳು ಎನ್ನುವಲ್ಲಿಯೂ ಶ್ರುತಿಯು ಇದೆ. ಆದಕಾರಣ ನಿಶ್ಚಯವು ಹೇಗೆ ಆಗುವುದು ಎಂದರೆ) ತ್ರಿವೃತ್ಕುರ್ವತಃ ಎನ್ನುವ ವಿಶೇಷಣಶಬ್ದವು ಹೇತ್ವರ್ಥಗರ್ಭಿತವಾಗಿದೆ. ತಥಾಚ **ನಾಮರೂಪಕರ್ತಾ ಪರಃ ಪೃಥಿವ್ಯಪ್ತೇಜೋರೂಪಭೂತತ್ರಯಸ್ಯ ಮಿಶ್ರೀಭಾವರೂಪತ್ರಿವೃತ್ಕರ್ತೃತ್ವಾತ್** ಎನ್ನುವ ಯುಕ್ತಿಯು ಉಕ್ತವಾಯ್ತು. (೪) (ಶ್ರೀಹರಿಗೆ ತ್ರಿವೃತ್ಕರ್ತೃತ್ವವಿದ್ದರೂ ನಾಮಾದಿ ಕರ್ತೃತ್ವವು ಹೇಗೆ ಸಿದ್ಧವಾಗುತ್ತದೆ ಎಂದರೆ—) ನಾಮರೂಪಗಳ ಕರಣಕ್ಕೆ ತ್ರಿವೃತ್ಕರಣ ಸಾಪೇಕ್ಷತ್ವವಿದ್ದುದರಿಂದ (ತ್ರಿವೃತ್ಕರಣವು ತಾಸಾಂ ತ್ರಿವೃತಂ ಎನ್ನುವ ಶ್ರುತಿಯಿಂದ ವಿಷ್ಣುವಿನ ಧರ್ಮವಾದುದರಿಂದ ತ್ರಿವೃತ್ಕರ್ತೃತ್ವ ಹೇತುವಿನಿಂದ ಶ್ರೀಹರಿಗೇನೇ ನಾಮಾದಿ ಕರ್ತೃತ್ವವು.) ॥ ೩ ॥

ಪೀಠಿಕೆ ॥ ವಿರಿಂಚೋ ವಾ ಇದಂ ಎನ್ನುವ ಶ್ರುತಿಯೂ ವಿರಿಂಚತ್ವಾದಿ ಯುಕ್ತಿಯುಕ್ತವಾಗಿದೆ ಎಂದರೆ ಅದು ಸಾವಕಾಶವಾಗಿದೆ ಎನ್ನುವುದು ಸ್ಮೃತಿಯಿಂದಲೇ ತೋರಿಸುತ್ತಾರೆ—

**ಭಾಷ್ಯ ॥ (೧) ಸರ್ವನಾಮ್ನಾಂ ಚ ರೂಪಾಣಾಂ ವ್ಯವಹಾರೇಷು ಕೇಶವಃ । ಏಕ ಏವ ಯತಃ ಸ್ರಷ್ಟಾ ಬ್ರಹ್ಮಾದ್ಯಾಸ್ತದವಾಂತರಾಃ ॥ ಇತಿ (ಚ)ಪಾದ್ಮೇ। (೨) ತ್ರಿವೃತ್ಕ್ರಿಯಾ ಯತೋ ವಿಷ್ಣೋ ರೂಪಂ ಚ ತದಪೇಕ್ಷಯಾ । ರೂಪಾಪೇಕ್ಷಂ ತಥಾ ನಾಮ ವ್ಯವಹಾರಸ್ತದಾತ್ಮಕಃ ॥ ಅತೋ ನಾಮ್ನಶ್ಚ ರೂಪಸ್ಯ ವ್ಯವಹಾರಸ್ಯ ಚೈಕರಾಟ್ । ಹರಿರೇವ ಯತಃ ಕರ್ತಾ ಪಿತಾಽತೋ ಭಗವಾನ್ಪ್ರಭುಃ ॥ ಇತಿ ಚ ಬ್ರಹ್ಮಾಂಡೇ ॥ ೨೧ ॥ ಅಧಿ. ೧೨ ॥ ॥ ४ ॥**

ಭಾಷ್ಯಾರ್ಥ ॥ (೧) ಯಾವ ಕಾರಣದಿಂದ ವಿರಿಂಚಾದಿ ಸರ್ವನಾಮ(ಸಂಜ್ಞೆ)ಗಳಿಗೂ ಮೂರ್ತಿಗಳಿಗೂ ಅಭಿಲಪನಾದಿ ವ್ಯವಹಾರಗಳಿಗೂ ಸೃಷ್ಟ್ಯಾದಿವಿಷಯದಲ್ಲಿ ಬ್ರಹ್ಮರುದ್ರರನ್ನು ಪ್ರವರ್ತಿಸತಕ್ಕ ಶ್ರೀಹರಿಯೊಬ್ಬನೇ ಮುಖ್ಯವಾಗಿ ಸೃಷ್ಟಿಮಾಡತಕ್ಕವನೋ ಆದಕಾರಣ ಬ್ರಹ್ಮಾದಿ ದೇವತೆಗಳು ನಾಮಾದಿಕರ್ತೃಗಳೆಂದು ಶ್ರುತರಾದಾಗ್ಯೂ ಸೃಷ್ಟ್ಯಾದಿಗಳಲ್ಲಿ ದ್ವಾರಕಾರಣೀಭೂತರೇ (ಅಮುಖ್ಯಕರ್ತೃಗಳೇ) ಎಂದು ಪಾದ್ಮದಲ್ಲಿದೆ. (೨) (ಸೂತ್ರಾರ್ಥದಲ್ಲಿ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ.) ಯಾವಕಾರಣದಿಂದ ಪೃಥಿವ್ಯಪ್ತೇಜಸ್ಸುಗಳ ಮಿಶ್ರೀಭಾವಕರಣವು ವಿಷ್ಣುಗತವೇ ಆಗುತ್ತದೋ, ರೂಪವು ತ್ರಿವೃತ್ಕರಣಾಪೇಕ್ಷೆಯಿಂದಲೇ ಆಗುತ್ತದೋ, (ತ್ರಿವೃತ್ಕರಣವಿಲ್ಲದೆ ರೂಪವು ಹುಟ್ಟಲಾರದು.) ನಾಮವು ರೂಪವನ್ನು ಅಪೇಕ್ಷಿಸತಕ್ಕುದೋ, (ರೂಪಸಾಧ್ಯವೊ) (ರೂಪವು ಇಲ್ಲವಾದರೆ ನಾಮವು ಕೂಡಲಾರದು.) ವ್ಯವಹಾರವು ನಾಮರೂಪಗಳನ್ನು ಅಪೇಕ್ಷಿಸಿಕೊಂಡು ಇರುವುದು. (ಅಂದರೆ ವ್ಯವಹಾರಕ್ಕೆ ನಾಮವು ಕರಣವು. ರೂಪವು ವಿಷಯವು.) ಆದಕಾರಣ ತ್ರಿವೃತ್ಕರಣವು ವಿಷ್ಣುವಿನಿಂದಲೇ ಆಗುವುದರಿಂದ ತ್ರಿವೃತ್ಕರಣಾಪೇಕ್ಷೆಯುಳ್ಳ ನಾಮಕ್ಕೂ ರೂಪಕ್ಕೂ ವ್ಯವಹಾರಕ್ಕೂ ಸರ್ವಸ್ವತಂತ್ರನಾದ ಶ್ರೀಹರಿಯೊಬ್ಬನೇ ಮುಖ್ಯಕರ್ತನೋ (ಮತ್ತೊಬ್ಬನಲ್ಲ) ಆದಕಾರಣ ಆ ಭಗವಂತನೇ ಸರ್ವರಿಗೂ ಪಿತನು. ಸ್ವಾಮಿಯೂ ಆಗಿರುತ್ತಾನೆ, ಎಂದೂ ಬ್ರಹ್ಮಾಂಡಪುರಾಣದಲ್ಲಿದೆ. ॥ ೨೧ ॥ ॥ ४ ॥

## ಮಾಯಾವಾದಿರೀತ್ಯಾ

ವಿಚಾರ ॥ ಅನೇನ ಜೀವೇನಾತ್ಮನಾನುಪ್ರವಿಶ್ಯ ಎನ್ನುವ ಶ್ರುತಿಯಿದ್ದುದರಿಂದ ನಾಮರೂಪಕರಣವು ಜೀವಕರ್ತೃಕವು ಎಂದು ಪೂರ್ವಪಕ್ಷವು ಬಂದರೆ—ಸೇಯಂ ದೇವತಾ ಎಂದುಪಕ್ರಮಿಸಿ ನಾಮರೂಪೇ ವ್ಯಾಕರವಾಣಿ ಎನ್ನುವ ಉತ್ತಮ ಪುರುಷವನ್ನು ಹೇಳಿದ್ದರಿಂದ ಈಶ್ವರಕರ್ತೃಕವೇ ಎನ್ನುತ್ತಾರೆ. ಅದು ಅಯುಕ್ತವು. ಜೀವೇಶ್ವರ ಶಬ್ದದಿಂದ ನಾಮರೂಪವುಳ್ಳ ವಿಶಿಷ್ಟವನ್ನು ವಿವಕ್ಷಾ ಮಾಡಿದರೆ ವಿಶಿಷ್ಟಕ್ಕೆ ಸ್ವನಾಮ ರೂಪಕರ್ತೃತ್ವವು ಇಲ್ಲ. ಚಿನ್ಮಾತ್ರವನ್ನು ವಿವಕ್ಷಾ

ಮಾಡಿದರೆ ಅದಕ್ಕೆ ಕರ್ತೃತ್ವವೇ ಇಲ್ಲದಿರುವುದರಿಂದ ಜೀವಕರ್ತೃತ್ವ ಪೂರ್ವಪಕ್ಷವೂ ಈಶ್ವರಕರ್ತೃತ್ವ ಸಿದ್ಧಾಂತವೂ ಕೂಡಲಾರದು. ಜೀವಭಾವವು ಪ್ರತಿಬಿಂಬದ ರೂಪಪ್ರವೇಶಾಧೀನವಾದುದರಿಂದ ಜೀವರೂಪದಿಂದ ಪ್ರವೇಶೋಕ್ತಿಯೂ ಕೂಡಲಾರದು.

## ಅಧಿಕರಣ ಸಾರಾಂಶ

ಶರೀರಾದಿ ವಸ್ತುಸಮುದಾಯವು ವಿರಿಂಚಸೃಷ್ಟವೋ ಪರಮಾತ್ಮಸೃಷ್ಟವೋ ಎಂದು ಸಂದೇಹವು. **ಯಸ್ಮಾದ್ವಿರೇಚಯೇತ್ಸರ್ವಂ** ಇತ್ಯಾದಿ ಸ್ಮೃತ್ಯುಕ್ತವಾದ ವಿರೇಚಕತ್ವ (ಸ್ರಷ್ಟೃತ್ವ) ರೂಪವಾದ ವಿರಿಂಚತ್ವಯುಕ್ತಿ ಯುಕ್ತವಾದ ವಿರಿಂಚೋ ವಾ ಇದಂ ಸರ್ವಂ ಎನ್ನುವ ಶ್ರುತಿಯು ಪರಮಾದ್ವೇತೇ ಎನ್ನುವ ಶ್ರುತಿಯಿಂದ ಪ್ರಬಲವು. ಆದಕಾರಣ ವಿರಿಂಚ ಸೃಷ್ಟವು ಎಂದು ಪೂರ್ವಪಕ್ಷವು ಬಂದರೆ—ಶರೀರಾದಿ ವಸ್ತುಸೃಷ್ಟಿಗೆ ಪೃಥಿವ್ಯಾದಿ ಭೂತತ್ರಯ ಮಿಶ್ರೀಭಾವರೂಪ ತ್ರಿವೃತ್ಕರಣದ ಅಪೇಕ್ಷೆಯು ಇದೆ. ಅದು **ಸೇಯಂ ದೇವತೇಮಾಸ್ತಿಸ್ರೋ ದೇವತಾಃ** ಇತ್ಯಾದಿ ಶ್ರುತಿಯಿಂದ ವಿಷ್ಣುಧರ್ಮವಾಗಿರುವುದರಿಂದ ವಿಷ್ಣುವಿನಿಂದಲೇ ದೇಹಾದಿನಾಮಪ್ರಪಂಚ ಸೃಷ್ಟಿಯು. ವಿರಿಂಚನಿಂದ ಅಲ್ಲ. ಯುಕ್ತಿಯಿಂದೊಡಗೂಡಿದ ಹಿಂದಿನ ಶ್ರುತಿಯಾದರೂ ಬ್ರಹ್ಮಾದ್ಯಾಪ್ತದ ವಾಂತರಾಃ ಎನ್ನುವ ಸ್ಮೃತಿಯಿಂದ ಅವಾಂತರ ಸೃಷ್ಟಿಪರವು. ॥ ಅಧಿ. ೧೨ ॥

## ಸಂಜ್ಞಾಕ್ಲೃಪ್ತ್ಯಧಿಕರಣವು ಸಮಾಪ್ತವಾಯಿತು.

॥ಓಂ ಶರೀರಕಾರಣ ವಿಷಯ ಶ್ರುತ್ಯವಿರೋಧಪ್ರಯೋಜ್ಯ ಸಮನ್ವಯ ಗೋಚರಾಯ ನಮಃ ಓಂ॥
॥ ಇತಿನ್ಯಾಯೋಪೇತಶ್ರುತಿ ಪರಸ್ಪರ ವಿರೋಧಪ್ರಯೋಜ್ಯ ಸಮನ್ವಯ ಗೋಚರಾಯ ನಮಃ ಓಂ॥

# ೧೩. ಮಾಂಸಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಶರೀರಕಾರಣವಿಷಯ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ—

**ಭಾಷ್ಯ ॥ (೧) ಅದ್ಭ್ಯೋ ಹೀದಮುತ್ಪದ್ಯತೇ ಆಪೋ ವಾ ವ ಮಾಂಸಮಸ್ಥಿ ಚ ಭವಂ(ವ) ತ್ಯಾಪಃ ಶರೀರಮಾಪ ಏವೇದಂ ಸರ್ವಂ। ಇತಿ ಕೌಂಡಿನ್ಯಶ್ರುತಿಃ। (೨) ಅಮ್ಮಯಂ ತು ಯತೋ ಮಾಂಸಮತಸ್ತೃಪ್ತಿಶ್ಚ ಮಾಂಸತಃ । ಇತಿ ಚ ಭಾರತೇ ॥ (೩) ಪೃಥಿವೀಶರೀರಮಾಕಾಶಮಾತ್ಮಾ (ಬೃ.೫.೨.೧೨.)। ಇತಿ ಚ ಶ್ರುತಿಃ ॥ ೧ ॥**

ಭಾಷ್ಯಾರ್ಥ ॥ (೧) ಈ ಶರೀರವು ಜಲಗಳಿಂದಲೇ ಹುಟ್ಟುತ್ತದೆ. ಜಲಗಳೇ ಮಾಂಸವೂ ಎಲಬುಗಳೂ ಆಗುತ್ತವೋ, ಆದಕಾರಣ ಜಲಗಳು ಶರೀರವು. ಅಂದರೆ ಶರೀರವು ಜಲದಿಂದ ಹುಟ್ಟಿದ್ದು. ಈ ಶರೀರ ಮೊದಲಾದುದೆಲ್ಲವೂ ಜಲಗಳೇ. (ಜಲಗಳಿಂದಲೇ ಹುಟ್ಟಿದ್ದು) ಎಂದು ಕೌಂಡಿನ್ಯಶ್ರುತಿಯು (ಶರೀರಕ್ಕೆ ಅಪ್ಯತ್ವವನ್ನು ಹೇಳುತ್ತದೆ.) (೨) ಯಾವ ಕಾರಣದಿಂದ ಮಾಂಸವು ಜಲಕಾರ್ಯವೋ, ಆದುದರಿಂದಲೇ ಮಾಂಸದಿಂದಲೇ ತೃಪ್ತಿಯು ಹುಟ್ಟುತ್ತದೆ. (ತಥಾಚ

**ತೃಪ್ತಿಜನಕತ್ವಾತ್ ಮಾಂಸಂ ಅಮ್ಮಯಂ** ಎನ್ನುವ ಯುಕ್ತಿಯು ಭಾರತದಲ್ಲಿ ಹೇಳಿದೆ. (೩.) ಪುರುಷನ ಶರೀರವು ಪೃಥಿವಿಯನ್ನು ಪ್ರವೇಶಿಸುತ್ತದೆ. ಅಂದರೆ ಪೃಥಿವಿಯಲ್ಲಿ ಲೀನವಾಗುತ್ತದೆ. ಪುರುಷನ ದೇಹಾಂತರ್ಗತನಾದ ಶ್ರೀಹರಿಯು ಮೂಲರೂಪಿಯಾದ ಪರಮಾತ್ಮನನ್ನು ಹೊಂದುತ್ತಾನೆ. ಎನ್ನುವ ಬೃಹದಾರಣ್ಯಕ ಶ್ರುತಿಯು (ಶರೀರಕ್ಕೆ ಪಾರ್ಥಿವತ್ವವನ್ನು ಹೇಳುತ್ತದೆ. ) (ಕಾರ್ಯಕ್ಕೆ ಕಾರಣದಲ್ಲಿಯೇ ಲಯವು ಎನ್ನುವುದು ನಿಯತವು.)

**ವಿಶೇಷಾಂಶ ॥** ತಥಾಚ (೧) **ಆಪೋ ವಾ ವ ಮಾಂಸಂ** ಎನ್ನುವ ಶ್ರುತಿಯಿಂದಲೂ ಮಾಂಸಾದಿಗಳಲ್ಲಿ ತೃಪ್ತಿಜನಕತ್ವರೂಪವಾದ ಜಲಧರ್ಮದರ್ಶನರೂಪ ಯುಕ್ತಿಯಿಂದಲೂ ಶರೀರವು ಅಪ್ಯವೆಂದು ಪೂರ್ವಪಕ್ಷವು (೨) ಅಥವಾ **ಪೃಥಿವೀಂ ಶರೀರಂ** ಎನ್ನುವ ಶ್ರುತಿಯಿಂದಲೂ ಕಾಠಿನ್ಯಗಂಧವತ್ವಾದಿಯುಕ್ತಿಯಿಂದಲೂ ಪಾರ್ಥಿವವೆಂದು ಪೂರ್ವಪಕ್ಷವು. (೩.) ಅಥವಾ ತೈಜಸವೆಂದು ಪೂರ್ವಪಕ್ಷವು. ಸರ್ವಥಾ ಶರೀರವು ಭೂತತ್ರಯಾತ್ಮಕವಲ್ಲ ಎಂದು ನಾಲ್ಕನೇ ಪೂರ್ವಪಕ್ಷವು. ಆದಕಾರಣ ಶ್ರುತಿಗಳಿಗೆ ಪರಸ್ಪರ ವಿರೋಧವಿದ್ದುದರಿಂದ ಅಪ್ರಾಮಾಣ್ಯವು.

**ಭಾಷ್ಯ ॥ ಅತೋ ಬ್ರವೀತಿ** ॥ ೨ ॥

**ಭಾಷ್ಯಾರ್ಥ ॥** ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ.

## ಸೂತ್ರ ॥ ಓಂ ಮಾಂಸಾದಿ ಭೌಮಂ ಯಥಾಶಬ್ದಮಿತರಯೋಶ್ಚ ಓಂ ॥ ೨೨ ॥

**ಭಾಷ್ಯ ॥ ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪೋ ಯದುಷ್ಣಂ ತತ್ತೇಜಃ (ಗರ್ಭೋಪನಿಷತ್ ೩.)। ಇತಿ ಶ್ರುತೇರ್ಮಾಂಸಾದ್ಯೇವ ಭೌಮಂ ನ ಸರ್ವಂ (ರ್ವ) ಶರೀರಂ। ಅಪ್ತೇಜಸೋಶ್ಚ ಕಾರ್ಯಂ ಯಥಾಶಬ್ದಮಂಗೀಕರ್ತವ್ಯಂ ॥ ೩ ॥**

**ಭಾಷ್ಯಾರ್ಥ ॥** (ಶರೀರದಲ್ಲಿ) ಕಠಿಣವಾದ ಯಾವುದು ಮಾಂಸಾದಿಗಳೋ, ಅದು ಪೃಥಿವೀಕಾರ್ಯವು. ಯಾವುದು ದ್ರವರೂಪವಾದ ಶೋಣಿತಾದಿಗಳೋ, ಅದು ಜಲಕಾರ್ಯವು, ಯಾವುದು ಉಷ್ಣವಾದ ಮಜ್ಜಾದಿಗಳೋ ಅದು ತೇಜಃ ಕಾರ್ಯವು ಎನ್ನುವ ಶ್ರುತಿಯಿಂದ ಮಾಂಸ ಮೊದಲಾದ ಕಠಿನರೂಪವಾದುದೇ, ಪಾರ್ಥಿವವು (ಪೃಥಿವೀಕಾರ್ಯವು) ಸರ್ವಶರೀರವು ಪಾರ್ಥಿವವಲ್ಲ, ಮತ್ತೆ ಜಲತೇಜಸ್ಸುಗಳ(ಳಿಂದ) ಕಾರ್ಯ(ಜನ್ಯ)ವಾದ ಶೋಣಿತಾದಿಗಳೂ ಮಜ್ಜಾದಿಗಳೂ ಶರೀರದಲ್ಲಿ ಇವೆ ಎಂದು ಶ್ರುತ್ಯನುಸಾರವಾಗಿ ಅಂಗೀಕರಿಸಬೇಕು.

**ವಿಶೇಷಾಂಶ ॥** (೧) **ಭೌಮಂ** ಎನ್ನುವುದು, **ಅಪ್ಯಂ** ಎನ್ನುವುದಕ್ಕೂ **ತೈಜಸಂ** ಎನ್ನುವುದಕ್ಕೂ ಉಪಲಕ್ಷಣವು. (೧) **ಅನ್ನಮಶಿತಂ ತ್ರೇಧಾ ವಿಧೀಯತೇ** (ಛಾ.೬.೫.೧.) ಇತ್ಯಾದಿ ಛಾಂದೋಗ್ಯದಲ್ಲಿ ಪುರೀಷ ಮಾಂಸ ಮನಸ್ಸುಗಳಿಗೆ ಪಾರ್ಥಿವತ್ವಶ್ರುತಿಯೂ, (೨) **ಅಪಃ ಪೀತಾಸ್ತ್ರೇಧಾ ವಿಧೀಯಂತೇ** (ಛಾ. ೬.೫.೨.) ಇತ್ಯಾದಿಗಳಲ್ಲಿ ಮೂತ್ರ ಶೋಣಿತ ಪ್ರಾಣಗಳಿಗೆ ಅಪ್ಯತ್ವಶ್ರುತಿಯೂ, (೩.

ತೇಜೋಽಶಿತಂ ತ್ರೇಧಾ (ಛಾ.೬.೫.೩) ಇತ್ಯಾದಿಗಳಲ್ಲಿ ಅಸ್ಥಿ ಮಜ್ಜಾ ವಚನಗಳಿಗೆ ತೈಜಸತ್ವಶ್ರುತಿಯೂ ಜ್ಞಾಪಕವಾದುದು. (೪) ಮಾಂಸಾದಿಗಳು ಭೌಮಮಾತ್ರವಲ್ಲ, ಅಪ್ತೇಜೋಜನ್ಯವೆಂದೂ ಶ್ರುತ್ಯನುಸಾರವಾಗಿ ಅಂಗೀಕರಿಸತಕ್ಕದು.

ಪೀಠಿಕೆ ॥ ಮಾಂಸಾದಿಗಳಿಗೆ ಅನೇಕ ಭೂತಕಾರ್ಯತ್ವಾಂಗೀಕಾರವು ಶಬ್ದಾನುಸಾರಿ ಎಂದು ಹೇಳಿದೆ. ಶಬ್ದವು ಯಾವುದೆಂದರೆ—

**ಭಾಷ್ಯ ॥ ಯದ್ವಾ ವಾಽಥೋ ವಿಮಿಶ್ರಂ ಮಿಶ್ರಾದ್ಧ್ಯೇತದ್ಭವತಿ ಮಿಶ್ರಾಣಿ ಹಿ ಭೂತಾನಿ ತಸ್ಮಾದೇವೈವಮಾಚಕ್ಷತೇ ಭೂತಾನಿ (ನೀತಿ)। ಇತಿ (ಹಿ) ಕಾಷಾಯಣಶ್ರುತಿಃ ॥೪॥**

ಭಾಷ್ಯಾರ್ಥ ॥ ಯಾವಕಾರಣದಿಂದ ಭೂತಗಳೇ ಮಿಶ್ರಗಳು (ಮಿಥಃ ಸಂಭೂತಗಳು) ಎಂದು ಪ್ರಸಿದ್ಧಿಯಿದೆಯೋ, ಆದುದರಿಂದ ಶರೀರದಲ್ಲಿ ಯಾವುದು ಮಾಂಸಾದಿಗಳೋ ಅದೂ ವಿಮಿಶ್ರವೇ ಆಗುವುದು. ಏಕೆಂದರೆ ಈ ಮಾಂಸಾದಿಗಳು ವಿಮಿಸ್ರವಾದ ಭೂಮ್ಯಾದಿಗಳಿಂದಲೇ ಆಗುವುದು. (ಕಾರ್ಯವು ಕಾರಣಾನುಗುಣವಾಗುವುದು.) ಸಂಭೂತ (ಸಹಭೂತ)ವಾದುದರಿಂದಲೇ ಅಂದರೆ ವಿಮಿಶ್ರವಾದುದರಿಂದಲೇ ಪೃಥಿವ್ಯಾದಿಗಳನ್ನು ಭೂತಗಳೆಂದು ಹೇಳುತ್ತಾರೆ. (ವಸ್ತುತಃ ಆದಿಸೃಷ್ಟಿಯಲ್ಲಿಯೇ ಭೂತಗಳನ್ನು ಮಿಶ್ರಗಳನ್ನಾಗಿಯೇ ಮಾಡಿರುತ್ತಾರೆ) ಎಂದು ಕಾಷಾಯಣಶ್ರುತಿಯು. ತಥಾಚ ಭೂಮ್ಯಾದಿ ಭೂತಗಳು ಸ್ವತೇವ ವಿಮಿಶ್ರಗಳಾಗಿರುವುದರಿಂದ ಅವುಗಳಿಂದುಂಟಾದ ಮಾಂಸಾದಿಗಳು ಏಕಭೂತಕಾರ್ಯಗಳಾಗದೆ ಅನೇಕಭೂತಕಾರ್ಯಗಳಾಗಿರುವುದರಿಂದ ಅದನ್ನು ಅಪೇಕ್ಷಿಸಿ ಅಪ್ಯತ್ವಾದ್ಯುಕ್ತಿಯು ಯುಕ್ತವು. ॥ ೪ ॥

ಪೀಠಿಕೆ ॥ ಈ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಪಂಚಭೂತಾತ್ಮಕಂ ಸರ್ವಂ ತದ (ಥಾಽ) ಪ್ಯೇಕವಿವಕ್ಷಯಾ । ಏಕಭೂತಾತ್ಮಕತ್ವೇನ ವ್ಯವಹಾರಸ್ತು ವೈದಿಕೇ ॥ ೫ ॥**

ಭಾಷ್ಯಾರ್ಥ ॥ ಯದ್ಯಪಿ ಪಾರ್ಥಿವಾದಿ ಸರ್ವಶರೀರಗಳಲ್ಲಿಯೂ ಮಾಂಸಾದಿಗಳೆಲ್ಲವೂ ಒಂದೊಂದು ಪಂಚಭೂತಾತ್ಮಕವಾಗುತ್ತವೆ. ಆದಾಗ್ಯೂ ಒಂದೊಂದು ಭೂತಸಂಬಂಧ ವಿವಕ್ಷೆಯಿಂದ ಒಂದು ಭೂತದಿಂದ ಹುಟ್ಟಿದ್ದನ್ನುವ ವಿವಕ್ಷೆಯಿಂದ ಭೌಮಂ ಇತ್ಯಾದಿರೂಪದಿಂದ ಆಪೋ ವಾ ವ ಮಾಂಸಂ ಇತ್ಯಾದಿ ವೈದಿಕಗ್ರಂಥದಲ್ಲಿ ವ್ಯವಹಾರವು ಇದೆ.

**ಭಾಷ್ಯ ॥ ಭೌಮಮಿತ್ಯೇವ ಕಾಠಿನ್ಯಾ(ನ್ಯಾ) ಚ್ಛೌಕ್ಲ್ಯಾದೌದಕಮಿತ್ಯಪಿ । ತೇಜಿಷ್ಠತ್ವಾತ್ತೈಜಸಂ ಚ ಯಥಾಽಸ್ಥ್ನಾಂ ವಚನಂ ಪ್ರುತೌ ॥ ಇತಿ ವಾಯುಪ್ರೋಕ್ತೇ ॥ ೨೨ ॥ ॥ ೬ ॥**

ಭಾಷ್ಯಾರ್ಥ ॥ ಕಾಠಿನ್ಯದಿಂದ, ಅವಗತವಾದ ಭೂಸಂಬಂಧದಿಂದ, ಶೌಕ್ಲ್ಯದಿಂದ ಅವಗತವಾದ ಜಲಸಂಬಂಧದಿಂದ, ಅತಿಶಯಿತ ತೇಜೋಭಾಗವಿದ್ದುದರಿಂದ ತೇಜಸ್ಸಂಬಂಧ ದಿಂದಲೂ, ಒಂದಕ್ಕೇನೇ ಭೌಮಂ ಇತ್ಯಾದಿ ಅನೇಕ ಶಬ್ದವ್ಯವಹಾರ ವಿಷಯತ್ವವು ಆಗುತ್ತದೆ.

ಹೇಗೆಂದರೆ ಯತ್ಕಠಿನಂ ಇತ್ಯಾದಿ ಸಾಮಾನ್ಯಶ್ರುತಿಯಲ್ಲಿ ಕಾಠಿನ್ಯದಿಂದ ಅವಗತವಾದ ಭೂತಸಂಬಂಧದಿಂದ ಅಸ್ಥಿಗಳಿಗೆ ಪಾರ್ಥಿವವೆಂದು ವಚನವು. ಅಸ್ತಿ ಚ ಭವಂತ್ಯಾಪಃ ಎನ್ನುವ ಕೌಂಡಿನ್ಯಶ್ರುತಿಯಲ್ಲಿ ಶುಕ್ಲತ್ವದಿಂದ ಅವಗತವಾದ ಜಲಸಂಬಂಧದಿಂದ ಔದಕಂ ಜಲೀಯವೆಂದು ವ್ಯವಹಾರವು. ತೇಜೋಽಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಃ ತದಸ್ಥಿ ಭವತಿ ಎನ್ನುವ ಛಾಂದೋಗ್ಯದಲ್ಲಿ ತೇಜಸ್ಸಂಬಂಧದಿಂದ ತೈಜಸವೆನ್ನುವ ವಚನವು, ಎಂದು ವಾಯುಪ್ರೋಕ್ತದಲ್ಲಿದೆ. (ಸರ್ವ ಚ ಭೌತಿಕಂ ಮಿಶ್ರಂ ಮಿಶ್ರತ್ವೇಽಪಿ ವಿಶೇಷಿತಂ। ಭೌಮಂ ಮಾಂಸಮಸೃಗ್ವಾರಿ ತೇಜೋ ಮಜ್ಜಾ ವಿಶೇಷತಃ ಈ ಪಕ್ಷದಲ್ಲಿ ಏಕವಿವಕ್ಷಯಾ ಎನ್ನುವುದಕ್ಕೆ ಏಕೈಕ ಭೂತಪ್ರಾಚುರ್ಯಸ್ಥಲದಲ್ಲಿ ಒಂದೊಂದು ಭೂತಕ್ಕೆ ಪ್ರಾಚುರ್ಯವನ್ನು ವಿವಕ್ಷಾ ಮಾಡಿಕೊಂಡು ಎಂದು, ಭೂತಸಾಮ್ಯಸ್ಥಲದಲ್ಲಿ ಒಂದೊಂದು ಭೂತಕ್ಕೆ ಅನೂನತ್ವವನ್ನು ವಿವಕ್ಷಾ ಮಾಡಿಕೊಂಡು ಎಂದು ಅರ್ಥವು.) ॥ ೨೨ ॥ ॥ ೬ ॥

ಭಾಷ್ಯ ॥ ಕಥಂ ತರ್ಹಿ ವಿಶೇಷವಚನಮಿತ್ಯತ ಆಹ ॥ ೭ ॥

ಭಾಷ್ಯಾರ್ಥ ॥ ಶರೀರವು ಒಂದು ಭೂತದಿಂದ ಜನ್ಯವಾಗದೆ ಇದ್ದರೆ ಪೃಥಿವೀಂ ಶರೀರಂ ಆಪಃ ಶರೀರಂ ಇತ್ಯಾದಿ ವಿಶೇಷೋಕ್ತಿಯು ಹೇಗೆ ಕೂಡುತ್ತದೆ ಎಂದಾಶಂಕಿಸಿದರೆ ಅದಕ್ಕೆ ಪರಿಹಾರವನ್ನು ಹೇಳುತ್ತಾರೆ.

## ಸೂತ್ರ ॥ ಓಂ (೧) ವೈಶೇಷ್ಯಾತ್ತು ತದ್ವಾದಸ್ತದ್ವಾದಃ ಓಂ ॥ ೨೩ ॥

ಭಾಷ್ಯ ॥ (೨) ಭೂತಾನಾಂ ವಿಶೇಷಸಂಯೋಗಾದೇವ ವಿಶೇಷವ್ಯವಹಾರಃ ॥ ೮ ॥

ಭಾಷ್ಯಾರ್ಥ ॥ (೧) ಆಪಃ ಶರೀರಂ ಇತ್ಯಾದಿ ವಿಶೇಷೋಕ್ತಿಯು ವೈಶೇಷ್ಯಾತ್ತು-ಭೂತಗಳ ಸಂಯೋಗಾಧಿಕ್ಯವನ್ನು ಅಪೇಕ್ಷಿಸಿಯೇ ಉಪಪನ್ನವಾಗುತ್ತದೆ. (೨) ಪೃಥಿವ್ಯಾದಿ ಭೂತಗಳಿಗೆ ಪಾರ್ಥಿವಾದಿ ಶರೀರಗಳಲ್ಲಿಯೂ ಮಾಂಸಾದಿಗಳಲ್ಲಿಯೂ ಆಯಾವ ಭೂತಗಳ ವಿಶೇಷಸಂಯೋಗ ವನ್ನು ಅಪೇಕ್ಷಿಸಿಯೇ ಶರೀರವು ಅನೇಕ ಭೂತೋಪಾದಾನಕವಾದಾಗ್ಯೂ ಅಬಾದಿ ಏಕೈಕ ಭೂತಾತ್ಮಕ ವಾದುದರಿಂದ ವ್ಯವಹಾರವು ಕೂಡುತ್ತದೆ. (ಆದಕಾರಣ ವಿಶೇಷೋಕ್ತಿಯಿಂದ ವಿರೋಧವಿಲ್ಲ)

ಪೀಠಿಕೆ ॥ ಶರೀರದಲ್ಲಿ ಅಥವಾ ಮಾಂಸಾದಿಗಳಲ್ಲಿ ವಿಶೇಷಸಂಯೋಗವೇ ಯಾವುದರಿಂದ ಸರ್ವ ಶರೀರಗಳಲ್ಲಿ ಸರ್ವಭೂತಗಳಿಗೆ ವಿಶೇಷಸಂಯೋಗವಿದ್ದರೆ ಪುನಃ ಏಕೈಕ ಭೂತಕ್ಕೆ ಪ್ರಾಚುರ್ಯವನ್ನು ವಿವಕ್ಷಾ ಮಾಡಿಕೊಂಡು ಪಾರ್ಥಿವಾದಿ ವಿಶೇಷೋಕ್ತಿಯು ಕೂಡಲಾರದು ಎಂದರೆ—

ಭಾಷ್ಯ ॥ ಪಾರ್ಥಿವಾನಾಂ ಶರೀರಾಣಾಮರ್ಧೇನ ಪೃಥಿವೀ ಸ್ಮೃತಾ । ಇತರೇಽರ್ಧೇ ತ್ರಿಭಾಗಿನ್ಯ ಆಪಸ್ತೇಜಸ್ತು ಭಾಗತಃ ॥ ಇತಿ ಸಾಮಾನ್ಯತೋ ಜ್ಞೇಯಂ ಭೇದಶ್ಚ (ದಂ ಚ) ಪ್ರತಿಪೂರುಷಂ । ಸ್ವರ್ಗಸ್ಥಾನಾಂ ಶರೀರಾಣಾಮರ್ಧಂ ತೇಜ ಉದಾಹೃತಂ ॥ ಇತಿ (ಚ) ಬೃಹತ್ಸ(ಬ್ರಹ್ಮಸ)ಹಿತಾಯಾಂ ॥ ೯ ॥

ಭಾಷ್ಯಾರ್ಥ ॥ ಪೃಥಿವಿಯಲ್ಲಿರತಕ್ಕ ಸ್ಥಲಜ ಶರೀರಗಳಿಗೆ ಅರ್ಧಭಾಗದಿಂದ ಪೃಥಿವಿಯು ಸ್ಮೃತವಾಗಿದೆ. (ಅವುಗಳಲ್ಲಿ ಅರ್ಧವು ಪೃಥಿವೀಭಾಗವು.) ಅರ್ಧದಿಂದ ಇತರವಾದ ಅರ್ಧದಲ್ಲಿ ಮೂರು ಭಾಗವುಳ್ಳವುಗಳು ಜಲಗಳು ಅಂದರೆ ಮೂರು ಜಲಭಾಗಗಳು ಸ್ಮೃತವಾಗಿದೆ.) ಹೀಗೆ ಸಾಮಾನ್ಯವಾಗಿ ಪಾರ್ಥಿವ ಆಪ್ಯ ಶರೀರಗಳಲ್ಲಿ ಎಲ್ಲ ತಂತಮ್ಮದ್ದು ನಾಲ್ಕು ಭಾಗಗಳು ಇವೆ. ಈ ವಿಶೇಷಸಂಯೋಗವು ಪಾರ್ಥಿವಾದಿ ಸರ್ವಶರೀರಗಳಲ್ಲಿಯೂ ನಿಯತವಾಗಿದೆ. ಸ್ವರ್ಗಸ್ಥರ ಶರೀರಗಳ ಅರ್ಧಭಾಗವು ತೇಜಸ್ಸು ಎಂದು ಹೇಳಲ್ಪಟ್ಟಿದೆ. (ಮೂರು ಜಲಭಾಗಗಳು. ಒಂದು ಪೃಥಿವೀಭಾಗವು.) (ವರುಣಲೋಕದಲ್ಲಿದ್ದ ಜಲೀಯ ಶರೀರಗಳಲ್ಲಿ ಅರ್ಧಜಲಭಾಗವು. ಮೂರು ಪೃಥಿವೀಭಾಗವು. ಒಂದು ತೇಜೋಭಾಗವು.) ಎಂದು ಬೃಹತ್ಸಂಹಿತೆಯಲ್ಲಿದೆ. ತಥಾಚ ಒಂದೇ ಶರೀರದಲ್ಲಿ ಸರ್ವಭೂತಗಳ ವಿಶೇಷಸಂಯೋಗವನ್ನು ಹೇಳುವುದಿಲ್ಲ. ಮತ್ತೆ ದೇಹಭೇದದಿಂದ ಆವಾವ ಭೂತ ವಿಶೇಷಸಂಯೋಗವು. ಆದುದರಿಂದ ಆವಾವ ದೇಹ ವಿವಕ್ಷೆಯಿಂದ ಅಪ್ಯತ್ವಾದಿ ವಿಶೇಷೋಕ್ತಿಯು ಯುಕ್ತವು. ॥ ೯ ॥

**ಭಾಷ್ಯ ॥ ಸರ್ವಾಧ್ಯಾಯಾರ್ಥಾವಧಾರಣಾರ್ಥಾऽಧ್ಯಾಯಾಂತೇ ದ್ವಿರುಕ್ತಿಃ ॥ ೧೦ ॥**

ಭಾಷ್ಯಾರ್ಥ ॥ ಎಲ್ಲಾ ಅಧ್ಯಾಯಾರ್ಥಕ್ಕೂ ಹೀಗೆಯೇ ಎನ್ನುವ ನಿಶ್ಚಯರೂಪವಾದ ಅರ್ಥವೇ ಪ್ರಯೋಜನವಾಗಿಉಳ್ಳ ದ್ವಿರ್ವಚನವು ಎಲ್ಲಾ ಅಧ್ಯಾಯಗಳ ಅಂತಿಮ ಸೂತ್ರದಲ್ಲಿ ಮಾಡಲ್ಪಡುತ್ತದೆ. ॥ ೧೦ ॥

**ಭಾಷ್ಯ ॥ ಗಾರುಡೇ ಚ । (೧) ಅಧ್ಯಾಯಾಂತೇ ದ್ವಿರುಕ್ತಿಃ ಸ್ಯಾದ್ವೇದೇ ವಾ ವೈದಿಕೇಽಪಿ ವಾ । ವಿಚಾರೋ ಯತ್ರ ಸಜ್ಜೇತ ಪೂರ್ವೋಕ್ತಸ್ಯಾವಧಾರಣೇ ॥ (೨) ಅನುಕ್ತಾನಾಂ ಪ್ರಮಾಣಾನಾಂ ಸ್ವೀಕಾರಶ್ಚ ಕೃತೋ ಭವೇತ್ । ವಿನಿಂದ್ಯ ಚೇತರಾನ್ಮಾರ್ಗಾನ್ಸಂಪೂರ್ಣಫಲತಾ ತಥಾ ॥ ಇತಿ ಚ ॥ ೨೩ ॥ ಅಧಿ. ೧೩ ॥ ॥ ೧೧ ॥**

ಭಾಷ್ಯಾರ್ಥ ॥ (೧) ಯಾವ ಗ್ರಂಥದಲ್ಲಿ ಅಧ್ಯಾಯದ ಆದಿಯನ್ನು ಆರಂಭಿಸಿ ಹೇಳಿದ ಅರ್ಥದ ನಿಶ್ಚಯಕ್ಕಾಗಿ ವಿಚಾರವು ಯಾರಿಂದ ಮಾಡಲ್ಪಡುತ್ತದೋ ಆ ಅಧ್ಯಾಯದ ಅಂತಿಮ ಸೂತ್ರಗಳಲ್ಲಿ ಅಥವಾ ವೇದದಲ್ಲಿ ಅಥವಾ ವೇದಾನುಸಾರಿ ಗ್ರಂಥಗಳಲ್ಲಿ ದ್ವಿರ್ವಚನವು ಬರುವುದು. (೨) (ದ್ವಿರುಕ್ತಿಗೆ ಪ್ರಯೋಜನ ವಿಶೇಷವನ್ನು ಹೇಳುತ್ತಾರೆ.) ಸೂತ್ರಪದಗಳಿಂದ ಮುಖತಃ ಅನುಕ್ತಗಳಾದ (ಸೂಚಿತಗಳಾದ) ಪ್ರಮಾಣಗಳಿಗೆ ದ್ವಿರುಕ್ತಿಯಿಂದ ಸಂಗ್ರಹವು ಆಗುವುದು. ಮತ್ತು ಸೂತ್ರ ಸೂತ್ರಾನುಕೂಲಗಳಿಂದ ಇತರಗಳಾದ ಜ್ಞಾನೋಪಾಯಗಳನ್ನು ಅಂತಹ ಶಾಸ್ತ್ರಗಳನ್ನು ವಿಷಯಾದಿಗಳು ಇಲ್ಲದಿರುವುದರಿಂದ ಅನುಪಾದೇಯಗಳೆಂದು ನಿಂದಿಸಿ ಅನುಕ್ತಗಳಾದ ಪ್ರಮಾಣಗಳಿಗೆ ಸ್ವೀಕಾರವೂ ಮಾಡಲ್ಪಡುವುದು. ಮತ್ತೂ ವಿಶಿಷ್ಟ ಮೋಕ್ಷಸಾಧನತ್ವವೂ ಶಾಸ್ತ್ರಕ್ಕೆ ಉಕ್ತವಾಗುತ್ತದೆ, ಎಂದು ಗಾರುಡದಲ್ಲಿ ಹೇಳಿದೆ. ॥ ೨೩ ॥ ೧೧ ॥

## ಮಾಯಾವಾದಿರೀತ್ಯಾ

ವಿಚಾರ ॥ ಉತ್ತರಸೂತ್ರದಲ್ಲಿ ವಿಷಯವನ್ನು ತೋರಿಸುವುದಕ್ಕಾಗಿ ಮಾಂಸ ಮೊದಲಾದ ಸರ್ವ ಭೌತಿಕವೂ ತ್ರಿವೃತ್ಕೃತ ಭೂತಕಾರ್ಯವು ಎಂದು ಮಾಂಸಾದಿ ಸೂತ್ರದಿಂದ ಹೇಳಿ ಸರ್ವವೂ ತ್ರಿವೃತ್ಕೃತ ಭೂತ ಕಾರ್ಯವಾದರೆ ಇದು ತೈಜಸವು, ಇದು ಆಪ್ಯವು ಎನ್ನುವ ವ್ಯವಸ್ಥೆಯು ಹೇಗೆ ಎಂದಾಶಂಕಿಸಿಕೊಂಡು **ಭೂಯಸ್ತ್ವಾದ್ವ್ಯವಸ್ಥಾ** ಎಂದು ಸಮಾಧಾನ ಹೇಳುವುದಕ್ಕಾಗಿ **ವೈಶೇಷ್ಯಾತ್** ಎನ್ನುವ ಉತ್ತರಸೂತ್ರವು ಎನ್ನುತ್ತಾರೆ. ಅದು ಅಯುಕ್ತವು. ಮಾಂಸಾದಿಗಳು ತ್ರಿವೃತ್ಕೃತ ಭೂತಕಾರ್ಯವಾದುದರಿಂದ ಸೂತ್ರವಿಲ್ಲವಾದರೂ ಭೂತಗಳಿಗೆ ಭೂತಗಳಲ್ಲಿರುವ ತ್ರಿವೃತ್ಕೃತತ್ವಮಾತ್ರದಿಂದ ಮಾಂಸಾದಿಗಳಿಗೂ ಆ ತ್ರಿವೃತ್ಕೃತ ಭೂತಕಾರ್ಯತ್ವದಿಂದ ಅವ್ಯವಸ್ಥಾಶಂಕೆಯು **ಭೂಯಸ್ತ್ವೇನ ವ್ಯವಸ್ಥಾ** ಎನ್ನುವ ಸಮಾಧಾನವೂ ಕೂಡುವುದರಿಂದ ಮಾಂಸಾದಿಸೂತ್ರವೇ ನಿಷ್ಫಲವು.

## ರಾಮಾನುಜಾಚಾರ್ಯರೀತ್ಯಾ

ವಿಚಾರ ॥ **ಅನೇನ ಜೀವೇನ** ಎನ್ನುವ ಶ್ರುತಿಯಿಂದ ನಾಮರೂಪ ಸೃಷ್ಟಿಯು ಜೀವವಿಶೇಷ ಹಿರಣ್ಯಗರ್ಭಕರ್ತೃಕ ಎಂದು ಪೂರ್ವಪಕ್ಷ ಮಾಡುತ್ತಾರೆ. ಅದು ಅಯುಕ್ತವು. ಜೀವಸಾಮಾನ್ಯ ವಾಚಕವಾದ ಜೀವಶಬ್ದಮಾತ್ರದಿಂದ ಹಿರಣ್ಯಗರ್ಭಪ್ರಾಪ್ತಿಯಾಗುವುದಿಲ್ಲ.

## ಅಧಿಕರಣ ಸಾರಾಂಶ

ಮೂರ್ತಿಪದದಿಂದ ಪ್ರಕೃತವಾದ ದೇಹವು ಆಪ್ಯವೋ ಪಾರ್ಥಿವವೋ ತೈಜಸವೋ ಭೂತತ್ರಯಾತ್ಮಕವೋ ಎಂದು ಸಂದೇಹವು. ಮಾಂಸಾದಿಗಳಲ್ಲಿ ತೃಪ್ತಿಜನಕತ್ವವು ಕಂಡದ್ದರಿಂದ ತರ್ಪಕತ್ವಯುಕ್ತೋಪೇತವಾದ **ಆಪಃ ಶರೀರಂ** ಎನ್ನುವ ಶ್ರುತಿಯಿಂದ ಜಲೀಯವೆಂದು ಪೂರ್ವಪಕ್ಷವು. ಕಾಠಿಣ್ಯ ಗಂಧಾದಿಯುಕ್ತೋಪೇತವಾದ **ಪೃಥಿವೀಂ ಶರೀರಂ** ಎನ್ನುವ ಶ್ರುತಿಯಿಂದ ಪಾರ್ಥಿವವೆಂದು ಪೂರ್ವಪಕ್ಷವು. ಔಷ್ಣ್ಯದರ್ಶನಯುಕ್ತೋಪೇತವಾದ **ಸೋಽಗ್ನಿರ್ದೇವಯೋನ್ಯಾ ಆಹುತಿಭ್ಯಃ** ಇತ್ಯಾದಿ ಶ್ರುತಿಗಳಿಂದ ತೈಜಸವೆಂದು ಪೂರ್ವಪಕ್ಷವು. **ಇಮಾಸ್ತಿಸ್ರೋ ದೇವತಾಃ** ಇತ್ಯಾದಿ ಶ್ರುತಿಗಳಲ್ಲಿ ಭೂತತ್ರಯಾತ್ಮಕತ್ವ ಪಕ್ಷವು ಪ್ರುತವಾದಾಗ್ಯೂ **ಆಪ ಏವ ಶರೀರಂ** ಇತ್ಯಾದಿ ವಿಶಿಷ್ಟ ಉಕ್ತಿಯು ಕೂಡದೆ ಇದ್ದುದರಿಂದ ಅಯುಕ್ತವೇ ಎಂದರೆ—ದೇಹಕ್ಕೆ ಅನೇಕ ಭೂತಗಳು ಕಾರಣಗಳಾದಾಗ್ಯೂ ಆಯಾಯ ಭೂತವಿಶೇಷಸಂಯೋಗವನ್ನು ಅಪೇಕ್ಷಿಸಿ ವಿಶಿಷ್ಟ ಉಕ್ತಿಯು ಉಪಪನ್ನವು. **ಯತ್ಕಠಿನಂ ಸಾ ಪೃಥಿವೀ** ಇತ್ಯಾದಿ ಶ್ರುತಿಗಳಿಂದ ಶರೀರವು ಅನೇಕ ಭೂತೋಪಾದಾನಕವೇ ಆಗಿದೆ. ॥ ಅಧಿ.೧೨ ॥

**ಮಾಂಸಾಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ
ಭಗವತ್ಪಾದಾಚಾರ್ಯ(ದ) ವಿರಚಿತೇ ದ್ವಿತೀಯಾಧ್ಯಾಯಸ್ಯ
ಚತುರ್ಥಃ ಪಾದಃ ॥ ೨-೪॥**

ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮದ್ಬ್ರಹ್ಮಸೂತ್ರ ಭಾಷ್ಯದಲ್ಲಿ ಎರಡನೇ ಅಧ್ಯಾಯದಲ್ಲಿ ೪ನೇ ಪಾದವು ಸಮಾಪ್ತವಾಯಿತು. ॥ ೨-೪ ॥

**ನಿರ್ದೋಷಗುಣಪೂರ್ಣೇನ ಶ್ರೀಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಣಾತು ಪುರುಷೋತ್ತಮಃ ॥
॥ ಶ್ರೀಕೃಷ್ಣಾರ್ಪಣಮಸ್ತು ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ತೃತೀಯಾಧ್ಯಾಯ ೧ನೇ ಪಾದ

## ವೈರಾಗ್ಯಪಾದಃ

ಓಂ ಜಯತಿ ಶ್ರೀರಮಾಕಾಂತಃ ಜಯತಿ ಶ್ರೀಶ್ಚ ತತ್ಪ್ರಿಯಾ ।

ಶ್ರೀಶ್ರೀಶಭಕ್ತೋ ಜಯತಿ ಮಧ್ವೋ ವಿಧ್ವಸ್ತಸಾಧ್ವಸಃ ॥

## ೧ ತದಂತರಾಧಿಕರಣವು

**ಭಾಷ್ಯ ॥ (೧) ಸಾಧನವಿಚಾರೋಽಯಮಧ್ಯಾಯಃ । (೨) ವೈರಾಗ್ಯಾರ್ಥೇ ಗತ್ಯಾದಿ— ನಿರೂಪಣಾ ಪ್ರಥಮಪಾದೇ ॥ ೧ ॥**

ಭಾಷ್ಯಾರ್ಥ : (೧) ಮೋಕ್ಷಕ್ಕೆ ಸಾಧನವಾದ ವೈರಾಗ್ಯ—ಭಕ್ತಿ ಉಪಾಸನಾದಿ ರೂಪಗಳಾದ ಸಾಧನಗಳ ವಿಚಾರವುಳ್ಳದ್ದು ಈ ಮೂರನೇಯ ಅಧ್ಯಾಯವು. (ಪ್ರಥಮ ಪಾದಾರ್ಥವನ್ನು ತೋರಿಸುತ್ತಾರೆ.) (೨) ಬ್ರಹ್ಮೇತರ ವಿಷಯದಲ್ಲಿ ಭೋಗ, ರಾಗಗಳ ಉಚ್ಛೇದಕ್ಕಾಗಿ=ಸ್ವರ್ಗಕ್ಕೆ ಹೋಗುವಿಕೆ. (ಆದಿ=) ಸ್ವರ್ಗದಿಂದ ಭೂಮಿಗೆ ಬರುವಿಕೆ, ನರಕ, ಗರ್ಭವಾಸ ಮೊದಲಾದವುಗಳ ನಿರೂಪಣವು (ಅಂದರೆ ಅವುಗಳೆಲ್ಲವೂ ದುಃಖರೂಪಗಳು ಎಂದು ಪ್ರತಿಪಾದಿಸುವಿಕೆಯು) ಮೂರನೇ ಅಧ್ಯಾಯದ ಒಂದನೇ ಪಾದದಲ್ಲಿ ಮಾಡಲ್ಪಡುತ್ತದೆ.

ವಿಶೇಷಾಂಶ : ವೈರಾಗ್ಯವಿಲ್ಲದೆ ದೃಢವಾದ ಭಕ್ತಿಯು ಹುಟ್ಟದೆ ಇರುವುದರಿಂದಲೂ ಭಕ್ತಿ ಹೊರತು ಉಪಾಸನೆಯು ಕೂಡದೆ ಇರುವುದರಿಂದಲೂ ಸಾಧನಗಳಲ್ಲಿ ವೈರಾಗ್ಯವೇ ಆದಿಯಲ್ಲಿ ಅಪೇಕ್ಷಿತವಾಗಿದೆ. ಅದು ಪುರುಷ ಪ್ರಯತ್ನಕ್ಕೆ ವಿಷಯವಲ್ಲ, ಆದುದರಿಂದ ಅದಕ್ಕೆ ಸಾಧನವಾದ ಗಮನ ಆಗಮನ ಸ್ವರ್ಗ ನರಕ ಗರ್ಭವಾಸಾದಿಗಳ ಸ್ವರೂಪವನ್ನು ಒಂದನೇ ಪಾದದಲ್ಲಿ ನಿರೂಪಿಸುತ್ತಾರೆ. ಆಗ ಗತ್ಯಾದಿಗಳು ದುಃಖಸ್ವರೂಪಗಳೆಂದು ಪುನಃ ಪುನಃ ವಿಚಾರಮಾಡತಕ್ಕ ಅಧಿಕಾರಿಗೆ ಸ್ವರ್ಗಾದಿಗಳಲ್ಲಿಯೂ ಅನಿತ್ಯತ್ವ ಜ್ಞಾನದಿಂದ ರಾಗವು ವಿಚ್ಛಿನ್ನವಾಗುವುದು. ॥ ೧ ॥

ಪೀಠಿಕೆ : ಈ ಅಧಿಕರಣದಲ್ಲಿ ಭಗವತ್ಪ್ರಾಪ್ತಿಗೆ ಸಾಧನವಾದ ವೈರಾಗ್ಯಕ್ಕಾಗಿ ಜೀವನಿಗೆ ಭೂತಗಳಿಂದ ಅವಿಯೋಗವನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ (೧) ಭೂತಬಂಧೋ ಹಿ ಬಂಧಃ । (೨) ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಂ । ಇತಿ (ಚ) ವಾರಾಹೇ ॥ ೨ ॥**

ಭಾಷ್ಯಾರ್ಥ : (೧) ಯಾವ ಬಂಧನಿವೃತ್ತಿಗಾಗಿ ವೈರಾಗ್ಯಾದಿ ಸಾಧನಗಳು

ಅಂಗೀಕೃತಗಳಾಗಿವೆಯೋ ಅಂತಹ ಬಂಧವೆಂದರೆ— ಪಂಚಭೂತಗಳಿಂದ ಸಂಬಂಧವೇ— (ಅಂತಹ ಬಂಧನಿವೃತ್ತಿಯೇ ಮುಕ್ತಿಯು) (೨) ಯಾವುದು ಸಂಸಾರಾಖ್ಯ ಬಂಧವೋ ಅದು ಭೂತಬಂಧವೇ. ಯಾವುದು ಬಂಧನಿವೃತ್ತ್ಯಾಖ್ಯವಾದ ಮುಕ್ತಿಯೋ, ಅದು ಪಂಚಭೂತಗಳಿಂದ ಆತ್ಯಂತಿಕ ವಿಮೋಚನವೇ. (ಬೇರೆಯಲ್ಲ) ಎಂದು ವಾರಾಹಪುರಾಣದಲ್ಲಿಯೂ ಹೇಳಿದೆ. ॥ ೨ ॥

**ಭಾಷ್ಯ ॥ (೧) ತಚ್ಚ ಮರಣೇ ಭವತಿ । (೨) ಭೂತಾನಾಂ ವಿನಿವೃತ್ತಿಸ್ತು ಮರಣಂ ಸಮುದಾಹೃತಂ। ಭೂತಾನಾಂ ಸಂಪ್ರಯೋಗಶ್ಚ ಜನಿರಿತ್ಯೇವ ಪಂಡಿತೈಃ॥ ಇತಿ(ಚ) ಭಾರತೇ ॥ (೩) ಅತಃ ಕಿಂ ಸಾಧನೈರಿತಿ ॥ (೪) ಅತ ಆಹ ॥ ೩ ॥**

ಭಾಷ್ಯಾರ್ಥ : (೧) ಆ ಭೂತವಿಮೋಚನವಾದರೂ ದೇಹತ್ಯಾಗರೂಪ ಮರಣವಾಗುವಾಗ (ತನ್ನಿಮಿತ್ತವಾಗಿ) ಆಗುತ್ತದೆ. (೨) ಪಂಚಭೂತಗಳ ಆತ್ಯಂತಿಕನಿವೃತ್ತಿಯು ಮರಣವೆಂದೂ ಪಂಚಭೂತಗಳ ಸಂಪರ್ಕವೇ ಉತ್ಪತ್ತಿಯು ಎಂದೂ (ಪಂಡಿತರಿಂದ) ಹೇಳಲ್ಪಡುತ್ತದೆ, ಎಂದು ಭಾರತದಲ್ಲಿ ಹೇಳಿದೆ. (೩.) (ಬಂಧನಿವೃತ್ತಿಗಾಗಿ ಸಾಧನಗಳನ್ನು ಅನುಷ್ಠಾನಮಾಡಬೇಕು. ಬಂಧನಿವೃತ್ತಿಯು ಮರಣವೇ. ಅಂದರೆ ಮರಣಕಾಲದಲ್ಲಿಯೇ ಆಗುತ್ತದೆ. ಮರಣವೇ ಮೋಕ್ಷವು. ಅದು ನಿಯತವೇ ಆದುದರಿಂದ ಅದಕ್ಕೆ ಸಾಧನಾಪೇಕ್ಷೆಯು ಇಲ್ಲ) ಆದಕಾರಣ ವೈರಾಗ್ಯಾದಿ ಸಾಧನಗಳಿಂದ ಏನು ಪ್ರಯೋಜನವು? (ಅವುಗಳನ್ನು ಅನುಷ್ಠಾನ ಮಾಡಬೇಕಾಗಿಲ್ಲ) (೪) ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ. ॥ ೩ ॥

## ಸೂತ್ರ ॥ ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ ಓಂ ॥ ೧ ॥

ಸೂತ್ರಾರ್ಥ: ಜೀವನಿಗೆ ಶರೀರಾಂತರಪ್ರಾಪ್ತಿಗಾಗಿ ಪೂರ್ವಶರೀರಪರಿತ್ಯಾಗಕಾಲದಲ್ಲಿ ಪೃಥಿವ್ಯಾದಿ ಭೂತಗಳಿಂದ ಯುಕ್ತನಾಗಿಯೇ ಜೀವನು ಪೂರ್ವಶರೀರವನ್ನು ಬಿಟ್ಟು ಲೋಕಾಂತರವನ್ನು ಕುರಿತು ಹೋಗುತ್ತಾನೆ. ವೇತ್ಥ ಯಥಾ ಎನ್ನುವ ಪ್ರಶ್ನೆಯು. ಇತಿ ತು ಪಂಚಮ್ಯಾ ಎನ್ನುವ ಪರಿಹಾರವಾಕ್ಯವೂ ಇವುಗಳಿಂದ ತಿಳಿದುಬರುತ್ತದೆ.

**ಭಾಷ್ಯ ॥ (೧) ಶರೀರಾಂತರಪ್ರತಿಪತ್ತೌ ಭೂತಸಂಪರಿಷ್ವಕ್ತ ಏವ ಗಚ್ಛತಿ ॥ (೨) [೧]ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ ॥ (೩) [೨]ಇತಿ**

೧ ಶ್ವೇತುಕೇತುವು ಎನ್ನುವ ಋಷಿಯು ತಂದೆಯಾದ ಉದ್ದಾಲಕರ ಸಮೀಪದಲ್ಲಿ ವಿದ್ಯೆಗಳನ್ನು ಕಲಿತು ಪಾಂಚಾಲದೇಶಕ್ಕೆ ಹೋದನು. ಆ ದೇಶಾಧಿಪತಿಯಾದ ಪ್ರವಾಹಣ ರಾಜನು ಪಂಡಿತನೆಂದು ತಿಳಿದಿರುವ ಈತನ ಅಹಂಕಾರ ಶಾಂತಿಗಾಗಿ ಪರೀಕ್ಷಾರ್ಥವಾಗಿ ಐದು ಪ್ರಶ್ನೆಗಳನ್ನು ಕೇಳಿದನು. ಅದರಲ್ಲಿ ಇದು ಐದನೇ ಪ್ರಶ್ನೆಯು.

೨ ಹೀಗೆ ಪ್ರಶ್ನಿಸಲ್ಪಟ್ಟ ಶ್ವೇತಕೇತುವು ನಾನು ತಿಳಿಯಲಿಲ್ಲವೆಂದು ಹೇಳಿದ ಮೇಲೆ ರಾಜನಿಂದ ತಿರಸ್ಕೃತನಾಗಿ ತಂದೆಯ ಸಮೀಪಕ್ಕೆ ಬಂದು ಕೇಳಿದನು. ಆಗ ತಂದೆಯಾದ ಉದ್ದಾಲಕರು ತಾನೂ ತಿಳಿಯದಿರುವುದರಿಂದ ರಾಜನ ಸಮೀಪಕ್ಕೆ ಬಂದು ಪ್ರಾರ್ಥಿಸೋಣ ಎಂದರು. ಐದು ಪ್ರಶ್ನೆಗಳಿಗೂ ಪರಿಹಾರಗಳನ್ನು ಪ್ರವಾಹಣ ರಾಜನು ಹೇಳಿದನು. ಇದು ಐದನೇ ಪ್ರಶ್ನೆಯ ಉತ್ತರವು.

**ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ** (ಛಾ.೫.೩.೯.) । **ಇತಿ ಪ್ರಶ್ನಪರಿಹಾರಾಭ್ಯಾಂ ॥ ೧ ॥ ಅಧಿ.೧ ॥ ೪ ॥**

**ಭಾಷ್ಯಾರ್ಥ** : (೧) ಪೂರ್ವ ಶರೀರವನ್ನು ಬಿಟ್ಟು ಲೋಕಾಂತರಕ್ಕೆ ಹೋಗತಕ್ಕ ಜೀವನು ಶರೀರಾಂತರಪ್ರಾಪ್ತಿಗಾಗಿ ಮುಕ್ತಿಪರ್ಯಂತವಾಗಿಯೂ ಪಂಚಭೂತಗಳಿಂದ ಯುಕ್ತನಾಗಿಯೇ ಹೋಗುತ್ತಾನೆ. (ಆದಕಾರಣ ಮರಣದಲ್ಲಿ ಭೂತವಿಯೋಗವೇ ಇಲ್ಲದಿರುವುದರಿಂದ ಭೂತವಿಮೋಚನರೂಪವಾದ ಮೋಕ್ಷಕ್ಕಾಗಿ ಸಾಧನಗಳು ಅತ್ಯಾವಶ್ಯಕಗಳೇ ಆಗಿವೆ.) (೨) [೧]ಎಲೋ ಶ್ವೇತುಕೇತುವೇ ಯಾವ ಕ್ರಮದಿಂದಲೂ ಯಾವ ಪ್ರಕಾರದಿಂದಲೂ ದ್ಯು ಪರ್ಜನ್ಯ ಧರಾ ಪುರುಷ ಯೋಷಾ ಎನ್ನುವ ಅಗ್ನಿ ಶಬ್ದವಾಚ್ಯಗಳಾದ ಐದು ಅಗ್ನಿಗಳ ಮಧ್ಯದಲ್ಲಿ ಯೋಷಾಖ್ಯ ಅಗ್ನಿಯಲ್ಲಿ ರೇತೋ ರೂಪವಾದ ಐದನೇ ಆಹುತಿಯು ಹುತವಾಗುತ್ತಿರಲು ಜಲ ಮೊದಲಾದ ಪಂಚಭೂತಗಳಿಂದ ಯುಕ್ತನಾದ ಜೀವನು ದೇಹವನ್ನು ಹೊಂದಿ ಪುರುಷನಾಮವುಳ್ಳವನು ಆಗುತ್ತಾನೋ ಆ ಕ್ರಮವನ್ನು ಆ ಪ್ರಕಾರವನ್ನು ತಿಳಿದಿರುತ್ತೀಯೋ ಏನು? ಎಂದು ಪ್ರಶ್ನೆಯು. (೩.)ಈ ಪ್ರಕಾರವಾಗಿ ಐದನೇ ಯೋಷಾಖ್ಯ ಅಗ್ನಿಯಲ್ಲಿ ರೇತೋರೂಪವಾದ ಆಹುತಿಯು ಹುತವಾಗುತ್ತಿರಲು ಮರಣಾನಂತರದಲ್ಲಿ ಜೀವನಿಂದ ಕೂಡಿ ಹೋಗಿರುವ ಪುನಃ ಒಟ್ಟು ಬಂದಿರುವ ಭೂತತ್ರಯಾತ್ಮಕಗಳಾದ ಜಲಗಳು ಪುರುಷಶಬ್ದವಾಚ್ಯಗಳಾಗುತ್ತವೆ. ಅಂದರೆ ಭೂತತ್ರಯಗಳಿಂದ ಯುಕ್ತನಾದ ಜೀವನು ದೇಹವನ್ನು ಹೊಂದಿ ಪುರುಷನಾಮವುಳ್ಳವನು ಆಗುತ್ತಾನೆ. (ಹೀಗೆ ಪ್ರವಾಹಣ ರಾಜನ) ಪರಿಹಾರವಾಕ್ಯದಿಂದ (ಜೀವನು ಭೂತಗಳಿಂದ ಯುಕ್ತನಾಗಿಯೇ ಹೋಗುತ್ತಾನೆಂದು ತಿಳಿಯುತ್ತದೆ.) ॥ ೧ ॥ ೪ ॥

## [೧]ಅಧಿಕರಣ ಸಾರಾಂಶ

ಜಿಜ್ಞಾಸಾ ಸೂತ್ರದಲ್ಲಿದ್ದ ಅಥಾದಿಪದಗಳಿಂದುಕ್ತವಾದ ವೈರಾಗ್ಯ ಮೊದಲಾದ ಮೋಕ್ಷಸಾಧನಗಳನ್ನು ಅನುಷ್ಠಾನ ಮಾಡಬಾರದೋ, ಅನುಷ್ಠಾನ ಮಾಡಬೇಕೋ ಅದಕ್ಕಾಗಿ ಜೀವನಿಗೆ ನಿಶ್ಶೇಷವಾಗಿ ಭೂತವಿಯೋಗವು ಇದೆಯೋ ಇಲ್ಲವೋ, ಮತ್ತು ಅದಕ್ಕಾಗಿ ಭೂತಗಳಿಂದ ವಿಯೋಗವು ಬಾರದಿರುವುದಕ್ಕಾಗಿ ಪ್ರಮಾಣ ಪ್ರಯೋಜನಗಳು ಇಲ್ಲವೋ ಇವೆಯೋ ಎಂದು ಸಂದೇಹವು. ೧ ಪ್ರಮಾಣ ಪ್ರಯೋಜನಗಳು ಇಲ್ಲವಾದರೆ ನಿಶ್ಶೇಷ ಭೂತವಿಯೋಗವೇ ಮೋಕ್ಷವಾದುದರಿಂದ ಸ್ವಾಭಾವಿಕ ಮರಣದಿಂದಲೇ ಅನಾಯಾಸದಿಂದ ಮೋಕ್ಷವು ಸಿದ್ಧಿಸುವುದರಿಂದ ಸಾಧನಗಳನ್ನು ಅನುಷ್ಠಾನ ಮಾಡಬೇಕಾಗಿಲ್ಲ. ೨ ಪ್ರಮಾಣ ಪ್ರಯೋಜನಗಳು ಇದ್ದರೆ ಭೂತವಿಯೋಗವೇ ಮುಕ್ತಿಯಾದಾಗ್ಯೂ ಮರಣಕಾಲದಲ್ಲಿ ಭೂತವಿಯೋಗವು ಇಲ್ಲದಿರುವುದರಿಂದ ಮೋಕ್ಷಕ್ಕಾಗಿ ಸಾಧನಗಳನ್ನು ಅನುಷ್ಠಾನ ಮಾಡಲೇಬೇಕು. ಏವಂಚ ಸಾಧನಗಳು ಇಲ್ಲದಿದ್ದರೂ ಭೂತಾನಾಂ ವಿನಿವೃತ್ತಿಸ್ತು ಎನ್ನುವ ಸ್ಮೃತಿಯಿಂದ ಸರ್ವಭೂತ ವಿನಿವೃತ್ತಿ ರೂಪವಾದ ಮರಣದಿಂದಲೇ ಮುಕ್ತಿಸ್ತೇಭ್ಯೋ

೧. ೧-೨ ನೇ ಅಧ್ಯಾಯಗಳಲ್ಲಿ ಅದ್ವೈತ ವಿಶಿಷ್ಟಾದ್ವೈತ ರೀತ್ಯಾ ಪೂರ್ವಪಕ್ಷ ಸಿದ್ಧಾಂತಗಳನ್ನು ಅವುಗಳ ನಿರಾಕರಣಗಳನ್ನು ಅತಿ ಸಂಕ್ಷೇಪದಿಂದ ಬರದಿದ್ದರೂ ಇನ್ನು ಮುಂದಕ್ಕೆ ಗ್ರಂಥಗೌರವ ಭೀತಿಯಿಂದ ಅವುಗಳನ್ನು ಬರಿಯುವುದಿಲ್ಲ.

**ವಿಮೋಚನಂ** ಎನ್ನುವ ಸ್ಮೃತಿಯಿಂದ ಭೂತವಿಮೋಚನರೂಪವಾದ ಮೋಕ್ಷವು ಸಿದ್ಧಿಸುವುದರಿಂದ ಸಾಧನಗಳು ಅನುಷ್ಠೇಯಗಳಲ್ಲ. ಭೂತಗಳು ಮೃತಜೀವನಿಂದ ಕೂಡಿಕೊಂಡು ಹೋಗುತ್ತವೆ ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲ. ಎಂದು ಪೂರ್ವಪಕ್ಷ ಬಂದರೆ— **ವೇತ್ಥ ಯಥಾ ಪಂಚಮ್ಯಾಂ** ಇತ್ಯಾದಿ ಪ್ರಶ್ನೆ ಉತ್ತರಗಳಲ್ಲಿ ಅಬಾದಿಗಳಿಂದ ಯುಕ್ತನಾದ ಜೀವನನ್ನು ಹೇಳಿದುದರಿಂದ, **ಭೂತಯುಕ್ತಃ ಪರಲೋಕಂ ಇಮಂ ಲೋಕಂ ಚ ಗಚ್ಛತಿ** ಇತ್ಯಾದಿ ಪ್ರಮಾಣಬಲದಿಂದ ಶರೀರಾಂತರ ಸಂಪಾದನರೂಪ ಪ್ರಯೋಜನವಿದ್ದುದರಿಂದ ಪಂಚಭೂತಗಳಿಗೆ ಜೀವನಿಂದ ಕೂಡಿಕೊಂಡು ಗಮನಾಗಮನಗಳು ಇದ್ದುದರಿಂದ ಮೃತಿಯಲ್ಲಿ ನಿಶ್ಶೇಷ ಭೂತವಿಯೋಗವೇ ಇಲ್ಲದಿರುವ ಪ್ರಯುಕ್ತ **ಮೃತಿಕಾಲೇ ಜಹತ್ಯೇನಂ** ಎನ್ನುವ ಸ್ಮೃತಿಯಿಂದ ಭಾಗಮಾತ್ರದಿಂದ ಭೂತಗಳು ಬಿಟ್ಟುಹೋಗುವುದರಿಂದ ನಿಶ್ಶೇಷ ಭೂತವಿಯೋಗರೂಪ ಮೋಕ್ಷಕ್ಕಾಗಿ ಸಾಧನಗಳನ್ನು ಅನುಷ್ಠಾನ ಮಾಡಲೇಬೇಕು. ॥ ಅಧಿ. ೧ ॥

**ತದಂತರಾಧಿಕರಣವು ಸಮಾಪ್ತವಾಯಿತು.**

## ೨ ತ್ರ್ಯಾತ್ಮಕತ್ವಾಧಿಕರಣವು

**ಪೀಠಿಕೆ :** ಈ ಅಧಿಕರಣದಲ್ಲಿ ಸಮಸ್ತ ಭೂತಪರಿಷ್ವಕ್ತನಾದ ಜೀವನಿಗೆ ಗತಿಯನ್ನು ಸಮರ್ಥಿಸುತ್ತಾರೆ. ಜಲಗಳೇ ಜೀವನನ್ನು ಆಲಿಂಗಿಸಿಕೊಂಡು ಹೋಗುತ್ತವೆ. ಸರ್ವ ಭೂತಗಳಲ್ಲ **ಆಪಃ ಪುರುಷ ವಚಸೋ ಭವಂತಿ** ಎಂದು ಪ್ರಶ್ನೆ—ಉತ್ತರವಾಕ್ಯಗಳಲ್ಲಿ ಜಲಗಳಿಗೇನೇ ಗತಿಯು ಶ್ರುತವಾಗಿದೆ. ಆದಕಾರಣ ಮೃತನಾದವನಿಗೆ ಸಮಸ್ತ ಭೂತಗಳ ಸಂಪರ್ಕವು ಇಲ್ಲದಿರುವುದರಿಂದಲೂ ಒಂದು ಭೂತಕ್ಕೆ ಶರೀರಾರಂಭಕತ್ವವು ಇಲ್ಲದಿರುವುದರಿಂದಲೂ ಮರಣವಾದೊಡನೆಯೇ ಮೋಕ್ಷವು ಸಿದ್ಧಿಸುತ್ತದೆ. ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ ॥ ೨ ॥

**ಭಾಷ್ಯ ॥ ಅಪ್ಶಬ್ದಸ್ತು ತ್ರ್ಯಾತ್ಮಕತ್ವಾದ್ಯುಜ್ಯತೇ । ಭೂಯಸ್ತ್ವಾಚ್ಚಾಪಾಂ ॥ ೧ ॥**

ಭಾಷ್ಯಾರ್ಥ : (ಯದ್ಯಪಿ ಜೀವನು ಸರ್ವಭೂತಗಳಿಂದ ಯುಕ್ತನಾಗಿಯೇ ಹೋಗುತ್ತಾನೆ. ಜಲಗಳಿಂದ ಮಾತ್ರ ಯುಕ್ತನಾಗಿ ಹೋಗುವುದಲ್ಲ. ಆದಾಗ್ಯೂ ಆಪಃ ಪುರುಷವಚಸಃ ಎಂದು ವಿಶಿಷ್ಟ ಅಪ್ ಶಬ್ದವಾದರೂ ಜಲಕ್ಕೆ ಪೃಥಿವ್ಯಪ್ತೇಜೋರೂಪತ್ವವಿದ್ದುದರಿಂದ ಯುಕ್ತವಾಗುತ್ತದೆ. (ಆದಕಾರಣ ಆಪಃ ಎಂದು ಗ್ರಹಣ ಮಾಡಿದರೂ ಇತರ ಭೂತಗಳಿಗೂ ಪ್ರಾಪ್ತಿಯು ಇದ್ದೇ ಇದೆ. ) (ಜೀವನಿಗೆ ಮರಣಕಾಲದಲ್ಲಿ ಭೂತತ್ರಯಸಂಬಂಧವಿರುವುದಾದರೆ ಪ್ರಶ್ನೋತ್ತರ ವಾಕ್ಯಗಳಲ್ಲಿ ಆಪಃ ಎನ್ನುವ ಶಬ್ದವು ಹೇಗೆ ಕೂಡುತ್ತದೆ ಎಂದರೆ) ಸರ್ವಶರೀರಗಳಲ್ಲಿ ಕೂಡಿ ಪೃಥಿವೀ ತೇಜಸ್ಸುಗಳಿಂದಲೂ ಜಲಗಳಿಗೆ ಆಧಿಕ್ಯವಿದ್ದುದರಿಂದ ಆಪಃ ಎಂದು ವಿಶಿಷ್ಟ ತೆಗೆದುಕೊಂಡದ್ದು ಯುಕ್ತವು. ॥ ೧ ॥

**ಭಾಷ್ಯ ॥ ತಾಪಾಪನೋದೋ ಭೂಯಸ್ತ್ವಮಂಭಸೋ ವೃತ್ತಯಸ್ತ್ವಿಮಾಃ ॥ ಇತಿ (ಚ) ಭಾಗವತೇ (ಸ್ಕ.೩.ಅ.೨೬.ಶ್ಲೋ.೪೩.) ॥ ೨ ॥ ಅಧಿ.೨ ॥ ೨ ॥**

**ಭಾಷ್ಯಾರ್ಥ :** **ಕ್ಲೇದನಂ ಪಿಂಡನಂ ತೃಪ್ತಿಃ ಪ್ರಾಣನಾಪ್ಯಾಯನೋಂದನಂ। ತಾಪಾಪನೋದಃ ಭೂಯಸ್ತ್ವಂ** — ಕ್ಲೇದನಂ=ಆರ್ದ್ರೀಕರಣವು, ಪಿಂಡನಂ=ಪಿಂಡೀಕರಣ, ತೃಪ್ತಿಃ=ತೃಪ್ತಿಪಡಿಸುವಿಕೆ, ಪ್ರಾಣನ=ಚೇಷ್ಟಾಕಾರಣತ್ವ, ಆಪ್ಯಾಯನ=ಸುಖಕರತ್ವ, ಉಂದನಂ=ಬಿಂದುಭಾವವು, ತಾಪಾಪನೋದಃ =ತಾಪ ನಿವರ್ತಕತ್ವವು, ಭೂಯಸ್ತ್ವಂ=ಇತರ ಭೂತಗಳಿಂದ ಕಾರ್ಯಭೂತದೇಹಗಳಲ್ಲಿ ಭಾಗಾಧಿಕ್ಯವು, ಈ ಎಂಟು ಸ್ವರೂಪರೂಪಗಳಾದ ಧರ್ಮಗಳು ಎಂದು ಭಾಗವತದಲ್ಲಿ ಹೇಳಿದೆ.

**ವಿಶೇಷಾಂಶ :** (೧) ಪಾರ್ಥಿವಶರೀರಗಳಲ್ಲಿ ಪೃಥಿವಿಯದ್ದು ನಾಲ್ಕು ಭಾಗಗಳು. ಜಲದ್ದು ಮೂರು ಭಾಗಗಳು. ತೇಜಸ್ಸಿನದ್ದು ಒಂದು ಭಾಗವು. (೨) ಸ್ವರ್ಗಸ್ಥ ತೈಜಸ ಶರೀರಗಳಲ್ಲಿ ತೇಜಸ್ಸಿನದ್ದು ನಾಲ್ಕು ಭಾಗಗಳು. ಜಲದ್ದು ಮೂರು ಭಾಗಗಳು. ಪೃಥಿವಿಯದ್ದು ಒಂದು ಭಾಗವು. (೩) ಆಪ್ಯಶರೀರದಲ್ಲಿ ಜಲಗಳದ್ದು ನಾಲ್ಕು ಭಾಗಗಳು, ಪೃಥಿವಿಯದ್ದು ಮೂರು ಭಾಗಗಳು. ತೇಜಸ್ಸಿನದ್ದು ಒಂದು ಭಾಗವು. ತಥಾಚ ಜಲಗಳದ್ದು ಹತ್ತು ಭಾಗಗಳು. ಪೃಥಿವಿಯದ್ದು ಎಂಟು ಭಾಗಗಳು. ತೇಜಸ್ಸಿನದ್ದು ಆರು ಭಾಗಗಳು. ಹೀಗೆ ಜಲಗಳಿಗೆ ಭೂಯಸ್ತ್ವವಿದೆ. ॥ ೨ ॥

## ಅಧಿಕರಣ ಸಾರಾಂಶ

ಮೃತನಾದ ಜೀವನ ಒಟ್ಟಿಗೆ ಜಲಗಳು ಮಾತ್ರ ಹೋಗುತ್ತವೋ ಸರ್ವಭೂತಗಳೂ ಹೋಗುತ್ತವೋ ಅದಕ್ಕಾಗಿ ಪ್ರಶ್ನೆ ಪ್ರತಿವಚನಗಳಲ್ಲಿದ್ದ ಅಪ್ ಶಬ್ದವು ಏಕಭೂತಪರವೋ ಅನೇಕ ಭೂತಪರವೋ, ಅನೇಕ ಭೂತಪರವೆನ್ನುವ ವಿಷಯದಲ್ಲಿ ಹೇತುವಿಲ್ಲದಿರುವುದರಿಂದ ಅಪ್ ಶಬ್ದವು ಅಯುಕ್ತವೋ ಯುಕ್ತವೋ ಎಂದು ಸಂದೇಹವು. ಆಪಃ ಪುರುಷವಚನಃ ಎಂದು ಪ್ರಶ್ನಾದಿಗಳಲ್ಲಿ ಅಪ್ ಶಬ್ದದಿಂದ ಜಲಗಳಿಗೇನೇ ಗತಿಯು ಶ್ರುತವಾದ ಪ್ರಯುಕ್ತ ಅಪ್ ಶಬ್ದವು ಅನೇಕ ಭೂತಪರವೆನ್ನುವ ವಿಷಯದಲ್ಲಿ ಹೇತುವು ಇಲ್ಲದಿರುವುದರಿಂದ ಭೂತಾನಿ ಪುರುಷವಚಾಂಸಿ ಭವಂತಿ ಎಂದು ನಿರ್ದೇಶವು ಬರಬೇಕಾಗಿರುವುದರಿಂದಲೂ ವಿಶಿಷ್ಟ ಅಪ್ ಶಬ್ದವು ಕೂಡದೆ ಇರುವುದರಿಂದ ಜಲಗಳು ಮಾತ್ರ ಹೋಗುತ್ತವೆ. ಇತರ ಭೂತಗಳು ಹೋಗುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ— ಮಿಶ್ರಾಣಿ ಹಿ ಭೂತಾನಿ ಇತ್ಯಾದಿ ಶ್ರುತಿಗಳಿಂದ ಭೂತಗಳು ಮಿಶ್ರಗಳಾಗಿರುವುದರಿಂದ ಶ್ರುತಿಯಲ್ಲಿ ತ್ರ್ಯಾತ್ಮಕಜಲವಾಚಕ ಅಪ್ ಶಬ್ದದಿಂದಲೇ ಭೂತಾನಿ ಪುರುಷವಚಾಂಸಿ ಎನ್ನುವ ಅರ್ಥವು ಸಿಗುವುದರಿಂದ ಸರ್ವಭೂತಗಳು ಮಿಶ್ರಗಳಾದಾಗ್ಯೂ ಪಾರ್ಥಿವಾದಿ ಸರ್ವ ದೇಹಗಳಲ್ಲಿ ಕೂಡಿ ಪೃಥಿವೀ ತೇಜಸ್ಸುಗಳಿಗಿಂತ ಜಲಭಾಗವೇ ಹೆಚ್ಚುಇದ್ದುದರಿಂದ ವಿಶಿಷ್ಟ ಅಪ್ ಶಬ್ದವು ಕೂಡುವುದರಿಂದ ಸರ್ವಭೂತಗಳೂ ಜೀವರ ಒಟ್ಟಿಗೆ ಹೋಗುತ್ತವೆ. ॥ ಅಧಿ.೨ ॥

ತ್ರ್ಯಾತ್ಮಕತ್ವಾಧಿಕರಣವು ಸಮಾಪ್ತವಾಯಿತು.

# ೩ ಪ್ರಾಣಗತ್ಯಧಿಕರಣವು

ಪೀಠಿಕೆ: ಈ ಅಧಿಕರಣದಲ್ಲಿ ಯುಕ್ತ್ಯಂತರದಿಂದ ಜೀವನಿಗೆ ಭೂತಗಳಿಂದ ಕೂಡಿಕೊಂಡು ಗತಿಯನ್ನು ಸಮರ್ಥಿಸುತ್ತಾರೆ. ಭೂತಗಳು ಜೀವರಿಂದ ಕೂಡಿಕೊಂಡು ಹೋಗುತ್ತವೆ ಎನ್ನುವ ವಿಷಯದಲ್ಲಿ ವಿಶೇಷ ಪ್ರಮಾಣವು ಇಲ್ಲದಿರುವುದರಿಂದ ಆಪಃ ಪುರುಷವಚಸೋ ಭವಂತಿ ಎನ್ನುವ ಪ್ರಶ್ನಪ್ರತ್ಯುತ್ತರ ವಾಕ್ಯಗಳಲ್ಲಿಯೂ ಹೇಳದಿರುವುದರಿಂದ ಜಲಗಳು ಒಟ್ಟಿಗೆ ಹೋಗುವಾಗ ಅವುಗಳು ಭೂತತ್ರಯಾತ್ಮಕಗಳಾಗಿರುವುದರಿಂದ ಭೂತಗಳಿಗೂ ಸಹಗಮನವು ಸಿದ್ಧಿಸುತ್ತದೆ, ಎನ್ನುವ ಆರ್ಥಿಕ ಕಲ್ಪನೆಯು ವಿಶೇಷ ಪ್ರಮಾಣವಿಲ್ಲದೆ ಕೂಡದೆ ಇರುವುದರಿಂದ ಭೂತಗಳು ಜೀವರಿಂದ ಕೂಡಿಕೊಂಡು ಹೋಗುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರಾಣಗತೇಶ್ಚ ಓಂ ॥೩ ॥

ಸೂತ್ರಾರ್ಥ: ಇಂದ್ರಿಯಗಳಿಗೆ ಜೀವರಿಂಡ ಕೂಡಿಕೊಂಡು ಗಮನವಿದ್ದುದರಿಂದ. (ಭೂತಗಳೂ ಕೂಡ ಜೀವರಿಂದ ಕೂಡಿಕೊಂಡೇ ಹೋಗುತ್ತವೆ.)

**ಭಾಷ್ಯ ॥ ಯತ್ರ ವಾ ವ ಭೂತಾನಿ ತತ್ರ ಕರಣಾನಿ ನಿತ್ಯಾನಿ ಹ ವಾ ಏತಾನಿ ಭೂತಾನಿ (ಚ) ಕರಣಾನಿ ಚ ನ ಚೈತಾನಿ ಕದಾಚಿದ್ವಿಯುಜ್ಯಂತೇ ನ ಚ ವಿಲೀಯಂತೇ ॥ ಇತಿ ಭಾಲ್ಲವೇಯಶ್ರುತೇಃ ಪ್ರಾಣಗತೇರ್ಭೂತಾನ್ಯಪಿ ಸಹ ಗಚ್ಛಂತಿ (ಸಂತಿ) ಇತಿ ಸಿದ್ಧಂ ॥ ೩ ॥ ಅಧಿ. ೩ ॥ ೧ ॥**

ಭಾಷ್ಯಾರ್ಥ: ಎಲ್ಲಿ ಎಲ್ಲ ಪೃಥಿವ್ಯಾದಿ ಭೂತಗಳು ಇರುತ್ತವೋ, ಅಲ್ಲಿ ಚಕ್ಷುರಾದಿ ಇಂದ್ರಿಯಗಳೂ ಇರುತ್ತವೆ. (ಅಂದರೆ— ಭೂತಗಳು ಕರಣವ್ಯಾಪಕಗಳು.) ಇವುಗಳು ನಿತ್ಯಗಳೂ ಅವಿಯುಕ್ತಗಳೂ ಆಗಿವೆ. ಈ ಪಂಚಭೂತಗಳೂ ಇಂದ್ರಿಯಗಳೂ ಯಾವಾಗಲೂ ಮೋಕ್ಷಪರ್ಯಂತ ವಾಗಿ ವಿಯುಕ್ತಗಳಾಗುವುದಿಲ್ಲ ನಾಶಗಳಾಗುವುದಿಲ್ಲ—ಎನ್ನುವ ಭಾಲ್ಲವೇಯಶ್ರುತಿಯಿಂದ ಇಂದ್ರಿಯಗಳಿಗೆ ಭೂತಗಳಿಂದ ವ್ಯಾಪ್ತಿಯಿದ್ದುದರಿಂದ ಇಂದ್ರಿಯಗಳಿಗೆ ಜೀವರಿಂದ ಕೂಡಿಕೊಂಡು ಗಮನವಿದ್ದುದರಿಂದ ಭೂತಗಳೂ ಜೀವರಿಂದ ಕೂಡಿಕೊಂಡೇ ಇರುತ್ತವೆ ಎಂದು ಸಿದ್ಧವಾಯಿತು. ತಥಾಚ ಭೂತಾನಿ ಜೀವೇನ ಸಹ ಗಚ್ಛಂತಿ ತತ್ಸಹಗಂತೃ ಪ್ರಾಣಾವಿನಾಭೂತತ್ವಾತ್ ಅಂದರೆ, ಭೂತಗಳು ಜೀವನಿಂದ ಕೂಡಿ ಹೋಗುತ್ತವೆ. ಜೀವನೊಟ್ಟಿಗೆ ಹೋಗುವ ಪ್ರಾಣಗಳಿಂದ ವ್ಯಾಪಕಗಳಾಗಿರುವುದ ರಿಂದ ಎನ್ನುವ ಅನುಮಾನವೇ ಇಲ್ಲಿ ವಿಶೇಷಪ್ರಮಾಣವೆಂದು ಉಕ್ತವಾಯಿತು.॥ ೩ ॥ ೧ ॥

## ಅಧಿಕರಣ ಸಾರಾಂಶ

ವೈರಾಗ್ಯಾದಿ ಸಾಧನಗಳನ್ನು ಅವಶ್ಯವಾಗಿ ಮಾಡಬೇಕೋ ಬೇಡವೋ, ಅದಕ್ಕಾಗಿ ಪ್ರಕೃತ ಭೂತಗಳು ಜೀವರಿಂದ ಕೂಡಿಕೊಂಡು ಹೋಗುವುದಿಲ್ಲವೋ ಹೋಗುತ್ತವೋ, ಅದಕ್ಕಾಗಿ ವಿಶಿಷ್ಟ

ಪ್ರಮಾಣವು ಇಲ್ಲವೋ ಇದೆಯೋ, ಎಂದು ಸಂದೇಹವು. ತ್ರ್ಯಾತ್ಮಕ ಜಲಗಳಿಗೆ ಗಮನದಿಂದ ಅರ್ಥಾತ್ ಭೂತಗಳಿಗೆ ಗಮನವು ಎನ್ನುವ ನಿರ್ಣಯವು ವಿಶೇಷಪ್ರಮಾಣಾಧೀನವಾದುದರಿಂದ ವಿಶೇಷಪ್ರಮಾಣವು ತೋರದಿರುವುದರಿಂದ ಭೂತಗಳು ಒಟ್ಟಿಗೆ ಹೋಗುವುದಿಲ್ಲ. ಆದಕಾರಣ ಸಾಧನವು ಅವಶ್ಯಕವಲ್ಲ. ಎಂದರೆ— **ಭೂತಾನಿ ಜೀವೇನ ಸಹ ಗಚ್ಛಂತ್ಯೇವ ತತ್ಸಹಗಂತೃ ಪ್ರಾಣಾವಿನಾಭೂತತ್ವಾತ್** (ಜೀವನೊಟ್ಟಿಗೆ ಹೋಗುವ ಪ್ರಾಣಗಳಿಂದ ವ್ಯಾಪಕಗಳಾಗಿರುವುದರಿಂದ) **ಯದ್ಯತ್ಸಹಗಂತ್ರವಿನಾಭೂತಂ ತತ್ತತ್ಸಹಗಂತೃ ಯಥಾ ರಾಜಸಹಗಂತೃಮಾತ್ಯಾವಿನಾಭೂತಂ ವಸ್ತು ರಾಜಸಹಗಂತೃ** ಎನ್ನುವ ಅನುಮಾನರೂಪವಾದ ವಿಶೇಷಪ್ರಮಾಣವಿದ್ದುದರಿಂದ ಭೂತಗಳು ಜೀವರಿಂದ ಕೂಡಿಕೊಂಡೇ ಹೋಗತಕ್ಕವುಗಳು. **ಕರಣೈರ್ವಾವ ನ ವಿಯುಜ್ಯತೇ , ಯತ್ರ ವಾ ವ ಭೂತಾನಿ ತತ್ರ ಕರಣಾನಿ ನೈತಾನಿ ಕದಾಚಿದ್ವಿಯುಜ್ಯಂತೇ** ಎನ್ನುವ ಉಕ್ತಿಗಳಿಂದ ಇಂದ್ರಿಯಗಳಿಗೆ ಭೂತಗಳಿಂದ ವ್ಯಾಪ್ತಿಯು ಇದ್ದುದರಿಂದ ಇಂದ್ರಿಯಗಮನದಿಂದ ಭೂತಗಮನವು ಸಿದ್ಧಿಸುವ ಪ್ರಯುಕ್ತ ಸಾಧನವು ಆವಶ್ಯಕವು. ॥ ಅಧಿ. ೩ ॥

**ಪ್ರಾಣಗತ್ಯಧಿಕರಣವು ಸಮಾಪ್ತವಾಯಿತು.**

# ೪ ಅಗ್ನ್ಯಾದ್ಯಧಿಕರಣವು

**ಪೀಠಿಕೆ :** ಇಂದ್ರಿಯಗಳಿಗೆ ಜೀವರಿಂದ ಕೂಡಿಕೊಂಡು ಗತಿಯು ಸಮರ್ಥಿಸಲ್ಪಡುತ್ತದೆ—

## ಸೂತ್ರ ॥ ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ ॥ ೪ ॥

**ಭಾಷ್ಯ ॥ ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಃ** (ಬೃ.೫.೨.೧೩.)। **ಇತ್ಯಾದಿಶ್ರುತೇರ್ನ ಪ್ರಾಣಾನಾಂ ಜೀವೇನ ಸಹ ಗತಿರಿತಿಚೇನ್ನ । ಭಾಗತೋಽಗ್ನ್ಯಾದಿಪ್ರಾಪ್ತೇಃ ॥ ೧ ॥**

**ಭಾಷ್ಯಾರ್ಥ :** (ಇಂದ್ರಿಯಗಳಿಗೆ ಜೀವರಿಂದ ಕೂಡಿಕೊಂಡು ಗಮನವಿಲ್ಲ) ಯಾವಾಗ ಮರಣ ಕಾಲದಲ್ಲಿ ಸಾಯತಕ್ಕ ಜೀವನಸಂಬಂಧಿಯಾದ ವಾಗಿಂದ್ರಿಯವು ಅಗ್ನಿಯನ್ನು ಹೊಂದುತ್ತದೋ, ವಾಯುವನ್ನು ಶ್ವಾಸಾದಿರೂಪವಾದ ಜಡವಾಯುವೂ ತದಭಿಮಾನಿಯಾದ ಮುಖ್ಯಪ್ರಾಣನೂ ಕೂಡ ಹೊಂದುತ್ತಾನೋ, (ಶ್ರೋತ್ರೇಂದ್ರಿಯವು ದಿಗ್ದೇವತೆಗಳನ್ನು ಹೊಂದುತ್ತದೋ,) ಇತ್ಯಾದಿ ಶ್ರುತಿಯಿಂದ (ಯಾಜ್ಞವಲ್ಕ್ಯರನ್ನು ಕುರಿತು ಆರ್ತಭಾಗನ ಪ್ರಶ್ನರೂಪದಿಂದ ಮೃತಪುರುಷಸಂಬಂಧಿಗಳಾದ) ಇಂದ್ರಿಯಗಳಿಗೆ ಅಗ್ನ್ಯಾದಿಗತಿಶ್ರುತೇಃ ಅಗ್ನ್ಯಾದಿದೇವತೆಗಳನ್ನು ಕುರಿತು ಗಮನವನ್ನು ಹೇಳಿದ್ದರಿಂದ ಇಂದ್ರಿಯಗಳಿಗೆ ಜೀವನಿಂದ ಕೂಡಿಕೊಂಡು ಗಮನವಿಲ್ಲ. ಎಂದರೆ— (ತಥಾಚ ಇಂದ್ರಿಯಗಳಿಗೆ ಜೀವನಿಂದ ಕೂಡಿಕೊಂಡು ಗಮನವಿಲ್ಲವಾದರೆ ಪೃಥಿವ್ಯಾದಿಭೂತಗಳಿಗೂ ಗಮನವಿಲ್ಲದಿರುವುದರಿಂದ (ಮರಣವೇ ಮೋಕ್ಷವು ಎಂದರೆ ಹಾಗೆ ಹೇಳಕೂಡದು. ಅಂದರೆ ಈ ಶ್ರುತಿಯ ಬಲದಿಂದ

ಇಂದ್ರಿಯಗಳಿಗೆ ಜೀವರಿಂದ ಕೂಡಿಕೊಂಡು ಗತಿಯಿಲ್ಲವೆಂದು ಹೇಳಕೂಡದು) ಭಾಕ್ತತ್ವಾತ್=ಭಾಗತಃ ಪ್ರಾಪ್ತಿವಿಷಯತ್ವವಿದ್ದುದರಿಂದ ಇಂದ್ರಿಯಗಳಿಗೆ ಭಾಗದಿಂದಲೇ ಅಗ್ನ್ಯಾದಿಗಳನ್ನು ಕುರಿತು ಪ್ರಾಪ್ತಿಯಿದ್ದುದರಿಂದ, (ಭಾಗದಿಂದ ಜೀವನನ್ನು ಅನುಸರಿಸಿ ಹೋಗುವಿಕೆಯು.)

ವಿಶೇಷಾಂಶ : ಶ್ರೀಹರಿಗೂ ತತ್ವಾಭಿಮಾನಿ ದೇವತೆಗಳಿಗೂ ಒಂದಂಶದಿಂದ ಜೀವನನ್ನು ಬಿಟ್ಟು ತಮ್ಮ ತಮ್ಮ ಮೂಲರೂಪ ಪ್ರಾಪ್ತಿಯು. ಅಂಶಾಂತರದಿಂದ ಜೀವನೊಟ್ಟಿಗೆ ಹೋಗುವಿಕೆಯು. ಮ್ರಿಯಮಾಣಮಿಮಂ ಜೀವಂ ವಾಸುದೇವಾದಿದೇವತಾಃ । ತ್ಯಕ್ತ್ವಾ ಭಾಗೇನ ಗಚ್ಛಂತಿ ಭಾಗತೋಽನುವ್ರಜಂತಿ ತಂ ॥ ಎಂದು ಹೇಳಿದೆ. ॥ ೧ ॥

**ಭಾಷ್ಯ ॥ ಪುರುಷಸ್ಯ ಮೃತೌ ಬ್ರಹ್ಮನ್ನಾಕ್ಷಾ ಭಾಗತ ಏವ ತು । ಅಧಿದೈವಂ ಪ್ರಾಪ್ನುವಂತಿ ಭಾಗತೋಽನುವ್ರಜಂತಿ ತಂ ॥ ಪುನಃ ಶರೀರಸಂಪ್ರಾಪ್ತೌ ತಮೇವಾನುವಿಶಂತಿ ಚ ॥ ಇತಿ ಬ್ರಾಹ್ಮೇ ॥ ೨ ॥**

ಭಾಷ್ಯಾರ್ಥ : ಜೀವನಿಗೆ ಮೃತಿಯು ಆಗುವಾಗ, ಜ್ಞಾನಿವೃದ್ಧನಾದ ನಾರದನೇ! ಚಕ್ಷುರಾದಿ ಇಂದ್ರಿಯಗಳೂ ತದಭಿಮಾನಿದೇವತೆಗಳೂ ಅಗ್ನ್ಯಾದಿದೇವತೆಗಳನ್ನು ಕುರಿತು ಒಂದು ಭಾಗದಿಂದಲೇ ಹೊಂದುತ್ತಾರೆ. ಒಂದು ಅಂಶದಿಂದ ಮೃತಪುರುಷನನ್ನು ಅನುಸರಿಸಿ ಹೋಗುತ್ತಾರೆ. (ಪ್ರತಿ ಮರಣದಲ್ಲಿ ಇಂದ್ರಿಯಭಾಗವು ಹೋದರೆ ಕಾಲತಃ ಸರ್ವಭಾಗಕ್ಕೂ ಅಪಗಮವಾಗಿ ಜೀವನೊಟ್ಟಿಗೆ ಇಂದ್ರಿಯ ಭಾಗವು ಹೋಗುವುದಿಲ್ಲವೆಂದು ಆಗಬೇಕಾಗುವುದು. ತಥಾಚ ಸರ್ವಭೂತಗಳಿಗೂ ಗಮನವಿಲ್ಲ ವೆಂದು ಆಗಬೇಕಾಗುವುದು. ಎಂದರೆ) ಸ್ವರ್ಗಾದಿ ಭೋಗಾನಂತರದಲ್ಲಿ ಭೂಲೋಕವನ್ನು ಹೊಂದಿದವನಿಗೆ ಶರೀರಾಂತರಪ್ರಾಪ್ತಿಯಾಗುವಾಗ ಆ ಜೀವನನ್ನೇ ಅನುಸರಿಸಿ (ಅವನಿಂದ ಕೂಡಿಕೊಂಡು) ಶರೀರಾಂತರವನ್ನು ಪ್ರವೇಶ ಮಾಡುತ್ತಾರೆ. ಎಂದು ಬ್ರಾಹ್ಮಪುರಾಣದಲ್ಲಿ ನಾರದನನ್ನು ಕುರಿತು ಚತುರ್ಮುಖನ ವಚನವು. (ಆದಕಾರಣ ಕಾಲತಃ ಸರ್ವೇಂದ್ರಿಯಗಳಿಗೂ ನಿವೃತ್ತಿಯಾಗಬೇಕಾಗುವುದು ಎನ್ನುವ ಶಂಕಾಕ್ಕೆ ಅವಕಾಶವಿಲ್ಲ) (ಗತ್ವರ್ಭಾಗೈರಪಿ ಪುನಃ ವಿಶೇಯುರ್ಭೋಗಸಿದ್ಧಯೇ । ಭೋಗ್ಯಲೋಕಮನುಪ್ರಾಪ್ತಂ ॥ ಎಂದುಕ್ತವಾಗಿದೆ.) ॥ ೨ ॥

ಪೀಠಿಕೆ : ಭಾಗತಃ ಅಗ್ನ್ಯಾದಿಗಳನ್ನು ಕುರಿತು ಹೋಗತಕ್ಕ ಇಂದ್ರಿಯಗಳಿಂದ ಕೂಡಿಕೊಂಡು ಪಂಚಭೂತಗಳಿಗೆ ಗತಿಯು ಇದೆಯೋ ಇಲ್ಲವೋ, ೧ ಇದ್ದರೆ ಜೀವನಿಂದ ಕೂಡಿಕೊಂಡು ಗಮನವು ಇಲ್ಲ, ೨ ಗತಿಯು ಇಲ್ಲವಾದರೆ ಪ್ರಾಣಗಳಿಂದ ವ್ಯಾಪ್ತಿಯು ಹೇಗೆ ಎಂದರೆ—

**ಭಾಷ್ಯ ॥ ಬ್ರಹ್ಮಾಂಡೇ ಚ । ಮೃತಿಕಾಲೇ ಜಹತ್ಯೇನಂ ಪ್ರಾಣಾ ಭೂತಾನಿ ಪಂಚ ಚ । ಭಾಗತೋಭಾಗತಸ್ತ್ವೇನಮನುಗಚ್ಛಂತಿ ಸರ್ವಶಃ ॥ ಇತಿ ॥ ೪ ॥ ಅಧಿ. ೪ ॥ ೩ ॥**

ಭಾಷ್ಯಾರ್ಥ : ಮರಣಕಾಲದಲ್ಲಿ ಇಂದ್ರಿಯಗಳೂ ಪಂಚಭೂತಗಳೂ ಕೂಡ ಈ ಜೀವನನ್ನು ಒಂದು ಅಂಶದಿಂದ ಬಿಡುತ್ತವೆ. ಪೃಥಿವ್ಯಾದಿ ಎಲ್ಲಾ ಭೂತಗಳೂ ಇಂದ್ರಿಯಗಳೂ ಪುನಃ ಶರೀರಾಂತರ ಪ್ರಾಪ್ತಿಯಾಗುವಾಗ ಆ ಭಾಗಗಳಿಂದಲೇ ಈ ಜೀವನನ್ನು ಪ್ರವೇಶ ಮಾಡುತ್ತವೆ. ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

**ವಿಶೇಷಾಂಶ ॥** ತಥಾಚ (೧) ಭೂತವಿನಿವೃತ್ತಿಯೆಂದರೆ ಅಗ್ನ್ಯಾದಿಮೂಲರೂಪಗಳನ್ನು ಕುರಿತು ಹೋಗತಕ್ಕ ಇಂದ್ರಿಯಭಾಗಗಳಿಂದ ಕೂಡಿ ಭಾಗತಃ ಪೃಥಿವ್ಯಾದಿಭೂತಗಳಿಗೇನೇ ಗಮನವು. ಸಂಪೂರ್ಣವಾಗಿ ಅಲ್ಲ. (೨) ಭೂತಸಂಪ್ರಯೋಗವೆಂದರೆ— ಭೂತಗಳಿಂದ ಕೂಡಿಕೊಂಡು ಅವರ ಶರೀರದಲ್ಲಿ ಪ್ರವೇಶವೇ. ॥ ೪ ॥ ೩ ॥

## ಅಧಿಕರಣ ಸಾರಾಂಶ

ಇಂದ್ರಿಯಗಳು ಜೀವರೊಟ್ಟಿಗೆ ಹೋಗುವುದಿಲ್ಲವೋ ಹೋಗುತ್ತವೋ ಎಂದು ಸಂದೇಹವು. ಯತ್ರಾಸ್ಯ ಪುರುಷಸ್ಯ ಇತ್ಯಾದಿಗಳಿಂದ ವಾಗಾದೀಂದ್ರಿಯಗಳಿಗೆ ಅಗ್ನ್ಯಾದಿದೇವತೆಗಳನ್ನು ಕುರಿತು ಗತಿಯು ಶ್ರುತವಾದುದರಿಂದ ಜೀವರಿಂದ ಕೂಡಿ ಗಮನವಿಲ್ಲ. ಒಂದು ಅಂಶದಿಂದ ಜೀವರಿಂದ ಕೂಡಿಕೊಂಡು ಹೋಗುತ್ತವೆ. ಭಾಗಾಂತರದಿಂದ ದೇವತೆಗಳನ್ನು ಹೊಂದುತ್ತವೆ ಎನ್ನುವುದಕ್ಕೆ ಕಲ್ಪಕವಿಲ್ಲ. ಪ್ರತಿಮರಣದಲ್ಲಿಯೂ ಭಾಗಗಳು ಹೋದರೆ ಕಾಲತಃ "ಸರ್ವಭಾಗಗಳೂ ಹೋಗಬೇಕಾಗುವುದರಿಂದಲೂ ಇಂದ್ರಿಯಗಳಿಗೆ ಅಗ್ನ್ಯಾದಿದೇವತೆಗಳನ್ನು ಕುರಿತು" ಗಮನವಾಗುವಾಗ ಭೂತಗಳಿಗೆ ಆ ದೇವತೆಗಳಿಂದ ಕೂಡಿಕೊಂಡು ಗಮನವಾಗುವಾಗ ಜೀವರಿಂದ ಕೂಡಿ ಗಮನವು ಇಲ್ಲದಿರುವುದರಿಂದ ಇಂದ್ರಿಯಗಳು ಜೀವರಿಂದ ಕೂಡಿ ಹೋಗತಕ್ಕವುಗಳಲ್ಲ. ಆದಕಾರಣ ಸಾಧನಗಳನ್ನು ಅನುಷ್ಠಾನ ಮಾಡಬೇಕಾಗಿಲ್ಲ ಎಂದು ಪೂರ್ವಪಕ್ಷ ಬಂದರೆ— ಪುರುಷಸ್ಯ ಮೃತೌ ಬ್ರಹ್ಮನ್ ಎನ್ನುವ ಸ್ಮೃತಿಯಲ್ಲಿ ಇಂದ್ರಿಯಗಳಿಗೆ ಭಾಗದಿಂದಲೇ ಗತಿಯನ್ನು ಹೇಳಿದ್ದರಿಂದ ಅಗ್ನ್ಯಾದಿಗತಿಶ್ರುತಿಯು ತತ್ಪರವಾಗಿದೆ. ಆ ಸ್ಮೃತಿಯಿಂದಲೇ ಮರಣದಲ್ಲಿ ವಿಯುಕ್ತಭಾಗಗಳಿಗೂ ಜೀವರಿಗೆ ದೇಹಾಂತರಪ್ರಾಪ್ತಿಯಾಗುವಾಗ ಪುನಃ ಪ್ರವೇಶವನ್ನು ಹೇಳಿದ್ದರಿಂದ ಕಾಲತಃ ಸರ್ವಭಾಗಕ್ಕೆ ಅಪಗಮವಿಲ್ಲ. ಜೀವರಿಗೆ ಮೃತಿಕಾಲದಲ್ಲಿ ಇಂದ್ರಿಯಗಳಿಗೆ ಭಾಗತಃ ಎರಡು ಕಡೆಗೂ ಗಮನವಾಗುವಾಗ ಪಂಚಭೂತಗಳಿಗೂ ಭಾಗತಃ ಉಭಯತ್ರ ಗಮನವು ಮೃತಿಕಾಲೇ ಜಹತ್ಯೇನಂ ಎನ್ನುವ ಸ್ಮೃತಿಸಿದ್ಧವಾದುದರಿಂದ ಇಂದ್ರಿಯಗಳೂ ಪಂಚಭೂತಗಳೂ ಜೀವರಿಂದ ಕೂಡಿಯೇ ಹೋಗುತ್ತವೆ. ಆದಕಾರಣ ಸಾಧನಗಳನ್ನು ಅನುಷ್ಠಾನ ಮಾಡಬೇಕು. ॥ ಅಧಿ. ೪ ॥

**ಅಗ್ನ್ಯಾದ್ಯಧಿಕರಣವು ಸಮಾಪ್ತವಾಯಿತು.**

## ೫ ಪ್ರಥಮೇ ಶ್ರವಣಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪುನಃ ಪಂಚಭೂತಗಳಿಗೆ ಜೀವನೊಟ್ಟಿಗೆ ಗತಿಯನ್ನು ಸಮರ್ಥಿಸುತ್ತಾರೆ—

### ಸೂತ್ರ ॥ ಓಂ ಪ್ರಥಮೇ ಶ್ರವಣಾದಿತಿ ಚೇನ್ನಂ ತಾ ಏವ ಹ್ಯುಪಪತ್ತೇಃ ಓಂ ॥ ೫ ॥

**ಸೂತ್ರಾರ್ಥ ॥** ತಸ್ಮಿನ್ ಎನ್ನುವ ಉಪಕ್ರಮವಾಕ್ಯದಲ್ಲಿ ಸ್ವರ್ಗಾಖ್ಯಪ್ರಥಮಾಗ್ನಿಯಲ್ಲಿ

ಅಶ್ರವಣಾತ್ = ಜಲಗಳಿಗೆ ಹೋಮ್ಯತ್ವದಿಂದ ಶ್ರವಣವಿಲ್ಲದಿರುವುದರಿಂದ ಜೀವನು ಭೂತಗಳಿಂದ ಕೂಡಿಕೊಂಡು ಹೋಗುವುದಿಲ್ಲ ಎಂದರೆ ಹಾಗೆ ಹೇಳಕೂಡದು. ಪ್ರಸ್ತುತಗಳಾದ ಜಲಗಳೇ ಪ್ರಥಮಾಗ್ನಿಯಲ್ಲಿ ಹೋಮ್ಯಬೋಧಕವಾದ ಶ್ರದ್ಧಾಶಬ್ದದಿಂದ ಹೇಳಲ್ಪಡುತ್ತವೆ. **ಆಪಃ ಪುರುಷವಚಸೋ ಭವಂತಿ** ಎನ್ನುವ ಉಪಸಂಹಾರವಾಕ್ಯವು ಕೂಡುವುದಕ್ಕಾಗಿ (ಅಂದರೆ ಉಪಸಂಹಾರಾನುಸಾರವಾಗಿ ಉಪಕ್ರಮವಾಕ್ಯಕ್ಕೆ ಅರ್ಥವನ್ನು ಹೇಳಬೇಕು.)

**ಭಾಷ್ಯ ॥ ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ (ಛಾ.೫.೪.೨.) । ಇತಿ ಪ್ರಥಮಾಗ್ನೌ ಶ್ರೂಯತೇ ನ ಭೂತಾನಿ ಜುಹ್ವತೀತಿ । ಅತೋ ನೇತಿ ಚೇನ್ನ ॥ ತಾ ಏವ ಪ್ರಸ್ತುತಾ ಆಪಃ ಶ್ರದ್ಧಾರೂಪೇಣ ಹೂಯಂತ ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ (ಛಾ.೫.೯.೧.) । ಇತ್ಯುಪಸಂಹಾರೋಪಪತ್ತೇಃ ॥ ೫ ॥ ಅಧಿ. ೫ ॥ ೧ ॥**

**ಭಾಷ್ಯಾರ್ಥ** ॥ (**ಅಸೌ ವಾ ಲೋಕೇ ಗೌತಮಾಗ್ನಿಃ** ಇತ್ಯಾದಿಗಳಿಂದ ದ್ಯಾಖ್ಯ ಅಗ್ನಿಯನ್ನು ನಿರೂಪಿಸಿ) ತಸ್ಮಿನ್ = ದ್ಯುಲೋಕಾಖ್ಯವಾದ, ಏತಸ್ಮಿನ್=ಆದಿತ್ಯಾದಿಸಮಿದಾದಿವಿಶಿಷ್ಟವಾದ, ಅಗ್ನೌ = **ದ್ಯಾದೀನಾಂ ದೇವತಾಭೋಗಸ್ಥಾನತ್ವಾತ್ ಅಗ್ನಿತ್ವಂ** ಎಂದು ತತ್ವಪ್ರದೀಪದಲ್ಲಿ ಹೇಳಿದ್ದರಿಂದ ದೇವತೆಗಳಿಗೆ ಭೋಗಸ್ಥಾನವಾದುದರಿಂದ ಅಗ್ನಿಶಬ್ದವಾಚ್ಯವಾದ ನಾರಾಯಣಾಧಿಷ್ಠಾನವಾದ ದ್ಯು-ಪರ್ಜನ್ಯ-ಧರಾ-ಪುಂ-ಸ್ತ್ರ್ಯಾಖ್ಯ ಐದು ಅಗ್ನಿಗಳ ಮಧ್ಯದಲ್ಲಿ ಪ್ರಥಮಾಗ್ನಿಯಲ್ಲಿ ದ್ಯುಲೋಕಾಧಿಪತಿಗಳಾದ ದೇವತೆಗಳು, ಶ್ರದ್ಧಾಂ=ಶ್ರದ್ಧೆಯಿಂದ ಯಜ್ಞಮಾಡತಕ್ಕ ಯಜಮಾನನನ್ನು, ಆಹುತಿರೂಪವನ್ನು ಹೋಮಿಸುತ್ತಾರೆ. ಎಂದು (ಉತ್ಕ್ರಾಂತನಾದ ಶ್ರದ್ಧೆಯಿಂದ ಯಜ್ಞಮಾಡತಕ್ಕ ಶ್ರದ್ಧಾಸಹಿತ ಜೀವನಿಗೇನೇ) ಉಪಕ್ರಮದಲ್ಲಿ ದ್ಯಾಖ್ಯವಾದ ಪ್ರಥಮಾಗ್ನಿಯಲ್ಲಿ ಹೋಮವು ಶ್ರುತವಾಗುತ್ತದೆ. **ಭೂತಾನಿ ಜುಹ್ವತಿ** ಎಂದು ಭೂತಸಹಿತನಿಗೆ ಹೋಮವು ಶ್ರುತವಾಗುವುದಿಲ್ಲ (ಭೂತಗಳೂ ಒಟ್ಟಿಗೆ ಹೋಗುವುದಾದರೆ ಉಪಕ್ರಮದಲ್ಲಿ ಹಾಗೆ ಹೇಳಬೇಕಿತ್ತು.) ಆದಕಾರಣ ಭೂತಗಳಿಗೆ ಜೀವನಿಂದ ಕೂಡಿಕೊಂಡು ಗಮನವಿಲ್ಲ (ಏವಂಚ ಶ್ರದ್ಧಾವುಳ್ಳ ಜೀವಹೋಮವೇ ಶ್ರುತವಾದುದರಿಂದಲೂ ಭೂತಹೋಮವು ಶ್ರುತವಾಗದೆ ಇರುವುದರಿಂದಲೂ **ಶ್ರವಣಾತ್ ಅಶ್ರವಣಾತ್** ಎಂದು ಎರಡು ಅರ್ಥವು.) ಎಂದರೆ ಹಾಗೆ ಹೇಳಕೂಡದು. ಅಂದರೆ— ಪ್ರಥಮಾಗ್ನಿಯಲ್ಲಿ ಭೂತಸಹಿತನಾದ ಜೀವನಿಗೆ ಹೋಮವು ಶ್ರುತವಾಗದೆ ಇರುವುದರಿಂದ ಭೂತಗಳಿಗೆ ಅಸಹಗತಿಯನ್ನು ತಿಳಿಸಲು ಕಲ್ಪಿಸಕೂಡದು. ಪ್ರಥಮಾಗ್ನಿಯಲ್ಲಿಯೂ ಕೂಡ **ವೇತ್ಥ ಯಥಾ ಪಂಚಮ್ಯಾಮಾಹುತೌ** ಎನ್ನುವ ವಾಕ್ಯದಲ್ಲಿ ಪ್ರಸ್ತುತಗಳಾದ ಜಲಗಳೇ ಶ್ರದ್ಧಾ ಶಬ್ದಾರ್ಥರೂಪವಾಗಿ ಹೋಮ್ಯವಾಗಿ ಕೇಳಲ್ಪಡುತ್ತವೆ. **ಇತಿ ತು ಪಂಚಮ್ಯಾಮಾಹುತಾ ವಾಪಃ ಪುರುಷವಚಸೋ ಭವಂತಿ** ಎನ್ನುವ ಉಪಸಂಹಾರವಾಕ್ಯದಲ್ಲಿ ಜಲಗಳಿಗೆ ಜೀವನಿಂದ ಕೂಡಿಕೊಂಡು ಗತಿಯು ಶ್ರುತವಾಗಿದೆ. ಉಪಸಂಹಾರವನ್ನು ಅನುಸರಿಸಿ **ಶ್ರದ್ಧಾಂ ಜುಹ್ವತಿ** ಎನ್ನುವ ಉಪಕ್ರಮವಾಕ್ಯಕ್ಕೆ ಶ್ರದ್ಧಾಪದದಿಂದ ಶ್ರದ್ಧೆಯಿಂದಲೂ ಜಲದಿಂದಲೂ ಸಹಿತಜೀವನನ್ನು ಹೋಮಿಸುತ್ತಾರೆ, ಎಂದು ಅರ್ಥವನ್ನು

ಕಲ್ಪಿಸಿದರೇನೇ ಉಪಸಂಹಾರ ವಾಕ್ಯವು ಉಪಪನ್ನವಾಗುವುದು. ಉಪಸಂಹಾರವನ್ನು ಅನುಸರಿಸಿ ಉಪಕ್ರಮಕ್ಕೆ ಅರ್ಥವನ್ನು ಕಲ್ಪಿಸದೆ ಇದ್ದರೆ ಉಪಸಂಹಾರವೇ ಕೂಡದೆ ಇದ್ದುದರಿಂದ ಉಪಸಂಹಾರ ವಿರೋಧದಿಂದ ಉಪಕ್ರಮಕ್ಕೆ ಪ್ರಬಲಪ್ರಮಾಣವಿರುದ್ಧಾರ್ಥ ಬೋಧಕತ್ವರೂಪ ಅಪ್ರಮಾಣ್ಯವು ಬರಬೇಕಾಗುವುದು. ॥ ೫ ॥ ೧ ॥

## ಅಧಿಕರಣ ಸಾರಾಂಶ

ಭೂತಗಳಿಗೆ ಜೀವನಿಂದ ಕೂಡಿಕೊಂಡು ಗತಿಯು ಇಲ್ಲವೋ ಇದೆಯೋ, ಅದಕ್ಕಾಗಿ ಉಪಕ್ರಮದಲ್ಲಿ ಶ್ರುತವಾದ ಶ್ರದ್ಧಾಶಬ್ದವು ವಿಶ್ರದ್ಧಾಮಾತ್ರಯುಕ್ತಜೀವಪರವೋ, ಅಥವಾ ಶ್ರದ್ಧೆಯಿಂದಲೂ, ಜಲಗಳಿಂದಲೂ, ಯುಕ್ತಜೀವಪರವೋ, ಭೂತಗಳಿಗೆ ಜೀವನಿಂದ ಕೂಡಿಕೊಂಡು ಗತಿಯಲ್ಲಿ ತಸ್ಮಿನ್ನೇತಸ್ಮಿನ್ ಎನ್ನುವ ಶ್ರುತಿಯಲ್ಲಿ ಶ್ರದ್ಧಾಸಹಿತಜೀವನಿಗೇನೇ ವ್ಯಾಖ್ಯಾವಾದ ಪ್ರಥಮಾಗ್ನಿಯಲ್ಲಿ ಹೋಮವು ಶ್ರುತವಾಗಿದೆ. ಭೂತಗತಿಯು ಶ್ರುತವಾಗಲಿಲ್ಲ. ಇಲ್ಲವಾದರೆ ಭೂತಾನಿ ಎಂದು ಹೇಳಬೇಕಿತ್ತು. ಉಪಸಂಹಾರದಲ್ಲಿದ್ದ ಅಪ್ ಶಬ್ದವಿರೋಧದಿಂದ ಶ್ರದ್ಧಾಶಬ್ದವು ಜಲಪರವೆಂದು ಹೇಳಕೂಡದು. ಪ್ರಥಮೋಪಸ್ಥಿತವಾದುದರಿಂದ ಉಪಕ್ರಮವು ಪ್ರಬಲವು. ಅದನ್ನು ಅನುಸರಿಸಿಯೇ ಉಪಸಂಹಾರಕ್ಕೆ ಅರ್ಥವನ್ನು ಹೇಳಬೇಕು, ಎಂದರೆ— ಉಪಕ್ರಮಕ್ಕೆ ಪ್ರಾಥಮ್ಯವಿದ್ದರೂ ಉಪಸಂಹಾರವು ವ್ಯಾಖ್ಯಾನರೂಪವಾದುದರಿಂದ ಪ್ರಬಲವಾದ ಪ್ರಯುಕ್ತ ಅದನ್ನು ಅನುಸರಿಸಿಯೇ ಉಪಕ್ರಮವನ್ನು ವ್ಯಾಖ್ಯಾನಮಾಡಬೇಕಾಗಿರುವುದರಿಂದ ಶ್ರದ್ಧಾಶಬ್ದಕ್ಕೆ ಶ್ರದ್ಧಾಜಲಗಳಿಂದ ಯುಕ್ತಜೀವಪರತ್ವವು ಕೂಡುವ ಪ್ರಯುಕ್ತ ಭೂತಗಳಿಗೆ ಜೀವರಿಂದ ಕೂಡಿಕೊಂಡೇ ಗಮನವು. ॥ ಅ. ೫ ॥

**ಪ್ರಥಮೇ ಶ್ರವಣಾಧಿಕರಣವು ಸಮಾಪ್ತವಾಯಿತು.**

# ೬ ಅಶ್ರುತತ್ವಾಧಿಕರಣವು

ಪೀಠಿಕೆ : ಈ ಅಧಿಕರಣದಲ್ಲಿ ಪುನಃ ಜೀವನಿಗೆ ಭೂತಗಳಿಂದ ಕೂಡಿಕೊಂಡು ಗತಿಯನ್ನು ಸಮರ್ಥಿಸುತ್ತಾರೆ—

### ಸೂತ್ರ ॥ ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ ॥ ೬ ॥

ಸೂತ್ರಾರ್ಥ : ಭೂತಸಹಗಮನವು ಪ್ರತ್ಯಕ್ಷಶ್ರುತಿಯಿಂದ ಕಾಣದೆ ಇದ್ದುದರಿಂದ ಜೀವನು ಭೂತಗಳಿಂದ ಕೂಡಿಕೊಂಡು ಹೋಗುವುದಿಲ್ಲ ಎಂದರೆ— ಹಾಗೆ ಹೇಳಕೂಡದು. ಇಷ್ಟಾಪೂರ್ತಾದಿ (ಯಾಗ ತಟಾಕಾದಿ) ಕರ್ತೃಗಳ ವಿಷಯದಲ್ಲಿ ಭೂತಸಹಗತಿಯು ಅಥೈನಂ ಯಜಮಾನಂ ಎನ್ನುವ ಶ್ರುತಿಯಲ್ಲಿ ಪ್ರತ್ಯಕ್ಷತಃ ಶ್ರುತವಾದುದರಿಂದ.

**ಭಾಷ್ಯ ॥ (೧) ಅಗ್ನ್ಯಾದಿಗತಿಃ ಪ್ರತ್ಯಕ್ಷತಃ ಶ್ರೂಯತೇ । ಅತಃ ಪ್ರತ್ಯಕ್ಷಾಶ್ರವಣಾನ್ನ ಯುಕ್ತಮಿತಿ ಚೇತ್ (೨) ನ॥ ಅಥೈನಂ ಯಜಮಾನಂ ಕಿಂ ನ ಜಹಾತಿ ಭೂತಾನ್ಯೇವ**

**ಭೂತೈರೇವ ಗಚ್ಛತಿ ಭೂತೈರ್ಭುಂಕ್ತೇ ಭೂತೈರುತ್ಪದ್ಯತೇ ಭೂತೈಶ್ಚರತಿ ಭೂತೈರ್ವಿಚರತಿ ॥ ಇತಿ ಕೌಂಠರವ್ಯಶ್ರುತೌ ಪ್ರತೀತೇಃ ॥ ೬ ॥ ಅಧಿ. ೬ ॥ ೧ ॥**

ಭಾಷ್ಯಾರ್ಥ ॥ (೧) ★ಅತಃ = ಹೇಗೆ (ಇಂದ್ರಿಯಗಳಿಗೆ) ಅಗ್ನ್ಯಾದಿಗಳನ್ನು ಕುರಿತು ಗತಿಯು (ಅಗ್ನಿಂ ವಾಗಪ್ಯೇತಿ ಇತ್ಯಾದಿಗಳಲ್ಲಿ) ಸ್ಪಷ್ಟವಾಗಿ ಶ್ರುತವಾಗುತ್ತದೋ, ಹಾಗೆಯೇ (ಭೂತಗಳಿಗೆ ಜೀವನಿಂದ ಕೂಡಿಕೊಂಡು ಗತಿಯು) ಸ್ಪಷ್ಟವಾಗಿ ಶ್ರುತವಾಗದೆ ಇದ್ದುದರಿಂದ ಭೂತಾನಿ ಜೀವೇನ ಸಹ ಗಚ್ಛಂತಿ ಎಂದು ಸ್ಪಷ್ಟ ಶ್ರುತಿಯು ಇಲ್ಲದಿರುವುದರಿಂದ (ಭೂತಗಳಿಗೆ ಜೀವನಿಂದ ಕೂಡಿಕೊಂಡು ಗಮನವು) ಯುಕ್ತವಲ್ಲ ಎಂದರೆ— (೨) ಹಾಗೆ ಹೇಳಕೂಡದು. (ಅಂದರೆ — ಪ್ರತ್ಯಕ್ಷ ಶ್ರುತವಾಗದೆ ಇದ್ದುದರಿಂದ ಭೂತಗಳಿಗೆ ಅಸಹಗತಿಯನ್ನು ಹೇಳಕೂಡದು.) ಮೃತಿಕಾಲದಲ್ಲಿ ಅಥವಾ ಯಾವಾಗಲೂ ಯಾಗಾದಿಕರ್ತನಾದ ಪುರುಷನನ್ನು ಯಾವ ವಸ್ತುವು ಬಿಡುವುದಿಲ್ಲ? (ಎಂದು ಪ್ರಶ್ನೆಯು) ಭೂತಗಳೇ ಬಿಡುವುದಿಲ್ಲ (ಎಂದು ಉತ್ತರವು) ಭೂತಗಳಿಂದ ಕೂಡಿಕೊಂಡೇ ಯಜಮಾನನು ಪರಲೋಕಕ್ಕೆ ಹೋಗುತ್ತಾನೆ. (ಅಲ್ಲಿದ್ದ ವಿಷಯಗಳನ್ನು) ಭೂತಗಳಿಂದ ಕೂಡಿಕೊಂಡೇ ಭೋಗಿಸುತ್ತಾನೆ. ಭೂತಗಳಿಂದ ಕೂಡಿಕೊಂಡೇ ಭೂಮಿಯಲ್ಲಿ ಹುಟ್ಟುತ್ತಾನೆ. ಭೂತಗಳಿಂದ ಕೂಡಿಕೊಂಡೇ ಸತ್ಕರ್ಮವನ್ನು ಮಾಡುತ್ತಾನೆ. ವಿರುದ್ಧವಾದ ದುಷ್ಟವಾದ ಕರ್ಮವನ್ನು ಮಾಡುತ್ತಾನೆ. ಹೀಗೆ ಕೌಂಠರವ್ಯ ಶ್ರುತಿಯಲ್ಲಿ (ಪ್ರತ್ಯಕ್ಷವಾಗಿಯೇ ಭೂತಗಳಿಗೆ ಜೀವನಿಂದ ಕೂಡಿಕೊಂಡೇ ಗತಿಯು) ಪ್ರತ್ಯಕ್ಷ ವಾಗಿಯೇ ಶ್ರುತವಾಗಿರುವುದರಿಂದ (ಭೂತಗಳಿಗೆ ಸಹಗಮನವು ಸಿದ್ಧವಾಗುತ್ತದೆ.) ॥ ೬ ॥೧॥

## ಅಧಿಕರಣ ಸಾರಾಂಶ

ಭೂತಗಳು ಜೀವನ ಒಟ್ಟಿಗೆ ಹೋಗುತ್ತವೋ ಇಲ್ಲವೋ ಎಂದು ಸಂದೇಹವು. ಪ್ರಶ್ನನಿರೂಪಣಗಳಲ್ಲಿ ತ್ರ್ಯಾತ್ಮಕಜಲಗಳಿಗೆ ಗತಿಯನ್ನು ಹೇಳಿದ್ದರಿಂದ ಅರ್ಥಾತ್ ಭೂತಗಳಿಗೆ ಗತಿಯು ಶ್ರುತವಾದಾಗ್ಯೂ ಅಗ್ನಿಂ ವಾಗಪ್ಯೇತಿ ಇತ್ಯಾದಿಗಳಂತೆ ಭೂತಾನಿ ಗಚ್ಛಂತಿ ಎಂದು ಪ್ರತ್ಯಕ್ಷವಾಗಿ ಶ್ರುತವಾಗದೆ ಇರುವುದೇ ಪ್ರಬಲವಾದ ಪ್ರಯುಕ್ತ ಭೂತಗಳು ಒಟ್ಟಿಗೆ ಹೋಗುವುದಿಲ್ಲ ಎಂದರೆ— **ಅಥ ಹೈನಂ ಯಜಮಾನಂ** ಇತ್ಯಾದಿ ಶ್ರುತಿಗಳಲ್ಲಿ ಪ್ರತ್ಯಕ್ಷವಾಗಿ ಭೂತಗತಿಯು ಶ್ರುತವಾಗಿರುವುದರಿಂದ ಭೂತಗಳು ಎಲ್ಲಾ ಜೀವರ ಒಟ್ಟಿಗೇ ಹೋಗಿಯೇ ಹೋಗುತ್ತವೆ. ॥ ಅಧಿ.೬ ॥

**ಅಶ್ರುತತ್ವಾಧಿಕರಣವು ಸಮಾಪ್ತವಾಯಿತು.**

# ೭ ಭಾಕ್ತಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಭಗವತ್ಪ್ರಾಪ್ತಿಗಾಗಿ ವೈರಾಗ್ಯಾದಿಸಾಧನಗಳು ಆವಶ್ಯಕಗಳೆಂದು ಸಮರ್ಥಿಸುತ್ತಾರೆ—

★ ಅತಶ್ಶಬ್ದಸ್ತು ಹೇತ್ವರ್ಥೇ ತಥೇತ್ಯರ್ಥೇ ಚ ವರ್ತತೇ। ಉಭಯಾರ್ಥೇ ಚ ಭವತಿ ಯಥಾ ಶಬ್ದವಿದೋ ವಿದುಃ ॥ ಈ ಪ್ರಮಾಣಾನುಸಾರವಾಗಿ ಅತಃ ಶಬ್ದವು ಹೇತ್ವರ್ಥಕವು.

**ಭಾಷ್ಯ ॥ ಅಪಾಮ ಸೋಮಮೃತಾ ಅಭೂಮ (ಋ.೮.೪೮.೩.) । ಇತ್ಯಾದಿ ಶ್ರುತಿವಿರೋಧಃ ಇತಿ । ಅತೋ ವಕ್ತಿ ॥ ॥ ೧ ॥**

**ಭಾಷ್ಯಾರ್ಥ ॥** ಸೋಮಯಾಗದಲ್ಲಿ ಸೋಮವನ್ನು ಕುಡಿದೆವು. ಆ ಸೋಮಯಾಗರೂಪವಾದ ಕರ್ಮದಿಂದ ಮುಕ್ತರು ಆದೆವು. (ಆದಿಪದದಿಂದ **ಅಕ್ಷಯ್ಯಂ ಹ ವೈ ಚಾತುರ್ಮಾಸ್ಯಯಾಜಿನಃ ಸುಕೃತಂ ಭವತಿ**) ಇತ್ಯಾದಿ ಶ್ರುತಿಗಳಿಂದ (ಕರ್ಮದಿಂದಲೇ ಮೋಕ್ಷವು ಸಿದ್ಧಿಸುವುದರಿಂದ ವೈರಾಗ್ಯಾದಿಗಳು ವ್ಯರ್ಥವೇ. ಇಲ್ಲವಾದರೆ) ಈ ಶ್ರುತಿವಿರೋಧವು. ಎಂದು ಶಂಕಾ ಬಂದರೆ— ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಭಾಕ್ತಂ ವಾऽನಾತ್ಮವಿತ್ತ್ವಾತ್ತಥಾ ಹಿ ದರ್ಶಯತಿ ಓಂ ॥ ೭ ॥

**ಸೂತ್ರಾರ್ಥ ॥** ಕರ್ಮಿಗಳಿಗೆ ಅಪಾಮ ಸೋಮಂ ಎನ್ನುವ ಶ್ರುತಿಯಿಂದ ಕರ್ಮಸಾಧ್ಯವಾಗಿ ಹೇಳಲ್ಪಟ್ಟ ಅಮೃತತ್ವವೆಂದರೆ ಭಾಗದಲ್ಲಿ (ಅಲ್ಪಕಾಲದಲ್ಲಿ ಆಗತಕ್ಕ ಸ್ವರ್ಗಭೋಗವು) ಕರ್ಮಿಗಳಿಗೆ ಬ್ರಹ್ಮಜ್ಞಾನವಿಲ್ಲದಿರುವುದರಿಂದ (ನಿತ್ಯಾನಂದಾನುಭವರೂಪವಾದ ಮುಕ್ತಿಯಲ್ಲ) ಏಕೆಂದರೆ— **ಅಮೃತೋ ವಾ ವ ಸೋಮಪಃ ಕರ್ಮಣಾ ಜ್ಞಾನಮಾತನೋತಿ, ಸ ಏನಮವಿದಿತಃ**, ಇತ್ಯಾದಿ ಶ್ರುತಿಯು ಹೇಳಿದ ಅರ್ಥವನ್ನು ತೋರಿಸುತ್ತದೆ.

**ಭಾಷ್ಯ ॥ ಭಾಗತಸ್ತದಮೃತತ್ವಂ । ನಾನ್ಯಃ ಪಂಥಾ ಅಯನಾಯ ವಿದ್ಯತೇ (ತೈ.ಆ.೩.೧೩.) । ಇತಿ ಶ್ರುತೇರಾತ್ಮವಿದ ಏವ ಹಿ ಮುಖ್ಯಂ । ವಾ ಶಬ್ದಾತ್ಪಾರಂಪರ್ಯೇಣಾತ್ಮವಿದ— ಪೇಕ್ಷಯಾ ವಾ ॥ ೨ ॥**

**ಭಾಷ್ಯಾರ್ಥ ॥** ಆ ಶ್ರುತಿಯಲ್ಲಿ ಪ್ರತಿಪಾದ್ಯವಾದ ಕರ್ಮಸಾಧ್ಯವಾದ ಅಮೃತತ್ವವು ಮನ್ವಂತರಾದಿರೂಪ ಕೆಲವು ಕಾಲದಲ್ಲಿ ಸ್ವರ್ಗಾನುಭವರೂಪವಾದುದೇ. ತಥಾಚ ಆ ಶ್ರುತಿಯು ಗೌಣಾರ್ಥಕವೇ. (ಮುಖ್ಯಾಮೃತತ್ವವೇ ಶ್ರುತ್ಯರ್ಥವು ಏಕೆ ಆಗಲಾರದೆಂದರೆ) ಮೋಕ್ಷಕ್ಕಾಗಿ ಇತರವಾದ ಮಾರ್ಗವು ಇಲ್ಲ ಎನ್ನುವ ಶ್ರುತಿಯಿಂದ ಪರಮಾತ್ಮಜ್ಞಾನಿಗೇನೇ ಮುಖ್ಯಾಮೃತತ್ವವು ಇತರರಿಗೆ ಕರ್ಮಸಾಧ್ಯ ವಾದ ಅಮೃತತ್ವವು ಅಲ್ಪಕಾಲದಲ್ಲಿ (ಸ್ವರ್ಗಾದಿಸುಖಾನುಭವ ರೂಪವಾದುದೇ.) (ಕಾಮ್ಯಕರ್ಮಿಗಳಿಗೆ ಮುಖ್ಯಾಮೃತತ್ವವು ಇಲ್ಲವಾದರೂ ಅಕಾಮ್ಯಕರ್ಮಿಗಳಿಗೆ ಮುಖ್ಯಾಮೃತತ್ವವು. ಬರಲಿ ಎಂದರೆ) (೧) **ಅಪಾಮ ಸೋಮಂ** ಎನ್ನುವ ಶ್ರುತಿಯಲ್ಲಿ ಅಕಾಮ್ಯಕರ್ಮವು ವಿವಕ್ಷಿತವಾದರೆ ಅಮೃತಪದದಿಂದ ಮುಖ್ಯಾಮೃತತ್ವವೇ ಆದು ಕರ್ಮದಿಂದ ಸಾಕ್ಷಾತ್ತಾಗಿ ಆಗುವುದಿಲ್ಲ ಮತ್ತೆ ಕರ್ಮದಿಂದ ಶುದ್ಧಾಂತಃಕರಣನಿಗೆ ವೈರಾಗ್ಯಾದಿಗಳು, ವೈರಾಗ್ಯಾದಿಗಳುಳ್ಳವನಿಗೆ ಜಿಜ್ಞಾಸಾ. ಜಿಜ್ಞಾಸಾವುಳ್ಳವನಿಗೆ ಜ್ಞಾನವು. ಆದರಿಂದ ಮೋಕ್ಷವು. ಹೀಗೆ ಪರಂಪರೆಯಿಂದಲೇ ಲಭ್ಯವು, ಎಂದು ವಾ ಶಬ್ದದಿಂದ ಸೂಚಿತವಾಯಿತು. (೨) ಅಪರೋಕ್ಷಜ್ಞಾನಿಕೃತ ಅಕಾಮ್ಯಕರ್ಮವು ವಿವಕ್ಷಿತವೆಂದಾದರೆ ಶ್ರುತ್ಯುಕ್ತ ಅಮೃತತ್ವವೆಂದರೆ— ಜ್ಞಾನಸಾಧ್ಯ ಮೋಕ್ಷದಲ್ಲಿ ಪ್ರಚುರಾನಂದವ್ಯಕ್ತಿವೈಚಿತ್ರ್ಯಾಖ್ಯ ಅತಿಶಯರೂಪ ವಾದುದೇ ಆತ್ಮಜ್ಞಾನಿಯನ್ನು ಅಪೇಕ್ಷಿಸಿಯೇ

ಆತ್ಮಜ್ಞಾನಿಗೆ ಮುಖ್ಯಾಮೃತತ್ವವು ಅಕಾಮ್ಯಕರ್ಮದಿಂದ ಆಗುತ್ತದೆ ಎಂದು ಹೇಳಿದ್ದು. ಹೀಗೆ ವಾ ಶಬ್ದದಿಂದ ಸೂಚಿತವಾಯಿತು.॥ ೨ ॥

**ಭಾಷ್ಯ ॥ (೧) ತಥಾ ಹಿ ಶ್ರುತಿಃ। (೨) ಸ ಏನಮವಿದಿತೋ ನ ಭುನಕ್ತಿ ಯಥಾ ವೇದೋ ವಾऽನನೂಕ್ತೋऽನ್ಯದ್ವಾ ಕರ್ಮಾಕೃತಂ ಯದಿ ಹ ವಾ ಅಪ್ಯನೇ ವಂವಿನ್ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾಂತತಃ ಕ್ಷೀಯತ ಏವಾತ್ಮಾನಮೇವ ಲೋಕಮುಪಾಸೀತ ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇऽಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ** (ಬೃ.೩.೪.೧೫.) **॥ ೩ ॥**

ಭಾಷ್ಯಾರ್ಥ ॥ (೧) ಹಿ ಏಕೆಂದರೆ— ಭಾಕ್ತಂ ವಾ ಎಂದು ಹೇಳಿದ ಪ್ರಕಾರ ಶ್ರುತಿಯು ಪ್ರತಿಪಾದಿಸುತ್ತದೆ. ಅಥವಾ ಆತ್ಮಜ್ಞಾನಿಗಳಿಗೇನೇ ಮುಖ್ಯಾಮೃತತ್ವವು, ಇತರರಿಗೆ ಇಲ್ಲ ಎನ್ನುವ ಅರ್ಥದಲ್ಲಿ ಸ ಏನಂ ಎನ್ನುವ ಬೃಹದಾರಣ್ಯಕಶ್ರುತಿಯು ಪ್ರಮಾಣವು. (೨) ಆ ಶ್ರೀಹರಿಯು ಕಾಣಲ್ಪಡದೆ ಇದ್ದವನಾಗಿ, ಜೀವನಿಗೆ ಮೋಕ್ಷಸುಖಾನುಭವವನ್ನು ಕೊಡುವುದಿಲ್ಲ. ರಕ್ಷಿಸುವುದಿಲ್ಲ (ಆತ್ಮಜ್ಞಾನಿಗೇನೇ ಮೋಕ್ಷವನ್ನು ಕೊಡುತ್ತಾನೆ. ಆತ್ಮಜ್ಞಾನವಿಲ್ಲದವನಿಗೆ ಮೋಕ್ಷವನ್ನು ಕೊಡುವುದಿಲ್ಲ.) ಹೇಗೆಂದರೆ— ವಿಧಿಪ್ರಕಾರ ಅಧ್ಯಯನಮಾಡಲ್ಪಡದಿರುವ ವೇದವು (ಹೇಗೆ ಈಶ್ವರಜ್ಞಾನಾದಿಗಳನ್ನು ಹುಟ್ಟಿಸಿ ಶ್ರೋತ್ರಿಯನನ್ನು ಅಮೃತತ್ವವನ್ನು) ಹೊಂದಿಸಿ ಕೊಡುವುದಿಲ್ಲವೋ, ಹೇಗೆ ಶಾಸ್ತ್ರಪ್ರಕಾರ ಅನುಷ್ಠಾನಮಾಡಲ್ಪಡದಿರುವ ಕರ್ಮವು (ಫಲಪ್ರದವಾಗುವುದಿಲ್ಲವೋ) ಹೀಗೆಯೇ ಹಿಂದೆ ಹೇಳಿದ ಪ್ರಕಾರ ಭಗವಜ್ಜ್ಞಾನವಿಲ್ಲದವನು ಮಹಾಪುಣ್ಯಸಾಧನವಾದ ಅಶ್ವಮೇಧಾದಿಕರ್ಮಗಳನ್ನು ಮಾಡುತ್ತಾನೋ, ಆಗ ಈ ಅಜ್ಞಾನಿಯ ಆ ಕರ್ಮಸಾಧ್ಯವಾದ ಅದೃಷ್ಟವು ಅಂತ್ಯದಲ್ಲಿ (ಸ್ವರ್ಗಾದಿಫಲಭೋಗಾವಸಾನದಲ್ಲಿ) ನಾಶವೇ ಆಗುತ್ತದೆ. (ಮುಖ್ಯಾಮೃತತ್ವವನ್ನು ಹೊಂದಿಸಿ ಕೊಡುವುದಿಲ್ಲ.) ನಿಶ್ಚಿತವು. ಆದಕಾರಣ ಮುಮುಕ್ಷುವು ಪರಮಾತ್ಮನನ್ನೇ ಸರ್ವಾಶ್ರಯನನ್ನಾಗಿ ಉಪಾಸನಾ ಮಾಡತಕ್ಕುದು. ಪ್ರಸಿದ್ಧನಾದ ಯಾವ ಅಧಿಕಾರಿಯು ಪರಮಾತ್ಮನನ್ನೇ ಸರ್ವಾಶ್ರಯನನ್ನಾಗಿ ಉಪಾಸನಾ ಮಾಡುತ್ತಾನೋ, ಈತನ ಅಕಾಮ್ಯಕರ್ಮವು ಕ್ಷೀಣವಾಗುವುದಿಲ್ಲ. (ಜ್ಞಾನಾದ್ವಾರಾ ಅಕ್ಷಯ ಮೋಕ್ಷವನ್ನು ಕೊಡುತ್ತದೆ.) ಮತ್ತೂ ಈತನ ಪುಣ್ಯಕರ್ಮವು ಅಕ್ಷಯ ಮೋಕ್ಷದಲ್ಲಿ ಅತಿಶಯಕ್ಕೆ ಕಾರಣವು ಆಗುತ್ತದೆ. ಆ ಮುಕ್ತನು ಯಾವುದುಯಾವುದನ್ನು ಇಚ್ಛಿಸುತ್ತಾನೋ, ಅವಾವ ಕಾಮ್ಯಫಲವನ್ನು ಸರ್ವಾಶ್ರಯನೆಂದು ತಿಳಿಯಲ್ಪಟ್ಟ ಪರಮಾತ್ಮನು (ಅಂದರೆ ಕರ್ಮದಿಂದ ಪ್ರಸನ್ನನಾದ ಪರಮಾತ್ಮನೇ ಸೃಷ್ಟಿ ಮಾಡಿಕೊಡುತ್ತಾನೆ.) ತಥಾಚ ಕರ್ಮವು ಆನುತರವಿನಾಶಿಯಾದಾಗ್ಯೂ ಕರ್ಮದಿಂದುಂಟಾದ ಭಗವತ್ಪ್ರಸಾದವು ನಿತ್ಯವಾದುದರಿಂದ ಅದನ್ನು ವಿವಕ್ಷಾಮಾಡಿಕೊಂಡು ಕರ್ಮ ನ ಕ್ಷೀಯತೇ ಎಂದು ಹೇಳಿದ್ದು ॥ ೩. ॥

**ಭಾಷ್ಯ ॥ (೧) ಅಮೃತೋ ವಾ ವ ಸೋಮವೋ ಭವತಿ ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯಃ ॥ (೨) ಕರ್ಮಣಾ ಜ್ಞಾನಮಾತನೋತಿ**

**ಜ್ಞಾನೇನಾಮೃತೀ ಭವತಿ ಅಥಾಮೃತಾನಿ ಕರ್ಮಾಣಿ ಯತ ಏನಮಮೃತತ್ವಂ (ಮಮೃತ) ನನಯಂತಿ ॥ ಇತಿ ಚ ॥ ೭ ॥ ಅಧಿ. ೭ ॥ ೪ ॥**

**ಭಾಷ್ಯಾರ್ಥ** ॥ (೧) ಸೋಮಯಾಜಿಯು ಅಮುಖ್ಯ ಅಮೃತತ್ವವುಳ್ಳವನಾಗುತ್ತಾನೆ. ಹೇಗೆಂದರೆ— ಇಂದ್ರನು, ಮನುವು, ಸೂರ್ಯನೂ ತಮ್ಮ ಪದದಲ್ಲಿ ಎಷ್ಟು ಕಾಲ ಇರುತ್ತಾರೋ, ಅಷ್ಟರವರೆಗೆ ಅಮೃತನಾಗುತ್ತಾನೆ. (ಸ್ವರ್ಗ ಸುಖವನ್ನು ಅನುಭವಿಸುತ್ತಾನೆ.) (ಇದರಿಂದ ಭಾಗತಃ ಅಮೃತತ್ವವು ಉಕ್ತವಾಯಿತು.) (೨) ಅಧಿಕಾರಿಯು ಅಕಾಮ್ಯಕರ್ಮದಿಂದ ಜ್ಞಾನವನ್ನು ಸಂಪಾದಿಸುತ್ತಾನೆ. ಅದರಿಂದ ಮುಕ್ತನಾಗುತ್ತಾನೆ. ಯಾವ ಕಾರಣದಿಂದ ಕರ್ಮಗಳು ಈ ಜಿಜ್ಞಾಸುವಿಗೆ ಮೋಕ್ಷವನ್ನು ಹೊಂದಿಸಿಕೊಡುತ್ತವೋ, ಆದುದರಿಂದಲೇ ಅಮೃತಗಳು ಎಂದು ಹೇಳಲ್ಪಡುತ್ತವೆ. (ಆದಕಾರಣ ಸಾಧನತ್ವವು ಯುಕ್ತವು. ಈ ಶ್ರುತಿಯು, ಕರ್ಮವು ಪರಂಪರೆಯಿಂದ ಮೋಕ್ಷಸಾಧನವು ಎನ್ನುವಲ್ಲಿ ಪ್ರಮಾಣವು.) ॥ ೭ ॥ ೪ ॥

## ಅಧಿಕರಣ ಸಾರಾಂಶ

**ಅಪಾಮ ಸೋಮಮಮೃತಾ ಅಭೂಮ** ಇತ್ಯಾದಿ ಕರ್ಮಗಳಿಂದ ಶ್ರುತವಾದ ಅಮೃತತ್ವವು ಮುಖ್ಯವೋ ಭಾಕ್ತವೋ ಎಂದು ಸಂದೇಹವು. ವೈರಾಗ್ಯಾದಿ ಸಾಧನಗಳನ್ನು ಮಾಡಬೇಕಾಗಿಲ್ಲ, ಅದು ಇಲ್ಲವಾದರೂ, **ಅಪಾಮ ಸೋಮಂ** ಇತ್ಯಾದಿ ಶ್ರುತಿಗಳಿಂದ ಸುಶಕವಾದ ಕರ್ಮದಿಂದಲೇ ಮುಕ್ತಿಯು ಸಿದ್ಧಿಸುವುದು, ಎಂದರೆ— **ತಮೇವಂ ವಿದ್ವಾನ್** ಇತ್ಯಾದಿಗಳಲ್ಲಿ ಆತ್ಮಜ್ಞಾನಿಗೇನೇ ಮುಖ್ಯಾಮೃತತ್ವವು, ಇತರರಿಗೆ ಇಲ್ಲವೆಂದು ಹೇಳಿದ್ದರಿಂದ ನಿರವಕಾಶ ಆ ಶ್ರುತಿವಿರೋಧರೂಪ ಬಾಧಕದಿಂದ **ಅಪಾಮ ಸೋಮಂ** ಇತ್ಯಾದಿ ಶ್ರುತಿಗಳಿಗೆ ಗೌಣಾರ್ಥತ್ವವನ್ನು ಅವಶ್ಯವಾಗಿ ಹೇಳಬೇಕಾದುದರಿಂದ ಕರ್ಮಾದಿಗಳಿಂದ ಮುಕ್ತಿಯು ಆಗದಿರುವ ಪ್ರಯುಕ್ತ ಮುಮುಕ್ಷುವು ವೈರಾಗ್ಯಾದಿ ಸಾಧನಗಳನ್ನು ಮಾಡಲೇಬೇಕು. **ಅಮೃತೋ ವಾ ವ ಸೋಮಪಃ** ಇತ್ಯಾದಿ ಶ್ರುತಿಗಳಿಂದ ಕಾಮ್ಯಕರ್ಮವುಳ್ಳವನಿಗೆ ಅಲ್ಪಕಾಲೀನ ಅಮೃತತ್ವವು, ಅಕಾಮ್ಯಕರ್ಮಿಯಾದ ಜಿಜ್ಞಾಸುವಿಗೆ ಜ್ಞಾನದ್ವಾರಾ ಅಮೃತತ್ವವು. ॥ ಅ. ೭ ॥

**ಭಾಕ್ತಾಧಿಕರಣವು ಸಮಾಪ್ತವಾಯಿತು.**

# ೮ ಕೃತಾತ್ಯಯಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ವೈರಾಗ್ಯಾದಿಸಾಧನಗಳು ಅವಶ್ಯವಾಗಿ ಅನುಷ್ಠೇಯಗಳೆಂದು ಸಾಧಿಸುತ್ತಾರೆ—

**ಭಾಷ್ಯ ॥ (೧) ಕೃತಸ್ಯ ಕರ್ಮಣೋ ಭೋಗೇನ ಕ್ಷಯಾನ್ಮುಕ್ತಿಃ । ಇತಿ ॥ (೨) ಅತ ಆಹ ॥ ೧ ॥**

ಭಾಷ್ಯಾರ್ಥ ॥ (೧) ಜೀವನೊಟ್ಟಿಗೆ ಬರುವ ಪೂರ್ವಸಂಪಾದಿತಗಳಾದ ಸರ್ವಕರ್ಮಗಳಿಗೂ ಫಲಾನುಭವದಿಂದ ಸ್ವರ್ಗಾದಿ ಸ್ಥಾನಗಳಲ್ಲಿಯೇ ನಿಶ್ಶೇಷವಾಗಿ ನಾಶವಿದ್ದುದರಿಂದ, (ಅಲ್ಲಿ ಕರ್ಮಾಂತರಾಪಾದನೆಯು ಇಲ್ಲದಿರುವುದರಿಂದ, ಕರ್ಮಮೂಲಬಂಧಕ್ಕೂ ನಾಶವಾಗುವುದರಿಂದ,) ಮುಕ್ತಿಯು ತನ್ನಷ್ಟಕ್ಕೇನೇ ಆಗುತ್ತದೆ. (ಅದಕ್ಕಾಗಿ ವೈರಾಗ್ಯಾದಿಸಾಧನಗಳನ್ನು ಅನುಷ್ಠಾನ ಮಾಡಬೇಕಾಗಿಲ್ಲ) (೨) ಎಂದು ಶಂಕಾ ಬಂದರೆ ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಕೃತಾತ್ಯಯೇಽನುಶಯವಾನ್ದೃಷ್ಟಸ್ಮೃತಿಭ್ಯಾಂ ಓಂ ॥ ೮ ॥

ಸೂತ್ರಾರ್ಥ ॥ ಕರ್ಮಕ್ಕೆ ಭೋಗದಿಂದ ಕ್ಷಯವಾಗೋಣ ಜೀವನು ಕರ್ಮಶೇಷ ವುಳ್ಳವನಾಗಿಯೇ ಬರುತ್ತಾನೆ. ತತಃ ಶೇಷೇಣ ಎನ್ನುವ ಶ್ರುತಿಯಿಂದಲೂ ಭುಕ್ತಶೇಷ ಎನ್ನುವ ಸ್ಮೃತಿಯಿಂದಲೂ.

**ಭಾಷ್ಯ ॥ (೧) ತತಃ ಶೇಷೇಣೇಮಂ ಲೋಕಮಾಯಾತಿ ಪುನಃ ಕರ್ಮ ಕುರುತೇ ಪುನರ್ಗಚ್ಛತಿ ಪುನರಾಗಚ್ಛತಿ ॥ ಇತಿ ಶ್ರುತೇಃ ॥ (೨) ಭುಕ್ತ ಶೇಷಾನುಶಯವಾನಿಮಾಂ ಪ್ರಾಪ್ಯಭುವಂ ಪುನಃ । ಕರ್ಮ ಕೃತ್ವಾ ಪುನರ್ಗಚ್ಛೇತ್ಪುನರಾಯಾತಿ ನಿತ್ಯಶಃ ॥ ಆಚತುರ್ದಶಮಾದ್ವರ್ಷಾತ್ಕರ್ಮಾಣಿ ನಿಯಮೇನ ತು । ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಂ ॥ ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ । ಇತ್ಯಾದಿಸ್ಮೃತೇಶ್ಚ ಶೇಷವಾನೇವಾಯಾತಿ ॥ ೮ ॥ ಅಧಿ. ೮ ॥ ೨ ॥**

ಭಾಷ್ಯಾರ್ಥ ॥ (೧) ಸ್ವರ್ಗಾದಿಸ್ಥಾನಗಳಿಂದ ಕರ್ಮಶೇಷದಿಂದ ಕೂಡಿಯೇ ಈ ಭೂಲೋಕಕ್ಕೆ ಬರುತ್ತಾನೆ. ಪುನಃ ಕರ್ಮವನ್ನು ಮಾಡುತ್ತಾನೆ. ಪುನಃ ಪರಲೋಕಕ್ಕೆ ಹೋಗುತ್ತಾನೆ. ಪುನಃ ಈ ಲೋಕಕ್ಕೆ ಬರುತ್ತಾನೆ, ಎನ್ನುವ ಶ್ರುತಿಯಿಂದ (೨) ಭುಕ್ತವಾದ ಶಿಷ್ಟಕರ್ಮಾನುಗತಿಯುಳ್ಳವನಾಗಿ ಈ ಭೂಲೋಕ ವನ್ನು ಹೊಂದಿ ಪುನಃ ಕರ್ಮವನ್ನು ಮಾಡಿ ಪುನಃ ಸ್ವರ್ಗಕ್ಕೆ ಹೋಗುವನು. ನಿಯಮೇನ ತಿರುಗಿ ಬರುತ್ತಾನೆ. ಹದಿನಾಲ್ಕು ವರ್ಷವನ್ನು ಆರಂಭಿಸಿ, ನಿಯಮೇನ ಹತ್ತು ಶರೀರಗಳಿಗೆ ಕಡಿಮೆಯಾಗದ ಶರೀರಗಳಿಗೆ ಕಾರಣಗಳಾದ ಕರ್ಮಗಳನ್ನು ಈ ಬದ್ಧಜೀವನು ಮಾಡುತ್ತಾನೆ. ಆದಕಾರಣ ಬಂಧಕಕರ್ಮಕ್ಕೆ ನಿಶ್ಶೇಷ ನಾಶನಿಮಿತ್ತದಿಂದ ಕರ್ಮಮೂಲಕ ಬಂಧನಿವೃತ್ತಿರೂಪವಾದ ಮುಕ್ತಿಯು ಹೇಗೆ ಆಗುವುದು? ಹೇಗೂ ಆಗಲಾರದು. ಇತ್ಯಾದಿ ಸ್ಮೃತಿಗಳಿಂದ ಕರ್ಮಶೇಷವುಳ್ಳವನಾಗಿಯೇ (ಅಂದರೆ— ಕರ್ಮ ಮಾಡಿ ಇಲ್ಲಿಂದ ಹೋದ ಜೀವನು ಸ್ವರ್ಗಾದಿಗಳಲ್ಲಿ ಕರ್ಮಫಲ ವನ್ನು ಭೋಗಿಸಿ ಆ ಕರ್ಮಶೇಷವುಳ್ಳವನಾಗಿಯೇ ಭೂಲೋಕಕ್ಕೆ ಬರುತ್ತಾನೆ.) (ಪುನಃ ಪುನಃ ಹೀಗೆಯೇ, ಕರ್ಮವನ್ನು ಮಾಡುತ್ತಾನೆ. ಹೀಗೆ ಕರ್ಮ ಪರಿಸಮಾಪ್ತಿಯು ಇಲ್ಲದಿರುವುದರಿಂದ ವೈರಾಗ್ಯಾದಿ ಸಾಧನಗಳು ಇಲ್ಲದೆ ಮುಕ್ತಿಯಾಗಲಾರದು.) ॥ ೮ ॥ ೨ ॥

## ಅಧಿಕರಣ ಸಾರಾಂಶ

ಬಂಧಕೀಭೂತಕರ್ಮಕ್ಕೆ ಸ್ವರ್ಗಾದಿಗಳಲ್ಲಿ ನಿಶ್ಶೇಷ ಭೋಗವೋ ಏಕದೇಶೇನ ಭೋಗವೋ, **ಕರ್ಮಣಾ ಬಧ್ಯತೇ ಜಂತುಃ** ಇತ್ಯಾದಿಗಳಿಂದ ಜೀವನೊಟ್ಟಿಗೆ ಸ್ವರ್ಗದಿಂದ ಬಂದಿರತಕ್ಕ ಬಂಧಕವಾದ ಕಾಮ್ಯಕರ್ಮಕ್ಕೆ ಭಾಗದಿಂದ ಭೋಗವನ್ನು ಕಲ್ಪಿಸಲಿಕ್ಕೆ ಪ್ರಮಾಣವಿಲ್ಲದಿರುವುದರಿಂದ ನಿಶ್ಶೇಷ ಭೋಗವು ಕೂಡುವುದರಿಂದಲೂ, ಭೋಗದಿಂದ ಕರ್ಮವನ್ನು ಭೋಗಿಸಿ ಕರ್ಮಶೇಷದಿಂದ ಸ್ವರ್ಗದಿಂದ ಪುನಃ ಆಗಮನ ವನ್ನು ಅಂಗೀಕರಿಸಿದರೂ ಹೀಗೆ ಎರಡು ಮೂರು ಆವೃತ್ತಿ ಆವರ್ತನದಿಂದ ನಿಶ್ಶೇಷಕರ್ಮಸಮಾಪ್ತಿಯು ಕೂಡುವುದರಿಂದಲೂ ಕರ್ಮಬಂಧವು ಸ್ವತ ಏವ ನಿವೃತ್ತಿಯಾಗುವುದರಿಂದ ವೈರಾಗ್ಯಾದಿಸಾಧನಗಳು ಬೇಕಾಗಿಲ್ಲ ಎಂದರೆ— **ತತಃ ಶೇಷೇಣೇಮಂ** ಎನ್ನುವ ಶ್ರುತಿಯಲ್ಲಿಯೂ **ಭುಕ್ತಶೇಷಾನುಶಯವಾನ್** ಎನ್ನುವ ಸ್ಮೃತಿಯಲ್ಲಿಯೂ ಸ್ವರ್ಗದಲ್ಲಿದ್ದವನಿಗೆ ಯಥಾಯೋಗ್ಯವಾಗಿ ಕರ್ಮವು ಒಟ್ಟಿಗೆ ಬಂದಿದ್ದರೂ ಸ್ವಲ್ಪ ಆದನ್ನು ಭೋಗಿಸಿ ಕರ್ಮಶೇಷಯುಕ್ತನಾಗಿಯೇ ಆಗಮನವನ್ನು ಪುನಃ ಕರ್ಮಕರಣವನ್ನು **ದಶಾವರಾಣಾಂ** ಎಂದು ಬಹುಕರ್ಮಕರಣವನ್ನು ಹೇಳಿದ್ದರಿಂದ ಭೋಗದಿಂದ ನಿಶ್ಶೇಷ ಕರ್ಮಕ್ಷಯವು ಇಲ್ಲದಿರುವುದರಿಂದ ವೈರಾಗ್ಯಾದಿ ಸಾಧನಗಳು ಆವಶ್ಯಕಗಳೇ. ॥ ಅಧಿ. ೮ ॥

**ಕೃತಾತ್ಯಯಾಧಿಕರಣವು ಸಮಾಪ್ತವಾಯಿತು.**

# ೯ ಯಥೇತಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸ್ವರ್ಗದಿಂದ ಆಗಮನಪ್ರಕಾರವನ್ನು ನಿರೂಪಿಸುತ್ತಾರೆ—

**ಭಾಷ್ಯ ॥ ಯಥೇತಮೇವ ಗಚ್ಛತಿ ಯಥೇತಮಾಗಚ್ಛತಿ ಸ ಭುಂಕ್ತೇ ಸ ಕರ್ಮ ಕುರುತೇ ಸ ಪರಿವರ್ತತ ಇತಿ ಗತಿಪ್ರಕಾರೇಣಾಗತಿಃ ಪ್ರತೀಯತೇ । ಅತೋ ಬ್ರೂತೇ ॥ ೧ ॥**

**ಭಾಷ್ಯಾರ್ಥ ॥** ಹೇಗೆ ಯಾವ ಮಾರ್ಗದಿಂದ ಸ್ವರ್ಗದಿಂದ ಈ ಲೋಕಕ್ಕೆ ಬಂದಿದ್ದಾನೋ, ಹಾಗೆಯೇ ಪುನಃ ಅದೇ ಮಾರ್ಗದಿಂದ ಸ್ವರ್ಗಲೋಕಕ್ಕೆ ಭೂಲೋಕದಿಂದ ಹೋಗುತ್ತಾನೆ. ಹೇಗೆ ಈ ಲೋಕದಿಂದ ಸ್ವರ್ಗಕ್ಕೆ ಹೋಗುತ್ತಾನೋ, ಹಾಗೆಯೇ ಪುನಃ ಈ ಲೋಕಕ್ಕೆ ಬರುತ್ತಾನೆ. ಆ ಜೀವನು ಕರ್ಮಫಲವನ್ನು ಸ್ವರ್ಗಾದಿಗಳಲ್ಲಿ ಭೋಗಿಸುತ್ತಾನೆ. ಆತನು ಭೂಮಿಯಲ್ಲಿ ಕರ್ಮವನ್ನು ಮಾಡುತ್ತಾನೆ. ಆತನು ತಿರುಗಾಡುತ್ತಾ ಇರುತ್ತಾನೆ. ಇತ್ಯಾದಿ ಶ್ರುತಿಗಳಲ್ಲಿ ಹೋದ ಪ್ರಕಾರವಾಗಿಯೇ ಆಗಮನವು ತೋರುತ್ತದೆ. (ಆದಕಾರಣ ಕರ್ಮಫಲಕ್ಕೆ ಅತಿಕ್ಲೇಶವಿಲ್ಲದಿರುವುದರಿಂದ ಅಲ್ಲಿ ವೈರಾಗ್ಯವನ್ನು ಸಂಪಾದಿಸಬೇಕಾಗಿಲ್ಲ) ಎಂದು ಶಂಕಾ ಬಂದರೆ ಉತ್ತರವನ್ನು ಹೇಳುತ್ತಾರೆ.

**ಸೂತ್ರ ॥ ಓಂ ಯಥೇತಮನೇವಂ ಚ ಓಂ ॥ ೯ ॥**

**ಸೂತ್ರಾರ್ಥ ॥** ಜೀವನು ಸ್ವರ್ಗಕ್ಕೆ ಹೋದ ಮಾರ್ಗವನ್ನು ಅತಿಕ್ರಮಿಸದೆಯೂ ಅತಿಕ್ರಮಿಸಿಯೂ

ಬರುತ್ತಾನೆ. ಅಂದರೆ ಕೆಲವು ಮಾರ್ಗವನ್ನು ಅತಿಕ್ರಮಿಸದೆಯೂ ಕೆಲವು ಮಾರ್ಗವನ್ನು ಅತಿಕ್ರಮಿಸಿಯೂ ಬರುತ್ತಾನೆ. ಏಕೆಂದರೆ— ಧೂಮಾದಭ್ರಂ ಎನ್ನುವ ಶ್ರುತಿಯು ಎರಡು ಪ್ರಕಾರವಾಗಿಯೂ ತೋರಿಸುತ್ತದೆ.

**ಭಾಷ್ಯ ॥ ಧೂಮಾದಭ್ರಮಭ್ರಾದಾಕಾಶಮಾಕಾಶಾಚ್ಚಂದ್ರಲೋಕಂ ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಽಭ್ರಂ ಭವತ್ಯಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ। ಇತಿ ಕಾಷಾಯಣಶ್ರುತೇರ್ಯಥಾಗತಮನ್ಯಥಾ ಚ ॥ ೯ ॥ ಅಧಿ. ೯ ॥ ೨ ॥**

ಭಾಷ್ಯಾರ್ಥ ॥ (ದೇಹವನ್ನು ಬಿಟ್ಟು ಹೋದ ಯಜಮಾನನು ಧೂಮಲೋಕವನ್ನು ಹೊಂದಿ) ಧೂಮಲೋಕದಿಂದ ಅಭ್ರದೇವತಾಕಲೋಕವನ್ನು ಅದರಿಂದ ಆಕಾಶದೇವತಾ ಲೋಕವನ್ನು ಅದರಿಂದ ಚಂದ್ರಲೋಕವನ್ನು ಹೊಂದುತ್ತಾನೆ. ಯಾವ ಮಾರ್ಗದಿಂದ ಆಕಾಶದಿಂದ ಚಂದ್ರಲೋಕವನ್ನು ಕುರಿತು ಹೊಂದಿರುತ್ತಾನೋ ಅದೇ ಮಾರ್ಗದಿಂದ ಪುನಃ ಆಕಾಶವನ್ನು ಹೊಂದುತ್ತಾನೆ. ಆಕಾಶದಿಂದ ವಾಯುಲೋಕವನ್ನು ಹೊಂದುತ್ತಾನೆ. ವಾಯುದೇಹಸ್ಥನಾಗಿ ಧೂಮದೇವತಾ ದೇಹಸ್ಥನು ಆಗುತ್ತಾನೆ. ಧೂಮದೇವತಾ ದೇಹಸ್ಥನು ಆಗಿ ಅಭ್ರದೇವತಾ ದೇಹಸ್ಥನು ಆಗುತ್ತಾನೆ. ಅಭ್ರದೇವತಾ ದೇಹಸ್ಥನಾಗಿ ಮೇಘದೇವತಾ ದೇಹಸ್ಥನು ಆಗುತ್ತಾನೆ. ಮೇಘದೇವತಾ ದೇಹಸ್ಥನಾಗಿ ವೃಷ್ಟಿದ್ವಾರಾ ಭೂಮಿಗೆ ಬರುತ್ತಾನೆ, ಎನ್ನುವ ಕಾಷಾಯಣ ಶ್ರುತಿಯಿಂದ ಯಾವ ಮಾರ್ಗದಿಂದ ಈ ಲೋಕದಿಂದ ಚಂದ್ರಲೋಕಕ್ಕೆ ಹೋಗಿದ್ದಾನೋ ಆ ಮಾರ್ಗದಿಂದಲೂ ಮಾರ್ಗಾಂತರದಿಂದಲೂ (ಕರ್ಮಿಯು ಭೂಲೋಕಕ್ಕೆ ಬರುತ್ತಾನೆ.) ॥ ೯ ॥ ೨ ॥

## ಅಧಿಕರಣ ಸಾರಾಂಶ

ಹೋದ ಮಾರ್ಗದಿಂದಲೇ ಆಗಮನವೋ ಬೇರೆ ಮಾರ್ಗದಿಂದಲೋ ಎಂದು ಸಂದೇಹವು. ಪರಿಚಿತಮಾರ್ಗವನ್ನು ಬಿಟ್ಟು ಅಪರಿಚಿತ ಮಾರ್ಗದಿಂದ ಬರಲಿಕ್ಕೆ ಕಾರಣವಿಲ್ಲದಿರುವುದರಿಂದಲೂ **ಯಥೇ ತಮಾಗಚ್ಛತಿ** ಎನ್ನುವ ಶ್ರುತಿವಿರೋಧದಿಂದಲೂ ಹೋದ ಮಾರ್ಗದಿಂದಲೇ ಬರುವುದರಿಂದ ಗಮನಾಗಮನಾದಿಗಳಲ್ಲಿ ಹೆಚ್ಚು ಕ್ಲೇಶವಿಲ್ಲದಿರುವುದರಿಂದ ಕರ್ಮದಲ್ಲಿ ವೈರಾಗ್ಯವು ಬರಲಾರದೆಂದರೆ— ಹೋಗಲಿಕ್ಕೆ ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಗಮನಸ್ಮರಣವು ಆಗಮನಕ್ಕೆ ಉಪಯುಕ್ತವಾಗ ದಿರುವ ಪ್ರಯುಕ್ತ **ಧೂಮಾದಭ್ರಂ** ಎನ್ನುವ ಶ್ರುತಿಯಲ್ಲಿ ಆಕಾಶಪರ್ಯಂತವಾಗಿಯೇ ಗತಿಮಾರ್ಗದಿಂದ ಗಮನಪ್ರಕಾರದಿಂದ ಆಗಮನವು. ಅದಕ್ಕಿಂತ ಕೆಳಗೆ ಮಾರ್ಗಾಂತರದಿಂದ ಆಗಮನವು ಎಂದು ಶ್ರುತಿಸಿದ್ಧವಾದ ಪ್ರಯುಕ್ತ ಗಮನಾಗಮನಗಳಲ್ಲಿ ಕ್ಲೇಶವಿರುವುದರಿಂದ ಕರ್ಮದಲ್ಲಿ ವೈರಾಗ್ಯವು ಆವಶ್ಯಕವೇ. ॥ ಅಧಿ. ೯ ॥

**ಯಥೇತಾಧಿಕರಣವು ಸಮಾಪ್ತವಾಯಿತು**

# ೧೦ ಚರಣಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಗಮನಾಗಮನಗಳು ಕರ್ಮಫಲಗಳೆಂದು ಸಾಧಿಸುತ್ತಾರೆ—

## ಸೂತ್ರ ॥ ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ ॥ ೧೦ ॥

ಸೂತ್ರಾರ್ಥ ॥ ಗಮನಾಗಮನಗಳು ಕರ್ಮಾಂಗಾಚಾರ ಹೇತುಕವೇ, ಕರ್ಮ ಹೇತುಕವಲ್ಲ, ರಮಣೀಯಚರಣಾಃ ಎನ್ನುವ ಶ್ರುತಿಯಿಂದ, ಎಂದರೆ ಹಾಗೆ ಹೇಳಕೂಡದು. ಏಕೆಂದರೆ, ಆ ಶ್ರುತಿಯು ಯಜ್ಞಾದಿಗಳಿಗೆ ಉಪಲಕ್ಷಕವಾದ ಅರ್ಥವುಳ್ಳದ್ದು. (ಅಂದರೆ— ಉಪಲಕ್ಷಣಯಾ ಯಜ್ಞಾದಿ ಕರ್ಮಗಳನ್ನೇ ಹೇಳತಕ್ಕದ್ದು.) ಎಂದು ಕಾರ್ಷ್ಣಾಜನಿ ಋಷಿಯು ತಿಳಿಯುತ್ತಾರೆ.

**ಭಾಷ್ಯ ॥ (೧) ತದ್ಯ ಇಹ ರಮಣೀಯಚರಣಾ ರಮಣೀಯಾಂ ಯೋನಿಮಾಪದ್ಯಂ ತೇ ಕಪೂಯಚರಣಾಃ ಕಪೂಯಾಂ** (ಛಾ.೫ ೧೦.೭.) **। ಇತಿ ಶ್ರುತೇಶ್ಚರಣ ಫಲಮೇವ ಗಮನಾಗಮನಂ ನ ಯಜ್ಞಾದಿಕೃತಃ ॥ (೨) ಆಚಾರ ಇತಿ ಸಂಪ್ರೋಕ್ತಃ ಕರ್ಮಾಂಗತ್ವೇನ ಶುದ್ಧಿದಃ । ಅಶುದ್ಧಿದಸ್ತ್ವನಾಚಾರಶ್ಚರಣಂ ತೂಭಯಂ ಮತಂ ಇತಿ ಸ್ಮೃತೇರಿತಿ ಚೇತ್। (೩) ನ । ಯಜ್ಞಾದ್ಯುಪಲಕ್ಷಣಾರ್ಥಾ ಚರಣಾದಿಶ್ರುತಿರಿತಿ ಕಾರ್ಷ್ಣಾಜಿನಿರ್ಮನ್ಯತೇ ॥ ೧೦ ॥ ೧ ॥**

ಭಾಷ್ಯಾರ್ಥ ॥ (೧) ಆ ಕರ್ಮಿಗಳಲ್ಲಿ ಯಾರು ಸದಾಚಾರಾದಿಗಳುಳ್ಳವರೋ ಅವರು ಈ ಭೂಮಿಯಲ್ಲಿ ಸಾಧುವಾದ ಬ್ರಾಹ್ಮಣಾದಿ ಯೋನಿಯನ್ನು ಹೊಂದುತ್ತಾರೆ. ಯಾರು ಅಸಾಧುವಾದ ಆಚಾರಾದಿಗಳುಳ್ಳವರೋ ಅವರು ಅಸಾಧುವಾದ ಶೂದ್ರಾದಿಯೋನಿಯನ್ನು ಹೊಂದುತ್ತಾರೆ, ಎನ್ನುವ ಶ್ರುತಿಯಿಂದ ಗಮನಾಗಮನವು ಚರಣಫಲವೇ. ಯಜ್ಞಾದಿಗಳನ್ನು ಮಾಡತಕ್ಕ ಪುರುಷನ ಯಜ್ಞಾದಿಕರ್ಮ ಫಲವಲ್ಲ. (೨) (ಯಜ್ಞಾದಿಕರ್ಮವೇ ಚರಣವಾದುದರಿಂದ ಗತಾಗತವು ಚರಣ ಫಲವು ಯಜ್ಞಾದಿಫಲವಲ್ಲವೆಂದರೆ) — ಕರ್ಮಾಂಗವಾಗಿ ಹೇಳಲ್ಪಟ್ಟ ಆಚಾರವೇ ಕ್ರಿಯಾ, ದ್ರವ್ಯ, ತತ್ಕರ್ತೃಗಳಿಗೆ ಶುದ್ಧಿಪ್ರದವು. ಅನಾಚಾರವಾದರೂ ಅಶುದ್ಧಿಯನ್ನು ಕೊಡತಕ್ಕದ್ದು. ಆಚಾರ ಅನಾಚಾರ ಎರಡೂ ಚರಣ ಶಬ್ದವಾಚ್ಯವೆಂದು ಸಮ್ಮತವು, ಎನ್ನುವ ಸ್ಮೃತಿಯಿಂದ (ಆಚಾರ ಅನಾಚಾರ ಉಭಯ ರೂಪಚರಣವು ಕರ್ಮದಿಂದ ಇತರವಾದುದೇ ಪ್ರತೀತವಾಗುತ್ತದೆ. ಆದಕಾರಣ ಗಮನಾಗಮನಾದಿಗಳು ಇತರ ಫಲವಾದುದರಿಂದ ಕರ್ಮದಿಂದ ಪ್ರಾಪ್ಯವಾದ ಸ್ವರ್ಗವೇ ಪುನರಾವೃತ್ತಿ ಶೂನ್ಯವು. ಅಲ್ಲಿ ವೈರಾಗ್ಯವನ್ನು ಸಂಪಾದಿಸಬೇಕಾಗಿಲ್ಲ) ಎಂದು ಶಂಕಾ ಬಂದರೆ— (೩) ನಃ ಗಮನಾಗಮನವು ಕರ್ಮಫಲವಲ್ಲವೆಂದಲ್ಲ, ಮತ್ತೆ ಯಜ್ಞಾದಿ ಕರ್ಮಫಲವೇ. ಚರಣದಿಂದ ರಮಣೀಯ ಕಪೂಯ ಯೋನಿಯು ಬರುವುದು ಎಂದು ಹೇಳುವ ಚರಣಾದಿಪದಘಟಿತವಾದ ಶ್ರುತಿಯು (ಆದಿಪದದಿಂದ ಅಥ ಯ ಇಮೇ ಗ್ರಾಮೇ ಇತ್ಯಾದಿ) ಯಜ್ಞಾದಿ ರೂಪ ಲಾಕ್ಷಣಿಕಾರ್ಥವುಳ್ಳದ್ದು. ಅಜಹಲ್ಲಕ್ಷಣಯಾ ಯಜ್ಞಾದಿಕರ್ಮ ಪ್ರತಿಪಾದಕವು. (ಏವಂಚ

ಗಮನಾಗಮನಗಳು ಕರ್ಮಫಲಗಳೆಂದು ಶ್ರುತ್ಯಾದಿ ಪ್ರಮಿತಗಳಾಗಿವೆ) ಎಂದು ಕಾರ್ಷ್ಣಾಜಿನಿ ಮುನಿಯು ತಿಳಿಯುತ್ತಾರೆ. ॥ ೧೦ ॥ ೧ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ಓಂ ॥ ೧೧ ॥

ಸೂತ್ರಾರ್ಥ ॥ ಚರಣಾದಿಶ್ರುತಿಯು ಯಜ್ಞಾದ್ಯುಪಲಕ್ಷಕವಾದರೆ ಚರಣಶಬ್ದಕ್ಕೆ ಆನರ್ಥಕ್ಯವು. ರಮಣೀಯ ಕಪೂಯಪದಗಳಿಂದಲೇ ಯಜ್ಞಾದ್ಯುಪಲಕ್ಷಣವು ಕೂಡುವುದರಿಂದ, ಎಂದರೆ ಹಾಗೆ ಹೇಳಕೂಡದು. ಯಜ್ಞಾದಿಗಳಲ್ಲಿರುವ ರಮಣೀಯತ್ವಾದಿಗಳಿಗೆ ಸಾಧ್ವಸಾಧ್ವಾಚಾರಾಪೇಕ್ಷತ್ವ ವಿದ್ದುದರಿಂದ.

## ಭಾಷ್ಯ ॥ (೧) ತರ್ಹಿ ರಮಣೀಯಾಃ ಕಪೂಯಾ ಇತ್ಯೇವ ಸ್ಯಾತ್ । ಚರಣ ಶಬ್ದಸ್ಯಾನರ್ಥಕ್ಯಮಿತಿ ಚೇತ್ ॥ (೨) ನ । ಚರಣಾಪೇಕ್ಷತ್ವಾದ್ರಮಣೀಯ ತ್ವಾದೇಸ್ತಜ್ಜ್ಞಾಪನಾರ್ಥತ್ವೇನೋಪಪತ್ತೇಃ ॥ ೧೧ ॥ ೨ ॥

ಭಾಷ್ಯಾರ್ಥ ॥ (೧) ರಮಣೀಯಚರಣಾಃ ಎನ್ನುವ ಶ್ರುತಿಯು ಯಜ್ಞಾದಿಕರ್ಮಗಳಿಗೆ ಉಪಲಕ್ಷಕವಾದರೆ) ರಮಣೀಯಾಃ ಕಪೂಯಾಃ ಎಂದೇ ಪ್ರಯೋಗ ಮಾಡಬೇಕಿತ್ತು. (ರಮಣೀಯ ಕಪೂಯ ಪದಗಳಿಂದಲೇ ಉಪಲಕ್ಷಣವು ಕೂಡುವುದು. ತಥಾಚ) ಚರಣಶಬ್ದಕ್ಕೆ ವೈಯರ್ಥ್ಯವು. (ಅಂದರೆ ಚರಣ ಶಬ್ದಪ್ರಯೋಗವು ವ್ಯರ್ಥವು.) ಎಂದರೆ— (೨) ಹಾಗೆ ಹೇಳಕೂಡದು. (ಅಂದರೆ— ವೈಯರ್ಥ್ಯವು ಬರಬೇಕಾಗಿರುವುದರಿಂದ ಉಪಲಕ್ಷಕತ್ವವೇ ಇಲ್ಲವೆನ್ನುವ ಪಕ್ಷವು ಯುಕ್ತವಲ್ಲ) (ಯದ್ಯಪಿ ರಮಣೀಯಾದಿ ಪದದಿಂದ ಯಜ್ಞಾದ್ಯುಪಲಕ್ಷಣವು ಶಕ್ಯವಾಗುವುದು. ಆದಾಗ್ಯೂ ಯಜ್ಞಾದಿಕಾರಿಗಳ ಸಾಧ್ವಸಾಧು ಯಜ್ಞಾದಿಮತ್ವಕ್ಕೆ ಸ್ನಾನ ಆಚಮನ ಮೊದಲಾದ ಸದಾಚಾರಗಳ, ಮತ್ತು ದುರಾಚಾರಗಳ ಅಪೇಕ್ಷತ್ವವಿದ್ದುದರಿಂದ) ರಮಣೀಯ ಚರಣ, ಕಪೂಯ ಚರಣಗಳಿಂದಲೇ ಯಜ್ಞಾದಿಕಾರಿಗಳಿಗೆ ರಮಣೀಯತ್ವಾದಿಗಳು ಎಂದು ತಿಳಿಸುವುದಕ್ಕಾಗಿ ಚರಣಶಬ್ದಕ್ಕೆ ಸಾರ್ಥಕ್ಯವು ಕೂಡುವುದರಿಂದ (ಆನರ್ಥಕ್ಯವಿಲ್ಲ. ಇಲ್ಲವಾದರೆ ರಮಣೀಯಾಃ ಕಪೂಯಾಃ ಎನ್ನುವದಕ್ಕೆ ಲಕ್ಷಣಯಾ ರಮಣೀಯ ಕಪೂಯ ಯಜ್ಞಾದಿಗಳನ್ನು ಮಾಡತಕ್ಕವರು ಎನ್ನುವ ಅರ್ಥವು ಸಿಗುವುದಾದರೂ ಯಜ್ಞಾದಿಕರ್ತೃತ್ವವು ಸಮಾನವಾಗುವಾಗ ಕೆಲವರಿಗೆ ರಮಣೀಯ ಯಜ್ಞಾದಿಮತ್ವವು ಇತರರಿಗೆ ಕಪೂಯ ಯಜ್ಞಾದಿಮತ್ವವು ಹೇಗೆ ಕೂಡುತ್ತದೆ ಎನ್ನುವ ಶಂಕೆಯು ಬರುವುದು. ತಥಾಚ ರಮಣೀಯ ಚರಣತ್ವದಿಂದ ಯಾವ ಸಾಧುಗಳು ಯಜ್ಞಾದಿಗಳನ್ನು ಮಾಡುವವರೋ ಅವರು ರಮಣೀಯರು ಎಂದು ಶ್ರುತಿಯೋಜನೆಯನ್ನು ಇಟ್ಟುಕೊಂಡರೆ ಆ ಯಜ್ಞಾಧಿಕಾರಿಗಳಿಗೂ ರಮಣೀಯ ಕಪೂಯಾಚಾರಗಳಿಂದ ಈ ರಮಣೀಯತ್ವಾದಿಗಳು ಎಂದು ತಿಳಿಸಿಕೊಡುವುದರಿಂದ ಚರಣಶಬ್ದಕ್ಕೆ ಸಾರ್ಥಕ್ಯವು ಬರುವುದು.) ॥ ೧೧ ॥ ೨ ॥

ಪೀಠಿಕೆ ॥ ಪ್ರಕಾರಾಂತರದಿಂದ ಚರಣಶ್ರುತಿಯನ್ನು ವ್ಯಾಖ್ಯಾನ ಮಾಡತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸುಕೃತದುಷ್ಕೃತೇ ಏವೇತಿ ತು ಬಾದರಿಃ ಓಂ ॥ ೧೨ ॥

**ಭಾಷ್ಯ ॥ (೧) ಧರ್ಮಂ ಚರತ ಮಾಧರ್ಮಮಿತ್ಯಾದಿಪ್ರಯೋಗಾತ್ಸುಕೃತದುಷ್ಕೃತೇ ಏವ ಚರಣಶಬ್ದೋಕ್ತೇ । ಇತಿ ಬಾದರಿರ್ಮನ್ಯತೇ ॥ (೨) ತು ಶಬ್ದಾತ್ಸ್ವಸಿದ್ಧಾಂತೋಽಪಿ ಸ ಏವೇತಿ ಸೂಚಯತಿ ॥ (೩) ತು ಶಬ್ದಸ್ತು ವಿಶೇಷೇ ಸ್ಯಾತ್ಸ್ವಸಿದ್ಧಾಂತೇಽವ— ಧಾರಣೇ । ಇತಿ(ಚ) ನಾಮಮಹೋದಧೌ ॥ ೧೨ ॥ ಅಧಿ. ೧೦ ॥ ೩ ॥**

**ಭಾಷ್ಯಾರ್ಥ ॥** (೧) **ಧರ್ಮಂ ಕುರುತ, ಅಧರ್ಮಂ ಮಾ ಕುರುತ**— ಧರ್ಮವನ್ನು ಮಾಡಿರಿ, ಅಧರ್ಮವನ್ನು ಮಾಡಬೇಡಿರಿ ಎನ್ನುವ ಅರ್ಥದಲ್ಲಿ ಧರ್ಮಂ ಚರತ ಮಾಽಧರ್ಮಂ ಇದು ಮೊದಲಾದ ಪ್ರಯೋಗಗಳು ಇದ್ದುದರಿಂದ ಚರಣಶಬ್ದಕ್ಕೆ ಕರ್ಮವಾಚಕತ್ವವೂ ಇದ್ದುದರಿಂದ ಸಾಧು ಅಸಾಧು ಆಚಾರಾಂಗವಾಗಿ ಮಾಡಲ್ಪಟ್ಟ ಯಜ್ಞಾದಿಕರ್ಮಗಳೇ (ಸದಸದಾಚಾರಾಂಗ ಮಾತ್ರವಲ್ಲ) **ರಮಣೀಯಚರಣಾಃ ಕಪೂಯಚರಣಾಃ** ಎನ್ನುವ ಶ್ರುತಿಯಲ್ಲಿ ಚರಣಶಬ್ದದಿಂದ ಹೇಳಲ್ಪಟ್ಟವುಗಳು. (ಆದಕಾರಣ ವಿರೋಧಶಾಂತಿಗಾಗಿ ಲಕ್ಷಣಾವನ್ನೇ ಅವಶ್ಯವಾಗಿ ಆಶ್ರಯಿಸಬೇಕಾಗಿಲ್ಲ) ಎಂದು ಬಾದರಿ ಆಚಾರ್ಯರು (ಶುಕಾಚಾರ್ಯರು) ತಿಳಿಯುತ್ತಾರೆ. (೨) (ಪರಮತವನ್ನು ಹೇಳಿ ಸೂತ್ರಕಾರರು ತನ್ನ ಮತವನ್ನು ಏಕೆ ಹೇಳಲಿಲ್ಲವೆಂದರೆ) ತು ಶಬ್ದದಿಂದ ತನ್ನ ಸಿದ್ಧಾಂತವೂ ಅದೇವೇ ಎಂದು ಸೂಚಿಸುತ್ತಾರೆ. (೩) ತು ಶಬ್ದವಾದರೂ ವಿಶೇಷ ಎನ್ನುವ ಅರ್ಥದಲ್ಲಿಯೂ, ತನ್ನ (ಗ್ರಂಥ ಕರ್ತೃಗಳ) ಸಿದ್ಧಾಂತ ಎನ್ನುವ ಅರ್ಥದಲ್ಲಿಯೂ ಅವಧಾರಣ ಎನ್ನುವ ಅರ್ಥದಲ್ಲಿಯೂ ಇದೆ. ಎಂದು ನಾಮ ಮಹೋದಧಿ ಎನ್ನುವ ಗ್ರಂಥದಲ್ಲಿದೆ. ॥ ೧೨ ॥ ೨. ॥

## ಅಧಿಕರಣ ಸಾರಾಂಶ

ಗಮನಾಗಮನವು ಚರಣಫಲವೋ ಕಾಮ್ಯಕರ್ಮಫಲವೋ, ಅದಕ್ಕಾಗಿ ತದ್ಯ ಇಹ ಎನ್ನುವ ಶ್ರುತಿಯಲ್ಲಿ ಚರಣಶಬ್ದವು ಕರ್ಮಾಂಗಾಚಾರಪರವೋ ಅಥವಾ ಕರ್ಮ ಪರವೋ ಎಂದು ಸಂದೇಹವು. ಗಮನಾಗಮನವು ಚರಣಫಲವೇ. ಕರ್ಮಫಲವಲ್ಲ. ಚರಣಶ್ರುತಿಯಲ್ಲಿ ಗಮನಾಗಮನಕ್ಕೆ ಚರಣಫಲತ್ವವನ್ನು ಹೇಳಿದ್ದರಿಂದ ಚರಣವು ಕರ್ಮವಲ್ಲ. **ಸ ಯಥಾಕಾರೀ** ಎನ್ನುವ ಶ್ರುತಿಯಲ್ಲಿಯೂ **ಆಚಾರ ಇತಿ ಸಂಪ್ರೋಕ್ತಃ** ಎನ್ನುವ ಸ್ಮೃತಿಯಲ್ಲಿಯೂ ಕರ್ಮಾಚಾರಗಳಿಗೆ ಭೇದವನ್ನು ಹೇಳಿದೆ. ಶ್ರುತಿಯಲ್ಲಿ ಚರಣಶಬ್ದಕ್ಕೆ ಲಕ್ಷಣಯಾ ಕರ್ಮಪರತ್ವವಿದ್ದರೆ ಅದಕ್ಕೆ ಆನರ್ಥಕ್ಯವು ಬರಬೇಕಾಗಿರುವುದರಿಂದ ಯಜ್ಞಾದಿಕಾರಿಗಳು ಪ್ರಕೃತರಾದುದರಿಂದ ಯಾರು ಯಜ್ಞಾಧಿಕಾರಿಗಳೋ ಅವರು ರಮಣೀಯಾಂ ಇತ್ಯಾದಿ ರೂಪದಿಂದ ಹೇಳಲಿಕ್ಕೆ ಬರುವಾಗ ಚರಣಶಬ್ದವು ಇಲ್ಲವಾದರೂ ಕರ್ಮೋಪಲಕ್ಷಣವು ಕೂಡುವುದು. ಎಂದು ಪೂರ್ವಪಕ್ಷವು ಬಂದರೆ ಗತಾಗತವು ಪುಣ್ಯಪಾಪಾಖ್ಯ

ಕರ್ಮಫಲವು ಆಗಿಯೇ ಆಗುತ್ತದೆ. ಇಷ್ಟಾಪೂರ್ತಂ ಎನ್ನುವ ಶ್ರುತಿಯಲ್ಲಿಯೂ, ತ್ರೈವಿದ್ಯಾ ಮಾಂ ಎನ್ನುವ ಸ್ಮೃತಿಯಲ್ಲಿಯೂ ಗತ್ಯಾದಿಗಳು ಕರ್ಮಫಲವೆಂದು ತೋರುವುದರಿಂದ ಆ ಬಲದಿಂದ ಚರಣಶ್ರುತಿಯು ಅಜಹಲ್ಲಕ್ಷಣಯಾ ಯಜ್ಞಾದ್ಯರ್ಥಕವಾದಾಗ್ಯೂ ರಮಣೀಯಾದ್ಯಾಚಾರದಿಂದಲೇ ಯಜ್ಞ ಮಾಡುವವರಿಗೆ ರಮಣೀಯತ್ವಾದಿಗಳು ಎಂದು ಸೂಚಕವಾಗಿ ಚರಣಪದಕ್ಕೆ ಸಾರ್ಥಕ್ಯವು ಕೊಡುವುದು. ಮತ್ತೂ ಧರ್ಮಂ ಕುರುತ ಎನ್ನುವ ಅರ್ಥದಲ್ಲಿ ಧರ್ಮಂ ಚರತ ಎನ್ನುವ ಪ್ರಯೋಗಬಲದಿಂದ ಚರಣಶ್ರುತಿಯು ಯಜ್ಞಾದಿಕರ್ಮಪರವಾಗಿದೆ. ॥ ಅಧಿ. ೧೦ ॥

**ಚರಣಾಧಿಕರಣವು ಸಮಾಪ್ತವಾಯಿತು.**

## ೧೧. ಅನಿಷ್ಟಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಅನಿಷ್ಟಾಧಿಕಾರಿಗಳಿಗೆ (ಅಂದರೆ— ಯಜ್ಞಗಳನ್ನು ಮಾಡದಿದ್ದವರಿಗೆ) ಗತಾಗತದುಃಖವನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ ಪುಣ್ಯಕೃತಾಮೇವ ಗಮನಾಗಮನೇ ನೇತರೇಷಾಂ ॥ ಇತಿ ॥ ಅತ ಆಹ ॥ ೧ ॥**

ಭಾಷ್ಯಾರ್ಥ ॥ ಯಜ್ಞ ಮೊದಲಾದ ಪುಣ್ಯಕರ್ಮವನ್ನು ಮಾಡುವವರಿಗೇನೇ ಗಮನಾಗಮನಗಳು ಪಾಪಕರ್ಮಕಾರಿಗಳಾದ ಆತ್ಮಜ್ಞಾನವಿಲ್ಲದವರಿಗೆ ಗಮನ ಆಗಮನಗಳು ಇಲ್ಲ. (ಯಜ್ಞಾಧಿಕಾರಿಗಳಿಗೆ ಪ್ರತ್ಯವಾಯ ಭಯವಿದ್ದುದರಿಂದ ಗಮನಾಗಮನಗಳು ಕೂಡಬಹುದು. ಇತರರಿಗೆ ಪ್ರತ್ಯವಾಯ ಭಯವಿಲ್ಲದಿರುವುದರಿಂದ ಗಮನಾಗಮನಗಳು ಕೂಡಲಾರವು.) ಎಂದು ಶಂಕಾ ಬಂದರೆ ಉತ್ತರ ಕೊಡುತ್ತಾರೆ. ॥ ೧ ॥

### ಸೂತ್ರ ॥ (೧) ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ ಓಂ ॥ ೧೩ ॥

**ಭಾಷ್ಯ ॥ (೨) ತದ್ಯ ಇಹ ಶುಭ(ಭಾ)ಕೃತೋ ಯೇ ಚಾ(ವಾ)ಶುಭಕೃತಸ್ತೇ ಶುಭಮನುಭೂಯಾವರ್ತಂತೇ ಪುನಃ ಕರ್ಮ ಕುರ್ವಂತಿ ಪುನರ್ಗಚ್ಛಂತಿ ಪುನರಾಗಚ್ಛಂತಿ । ಇತಿ ಭಾಲ್ಲವೇಯಶ್ರುತೌ ॥ ೧೩ ॥ ೨ ॥**

ಭಾಷ್ಯಾರ್ಥ ॥ (೧) (ಯಜ್ಞಾಧಿಕಾರಿಗಳಿಗೆ ಮಾತ್ರ ಗಮನಾಗಮನಗಳು ಅಲ್ಲ. ಮತ್ತೆ) ಅನಿಷ್ಟಾಧಿ ಕಾರಿಣಾಮಪಿ=ಯಾಗಾದಿಗಳನ್ನು ಮಾಡದಿದ್ದವರಿಗೂ ತದ್ವಿರುದ್ಧ ಪಾಪಕರ್ಮಕಾರಿಗಳಿಗೂ ಶ್ರುತವಾಗಿದೆ. ಅಥವಾ ಕೇವಲ ಯಜ್ಞಾದಿಗಳನ್ನು ಮಾಡದಿದ್ದವರಿಗೆ ಗಮನಾಗಮನ ಮಾತ್ರವಲ್ಲ, ಮತ್ತೆ ಸಂಯಮನ (ಯಮಶಾಸನ) ರೂಪವಾದ ಪ್ರಬಲ ದುಃಖಾಂತರವೂ ಇದೆ. (೨) ಏಕೆಂದರೆ— ತದ್ಯ ಎನ್ನುವ ಶ್ರುತಿಯಲ್ಲಿ ಹಾಗೆ ಶ್ರುತವಾದ ಪ್ರಯುಕ್ತ. ಆ ಅಜ್ಞಾನಿಗಳಲ್ಲಿ ಈ ಲೋಕದಲ್ಲಿ ಯಾರು, ಶುಭಾಕೃತಃ = ಯಾಗಾದಿ ಪುಣ್ಯ ಕರ್ಮವನ್ನು ಮಾಡದಿದ್ದವರೋ, ಅಶುಭಕೃತಃ = ಯಜ್ಞಾದಿ ವಿರುದ್ಧ ಪಾಪ ಕರ್ಮಾದಿಗಳನ್ನು ಮಾಡಿದವರೋ ಅವರು (ಲೋಕಾಂತರಕ್ಕೆ ಹೋದವರಾಗಿ ಅಲ್ಲಿ)

ಅಶುಭವಾದ ಪಾಪಫಲವನ್ನು ಅನುಭವಿಸಿ ಪುನಃ ತಿರುಗಿ ಭೂಲೋಕಕ್ಕೆ ಬರುತ್ತಾರೆ ಬಂದು ಪುನಃ ಇಲ್ಲಿ ಕರ್ಮವನ್ನು ಮಾಡುತ್ತಾರೆ. ಪುನಃ ಪರಲೋಕಕ್ಕೆ ಹೋಗುತ್ತಾರೆ. ಪುನಃ ಪರಲೋಕದಿಂದ ಭೂಮಿಗೆ ಬರುತ್ತಾರೆ. ಎನ್ನುವ ಭಾಲ್ಲವೇಯ ಶ್ರುತಿಯಲ್ಲಿ (ಗಮನಾಗಮನಗಳು ಯಜ್ಞಾದಿಗಳನ್ನು ಮಾಡದಿದ್ದವರಿಗೂ ಉಕ್ತವಾಗಿದೆ.) ॥ ೧೩. ॥ ೨ ॥

**ಪೀಠಿಕೆ ॥** ಯಾಗಾದಿಗಳನ್ನು ಮಾಡದಿದ್ದವರಿಗೆ ಗಮನಾಗಮನ ಮಾತ್ರವಲ್ಲ. ಮತ್ತೆ ಇತರವಾದ ಅತಿ ದುಃಖವೂ ಅದೆ ಎಂದು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ಓಂ ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ಓಂ ॥ ೧೪ ॥

**ಸೂತ್ರಾರ್ಥ ॥** ನರಕದಲ್ಲಿ ಸಮ್ಯಕ್ ಯಮಶಾಸನವನ್ನು ಅನುಭವಿಸಿಯೇ ಕೆಲವರಿಗೆ (ಯಜ್ಞಾದಿಗಳನ್ನು ಮಾಡದಿದ್ದವರಿಗೆ) ನರಕದಿಂದ ಉತ್ಥಾನವು. ಇತರರಾದ ನೀಚರಾದ ತಮೋಯೋಗ್ಯರಿಗೆ ನಿತ್ಯನರಕದಲ್ಲಿ ಪಾತವು. ಯಜ್ಞಾದಿಗಳನ್ನು ಮಾಡದಿದ್ದವರಿಗೂ ತಮೋಯೋಗ್ಯರಿಗೂ ಇಂತಹ ಗತಿಯು ಸರ್ವೇ ವಾ ಏತೇ ಎನ್ನುವ ಶ್ರುತಿಸಿದ್ಧವಾದ ಪ್ರಯುಕ್ತ.

**ಭಾಷ್ಯ ॥ (೧) ಸಂಯಮನಮನುಭೂಯ ಕೇಷಾಂಚಿದಾರೋಹಃ ಕೇಷಾಂಚಿದ— ವರೋಹಃ । (೨) ತು ಶಬ್ದೋಽವಧಾರಣೇ ॥ (೩) ಸರ್ವೇ ವಾ ಏತೇಽಶುರುಭಕೃತಃ ಸಂಯಮನೇ ಪ್ರಪತಂತಿ ತತ್ರ(ಹ)ಯೇ ಪರದ್ವಿಷೋ ಗುರುದ್ವಿಷಃ ಶ್ರುತಿದ್ವಿಷಸ್ತ್ವವಮಂತಾರಃ ಶಠಾ ಮೂರ್ಖಾ ಇತಿ ತೇ ವೈತತೋಽವರುಹ್ಯ ತಮಸಿ ಪ್ರಪತಂತಿ ನೈವೈತ ಉತ್ತಿಷ್ಠಂತೇಽಪಿ ಕರ್ಹಿಚಿದ್ವಹ್ರಂ ವಾ ಏತದಿತ್ಯಾಹುರಥ ಯೇಽನ್ಯೇ ಬ್ರಹ್ಮದ್ವಿಷಃ ಸ್ತೇನಾಃ ಸುರಾಪಾ ಇತಿ ತೇ ವೈತದನುಭೂಯೇಮಂ ಲೋಕಮನುವ್ರಜಂತಿ । ಇತಿ ಕೌಂಠರವ್ಯಶ್ರುತೇಃ ॥ ೧೪ ॥ ೩ ॥**

**ಭಾಷ್ಯಾರ್ಥ ॥** (೧) ನರಕದಲ್ಲಿ ಸಮ್ಯಕ್ ಯಮಶಾಸನ ನಿಮಿತ್ತ ದುಃಖವನ್ನು ಅನುಭವಿಸಿಯೇ (ಅನುಭವಾವಸಾನದಲ್ಲಿ) ಯಜ್ಞಾದಿಗಳನ್ನು ಮಾಡದಿದ್ದ ಕೆಲವರಿಗೆ ನರಕದಿಂದ ಏಳುವಿಕೆಯು. ತಮೋಯೋಗ್ಯರಿಗೆ ಅದಕ್ಕಿಂತಲೂ ಅತಿ ನೀಚಸ್ಥಾನವಾದ ನಿತ್ಯನರಕದಲ್ಲಿ ಬೀಳುವಿಕೆಯು. (೨) (ಭಗವದ್ದ್ವೇಷಾದಿಗಳಿಂದ ಯುಕ್ತರಿಗೇನೇ ನಿತ್ಯನರಕದಲ್ಲಿ ಪಾತವು. ಇತರರಿಗೆ ಆದಕ್ಕಿಂತ ಆರೋಹವು ಎನ್ನುವ ವ್ಯವಸ್ಥಿತ ವಿಕಲ್ಪವಿದ್ದಂತೆ ಸಂಯಮನದಲ್ಲಿಯೂ ಇದೆಯೋ ಎಂದರೆ— ತು ಶಬ್ದವು ಅವಧಾರಣಾರ್ಥದಲ್ಲಿದೆ, ತಥಾಚ ಸಂಯಮನವನ್ನು ಅನುಭವಿಸಿಯೇ ಎಂದರ್ಥವು. (೩) ಈ ಎಲ್ಲಾ ಶುಭಕರ್ಮಗಳನ್ನು ಮಾಡದಿದ್ದವರು, ಶುಭವಿರುದ್ಧವಾದ ಅಶುಭಕರ್ಮಗಳನ್ನು ಮಾಡಿದವರೂ ಸಮ್ಯಕ್ ಯಮಶಾಸನಕ್ಕೆ ಅಧಿಕರಣವಾದ ನರಕದಲ್ಲಿ ಬೀಳುತ್ತಾರೆ. ಆ ಅಶುಭಕಾರಿಗಳ ಮಧ್ಯದಲ್ಲಿ ಯಾರು ಶ್ರೀಹರಿಗೆ ದ್ವೇಷಿಗಳೋ ಗುರುಗಳಿಗೆ ದ್ವೇಷಿಗಳೋ ವೇದವಿದ್ವೇಷಿಗಳೋ (ವೇದಗಳಿಗೆ) ಅಪ್ರಾಮಾಣ್ಯವಾದಿಗಳೋ, ವೇದಾನಭಿಮತ ಅರ್ಥವಕ್ತೃಗಳೋ) (ದ್ವೇಷವೆಂದರೆ ವಿರೋಧ

ಬುದ್ಧಿಯು) ಹರಿ ಗುರು ಶ್ರುತಿಗಳನ್ನು ಅವಮಾನ ಮಾಡತಕ್ಕವರು (ಅವಮತಿಯೆಂದರೆ ನೀಚತ್ವೇನ ವಿಜ್ಞಾನವು.) ಗೂಢದ್ವೇಷಿಗಳು. ತತ್ವಜ್ಞಾನರಹಿತರು ಮತ್ತು ವಿಪರೀತಜ್ಞಾನಿಗಳು, ಇದು ಮೊದಲಾದವರು (ಸ್ತ್ರೋತ್ತಮಸ್ತ್ರೀರಾಗಾದಿಗಳುಳ್ಳವರು.) ಅಜ್ಞರಾದ ಇವರೆಲ್ಲರೂ ಸಂಯಮನೀಪುರ ದಿಂದಲೂ ಕೆಳಗೆ ಇಳಿದು ಅದಕ್ಕಿಂತಲೂ ನೀಚಸ್ಥಾನವಾದ ತಮೋಲೋಕದಲ್ಲಿ ಬೀಳುತ್ತಾರೆ. ತಮಸ್ಸಿನಿಂದ ಯಾವಾಗಲೂ ಏಳುವುದೇ ಇಲ್ಲ. ಈ ತಮೋಲೋಕವನ್ನು ವಪ್ರನನ್ನಾಗಿ ಹೇಳುತ್ತಾರೆ. (ಅಂದರೆ, ಸ್ಥಿತಾನ್ ವಾರಯತಿ=ತನ್ನಲ್ಲಿ ಬಿದ್ದವರನ್ನು ಹೋಗಲಿಕ್ಕೆ ಬಿಡುವುದಿಲ್ಲ. ಅಥವಾ ಸ್ವಗತಾನಾಂ ಗಮನಂ ವಾರಯತಿ ಅಥವಾ ವರಂ ಆನಂದಂ ವಾರಯತಿ ಎನ್ನುವ ವ್ಯುತ್ಪತ್ತಿಗಳಿಂದ ವಪ್ರವೆನ್ನಿಸುತ್ತದೆ.) ಆ ಮೇಲೆ ಪರದ್ವಿಡಾದಿ ಆರು ಮಂದಿ ಇತರರಾದ ಬ್ರಾಹ್ಮಣರ ಹನನಾದಿಗಳನ್ನು ಮಾಡಿದವರೋ, ಚೋರರೋ, ಮಧ್ಯಪಾಯಿಗಳೋ ಇದು ಮೊದಲಾದವರು (ಗುರ್ವಂಗನಾಗಮನಾದಿ ಪಾಪಕರ್ಮಕರ್ತೃಗಳೋ) ಇವರೆಲ್ಲರೂ ಯಮಶಾಸನ ದುಃಖವನ್ನು ಅನುಭವಿಸಿಯೇ ಆ ಮೇಲೆ ಈ ಭೂಲೋಕಕ್ಕೆ ಬರುತ್ತಾರೆ. ಎನ್ನುವ ಕೌಂಠರವ್ಯ ಶ್ರುತಿಯಿಂದ.

ವಿಶೇಷಾಂಶ— (೧) ಜೀವಾಭೇದೋ ನಿರ್ಗುಣತ್ವಂ ಇತ್ಯಾದ್ಯಾಗಮಗಳಿಂದ ವಿಷ್ಣು ದ್ವೇಷವು ಅನೇಕ ವಿಧವೆಂದು ತಿಳಿಯತಕ್ಕದ್ದು. (೨) ವಿಷ್ಣುವಿಗೆ ಅವಮತಿಯೆಂದರೆ ನೀಚತ್ವೇನ ವಿಜ್ಞಾನವು. ಅಥವಾ ಬ್ರಹ್ಮರುದ್ರರಮಾದೀನಾಂ ಸಾಮ್ಯದೃಷ್ಟಿರನನ್ಯತಾ । ಪ್ರಾದುರ್ಭಾವಗತಸ್ಯಾಪಿ ದೋಷದೃಷ್ಟಿರಪೂರ್ಣತಾ ॥ ಧರ್ಮದೇಹಾವತಾರಾದೇರ್ಭೇದದೃಷ್ಟಿಶ್ಚ ಸಂಕರಃ । ಅವತಾರೇಷ್ವಪಿ ಜ್ಞೇಯಮವಜ್ಞಾನಂ ಜನಾರ್ದನೇ ॥ ಎನ್ನುವ ಪ್ರಮಾಣಾನುಸಾರವಾಗಿ ವಿಷ್ಣುವಿಗೆ ಅನ್ಯಸಾಮ್ಯಾದಿ ಗಳನ್ನು ತಿಳಿದುಕೊಳ್ಳುವಿಕೆಯು. ॥ ೧೪ ॥ ೩ ॥

ಪೀಠಿಕೆ ॥ ಹಿಂದೆ ಹೇಳಿದ ಅರ್ಥವನ್ನು ಸ್ಮೃತಿಯಿಂದಲೂ ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ಮರಂತಿ ಚ ಓಂ ॥ ೧೫ ॥

ಸೂತ್ರಾರ್ಥ ॥ ಈ ಅರ್ಥವನ್ನು ಸ್ಮೃತಿಕರ್ತೃಗಳು ಗಚ್ಛಂತಿ ಪಾಪಿನಃ ಇತ್ಯಾದಿ ಸ್ಮೃತಿಗಳಿಂದ ಬೋಧಿಸುತ್ತಾರೆ.

**ಭಾಷ್ಯ ॥ ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ । ತತ್ರ ಭುಕ್ತ್ವಾ ಪತಂತ್ಯೇವ ಯೇ ದ್ವಿಷಂತಿ ಜನಾರ್ದನಂ ॥ ಮಹಾತಮಸಿ ಮಗ್ನಾ ನಾಂ ನ ತೇಷಾಮುತ್ಥಿತಿಃ ಕ್ವಚಿತ್ । ಇತರೇಷಾಂ ತು ಪಾಪಾನಾಮು (ನಾಂ ವ್ಯು)ತ್ಥಾನಂ ವಿದ್ಯತೇಽಪಿ ಚ ॥ ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ । ಇತಿ ಸರ್ವತ್ರ ನಿಯಮಃ ಪಂಚಕಷ್ಟೇ ತು ತತ್ಸದಾ ॥ ಇತ್ಯಾದಿ ॥ ೧೫ ॥ ಅಧಿ. ೧೧ ॥ ೪ ॥**

ಭಾಷ್ಯಾರ್ಥ ॥ ಎಲ್ಲಾ ಪಾಪಿಷ್ಠರೂ ನರಕವನ್ನು ಹೊಂದುತ್ತಾರೆ. (ಅಲ್ಲಿ ದುಃಖವನ್ನು ಅನುಭವಿಸುತ್ತಾರೆ.) ಈ ವಿಷಯದಲ್ಲಿ ಸಂದೇಹವಿಲ್ಲ. ಆ ಪಾಪಿಗಳಲ್ಲಿ ಯಾರು ಶ್ರೀಹರಿಯನ್ನು

ದ್ವೇಷಿಸುತ್ತಾರೋ (ಗುರುದ್ವೇಷಾದಿಗಳನ್ನು ಯಾರು ಮಾಡುತ್ತಾರೋ) ಆವರು (ನರಕದಲ್ಲಿ ಸ್ವಲ್ಪಕಾಲ ದುಃಖವನ್ನು) ಅನುಭವಿಸಿ (ಅದರಿಂದಲೂ ಕೆಳಗೆ ಇಳಿದು) ಮಹಾತಮಸ್ಸಿನಲ್ಲಿ ಬೀಳುತ್ತಾರೆ. ಅದರಲ್ಲಿ ಮುಳುಗಿದವರಿಗೆ ಯಾವಾಗಲೂ ಉತ್ಥಾನವೇ ಇಲ್ಲ (ಅಂದರೆ— ಮೇಲೆ ಬರುವುದೇ ಇಲ್ಲ) ಭಗವದ್ದ್ವೇಷಿಗಳಿಂದ ಇತರರಾದ ಬ್ರಹ್ಮಹತ್ಯಾ ಮೊದಲಾದ ಪಾಪಯುಕ್ತರಿಗೆ ಪಾಪಸ್ಥಾನದಿಂದ ಆರೋಹವು ಫಲತಃ ನಿವೃತ್ತಿಯೂ ಕದಾಚಿತ್ ಇದೆ. ಸುಖದ ಅನಂತರದಲ್ಲಿ ದುಃಖವು, ದುಃಖದ ಮೇಲೆ ಸುಖವು, ಹೀಗೆ ಸರ್ವತ್ರ ಸ್ವರ್ಗ, ಅನಿತ್ಯ, ನರಕಾದಿಗಳಲ್ಲಿ ನಿಯಮವಿದೆ. ರೌರವ ಮೊದಲಾದ ಐದು ನರಕಗಳಿಂದಲೂ ಕ್ಲೇಶಯುಕ್ತವಾದ ನಿತ್ಯ ನರಕದಲ್ಲಿ ಆದರೂ ದುಃಖವೇ ಯಾವಾಗಲೂ ಇರುತ್ತದೆ. ಇದು ಮೊದಲಾದ ವಾಕ್ಯವನ್ನು (ಸ್ಮೃತಿಕರ್ತೃಗಳು ರಚಿಸುತ್ತಾರೆ.)

**ವಿಶೇಷಾಂಶ ॥ (೧) ಆದಿಪದದಿಂದ ತಾನಹಂ ದ್ವಿಷತಃ ಕ್ರೂರಾನ್ (೨) ಸರ್ವದೇವವರತ್ವೇನ ಯೋ ನ ಜಾನಾತಿ ಕೇಶವಂ, ಇತ್ಯಾದಿಗಳಿಗೆ ಸಂಗ್ರಹವು. ॥ ೧೫ ॥ ೪ ॥**

## ಅಧಿಕರಣ ಸಾರಾಂಶ

ಮಾರ್ಗಗಮನಾದಿ ದುಃಖವು ಪುಣ್ಯ ಮಾಡಿದವರಿಗೆ ಮಾತ್ರವೋ ಪುಣ್ಯ ಮಾಡದಿದ್ದವರಿಗೂ ಇದೆಯೋ ಎಂದು ಸಂದೇಹವು. ಪುಣ್ಯ ಮಾಡಿದವರಿಗೇನೇ ಗಮನಾದಿ ದುಃಖವು. ಅವರಿಗೇನೇ ಪ್ರತ್ಯವಾಯಭಯವು ಇದೆ. ಪುಣ್ಯ ಮಾಡದಿದ್ದವರಿಗೆ ಪ್ರತ್ಯವಾಯಭಯವು ಇಲ್ಲದಿರುವುದರಿಂದ ಗಮನಾದಿ ದುಃಖವು ಇಲ್ಲ. **ಕಾಮಾನ್ಯಃ ಕಾಮಾಯತೇ** ಎನ್ನುವ ಶ್ರುತಿಯಲ್ಲಿ ಕಾಮಿಯಾಗವನಿಗೇನೇ ಪುನರಾಗಮನವನ್ನು ಹೇಳಿದ್ದಾರೆ, ಎಂದರೆ— **ತದ್ಯ ಇಹ ಶುಭಾಕೃತಃ** ಎನ್ನುವ ಶ್ರುತಿಯಲ್ಲಿ ಪುಣ್ಯ ಮಾಡಿದವರಂತೆಯೇ ಇತರರಿಗೂ ಆಗಮನವನ್ನು ಹೇಳಿರುತ್ತಾರೆ. ಹಾಗೆಯೇ, **ಸರ್ವೇ ವಾ ಏತೇಽಶುಭಕೃತಃ** ಎನ್ನುವ ಶ್ರುತಿಯಲ್ಲಿಯೂ **ಗಚ್ಛಂತಿ ಪಾಪಿನಃ** ಇತ್ಯಾದಿ ಸ್ಮೃತಿಗಳಲ್ಲಿಯೂ ಪುಣ್ಯ ಮಾಡಿದವರಿಂದ ಇತರರಿಗೆ ನಿತ್ಯ ನರಕಾದಿ ಮಹಾನರ್ಥವನ್ನು ಹೇಳಿರುತ್ತಾರೆ. ಏವಂಚ ಭಗವದಜ್ಞಾನಿಗಳಿಗೆಲ್ಲರಿಗೂ ಆಗಮನಾದಿ ದುಃಖವು ಉಂಟೇ ಉಂಟು. ॥ ಅಧಿ.೧೧ ॥

**ಅನಿಷ್ಟಾಧಿಕರಣವು ಸಮಾಪ್ತವಾಯಿತು.**

# ೧೨ ಅಪಿಸಪ್ತಾಧಿಕರಣವು

**ಪೀಠಿಕೆ ॥** ಭಗವದ್ದ್ವೇಷಿಗಳಿಗೆ ಫಲಭೂತವಾದ ನರಕಕ್ಕೆ ನಿತ್ಯತ್ವವು ಸಮರ್ಥಿಸಲ್ಪಡುತ್ತದೆ. ನರಕವು ಆವೃತ್ತಿಯುಳ್ಳದ್ದೇ. ನಿತ್ಯಫಲಪ್ರದವಲ್ಲ, ಯಾವದಿಂದ್ರಾಶ್ಚತುರ್ದಶ ಇತ್ಯಾದಿಗಳಲ್ಲಿ ನರಕಭೋಗಕ್ಕೆ ಅವಧಿಯನ್ನು ಹೇಳಿದ್ದರಿಂದ ಅನಿತ್ಯತ್ವ ವನ್ನು ಹೇಳಿದ್ದಾರೆ, ಎಂದು ಪೂರ್ವಪಕ್ಷ ಬಂದರೆ ಸಿದ್ಧಾಂತೀಕರಿಸುತ್ತಾರೆ—

## ಸೂತ್ರ ॥ ಓಂ ಅಪಿ ಸಪ್ತ ಓಂ ॥ ೧೬ ॥

**ಸೂತ್ರಾರ್ಥ** ॥ ಸ್ಮೃತಿಕರ್ತೃಗಳು ಏಳು ನರಕಗಳನ್ನೂ ಅವುಗಳಲ್ಲಿ ನಿತ್ಯಾನಿತ್ಯ ವಿಭಾಗವನ್ನೂ ಗ್ರಂಥದಲ್ಲಿ ಪ್ರತಿಪಾದಿಸುತ್ತಾರೆ.

**ಭಾಷ್ಯ ॥ ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ। ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ಚ (ತು) ॥ ತಾಮಿಸ್ರಶ್ಚಾಂಧತಾಮಿಸ್ರೋ ದ್ವೌ ನಿತ್ಯೌ ಸಂಪ್ರಕೀರ್ತಿತೌ । ಇತಿ ಸಪ್ತ ಪ್ರಧಾನಾನಿ ಬಲೀಯಸ್ತೂತ್ತರೋ ತ್ತರಂ ॥ ಏತಾನಿ ಕ್ರಮಶೋ ಗತ್ವೈವಾರೋಹೋಽಥಾವರೋಹಣಂ । ಇತಿ(ಚ) ಭಾರತೇ ॥ ೧೬ ॥ ಅಧಿ. ೧೨ ॥ ೧ ॥**

**ಭಾಷ್ಯಾರ್ಥ** ॥ ರೌರವ, ಮಹಾರೌರವ, ವಹ್ನಿ ಹಾಗೆಯೇ ವೈತರಣೀ, ಕುಂಭೀಪಾಕ, ಹೀಗೆ ಐದು ಅನಿತ್ಯನರಕಗಳು ಹೇಳಲ್ಪಟ್ಟಿವೆ. ತಾಮಿಸ್ರ ಅಂಧತಾಮಿಸ್ರ ಎಂದು ಎರಡು ನಿತ್ಯನರಕಗಳು ಹೇಳಲ್ಪಟ್ಟಿವೆ. (**ನರಕಾನ್ ಏಕವಿಂಶತಿಂ ಗಣಯಂತಿ, ಅಷ್ಟಾವಿಂಶತಿನರಕಾಃ ಏವಂವಿಧಾ ನರಕಾ ಯಮಾಲಯೇ ಸಂತಿ ಶತಶಃ ಸಹಸ್ರಶಃ** ಇತ್ಯಾದಿಗಳಿಂದ ಭಾಗವತಾದಿಗಳಲ್ಲಿ ನರಕ ಬಾಹುಲ್ಯವನ್ನು ಹೇಳಿದ್ದರಿಂದ ಆದರಿಂದ ವಿರೋಧವೆಂದರೆ) ಹೀಗೆ ಅನೇಕ ನರಕಗಳಲ್ಲಿ ಏಳು ನರಕಗಳು ಪ್ರಧಾನಗಳು. ಇವುಗಳಲ್ಲಿ ಪೂರ್ವಪೂರ್ವಕ್ಕಿಂತ ಮೇಲೆ ಮೇಲಿನದ್ದು ಬಲಿಷ್ಠವು. (ದುಃಖಾಧಿಕ್ಯಯುಕ್ತವು।) ಇವುಗಳನ್ನು ಪಾಪಾಧಿಕ್ಯ ಕ್ರಮದಿಂದಲೂ ನಿರ್ದಿಷ್ಟ ಕ್ರಮಾನುಸಾರವಾಗಿಯೂ ಹೊಂದಿಯೇ ಆರೋಹವು. ಆಮೇಲೆ ಅಂಧಂತಮಸ್ಸಿನಲ್ಲಿ ಜೀಳುವಿಕೆಯು. ಎಂದು ಭಾರತದಲ್ಲಿದೆ. ॥ ೧೬ ॥ ೧ ॥

### ಅಧಿಕರಣ ಸಾರಾಂಶ

ನರಕವು ಪುನರಾವೃತ್ತಿಯುಳ್ಳದ್ದೋ ಅಲ್ಲವೋ ನರಕವು ಒಂದೋ, ಅನೇಕವೋ ಎಂದು ಸಂದೇಹವು. ನರಕಭೇದದಲ್ಲಿ ಪ್ರಮಾಣವಿಲ್ಲದಿರುವುದರಿಂದ ಒಂದೇ ನರಕವು. **ಯಾವದಿಂದ್ರಾಶ್ಚತುರ್ದಶ** ಇತ್ಯಾದಿಗಳಲ್ಲಿ ಅನಿತ್ಯತ್ವವನ್ನು ಹೇಳಿದ್ದರಿಂದ ಭಗವದ್ದ್ವೇಷಿಗೆ ಆಗತಕ್ಕ ನರಕವು ಕೂಡ ಪುನರಾವೃತ್ತಿಯುಳ್ಳದ್ದೇ, ಎಂದರೆ **ರೌರವೋಽಥ ಮಹಾಂಶ್ಚೈವ** ಎನ್ನುವ ಸ್ಮೃತಿಯಲ್ಲಿ ಅನಿತ್ಯ ನರಕಪಂಚಕವನ್ನು ನಿತ್ಯನರಕದ್ವಯವನ್ನು ಪ್ರಧಾನವೆಂದು ಹೇಳಿದೆ. ಏವಂಚ ಭಗವದ್ದ್ವೇಷಿಗೆ ಆಗತಕ್ಕ ನರಕವು ಪುನರಾವೃತ್ತಿ ಶೂನ್ಯವೇ. ॥ ಅಧಿ.೧೨ ॥

**ಅಪಿಸಪ್ತಾಧಿಕರಣವು ಸಮಾಪ್ತವಾಯಿತು.**

## ೧೩. ತತ್ರಾಪ್ಯಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ನರಕಕ್ಕೆ ಸದುಃಖತ್ವವನ್ನು ಸಮರ್ಥಿಸುತ್ತಾರೆ. ನರಕದಲ್ಲಿ

ದುಃಖವಿಲ್ಲ. ದುಃಖವಿದ್ದರೆ ನರಕದಲ್ಲಿ ಈಶ್ವರನು ಪ್ರೇರಕನಾಗಿ ಇದ್ದಾನೋ ಇಲ್ಲವೋ ಪ್ರೇರಕನಾಗಿ ಇದ್ದಾನೆ ಎನ್ನುವುದು ಕೂಡುವುದಿಲ್ಲ ಏಕೆಂದರೆ—

**ಭಾಷ್ಯ ॥ (೧) ಈಶ್ವರಸ್ಯ ನರಕಾಯುಕ್ತೇಃ ॥ (೨) ಸರ್ವಂ ವಿಸೃಜತಿ ಸರ್ವಂ ವಿಲಾಪಯತಿ ಸರ್ವಂ ರಮಯತಿ ಸರ್ವಂ ನ ರಮಯತಿ ಸರ್ವಂ ಪ್ರವರ್ತಯತ್ಯಂತರಸ್ಮಿನ್ನಿವಿಷ್ಟ ಇತಿ ಕೌಷಾರವಶ್ರುತಿವಿರೋಧಃ ॥ ಇತಿ ॥ (೩) ಅತೋ ವಕ್ತಿ ॥ ೧ ॥**

**ಭಾಷ್ಯಾರ್ಥ ॥** (೧) ಈಶ್ವರನಿಗೆ ನರಕದುಃಖಭೋಗವು ಕೂಡದೆ ಇರುವುದರಿಂದ (ಅಂದರೆ ನರಕದಲ್ಲಿ ದುಃಖವನ್ನು ಅಂಗೀಕರಿಸಿದರೆ ನಾರಕಿಜನ ಪ್ರೇರಕನಾಗಿ ಈಶ್ವರನನ್ನೂ ಅಂಗೀಕರಿಸಬೇಕು. ದುಃಖಿಗಳ ಒಟ್ಟಿಗೆ ನರಕದಲ್ಲಿದ್ದವನಿಗೆ ಜೀವನಂತೆಯೇ ದುಃಖವನ್ನು ಅಂಗೀಕರಿಸಬೇಕು. ಅದು ಅಯುಕ್ತವು. ಈಶ್ವರತ್ವದಿಂದ ವಿರೋಧವು ಬರುವುದು. ಆದಕಾರಣ ನರಕದಲ್ಲಿ ದುಃಖವಿಲ್ಲವೆಂದು ಅಂಗೀಕರಿಸಬೇಕು.) (೨) (ನರಕದಲ್ಲಿ ಪ್ರೇರಕನಾಗಿ ಈಶ್ವರನನ್ನು ಅಂಗೀಕರಿಸುವುದಿಲ್ಲ ಆದಕಾರಣ ದೋಷವಿಲ್ಲವೆಂದರೆ) ಸರ್ವಜಗತ್ತನ್ನು ಅನೇಕಾಕಾರವಾಗಿ ಈಶ್ವರನು ಸೃಷ್ಟಿಸುತ್ತಾನೆ. ಸರ್ವಜಗತ್ತನ್ನು ನಾಶಪಡಿಸುತ್ತಾನೆ. ಸಾಧುಜೀವರ ಸಮುದಾಯವನ್ನು ಸಂತೋಷಪಡಿಸುತ್ತಾನೆ. ಅಸಾಧು ಜೀವರ ಸಮುದಾಯವನ್ನು ಸಂತೋಷಪಡಿಸುವುದಿಲ್ಲ (ಅವರಿಗೆ ದುಃಖವನ್ನೇ ಹೊಂದಿಸಿಕೊಡುತ್ತಾನೆ.) ಸರ್ವರಲ್ಲಿ ಒಳಗೆ ಪ್ರವಿಷ್ಟನಾಗಿ ಸರ್ವರನ್ನು ಕಾರ್ಯದಲ್ಲಿ ಪ್ರವರ್ತಿಸುತ್ತಾನೆ, ಎನ್ನುವ ಕೌಷಾರವ ಶ್ರುತಿವಿರೋಧವು. ಏವಂಚ ಉಭಯಥಾऽಪಿ ನರಕಕ್ಕೆ ಸದುಃಖತ್ವವು ಕೂಡುವುದಿಲ್ಲ. ಎಂದರೆ (೩.) ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ॥ ೧೭ ॥

**ಸೂತ್ರಾರ್ಥ ॥** ನರಕದಲ್ಲಿಯೂ ಈಶ್ವರನಿಗೆ ಪ್ರೇರಣಾರೂಪವಾದ ವ್ಯಾಪಾರವನ್ನು ಅಂಗೀಕರಿಸಿದರೂ ಶ್ರುತಿವಿರೋಧವಿಲ್ಲ.

**ಟೀಕಾ ॥** ಈಶ್ವರನು ದುಃಖಿಯ ಒಟ್ಟಿಗೆ ಇದ್ದ ಪ್ರಯುಕ್ತ ಆತನಿಗೆ ದುಃಖಭೋಗ ಪ್ರಾಪ್ತಿಯಾಗಬೇಕಾಗುವುದು ಎಂದು ಹೇಳಿದ ವಿರೋಧಪರಿಹಾರವನ್ನು ಹೇಳಬೇಕು. ಅದನ್ನು ಏಕೆ ಸೂತ್ರೀಕರಿಸಲಿಲ್ಲ ಎಂದರೆ—

**ಭಾಷ್ಯ ॥ ಚ ಶಬ್ದಾದದುಃಖಾನುಭವೇನ ॥ ೨ ॥**

**ಭಾಷ್ಯಾರ್ಥ ॥** ಚ ಶಬ್ದದಿಂದ ನರಕದಲ್ಲಿಯೂ ದುಃಖಾನುಭವವಿಲ್ಲದೇನೇ ಎಂದು ಸಮುಚ್ಚಿತವಾಗುತ್ತದೆ. ಅಂತೂ ಈಶ್ವರನಿಗೆ ಪ್ರೇರಣಾರೂಪವ್ಯಾಪಾರವನ್ನು ಅಂಗೀಕರಿಸಿದರೂ ಶ್ರುತಿ ಯುಕ್ತಿವಿರೋಧವಿಲ್ಲ. ॥ ೨ ॥

**ಟೀಕಾ ॥** ಈ ಅರ್ಥವು ಪ್ರಾಮಾಣಿಕವಾದರೆ ವಿರೋಧಾಭಾವವು ಬರುವುದು ಅದೇವೇ ಹೇಗೆಂದರೆ—

**ಭಾಷ್ಯ ॥ ಸ ಸ್ವರ್ಗೇ ಸ ಭೂಮೌ ಸ ನರಕೇ ಸೋಽಂಧೇ ತಮಸಿ ಪ್ರವೃತ್ತಿ ಕೃದೇಕ ಏವಾನು ವಿಷ್ಣೋ ನಾಸೌ ದುಃಖಭುಗೀಶ್ವರಃ ಪ್ರಭುತ್ವಾತ್ಸರ್ವಂ ಪಶ್ಯತಿ ಸರ್ವಂ ಕಾರಯತಿ ನಾಸೌ ದುಃಖಭುಗ್ಯ ಏವಂ ವೇದ ॥ ಇತಿ ಪೌತ್ರಾಯಣಶ್ರುತೇರವಿರೋಧಃ ॥೩॥**

ಭಾಷ್ಯಾರ್ಥ ॥ ಆ ಈಶ್ವರನು ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ ನರಕದಲ್ಲಿಯೂ ಅಂಧಂತಮಸ್ಸಿನಲ್ಲಿಯೂ ಪ್ರವಿಷ್ಟನಾಗಿ ಒಬ್ಬನೇ ಸ್ವತಃ ಪ್ರವೃತ್ತಿಯನ್ನು ಮಾಡತಕ್ಕವನು. ಈಶ್ವರನು ದುಃಖವನ್ನು ಅನುಭವಿಸುವವನು ಅಲ್ಲ ಏಕೆಂದರೆ ಅಚಿಂತ್ಯಾದ್ಭುತ ಶಕ್ತಿಯಿದ್ದುದರಿಂದ. (ದುಃಖಭೋಗವಿಲ್ಲವಾದರೆ ಸರ್ವಜ್ಞತ್ವಾಭಾವವು ಬರಬೇಕಾಗುವುದು ಎಂದರೆ) ತಾನು ದುಃಖವನ್ನು ಭೋಗಿಸದೆ ಇದ್ದರೂ ಪರಗತವಾದ ದುಃಖವೆಲ್ಲವನ್ನು ಅಪರೋಕ್ಷೀಕರಿಸುತ್ತಾನೆ. (ಆದಕಾರಣ ಅಸಾರ್ವಜ್ಞ್ಯವು ಇಲ್ಲ) ಮತ್ತು ಶ್ರೀಹರಿಯು ದುಃಖಭೋಗಾದಿಗಳೆಲ್ಲವನ್ನೂ ಜೀವನಿಂದ ಮಾಡಿಸುತ್ತಾನೆ. ಯಾರು ಹೀಗೆ ತಿಳಿಯುತ್ತಾನೋ ಅಂತಹ ಅಧಿಕಾರಿಯೂ ಕೂಡ ದುಃಖವನ್ನು ಅನುಭವಿಸುವವನಲ್ಲ. (ಈಶ್ವರನು ದುಃಖವನ್ನು ಅನುಭವಿಸತಕ್ಕವನಲ್ಲವೆಂದು ಏನು ಹೇಳಬೇಕು) ಎನ್ನುವ ಪೌತ್ರಾಯಣಶ್ರುತಿಯಿಂದ ಶ್ರುತಿ ಯುಕ್ತಿ ವಿರೋಧವಿಲ್ಲ ॥ ೩ ॥

**ಭಾಷ್ಯ ॥ ನರಕೇಽಪಿ ವಸನ್ನೀಶೋ ನಾಸೌ ದುಃಖಭುಗುಚ್ಯತೇ । ನೀಚೋಚ್ಚತೈವ ದುಃಖಾದೇರ್ಭೋಗ ಇತ್ಯಭಿಧೀಯತೇ ॥ ನಾಸೌ ನೀಚೋಚ್ಚತಾಂ ಯಾತಿ ಪಶ್ಯತ್ಯೇವ ಪ್ರಭುತ್ವತಃ ॥ ಇತಿ ಭಾಗವತತಂತ್ರೇ ॥ ೧೭ ॥ ಅಧಿ.೧೩ ॥ ೪ ॥**

ಭಾಷ್ಯಾರ್ಥ ॥ ಶ್ರೀಹರಿಯು ನರಕದಲ್ಲಿಯೂ ಆವಾಸಮಾಡುವವನಾದಾಗ್ಯೂ ದುಃಖವನ್ನು ಅನುಭವಿಸತಕ್ಕವನೆಂದು ಹೇಳಲ್ಪಡುವುದಿಲ್ಲ (ದುಃಖಾನುಭವವಿಲ್ಲವಾದರೆ ಸಾರ್ವಜ್ಞಾಭಾವವು ಬರಬೇಕಾಗುವುದು ಎಂದರೆ) ದುಃಖಾದಿಗಳಿಗೆ ನೀಚೋಚ್ಚತ್ವವೇ ಭೋಗವೆಂದು ಹೇಳಲ್ಪಡುತ್ತದೆ. (ನೀಚೋಚ್ಚತ್ವವೆಂದರೆ— ದುಃಖಭೋಗ ಸುಖಭೋಗಗಳಿಂದ ಉಂಟಾಗತಕ್ಕ ಚೇತನಸ ರೂಪದಲ್ಲಿರತಕ್ಕ, ಮ್ಲಾನತಾ ವಿಕಾಸರೂಪಗಳಾದ ಧರ್ಮವಿಶೇಷಗಳು. ಭೋಗವೆಂದರೆ ನನಗೆ ಇದು ಪ್ರತಿಕೂಲವು, ಅಥವಾ ಅನುಕೂಲವು ಎನ್ನುವ ಅನುಸಂಧಾನವು.) ಶ್ರೀಹರಿಯು ಪರಗತವಾದ ದುಃಖವನ್ನು ಸುಖವನ್ನು ನೋಡಿಯೇ ನೋಡುತ್ತಾನೆ. (ದುಃಖಿಯ ಒಟ್ಟಿಗೆ ಇದ್ದರೂ ನನಗೆ ಇದು ಪ್ರತಿಕೂಲವೆಂದಾಗಲೀ ಅನುಕೂಲವೆಂದಾಗಲೀ ಅನುಸಂಧಾನ ಮಾಡುವುದಿಲ್ಲ) ಅಚಿಂತ್ಯ ಅದ್ಭುತ ಶಕ್ತಿಯಿದ್ದುದರಿಂದ. ಆದಕಾರಣ ಶ್ರೀಹರಿಯು ನೀಚೋಚ್ಚತ್ವವನ್ನು ಹೊಂದುವುದಿಲ್ಲ ಎಂದು ಭಾಗವತತಂತ್ರದಲ್ಲಿ ಹೇಳಿದೆ. ॥ ೧೭ ॥ ೪ ॥

## ಅಧಿಕರಣ ಸಾರಾಂಶ

ನರಕವು ಅದುಃಖರೂಪವೋ ದುಃಖರೂಪವೋ ನರಕಕ್ಕೆ ಸದುಃಖತ್ವವಿದ್ದರೆ ತತ್ಪ್ರೇರಕ ಈಶ್ವರನಿಗೆ ದುಃಖಭೋಗವು ಬರುತ್ತದೋ ಇಲ್ಲವೋ ಎಂದು ಸಂದೇಹವು. ನರಕದಲ್ಲಿದ್ದವನಿಗೆ

ದುಃಖವಿಲ್ಲ. ದುಃಖವಿದ್ದರೆ ನರಕದಲ್ಲಿ ಈಶ್ವರನು ಪ್ರೇರಕನಾಗಿ ಇದ್ದಾನೋ ಇಲ್ಲವೋ ಪ್ರೇರಕನಾಗಿ ಇದ್ದಾನೆ ಎನ್ನುವುದು ಕೂಡುವುದಿಲ್ಲ ಏಕೆಂದರೆ—

**ಭಾಷ್ಯ ॥ (೧) ಈಶ್ವರಸ್ಯ ನರಕಾಯುಕ್ತೇಃ ॥ (೨) ಸರ್ವಂ ವಿಸೃಜತಿ ಸರ್ವಂ ವಿಲಾಪಯತಿ ಸರ್ವಂ ರಮಯತಿ ಸರ್ವಂ ನ ರಮಯತಿ ಸರ್ವಂ ಪ್ರವರ್ತಯತ್ಯಂತರಸ್ಮಿನ್ನಿವಿಷ್ಟ ಇತಿ ಕೌಷಾರವಶ್ರುತಿವಿರೋಧಃ ॥ ಇತಿ ॥ (೩) ಅತೋ ವಕ್ತಿ ॥ ೧ ॥**

**ಭಾಷ್ಯಾರ್ಥ ॥** (೧) ಈಶ್ವರನಿಗೆ ನರಕದುಃಖಭೋಗವು ಕೂಡದ ಇರುವುದರಿಂದ (ಅಂದರೆ ನರಕದಲ್ಲಿ ದುಃಖವನ್ನು ಅಂಗೀಕರಿಸಿದರೆ ನಾರಕಿಜನ ಪ್ರೇರಕನಾಗಿ ಈಶ್ವರನನ್ನೂ ಅಂಗೀಕರಿಸಬೇಕು. ದುಃಖಿಗಳ ಒಟ್ಟಿಗೆ ನರಕದಲ್ಲಿದ್ದವನಿಗೆ ಜೀವನಂತೆಯೇ ದುಃಖವನ್ನು ಅಂಗೀಕರಿಸಬೇಕು. ಅದು ಅಯುಕ್ತವು. ಈಶ್ವರತ್ವದಿಂದ ವಿರೋಧವು ಬರುವುದು. ಆದಕಾರಣ ನರಕದಲ್ಲಿ ದುಃಖವಿಲ್ಲವೆಂದು ಅಂಗೀಕರಿಸಬೇಕು.) (೨) (ನರಕದಲ್ಲಿ ಪ್ರೇರಕನಾಗಿ ಈಶ್ವರನನ್ನು ಅಂಗೀಕರಿಸುವುದಿಲ್ಲ ಆದಕಾರಣ ದೋಷವಿಲ್ಲವೆಂದರೆ) ಸರ್ವಜಗತ್ತನ್ನು ಅನೇಕಾಕಾರವಾಗಿ ಈಶ್ವರನು ಸೃಷ್ಟಿಸುತ್ತಾನೆ. ಸರ್ವಜಗತ್ತನ್ನು ನಾಶಪಡಿಸುತ್ತಾನೆ. ಸಾಧುಜೀವರ ಸಮುದಾಯವನ್ನು ಸಂತೋಷಪಡಿಸುತ್ತಾನೆ. ಅಸಾಧು ಜೀವರ ಸಮುದಾಯವನ್ನು ಸಂತೋಷಪಡಿಸುವುದಿಲ್ಲ. (ಅವರಿಗೆ ದುಃಖವನ್ನೇ ಹೊಂದಿಸಿಕೊಡುತ್ತಾನೆ.) ಸರ್ವರಲ್ಲಿ ಒಳಗೆ ಪ್ರವಿಷ್ಟನಾಗಿ ಸರ್ವರನ್ನು ಕಾರ್ಯದಲ್ಲಿ ಪ್ರವರ್ತಿಸುತ್ತಾನೆ, ಎನ್ನುವ ಕೌಷಾರವ ಶ್ರುತಿವಿರೋಧವು. ಏವಂಚ ಉಭಯಥಾಽಪಿ ನರಕಕ್ಕೆ ಸದುಃಖತ್ವವು ಕೂಡುವುದಿಲ್ಲ. ಎಂದರೆ (೩) ಹೀಗೆ ಶಂಕೆಯು ಬಂದರೆ ಉತ್ತರ ಕೊಡುತ್ತಾರೆ.

## ಸೂತ್ರ ॥ ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ॥ ೧೭ ॥

**ಸೂತ್ರಾರ್ಥ ॥** ನರಕದಲ್ಲಿಯೂ ಈಶ್ವರನಿಗೆ ಪ್ರೇರಣಾರೂಪವಾದ ವ್ಯಾಪಾರವನ್ನು ಅಂಗೀಕರಿಸಿದರೂ ಶ್ರುತಿವಿರೋಧವಿಲ್ಲ.

**ಪೀಠಿಕೆ ॥** ಈಶ್ವರನು ದುಃಖಿಯ ಒಟ್ಟಿಗೆ ಇದ್ದ ಪ್ರಯುಕ್ತ ಆತನಿಗೆ ದುಃಖಭೋಗ ಪ್ರಾಪ್ತಿಯಾಗಬೇಕಾಗುವುದು ಎಂದು ಹೇಳಿದ ವಿರೋಧಪರಿಹಾರವನ್ನು ಹೇಳಬೇಕು. ಅದನ್ನು ಏಕೆ ಸೂತ್ರೀಕರಿಸಲಿಲ್ಲ ಎಂದರೆ—

**ಭಾಷ್ಯ ॥ ಚ ಶಬ್ದಾದದುಃಖಾನುಭವೇನ ॥ ೨ ॥**

**ಭಾಷ್ಯಾರ್ಥ ॥** ಚ ಶಬ್ದದಿಂದ ನರಕದಲ್ಲಿಯೂ ದುಃಖಾನುಭವವಿಲ್ಲದೇನೇ ಎಂದು ಸಮುಚ್ಚಿತವಾಗುತ್ತದೆ. ಅಂತೂ ಈಶ್ವರನಿಗೆ ಪ್ರೇರಣಾರೂಪವ್ಯಾಪಾರವನ್ನು ಅಂಗೀಕರಿಸಿದರೂ ಶ್ರುತಿ ಯುಕ್ತಿವಿರೋಧವಿಲ್ಲ. ॥ ೨ ॥

**ಪೀಠಿಕೆ ॥** ಈ ಅರ್ಥವು ಪ್ರಾಮಾಣಿಕವಾದರೆ ವಿರೋಧಾಭಾವವು ಬರುವುದು ಅದೇವೇ ಹೇಗೆಂದರೆ—

**ಭಾಷ್ಯ ॥ ಸ ಸ್ವರ್ಗೇ ಸ ಭೂಮೌ ಸ ನರಕೇ ಸೋಽಂಧೇ ತಮಸಿ ಪ್ರವೃತ್ತಿ ಕೃದೇಕ ಏವಾನು ವಿಷ್ಣೋ ನಾಸೌ ದುಃಖಭುಗೀಶ್ವರಃ ಪ್ರಭುತ್ವಾತ್ಸರ್ವಂ ಪಶ್ಯತಿ ಸರ್ವಂ ಕಾರಯತಿ ನಾಸೌ ದುಃಖಭುಗ್ಯ ಏವಂ ವೇದ ॥ ಇತಿ ಪೌತ್ರಾಯಣಶ್ರುತೇರವಿರೋಧಃ ॥೩॥**

ಭಾಷ್ಯಾರ್ಥ ॥ ಆ ಈಶ್ವರನು ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ ನರಕದಲ್ಲಿಯೂ ಅಂಧಂತಮಸ್ಸಿನಲ್ಲಿಯೂ ಪ್ರವಿಷ್ಟನಾಗಿ ಒಬ್ಬನೇ ಸ್ವತಃ ಪ್ರವೃತ್ತಿಯನ್ನು ಮಾಡತಕ್ಕವನು. ಈಶ್ವರನು ದುಃಖವನ್ನು ಅನುಭವಿಸುವವನು ಅಲ್ಲ. ಏಕೆಂದರೆ ಅಚಿಂತ್ಯಾದ್ಭುತ ಶಕ್ತಿಯಿದ್ದುದರಿಂದ. (ದುಃಖಭೋಗವಿಲ್ಲವಾದರೆ ಸರ್ವಜ್ಞತ್ವಾಭಾವವು ಬರಬೇಕಾಗುವುದು ಎಂದರೆ) ತಾನು ದುಃಖವನ್ನು ಭೋಗಿಸದೆ ಇದ್ದರೂ ಪರಗತವಾದ ದುಃಖವೆಲ್ಲವನ್ನು ಅಪರೋಕ್ಷೀಕರಿಸುತ್ತಾನೆ. (ಆದಕಾರಣ ಅಸಾರ್ವಜ್ಞ್ಯವು ಇಲ್ಲ) ಮತ್ತು ಶ್ರೀಹರಿಯು ದುಃಖಭೋಗಾದಿಗಳಿಲ್ಲವನ್ನೂ ಜೀವನಿಂದ ಮಾಡಿಸುತ್ತಾನೆ. ಯಾರು ಹೀಗೆ ತಿಳಿಯುತ್ತಾನೋ ಅಂತಹ ಅಧಿಕಾರಿಯೂ ಕೂಡ ದುಃಖವನ್ನು ಅನುಭವಿಸುವವನಲ್ಲ (ಈಶ್ವರನು ದುಃಖವನ್ನು ಅನುಭವಿಸತಕ್ಕವನಲ್ಲವೆಂದು ಏನು ಹೇಳಬೇಕು) ಎನ್ನುವ ಪೌತ್ರಾಯಣಶ್ರುತಿಯಿಂದ ಶ್ರುತಿ ಯುಕ್ತಿ ವಿರೋಧವಿಲ್ಲ ॥ ೩ ॥

**ಭಾಷ್ಯ ॥ ನರಕೇಽಪಿ ವಸನ್ನೀಶೋ ನಾಸೌ ದುಃಖಭುಗುಚ್ಯತೇ । ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ ॥ ನಾಸೌ ನೀಚೋಚ್ಚತಾಂ ಯಾತಿ ಪಶ್ಯತ್ಯೇವ ಪ್ರಭುತ್ವತಃ ॥ ಇತಿ ಭಾಗವತತಂತ್ರೇ ॥ ೧೭ ॥ ಅಧಿ.೧೩ ॥ ೪ ॥**

ಭಾಷ್ಯಾರ್ಥ ॥ ಶ್ರೀಹರಿಯು ನರಕದಲ್ಲಿಯೂ ಆವಾಸಮಾಡುವವನಾದಾಗ್ಯೂ ದುಃಖವನ್ನು ಅನುಭವಿಸತಕ್ಕವನೆಂದು ಹೇಳಲ್ಪಡುವುದಿಲ್ಲ (ದುಃಖಾನುಭವವಿಲ್ಲವಾದರೆ ಸಾರ್ವಜ್ಞಾಭಾವವು ಬರಬೇಕಾಗುವುದು ಎಂದರೆ) ದುಃಖಾದಿಗಳಿಗೆ ನೀಚೋಚ್ಚತ್ವವೇ ಭೋಗವೆಂದು ಹೇಳಲ್ಪಡುತ್ತದೆ. (ನೀಚೋಚ್ಚತ್ವವೆಂದರೆ— ದುಃಖಭೋಗ ಸುಖಭೋಗಗಳಿಂದ ಉಂಟಾಗತಕ್ಕ ಚೇತನಸ ರೂಪದಲ್ಲಿರತಕ್ಕ, ಮ್ಲಾನತಾ ವಿಕಾಸರೂಪಗಳಾದ ಧರ್ಮವಿಶೇಷಗಳು. ಭೋಗವೆಂದರೆ ನನಗೆ ಇದು ಪ್ರತಿಕೂಲವು, ಅಥವಾ ಅನುಕೂಲವು ಎನ್ನುವ ಅನುಸಂಧಾನವು.) ಶ್ರೀಹರಿಯು ಪರಗತವಾದ ದುಃಖವನ್ನು ಸುಖವನ್ನು ನೋಡಿಯೇ ನೋಡುತ್ತಾನೆ. (ದುಃಖಿಯ ಒಟ್ಟಿಗೆ ಇದ್ದರೂ ನನಗೆ ಇದು ಪ್ರತಿಕೂಲವೆಂದಾಗಲೀ ಅನುಕೂಲವೆಂದಾಗಲೀ ಅನುಸಂಧಾನ ಮಾಡುವುದಿಲ್ಲ) ಅಚಿಂತ್ಯ ಅದ್ಭುತ ಶಕ್ತಿಯಿದ್ದುದರಿಂದ. ಆದಕಾರಣ ಶ್ರೀಹರಿಯು ನೀಚೋಚ್ಚತ್ವವನ್ನು ಹೊಂದುವುದಿಲ್ಲ ಎಂದು ಭಾಗವತತಂತ್ರದಲ್ಲಿ ಹೇಳಿದೆ. ॥ ೧೭ ॥ ೪ ॥

## ಅಧಿಕರಣ ಸಾರಾಂಶ

ನರಕವು ಅದುಃಖರೂಪವೋ ದುಃಖರೂಪವೋ ನರಕಕ್ಕೆ ಸದುಃಖತ್ವವಿದ್ದರೆ ತತ್ಪ್ರೇರಕ ಈಶ್ವರನಿಗೆ ದುಃಖಭೋಗವು ಬರುತ್ತದೋ ಇಲ್ಲವೋ ಎಂದು ಸಂದೇಹವು. ನರಕದಲ್ಲಿದ್ದವನಿಗ

ದುಃಖವಿದ್ದರೆ ಪ್ರೇರಕ ಸರ್ವಜ್ಞ ಈಶ್ವರನಿಗೆ ದುಃಖಭೋಗವು ಬರಬೇಕಾಗಿರುವುದರಿಂದ ನರಕವು ದುಃಖರೂಪವಲ್ಲ ಎಂದು ಪೂರ್ವಪಕ್ಷವು ಬಂದರೆ ನೀಚೋಚ್ಚತ್ವ ದುಃಖಾದೇಃ ಎನ್ನುವ ಸ್ಮೃತಿಯಿಂದ ನೀಚೋಚ್ಚತ್ವಾದಿಗಳೇ ಭೋಗಶಬ್ದಾರ್ಥವಾದುದರಿಂದ ಶ್ರೀಹರಿಗೆ ದುಃಖಪ್ರೇರಕತ್ವವಿದ್ದರೂ ನಿರ್ವಿಕಾರನಾದ ಅಚಿಂತ್ಯಶಕ್ತಿಯುಳ್ಳ ಶ್ರೀಹರಿಯಲ್ಲಿ ದುಃಖಾಭಾವವು ನಾಸೌ ದುಃಖಭುಕ್ ಇತ್ಯಾದಿ ಶ್ರುತಿಸ್ಮೃತಿಸಿದ್ಧವಾದುದರಿಂದ ನರಕದಲ್ಲಿದ್ದವರಿಗೆ ದುಃಖವಿದ್ದರೆ ಬಾಧಕವಿಲ್ಲದಿರುವುದರಿಂದ ನರಕವು ಸದುಃಖವೇ ಆಗಿದೆ.॥ ಅಧಿ.೧೩. ॥

**ತತ್ರಾಪ್ಯಧಿಕರಣವು ಸಮಾಪ್ತವಾಯಿತು.**

## ೧೪ ವಿದ್ಯಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಜೀವರಿಗೆ ಪಿತೃಯಾನ, ದೇವಯಾನ ಗತಿಯಲ್ಲಿ ಸ್ವಾತಂತ್ರ್ಯವನ್ನು ನಿರಾಕರಿಸುತ್ತಾರೆ—

**ಭಾಷ್ಯ ॥ ಅಥೈತಯೋಃ ಪಥೋರ್ನ್ಯೆ(ನ) ಕತರೇಣ ಚ ನ ತಾನೀಮಾನಿ ಕ್ಷುದ್ರಮಿಶ್ರಾಣ್ಯ ಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತ್ಯೇತತ್ತೃತೀಯಂ ಸ್ಥಾನಂ (ಛಾ.ಊ.೧೦.೮.) । ಇತಿ ಗತಿಸ್ವಾತಂತ್ರ್ಯಂ ಭೂತಾನಾಂ ಪ್ರತೀಯತೇ । ಇತಿ ॥ ಅತ ಆಹ ॥ ೧ ॥**

**ಭಾಷ್ಯಾರ್ಥ ॥** ತೇಽರ್ಚಿಷಮಭಿಸಂಭವಂತಿ ತೇ ಧೂಮಮಭಿಸಂಭವಂತಿ ಎಂದು ಜ್ಞಾನಿ ಕರ್ಮಿಗಳ ಗತಿಯನ್ನು ನಿರೂಪಣ ಮಾಡಿದಮೇಲೆ ಇತರರ ಗತಿಯು ನಿರೂಪಿಸಲ್ಪಡುತ್ತದೆ. ಜ್ಞಾನಿ ಕರ್ಮಿ ಪ್ರಾಪ್ಯಗಳಾದ ಅರ್ಚಿರಾದಿ ಧೂಮಾದಿಮಾರ್ಗಗಳ ಮಧ್ಯದಲ್ಲಿ ಯಾವುಗಳು ಯಾವ ಮಾರ್ಗದಿಂದಲೂ ಹೋಗುವುದಿಲ್ಲವೋ, ಆ ಇವುಗಳು, ಅಲ್ಪಗಳು, ಸುಖದುಃಖಮಿಶ್ರಗಳು, ಪುನಃ ಪುನಃ ಗಮನಾಗಮನವುಳ್ಳವುಗಳು ಆಗುತ್ತವೆ. ಪುನಃ ಪುನಃ ಹುಟ್ಟುತ್ತವೆ, ಸಾಯುತ್ತವೆ. ಇದು ಸ್ವರ್ಗಾಪವರ್ಗಗಳಿಂದ ಇತರವಾದ ಮೂರನೇದ್ದಾದ ಪ್ರಾಣಿಗಳ ಆವಾಸಸ್ಥಾನವು, ಹೀಗೆ ಛಾಂದೋಗ್ಯದಲ್ಲಿ ಜೀವರಿಗೆ ಮಾರ್ಗರೂಪಫಲದಲ್ಲಿ ಸ್ವಾತಂತ್ರ್ಯವು ತೋರುತ್ತದೆ. (ಇಲ್ಲಿಯೇ ಪೂರ್ವವಾಕ್ಯದಲ್ಲಿ ಅಭಿಸಂಭವಂತಿ, ನ ಗಚ್ಛಂತಿ ಎಂದು ಶ್ರುತವಾಗಿದೆ. ಪುರುಷಪ್ರಯತ್ನಾವಿಷಯದಲ್ಲಿ ಅಭಿಸಂಭವಂತಿ ಎನ್ನುವ ವಿಧಿಯಾಗಲೀ, ನ ಗಚ್ಛಂತಿ ಎನ್ನುವ ನಿಷೇಧವಾಗಲೀ ಕೂಡಲಾರದು.) ಎಂದು ಶಂಕಾ ಬಂದರೆ ಉತ್ತರ ಕೊಡುತ್ತಾರೆ.

**ಸೂತ್ರ ॥ ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ॥ ೧೮ ॥**

**ಭಾಷ್ಯ ॥ ವಿದ್ಯಾಕರ್ಮಾಪೇಕ್ಷಯೈ(ವೈ) ತದ್ವಚನಂ । ತಯೋರಪಿ ಪ್ರಕೃತತ್ವಾತ್ ॥ ೨ ॥**

**ಭಾಷ್ಯಾರ್ಥ ॥ ಅಧ್ವೆತಯೋಃ ಪಥೋಃ** ಎನ್ನುವ ವಚನವು ದೇವಯಾನ, ಪಿತೃಯಾನ ಸಾಧನಭೂತಗಳಾದ ವಿದ್ಯಾ, ಕರ್ಮಗಳ ಅಪೇಕ್ಷೆಯಿಂದಲೇ ಪ್ರವೃತ್ತವಾದುದು. ಜ್ಞಾನ, ಕರ್ಮ ಮಾರ್ಗಗಳಿಗೂ, **ತದ್ಯ ಇತ್ಥಂ ವಿದುಃ, ಇಷ್ಟಾಪೂರ್ತೇ ದತ್ತಂ** ಎನ್ನುವ ಶ್ರುತಿಗಳಿಂದ ಪ್ರಕ್ರಾಂತತ್ವವಿದ್ದ ಪ್ರಯುಕ್ತ

**ವಿಶೇಷಾಂಶ ॥** ದೇವಯಾನ, ಪಿತೃಯಾನಗಳಿಗೆ **ತೇऽರ್ಚಿಷಂ, ತೇ ಧೂಮಂ** ಎಂದು ಪ್ರಕೃತತ್ವವಿದ್ದುದರಿಂದ ಏತಚ್ಛಬ್ದದಿಂದ ಅವುಗಳ ಪರಾಮರ್ಶವೇ ಯುಕ್ತವು, ಎಂದು ಹೇಳಕೂಡದು. ೧ **ತದ್ಯ ಇತ್ಥಂ ವಿದುಃ ಯೇ ಚೇಮೇऽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇऽರ್ಚಿಷಮಭಿಸಂಭವಂತಿ** ೨ **ಅಥ ಯ ಇಮೇ ಗ್ರಾಮಾ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ** ಎಂದು ದೇವಯಾನ, ಪಿತೃಯಾನಗಳಂತೆ ತತ್ಸಾಧನಗಳಾದ ವಿದ್ಯಾಕರ್ಮಗಳೂ ಪ್ರಕೃತಗಳಾದುದರಿಂದ ಏತಯೋಃ ಎನ್ನುವ ಶಬ್ದದಿಂದ ಜ್ಞಾನ, ಕರ್ಮಗಳ ಮಧ್ಯದಲ್ಲಿ, ಎಂದು ಪರಾಮರ್ಶವು ಯುಕ್ತವು. ॥ ೨ ॥

**ಪೀಠಿಕೆ ॥** ಈ ವಿಷಯದಲ್ಲಿ ಸ್ಮೃತಿಸಮಾಖ್ಯೆಯನ್ನು ಹೇಳುತ್ತಾರೆ—

**ಭಾಷ್ಯ ॥ ವಿದ್ಯಾಪಥಃ ಕರ್ಮಪಥೋ ದ್ವೌ ಪಂಥಾನೌ ಪ್ರಕೀರ್ತಿತೌ । ತದ್ವರ್ಜಿತಸ್ತ್ರಿಧಾಯಾತಿ ತಿರ್ಯಗ್ವಾನರಕಂ ತಮಃ ॥ ಇತಿ(ಚ) ಭಾರತೇ ॥ ೧೮ ॥ ಅಧಿ.೧೪ ॥ ೩ ॥**

**ಭಾಷ್ಯಾರ್ಥ ॥** ವಿದ್ಯಾಮಾರ್ಗವು, ಕರ್ಮಮಾರ್ಗವು, ಎಂದು ಎರಡು ಮಾರ್ಗಗಳು ದೇವಯಾನ, ಪಿತೃಯಾನಗಳಿಗೆ ಸಾಧನಗಳೆಂದು ೧ **ಆತ್ಮಾ ವಾ ಅರೇ ದ್ರಷ್ಟವ್ಯಃ ತದ್ವಿಜಿಜ್ಞಾಸಸ್ವ** ೨ **ಜ್ಯೋತಿಷ್ಟೋಮೇನ** ಇತ್ಯಾದಿಗಳಲ್ಲಿ ಹೇಳಲ್ಪಟ್ಟಿವೆ. ಉಭಯವರ್ಜಿತ ಜನರು, ತಿರ್ಯಕ್ ಯೋನಿಯನ್ನು ನರಕವನ್ನು ತಮಸ್ಸನ್ನು ಹೀಗೆ ಪ್ರಕಾರತ್ರಯೋಪೇತ ಫಲವನ್ನು ಹೊಂದುತ್ತಾರೆ, ಎಂದು ಭಾರತದಲ್ಲಿದೆ. ॥ ೧೮ ॥ ೩ ॥

## ಅಧಿಕರಣ ಸಾರಾಂಶ

ಜೀವರಿಗೆ ಗತ್ಯಾದಿಗಳಲ್ಲಿ ಸ್ವಾತಂತ್ರ್ಯವು ಇಲ್ಲವೋ ಇದೆಯೋ ಎಂದು ಸಂದೇಹವು. **ತೇऽರ್ಚಿಷಮಭಿಸಂಭವಂತಿ, ತೇ ಧೂಮಮಭಿಸಂಭವಂತಿ** ಎಂದು ಪ್ರಕೃತಗಳಾದ ದೇವಯಾನ ಪಿತೃಯಾನರೂಪಮಾರ್ಗಗಳಿಗೆ ಪರಾಮರ್ಶವು, ವಿದ್ಯಾಕರ್ಮಗಳಿಗೆ ಪರಾಮರ್ಶವಲ್ಲ ಎಂದು ಪೂರ್ವಪಕ್ಷ ಬಂದರೆ— **ತದ್ಯ ಇತ್ಥಂ ವಿದುಃ, ಅಥ ಯ ಇಮೇ ಗ್ರಾಮಾಃ** ಎಂದು ವಿದ್ಯಾಕರ್ಮಗಳಿಗೂ ಪ್ರಕೃತತ್ವವಿದ್ದುದರಿಂದ, **ವಿದ್ಯಾಪಥಃ ಕರ್ಮಪಥಃ** ಎನ್ನುವ ಸಮಾಖ್ಯೆಯಿಂದ ಏತಯೋಃ ಎನ್ನುವುದರಿಂದ ವಿದ್ಯಾಕರ್ಮಗಳನ್ನೇ ಇಟ್ಟುಕೊಳ್ಳಬೇಕು. ಏವಂಚ ಜೀವರಿಗೆ ಸಾಧನದಲ್ಲಿಯೇ ಸ್ವಾತಂತ್ರ್ಯವು. ಫಲದಲ್ಲಿ ಸ್ವಾತಂತ್ರ್ಯವು ಇಲ್ಲ॥ ಅಧಿ.೧೪ ॥

**ವಿದ್ಯಾಧಿಕರಣವು ಸಮಾಪ್ತವಾಯಿತು.**

# ೧೫ ನ ತೃತೀಯಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಅಂಧಂತಮಸ್ಸಿನಲ್ಲಿ ದುಃಖಮಾತ್ರತ್ವವು ಸಮರ್ಥಿಸಲ್ಪಡುತ್ತದೆ—

**ಭಾಷ್ಯ ॥ (೧) ಯತ್ರ ದುಃಖಂ ಸುಖಂ ತತ್ರ ಸರ್ವತ್ರಾಪಿ ಪ್ರತೀಯತೇ । ಅಪಿ ನೀಚಗತೌ ಕಿಂಚಿತ್ಕಿಮು ಮಾನುಷದೇಹಿನಃ ॥ ಇತಿ ವಚನಾನ್ಮಹಾತಮಸ್ಯಪಿ ಸುಖಪ್ರಾಪ್ತಿಃ ಇತಿ ॥ (೨) ಅತ ಆಹ ॥ ೧ ॥**

ಭಾಷ್ಯಾರ್ಥ ॥ (೧) ಯಾರಲ್ಲಿ ದುಃಖವಿದೆಯೋ ಆ ಎಲ್ಲರಲ್ಲಿಯೂ ಸುಖವು ಇದೆ. ಸೂಕರಾದಿ ಜನ್ಮದಲ್ಲಿಯೂ ಕೂಡ ಕಿಂಚಿತ್ ಸುಖವು ಇದೆ. ಮನುಷ್ಯನಿಗೆ ಸುಖವು ಇದೆ ಎಂದು ಏನು ಹೇಳಬೇಕು? ಎನ್ನುವ ವಚನದಿಂದ ದುಃಖಕ್ಕೆ ಸುಖದಿಂದ ವ್ಯಾಪ್ತಿಯು ಇದ್ದುದರಿಂದ ಅಂಧಂತಮಃ ಸುಖಯುಕ್ತಂ ದುಃಖಯುಕ್ತತ್ವಾತ್ ಎನ್ನುವ ಅನುಮಾನದಿಂದ ಮಹಾದುಃಖವುಳ್ಳದ್ದೆಂದು ಪ್ರಸಿದ್ಧವಾದ ತಮಸ್ಸಿನಲ್ಲಿಯೂ ಸುಖಪ್ರಾಪ್ತಿಯು ಇದೆ. (೨) ಎಂದು ಶಂಕಾ ಬಂದರೆ ಉತ್ತರ ಕೊಡುತ್ತಾರೆ

## ಸೂತ್ರ ॥ ಓಂ ನ ತೃತೀಯೇ ತಥೋಪಲಬ್ಧೇಃ ಓಂ ॥ ೧೯ ॥

ಸೂತ್ರಾರ್ಥ ॥ ತಿರ್ಯಗ್ಯಾತನಾ ತಮಃ ಎನ್ನುವ ಶ್ರುತ್ಯುಕ್ತವಾದ ಅವಾಗ್ಗತಿ ರೂಪ ತೃತೀಯ ತಮಸ್ಸಿನಲ್ಲಿ ಸುಖಲೇಶವೂ ಇಲ್ಲ. ಅಥಾವಿದ್ವಾನ್ ಎನ್ನುವ ಶ್ರುತಿಯಲ್ಲಿ ಹಾಗೆ ತೋರುವುದರಿಂದ.

**ಭಾಷ್ಯ ॥ ಅಥಾವಿದ್ವಾನಕರ್ಮಾಽವಾಗ್ಗಚ್ಛತಿ ತ್ರಿಧಾ ಹ ವಾಽವಾಗ್ಗತಿಸ್ತಿರ್ಯಗ್ಯಾತನಾತಮ ಇತಿ ದ್ವೇ ವಾ ವ ಸುಖಾನುವೃತ್ತೇ ನ ತಮಃ ಸುಖಾನುವೃ ತ್ತಂ ಕೇವಲಂ ಹ್ಯೇವಾತ್ರ ದುಃಖಂ ಭವತಿ ॥ ಇತಿ ಶ್ರುತೇರ್ನ ತೃತೀಯಾವಾಗ್ಗತೌ ಸುಖಂ ॥ ೧೯ ॥ ೨ ॥**

ಭಾಷ್ಯಾರ್ಥ ॥ ಮುಕ್ತಿ ಹೇತುಜ್ಞಾನರಹಿತನಾದ, ಸ್ವರ್ಗಾದ್ಯಾಪಾದಕ ಕರ್ಮರಹಿತನಾದ ದುಷ್ಟಕರ್ಮವುಳ್ಳ ಸಾತ್ವಿಕ ತಾಮಸನು, ರಾಜಸ ತಾಮಸನೂ ಕೂಡ ಅಧೋಗತಿಯನ್ನು ಹೊಂದುತ್ತಾನೆ. ಕೆಳಗಿನ ಗತಿಯೆನ್ನುವುದು ಯಾವುದಿದೆಯೋ ಅದು ಮೂರು ಪ್ರಕಾರವು. ತಿರ್ಯಕ್ (ನಾನಾಯೋನಿ ಪ್ರಾಪ್ತಿರೂಪವಾದುದು ಮೂರನೇ ಗತಿಯು.) ಯಾತನಾ (ನರಕವು. ಅಥವಾ ದುರ್ನರಕತ್ವವು.) ತಮಃ ಎಂದು. ಇವುಗಳಲ್ಲಿ ಎರಡು ಸುಖಯುಕ್ತಗಳು. ತಮಸ್ಸು ಸುಖಯುಕ್ತವೇ ಅಲ್ಲ. ಏಕೆಂದರೆ— ಈ ತಮಸ್ಸಿನಲ್ಲಿ ಅತ್ಯಂತ ದುಃಖವೇ ಪ್ರಾಪ್ತವಾಗುತ್ತದೆ. ಈ ಶ್ರುತಿಯಿಂದ ತಿರ್ಯಕ್, ನರಕ, ತಮಃ ಎಂದು ಹೇಳಿದ ಅಧೋಗತಿಗಳಲ್ಲಿ ಮೂರನೇದ್ದಾದ ತಮಸ್ಸಿನಲ್ಲಿ ಸುಖವಿಲ್ಲ. ॥ ೧೯ ॥ ೨ ॥

ಪೀಠಿಕೆ ॥ ಈ ಅರ್ಥವನ್ನೇ ಸ್ಮೃತ್ಯನುಮಾನಗಳಿಂದಲೂ ಸಾಧಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸ್ಮರ್ಯತೇಽಪಿ ಚ ಲೋಕೇ ಓಂ ॥ ೨೦ ॥

ಸೂತ್ರಾರ್ಥ ॥ ಅಂಧಂತಮಸಸ್ಸಿನಲ್ಲಿ ಸುಖಲೇಶರಾಹಿತ್ಯವು ಸ್ಮೃತಿಸಿದ್ಧವಾಗಿದೆ. ಲೌಕಿಕ ದೃಷ್ಟಾಂತಯುಕ್ತ ಅನುಮಾನಸಿದ್ಧವೂ ಆಗಿದೆ.

**ಭಾಷ್ಯ ॥ (೧) ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೇ । ನಾಂಧೇ ತಮಸಿ ಮಗ್ನಾನಾಂ ಸುಖಲೇಶೋಽಪಿ ಕಶ್ಚನ ॥ ಇತಿ ಭವಿಷ್ಯತ್ಪರ್ವಣಿ ॥ (೨) ಲೋಕಸಿದ್ಧಂ ಚೈತತ್ ॥ (೩) ಚ ಶಬ್ದಾಲ್ಲೋಕಸಿದ್ಧಿರಪಿ ಸ್ವಾರ್ತ್ವೇ ತ್ಯಾಹ ॥ (೪) ಅತಿ ಪ್ರಿಯೇ ಯಥಾ ರಾಜಾ ನ ದುಃಖಂ ಸಹತೇ ಕ್ವಚಿತ್ । ಅತ್ಯಪ್ರಿಯೇ ಸುಖಮಪಿ ತಥೈವ ಪರಮೇಶ್ವರಃ ॥ ಇತ (ಹಿ) ಬ್ರಾಹ್ಮೇ ॥ ೨೦ ॥ ೩ ॥**

ಭಾಷ್ಯಾರ್ಥ ॥ (೧) ತಿರ್ಯಕ್ ಯೋನಿಯಲ್ಲಿಯೂ ನರಕದಲ್ಲಿಯೂ ಸುಖಲೇಶವು ಇದೆ ಎಂದು ಆಗಮಗಳಲ್ಲಿ ವಿಹಿತವಾಗಿದೆ. ಅಂಧಂತಮಸ್ಸಿನಲ್ಲಿ ಇದ್ದವರಿಗೆ ಯಾವ ನಿಮಿತ್ತದಿಂದಲೂ ಸುಖಲೇಶವೂ ಇಲ್ಲ ಎಂದು ಭವಿಷ್ಯತ್ಪರ್ವದಲ್ಲಿ ಸ್ಮರಿಸಲ್ಪಟ್ಟಿದೆ. (೨) ಅಂಧಂತಮಸ್ಸಿನಲ್ಲಿ ಸುಖಲೇಶರಾಹಿತ್ಯವು ಲೌಕಿಕ ದೃಷ್ಟಾಂತಯುಕ್ತ ಅನುಮಾನಸಿದ್ಧವಾಗಿದೆ. ಕೇವಲ ಸ್ಮೃತಿಸಿದ್ಧವಲ್ಲ. (ತಮೋಗತಾಃ ನ ಸುಖಿತ್ವೇ ನೇತ್ವರೇಷ್ಯಾಃ ಅಪ್ರಿಯತ್ವಾತ್ ಯೋ ಯಸ್ಯಾಪ್ರಿಯಃ ಸ ಸುಖಿತ್ವೇನ ನ ತದಿಷ್ಟ ಯಥಾ ರಾಜವಿರೋಧೀ ರಾಜ್ಞಃ, ತತಶ್ಚ ನ ಸುಖಿನಃ ಎಂದು ಅನುಮಾನವು ಉಕ್ತವಾಯಿತು.) (೩) ತಮಸ್ಸಿಗೆ ಸುಖರಾಹಿತ್ಯವು ಶ್ರುತಿ ಸಿದ್ಧಮಾತ್ರವಲ್ಲ. ಮತ್ತೆ ಲೌಕಿಕದೃಷ್ಟಾಂತಯುಕ್ತ ಅನುಮಾನದಿಂದ ತಮಸ್ಸಿಗೆ ಸುಖರಾಹಿತ್ಯಸಿದ್ಧಿಯೂ ಕೂಡ ಸ್ಮೃತಿಸಿದ್ಧವಾಗಿದೆ, ಎಂದು ಚ ಶಬ್ದದಿಂದ ಸೂತ್ರಕಾರರು ಸೂಚಿಸುತ್ತಾರೆ. (೪) ರಾಜನು ಹೇಗೆ ಅತಿಪ್ರಿಯವಾದ ಪುರುಷನಲ್ಲಿ ಯಾವ ಕಾಲದಲ್ಲಿಯೂ ದುಃಖವನ್ನು ಸಹಿಸುವುದಿಲ್ಲವೋ, (ಸುಖವನ್ನೇ ಮಾಡು ತ್ತಾನೋ) ಹೇಗೆ ಅತ್ಯಂತ ಅಪ್ರಿಯನಾದವನಲ್ಲಿ ಸುಖವನ್ನು ಸಹಿಸುವುದಿಲ್ಲವೋ, (ದುಃಖವನ್ನೇ ಕೊಡುತ್ತಾನೋ) ಹಾಗೆಯೇ ಪರಮೇಶ್ವರನೂ ಕೂಡ. (ಇದರಿಂದ ವಿಪ್ರತಿಪನ್ನಾಃ ತಾಮಸಾಃ ನ ಸುಖಿತ್ವೇನ ಈಶ್ವರೇಷ್ಯಾಃ ಅಪ್ರಿಯತ್ವಾತ್ ಎನ್ನುವ ಅನುಮಾನವು ಉಕ್ತವಾಯಿತು.) ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ॥ ೨೦ ॥ ೩ ॥

ಪೀಠಿಕೆ ॥ ಪ್ರತ್ಯಕ್ಷದಿಂದಲೂ ಈ ಅರ್ಥವನ್ನು ಸಾಧಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ದರ್ಶನಾಚ್ಚ ಓಂ ॥ ೨೧ ॥

ಸೂತ್ರಾರ್ಥ ॥ ಹಿರಣ್ಯಗರ್ಭನ ಪ್ರತ್ಯಕ್ಷದರ್ಶನ ವಚನದಿಂದ ಸಿದ್ಧವಾದ ಆತನ ಪ್ರತ್ಯಕ್ಷದರ್ಶನದಿಂದಲೂ, ತಮಸ್ಸಿನಲ್ಲಿದ್ದವರಿಗೆ ಸುಖಲೇಶರಾಹಿತ್ಯವು ಸಿದ್ಧಿಸುತ್ತದೆ.

**ಭಾಷ್ಯ ॥ ನಾರಾಯಣಪ್ರಸಾದೇನ ಸಮಿದ್ಧಜ್ಞಾನಚಕ್ಷುಷಾ । ಅತ್ಯಂತದುಃಖ ಸಲ್ಲೀನಾನ್ನಿಃ— ಶೇಷಸುಖವರ್ಜಿತಾನ್ ॥ ನಿತ್ಯಮೇವ ತಥಾಭೂತಾನ್ನಿಮಿಶ್ರಾಂಶ್ಚ ಗಣಾನ್ಬಹೂನ್ । ನಿರಸ್ತಾಶೇಷದುಃಖಾಂಶ್ಚ ನಿತ್ಯಾನಂದೈಕಭಾಗಿನಃ ॥ ಅಪಶ್ಯ ತ್ರಿವಿಧಾನ್ ಬ್ರಹ್ಮಾ ಸಾಕ್ಷಾದೇವ ಚತುರ್ಮುಖಃ ॥ ಇತಿ ದರ್ಶನವಚನಾಚ್ಚ ಪಾದ್ಮೇ ॥ ೨೧ ॥ ೪ ॥**

**ಭಾಷ್ಯಾರ್ಥ ||** ಚತುರ್ಮುಖ ಬ್ರಹ್ಮನು ನಾರಾಯಣನ ಪ್ರಸಾದದಿಂದ ಸಮ್ಯಕ್ ಅಭಿವೃದ್ಧವಾದ ಜ್ಞಾನದೃಷ್ಟಿಯಿಂದ ಅತ್ಯಂತ ದುಃಖದಲ್ಲಿಯೇ ಮಗ್ನರಾದ, ಸುಖಲೇಶರಹಿತರಾದ, (ಇದರಿಂದ ತಮೋಯೋಗ್ಯರು ಸಂಗೃಹೀತರಾದರು.) ನಿತ್ಯದಲ್ಲಿಯೂ ವಿಮಿಶ್ರರಾದ (ಸುಖದುಃಖಗಳನ್ನು ಅನುಭವಿಸಿಕೊಂಡಿರುವ) ಸ್ವರ್ಗ ನರಕ ಭೂಮಿಗಳಲ್ಲಿರತಕ್ಕ ಬಹುಗಣಗಳನ್ನು (ಇದರಿಂದ ನಿತ್ಯಸಂಸಾರಿಗಳು) ಅಶೇಷದುಃಖ ರಹಿತರಾದವರು, (ಅಂದರೆ, ಆತ್ಯಂತಿಕ ದುಃಖನಿವೃತ್ತಿಯನ್ನು ಹೊಂದಿದವರು.) ನಿತ್ಯಾನಂದವನ್ನೇ ಅನುಭವಿಸುವವರು (ಇದರಿಂದ ಮೋಕ್ಷಯೋಗ್ಯರು ಸಂಗ್ರಹೀತ ರಾದರು.) ಹೀಗೆ ತ್ರಿವಿಧರಾದ ಜೀವರನ್ನು ಚತುರ್ಮುಖ ಬ್ರಹ್ಮನು ಪರಮಖವಿಲ್ಲದೆ ತಾನೇ ಕಂಡನು. ಹೀಗೆ ಪಾದ್ಮಪುರಾಣದಲ್ಲಿ ದರ್ಶನಪ್ರತಿಪಾದಕವಚನದಿಂದ || ೨೦ || ೪ ||

**ಪೀಠಿಕೆ ||** ಅರ್ಥಾಪತ್ತಿಯಿಂದಲೂ, ಈ ಅರ್ಥವನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ || ಓಂ ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ ಓಂ || ೨೨ ||

**ಸೂತ್ರಾರ್ಥ ||** ಅಂಧಂತಮಸ್ಸಿನಲ್ಲಿ ತದ್ವಿಷಯಕ ಶಬ್ದಶ್ರವಣದಿಂದ ಅತಿದುಃಖಜನ್ಯವಾದ ಮೋಹಕ್ಕೆ ಪ್ರಾಪ್ತಿಯು.

**ಭಾಷ್ಯ || ತೃತೀಯೇ ತೃತೀಯತಮಸಃ ಶ್ರವಣಾದೇವ ಶಬ್ದಾನುಸಾರೇಣ ಸಂಶೋಕಜ ಮೋಹಪ್ರಾಪ್ತಿಃ || ೨೨ || ೫ ||**

**ಭಾಷ್ಯಾರ್ಥ ||** ಅಧೋಗತಿಗಳಲ್ಲಿ ತೃತೀಯಸ್ಥಾನಭೂತವಾದ ಊರ್ಧ್ವ, ಮಧ್ಯ, ಅಧರಭೇದದಿಂದ ತ್ರಿವಿಧವಾದ ತಮಸ್ಸಿನಲ್ಲಿ ಅಧರರೂಪವಾದ ಯಾವುದು ತಮಸ್ಸೋ ಅಂತಹ ತಮಸ್ಸಿನ ಶ್ರವಣದಿಂದಲೇ ಉಂಟಾದ ಸಮ್ಯಕ್ ಶೋಕದಿಂದ ಹುಟ್ಟಿದ ಮೂರ್ಛೆಯ ಪ್ರಾಪ್ತಿಯು. ಅದು ಮೂರನೇ ತಮಸ್ಸಿನ ಸ್ವರೂಪ ಪ್ರತಿಪಾದಕ ವಕ್ಯಶಬ್ದವನ್ನು ಅನುಸರಿಸಿ, (ಹೇಗೆ ತಮಃ ಸ್ವರೂಪ ವರ್ಣನವು ವಿಶೇಷತಃ ಆಗುವುದೋ, ಹಾಗೆ, ಶ್ರೋತೃಗಳಿಗೆ ಮೂರ್ಛಾವಿಶೇಷವು ಉಂಟಾಗುವುದು). || ೨೨ || ೫ ||

**ಪೀಠಿಕೆ ||** ಮೂರನೇದ್ದಾದ ತಮಸ್ಸಿನ ಸ್ವರೂಪವನ್ನು ಕೇಳಿದೊಡನೆ ಶ್ರೋತೃಗಳಿಗೆ ಮೋಹಪ್ರಾಪ್ತಿಯು ಎನ್ನುವುದು, ಯಾವುದರಿಂದ ತಿಳಿದುಬರುತ್ತದೆ, ಎಂದರೆ—

## ಸೂತ್ರ || ಓಂ ಸ್ಮರಣಾಚ್ಚ ಓಂ || ೨೩ ||

**ಸೂತ್ರಾರ್ಥ ||** ಅಧರತಮೋವಿಷಯಕ ಶಬ್ದಶ್ರವಣದಿಂದ ಮೂರ್ಛಾಪ್ರಾಪ್ತಿಯಾಗುತ್ತದೆಂದು ಮಹಾತಮಸ್ತ್ರಿಧಾ ಪ್ರೋಕ್ತಂ ಎನ್ನುವ ಸ್ಮೃತಿಯಿಂದ ಸಿದ್ಧವಾಗುತ್ತದೆ.

**ಭಾಷ್ಯ || ಮಹಾತಮಸ್ತ್ರಿಧಾ ಪ್ರೋಕ್ತಮೂರ್ಧ್ವಂ ಮಧ್ಯಂ ತಥಾಽಧರಂ | ಶ್ರವಣಾದೇವ**

**(ಹೇನೈವ) ಮೂರ್ಛಾದಿರಧರಸ್ಯ ಯತೋ ಭವೇತ್ ॥ ತಸ್ಮಾನ್ನ ವಿಸ್ತರೇಣೈತತ್ಕಥ್ಯತೇ ರಾಜಸತ್ತಮ ॥ ಇತಿ ಕೌರ್ಮೇ ॥ ೨೩ ॥ ಅಧಿ.೧೫ ॥ ೬ ॥**

ಭಾಷ್ಯಾರ್ಥ ॥ ಅಂಧತಾಮಿಸ್ರಾಖ್ಯವಾದ ಮಹಾತಮಸ್ಸು ಊರ್ಧ್ವ, ಮಧ್ಯ, ಅಧರ ಎಂದು ಎಂದು ಮೂರು ಪ್ರಕಾರವಾಗಿ ಹೇಳಲ್ಪಟ್ಟಿದೆ. ಅವುಗಳಲ್ಲಿ ಅಧರಾಖ್ಯ ತಮಸ್ಸಿನ ಶಬ್ದಶ್ರವಣ ನಿಮಿತ್ತದಿಂದಲೇ ಶ್ರೋತೃಗಳಿಗೆ ಯಾವ ಕಾರಣದಿಂದ ಮೂರ್ಛೆ, ಉನ್ಮಾದ, ಮರಣಾದಿಗಳು ಉಂಟಾಗುವವೋ, ಆದಕಾರಣ ಎಲೋ ರಾಜಶ್ರೇಷ್ಠನೇ! ಸಮ್ಯಕ್ ವ್ಯಾಖ್ಯಾನದಿಂದ ಇದು ಹೇಳಲ್ಪಡುವುದಿಲ್ಲ. ಅಂದರೆ, ಅಂಧಂತಮಸ್ಸಿನ ವಿಸ್ತಾರವು ಮಾಡಲ್ಪಡುವುದಿಲ್ಲ ಎಂದು ಕೌರ್ಮ ಪುರಾಣದಲ್ಲಿ ಹೇಳಿದೆ. ॥ ೨೩ ॥ ೬ ॥

## ಅಧಿಕರಣ ಸಾರಾಂಶ

ತಮಸ್ಸು ಇತರ ನರಕಗಳಂತೆ ಸುಖದುಃಖಮಿಶ್ರವೋ, ಅಥವಾ ದುಃಖೈಕಸ್ವರೂಪವೋ, ಎಂದು ಸಂದೇಹವು. ಯತ್ರ ದುಃಖಂ ಸುಖಂ ತತ್ರ ಎನ್ನುವ ಸ್ಮೃತಿಯಿಂದ, ಎಲ್ಲಿ ದುಃಖವೋ, ಅಲ್ಲಿ ಸುಖವು, ಎನ್ನುವ ವ್ಯಾಪ್ತಿಗ್ರಹಣವಾಗುವುದರಿಂದ ದುಃಖಯುಕ್ತವಾದ ತಮಸ್ಸಿನಲ್ಲಿ ಇತರ ನರಕಗಳಂತೆ ಸುಖವೂ ಅನುಮಾನ ಸಿದ್ಧವಾಗಿದೆ, ಎಂದರೆ— ಶ್ರುತಿ, ಸ್ಮೃತಿ, ಪ್ರತ್ಯಕ್ಷ, ಅನುಮಾನ, ಅರ್ಥಾಪತ್ತಿ ರೂಪ ಪ್ರಮಾಣಗಳಿಂದ ತಮಸ್ಸು ಕೇವಲ ದುಃಖದಿಂದೊಡಗೂಡಿದ್ದು ಎಂದು ಅವಗತವಾಗುತ್ತದೆ. **ಯತ್ರ ದುಃಖಂ** ಎನ್ನುವ ಸ್ಮೃತಿಯು ತಮೋನ್ಯನರಕವಿಷಯಕವು. ೧. **ನ ತಮಃ ಸುಖಾನುವೃತ್ತಂ** ಎಂದು ಶ್ರುತಿಯು. ೨. **ನಾಂಧೇ ತಮಸಿ ಮಗ್ನಾನಾಂ** ಎಂದು ಸ್ಮೃತಿಯು. ೩. **ನಾರಾಯಣಪ್ರಸಾದೇನ** ಎನ್ನುವ ಸ್ಮೃತಿಸಿದ್ಧ ಚತುರ್ಮುಖ ಪ್ರತ್ಯಕ್ಷವು. ೪. **ಅತಿಪ್ರಿಯೇ ಯಥಾ ರಾಜಾ** ಇತ್ಯಾದಿ ಸ್ಮೃತಿಸಿದ್ಧವಾದುದರಿಂದ ಪ್ರಬಲವಾದ ವಿಪ್ರತಿಪನ್ನಾಃ **ನ ಸುಖವಂತಃ ತಥಾತ್ವೇನೇಶ್ವರಾನಿಷ್ಟತ್ವಾತ್ ಯದ್ಯಥೇಶ್ವರಾನಿಷ್ಟಂ ತತ್ತಥಾ ನ ಭವತಿ ಯಥಾ ಶಶೋ ವಿಷಾಣಿತ್ವೇನ** ಎನ್ನುವ ಅನುಮಾನವು. ೫. **ಮಹಾತಮಸ್ತ್ರಿಧಾ ಪ್ರೋಕ್ತಂ** ಇತ್ಯಾದಿ ಸ್ಮೃತಿಯಿಂದ ತಮಸ್ಸಿನ ಸ್ವರೂಪಶ್ರವಣಾಗೋಣ ಶ್ರೋತೃಗಳಿಗೆ ಶ್ರವಣದಿಂದುಂಟಾದ ದುಃಖಾಧಿಕ್ಯದಿಂದ ಮೂರ್ಛಾಪ್ರಾಪ್ತಿಯು ಅವಗತವಾಗಿರುವುದರಿಂದ ತದನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯು ॥ ಅಧಿ.೧೫ ॥

ನ ತೃತೀಯಾಧಿಕರಣವು ಸಮಾಪ್ತವಾಯಿತು.

# ೧೬ ತತ್ಸ್ವಾಭಾವ್ಯಾಪತ್ತಿರಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಕರ್ಮಿಗೆ ಧೂಮಾದಿದೇವತಾಭಾವಪ್ರಾಪ್ತಿಯು ನಿವಾರಿಸಲ್ಪಡುತ್ತದೆ—

**ಭಾಷ್ಯ ॥ ಧೂಮೋ ಭೂತ್ವಾಽಭ್ರಂ ಭವತಿ** (ಛಾ.೫.೧೦.೫.) । **ಇತ್ಯಾದ್ಯನ್ಯಭಾವಃ ಶ್ರೂಯತೇ ॥ ಸ ಕಥಮಿತಿ । ಅತೋ ಬ್ರವೀತಿ ॥ ೧ ॥**

ಭಾಷ್ಯಾರ್ಥ ॥ (ಸ್ವರ್ಗದಿಂದ ಇಳಿದಿರುವ ಕರ್ಮಿಗಳಿಗೆ ಮಾರ್ಗದಲ್ಲಿ) ಧೂಮೋ ಭೂತ್ವಾ ಅಭ್ರಂ ಭವತಿ ಎಂದು ಅನ್ಯಭಾವವು (ಧೂಮಾದಿದೇವತಾಭಾವವು) ಶ್ರುತವಾಗಿದೆ. ಆ ಧೂಮಾದಿಭಾವವು ಯಾವ ರೂಪವುಳ್ಳದ್ದು (ಅಂದರೆ, ಧೂಮಾದಿ ದೇವತೈಕ್ಯವೋ, ಕರ್ಮಿಗಳಿಗೆ ಧೂಮಾದಿದೇವತಾಪದ ಪ್ರಾಪ್ತಿಯೋ, ಪ್ರಕಾರಾಂತರವೋ, ಹೀಗೆ ಪೂರ್ವಪಕ್ಷವು ಬಂದರೆ— ಉತ್ತರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ ॥ ೨೪ ॥

ಸೂತ್ರಾರ್ಥ ॥ (ಕರ್ಮಿಗಳಿಗೆ ಧೂಮೋ ಭೂತ್ವಾ ಇತ್ಯಾದಿ ಶ್ರುತ್ಯುಕ್ತವಾದ ಧೂಮಾದಿತ್ವವು) ಧೂಮಾದಿದೇವತಾ ಸ್ವಭಾವೈಕದೇಶಸದೃಶ ಪ್ರಾಪ್ತಿಯೇ. (ಧೂಮಾದಿದೇವತೈಕ್ಯವಾಗಲೀ, ಧೂಮಾದಿದೇವತಾಪದಪ್ರಾಪ್ತಿಯಾಗಲೀ ಅಲ್ಲ) ಉಕ್ತಾರ್ಥವೇ ಉಪಪನ್ನವಾಗುವುದರಿಂದ.

**ಭಾಷ್ಯ ॥ (೧) ಧೂಮಾದಿಷು ಪ್ರವಿಶ್ಯ ತದ್ಗತೌ ಗತಿಸ್ತತ್ಸ್ಥಿತೌ ಸ್ಥಿತಿರಿತ್ಯಾದಿರೇವ ತದ್ಭಾವಾಪತ್ತಿಃ ॥ (೨) ನ ಹ್ಯನ್ಯಸ್ಯಾನ್ಯಭಾವೋ ಯುಜ್ಯತೇ ॥ (೩) ನ ಚ ತತ್ಪದಪ್ರಾಪ್ತಿಃ ॥ ೨ ॥**

ಭಾಷ್ಯಾರ್ಥ ॥ (೧) ಧೂಮಾದಿದೇವತಾ ದೇಹಗಳನ್ನು ಪ್ರವೇಶ ಮಾಡಿ ಧೂಮಾದಿದೇವತೆಗಳಿಗೆ ಗಮನವಾಗುವಾಗ ಗಮನವು. ಧೂಮಾದಿದೇವತೆಗಳಿಗೆ ಸ್ಥಿತಿಯಾಗುವಾಗ ಕರ್ಮಿಗಳಿಗೂ ಸ್ಥಿತಿಯು, ಇತ್ಯಾದಿಗಳೇ (ಆದಿಪದದಿಂದ ಆ ದೇವತೆಗಳಂತೆ ಲಘುತ್ವವಿರುವಿಕೆ, ಇತರರ ಶರೀರದಲ್ಲಿ ಪ್ರವಿಷ್ಟವಾದ ಪಿಶಾಚಿಯಂತೆ ಅವರ ಶರೀರದಲ್ಲಿಯೇ ಅಭಿಮಾನವು, ಪ್ರತ್ಯೇಕ ಅಭಿಮಾನಾಭಾವವು.) ಧೂಮಾದಿದೇವತಾ ಸ್ವಭಾವಪ್ರಾಪ್ತಿಯು (೨) ಏಕೆಂದರೆ— ಮೊದಲು ಬೇರೆಯಾಗಿದ್ದ ಕರ್ಮಿಗೆ ಧೂಮಾದಿದೇವತೈಕ್ಯವು ಕೂಡುವುದಿಲ್ಲ. ಏಕೆಂದರೆ— ಅನ್ಯವಾದ ವಸ್ತುವಿಗೆ ಇನ್ನೊಂದು ಪದಾರ್ಥಭಾವವು ಕಾಣಲ್ಪಡುವುದಿಲ್ಲವಷ್ಟೆ. (೩) ಧೂಮಾದಿದೇವತಾ ಪದಪ್ರಾಪ್ತಿಯೂ ಕಾಣಲ್ಪಡುವುದಿಲ್ಲ (ಆ ಪದವು ನಿಯತಾಧಿಕಾರಿಗಳಿಂದ ವಿದ್ಯಾ ಪ್ರಾಪ್ಯವು. ಕರ್ಮದಿಂದ ಪ್ರಾಪ್ಯವೇ ಅಲ್ಲ. ಆದಕಾರಣ ಪ್ರಾತೀತಿಕಾರ್ಥವು ಕೂಡದಿರುವುದರಿಂದ ಹಿಂದೆ ಹೇಳಿದ ಅರ್ಥವೇ ಯುಕ್ತವು. ॥ ೨ ॥

ಪೀಠಿಕೆ ॥ ನ್ಯಾಯಪ್ರಾಪ್ತವಾದ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಗಾರುಡೇ ಚ । (೧) ಧೂಮಾದಿಭಾವಪ್ರಾಪ್ತಿಶ್ಚ ತದ್ಗತೌ ಗತಿರೇವ ತು । ಸ್ಥಿತೌ ಸ್ಥಿತಿಃ ಪ್ರವೇಶಶ್ಚ ಲಘುತ್ವಾದಿಸ್ತಥೈವ ಚ ॥ ನ ಹ್ಯನ್ಯಸ್ಯಾನ್ಯಥಾಭಾವೋ ನ ಚ ತತ್ಪದಮಿಷ್ಯತೇ । ವಿದ್ಯಾಗಮ್ಯಂ ಪದಂ ಯಸ್ಮಾನ್ನ ತತ್ಪ್ರಾಪ್ಯಂ ಹಿ ಕರ್ಮಣಾ ॥ (೨) ಏಕದೇಶಸ್ವಭಾವೇನ ವಾಗಭೇದಾऽಪಿ ಯುಜ್ಯತೇ । (೩) ಯಥಾ ಜೀವಃ ಪರಂಬ್ರಹ್ಮ ಬ್ರಹ್ಮೇದಂ ಜಗದಿತ್ಯಪಿ ॥ ಇತಿ ॥ ೨೪ ॥ ಅಧಿ.೧೬ ॥ ೩ ॥**

ಭಾಷ್ಯಾರ್ಥ ॥ (೧) ಶ್ರುತ್ಯುಕ್ತವಾದ ಧೂಮಾದಿಭಾವಪ್ರಾಪ್ತಿಯಾದರೂ ಧೂಮಾದಿದೇವತೆಗಳಿಗೆ ಗತಿಯಾಗುವಾಗ ಗಮನವೇ ನಿಂತುಕೊಳ್ಳುವಾಗ ನಿಲ್ಲುವಿಕೆಯು. ಅವರಲ್ಲಿ ಪ್ರವೇಶವು. ಹಾಗೆಯೇ ಲಘುತ್ವಾದಿಗಳು ಒಬ್ಬನಿಗೆ ಇನ್ನೊಬ್ಬನಿಂದ ಐಕ್ಯವು ಕೂಡುವುದಿಲ್ಲ. ಆ ದೇವತಾಪದವೂ ಅನ್ಯನಿಂದ ಪ್ರಾಪ್ಯವೆಂದು ಅಂಗೀಕರಿಸಲ್ಪಡುವುದಿಲ್ಲ. ಏಕೆಂದರೆ— ಆ ಪದವಿಯು ವಿದ್ಯೆಯಿಂದಲೇ (ಬ್ರಹ್ಮದರ್ಶನದಿಂದಲೇ) ಪ್ರಾಪ್ಯವು. ಆ ಪದವು ಕರ್ಮದಿಂದ ಪ್ರಾಪ್ಯವೇ ಅಲ್ಲ (೨) ಏಕದೇಶ ಸ್ವಭಾವಸದೃಶ ಸ್ವಭಾವತ್ವದಿಂದಲೂ ಧೂಮೋ ಭೂತ್ವಾ ಇತ್ಯಾದಿ ರೂಪವಾದ ಅಭೇದವನ್ನು ಹೇಳತಕ್ಕ (ಭೇದರಹಿತವಾದ) ವಚನವು ಕೂಡುತ್ತದೆ. (೩) (ಉಭಯತ್ರಾಪಿ ಉದಾಹರಣೆಯನ್ನು ಹೇಳುತ್ತಾರೆ.) ಹೇಗೆಂದರೆ— ಜೀವನು ಪರ ಬ್ರಹ್ಮನು. ಅಂದರೆ— ಜೀವನನ್ನುದ್ದೇಶಿಸಿ ಪರಬ್ರಹ್ಮಾಭೇದವನ್ನು ಹೇಳತಕ್ಕ ತತ್ತ್ವಮಸಿ ಇತ್ಯಾದಿ ಶ್ರುತಿಯು ಹೇಗೆ ಕಿಂಚಿತ್ಸಾದೃಶ್ಯ ನಿಮಿತ್ತದಿಂದ ಕೂಡುತ್ತದೋ, ಹೇಗೆ ಬ್ರಹ್ಮೇದಂ ಜಗತ್ ಅಂದರೆ— ಬ್ರಹ್ಮನನ್ನುದ್ದೇಶಿಸಿ ಬ್ರಹ್ಮನಿಗೆ ಜಗತ್ತಿನಿಂದ ಅಭೇದವನ್ನು ಹೇಳತಕ್ಕ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ಶ್ರುತಿಯೂ ಜಗತ್ತಿಗೆ ಭಗವದಧೀನತ್ವನಿಮಿತ್ತದಿಂದ ಕೂಡುತ್ತದೋ ಏವಂಚ ಸರ್ವವೂ ಬ್ರಹ್ಮನ ಅಧೀನವಾದುದರಿಂದ ಈ ವ್ಯಪದೇಶವು. ಹಾಗೆಯೇ ಪ್ರಕೃತದಲ್ಲಿಯೂ. ॥ ೨೪ ॥ ೩ ॥

## ಅಧಿಕರಣ ಸಾರಾಂಶ

ಕರ್ಮಿಗೆ ಸ್ವರ್ಗಾದಿಗತಿಯಲ್ಲಿ ಧೂಮೋ ಭೂತ್ವಾಭ್ರಂ ಭವತಿ ಇತ್ಯಾದಿಗಳಿಂದ ಶ್ರುತವಾದ ಧೂಮಾದಿಭಾವವು (೧) ಧೂಮಾದಿದೇವತೈಕ್ಯ, ತತ್ಪದ ಪ್ರಾಪ್ಯನ್ಯತರರೂಪವೋ (೨) ಸಾದೃಶ್ಯಾದಿ ರೂಪವೋ ಎಂದು ಸಂದೇಹವು. ದೇವತೈಕ್ಯ ಪದಪ್ರಾಪ್ತಿ ಎರಡರಲ್ಲಿ ಅನ್ಯತರ ರೂಪವೇ ಧೂಮಾದಿಭಾವವು. ಆ ದೇವತೆಗಳೇ ತಮ್ಮ ಪದವು ವಿದ್ಯಾಪ್ರಾಪ್ಯವಾದಾಗ್ಯೂ ಅದನ್ನು ಸ್ನೇಹಾದಿವಶದಿಂದ ಕೊಡಲಿಕ್ಕೆ ಶಕ್ತಿಯಿದ್ದುದರಿಂದ ಕರ್ಮಿಗೆ ಆ ಪದಪ್ರಾಪ್ತಿಯು ಸಂಭಾವಿತವಾಗಿದೆ. ಸುಖಹೇತುವೂ ಆಗಿದೆ, ಎಂದರೆ— ಲೋಕದಲ್ಲಿ ಒಬ್ಬನಿಗೆ ಇನ್ನೊಬ್ಬನಿಂದ ಐಕ್ಯವು ಕಾಣದಿರುವುದರಿಂದಲೂ ಅತ್ಯಂತ ಭಿನ್ನವಾದ ಕರ್ಮಿಗೆ ದೇವತೈಕ್ಯವು ಕೂಡಲಾರದು. ಆ ಪದವಿಯು ನಿಯತಾಧಿಕಾರಿಗಳಿಂದ ವಿದ್ಯೆಯಿಂದಲೇ ಹೊಂದಲರ್ಹವಾಗಿದೆ. ಅಲ್ಲದೆ ಏಕಕಾಲದಲ್ಲಿ ಅನೇಕ ಕರ್ಮಿಗಳು ಕೂಡುವಾಗ ಅನೇಕ ಮಂದಿಗೆ ಒಂದು ಪದಪ್ರಾಪ್ತಿಯು ಸರ್ವಥಾ ಕೂಡಲಾರದು. ಆದ ಪ್ರಯುಕ್ತ ಧೂಮಾದಿಭಾವಪ್ರಾಪ್ತಿಯೆಂದರೆ ತದ್ಗತಾ ಗತಿರೇವ ತು, ಇತ್ಯಾದಿ ಸ್ಮೃತಿಯಲ್ಲಿ ಹೇಳಿದ ಪ್ರಕಾರ ದೇವತಾಸಾದೃಶ್ಯಪರವು. ಅಥವಾ ಆ ಲೋಕಪ್ರವೇಶದಿಂದ ಸ್ವಾನ್ವೈಕ್ಯಪರವು. ಸರ್ವಥಾ ದೇವತೈಕ್ಯಾದಿಪರವಲ್ಲ. ॥ಅಧಿ. ೧೬ ॥

**ತತ್ಸ್ವಾಭಾವ್ಯಾಪತ್ತಿರಧಿಕರಣವು ಸಮಾಪ್ತವಾಯಿತು.**

# ೧೭. ನಾತಿಚಿರೇಣಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸ್ವರ್ಗದಿಂದ ಇಳಿದಿರುವ ಕರ್ಮಿಗೆ ಶೀಘ್ರವಾಗಿ ಗರ್ಭವಾಸಾದಿಗಳನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ ಬಹುಸ್ಥಾನಗಮನಾತ್ಕಲ್ಪಾಂತಮಪ್ಯೇವಂ ಸ್ಯಾದಿತಿ । ಅತ ಆಹ ॥ ೧ ॥**

**ಭಾಷ್ಯಾರ್ಥ ॥** (ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾ ಅಭ್ರಂ ಭವತಿ ಇತ್ಯಾದಿಗಳಲ್ಲಿ) ಬಹುಸ್ಥಾನ ಪ್ರಾಪ್ತಿಯು ಶ್ರುತವಾದುದರಿಂದ ಸಕೃತ್ ಯಜ್ಞವನ್ನು ಮಾಡಿದವನಿಗೆ ಸ್ವರ್ಗ ಭೋಗಾವಸಾನದಲ್ಲಿ ಮಾರ್ಗಮಧ್ಯದಲ್ಲಿ ಬ್ರಹ್ಮಕಲ್ಪಪರ್ಯಂತವಾಗಿಯೂ ಹೀಗೆಯೇ ಆವಾವ ದೇವತಾ ಸ್ವಾಭಾವ್ಯವು ಬರುವುದು. (ಕಲ್ಪಾವಸಾನದಲ್ಲಿಯೇ ದೇವತೆಗಳಿಗೆ ಪದಪರ್ಯವಸಾನವಾಗುವುದು. ಮತ್ತು ಅಲ್ಲಿ ಅಲ್ಲಿ ಆವಾವ ದೇವತಾ ಸಾದೃಶ್ಯವು ಬರುವುದರಿಂದ ಅತಿ ಮಹಾಸುಖವು ಬರುವಾಗ ಅದನ್ನು ಬಿಟ್ಟು ಬರಲಿಕ್ಕೆ ಪ್ರಯೋಜನವಿಲ್ಲ. ಆದಕಾರಣ ಸ್ವರ್ಗದಿಂದ ಹೊರಟಿರುವ ಕರ್ಮಿಗೆ ಅತಿ ವಿಲಂಬದಿಂದಲೇ ದೇಹಪ್ರಾಪ್ತಿಯಾಗುವುದು.) ಹೀಗೆ ಪೂರ್ವಪಕ್ಷವು ಬಂದರೆ— ಉತ್ತರವನ್ನು ಹೇಳುತ್ತಾರೆ.

**ಸೂತ್ರ ॥ ಓಂ ನಾತಿಚಿರೇಣ ವಿಶೇಷಾತ್ ಓಂ ॥ ೨೫ ॥**

**ಭಾಷ್ಯ ॥ ★ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ (ಛಾ.೫.೧೦.೭.) । ಇತಿ ವಿಶೇಷಾನ್ನಾತಿಚಿರೇಣ ॥ ೨೫ ॥ ೨ ॥**

**ಭಾಷ್ಯಾರ್ಥ ॥** ತದ್ಯ ಇಹ ಎನ್ನುವ ವಿಶೇಷಶ್ರುತಿಯಿಂದ ಕರ್ಮಿಯು ಸ್ವರ್ಗದಿಂದ ಅತಿ ಸಾವಕಾಶವಾಗಿ ಈ ಭೂಲೋಕಕ್ಕೆ ಬರುವುದಿಲ್ಲ. ಮತ್ತೆ ಶೀಘ್ರವಾಗಿಯೇ ಬರುತ್ತಾನೆ. (ಕಲ್ಪಾಂತರೂಪವಾದ ಸಾವಕಾಶದಿಂದ ಗಮನವಿಲ್ಲವಾದರೂ ಬಹುಸ್ಥಾನ ಪ್ರಾಪ್ತಿ ಪ್ರಯುಕ್ತ ಸಾವಕಾಶಗಮನವು ಇದ್ದೇ ಇದೆ. ಎನ್ನುವ ಅಭಿಪ್ರಾಯದಿಂದ ಅತಿ ಎಂದು ಹೇಳಿರುವರು.)

**ಪೀಠಿಕೆ ॥** ಶ್ರುತ್ಯರ್ಥ ನಿರ್ಣಯಕ್ಕಾಗಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಸ್ವರ್ಗಾಲ್ಲೋಕಾದವಾಕ್ಪ್ರಾಪ್ತೋ ವತ್ಸರಾತ್ಪೂರ್ವಮೇವ ತು । ಮಾತುಃ ಶರೀರಮಾಪ್ನೋತಿ ಪರ್ಯಟನ್ನತ್ರ ತತ್ರ ಚ ॥ ಇತಿ ಚ ನಾರದೀಯೇ ॥ ೨೫ ॥ ಅಧಿ. ೧೭ ॥ ೩ ॥**

**ಭಾಷ್ಯಾರ್ಥ ॥** ಸ್ವರ್ಗಲೋಕದಿಂದ ಅಧೋದೇಶವನ್ನು ಹೊಂದಿದವನು ಸಂವತ್ಸರ ಸಮಾಪ್ತಿಯಿಂದ ಮೊದಲೇ (ಅಧಿಕ ಕಾಲವು ಬೇಕಾಗಿಲ್ಲ) ಅಲ್ಲಿ ಅಲ್ಲಿ ಆಕಾಶ ವಾಯು ಧೂಮಾದಿ

★ ಈ ಶ್ರುತಿಯು ಚರಣಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಸ್ಥಾನಗಳಲ್ಲಿ ಸಂಚರಿಸುವವನಾಗಿ ತಾಯಿಯ ಶರೀರವನ್ನು ಹೊಂದುತ್ತಾನೆ ಎಂದು ನಾರದೀಯ ಪುರಾಣದಲ್ಲಿಯೂ ಹೇಳಿದೆ. ॥ ೨೫ ॥ ೩ ॥

## ಅಧಿಕರಣ ಸಾರಾಂಶ

ಕರ್ಮಿಗೆ ಧೂಮಾದಿ ದೇವತಾಸ್ವಾಭಾವ್ಯದಿಂದ ಸ್ವರ್ಗದಿಂದ ಆಗಮನವು ಚಿರಕಾಲೀನವೋ ಅಲ್ಪಕಾಲೀನವೋ ಎಂದು ಸಂದೇಹವು. ಇಷ್ಟು ಕಾಲದಲ್ಲಿಯೇ ಬರಬೇಕೆಂದು ಬರಲಿಕ್ಕೆ ಕಾಲ ಕ್ಲೃಪ್ತಿಯು ಇಲ್ಲದಿರುವುದರಿಂದ **ಯಥೇತಮಾಕಾಶಂ** ಇತ್ಯಾದಿಗಳಿಂದ ಭೂಲೋಕಪರ್ಯಂತ ಪ್ರಾಪ್ತಿಯು ಶ್ರುತವಾಗಿದೆ. ಬರುವಾಗ ತತ್ತದ್ದೇವತಾಸ್ವಾಭಾವ್ಯದಿಂದ ಪ್ರಾಪ್ತವಾದ ಅತಿ ಮಹಾಸುಖವನ್ನು ಬಿಟ್ಟು ಶೀಘ್ರದಲ್ಲಿ ಬರಲಿಕ್ಕೆ ಹೇತುವು ಇಲ್ಲದಿರುವುದರಿಂದ ಕಲ್ಪಪರ್ಯಂತವಾಗಿಯೂ ಮಾರ್ಗಮಧ್ಯದಲ್ಲಿ ಇರೋಣದರಿಂದ ಸಾವಕಾಶವಾಗಿಯೇ ಸ್ವರ್ಗದಿಂದ ಬರುವಿಕೆಯು, ಎಂದು ಪೂರ್ವಪಕ್ಷವು ಬಂದರೆ— ತದ್ಯ ಇಹ ರಮಣೀಯಾಃ ಇತ್ಯಾದಿ ಶ್ರುತಿಗಳಲ್ಲಿಯೂ, ಸ್ವರ್ಗಾಲ್ಲೋಕಾತ್ ಇತ್ಯಾದಿ ಸ್ಮೃತಿಗಳಲ್ಲಿಯೂ ಬರಲಿಕ್ಕೆ ಕರ್ಮಿಗೆ ಕಾಲಕ್ಲೃಪ್ತಿಯು ಅವಗತವಾಗುವುದರಿಂದ ಕ್ಲೃಪ್ತ ಕಾಲಕ್ಕಿಂತ ಹೆಚ್ಚು ಕಾಲ ಇರಲಿಕ್ಕೆ ಕಾರಣವಿಲ್ಲ. ಇಷ್ಟವಾದಾಗ್ಯೂ ಜೀವನಿಗೆ ಸ್ವಾತಂತ್ರ್ಯವಿಲ್ಲ. ಆದಕಾರಣ, ಅತಿಶೀಘ್ರವಾಗಿಯೇ ಸ್ವರ್ಗದಿಂದ ಆಗಮನವು. ॥ ಅಧಿ. ೧೭ ॥

**ನಾತಿಚಿರೇಣಾಧಿಕರಣವು ಸಮಾಪ್ತವಾಯಿತು.**

# ೧೮ ಅನ್ಯಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಕರ್ಮಿಗಳಿಗೆ ವ್ರೀಹ್ಯಾದಿ ಭಾವನಿಮಿತ್ತ ದುಃಖಾಭಾವವನ್ನು ಪ್ರತಿಪಾದಿಸುತ್ತಾರೆ—

**ಭಾಷ್ಯ ॥ ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಾ ಮಾಷಾ ಇತಿ ಜಾಯಂತೇ (ಛಾ.೫.೧೦.೬.)। ಇತಿ ಶ್ರವಣಾದನರ್ಥಫಲತ್ವಂ ಯಜ್ಞಾದೇರಿತಿ । ಅತೋ ವಕ್ತಿ ॥ ೧ ॥**

**ಭಾಷ್ಯಾರ್ಥ ॥** ಪುಣ್ಯವನ್ನು ಭೋಗಿಸಿದ ಕರ್ಮಿಗಳು (ಸ್ವರ್ಗದಿಂದ ಬರತಕ್ಕವರಾಗಿ ಮೇಘಪರ್ಯಂತವಾದ ಮಾರ್ಗದಿಂದ ವೃಷ್ಟಿದ್ವಾರಾ ಭೂತಲವನ್ನು ಹೊಂದಿದವರಾಗಿ) ಈ ಭೂಮಿಯಲ್ಲಿ ತಂತಮ್ಮ ಕರ್ಮಶೇಷ ವಿಶೇಷಾನುಸಾರವಾಗಿ ಕೆಲವರು ವ್ರೀಹಿಯವರೂಪರಾಗಿಯೂ ಕೆಲವರು ಓಷಧಿವನಸ್ಪತಿರೂಪರಾಗಿಯೂ ಕೆಲವರು ತಿಲಮಾಷರೂಪರಾಗಿಯೂ (ಇತಿ=) ಇದೇ ಮೊದಲಾದ ಪ್ರಿಯಂಗ್ವಾದಿ ರೂಪರಾಗಿಯೂ ಹುಟ್ಟುತ್ತಾರೆ (ಅಂದರೆ ಇತರ ಜೀವರಿಂದ ಅಧಿಷ್ಠಿತವಾದ ವ್ರೀಹ್ಯಾದಿ ಶರೀರದಲ್ಲಿ ಪ್ರವೇಶಮಾಡುತ್ತಾರೆ. ಹೀಗೆ ಛಾಂದೋಗ್ಯ ಶ್ರುತಿಯಲ್ಲಿ (ಕರ್ಮಿಗಳಿಗೆ ವ್ರೀಹ್ಯಾದಿಭಾವವು) ಶ್ರುತವಾದುದರಿಂದ (ವ್ರೀಹ್ಯಾದಿಭಾವವು ಬಂದರೆ ಛೇದನಾದಿಗಳಿಂದ ದುಃಖವು

ನಿಯತವಾದರಿಂದ) ಯಜ್ಞಾದಿಗಳಿಗೆ ದುಃಖ ಫಲಕತ್ವವು ಪ್ರಾಪ್ತವಾಗುವುದು. ಆದಕಾರಣ ಯಜ್ಞಾದಿಗಳಿಗೆ ಸುಖಹೇತುತ್ವವನ್ನು ಹೇಳುವ ಶ್ರುತಿಗೆ ಅಪ್ರಾಮಾಣ್ಯವು ಬರಬೇಕಾಗುವುದು ಎಂದು, ಶಂಕಾ ಬಂದರೆ ಉತ್ತರವನ್ನು ಹೇಳುತ್ತಾರೆ. ॥ ೧ ॥

## ಸೂತ್ರ ॥ ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ॥ ೨೬ ॥

**ಸೂತ್ರಾರ್ಥ** ॥ ಸ್ವರ್ಗದಿಂದ ಇಳಿದ ಕರ್ಮಿಗೆ ಇತರ ಜೀವನಿಂದ ಅಭಿಮನ್ಯಮಾನವಾದ ವ್ರೀಹ್ಯಾದಿ ಶರೀರದಲ್ಲಿ ಪ್ರವೇಶಮಾತ್ರ. ಅಭಿಮಾನವಿಲ್ಲ. **ಸೋಽವಾಗ್ಗತಃ** ಎನ್ನುವ ಶ್ರುತಿಯಲ್ಲಿಯೂ **ಸ್ವರ್ಗಾದಿವಾಗ್ಗತಃ** ಎನ್ನುವ ಸ್ಮೃತಿಯಲ್ಲಿಯೂ ಹಾಗೆ ಹೇಳಿದ್ದರಿಂದ ಪೂರ್ವದಲ್ಲಿ ಪಠಿತವಾದ **ಧೂಮೋ ಭೂತ್ವಾ** ಇತ್ಯಾದಿಗಳಂತೆ, **ತೇ ಇಹ ವ್ರೀಹಿಯವಾಃ** ಇತ್ಯಾದಿ ಐಕ್ಯವ್ಯವಹಾರವು ಕೂಡುತ್ತದೆ.

**ಭಾಷ್ಯ ॥ ಅನ್ಯಾಧಿಷ್ಠಿತೇ ವ್ರೀಹ್ಯಾದಿಶರೀರೇ ಪ್ರವೇಶಃ । ನ ತು ಭೋಗೋಽಸ್ಯ । ಧೂಮೋ ಭೂತ್ವಾಽಭ್ರಂ ಭವತಿ** (ಛಾ.೫.೧೦.೫.) **। ಇತ್ಯಾದಿಪೂರ್ವೋಕ್ತಿ(ಕ್ತ) ವತ್ ॥ ೨ ॥**

**ಭಾಷ್ಯಾರ್ಥ** ॥ ವ್ರೀಹ್ಯಾದಿ ಶರೀರಾಭಿಮಾನಿ ಜೀವನಿಂದ ಭೋಕ್ತೃತ್ವೇನ ಆಗಿ ಅಧಿಷ್ಠಿತವಾದ ವ್ರೀಹ್ಯಾದಿ ಶರೀರದಲ್ಲಿ ಕರ್ಮಿಗಳಿಗೆ ಪ್ರವೇಶವೇ. (ಈ ಶ್ರುತಿಯಲ್ಲಿ ಹೇಳಲ್ಪಡುತ್ತದೆ. ಆ ಶರೀರಾಭಿಮಾನಿತ್ವವು ಹೇಳಲ್ಪಡುವುದಿಲ್ಲ ಆದ ಕಾರಣ ವ್ರೀಹ್ಯಾದಿಭಾವವು ಇಲ್ಲದಿರುವುದರಿಂದ) ಈ ಕರ್ಮಿಗೆ ಛೇದನಾದಿಗಳಿಂದುಂಟಾದ ದುಃಖಭೋಗವು ಇಲ್ಲವೇ ಇಲ್ಲ. (ಅಭಿಮಾನವು ಬೇಡ. ವ್ರೀಹ್ಯಾದಿ ಜೀವರಿಂದೊಡಗೂಡಿ ಇದ್ದರೂ ದುಃಖವು ಬರಲಿ ಎಂದರೆ) (ಒಟ್ಟಿಗೆ ಇದ್ದರೂ ದುಃಖ ಕಾರಣವಾದ ಪಾಪಫಲಾನುಭವವು ತತ್ಕಾಲದಲ್ಲಿ ಪ್ರಾಪ್ತವಾಗದೆ ಇದ್ದುದರಿಂದ) ಕರ್ಮಿಗೆ ದುಃಖಭೋಗವು ಇಲ್ಲ. (ಕರ್ಮಿಗೆ ವ್ರೀಹ್ಯಾದಿ ದೇಹಪ್ರವೇಶವೇ. ವ್ರೀಹ್ಯಾದಿ ಭಾವವಿಲ್ಲ ಎಂದಾದರೆ, ತ ಇಹ ವ್ರೀಹಿಯವಾಃ ಇತ್ಯಾದ್ಯುಕ್ತಿಯು ಹೇಗೆ ಕೂಡುತ್ತದೆ ಎಂದರೆ—) ಪೂರ್ವಾಧಿಕರಣದಲ್ಲಿ ಧೂಮೋ ಭೂತ್ವಾ ಇತ್ಯಾದಿ ಧೂಮಾದಿ ಭಾವೋಕ್ತಿಯು ಕರ್ಮಿಗೆ ಧೂಮಾದಿದೇವತಾ ಶರೀರದಲ್ಲಿ ಪ್ರವೇಶದಿಂದ ಸ್ವಾಸ್ಥ್ಯಕ್ಯಾದ್ಯಭಿಪ್ರಾಯವುಳ್ಳದ್ದೋ ಹಾಗೆಯೇ ವ್ರೀಹ್ಯಾದಿ ಭಾವೋಕ್ತಿಯು. ಆದಕಾರಣ ಕರ್ಮಿಗೆ ವ್ರೀಹ್ಯಾದಿದೇಹಾಭಿಮಾನವಿಲ್ಲದಿರುವುದರಿಂದ ಛೇದನಾದಿ ನಿಮಿತ್ತ ದುಃಖಾದಿಗಳು ಇಲ್ಲ. ॥ ೨ ॥

ಪೀಠಿಕೆ ॥ ಶ್ರುತಿಗೆ ಹೀಗೆ ಅರ್ಥಾಂತರಕಲ್ಪನವು ಏಕೆಂದರೆ—

**ಭಾಷ್ಯ ॥ (೧) ಸೋಽವಾಗ್ಗತಃ ಸ್ಥಾವರಾನ್ಪ್ರವಿಶ್ಯಾ (ಶ್ಯ) ಭೋಗೇನೈವ ವ್ರಜನ್ಸ್ಥೂಲಂ ಶರೀರಮೇತಿ ಸ್ಥೂಲಾಚ್ಛರೀರಾದ್ಭೋಗಾನನುಭುಂಕ್ತೇ ॥ ಇತ್ಯಭಿಲಾಪಾತ್ಕೌಷಾ— ರವ ಶ್ರುತೌ ॥ (೨) ಸ್ವರ್ಗಾದವಾಗ್ಗತೋ ದೇಹೀ ವ್ರೀಹ್ಯಾದಿತರದೇಹಗಃ । ಅಭುಂಜಂಸ್ತು ಕ್ರಮೇಣೈವ ದೇಹಮಾಪ್ನೋತಿ ಕಾಲತಃ ॥ ಇತಿ (ಚ) ವಾರಾಹೇ ॥ ೨೬ ॥ ೩ ॥**

ಭಾಷ್ಯಾರ್ಥ ॥ (೧) ಕರ್ಮಿಯು ಸ್ವರ್ಗದಿಂದ ಕೆಳಗೆ ಇಳಿದವನಾಗಿ ವ್ರೀಹ್ಯಾದಿ ದೇಹಗಳನ್ನು ಪ್ರವೇಶಮಾಡಿ ವ್ರೀಹ್ಯಾದ್ಯಭಿಮಾನಿ ಜೀವನೊಟ್ಟಿಗೆ ಇದ್ದರೂ ದುಃಖವನ್ನು ಅನುಭವಿಸದೆ ಇರುವವನಾಗಿ ಪಿತೃಮಾತೃದ್ವಾರಾ ಮಾನುಷಾದಿ ಶರೀರವನ್ನು ಹೊಂದುತ್ತಾನೆ. ಸ್ಥೂಲಶರೀರದಿಂದ ಭೋಗ್ಯಗಳಾದ ಸುಖಾದಿಗಳನ್ನು ಅನುಭವಿಸುತ್ತಾನೆ, ಎಂದು ಕೌಷಾರವ ಶ್ರುತಿಯಲ್ಲಿ ಹೇಳಿದ್ದರಿಂದ ಅನ್ಯಾಧಿಷ್ಠಿತ ಶರೀರದಲ್ಲಿ ಪ್ರವೇಶಮಾತ್ರವೇ. (೨) ಸ್ವರ್ಗದಿಂದ ಕೆಳಗೆ ಬಂದಿರತಕ್ಕ ಜೀವನು ಕ್ರಮದಿಂದ ವ್ರೀಹ್ಯಾದಿರೂಪವಾದ ಇತರ ಶರೀರದಲ್ಲಿ ಇದ್ದವನಾಗಿ ಒಟ್ಟಿಗೆ ಇದ್ದರೂ ಆ ದೇಹಕೃತದುಃಖವನ್ನು ಅನುಭವಿಸದೆ ಇದ್ದವನಾಗಿ ವತ್ಸರರೂಪಕಾಲದ ಮಧ್ಯದಲ್ಲಿಯೇ ಪಿತೃ ಮಾತೃಕ್ರಮದಿಂದ ಸ್ಥೂಲದೇಹವನ್ನು ಹೊಂದುತ್ತಾನೆ, ಎಂದು ವಾರಾಹದಲ್ಲಿ ಹೇಳಿದ್ದರಿಂದ ಪ್ರವೇಶಮಾತ್ರವೇ ॥ ೨೬ ॥ ೩ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಶುದ್ಧಮಿತಿ ಚೇನ್ನ ಶಬ್ದಾತ್ ಓಂ ॥ ೨೭ ॥

ಸೂತ್ರಾರ್ಥ ॥ ಯಜ್ಞಾದಿ ಸಾಂಗಕರ್ಮವು ಪಾಪಜನಕವು, ಹಿಂಸಾರೂಪವಾದುದರಿಂದ ಬ್ರಹ್ಮಹತ್ಯಾದಿಗಳಂತೆ, ಎಂದರೆ ಹೀಗೆ ಹೇಳಕೂಡದು. ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ ಇತ್ಯಾದಿ ಶ್ರುತಿವಿಹಿತವಾಗಿದೆ. ಶ್ರುತಿಯಿಂದ ನಿಷಿದ್ಧವಾಗಿಲ್ಲ.

**ಭಾಷ್ಯ ॥ (೧) ಹಿಂಸಾರೂಪತ್ವಾತ್ಪಾಪಸ್ಯಾಪಿ ಸಂಭವಾದ್ದುಃಖಂ ಚ ಭವತ್ವಿತಿ ಚೇನ್ನ । ಶಬ್ದವಿಹಿತತ್ವಾತ್ ॥ (೨) ಹಿಂಸಾತ್ಮವೈದಿಕೀ (ಕಾ) ಯಾ ತು ತಯಾಽನರ್ಥೋ ಧ್ರುವಂ ಭವೇತ್ । ವೇದೋಕ್ತಯಾ ಹಿಂಸಯಾ ತು ನೈವಾನರ್ಥಃ ಕಥಂಚನ ॥ ಇತಿ ವಾರಾಹೇ ॥ ೨೭ ॥ ಅಧಿ. ೧೮ ॥ ४ ॥**

ಭಾಷ್ಯಾರ್ಥ ॥ (೧) ಯಜ್ಞಾದಿಕರ್ಮಗಳಿಗೆ ಹಿಂಸಾಯುಕ್ತತ್ವವಿದ್ದುದರಿಂದ ಅದರಿಂದ ಪಾಪವೂ ಕೂಡುವುದರಿಂದ (ಪುಣ್ಯವು ಮಾತ್ರವಲ್ಲ) (ಕರ್ಮಿಗಳಿಗೆ ವ್ರೀಹ್ಯಾದಿಭಾವದಿಂದಲಾಗಲೀ ಆ ಶರೀರಪ್ರವೇಶದಿಂದಲಾಗಲೀ) ದುಃಖವೂ ಬರಲಿ, ಎಂದರೆ ಹಾಗೆ ಹೇಳಕೂಡದು. (ಅಂದರೆ ಯಜ್ಞಾದಿಗಳು ಪಾಪಹೇತುಗಳಲ್ಲ. ಆದ ಕಾರಣ ದುಃಖವೂ ಅದರಿಂದ ಬರುವುದಿಲ್ಲ. ಏಕೆಂದರೆ) ವಾಯವ್ಯಂ ಶ್ವೇತಮಾಲಭೇತ (ತೈ.ಸಂ.೨.೧.೧.) ಇತ್ಯಾದಿ ಶಬ್ದವಿಹಿತವಾದುದರಿಂದ. (ಶ್ರುತಿನಿಷಿದ್ಧವಾಗಿದ್ದರೇನೇ ಪಾಪಸಾಧನವಾಗುವುದು. ಇದಾದರೂ ನಿಷಿದ್ಧವೇ ಅಲ್ಲ. ಮತ್ತೆ ಶ್ರುತಿವಿಹಿತವೇ ಆಗಿದೆ. ಆದ ಪ್ರಯುಕ್ತ ಇದು ಪಾಪಾದಿಗಳಿಗೆ ಕಾರಣವಲ್ಲ) (೨) (ವಿಧ್ಯುಕ್ತವಾದ ಹಿಂಸೆಯು ಪಾಪಸಾಧನವಲ್ಲ ಎನ್ನುವಲ್ಲಿ ಸ್ಮೃತಿಯನ್ನು ತೋರಿಸುತ್ತಾರೆ.) ವೇದಗಳಲ್ಲಿ ಅವಿಹಿತವಾದ ಯಾವುದು ಬ್ರಹ್ಮಹತ್ಯಾದಿರೂಪವಾದ ಹಿಂಸೆಯು ಇದೆಯೋ, ಅದರಿಂದ ನಿಶ್ಚಯವಾಗಿಯೂ, ಅನರ್ಥವೂ ಪಾಪವೂ ದುಃಖವೂ ಉಂಟಾಗುವುದು. ವೇದೋಕ್ತವಾದ ಹಿಂಸೆಯಿಂದಲಾದರೂ

(ಯಜ್ಞದಲ್ಲಿ ಮಾಡತಕ್ಕ ಪಶುಹಿಂಸಾದಿಗಳಿಂದ) ಅನರ್ಥವು ಯಾವ ಪ್ರಕಾರದಿಂದಲೂ ಬರಲಾರದು. ಎಂದು ವಾರಾಹದಲ್ಲಿದೆ. ॥ ೨೭ ॥ ४ ॥

## ಅಧಿಕರಣ ಸಾರಾಂಶ

ತ ಇಹ ವ್ರೀಹಿಯವಾಃ ಎಂದು ಶ್ರುತ್ಯುಕ್ತವಾದ ಕರ್ಮಿಗಳಿಗೆ ವ್ರೀಹ್ಯಾದಿಭಾವವು ಮುಖ್ಯವೋ, ಅಥವಾ ಧೂಮಾದಿಭಾವದಂತೆ ಗೌಣವೋ, ಎಂದು ಸಂದೇಹವು. ವ್ರೀಹ್ಯಾದಿಭಾವವು ಮುಖ್ಯವಾದರೆ ವ್ರೀಹ್ಯಾದಿ ದುಃಖಿಜೀವರಿಂದೊಡಗೂಡಿ ಇರುವುದರಿಂದಲೂ ಯಾಗಾದಿಕರ್ಮಗಳು ಪಶುಹಿಂಸಾರೂಪಗಳಾದುದರಿಂದ ಕರ್ಮಿಗಳಿಗೆ ಪಾಪವು ಬರಬೇಕಾಗುವುದರಿಂದಲೂ ದುಃಖವು ಬರಬೇಕಾಗುವುದು. ಎಂದರೆ— ಕರ್ಮಿಗಳಿಗೆ ಶ್ರುತವಾದ ವ್ರೀಹ್ಯಾದಿಭಾವವು ಜೀವಾಂತರಾಧಿಷ್ಠಿತ ವ್ರೀಹ್ಯಾದಿ ದೇಹದಲ್ಲಿ ಪ್ರವೇಶರೂಪವಾಗಿರುವುದರಿಂದ ಧೂಮಾದಿಭಾವದಂತೆ ಗೌಣವೆಂದೇ ಹೇಳಬೇಕು. ದುಃಖಿಯಾದ ಜೀವನೊಟ್ಟಿಗೆ ಇದ್ದರೂ ಕರ್ಮವು ಹಿಂಸಾರೂಪವಾದಾಗ್ಯೂ ವಾಯವ್ಯಂ ಶ್ವೇತಮಾಲಭೇತ ಇತ್ಯಾದಿ ಶ್ರುತಿವಿಹಿತವಾದುದರಿಂದ ಕರ್ಮಿಗೆ ದುಃಖವು ಪ್ರಾಪ್ತವಾಗುವುದಿಲ್ಲ. ॥ ಅಧಿ. ೧೮ ॥

**ಅನ್ಯಾಧಿಕರಣವು ಸಮಾಪ್ತವಾಯಿತು.**

# ೧೯ ರೇತೋಽಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಸ್ವರ್ಗದಿಂದ ಇಳಿದಿರುವ ಕರ್ಮಿಗೆ ಪಿತೃಪ್ರವೇಶವನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ ಸ್ವರ್ಗಾದವಾಗ್ಗತಶ್ಚಾಪಿ ಮಾತುರೇವೋದರಂ ವ್ರಜೇತ್ । ಇತಿ ವಚನಾದ್ಯ ಏವ ಗೃಹೀ ಭವತಿ ಯೋ ವಾ ರೇತಃ ಸಿಂಚತಿ ತಮೇವಾನುವಿಶತಿ । ಇತಿ ಶ್ರುತಿಃ ಕಥಮಿತಿ । ಅತ ಆಹ ॥ ೧ ॥**

ಭಾಷ್ಯಾರ್ಥ ॥ ಸ್ವರ್ಗದಿಂದಲೂ (ನರಕದಿಂದಲೂ) ಭೂಮಿಗೆ ಬಂದ ಕರ್ಮಿಯು ತಾಯಿಯ ಉದರವನ್ನೇ ಪ್ರವೇಶಮಾಡುತ್ತಾನೆ. ಎನ್ನುವ ವಚನದಿಂದ ಯಾವ ಪುರುಷನು ಗೃಹಸ್ಥಾಶ್ರಮಿಯು ಆಗುತ್ತಾನೋ, ಯಾರು ರೇತಸ್ಸನ್ನು ಸೇಚಿಸುತ್ತಾನೋ, ಅಂತಹ ತಂದೆಯನ್ನೇ ಜೀವನು ಪ್ರವೇಶಮಾಡುತ್ತಾನೆ. ಎನ್ನುವ ಶ್ರುತಿಯು ಏನು ಅರ್ಥವುಳ್ಳದ್ದು (ಅಂದರೆ— (೧) ಮಾತುರೇವ ಎನ್ನುವ ಅವಧಾರಣದಿಂದ ಪಿತೃಪ್ರವೇಶವು ಬೇಕಾಗಿಲ್ಲವೆಂದು ಉಕ್ತವಾಯಿತು. (೨) ವ್ರಜೇದಪಿ ಎನ್ನುವಲ್ಲಿದ್ದ ಅಪಿಪದದಿಂದ ತಾಯಿಯ ಉದರಪ್ರವೇಶವು ಸಂಭಾವಿತವೆಂದು ತಿಳಿಯುವುದರಿಂದ ಪಿತೃಶರೀರ ಪ್ರವೇಶವು ವೈಯರ್ಥ್ಯವು ಎನ್ನುವ ಯುಕ್ತಿಯು ಸೂಚಿತವು ಆಗುವುದರಿಂದ ಯ ಏವ

ಗೃಹೀ ಭವತಿ ಎನ್ನುವ ಶ್ರುತಿಗೆ ಏನು ಅರ್ಥವು? ಯುಕ್ತಸಹಿತವಾದ ಸ್ಮೃತಿವಚನದಿಂದ ವಿರುದ್ಧವಾದ ಶ್ರುತಿಗೆ ಪ್ರತೀ ತಾರ್ಥದಲ್ಲಿ ಪ್ರಾಮಾಣ್ಯವಿಲ್ಲ. ಅರ್ಥಾಂತರವನ್ನೇ ಹೇಳಬೇಕು. ಆದಕಾರಣ ಈ ಶ್ರುತಿಗೆ ಏನು ಅರ್ಥವು,) ಎಂದು ಪೂರ್ವಪಕ್ಷವು ಬಂದರೆ ಉತ್ತರವನ್ನು ಹೇಳುತ್ತಾರೆ. ॥ ೧ ॥

## ಸೂತ್ರ ॥ ಓಂ ರೇತಃಸಿಗ್ಯೋಗೋಽಥ ಓಂ ॥ ೨೮ ॥

**ಸೂತ್ರಾರ್ಥ** ॥ ಸ್ವರ್ಗದಿಂದ ಇಳಿದಿರುವ ಕರ್ಮಿಗೆ ಪ್ರಥಮತಃ ರೇತಸ್ಸನ್ನು ಸೇಚನ ಮಾಡತಕ್ಕ ತಂದೆಯಲ್ಲಿ ಪ್ರವೇಶವು. ಆ ಮೇಲೆ ತಾಯಿಯಲ್ಲಿ ಪ್ರವೇಶವು.

**ಭಾಷ್ಯ ॥ ತತೋ ರೇತಃಸಿಚಮೇವಾನುಪ್ರವಿಶತ್ಯಥ ಮಾತರಮಥ ಪ್ರಸೂಯತೇ ಸ ಕರ್ಮಕುರುತೇ । ಇತಿ ಕೌಂಠರವ್ಯಶ್ರುತೇಃ ಪಿತರಮೇವ ಪ್ರಥಮತಃ ಪ್ರವಿಶತಿ । ಮಾತೃ ಪ್ರಾಪ್ತೇಃ ಪಶ್ಚಾದಪಿ ಭಾವ್ಯತ್ವಾತ್ ॥ ೨೮ ॥ ಅಧಿ.೧೯ ॥ ೨ ॥**

**ಭಾಷ್ಯಾರ್ಥ** ॥ ಸ್ವರ್ಗದಿಂದ ಭೂಮಿಗೆ ಬಂದಮೇಲೆ ವ್ರೀಹ್ಯಾದಿಗಳಲ್ಲಿದ್ದ ಜೀವನು ಅನ್ನಾದಿಗಳಿಂದ ಕೂಡಿಕೊಂಡು ರೇತಸ್ಸನ್ನು ಸೇಚನೆ ಮಾಡತಕ್ಕ ತಂದೆಯನ್ನು ಪ್ರಥಮತಃ ಪ್ರವೇಶ ಮಾಡುತ್ತಾನೆ. ಆ ಮೇಲೆ ತಾಯಿಯನ್ನು ಪ್ರವೇಶ ಮಾಡುತ್ತಾನೆ. ಆಮೇಲೆ ಹುಟ್ಟುತ್ತಾನೆ. ಆತನು ಕರ್ಮವನ್ನು ಮಾಡುತ್ತಾನೆ. ಎನ್ನುವ ಕೌಂಠರವ್ಯಶ್ರುತಿಯಿಂದ ತಂದೆಯನ್ನೇ ಪ್ರಥಮತಃ ಜೀವನು ಪ್ರವೇಶ ಮಾಡುತ್ತಾನೆ. (ಹೀಗಾದರೆ, **ಮಾತುರೇವೋದರಂ ವ್ರಜೇತ್** ಎನ್ನುವ ವಚನವು ಅಪ್ರಮಾಣವಾಗಬೇಕಾಗುವುದು ಎಂದರೆ) ಮಾತೃಶರೀರ ಪ್ರಾಪ್ತಿಯು (ಪ್ರಥಮದಲ್ಲಿಯೇ ಕೂಡದಿದ್ದರೂ) ರೇತಸ್ಸಿಗ್ಯೋಗಾನಂತರದಲ್ಲಿಯೂ ಆಗುವುದರಿಂದ (**ಮಾತುರೇವೋದರಂ ವ್ರಜೇತ್** ಎನ್ನುವ ವಚನವು ಅಪ್ರಮಾಣವಲ್ಲ, ಏವಂಚ, ಪ್ರಥಮತಃ ರೇತಸ್ಸಿಗ್ಯೋಗವು. ಆ ಮೇಲೆ ಮಾತೃಪ್ರವೇಶವು. ಇಲ್ಲಿ ಶ್ರುತಿ ಸೂತ್ರಗಳಲ್ಲಿ ಪಿತೃಶಬ್ದವನ್ನು ಪ್ರಯೋಗಿಸದೆ ರೇತಸ್ಸಿಚಂ ಎನ್ನುವ ಪದವನ್ನು ಪ್ರಯೋಗಿಸಿದ್ದರಿಂದ ಶರೀರಪರಿಣಾಮಕ್ಕಾಗಿ ರೇತಸ್ಸು ಅಪೇಕ್ಷಿತವಾದುದರಿಂದ ರೇತಸ್ಸೇಕ ಮಾಡತಕ್ಕವನಲ್ಲಿ ಪ್ರವೇಶವು ಸಾರ್ಥಕವೇ, ಎಂದು ಸೂಚಿತವಾಯಿತು. ಆದಕಾರಣ, ಪಿತೃಶರೀರ ಪ್ರವೇಶವು ವೈಯರ್ಥ್ಯವು, ಎನ್ನುವ ಪೂರ್ವಪಕ್ಷ ಯುಕ್ತಿಯು ತಿರಸ್ಕೃತವಾಯಿತು.) ॥ ೨೮ ॥

## ಅಧಿಕರಣ ಸಾರಾಂಶ

ಸ್ವರ್ಗದಿಂದ ಬಂದ ಕರ್ಮಿಗೆ ಪಿತೃಪ್ರವೇಶವು ಇದೆಯೋ ಇಲ್ಲವೋ, ಎಂದು ಸಂದೇಹವು. ಕರ್ಮಿಗೆ ಪಿತೃಪ್ರವೇಶದಲ್ಲಿ ಫಲವಿಲ್ಲದಿರುವುದರಿಂದ ದೇಹಪರಿಣಾಮಕ್ಕಾಗಿ ರೇತಸ್ಸು ಅಪೇಕ್ಷಿತವಾದಾಗ್ಯೂ ಸೇಕಾನಂತರದಲ್ಲಿ ಮಾತೃಪ್ರವೇಶವಾದಾಗ್ಯೂ ಅದು ಉಪಪನ್ನವಾಗುವುದರಿಂದ **ಮಾತುರೇವೋದರಂ ವ್ರಜೇತ್** ಎನ್ನುವ ವಚನದಿಂದ ಸಯುಕ್ತಿಕ ಸಾಧಾರಣ ವಚನದಿಂದ ಬಾಧಿತವಾದ ಪ್ರಯುಕ್ತ ಪಿತೃಶರೀರ ಪ್ರವೇಶ ಶ್ರುತಿಯು ದುರ್ಬಲವಾದ ಪ್ರಯುಕ್ತ ಪಿತೃಶರೀರಪ್ರವೇಶವಿಲ್ಲ ಎಂದರೆ— ದೇಹಪರಿಣಾಮಕ್ಕಾಗಿ ರೇತಸ್ಸು ಆವಶ್ಯಕವಾದುದರಿಂದ **ಈಶಶಕ್ತ್ಯೈವ ಪಿತರಂ ಪ್ರವಿಷ್ಟೋ**

**ಯಾತಿ ಮಾತರಂ** ಎನ್ನುವ ವಚನದಿಂದಲೂ **ರೇತಸ್ಸಿಚಮೇವಾನುವಿಶತಿ** ಎನ್ನುವ ಶ್ರುತಿಯಿಂದಲೂ ಪ್ರಥಮತಃ ಪಿತೃಪ್ರವೇಶವು. ಆ ಮೇಲೆಯೇ ಮಾತೃಪ್ರವೇಶವು, ಎಂದು ಸಿದ್ಧಾಂತವು. ॥ ಅಧಿ. ೧೯ ॥

**ರೇತೋಽಧಿಕರಣವು ಸಮಾಪ್ತವಾಯಿತು.**

# ೨೦ ಯೋನ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಜೀವರಿಗೆ ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶ ಮಾಡಿ ಶರೀರಪ್ರಾಪ್ತಿಯನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿಶೇತ್ಸ್ವರ್ಗತೋ ಗತಃ । ಇತಿ ವಚನಾತ್ಸ್ವಾದೇವ ಪ್ರವಿಶತೀತಿ ॥ ಅತ ಆಹ ॥ ೧ ॥**

ಭಾಷ್ಯಾರ್ಥ ॥ ಸ್ವರ್ಗದಿಂದ ಭೂಮಿಗೆ ಬಂದವನು ಗರ್ಭದಲ್ಲಿರತಕ್ಕ ದೇಹವನ್ನಾಗಲೀ ಗರ್ಭದಿಂದ ಇತರತ್ರ ಯಾವುದಾದರೊಂದು ಸ್ಥಾನದಲ್ಲಿ ನಿರ್ಮಿತವಾದ ಶರೀರವನ್ನಾಗಲೀ ಪ್ರವೇಶ ಮಾಡುವನು. ಎನ್ನುವ ವಚನದಿಂದ ಸ್ವರ್ಗದಿಂದ ಬಂದ ಮೇಲೆ ಸಿದ್ಧವೇ ಆದ ಶರೀರವನ್ನು ಪ್ರವೇಶಿಸುತ್ತಾನೆ. ಪಿತೃಪ್ರವೇಶವನ್ನಾಗಲೀ ಮಾತೃಯೋನಿಪ್ರವೇಶವನ್ನಾಗಲೀ ಅಪೇಕ್ಷಿಸುವುದಿಲ್ಲ. ಅಲ್ಲದೆ ಮೊದಲು ಅಸಿದ್ಧವೇ ಆದ ದೇಹವನ್ನೇ ಪ್ರವೇಶಿಸುತ್ತಾನೆ, ಎನ್ನುವ ನಿಯಮವಿಲ್ಲ. ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ.

**ವಿಶೇಷಾಂಶ ॥** ಪಿತೃಶರೀರದಿಂದ ರೇತಸ್ಸಿನಿಂದ ಕೂಡಿಯೇ ಯೋನಿದ್ವಾರಾ ಮಾತೃಶರೀರವನ್ನು ಪ್ರವೇಶಮಾಡಿ ಆ ಮೇಲೆ ದೇಹವನ್ನು ಹೊಂದುತ್ತಾನೆ ಎನ್ನುವ ನಿಯಮವಿಲ್ಲ. ಇದರಿಂದ ಯೋನಿಪ್ರವೇಶವೂ ಇಲ್ಲ. ಯೋನಿಪ್ರವೇಶವೂ ವ್ಯರ್ಥವು. ಪಿತೃಪ್ರವೇಶವೂ ಅಯುಕ್ತವು. ಪ್ರಾಕ್ ಅಸಿದ್ಧ ಶರೀರಪ್ರಾಪ್ತಿಯೂ ಅಯುಕ್ತವು ಎಂದು ಪೂರ್ವಪಕ್ಷವು ಸೂಚಿತವಾಯಿತು. ॥ ೧ ॥

## ಸೂತ್ರ ॥ ಓಂ ಯೋನೇಃ ಶರೀರಂ ಓಂ ॥ ೨೯ ॥

**ಸೂತ್ರಾರ್ಥ ॥** ಕರ್ಮಿಗಳು ಪಿತೃಪ್ರವೇಶಾನಂತರದಲ್ಲಿ ಮಾತೃಯೋನಿಯನ್ನು ಪ್ರವೇಶ ಮಾಡಿ ಶರೀರವನ್ನು ಹೊಂದುತ್ತಾರೆ. ಪಿತೃಪ್ರವೇಶಾದಿ ಪರಂಪರೆಯು ಇಲ್ಲದೆಯೂ ಕೆಲವು ಕರ್ಮಿಗಳು ಶರೀರವನ್ನು ಹೊಂದುತ್ತಾರೆ.

**ಭಾಷ್ಯ ॥ ಪಿತೃಶರೀರಾನ್ಮಾತೃಯೋನಿಮನುಪ್ರವಿಶ್ಯ ತತ ಏವ ಶರೀರಂ ಪ್ರಾಪ್ನೋತಿ ॥ ೨ ॥**

ಭಾಷ್ಯಾರ್ಥ ॥ ಪ್ರಥಮತಃ ಪಿತೃಶರೀರವನ್ನು ಪ್ರವೇಶ ಮಾಡಿಯೇ ಪಿತೃಶರೀರದಿಂದ ಮಾತೃಯೋನಿಯನ್ನು ಪ್ರವೇಶ ಮಾಡಿ (ಅಂದರೆ, ಯೋನಿದ್ವಾರಾ ತಾಯಿ ಯನ್ನು ಪ್ರವೇಶ ಮಾಡಿ) ಆ ಮಾತೃಶರೀರದಲ್ಲಿಯೇ ಮೊದಲು ಅಸಿದ್ಧವೇ ಆದ ಶರೀರವನ್ನು ಹೊಂದುತ್ತಾನೆ. ॥ ೨ ॥

ಭಾಷ್ಯ ॥ ದಿವಃ ಸ್ಥಾಸ್ನೂನ್ನಚ್ಛತಿ ಸ್ಥಾಸ್ನುಭ್ಯಃ ಪಿತರಂ ಪಿತುರ್ಮಾತರಂ ಮಾತುಃ ಶರೀರಂ ಶರೀರೇಣ ಜಾಯತ ಇತಿ ಸಂಮಿತಂ । ಅಥಾಸಂಮಿತಂ ಸ್ಥಾ ಸ್ನುಭ್ಯೋ ಜಾಯತೇ ಪಿತುರ್ಮಾತುರಂತರೇ ವಾ ಗರ್ಭೇವಾ ಬಹಿರ್ವಾ ॥ ಇತಿ ಪೌಷ್ಯಾಯಣಶ್ರುತೇಃ ॥ ೩ ॥

ಭಾಷ್ಯಾರ್ಥ ॥ ಸ್ವರ್ಗದಿಂದ ಭೂಮಿಗೆ ಬಂದ ಜೀವನು ಸ್ಥಾವರಗಳಾದ ವ್ರೀಹ್ಯಾದಿ ಶರೀರಗಳನ್ನು ಪ್ರವೇಶಿಸುತ್ತಾನೆ. ಅವುಗಳಿಂದ ತಂದೆಯನ್ನು ಹೊಂದುತ್ತಾನೆ. ತಂದೆಯಿಂದ ಯೋನಿದ್ವಾರಾ ತಾಯಿಯನ್ನು ಹೊಂದುತ್ತಾನೆ. ತಾಯಿಯಿಂದ ಮೊದಲು ಅಸಿದ್ಧವಾದ ಶರೀರವನ್ನು ಹೊಂದುತ್ತಾನೆ. ಶರೀರದಿಂದ ಯುಕ್ತನಾಗಿ ಹುಟ್ಟುತ್ತಾನೆ. ಹೀಗೆ ಸಮ್ಮಿತಂ = ವಿದ್ಯಾ ತಪಸ್ಸು ಮೊದಲಾದ ವಿಶೇಷ ಕಾರಣಗಳು ಇಲ್ಲದ ಸರ್ವಸಾಧಾರಣವಾದ ಜನ್ಮವು ಉಕ್ತವಾಯಿತು. ಮೇಲೆ ಅಸಮ್ಮಿತಂ= ತಪಸ್ಸು ಜ್ಞಾನ ಮೊದಲಾದ ವಿಶೇಷಕಾರಣವುಳ್ಳ ಉತ್ತಮವಾದ ಉತ್ತಮಾಧಿಕಾರಿಗಳಿಂದಲೇ ಹೊಂದಲರ್ಹವಾದ ಅಸಾಧಾರಣವಾದ ಜನ್ಮವು ಹೇಳಲ್ಪಡುತ್ತದೆ. ಸ್ಥಾವರಗಳಿಂದ ಜೀವನು ಹುಟ್ಟುತ್ತಾನೆ. ತಂದೆಯಿಂದ, ತಾಯಿಯಿಂದ ಸ್ಥಾನಾಂತರದಲ್ಲಿ ಗರ್ಭದಲ್ಲಿ ಹೊರಗೆ ಆಗಲೀ ಹುಟ್ಟುತ್ತಾನೆ, ಎನ್ನುವ ಪೌಷ್ಯಾಯಣ ಶ್ರುತಿಯಿಂದ. ॥ ೩. ॥

ಪೀಠಿಕೆ ॥ ಶ್ರುತ್ಯರ್ಥನಿರ್ಣಯಕ್ಕಾಗಿ ಸ್ಮೃತಿಯನ್ನು ಹೇಳುತ್ತಾರೆ—

ಭಾಷ್ಯ ॥ ಸ್ಥಾವರಾಣಿ ದಿವಃ ಪ್ರಾಪ್ತಃ ಸ್ಥಾವರೇಭ್ಯಶ್ಚ ಪುರುಷಂ । ಪುರುಷಾತ್ಸ್ತ್ರಿಯಮಾಪನ್ನಸ್ತತೋ ದೇಹಂ ಯಥಾಕ್ರಮಂ ॥ ದೇಹೇನ ಜಾಯತೇ ಜಂತುರಿತಿ ಸಾಮಾನ್ಯತೋ ಜನಿಃ । ವಿಶೇಷಜನನಂ ಚಾಪಿ ಪ್ರೋಚ್ಯಮಾನಂ ನಿಬೋಧ ಮೇ ॥ ಸ್ಥಾಸ್ನುಷ್ವಥಾಪಿ ಪುರುಷೇ ಪ್ರಮದಾಯಾಮಥಾಪಿ ವಾ । ಗರ್ಭೇ ವಾ ಬಹಿರೇವಾಥ ಕ್ವಚಿತ್ಸ್ಥಾನಾಂತರೇಷು ಚ(ವಾ) ॥ ಇತಿ ಚ ಬ್ರಾಹ್ಮೇ ॥ ೨೯ ॥ ಅಧಿ. ೨೦ ॥ ೪ ॥

ಭಾಷ್ಯಾರ್ಥ ॥ ಕರ್ಮಿಜೀವನು ಸ್ವರ್ಗದಿಂದ ಬಂದವನು ವ್ರೀಹ್ಯಾದಿಗಳನ್ನು ಪ್ರವೇಶಿಸುತ್ತಾನೆ. ಅವುಗಳಿಂದ ರೇತಸ್ಸೇಕ ಮಾಡತಕ್ಕ ತಂದೆಯನ್ನೂ ಅವನಿಂದ ರೇತೋದ್ವಾರಾ ತಾಯಿಯನ್ನೂ ಹೊಂದುತ್ತಾನೆ. ಆ ಮೇಲೆ ಹಿಂದೆ ಹೇಳಿದ ಕ್ರಮವನ್ನು ಅತಿಕ್ರಮಿಸದೆ ಮತ್ತೂ ಕಲಲಂ ತ್ವೇಕರಾತ್ರೇಣ ಇತ್ಯಾದ್ಯುಕ್ತ ಕಲಿಲ ಬುದ್ಬುದಾದಿಕ್ರಮದಿಂದ ಆಗುವ ಶರೀರವನ್ನು ಹೊಂದುತ್ತಾನೆ. ಹೀಗೆ ಶರೀರದಿಂದ ವಿಶಿಷ್ಟನಾಗಿ ಹುಟ್ಟುತ್ತಾನೆ. ಹೀಗೆ ಸರ್ವಸಾಧಾರಣವಾದ ಉತ್ಪತ್ತಿಯು. ಅಸಾಧಾರಣವಾದ ಉತ್ಪತ್ತಿಯನ್ನು ಹೇಳಲ್ಪಡುವುದನ್ನು ನನ್ನಿಂದ ತಿಳಿ. ಅರಣೀ ಮೊದಲಾದ ಸ್ಥಾವರಗಳಲ್ಲಿ ಶುಕಾಚಾರ್ಯ ಮೊದಲಾದವರು ಹುಟ್ಟಿದ್ದಾರೆ. ಪುರುಷರಲ್ಲಿ (ತಂದೆಯಲ್ಲಿಯೇ) ಮಾಂಧಾತೃ ಮೊದಲಾದವರು. ಸ್ತ್ರೀಯರಲ್ಲಿ (ತಾಯಿಯಲ್ಲಿ) ಜರತ್ಕಾರ್ವಾದಿಗಳ ಅನುಗ್ರಹದಿಂದ ಆಸ್ತಿಕಾದಿಗಳು ಹುಟ್ಟಿರುವರು. ಗರ್ಭೇ = ಪೂರ್ವದಲ್ಲಿ ಸಿದ್ಧವೇ ಆದ ಶರೀರದಲ್ಲಿ ಉತ್ತಮ ಜವರು ಪ್ರವೇಶಿಸುತ್ತಾರೆ. ಬಹೀಃ

ಮಾತೃದ್ವಾರವಿಲ್ಲದೆ ಕೇವಲ ತಂದೆಯಿಂದಲೇ ದ್ರುಪದ ದ್ರೋಣಾದಿಗಳು ಹುಟ್ಟಿದ್ದಾರೆ, ಅಥವಾ ಋಜುಗಳು, ಸ್ಥಾನಾಂತರದಲ್ಲಿ ಕುಂಡಾದಿಗಳಲ್ಲಿ ಧೃಷ್ಟದ್ಯುಮ್ನಾದಿಗಳು. ಅಥವಾ ಮಾತಾಪಿತೃಗಳ ಮಧ್ಯದಲ್ಲಿ ಅನ್ಯೋನ್ಯ ದರ್ಶನ ಮಾತ್ರದಿಂದ ಕೆಲವರು ಕೃಪ ಮೊದಲಾದವರು ಹುಟ್ಟಿದ್ದು ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

**ವಿಶೇಷಾಂಶ** ॥ (೧) ತತ್ವಪ್ರದೀಪದಲ್ಲಿ ಅತ್ಯಂತ ವಿಶಿಷ್ಟ( ಋಜವ ಏವ) ವಿಷಯಂ ಬಹಿಃ ಪ್ರವೇಶ ವಚನಮವಗಮ್ಯತೇ ಎಂದು ಹೇಳಿದೆ. ಇದಕ್ಕೆ ಟೀಕಾದಲ್ಲಿ ಬಹಿಃ ದ್ರುಪದಾದಯಃ ಎನ್ನುವ ಉಕ್ತಿಯಿಂದ ವಿರೋಧವೆಂದು ಹೇಳಕೂಡದು. ಅಲ್ಲಿ ಕೇವಲ ಪಿತನನ್ನು ಅಪೇಕ್ಷಿಸಿ ತಾಯಿಯ ಉದರದಿಂದ ಬಹಿಃ ಎನ್ನುವ ಅರ್ಥವನ್ನು ಆಶ್ರಯಿಸಿಕೊಂಡು ಪ್ರವೃತ್ತವಾದುದು. ತತ್ವಪ್ರದೀಪವು ಮಾತಾಪಿತೃ ಉಭಯ ಬಹಿರ್ಗತ ಉಭಯ ನಿರಪೇಕ್ಷ ದೇಹವಿಷಯಕವಾಗಿ ಪ್ರವೃತ್ತವಾದುದು. ಅತ ಏವ ತತ್ವಪ್ರದೀಪದಲ್ಲಿ **ಸಂಜಾತೇ ಶರೀರೇ ಪ್ರವೇಪ್ಟುರ್ಗರ್ಭವಾಸಪ್ರಸೂತ್ಯಾದಿ ದುಃಖ ಗ್ರಾಮಲೇಶಸ್ಪರ್ಶಾದ್ವಿನೈವ ಯಥಾಕಾಮಂ ದೇಹಗ್ರಹಣಸಂಭವಾತ್ತಸ್ಯ ಚ ಜನ್ಮ ಭಾಜಾಮತಿದುರ್ಲಭತ್ವಾದತೋ ನಾರಾಯಣಪರಾಯಣಸ್ಯ ಕಸ್ಯಚಿತ್ ತತ್ಪ್ರಸಾದಸಾಮಗ್ರೀಸಮುದ್ಭೂತಪ್ರಭಾವಸ್ಯೈವ ತತ್ಸುಲಭಮುಪಲಭಾಮಹೇ । ಸ್ವಯಂ ಚಾವೋಚತ್ ।** ಬೀಜಪೂರುಷಯೋನೀನಾಂ ಇತ್ಯಾದಿ ಏವಂಚ ಈ ಅಭಿಪ್ರಾಯವನ್ನು ಇಟ್ಟುಕೊಂಡು ಗರ್ಭೇ ಎನ್ನುವುದು ಋಜುವ್ಯತಿರಿಕ್ತ ಜೀವ ವಿಷಯಕವು. ಬಹಿಃ ಎನ್ನುವುದು ಋಜುವಿಷಯಕವು. (೨) **ದೇಹಂ ಗರ್ಭಸ್ಥಿತಂ** ಎನ್ನುವ ವಚನವು ಅಸಾಧಾರಣ ಜನ್ಮವಿಷಯಕವು. ॥ ೨೯ ॥ ೪ ॥

## ಅಧಿಕರಣ ಸಾರಾಂಶ

ಪಿತೃಶರೀರದಿಂದ ಯೋನಿದ್ವಾರಾ ಮಾತೃಶರೀರವನ್ನು ಹೊಂದಿ ಶರೀರವನ್ನು ಹೊಂದುವು ದಿಲ್ಲವೋ ಆ ಕ್ರಮದಿಂದಲೇ ಶರೀರವನ್ನು ಹೊಂದುತ್ತಾನೋ ಅದಕ್ಕಾಗಿ ಹೇಳಿದ ಕ್ರಮದಿಂದ ಅನ್ಯಥಾಪಿ ಉತ್ಪತ್ತಿಯು ಕೂಡುತ್ತದೋ ಇಲ್ಲವೋ ಎಂದು ಸಂದೇಹವು. ಹೇಳಿದ ಕ್ರಮದಿಂದ ಅನ್ಯಥಾ ಕರ್ಮಿಗೆ ಉತ್ಪತ್ತಿಯು ಕೂಡುತ್ತದೆ. ಹೇಗೆಂದರೆ— ತಂದೆಯಿಂದಲೇ ಅಥವಾ ತಾಯಿಯ ಉದರದಿಂದ ಹೊರಗೇನೇ ಮಾಂಧಾತೃ ದ್ರೋಣಾದಿಗಳಂತೆಯೇ ಉತ್ಪತ್ತಿಯು ಕೂಡುವುದರಿಂದ ತಾಯಿಯ ಹೊಟ್ಟೆಯೊಳಗೆ ಪ್ರವೇಶಿಸುವುದು ಅನಾವಶ್ಯಕವು. ಆವಶ್ಯಕವೆಂದಾದರೆ— **ದೇಹಂ ಗರ್ಭಸ್ಥಿತಂ** ಎಂದು ಹೇಳಿದ್ದರಿಂದ ಆಸ್ತಿಕಾದಿಗಳಂತೆ ಸಂಸ್ಪರ್ಶದ್ವಾರಾ ತಂದೆಯಿಂದ ತಾಯಿಯ ಉದರಪ್ರವೇಶವು ಕೂಡುವುದರಿಂದ ಯೋನಿಪ್ರಾಪ್ತಿಯು ಅನಾವಶ್ಯಕವು. **ದೇಹಂ ಗರ್ಭಸ್ಥಿತಂ** ಎನ್ನುವ ವಚನದಿಂದ ತಾಯಿಯಿಂದ ತಿನ್ನಲ್ಪಡತಕ್ಕ ಅನ್ನಾದಿಗಳಿಂದಲೇ ತಾಯಿಯ ಉದರಪ್ರವೇಶವು ಕೂಡುವುದರಿಂದ ಮಾತೃ ದೇಹದಲ್ಲಿರತಕ್ಕ ರೇತಸ್ಸಿನಿಂದಲೇ ದೇಹಪರಿಣಾಮವು ಕೂಡುವುದರಿಂದ ಪಿತೃಪ್ರವೇಶವು ವ್ಯರ್ಥವು. ಆದಕಾರಣ ಜನ್ಮಪ್ರಾಪ್ತಿಯಾಗಲಿಕ್ಕೆ ಅತ್ಯಾಯಾಸವಿಲ್ಲದಿರುವುದರಿಂದ ಅತಿ ವೈರಾಗ್ಯವು ಬೇಕಾಗಿಲ್ಲ ಎಂದು ಪೂರ್ವಪಕ್ಷವು ಬಂದರೆ— ಪಿತೃಪ್ರವೇಶಪೂರ್ವಕವಾಗಿಯೇ ಯೋನಿದ್ವಾರಾ ತಾಯಿಯ ಉದರಪ್ರವೇಶದಿಂದಲೇ ಕರ್ಮಿಗೆ ಉತ್ಪತ್ತಿಯು, ಎಂದು ಸಾಮಾನ್ಯ ನಿಯಮವು ಎಂದು ದಿವಃ ಸ್ಥಾನ್ಸೂನ್ ಗಚ್ಛತಿ ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ದೇಹಂ ಗರ್ಭಸ್ಥಿತಂ ಇತ್ಯಾದಿ ಪ್ರಮಾಣವು

ಯೋಗಾರಾಧಿತ ಭಗವತ್ಪ್ರಸಾದದಿಂದ ಲಬ್ಧವಾದ ಸಾಮರ್ಥ್ಯಾತಿಶಯವುಳ್ಳ ಮಹಾತ್ಮರ ಜನ್ಮವಿಷಯಕವು. ಹೀಗೆ ಕರ್ಮಿಗೆ ದೇಹ ಪ್ರಾಪ್ತಿಯಾಗಲಿಕ್ಕೆ ಆಯಾಸವನ್ನುಕರ್ಮಾದಿಗಳಲ್ಲಿ ಅತಿವೈರಾಗ್ಯವು ಆವಶ್ಯಕವು.॥ ಅಧಿ. ೨೦ ॥

**ಯೋಽನ್ಯಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ(ದ) ವಿರಚಿತೇ ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ ॥ ೩—೧ ॥**

ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ಶ್ರೀಮದ್ ವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಮೂರನೇ ಅಧ್ಯಾಯದಲ್ಲಿ ಒಂದನೇ ಪಾದವು ಸಮಾಪ್ತವಾಯಿತು.

**ಸಂಪೂರ್ಣ ಗುಣನಿರ್ದೋಷರೂಪಿಣೇ ಮುಕ್ತಿದಾಯಿನೇ ।**
**ವೇದಗಮ್ಯಾಯ ರಾಮಾಯ ನಮಃ ಶ್ರೀಪತಯೇ ಸದಾ ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ತೃತೀಯಾಧ್ಯಾಯ ೨ನೇ ಪಾದ

## ಭಕ್ತಿಪಾದಃ

## ೧. ಸಂಧ್ಯಾಧಿಕರಣವು

**ಭಾಷ್ಯ ॥ (೧) ಭಕ್ತಿರಸ್ಮಿನ್ಪಾದ ಉಚ್ಯತೇ । (೨) ಭಕ್ತ್ಯರ್ಥಂ ಭಗವನ್ಮಹಿಮೋಕ್ತಿಃ ॥ ೧ ॥**

**ಭಾಷ್ಯಾರ್ಥ** ॥ (೧) (ವೈರಾಗ್ಯ ಸಾಧ್ಯವಾದುದರಿಂದಲೂ ಉಪಾಸನಾಕ್ಕೆ ಅಂಗವಾಗಿರುವುದ ರಿಂದಲೂ ವೈರಾಗ್ಯಪಾದ ಉಪಾಸನಾ ಪಾದಗಳ ಮಧ್ಯದಲ್ಲಿ) ಈ ಪಾದದಲ್ಲಿ ಭಕ್ತಿಯು ನಿರೂಪಿಸಲ್ಪಡುತ್ತದೆ. (೨) (ಎಲ್ಲಿಯೂ ಲಕ್ಷಣ ಪ್ರಮಾಣಾದಿಗಳಿಂದ ಭಕ್ತಿಸ್ವರೂಪವನ್ನು ನಿರೂಪಣ ಮಾಡದಿರುವುದರಿಂದಲೂ ಕರ್ತವ್ಯಾ ಎಂದು ವಿಧಾನ ಮಾಡಲರ್ಹವಾಗದಿದ್ದುದರಿಂದಲೂ ಭಕ್ತಿರುಚ್ಯತೇ ಎಂದು ಹೇಳಿದ್ದು ಹೇಗೆ? ಎಂದರೆ) (ಭಕ್ತಿಸ್ವರೂಪ ನಿರೂಪಣಾದಿಗಳು ಇಲ್ಲವಾದರೂ) ಭಕ್ತಿಯು ಹುಟ್ಟುವುಕ್ಕಾಗಿ ಭಗವಂತನ ಮಾಹಾತ್ಮ್ಯೆಯ ಉಕ್ತಿಯು (ಅಂದರೆ ಒಂದನೇ ಅಧ್ಯಾಯದಲ್ಲಿಯೇ ಸರ್ವಮಾಹಾತ್ಮ್ಯೆಗಳನ್ನು ಹೇಳಿದಾಗ್ಯೂ ಇಲ್ಲಿ ಕ್ವಚಿತ್ ವಿವರಣವು ಕ್ವಚಿತ್ ಸಮರ್ಥನವು ಹೇಳಲ್ಪಡುತ್ತದೆ.) (ಅಂದರೆ ಭಕ್ತಿಯೆಂದರೆ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವು. ಮಾಹಾತ್ಮ್ಯೆಗಳನ್ನು ಹೇಳದಿದ್ದರೆ ಭಗವಂತನ ಜ್ಞಾನವು ತನ್ಮೂಲಕ ಸ್ನೇಹವು ಹುಟ್ಟಲಾರದು. ಆದಕಾರಣ ಭಗವನ್ಮಹಿಮೋಕ್ತಿಗೆ ಭಕ್ತಿಯು ಫಲವಾಗಿರುವುದರಿಂದ ಭಕ್ತಿರುಚ್ಯತೇ ಎಂದು ಹೇಳಿದ್ದು.) ॥ ೧ ॥

**ಪೀಠಿಕೆ** ॥ ಈ ಅಧಿಕರಣದಲ್ಲಿ ಸ್ವಾಪ್ನಪದಾರ್ಥ ತತ್ಪ್ರತೀತಿಗಳಿಗೆ ಭಗವದಧೀನತ್ವವು ಹೇಳಲ್ಪಡುತ್ತದೆ. ಸ್ವಾಪ್ನಪದಾರ್ಥವು ಭಗವದಧೀನವಲ್ಲ. ಅದು ಮರುಮರೀಚಿಕಾ ಜಲಾದಿಗಳಂತೆ ಪ್ರಾತೀತಿಕವಾದುದರಿಂದ ಅಸತ್ತು ಆಗಿದೆ. ಪಾರಮಾರ್ಥಿಕವಾದರೆ ಸ್ವಪ್ನಾವಸ್ಥೆಗಿಂತ ಮೊದಲೂ ಮೇಲೆಯೂ ಸ್ವಪ್ನವಿಷಯವು ತೋರಬೇಕಾಗುವುದು. ಆಗ ತೋರುವುದಿಲ್ಲ. ಹಾಗಾದಾಗ್ಯೂ ಮೊದಲೂ ಮೇಲೆಯೂ ಮೃತ್ಪಿಂಡ ಕಪಾಲಾದಿಗಳಂತೆ ಅವುಗಳ ಕಾರಣಗಳಾದರೂ ತೋರಬೇಕಾಗುವವು, ಎಂದು ಪೂರ್ವಪಕ್ಷ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ॥ ೧ ॥**

**ಸೂತ್ರಾರ್ಥ** ॥ ಜಾಗ್ರತ್ ಸುಷುಪ್ತಿಗಳ ಸಂಧಿಯಲ್ಲಿ ಹುಟ್ಟತಕ್ಕ ಸ್ವಪ್ನಾವಸ್ಥೆಯಲ್ಲಿ ಸ್ವಾಪ್ನಪದಾರ್ಥ ಗಳ ಸೃಷ್ಟಿಯು ಶ್ರೀಹರಿಯಿಂದಲೇ ಆಗುತ್ತದೆ. ನ ತತ್ರ ಇತ್ಯಾದಿ ಶ್ರುತಿಯು ಹಾಗೆಯೇ ಹೇಳುತ್ತದೆ.

**ಭಾಷ್ಯ ॥ (೧) ನ ಸ್ವಪ್ನೋಽಪಿ ತಂ ವಿನಾ ಪ್ರತೀಯತೇ । (೨) ನ ತತ್ರ ರಥ್ಯಾನ ರಥಯೋಗಾ ನ ಪಂಥಾನೋ ಭವಂತ್ಯಥ ರಥಾನ್ರಥಯೋಗಾನ್ಪಥಃ ಸೃಜತೇ (ಬೃ.೬.೭.೧೦.) । ಇತ್ಯಾದಿಶ್ರುತೇಃ ॥ ೧ ॥ ೨ ॥**

**ಭಾಷ್ಯಾರ್ಥ ॥** (೧) ಜಾಗ್ರದಾದಿ ಪ್ರತೀತಿಮಾತ್ರವಲ್ಲ, ಸ್ವಾಪ್ನಪದಾರ್ಥವೂ ಕೂಡ ಶ್ರೀಪರಮಾತ್ಮನನ್ನು ಹೊರತು ತೋರುವುದಿಲ್ಲ (ಅದೂ ಶ್ರೀಹರಿಯ ಅಧೀನವೇ.) (೨) (ಸ್ವಪ್ನದಲ್ಲಿ ಮೊದಲು ಇಲ್ಲದಿರುವ ಪದಾರ್ಥಗಳಿಗೆ ಸೃಷ್ಟಿಯೂ ಅನಂತರದಲ್ಲಿಯೇ ನಾಶವೂ ಅಂಗೀಕೃತವಾಗುತ್ತದೆ. ಆದುದರಿಂದ ಮೊದಲೂ ಮೇಲೆಯೂ ತೋರದಿದ್ದರೂ ಅಸತ್ಯವನ್ನು ಹೇಳಕೂಡದು. ಈ ಅರ್ಥದಲ್ಲಿ ಪ್ರಮಾಣ ವನ್ನು ಹೇಳುತ್ತಾರೆ.) ಸ್ವಪ್ನದಲ್ಲಿ ಪೂರ್ವಸಿದ್ಧಗಳಾದ ರಥಗಳೂ ಇರಲಿಲ್ಲ, ರಥದಲ್ಲಿ ಕೂಡಿಸತಕ್ಕ ಅಶ್ವಾದಿಗಳೂ ಮೊದಲು ಇರಲಿಲ್ಲ, ರಥಸಂಚರಣ ಮಾರ್ಗಗಳೂ ಇರಲಿಲ್ಲ, ಆ ಮೇಲೆ ತಕ್ಷಣದಲ್ಲಿಯೇ ರಥಗಳನ್ನು ಕುದುರೆಗಳನ್ನು ಮಾರ್ಗ ಗಳನ್ನು ಅವರವರ ಕರ್ಮಾನುಸಾರವಾಗಿ ಶ್ರೀಹರಿಯು ಸೃಷ್ಟಿಮಾಡುತ್ತಾನೆ. ಇದು ಮೊದಲಾದ ಶ್ರುತಿಗಳಿಂದ. (ಆದಿಪದದಿಂದ **ನ ತತ್ರಾನಂದಾಃ ಮುದಃ ಪ್ರಮುದೋ ಭವಂತಿ, ಅಥಾನಂದಾ ನ ಮುದಃ ಪ್ರಮುದಃ ಸೃಜತೇ** ಇತ್ಯಾದಿಗಳನ್ನು ಇಟ್ಟುಕೊಳ್ಳಲೇಬೇಕು. ॥ ೧ ॥ ೨ ॥

**ಪೀಠಿಕೆ ॥** ಇಲ್ಲಿ ಈಶ್ವರನು ಸೃಷ್ಟಿಸತಕ್ಕವನು ಎಂದು ಹೇಳಲಿಲ್ಲ, ತತ್ಕಾಲದಲ್ಲಿಯೇ ಉತ್ಪತ್ತಿವಿನಾಶಕರ್ತನನ್ನು ಲೋಕದಲ್ಲಿ ಕಾಣದೆ ಇದ್ದುದರಿಂದಲೂ ಜೀವನು ಸುಪ್ತನಾದುದರಿಂದ ಕರ್ತೃತ್ವವು ಕೂಡದಿರುವುದರಿಂದ ಕರ್ತನೇ ಇಲ್ಲದಿರುವುದರಿಂದ ಸೃಷ್ಟಿಯು ಹೇಗೆ ಕೂಡುತ್ತದೆ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ ॥ ೨ ॥

**ಸೂತ್ರಾರ್ಥ ॥** ಕೆಲವು ಶಾಖಿಗಳು ಶ್ರೀಹರಿಯನ್ನು ಸರ್ವಸ್ವಾಪ್ನಪದಾರ್ಥಗಳಿಗೆ ನಿರ್ಮಾಣ ಮಾಡತಕ್ಕವನನ್ನಾಗಿ ಹೇಳುತ್ತಾರೆ, ಮತ್ತು ನಿರ್ಮೇಯಭೂತರಾದ ಸ್ವಾಪ್ನಪುತ್ರಾದಿಗಳು ಶ್ರೀಹರಿಯಿಂದಲೇ ಹುಟ್ಟುತ್ತಾರೆ. ಎಂದು ಗೌಪವನರು ಸ್ಪಷ್ಟವಾಗಿ ಹೇಳುತ್ತಾರೆ.

**ಭಾಷ್ಯ ॥ (೧) ಯ ಏಷು (ಷ) ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಮಾಣಃ (ಕಠ.೫.೮.) । ಇತಿ ಚ ॥ (೨) ಏತಸ್ಮಾದ್ಧ್ಯೇವ ಪುತ್ರೋ ಜಾಯತೇ ಏತಸ್ಮಾದ್ಭ್ರಾತೈತಸ್ಮಾದ್ಭಾರ್ಯಾ ಯದ್ವೈ(ದೇ)ನಂ ಪುರುಷಮೇಷ ಸ್ವಪ್ನೇನಾಭಿಹಂತಿ । ಇತಿ ಗೌಪವನಶ್ರುತಿಶ್ಚ ॥ ೨ ॥ ೩ ॥**

**ಭಾಷ್ಯಾರ್ಥ ॥** (೧) ಯಾವ ಶ್ರೀಹರಿಯು ಜೀವರು ಸುಪ್ತರಾಗುತ್ತಿರಲು ಇಷ್ಟವಾದ ಸ್ವಾಪ್ನರಥಾದಿ ಪದಾರ್ಥಸಮೂಹವನ್ನು ನಿರ್ಮಿಸುವವನಾಗಿ ಜಾಗರೂಕನಾಗಿರುತ್ತಾನೆ. ಎಂದು ಇದೆ. (ಏವಂಚ ಶ್ರೀಹರಿಗೆ ಇತರರಿಗೆ ಮಾಡಲಿಕ್ಕೆ ಅಸಾಧ್ಯವಾದುದನ್ನು ಮಾಡತಕ್ಕ ಶಕ್ತಿಯಿದ್ದುದರಿಂದ ತತ್ಕಾಲದಲ್ಲಿ ಸೃಷ್ಟಿಯು ಯುಕ್ತವೇ. ಈ ಸ್ವಾಪ್ನಪದಾರ್ಥವನ್ನು ನಿರ್ಮಿಸತಕ್ಕವನು ಜೀವನನ್ನಕೂಡಚು.

**ಸುಪ್ತೇಷು ಜಾಗರ್ತಿ** ಎಂದು ಈಶ್ವರ ಲಿಂಗವು ಶ್ರುತವಾಗಿದೆ. ಮತ್ತು **ತದೇವ ಶುಕ್ರಂ ತದ್ಬ್ರಹ್ಮ** ಎಂದು ವಾಕ್ಯಶೇಷದಲ್ಲಿ ಬ್ರಹ್ಮ ಎಂಬ ಶಬ್ದವೂ ಅದೆ.) (೨) ಯಾವಾಗ ಈ ಜೀವನನ್ನು ಈ ಪರಮಾತ್ಮನು ಸ್ವಪ್ನದಿಂದ ಸಂಯೋಜಿಸುತ್ತಾನೋ, ಆಗ ಸ್ವಪ್ನಾವಸ್ಥೆಯಲ್ಲಿ ಈ ಶ್ರೀಹರಿಯಿಂದಲೇ ಜೀವನಿಗೆ ಸ್ವಾಪ್ನಪುತ್ರ ಸಹೋದರಾದಿಗಳು ಹುಟ್ಟುತ್ತಾರೆ. ಪ್ರಸಿದ್ಧ ಎಂದು ಸ್ಪಷ್ಟವಾಗಿ ಗೌಪವನ ಶ್ರುತಿಯು ಇದೆ. ॥ ೨ ॥ ૩ ॥

**ಪೀಠಿಕೆ ॥** ಉಪಾದಾನ ನಿಮಿತ್ತಕಾರಣಗಳು ಇಲ್ಲದಿರುವುದರಿಂದ ಸ್ವಾಪ್ನಸೃಷ್ಟಿಯು ಅನುಪಪನ್ನವು ಎಂದು ಆಕ್ಷೇಪಿಸುತ್ತಾರೆ—

**ಭಾಷ್ಯ ॥ ಕೇನ ಸಾಧನೇನ ॥ ೪ ॥**

**ಭಾಷ್ಯಾರ್ಥ ॥** ಸ್ವಪ್ನವು ಈಶ್ವರ ನಿಮಿತ್ತವೆಂದಾದರೆ ಯಾವ ಸಾಧನದಿಂದ ಉಪಾದಾನಾದಿ ಸಾಧನವಿಲ್ಲದೆ, ಸೃಷ್ಟಿಯು ಕೂಡುವುದಿಲ್ಲ. ಅಂತಹ ಸಾಧನವು ಯಾವುದೂ ಇಲ್ಲ. ಆದಕಾರಣ ಇದೆಲ್ಲವೂ ಕಾಲ್ಪನಿಕವೇ. ಸೃಷ್ಟವಲ್ಲ.॥ ೪ ॥

**ಪೀಠಿಕೆ ॥** ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ಓಂ ॥ ૩ ॥

**ಸೂತ್ರಾರ್ಥ ॥** ಸ್ವಾಪ್ನಪದಾರ್ಥವು ಶ್ರೀಹರಿಯಿಂದ ಉಪಾದಾನಭೂತವಾದ ಪೂರ್ವಾನುಭೂತವಸ್ತುವಿನ ಸಂಸ್ಕಾರದಿಂದ ನಿಮಿತ್ತಭೂತವಾದ ಭಗವದಿಚ್ಛೆಯಿಂದ ಇವುಗಳಿಂದಲೇ ನಿರ್ಮಿಸಲ್ಪಟ್ಟದ್ದು. ಬಾಹ್ಯಕಾರಣವಲ್ಲ. ಸಂಪೂರ್ಣವಾಗಿ ಚೆನ್ನಾಗಿ ಸ್ಪಷ್ಟವಾಗಿ ಅಭಿವ್ಯಕ್ತವಾಗದಿರುವ ಸ್ವರೂಪವು ಇದ್ದುದರಿಂದ. (ಆದಕಾರಣ ಉಪಾದಾನಾದಿಗಳು ಇದ್ದ ಪ್ರಯುಕ್ತ ಸ್ವಾಪ್ನಪದಾರ್ಥದ ಸೃಷ್ಟಿಯು ಕೂಡಬಹುದು.)

**ಭಾಷ್ಯ ॥ ಅನಾದಿಮನೋಗತಾನ್ ಸಂಸ್ಕಾರಾನ್ ಸ್ವೇಚ್ಛಾಮಾತ್ರೇಣ ಪ್ರದರ್ಶಯತಿ । ನಾನ್ಯೇನ ಸಾಧನೇನ । ಸಮ್ಯಗನಭಿವ್ಯಕ್ತತ್ವಾತ್ ॥ ૩ ॥ ೫ ॥**

**ಭಾಷ್ಯಾರ್ಥ ॥** ಅನಾದಿಯಾದ ತ್ರಿಗುಣಾತ್ಮಕವಾದ ಮನಸ್ಸಿನಲ್ಲಿರತಕ್ಕ (ಅಂದರೆ ಮನಸ್ಸೇ ಉಪಾದಾನಕಾರಣವಾಗಿವುಳ್ಳ) ಪೂರ್ವಾನುಭೂತವನ್ನು ವಿಷಯಕಗಳಾದ ವಾಸನಾಖ್ಯಸಂಸ್ಕಾರಗಳನ್ನು ಉಪಾದಾನೀಕರಿಸಕೊಂಡು ನಿಮಿತ್ತಭೂತವಾದ ತನ್ನ ಇಚ್ಛೆಯಿಂದಲೇ (ಪರಾಪೇಕ್ಷೆಯಿಂದ ಅಲ್ಲ) ಮನಸ್ಸಿನಿಂದ ಜೀವನಿಗೋಸ್ಕರ ಸ್ವಾಪ್ನಪದಾರ್ಥಗಳನ್ನು ಈಶ್ವರನು ತೋರಿಸುತ್ತಾನೆ. (ತನ್ನ ಶಿರಃ ಛೇದಾದಿಗಳಿಗೆ ಸಂಸ್ಕಾರವಿಲ್ಲದಿರುವುದರಿಂದ ಉಪಾದಾನ ಕಾರಣವೇ ಇಲ್ಲದಿರುವುದರಿಂದ ಶುಕ್ತಿ ರಜತಾದಿಗಳಂತೆಯೇ ಅಸತ್ಯವೇ ಬರಬೇಕಾಗುವುದು ಎಂದರೆ— ಅವುಗಳು ಈ ಜನ್ಮದಲ್ಲಿ ಅನುಭೂತವಾಗದಿರುವುದರಿಂದ ಸಂಸ್ಕಾರವು ಕೂಡದಿದ್ದರೂ ಅನಾದಿಯಾದ ಸಂಸಾರದಲ್ಲಿ ಕದಾಚಿತ

ಶಿರಃ ಛೇದಾದಿಗಳ ಅನುಭವವು ಕೂಡುವುದರಿಂದ ಆ ಸಂಸ್ಕಾರದಿಂದ ಈಗ ಶಿರಃಛೇದಾದಿಗಳ ದರ್ಶನವು ಕೂಡಿಯೇ ಕೂಡುತ್ತದೆ, ಎನ್ನುವ ಅಭಿಪ್ರಾಯದಿಂದ ಅನಾದಿಮನಃ ಎಂದು ತೆಗೆದು ಕೊಂಡಿದ್ದಾರೆ.) (ಇದಕ್ಕೆ ವಾಸನೋಪಾದಾನಕತ್ವವು ಹೇಗೆಂದರೆ ಅನಿತ್ಯವಾದ ಭಾವಪದಾರ್ಥಕ್ಕೆ ಬಾಹ್ಯಕಾರಣವು ಇಲ್ಲವಾದರೆ ಪರಿಶೇಷ ಪ್ರಮಾಣದಿಂದಲೇ ವಾಸನಾ (ಸಂಸ್ಕಾರವು) ಉಪಾದಾನ ಕಾರಣವು ಎನ್ನುವುದು ಸಿದ್ಧಿಸುತ್ತದೆ ಎನ್ನುವ ಅಭಿಪ್ರಾಯದಿಂದ ಬಾಹ್ಯಕಾರಣದಿಂದ ತೋರಿಸುವುದಿಲ್ಲ (ಅಂದರೆ— ಬಾಹ್ಯಕಾರಣವನ್ನು ಉಪಾದಾನ ಕಾರಣವನ್ನಾಗಿ ಮಾಡಿ ಸ್ವಾಪ್ನಪದಾರ್ಥವನ್ನು ಸೃಷ್ಟಿಸುವುದಿಲ್ಲ) ಏಕೆಂದರೆ ಜಲಾಹರಣ ಮೊದಲಾದ ಬಾಹ್ಯಾರ್ಥಕ್ರಿಯಾ ಸಾಮರ್ಥ್ಯವು ಇಲ್ಲದಿರುವುದರಿಂದ ಸ್ವಾಪ್ನಪದಾರ್ಥಗಳು ಬಾಹ್ಯೋಪಾದಾನಕಗಳಲ್ಲ ಮತ್ತೆ ಸಂಸ್ಕಾರವೇ ಉಪಾದಾನಕಾರಣವಾಗಿ ಉಳ್ಳವುಗಳೇ. ॥ ೨. ॥ ೫ ॥

**ಭಾಷ್ಯ ॥ ಬ್ರಹ್ಮಾಂಡೇ ಚ ॥ ಮನೋಗತಾಂಶ್ಚ(ಸ್ತು) ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ । ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯ ತೇ ॥ ಯದನ್ಯಥಾತ್ವಂ ಜಾಗ್ರತ್ತ್ವಂ ಸಾ ಭ್ರಾಂತಸ್ತತ್ರ ತತ್ಕೃತಾ । ಅನಭಿ ವ್ಯಕ್ತರೂಪತ್ವಾನ್ನಾನ್ಯಸಾಧನಜಂ ಭವೇತ್ ॥ ಇತಿ ॥ ೬ ॥**

ಭಾಷ್ಯಾರ್ಥ ॥ ಶ್ರೀಪರಮೇಶ್ವರನು ಅನಾದಿಮನಸ್ಸಿನಲ್ಲಿರತಕ್ಕ ಸಂಸ್ಕಾರೋಪಾದಾನಕ ಅರ್ಥಗಳನ್ನು ಉಪಾದಾನೀಕರಿಸಿಕೊಂಡು ತನ್ನಿಂದ ನಿರ್ಮಿತವಾದ ಸ್ವಾಪ್ನ ಪದಾರ್ಥವನ್ನು ನಿಮಿತ್ತಭೂತ ವಾದ ತನ್ನ ಇಚ್ಛೆಯಿಂದಲೇ ಜೀವನಿಗೋಸ್ಕರ ತೋರಿಸುತ್ತಾನೆ. ಹೀಗೆ ಅರ್ಥಜ್ಞಾನಾತ್ಮಕವಾದುದು ಸ್ವಪ್ನವೆಂದು ಹೇಳಲ್ಪಡುತ್ತದೆ. (೨) (ಸ್ವಪ್ನದಿಂದ ಎಚ್ಚತ್ತವನಿಗೆ ಅವಿದ್ಯಮಾನಗಳೇ ಆದ ಗಜ ಅಶ್ವ ಮೊದಲಾದವುಗಳನ್ನು ನಾನು ಕಂಡೆನು ಎಂದು ಅನುಭವವಿದ್ದುದರಿಂದ ಸ್ವಾಪ್ನಪದಾರ್ಥಕ್ಕೆ ಉತ್ಪತ್ತಿಯು ಹೇಗೆಂದರೆ) ಸ್ವಾಪ್ನ ಪದಾರ್ಥಗಳಲ್ಲಿ ಯಾವುದು ಜಾಗ್ರತ್ತ್ವವು ತೋರುತ್ತದೋ (ಅಂದರೆ ಜಾಗ್ರತ್ವ ಜಾಗರಾನುಭೂತಪದಾರ್ಥಗಳಿಂದ ಏಕತ್ವವು, ಸ್ವಾಪ್ನ ಘಟಾದಿಗಳಿಗೆ ಬಾಹ್ಯಮೃದಾದ್ಯುಪಾದಾನಕತ್ವ ಜಲಾಹರಣಾದ್ಯರ್ಥಕ್ರಿಯಾ ಕಾರಿತ್ವ, ಇತ್ಯಾದಿಯು. ಇದಕ್ಕೆ ಯಾವಕಾರಣದಿಂದ ಬಾಧ್ಯತ್ವವು ಇದೆಯೋ, ಅದಕ್ಕೆ ಬಾಧ್ಯತ್ವವೇ. ಅಂದರೆ ಸ್ವಾಪ್ನಪದಾರ್ಥಗಳಲ್ಲಿ ಜಾಗ್ರತ್ತದಾರ್ಥಗಳ ಅಭೇದ ತೋರುವುದು ಅಸತ್ತು. ಸ್ವಾಪ್ನಪದಾರ್ಥಗಳು ಅಸತ್ತಲ್ಲ. ಆದಕಾರಣ ಸಾಃಸ್ವಾಪ್ನಪದಾರ್ಥಗಳಿಗೆ ಜಾಗ್ರತ್ವದಾರ್ಥತ್ವವಿಷಯಕವಾದ ಪ್ರತೀತಿಯು, ತತ್ಕೃತಾಃಅನ್ಯಥಾತ್ವಹೇತುಕೃತವಾದ ಭ್ರಾಂತಿಯು ಆಗಲಿ, ಅಥವಾ ಈಶ್ವರಕೃತವು. (ಪ್ರಕಾರವು ಅಸತ್ತು ಆದರೆ ತತ್ ಪ್ರತೀತಿಯು ಭ್ರಾಂತಿಯೆಂದು ನಿಯತವು. ಸ್ವಾಪ್ನ ಗಜ ಅಶ್ವಾದಿ ಪ್ರತೀತಿಯಾದರೂ ಭ್ರಾಂತಿಯು ಅಲ್ಲ. ಉತ್ತರಕಾಲದಲ್ಲಿ ಬರತಕ್ಕ ಅನುಭವವು ಜಾಗ್ರತ್ವಮಾತ್ರ ವಿಷಯಕವು.) (ಸ್ವಾಪ್ನಪದಾರ್ಥಕ್ಕೆ ಸಂಸ್ಕಾರೋಪಾದಾನಕತ್ವವು ಹೇಗೆಂದರೆ) ಸ್ವಾಪ್ನಪದಾರ್ಥಸಮುದಾಯವು ಬಾಹ್ಯಾರ್ಥಕ್ರಿಯಾ ಸಾಮರ್ಥ್ಯರಹಿತವಾದುದರಿಂದ ಬಾಹ್ಯಮೃತ್ಪಿಂಡಾದ್ಯುಪಾದಾನ ಜನ್ಯವು ಆಗಲಾರದು, ಎಂದು ಬ್ರಹ್ಮಾಂಡ ಪುರಾಣದಲ್ಲಿಯೂ ಹೇಳಿದೆ. (ಸೂತ್ರಕಾರರು ಮಾತ್ರ ಹೇಳಿದ್ದಲ್ಲ.) ॥ ೬ ॥

ಪೀಠಿಕೆ ॥ ಸ್ವಾಪ್ನಪದಾರ್ಥಗಳು ಬಾಹ್ಯಸಾಧನಗಳಿಂದ ಹುಟ್ಟಿದ್ದಲ್ಲವೆಂದಾದರೆ ಅವುಗಳಿಗೆ ಶುಕ್ತಿರಜತಾದಿಗಳಂತೆಯೇ ಸತ್ವವು ಕೂಡಲಾರದು ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ ॥ ೪ ॥

**ಸೂತ್ರಾರ್ಥ** ॥ ಸ್ವಾಪ್ನಾರ್ಥವು ಶುಭಾಶುಭ ಸೂಚಕವು. ಆದಕಾರಣ ಅಸತ್ತಲ್ಲ. ಶ್ರುತೇಃ ಯದಾಕರ್ಮಸು ಕಾಮ್ಯೇಷು ಇತ್ಯಾದಿ ಶ್ರುತಿಯಿಂದಲೂ, (ಹಿಃ) ಪ್ರತ್ಯಕ್ಷತಃ ಫಲವು ದೃಷ್ಟವಾದುದ ರಿಂದಲೂ, ಸ್ವಾಪ್ನಾರ್ಥವನ್ನು ತಿಳಿದಿರುವ ವ್ಯಾಸಾದಿಗಳು, ಯದ್ವಾಪಿ ಬ್ರಾಹ್ಮಣಃ ಇತ್ಯಾದಿ ಪ್ರಕಾರ ಹೇಳುತ್ತಾರೆ.

**ಭಾಷ್ಯ ॥ (೧) ಸಾಧನಾಂತರಾಭಾವೇಽಪಿ ಭಾವಾಭಾವಸೂಚಕತ್ವೇನೇ (ನಚೇ) ಶ್ವರೋದರ್ಶಯತಿ ॥ (೨) ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿಪಶ್ಯತಿ । ಸಮೃದ್ಧಿಂ ತತ್ರ ಜಾನೀಯಾತ್ತಸ್ಮಿನ್ ಸ್ವಪ್ನನಿದರ್ಶನೇ (ಛಾ.ಔ. ೨. ೯.) । ಇತ್ಯಾದಿ ಶ್ರುತೇಃ ॥ (೩) ಹಿ ಶಬ್ದಾದ್ದರ್ಶನಾಚ್ಚ ॥ ೪ ॥ ೭ ॥**

ಭಾಷ್ಯಾರ್ಥ ॥ (೧) ಸ್ವಾಪ್ನಪದಾರ್ಥಗಳಿಗೆ ಬಾಹ್ಯಸಾಧನಜನ್ಯತ್ವವಿಲ್ಲವಾದರೂ ಶುಭಾಶುಭ ಗಳನ್ನು ಸೂಚಿಸುವುದರಿಂದ ಈಶ್ವರನು ಸತ್ಯಭೂತವಾದ ಸ್ವಾಪ್ನಪದಾರ್ಥವನ್ನು ತೋರಿಸುತ್ತಾನೆ. (ಆದಕಾರಣ ಸತ್ವಕ್ಕೆ ಹಾನಿಯಿಲ್ಲ, ಮತ್ತೆ ಸತ್ವವೇ ನಿಶ್ಚಿತವಾಯಿತು. ಇಲ್ಲದಿರುವ ಶಾಕುನವು ಯಾವುದಕ್ಕೂ ಸೂಚಕವಾಗಲಾರದು.) (೨) (ಸ್ವಾಪ್ನಾರ್ಥಗಳಿಗೆ ಶುಭಾಶುಭ ಸೂಚಕತ್ವವೇ ಹೇಗೆಂದರೆ) ಕಾಮ್ಯಕರ್ಮಗಳು ಮಾಡಲ್ಪಡುತ್ತಿರಲು ಪುರುಷನು ಸ್ವಪ್ನದಲ್ಲಿ ಸ್ತ್ರೀಯರನ್ನು ಕಂಡರೆ ಆ ಸ್ವಪ್ನಾಖ್ಯನಿದರ್ಶನವು ಉಂಟಾಗುವಾಗ ಸಮೃದ್ಧಿಯನ್ನು (ತನಗೆ ಶ್ರೇಯೋಲಾಭವನ್ನು) ತಿಳಿಯತಕ್ಕದ್ದು. ಇತ್ಯಾದಿ ಶ್ರುತಿಗಳಿಂದ (ಹೀಗೆಯೇ ಸ್ವಪ್ನದಲ್ಲಿ ಮರ್ಕಟಾದಿಗಳನ್ನು ಕಂಡರೆ ತನಗೆ ಮರಣ ಸೂಚಕವಾಗುತ್ತದೆ ಎಂದು ಐತರೇಯ ಶ್ರುತಿಯು.) (೩) ಹಿಶಬ್ದದಿಂದ ಪ್ರತ್ಯಕ್ಷದರ್ಶನದಿಂದಲೂ ಸೂಚಿತವಾಯಿತು. (ಶುಭಾಶುಭ ಸೂಚಕತ್ವವು ಶ್ರುತಿಸಿದ್ಧಮಾತ್ರವಲ್ಲ, ಮತ್ತೆ ಪ್ರತ್ಯಕ್ಷದರ್ಶನ ದಿಂದಲೂ ಸಿದ್ಧವು ಆಗಿದೆ.) ॥ ೭ ॥

**ಭಾಷ್ಯ ॥ ಯದ್ವಾಪಿ ಬ್ರಾಹ್ಮಣೋ ಬ್ರೂಯಾದ್ದೇವತಾ ವೃಷಭೋಽಪಿ ವಾ । ಸ್ವಪ್ನಸ್ಥ ಮಥವಾ ರಾಜಾ ತತ್ತಥೈವ ಭವಿಷ್ಯತಿ ॥ ಇತ್ಯಾ(ದ್ಯಾ) ಚಕ್ಷತೇ ಚ ಸ್ವಪ್ನವಿದೋವ್ಯಾಸಾದಯಃ ॥ ಅಧಿ. ೧ ॥ ೮ ॥**

ಭಾಷ್ಯಾರ್ಥ ॥ ಯಾವ ಪಕ್ಷದಲ್ಲಿ ಬ್ರಾಹ್ಮಣನಾಗಲೀ ದೇವತೆಯಾಗಲೀ ದೇವಶ್ರೇಷ್ಠನಾಗಲೀ (ವೃಷಂ ಜಿಭರ್ತಿ ಎನ್ನುವ ವ್ಯುತ್ಪತ್ತಿಯಿಂದ) ರುದ್ರನಾಗಲೀ ರಾಜನಾಗಲೀ ಸ್ವಪ್ನಾವಸ್ಥೆಯನ್ನು ಹೊಂದಿದ ಜನರನ್ನು ಕುರಿತು ಯಾವ ಕಾರ್ಯವನ್ನೇ ಹೇಳುವನೋ, ಆ ವಚನವು ಹಾಗೆಯೇ ತಥ್ಯವೇ

ಆಗುವುದು. ಹೀಗೆ ಸ್ವಾಪ್ನಾರ್ಥಜ್ಞಾನಿಗಳಾದ ವ್ಯಾಸ ಮನು ಮೊದಲಾದವರು ಹೇಳುತ್ತಾರೆ. (ಆದುದರಿಂದಲೂ ಸ್ವಾಪ್ನಾರ್ಥವು ಸೂಚಕವು.) ॥ ೮ ॥

## ಅಧಿಕರಣ ಸಾರಾಂಶ

ಈ ಅಧಿಕರಣದಲ್ಲಿ ಶ್ರೀಹರಿಗೆ ಸ್ವಾಪ್ನಾರ್ಥಪ್ರತೀತಿ, ಸ್ವಾಪ್ನಾರ್ಥನಿಯಂತೃತ್ವರೂಪವಾದ ಮಹಿಮೆಯು ನಿರೂಪಿತವಾಗುತ್ತದೆ. ಸ್ವಾಪ್ನಾರ್ಥವು ಈಶ್ವರಾಧೀನವೋ ಅಲ್ಲವೋ, ಅದು ಅಸತ್ಯವೋ, ಸತ್ಯವೋ, ಎಂದು ಸಂದೇಹವು. ಸ್ವಾಪ್ನಾರ್ಥವು ಅಸತ್ತಾದುದರಿಂದ ಈಶ್ವರಾಧೀನವಲ್ಲ. ಅಸತ್ತಾದ ಶಶ ವಿಷಾಣಾದಿಗಳಿಗೆ ಈಶಾಧೀನತ್ವವು ಅನುಪಪನ್ನವು. ಮತ್ತು ಸ್ವಾಪ್ನಾರ್ಥಗಳು ಸತ್ಯಗಳೆಂದಾದರೆ ಸ್ವಾಪ್ನಾರ್ಥಗಳಿಗೆ ನಿತ್ಯತ್ವವನ್ನು ಅಂಗೀಕರಿಸಿದರೂ ಅನಿತ್ಯತ್ವವನ್ನು ಅಂಗೀಕರಿಸಿದರೂ ಉಭಯಥಾऽಪಿ ಸ್ವಾಪ್ನಾವಸ್ಥೆಗಿಂತ ಮೊದಲೂ ಮೇಲೆಯೂ ತೋರಬೇಕಾಗುವುದು. ಆವಾಗಲೇ ಉತ್ಪತ್ತಿ ವಿನಾಶಗಳೆನ್ನವುದು ಪ್ರಮಾಣವಿಲ್ಲದಿರುವುದರಿಂದಲೇ ಅಯುಕ್ತವು. ಅಲ್ಲದೆ ಆವಾಗ ಕರ್ತೃ ಉಪಾದಾನ ನಿಮಿತ್ತಕಾರಣಗಳೂ ಇರುವುದಿಲ್ಲ. ಬಾಹ್ಯ ಉಪಾದಾನನಿಮಿತ್ತಗಳು ಕಾರಣಗಳೆಂದರೆ ಕಪಾಲಾದಿಗಳೂ ತೋರಬೇಕಾಗುವವು. ಉಪಾದಾನಕಾರಣಗಳಿಂದ ಜನ್ಯವಲ್ಲವೆಂದಾದರೆ ಶುಕ್ತಿರೂಪ್ಯ ದಂತೆಯೇ ಅಸತ್ಯವು ಬರಬೇಕಾಗುವುದು. ಅಸತ್ತೇ ಆದ ಗಜಾದಿಗಳು ಸ್ವಾಪ್ನದಲ್ಲಿ ಕಾಣಲ್ಪಟ್ಟಿವೆ. ಎನ್ನುವ ಬಾಧಜ್ಞಾನವೂ ಇದೆ ಎಂದರೆ, **ಯದಾ ಕರ್ಮಸು ಕಾಮ್ಯೇಷು** ಇತ್ಯಾದಿ ಶ್ರುತಿಸ್ಮೃತಿಗಳಿಂದ ಸ್ವಾಪ್ನಾರ್ಥಗಳು ಶುಭಾಶುಭಸೂಚಕಗಳಾಗಿರುವುದರಿಂದ ಶಾಕುನದಂತೆ ಸತ್ಯಗಳಾಗಿವೆ. **ನ ತತ್ರ ರಥಾಃ** ಇತ್ಯಾದಿ ಶ್ರುತಿಗಳಿಂದ ಆವಾಗಲೇ ಉತ್ಪತ್ತಿ ನಾಶಗಳು ಕೂಡುವುದರಿಂದ ಮೊದಲೂ ಮೇಲೆಯೂ ತೋರಬೇಕೆಂದು ಇಲ್ಲ. **ಯ ಏಷು ಸುಪ್ತೇಷು** ಎನ್ನುವ ಶ್ರುತಿಯಲ್ಲಿಯೂ **ಏತಸ್ಮಾದ್ಧ್ಯೇವ ಪುತ್ರಃ** ಎನ್ನುವ ಶ್ರುತಿಯಲ್ಲಿಯೂ ಸ್ವಾಪ್ನಾರ್ಥಗಳಿಗೆ ಈಶಕರ್ತೃಕತ್ವವನ್ನು ಹೇಳಿದ್ದರಿಂದ ಕರ್ತನು ಇಲ್ಲವೆನ್ನುವುದು ಹೇಳಲು ಆಗುವುದಿಲ್ಲ. **ಮನೋಗತಾಂಶ್ಚ ಸಂಸ್ಕಾರಾನ್** ಎನ್ನುವ ಸ್ಮೃತಿಯಿಂದ ಬಾಹ್ಯೋಪಾದಾನವು ಇಲ್ಲವೆಂದೂ, ಮಾನಸ ಸಂಸ್ಕಾರವೇ ಉಪಾದಾನವೆಂದೂ ಸಿದ್ಧಿಸುವುದರಿಂದ ಕಪಾಲಾದಿಗಳು ತೋರಬೇಕಾಗುವವು ಎನ್ನುವ ಚೋದ್ಯಕ್ಕೆ ಅವಕಾಶವಿಲ್ಲ. ಸ್ವಾಪ್ನಾರ್ಥಗಳಿಗೆ ಜಾಗ್ರತ್ತದಾರ್ಥತ್ವವು ಅಸತ್ತಾದುದರಿಂದ ಸ್ವಾಪ್ನಾರ್ಥಗಳು ಸತ್ಯಗಳೇ. ಏವಂಚ ಸ್ವಾಪ್ನಾರ್ಥಗಳೂ ತಜ್ಞಾನವೂ ತಿರೋಭಾವವೂ ಎಲ್ಲವೂ ಈಶ್ವರಾಧೀನವೇ ॥ ಅಧಿ. ೧ ॥

ಸಂಧ್ಯಾಧಿಕರಣವು ಸಮಾಪ್ತವಾಯಿತು.

# ೨ ಪರಾಭಿಧ್ಯಾನಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಶ್ರೀಹರಿಗೆ ಸ್ವಪ್ನತಿರೋಧಾಯಕತ್ವ ಮಹಿಮೆಯು ಹೇಳಲ್ಪಡುತ್ತದೆ—

## ಸೂತ್ರ ॥ ಓಂ ಪರಾಭಿಧ್ಯಾನಾತ್ತುತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ ॥ ೫ ॥

**ಸೂತ್ರಾರ್ಥ ॥** ಈಶ್ವರೇಚ್ಛೆಯಿಂದಲೇ ಸ್ವಪ್ನವು ತಿರೋಹಿತವಾಗುತ್ತದೆ. ಬಾಹ್ಯಾರ್ಥಜ್ಞಾನದಿಂದ ಅಲ್ಲ ಏಕೆಂದರೆ— ಜೀವನಿಗೆ ಬಂಧಮೋಕ್ಷಗಳು ಈಶ್ವರನಿಂದಲೇ ಆಗುತ್ತವೆ. (ಹೇಗೆ ಬಂಧಮೋಕ್ಷಗಳು ಅಜ್ಞಾನಜ್ಞಾನನಿಮಿತ್ತಕಗಳೆಂದು ಪ್ರಸಿದ್ಧಿಯಿದ್ದರೂ ಅವುಗಳನ್ನು ಕೊಡತಕ್ಕವನು ಸ್ವತಂತ್ರನಾದ ಪರಮಾತ್ಮನೇ. ಅಂದರೆ— ಜ್ಞಾನಾಜ್ಞಾನಗಳು ಜಡಗಳಾಗಿರುವುದರಿಂದ ಅಸ್ವತಂತ್ರಗಳಾದ ಪ್ರಯುಕ್ತ ಜ್ಞಾನ ಅಜ್ಞಾನಗಳು ಕೊಡತಕ್ಕವುಗಳಲ್ಲ. ಹೀಗೆಯೇ ಸ್ವಾಪ್ನಾವಿರ್ಭಾವ ತಿರೋಭಾವಗಳೂ ಅಜ್ಞಾನ ಜ್ಞಾನನಿಮಿತ್ತಕಗಳೆಂದು, ತೋರಿದರೂ ಅವುಗಳನ್ನು ಕೊಡತಕ್ಕವನು ಶ್ರೀಹರಿಯೇ.

### ಭಾಷ್ಯ ॥ ಬಂಧಮೋಕ್ಷಪ್ರದತ್ವಾತ್ಸ ಏವ ಸ್ವಪ್ನತಿರಸ್ಕರ್ತಾ ॥ ೫ ॥ ೧ ॥

**ಭಾಷ್ಯಾರ್ಥ ॥** (೧) (ಬಾಹ್ಯಾರ್ಥಜ್ಞಾನ ಮೂಲಕ ಸ್ವಪ್ನಪ್ರತೀತಿಗೆ ಬಾಹ್ಯಪದಾರ್ಥ ಜ್ಞಾನದಿಂದಲೇ ಅಜ್ಞಾನನಿವೃತ್ತಿಯಾಗಿ ತಿರೋಧಾನವು ಕೂಡುವುದರಿಂದ ಸ್ವಾಪ್ನಾವಿರ್ಭಾವ ತಿರೋಭಾವಗಳಲ್ಲಿ ಈಶ್ವರನಿಂದ ಕೃತ್ಯವಿಲ್ಲ ಎಂದರೆ) ಆ ಶ್ರೀಹರಿಯೇ ಜೀವನಿಗೆ ಸ್ವಾಪ್ನಪದಾರ್ಥ ಜ್ಞಾನವನ್ನು ಮಾಡತಕ್ಕವನು, ಮತ್ತು ಸ್ವಪ್ನತಿರೋಧಾಯಕನು. (ಬಾಹ್ಯಜ್ಞಾನವು ಮುಖ್ಯವಾಗಿ ಅಲ್ಲ, ಅದು ಅಚೇತನವಾದುದರಿಂದ ಅಸ್ವತಂತ್ರವಾಗಿದೆ.) (ಶ್ರೀಹರಿಗಾದರೂ) ಅನಾದಿಯಾದ ಬಂಧ, ಅದರಿಂದ ಮೋಕ್ಷ ಇವುಗಳನ್ನು ಸಹ ಕೊಡುವಿಕೆ ಇದ್ದುದರಿಂದ (ಅದು ಕೂಡುತ್ತದೆ.)

**ವಿಶೇಷಾಂಶ ॥** ಹೇಗಂದರೆ ಬಂಧಮೋಕ್ಷಗಳು ಅಜ್ಞಾನಜ್ಞಾನನಿಮಿತ್ತಕಗಳೆಂದು ಸುಪ್ರಸಿದ್ಧ ಗಳಾದಾಗ್ಯೂ ಶ್ರೀಭಗವಂತನೇ ಬಂಧಮೋಕ್ಷದಾಯಕನು. ಜ್ಞಾನ ಅಜ್ಞಾನಗಳು ಅಚೇತನಗಳಾದುದ ರಿಂದ ಅಸ್ವತಂತ್ರಗಳಾಗಿವೆ. ಹೀಗೆಯೇ ಸ್ವಾಪ್ನಾವಿರ್ಭಾವತಿರೋಭಾವಗಳು ಅಜ್ಞಾನಜ್ಞಾನ ನಿಮಿತ್ತಕಗಳೆಂದು ಪ್ರತೀತಗಳಾದಾಗ್ಯೂ ಶ್ರೀಹರಿಯೇ ಅವುಗಳನ್ನು ಕೊಡತಕ್ಕವನು ಜ್ಞಾನಾಜ್ಞಾನಗಳಾದರೂ ನಿಮಿತ್ತಮಾತ್ರವು. ॥ ೫ ॥ ೧ ॥

**ಪೀಠಿಕೆ ॥** ದೃಷ್ಟಾಂತಮಾತ್ರವು ಅಸಾಧಕವಾದುದರಿಂದ ಈ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

### ಭಾಷ್ಯ ॥ ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ । ತದಿಚ್ಛಯಾ ಯತೋಹ್ಯಸ್ಯ ಬಂಧಮೋಕ್ಷೌ ಪ್ರತಿಷ್ಠಿತೌ ॥ ಇತಿ ಕೌರ್ಮೇ ॥ ಅಧಿ. ೨.॥ ೨ ॥

**ಭಾಷ್ಯಾರ್ಥ ॥** ಆ ಶ್ರೀಹರಿಯೇ, ಸ್ವಪ್ನ, ಜಾಗ್ರನ್ಮನೋರಥಾದಿಗಳ ಬುದ್ಧಿಯನ್ನು ಮಾಡತಕ್ಕವನೂ ಸ್ವಾಪ್ನಾದಿಬುದ್ಧಿಯನ್ನು ತಿರಸ್ಕರಿಸತಕ್ಕವನೂ ಆಗಿರುತ್ತಾನೆ. ಈಶ್ವರೇಚ್ಛೆಯಿಂದಲೇ ಜೀವನಿಗೆ ಬಂಧಮೋಕ್ಷಗಳು ಎರಡೂ ಪ್ರತಿಷ್ಠಿತಗಳಾಗಿವೆ, ಎಂದು ಕೂರ್ಮಪುರಾಣದಲ್ಲಿ ಹೇಳಿದೆ. ॥ ೫ ॥ ೨ ॥

## ಅಧಿಕರಣ ಸಾರಾಂಶ

ಸ್ವಾಪ್ನಾವಿರ್ಭಾವ ತಿರೋಭಾವಗಳು ಈಶ್ವರಾಧೀನಗಳೋ ಅಧೀನಗಳಲ್ಲವೋ, ಆದಕ್ಕಾಗಿ ಬಾಹ್ಯಾರ್ಥಾ ಜ್ಞಾನ ಅಜ್ಞಾನಗಳು ಸ್ವಪ್ನ ಜ್ಞಾನ ತಿರೋಧಾನಗಳಿಗೆ ಸ್ವತಂತ್ರ ಹೇತುವೋ ನಿಮಿತ್ತಮಾತ್ರವೋ ಎಂದು ಸಂದೇಹವು. ಸ್ವಾಪ್ನಾವಿರ್ಭಾವ ತಿರೋಧಾನಗಳಿಗೆ ಬಾಹ್ಯಾರ್ಥಾಜ್ಞಾನ ಜ್ಞಾನಾಧೀನತ್ವಾನುಭವವಿದ್ದುದರಿಂದ ಸ್ವಾಪ್ನಾವಿರ್ಭಾವ ತಿರೋಧಾನಗಳು ಬಾಹ್ಯಾರ್ಥಾಜ್ಞಾನ ಜ್ಞಾನಗಳಿಂದಲೇ ಕೊಡುವಾಗ ಈಶ್ವರನಿಂದ ಕೃತ್ಯವಿಲ್ಲ ಎಂದರೆ— ಹೇಗೆ ಬಂಧಮೋಕ್ಷಗಳು ಈಶ್ವರನ ಅಜ್ಞಾನ ಜ್ಞಾನನಿಬಂಧನಗಳು ಎಂದು ಪ್ರಸಿದ್ಧಿಯಿದ್ದರೂ ಅವುಗಳು ಜಡಗಳಾದುದರಿಂದ ಅಸ್ವತಂತ್ರಗಳಾದ ಪ್ರಯುಕ್ತ ಬಂಧಕೋ ಭವಪಾಶೇನ ಇತ್ಯಾದಿ ವಚನಗಳಿಂದ ಬಂಧಮೋಕ್ಷಗಳು ಈಶ್ವರನ ಅಧೀನಗಳೇ ಆಗಿವೆಯೋ, ಹಾಗೆಯೇ ಸ್ವಾಪ್ನಾವಿರ್ಭಾವ ತಿರೋಭಾವಗಳು ಬಾಹ್ಯಾರ್ಥಾಜ್ಞಾನ ಜ್ಞಾನನಿಮಿತ್ತಕಗಳೆಂದು ತೋರಿದರೂ ಈಶ್ವರಾಧೀನಗಳೇ ಆಗಿವೆ. ಜ್ಞಾನಾಜ್ಞಾನಗಳು ಅಸ್ವತಂತ್ರಗಳು. ಸ್ವಪ್ನಾದಿಬುದ್ಧಿಕರ್ತಾ ಚ ಇತ್ಯಾದಿ ಸ್ಮೃತಿಗಳಿಂದ ಅವುಗಳು ನಿಮಿತ್ತಮಾತ್ರ ॥ ಅಧಿ. ೨ ॥

ಪರಾಭಿಧ್ಯಾನಾಧಿಕರಣವು ಸಮಾಪ್ತವಾಯಿತು.

# ೩. ದೇಹಯೋಗಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಈಶ್ವರನಿಗೆ ಜಾಗ್ರದವಸ್ಥಾಪ್ರವರ್ತಕತ್ವ ಮಹಿಮೆಯನ್ನು ನಿರೂಪಿಸುತ್ತಾರೆ. ಜಾಗರಣವು ಕಾಲಾಧೀನವೆಂದು ಪ್ರತ್ಯಕ್ಷಸಿದ್ಧವಾದುದರಿಂದ ಭಗವದಧೀನವಲ್ಲ ಎಂದರೆ—

## ಸೂತ್ರ ॥ ಓಂ ದೇಹಯೋಗಾದ್ವಾಸೋऽಪಿ ಓಂ ॥ ೬ ॥

ಸೂತ್ರಾರ್ಥ ॥ ದೇಹಾಭಿಮಾನದಿಂದ ಸ್ಥಿತಿಯೂ ಅಂದರೆ, ಜಾಗ್ರದವಸ್ಥೆಯೂ ಕೂಡ ಈಶ್ವರೇಚ್ಛೆಯಿಂದಲೇ ಕಾಲಾದಿಗಳಿಂದ ಅಲ್ಲ

**ಭಾಷ್ಯ ॥ (೧) ದೇಹಯೋಗೇನ ವಾಸೋ ಜಾಗ್ರದಪಿ ತತ ಏವ ॥ (೨) ಸ ಏವ ಜಾಗರಿತೇ ಸ್ಥಾಪಯತಿ ಸ ಸ್ವಪ್ನೇ ಸ ಪ್ರಭುಸ್ತುರಾಷಾಟ್ ಸ ಏಕೋ ಬಹುಧಾ ಭವತಿ । ಇತಿ ಕೌಂತರವ್ಯಶ್ರುತೇಃ ॥ ೬ ॥ ಅಧಿ.೩ ॥ ೧ ॥**

ಭಾಷ್ಯಾರ್ಥ ॥ (೧) ದೇಹಾಭಿಮಾನದಿಂದ ಸ್ಥಿತಿಯು ಅಂದರೆ— ಜೀವನಿಗೆ ಜಾಗ್ರದ ವಸ್ಥೆಯೂ ಕೂಡ ಶ್ರೀಹರಿಯ ಇಚ್ಛೆಯಿಂದಲೇ ಆಗುತ್ತದೆ. (ಕೇವಲ ಕಾಲದಿಂದ ಅಲ್ಲ. ಅದು ಅಚೇತನವಾದುದರಿಂದ ಅಸ್ವತಂತ್ರವಾಗಿದೆ.) (೨) (ಜಾಗ್ರದವಸ್ಥೆಯೂ ಕಾಲಾಧೀನವೆಂದು ತೋರುವುದರಿಂದ ಈಶ್ವರಾಧೀನವೆನ್ನುವುದು ಹೇಗೆ ಸಿದ್ಧಿಸುತ್ತದೆ ಎಂದರೆ) ಆ ಶ್ರೀಹರಿಯೇ

ಜಾಗ್ರದವಸ್ಥೆಯಲ್ಲಿ ಜೀವನನ್ನು ಸ್ಥಾಪಿಸುತ್ತಾನೆ. ಆತನೇ ಸ್ವಪ್ನ (ಸುಪ್ತಿ) ದಲ್ಲಿ ಸ್ಥಾಪಿಸುತ್ತಾನೆ. ಆತನೇ ಸರ್ವ ಸಮರ್ಥನು. ವೈರಿಗಳ ವೇಗವನ್ನು ಸಹಿಸತಕ್ಕ ಆತನೊಬ್ಬನೇ. ಜಾಗ್ರದಾದ್ಯವಸ್ಥೆಗಳಿಗೆ ನಿಯಾಮಕನಾಗಿ ವಿಶ್ವಾದಿಬಹುರೂಪಗಳುಳ್ಳವನಾಗುತ್ತಾನೆ. ಎನ್ನುವ ಕೌಂಠರವ್ಯಶ್ರುತಿಯಿಂದ. (ಏವಂಚ ಕೇವಲ ಕಾಲವೇ ಪ್ರವರ್ತಕವೆಂದಾದರೆ ಶ್ರುತಿ ವಿರೋಧವು ಬರುವುದರಿಂದ ಕಾಲಕ್ಕೆ ಕಾರಣತ್ವವನ್ನು ತೋರಿಸುವ ಪ್ರತ್ಯಕ್ಷವು ನಿಮಿತ್ತತ್ವಮಾತ್ರ ವಿಷಯಕವು. ॥ ೬ ॥ ೧ ॥

## ಅಧಿಕರಣ ಸಾರಾಂಶ

ದೇಹಾಭಿಮಾನದಿಂದ ಅವಸ್ಥಿತಿರೂಪವಾದ ಜಾಗ್ರದವಸ್ಥೆಯು ಅಹರಾದಿಕಾಲಾಧೀನವು ಎಂದು ಪೂರ್ವಪಕ್ಷವು ಬಂದರೆ ಕಾಲವು ಅಸ್ವತಂತ್ರವಾದುದರಿಂದ ಈಶ್ವರಾಧೀನವೇ ಎಂದು ಸಿದ್ಧಾಂತವು. ಸ ಏವ ಜಾಗರಿತೇ ಸ್ಥಾಪಯತಿ ಇತ್ಯಾದಿ ಶ್ರುತಿಬಲದಿಂದ ಕಾಲವು ನಿಮಿತ್ತಮಾತ್ರವು. ॥ ಅಧಿ. ೩ ॥

**ದೇಹಯೋಗಾಧಿಕರಣವು ಸಮಾಪ್ತವಾಯಿತು**

# ೪ ತದಭಾವಾಧಿಕರಣವು

**ಪೀಠಿಕೆ ॥** ಈಶ್ವರನಿಗೆ ಸುಪ್ತಪ್ರಾಪ್ಯತ್ವ ಮಹಿಮೆಯನ್ನು ಹೇಳಲ್ಪಡುತ್ತದೆ. ಯದ್ಯಪಿ, **ಆಸು ತದಾನಾಡೀಷು ಸುಪ್ತಃ** ಎನ್ನುವ ಶ್ರುತಿಯಲ್ಲಿ ಜೀವನಿಗೆ ನಾಡಿಯಲ್ಲಿ ಸುಪ್ತಿಯು ಹೇಳಲ್ಪಡುತ್ತದೆ. ಆದಾಗ್ಯೂ ನಾಡಿಗಳಲ್ಲಿ ಸುಪ್ತಿಯಲ್ಲ, ಪರಮಾತ್ಮನಲ್ಲಿಯೇ ಸುಪ್ತಿಯು. ಸುಪ್ತನು ಪರಮಾತ್ಮನಿಂದ ಅನ್ಯತ್ರ ಇದ್ದರೆ ದುಃಖವು ಬರಬೇಕಾಗುವುದು. ಆಗ ಸುಖಮಾತ್ರಾನುಭವವಿದ್ದುದರಿಂದ ಸುಪ್ತನಿಗೆ ದುಃಖವಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ ॥ ೭ ॥

**ಸೂತ್ರಾರ್ಥ ॥** ಜೀವನಿಗೆ ಜಾಗ್ರತ್ಸ್ವಪ್ನಾಭಾವರೂಪವಾದ ಸುಪ್ತಿಯು ನಾಡೀಸ್ಥ ಪರಮಾತ್ಮನಲ್ಲಿ ಸುಪ್ತಿಗೆ ನಾಡೀಸ್ಥತ್ವವೂ ಆತ್ಮಸ್ಥತ್ವವೂ, **ನಾಡೀಷು ಸುಪ್ತಃ** ಸತಾ ಸೌಮ್ಯ ತದಾ ಸಂಪನ್ನಃ ಎನ್ನುವ ಶ್ರುತಿಗಳಲ್ಲಿ ಹೇಳಿದ್ದರಿಂದ. ಹಃತನ್ನಾಡೀಸಂಸ್ಥಿತಂ ವಿಷ್ಣುಂ ಮದ್ಯೇ ಜೀವಃ ಪ್ರಪದ್ಯತೇ ಇತ್ಯಾದಿಗಳಲ್ಲಿ ಪ್ರಸಿದ್ಧವು.

**ಭಾಷ್ಯ ॥ (೧) ಜಾಗ್ರತ್ಸ್ವಪ್ನಾಭಾವಃ ಸುಪ್ತಿಃ ನಾಡೀಸ್ಥೇ ಪರಮಾತ್ಮನಿ ॥ (೨) ಆಸು ತದಾ ನಾಡೀಷು ಸುಪ್ತೋ ಭವತಿ** (ಛಾ.೮.೬.೩.) **। ಸತಾ ಸೋಮ್ಯ ತದಾ ಸಂಪನ್ನೋ ಭವತಿ** (ಛಾ.೬.೮.೧.) **। ಇತಿ ಶ್ರುತೇಃ ॥ ೭ ॥ ಅಧಿ.೪ ॥ ೧ ॥**

**ಭಾಷ್ಯಾರ್ಥ ॥** (೧) ಜಾಗ್ರತ್ ಸ್ವಪ್ನಾಭಾವರೂಪವಾದ ಸುಪ್ತಿಯು ಜೀವನಿಗೆ ನಾಡೀಸ್ಥ ಪರಮಾತ್ಮನಲ್ಲಿ ಅಂಗೀಕರಿಸಲ್ಪಡುತ್ತದೆ. (ಕೇವಲ ನಾಡಿಗಳಲ್ಲಿ ಅಲ್ಲ. ಸುಪ್ತಿಯಲ್ಲಿ ದುಃಖವು ಹೇಗೆ

ಪ್ರಸಕ್ತವಾಗುವುದು?) (೨) ಈ ನಾಡಿಗಳಲ್ಲಿ ಸುಪ್ತಿಕಾಲದಲ್ಲಿ ಜೀವನು ಸುಷುಮ್ನಾಖ್ಯ ನಾಡಿಯನ್ನು ಹೊಂದಿದವನು ಆಗುತ್ತಾನೆ. (ಎಂದು ಶ್ರುತಿಯಲ್ಲಿ ನಾಡಿಗಳಲ್ಲಿ ಸುಪ್ತಿಯು ಶ್ರುತವಾಗಿದೆ.) (೩) ಶ್ವೇತಕೇತುವೇ ಸುಪ್ತಿಕಾಲದಲ್ಲಿ ಪರಬ್ರಹ್ಮನಿಂದ ಸಂಗತನಾಗುತ್ತಾನೆ ಎನ್ನುವ ಛಾಂದೋಗ್ಯ ಶ್ರುತಿಯಲ್ಲಿಯೂ ಪರಬ್ರಹ್ಮನಲ್ಲಿ ಪ್ರಾಪ್ತಿಯು ಶ್ರುತ ವಾದುದರಿಂದ. (ಆದಕಾರಣ ಎರಡು ಶ್ರುತಿಗಳಿಗೂ ಅಪ್ರಾಮಾಣ್ಯ ಹೇಳಲು ಆಗುವುದಿಲ್ಲ. ಆದಕಾರಣ ನಾಡಿಗಳಲ್ಲಿದ್ದ ಶ್ರೀಹರಿಯಲ್ಲಿ ಸುಪ್ತಿಯನ್ನು ಅಂಗೀಕರಿಸುವೆವು.) ॥ ೭ ॥ ೧ ॥

## ಅಧಿಕರಣ ಸಾರಾಂಶ

ಜೀವನಿಗೆ ಸುಪ್ತಿಯು ನಾಡೀ ಪರಮಾತ್ಮ ಇಬ್ಬರ ಮಧ್ಯದಲ್ಲಿ ಅನ್ಯತರತ್ರವೋ ಉಭಯತ್ರವೋ ಎಂದು ಸಂದೇಹವು. ನಾಡೀ ಪರಮಾತ್ಮ ಇಬ್ಬರಲ್ಲಿ ಸುಪ್ತಿಯು ವಿರುದ್ಧವಾದುದರಿಂದ ಸತಾ ಸೌಮ್ಯ, ತದಾ ನಾಡೀಷು ಎನ್ನುವ ಎರಡು ಶ್ರುತಿ ಗಳಿಗೆ ಉಭಯತ್ರ ಸುಪ್ತಿ ವ್ಯವಸ್ಥಾಪಕತ್ವವು ಇಲ್ಲದಿರುವುದರಿಂದ ಒಬ್ಬರಲ್ಲಿ ಎಂದು ಅವಶ್ಯವಾಗಿ ಹೇಳಬೇಕು. ಎಂದರೆ— ನಿತ್ಯನಿರ್ದೋಷವಾದ ಪ್ರಮಾಣಭೂತ ವಾದ ಹಿಂದೆ ಹೇಳಿದ ಶ್ರುತಿಗಳಿಂದ ಸಾಕ್ಷಾತ್ ಪರಂಪರೆಗಳಿಂದ ನಾಡೀಸ್ಥ ಪರಮಾತ್ಮನಲ್ಲಿಯೇ ಸುಪ್ತಿಯು ಎಂದು ಸಿದ್ಧಾಂತವು ॥ ಅಧಿ. ೪ ॥

**ತದಭಾವಾಧಿಕರಣವು ಸಮಾಪ್ತವಾಯಿತು**

# ೫ ಪ್ರಬೋಧಾದಿಕರಣವು

**ಪೀಠಿಕೆ ॥** ಶ್ರೀಹರಿಗೆ ಸುಪ್ತಪ್ರಬೋಧಕತ್ವ ಮಹಿಮೆಯು ಹೇಳಲ್ಪಡುತ್ತದೆ. ಭೇರೀ ತಾಡನಾದಿಗಳೂ ಪ್ರಬೋಧಕಾರಣಗಳು ಕಂಡಪ್ರಯುಕ್ತ ಸುಪ್ತಪ್ರಬೋಧವು ಈಶ್ವರಾಧೀನವಲ್ಲ ಎಂದು ಪೂರ್ವಪಕ್ಷ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅತಃ ಪ್ರಬೋಧೋಽಸ್ಮಾತ್ ಓಂ ॥ ೮ ॥

**ಸೂತ್ರಾರ್ಥ ॥** ಜೀವನಿಗೆ ಸುಪ್ತಿಪ್ರಬೋಧವು ಶ್ರೀಪರಮಾತ್ಮನಿಂದ ಆಗುತ್ತದೆ. ಜೀವನು ಆತ್ಮನಲ್ಲಿಯೇ ಸುಪ್ತನಾದ ಪ್ರಯುಕ್ತ (ಭೇರಿತಾಡನಾದಿಗಳಿಗೆ ಪ್ರಬೋಧಕತ್ವದರ್ಶನವು ನಿಮಿತ್ತಮಾತ್ರ ವಿಷಯಕವು.)

**ಭಾಷ್ಯ ॥ (೧) ಯತಸ್ತಸ್ಮಿನ್ ಸುಪ್ತಿಃ ॥ (೨) ಏಷ ಏವ ಸುಪ್ತಂ ಪ್ರಬೋಧಯತ್ಯೇತಸ್ಮಾಜ್ಜೀವ ಉತ್ತಿಷ್ಠತ್ಯೇಷ ಪ್ರಮಾತ್ಯೈಷ ಪರಮಃ ॥ ಇತಿ (ಹಿ) ಕೌಂಡಿನ್ಯಶ್ರುತಿಃ ॥ ೮ ॥ ॥ ಅಧಿ. ೫ ॥ ೧ ॥**

**ಭಾಷ್ಯಾರ್ಥ ॥** (೧) ಯಾವ ಕಾರಣದಿಂದ ನಾಡೀಸ್ಥ ಪರಮಾತ್ಮನಲ್ಲಿಯೇ ಜೀವನಿಗೆ ಸುಪ್ತಿಯು.

(ಆದಕಾರಣ ಸುಪ್ತಿಪ್ರಬೋಧವೂ ಶ್ರೀಹರಿಯಿಂದಲೇ ಆತನ ಇಚ್ಛೆಯಿಂದಲೇ ಆಗುತ್ತದೆ. ಜೀವನು ಶ್ರೀಹರಿಯಿಂದ ಅಂತಃನಿವೇಶಿತನಾದುದರಿಂದ ಶ್ರೀ ಹರಿಯ ಪ್ರೇರಣೆಯಿಲ್ಲದೆ ಎಚ್ಚರ ಹೊಂದಲಿಕ್ಕೆ ಶಕ್ತನಲ್ಲ) (೨) (ಭೇರಿತಾಡನಾದಿಗಳು ಪ್ರಬೋಧ ಹೇತುಗಳು ಎಂದು ಕಂಡದ್ದರಿಂದ ಅದು ಭಗವನ್ಮಾತ್ರಾಧೀನವೆನ್ನುವುದು ಹೇಗೆ, ಎಂದರೆ) ಶ್ರೀಹರಿಯೇ ಸುಪ್ತನನ್ನು ಎಚ್ಚರಿಸುತ್ತಾನೆ. ಶ್ರೀಹರಿಯಿಂದಲೇ ಜೀವನು ಸುಪ್ತಿಯಿಂದ ಎಚ್ಚರಿಕೆ ಹೊಂದುತ್ತಾನೆ. ಶ್ರೀಹರಿಯೇ ಸುಪ್ತಪ್ರಬೋಧಕನು, ಸರ್ವಜ್ಞನು, ಸರ್ವೋತ್ತಮನು, ಎಂದು ಕೌಂಡಿನ್ಯಶ್ರುತಿಯು (ತಥಾಚ ಸಾವಧಾರಣ ಶ್ರುತಿವಿರೋಧದಿಂದ ಭೇರಿತಾಡನಾದಿಗಳಿಗೆ ಕಾರಣತ್ವಾವಗಾಹಿ ಪ್ರತ್ಯಕ್ಷವೂ ನಿಮಿತ್ತತ್ವಮಾತ್ರ ವಿಷಯಕವು. ) ॥ ೮ ॥ ೧ ॥

## ಅಧಿಕರಣ ಸಾರಾಂಶ

ಸುಪ್ತಪ್ರಬೋಧಕವು ಕ್ವಚಿತ್ ಭೇರಿತಾಡನಾದಿ ಹೇತ್ವಂತರಾಧೀನವೋ, ಅಥವಾ ಸರ್ವತ್ರ ಈಶ್ವರೈಕಾಧೀನವೋ, ಎಂದು ಸಂದೇಹವು. ಕ್ವಚಿತ್ ಭೇರಿತಾಡನಾದಿಗಳು ಪ್ರಬೋಧಕಗಳೆಂದು ಕಂಡದ್ದರಿಂದ ಅಲ್ಲಿಯೂ ಈಶ್ವರನೇ ಪ್ರಬೋಧಕನೆಂದು ಕಲ್ಪಿಸಲಿಕ್ಕೆ ಪ್ರಮಾಣವಿಲ್ಲದಿರುವುದರಿಂದಲೂ ಭೇರಿತಾಡನಾದಿಗಳು ನಿಮಿತ್ತಮಾತ್ರ ಎಂದು ಕಲ್ಪಿಸಲಿಕ್ಕೆ ಹೇತುವು ಇಲ್ಲದಿರುವುದರಿಂದಲೂ ಅವುಗಳೇ ಪ್ರಬೋಧಕಗಳೆಂದು ಪೂರ್ವಪಕ್ಷವು ಬಂದರೆ— **ಏಷ ಏವ ಸುಪ್ತಂ ಪ್ರಬೋಧಯತಿ** ಎನ್ನುವ ಸಾವಧಾರಣ ಶ್ರುತಿವಿರೋಧದಿಂದ ಹೇತ್ವಂತರಗಳು ನಿಮಿತ್ತಮಾತ್ರಗಳು. ಆದುದರಿಂದ ಮುಖ್ಯವಾಗಿ ಸುಪ್ತಪ್ರಬೋಧಕನು ಈಶ್ವರನೇ. ಅವನೇ ಸರ್ವಸ್ವತಂತ್ರನು.॥ ಅಧಿ. ೫ ॥

**ಪ್ರಬೋಧಾಧಿಕರಣವು ಸಮಾಪ್ತವಾಯಿತು.**

# ೬ ಕರ್ಮಾನುಸ್ಮೃತ್ಯಧಿಕರಣವು

**ಪೀಠಿಕೆ ॥** ಸರ್ವಪುರುಷರಲ್ಲಿರತಕ್ಕ ಸರ್ವಕಾಲೀನಗಳಾದ ಸರ್ವಾವಸ್ಥೆಗಳಿಗೂ ಭಗವದಧೀನತ್ವ ಮಹಿಮೆಯನ್ನು ಹೇಳುತ್ತಾರೆ. ರಾಜಾದಿಗಳಿಗೆ ಖಂಡೇಶತ್ವವು ಕಂಡಂತೆಯೇ ಸರ್ವರಿಗೆ ಸರ್ವಕಾಲೀನಾವಸ್ಥೆಗಳು ಭಗವಂತನ ಅಧೀನಗಳಲ್ಲ, ಮತ್ತೆ ಕೆಲವರಿಗೆ ಕೆಲವು ವೇಳೆಯಲ್ಲಿ ಆಗತಕ್ಕ ಅವಸ್ಥೆಯೇ ಈಶ್ವರನ ಅಧೀನವು. ಆದಪ್ರಯುಕ್ತ ಶ್ರೀಹರಿಗೆ ಸರ್ವೇಶ್ವರ್ಯವಿಲ್ಲ ಎಂದು ಪೂರ್ವಪಕ್ಷವು ಬಂದರೆ—

## ಸೂತ್ರ ॥ ಓಂ ಸ ಏವ ಚ ಕರ್ಮಾನು ಸ್ಮೃತಿಶಬ್ದ ವಿಧಿಭ್ಯಃ ಓಂ ॥ ೯ ॥

**ಸೂತ್ರಾರ್ಥ ॥** ಪ್ರಸ್ತುತ ಆತ್ಮನೇ ಸರ್ವಕಾಲೀನ ಸರ್ವಾವಸ್ಥಾಪ್ರವರ್ತಕನು (ದೇಶಾಂತರ ಕಾಲಾಂತರಗಳಲ್ಲಿ ಮತ್ತೊಬ್ಬ ಪ್ರೇರಕನಲ್ಲ) ಸ ಏವ ಸಾಧು ಕರ್ಮ ಕಾರಯತಿ ಇತ್ಯಾದಿ ಕರ್ಮಗಳು

ಸ್ವತ್ವರಾಧೀನಗಳು ಎಂದು ಪ್ರತಿಪಾದಿಸತಕ್ಕ ಶ್ರುತಿಯಿಂದಲೂ, ಪ್ರದರ್ಶಕಸ್ತು ಸರ್ವೇಷಾಂ ಇತ್ಯಾದಿ ಅಭಿಮತಾರ್ಥಾನುಸಾರಿ ಸ್ಮೃತಿಯಿಂದಲೂ ಏಷ ಸ್ವಪ್ನಾನ್ ದರ್ಶಯತಿ ಇತ್ಯಾದಿ ಶಬ್ದಗಳಿಂದಲೂ, ಆತ್ಮಾನಮೇವ ಲೋಕಮುಪಾಸೀತ ಎಂದು ಆತ್ಮನಿಗೇನೇ ಉಪಾಸ್ಯತ್ವವನ್ನು ಹೇಳತಕ್ಕ ವಿಧಿಯಿಂದಲೂ.

**ಭಾಷ್ಯ ॥ (೧) ನ ಚ ಕೇಷಾಂಚಿತ್ ಸ್ವಪ್ನಾದಿ ಕರ್ತಾ ನ ತು ಸರ್ವೇಷಾಂ । ಇತಿ ॥ (೨) ಏಷ ಹ್ಯೇವ ಸಾಧು ಕರ್ಮ ಕಾರಯತಿ** (ಕೌ.೩.೮.) **। ಇತಿ ಕರ್ಮಣ್ಯವಧಾರಣಾತ್ ॥ (೩) ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು । ಪರಮಃ ಪುರುಷೋ ವಿಷ್ಣುಸ್ತತೋಽನ್ಯೋ ನಾಸ್ತಿ ಕಶ್ಚನ ॥ ಇತಿ ಅನುಸಾರಿಸ್ಮೃತೇಶ್ಚ ॥ (೪) ಏಷಸ್ವಪ್ನಾನ್ ದರ್ಶಯತ್ಯೇಷ ಪ್ರಬೋಧಯತ್ಯೇ (ತ್ಯಥೈ) ಷ ಏವ ಪರಮ ಆನಂದಃ । ಇತಿ ಚ ಶ್ರುತಿಃ ॥ (೫) ಆತ್ಮಾನಮೇವ ಲೋಕಮುಪಾಸೀತ** (ಬೃ.೩.೪.೧೫.) **। ಇತಿ ಚ ವಿಧಿಃ ॥ ೯ ॥ ಅಧಿ. ೬ ॥೧ ॥**

**ಭಾಷ್ಯಾರ್ಥ ॥** (೧) ಕೆಲವರಿಗೆ ಕದಾಚಿತ್ ಸ್ವಪ್ನಾದಿಕರ್ತನು, ಸರ್ವರಿಗೆ ಸರ್ವದಾ ಸ್ವಪ್ನಾದಿಕರ್ತನು ಅಲ್ಲ ಎಂದು ಹೇಳಕೂಡದು. (ಶ್ರೀಹರಿಯೇ ಸರ್ವಕಾಲೀನ ಸರ್ವಾವಸ್ಥಾ ಪ್ರೇರಕನು) (೨) ಶ್ರೀಹರಿಯೇ ಸಾಧುಕರ್ಮವನ್ನು (ಅಸಾಧು ಕರ್ಮವನ್ನು ಜೀವನಿಂದ) ಮಾಡಿಸುತ್ತಾನೆ. ಎನ್ನುವ ಕೌಂಶರವ ಶ್ರುತಿಯಲ್ಲಿ ಸರ್ವಕರ್ಮಗಳಿಗೂ (ಭಗವದಧೀನತ್ವವು ಏವ ಶಬ್ದದಿಂದ) ಅವಧಾರಣ ಮಾಡಿದ್ದರಿಂದ (೩) ವಿಷ್ಣುವೇ ಮುಖ್ಯವಾಗಿ ಸರ್ವದಾ ಸರ್ವರಿಗೂ ಸ್ವಪ್ನಾದ್ಯವಸ್ಥೆಗಳಿಗೆ ಪ್ರದರ್ಶಕನು ಪ್ರೇರಕನು ಜನಕನೂ ಒಬ್ಬನೇ. ಆತನು ಸರ್ವೋತ್ತಮನಾದ ಪುರುಷಶಬ್ದವಾಚ್ಯನಾದ ವಿಷ್ಣುವೇ ಆಗಬೇಕು. ಅವನಕ್ಕಿಂತ ಮತ್ತೊಬ್ಬನು ಸರ್ವೋತ್ತಮನು ಇಲ್ಲ ಎನ್ನುವ ಅನುಸಾರಿಸ್ಮೃತಿ (ಸ್ಫುಟವಾಗಿ ಅಭಿಮತವಾದ ಅರ್ಥವನ್ನು ಹೇಳುವುದು) ಯಿಂದಲೂ (೪) ಈ ಶ್ರೀಹರಿಯೇ ಸ್ವಪ್ನಾವಸ್ಥೆಗಳನ್ನು ಜೀವರಿಗೆ ಸಂಯೋಜಿಸುತ್ತಾನೆ. ಶ್ರೀಹರಿಯೇ ಸುಪ್ತಜೀವರನ್ನು ಎಚ್ಚರಿಸುತ್ತಾನೆ, ಈತನೇ ಸರ್ವೋತ್ತಮನು, ಆನಂದಪೂರ್ಣನು, ಎಂದು ಶ್ರುತಿರೂಪವಾದ ಶಬ್ದವು. (೫) ಪರಮಾತ್ಮನನ್ನೇ ಸರ್ವಾಶಯನನ್ನಾಗಿ ಉಪಾಸನಾ ಮಾಡತಕ್ಕದ್ದು, ಎಂದು ಪರಮಾತ್ಮನಿಗೇನೇ ಉಪಾಸ್ಯತ್ವವನ್ನು ವಿಧಾನಮಾಡತಕ್ಕ ವಿಧಿಯು. ಏವಂಚ ಇತರರೂ ಪ್ರೇರಕರು ಇದ್ದರೆ ಅವರಿಗೂ ಸರ್ವಾಶ್ರಯತ್ವದಿಂದ ಉಪಾಸ್ಯತ್ವವು ಪ್ರಾಪ್ತವಾಗುವುದರಿಂದ ಆತ್ಮಾನಮೇವ ಎನ್ನುವ ಅವಧಾರಣವು ಕೂಡದೆ ಹೋಗುವುದು. ॥ ೯ ॥ ಅಧಿ.೬ ॥ ೧ ॥

## ಅಧಿಕರಣ ಸಾರಾಂಶ

ಶ್ರೀಹರಿಯು ಕೆಲವರಿಗೆ ಕದಾಚಿತ್ ಅವಸ್ಥಾಪ್ರೇರಕನೋ, ಅಥವಾ ಸರ್ವಜೀವರಿಗೆ ಸರ್ವಕಾಲೀನ ಅವಸ್ಥಾಪ್ರೇರಕನೋ, ಎಂದು ಸಂದೇಹವು. ಕೆಲವರಿಗೆ ಕದಾಚಿತ್ ಅವಸ್ಥಾಪ್ರೇರಕನು, ಸರ್ವಜನರಿಗೂ ಸರ್ವಕಾಲೀನಾವಸ್ಥಾಪ್ರೇರಕನು ಅಲ್ಲ. ಲೋಕದಲ್ಲಿ ರಾಜಾದಿಗಳಲ್ಲಿ ಖಂಡೇಶತ್ವವು

(ಆದಕಾರಣ ಸುಪ್ತಿಪ್ರಬೋಧವೂ ಶ್ರೀಹರಿಯಿಂದಲೇ ಆತನ ಇಚ್ಛೆಯಿಂದಲೇ ಆಗುತ್ತದೆ. ಜೀವನು ಶ್ರೀಹರಿಯಿಂದ ಅಂತಃನಿವೇಶಿತನಾದುದರಿಂದ ಶ್ರೀ ಹರಿಯ ಪ್ರೇರಣೆಯಿಲ್ಲದೆ ಎಚ್ಚರ ಹೊಂದಲಿಕ್ಕೆ ಶಕ್ತನಲ್ಲ) (೨) (ಭೇರಿತಾಡನಾದಿಗಳು ಪ್ರಬೋಧ ಹೇತುಗಳು ಎಂದು ಕಂಡದ್ದರಿಂದ ಅದು ಭಗವನ್ಮಾತ್ರಾಧೀನವೆನ್ನುವುದು ಹೇಗೆ, ಎಂದರೆ) ಶ್ರೀಹರಿಯೇ ಸುಪ್ತನನ್ನು ಎಚ್ಚರಿಸುತ್ತಾನೆ. ಶ್ರೀಹರಿಯಿಂದಲೇ ಜೀವನು ಸುಪ್ತಿಯಿಂದ ಎಚ್ಚರಿಕೆ ಹೊಂದುತ್ತಾನೆ. ಶ್ರೀಹರಿಯೇ ಸುಪ್ತಪ್ರಬೋಧಕನು, ಸರ್ವಜ್ಞನು, ಸರ್ವೋತ್ತಮನು, ಎಂದು ಕೌಂಡಿನ್ಯಶ್ರುತಿಯು (ತಥಾಚ ಸಾವಧಾರಣ ಶ್ರುತಿವಿರೋಧದಿಂದ ಭೇರಿತಾಡನಾದಿಗಳಿಗೆ ಕಾರಣತ್ವಾವಗಾಹಿ ಪ್ರತ್ಯಕ್ಷವೂ ನಿಮಿತ್ತತ್ವಮಾತ್ರ ವಿಷಯಕವು. ) ॥ ೮ ॥ ೧ ॥

## ಅಧಿಕರಣ ಸಾರಾಂಶ

ಸುಪ್ತಪ್ರಬೋಧಕವು ಕ್ವಚಿತ್ ಭೇರಿತಾಡನಾದಿ ಹೇತ್ವಂತರಾಧೀನವೋ, ಅಥವಾ ಸರ್ವತ್ರ ಈಶ್ವರೈಕಾಧೀನವೋ, ಎಂದು ಸಂದೇಹವು. ಕ್ವಚಿತ್ ಭೇರಿತಾಡನಾದಿಗಳು ಪ್ರಬೋಧಕಗಳೆಂದು ಕಂಡದ್ದರಿಂದ ಅಲ್ಲಿಯೂ ಈಶ್ವರನೇ ಪ್ರಬೋಧಕನೆಂದು ಕಲ್ಪಿಸಲಿಕ್ಕೆ ಪ್ರಮಾಣವಿಲ್ಲದಿರುವುದರಿಂದಲೂ ಭೇರಿತಾಡನಾದಿಗಳು ನಿಮಿತ್ತಮಾತ್ರ ಎಂದು ಕಲ್ಪಿಸಲಿಕ್ಕೆ ಹೇತುವು ಇಲ್ಲದಿರುವುದರಿಂದಲೂ ಅವುಗಳೇ ಪ್ರಬೋಧಕಗಳೆಂದು ಪೂರ್ವಪಕ್ಷವು ಬಂದರೆ— **ಏಷ ಏವ ಸುಪ್ತಂ ಪ್ರಬೋಧಯತಿ** ಎನ್ನುವ ಸಾವಧಾರಣ ಶ್ರುತಿವಿರೋಧದಿಂದ ಹೇತ್ವಂತರಗಳು ನಿಮಿತ್ತಮಾತ್ರಗಳು. ಆದುದರಿಂದ ಮುಖ್ಯವಾಗಿ ಸುಪ್ತಪ್ರಬೋಧಕನು ಈಶ್ವರನೇ. ಅವನೇ ಸರ್ವಸ್ವತಂತ್ರನು.॥ ಅಧಿ. ೫ ॥

**ಪ್ರಬೋಧಾಧಿಕರಣವು ಸಮಾಪ್ತವಾಯಿತು.**

# ೬ ಕರ್ಮಾನುಸ್ಮೃತ್ಯಧಿಕರಣವು

**ಪೀಠಿಕೆ ॥** ಸರ್ವಪುರುಷರಲ್ಲಿರತಕ್ಕ ಸರ್ವಕಾಲೀನಗಳಾದ ಸರ್ವಾವಸ್ಥೆಗಳಿಗೂ ಭಗವದಧೀನತ್ವ ಮಹಿಮೆಯನ್ನು ಹೇಳುತ್ತಾರೆ. ರಾಜಾದಿಗಳಿಗೆ ಖಂಡೇಶತ್ವವು ಕಂಡಂತೆಯೇ ಸರ್ವರಿಗೆ ಸರ್ವಕಾಲೀನಾವಸ್ಥೆಗಳು ಭಗವಂತನ ಅಧೀನಗಳಲ್ಲ. ಮತ್ತೆ ಕೆಲವರಿಗೆ ಕೆಲವು ವೇಳೆಯಲ್ಲಿ ಆಗತಕ್ಕ ಅವಸ್ಥೆಯೇ ಈಶ್ವರನ ಅಧೀನವು. ಆದಪ್ರಯುಕ್ತ ಶ್ರೀಹರಿಗೆ ಸರ್ವೇಶ್ವರ್ಯವಿಲ್ಲ ಎಂದು ಪೂರ್ವಪಕ್ಷವು ಬಂದರೆ—

### ಸೂತ್ರ ॥ ಓಂ ಸ ಏವ ಚ ಕರ್ಮಾನು ಸ್ಮೃತಿಶಬ್ದ ವಿಧಿಭ್ಯಃ ಓಂ ॥ ೯ ॥

**ಸೂತ್ರಾರ್ಥ ॥** ಪ್ರಸ್ತುತ ಆತ್ಮನೇ ಸರ್ವಕಾಲೀನ ಸರ್ವಾವಸ್ಥಾಪ್ರವರ್ತಕನು (ದೇಶಾಂತರ ಕಾಲಾಂತರಗಳಲ್ಲಿ ಮತ್ತೊಬ್ಬ ಪ್ರೇರಕನಲ್ಲ) ಸ ಏವ ಸಾಧು ಕರ್ಮ ಕಾರಯತಿ ಇತ್ಯಾದಿ ಕರ್ಮಗಳು

ಇತರಾಧೀನಗಳು ಎಂದು ಪ್ರತಿಪಾದಿಸತಕ್ಕ ಶ್ರುತಿಯಿಂದಲೂ, ಪ್ರದರ್ಶಕಸ್ತು ಸರ್ವೇಷಾಂ ಇತ್ಯಾದಿ ಅಭಿಮತಾರ್ಥಾನುಸಾರಿ ಸ್ಮೃತಿಯಿಂದಲೂ ಏಷ ಸ್ವಪ್ನಾನ್ ದರ್ಶಯತಿ ಇತ್ಯಾದಿ ಶಬ್ದಗಳಿಂದಲೂ, ಆತ್ಮಾನಮೇವ ಲೋಕಮುಪಾಸೀತ ಎಂದು ಆತ್ಮನಿಗೇನೇ ಉಪಾಸ್ಯತ್ವವನ್ನು ಹೇಳತಕ್ಕ ವಿಧಿಯಿಂದಲೂ.

**ಭಾಷ್ಯ ॥ (೧) ನ ಚ ಕೇಷಾಂಚಿತ್ ಸ್ವಪ್ನಾದಿ ಕರ್ತಾ ನ ತು ಸರ್ವೇಷಾಂ। ಇತಿ ॥ (೨) ಏಷ ಹ್ಯೇವ ಸಾಧು ಕರ್ಮ ಕಾರಯತಿ** (ಕೌ.೩.೮.) **। ಇತಿ ಕರ್ಮಣ್ಯವಧಾರಣಾತ್ ॥ (೩) ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು । ಪರಮಃ ಪುರುಷೋ ವಿಷ್ಣುಸ್ತತೋಽನ್ಯೋ ನಾಸ್ತಿ ಕಶ್ಚನ ॥ ಇತಿ ಅನುಸಾರಿಸ್ಮೃತೇಶ್ಚ ॥ (೪) ಏಷಸ್ವಪ್ನಾನ್ ದರ್ಶಯತ್ಯೇಷ ಪ್ರಬೋಧಯತ್ಯೇ (ತ್ಯಥ) ಷ ಏವ ಪರಮ ಆನಂದಃ । ಇತಿ ಚ ಶ್ರುತಿಃ ॥ (೫) ಆತ್ಮಾನಮೇವ ಲೋಕಮುಪಾಸೀತ** (ಬೃ.೨.೪.೧೫.) **। ಇತಿ ಚ ವಿಧಿಃ ॥ ೯ ॥ ಅಧಿ. ೬ ॥೧ ॥**

**ಭಾಷ್ಯಾರ್ಥ ॥** (೧) ಕೆಲವರಿಗೆ ಕದಾಚಿತ್ ಸ್ವಪ್ನಾದಿಕರ್ತನು, ಸರ್ವರಿಗೆ ಸರ್ವದಾ ಸ್ವಪ್ನಾದಿಕರ್ತನು ಅಲ್ಲ, ಎಂದು ಹೇಳಕೂಡದು. (ಶ್ರೀಹರಿಯೇ ಸರ್ವಕಾಲೀನ ಸರ್ವಾವಸ್ಥಾ ಪ್ರೇರಕನು) (೨) ಶ್ರೀಹರಿಯೇ ಸಾಧುಕರ್ಮವನ್ನು (ಅಸಾಧು ಕರ್ಮವನ್ನು ಜೀವನಿಂದ) ಮಾಡಿಸುತ್ತಾನೆ. ಎನ್ನುವ ಕೌಂಶರವ ಶ್ರುತಿಯಲ್ಲಿ ಸರ್ವಕರ್ಮಗಳಿಗೂ (ಭಗವದಧೀನತ್ವವು ಏವ ಶಬ್ದದಿಂದ) ಅವಧಾರಣ ಮಾಡಿದ್ದರಿಂದ (೩) ವಿಷ್ಣುವೇ ಮುಖ್ಯವಾಗಿ ಸರ್ವದಾ ಸರ್ವರಿಗೂ ಸ್ವಪ್ನಾದ್ಯವಸ್ಥೆಗಳಿಗೆ ಪ್ರದರ್ಶಕನು ಪ್ರೇರಕನು ಜನಕನೂ ಒಬ್ಬನೇ. ಆತನು ಸರ್ವೋತ್ತಮನಾದ ಪುರುಷಶಬ್ದವಾಚ್ಯನಾದ ವಿಷ್ಣುವೇ ಆಗಬೇಕು. ಅವನಕ್ಕಿಂತ ಮತ್ತೊಬ್ಬನು ಸರ್ವೋತ್ತಮನು ಇಲ್ಲ ಎನ್ನುವ ಅನುಸಾರಿಸ್ಮೃತಿ (ಸ್ಫುಟವಾಗಿ ಅಭಿಮತವಾದ ಅರ್ಥವನ್ನು ಹೇಳುವುದು) ಯಿಂದಲೂ (೪) ಈ ಶ್ರೀಹರಿಯೇ ಸ್ವಪ್ನಾವಸ್ಥೆಗಳನ್ನು ಜೀವರಿಗೆ ಸಂಯೋಜಿಸುತ್ತಾನೆ. ಶ್ರೀಹರಿಯೇ ಸುಪ್ತಜೀವರನ್ನು ಎಚ್ಚರಿಸುತ್ತಾನೆ, ಈತನೇ ಸರ್ವೋತ್ತಮನು, ಆನಂದಪೂರ್ಣನು, ಎಂದು ಶ್ರುತಿರೂಪವಾದ ಶಬ್ದವು. (೫) ಪರಮಾತ್ಮನನ್ನೇ ಸರ್ವಾಶಯನನ್ನಾಗಿ ಉಪಾಸನಾ ಮಾಡತಕ್ಕದು, ಎಂದು ಪರಮಾತ್ಮನಿಗೇನೇ ಉಪಾಸ್ಯತ್ವವನ್ನು ವಿಧಾನಮಾಡತಕ್ಕ ವಿಧಿಯು. ಏವಂಚ ಇತರರೂ ಪ್ರೇರಕರು ಇದ್ದರೆ ಅವರಿಗೂ ಸರ್ವಾಶ್ರಯತ್ವದಿಂದ ಉಪಾಸ್ಯತ್ವವು ಪ್ರಾಪ್ತವಾಗುವುದರಿಂದ **ಆತ್ಮಾನಮೇವ** ಎನ್ನುವ ಅವಧಾರಣವು ಕೂಡದೆ ಹೋಗುವುದು. ॥ ೯ ॥ ಅಧಿ.೬ ॥ ೧ ॥

## ಅಧಿಕರಣ ಸಾರಾಂಶ

ಶ್ರೀಹರಿಯು ಕೆಲವರಿಗೆ ಕದಾಚಿತ್ ಅವಸ್ಥಾಪ್ರೇರಕನೋ, ಅಥವಾ ಸರ್ವಜೀವರಿಗೆ ಸರ್ವಕಾಲೀನ ಅವಸ್ಥಾಪ್ರೇರಕನೋ, ಎಂದು ಸಂದೇಹವು. ಕೆಲವರಿಗೆ ಕದಾಚಿತ್ ಅವಸ್ಥಾಪ್ರೇರಕನು, ಸರ್ವಜನರಿಗೂ ಸರ್ವಕಾಲೀನಾವಸ್ಥಾಪ್ರೇರಕನು ಅಲ್ಲ. ಲೋಕದಲ್ಲಿ ರಾಜಾದಿಗಳಲ್ಲಿ ಏಂಡೇಶತ್ವವು

ದೃಷ್ಟವಾಗಿದೆ. ಎಂದರೆ, ವಿಷ್ಣುವೇ ಸರ್ವತ್ರ ಸರ್ವಜನೀನ ಸಾರ್ವಕಾಲಿಕ ಸರ್ವಾವಸ್ಥಾಪ್ರೇರಕನು. ಎಲ್ಲಿಯೂ ಮತ್ತೊಬ್ಬನು ಪ್ರೇರಕನು ಇಲ್ಲ. **ಏಷ ಹ್ಯೇವ ಸಾಧು ಕರ್ಮ ಕಾರಯತಿ,** ಇತ್ಯಾದಿ ಶ್ರುತಿಬಲದಿಂದಲೂ **ಆತ್ಮಾನಮೇವ ಲೋಕಮುಪಾಸೀತ** ಇತ್ಯಾದಿಗಳಲ್ಲಿ ಆತ್ಮನಿಗೇನೇ ಉಪಾಸ್ಯತ್ವವನ್ನು ಹೇಳಿದ್ದರಿಂದ ಶ್ರೀಹರಿಗೇನೇ ಸರ್ವಕಾಲೀನ ಸರ್ವಾವಸ್ಥಾಪ್ರೇರಕತ್ವವು ಅವಗತವಾಗುತ್ತದೆ. ॥ಅಧಿ.೬॥

**ಕರ್ಮಾನುಸ್ಮೃತ್ಯಧಿಕರಣವು ಸಮಾಪ್ತವಾಯಿತು.**

## ೭ ಸಂಪತ್ತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಈಶ್ವರನಿಗೆ ಮೋಹಾವಸ್ಥೆಯಲ್ಲಿ ಜೀವನಿಂದ ಅರ್ಧಪ್ರಾಪ್ಯತ್ವವು ನಿರೂಪಿಸಲ್ಪಡುತ್ತದೆ. ಜೀವನಿಗೆ ಭಗವದಿತರತ್ರ ಮೋಹವು ಬರುವುದಿಲ್ಲ, ಶ್ರೀಹರಿಯಲ್ಲಿಯೇ ಮೋಹವು. ಈ ಮೋಹಾವಸ್ಥೆಯು ಸುಪ್ತಿಯಂತೆ ಜಾಗ್ರತ್ ಸ್ವಪ್ನಾವಸ್ಥೆಗಳಿಂದ ಪ್ರತ್ಯೇಕ ಅವಸ್ಥೆಯಾಗಿದೆ ಎಂದು ಪೂರ್ವಪಕ್ಷವು ಬಂದರೆ—

### ಸೂತ್ರ ॥ ಓಂ ಮುಗ್ಧೇऽರ್ಧಸಂಪತ್ತಿಃ ಪರಿಶೇಷಾತ್ ಓಂ ॥ ೧೦ ॥

**ಸೂತ್ರಾರ್ಥ ॥** ಮೋಹಾವಸ್ಥೆಯಲ್ಲಿ ಜೀವನಿಗೆ ವಿಷ್ಣುವಿನಲ್ಲಿ ಅರ್ಧಪ್ರವೇಶವು. ಮೋಹದಲ್ಲಿ ಪ್ರಸಕ್ತಗಳಾದ ವಿದೂರತ್ವ, ಸಾಮೀಪ್ಯ, ಪ್ರವೇಶ, ಅರ್ಧಪ್ರವೇಶಗಳ ಮಧ್ಯದಲ್ಲಿ ಪ್ರಾಥಮಿಕ ಮೂರು ಅವಸ್ಥಾಂತರಗಳ ಧರ್ಮಗಳಾದುದರಿಂದ ಅವುಗಳಿಗೆ ವ್ಯಾವೃತ್ತಿಯಾಗುವಾಗ ಅರ್ಧಪ್ರವೇಶವೇ ಪರಿಶಿಷ್ಟವಾದುದರಿಂದ.

**ಭಾಷ್ಯ ॥ (೧) ಮೋಹಾವಸ್ಥಾಯಾಂ ಪರಮೇಶ್ವರೇऽರ್ಧ ಪ್ರಾಪ್ತಿರ್ಜೀವಸ್ಯ ॥ (೨) ಹೃದಯಸ್ಥಾತ್ಪರಾಜ್ಜೀವೋ ದೂರಸ್ಥೋ ಜಾಗ್ರದೇಕ್ಷತಿ । ಸಮೀಪಸ್ಥಸ್ತಥಾ ಸ್ವಪ್ನಂ ಸ್ವಪಿತ್ಯಸ್ಮಿಂಲ್ಲಯಂ ವ್ರಜನ್ ॥ ಯತ ಏವಂ ತ್ರಯೋऽವಸ್ಥಾ ಮೋಹಸ್ತು ಪರಿಶೇಷತಃ । ಅರ್ಧಪ್ರಾಪ್ತಿರಿತಿ ಜ್ಞೇಯೋ ದುಃಖಮಾತ್ರಪ್ರತಿಸ್ಮೃತೇ ॥ ಇತಿ ವಾರಾಹೇ ॥ ೧೦ ॥ ೧ ॥**

ಭಾಷ್ಯಾರ್ಥ ॥ (೧) ಮೋಹಾವಸ್ಥೆಯಲ್ಲಿ ಭಗವದುದರದಲ್ಲಿ ಜೀವನಿಗೆ ಅರ್ಧಪ್ರಾಪ್ತಿಯೇ. (೨) ಹೃದಯದಲ್ಲಿರತಕ್ಕ ಪ್ರಾಜ್ಞನಾಮಕ ಪರಮಾತ್ಮನನ್ನು ಅಪೇಕ್ಷಿಸಿ ಜೀವನು ಯಾವಾಗ ಅಕ್ಷಿಸ್ಥನಾಗುತ್ತಾನೋ ಆಗ ಜಾಗ್ರದವಸ್ಥೆಯನ್ನು ಹೊಂದುವನು. ಯಾವಾಗ ಕಂಠದೇಶದಲ್ಲಿರುತ್ತಾನೋ, ಆಗ ಸ್ವಪ್ನಾವಸ್ಥೆಯನ್ನು ಹೊಂದುವನು. ಯಾವಾಗ ಈ ಶ್ರೀಹರಿಯಲ್ಲಿ ಲಯಂ=ನೊಣಗಳಿಗೆ ಗೃಹಗೋಧಿಕಾ (ಹಲ್ಲಿ)ದಲ್ಲಿ ಪ್ರವೇಶದಂತೆ ಸಂಪೂರ್ಣ ಪ್ರವೇಶವನ್ನು ಹೊಂದುವವನು ಆಗುತ್ತಾನೋ ಆಗ ಸುಪ್ತ್ಯವಸ್ಥೆಯನ್ನು ಹೊಂದುತ್ತಾನೆ. ಯಾವ ಕಾರಣದಿಂದ ಹೀಗೆ ಹೇಳಿದ ಪ್ರಕಾರದಿಂದ ಜಾಗ್ರದಾದಿ ಮೂರು ಅವಸ್ಥೆಗಳು, ಪರಮಾತ್ಮ ವಿದೂರತ್ವ, ಸಾಮೀಪ್ಯ, ಪರಮಾತ್ಮ ಪ್ರವೇಶರೂಪಗಳಾಗಿವೆಯೋ,

ಆದಕಾರಣ ಮೋಹವಾದರೂ ಪರಿಶೇಷದಿಂದ (ಪ್ರಸಕ್ತಗಳನ್ನು ಪ್ರತಿಷೇಧಿಸಿ ಪರಿಶಿಷ್ಯಮಾಣವಾದ ವಸ್ತುವಿನಲ್ಲಿ ಬುದ್ಧಿಯು ಪರಿಶೇಷವು) ಅರ್ಥಪ್ರವೇಶಾಖ್ಯ ಪ್ರಕಾರ ಯುಕ್ತವಾದುದು ಎಂದು ತಿಳಿಯತಕ್ಕುದು. (ಏವಂಚ ನಾಲ್ಕೇ ಪ್ರಕಾರಗಳು ಪ್ರಸಕ್ತಗಳಾದವುಗಳು. ಅವುಗಳಲ್ಲಿ ಮೂರು ಜಾಗ್ರದಾವಸ್ಥಾ ಧರ್ಮಗಳು.) (ಮೋಹಕ್ಕೆ ಪೃಥಕ್ ಅವಸ್ಥಾತ್ವವೇ ಏಕೆ ಇಟ್ಟುಕೊಳ್ಳಬೇಕೆಂದರೆ) ದುಃಖ ಆತ್ಮಕಾಲಗಳ ಅನುಸಂಧಾನವಿದ್ದ ಪ್ರಯುಕ್ತ (ಅಂದರೆ ದುಃಖಾನುಸಂಧಾನವಿದ್ದ ಪ್ರಯುಕ್ತ ಮೋಹಕ್ಕೆ ಸುಪ್ತಿಯಲ್ಲಿ ಅಂತರ್ಭಾವವಿಲ್ಲ. ದುಃಖ ಆತ್ಮ ಕಾಲಗಳಿಂದ ಅತಿರಿಕ್ತವಿಷಯಗಳು ಕಾಣದಿರುವುದರಿಂದ ಜಾಗ್ರದವಸ್ಥೆ ಸ್ವಪ್ನಾವಸ್ಥೆಗಳಲ್ಲಿಯೂ ಅಂತರ್ಭಾವವಾಗುವುದಿಲ್ಲ ಎಂದು ವಾರಾಹಪುರಾಣದಲ್ಲಿದೆ. ಆದಕಾರಣ ಪರಿಶೇಷಾತ್ ಮೋಹಕ್ಕೆ ಪೃಥಕ್ ಅವಸ್ಥಾತ್ವವು ಸಿದ್ಧಿಸುತ್ತದೆ. ॥ ೧ ॥

**ಪೀಠಿಕೆ ॥** ಮೋಹಕಾರಣಗಳು ಆಧಿ ವ್ಯಾಧ್ಯಾದಿಗಳೂ ಪೃಥಕ್ ಇದ್ದುದರಿಂದ ಸ್ವಪ್ನಾದಿಗಳಂತೆಯೇ ಮೋಹವೂ ಕೇವಲ ಭಗವದಧೀನವೆನ್ನುವುದನ್ನು ಸಾಧಿಸಲೇಬೇಕು. ಆ ವಿಚಾರವನ್ನು ಏಕೆ ಮಾಡುವುದಿಲ್ಲವೆಂದರೆ—

**ಭಾಷ್ಯ ॥ ಸೋಽಪಿ ತತ ಏವೇತಿ ಚ ಸಿದ್ಧಂ ॥ ೨ ॥**

**ಭಾಷ್ಯಾರ್ಥ ॥** (ಸ್ವಪ್ನಾದಿಗಳು ಮಾತ್ರವಲ್ಲ) ಮೋಹವೂ ಮೋಹಪ್ರಬೋಧವೂ ಕೂಡ ಈಶ್ವರನಿಂದಲೇ ಆಗುತ್ತದೆ ಎಂದು ಕರ್ಮಾನುಸ್ಮೃತ್ಯಾದಿ ಹೇತುಗಳಿಂದಲೇ ಸಿದ್ಧವಾಯಿತು. ಆದಕಾರಣ ಅದು ಶ್ರೀಹರಿಯಿಂದಲೋ ಇತರರಿಂದಲೋ ಎನ್ನುವ ವಿಚಾರವನ್ನು ಮಾಡುವುದಿಲ್ಲ ॥ ೨ ॥

**ಪೀಠಿಕೆ ॥** ಬಾಹ್ಯಕಾರಣದರ್ಶನವಾದರೂ ನಿಮಿತ್ತಕಾರಣವಿಷಯಕವು. ಅನ್ಯಥಾ ವಿಶೇಷ ಸ್ಮೃತಿವಿರೋಧವು ಬರುವುದು ಎನ್ನುವ ಅಭಿಪ್ರಾಯದಿಂದ ಆ ಸ್ಮೃತಿಯನ್ನು ಉದಾಹರಿಸುತ್ತಾರೆ—

**ಭಾಷ್ಯ ॥ ಮೂರ್ಛಾ ಪ್ರಬೋಧನಂ ಚೈವ ಯತ ಏವ ಪ್ರವರ್ತತೇ । ಸ ಈಶಃ ಪರಮೋ ಜ್ಞೇಯಃ ಪರಮಾನಂದಲಕ್ಷಣಃ ॥ ಇತಿ (ಹಿ) ಕೌರ್ಮೇ ॥ ಅಧಿ. ೭ ॥ ೩ ॥**

**ಭಾಷ್ಯಾರ್ಥ ॥** ಮೂರ್ಛೆಯೂ, ಮೂರ್ಛೆಯಿಂದ ಉದ್ಬೋಧವೂ ಕೂಡ ಯಾವ ಶ್ರೀಹರಿಯಿಂದಲೇ ಹುಟ್ಟುತ್ತದೋ, ಆತನು ಪರಮೇಶ್ವರನೆಂದೇ ತಿಳಿಯಬೇಕು. (ಬ್ರಹ್ಮಾದಿ ಜೀವರಲ್ಲ) ಆತನು ಉತ್ತಮವಾದ ಪೂರ್ಣವಾದ ಆನಂದವೇ ಸ್ವರೂಪ ಲಕ್ಷಣವಾಗಿ ಉಳ್ಳವನು ಎಂದು ಕೌರ್ಮಪುರಾಣದಲ್ಲಿ ಹೇಳಿದೆ. ॥ ೩ ॥

## ಅಧಿಕರಣ ಸಾರಾಂಶ

ಮೋಹವು ಸ್ವಪ್ನಾವಸ್ಥೆಗಳಲ್ಲಿ ಯಾವುದಾದರೊಂದರಲ್ಲಿ ಅಂತರ್ಭೂತವೋ, ಅವಸ್ಥಾಂತರವೋ, ಎಂದು ಸಂದೇಹವು. ಮೋಹವು ಸ್ವಪ್ನಾದ್ಯವಸ್ಥೆಗಳಲ್ಲಿ ಮೂರರಲ್ಲಿ ಒಂದರಲ್ಲಿ ಅಂತರ್ಭೂತವು. ಪ್ರಮಾಣವಿಲ್ಲದಿರುವುದರಿಂದ ಆದರಿಂದ ಅತಿರಿಕ್ತವಲ್ಲ ಎಂದರೆ ದುಃಖಮಾತ್ರ

**ಪ್ರತಿಸ್ಮೃತೇಃ** ಎನ್ನುವ ಸ್ಮೃತಿಯಿಂದ ದುಃಖ ಆತ್ಮ ಕಾಲಗಳಿಂದ ಅತಿರಿಕ್ತವಾದ ವಿಷಯಾಂತರಗಳ ಜ್ಞಾನವಿಲ್ಲ. ಸುಖಾದಿಗಳ ಜ್ಞಾನದಿಂದ ಕೂಡಿದ ಸುಷ್ಟ್ಯಾದಿಗಳಲ್ಲಿ ಅಂತರ್ಭಾವವು ಕೂಡದಿರುವುದರಿಂದ ಮೋಹಾದಿ ಮೂರು ಅವಸ್ಥೆಗಳಿಂದ ಅತಿರಿಕ್ತವಾದ ಅವಸ್ಥೆಯೇ. ಈ ವಿಷಯದಲ್ಲಿ ಕೇವಲ ದುಃಖಾನುಭವವೇ ಪ್ರಮಾಣವು. ಪರಮಾತ್ಮನಲ್ಲಿ ದೂರತ್ವ, ಸಾಮೀಪ್ಯ ಪ್ರವೇಶಗಳು, ಹೃದಯಸ್ಥಾತ ಎನ್ನುವ ಸ್ಮೃತಿಯಿಂದ ಅರ್ಧಪ್ರವೇಶವು ಮೋಹವೆಂದು ಅವಶ್ಯವಾಗಿ ಹೇಳಬೇಕಾದುದರಿಂದ ಪರಿಶೇಷಪ್ರಮಾಣದಿಂದ ಸಿದ್ಧವಾಗಿದೆ. ॥ ಅಧಿ.೭ ॥

**ಸಂಪತ್ತ್ಯಾಧಿಕರಣವು ಸಮಾಪ್ತವಾಯಿತು.**

# ೮ ನ ಸ್ಥಾನತೋಽಪ್ಯಧಿಕರಣವು

**ಪೀಠಿಕೆ ॥** ಶ್ರೀಹರಿಯು ಸರ್ವರೂಪಗಳಲ್ಲಿಯೂ ನಿರ್ದೋಷ ಅಶೇಷಗುಣಪೂರ್ಣನು ಎಂದೂ ಅಭಿನ್ನನೆಂದೂ ಸಮರ್ಥಿಸುತ್ತಾರೆ—

**ಭಾಷ್ಯ ॥ ಸ್ಥಾನಾಪೇಕ್ಷಯಾ ಪರಮಾತ್ಮನೋಽಪಿ ಭೇದಾನುಗ್ರಹಾನುಗ್ರಾಹಕ ಭಾವಃ । ಇತಿ ॥ ಅತ ಆಹ ॥ ೧ ॥**

**ಭಾಷ್ಯಾರ್ಥ ॥** ಸುರನರಾದಿ ಸರ್ವಶರೀರರಾಖ್ಯಸ್ಥಾನಗಳೂ, ಅಲ್ಲಿಯೂ ದಕ್ಷಿಣಾಕ್ಷ್ಯಾದಿಸ್ಥಾನಗಳೂ ಇವುಗಳ ಭೇದವನ್ನು ಅಪೇಕ್ಷಿಸಿ (ಅಂದರೆ ಸ್ಥಾನಭೇದನಿಮಿತ್ತದಿಂದ ಅಲ್ಲಿದ್ದ ಪರಮಾತ್ಮನಿಗೂ ಭೇದವು ಬರುವುದು. ಭೇದದಿಂದ ಅನುಗ್ರಾಹ್ಯ ಅನುಗ್ರಾಹಕ ಭಾವವು) (ಗುಣಾದಿತಾರತಮ್ಯವೂ) ಪ್ರಸಕ್ತವಾಗುವುದು. (ಏವಂಚ ಯುಗಪತ್ ಭಿನ್ನಸ್ಥಾನದಲ್ಲಿದ್ದವನಿಗೆ ಘಟಾದಿಗಳಂತೆ ಭೇದವು ನಿಯತವು. ವಿಭಿನ್ನವಾದವುಗಳಿಗೆ ಗುಣಾದಿಗಳಲ್ಲಿ ತಾರತಮ್ಯವೂ ಅನುಗ್ರಾಹ್ಯ ಅನುಗ್ರಾಹಕಭಾವವೂ ದೃಷ್ಟವಾಗಿದೆ. ) ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ. ॥ ೧ ॥

## ಸೂತ್ರ ॥ ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ ॥ ೧೧ ॥

**ಸೂತ್ರಾರ್ಥ ॥** ಸುರನರತಿರ್ಯಗಾದಿ ಶರೀರರೂಪಸ್ಥಾನ ಅಕ್ಷ್ಯಾದಿಸ್ಥಾನ ಇವುಗಳಿಗೆ ಭೇದವಿದ್ದರೂ ಅಲ್ಲಿದ್ದ ಪರಮಾತ್ಮರೂಪಗಳಿಗೆ ಭೇದವು ಇಲ್ಲ (ದೋಷಿತ್ವಾದಿಗಳಿಗೂ ಇಲ್ಲ) ಏಕೆಂದರೆ ಸರ್ವೋತ್ತಮನಾದ ಶ್ರೀಹರಿಯೂ ಸರ್ವಸ್ಥಾನಗಳಲ್ಲಿಯೂ ನಿರ್ದೋಷಾಶೇಷಗುಣಗಳುಳ್ಳವನೂ, ನಿರ್ಭಿನ್ನನೂ ಆಗಿದ್ದಾನೆಂದು ಸರ್ವೇಷು ಭೂತೇಷು ಏತಮೇವ ಇತ್ಯಾದಿಗಳಲ್ಲಿ ಶ್ರುತವಾಗುತ್ತದೆ.

**ಭಾಷ್ಯ ॥ (೧) ಸ್ಥಾನಾಪೇಕ್ಷಯಾಽಪಿ ಪರಮಾತ್ಮನೋ ನ ಭಿನ್ನಂರೂಪಂ ॥ (೨) ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ (ಐ.ಆ.೩.೨.೩.) । ಇತಿ (ಹಿ) ಶ್ರುತಿಃ ॥ ೧೧ ॥ ೨ ॥**

**ಭಾಷ್ಯಾರ್ಥ ॥** (೧) ಪರಮಾತ್ಮನ ವಿಶ್ವ ತೈಜಸಾದಿರೂಪವು, ಅಕ್ಷ್ಯಾದಿಸ್ಥಾನ ಭೇದದಿಂದ ಭೇದವುಳ್ಳದ್ದೆಂದು ತಿಳಿಯಕೂಡದು. (೨) ಸುರನರಾದಿ ದೇಹಗಳಲ್ಲಿಯೂ ಚಕ್ಷುರಾದಿ ಸ್ಥಾನಗಳಲ್ಲಿಯೂ ಇರತಕ್ಕ ಶ್ರೀಪರಮಾತ್ಮನೊಬ್ಬನನ್ನೇ ಪೂರ್ಣ ಗುಣಗಳುಳ್ಳವನನ್ನಾಗಿ ಹೇಳುತ್ತಾರೆ. (ಅಂದರೆ ಶ್ರೀಹರಿಯು ಭಿನ್ನ ಸ್ಥಾನಗಳಲ್ಲಿದ್ದರೂ ಆತನನ್ನು ಅಭಿನ್ನನೆಂದೂ ಗುಣಪರಿಪೂರ್ಣನೆಂದೂ) ಐತರೇಯ ಶ್ರುತಿಯು ಹೇಳುತ್ತದೆ. ॥ ೨ ॥

**ಭಾಷ್ಯ ॥ (೧) ಏಕರೂಪಃ ಪರೋ ವಿಷ್ಣುಃ ಸರ್ವತ್ರಾಪಿ ನ ಸಂಶಯಃ । ಐಶ್ವರ್ಯಾದ್ರೂಪಮೇಕಂ ಚ ಸೂರ್ಯವದ್ಬಹುಧೇಯತ ॥ ಇತಿ (ಹಿ) ಮಾತ್ಸ್ಯೇ ॥ (೨) ಪ್ರತಿದೃಶಮಿವ ನೈಕಧಾರ್ಕಮೇಕಂ ಸಮಧಿಗತೋಽಸ್ಮಿ ವಿಧೂತ ಭೇದ ಮೋಹಃ** (ಸ್ಕಂಧ.೧ ಅಧ್ಯಾ.೯ ಶ್ಲೋ.೪೨.) **। ಇತಿ ಭಾಗವತೇ ॥ ೩ ॥**

**ಭಾಷ್ಯಾರ್ಥ ॥** (೧) ಶ್ರೀಹರಿಯು ಎಲ್ಲಾ ಸ್ಥಾನಗಳಲ್ಲಿಯೂ ಗುಣಾದಿಗಳಿಂದಲೂ ಅವತಾರ ಗಳಿಂದಲೂ ಅಭಿನ್ನರೂಪನೇ ಆಗಿರುತ್ತಾನೆ. (ಭಿನ್ನರೂಪವುಳ್ಳವನೂ ಅಲ್ಲ, ಹೀನಾಧಿಕರೂಪವುಳ್ಳವನೂ ಅಲ್ಲ) ಸರ್ವತ್ರ ಅವಯವಗಳಿಂದ ಪೂರ್ಣನೇ ಆಗಿರುತ್ತಾನೆ. (ಏಕದೇಶದಿಂದ ಇರತಕ್ಕವನು ಅಲ್ಲ) ಒಂದೇ ಆ ರೂಪವೂ ಅಘಟಿತಘಟಕ ಐಶ್ವರ್ಯವಶದಿಂದ ಅನೇಕ ಸ್ಥಾನಗಳಲ್ಲಿ ಸಮಗ್ರವಾಗಿಯೇ ಸೂರ್ಯನಂತೆ ಅನೇಕಧಾ ಇರತಕ್ಕುದೆಂದು ತಿಳಿಯಲ್ಪಡುತ್ತದೆ, ಎಂದು ಮಾತ್ಸ್ಯಪುರಾಣದಲ್ಲಿ ಹೇಳಿದೆ. (೨) **(ತಮಿಮಮಜಮಹಃ ಶರೀರಭಾಜಾಂ ಹೃದಿ ಹೃದಿ ವಿಷ್ಠಿತಮಾತ್ಮ ಕಲ್ಪಿತಾನಾಂ)** ಪ್ರತೀನೇತ್ರಗಳಿಗೂ ಪ್ರೇರಕನಾಗಿ ಐಶ್ವರ್ಯವಶದಿಂದ ಅನೇಕ ರೂಪಗಳಿಂದ ಇರತಕ್ಕ ಸೂರ್ಯನನ್ನು ಹೇಗೆ ಒಬ್ಬನನ್ನಾಗಿಯೇ ಚೆನ್ನಾಗಿ ತಿಳಿಯುತ್ತಾರೋ, ಹಾಗೆಯೇ ಅವತಾರಗುಣಾದಿಗಳಲ್ಲಿ ಭೇದ ಭ್ರಾಂತಿಯು ಇಲ್ಲದಿರುವ ನಾನು ಪರಮಾತ್ಮ ಸೃಷ್ಟರಾದ ಜೀವರ ಪ್ರತಿಹೃದಯದಲ್ಲಿ ಸಮಗ್ರರೂಪ ದಿಂದಲೇ ಬಹುರೀತಿಯಾಗಿ ಇರತಕ್ಕ ಆ ಈಶ್ವರನಾದ ಕೃಷ್ಣನನ್ನು ಒಬ್ಬನನ್ನಾಗಿಯೇ ತಿಳಿದವನಾಗಿರುತ್ತೇನೆ. ಹೀಗೆ ಭಾಗವತದಲ್ಲಿಯೂ ಹೇಳಿದೆ. (ಧರ್ಮರಾಜನನ್ನು ಕುರಿತು ಭೀಷ್ಮಾಚಾರ್ಯರ ವಾಕ್ಯವು.) ॥ ೩ ॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿ ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ಓಂ ॥ ೧೨ ॥

**ಸೂತ್ರಾರ್ಥ ॥** ಕಾರ್ಯಕಾರಣ ಬದ್ಧೌ ಎನ್ನುವ ಶ್ರುತಿಯಲ್ಲಿ ಜಾಗ್ರದ್ಬದ್ಧನು ವಿಶ್ವನು. ಸ್ವಪ್ನಬದ್ಧನು, ತೈಜಸನು, ಅಜ್ಞಾನಬದ್ಧನು, ಪ್ರಾಜ್ಞನು ಇತ್ಯಾದಿ ಭೇದ ದೋಷಿತ್ವಾದಿ ವಚನದಿಂದ ಪರಮಾತ್ಮನಿಗೆ ಎಲ್ಲಾ ರೂಪಗಳಲ್ಲಿ ಅಭೇದವಿಲ್ಲ ಎಂದರೆ— ಹೀಗೆ ಹೇಳಕೂಡದು. **ಏಷ ತ ಆತ್ಮಾ ಅಂತರ್ಯಾಮ್ಯಮೃತಃ** ಎನ್ನುವಲ್ಲಿ ಪೃಥಿವ್ಯಂತರ್ಯಾಮಿಯೇ ನಿನ್ನ ಅಂತರ್ಯಾಮಿಯು. ಎಂದೂ ಅಯಮೇವ ಸಃ ಇತ್ಯಾದಿಗಳಲ್ಲಿ ಈಶ್ವರರೂಪಗಳಿಗೆ ಪ್ರತ್ಯೇಕವಾಗಿಯೂ ಪರಸ್ಪರವಾಗಿಯೂ ಮೂಲರೂಪದಿಂದಲೂ ಅಭೇದವಚನದಿಂದ.

**ಭಾಷ್ಯ ॥ ಕಾರ್ಯಕಾರಣಬದ್ಧೌತಾವಿಷ್ಯೇತೇ ವಿಶ್ವತೈಜಸೌ । ಪ್ರಾಜ್ಞಃ ಕಾರಣ ಬದ್ಧಸ್ತುದ್ವೌ ತು ತುರ್ಯೇನ ಸಿದ್ಧ್ಯತಃ (ಮಾಂ.೨.೧೬.) । ಇತಿ ಭೇದವಚ ನಾನ್ನೇತಿ ಚೇನ್ನ ॥ ಏಷ ತ ಆತ್ಮಾಂऽತರ್ಯಾಮ್ಯಮೃತಃ (ಬೃ.೫.೭.೩.) । ಅಯಮೇವ ಸ ಯೋऽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ (ಬೃ.೪.೫.೧.) । ಅಯಂ ವೈ ಹರಿಯೋऽಯಂ ವೈದಶ ಚ ಸಹಸ್ರಾಣಿ ಚ ಬಹೂ ನಿ ಚಾನಂತಾನಿ ಚ । ತದೇತದ್ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂತಿತ್ಯನುಶಾಸನಂ (ಬೃ. ೪.೫.೧೯.) । ಇತಿ ಪ್ರತ್ಯೇಕಮಭೇದವಚನಾತ್ ॥ ೧೨ ॥ ೪ ॥**

ಭಾಷ್ಯಾರ್ಥ ॥ (೧) ಕಾರ್ಯಶಬ್ದದಿಂದ, ಅವಿದ್ಯಾಕಾರ್ಯಸ್ವಾತಂತ್ರ್ಯಾದಿ ವಿಷಯ ಭ್ರಮರೂಪವಾದ ಜಾಗ್ರದವಸ್ಥಾ ತತ್ಸಂಸಾರದ್ವಾರಾ ಜಾಗ್ರತ್ಕಾಲೀನ ಸ್ವಾತಂತ್ರ್ಯಾದಿ ಭ್ರಮಕಾರ್ಯಭೂತ ಸ್ವಪ್ನಾವಸ್ಥೆಯೂ ಇವೆರಡೂ ಗ್ರಹೀತವಾಗುತ್ತದೆ. ಕಾರಣಶಬ್ದದಿಂದ ಅವಿದ್ಯೆಯು ಗ್ರಹೀತವಾಗುತ್ತದೆ. ತಥಾಚ ವಿಶ್ವನು ಕಾರ್ಯಬದ್ಧನು. ಜಾಗ್ರದ್ಬದ್ಧನು, ಜಾಗ್ರತ್ಕಾರಣವಾದ ಅವಿದ್ಯಾಬದ್ಧನು. ತೈಜಸನು ಕಾರ್ಯಬದ್ಧನು, ಉಕ್ತರೂಪ ಸ್ವಪ್ನಬದ್ಧನು, ತನ್ಮೂಲಕಾರಣವಾದ ಅವಿದ್ಯಾಬದ್ಧನು. ಪ್ರಾಜ್ಞನು ಕಾರಣಬದ್ಧನು, ಜಾಗ್ರತ್ಸ್ವಪ್ನಭ್ರಮಗಳಿಗೆ ಕಾರಣವಾದ ಯಾವುದು ಅಜ್ಞಾನವೋ ತದ್ರೂಪವಾದ ಸುಪ್ತಿಬದ್ಧನು. ತುರೀಯನಲ್ಲ ಆದರೂ ಕಾರ್ಯಕಾರಣಾಕಾರದಿಂದ ಎರಡು ಬಂಧಗಳೂ ಇರುವುದಿಲ್ಲ ಎಂದು ಮಾಂಡೂಕಶ್ರುತಿಯಲ್ಲಿ ವಿಶ್ವತೈಜಸರಿಗೆ ಎರಡು ವಿಧವಾದ ಬಂಧವಿದ್ದುರಿಂದಲೂ ಪ್ರಾಜ್ಞನಿಗೆ ಒಂದು ಬಂಧವಿದ್ದುದರಿಂದಲೂ ತುರೀಯನಿಗೆ ಬಂಧವೇ ಇಲ್ಲದಿರುವುದರಿಂದ ವಿಶ್ವಾದಿ ಭಗವದ್ರೂಪಗಳಿಗೆ ಭೇದವನ್ನು ಹೇಳುವ ಪ್ರಯುಕ್ತ ಅಭೇದವನ್ನು ಹೇಳಕೂಡದು. ಎಂದರೆ— (೨) ಈ ಶ್ರುತಿಯಬಲದಿಂದ ಈಶ್ವರರೂಪಗಳಿಗೆ ಭೇದವನ್ನು ಹೇಳಕೂಡದು. (೩) (ಯಃ ಪೃಥಿವ್ಯಾಂ ತಿಷ್ಠನ್ ಇತ್ಯಾದಿಗಳಿಂದ ಶ್ರೀಹರಿಗೆ ಅನೇಕ ಸ್ಥಾನಗಳನ್ನು ಹೇಳಿ) ಯಾರು ಪೃಥಿವಿಯಲ್ಲಿ ಅಂತರ್ಯಾಮಿಯೋ, ಇವನೇ ನಿನ್ನ ಅಂತರ್ಯಾಮಿಯು, ಅಮೃತನೂ ಆಗಿರುತ್ತಾನೆ. (ಎಂದು ಆಯಾಯ ಸ್ಥಾನಗಳಲ್ಲಿರತಕ್ಕ ಭಗವದ್ರೂಪಗಳಿಗೆ ಪರಸ್ಪರವಾಗಿಯೂ ಮೂಲರೂಪದಿಂದಲೂ ಅಭೇದವಚನದಿಂದ) (೪) (ಯಃ ಪೃಥಿವ್ಯಾಂ ತೇಜೋಮಯಃ ಇತ್ಯಾದಿಗಳಿಂದ ಶ್ರೀಹರಿಗೆ ಅನೇಕ ಸ್ಥಾನಗಳಲ್ಲಿ ಸ್ಥಿತಿಯನ್ನು ಪ್ರತ್ಯೇಕ) ಯಾವ ಈ ಶ್ರೀಹರಿಯು ಪೃಥಿವಿಯಲ್ಲಿರುತ್ತಾನೋ, ಪ್ರತಿಶರೀರದಲ್ಲಿ ಇರುತ್ತಾನೋ, ಆತನು, ಅಯಮೇವ= ಮೂಲರೂಪಿಯೇ, ಶ್ರೀಹರಿಯು ಆದಾನಾದಿಕರ್ತನು, ಈ ಭಗವತ್ಸ್ವರೂಪವು ನಿತ್ಯಮುಕ್ತವು. ಈ ಭಗವತ್ಸ್ವರೂಪವೇ ಗುಣಪರಿಪೂರ್ಣವು. ಸರ್ವವ್ಯಾಪ್ತವು. ಹೀಗೆ ಭಗವದ್ರೂಪಗಳಿಗೆ ಪರಸ್ಪರವಾಗಿ ಅಭೇದವಚನದಿಂದ. (೫) ಈ ಮೂಲರೂಪಿಯೇ ಹರಿನಾಮಕ ಭಗವದ್ರೂಪಗಳು, ಮೂಲರೂಪಿಯೇ ಮತ್ಸ್ಯಾದಿದಶರೂಪಗಳು, ವಿಶ್ವಾದಿ ಸಹಸ್ರರೂಪಗಳು, ಪರಾದಿ ಬಹುರೂಪಗಳು, ಅಜಿತಾದ್ಯನಂತರೂಪಗಳು, ಆ ಈ ಭಗವತ್ಸ್ವರೂಪವು ಗುಣಪರಿಪೂರ್ಣವು. ಅನಾದಿಯು ನಾಶರಹಿತವಾದುದು, ತಾನೇ ಸರ್ವವಸ್ತುಗಳ ಒಳಗೂ ಹೊರಗೂ ಇದ್ದುದರಿಂದ

ಅಂತರ್ಬರ್ಹಿಃ ಸ್ಥಿತವಸ್ತುರಹಿತವು. ಈ ಆತ್ಮನು ಗುಣಪರಿಪೂರ್ಣನು, ಸರ್ವಜ್ಞನು. ಹೀಗೆ ವೇದಗಳ ಅನುಶಾಸನವು. ಹೀಗೆ ಪ್ರತ್ಯೇಕವಾಗಿ ಅಭೇದ ಪ್ರತಿಪಾದಕ ವಚನವಿದ್ದುದರಿಂದ. ॥ ೧೨ ॥ ೪ ॥

**ಪೀಠಿಕೆ ॥** ಕಾರ್ಯಕಾರಣಬದ್ಧೌ ಎನ್ನುವ ಭೇದಶ್ರುತಿಗೆ ಈ ಅಭೇದಶ್ರುತಿಯಿಂದ ವಿರೋಧವಿಲ್ಲ. ಅಭೇದವನ್ನು ಹೇಳುವ ಶ್ರುತಿಯು ಕೆಲವು ರೂಪಗಳಿಗೆ ಮಾತ್ರ ಅಭೇದವನ್ನು ಹೇಳುವುದು. ಆದುದರಿಂದ ಭೇದಶ್ರುತಿಯಬಲದಿಂದ ವಿಶ್ವಾದಿರೂಪಗಳಿಗೆ ಭೇದವನ್ನೇ ಹೇಳಬೇಕು. ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅಪಿ ಚೈವಮೇಕೇ ಓಂ ॥ ೧೩ ॥

**ಸೂತ್ರಾರ್ಥ ॥** ಕೆಲವು ಶಾಖಿಗಳು ಶ್ರೀಹರಿಯರೂಪಗಳಿಗೆ ಅಮಾತ್ರೋಽನಂತಮಾತ್ರಶ್ಚ ಎನ್ನುವುದರಿಂದ ಅಭೇದವನ್ನೂ ಅನಂತರೂಪಗಳನ್ನೂ ಹೇಳುತ್ತಾರೆ.

**ಭಾಷ್ಯ ॥ (೧) ಏವಮಭೇದೇನೈವ । ಚ ಶಬ್ದಾದನಂತರೂಪತ್ವ ಚೈಕೇ ಶಾಖಿನಃ ಪಠಂತಿ ॥ (೨) ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ । ಓಂಕಾರೋವಿದಿತೋ ಯೇನ ಸ ಮುನಿರ್ನೇತರೋ ಜನಃ (ಮಾಂ.೪.೭.) । ಇತಿ ॥ (೩) ಅಭೇದೇಽಪಿ ಭೇದವ್ಯಪದೇಶಃ ಸ್ಥಾನಭೇದಾದೈಶ್ವರ್ಯಯೋಗಾಚ್ಚ ಯುಜ್ಯತೇ । (೪) ಬ್ರಹ್ಮತರ್ಕೇ ಚ । ಬದ್ಧೋಬಂಧಾದಿ ಸಾಕ್ಷಿತ್ವಾದ್ವಿಭ್ನೋ ಭಿನ್ನೇಷು ಸಂಸ್ಥಿತೇಃ । ನಿರ್ದೋಷಾದ್ವಯರೂಪೋಽಪಿ ಕಥ್ಯತೇ ಪರಮೇಶ್ವರಃ । ಇತಿ ॥ ॥ ೧೩ ॥ ಅಧಿ. ೮ ॥ ೫ ॥**

**ಭಾಷ್ಯಾರ್ಥ ॥** (೧) ಮಾಂಡೂಕೇಯ ಶಾಖಿಯರೂ ಕೂಡ ವಿಶ್ವಾದಿರೂಪಗಳನ್ನು ಅಭೇದದಿಂದಲೇ, ಪಠನಮಾಡುತ್ತಾರೆ. ಚ ಶಬ್ದದಿಂದ ಶ್ರೀಹರಿಗೆ ಅನಂತರೂಪಗಳನ್ನು ಹೇಳುತ್ತಾರೆ. (ಅಂದರೆ ವಿಶ್ವಾದಿ ಅನಂತರೂಪಗಳಿಗೆ ಅಭೇದವೆಂದೇ ಹೇಳುತ್ತಾರೆ.) (೨) ಭಿನ್ನಾಂಶ ಶೂನ್ಯನು. ಅಥವಾ ಪರಿಮಾಣರಹಿತನು, ಅಭಿನ್ನಗಳಾದ ಅನಂತಾಂಶಗಳುಳ್ಳವನು, ಅಥವಾ ಅನಂತರೂಪಗಳುಳ್ಳವನು (ದ್ವಿತ್ವೇನ ಪ್ರಕಾರೇಣೇತಂ ದ್ವೀತಂ ದ್ವೀತಮೇವ ದ್ವೈತಂ, ಎನ್ನುವ ವ್ಯುತ್ಪತ್ತಿಯಿಂದ) ಮಿಥ್ಯಾಜ್ಞಾನವನ್ನು ನಾಶಪಡಿಸತಕ್ಕವನು, ನಿರ್ದುಃಖಸುಖ ಸ್ವರೂಪನು, ಓಂ ಎನ್ನುವ ಪ್ರಣವ ವಾಚ್ಯನು, ಇಂತಹ ಶ್ರೀಹರಿಯು ಯಾರಿಂದ ತಿಳಿಯಲ್ಪಡುತ್ತಾನೋ, ಅವನೇ ಮುನಿಯು. ಇತರನಲ್ಲ. (೩) (ಭೇದವ್ಯಪದೇಶಕ್ಕೆ ಏನು ಅರ್ಥವು ಎಂದರೆ—) ವಿಶ್ವಾದಿರೂಪಗಳುಳ್ಳ ಶ್ರೀಹರಿಗೆ ಅಭೇದವಿದ್ದರೂ ಅಕ್ಷ್ಯಾದಿಸ್ಥಾನಗಳ ಭೇದದಿಂದಲೂ ಅಚಿಂತ್ಯ ಶಕ್ತ್ಯಾಖ್ಯಯೋಗದಿಂದಲೂ ಅಕ್ಷ್ಯಾದಿಗಳಲ್ಲಿ ಇದ್ದವನು ಬದ್ಧನು, ಮಸ್ತಕದಿಂದ ಮೇಲೆ ದ್ವಾದಶಾಂಗುಲಪರಿಮಿತ ಸ್ಥಾನದಲ್ಲಿ ಇದ್ದ ತುರೀಯನು ಅಬದ್ಧನು ಇತ್ಯಾದಿ ಭೇದವ್ಯಪದೇಶವು ಯುಕ್ತವಾಗುತ್ತದೆ. (೪) (ನಿರ್ದೋಷನಾದ ಶ್ರೀಹರಿಗೆ ಬಂಧವು ಹೇಗೆ ಕೂಡುತ್ತದೆ ಎಂದು ಶಂಕಾ ಬಂದರೆ ಸ್ಮೃತಿಯನ್ನು ಹೇಳುತ್ತಾರೆ.) ಶ್ರೀಹರಿಯು ನಿರ್ದೋಷನಾದಾಗ್ಯೂ ಜೀವರಲ್ಲಿರತಕ್ಕ ಜಾಗ್ರದಾದಿ ಬಂಧಗಳಿಗೆ ಸ್ವಾಮಿಯಾದುದರಿಂದಲೂ ದುಃಖ

ಎಂದೂ ನಿರ್ಭಿನ್ನ ಸ್ವರೂಪವುಳ್ಳವನಾದಾಗ್ಯೂ ಭಿನ್ನಗಳಾದ ಅಕ್ಷ್ಯಾದಿಗಳಲ್ಲಿ ನಿಯಮಾಕನಾಗಿ ಇದ್ದುದರಿಂದ ಭಿನ್ನಃ ಎಂದು ಹೇಳಲ್ಪಡುತ್ತಾನೆ. ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ॥ ೧೩ ॥ ೫ ॥

## ಅಧಿಕರಣ ಸಾರಾಂಶ

ಪ್ರತಿಶರೀರಾದಿ ಜಾಗ್ರದಾದಿ ಸ್ಥಾನಗಳಲ್ಲಿರತಕ್ಕ ವಿಶ್ವಾದಿರೂಪಿಯಾದ ಶ್ರೀಹರಿಯು ಪರಸ್ಪರವಾಗಿ ಭೇದವುಳ್ಳವನೋ, ಅಭಿನ್ನನೋ, ಎಂದು ಸಂದೇಹವು. ಅಕ್ಷಿ ಕಂಠಾದಿರೂಪ ಭಿನ್ನ ಸ್ಥಾನಗಳಲ್ಲಿ ಇದ್ದುದರಿಂದ ಪರಸ್ಪರ ಭೇದವುಳ್ಳವನೇ, ಮತ್ತೂ ಕಾರ್ಯಕಾರಣ ಬದ್ಧೌ ಇತ್ಯಾದಿಗಳಿಂದ ವಿಶ್ವಾದಿ ರೂಪಗಳಿಗೆ ಜಾಗ್ರತ್ ಸ್ವಪ್ನ ಸುಷುಪ್ತಿರೂಪಕಾರ್ಯ ಬದ್ಧತ್ವ, ಕಾರಣ ಬದ್ಧತ್ವ ಅಬದ್ಧತ್ವ ಸ್ಥೂಲಭುಕ್ತ್ವ, ಸೂಕ್ಷ್ಮಭುಕ್ತ್ವ ಇದು ಮೊದಲಾದ ರೂಪದಿಂದ ಭೇದವನ್ನು ಹೇಳಿದ್ದರಿಂದಲೂ ಅನ್ಯೋನ್ಯ ಭೇದವುಳ್ಳವನೇ ಎಂದರೆ — ಪರಸ್ಪರವಾಗಿ ಅಲ್ಲಿ ಅಲ್ಲಿ ಇರತಕ್ಕ ರೂಪಗಳಿಂದ ಶ್ರೀಹರಿಯು ಅಭಿನ್ನನೇ, ಸರ್ವೇಷು ಭೂತೇಷು ಇತ್ಯಾದಿ ಶ್ರುತಿಗಳಲ್ಲಿ ಅಲ್ಲಿ ಅಲ್ಲಿರತಕ್ಕ ಭಗವದ್ರೂಪಗಳಿಗೆ ಪರಸ್ಪರವಾಗಿಯೂ ಮೂಲರೂಪದಿಂದಲೂ ಅಭೇದವನ್ನು ಹೇಳಿದ್ದಾರೆ. ಅಮಾತ್ರೋಽನಂತಮಾತ್ರಶ್ಚ ಎನ್ನುವ ಶ್ರುತಿಯಲ್ಲಿ ಭಿನ್ನಾಂಶ ಶೂನ್ಯನು, ಅನಂತಾಂಶವುಳ್ಳವನು ಎಂದೂ ವಿಶ್ವಾದಿ ಅನಂತರೂಪಗಳಿಗೆ ಅಭೇದವನ್ನು ಹೇಳಿದ್ದಾರೆ. ಭೇದವ್ಯಪದೇಶವು ಭಿನ್ನೋ ಭಿನ್ನೇಷು ಸಂಸ್ಥಿತೇಃ ಇತ್ಯಾದಿ ಸ್ಮೃತಿಯಿಂದ ಸ್ಥಾನಭೇದದಿಂದ ಅಮುಖ್ಯವೃತ್ತಿಯಿಂದ ಐಶ್ವರ್ಯ ಬಲದಿಂದಲಾಗಲೀ ಉಪಪನ್ನವಾಗುವುದು. ॥ ಅಧಿ. ೮ ॥

**ನ ಸ್ಥಾನತೋಽಪ್ಯಧಿಕರಣವು ಸಮಾಪ್ತವಾಯಿತು.**

## ೯ ಅರೂಪಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಶ್ರೀಹರಿಗೆ ಅಪ್ರಾಕೃತರೂಪವನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ (೧) ರೂಪವತ್ತ್ವಾದನಿತ್ಯತ್ವಮಿತಿ । (೨) ಅತೋ ವಕ್ತಿ ॥ ೧ ॥**

ಭಾಷ್ಯಾರ್ಥ ॥ (೧) ರುಗ್ಮವರ್ಣಂ, ಆದಿತ್ಯವರ್ಣಂ ಇತ್ಯಾದಿ ಶ್ರುತಿಗಳಿಂದ ಶ್ರೀಹರಿಗೆ ಶುಕ್ಲ ಮೊದಲಾದ ರೂಪಗಳು ಇವೆ ಎಂದೂ ಶರೀರವಿದೆ ಎಂದೂ ಉಕ್ತವಾದ ಪ್ರಯುಕ್ತ ದೇಹನಾಶವು ಬರುವುದು. (೨) ಹೀಗೆ ಶಂಕೆಯು ಬಂದರೆ ಉತ್ತರಿಸುತ್ತಾರೆ.

**ಸೂತ್ರ ॥ ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ ॥ ೧೪ ॥**

**ಭಾಷ್ಯ ॥ ಪ್ರಕೃತ್ಯಾದಿಪ್ರವರ್ತಕತ್ವೇನ ತದುತ್ತಮತ್ವಾನ್ನೈವ ರೂಪವದ್ಬ್ರಹ್ಮ । ಹಿ ಶಬ್ದಾದಸ್ಥೂಲಮನಣು (ಬೃ.೫.೮.೮.) ॥ ಇತ್ಯಾದಿಶ್ರುತೇಶ್ಚ ॥ ೨ ॥**

ಭಾಷ್ಯಾರ್ಥ ॥ ಪ್ರಕೃತಿ ಮೊದಲಾದವುಗಳಿಗೆ ಪ್ರವರ್ತಕನಾದುದರಿಂದ ಆ ಶ್ರೀಹರಿಗೆ ಪ್ರಕೃತಿ

ಯಿಂದಲೂ ಭೂತಗಳಿಂದಲೂ ಉತ್ತಮತ್ವವಿದ್ದುದರಿಂದ ಆ ಬ್ರಹ್ಮನು ಪ್ರಾಕೃತ ಭೌತಿಕ ಶರೀರವುಳ್ಳವನು ಅಲ್ಲವೇ ಅಲ್ಲ. (ತನ್ನ ಅಧೀನದಲ್ಲಿ ಇದ್ದು ದಕ್ಕೆ ತನ್ನನ್ನು ಬಂಧಿಸುವ ಶಕ್ತಿಯಿಲ್ಲ) (ಹಾಗಾದರೆ ಬ್ರಹ್ಮನಿಗೆ ಪ್ರಕೃತ್ಯಾದಿಗಳಿಂದ ಹೆಚ್ಚು ಸಾಮರ್ಥ್ಯವಿದ್ದುದರಿಂದ ಪ್ರಾಕೃತ ಶರೀರಪ್ರಾಪ್ತಿಯಿಲ್ಲವಾದರೂ ಸ್ವೇಚ್ಛೆಯಿಂದಲೇ ಪ್ರಾಕೃತ ಶರೀರ ಸ್ವೀಕಾರವು ಏಕೆ ಆಗಲಾರದು ಎಂದರೆ) ಹಿ ಶಬ್ದದಿಂದ ಸೂಚಿತವಾದ ಅಸ್ಥೂಲಂ ಅನಣು ಇತ್ಯಾದಿ ಶ್ರುತಿಗಳಿಂದ ॥ ೨ ॥

ಭಾಷ್ಯ ॥ ★ಭೌತಿಕಾನಿ ಹಿ ರೂಪಾಣಿ ಭೂತೇಭ್ಯೋಽಸೌ ಪರೋ ಯತಃ । ಅರೂಪವಾನತಃ ಪ್ರೋಕ್ತಃ ಕ್ವ ತದವ್ಯಕ್ತತಃ ಪರೇ ॥ ಇತಿ (ಚ) ಮಾತ್ಸ್ಯೇ ॥ ೧೪ ॥ ೩ ॥

ಭಾಷ್ಯಾರ್ಥ ॥ ಯಾವ ಕಾರಣದಿಂದ ಎಲ್ಲಾ ಶರೀರಗಳು ಪಾಂಚ ಭೌತಿಕಗಳು ಮತ್ತೂ ಅವ್ಯಕ್ತಜನ್ಯಗಳೋ, ಈ ಶ್ರೀಹರಿಯಾದರೂ ಪಂಚಭೂತಗಳಿಂದ ತತ್ಪ್ರವರ್ತಕನಾದುದರಿಂದ ಉತ್ತಮನೋ, ಆದಕಾರಣ ಪಂಚಭೂತಕಾರ್ಯ ಶರೀರರೂಪರಹಿತನೆಂದು ಹೇಳಲ್ಪಡುತ್ತಾನೆ. ಪ್ರಕೃತಿಯಿಂದ ಪ್ರಕೃತಿಪ್ರವರ್ತಕನಾದುದರಿಂದುತ್ತಮನೂ, ಪ್ರಕೃತಿಕೃತ ಬಂಧಶೂನ್ಯನೂ ಆದ ಬ್ರಹ್ಮನಲ್ಲಿ ಪ್ರಾಕೃತವಾದ ರೂಪವು ಹೇಗೆ ಕೂಡುತ್ತದೆ. ಅಥವಾ [೧]ಭೂತಗಳಿಂದುತ್ತಮನಾದ ಶ್ರೀಹರಿಯಲ್ಲಿ ಯಾವಾಗ ಭೂತಕಾರ್ಯದೇಹವಿಲ್ಲವೋ ಆಗ ಭೂತಕಾರಣವಾದ ಅವ್ಯಕ್ತವನ್ನು ಅತಿಕ್ರಮಿಸಿರುವ ಶ್ರೀಹರಿಯಲ್ಲಿ ಅವ್ಯಕ್ತಕಾರ್ಯವಾದ ಭೂತದ ಕಾರ್ಯವಾದ ಶರೀರವು ಇಲ್ಲವೆಂದು ಏನು ಹೇಳಬೇಕು. ಹಾಗೆಯೇ ಯಾವ ಕಾರಣದಿಂದ ಭೌತಿಕರೂಪಗಳು ಅನಿತ್ಯತ್ವ ವ್ಯಾಪ್ತಗಳೋ ಶ್ರೀಹರಿಯು ಭೂತಗಳಿಂದುತ್ತಮನಾದುದರಿಂದ ಭೂತಸಂಬಂಧವಿಲ್ಲದಿರುವುದರಿಂದ ಅನಿತ್ಯತ್ವ ಶಂಕೆಯನ್ನು ಮಾಡಕೂಡದು. ಎಂದು ಮಾತ್ಸ್ಯಪುರಾಣದಲ್ಲಿ ಹೇಳಿದೆ. ॥ ೧೪ ॥ ೩. ॥

ಪೀಠಿಕೆ ॥ ಬ್ರಹ್ಮನಿಗೆ ರೂಪವಿಲ್ಲವಾದರೆ—ರುಗ್ಮವರ್ಣಂ ಇತ್ಯಾದಿ ರೂಪಿತ್ವಶ್ರುತಿಗೆ ಅಪ್ರಾಮಾಣ್ಯವೂ ಸೌಂದರ್ಯ ಸೌಲಕ್ಷಣ್ಯಾದ್ಯಭಾವವೂ ಬರಬೇಕಾಗುವುದು ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರಕಾಶವಚ್ಚಾವೈಯರ್ಥ್ಯಂ ಓಂ ॥ ೧೫ ॥

ಸೂತ್ರಾರ್ಥ ॥ ಯದಾ ಪಶ್ಯಃ ಪಶ್ಯತೇ, ಸುವರ್ಣಜ್ಯೋತಿಃ ಇತ್ಯಾದಿ ಶ್ರುತಿಗಳಿಗೆ ವೈಯರ್ಥ್ಯವೂ ಅಪ್ರಾಮಾಣ್ಯವೂ ಇಲ್ಲ. ಸೌಂದರ್ಯಾದ್ಯಭಾವವೂ ಇಲ್ಲ. ಬ್ರಹ್ಮನಿಗೆ ಅಪ್ರಾಕೃತರೂಪವಿದ್ದ ಪ್ರಯುಕ್ತ ಮನೆಯೊಳಗೆ ಚಾಕ್ಷುರಾದಿ ಪ್ರಕಾಶ ವಿದ್ದರೂ ಸೂರ್ಯಾದಿ ಲೌಕಿಕ ಪ್ರಕಾಶ ವೈಲಕ್ಷಣ್ಯವಿದ್ದುದರಿಂದ ಪ್ರಕಾಶವಿಲ್ಲ ಎನ್ನುವ ಉಕ್ತಿಯಂತೆ. ಹಾಗೆಯೇ ಬ್ರಹ್ಮನಿಗೂ ವಿಲಕ್ಷಣವಾದ ಅಪ್ರಾಕೃತರೂಪವು ಇದ್ದ ಪ್ರಯುಕ್ತ ಶ್ರುತಿಗೆ ಅಪ್ರಾಮಾಣ್ಯವಿಲ್ಲ.

---

★ ಅಕ್ಷರಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

೧. ತತ್ವಪ್ರದೀಪೋಕ್ತ ಯೋಜನಾಂತರವು.

**ಭಾಷ್ಯ ॥ (೧) ಯದಾ ಪಶ್ಯಃ ಪಶ್ಯತೇ ರುಕ್ಮ(ಗ್ಮ) ವರ್ಣಂ** (ಮು.೩.೧. ೩.) **॥ (೨) ಶ್ಯಾಮಾಚ್ಛಬಲಂ ಪ್ರಪದ್ಯೇ** (ಛಾ. ೮.೧೩.೧.) **॥ (೩) ಸುವರ್ಣಜ್ಯೋತಿಃ** (ತೈ.೩.೧೦.) **। ಇ(ರಿತೀ)ತ್ಯಾದಿ ಶ್ರುತೀನಾಂ ಚ ನ ವೈಯರ್ಥ್ಯಂ । ವಿಲಕ್ಷಣ ರೂಪವತ್ತ್ವಾತ್ ॥ (೪) ಯಥಾ ಚಕ್ಷುರಾದಿಪ್ರಕಾಶೇ ವಿದ್ಯಮಾನೇಽಪಿ ವೈಲಕ್ಷಣ್ಯಾದಪ್ರಕಾಶಾದಿ ವ್ಯವಹಾರಃ ॥ ೧೫ ॥ ೪ ॥**

ಭಾಷ್ಯ ॥ (೧) [೨]ಯದಾ ಪಶ್ಯಃ (೨) ಶ್ಯಾಮೋ ಹೃದಿ ಸ್ಥಿತೋ ವಿಷ್ಣುಃ ಶಬಲೋ ವಿಶ್ವರೂಪವಾನ್ ಎನ್ನುವ ವಚನದಿಂದ ಶ್ಯಾಮರೂಪವುಳ್ಳ ಶ್ರೀಹರಿಯ ಉಪಾಸನಾನಂತರದಲ್ಲಿ ವಿಶ್ವರೂಪಗಳುಳ್ಳ ನಾನಾರೂಪಗಳ ಸಮಾಹಾರವುಳ್ಳ ಭಗವದ್ರೂಪ ವಿಶೇಷವನ್ನು ಉಪಾಸನಾ ಮಾಡುತ್ತೇನೆ. ಅಂದರೆ, ಹೃದ್ಗತೋಪಾಸ್ತಿ ಸಾಧ್ಯವಾದುದು, ವಿಶ್ವರೂಪೋಪಾಸನೆಯು. ಅಂದರೆ, (ವ್ಯಾಪ್ತರೂಪಿ ಭಗವದು ಪಾಸನೆಯು.) (೩) ಸುವರ್ಣದಂತೆಯೇ ಪ್ರಕಾಶವುಳ್ಳವನು ಇತ್ಯಾದಿ ಶ್ರುತಿಗಳಿಗೆ ವೈಯರ್ಥ್ಯವು ಇಲ್ಲ. ಅಂದರೆ, ಬ್ರಹ್ಮನಿಗೆ ಪ್ರಾಕೃತ ರೂಪವು ಇಲ್ಲವಾದರೂ ಈ ಶ್ರುತಿಗಳಿಗೆ ಅರ್ಥಶೂನ್ಯತ್ವರೂಪವಾದ ಅಪ್ರಾಮಾಣ್ಯವು ಇಲ್ಲ. ಸೌಂದರ್ಯಾದ್ಯಭಾವವೂ ಇಲ್ಲ. (ಹೇಗೆಂದರೆ) ಶ್ರೀಹರಿಗೆ ಪ್ರಾಕೃತ ಭೌತಿಕ ರೂಪದಿಂದ ವಿಲಕ್ಷಣರೂಪಗಳು ಇದ್ದುದರಿಂದ (೪) (ವಿಲಕ್ಷಣರೂಪಗಳು ಇದ್ದರೆ ಶ್ರುತಿಯಲ್ಲಿ ಅರೂಪಿತ್ವ ವ್ಯವಹಾರವು ಹೇಗೆ ಎಂದರೆ) ಹೇಗೆ ಮನೆಯೊಳಗೆ ಚಕ್ಷುರಾದಿ ಪ್ರಕಾಶವು ಇದ್ದರೂ ಅದಕ್ಕೆ ಲೌಕಿಕ ದೀಪಾದಿಪ್ರಕಾಶದಿಂದ ವೈಲಕ್ಷಣ್ಯವಿದ್ದುದರಿಂದ ನಾಸ್ತಿ ಪ್ರಕಾಶಃ ಇತ್ಯಾದಿ ವ್ಯವಹಾರವು ಇರುತ್ತದೋ, (ಹಾಗೆಯೇ ಬ್ರಹ್ಮನಿಗೆ ರೂಪವಿದ್ದರೂ ವಿಲಕ್ಷಣರೂಪವು ಇದ್ದುದರಿಂದ ಅರೂಪತ್ವ ಶ್ರುತಿಗೆ ವೈಯರ್ಥ್ಯವು ಇಲ್ಲ) ॥ ೧೫ ॥ ೪ ॥

ಪೀಠಿಕೆ ॥ ಸರ್ವರೂಪಗಳಿಗೂ ಪ್ರಕೃತ್ಯಾದ್ಯಾತ್ಮಕತ್ವವು ನಿಯತವಾದುದರಿಂದ ಬ್ರಹ್ಮನಿಗೆ ವಿಲಕ್ಷಣ ರೂಪತ್ವವು ಹೇಗೆ ಎಂಬೀ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆಹ ಚ ತನ್ಮಾತ್ರಮ್ ಓಂ ॥ ೧೬ ॥

ಸೂತ್ರಾರ್ಥ ॥ ಏಕಾತ್ಮ್ಯಪ್ರತ್ಯಯಸಾರಂ ಇತ್ಯಾದಿ ಶ್ರುತಿಯು ಶ್ರೀಪರಬ್ರಹ್ಮನ ರೂಪವನ್ನು ಕೇವಲ ಜ್ಞಾನಾನಂದಾದಿ ಸ್ವರೂಪವನ್ನಾಗಿಯೇ ಪ್ರತಿಪಾದಿಸುತ್ತದೆ. (ಪ್ರಾಕೃತವಲ್ಲವೇ ಅಲ್ಲ)

**ಭಾಷ್ಯ ॥ (೧) ವೈಲಕ್ಷಣ್ಯಂ ಚೋಚ್ಯತೇ ರೂಪಸ್ಯ ವಿಜ್ಞಾನಾನಂದಮಾತ್ರತ್ವಂ ॥ (೨) ಏಕಾತ್ಮ್ಯಪ್ರತ್ಯಯಸಾರಂ** (ಮಾಂ.೨.೭.) **। ಇತಿ ॥ (೩) ಆನಂದ ಮಾತ್ರಮಜರಂ ಪುರಾಣಮೇಕಂ ಸಂತಂ ಬಹುಧಾ ದೃಶ್ಯಮಾನಂ । ತಮಾತ್ಮ ಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ । ಇತಿ (ಚ) ಚತುರ್ವೇದಶಿಖಾಯಾಂ ॥ ೧೬ ॥ ೫ ॥**

---

೨. ಅದೃಶ್ಯತ್ವಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

**ಭಾಷ್ಯಾರ್ಥ ॥** (೧) ಬ್ರಹ್ಮನ ರೂಪಕ್ಕೆ ವೈಲಕ್ಷಣ್ಯವಾದರೂ (ಐಕಾತ್ಮ್ಯಪ್ರತ್ಯಯಸಾರಂ ಎನ್ನುವ ಮಾಂಡೂಕ ಶ್ರುತಿಯಲ್ಲಿಯೂ ಆನಂದಮಾತ್ರಂ ಎನ್ನುವ ಚತುರ್ವೇದ ಶಿಖಾದಲ್ಲಿಯೂ) ಕೇವಲ ಜ್ಞಾನಾನಂದಾದ್ಯೇಕ ಸ್ವರೂಪತ್ವರೂಪವು ಎಂದು ಪ್ರತಿಪಾದಿಸಲ್ಪಡುತ್ತದೆ. (ಆದಕಾರಣ ಶ್ರುತಿಸಿದ್ಧವಾದ ಪ್ರಯುಕ್ತ ಶ್ರೀ ಹರಿಗೆ ವಿಲಕ್ಷಣರೂಪವತ್ವವು ಯುಕ್ತವು.) (೨) ***ಏಕಶ್ಚಾಸಾವಾತ್ಮಾ ಚ, ಏಕಾತ್ಮನಃ ಭಾವಃ** ಐಕಾತ್ಮ್ಯಂ, ತದೇವ ಪ್ರತ್ಯಯಃ=ಸಾರಃ=ಯಸ್ಯ ಎನ್ನುವ ವ್ಯುತ್ಪತ್ತಿಯಿಂದ, ಪರಬ್ರಹ್ಮನು ಸರ್ವಾಪೇಕ್ಷಯಾ ಪ್ರಧಾನನು, ಗುಣಪರಿಪೂರ್ಣನು, ಅದೇ ಸ್ವರೂಪವಾಗಿರತಕ್ಕವನು, ಜ್ಞಾನಸ್ವರೂಪನು, ಆನಂದಸ್ವರೂಪನು ಎಂದುಕ್ತವಾಯಿತು. (೩.) ಆನಂದೈಕಸ್ವರೂಪನು, ಮುಪ್ಪು ಇಲ್ಲದವನು, (ಅಂದರೆ ಸದಾ ದೃಢನು.) ಅನಾದಿಭೂತನು, ಸರ್ವೋತ್ಕೃಷ್ಟನು, ಸಂತಂ = ನಿರ್ದುಷ್ಟನು, ವಿಶ್ವಾದಿರೂಪದಿಂದ ಮತ್ಸ್ಯಾದಿರೂಪಗಳಿಂದ ಕಾಣಲ್ಪಡತಕ್ಕವನು, ದೇಹದಲ್ಲಿರತಕ್ಕ ಇಂತಹ ಶ್ರೀಹರಿಯನ್ನು ಯಾವ ಜ್ಞಾನಿಗಳು ಸಾಕ್ಷಾತ್ಕರಿಸುತ್ತಾರೋ, ಅವರಿಗೇನೇ ಮೋಕ್ಷವು ಆಗುತ್ತದೆ. ಇತರರಿಗೆ ಆಗುವುದಿಲ್ಲ ಎಂದು ಚತುರ್ವೇದ ಶಿಖಾದಲ್ಲಿ ಹೇಳಿದೆ. ॥ ೧೬ ॥ ೫ ॥

**ಟೀಕೆ ॥** ಈ ಎರಡು ಶ್ರುತಿಗಳಲ್ಲಿ ಬ್ರಹ್ಮನಿಗೆ ಜ್ಞಾನಾನಂದಾದ್ಯಾತ್ಮಕತ್ವವೇ ಹೇಳಲ್ಪಡುತ್ತದೆ. ಆನಂದಾದಿಗಳಿಗೆ ಬ್ರಹ್ಮನ ಶರೀರತ್ವವು ಹೇಳಲ್ಪಡುವುದಿಲ್ಲ. ಆದ ಕಾರಣ ರೂಪತ್ವಶ್ರುತಿಗೆ ಅಪ್ರಾಮಾಣ್ಯವು ತಪ್ಪಿದ್ದಲ್ಲ ಎನ್ನುವ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ ॥ ೧೭ ॥

**ಸೂತ್ರಾರ್ಥ ॥** ಆನಂದರೂಪಮಮೃತಂ ಎನ್ನುವ ಶ್ರುತಿಯು ಶ್ರೀಹರಿಗೆ ಆನಂದಾತ್ಮಕರೂಪತ್ವ ವನ್ನು ತೋರಿಸುತ್ತದೆ. ಮತ್ತು ರೂಪವು ಜ್ಞಾನಾತ್ಮಕವೆಂದೂ ಸ್ಮರಿಸಲ್ಪಡುತ್ತದೆ.

**ಭಾಷ್ಯ ॥ (೧) ದರ್ಶಯತಿ ಚಾನಂದ(ಸ್ಯ) ರೂಪತ್ವಂ ॥ ತದ್ವಿಜ್ಞಾನೇನ ಪರಿಪಶ್ಯಂತಿಧೀರಾ ಆನಂದರೂಪಮಮೃತಂ ಯದ್ವಿಭಾತಿ** (ಮು.೨.೨೮.) **। ಇತಿ ॥ (೨) ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಂ । ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರೇಃ ॥ ಇತಿ ಚ ಮಾತ್ಸ್ಯೇ ॥ ೧೭ ॥ ಅಧಿ.೯ ॥ ೬ ॥**

**ಭಾಷ್ಯಾರ್ಥ ॥** (೧) ಆನಂದಾತ್ಮಕಶರೀರವುಳ್ಳವನೂ ದೇಹತೋऽಪಿ ನಾಶರಹಿತನೂ ಆದ ಯಾವ ಬ್ರಹ್ಮನು ಶೋಭಿಸುತ್ತಾನೋ, ಅಂತಹ ಬ್ರಹ್ಮನನ್ನು ಜ್ಞಾನಿಗಳು ಶ್ರವಣಾದಿಗಳಿಂದುಂಟಾದ ಸಾಕ್ಷಾತ್ಕಾರದಿಂದ ವಿಷಯೀಕರಿಸುತ್ತಾರೆ, ಎಂದು ಶ್ರುತಿಯೂ ಆನಂದಕ್ಕೆ ಬ್ರಹ್ಮರೂಪತ್ವವನ್ನು ಬ್ರಹ್ಮಶರೀರತ್ವವನ್ನು ತೋರಿಸುತ್ತದೆ ಎಂದು. (೨) ಯತಿಗಳು ಶುದ್ಧ ಸ್ಫಟಿಕದಂತೆ ಶುಕ್ಲವರ್ಣನೂ, ನಿರ್ದೋಷನೂ, ಆದ ವಾಸುದೇವನನ್ನೇ ಪ್ರಧಾನನ್ನಾಗಿ ಜ್ಞಾನಕ್ಕೋಸ್ಕರ ಧ್ಯಾನಿಸಬೇಕು. ಜ್ಞಾನಾತ್ಮಕ

★ ಏಕಃ ಪ್ರಧಾನ ಉದ್ದಿಷ್ಟಃ ಆತ್ಮಾ ಪೂರ್ಣತ್ವತಃ ಶ್ರುತಃ । ತದೇವಾಸ್ಯ ಸ್ವರೂಪಂ ಯದೈಕಾತ್ಮ್ಯಂ ತೇನ ಕೀರ್ತಿತಂ । ಪ್ರತ್ಯಯೋ ಜ್ಞಾನರೂಪತ್ವಾತ್ಸಾರ ಆನಂದರೂಪತಃ ॥ ಎಂದು ಮಾಂಡೂಕ ಭಾಷ್ಯದಲ್ಲಿ ಉಕ್ತವಾಗಿದೆ.

ಶರೀರವುಳ್ಳ ವಾಸುದೇವನಿಂದ ಹೊರತು ಇತರರಾದ ಬ್ರಹ್ಮಾದಿಗಳನ್ನು ಸರ್ವೋತ್ತಮರನ್ನಾಗಿ ಧ್ಯಾನಿಸಬಾರದು. ಎಂದು ಮಾತ್ಸ್ಯಪುರಾಣದಲ್ಲಿ ಹೇಳಿದೆ.

**ವಿಶೇಷಾಂಶ ॥** (೧) **ತಜ್ಞಾನಾನಂದಶೀರ್ಷೋಽಸೌ** (೨) **ಬ್ರಹ್ಮಣಸ್ತದ್ಗುಣಾನಾಂ ಚ ಭೇದದರ್ಶ್ಯಧರಂ ತಮಃ । ಭೇದಾಭೇದಪ್ರದರ್ಶೀ ಚ ತಮ ಏವೋತ್ತರಂ ವಿಶೇತ್ ॥** ಇತ್ಯಾದಿ ಪೈಂಗಿಶ್ರುತಿಯು ಈ ಅರ್ಥವನ್ನು ತೋರಿಸುತ್ತದೆ. ॥ ೧೭ ॥ ೬ ॥

## ಅಧಿಕರಣ ಸಾರಾಂಶ

ರೂಪಿತ್ವ, ಅರೂಪಿತ್ವ ಶ್ರುತಿಗಳಿಗೆ ಏಕವಿಷಯಕತ್ವವೋ, ಭಿನ್ನವಿಷಯಕತ್ವವೋ, ಎಂದು ಸಂದೇಹವು. ಶ್ರೀಹರಿಗೆ ರೂಪವನ್ನು ಅಂಗೀಕರಿಸಿದರೂ ರೂಪವಿಲ್ಲವೆಂದಂಗೀಕರಿಸಿದರೂ ದೋಷವು ಬರುವುದರಿಂದ ಮಾಹಾತ್ಮ್ಯವು ಕೂಡಲಾರದು. ರೂಪವಿದ್ದರೆ ಚೈತ್ರನಂತೆ ಅನಿತ್ಯತ್ವವು ಬರುವುದು. **ಅರೂಪಮವ್ಯಯಂ** ಇತ್ಯಾದಿ ಶ್ರುತಿಗಳಿಗೆ ಅಪ್ರಾಮಾಣ್ಯವೂ ಬರುವುದು. ರೂಪವಿಲ್ಲವಾದರೆ ಸೌಂದರ್ಯಾದಿಗಳು ಕೂಡಲಾರವು. **ರುಗ್ಮವರ್ಣಂ** ಇತ್ಯಾದಿ ಶ್ರುತಿಗಳಿಗೆ ಅಪ್ರಾಮಾಣ್ಯವೂ ಬರುವುದು ಎಂದರೆ— **ಐಕಾತ್ಮ್ಯ ಪ್ರತ್ಯಯಸಾರಂ ಆನಂದಮಾತ್ರಂ,** ಇತ್ಯಾದಿ ಶ್ರುತಿಸ್ಮೃತಿ ಗಳ ಬಲದಿಂದ ಜ್ಞಾನಾನಂದಾದ್ಯಾತ್ಮಕ ದಿವ್ಯರೂಪವು ಶ್ರುತವಾದುದರಿಂದ ರೂಪತ್ವ ಶ್ರುತಿಗೆ ಅಪ್ರಾಕೃತರೂಪವತ್ವ ವಿಷಯಕತ್ವವು **ಭೌತಿಕಾನಿ ಹಿ ರೂಪಾಣಿ** ಇತ್ಯಾದಿ ಸ್ಮೃತಿಗಳಿಂದ ಪ್ರಾಕೃತರೂಪರಹಿತನು, ಅಪ್ರಾಕೃತ ದಿವ್ಯಶರೀರವುಳ್ಳವನು ಎಂದು ರೂಪವಿಲ್ಲವೆಂದು ಹೇಳುವ ಶ್ರುತಿಯು ಪ್ರಾಕೃತ ರೂಪಾಭಾವ ವಿಷಯಕವು. ಏವಂಚ ಸೌಂದರ್ಯಾದಿಗಳೂ ಕೂಡುವುದರಿಂದ ಮಾಹಾತ್ಮ್ಯವು ಇದ್ದುದರಿಂದ ಭಕ್ತಿಯು ಯುಕ್ತವು. ॥ ಅಧಿ. ೯ ॥

**ಅರೂಪಾಧಿಕರಣವು ಸಮಾಪ್ತವಾಯಿತು.**

# ೧೦ ಉಪಮಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಶ್ರೀಹರಿಗೆ ಜೀವಾಭೇದವನ್ನು ನಿರಾಕರಿಸುತ್ತಾರೆ—

## ಸೂತ್ರ ॥ ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ ॥ ೧೮ ॥

**ಸೂತ್ರಾರ್ಥ ॥** ಈಶ, ಈಶರೂಪಗಳಿಗೆ ಪರಸ್ಪರ ಅಭೇದವನ್ನು ನ ಸ್ಥಾನತಃ ಎನ್ನುವಲ್ಲಿ ಹೇಳಿದ್ದರಿಂದಲೇ, ಚೇತನತ್ವ ಅಂಶಾಂಶಿತ್ವಾದಿ ಹೇತುಗಳಿಂದಲೇ ಈ ಜೀವನಿಗೆ ಮತ್ಸ್ಯಾದಿ ಸಾಮ್ಯವು (ಅಂದರೆ ಮತ್ಸ್ಯಾದಿಗಳಂತೆ ಈಶ್ವರನಿಂದ ಅಭೇದವು. ಅಂತೂ **ಜೀವಃ ವಿಷ್ಣ್ವಭಿನ್ನಃ ತದಂಶತ್ವಾತ್ ಚೇತನತ್ವಾತ್ ಮತ್ಸ್ಯಾದಿವತ್** ಎನ್ನುವ ಅನುಮಾನವು ಉಕ್ತವಾಯಿತು.) ಎಂದರೆ— ಹಾಗೆ ಹೇಳಕೂಡದು. ಸೂರ್ಯಾದಿಪ್ರತಿಬಿಂಬಕ್ಕೆ ಸೂರ್ಯಾದಿಗಳಿಂದ ಭೇದವಿದ್ದಂತೆ ಜೀವನೂ ಪ್ರತಿಬಿಂಬ ಭೂತವಾದುದರಿಂದ ವಿಷ್ಣುವಿನಿಂದ ಭಿನ್ನನೇ.

ಭಾಷ್ಯ ॥ ಯಸ್ಮಾದೇವಂ ಪರಮೇಶ್ವರ (ಸ್ಯ) ರೂಪಾಣಾಂ ಮಿಥೋ ನ ಕಶ್ಚಿದ್ಭೇದಃ । ಅತಃ (ಏವ) ಸಾದೃಶ್ಯಾಜ್ಜೀವಸ್ಯಾಪಿ ತಥಾ ಸ್ಯಾದಿತಿ । ತಸ್ಯ ಪ್ರತಿ ಬಿಂಬತ್ವಮುಕ್ತ್ವಾ ಚ ಶಬ್ದೇನ ಭೇದಂ ದರ್ಶಯತಿ ॥ ೧ ॥

ಭಾಷ್ಯಾರ್ಥ ॥ ಯಾವ ಕಾರಣದಿಂದ ನ ಸ್ಥಾನತೋಽಪಿ ಇತ್ಯಾದ್ಯುಕ್ತಪ್ರಕಾರದಿಂದ ಪರಮೇಶ್ವರನ ರೂಪಗಳಿಗೂ ಪರಮೇಶ್ವರನಿಗೂ ಪರಸ್ಪರವಾಗಿಯೂ ಯಾವ ಭೇದವೂ ಇಲ್ಲವೋ (ಅಂದರೆ ಅತ್ಯಂತಾಭೇದವೇ ಇದೆಯೋ.) ಆದುದರಿಂದಲೇ ಮತ್ಸ್ಯಾದಿ ಸಾದೃಶ್ಯದಿಂದಲೂ, ಚೇತನತ್ವದಿಂದಲೂ, ಅಂಶತ್ವದಿಂದಲೂ ಜೀವನಿಗೂ ಮತ್ಸ್ಯಾದಿಗಳಂತೆಯೇ ಪರಮಾತ್ಮನಿಂದ ಅಭೇದವು ಬರಬೇಕಾಗುವುದು. ಎಂದರೆ ಜೀವನಿಗೆ ಈಶಪ್ರತಿಬಿಂಬತ್ವರೂಪವಾದ ಹೇತುವನ್ನು ಸೂರ್ಯಕಾದಿವತ್ ಎನ್ನುವ ದೃಷ್ಟಾಂತವನ್ನು ಹೇಳಿದ್ದರಿಂದಲೇ ಹೇಳಿ ಮತ್ತು ಸೂಚಿಸಿ ಚ ಶಬ್ದದಿಂದ ಪರಮೇ ಶ್ವರನಿಂದ ಅತ್ಯಂತ ಭೇದರೂಪವಾದ ಸಾಧ್ಯವನ್ನು (ಸೂತ್ರಕಾರರು) ತೋರಿಸುತ್ತಾರೆ. ತಥಾಚ ಜೀವಃ ಬ್ರಹ್ಮಣಃ ಅತ್ಯಂತಭಿನ್ನಃ ತತ್ಪ್ರತಿಬಿಂಬತ್ವಾತ್ ಯೋ ಯತ್ಪ್ರತಿಬಿಂಬಃ ಸ ತಸ್ಮಾದತ್ಯಂತಭಿನ್ನಃ ಯಥಾ ಸೂರ್ಯಕಃ ಸೂರ್ಯಾತ್, ಎನ್ನುವ ಅನುಮಾನವು ಉಕ್ತವಾಯಿತು. ॥ ೧ ॥

ಪೀಠಿಕೆ ॥ ಜೀವನಿಗೆ ಈಶ್ವರಪ್ರತಿಬಿಂಬತ್ವವೇ ಹೇಗೆಂದರೆ—

ಭಾಷ್ಯ ॥ (೧)★ರೂಪಂ ರೂಪಂ ಪ್ರತಿರೂಪೋ ಬಭೂವ (ಬೃ.೪.೫.೧೯.) । (೨) ಬಹವಃ ಸೂರ್ಯಕಾ ಯದ್ವತ್ಸೂರ್ಯಸ್ಯ ಸದೃಶಾ ಜಲೇ । ಏವಮೇವಾತ್ಮಕಾ ಲೋಕೇ ಪರಾತ್ಮಸದೃಶಾ ಮತಾಃ ॥ ಇತ್ಯಾದಿ । (೩) ಅತ ಏವ ಭಿನ್ನತ್ವ ತದಧೀನತ್ವ ತತ್ಸಾದೃಶ್ಯೈರೇವ ಸೂರ್ಯಕಾದ್ಯುಪಮಾ । ನೋಪಾಧ್ಯಧೀನತ್ವಾದಿನಾ ॥ ೧೮ ॥ ಅಧಿ.೧೦ ॥ ೨ ॥

ಭಾಷ್ಯಾರ್ಥ ॥ (೧) ಜಲಾದಿಗಳಲ್ಲಿ ಸೂರ್ಯನಲ್ಲಿ ಪ್ರತಿಬಿಂಬಿತಗಳಾದ ಬಹುಸೂರ್ಯರು ಹೇಗೆ ಸೂರ್ಯನಿಗೆ ಸದೃಶರಾಗಿ ಸಮ್ಮತರೋ, ಹೀಗೆಯೇ ಲೋಕದಲ್ಲಿ ಪ್ರಮಿತರಾದ ಈಶ್ವರ ಪ್ರತಿಬಿಂಬಭೂತರಾದ ಜೀವರು ಪರಮಾತ್ಮನಿಗೆ ಸದೃಶರೆಂದು ಸಮ್ಮತರಾಗಿರುತ್ತಾರೆ, ಇತ್ಯಾದಿ ಶ್ರುತಿಯು ತೋರಿಸುತ್ತದೆ. (೨) ಆದುದರಿಂದಲೇ ಅಂದರೆ, ಭಿನ್ನತ್ವರೂಪ ಸಾಧ್ಯಧರ್ಮದಿಂದಲೂ, ಬಿಂಬಾಧೀನತ್ವ ಬಿಂಬಸಾದೃಶ್ಯ ರೂಪ ಸಾಧನಧರ್ಮಗಳಿಂದಲೂ ಜೀವನಿಗೆ ಸೂರ್ಯಕಾದಿ ಸಾದೃಶ್ಯವು (ಸೂತ್ರಕಾರರಿಂದ ಉಕ್ತವಾಗಿದೆ) ಉಪಾಧ್ಯಧೀನತ್ವ ಉಪಾಧಿನಾಶನಾಶ್ಯತ್ವ, ಜಡತ್ವಾದಿಗಳಿಂದ ಸೂರ್ಯಕಾದಿ ದೃಷ್ಟಾಂತವು ಕೂಡವುದಿಲ್ಲ ಅನಿತ್ಯತ್ವಾದಿ ಪ್ರಸಂಗವೂ ಇಲ್ಲ ಏವಂಚ ದೃಷ್ಟಾಂತದಾರ್ಷ್ಟಾಂತಿಕಗಳಲ್ಲಿ ಸರ್ವಸಾಮ್ಯದ ಅಪೇಕ್ಷೆಯಿಲ್ಲ. ಪ್ರಕೃತದಲ್ಲಿ ಭಿನ್ನತ್ವವು ಸಾಧ್ಯವು. ಈಶ್ವರಾಧೀನತ್ವ ಈಶ್ವರಸಾದೃಶ್ಯರೂಪವಾದ ಪ್ರತಿ ಬಿಂಬತ್ವವು ಹೇತುವು. ॥ ೧೮ ॥ ೨ ॥

★ ಇದು ಅಂಶಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

## ಅಧಿಕರಣ ಸಾರಾಂಶ

ಜೀವನು ಶ್ರೀಹರಿಯಿಂದ ಭಿನ್ನಾಭಿನ್ನನೋ, ಅಭಿನ್ನನೋ ಎಂದು ಸಂದೇಹವು. **ಪೃಥಗುಪದೇಶಾತ್** ಎನ್ನುವಲ್ಲಿ ಜೀವೇಶ್ವರರಿಗೆ ಭೇದವನ್ನು ಹೇಳಿದ್ದರೂ ಸರ್ವ ಚೇತನ ಸಮುದಾಯಕ್ಕೆ ಈಶತ್ವವಿದ್ದುದರಿಂದ ಒಬ್ಬೊಬ್ಬ ಜೀವನಿಗೆ ಪರಮಾತ್ಮನಿಂದ ಭೇದಾಭೇದವಿದ್ದರೂ ಭೇದಕ್ಕೆ ವಿರೋಧವಿಲ್ಲ. ಔಪಾಧಿಕ ಭೇದವು ಸ್ವಾಭಾವಿಕ ಅಭೇದಕಾರ್ಯಕ್ಕೆ ಪ್ರತಿಬಂಧಕವಲ್ಲ. ಅನಾದಿನಿತ್ಯರಾದ ಜೀವೇಶರಿಗೆ ಔಪಾಧಿಕವಾದ ಬಿಂಬಪ್ರತಿಬಿಂಬಭಾವವು ಯುಕ್ತವಲ್ಲ ಎಂದರೆ— **ಜೀವಃ ಈಶಾಭಿನ್ನೋ ನ ತತ್ಕೃತಿ ಬಿಂಬತ್ವಾತ್** ಎನ್ನುವ ಅನುಮಾನ ವಿರೋಧದಿಂದ ಚೇತನತ್ವಾದಿಗಳು ಅಭೇದಸಾಧಕಗಳಲ್ಲ. ಜೀವನೂ ಈಶ್ವರನ ಸ್ವರೂಪಾಂಶನಾದರೆ— ಮತ್ಸ್ಯಾದಿ ಸಾಮ್ಯವು ಬರಬೇಕಾಗಿರುವುದರಿಂದ ಜ್ಞಾನೈಶ್ವರ್ಯಾದಿಗಳೆಲ್ಲವೂ ಬರಬೇಕಾಗುವವು. ಎನ್ನುವ ಯುಕ್ತಿಯಿಂದಲೂ **ರೂಪಂ ರೂಪಂ** ಎನ್ನುವ ಶ್ರುತಿಯಿಂದಲೂ **ಬಹವಃ ಸೂರ್ಯಕಾಃ** ಎನ್ನುವ ಸ್ಮೃತಿಯಿಂದಲೂ ಭೇದವೇ ಸಿದ್ಧಿಸುವುದು. ಜೀವನು ಅನಾದಿನಿತ್ಯನಾದಾಗ್ಯೂ **ಪೃಥಗುಪದೇಶಾತ್** ಇತ್ಯಾದ್ಯುಕ್ತಿಯಿಂದ ಭಿನ್ನತ್ವ ತದಧೀನತ್ವ ತತ್ಸದೃಶತ್ವರೂಪಧರ್ಮಗಳಿಂದ ಪ್ರತಿಬಿಂಬತ್ವವು ಅವಗತವಾಗುವುದು. ॥ ಅಧಿ.೧೦ ॥

**ಉಪಮಾಧಿಕರಣವು ಸಮಾಪ್ತವಾಯಿತು.**

# ೧೧ ಅಂಬುವದಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭಗವದ್ಭಕ್ತಿಸ್ವರೂಪಸುಖಾಭಿವ್ಯಕ್ತಿರೂಪ ಫಲವು ನಿರೂಪಿತವಾಗುತ್ತದೆ—

**ಭಾಷ್ಯ ॥ (೧) ನಿತ್ಯಸಿದ್ಧತ್ವಾತ್ತಾದೃಶ್ಯಸ್ಯ ನಿತ್ಯಾನಂದಜ್ಞಾನಾದೇರ್ನ ಭಕ್ತಿ ಜ್ಞಾನಾದಿನಾ ಪ್ರಯೋಜನಮಿತಿ । (೨) ಅತೋ ಬ್ರವೀತಿ ॥ ೧ ॥**

**ಭಾಷ್ಯಾರ್ಥ ॥** (೧) ಭಗವತ್ಸಾದೃಶ್ಯವು ಜೀವನಲ್ಲಿ ನಿತ್ಯದಲ್ಲಿ ಇದ್ದುದರಿಂದ ನಿತ್ಯಾನಂದ ಜ್ಞಾನಾದಿಗಳೂ ನಿತ್ಯಾನಂದಜ್ಞಾನಾದಿಮತ್ಸ್ವರೂಪವಾದ ಮೋಕ್ಷವೂ ನಿತ್ಯ ಸಿದ್ಧವಾದುದರಿಂದ ಭಕ್ತಿ ಅಪರೋಕ್ಷಜ್ಞಾನ, ಪ್ರಸಾದ ಇವುಗಳಿಂದ ಪ್ರಯೋಜನವಿಲ್ಲ. (ಇದ್ದುದಕ್ಕೆ ಅಭಿವ್ಯಕ್ತಿಯೂ ನಿತ್ಯಸಿದ್ಧವಾದುದರಿಂದ ಅಭಿವ್ಯಕ್ತಿಗಾಗಿಯೂ ಭಕ್ತ್ಯಾದಿಗಳು ಆವಶ್ಯಕವೆಂದು ಹೇಳಕೂಡದು.) (ಯದ್ಯಪಿ ಭಕ್ತಿಗೆ ಜ್ಞಾನವು, ಜ್ಞಾನಕ್ಕೆ ಪ್ರಸಾದವು, ಪ್ರಸಾದಕ್ಕೆ ಮೋಕ್ಷವು ಪ್ರಯೋಜನವೆಂದು ಸಿದ್ಧಾಂತಿಗಳು ಹೇಳುವರು. ಆದಾಗ್ಯೂ ಪರಮ ಪ್ರಯೋಜನವೆಂದು ಅಭಿಮತವಾದ ಮೋಕ್ಷವೇ ನಿತ್ಯಸಿದ್ಧವಾದ ಪ್ರಯುಕ್ತ ಯಾವುದರಿಂದಲೂ ಪ್ರಯೋಜನವಿಲ್ಲ.) (೨) ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ.

**ಸೂತ್ರ ॥ ಓಂ ಅಂಬುವದಗ್ರಹಣಾತ್ತ ನ ತಥಾತ್ವಂ ಓಂ ॥ ೧೯ ॥**

**ಸೂತ್ರಾರ್ಥ ॥** ಅಂಬುಸದೃಶ ಜ್ಞಾನವಿಲ್ಲದಿರುವುದರಿಂದ ಅಂದರೆ ಸ್ನೇಹಯುಕ್ತ ಜ್ಞಾನವಿಲ್ಲ

ದಿರುವುದರಿಂದ ಅಂದರೆ ಭಕ್ತಿಯು ಇಲ್ಲದಿರುವುದರಿಂದ ತದ್ಗುಣಸಾರತ್ವ ರೂಪಸಾದೃಶ್ಯವು. ಅಂದರೆ ಭಕ್ತಿಯು ಇಲ್ಲದೆ ಸುಖಾತ್ಮಕತ್ವರೂಪವಾದ ಸಾದೃಶ್ಯವು ಚೆನ್ನಾಗಿ ಅಭಿವ್ಯಕ್ತವಾಗುವುದಿಲ್ಲ.

**ಭಾಷ್ಯ ॥ ಅಂಬುವತ್ಸ್ನೇಹೇನ । ಗ್ರಹಣಂ ಜ್ಞಾನಂ । ಭಕ್ತಿಂ ವಿನಾ ನ ತತ್ಸಾದೃಶ್ಯಂ ಸಮ್ಯಗಭಿವ್ಯಜ್ಯತೇ ॥ ೨ ॥**

ಭಾಷ್ಯಾರ್ಥ ॥ ಜಲದಂತೆ ಸ್ನೇಹದಿಂದ ಗ್ರಹಣವು ಜ್ಞಾನವು. ಭಕ್ತಿಯು ಇಲ್ಲದೆ ಭಗವತ್ಸಾದೃಶ್ಯವು ಚೆನ್ನಾಗಿ ಅಭಿವ್ಯಕ್ತವಾಗುವುದಿಲ್ಲ.

ವಿಶೇಷಾಂಶ ॥ (೧) ಯದ್ಯಪಿ ಭಗವತ್ಸಾದೃಶ್ಯವು ಜೀವನಿಗೆ ನಿತ್ಯಸಿದ್ಧವಾಗಿದೆ. ಆದಾಗ್ಯೂ ಭಕ್ತಿಜ್ಞಾನಾದಿಗಳು ವ್ಯರ್ಥವಲ್ಲ. ಭಗವತ್ಸಾದೃಶ್ಯಾಭಿವ್ಯಕ್ತಿಗೆ ಆವಶ್ಯಕವು. (೨) ಸುಷ್ಪ್ತಿಯಲ್ಲಿ ಭಕ್ತಿಯು ಇಲ್ಲದೇನೂ ಸುಖಾದ್ಯಭಿವ್ಯಕ್ತಿಯು ಕಾಣಲ್ಪಡುವುದಾದರೂ ಆ ಸುಖಾದ್ಯಭಿವ್ಯಕ್ತಿಯು ಚೆನ್ನಾಗಿ ಆಲ್ಲ. ಆದಕಾರಣ ಭಕ್ತಿಯು ಸಫಲವೇ ಆಗಿದೆ. (೩) ತಥಾಚ ನೀರು ಚೂರ್ಣಾದಿಗಳನ್ನು ಸ್ನೇಹದಿಂದ ಹೇಗೆ ಗ್ರಹಿಸುತ್ತದೋ, ಹೀಗೆಯೇ ಸ್ನೇಹದಿಂದ ಭಗವದ್ಗುಣ ಗ್ರಹಣವಾಗದಿರುವುದರಿಂದ (ಅಂದರೆ ಸ್ನೇಹಪೂರ್ವಕ ಮಹತ್ವ ಜ್ಞಾನರೂಪ ಭಕ್ತಿಯು ಇಲ್ಲದಿರುವುದರಿಂದ) ಭಗವತ್ಸಾದೃಶ್ಯವು ಚೆನ್ನಾಗಿ ಅಭಿವ್ಯಕ್ತವಾಗುವುದಿಲ್ಲ ॥ ೨೨ ॥

ಪೀಠಿಕೆ ॥ ಸಾದೃಶ್ಯಾಭಿವ್ಯಕ್ತಿಯು ಭಕ್ತಿಯಿಂದ ಆಗುತ್ತದೆ ಎನ್ನುವುದು ಯಾವುದರಿಂದ ಸಿದ್ಧವಾಗುತ್ತದೆ. ಎಂದರೆ—

**ಭಾಷ್ಯ ॥ (೧) ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣು ತೇ ತನೂಂಸ್ವಾಂ** (ಕಠ.೨.೨೩.) **। ಇತಿ ಹಿ ಶ್ರುತಿಃ ॥ (೨) ಮಹತ್ವಬುದ್ಧಿರ್ಭಕ್ತಿಸ್ತು ಸ್ನೇಹಪೂರ್ವಾಭಿಧೀಯತೇ । ತಯೈವ ವ್ಯಜ್ಯತೇ ಸಮ್ಯಗ್ಜೀವ ರೂಪಂ ಸುಖಾದಿಕಮ್ ಇತಿ ಪಾದ್ಮೇ ॥ ೧೯ ॥ ಅಧಿ. ೧೧ ॥ ೩ ॥**

ಭಾಷ್ಯಾರ್ಥ ॥ (೧) ಶ್ರೀಹರಿಯು ಯಾರನ್ನು ಭಕ್ತನೆಂದು ವರಿಸುತ್ತಾನೋ, ಆತನಿಂದಲೇ ಲಭ್ಯನು. ಆ ಭಕ್ತನಿಗೇನೇ ಜೀವನಸ್ವರೂಪಭೂತವಾದ ಆನಂದಾದಿ ಜೀವಸ್ವರೂಪವನ್ನು ಪ್ರಕಾಶ ಪಡಿಸುತ್ತಾನೆ, ಎಂದು ಶ್ರುತಿಯು. (೨) ಮಾನಸಿಕ ಸ್ನೇಹಸಹಿತವಾದ ಶ್ರೀಹರಿಯ ಮಾಹಾತ್ಮ್ಯಜ್ಞಾನವೇ ಭಕ್ತಿಯೆಂದು ಹೇಳಲ್ಪಡುತ್ತದೆ. ಆ ಭಕ್ತಿಯಿಂದಲೇ ಜೀವಸ್ವರೂಪಭೂತವಾದ ಸುಖಾದಿಗಳು ಚೆನ್ನಾಗಿ ಅಭಿವ್ಯಕ್ತವಾಗುತ್ತವೆ. ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ॥ ೧೯ ॥ ೩ ॥

## ಅಧಿಕರಣ ಸಾರಾಂಶ

ಜೀವನಿಗೆ ಭಕ್ತಿಯಿಂದ ಈಶಜ್ಞಾನ ಈಶಪ್ರಸಾದದ್ವಾರಾ ಜ್ಞಾನಾನಂದಾದಿ ಬ್ರಹ್ಮಸಾದೃಶ್ಯ ಜೀವಸ್ವರೂಪಾಭಿವ್ಯಕ್ತಿರೂಪ ಫಲವು ಕೂಡುವುದಿಲ್ಲವೋ ಕೂಡುತ್ತದೋ ಎಂದು ಸಂದೇಹವು. ಜ್ಞಾನಾನಂದಾದಿ ಬ್ರಹ್ಮಸಾದೃಶ್ಯವು ಜೀವಸ್ವರೂಪವೆಂದು ನಿತ್ಯಸಿದ್ಧವಾದುದರಿಂದ ಅದರ ಅಭಿವ್ಯಕ್ತಿಗೆ

ಜ್ಞಾನವೇ ಹೇತುವಾಗಿಉಳ್ಳ ಭಕ್ತಿಯ ಫಲತ್ವವು ಕೂಡಲಾರದು. ಎಂದರೆ ಸಾಧ್ಯತ್ವವು ನಿತ್ಯಸಿದ್ಧವಾದುದಾಗ್ಯೂ ಸಮ್ಯಕ್ ಅಭಿವ್ಯಕ್ತಿರೂಪವಾದ ಮುಕ್ತಿಯು ಯಮೇವೈಷಃ ಇತ್ಯಾದಿ ಶ್ರುತಿಸ್ಮೃತಿಗಳ ಬಲದಿಂದ ಭಕ್ತಿಸಾಧ್ಯವಾದುದರಿಂದ ಅದಕ್ಕಾಗಿ ಭಕ್ತಿಯ ಆವಶ್ಯಕವೇ. ॥ ಅಧಿ.೧೧ ॥

ಅಂಬುವದಧಿಕರಣವು ಸಮಾಪ್ತವಾಯಿತು

# ೧೨ ವೃದ್ಧಿಹ್ರಾಸಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಶ್ರೀಹರಿಯು ಭಕ್ತ್ಯನುಸಾರಿಯಾದ ಫಲವನ್ನು ಕೊಡುತ್ತಾನೆಂದು ಸಮರ್ಥಿಸುತ್ತಾರೆ. ಭಕ್ತಿಫಲವಾದ ಮುಕ್ತತ್ವ, ಆನಂದತ್ವಾದಿಗಳು ಸರ್ವರಲ್ಲಿ ಸಮವಾದುದರಿಂದ ಫಲವು ಸಮಾನವಾದರೆ ಸಾಧನವೈಚಿತ್ರ್ಯವು ಕೂಡದೆ ಇರುವುದರಿಂದ ಭಕ್ತಿಯು ಏಕಪ್ರಕಾರವೇ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಮ್ ಓಂ ॥ ೨೦ ॥

ಸೂತ್ರಾರ್ಥ ॥ ಭಕ್ತಿಗೆ ಆಧಿಕ್ಯ ನ್ಯೂನತೆಗಳು ಇದೆ. ಬ್ರಹ್ಮಾದಿಗಳಿಗೂ ಅಸ್ಮದಾದಿಗಳಿಗೂ ಭಕ್ತತ್ವದಲ್ಲಿ ಅಂತರ್ಭಾವವಿದ್ದುದರಿಂದ, (ಬ್ರಹ್ಮಾದ್ಯಧಿಕಾರಿಗಳಿಗೆ ಮಹದಲ್ಪಫಲಗಳು ಇವೆ.) ಭಕ್ತಿತಾರತಮ್ಯವನ್ನು ಅಂಗೀಕರಿಸಿದರೇನೇ ಶ್ರೀಹರಿಗೆ ಬ್ರಹ್ಮಾದಿಗಳನ್ನು ಕುರಿತು ಸಾಮಂಜಸ್ಯವು ಕೂಡುವುದು (ಇಲ್ಲವಾದರೆ ನಿರ್ಬೀಜವಾಗಿ ವಿಷಮ ಫಲಗಳನ್ನೇ ಕೊಡತಕ್ಕ ಈಶ್ವರನಿಗೆ ವೈಷಮ್ಯವು ಬರಬೇಕಾಗುವುದು.)

**ಭಾಷ್ಯ ॥ (೧) ತಸ್ಯ ಚ ಭಕ್ತಿಜ್ಞಾನಾದೇರ್ವೃದ್ಧಿಹ್ರಾಸಭಾಕ್ತ್ವಂ ವಿದ್ಯತೇ ॥ (೨) ಬ್ರಹ್ಮಾದೀನಾಮುತ್ತಮಾನಾಂ ಸರ್ವೇಷಾಂ ಭಕ್ತತ್ವೇಂऽತರ್ಭಾವಾತ್ । (೩) ಏವಂ ಭಕ್ತ್ಯಾದಿ ವಿಶೇಷಾಂಗೀಕಾರಾದೇವೇಶ್ವರಸ್ಯ ಬ್ರಹ್ಮಾದೀನನ್ಯಾನ್ಪ್ರತಿ ಚ ಸಾಮಂಜಸ್ಯಂ ಭವತಿ ॥ ೧ ॥**

ಭಾಷ್ಯಾರ್ಥ ॥ (೧) ಮೋಕ್ಷಸಾಧನತ್ವೇನ ಪ್ರಕೃತವಾದ ಭಕ್ತಿಜ್ಞಾನ ವೈರಾಗ್ಯಾದಿಗಳಿಗೆ ತಾರತಮ್ಯವು ಇದೆ. (೨) ಬ್ರಹ್ಮಾದ್ಯುತ್ತಮಾಧಿಕಾರಿಗಳಿಗೂ ಅಸ್ಮದಾದಿ ಅಲ್ಪಾಧಿಕಾರಿಗಳಿಗೂ ಭಕ್ತತ್ವದಲ್ಲಿ ಅಂತರ್ಭಾವವಿದ್ದುದರಿಂದ. (ಅಂದರೆ ಬ್ರಹ್ಮಾದ್ಯುತ್ತಮರಿಗೆ ಉತ್ತಮ ಫಲವು. ಇತರರಿಗೆ ಅಲ್ಪಫಲವು.) (೩) (ಮಹದಲ್ಪ ಫಲವಿದ್ದರೂ ಬ್ರಹ್ಮಾದಿಗಳಿಗೂ ಇತರರಿಗೂ ಭಕ್ತಿಜ್ಞಾನಾದಿ ತಾರತಮ್ಯಕ್ಕೆ ಕಾರಣವೇನು? ಎಂದರೆ— ವಿಷಮ ಫಲವುಳ್ಳ ಬ್ರಹ್ಮಾದಿಗಳಿಗೂ ಇತರರಿಗೂ ಭಕ್ತಿ ಮೊದಲಾದ ಸಾಧನಗಳಲ್ಲಿ ತಾರತಮ್ಯವನ್ನು ಅಂಗೀಕರಿಸಿದ್ದರಿಂದಲೇ (ತಾರತಮ್ಯವು ಅಂಗೀಕೃತವಾದರೇನೇ) ವಿಷಮಫಲಗಳನ್ನು ಕೊಡತಕ್ಕ ಈಶ್ವರನಿಗೆ ಬ್ರಹ್ಮಾದ್ಯುತ್ತಮ ಜೀವರನ್ನೂ, ಇತರರನ್ನೂ ಕುರಿತು

ವೈಷಮ್ಯಾದಿ ದೋಷ ಶೂನ್ಯತ್ವವು ಬರುತ್ತದೆ. (ಸಮಭಕ್ತಿಯುಳ್ಳವರಿಗೆ ವಿಷಮ ಫಲವನ್ನು ಕೊಟ್ಟರೆ ವೈಷಮ್ಯಾದಿದೋಷವೇ ಬರುವುದು. ಆದಪ್ರಯುಕ್ತ ಫಲವೈಷಮ್ಯವು ಇದ್ದುದರಿಂದ ಅದಕ್ಕೆ ಕಾರಣವಾದ ಭಕ್ತಿಗೂ ವೈಷಮ್ಯವನ್ನು ಹೇಳಬೇಕು.) ॥ ೧ ॥

ಪೀಠಿಕೆ ॥ ಫಲಸಾಧನಗಳಿಗೆ ವೈರೂಪ್ಯ ವಿಷಯದಲ್ಲಿ ಯುಕ್ತಿವಿರೋಧವನ್ನು ಹೇಳಿ ಸ್ಮೃತಿವಿರೋಧವನ್ನು ತೋರಿಸುತ್ತಾರೆ—

**ಭಾಷ್ಯ ॥ ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ । ಬ್ರಹ್ಮಾದಯಃ ಕ್ರಮೇಣೈವ ಯಥಾನಂದಶ್ರುತೌ ಶ್ರುತಾಃ ॥ ಇತಿ(ಚ) ಬ್ರಾಹ್ಮೇ ॥ ೨೦ ॥ ೨ ॥**

ಭಾಷ್ಯಾರ್ಥ ॥ ಭಕ್ತ್ಯಾದಿರೂಪವಾದ ಸಾಧನಕ್ಕೆ ಮಹತ್ವದಿಂದಲೂ ಅಲ್ಪತ್ವದಿಂದಲೂ ಸಾಧ್ಯವಾದ ಉತ್ತಮವಾದ ಮುಕ್ತಿಫಲವನ್ನು ಅಲ್ಪವಾದ ಫಲವನ್ನು ದೇವತೆಗಳು ಕ್ರಮದಿಂದಲೇ ಹೊಂದುತ್ತಾರೆ. ಅಥಾತ ಆನಂದಸ್ಯ ಎನ್ನುವ ಶ್ರುತಿಯಲ್ಲಿ ಯಾವ ಕ್ರಮದಿಂದ ಆನಂದವುಳ್ಳವರೆಂದು ಶ್ರುತರಾಗಿರುತ್ತಾರೋ, ಹಾಗೆಯೇ ಅದೇ ಕ್ರಮದಿಂದ ಸಾಧ್ಯವಾದ ಆನಂದವನ್ನು ಹೊಂದುವರು, ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ॥ ೨ ॥

ಪೀಠಿಕೆ ॥ ಬ್ರಹ್ಮಾದಿಗಳಿಗೆ ಫಲತಾರತಮ್ಯ ಇರುತ್ತಿದ್ದರೆ ಆಗಬಹುದಿತ್ತು. ಅದೇವೇ ಹೇಗೆ ಕೂಡುತ್ತದೆ ಎಂದು ಆಕ್ಷೇಪಿಸುತ್ತಾರೆ—

**ಭಾಷ್ಯ ॥ ಕುತಃ ॥ ೩ ॥**

ಭಾಷ್ಯಾರ್ಥ ॥ ಫಲಗಳಿಗೆ ತಾರತಮ್ಯವು ಯಾವ ಪ್ರಮಾಣದಿಂದ? ಪ್ರಮಾಣ ಇಲ್ಲದಿರುವುದರಿಂದ ತಾರತಮ್ಯವು (ವೃದ್ಧಿಹ್ರಾಸಗಳು) ಇಲ್ಲವೇ ಇಲ್ಲ. ॥ ೩ ॥

ಪೀಠಿಕೆ ॥ ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ದರ್ಶನಾಚ್ಚ ಓಂ ॥ ೨೧ ॥

ಸೂತ್ರಾರ್ಥ ॥ ಅಥಾತ ಆನಂದಸ್ಯ ಇತ್ಯಾದಿಗಳಲ್ಲಿ ಫಲತಾರತಮ್ಯವು ಕಂಡದ್ದರಿಂದ.

**ಭಾಷ್ಯ ॥ ಅಥಾತ ಆನಂದಸ್ಯ ಮೀಮಾಂಸಾ ಭವತಿಃ (ತೈ.೨.೮.) । ಇತ್ಯಾರಭ್ಯ ಬ್ರಹ್ಮಪರ್ಯಂತೇಷು ಸುಖೇ ವಿಶೇಷದರ್ಶನಾತ್ ॥ ೪ ॥**

ಭಾಷ್ಯಾರ್ಥ ॥ ಪ್ರಕರಣಾಂತರವು ಆರಂಭಿಸಲ್ಪಡುತ್ತದೆ. ಎರಡು ಪಕ್ಷಗಳಿಗೂ ಪ್ರಾಪಕವಾದುದು ಇದ್ದುದರಿಂದ ಮುಕ್ತರ ಸುಖದ ವಿಚಾರವು ಅಂದರೆ ಸರ್ವರಿಗೂ ಆನಂದವು ಏಕಪ್ರಕಾರವೋ ಅನೇಕ ಪ್ರಕಾರವೋ ಎನ್ನುವ ವಿಚಾರವು ಪ್ರವೃತ್ತವಾಗುತ್ತದೆ. ಇತ್ಯಾದಿಗಳಿಂದ **ತೇ ಯೇ ಶತಂ ಪ್ರಜಾಪತೇರಾನಂದಾಃ । ಸ ಏಕೋ ಬ್ರಹ್ಮಣ ಆನಂದಃ ॥** ಎನ್ನುವ ತನಕ ಚಕ್ರವರ್ತಿಗಳನ್ನಾರಂಭಿಸಿ ಬ್ರಹ್ಮ ಪರ್ಯಂತರಾದ ದೇವತೆಗಳಲ್ಲಿ ಸುಖದಲ್ಲಿ ಕ್ರಮದಿಂದ ನೂರು ಪಾಲು ಆನಂದದ ಉತ್ಕರ್ಷವನ್ನು ಪ್ರತಿಪಾದಿಸಿದ್ದರಿಂದ.

**ಪೀಠಿಕೆ ॥** ಫಲ ತಾರತಮ್ಯವು ಇರಲಿ, ಆದಾಗ್ಯೂ ಭಕ್ತಿಸಾಮ್ಯವು ಏಕೆ ಆಗಲಾರದು ಫಲತಾರತಮ್ಯವು ಭಕ್ತಿ ತಾರತಮ್ಯದಿಂದಲೂ ಕೂಡಬಹುದು. ಎಂದರೆ—

**ಭಾಷ್ಯ ॥ ಚ ಶಬ್ದಾತ್ಸ್ಮೃತಿಃ ॥ ಯಥಾ ಭಕ್ತಿ ವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ । ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ॥ ಇತಿ ॥ ೨೧ ॥ ಅಧಿ. ೧೨ ॥ ೫ ॥**

**ಭಾಷ್ಯಾರ್ಥ ॥** ಸಂಸಾರದಲ್ಲಿ ಜ್ಞಾನಿಗಳಿಗೆ ಪರಮಾತ್ಮನಲ್ಲಿ ಹೇಗೆ ಭಕ್ತ್ಯತಿಶಯವು ಕಾಣಲ್ಪಡುತ್ತದೋ ಹಾಗೆಯೇ ಅವರಿಗೆ ಲಿಂಗಶರೀರ ಭಂಗವು ಉಂಟಾಗುತ್ತಿರಲು ಮುಕ್ತಿಯಲ್ಲಿ ಆನಂದಭಿವ್ಯಕ್ತಿವಿಶೇಷವೂ ಕಾಣಲ್ಪಡುತ್ತದೆ, ಎಂದು ಚ ಶಬ್ದದಿಂದ ಸ್ಮೃತಿಯು ಅಂಗೀಕರಿಸತಕ್ಕುದು. ॥ ೨೧ ॥ ೫ ॥

## ಅಧಿಕರಣ ಸಾರಾಂಶ

ಭಕ್ತಿ ಮೊದಲಾದ ಸಾಧನಸಮುದಾಯವು ಭಕ್ತರಲ್ಲಿ ಏಕಪ್ರಕಾರವೋ, ಅನೇಕ ಪ್ರಕಾರವೋ, ಅದಕ್ಕಾಗಿ ಆನಂದ ಮೊದಲಾದ ಬ್ರಹ್ಮಸಾದೃಶ್ಯಾಭಿವ್ಯಕ್ತಿಯು ಸರ್ವತ್ರ ಏಕಪ್ರಕಾರವೋ ಅನೇಕ ಪ್ರಕಾರವೋ ಎಂದು ಸಂದೇಹವು. ಸೈಷಾನಂದಸ್ಯ ಇತ್ಯಾದಿಗಳು ವೈರಾಗ್ಯ ಪ್ರಶಂಸಾಪರವಾದುದ ರಿಂದಲೂ ಆನಂದ ತಾರತಮ್ಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಫಲತಾರತಮ್ಯವು ಸಿದ್ಧಿಸದೆ ಇದ್ದ ಪ್ರಯುಕ್ತ ಭಕ್ತ್ಯಾದಿ ಸಾಧನಗಳೂ ಭಕ್ತರಲ್ಲಿ ಏಕಪ್ರಕಾರವೇ ಎಂದರೆ, ಸೈಷಾ ಎನ್ನುವ ಶ್ರುತಿಯು ವೈರಾಗ್ಯ ಪ್ರಶಂಸಾದಿಪರವೆನ್ನುವುದೇ ಭಾಷ್ಯಕಾರರಿಂದಲೇ ನಿರಸ್ತವಾಗಿದೆ. ಶ್ರುತ್ಯಾದಿಗಳಿಂದ ಸಿದ್ಧವಾದ ಆನಂದಾದಿರೂಪ ಫಲತಾರತಮ್ಯಾನ್ಯಥಾನುಪಪತ್ತಿಯಿಂದ ಸಾಧನಗಳಲ್ಲಿಯೂ ತಾರತಮ್ಯವನ್ನು ಅವಶ್ಯವಾಗಿ ಅಂಗೀಕರಿಸತಕ್ಕುದು. ॥ ಅಧಿ. ೧೨ ॥

**ವೃದ್ಧಿಹ್ರಾಸಾಧಿಕರಣವು ಸಮಾಪ್ತವಾಯಿತು.**

# ೧೩. ಪ್ರಕೃತೈತಾವತ್ತ್ವಾಧಿಕರಣವು

**ಪೀಠಿಕೆ ॥** ಬ್ರಹ್ಮನಿಗೆ ವಿಶ್ವಪಾಲಕತ್ವವು ಸಮರ್ಥಿಸಲ್ಪಡುತ್ತದೆ—

**ಭಾಷ್ಯ ॥ (೧) ಸೃಷ್ಟಿಸಂಹಾರಕರ್ತೃತ್ವಮೇವಾಸ್ಯ ನ ಪಾಲಕತ್ವಂ ಸ್ವತಃ ಸಿದ್ಧೇಃ । ಇತಿ ॥ (೨) ಅತ ಆಹ ॥ ೧ ॥**

**ಭಾಷ್ಯಾರ್ಥ ॥** (೧) ಶ್ರೀಹರಿಗೆ ಸೃಷ್ಟಿಸಂಹಾರಕರ್ತೃತ್ವವೇ ಪಾಲಕತ್ವವನ್ನು ಪ್ರತ್ಯೇಕ ಹೇಳಬೇಕಾಗಿಲ್ಲ. (ಸೃಷ್ಟಿಮಾಡಿ ಸಂಹರಿಸದೆ ಇರುವತನಕ ಪಾಲನ ಕಾರ್ಯವಾದ ಜಗತ್ತಿನ ಸ್ಥಿತಿಯು) ಸ್ವತ ಏವ ಸಿದ್ಧವಾಗಿದೆ. ಸಂಹಾರಕನಿಗೆ ಅಸಂಹಾರದಿಂದ ಅತಿರಿಕ್ತವಾದ ರಕ್ಷಾರೂಪವಾದ ವ್ಯಾಪಾರವೇ ಕೂಡಲಾರದು.) (೨) ಎಂದು ಶಂಕಾ ಬಂದರೆ ಉತ್ತರ ಕೊಡುತ್ತಾರೆ. ॥ ೧ ॥

## ಸೂತ್ರ ॥ ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ ॥ ೨೨ ॥

**ಸೂತ್ರಾರ್ಥ** ॥ ಪರಮಾತ್ಮನು ಪಾಲಕನೂ ಆಗಿರುತ್ತಾನೆ. ನೈತಾವದೇನಾ ಎನ್ನುವ ಶ್ರುತಿಯೂ ಸೃಷ್ಟಿಂಚ ಎನ್ನುವ ಸ್ಮೃತಿಯೂ ಅಸ್ಯೇದೇಷಾ ಸುಮತಿಃ ಇತ್ಯಾದಿಗಳಿಂದ ಪ್ರಕೃತವಾದ ಸೃಷ್ಟಿಸಂಹಾರ ಕರ್ತೃತ್ವ ಮಾತ್ರವನ್ನು ನಿಷೇಧಿಸುತ್ತದೆ. ಸೃಷ್ಟ್ಯಾದಿಕರ್ತೃತ್ವಕ್ಕಿಂತ ಅಧಿಕವಾದ ಪಾತೃತ್ವವನ್ನೂ ಕೂಡ ಹೇಳುತ್ತದೆ.

**ಭಾಷ್ಯ ॥ (೧) ಉಕ್ತಂ ಸೃಷ್ಟಿಸಂಹಾರಕರ್ತೃತ್ವ ಮಾತ್ರಂ ಪ್ರತಿಷಿದ್ಧ ತತೋಽಧಿಕಂ ಬ್ರವೀತಿ । (೨) ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ (ಋ.೧೦.೩೧.೮.) । ಇತಿ (೩) ಚ ಶಬ್ದಾತ್ಸ್ಮೃತಿಶ್ಚ । ಸೃಷ್ಟಿಂ ಚ ಪಾಲನಂ ಚೈವ ಸಂಹಾರಂ ನಿಯಮಂ ತಥಾ । ಏಕ ಏವ ಕರೋತೀಶಃ ಸರ್ವಸ್ಯ ಜಗತೋ ಹರಿಃ ॥ ಇತಿ ಬ್ರಹ್ಮಾಂಡೇ ॥ ೨೨ ॥ ಅಧಿ.೧೩ ॥ ೨ ।**

**ಭಾಷ್ಯಾರ್ಥ** ॥ (೧) ಅಸ್ಯೇದೇಷಾ ಸುಮತಿಃ ಇತ್ಯಾದಿ ಪೂರ್ವವಾಕ್ಯದಲ್ಲಿ ಹೇಳಲ್ಪಟ್ಟ ಸೃಷ್ಟಿ ಸಂಹಾರ ಕರ್ತೃತ್ವಮಾತ್ರವು ಎನ್ನುವುದನ್ನು ನಿಷೇಧಿಸಿ ಅದಕ್ಕಿಂತ ಹೆಚ್ಚಾದ ಪಾಲನವನ್ನು ಕೂಡ ನೈತಾವತ್ ಇತ್ಯಾದಿ ಶ್ರುತಿಯು ಶ್ರೀ ಹರಿಗೆ ಪ್ರತಿಪಾದಿಸುತ್ತದೆ. ಆದಕಾರಣ ಶ್ರೀಹರಿಗೆ ಪಾಲನಕರ್ತೃತ್ವವೂ ಪ್ರತ್ಯೇಕ ವಾಗಿ ಇದ್ದೇ ಇದೆ. (೨) ಈ ಈಶ್ವರನಿಂದ ಉಂಟಾಗತಕ್ಕಕಾರ್ಯವು ಹಿಂದೆ ಹೇಳಿದ ಸೃಷ್ಟಿಸಂಹಾರ ಕರ್ತೃತ್ವ ಮಾತ್ರವಾಗುವುದಿಲ್ಲ. ಮತ್ತೆ ಇತರವಾದುದೂ ಇದೆ. ಭಕ್ತರಿಗೆ ಅಭಿಲಷಿತವನ್ನು ಕೊಡತಕ್ಕ ಆ ಸರ್ವೋತ್ತಮನಾದ ಶ್ರೀಹರಿಯು ಸ್ವರ್ಗ ಭೂಮಿಮೊದಲಾದ ಸರ್ವಜಗತ್ತನ್ನು ಧರಿಸುತ್ತಾನೆ. ಪೋಷಿಸುತ್ತಾನೆ. (೩) (ಸೃಷ್ಟಿಸಂಹಾರ ಕರ್ತನಿಗೂ ಪಾಲಕತ್ವವು ಆದೆ ಎನ್ನುವಲ್ಲಿ ಸ್ಪಷ್ಟಸ್ಮೃತಿಯನ್ನೂ ಹೇಳುತ್ತಾರೆ.) ಚ ಶಬ್ದದಿಂದ ಸ್ಮೃತಿಯು ಸಮುಚ್ಚಿತವಾಯಿತು. ಸರ್ವಸ್ವಾಮಿಯಾದ ಶ್ರೀಹರಿಯೊಬ್ಬನೇ ಸರ್ವಜಗತ್ತಿಗೂ ಸೃಷ್ಟಿಯನ್ನೂ ರಕ್ಷಣೆಯನ್ನೂ ಸಂಹಾರವನ್ನೂ ನಿಯಮನವನ್ನೂ ಮಾಡುತ್ತಾನೆಂದು ಬ್ರಹ್ಮಾಂಡ ಪುರಾಣದಲ್ಲಿದೆ. ॥ ೨೨ ॥ ೨ ॥

### ಅಧಿಕರಣ ಸಾರಾಂಶ

ಪಾಲನಾಖ್ಯಗುಣವು ಶ್ರೀಹರಿಗೆ ಅಯುಕ್ತವೋ, ಯುಕ್ತವೋ ಎಂದು ಸಂದೇಹವು. ಸೃಷ್ಟವಾದ ವಸ್ತುವಿಗೆ ಸಂಹಾರ ಪರ್ಯಂತ ಸ್ಥಿತಿಯು ಸ್ವತಏವ ಸಿದ್ಧವಾದುದರಿಂದ ಸಂಹಾರಾದಿಗಳನ್ನು ಮಾಡುವವನಿಗೆ ಅಸಂಹಾರಾದಿಗಳಿಂದ ಅತಿರಿಕ್ತವಾದ ರಕ್ಷಾರೂಪವ್ಯಾಪಾರವೇ ಕೂಡದಿರುವುದರಿಂದ ಶ್ರೀಹರಿಗೆ ಪಾಲಕತ್ವವು ಯುಕ್ತವಲ್ಲ. ಎಂದರೆ ಶ್ರೀಹರಿಗೆ, ನೈತಾವದೇನಾ ಎನ್ನುವ ಶ್ರುತಿಯಲ್ಲಿ ಸೃಷ್ಟಿಸಂಹಾರಕರ್ತೃತ್ವಮಾತ್ರವನ್ನು ನಿಷೇಧಿಸಿ ಪಾಲನಾಖ್ಯವ್ಯಾಪಾರವನ್ನು ಪ್ರತಿಪಾದಿಸಿದೆ. ಮತ್ತು ಸೃಷ್ಟಿಂಚ ಎನ್ನುವ ಸ್ಮೃತಿಯಲ್ಲಿಯೂ ಪಾಲನವನ್ನು ಹೇಳಿದ್ದರಿಂದ ಶ್ರೀಹರಿಯು ಪಾಲನಾಖ್ಯಗುಣಯುಕ್ತನು. ॥ ಅಧಿ. ೧೩ ॥

**ಪ್ರಕೃತೈತಾವತ್ತ್ವಾಧಿಕರಣವು ಸಮಾಪ್ತವಾಯಿತು.**

# ೧೪ ಅವ್ಯಕ್ತತ್ವಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಶ್ರೀಹರಿಗೆ ಉಪಲಬ್ಧ್ಯಯೋಗ್ಯತ್ವವನ್ನು ಸಮರ್ಥಿಸುತ್ತಾರೆ. ಶ್ರೀಹರಿಯು ಅವ್ಯಕ್ತಸ್ವಭಾವನಾದರೆ, ನೂರಾರು ಸಾಧನಗಳಿಂದಲೂ ಆತನ ದರ್ಶನವು ಕೂಡದಿರುವುದರಿಂದ ಸ್ತಂಭಾದಿಗಳಂತೆಯೇ ಪುರುಷ ಪ್ರಯತ್ನದಿಂದಲೇ ಪ್ರತ್ಯಕ್ಷವು ಕೂಡಬಹುದು, ಆದಕಾರಣ ಆತನಲ್ಲಿ ಭಕ್ತಿಯು ವ್ಯರ್ಥವೇ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಪರಮಾತ್ಮಾಪರೋಕ್ಷ್ಯಂ ಚ ತತ್ಪ್ರಸಾದಾದೇವ । ನ ಜೀವಶಕ್ತ್ಯೇತಿ ವಕ್ತುಮುಚ್ಯತೇ ॥ ೧ ॥**

ಭಾಷ್ಯಾರ್ಥ ॥ ಪರಮಾತ್ಮ ಪ್ರತ್ಯಕ್ಷವಾದರೂ ಭಕ್ತಿಸಾಧ್ಯವಾದ ಈಶ್ವರ ಪ್ರಸಾದದಿಂದಲೇ, ಪುರುಷ ಪ್ರಯತ್ನದಿಂದ ಅಲ್ಲ ಎಂದು ಆತೋಽನಂತೇನ ಇತ್ಯಾದಿಗಳಲ್ಲಿ ಹೇಳತಕ್ಕ ಬ್ರಹ್ಮನಿಗೆ ಅವ್ಯಕ್ತತ್ವವು ಹೇಳಲ್ಪಡುತ್ತದೆ.

## ಸೂತ್ರ ॥ ಓಂ ತದವ್ಯಕ್ತಮಾಹ ಹಿ ಓಂ ॥ ೨೩ ॥

ಸೂತ್ರಾರ್ಥ ॥ ಆ ಬ್ರಹ್ಮನು ಅವ್ಯಕ್ತನು. ಏಕೆಂದರೆ **ಅರೂಪಮಕ್ಷರಂ,** ಎನ್ನುವ ಶ್ರುತಿಯು ಅವ್ಯಕ್ತತ್ವವನ್ನು ಹೇಳುತ್ತದೆ.

**ಭಾಷ್ಯ ॥ (೧) ಅವ್ಯಕ್ತಮೇವ ತದ್ಬ್ರಹ್ಮ ಸ್ವತಃ ॥ (೨) ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಂ। ಯಜ್ಜ್ಞಾತ್ವಾಮುಚ್ಯತೇ ಜಂತುರಾನಂದಶ್ಚಾಕ್ಷ(ವ್ಯ)ಯೋ ಭವೇತ್ ॥ ಇತಿ (ಹಿ) ಕೌಂಠರವ್ಯಶ್ರುತಿಃ ॥ ೨೩ ॥ ೨ ॥**

ಭಾಷ್ಯಾರ್ಥ ॥ (೧) ಪರಬ್ರಹ್ಮನು ಸ್ವಾಭಾವಿಕವಾಗಿ ಅವ್ಯಕ್ತನೇ ಆಗಿರುತ್ತಾನೆ. (ಪುರುಷರ ಪ್ರಯತ್ನದಿಂದ ನೋಡಲು ಶಕ್ಯನಲ್ಲ) (೨) ಬ್ರಹ್ಮನು ಸರ್ವಥಾ ನಾಶಶೂನ್ಯನು, ಆದಕಾರಣ ಪ್ರಾಕೃತ ಶರೀರಶೂನ್ಯನು, ಮತ್ತು ಪ್ರಾಕೃತ ಶುಕ್ಲಾದಿರೂಪಶೂನ್ಯನು, ಆದಕಾರಣ ಸದಾ ಅಪ್ರತ್ಯಕ್ಷನು. ಭಿನ್ನಾಂಶಶೂನ್ಯನು, ಅಥವಾ ಷೋಡಶಕಲಾಶೂನ್ಯನು. ಯಾವ ಪರಬ್ರಹ್ಮಾಖ್ಯ ವಸ್ತುವನ್ನು ಅಪರೋಕ್ಷವಾಗಿ ತಿಳಿದು ಜೀವನು ಸಂಸಾರದಿಂದ ಮುಕ್ತನಾಗುತ್ತಾನೋ, (ಅನಿಷ್ಟ ನಿವೃತ್ತಿ ಮಾತ್ರವಲ್ಲ ಮತ್ತೆ ಈ ಜೀವನಿಗೇನೇ) ಸ್ವರೂಪಾನಂದವು ನಿತ್ಯಾಭಿವ್ಯಕ್ತವಾಗುವುದೋ, ಅಂತಹ ಬ್ರಹ್ಮನು ಅವ್ಯಕ್ತನೇ. ಹೀಗೆ ಅರೂಪಂ ಎನ್ನುವ ಕೌಂಠರವ್ಯ ಶ್ರುತಿಯು ಬ್ರಹ್ಮನಿಗೆ ಅವ್ಯಕ್ತತ್ವವನ್ನು ಹೇಳುತ್ತದೆ. ॥ ೨೩. ॥ ೨ ॥

ಪೀಠಿಕೆ ॥ ಬ್ರಹ್ಮನು ಸ್ವತಃ ಅವ್ಯಕ್ತವಾಗಲಿ, ಆದಾಗ್ಯೂ ಆರಾಧನ ರೂಪವಾದ ಪುರುಷಪ್ರಯತ್ನದಿಂದ ಯಕ್ಷಾದಿಗಳಂತೆ ಪ್ರತ್ಯಕ್ಷವು ಏಕೆ ಆಗಲಾರದು, ಎಂದರೆ—

## ಸೂತ್ರ ॥ ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ ಓಂ ॥ ೨೪ ॥

ಸೂತ್ರಾರ್ಥ ॥ ಭಕ್ತಿರಹಿತವಾದ ಆರಾಧನದಿಂದ ಪೂಜಿಸಿದರೂ ಆ ಬ್ರಹ್ಮನು ಅವ್ಯಕ್ತನೇ. ಅವ್ಯಕ್ತತ್ವವು ಜ್ಞಾನಿಪ್ರತ್ಯಕ್ಷದಿಂದಲೂ ಸೂಕ್ಷ್ಮತ್ವಹೇತುಕಾನುಮಾನದಿಂದಲೂ ಸಿದ್ಧವಾದ ಪ್ರಯುಕ್ತ

**ಭಾಷ್ಯ ॥ (೧) ಆರಾಧನೇಽಪ್ಯವ್ಯಕ್ತಮೇವ । ಜ್ಞಾನಿಪ್ರತ್ಯಕ್ಷೇಣೇತರೇಷಾಮತಿಸೂಕ್ಷ್ಮತ್ವಲಿಂಗಾದನುಮಾನೇನ ॥ (೨) ನ ತಮಾರಾಧಯಿತ್ವಾಽಪಿ ಕಶ್ಚಿದ್ವ್ಯಕ್ತೀಕರಿಷ್ಯತಿ । ನಿತ್ಯಾವ್ಯಕ್ತೋ ಯತೋ ದೇವಃ ಪರಮಾತ್ಮಾ ಸನಾತನಃ ॥ ಇತಿ (ಚ) ಬ್ರಹ್ಮವೈವರ್ತೇ ॥ ೨೪ ॥ ೩ ॥**

ಭಾಷ್ಯಾರ್ಥ ॥ (೧) ಭಕ್ತಿರಹಿತವಾದ ಆರಾಧನದಿಂದ ಸಂಪೂಜಿಸಿದರೂ ಆ ಬ್ರಹ್ಮನು ಅವ್ಯಕ್ತನೇ. (ಪ್ರತ್ಯಕ್ಷೀಕರಿಸಲಿಕ್ಕೆ ಶಕ್ಯನಲ್ಲ) ಜ್ಞಾನಿಪ್ರತ್ಯಕ್ಷದಿಂದಲೂ ಇತರರಾದ ಜಿಜ್ಞಾಸುಗಳಿಗೆ ಬ್ರಹ್ಮನು ವ್ಯಕ್ತನಲ್ಲ. **ಅತಿಸೂಕ್ಷ್ಮತ್ವಾತ್** ಎಂದು ಅತಿ ಸೂಕ್ಷ್ಮತ್ವಹೇತುಕಾನುಮಾನದಿಂದಲೂ ಈ ಅರ್ಥವು ಸಿದ್ಧವಾದ ಪ್ರಯುಕ್ತ (ಯದ್ಯಪಿ ಈ ಅರ್ಥವು ಜ್ಞಾನಿಗಳಿಗೂ ಪ್ರತ್ಯಕ್ಷದಿಂದಲೆಂಬಂತೆ ಅನುಮಾನದಿಂದಲೂ ಸಿದ್ಧಿಸುವುದು. ಅನ್ಯಥಾ ಪ್ರಮಾಣಗಳು ವ್ಯರ್ಥವಾಗಬೇಕಾಗುವವು. ಆದಾಗ್ಯೂ ಪ್ರತ್ಯಕ್ಷಸಿದ್ಧವಾದ ಅರ್ಥದಲ್ಲಿ ಅನುಮಾನಾಪೇಕ್ಷೆಯು ಇಲ್ಲದಿರುವುದರಿಂದ ಇತರೇಷಾಂ ಎಂದು ಹೇಳಿರುವರು.) (೨) (ಪರಪ್ರತ್ಯಕ್ಷವು ಅಸಿದ್ಧವಾದ ಪ್ರಯುಕ್ತ ಜ್ಞಾನಿಪ್ರತ್ಯಕ್ಷವನ್ನು ಹೇಗೆ ಪ್ರಮಾಣೀಕರಿಸಿದ್ದು ಎಂದು ಹೇಳ ಕೂಡದು. ಜ್ಞಾನಿಗಳ ವಚನದಿಂದಲೇ ತನ್ಮೂಲವಾದ ಪ್ರತ್ಯಕ್ಷವು ಸಿದ್ಧಿಸುತ್ತದೆ, ಎನ್ನುತ್ತಾರೆ.) ಆ ಪರಮಾತ್ಮನನ್ನು ಭಕ್ತಿಯಿಲ್ಲದೆ ಆರಾಧಿಸಿದರೂ ಯಾವ ಯೋಗ್ಯ ಜನರೂ ಪ್ರತ್ಯಕ್ಷೀಕರಿಸುವುದಿಲ್ಲ. ಏಕೆಂದರೆ— ದೇಹತಃ ಸ್ವಭಾವತಶ್ಚ ನಿತ್ಯನಾದ ಸರ್ವೋತ್ತಮನಾದ ದೇವನು ನಿತ್ಯದಲ್ಲಿಯೂ ಅವ್ಯಕ್ತನೇ ಆಗಿರುತ್ತಾನೆ. ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. ॥ ೨೪ ॥ ೩ ॥

**ಭಾಷ್ಯ ॥ (೧) ನಿತ್ಯಾವ್ಯಕ್ತ (ಕ್ತೇನ) ರೂಪೇಣ ತಥೈವ ತಿಷ್ಠತಿ । ವ್ಯಕ್ತಂ ಕಿಂಚಿದ್ರೂಪಂ ಗೃಹೀತ್ವಾ ದೃಶ್ಯತೇ । ಯಥಾಽಗ್ನ್ಯಾದಯಸ್ತನ್ಮಾತ್ರಾರೂಪೇಣಾದೃಶ್ಯಾ ಅಪಿಸ್ಥೂಲರೂಪೇಣ ದೃಶ್ಯಂತೇ ಏವಮ್ ॥ (೨) ಇತಿ ಚೇನ್ನ ॥ ೪ ॥**

ಭಾಷ್ಯಾರ್ಥ ॥ (೧) ಹೇಗೆ ಅಗ್ನ್ಯಾದಿಗಳು ಅಗ್ನಿಮಾತ್ರಾದಿ ಲಕ್ಷಣ ಅನುಪಚಿತವಾದ ಸೂಕ್ಷ್ಮರೂಪದಿಂದ ಅದೃಶ್ಯಗಳಾದಾಗ್ಯೂ ಉಪಚಿತರೂಪದಿಂದ ವ್ಯಕ್ತಗಳಾಗುತ್ತವೋ, ಹೀಗೆಯೇ ನಿತ್ಯವಾದ (ಉತ್ಪತ್ತ್ಯಾದಿರಹಿತವಾದ) ಅವ್ಯಕ್ತವಾದ ಮೂಲ ರೂಪದಿಂದ ಅವ್ಯಕ್ತನಾಗಿಯೇ ಬ್ರಹ್ಮನು ಇರುತ್ತಾನೆ. ವ್ಯಕ್ತವಾದ ಅವತಾರ ರೂಪವನ್ನು ಸ್ವೀಕರಿಸಿ ಅವತಾರರೂಪದಿಂದ ಕಾಣಲ್ಪಡುತ್ತಾನೆ. (ಆದಕಾರಣ ಭಕ್ತಿಯು ಇಲ್ಲವಾದರೂ ಬ್ರಹ್ಮದರ್ಶನವು ಆಗುವುದರಿಂದ ಭಕ್ತಿಯು ವ್ಯರ್ಥವೇ.) (೨) ಎಂದರೆ, ಹಾಗೆ ಹೇಳಕೂಡದು.

## ಸೂತ್ರ ॥ ಓಂ ಪ್ರಕಾಶವಚ್ಚಾವೈಶೇಷ್ಯಮ್ ಓಂ ॥ ೨೫ ॥

ಸೂತ್ರಾರ್ಥ ॥ ಬ್ರಹ್ಮನು ಅಗ್ನ್ಯಾದಿಗಳಂತೆಯೇ ಸೂಕ್ಷ್ಮರೂಪದಿಂದ ಅವ್ಯಕ್ತನೂ

# ೧೪ ಅವ್ಯಕ್ತತ್ವಾಧಿಕರಣವು

**ಪೀಠಿಕೆ ||** ಈ ಅಧಿಕರಣದಲ್ಲಿ ಶ್ರೀಹರಿಗೆ ಉಪಲಬ್ಧ್ಯಯೋಗ್ಯತ್ವವನ್ನು ಸಮರ್ಥಿಸುತ್ತಾರೆ. ಶ್ರೀಹರಿಯು ಅವ್ಯಕ್ತಸ್ವಭಾವನಾದರೆ, ನೂರಾರು ಸಾಧನಗಳಿಂದಲೂ ಆತನ ದರ್ಶನವು ಕೂಡದಿರುವುದರಿಂದ ಸ್ತಂಭಾದಿಗಳಂತೆಯೇ ಪುರುಷ ಪ್ರಯತ್ನದಿಂದಲೇ ಪ್ರತ್ಯಕ್ಷವು ಕೂಡಬಹುದು. ಆದಕಾರಣ ಆತನಲ್ಲಿ ಭಕ್ತಿಯು ವ್ಯರ್ಥವೇ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ || ಪರಮಾತ್ಮಾಪರೋಕ್ಷ್ಯಂ ಚ ತತ್ಪ್ರಸಾದಾದೇವ । ನ ಜೀವಶಕ್ತ್ಯೇತಿ ವಕ್ತುಮುಚ್ಯತೇ || ೧ ||**

**ಭಾಷ್ಯಾರ್ಥ ||** ಪರಮಾತ್ಮ ಪ್ರತ್ಯಕ್ಷವಾದರೂ ಭಕ್ತಿಸಾಧ್ಯವಾದ ಈಶ್ವರ ಪ್ರಸಾದದಿಂದಲೇ, ಪುರುಷ ಪ್ರಯತ್ನದಿಂದ ಅಲ್ಲ ಎಂದು **ಅತೋಽನಂತೇನ** ಇತ್ಯಾದಿಗಳಲ್ಲಿ ಹೇಳತಕ್ಕ ಬ್ರಹ್ಮನಿಗೆ ಅವ್ಯಕ್ತತ್ವವು ಹೇಳಲ್ಪಡುತ್ತದೆ.

## ಸೂತ್ರ || ಓಂ ತದವ್ಯಕ್ತಮಾಹ ಹಿ ಓಂ || ೨೩ ||

**ಸೂತ್ರಾರ್ಥ ||** ಆ ಬ್ರಹ್ಮನು ಅವ್ಯಕ್ತನು. ಏಕೆಂದರೆ **ಅರೂಪಮಕ್ಷರಂ,** ಎನ್ನುವ ಶ್ರುತಿಯು ಅವ್ಯಕ್ತತ್ವವನ್ನು ಹೇಳುತ್ತದೆ.

**ಭಾಷ್ಯ || (೧) ಅವ್ಯಕ್ತಮೇವ ತದ್ಬ್ರಹ್ಮ ಸ್ವತಃ || (೨) ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಂ । ಯಜ್ಜ್ಞಾತ್ವಾಮುಚ್ಯತೇ ಜಂತುರಾನಂದಶ್ಚಾಕ್ಷ(ವ್ಯ)ಯೋ ಭವೇತ್ || ಇತಿ (ಹಿ) ಕೌಂಠರವ್ಯಶ್ರುತಿಃ || ೨೩ || ೨ ||**

**ಭಾಷ್ಯಾರ್ಥ ||** (೧) ಪರಬ್ರಹ್ಮನು ಸ್ವಾಭಾವಿಕವಾಗಿ ಅವ್ಯಕ್ತನೇ ಆಗಿರುತ್ತಾನೆ. (ಪುರುಷರ ಪ್ರಯತ್ನದಿಂದ ನೋಡಲು ಶಕ್ಯನಲ್ಲ) (೨) ಬ್ರಹ್ಮನು ಸರ್ವಥಾ ನಾಶಶೂನ್ಯನು. ಆದಕಾರಣ ಪ್ರಾಕೃತ ಶರೀರಶೂನ್ಯನು, ಮತ್ತು ಪ್ರಾಕೃತ ಶುಕ್ಲಾದಿರೂಪಶೂನ್ಯನು, ಆದಕಾರಣ ಸದಾ ಅಪ್ರತ್ಯಕ್ಷನು. ಭಿನ್ನಾಂಶಶೂನ್ಯನು, ಅಥವಾ ಷೋಡಶಕಲಾಶೂನ್ಯನು. ಯಾವ ಪರಬ್ರಹ್ಮಾಖ್ಯ ವಸ್ತುವನ್ನು ಅಪರೋಕ್ಷವಾಗಿ ತಿಳಿದು ಜೀವನು ಸಂಸಾರದಿಂದ ಮುಕ್ತನಾಗುತ್ತಾನೋ, (ಅನಿಷ್ಟ ನಿವೃತ್ತಿ ಮಾತ್ರವಲ್ಲ, ಮತ್ತೆ ಈ ಜೀವನಿಗೇನೇ) ಸ್ವರೂಪಾನಂದವು ನಿತ್ಯಾಭಿವ್ಯಕ್ತವಾಗುವುದೋ, ಅಂತಹ ಬ್ರಹ್ಮನು ಅವ್ಯಕ್ತನೇ. ಹೀಗೆ ಅರೂಪಂ ಎನ್ನುವ ಕೌಂಠರವ್ಯ ಶ್ರುತಿಯು ಬ್ರಹ್ಮನಿಗೆ ಅವ್ಯಕ್ತತ್ವವನ್ನು ಹೇಳುತ್ತದೆ. || ೨೩ || ೨ ||

**ಪೀಠಿಕೆ ||** ಬ್ರಹ್ಮನು ಸ್ವತಃ ಅವ್ಯಕ್ತವಾಗಲಿ, ಆದಾಗ್ಯೂ ಆರಾಧನ ರೂಪವಾದ ಪುರುಷಪ್ರಯತ್ನದಿಂದ ಯಕ್ಷಾದಿಗಳಂತೆ ಪ್ರತ್ಯಕ್ಷವು ಏಕೆ ಆಗಲಾರದು, ಎಂದರೆ—

## ಸೂತ್ರ || ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ ಓಂ || ೨೪ ||

ಸೂತ್ರಾರ್ಥ ॥ ಭಕ್ತಿರಹಿತವಾದ ಆರಾಧನದಿಂದ ಪೂಜಿಸಿದರೂ ಆ ಬ್ರಹ್ಮನು ಅವ್ಯಕ್ತನೇ. ಅವ್ಯಕ್ತತ್ವವು ಜ್ಞಾನಿಪ್ರತ್ಯಕ್ಷದಿಂದಲೂ ಸೂಕ್ಷ್ಮತ್ವಹೇತುಕಾನುಮಾನದಿಂದಲೂ ಸಿದ್ಧವಾದ ಪ್ರಯುಕ್ತ

**ಭಾಷ್ಯ ॥ (೧) ಆರಾಧನೇऽಪ್ಯವ್ಯಕ್ತಮೇವ । ಜ್ಞಾನಿಪ್ರತ್ಯಕ್ಷೇಣೇತರೇಷಾಮತಿಸೂಕ್ಷ್ಮತ್ವಲಿಂಗಾದನುಮಾನೇನ ॥ (೨) ನ ತಮಾರಾಧಯಿತ್ವಾಪಿ ಕಶ್ಚಿದ್ವ್ಯಕ್ತೀಕರಿಷ್ಯತಿ । ನಿತ್ಯಾವ್ಯಕ್ತೋ ಯತೋ ದೇವಃ ಪರಮಾತ್ಮಾ ಸನಾತನಃ ॥ ಇತಿ (ಚ) ಬ್ರಹ್ಮವೈವರ್ತೇ ॥ ೨೪ ॥ ೩ ॥**

ಭಾಷ್ಯಾರ್ಥ ॥ (೧) ಭಕ್ತಿರಹಿತವಾದ ಆರಾಧನದಿಂದ ಸಂಪೂಜಿಸಿದರೂ ಆ ಬ್ರಹ್ಮನು ಅವ್ಯಕ್ತನೇ. (ಪ್ರತ್ಯಕ್ಷೀಕರಿಸಲಿಕ್ಕೆ ಶಕ್ಯನಲ್ಲ) ಜ್ಞಾನಿಪ್ರತ್ಯಕ್ಷದಿಂದಲೂ ಇತರರಾದ ಜಿಜ್ಞಾಸುಗಳಿಗೆ ಬ್ರಹ್ಮನು ವ್ಯಕ್ತನಲ್ಲ. **ಅತಿಸೂಕ್ಷ್ಮತ್ವಾತ್** ಎಂದು ಅತಿ ಸೂಕ್ಷ್ಮತ್ವಹೇತುಕಾನುಮಾನದಿಂದಲೂ ಈ ಅರ್ಥವು ಸಿದ್ಧವಾದ ಪ್ರಯುಕ್ತ (ಯದ್ಯಪಿ ಈ ಅರ್ಥವು ಜ್ಞಾನಿಗಳಿಗೂ ಪ್ರತ್ಯಕ್ಷದಿಂದಲೆಂಬಂತೆ ಅನುಮಾನದಿಂದಲೂ ಸಿದ್ಧಿಸುವುದು. ಅನ್ಯಥಾ ಪ್ರಮಾಣಗಳು ವ್ಯರ್ಥವಾಗಬೇಕಾಗುವವು. ಆದಾಗ್ಯೂ ಪ್ರತ್ಯಕ್ಷಸಿದ್ಧವಾದ ಅರ್ಥದಲ್ಲಿ ಅನುಮಾನಾಪೇಕ್ಷೆಯು ಇಲ್ಲದಿರುವುದರಿಂದ ಇತರೇಷಾಂ ಎಂದು ಹೇಳಿರುವರು.) (೨) (ಪರಪ್ರತ್ಯಕ್ಷವು ಅಸಿದ್ಧವಾದ ಪ್ರಯುಕ್ತ ಜ್ಞಾನಿಪ್ರತ್ಯಕ್ಷವನ್ನು ಹೇಗೆ ಪ್ರಮಾಣೀಕರಿಸಿದ್ದು ಎಂದು ಹೇಳ ಕೂಡದು. ಜ್ಞಾನಿಗಳ ವಚನದಿಂದಲೇ ತನ್ಮೂಲವಾದ ಪ್ರತ್ಯಕ್ಷವು ಸಿದ್ಧಿಸುತ್ತದೆ, ಎನ್ನುತ್ತಾರೆ.) ಆ ಪರಮಾತ್ಮನನ್ನು ಭಕ್ತಿಯಿಲ್ಲದೆ ಆರಾಧಿಸಿದರೂ ಯಾವ ಯೋಗ್ಯ ಜನರೂ ಪ್ರತ್ಯಕ್ಷೀಕರಿಸುವುದಿಲ್ಲ. ಏಕೆಂದರೆ— ದೇಹತಃ ಸ್ವಭಾವತಶ್ಚ ನಿತ್ಯನಾದ ಸರ್ವೋತ್ತಮನಾದ ದೇವನು ನಿತ್ಯದಲ್ಲಿಯೂ ಅವ್ಯಕ್ತನೇ ಆಗಿರುತ್ತಾನೆ. ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. ॥ ೨೪ ॥ ೩ ॥

**ಭಾಷ್ಯ ॥ (೧) ನಿತ್ಯಾವ್ಯಕ್ತ (ಕ್ತೇನ) ರೂಪೇಣ ತಥೈವ ತಿಷ್ಠತಿ । ವ್ಯಕ್ತಂ ಕಿಂಚಿದ್ರೂಪಂ ಗೃಹೀತ್ವಾ ದೃಶ್ಯತೇ । ಯಥಾऽಗ್ನ್ಯಾದಯಸ್ತನ್ಮಾತ್ರಾರೂಪೇಣಾದೃಶ್ಯಾ ಅಪಿಸ್ಥೂಲರೂಪೇಣ ದೃಶ್ಯಂತೇ ಏವಮ್ ॥ (೨) ಇತಿ ಚೇನ್ನ ॥ ೪ ॥**

ಭಾಷ್ಯಾರ್ಥ ॥ (೧) ಹೇಗೆ ಅಗ್ನ್ಯಾದಿಗಳು ಅಗ್ನಿಮಾತ್ರಾದಿ ಲಕ್ಷಣ ಅನುಪಚಿತವಾದ ಸೂಕ್ಷ್ಮರೂಪದಿಂದ ಅದೃಶ್ಯಗಳಾದಾಗ್ಯೂ ಉಪಚಿತರೂಪದಿಂದ ವ್ಯಕ್ತಗಳಾಗುತ್ತವೋ, ಹೀಗೆಯೇ ನಿತ್ಯವಾದ (ಉತ್ಪತ್ತ್ಯಾದಿರಹಿತವಾದ) ಅವ್ಯಕ್ತವಾದ ಮೂಲ ರೂಪದಿಂದ ಅವ್ಯಕ್ತನಾಗಿಯೇ ಬ್ರಹ್ಮನು ಇರುತ್ತಾನೆ. ವ್ಯಕ್ತವಾದ ಅವತಾರ ರೂಪವನ್ನು ಸ್ವೀಕರಿಸಿ ಅವತಾರರೂಪದಿಂದ ಕಾಣಲ್ಪಡುತ್ತಾನೆ. (ಆದಕಾರಣ ಭಕ್ತಿಯು ಇಲ್ಲವಾದರೂ ಬ್ರಹ್ಮದರ್ಶನವು ಆಗುವುದರಿಂದ ಭಕ್ತಿಯು ವ್ಯರ್ಥವೇ.) (೨) ಎಂದರೆ, ಹಾಗೆ ಹೇಳಕೂಡದು.

## ಸೂತ್ರ ॥ ಓಂ ಪ್ರಕಾಶವಚ್ಚಾವೈಶೇಷ್ಯಮ್ ಓಂ ॥ ೨೫ ॥

ಸೂತ್ರಾರ್ಥ ॥ ಬ್ರಹ್ಮನು ಅಗ್ನ್ಯಾದಿಗಳಂತೆಯೇ ಸೂಕ್ಷ್ಮರೂಪದಿಂದ ಅವ್ಯಕ್ತನೂ

ಸ್ಥೂಲರೂಪದಿಂದ ವ್ಯಕ್ತನೂ ಎನ್ನುವುದು ಅಲ್ಲ ಮತ್ತೆ ಅವ್ಯಕ್ತನೇ. ಏಕೆಂದರೆ, ಬ್ರಹ್ಮನಿಗೆ ಸ್ಥೂಲತ್ವ ಸೂಕ್ಷ್ಮತ್ವ ವಿಶೇಷವು ಇಲ್ಲದಿರುವುದರಿಂದ.

**ಭಾಷ್ಯ ॥ (೧) ಅಗ್ನ್ಯಾದಿವತ್ ಸ್ಥೂಲಸೂಕ್ಷ್ಮತ್ವವಿಶೇಷಾಭಾವಾತ್ ॥ (೨) ನಾಸೌ ಸೂಕ್ಷ್ಮೋ ನ ಸ್ಥೂಲಃ ಪರ ಏವ ಸ ಭವತಿ ತಸ್ಮಾದಾಹುಃ ಪರಮ ಇತಿ । ಇತಿ ಮಾಂಡವ್ಯಶ್ರುತೇಃ ॥ (೩) ಸ್ಥೂಲಸೂಕ್ಷ್ಮವಿಶೇಷೋಽತ್ರ ನ ಕ್ವಚಿತ್ಪರ ಮೇಶ್ವರೇ । ಸರ್ವತ್ರೈಕಪ್ರಕಾರೋಽಸೌ ಸರ್ವರೂಪೇಷ್ವಜೋ ಯತಃ ॥ ಇತಿ ಚ ಗಾರುಡೇ ॥ (೪) ಅವ್ಯಕ್ತವ್ಯಕ್ತಭಾವೌ ಚ ನ ಕ್ವಚಿತ್ಪರಮೇಶ್ವರೇ। ಸರ್ವತ್ರಾವ್ಯಕ್ತರೂಪೋಽಯಂ ಯತ ಏವ ಜನಾರ್ದನಃ ॥ ಇತಿ ಚ ಕೌರ್ಮೇ ॥ ೨೫ ॥ ೫ ॥**

ಭಾಷ್ಯಾರ್ಥ ॥ (೧) ಹೇಗೆ ಅಗ್ನ್ಯಾದಿಗಳಿಗೆ ಸ್ಥೂಲರೂಪದಿಂದ ವ್ಯಕ್ತತ್ವವು, ಸೂಕ್ಷ್ಮರೂಪದಿಂದ ಅವ್ಯಕ್ತತ್ವವು, ವ್ಯಕ್ತತ್ವ ಅವ್ಯಕ್ತತ್ವ ಪ್ರಯೋಜಕ ಸ್ಥೂಲತ್ವ ಸೂಕ್ಷ್ಮತ್ವ ವಿಶೇಷವದೆಯೋ, ಹಾಗೆಯೇ ಬ್ರಹ್ಮನಲ್ಲಿ ಸ್ಥೂಲತ್ವ ಸೂಕ್ಷ್ಮತ್ವ ರೂಪ ವಿಶೇಷವು ಇಲ್ಲದಿರುವುದರಿಂದ ವ್ಯಕ್ತಾವ್ಯಕ್ತತ್ವವಿಲ್ಲ. (೨) ಈ ಶ್ರೀಹರಿಯು ಕೆಲವು ರೂಪದಿಂದ ಸೂಕ್ಷ್ಮನು ಕೆಲವು ರೂಪದಿಂದ ಸ್ಥೂಲನು ಎನ್ನುವುದು ಅಲ್ಲ ಮತ್ತೆ ಸರ್ವರೂಪಗಳಲ್ಲಿ ಪರಮಸೂಕ್ಷ್ಮನೇ ಆಗಿರುತ್ತಾನೆ. ಹೀಗೆಯೇ ಶ್ರೀಹರಿಯು ಕೆಲವು ರೂಪದಿಂದ ಸ್ಥೂಲನು ಕೆಲವು ರೂಪದಿಂದ ಸೂಕ್ಷ್ಮನು ಎಂದಲ್ಲ. ಮತ್ತೆ ಸರ್ವತ್ರ ಪರಮಸ್ಥೂಲನೇ. ಆದುದರಿಂದ ಈ ಶ್ರೀಹರಿಯನ್ನು ಪರಮನೆಂದು ಜ್ಞಾನಿಗಳು ಹೇಳುತ್ತಾರೆ. ಈ ಮಾಂಡವ್ಯಶ್ರುತಿಯಿಂದ ಸ್ಥೂಲತ್ವ ಸೂಕ್ಷ್ಮತ್ವ ವಿಶೇಷವಿಲ್ಲವೆನ್ನುವುದು ಸಿದ್ಧವಾಯಿತು. (೩) ಯಾವ ಕಾರಣದಿಂದ ಈ ಶ್ರೀಹರಿಯು ಸದಾ ಸರ್ವರೂಪಗಳಲ್ಲಿಯೂ ಉತ್ಪತ್ತಿಶೂನ್ಯನೋ ಆದಕಾರಣ ಈ ಶ್ರೀಹರಿಯಲ್ಲಿ ಯಾವ ರೂಪದಲ್ಲಿ ಆಗಲೀ ಯಾವ ಕಾಲದಲ್ಲಿಯೂ ಸ್ಥೂಲತ್ವ ಸೂಕ್ಷ್ಮತ್ವರೂಪವಾದ ಧರ್ಮವು ವ್ಯವಸ್ಥೆಯಿಂದ ಅಲ್ಲ (ಅಂದರೆ— ಕೆಲವು ರೂಪದಿಂದ ಸ್ಥೂಲನು ಕೆಲವು ರೂಪದಿಂದ ಸೂಕ್ಷ್ಮನು ಎನ್ನುವುದು ಅಲ್ಲ) ಹೀಗೆಯೇ ಘಟಾದಿಗಳಂತೆಯೇ ಉತ್ಪತ್ತಿಗಿಂತ ಮೊದಲು ಸೂಕ್ಷ್ಮನು, ಆ ಮೇಲೆ ಸ್ಥೂಲನು ಎನ್ನುವದೂ ಅಲ್ಲ. ಮತ್ತೆ ಪರಮೈಶ್ವರ್ಯಸಂಪನ್ನನಾದ ಪ್ರಯುಕ್ತ ಸರ್ವತ್ರ ಏಕರೂಪನೇ ಆಗಿರುತ್ತಾನೆ. ಎಂದೂ ಗಾರುಡಪುರಾಣದಲ್ಲಿ ಹೇಳಿದೆ. (೪) ಅವ್ಯಕ್ತತ್ವ ವ್ಯಕ್ತತ್ವಗಳು ಪರಮೇಶ್ವರನಲ್ಲಿ ಯಾವ ರೂಪದಲ್ಲಿಯೂ ಅಲ್ಲ (ಅಂದರೆ, ಕೆಲವು ರೂಪದಲ್ಲಿ ಅವ್ಯಕ್ತತ್ವವು, ಕೆಲವು ರೂಪದಲ್ಲಿ ವ್ಯಕ್ತತ್ವವು ಎಂದು ವ್ಯವಸ್ಥಿತಗಳಲ್ಲ) ಸರ್ವರೂಪಗಳಲ್ಲಿಯೂ ಈ ಪರಮೇಶ್ವರನು ಅವ್ಯಕ್ತಸ್ವರೂಪನು. ಹೇಗೆಂದರೆ— ಶ್ರೀಹರಿಯು ಇತರರಿಗೆ ಉತ್ಪತ್ತಿಯನ್ನು ಹೊಂದಿಸಿ ಕೊಡತಕ್ಕವನು, ತಾನು ಇತರರ ಶಕ್ತಿಯಿಂದ ಉತ್ಪತ್ತಿಯನ್ನು ಹೊಂದದೆ ಇರುವವನು ಎಂದು ಕೌರ್ಮಪುರಾಣದಲ್ಲಿ ಹೇಳಿದೆ. ॥ ೨೫ ॥ ೫ ॥

**ಭಾಷ್ಯ ॥ ತರ್ಹಿ ಕಿಂ ಯತ್ನೇನೇತ್ಯತ ಆಹ ॥ ೬ ॥**

ಭಾಷ್ಯಾರ್ಥ ॥ ಬ್ರಹ್ಮನು ಸರ್ವಥಾ ಅವ್ಯಕ್ತನಾದರೆ— ಭಕ್ತಿಪೂರ್ವಕವಾದ ಶ್ರವಣಾದಿರೂಪವಾದ ಪ್ರಯತ್ನದಿಂದ ಏನು ಪ್ರಯೋಜನವು? ಯಾವ ಪ್ರಯೋಜನವೂ ಇಲ್ಲ ಎಂದು ಶಂಕಾ

ಬಂದರೆ ಸೂತ್ರಕಾರರು ಪರಿಹಾರವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ ॥ ೨೬ ॥

ಸೂತ್ರಾರ್ಥ ॥ ಕರ್ಮಕಾರಕನಾದ (ವಿಷಯಭೂತನಾದ) ಬ್ರಹ್ಮನಲ್ಲಿ ಶ್ರವಣಾದಿಗಳಿಗೆ ಅಭ್ಯಾಸ ವಿದ್ದುದರಿಂದ ಅಂದರೆ, ಬ್ರಹ್ಮವಿಷಯಕ ಶ್ರವಣಾದಿಗಳಿಗೆ ಮತ್ತು ಮತ್ತು ಆವರ್ತಿಯಿದ್ದುದರಿಂದ ಬ್ರಹ್ಮನ ಅಪರೋಕ್ಷಜ್ಞಾನವು ಆಗುತ್ತದೆ. ದ್ರಷ್ಟವ್ಯಃ ಶ್ರೋತವ್ಯಃ ಇತ್ಯಾದಿ ಶ್ರುತಿಗಳಿಂದ.

**ಭಾಷ್ಯ ॥ (೧) ವಿಷಯಭೂತೇ ತಸ್ಮಿನ್ನೇವ ಶ್ರವಣಾದ್ಯಭ್ಯಾಸಾತ್ಪ್ರಕಾಶಶ್ಚ ಭವತಿ ॥ (೨) ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ (ಬೃ.೪.೪.೫.) । ಇತಿ ಶ್ರುತೇಃ ॥ ೨೬ ॥ ೭ ॥**

ಭಾಷ್ಯಾರ್ಥ ॥ (೧) ಶಾಸ್ತ್ರವಿಷಯೀಭೂತನಾದ ಅವ್ಯಕ್ತಸ್ವಭಾವವೇ ಆದ ಬ್ರಹ್ಮನಲ್ಲಿ ಬ್ರಹ್ಮವಿಷಯಕ ಶ್ರವಣ ಮನನ ನಿಧಿಧ್ಯಾಸನಗಳನ್ನು ಭಕ್ತಿಪೂರ್ವಕವಾಗಿ ಪುನಃ ಪುನಃ ಮಾಡಿದ್ದರಿಂದ ಬ್ರಹ್ಮನ ಅಪರೋಕ್ಷವು ಆಗುತ್ತದೆ. (೨) (ಶ್ರವಣಾದ್ಯಭ್ಯಾಸದಿಂದ ಅಪರೋಕ್ಷವು ಆಗುತ್ತದೆ ಎಂದು ಯಾವ ಪ್ರಮಾಣದಿಂದ ತಿಳಿಯುತ್ತ ದೆ ಎಂದರೆ) *ಆತ್ಮಾವಾ ಎನ್ನುವ ಶ್ರುತಿಯಿಂದ (ಬ್ರಹ್ಮವಿಷಯಕ ಶ್ರವಣಮನನಾ ದಿಗಳಿಂದ ಅಪರೋಕ್ಷ ಜ್ಞಾನವು ಉಂಟಾಗುತ್ತದೆಂದು ತಿಳಿಯುತ್ತದೆ.) ॥ ೨೬ ॥ ೭ ॥

**ಭಾಷ್ಯ ॥ ನಿತ್ಯಾವ್ಯಕ್ತಸ್ಯ ಕಥಂ ಪ್ರಕಾರ ಇತ್ಯತ ಉಚ್ಯತೇ ॥ ೮ ॥**

ಭಾಷ್ಯಾರ್ಥ ॥ ನಿತ್ಯದಲ್ಲಿಯೂ ಅವ್ಯಕ್ತನಾದ ಬ್ರಹ್ಮನಿಗೆ ಶ್ರವಣಾದಿಗಳಿಂದಲೂ ಪ್ರಕಾಶವು (ಅಪರೋಕ್ಷ್ಯವು) ಹೇಗೆ ಆಗುತ್ತದೆ? ನೂರಾರು ಸಾಧನಗಳಿಂದಲೂ ಮನುಷ್ಯನನ್ನು ವಾನರನನ್ನಾಗಿ ಮಾಡಲಿಕ್ಕೆ ಸಾಧ್ಯವಿಲ್ಲ) ಎಂದು ಶಂಕಾ ಬಂದರೆ, ಉತ್ತರವು ಹೇಳಲ್ಪಡುತ್ತದೆ. ॥ ೮ ॥

## ಸೂತ್ರ ॥ ಓಂ ಅತೋಽನಂತೇನ ತಥಾ ಹಿ ಲಿಂಗಮ್ ಓಂ ॥ ೨೭ ॥

ಸೂತ್ರಾರ್ಥ ॥ ಅವ್ಯಕ್ತತ್ವದಲ್ಲಿಯೂ ಪ್ರತ್ಯಕ್ಷದಲ್ಲಿಯೂ ಪ್ರಮಾಣವಿದ್ದುದರಿಂದ ಅಪರಿಚ್ಛಿನ್ನ ಶಕ್ತಿಯುಳ್ಳ ಈಶ್ವರನ ಪ್ರಸಾದದಿಂದ ಅವ್ಯಕ್ತನಾದ ಬ್ರಹ್ಮನಿಗೂ ಪ್ರಕಾಶವು ಆಗುತ್ತದೆಂದು ತಿಳಿಯುತ್ತದೆ. ಈಶಪ್ರಸಾದದಿಂದ ಸಾಧ್ಯ ಬಂಧನಿವೃತ್ತಿರೂಪವಾದ ಲಿಂಗವೂ ಪ್ರಸಾದಕಾರಣವಾದ ಪ್ರಕಾಶಕ್ಕೆ ಜ್ಞಾಪಕವಾಗಿ ಇದೆ.

**ಭಾಷ್ಯ ॥ (೧) ಉಭಯತ್ರ ಪ್ರಮಾಣಭಾವಾತ್ತತ್ಪ್ರಸಾದಾದೇವ ಪ್ರಕಾಶೋ ಭವತಿ ॥ (೨) ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವ ಮಾಯಾನಿವೃತ್ತಿಃ (ಶ್ವೇ.೧.೧೦.) । ಇತಿ ತಲ್ಲಿಂಗಾತ್ ॥ (೩) ಯುಜ್ಯತೇ ಚ ತಸ್ಯಾನಂತಶಕ್ತಿತ್ವಾತ್ ॥ (೪) ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ । ತಮೃತೇ ಪರಮಾತ್ಮಾನಂ ಕಃ**

---

* ಈ ಶ್ರುತಿಯು ಜಿಜ್ಞಾಸಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

**ಪಶ್ಯೇತಾಮಿತಂ ಪ್ರಭುಮ್ ॥ ಇತಿ (ಚ) ನಾರಾಯಣಾಧ್ಯಾತ್ಮೇ ॥ ೨೭ ॥**
**॥ ಅಧಿ. ೧೪ ॥ ೯ ॥**

**ಭಾಷ್ಯಾರ್ಥ ॥** (೧) ಸಾಧನ ಸಾಮರ್ಥ್ಯದಿಂದ ಶ್ರೀಹರಿಯ ಪ್ರತ್ಯಕ್ಷವಾಗದಿದ್ದರೂ ಪರಬ್ರಹ್ಮನ ಪ್ರಸಾದದಿಂದಲೇ ಅವ್ಯಕ್ತನಾದಾಗ್ಯೂ ಆ ಶ್ರೀಹರಿಯ ಪ್ರತ್ಯಕ್ಷವು ಆಗುತ್ತದೆ. ಅವ್ಯಕ್ತತ್ವದಲ್ಲಿಯೂ ಪ್ರತ್ಯಕ್ಷತ್ವದಲ್ಲಿಯೂ ಪ್ರಮಾಣವಿದ್ದುದರಿಂದ. (ಇದರಿಂದ ಪ್ರಸಾದ ನಿರಪೇಕ್ಷವಾದ ಪುರುಷಪ್ರಯತ್ನ ದಿಂದ ಅಪ್ರತ್ಯಕ್ಷತ್ವವೂ ಶ್ರೀಹರಿಯ ಪ್ರಸಾದ ಸಹಕೃತ ಶ್ರವಣಾದಿ ಸಾಮಗ್ರಿಗಳಿಂದ ಪ್ರತ್ಯಕ್ಷತ್ವವೂ ತಿಳಿಯಲ್ಪಡುತ್ತದೆ.) (೨) (ಪ್ರಬಲಯುಕ್ತಿಯಿಂದಲೂ ಇದನ್ನು ಸಾಧಿಸುತ್ತಾರೆ.) *ತಸ್ಯ ಎನ್ನುವ ಶ್ರುತಿಯಲ್ಲಿ ಶ್ರೀಹರಿಯ ಪ್ರಸಾದದಿಂದ ವಿಶ್ವಬಂಧಕ ಮಾಯಾ ರೂಪವಾದ ಸಂಸಾರ ನಿವೃತ್ತಿಯಾಗುತ್ತದೆ ಎಂದು ಹೇಳಲ್ಪಡುತ್ತದೆ. ಮೋಕ್ಷಕ್ಕೆ ಭಗವತ್ಪ್ರಸಾದ ಸಾಧ್ಯತ್ವಲಿಂಗವು ಭಗವತ್ಪ್ರಸಾದ ಸಾಧನವಾದ ಶ್ರೀಹರಿಯ ದರ್ಶನಕ್ಕೆ ಜ್ಞಾಪಕವಾಗುತ್ತದೆ. ತಥಾಚ ತಸ್ಯಾಭಿಧ್ಯಾನಾತ್ ದೃಷ್ಟ್ವೈವ ಎನ್ನುವ ಎರಡು ಶ್ರುತಿಗಳ ಬಲದಿಂದ ದರ್ಶನ ಸಾಧ್ಯವಾದ ಪ್ರಸಾದದಿಂದ ಮೋಕ್ಷವು, ಉಪಾಸನಾಜನಿತ ಪ್ರಸಾದದಿಂದ ದರ್ಶನವು ಹೀಗೆ ಪಾರಂಪರ್ಯವು ಸಿದ್ಧಿಸುತ್ತದೆ. (೩) ಆ ವಿಷ್ಣುವಿಗೇನೇ ಅವ್ಯಕ್ತತ್ವವೂ ಪ್ರತ್ಯಕ್ಷತ್ವವೂ ಇವೆರಡೂ ಅಪರಿಮಿತ ಅಘಟಿತಘಟಕ ಸಾಮರ್ಥ್ಯವು ಇದ್ದ ಪ್ರಯುಕ್ತ ಉಪಪನ್ನವಾಗುತ್ತದೆ. (ಇತರರಿಗೆ ಯುಕ್ತವಾಗುವುದಿಲ್ಲ) (೪) ಯದ್ಯಪಿ ಶ್ರೀಹರಿಯು ನಿಯಮೇನ ಸ್ವತಃ ಅವ್ಯಕ್ತನು ಆದಾಗ್ಯೂ ಭಕ್ತರಿಂದ ಕಾಣಲ್ಪಡುತ್ತಾನೆ. ಸ್ವರೂಪಸಾಮರ್ಥ್ಯದಿಂದಲೇ ದರ್ಶನವಿಷಯನಾಗುತ್ತಾನೆ. ಆ ಪರಮಾತ್ಮನ ಪ್ರಸಾದವಿಲ್ಲದೆ, ಅನಂತನೂ ಸಮರ್ಥನೂ ಆದ ಶ್ರೀಪರಮಾತ್ಮನನ್ನು ಯಾವನು ನೋಡುತ್ತಾನೆ ಎಂದು ನಾರಾಯಣಾಧ್ಯಾತ್ಮದಲ್ಲಿ ಹೇಳಿದೆ. ॥ ೨೭ ॥ ೯ ॥

## ಅಧಿಕರಣ ಸಾರಾಂಶ

ಭಗವದ್ಭಕ್ತಿಯು ಈಶ್ವರನಿಗೆ ಪ್ರತ್ಯಕ್ಷತ್ವವಿದ್ದರೂ ಅಪ್ರತ್ಯಕ್ಷತ್ವವಿದ್ದರೂ ಉಭಯಥಾಽಪಿ ಮೋಕ್ಷಕ್ಕೆ ಹೇತುವೋ, ಅವ್ಯಕ್ತತ್ವವಿದ್ದರೂ ಈಶ್ವರಪ್ರಸಾದದ್ವಾರಾ ಪುರುಷಾರ್ಥ ಹೇತುವೋ ಎಂದು ಸಂದೇಹವು. ಪ್ರತ್ಯಕ್ಷ ಯೋಗ್ಯತ್ವವಿದ್ದರೆ ಸ್ತಂಭಾದಿಗಳಂತೆ ಶ್ರೀಹರಿಗೆ ಭಕ್ತಿಯು ಇಲ್ಲವಾದರೂ ಪ್ರತ್ಯಕ್ಷತ್ವವು ಕೂಡುವುದು. ಕೇವಲ ಅವ್ಯಕ್ತಸ್ವಭಾವನಾದರೆ— ಧರ್ಮಾದಿಗಳಂತೆಯೇ ಭಕ್ತ್ಯಾದಿ ಸಾಧನಗಳಿಂದಲೂ ಪ್ರತ್ಯಕ್ಷತ್ವವು ಕೂಡಲಾರದು. ಅಗ್ನ್ಯಾದಿ ಭೂತಗಳಿಗೆ ಸ್ಥೂಲ ಸೂಕ್ಷ್ಮ ವಿಶೇಷದಿಂದ ಪ್ರತ್ಯಕ್ಷತ್ವ ಅಪ್ರತ್ಯಕ್ಷತ್ವವಿದ್ದಂತೆಯೇ ಮೂಲರೂಪದಿಂದ ಅವ್ಯಕ್ತನಾದವನಿಗೂ ಅವತಾರ ರೂಪದಿಂದ ಪ್ರತ್ಯಕ್ಷತ್ವವು ಕೂಡಬಹುದು. ಆದಕಾರಣ ಭಕ್ತಿಯು ವ್ಯರ್ಥವು, ಎಂದರೆ— ಅರೂಪಮಕ್ಷರಂ ಎನ್ನುವ ಶ್ರುತಿಯಿಂದ ಕೇವಲ ಅವ್ಯಕ್ತಸ್ವಭಾವನಾದವನಿಗೂ ಆತ್ಮಾ ವಾ ಇತ್ಯಾದಿ ಶ್ರುತಿಬಲದಿಂದ ಭಕ್ತಿಪೂರ್ವಕ ಶ್ರವಣಾದ್ಯಭ್ಯಾಸದಿಂದ ಅಚಿಂತ್ಯ ಶಕ್ತಿಯುಳ್ಳ ಈಶ್ವರ ಪ್ರಸಾದದಿಂದಲೇ ಬ್ರಹ್ಮಾಪರೋಕ್ಷವೂ ನಿತ್ಯಾವ್ಯಕ್ತೋಽಪಿ ಇತ್ಯಾದಿ ಸ್ಮೃತಿಯಿಂದ ತಸ್ಯಾಭಿಧ್ಯಾನಾತ್ ಎನ್ನುವ ಶ್ರುತ್ಯುಕ್ತವಾದ, ಮೋಕ್ಷಕ್ಕೆ ಜ್ಞಾನಜನ್ಯಪ್ರಸಾದಸಾಧ್ಯತ್ವಲಿಂಗದಿಂದ ಅವ್ಯಕ್ತತ್ವ ಪ್ರತ್ಯಕ್ಷತ್ವಗಳೆರಡೂ ಶ್ರುತಿದ್ವಯಾನ್ಯಥಾನುಪಪ

★ ತಸ್ಯಾಭಿಧ್ಯಾನಾತ್ ಎನ್ನುವ ಶ್ರುತಿಯು ತದಭಿಧ್ಯಾನಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಶ್ರುತಿಯಿಂದ ಸಿದ್ಧಗಳಾಗುತ್ತವೆ. ನ ತಮಾರಾಧಯಿತ್ವಾಪಿ ಎನ್ನುವ ಸ್ಮೃತಿಸಿದ್ಧವಾದ ಆರಾಧನದಿಂದ, ಅವ್ಯಕ್ತತ್ವ ಲಿಂಗದಿಂದ, ಸೂಕ್ಷ್ಮತ್ವ ಅನುಮಾನದಿಂದ, ಭಕ್ತಿಯಿಲ್ಲದೆ ಆರಾಧಿಸಿದರೆ— **ನಾಸೌ ಸೂಕ್ಷ್ಮ:** ಇತ್ಯಾದಿ ಶ್ರುತಿಯಿಂದಲೂ ಅವತಾರ ರೂಪದಿಂದಲೂ ಈಶಪ್ರತ್ಯಕ್ಷತ್ವಕ್ಕೆ ಅಭಾವವು ಅವಗತವಾಗುವುದರಿಂದ ಶ್ರವಣಾದಿ ಯುಕ್ತವಾದ ಭಕ್ತಿಯೇ ಶ್ರೀಹರಿಯ ಅಪರೋಕ್ಷಹೇತುವು. ಆದಕಾರಣ ಭಕ್ತಿಯು ಅವಶ್ಯ ಕರ್ತವ್ಯವು. ॥ ಅಧಿ. ೧೪ ॥

### ಅವ್ಯಕ್ತತ್ವಾಧಿಕರಣವು ಸಮಾಪ್ತವಾಯಿತು.

## ೧೫ ಅಹಿಕುಂಡಲಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಗುಣಾತ್ಮಕನಾದ ಶ್ರೀಹರಿಗೆ ಗುಣತ್ವವು ಸಮರ್ಥಿಸಲ್ಪಡುತ್ತದೆ—

**ಭಾಷ್ಯ ॥ (೧) ಸ್ವರೂಪೇಣಾನಂದಾದಿನಾ ಕಥಮಾನಂದಿತ್ವಾದಿರಿತಿ ॥ (೨) ಅತ ಉ(ಅತ್ರೋ)ಚ್ಯತೇ ॥ ೧ ॥**

ಭಾಷ್ಯಾರ್ಥ ॥ (೧) ಆನಂದಾದಿಗಳು ಬ್ರಹ್ಮನ ಸ್ವರೂಪವೆಂದು ಅಂಗೀಕೃತವಾಗುತ್ತದೆ. ಹೀಗೆ ಬ್ರಹ್ಮಸ್ವರೂಪವೆಂದಂಗೀಕೃತವಾದ ಆನಂದಾದಿಗಳಿಂದ (ಅಂದರೆ, ಆನಂದಾದಿಗುಣಗಳಿಗೆ ಬ್ರಹ್ಮಸ್ವರೂಪತ್ವವನ್ನು ಅಂಗೀಕರಿಸಿದ್ದರಿಂದ) ಆನಂದಿತ್ವಾದಿಗಳು ಹೇಗೆ ಕೂಡುತ್ತವೆ. (೨) ಹೀಗೆ ಶಂಕೆಯು ಬಂದರೆ ಉತ್ತರವು ಹೇಳಲ್ಪಡುತ್ತದೆ. ॥ ೧ ॥

### ಸೂತ್ರ ॥ ಓಂ ಉಭಯವ್ಯಪದೇಶಾತ್ತ್ವಹಿಕುಂಡಲವತ್ ಓಂ ॥ ೨೮ ॥

ಸೂತ್ರಾರ್ಥ ॥ ಗುಣತ್ವವನ್ನು ಗುಣಾತ್ಮಕತ್ವವನ್ನು ಎರಡನ್ನೂ ಆನಂದಂ ಬ್ರಹ್ಮಣಃ, ಏಷ ಪರಮ ಆನಂದಃ ಇತ್ಯಾದಿಗಳಲ್ಲಿ ವ್ಯಪದೇಶ ಮಾಡಿದ್ದರಿಂದ ಗುಣತ್ವವೂ ಗುಣತ್ವವೂ ಕೂಡುತ್ತದೆ. ಸರ್ಪನಿಗೆ ಕುಂಡಲಾತ್ಮಕತ್ವ, ಕುಂಡಲಿತ್ವ ಇದ್ದಂತೆಯೇ.

**ಭಾಷ್ಯ ॥ (೧) ಆನಂದಂ ಬ್ರಹ್ಮಣೋ ವಿದ್ವಾನ್ (ತೈ.೨.೪.) ॥ (೨) ಅಥೈಷ ಏವ ಪರಮ ಆನಂದಃ** (ಬೃ.೬.೨.೩೩.) **। ಇತ್ಯುಭಯವ್ಯಪದೇಶಾದಹಿ ಕುಂಡಲವದೇವ ಯುಜ್ಯತೇ । ಯಥಾऽಹಿಃ ಕುಂಡಲೀ ಕುಂಡಲಂ ಚ ॥ (೩) ತುಶಬ್ದಾತ್ಕೇವಲಶ್ರುತಿ ಗಮ್ಯತ್ವಂ ದರ್ಶಯತಿ ॥ ೨೮ ॥ ೨ ॥**

ಭಾಷ್ಯಾರ್ಥ ॥ (೧) ಆನಂದಂ ಬ್ರಹ್ಮಣಃ ಎನ್ನುವ ತೈತ್ತಿರೀಯ ಶ್ರುತಿಯಲ್ಲಿ ಆನಂದಕ್ಕೆ ಬ್ರಹ್ಮಸಂಬಂಧಿತ್ವವನ್ನು ಹೇಳಿದ್ದರಿಂದ ಬ್ರಹ್ಮನಿಗೆ ಆನಂದಿತ್ವವು ಹೇಳಲ್ಪಡುತ್ತದೆ. (೨) ಅಥೈಷ ಏವ ಎನ್ನುವ ಶ್ರುತಿಯಲ್ಲಿ ಸಾಮಾನಾಧಿಕರಣ್ಯದಿಂದ ಆನಂದಾತ್ಮಕತ್ವವು ಹೇಳಲ್ಪಡುತ್ತದೆ. ಹೀಗೆ ಶ್ರುತಿಗಳಲ್ಲಿ

ಗುಣಾತ್ಮಕತ್ವವೂ, ಗುಣತ್ವವೂ ಈ ಎರಡನ್ನು ವ್ಯಪದೇಶ ಮಾಡಿದ್ದರಿಂದ ಬ್ರಹ್ಮನಿಗೆ ಗುಣಸ್ವರೂಪತ್ವ ವಿದ್ದರೂ ಆನಂದಾದಿ ಗುಣಿತ್ವವು ಕೂಡುತ್ತದೆ. ಅಹಿಕುಂಡಲಗಳಂತೆಯೇ ಕೂಡುತ್ತದೆ. ಹೇಗೆ ಸರ್ಪವು ಕುಂಡಲಾತ್ಮಕವಾದಾಗ್ಯೂ ಕುಂಡಲೀ ಆಗುತ್ತದೋ, ಹೀಗೆಯೇ ಶ್ರೀಹರಿಯು ಆನಂದಾದಿ ರೂಪನಾದಾಗ್ಯೂ ವಿಶೇಷ ಬಲದಿಂದ ಆನಂದಾದಿಗಳುಳ್ಳವನು ಆಗುತ್ತಾನೆ. (೨.) (ಹಾಗಾದರೆ— **ಈಶ್ವರಃ ನ ಗುಣವಾನ್ ಗುಣಾತ್ಮಕತ್ವಾತ್** ಇತ್ಯಾದಿ ಯುಕ್ತಿವಿರೋಧವು ಬರುವುದು. ಎಂದರೆ) ತು ಶಬ್ದದಿಂದ ಕೇವಲ ಶ್ರುತಿಗಮ್ಯತ್ವವನ್ನು ತೋರಿಸುತ್ತಾರೆ. ಅಂದರೆ— ಶ್ರೀಹರಿಯು ಕೇವಲ ಶ್ರುತಿಗಮ್ಯನೇ ಆಗಿರುತ್ತಾನೆ. ಶುಷ್ಕತರ್ಕಗಮ್ಯನಲ್ಲ. ಆದಕಾರಣ ಇಲ್ಲಿ ಯುಕ್ತಿವಿರೋಧವಿಲ್ಲ.

**ಪೀಠಿಕೆ ॥** ದೃಷ್ಟಾಂತಾಂತರದಿಂದ ಇದನ್ನೇ ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ಓಂ ॥ ೨೯ ॥

**ಸೂತ್ರಾರ್ಥ ॥** ಪ್ರಕಾಶಾಶ್ರಯ ಸೂರ್ಯಬಿಂಬಕ್ಕೆ ಪ್ರಕಾಶತ್ವ ಪ್ರಕಾಶಿತ್ವ ಎರಡರಂತೆ, ತೇಜೋರೂಪತ್ವವಿದ್ದುದರಿಂದ ಬ್ರಹ್ಮನಿಗೆ ಗುಣರೂಪತ್ವವೂ ಗುಣಿರೂಪತ್ವವೂ ಕೂಡುತ್ತದೆ.

**ಭಾಷ್ಯ ॥ ಯಥಾಽದಿತ್ಯಸ್ಯ ಪ್ರಕಾಶತ್ವಂ ಪ್ರಕಾಶಿತ್ವಂ ಚ ಏವಂ ವಾ ದೃಷ್ಟಾಂತಃ । ತೇಜೋರೂಪತ್ವಾದ್ಬ್ರಹ್ಮಣಃ ॥ ೨೯ ॥ ೩ ॥**

**ಭಾಷ್ಯಾರ್ಥ ॥** ಹೇಗೆ ಪ್ರಕಾಶಾತ್ಮಕನಾದಾಗ್ಯೂ ಆದಿತ್ಯನಿಗೆ ವಿಶೇಷಬಲದಿಂದ ಪ್ರಕಾಶತ್ವವೂ ಪ್ರಕಾಶಿತ್ವವೂ ಇದೆಯೋ, ಹೀಗೆಯೇ ಗುಣಸ್ವರೂಪನಾದಾಗ್ಯೂ ಬ್ರಹ್ಮನಿಗೆ ವಿಶೇಷಬಲದಿಂದ ಗುಣಿತ್ವವೂ ಕೂಡುತ್ತದೆ. (ಘಟಾದಿಗಳನ್ನು ದೃಷ್ಟಾಂತೀಕರಿಸಲಿಕ್ಕೆ ಸಾಧ್ಯವಿದ್ದ ಪ್ರಯುಕ್ತ ವಿಶಿಷ್ಟ ಆದಿತ್ಯನನ್ನು ತೆಗೆದುಕೊಳ್ಳಲಿಕ್ಕೆ ಏನು ಕಾರಣವು ಎಂದರೆ) ಬ್ರಹ್ಮನಿಗೆ ತೇಜೋರೂಪತ್ವವಿದ್ದುದರಿಂದ ಈ ದೃಷ್ಟಾಂತವು ॥ ೨೯ ॥ ೨. ॥

**ಪೀಠಿಕೆ ॥** ದೃಷ್ಟಾಂತಾಂತರದಿಂದ ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪೂರ್ವವದ್ವಾ ಓಂ ॥ ೩೦ ॥

**ಸೂತ್ರಾರ್ಥ ॥** ಹೇಗೆ ಕಾಲವು ಪೂರ್ವಕಾಲದಿಂದ ಅಭಿನ್ನವಾದಾಗ್ಯೂ ಪೂರ್ವ ಎಂದು ಹೇಳಲ್ಪಡುತ್ತದೋ, ಹಾಗೆಯೇ ಗುಣಾತ್ಮಕ ಗುಣೀ ಎಂದು ಹೇಳಲ್ಪಡುತ್ತಾನೆ.

**ಭಾಷ್ಯ ॥ (೧) ಯಥೈಕ ಏವ ಕಾಲಃ ಪೂರ್ವ ಇತ್ಯವಚ್ಛೇದಕೋಽವಚ್ಛೇದ್ಯಶ್ಚ ಭವತಿ । ಅತಿಸೂಕ್ಷ್ಮತ್ವಾಪೇಕ್ಷಯೈಷ ದೃಷ್ಟಾಂತಃ । ಸ್ಥೂಲಮತೀನಾಂ ಚ ಪ್ರದರ್ಶನಾರ್ಥ ಮಹಿಕುಂಡಲದೃಷ್ಟಾಂತಃ ॥ (೨) ಪ್ರಕಾಶವತ್ಕಾಲವದ್ವಾ ಯಥಾಂಗೇ ಶಯನಾದಿಕಮ್ । ಬ್ರಹ್ಮಣಶ್ಚೈವ ಮುಕ್ತಾನಾಮಾನಂದೋ ಭಿನ್ನ ಏವ ತು ॥ ಇತಿ ನಾರಾಯಣಾಧ್ಯಾತ್ಮೇ ॥ (೩) ಆನಂದೇನ ತ್ವಭಿನ್ನೇನ ವ್ಯವಹಾರಃ ಪ್ರಕಾಶವತ್ ।**

**ಕಾಲವದ್ವಾ ಯಥಾ ಕಾಲಃ ಸ್ವಾವಚ್ಛೇದಕತಾಂ ವ್ರಜೇತ್ ॥ ಇತಿ ಬ್ರಾಹ್ಮೇ ॥ ೩೦ ॥ ॥ ೪ ॥**

ಭಾಷ್ಯಾರ್ಥ ॥ (೧) ಹೇಗೆ **ಪೂರ್ವಕಾಲಃ** ಎನ್ನುವ ಪ್ರಯೋಗದಲ್ಲಿ ಪೂರ್ವಕಾಲದಿಂದ ಅಭಿನ್ನವಾದಾಗ್ಯೂ **ಕಾಲಃ ಪೂರ್ವಃ** ಎಂದು ವಿಶೇಷಣವಾಗುತ್ತದೆ. **ಕಾಲಃ** ಎಂದು ವಿಶೇಷ್ಯವೂ ಆಗುತ್ತದೆ. ಬ್ರಹ್ಮನಿಗೆ ಅತಿಸೂಕ್ಷ್ಮತ್ವವನ್ನು ಇಟ್ಟುಕೊಂಡು ಈ ಕಾಲ ದೃಷ್ಟಾಂತವು. ಸ್ಥೂಲಮತಿಗಳಿಗೆ (ಒಂದರಲ್ಲಿಯೇ ವಿಶೇಷಣ ವಿಶೇಷ್ಯಭಾವವನ್ನು ತೋರಿಸುವುದಕ್ಕಾಗಿ) ಅಹಿಕುಂಡಲ ದೃಷ್ಟಾಂತವು. (೨) ಆದಿತ್ಯಮಂಡಲಪ್ರಕಾಶದಂತೆ, ಸಾಕ್ಷಿಸಿದ್ಧ ಪೂರ್ವೋತ್ತರಾದಿ ಕಾಲಾವಯವದಂತೆ, **ಅಂಗೇ, ಶಯನಃ** ಎಂದು ಪ್ರಯೋಗದಲ್ಲಿ ಶಯನವು ಅಂಗದಿಂದ ಅಭಿನ್ನವಾದಾಗ್ಯೂ ಹೇಗೆ ಅಂಗವಿಶೇಷಣಕವಾಗುತ್ತದೋ, ಅಂಗವು ಶಯನವಿಶೇಷಣವು ಆಗುತ್ತದೋ ಹೀಗೆಯೇ ಬ್ರಹ್ಮನಿಂದಲೂ ಮುಕ್ತರಿಂದಲೂ ಆನಂದವು ಅಭಿನ್ನವೇ ಆಗಿದೆ. ಆದಾಗ್ಯೂ ಬ್ರಹ್ಮನದ್ದು ಮುಕ್ತರದ್ದು ಆನಂದವು, ಎಂದು ತತ್ಸಂಬಂಧಿಯಾಗಿ ಹೇಳಲ್ಪಡುತ್ತದೆ. (ಅಭಿನ್ನವೇ ಆದ ಆನಂದದಿಂದ ಬ್ರಹ್ಮನು ಆನಂದವುಳ್ಳವನು ಎಂದು ವಿಶೇಷಣ ವಿಶೇಷ್ಯಭಾವದಿಂದ ವ್ಯವಹಾರವು ವಿಶೇಷ ಬಲದಿಂದ ಆಗುತ್ತದೆ.) (೩) ಹೇಗೆ ತನ್ನಿಂದ ಅಭಿನ್ನವೇ ಆದ ಆನಂದದಿಂದ ಪ್ರಕಾಶದಂತೆಯೂ ಕಾಲದಂತೆಯೂ ವಿಶೇಷಣ ವಿಶೇಷ್ಯಭಾವದಿಂದ ವ್ಯಪದೇಶವು ಆಗುತ್ತದೆ. ಹೇಗೆ ಕಾಲವು ಸ್ವವಿಶೇಷಣಕತ್ವವನ್ನು ಹೊಂದುತ್ತದೆ, ಹಾಗೆಯೇ, (ಅಂದರೆ, ತನ್ನಿಂದ ಅಭಿನ್ನವಾದ ಪ್ರಕಾಶದಿಂದ **ಪ್ರಕಾಶೀ ಸೂರ್ಯಃ** ಎನ್ನುವ ವ್ಯವಹಾರವೋ, ಹಾಗೆ ತನ್ನಿಂದ ಅಭಿನ್ನವೇ ಆದ ಪೂರ್ವಕಾಲದಿಂದ **ಪೂರ್ವಃ** ಕಾಲಃ ಎಂದು ವಿಶೇಷಿತವಾಗುತ್ತದೋ, ಹಾಗೆಯೇ) ವಿಶೇಷಣ ವಿಶೇಷ್ಯಭಾವವು ಉಪಪನ್ನವಾಗುತ್ತದೆ. ॥ ೩೦ ॥ ೪ ॥

## ಸೂತ್ರ ॥ ಓಂ ಪ್ರತಿಷೇಧಾಚ್ಚ ಓಂ ॥ ೩೧ ॥

**ಸೂತ್ರಾರ್ಥ** ॥ ನೇಹ ನಾನಾಸ್ತಿ ಇತ್ಯಾದಿ ಶ್ರುತಿಗಳಲ್ಲಿ ಗುಣಗುಣ್ಯಾದಿ ಭೇದವನ್ನು ನಿಷೇಧಮಾಡಿದ್ದರಿಂದಲೂ ಭಗವದ್ಗುಣಾದಿಗಳಿಂದ ಶ್ರೀಹರಿಗೆ ಭೇದವಿಲ್ಲ.

**ಭಾಷ್ಯ ॥ ಏಕಮೇವಾದ್ವಿತೀಯಂ (ಛಾ.೬.೨.೧.) । ನೇಹ ನಾನಾಸ್ತಿ ಕಿಂಚನ (ಕಠ.೨.೪.೧೧.) । ಇತಿ ಭೇದಸ್ಯ ॥ ೩೧ ॥ ಅಧಿ.೧೫ ॥ ೫ ॥**

ಭಾಷ್ಯಾರ್ಥ ॥ ಬ್ರಹ್ಮನು ತನ್ನ ಅವಯವ ಗುಣಕ್ರಿಯಾದಿಗಳಿಂದ ಅಭಿನ್ನನೇ. (ಘಟಾದಿಗಳಂತೆ ಭಿನ್ನಾಭಿನ್ನನಲ್ಲ) ಸಮಾಧಿಕ ವರ್ಜಿತನು. ಬ್ರಹ್ಮನಲ್ಲಿ ಗುಣ ಗುಣ್ಯಾದಿಗಳು ಭಿನ್ನವಾದುದು ಇಲ್ಲ ಎಂದು ಭೇದವನ್ನು ಪ್ರತಿಷೇಧ ಮಾಡಿದ್ದರಿಂದ ॥ ೩೧ ॥ ೫ ॥

### ಅಧಿಕರಣ ಸಾರಾಂಶ

ಗುಣಾತ್ಮಕನಾದ ಶ್ರೀಹರಿಗೆ ಗುಣತ್ವವು ಸಂಭಾವನಾ ಪ್ರಮಾಣಗಳಿಂದ ರಹಿತವಾಗಿ ಯುಕ್ತಿವಿರುದ್ಧವೋ, ಅಲ್ಲವೋ ಎಂದು ಸಂದೇಹವು. ತದಾತ್ಮಕನಾದವನಿಗೆ ತದ್ವತ್ತ್ವವು ಎಲ್ಲಿಯೂ ದೃಷ್ಟವಾಗದೆ ಇದ್ದ ಪ್ರಯುಕ್ತ ಗುಣರೂಪನಾದ ಶ್ರೀಹರಿಗೆ ಗುಣತ್ವವು ಅಸಂಭಾವಿತವು.

ಪ್ರಮಾಣರಹಿತವಾಗಿದೆ. **ಹರಿಃ ನ ಗುಣವಾನ್ ಗುಣಾತ್ಮಕತ್ವಾತ್** ಇತ್ಯಾದಿ ಯುಕ್ತಿವಿರುದ್ಧವೂ ಆಗಿದೆ, ಎಂದರೆ, ಕುಂಡಲಾತ್ಮಕನಾದ ಸರ್ಪನಿಗೆ ವಿಶೇಷ ಬಲದಿಂದ ಕುಂಡಲೀ ಎನ್ನುವ ವ್ಯವಹಾರವಿದ್ದಂತೆಯೇ, ಪ್ರಕಾಶಾತ್ಮಕನಾದ ಆದಿತ್ಯನಿಗೆ **ಪ್ರಕಾಶೀ** ಎನ್ನುವ ವ್ಯವಹಾರದಂತೆ, ಕಾಲವು ಪೂರ್ವಕಾಲದಿಂದ ಅಭಿನ್ನವಾದಾಗ್ಯೂ **ಪೂರ್ವಃ ಕಾಲಃ** ಎಂದು ವಿಶೇಷ ವಿಶೇಷ್ಯ ಭಾವವ್ಯವಹಾರದಂತೆ ಗುಣಾತ್ಮಕನಾದ ಶ್ರೀಹರಿಗೆ ಗುಣಿತ್ವವು ಭೇದಪ್ರತಿನಿಧಿ ವಿಶೇಷ ಬಲದಿಂದ ಅಂಗೀಕರಿಸತಕ್ಕುದು. ಮತ್ತು **ಆನಂದಂ ಬ್ರಹ್ಮಣೋ ವಿದ್ವಾನ್, ಅಥೈಷ ಪರಮಾನಂದಃ** ಎಂದು ಗುಣತ್ವ, ಗುಣಿತ್ವ, ರೂಪ ಉಭಯ ವ್ಯಪದೇಶವೂ ಇದೆ. ॥ ಅಧಿ. ೧೫ ॥

**ಅಹಿಕುಂಡಲಾಧಿಕರಣವು ಸಮಾಪ್ತವಾಯಿತು**

## ೧೬ ಪರಮತಾಧಿಕರಣವು

**ಪೀಠಿಕೆ ॥** ಈಶ್ವರಗುಣಗಳಿಗೆ ಈ ಅಧಿಕರಣದಲ್ಲಿ ಲೋಕವಿಲಕ್ಷಣತ್ವವು ಸಮರ್ಥಿಸಲ್ಪಡುತ್ತದೆ. ಭಗವದ್ಗುಣ ಸಮುದಾಯವು ಆನಂದಾದಿ ಶಬ್ದವಾಚ್ಯವಾದುದರಿಂದ ಲೌಕಿಕ ಆನಂದಾದಿ ಸದೃಶವೇ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ ॥ ೩೨ ॥

**ಸೂತ್ರಾರ್ಥ ॥** ಆನಂದಾದಿ ಗುಣಸಮುದಾಯವು ಲೌಕಿಕಾನಂದಾದಿಗಳಿಂದ ವಿಲಕ್ಷಣವು, ಏಷಸೇತುಃ ಎಂದು ಸೇತುತ್ವವ್ಯಪದೇಶದಿಂದಲೂ, ಯತೋ ವಾಚಃ ಎಂದು ಪೂರ್ಣತ್ವವನ್ನು ಹೇಳಿದ್ದರಿಂದಲೂ, ಏತಸ್ಯೈವಾನಂದಸ್ಯ, ಎಂದು ಬಿಂಬ ಪ್ರತಿಬಿಂಬಭಾವ ಸಂಬಂಧವನ್ನು ಹೇಳಿದ್ದರಿಂದಲೂ ಅನ್ಯಜ್ಞಾನಂ ತು ಎಂದು ಭೇದವನ್ನು ಹೇಳಿದ್ದರಿಂದಲೂ.

**ಭಾಷ್ಯ ॥ (೧) ನ ಚಾನಂದಾದಿತ್ವಾಲ್ಲೋಕಾನಂದಾದಿವತ್ ॥ (೨) ಏಷ ಸೇತುರ್ವಿಧೃತಿಃ** (ಛಾ.೮.೪.೧.) **॥ (೩) ಯ ಏಷ ಆನಂದಃ ಪರಸ್ಯೈಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ** (ಬೃ.೬.೪.೨೩.) **। ಇತಿ ಸೇತುತ್ವಂ ಹ್ಯುಚ್ಯತೇ ॥ (೪) ಯತೋ ವಾಚೋ ನಿವರ್ತಂತೇ** (ತೈ.೨.೪.) **। ಇತ್ಯುನ್ಮಾನತ್ವಮ್ ॥ (೫) ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ** (ಬೃ.೬. ೩. ೩೨.) **। ಇತಿ ಸಂಬಂಧಃ ॥ (೬) ಅನ್ಯಜ್ಞಾನಂ ತು ಜೀವಾನಾಮನ್ಯಜ್ಞಾನಂ ಪರಸ್ಯ ಚ । ನಿತ್ಯಾನಂದಾವ್ಯಯಂ ಪೂರ್ಣಂ ಪರಜ್ಞಾನಂ ವಿಧೀಯತೇ ॥ ಇತಿ ಭೇದಃ ॥ (೭) ಅತೋಽಲೌಕಿಕತ್ವಾತ್ಪರಮೇವ ಬ್ರಹ್ಮಾನಂದಾದಿಕಮ್ ॥ ೩೨ ॥ ೧ ॥**

ಭಾಷ್ಯಾರ್ಥ ॥ (೧) ಬ್ರಹ್ಮಾನಂದಾದಿಗಳು ಆನಂದಾದಿ ಶಬ್ದವಾಚ್ಯವಾದ ಪ್ರಯುಕ್ತ ಲೌಕಿಕ

ಆನಂದಾದಿಗಳಂತೆಯೇ (ಲೌಕಿಕವೇ) ಎಂದು ತಿಳಿಯಕೂಡದು. ಮತ್ತೆ ಲೌಕಿಕಾನಂದಾದಿಗಳಿಂದ ವಿಲಕ್ಷಣವೇ. (೨) (ಯಾವುದಿದು ಪರಮಾತ್ಮನ ಆನಂದವೋ) ಇದು ವಿಧಾರಣ ಸಮರ್ಥವು. ಸರ್ವಾಶ್ರಯವು. (೩.) ಬ್ರಾಹ್ಮಣಸ್ಯ = ವೇದಗಮ್ಯನಾದ ಸರ್ವೋತ್ತಮನಾದ ಶ್ರೀಹರಿಯ ಯಾವುದು ಆನಂದವೋ, ಯಾವುದು ಸರ್ವಾಶ್ರಯಾನಂದಾದಿ ಗುಣಕತ್ವಾದಿ ಮಹಿಮೆಯೋ, ಅದು ನಿತ್ಯವು. (ಆಗಂತುಕವಲ್ಲ) ಹೀಗೆ ಭಗವದಾನಂದಕ್ಕೆ ಸೇತುತ್ವವು ಹೇಳಲ್ಪಡುತ್ತದೆ. (೪) ★**ಯತೋ ವಾಚಃ** ಎನ್ನುವ ಶ್ರುತಿಯಿಂದ ಭಗವದಾನಂದಾದಿಗಳಿಗೆ ಪೂರ್ಣತ್ವವು ಹೇಳಲ್ಪಡುತ್ತದೆ. (೫) ಭಗವತ್ಸಂಬಂಧಿ ಯೇ ಆದ ಆನಂದದ ಅಂಶವನ್ನು (ಪ್ರತಿಬಿಂಬರೂಪವನ್ನು) ರಮಾಬ್ರಹ್ಮಾದಿಭೂತಗಳು ಅನುಭವಿಸುತ್ತವೆ, ಎಂದು ಭಗವದಾನಂದ ಇತರಾನಂದಗಳಿಗೆ ಬಿಂಬಪ್ರತಿಬಿಂಬಭಾವರೂಪವಾದ ಸಂಬಂಧವು ಹೇಳಲ್ಪಡುತ್ತದೆ. (೬) ಜೀವರ ಜ್ಞಾನವು ಭಗವಜ್ಞಾನದಿಂದ ವಿಲಕ್ಷಣವು. ಪರಮಾತ್ಮನ ಜ್ಞಾನವು ಜೀವರ ಜ್ಞಾನದಿಂದ ವಿಲಕ್ಷಣವು. ನಿಯಮೇನ ಆನಂದರೂಪವು ಅಪಚಯರಹಿತವು, ನಿರವಧಿಕವು, ಇಂತಹ ಪರಜ್ಞಾನವು ವಿಧಿಸಲ್ಪಡುತ್ತದೆ. (ಜೀವಜ್ಞಾನವಾದರೂ ಇಂತಹುದು ಅಲ್ಲ) ಹೀಗೆ ಜೀವಜ್ಞಾನ ಪರಜ್ಞಾನಗಳಿಗೆ ವೈಲಕ್ಷಣ್ಯವು ಹೇಳಲ್ಪಡುತ್ತದೆ. (೭) ಆದಕಾರಣ ಅಲೌಕಿಕವಾದುದರಿಂದ ಬ್ರಹ್ಮಾನಂದಿಗಳು ವಿಲಕ್ಷಣವೇ ॥ ೩.೨ ॥ ೧ ॥

**ಪೀಠಿಕೆ ॥** ಹೇತ್ವಂತರದಿಂದ ಆನಂದಾದಿಗಳಿಗೆ ಅಲೌಕಿಕತ್ವವನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ದರ್ಶನಾತ್ತು ಓಂ ॥ ೩೩ ॥

**ಸೂತ್ರಾರ್ಥ** ॥ ಇತರರ ಆನಂದಾದಿಗಳು ಮನೋವಾಗ್ಗೋಚರಗಳಾಗಿವೆ. ಭಗವದಾನಂದಾದಿಗಳು ಮನೋವಾಗ್ಗೋಚರಗಳಲ್ಲ, ಆದಕಾರಣ ಈಶ್ವರನ ಗುಣಗಳ ಸಮುದಾಯವು ವಿಲಕ್ಷಣವು.

**ಭಾಷ್ಯ ॥ (೧) ದರ್ಶನಾದೇವ ಚಾನ್ಯಾನದಂದಾದೀನಾಮ್ ॥ (೨) ಅದೃಷ್ಟಮವ್ಯವಹಾರ್ಯಮವ್ಯಪದೇಶ್ಯಂ ಸುಖಂ ಜ್ಞಾನಮೋಜೋ ಬಲಮಿತಿ ಬ್ರಹ್ಮಣಸ್ತಸ್ಮಾದ್ಬ್ರಹ್ಮೇತ್ಯಾಚಕ್ಷತೇ ತಸ್ಮಾದ್ಬ್ರಹ್ಮೇತ್ಯಾಚಕ್ಷತೇ । ಇತಿ ಹಿ ಕೌಂಡಿನ್ಯಶ್ರುತಿಃ ॥ ೩೩ ॥ ೨ ॥**

**ಭಾಷ್ಯಾರ್ಥ** ॥ (೧) ಇತರರ ಆನಂದಾದಿಗಳೂ (ವ್ಯವಹಾರ್ಯಗಳೂ) ಮನೋವಾಗ್ಗೋಚರಗಳೂ ಆಗಿರುವುದರಿಂದಲೇ (ಈಶ್ವರನ ಆನಂದಾದಿಗಳು ಚತುರ್ಮುಖಾದ್ಯಾನಂದಾದಿಗಳಿಂದ ವಿಲಕ್ಷಣವು. (೨) (ಈಶ್ವರಾನಂದಾದಿಗಳಿಗೆ ಅಲೌಕಿಕತ್ವವು ಹೇಗೆ ಎಂದರೆ) ಬ್ರಹ್ಮನ ಸುಖವು, ಜ್ಞಾನವು, ಸಾಮರ್ಥ್ಯವು ಬಲವು, ಇದು ದರ್ಶನಾಗೋಚರವು, ಮಾತಿನಿಂದ ವ್ಯವಹರಿಸಲಿಕ್ಕೆ ಅಶಕ್ಯವು, ವಿವಿಕ್ತವಾಗಿ ನಿರೂಪಿಸಲಿಕ್ಕೆ ಅಶಕ್ಯವು, ಆದಕಾರಣ ಆತನನ್ನು ಬ್ರಹ್ಮ ಎಂದು ಹೇಳುತ್ತಾರೆ, ಎಂದು ಕೌಂಡಿನ್ಯಶ್ರುತಿಯು. ॥ ೩೩ ॥ ೨ ॥

---

★ ಇದು ಈಕ್ಷತ್ಯಧಿಕರಣದಲ್ಲಿ ವ್ಯಾಖ್ಯಾತವಾಗಿದೆ

ಪೀಠಿಕೆ ॥ ಆನಂದಾದಿಗಳು ಅಲೌಕಿಕಗಳಾಗಿರುವುದರಿಂದ ಶ್ರುತಿಪುರಾಣಾದಿಗಳಲ್ಲಿ ಆನಂದಾದಿ ಪದಪ್ರಯೋಗವು ಹೇಗೆ ಕೂಡುತ್ತದೆ, ಎಂದಾಶಂಕಿಸಿಕೊಂಡು ಅದರ ಪರಿಹಾರಕ್ಕಾಗಿ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

**ಭಾಷ್ಯ ॥ ಅಪ್ರಸಿದ್ಧಸ್ಯ ಕಥಮಾನಂದ ಇತ್ಯಾದಿವ್ಯಪದೇಶ ಇತ್ಯತೋ ವಕ್ತಿ ॥ ೩ ॥**

ಭಾಷ್ಯಾರ್ಥ ॥ ಅಪ್ರಸಿದ್ಧವಾದ ಬ್ರಹ್ಮಾನಂದಾದಿಗಳಿಗೆ ಆನಂದಾದಿ ವ್ಯಪದೇಶವು (ಆನಂದಾದಿ ಶಬ್ದವ್ಯವಹಾರವು.) ಯಾವ ಉಪಾಯದಿಂದ ಹೇಗೆ ಕೂಡುತ್ತದೆ, ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ—

## ಸೂತ್ರ ॥ ಓಂ ಬುದ್ಧ್ಯರ್ಥಃ ಪಾದವತ್ ಓಂ ॥ ೩೪ ॥

ಸೂತ್ರಾರ್ಥ ॥ ಹೇಗೆ ಲೌಕಿಕವಾದ ವಿಲಕ್ಷಣಗಳಾದ ಭೂತಗಳಲ್ಲಿಯೂ ಪಾದೋಽಸ್ಯ ವಿಶ್ವಾಭೂತಾನಿ ಎಂದು ಪಾದಪದ ಪ್ರಯೋಗವು ಭೂತಗಳಿಗೆ ಈಶಾಂಶತ್ವಜ್ಞಾಪನಕ್ಕಾಗಿಯೋ, ಹಾಗೆಯೇ ಅಲೌಕಿಕವಾದ ಆನಂದದಲ್ಲಿಯೂ ಆನಂದಾದಿ ಪದಪ್ರಯೋಗವು ಅನುಕೂಲ ವೇದ್ಯತ್ವಾದಿರೂಪವಾದ ಅರ್ಥಾದಿಗಳನ್ನು ತಿಳಿಸತಕ್ಕುದು.

**ಭಾಷ್ಯ ॥ (೧) ಜೀವೇಶ್ವರಸಂಬಂಧಜ್ಞಾಪನಾರ್ಥಮಪ್ರಸಿದ್ಧೋಽಪಿ ಪಾದೋ ಯಥಾ ಪಾದಶಬ್ದೇನ ವ್ಯಪದಿಶ್ಯತೇ ಪಾದೋಽಸ್ಯ ವಿಶ್ವಾಭೂತಾನಿ (ಋ.೧೦. ೯೦. ೩.) । ಇತಿ ತಥಾ ॥ (೨) ಅಲೌಕಿಕೋಽಪಿ ಜ್ಞಾನಾದಿಸ್ತಚ್ಛಬ್ದೇನೈ (ಬ್ದೈರೇ) ವ ಭಣ್ಯತೇ । ಜ್ಞಾಪನಾರ್ಥಾಯ ಲೋಕಸ್ಯ ಯಥಾ ರಾಜೇವ ದೇವರಾಟ್ ॥ ಇತಿ ಚ ಪಾದ್ಮೇ ॥ ೩೪ ॥ ಅಧಿ. ೧೬ ॥ ೪ ॥**

ಭಾಷ್ಯಾರ್ಥ ॥ (೧) ಪ್ರಸಿದ್ಧ ಚರಣವಿಲಕ್ಷಣವೂ ಶ್ವೇತದ್ವೀಪ ಮೊದಲಾದ ಮೂರು ಸ್ಥಾನಗಳಲ್ಲಿರತಕ್ಕ ನಾರಾಯಣ ವಾಸುದೇವ ವೈಕುಂಠಾಖ್ಯ ಮೂರ್ತಿತ್ರಯದಂತೆ ಸ್ವರೂಪಾಂಶತ್ವವು ಇಲ್ಲದಿರುವುದರಿಂದ ಅದರಿಂದ ವಿಲಕ್ಷಣವಾದಾಗ್ಯೂ ಭೂತಾಖ್ಯಪಾದವು ಪಾದೋಽಸ್ಯ ವಿಶ್ವಾ ಎನ್ನುವ ಮಂತ್ರದಲ್ಲಿ ಪಾದಶಬ್ದದಿಂದ ಹೇಳಲ್ಪಡುತ್ತದೋ, ಜೀವೇಶ್ವರ ಸಂಬಂಧವನ್ನು ತಿಳಿಸಲಿಕ್ಕೆ ಅಂದರೆ— ಹೇಗೆ ಪರಮಪುರುಷನ ಪಾದಭೂತರಾದ ನಾರಾಯಣಾದಿಗಳಿಗೆ ಪರಮಪುರುಷರ ಅಂಶತ್ವವೋ, ಹಾಗೆಯೇ ಭೂತಗಳಿಗೂ ಶ್ರೀಹರಿಯ ಅಂಶತ್ವವು ಎಂದು ಜೀವೇಶ್ವರರಿಗೆ ಅಂಶಅಂಶಿತ್ವರೂಪವಾದ ಸಂಬಂಧವನ್ನು ತಿಳಿಸುವುದಕ್ಕಾಗಿ. ಹೇಗೆ ಲೋಕ ವಿಲಕ್ಷಣಗಳಾದಾಗ್ಯೂ ಆನಂದಾದಿಗಳು ಆನಂದಾದಿ ಶಬ್ದಗಳಿಂದ ಹೇಳಲ್ಪಡುತ್ತವೋ, ಹೇಗ ಲೌಕಿಕ ಆನಂದಾದಿಗಳಿಗೆ ಇದು ಅನುಕೂಲವೇ. ಅನುಕೂಲವೇದ್ಯತ್ವಾದಿಗಳೋ, ಹಾಗೆಯೇ ಭಗವದಾನಂದಾದಿಗಳಿಗೂ ಇದೆ ಎಂದು ತಿಳಿಸುವುದಕ್ಕಾಗಿ. (೨) ದೇವೇಂದ್ರನು ಪ್ರಸಿದ್ಧರಾಜರಕ್ಕಿಂತ ವಿಲಕ್ಷಣನಾದಾಗ್ಯೂ ರಾಜನಂತೆಯೇ ಇದ್ದಾನೆ. ಅಂದರೆ, ರಾಜಾ ಎನ್ನುವ ಶಬ್ದದಿಂದ ವ್ಯವಹರಿಸಲ್ಪಡುತ್ತಾನೋ, ಹಾಗೆಯೇ ಅಲೌಕಿಕವಾದ ಜ್ಞಾನಾದಿಗಳೂ ಲೋಕದಲ್ಲಿದ್ದ ಜನರಿಗೆ ಬೋಧಕತ್ವ, ಸರ್ವವ್ಯವಹಾರ ಹೇತುತ್ವ, ಅನುಕೂಲ ವೇದನೀಯತ್ವ

ಮೊದಲಾದವುಗಳನ್ನು ತಿಳಿಸಿಕೊಡುವುದುಕ್ಕಾಗಿ ಜ್ಞಾನಂ ಇತ್ಯಾದಿರೂಪಗಳಾದ ಅಲೌಕಿಕ ಶಬ್ದಗಳಿಂದ ಹೇಳಲ್ಪಡುತ್ತದೆ, ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ॥ ೩೪ ॥ ೪ ॥

## ಅಧಿಕರಣ ಸಾರಾಂಶ

ಈಶ್ವರನ ಗುಣಸಮುದಾಯವು ಲೌಕಿಕವೋ, ಅಲೌಕಿಕವೋ ಎಂದು ಸಂದೇಹವು. ಘಟವಿಲಕ್ಷಣದಲ್ಲಿ ಘಟಪದವಾಚ್ಯತ್ವವು ಕಾಣದಿರುವುದರಿಂದ ಭಗವದಾನಂದಾದಿಗಳಲ್ಲಿ ಆನಂದಂ ಬ್ರಹ್ಮಣಃ ಇತ್ಯಾದಿಗಳಲ್ಲಿ ಆನಂದಾದಿಪದಪ್ರಯೋಗವಿದ್ದುದರಿಂದ ಅಲೌಕಿಕ ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಭಗವದ್ಗುಣಸಮುದಾಯವು ಲೌಕಿಕವೇ, ಎಂದರೆ— 1 ಏಷ ಸೇತುರ್ವಿಧೃತಿಃ 2 ಯತೋವಾಚಃ 3 ವಿತಸ್ಯೈ ವಾನಂದಸ್ಯ, 4 ಅನ್ಯಜ್ಞಾನಂ, 5 ಅದೃಷ್ಟಮವ್ಯವಹಾರ್ಯಂ ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮಾನಂದಾದಿಗುಣಗಳಲ್ಲಿ ಲೌಕಿಕಾನಂದಾದಿ ಗುಣಗಳಲ್ಲಿ ಸರ್ವಥಾ ಇಲ್ಲದಿರುವ ಸೇತುತ್ವ, ಪೂರ್ಣತ್ವ, ಬಿಂಬತ್ವ, ಅದೃಷ್ಟತ್ವಾದಿ ಧರ್ಮಗಳನ್ನು ಹೇಳಿದ್ದರಿಂದಲೂ ಅಲೌಕಿಕೋಽಪಿ ಜ್ಞಾನಾದಿಃ ಇತ್ಯಾದಿ ಸ್ಮೃತಿಗಳಿಂದಲೂ ಈಶ್ವರ ಗುಣಸಮುದಾಯವು ಅಲೌಕಿಕವೇ. ॥ ಅಧಿ. ೧೬ ॥

**ಪರಮತಾಧಿಕರಣವು ಸಮಾಪ್ತವಾಯಿತು.**

# ೧೭ ಸ್ಥಾನವಿಶೇಷಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಬ್ರಹ್ಮಾದಿಜೀವರ ಆನಂದಾದಿಗಳಿಗೆ ಭಗವದಾನಂದಾದಿ ಪ್ರತಿ ಬಿಂಬತ್ವವನ್ನು ಸಮರ್ಥಿಸುತ್ತಾರೆ—

### ಭಾಷ್ಯ ॥ ಪರಾನಂದಮಾತ್ರಾತ್ವೇ ಕಥಂ ಬ್ರಹ್ಮಾದ್ಯಾನಂದಾದೀನಾಂ ವಿಶೇಷ ಇತ್ಯತ ಉ(ತ್ರೋ)ಚ್ಯತೇ ॥ ೧ ॥

**ಭಾಷ್ಯಾರ್ಥ** ॥ ಮುಕ್ತಬ್ರಹ್ಮಾದಿಗಳ ಆನಂದಾದಿಗುಣಗಳಿಗೆ ಭಗವದಾನಂದಾದಿ ಪ್ರತಿಬಿಂಬತ್ವ ವನ್ನು ಅಂಗೀಕರಿಸಿದರೆ ಶುದ್ಧ ಚೈತನ್ಯರೂಪದಿಂದ ಇದ್ದ ಪ್ರಯುಕ್ತ ಪರಸ್ಪರವಾಗಿ ವೈಚಿತ್ರ್ಯವು ಹೇಗೆ ಕೂಡುತ್ತದೆ. (ಬಿಂಬವೈಚಿತ್ರ್ಯವಿಲ್ಲದೆ ಪ್ರತಿಬಿಂಬದಲ್ಲಿ ವೈಚಿತ್ರ್ಯವು ಕೂಡಲಾರದು) ಎಂದು ಶಂಕಾ ಬಂದರೆ, ಉತ್ತರವು ಹೇಳಲ್ಪಡುತ್ತದೆ.

**ವಿಶೇಷಾಂಶ** ॥ ಸೃತಿಗಾನಾಂ ಸೃಷ್ಟ್ಯಾದಿನಾ ವೈಷಮ್ಯಕಾಲುಷ್ಯಾದೇರ್ವೈಚಿತ್ರ್ಯಮುಪಪದ್ಯತೇ । ನ ಮುಕ್ತಬ್ರಹ್ಮಾದ್ಯಾನಂದಾದೀನಾಂ ವಿರುದ್ಧರೂಪಾಣಾಂ ತದುಪಪತ್ತಿಃ ಎಂದು ತತ್ತ್ವಪ್ರದೀಪದಲ್ಲಿ ಹೇಳಿದೆ.

### ಸೂತ್ರ ॥ ಓಂ ಸ್ಥಾನವಿಶೇಷಾತ್ಪ್ರಕಾಶಾದಿವತ್ ಓಂ ॥ ೩೫ ॥

**ಸೂತ್ರಾರ್ಥ** ॥ ಸೂರ್ಯಾದಿಪ್ರತಿಬಿಂಬದಲ್ಲಿ ಸೂರ್ಯಕಾಂತಾದಿ ಸ್ಥಾನವಿಶೇಷದಿಂದ ಸ್ಥಾನಗುಣದಿಂದ ಅಗ್ನಿಜನಕತ್ವಾದಿ ವೈಚಿತ್ರ್ಯವು ಇದ್ದಂತೆಯೇ ಬ್ರಹ್ಮಾದಿಸ್ಥಾನಗಳ ಅನಾದಿಭಕ್ತ್ಯಾದಿಗುಣ

ವಿಶೇಷದಿಂದ ಪ್ರತಿಬಿಂಬದಲ್ಲಿ ವೈಚಿತ್ರ್ಯವು ಕೂಡುವುದರಿಂದ ಬ್ರಹ್ಮಾದಿಗಳ ಆನಂದಾದಿಗಳು ಈಶ್ವರನ ಆನಂದಾದಿಗಳಿಗೆ ಪ್ರತಿಬಿಂಬವು.

**ಭಾಷ್ಯ ॥ (೧) ಯಥಾ ಆದಿತ್ಯಸ್ಯ ದರ್ಪಣಾದಿಸ್ಥಾನವಿಶೇಷಾತ್ಪ್ರತಿಬಿಂಬವಿಶೇಷಃ । ಏವ ಮಾನಂದಾದೇರಪಿ ॥ (೨) ಬ್ರಹ್ಮಾದಿಗುಣವೈಶೇಷ್ಯಾದಾನಂದಾದಿಃ ಪರ (ನಂದಃ ಪರಮ)ಸ್ಯ ಚ । ಪ್ರತಿಬಿಂಬತ್ವಮಾಯಾತಿ ಮಧ್ಯೋಚ್ಚಾದ್ಯಿವಿಶೇಷ (ಭೇದ) ತಃ ॥ ಇತಿ ಚ ವಾರಾಹೇ ॥ ೩೫ ॥ ೨ ॥**

ಭಾಷ್ಯಾರ್ಥ॥ (೧) ಬಿಂಬಭೂತನಾದ ಆದಿತ್ಯನು, ಅವಿಚಿತ್ರನಾದಾಗ್ಯೂ ದರ್ಪಣ ಸೂರ್ಯಕಾಂತಾದಿ ಸ್ಥಾನಗತವಾದ ವೈಚಿತ್ರ್ಯದಿಂದ ಪ್ರತಿಬಿಂಬಭೂತರಾದ ಸೂರ್ಯಕಾದಿಗಳಲ್ಲಿ ಅಗ್ನಿ ಜನಕತ್ವತದಭಾವಾದಿ ರೂಪವಾದ ವೈಚಿತ್ರ್ಯವಿದೆಯೋ, ಹೀಗೆಯೇ ಬಿಂಬಭೂತವಾದ ಭಗವದಾನಂದಾದಿಗಳು ಅವಿಚಿತ್ರಗಳಾದಾಗ್ಯೂ ಬ್ರಹ್ಮ ರುದ್ರ ಮೊದಲಾದ ಸ್ಥಾನಗುಣಗಳ ವೈಚಿತ್ರ್ಯದಿಂದ ಪ್ರತಿಬಿಂಬಭೂತರಾದ ಬ್ರಹ್ಮಾದ್ಯಾನಂದಾದಿಗಳಲ್ಲಿ ವೈಚಿತ್ರ್ಯವು ಕೂಡುತ್ತದೆ. (೧) ಬ್ರಹ್ಮಾದಿ ಸ್ಥಾನಗಳಲ್ಲಿರುವ ಭಕ್ತ್ಯಾದಿ ಗುಣಗಳ ವೈಚಿತ್ರ್ಯದಿಂದ ಶ್ರೀಹರಿಯ ಆನಂದಾದಿಗಳು ಅವಿಚಿತ್ರಗಳಾದಾಗ್ಯೂ ಮಧ್ಯಮ ಉತ್ತಮ ಅಧಮ ಭೇದದಿಂದ ಪ್ರತಿಬಿಂಬತ್ವವನ್ನು ಹೊಂದುತ್ತವೆ. (ಬ್ರಹ್ಮಾದಿಗಳಲ್ಲಿ ಪ್ರತಿಫಲಿತವಾಗುತ್ತವೆ, ಅಂದರೆ, ಚತುರ್ಮುಖಾದ್ಯಾನಂದಾದಿಗಳು ಅವಿಚಿತ್ರ ಭಗವದಾನಂದಾದಿಗಳಿಗೆ ಪ್ರತಿಬಿಂಬಭೂತಗಳಾದಾಗ್ಯೂ ತಾವು ವಿಚಿತ್ರಗಳಾಗುತ್ತವೆ.) ಎಂದು ವಾರಾಹದಲ್ಲಿ ಉಕ್ತವಾಗಿದೆ. ॥ ೩೫ ॥ ೨ ॥

ಪೀಠಿಕೆ॥ ಯುಕ್ತ್ಯಂತರದಿಂದ ಇದೇ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಉಪಪತ್ತೇಶ್ಚ ಓಂ ॥ ೩೬ ॥

ಸೂತ್ರಾರ್ಥ ॥ ಸ್ಥಾನಗುಣದಿಂದ ಮಾತ್ರವಲ್ಲ ಮತ್ತೆ ಬಿಂಬಭೂತ ಈಶ್ವರಸಾಮರ್ಥ್ಯದಿಂದಲೂ ಬ್ರಹ್ಮಾದ್ಯಾನಂದಾದಿಗಳಲ್ಲಿ ವೈಚಿತ್ರ್ಯವು ಕೂಡುವುದರಿಂದ ಅನ್ಯಾನಂದಾದಿಗಳು ಈಶ್ವರಪ್ರತಿಬಿಂಬಗಳು.

**ಭಾಷ್ಯ ॥ ಐಶ್ವರ್ಯಾತ್ಪರಮಾದ್ವಿಷ್ಣೋರ್ಭಕ್ತ್ಯಾದೀನಾಮನಾದಿತಃ । ಬ್ರಹ್ಮಾದೀನಾಂ ಸೂಪಪನ್ನಾ ಹ್ಯಾನಂದಾದೇರ್ವಿಚಿತ್ರತಾ ॥ ಇತಿ (ಹಿ)ಪಾದ್ಮೇ ॥ ೩೬ ॥ ಅಧಿ.೧೭ ॥ ೩ ॥**

ಭಾಷ್ಯಾರ್ಥ॥ ಬ್ರಹ್ಮಾದಿಗಳ ಆನಂದಾದಿಗಳು ಅವಿಚಿತ್ರ ವಿಷ್ಣ್ವಾನಂದಾದಿಗಳಿಗೆ ಪ್ರತಿಬಿಂಬ ಭೂತಗಳಾದಾಗ್ಯೂ ವಿಷ್ಣುವಿನ ಪರಮೈಶ್ವರ್ಯದಿಂದಲೂ ಬ್ರಹ್ಮಾದಿಗಳ ಭಕ್ತ್ಯಾದಿಗಳಿಗೆ ಅನಾದಿತ್ವವಿದ್ದ ಪ್ರಯುಕ್ತವೂ ಅಂದರೆ ಅನಾದಿಭಕ್ತ್ಯಾದಿಗುಣವೈಚಿತ್ರ್ಯದಿಂದಲೂ ಆನಂದಾದಿಗಳಿಗೆ ವೈಚಿತ್ರ್ಯವು ಯುಕ್ತವೇ. ॥ ೩೬ ॥ ೩ ।

## ಅಧಿಕರಣ ಸಾರಾಂಶ

ಭಗವದಾನಂದಾದಿ ಗುಣಕ್ಕೆ ವಿಚಿತ್ರ ಚತುರ್ಮುಖಾದ್ಯಾನಂದಾದಿ ಬಿಂಬತ್ವವು ಅಯುಕ್ತವೋ, ಯುಕ್ತವೋ ಎಂದು ಸಂದೇಹವು. ಬ್ರಹ್ಮಾದ್ಯಾನಂದಾದಿಗಳು ಮಿಥಃ ವಿಚಿತ್ರಗಳಾದುದರಿಂದ ಅವುಗಳು ಈಶಗುಣ ಪ್ರತಿಬಿಂಬಗಳಾದರೆ— ಈಶ್ವರಗುಣಗಳಿಗೆ ಬಿಂಬತ್ವವಿದ್ದರೆ— ಅದರಂತೆ ವೈಚಿತ್ರ್ಯವು ಬರುವುದು. ಬಿಂಬದಲ್ಲಿ ವೈಚಿತ್ರ್ಯವು ಇಲ್ಲ. ಆದಕಾರಣ ಬಿಂಬತ್ವವೇ ಇಲ್ಲದಿರುವುದರಿಂದ ಈಶ್ವರಗುಣಗಳಿಗೆ ಅಲೌಕಿಕತ್ವವಿಲ್ಲ ಎಂದರೆ— ಬಿಂಬದಲ್ಲಿ ವೈಚಿತ್ರ್ಯವು ಇಲ್ಲವಾದರೂ ಸೂರ್ಯಕಾಂತಾದಿ ಸ್ಥಾನ ಗುಣದಿಂದ ಸೂರ್ಯಾದಿ ಪ್ರತಿಬಿಂಬದಲ್ಲಿ ಅಗ್ನಿಜನಕತ್ವಾದಿ ವೈಚಿತ್ರ್ಯವಿದ್ದಂತೆ ಬ್ರಹ್ಮಾದಿಗಳ ಅನಾದಿ ಭಕ್ತ್ಯಾದಿ ಸ್ಥಾನಗುಣ ವೈಚಿತ್ರ್ಯವು ಕೂಡುತ್ತದೆ. **ಬ್ರಹ್ಮಾದಿ ಗುಣವೈಶೇಷ್ಯಾತ್, ಐಶ್ವರ್ಯಾತ್ಪರಮಾತ್** ಎನ್ನುವ ಸ್ಮೃತಿಗಳಿಂದ ಈಶ್ವರ ಗುಣಗಳಿಗೆ ವೈಚಿತ್ರ್ಯವಿಲ್ಲವಾದರೂ ಬಿಂಬತ್ವವು ಯುಕ್ತವು. ॥ ಅಧಿ. ೧೭ ॥

**ಸ್ಥಾನವಿಶೇಷಾಧಿಕರಣವು ಸಮಾಪ್ತವಾಯಿತು**

# ೧೮. ತಥಾನ್ಯತ್ವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪುನಃ ಭಗವಂತನಿಗೆ ಅವ್ಯಕ್ತತ್ವವನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ ಧ್ಯಾನಕಾಲೇ ಯಚ್ಚಿತ್ತೇ ಪ್ರದೃಶ್ಯತೇ ತದೇವ (ಹಿ) ಬ್ರಹ್ಮರೂಪಮ್ । ಅತಃ ಕಥಮವ್ಯಕ್ತತೇತ್ಯತ ಆಹ ॥ ೧ ॥**

**ಭಾಷ್ಯಾರ್ಥ ॥** ಧ್ಯಾನಕಾಲದಲ್ಲಿ ಯಾವ ಬ್ರಹ್ಮರೂಪವು ಪುರುಷಪ್ರಯತ್ನದಿಂದ ಚಿತ್ತದಲ್ಲಿ (ಮನಸ್ಸಿನಲ್ಲಿ) ತೋರುತ್ತದೋ, ಅದೇವೇ ಬ್ರಹ್ಮಸ್ವರೂಪವು. (ಇಲ್ಲವಾದರೆ ಧ್ಯಾನವು ವ್ಯರ್ಥವಾಗುವುದು. ಯಾವದನ್ನಾದರೂ ಧ್ಯಾನ ಮಾಡಿದರೆ ಬ್ರಹ್ಮನು ಫಲವನ್ನು ಕೊಡುತ್ತಾನೆ ಎನ್ನುವುದು ಯುಕ್ತವಲ್ಲ) ಆದಕಾರಣ ಬ್ರಹ್ಮನಿಗೆ ಅವ್ಯಕ್ತತ್ವವು ಹೇಗೆ ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ.

**ವಿಶೇಷಾಂಶ ॥** ಧ್ಯಾನಪ್ರತೀತವಾದುದು ಬ್ರಹ್ಮವಲ್ಲ. ಹಾಗೆ ಇದ್ದರೆ ಧ್ಯಾನಮಾಡತಕ್ಕವರು ಹೆಚ್ಚು ಇದ್ದ ಪ್ರಯುಕ್ತ ಧ್ಯೇಯರೂಪಕ್ಕೂ ಬಹುತ್ವವು ಬರಬೇಕಾಗುವುದು. ಎಂದರೆ ಆಶಂಕಾಪರಿಹಾರಕ್ಕಾಗಿ ಬ್ರಹ್ಮರೂಪವೆಂದು ಹೇಳಿರುವರು. ಅಂದರೆ, ಚಿತ್ರದಲ್ಲಿ ತೋರಿದವುಗಳು ಬ್ರಹ್ಮರೂಪಗಳೇ. ಆದಕಾರಣ ಸ್ವರೂಪಭೇದವಿಲ್ಲವಾದರೂ ರೂಪಗಳು ಹೆಚ್ಚು ಇದ್ದಪ್ರಯುಕ್ತ ಧ್ಯೇಯರೂಪಕ್ಕೆ ಬಹುತ್ವವು ಕೂಡುತ್ತದೆ.

**ಸೂತ್ರ ॥ ಓಂ ತಥಾಽನ್ಯತ್ಪ್ರತಿಷೇಧಾತ್ ಓಂ ॥ ೩೭ ॥**

ಸೂತ್ರಾರ್ಥ ॥ ಬ್ರಹ್ಮನು ಧ್ಯಾನದಲ್ಲಿ ಪ್ರತೀತವಾದ ವಸ್ತುವಿನಿಂದ ಬ್ರಹ್ಮಾನಂದಾದಿಗಳಂತೆಯೇ ವಿಲಕ್ಷಣನು. (ಆದೇವೇ ಇಲ್ಲ) ಯನ್ಮನಸಾ ನ ಮನುತೇ ಇತ್ಯಾದಿಗಳಲ್ಲಿ ಧ್ಯಾನದಲ್ಲಿ ಪ್ರತೀತವಾದುದಕ್ಕೆ ಬ್ರಹ್ಮತ್ವವನ್ನು ಪ್ರತಿಷೇಧಿಸಿದ್ದರಿಂದ.

**ಭಾಷ್ಯ ॥ (೧) ಯಥಾ ಜೀವಾನಂದಾದೇರನ್ಯದ್ಬ್ರಹ್ಮ ತಥೋಪಾಸಾಕೃತಾದಾಪಿ ॥ (೨) ಯನ್ಮನಸಾ ನ ಮನುತೇ ಯೇನಾಹುರ್ಮನೋಮತಮ್ । ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ (ಕೇನ. ೧. ೬.) ॥ ಇತಿ ಪ್ರತಿ ಷೇಧಾತ್ ॥ (೩) ಪಶ್ಯಂತಿ ಪರಮಂ ಬ್ರಹ್ಮ ಚಿತ್ತೇ ಯತ್ಪ್ರತಿಬಿಂಬಿತಮ್ । ಬ್ರಹ್ಮೈವ ಪ್ರತಿಬಿಂಬೀಯದತಸ್ತೇಷಾಂ ಫಲಪ್ರದಮ್ ॥ ತದುಪಾಸನಂ ಚ ಭವತಿ ಪ್ರತಿಮೋಪಾಸನಂ ಯಥಾ । ದೃಶ್ಯತೇತ್ವಾ(ತ್ವ) ಪರೋಕ್ಷ್ಯೇ(ಕ್ಷೇ)ಣ ಜ್ಞಾನೇನೈವ ಪರಂ ಪದಮ್ ॥ ಉಪಾಸನಾ ತ್ವಾಪರೋಕ್ಷ್ಯಂ ಗಮಯೇತ್ತತ್ಪ್ರಸಾದತಃ । ಇತಿ ಚ ಬ್ರಹ್ಮತರ್ಕೇ ॥ ೩೭ ॥ ॥ ಅಧಿ. ೧೮ ॥ ೨ ॥**

ಭಾಷ್ಯಾರ್ಥ ॥ (೧) ಹೇಗೆ ಜೀವಾನಂದಾದಿಗಳಿಂದ ಬ್ರಹ್ಮಾನಂದಾದಿಗಳು ವಿಲಕ್ಷಣಗಳೋ, (ಜೀವಾನಂದಾದಿಗಳು ಅಲ್ಪವೂ ಪರತಂತ್ರವೂ ಆಗಿವೆ. ಬ್ರಹ್ಮಾನಂದಾದಿಗಳು ನಿರವಧಿಕಗಳೂ ಸ್ವತಂತ್ರಗಳೂ ಆಗಿವೆ.) ಹಾಗೆಯೇ ಉಪಾಸನಾಕಾಲದಲ್ಲಿ ಮಾನಸ ವಾಸನಾಮಯವಾದ ಆಕಾರವಿಶೇಷದಿಂದಲೂ ಬ್ರಹ್ಮನು ವಿಲಕ್ಷಣನೇ. (ಅದು ದುರ್ಲಕ್ಷಣಯುಕ್ತವಾದ ಕಾರಣ ಬ್ರಹ್ಮನು ಧ್ಯಾನಪ್ರತೀತವಾದ ವಾಸನಾಮಯ ವಸ್ತುವಿನಿಂದ ಅಭಿನ್ನನು ಅಲ್ಲ. ಯನ್ಮನಸಾ ಎನ್ನುವ ತಳವಕಾರಶ್ರುತಿ ಯಲ್ಲಿ ಧ್ಯಾನದಲ್ಲಿ ಪ್ರತೀತವಾದುದಕ್ಕೆ ಬ್ರಹ್ಮತ್ವವನ್ನು ಪ್ರತಿಷೇಧಿಸಿದ್ದಾರೆ.) (೨) ಯಾವ ವಸ್ತುವನ್ನು ಪುರುಷನು ಮನಸ್ಸಿನಿಂದ ತಿಳಿಯುವುದಿಲ್ಲವೋ, ಯಾವ ವಸ್ತುವಿನಿಂದ ಮನಸ್ಸನ್ನು ತಿಳಿಯಲ್ಪಟ್ಟದ್ದನ್ನಾಗಿ ಹೇಳುತ್ತಾರೋ, ಅದನ್ನೇ ಬ್ರಹ್ಮನನ್ನಾಗಿ ತಿಳಿ. ಯಾವ ವಸ್ತುವನ್ನು ಪುರುಷರು ಉಪಾಸನಾ ಕಾಲದಲ್ಲಿ ತಿಳಿಯುತ್ತಾರೋ, ಇದು ಬ್ರಹ್ಮ ಎಂದು ರುದ್ರನನ್ನು ಕುರಿತು ಬ್ರಹ್ಮನ ವಾಕ್ಯವು ಎಂದು ತಳವಕಾರದಲ್ಲಿ ಧ್ಯಾನದಲ್ಲಿ ಪ್ರತೀತವಾದುದಕ್ಕೆ ಬ್ರಹ್ಮತ್ವವನ್ನು ನಿಷೇಧಿಸಿದ್ದರಿಂದ. (೩) (ಧ್ಯಾನಕಾಲದಲ್ಲಿ ಪ್ರತೀತವಾದುದಕ್ಕೆ ವಾಸನಾಮಯವಾದ ಯಾವುದು ವಸ್ತುವೋ ಆದು ಪರಬ್ರಹ್ಮಪ್ರತಿಬಿಂಬವು. ಅದನ್ನು ಧ್ಯಾನಕಾಲದಲ್ಲಿ ನೋಡುತ್ತಾರೆ. (ಅಂದರೆ, ಮಾನಸವಾಸನಾಮಯವಾದ ಪರಬ್ರಹ್ಮನ ಪ್ರತಿಬಿಂಬವನ್ನು ಧ್ಯಾನಕಾಲದಲ್ಲಿ ಮನಸ್ಸಿನಿಂದ ನೋಡುತ್ತಾರೆ.) ಅಂತಹ ಪ್ರತಿಬಿಂಬದಲ್ಲಿ ಯಾವ ಕಾರಣದಿಂದ ಬ್ರಹ್ಮನು ಇದ್ದಾನೋ, ಆದಕಾರಣ ಬ್ರಹ್ಮನೇ ಧ್ಯಾತೃಗಳಿಗೆ ದರ್ಶನಾಖ್ಯ ಫಲಪ್ರದನು. (ಸ್ಥಿತಿಮಾತ್ರದಿಂದ ಹೇಗೆ ಫಲಪ್ರದನಾಗುವನು ಎಂದರೆ) ಹೇಗೆ ಪ್ರತಿಮೆಯಲ್ಲಿ ಇಂತಹ ಶ್ರೀಹರಿಯು ಇದ್ದಾನೆನ್ನುವ ಸ್ಮೃತಿಯು ಪ್ರತಿಮಾಧಿಷ್ಠಿತ ಬ್ರಹ್ಮೋಪಾಸನೆಯು ಆಗುತ್ತದೋ ಹಾಗೆಯೇ ಪ್ರತಿಬಿಂಬೋಪಾಸನವು (ಅಂದರೆ, ವಾಸನಾಮಯ ವಸ್ತುಧ್ಯಾನವೂ ಕೂಡ) ಬ್ರಹ್ಮೋಪಾಸನವು ಆಗುತ್ತದೆ. (ಪ್ರತಿಬಿಂಬವು ಬ್ರಹ್ಮವೇ ಏಕೆ ಆಗುವುದಿಲ್ಲವೆಂದರೆ) ಉತ್ತಮನಾದ ಬ್ರಹ್ಮನು ಧ್ಯಾನಜನ್ಯ ಜ್ಞಾನದಿಂದಲೇ ಅಪರೋಕ್ಷವಾಗಿ ವಿಷಯೀಕರಿಸಲ್ಪಡುತ್ತಾನೆ. (ಧ್ಯಾನದಿಂದ ಅಲ್ಲ) (ಹಾಗಾದರೆ

ಜ್ಞಾನಕ್ಕೇನೇ ಪ್ರಯತ್ನಿಸಬೇಕು. ಉಪಾಸನೆಯು ಏಕೆ ಎಂದರೆ) ಆತನ ಧ್ಯಾನವೇ ಬ್ರಹ್ಮನ ಪ್ರಸಾದದಿಂದ ಬ್ರಹ್ಮನ ಅಪರೋಕ್ಷವನ್ನು ಹೊಂದಿಸಿ ಕೊಡುವುದು. ಅಂದರೆ, ಬ್ರಹ್ಮನು ಅಪರೋಕ್ಷಜ್ಞಾನಕ್ಕೆ ವಿಷಯನಾಗುತ್ತಾನೆ, ಎಂದು ಬ್ರಹ್ಮತರ್ಕ ದಲ್ಲಿ ಹೇಳಿದೆ. ॥ ೩೭ ॥ ೨ ॥

## ಅಧಿಕರಣ ಸಾರಾಂಶ

ಧ್ಯಾನಪ್ರತೀತವೇ ಬ್ರಹ್ಮನೋ, ಇತರವೋ, ಎಂದು ಸಂದೇಹವು. ಬ್ರಹ್ಮನೇ ಫಲಪ್ರದನಾದುದ ರಿಂದ **ತಂ ಯಥಾ ಯಥಾ** ಇತ್ಯಾದಿ ಶ್ರುತಿಗಳಿಂದ ಉಪಾಸಿತವಾದುದೇ ಫಲವನ್ನು ಕೊಡತಕ್ಕುದು. ಆದುದರಿಂದ ಧ್ಯಾನಿಸಲ್ಪಟ್ಟದ್ದು ಬ್ರಹ್ಮವಾದುದರಿಂದ ಅವನು ಫಲಪ್ರದನಾಗದೆ ಇದ್ದರೆ ಧ್ಯಾನವು ವ್ಯರ್ಥವಾಗುವುದರಿಂದ ಧ್ಯಾನಿಸತಕ್ಕವರು ಹೆಚ್ಚು ಇದ್ದಪ್ರಯುಕ್ತ ಧ್ಯೇಯರೂಪಕ್ಕೆ ಬಹುತ್ವವು ನಿರ್ಭಿನ್ನನಾದ ಹರಿಯಲ್ಲಿಯೂ ಆತನ ರೂಪಗಳು ಅನೇಕವಿದ್ದ ಪ್ರಯುಕ್ತ ಯುಕ್ತವಾಗುವುದು. ಆದಕಾರಣ ಧ್ಯಾನಕಾಲದಲ್ಲಿ ಪ್ರತೀತವಾದುದೇ ಬ್ರಹ್ಮವು. ಎಂದರೆ, ಅಪ್ರಾಕೃತ ನಿರ್ದೋಷ ಸರ್ವಸುಲಕ್ಷಣ ದಿವ್ಯಸ್ವರೂಪವಿಗ್ರಹವುಳ್ಳ ಶ್ರೀಹರಿಗೆ ನಾನಾ ದುರ್ಲಕ್ಷಣಯುಕ್ತ ಧ್ಯಾನಪ್ರತೀತ ವಸ್ತುತ್ವವು ಕೂಡದಿರುವುದರಿಂದ ಆದರಿಂದ ಭೇದವನ್ನು ಅವಶ್ಯವಾಗಿ ಹೇಳಬೇಕಾಗಿರುವುದ ರಿಂದಲೂ **ತದೇವ ಬ್ರಹ್ಮತ್ವಂ** ಎನ್ನುವ ಶ್ರುತಿಯಲ್ಲಿ ಧ್ಯಾನದಲ್ಲಿ ಪ್ರತೀತವಾದುದಕ್ಕೆ ಬ್ರಹ್ಮತ್ವವನ್ನು ನಿಷೇಧಿಸಿ ಇತರನೇ ಬ್ರಹ್ಮನು ಎಂದು ಹೇಳಿದ್ದರಿಂದಲೂ ಧ್ಯಾನದಲ್ಲಿ ಪ್ರತೀತವಾದ ವಸ್ತುವಿನಿಂದ ಭಿನ್ನ ನಾದವನೇ ಅವ್ಯಕ್ತನಾದ ಬ್ರಹ್ಮನು. ॥ ಅಧಿ. ೧೮ ॥

**ತದನ್ಯತ್ವಾಧಿಕರಣವು ಸಮಾಪ್ತವಾಯಿತು.**

# ೧೯ ಸರ್ವಗತತ್ವಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಶ್ರೀಹರಿಗೇನೇ ಜಗತ್ಕರ್ತೃತ್ವಾದಿಗಳು ಇತರರಿಗೆ ಇಲ್ಲ ಎಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ದೇಶಕಾಲಾಂತರೇಽನ್ಯತೋಽಪಿ ಸೃಷ್ಟ್ಯಾದಿ ಯುಕ್ತಮಿತ್ಯ-(ಕ್ರಿಯಾ ಯುಕ್ತೇತ್ಯ) ತೋ ಬ್ರೂತೇ ॥ ೧ ॥**

ಭಾಷ್ಯಾರ್ಥ ॥ ಸರ್ವತ್ರ ಸೃಷ್ಟ್ಯಾದಿ ಕ್ರಿಯೆಯು ಬ್ರಹ್ಮನಿಂದಲೇ ಆಗುವುದಿಲ್ಲ ಮತ್ತೆ ದೇಶಾಂತರ ಕಾಲಾಂತರಗಳಲ್ಲಿ ಇತರರಿಂದಲೂ ಜಗತ್ತಿಗೆ ಸೃಷ್ಟ್ಯಾದಿಗಳು ಆಗುತ್ತವೆ. ರಾಜಾದಿಗಳಲ್ಲಿ ಹಾಗೆ ಕಂಡದೆ. ಇತರರಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಇದು ಅಯುಕ್ತವೆಂದು ಹೇಳಕೂಡದು. ಯುಕ್ತವೇ ಆಗಿದೆ. (ಶ್ರೀಹರಿಯೇ ಇತರರಿಗೆ ಕ್ರೀಡೆಯಿಂದ ತನ್ನ ಸ್ವಾತಂತ್ರ್ಯವನ್ನು ಕೊಡುತ್ತಾನೆಂದು ಕೂಡಬಹುದು) ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ. ॥ ೧ ॥

**ಸೂತ್ರ ॥ ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ ॥ ೩೮॥**

ಸೂತ್ರಾರ್ಥ ॥ ಪ್ರಕೃತನಾದ ಈಶ್ವರನಿಂದಲೇ ಸರ್ವತ್ರ ಸೃಷ್ಟ್ಯಾದಿಗಳು ಆಗುತ್ತವೆ, ದೇಶಾಂತರ ಕಾಲಾಂತರಾದಿಗಳಲ್ಲಿ ಮತ್ತೊಬ್ಬನಿಂದ ಸೃಷ್ಟ್ಯಾದಿಗಳು ಆಗುವುದಿಲ್ಲ. ಏಷ ಸರ್ವಗತಃ ಎಂದು ಸರ್ವಗತತ್ವವು ಶ್ರುತವಾದುದರಿಂದಲೂ ಸರ್ವತ್ರ ಸರ್ವಂ, ಎಂದು ಮಾಯಾಮಯಶಬ್ದವನ್ನು ವ್ಯಾಖ್ಯಾನ ಮಾಡತಕ್ಕ ಶ್ರುತಿಯಿಂದಲೂ ಇತರ ಕರ್ತೃತ್ವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ

ಭಾಷ್ಯ ॥ (೧) ಸರ್ವದೇಶಕಾಲವಸ್ತುಷ್ವನೇನೈವ ಸೃಷ್ಟ್ಯಾದಿಕಂ ಪ್ರವರ್ತತೇ । (೨) ಏಷ ಸರ್ವ ಏಷ ಸರ್ವಗತ ಏಷ ಸರ್ವೇಶ್ವರ ಏಷೋಽಚಿಂತ್ಯ ಏಷ ಪರಮ ಇತಿ ಹಿ ಭಾಲ್ಲವೇಯಶ್ರುತಿಃ ॥ (೩) ಸರ್ವತ್ರ ಸರ್ವಮೇತಸ್ಮಾತ್ಸರ್ವದಾ ಸರ್ವ ವಸ್ತುಷು । ಸ್ವರೂಪಭೂತಯಾ ನಿತ್ಯಶಕ್ತ್ಯಾ ಮಾಯಾಖ್ಯಯಾ ಯತಃ ॥ ಅತೋ ಮಾಯಾಮಯಂ ವಿಷ್ಣುಂ ಪ್ರವದಂತಿ ಸನಾತನಮ್ । ಇತಿ ಹಿ ಚತುರ್ವೇದಶಿಖಾಯಾಂ ॥ (೪) ಆದಿಶಬ್ದಾದನ್ಯತ್ರ ಪ್ರಮಾಣಾಭಾವಾಚ್ಚ ॥ ೩೮ ॥ ಅಧಿ. ೧೯ ॥ ೨ ॥

ಭಾಷ್ಯಾರ್ಥ ॥ (೧) ಸರ್ವ ದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಸರ್ವವಸ್ತುಗಳಲ್ಲಿಯೂ ಶ್ರೀಹರಿಯಿಂದಲೇ ಜಗಜ್ಜನ್ಮಾದಿಗಳು ಆಗುತ್ತವೆ. (ದೇಶಾಂತರ ಕಾಲಾಂತರಗಳಲ್ಲಿ ಇತರರಿಂದ ಅಲ್ಲ) (೨) ಈ ಶ್ರೀಹರಿಯು ಗುಣಪೂರ್ಣನು, ವ್ಯಾಪ್ತನು, ಸರ್ವನಿಯಾಮಕನು, ಹೀಗೆಯೇ ಇದ್ದಾನೆಂದು ವಿಚಾರಮಾಡಲಿಕ್ಕೆ ಅಶಕ್ಯನು, ಸರ್ವೋತ್ತಮನು ಎಂದು ಭಾಲ್ಲವೇಯ ಶ್ರುತಿಯು. (೩) ಸರ್ವ ದೇಶಗಳಲ್ಲಿ ಈ ವಿಷ್ಣುವಿನಿಂದಲೇ ಸರ್ವಕಾಲಗಳಲ್ಲಿ ಸರ್ವವಸ್ತುಗಳಲ್ಲಿ ಅಂದರೆ, ಸರ್ವವಸ್ತುವಿಷಯಕವಾದ ಸೃಷ್ಟ್ಯಾದಿಗಳಲ್ಲಿ ಸ್ವರೂಪಭೂತವಾದ ಮಾಯ ಎಂದು ಹೆಸರುಳ್ಳ ನಿತ್ಯಶಕ್ತಿಯಿಂದ ಯಾವ ಕಾರಣದಿಂದ ಆಗುತ್ತದೋ, ಆದಕಾರಣ ಪರಮನಿತ್ಯನಾದ ವಿಷ್ಣುವನ್ನು ಜಗತ್ತನ್ನು ನಿರ್ಮಾಣ ಮಾಡತಕ್ಕ ಶಕ್ತಿಸ್ವರೂಪನಾದುದರಿಂದ ಮಾಯಾಮಯನನ್ನಾಗಿ ಹೇಳುತ್ತಾರೆ. ಎಂದು ಚತುರ್ವೇದ ಶಿಖಾದಲ್ಲಿ ಹೇಳಿದೆ. (೪) ದೇಶಾಂತರ ಕಾಲಾಂತರಗಳಲ್ಲಿ ಕೆಲವು ವಸ್ತುವಿಷಯದಲ್ಲಿ ವಿಷ್ಣುವಿನಿಂದ ಇತರರಾದವರಿಂದ ಕೆಲವು ಸೃಷ್ಟ್ಯಾದಿಗಳು ಆಗುತ್ತವೆ, ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಎಂದು ಆದಿಶಬ್ದದಿಂದ ಸಂಗೃಹಿತವಾಯಿತು. ॥ ೩೮ ॥ ೨ ॥

## ಅಧಿಕರಣ ಸಾರಾಂಶ

ಕೆಲವು ವೇಳೆ ಕೆಲವು ಪ್ರದೇಶಗಳಲ್ಲಿ ಮತ್ತೊಬ್ಬನೂ ಕರ್ತನು ಇದ್ದಾನೋ, ಅಥವಾ ಎಲ್ಲಾ ಕಡೆಗಳಲ್ಲಿಯೂ ಸರ್ವ ಕಾಲಗಳಲ್ಲಿಯೂ ಸರ್ವ ವಸ್ತುಗಳಿಗೂ ಶ್ರೀ ಹರಿಯೇ ಸೃಷ್ಟ್ಯಾದಿಕರ್ತನೋ, ಆದಕ್ಕಾಗಿ ತನ್ನ ಸ್ವಾತಂತ್ರ್ಯವನ್ನು ಕದಾಚಿತ್ ಇತರರಿಗೂ ಕೊಡುತ್ತಾನೋ ಇಲ್ಲವೋ ಎಂದು ಸಂದೇಹವು. ಶ್ರೀಹರಿಗೆ ಕೃಷ್ಣಾದ್ಯವತಾರಗಳಲ್ಲಿ ಪರಪ್ರೇಷ್ಯತ್ವ ಮೊದಲಾದ ಅಸಂಭಾವಿತಗಳಾದ ಅನೇಕ ಲೀಲೆಗಳು ಕಂಡದ್ದರಿಂದ ಕ್ವಚಿತ್ ಕೆಲವು ವೇಳೆ ತನ್ನ ಸ್ವಾತಂತ್ರ್ಯವನ್ನು ಇತರರಿಗೂ ಕೊಡಬಹುದಾದುದರಿಂದ

ಶ್ರೀಹರಿಯೇ ಸರ್ವ ಸೃಷ್ಟ್ಯಾದಿಗಳನ್ನು ಮಾಡತಕ್ಕವನು ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ಲೋಕದಲ್ಲಿ ರಾಜಾದಿಗಳಲ್ಲಿ ಖಂಡೇಶತ್ವವು ಕಂಡದ್ದರಿಂದಲೂ ದೇಶಾಂತರಾದಿಗಳಲ್ಲಿ ಮತ್ತೊಬ್ಬನೂ ಸೃಷ್ಟ್ಯಾದಿಕರ್ತನು ಆಗುತ್ತಾನೆ ಎನ್ನುವ ಅನುಮಾನವಿದ್ದಪ್ರಯುಕ್ತವೂ ಶ್ರೀಹರಿಯೇ ಸರ್ವತ್ರ ಸೃಷ್ಟ್ಯಾದಿಕರ್ತನು ಆಗದಿರುವುದರಿಂದ ಶ್ರೀಹರಿಯಲ್ಲಿ ಅತಿಶಯಿತ ಭಕ್ತಿಯು ಯುಕ್ತವಲ್ಲ ಎಂದರೆ— ಸ್ವಾತಂತ್ರ್ಯಾತ್ಕ್ರೀಡತೇ ವಿಷ್ಣುಃ ನ ಹಿ ಸ್ವಾತಂತ್ರ್ಯಮನ್ಯಗಂ । ಕರೋತಿ ಕ್ವಾಪಿ ಇತ್ಯಾದಿಗಳಿಂದ ಸ್ವಾತಂತ್ರ್ಯವೇ ಕ್ರೀಡೆಯೆಂದು ಅವಗತವಾಗುವುದರಿಂದ ಅನ್ಯತ್ರ ಸ್ವಾತಂತ್ರ್ಯ ದಾಸವು ಕೂಡದಿರುವುದರಿಂದ ಶ್ರೀಹರಿಯೇ ಸರ್ವಕರ್ತನು. ಏಷ ಸರ್ವಗತಃ ಇತ್ಯಾದಿ ಶ್ರುತಿ ಸಿದ್ಧವಾದುದರಿಂದಲೂ ಅನುಮಾನವು ಶ್ರುತಿಯಿಂದ ಬಾಧಿತವಾದುದರಿಂದಲೂ ದೇಶಾಂತರ ಕಾಲಾಂತರಗಳಲ್ಲಿ ಮತ್ತೊಬ್ಬ ಕರ್ತನು ಇದ್ದಾನೆ ಎನ್ನುವ ವಿಷಯ ದಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ಶ್ರೀಹರಿಯೇ ಸರ್ವತ್ರ ಸೃಷ್ಟ್ಯಾದಿಕರ್ತನು ॥ ಅಧಿ. ೧೯ ॥

**ಸರ್ವಗತತ್ವಾಧಿಕರಣವು ಸಮಾಪ್ತವಾಯಿತು.**

## ೨೦ ಫಲಾಧಿಕರಣವು

ಪೀಠಿಕೆ ॥ ಈಶ್ವರನೇ ಕರ್ಮಫಲದಾತನು ಎಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ಕರ್ಮಾಪೇಕ್ಷತ್ವಾತ್ಫಲದಾನಸ್ಯ ತದೇವ ದದಾತೀತಿ ನ ವಾಚ್ಯಮ್ । ಕುತಃ ॥ ೧ ॥**

ಭಾಷ್ಯಾರ್ಥ ॥ ಈಶ್ವರಕರ್ತೃತ್ವ ಫಲದಾನಕ್ಕೆ ಕರ್ಮಾಪೇಕ್ಷೆಯು ಇದ್ದುದರಿಂದ (ಅಂದರೆ— ಈಶ್ವರನೇ ಫಲದಾತನು ಎಂದು ಹೇಳುವವರೂ ಅದಕ್ಕೆ ಕರ್ಮಸಾಪೇಕ್ಷತ್ವವನ್ನು ಅಂಗೀಕರಿಸಿದ್ದರಿಂದ) (ಕರ್ಮವು ಮಾಡದಿದ್ದರೆ ಫಲವು ಕಾಣದೆ ಇದ್ದುದರಿಂದಲೂ) ಆ ಕರ್ಮವೇ ಫಲವನ್ನು ಕೊಡುತ್ತದೆ. (ಈಶ್ವರನಲ್ಲ) ಎಂದು ಹೇಳಕೂಡದು. ಯಾವುದರಿಂದ? ಎಂದರೆ—

### ಸೂತ್ರ ॥ ಓಂ ಫಲಮತ ಉಪಪತ್ತೇಃ ಓಂ ॥ ೩೯ ॥

ಸೂತ್ರಾರ್ಥ ॥ ಪ್ರಸ್ತುತ ಈಶ್ವರನಿಂದಲೇ ಫಲವು. ಕರ್ಮದಿಂದ ಅಲ್ಲ. ಈಶ್ವರನು ಚೇತನನು ಆದುದರಿಂದ ಫಲದಾನವು ಕೂಡುವುದರಿಂದಲೂ ಕರ್ಮವು ಅಚೇತನವಾದುದರಿಂದ ಫಲಪ್ರದಾನವು ಕೂಡಲಾರದು.

**ಭಾಷ್ಯ ॥ ಅತ ಏವೇಶ್ವರಾತ್ಫಲಂ ಭವತಿ । ನ ಹ್ಯಚೇತನಸ್ಯ ಸ್ವತಃ ಪ್ರವೃತ್ತಿ ರ್ಯುಜ್ಯತೇ ॥ ೩೯ ॥ ೨ ॥**

ಭಾಷ್ಯಾರ್ಥ ॥ ಪ್ರಸ್ತುತನಾದ ಈಶ್ವರನಿಂದಲೇ (ಕರ್ಮದಿಂದ ಅಲ್ಲ) ಫಲವು ಆಗುತ್ತದೆ. ಅಚೇತನವಾದ ಕರ್ಮಕ್ಕೆ ಫಲದಾನರೂಪವಾದ ಸ್ವತಃ ಪ್ರವೃತ್ತಿಯು ಕೂಡಲಾರದು. ಏಕೆಂದರೆ ಅಚೇತನಕ್ಕೆ ಸ್ವತಃ ಪ್ರವೃತ್ತಿಯೇ ಇಲ್ಲ. ॥ ೩೯ ॥ ೨ ॥

**ಪೀಠಿಕೆ ॥** ಈಶ್ವರನು ಚೇತನನು ಆದುದರಿಂದ ಆತನಿಗೆ ಫಲದಾತೃತ್ವವನ್ನು ಸಂಭಾವಿಸಬಹುದು. ಚೇತನತ್ವವು ಜೀವನಲ್ಲಿಯೂ ಇದ್ದುದರಿಂದ ಈಶ್ವರನಿಗೆ ಫಲದಾತೃತ್ವ ನಿಶ್ಚಯವು ಆಗುವುದಿಲ್ಲ ಎಂದರೆ ಉತ್ತರಿಸುತ್ತಾರೆ—

## ಸೂತ್ರ ॥ ಓಂ ಶ್ರುತತ್ವಾಚ್ಚ ಓಂ ॥ ೪೦ ॥

**ಸೂತ್ರಾರ್ಥ ॥** ವಿಜ್ಞಾನಮಾನಂದಂ ಬ್ರಹ್ಮ ಇತ್ಯಾದಿಗಳಿಂದ ಈಶ್ವರನಿಗೇನೇ ಫಲ ದಾತೃತ್ವವು ಶ್ರುತವಾದ ಪ್ರಯುಕ್ತವೂ ಈಶ್ವರನಿಂದಲೇ ಫಲವು.

**ಭಾಷ್ಯ ॥ ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಂ** (ಬೃಂ. ೫. ೯.೨೮.) **। ಇತಿ ॥ ೪೦ ॥ ೩ ॥**

**ಭಾಷ್ಯಾರ್ಥ ॥ ತಿಷ್ಠಮಾನಸ್ಯ ತದ್ವಿದಃ** ಹವಿಸ್ಸನ್ನು ಕೊಡತಕ್ಕ ಯಜಮಾನರಿಗೆ ಪ್ರಿಯನು (ಫಲಪ್ರದನು) ತಿಷ್ಠಮಾನಸ್ಯ = ತನ್ನಲ್ಲಿಯೇ ಮನಸ್ಸನ್ನು ಇಟ್ಟಿರತಕ್ಕ ಬ್ರಹ್ಮಜ್ಞಾನಿಗಳಿಗೆ ಪರಮಪ್ರಿಯನು, ಪೂರ್ಣಜ್ಞಾನನು. ಪೂರ್ಣಾನಂದನು, ಬ್ರಹ್ಮನು ಎಂದು ॥ ೪೦ ॥ ೩. ॥

## ಸೂತ್ರ ॥ ಓಂ ಧರ್ಮಂ ಜೈಮಿನಿರತ ಏವ ಓಂ ॥ ೪೧ ॥

**ಸೂತ್ರಾರ್ಥ ॥** ಏಷ ಹ್ಯೇವ ಇತ್ಯಾದಿ ಶ್ರುತಿಗಳಿಂದಲೇ ಈಶ್ವರನಿಂದಲೇ ಧರ್ಮಾಖ್ಯಕರ್ಮವು ಕಾರಿತವು ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. (ಕರ್ಮದಿಂದಲೇ ಫಲವು ಆಗುತ್ತದೆ ಎನ್ನುತ್ತಾರೆ.)

**ಭಾಷ್ಯ ॥ ಯತಃ ಫಲಂ ತದೇವ ಕರ್ಮೇಶ್ವರಾದ್ಭವತಿ । ಏಷ ಹ್ಯೇವ ಸಾಧು ಕರ್ಮಕಾರಯತಿ** (ಕೌ.೩.೮.) **। ಇತಿ ಶ್ರುತೇರಿತಿ ಜೈಮಿನಿಃ ॥ ೪೧ ॥ ೪ ॥**

**ಭಾಷ್ಯಾರ್ಥ ॥** ಯಾವ ಕರ್ಮದಿಂದ ಫಲವು ಆಗುತ್ತದೋ ಅಂತಹ ಕರ್ಮವೇ ಈಶ್ವರನಿಂದ ಆಗುತ್ತದೆ. (ಫಲವಲ್ಲ) (ಕರ್ಮವೂ ಈಶ್ವರನಿಂದ ಆಗುತ್ತದೆ ಎನ್ನುವುದು ಯಾವುದರಿಂದ ಸಿದ್ಧವಾಗುತ್ತದೆ ಎಂದರೆ) ಶ್ರೀಹರಿಯೇ ಸಾಧುಕರ್ಮವನ್ನು ಮಾಡಿಸುತ್ತಾನೆ, ಎನ್ನುವ ಶ್ರುತಿಯಿಂದ ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ. ತಥಾಚ ಕರ್ಮವೇ ಫಲಪ್ರದವು. ಈಶ್ವರನಾದರೂ ಫಲ ಹೇತುವಾದ ಕರ್ಮಕ್ಕೆ ಕಾರಣವಾದುದರಿಂದ ರಾತಿರ್ದಾತುಃ ಇತ್ಯಾದಿ ಶ್ರುತಿಯಲ್ಲಿ ಫಲಪ್ರದನೆಂದು ಹೇಳಲ್ಪಡುತ್ತಾನೆ. ಆದಕಾರಣ ಈ ಶ್ರುತಿವಿರೋಧವಿಲ್ಲ. ॥ ೪೧ ॥ ೪ ॥

## ಸೂತ್ರ ॥ ಓಂ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ಓಂ ॥ ೪೨ ॥

**ಸೂತ್ರಾರ್ಥ ॥** ಬ್ರಹ್ಮನನ್ನು ಫಲಹೇತುವನ್ನಾಗಿ ವೇದವ್ಯಾಸರು ತಿಳಿಯುತ್ತಾರೆ. (ಬ್ರಹ್ಮನು ಕರ್ತನು, ಧರ್ಮವು ಕರಣವು.) ಆದುದರಿಂದ ಫಲದಾತೃತ್ವದಿಂದ ಬ್ರಹ್ಮ ಕರ್ಮಗಳಿಗೆ ಸಾಮ್ಯವಿಲ್ಲ ಎಂದು ತು

ಶಬ್ದಾರ್ಥವು. ಪುಣ್ಯೇನ ಪುಣ್ಯಂ ಲೋಕಂ ನಯತಿ ಎಂದು ಬ್ರಹ್ಮ ಕರ್ಮಗಳಿಗೆ ಕರ್ತೃತ್ವ ಕರಣತ್ವರೂಪಹೇತುತ್ವವನ್ನು ವ್ಯಪದೇಶಮಾಡಿದ್ದರಿಂದ.

**ಭಾಷ್ಯ ॥ ಪರಸ್ಯ ಕರ್ಮಣಶ್ಚೋಭಯೋಃ । ಫಲಕಾರಣತ್ವೇऽಪಿ ನ ಕರ್ಮ ಪರ ಪ್ರವರ್ತಕಂ । ಪರ ಏವ ಕರ್ಮಪ್ರವರ್ತಕಃ । ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್ (ಪ್ರ,೩,೨,) । ಇತಿ ಹೇತುವ್ಯಪದೇಶಾತ್ । ದ್ರವ್ಯಂ ಕರ್ಮ ಚ ಕಾಲಶ್ಚೇತಿ ಚ ॥ ೪೨ ॥ ಅಧಿ. ೨೦ ॥ ೫ ॥**

ಭಾಷ್ಯಾರ್ಥ ॥ (೧)ರಾತಿರ್ದಾತುಃ ಎನ್ನುವ ಶ್ರುತಿಯಿಂದ ಈಶ್ವರನಿಗೆ ಫಲಕಾರಣತ್ವವನ್ನು ಅವಶ್ಯವಾಗಿ ಅಂಗೀಕರಿಸಬೇಕು. ಕರ್ಮಸತ್ವೇ ಫಲಸತ್ವಂ, ಕರ್ಮಾಭಾವೇ ಫಲಾಭಾವಃ ಎನ್ನುವ ಅನ್ವಯ ವ್ಯತಿರೇಕದಿಂದ ಕರ್ಮಕ್ಕೂ ಫಲಕಾರಣತ್ವವನ್ನು ಅಂಗೀಕರಿಸಬೇಕು. ಏವಂಚ ಈಶ್ವರಕರ್ಮ ಎರಡಕ್ಕೂ ಫಲಕಾರಣತ್ವವಿದ್ದರೂ (ಎರಡಕ್ಕೂ ಸಮಪ್ರಾಧಾನ್ಯವಲ್ಲ. ಮತ್ತೆ ಅದರಲ್ಲಿ ಕರ್ಮವು ಕರಣವು. ಬ್ರಹ್ಮನು ಕರ್ತೃ ಆಗಿ ಕರಣವನ್ನು ಪ್ರವರ್ತಿಸುತ್ತಾನೆ ಎಂದೇ ಹೇಳಬೇಕು.) ಅಲ್ಲದೆ. ಕರ್ಮವು ಕರ್ತೃ ಆಗಿ ಪರಮಾತ್ಮನಿಗೆ ಪ್ರವರ್ತಕವಲ್ಲ. ಮತ್ತೆ ಶ್ರೀ ಹರಿಯೇ ಫಲದಾನದಲ್ಲಿ ಕರಣಭೂತವಾದ ಕರ್ಮಕ್ಕೆ ಪ್ರವರ್ತಕನು. (ಚೇತನಕ್ಕೆ ಕರ್ತೃತ್ವವು ಅಚೇತನಕ್ಕೆ ಕರಣತ್ವವು ಎಂದು ಲೋಕದಲ್ಲಿ ಕಂಡದೆ.) (೨) ಜೀವಕೃತ ಪುಣ್ಯವನ್ನು ನಿಮಿತ್ತೀಕರಿಸಿಕೊಂಡು ಪುಣ್ಯಲೋಕವನ್ನು ಹೊಂದಿಸಿ ಕೊಡುತ್ತಾನೆ ಪಾಪವನ್ನು ನಿಮಿತ್ತೀಕರಿಸಿಕೊಂಡು ಪಾಪಿಷ್ಠಲೋಕವನ್ನು ಹೊಂದಿಸಿ ಕೊಡುತ್ತಾನೆ, ಎಂದು ಬ್ರಹ್ಮನಿಗೆ ಕರ್ತೃತ್ವಾಖ್ಯಹೇತುತ್ವ ವ್ಯಪದೇಶನಿಂದಲೂ ಪುಣ್ಯೇನ ಪಾಪೇನ ಎಂದು ಕರ್ಮಕ್ಕೆ ಪರಪ್ರೇರಿತವಲ್ಲ. ಮತ್ತೆ ಕರ್ಮಸತ್ತಾವೂ ಈಶ್ವರನ ಅಧೀನವು, ಅದು ಕರ್ತೃ ಅಲ್ಲ ಎನ್ನುತ್ತಾರೆ.) ದ್ರವ್ಯಂ ಕರ್ಮ ಚ ಎನ್ನುವ ಸ್ಮೃತಿಯಲ್ಲಿಯೂ ಕರ್ಮಸತ್ತಾವನ್ನು ಕುರಿತು ಈಶ್ವರನಿಗೇನೇ ಹೇತುತ್ವವನ್ನು ಹೇಳಿದ್ದರಿಂದಲೂ. ॥ ೪೨ ॥ ೫ ॥

## ಅಧಿಕರಣ ಸಾರಾಂಶ

ಕರ್ಮವೇ ಫಲಪ್ರದವು, ಶ್ರೀಹರಿಯು ಅದರಲ್ಲಿ ಶೇಷಭೂತನೋ, ಅಥವಾ ಶ್ರೀ ಹರಿಯೇ ಫಲಪ್ರದನೋ, ಎಂದು ಸಂದೇಹವು. ಈಶ್ವರನು ಫಲಪ್ರದನು ಎನ್ನುವ ಪಕ್ಷದಲ್ಲಿಯೂ ಕರ್ಮಕ್ಕೆ ವೈಯರ್ಥ್ಯ ಬರಬಾರದಿರುವುದಕ್ಕಾಗಿಯೂ ವೇದಗಳಿಗೆ ಪ್ರಾಮಾಣ್ಯ ಸಿದ್ಧಿಸುವುದಕ್ಕಾಗಿಯೂ ಶ್ರೀಹರಿಗೆ ವೈಷಮ್ಯಾದಿದೋಷವು ಬಾರದಿರುವುದಕ್ಕಾಗಿಯೂ ಮಾಡಿದ ಕರ್ಮಕ್ಕೆ ಫಲವು ಕಂಡದ್ದರಿಂದ ಅವಶ್ಯವಾಗಿ ಕರ್ಮಾಪೇಕ್ಷತ್ವವನ್ನು ಹೇಳಬೇಕು, ರಾತಿರ್ದಾತುಃ ಎನ್ನುವ ಶ್ರುತಿಯಿಂದ, ಏಷ ಹ್ಯೇವ ಇತ್ಯಾದಿಗಳಿಂದ ಶ್ರೀಹರಿಯು ಫಲಪ್ರದ ಕರ್ಮಕ್ಕೆ ಹೇತುವಾಗಿರುವುದರಿಂದ ಅಮುಖ್ಯವಾಗಿ ಕೂಡುವುದರಿಂದಲೂ ಆಪ್ತತಮರಾದ ಜೈಮಿನ್ಯಾಚಾರ್ಯರ ಮತವಾದುದರಿಂದಲೂ ಕರ್ಮವೇ ಪ್ರಧಾನವಾಗಿ ಫಲಪ್ರದವು. ಶ್ರೀಹರಿಯು ಕರ್ಮ ಶೇಷನು, ಎಂದರೆ ಚೇತನಕ್ಕೆ ಯುಕ್ತಿಯಿಂದಲೂ

**ಪುಣ್ಯೇನ ಪುಣ್ಯಂ** ಇತ್ಯಾದಿ ವಿಶೇಷಶ್ರುತಿಯಿಂದಲೂ **ರಾತಿರ್ದಾತುಃ** ಎನ್ನುವ ಶ್ರುತಿಗೆ ಪ್ರಾಬಲ್ಯವಿದ್ದ ಪ್ರಯುಕ್ತ ಗೌಣಾರ್ಥತ್ವವು ಕೂಡದಿರುವುದರಿಂದ ಬ್ರಹ್ಮನೇ ಪ್ರಧಾನವಾಗಿ ಫಲ ಪ್ರದನು ಕರ್ಮವು ಅಲ್ಲ, ಮತ್ತೆ ಕರ್ಮವು ಕರಣವು. ॥ ಅಧಿ. ೨೦ ॥

**ಫಲಾಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ(ದ) ವಿರಚಿತೇ ತೃತೀಯಾಧ್ಯಾಯಸ್ಯ ದ್ವಿತಿಯಃ ಪಾದಃ ॥ ೩—೧ ॥**

ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ಶ್ರೀಮತ್ ವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಮೂರನೇ ಅಧ್ಯಾಯದಲ್ಲಿ ಎರಡನೇ ಪಾದವು ಸಮಾಪ್ತವಾಯಿತು. ॥ ೩—೧ ॥

**ಸಂಪೂರ್ಣ ಗುಣನಿರ್ದೋಷರೂಪಿಣೇ ಮುಕ್ತಿದಾಯಿನೇ ।**
**ವೇದಗಮ್ಯಾಯ ರಾಮಾಯ ನಮಃ ಶ್ರೀಪತಯೇ ಸದಾ ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ತೃತೀಯಾಧ್ಯಾಯ ೩ನೇ ಪಾದ

## ಉಪಾಸನಾಪಾದ

## ೧. ಸರ್ವವೇದಾಧಿಕರಣವು

**ಭಾಷ್ಯ ॥ ಓಂ ಉಪಾಸನಾಽಸ್ಮಿನ್ಪಾದ ಉಚ್ಯತೇ । ಸರ್ವ ಪರಿಜ್ಞಾನಂ ಪ್ರಥಮತ ಉಚ್ಯತೇ ॥ ೧ ॥**

ಭಾಷ್ಯಾರ್ಥ ॥ (ಭಕ್ತಿಯಿಂದ ಸಾಧ್ಯವಾದುದರಿಂದಲೂ ಜ್ಞಾನಕ್ಕೆ ಸಾಧನವಾದುದರಿಂದಲೂ ಭಕ್ತಿನಿರೂಪಣಾನಂತರದಲ್ಲಿ ಜ್ಞಾನನಿರೂಪಣದಿಂದ ಮೊದಲೇ.) ಬ್ರಹ್ಮನ ಉಪಾಸನೆಯು ಈ ಪಾದದಲ್ಲಿ ಹೇಳಲ್ಪಡುತ್ತದೆ. (ಒಂದನೇ ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ.) ಸಮಸ್ತ ಸಚ್ಛಾಸ್ತ್ರ ಶ್ರವಣ ಮನನರೂಪ ಶಾಸ್ತ್ರಾಭ್ಯಾಸ ರೂಪವಾದ ಉಪಾಸನವು ಧ್ಯಾನರೂಪವಾದ ಉಪಾಸನೆಗೆ ಅಂಗಭೂತವಾದುದರಿಂದ ಪ್ರಥಮಾಧಿಕರಣದಲ್ಲಿ ವಿಧಿಸಲ್ಪಡುತ್ತದೆ.

ಪೀಠಿಕೆ ॥ ತಂತಮ್ಮ ಶಾಖೆಯಲ್ಲಿ ಹೇಳಲ್ಪಟ್ಟ ಬ್ರಹ್ಮನೇ ಶ್ರವಣಮನನಗಳಿಂದ ಸರ್ವರಿಂದಲೂ ತಿಳಿಯಲ್ಪಡಬೇಕು. ಸರ್ವಶಾಖೆಗಳಲ್ಲಿ ಹೇಳಲ್ಪಟ್ಟ ಬ್ರಹ್ಮನಲ್ಲ. ಪ್ರತಿ ಶಾಖೆಗಳಲ್ಲಿ ಹೇಳಲ್ಪಡತಕ್ಕ ಅರ್ಥಗಳು ಬೇರೆ ಬೇರೆಯಾಗಿವೆ. ಇಲ್ಲವಾದರೆ ಶಾಖಾ ಭೇದವೇ ಕೂಡದೆ ಹೋಗುವುದು. ಮಂದರಿಗೆ ಸರ್ವಶಾಖೆಗಳಲ್ಲಿ ಹೇಳಲ್ಪಟ್ಟ ಅರ್ಥ ಪರಿಜ್ಞಾನವು ಕೂಡಲಾರದು, ಎಂದು ಶಂಕಾ ಬಂದರೆ—

### ಸೂತ್ರ ॥ ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ॥ ೧ ॥

ಸೂತ್ರಾರ್ಥ ॥ ಬ್ರಹ್ಮನು ಸರ್ವವೇದ ವಿಷಯ ಶ್ರವಣ ಮನನಸಾಧ್ಯ ನಿರ್ಣಯದಿಂದ ಹುಟ್ಟತಕ್ಕ ಜ್ಞಾನವಿಷಯನು, (ಅಂದರೆ— ಯಥಾಶಕ್ತಿ ಸಮಸ್ತವೇದಗಳನ್ನು ಶ್ರವಣಾದಿಗಳಿಂದ ನಿರ್ಣಯಮಾಡಿ ಬ್ರಹ್ಮನನ್ನು ತಿಳಿಯತಕ್ಕದು.) (ತಂತಮ್ಮ ಶಾಖೆಗಳಲ್ಲಿ ಹೇಳಿದ ರೀತಿಯಿಂದ ಮಾತ್ರವಲ್ಲ) ವಿಧಿ ಯುಕ್ತಕಾಣ್ವಾದಿ ಶಾಖೆಗಳಲ್ಲಿ ಕಾಣ್ವರು ಹೀಗೆ ತಿಳಿಯಬೇಕು, ಮಾಧ್ಯಂದಿನರು, ಹೀಗೆ ತಿಳಿಯಬೇಕು ಎಂದು ಅಧಿಕಾರಿವಿಶೇಷವಿಲ್ಲದಿರುವುದರಿಂದ ಅಲ್ಲದೆ ಆತ್ಮೇ ತ್ಯೇವೋಪಾಸೀತ ಇತ್ಯಾದಿ ವಿಧಿಗಳೂ ಸರ್ವಾಧಿಕಾರಿ ಸಾಧಾರಣಗಳಾಗಿವೆ.

ಭಾಷ್ಯ ॥ (೧) ಅಂತೋ ನಿರ್ಣಯಃ ॥ (೨) ಉಭಯೋರಪಿ ದೃಷ್ಟೋಽಂಽತಃ

**(ಗೀ.ಅಧ್ಯಾ.೨. ಶ್ಲೋ.೧೬.) । ಸರ್ವವೇದ ವಿನಿರ್ಣಯೋತ್ಪಾದ್ಯಜ್ಞಾನಂ ಬ್ರಹ್ಮ ॥ (೩) ಆತ್ಮೇತ್ಯೇವೋಪಾಸೀತ (ಬೃ.೩.೪.೭.) । ಇತ್ಯಾದಿ ವಿಧೀನಾಂ ತದುಕ್ತಯುಕ್ತೀನಾಂ ಚಾವಿಶಿಷ್ಟತ್ವಾತ್ ॥ ೧ ॥ ೨ ॥**

**ಭಾಷ್ಯಾರ್ಥ ॥** (೧) ಅಂತಃ = ನಿರ್ಣಯವು, (೨) ಪ್ರಕೃತಿ ಬ್ರಹ್ಮರಿಬ್ಬರ ಅನಾದಿನಿತ್ಯತ್ವದ, ನಿರ್ಣಯವು ತತ್ತ್ವಜ್ಞಾನಿಗಳಿಂದ ಕಾಣಲ್ಪಟ್ಟಿದೆ, ಎನ್ನುವ ಗೀತಾವಚನದಿಂದ ಅಂತಃ ಎನ್ನುವುದಕ್ಕೆ ನಿರ್ಣಯ ಎನ್ನುವ ಅರ್ಥವು ತಿಳಿಯುತ್ತದೆ. (೩) ಬ್ರಹ್ಮನು ಸಮಸ್ತವೇದಗಳ ನಿರ್ಣಯದಿಂದ ಉತ್ಪಾದ್ಯವಾದ ಜ್ಞಾನದಿಂದ ಜ್ಞೇಯನು (ಅಂದರೆ ಧ್ಯಾನಾರ್ಥಿಯು ಶ್ರವಣಮನನಗಳಿಂದ ಸರ್ವವೇದಗಳನ್ನು ನಿರ್ಣಯವು ಮಾಡಿಯೇ ಬ್ರಹ್ಮನನ್ನು ತಿಳಿಯಬೇಕು.) (೪) (ಏಕೆಂದರೆ) ಆತ್ಮಾ ಎಂದೇ ಶ್ರೀಹರಿಯನ್ನು ಉಪಾಸನಾ ಮಾಡತಕ್ಕದು. **ಆತ್ಮಾನಮೇವ ಲೋಕಮುಪಾಸೀತ** ಇದು ಮೊದಲಾದ ಅಲ್ಲಿ ಅಲ್ಲಿ ಹೇಳಿದ ವಿಧಿಗಳು ಸರ್ವಾಧಿಕಾರಿ ಸಾಧಾರಣಗಳಾಗಿವೆ. ಮತ್ತು ಕಾಣ್ವರೇ ಹೀಗೆ ತಿಳಿಯಬೇಕು. ಮಾಧ್ಯಂದಿನರೇ ಹೀಗೆ ತಿಳಿಯಬೇಕು, ಎಂದು ಕಾಣ್ವಾದಿ ಶಾಖೆಗಳಲ್ಲಿ ಅಧಿಕಾರಿವಿಶೇಷ ನಿರ್ದೇಶವೂ ಇಲ್ಲ (ಹಾಗಾದರೆ ಅಧಿಕಾರಿವಿಶೇಷ ನಿರ್ದೋಷವಿಲ್ಲವಾದರೂ ಫಲೋಕ್ತ್ಯಾದಿಗಳಿಂದ ಅಧಿಕಾರಿ ವಿಶೇಷ ನಿಶ್ಚಯವು ಆಗುವುದು. ಎಂದೂ ಹೇಳಕೂಡದು.) ಆತ್ಮಾ ಎಂದೇ ಉಪಾಸನಾ ಮಾಡಬೇಕು ಎನ್ನುವ ವಿಧಿಯಲ್ಲಿ **ಅತ್ರ ಹ್ಯೇತೇ ಸರ್ವ ಏಕೀಭವಂತಿ** ಇತ್ಯಾದಿಗಳಿಂದ ಹೇಳಲ್ಪಟ್ಟ ಯುಕ್ತಿಗಳೂ ಸರ್ವಾಧಿಕಾರಿ ಸಾಧಾರಣಗಳಾಗಿವೆ.

**ವಿಶೇಷಾಂಶ ॥** ಈ ಆತ್ಮತ್ವದಲ್ಲಿ ಆವಾವ ಅಧಿಕಾರಿ ಯೋಗ್ಯಗಳಾದ ಎಲ್ಲಾ ಗುಣಗಳೂ ಅಂತರ್ಭೂತಗಳಾಗುತ್ತವೆ. ಆದಕಾರಣ ಅಪೇಕ್ಷಿತಗಳಾದ ಸರ್ವ ಗುಣಗಳಿಗೂ ಸಂಗ್ರಾಹಕ ಗಳಾಗಿರುವುದರಿಂದ ಆತ್ಮಾ ಎಂದೇ ಉಪಾಸನಾ ಮಾಡಬೇಕು. ಇಂತಹ ಯುಕ್ತಿಗಳು ಹೇಳಲ್ಪಡುತ್ತವೆ. ಈ ಯುಕ್ತಿಗಳು ಸರ್ವಾಧಿಕಾರಿ ಸಾಧಾರಣಗಳೇ ಆಗಿವೆ. ಅಧಿಕಾರಿ ವಿಶೇಷದಲ್ಲಿ ಇರತಕ್ಕದು ಅಲ್ಲ. ಆದಕಾರಣ ಸರ್ವರೂ ಯಥಾಶಕ್ತಿ ಸರ್ವಶಾಖೆಗಳಲ್ಲಿ ಹೇಳಲ್ಪಟ್ಟ ಬ್ರಹ್ಮನನ್ನು ತಿಳಿಯಲೇಬೇಕು. ॥ ೧ ॥ ॥ ೨ ॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ ॥ ೨ ॥

**ಸೂತ್ರಾರ್ಥ ॥** ವಿಜ್ಞಾನಮಾನಂದಂ ಬ್ರಹ್ಮ, ಸತ್ಯಂ ಜ್ಞಾನಂ ಇತ್ಯಾದಿಗಳಿಂದ ಪ್ರತಿ ಶಾಖಾದಲ್ಲಿ ವಸ್ತುಗಳಿಗೆ ಭೇದವನ್ನು ಹೇಳಿದ್ದರಿಂದ ಒಬ್ಬ ಬ್ರಹ್ಮನು ಸರ್ವವೇದಾಂತಗಳಿಂದ ಜ್ಞೇಯನಲ್ಲ (ಆವಾವ ಶಾಖೆಗಳಲ್ಲಿ ಹೇಳಿದ ಪ್ರಕಾರವೇ ಜ್ಞೇಯನು.) ಒಂದೇ ವಸ್ತುವನ್ನು ಅಧಿಕಾರಿಯು ತಿಳಿಯಬೇಕಾಗಿರುವುದರಿಂದ ಎಂದರೆ— ಹಾಗೆ ಹೇಳಕೂಡದು. **ಆತ್ಮೇತ್ಯೇವೋಪಾಸೀತ ಕಂ ಬ್ರಹ್ಮ ಖಂ** ಬ್ರಹ್ಮ ಎಂದು ಒಂದು ಶಾಖೆಯಲ್ಲಿಯೂ (ಅರ್ಥಭೇದವನ್ನು ಹೇಳಿದ್ದರಿಂದ ಒಂದು ಶಾಖೆಯಲ್ಲಿ ಹೇಳಿದ್ದನ್ನೂ ತಿಳಿಯದೆ ಇರಬೇಕಾಗುವುದು.)

ಭಾಷ್ಯ ॥ (೧) ವಿಜ್ಞಾನಮಾನಂದ ಬ್ರಹ್ಮ (ಬೃ.೫.೯.೨೮.) । (೨) ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ.೨.೧.) । ಇತ್ಯಾದಿ ಪ್ರತಿ ಶಾಖಮುಕ್ತಿಭೇದಾನ್ನೈಕಾಧಿಕಾರಿವಿಷಯಾಃ ಸರ್ವಶಾಖಾ ಇತಿ ಚೇನ್ನ ॥ (೩) ಏಕಸ್ಯಾಮಪಿ ಶಾಖಾಯಾಂ ಆತ್ಮೇತ್ಯೇವೋಽಪಾಸೀತ (ಬೃ.೩.೪.೭.) ॥ (೪) ಕಂ ಬ್ರಹ್ಮ (ಉಪಾಸೀತೋಂ) ಖಂ ಬ್ರಹ್ಮ (ಛಾ.೪.೧೦.೫.) । ಇತ್ಯಾದಿ ಭೇದದರ್ಶನಾತ್ ॥ ೨ ॥ ೩ ॥

ಭಾಷ್ಯಾರ್ಥ ॥ (೧) ವಿಜ್ಞಾನಮಾನಂದಂ ಬ್ರಹ್ಮ, ಸತ್ಯಂ ಜ್ಞಾನಂ (ಆದಿಪದದಿಂದ, ಶ್ರೋತಾಮಂತಾ ಯ ಆತ್ಮಾ ಅಪಹತಪಾಪ್ಮಾ) ಇತ್ಯಾದಿಗಳಲ್ಲಿ ಪ್ರತಿಶಾಖೆಗಳಲ್ಲಿಯೂ ಆಯಾಯ ಶಾಖೆಗಳಲ್ಲಿ ಹೇಳಿದ ಅರ್ಥಗಳು ಬೇರೆಬೇರೆಯಾದುದರಿಂದ ಸರ್ವಶಾಖೆಗಳು ಏಕಾಧಿಕಾರಿ ವಿಷಯಕಗಳಲ್ಲ. ಮತ್ತೆ ತಂತಮ್ಮ ಶಾಖೆಗಳಲ್ಲಿ ಹೇಳಿದ ಪ್ರಕಾರವೇ ತಿಳಿಯಬೇಕು. ಎಂದರೆ ಹಾಗೆ ಹೇಳಕೂಡದು. (೨) ಒಂದೇ ಬೃಹದಾರಣ್ಯಕ ಶಾಖೆಯಲ್ಲಿಯೇ ಆತ್ಮೇತ್ಯೇವೋಪಾಸೀತ ಎಂದು ಬ್ರಹ್ಮನಿಗೆ ಆತ್ಮತ್ವವನ್ನು ವಿಧಾನಮಾಡಿ ಕಂ ಬ್ರಹ್ಮ ಇತ್ಯಾದಿಗಳಿಂದ ಜ್ಞಾನಸುಖಾತ್ಮಕತ್ವರೂಪತ್ವವೂ ವಿಧಿಸಲ್ಪಡುತ್ತದೆ. ಹೀಗೆ ಇತರವಾದ ಒಂದೊಂದೇ ಶಾಖೆಯಲ್ಲಿಯೂ ಹೇಳಲ್ಪಡತಕ್ಕ ಅರ್ಥಗಳಿಗೆ ಭೇದವು ಕಂಡದ್ದರಿಂದ ತಂತಮ್ಮ ಶಾಖೆಯಲ್ಲಿ ಹೇಳಿದ ಅರ್ಥಕ್ಕೂ ಅಜ್ಞೇಯತ್ವವು ಬರಬೇಕಾಗಿರುವುದರಿಂದ ಸರ್ವಶಾಖೆಗಳಲ್ಲಿ ಹೇಳಿದ್ದನ್ನು ಒಬ್ಬನು ತಿಳಿಯಬಾರದು ಎಂದು ಹೇಳಕೂಡದು. ॥ ೨ ॥ ೩. ॥

ಪೀಠಿಕೆ ॥ ಹೇತ್ವಂತರದಿಂದ ಈ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಓಂ ॥ ೩ ॥

ಸೂತ್ರಾರ್ಥ ॥ ಸ್ವಾಧ್ಯಾಯೋಽಧ್ಯೇತವ್ಯಃ ಎನ್ನುವ ಸ್ವಾಧ್ಯಯಾಧ್ಯಯನ ವಿಧಿಗೆ ಸರ್ವಾಧಿಕಾರಿ ಸಾಧಾರಣತ್ವವಿದ್ದುದರಿಂದ, (ಸರ್ವಾಧ್ಯಯನವಿಧಾಯಕತ್ವ ಹೇತುವಿನಿಂದ) ಸರ್ವ ಶಾಖಾಸಮುದಾಯವನ್ನು ಅವಿಶೇಷವಾಗಿಯೇ ಅಧ್ಯಯನ ಮಾಡಬೇಕೆಂದು ಹೇಳಿದ್ದರಿಂದಲೂ, ವೇದಃ ಕೃತ್ಸ್ನೋಽಧಿಗಂತವ್ಯಃ ಎನ್ನುವ ಸ್ಮೃತಿಯಿಂದಲೂ, ಸರ್ವವೇದೋಕ್ತಮಾರ್ಗೇಣ ಎನ್ನುವ ಸ್ಮೃತಿಯಿಂದ ಸರ್ವವೇದೋಕ್ತ ಕರ್ಮಗಳನ್ನು ಚೆನ್ನಾಗಿ ಅನುಷ್ಠಾನ ಮಾಡುವ ವಿಷಯದಲ್ಲಿ ಸರ್ವರಿಗೆ ಅಧಿಕಾರವಿದ್ದ ಪ್ರಯುಕ್ತವೂ ಏವಂಚ ಸರ್ವವೇದೋಕ್ತ ಬ್ರಹ್ಮಜ್ಞಾನದಲ್ಲಿ ಸುತರಾಂ ಅಧಿಕಾರವಿದ್ದ ಪ್ರಯುಕ್ತ ಬ್ರಹ್ಮನು ಸರ್ವವೇದಾಂತ ಜ್ಞೇಯನು.

ಭಾಷ್ಯ ॥ (೧) ಸ್ವಾಧ್ಯಾಯೋಽಧ್ಯೇತವ್ಯಃ (ತೈ.ಆ.೨.೧೫.) । ಇತಿ ಸಾಮಾನ್ಯ ವಿಧೇಃ ॥ (೨) ಹಿ ಶಬ್ದಾದ್ವೇದಃ ಕೃತ್ಸ್ನೋಧಿಗಂತವ್ಯಃ ಸ ರಹಸ್ಯೋ ದ್ವಿಜನ್ಮನಾ । ಇತಿ ಸ್ಮೃತೇಃ ॥ (೩) ಸರ್ವ ವೇದೋಕ್ತಮಾರ್ಗೇಣ ಕರ್ಮ ಕುರ್ವೀತ ನಿತ್ಯಶಃ । ಆನಂದೋ ಹಿ ಫಲಂ ಯಸ್ಮಾಚ್ಛಾಖಾಭೇದೋ ಹ್ಯಶಕ್ತಿಜಃ ॥ ಸರ್ವಕರ್ಮಕೃತೌ ಯಸ್ಮಾದಶಕ್ತಾಃ

**ಸರ್ವಜಂತವಃ । ಶಾಖಾ ಭೇದಂ ಕರ್ಮಭೇದಂ ವ್ಯಾಸಸ್ತಸ್ಮಾದಚೀಕ್ಲ್ಪಪತ್ ॥ ಇತಿ ಸಮಾಚಾರೇ ಸರ್ವೇಷಾಮಧಿಕಾರಾಚ್ಚ ॥ ೩ ॥ ೪ ॥**

ಭಾಷ್ಯಾರ್ಥ ॥ (೧) ವೇದವನ್ನು ಅಧ್ಯಯನ ಮಾಡಬೇಕೆಂದು ಸಾಧಾರಣ ವಿಧಿಯು ಸರ್ವಾಧಿಕಾರಿಸಾಧಾರಣವಾದುದರಿಂದ, (೨) ಹಿತಶಬ್ದದಿಂದ ಸೂಚಿತವಾದ, ತ್ರೈವರ್ಣಿಕನಿಂದ ಉಪನಿಷತ್ಸಹಿತವಾದ ಸರ್ವವೇದವೂ ಅರ್ಥಜ್ಞಾನಕ್ಕಾಗಿ ಅಧ್ಯಯನ ಮಾಡತಕ್ಕದು, ಎನ್ನುವ ಸ್ಮೃತಿಯಿಂದ. (೩) ಸಮಸ್ತ ವೇದಗಳನ್ನು ಸರ್ವಶಾಖೆಗಳನ್ನು ಹೊಂದಿ ಸಮಸ್ತ ವೇದಗಳಲ್ಲಿ ಹೇಳಲ್ಪಟ್ಟ ಪ್ರಕಾರ ಅನುಷ್ಠಾನಪೂರ್ವಕವಾಗಿ ಯಜ್ಞಾದಿಕರ್ಮಗಳನ್ನು ಸರ್ವರೂ ಮಾಡತಕ್ಕುದು ಏಕೆಂದರೆ— ವೇದದಲ್ಲಿ ಹೇಳಲ್ಪಟ್ಟ ಸರ್ವ ಕರ್ಮಜ್ಞಾನ, ಅವುಗಳ ಅನುಷ್ಠಾನದಿಂದ ಮೌಕ್ತಸುಯೋದ್ರೇಕವು ಜ್ಞಾನಿಗೆ ಫಲವಾಗುತ್ತದೋ, (ಜ್ಞಾನಿಗಳು ಅಲ್ಲದವರಿಗೆ ಚಿತ್ತಶುದ್ಧ್ಯಾದಿಗಳು ಆಗುತ್ತವೆ.) ಶಾಖಾಭೇದವೂ ಕರ್ಮಭೇದವೂ ಅಸಾಮರ್ಥ್ಯನಿಮಿತ್ತಕವು, ಚೆನ್ನಾಗಿ ಸರ್ವಶಾಖೋಕ್ತ ಕರ್ಮಾಚರಣದಲ್ಲಿಯೂ ಸರ್ವಶಾಖಾಧ್ಯಯನದಲ್ಲಿಯೂ ಯಾವ ಕಾರಣದಿಂದ ಸರ್ವಜಂತುಗಳು ಅಶಕ್ತಗಳೋ, ಆದಕಾರಣ ವೇದವ್ಯಾಸರು ಶಾಖಾಭೇದವನ್ನು ಕರ್ಮಭೇದವನ್ನು ಮಾಡಿದರು. ಹೀಗೆ ವೇದಗಳಲ್ಲಿ ಹೇಳಲ್ಪಟ್ಟ ಸರ್ವಕರ್ಮಗಳನ್ನು ಚೆನ್ನಾಗಿ ಮಾಡುವ ವಿಷಯದಲ್ಲಿ ಎಲ್ಲಾ ಶಾಖಿಗಳಿಗೆ ಅಧಿಕಾರವಿದ್ದಪ್ರಯುಕ್ತವೂ, (ಇತ್ಯಾದಿ ಪ್ರಮಾಣಾನುಸಾರವಾಗಿ ಸರ್ವವೇದೋಕ್ತ ಕರ್ಮಗಳನ್ನು ಮಾಡುವ ವಿಷಯದಲ್ಲಿ ಸರ್ವರಿಗೆ ಅಧಿಕಾರವಿದ್ದ ಪ್ರಯುಕ್ತವೂ ಸರ್ವವೇದೋಕ್ತಬ್ರಹ್ಮಜ್ಞಾನದಲ್ಲಿಯೂ ಅಧಿಕಾರವದೆ.) ॥ ೩ ॥ ೪ ॥

## ಸೂತ್ರ ॥ ಓಂ ಸಲಿಲವಚ್ಚ ತನ್ನಿಯಮಃ ಓಂ ॥ ೪ ॥

ಸೂತ್ರಾರ್ಥ ॥ ಬ್ರಹ್ಮನು ಸರ್ವವೇದಾಂತಜ್ಞೇಯನು ಎನ್ನುವ ನಿಯಮವು ಜಲಗಳಿಗೆ ಸಮುದ್ರಪ್ರಾಪ್ತಿ ನಿಯಮದಂತೆ, ಅಂದರೆ— ಎಲ್ಲಾ ಜಲಗಳಿಗೂ ಸಮುದ್ರವು ಮುಖ್ಯಾಶ್ರಯವು ಎನ್ನುವ ನಿಯಮವು ಶಕ್ತಿಯು ಇರುವಾಗ, ಹೀಗೆಯೇ ಬ್ರಹ್ಮನು ಸರ್ವಶಾಖೆಗಳಿಂದ ಜ್ಞೇಯನು ಎನ್ನುವ ನಿಯಮವೂ ಕೂಡ ಆವಾವ ಪುರುಷರ ಶಕ್ತಿಯನ್ನು ಅಪೇಕ್ಷಿಸಿಯೇ ।

**ಭಾಷ್ಯ ॥ (೧) ಯಥಾ ಸರ್ವಂ ಸಲಿಲಂ ಸಮುದ್ರಂ ಗಚ್ಛತಿ ಏವಂ ಸರ್ವಾಣಿ ವಚನಾನಿ ಬ್ರಹ್ಮಜ್ಞಾನಾರ್ಥಾನಿ । ಇತಿ ನಿಯಮಃ ॥ (೨) ಆಗ್ನೇಯೇ ಚ । ಯಥಾ ನದೀನಾಂ ಸಲಿಲಂ ಶಕ್ಯೇ ಸಾಗರಗಂ ಭವೇತ್ । ಏವಂ ವಾಕ್ಯಾನಿ ಸರ್ವಾಣಿ ಪುಂಶಕ್ತ್ಯಾ ಬ್ರಹ್ಮವಿತ್ತಯೇ । ಇತಿ ॥ ೪ ॥ ೫ ॥**

ಭಾಷ್ಯಾರ್ಥ ॥ (೧) ಸರ್ವಾಸಾಮಪಾಂ ಸಮುದ್ರ ಏಕಾಯನಂ ಇತ್ಯಾದಿ ಶ್ರುತ್ಯುಕ್ತವಾದ ಸರ್ವಜಲವೂ ಸಮುದ್ರಕ್ಕೆ ಹೋಗಿ ಸೇರುತ್ತದೆ, ಎನ್ನುವ ನಿಯಮವು ಹೇಗೆ ಪ್ರತಿಬಂಧಾಭಾವವನ್ನು ಅಪೇಕ್ಷಿಸಿಯೇ ಇರುವುದೋ, ಅತಿ ದೃಢವಲ್ಲ, ಹೀಗೆಯೇ ಸರ್ವವಚನಗಳೂ ಬ್ರಹ್ಮಜ್ಞಾನವೇ ಪ್ರಯೋಜನವಾಗಿ ಉಳ್ಳವುಗಳು, ಎನ್ನುವ ನಿಯಮವೂ ಕೂಡ ಪುರುಷರ ಶಕ್ತಿಯನ್ನು ಅಪೇಕ್ಷಿಸಿಯೇ.

(೨) ಹೇಗೆ ನದಿಗಳ ಜಲವು ಸಮುದ್ರಕ್ಕೆ ಹೋಗಲಿಕ್ಕೆ ಶಕ್ಯವಾಗುತ್ತಿರಲು (ಪ್ರತಿ ಬಂಧಕವು ಇಲ್ಲದಿರಲು) ಸಮುದ್ರಗಾಮಿಯು ಆಗುತ್ತದೋ ಹೀಗೆ ಎಲ್ಲಾ ವಚನಗಳು ಪುರುಷಶಕ್ತ್ಯನುಸಾರವಾಗಿ ಅಧ್ಯಯನದ್ವಾರಾ ಬ್ರಹ್ಮಜ್ಞಾನಕ್ಕೋಸ್ಕರ ಆಗುತ್ತವೆ. (ತಥಾಚ ಯಥಾಶಕ್ತಿ ಅಧೀತ ಸರ್ವವೇದಗಳಿಂದ ಶ್ರವಣಮನನಗಳಿಂದ ಬ್ರಹ್ಮನನ್ನು ತಿಳಿದಿರುವ ಮಂದಾಧಿಕಾರಿಗಳಿಗೂ ಧ್ಯಾನವು ಕೂಡುತ್ತದೆ.) ಎಂದು ಆಗ್ನೇಯ ಪುರಾಣದಲ್ಲಿ ಹೇಳಿದೆ. ॥ ೪ ॥ ೫ ॥

**ಪೀಠಿಕೆ ॥** ಯುಕ್ತಿಯಿಂದ ಸಮರ್ಥಿತವಾದ ಅರ್ಥವನ್ನು ಶ್ರುತಿಸ್ಮೃತಿಗಳಿಂದಲೂ ಸಾಧಿಸತಕ್ಕ ಸೂತ್ರವನ್ನುದಾಹರಿಸುತ್ತಾರೆ—

## ಸೂತ್ರ ॥ ಓಂ ದರ್ಶಯತಿ ಚ ಓಂ ॥ ೫ ॥

**ಸೂತ್ರಾರ್ಥ ॥** ಸರ್ವೈಶ್ಚ ವೇದ್ಯಃ ಎನ್ನುವ ಶ್ರುತಿಯು ಈ ಅರ್ಥವನ್ನು ತೋರಿಸುತ್ತದೆ.

**ಭಾಷ್ಯ ॥ (೧) ಸರ್ವೈಶ್ಚ ವೇದ್ಯಃ ಪರಮೋ ಹಿ ದೇವೋ ಜಿಜ್ಞಾಸ್ಯೋಽಸೌ ನಾಲ್ಪವೇದ್ಯಃ ಪ್ರಸಿದ್ಧೇಃ । ತಸ್ಮಾದೇನಂ ಸರ್ವವೇದಾನಧೀತ್ಯ ವಿಚಾರ್ಯ ಚ ಜ್ಞಾತುಮಿಚ್ಛೇನ್ಮುಮುಕ್ಷುಃ ॥ ಇತಿ ಚತುರ್ವೇದಶಿಖಾಯಾಂ ॥ (೨) ಸರ್ವಾನ್ವೇದಾನ್ ಸೇತಿಹಾಸಾನ್ಸಪುರಾಣಾನ್ ಸಯುಕ್ತಿಕಾನ್ । ಸಪಂಚರಾತ್ರಾನ್ ವಿಜ್ಞಾಯ ವಿಷ್ಣುರ್ಜ್ಞೇಯೋ ನ ಚಾನ್ಯಥಾ ॥ ಇತಿ (ಚ) ಬ್ರಹ್ಮತರ್ಕೇ ॥ ೫ ॥ ಅಧಿ. ೧ ॥ ೬ ॥**

**ಭಾಷ್ಯಾರ್ಥ ॥** (೧) ಯಾವಕಾರಣದಿಂದ ಸರ್ವೋತ್ತಮನಾದ ಶ್ರೀಹರಿಯು ಸಮಸ್ತವೇದಗಳಿಂದಲೇ ಜ್ಞಾತನಾಗುವನೋ, ಅಲ್ಪವೇದಗಳಿಂದ ಜ್ಞಾತನಾಗಲಾರನು, ಆದಕಾರಣ ಸರ್ವವೇದಗಳಿಂದಲೇ ಜಿಜ್ಞಾಸ್ಯನು ಆಗುವನು. ಅಲ್ಪವೇದಗಳಿಂದ ಅಲ್ಲ. ಆದ ಪ್ರಯುಕ್ತ ಮೋಕ್ಷೇಚ್ಛುವು ಶ್ರೀವಿಷ್ಣುವನ್ನು ಅಪರೋಕ್ಷವಾಗಿ ತಿಳಿಯಲಿಕ್ಕೆ ಇಚ್ಛಿಸಿದರೆ, ಆಗ ಸರ್ವವೇದಗಳನ್ನು ಅಧ್ಯಯನ ಮಾಡಿ ಶ್ರವಣ ಮನನಗಳಿಂದ ಶ್ರೀಹರಿಯನ್ನು ತಿಳಿದೇ ಇರಬೇಕು. ಆಗಲೇ ಶ್ರೀಹರಿಯು ಅಪರೋಕ್ಷ ವಿಷಯನಾಗುವನು, ಎಂದು ಚತುರ್ವೇದಶಿಖಾದಲ್ಲಿ ಹೇಳಿದೆ. (೨) ಭಾರತದಿಂದ ಕೂಡಿರುವ ಪುರಾಣಗಳಿಂದ ಕೂಡಿರುವ ಮೀಮಾಂಸದಿಂದ ಯುಕ್ತಗಳಾದ ಪಂಚರಾತ್ರಾಗಮದಿಂದ ಸಹಿತಗಳಾದ ಸರ್ವವೇದಗಳನ್ನು ತಿಳಿದು ಇರತಕ್ಕ ಪುರುಷನಿಂದಲೇ ಶ್ರೀಹರಿಯು ಜ್ಞೇಯನು, ಅಲ್ಪವೇದಗಳನ್ನು ತಿಳಿದವನಿಂದ ಜ್ಞೇಯನಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ॥ ೫ ॥ ೬ ॥

## ಅಧಿಕರಣ ಸಾರಾಂಶ

ಜಿಜ್ಞಾಸಾರಜ್ಯೋಕ್ತಗಳಾದ ಸರ್ವಸಚ್ಛಾಸ್ತ್ರ ಶ್ರವಣಮನನಗಳು ಮಾಡಬಾರದೋ, ಮಾಡಬೇಕೋ, ಆದಕ್ಕಾಗಿ ಪರಬ್ರಹ್ಮನು ತಂತಮ್ಮ ಶಾಯೋಕ್ತಪ್ರಕಾರ ಜ್ಞೇಯನೋ ಅಥವಾ ಸರ್ವವೇದೋಕ್ತಪ್ರಕಾರದಿಂದ ಜ್ಞೇಯನೋ, ಎಂದು ಸಂದೇಹವು. ಬ್ರಹ್ಮನು ಸರ್ವವೇದೋಕ್ತಧರ್ಮ

ದಿಂದ ಜ್ಞೇಯನು ಎನ್ನುವಲ್ಲಿ ಸಾಧಕವಿಲ್ಲ. ಮತ್ತೆ ವೇದರಾಶಿಗಳಿಗೆ ಏಕೈಕಾಧಿಕಾರಿಗಳಾದರೆ ಕಾಣ್ವಾದಿ ಶಾಖಾಭೇದವೂ ಕೂಡಲಾರದು. **ವಿಜ್ಞಾನಮಾನಂದಂ** ಇತ್ಯಾದಿರೂಪದಿಂದ ಪ್ರತಿಶಾಖೆಯಲ್ಲಿ ಅರ್ಥಭೇದೋಕ್ತಿಯೂ ಕೂಡಲಾರದು. ಒಬ್ಬೊಬ್ಬನಿಗೆ ಸರ್ವಶಾಖಾಧ್ಯಯನವು ಇಲ್ಲದಿರುವುದರಿಂದ ಅದಕ್ಕಾಗಿ ಜ್ಞಾನವೂ ಕೂಡಲಾರದು. ಇತ್ಯಾದಿರೂಪವಾದ ಬಾಧಕವೂ ಇಲ್ಲದಿರುವುದರಿಂದ ಆವಾವ ಶಾಖೋಕ್ತಪ್ರಕಾರವೇ ಬ್ರಹ್ಮನನ್ನು ತಿಳಿಯಬೇಕು. ಹಿಂದೆ ಹೇಳಿದ ಪ್ರಕಾರ ಶ್ರವಣಮನನಗಳನ್ನು ಮಾಡಬಾರದು. ಎಂದರೆ— ಭಗವಜ್ಜ್ಞಾನ ಸಂಪಾದನಕ್ಕಾಗಿ ಪ್ರವೃತ್ತಗಳಾದ **ಆತ್ಮೇತ್ಯೇವೋಪಾಸೀತ** ಇದು ಮೊದಲಾದ ಕಾಣ್ವಾದಿ ಆವಾವ ಶಾಖೆಗಳಲ್ಲಿರತಕ್ಕ ವಿಧಿಗಳಿಗೂ, ಭಕ್ತರಿಗೆ **ಅತ್ರ ಹ್ಯೇತೇ ಸರ್ವ ಏಕೀಭವಂತಿ ನ ಚಾಸ್ಯ ಕರ್ಮ ಕ್ಷೀಯತೇ,** ಇತ್ಯಾದಿ ಆವಾವ ವಿಧಿಸಮೀಪದಲ್ಲಿ ಹೇಳಲ್ಪಟ್ಟ ಅರ್ಥವಾದಗಳಿಗೂ **ಸ್ವಾಧ್ಯಾಯೋಽಧ್ಯೇತವ್ಯಃ ವೇದಃ ಕೃತೋಽಧಿಗಂತವ್ಯಃ** ಇತ್ಯಾದಿ ಸ್ವಾಧ್ಯಾಯಾಧ್ಯಯನ ವಿಧಿಗಳೂ ಸರ್ವಾಧಿಕಾರಿ ಸಾಧಾರಣಗಳಾಗಿವೆ. ಮತ್ತೂ **ಸರ್ವವೇದೋಕ್ತ ಮಾರ್ಗೇಣ** ಎನ್ನುವ ಸ್ಮೃತಿಯಿಂದ ಸರ್ವವೇದೋಕ್ತಮಾರ್ಗಗಳನ್ನು ಅನುಷ್ಠಾನ ಮಾಡಲಿಕ್ಕೆ ಸರ್ವರಿಗೂ ಅಧಿಕಾರವು ತಿಳಿದು ಬರುವುದರಿಂದಲೂ ತದನ್ಯಥಾನುಪಪತ್ತಿರೂಪಯುಕ್ತಿಯಿಂದಲೂ **ಸರ್ವಾನ್ ವೇದಾನಧೀತ್ಯ** ಎನ್ನುವ ಶ್ರುತಿಯಿಂದಲೂ **ಸರ್ವಾನ್ ವೇದಾನ್ ಸೇತಿಹಾಸಾನ್** ಎನ್ನುವ ಸ್ಮೃತಿಯಿಂದಲೂ ಒಬ್ಬೊಬ್ಬನಿಗೆ ಸರ್ವಶಾಖಾಧ್ಯಯನದ್ವಾರಾ ಅಲ್ಲಿ ಹೇಳಿದ ಅರ್ಥಜ್ಞಾನದಲ್ಲಿ ಅಧಿಕಾರವು ಅವಗತವಾಗುವುದರಿಂದ ಸಾಧಕವಿದ್ದ ಪ್ರಯುಕ್ತ **ಶಾಖಾಭೇದೋ ಹ್ಯಶಕ್ತಿಜಃ** ಎನ್ನುವ ಸ್ಮೃತಿಯಿಂದ ಕಾಣ್ವಾದಿ ಶಾಖಾಭೇದವು ಅಶಕ್ತಿಮೂಲಕವಾದ ಪ್ರಯುಕ್ತವೂ ಪ್ರತಿಶಾಖೆಯಲ್ಲಿ ಅರ್ಥಭೇದೋಕ್ತಿಯು ಒಂದೊಂದು ಶಾಖೆಯಲ್ಲಿಯೂ ಅರ್ಥಭೇದೋಕ್ತಿಯು ಇದ್ದಂತೆಯೇ ಪ್ರಸಂಗಭೇದ ಅನುವಾದಾದಿರೂಪವಾಗಿ ಸರ್ವವೇದಗಳಲ್ಲಿ ಹೇಳಿದ ಪ್ರಕಾರ ಬ್ರಹ್ಮನು ಜ್ಞೇಯನು ಎನ್ನುವ ನಿಯಮವು **ಸರ್ವಾಸಾಮಪಾಂ** ಎನ್ನುವ ನಿಯಮದಂತೆಯೇ **ಯಥಾ ನದೀನಾಂ** ಎನ್ನುವ ಸ್ಮೃತಿಯಿಂದ **ತತ್ತಚ್ಛಕ್ತ್ಯನುಸಾರೇಣ** ಉಪಪತ್ತಿಯಾಗುವುದರಿಂದ ಹಿಂದೆ ಹೇಳಿದ ಬಾಧಕಗಳು ಇಲ್ಲದಿರುವುದರಿಂದಲೂ ಸರ್ವವೇದಗಳಲ್ಲಿ ಹೇಳಿದ ಪ್ರಕಾರ ಶಕ್ತ್ಯನುಸಾರವಾಗಿ ಸರ್ವಸಚ್ಛಾಸ್ತ್ರಗಳ ಶ್ರವಣಮನನಗಳನ್ನು ಸರ್ವರೂ ಮಾಡಲೇಬೇಕು. ॥ ಅಧಿ.೧ ॥

**ಸರ್ವವೇದಾಧಿಕರಣವು ಸಮಾಪ್ತವಾಯಿತು.**

# ೨ ಉಪಸಂಹಾರಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಜ್ಞಾನಕ್ಕಾಗಿ ಸಾರ್ವತ್ರಿಕ ಬ್ರಹ್ಮಗುಣೋಪಸಂಹಾರವು ಸಮರ್ಥಿಸಲ್ಪಡುತ್ತದೆ—

**ಭಾಷ್ಯ ॥ ಸರ್ವೈರ್ವೇದೈರ್ಜ್ಞೇಯೋ ನೋಪಾಸ್ಯೋಽಶಕ್ಯತ್ವಾದಿತಿ । ಅತ ಆಹ ॥ ೧ ॥**

ಭಾಷ್ಯಾರ್ಥ ॥ ಶ್ರೀಹರಿಯು ಸರ್ವವೇದಗಳಿಂದ ಸರ್ವವೇದೋಕ್ತ ಗುಣವಿಶಿಷ್ಟನೆಂದು

ಜ್ಞೇಯನೇ, ಉಪಾಸ್ಯನಲ್ಲ (ಅಂದರೆ— ಸರ್ವಗುಣಗಳನ್ನು ಉಪಸಂಹಾರ ಮಾಡಿ ಧ್ಯೇಯನಲ್ಲ.) ಸರ್ವವೇದಗಳಲ್ಲಿ ಹೇಳಿದ ಗುಣವಿಷಯಕಧ್ಯಾನವನ್ನು ಮಾಡಲಿಕ್ಕೆ ಶಕ್ತಿಯಿಲ್ಲದಿರುವುದರಿಂದ. (ಜ್ಞಾನವಾದರೂ ಕ್ರಮದಿಂದ ಹುಟ್ಟತಕ್ಕುದು. ಆದುದರಿಂದ ಶಕ್ಯವೇ ಆಗಿದೆ. ಆದಾಗ್ಯೂ ಸರ್ವವೇದೋಕ್ತಪ್ರಕಾರದಿಂದ ಯುಪತ್ ಸರ್ವಗುಣೋಪಸಂಹಾರದಿಂದ ಧ್ಯಾನವು ಕೂಡದಿರುವುದರಿಂದ ಆದಕ್ಕಾಗಿ ಹೇಳಿದ ಸರ್ವಜ್ಞಾನವು ವ್ಯರ್ಥವು.) ಎಂದು ಶಂಕಾ ಬಂದರೆ ಉತ್ತರಿಸುತ್ತಾರೆ—

## ಸೂತ್ರ ॥ ಓಂ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ ಓಂ ॥ ೬ ॥

**ಸೂತ್ರಾರ್ಥ ॥** ಸರ್ವವೇದೋಕ್ತ ಅರ್ಥಗಳೂ ಅಂದರೆ— ಆನಂದಾದಿಗುಣಗಳು, ಅಪಹತಪಾಪ್ಮತ್ವಾದಿ ದೋಷಾಭಾವಗಳೂ ಇವುಗಳಿಗೆ ಅಭೇದದಿಂದ (ಅಂದರೆ, ವಿಭಾಗ ವಿಲ್ಲದೆ) ಉಪಸಂಹಾರವು (ಅಂದರೆ— ಯುಗಪತ್ ಬುದ್ಧ್ಯಾರೋಪಣಪೂರ್ವಕವಾಗಿ ಧ್ಯಾನವು) ಮಾಡಲ್ಪಡತಕ್ಕುದು. (ಅಂದರೆ— ವಿಭಾಗವಿಲ್ಲದೆ ಅವುಗಳನ್ನು ಉಪಸಂಹಾರ ಮಾಡಿ ಬ್ರಹ್ಮನನ್ನು ಧ್ಯಾನಿಸಬೇಕು.) ಹೇಗೆ ವಿಹಿತವಾದ ಪ್ರಯುಕ್ತ ಸಂಧ್ಯಾವಂದನಾದಿ ಕರ್ಮವನ್ನು ಮಾಡಬೇಕೋ, ಹೀಗೆಯೇ **ಉಪಾಸ್ಯ** ಏಕಃ ಇತ್ಯಾದಿ ಶ್ರುತಿವಿಹಿತವಾದ ಪ್ರಯುಕ್ತ ಹಿಂದೆ ಹೇಳಿದ ಸರ್ವಗುಣೋಪಸಂಹಾರ ಪೂರ್ವಕ ಧ್ಯಾನವನ್ನು ಮಾಡಬೇಕು. ಯೋಗ್ಯಗುಣವಿಷಯದಲ್ಲಿಯೇ ಉಪಸಂಹಾರವನ್ನು ಮಾಡಬೇಕು. ಅಯೋಗ್ಯವಾದ ರೋದನಾದಿ ವಿಷಯದಲ್ಲಿ ಉಪಸಂಹಾರ ಮಾಡಕೂಡದು.

**ಭಾಷ್ಯ ॥ (೧) ಸರ್ವವೇದೋಕ್ತಾನ್ ಗುಣಾನ್ ದೋಷಾಭಾವಾಂಶ್ಚೋಪಸಂ ಹೃತ್ಯೈವ ಪರಮಾತ್ಮೋಪಾಸ್ಯ ॥ (೨) ಉಪಾಸ್ಯ ಏಕಃ ಪರತಃ ಪರೋ ಯೋ ವೇದೈಶ್ಚ ಸರ್ವೈಃ ಸಹ ಚೇತಿಹಾಸ್ಯೈಃ ಸಪಂಚರಾತ್ರೈಃ ಸಪುರಾಣೈಶ್ಚ ದೇವಃ ಸರ್ವೈರ್ಗುಣೈಸ್ತತ್ರಪ್ರತೀತೈಃ । ಇತಿ(ಹಿ) ಭಾಲ್ಲವೇಯಶ್ರುತಿಃ ॥೨ ॥**

**ಭಾಷ್ಯಾರ್ಥ ॥** (೧) ಸರ್ವವೇದಗಳಲ್ಲಿ ಹೇಳಿದ ಗುಣಗಳನ್ನು (ವಿಧಿಮುಖವೇದ್ಯಗಳಾದ ಆನಂದ ಮೊದಲಾದ ಧರ್ಮಗಳು ಗುಣಗಳು.) ನಿಷೇಧಮುಖ ವೇದ್ಯಗಳಾದ ಅಪಹತಪಾಪ್ಮತ್ವ, ನಿರ್ದುಃಖತ್ವ, ಮೊದಲಾದ ದೋಷಾಭಾವಗಳನ್ನು ಉಪಸಂಹಾರ ಮಾಡಿಯೇ ಶ್ರೀಹರಿಯು ಧ್ಯೇಯನು. (ಏಕೆಂದರೆ— ಉಪಾಸ್ಯ ಏಕಃ ಎನ್ನುವ ಶ್ರುತಿಯು ಸರ್ವಗುಣಗಳನ್ನುಪಸಂಹಾರ ಮಾಡಿ ಶ್ರೀಹರಿಯ ಧ್ಯಾನವನ್ನು ವಿಧಿಸುತ್ತದೆ. ವಿಹಿತಕ್ರಿಯೆಗಳಿಗೆ ಲೋಪವು ಬಂದರೆ, ಅನರ್ಥವು ಪ್ರಾಪ್ತವಾಗುವುದು. ಸಂಧ್ಯಾವಂದನಾದಿಗಳಲ್ಲಿ ಹಾಗೆ ಕಂಡದೆ) (೨) ರಮಾದಿಗಳಿಂದಲೂ ಉತ್ತಮನಾದ ಶ್ರೀಹರಿಯು ಭಾರತಾದಿ ಇತಿಹಾಸಗಳಿಂದ ಕೂಡಿದ, ಪಂಚರಾತ್ರಾಗಮಗಳಿಂದೊಡ ಗೂಡಿದ ಪುರಾಣಗಳಿಂದ ಯುಕ್ತಗಳಾದ ಸರ್ವವೇದಗಳಿಂದ, ವೇದಪುರಾಣಗಳಲ್ಲಿ ಪ್ರತಿಪಾದಿತಗಳಾದ ಸರ್ವಗುಣಗಳಿಂದಲೂ ದೋಷಾಭಾವಗಳಿಂದಲೂ ವಿಭಾಗವಿಲ್ಲದೆ ಉಪಾಸ್ಯನು ಎಂದು ಭಾಲ್ಲವೇಯ ಶ್ರುತಿಯು. ॥ ೨ ॥

**ಭಾಷ್ಯ ॥ ಆಗ್ನೇಯೇ ಚ । ವಿಧಿಶೇಷಾಣಿ ಕರ್ಮಾಣಿ ಸರ್ವವೇದೋದಿತಾನ್ಯಪಿ । ಯಥಾ ಕಾರ್ಯಾಣಿ ಸರ್ವೈಶ್ಚ ಸರ್ವಾಙ್ಗೈೇವಾವಿಶೇಷತಃ ॥ ಏವಂ ಸರ್ವಗುಣಾನ್ ಸರ್ವದೋಷಾಭಾವಾಂಶ್ಚ ಯತ್ನತಃ । ಯೋಜಯಿತ್ವೈವ ಭಗವಾನುಪಾಸ್ಯೋ ನಾನ್ಯಥಾ ಕ್ವಚಿತ್ ॥ ಇತಿ ॥ ೩ ॥**

**ಭಾಷ್ಯಾರ್ಥ ॥** ಸೋಮೇನ ಯಜೇತ ಇತ್ಯಾದಿ ವಿಧಿವಿಹಿತಗಳಾದ ಜ್ಯೋತಿಷ್ಟೋಮ ಮೊದಲಾದ ಕರ್ಮಗಳು, ತಂತಮ್ಮ ಶಾಖಾವಿಧಿ ವಿಹಿತಗಳು ಮಾತ್ರವಲ್ಲ ಮತ್ತು ಸರ್ವವೇದಗಳಲ್ಲಿ ಹೇಳಲ್ಪಟ್ಟವುಗಳೂ, ವೇದಗಳಲ್ಲಿ ಹೇಳಲ್ಪಟ್ಟವುಗಳು ಎಷ್ಟು ಇರುತ್ತವೋ, ಅವುಗಳೆಲ್ಲವೂ, ಅಧಿಕಾರಿವಿಶೇಷ ವಿಭಾಗವಿಲ್ಲದೆ, ಸರ್ವಶಾಖಿಗಳಿಂದಲೂ ಹೇಗೆ ಮಾಡಲ್ಪಡತಕ್ಕವುಗಳೋ, ಹೀಗೆಯೇ ಶ್ರೀಹರಿಯು ಸರ್ವವೇದೋಕ್ತ ಗುಣಗಳನ್ನು ದೋಷಾಭಾವಗಳನ್ನು ಶ್ರವಣಾದಿರೂಪಪ್ರಯತ್ನದಿಂದ ಶಕ್ತ್ಯನುಸಾರ ವಾಗಿ ಉಪಸಂಹಾರ ಮಾಡಿಯೇ ಸರ್ವರಿಂದ ಉಪಾಸ್ಯನು. ಎಲ್ಲಿಯೂ ಕಾಲ ದೇಶ ಪುರುಷರಲ್ಲಿ ಹೇಳಿದ್ದಕ್ಕೆ ಅನ್ಯಥಾಭಾವವು ಇಲ್ಲ ॥ ೩ ॥

**ಭಾಷ್ಯ ॥ (೧) ಸಮಾನವಿಷಯೇ ಚೋಪಸಂಹಾರಃ । ನ ತು ಸೋಽರೋದೀತ್** (ತೈ.ಸ.೧.೫.೧.) **। ಇತ್ಯಾದೀನಾಂ ॥ (೨) ಗುಣೈರೇವ ಸ ತೂಪಾಸ್ಯೋ ನೈವ ದೋಷೈಃ ಕಥಂಚನ । ಗುಣೈರಪಿ ನ ತೂಪಾಸ್ಯೋ ಯೇ ಪೂರ್ಣತ್ವವಿರೋಧಿನಃ ॥ ಇತಿ (ಹಿ) ಬೃಹತ್ತಂತ್ರೇ ॥ ೬ ॥ ೪ ॥**

**ಭಾಷ್ಯಾರ್ಥ ॥** (೧) ಯೋಗ್ಯ ಗುಣವಿಷಯದಲ್ಲಿಯೇ ಉಪಸಂಹಾರವು. **ಸೋಽರೋದೀತ್** ಇತ್ಯಾದಿ ವಾಕ್ಯಬೋಧ್ಯಗಳಾದ ಅಯೋಗ್ಯಗಳಾದ ಅರ್ಥಗಳ ಉಪಸಂಹಾರವು ಮಾಡಕೂಡದು. (ಅಯೋಗ್ಯೋಪಾಸನದಿಂದ ಅನರ್ಥ ಪ್ರಾಪ್ತಿಯಾಗುವುದು.) (೨) ಆ ಶ್ರೀಹರಿಯು ಜ್ಞಾನ ಆನಂದ ಮೊದಲಾದ ಗುಣಗಳಿಂದಲೇ ಉಪಾಸ್ಯನು. ದುಃಖಾದಿದೋಷಗಳಿಂದ ಸರ್ವಥಾ ಉಪಾಸ್ಯನಲ್ಲ. ಪೂರ್ಣತ್ವಕ್ಕೆ ವಿರೋಧಿಗಳಾದವುಗಳು ಯಾವುವು ಮಿತಭುಕ್ತ್ವಾದಿಗಳೋ ಅಂತಹ ಗುಣಗಳಿಂದಲೂ ಶ್ರೀಹರಿಯು ಉಪಾಸ್ಯನೇ ಅಲ್ಲ (ಮಿತಭುಕ್ತ್ವಾದಿಗಳು ಲೋಕದಲ್ಲಿ ಗುಣಗಳಾದಾಗ್ಯೂ ಈಶ್ವರನಲ್ಲಿ ದೋಷಗಳಾಗುತ್ತವೆ. ಈಶ್ವರನಿಗೆ ಬಹುಭುಕ್ತ್ವವೇ ಗುಣವು.) ಎಂದು ಬೃಹತ್ತಂತ್ರದಲ್ಲಿ ಹೇಳಿದೆ. ॥ ೪॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರ ವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನ್ಯಥಾತ್ವಂ ಚ ಶಬ್ದಾದಿತಿ ಚೇನ್ನಾವಿಶೇಷಾತ್ ಓಂ ॥ ೭ ॥

**ಸೂತ್ರಾರ್ಥ ॥** (೧) ಆತ್ಮೇತ್ಯೇವೋಪಾಸೀತ ಎನ್ನುವ ಶ್ರುತಿಯಿಂದ ಉಪಸಂಹಾರಕ್ಕೆ ಅಕರ್ತವ್ಯತ್ವವು ಏವ ಎನ್ನುವ ಅವಧಾರಣದಿಂದ ಆತ್ಮತ್ವದಿಂದ ಇತರ ಗುಣಗಳನ್ನು ಧ್ಯಾನ ಮಾಡಬಾರದೆಂದು ತೋರುವುದರಿಂದ, ಎಂದರೆ, ಹಾಗೆ ಹೇಳಕೂಡದು. ಏತೇ ಗುಣಾಃ ನೋಪಾಸ್ಯಾಃ ಎಂದು ವಿಶೇಷಪ್ರಮಾಣವಿಲ್ಲದಿರುವುದರಿಂದ.

**ಭಾಷ್ಯ ॥ (೧) ಆತ್ಮೇತ್ಯೇವೋಪಾಸೀತ** (ಬೃ.೩.೪.೭.) **। ಇತಿಶಬ್ದಾದುಪ ಸಂಹಾರಸ್ಯಾನ್ಯಥಾತ್ವಮಿತಿ ಚೇನ್ನ । ಏತೇ ಗುಣಾನೋಪಾಸ್ಯಾ ಇತಿ ವಿಶೇಷ ವಚನಾಭಾವಾತ್ ॥ (೨) ಸರ್ವೈಗುಣೈರೇಕ ಏವೇಶಿತಾಸಾವುಪಾಸಿತವ್ಯೋ ನ ತು ದೋಷೈಃ ಕದಾಚಿತ್ । ಇತಿ ವಿಶೇಷವಚನಾಚ್ಚ ॥ (೩) ಆತ್ಮೇತ್ಯೇವೇತ್ಯ ವಧಾರಣಮನಾತ್ಮತ್ವನಿವೃತ್ತ್ಯರ್ಥಂ ॥ ೭ ॥ ೫ ॥**

ಭಾಷ್ಯಾರ್ಥ ॥ (೧) ಆತ್ಮೇತ್ಯೇವೋಪಾಸೀತ ಎನ್ನುವ ಶ್ರುತಿಯಿಂದ, ಏವಕಾರದಿಂದ ಆತ್ಮತ್ವದಿಂದ ಇತರಗಳಾದ ಗುಣಗಳ ಉಪಾಸನಾವನ್ನು ನಿಷೇಧ ಮಾಡಿದ್ದರಿಂದ, ಸರ್ವಗುಣಗಳ ಉಪಸಂಹಾರಕ್ಕೆ ಆಕರ್ತವ್ಯತ್ವವು ಎಂದರೆ, ಹಾಗೆ ಹೇಳಕೂಡದು. ಈ ಗುಣಗಳನ್ನು ಉಪಾಸನಾ ಮಾಡಬಾರದು. ಎನ್ನುವ ವಿಶೇಷ ವಚನವು ಇಲ್ಲದಿರುವುದರಿಂದಲೂ, (೨) ಸರ್ವೇಶ್ವರನು ಅಭಿನ್ನನೇ ಸರ್ವವೇದೋಕ್ತಗಳಾದ ಪೂರ್ಣತ್ವಕ್ಕೆ ಅವಿರೋಧಗಳಾದ ಧರ್ಮಗಳಿಂದಲೇ ಉಪಸಂ ಹಾರಪೂರ್ವಕ ಧ್ಯೇಯನು, ಯಾವಾಗಲೂ ದುಃಖಾದಿದೋಷಗಳಿಂದ ಧ್ಯೇಯನಲ್ಲ ಎಂದು ಸರ್ವಗುಣೋಪಸಂಹಾರದಲ್ಲಿ ವಿಶೇಷ ವಚನವಿದ್ದಪ್ರಯುಕ್ತವೂ (ಸರ್ವಗುಣಗಳನ್ನು ಉಪಸಂಹಾರ ಮಾಡಬಾರದೆಂದು ಹೇಳಬಾರದು. (೩) ಆತ್ಮೇತ್ಯೇವ ಎನ್ನುವ ಆತ್ಮತ್ವಾವಧಾರಣದಿಂದಲೇ ಆತ್ಮತ್ವದಿಂದ ಇತರಗಳಾದ ಗುಣಗಳನ್ನು ಉಪಾಸನಾ ಮಾಡಬಾರದೆಂದು ಸಿದ್ಧಿಸುತ್ತದೆ ಎಂದರೆ) ಆತ್ಮೇತ್ಯೇವ ಎನ್ನುವ ಅವಧಾರಣವು ಆತ್ಮತ್ವಾಯೋಗವ್ಯವಚ್ಛೇದಕ್ಕಾಗಿ, ಆತ್ಮತ್ವದಿಂದ ಇತರಗಳಾದ ಗುಣಗಳ ವ್ಯವಚ್ಛೇದಕ್ಕಾಗಿ ಅಲ್ಲ. ಅಂದರೆ, ಶ್ರೀಭಗವಂತನನ್ನು ಆತ್ಮಾ ಎಂದೇ ಉಪಾಸನಾ ಮಾಡಬೇಕು. ಅನಾತ್ಮಾ ಎಂದು ಉಪಸನಾ ಮಾಡಬಾರದು, ಹೀಗೆ ಉತ್ತಮಾಧಿಕಾರಿಗಳನ್ನು ಕುರಿತು ಆತ್ಮತ್ವಾಯೋಗ ವ್ಯವಚ್ಛೇದಕವು ಏವಕಾರವು, ಆತ್ಮತ್ವೇತರ ಗುಣಗಳಿಗೆ ವ್ಯವಚ್ಛೇದಕವಲ್ಲ ॥ ೫ ॥

ಪೀಠಿಕೆ ॥ ಅಶಕ್ಯವಾದ ಪ್ರಯುಕ್ತ ಈ ಸರ್ವಗುಣೋಪಸಂಹಾರವು ಯುಕ್ತವಲ್ಲ ಎಂಬೀ ಆಶಂಕೆಯನ್ನು ಅಂಗೀಕರಿಸಿಕೊಂಡು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನ ವಾ ಪ್ರಕರಣಭೇದಾತ್ಪರೋವರೀಯಸ್ತ್ವಾದಿವತ್ ಓಂ ॥ ೮ ॥

**ಭಾಷ್ಯ ॥ ಪ್ರಕರಣಭೇದಾನ್ನವೋಪಸಂಹಾರಃ ಕಾರ್ಯಃ । ಪರೋವರೀಯಸ್ತ್ವಾದಿಷು ತಾವದೇವ ಹ್ಯುಕ್ತಂ ॥ ೮ ॥ ೬ ॥**

ಭಾಷ್ಯಾರ್ಥ ॥ (೧) ಪರೋವರೀಯಃ ವೈಶ್ವಾನರಾದಿ ವಿದ್ಯೆಗಳಿಗೆ ಭೇದವಿದ್ದ ಪ್ರಯುಕ್ತ ಉಪಸಂಹಾರವು ಮಾಡದೇನೂ ಇರಬಹುದು. (ಒಬ್ಬೊಬ್ಬನಿಗೆ ಸರ್ವ ಗುಣೋಪಾಸನವು ಆಗುವುದಾದರೆ, ಕಾರಣವಿಲ್ಲದೆ ಬೇರೆ ಬೇರೆ ಪ್ರಕರಣಗಳೂ ಬೇಕಾಗಿಲ್ಲ) (೨) ಒಂದೊಂದು ಪ್ರಕರಣದಲ್ಲಿಯೂ ಸರ್ವಗುಣೋಕ್ತಿಯು ಕೂಡುವುದರಿಂದ ಪ್ರಕರಣಭೇದವಿದ್ದರೂ ಸರ್ವಗುಣೋ ಪಾಸನೆಯು ಕೂಡಬಹುದೆಂದರೆ—) ಸ ಏಷ ಪರೋವರೀಯಾನ್ ಇತ್ಯಾದಿ ಪರೋವರೀಯಸ್ತ್ವಾದಿ

ಗಳೇ ಉಪಾಸ್ಯಗಳೆಂದು ಹೇಳಲ್ಪಟ್ಟವೆ. (ಸರ್ವಗುಣಗಳು ಉಪಾಸ್ಯಗಳು ಎಂದು ಹೇಳಲ್ಪಡಲಿಲ್ಲ. ಹೀಗೆಯೇ ಪ್ರಕರಣಾಂತರಗಳಲ್ಲಿಯೂ ತಿಳಿಯತಕ್ಕುದು.) ॥ ೮ ॥ ೬ ॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ಓಂ ॥ ೯ ॥

**ಸೂತ್ರಾರ್ಥ ॥** ಸೋಽಹಂ ನಾಮವಿದೇವ ಎನ್ನುವ ಶ್ರುತಿಯಿಂದ ಸರ್ವವಿದ್ಯೆಗಳಿಗೆ ಈಶ್ವರನಾಮತ್ವವಿದ್ದುದರಿಂದ (ಅಂದರೆ, ಈಶ್ವರಗುಣವಾಚಕತ್ವವಿದ್ದುದರಿಂದ) (ಅದು ಧ್ಯಾನಕ್ಕೆ ಉಪಯುಕ್ತವಾದ ಪ್ರಯುಕ್ತ) ಉಪಸಂಹಾರವನ್ನು ಮಾಡಬೇಕು. ಎಂದರೆ, ಉಪಸಂಹಾರಕ್ಕೆ ಕರ್ತವ್ಯತ್ವವು ನಮ್ಮಿಂದ ಮೊದಲೇ ಉಕ್ತವಾಗಿದೆ. ನಾಮ ವಾ ಏತಾಃ ಬ್ರಹ್ಮಣಃ ಎನ್ನುವ ಶ್ರುತಿರೂಪಪ್ರಮಾಣವೂ ಇದೆ. ಪ್ರಯತ್ನೇನೋಪಸಂಹಾರೇ ಫಲಾಧಿಕ್ಯಬೋಧನಾರ್ಥಂ ಬಹುಪ್ರಮಾಣ ಗ್ರಹಣಾರ್ಥಂ ಚ ಪುನಃ ಪುನಃ ಉಪಸಂಹಾರೋಪನ್ಯಾಸಃ ಎಂದು ತತ್ವಪ್ರದೀಪದಲ್ಲಿ ಹೇಳಿದೆ.

**ಭಾಷ್ಯ ॥ (೧) ಸರ್ವವಿದ್ಯಾ ಉಕ್ತ್ವಾ ಸೋಽಹಂ ನಾಮವಿದೇವಾಸ್ಮಿ ನಾತ್ಮವಿತ್** (ಛಾ.೭.೧.೩.) **। ಇತಿ ವಚನಾತ್ಸರ್ವಸ್ಯ ಬ್ರಹ್ಮನಾಮತ್ವಾತ್ತದುಪ ಸಂಹಾರಃ ಕಾರ್ಯಃ। (೨) ನಾಮತ್ವಾತ್ಸರ್ವವಿದ್ಯಾನಾಂ ಗುಣಾನಾಮುಪಸಂಹೃತಿಃ ॥ (೩) ಕಾರ್ಯೈವ ಬ್ರಹ್ಮಣಿ ಪರೇ ನಾತ್ರ ಕಾರ್ಯಾ ವಿಚಾರಣಾ। ಇತಿ (ಚ) ಬ್ರಹ್ಮತರ್ಕೇ ಇತಿ ಚೇತ್ ಸತ್ಯಂ। ಉಕ್ತೋ ಹ್ಯುಪಸಂಹಾರಃ। ತತ್ಪ್ರಮಾಣಮಸ್ತ್ಯೇವ ॥ (೪) ನಾಮ ವಾ ಏತಾ ಬ್ರಹ್ಮಣಃ ಸರ್ವವಿದ್ಯಾಸ್ತಸ್ಮಾದೇಕಃ ಸರ್ವಗುಣೈರ್ವಿಚಿಂತ್ಯಃ । ಇತಿ ಕೌಂಡಿನ್ಯಶ್ರುತೌ ॥ ೯ ॥ ಅಧಿ. ೨ ॥ ೭ ॥**

**ಭಾಷ್ಯಾರ್ಥ ॥** (೧) ಋಗ್ವೇದಂ ಭಗವಃ ಅಧ್ಯೇಮಿ ಇತ್ಯಾದಿಗಳಿಂದ ನಾರದರು ಸನತ್ಕುಮಾರರನ್ನು ಕುರಿತು ಸರ್ವವಿದ್ಯೆಗಳೂ ತನ್ನಿಂದ ಅಧೀತಗಳಾಗಿವೆ ಎಂದು ಹೇಳಿ, ಸರ್ವವಿದ್ಯೆಗಳನ್ನು ತಿಳಿದಿರತಕ್ಕ ನಾನು ಶ್ರೀಹರಿಯ ನಾಮಜ್ಞಾನಿಯೇ ಆಗಿರುತ್ತೇನೆ. ಭಗವತ್ಸ್ವರೂಪ ನಿರ್ಣಯಜ್ಞಾನವಿಲ್ಲದಿರುವುದರಿಂದ ಭಗವತ್ಸ್ವರೂಪವನ್ನು ತಿಳಿದವನಲ್ಲ ಎಂದು ಹೇಳಿದ್ದರಿಂದ ಎಲ್ಲಾ ವಿದ್ಯಾಸಮುದಾಯವೂ ಬ್ರಹ್ಮನ ನಾಮವಾದುದರಿಂದ (ನಾಮಗಳು ಮಹಾಯೋಗ ವಿದ್ವದ್ರೂಢಿಗಳಿಂದ ಭಗವದ್ಗುಣ ಪ್ರತಿಪಾದಕಗಳಾದುದರಿಂದ ಗುಣಾಭಿಧಾನವು ಉಪಸಂಹಾರಾರ್ಥ ವಾದುದರಿಂದ) ವೇದೋಕ್ತ ಗುಣೋಪಸಂಹಾರವು ಮಾಡತಕ್ಕುದೋ, (೨) ಸರ್ವ ವಿದ್ಯೆಗಳಿಗೆ ಬ್ರಹ್ಮನಾಮತ್ವವಿದ್ದುದರಿಂದ (ಸರ್ವಗುಣಗಳನ್ನು ಹೇಳತಕ್ಕವುಗಳಾದುದರಿಂದ ಗುಣಾಭಿಧಾನವು ಉಪಸಂಹಾರಾರ್ಥವಾದುದರಿಂದ) ಪರಬ್ರಹ್ಮನಲ್ಲಿ ಗುಣಗಳ ಉಪಸಂಹಾರವು ಮಾಡತಕ್ಕುದೇ. ಈ ವಿಷಯದಲ್ಲಿ ವಿಚಾರವು ಮಾಡಕೂಡದು, ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. (೩) ಎಂದರೆ, ಯುಕ್ತಿಪೂರ್ವಕವಾಗಿ ಗುಣೋಪಸಂಹಾರವನ್ನು ಮಾಡಬೇಕೆಂದು ಹೇಳಿದ್ದು ಯುಕ್ತವೇ. ಏಕೆಂದರೆ—

ಉಪಸಂಹಾರವು ಕರ್ತವ್ಯವೆಂದೇ ಉಕ್ತವಾಗಿದೆ. ಉಪಸಂಹಾರವನ್ನು ಮಾಡಬೇಕೆಂದು ಹೇಳಿದ ವಿಷಯದಲ್ಲಿ ಶ್ರುತಿರೂಪವಾದ ಪ್ರಮಾಣವೂ ಇದೆ. (೪) ಈ ಸರ್ವವಿದ್ಯೆಗಳೂ ಪರಬ್ರಹ್ಮನ ನಾಮವೇ. ಆದಕಾರಣ ವಿಷ್ಣು ಒಬ್ಬನೇ ಸರ್ವಗುಣಗಳಿಂದ ಉಪಸಂಹಾರಪೂರ್ವಕವಾಗಿ ಉಪಾಸ್ಯನು, ಹೀಗೆ ಕೌಂಡಿನ್ಯಶ್ರುತಿಯಲ್ಲಿ ಹೇಳಿದೆ. ॥ ೯ ॥ ೭ ॥

## ಅಧಿಕರಣ ಸಾರಾಂಶ

ಸರ್ವವೇದೋಕ್ತಪರಿಜ್ಞಾನವು ಅನಾವಶ್ಯಕವೋ ಆವಶ್ಯಕವೋ, ಅದಕ್ಕಾಗಿ ಸಾರ್ವತ್ರಿಕ ಗುಣೋಪಸಂಹಾರ ಅನುಪಸಂಹಾರಗಳಿಂದ ವೇದಾರ್ಥಭೂತ ಬ್ರಹ್ಮಧ್ಯಾನವು ಅಯುಕ್ತವೋ ಯುಕ್ತವೋ ಎಂಬ ಸಂದೇಹವು. ಉಭಯಥಾऽಪಿ ಧ್ಯಾನವು ಕೂಡುವುದಿಲ್ಲ. ಹೇಗೆಂದರೆ— ಉಪಸಂಹಾರಪೂರ್ವಕವಾಗಿ ಧ್ಯಾನವನ್ನು ಮಾಡಬೇಕೆನ್ನುವ ಪಕ್ಷವು ಯುಕ್ತವಲ್ಲ. ಸರ್ವಪರಿಜ್ಞಾನವು ಕ್ರಮಭಾವಿಯಾದುದರಿಂದ ಶಕ್ಯವಾದಾಗ್ಯೂ ಸಾರ್ವತ್ರಿಕ ಸರ್ವಗುಣಗಳಿಗೆ ಏಕಬುದ್ಧಿಯಲ್ಲಿ ಉಪಾರೂಢತ್ವರೂಪವಾದ ಸರ್ವಗುಣೋಪಸಂಹಾರವು ಅಶಕ್ಯವಾಗಿದೆ. ಸರ್ವರಿಗೆ ಅಶಕ್ಯವಾದಾಗ್ಯೂ ಕೆಲವರಿಗೆ ಹಾಗೆ ಧ್ಯಾನಿಸುವುದು ಶಕ್ಯವೆನ್ನುವ ಕಲ್ಪನೆಯು ಕಲ್ಪಕವಿಲ್ಲದಿರುವುದರಿಂದ ಅಯುಕ್ತವು. ಮತ್ತು **ಆತ್ಮೇತ್ಯೇವೋಪಾಸೀತ** ಎಂದು ಸಾವಧಾರಣವಾದ ಆತ್ಮತ್ವವನ್ನು ಮಾತ್ರ ಉಪಾಸನ ಮಾಡಬೇಕೆನ್ನುವ ವಿಧಿವಾಕ್ಯದಿಂದ ವಿರುದ್ಧವೂ ಆಗಿದೆ, ಮತ್ತು ಪರೋವರೀಯಃ ವೈಶ್ವಾನರ ಮೊದಲಾದ ಪ್ರಕರಣಭೇದವು ಕೂಡಲಾರದು, ಹೀಗೆಯೇ ಕತಿಪಯಗುಣಗಳನ್ನು ಉಪಸಂಹಾರ ಮಾಡಿ ಧ್ಯಾನಿಸಬೇಕು ಎನ್ನುವ ಪಕ್ಷವೂ ಯುಕ್ತವಲ್ಲ. ಈ ವಿಷಯದಲ್ಲಿ ಸ್ಪಷ್ಟ ಪ್ರಮಾಣವಿಲ್ಲ. **ಪರೋವರೀಯಃ** ವೈಶ್ವಾನರಾದಿ ಪ್ರಕರಣಭೇದವೇ ಅಲ್ಪಗುಣೋಪಸಂಹಾರದಲ್ಲಿ ಪ್ರಮಾಣವೆಂದು ಹೇಳಕೂಡದು. ಒಂದೇ ಪ್ರಕರಣದಲ್ಲಿಯೂ ಸರ್ವಗುಣೋಕ್ತಿಯೂ ಕೂಡುವುದು. ಆದಕಾರಣ ಎರಡು ಕಡೆಗಳಲ್ಲಿಯೂ ಧ್ಯಾನವು ಕೂಡದೆ ಇದ್ದುದರಿಂದ ಧ್ಯಾನಕ್ಕೆ ಅಂಗವಾಗಿ ಹಿಂದೆ ಹೇಳಿದ ಶಕ್ತರಿಗೆ ಸರ್ವವೇದಾರ್ಥಪರಿಜ್ಞಾನವು, ಅಶಕ್ತರಿಗೆ ಯಥಾ ಶಕ್ತಿ ಕೆಲವು ಶಾಖೆಗಳ ಅರ್ಥಪರಿಜ್ಞಾನವು ಎಂದು ಹೇಳಿದ್ದು ವ್ಯರ್ಥವಾಗಿರುವುದರಿಂದ ಅವಶ್ಯ ಸಂಪಾದ್ಯವಲ್ಲ ಎಂದರೆ— ಹಿಂದೆ ಹೇಳಿದ ಎರಡು ಪಕ್ಷಗಳಲ್ಲಿಯೂ ಧ್ಯಾನವು ಕೂಡುತ್ತದೆ. ಸರ್ವವೇದೋಕ್ತಗುಣಗಳನ್ನು ದೋಷಾಭಾವಗಳನ್ನು ಉಪಸಂಹಾರಮಾಡಿ ಧ್ಯಾನಿಸಬೇಕೆಂದು **ಉಪಾಸ್ಯ ಏಕಃ, ಸರ್ವೇ ಗುಣಾಃ** ಇತ್ಯಾದಿ ಶ್ರುತಿಗಳಲ್ಲಿ ವಿಹಿತಗಳಾಗಿರುತ್ತವೆ. ಇಲ್ಲವಾದರೆ, ವಿಹಿತಕ್ರಿಯೆಗಳಿಗೆ ಲೋಪವು ಬರುವುದರಿಂದ ಅನರ್ಥವು ಬರುವುದು. ಹಾಗೆಯೇ **ಋಗ್ವೇದಂ ಭಗವಃ ಅಧ್ಯೇಮಿ** ಇತ್ಯಾದಿಗಳಿಂದ ನಾರದರು ತಾನು ಸರ್ವವಿದ್ಯೆಗಳನ್ನು ತಿಳಿದಿದ್ದರೂ ಮಂತ್ರಜ್ಞಾನಿಯೇ ಆಗಿರುತ್ತೇನೆ. ಅಲ್ಲದೆ ಆತ್ಮಜ್ಞಾನಿಯು ಅಲ್ಲವೆಂದೂ, ಹಾಗೆಯೇ ಶ್ರುತ್ಯಂತರದಲ್ಲಿ ನಾನು ನಾಮಜ್ಞಾನಿಯೇ ಆಗಿರುತ್ತೇನೆ. ಆತ್ಮಜ್ಞಾನಿಯು ಅಲ್ಲ ಎನ್ನುವ ಉಕ್ತಿಯಿಂದಲೂ ಸರ್ವ ವಿದ್ಯೆಗಳೂ ಭಗವನ್ನಾಮಗಳಾದುದರಿಂದ ತದ್ಗುಣಾ ಭಿಧಾಯಕತ್ವಾನ್ಯಥಾನುಪ ಪತ್ತಿರೂಪ ಯುಕ್ತಿಯಿಂದಲೂ ಧ್ಯಾನವು ಸಿದ್ಧವಾಗಿದೆ. ಮತ್ತು **ನಾಮ ವಾ ಏತಾಃ** ಎನ್ನುವ ಶ್ರುತಿಸಿದ್ಧವೂ ಆಗಿದೆ. ಆತ್ಮೇತ್ಯೇವೋಪಾಸೀತ ಎನ್ನುವ ಏವಕಾರವು ಶ್ರೀಹರಿಯನ್ನು **ಆತ್ಮಾ** ಎಂದು ಉಪಾಸನಾ ಮಾಡಲೇಬೇಕು. ಎಂದು ಅಯೋಗವ್ಯವಚ್ಛೇದಕವಾಗಿ ಬೋಧಕವಾಗಿದೆ, ಭಿನ್ನಭಿನ್ನ ಪ್ರಕರಣದಲ್ಲಿ

ಇದ್ದುದನ್ನು ಉಪಸಂಹಾರ ಮಾಡಿ ಧ್ಯಾನಿಸಬೇಕು ಎನ್ನುವ ಪಕ್ಷವು ಯುಕ್ತವು. ಕತಿಪಯಗುಣ ಉಪಸಂಹಾರ ಮಾಡಿ ಧ್ಯಾನಿಸಬೇಕು ಎನ್ನುವ ಅನುಪಸಂಹಾರ (ಅಲ್ಪಗುಣೋಪಸಂಹಾರ) ಪಕ್ಷವೂ ಯುಕ್ತವೇ. ಸರ್ವರಿಗೂ ಸರ್ವಗುಣ ಉಪಸಂಹಾರ ಮಾಡಿ ಧ್ಯಾನವು ಅಶಕ್ಯವಾದುದರಿಂದ ಕೆಲವು ಪ್ರಕರಣಗಳಲ್ಲಿ ಕೆಲವು ಗುಣಗಳನ್ನು ಮಾತ್ರ ಹೇಳಿ ಸರ್ವಗುಣಗಳನ್ನು ಸ ಏಷ ಪರೋವರೀಯಾನ್ ಇತ್ಯಾದಿಪ್ರಕರಣಗಳಲ್ಲಿ ಕೇಳದೆ ಇದ್ದುದರಿಂದ. ಪರೋವರೀಯಸ್ತ್ವ ಮೊದಲಾದ ಕೆಲವು ಗುಣಗಳನ್ನೇ ಹೇಳಿದ್ದರಿಂದ ಏಕತ್ರ ಸರ್ವಗುಣೋಕ್ತಿಯು ಇರುವುದಿಲ್ಲ. ಆದಕಾರಣ ಉಭಯಥಾऽಪಿ ಧ್ಯಾನವು ಪ್ರಾಮಾಣಿಕವಾದುದರಿಂದ ಯುಕ್ತವಾದ ಪ್ರಯುಕ್ತ ವೇದಾರ್ಥಪರಿಜ್ಞಾನವು ಸಾರ್ಥಕವೇ. ॥ ಅಧಿ. ೨ ॥

**ಉಪಸಂಹಾರಾಧಿಕರಣವು ಸಮಾಪ್ತವಾಯಿತು.**

## ೩ ಪ್ರಾಪ್ತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪೂರ್ವಾಧಿಕರಣಗಳಲ್ಲಿ ಹೇಳಿದ ಗುಣೋಪಸಂಹಾರ ಅನುಪಸಂಹಾರ ಎರಡನ್ನೂ ಅಧಿಕಾರಿ ಭೇದದಿಂದ ಮಾಡಬೇಕೆಂದು ಸಮರ್ಥಿಸುತ್ತಾರೆ. ಆ ಎರಡೂ ಏಕ ಪುರುಷವಿಷಯಕವಾದರೆ ವಿರೋಧವು, ಭಿನ್ನಾಧಿಕಾರಿಗಳೆನ್ನುವ ವಿಷಯದಲ್ಲಿ ನಿಯಾಮಕ ವಿಲ್ಲದಿರುವುದರಿಂದ ನಿರ್ಣಯವಾಗದಿರುವ ಪ್ರಯುಕ್ತ ಅವುಗಳು ಕೂಡಲಾರವು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

### ಸೂತ್ರ ॥ ಓಂ ಪ್ರಾಪ್ತೇಶ್ಚ ಸಮಂಜಸಂ ಓಂ ॥ ೧೦ ॥

**ಸೂತ್ರಾರ್ಥ ॥** ಪ್ರಕೃತವಾದ ಉಪಸಂಹಾರಾನುಪಸಂಹಾರ ಕರ್ತವ್ಯವು ಹೇಳಲಿಕ್ಕೂ ಯುಕ್ತವಾಗಿದೆ. ಯೋಗ್ಯತಾ ವಿಶೇಷದಿಂದ ಅವುಗಳು ವ್ಯವಸ್ಥಿತಗಳಾಗಿರುವುದರಿಂದ.

**ಭಾಷ್ಯ ॥ (೧) ಯುಜ್ಯತೇ ಚೋಪಸಂಹಾರೋऽನುಪಸಂಹಾರಶ್ಚ ಯೋಗ್ಯತಾ ವಿಶೇಷಾತ್ ॥ (೨) ಗುಣೈಸ್ಸರ್ವೈರುಪಾಸ್ಯೋऽಸೌ ಬ್ರಹ್ಮಣಾ ಪರಮೇಶ್ವರಃ । ಅನ್ಯೈರ್ಯಥಾಕ್ರಮಂ ಚೈವ ಮಾನುಷೈಃ ಕೈಶ್ಚಿದೇವ ತು ॥ ಇತಿ ಭವಿಷ್ಯತ್ಪರ್ವಣಿ ॥ ೧೦ ॥ ಅಧಿ.೩ ॥ ೧ ॥**

ಭಾಷ್ಯಾರ್ಥ ॥ (೧) ಉಪಸಂಹಾರ ಅನುಪಸಂಹಾರಾದಿಗಳು ಕರ್ತವ್ಯಗಳೆಂದು ಮಾತ್ರವಲ್ಲ, ಮತ್ತೆ ಅವರವರ ಯೋಗ್ಯತಾ ವಿಶೇಷದಿಂದ ಯುಕ್ತವೂ ಆಗುತ್ತದೆ. ಅಂದರೆ ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ ಯುಗಪತ್ ಸ್ವಭುಜೌ ಯದ್ವತ್ ಧ್ಯಾಯೇತ್ತಾವತ ಏವ ಸಃ ಎನ್ನುವ ಶ್ರುತ್ಯನುಸಾರವಾಗಿ ಯಾವ ಉಪಾಸಕನಿಗೆ ಧ್ಯಾನಕಾಲದಲ್ಲಿ ಎಷ್ಟುಗುಣಗಳು ಯುಗಪತ್ ಪ್ರತೀತಗಳಾಗುತ್ತವೋ, ಆತನು ಅಷ್ಟು ಗುಣಗಳನ್ನು ಉಪಸಂಹಾರ ಮಾಡಬೇಕು. ಯಾರಿಗೆ ಅಷ್ಟು

ಗುಣಗಳು ತೋರುವುದಿಲ್ಲವೋ ಮತ್ತೆ ಒಂದೊಂದು ಗುಣವು ತೋರುತ್ತದೋ ಆತನು ಅನುಪಸಂಹಾರ ಮಾಡಬೇಕು. ಹೀಗೆ ಉಪಾಸಕ ಪುರುಷರಿಗೆ ಏಕಕಾಲದಲ್ಲಿ ಪ್ರತೀತಿ ಮೊದಲಾದ ಯೋಗ್ಯತಾಭೇದದಿಂದ (೨) (ಯೋಗ್ಯತಾವಿಶೇಷಾತ್ ಎಂದು ಹೇಳಿದ್ದನ್ನೇ ಸ್ಪಷ್ಟವಾಗಿ ತೋರಿಸುತ್ತಾರೆ) ಸರ್ವಗುಣಗಳಿಂದ ಶ್ರೀಹರಿಯು ಬ್ರಹ್ಮನಿಂದ ಉಪಾಸ್ಯನು. (ಚತುರ್ಮುಖನಿಗೆ ಯುಗಪತ್ ಸರ್ವಗುಣಗಳು ಪ್ರತೀತಗಳಾಗುತ್ತವೆ.) ಇತರರಾದ ರುದ್ರಾದಿ ದೇವತೆಗಳಿಂದ ಯಥಾಕ್ರಮವಾಗಿ ಧ್ಯಾನಕಾಲದಲ್ಲಿ ಎಷ್ಟು ಗುಣಗಳು ಯುಗಪತ್ ಪ್ರತೀತಗಳಾಗುತ್ತವೋ ಅಷ್ಟು ಗುಣಗಳಿಂದ ಉಪಾಸ್ಯನು. (ಮನುಷ್ಯರಿಗೆ ಕೆಲವರಿಗೆ ಚತುರ್ಗುಣಗಳೇ ಯುಗಪತ್ ಪ್ರತೀತಗಳಾಗುವುದರಿಂದ) ಕೆಲವು ಮನುಷ್ಯರಿಂದ ಆನಂದಾದಿ ಚತುರ್ಗುಣಗಳಿಂದಲೇ ಉಪಾಸ್ಯನು. ಕೆಲವು ಮನುಷ್ಯರಿಂದ ಆತ್ಮತ್ವವೆನ್ನುವ ಒಂದು ಗುಣದಿಂದಲೇ ಉಪಾಸ್ಯನು ಎಂದು ಭವಿಷ್ಯತ್ಪರ್ವದಲ್ಲಿ ಇದೆ. ॥ ೧೦ ॥

## ಅಧಿಕರಣ ಸಾರಾಂಶ

ಗುಣೋಪಸಂಹಾರ ಅನುಪಸಂಹಾರ ಪೂರ್ವಕ ದ್ವಿವಿಧ ಧ್ಯಾನವು ಅಯುಕ್ತವೋ ಯುಕ್ತವೋ ಅದಕ್ಕಾಗಿ ಅಧಿಕಾರಿಭೇದೇನ ವ್ಯವಸ್ಥೆಯು ಇಲ್ಲವೋ ಇದೆಯೋ ಎಂದು ಸಂದೇಹವು. ದ್ವಿರೂಪಧ್ಯಾನವು ವಿರುದ್ಧವಾದುದರಿಂದ ಒಬ್ಬನಿಗೆ ಕೂಡಲಾರದು. ಅಧಿಕಾರಿ ಭೇದದಿಂದ ವ್ಯವಸ್ಥಿತವಾಗಿದೆ. ಎನ್ನುವುದು ಇದರಲ್ಲಿ ಇವರಿಗೆ ಅಧಿಕಾರವು ಈ ಗುಣದಲ್ಲಿ ಇವರಿಗೆ ಅಧಿಕಾರವು ಎನ್ನುವ ವ್ಯವಸ್ಥಾಪಕ ಪ್ರಮಾಣವಿಲ್ಲದಿರುವುದರಿಂದ ಕೂಡದಿರುವ ಪ್ರಯುಕ್ತ ದ್ವಿವಿಧ ಧ್ಯಾನವು ಅಯುಕ್ತವು, ಎಂದರೆ— **ಯಸ್ಯ ಯಾವದ್ಗುಣಾಃ** ಎನ್ನುವ ಶ್ರುತ್ಯುಕ್ತ ಪ್ರಕಾರವೂ **ಗುಣೈಃ ಸರ್ವೈಃ** ಎನ್ನುವ ಸ್ಮೃತ್ಯುಕ್ತಪ್ರಕಾರವೂ ಧ್ಯಾನಕಾಲದಲ್ಲಿ ಯುಗಪತ್ ಸ್ಪಷ್ಟವಾಗಿ ಸರ್ವಗುಣಗಳೂ ಚತುರ್ಮುಖನಿಗೆ ಪ್ರತೀತಗಳಾಗುತ್ತವೆ. ರುದ್ರಾದಿಗಳಿಗೆ ಯಥಾಯೋಗ್ಯವಾಗಿ ಪ್ರತೀತಗಳಾಗುತ್ತವೆ. ಹೀಗೆ ಅಧಿಕಾರಿ ಭೇದದಿಂದ ವ್ಯವಸ್ಥೆಯು ಉಪಪನ್ನವಾಗುವುದರಿಂದ ದ್ವಿರೂಪಧ್ಯಾನವು ಯುಕ್ತವು. ॥ ಅಧಿ. ೩ ।

**ಪ್ರಾಪ್ತ್ಯಧಿಕರಣವು ಸಮಾಪ್ತವಾಯಿತು.**

# ೪ ಸರ್ವಾಭೇದಾಧಿಕರಣವು

**ಪೀಠಿಕೆ॥** ಈ ಅಧಿಕರಣದಲ್ಲಿ ಬಹುಗುಣಗಳನ್ನು ಉಪಸಂಹಾರ ಮಾಡಬೇಕೆಂದು ಸಮರ್ಥಿಸುತ್ತಾರೆ. ಅಲ್ಪಗುಣಗಳನ್ನು ಉಪಸಂಹಾರ ಮಾಡುವವರ ದೆಶೆಯಿಂದ ಬಹುಗುಣಗಳನ್ನು ಉಪಸಂಹಾರ ಮಾಡುವವರಿಗೆ ಫಲಾಧಿಕ್ಯವದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ವ್ಯರ್ಥವಾಗಿ ಆಯಾಸವನ್ನು ಮಾಡಬಾರದಾದ ಪ್ರಯುಕ್ತವೂ ಬಹುಗುಣೋಪಸಂಹಾರವನ್ನು ಮಾಡಬಾರದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ಸರ್ವಾಭೇದಾದನ್ಯತ್ರೇಮೇ ಓಂ ॥ ೧೧ ॥**

**ಸೂತ್ರಾರ್ಥ ॥** ಉಪಸಂಹಾರ ಮಾಡತಕ್ಕವರೆಂದು ವಿಶಿಷ್ಟ ಪ್ರಸ್ತುತರಾದ ಬ್ರಹ್ಮಾದಿಗಳು ಅಲ್ಪಗುಣೋಪಸಂಹರ್ತೃಗಳ ಫಲಕ್ಕಿಂತ ವಿಲಕ್ಷಣವಾದ ಸಂಪೂರ್ಣಾನಂದಾದ್ಯಾತ್ಮಕವಾದ ಮೋಕ್ಷಫಲದಲ್ಲಿ ಭಾಗಿಗಳು ಆಗುತ್ತಾರೆ. ಸರ್ವಗುಣಗಳಿಗೆ ಅಭೇದದಿಂದ ಉಪಾಸನಾವಿದ್ದ ಪ್ರಯುಕ್ತ (ಅಂದರೆ, ಸರ್ವಗುಣಯುಕ್ತನೆಂದು ಉಪಾಸನಾ ಮಾಡತಕ್ಕವರಾದುದರಿಂದ.)

**ಭಾಷ್ಯ ॥ (೧) ಸರ್ವಗುಣಯುಕ್ತತ್ವೇನೋಪಾಸನಾದನ್ಯತ್ರೈವ ಫಲೇ ಬ್ರಹ್ಮಾದಯೋ ಭವಂತಿ । (೨) ಸಂಪೂರ್ಣೋಪಾಸನಾದ್ಬ್ರಹ್ಮಾ ಸಂಪೂರ್ಣಾನಂದಭಾಗ್ಭವೇತ್ । ಇತರೇ ತು ಯಥಾಯೋಗಂ ಸಮ್ಯಗ್ಮುಕ್ತೌ ಭವಂತಿ ಹಿ ॥ ಇತಿ ಪಾದ್ಮೇ ॥ ೧೧ ॥ ಅಧಿ. ೪ ॥ ೧ ॥**

**ಭಾಷ್ಯಾರ್ಥ ॥** (೧) ಬಹುಗುಣಗಳಿಂದ ಯುಕ್ತನೆಂದು ಉಪಾಸನಾಮಾಡಿದ್ದರಿಂದ ಅನುಪಸಂಹರ್ತೃಗಳಿಗೆ ಆಗತಕ್ಕ ಫಲಕ್ಕಿಂತ ವಿಲಕ್ಷಣಫಲದಲ್ಲಿಯೇ ಚತುರ್ಮುಖಾದಿಗಳು ಭಾಗಿಗಳು ಆಗುತ್ತಾರೆ. ಬಹುಗುಣೋಪಾಸಕರಾದ ಪ್ರಯುಕ್ತ ಇತರರಕ್ಕಿಂತ ಮಹತ್ತಾದ ಫಲವನ್ನೇ ಹೊಂದುತ್ತಾರೆ. ವೇದದಲ್ಲಿ ಹೇಳಿದ ಪ್ರಕಾರ ಅತಿಶಯವಾಗಿ ಉಪಾಸನಾಮಾಡಿದವರಿಗೂ ಅತಿಶಯಿತ ಫಲವಿಲ್ಲ ವೆನ್ನುವುದು ಕೂಡಲಾರದು. ಆದಕಾರಣ ಫಲನಿರ್ಣಯವು ಕೂಡುವುದರಿಂದ ಬ್ರಹ್ಮಾದಿಗಳಿಗೆ ಬಹುಗುಣೋಪಸಂಹಾರವು ಯುಕ್ತವೇ ಆಗಿದೆ. (೨) ಚತುರ್ಮುಖನು ಶ್ರೀಹರಿಯು ಸರ್ವಗುಣಯುಕ್ತನೆಂದು ಉಪಾಸನಾ ಮಾಡಿದ್ದರಿಂದ ಪರಿಪೂರ್ಣ ಆನಂದವನ್ನು ಹೊಂದುವವನು ಆಗುವನು. ರುದ್ರಾದಿಗಳಾದರೂ ತಂತಮಗೆ ಯೋಗ್ಯಗಳಾದ ಬಹುಗುಣಗಳ ಉಪಾಸನವನ್ನು ಅನುಸರಿಸಿ ಮುಕ್ತಿಯಲ್ಲಿ ಆನಂದಾತಿಶಯವುಳ್ಳವರು ಆಗುತ್ತಾರೆ, ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ॥ ೧೧ ॥ ೧ ॥

## ಅಧಿಕರಣ ಸಾರಾಂಶ

ಸರ್ವಗುಣಧ್ಯಾನವನ್ನು ಮಾಡಬಾರದೋ ಮಾಡಬೇಕೋ, ಅದಕ್ಕಾಗಿ ಫಲಾತಿಶಯ ನಿರ್ಣಯವು ಆಗುವುದಿಲ್ಲವೋ ಆಗುತ್ತದೋ ಎಂದು ಸಂದೇಹವು. ಮೋಕ್ಷರೂಪಫಲವು ಅಸರ್ವಧ್ಯಾನದಿಂದಲೂ ಸಿದ್ಧಿಸುವುದರಿಂದ, ಸರ್ವಗುಣಧ್ಯಾನವೂ ಅಸರ್ವಗುಣ ಧ್ಯಾನಸಾಧ್ಯ ಫಲಾತಿಶಯರೂಪ ನಿರ್ಣಯವೂ ನಿರ್ಣಾಯಕವಿಲ್ಲದಿರುವುದರಿಂದ ಕೂಡಲಾರದು. ಎಂದರೆ— ಸರ್ವಗುಣಧ್ಯಾನಂ ಅಸರ್ವಗುಣಧ್ಯಾನಾದಧಿಕಫಲವತ್, ತತೋ ಮಹತ್ವಾತ್, ಯತ್ಸಾಧನಂ ಯತೋ ಮಹತ್ ತತ್ ತತಃ ಅಧಿಕಫಲವತ್, ಅಗ್ನಿಷ್ಟೋಮಾದಿತಃ ವಾಜಪೇಯಾದಿಕಂ ಎನ್ನುವ ಅನುಮಾನದಿಂದಲೂ ಸಂಪೂರ್ಣೋಪಾಸನಾದ್ಬ್ರಹ್ಮಾ ಇತ್ಯಾದಿ ಸ್ಮೃತಿಗಳಿಂದಲೂ ಫಲಾಧಿಕ್ಯವದೆ ಎಂದು ನಿರ್ಣಯವು ಆಗುವುದು. ॥ ಅಧಿ.೪ ॥

**ಸರ್ವಾಭೇದಾಧಿಕರಣವು ಸಮಾಪ್ತವಾಯಿತು.**

## ೫ ಆನಂದಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಸರ್ವಮುಮುಕ್ಷು ಸಾಧಾರಣಗಳಾದ ಉಪಾಸ್ಯಗುಣಗಳು ನಿರ್ಣಯಿಸಲ್ಪಡುತ್ತವೆ—

**ಭಾಷ್ಯ ॥ ಸರ್ವೇಷಾಂ ಮುಮುಕ್ಷೂಣಾಂ ಕಿಯನ್ನಿಯಮೇನೋಪಾಸ್ಯಂ । ಇತಿ ಅತ ಆಹ ॥ ೧ ॥**

ಭಾಷ್ಯಾರ್ಥ ॥ ಸರ್ವಮುಮುಕ್ಷುಗಳಿಗೆ ಎಷ್ಟು ಗುಣಸಮುದಾಯವು ನಿಯಮೇನ ಉಪಾಸ್ಯವು ಯಾವುದದು. (ಅಂದರೆ— ಸರ್ವಮುಮುಕ್ಷುಗಳಿಂದ ಉಪಾಸ್ಯಗಳಾದ ಗುಣಗಳು ಸಂಖ್ಯೆಯಿಂದ ಇಷ್ಟೇ ಎಂದು, ಅಥವಾ ಇವುಗಳೇ ಎಂದು ನಿರ್ದೇಶದಿಂದ ಕ್ಲಪ್ತಗಳಾಗಿ ಪ್ರತ್ಯೇಕ ಇರುತ್ತವೆ ಎಂದು ಹೇಳಿಲಿಕ್ಕೆ ಬರುವುದಿಲ್ಲ. ಇಷ್ಟೇ, ಇವುಗಳೇ ಎಂದು ಹೇಳಿದರೆ ಅದಕ್ಕಿಂತ ಹೆಚ್ಚಾದ ಅದರಿಂದ ಇತರ ಗಳಾದ ಗುಣಗಳಿಗೆ ಗ್ರಹಣ ಮಾಡದಿರಲಿಕ್ಕೆ ಕಾರಣವಿಲ್ಲದಿರುವುದರಿಂದ ಅವುಗಳನ್ನು ತೆಗೆದುಕೊಳ್ಳಬೇಕಾಗಿರುವುದರಿಂದ ಸಂಖ್ಯಾನಿಯಮವೂ ನಿರ್ದೇಶನಿಯವೂ ಕೂಡದೆ ಹೋಗುವುದು. ಆದಪ್ರಯುಕ್ತ ನಿಯಮೇನ ಉಪಾಸ್ಯಗಳಾದ ಗುಣಗಳ ನಿರ್ಣಯವಾಗದಿರುವುದರಿಂದ ಯಾವ ಗುಣಕ್ಕೂ ಉಪಾಸನಾ ಕೂಡಬಾರದು) ಎಂದು ಶಂಕಾ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.

### ಸೂತ್ರ ॥ ಓಂ ಆನಂದಾದಯಃ ಪ್ರಧಾನಸ್ಯ ಓಂ ॥ ೧೨ ॥

**ಭಾಷ್ಯ ॥ ಪ್ರಧಾನಫಲಸ್ಯ ಮೋಕ್ಷಸ್ಯಾರ್ಥೇ ಆನಂದೋ ಜ್ಞಾನಂ ಸದಾತ್ಮೇತ್ಯು ಪಾಸ್ಯ ಏವ ॥ ೨ ॥**

ಭಾಷ್ಯಾರ್ಥ ॥ ಆನಂದವು, ಜ್ಞಾನವು, (ಸತ್=) ನಿರ್ದೋಷತ್ವವೂ ಆತ್ಮಾ = ಆತ್ಮತ್ವ (ಸ್ವಾಮಿತ್ವ)ವು ಹೀಗೆ ನಾಲ್ಕು ಗುಣಗಳು ಸರ್ವಮುಮುಕ್ಷುಗಳಿಂದಲೂ ಉಪಾಸ್ಯಗಳೇ ಆಗಿವೆ. ಪ್ರಧಾನಫಲವಾದ ಮೋಕ್ಷಕ್ಕಾಗಿ (ಅಂದರೆ ಉಪಾಸನವು ಆನಂದಾದಿರೂಪ ಮೋಕ್ಷಾರ್ಥವಾದ ಪ್ರಯುಕ್ತ) ಅಪೇಕ್ಷಿತ ಫಲವನ್ನು ಅನುಸರಿಸಿಯೇ ಈಶ್ವರನು ಉಪಾಸ್ಯನು ಆಗಿರುತ್ತಾನೆ.

**ಭಾಷ್ಯ ॥ ಸಚ್ಚಿದಾನಂದ ಆತ್ಮೇತಿ ಬ್ರಹ್ಮೋಪಾಸಾ ವಿನಿಶ್ಚಿತಾ । ಸರ್ವೇಷಾಂ ಚ ಮುಮುಕ್ಷೂಣಾಂ ಫಲಸಾಮ್ಯಾದಪೇಕ್ಷಿತಾ ॥ ಇತಿ ಬ್ರಹ್ಮತರ್ಕೇ ॥ ೧೨ ॥ಅಧಿ.೫ ॥ ೩ ॥**

ಭಾಷ್ಯಾರ್ಥ ॥ ನಿರ್ದೋಷನು, ಜ್ಞಾನರೂಪನು, ಸುಖರೂಪನು, ಸ್ವಾಮಿಯು ಎಂದು ವಿಷ್ಣುವಿನ ಉಪಾಸನೆಯು ಕರ್ಮಕ್ಷಯಾದಿ ನಾಲ್ಕು ವಿಧ ಮೋಕ್ಷೇಚ್ಛುಗಳಿಗೂ ಕರ್ತವ್ಯವೆಂದು ವಿನಿಶ್ಚಿತವಾಗಿದೆ. ಫಲವು ಉಪಾಸನಾ ಸದೃಶವಾದುದರಿಂದ ಆ ಉಪಾಸನವು ಅಪೇಕ್ಷಿತ ಫಲಸಾಧನವೂ ಆಗಿದೆ. ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ॥ ೧೨ ॥ ೩ ॥

## ಅಧಿಕರಣ ಸಾರಾಂಶ

ಸರ್ವಮುಮುಕ್ಷುಧ್ಯೇಯ ಗುಣನಿರ್ಣಯವು ಆಗುವುದಿಲ್ಲವೋ ಆಗುತ್ತದೋ, ಆದಕ್ಕಾಗಿ ಧ್ಯೇಯಗುಣಗಳು ಸಂಖ್ಯಾನಿರ್ದೇಶಗಳಿಂದ ಕ್ಲಪ್ತವಾಗಿ ಪ್ರತ್ಯೇಕ ಇಲ್ಲವೋ ಇವೆಯೋ ಎಂದು ಸಂದೇಹವು. ಸಂಖ್ಯಾನಿರ್ದೋಷಗಳಿಂದ ಕ್ಲಪ್ತಗಳಾದ ಪ್ರತ್ಯೇಕ ಗುಣಗಳು ಇಲ್ಲ. ಇದ್ದರೆ ಅವುಗಳು ಎಷ್ಟು? ಐದಾರು ಆನಂದಾದಿಗಳು ಎಂದು ಹೇಳಿದರೆ— ಕೆಲವುಗಳನ್ನು ಒಟ್ಟು ಸೇರಿಸಿದರೆ— ಇತರಗಳಿಗೂ ಸಮುಚ್ಚಯವು ಬರಬೇಕಾಗಿರುವುದರಿಂದ ನಿಯಮವೇ ಕೂಡಲಾರದು. ಮತ್ತು ಆನಂದಾದಿಗಳಿಂದ ಇತರಗಳೇ ಎಂದೂ ಹೇಳಲಿಕ್ಕೆ ಶಕ್ಯವಾಗುವುದರಿಂದ ಇವುಗಳೇ ಎಂದು ನಿರ್ದೇಶ ಮಾಡಲಿಕ್ಕೆ ಬರುವುದಿಲ್ಲ. ಹೀಗೆ ಸರ್ವಮುಮುಕ್ಷುಧ್ಯೇಯ ಗುಣಗಳ ನಿರ್ಣಯವು ಆಗದಿರುವುದರಿಂದ ಭಗವದ್ಧ್ಯಾನವು ಕೂಡುವುದು. ಎಂದರೆ— ಸರ್ವರಿಗೆ ಬಹುಗುಣಗಳನ್ನು ಉಪಾಸನ ಮಾಡಲಿಕ್ಕೆ ಶಕ್ತಿಯಿಲ್ಲ. ಸರ್ವಾಪೇಕ್ಷಿತವಾದ ನಿರ್ದೋಷ ಆನಂದಾನುಭವರೂಪವಾದ ಮೋಕ್ಷವು ತಂ ಯಥಾ ಯಥೋಪಾಸ ತೇ ಎನ್ನುವ ಶ್ರುತಿಯಿಂದ ಆದಕ್ಕೆ ಅನುಗುಣವಾದ ಉಪಾಸನ ಸಾಧ್ಯವಾಗಿದೆ. ಅಲ್ಲದೆ ಭಗವತ್ಪ್ರೀತಿಗೆ ಹೇತುವಾಗಿರುವುದರಿಂದ ಆತ್ಮತ್ವೇನ (ಸ್ವಾಮಿತ್ವೇನ) ಉಪಾಸನವು ಆವಶ್ಯಕವು. ಸಚ್ಚಿದಾನಂದ ಆತ್ಮಾ ಇತ್ಯಾದಿ ಸ್ಮೃತಿಯಿಂದ ಸತ್ ಮೊದಲಾದ ನಾಲ್ಕೇ ಸಂಖ್ಯಾ ನಿರ್ದೇಶಗಳಿಂದ ಕ್ಲಪ್ತಗಳಾಗಿವೆ, ಏವಂಚ ಧ್ಯೇಯ ಗುಣಗಳ ನಿರ್ಣಯವಾಗುವುದರಿಂದ ಭಗವದ್ಧ್ಯಾನವು ಯುಕ್ತವು. ॥ ಅಧಿ. ೫ ॥

**ಆನಂದಾಧಿಕರಣವು ಸಮಾಪ್ತವಾಯಿತು.**

# ೬ ಪ್ರಿಯಶಿರಸ್ತ್ವಾದ್ಯಧಿಕರಣವು

**ಪೀಠಿಕೆ ॥** ಪ್ರಿಯಶಿರಸ್ತ್ವಾದಿಗುಣಗಳು ಸರ್ವಮುಮುಕ್ಷುಗಳಿಂದ ಉಪಾಸ್ಯಗಳಲ್ಲವೆಂದು ಸಮರ್ಥಿಸುತ್ತಾರೆ. ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ ಇತ್ಯಾದಿ ಶ್ರುತಿಗಳಲ್ಲಿ ಶ್ರೀಹರಿಗೆ ಪ್ರಿಯಶಿರಸ್ತ್ವಾದಿಗುಣಗಳು ಶ್ರುತಗಳಾಗಿವೆ. ಅವುಗಳು ಸರ್ವೋಪಾಸ್ಯಗಳೇ ಆಗಿವೆ. ಪ್ರಿಯಾದಿಗಳು ಆನಂದಾದಿಗಳ ವಿಶೇಷವಾಗಿವೆ. ಆನಂದಾದಿಗಳು ಸರ್ವೋಪಾಸ್ಯಗಳು. ಆದಪ್ರಯುಕ್ತ ನಾಲ್ಕೇ ಎನ್ನುವ ನಿಯಮವಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

## ಸೂತ್ರ ॥ ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ ॥ ೧೩ ॥

**ಸೂತ್ರಾರ್ಥ ॥** ತಸ್ಯ ಪ್ರಿಯಮೇವ ಶಿರಃ ಇತ್ಯಾದ್ಯುಕ್ತವಾದ ಪ್ರಿಯಶಿರಸ್ತ್ವಾದಿ ಗುಣೋಪಾಸನಾ ಪ್ರಾಪ್ತಿಯು ಸರ್ವರಿಗೆ ಇಲ್ಲ. ಪ್ರಧಾನವಾದ ಮೋಕ್ಷಾಖ್ಯ ಫಲಕ್ಕೆ ತಾರತಮ್ಯಕ್ಕಾಗಿ, ಗುಣೋಪಾಸನೆಗೆ ವೃದ್ಧಿಹ್ರಾಸಗಳನ್ನು ಅಂಗೀಕರಿಸಬೇಕು.

**ಭಾಷ್ಯ ॥ (೧) ಫಲಭೇದಾರ್ಥಮುಪಚಯಾಪಚಯಯೋರ್ಭಾವಾನ್ನ ಸರ್ವೇಷಾಂ ಪ್ರಿಯಶಿರಸ್ತ್ವಾದಿಗುಣೋಪಾಸಾಪ್ರಾಪ್ತಿಃ । (೨) ನೈವಂ ಸರ್ವಗುಣಾಃ ಸರ್ವೈ ರುಪಾಸ್ಯಾ ಮುಕ್ತಿಭೇದತಃ । ವಿರಿಂಚಸ್ಯೈವ ಯನ್ಮುಕ್ತಾವಾನಂದಸ್ಯ ಸುಪೂರ್ಣತಾ ॥ ಇತಿ ಹಿ ವಾರಾಹೇ ॥ ೧೩ ॥ ಅಧಿ. ೧ ॥**

ಭಾಷ್ಯಾರ್ಥ ॥ (೧) ಸೈಷಾನಂದಸ್ಯ ಮೀಮಾಂಸಾ ಭವತಿ ಇದು ಮೊದಲಾದ ಆನಂದಾದಿ ಶ್ರುತಿಸಿದ್ಧಫಲ ತಾರತಮ್ಯವು ಸಿದ್ಧಿಸುವುದಕ್ಕಾಗಿಯೂ ★ಉತ್ಕರ್ಷಾಪಕರ್ಷರೂಪ ತಾರತಮ್ಯವು ಅಪೇಕ್ಷಿತವಾದ ಪ್ರಯುಕ್ತ ಸರ್ವರಿಗೆ ಪ್ರಿಯಶಿರಸ್ತ್ವಾದಿ ಗುಣೋಪಾಸನಾ ಪ್ರಾಪ್ತಿಯು ಆಗುವುದಿಲ್ಲ (ಹಾಗಿದ್ದರೆ ಆದರಂತೆ ಸರ್ವಗುಣೋಪಾಸನೆಯೂ ಬರಬೇಕಾಗುವುದು.) ಸರ್ವಗುಣಗಳೂ ನಾಲ್ಕು ಗುಣಗಳ ವಿಶೇಷವೆಂದೇ ಹೇಳಲು ಶಕ್ಯವಾಗುವುದು.) (೨) ಮೌಕ್ತಾನಂದದಲ್ಲಿ ತಾರತಮ್ಯವಿದ್ದ ಪ್ರಯುಕ್ತ ಸರ್ವಗುಣಗಳು ಸರ್ವರಿಂದ ಉಪಾಸ್ಯಗಳೇ ಅಲ್ಲವೇ ಅಲ್ಲ. ವಿರಿಂಚನಿಂದೊಬ್ಬನಿಂದಲೇ ಎಲ್ಲಾ ಗುಣಗಳೂ ಉಪಾಸ್ಯಗಳು. ಏಕೆಂದರೆ— ವಿರಿಂಚನಿಗೇನೇ ಮುಕ್ತಿಯಲ್ಲಿ ಆನಂದದ ಪರಿಪೂರ್ಣತ್ವವು. ವಿರಿಂಚನಿಂದ ಇತರರಿಗೆ ಅಪೂರ್ಣಾನಂದವೂ ಇಲ್ಲ ಎಂದು ವಾರಾಹದಲ್ಲಿ ಹೇಳಿದೆ. ॥ ೧೩ ॥ ೧ ॥

## ಅಧಿಕರಣ ಸಾರಾಂಶ

ಪ್ರಿಯಶಿರಸ್ತ್ವಾದಿಗಳು ಸರ್ವೋಪಾಸ್ಯಗಳೋ ಅಲ್ಲವೋ ಎಂದು ಸಂದೇಹವು. ಪ್ರಿಯಶಿರಸ್ತ್ವಾದಿಗಳೂ ಸರ್ವೋಪಾಸ್ಯಗಳು. ಅವುಗಳು ಆನಂದವಿಶೇಷವಾಗಿವೆ. ತಮಗೆ ಅಭಿಮತ ಮೋಕ್ಷ ರೂಪ ಫಲಪ್ರಾಪ್ತಿಗಾಗಿ ಆನಂದಾದಿಗಳು ಸರ್ವೋಪಾಸ್ಯಗಳೆಂದು ಉಕ್ತವಾಗಿವೆ. ಆದಕಾರಣ ಹಿಂದೆ ಹೇಳಿದ ನಿಯಮವು ಯುಕ್ತವಲ್ಲವೆಂದರೆ— ಆನಂದಾವಿಶೇಷಮಾತ್ರದಿಂದ ಪ್ರಿಯಶಿರಸ್ತ್ವಾದಿಗಳು ಸರ್ವೋಪಾಸ್ಯಗಳಾದರೆ ಸರ್ವಗುಣಗಳೂ ಆನಂದಾದಿ ನಾಲ್ಕು ಗುಣಗಳ ವಿಶೇಷವೆಂದು ಹೇಳಲಿಕ್ಕೆ ಶಕ್ಯವಾಗುವುದರಿಂದ ಸರ್ವರಿಗೂ ಸರ್ವಗುಣೋಪಾಸನೆಯು ಬರಬೇಕಾಗಿರುವುದರಿಂದ ಆನಂದ ಶ್ರುತಿಸಿದ್ಧ ಫಲಭೇದವು ಲೋಪವಾಗುವುದು. ಅದು ಅನಿಷ್ಟವಾದಪ್ರಯುಕ್ತ ಫಲಭೇದ ಸಿದ್ಧಿಗಾಗಿ ಗುಣೋಪಾಸನದಲ್ಲಿಯೂ ತಾರತಮ್ಯವನ್ನು ಹೇಳಬೇಕಾಗಿರುವುದರಿಂದ **ನೈವ ಸರ್ವಗುಣಾಃ ಸರ್ವೈಃ** ಎನ್ನುವ ಸ್ಮೃತಿಯಿಂದಲೂ ಪ್ರಿಯಶಿರಸ್ತ್ವಾದಿಗಳು ಸರ್ವೋಪಾಸ್ಯಗಳಲ್ಲ. ಮತ್ತು **ಯಥಾಯೋಗ್ಯಾನ್ ಗುಣಪೂರ್ಣಾನುಪಾಸ್ಯ ಫಲಂ ಭವೇತ್** ಇತ್ಯಾದಿ ಶ್ರುತಿಗಳಿಂದ ವಿಶೇಷೋಪಾಸನ ಮಾಡದಿದ್ದರೂ ಯೋಗ್ಯ ಗುಣೋಪಾಸನದಿಂದಲೇ ಮುಕ್ತಿಫಲವು ಪ್ರಾಪ್ತವಾಗುತ್ತದೆಂದು ಅವಗತವಾಗಿದೆ. ॥ಅಧಿ.೬॥

**ಪ್ರಿಯಶಿರಸ್ತ್ವಾದ್ಯಧಿಕರಣವು ಸಮಾಪ್ತವಾಯಿತು.**

---

★ ಆನಂದಾದಿ ಗುಣಗಳ ಮಧ್ಯದಲ್ಲಿ ಒಂದೊಂದು ಗುಣಗಳ ಮಧ್ಯದಲ್ಲಿಯೂ ಇರತಕ್ಕ ಪ್ರಿಯತ್ವಾದಿಗಳನ್ನು ಸಂಪೂರ್ಣವಾಗಿ ವಿಷಯೀಕರಿಸುವಿಕೆಯು ಉಪಚಯವು. ಕತಿಪಯ ವಿಶೇಷ ವಿಷಯತ್ವರೂಪವಾದ ಅಲ್ಪತ್ವವು ಅಪಚಯವು.

## ೭ ಇತರಾಧಿಕರಣವು

**ಪೀಠಿಕೆ ॥** ದೇವಾದಿಗಳಿಗೆ ಬಹುಗುಣೋಪಾಸನವನ್ನು ಸಮರ್ಥಿಸುತ್ತಾರೆ. ಚತುರ್ಮುಖನಿಂದ ಇತರರಾದ ದೇವಾದಿಗಳು ನಾಲ್ಕೇ ಗುಣಗಳನ್ನು ಉಪಾಸನಾ ಮಾಡಬೇಕು. ಹೆಚ್ಚು ಅಲ್ಲ. ಸರ್ವಮುಮುಕ್ಷುಗಳಿಗೂ ಚತುರ್ಗುಣೋಪಾಸನಾ ಯೋಗ್ಯತೆಯೇ ನಿರ್ಣೀತವಾಗಿದೆ. ಮಧ್ಯಮ ಗುಣಗಳಲ್ಲಿ ಇವನಿಗೆ ಇಷ್ಟುಗುಣಗಳು ಎಂದು ಯೋಗ್ಯತಾ ನಿಯಮವನ್ನು ತಿಳಿಯಲಿಕ್ಕೆ ಸಾಧ್ಯವಿಲ್ಲ. ಅವರಿಗೆ ಉಪಾಸನವು ಹೇಗೆ ಆಗುವುದು? ಎಂದು ಪೂರ್ವಪಕ್ಷ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರ ವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ ॥ ೧೪ ॥**

**ಭಾಷ್ಯ ॥ ಇತರೇ ಗುಣಾಃ ಫಲಸಾಮ್ಯಾಪೇಕ್ಷಯೋಪಸಂಹರ್ತವ್ಯಾಃ ॥ ೧೪ ॥ ಅಧಿ. ೭ ॥ ೧ ॥**

**ಭಾಷ್ಯಾರ್ಥ ॥** ಮನುಷ್ಯೋತ್ತಮರಿಂದ ಉಪಾಸ್ಯಗಳಾದ ಆನಂದಾದಿ ನಾಲ್ಕು ಗುಣ ಗಳಿಂದಲೂ, ಚತುರ್ಮುಖೋಪಾಸ್ಯಗಳಾದ ಸರ್ವಗುಣಗಳಿಂದಲೂ ಇತರಗಳಾದ ಮಧ್ಯಮ ಗುಣಗಳು ದೇವಾದಿಗಳಿಂದ ಉಪಸಂಹಾರ್ಯಗಳೇ ಆಗಿವೆ. (ಯೋಗ್ಯತಾ ನಿರ್ಣಯವು ಆಗುವುದಿಲ್ಲ ವೆಂದು ಹೇಳಕೂಡದು.) ಮುಕ್ತಿಯಲ್ಲಿ ತಮ್ಮಿಂದ ಪ್ರಾರ್ಥ್ಯವಾದ ಫಲದಿಂದ ಉಪಾಸನಕ್ಕೆ ಸಾಮ್ಯವು ಆವಶ್ಯಕವಾದುದರಿಂದ ಅದನ್ನು ಅಪೇಕ್ಷಿಸಿ ಉಪಾಸನದಲ್ಲಿ ಯೋಗ್ಯತಾನಿರ್ಣಯವು ಕೂಡುತ್ತದೆ. (ಅಂದರೆ ಭಾವಿ ಫಲೋತ್ಕರ್ಷವನ್ನು ತಿಳಿದಿರುವ ಸರ್ವಜ್ಞರಾದ ಸ್ವರೂಪಗುರುಗಳು ಅವರಿಗೆ ಅನುಸಾರಿಯಾದ ಗುಣನಿಯಮೋಪದೇಶವನ್ನು ಮಾಡುತ್ತಾರೆ.) ॥ ೧೪ ॥ ೧ ॥

### ಅಧಿಕರಣ ಸಾರಾಂಶ

ಆನಂದಾದಿ ನಾಲ್ಕು ಗುಣಗಳಿಂದ ಅಧಿಕ ಗುಣೋಪಾಸನವನ್ನು ಮಾಡಬಾರದೋ ಮಾಡಬೇಕೋ, ಅದಕ್ಕಾಗಿ ಅದಕ್ಕೆ ಅಧಿಕಾರಿಗಳಾದ ದೇವತೆಗಳಿಗೆ ಯೋಗ್ಯತಾನಿಯಮನಿರ್ಣಯವು ಅಶಕ್ಯವೋ, ಶಕ್ಯವೋ, ಎಂದು ಸಂದೇಹವು. ಧ್ಯಾನದಿಂದ ಮೊದಲೇ ಯೋಗ್ಯತಾನಿಯಮವು ಆಗದಿರುವುದರಿಂದ ಅಯೋಗ್ಯೋಪಾಸನವು ಬರಬೇಕಾಗಿರುವುದರಿಂದ ಅದಕ್ಕೆ ಅಸತ್ಯಾಯೋಗ್ಯಾನ್ಯನುಪಾಸ್ಯಾನಿ ಎನ್ನುವ ಸಾಂಕರ್ಷಣ ಸೂತ್ರಪ್ರಕಾರ ಅನರ್ಥಫಲವು ಇದ್ದುದರಿಂದ ಧ್ಯಾನಕಾಲದಲ್ಲಿದ್ದ ಗುಣಪ್ರತಿಭಾನವು ಯೋಗ್ಯತಾನಿರ್ಣಾಯಕವಾಗದಿರುವುದರಿಂದ ಅಧಿಕೋಪಾಸನ ವನ್ನು ಮಾಡಬಾರದು, ಎಂದರೆ ಅವರವರಿಂದ ಪ್ರಾಪ್ತವಾದ ಫಲವನ್ನು ಅಪೇಕ್ಷಿಸಿ ಉಪಾಸನ ಯೋಗ್ಯತಾನಿರ್ಣಯವು ಆಗುವುದರಿಂದ ಭಾವಿ ಉತ್ಕರ್ಷವನ್ನು ತಿಳಿದ ಸರ್ವಜ್ಞಗುರುಗಳು

ಯೋಗ್ಯತಾನುಸಾರವಾಗಿ ಉಪದೇಶ ಕೊಡುವುದರಿಂದ ದೇವತೆಗಳಿಂದ ನಾಲ್ಕು ಗುಣಗಳಿಂದ ಅಧಿಕೋಪಾಸನವನ್ನು ಮಾಡಲೇಬೇಕು. ॥ ಅಧಿ. ೭ ॥

ಇತರಾಧಿಕರಣವು ಸಮಾಪ್ತವಾಯಿತು.

# ೮ ಆಧ್ಯಾನಾಧಿಕರಣವು

ಪೀಠಿಕೆ ॥ ಶ್ರೀಹರಿಯ ಗುಣೋಪಸಂಹಾರ ಅನುಪಸಂಹಾರಗಳನ್ನು ಸಮರ್ಥಿಸುತ್ತಾರೆ. ಅದರಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ಪ್ರಯೋಜನವಿಲ್ಲದಿರುವುದರಿಂದಲೂ ಉಪಸಂಹಾರ ಮಾಡಬಾರದು. ಉಪಸಂಹಾರ ಮಾಡದಿದ್ದರೂ ಮೋಕ್ಷಪ್ರಾಪ್ತಿಯು ಉಕ್ತವಾಗಿದೆ. ಇಷ್ಟನ್ನೇ ಉಪಾಸನಮಾಡಬೇಕೆಂದು ಹೇಳದೆ ಇದ್ದುದರಿಂದ ಅನುಪಸಂಹಾರವನ್ನು ಮಾಡಬಾರದು, ಹೀಗೆ ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸುತ್ತಾ ಅಧಿಕರಣ ತಾತ್ಪರ್ಯವನ್ನು ಹೇಳುತ್ತಾರೆ—

**ಭಾಷ್ಯ ॥ ಉಪಸಂಹಾರಾನುಪಸಂಹಾರಪರಮಾಣಮಾಹ ॥ ೧ ॥**

ಭಾಷ್ಯಾರ್ಥ ॥ ಸೂತ್ರಕಾರರು ಈ ಅಧಿಕರಣದಲ್ಲಿ ಉಪಸಂಹಾರ ಅನುಪಸಂಹಾರಗಳನ್ನು ಮಾಡುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ॥ ೧೫ ॥

ಸೂತ್ರಾರ್ಥ ॥ ಸರ್ವವೇದಾದಿಗಳಲ್ಲಿ ಈಶ್ವರನಿಗೆ ಸರ್ವಗುಣೋಕ್ತಿಯು ಚೆನ್ನಾಗಿ ಸರ್ವಗುಣೋಪಸಂಹಾರ ಪೂರ್ವಕ ಧ್ಯಾನರೂಪ ಪ್ರಯೋಜನಕ್ಕಾಗಿ ಚೆನ್ನಾಗಿ ಅನುರೂಪ ಫಲಜನಕ ಧ್ಯಾನಾರ್ಥವಾಗಿಯೂ, ಧ್ಯಾನರೂಪ ಪ್ರಯೋಜನದಿಂದ ಇತರ ಪ್ರಯೋಜನವಿಲ್ಲದಿರುವುದರಿಂದ.

**ಭಾಷ್ಯ ॥ (೧) ಆಧ್ಯಾನಾರ್ಥಂ ಹಿ ಸರ್ವೇ ಗುಣಾ ಉಚ್ಯಂತೇ ಪ್ರಯೋಜನಾಂತರಾಭಾವಾತ್ । (೨) ಜ್ಞಾನಾರ್ಥಮಥ ಧ್ಯಾನಾರ್ಥಂ ಗುಣಾನಾಂ ಸಮುದೀರಣಾತ್ ಜ್ಞಾತವ್ಯಾಶ್ಚೈವ ಧ್ಯಾತವ್ಯಾ ಗುಣಾಃ ಸರ್ವೇಪ್ಯತೋ ಹರೇಃ ॥ ನಾನ್ಯತ್ಪ್ರಯೋಜನಂ ಜ್ಞಾನಾದ್ಧ್ಯಾನಾತ್ಕರ್ಮಕೃತೇರಪಿ । ಶ್ರವಣಾಚ್ಚಾಥ ಪಾಠಾದ್ವಾ ವಿದ್ಯಾಭಿಃ ಕಿಂಚಿದಿಷ್ಯತೇ ॥ ಇತಿ ಪರಮಸಂಹಿತಾಯಾಂ ॥ (೩) ಗುಣಾಃ ಸರ್ವೇಽಪಿ ವೇತ್ತವ್ಯಾಃ ಧ್ಯಾತವ್ಯಾಶ್ಚ ನ ಸಂಶಯಃ । ನಾನ್ಯತ್ಪ್ರಯೋಜನಂ ಮುಖ್ಯಂ ಗುಣಾನಾಂ ಕಥನೇ ಭವೇತ್ ॥ (೪) ಜ್ಞಾನಧ್ಯಾನಸಮಾಯೋಗಾದ್ಗುಣಾನಾಂ ಸರ್ವಶಃ ಫಲಂ । ಮುಖ್ಯಂ ಭವೇನ್ನ ಚಾನ್ಯೇನ ಫಲಂ ಮುಖ್ಯಂ ಕ್ವಚಿತ್ಭವೇತ್ ॥ ಇತಿ ಬೃಹತ್ತಂತ್ರೇ ॥ ೧೫ ॥ ೨ ॥**

ಭಾಷ್ಯಾರ್ಥ ॥ (೧) ಚೆನ್ನಾಗಿ (ಅಂದರೆ) ಅಶೇಷಗುಣೋಪಸಂಹಾರ ಪೂರ್ವಕವಾಗಿ ಧ್ಯಾನಕ್ಕಾಗಿ ಸರ್ವಗುಣಗಳೂ ಸರ್ವವಿದ್ಯೆಗಳಿಂದ ಹೇಳಲ್ಪಡುತ್ತವೆ. (ಆದ ಕಾರಣ ಗುಣಾಭಿಧಾನವು ಧ್ಯಾನಾರ್ಥವಾದುದರಿಂದ ಉಪಸಂಹಾರವನ್ನು ಮಾಡಲೇಬೇಕು.) ಗುಣಾಭಿಧಾನಕ್ಕೆ ಧ್ಯಾನ ಹೊರತು ಪ್ರಯೋಜನವಿಲ್ಲದಿರುವುದರಿಂದ. (೨) ವಿದ್ಯೆಗಳಿಂದ ಗುಣಾದಿಗಳನ್ನು ಹೇಳಿದ್ದರಿಂದ ವಿದ್ಯಾಭಿಧೇಯ ಗಳಾದ ಶ್ರೀಹರಿಯ ಗುಣಗಳಿಗೆ ಪರೋಕ್ಷಜ್ಞಾನದಿಂದಲೂ ಧ್ಯಾನದಿಂದಲೂ ಶ್ರೀಹರಿಯ ಪೂಜಾದಿ ರೂಪವಾದ ಕರ್ಮಕರಣದಿಂದಲೂ ಶಬ್ದಗ್ರಹಣರೂಪ ಶ್ರವಣದಿಂದಲೂ ಶಬ್ದಾಭ್ಯಾಸರೂಪವಾದ ಪಾಠದಿಂದಲೂ ಇತರವಾದ ಯಾವ ಪ್ರಯೋಜನವೂ ಇಚ್ಛಿಸಲ್ಪಡುವುದಿಲ್ಲವೋ, ಆದಕಾರಣ ಬ್ರಹ್ಮಕರ್ಮವಿದ್ಯೆಗಳಿಂದ ಗುಣಗಳ ಮತ್ತು ಕರ್ಮಗಳ ಹೇಳುವಿಕೆಯು ಜ್ಞಾನಕ್ಕಾಗಿ ತದ್ವಾರಾ ಧ್ಯಾನಕ್ಕಾಗಿಯೇ. (ಕರ್ಮಕರಣಕ್ಕಾಗಿಯೂ) ಆಗುವುದು. (ಏವಂಚ ಗುಣಾದಿಗಳನ್ನು ಹೇಳಿದ್ದು ಧ್ಯಾನಾದಿಗಳಿಗಾಗಿಯೇ, ಇತರ ಪ್ರಯೋಜನಕ್ಕಾಗಿ ಅಲ್ಲ) ಆದಕಾರಣ ಸರ್ವರಿಂದಲೂ ಎಲ್ಲಾ ಶ್ರೀಹರಿಯ ಗುಣಗಳೂ ತಿಳಿಯಲರ್ಹಗಳೇ ಧ್ಯೇಯಗಳೇ ಆಗಿವೆ. (ಕರ್ಮಗಳೂ ಕರ್ತವ್ಯಗಳೇ) ಇತಿ ಪರಮಸಂಹಿತಾಖ್ಯಗ್ರಂಥದಲ್ಲಿ ಸೂತ್ರಕಾರರಿಂದ ಉಕ್ತವಾಗಿದೆ. (೩.) (ಗುಣಾಭಿಧಾನಕ್ಕೆ ಶ್ರವಣಪಾಠಗಳೂ ಪ್ರಯೋಜನವು, ಕೇವಲ ಧ್ಯಾನವೇ ಅಲ್ಲ ಎಂದರೆ) ಗುಣಗಳನ್ನು ಹೇಳಿದ್ದರಿಂದ ಜ್ಞಾನಧ್ಯಾನಗಳಿಂದ ಇತರವಾದ ಮುಖ್ಯಪ್ರಯೋಜನವು ಇಲ್ಲವೇ ಇಲ್ಲ. ಆದಕಾರಣ ಆತನಿಗೆ ಆ ಪ್ರಯೋಜನಕ್ಕಾಗಿ ಶ್ರೀಹರಿಯ ಎಲ್ಲಾ ಗುಣಗಳನ್ನು ತಿಳಿಯಬೇಕು ಮತ್ತು ಧ್ಯಾನಮಾಡಬೇಕು. (ತಥಾಚ ಶ್ರವಣಾದಿಗಳು ಪರೋಕ್ಷಜ್ಞಾನ ಧ್ಯಾನಾರ್ಥಗಳಾದುದರಿಂದ ಅವುಗಳಿಗೆ ಸಾಧನವಾದ ಪ್ರಯುಕ್ತ ಅದು ಗುಣಾಭಿಧಾನಕ್ಕೆ ಮುಖ್ಯ ಪ್ರಯೋಜನವಲ್ಲ) (೪) (ಜ್ಞಾನವೂ ಪ್ರಯೋಜನವಾದುದರಿಂದ ಧ್ಯಾನವೇ ಅಲ್ಲ ಎಂದರೆ) ಎಲ್ಲಾ ಗುಣಗಳಿಗೂ ಜ್ಞಾನ ಧ್ಯಾನಗಳಿಗೆ ಉಪಯೋಗಿ ಉಪಯೋಜ್ಯ ಭಾವದಿಂದ ಸಮ್ಮೇಲದಿಂದ ಮುಖ್ಯವಾದ ಅಪರೋಕ್ಷ ಜ್ಞಾನಾದಿರೂಪವಾದ ಫಲವು ಆಗುವುದು. ಇತರವಾದ ಪರೋಕ್ಷಜ್ಞಾನ ಮಾತ್ರದಿಂದ ಆಗುವುದಿಲ್ಲ) (ತಥಾಚ ಧ್ಯಾನಪೂರ್ವಭಾವಿಯಾದ ಜ್ಞಾನವೂ ಕೂಡ ಧ್ಯಾನಕ್ಕೆ ಉಪಯೋಗಿಯಾದುದರಿಂದ ಮುಖ್ಯವಲ್ಲ) ಹೀಗೆ ಬೃಹತ್ತಂತ್ರದಲ್ಲಿ ಹೇಳಿದೆ. ॥ ೧೫ ॥ ೨ ॥

ಪೀಠಿಕೆ ॥ ಹೀಗೆ ಸರ್ವಗುಣೋಪಸಂಹಾರವನ್ನು ಪ್ರಮಾಣದಿಂದ ಸಮರ್ಥಿಸಿ ಅನುಪ ಸಂಹಾರ (ಅಲ್ಪಗುಣೋಪಸಂಹಾರ)ವನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆತ್ಮಶಬ್ದಾಚ್ಚ ಓಂ ॥ ೧೬ ॥

ಸೂತ್ರಾರ್ಥ ॥ ಗುಣಾಂತರ ವ್ಯಾವೃತ್ತಿಪೂರ್ವಕವಾಗಿ ಆತ್ಮತ್ವೋಪಾಸ್ತಿ ವಿಧಾಯಕ ಆತ್ಮಶಬ್ದದಿಂದ ಅನುಪಸಂಹಾರವೂ (ಅಲ್ಪಗುಣೋಪಸಂಹಾರವೂ) ಸಿದ್ಧಿಸುತ್ತದೆ.

**ಭಾಷ್ಯ ॥ ಆತ್ಮೇತ್ಯೇವೋಪಾಸೀತ** (ಬೃ.೩.೪.೭.) **। ಇತ್ಯನುಪಸಂಹಾರೇ (ರ) ಪ್ರಮಾಣಂ ॥ ೧೬ ॥ ಅಧಿ. ೮ ॥ ೩ ॥**

ಭಾಷ್ಯಾರ್ಥ ॥ ಆತ್ಮೇತ್ಯೇವೋಪಾಸೀತ ಎಂದು ಬೃಹದಾರಣ್ಯಕದಲ್ಲಿ ಗುಣಾಂತರ ವ್ಯಾವೃತ್ತಿ

ಪೂರ್ವಕವಾಗಿ ಆತ್ಮತ್ವವನ್ನು ಉಪಾಸನ ಮಾಡಬೇಕೆಂದು ವಿಧಿಸಿದ್ದರಿಂದ ಆ ವಾಕ್ಯವು ಅನುಪಸಂಹಾರದಲ್ಲಿ ಪ್ರಮಾಣವು. ॥ ೧೬ ॥ ೨. ॥

## ಅಧಿಕರಣ ಸಾರಾಂಶ

ಗುಣೋಪಸಂಹಾರ ಅನುಪಸಂಹಾರಗಳನ್ನು ಮಾಡಬಾರದೋ ಮಾಡಬೇಕೋ ಎಂದು ಸಂದೇಹವು. ಸರ್ವವಿದ್ಯೆಗಳೂ ಭಗವಂತನ ನಾಮಗಳಾದುದರಿಂದ ಗುಣಾಭಿಧಾನವು ಉಪಸಂಹಾರಾರ್ಥಕವಾದರೆ— ಸರ್ವಗುಣಗಳನ್ನು ಏಕತ್ರ ಹೇಳಬೇಕಾಗಿರುವುದರಿಂದ ನಾನಾ ಸ್ಥಳಗಳಲ್ಲಿ ಹೇಳಿದ್ದು ವ್ಯರ್ಥವಾಗುವುದು. ಮೋಕ್ಷವು ಅನುಪಸಂಹಾರದಿಂದಲೂ ಸಿದ್ಧಿಸುವುದರಿಂದ ಉಪಸಂಹಾರವೂ ವ್ಯರ್ಥವು ಮತ್ತು ಆವಾವ ವಿದ್ಯಾ ಪ್ರಕರಣಗಳಲ್ಲಿ ಇಷ್ಟೇ ಉಪಾಸನ ಮಾಡಬೇಕೆಂದು ಉಕ್ತಿಯು ಇಲ್ಲದಿರುವುದರಿಂದ ಪ್ರಕರಣಭೇದವು ಅನುಪಸಂಹಾರದಲ್ಲಿ ಅಪ್ರಮಾಣವಾದುದರಿಂದ ಉಪಸಂಹಾರ ಅನುಪಸಂಹಾರಗಳೆರಡನ್ನೂ ಮಾಡಬಾರದು. ಎಂದರೆ— ಗುಣೋಕ್ತಿಗೆ ಉಪಸಂಹಾರದಿಂದ ಇತರವಾದ ಪ್ರಯೋಜನವಿಲ್ಲದಿರುವುದರಿಂದ ನಾನಾ ಸ್ಥಳಗಳಲ್ಲಿ ಹೇಳಲ್ಪಟ್ಟ ಗುಣಗಳಿಗೂ ಉಪಸಂಹಾರ ಮಾಡಿದರೆ ಮುಕ್ತಿಯಲ್ಲಿ ಫಲಾತಿಶಯವಿದ್ದ ಪ್ರಯುಕ್ತವೂ, ಆತ್ಮೇತ್ಯೇವೋಪಾಸೀತ ಎನ್ನುವ ಶ್ರುತಿಯಲ್ಲಿ ಅನ್ಯವ್ಯವಚ್ಛೇದ ಪೂರ್ವಕವಾಗಿ ಆತ್ಮತ್ವೋಪಾಸನವನ್ನು ವಿಧಾನಮಾಡಿದ್ದರಿಂದಲೂ ಉಪಸಂಹಾರ ಅನುಪಸಂಹಾರಗಳೆರಡನ್ನು ಅಧಿಕಾರಿಭೇದದಿಂದ ಮಾಡಬೇಕು. ॥ ಅಧಿ. ೮ ॥

**ಆಧ್ಯಾನಾಧಿಕರಣವು ಸಮಾಪ್ತವಾಯಿತು.**

# ೯ ಆತ್ಮಗೃಹೀತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಉಪಾಸನದಲ್ಲಿ ಆನಂದಾದಿಗಳ ನಿಯಮವನ್ನು ಸಮರ್ಥಿಸುತ್ತಾರೆ. ಆತ್ಮತ್ವ ಒಂದನ್ನೇ ಸರ್ವರೂ ಉಪಾಸನಾ ಮಾಡಬೇಕು. ಆನಂದಾದಿ ನಾಲ್ಕನ್ನು ಉಪಾಸನ ಮಾಡುವುದು ಬೇಡ, ಆತ್ಮೇತ್ಯೇವೋಪಾಸೀತ ಎನ್ನುವ ಸಾವಧಾರಣ ಶ್ರುತಿಯಿಂದ ಆನಂದಾದಿ ಮೂರನ್ನು ಲೋಪಮಾಡಿಕೊಂಡು ಆತ್ಮತ್ವ ಮಾತ್ರೋಪಾಸನವು ಸುಕರವಾಗಿದೆ. ಮತ್ತು ಶೀಘ್ರದಲ್ಲಿ ಅಪರೋಕ್ಷ ಸಿದ್ಧಿರೂಪ ಗುಣಲಾಭವೂ ಆಗುತ್ತದೆ. ಆದಪ್ರಯುಕ್ತ ಆತ್ಮತ್ವವೊಂದೇ ಸರ್ವೋಪಾಸ್ಯವಾದ ಪ್ರಯುಕ್ತ ಆನಂದಾದಯಃ ಪ್ರಧಾನಸ್ಯ ಎಂದು ಹೇಳಿದ್ದು ಶ್ರುತ್ಯಾದಿವಿರೋಧವಿದ್ದ ಪ್ರಯುಕ್ತ ಅಯುಕ್ತವು ಎಂದು ಪೂರ್ವಪಕ್ಷ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

## ಸೂತ್ರ ॥ ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ ॥ ೧೭ ॥

**ಸೂತ್ರಾರ್ಥ ॥** ಆತ್ಮಶಬ್ದದಿಂದ ಆನಂದ ಮೊದಲಾದ ನಾಲ್ಕು ಗುಣಗಳಿಗೂ ಗ್ರಹಣವಾಗುತ್ತದೆ.

**ಭಾಷ್ಯಾರ್ಥ** ॥ (೧) ಚೆನ್ನಾಗಿ (ಅಂದರೆ) ಅಶೇಷಗುಣೋಪಸಂಹಾರ ಪೂರ್ವಕವಾಗಿ ಧ್ಯಾನಕ್ಕಾಗಿ ಸರ್ವಗುಣಗಳೂ ಸರ್ವವಿದ್ಯೆಗಳಿಂದ ಹೇಳಲ್ಪಡುತ್ತವೆ. (ಆದ ಕಾರಣ ಗುಣಾಭಿಧಾನವು ಧ್ಯಾನಾರ್ಥವಾದುದರಿಂದ ಉಪಸಂಹಾರವನ್ನು ಮಾಡಲೇಬೇಕು.) ಗುಣಾಭಿಧಾನಕ್ಕೆ ಧ್ಯಾನ ಹೊರತು ಪ್ರಯೋಜನವಿಲ್ಲದಿರುವುದರಿಂದ. (೨) ವಿದ್ಯೆಗಳಿಂದ ಗುಣಾದಿಗಳನ್ನು ಹೇಳಿದ್ದರಿಂದ ವಿದ್ಯಾಭಿಧೇಯ ಗಳಾದ ಶ್ರೀಹರಿಯ ಗುಣಗಳಿಗೆ ಪರೋಕ್ಷಜ್ಞಾನದಿಂದಲೂ ಧ್ಯಾನದಿಂದಲೂ ಶ್ರೀಹರಿಯ ಪೂಜಾದಿ ರೂಪವಾದ ಕರ್ಮಕರಣದಿಂದಲೂ ಶಬ್ದಗ್ರಹಣರೂಪ ಶ್ರವಣದಿಂದಲೂ ಶಬ್ದಾಭ್ಯಾಸರೂಪವಾದ ಪಾಠದಿಂದಲೂ ಇತರವಾದ ಯಾವ ಪ್ರಯೋಜನವೂ ಇಚ್ಛಿಸಲ್ಪಡುವುದಿಲ್ಲವೋ, ಆದಕಾರಣ ಬ್ರಹ್ಮಕರ್ಮವಿದ್ಯೆಗಳಿಂದ ಗುಣಗಳ ಮತ್ತು ಕರ್ಮಗಳ ಹೇಳುವಿಕೆಯು ಜ್ಞಾನಕ್ಕಾಗಿ ತದ್ವಾರಾ ಧ್ಯಾನಕ್ಕಾಗಿಯೇ. (ಕರ್ಮಕರಣಕ್ಕಾಗಿಯೂ) ಆಗುವುದು. (ಏವಂಚ ಗುಣಾದಿಗಳನ್ನು ಹೇಳಿದ್ದು ಧ್ಯಾನಾದಿಗಳಿಗಾಗಿಯೇ, ಇತರ ಪ್ರಯೋಜನಕ್ಕಾಗಿ ಅಲ್ಲ) ಆದಕಾರಣ ಸರ್ವರಿಂದಲೂ ಎಲ್ಲಾ ಶ್ರೀಹರಿಯ ಗುಣಗಳೂ ತಿಳಿಯಲರ್ಹಗಳೇ ಧ್ಯೇಯಗಳೇ ಆಗಿವೆ. (ಕರ್ಮಗಳೂ ಕರ್ತವ್ಯಗಳೇ) ಇತಿ ಪರಮಸಂಹಿತಾಖ್ಯಗ್ರಂಥದಲ್ಲಿ ಸೂತ್ರಕಾರರಿಂದ ಉಕ್ತವಾಗಿದೆ. (೩) (ಗುಣಾಭಿಧಾನಕ್ಕೆ ಶ್ರವಣಪಾಠಗಳೂ ಪ್ರಯೋಜನವು, ಕೇವಲ ಧ್ಯಾನವೇ ಅಲ್ಲ ಎಂದರೆ) ಗುಣಗಳನ್ನು ಹೇಳಿದ್ದರಿಂದ ಜ್ಞಾನಧ್ಯಾನಗಳಿಂದ ಇತರವಾದ ಮುಖ್ಯಪ್ರಯೋಜನವು ಇಲ್ಲವೇ ಇಲ್ಲ. ಆದಕಾರಣ ಆತನಿಗೆ ಆ ಪ್ರಯೋಜನಕ್ಕಾಗಿ ಶ್ರೀಹರಿಯ ಎಲ್ಲಾ ಗುಣಗಳನ್ನು ತಿಳಿಯಬೇಕು ಮತ್ತು ಧ್ಯಾನಮಾಡಬೇಕು. (ತಥಾಚ ಶ್ರವಣಾದಿಗಳು ಪರೋಕ್ಷಜ್ಞಾನ ಧ್ಯಾನಾರ್ಥಗಳಾದುದರಿಂದ ಅವುಗಳಿಗೆ ಸಾಧನವಾದ ಪ್ರಯುಕ್ತ ಅದು ಗುಣಾಭಿಧಾನಕ್ಕೆ ಮುಖ್ಯ ಪ್ರಯೋಜನವಲ್ಲ) (೪) (ಜ್ಞಾನವೂ ಪ್ರಯೋಜನವಾದುದರಿಂದ ಧ್ಯಾನವೇ ಅಲ್ಲ ಎಂದರೆ) ಎಲ್ಲಾ ಗುಣಗಳಿಗೂ ಜ್ಞಾನ ಧ್ಯಾನಗಳಿಗೆ ಉಪಯೋಗಿ ಉಪಯೋಜ್ಯ ಭಾವದಿಂದ ಸಮ್ಮೇಲದಿಂದ ಮುಖ್ಯವಾದ ಅಪರೋಕ್ಷ ಜ್ಞಾನಾದಿರೂಪವಾದ ಫಲವು ಆಗುವುದು. ಇತರವಾದ ಪರೋಕ್ಷಜ್ಞಾನ ಮಾತ್ರದಿಂದ ಆಗುವುದಿಲ್ಲ) (ತಥಾಚ ಧ್ಯಾನಪೂರ್ವಭಾವಿಯಾದ ಜ್ಞಾನವೂ ಕೂಡ ಧ್ಯಾನಕ್ಕೆ ಉಪಯೋಗಿಯಾದುದರಿಂದ ಮುಖ್ಯವಲ್ಲ) ಹೀಗೆ ಬೃಹತ್ತಂತ್ರದಲ್ಲಿ ಹೇಳಿದೆ. ॥ ೧೫ ॥ ೨ ॥

**ಪೀಠಿಕೆ** ॥ ಹೀಗೆ ಸರ್ವಗುಣೋಪಸಂಹಾರವನ್ನು ಪ್ರಮಾಣದಿಂದ ಸಮರ್ಥಿಸಿ ಅನುಪ ಸಂಹಾರ (ಅಲ್ಪಗುಣೋಪಸಂಹಾರ)ವನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆತ್ಮಶಬ್ದಾಚ್ಚ ಓಂ ॥ ೧೬ ॥

**ಸೂತ್ರಾರ್ಥ** ॥ ಗುಣಾಂತರ ವ್ಯಾವೃತ್ತಿಪೂರ್ವಕವಾಗಿ ಆತ್ಮೇತ್ಯೇವೋಪಾಸ್ತಿ ವಿಧಾಯಕ ಆತ್ಮಶಬ್ದದಿಂದ ಅನುಪಸಂಹಾರವೂ (ಅಲ್ಪಗುಣೋಪಸಂಹಾರವೂ) ಸಿದ್ಧಿಸುತ್ತದೆ.

**ಭಾಷ್ಯ ॥ ಆತ್ಮೇತ್ಯೇವೋಪಾಸೀತ** (ಬೃ.೨..೪.೭.) **। ಇತ್ಯನುಪಸಂಹಾರೇ (ರ) ಪ್ರಮಾಣಂ ॥ ೧೬ ॥ ಅಧಿ. ೮ ॥ ೩ ॥**

**ಭಾಷ್ಯಾರ್ಥ** ॥ ಆತ್ಮೇತ್ಯೇವೋಪಾಸೀತ ಎಂದು ಬೃಹದಾರಣ್ಯಕದಲ್ಲಿ ಗುಣಾಂತರ ವ್ಯಾವೃತ್ತಿ

ಪೂರ್ವಕವಾಗಿ ಆತ್ಮತ್ವವನ್ನು ಉಪಾಸನ ಮಾಡಬೇಕೆಂದು ವಿಧಿಸಿದ್ದರಿಂದ ಆ ವಾಕ್ಯವು ಅನುಪಸಂಹಾರದಲ್ಲಿ ಪ್ರಮಾಣವು. ॥ ೧೬ ॥ ೨. ॥

## ಅಧಿಕರಣ ಸಾರಾಂಶ

ಗುಣೋಪಸಂಹಾರ ಅನುಪಸಂಹಾರಗಳನ್ನು ಮಾಡಬಾರದೋ ಮಾಡಬೇಕೋ ಎಂದು ಸಂದೇಹವು. ಸರ್ವವಿದ್ಯೆಗಳೂ ಭಗವಂತನ ನಾಮಗಳಾದುದರಿಂದ ಗುಣಾಭಿಧಾನವು ಉಪಸಂಹಾರಾರ್ಥಕವಾದರೆ— ಸರ್ವಗುಣಗಳನ್ನು ಏಕತ್ರ ಹೇಳಬೇಕಾಗಿರುವುದರಿಂದ ನಾನಾ ಸ್ಥಳಗಳಲ್ಲಿ ಹೇಳಿದ್ದು ವ್ಯರ್ಥವಾಗುವುದು. ಮೋಕ್ಷವು ಅನುಪಸಂಹಾರದಿಂದಲೂ ಸಿದ್ಧಿಸುವುದರಿಂದ ಉಪಸಂಹಾರವೂ ವ್ಯರ್ಥವು ಮತ್ತು ಆವಾವ ವಿದ್ಯಾ ಪ್ರಕರಣಗಳಲ್ಲಿ ಇಷ್ಟೇ ಉಪಾಸನ ಮಾಡಬೇಕೆಂದು ಉಕ್ತಿಯು ಇಲ್ಲದಿರುವುದರಿಂದ ಪ್ರಕರಣಭೇದವು ಅನುಪಸಂಹಾರದಲ್ಲಿ ಅಪ್ರಮಾಣವಾದುದರಿಂದ ಉಪಸಂಹಾರ ಅನುಪಸಂಹಾರಗಳೆರಡನ್ನೂ ಮಾಡಬಾರದು. ಎಂದರೆ— ಗುಣೋಕ್ತಿಗೆ ಉಪಸಂಹಾರದಿಂದ ಇತರವಾದ ಪ್ರಯೋಜನವಿಲ್ಲದಿರುವುದರಿಂದ ನಾನಾ ಸ್ಥಳಗಳಲ್ಲಿ ಹೇಳಲ್ಪಟ್ಟ ಗುಣಗಳಿಗೂ ಉಪಸಂಹಾರ ಮಾಡಿದರೆ ಮುಕ್ತಿಯಲ್ಲಿ ಫಲಾತಿಶಯವಿದ್ದ ಪ್ರಯುಕ್ತವೂ, **ಆತ್ಮೇತ್ಯೇವೋಪಾಸೀತ** ಎನ್ನುವ ಶ್ರುತಿಯಲ್ಲಿ ಅನ್ಯವ್ಯವಚ್ಛೇದ ಪೂರ್ವಕವಾಗಿ ಆತ್ಮತ್ವೋಪಾಸನವನ್ನು ವಿಧಾನಮಾಡಿದ್ದರಿಂದಲೂ ಉಪಸಂಹಾರ ಅನುಪಸಂಹಾರಗಳೆರಡನ್ನು ಅಧಿಕಾರಿಭೇದದಿಂದ ಮಾಡಬೇಕು. ॥ ಅಧಿ. ೮ ॥

**ಆಧ್ಯಾನಾಧಿಕರಣವು ಸಮಾಪ್ತವಾಯಿತು.**

# ೯ ಆತ್ಮಗೃಹೀತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಉಪಾಸನದಲ್ಲಿ ಆನಂದಾದಿಗಳ ನಿಯಮವನ್ನು ಸಮರ್ಥಿಸುತ್ತಾರೆ. ಆತ್ಮತ್ವ ಒಂದನ್ನೇ ಸರ್ವರೂ ಉಪಾಸನಾ ಮಾಡಬೇಕು. ಆನಂದಾದಿ ನಾಲ್ಕನ್ನು ಉಪಾಸನ ಮಾಡುವುದು ಬೇಡ, **ಆತ್ಮೇತ್ಯೇವೋಪಾಸೀತ** ಎನ್ನುವ ಸಾವಧಾರಣ ಶ್ರುತಿಯಿಂದ ಆನಂದಾದಿ ಮೂರನ್ನು ಲೋಪಮಾಡಿಕೊಂಡು ಆತ್ಮತ್ವ ಮಾತ್ರೋಪಾಸನವು ಸುಶಕವಾಗಿದೆ. ಮತ್ತು ಶೀಘ್ರದಲ್ಲಿ ಅಪರೋಕ್ಷ ಸಿದ್ಧಿರೂಪ ಗುಣಲಾಭವೂ ಆಗುತ್ತದೆ. ಆದಪ್ರಯುಕ್ತ ಆತ್ಮತ್ವವೊಂದೇ ಸರ್ವೋಪಾಸ್ಯವಾದ ಪ್ರಯುಕ್ತ ಆನಂದಾದಯಃ ಪ್ರಧಾನಸ್ಯ ಎಂದು ಹೇಳಿದ್ದು ಶ್ರುತ್ಯಾದಿವಿರೋಧವಿದ್ದ ಪ್ರಯುಕ್ತ ಆಯುಕ್ತವು ಎಂದು ಪೂರ್ವಪಕ್ಷ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರಕ್ಕೆ ಅವತಾರಿಕೆ ಕೊಡುತ್ತಾರೆ—

## ಸೂತ್ರ ॥ ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ ॥ ೧೭ ॥

**ಸೂತ್ರಾರ್ಥ ॥** ಆತ್ಮಶಬ್ದದಿಂದ ಆನಂದ ಮೊದಲಾದ ನಾಲ್ಕು ಗುಣಗಳಿಗೂ ಗ್ರಹಣವಾಗುತ್ತದೆ.

ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ವಾಕ್ಯಗಳಲ್ಲಿ ಅನೇಕ ಸತ್ಯತ್ವಾದ್ಯುಕ್ತಿಯು ಇದ್ದಂತೆ. ಅತ್ರಹ್ಯೇತೇ ಸರ್ವೇ ಎನ್ನುವ ಉತ್ತರವಾಕ್ಯದಿಂದ.

**ಭಾಷ್ಯ ॥ (೧) ನ ಚಾನಂದದಾದಯಃ ಪ್ರಧಾನಸ್ಯೇತ್ಯುಕ್ತಿವಿರೋಧಃ। (೨) ಯತಃ। ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ.೨.೧.)। ವಿಜ್ಞಾನಮಾನಂದಂ ಬ್ರಹ್ಮ (ಬೃ.೫.೯.೨೮.)। ಇತಿವದೇವಾತ್ಮಶಬ್ದಗೃಹೀತಿಃ। (೩) ಅತ್ರ ಹ್ಯೇತೇ ಸರ್ವ ಏಕೀ (ಕಂ) ಭವಂತಿ (ಬೃ.೨.೪.೭.)। ಇತ್ಯುತ್ತರಾತ್। (೪) ಆನಂದಾನುಭವತ್ವಾಚ್ಚ ನಿರ್ದೋಷತ್ವಾಚ್ಚ ಭಣ್ಯತೇ। ನಿತ್ಯತ್ವಾಚ್ಚತಥಾऽತ್ಮೇತಿ ವೇದವಾದಿಭಿರೀಶ್ವರಃ॥ ಇತಿ ಬೃಹತ್ತಂತ್ರೇ ॥ ೧೭ ॥ ಅಧಿ.೯ ॥ ೧ ॥**

ಭಾಷ್ಯಾರ್ಥ ॥ (೧) ಆತ್ಮತ್ವ ಮಾತ್ರಕ್ಕೆ ಸರ್ವೋಪಾಸ್ಯತ್ವವಿದ್ದುದರಿಂದ ಆನಂದಾದಯಃ ಪ್ರಧಾನಸ್ಯ ಎನ್ನುವ ಉಕ್ತಿಗೆ ಆತ್ಮೇತ್ಯೇವ ಎನ್ನುವ ಶ್ರುತಿ ವಿರೋಧವು ಎನ್ನುವುದು ಯುಕ್ತವಲ್ಲ. (ಮತ್ತೆ ಆನಂದಾದಿ ನಾಲ್ಕು ಗುಣಗಳೂ ಉಪಾಸ್ಯಗಳೇ ಆಗಿವೆ.) (೨) ಏಕೆಂದರೆ— ಸತ್ಯಂ ಜ್ಞಾನಂ ವಿಜ್ಞಾನಮಾನಂದಂ ಇತ್ಯಾದಿ ವಾಕ್ಯದಲ್ಲಿ ಸತ್ಯಜ್ಞಾನಾದಿಪದಗಳಿಗೆ ಸತ್ಯತ್ವಾದ್ಯಭಿಧಾಯಕತ್ವವಿದ್ದಂತೆಯೇ ಆತ್ಮಶಬ್ದದಿಂದ ಆನಂದ ಮೊದಲಾದ ಮೂರಕ್ಕೂ ಗ್ರಹಣವು. (ಸ್ವಾಮಿತ್ವ ಮಾತ್ರಕ್ಕೆ ಗ್ರಹಣವಲ್ಲ) (೩.) (ಇದು ಯಾವುದರಿಂದ ಎಂದರೆ) ಈ ಆತ್ಮತ್ವದಲ್ಲಿ ಈ ಆನಂದಾದಿ ಗುಣಗಳೆಲ್ಲವೂ ಅಂತರ್ಭೂತ ಗಳಾಗುತ್ತವೆ. ಉತ್ತರ ವಾಕ್ಯದಿಂದ, (೪) (ಆತ್ಮಶಬ್ದವು ಸ್ವಾಮಿತ್ವರೂಪವಾದ ಅರ್ಥವನ್ನು ಮಾತ್ರ ಹೇಳುವದಲ್ಲ ಎನ್ನು ವಲ್ಲಿ ಸ್ಮೃತಿಯನ್ನು ಹೇಳುತ್ತಾರೆ) ಶ್ರೀಹರಿಯು ಆನಂದರೂಪನಾದುದರಿಂದಲೂ ಜ್ಞಾನರೂಪನಾದುದರಿಂದಲೂ ನಿರ್ದೋಷನಾದುದರಿಂದಲೂ ನಿತ್ಯಭೂತನಾದುದರಿಂದಲೂ ವೇದ ಪಾರಂಗತರಿಂದ ಆತ್ಮಾ ಎಂದು ಹೇಳಲ್ಪಡುತ್ತಾನೆ ಎಂದು ಬೃಹತ್ತಂತ್ರದಲ್ಲಿ ಹೇಳಿದೆ. ॥ ೧೭ ॥ ೧ ॥

## ಅಧಿಕರಣ ಸಾರಾಂಶ

ಆನಂದಾದಯಃ ಎನ್ನುವಲ್ಲಿ ಹೇಳಿದ ಚತುರ್ಗುಣೋಪಾಸನವು ಅಯುಕ್ತವೋ ಯುಕ್ತವೋ ಅದಕ್ಕಾಗಿ ಆತ್ಮೇತ್ಯೇವ ಎನ್ನುವಲ್ಲಿ ಹೇಳಿದ ಆತ್ಮಶಬ್ದವು ಸುಶಕತ್ವಾದಿ ಯುಕ್ತಿಯಿಂದ ಸ್ವಾಮಿತ್ವರೂಪವಾದ ಅರ್ಥವನ್ನು ಮಾತ್ರ ಹೇಳತಕ್ಕದೋ, ಅಥವಾ ವಾಕ್ಯಶೇಷಬಲದಿಂದ ಜ್ಞಾನ ಮೊದಲಾದ ಚತುರ್ಗುಣಗಳನ್ನು ಹೇಳತಕ್ಕದೋ ಎಂದು ಸಂದೇಹವು. ಆತ್ಮತ್ವಮಾತ್ರೋಪಾಸ್ತಿಯು ಸುಶಕವಾದುದ ರಿಂದಲೂ ಶೀಘ್ರದಲ್ಲಿ ಅಪರೋಕ್ಷಜ್ಞಾನಕ್ಕೆ ಕಾರಣವಾಗಿರುವುದರಿಂದಲೂ ಸಾವಧಾರಣವಾದ ಶ್ರೌತ ಆತ್ಮಪದವು ಸ್ವಾಮಿತ್ವರೂಪವಾದ ಅರ್ಥವನ್ನು ಮಾತ್ರ ಹೇಳತಕ್ಕುದು. ಆದುದರಿಂದ ಅಷ್ಟನ್ನು ಮಾತ್ರವೇ ಉಪಾಸನ ಮಾಡಬೇಕಾಗಿರುವುದರಿಂದ ಚತುರ್ಗುಣೋಪಾಸನವು ಅಯುಕ್ತವು, ಎಂದರೆ— ಅತ್ಯಲೌಕಿಕ ಸರ್ವೋತ್ತಮನಾದ ಪುರುಷಾರ್ಥಕ್ಕೆ ಕಾರಣವಾದ ಅಪರೋಕ್ಷ್ಯದಲ್ಲಿ ಅತಿಸುಶಕತ್ವವು ಗುಣವಲ್ಲ, ಗುಣವೆಂದು ಇಟ್ಟುಕೊಂಡರೂ ಸರ್ವಮುಮುಕ್ಷುಗಳಿಗೂ ಫಲವು ಸಮಾನವಾದುದರಿಂದ ಅಪೇಕ್ಷಿತವಾಗಿದೆ. ಸ್ವಾಪೇಕ್ಷಿತವಾದ ಜ್ಞಾನ ಆನಂದ ಮೊದಲಾದ ಫಲಪ್ರಾಪ್ತಿ ಗಾಗಿಯೂ ಅನ್ಯೋಪಾಸನವು ಆವಶ್ಯಕವಾಗಿದೆ. ಮತ್ತು ಪ್ರಾಣನ್ನೇವ ಪ್ರಾಣಃ ಇದು ಮೊದಲಾದ

ಪೂರ್ವವಾಕ್ಯದಲ್ಲಿ ಪ್ರಾಣಪದಾದಿಗಳಿಂದ ಪ್ರಕೃತಗಳಾದ ಆನಂದಾದಿ ಗುಣಗಳಿಗೆ ಪರಾಮರ್ಶವಿದ್ದುದರಿಂದ **ಅತ್ರ ಹ್ಯೇತೇ ಸರ್ವ ಏಕೀಭವಂತಿ** ಎಂದು ಆತ್ಮಗುಣದಲ್ಲಿ ಆನಂದಾದಿ ಗುಣಗಳಿಗೆ ಅಂತರ್ಭಾವವನ್ನು ಹೇಳತಕ್ಕ ವಾಕ್ಯಶೇಷವನ್ನು ಅನುಸರಿಸಿ ಆನಂದಾನುಭವತ್ವಾಚ್ಚ ಇತ್ಯಾದಿ ಸ್ಮೃತಿಯನ್ನೂ ಅನುಸರಿಸಿ ಹೇಳತಕ್ಕ ಶಬ್ದವು ಸ್ವಾಮಿತ್ವ ಮೊದಲಾದ ಚತುರ್ಗುಣಗಳನ್ನು ಹೇಳುವುದರಿಂದ ಸರ್ವಾಧಿಕಾರಕವಾದ ಆನಂದ ಮೊದಲಾದ ಚತುರ್ಗುಣೋಪಾಸನವು ಯುಕ್ತವು. ॥ ಅಧಿ. ೯ ॥

**ಆತ್ಮಗೃಹೀತ್ಯಧಿಕರಣವು ಸಮಾಪ್ತವಾಯಿತು.**

# ೧೦ ಅನ್ವಯಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಆತ್ಮಶಬ್ದೋಕ್ತ ಗುಣೋಪಾಸನವನ್ನು ಸರ್ವರೂ ಮಾಡಬೇಕೆಂದು ಸಮರ್ಥಿಸುತ್ತಾರೆ—

## ಸೂತ್ರ ॥ ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ ॥ ೧೮ ॥

**ಸೂತ್ರಾರ್ಥ** ॥ **ಆಪ್ತವ್ಯಾಪ್ತೇರಾತ್ಮಶಬ್ದಃ** ಎನ್ನುವ ಉಕ್ತಿಯಿಂದ ಆತ್ಮಶಬ್ದದಲ್ಲಿ ಸರ್ವಗುಣಗಳಿಗೆ ಅನ್ವಯವಿದ್ದ ಪ್ರಯುಕ್ತ (ಅಂದರೆ, ಆತ್ಮಶಬ್ದವು ಸರ್ವ ಗುಣವಾಚಕವಾದುದರಿಂದ) ಅದಕ್ಕೆ ಅನುಪಸಂಹಾರ (ಅಲ್ಪಗುಣೋಪಸಂಹಾರ) ಮಾನಸತ್ವವು ಅಯುಕ್ತವು. ಎಂದರೆ, ಆತ್ಮಶಬ್ದಕ್ಕೆ ಸರ್ವಗುಣವಾಚಿತ್ವವು ಅಂಗೀಕರಿಸಲ್ಪಡುತ್ತದೆ. **ಆತ್ಮೇತ್ಯೇವ** ಎನ್ನುವ ಅವಧಾರಣದಿಂದ. (ಏವಂಚ ಈ ವಿಧಿಯು ಬ್ರಹ್ಮಾದಿ ಸರ್ವಾಧಿಕಾರಿಕವಾದುದರಿಂದ ಆತ್ಮಪದದಿಂದ ಸರ್ವಗುಣಗಳನ್ನು ಹೇಳಿ ಅವಧಾರಣದಿಂದ ಇತರ ವ್ಯಾವೃತ್ತಿಯನ್ನು ಹೇಳಿದ್ದರಿಂದ **ಗುಣೈಃ ಸರ್ವೈರುಪಾಸ್ಯಃ** ಇತ್ಯಾದಿಗಳಿಂದ ವಿರೋಧವು ಬರುವುದು. ಆದ ಪ್ರಯುಕ್ತ ಬ್ರಹ್ಮಾದಿಗಳನ್ನು ಕುರಿತು ಸರ್ವಗುಣವನ್ನು ಹೇಳುತ್ತಾರೆ. ಇತರರನ್ನು ಕುರಿತು ತತ್ತದ್ಯೋಗ್ಯ ಗುಣಗಳನ್ನೇ ಹೇಳುತ್ತದೆ, ಎಂದು ತಿಳಿಯುತ್ತದೆ.)

**ಭಾಷ್ಯ ॥ (೧) ಸರ್ವಗುಣಾನಾಮನ್ವಯಃ ಆತ್ಮಶಬ್ದೇ ಭವತಿ । (೨) ಆಪ್ತವ್ಯಾಪ್ತೇರಾತ್ಮಶಬ್ದಃ ಪರಮಸ್ಯ ಪ್ರಯುಜ್ಯತೇ । ಇತಿ ವಚನಾದಿತಿ ಚೇತ್ತಸ್ಯಂ । ಸ್ಯಾಚ್ಚೈವಂ ॥ (೩) ಆತ್ಮೇತ್ಯೇವ** (ಬೃ.೩.೪.೭.) **। ಇತ್ಯವಧಾರಣಾತ್ । ಅನ್ಯಥಾ ಸರ್ವೋಪಸಂಹಾರವಚನವಿರೋಧಾತ್ ॥ ೧೮ ॥ ಅಧಿ.೧೦.॥ ೧ ।**

ಭಾಷ್ಯಾರ್ಥ ॥ (೧) ಎಲ್ಲಾ ಗುಣಗಳಿಗೆ ಪ್ರತಿಪಾದ್ಯತಾಸಂಬಂಧದಿಂದ ಆತ್ಮಶಬ್ದದಲ್ಲಿ ಅನ್ವಯವು ಆಗುತ್ತದೆ (ಅಂದರೆ, ಆತ್ಮಶಬ್ದವು ಸರ್ವಗುಣಗಳನ್ನು ಹೇಳುತ್ತದೆ.) (೨) ಹೊಂದಲರ್ಹ ಗಳಾದ ಎಲ್ಲಾ ಗುಣಗಳಿಗೂ ಪ್ರಾಪ್ತತ್ವವಿದ್ದ ಪ್ರಯುಕ್ತ (ಎಲ್ಲಾ ಗುಣಗಳೂ ಪ್ರಾಪ್ತಗಳಾದುದರಿಂದ) ಆತ್ಮಶಬ್ದವು ಶ್ರೀಹರಿಯ ವಿಷಯದಲ್ಲಿ ವೇದಾದಿಗಳಲ್ಲಿ ಹೇಳಲ್ಪಡುತ್ತದೆ. ಎನ್ನುವ ವಚನದಿಂದ (ತಥಾಚ ಆತ್ಮಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳಲ್ಲ. ಸರ್ವರಿಗೆ ಸರ್ವಗುಣೋಪಾಸ್ತಿ ಯೋಗ್ಯತೆಯು

ಇರುವುದಿಲ್ಲ. ಏವಂಚ **ಆತ್ಮೇತ್ಯೇವೋಪಾಸೀತ** ಎನ್ನುವುದಕ್ಕೆ ಅನುಪಸಂಹಾರ (ಅಲ್ಪಗುಣೋಪಸಂಹಾರ) ಪ್ರಮಾಣತ್ವವು ಅನುಪಪನ್ನವು. ಎಂದರೆ, ಸತ್ಯವೇ (ಅರ್ಧಾಂಗೀಕಾರವು) ಆತ್ಮಶಬ್ದಕ್ಕೆ ಸರ್ವಗುಣಾಭಿಧಾಯಕತ್ವವು ಯಾವುದು ಪರರಿಂದ ಉಕ್ತವಾಗಿಯದೋ, ಅದು ಅಂಗೀಕೃತವೇ ಆಗುವುದು. ಆದರೆ, ಬ್ರಹ್ಮಾದಿಗಳನ್ನು ಕುರಿತೇ ಇತರರನ್ನು ಆತ್ಮಶಬ್ದವು ಅಲ್ಪಗುಣಾಭಿಧಾಯಕವು ಎಂದು ಏಕೆ ಆಗಲಾರದು ಎಂದರೆ) ಆತ್ಮ ಶಬ್ದೋಕ್ತ ಗುಣಗಳೇ ಉಪಾಸ್ಯಗಳು, ಆತ್ಮಶಬ್ದದಿಂದ ಅನುಕ್ತಗಳಲ್ಲ ಎಂದು ಅವಧಾರಣವಿದ್ದುದರಿಂದ, ಆತ್ಮಶಬ್ದಕ್ಕೆ ಬ್ರಹ್ಮಾದಿಗಳನ್ನು ಕುರಿತು ಸರ್ವಗುಣಾಭಿಧಾಯಕತ್ವವಿಲ್ಲವಾದರೆ **ಗುಣೈಃ ಸರ್ವೈರುಪಾಸ್ಯಃ** ಇತ್ಯಾದಿ ಸರ್ವಗುಣೋಪಸಂಹಾರವಚನ ವಿರೋಧವು ಬರುವುದು. ಏವಂಚ ಆತ್ಮಶಬ್ದವು ಬ್ರಹ್ಮಾದಿಗಳಿಗೆ ಸರ್ವಗುಣಾಭಿಧಾಯಕವು. ॥ ೧೮ ॥ ೧ ॥

## ಅಧಿಕರಣ ಸಾರಾಂಶ

ಆತ್ಮಪದೋಕ್ತ ಗುಣಗಳು ಉಪಸಂಹರ್ತೃ ಮಾತ್ರ ಉಪಾಸ್ಯಗಳೋ ಅನುಪಸಂಹರ್ತೃ (ಅಲ್ಪಗುಣೋಪಸಂಹರ್ತೃ ಉಪಾಸ್ಯಗಳೂ ಆಗುತ್ತವೋ, ಎಂದು ಸಂದೇಹವು. **ಆತ್ಮೇತ್ಯೇವೋಪಾಸೀತ** ಎನ್ನುವುದು ಅಖಿಲ ಗುಣಗಳನ್ನು ಧ್ಯಾನಿಸತಕ್ಕ ಬ್ರಹ್ಮಾದಿಗಳನ್ನು ಕುರಿತು ಪ್ರವೃತ್ತವಾಗುತ್ತದೆ. ಆತ್ಮಶಬ್ದವು ಅನುಪಸಂಹರ್ತೃಗಳಿಗೆ ಮಾತ್ರ ಯೋಗ್ಯಗಳಾದ ಗುಣಗಳನ್ನು ಬೋಧಿಸುವುದಾದರೆ— **ಆತ್ಮೇತ್ಯೇವ** ಎನ್ನುವ ಅವಧಾರಣವು ಕೂಡದಿರುವುದರಿಂದ ತದನ್ಯಥಾನುಪಪತ್ತಿಯಿಂದಲೂ **ಆಪ್ತವ್ಯಾಪ್ತೇಃ** ಎನ್ನುವ ಸ್ಮೃತಿಯಿಂದಲೂ ಆತ್ಮಶಬ್ದವು ಸರ್ವಗುಣವಾಚಕವಾದುದರಿಂದ ಅನುಪಸಂಹರ್ತೃಗಳಾದ ಚತುರ್ಗುಣಾದ್ಯುಪಾಸಕರನ್ನು ಕುರಿತು ತತ್ತದ್ಯೋಗ್ಯಗುಣಗಳನ್ನು ಮಾತ್ರ ತಿಳಿಸದೆ ಇರುವುದರಿಂದ ಅಲ್ಲಿ ಹೇಳಿದ ಗುಣಗಳು ಉಪಸಂಹರ್ತೃಗಳಿಂದ ಅನುಪಾಸ್ಯಗಳು. ಆದಕಾರಣ ಇದು ಅನುಪಸಂಹಾರದಲ್ಲಿ ಪ್ರಮಾಣವು. ಎಂದರೆ, ಆತ್ಮಶಬ್ದಕ್ಕೆ ಸರ್ವಗುಣವಾಚಕವಿದ್ದರೂ ತತ್ತದ್ಗುಣೋಪಾಸನೆಗೆ ಯೋಗ್ಯರಾದವರನ್ನು ಕುರಿತು ಸರ್ವಗುಣಗಳನ್ನು ಹೇಳುತ್ತದೆ ಎನ್ನುವುದು ಅವರವರ ಅನುಭವಸಿದ್ಧವಾದ ಪ್ರಯುಕ್ತ ಅಲ್ಲಿ ಹೇಳಿದ ಗುಣಗಳು ಸರ್ವೋಪಾಸ್ಯಗಳಾದುದರಿಂದ ಅನುಪಸಂಹಾರಮಾನತ್ವವು ಯುಕ್ತವು. ॥ ಅಧಿ. ೧೦ ॥

**ಅನ್ವಯಾಧಿಕರಣವು ಸಮಾಪ್ತವಾಯಿತು.**

# ೧೧ ಕಾರ್ಯಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಅಲೌಕಿಕ ಗುಣಗಳಿಗೆ ಉಪಸಂಹಾರ್ಯತ್ವವು ಸಮರ್ಥಿಸಲ್ಪಡುತ್ತದೆ. ಅಲೌಕಿಕ ಗುಣಗಳು ಅನನುಭೂತಗಳಾಗಿರುವುದರಿಂದ ಧ್ಯಾನಕಾಲದಲ್ಲಿ ಪ್ರತೀತಿಯು ಕೂಡದಿರುವುದರಿಂದ ಧ್ಯಾನವನ್ನು ಅವಶ್ಯವಾಗಿ ಮಾಡಬೇಕಾಗಿರುವುದರಿಂದ ಲೌಕಿಕ ಗುಣಗಳೇ ಧ್ಯೇಯಗಳು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಕಾರ್ಯಾಖ್ಯಾನಾದಪೂರ್ವಂ ಓಂ ॥ ೧೯ ॥

**ಸೂತ್ರಾರ್ಥ ॥** ಗುಣಸಮುದಾಯವು ಅಲೌಕಿಕವನ್ನು ಉಪಸಂಹಾರ ಮಾಡಿ ಧ್ಯಾನಿಸತಕ್ಕುದು ಮೋಕ್ಷಾಖ್ಯ ಅಪೂರ್ವ ಕಾರ್ಯವನ್ನು ಹೇಳಿದ್ದರಿಂದ.

**ಭಾಷ್ಯ ॥ ಅಲೌಕಿಕಾಸ್ತಸ್ಯ ಗುಣಾ ಹ್ಯುಪಾಸ್ಯಾ ಅಲೌಕಿಕಂ ಮುಕ್ತಿಕಾರ್ಯಂ ಯತೋಽಸ್ಯ । ಇತಿ ಕಾರ್ಯಾಖ್ಯಾನಾದನ್ಯತ್ರಾದೃಷ್ಟಾ ಏವ ಗುಣಾ ಉಪಾಸ್ಯಾಃ ॥ ೧೯ ॥ ಅಧಿ. ೧೧ ॥ ೧ ॥**

**ಭಾಷ್ಯಾರ್ಥ ॥** ಶ್ರೀಹರಿಯ ಗುಣಗಳು ಅಲೌಕಿಕಗಳೇ ಉಪಾಸ್ಯಗಳು. ಏಕೆಂದರೆ, ಈ ಮುಮುಕ್ಷುವಿನ ಮುಕ್ತಿರೂಪವಾದ ಫಲವು ಅಲೌಕಿಕವೆಂದು ಧ್ಯಾನಕಾರ್ಯವಾದ ಮೋಕ್ಷಕ್ಕೆ ಅಲೌಕಿಕತ್ವವನ್ನು ಹೇಳಿದ್ದರಿಂದ. ಅನ್ಯತ್ರ ಅದೃಷ್ಟಗಳಾದ ಅಲೌಕಿಕ ಗುಣಗಳು ಉಪಾಸ್ಯಗಳು. (ಫಲಾನುಸಾರಿ ಧ್ಯಾನವನ್ನೇ ಮಾಡಬೇಕು. ಜ್ಞಾನಿಗಳ ಉಪದೇಶದಿಂದ ಅಲೌಕಿಕ ಗುಣಗಳಿಗೂ ಪ್ರತೀತಿಯು ಕೂಡುತ್ತದೆ.) ॥ ೧೯ ॥ ೧ ॥

## ಅಧಿಕರಣ ಸಾರಾಂಶ

ಲೌಕಿಕ ಗುಣಗಳೇ ಧ್ಯೇಯಗಳೋ ಅಲೌಕಿಕ ಗುಣಗಳು ಧ್ಯೇಯಗಳೋ, ಎಂದು ಸಂದೇಹವು. ಅಲೌಕಿಕ ಗುಣವಿಷಯದಲ್ಲಿ ಪ್ರತ್ಯಕ್ಷ ಅನುಮಾನಗಳಿಗೆ ಪ್ರಸಕ್ತಿಯಿಲ್ಲದಿರುವುದರಿಂದ, ಪ್ರಸಕ್ತವಾದ ಶಬ್ದಕ್ಕೆ ಸಂಗತಿ ಗ್ರಹಣಾಪೇಕ್ಷೆಯಿದ್ದುದರಿಂದ ಅದು ಸಂಬಂಧಿಜ್ಞಾನಾಧೀನವಾಗಿದೆ. ಶಬ್ದರೂಪವಾದ ಸಂಬಂಧಿಯು ಪ್ರತ್ಯಕ್ಷವಾದಾಗ್ಯೂ ಅರ್ಥರೂಪವಾದ ಸಂಬಂಧಿಯು ಶಬ್ದ ಹೊರತು ಬೇರೆ ಯಾವುದರಿಂದಲೂ ಪ್ರತೀತವಾಗಲಾರದು. ಶಬ್ದಾಂತರದಿಂದ ಪ್ರತೀತಿಯಾಗುವುದಾದರೆ ತತ್ರಾಪಿ ಹೀಗೆಯೇ ಎಂದು ಅನವಸ್ಥಾದೋಷವು ಬರುವುದರಿಂದ ಸಂಗತಿಗ್ರಹಣವು ಕೂಡವುದರಿಂದ ಶಬ್ದದಿಂದಲೂ ಅನುಭವವು ಕೂಡದಿರುವುದರಿಂದ ಧ್ಯಾನಕಾಲದಲ್ಲಿ ಅಲೌಕಿಕ ಗುಣಗಳ ಪ್ರತೀತಿಯೂ ಆಗದಿರುವುದರಿಂದ ಧ್ಯಾನವೇ ಕೂಡಲಾರದು. ಲೌಕಿಕಗಳನ್ನು ಧ್ಯಾನ ಮಾಡದಿದ್ದರೆ ಗುಣಗಳ ಧ್ಯಾನವೇ ಇಲ್ಲವೆಂದು ಆಗುವುದರಿಂದ ಧ್ಯಾನಸಾಧ್ಯವಾದ ಅಪರೋಕ್ಷಜ್ಞಾನದಿಂದ ಹುಟ್ಟಿದ್ದು ಇಲ್ಲ ವೆಂದು ಆಗುವುದದರಿಂದ ಗುಣಧ್ಯಾನವು ಆವಶ್ಯಕವಾದುದರಿಂದ ಲೌಕಿಕಗುಣಗಳೇ ಧ್ಯೇಯಗಳು. ಎಂದರೆ, **ಅಲೌಕಿಕಾಸ್ತಸ್ಯ ಗುಣಾಃ** ಎನ್ನುವ ಶ್ರುತಿಯಲ್ಲಿ ಮೋಕ್ಷಕ್ಕೆ ಅಲೌಕಿಕತ್ವವನ್ನು ಹೇಳಿದ್ದರಿಂದ ಅಂತಹ ಮೋಕ್ಷವು ಅಲೌಕಿಕ ಗುಣೋಪಾಸನವಿಲ್ಲದೆ ಕೂಡದಿರುವುದರಿಂದ ಫಲಾನುಸಾರಿ ಧ್ಯಾನವನ್ನು ಮಾಡಬೇಕಾಗಿರುವುದರಿಂದ ಅಲೌಕಿಕ ಗುಣಗಳೇ ಧ್ಯೇಯಗಳು. ॥ ಅಧಿ. ೧೧ ॥

**ಕಾರ್ಯಾಧಿಕರಣವು ಸಮಾಪ್ತವಾಯಿತು.**

# ೧೨ ಸಮಾನಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭಗವದುಪಾಸನವು ತನಗೆ ಸದೃಶವಾದ ಫಲಪ್ರದವು ಎಂದು ಸಮರ್ಥಿಸುತ್ತಾರೆ. ಉಪಾಸನವು ಅನುಸಾರಿಯಾದ ಫಲಪ್ರದವಲ್ಲ. ಹೇಗೆಂದರೆ, ಸರಸ್ವತೀ ಚತುರ್ಮುಖರ ಉಪಾಸನವು ಅನುಸಾರಿ ಫಲಪ್ರದವಲ್ಲ. ಅವರಿಬ್ಬರಿಗೆ ಸಮಫಲವೂ ವಿಷಮಫಲವೂ ಆಗುವುದಿಲ್ಲ. ಇಬ್ಬರೂ ಸಾಯುಜ್ಯಭಾಗಿಗಳಾದುದರಿಂದ ಸತ್ಯಲೋಕಾದಿ ಸ್ಥಾನೈಕ್ಯವೂ ಆನಂದಾದಿ ಗುಣ ತಾರತಮ್ಯವೂ ಇದೆ. ಉಪಾಸನಕ್ಕೆ ಸಮತ್ವವೂ ವಿಷಮತ್ವವೂ ಕೂಡುವುದಿಲ್ಲ. ಶ್ರೀಹರಿಯ ಸರ್ವಗುಣ ಕ್ರಿಯಾವತಾರಾದಿಗಳಲ್ಲಿ ಇಬ್ಬರಿಗೂ ಉಪಾಸನವು ಸಮವಾಗುವಾಗ ವೈಷಮ್ಯವು ಕೂಡಲಾರದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಮಾನ ಏವಂ ಚಾಭೇದಾತ್ ಓಂ ॥ ೨೦ ॥

**ಸೂತ್ರಾರ್ಥ ॥** ಈಶ್ವರ ಧರ್ಮಗಳಿಗೆ ಅಪೂರ್ವತ್ವವಿದ್ದರೂ ಯೋಗ್ಯ ಗುಣವಿಷಯದಲ್ಲಿಯೇ ಉಪಸಂಹಾರವು. ಆಯೋಗ್ಯ ವಿಷಯದಲ್ಲಿ ಅಲ್ಲ. ಯಥಾಶಕ್ತಿ ಸ್ಮೃತಾನ್ ಧಾತ್ರಾ ಗುಣಾನ್ಸರ್ವೋಽ ಸರಸ್ವತೀ । ಇತ್ಯಾದಿ ಸ್ಮೃತಿಗಳಿಂದ ಸರಸ್ವತಿಗೆ ಸರ್ವಗುಣಗಳಲ್ಲಿಯೂ ಕ್ರಿಯಾಸಾಮಾನ್ಯದಲ್ಲಿಯೂ ಯೋಗ್ಯತೆಯು. ಚತುರ್ಮುಖನಂತೆ ಕ್ರಿಯಾವಿಶೇಷದಲ್ಲಿ ಅಲ್ಲ. ನಿತ್ಯವಿಶ್ರಾಂತ್ಯಾದಿ ಸಾಮಾನ್ಯ ಕ್ರಿಯೆಗಳಲ್ಲಿ ಅಂತರ್ಭಾವವಿದ್ದುದರಿಂದ.

**ಭಾಷ್ಯ ॥ ಅಪೂರ್ವತ್ವೇಽಪಿ ಸಮಾನಾನಾಮೇವೋಪಸಂಹಾರಃ । ನ ತು ತ್ರಿವಿಕ್ರಮತ್ವಾದೀನಾಂ ಕಾದಾಚಿತ್ಕಾನಾಂ ಪೃಥಕ್ತ್ವೇನ। ನಿತ್ಯವಿಕ್ರಾಂತ್ಯಾದಿಷ್ವಂತರ್ಭಾವಾತ್ ॥ ೨೦ ॥ ೧ ॥**

**ಭಾಷ್ಯಾರ್ಥ ॥** ತ್ರಿವಿಕ್ರಮತ್ವಾದಿ ಕ್ರಿಯೆಗಳಿಗೆ (ತ್ರಿತ್ವಸಂಖ್ಯೋಪೇತ ಪಾದವಿಕ್ಷೇಪರೂಪ ಕ್ರಿಯಾದಿಗಳಿಗೆ) ಲೋಕವಿಲಕ್ಷಣತ್ವೇನ ಅತ್ಯಾಶ್ಚರ್ಯತ್ವವಿದ್ದರೂ ಯೋಗ್ಯ ಗುಣಗಳಿಗೂ ಕ್ರಿಯೆಗಳಿಗೂ ಇವುಗಳಿಗೇನೇ (ಸರಸ್ವತೀದೇವಿಯಿಂದ) ಉಪಸಂಹಾರವು ಮಾಡಲ್ಪಡುತ್ತದೆ. (ಅಂತಹ ಎಲ್ಲಾ ಗುಣಗಳೂ ಕ್ರಿಯೆಗಳೂ ಸಾಮಾನ್ಯರೂಪಗಳು, ಆದಪ್ರಯುಕ್ತ ಸರಸ್ವತ್ಯುಪಾಸನೆಗೆ ಚತುರ್ಮುಖನ ಉಪಾಸನ ಸಾಮ್ಯವು.) ತ್ರಿವಿಕ್ರಮತ್ವ ಮೊದಲಾದ ಕದಾಚಿತ್ ಅಭಿವ್ಯಕ್ತಗಳಾದ ಕ್ರಿಯೆಗಳಿಗಾದರೂ ಉಪಸಂಹಾರವು ತ್ರಿವಿಕ್ರಮತ್ವಾದಿ ಬ್ರಹ್ಮೋಪಾಸ್ಯಗಳಾದ ಗುಣಗಳಲ್ಲಿ ವಿಶೇಷಾಕಾರದಿಂದ ಸರಸ್ವತೀ ದೇವಿಯಿಂದ ಮಾಡಲ್ಪಡುವುದಿಲ್ಲ. ನಿತ್ಯವಿಕ್ರಾಂತಿ ಮೊದಲಾದ ಸಾಮಾನ್ಯ ಕ್ರಿಯೆಗಳಲ್ಲಿಯೇ ಅವುಗಳಿಗೆ ಅಂತರ್ಭಾವವಿದ್ದುದರಿಂದ. (ಪ್ರತ್ಯೇಕ ಉಪಾಸನ ಮಾಡಲಿಕ್ಕೆ ಯೋಗ್ಯತೆಯು ಇಲ್ಲದಿರುವುದರಿಂದ ಅಂತರ್ಭಾವ ಮಾಡಿಕೊಂಡೇ ಉಪಸಂಹಾರವು ಮಾಡಲ್ಪಡುತ್ತದೆ.)

**ವಿಶೇಷಾಂಶ ॥** ಸ್ಮರೇತ್ತ್ರೈವಿಕ್ರಮಾದ್ಯಾಂಸ್ತು ನಿತ್ಯವಿಶ್ರಾಂತಿಪೂರ್ವಕೈಃ । ಕದಾಚಿಲ್ಲೋಪಯೇದ್ದೇವೀ ಎಂದು ಯದ್ಯಪಿ ಸರಸ್ವತಿಯು ಪ್ರತ್ಯೇಕವಾಗಿಯೂ ಉಪಸಂಹಾರವನ್ನು ಮಾಡುತ್ತಾಳೆ. ಆದಾಗ್ಯೂ

ಸದಾ ಅಲ್ಲ. ಹಿರಣ್ಯಗರ್ಭನಾದರೂ ಸದಾ ಉಪಸಂಹಾರವನ್ನು ಮಾಡುತ್ತಾನೆ. ಆದ ಪ್ರಯುಕ್ತ ಸರಸ್ವತೀ ಚತುರ್ಮುಖರ ಉಪಾಸನಕ್ಕೆ ವೈಷಮ್ಯವು. ಆದಕಾರಣ ಉಪಾಸನದಲ್ಲಿಯೂ ಸಮವಿಷಯತ್ವಗಳು ಇದ್ದುದರಿಂದ ಉಪಾಸನೆಗೆ ಅನುಸಾರಿಯಾದ ಫಲಪ್ರದತ್ವವು ಇದ್ದೇ ಇದೆ. ॥ ೨೦ ॥ ೧ ॥

**ಪೀಠಿಕೆ ॥** ಹಿರಣ್ಯಗರ್ಭನೂ ಕೂಡ ತ್ರೈವಿಕ್ರಮಾದಿ ಕ್ರಿಯೆಗಳನ್ನು ಸದಾ ಉಪಾಸನವನ್ನು ಹೇಗೆ ಮಾಡುತ್ತಾನೆ. ಅವುಗಳು ಅನಿತ್ಯಗಳಾದ ಪ್ರಯುಕ್ತ ಧ್ಯಾನಕಾಲದಲ್ಲಿ ಇಲ್ಲ ಎಂಬೀ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಂಬಂಧಾದೇವಮನ್ಯತ್ರಾಪಿ ಓಂ ॥ ೨೧ ॥

**ಸೂತ್ರಾರ್ಥ ॥** ಬ್ರಹ್ಮಾಣ್ಯುಪಾಸ್ಯವಿಲಕ್ಷಣ ತ್ರಿವಿಕ್ರಮತ್ವಾದಿ ಕ್ರಿಯಾವಿಷಯದಲ್ಲಿಯೂ ಹೀಗೆಯೇ ಉಪಸಂಹಾರ ಮಾಡಬೇಕು. ಅವುಗಳಿಗೆ ಈಶ್ವರತಾದಾತ್ಮ್ಯವಿದ್ದುದರಿಂದ. (ಅಂದರೆ, ಅವುಗಳು ನಿತ್ಯಗಳಾದುದರಿಂದ.) (ಗುಣಕ್ರಿಯಾದಯೋ ಭಾವಾಃ ಸ್ವರೂಪಂ ನಾನ್ಯದಿಷ್ಯತೇ।)

**ಭಾಷ್ಯ ॥ (೧) ಪರಮಾತ್ಮಸಂಬಂಧಿತ್ವೇನ ನಿತ್ಯತ್ವಾತ್ ತ್ರಿವಿಕ್ರಮತ್ವಾದಿಷ್ವಪ್ಯುಪಸಂಹಾರ್ಯತ್ವಂ ಯುಜ್ಯತೇ ॥ (೨) ಗುಣಾಸ್ತ್ರೈವಿಕ್ರಮಾದ್ಯಾಶ್ಚ ಸಂಹರ್ತವ್ಯಾ ನ ಸಂಶಯಃ । ವಿರಿಂಚಸ್ಯೈವ ನಾನ್ಯೇಷಾಂ ಸ ಹಿ ಸರ್ವಗುಣಾಧಿಕಃ ॥ ಇತಿ(ಹಿ) ಬೃಹತ್ತಂತ್ರೇ ॥ ೨೧ ॥ ಅಧಿ. ೧೨ ॥ ೨ ॥**

**ಭಾಷ್ಯಾರ್ಥ ॥** (೧) ತ್ರಿವಿಕ್ರಮತ್ವಾದಿ ಕಾದಾಚಿತ್ಕ ಕ್ರಿಯೆಗಳಿಗೆ ಪರಮಾತ್ಮನಿಂದ ತಾದಾತ್ಮ್ಯ ಸಂಬಂಧವಿದ್ದುದರಿಂದ (ಅಂದರೆ, ಪರಮಾತ್ಮನಿಂದ ಅಭೇದವಿದ್ದುದರಿಂದ) ನಿತ್ಯತ್ವವಿದ್ದುದರಿಂದಲೂ ವಿಶೇಷಬಲದಿಂದ ಶಕ್ತಿವ್ಯಕ್ತಿಭೇದದಿಂದ ಸರ್ವವೂ ಸಮಂಜಸವಾಗುವ ಪ್ರಯುಕ್ತ ಆ ತ್ರಿವಿಕ್ರಮತ್ವಾದಿ ಕಾದಾಚಿತ್ಕ ಕ್ರಿಯೆಗಳ ವಿಷಯದಲ್ಲಿಯೂ ಸರ್ವದಾ ಹಿರಣ್ಯಗರ್ಭನಿಂದ ಉಪಸಂಹಾರ್ಯತ್ವವು ಯುಕ್ತವಾಗುತ್ತದೆ. (೨) ತ್ರಿವಿಕ್ರಮತ್ವಾದಿ ಕ್ರಿಯಾತ್ಮಕ ಧರ್ಮಗಳು ವಿರಿಂಚನಿಂದಲೇ ಉಪ ಸಂಹರ್ತವ್ಯಗಳು ಸಂದೇಹವಿಲ್ಲ. ವಾಣ್ಯಾದಿಗಳಿಗೆ ಉಪಸಂಹರ್ತವ್ಯಗಳಲ್ಲ. ವಿರಿಂಚನೇ ಎಲ್ಲಾ ಅಧಿಕಾರಿಗಳಿಂದಲೂ ಗುಣಗಳಿಂದ ಅಧಿಕನು, ಎಂದು ಬೃಹತ್ತಂತ್ರದಲ್ಲಿ ಹೇಳಿದೆ. ॥ ೨೧ ॥ ೨ ॥

### ಅಧಿಕರಣ ಸಾರಾಂಶ

ಧ್ಯಾನಕ್ಕೆ ಅರ್ಥಾನುಸಾರಿತ್ವವು ಯುಕ್ತವೋ ಅಯುಕ್ತವೋ, ಅದಕ್ಕಾಗಿ ಚತುರ್ಮುಖ ಸರಸ್ವತಿಯರ ಉಪಾಸನೆಗೆ ಸದೃಶನಾದ ಫಲಾನುಸಾರಿತ್ವವು ಇಲ್ಲವೋ ಇದೆಯೋ, ಅದಕ್ಕಾಗಿ ಸಮ ವಿಷಮಫಲಗಳುಳ್ಳ ಆವರಿಬ್ಬರಿಗೆ ಉಪಾಸನವೂ ಸಮವಿಷಮರೂಪವು ಆಗುವುದಿಲ್ಲವೋ ಆಗುತ್ತದೋ, ಅದಕ್ಕಾಗಿ ತ್ರಿವಿಕ್ರಮತ್ವಾದಿ ಕ್ರಿಯಾದಿವಿಶೇಷಗಳು ಚತುರ್ಮುಖ ಸರಸ್ವತಿಯರಿಂದ ಯಥಾಕ್ರಮವಾಗಿ ಉಪಾಸ್ಯ ಅನುಪಾಸ್ಯಗಳಾಗಿ ಅಯುಕ್ತಗಳೋ ಯುಕ್ತಗಳೋ ಎಂದು ಸಂದೇಹವು. ತ್ರಿವಿಕ್ರಮತ್ವಾದಿ ಕ್ರಿಯಾವಿಶೇಷಗಳು ಅನಿತ್ಯಗಳಾದುದರಿಂದ ಧ್ಯಾನಕಾಲದಲ್ಲಿ ಇಲ್ಲ. ಅವಿದ್ಯಮಾನವಾದುದು ನಿಂದಿತವಾದುದರಿಂದ ಬ್ರಹ್ಮಾಣೀ ಬ್ರಹ್ಮರಲ್ಲಿ ಕ್ರಿಯಾವಿಶೇಷದಲ್ಲಿ ವೈಷಮ್ಯವೂ

ಹೇಳಲಸಾಧ್ಯವಾಗಿದೆ. ಪ್ರಕಾರಾಂತರದಿಂದ ಬ್ರಹ್ಮಾಣೀಬ್ರಹ್ಮರಿಂದ ಮಾಡಲ್ಪಡತಕ್ಕ ಉಪಾಸನಗಳಿಗೆ ಸಮತ್ವವೂ ವಿಷಮತ್ವವೂ ಇಲ್ಲದಿರುವುದರಿಂದ ಮೇಲೆ ಹೊಂದಲ್ಪಡತಕ್ಕ ಫಲಕ್ಕೆ ಸ್ವಾನ್ಯೆಕ್ಯ ಗುಣ ತಾರತಮ್ಯರೂಪವಾದುದರಿಂದ ಸಮವಿಷಯತ್ವವಿದ್ದುದರಿಂದ ಅವರಿಂದ ಮಾಡಲ್ಪಡತಕ್ಕ ಉಪಾಸನೆಗೆ ತನಗೆ ಸದೃಶವಾದ ಫಲಾನುಸಾರಿತ್ವವು ಇಲ್ಲದಿರುವುದರಿಂದ ಅರ್ಥ ಸಾಮಾನ್ಯಾತ್ ಎಂದು ಹೇಳಿದ್ದು ಅಯುಕ್ತವು. ಎಂದರೆ, **ಗುಣಕ್ರಿಯಾದಯೋ ವಿಷ್ಣೋಃ** ಎನ್ನುವ ಶ್ರುತಿಯಿಂದ ಗುಣಕ್ರಿಯಾದಿಗಳಿಗೆ ವಿಷ್ಣುವಿನಿಂದ ತಾದಾತ್ಮ್ಯರೂಪಸಂಬಂಧವಿದ್ದುದರಿಂದ ನಿತ್ಯವಾದ ಪ್ರಯುಕ್ತ ಧ್ಯಾನಕಾಲದಲ್ಲಿ ಅಸತ್ವವು ಇಲ್ಲದಿರುವುದರಿಂದ ಅದರ ಉಪಾಸನೆಯು ಬ್ರಹ್ಮಾಣೀಬ್ರಹ್ಮರಿಗೆ ಅಸದುಪಾಸನೆಯು ಆಗುವುದಿಲ್ಲ. ಕ್ರಿಯಾದಿ ವಿಶೇಷಗಳು ಅಲೌಕಿಕಗಳಾದಾಗ್ಯೂ **ಗುಣಾಸ್ತ್ರಿವಿಕ್ರಮಾದ್ಯಾಶ್ಚ** ಎನ್ನುವ ಸ್ಮೃತಿಯಿಂದ ವಿರಿಂಚನಿಗೇನೇ ಯೋಗ್ಯವಾದುದರಿಂದ ಅವುಗಳಿಗೆ ಬ್ರಹ್ಮನಿಂದ ಉಪಾಸ್ಯತ್ವವಿದ್ದಂತೆಯೇ ಸರಸ್ವತಿಗೆ ನಿತ್ಯವಿಕ್ರಾಂತ್ಯಾದಿ ಕ್ರಿಯೆಗಳಲ್ಲಿ ಅಂತರ್ಭಾವದಿಂದಲೇ ಉಪಾಸ್ಯತ್ವವಿದ್ದುದರಿಂದ ಪ್ರತ್ಯೇಕ ಉಪಾಸ್ಯತ್ವವಿಲ್ಲದಿರುವ ಪ್ರಯುಕ್ತ ಕ್ರಿಯಾವಿಷಯದಲ್ಲಿ ವಿಷಮತ್ವವೂ ಗುಣಾದಿ ವಿಷಯದಲ್ಲಿ ಸಮತ್ವವೂ ಕೂಡುವುದರಿಂದ ಬ್ರಹ್ಮಾಣೀಬ್ರಹ್ಮರಿಂದ ಮಾಡಲ್ಪಡತಕ್ಕ ಉಪಾಸನೆಗೂ ಫಲಕ್ಕೂ ಸಮವಿಷಮತ್ವವಿದ್ದುದರಿಂದ ಎಲ್ಲಾ ಉಪಾಸನದಲ್ಲಿಯೂ ಫಲಾನುಸಾರಿತ್ವವೇ ಯುಕ್ತವು. ॥ ಅಧಿ. ೧೨ ॥

**ಸಮಾನಾಧಿಕರಣವು ಸಮಾಪ್ತವಾಯಿತು.**

## ೧೩. ನವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಆತ್ಮಶಬ್ದೋಕ್ತ ಗುಣೋಪಾಸನವನ್ನು ಸರ್ವರೂ ಮಾಡಬೇಕೆಂದು ಸಮರ್ಥಿಸುತ್ತಾರೆ. ಆತ್ಮಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳಲ್ಲ. ಆತ್ಮಶಬ್ದವು ಉತ್ತಮರನ್ನು ಕುರಿತೇ ಸರ್ವಗುಣಾಭಿಧಾಯಕವು. ಇತರರನ್ನು ಕುರಿತು ಆತ್ಮಶಬ್ದಕ್ಕೆ ಸರ್ವಗುಣಾಭಿಧಾಯಕತ್ವವು ಇಲ್ಲವಾದರೂ ಈ ಅಧಿಕಾರಿಗೆ ಇಷ್ಟೇ ಗುಣಗಳನ್ನು ಹೇಳುತ್ತದೆ ಎಂದು ಪ್ರಾತಿಸ್ವಿಕ ನಿಯಮವು ಇಲ್ಲದಿರುವುದರಿಂದ ಉಪಾಸನೆಯು ಕೂಡದಿರುವ ಪ್ರಯುಕ್ತ ತದುಕ್ತಗುಣಗಳು ಸರ್ವೋಪಾಸ್ಯಗಳಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ನ ವಾ ವಿಶೇಷಾತ್ ಓಂ ॥ ೨೨ ॥**

ಸೂತ್ರಾರ್ಥ ॥ ಸರ್ವಗುಣಗಳಿಗೆ ಆತ್ಮಪದದಿಂದ ಗ್ರಹಣವು ಇಲ್ಲ. ಯೋಗ್ಯತಾವಿಶೇಷದಿಂದ ಅಂದರೆ ಆತ್ಮಪದಕ್ಕೆ ಸರ್ವಗುಣಗಳನ್ನು ಹೇಳತಕ್ಕ ಶಕ್ತಿಯಿದ್ದರೂ ಅಧಿಕಾರಿವಿಶೇಷರನ್ನು ಅನುಸರಿಸಿ ತತ್ತದ್ಯೋಗ್ಯತಾನುಸಾರವಾಗಿ ಗುಣಬೋಧಕವಾದುದರಿಂದ ಆ ಆತ್ಮಪದದಿಂದ ಯಾರಿಗೆ ಎಷ್ಟು ಗುಣಗಳು ಯುಗಪತ್ ಪ್ರತೀತಗಳಾಗುತ್ತವೋ ಆತನಿಂದ ಅಷ್ಟು ಗುಣಗಳು ಧ್ಯೇಯಗಳು.

**ಭಾಷ್ಯ ॥ ನ ವಾಽಽತ್ಮಶಬ್ದೇನ ಸರ್ವಗುಣಗೃಹೀತಿಃ । ಅಧಿಕಾರಿವಿಶೇಷಾತ್ ॥ ೨೨ ॥೧॥**

ಭಾಷ್ಯಾರ್ಥ ॥ ಆತ್ಮಶಬ್ದದಿಂದ ಎಲ್ಲಾ ಶುಭಧರ್ಮಗಳಿಗೆ ಅಭಿಧಾನವು ಸರ್ವರನ್ನು ಕುರಿತು ಆಗುವುದಿಲ್ಲ (ಅಂದರೆ, ಸರ್ವರನ್ನು ಕುರಿತು ಸರ್ವಗುಣಗಳನ್ನು ಹೇಳುವುದಿಲ್ಲ, ಬ್ರಹ್ಮಾದಿಗಳನ್ನು ಕುರಿತೇ ಹೇಳುತ್ತದೆ.) ಆತ್ಮಶಬ್ದಕ್ಕೆ ಅಧಿಕಾರಿ ಸಾಮರ್ಥ್ಯವಿಶೇಷವನ್ನು ಅಪೇಕ್ಷಿಸಿ ತತ್ತದ್ಯೋಗ್ಯಗುಣಾಭಿಧಾಯಕತ್ವವು ಇದ್ದುದರಿಂದ (ಅಂದರೆ, ತತ್ತದ್ಯೋಗ್ಯತಾನುಸಾರವಾಗಿಯೇ ಗುಣಗಳನ್ನು ಹೇಳುತ್ತದೆ.) ॥ ೨೨ ॥ ೧ ॥

ಪೀಠಿಕೆ ॥ ಯುಕ್ತಿಸಿದ್ಧವಾದ ಅರ್ಥವನ್ನು ಶ್ರುತಿಯಿಂದಲೂ ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ದರ್ಶಯತಿ ಚ ಓಂ ॥ ೨೩ ॥

**ಭಾಷ್ಯ ॥ ಸರ್ವಾನ್ ಗುಣಾನಾತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ ಇತಿ(ಚ) ಭಾಲ್ಲವೇಯಶ್ರುತಿಃ ॥ ೨೩ ॥ ಅಧಿ.೧೩ ॥ ೨ ॥**

ಭಾಷ್ಯಾರ್ಥ ॥ ಆತ್ಮಶಬ್ದವು ಬಹ್ವರ್ಥಕವಾದಾಗ್ಯೂ ಚತುರ್ಮುಖ ಸರಸ್ವತ್ಯಾದಿಗಳನ್ನು ಕುರಿತು ಸ್ವಯೋಗ್ಯಗಳಾದ ಬಹುಭಗವದ್ಧರ್ಮಗಳನ್ನು ಧ್ಯಾನಕಾಲದಲ್ಲಿ ಏಕಕಾಲದಲ್ಲಿ ಪ್ರಕಾಶಪಡಿಸುತ್ತದೆ. ಇತರರಾದ ದೇವಗಂಧರ್ವರಿಗೂ ಮನುಷ್ಯೋತ್ತಮರಿಗೂ ಬಹುಗುಣಗಳನ್ನು ಪ್ರಕಾಶಪಡಿಸುವುದಿಲ್ಲ ಕೆಲವು ಗುಣಗಳನ್ನೇ ಪ್ರಕಾಶಪಡಿಸುತ್ತದೆ ಎಂದು ಭಾಲ್ಲವೇಯಶ್ರುತಿಯಲ್ಲಿ ಹೇಳಿದೆ. ॥ ೨೩ ॥ ೨ ॥

## ಅಧಿಕರಣ ಸಾರಾಂಶ

ಆತ್ಮಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳಲ್ಲವೋ ಸರ್ವೋಪಾಸ್ಯಗಳೋ, ಅದಕ್ಕಾಗಿ ಆತ್ಮಶಬ್ದಕ್ಕೆ ಗುಣಾಭಿಧಾಯಕತ್ವವಿದ್ದರೂ ಅಧಿಕಾರಿಯನ್ನು ಕುರಿತು ತತ್ತದ್ಯೋಗ್ಯ ಗುಣಾಭಿಧಾಯಕತ್ವವೂ ಅಯುಕ್ತವೋ ಯುಕ್ತವೋ, ಅದಕ್ಕಾಗಿ ತತ್ತದುಪಾಸನಾ ಯೋಗ್ಯ ಗುಣಮಾತ್ರಾಭಿಧಾಯಕತ್ವನಿಯಮವು ಕೂಡುವುದಿಲ್ಲವೋ ಕೂಡುತ್ತದೋ ಎಂದು ಸಂದೇಹವು. ಆತ್ಮಶಬ್ದವು ಚತುರ್ಮುಖನಿಗೆ ಎಲ್ಲಾ ಈಶ್ವರ ಧರ್ಮಗಳನ್ನೂ ಸರಸ್ವತಿಗೆ ಎಲ್ಲಾ ಗುಣಗಳನ್ನೂ ಕ್ರಿಯಾಸಾಮಾನ್ಯಗಳನ್ನು ಇತರರಿಗೆ ಅವರ ಉಪಾಸನೆಗೆ ಯೋಗ್ಯಗಳಾದ ಗುಣಗಳನ್ನೇ ಹೆಚ್ಚು ಕಡಿಮೆಗಳನ್ನೂ ಹೇಳುತ್ತದೆ. ಹೀಗೆ ಪ್ರಾತಿಸ್ವಿಕ ನಿಯಮವು ಇಲ್ಲದೆ ಇರುವುದರಿಂದ ಆತ್ಮಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳಲ್ಲ. ಆದಕಾರಣ ಅಲ್ಪಗುಣೋಪಸಂಹಾರಮಾತ್ರತ್ವವು ಆತ್ಮಶಬ್ದಾಷ್ಟ ಎನ್ನುವಲ್ಲಿ ಹೇಳಿದೆ ಎನ್ನುವುದು ಅಯುಕ್ತವು ಎಂದರೆ, ಸರ್ವಗುಣಗಳನ್ನು ಹೇಳತಕ್ಕ ಆತ್ಮಶಬ್ದವು ಅವರವರಿಗೆ ಯೋಗ್ಯಗಳಾದ ಗುಣಗಳನ್ನು ತಿಳಿಸಿಕೊಡವುದರಿಂದ ನ್ಯೂನಾಧಿಕ್ಯವು ಕೂಡಿದರೂ ಆವಾವ ಅಧಿಕಾರಿ ಸಾಮರ್ಥ್ಯದಿಂದ ಆತ್ಮಶಬ್ದದಿಂದ ಯಾರಿಗೆ ಎಷ್ಟು ಗುಣಗಳು ಪ್ರತೀತಗಳಾಗುತ್ತವೋ ಅವನು ಅಷ್ಟು ಧ್ಯಾನ ಮಾಡಬೇಕು, ಎನ್ನುವ ವ್ಯವಸ್ಥೆಯು ಕೂಡುವುದರಿಂದಲೂ ಸರ್ವಾನ್ ಗುಣಾನ್ ಎನ್ನುವ ಶ್ರುತಿಗಳಿಂದಲೂ ಆತ್ಮಶಬ್ದೋಕ್ತ ಗುಣಗಳೂ ಸರ್ವೋಪಾಸ್ಯಗಳೇ. ॥ ಅಧಿ. ೧೩ ॥

ನವಾಧಿಕರಣವು ಸಮಾಪ್ತವಾಯಿತು.

# ೧೪ ಸಂಭೃತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸಂಭೃತ್ಯಾದಿಗುಣವು ಸರ್ವೋಪಾಸ್ಯವಲ್ಲವೆನ್ನುತ್ತಾರೆ. ಉಕ್ಥಾ ಸ ದ್ಯಾವಾಪೃಥಿವೀ ಬಿಭರ್ತಿ ಎನ್ನುವಲ್ಲಿ ಸಂಭೃತಿಯು ತೋರುತ್ತದೆ. ಏಷ ಹಿ ಸರ್ವೇಷು ಲೋಕೇಷು ಎನ್ನುವಲ್ಲಿ ಪ್ರಕಾಶದಿಂದ ವ್ಯಾಪ್ತಿಯು. ಇವುಗಳು ಸರ್ವೋಪಾಸ್ಯಗಳು. ಮೋಕ್ಷದಲ್ಲಿ ಸ್ವಾಧಮಭರಣವೂ ಪ್ರಕಾಶವ್ಯಾಪ್ತಿಯೂ ಸರ್ವಾಪೇಕ್ಷಿತವಾಗಿದೆ. ಫಲಾನುಸಾರವಾಗಿಯೇ ಈಶ್ವರನನ್ನು ಭಜಿಸಬೇಕು. ಆದಕಾರಣ ಚತುರ್ಗುಣೋಪಾಸನಾ ನಿಯಮವು ಯುಕ್ತವಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ॥ ೨೪ ॥

**ಸೂತ್ರಾರ್ಥ ॥** ಉಕ್ಥಾಸ ದ್ಯಾವಾಪೃಥಿವೀ ಬಿಭರ್ತಿ, ಏಷ ಹಿ ಸರ್ವೇಷು ಭಾತಿ ಎಂದು ಹೇಳಿದ ಸಮ್ಯಕ್ ಭರಣವೂ ಪ್ರಕಾಶದಿಂದ ವ್ಯಾಪ್ತಿಯೂ ಸರ್ವೋಪಾಸ್ಯಗಳಲ್ಲ. (ಮತ್ತೆ ದೇವಾದ್ಯುಪಾಸ್ಯಗಳು. ಆವಾವ ಯೋಗ್ಯತಾವಿಶೇಷದಿಂದಲೇ. (ಯೋಗ್ಯತೆಯೇ ಉಪಾಸನಾ ನಿಯಮಕ್ಕೆ ಪ್ರಯೋಜಕವು. ಫಲಾಪೇಕ್ಷೆಯಲ್ಲ)

**ಭಾಷ್ಯ ॥ (೧) ಸಂಭೃತಿದ್ಯುವ್ಯಾಪ್ತೀ ಅಪಿ ದೇವಾದೀನಾಮುಪಸಂಹರ್ತವ್ಯೇ ನಾನ್ಯೇಷಾಂ ಅತ ಏವ ಯೋಗ್ಯತಾವಿಶೇಷಾತ್ । (೨) ದೇವಾದೀನಾಮುಪಾಸ್ಯಾಸ್ತು ಭೃತಿವ್ಯಾಪ್ತ್ಯಾದಯೋಃ ಗುಣಾಃ । ಆನಂದಾದ್ಯಾಸ್ತು ಸರ್ವೇಷಾಮನ್ಯಥಾಽನರ್ಥ ಕೃದ್ಭವೇತ್ ॥ ಇತಿ(ಚ) ಬ್ರಹ್ಮತರ್ಕೇ ॥ ೨೪ ॥ ಅಧಿ.೧೪ ॥ ೧ ॥**

**ಭಾಷ್ಯಾರ್ಥ ॥** (೧) ಸ್ವರ್ಗ ಭೂಮಿಗಳ ಸಮ್ಯಕ್ ಭರಣವೂ, ಮಹಾಪ್ರಕಾಶದಿಂದ ವ್ಯಾಪ್ತಿಯೂ ಇವುಗಳು ದೇವಾದಿಗಳಿಂದ ಇತರರಾದ ಮನುಷ್ಯೋತ್ತಮರಿಂದ ಉಪ ಸಂಹಾರಪೂರ್ವಕವಾಗಿ ಉಪಾಸ್ಯಗಳಲ್ಲ. ಮತ್ತೆ ದೇವಾದಿಗಳಿಗೇನೇ ಉಪಸಂಹಾರ ಪೂರ್ವಕವಾಗಿ ಉಪಾಸ್ಯಗಳಾಗಿವೆ. ಅಧಿಕಾರಿ ಯೋಗ್ಯತೆಯಲ್ಲಿ ವಿಶೇಷವಿದ್ದ ಪ್ರಯುಕ್ತವೇ. (೨) (ಸಂಭೃತ್ಯಾದಿ ಗುಣೋಪಾಸನೆಯು ದೇವಾದಿಗಳಿಗೇನೇ ಯೋಗ್ಯವೆನ್ನುವುದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಎಂದರೆ) ಸಂಭೃತಿ, ದ್ಯುವ್ಯಾಪ್ತಿ ಮೊದಲಾದ (ವೀರ್ಯಾದಿ ಗುಣಗಳು ದೇವಾದಿಗಳಿಂದಲೇ ಉಪಾಸ್ಯಗಳು ಆಗಿವೆ. ಸಂಪೂರ್ಣ ಮೋಕ್ಷಯೋಗ್ಯರಾದ ದೇವಾದಿ ಮನುಷ್ಯೋತ್ತಮ ಪರ್ಯಂತರಾದವರಿಂದ ಆನಂದ ಮೊದಲಾದವುಗಳಾದರೂ ಉಪಾಸ್ಯಗಳಾಗಿವೆ. ಅಯೋಗ್ಯವನ್ನು ಉಪಾಸನ ಮಾಡಿದರೆ ಆ ಉಪಾಸನವು ಅನರ್ಥಕಾರಿಯಾಗುವುದು. ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ॥ ೨೪ ॥ ೧ ॥

### ಅಧಿಕರಣ ಸಾರಾಂಶ

ಸಂಭೃತಿದ್ಯುವ್ಯಾಪ್ತಿಗಳು ಸರ್ವೋಪಾಸ್ಯಗಳೋ ಅಲ್ಲವೋ ಆದಕ್ಕಾಗಿ ಗುಣಗಳ ಉಪಾಸನದಲ್ಲಿ

ಉಪಾಸನಾಜನ್ಯ ಫಲಾಪೇಕ್ಷೆಯೇ ಹೇತುವೂ ಅಥವಾ ಯೋಗ್ಯತಾ ವಿಶೇಷವೂ ಹೇತುವೋ, ಎಂದು ಸಂದೇಹವು. ಎಲ್ಲಾ ಮುಮುಕ್ಷುಗಳಿಗೂ ಸ್ವಾಧಮ ಸಂಭರಣವೂ ಪ್ರಕಾಶವ್ಯಾಪ್ತಿಯೂ ಅಪೇಕ್ಷಿತವಾದ ಪ್ರಯುಕ್ತ ಫಲಾಪೇಕ್ಷೆಯೇ ತತ್ಸಾಧನಾನುಷ್ಠಾನದಲ್ಲಿ ನಿಯಾಮಕವು. ಯೋಗ್ಯತಾ ವಿಶೇಷವು ಹೇತುವೆಂದು ಇಟ್ಟುಕೊಂಡರೂ ಅದು ಸರ್ವರಿಗೂ ಇದೆ ಎಂದಂಗೀಕರಿಸಿದರೂ ವಿರೋಧವಿಲ್ಲ **ಯಾದೃಶೋ ಭಾವಿತಃ ಶ್ರೀಶಃ ತಾದೃಶೋ ಜೀವ ಆ ಭವೇತ್** ಎನ್ನುವ ಸ್ಮೃತಿಯಿಂದ ಸಂಭೃತ್ಯಾದಿ ಗುಣವಿಶಿಷ್ಟನೆಂದು ಭಗವಂತನನ್ನು ಉಪಾಸನಾ ಮಾಡಿದ್ದರಿಂದಲೇ ಹೊಂದಬೇಕಾದುದರಿಂದ ಸಂಭೃತಿ ದ್ಯುವ್ಯಾಪ್ತಿಗಳು ಸರ್ವೋಪಾಸ್ಯಗಳು ಎಂದರೆ ಫಲಾಪೇಕ್ಷೆಯೇ ತತ್ಸಾಧನಾನುಷ್ಠಾನದಲ್ಲಿ ನಿಯಾಮಕವು. ಎಂದಾದರೆ ತ್ರೈವರ್ಣಿಕೇತರರಿಗೂ ಸ್ವರ್ಗಕ್ಕೆ ಹೇತುವಾದ ಯಾಗಾದ್ಯನುಷ್ಠಾನದಿಂದ ಫಲಪ್ರಾಪ್ತಿಯು ಬರಬೇಕಾಗುವುದು. ಮತ್ತೆ **ಅನ್ಯಥಾಽನರ್ಥಕೃದ್ಭವೇತ್** ಎನ್ನುವ ಸ್ಮೃತಿಯಲ್ಲಿ ಅಯೋಗ್ಯ ಸಾಧನಾನುಷ್ಠಾನ ಮಾಡಿದರೆ ಆತನಿಗೆ ಅನರ್ಥಫಲವನ್ನು ಹೇಳಿದ್ದರಿಂದ ಯೋಗ್ಯತಾ ವಿಶೇಷವೇ ನಿಯಾಮಕವು. **ದೇವಾದೀನಾಮುಪಾಸ್ಯಾಸ್ತು** ಎನ್ನುವ ಸ್ಮೃತಿಯಿಂದ ಸಂಭೃತ್ಯಾದಿಗುಣಗಳು ದೇವಾದಿಗಳಿಗೇನೇ ಉಪಾಸ್ಯಗಳು. ಇತರರಿಗೆ ಅವುಗಳು ಉಪಾಸ್ಯಗಳಲ್ಲ ॥ ಅಧಿ. ೧೪ ॥

**ಸಂಭೃತ್ಯಧಿಕರಣವು ಸಮಾಪ್ತವಾಯಿತು.**

# ೧೫ ಪುರುಷಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸರ್ವವಿದ್ಯೆಗಳಿಂದ ಗುಣೋಪಸಂಹಾರವು ಕರ್ತವ್ಯವೆಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ಯಸ್ಯಾಂ ವಿದ್ಯಾಯಾಂ ಮಹಾಗುಣಾ ಉಚ್ಯಂತೇ ಸೋತ್ತಮಾನಾ ಮಿತರಾಽನ್ಯೇಷಾಮಿತಿ ಚೇತ್ । ನ ॥ ೧ ॥**

**ಭಾಷ್ಯಾರ್ಥ ॥** (ಪ್ರಯೋಜನವು ಇಲ್ಲದಿರುವುದರಿಂದ ಸರ್ವವಿದ್ಯೆಗಳಿಂದ ಗುಣೋಪಸಂಹಾರವು ಕರ್ತವ್ಯವಲ್ಲ ತಮಗೆ ಯೋಗ್ಯವಾದ ಗುಣೋಪಾಸನಕ್ಕಾಗಿ ಉಪಸಂಹಾರವು ಕಾರ್ಯವು ಎಂದಲ್ಲ ಸಾರ್ವತ್ರಿಕ ಗುಣೋಪಸಂಹಾರವಿಲ್ಲದಿದ್ದರೂ ಉಪಾಸನೆಯೂ ಕೂಡಬಹುದು. ಹೇಗೆಂದರೆ) ಯಾವ ವಿದ್ಯೆಯಲ್ಲಿ ಬಹುಗುಣಗಳು ಹೇಳಲ್ಪಡುತ್ತವೋ, ಆ ವಿದ್ಯೆಯು ಬಹುಗುಣೋಪಾಸನ ಯೋಗ್ಯರಿಗೆ ಉಪಾಸನಕ್ಕಾಗಿ ಆಗುತ್ತದೆ. ಅಲ್ಪಗುಣೋಪಾಸನ ಯೋಗ್ಯರಿಗೆ ಅಲ್ಪಗುಣಾಭಿಧಾಯಕ ವಿದ್ಯೆಯು ಉಪಾಸನಕ್ಕಾಗಿ ಆಗುತ್ತದೆ. (ವಿವಂಚ ಆವಾವ ವಿದ್ಯೆಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿಯೇ ಅವರವರಿಗೆ ತಮಗೆ ಅಪೇಕ್ಷಿತವಾದ ಗುಣೋಪಾಸನೆಯು ಕೂಡುತ್ತದೆ. ಸಾರ್ವತ್ರಿಕ ಗುಣೋಪಸಂಹಾರವು ವ್ಯರ್ಥವೇ.) ಎಂದರೆ, ಸರ್ವವಿದ್ಯೆಗಳಿಂದ ಗುಣೋಪಸಂಹಾರವು ಕರ್ತವ್ಯವಲ್ಲವೆಂದಲ್ಲ. ಮತ್ತೆ ಕರ್ತವ್ಯವೇ. ಹೇಗೆಂದರೆ— ॥ ೧ ॥

## ಸೂತ್ರ ॥ ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ ॥ ೨೫ ॥

**ಭಾಷ್ಯ ॥ ಪುರುಷಸೂಕ್ತೋಕ್ತವಿದ್ಯಾಯಾಮಪಿ ಕೇಷಾಂಚಿದ್ಗುಣಾನಾಮನಾಮ್ನಾನಾತ್ ॥ ೨ ॥**

ಭಾಷ್ಯಾರ್ಥ ॥ ಸರ್ವವಿದ್ಯೆಗಳಲ್ಲಿ ಉತ್ತಮವಾದ ಪುರುಷಸೂಕ್ತದಲ್ಲಿಯೂ ಕೂಡ ಕೆಲವು ಗುಣಗಳನ್ನು ಹೇಳದೆ ಇದ್ದ ಪ್ರಯುಕ್ತ ಕೆಲವು ಗುಣಗಳನ್ನು ಹೇಳಿದ್ದರಿಂದ ಸರ್ವತಃ ಗುಣೋಪ ಸಂಹಾರವನ್ನು ಮಾಡಬೇಕು.) (ಇತರ ವಿದ್ಯೆಗಳಲ್ಲಿ ಸರ್ವ ಗುಣಗಳನ್ನು ಹೇಳಲಿಲ್ಲವೆಂದು ಸುತರಾಂ ಸಿದ್ಧವು.) ॥ ೨ ॥

**ಭಾಷ್ಯ ॥ ಸರ್ವತಃ ಪೌರುಷೇ ಸೂಕ್ತೇ ಗುಣಾ ವಿಷ್ಣೋರುದೀರಿತಾಃ । ತತ್ರಾಪಿ ನೈವ ಸರ್ವೇಽಪಿ ತಸ್ಮಾತ್ಕಾರ್ಯೋಪಸಂಹೃತಿಃ ॥ ಇತಿ ಬ್ರಹ್ಮತರ್ಕೇ ॥ ೨೫ ॥ ೩ ॥**

ಭಾಷ್ಯಾರ್ಥ ॥ ಪರಮ ಪುರುಷನನ್ನೇ ಪ್ರತಿಪಾದಿಸತಕ್ಕ ಪುರುಷಸೂಕ್ತದಲ್ಲಿಯೂ ಆದಿಯಲ್ಲಿಯೂ ಅಂತ್ಯದಲ್ಲಿಯೂ ಮಧ್ಯದಲ್ಲಿಯೂ ವಿಷ್ಣುವಿನ ಎಲ್ಲಾ ಗುಣಗಳು ಇತರ ಎಲ್ಲಾ ವಿದ್ಯೆಗಳಿಗಿಂತ ಅಧಿಕವಾಗಿ ಹೇಳಲ್ಪಟ್ಟವೆ. ಅಂತಹ ಪುರುಷಸೂಕ್ತದಲ್ಲಿಯೂ ಸ್ವಾಪೇಕ್ಷಿತಗಳಾದ ಎಲ್ಲ ಗುಣಗಳೂ ಹೇಳಲ್ಪಡಲಿಲ್ಲ. ಒಂದರಲ್ಲಿಯೂ ಸ್ವಾಪೇಕ್ಷಿತವಾದ ಸರ್ವಗುಣಗಳನ್ನು ಹೇಳದೆ ಇದ್ದುದರಿಂದ ಸರ್ವವಿದ್ಯೋಕ್ತ ಗುಣಗಳಿಂದ ಉಪಸಂಹಾರವು ಮಾಡಲ್ಪಡತಕ್ಕುದು. ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. (ಏವಂಚ ಯಾವಾಗ ಪುರುಷಸೂಕ್ತಕ್ಕೂ ಸರ್ವಗುಣಾಭಿಧಾಯಕತ್ವವು ಇಲ್ಲವೋ ಆಗ ಇತರ ವಿದ್ಯೆಗಳಿಗೆ ಸರ್ವಗುಣಾಭಿಧಾಯಕತ್ವವು ಇಲ್ಲವೆನ್ನುವುದು ಸುತರಾಂ ಸಿದ್ಧವಾಗುವುದು. ಆದ ಪ್ರಯುಕ್ತ ತಂತಮ್ಮಿಂದ ಅಪೇಕ್ಷಿತ ಗುಣಗಳು ಒಂದೊಂದು ವಿದ್ಯೆಯಿಂದ ಪೂರ್ತಿಯಾಗದಿರುವುದರಿಂದ ಸರ್ವತಃ ಉಪಸಂಹಾರವು ಕಾರ್ಯವೇ.) ॥ ೨೫ ॥ ೩ ॥

### ಅಧಿಕರಣ ಸಾರಾಂಶ

ತಂತಮಗೆ ಯೋಗ್ಯಗುಣಗಳು ಒಂದೊಂದು ವಿದ್ಯೆಯಲ್ಲಿ ಹೇಳಲ್ಪಡುತ್ತವೋ, ಇಲ್ಲವೋ, ಅದಕ್ಕಾಗಿ ಒಂದೊಂದರಲ್ಲಿ ತತ್ತದ್ಯೋಗ್ಯ ಗುಣಗಳಿಗೆ ಅನುಕ್ತಿ ಜ್ಞಾಪಕವು ಇಲ್ಲವೋ ಇದೆಯೋ ಎಂದು ಸಂದೇಹವು. ಒಂದೊಂದು ವಿದ್ಯೆಯಲ್ಲಿ ತತ್ತದ್ಯೋಗ್ಯ ಗುಣಗಳು ಹೇಳಲ್ಪಡುವುದಿಲ್ಲ ಎನ್ನುವಲ್ಲಿ ಜ್ಞಾಪಕವಿಲ್ಲದಿರುವುದರಿಂದ ಒಂದೊಂದರಲ್ಲಿಯೇ ಅವರವರಿಗೆ ಅಪೇಕ್ಷಿತವಾದ ಗುಣೋಕ್ತಿಯು ಕೂಡಬಹುದು. ಆದಪ್ರಯುಕ್ತ ಕೇವಲ ಅದರ ಜ್ಞಾನದಿಂದಲೂ ತಮಗೆ ಯೋಗ್ಯವಾದ ಧ್ಯಾನಕ್ಕೆ ವಿಷಯಗಳಾದ ಗುಣಗಳಿಗೆ ಬುದ್ಧ್ಯಾರೂಢತ್ವವು ಕೂಡುವುದರಿಂದ ಅಲ್ಲಿ ಅಲ್ಲಿ ಹೇಳಿದ ಗುಣಗಳು ಉಪಸಂಹಾರವು ಅವಶ್ಯ ಕರ್ತವ್ಯವಲ್ಲ. ಏವಂಚ ತ್ರಿವಿಧಾಧಿಕಾರಿಗಳಿಗೂ ಯಥಾಶಕ್ತಿ ಸರ್ವಪರಿಜ್ಞಾನವು ಯುಕ್ತವಲ್ಲ ಎಂದರೆ— ಸರ್ವತಃ ಪೌರುಷೇ ಸೂಕ್ತೇ ಎನ್ನುವ ಸ್ಮೃತಿಯಿಂದ

ಸರ್ವವಿದ್ಯೋತ್ತಮ ಪುರುಷಸೂಕ್ತವಿದ್ಯೆಯಲ್ಲಿಯೂ ಕೆಲವು ಗುಣಗಳನ್ನು ಮಾತ್ರ ಹೇಳಿದ್ದರಿಂದ ಇತರ ವಿದ್ಯೆಗಳಲ್ಲಿ ಸರ್ವಗುಣಗಳನ್ನು ಹೇಳಲಿಲ್ಲವೆಂದು ಕೈಮುತ್ಯನ್ಯಾಯಸಿದ್ಧವು. ಆದುದರಿಂದ ಉತ್ತಮಾಧಿಕಾರಿಗಳಿಗೆ ಸರ್ವತಃ ಗುಣೋಪಸಂಹಾರವು ಆವಶ್ಯಕವಾದುದರಿಂದ ಮಧ್ಯಮಾಧಿಕಾರಿಗಳಿಗೂ ಮಹದಲ್ಪಗುಣಾಭಿಧಾಯಕ ವಿದ್ಯೆಗಳಲ್ಲಿ ಸಂಖ್ಯಾಸಾಮ್ಯವು ಕೂಡಿದರೂ ತಂತಮಗೆ ಅಭಿಮತಗುಣಗಳಿಗೆ ಒಂದೊಂದು ವಿದ್ಯೆಯಲ್ಲಿಯೇ ಉಕ್ತಿನಿಯಮವಿಲ್ಲದಿರುವುದರಿಂದ ಸರ್ವವಿದ್ಯೋಕ್ತ ಗುಣೋಪಸಂಹಾರವನ್ನು ಮಾಡಲೇಬೇಕು. ಹೀಗೆ ಸರ್ವರಿಗೆ ಯಥಾಶಕ್ತಿ ಸರ್ವಪರಿಜ್ಞಾನವು ಯುಕ್ತವು. ॥ ಅಧಿ. ೧೫ ॥

ಪುರುಷಾಧಿಕರಣವು ಸಮಾಪ್ತವಾಯಿತು.

## ೧೬ ವೇಧಾಧಿಕರಣವು

ಪೀಠಿಕೆ ॥ ಅಗ್ನೇತ್ವಚಂ ಯಾತುಧಾನಸ್ಯ ಭಿಂಧಿ ಇತ್ಯಾದಿಗಳಲ್ಲಿ ಶ್ರುತಗಳಾದ ಭೇದಾದಿ ಗುಣಗಳಿಗೆ ಸರ್ವೋಪಸಂಹಾರ್ಯತ್ವವು ನಿರಾಕರಿಸಲ್ಪಡುತ್ತದೆ. ದುಷ್ಟನಿಗ್ರಹವೇ ಫಲವಾಗಿದ್ದುದರಿಂದ ವೇಧಭೇದಾದಿಗಳು ಸರ್ವೋಪಾಸ್ಯಗಳೇ ಆಗಿವೆ. ಅದು ಸರ್ವಸಜ್ಜನರಿಗೂ ಅಪೇಕ್ಷಿತವಾಗಿದೆ. ಆದಕಾರಣ ಚತುರ್ಗುಣೋಪಾಸನ ನಿಯಮವಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

### ಸೂತ್ರ ॥ ಓಂ ವೇಧ್ಯಾದ್ಯರ್ಥಭೇದಾತ್ ಓಂ ॥ ೨೬ ॥

ಸೂತ್ರಾರ್ಥ ॥ ತಂ ಪ್ರತ್ಯಂಚಮರ್ಚಿಷಾ ವಿದ್ಧ್ಯಮರ್ಮನ್ । ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ । ಪರಾಶೃಣೀಹಿ, ಎಂದು ಶ್ರುತವಾದ ವೇಧಾದಿಗಳು ಸರ್ವೋಪಾಸ್ಯಗಳಲ್ಲ. ಫಲಭೇದವಿದ್ದ ಪ್ರಯುಕ್ತ ಅಂದರೆ ವೇಧಾದ್ಯುಪಾಸನವು ದುಷ್ಟಜನಹಿಂಸಾದಿರೂಪವಾದ ವಿಲಕ್ಷಣಫಲವುಳ್ಳದ್ದು. ಆದರಲ್ಲಿ ಯತ್ಯಾದಿಗಳಿಗೆ ಅಧಿಕಾರವಿಲ್ಲ.

**ಭಾಷ್ಯ ॥ ಭಿಂಧಿ ವಿದ್ಧಿ ಶೃಣೀಹೀತಿ ಫಲಭೇದೇನ ಸರ್ವತಃ । ಯತ್ಯಾದೀನಾಂ ತೇಷ್ವಯೋಗಾನ್ನಾಧಿಕಾರ್ಯೈಕತಾ ಭವೇತ್ ॥ ಅಯೋಗ್ಯೋಪಾಸನಾದೀಯುರನರ್ಥಂ ಚಾರ್ಥನಾಶನಂ । ಇತಿ ಬೃಹತ್ತಂತ್ರೇ ॥ ೨೬ ॥ ಅಧಿ. ೧೬ ॥ ೧ ।**

ಭಾಷ್ಯಾರ್ಥ ॥ ಎಲೋ ಪೂಜ್ಯರೇ ದುರ್ಜನರನ್ನು ಭೇದಿಸು, ಆಯುಧಗಳಿಂದ ಛೇದಿಸಿ ಕೊಲ್ಲು ಇಂತಹ ಉಪಾಸನಗಳಲ್ಲಿ ಫಲಭೇದವಿರುದರಿಂದ (ಅಂದರೆ ಈ ಉಪಾಸನಾಫಲಗಳು ಯತ್ಯಾದಿಗಳು ಉಪಾಸನಮಾಡುವ ಫಲಕ್ಕಿಂತ ವಿಲಕ್ಷಣಗಳಾಗಿವೆ.) ಹಿಂಸಾಧಿಕಾರ ಶೂನ್ಯರಾದ ಯತ್ಯಾದಿಗಳಿಗೆ ಆ ಉಪಾಸನಗಳಲ್ಲಿ ಯೋಗ್ಯತೆಯು ಇಲ್ಲದಿರುವುದರಿಂದ ಸರ್ವರಿಗೆ ಅಧಿಕಾರ

ಸಾಮ್ಯವು ಇರಲಾರದು. (ಅಂದರೆ ಆ ಉಪಾಸನವು ಸರ್ವಾಧಿಕಾರಿಸಮವಲ್ಲ) ಅಯೋಗ್ಯೋಪಾಸನೆಯಿಂದ ಉಪಾಸಕರು ಅನರ್ಥವನ್ನು ಅರ್ಥನಾಶವನ್ನು ಹೊಂದುವರು, ಎಂದು ಬೃಹತ್ತಂತ್ರದಲ್ಲಿ ಹೇಳಿದೆ. ॥ ೨೬ ॥ ೧ ॥

## ಅಧಿಕರಣ ಸಾರಾಂಶ

ತಂ ಪ್ರತ್ಯಂಚಮರ್ಚಿಷಾ ವಿಧ್ಯಮರ್ಮನ್ ಇತ್ಯಾದಿ ಶ್ರುತ್ಯುಕ್ತವಾದ ವೇಧಾದಿ ಗುಣವು ಸರ್ವೋಪಾಸ್ಯವೋ ಅಲ್ಲವೋ ಎಂದು ಸಂದೇಹವು. ವೇಧ ಮೊದಲಾದ ಭಗವದ್ಗುಣೋಪಾಸನಾ ಫಲವಾದ ದುಷ್ಟನಿಗ್ರಹವು ಸರ್ವಸಜ್ಜನರಿಗೂ ಅಪೇಕ್ಷಿತವಾಗಿದೆ. **ಪ್ರಾಣಸ್ತ್ವಾವಂಶೋ ಹಾಸ್ಯತಿ ಆತತಾಯಿನಮಾಯಾಂತಂ** ಎನ್ನುವ ಶ್ರುತಿ ಸ್ಮೃತಿಗಳಲ್ಲಿ ವಿಹಿತವಾದುದರಿಂದ ಯೋಗ್ಯತೆಯೂ ಇದೆ ಎಂದು ತಿಳಿದುಬರುವುದರಿಂದಲೂ ವೇಧಾದಿಗಳು ಸರ್ವೋಪಾಸ್ಯಗಳೇ ಎಂದರೆ, **ಭಿಂಧಿ ವಿದ್ಧಿ ಶೃಣೀಹಿ** ಎನ್ನುವ ಸ್ಮೃತಿಯಲ್ಲಿ ವೇಧಾದಿಗುಣಗಳಿಂದ ಅಪೇಕ್ಷಿತ ಫಲಕ್ಕೆ ಯತಿಗಳಿಂದ ಪ್ರಾಪ್ಯವಾದ ಫಲಕ್ಕಿಂತ ವಿಲಕ್ಷಣ ಫಲವನ್ನು ಹೇಳಿ ಯತಿಗಳಿಗೆ ಅಲ್ಲಿ ಯೋಗ್ಯತೆಯು ಇಲ್ಲವೆಂದು ಉಕ್ತವಾಗಿದೆ. ಹಿಂದೆ ಹೇಳಿದ ಪ್ರಾಣಸ್ತ್ವಾ ಎನ್ನುವ ಶ್ರುತಿಯು **ವಿಷ್ಣುನಾ ವಂಶಭೂತೇನ ಸಹಿತಂ ವಾಯುನಾ ಸತಃ ।** ಎನ್ನುವ ಸ್ಮೃತಿಯಿಂದ ದೇವವಿಷಯಕವಾಗಿದೆ. **ಆತತಾಯಿನಮಾಯಾಂತಂ** ಎನ್ನುವ ಸ್ಮೃತಿಯು ಕ್ಷತ್ರಿಯ ಪರವಾದುದರಿಂದ ಯೋಗ್ಯತಾನಿರ್ಣಾಯಕವಾಗದಿರುವುದರಿಂದ ಯೋಗ್ಯತಾ ಅಪೇಕ್ಷಾ ಇವೆರಡೂ ಇಲ್ಲವೆಂದಾದರೆ ತನ್ನಿಮಿತ್ತಕವಾದ ವೇಧಾದಿಗುಣೋಪಾಸನೆಯೂ ಇಲ್ಲವೆಂದೇ ಸಿದ್ಧಿಸುತ್ತದೆ. ॥ ಅಧಿ. ೧೬ ॥

**ವೇಧಾಧಿಕರಣವು ಸಮಾಪ್ತವಾಯಿತು.**

# ೧೭ ಹಾನ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಮುಕ್ತಿಯಲ್ಲಿಯೂ ಉಪಾಸನವನ್ನು ಅನಸರಿಸುತ್ತಾರೆಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ಮುಕ್ತಸ್ಯೋಪಾಸನಾ ಕರ್ತವ್ಯಾ ನ ವಾ । ಇತಿ । ಅತೋ ಬ್ರವೀತಿ ॥ ೧ ॥**

**ಭಾಷ್ಯಾರ್ಥ ॥** ಮುಕ್ತನಿಗೆ ಉಪಾಸನವು ಕರ್ತವ್ಯವೋ ಅಲ್ಲವೋ ಅಂದರೆ— ಮುಕ್ತನಿಂದ ಉಪಾಸನೆಯು ವಿಹಿತವಾದ ಕಾರಣ ಮಾಡಲ್ಪಡುತ್ತದೋ, ಅವಿಹಿತವಾದರೂ ಮಾಡಲ್ಪಡುತ್ತದೋ (೧)ನೇ ಕಲ್ಪದಲ್ಲಿ ವಿಧಿಬದ್ಧರಾದ ಪ್ರಯುಕ್ತ ಮುಕ್ತತ್ವವೇ ಇಲ್ಲವೆಂದಾಗುವುದು. (೨) ನೇ ಕಲ್ಪದಲ್ಲಿ ಅವಿಹಿತವಾದ ಪ್ರಯುಕ್ತವೇ ಉಪಾಸನಾಕಾರಣವೇ ಆಗದೆ ಹೋಗುವುದು, ಎಂದರೆ ಸಿದ್ಧಾಂತೀಕರಿಸುತ್ತಾರೆ ॥ ೧ ॥

## ಸೂತ್ರ ॥ ಓಂ ಹಾನೌ ತೂಪಾಯನಶಬ್ದಶೇಷತ್ವಾತ್ಕುಶಾಽಛಂದಸ್ತುತ್ಯುಪಗಾನವತ್ತದುಕ್ತಂ ॥ ೨೭ ॥

**ಸೂತ್ರಾರ್ಥ** ॥ ಬಂಧಹಾನಿರೂಪವಾದ ಮುಕ್ತಿಯಲ್ಲಿ ಮುಕ್ತರಿಗೆ ಉಪಾಸನವು ಇದೆ. ಆದೂ ಸ್ವೇಚ್ಛೆಯಿಂದಲೇ ವಿಧಿಯಿಂದ ಅಲ್ಲ. ಆ ಉಪಾಸನವು ಏತತ್ಸಾಮ ಗಾಯನ್ನಾಸ್ತೇ ಇತ್ಯಾದಿ ಶ್ರುತಿಗಳಲ್ಲಿ ಉಕ್ತವಾಗಿದೆ. ಉಪಾಸನಾ ವಿಧಿಗಳಿಗೆ ಮೋಕ್ಷವಾಕ್ಯಶೇಷತ್ವವಿದ್ದ ಪ್ರಯುಕ್ತ. ನಿಯಮೇನ ಬ್ರಹ್ಮಯಜ್ಞಾನಂತರದಲ್ಲಿಯೂ ದ್ವಿಜರಿಗೆ ಸ್ವೇಚ್ಛೆಯಿಂದಲೇ ಕುಶಧಾರಣದಿಂದ ಮಂತ್ರಾಧ್ಯಯನದಂತೆ.

**ಭಾಷ್ಯ** ॥ (೧) ನಿಯತಸ್ವಾಧ್ಯಾಯಾನಂತರಂ ಸ್ವೇಚ್ಛಯಾ ಕುಶಾಗ್ರಹಣಸ್ತುತ್ಯುಪಗಾನವದೇವ ಮೋಕ್ಷೇ ಉಪಾಸನಾದಿಃ । (೨) ಬ್ರಹ್ಮವಿದಾಪ್ನೋತಿ ಪರಂ (ತೈ.೩.೧೦.) । ಇತಿ ಮೋಕ್ಷವಾಕ್ಯಶೇಷತ್ವಾದಿತರೇಷಾಂ । (೩) ತಚ್ಚೋಕ್ತಂ । ಏತತ್ಸಾಮ ಗಾಯನ್ನಾಸ್ತೇ (ತೈ.೩.೧೦.) । ಇತ್ಯಾದಿ ॥ ೨ ॥

**ಭಾಷ್ಯಾರ್ಥ** ॥ (೧) ಮೋಕ್ಷದಲ್ಲಿ ಭಗವದುಪಾಸನಾದಿಗಳು ಇವೆ. ಆದು ಸ್ವೇಚ್ಛೆಯಿಂದಲೇ. (ವಿಧಿನಿಮಿತ್ತದಿಂದ ಅಲ್ಲ) (ವಿಹಿತವಾಗದಿದ್ದರೆ ಉಪಾಸನಾಕರಣವೇ ಕೂಡಲಾರದು ಎಂದು ಹೇಳಕೂಡದು.) ನಿಯತ ಬ್ರಹ್ಮಯಜ್ಞಾನಂತರದಲ್ಲಿಯೂ ಸ್ವೇಚ್ಛೆಯಿಂದಲೇ ಕುಶಧಾರಣ ಪೂರ್ವಕವಾಗಿ ಮಂತ್ರಸಾಮಗಳ ಅಧ್ಯಯನದಂತೆಯೇ (ಅಂದರೆ ಹೇಗೆ ದ್ವಿಜರಿಗೆ ಮಂತ್ರಸಾಮಗಳ ಅಧ್ಯಯನವು ಮಾಡಲ್ಪಡುತ್ತಿರಲು ಕುಶಗ್ರಹಣವು ವಿಧಿಪ್ರಾಪ್ತವಲ್ಲವೋ ಹೀಗೆಯೇ ಮುಕ್ತಿಯಲ್ಲಿ ಉಪಾಸನವು) (ಯಾವಾಗ ಮುಕ್ತರು ಅವಿಹಿತವಾದಾಗ್ಯೂ ಕರ್ಮವನ್ನು ಸ್ವೇಚ್ಛೆಯಿಂದಲೇ ಮಾಡುತ್ತಾರೋ ಆಗ ಉಪಾಸನವನ್ನು ಮಾಡುತ್ತಾರೆಂದು ಸುತರಾಂ ಸಿದ್ಧಿಸುವುದು.) (೨) (ಮುಕ್ತರಿಗೆ ಉಪಾಸನವು ಇದೆ ಎಂದಾದರೆ— ಆದು ಸ್ವೇಚ್ಛೆಯಿಂದ ಎಂದು ಹೇಗೆ ಸಿದ್ಧಿಸುತ್ತದೆ. ವಿಧ್ಯನುಸಾರ ವಾಗಿಯೇ ಎಂದು ಏಕೆ ಆಗಲಾರದು ಎಂದರೆ) ಶ್ರೋತವ್ಯೋ ಮಂತವ್ಯಃ ತದ್ವಿಜಿಜ್ಞಾಸಸ್ವ ಇತ್ಯಾದ್ಯುಪಾಸನಾವಿಧಿಗಳಿಗೆ, ಬ್ರಹ್ಮವಿದಾಪ್ನೋತಿಪರಂ ಎಂದು ಬ್ರಹ್ಮಜ್ಞಾನದಿಂದ ಮೋಕ್ಷಪ್ರತಿಪಾದಕವಾದ ಯಾವುದು ವಾಕ್ಯವೋ, ತಚ್ಛೇಷತ್ವವಿದ್ದಪ್ರಯುಕ್ತ (ಅಂದರೆ, ಮೋಕ್ಷಸಿದ್ಧಿಗಾಗಿ ಮೋಕ್ಷಸಾಧನವಾದ ಬ್ರಹ್ಮಜ್ಞಾನಾರ್ಥತ್ವವಿದ್ದ ಪ್ರಯುಕ್ತ) ಸ್ವೇಚ್ಛೆಯಿಂದಲೇ ಮುಕ್ತನಿಗೆ ಉಪಾಸನವು. ವಿಧಿನಿಮಿತ್ತಕವಲ್ಲ. (ಮೋಕ್ಷ ಸಿದ್ಧಿಗಾಗಿ ಪ್ರವೃತ್ತಗಳಾದ ವಿಧಿಗಳು ಮುಕ್ತವಿಷಯಗಳು ಆಗಲಾರವು.) (೩) (ಮುಕ್ತನಿಗೆ ಉಪಾಸನವೇ ಇರುತ್ತಿದ್ದರೆ ಹೀಗೆ ಆಗುತ್ತಿತ್ತು. ಅದೇವೇ ಹೇಗೆ ಎಂದರೆ) ಆ ಉಪಾಸನವು, ಮುಕ್ತನಾದ ಬ್ರಹ್ಮನು ಹಾ ಉ ಇತ್ಯಾದಿ ಸಾಮವನ್ನು ಗಾಯನ ಮಾಡುತ್ತಾ ಇದ್ದಾನೆ, ಇತ್ಯಾದಿ ಪ್ರಮಾಣಗಳಲ್ಲಿ ಉಕ್ತವಾಗಿದೆ. ॥ ೨ ॥

**ಪೀಠಿಕೆ** ॥ ಸ್ವೇಚ್ಛೆಯಿಂದಲೇ ಮುಕ್ತರು ಉಪಾಸನವನ್ನು ಮಾಡುತ್ತಾರೆ. ಎನ್ನುವಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

---

★ ಇದು ಅಂಶಾಧಿಕರಣವಲ್ಲಿ ವ್ಯಾಖ್ಯಾತವಾಗಿದೆ.

**ಭಾಷ್ಯ ॥ (೧) ಬ್ರಹ್ಮತರ್ಕೇ ಚ । ಮುಕ್ತಾ ಅಪಿ ಹಿ ಕುರ್ವಂತಿ ಸ್ವೇಚ್ಛಯೋಪಾಸನಂ ಹರೇಃ । ನಿಯಮಾನಂತರಂ ವಿಪ್ರಾಃ ಕುಶಾದ್ಯೈರಪ್ಯಧೀಯತೇ ॥ ಇತಿ ॥ (೨) ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ । ಇತಿ ಚ ಭಾರತೇ ॥ ೨೭ ॥ ३ ॥**

ಭಾಷ್ಯಾರ್ಥ ॥ (೧) ಮುಕ್ತರೂ ಕೂಡ ಸ್ವೇಚ್ಛೆಯಿಂದಲೇ ಶ್ರೀಹರಿಯ ಉಪಾಸನವನ್ನು ಮಾಡುತ್ತಾರೆ. ನಿಯತ ಸ್ವಾಧ್ಯಾಯಾನಂತರದಲ್ಲಿ ಬ್ರಾಹ್ಮಣರು, ಕುಶಗ್ರಹಣಪೂರ್ವಕವಾಗಿ ಪ್ರಾಙ್ಮತ್ವಾದಿ ನಿಯಮದಿಂದ ಹೇಗೆ ಅಧ್ಯಯನ ಮಾಡುತ್ತಾರೋ ಹಾಗೆಯೇ, (೨) (ಮುಕ್ತರಿಗೆ ಯಜನಾದಿ ಕರ್ಮವೂ ಸ್ವೇಚ್ಛೆಯಿಂದ ಅದೆ. ಉಪಸಾಸನಾದಿಗಳು ಇವೆ ಎಂದು ಏನು ಹೇಳಬೇಕು, ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.) ಕೃಷ್ಣ *ಮೂಲರೂಪಿಯು ಮೋಹರಹಿತರಾದ ಮುಕ್ತರಿಂದ ಪೂಜಿಸಲ್ಪಡುತ್ತಾನೆ ಎಂದೂ ಭಾರತದಲ್ಲಿ ಹೇಳಿದೆ.

ಪೀಠಿಕೆ ॥ ಮುಕ್ತನಿಗೆ ಉಪಾಸನವು ಸ್ವೇಚ್ಛೆಯಿಂದ ಅಲ್ಲ, ಮತ್ತು ಮೋಕ್ಷದಲ್ಲಿ ಆವಾವ ಕಾಲದಲ್ಲಿ ಪ್ರಾಪ್ತವಾದ ಅನಿಷ್ಟ ಪರಿಹಾರಾರ್ಥಕವೇ. ಯಾರದ್ದೂ ನಿಷ್ಫಲ ಪ್ರವೃತ್ತಿಯು ಕಾಣಲಿಲ್ಲ, ಎಂಬೀ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಾಂಪರಾಯೇ ತರ್ತವ್ಯಾಭಾವಾತ್ತಥಾ ಹ್ಯನ್ಯೇ ಓಂ ॥ ೨೮ ॥

ಸೂತ್ರಾರ್ಥ ॥ ಮೋಕ್ಷದಲ್ಲಿ ನಿರಸನೀಯವಾದ ಅನಿಷ್ಟವು ಇಲ್ಲದಿರುವುದರಿಂದ, ಏಕೆಂದರೆ— ಇತರ ಶಾಖಿಗಳು ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಎಂದು ಹೇಳುತ್ತಾರೆ.

**ಭಾಷ್ಯ ॥ (೧) ಸ್ವೇಚ್ಛಯೇತ್ಯಂಗೀಕರ್ತವ್ಯಂ । ಮುಕ್ತಸ್ಯ ತೀರ್ಣತ್ವಾತ್ । (೨) ತೀರ್ಣೋ ಹಿ ಸರ್ವಾಂಶ್ಶೋಕಾನ್ ಹೃದಯಸ್ಯ ಭವತಿ (ಬೃ.೬.೩. ೨೨.) । ಇತಿ ಹ್ಯನ್ಯೇ ಪಠಂತಿ । (೩) ವಾಯುಪ್ರೋಕ್ತೇ ಚ । ಸ್ಥಿತಪ್ರಜ್ಞ ತ್ವಮೂಪ್ತಾ ಯೇ ಜ್ಞಾನೇನ ಪರಮಾತ್ಮನಃ । ಬ್ರಹ್ಮಲೋಕಂ ಗತಾಃ ಸರ್ವೇ ಬ್ರಹ್ಮಣಾ ಚ ಪರಂ ಗತಾಃ ॥ ತೀರ್ಣತರ್ತವ್ಯ-ಭಾಗಾಶ್ಚ ಸ್ವೇಚ್ಛಯೋಪಾಸತೇ ಪರಂ ಇತಿ ॥ ೨೮ ॥ ಅಧಿ. ೧೭ ॥ ३ ॥**

ಭಾಷ್ಯಾರ್ಥ ॥ (೧) ಮುಕ್ತನಿಗೆ ಉಪಾಸನವೇ ಸ್ವೇಚ್ಛೆಯಿಂದಲೇ ಎಂದಂಗೀಕರಿಸತಕ್ಕದ್ದು. (ಅನಿಷ್ಟಪರಿಹಾರಕ್ಕಾಗಿ ಅಲ್ಲ, ಮುಕ್ತನು ಸರ್ವಾನಿಷ್ಟಗಳಿಂದ ಉತ್ತೀರ್ಣನಾದುದರಿಂದ ಮೋಕ್ಷದಲ್ಲಿ ನಿರಸನೀಯವಾದ ಅನಿಷ್ಟವೇ ಆತನಿಗೆ, ಇಲ್ಲದಿರುವುದರಿಂದ. (೨) ಏಕೆಂದರೆ, ಇತರ ಶಾಖಿಗಳು, ಮುಕ್ತಜೀವನು ಮೋಕ್ಷದಲ್ಲಿ ಸರ್ವಶೋಕಗಳನ್ನು ದಾಟಿದವನಾಗಿ ಸರ್ವ ಹೃದ್ಗತನಾದ ವಿಷ್ಣುವಿನ ಸಂಬಂಧಿಯು (ಅಂದರೆ, ವಿಷ್ಣುವಿನ ಉಪಾಸನಾದಿಗಳುಳ್ಳವನು) ಆಗುತ್ತಾನೆ. ಎಂದು ಹೇಳುತ್ತಾರೆ. (೩) ಯಾವ ಜನರು ಪರಮಾತ್ಮನ ಪರೋಕ್ಷ ನಿಶ್ಚಯದಿಂದ ಅಪರೋಕ್ಷ ಜ್ಞಾನಿತ್ವವನ್ನು ಹೊಂದಿರುತ್ತಾರೋ, ಅವರು ಸತ್ಯಲೋಕವನ್ನು ಹೊಂದಿರುವವರಾಗಿ ಅಲ್ಲಿ ಚತುರ್ಮುಖ ನಿಂದುಪದೇಶವನ್ನು ಹೊಂದಿದವರಾಗಿ ಆ ಚತುರ್ಮುಖನಿಂದ ಕೂಡಿಕೊಂಡು ಪರಮಾತ್ಮನನ್ನು

★ ಇದು ಅಂಶಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಹೊಂದಿದವರಾಗಿ ಬಂಧದಿಂದ ಬಿಡುಗಡೆ ಹೊಂದಿದವರಾಗಿ ಸ್ವೇಚ್ಛೆಯಿಂದಲೇ ಶ್ರೀಹರಿಯನ್ನು ಉಪಾಸನಾ ಮಾಡುತ್ತಾರೆ, ಎಂದು ವಾಯುಪ್ರೋಕ್ತದಲ್ಲಿ ಹೇಳಿದೆ. ॥ ೨೮ ॥ ೩ ॥

## ಅಧಿಕರಣ ಸಾರಾಂಶ

ಮುಕ್ತನಿಂದ ಉಪಾಸನವು ಮಾಡಲ್ಪಡುವುದಿಲ್ಲವೋ ಮಾಡಲ್ಪಡುತ್ತದೋ, ಎಂದು ಸಂದೇಹವು. ಮುಕ್ತನಿಗೆ ಉಪಾಸನವು ಇದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ ವಿಧಿಬದ್ಧರು ಎಂದು ಇಟ್ಟುಕೊಂಡರೂ ವಿಧಿಯಿಂದ ಅಬದ್ಧರು ಎಂದಾದರೂ ಉಭಯಥಾಪಿ ಉಪಾಸನವು ಇದ್ದರೆ ತತ್ಸಾಧ್ಯ ಫಲವನ್ನು ಒಪ್ಪಬೇಕಾಗಿರುವುದರಿಂದ ಅಪೂರ್ಣತ್ವವು ಬರುವುದು. ಅಲ್ಲದೆ ವಿಧಿ ಬದ್ಧರೆಂದಾದರೆ ಸಂಸಾರಿಗಳ ಸಮಾನಧರ್ಮವು ಬರಬೇಕಾಗುವುದು. ಅಬದ್ಧರಾದರೆ ಅವಿಹಿತಕರಣವೇ ಕೂಡಲಾರದು. ಆದಕಾರಣ ಮುಕ್ತನು ಉಪಾಸನಾ ಮಾಡಬಾರದು, ಎಂದರೆ— ಏತತ್ಸಾಮ ಗಾಯನ್ನಾಸ್ತೇ ಇದು ಮೊದಲಾದ ಸಾಧಕಗಳು ಇದ್ದುದರಿಂದ ಉಪಾಸನಾ ವಿಧಿಗಳು ಮೋಕ್ಷವಾಕ್ಯದ ಶೇಷವಾದುದರಿಂದ ಮೋಕ್ಷಾರ್ಥಗಳು. ಮುಕ್ತನಿಗೆ ವಿಧಿವಿಷಯತ್ವವಿಲ್ಲವಾದರೂ ಕುಶಾಛಂದಸುತ್ತುಪಗಾನದಂತೆ ಸ್ವೇಚ್ಛೆಯಿಂದಲೇ. ಪ್ರಾಪ್ಯಫಲವು ಇಲ್ಲವಾದರೂ ಈಶ್ವರನ ಕ್ರಿಯೆಯಂತೆ ಮುಕ್ತನಿಗೆ ಉಪಾಸನಾ ಕ್ರಿಯೆಯು ಲೀಲಾರೂಪವಾಗಿ ಸ್ವಭಾವವೆಂದು ಕೂಡುವುದು. ಏವಂಚ ಬಾಧಕವು ಇಲ್ಲದಿರುವುದರಿಂದ ಮುಕ್ತನೂ ಉಪಾಸನವನ್ನು ಮಾಡುತ್ತಾನೆ. ॥ ಅಧಿ. ೧೭ ॥

**ಹಾನ್ಯಧಿಕರಣವು ಸಮಾಪ್ತವಾಯಿತು.**

# ೧೮. ಛಂದಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಮುಕ್ತರಿಗೆ ಭಗವತ್ಕರ್ಮದಲ್ಲಿ ನಿಯಮಾಭಾವವನ್ನು ಸಮರ್ಥಿಸುತ್ತಾರೆ—

**ಭಾಷ್ಯ ॥ ಕರ್ಮಾಪಿ ಕುರ್ವಂತಿ ನ ವಾ । ಇತ್ಯತ ಆಹ ॥ ೧ ॥**

**ಭಾಷ್ಯಾರ್ಥ ॥** ಉಪಾಸನದಂತೆ ಮುಕ್ತರೂ ನಿಯಮೇನ ಕರ್ಮವನ್ನು ಮಾಡುತ್ತಾರೋ, ಮಾಡುವುದಿಲ್ಲವೋ (ಎಂದು ಸಂಶಯವು. ಮುಕ್ತರು ಕರ್ಮವನ್ನು ಮಾಡಿಯೇ ಮಾಡುತ್ತಾರೆ. ಕರ್ಮವೂ ಭಗವತ್ಪೂಜಾರೂಪವಾಗಿದೆ. ಮುಕ್ತರಿಗೆ ಕರ್ಮವನ್ನು ಮಾಡತಕ್ಕ ಶಕ್ತಿಯು ಅದೆ. ಆದಕಾರಣ ಕರ್ಮೋಪಾಸನಗಳಿಗೆ ಸಾಮ್ಯವೇ, ಎಂದು ಪೂರ್ವಪಕ್ಷವು ಬಂದರೆ— ಸಿದ್ಧಾಂತೀಕರಿಸುತ್ತಾರೆ ॥ ೧ ॥

## ಸೂತ್ರ ॥ ಓಂ ಛಂದತ ಉಭಯಾವಿರೋಧಾತ್ ಓಂ ॥ ೨೯ ॥

**ಸೂತ್ರಾರ್ಥ ॥** ಮುಕ್ತಿಯಲ್ಲಿ ಆದರೂ ಮುಕ್ತರು ಕರ್ಮವನ್ನು ಸ್ವೇಚ್ಛೆಯಿಂದ ಮಾಡುತ್ತಾರೆ. ಮಾಡದೇನೂ ಇರುತ್ತಾರೆ. ವಿಧಿಪ್ರತ್ಯವಾಯಗಳು ಎರಡು ಇಲ್ಲದಿರುವುದರಿಂದ.

ಭಾಷ್ಯ ॥ ಸ್ವೇಚ್ಛಯಾ ಕುರ್ವಂತಿ ನ ವಾ । ಬಂಧಪ್ರತ್ಯವಾಯಯೋರಭಾವಾತ್ ॥ ೨೯ ॥ ೨ ॥

ಭಾಷ್ಯಾರ್ಥ ॥ ಮುಕ್ತರಿಗೆ ಕರ್ಮವನ್ನು ಮಾಡತಕ್ಕ ಶಕ್ತಿಯು ಇದ್ದರೂ ಅವರು ಸ್ವೇಚ್ಛಾನುಸಾರವಾಗಿ ಕದಾಚಿತ್ ಕರ್ಮವನ್ನುಮಾಡುತ್ತಾರೆ. ಕದಾಚಿತ್ ಮಾಡದೇನೂ ಇರುತ್ತಾರೆ. ಅವಶ್ಯವಾಗಿ ಮಾಡಲೇಬೇಕು ಎನ್ನುವಲ್ಲಿ ವಿಧಿಬಂಧವಿಲ್ಲ. ಮಾಡದಿದ್ದರೆ ಪ್ರತ್ಯವಾಯುವೂ ಇಲ್ಲ ॥ ೨೯ ॥ ೨ ॥

ಪೀಠಿಕೆ ॥ ಮುಕ್ತರಿಗೆ ವಿಧಿಬಂಧವೂ ಪ್ರತ್ಯವಾಯುವೂ ಇಲ್ಲವೆನ್ನುವುದು ಯಾವ ಪ್ರಮಾಣ ದಿಂದ ಸಿದ್ಧವಾಗುತ್ತದೆ ಎಂಬೀ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಗತೇರರ್ಥವತ್ತ್ವಮುಭಯಥಾಽನ್ಯಥಾ ಹಿ ವಿರೋಧಃ ಓಂ ॥ ೩೦ ॥

ಸೂತ್ರಾರ್ಥ ॥ ಯಾವ ಕಾರಣದಿಂದ ವಿಧಿಪ್ರತ್ಯವಾಯಗಳು ಇಲ್ಲದಿರುವುದರಿಂದಲೇ ಈಶಪ್ರಾಪ್ತಿರೂಪವಾದ ಮುಕ್ತಿಗೆ ಪುರುಷಾರ್ಥತ್ವವೋ, ಆದಕಾರಣ ವಿಧಿಯೂ ಪ್ರತ್ಯವಾಯವೂ ಎರಡೂ ಇಲ್ಲ. ಮೋಕ್ಷದಲ್ಲಿ ವಿಧಿ, ಪ್ರತ್ಯವಾಯಗಳು ಇದ್ದರೆ ಅದು ಮೋಕ್ಷವೆಂದೇ ಆಗದೇಹೋಗುವುದು. ಮತ್ತು ಮುಕ್ತನಿಗೆ ಸಂಸಾರ ಸಮಾನಧರ್ಮವತ್ತ್ವವೂ ಬರಬೇಕಾಗುವುದು.

ಭಾಷ್ಯ ॥ (೧) ಬಂಧಪ್ರತ್ಯವಾಯಾಭಾವೇ ಹಿ ಮೋಕ್ಷಸ್ಯಾರ್ಥವತ್ತ್ವಂ । ಅನ್ಯಥಾ ಮೋಕ್ಷತ್ವಮೇವ ನ ಸ್ಯಾತ್ । (೨) ಕದಾಚಿತ್ಕರ್ಮ ಕುರ್ವಂತಿ ಕದಾಚಿ ನ್ನೈವ ಕುರ್ವತೇ । ನಿತ್ಯಜ್ಞಾನಸ್ವರೂಪತ್ವಾನ್ನಿತ್ಯಂ ಧ್ಯಾಯಂತಿ ಕೇಶವಂ ॥ (೩) ತೀರ್ಣಕರ್ತವ್ಯಭಾಗಾ ಯೇ ಪ್ರಾಪ್ತಾನಂದಾಃ ಪರಾತ್ಮನಃ। ಪ್ರತ್ಯವಾಯ ಸ್ಯ ಬಂಧಸ್ಯಾಪ್ಯಭಾವಾತ್ ಸ್ವೇಚ್ಛಯಾ ಭವೇತ್ ॥ ಇತಿ (ಹಿ) ಬ್ರಹ್ಮಾಂಡೇ ॥ ೩೦ ॥ ೩ ॥

ಭಾಷ್ಯಾರ್ಥ ॥ (೧) ಬಂಧವೂ ಪ್ರತ್ಯವಾಯವೂ ಎರಡೂ ಇಲ್ಲ. ಇದ್ದರೇನೇ ಮೋಕ್ಷಕ್ಕೆ ಪುರುಷಾರ್ಥತ್ವವು ಬಂಧಪ್ರತ್ಯವಾಯಗಳು ಇದ್ದರೆ ಸಂಸಾರಸಮಾನ ಧರ್ಮವತ್ತ್ವವು ಬರುವುದರಿಂದ ಮೋಕ್ಷವೆಂದೇ ಆಗದೆ ಹೋಗುವುದು. (೨) (ಮುಕ್ತರಿಗೆ ಕರ್ಮದಲ್ಲಿ ನಿಯಮವು ಇಲ್ಲವಾದರೆ ಉಪಾಸನದಲ್ಲಿಯೂ ಅನಿಯಮವು ಬರುವುದು. ವಿಧಿಬಂಧ, ಪ್ರತ್ಯವಾಯಾಭಾವಗಳಿಂದ ವಿಶೇಷವಿಲ್ಲದಿರುವ ಪ್ರಯುಕ್ತ ಎಂಬೀ ಶಂಕೆಯನ್ನು ಪರಿಹರಿಸುವುದಕ್ಕಾಗಿ ಉಕ್ತಾರ್ಥದಲ್ಲಿ ಸ್ಮೃತಿ ಯನ್ನು ಹೇಳುತ್ತಾರೆ.) ಮುಕ್ತರು ಕದಾಚಿತ್ ಕರ್ಮವನ್ನು ಮಾಡುತ್ತಾರೆ. ಕದಾಚಿತ್ ಮಾಡುವುದೇ ಇಲ್ಲ. ಮುಕ್ತರಿಗೆ ನಿತ್ಯದಲ್ಲಿಯೂ ಭಗವದ್ವಿಷಯಕವಾದ ಅಪರೋಕ್ಷಜ್ಞಾನಸ್ವರೂಪತ್ವವಿದ್ದುದರಿಂದ ಅವರು ನಿತ್ಯದಲ್ಲಿಯೂ ಶ್ರೀಹರಿಯನ್ನು ಧ್ಯಾನಿಸುತ್ತಾರೆ. (ಅಂದರೆ ಮುಕ್ತರಿಗೆ ಕರ್ಮ ಉಪಾಸನಗಳಿಗೆ ವಿಧ್ಯಾದ್ಯಭಾವವು ಸಮವಾದಾಗ್ಯೂ, ಕರ್ಮದಂತೆ ಉಪಾಸನವು ಅನಿಯತವಲ್ಲ. ಮುಕ್ತರು ನಿತ್ಯ

ಜ್ಞಾನಸ್ವರೂಪರು. ಉಪಾಸನವು ಜ್ಞಾನವಿಶೇಷವು. ಜ್ಞಾನದಂತೆಯೇ ಕರ್ಮಕ್ಕೂ ತತ್ಸ್ವರೂಪವಿದ್ದುದರಿಂದ ಅಲ್ಲಿ ಅನಿಯಮವು ಯಾವುದರಿಂದ ಎಂದು ಹೇಳಕೂಡದು. ಕರ್ಮಕ್ಕೂ ಸ್ವರೂಪತ್ವವಿದ್ದರೂ ಜ್ಞಾನದಂತೆ ನಿತ್ಯದಲ್ಲಿ ಅಭಿವ್ಯಕ್ತತ್ವವಿಲ್ಲ. ಉಪಾಸನದಂತೆಯೇ ನಿತ್ಯಕೃತಿಸಂಸ್ಕಾರ ಪಾಟವವೂ ಇಲ್ಲ.) (೨.) (ಮುಕ್ತರಿಗೆ ವಿಧ್ಯಾದಿಗಳು ಇಲ್ಲವಾದರೂ ಅನಿಷ್ಟನಿವೃತ್ತಿಗಾಗಿ ಅಥವಾ ಆನಂದ ಪ್ರಾಪ್ತಿಗಾಗಿ ಕರ್ಮನಿಯಮವು ಎಂದು ಏಕೆ ಆಗಲಾರದು ಎಂದರೆ) ಶ್ರೀಪರಮಾತ್ಮನ ಪ್ರಸಾದದಿಂದ ಯಾರು ನಿರಸನೀಯಗಳಾದ ಎಲ್ಲಾ ಅನಿಷ್ಟಾಂಶಗಳನ್ನು ದಾಟಿದವರೋ, ಆನಂದವನ್ನು ಹೊಂದಿದವರೋ, ಅವರಿಗೆ ಪುನಃ ಅರ್ಥಿತ್ವವು ಇಲ್ಲದಿರುವುದರಿಂದಲೂ ಪ್ರತ್ಯವಾಯವೂ ಬಂಧವೂ ಇಲ್ಲದಿರುವ ಪ್ರಯುಕ್ತವೂ ಸ್ವೇಚ್ಛಾನುಸಾರವಾಗಿ ಕರ್ಮಕರಣವು ಆಗುವುದು. ಎಂದು ಬ್ರಹಾಂಡ ಪುರಾಣದಲ್ಲಿ ಹೇಳಿದೆ. ॥ ೩೦ ॥ ೨. ॥

**ಪೀಠಿಕೆ** ॥ ವಿಧ್ಯಾದ್ಯಭಾವವು ಕರ್ಮಾನಿಯಮದಲ್ಲಿ ಸಂಭಾವಕವೇ. ಸಾಧಕವಾದರೂ ಇಲ್ಲವೇ ಇಲ್ಲ. ಆದಕಾರಣ ಕರ್ಮಾನಿಯಮವು ಅನುಪಪನ್ನವೇ ಎಂಬೀ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ಓಂ ॥ ೩೧ ॥

**ಸೂತ್ರಾರ್ಥ** ॥ ಮುಕ್ತರು ಕದಾಚಿತ್ ಕರ್ಮವನ್ನು ಮಾಡುತ್ತಾರೆ. ಕದಾಚಿತ್ ಮಾಡದೇನೂ ಇರುತ್ತಾರೆ, ಎನ್ನುವುದು ಯುಕ್ತವು. ತನ್ನಿಮಿತ್ತಕವಾದ ಕರ್ಮಸಾಧ್ಯವಾದ ಮೋಕ್ಷಾಖ್ಯ ಫಲವು ಪ್ರಾಪ್ತವಾದ ಪ್ರಯುಕ್ತ. ಹೇಗೆ ಲೋಕದಲ್ಲಿ ಯಾಗಾದಿ ಸಮಾಪ್ತಿ ಫಲಕವಾದ ವಿಷ್ಣುಕ್ರಮಣಾಖ್ಯವಾದ ವಿಷ್ಣುಪ್ರೀತಿಕರವಾದ ಕರ್ಮವನ್ನು ಯಾಗಾದಿ ಸಮಾಪ್ತ್ಯನಂತರದಲ್ಲಿಯೂ ಕೆಲವರು ಮಾಡುವುದಿಲ್ಲವೋ ಹಾಗೆಯೇ.

**ಭಾಷ್ಯ ॥ (೧) ಉಪಪನ್ನಶ್ಚೈವಂಭಾವಃ । ಪ್ರಾಪ್ತತ್ವಾತ್ತಲ್ಲಕ್ಷಣಸ್ಯ ಫಲಸ್ಯ । (೨) ಯಥಾ ಲೋಕೇ ವಿಧ್ಯರ್ಥತ್ವೇನ ವಿಷ್ಣುಕ್ರಮಣಾದಿಕಂ ಕೃತ್ವಾ ಸಮಾಪ್ತಕರ್ಮೇಚ್ಛಯಾ ಕರೋತಿ ನ ಕರೋತಿ ಚ ॥ ೩೧ ॥ ಅಧಿ.೧೮ ॥ ೪ ॥**

**ಭಾಷ್ಯಾರ್ಥ** ॥ (೧) ಕದಾಚಿತ್ ಕರ್ಮವನ್ನು ಮಾಡುತ್ತಾರೆ. ಮಾಡದೇನೂ ಇರುತ್ತಾರೆ. ಎನ್ನುವುದು ಮುಕ್ತರಿಗೆ ಯುಕ್ತವೇ. ಜ್ಞಾನದ್ವಾರಾ ಕರ್ಮಫಲವಾದ ಮೋಕ್ಷವು ಪ್ರಾಪ್ತವಾದ ಪ್ರಯುಕ್ತ (ಫಲಪ್ರಾಪ್ತಿಯಾದರೂ ಫಲಸಾಧನವನ್ನು ಮಾಡಬೇಕೆನ್ನುವ ನಿಯಮವೇ ಏಕೆ ಆಗಲಾರದು ಎಂದರೆ) ಫಲಪ್ರಾಪ್ತಿಯು ಆದ ಮೇಲೆ ಫಲಸಾಧನಾನುಷ್ಠಾನ ನಿಯಮವನ್ನು ನಿವಾರಿಸುವುದೇ ಲೋಕದಲ್ಲಿ ಫಲದ ಲಕ್ಷಣವು (ತಥಾಚ ಫಲಕ್ಕೆ ಇಂತಹ ಲಕ್ಷಣವು ಇದ್ದುದರಿಂದ ಫಲಪ್ರಾಪ್ತಿ ಯಾದ ಮೇಲೆ ಸ್ವಸಾಧನ ನಿಯಮವು ಇಲ್ಲ) ಹೇಗೆಂದರೆ, (೨) ಲೋಕದಲ್ಲಿ ಯಜಮಾನನಿಗೆ ಯಾಗ ವಿಧಿ ಪೂರ್ತಿರೂಪವಾದ ಫಲಕ್ಕೆ ಸಾಧನವಾಗಿ ವಿಷ್ಣುಕ್ರಮಣಾದಿ ಕರ್ಮಗಳನ್ನು (ವಿಷ್ಣುವನ್ನುದ್ದೇಶಿಸಿಕೊಂಡು

ಮಾಡಲ್ಪಡತಕ್ಕ ಯಾಗದ ಪೂರ್ವಾಂಗಭೂತವಾದ ಕರ್ಮವಿಶೇಷವು ವಿಷ್ಣುಕ್ರಮಣವು.) ನಿಯಮದಿಂದ ಮಾಡಿ ಸಮಾಪ್ತವಾದ ಕರ್ಮವುಳ್ಳ ಯಜಮಾನನು ಸ್ವೇಚ್ಛೆಯಿಂದ ಯಾಗ ವಿಧಿ ಪೂರ್ತ್ಯನಂತರದಲ್ಲಿಯೂ ಕದಾಚಿತ್ ಆ ಕರ್ಮವನ್ನು ಮಾಡುತ್ತಾನೆ. ಕದಾಚಿತ್ ಮಾಡುವುದಿಲ್ಲ (ನಿಯಮೇನ ಯಜಮಾನನು ಮಾಡುವುದಿಲ್ಲ) ಏವಂಚ **ಮುಕ್ತಾಃ ನ ಕರ್ಮನಿಯಮವಂತಃ ವಿಶೇಷಹೇತ್ವಭಾವೇ ಸತಿ ಪ್ರಾಪ್ತಫಲತ್ವಾತ್ ಯಾಗಕರ್ತೃವತ್** ಎನ್ನುವ ಅನುಮಾನವು ಉಕ್ತವಾಯಿತು. ॥ ೨.೧೧ ॥ ೪ ॥

## ಅಧಿಕರಣ ಸಾರಾಂಶ

ಮುಕ್ತರು ಉಪಾಸನದಂತೆ ನಿಯಮೇನ ಕರ್ಮವನ್ನು ಮಾಡುತ್ತಾರೋ, ಇಲ್ಲವೋ ಎಂದು ಸಂದೇಹವು. ಸಾಧನಗಳನ್ನು ಅನುಷ್ಠಾನ ಮಾಡಬೇಕಾದರೆ ಸಾಧನಜನ್ಯಫಲದಲ್ಲಿ ಅಪೇಕ್ಷೆಯಿದ್ದು ಶಕ್ತತ್ವವು ಪ್ರಯೋಜಕವು. ಮುಕ್ತರಿಗೆ ಫಲವು ಮೊದಲೇ ಲಬ್ಧವಾದುದರಿಂದ ಅರ್ಥಿತ್ವವಿಲ್ಲವಾದರೂ ಸ್ವೇಚ್ಛೆಯಿಂದ ಉಪಾಸನಾನುಷ್ಠಾನದಂತೆ ಕರ್ಮ ಮಾಡಲಿಕ್ಕೂ ಶಕ್ತಿಯು ಇದ್ದುದರಿಂದಲೂ ಕರ್ಮವು ಭಗವತ್ಪೂಜಾರೂಪವಾದುದರಿಂದಲೂ ಅನುಷ್ಠಾಪಕವಿದ್ದ ಪ್ರಯುಕ್ತ ಕರ್ಮವನ್ನು ನಿಯಮೇನ ಮಾಡಿಯೇ ಮಾಡುತ್ತಾರೆ. ಇದು ಅನುಷ್ಠಾಪಕವಾಗದಿದ್ದರೆ ಉಪಾಸನವನ್ನು ವಿಶೇಷವಿಲ್ಲದಿದ್ದ ಪ್ರಯುಕ್ತ ನಿಯಮೇನ ಮಾಡಲಾರರು ಎಂದು ಪೂರ್ವ ಪಕ್ಷವು ಬಂದರೆ, ಕರ್ಮವು ಭಗವತ್ಪೂಜಾರೂಪವಾದುದಾಗ್ಯೂ ಮುಕ್ತರಿಗೆ ಅದನ್ನು ಅನುಷ್ಠಾನ ಮಾಡತಕ್ಕ ಶಕ್ತಿಯಿದ್ದರೂ ಅಷ್ಟು ಮಾತ್ರ ನಿಯಮೇನ ಅನುಷ್ಠಾನ ಮಾಡಲಿಕ್ಕೆ ಹೇತುವಿಲ್ಲ. ಮತ್ತೆ ವಿಧಿವಿಹಿತತ್ವವೂ ಮಾಡದಿದ್ದರೆ ಪ್ರತ್ಯವಾಯವೂ, ಫಲವು ಪ್ರಾಪ್ತವಾಗದಿರುವುದು, ಇವು ಮೂರು. ಮುಕ್ತರಿಗೆ ಇವು ಯಾವುದೂ ಇಲ್ಲ. ಮೋಕ್ಷದಲ್ಲಿಯೂ ಕರ್ಮವು ವಿಹಿತವಾಗಿದ್ದರೆ ವಿಧಿ ಬಂಧವಿದ್ದ ಪ್ರಯುಕ್ತ ಮೋಕ್ಷವು ಅಪುರುಷಾರ್ಥವಾಗಬೇಕಾಗುವುದು ಮೋಕ್ಷದಲ್ಲಿ ಕರ್ಮ ಮಾಡಬೇಕೆನ್ನುವ ಯಾವ ವಿಧಿಯೂ ಎಲ್ಲಿಯೂ ಇಲ್ಲ. ಮಾಡದಿದ್ದರೆ ಪ್ರತ್ಯವಾಯವೂ ಇಲ್ಲ. ಫಲವೂ ಪ್ರಾಪ್ತವಾಗಿದೆ. ಆದ ಪ್ರಯುಕ್ತ ನಿಯಮೇನ ಕರ್ಮವನ್ನು ಮಾಡುವುದಿಲ್ಲ. ಆದರೆ ಭಗವತ್ಪೂಜಾರೂಪವಾದುದರಿಂದಲೂ ಮೊದಲು ಮಾಡಿದ ಸಂಸ್ಕಾರಬಲದಿಂದಲೂ ಕೆಲವು ವೇಳೆ ಮಾತ್ರ ಕರ್ಮವನ್ನು ಮಾಡುತ್ತಾರೆ. ಉಪಾಸನವನ್ನಾದರೂ ಪೂರ್ವದಲ್ಲಿ ನಿಯಮೇನ ನಿರಂತರಾನುಷ್ಠಾನ ಮಾಡಿರುವ ಪ್ರಯುಕ್ತ ಅದರ ಸಂಸ್ಕಾರ ಬಲದಿಂದಲೂ ನಿತ್ಯಜ್ಞಾನಸ್ವರೂಪರಾದುದರಿಂದಲೂ ನಿಯಮೇನ ಅನುಷ್ಠಾನ ಮಾಡುತ್ತಾರೆ. **ಕದಾಚಿತ್ಕರ್ಮ ಕುರ್ವಂತಿ** ಇತ್ಯಾದಿ ಸ್ಮೃತಿಗಳಿಂದ ಈ ಅರ್ಥವು ಸಿದ್ಧಿಸುತ್ತದೆ. ॥ ಅಧಿ. ೧೮ ॥

**ಛಂದಾಧಿಕರಣವು ಸಮಾಪ್ತವಾಯಿತು.**

# ೧೯ ಅನಿಯಮಾಧಿಕರಣವು

**ಪೀಠಿಕೆ ॥** ಉಪಾಸನಾದಿಂದ ಬ್ರಹ್ಮಜ್ಞಾನವನ್ನು ಹೊಂದಿದವರಿಗೆಲ್ಲಾ ಮೋಕ್ಷವು ನಿಯತವು ಎಂದು ಸಾಧಿಸುತ್ತಾರೆ—

## ಸೂತ್ರ ॥ ಓಂ ಅನಿಯಮಃ ಸರ್ವೇಷಾಮವಿರೋಧಾಚ್ಛಬ್ದಾನುಮಾನಾಭ್ಯಾಂ ಓಂ ॥ ೩೨ ॥

**ಸೂತ್ರಾರ್ಥ ॥** ಎಲ್ಲಾ ಬ್ರಹ್ಮಪರೋಕ್ಷ ಜ್ಞಾನಿಗಳಿಗೂ ಮುಕ್ತಿಗೆ ಅನಿಯಮವು ಅಂದರೆ ಕೆಲವರಿಗೆ ಮೋಕ್ಷವು ಇದೆ. ಕೆಲವರಿಗೆ ಇಲ್ಲ ಎಂದು ಮುಕ್ತಿಗೆ ವ್ಯವಸ್ಥೆಯು (ವಿಕಲ್ಪವು) ಇಲ್ಲ ಮತ್ತೆ ಅನಿಯಮವೇ. (ಅಂದರೆ, ಎಲ್ಲಾ ಬ್ರಹ್ಮಾಪರೋಕ್ಷಜ್ಞಾನಿಗಳಿಗೆ ಮೋಕ್ಷವು ಆಗುತ್ತದೆ.) ಏಕೆಂದರೆ— **ಸರ್ವೇ ಗುಣಾಃ ಬ್ರಹ್ಮಣ್ಯೇವ** ಎಂದು ಉಪಾಸನಾದಲ್ಲಿ ಶ್ರುತಿವಿರೋಧವು ಇದ್ದಂತೆ ಇಲ್ಲಿ ಶ್ರುತಿವಿರೋಧವು ಇಲ್ಲದಿರುವುದರಿಂದ. **ನ ಕಶ್ಚಿದ್ಬ್ರಹ್ಮವಿತ್ತೃಪ್ತಿಮನುಭವತಿ** ಎನ್ನುವ ಶ್ರುತಿಯಿಂದಲೂ, **ವಿಮತಾಃ ಜ್ಞಾನಿನಃ ನಿಯತಮೋಕ್ಷಾಃ ಜ್ಞಾನಿತ್ವಾತ್ ಸಮ್ಮತವತ್** ಎನ್ನುವ ಅನುಮಾನದಿಂದಲೂ.

**ಭಾಷ್ಯ ॥ (೧) ಪ್ರಾಪ್ತಜ್ಞಾನಾಮಪಿ ಕೇಷಾಂಚಿನ್ಮುಕ್ತಿಪ್ರಾಪ್ತಿಃ ಕೇಷಾಂಚಿನ್ನ ಯಥೋಪಸಂಹಾರನಿಯಮ ಇತಿ ನ ಮಂತವ್ಯಂ। (೨) ಸರ್ವೇ ಗುಣಾ ಬ್ರಹ್ಮಣ್ಯೇವ ಹ್ಯುಪಾಸ್ಯಾ ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ । ಇತ್ಯುಪಸಂಹಾರೇ(ರ) ವಿರೋಧಾದನ್ಯತ್ರಾವಿರೋಧಾತ್ । (೩) ನ ಕಶ್ಚಿದ್ಬ್ರಹ್ಮವಿತ್ತೃಪ್ತಿ ಮನುಭವತಿ ಮುಕ್ತೋ ಹ್ಯೇವ ಭವತಿ ತಸ್ಮಾದಾಹುಃ ಸ್ವತಿಹೇತಿ, । ಇತಿ ಕೌಂಡಿನ್ಯಶ್ರುತೇಶ್ಚ। (೪) ಯಥಾ ಕೇಷಾಂಚಿನ್ಮೋಕ್ಷ ಏವಮನ್ಯೇಷಾಮಿತ್ಯನುಮಾನಾಚ್ಚ ॥ ೩೨ ॥ ಅಧಿ.೧೯ ॥ ೧ ॥**

**ಭಾಷ್ಯಾರ್ಥ ॥** (೧) ಅಪರೋಕ್ಷಜ್ಞಾನವನ್ನು ಹೊಂದಿದವರ ಮಧ್ಯದಲ್ಲಿಯೂ ಯೋಗ್ಯರಿಗೇನೇ ಮುಕ್ತಿಯು. ಅಯೋಗ್ಯರಿಗೆ ಮುಕ್ತಿಯಿಲ್ಲ. ಗುಣೋಪಸಂಹಾರದಲ್ಲಿ ಯೋಗ್ಯರಿಗೇನೇ ಸರ್ವಗುಣೋಪಸಂಹಾರವು. ಅಯೋಗ್ಯರಿಗೆ ಇಲ್ಲ ಎನ್ನುವ ಪುರುಷವ್ಯವಸ್ಥೆಯಂತೆ ಹಾಗೆಯೇ ಮುಕ್ತಿಯಲ್ಲಿಯೂ, ಹೀಗೆ ತಿಳಿಯಕೂಡದು. (ಮತ್ತೆ ಅಪರೋಕ್ಷ ಜ್ಞಾನವನ್ನು ಹೊಂದಿದವರಿಗೆಲ್ಲಾ ಮೋಕ್ಷವು ಇದೆ.) (೨) ಯಾವ ಕಾರಣದಿಂದ ವೇದೋಕ್ತಗಳಾದ ಎಲ್ಲಾ ಗುಣಗಳೂ ಬ್ರಹ್ಮನಿಂದಲೇ ಉಪಾಸ್ಯಗಳೋ ಬ್ರಹ್ಮೇತರರಾದ ದೇವತೆಗಳಿಂದ ಉಪಾಸ್ಯಗಳಲ್ಲವೋ ಮನುಷ್ಯೋತ್ತಮರಿಂದ ಎಲ್ಲಾ ಉಪಾಸ್ಯಗಳು ಅಲ್ಲವೆಂದು ಏನು ಹೇಳಬೇಕು. ಆದಕಾರಣ ಸರ್ವಗುಣಗಳು ಬ್ರಹ್ಮನಿಂದಲೇ ಉಪಾಸ್ಯಗಳು, ಎಂಬ ಶ್ರುತಿಯಿಂದ ಉಪಸಂಹಾರದಲ್ಲಿ ಅನಿಯಮವನ್ನು ನಿಷೇಧಿಸಿದ್ದರಿಂದ ಅಲ್ಲಿ ವ್ಯವಸ್ಥೆಯು ಕೂಡುತ್ತದೆ. ಸರ್ವಜ್ಞಾನಿಗಳಿಗೆ ಮೋಕ್ಷವಿಷಯದಲ್ಲಿ ನಿಷೇಧವು ಇಲ್ಲದಿರುವ ಪ್ರಯುಕ್ತ ವ್ಯವಸ್ಥೆಯು ಕೂಡುವುದಿಲ್ಲ. (೩) (ನಿಷೇಧವಿಲ್ಲವಾದರೂ ಸಾಧಕಪ್ರಮಾಣವು ಇಲ್ಲದಿರುವುದರಿಂದ

ಮಾಡಲ್ಪಡತಕ್ಕ ಯಾಗದ ಪೂರ್ವಾಂಗಭೂತವಾದ ಕರ್ಮವಿಶೇಷವು ವಿಷ್ಣುಕ್ರಮಣವು.) ನಿಯಮದಿಂದ ಮಾಡಿ ಸಮಾಪ್ತವಾದ ಕರ್ಮವುಳ್ಳ ಯಜಮಾನನು ಸ್ವೇಚ್ಛೆಯಿಂದ ಯಾಗ ವಿಧಿ ಪೂರ್ತ್ಯನಂತರದಲ್ಲಿಯೂ ಕದಾಚಿತ್ ಆ ಕರ್ಮವನ್ನು ಮಾಡುತ್ತಾನೆ. ಕದಾಚಿತ್ ಮಾಡುವುದಿಲ್ಲ (ನಿಯಮೇನ ಯಜಮಾನನು ಮಾಡುವುದಿಲ್ಲ) ಏವಂಚ **ಮುಕ್ತಾಃ ನ ಕರ್ಮನಿಯಮವಂತಃ ವಿಶೇಷಹೇತ್ವಭಾವೇ ಸತಿ ಪ್ರಾಪ್ತಫಲತ್ವಾತ್ ಯಾಗಕರ್ತೃವತ್** ಎನ್ನುವ ಅನುಮಾನವು ಉಕ್ತವಾಯಿತು. ॥ ೩.೧ ॥ ೪ ॥

## ಅಧಿಕರಣ ಸಾರಾಂಶ

ಮುಕ್ತರು ಉಪಾಸನದಂತೆ ನಿಯಮೇನ ಕರ್ಮವನ್ನು ಮಾಡುತ್ತಾರೋ, ಇಲ್ಲವೋ ಎಂದು ಸಂದೇಹವು. ಸಾಧನಗಳನ್ನು ಅನುಷ್ಠಾನ ಮಾಡಬೇಕಾದರೆ ಸಾಧನಜನ್ಯಫಲದಲ್ಲಿ ಅಪೇಕ್ಷೆಯಿದ್ದು ಶಕ್ತತ್ವವು ಪ್ರಯೋಜಕವು. ಮುಕ್ತರಿಗೆ ಫಲವು ಮೊದಲೇ ಲಬ್ಧವಾದುದರಿಂದ ಅರ್ಥಿತ್ವವಿಲ್ಲವಾದರೂ ಸ್ವೇಚ್ಛೆಯಿಂದ ಉಪಾಸನಾನುಷ್ಠಾನದಂತೆ ಕರ್ಮ ಮಾಡಲಿಕ್ಕೂ ಶಕ್ತಿಯು ಇದ್ದುದರಿಂದಲೂ ಕರ್ಮವು ಭಗವತ್ಪೂಜಾರೂಪವಾದುದರಿಂದಲೂ ಅನುಷ್ಠಾಪಕವಿದ್ದ ಪ್ರಯುಕ್ತ ಕರ್ಮವನ್ನು ನಿಯಮೇನ ಮಾಡಿಯೇ ಮಾಡುತ್ತಾರೆ. ಇದು ಅನುಷ್ಠಾಪಕವಾಗದಿದ್ದರೆ ಉಪಾಸನವನ್ನು ವಿಶೇಷವಿಲ್ಲದಿದ್ದ ಪ್ರಯುಕ್ತ ನಿಯಮೇನ ಮಾಡಲಾರರು ಎಂದು ಪೂರ್ವ ಪಕ್ಷವು ಬಂದರೆ, ಕರ್ಮವು ಭಗವತ್ಪೂಜಾರೂಪವಾದುದಾಗ್ಯೂ ಮುಕ್ತರಿಗೆ ಅದನ್ನು ಅನುಷ್ಠಾನ ಮಾಡತಕ್ಕ ಶಕ್ತಿಯಿದ್ದರೂ ಅಷ್ಟು ಮಾತ್ರ ನಿಯಮೇನ ಅನುಷ್ಠಾನ ಮಾಡಲಿಕ್ಕೆ ಹೇತುವಿಲ್ಲ. ಮತ್ತೆ ವಿಧಿವಿಹಿತತ್ವವೂ ಮಾಡದಿದ್ದರೆ ಪ್ರತ್ಯವಾಯವೂ, ಫಲವು ಪ್ರಾಪ್ತವಾಗದಿರುವುದು, ಇವು ಮೂರು. ಮುಕ್ತರಿಗೆ ಇವು ಯಾವುದೂ ಇಲ್ಲ. ಮೋಕ್ಷದಲ್ಲಿಯೂ ಕರ್ಮವು ವಿಹಿತವಾಗಿದ್ದರೆ ವಿಧಿ ಬಂಧವಿದ್ದ ಪ್ರಯುಕ್ತ ಮೋಕ್ಷವು ಅಪುರುಷಾರ್ಥವಾಗಬೇಕಾಗುವುದು ಮೋಕ್ಷದಲ್ಲಿ ಕರ್ಮ ಮಾಡಬೇಕೆನ್ನುವ ಯಾವ ವಿಧಿಯೂ ಎಲ್ಲಿಯೂ ಇಲ್ಲ. ಮಾಡದಿದ್ದರೆ ಪ್ರತ್ಯವಾಯವೂ ಇಲ್ಲ. ಫಲವೂ ಪ್ರಾಪ್ತವಾಗಿದೆ. ಆದ ಪ್ರಯುಕ್ತ ನಿಯಮೇನ ಕರ್ಮವನ್ನು ಮಾಡುವುದಿಲ್ಲ. ಆದರೆ ಭಗವತ್ಪೂಜಾರೂಪವಾದುದರಿಂದಲೂ ಮೊದಲು ಮಾಡಿದ ಸಂಸ್ಕಾರಬಲದಿಂದಲೂ ಕೆಲವು ವೇಳೆ ಮಾತ್ರ ಕರ್ಮವನ್ನು ಮಾಡುತ್ತಾರೆ. ಉಪಾಸನವನ್ನಾದರೂ ಪೂರ್ವದಲ್ಲಿ ನಿಯಮೇನ ನಿರಂತರಾನುಷ್ಠಾನ ಮಾಡಿರುವ ಪ್ರಯುಕ್ತ ಅದರ ಸಂಸ್ಕಾರ ಬಲದಿಂದಲೂ ನಿತ್ಯಜ್ಞಾನಸ್ವರೂಪರಾದುದರಿಂದಲೂ ನಿಯಮೇನ ಅನುಷ್ಠಾನ ಮಾಡುತ್ತಾರೆ. **ಕದಾಚಿತ್ಕರ್ಮ ಕುರ್ವಂತಿ** ಇತ್ಯಾದಿ ಸ್ಮೃತಿಗಳಿಂದ ಈ ಅರ್ಥವು ಸಿದ್ಧಿಸುತ್ತದೆ. ॥ ಅಧಿ. ೧೪ ॥

**ಛಂದಾಧಿಕರಣವು ಸಮಾಪ್ತವಾಯಿತು.**

# ೧೯ ಅನಿಯಮಾಧಿಕರಣವು

**ಪೀಠಿಕೆ ॥** ಉಪಾಸನಾದಿಂದ ಬ್ರಹ್ಮಜ್ಞಾನವನ್ನು ಹೊಂದಿದವರಿಗೆಲ್ಲಾ ಮೋಕ್ಷವು ನಿಯತವು ಎಂದು ಸಾಧಿಸುತ್ತಾರೆ—

## ಸೂತ್ರ ॥ ಓಂ ಅನಿಯಮಃ ಸರ್ವೇಷಾಮವಿರೋಧಾಚ್ಛಬ್ದಾನುಮಾನಾಭ್ಯಾಂ ಓಂ ॥ ೩೨ ॥

**ಸೂತ್ರಾರ್ಥ ॥** ಎಲ್ಲಾ ಬ್ರಹ್ಮಪರೋಕ್ಷ ಜ್ಞಾನಿಗಳಿಗೂ ಮುಕ್ತಿಗೆ ಅನಿಯಮವು ಅಂದರೆ ಕೆಲವರಿಗೆ ಮೋಕ್ಷವು ಇದೆ. ಕೆಲವರಿಗೆ ಇಲ್ಲ ಎಂದು ಮುಕ್ತಿಗೆ ವ್ಯವಸ್ಥೆಯು (ವಿಕಲ್ಪವು) ಇಲ್ಲ ಮತ್ತೆ ಅನಿಯಮವೇ. (ಅಂದರೆ, ಎಲ್ಲಾ ಬ್ರಹ್ಮಾಪರೋಕ್ಷಜ್ಞಾನಿಗಳಿಗೆ ಮೋಕ್ಷವು ಆಗುತ್ತದೆ.) ಏಕೆಂದರೆ— **ಸರ್ವೇ ಗುಣಾಃ ಬ್ರಹ್ಮಣ್ಯೆವ** ಎಂದು ಉಪಾಸನಾದಲ್ಲಿ ಶ್ರುತಿವಿರೋಧವು ಇದ್ದಂತೆ ಇಲ್ಲಿ ಶ್ರುತಿವಿರೋಧವು ಇಲ್ಲದಿರುವುದರಿಂದ. **ನ ಕಶ್ಚಿದ್ಬ್ರಹ್ಮವಿತ್ಸೃತಿಮನುಭವತಿ** ಎನ್ನುವ ಶ್ರುತಿಯಿಂದಲೂ, **ವಿಮತಾಃ ಜ್ಞಾನಿನಃ ನಿಯತಮೋಕ್ಷಾಃ ಜ್ಞಾನಿತ್ವಾತ್ ಸಮ್ಮತವತ್** ಎನ್ನುವ ಅನುಮಾನದಿಂದಲೂ.

**ಭಾಷ್ಯ ॥ (೧) ಪ್ರಾಪ್ತಜ್ಞಾನಾಮಪಿ ಕೇಷಾಂಚಿನ್ಮುಕ್ತಿಪ್ರಾಪ್ತಿಃ ಕೇಷಾಂಚಿನ್ನ ಯಥೋಪಸಂಹಾರನಿಯಮ ಇತಿ ನ ಮಂತವ್ಯಂ। (೨) ಸರ್ವೇ ಗುಣಾ ಬ್ರಹ್ಮಣ್ಯೆವ ಹ್ಯುಪಾಸ್ಯಾ ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ । ಇತ್ಯುಪಸಂಹಾರೇ(ರ) ವಿರೋಧಾದನ್ಯತ್ರಾವಿರೋಧಾತ್ । (೩) ನ ಕಶ್ಚಿದ್ಬ್ರಹ್ಮವಿತ್ಸೃತಿಮನುಭವತಿ ಮುಕ್ತೋ ಹ್ಯೇವ ಭವತಿ ತಸ್ಮಾದಾಹುಃ ಸೃತಿಹೇತಿ, । ಇತಿ ಕೌಂಡಿನ್ಯಶ್ರುತೇಶ್ಚ। (೪) ಯಥಾ ಕೇಷಾಂಚಿನ್ಮೋಕ್ಷ ಏವಮನ್ಯೇಷಾಮಿತ್ಯನುಮಾನಾಚ್ಚ ॥ ೩೨ ॥ ಅಧಿ.೧೯ ॥ ೧ ॥**

**ಭಾಷ್ಯಾರ್ಥ ॥** (೧) ಅಪರೋಕ್ಷ ಜ್ಞಾನವನ್ನು ಹೊಂದಿದವರ ಮಧ್ಯದಲ್ಲಿಯೂ ಯೋಗ್ಯರಿಗೇನೇ ಮುಕ್ತಿಯು. ಅಯೋಗ್ಯರಿಗೆ ಮುಕ್ತಿಯಿಲ್ಲ. ಗುಣೋಪಸಂಹಾರದಲ್ಲಿ ಯೋಗ್ಯರಿಗೇನೇ ಸರ್ವಗುಣೋಪಸಂಹಾರವು. ಅಯೋಗ್ಯರಿಗೆ ಇಲ್ಲ ಎನ್ನುವ ಪುರುಷವ್ಯವಸ್ಥೆಯಂತೆ ಹಾಗೆಯೇ ಮುಕ್ತಿಯಲ್ಲಿಯೂ, ಹೀಗೆ ತಿಳಿಯಕೂಡದು. (ಮತ್ತೆ ಅಪರೋಕ್ಷ ಜ್ಞಾನವನ್ನು ಹೊಂದಿದವರಿಗೆಲ್ಲಾ ಮೋಕ್ಷವು ಇದೆ.) (೨) ಯಾವ ಕಾರಣದಿಂದ ವೇದೋಕ್ತಗಳಾದ ಎಲ್ಲಾ ಗುಣಗಳೂ ಬ್ರಹ್ಮನಿಂದಲೇ ಉಪಾಸ್ಯಗಳೋ ಬ್ರಹ್ಮೇತರರಾದ ದೇವತೆಗಳಿಂದ ಉಪಾಸ್ಯಗಳಲ್ಲವೋ ಮನುಷ್ಯೋತ್ತಮರಿಂದ ಎಲ್ಲಾ ಉಪಾಸ್ಯಗಳು ಅಲ್ಲವೆಂದು ಏನು ಹೇಳಬೇಕು. ಆದಕಾರಣ ಸರ್ವಗುಣಗಳು ಬ್ರಹ್ಮನಿಂದಲೇ ಉಪಾಸ್ಯಗಳು, ಎಂಬ ಶ್ರುತಿಯಿಂದ ಉಪಸಂಹಾರದಲ್ಲಿ ಅನಿಯಮವನ್ನು ನಿಷೇಧಿಸಿದ್ದರಿಂದ ಅಲ್ಲಿ ವ್ಯವಸ್ಥೆಯು ಕೂಡುತ್ತದೆ. ಸರ್ವಜ್ಞಾನಿಗಳಿಗೆ ಮೋಕ್ಷವಿಷಯದಲ್ಲಿ ನಿಷೇಧವು ಇಲ್ಲದಿರುವ ಪ್ರಯುಕ್ತ ವ್ಯವಸ್ಥೆಯು ಕೂಡುವುದಿಲ್ಲ. (೩) (ನಿಷೇಧವಿಲ್ಲವಾದರೂ ಸಾಧಕಪ್ರಮಾಣವು ಇಲ್ಲದಿರುವುದರಿಂದ

ವ್ಯವಸ್ಥೆಯೇ ಎಂದರೆ) ಬ್ರಹ್ಮಾಪರೋಕ್ಷಜ್ಞಾನಿಯು ಯಾರೊಬ್ಬನೂ ಯಾವಾಗಲೂ ಸಂಸಾರವನ್ನು ಅನುಭವಿಸುವುದಿಲ್ಲ. ಮತ್ತೆ ಪ್ರಾರಬ್ಧಕರ್ಮ ಕ್ಷಯಾನಂತರದಲ್ಲಿ ಮುಕ್ತನೇ ಆಗುತ್ತಾನೆ. ಆದಕಾರಣ ಈ ಜ್ಞಾನಿಜೀವನನ್ನು ಸಂಸಾರತ್ಯಾಗಿಯು ಎಂದು ಜ್ಞಾನಿಗಳು ಹೇಳುತ್ತಾರೆ. ಅಥವಾ ಸಂಸಾರನಿವರ್ತಕ ಜ್ಞಾನವಿಷಯನಾದುದರಿಂದ ಈ ಪರಮಾತ್ಮನನ್ನು ಸಂಸಾರಪರಿಹಾರಕನು ಎನ್ನುತ್ತಾರೆ. ಎನ್ನುವ ಕೌಂಡಿನ್ಯ ಶ್ರುತಿಯಿಂದಲೂ. (೪) ಹೇಗೆ ಕೆಲವು ಜ್ಞಾನಿಗಳಿಗೆ ಮೋಕ್ಷವೋ ಹೀಗೆ ಇತರರಿಗೂ ಜ್ಞಾನಿತ್ವವಿದ್ದ ಪ್ರಯುಕ್ತವೇ ಮೋಕ್ಷವು ಎನ್ನುವ ಅನುಮಾನದಿಂದಲೂ. ॥ ೩೨ ॥ ೧ ॥

## ಅಧಿಕರಣ ಸಾರಾಂಶ

ಮೋಕ್ಷವು ಕೆಲವು ಜ್ಞಾನಿಗಳಿಗೇನೇ ಪ್ರಾಪ್ಯವೋ ಸರ್ವಜ್ಞಾನಿಗಳಿಗೂ ಪ್ರಾಪ್ಯವೋ ಎಂದು ಸಂದೇಹವು. ಕೆಲವು ಜ್ಞಾನಿಗಳಿಗೇನೇ ಮೋಕ್ಷವು. ಸರ್ವ ಜ್ಞಾನಿಗಳಿಗೆ ಮೋಕ್ಷವು ಇಲ್ಲ. ಜ್ಞಾನಿಗಳ ಮಧ್ಯದಲ್ಲಿಯೂ ಕೆಲವರಲ್ಲಿ ಅಯೋಗ್ಯತ್ವವು ಕೂಡಬಹುದು. ಅಯೋಗ್ಯರಿಗೆ ಮೋಕ್ಷವು ಅಪ್ರಾಪ್ಯವೇ ಆಗಿದೆ. ಸರ್ವಗುಣೋಪಸಂಹಾರದಲ್ಲಿ ಯೋಗ್ಯಾಯೋಗ್ಯ ವಿಭಾಗದಂತೆ ಜ್ಞಾನಿಗಳಲ್ಲಿ ಯೋಗ್ಯಾಯೋಗ್ಯ ವಿಭಾಗವಿಲ್ಲ ಎನ್ನುವಲ್ಲಿ ಜ್ಞಾಪಕವಿಲ್ಲ. ಎಂದರೆ, ಎಲ್ಲಾ ಜ್ಞಾನಿಗಳಿಗೂ ಮೋಕ್ಷವು ಇದ್ದೇ ಇದೆ. ಕೆಲವರಿಗೇನೇ ಎನ್ನುವ ನಿಯಮವು ಇಲ್ಲ. **ಸರ್ವೈರ್ಗುಣೈರ್ಬ್ರಹ್ಮೈವ** ಎನ್ನುವ ನಿಷೇಧಬಲದಿಂದ ಉಪಸಂಹಾರದಲ್ಲಿ ಯೋಗ್ಯಾಯೋಗ್ಯ ವಿಭಾಗವಿದ್ದರೂ ಜ್ಞಾನಿಗಳಲ್ಲಿ ಯಾರಿಗೂ ಮುಕ್ತಿ ನಿಷೇಧವಿಲ್ಲ. ಅಲ್ಲದೆ **ನ ಕಶ್ಚಿತ್ ಬ್ರಹ್ಮವಿತ್** ಎನ್ನುವ ಶ್ರುತಿಯಲ್ಲಿ ಸರ್ವಜ್ಞಾನಿಗಳಿಗೂ ಮುಕ್ತಿಯು ನಿಯತವೆಂದು ಹೇಳಿದೆ. ಮತ್ತು **ವಿಮತಾಃ ಜ್ಞಾನಿನಃ ನಿಯತಮೋಕ್ಷಾಃ ಜ್ಞಾನಿತ್ವಾತ್** ಎನ್ನುವ ನಿರ್ಬಾಧಶ್ರುತಿಮೂಲಕವಾದ ಅನುಮಾನದಿಂದಲೂ ಜ್ಞಾನಿಗಳಲ್ಲಿ ಮೋಕ್ಷಾಯೋಗ್ಯರು ಇಲ್ಲವೆಂದು ನಿಶ್ಚಯವಾಗುವುದರಿಂದ ಮೋಕ್ಷವು ಸರ್ವಜ್ಞಾನಿಗಳಿಂದಲೂ ಪ್ರಾಪ್ಯವೇ.. ಆದಕಾರಣ ಮೋಕ್ಷ ಸಾಧನವಾದ ಉಪಾಸನವನ್ನು ನಿಸ್ಸಂಶಯವಾಗಿ ಮಾಡಲೇಬೇಕು. ॥ ಅಧಿ. ೧೯ ॥

**ಅನಿಯಮಾಧಿಕರಣವು ಸಮಾಪ್ತವಾಯಿತು.**

# ೨೦ ಯಾವದಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭಗವದುಪಾಸನದಲ್ಲಿ ಇವರಿಗೆ ಇಷ್ಟು ಅಧಿಕಾರವು, ಇವರಿಗೆ ಇಷ್ಟು ಅಧಿಕಾರವು ಎಂಬುವ ಅಧಿಕಾರನಿಯಮವನ್ನು ಸಮರ್ಥಿಸುತ್ತಾರೆ. ಉಪಾಸನಾ ಮಾಡತಕ್ಕವರು ಅಧಿಕಾರ ನಿಯಮವುಳ್ಳವರಲ್ಲ. ಪ್ರಮಾಣವಿಲ್ಲದಿರುವುದರಿಂದ, ಆನಂದತಾರತಮ್ಯವು ಉಪಾಸನಾದಿ ಪ್ರಯತ್ನ ತಾರತಮ್ಯದಿಂದಲೇ ಕೂಡುವುದು. ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ ॥ ೩೩ ॥

ಸೂತ್ರಾರ್ಥ ॥ ಯೋಗ್ಯತಾನುಸಾರವಾಗಿ ಅನುಷ್ಠಾನಶೀಲರಾದ ಬ್ರಹ್ಮಾದಿ ದೇವತೆಗಳಿಗೆ ಅಧಿಕಾರಾನುಸಾರವಾಗಿಯೇ ಮುಕ್ತಿಯಲ್ಲಿ ತಾರತಮ್ಯದಿಂದ ಅವಸ್ಥಾನವು. (ಉಪಾಸನಾಪ್ರಯತ್ನ ತಾರತಮ್ಯದಿಂದ ಅಲ್ಲ)

**ಭಾಷ್ಯ ॥ (೧) ಯಥಾಯಥಾಽಧಿಕಾರೋ ವಿಶಿಷ್ಯತೇ ಏವಂ ಮುಕ್ತಾವಾನಂದೋ ವಿಶಿಷ್ಯತೇ । (೨) ಮನುಷ್ಯೇಭ್ಯೋ ಗಂಧರ್ವಾಣಾಂ ಗಂಧರ್ವೇಭ್ಯ ಋಷೀಣಾ ಮೃಷಿಭ್ಯೋ ದೇವಾನಾಂ ದೇವೇಭ್ಯ ಇಂದ್ರಸ್ಯ ಇಂದ್ರಾದ್ರುದ್ರಸ್ಯ ರುದ್ರಾದ್ಬ್ರಹ್ಮಣ ಏಷ ಹ್ಯೇವ ಶತಾನಂದಃ । ಇತಿ (೩) ಚತುರ್ವೇದಶಿಖಾಯಾಂ । (೩) ಅಧ್ಯಾತ್ಮೇ ಚ । ಜ್ಞಾನಂ ಚೋಪಾಸನಂ ಚೈವ ಮುಕ್ತಾವಾನಂದ ಏವ ಚ । ಯಥಾಽಧಿಕಾರಂ ದೇವಾನಾಂ ಭವಂತ್ಯೇವೋತ್ತರೋತ್ತರಂ ॥ ಇತಿ ॥ ೩೩ ॥ ೧ ॥**

ಭಾಷ್ಯಾರ್ಥ ॥ (೧) ಪರಮೇಶ್ವರನಿಂದ ದತ್ತವಾದ ಅಧಿಕಾರದಲ್ಲಿ ಇರತಕ್ಕ ಬ್ರಹ್ಮಾದಿ ದೇವತೆಗಳಿಗೆ ಹೇಗೆ ಹೇಗೆ ಅಧಿಕಾರವು ಉತ್ಕೃಷ್ಟವಾಗಿರುತ್ತದೋ, ಹೀಗೆಯೇ ಅಧಿಕಾರ (ಯೋಗ್ಯತಾ) ತಾರತಮ್ಯಾನುಸಾರವಾಗಿಯೇ (ಶ್ರವಣಾದಿರೂಪವಾದ ತಮ್ಮ ಪ್ರಯತ್ನಾನುಸಾರವಾಗಿ ಅಲ್ಲ) ಮುಕ್ತಿಯಲ್ಲಿ ಆನಂದವು ಉತ್ತರೋತ್ತರವಾಗಿ ಅಧಿಕವಾಗುತ್ತದೆ. ತಾರತಮ್ಯದಿಂದ ಯುಕ್ತವಾಗಿ ಇರುತ್ತದೆ. (ತಥಾಚ ಆನಂದ ತಾರತಮ್ಯವು ಉಪಾಸನಾಧಿಕಾರ ನಿಯಮಾನುಸಾರಿಯಾದುದರಿಂದ ಅದನ್ನು ಅಂಗೀಕರಿಸದಿದ್ದರೆ ಆನಂದ ತಾರತಮ್ಯವೇ ಅನುಪಪನ್ನ ವಾಗಬೇಕಾಗಿರುವುದರಿಂದ ಅಧಿಕಾರ ನಿಯಮವು ಇದ್ದೇ ಇದೆ.) (೨) ಮನುಷ್ಯೋತ್ತಮರಿಂದ ಗಂಧರ್ವರ ಆನಂದವು ವಿಶಿಷ್ಟವು. ಮನುಷ್ಯ ಗಂಧರ್ವ ದೇವ ಗಂಧರ್ವರ ದೆಶೆಯಿಂದ ಋಷಿಗಳ ಆನಂದವು ಅಧಿಕವು. ಋಷಿಗಳು ಮತ್ತು ಆಜಾನಜ ದೇವತೆಗಳೂ ಇವರಿಂದ ದೇವತೆಗಳ ಆನಂದವು ಅಧಿಕವು. ತಾತ್ವಿಕ ದೇವತೆಗಳ ದೆಶೆಯಿಂದ ಇಂದ್ರನ ಆನಂದವು ಅಧಿಕವು. ಇಂದ್ರನ ದೆಶೆಯಿಂದ ರುದ್ರನ ಆನಂದವು ಅಧಿಕವು. ರುದ್ರನ ದೆಶೆಯಿಂದ ಬ್ರಹ್ಮನ ಆನಂದವು ಅಧಿಕವು. ಈ ಚತುರ್ಮುಖನೇ ಶತಾನಂದನು ಎಂದು ಚತುರ್ವೇದ ಶಿಖಾದಲ್ಲಿ ಹೇಳಿದೆ. (೩) (ಆನಂದ ತಾರತಮ್ಯವು ಪ್ರಯತ್ನ ತಾರತಮ್ಯದಿಂದಲೇ ಕೂಡುವುದರಿಂದ ಅಧಿಕಾರ ನಿಯಮದಲ್ಲಿ ಪ್ರಯೋಜಕವಲ್ಲ ಎಂದರೆ ಬ್ರಹ್ಮಾದಿಗಳಿಗೆ ಅಧಿಕಾರಾನುಸಾರವಾಗಿಯೇ ಉಪಾಸನವು. ಉಪಾಸನಾನುಸಾರವಾಗಿಯೇ ಜ್ಞಾನವು. ಜ್ಞಾನಾನುಸಾರವಾಗಿಯೇ ಮುಕ್ತಿಯಲ್ಲಿ ಆನಂದವು. ಈ ಗುಣಗಳು ಪರಸ್ಪರ ಸಾಪೇಕ್ಷಗಳು ಆಗುತ್ತವೆ ಎಂದು ಅಧ್ಯಾತ್ಮದಲ್ಲಿ ಹೇಳಿದೆ.

ವಿಶೇಷಾಂಶ ॥ ತಥಾಚ ಉಪಾಸನಾದಿ ಪ್ರಯತ್ನವೂ ಅಧಿಕಾರ ನಿಯಮಾನುಸಾರಿ ಯಾದುದರಿಂದ ಮುಕ್ತಿಯಲ್ಲಿ ಆನಂದ ತಾರತಮ್ಯವು ಪ್ರಯತ್ನ ತಾರತಮ್ಯಾಧೀನವಲ್ಲ. ಮತ್ತೆ ಅಧಿಕಾರ ನಿಯಮಾನುಸಾರಿಯೇ ॥ ೩೩ ॥ ೧ ॥

ಪೀಠಿಕೆ ॥ ಮುಕ್ತಿಯಲ್ಲಿ ಆನಂದ ತಾರತಮ್ಯವೇ ಕೂಡುವುದಿಲ್ಲ. ಮುಕ್ತರಿಗೆ ಅಸಮತ್ವವಿದ್ದರೆ

ಪರಸ್ಪರ ವಿರೋಧವು ಬರಬೇಕಾಗುವುದು. ಎಂಬೀ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯತದ್ಭಾವಾಭ್ಯಾಮೌಪ ಸದವತ್ತದುಕ್ತಂ ಓಂ ॥ ೩೪ ॥

**ಸೂತ್ರಾರ್ಥ** ॥ ಬ್ರಹ್ಮಾದಿ ಮುಕ್ತರಿಗೆ ಸಾಮ್ಯವಿಲ್ಲವಾದರೂ ವಿರೋಧವು ಇಲ್ಲ. ವಿಷಯ ಲಂಪಟತ್ವ (ರಾಗ) ವಿಲ್ಲದಿರುವುದರಿಂದ. ಮತ್ಸರಾದಿದೋಷಾಭಾವವು ಸಮವಾದುದರಿಂದಲೂ, ಉತ್ತಮರಿಂದ ಅಧಮರಿಗೆ ಬ್ರಹ್ಮಜ್ಞಾನಾದಿರೂಪವಾದ ಉಪಕಾರವು ಇದ್ದ ಪ್ರಯುಕ್ತವೂ, ಶಿಷ್ಯನಿಗೆ ಹೇಗೆ ಗುರುವಿನಲ್ಲಿ ವಿರೋಧವು ಇಲ್ಲವೋ ಹಾಗೆಯೇ. ಸಮತ್ವವಿಲ್ಲವಾದರೂ ದೋಷಾಭಾವಾದಿ ಗಳಿಂದ ವಿರೋಧವು ಇಲ್ಲವೆನ್ನುವುದು ನಾನಾವಿಧಾ ಜೀವಸಂಘಾ ಇತ್ಯಾದಿ ಶ್ರುತಿಗಳಲ್ಲಿ ಉಕ್ತವಾಗಿದೆ.

**ಭಾಷ್ಯ ॥ (೧) ನ ಚಾಸಮತ್ವೇನ ವಿರೋಧೋ ಭವತಿ । ಬ್ರಹ್ಮಧೀತ್ವಾದ್ದೋಷಾಭಾವಸಾಮ್ಯಾದುತ್ತಮೇಭ್ಯೋಽನ್ಯೇಷಾಂ ಭಾವಾಚ್ಚ । (೨) ಔಪಸದವಚ್ಛಿಷ್ಯವತ್ । (೩) ಉಕ್ತಂ ಚ ತುರಶ್ರುತೌ । ನಾನಾವಿಧಾ ಜೀವ(ದೇವ)ಸಂಘಾ ವಿಮುಕ್ತೌ ನ ಚೈವ ತೇಷಾಂ ಬ್ರಹ್ಮಧಿಯಾಂ ವಿರೋಧಃ । ದೋಷಾಭಾವಾದ್ಗುರುಶಿಷ್ಯಾದಿಭಾವಾಲ್ಲೋಕೇಽಪಿ ನಾಸೌ ಕಿಮು ತೇಷಾಂ ವಿಮುಕ್ತೇಃ । ಇತಿ ॥ ೩೪ ॥ ಅಧಿ. ೨೦ ॥ ೨ ॥**

ಭಾಷ್ಯಾರ್ಥ ॥ (೧) ಮುಕ್ತರಿಗೆ ಅಸಾಮ್ಯ ನಿಮಿತ್ತದಿಂದ ಪರಸ್ಪರವಾಗಿ ವಧ್ಯ ಘಾತುಕ ಭಾವಾದಿ ರೂಪವಾದ ವಿರೋಧವು ಇಲ್ಲ. ಬ್ರಹ್ಮಜ್ಞಾನಿತ್ವವಿದ್ದ ಪ್ರಯುಕ್ತ. (ಬ್ರಹ್ಮಜ್ಞಾನಿಗಳಿಗೆ ವಿಷಯಲಂಪಟತ್ವ (ರಾಗ)ದಿಂದ ಪಾಮರರಂತೆ ವಿರೋಧವು ಕೂಡುವುದಿಲ್ಲ.) ದೋಷಾಭಾವವು ಸಮವಾದುದರಿಂದ (ನಿರ್ದೋಷತ್ವೇನ ಸಮರಾದವರಿಗೆ ಪರಸ್ಪರವಾಗಿ ಮತ್ಸರಾದಿ ದೋಷದಿಂದ ವಿರೋಧವೂ ಕೂಡುವು ದಿಲ್ಲ.) ಉತ್ತಮರಿಂದ ಅಧಮರಿಗೆ ಜ್ಞಾನಾದಿರೂಪವಾದ ಉಪಕಾರವು ಇದ್ದ ಪ್ರಯುಕ್ತವೂ. (ಉಪಕಾರ ಮಾಡಿದವರಲ್ಲಿ ವಿರೋಧವು ಕೂಡುವುದಿಲ್ಲವಷ್ಟೇ.) (೨) (ವಿರೋಧಿಗಳಲ್ಲಿ ಅಸಾಮ್ಯವೂ ವಿಷಯಲಂಪಟತ್ವಾದಿಗಳೂ ಕಾಣಲ್ಪಡುತ್ತವೆ. ಆದುದರಿಂದ ವಿರೋಧವು ದೋಷನಿಮಿತ್ತಕವೇ. ಅಸಾಮ್ಯನಿಮಿತ್ತಕವಲ್ಲ, ಎಂದು ಹೇಗೆ ನಿಶ್ಚಯವಾಗುವುದು, ಎಂದರೆ) ಸಚ್ಛಿಷ್ಯನಂತೆ, ಅಂದರೆ, ಸಚ್ಛಿಷ್ಯನಿಗೆ ಗುರುವಿನಿಂದ ಅಸಾಮ್ಯವಿದ್ದರೂ ಮತ್ಸರಾದಿ ದೋಷಗಳು ಇಲ್ಲದಿರುವುದರಿಂದ ಗುರುಗಳಲ್ಲಿ ಹೇಗೆ ವಿರೋಧವು ಇಲ್ಲವೋ, ಹಾಗೆಯೇ. (ತಥಾಚ ಕ್ವಚಿತ್ ವಿರೋಧಿಗಳಲ್ಲಿ ದೋಷ ಅಸಮತ್ವಗಳು ಒಟ್ಟು ಕೂಡಿದರೂ ದೋಷಗಳೇ ವಿರೋಧಕ್ಕೆ ಪ್ರಯೋಜಕಗಳು, ಎಂದು ನಿಶ್ಚಯವು ಆಗುತ್ತದೆ. ಗುರುಶಿಷ್ಯರು ಅಸಮರಾದಾಗ್ಯೂ ದೋಷಾಭಾವದಿಂದ ವಿರೋಧಾಭಾವವು ಕಂಡದೆ.) (೩) (ಈ ಅರ್ಥದಲ್ಲಿ ಶ್ರುತಿಯನ್ನುದಾಹರಿಸುತ್ತಾರೆ.) ಮುಕ್ತರ ಸಮುದಾಯಗಳು ವಿಮುಕ್ತಿಯಲ್ಲಿ ಗುಣಾದಿ ತಾರತಮ್ಯೋಪೇತರಾಗಿ ಗಣಶಃ

ಇರುತ್ತಾರೆ. ಆದಾಗ್ಯೂ ಅವರಿಗೆ ವಿರೋಧವು ಇಲ್ಲವೇ ಇಲ್ಲ. ಬ್ರಹ್ಮಜ್ಞಾನಿಗಳಾದುದರಿಂದಲೂ ಮತ್ಸರಾದಿ ದೋಷಾಭಾವವಿದ್ದುದರಿಂದಲೂ, ಗುರುಶಿಷ್ಯಾಭಾವವಿದ್ದುದರಿಂದಲೂ, ಸ್ವಾಮಿಭೃತ್ಯ ಭಾವವಿದ್ದುದರಿಂದಲೂ, ಭರ್ತೃಭಾರ್ಯಾದಿಭಾವವಿದ್ದುದರಿಂದಲೂ, ಸಂಸಾರದೆಶೆಯಲ್ಲಿಯೂ ಗುರುಶಿಷ್ಯಾದಿ ನಿಮಿತ್ತದಿಂದ ಗುರ್ವಾದಿಗಳಲ್ಲಿ ಸತ್ ಶಿಷ್ಯಾದಿಗಳಿಗೆ ವಿರೋಧವು ಕಾಣಲ್ಪಡುವುದಿಲ್ಲ. ಮೋಕ್ಷಾನಂತರದಲ್ಲಿ ಆ ದೇವಸಂಘಗಳಿಗೆ ವಿರೋಧವು ಇಲ್ಲವೆಂದು ಏನು ಹೇಳಬೇಕು, ಎಂದೂ ತುರಶ್ರುತಿಯಲ್ಲಿ ಹೇಳಿಯದೆ. ॥ ೩೪ ॥ ೨ ॥

## ಅಧಿಕರಣ ಸಾರಾಂಶ

ಉಪಾಸಕರು ಯೋಗ್ಯತಾ ತಾರತಮ್ಯವುಳ್ಳವರು ಅಲ್ಲವೋ, ತಾರತಮ್ಯವುಳ್ಳವರೋ, ಆದಕಾರಣ ಅಲ್ಲಿ ಪ್ರಮಾಣವು ಇಲ್ಲವೋ ಇದೆಯೋ, ಅದಕ್ಕಾಗಿ ಮುಕ್ತಿಯಲ್ಲಿ ಆನಂದಾದಿ ತಾರತಮ್ಯವು ಉಪಾಸನಾದಿ ಪ್ರಯತ್ನ ತಾರತಮ್ಯದಿಂದಲೇ ಕೂಡುತ್ತದೋ, ಅಥವಾ ಯೋಗ್ಯತಾ ತಾರತಮ್ಯದಿಂದಲೇ ಉಪಪನ್ನವಾಗುತ್ತದೋ ಎಂದು ಸಂದೇಹವು. **ಆನಂದಸ್ಯ ಮೀಮಾಂಸಾ ಭವತಿ** ಇತ್ಯಾದಿ ಶ್ರುತಿಯು ಸಂಸಾರಿಪರವಾದ್ದುದರಿಂದ ಮುಕ್ತಿಯಲ್ಲಿ ಆನಂದ ತಾರತಮ್ಯದಲ್ಲಿ ಪ್ರಮಾಣವಿಲ್ಲ. ದ್ವೇಷ ಈರ್ಷ್ಯಾದಿಗಳೂ ಪ್ರಸಕ್ತವಾಗಬೇಕಾಗುವವು ಎನ್ನುವ ಬಾಧಕವೂ ಇದೆ. ಆದ ಕಾರಣ ಮುಕ್ತಿಯಲ್ಲಿ ತಾರತಮ್ಯವೇ ಅಯುಕ್ತವು. ಯುಕ್ತವಾಗಿದ್ದರೂ ಕೃಷ್ಯಾದಿ ಪ್ರಯತ್ನ ತಾರತಮ್ಯದಿಂದ ಧಾನ್ಯಾದಿಫಲ ತಾರತಮ್ಯದಂತೆಯೇ ಉಪಾಸನಾದಿ ಪ್ರಯತ್ನ ತಾರತಮ್ಯದಿಂದಲೇ ಉಪಪನ್ನವಾಗುವುದು. ಮುಕ್ತಿಯಲ್ಲಿ ಆನಂದ ತಾರತಮ್ಯಕ್ಕೆ ಯೋಗ್ಯತಾ ತಾರತಮ್ಯವು ಪ್ರಯೋಜಕವು, ಎನ್ನುವಲ್ಲಿ ಪ್ರಮಾಣವಿಲ್ಲದಿರುವ ಪ್ರಯುಕ್ತ ಉಪಾಸಕರು ಯೋಗ್ಯತಾತಾರತಮ್ಯವುಳ್ಳರಲ್ಲ ಎಂದರೆ, ನಾನಾವಿಧಾ **ದೇವಸಂಘಾಃ** ಇತ್ಯಾದಿ ವಿಶೇಷ ಶ್ರುತಿಯಿಂದಲೂ **ನರಾದಿಬ್ರಹ್ಮಪರ್ಯಂತಂ ವಿಮುಕ್ತಾನಾಂ ಶತೋಚ್ಚಯಃ** ಇತ್ಯಾದಿ ಸ್ಮೃತಿಯಿಂದಲೂ ಆನಂದ ಶ್ರುತಿಯು ಅಮುಕ್ತ ವಿಷಯಕವು ಆಗದಿರುವುದರಿಂದ ಮುಕ್ತಿಯಲ್ಲಿ ತಾರತಮ್ಯವದೆ ಎನ್ನವಲ್ಲಿ ಪ್ರಮಾಣವಿದೆ. ವಿಷಯಗಳಲ್ಲಿ ಅತಿರಾಗ, ಮತ್ಸರಾದಿ ದೋಷ, ಅನುಪಕಾರಿತ್ವಾದಿಗಳು ಲೋಕದಲ್ಲಿ ದ್ವೇಷ ಈರ್ಷ್ಯಾದಿಗಳಿಗೆ ಪ್ರಯೋಜಕಗಳು. ದ್ವೇಷೇರ್ಷ್ಯಾದಿ ನಿಮಿತ್ತ ವಿಷಯಲಂಪಟತ್ವಾದಿಗಳು, ಮುಕ್ತರು ಬ್ರಹ್ಮಜ್ಞಾನಿಗಳಾದುದರಿಂದ ಅವರಲ್ಲಿ ಇರಲಾರವು. ಉತ್ತಮರಿಂದ ಅಧಮರಿಗೆ ಜ್ಞಾನಾದಿರೂಪವಾದ ಉಪಕಾರವು ಲಭಿಸುವುದರಿಂದ ಅನುಪಕಾರಿತ್ವವಿಲ್ಲ. ಬಾಧಕವೂ ಇಲ್ಲ. ಆದಕಾರಣ ಮುಕ್ತಿಯಲ್ಲಿ ತಾರತಮ್ಯವು ಯುಕ್ತವೇ. **ಸ್ವಾಧಿಕಾರಾಧಿಕೋ ಯತ್ನಃ ಪ್ರಾಯಶೋನೋಪಪದ್ಯತೇ । ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್** ಎನ್ನುವ ವಚನದಿಂದ ಪ್ರಯತ್ನ ತಾರತಮ್ಯವೂ ಯೋಗ್ಯತಾತಾರತಮ್ಯ (ನೀಚೋಚ್ಚಭಾವ) ನಿಬಂಧನವಾಗಿದೆ. ಆದಕಾರಣ ಉಪಾಸಕರು ಯೋಗ್ಯತಾ ತಾರತಮ್ಯವುಳ್ಳವರೇ. ॥ ಅಧಿ. ೨೦ ॥

**ಯಾವದಧಿಕರಣವು ಸಮಾಪ್ತವಾಯಿತು.**

# ೨೧ ಇಯದಾಮನನಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಉಪಾಸನಾಧಿಕಾರಿಗಳಿಗೆ ಪ್ರಾಣನು ಅವಸಾನನು ಎಂದು ಸಮರ್ಥಿಸುತ್ತಾರೆ. ಅಧಿಕಾರಿಗಳು ಪ್ರಾಣಪರ್ಯಂತರಾದವರು ಅಲ್ಲ. **ಪ್ರಾಣಃ ಸ್ವೋತ್ತಮಾಧಿಕಾರಿಯುಕ್ತಃ ಅಧಿಕಾರಿತ್ವಾತ್ ನಾಮಾದಿವತ್** ಎನ್ನುವ ಅನುಮಾನದಿಂದ ಪ್ರಾಣನಿಂದಲೂ ಉತ್ತಮಾಧಿಕಾರಿಗಳನ್ನು ಸಾಧಿಸುವುದು ಸುಲಭವಾಗಿದೆ. ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಇಯದಾಮನನಾತ್ ಓಂ ॥ ೩೫ ॥

**ಸೂತ್ರಾರ್ಥ ॥** ಉಪಾಸಕರಿಗೆ ಪ್ರಾಣನೇ ಅವಧಿಯು. ಪ್ರಾಣನಿಂದ ಉತ್ತಮನು ಇಲ್ಲ. ಪ್ರಾಣೋ ವಾವ ಎನ್ನುವ ಶ್ರುತಿಯಲ್ಲಿ ಹಾಗೆ ಹೇಳಿದ್ದರಿಂದ.

**ಭಾಷ್ಯ ॥ (೧) ನಾಮಾದ್ಯಾರಭ್ಯ ಪ್ರಾಣಾಂತಮುತ್ತರೋತ್ತರೋಮತ್ತ್ವಮುಕ್ತಂ । ನ ಪ್ರಾಣಾತ್ ಕಿಂಚಿದ್ಭೂಯ ಉಕ್ತಂ । ತಥಾऽಪಿ ಪೂರ್ವವತ್ ಸ್ಯಾದಪೀತಿ ನ ವಾಚ್ಯಂ । (೨) ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ನ ಹಿ ಪ್ರಾಣಾದ್ಭೂಯಾನ್ ಪ್ರಾಣೋಹ್ಯೇವ ಭೂಯಾಂಸ್ತಸ್ಮಾದ್ಭೂಯಾನ್ನಾಮ । ಇತಿ ಕೌಂತರವ್ಯಶ್ರುತೇಃ ॥ ೩೫ ॥ ೧ ॥**

**ಭಾಷ್ಯಾರ್ಥ ॥** (೧) ಯದ್ಯಪಿ ಛಂದೋಗ ಶ್ರುತಿಯಲ್ಲಿ ನಾಮಾದಿಗಳನ್ನು ಆರಂಭಿಸಿ ಪ್ರಾಣಪರ್ಯಂತವಾಗಿ (ಅಂದರೆ, ನಾಮ ವಾಕ್ ಮನಃ ಸಂಕಲ್ಪ ಚಿತ್ತ ಧ್ಯಾನ ವಿಜ್ಞಾನ ಅನ್ನ ಅಪ್ ತೇಜಃ ಆಕಾಶ ಸ್ಮರ ಆಶಾ ಪ್ರಾಣ ಶಬ್ದವಾಚ್ಯರಾದ ಉಷಾ ಸ್ವಾಹಾ ಪರ್ಜನ್ಯ ಮಿತ್ರ ಅಗ್ನಿ ವರುಣ ಚಂದ್ರ ಪ್ರವಹ ಅನಿರುದ್ಧ ಅಹಂಕಾರಿಕಪ್ರಾಣ ಇಂದ್ರ ಉಮಾ ರುದ್ರ ವಾಣೀ ಪ್ರಾಣ ಇವರಿಗೆ ಪೂರ್ವ ಪೂರ್ವಾಪೇಕ್ಷಯಾ ಉತ್ತರೋತ್ತರದಲ್ಲಿ ಉತ್ತಮತ್ವವು ಉಕ್ತವಾಗಿದೆ. ಮುಖ್ಯಪ್ರಾಣನ ದೆಶೆಯಿಂದ ಅಧಿಕಾರಿ ವರ್ಗದಲ್ಲಿ ಯಾರೊಬ್ಬನೂ ಉತ್ತಮಾಧಿಕಾರಿಯಾಗಿ ಹೇಳಲ್ಪಡಲಿಲ್ಲ. ಆದಾಗ್ಯೂ ನಾಮಾದಿಗಳಂತೆ ಪ್ರಾಣನಿಗೂ ಕೂಡ ಅಧಿಕಾರತ್ವವಿದ್ದುದರಿಂದ ಸ್ವೋತ್ತಮಾಧಿಕಾರಿ ಯುಕ್ತತ್ವವು ಬರುವುದು. ಎಂದು ಹೇಳಕೂಡದು. (೨) (ಮತ್ತೆ ಅಧಿಕಾರಿಗಳಲ್ಲಿ ಪ್ರಾಣನೇ ಅವಸಾನನು. ಹೇಗೆಂದರೆ) ಪ್ರಾಣನ ದೆಶೆಯಿಂದ ಅಧಿಕನು ಯಾರೊಬ್ಬನೂ ಇಲ್ಲ. ಆದಕಾರಣ ಪ್ರಾಣನೇ ಸರ್ವರಿಂದ ಶ್ರೇಷ್ಠನು. ಪ್ರಾಣನೇ ಶ್ರೇಷ್ಠನು. ಆದುದರಿಂದ ಭೂಯಾನ್ = ಉತ್ತಮನು ಎಂದು ಪ್ರಸಿದ್ಧನು, ಎನ್ನುವ ಕೌಂತರವ್ಯ ಶ್ರುತಿಯಿಂದ. ॥ ೩೫ ॥ ೧ ॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅಂತರಾ ಭೂತಗ್ರಾಮವದಿತಿ ಚೇತ್ತದುಕ್ತಂ ಓಂ ॥ ೩೬ ॥

ಸೂತ್ರಾರ್ಥ ॥ ಪ್ರಾಣಿಗಳ ಸಮೂಹಗಳಾದ ವಾಗಾದಿಗಳಲ್ಲಿ ಒಬ್ಬನಿಂದ ಮತ್ತೊಬ್ಬನು ಅಧಿಕನು ಹೇಗೆ ದೃಷ್ಟನಾಗಿದ್ದಾನೋ ಹಾಗೆಯೇ ಅಧಿಕಾರಿಗಳಲ್ಲಿ ಪ್ರವಿಷ್ಟನಾದುದರಿಂದ ಪ್ರಾಣನು ಪರಬ್ರಹ್ಮನನ್ನು ಹೊರತು ಮತ್ತೊಬ್ಬ ಉತ್ತಮ ಅಧಿಕಾರಿಯುಕ್ತನು ಆಗುವನು, ಎಂದರೆ ಹೀಗೆ ಹೇಳಕೂಡದು. ಪ್ರಾಣನಿಂದ ಅಧಿಕನು ಇಲ್ಲ ಎಂದು ವಿಷಯದಲ್ಲಿ ಪ್ರಾಣೋ ವಾ ಎನ್ನುವ ಪ್ರಮಾಣವು ಉಕ್ತವಾಗಿದೆ.

**ಭಾಷ್ಯ ॥ ಯಥಾ ಭೂತಗ್ರಾಮ ಏಕಸ್ಮಾದೇಕ ಉತ್ತಮೋಽನ್ಯೈವ । ಏವಂ ಪ್ರಾಣಾದಪಿ ಪರಮಾತ್ಮಾನಮಂತರಾ ವಿದ್ಯತೇ । ಇತಿ ಚೇತ್ ನ । ಪ್ರಾಣಾದುತ್ತಮಾಭಾವೇ ಪ್ರಮಾಣಮುಕ್ತಂ । ಅನ್ಯತ್ರೋತ್ತಮಾಭಾವೇ ನ ಪ್ರಮಾಣಂ । ದೃಶ್ಯತೇ ಚಾನ್ಯತ್ರೋತ್ತಮತ್ವಂ ॥ ೩೬ ॥ ೨ ॥**

ಭಾಷ್ಯಾರ್ಥ ॥ ಹೇಗೆ ಪ್ರಾಣಿಗಳ ಸಮೂಹಗಳಾದ ನಾಮಾದಿಗಳಲ್ಲಿ ಒಬ್ಬನಿಂದ ಮತ್ತೊಬ್ಬನು ಉತ್ತಮನು ಇದ್ದೇ ಇದ್ದಾನೋ ಹಾಗೆಯೇ ಪ್ರಾಣನಿಂದಲೂ ಪರಮಾತ್ಮನನ್ನು ಹೊರತು ಮತ್ತೊಬ್ಬನು ಉತ್ತಮ ಅಧಿಕಾರಿ ಜೀವನು ಇದ್ದಾನೆ, ಎಂದರೆ ಹೀಗೆ ಹೇಳಕೂಡದು. ಈ ಅನುಮಾನದಿಂದ ಪ್ರಾಣನಿಂದ ಉತ್ತಮ ಜೀವನನ್ನು ಸಾಧಿಸಕೂಡದು. ಪ್ರಾಣನಿಂದ ಉತ್ತಮಾಧಿಕಾರಿಯು ಇಲ್ಲ ಎನ್ನುವ ವಿಷಯದಲ್ಲಿ ಪ್ರಾಣೋ ವಾವ ಎನ್ನುವ ಶ್ರುತಿರೂಪವಾದ ಪ್ರಮಾಣವು ಉಕ್ತವಾಗಿದೆ. ನಾಮಾದಿಗಳಲ್ಲಿ ಉತ್ತರೋತ್ತರ ಉತ್ತಮನು ಇಲ್ಲ ಎನ್ನುವಲ್ಲಿ ಪ್ರಮಾಣವು ಇಲ್ಲ. ವಾಗಾದಿಗಳಲ್ಲಿ ನಾಮಾದ್ಯುತ್ತಮತ್ವವು ಛಾಂದೋಗ್ಯದಲ್ಲಿ ಹೇಳಲ್ಪಡುತ್ತದೆ. ॥ ೩೬ ॥ ೨ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶವತ್ ಓಂ ॥ ೩೭ ॥

ಸೂತ್ರಾರ್ಥ ॥ ಪ್ರಾಣನಿಂದ ಉತ್ತಮನು ಇಲ್ಲದಿದ್ದರೆ ಇವನಿಗೇನೇ ಸರ್ವೋತ್ತಮತ್ವವಿದ್ದರೆ ಬ್ರಹ್ಮನಿಂದ ಪ್ರಾಣನಿಗೆ ಶ್ರುತ್ಯಾದಿಸಿದ್ಧವಾದ ಭೇದವು ಅಯುಕ್ತವಾಗುವುದು. (ಇಬ್ಬರಿಗೆ ಅಸಂಕುಚಿತ ಸರ್ವೋತ್ತಮತ್ವವು ಕೂಡಲಾರದು.) ಎಂದರೆ, ಹಾಗೆ ಹೇಳಕೂಡದು. ಉಪದೇಶಾನುಸಾರವಾಗಿ, ಸರ್ವೇಭ್ಯೋ ಭೂಯಾನ್ ಎಂದು ಸರ್ವಶಬ್ದಕ್ಕೆ ಸಂಕೋಚವು ಕೂಡುತ್ತದೆ. (ಅಂದರೆ ವಾಗಾದಿಗಳಿಂದ ಪ್ರಾಣನಿಗೂ ಪ್ರಾಣನಿಂದ ಶ್ರೀಹರಿಗೂ ಆಧಿಕ್ಯವು ಶ್ರುತಿಯಲ್ಲಿ ಉಕ್ತವಾಗಿದೆ.)

**ಭಾಷ್ಯ॥ ಪ್ರಾಣಸ್ಯ ಸರ್ವೋತ್ತಮತ್ವೇ ಪರಮಾತ್ಮನಾ ಭೇದಾನುಪಪತ್ತಿಃ । ಇತಿ ಚೇತ್ ನ । ಶ್ರುತ್ಯುಪದಿಷ್ಟವದುಪಪತ್ತೇಃ । ಅನ್ಯೇಭ್ಯಃ ಪ್ರಾಣಸ್ಯೋತ್ತಮತ್ವಂ ತಸ್ಮಾತ್ಪರಮಾತ್ಮನೋ ಹ್ಯುಪದಿಷ್ಟಂ ॥ ೩೭ ॥ ಅಧಿ. ೨೧ ॥ ೩ ।**

ಭಾಷ್ಯಾರ್ಥ ॥ (ಪ್ರಾಣೋ ವಾ ಸರ್ವೇಭ್ಯೋ ಭೂಯಾನ್ ಎನ್ನುವ ಶ್ರುತಿಯ ಬಲದಿಂದ

ಪ್ರಾಣನ ದೆಶೆಯಿಂದ ಉತ್ತಮಾಧಿಕಾರಿಯು ಇಲ್ಲವೆಂದು ಹೇಳಲ್ಪಡುತ್ತದೆ ಅಲ್ಲಿ ಸರ್ವ ಶಬ್ದವು ನಿರುಪಚರಿತ ಸರ್ವಾರ್ಥಕವು ಎಂದಂಗೀಕರಿಸಿದರೆ) ಮುಖ್ಯಪ್ರಾಣನಿಗೆ ನಿರುಪಚಿರಿತ ಸರ್ವೋತ್ತಮತ್ವವನ್ನೇ ಅಂಗೀಕರಿಸಬೇಕಾಗುವುದು. ಹಾಗಿದ್ದರೆ ಮುಖ್ಯಪ್ರಾಣನಿಗೆ ಪರಮಾತ್ಮನಿಂದ ಭೇದವೇ ಕೂಡದೇ ಹೋಗಬೇಕಾಗುವುದು. (ಇಬ್ಬರು ಸರ್ವೋತ್ತಮರೆನ್ನುವುದು ಅಯುಕ್ತವಷ್ಟೇ.) (ಶ್ರುತಿಯಲ್ಲಿದ್ದ ಸರ್ವಶಬ್ದಕ್ಕೆ ಸಂಕುಚಿತಾರ್ಥತ್ವವನ್ನು ಇಟ್ಟುಕೊಂಡರೆ ಪರಮಾತ್ಮನನ್ನೂ ಲಕ್ಷ್ಮೀದೇವಿಯನ್ನೂ ಹೊರತು ಎಂದು ಹೇಳುವಂತೆ ಕೆಲವು ಅಧಿಕಾರಿಗಳನ್ನು ಹೊರತು ಎಂದೂ ಹೇಳಲಿಕ್ಕೆ ಶಕ್ಯವಾಗುವುದರಿಂದ ಈ ಶ್ರುತಿಯಿಂದ ಪ್ರಾಣನ ದೆಶೆಯಿಂದ ಉತ್ತಮಾಧಿಕಾರಿಯು ಇಲ್ಲವೆಂದು ಸಿದ್ಧಿಸುವುದಿಲ್ಲ) ಎಂದರೆ, ಹಾಗೆ ಹೇಳಕೂಡದು, (ಅಂದರೆ, ಆ ದೋಷಗಳು ಪ್ರಾಪ್ತವಾಗುವುದಿಲ್ಲ) ಶ್ರುತಿಯಲ್ಲಿ ಹೇಳಿದ ಪ್ರಕಾರವೇ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬೇಕು. (ಅಂದರೆ, ಶ್ರುತಿಗೆ ವಿಷ್ಣುವಿನಿಂದ ಮಾತ್ರ ವ್ಯತಿರಿಕ್ತರಾದವರು ಎಲ್ಲರೂ ಎಂದು ಸರ್ವಶಬ್ದಕ್ಕೆ ಅರ್ಥವು. ವಿಷ್ಣುವು ಹೊರತು ಕೆಲವು ಅಧಿಕಾರಿಗಳಿಂದಲೇ ಉತ್ತಮನು ಎನ್ನುವ ಅರ್ಥವಲ್ಲ) ಎಲ್ಲಾ ಅಧಿಕಾರಿಗಳಿಂದ ಪ್ರಾಣನಿಗೆ ಉತ್ತಮತ್ವವು, ಪ್ರಾಣನ ದೆಶೆಯಿಂದ ಪರಮಾತ್ಮನಿಗೆ ಉತ್ತಮತ್ವವು ಎಂದು ಛಂದೋಗಶ್ರುತಿಯಲ್ಲಿ ಉಪದಿಷ್ಟವಾಗಿದೆ. ॥ ೩೭ ॥ ೩ ॥

## ಅಧಿಕರಣ ಸಾರಾಂಶ

ನಾಮಾದಿ ಶಬ್ದವಾಚ್ಯರಾದ ಉಷಾ ಮೊದಲಾದ ಉಪಾಸನಾಧಿಕಾರವುಳ್ಳ ದೇವತೆಗಳು ಮುಖ್ಯಪ್ರಾಣನೇ ಅವಧಿಯಾಗಿ ಉಳ್ಳವರು ಆಗುವುದಿಲ್ಲವೋ ಆಗುತ್ತಾರೋ ಎಂದು ಸಂದೇಹವು. **ಪ್ರಾಣೋ ವಾವ ಸರ್ವೇಭ್ಯಃ** ಎನ್ನುವಲ್ಲಿ ಸರ್ವಶಬ್ದಕ್ಕೆ ಸಂಕುಚಿತಾರ್ಥತ್ವವನ್ನು ಇಟ್ಟುಕೊಳ್ಳದಿದ್ದರೆ ಮುಖ್ಯಪ್ರಾಣನಿಗೆ ನಿರುಪಚರಿತ ಸರ್ವೋತ್ತಮತ್ವವು ಪ್ರಾಪ್ತವಾಗುವುದರಿಂದ ಸರ್ವೋತ್ತಮರಿಬ್ಬರು ಕೂಡದಿರುವ ಪ್ರಯುಕ್ತ ಮುಖ್ಯಪ್ರಾಣನಿಗೆ ವಿಷ್ಣುವಿನಿಂದ ಅಭೇದವನ್ನು ಹೇಳಬೇಕಾಗುವುದು. ಸರ್ವಶಬ್ದಕ್ಕೆ ಸಂಕುಚಿತಾರ್ಥತ್ವವನ್ನು ಹೇಳುವುದಾದರೆ ಸರ್ವ ಶಬ್ದವು ಅಧಿಕಾರಿವಿಶೇಷಪರವೆಂದು ಸಂಕೋಚಮಾಡಬಹುದು. ತಥಾಚ ಆ ಶ್ರುತಿಯು **ಪ್ರಾಣಃ ಸ್ವೋತ್ತಮಾಧಿಕಾರಿಯುಕ್ತಃ ಅಧಿಕಾರಿತ್ವಾತ್ ಉಮಾದಿವತ್** ಎನ್ನುವ ಅನುಮಾನಕ್ಕೆ ಬಾಧಕವಾಗದಿರುವುದರಿಂದ ಪ್ರಾಣನದೆಶೆಯಿಂದಲೂ ಉತ್ತಮಾಧಿಕಾರಿಯು ಸಿದ್ಧಿಸುವುದರಿಂದ ಉಪಾಸನಾಧಿಕಾರಿಗಳು ಮುಖ್ಯಪ್ರಾಣನೇ ಅವಸಾನವಾಗಿ ಉಳ್ಳವರಲ್ಲ ಎಂದರೆ— ಸರ್ವಶಬ್ದಕ್ಕೆ ಅನೇಕ ಪ್ರಮಾಣಬಲದಿಂದ ಭಗವಂತನಿಂದ ಇತರ ಸರ್ವ ಪರತ್ವವು. **ಉತ್ತಮತ್ವಂ ಹಿ ದೇವಾನಾಂ** ಇತ್ಯಾದಿ ಪ್ರಮಾಣಗಳಿಂದ ಪ್ರಾಣನದೆಶೆಯಿಂದ ಕೇವಲ ಶ್ರೀಹರಿಗೇನೇ ಉತ್ತಮತ್ವವು. ಆದಕಾರಣ ಉಪಾಸಕರು ಪ್ರಾಣನೇ ಅವಸಾನವಾಗಿ ಉಳ್ಳವರು. ॥ಅಧಿ.೨೧ ॥

ಇಯದಾಮನನಾಧಿಕರಣವು ಸಮಾಪ್ತವಾಯಿತು.

# ೨೨ ವ್ಯತಿಹಾರಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಉಪಾಸನಾಧಿಕಾರಿಯಾದ ಪ್ರಾಣನದೆಶೆಯಿಂದ ಪರಮಾತ್ಮನಿಗೆ ಉತ್ತಮತ್ವವು ಸಾಧಿಸಲ್ಪಡುತ್ತದೆ—

**ಭಾಷ್ಯ ॥ ನೇತಿ ಚೇನ್ನ ॥ ೧ ॥**

**ಭಾಷ್ಯಾರ್ಥ ॥** ಛಂದೋಗಶ್ರುತಿಯಲ್ಲಿ ಪ್ರಾಣನಿಗೇನೇ ಸರ್ವೋತ್ತಮತ್ವವನ್ನು ಹೇಳಿದೆ ಪ್ರಾಣನ ದೆಶೆಯಿಂದ ಪರಮಾತ್ಮನಿಗೆ ಉತ್ತಮತ್ವವನ್ನು ಹೇಳಲಿಲ್ಲ ಎಂದರೆ ಹಾಗೆ ಹೇಳಕೂಡದು. ಏಕೆಂದರೆ ॥ ೧ ॥

**ಸೂತ್ರ॥ ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ ॥ ೩೮ ॥**

**ಸೂತ್ರಾರ್ಥ ॥** ಪ್ರಾಣನ ದೆಶೆಯಿಂದ ಸತ್ಯಾಖ್ಯ ವಿಷ್ಣುವಿಗೆ ಉತ್ತಮತ್ವವು ಯುಕ್ತವು. ಪ್ರಾಣಸತ್ಯರ ಮಧ್ಯದಲ್ಲಿ ಶ್ರುತಿಯಲ್ಲಿ ಪ್ರಶ್ನೆ ಪ್ರತಿವಚನಗಳು ಇಲ್ಲದಿದದ್ದರೂ ಪ್ರಶ್ನ ಪ್ರತ್ಯುತ್ತರಗಳನ್ನು ಅಧ್ಯಾಹಾರಮಾಡಬೇಕು. ಪ್ರಶ್ನಾದಿಗಳನ್ನು ಮಾಡಿ ನಾಮಾದಿಗಳಿಂದ ವಾಗಾದಿಗಳಂತೆ, ತು ಶಬ್ದದಿಂದ ಪ್ರಾಣನಿಗೆ ಉತ್ತಮತ್ವವನ್ನು ಹೇಳುವವನಿಂದ ಸತ್ಯನಿಗೆ ಉತ್ತಮತ್ವವನ್ನು ಹೇಳತಕ್ಕವನನ್ನು ಛಂದೋಗರು ವ್ಯಾವರ್ತಿಸುತ್ತಾರೆ. (ವಿಶೇಷವನ್ನು ಹೇಳಿದ್ದಾರೆ.)

**ಭಾಷ್ಯ॥ (೧) ಉಕ್ತಂ ಪ್ರಾಣಾತ್ಪರಮಾತ್ಮನ ಉತ್ತಮತ್ವಂ ಪೂರ್ವೋಕ್ತಾಧ್ಯಾಹಾರೇಣ । (೨) ಏಷ ತು ವಾ ಅತಿವದತಿ** (ಛಾ.೭.೧೬.) **। ಇತಿ ವಿಶಿಂಷಂ ತಿ ಹಿ । (೩) ಯಥೇತರೇಷು ವಿಶೇಷಣಂ । (೪) ಉತ್ತಮತ್ವಂ ಹಿ ದೇವಾನಾಂ ಮುಕ್ತಾವಪಿ ಹಿ ಮಾನವಾತ್ । ತೇಭ್ಯಃ ಪ್ರಾಣಸ್ಯ ತಸ್ಮಾಚ್ಚ ನಿತ್ಯಮುಕ್ತಸ್ಯ ವೈ ಹರೇಃ ॥ ಇತಿ (೮) ಬೃಹತ್ತಂತ್ರೇ ॥ ೩೮ ॥ ಅಧಿ. ೨೨ ॥ ೨ ॥**

**ಭಾಷ್ಯಾರ್ಥ ॥** (೧) ಏಷ ತು ವಾ ಅತಿವದತಿ । **ಯಃ ಸತ್ಯೇನಾತಿವದತಿ** ಎಂದು ಸತ್ಯಪದದಿಂದ ಹೇಳಲ್ಪಟ್ಟ ಪರಮಾತ್ಮನಿಗೆ ಪ್ರಾಣನ ದೆಶೆಯಿಂದ ಉತ್ತಮತ್ವವು ಛಂದೋಗ ಶ್ರುತಿಯಲ್ಲಿ ಉಕ್ತವಾಗಿದೆ. (ಆದಕಾರಣ ಪ್ರಾಣನಿಗೇನೇ ಸರ್ವೋತ್ತಮತ್ವವಲ್ಲ) (ಛಾಂದೋಗ್ಯದಲ್ಲಿ ಹಿಂದಿನ ನಾಮಾದಿ ಪ್ರಕರಣಗಳಲ್ಲಿ ಅಸ್ತಿ ಭಗವಃ ನಾಮ್ನೋ ವಾವ ಭೂಯೋಽಸ್ತಿ, ತನ್ಮೇ ಭಗವಾನ್ ಬ್ರವೀತು, ವಾಗ್ವಾವ ನಾಮ್ನೋ ಭೂಯಸೀ ಎಂದು ಹೇಳಿದ ಪ್ರಶ್ನೋತ್ತರ ವಾಕ್ಯಕ್ಕೆ ಸದೃಶವಾದ ಅಸ್ತಿ ಭಗವಃ ಪ್ರಾಣಾದ್ಭೂಯೋಽಸ್ತಿ, ತನ್ಮೇ ಭಗವಾನ್ ಬ್ರವೀತು, ಸತ್ಯಂ ವಾವ ಪ್ರಾಣಾದ್ಭೂಯಃ ಎನ್ನುವ ಪ್ರಶ್ನ ಪ್ರತಿವಚನರೂಪವಾದ ವಾಕ್ಯವನ್ನು ಅಧ್ಯಾಹಾರ ಮಾಡಿಕೊಂಡು ಪ್ರಕರಣಭೇದವನ್ನು ಕಲ್ಪಿಸಿ ಸತ್ಯನಾಮಕ ವಿಷ್ಣುವಿಗೆ ಪ್ರಾಣನ ದೆಶೆಯಿಂದ ಉತ್ತಮತ್ವವು ಉಕ್ತವಾಗಿದೆ. (೨) ಅಧ್ಯಾಹಾರದಲ್ಲಿ ಕಾರಣವು ಇಲ್ಲದಿರುವುದರಿಂದ ಪ್ರಾಣಖಂಡ, ಸತ್ಯಖಂಡಗಳಿಗೆ ಏಕಪ್ರಕರಣತ್ವವೇ ಏಕೆ ಆಗಲಾರದು.

ಎಂದರೆ) (ಛಾಂದೋಗ್ಯದಲ್ಲಿ ಸವಾ ಏಷ ಏವಂ ಪಶ್ಯನ್ ಇತ್ಯಾದಿ ಗಳಿಂದ ಪ್ರಾಣನಿಗೆ ಉತ್ತಮತ್ವವನ್ನು ಹೇಳುವವನಕ್ಕಿಂತ ಸತ್ಯಾಖ್ಯ ಅತಿಶಯಿತ ವಸ್ತುವನ್ನು ಹೇಳತಕ್ಕವನಾದುದರಿಂದ ಆತನಿಗೆ ಅತಿವಾದಿತ್ವವು (ಉತ್ಕೃಷ್ಟವಸ್ತುವನ್ನು ಹೇಳುವಿಕೆಯು) ಉಕ್ತವಾಗಿದೆ. ತತಶ್ಚ ಏಷ ತು ವಾ = ಇವನೇ, (ಅಂದರೆ ಯಾವ ಅಧಿಕಾರಿಯು ನಿರ್ದೋಷನೂ ನಿಯಾಮಕನೂ ಆದ ಸತ್ಯಾಖ್ಯ ವಿಷ್ಣುವನ್ನು ಉತ್ತಮ ವಸ್ತುವನ್ನಾಗಿ ಹೇಳುತ್ತಾನೋ ಇವನೇ) ಪ್ರಾಣನಿಗೆ ಉತ್ತಮತ್ವವನ್ನು ಹೇಳುವವನಕ್ಕಿಂತ ವಿಶೇಷವಾಗಿ, ಅತಿವದತಿ = ಅತಿಶಯಿತವಾದ ಉತ್ತಮವಾದ ವಸ್ತುವನ್ನೇ ಹೇಳುತ್ತಾನೆ. (ಹೀಗೆ ಸತ್ಯಾಖ್ಯ ಉತ್ತಮ ವಸ್ತುವನ್ನು ಹೇಳುವವನಿಗೆ ಅತಿವಾದಿತ್ವವು ಹೇಳಲ್ಪಡುತ್ತದೆ. ಅಲ್ಲಿ ಪ್ರಾಣನಿಗೆ ಉತ್ತಮತ್ವವನ್ನು ಹೇಳುವವನಕ್ಕಿಂತ ಸತ್ಯಾತಿವಾದಿಯು (ಸತ್ಯಕ್ಕೆ ಉತ್ತಮತ್ವವನ್ನು ಹೇಳುವವನು) ತು ಶಬ್ದದಿಂದ ವಿಶೇಷಿತನಾಗಿದ್ದಾನೆ. (ಉತ್ತಮನೆಂದು ಹೇಳಲ್ಪಟ್ಟಿದ್ದಾನೆ.) ತಥಾಚ ಛಂದೋಗರು ಪ್ರಾಣನಿಗೆ ಉತ್ತಮತ್ವವನ್ನು ಹೇಳುವವನಕ್ಕಿಂತ ಸತ್ಯನಿಗೆ ಉತ್ತಮತ್ವವನ್ನು ಹೇಳುವವನನ್ನು ಅತಿಶಯಿತ ವಸ್ತುವಾದಿತ್ವರೂಪ ವಿಶೇಷದಿಂದ ಯುಕ್ತನನ್ನಾಗಿ ಹೇಳುತ್ತಾರೆ. ಏವಂಚ ಪ್ರಾಣನ ದೆಶೆಯಿಂದ ಸತ್ಯನಿಗೆ ನಿರವಧಿಕ ಸರ್ವೋತ್ತಮತ್ವವು ಸಿದ್ಧವಾಯಿತು. ತಥಾಚ ಪ್ರಕರಣ ಭೇದಕ ತು ಶಬ್ದವು ಇದ್ದ ಪ್ರಯುಕ್ತ ಪ್ರಶ್ನಾದಿಗಳನ್ನು ಆಧ್ಯಾಹಾರಮಾಡಿಕೊಂಡು ಸತ್ಯ ಶಬ್ದವಾಚ್ಯನಾದ ವಿಷ್ಣುವಿಗೆ ಪ್ರಾಣನಿಂದಲೂ ಉತ್ತಮತ್ವ ವ್ಯಾಖ್ಯಾನವು ಯುಕ್ತವು (೩) (ಈ ತು ಶಬ್ದವು ಹೇಗೆ ಪ್ರಕರಣಭೇದಕವಾಗುವುದು? ಪ್ರಶ್ನಾದ್ಯಧ್ಯಾಹಾರವನ್ನು ಮಾಡಬೇಕೆಂದು ಹೇಗೆ ತಿಳಿಯುವುದು ಎಂದರೆ) ಹೇಗೆ ವಾಗಾದಿ ಪ್ರಕರಣಗಳಲ್ಲಿ ವಾಗ್ವಾವ ನಾಮ್ನೋ ಭೂಯಸೀ ಇತ್ಯಾದಿ ವಿಶೇಷಣವು (ವಾಗಾದಿಗಳಿಗೆ ನಾಮಾದಿಗಳಿಂದ ಆಧಿಕ್ಯವಾಚಕತ್ವವಿದ್ದುದರಿಂದ ಪ್ರಕರಣ ಭೇದಕವೋ ಹೀಗೆಯೇ ಈ ತು ಶಬ್ದವೂ ಪ್ರಕರಣ ಭೇದಕವು ಆಗಿಯೇ ಆಗುತ್ತದೆ.) (೪) (ಈ ಅರ್ಥದಲ್ಲಿ ಹಿ ಶಬ್ದ ಸೂಚಿತವಾದ ಸ್ಮೃತಿಯನ್ನು ಹೇಳುತ್ತಾರೆ.) ನಾಮಾದಿ ದೇವತೆಗಳಿಗೆ ಮನುಷ್ಯೋತ್ತಮನಿಂದ ಮುಕ್ತಿಯಲ್ಲಿಯೂ ಉತ್ತಮತ್ವವು ಇದೆ. (ಸಂಸಾರದಲ್ಲಿ ಉತ್ತಮತ್ವವು ಇದೆ ಎಂದು ಏನು ಹೇಳಬೇಕು.) ಆ ದೇವತೆಗಳಿಂದ ಮುಖ್ಯ ವಾಯುವಿಗೆ ಉತ್ತಮತ್ವವು. ಮುಖ್ಯ ವಾಯುವಿನಿಂದ ನಿತ್ಯಮುಕ್ತನಾದ ಶ್ರೀಹರಿಗೆ ಉತ್ತಮತ್ವವು ಎಂದು ಬೃಹತ್ತಂತ್ರದಲ್ಲಿ ಹೇಳಿಯದೆ. ॥ ೩೮ ॥ ೩ ॥

## ಅಧಿಕರಣ ಸಾರಾಂಶ

ಶ್ರೀವಿಷ್ಣುವು ಪ್ರಾಣನದೆಶೆಯಿಂದ ಉತ್ತಮನಲ್ಲವೋ ಉತ್ತಮನೋ, **ಪ್ರಾಣೋ ವಾ ಆಶಾಯಾ ಭೂಯಾನ್** ಎಂದು ಹೇಳಲ್ಪಟ್ಟ ಪ್ರಾಣನ ದೆಶೆಯಿಂದ ಮೇಲೆ **ಸತ್ಯಂ ತ್ವೇವ ವಿಜಿಜ್ಞಾಸಿತವ್ಯಃ** ಎಂದು ಹೇಳಲ್ಪಟ್ಟ ಸರ್ವೋತ್ತಮನಾದ ಸತ್ಯ ನಾಮಕನು ಪ್ರಾಣನದೆಶೆಯಿಂದ ಅಭಿನ್ನನೋ ಅಥವಾ ಭಿನ್ನನಾದ ವಿಷ್ಣುವೋ, ಅದಕ್ಕಾಗಿ ಪ್ರಾಣಪ್ರಕರಣದಿಂದ ಸತ್ಯಪ್ರಕರಣಕ್ಕೆ ಭೇದಕವು ಇಲ್ಲವೋ ಇದೆಯೋ ಎಂದು ಸಂದೇಹವು. ನಾಮಾದಿ ಪ್ರಾಣಪರ್ಯಂತರಾದ ಹದಿನೈದು ಪ್ರಕರಣಗಳಿಗೆ ಭೇದಕವಾದ ಪ್ರಶ್ನಪ್ರತಿವಚನಗಳು ಇದ್ದಂತೆಯೇ ಇಲ್ಲ **ಅಸ್ತಿ ಪ್ರಾಣಾದ್ಭೂಯಃ** ಎನ್ನುವ ಪ್ರಶ್ನೆಯೂ **ಸತ್ಯಂ ವಾವ ಪ್ರಾಣಾದ್ಭೂಯಃ** ಎನ್ನುವ ಪ್ರತಿವಚನ ರೂಪ ಪ್ರಕರಣ ಭೇದಕವು ಇಲ್ಲದಿರುವುದರಿಂದ ಪ್ರಾಣ ಸತ್ಯರಿಗೆ ಅಭೇದವಿದ್ದ ಪ್ರಯುಕ್ತ ಸತ್ಯಶಬ್ದಾರ್ಥಭೂತನಾದ ವಿಷ್ಣುವು ಪ್ರಾಣನಿಂದ ಉತ್ತಮನಲ್ಲ, ಪ್ರಕರಣ

ಭೇದಕಗಳಾದ ಪ್ರಶ್ನಪ್ರತಿವಚನಗಳಿಗೆ ಜ್ಞಾಪಕವು ಇಲ್ಲದಿರುವುದರಿಂದ ಅಧ್ಯಾಹಾರವೂ ಯುಕ್ತವಲ್ಲ ಎಂದರೆ ಸ ವಾ ಏಷ ಏವಂ ಪಶ್ಯನ್ ಇತ್ಯಾದಿಗಳಿಂದ ಪ್ರಾಣನಿಗೆ ಉತ್ತಮತ್ವವನ್ನು ಹೇಳುವವನಿಗೆ ಅತಿಶಯಿತ ವಸ್ತುವಾದಿತ್ವ ನಿಮಿತ್ತದಿಂದ ಅತಿವಾದಿತ್ವವನ್ನು ಹೇಳಿ ಏಷ ತು ವಾ ಅತಿವದತಿ ಯಃ ಸತ್ಯೇನಾತಿ ವದತಿ ಎಂದು ಸತ್ಯಾಖ್ಯ ವಸ್ತುವನ್ನು ಹೇಳುವವನಿಗೂ ಅತಿವಾದಿತ್ವವನ್ನು ಹೇಳಿದ್ದರಿಂದ ಪ್ರಾಣಾತಿವಾದಿಗಿಂತಲೂ ಸತ್ಯಾತಿವಾದಿಗೆ ತು ಶಬ್ದದಿಂದ ವಿಶೇಷವನ್ನು ಹೇಳಿದ್ದು ಪ್ರಕರಣ ಭೇದಕಗಳಾದ ಪ್ರಶ್ನಪ್ರತಿವಚನಗಳ ಅಧ್ಯಾಹಾರ ಜ್ಞಾಪಕವಾಗುವುದು. ಉತ್ತಮತ್ವಂ ಹಿ ದೇವಾನಾಂ ಎನ್ನುವ ಸ್ಮೃತಿಯಿಂದಲೂ ಸತ್ಯನಾಮಕನಾದ ವಿಷ್ಣುವು ಪ್ರಾಣನಿಂದ ಉತ್ತಮನು, ಎಂದು ಸಿದ್ಧಿಸುವುದು.॥ ಅಧಿ. ೨೨ ॥

**ವ್ಯತಿಹಾರಾಧಿಕರಣವು ಸಮಾಪ್ತವಾಯಿತು.**

## ೨೩. ಸತ್ಯಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ವಿಷ್ಣುವು ಒಬ್ಬನೇ ಪ್ರಾಣನಿಂದ ಉತ್ತಮನು ಎಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ಕೃತಿರ್ನಿಷ್ಠಾ ವಿಜ್ಞಾನಮಿತ್ಯಾದೀನಾಂ ಭೇದಾದ್ಬಹವ ಉತ್ತಮಾ ಇತಿ ಚೇನ್ನ ॥ ೧ ॥**

ಭಾಷ್ಯಾರ್ಥ ॥ ಕೃತಿ ನಿಷ್ಠಾ ವಿಜ್ಞಾನ ಇದು ಮೊದಲಾದ ಮತಿ, ಶ್ರದ್ಧಾ, ಸುಖ, ಭೂಮಾ, ಅಹಂಕಾರ, ಆತ್ಮಾ ಹೀಗೆ ಸತ್ಯದೆಶೆಯಿಂದ ಉಪರಿ ಉಕ್ತಗಳಾದ ಒಂಭತ್ತಕ್ಕೆ (ಪರಸ್ಪರ ಅಭೇದವಿಷಯದಲ್ಲೇ ಜ್ಞಾಪಕವು ಇಲ್ಲದಿರುವುದರಿಂದ) ನಿಷೇಧವಿದ್ದ ಪ್ರಯುಕ್ತ (ಸತ್ಯಪದದಿಂದ ಹೇಳಲ್ಪಟ್ಟ ವಿಷ್ಣುವೊಬ್ಬನೇ ಪ್ರಾಣನಿಂದ ಉತ್ತಮನು ಅಲ್ಲ) ಮತ್ತೆ ವಿಜ್ಞಾನ ಮೊದಲಾದವುಗಳು ಹೆಚ್ಚು ಉತ್ತಮಗಳು ಇವೆ. ಎಂದರೆ, ಹೀಗೆ ಹೇಳಕೂಡದು. (ಅಂದರೆ, ಪ್ರಾಣನ ದೆಶೆಯಿಂದ ಉತ್ತಮರು ಬಹು ಮಂದಿ ಇದ್ದಾರೆ ಎನ್ನುವುದು ಯುಕ್ತವಲ್ಲ) ಏಕೆಂದರೆ ॥ ೧ ॥

**ಸೂತ್ರ ॥ ಓಂ ಸೈವ ಹಿ ಸತ್ಯಾದಯಃ ಓಂ ॥ ೩೯ ॥**

ಸೂತ್ರಾರ್ಥ ॥ ಪ್ರಾಣನ ದೆಶೆಯಿಂದ ವಿಷ್ಣುವೊಬ್ಬನಿಗೇನೇ ಉತ್ತಮತ್ವವು. ಬಹುಮಂದಿಗೆ ಅಲ್ಲ ಏಕೆಂದರೆ— ಸತ್ಯ ವಿಜ್ಞಾನ ಮತಿ ಶ್ರದ್ಧಾ ನಿಷ್ಠಾ ಕೃತಿ ಸುಖ ಭೂಮಾ ಅಹಂಕಾರ ಆತ್ಮಾ ಇವುಗಳು ಪ್ರಾಣನಿಂದ ಮೇಲೆ ಹೇಳಲ್ಪಟ್ಟವುಗಳು ಪ್ರಕೃತ ಈಶಾಖ್ಯ ಪರದೇವತೆಯೇ.

**ಭಾಷ್ಯ ॥ (೧) ಸತ್ಯಾದಿಗುಣಾಸ್ತಸ್ಯಾ ಏವ ಪರದೇವತಾಯಾಃ ಸ್ವರೂಪಭೂತಾಃ । (೨) ಬ್ರಹ್ಮತರ್ಕೇ ಚ । ನಾಮಾದಿಪ್ರಾಣಪರ್ಯಂತಾದ್ಯೋ ಹಿ ಸತ್ಯಾದಿರೂಪ ವಾನ್ । ತಸ್ಮೈನಮೋ ಭಗವತೇ ವಿಷ್ಣವೇ ಸರ್ವಜಿಷ್ಣವೇ । ಇತಿ ॥ (೩) ಸತ್ಯಾದ್ಯಾ**

**ಅಹಮಾತ್ಮಾಂತಾ ಯದ್ಗುಣಾಃ ಸಮುದೀರಿತಾಃ । ತಸ್ಮೈನಮೋ ಭಗವತೇ ಯಸ್ಮಾದೇವ ವಿಮುಚ್ಯತೇ ॥ ಇತಿ ಚಾಧ್ಯಾತ್ಮೇ ॥ ೩೯ ॥ ಅಧಿ. ೨೩ ॥ ೨ ॥**

ಭಾಷ್ಯಾರ್ಥ ॥ (೧) ಸತ್ಯತ್ವ ಮೊದಲಾದ ಹತ್ತು ಗುಣಗಳು ವಿಷ್ಣ್ವಾಖ್ಯವಾದ ಪರದೇವತೆದ್ದೇ ಸ್ವರೂಪಭೂತಗಳು. (ವಿಷ್ಣುವಿನಿಂದ ಭಿನ್ನಗಳಲ್ಲ) (೨) (ಹಿ ಶಬ್ದಸೂಚಿತವಾದ ಸ್ಮೃತಿಯನ್ನು ಹೇಳುತ್ತಾರೆ.) ಯಾವಾತನು ನಾಮವನ್ನು ಆರಂಭಿಸಿ ಪ್ರಾಣ ಪರ್ಯಂತವಾದ ಅಧಿಕಾರಿ ಸಮೂಹದೆಶೆಯಿಂದ ಮೇಲೆ ಉತ್ಕೃಷ್ಟನಾಗಿ ಸತ್ಯಾದಿ ಶಬ್ದಗಳಿಂದ ವಾಚ್ಯಗುಣಸ್ವರೂಪನಾಗಿ ಹೇಳಲ್ಪಟ್ಟರುತ್ತಾನೋ, ಅಂತಹ ಸರ್ವಜನಕ ಸ್ವಭಾವವುಳ್ಳ ವ್ಯಾಪ್ತನಾದ ಭಗವಂತನಿಗೋಸ್ಕರ ನಮಸ್ಕಾರವು. ಪ್ರಸಿದ್ಧವು. (೩) (ಹಾಗಾದರೆ ಭೂಮ ಪರ್ಯಂತವಾದವುಗಳು ಭಗವದ್ಗುಣಗಳೆಂದು ಹೇಳಿದ್ದರಿಂದ ಅವುಗಳಿಗೆ ಶ್ರೀಹರಿಯಿಂದ ಅಭೇದವಿರಲಿ. ಅಹಂಕಾರಾತ್ಮಗಳಿಗೆ ಅಭೇದವನ್ನು ಹೇಳದೆ ಇದ್ದುದರಿಂದ ಅವುಗಳಿಗೆ ಶ್ರೀಹರಿಯಿಂದ ಅಭೇದವಿಲ್ಲ ಎಂದರೆ) ಸತ್ಯ ವಿಜ್ಞಾನಗಳನ್ನು ಆರಂಭಿಸಿ ಅಹಂಕಾರ ಆತ್ಮ ಪರ್ಯಂತಗಳಾದ ಶಬ್ದಗಳು ಪರಮಾತ್ಮನ ಗುಣಕ್ಕೆ ವಾಚಕಗಳಾಗಿ ಪ್ರಮಾಣದಲ್ಲಿ ಹೇಳಲ್ಪಟ್ಟವೆಯೋ, ಅಂತಹ ಶ್ರೀಹರಿಗೋಸ್ಕರ ನಮಸ್ಕಾರವು. ಯಾವ ಅಹಂಕಾರ ಆತ್ಮರ ಜ್ಞಾನದಿಂದ ಸ ವಾ ಏಷ ಏವಂ ಪಶ್ಯನ್ ಎನ್ನುವ ವಾಕ್ಯಶೇಷದಲ್ಲಿ ಜೀವನು ಬಂಧದಿಂದ ಬಿಡಲ್ಪಡುತ್ತಾನೆ ಎಂದು ಯುಕ್ತಿಯು ಉಕ್ತವಾಗಿಯದೋ, (ಆದುದರಿಂದ ಅಹಂಕಾರ ಆತ್ಮರಿಗೆ ಭಗವತ್ಸ್ವರೂಪತ್ವವು) ಎಂದು ಬ್ರಹ್ಮತರ್ಕದಲ್ಲಿಯೂ ಅಧ್ಯಾತ್ಮ ಎನ್ನುವ ಗ್ರಂಥದಲ್ಲಿಯೂ ಉಕ್ತವಾಗಿದೆ. ॥ ೩೯ ॥ ೨ ॥

## ಅಧಿಕರಣ ಸಾರಾಂಶ

ಪ್ರಾಣನ ದೆಶೆಯಿಂದ ಸತ್ಯಪದದಿಂದ ಉಕ್ತನಾದ ವಿಷ್ಣುವೊಬ್ಬನೇ ಉತ್ತಮನೋ ಅನೇಕ ಮಂದಿ ಉತ್ತಮರು ಇದ್ದಾರೋ, ಅದಕ್ಕಾಗಿ ಸತ್ಯದ ಮೇಲೆ ಪಠಿತಗಳಾದ ವಿಜ್ಞಾನಾದಿಗಳಿಗೆ ಸತ್ಯದೆಶೆಯಿಂದ ಪರಸ್ಪರವಾಗಿ ಅಭೇದವೋ ಭೇದವೋ, ಅದಕ್ಕಾಗಿ ಅಭೇದಕ್ಕೆ ಜ್ಞಾಪಕವು ಇಲ್ಲವೋ ಇದೆಯೋ ಎಂದು ಸಂದೇಹವು ಸತ್ಯವನ್ನು ಆರಂಭಿಸಿ ಆತ್ಮಪರ್ಯಂತವಾದವುಗಳಿಗೆ ಅಭೇದ ಜ್ಞಾಪಕವು ಇಲ್ಲದಿರುವುದರಿಂದ ಭೇದವೇ ನ್ಯಾಯವಾದ ಪ್ರಯುಕ್ತ ಪ್ರಾಣನದೆಶೆಯಿಂದ ಸತ್ಯ ಮೊದಲಾದವುಗಳು ಅನೇಕ ಉತ್ತಮಗಳು ಇವೆ, ಎಂದರೆ ವಿಜ್ಞಾನಾದಿಗಳಿಗೆ ಸತ್ಯಾದಿಗಳಿಂದ ಭೇದವಿದ್ದರೆ ಸತ್ಯಂ ಭಗವೋ ವಿಜಿಜ್ಞಾಸೇ ಎಂದು ಪ್ರಶ್ನಿಸುವಾಗ ವಿಜ್ಞಾನಾದಿಗಳನ್ನು ಹೇಳಿದ್ದು ಅಸಂಗತವಾಗಬೇಕಾಗುವುದು. ಆದಕಾರಣ ಅವುಗಳಿಗೆಲ್ಲಾ ಅಭೇದವೇ ನ್ಯಾಯಪ್ರಾ ಪ್ತವಾದ ಪ್ರಯುಕ್ತವೂ ಸತ್ಯಾದ್ಯಾ ಅಹಮಾತ್ಮಾಂತಾಃ ಇತ್ಯಾದಿ ಸ್ಮೃತಿಗಳಿಂದಲೂ ಸತ್ಯಾದಿಗಳಿಗೆ ಅಭೇದವಿದ್ದ ಪ್ರಯುಕ್ತ ವಿಷ್ಣುವೊಬ್ಬನೇ ಪ್ರಾಣನಿಂದ ಉತ್ತಮನು ॥ ಅಧಿ. ೨೩ ॥

**ಸತ್ಯಾಧಿಕರಣವು ಸಮಾಪ್ತವಾಯಿತು.**

# ೨೪ ಕಾಮಾಧಿಕರಣವು

ಪೀಠಿಕೆ॥ ಈ ಅಧಿಕರಣದಲ್ಲಿ ಭಗವದುಪಾಸನದಲ್ಲಿ ಮಹಾಲಕ್ಷ್ಮಿಗೆ ಅಧಿಕಾರವಿಲ್ಲವೆಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ಪ್ರಕೃತೇರಪಿ ಜನ್ಮಾದೇಃ ಸಂಸಾರಪ್ರಾಪ್ತೇಃ ಕಿಮಿತಿ ನಾಮಾದಿಷ್ವಪಾಠಃ । ಇತಿ । ಅತ್ರೋಚ್ಯತೇ ॥ ೧ ॥**

ಭಾಷ್ಯಾರ್ಥ॥ ಲಕ್ಷ್ಮೀದೇವಿಗೂ ಕೂಡ ಸೀತಾರುಗ್ಮಿಣ್ಯಾದಿರೂಪದಿಂದ ಜನ್ಮಮರಣಾದಿಗಳು ಕಂಡದ್ದರಿಂದ ಸಂಸಾರವು ಪ್ರಾಪ್ತವಾಗುವುದರಿಂದ (ಸಂಸಾರಿಗಳಾದ ಸಾಧುಗಳಿಗೆ ಅಧಿಕಾರವು ಅವಶ್ಯವಾಗಿ ಬೇಕಾಗಿರುವುದರಿಂದ) ಆ ಲಕ್ಷ್ಮಿಗೇ ನಾಮಾದಿ ಅಧಿಕಾರಿ ವರ್ಗದಲ್ಲಿ ಏಕೆ ಪಾಠವಿಲ್ಲ (ಮತ್ತೆ ಪ್ರಾಣನ ದೆಸೆಯಿಂದ ಮೇಲೆ ಲಕ್ಷ್ಮಿಗೆ ಪಾಠವನ್ನು ಅಧ್ಯಾಹಾರ ಮಾಡಬೇಕು. ತಥಾಚ ಅಧಿಕಾರಿಗಳು ಪ್ರಾಣಪರ್ಯಂತರಾದವರು ಅಲ್ಲ) ಈ ಪೂರ್ವಪಕ್ಷವು ಬಂದರೆ ಸೂತ್ರಕಾರರಿಂದ ಸಿದ್ಧಾಂತವು ಹೇಳಲ್ಪಡುತ್ತದೆ. ॥ ೧ ॥

## ಸೂತ್ರ ॥ ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ ॥ ೪೦ ॥

ಸೂತ್ರಾರ್ಥ॥ (ಈಶ್ವರೇಚ್ಛಾನುಸಾರಿ ಸ್ವೇಚ್ಛೆಯಿಂದಲೇ ಕರ್ಮದಿಂದ ಅಲ್ಲ) ಲಕ್ಷ್ಮೀದೇವಿಯು ಈಶ್ವರ ಸಮೀಪದಲ್ಲಿ ಮೂಲರೂಪದಲ್ಲಿ ಇದ್ದವಳಾಗಿ ಭೂಮ್ಯಾದಿಗಳಲ್ಲಿಯೂ ಅವತರಿಸುತ್ತಾಳೆ. ಸರ್ವಾಯತನಾ ಇತ್ಯಾದಿ ಸರ್ವಗತತ್ವಾದಿ ಬೋಧಕ ಶ್ರುತ್ಯಾದಿಗಳ ದೆಸೆಯಿಂದ.

**ಭಾಷ್ಯ ॥ (೧) ಸ್ವೇಚ್ಛಯೈವ ಮೂಲಸ್ಥಾನೇ ಸ್ಥಿತಾಽನ್ಯತ್ರಾವತಾರಾನ್ ಕರೋತೀಶ್ವರೇಚ್ಛಾನುಸಾರೇಣ । (೨) ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ ಸರ್ವಜ್ಞಾಬದ್ಧಾ (ನ ಬದ್ಧಾ) ಬಂಧಿ (ಧ) ಕಾ ಸೈಷಾ ಪ್ರಕೃತಿರವಿಕೃತಿಃ । ಇತಿ ವತ್ಸಶ್ರುತೇಃ ॥ ೨ ॥**

ಭಾಷ್ಯಾರ್ಥ॥ (೧)ಆ ಪ್ರಕೃತಿಯು ವೈಕುಂಠಾದಿ ಮೂಲಸ್ಥಾನದಲ್ಲಿ ಭಗವತ್ಸಮೀಪದಲ್ಲಿ ಮೂಲರೂಪದಿಂದ ಇದ್ದವಳಾಗಿಯೇ ಭೂಮ್ಯಾದಿಗಳಲ್ಲಿ ಸೀತಾದಿರೂಪದಿಂದ ಈಶ್ವರೇಚ್ಛಾನುಸಾರಿಯಾದ ಸ್ವೇಚ್ಛೆಯಿಂದಲೇ (ಇಂದ್ರಾದಿಗಳಂತೆ ಕರ್ಮನಿಮಿತ್ತದಿಂದ ಅಲ್ಲ) ಅವತಾರಾದಿಗಳನ್ನು ಮಾಡುತ್ತಾಳೆ. ಆದಕಾರಣ ಈಶ್ವರನಂತೆ ಸ್ವಾತಂತ್ರ್ಯವಿಲ್ಲ. ಅಂತೂ ಲಕ್ಷ್ಮಿಗೆ ದೇಹಯೋಗಾದಿ ರೂಪವಾದ ಜನ್ಮಾದಿಗಳು ಕೂಡದಿರುವುದರಿಂದ ಸಂಸಾರಿತ್ವವು ಇಲ್ಲದಿರುವ ಪ್ರಯುಕ್ತ ಅಧಿಕಾರಿತ್ವವಿಲ್ಲ (ಆದ ಕಾರಣ ನಾಮಾದಿಗಳಲ್ಲಿ ಪಾಠವಿಲ್ಲ) (೨) ಸರ್ವಜಗತ್ತೇ ಆಶ್ರಯವಾಗಿ ಉಳ್ಳವಳು, ಸರ್ವಕಾಲವು ಆಶ್ರಯವಾಗಿ ಉಳ್ಳವಳು (ಅಂದರೆ ಸರ್ವಕಾಲದಲ್ಲಿ ಇದ್ದವಳು) ಸರ್ವವೂ ಇಚ್ಛಾಧೀನವಾಗಿ ಉಳ್ಳವಳು, ಸರ್ವಜ್ಞಳು, ಬದ್ಧಳಲ್ಲ, ಸರ್ವ ಜೀವರನ್ನು ಬಂಧಿಸತಕ್ಕವಳು, ವಿಕಾರರಹಿತಳು, ಲಕ್ಷ್ಮೀದೇವಿಯು, ಎನ್ನುವ ವತ್ಸಶ್ರುತಿಯಿಂದ. ॥ ೨ ॥

ಪೀಠಿಕೆ ॥ ಪ್ರಕೃತಿಗೆ ಅಧಿಕಾರವಿಲ್ಲದಿದ್ದರೂ ನಾಮಾದಿ ತಾರತಮ್ಯ ಪ್ರಕರಣದಲ್ಲಿ ಈಶ್ವರನಂತೆ ಏಕೆ ಪಾಠವಿಲ್ಲ ಎಂದರೆ—

**ಭಾಷ್ಯ ॥ ನಾಮಾದಯಸ್ತು ಬದ್ಧತ್ವಾನ್ಮೋಚಕತ್ವಾತ್ಪರೋಽಪಿ ಚ । ಉಭಯೋರಪ್ಯಭಾವೇನ ಯಥಾಽವ್ಯಕ್ತಂ ನ ತೂದಿತಂ ॥ ಶ್ರುತೌ ತಥಾ ಜೀವಪರಾವುಚ್ಯೇತೇ ಕಿಂಚನೇತರತ್ । ನೋಚ್ಯತೇ ಚ ತದಾ ತತ್ತ್ವದ್ವಯಂ ವೈ ಸಮುದಾಹೃತಂ ॥ ಇತಿ ಬ್ರಹ್ಮತರ್ಕೇ ॥ ೪೧ ॥ ೩ ॥**

ಭಾಷ್ಯಾರ್ಥ ॥ ಬದ್ಧತ್ವನಿಮಿತ್ತದಿಂದಲೇ ನಾಮವನ್ನು ಆರಂಭಿಸಿ ಪ್ರಾಣಪರ್ಯಂತರಾದ ದೇವತೆಗಳು ಛಂದೋಗ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾರೆ. ಮೋಚಕತ್ವ ನಿಮಿತ್ತದಿಂದಲೇ ಪರಮಾತ್ಮನೂ ಹೇಳಲ್ಪಟ್ಟಿದ್ದಾನೆ. ಬದ್ಧತ್ವವೂ ಮೋಚಕತ್ವವೂ ಈ ಎರಡು ಇಲ್ಲದಿರುವುದರಿಂದಲೇ ಶ್ರೀತತ್ವವು ಹೇಳಲ್ಪಡಲಿಲ್ಲವೋ (ಶ್ರೀತತ್ವವು ಇಲ್ಲದಿರುವ ನಿಮಿತ್ತದಿಂದ ಹೇಳಲ್ಪಡದೆ ಇದ್ದುದಲ್ಲ) ಹಾಗೆಯೇ ದ್ವಾ ಸುಪರ್ಣಾ ಇತ್ಯಾದಿ ಶ್ರುತಿಗಳಲ್ಲಿ ಜೀವಪರಮಾತ್ಮರೇ ಹೇಳಲ್ಪಡುತ್ತಾರೆ. ಅವರಿಂದ ಇತರ ವಾದ ಯಾವುದೊಂದು ಜಡವೂ ಹೇಳಲ್ಪಡುವುದಿಲ್ಲ. ಆಗ ★ ಎರಡು ತತ್ವಗಳೇ ಹೇಳಲ್ಪಟ್ಟವೆ ಎಂದು ತಿಳಿಯತಕ್ಕುದು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ॥ ೪೦ ॥ ೩ ॥

ಪೀಠಿಕೆ ॥ ಲಕ್ಷ್ಮೀದೇವಿಗೆ ಸಂಸಾರಿತ್ವವು ಇಲ್ಲವಾದರೆ ಅವಳು ಕೃತಕೃತ್ಯಳು. ಆದುದರಿಂದಲೂ ಭಗವದುಪಾಸನಾದಿಗಳೇ ಇಲ್ಲವೆಂದು ಆಗಬೇಕಾಗುವುದು. ಯದರ್ಚಿ ತಂ ಬ್ರಹ್ಮಭವಾದಿಭಿಃ ಸುರೈಃ ಶ್ರಿಯಾ ಚ ದೇವ್ಯಾ ಮುನಿಭಿಶ್ಚ ಸಾತ್ವತೈಃ ಇತ್ಯಾದಿ ಪ್ರಮಾಣಗಳಿಂದ ವಿರುದ್ಧವಾದ ಪ್ರಯುಕ್ತ ಉಪಾಸನಾದಿಗಳು ಇಲ್ಲವೆನ್ನುವುದು ಯುಕ್ತವಲ್ಲ. ಎಂಬೀ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಆದರಾದಲೋಪಃ ಓಂ ॥ ೪೧ ॥

ಸೂತ್ರಾರ್ಥ ॥ ನಿರುಪಾಧಿಕ ಭಕ್ತ್ಯತಿಶಯ ನಿಮಿತ್ತದಿಂದಲೇ (ವಿಧಿಬದ್ಧತ್ವ ಪ್ರಯುಕ್ತವಲ್ಲ) ಲಕ್ಷ್ಮೀದೇವಿಗೆ ಭಗವಂತನ ಉಪಾಸನೆಗೆ ಲೋಪವಿಲ್ಲ.

**ಭಾಷ್ಯ ॥ (೧) ಅಬದ್ಧತ್ವೇಽಪಿ ಭಕ್ತಿವಿಶೇಷಾದೇವೋಪಾಸನಾದ್ಯಲೋಪಸ್ತಸ್ಯಾ ಭವತಿ । (೨) ಯಥಾ ಶ್ರೀರ್ನಿತ್ಯಮುಕ್ತಾಽಪಿ ಪ್ರಾಪ್ತಕಾಮಾಽಪಿ ಸರ್ವದಾ । ಉಪಾಸ್ತೇ ನಿತ್ಯಶೋ ವಿಷ್ಣುಮೇವಂ ಭಕ್ತೋ ಹರೇರ್ಭವೇತ್ ॥ ಇತಿ (ಹಿ) ಬೃಹತ್ತಂತ್ರೇ ॥ ೪೧ ॥ ೪ ॥**

---

★ ಈಶ್ವರಃ ಪ್ರಕೃತಿರ್ಜೀವೋ ಜಡಂ ಚೇತಿ ಚತುಷ್ಟಯಂ । ಪದಾರ್ಥಾನಾಂ ಸಮುದ್ದಿಷ್ಟಂ ಎನ್ನುವ ಪ್ರಮಾಣದಲ್ಲಿ ಹೇಳಿದ ನಾಲ್ಕು ತತ್ವಗಳ ಮಧ್ಯದಲ್ಲಿ ಈಶ್ವರ ಜೀವ ಎನ್ನುವ ಎರಡು ತತ್ವಗಳನ್ನೇ ಹೇಳಿದ್ದು. ಜಡವು ಇಲ್ಲವೆಂದಲ್ಲ ಅವ್ಯಕ್ತವು ಅಬದ್ಧವಾದ ಪ್ರಯುಕ್ತ ಪರತತ್ವದಲ್ಲಿ ಅಂತರ್ಭೂತವಾಗಿದೆ.

ಭಾಷ್ಯಾರ್ಥ ॥ (೧) ಯದ್ಯಪಿ ಲಕ್ಷ್ಮೀದೇವಿಯು ಅಬದ್ಧಳು (ನಿತ್ಯಮುಕ್ತಳು) ಕೃತಕೃತ್ಯಳೂ ಆಗಿರುತ್ತಾಳೆ. ಆದಾಗ್ಯೂ ನಿರುಪಾಧಿಕ ಸರ್ವಾತಿಶಯಿತ ಭಕ್ತಿವಶದಿಂದಲೇ ಆ ಲಕ್ಷ್ಮೀದೇವಿಗೆ ಶ್ರೀಹರಿಯ ಉಪಾಸನಾ ಪೂಜಾದಿಗಳಿಗ ಲೋಪವು ಬರುವುದಿಲ್ಲ. (೨) ಹೇಗೆ ಲಕ್ಷ್ಮೀದೇವಿಯು ಸರ್ವಥಾ ನಿತ್ಯಮುಕ್ತಳಾದಾಗ್ಯೂ ಕೃತಕೃತ್ಯಳಾದಾಗ್ಯೂ ಯಾವಾಗಲೂ ಶ್ರೀವಿಷ್ಣುವನ್ನು ಉಪಾಸನಾ ಮಾಡುತ್ತಾಳೋ, ಹೀಗೆಯೇ ಲಕ್ಷ್ಮೀದೇವಿಯಂತೆ ಮತ್ತೊಬ್ಬನೂ ಕೂಡ ನಿರುಪಾಧಿಕವಾಗಿ ಶ್ರೀಹರಿಗೆ ಭಕ್ತನು ಆಗಬೇಕು. ನಿರುಪಾಧಿಕ ಭಕ್ತಿಯಿಂದ ಶ್ರೀಹರಿಗೆ ಉಪಾಸಕನು ಆಗಬೇಕು. ಎಂದು ಬೃಹತ್ತಂತ್ರದಲ್ಲಿ ಹೇಳಿದೆ. ॥ ೪ ॥

ಟೀಕಾ ॥ ರಮಾದೇವಿಯು ಅಸ್ವತಂತ್ರಳಾದ ಪ್ರಯುಕ್ತ ಅವಳಿಗೆ ನಿತ್ಯಮುಕ್ತತ್ವವು ಯುಕ್ತವಲ್ಲ ಎಂಬೀ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಉಪಸ್ಥಿತೇಸ್ತದ್ವಚನಾತ್ ಓಂ ॥ ೪೨ ॥

ಸೂತ್ರಾರ್ಥ ॥ ಶ್ರೀಹರಿಯು ಸಮೀಪದಲ್ಲಿ ನಿತ್ಯದಲ್ಲಿಯೂ ಇದ್ದ ಪ್ರಯುಕ್ತ (ಅಂದರೆ ಲಕ್ಷ್ಮೀದೇವಿಗೆ ನಿತ್ಯದಲ್ಲಿಯೂ ಈಶ್ವರಸಂಬಂಧವಿದ್ದ ಪ್ರಯುಕ್ತ ಅತಿಶಯಿತ ಈಶ್ವರ ಪ್ರಸಾದದಿಂದ) ನಿತ್ಯಮುಕ್ತತ್ವವು ದ್ವಾವೇತೌ ಇತ್ಯಾದಿ ನಿತ್ಯಸಂಬಂಧ ಬೋಧಕ ಶ್ರುತಿಯಿದ್ದ ಪ್ರಯುಕ್ತ ನಿತ್ಯದಲ್ಲಿಯೂ ಈಶ್ವರನ ಸಮೀಪದಲ್ಲಿ ಸ್ಥಿತಿಯು ಸಿದ್ಧವಾಗುತ್ತದೆ.

**ಭಾಷ್ಯ ॥ (೧) ಅನಾದಿಕಾಲೇ ಭಗವತ್ಸಂಬಂಧಿತ್ವಾದ್ಯುಜ್ಯತೇ ಚ ನಿತ್ಯಮುಕ್ತತ್ವಂ (ತಸ್ಯಾಃ) । (೨) ದ್ವಾವೇತಾವನಾದಿನಿತ್ಯಾವನಾದಿಯುಕ್ತೌ ನಿತ್ಯಮು (ಯು)ಕ್ತಾವನಾದಿಕೃತೌ ನಿತ್ಯಕೃತೌ ಯೋಽಯಂ ಪರಮೋ ಯಾ ಚ ಪ್ರಕೃತೀ ರಮತೇ ಹ್ಯಸ್ಯಾಂ ಪರಮೋ ರಮತೇ ಹ್ಯಸ್ಮಿನ್ ಪ್ರಕೃತಿಃ ಸ್ವಸ್ಮಿನ್ ಹಿ ರಮತೇ ಪರಮೋ ನ ಸ್ವಸ್ಮಿನ್ ಪ್ರಕೃತಿರತ ಏನಮಾಹುಃ ಪರಮ ಇತಿ । ಇತಿ ಗೌಪವನಶ್ರುತಿವಚನಾತ್ ॥ ೪೨ ॥ ಅಧಿ. ೨೪ ॥ ೫ ॥**

ಭಾಷ್ಯಾರ್ಥ ॥ (೧) ಅನಾದ್ಯನಂತ ಕಾಲದಲ್ಲಿ ಪರಮಾತ್ಮನಿಂದ ದೇಶಕಾಲಗಳಿಂದ ವ್ಯಾಪ್ತಿಯಿದ್ದುದರಿಂದ ಶ್ರೀಹರಿಗೆ ಅತಿಶಯಿತವಾಗಿ ಅನುಗ್ರಹಪಾತ್ರಳಾದುದರಿಂದ ಶ್ರೀಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವು ಯುಕ್ತವಾಗುತ್ತದೋ. (೨) ಯಾರು ಲಕ್ಷ್ಮೀದೇವಿಯೋ ಯಾವ ಶ್ರೀಪರಮಾತ್ಮನೋ, ಇವರಿಬ್ಬರೂ ಅನಾದಿನಿತ್ಯರು. ದೇಹದಿಂದಲೂ ಅನಾದಿಕಾಲದಲ್ಲಿ ಸಂಬದ್ಧರು. ಅಥವಾ ಅನಾದಿಕಾಲದಿಂದಲೂ ವಿಯೋಗರಹಿತರು. ಅನಾದ್ಯನಂತಕಾಲದಿಂದ ದುಃಖಾಸಂಬದ್ಧರು. ಅನಾದಿಕಾಲದಿಂದಲೂ ಪೂರ್ಣರು. ಸರ್ವಕಾಲದಲ್ಲಿಯೂ ಸುಪೂರ್ಣರು. ಲಕ್ಷ್ಮೀದೇವಿಯಲ್ಲಿ ಶ್ರೀಹರಿಯು ರಮಿಸುತ್ತಾನೆ. ಶ್ರೀಪರಮಾತ್ಮನಲ್ಲಿ ಲಕ್ಷ್ಮೀದೇವಿಯು ರಮಿಸುತ್ತಾಳೆ. ಶ್ರೀ ಪರಮಾತ್ಮನು ಲಕ್ಷ್ಮೀದೇವಿಯಲ್ಲಿ ರಮಿಸತಕ್ಕವನಾದಾಗ್ಯೂ ಲಕ್ಷ್ಮಿಯಲ್ಲಿರುವ ತನ್ನ ಸ್ತ್ರೀರೂಪದಲ್ಲಿ ಪುರುಷರೂಪದಿಂದ ರಮಿಸುತ್ತಾನೆ. ಲಕ್ಷ್ಮೀದೇವಿಯು ತಾನೇ ಪುರುಷರೂಪವನ್ನು ಸ್ವೀಕಾರಮಾಡಿ ಆ ಪುರುಷರೂಪದಿಂದ

ಕ್ರೀಡಿಸುವುದಿಲ್ಲ. ಆದುದರಿಂದ ಈ ವಿಷ್ಣುವನ್ನು ಅನ್ಯಾಪೇಕ್ಷೆಯಿಲ್ಲದೆ ತಾನೇ ರಮಿಸಿಕೊಂಡಿರುವುದರಿಂದ ಲಕ್ಷ್ಮೀದೇವಿಗಿಂತ ಉತ್ತಮನಾದ ಪ್ರಯುಕ್ತ **ಮಾಯಾಃ ಪರಃ** ಎನ್ನುವ ವ್ಯುತ್ಪತ್ತಿಯಿಂದ ಪರಮನೆಂದು ಜ್ಞಾನಿಗಳು ಹೇಳುತ್ತಾರೆ— ಎನ್ನುವ ಗೌಪವನಶ್ರುತಿಯ ವಚನದಿಂದ ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವು ತಿಳಿಯುತ್ತದೆ. ॥ ೪೨ ॥ ೫ ॥

## ಅಧಿಕರಣ ಸಾರಾಂಶ

ಲಕ್ಷ್ಮೀದೇವಿಯು ಉಪಾಸನಾದಲ್ಲಿ ಅಧಿಕಾರವುಳ್ಳವಳೋ ಅಲ್ಲವೋ, ಅವಳು ಬದ್ಧಳೋ ಅಲ್ಲವೋ, ಸೀತಾರುಗ್ಮಿಣ್ಯಾದಿ ರೂಪದಿಂದ ಭೂಮಿಯಲ್ಲಿ ಉತ್ಪತ್ತ್ಯಾದಿಗಳು ಜೀವನಂತೆ ದೇಹಯೋಗಾದಿರೂಪವಾದುವುಗಳೋ ಅಥವಾ ಪ್ರಾದುರ್ಭಾವಾದಿ ರೂಪಗಳೋ, ಲಕ್ಷ್ಮೀದೇವಿಗೆ ನಿತ್ಯದಲ್ಲಿ ಭಗವದರ್ಚನವು ಜನ್ಮಾದಿಗಳಿಗೆ ಕಾರಣವಾದ ಕರ್ಮಾದಿ ಬಂಧನಿವೃತ್ತಿರೂಪ ಪ್ರಯೋಜನಕ್ಕಾಗಿಯೋ ಅಥವಾ ಮುಕ್ತರಂತೆ ನಿರುಪಾಧಿಕ ಭಕ್ತ್ಯತಿಶಯನಿಮಿತ್ತವೋ ಎಂದು ಸಂದೇಹವು. **ಯದರ್ಚಿತಂ ಬ್ರಹ್ಮ ಭವಾದಿಭಿಃ ಸುರೈಃ** ಇತ್ಯಾದಿಗಳಲ್ಲಿ ಲಕ್ಷ್ಮೀದೇವಿಗೂ ಭಗವದುಪಾಸನವು ಶ್ರುತವಾಗಿದೆ. ಅದು ಭಗವತ್ಪ್ರೀತಿದ್ವಾರಾ ಬಂಧದ ಮೋಚನಕ್ಕಾಗಿ. ಅವಳು ಕೃತಕೃತ್ಯಳು ಆಗಿದ್ದರೆ ಅವಳಿಗೆ ಉಪಾಸನೆಯು ಕೂಡಲಾರದು. ಭಕ್ತ್ಯತಿಶಯ ನಿಮಿತ್ತಕವೆಂದು ಹೇಳಲಿಕ್ಕೆ ಕಲ್ಪಕವು ಇಲ್ಲ. ಏವಂಚ ಸೀತಾರುಗ್ಮಿಣ್ಯಾದಿ ರೂಪದಿಂದ ಉತ್ಪತ್ತಿ ತಿರೋಧಾನಾದಿಗಳು, ಕರ್ಮಾಧೀನ ದೇಹೋಪಾದಾನ ತ್ಯಾಗಾದಿ ರೂಪಗಳಾದುದರಿಂದ ಇತರ ಜೀವರಂತೆ ಬದ್ಧತ್ವವು ತಿಳಿದುಬರುವುದರಿಂದ ಉಪಾಸನಾದಲ್ಲಿ ಲಕ್ಷ್ಮೀದೇವಿಯೂ ಅಧಿಕಾರವುಳ್ಳವಳೇ, ಎಂದರೆ— **ಸರ್ವಾಯತನಾ** ಇತ್ಯಾದಿ ಶ್ರುತ್ಯಾದಿಗಳ ಬಲದಿಂದ ನಿತ್ಯದಲ್ಲಿಯೂ ವಿಶೇಷತಃ ಭಗವಂತನ ಸಂಬಂಧವು ಇದ್ದುದರಿಂದ ಅತಿಶಯಿತ ಭಗವತ್ಪ್ರಸಾದಾಧೀನ ನಿತ್ಯಮುಕ್ತತ್ವವು ಅವಗತವಾಗುವುದರಿಂದ ಭೂಮಿಯಲ್ಲಿ ಜನನಾದಿಗಳಿಗೆ ಈಶ್ವರೇಚ್ಛಾಧೀನ ತನ್ನ ಇಚ್ಛೆಯೇ ಹೇತುವಾಗಿರುವುದರಿಂದ ಜನನಾದಿಗಳು ಪ್ರಾದುರ್ಭಾವಾದಿ ರೂಪವಾದುದು, ಕರ್ಮಾಧೀನ ದೇಹ ಸ್ವೀಕಾರಾದಿ ರೂಪವಾದುದಲ್ಲ. ಮತ್ತು **ಯಥಾ ಶ್ರೀರ್ನಿತ್ಯಮುಕ್ತಾಽಪಿ** ಎನ್ನುವ ಸ್ಮೃತಿಯಿಂದ ಭಗವಂತನನ್ನು ಪೂಜಿಸಲಿಕ್ಕೆ ಭಕ್ತ್ಯತಿಶಯವೇ ನಿಮಿತ್ತವು. ॥ ಅಧಿ. ೨೪ ॥

**ಕಾಮಾಧಿಕರಣವು ಸಮಾಪ್ತವಾಯಿತು.**

# ೨೫ ನಿರ್ಧಾರಣಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಶ್ರವಣ ಮನನ ಧ್ಯಾನರೂಪವಾದ ಸಮಸ್ತ ಉಪಾಸನವನ್ನು ಮಾಡಬೇಕೆಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ದರ್ಶನಾರ್ಥಂ ಹ್ಯುಪಾಸನಂ । ತಚ್ಚ ಶ್ರವಣಾದೇರೇವ ಭವತಿ । ಅತಃ ಕಿಮರ್ಥಮತ್ರೋಚ್ಯತೇ ॥ ೧ ॥**

ಭಾಷ್ಯಾರ್ಥ ॥ ಧ್ಯಾನವು ಬ್ರಹ್ಮದರ್ಶನಕ್ಕಾಗಿಯೇ. (ಇತರ ಪ್ರಯೋಜನಕ್ಕಾಗಿ ಅಲ್ಲ) ಆ ದರ್ಶನವು ಶ್ರವಣ ಮನನಗಳಿಂದಲೇ ಆಗುವುದು. ಆದುದರಿಂದ ಸಮಸ್ತೋಪಾಸನವು (ಧ್ಯಾನವು) ಏಕೆ? (ಆದಕಾರಣ ಸಮಸ್ತೋಪಾಸನವು ವ್ಯರ್ಥವಾದುದರಿಂದ ಅದನ್ನು ಮಾಡಬಾರದು.) ಎಂದರೆ ಉತ್ತರವು ಹೇಳಲ್ಪಡುತ್ತದೆ. ॥ ೧ ॥

## ಸೂತ್ರ ॥ ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ ಓಂ ॥ ೪೩ ॥

ಸೂತ್ರಾರ್ಥ ॥ ಇದು ಅದರ ಅರ್ಥವು ಎಂದು ತತ್ವವಿಷಯಕ ನಿಶ್ಚಯವೂ, ಇದೇವೇ ವೇದಾರ್ಥವು ಬೇರೆಯಲ್ಲ ಎನ್ನುವ ದೃಢವಾದ ನಿಶ್ಚಯವೂ ಕೂಡ ಬ್ರಹ್ಮಾಪರೋಕ್ಷದಿಂದ ಬೇರೆಯೇ. ತನ್ನಿರ್ಧಾರಣ ಅರ್ಥನಿಯಮಗಳಿಗೆ ಮುಖ್ಯ ಫಲವಾದರೂ ಬ್ರಹ್ಮಾಪರೋಕ್ಷಕ್ಕೆ ಪ್ರತಿಬಂಧಕೀಭೂತಗಳಾದ ಅಜ್ಞಾನ ಸಂಶಯ ವಿಪರ್ಯಯಗಳ ನಿವೃತ್ತಿಯು. ಶ್ರವಣಾದಿಗಳು ಮೂರೂ ಕರ್ತವ್ಯವೆನ್ನುವುದು ಶ್ರುತಿಪ್ರಸಿದ್ಧವು. ಅಂದರೆ ಶ್ರವಣದಿಂದ ತತ್ವನಿಶ್ಚಯವು ಉಂಟಾಗುತ್ತದೆ. ಅದರಿಂದ ಅಜ್ಞಾನನಿವೃತ್ತಿಯು ಆಗುತ್ತದೆ. ಮನನದಿಂದ ವೇದಾರ್ಥನಿಶ್ಚಯವು. ಅದರಿಂದ ಸಂಶಯ ವಿಪರ್ಯಯಗಳ ನಿವೃತ್ತಿಯಾಗುತ್ತದೆ. ಧ್ಯಾನದಿಂದ ಅಪರೋಕ್ಷ ಜ್ಞಾನವು. ಹೀಗೆ ಫಲಗಳು ಬೇರೆಬೇರೆಯಾದುದರಿಂದ ಶ್ರವಣ ಮನನ ನಿದಿಧ್ಯಾಸನಗಳೆನ್ನುವ ಮೂರನ್ನೂ ಮಾಡಲೇಬೇಕು.

**ಭಾಷ್ಯ ॥ (೧) ತತ್ವನಿಶ್ಚಯೋ ವೇದಾರ್ಥನಿಯಮಶ್ಚ ಬ್ರಹ್ಮದೃಷ್ಟೇಃ ಪೃಥಗೇವ । (೨) ಹಿ ಶಬ್ದೇನ ★ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ (ಬೃ.೪.೪.೫.) ಇತಿ ಶ್ರುತಿಂ ಸೂಚಯತಿ । (೩) ಶ್ರವಣಾದಿಫಲಂ ಚಾಜ್ಞಾನವಿಪರ್ಯಯಾದಿದರ್ಶನಪ್ರತಿಬಂಧನಿವೃತ್ತಿಃ । (೪) ಬ್ರಹ್ಮತರ್ಕೇ ಚ ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ । ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಂ ॥ ಇತಿ ॥ ೪೩ ॥ ಅಧಿ. ೨೫ ॥ ೨ ॥**

ಭಾಷ್ಯಾರ್ಥ ॥ (೧) ಪರಾಪರತತ್ವಜ್ಞಾನವು, ಇದೇ ವೇದಾರ್ಥವು ಬೇರೆಯಲ್ಲ ಎನ್ನುವ ದೃಢನಿರ್ಣಯವೂ (ಶ್ರವಣ ಮನನಗಳ ಫಲಗಳು) ಅವುಗಳು ಬ್ರಹ್ಮಾಪರೋಕ್ಷಜ್ಞಾನದಿಂದ ಪ್ರತ್ಯೇಕವೇ. (ಆದಕಾರಣ ಶ್ರವಣಮನನಮಾತ್ರದಿಂದ ಬ್ರಹ್ಮದರ್ಶನವು ಆಗದಿರುವುದರಿಂದ ಬ್ರಹ್ಮದರ್ಶನಕ್ಕಾಗಿ ಧ್ಯಾನವನ್ನು ಮಾಡಲೇಬೇಕು.) (೨) (ಧ್ಯಾನದಿಂದಲೇ ದರ್ಶನವು ಆಗುವುದಾದರೆ ಶ್ರವಣ ಮನನಗಳು ಏಕೆ ಎಂದರೆ) ಹಿ ಶಬ್ದದಿಂದ ದರ್ಶನಕ್ಕಾಗಿ ಧ್ಯಾನವು ಅದಕ್ಕೆ ಶ್ರವಣ ಮನನಗಳು ಹೀಗೆ ಮೂರೂ ವಿಹಿತವಾದ ಪ್ರಯುಕ್ತ ಸಮಸ್ತ ಉಪಾಸನವನ್ನು ಮಾಡಲೇಬೇಕು. (೩) (ಶ್ರುತಿವಿಹಿತವಾದಾಗ್ಯೂ ಸಮಸ್ತೋಪಾಸನವನ್ನು ಹೇಗೆ ಅಂಗೀಕರಿಸಲಿಕ್ಕೆ ಶಕ್ಯವಾಗುವುದು? ಭಗವದ್ದರ್ಶನವು ಧ್ಯಾನದಿಂದಲೇ ಕೂಡುವುದು. ತತ್ವಜ್ಞಾನಾದಿಗಳೇ ಫಲವಾಗಿ ಉಳ್ಳ ಶ್ರವಣಾದಿಗಳು

---

★ ಇದು ಜಿಜ್ಞಾಸಾಕರಣದಲ್ಲಿ ವ್ಯಾಖ್ಯಾತವಾಗಿದೆ.

ದರ್ಶನಕ್ಕೆ ಉಪಯುಕ್ತವಲ್ಲ ಎಂದರೆ—) ಯದ್ಯಪಿ ಶ್ರವಣಾದಿಗಳಿಗೆ ತತ್ತ್ವಜ್ಞಾನಾದಿಗಳೇ ಫಲವು. ಆದಾಗ್ಯೂ ಅವುಗಳಿಗೆ ಅಷ್ಟು ಮಾತ್ರ ಫಲವಲ್ಲ. ಮತ್ತೆ ಶ್ರವಣಾದಿಗಳ ಫಲವೂ ಅಜ್ಞಾನ ವಿಪರ್ಯಯ ಸಂಶಯರೂಪವಾದ ದರ್ಶನಪ್ರತಿಬಂಧದ ನಿವೃತ್ತಿಯು (ಅದರಲ್ಲಿ ಶ್ರವಣವು ತತ್ತ್ವಜ್ಞಾನವನ್ನು ಹುಟ್ಟಿಸುತ್ತಾ ಅಜ್ಞಾನವನ್ನು ಹೋಗಲಾಡಿಸುತ್ತದೆ. ಮನನವು ವೇದಾರ್ಥನಿರ್ಣಯವನ್ನು ಮಾಡುತ್ತಾ ಸಂಶಯ ವಿಪರ್ಯಯಗಳನ್ನು ಹೋಗಲಾಡಿಸುತ್ತದೆ. ಅಜ್ಞಾನ ಸಂಶಯ ವಿಪರ್ಯಯಗಳು ದರ್ಶನಕ್ಕೆ ಪ್ರತಿಬಂಧಕಗಳು. ಆದುದರಿಂದ ಶ್ರವಣಮನನಗಳು ಪ್ರತಿಬಂಧಕಗಳನ್ನೇ ಹೋಗಲಾಡಿಸಿ ದರ್ಶನಕ್ಕೆ ಉಪಯುಕ್ತಗಳಾದ ಪ್ರಯುಕ್ತ ಸಮಸ್ತೋಪಾಸನವನ್ನು ಮಾಡಲೇಬೇಕು. (೪) (ಶ್ರವಣಾದಿಗಳು ಪ್ರತಿಬಂಧಕಗಳನ್ನು ಹೋಗಲಾಡಿಸುತ್ತಾ ಜ್ಞಾನಕ್ಕೆ ಉಪಯುಕ್ತಗಳು ಎನ್ನುವ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ.) ಗುರುಗಳಿಂದ ಉಪದೇಶವನ್ನು ಹೊಂದಿ ಉಪದೇಶದಿಂದುಂಟಾದ ತತ್ತ್ವಜ್ಞಾನದ್ವಾರಾ ಬ್ರಹ್ಮವಿಷಯಕ ಅಜ್ಞಾನವನ್ನು ಪರಿಹರಿಸಿಕೊಂಡು ಬ್ರಹ್ಮವಿಷಯಕ ಯುಕ್ತ್ಯನುಸಂಧಾನಾತ್ಮಕವಾದ ಮನನವನ್ನು ಮಾಡಿ ಬ್ರಹ್ಮವಿಷಯಕ ಸಂಶಯ ಮಿಥ್ಯಾಜ್ಞಾನಗಳನ್ನು ಪರಿಹರಿಸಿಕೊಂಡು ಹಾಗೆಯೇ ಧ್ಯಾನ ಮಾಡಿಕೊಂಡು ದೃಢವಾದ ಪ್ರತಿಬಂಧವನ್ನೂ ಕೂಡ ಪರಿಹರಿಸಿಕೊಂಡು ಬ್ರಹ್ಮಾಪರೋಕ್ಷವನ್ನು ಹೊಂದುತ್ತಾನೆ, ಎಂದು ಬ್ರಹ್ಮತರ್ಕದಲ್ಲಿಯೂ ಅಜ್ಞಾನಾದಿ ನಿವೃತ್ತಿಯು ಶ್ರವಣಾದಿಗಳ ಫಲವು ಎಂದುಕ್ತವಾಗಿದೆ. ॥ ೪೨ ॥ ೨ ॥

## ಅಧಿಕರಣ ಸಾರಾಂಶ

ಶ್ರವಣ ಮನನ ಧ್ಯಾನರೂಪವಾದ ಮೂರು ವಿಧ ಉಪಾಸನವನ್ನು ಪ್ರತ್ಯೇಕವಾಗಿ ಮಾಡಬೇಕೋ, ಸಮಸ್ತವನ್ನೂ ಮಾಡಬೇಕೋ ಮೂರಕ್ಕೂ ಫಲವು ಇಲ್ಲವೋ, ಇದೆಯೋ, ದರ್ಶನವು ಶ್ರವಣಾದಿಗಳ ಮಧ್ಯದಲ್ಲಿ ಒಂದರಿಂದ ಸಾಧ್ಯವೋ, ಅಥವಾ ಮೂರರಿಂದ ಸಾಧ್ಯವೋ, ಎಂದು ಸಂದೇಹವು. ಆತ್ಮಾ ವಾ ಅರೇ ದ್ರಷ್ಟವ್ಯಃ ಎನ್ನುವ ಶ್ರುತಿಯಿಂದ ಉಪಾಸನವು ಭಗವದ್ದರ್ಶನಕ್ಕೆ ಆವಶ್ಯಕವು. ಭಗವದ್ದರ್ಶನವು ಶ್ರವಣ ಮನನಗಳಿಂದ ಅಥವಾ ಧ್ಯಾನದಿಂದಲೇ ಕೂಡುವಾಗ ಶ್ರವಣಾದಿಗಳು ಮೂರೂ ಆವಶ್ಯಕವು ಎನ್ನುವಲ್ಲಿ ಪ್ರಮಾಣವು ಇಲ್ಲ. ಮೂರಕ್ಕೆ ಉಪಯೋಗವೂ ಇಲ್ಲ. ಏವಂಚ ಪ್ರಮಾಣ ಉಪಯೋಗಗಳು ಇಲ್ಲದಿರುವುದರಿಂದ ದರ್ಶನವು ಶ್ರವಣಾದಿ ಮೂರರಿಂದ ಸಾಧ್ಯವಾಗದಿರುವುದರಿಂದ ಫಲವು ಇಲ್ಲದಿರುವ ಪ್ರಯುಕ್ತ ಸಮಸ್ತೋಪಾಸನವನ್ನು ಮಾಡಕೂಡದು. ಎಂದರೆ, ಅರೇ ದ್ರಷ್ಟವ್ಯಃ ಎನ್ನುವ ಶ್ರುತಿಯಲ್ಲಿ ದರ್ಶನವನ್ನುದ್ದೇಶಿಸಿ ಶ್ರವಣಾದಿಗಳು ಮೂರನ್ನು ವಿಧಿಸಿಯದೆ. ವಿಕಲ್ಪದ್ಯೋತಕ ಶಬ್ದಗಳು ಇಲ್ಲದಿರುವುದರಿಂದ ಶ್ರವಣಾದಿಗಳು ಮೂರೂ ದರ್ಶನಕ್ಕೆ ಕಾರಣವು, ಅಲ್ಲದೆ ಉಪಯೋಗವು ಇಲ್ಲವೆಂದೂ ಹೇಳಕೂಡದು. ದರ್ಶನಕ್ಕೆ ಧ್ಯಾನವೇ ಹೇತುವಾದಾಗ್ಯೂ ಧ್ಯಾನಕ್ಕೆ ಶ್ರವಣಮನನಗಳು ಬ್ರಹ್ಮಾಪರೋಕ್ಷಕ್ಕೆ ಅಪೇಕ್ಷಿತವಾದ ಪ್ರತಿಬಂಧಕೀಭೂತಗಳಾದ ಅಜ್ಞಾನ ಸಂಶಯ ವಿಪರ್ಯಯಗಳನ್ನು ಹೋಗಲಾಡಿಸಿ ಉಪಯುಕ್ತಗಳಾಗುತ್ತವೆ. ಏವಂಚ ಸಮಸ್ತೋಪಾಸನವನ್ನು ಮಾಡಲೇಬೇಕು. ॥ ಅಧಿ. ೨೫ ॥

**ನಿರ್ಧಾರಣಾಧಿಕರಣವು ಸಮಾಪ್ತವಾಯಿತು.**

# ೨೬ ಪ್ರದಾನಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭಗವದುಪಾಸನದಲ್ಲಿ ಪ್ರೀತಿಪೂರ್ವಕವಾಗಿ ಗುರೂಪದೇಶವು ಆವಶ್ಯಕವೆಂದು ಸಮರ್ಥಿಸುತ್ತಾರೆ. ಆತ್ಮಾ ವಾ ಅರೇ ಎನ್ನುವ ಶ್ರುತಿಯಲ್ಲಿ ಕೇವಲ ಶ್ರವಣಾದಿಗಳೇ ದರ್ಶನಕ್ಕೆ ಕಾರಣಗಳೆಂದು ತಿಳಿದುಬರುವುದರಿಂದ ಶ್ರವಣಾದಿಗಳನ್ನು ಯಾವ ರೀತಿಯಿಂದ ಮಾಡಿದರೂ ಬ್ರಹ್ಮಾಪರೋಕ್ಷ್ಯವು ಆಗುವುದು. ಪ್ರೀತಿಪೂರ್ವಕವಾಗಿ ಗುರೂಪದೇಶವು ಆವಶ್ಯಕವಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಪ್ರದಾನವದೇವ ಹಿ ತದುಕ್ತಂ ಓಂ ॥ ೪೪ ॥

**ಸೂತ್ರಾರ್ಥ ॥** ಶ್ರವಣಾದಿಗಳು ಮೂರು ಪ್ರೀತಿಪೂರ್ವಕವಾಗಿ ಗುರೂಪದೇಶಯುಕ್ತವಾದುದೇ ಬ್ರಹ್ಮಾಪರೋಕ್ಷಾಖ್ಯ ಫಲವುಳ್ಳದ್ದು. (ಶ್ರವಣಾದಿಗಳು ಮಾತ್ರವಲ್ಲ) ಜ್ಞಾನವು ಗುರುಪ್ರಸಾದಾಧೀನವೆನ್ನುವುದು ಆಚಾರ್ಯವಾನ್ ಪುರುಷೋ ವೇದ ಎನ್ನುವ ಶ್ರುತಿಯಲ್ಲಿ ಉಕ್ತವಾಗಿದೆ.

**ಭಾಷ್ಯ ॥ (೧) ನ ಚ ಶ್ರವಣಾದಿಮಾತ್ರೇಣ ಬ್ರಹ್ಮದೃಷ್ಟಿರ್ಭವತಿ । ಕಿಂ ತು ಪ್ರೀತಿಕರ್ತವ್ಯೇನ । ಯಥಾ ಗುರುದತ್ತಂ ತಥೈವ ಭವತಿ । (೨) ಆಚಾರ್ಯವಾನ್ ಪುರುಷೋ ವೇದ (ಛಾ. ೬.೧೪.೨.) । ಇತಿ ಹ್ಯುಕ್ತಂ ॥ ೪೪ ॥ ಅಧಿ. ೨೬ ॥ ೧ ॥**

**ಭಾಷ್ಯಾರ್ಥ ॥** (೧) ಯಥಾಕಥಂಚಿತ್ (ಅಂದರೆ ಗುರೂಪದೇಶವಿಲ್ಲದೆ ಲಿಖಿತಪಾಠಾದಿಗಳಿಂದಲೇ ಅನುಷ್ಠಿತವಾದ ಕೇವಲ ಶ್ರವಣಾದಿಗಳಿಂದಲೇ ಬ್ರಹ್ಮಾಪರೋಕ್ಷವು ಆಗುವುದಿಲ್ಲ. ಮತ್ತೆ ಇತಿ ಕರ್ತವ್ಯತಾ (ಸಹಕಾರಿ) ರೂಪವಾದ ಗುರುಪ್ರಸಾದ ಪೂರ್ವಕವಾದ ಗುರೂಪದೇಶದಿಂದ ಸಾಧ್ಯವೇ ಆದ ಶ್ರವಣಾದಿಗಳಿಂದಲೇ ಆಗುತ್ತದೆ. ಹೇಗೆ ಗುರುಗಳ ಉಪದೇಶವೋ ಹಾಗೆಯೇ ಗುರುಗಳ ಉಪದೇಶಾನುಸಾರವಾಗಿಯೇ ಫಲವು ಲಭಿಸುವುದು. (೨) (ಜ್ಞಾನವು ಗುರುಗಳ ಪ್ರಸಾದಾಧೀನವೆನ್ನುವುದು ಹೇಗೆ ತಿಳಿಯುತ್ತದೆ ಎಂದರೆ) ಗುರುಗಳ ಅನುಗ್ರಹವುಳ್ಳ ಪುರುಷನೇ ಪರಬ್ರಹ್ಮನನ್ನು ತಿಳಿಯುತ್ತಾನೆ, ಎಂದು ಛಾಂದೋಗ್ಯದಲ್ಲಿ ಭಗವಜ್ಞಾನವು ಗುರು ಪ್ರಸಾದಾಧೀನವೇ ಎಂದು ಉಕ್ತವಾಗಿದೆ. ॥ ೪೪ ॥ ೧ ॥

### ಅಧಿಕರಣ ಸಾರಾಂಶ

ಶ್ರವಣ ಮನನ ನಿದಿಧ್ಯಾಸಗಳು ಮೂರು ಯಥಾಕಥಂಚಿತ್ ಅನುಷ್ಠಿತವಾದುದು ಜ್ಞಾನಕ್ಕೆ ಹೇತುವೋ, ಅಥವಾ ಪ್ರೀತಿಪೂರ್ವಕವಾಗಿ ಗುರೂಪದೇಶಯುಕ್ತವಾದ ಶ್ರವಣಾದಿಗಳೋ, ಎಂದು ಸಂದೇಹವು. ಗುರೂಪದೇಶಯುಕ್ತ ಶ್ರವಣಾದಿಗಳೇ ಜ್ಞಾನಕ್ಕೆ ಹೇತುವು ಎನ್ನುವಲ್ಲಿ ಪ್ರಮಾಣವಿಲ್ಲ. ಅಲ್ಲದೆ ದ್ರಷ್ಟವ್ಯಃ ಎನ್ನುವ ಶ್ರುತಿಯಲ್ಲಿ ಬ್ರಹ್ಮಾಪರೋಕ್ಷವನ್ನುದ್ದೇಶಿಸಿಕೊಂಡು ಶ್ರವಣಾದಿಗಳನ್ನೇ ವಿಧಿಸಿದ್ದಾರೆ. ಜ್ಞಾನವು ಗುರುಪ್ರಸಾದಾಧೀನವಾದರೆ ಜ್ಞಾನಿಗಳಿಗೆ ಆಗತಕ್ಕ ಮೋಕ್ಷವು ಗುರುಗಳ ಅಧೀನವಾಗಬೇಕಾಗುವುದರಿಂದ ಕದಾಚಿತ್ ಗುರುಗಳಿಗೆ ಸಿಟ್ಟು ಬಂದರೆ ಜ್ಞಾನಿಗಳಿಗೂ ಮೋಕ್ಷವೇ

ಇಲ್ಲವೆಂದಾಗಬೇಕಾಗುವುದು. ತಥಾಚ ಗುರೂಪದೇಶ ಸಾಧ್ಯವಾದ ಶ್ರವಣಾದಿಗಳು ಜ್ಞಾನಹೇತುವಲ್ಲ, ಮತ್ತೆ ಕೇವಲ ಶ್ರವಣಾದಿಗಳೇ ಜ್ಞಾನಕ್ಕೆ ಕಾರಣವು, ಎಂದರೆ, ಪ್ರೀತಿಪೂರ್ವಕ ಗುರೂಪದೇಶ ಸಾಧ್ಯವಾದ ಶ್ರವಣಾದಿಗಳೇ ಜ್ಞಾನಕ್ಕೆ ಹೇತುವು. ಕೇವಲ ಶ್ರವಣಾದಿಗಳು ಅಲ್ಲ. **ಆಚಾರ್ಯವಾನ್ ಪುರುಷಃ** ಎನ್ನುವ ಶ್ರುತಿಯಲ್ಲಿ ಜ್ಞಾನವು ಗುರುಗಳ ಪ್ರಸಾದಾಧೀನವೆಂದು ಅವಗತವಾಗುವುದರಿಂದ ಗುರುಗಳ ಅನುಗ್ರಹವಿಲ್ಲದೆ ಕೇವಲ ಶ್ರವಣಾದಿಗಳಿಂದ ಜ್ಞಾನವು ಸಿದ್ಧಿಸಲಾರದು. **ಸಮ್ಯಕ್ ಲಕ್ಷಣಸಂಪನ್ನಃ ಯದ್ದದ್ಯಾತ್ಸು ಪ್ರಸನ್ನ ಧೀಃ । ಶಿಷ್ಯಾಯ ಸತ್ಯಂ ಭವತಿ ,** ಇತ್ಯಾದಿ ಸ್ಮೃತಿಗಳಿಂದ ಈ ಅರ್ಥವು ಸಿದ್ಧಿಸುವುದು. ಏವಂಚ ಶ್ರವಣಾದಿಗಳು ಪ್ರಧಾನ ಸಾಧನಗಳು, ಗುರೂಪದೇಶವು ಶ್ರವಣಾದಿಗಳಿಗೆ ಅಂಗವು. ಜ್ಞಾನವು ಗುರೂಪದೇಶದ ಅಧೀನವಾದಾಗ್ಯೂ ಜ್ಞಾನಕ್ಕೆ ಕಾರಣವಾದ ಶ್ರವಣಕ್ಕೂ ಗುರೂಪದೇಶವು ಅಂಗವಾಗುವುದು. ಕದಾಚಿತ್ ಗುರು ಕೋಪದಿಂದ ಜ್ಞಾನವೂ ಇಲ್ಲವೆಂದಾಗುವುದು ಅಥವಾ ಜ್ಞಾನಿಗೂ ಮೋಕ್ಷವು ಇಲ್ಲವೆಂದಾಗಬೇಕಾಗುವುದುದೆಂದು ಹೇಳಕೂಡದು. ಜ್ಞಾನ ಮೋಕ್ಷಗಳು ಈಶ್ವರನಿಂದ ಕ್ಲಪ್ತಗಳಾಗಿರುವುದರಿಂದ ಜ್ಞಾನ ಮೋಕ್ಷಗಳು ಇಲ್ಲವೆಂದಾಗುವುದೆನ್ನುವುದು ಕೂಡಲಾರದು. **ಜ್ಞಾನಿತೋ ಗುರುಶಾಪೇಽಪಿ** ಇತ್ಯಾದಿ ಸ್ಮೃತಿಗಳಿಂದ ಗುರುಶಾಪಾದಿಗಳು ಜ್ಞಾನಾದಿಗಳ ಹ್ರಾಸಕ್ಕೆ ಮಾತ್ರ ಕಾರಣಗಳು. ತಥಾಚ ಪ್ರೀತಿಪೂರ್ವಕವಾಗಿ ಗುರುಗಳ ಉಪದೇಶಯುಕ್ತವಾದ ಶ್ರವಣಾದಿಗಳೇ ಜ್ಞಾನಕ್ಕೆ ಕಾರಣವು. ॥ ಅಧಿ. ೨೬ ॥

**ಪ್ರದಾನಾಧಿಕರಣವು ಸಮಾಪ್ತವಾಯಿತು.**

# ೨೭ ಲಿಂಗಭೂಯಸ್ತ್ವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಶ್ರವಣಾದಿಗಳಕ್ಕಿಂತ ಗುರುಪ್ರಸಾದವೇ ಬಲಿಷ್ಠವು ಎಂದು ಸಮರ್ಥಿಸುತ್ತಾರೆ—

## ಭಾಷ್ಯ ॥ ಗುರುಪ್ರಸಾದಃ ಸ್ವಪ್ರಯತ್ನೋ ವಾ ಬಲವಾನಿತಿ । ನಿಗದ್ಯತೇ ॥ ೧ ॥

**ಭಾಷ್ಯಾರ್ಥ ॥** ಗುರುಗಳ ಅನುಗ್ರಹವು ಬಲಿಷ್ಠವೋ ಶ್ರವಣಾದಿರೂಪವಾದ ಶಿಷ್ಯ ಪ್ರಯತ್ನವೋ ಎರಡೂ ಸಮವೋ, ಗುರುಪ್ರಸಾದವು ಕೇವಲ ಇತಿಕರ್ತವ್ಯತಾ (ಸಹಕಾರಿ) ರೂಪವಾದುದರಿಂದ (ಶಿಷ್ಯ ಪ್ರಯತ್ನವೇ ಬಲಿಷ್ಠವು. ಸಾಧನಕ್ಕಿಂತಲೂ ಸಹಕಾರಿಯು ಪ್ರಬಲವೆಂದು ದೃಷ್ಟವಾಗಲಿಲ್ಲ) ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತವು ಹೇಳಲ್ಪಡುತ್ತದೆ.

## ಸೂತ್ರ ॥ ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ ॥ ೪೫ ॥

**ಸೂತ್ರಾರ್ಥ ॥** ಗುರೂಪದೇಶವು ಶ್ರವಣಾದಿರೂಪವಾದ ತನ್ನ ಪ್ರಯತ್ನಕ್ಕಿಂತಲೂ ಜ್ಞಾನಸಾಧನದಲ್ಲಿ ಬಲಿಷ್ಠವು. ಲಿಂಗಗಳಿಗೆ ಬಾಹುಲ್ಯವು ಕಂಡದ್ದರಿಂದ. ಶ್ರವಣಾದಿಗಳನ್ನು ಅವಶ್ಯವಾಗಿ ಮಾಡಬೇಕು. ಶ್ರೋತವ್ಯಃ ಇತ್ಯಾದಿ ಶ್ರುತಿಯು ಇದೆ.

ಭಾಷ್ಯ ॥ (೧) ಋಷಭಾದಿಭ್ಯೋ ವಿದ್ಯಾಂ ಜ್ಞಾತ್ವಾಽಪಿ ಸತ್ಯಕಾಮೇನ ಭಗವಾಂಸ್ತ್ವೇವ ಮೇ ಕಾಮೇ ಬ್ರೂಯಾತ್ (ಛಾ.೪.೯.೨.) । (೨) ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ । ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತಿ (ಛಾ.೪.೯.೩.) ಇತಿ ವಚನಾತ್ । (೩) ಅತ್ರ ಹ ನ ಕಿಂಚನ ವೀಯಾಯೇತ್ಯನುಜ್ಞಾನಾದುಪಕೋಸಲವಚನಾಚ್ಚ । ಲಿಂಗಭೂಯಸ್ತ್ವಾದ್ಗುರುಪ್ರಸಾದ್ಯ ಏವ ಬಲವಾನ್ । (೪) ತರ್ಹಿ ತಾವತಾಽಲಮಿತಿ ನ ಮಂತವ್ಯಂ । ಶ್ರೋತವ್ಯೋ ಮಂತವ್ಯಃ (ಬೃ.೪.೬.೫.) ಇತ್ಯಾದೇಸ್ತದಪಿ ಕರ್ತವ್ಯಂ । (೫) ವಾರಾಹೇ ಚ । ಗುರುಪ್ರಸಾದೋ ಬಲವಾನ್ನ ತಸ್ಮಾದ್ಬಲವತ್ತರಂ । ತಥಾಽಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ॥ ಇತಿ ॥ ೪೫ ॥ ಅಧಿ. ೨೭ ॥ ೨ ॥

ಭಾಷ್ಯಾರ್ಥ ॥ (೧) (ಗುರುಪ್ರಸಾದ ಪೂರ್ವಕವಾಗಿ ಉಪದೇಶವೇ ಶ್ರವಣಾದಿಗಳಿಗಿಂತ ಪ್ರಬಲವು. ಆ ವಿಷಯದಲ್ಲಿ ಬಹುಲಿಂಗಗಳು ಕಂಡಿವೆ. ಹೇಗೆಂದರೆ) ವೃಷಭ ಅಗ್ನಿ ಹಂಸ ಜಲವಾಯಸಸ್ವರೂಪವುಳ್ಳ ವಾಯು ಅಗ್ನಿ ಚತುರ್ಮುಖ ವರುಣ ಇವರಿಂದ ಬ್ರಹ್ಮವಿದ್ಯೆಯನ್ನು ಅಥವಾ ಜ್ಞಾನಾದಿಗುಣಗಳುಳ್ಳ ಬ್ರಹ್ಮನನ್ನು ತಿಳಿದವರಾದಾಗ್ಯೂ ಸತ್ಯಕಾಮ ಎನ್ನುವ ಋಷಿಗಳು (ತನಗೆ ಉಪನಯನಮಾಡಿದ ಗುರುಗಳಾದ ಗೌತಮರ ಹತ್ತಿರ ಯದ್ಯಪಿ ದೇವತೆಗಳಿಂದ ವಿದ್ಯೆಯನ್ನು ನಾನು ಕೇಳಿರುವೆನು, ಆದಾಗ್ಯೂ) ಪೂಜ್ಯರಾದ ತಾವೇ ನನ್ನ ಶುಭಕ್ಕಾಗಿ ಉಪದೇಶ ಕೊಡಬೇಕು. (ಇದೊಂದು ಲಿಂಗವು) ಇದರಿಂದ (೨) ಏಕೆಂದರೆ ನಿಮ್ಮಂತಹ ಇತರ ಉಪದೇಶಕರಿಂದಲೇ ನನ್ನಿಂದ ವಿದ್ಯೆಯು ಶ್ರುತವಾಗಿದೆ. (ಆಚಾರ್ಯರಿಂದ ಅಲ್ಲ) ಉಪನಯನಾದಿಗಳನ್ನು ಮಾಡಿದ ಆಚಾರ್ಯರೆಂದು ಸ್ವೀಕೃತರಾದವರಿಂದಲೇ ಲಬ್ಧವಾದ ವಿದ್ಯೆಯು ಸಾಧುತಮತ್ವವನ್ನು ವಾ ಸ್ಥಿರತ್ವವನ್ನು ಹೊಂದಿಸಿ ಕೊಡುತ್ತದೆ. ಎಂದು ಪ್ರಾರ್ಥಿಸಿಕೊಳ್ಳುವ ಪ್ರಯುಕ್ತವೂ ಗುರೂಪದೇಶವು ಅತ್ಯಾವಶ್ಯಕವೆಂದು ತಿಳಿದುಬರುತ್ತದೆ.) (ಇದೊಂದೂ ಲಿಂಗವು) (ಕೇವಲ ಶ್ರವಣಾದಿಗಳೇ ಪ್ರಬಲವಾಗಿದ್ದರೆ ಸತ್ಯಕಾಮರು ಗುರುಗಳಾದ ಗೌತಮರ ಹತ್ತಿರ ಅನುಗ್ರಹ ಪೂರ್ವಕವಾಗಿ ಉಪದೇಶಿಸಬೇಕೆಂದು ಪ್ರಾರ್ಥಿಸುತ್ತಿರಲಿಲ್ಲ) (೩) (ಆಗ ಗುರುಗಳಾದ ಗೌತಮರು ಋಷಭಾದಿ ದೇವತೆಗಳಿಂದ) (ಅತ್ರ = ವಿದ್ಯೆಯನ್ನು ಶ್ರವಣ ಮಾಡಿದ ನಿಮಿತ್ತದಿಂದ ನಿನಗೆ ಯಾವುದೊಂದು ಹಾನಿಯೂ ಆಗಲಿಲ್ಲ ಎಂದು (ಶಿಷ್ಯನಾದ ಸತ್ಯಕಾಮನನ್ನು ಕುರಿತು ಹೇಳಿದರು) ಹೀಗೆ ಗೌತಮರು ದೇವತೆಗಳು ಉಪದೇಶಮಾಡಿದ ವಿಷಯದಲ್ಲಿಯೇ ತನಗೆ ಅಭಿಮತಿಸೂಚಕವಾದ ಶಬ್ದೋಕ್ತಿ ರೂಪವಾದ ಅನುಜ್ಞೆಯನ್ನು ಕೊಟ್ಟದ್ದರಿಂದ (ಗುರ್ವನುಗ್ರಹವು ಆವಶ್ಯಕವೆಂದು ತಿಳಿದುಬರುತ್ತದೆ) (ಇದೊಂದು ಲಿಂಗವು) (ಮತ್ತೂ ಲಿಂಗಾಂತರವನ್ನೂ ತೋರಿಸುತ್ತಾರೆ) ಸತ್ಯಕಾಮಾಖ್ಯ ಗುರುಗಳ ಸಮೀಪದಲ್ಲಿ ಉಪಕೋಸಲರೆಂಬ ಋಷಿಗಳು ಮಾಡಿದ ಪ್ರಾರ್ಥನಾರೂಪವಾದ ವಚನದಿಂದಲೂ ಮತ್ತು ಉಪಕೋಸಲರನ್ನು ಕುರಿತು ಸತ್ಯಕಾಮಾಖ್ಯ ಗುರುಗಳ ಉಪದೇಶರೂಪವಾದ ವಚನದಿಂದಲೂ (ತತ್ತ್ವಪ್ರದೀಪದಲ್ಲಿ ಆದರೂ) ಸತ್ಯಕಾಮರ ಸಮೀಪದಲ್ಲಿ ಉಪಕೋಸಲರಿಗೆ ಉಪದೇಶಿಸಬೇಕೆನ್ನುವ ಹೆಂಡತಿಯ ಪ್ರಾರ್ಥನೆ ಯಿಂದಲೂ ಉಪಕೋಸಲನಿಗೋಸ್ಕರ ಗಾರ್ಹಪತ್ಯಾದ್ಯಗ್ನಿಗಳ ಉಪದೇಶದಿಂದಲೂ ಆ ಅಗ್ನಿಗಳ

ಪ್ರತ್ಯೇಕವಾಗಿ ಬ್ರಹ್ಮ ವಿದ್ಯೋಪದೇಶದಿಂದಲೂ ಆಚಾರ್ಯರಿಂದ ತತ್ವಜ್ಞಾನವನ್ನು ಹೊಂದು ಎಂದು ಉಪ ಕೋಸಲನಿಗೋಸ್ಕರ ಗಾರ್ಹಪತ್ಯಾದಿ ★ ಅಗ್ನಿಗಳ ವಚನದಿಂದಲೂ, ಎಂದುಕ್ತವಾಗಿದೆ) ತಥಾಚ ಸತ್ಯಕಾಮರ ಪ್ರಾರ್ಥನಾ, ಗೌತಮರ ಅನುಜ್ಞಾ, ಉಪಕೋಸಲರ ಪ್ರಾರ್ಥನಾ, ಸತ್ಯಕಾಮರ ಉಪದೇಶರೂಪವಾದ ಬಹುಲಿಂಗಗಳಿಂದ ಗುರುಗಳ ಪ್ರಸಾದವೇ (ಶ್ರವಣಾದಿರೂಪವಾದ ತನ್ನ ಪ್ರಯತ್ನಕ್ಕಿಂತಲೂ) ಪ್ರಬಲವು. (೪) ಗುರುಪ್ರಸಾದವೇ ಪ್ರಬಲವಾದರೆ ಗುರುಪ್ರಸಾದವೇ ಸಾಕು. ಶ್ರವಣಾದಿಗಳು ಬೇಕಾಗಿಲ್ಲ ವ್ಯರ್ಥವೇ, ಎಂದು ತಿಳಿಯಕೂಡದು. ಶ್ರೋತವ್ಯಃ ಇತ್ಯಾದಿ ಶ್ರುತಿಗಳಿಂದ ಶ್ರವಣಾದಿಗಳನ್ನೂ ಅವಶ್ಯಕವಾಗಿ ಮಾಡಲೇಬೇಕು. (೫) ಸಾಧನಗಳಲ್ಲಿ ಗುರುಪ್ರಸಾದವೇ ಪ್ರಬಲವು. ಪ್ರಸಾದದ ಕೆಯಿಂದ ಬಲಿಷ್ಠವಾದ ಸಾಧನವು ಇನ್ನೊಂದು ಇಲ್ಲ. ಆದಾಗ್ಯೂ ಮೋಕ್ಷಪ್ರಾಪ್ತಿಗಾಗಿ ಶ್ರವಣಾದಿಗಳನ್ನು ಮಾಡಲೇಬೇಕು. ಎಂದು (ಸೂತ್ರದಲ್ಲಿ ಮಾತ್ರ ಹೇಳಿದ್ದಲ್ಲ) ವಾರಾಹಪುರಾಣ ದಲ್ಲಿಯೂ ಹೇಳಿದೆ. ॥ ೪೫ ॥ ೨ ॥

## ಅಧಿಕರಣ ಸಾರಾಂಶ

ಶ್ರವಣ ಮೊದಲಾದ ಸಾಧನವು, ಶ್ರವಣಾದಿಗಳಿಗೆ ಅಂಗವಾವ ಗುರೂಪದೇಶವು ಇವೆರಡೂ ಸಮಬಲವುಳ್ಳದ್ದೋ, ಅಥವಾ ಎರಡರಲ್ಲಿ ಒಂದು, ಅಂದರೆ ಶ್ರವಣಾದಿರೂಪ ಶಿಷ್ಯಪ್ರಯತ್ನವು ಬಲಿಷ್ಠವೋ, ಗುರ್ವನುಗ್ರಹಪೂರ್ವಕ ಉಪದೇಶವು ಪ್ರಬಲವೋ, ಅದಕ್ಕಾಗಿ ಪುರುಷತ್ವಸಾಮ್ಯವು ಗುರುಶಿಷ್ಯ ಪ್ರಯತ್ನಗಳಿಗೆ ಸಾಮ್ಯಾಪಾದಕವಾಗುತ್ತದೋ ಇಲ್ಲವೋ, ಎಂದು ಸಂದೇಹವು. ಎಲ್ಲಿಯೂ ಸಹಕಾರಿಗೆ ಸಾಧನಕ್ಕಿಂತಲೂ ಪ್ರಾಬಲ್ಯವು ದೃಷ್ಟವಾಗಲಿಲ್ಲ. ಸಹಕಾರಿತ್ವ ಭಂಗವೇ ಬರಬೇಕಾಗುವುದು. ಶ್ರವಣಾದಿಗಳಿಗೆ ವೈಗುಣ್ಯವೂ ಬರಬೇಕಾಗುವುದು, ಎನ್ನುವ ಬಾಧಕವೂ ಅದೆ. ಸಾಧಕವಿಲ್ಲ. ಆದಕಾರಣ ಗುರೂಪದೇಶವು ಬಲಿಷ್ಠವಲ್ಲ. ಮತ್ತೆ ಪ್ರಧಾನ ಸಾಧನವಾದುದರಿಂದ ಶ್ರವಣಾದಿಗಳೇ ಬಲಿಷ್ಠಗಳು, ಎಂದರೆ— ಶ್ರವಣಾದಿಗಳಿಗೂ ಗುರೂಪದೇಶಕ್ಕೂ ಸಾಮ್ಯವು ಯುಕ್ತವಲ್ಲ. ಪುರುಷತ್ವವು ಸಾಮ್ಯವಾದಾಗ್ಯೂ, ಗುರುತ್ವ ಶಿಷ್ಯತ್ವಗಳಲ್ಲಿ ನ್ಯೂನಾಧಿಕಭಾವವು ಇದ್ದಂತೆಯೇ, ಶ್ರವಣಾದಿರೂಪ ಶಿಷ್ಯಪ್ರಯತ್ನ ಉಪದೇಶರೂಪ ಗುರುಪ್ರಯತ್ನ ಇವುಗಳಲ್ಲಿಯೂ ನ್ಯೂನಾಧಿಕಭಾವವು ಇದ್ದೇ ಇದೆ. ಪುರುಷತ್ವ ಮಾತ್ರವು ಅಪ್ರಯೋಜಕವು. ಏವಂಚ ಬಹುಲಿಂಗರೂಪ ಸಾಧಕಗಳು ಇದ್ದುದರಿಂದ

★ ಉಪಕೋಸಲ ಎನ್ನುವ ಋಷಿಗೆ ಸತ್ಯಕಾಮರು ವಿದ್ಯೆಯನ್ನು ಉಪದೇಶಿಸಬೇಕೆಂದು ತನ್ನ ಹೆಂಡತಿಯಿಂದ ಪ್ರಾರ್ಥಿತರಾದಾಗ್ಯೂ ವಿದ್ಯೆಯನ್ನುಪದೇಶಿಸಲಿಲ್ಲ. ಆಗ ಉಪಕೋಸಲರು ಗುರುಗಳ ಆಜ್ಞಾನುಸಾರವಾಗಿ ಬಹುವರ್ಷಗಳಲ್ಲಿ ಗಾರ್ಹಪತ್ಯಾದ್ಯ ಗ್ನಿಗಳನ್ನು ಸೇವಿಸಿದರು. ಆಗ ಸಂತುಷ್ಟರಾಗಿ ಗಾರ್ಹಪತ್ಯಾದ್ಯಗ್ನಿಗಳು ಮಿಲಿತ ರಾಗಿಯೂ ಪ್ರತ್ಯೇಕವಾಗಿಯೂ ಬ್ರಹ್ಮ ವಿದ್ಯೆಯನ್ನುಪದೇಶಿಸಿದರು. ಹೀಗೆ ಉಪ ಕೋಸಲರು ಅಗ್ನಿಗಳಿಂದ ವಿದ್ಯೆಗಳನ್ನು ಉಪದೇಶಿಸಿಕೊಂಡವರಾದಾಗ್ಯೂ, 'ಆಚಾರ್ಯಸ್ತು ತೇ ಗತಿಂ ವಕ್ತಾ' ಎಂದು ಅಗ್ನಿಗಳ ಉಪದೇಶಾನುಸಾರವಾಗಿ ಗುರುಗಳಾದ ಸತ್ಯಕಾಮರನ್ನು ವಿದ್ಯೋಪದೇಶಕ್ಕಾಗಿ ಪ್ರಾರ್ಥಿಸಿದರು. ಆಗ ಗುರುಗಳು ಉಪಕೋಸಲರಿಗೆ 'ಯ ಏಷೋಽಂತರಕ್ಷಿಣಿ' ಇತ್ಯಾದಿಗಳಿಂದ ಬ್ರಹ್ಮ ವಿದ್ಯೆಯನ್ನುಪದೇಶಿಸಿದರು. (೨) ಶ್ರವಣಾದಿಗಳೇ ಪ್ರಬಲಗಳಾಗಿದ್ದರೆ ಅಗ್ನಿಗಳಿಂದ ವಿದ್ಯಾಶ್ರವಣ ಮಾಡಿದ್ದರಿಂದಲೇ ಪೂರ್ತಿಯಾದ ಕಾರಣ ಉಪಕೋಸಲರು ಶ್ರವಣಕ್ಕಾಗಿ ಗುರುಗಳನ್ನು ಪ್ರಾರ್ಥಿಸುತ್ತಿರಲಿಲ್ಲ. ಸತ್ಯಕಾಮರು ಉಪದೇಶವನ್ನೂ ಮಾಡುತ್ತಿರಲಿಲ್ಲ. ಆದ ಪ್ರಯುಕ್ತ ಗುರ್ವನುಗ್ರಹಪೂರ್ವಕ ಉಪದೇಶವೇ ಪ್ರಬಲವೆಂದು ತಿಳಿಯುತ್ತದೆ.)

ಗುರೂಪದೇಶವೇ ಪ್ರಬಲವು. ಸಾಮಾನ್ಯತಃ ಹಿಂಸೆಯಿಂದ ಪಾಪವು ಹುಟ್ಟುವುದಾದರೂ ಯಾಗೀಯಹಿಂಸಾದಲ್ಲಿ ಮಂತ್ರ ಸಂಸ್ಕಾರಾದಿರೂಪ ಸಹಕಾರಿಯ ಬಲದಿಂದ ಪುಣ್ಯಜನಕತ್ವವು ಕಂಡದ್ದರಿಂದ ಅಲ್ಲಿ ಪ್ರೋಕ್ಷಣಾದಿ ಸಹಕಾರಿಗೆ ಪ್ರಾಬಲ್ಯವಿದ್ದಂತೆಯೇ ಇಲ್ಲಿಯೂ ಗುರೂಪದೇಶವು ಪ್ರಬಲವು ಎಂದು ಹೇಳಿದರೆ ಅಂಗತ್ವಕ್ಕೆ ಭಂಗವು ಬರಬೇಕಾಗುವುದು ಇಲ್ಲ. **ಶ್ರೋತವ್ಯಃ** ಇತ್ಯಾದಿ ಶ್ರುತಿಗಳಿಂದಲೂ **ಗುರುಪ್ರಸಾದೋ ಬಲವಾನ್** ಇತ್ಯಾದಿ ಸ್ಮೃತಿಗಳಿಂದಲೂ ಶ್ರವಣಾದಿಗಳನ್ನು ಅವಶ್ಯ ಮಾಡಬೇಕಾಗಿರುವುದರಿಂದ ಅವುಗಳಿಗೆ ವೈಯರ್ಥ್ಯವೂ ಇಲ್ಲ. ಯಾವ ಬಾಧಕವೂ ಇಲ್ಲ. ಪೂರ್ವೋಕ್ತರೀತ್ಯಾ ಲಿಂಗ ಬಾಹುಲ್ಯವೂ ಇದೆ. ಏವಂಚ ಗುರ್ವನುಗ್ರಹಪೂರ್ವಕವಾಗಿ ಉಪದೇಶವೇ ಪ್ರಬಲವು. ॥ ಅಧಿ. ೨೭ ॥

**ಲಿಂಗಭೂಯಸ್ತ್ವಾಧಿಕರಣವು ಸಮಾಪ್ತವಾಯಿತು.**

## ೨೮ ವಿಕಲ್ಪಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪ್ರಥಮಪ್ರಾಪ್ತ ಗುರುಗಳಿಂದ ಇತರ ಗುರುಗಳನ್ನು ಸ್ವೀಕರಿಸಬಹುದು ಎಂದು ಸಮರ್ಥಿಸುತ್ತಾರೆ. **ಗುರುತ್ಯಾಗೇ ಭವೇನ್ಮೃತ್ಯುಃ ಮಂತ್ರತ್ಯಾಗೇ ದರಿದ್ರತಾ । ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್ ॥** ಎನ್ನುವ ಸ್ಮೃತಿಯಿಂದ ಗುರುಗಳನ್ನು ಬಿಟ್ಟರೆ ದೋಷವು ಶ್ರುತವಾಗಿದೆ. ಅಲ್ಲದೆ ಪ್ರಥಮಪ್ರಾಪ್ತ ಗುರುಗಳನ್ನು ಬಿಡಲಿಕ್ಕೆ ಕಾರಣವೂ ಇಲ್ಲ. ಆದ ಕಾರಣ ಪ್ರಥಮದಲ್ಲಿ ಪ್ರಾಪ್ತರಾದ ಗುರುಗಳನ್ನೇ ಸ್ವೀಕರಿಸಬೇಕು. ಅವರನ್ನು ಬಿಟ್ಟು ಮತ್ತೊಬ್ಬರನ್ನು ಸ್ವೀಕಾರ ಮಾಡಬಾರದು. ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

### ಸೂತ್ರ ॥ ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ ॥ ೪೬ ॥

**ಸೂತ್ರಾರ್ಥ ॥** ಪ್ರಕೃತನಾದ ಗುರುವು ಪ್ರಥಮತಃ ಸ್ವೀಕರಿಸಲ್ಪಟ್ಟ ಗುರುಗಳಿಂದ ಮೇಲೆ ಪ್ರಾಪ್ತರಾದ ಗುರುಗಳಿಗೆ ವಿಕಲ್ಪವು. (ಅಂದರೆ ಮೊದಲನೆಯವರನ್ನು ಬಿಟ್ಟು ಎರಡನೆಯವರನ್ನು ಸ್ವೀಕರಿಸಲೂಬಹುದು. ಬಿಡಲೂಬಹುದು. ಸ್ವೀಕರಿಸಲೇಬೇಕೆನ್ನುವ ವಿಧಿಯು ಇಲ್ಲ.) ಪ್ರಕರಣಾತ್— ಅನುಗ್ರಹವನ್ನು ಚೆನ್ನಾಗಿ ಮಾಡುವ ನಿಮಿತ್ತದಿಂದ, ಸ್ವೀಕರಿಸಲೇಬೇಕು. ಸಮಫಲವುಳ್ಳ ಧ್ಯಾನಗಳಲ್ಲಿ ಹೇಗೆ ವಿಕಲ್ಪವೋ ಹಾಗೆಯೇ (ಏವಂಚ ಪೂರ್ವಪ್ರಾಪ್ತ ಗುರುಗಳಿಂದ ಮೇಲೆ ಪ್ರಾಪ್ತರಾದ ಗುರುಗಳು ಸಮಗ್ರಾನುಗ್ರಹವನ್ನು ಮಾಡುತ್ತಾ ಉತ್ತಮರಾದರೆ ಸ್ವೀಕರಿಸಲೇಬೇಕು. ಸಮರಾದರೆ ಪೂರ್ವಗುರುಗಳ ಅನುಜ್ಞೆಯಿಂದಲೇ ಸ್ವೀಕರಿಸಬೇಕು. ಅಧಮರಾದರೆ ಸ್ವೀಕರಿಸಲೇಬಾರದು.)

**ಭಾಷ್ಯ ॥ (೧) ನ ಚ ಪೂರ್ವಪ್ರಾಪ್ತ ಏವ ಗುರುರಿತಿ ನಿಯಮಃ । ಸಮಗ್ರಾನುಗ್ರಹಂ**

**ಚೇತ್ ಪಶ್ಚಾತ್ತನಃ ಪ್ರಕರೋತಿ ಸ್ವಯಮೇವ ತದಾ ವಿಕಲ್ಪಃ ಸ್ಯಾತ್ । (೨) ಮಾನಸಕ್ರಿಯಾವತ್ । ಯಥೋಭಯೋರ್ಧ್ಯಾನಯೋಃ ಸಮಯೋಃ । (೩) ಪೂರ್ವಸ್ಮಾದುತ್ತಮೋ ಲಬ್ಧಃ ಸ್ವಯಮೇವ ಗುರುರ್ಯದಿ । ಗೃಹ್ಣೀಯಾದವಿಚಾರೇಣ ವಿಕಲ್ಪಃ ಸಮಯೋರ್ಭವೇತ್ ॥ ಸಮಗ್ರಾನುಗ್ರಹಾಭಾವಾತ್ಸತ್ಯಕಾಮಃ ಸ್ವಕಂ ಗುರುಂ । ಋಷಭಾದ್ಯನುಜ್ಞಯಾ ಚೈವ ಪ್ರಾಪ್ತ ತಸ್ಮಾದ್ಧಿ ಯುಜ್ಯತೇ ॥ ಇತಿ ಹಿ ಬೃಹತ್ತಂತ್ರೇ ॥ ೧ ॥**

ಭಾಷ್ಯಾರ್ಥ ॥ (೧) ಪೂರ್ವಪ್ರಾಪ್ತ ಗುರುಗಳೇ ಎನ್ನುವ ನಿಯಮವಿಲ್ಲ. ಎರಡನೇ ಪ್ರಾಪ್ತಗುರುಗಳನ್ನು ಸ್ವೀಕರಿಸಬಹುದು. ಎರಡನೇ ಗುರುಗಳು ಶಿಷ್ಯರ ಅಜ್ಞಾನಾದಿಗಳನ್ನು ಪರಿಹರಿಸಲಿಕ್ಕೆ ಸಮರ್ಥವಾದ ಶಿಷ್ಯರಿಗೆ ಅಪೇಕ್ಷಿತವಾದ ಅರ್ಥವನ್ನು ಉಪದೇಶಿಸುವುದರಲ್ಲಿ ಶಕ್ತವಾದ ಪೂರ್ಣಾನುಗ್ರಹವನ್ನು ಮಾಡುವುದಾದರೇನೇ ಸ್ವೀಕರಿಸಬೇಕು. (ಇಲ್ಲವಾದರೆ ಸ್ವೀಕರಿಸಬಾರದು. ಈ ನಿಯಮವು ಪೂರ್ವಗುರುಗಳಕ್ಕಿಂತ ಉತ್ತಮಗುರು, ಅಥವಾ ಸಮಗುರು ವಿಷಯಕವಾದುದು. ಅಧಮ ಗುರು ವಿಷಯವಲ್ಲ. **ಗುಣಾಧಿಕಂ ಗುರುಂ ಪ್ರಾಪ್ಯ ತದ್ಧೀನಂ ನಾಪ್ನುಯಾತ್ಕ್ವಚಿತ್** । ಎಂದು ಸ್ಮೃತಿಯು. ಸಮರಾದಾಗ್ಯೂ) ಮೇಲಿನ ಗುರುಗಳು ಪೂರ್ಣಾನುಗ್ರಹವನ್ನು ತನ್ನಷ್ಟಕ್ಕೇನೇ (ಅಂದರೆ ಶಿಷ್ಯರ ಪ್ರಾರ್ಥನೆಯು ಇಲ್ಲದೇನೇ) ಮಾಡುವುದಾದರೆ ಆಗ ವಿಕಲ್ಪವು. ಪೂರ್ವಗುರುಗಳ ಅನುಜ್ಞೆಯಿಂದ ಸ್ವೀಕರಿಸಬಹುದು. ಸ್ವೀಕರಿಸದೇನೂ ಇರಬಹುದು. ಸ್ವೀಕರಿಸಲೇಬೇಕೆನ್ನುವ ವಿಧಿಯಿಲ್ಲ. ಮೇಲಿನ ಗುರುಗಳು ಉತ್ತಮರಾಗಿ ತಾವೇ (ಶಿಷ್ಯರ ಪ್ರಾರ್ಥನೆಯಿಲ್ಲದೇನೇ, ಯದೃಚ್ಛೆಯಿಂದಲೇ ಪೂರ್ಣಾನುಗ್ರಹವನ್ನು ಮಾಡುವುದಾದರೆ ಆಗ ಅವರ ವಿಷಯದಲ್ಲಿ ವಿಕಲ್ಪವು ಆಗುವುದು. ಅಂದರೆ ನಿಸ್ಸಂಶಯವಾಗಿ ಪೂರ್ವಗುರುಗಳ ಅನುಜ್ಞೆಯಿಲ್ಲದೇನೇ ನಿರ್ವಿಚಾರವಾಗಿಯೇ ಪೂರ್ವಗುರುಗಳನ್ನು ಬಿಟ್ಟು ಮೇಲಿನ ಗುರುಗಳನ್ನು ಸ್ವೀಕರಿಸಬೇಕು. (ಪೂರ್ವಗುರುಗಳಿಂದ ಮೇಲೆ ಅಧಮನು ಪ್ರಾಪ್ತನಾಗಿ ಸಮಗ್ರಾನುಗ್ರಹವನ್ನು ಮಾಡುವುದಾದರೆ ಆಗ ಪೂರ್ವಗುರುಗಳ ಅನುಜ್ಞೆಯಿಂದಲೇ ಸ್ವೀಕರಿಸಬೇಕು.) (೨) ಮನೋವೃತ್ತಿರೂಪವಾದ ಕ್ರಿಯೆಯಂತೆ. (ಅಂದರೆ ಧ್ಯಾನದಂತೆ.) ಫಲತಃ ಸಮಗಳೇ ಆದ (ಉತ್ತಮಾಧಮ ಫಲವುಳ್ಳವುಗಳಿಗೆ ಅಲ್ಲ) ರಾಮಕೃಷ್ಣರೂಪ ಎರಡು ಧ್ಯಾನಗಳಲ್ಲಿ ಮೊದಲಿನದನ್ನು ಬಿಟ್ಟು ಮತ್ತೊಂದು ಸ್ವೀಕಾರ ಮಾಡಲಿಕ್ಕೆ ಹೇಗೆ ವಿಕಲ್ಪವೋ ಹಾಗೆಯೇ. (೩) ಪೂರ್ವದಲ್ಲಿ ಸ್ವೀಕರಿಸಲ್ಪಟ್ಟ ಗುರುಗಳಿಂದ ಉತ್ತಮಗುರುಗಳು ಯದೃಚ್ಛೆಯಿಂದಲೇ ಸಮಗ್ರಾನುಗ್ರಹವನ್ನು ಮಾಡುವವರಾಗಿ ಲಬ್ಧರಾದರೆ ಆಗ ಶಿಷ್ಯನು ಸಂದೇಹವಿಲ್ಲದೇನೇ ತಾನೇ ಪೂರ್ವಗುರುಗಳು, ಅನುಜ್ಞೆಯಿಲ್ಲದೇನೇ ಸ್ವೀಕರಿಸಲೇಬೇಕು. ಜ್ಞಾನಾದಿಗಳಿಂದ ಪೂರ್ವೋತ್ತರ ಗುರುಗಳು ಸಮರು ಆಗಿದ್ದರೆ ತ್ಯಾಗ ಸ್ವೀಕಾರಗಳಲ್ಲಿ ವಿಕಲ್ಪವು ಆಗುವುದು. (ಪೂರ್ವಗುರುಗಳಿಂದ, ಮೇಲೆ ಉತ್ತಮ ಗುರುಗಳ ಲಬ್ಧವಾದರೆ ಅವರನ್ನು ನಿರ್ವಿಚಾರವಾಗಿ ಸ್ವೀಕರಿಸಬೇಕೆಂದಾದರೆ ಸತ್ಯಕಾಮರು ಋಷಭಾದ್ಯಾವಿಷ್ಟ ವಾಯ್ವಾದಿದೇವತೆಗಳನ್ನು ಗುರುಗಳೆಂದು ಏಕೆ ಸ್ವೀಕರಿಸಲಿಲ್ಲ. ತಿರುಗಿ ಮೊದಲಿನ ಗುರುಗಳನ್ನೇ ಹೇಗೆ ಸ್ವೀಕರಿಸಿದ್ದಾರೆ, ಆದಕಾರಣ ಇದು ಯುಕ್ತವಲ್ಲ ಎಂದರೆ) ಸತ್ಯಕಾಮರು, ಋಷಭಾದಿಗಳು ಪೂರ್ಣಾನುಗ್ರಹವನ್ನು ಮಾಡದಿರುವುದರಿಂದಲೇ ಉತ್ತಮ

ರಾದಾಗ್ಯೂ ಋಷಭಾದ್ಯಾವಿಷ್ಟ ವಾಯ್ವಾದಿದೇವತೆಗಳನ್ನು ಗುರುಗಳನ್ನಾಗಿ ಸ್ವೀಕರಿಸಲಿಲ್ಲ) ಮತ್ತೆ ಆ ಋಷಭಾದಿಗಳ ಅನುಜ್ಞೆಯಿಂದಲೇ ತನಗೆ ಯೋಗ್ಯರೇ ಆದ ಸಮಗ್ರಾನುಗ್ರಹವನ್ನು ಮಾಡತಕ್ಕ ಗೌತಮಾಖ್ಯ ಗುರುಗಳನ್ನೇ ಸ್ವೀಕರಿಸಿದರು. ಆದುದರಿಂದ ಪೂರ್ವಗುರುಗಳನ್ನು ಬಿಟ್ಟು ಸಮಗ್ರಾನುಗ್ರಹವನ್ನು ಮಾಡತಕ್ಕ ಉತ್ತಮರಾದ ಅಧಮ ಸಮರಾದ ಗುರುಗಳನ್ನು ಸ್ವೀಕರಿಸಬೇಕು, ಎನ್ನುವುದು ಕೂಡುತ್ತದೆ, ಎಂದು ಬೃಹತ್ತಂತ್ರದಲ್ಲಿ ಹೇಳಿಯದೆ. ॥ ೧ ॥

ಪೀಠಿಕೆ ॥ ಮೇಲಿನ ಗುರುಗಳು ಪೂರ್ವತರ ಗುರುಗಳಿಗೆ ಸಮರು ಆಗಿದ್ದರೆ ಆಗ ಪೂರ್ವಗುರುಗಳ ಅನುಜ್ಞೆಯಿಂದಲೇ ಮೇಲಿನ ಗುರುಗಳನ್ನು ಸ್ವೀಕರಿಸಬೇಕೆನ್ನುವ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ (೧) ಸಮಗ್ರಾನುಗ್ರಹಂ ಕಶ್ಚಿತ್ಸ್ವಯಮೇವ ಸಮೋ ಯದಿ । ಕುರ್ಯಾತ್ತುನಷ್ಟ ಗೃಹ್ಣೀಯಾದವಿರೋಧೇನ ಕಾಮತಃ ॥ (೨) ಧ್ಯಾನಯೋಃ ಸಮಯೋರ್ಯದ್ವದ್ವಿಕಲ್ಪಃ ಕಾಮತೋ ಭವೇತ್ । ಏವಂ ಗುರೋರ್ದ್ವಿತೀಯಸ್ಯ ವಿಕಲ್ಪೋ ಗ್ರಹಣೇಽಪಿ ಚ ॥ ಇತಿ ಮಹಾಸಂಹಿತಾಯಾಂ ॥ ೪೬ ॥ ೨ ।**

ಭಾಷ್ಯಾರ್ಥ ॥ (೧) ಯಾವ ಪಕ್ಷದಲ್ಲಿ ಪುನಃ ಪೂರ್ವಗುರುಗಳಿಂದ ಜ್ಞಾನಾದಿ ಗುಣಗಳಿಂದ ಸಮರಾದ ಗುರುಗಳು ಯಾರಾದರೂ ಮಧ್ಯೇಪ್ರಾಪ್ತರಾಗಿ ಶಿಷ್ಯರ ಪ್ರಯತ್ನವಿಲ್ಲದೇನೇ ಪ್ರಸನ್ನರಾಗಿ ಪೂರ್ಣಾನುಗ್ರಹವನ್ನು ಮಾಡುತ್ತಾರೋ, ಆಗ ಪೂರ್ವಗುರುಗಳ ವಿರೋಧವಿಲ್ಲದೆ (ಅಂದರೆ ಅವರ ಅನುಜ್ಞೆಯಿಂದ) ಯಥೇಚ್ಛವಾಗಿ ವಿಕಲ್ಪವಾಗಿ ಗುರುಗಳನ್ನು ಸ್ವೀಕರಿಸಬೇಕು. (ಪೂರ್ವಗುರುಗಳ ಅನುಜ್ಞೆಯಿಲ್ಲವಾದರೆ ತನಗೂ ಇಚ್ಛೆಯಿಲ್ಲವಾದರೆ ಸ್ವೀಕರಿಸಬಾರದು) ಏವಂಚ ೧ ಪೂರ್ವ ಗುರುಗಳನ್ನು ಬಿಟ್ಟು ಅಧಮ ಗುರುಗಳನ್ನು ಸ್ವೀಕರಿಸಿದರೂ ೨ ಸಮಗ್ರಾನುಗ್ರಹವನ್ನು ಮಾಡದಿರುವ ಸಮರಾದ ಗುರುಗಳನ್ನು ಯಾ ಉತ್ತಮ ಗುರುಗಳನ್ನು ಸ್ವೀಕರಿಸಿದರೂ ೩ ಪೂರ್ವಗುರುಗಳ ಅನುಜ್ಞೆಯಿಲ್ಲದೆ ಸಮರಾದ ಗುರುಗಳನ್ನು ಸ್ವೀಕರಿಸಿದರೂ ದೋಷವು, ಎಂದುಕ್ತವಾಯಿತು.) (೨) ರಾಮಕೃಷ್ಣಾಖ್ಯ ಎರಡು ರೂಪಗಳನ್ನು ವಿಷಯೀಕರಿಸಿಕೊಂಡಿರುವ ಸಮಫಲವುಳ್ಳ ಧ್ಯಾನಗಳಲ್ಲಿ ಹೇಗೆ ಇಚ್ಛೆಯಿಂದ ವ್ಯವಸ್ಥಿತವಾದ ವಿಕಲ್ಪವೋ (ಅಂದರೆ ತನಗೆ ಇಷ್ಟವಾದ, ಎರಡರಲ್ಲಿ ಒಂದನ್ನು ಮಾಡುವುದೋ) ಹೀಗೆಯೇ ಪೂರ್ವದಲ್ಲಿ ಸ್ವೀಕೃತರಾದ ಗುರುಗಳಿಗೆ ಸಮಾನಿಕರಾದ ಎರಡನೇ ಗುರುಗಳನ್ನು ಸ್ವೀಕಾರಮಾಡುವ ವಿಷಯದಲ್ಲಿಯೂ ವಿಕಲ್ಪವು. ಅಂದರೆ ಮೊದಲಿನ ಗುರುಗಳ ಅನುಜ್ಞೆಯಿಂದ ಸ್ವೀಕರಿಸಬೇಕು. ಅನುಜ್ಞೆಯು ಇಲ್ಲವಾದರೆ ಸ್ವೀಕರಿಸಬಾರದು. ಹೀಗೆಯೇ ತನಗೆ ಇಚ್ಛೆಯಿದ್ದರೆ ಸ್ವೀಕರಿಸಬೇಕು. ಇಲ್ಲವಾದರೆ ಸ್ವೀಕರಿಸಬಾರದು. ಹೀಗೆ ಮಹಾಸಂಹಿತಾ ಎನ್ನುವ ಗ್ರಂಥದಲ್ಲಿ ಹೇಳಿದೆ. (ಇದರಿಂದ ಗುರುತ್ಯಾಗೀ ಇತ್ಯಾದಿಗಳಿಂದ ದೋಷವಚನಕ್ಕೆ ಅಧಮ ಗುರುಗಳನ್ನು ಸ್ವೀಕರಿಸಬಾರದು. ಅನುಜ್ಞೆಯಿಲ್ಲದೆ ಸ್ವೀಕರಿಸಬಾರದು, ಸಮಗ್ರಾನುಗ್ರಹವನ್ನು ಮಾಡದಿರುವ ಗುರುಗಳನ್ನು ಸ್ವೀಕರಿಸಬಾರದು. ಎಂದರ್ಥವು. ॥ ೪೬ ॥ ೨ ॥

**ಪೀಠಿಕೆ ॥** ಹೇತ್ವಂತರದಿಂದ ಸಮ, ಯಾ ಉತ್ತಮ ಗುರುಗಳನ್ನು ಸ್ವೀಕರಿಸಬೇಕೆಂದು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅತಿದೇಶಾಚ್ಚ ಓಂ ॥ ೪೭ ॥

**ಸೂತ್ರಾರ್ಥ ॥** ಬ್ರಹ್ಮೋಪಾಸ್ವ ಎನ್ನುವ ಶ್ರುತಿಯಲ್ಲಿ ಮೊದಲಿನ ಗುರುಗಳಿಗೆ ಸಮರಾದ ಅಥವಾ ಉತ್ತಮ ಗುರುಗಳನ್ನು ಸ್ವೀಕರಿಸುವುದಕ್ಕೋಸ್ಕರ ಅತಿದೇಶ ಮಾಡಿದ್ದರಿಂದಲೂ ಸಮರಾದ ಯಾ ಉತ್ತಮರಾದ ಗುರುಗಳನ್ನು ಸ್ವೀಕರಿಸಬೇಕು.

**ಭಾಷ್ಯ ॥ ಬ್ರಹ್ಮೋಪಾಸ್ವ ಬ್ರಹ್ಮೋಪಚರಸ್ವ ತಚ್ಛೃಣು ಹಿ ತತ್ತ್ವಾಮವತು । ಯಥಾ ಬ್ರಹ್ಮೋಪಚರೇರ್ಯಥಾ ಮಾಮುಪಚರೇರ್ಯೇ ಚಾನ್ಯೇಽಸ್ಮದ್ವಿಧಾಃ ಶ್ರೇಯಸಶ್ಚ ತಾನುಪಾಸ್ವ ತಾನುಪಚರಸ್ವ ತೇಭ್ಯಃ ಶೃಣು ಹಿ ತೇ ತ್ವಾಮವಂತು ॥ ಇತಿ ಪೌತ್ರಾಯಣಶ್ರುತಾವತಿದೇಶಾಚ್ಚ ॥ ೪೭ ॥ ಅಧಿ. ೨೮ ॥ ೩ ॥**

**ಭಾಷ್ಯಾರ್ಥ ॥** ಬ್ರಹ್ಮವಿಷಯಕ ಧ್ಯಾನಾದಿಗಳನ್ನು ಮಾಡು, ಬ್ರಹ್ಮನನ್ನು ಪೂಜಿಸು.ಪ್ರಸಿದ್ಧನಾದ ಆ ಬ್ರಹ್ಮನನ್ನು ಕೇಳು, ಆ ಬ್ರಹ್ಮನು ನಿನ್ನನ್ನು ರಕ್ಷಿಸಲಿ. ಹೇಗೆ ಬ್ರಹ್ಮನನ್ನು ಉಪಾಸನಾ ಮಾಡುತ್ತೀಯೋ, ಹಾಗೆ ನನ್ನನ್ನು ಉಪಾಸನಾಮಾಡು. ಹೇಗೆ ಬ್ರಹ್ಮನನ್ನು ಸೇವಿಸುತ್ತೀಯೋ ಹಾಗೆ ನನ್ನನ್ನು ಸೇವಿಸು. ಹೇಗೆ ನನ್ನನ್ನು ಸೇವಿಸುತ್ತೀಯೋ, ಹಾಗೆಯೇ ಯಾರು ಇತರರಾದ ನಮಗೆ ಸಮಾನರಾದ ಶ್ರೇಷ್ಠರು ಇದ್ದಾರೋ, ಅಂತಹ ಶ್ರೇಷ್ಠರಾದ ನಮ್ಮಿಂದ ಉತ್ತಮರಾದವರನ್ನು ಉಪಾಸನಾಮಾಡು. ಉಪಾಸ್ವಯೆಂದರೆ ವಿನಯಪೂರ್ವಕವಾಗಿ ಗುರುಗಳ ಸಮೀಪದಲ್ಲಿರುವಿಕೆ. ಅವರನ್ನು ಉಪಚರಿಸು ಸೇವಿಸು, ಉಪಚರಿಸ್ವ ಎಂದರೆ ಅವರಿಗೆ ಅಭೀಷ್ಟವನ್ನು ಮಾಡುವಿಕೆ ಇತ್ಯಾದಿಗಳು. ಅವರಿಂದ ಬ್ರಹ್ಮನನ್ನು ಕೇಳು. ಅವರು ನಿನ್ನನ್ನು ರಕ್ಷಿಸಲಿ, ಎಂದು (ಶಿಷ್ಯನನ್ನು ಕುರಿತು ಗುರುಗಳ ವಾಕ್ಯವು.) ಹೀಗೆ ಪೂರ್ವಗುರುಗಳೇ ತನಗೆ ಸಮಾನರಾದ ವಾ ಉತ್ತಮರಾದ ಗುರುಗಳನ್ನು ಸ್ವೀಕಾರ ಮಾಡುವುದಕ್ಕಾಗಿ ಪೌತ್ರಾಯಣ ಶ್ರುತಿಯಲ್ಲಿ ಅತಿದೇಶ ಮಾಡಿದ್ದರಿಂದಲೂ ಇದು ಯುಕ್ತವು. ॥ ೪೭ ॥ ೩ ॥

## ಅಧಿಕರಣ ಸಾರಾಂಶ

ಪೂರ್ವಪ್ರಾಪ್ತ ಗುರುಗಳೇ ಎನ್ನುವ ನಿಯಮವೋ ಮತ್ತೊಬ್ಬ ಗುರುಗಳನ್ನು ಸ್ವೀಕರಿಸಲಿಕ್ಕೆ ಶಕ್ಯವಾಗುವುದೋ ಎಂದು ಸಂದೇಹವು. ಶುಭಲಾಭಕ್ಕಾಗಿ ಗುರುಗಳನ್ನು ಸ್ವೀಕರಿಸುವುದು, ಆ ಶುಭಲಾಭವು ಪೂರ್ವಪ್ರಾಪ್ತಗುರುಗಳಿಂದಲೇ ಆಗುವುದು. ಅವರನ್ನು ಬಿಡಲಿಕ್ಕೆ ಕಾರಣವಿಲ್ಲ. **ಗುರುಮಂತ್ರಪರಿತ್ಯಾಗೀ** ಎಂದು ದೋಷವೂ ಶ್ರುತವಾಗಿದೆ. ಆದುದರಿಂದ ಪೂರ್ವಪ್ರಾಪ್ತ ಗುರುಗಳೇ ಆವಶ್ಯಕರು ಇತರ ಗುರುಗಳನ್ನು ಸ್ವೀಕರಿಸಕೂಡದು, ಎಂದರೆ ಗುರುಗಳ ಸ್ವೀಕಾರವು ಕೇವಲ ಯತ್ಕಿಂಚಿತ್ ಶುಭಲಾಭಕ್ಕಾಗಿ ಅಲ್ಲ. ಮತ್ತೆ ಅಪೇಕ್ಷಿತಗಳಾದ ತನಗೆ ಯೋಗ್ಯಗಳಾದ ಸರ್ವಶುಭಗಳನ್ನು ಹೊಂದುವುದಕ್ಕಾಗಿ. ಪೂರ್ವದಲ್ಲಿ ಸ್ವೀಕರಿಸಲ್ಪಟ್ಟವರು ಅಸಮರ್ಥರಾದರೆ ಸಮಗ್ರಾನುಗ್ರಹವನ್ನು

ಹೊಂದುವುದಕ್ಕಾಗಿ ಮತ್ತೊಬ್ಬ ಗುರುಗಳನ್ನು ಸ್ವೀಕರಿಸಬಹುದು. ಅವರು ಪೂರ್ವಗುರುಗಳಿಂದ ಉತ್ಕೃಷ್ಟರೂ ಸಮಗ್ರಾನುಗ್ರಹಕರ್ತರೂ ಆಗಬೇಕು. ಪೂರ್ವ ಗುರುಗಳಿಗೆ ಸಮಾನಿಕರಾದರೆ ಪೂರ್ವಗುರುಗಳ ಅನುಜ್ಞೆಯಿಂದಲೇ ಸ್ವೀಕರಿಸಲೂಬಹುದು. ಬಿಡಲೂಬಹುದು. ಉತ್ತಮರಾದರೆ ಪೂರ್ವಗುರುಗಳ ಅನುಜ್ಞೆಯಿಲ್ಲದೇನೇ ಸ್ವೀಕರಿಸಬೇಕು. ಇವೆಲ್ಲವೂ **ಪೂರ್ವಸ್ಮಾದುತ್ತಮಃ, ಸಮಗ್ರಾನುಗ್ರಹಂ,** ಎನ್ನುವ ಸ್ಮೃತಿಗಳಿಂದ ಸಿದ್ಧವಾಗಿದೆ. ಮತ್ತೂ ಬ್ರಹ್ಮೋಪಾಸ್ಯ ಎನ್ನುವ ಶ್ರುತಿಯಲ್ಲಿ ಪೂರ್ವಗುರುಗಳೇ ತನಗೆ ಸಮಾನಿಕರಾದ ವಾ ಉತ್ತಮರಾದ ಗುರಗಳನ್ನು ಸ್ವೀಕರಿಸುವುದಕ್ಕೋಸ್ಕರ ಅತಿದೇಶಮಾಡಿದ್ದಾರೆ, ಏವಂಚ ಇತರ ಗುರುಗಳನ್ನು ಸ್ವೀಕರಿಸಬಹುದು. ॥ ಅಧಿ. ೨೮ ॥

**ವಿಕಲ್ಪಾಧಿಕರಣವು ಸಮಾಪ್ತವಾಯಿತು.**

## ೨೯ ವಿದ್ಯಾಧಿಕರಣವು

ಪೀಠಿಕೆ॥ ಈ ಅಧಿಕರಣದಲ್ಲಿ ಉಪಾಸನವನ್ನು ಮಾಡಬೇಕೆಂದು ಸಮರ್ಥಿಸುವುದಕ್ಕಾಗಿ ಜ್ಞಾನವೇ ಮುಕ್ತಿಗೆ ಹೇತುವು ಎಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ನ ಚ ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ (ಗೀ.೩.೨೦.) । ಇತ್ಯಾದಿನಾಽನ್ಯನ್ಮೋಕ್ಷಸಾಧನಂ ॥ ೧ ॥**

ಭಾಷ್ಯಾರ್ಥ ॥ ಜನಕಾದಿಗಳು ಕರ್ಮದಿಂದಲೇ ಮೋಕ್ಷವನ್ನು ಹೊಂದಿರುತ್ತಾರೆ. ಇದು ಮೊದಲಾದ ತ್ಯಾಗೇನೈಕೇ ಅಮೃತತ್ವಮಾನಶುಃ, ಪ್ರಯಾಗಮರಣೇನ ವಾ ಇತ್ಯಾದಿ ವಾಕ್ಯಗಳಿಂದ ಮೋಕ್ಷಸಾಧನವೆಂದು ತಿಳಿಯಲ್ಪಟ್ಟ ಜ್ಞಾನದಿಂದ ಇತರಗಳಾದ ಕರ್ಮಾದಿಗಳೇ ಮೋಕ್ಷಸಾಧನವಲ್ಲ. ಹೇಗೆಂದರೆ, ॥ ೧ ॥

**ಸೂತ್ರ ॥ ಓಂ ವಿದ್ಯೈವ ತು ನಿರ್ಧಾರಣಾತ್ ಓಂ ॥ ೪೮ ॥**

ಸೂತ್ರಾರ್ಥ ॥ ಬ್ರಹ್ಮಜ್ಞಾನವೇ ಮೋಕ್ಷಸಾಧನವು, ಕರ್ಮವಲ್ಲ ನಾನ್ಯಃ ಪಂಥಾಃ ಎಂದು ಕರ್ಮಾದಿಗಳನ್ನು ನಿಷೇಧಿಸಿ ಜ್ಞಾನವೇ ಮುಕ್ತಿಗೆ ಸಾಧನವು, ಎಂದು ನಿರ್ಧಾರಣ ಮಾಡಿದ್ದರಿಂದ.

**ಭಾಷ್ಯ ॥ ತಮೇವಂ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇ ಅಯನಾಯ (ಶ್ವೇ.೩.೮.)। ಇತಿ ನಿರ್ಧಾರಣಾದ್ವಿದ್ಯಯೈವ ಮೋಕ್ಷಃ ॥ ೪೮ ॥ ೨ ॥**

ಭಾಷ್ಯಾರ್ಥ ॥ ಆ ಪರಮಾತ್ಮನನ್ನು, ಸಹಸ್ರಶಿರಸ್ಸುಗಳುಳ್ಳವನು ಇತ್ಯಾದಿ ಪ್ರಕಾರದಿಂದ ತಿಳಿದು ಸಂಸಾರವನ್ನು ದಾಟುತ್ತಾನೆ. ಮೋಕ್ಷಕ್ಕಾಗಿ ಅಪರೋಕ್ಷ ಜ್ಞಾನದಿಂದ ಇತರವಾದ ಉಪಾಯವು ಇಲ್ಲ ಎಂದು ಅವಧಾರಣ ಸಹಿತವಾದ ವಿಜ್ಞಾನಕ್ಕೇನೇ ಮೋಕ್ಷಸಾಧನತ್ವವನ್ನು ಹೇಳುವ ತಮೇವಂ ಇತ್ಯಾದಿ ವಾಕ್ಯಬಲದಿಂದ ಕರ್ಮಕ್ಕೆ ಮೋಕ್ಷಸಾಧನತ್ವವು ಸಾಕ್ಷಾತ್ ಇಲ್ಲವೆಂದು ನಿರ್ಣಯವು ಆಗುವುದರಿಂದ

ತತ್ವಜ್ಞಾನದಿಂದಲೇ ಸಂಸಾರನಿವೃತ್ತಿರೂಪವಾದ ಮೋಕ್ಷವು ಆಗುತ್ತದೆ. (ಕರ್ಮಾದಿಗಳಿಂದ ಅಲ್ಲ) ॥ ೪೮ ॥ ೨ ॥

**ಪೀಠಿಕೆ** ॥ ವಿದ್ಯೆಯೇ ಮೋಕ್ಷ ಸಾಧನವಾದರೆ ಶ್ರವಣದಿಂದಲೇ ವಿದ್ಯೆಯು ಕೂಡುವುದರಿಂದ ಧ್ಯಾನೋಪಾಸನವನ್ನು ಮಾಡಬೇಕಾಗಿಲ್ಲ ಎಂಬೀ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ದರ್ಶನಾಚ್ಚ ಓಂ ॥ ೪೯ ॥

**ಸೂತ್ರಾರ್ಥ** ॥ ಬ್ರಹ್ಮಸಾಕ್ಷಾತ್ಕಾರದಿಂದಲೂ ಮುಕ್ತಿಯು, ಕೇವಲ ಪರೋಕ್ಷ ಜ್ಞಾನ ಮಾತ್ರದಿಂದ ಅಲ್ಲ, ಆದುದರಿಂದ ಅಪರೋಕ್ಷಜ್ಞಾನಕ್ಕೆ ಸಾಧನವಾದ ಧ್ಯಾನವು ವ್ಯರ್ಥವು ಹೇಗೆ ಆಗುವುದು?

**ಭಾಷ್ಯ ॥ ನ ಕೇವಲವಿದ್ಯಯಾ ಕಿಂ ತ್ವಪರೋಕ್ಷಜ್ಞಾನೇನೈವ ಚ । ಸರ್ವಾನ್ ಪರೋಮಾಯಯಾ ಯಂ ಸಿನೀತೇ ದೃಷ್ಟ್ವೈವ ತಂ ಮುಚ್ಯತೇ ನಾಪರೇಣ । ಇತಿ ಕೌಶಿಕಶ್ರುತೇಃ ॥ ೪೯ ॥ ಅಧಿ. ೨೯ ॥ ೩ ॥**

**ಭಾಷ್ಯಾರ್ಥ** ॥ ಕೇವಲ ಪರೋಕ್ಷಜ್ಞಾನದಿಂದ ಮೋಕ್ಷವು ಆಗುತ್ತದೆಂದು ನಾವು ಹೇಳುವುದಿಲ್ಲ. ಮತ್ತೆ ಭಗವಂತನ ಅಪರೋಕ್ಷಜ್ಞಾನದಿಂದಲೂ ಮೋಕ್ಷವು ಆಗುವುದು. (ತಥಾಚ ದರ್ಶನಕ್ಕಾಗಿ ಧ್ಯಾನವು ಆವಶ್ಯಕವು.) (ವಿದ್ವಾನ್ ಎಂದು ಪರೋಕ್ಷ ಜ್ಞಾನದಿಂದ ಮೋಕ್ಷವು ಶ್ರುತವಾದುದರಿಂದ ದರ್ಶನದಿಂದ ಮೋಕ್ಷವೆಂದು ಹೇಗೆ ಹೇಳುವುದು? ಎಂದರೆ) ಸರ್ವೋತ್ತಮನಾದ ಶ್ರೀಹರಿಯು ಎಲ್ಲಾ ಜೀವರನ್ನು ಸ್ವೇಚ್ಛೆಯಿಂದಲೂ ಪ್ರಕೃತಿಯಿಂದಲೂ ಬಂಧಿಸುತ್ತಾನೆ. ಆದ ಕಾರಣ ಆ ಶ್ರೀಹರಿಯನ್ನು ಯಥಾಯೋಗ್ಯವಾಗಿ ಅಪರೋಕ್ಷವಾಗಿ ತಿಳಿದೇ ಮಾಯಾಬಂಧದಿಂದ ಬಿಡುಗಡೆಯನ್ನು ಹೊಂದುತ್ತಾನೆ. ದರ್ಶನಭಿನ್ನವಾದ ಸಾಧನದಿಂದ ಅಥವಾ ಇತರ ಪುರುಷರ ದರ್ಶನದಿಂದ ಮುಕ್ತನಾಗುವುದಿಲ್ಲ. (ಬಂಧದಿಂದ ಬಿಡುಗಡೆಮಾಡಲಿಕ್ಕೆ ಮತ್ತೊಬ್ಬನಿಗೆ ಶಕ್ತಿಯು ಇರುವುದಿಲ್ಲ) ಎನ್ನುವ ಕೌಶಿಕ ಶ್ರುತಿಯಿಂದ (ಪರೋಕ್ಷ ಜ್ಞಾನದಿಂದ ಮೋಕ್ಷವಾಗುತ್ತದೆ ಎಂದು ಹೇಳುವ ಶ್ರುತಿಯೂ ಕೂಡ ಅಪರೋಕ್ಷ ಜ್ಞಾನದಿಂದಲೇ ಮೋಕ್ಷವಾಗುತ್ತದೆ ಎಂದು ಹೇಳತಕ್ಕದು.) ॥ ೪೯ ॥ ೩. ॥

## ಅಧಿಕರಣ ಸಾರಾಂಶ

ಶ್ರವಣಾದ್ಯುಪಾಸನವನ್ನು ಮಾಡಬಾರದೋ, ಮಾಡಬೇಕೋ, ಅದಕ್ಕಾಗಿ ಉಪಾಸನೆಯು ಜ್ಞಾನದ್ವಾರಾ ಮುಕ್ತಿಗೆ ಕಾರಣವು ಎನ್ನುವ ನಿರ್ಣಯವು ಆಗುವುದಿಲ್ಲವೋ ಆಗುತ್ತದೋ ಎಂದು ಸಂದೇಹವು. ಕರ್ಮಣ್ಯೆವ ಹಿ ಸಂಸಿದ್ಧಿಂ ಇತ್ಯಾದಿಗಳಲ್ಲಿ ಕರ್ಮವು ಮುಕ್ತಿಗೆ ಸಾಕ್ಷಾತ್ಕಾರಣವೆಂದು ಅವಗತವಾಗುವುದರಿಂದ ಜ್ಞಾನದ್ವಾರಾ ಶ್ರವಣಾದ್ಯುಪಾಸನವೇ ಮೋಕ್ಷಕ್ಕೆ ಕಾರಣವು ಎನ್ನುವ ನಿರ್ಣಯವು ಆಗದಿರುವುದರಿಂದ ಉಪಾಸನವನ್ನು ಮಾಡಬೇಕಾಗಿಲ್ಲ. ಅಲ್ಲದೆ ತಮೇವಂ ವಿದ್ವಾನ್ ಎನ್ನುವ ಶ್ರುತಿಯಿಂದ ಪರೋಕ್ಷಜ್ಞಾನವೇ ಮುಕ್ತಿಗೆ ಕಾರಣವೆಂದು ತಿಳಿಯುವುದರಿಂದ ಅದು

ಶ್ರವಣಾದಿಗಳಿಂದಲೇ ಸಿದ್ಧಿಸುವ ಪ್ರಯುಕ್ತ ಧ್ಯಾನವನ್ನು ಸರ್ವಥಾ ಮಾಡಬೇಕಾಗಿಲ್ಲ ಎಂದರೆ, **ನಾನ್ಯಃ ಪಂಥಾಃ** ಎನ್ನುವ ಸಾವಧಾರಣ ವಚನವು ಕರ್ಮವಚನದಿಂದಲೂ ಪ್ರಬಲವಾದ ಪ್ರಯುಕ್ತ **ಕರ್ಮಣೈವ** ಇತ್ಯಾದಿ ವಾಕ್ಯವು ಪರಂಪರಯಾ ಕಥಂಚಿತ್ ಮುಕ್ತಿಗೆ ಕಾರಣವು ಎಂದು ತಿಳಿಯುತ್ತದೆ. ಮತ್ತು ಉಪಾಸನವು ಜ್ಞಾನದ್ವಾರಾ ಮುಕ್ತಿಗೆ ಕಾರಣವು ಎಂದು ನಿರ್ಣಯವು ಆಗುವುದರಿಂದ ಉಪಾಸನವನ್ನು ಮಾಡಲೇಬೇಕು. ಜ್ಞಾನವೂ ಕೂಡ ಪರೋಕ್ಷ ಜ್ಞಾನ ಮಾತ್ರವಲ್ಲ. ಮತ್ತೆ ದೃಷ್ಟ್ವೈವ ಇತ್ಯಾದಿ ಶ್ರುತಿಯ ಬಲದಿಂದ ವಿದ್ವಾನ್ ಎನ್ನುವ ಶ್ರುತಿಯೂ ಅಪರೋಕ್ಷ ಜ್ಞಾನಪರವು. ಆದಕಾರಣ ಅಪರೋಕ್ಷ ಜ್ಞಾನವನ್ನು ಸಂಪಾದಿಸಬೇಕು. ಆದಕಾರಣ ಶ್ರವಣ ಮನನ ನಿದಿಧ್ಯಾಸನಗಳನ್ನು ಮಾಡಲೇಬೇಕು. ॥ ಅಧಿ. ೨೯ ॥

**ವಿದ್ಯಾಧಿಕರಣವು ಸಮಾಪ್ತವಾಯಿತು.**

# ೩೦ ಶ್ರುತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭಗವದುಪಾಸನೆಯಿಂದ ಸಾಧ್ಯವಾದ ಅಪರೋಕ್ಷಜ್ಞಾನವು ಮೋಕ್ಷಸಾಧನವು ಎಂದು ಸಮರ್ಥಿಸುತ್ತಾರೆ. **ಕರ್ಮಣೈವ** ಎನ್ನುವ ಸಾವಧಾರಣ ಸ್ಮೃತಿಯಿಂದ ಮೋಕ್ಷವು ಕರ್ಮದಿಂದಲೇ ಸಾಧ್ಯವು. ಜ್ಞಾನಸಾಧ್ಯವಲ್ಲ. ಆ ಸ್ಮೃತಿಯು ಭಗವಂತನ ವಚನವಾದುದರಿಂದ **ನಾನ್ಯಃ ಪಂಥಾಃ** ಎನ್ನುವ ಸಾವಧಾರಣ ಶ್ರುತಿಯಿಂದಲೂ ಪ್ರಬಲವಾಗಿದೆ, ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ ॥ ೫೦ ॥

**ಸೂತ್ರಾರ್ಥ ॥** ಅಪರೋಕ್ಷ ಜ್ಞಾನವೇ ಮುಕ್ತಿಗೆ ಕಾರಣವಾದಾಗ್ಯೂ **ಕರ್ಮಣೈವ** ಎನ್ನುವ ಸ್ಮೃತಿಯಿಂದ ಬಾಧವು ಇಲ್ಲ. ಏಕೆಂದರೆ, ಶ್ರುತ್ಯಾದಿಗಳಿಗೆ ಪ್ರಾಬಲ್ಯವಿದ್ದಪ್ರಯುಕ್ತ ಅಂದರೆ, ೧ **ತಮೇವಂ** ಎನ್ನುವ ಶ್ರುತಿಯು, ೨ **ಇಂದ್ರೋsಶ್ವಮೇಧಾನ್** ಎನ್ನುವ ಶ್ರುತ್ಯುಕ್ತವಾದ ಇಂದ್ರನು ಬಹುಕರ್ಮಗಳನ್ನು ಮಾಡಿದವನಾದಾಗ್ಯೂ ಆತನ ದುಃಖಾಮಿಶ್ರ · ಸುಖರೂಪವಾದ ಮೋಕ್ಷಕ್ಕಾಗಿ ತತ್ವಜ್ಞಾನಪ್ರಾರ್ಥನರೂಪವಾದ ಲಿಂಗವೂ, ೩ **ನಾಸ್ತ್ಯಕೃತಃ ಕೃತೇನ** ಎನ್ನುವ ಉಕ್ತಿಯಿಂದ ಉತ್ಪತ್ತಿನಾಶವುಳ್ಳ ಫಲವುಳ್ಳದ್ದೆಂದು ನಿಶ್ಚಿತವಾದ ಕರ್ಮದಿಂದ ನಿತ್ಯಪುರುಷಾರ್ಥವು ಸಿಗುವುದಿಲ್ಲ ಎನ್ನುವ ಯುಕ್ತಿಯೂ **ಕರ್ಮಣಾ ಬಧ್ಯತೇ ಜಂತುಃ** ಸ್ಮೃತಿಯೂ, ಇವುಗಳಿಗೆ ಪ್ರಾಬಲ್ಯವಿದ್ದಪ್ರಯುಕ್ತ.

**ಭಾಷ್ಯ ॥ (೧) ಸಾವಧಾರಣಾ ಬಲವತೀ ಶ್ರುತಿಃ । (೨) ಇಂದ್ರೋsಶ್ವಮೇಧಾಂಶ್ಶತಮಿಷ್ಟ್ವಾsಪಿ ರಾಜಾ ಬ್ರಹ್ಮಾಣಮೀಡ್ಯಂ ಸಮುವಾಚೋಪಸನ್ನಃ । ನ ಕರ್ಮಭಿರ್ನಧನೈರ್ನೈವ ಚಾನ್ಯೈಃ ಪಶ್ಯೇ ಸುಖಂ ತೇನ ತತ್ತ್ವಂ ಬ್ರವೀಹಿ ॥ ಇತಿ ಬಲವಲ್ಲಿಂಗಂ ॥ (೩) ನಾಸ್ತ್ಯಕೃತಃ ಕೃತೇನ ।** (ಮು.೧.೨.) **ಇತ್ಯು ಪಪತ್ತಿಶ್ಚ ॥ (೪)**

**ಕರ್ಮಣಾ ಬಧ್ಯತೇ ಜಂತುರ್ವಿದ್ಯಯಾ ಚ ವಿಮುಚ್ಯತೇ । ತಸ್ಮಾತ್ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ ಇತಿ ಯುಕ್ತಿಮದ್ಭಗವದ್ವಚನಂ । ಅತೋ ನ ಕರ್ಮಣಾಂತರಬಾಧಃ ॥ (೫) ಕರ್ಮಣೈವ** (ಗೀ.೩.೨೦.) **ಇತಿ ಅಯೋಗವ್ಯವಚ್ಛೇದಃ ॥ ೫೦ ॥ ಅಧಿ. ೨೦ ॥ ೧ ॥**

**ಭಾಷ್ಯಾರ್ಥ** ॥ (೧) ನಿರವಕಾಶವಾದ ಇತರವಾದ ಕರ್ಮಕ್ಕೆ ಮೋಕ್ಷಸಾಧನತ್ವ ನಿರಾಸಕವಾದ ಅವಧಾರಣದಿಂದ ಯುಕ್ತವಾದ ತಮೇವಂ, ದೃಷ್ಟ್ವೈವ ಎನ್ನುವ ಶ್ರುತಿಯು ಕರ್ಮಣೈವ ಎನ್ನುವ ಸ್ಮೃತಿಯಿಂದ ಪ್ರಬಲವಾದುದು. (೨) ರಾಜನಾದ ಇಂದ್ರನು ನೂರು (೧೦೦) ಅಶ್ವಮೇಧಾಖ್ಯ ಕ್ರತುಗಳನ್ನು ಮಾಡಿ ಸುತ್ತನಾದ ಚತುರ್ಮುಖನನ್ನು ಉಪಸತ್ತಿ ಮಾಡಿದವನಾಗಿ ಪ್ರಾರ್ಥಿಸಿದನು. ಎಲೋ ಬ್ರಹ್ಮನೇ ನಾನು ಅಶ್ವಮೇಧಾದಿಗಳಿಂದಲಾಗಲೀ, ಧನಗಳಿಂದಲಾಗಲೀ ತಪಸ್ಸು ಮೊದಲಾದವುಗಳಿಂದಲಾಗಲೀ ಸುಖವನ್ನು ನೋಡಲಾರೆ. ಆ ಕಾರಣದಿಂದ ದುಃಖಲೇಶವಿಲ್ಲದಿರುವ ಸುಖರೂಪವಾದ ಮೋಕ್ಷಕ್ಕಾಗಿ ಮೋಕ್ಷಸಾಧನ ಜ್ಞಾನವಿಷಯನಾದ ಬ್ರಹ್ಮನನ್ನು ಉಪದೇಶಿಸು. ಎನ್ನುವ ಶ್ರುತ್ಯುಕ್ತವಾದ ಮೋಕ್ಷವು ಜ್ಞಾನ ಸಾಧ್ಯವು ಎನ್ನುವಲ್ಲಿ ಹೇಳಿದ ಅವ್ಯವಹಿತವಾದ ಲಿಂಗವು ಕರ್ಮಣೈವ ಎನ್ನುವ ಸ್ಮೃತಿಗಿಂತ ನಿರವಕಾಶತ್ವರೂಪ ಪ್ರಾಬಲ್ಯವುಳ್ಳದ್ದು. (ಅಲ್ಲಿ ನೂರು ಅಶ್ವಮೇಧಗಳನ್ನು ಮಾಡಿರುವ ಇಂದ್ರನಿಗೂ ಕರ್ಮಾದಿಗಳಿಂದ ದುಃಖಮಿಶ್ರಿತವಾಗದಿರುವ ಸುಖರೂಪವಾದ ಮೋಕ್ಷವು ಲಭಿಸದೆ ಇರುವುದರಿಂದ ಅಂತಹ ಮೋಕ್ಷಕ್ಕಾಗಿ ಚತುರ್ಮುಖನ ಹತ್ತಿರ ತತ್ವಜ್ಞಾನವನ್ನು ಉಪದೇಶಿಸಬೇಕೆಂದು ಇಂದ್ರದೇವರು ಪ್ರಾರ್ಥಿಸಿರುವರು. ಇದರಿಂದ ಕರ್ಮವು ಮೋಕ್ಷಸಾಧನವಲ್ಲ. ಜ್ಞಾನವೇ ಮೋಕ್ಷ ಸಾಧನವು ಎಂದು ತಿಳಿಯುತ್ತದೆ. ಇದು ನಿರವಕಾಶವಾದ ಪ್ರಯುಕ್ತ ಪ್ರಬಲವು.) (೩) ಅನಿತ್ಯ ಫಲವುಳ್ಳ ಕರ್ಮದಿಂದ ನಿತ್ಯ ಪುರುಷಾರ್ಥವಾದ ಮೋಕ್ಷವು ಲಭಿಸುವುದಿಲ್ಲ. ಎನ್ನುವ ಶ್ರುತಿಬೋಧ್ಯವಾದ ಮೋಕ್ಷವು ಜ್ಞಾನೈಕಸಾಧ್ಯವು ಎನ್ನುವ ವಿಷಯದಲ್ಲಿ ಹೇಳಿದ ಸಾಕ್ಷಾತ್ ಯುಕ್ತಿಯೂ ದೋಷವಿಲ್ಲದಿರುವುದರಿಂದಲೂ ಶ್ರುತ್ಯುಕ್ತವಾದುದರಿಂದಲೂ ಕರ್ಮಣೈವ ಎನ್ನುವ ಸ್ಮೃತಿಗಿಂತ ಪ್ರಬಲವು. (೪) ಜೀವರು ಕಾಮ್ಯಕರ್ಮದಿಂದ ಸಂಸಾರದಲ್ಲಿ ಬದ್ಧರಾಗುತ್ತಾರೆ. ಅಪರೋಕ್ಷಜ್ಞಾನ ದಿಂದಲೇ ಮುಕ್ತರಾಗುತ್ತಾರೆ. ಕರ್ಮವು ಬಂಧಕವಾದುದರಿಂದ ಮೋಕ್ಷಸಾಧನವಾಗದಿದ್ದ ಪ್ರಯುಕ್ತವೇ ಇಂದ್ರಿಯಗಳನ್ನು ನಿಗ್ರಹಿಸಿ ಕೊಂಡಿರುವ ಬ್ರಹ್ಮಾಪರೋಕ್ಷಿಗಳು ಕರ್ಮವನ್ನು ಮಾಡುವುದಿಲ್ಲ. ಎಂದು ಕರ್ಮಕ್ಕೆ ಬಂಧಕತ್ವ, ಮೋಕ್ಷೇಚ್ಛುಗಳಿಂದ ಮಾಡಲ್ಪಡದಿರುವಿಕೆ ಎನ್ನುವ ಯುಕ್ತಿಯುಕ್ತವಾದ ಈ ಭಗವದ್ವಚನವು ಕರ್ಮಣೈವ ಎನ್ನುವ ಸ್ಮೃತಿಗಿಂತ ಪ್ರಬಲವು. ಹೀಗೆ ಮೋಕ್ಷವು ಜ್ಞಾನಸಾಧ್ಯವು ಎನ್ನುವ ವಿಷಯದಲ್ಲಿ ಪ್ರತ್ಯೇಕವಾಗಿ ಪ್ರಬಲ ಶ್ರುತ್ಯಾದಿಗಳು ಇದ್ದುದರಿಂದ ವಿದ್ಯೆಯೇ ಮೋಕ್ಷಸಾಧನವು, ಎನ್ನುವುದಕ್ಕೆ ಕರ್ಮಣೈವ ಇತ್ಯಾದಿ ಪ್ರಮಾಣಾಂತರಗಳಿಂದ ಬಾಧವಿಲ್ಲ (೫) (ಹೀಗಾದರೆ ಕರ್ಮಣೈವ ಎನ್ನುವ ಸ್ಮೃತಿಯು ಅಪ್ರಮಾಣವೆಂದೇ ಪ್ರಾಪ್ತವಾಯಿತೆಂದರೆ) ಕರ್ಮಣೈವ ಎನ್ನುವ ವಾಕ್ಯದಲ್ಲಿದ್ದ ಏವಕಾರದಿಂದ ಕರ್ಮವೂ ಪರಂಪರೆಯಿಂದ ಮೋಕ್ಷಕ್ಕೆ ಕಾರಣವು ಎಂದೇ ಹೇಳಲ್ಪಡುತ್ತದೆ. ಅಲ್ಲದೆ ಕರ್ಮದಿಂದ ಇತರವಾದ ಜ್ಞಾನಕ್ಕೆ ಮೋಕ್ಷ ಸಾಧನತ್ವವು ಇಲ್ಲವೆಂದು ಹೇಳಲ್ಪಡುವುದಿಲ್ಲ. ತಥಾಚ ಜನಕಾದಿಗಳು ಕರ್ಮವನ್ನು ಮಾಡುವವರಾಗಿಯೇ ಮೋಕ್ಷವನ್ನು ಹೊಂದುತ್ತಾರೆ. ಅಥವಾ

ಕರ್ಮದಿಂದ ಮೋಕ್ಷವನ್ನು ಹೊಂದಿಯೇ ಹೊಂದಿರುತ್ತಾರೆ. (ಮೋಕ್ಷದಲ್ಲಿ ಕರ್ಮಯೋಗವು ಆನಂದಾತಿಶಯಕ್ಕಾಗಿ) ಆದುದರಿಂದ **ಕರ್ಮಣ್ಯೆವ** ಎನ್ನುವ ಸ್ಮೃತಿಗೆ ಅಪ್ರಾಮಾಣ್ಯವಿಲ್ಲ. ॥ ೫೦ ॥೧॥

## ಅಧಿಕರಣ ಸಾರಾಂಶ

ಮೋಕ್ಷವು ಕರ್ಮಸಾಧ್ಯವೋ, ಜ್ಞಾನಸಾಧ್ಯವೋ, ಅದಕ್ಕಾಗಿ.**ಕರ್ಮಣ್ಯೆವ** ಎನ್ನುವ ಸ್ಮೃತಿಯು **ನಾನ್ಯಃ ಪಂಥಾಃ** ಎನ್ನುವ ಶ್ರುತಿಯಿಂದಲೂ ಪ್ರಬಲವೋ, ಅಲ್ಲವೋ ಅದಕ್ಕಾಗಿ **ಕರ್ಮಣ್ಯೆವ** ಎನ್ನುವ ಅವಧಾರಣವು ನಿರವಕಾಶವೋ ಸಾವಕಾಶವೋ, ಎಂದು ಸಂದೇಹವು. **ಕರ್ಮಣ್ಯೆವ** ಎನ್ನುವ ಸ್ಮೃತಿಯಿಂದ ಮೋಕ್ಷವು ಕರ್ಮಸಾಧ್ಯವು. **ಕರ್ಮಣ್ಯೆವ** ಎನ್ನುವ ಸ್ಮೃತಿಯು ಸಾವಧಾರಣವಾದ **ನಾನ್ಯಃ ಪಂಥಾಃ** ಎನ್ನುವ ಶ್ರುತಿಯಿಂದ ಬಾಧಿತವಾಗುವ ಪ್ರಯುಕ್ತ ದುರ್ಬಲವೆಂದು ಹೇಳಕೂಡದು. ಏಕೆ ಎಂದರೆ ಕರ್ಮಣ್ಯೆವ ಎನ್ನುವ ಸ್ಮೃತಿಯು ಭಗವದ್ವಾಕ್ಯವಾದುದರಿಂದಲೇ ಪ್ರಮಾಣವೆಂದು ಅಂಗೀಕರಿಸಲೇ ಬೇಕಾದುದರಿಂದಲೂ ಆಪ್ತವಾಕ್ಯವಾದುದರಿಂದಲೂ ಅವಧಾರಣ ಸಹಿತವಾದುದರಿಂದಲೂ ಪ್ರಬಲವಾದ ಪ್ರಯುಕ್ತ **ನಾನ್ಯಃ ಪಂಥಾಃ** ಎನ್ನುವ ಶ್ರುತಿಗೇನೇ ಬಾಧವು, ಎಂದರೆ ಮೋಕ್ಷವು ಜ್ಞಾನದಿಂದಲೇ ಸಾಧ್ಯವು. ಕರ್ಮಸಾಧ್ಯವಲ್ಲ. ಜ್ಞಾನದಿಂದಲೇ ಸಾಧ್ಯವು ಎನ್ನುವ ವಿಷಯದಲ್ಲಿ ಪ್ರಬಲ ಶ್ರುತಿಲಿಂಗ ಉಪಪತ್ತಿ ಸ್ಮೃತಿಗಳು ಇವೆ. (೧) **ತಮೇವಂ— ನಾನ್ಯಃ ಪಂಥಾಃ** ಎನ್ನುವ ಶ್ರುತಿಯು ನಿರವಕಾಶವಾದ ಅವಧಾರಣದಿಂದ ಯುಕ್ತವಾದ ಪ್ರಯುಕ್ತ ಪ್ರಬಲವಾಗಿದೆ. (೨) ಹಾಗೆಯೇ ಇಂದ್ರನು ಬಹುಕರ್ಮಗಳನ್ನು ಮಾಡಿದವನಾದಾಗ್ಯೂ ದುಃಖಮಿಶ್ರವಾಗದಿರುವ ಸುಖರೂಪವಾದ ಮೋಕ್ಷಕ್ಕಾಗಿ ಬ್ರಹ್ಮನನ್ನು ಕುರಿತು ತತ್ವಜ್ಞಾನವನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಿರುವನು, ಈ ಲಿಂಗವು **ಇಂದ್ರೋಽಶ್ವಮೇಧಾನ್** ಇತ್ಯಾದಿನಾ ಸುಪ್ರಸಿದ್ಧವಾಗಿ ಪ್ರಬಲವಾದುದು. ಮತ್ತೂ (೩) ಉತ್ಪತ್ತಿ ನಾಶವತ್ತಾದ ಫಲವುಳ್ಳದ್ದೆಂದು ನಿಶ್ಚಿತವಾದ ಕರ್ಮದಿಂದ ನಿತ್ಯಪುರುಷಾರ್ಥವಾದ ಮೋಕ್ಷವು ಸಿಗುವುದಿಲ್ಲವೆಂದು ಯುಕ್ತಿಯೂ ಇದೆ. ಅಂದರೆ **ಕರ್ಮ ನ ಮೋಕ್ಷಸಾಧನಂ ಅನಿತ್ಯಫಲಕತ್ವಾತ್** ಎಂದು. ಇದು **ನಾಸ್ತ್ಯಕೃತಃ ಕೃತೇನ** ಎನ್ನುವ ಶ್ರುತಿಸಿದ್ಧವಾದುದರಿಂದಲೂ ನಿರ್ದೋಷವಾದುದರಿಂದಲೂ ಪ್ರಬಲವಾಗಿದೆ. (೪) **ಕರ್ಮಣಾ ಬಧ್ಯತೇ** ಎನ್ನುವ ಸ್ಮೃತಿಯು ಭಗವದ್ವಾಕ್ಯವಾದುದರಿಂದಲೂ ಯುಕ್ತಿಮತ್ತಾದುದರಿಂದಲೂ ಪ್ರಬಲವಾಗಿದೆ. ಹೀಗೆ ಮೋಕ್ಷವು ಜ್ಞಾನದಿಂದಲೇ ಸಾಧ್ಯವು ಎಂದು ನಿರ್ಣಯಿಸಿ ಕೊಡುವ ಅನೇಕ ಸಾಧನಗಳು ಇದ್ದುದರಿಂದ **ಕರ್ಮಣ್ಯೆವ** ಎನ್ನುವ ಅವಧಾರಣವು ಕರ್ಮದಿಂದ ಸಹಿತರಾಗಿ ಮೋಕ್ಷವನ್ನು ಹೊಂದಿಯೇ ಹೊಂದುತ್ತಾರೆ. (ಮೋಕ್ಷವನ್ನು ಹೊಂದಲಿಲ್ಲವೆಂದಲ್ಲ) ಎಂದು ಅಯೋಗ್ಯವ್ಯವಚ್ಛೇದವಾಗಿ ಎಂದರೆ (ಕರ್ಮವೂ ಮೋಕ್ಷಕ್ಕೆ ಕಾರಣವು ಎಂದು ಅರ್ಥವನ್ನು ಹೇಳುವುದಾಗಿ) ಸಾವಕಾಶವಾದ ಪ್ರಯುಕ್ತ ಮೋಕ್ಷವು ಕೇವಲ ಕರ್ಮದಿಂದಲೇ ಸಾಧ್ಯವು ಎಂದು ಹೇಳುವ ವಿಷಯದಲ್ಲಿ **ಕರ್ಮಣ್ಯೆವ** ಎನ್ನುವ ಸ್ಮೃತಿಯು ಪ್ರಮಾಣವಾಗುವುದಿಲ್ಲ. ॥ ಅಧಿ. ೩೦ ॥

**ಶ್ರುತ್ಯಧಿಕರಣವು ಸಮಾಪ್ತವಾಯಿತು.**

# ೩೧ ಅನುಬಂಧಾಧಿಕರಣವು

**ಪೀಠಿಕೆ ॥** ಬ್ರಹ್ಮಜ್ಞಾನಕ್ಕೆ ಸಾಧನವಾದ ಉಪಾಸನವು ಭಕ್ತಿಪೂರ್ವಕವಾಗಬೇಕೆಂದು ಸಮರ್ಥಿಸುತ್ತಾರೆ. ಬ್ರಹ್ಮಜ್ಞಾನಕ್ಕೆ ಭಕ್ತ್ಯಾದಿಗಳು ಬೇಕಾಗಿಲ್ಲ. ಗುರ್ವನುಗ್ರಹ ಸಹಿತವಾದ ಉಪಾಸನದಿಂದಲೇ ಬ್ರಹ್ಮದರ್ಶನವು (ಅಪರೋಕ್ಷವು) ಆಗುತ್ತದೆ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನುಬಂಧಾದಿಭ್ಯಃ ಓಂ ॥ ೫೧ ॥

**ಸೂತ್ರಾರ್ಥ ॥** ಬ್ರಹ್ಮದರ್ಶನವು ಶ್ರವಣಾದಿಗಳಿಂದ ಹುಟ್ಟುವುದಾದರೂ ಹರಿಗುರುಗಳಲ್ಲಿ ಭಕ್ತಿಯು ಶಮದಮಾದಿಗಳು ಇವುಗಳಿಂದ ಆಗುತ್ತದೆ. ದ್ವೇಷಾದಿಗಳಿಂದ ಆಗುವುದಿಲ್ಲ. (ಸ್ವಾನುಸಾರೇಣ ಬಧ್ನಾತಿ— ಹರಿಗುರ್ವಾದಿಗಳ ಪ್ರಸಾದಾದಿಗಳನ್ನು ಸಂಪಾದಿಸತಕ್ಕುದು ಎನ್ನುವ ವ್ಯುತ್ಪತ್ತಿಯಿಂದ ಅನುಬಂಧಃ = ಮಾಹಾತ್ಮ್ಯ ಜ್ಞಾನಾನುಸಾರಿ ಸ್ನೇಹರೂಪವಾದ ಭಕ್ತಿಯು )

**ಭಾಷ್ಯ ॥ (೧) ನ ಕೇವಲಂ ಶ್ರವಣಾದಿಭಿರ್ಗುರುಪ್ರಸಾದೇನ ಚ ಬ್ರಹ್ಮದರ್ಶನಂ। ಕಿಂತು ಭಕ್ತ್ಯಾದಿಭಿಶ್ಚ॥ (೨) ಸರ್ವಲಕ್ಷಣಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ। ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ತನ್ನಾನ್ಯಥಾ ಭವೇತ್ ॥ ತಥಾಽಪ್ಯನಾದಿಸಂಸಿದ್ಧ(ದ್ಧೋ)ಭಕ್ತ್ಯಾದಿಗುಣಪೂಗತಃ ॥ ಲಭೇದ್ಗುರುಪ್ರಸಾದಂ ಚ ತಸ್ಮಾದೇವ ಚ ತದ್ಭವೇತ್ । ಇತಿ ॥ (೩) ಭಕ್ತಿರ್ವಿಷ್ಣೌ ಗುರೌ ಚೈವ ಗುರೋರ್ನಿತ್ಯಪ್ರಸನ್ನತಾಂ। ದದ್ಯಾಚ್ಛಮದಮಾದಿ (ದೀಂ) ಶ್ಚ ತೇನ ಚೈತೇ ಗುಣಾಃ ಪುನಃ ॥ ತೈಸ್ಸರ್ವೈರ್ದರ್ಶನಂ ವಿಷ್ಣೋಃ ಶ್ರವಣಾದಿಕೃತಂ ಭವೇತ್ । ಇತಿ ಚ ನಾರಾಯಣ ತಂತ್ರೇ ॥ ೫೧ ॥ ಅಧಿ. ೩೧ ॥ ೧ ॥**

**ಭಾಷ್ಯಾರ್ಥ ॥** (೧) ಕೇವಲ ಶ್ರವಣ ಮನನ ಧ್ಯಾನಗಳಿಂದಲೂ ಗುರುಪ್ರಸಾದಿದಿಂದಲೂ ಬ್ರಹ್ಮದರ್ಶನವಾಗುವುದಲ್ಲ. ಮತ್ತೆ ಹರಿಗುರುಭಕ್ತಿ ಶಮದಮಾದಿಗಳಿಂದಲೂ ಆಗುತ್ತದೆ. (ಭಕ್ತ್ಯಾದಿಗಳು ಇಲ್ಲದೆ ಶ್ರವಣಾದಿಗಳೂ ಗುರುಪ್ರಸಾದವೂ ಎರಡೂ ಸಿದ್ಧವಾಗಲಾರವು.) (೨) (ಈ ವಿಷಯದಲ್ಲಿ ನಿಯಾಮಕವಾದ ಸ್ಮೃತಿಯನ್ನು ಹೇಳುತ್ತಾರೆ, ) ತನಗೆ ಯೋಗ್ಯವಾದ ತೊಂಭತ್ತಾರು ಅಂಗುಲವತ್ತ್ವ ಮೊದಲಾದ ಲಕ್ಷಣಗಳಿಂದ ಸಂಪನ್ನನೂ ತನಗೆ ಯೋಗ್ಯವಾದ ಸಾರ್ವಜ್ಞೋಪೇತನೂ, ವಿಷ್ಣುಭಕ್ತಿಯುಳ್ಳವನೂ ಆದ ಗುರುವು ಚೆನ್ನಾಗಿ ಸಂತುಷ್ಟನಾಗಿ ಶಿಷ್ಯನಿಗೆ ಯಾವ ಜ್ಞಾನವನ್ನು ಉಪದೇಶ ಕೊಡುತ್ತಾನೋ, ಅದು ನಿಷ್ಫಲವಾದುದು ಆಗಲಾರದು. (ಯದ್ಯಪಿ ಪ್ರಬಲವಾದ ಗುರುಪ್ರಸಾದದಿಂದಲೇ ಬ್ರಹ್ಮದರ್ಶನವಾಗುವುದು.) ಆದಾಗ್ಯೂ ಭಕ್ತ್ಯಾದಿಗಳೂ ಆವಶ್ಯಕವು. (ಏಕೆಂದರೆ) ಅನಾದಿಕಾಲದಿಂದ ಸ್ವತ ಏವ ಸಿದ್ಧವಾದ ಅವ್ಯಕ್ತವಾದ ಪ್ರುತ್ಯಾದಿರೂಪವಾದ ಗುಣಸಮುದಾಯ ದೆಶೆಯಿಂದ ಗುರುಪ್ರಸಾದವನ್ನೂ ಹರಿಪ್ರಸಾದವನ್ನೂ ಹೊಂದುವನು. ಅಭಿವ್ಯಕ್ತ ಭಕ್ತ್ಯಾದಿಗಳಿಂದಲೇ ಅಪರೋಕ್ಷ ಜ್ಞಾನವು ಆಗುವುದು. ಆ ಭಕ್ತ್ಯಾದಿಗಳಿಂದಲೇ ಗುರುಪ್ರಸಾದಾದಿಗಳೂ

ಆಗುವವು. ಅನಾದಿಸಂಸಿದ್ಧ ಅನಭಿವ್ಯಕ್ತ ಭಕ್ತ್ಯಾದಿ ಗುಣಸಮುದಾಯದಿಂದ ಲಬ್ಧವಾದ ಗುರುಪ್ರಸಾದದಿಂದಲೇ ಭಕ್ತ್ಯಾದಿಗಳು ಅಭಿವ್ಯಕ್ತಗಳಾಗುವವು, (ತಥಾಚ ಅನಾದಿಸಿದ್ಧ ಅವ್ಯಕ್ತ ಭಕ್ತ್ಯಾದಿಗಳಿಂದ ಗುರುಪ್ರಸಾದವು. ಆದರಿಂದ ಭಕ್ತ್ಯಾದಿಗಳಿಗೆ ಅಭಿವ್ಯಕ್ತಿಯು. ಅಭಿವ್ಯಕ್ತ ಭಕ್ತ್ಯಾದಿಗಳಿಂದ ಅಪರೋಕ್ಷ ಜ್ಞಾನವು.) (೩) ಶ್ರೀ ವಿಷ್ಣುವಿನಲ್ಲಿಯೂ ಗುರುವಿನಲ್ಲಿಯೂ ಸ್ವರೂಪಭೂತವಾದ ಅನಾದಿಸಿದ್ಧವಾದ ಯಾವುದು ಭಕ್ತಿಯೋ ಯಾವ ಶಮದಮಾದಿಗಳೋ ಅವುಗಳೆಲ್ಲವೂ ಗುರುಗಳಿಗೆ ಸಂತುಷ್ಟತನವನ್ನು ಕೊಡುತ್ತದೆ, ಆ ಗುರುಪ್ರಸಾದದಿಂದ ಅಥವಾ ಪ್ರಸನ್ನರಾದ ಗುರುಗಳಿಂದ ಈ ಭಕ್ತ್ಯಾದಿ ಗುಣಗಳು ಪುನಃ ಅಭಿವೃದ್ಧಗಳಾಗುತ್ತವೆ. ಅವುಗಳಿಂದೆಲ್ಲಾ ಅಂದರೆ, ಗುರುಪ್ರಸಾದ ಪೂರ್ವಕಗಳಾದ ಅಭಿವ್ಯಕ್ತ ಭಕ್ತ್ಯಾದಿಗುಣಗಳಿಂದ ಯುಕ್ತವಾದ ಶ್ರವಣಾದಿಗಳಿಂದ ಶ್ರೀವಿಷ್ಣುವಿನ ದರ್ಶನವು ಉಂಟಾಗುವುದು ಎಂದೂ ನಾರಾಯಣ ತಂತ್ರದಲ್ಲಿ ಹೇಳಿದೆ. ( ಅನಾದಿತಃ ಅನಭಿವ್ಯಕ್ತ ಗಳಾಗಿರುವ ಭಕ್ತ್ಯಾದಿಗಳಿಗೆ ಅಭಿವ್ಯಕ್ತಿಯೆಂದರೆ, ಕ್ರಮದಿಂದ ಅಭಿವೃದ್ಧಿ ಮಾತ್ರವೇ. ಆನಂದಾದಿ ಗಳಂತೆಯೇ ಸರ್ವಥಾ ಮೊದಲು. ಅಭಿವ್ಯಕ್ತಗಳಾಗದೆ ಇರುವ ಭಕ್ತ್ಯಾದಿಗಳಿಗೆ ಅಭಿವ್ಯಕ್ತಿಯಲ್ಲ) ॥ ೫೧ ॥ ೧ ॥

## ಅಧಿಕರಣ ಸಾರಾಂಶ

ದರ್ಶನವು ಭಕ್ತ್ಯಾದಿಗಳು ಇಲ್ಲದೆ ಗುರೂಪದೇಶದಿಂದ ಯುಕ್ತವಾದ ಶ್ರವಣಾದಿಗಳಿಂದಲೇ ಆಗುತ್ತದೋ ಇಲ್ಲವೋ ಎಂದು ಸಂದೇಹವು. ಭಕ್ತ್ಯಾದಿಗಳು ಇಲ್ಲದೆ ಗುರೂಪದೇಶಯುಕ್ತ ಶ್ರವಣಾದಿಗಳಿಂದಲೇ ದರ್ಶನವು ಆಗುವುದು. ಸಮ್ಯಕ್ ಲಕ್ಷಣಸಂಪನ್ನಃ ಇತ್ಯಾದಿ ಸ್ಮೃತಿಗಳಿಂದ ಗುರುಪ್ರಸಾದದಿಂದ ಸಾಧ್ಯವಾದುದು ಯಾವುದೂ ಇಲ್ಲ. ಭಕ್ತ್ಯಾದಿಗಳು ಇಲ್ಲದವನಿಗೆ ಉಪಾಸನವೇ ಕೂಡಲಾರದು ಎಂದು ಹೇಳ ಕೂಡದು. ದ್ವೇಷದಿಂದಲೂ ಉಪಾಸನವು ಕೂಡಬಹುದು. ದ್ವೇಷಯುಕ್ತ ಉಪಾಸನದಿಂದ ಫಲವು ಸಿಗಲಾರದು ಎಂದೂ ಹೇಳಕೂಡದು. ದ್ವೇಷಾಚ್ಚೈದ್ಯಾದಯೋ ನೃಪಾಃ ಎಂದು ದ್ವೇಷದಿಂದ ಧ್ಯಾನಿಸುವವರಿಗೂ ಮುಕ್ತಿಯು ಉಕ್ತವಾಗಿದೆ, ಎಂದರೆ, ದರ್ಶನವು ಭಕ್ತ್ಯಾದಿಗಳು ಇಲ್ಲದ ಗುರೂಪದೇಶಯುಕ್ತವಾದ ಉಪಾಸನದಿಂದ ಆಗುವುದಿಲ್ಲ ಮತ್ತೆ ಭಕ್ತ್ಯಾದ್ಯುಪೇತವಾದ ಗುರೂಪದೇಶಯುಕ್ತವಾದ ಉಪಾಸನದಿಂದಲೇ ಆಗುತ್ತದೆ.· ಭಕ್ತ್ಯಾದಿಗಳು ಇಲ್ಲದ ಉಪಾಸನವು ಪುರುಷಾರ್ಥಕ್ಕೆ ಹೇತುವಲ್ಲ. ಅನರ್ಥಕ್ಕೇನೇ ಕಾರಣವು. ಉಪಾಸನವೂ ಗುರುಪ್ರಸಾದವೂ ಭಕ್ತ್ಯಾದಿಗಳಿಂದಲೇ ಸಿದ್ಧಿಸುತ್ತದೆ ಎನ್ನುವುದು ಅನಾದಿಸಂಸಿದ್ಧ ಭಕ್ತ್ಯಾದಿ ಇತ್ಯಾದಿ ಸ್ಮೃತಿಗಳಿಂದ ಸಿದ್ಧವಾಗಿದೆ. ದ್ವೇಷಾಚ್ಚೈದ್ಯಾದಯಃ ಇತ್ಯಾದಿಗಳು ಸ್ವಾಭಾವಿಕ ಭಕ್ತವಿಷಯಕಗಳು ) ॥ ಅಧಿ. ೫೧ ॥

**ಅನುಬಂಧಾಧಿಕರಣವು ಸಮಾಪ್ತವಾಯಿತು.**

# ೩೨ ಪ್ರಜ್ಞಾಂತರಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಉಪಾಸನಾಜನ್ಯ ಅಪರೋಕ್ಷಜ್ಞಾನದಲ್ಲಿ ತಾರತಮ್ಯವನ್ನು

ಸಮರ್ಥಿಸುತ್ತಾರೆ. ಭಗವದ್ದರ್ಶನವು ಸರ್ವರಿಗೂ ಏಕಪ್ರಕಾರವೇ. ತಾರತಮ್ಯವಿದ್ದುದಲ್ಲ. ದೃಷ್ಟೈವ ತಂ ಮುಚ್ಯತೇ ಎನ್ನುವಲ್ಲಿ ಸರ್ವರಿಗೂ ಅವಿಶೇಷಿತ ಜ್ಞಾನದಿಂದಲೇ ಮೋಕ್ಷವು ಶ್ರುತವಾಗಿದೆ. ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ ॥ ೫೨ ॥

**ಸೂತ್ರಾರ್ಥ ॥** ಪ್ರಜ್ಞಾವಿಶೇಷ (ಉಪಾಸನೇಗೆ)ಕ್ಕೆ ತಾರತಮ್ಯವಿದ್ದಂತೆಯೇ ಬ್ರಹ್ಮದರ್ಶನವೂ ತಾರತಮ್ಯವುಳ್ಳದ್ದು (ಫಲವು ಸಾಧನಾನುಸಾರಿಯಾದುದು) ಬ್ರಹ್ಮದರ್ಶನದಲ್ಲಿ ತಾರತಮ್ಯವು ಇದೆ ಎನ್ನುವುದು ಅಂತರ್ದೃಷ್ಟಯಃ ಇತ್ಯಾದಿ ಶ್ರುತಿಗಳಲ್ಲಿ ಉಕ್ತವಾಗಿದೆ. ಹಾಗೆಯೇ ಬ್ರಹ್ಮದರ್ಶನವು ಅನೇಕ ಪ್ರಕಾರವಾದುದಾಗ್ಯೂ ಸರ್ವಜ್ಞಾನಿಗಳಿಗೂ ಮುಕ್ತಿಯು ಇದೆ ಎನ್ನುವುದು ದೃಷ್ಟೈವ ಹ್ಯವತಾರಾಣಾಂ ಎನ್ನುವ ಸ್ಮೃತಿಯಲ್ಲಿ ಉಕ್ತವಾಗಿದೆ.

**ಭಾಷ್ಯ ॥** (೧) ಉಪಾಸನಾಭೇದವದ್ದರ್ಶನಭೇದಃ । (೨) ತಚ್ಚೋಕ್ತಂ ಕಮಠಶ್ರುತೌ । ಅಂತರ್ದೃಷ್ಟಯೋ ಬಹಿರ್ದೃಷ್ಟಯೋಽವತಾರದೃಷ್ಟಯಃ ಸರ್ವದೃಷ್ಟಯಃ ಇತಿ । ದೇವಾ ವಾವ ಸರ್ವದೃಷ್ಟಯಸ್ತೇಷು ಚೋತ್ತರೋತ್ತರಮಾಬ್ರಹ್ಮಣೋಽನ್ಯೇಷು ತು ಯಥಾಯೋಗಂ ಯಥಾ ಹ್ಯಾಚಾರ್ಯಾ ಆಚಕ್ಷತೇ। ಇತಿ ॥ (೩) ಅಧ್ಯಾತ್ಮೇ ಚ । ದೃಷ್ಟೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ । ದರ್ಶನೇನಾಂತರೇಣಾನ್ಯೇ ದೇವಾಃ ಸರ್ವತ್ರ ದರ್ಶನಾತ್ ॥ ತೇಷಾಂ ವಿಶೇಷಮಾಚಾರ್ಯೋ ವೇತ್ತಿ ಸರ್ವಜ್ಞತಾಂ ಗತಃ । ಇತಿ ॥ ೫೩ ॥ ಅಧಿ. ೩೨ ॥ ೧ ॥

**ಭಾಷ್ಯಾರ್ಥ ॥** (೧) ಅಪರೋಕ್ಷಜ್ಞಾನಕ್ಕೆ ಸಾಧನವಾದ ಉಪಾಸನಾದಲ್ಲಿ ಹೇಗೆ ಅನೇಕಪ್ರಕಾರವಿದೆಯೋ ಹಾಗೆಯೇ ಅಪರೋಕ್ಷಜ್ಞಾನದಲ್ಲಿಯೂ ತಾರತಮ್ಯವು ಆದೆ. (ಫಲವು ಸಾಧನವನ್ನು ಅನುಸರಿಸಿಕೊಂಡಿರುವುದು.) (೨) (ಸಾಧನ ವೈಚಿತ್ರ್ಯವುಳ್ಳವರಿಗೂ ಸಾಧ್ಯಸಾಮ್ಯವೇ ಏಕೆ ಆಗಲಾರದು ಎಂದರೆ) ತಮ್ಮ ಹೃದಯದಲ್ಲಿರತಕ್ಕ ಪರಬ್ರಹ್ಮನನ್ನು ಅಪರೋಕ್ಷೀಕರಿಸಿಕೊಂಡವರು ಅಗ್ನ್ಯಾದಿಗಳಲ್ಲಿರತಕ್ಕ ಪರಮಾತ್ಮನನ್ನು ಅಪರೋಕ್ಷೀಕರಿಸಿಕೊಂಡವರು, ರಾಮಕೃಷ್ಣಾದ್ಯವತಾರ ರೂಪಗಳನ್ನು ದಿವ್ಯದೃಷ್ಟಿಯಿಂದ ಪ್ರತ್ಯಕ್ಷೀಕರಿಸಿಕೊಂಡವರು. ವ್ಯಾಪ್ತೋಪಾಸಕರು, ಹೀಗೆ ಬ್ರಹ್ಮಾಪರೋಕ್ಷಿಗಳು ನಾಲ್ಕು ವಿಧರು. ಅವರಲ್ಲಿ ದೇವತೆಗಳೇ ವ್ಯಾಪ್ತೋಪಾಸಕರು. ದೇವತೆಗಳಲ್ಲಿ ಬ್ರಹ್ಮಪರ್ಯಂತವಾಗಿ ಉತ್ತರೋತ್ತರವಾಗಿ ಅಧಿಕವಾಗಿ ವ್ಯಾಪ್ತೋಪಾಸಕರು ಇತರರಾದ ಅವತಾರಾದಿಗಳನ್ನು ಪ್ರತ್ಯಕ್ಷೀಕರಿಸಿಕೊಂಡವರಲ್ಲಿ ತತ್ತದ್ಯೋಗ್ಯತಾನುಸಾರವಾಗಿ ಭಗವದ್ದರ್ಶನವು ಆಗುತ್ತದೆ. ಅವರಲ್ಲಿಯೂ ಯಥಾಯೋಗ್ಯವಾಗಿ ಉತ್ತರೋತ್ತರದಲ್ಲಿ ಅಧಿಕ್ಯವನ್ನು ತಿಳಿಯಬೇಕು. (ಯೋಗ್ಯತೆಯೇ ಹೇಗೆ ತಿಳಿಯುತ್ತದೆ ಎಂದರೆ) ಹೇಗೆ ಶಿಷ್ಯನಯೋಗ್ಯತೆಯನ್ನು ತಿಳಿದಿರುವ ಗುರುಗಳು ಶ್ರೀಭಗವಂತನ ಉಪಾಸನಾಪ್ರಕಾರವನ್ನು ಉಪದೇಶಿಸುತ್ತಾರೋ, ಹಾಗಯೇ ಉಪಾಸನಾನುಸಾರವಾಗಿ ಶ್ರೀಹರಿಯ

ಅಪರೋಕ್ಷ ಜ್ಞಾನವುಳ್ಳವರು ಆಗುತ್ತಾರೆ. ಎಂದು ಕಮಠಶ್ರುತಿಯಲ್ಲಿ ಹೇಳಲ್ಪಟ್ಟಿದೆ. (೩.) ದರ್ಶನ (ಅಪರೋಕ್ಷಜ್ಞಾನ)ದಲ್ಲಿ ಭೇದವಿದ್ದರೆ ಸರ್ವರಿಗೆ ಮೋಕ್ಷವಿಲ್ಲವೆಂದಾಗುವುದು. **ಭಕ್ತ್ಯಾಮಾಮಭಿಜಾನಾತಿ**, ಇತ್ಯಾದಿ ಸ್ಮೃತಿಗಳಲ್ಲಿ ಸಂಪೂರ್ಣ ಜ್ಞಾನದಿಂದಲೇ ಮೋಕ್ಷವು ಸ್ಮೃತವಾಗಿದೆ ಎಂದರೆ) ಕೆಲವು ಮನುಷ್ಯರು ರಾಮಕೃಷ್ಣಾದ್ಯವತಾರಗಳ ದಿವ್ಯದರ್ಶನದಿಂದಲೇ ಅಂದರೆ, **ಪ್ರಾದುರ್ಭಾವಾನಪಿ ಯದಾ ಜ್ಞಾನದೃಷ್ಟ್ಯೈವ ಪಶ್ಯತಿ । ತದೈವ ಮುಚ್ಯತೇ ಯೋಗೀ** ಎಂದು ಹೇಳಿದ ಪ್ರಕಾರ ಜ್ಞಾನದೃಷ್ಟಿಯಿಂದಲೇ ದರ್ಶನ ಮಾಡಿ) ಮುಕ್ತರಾಗುತ್ತಾರೆ. ಕೆಲವರು ಋಷಿಗಳು ಹೃದಯಾಂತರ್ಗತವಾದ ಭಗವದ್ರೂಪ ದರ್ಶನದಿಂದಲೇ ಮುಕ್ತರಾಗುತ್ತಾರೆ. ದೇವತೆಗಳು ಸರ್ವತ್ರ ಇರತಕ್ಕ (ವ್ಯಾಪ್ತನಾದ) ಶ್ರೀಹರಿಯ ದರ್ಶನದಿಂದಲೇ ಮುಕ್ತರಾಗುತ್ತಾರೆ. ಆ ದೇವಾದ್ಯಧಿಕಾರಿಗಳ ತಾರತಮ್ಯವನ್ನು ಯೋಗ್ಯತಾವಿಶೇಷವನ್ನಾಗಲೀ ಸರ್ವಜ್ಞತ್ವವನ್ನು ಹೊಂದಿರತಕ್ಕ ಆಚಾರ್ಯರೇ ತಿಳಿಯುತ್ತಾರೆ, ಎಂದು ಅಧ್ಯಾತ್ಮ ಎನ್ನುವ ಗ್ರಂಥದಲ್ಲಿ ಉಕ್ತವಾಗಿದೆ. (ತಥಾಚ ಈ ವಾಕ್ಯವಿಶೇಷ ಬಲದಿಂದ **ದೃಷ್ಟ್ಯೈವ** ಎನ್ನುವ ಶ್ರುತಿಗೆ ಯೋಗ್ಯತಾನುಸಾರವಾಗಿ ನೋಡಿ ಎಂದು ಅರ್ಥವು. **ಯಾವಾನ್ನಶ್ಶಾಸ್ತ್ರಿ** ಎನ್ನುವ ಸ್ಮೃತಿಯು ಚತುರ್ಮುಖ ವಿಷಯಕವು.) ॥ ೫೨ ॥ ೧ ॥

## ಅಧಿಕರಣ ಸಾರಾಂಶ

ಮುಕ್ತಿಗೆ ಕಾರಣವಾದ ಭಗವದ್ದರ್ಶನವು ಏಕಪ್ರಕಾರವೋ, ಅನೇಕ ಪ್ರಕಾರವೋ, ಅದಕ್ಕಾಗಿ **ದೃಷ್ಟ್ಯೈವ** ಇತ್ಯಾದಿ ವಚನವು ಸರ್ವರಿಗೆ ಏಕರೂಪವಾದ ಜ್ಞಾನಕ್ಕೆ ಹೇತುತ್ವ ಬೋಧಕವೋ, ಅಲ್ಲವೋ ಎಂದು ಸಂದೇಹವು. **ದೃಷ್ಟ್ಯೈವ** ಎನ್ನುವ ಶ್ರುತಿಯಲ್ಲಿ ಸರ್ವರಿಗೆ ಅವಿಶೇಷಿತ ಜ್ಞಾನದಿಂದ ಮೋಕ್ಷವು ಶ್ರುತವಾದುದರಿಂದ ಸರ್ವರಿಗೆ ಮುಕ್ತಿಗೆ ಕಾರಣವಾದ ಜ್ಞಾನವು ಏಕರೂಪವೇ. **ಭಕ್ತ್ಯಾ ಮಾಮಭಿಜಾನಾತಿ** ಎನ್ನುವುದರಿಂದ ಸರ್ವರಿಗೂ ಭಕ್ತ್ಯಾದಿಗಳಿಂದಲೇ ಸಂಪೂರ್ಣಜ್ಞಾನವು ಹುಟ್ಟಿ ಅದರಿಂದಲೇ ಮೋಕ್ಷವು ಉಕ್ತವಾಗಿದೆ, ಜ್ಞಾನದಲ್ಲಿ ನ್ಯೂನಾಧಿಕ ರೂಪವಿಶೇಷವಿದ್ದರೆ **ಭಕ್ತ್ಯಾ** ಎನ್ನುವ ಸ್ಮೃತಿಯಲ್ಲಿ ಸಂಪೂರ್ಣ ಜ್ಞಾನದಿಂದಲೇ ಮೋಕ್ಷವನ್ನು ಹೇಳಿದ್ದರಿಂದ ಜ್ಞಾನವಿಲ್ಲದವರಿಗೆ ಮುಕ್ತಿಯೇ ಇಲ್ಲವೆಂದಾಗಬೇಕಾಗುವುದು ಎಂದರೆ, ದೇವಾದ್ಯಧಿಕಾರಿಗಳಿಗೆ ಭಗವದ್ದರ್ಶನವು ಅನೇಕ ವಿಧವೇ. ಭಗವದ್ದರ್ಶನಕ್ಕೆ ಸಾಧನವಾದ ಉಪಾಸನವು ವಿಚಿತ್ರವಾದುದರಿಂದ ಉಪಾಸನಜನ್ಯ ಜ್ಞಾನದಲ್ಲಿಯೂ ವೈಚಿತ್ರ್ಯವು (ತಾರತಮ್ಯವು) ಆವಶ್ಯಕವು. ಫಲವು ಸಾಧನಾನುಸಾರಿಯು. **ಅಂತರ್ದೃಷ್ಟಯಃ** ಇತ್ಯಾದಿ ಶ್ರುತಿಯಲ್ಲಿ ಜ್ಞಾನದಲ್ಲಿ ನ್ಯೂನಾಧಿಕಭಾವವು ಪ್ರಮಿತವಾದುದರಿಂದ ಸರ್ವಾಧಿಕಾರಿಗಳಿಗೆ ಜ್ಞಾನವು ಒಂದೇ ವಿಧವೆನ್ನುವುದು ಬಾಧಿತವಾದುದರಿಂದ ಉಪಾಸನ ವೈಚಿತ್ರ್ಯವನ್ನು ಕಲ್ಪಿಸಲೇಬೇಕು. **ದೃಷ್ಟ್ಯೈವ ಹ್ಯವತಾರಾಣಾಂ** ಎನ್ನುವ ಸ್ಮೃತಿಯಿಂದ ತರತಮಭಾವವನ್ನು ಹೊಂದಿದ ಜ್ಞಾನದಿಂದಲೇ ಅಧಿಕಾರಿಗಳಿಗೆಲ್ಲಾ ಮೋಕ್ಷವಾಗುತ್ತದೆಂದು ತಿಳಿಯುತ್ತದೆ. **ಭಕ್ತ್ಯಾ** ಎನ್ನುವ ಸ್ಮೃತಿಯು ಹಿರಣ್ಯಗರ್ಭರೂಪ ಅಧಿಕಾರಿ ವಿಶೇಷಪರವು. ॥ ಅಧಿ. ೨.೨ ॥

**ಪ್ರಜ್ಞಾಂತರಾಧಿಕರಣವು ಸಮಾಪ್ತವಾಯಿತು.**

# ೩೩ ನ ಸಾಮಾನ್ಯಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಉಪಾಸನಾ ಸಾಧ್ಯವಾದ ಬಿಂಬವಿಷಯಕವಾದ ಅಪರೋಕ್ಷ ಜ್ಞಾನವೇ ಮೋಕ್ಷಕ್ಕೆ ಸಾಧನವೆಂದು ಸಮರ್ಥಿಸುತ್ತಾರೆ. ಶ್ರೀಹರಿಗೆ ಸರ್ವರೂಪಗಳಲ್ಲಿಯೂ ಸಾಮ್ಯವಿದೆ. ಮೋಕ್ಷದಾತೃತ್ವ ಶಕ್ತಿಗೂ ಸರ್ವತ್ರ ವಿಶೇಷವಿಲ್ಲದಿರುವ ಪ್ರಯುಕ್ತ ಯತ್ಕಿಂಚಿದ್ಭಗವದ್ರೂಪ ದರ್ಶನವೂ ಮೋಕ್ಷಸಾಧನವು ಆಗಿಯೇ ಆಗುತ್ತದೆ. ಆದಪ್ರಯುಕ್ತ ಬಿಂಬೋಪಾಸನವು ನಿಯತವಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ ॥ ೫೩ ॥

**ಸೂತ್ರಾರ್ಥ** ॥ ಬ್ರಹ್ಮರೂಪಗಳು ಸಮಾನಗಳಾದುದರಿಂದ ಭಗವದ್ವಿಷಯಕ ದರ್ಶನಗಳಿಗೂ ಸಾಧಾರಣ್ಯವಿದ್ದುದರಿಂದ ಯತ್ಕಿಂಚಿದ್ಭಗವದ್ರೂಪ ಪ್ರತ್ಯಕ್ಷದಿಂದಲೂ ಮುಕ್ತಿಯು ಆಗುತ್ತದೆ ಎಂದು ಅಲ್ಲ. ಮತ್ತೆ ಬಿಂಬಾಪರೋಕ್ಷದಿಂದಲೇ ಮುಕ್ತಿಯು ಆಗುತ್ತದೆ. ಹೇಗೆ ಮೃತಿಸಾಮಾನ್ಯದಿಂದ ಮುಕ್ತಿಯಲ್ಲವೋ ಮತ್ತೆ ಮರಣ ವಿಶೇಷಾನಂತರದಲ್ಲಿಯೇ. ರೂಪಾಂತರ ದೃಷ್ಟಿಗೆ ಫಲಭೂತವಾದ ಮಹರಾದಿ ಲೋಕ ಪ್ರಾಪ್ತಿಯು ಮುಕ್ತಿಯು ಆಗುವುದಿಲ್ಲ.

**ಭಾಷ್ಯ ॥ (೧) ನ ಸಾಮಾನ್ಯದರ್ಶನಮಾತ್ರೇಣ ಮುಕ್ತಿಃ । ಯಥಾ ಮೃತ್ಯುಮಾತ್ರಾತ್ । (೨) ನ ಹಿ ಲೋಕಾಪತ್ತಿಮಾತ್ರಂ ಮುಕ್ತಿಃ । (೩) ಸಾಮಾನ್ಯದರ್ಶನಾಲ್ಲೋಕಾಮುಕ್ತಿರ್ಯೋಗ್ಯಾತ್ಮದರ್ಶನಾತ್ । ಇತಿ ನಾರಾಯಣ ತಂತ್ರೇ । (೪) ಮುಚ್ಯತೇನಾತ್ರ ಸಂದೇಹೋ ದೃಷ್ಟ್ವಾ ತು ಸ್ವಾತ್ಮಯೋಗ್ಯಯಾ । ಇತಿ । (೫) ದರ್ಶನೇನಾತ್ಮಯೋಗ್ಯೇನ ಮುಕ್ತಿರ್ನಾನ್ಯೇನ ಕೇನ ಚಿತ್ । ಇತಿ ಚಾಧ್ಯಾತ್ಮೇ ॥ ೫೩ ॥ ಅಧಿ. ೩೩ ॥ ೧ ॥**

ಭಾಷ್ಯಾರ್ಥ ॥ (೧) ಸಾಮಾನ್ಯ ದರ್ಶನದಿಂದಲೇ ಅಂದರೆ ಯತ್ಕಿಂಚಿದ್ಭಗವದ್ರೂಪ ಪ್ರತ್ಯಕ್ಷದಿಂದಲೇ ಸರ್ವರಿಗೆ ಮುಕ್ತಿಯಾಗುವುದಲ್ಲ. ಮತ್ತೆ ತಂತಮ್ಮ ಬಿಂಬಾಪರೋಕ್ಷದಿಂದಲೇ ಮುಕ್ತಿಯು. (ಸಮೋಽಪಿ ಭಗವಾನ್ ಬಿಂಬದರ್ಶನಯ್ಯೆವೇನಂ ಮೋಚಯತಿ ಇತ್ಯಾದಿ ಶ್ರುತಿಯು) ಹೇಗೆ ಮೃತ್ಯುತ್ವವು ಸಮಾನವಾದಾಗ್ಯೂ ಸರ್ವಸಾಧಾರಣವಾದ ಮರಣಮಾತ್ರದ ಅನಂತರದಲ್ಲಿ ಮುಕ್ತಿಯಲ್ಲ ಮತ್ತೆ ಪ್ರಾರಬ್ಧಕರ್ಮಕ್ಷಯವಾದ ಮೇಲೆ ಮರಣ ವಿಶೇಷಾನಂತರದಲ್ಲಿಯೇ ಮುಕ್ತಿಯೋ. (ಹೀಗೆಯೇ ಭಗವದ್ರೂಪಗಳು ಸಮಾನಗಳಾದಾಗ್ಯೂ ರೂಪವಿಶೇಷಜ್ಞಾನವೇ ಮೋಕ್ಷಸಾಧನವು. ಸಾಮಾನ್ಯದರ್ಶನವಲ್ಲ) (೨) (ಸಾಮಾನ್ಯದರ್ಶನದಿಂದ ಮುಕ್ತಿಯು ಆಗದಿದ್ದರೆ ಅದು ನಿಷ್ಫಲವಾಗ ಬೇಕಾಗುವುದು. ಅದು ಯುಕ್ತವಲ್ಲ. ಆದಕಾರಣ ಅದಕ್ಕೆ ಯಾವುದು ಫಲವೋ ಅದೇ ಮೋಕ್ಷವು. ಎಂದರೆ) ಸಾಮಾನ್ಯ ದರ್ಶನವು ನಿಷ್ಫಲವಲ್ಲ. ಮತ್ತೆ ಅದಕ್ಕೆ ಮಹರಾದಿ ಲೋಕಪ್ರಾಪ್ತಿಯು ಫಲವು.

ಇಷ್ಟರಿಂದ (ಸಾಮಾನ್ಯ ದರ್ಶನಕ್ಕೆ ಮೋಕ್ಷಸಾಧನತ್ವವಿಲ್ಲ) ಏಕೆಂದರೆ, ಸಾಮಾನ್ಯ ದರ್ಶನದಿಂದ ಮಹರಾದಿ ಲೋಕಪ್ರಾಪ್ತಿಮಾತ್ರವೇ. ಮುಕ್ತಿಯಾಗುವುದಿಲ್ಲ (೩) (ಅದು ಹೇಗೆಂದರೆ) ಯತ್ಕಿಂಚಿದ್ಭಗವದ್ರೂಪ ದರ್ಶನದಿಂದ (ಅಂದರೆ, ಯೋಗ್ಯವಾದ ಆತ್ಮದರ್ಶನದಿಂದ ಅತಿರಿಕ್ತವಾದ ಅವತಾರಾದಿ ದರ್ಶನದಿಂದ) ಮಹರಾದಿ ಲೋಕಗಳು ಪ್ರಾಪ್ತಗಳಾಗುತ್ತವೆ. ಯಾವ ಅಧಿಕಾರಿಗೆ ಯಾವ ಭಗವದ್ರೂಪವು ಯೋಗ್ಯವೋ ಆ ಭಗವದ್ರೂಪದರ್ಶನದಿಂದ ಮುಕ್ತಿಯು ಆಗುತ್ತದೆ, ಎಂದು ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಉಕ್ತವಾಗಿದೆ. (೪) (ಭಗವದಪರೋಕ್ಷಗಳ ಮಧ್ಯದಲ್ಲಿ ಯೋಗ್ಯವಾದ ಬಿಂಬಾಪರೋಕ್ಷವೇ ಮುಕ್ತಿಗೆ ಕಾರಣವು. ಅವತಾರಾದಿ ರೂಪಾಂತರ ಪ್ರತ್ಯಕ್ಷವು ಮುಕ್ತಿಗೆ ಕಾರಣವಲ್ಲ ಎಂದು ಹೇಗೆ ಇದೆಯೋ ಹಾಗೆಯೇ ಯೋಗ್ಯವಾದ ಆತ್ಮದರ್ಶನದಲ್ಲಿಯೂ (ಅಂದರೆ ಬಿಂಬಾ ಪರೋಕ್ಷದಲ್ಲಿಯೂ) ಕೆಲವು ಮುಕ್ತಿಗೆ ಕಾರಣವು, ಕೆಲವು ಅಲ್ಲ ಎಂದು ಇರಬಹುದೆಂದರೆ) ತಮಗೆ ಯೋಗ್ಯವಾದ ಭಗವದ್ರೂಪ ವಿಷಯಕವಾದ ಪ್ರತ್ಯಕ್ಷದಿಂದಲಾದರೂ ಮುಕ್ತನು ಆಗಿಯೇ ಆಗುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ ಎಂದೂ ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಹೇಳಿದೆ. (೫) (ಸಾಮಾನ್ಯ ದರ್ಶನದಿಂದ ಹೇಗೆ ಮಹರಾದಿ ಲೋಕಪ್ರಾಪ್ತಿಯೋ ಹಾಗೆಯೇ ಕ್ವಚಿತ್ ಮುಕ್ತಿಯೇ ಏಕೆ ಆಗಲಾರದು ಎಂದರೆ) ಸ್ವಯೋಗ್ಯ ಭಗವದ್ರೂಪವಿಷಯಕವಾದ ಅಪರೋಕ್ಷದಿಂದಲೇ, ಮುಕ್ತಿಯು ಬೇರೆ ಯಾವುದರಿಂದಲೂ (ಅಂದರೆ ಸಾಮಾನ್ಯ ದರ್ಶನಾದಿಗಳಿಂದ) ಮುಕ್ತಿಯು ಆಗುವುದಿಲ್ಲ ಎಂದು ಅಧ್ಯಾತ್ಮ ಎನ್ನುವ ಗ್ರಂಥದಲ್ಲಿ ಉಕ್ತವಾಗಿದೆ. ॥ 53 ॥ ಅಧಿ. 33 ॥ 1 ॥

ವಿಶೇಷಾಂಶ ॥ (೧) **ಬಿಂಬದರ್ಶನಾನ್ಮುಕ್ತಿಃ** ಎಂದು ಹೇಳುವುದನ್ನು ಬಿಟ್ಟು **ಮುಕ್ತಿರ್ಯೋಗ್ಯಾತ್ಮದರ್ಶನಾತ್** ಎಂದು ಸಾಮಾನ್ಯತಃ ನಿರ್ದೇಶ ಮಾಡಿದ್ದರಿಂದ ಸರ್ವರಿಗೂ ಬಿಂಬ ದರ್ಶನದಿಂದಲೇ ಮುಕ್ತಿಯೆಂದು ನಿಯಮವಿಲ್ಲ. ಮತ್ತೆ ಬಿಂಬದರ್ಶನಕ್ಕೆ ಯೋಗ್ಯರಾದ ಋಷ್ಯಾದಿಗಳಿಗೇನೇ ಬಿಂಬದರ್ಶನದಿಂದ ಮುಕ್ತಿಯು **ದೃಷ್ಟೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ** ಇತ್ಯಾದಿ ಪ್ರಮಾಣಾನುಸಾರವಾಗಿ ಸರ್ವರಿಗೆ ಬಿಂಬದರ್ಶನ ಯೋಗ್ಯತೆಯಿಲ್ಲ. ಆದಕಾರಣ ಯಾರಿಗೆ ಮುಕ್ತಿಯಾಗಲಿಕ್ಕೆ ಯಾವ ಭಗವದ್ರೂಪವು ಯೋಗ್ಯವೋ ಆ ಭಗವದ್ರೂಪಜ್ಞಾನದಿಂದಲೇ ಆತನಿಗೆ ಮುಕ್ತಿಯು ಎಂದೇ ನಿಯಮವು. ಅದು ಬಿಂಬರೂಪವೂ ಆಗಬಹುದು. ಬಿಂಬಾತಿರಿಕ್ತವಾದ ಅವತಾರಾದಿ ರೂಪವೂ ಆಗಬಹುದು. (೨) ಕೆಲವರು **ಸರ್ವೋऽಪಿ ಭಗವಾನ್ವಿಷ್ಣುಃ ಸ್ವಬಿಂಬದರ್ಶನಯ್ಯೆವೈನಂ ಮೋಚಯತಿ** ಎನ್ನುವ ಶ್ರುತಿಯಲ್ಲಿದ್ದ ಬಿಂಬಶಬ್ದವು ಸ್ವಯೋಗ್ಯಾತ್ಮಪರವಲ್ಲ. ಮತ್ತೆ **ಹೃದಿಸ್ಥಾ ಯಾ ಹರೇರ್ಮೂರ್ತಿ ರ್ಜೀವೋ ಯತ್ಪ್ರತಿಬಿಂಬತಃ । ಯದ್ವಶೇ ವರ್ತತೇ ಜೀವಃ** ಇತ್ಯಾದಿ ಪ್ರಮಾಣಾನುಸಾರವಾಗಿ ಬಿಂಬಶಬ್ದವು ಹೃದಯಸ್ಥ ಭಗವತ್ಪರವೇ. ಆದಕಾರಣ ಅವತಾರದರ್ಶಿಗಳಿಗೂ ಹೃದ್ಗತವಾದ ಭಗವದ್ರೂಪ ದರ್ಶನವು ಆವಶ್ಯಕವು. **ಯೇಷಾಂ ಬಹಿರುಪಾಸನೇನ ಮೋಕ್ಷಹ ತೇಷಾಂ ಹೃದ್ಯುಪಾಸಂ ಕಿಂಚಿತ್ಕರ್ತವ್ಯಂ** ಎಂದು ಬೃಹದ್ಭಾಷ್ಯೋಕ್ತರೀತ್ಯಾ ಬಹಿರುಪಾಸಕರಿಗೂ ಹೃದ್ಗತವಾದ ಭಗವದ್ರೂಪೋಪಾಸನವು ಕಿಂಚಿತ್ ಆವಶ್ಯಕವೇ, ಎನ್ನುತ್ತಾರೆ. (೩) (ಏವಂಚ) **ಪ್ರಾದುರ್ಭಾವಾನಪಿ ಯದಾ ಜ್ಞಾನದೃಷ್ಟ್ಯೈವ ಪಶ್ಯತಿ । ತದೈವ ಮುಚ್ಯತೇ ಯೋಗೀ** ಇತ್ಯಾದ್ಯುಕ್ತಪ್ರಕಾರ ರಾಮ ಕೃಷ್ಣಾದ್ಯವತಾರರೂಪಗಳನ್ನು ದಿವ್ಯದೃಷ್ಟಿಯಿಂದ ಬಿಂಬ ರೂಪಾಭೇದದಿಂದ

ಪ್ರತ್ಯಕ್ಷೀಕರಿಸಿಕೊಂಡು ಅವತಾರದರ್ಶಿಗಳೂ ಕೂಡ ಮುಕ್ತರಾಗುತ್ತಾರೆ. ಆದಕಾರಣ ಮೋಕ್ಷಕ್ಕೆ ಬಿಂಬಾಪರೋಕ್ಷವು ಆವಶ್ಯಕವು. ಎನ್ನುವ ಉಕ್ತಿವಿರೋಧವಿಲ್ಲ ॥ ೫೩ ॥ ೧ ॥

## ಅಧಿಕರಣ ಸಾರಾಂಶ

ಯಾವುದಾದರೊಂದು ಭಗವದ್ರೂಪ ದರ್ಶನವು ಮುಕ್ತಿಗೆ ಕಾರಣವೋ ಅಥವಾ ಬಿಂಬ ರೂಪದರ್ಶನವೋ, ಎಂದು ಸಂದೇಹವು. ಭಗವದ್ರೂಪಗಳಲ್ಲಿ ಕೆಲವು ರೂಪಗಳಿಗೆ ಮಾತ್ರ ಮೋಕ್ಷವನ್ನು ಕೊಡತಕ್ಕ ಶಕ್ತಿಯು ಕೆಲವು ರೂಪಗಳಿಗೆ ಇಲ್ಲ ಎಂದಂಗೀಕರಿಸಿದರೆ ಸರ್ವರೂಪಗಳಿಗೆ ಸಾಮ್ಯವು ಇಲ್ಲವೆಂದಾಗಬೇಕಾಗುವುದು. ಆದುದರಿಂದ ಯಾವುದೊಂದು ಭಗವದ್ರೂಪಜ್ಞಾನವೂ ಮುಕ್ತಿಗೆ ಕಾರಣವೆಂದೇ ಹೇಳಬೇಕು. ಮತ್ತು ಸಾಮಾನ್ಯವಾದ ರಾಮ ಕೃಷ್ಣಾದ್ಯವತಾರ ದರ್ಶನವು ಮುಕ್ತಿಗೆ ಫಲವೆಂದು ಹೇಳಬೇಕು. ಮತ್ತು ಯತ್ಕಿಂಚಿದ್ರೂಪಜ್ಞಾನವು ಮುಕ್ತಿಗೆ ಕಾರಣವು, ಇತರ ವಲ್ಲವೆಂದು ಹೇಳುವುದಾದರೆ ಯತ್ಕಿಂಚಿತ್ ಬಿಂಬಜ್ಞಾನವು ಮುಕ್ತಿಗೆ ಕಾರಣವು. ಕೆಲವು ಬಿಂಬಜ್ಞಾನವು ಮುಕ್ತಿಗೆ ಕಾರಣವಲ್ಲವೆಂದಾಗಬೇಕಾಗುವುದು ಎಂದರೆ, ಸರ್ವಸಾಧಾರಣಗಳಾದ ಎಲ್ಲಾ ಮೃತಿಗಳಲ್ಲಿ ಮೃತಿತ್ವದಿಂದ ವಿಶೇಷವಿಲ್ಲವಾದರೂ ಮೃತಿವಿಶೇಷಾನಂತರದಲ್ಲಿಯೇ ಮುಕ್ತಿಯೋ, ಹೀಗೆ ಭಗವದ್ರೂಪಗಳಿಗೆಲ್ಲಾ ಸಾಮ್ಯವಿದ್ದರೂ ಭಗವತ್ಸಂಕಲ್ಪಾನುಸಾರವಾಗಿ ಬಿಂಬರೂಪ ವಿಶೇಷಜ್ಞಾನವೇ ಮುಕ್ತಿಗೆ ಕಾರಣವು. ಯತ್ಕಿಂಚಿದ್ರೂಪಜ್ಞಾನವಲ್ಲ. ಸಮೋಽಪಿ ಭಗವಾನ್, ಸ್ವಬಿಂಬದರ್ಶನ ಯ್ಯೆವೈನಂ ಮೋಚಯತಿ ಇತ್ಯಾದಿ ಶ್ರುತಿಗಳಿಂದ. ಹೀಗಾದರೆ, ಸಾಮಾನ್ಯ ದರ್ಶನವು ನಿಷ್ಫಲವಾಗುವುದಿಲ್ಲ. ಸಾಮಾನ್ಯದರ್ಶನಾಲ್ಲೋಕಾಃ ಇತ್ಯಾದಿ ಸ್ಮೃತಿಗಳಿಂದ ಸಾಮಾನ್ಯ ದರ್ಶನಕ್ಕೆ ಮಹರಾದಿ ಲೋಕಾಂತರಪ್ರಾಪ್ತಿಯೇ ಫಲವು. ಮುಚ್ಯತೇ ನಾತ್ರ ಸಂದೇಹಃ ದೃಷ್ಟ್ವಾತು ಸ್ವಾತ್ಮಯೋಗ್ಯಯಾ ಇತ್ಯಾದಿ ಸ್ಮೃತಿಗಳಿಂದ ಬಿಂಬದರ್ಶನದಿಂದ ಮುಕ್ತಿಯು ಆಗಿಯೇ ಆಗುತ್ತದೆ. ॥ ಅಧಿ. ೩೩ ॥

**ನ ಸಾಮಾನ್ಯಾಧಿಕರಣವು ಸಮಾಪ್ತವಾಯಿತು.**

# ೩೪ ಪರೇಣಾಧಿಕರಣವು

ಪೀಠಿಕೆ ॥ ಭಕ್ತಿಗೆ ಅಪರೋಕ್ಷಜ್ಞಾನವನ್ನು ಹುಟ್ಟಿಸುವುದರಲ್ಲಿ ಸ್ವಾತಂತ್ರ್ಯವನ್ನು ನಿರಾಕರಿಸುತ್ತಾರೆ—

**ಭಾಷ್ಯ ॥ (೧) ಭಕ್ತಿರೇವೈನಂ ನಯತಿ ಭಕ್ತಿರೇವೈನಂ ದರ್ಶಯತಿ ಭಕ್ತಿವಶಃ ಪುರುಷೋ ಭಕ್ತಿರೇವ ಭೂಯಸೀ । ಇತಿ ಮಾಠರಶ್ರುತೇರ್ನ ಪರಮಾತ್ಮನಾ ದರ್ಶನಂ । ಇತಿ ಚೇತ್ । (೨) ನ । ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ (ಮು. ೩.೨.೪.) । ಇತಿ ಶ್ರುತೇಃ । (೩) ಕಥಂ ತರ್ಹ್ಯೇಷಾ ಶ್ರುತಿಃ ॥ ೧ ॥**

ಭಾಷ್ಯಾರ್ಥ ॥ (೧) ಭಕ್ತಿಯೇ ಈ ಪರಮಾತ್ಮನ ಸಮೀಪಕ್ಕೆ ಮುಕ್ತಿಯಲ್ಲಿ ಭಕ್ತನನ್ನು ಹೊಂದಿಸಿಕೊಡುತ್ತದೆ. ಭಕ್ತಿಯೇ ಈ ವಿಷ್ಣುವನ್ನು ಭಕ್ತನಿಗೋಸ್ಕರ ತೋರಿಸಿಕೊಡುತ್ತಾರೆ.

ಶ್ರೀಪರಮಾತ್ಮನು ಭಕ್ತ್ಯಧೀನನು. ಭಕ್ತಿಯೇ ಸಾಧನಗಳಲ್ಲಿ ಶ್ರೇಷ್ಠವಾದುದು, ಎನ್ನುವ ಮಾಠರ ಶ್ರುತಿಯಿಂದ ಪರಮಾತ್ಮಪ್ರಸಾದದಿಂದ ಬ್ರಹ್ಮಸಾಕ್ಷಾತ್ಕಾರಾದಿಗಳು ಆಗುವುದಿಲ್ಲ ಮತ್ತೆ ಭಕ್ತಿಸಾಮರ್ಥ್ಯದಿಂದಲೇ ಆಗುತ್ತದೆಂದು ತಿಳಿಯುತ್ತದೆ. (ಆದಕಾರಣ ಬ್ರಹ್ಮನಿಗೆ ಅವ್ಯಕ್ತತ್ವವಿಲ್ಲ) (೨) ಎಂದರೆ ಹಾಗೇ ಹೇಳಕೂಡದು. ಅಂದರೆ ಭಕ್ತಿಗೇನೇ ಸ್ವಾತಂತ್ರ್ಯದಿಂದ ದರ್ಶನಾದಿ ಸಾಧನತ್ವವಿಲ್ಲ. ಮತ್ತೆ ಭಕ್ತಿಯಿಂದ ಪ್ರಸನ್ನನಾದ ಪರಮಾತ್ಮನಿಗೇನೇ ಇರುವುದು. (ಭಕ್ತಿಯೇ ಪ್ರಧಾನವಾಗಿಯುಳ್ಳ ಪ್ರವಚನಾದ್ಯುಪಾಯಗಳಿಂದ ಯಾವಾತನು ಬ್ರಹ್ಮದರ್ಶನಕ್ಕಾಗಿ ಪ್ರಯತ್ನಿಸುತ್ತಾನೋ.) ಅಂತಹ ಅಧಿಕಾರಿಗೆ ಅವುಗಳಿಂದ ಪ್ರಸನ್ನವಾದ ಶ್ರೀಪರಮಾತ್ಮನು ಪರಬ್ರಹ್ಮನಿಗೆ ಅಧಿಷ್ಠಾನಭೂತನಾದ ವಾಯುವನ್ನು ಪ್ರವೇಶಮಾಡುತ್ತಾನೆ. ಅಂದರೆ ವಾಯುವಿನಲ್ಲಿ ಅಧಿಕಾರಿಗೆ ತನ್ನ ರೂಪವನ್ನು ತೋರಿಸುತ್ತಾನೆ, ಎನ್ನುವ ಶ್ರುತಿಯಿಂದ (೩.) (ಪರಮಾತ್ಮನಿಂದಲೇ ದರ್ಶನಾದಿಗಳು ಆಗುವುದಾದರೆ ಭಕ್ತಿಗೇನೇ ದರ್ಶನಾದಿ ಸಾಧನತ್ವವನ್ನು ಹೇಳತಕ್ಕ ಶ್ರುತಿಯು ಹೇಗೆ ಕೂಡುತ್ತದೆ, ಎಂದರೆ) ಭಕ್ತಿಗೇನೇ ಕರ್ತೃತ್ವವನ್ನು ಹೇಳತಕ್ಕ ಭಕ್ತಿರೇವೈನಂ ಎನ್ನುವ ಶ್ರುತಿಯು ಹೇಗೆ ಕೂಡುತ್ತದೆ ಎಂದರೆ. ॥ ೧ ॥

## ಸೂತ್ರ ॥ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ ॥ ೫೪ ॥

ಸೂತ್ರಾರ್ಥ ॥ ಪರಮಾತ್ಮನಿಂದಲೇ ಭಗವದ್ದರ್ಶನಾದಿಗಳು. ಸ್ವತಂತ್ರವಾದ ಭಕ್ತಿಯಿಂದ ಅಲ್ಲ. ಏತೈರುಪಾಯೈಃ ಎನ್ನುವ ಶ್ರುತಿಯಿಂದ. ಭಕ್ತಿರೇವ ಎನ್ನುವ ಶ್ರುತಿಗೆ ಭಕ್ತಿಗೆ ಸ್ವಾತಂತ್ರ್ಯದಿಂದ ದರ್ಶನಾದಿ ಹೇತುತ್ವವಾಚಕತ್ವವಾದರೂ ಭಕ್ತಿಯು ಪ್ರಧಾನ ಕಾರಣವಾದುದರಿಂದ ಯುಕ್ತವಾಗುತ್ತದೆ. ಭಕ್ತಿಯಾದರೂ ಕರಣಾಂತರಗಳಲ್ಲಿ ಪ್ರಧಾನವಾದುದರಿಂದ ವಿಶಿಷ್ಟ ಉಕ್ತವಾಗಿದೆ.

**ಭಾಷ್ಯ ॥ (೧) ಪರಮಾತ್ಮೈವ ಭಕ್ತ್ಯಾದರ್ಶನಂ ಪ್ರಾಪ್ಯ ಮುಕ್ತಿಂ ದದಾತೀತಿ ಪ್ರಧಾನಸಾಧನತ್ವಾದ್ಭಕ್ತಿಃ ಕರಣತ್ವೇನೋಚ್ಯತೇ । (೨) ಮಾಯಾವೈಭವೇ ಚ । ಭಕ್ತಿಸ್ಥಃ ಪರಮೋ ವಿಷ್ಣುಸ್ತಯೈವೈನಂ ವಶಂ ನಯೇತ್ । ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ॥ ಸ್ನೇಹಾನುಬಂಧೋ ಯಸ್ತಸ್ಮಿನ್ ಬಹುಮಾನಪುರಸ್ಸರಃ । ಭಕ್ತಿರಿತ್ಯುಚ್ಯತೇ ಸೈವ ಕರಣಂ ಪರಮೀಶಿತುಃ । ಇತಿ ॥ (೩) ಸರ್ವಶಬ್ದಾನಾಂ ಬ್ರಹ್ಮಣಿ ಪ್ರವೃತ್ತೇಶ್ಚ ॥ ೫೪ ॥ ಅಧಿ. ೩೪ ॥ ೨ ॥**

ಭಾಷ್ಯಾರ್ಥ ॥ (೧) ಯದ್ಯಪಿ ಪರಮಾತ್ಮನೇ ದರ್ಶನವನ್ನು ಹೊಂದಿ ಮುಕ್ತಿಯನ್ನು ಕೊಡುತ್ತಾನೆ. (ಕೇವಲ ಭಕ್ತಿಸಾಮರ್ಥ್ಯದಿಂದಲೇ ಭಗವದ್ದರ್ಶನಾದಿಗಳು ಅಲ್ಲ ಆದಾಗ್ಯೂ.) ಪರಮಾತ್ಮನೇ ಭಕ್ತಿಯಿಂದಲೇ ಪ್ರಸನ್ನನಾಗಿ ತನ್ನ ದರ್ಶನವನ್ನುಕೊಟ್ಟು ಮುಕ್ತಿಯನ್ನು ಕೊಡುತ್ತಾನೆ, ಎನ್ನುವ ಹೇತುವಿನಿಂದ (ಸಾಧನಾಂತರಗಳು ಇದ್ದರೂ) ಸಾಧನಗಳಲ್ಲಿ ಪ್ರಧಾನವಾದುದರಿಂದ ಭಕ್ತಿಯೇ (ದರ್ಶನಾದಿಗಳಲ್ಲಿ) ಕರಣವೆಂದು ಹೇಳಲ್ಪಡುತ್ತದೆ. (ಸಾಧನಾಂತರಗಳಲ್ಲ) (೨) (ಈ ವಿಷಯದಲ್ಲಿಯೇ ಸ್ಮೃತಿಯನ್ನು ಹೇಳುತ್ತಾರೆ) ಭಕ್ತಿಯಲ್ಲಿರತಕ್ಕ ಭಕ್ತಿಗೆ ನಿಯಾಮಕನಾದ

ಸರ್ವೋತ್ತಮನಾದ ವಿಷ್ಣುವು ಅನಾದಿಸಿದ್ಧವಾದ ಭಕ್ತಿಯಿಂದಲೇ ತನ್ನನ್ನು ಜೀವವಶನನ್ನಾಗಿ ತಿಳಿಸಿಕೊಡುವನು (ಅಂದರೆ ತಾನು ಜೀವಾಧೀನನು ಎಂದು ತೋರಿಸುವನು.) ಅಥವಾ ಈ ಜೀವನನ್ನು ತನ್ನವನನ್ನಾಗಿ ಮಾಡುವನು. (ಅಂದರೆ ಜೀವನಿಗೆ ತಾನು ಭಗವದ್ಭಕ್ತನು ಆತನ ಭೃತ್ಯಕೂಟದಲ್ಲಿ ಸೇರಿದವನು ಎನ್ನುವ ಸ್ಮೃತಿಯನ್ನು ಹುಟ್ಟಿಸುವನು.) ಗುರುಪ್ರಸಾದದಿಂದ ಅಭಿವ್ಯಕ್ತವಾದ ಭಕ್ತಿಯಿಂದಲೇ ಪ್ರಸನ್ನನಾಗಿ ದರ್ಶನವನ್ನು ಹೊಂದಿದವನಾಗಿ (ದರ್ಶನವಿಷಯನಾಗಿ) ಈ ಅತಿ ಪರಿಪಕ್ವವಾದ ಭಕ್ತಿಯಿಂದ (ಜೀವರಿಗೆ) ಮುಕ್ತಿಯನ್ನು ಕೊಡುವನು. ಯಾವುದು ಆ ವಿಷ್ಣುವಿನಲ್ಲಿ ದೇಶಕಾಲ ಗುಣಗಳಿಂದ ಪೂರ್ಣತ್ವ ಜ್ಞಾನಪೂರ್ವಕವಾದ ಸ್ನೇಹವೋ ಅದೇವೇ ಅನುಬಂಧವು. (ಅನುಬಧ್ನಾತಿ = ತನಗೆ ಅನುಕೂಲವಾಗುವ ಹಾಗೆ ಬಂಧಿಸುವುದು ಅಂದರೆ, ಬದ್ಧನಾದವನನ್ನೇಂಬಂತೆ ತನ್ನ ಪ್ರಭುವನ್ನು ವಶೀ ಕರಿಸಿಕೊಳ್ಳುವಂಥಾದ್ದು.) ಅದೇವೇ ಭಕ್ತಿಯು ಎನ್ನಿಸಿಕೊಳ್ಳುತ್ತದೆ. ಸರ್ವೇಶ್ವರನಾದ ಶ್ರೀಹರಿಗೆ ದರ್ಶನಾದಿಗಳನ್ನು ಕೊಡುವುದರಲ್ಲಿ ಆ ಭಕ್ತಿಯೇ ಪ್ರಧಾನವಾದ ಕರಣವು. (ಬೇರೆಯಲ್ಲ) ಆದಕಾರಣ ಅದೇ ಕರಣವೆಂದು ಹೇಳಲ್ಪಡುತ್ತದೆ ಎಂದು ಮಾಯಾ ವೈಭವವೆನ್ನುವ ಗ್ರಂಥದಲ್ಲಿ ಹೇಳಲ್ಪಟ್ಟಿದೆ. (೩) ಭಕ್ತಿಃ ಇದು ಮೊದಲಾದ ಸರ್ವಶಬ್ದಗಳಿಗೆ ಪರಬ್ರಹ್ಮನಲ್ಲಿ ಪರಮ ಮುಖ್ಯವೃತ್ತಿಯು ಇದ್ದುದರಿಂದ. ತಥಾಚ **ಭಕ್ತಿರೇವೈನಂ ದರ್ಶಯತಿ**, ವಿಷ್ಣುವೇ ತನ್ನ ಜೀವನಿಗ ತೋರಿಸುತ್ತಾನೆ. ಆದುದರಿಂದಲೇ ಅಪರೋಕ್ಷ ಜ್ಞಾನಿಯಾದ ಪುರುಷನು ಭಕ್ತವಶನು ಎನ್ನಿಸುತ್ತಾನೆ. ॥ ೫೪ ॥ ೨ ॥

## ಅಧಿಕರಣ ಸಾರಾಂಶ

ಪ್ರಕೃತ ದರ್ಶನವು ಭಕ್ತಿಸಾಮರ್ಥ್ಯದಿಂದಲೋ ಈಶ್ವರಶಕ್ತಿಯಿಂದಲೋ, ಆದಕ್ಕಾಗಿ **ಭಕ್ತಿರೇವೈನಂ ದರ್ಶಯತಿ** ಎನ್ನುವ ಶ್ರುತಿಯು ಭಕ್ತಿಗೇನೇ ಸ್ವಾತಂ ತ್ರ್ಯಬೋಧಕವೋ ಅಥವಾ ಕರ್ತನಾದ ಈಶ್ವರನಿಗೆ ದರ್ಶನವನ್ನು ಕೊಡಲಿಕ್ಕೆ ಕಾರಣತ್ವ ಬೋಧಕವೋ ಎಂದು ಸಂದೇಹವು. **ಭಕ್ತಿರೇವೈನಂ ದರ್ಶಯತಿ** ಎಂದು ಭಕ್ತಿಗೆ ಕರ್ತೃತ್ವವು ಶ್ರುತವಾಗಿದೆ. ಅದಕ್ಕೆ ಕಾರಣತ್ವ ಪರತ್ವವನ್ನು ಇಟ್ಟುಕೊಳ್ಳಲಿಕ್ಕೂ ಈಶ್ವರಪರತ್ವವನ್ನು ಕಲ್ಪಿಸಲಿಕ್ಕೂ ಕಲ್ಪಕವಿಲ್ಲ. ಇತರ ಸಾಧನಗಳು ಇರುವಾಗ ವಿಶಿಷ್ಟ ಭಕ್ತಿಯನ್ನೇ ಹೇಳಲಿಕ್ಕೆ ಕಾರಣವೂ ಇಲ್ಲದಿರುವುದರಿಂದ **ಭಕ್ತಿರೇವ** ಎಂದು ಹೇಳಿದ್ದು ಅಯುಕ್ತವಾಗಿದೆ. ಆದಕಾರಣ ಭಕ್ತಿಯೇ ಈಶ್ವರಪ್ರಸಾದವನ್ನು ಅಪೇಕ್ಷಿಸದೆ ತನ್ನ ಶಕ್ತಿಯಿಂದಲೇ ಭಗವಂತನ ಅಪರೋಕ್ಷ್ಯವನ್ನು ಕೊಡುತ್ತದೆ ಎಂದರೆ, ಭಕ್ತಿಗೇನೇ ದರ್ಶನಕರ್ತೃತ್ವವಿದ್ದರೆ ಏತೈರುಪಾಯೈರ್ಯತತೇ ಎನ್ನುವ ಶ್ರುತಿಯಲ್ಲಿ ಭಕ್ತ್ಯಾದ್ಯುಪಾಯಗಳಿಂದ ಪ್ರಸನ್ನನಾದ ಈಶ್ವರನೇ ತನ್ನ ಪ್ರತ್ಯಕ್ಷವನ್ನು ಕೊಡುತ್ತಾನೆಂದು ಹೇಳಿದ್ದರಿಂದ ಭಕ್ತಿರೇವ ಎನ್ನುವ ಶ್ರುತಿಗೆ ಕರ್ತೃತ್ವಪರತ್ವವು ಕೂಡದಿರುವುದರಿಂದ ಕಾರಣತ್ವ ಪರತ್ವವಿದ್ದುದರಿಂದ ಸಾಧನಗಳಲ್ಲಿ ಭಕ್ತಿಯೇ ಪ್ರಧಾನವಾದುದರಿಂದ **ಭಕ್ತಿರೇವ** ಎಂದು ವಿಶಿಷ್ಟ ಭಕ್ತಿಯನ್ನು ಹೇಳಿದ್ದು. ಏವಂಚ **ಭಕ್ತಿಸ್ಥಃ ಪರಮಃ** ಇತ್ಯಾದಿ ಸ್ಮೃತಿಬಲದಿಂದ ಅನಾದಿಭಕ್ತಿಯಿಂದ ಪ್ರಸನ್ನನಾದ ಈಶ್ವರನ ಸಾಮರ್ಥ್ಯದಿಂದ ಈಶ್ವರನ ಅಪರೋಕ್ಷ್ಯಜ್ಞಾನವು. ॥ ಅಧಿ.೩೪ ॥

**ಪರೇಣಾಧಿಕರಣವು ಸಮಾಪ್ತವಾಯಿತು.**

## ೩೫ ಏಕಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಉಪಾಸನಕ್ಕೆ ಅನಾದಿ ಯೋಗ್ಯತಾಪೇಕ್ಷೆಯು ಇದೆ ಎಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ಜೀವಾಂಶಾನಾಂ ಪೃಥಗುತ್ಪತ್ತೇರ್ನಾನಾದಿಯೋಗ್ಯತಾಪೇಕ್ಷೇತಿ ನ ಮಂತವ್ಯಂ । ಕುತಃ ? ॥ ೧ ॥**

**ಭಾಷ್ಯಾರ್ಥ ॥** ಇಂದ್ರ ಮೊದಲಾದ ಜೀವಾಂಶರಾದ ಅರ್ಜುನಾದಿಗಳಿಗೆ ಉತ್ಪತ್ತಿಯಿದ್ದ ಪ್ರಯುಕ್ತ ಉಪಾಸನಾದಿಗಳಲ್ಲಿ ಅನಾದಿ ಯೋಗ್ಯತಾಪೇಕ್ಷೆಯು ಇಲ್ಲ. (ಯೋಗ್ಯತೆಯು ಅನಾದಿಯೆನ್ನುವುದು ಸಿದ್ಧಾಂತಿಗಳಿಗೆ ಇಷ್ಟವೇ. ಇಲ್ಲವಾದರೆ ಯೋಗ್ಯತೆಯಂತೆ ಉಪಾಸನಾದಿಗಳು ಆಗಂತುಕವಾಗಬೇಕಾಗುವವು. ಉತ್ಪತ್ತಿಯುಳ್ಳ ಅರ್ಜುನಾದಿಗಳ ಯೋಗ್ಯತೆಯು ಅನಾದಿಯೆನ್ನುವುದು ಕೂಡಲಾರದು. ಧರ್ಮಿಯು ಸಾದಿಯಾದರೆ ಧರ್ಮವು ಅನಾದಿಯಾಗಲಾರದು. ಅಂಶಿಯು ಅನಾದಿಯಾದಾಗ್ಯೂ ಅಂಶಗಳಿಗೆ ಉತ್ಪತ್ತಿಯು ಯುಕ್ತವೇ.) ಅರ್ಜುನಾದ್ಯಂಶಗಳಿಗೆ ಇಂದ್ರಾದಿಯಿಂದ ಅಂಶಿ ಪೃಥಕ್ತ್ವ(ಭೇದ)ವಿದ್ದ ಪ್ರಯುಕ್ತ (ಭೇದವಿಲ್ಲವಾದರೆ ಜ್ಞಾನಸುಖಾದಿಗಳಿಗೆ ಭೇದವೇ ಕೂಡಲಾರದು) ಆದುದರಿಂದ ಅಂಶಗಳಿಗೆ ಉತ್ಪತ್ತಿಯಿದ್ದುದರಿಂದ ಅನಾದಿ ಯೋಗ್ಯತೆಯು ಇಲ್ಲದಿರುವುದರಿಂದ ಉಪಾಸನಾದಿಗಳಿಗೆ ಯೋಗ್ಯತಾಪೇಕ್ಷೆಯು ಇಲ್ಲ ಎಂದರೆ, ಹೀಗೆ ತಿಳಿಯಕೂಡದು. ಏಕೆ ತಿಳಿಯಕೂಡದು ಎಂದರೆ, ॥ ೧ ॥

### ಸೂತ್ರ ॥ ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ॥ ೫೫ ॥

**ಸೂತ್ರಾರ್ಥ ॥** ಇಂದ್ರಾದ್ಯಂಶಿಯೂ ಅರ್ಜುನಾದ್ಯಂಶವೂ ಒಂದೇ. (ಅಭಿನ್ನವೇ. ಭಿನ್ನವಲ್ಲ. ಆದಕಾರಣ ಅಂಶವು ಹುಟ್ಟುವುದಿಲ್ಲ. ಆದಕಾರಣ ಯೋಗ್ಯತೆಗೆ ಅನಾದಿತ್ವವು ಇಲ್ಲವೆಂದು ಹೇಳಕೂಡದು.) ಅಂಶಿ ಸಂಬಂಧಿಯಾದ ಶರೀರದಲ್ಲಿ (ಅಂದರೆ ಅಂಶಿ ಕರ್ಮಾರ್ಜಿತ ಶರೀರದಲ್ಲಿ ಅರ್ಜುನಾದ್ಯಂಶವು ಇದ್ದ ಪ್ರಯುಕ್ತ)

**ಭಾಷ್ಯ ॥ ಅಂಶಾಂಶಿನೋರೇಕತ್ವಮೇವ । ಅಂಶಿಕರ್ಮವಿನಿರ್ಮಿತಶರೀರ ಏವಾಂಶಸ್ಯ ಭಾವಾತ್ ॥ ೫೫ ॥ ೨ ॥**

**ಭಾಷ್ಯಾರ್ಥ ॥** ಅರ್ಜುನಾದ್ಯಂಶ ಇಂದ್ರಾದ್ಯಂಶಿಗಳಿಗೆ ಅಭೇದವೇ. ಭೇದವಲ್ಲ (ಆದುದರಿಂದ ಅಂಶಿಯಂತೆ ಅಂಶವೂ ಅನಾದಿಯಾದುದರಿಂದ ಅದಕ್ಕೆ ಉತ್ಪತ್ತಿಯಿಲ್ಲ) ಅಂಶಿಯ ಕರ್ಮದಿಂದ ನಿರ್ಮಿತವಾದ ಶರೀರದಲ್ಲಿಯೇ ಅಂಶವು ಅಭಿಮಾನಿಯಾಗಿ ಇದ್ದಪ್ರಯುಕ್ತ ಅಂಶಾಂಶಿಗಳಿಗೆ ಅಭೇದವೇ. (ಅಂಶಾಂಶಿಗಳಿಗೆ ಭೇದವಿದ್ದರೆ ಅಂಶಿ ಕರ್ಮನಿರ್ಮಿತ ಶರೀರದಲ್ಲಿ ಇರುವಿಕೆಯು ಕೂಡಲಾರದು.) ಮತ್ತು ಅಂಶಕ್ಕೆ ತಾನು ಮಾಡದಿರುವ ಕರ್ಮಭೋಗವೂ ಅಂಶಿಗೆ ಭೋಗವಿಲ್ಲದೇ ನೇ ಮಾಡಿದ ಕರ್ಮಕ್ಕೆ ನಾಶವೂ ಬರಬೇಕಾಗುವುದು. ॥ ೨ ॥

**ಪೀಠಿಕೆ ॥** ಜ್ಞಾನ ಸುಖದುಃಖಾದಿಗಳಿಗೆ ಭೇದವಿದ್ದ ಪ್ರಯುಕ್ತ ಅಂಶ ಅಂಶಿಗಳಿಗೆ ಭೇದವೇ. ಆದಕಾರಣ ಉತ್ಪತ್ತಿಯುಳ್ಳ ಅಂಶಕ್ಕೆ ಅನಾದಿತ್ವವು ಯುಕ್ತವಲ್ಲ ಎಂದರೆ—

## ಸೂತ್ರ ॥ ಓಂ ವ್ಯತಿರೇಕಸ್ತದ್ಭಾವಭಾವಿತ್ವಾನ್ನ ತೂಪಲಬ್ಧಿವತ್ ಓಂ ॥ ೫೬ ॥

**ಸೂತ್ರಾರ್ಥ ॥** ಜ್ಞಾನ ಸುಖಾದಿಗಳಲ್ಲಿ ಭೇದವಿದ್ದಂತೆಯೇ ಅಂಶಾಂಶಿಗಳಿಗೆ ಭೇದವೇ ಎಂದಲ್ಲ. ಅಂಶಿಯ ಉಪಾಸನಾದಿ ಭಾವದಿಂದ ಅಂಶಕ್ಕೆ ಆ ಫಲಾನುಸಂಧಾನವು ಇದ್ದುದರಿಂದ. (ಅಲ್ಲ ಜ್ಞಾನಾದಿಗಳಲ್ಲಿ ಅನುಸಂಧಾನವಿಲ್ಲವಾದರೂ ಅಂಶಿಯಲ್ಲಿರತಕ್ಕ ಉಪಾಸನ ಮೊದಲಾದವುಗಳಿಗೆ ಫಲಾನುಸಂಧಾನವಿದೆ. ಹಾಗೆಯೇ ಅಂಶದಲ್ಲಿರತಕ್ಕ ಜ್ಞಾನಾದಿ ಧರ್ಮದ ಅನುಸಂಧಾನವು ಅಂಶಿಗೆ ಇದೆ.)

**ಭಾಷ್ಯ ॥ (೧) ಜ್ಞಾನಾದಿಭೇದೇ ವಿದ್ಯಮಾನೇಽಪಿ ನಾಂಶಾಂಶಿನೋಃ ಪೃಥಗ್ಭಾವ ಏವ । ತದುಪಾಸನಾದಿಭೋಗಾದಂಶಸ್ಯ । (೨) ಪರಮಸಂಹಿತಾಯಾಂ ಚ । ಅಂಶಿನಸ್ತು ಪೃಥಗ್ಜಾತಾ ಅಂಶಾಸ್ತಸ್ಯೈವ ಕರ್ಮಣಾ । ಪುನರೈಕ್ಯಂ ಪ್ರಪದ್ಯಂತೇ ನಾತ್ರ ಕಾರ್ಯಾ ವಿಚಾರಣಾ ॥ ಇತಿ ॥ ೫೬ ॥ ಅಧಿ.೩೫ ॥ ೩ ॥**

**ಭಾಷ್ಯಾರ್ಥ ॥** (೧) ಅಂಶ ಅಂಶಿಗಳಿಗೆ ಜ್ಞಾನಾದಿ ಭೇದವಿದ್ದರೂ ಭೇದವೇ ಎಂದು ಹೇಳಕೂಡದು. ಏಕೆಂದರೆ, ಅಂಶಿದ್ದು ಯಾವುದು ಉಪಾಸನ ಮೊದಲಾದ ಪ್ರಧಾನ ಸಾಧನವೋ ಆ ಫಲಾನುಸಂಧಾನವು ಅಂಶಕ್ಕೆ ಇದ್ದ ಪ್ರಯುಕ್ತ (ಉಪಾಸನಾದಿಗಳಿಂದ ಜನ್ಯವಾದ ಮಹಾ ಫಲವು ಅಂಶಿಯಿಂದ ಭೋಗಿಸಲ್ಪಡುತ್ತಿರಲು ಆದರ ಅನುಸಂಧಾನವು ಅಂಶಕ್ಕೆ ಕಂಡದೆ. ಅಲ್ಪವಾದ ಅಂಶಿಗತವಾದ ಜ್ಞಾನಾದ್ಯನನುಸಂಧಾನವಾದರೂ ಈಶ್ವರನ ಅಚಿಂತ್ಯವಾದ ಶಕ್ತಿಯಿಂದ ಕೂಡುತ್ತದೆ. ಅಂಶಾಂಶಿಗಳಿಗೆ ಅತ್ಯಂತ ಭೇದವಿದ್ದರೆ ಅಂಶಿಯ ಉಪಾಸನಾದಿ ಫಲಭೋಗವೂ ಅಂಶಕ್ಕೆ ಬಾರದೆ ಹೋಗುವುದು. (೨) (ಈ ಸೂತ್ರಾರ್ಥದಲ್ಲಿ ಸ್ಮೃತಿಯನ್ನು ಪ್ರಮಾಣೀಕರಿಸುತ್ತಾರೆ.) ಅರ್ಜುನಾದಿ ಅಂಶಗಳು ಅಂಶಿ ಕರ್ಮದಿಂದಲೇ ಅಂದರೆ, ಅಂಶಿಯು ಕರ್ಮನಿಮಿತ್ತವೇ ಆದ ಶರೀರದಿಂದ ಕೂಡಿಕೊಂಡು ಅಂಶಿಯಾದ ಇಂದ್ರಾದಿಗಳಿಂದ ಬೇರೆಯಾಗಿ ಭೂಮ್ಯಾದಿಗಳಲ್ಲಿ ಹುಟ್ಟಿದವರಾಗಿ ಪುನಃ ಆ ಶರೀರ ಪಾತಾನಂತರದಲ್ಲಿ ಅಥವಾ ಆ ಕರ್ಮಪರ್ಯವಸಾನಾನಂತರದಲ್ಲಿ ತಮ್ಮ ಸ್ಥಾನವನ್ನು ಹೊಂದಿದವರಾಗಿ ಅಂಶಿಯಾದ ಇಂದ್ರಾದಿಗಳಿಂದ ಐಕ್ಯವನ್ನು ಹೊಂದುತ್ತಾರೆ. (ಮತ್ತೊಬ್ಬನ ಕರ್ಮದಿಂದ ಅಲ್ಲ) ಈ ಅರ್ಥದಲ್ಲಿ ವಿಚಾರವು ಮಾಡಕೂಡದು ಎಂದು ಸೂತ್ರಕಾರರಿಂದ ಉಕ್ತವಾದ ಪ್ರಮೇಯವು ಪರಮಸಂಹಿತಾ ಎನ್ನುವ ಗ್ರಂಥದಲ್ಲಿಯೂ ಉಕ್ತವಾಗಿದೆ. ॥ ೫೬ ॥ ೩ ॥

## ಅಧಿಕರಣ ಸಾರಾಂಶ

ಉಪಾಸನಾದಿಗಳಲ್ಲಿ ಅನಾದಿಯೋಗ್ಯತಾಪೇಕ್ಷೆಯು ಇಲ್ಲವೋ ಇದೆಯೋ, ಅದಕ್ಕಾಗಿ ಯೋಗ್ಯತೆಗೆ ಅನಾದಿತ್ವವು ಕೂಡವುದಿಲ್ಲವೋ ಕೂಡುತ್ತದೋ, ಅದಕ್ಕಾಗಿ ಅರ್ಜುನಾದ್ಯಂಶಗಳಿಗೆ

ಸ್ವರೂಪದಿಂದ ಉತ್ಪತ್ತಿಯು ಇದೆಯೋ ಇಲ್ಲವೋ, ಅದಕ್ಕಾಗಿ ಅಂಶಾಂಶಿಗಳಿಗೆ ಭೇದವೋ ಅಭೇದವೋ, ಅದಕ್ಕಾಗಿ ಅಭೇದಸಾಧಕವು ಇಲ್ಲವೋ, ಅಭೇದದಲ್ಲಿ ಬಾಧಕವು ಇದೆಯೋ, ಅಥವಾ ಇದಕ್ಕೆ ವಿಪರೀತವಾಗಿ ಇದೆಯೋ ಎಂದು ಸಂದೇಹವು. ಅಂಶಾಂಶಿಗಳಿಗೆ ಅಭೇದವಿಷಯದಲ್ಲಿ ಸಾಧಕ ಪ್ರಮಾಣವಿಲ್ಲ. ಮತ್ತೆ ಅಂಶಾಂಶಿಗಳಿಗೆ ಜ್ಞಾನ ಸುಖ ದುಃಖಾದಿಗಳಲ್ಲಿ ಭೇದವು ಇದ್ದುದರಿಂದ ಅಭೇದದಲ್ಲಿ ಬಾಧಕವೂ ಇದೆ. ಆದುದರಿಂದ ಅವಶ್ಯವಾಗಿ ಭೇದವನ್ನೇ ಹೇಳಬೇಕು. ಇಂದ್ರಾದ್ಯಂಶಿಗಳಿಗೆ ಅನಾದಿತ್ವವಿದ್ದರೂ ಅರ್ಜುನಾದ್ಯಂಶಕ್ಕೆ ಸ್ವರೂಪತಃ ಉತ್ಪತ್ತಿಯು ಇರುವುದರಿಂದ ಇಂದ್ರಾದಿಗಳ ಅಂಶರಾದ ಅರ್ಜುನಾದಿಗಳಿಗೆ ಸಾದಿತ್ವವಿದ್ದುದರಿಂದ ಅವರ ಯೋಗ್ಯತೆಗೂ ಸಾದಿತ್ವವನ್ನು ಹೇಳಬೇಕಾದ ಪ್ರಯುಕ್ತ ಯೋಗ್ಯತೆಗೆ ಅನಾದಿತ್ವವು ಕೂಡದಿರುವುದರಿಂದ ಉಪಾಸನಾದಿಗಳಲ್ಲಿ ಅನಾದಿ ಯೋಗ್ಯತಾಪೇಕ್ಷೆಯು ಇಲ್ಲವೇ ಇಲ್ಲ. ಎಂದರೆ— ಅಂಶವು ಸ್ವರೂಪತಃ ಹುಟ್ಟುತ್ತದೆ ಎನ್ನುವ ಪಕ್ಷದಲ್ಲಿ ಆ ಅಂಶಶರೀರಸಂಪಾದಕವಾದ ಅಂಶವು ಮೊದಲು ಮಾಡಿದ ಕರ್ಮವು ಇಲ್ಲದಿರುವುದರಿಂದ ಕರ್ಮನಿಮಿತ್ತವಾದ ಶರೀರವೇ ಕೂಡದೆ ಹೋಗುವದು. **ಅಂಶಿನಸ್ತು ಪೃಥಕ್ ಜಾತಾಃ** ಎನ್ನುವ ಸ್ಮೃತಿಯಿಂದ ಅಂಶಿ ಕರ್ಮಾರ್ಜಿತ ಶರೀರದಲ್ಲಿ ಅರ್ಜುನಾದ್ಯಂಶಿಗಳಿಗೆ ಸ್ಥಿತಿಯು ಎಂದು ಅವಶ್ಯವಾಗಿ ಹೇಳಬೇಕಾಗಿರುವುದರಿಂದ ಅಂಶಿಯಿಂದ ಅಂಶಕ್ಕೆ ಭೇದವು ಇದ್ದರೆ ಅಂಶಿಕರ್ಮಾರ್ಜಿತ ಶರೀರದಲ್ಲಿ ಸ್ಥಿತಿಯು ಕೂಡದೆ ಹೋಗುವುದರಿಂದ ಅಂಶಿಕರ್ಮಾರ್ಜಿತ ಶರೀರದಲ್ಲಿ ಅವಸ್ಥಿತಿಯಿದ್ದ ಪ್ರಯುಕ್ತ ಅಂಶಿಯಲ್ಲಿರುವ ಪ್ರಧಾನ ಸಾಧನವಾದ ಉಪಾಸನಾದಿ ಫಲವನ್ನು ಅಂಶವು ಅನುಸಂಧಾನ ಮಾಡುವುದರಿಂದ ಅಂಶಾಂಶಿಗಳಿಗೆ ಅಭೇದ ಸಾಧಕ ಪ್ರಮಾಣವಿದೆ. ಅಲ್ಪಜ್ಞಾನ ಸುಖಾದ್ಯನನುಸಂಧಾನವು ಮಾನುಷಸಂಪರ್ಕ ಪ್ರಾಕೃತಾನ್ನಭೋಜನಾದಿಗಳಿಂದಲೂ ಭಗವದಿಚ್ಛೆಯಿಂದಲೂ ಕೂಡುತ್ತದೆ. ಆದಕಾರಣ ಅಭೇದದಲ್ಲಿ ಬಾಧಕವು ಇಲ್ಲದಿರುವುದರಿಂದ ಅಂಶಾಂಶಿಗಳಿಗೆ ಅಭೇದವೇ ಕೂಡುವ ಪ್ರಯುಕ್ತ ಅನಾದಿತಃ ಅಭಿನ್ನವಾದ ಅಂಶಕ್ಕೆ ಸ್ವರೂಪತಃ ಉತ್ಪತ್ತಿಯು ಕೂಡದಿರುವುದರಿಂದ ಅದು ಅನಾದಿಯಾದುದರಿಂದ ಅದರ ಧರ್ಮಭೂತವಾದ ಯೋಗ್ಯತೆಯೂ ಅನಾದಿಯೆಂದೇ ಹೇಳಬೇಕಾಗುದುದರಿಂದ ಉಪಾಸನಾದಿಗಳಲ್ಲಿ ಅನಾದಿಯೋಗ್ಯತಾಪೇಕ್ಷೆಯು ಇದೆ. ॥ ಅಧಿ. ೩೫ ॥

ಏಕಾಧಿಕರಣವು ಸಮಾಪ್ತವಾಯಿತು.

## ೩೬ ಅಂಗಾವಬದ್ಧಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭಗವದುಪಾಸನವನ್ನು ಯಥಾಯೋಗ್ಯವಾಗಿ ಬ್ರಹ್ಮಾದಿ ಪರಿವಾರ ದೇವತೋಪಾಸನದಿಂದ ಕೂಡಿಕೊಂಡು ಮಾಡಬೇಕೆಂದು ಸಮರ್ಥಿಸುತ್ತಾರೆ **ತಮೇವೈಕಂ ಜಾನಥ, ಪೂಜಯೇನ್ನಾನ್ಯದೇವತಾಃ** ಇತ್ಯಾದಿಗಳಿಂದ ಕೇವಲ ಭಗವದುಪಾಸನವನ್ನು ಮಾತ್ರವೇ ಮಾಡಬೇಕು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ ಓಂ ॥೫೭॥

**ಸೂತ್ರಾರ್ಥ ॥** ಈಶ್ವರನ ಅಂಗದೇವತೆಗಳಿಂದ ಅಂಗಸಂಬದ್ಧಗಳಾದ ಅಂದರೆ ಬ್ರಹ್ಮಾದಿ ದೇವವಿಷಯಕಗಳಾದ ಉಪಾಸನಾ ಪರಿಚರ್ಯಾದಿಗಳು ಸರ್ವಮುಮುಕ್ಷುಗಳಿಂದಲೂ ಮಾಡಲ್ಪಡಲೇಬೇಕು. ಹಿ ಶಬ್ದ ಸೂಚಿತವಾದ ಸಮತ್ವಾದ್ವಾ ಎನ್ನುವ ಸ್ಮೃತಿಯಿಂದಲೇ. (ಹಾಗಾದರೆ ಸರ್ವಗುಣಗಳನ್ನು ಸರ್ವತ್ರ ಉಪಸಂಹಾರ ಮಾಡಿ ಉಪಾಸನಾ ಮಾಡಬೇಕಾಗುವುದು ಎಂದರೆ) ಪ್ರತಿ ವೇದದಲ್ಲಿ ಸರ್ವ ಶಾಖೆಗಳಲ್ಲಿ ಹೇಳಲ್ಪಟ್ಟ ಉತ್ತಮರಾದ ಬ್ರಹ್ಮಾದಿ ದೇವತೆಗಳ ಗುಣಸಮುದಾಯವನ್ನು ರುದ್ರಾದ್ಯಧಮರಲ್ಲಿ ಉಪಸಂಹಾರ ಮಾಡಕೂಡದು. ಅಂದರೆ, ಉತ್ತಮರ ಗುಣಗಳನ್ನು ಅಧಮರಲ್ಲಿಯೂ ಸಮರಲ್ಲಿಯೂ ಧ್ಯಾನ ಮಾಡಕೂಡದು.

**ಭಾಷ್ಯ ॥ (೧) ಬ್ರಹ್ಮಾದ್ಯಂಗದೇವತಾವಬದ್ಧೋಪಾಸನಾದಿ ಪ್ರತಿಶಾಖಂ ಪ್ರತಿ ವೇದಂ ಚ ನೋಪಸಂಹ್ರಿಯತೇ । (೨) ಹಿ ಶಬ್ದಾತ್ । ಸಮತ್ವಾದ್ವೋತ್ತಮತ್ವಾದ್ವಾನಾಂಗದೇವಾದ್ಯುಪಾಸನಂ । ಉಪಸಂಹಾರ್ಯಮಿತ್ಯಾಹುರ್ವೇದಸಿದ್ಧಾಂತವೇದಿನಃ ॥ ಇತಿ ಬ್ರಹ್ಮತರ್ಕವಚನಾತ್ ॥ ೫೭ ॥ ೧ ॥**

ಭಾಷ್ಯಾರ್ಥ ॥ (೧) (ವಿಷ್ಣೋರಂಗಸಮುದ್ಭೂತೇ ವಿಷ್ಣೋರಂಗಾನಿ ದೇವತಾಃ ಎನ್ನುವ ಪ್ರಮಾಣದಿಂದ ಶ್ರೀಹರಿಯ ಅಂಗಗಳಿಂದ ಹುಟ್ಟಿದ ಪ್ರಯುಕ್ತ ಬ್ರಹ್ಮಾದಿ ದೇವತೆಗಳು ಅಂಗಶಬ್ದ ವಾಚ್ಯರು ಎನ್ನಿಸುತ್ತಾರೆ.) ಯಾವ ಬ್ರಹ್ಮಾದಿ ದೇವತೆಗಳು ಶ್ರೀಹರಿಯ ಅಂಗವನ್ನು ಆಶ್ರಯಿಸಿ ಕೊಂಡಿರುವುರೋ ಶ್ರೀಹರಿಯ ಪರಿವಾರಭೂತರೋ, ಅಂತಹ ದೇವತೆಗಳಿಂದ ಸಂಬದ್ಧವಾದ ಅಂದರೆ, ದೇವತಾವಿಷಯಕವಾದ ಉಪಾಸನ ಪರಿಚರ್ಯಾ ನಮಸ್ಕಾರ ಮೊದಲಾದುದು (ಅಧಿಕಾರಿ ಗಳಿಂದ) ಮಾಡಲ್ಪಡತಕ್ಕುದು. (ಏವಂಚ ಬ್ರಹ್ಮಾದಿದೇವತಾವಿಷಯಕ ಉಪಾಸನವನ್ನು ಸರ್ವಥಾ ನಿಷೇಧಿಸುವುದಿಲ್ಲ ಮತ್ತೆ ಸರ್ವೋತ್ತಮರೆಂದು ಉಪಾಸನಾ ಮಾಡಬಾರದು. **ಸರ್ವವರ್ಣಾಶ್ರಮೈರ್ವಿಷ್ಣುರೇಕ ಏವೇಜ್ಯತೇ ಸದಾ । ರಮಾ ಬ್ರಹ್ಮಾದಯಸ್ತಸ್ಯ ಪರಿವಾರತಯೈವ ತು ॥** ಇತ್ಯಾದ್ಯುಕ್ತಪ್ರಕಾರ ಬ್ರಹ್ಮಾದಿ ದೇವತೆಗಳನ್ನು ಶ್ರೀಹರಿಯ ಪರಿವಾರಭೂತರೆಂದು ಉಪಾಸನವನ್ನು ಮಾಡಲೇಬೇಕು. ಉಪಾಸನದಲ್ಲಿ ಆದರೂ ವಿಶೇಷವದೆ.) ಸರ್ವ ವೇದಸಂಭಂಧಿಗಳಾದ ಸರ್ವ ಶಾಖೆಗಳಲ್ಲಿ ಹೇಳಲ್ಪಟ್ಟ ಬ್ರಹ್ಮಾದ್ಯಂಗದೇವತಾ ಸಂಬಂಧಿಯಾದ ಗುಣಸಮುದಾಯವನ್ನು ರುದ್ರಾದ್ಯಧಮರಲ್ಲಿ ಉಪಸಂಹಾರಪೂರ್ವಕ ಧ್ಯಾನಿಸಬಾರದು. (ಮತ್ತೆ ತತ್ತತ್ ಯೋಗ್ಯವಾದುದನ್ನೇ ಉಪಾಸನಾ ಮಾಡಬೇಕು.) (**ತಥಾಚ ವೇದಾಹಮೇತಂ ಪುರುಷಂ ಮಹಾಂತಂ** ಇತ್ಯಾದಿ ಚತುರ್ಮುಖನ ಸರ್ವಗುಣಗಳನ್ನು ಅಧಮರಾದ ರುದ್ರಾದಿಗಳಲ್ಲಿಯೂ **ತ್ರ್ಯಂಬಕಾಯ ತ್ರಿಪುರಾಂತಕಾಯ ಕಾಲಾಗ್ನಿ ರುದ್ರಾಯ ನೀಲಕಂಠಾಯ** ಇತ್ಯಾದಿ ರುದ್ರನ ಗುಣಗಳನ್ನು ಇಂದ್ರಾದಿದೇವತೆಗಳಲ್ಲಿಯೂ ಉಪಸಂಹಾರ ಮಾಡಬಾರದು. ಮತ್ತೆ ಯೋಗ್ಯಗಳನ್ನು ಉಪಸಂಹಾರ ಮಾಡಬೇಕು.) (೨) ಪರಿವಾರಭೂತರಾದ ಬ್ರಹ್ಮರುದ್ರಾದಿ ದೇವತೆಗಳ ಉಪಾಸನವನ್ನು ಮುಮುಕ್ಷುಗಳು ಮಾಡಬೇಕು. ಆದರೆ ಉತ್ತಮರಾದ ಬ್ರಹ್ಮಾದಿಗಳ ಗುಣಸಮುದಾಯವನ್ನೆಲ್ಲಾ

ಅಧಮರಾದ ರುದ್ರಾದಿಗಳಲ್ಲಿ ಉಪಸಂಹಾರ ಮಾಡಬಾರದು. (ಏಕೆಂದರೆ ಇತರರ ಗುಣಗಳನ್ನು ಬೇರೆಯವರಲ್ಲಿ ಉಪಸಂಹಾರ ಮಾಡಬೇಕಾದರೆ— ಸರ್ವ ದೇವತೆಗಳೂ ಸಮರಾಗಬೇಕು. ಅದಾದರೂ ಇಲ್ಲ) ಕೆಲವರಿಗೆ ಸಾಮ್ಯವಿದ್ದುದರಿಂದ ಕೆಲವರಿಗೆ ಉತ್ತಮತ್ವವಿದ್ದುದರಿಂದ, (ಅಂದರೆ, ಸರ್ವರೂ ಸಮರಾಗಿದ್ದರೆ ಸಾಮ್ಯೇನ ಉಪಾಸನವು ಯುಕ್ತವಾಗುತ್ತಿತ್ತು. ಅದು ಯುಕ್ತವಲ್ಲ. ಏಕೆಂದರೆ) ವೇದನಿರ್ಣಯದ ಗ್ರಂಥವನ್ನು ತಿಳಿದವರು, ವೇದಸಿದ್ಧಾಂತದಲ್ಲಿ ಬ್ರಹ್ಮಾದಿ ದೇವತೆಗಳು ನಾನಾಗುಣವುಳ್ಳವರೆಂದು ಸಿದ್ಧವಾಗಿದೆ ಎಂದು ಹೇಳಿರುವರು. ಅಲ್ಲದೆ ಅಸಮರಿಗೆ ಸಮತ್ವೇನ ಉಪಾಸನವೂ ಉತ್ತಮರಿಗೆ ಅಧಮತ್ವೇನ ಉಪಾಸನವೂ ನಿಷಿದ್ಧವಾಗಿದೆ, ಎಂದೂ ಹೇಳಿರುವರು. ಈ ರೀತಿಯಾಗಿ ಓ ಶಬ್ದ ಸೂಚಿತವಾದ ಬ್ರಹ್ಮತರ್ಕ ವಚನದಿಂದ ಅಂಗದೇವಾದ್ಯುಪಾಸನವನ್ನು ಮಾಡಬೇಕು. ॥ ೫೭ ॥ ೧ ॥

**ಪೀಠಿಕೆ ॥** ಹೀಗೆ ಏಕತ್ರ ಪ್ರತೀತಗಳಾದ ಸರ್ವಗುಣಗಳಿಗೆ ಅನ್ಯತ್ರ ಉಪಸಂಹಾರವಿಲ್ಲವೆಂದು ಹೇಳಿ ಉಪಸಂಹಾರವನ್ನು ಅಂಗೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಮಂತ್ರಾದಿವದ್ವಾಽವಿರೋಧಃ ಓಂ ॥ ೫೮ ॥

**ಸೂತ್ರಾರ್ಥ ॥** ಅಧಮರ ಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಿದರೂ ವಿರೋಧವಿಲ್ಲ. ಅಧಮ ಪರವಾದ ಮಂತ್ರ ವಿದ್ಯಾದಿಗಳಿಗೆ ಉತ್ತಮರ ವಿಷಯಕವಾಗಿ ಅಧ್ಯಯನವಿದ್ದಂತೆಯೇ.

**ಭಾಷ್ಯ ॥ (೧) ಸರ್ವದೇವತಾಮಂತ್ರಾ ಯಥಾಽಧೀಯಂತೇ ಏವಮವಿರೋಧೋ ವಾ । (೨) ಉಪಾಸನಾಂಽಗದೇವಾನಾಂ ಪರಮಾಂಗತಯಾ ಭವೇತ್ । ಉಪಸಂಹೃತಿರ್ವಿಶೇಷೇ ತು ಫಲಾನಾಮನ್ಯಥಾ ನ ತು ॥ ಪುರುಷಾಣಾಂ ವಿಶೇಷಾದ್ವಾ ಯಥಾಯೋಗಂ ಭವಿಷ್ಯತಿ । ಇತಿ ಚ ಬೃಹತ್ತಂತ್ರೇ ॥ ೫೮ ॥ ಅಧಿ.೩೬ ॥ ೨ ॥**

**ಭಾಷ್ಯಾರ್ಥ ॥** (೧) ಹೇಗೆ ಅಗ್ನ್ಯಾದಿ ಅಧಮ ಸರ್ವದೇವತಾ ಮಂತ್ರ ಮೊದಲಾದುವುಗಳು ಅಗ್ನ್ಯಾದಿಗಳಿಂದ ಉತ್ತಮರಾದ ಬ್ರಹ್ಮಾದಿ ಸರ್ವದೇವತೆಗಳ ವಿಷಯಗಳಾಗಿ ಅಧ್ಯೇತಗಳಿಂದ ಅಧ್ಯಯನ ಮಾಡಲ್ಪಡುತ್ತವೋ, (ಉತ್ತಮರಿಗೆ ಅಥವಾ ದೇವತಾ ಪ್ರತಿಪಾದಕಮಂತ್ರ ಪ್ರತಿಪಾದ್ಯತ್ವವಿದೆ.) ಹೀಗೆ ಅಧಮ ದೇವತೆಗಳ ಗುಣಗಳನ್ನು ಉತ್ತಮ ದೇವತೆಗಳಲ್ಲಿ ಉಪಸಂಹಾರ ಮಾಡಿದರೂ ವಿರೋಧವಿಲ್ಲ (ಉತ್ತಮರಲ್ಲಿ ಅಧಮರ ಗುಣಗಳಿದ್ದಾವೆ.) (೨) (ಪರಿವಾರ ದೇವತೆಗಳ ಉಪಾಸನ ಮಾಡಬೇಕು. ಎಂದು ಯಾವುದು ಹೇಳಲ್ಪಟ್ಟವೋ, ಮತ್ತು ಯಥಾಯೋಗ್ಯವಾಗಿ ಗುಣೋಪಸಂಹಾರವನ್ನು ಮಾಡಬೇಕು. ಎಂದು ಯಾವುದು ಉಕ್ತವಾಗಿದೋ, ಅದನ್ನು ಸರ್ವರೂ ಮಾಡಬೇಕೋ ಎಂದರೆ) ಬ್ರಹ್ಮಾದಿ ದೇವತೆಗಳ ಉಪಾಸನವನ್ನು ಶ್ರೀಹರಿಯ ಪರಿವಾರತ್ವೇನ ಮೋಕ್ಷ ಯೋಗ್ಯರೆಲ್ಲರೂ ಮಾಡಲೇಬೇಕು. (ಸರ್ವೋತ್ತಮತ್ವೇನ ಮಾಡಬಾರದು) ಉಪಸಂಹೃತಿಯಾದರೂ ಅತಿಶಯಿತ ಫಲಾಪೇಕ್ಷಾ ಇದ್ದರೇನೇ ಮಾಡತಕ್ಕುದು. ಫಲವಿಶೇಷಾರ್ಥಿತ್ವ

ವಿಲ್ಲದಿದ್ದರೆ ಕೇವಲ ಮೋಕ್ಷಕ್ಕಾಗಿ ಮಾಡಬೇಕಾಗಿಲ್ಲ. ಅಥವಾ ಉಪಸಂಹೃತಿಯಾದರೂ ಪುರುಷರ ಉತ್ತಮಾಧಿಕಾರಿತ್ವವನ್ನು ಅಪೇಕ್ಷಿಸಿ ಯಥಾಯೋಗ್ಯ ಫಲವಿಶೇಷಕ್ಕಾಗಿ ಆಗುವುದು. ಉತ್ತಮಾಧಿಕಾರಿತ್ವ ವಿಲ್ಲವಾದರೆ ಅಂತಹ ಫಲಯೋಗ್ಯತೆಯೇ ಇಲ್ಲದಿರುವುದರಿಂದ ಉಪಸಂಹಾರವನ್ನು ಮಾಡದೇನೂ ಇರಬಹುದು. ಹೀಗೆ ಬೃಹತಂತ್ರದಲ್ಲಿ ಹೇಳಿದೆ.

**ವಿಶೇಷಾಂಶ ॥** ಯದ್ಯಪಿ ಫಲವಿಶೇಷವು ಉತ್ತಮಾಧಿಕಾರಿಗಳಿಗೇನೇ. ಆದಾಗ್ಯೂ ಫಲ ವಿಶೇಷವನ್ನು ಇಚ್ಛಿಸುವ ಉತ್ತಮಾಧಿಕಾರಿಗಳು ಉಪಸಂಹಾರವನ್ನು ಮಾಡಬೇಕು. ತದ್ವ್ಯತಿರಿಕ್ತರಾದ ಫಲವಿಶೇಷಾಯೋಗ್ಯರು ಉಪಸಂಹಾರ ಮಾಡಬಾರದು ಎನ್ನುವುದೊಂದೇ ಪಕ್ಷವು ಪಕ್ಷಭೇದವಿಲ್ಲ. ಆದಾಗ್ಯೂ ಉತ್ತಮಾಧಿಕಾರಿಗಳೇ ಫಲಾತಿಶಯಾಪೇಕ್ಷಾ ಇರುವಾಗ ಉಪಸಂಹಾರ ಮಾಡಬೇಕು. ಇಲ್ಲವಾದರೆ ನ ಕರ್ತವ್ಯಾ ಎಂದು ಉತ್ತಮಾಧಿಕಾರಿ ಯೋಗ್ಯವಾದ ಉಪಸಂಹೃತಿರೂಪವಾದ ಸಾಧನದಲ್ಲಿಯೇ ಈ ವಿಕಲ್ಪವು, ಆ ಉಪಸಂಹಾರವು ಯಥಾ ಯೋಗ್ಯವಾಗಿಯೇ ಆಗುವುದು. ಉತ್ತಮರಲ್ಲಿ ಅಧಮ ಗುಣಗಳಿಗೇನೇ ಉಪಸಂಹಾರವು. ಅಧಮರಲ್ಲಿ ಉತ್ತಮ ಗುಣಗಳಿಗೆ ಉಪಸಂಹಾರವಿಲ್ಲ. ॥ ೫೮ ॥೨ ॥

## ಅಧಿಕರಣ ಸಾರಾಂಶ

ಕೇವಲ ಭಗವದುಪಾಸನವನ್ನು ಮಾಡಬೇಕೋ ಅಥವಾ ಪರಿವಾರ ದೇವತೋಪಾಸನದಿಂದ ಕೂಡಿಕೊಂಡು ಪರಬ್ರಹ್ಮನನ್ನು ಉಪಾಸನ ಮಾಡಬೇಕೋ, **ತಮೇವೈಕಂ ಜಾನಥ ಪೂಜಯೋನ್ನಾನ್ಯದೇವತಾಃ** ಇತ್ಯಾದಿಗಳಲ್ಲಿ ಸರ್ವಾತ್ಮನಾ ಇತರೋಪಾಸನಾ ನಿಷೇಧವೋ, ಅಥವಾ ಸರ್ವೋತ್ತಮತ್ವೇನ ನಿಷೇಧವೋ, ಹಾಗೆಯೇ ಅನ್ಯದೇವತೋಪಾಸನದಲ್ಲಿಯೂ ಏಕತ್ರ ಪ್ರತೀತಗಳಾದ ಗುಣಗಳನ್ನು ಸರ್ವತ್ರ ಧ್ಯಾನಮಾಡಬೇಕೋ, ಅಥವಾ ತತ್ತದ್ಯೋಗ್ಯ ಗುಣಗಳನ್ನು ಧ್ಯಾನಿಸಬೇಕೋ, ಎಂದು ಸಂದೇಹವು. ತಮೇವೈಕಂ ಜಾನಥ ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಇತರ ದೇವತೆಗಳ ಉಪಾಸನ ಪೂಜಾದಿಗಳನ್ನು ನಿಷೇಧಿಸಿದ್ದರಿಂದ ಸರ್ವಸ್ವತಂತ್ರರೆಂದು ಪೂಜಾದಿಗಳಿಗೇನೇ ನಿಷೇಧವು ಎನ್ನುವಲ್ಲಿ ಜ್ಞಾಪಕವಿಲ್ಲದಿರುವುದರಿಂದ ಕೇವಲ ಭಗವದುಪಾಸನವನ್ನೇ ಮಾಡಬೇಕು. ದೇವತೋಪಾಸನವನ್ನು ಮಾಡುವುದಾದರೂ ಏಕತ್ರ ಪ್ರತೀತ ಗುಣಗಳಿಂದ ಯುಕ್ತರೆಂದೇ ಸಮಸ್ತ ದೇವತೆಗಳ ಉಪಾಸನವನ್ನು ಮಾಡಬೇಕು. ದೇವತೆಗಳು ಸರ್ವತ್ರ ಉಪಾಸ್ಯರು, ಬಾಧಕವೂ ಇಲ್ಲ ಎಂದರೆ, ಉಪಾಸನಕ್ಕಾಗಿಯೇ ದೇವತೆಗಳನ್ನು ವೇದಗಳಲ್ಲಿ ಪ್ರತಿಪಾದಿಸಿದ್ದು. ತಮೇವೈಕಂ ಇತ್ಯಾದಿ ಶ್ರುತಿಯು ಪ್ರಾಧಾನ್ಯೇನ ದೇವತೆಗಳ ಉಪಾಸನಾ ನಿಷೇಧಪರವು, ಆದಕಾರಣ ಅದರಿಂದ ವಿರೋಧವು ಇಲ್ಲದಿರುವ ಪ್ರಯುಕ್ತ ಪರಿವಾರಗಳ ದೇವತೋಪಾಸನ ಯುಕ್ತವಾಗಿಯೇ ಭಗವದುಪಾಸನವನ್ನು ಮಾಡಬೇಕು. ಅನ್ಯದೇವತೋಪಾಸನ ಮಾಡಿದರೂ ಸಮತ್ವಾದ್ವಾ ಇತ್ಯಾದಿ ಸ್ಮೃತಿಯಿಂದ ದೇವತೆಗಳು ತಾರತಮ್ಯವುಳ್ಳವರಾದುದರಿಂದ ಅಧಮರಲ್ಲಿ ಉತ್ತಮರ ಗುಣಗಳನ್ನು ಧ್ಯಾನ ಮಾಡಬಾರದು. ಮತ್ತೆ ಅವರವರ ಯೋಗ್ಯಗುಣಗಳನ್ನು ಉಪಸಂಹಾರಪೂರ್ವಕ ಧ್ಯಾನಿಸಬೇಕು, ಅಧಮರ ಗುಣಗಳನ್ನಾದರೂ ಉತ್ತಮರಲ್ಲಿ ಧ್ಯಾನಿಸಬಹುದು. ಅಧಮ ದೇವತಾಪ್ರತಿಪಾದಕ ಮಂತ್ರಗಳು ಹೇಗೆ ಉತ್ತಮ ದೇವತಾಪ್ರತಿಪಾದಕಗಳಾಗುತ್ತವೋ,

ಹಾಗೆಯೇ. ತಥಾಚ ಅಂಗದೇವತೋಪಾಸನವನ್ನು ಫಲವಿಶೇಷಕ್ಕಾಗಿ ಉತ್ತಮಾಧಿಕಾರಿಗಳೇ ಮಾಡಬೇಕು. ಸರ್ವರೂ ಅಲ್ಲ. ಉಪಾಸನಾಂಗದೇವಾನಾಂ ಇತ್ಯಾದಿ ಸ್ಮೃತಿಗಳಿಂದ ॥ ಅಧಿ. ೩೬ ॥

**ಅಂಗಾವದ್ಧಾಧಿಕರಣವು ಸಮಾಪ್ತವಾಯಿತು.**

# ೩೭ ಭೂಮಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭೂಮಗುಣವು ಸರ್ವೋಪಾಸ್ಯಗಳಾಗಿದೆ ಎಂದು ಸಮರ್ಥಿಸುತ್ತಾರೆ. ಪ್ರಯೋಜನವು ಇಲ್ಲದಿರುವುದರಿಂದ ಭೂಮ ಗುಣವು ಸರ್ವೋಪಾಸ್ಯವಲ್ಲ. ಭೂಮತ್ವವೆಂದರೆ ನಿರತಿಶಯತ್ವವು. ಉಪಾಸನವಾದರೂ ಇಷ್ಟವಾದ ಫಲವನ್ನು ಅನುಸರಿಸಿಕೊಂಡಿರುವುದು. ಆದುದರಿಂದಲೇ ಆನಂದಾದ್ಯುಪಾಸನವನ್ನು ಸರ್ವರೂ ಮಾಡುತ್ತಾರೆ. ಭೂಮತ್ವವು ಯಾರಿಗೂ ಇಷ್ಟವಲ್ಲ. ಆದಕಾರಣ ಫಲೋಪಯೋಗಿ ಆಗದಿರುವುದರಿಂದ ಭೂಮತ್ವಕ್ಕೆ ಸರ್ವೋಪಾಸ್ಯತ್ವವಿಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ ॥ ೫೯ ॥

**ಸೂತ್ರಾರ್ಥ ॥** ದೀಕ್ಷಾ ಪ್ರಾಯಣೀಯ ಉದಯನೀಯ ಪ್ರಾತಃಸವನ ಮಾಧ್ಯಂದಿನಸವನ ತೃತೀಯಸವನ ಅವಭೃಥಾತ್ಮಕ ಯಾಗೀಯ ಅಂಗಕಲಾಪದಂತೆ (ಅಂದರೆ, ವಿಶ್ವಜಿತ್ ಮೊದಲಾದ ಸರ್ವಯಾಗಗಳಲ್ಲಿ ಸಂಬದ್ಧವಾದುದರಿಂದ ಆವಾವ ಯಾಗಾನುಷ್ಠಾನ ಫಲಹೇತುವಾಗಿರುವುದರಿಂದ ಅದಕ್ಕೆ ಪ್ರಾಧಾನ್ಯವಿದ್ದಂತೆಯೇ) ಪೂರ್ಣತ್ವ ಗುಣಕ್ಕೆ, ಆನಂದಾದಿ ಸರ್ವಗುಣಗಳಲ್ಲಿ ವಿಶೇಷಣವಾಗಿ ಪ್ರವೇಶ ಇದ್ದುದರಿಂದ ಪ್ರಾಧಾನ್ಯವು ಇದೆ. ಆದುದರಿಂದ ಪೂರ್ಣತ್ವಗುಣವು ಉಪಸಂಹಾರ ಪೂರ್ವಕವಾಗಿ ಸರ್ವರಿಂದ ಉಪಾಸನಾ ಮಾಡತಕ್ಕುದು. ಆದುದರಿಂದ ಭೂಮೈವ ದೇವಃ ಎನ್ನುವ ಶ್ರುತಿಯು ಭೂಮತ್ವೋಪಾಸನವು ಸರ್ವರಿಗೂ ಆವಶ್ಯಕವೆಂದು ತೋರಿಸುತ್ತದೆ.

**ಭಾಷ್ಯ ॥ (೧) ಸರ್ವಗುಣೇಷು ಭೂಮಗುಣಸ್ಯ ಜ್ಯಾಯಸ್ತ್ವಂ ಕ್ರತುವತ್ । ಸರ್ವತ್ರ ಸಹಭಾವಾತ್ । (೨) (ದೀಕ್ಷಾಪ್ರಾಯಣೀಯೋದಯನೀಯಸವನತ್ರಯಾವಭೃಥಾತ್ಮಕಃ ಕ್ರತುಃ । (೩) ಭೂಮೈವ ದೇವಃ ಪರಮೋ ಹ್ಯುಪಾಸ್ಯೋ ನೈವಾಭೂಮಾ ಫಲಮೇಷಾಂ ವಿಧತ್ತೇ । ತಸ್ಮಾದ್ಭೂಮಾ ಗುಣತೋ ವೈ ವಿಶಿಷ್ಟೋ ಯಥಾ ಕ್ರತುಃ ಕರ್ಮಮಧ್ಯೇ ವಿಶಿಷ್ಟಃ ॥ ಇತಿ ಚ ಗೌಪವನಶ್ರುತಿಃ ॥ ೫೯ ॥ ಅಧಿ. ೩೭ ॥ ೧ ॥**

**ಭಾಷ್ಯಾರ್ಥ** ॥ (೧) ಶ್ರೀಹರಿಯ ಜ್ಞಾನ ಆನಂದ ಮೊದಲಾದ ಸರ್ವಗುಣಗಳ ಮಧ್ಯದಲ್ಲಿ **ಯೋ ವೈ ಭೂಮಾ** ಎನ್ನುವಲ್ಲಿ ಶ್ರುತವಾದ ಪೂರ್ಣತ್ವರೂಪವಾದ ಶುಭ ಧರ್ಮಕ್ಕೆ ಕ್ರತುವಿನಂತೆ ಉತ್ತಮತ್ವವು. (ಆದುದರಿಂದ ಭೂಮಗುಣವು ಸರ್ವರಿಂದಲೂ ಉಪಾಸ್ಯವೇ) ಭೂಮತ್ವ (ಪೂರ್ಣತ್ವ)ವನ್ನು ಬಿಟ್ಟು ಯಾವ ಗುಣವನ್ನು ಉಪಾಸನ ಮಾಡಲಾಗುವುದಿಲ್ಲ. **ಪೂರ್ಣಜ್ಞಾನಃ ಪೂರ್ಣಾನಂದಃ** ಇತ್ಯಾದಿ ಕ್ರಮದಿಂದ ಜ್ಞಾನಾದಿ ಗುಣಗಳಲ್ಲಿ ಸಂಬದ್ಧವಾಗಿಯೇ ಉಪಾಸ್ಯತ್ವವು.) ಕ್ರತುವಿನಂತೆ ಆನಂದ ಮೊದಲಾದ ಸರ್ವೋಪಾಸ್ಯ ಗುಣಗಳಲ್ಲಿ ಇಷ್ಟಫಲಸಿದ್ಧಿಗಾಗಿ ಪೂರ್ಣತ್ವದಿಂದ ಕೂಡಿಕೊಂಡೇ (ಅಂದರೆ **ಪೂರ್ಣಾನಂದಃ** ಇತ್ಯಾದಿ ರೂಪದಿಂದ) ಉಪಾಸ್ಯತ್ವವಿದ್ದುದರಿಂದ. ದೀಕ್ಷಾದಿರೂಪವಾದ ಕ್ರತುವಿಗೆ **ವಿಶ್ವಜಿತ್** ಮೊದಲಾದ ಸರ್ವಯಾಗಗಳಲ್ಲಿ ಅನುವೃತ್ತಿಯಿದ್ದರೇನೇ ಸಾಫಲ್ಯವು. ಇಲ್ಲವಾದರೆ ಫಲವಿಲ್ಲವಾದ ಕಾರಣ ಉತ್ಕೃಷ್ಟತ್ವವು. ಆದಕಾರಣ ಕ್ರತುವಿಗೆ ಹೇಗೆ ಸರ್ವರಿಂದ ಕರ್ತವ್ಯತ್ವವೋ ಹಾಗೆಯೇ. (೨) (ಪಶುಹಿಂಸಾತ್ಮಕ ಯಾಗಗಳಿಗೇನೇ ಕ್ರತುತ್ವವಿದ್ದುದರಿಂದ ಸರ್ವಯಾಗಗಳಲ್ಲಿ ಅದಕ್ಕೆ ಅನುವೃತ್ತಿಯು ಹೇಗೆ ಎಂದರೆ, ಇಲ್ಲಿ ವಿವಕ್ಷಿತವಾದ ಕ್ರತುಶಬ್ದಾರ್ಥವನ್ನು ಹೇಳುತ್ತಾರೆ.) ಜ್ಯೋತಿಷ್ಟೋಮದಲ್ಲಿ ದೀಕ್ಷಾ ಅಂದರೆ. ಯಜಮಾನಸಂಸ್ಕಾರರೂಪ ಕರ್ಮವಿಶೇಷವು. ಅದರ ಆದ್ಯಂತಗಳಲ್ಲಿ ಮಾಡಲರ್ಹಗಳಾದ ಇಷ್ಟಿವಿಶೇಷಗಳು ಪ್ರಾಯಣೀಯ ಉದಯನೀಯಗಳು. ಸೋಮಾಭಿಷವರೂಪವಾದ ಸವನತ್ರಯವು ಪ್ರಾತಸ್ಸವನ, ಸವನ ಮಾಧ್ಯಂದಿನ ತೃತೀಯಸವನಗಳೆನ್ನಿಸುತ್ತವೆ. ಅವಭೃಥವೆಂದರೆ **ಅಪ್ಸ್ವವಭೃಥೇನ ಚರಂತಿ** ಎಂದು ಹೇಳಿದ ಇಷ್ಟಿವಿಶೇಷವು. ಏತದ್ರೂಪವಾದ ಅಂಗಕಲಾಪವೇ ಸರ್ವತ್ರ ಮಾಡಲಿಕ್ಕೆ ಯೋಗ್ಯವಾಗಿರುವುದರಿಂದ ಇಲ್ಲಿ ಇವುಗಳು ಕ್ರತು ಶಬ್ದದಿಂದ ಹೇಳಲ್ಪಡುತ್ತವೆ. (ಪಶುಹಿಂಸಾತ್ಮಕ ಯಾಗವಲ್ಲ. ಆದಕಾರಣ ಅದಕ್ಕೆ ಸರ್ವಯಾಗಗಳಲ್ಲಿ ಸಂಬಂಧವು ಯುಕ್ತವೇ.) (೩) ( ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಸರ್ವೋತ್ತಮನಾದ ನಾರಾಯಣನು ಸರ್ವಗುಣ ಪರಿಪೂರ್ಣನು ಎಂದು ಪೂರ್ಣತ್ವದಿಂದಲೇ ಸರ್ವೋಪಾಸ್ಯನು. ಸರ್ವಗುಣಪರಿಪೂರ್ಣನು ಅಲ್ಲವೆಂದು ಉಪಾಸಿತನಾಗಬಾರದು. ಹೇಗೆ ದೀಕ್ಷಾದ್ಯಂಗಕಲಾಪವು ಕರ್ಮಮಧ್ಯದಲ್ಲಿ ವಿಕೃತಿಯಾಗಗಳಿಗೆ ತಾನು ಒಟ್ಟಿಗೆ ಇರೋಣದರಿಂದಲೆ ಫಲಪ್ರದವಾದುದರಿಂದ ಆ ವಿಕೃತಿಯಾಗಗಳಲ್ಲಿ ಉತ್ಕೃಷ್ಟವೋ, ಹಾಗೆಯೇ ಭೂಮಗುಣವು ಗುಣರಾಶಿಯಿಂದ ಪ್ರಧಾನವು. ಏಕೆಂದರೆ— ಭೂಮಗುಣವೇ ಸರ್ವಗುಣಗಳಲ್ಲಿ ಪ್ರವಿಷ್ಟವೆಂದು ಉಪಾಸನಾ ಮಾಡಿದರೇನೇ ಗುಣಪೂರ್ಣನಾದ ಶ್ರೀ ಹರಿಯು ಅಧಿಕಾರಿಗಳಿಗೆ ಫಲವನ್ನು ಕೊಡುತ್ತಾನೆ. ಅಪೂರ್ಣತ್ವೇ ಉಪಾಸಿತನಾದವನು ಫಲವನ್ನು ಕೊಡಲಾರನು, ಎಂದು ಗೌಪವನ ಶ್ರುತಿಯು ॥ ೫೯ ॥ ೧ ॥

## ಅಧಿಕರಣ ಸಾರಾಂಶ

**ಯೋ ವೈ ಭೂಮಾ** ಇತ್ಯಾದಿಗಳಲ್ಲಿ ಶ್ರುತವಾದ ಭೂಮಗುಣವು ಸರ್ವೋಪಾಸ್ಯವಲ್ಲವೋ, ಸರ್ವೋಪಾಸ್ಯವೋ. ಅದಕ್ಕಾಗಿ ಆ ಉಪಾಸನವು ಅರ್ಥವುಳ್ಳದ್ದಲ್ಲವೋ ಅರ್ಥವುಳ್ಳದ್ದೋ, ಎಂದ ಸಂದೇಹವು. ಸಂಭೃತ್ಯಾದಿ ಗುಣೋಪಾಸನಾಫಲವು ಸರ್ವರಿಂದ ಅಪ್ರಾಪ್ಯವಾದ ಪ್ರಯುಕ್ತ ಸಂಭೃತ್ಯಾದಿಗಳು ಹೇಗೆ ಸರ್ವೋಪಾಸ್ಯವಲ್ಲವೋ, ಹಾಗೆಯೇ ನಿರತಿಶಯ ಪೂರ್ಣತ್ವರೂಪವಾದ

ಭೂಮತ್ವವೂ ಕೆಲವರಿಗೆ ಅಯೋಗ್ಯವಾದ ಪ್ರಯುಕ್ತ ಹೊಂದಲಿಕ್ಕೆ ಇಷ್ಟವಲ್ಲ. ಆದಕಾರಣ ವ್ಯರ್ಥವಾದ ಪ್ರಯುಕ್ತ ಭೂಮತ್ವವು ಸರ್ವೋಪಾಸ್ಯವಲ್ಲ. ಆ ಭೂಮತ್ವವು ಸರ್ವೋಪಾಸ್ಯಗಳಾದ ಜ್ಞಾನಾನಂದಾದಿಗುಣಗಳಲ್ಲಿ ವಿಶೇಷಣವಾಗುವುದಾದರೂ ಪ್ರಿಯಶಿರಸ್ತ್ವಾದಿಗಳಂತೆ ಫಲೋಪಯೋಗಿಯಾಗದಿರುವುದರಿಂದ ವ್ಯರ್ಥವಾದ ಪ್ರಯುಕ್ತ ಭೂಮತ್ವವು ಸರ್ವೋಪಾಸ್ಯವಲ್ಲ ಎಂದರೆ— **ತಥೈವ ದೇವಃ ಪರಮೋ ಹ್ಯುಪಾಸ್ಯಃ** ಎನ್ನುವ ಶ್ರುತಿಯಿಂದ ಜ್ಞಾನ ಆನಂದ ಮೊದಲಾದ ಗುಣಗಳಲ್ಲಿ ಎಲ್ಲಾ ಭೂಮತ್ವವು ಒಟ್ಟಿಗೆ ಇದ್ದಪ್ರಯುಕ್ತ ಹಾಗೆ ಉಪಾಸನಾ ಮಾಡಿದರೇನೇ ಫಲವು ಸಿದ್ಧಿಸುತ್ತದೆ. ಇಲ್ಲವಾದರೆ ಫಲವು ಸಿಗಲಾರದು ಎಂದು ತಿಳಿಯುವುದರಿಂದ ಜ್ಞಾನವೂ ಪೂರ್ಣವು, ಆನಂದವೂ ಪೂರ್ಣವು. ಈ ರೀತಿಯಾಗಿ ಭೂಮಗುಣೋಪಾಸನವು ಇಷ್ಟ ಫಲಪ್ರಾಪ್ತಿಗೆ ಹೇತುವಾಗಿದೆ. ಮತ್ತು ದೀಕ್ಷಾ ಪ್ರಾಯಣೀಯಾದ್ಯಾತ್ಮಕವಾದ ಕ್ರತುವು ಸರ್ವಯಾಗಗಳಲ್ಲಿ ಅನುವೃತ್ತವಾದರೇನೇ ಸಫಲವು. ಇಲ್ಲವಾದರೆ ವಿಫಲವಾದ ಪ್ರಯುಕ್ತ ಅದಕ್ಕೆ ಜ್ಯಾಯಸ್ತ್ವವಿದ್ದುದರಿಂದ ಹೇಗೆ ಸರ್ವರಿಂದ ಕರ್ತವ್ಯವೋ, ಹಾಗೆಯೇ ಭೂಮತ್ವವೂ ಸರ್ವರಿಂದಲೂ ಉಪಾಸ್ಯವೇ । ಅಧಿ. ೩೭ ॥

**ಭೂಮಾಧಿಕರಣವು ಸಮಾಪ್ತವಾಯಿತು.**

# ೩೮ ನಾನಾಶಬ್ದಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭೂಮಗುಣೋಪಾಸನದಲ್ಲಿ ಅಧಿಕಾರಿಗಳಿಗೆ ತಾರತಮ್ಯವನ್ನು ಸಮರ್ಥಿಸುತ್ತಾರೆ. ಸರ್ವರಿಗೂ ಭೂಮತ್ವವು ಏಕಪ್ರಕಾರವಾಗಿಯೇ ತೋರುತ್ತದೆ. ಭೂಮತ್ವದಲ್ಲಿ ವಿಶೇಷ ಕಲ್ಪನೆಯು ಕೂಡಲಾರದು. ಏಕೆಂದರೆ— ಕೆಲವರಿಗೆ ಶ್ರೀಹರಿಯು ಸಮ್ಯಕ್ ಪೂರ್ಣಾನಂದನು, ಕೆಲವರಿಗೆ ಪೂರ್ಣಾನಂದನಲ್ಲ ಎನ್ನುವ ಉಪಾಸನವು ಯುಕ್ತವಲ್ಲ. ಆದಕಾರಣ ಸರ್ವರೂ ಏಕಪ್ರಕಾರವಾಗಿಯೇ ಭೂಮತ್ವೋಪಾಸಕರು. ಆದುದರಿಂದ ಫಲದಲ್ಲಿ ತಾರತಮ್ಯವಿಲ್ಲ ಎಂದು ಪೂರ್ವ ಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ನಾನಾ ಶಬ್ದಾದಿಭೇದಾತ್ ಓಂ ॥ ೬೦ ॥

**ಸೂತ್ರಾರ್ಥ ॥** ಸರ್ವಗುಣಗಳಲ್ಲಿ ಪ್ರವಿಷ್ಟವಾದ ಭೂಮಗುಣವು ಸರ್ವರಿಂದ ಅಧಿಕಾರಾನುಸಾರವಾಗಿ ನಾನಾಪ್ರಕಾರದಿಂದ ಉಪಾಸ್ಯವು. (ಒಂದೇ ರೀತಿಯಾಗಿ ಉಪಾಸ್ಯವಲ್ಲ) ಶಬ್ದ ಅನುಮಾನ ಪ್ರತ್ಯಕ್ಷಗಳಿಂದ ಭೂಮಗುಣಪ್ರತೀತಿಗೆ ನಾನಾಪ್ರಕಾರವಿದ್ದ ಪ್ರಯುಕ್ತ

**ಭಾಷ್ಯ ॥ ಶಬ್ದೋಽನುಮಾ ತಥೈವಾಕ್ಷೋ ಯೋಗ್ಯತಾಭೇದತಃ ಸದಾ । ಬ್ರಹ್ಮಾದೀನಾಮೇಕಮರ್ಥಂ ಬಹುಧಾ ದರ್ಶಯಂತಿ ಹಿ ॥ ಅತಃ ಪೂರ್ಣತ್ವಮೀಶಸ್ಯ ನಾನ್ಯೈರ್ವೈಷಾಂ ಪ್ರದೃಶ್ಯತೇ । ಅತಃ ಫಲಸ್ಯ ನಾನಾತ್ವಂ ನಾನ್ಯೈರ್ವೋಪಾಸನಂ (ನಾ)**

**ಯತಃ ॥ ಇತಿ ಹಿ ಬ್ರಹ್ಮತರ್ಕೇ ॥ ಅತೋ ಭೂಮತ್ವಮಪಿ ನಾನೈವೋಪಾಸ್ಯತೇ ॥ ೬೦ ॥ ಅಧಿ. ೩೮ ॥ ೧ ॥**

**ಭಾಷ್ಯಾರ್ಥ ॥** ಆಗಮವು, ಅನುಮಾನವು, ಹಾಗೆಯೇ ಪ್ರತ್ಯಕ್ಷವು ಇವುಗಳು ಬ್ರಹ್ಮಾದ್ಯಧಿಕಾರಿಗಳಿಗೆ ಯಾವಾಗಲೂ ಯೋಗ್ಯತಾ ವಿಶೇಷದಿಂದ ಪೂರ್ಣತ್ವಾದಿ ರೂಪವಾದ ಒಂದೊಂದೇ ಅರ್ಥವನ್ನು ಅವಾಂತರ ವಿಶೇಷವುಳ್ಳದ್ದಾಗಿ ಬಹುಧಾ ತಿಳಿಸಿ ಕೊಡುತ್ತವೆ. ಆದಕಾರಣ ಶ್ರೀಹರಿಯ ಪೂರ್ಣತ್ವವು ಈ ಬ್ರಹ್ಮಾದ್ಯಧಿಕಾರಿಗಳಿಗೆ ನಾನಾ ಪ್ರಕಾರವಾಗಿಯೇ ಉಪಾಸನಕಾಲದಲ್ಲಿ ಪ್ರತೀತವಾಗುತ್ತದೆ. ಯಾವಕಾರಣದಿಂದ ಹೀಗೆ ಭೂಮತ್ವ ವಿಷಯಕವಾದ ಉಪಾಸನವು ನಾನಾಪ್ರಕಾರವಾಗಿಯೇ ಇದೆಯೋ, ಆದಕಾರಣ ಫಲಕ್ಕೆ ತಾರತಮ್ಯವೂ ಕೂಡುತ್ತದೆ. ಹೀಗೆ ಬ್ರಹ್ಮತರ್ಕದಲ್ಲಿ ಹೇಳಿದೆ. ಆದಕಾರಣ ಅಧಿಕಾರಿಭೇದದಿಂದ ಶಬ್ದಾದಿ ಪ್ರಮಾಣಗಳು ಒಂದೇ ಅರ್ಥವನ್ನು ಅನೇಕ ಪ್ರಕಾರವಾಗಿ ತಿಳಿಸಿಕೊಡುವುದರಿಂದ ಆ ಪ್ರಮಾಣಗಳಿಂದ ಭೂಮತ್ವವು ಅಧಿಕಾರಿಗಳಿಗೆ ಉಪಾಸನದಲ್ಲಿ ನಾನಾ ಪ್ರಕಾರವಾಗಿಯೇ ಪ್ರತೀತವಾಗುತ್ತದೋ ಆದುದರಿಂದ ಭೂಮತ್ವವು ನಾನಾಪ್ರಕಾರವಾಗಿಯೇ ಉಪಾಸನಾ ಮಾಡಲ್ಪಡುತ್ತದೆ. ಅಪಿ = ನಾನಾಪ್ರಕಾರವಾಗಿಯೇ ಫಲಪ್ರದವು ಆಗುತ್ತದೆ.

**ವಿಶೇಷಾಂಶ ॥** (೧) ಭೂಮಗುಣವನ್ನು ತಿಳಿಸಿಕೊಡುವ ಶಬ್ದ ಅನುಮಾನ ಪ್ರತ್ಯಕ್ಷ ಪ್ರಮಾಣಗಳಿಂದ ಆವಾವ ಅಧಿಕಾರಿ ಯೋಗ್ಯತಾವಿಶೇಷದಿಂದ ಭೂಮಗುಣವು ನಾನಾ ರೂಪವಾಗಿ ತೋರುತ್ತದೆ. (೨) ಪ್ರಥಮತಃ ತತ್ವನಿರ್ಣಯವು. ಆ ಮೇಲೆ ವೇದಾರ್ಥ ನಿಯಮವು, ಆಮೇಲೆ ಅಪರೋಕ್ಷಜ್ಞಾನವು, ಹೀಗೆ ಕಾರ್ಯಕ್ರಮವನ್ನು ಅನುಸರಿಸಿ ಸ್ಮೃತಿಯಲ್ಲಿ ಶಬ್ದಾದಿಗಳನ್ನು ಕ್ರಮದಿಂದ ನಿರ್ದೇಶ ಮಾಡಿದ್ದು ॥ ೬೦ ॥ ೧ ॥

## ಅಧಿಕರಣ ಸಾರಾಂಶ

ಭೂಮತ್ವವು ಅಧಿಕಾರಿಗಳಿಗೆ ಒಂದೇ ರೂಪದಿಂದ ತೋರುತ್ತದೋ, ನಾನಾ ರೂಪದಿಂದ ತೋರುತ್ತದೋ, ಅದಕ್ಕಾಗಿ ಭೂಮತ್ವವು ನಾನಾ ರೂಪದಿಂದ ತೋರುವುದಾದರೆ ಆ ಪ್ರತೀತಿಗೆ ಭ್ರಾಂತಿತ್ವವು ಆಪಾದಿತವಾಗುತ್ತದೋ ಇಲ್ಲವೋ, ಅದಕ್ಕಾಗಿ ಭೂಮತ್ವವು ಏಕರೂಪವೋ ಅಥವಾ ನಾನಾರೂಪವೂ ಕೂಡುತ್ತದೋ, ಎಂದು ಸಂದೇಹವು. ನಿರತಿಶಯ ಪೂರ್ಣತ್ವರೂಪವಾದ ಭೂಮತ್ವದಲ್ಲಿ ತಾರತಮ್ಯವು ಅಸಂಭಾವಿತವಾದ ಪ್ರಯುಕ್ತ ಏಕರೂಪವೇ. ಏಕರೂಪವಾದರೂ ಶ್ರವಣ ಮನನ ಅಪರೋಕ್ಷಜ್ಞಾನಗಳಲ್ಲಿ ತಾರತಮ್ಯದಿಂದ ತೋರುವುದಾದರೆ ಶ್ರವಣಾದಿಗಳಿಗೂ ಮಿಥ್ಯಾಜ್ಞಾನತ್ವವು ಬರಬೇಕಾಗಿರುವುದರಿಂದ ಏಕರೂಪದಿಂದ ತೋರುತ್ತದೆ ಎಂದೇ ಯುಕ್ತವು. ಎಂದು ಪೂರ್ವಪಕ್ಷವು ಬಂದರೆ— ಅತೀತವತ್ಸರಮಾಸ ಪಕ್ಷ ದಿನ ಘಟಕಾದಿಗಳ ಆನಂತ್ಯದಲ್ಲಿ ತಾರತಮ್ಯವು ಇದ್ದಂತೆಯೇ ಇಲ್ಲಿಯೂ ಭೂಮತ್ವದಲ್ಲಿ ತಾರತಮ್ಯವು ಕೂಡುವುದರಿಂದ ಭಗವದ್ಗುಣಗಳಲ್ಲಿಯೂ ಭಗವದ್ರೂಪಗಳಲ್ಲಿಯೂ ಆನಂತ್ಯವಿದ್ದುದರಿಂದ ಆವಾವ ಅಧಿಕಾರಿಗಳನ್ನು ಅನುಸರಿಸಿ ಅಷ್ಟಷ್ಟು

ಭಗವದ್ಗುಣವು ಶ್ರವಣ ಮನನ ಅಪರೋಕ್ಷಜ್ಞಾನಗಳಲ್ಲಿ ಪ್ರತೀತವಾಗುವಾಗ ಅಷ್ಟೇ ಎಂದೂ ಪ್ರತೀತವಾಗದಿರುವುದರಿಂದ ಭ್ರಾಂತಿತ್ವವು ಕೂಡದಿರುವುದರಿಂದ ನಾನಾ ರೂಪವಾಗಿಯೇ (ಪ್ರತೀತವಾಗುವುದರಿಂದ ಅಧಿಕಾರಿಗಳು ತಂತಮ್ಮಿಂದ ಪ್ರಾಪ್ಯಫಲವನ್ನು ಅನುಸರಿಸಿ ನಾನಾರೂಪ ದಿಂದಲೇ ಅಧಿಕಾರಿಗಳಿಂದ ಭೂಮತ್ವವು ಉಪಾಸ್ಯವು.) ॥ ಅಧಿ. ೩೮ ॥

**ನಾನಾಧಿಕರಣವು ಸಮಾಪ್ತವಾಯಿತು.**

## ೩೯ ವಿಕಲ್ಪಾಧಿಕರಣವು

**ಪೀಠಿಕೆ ॥** ಬಿಂಬಾತಿರಿಕ್ತ ಉಪಾಸನವನ್ನು ವಿಕಲ್ಪದಿಂದ ಮಾಡಬೇಕೆಂದು ಹೇಳುತ್ತಾರೆ. ಮೋಕ್ಷೇಚ್ಛುವು ಮುಕ್ತಿಗೆ ಸಾಧನವಾಗದಿರುವ ಪ್ರಯುಕ್ತ ಸ್ವಬಿಂಬಾತಿರಿಕ್ತ ಉಪಾಸನವನ್ನು ಮಾಡಬಾರದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತಿಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ಓಂ ॥ ೬೧ ॥

**ಸೂತ್ರಾರ್ಥ ॥** ಸಾಮಾನ್ಯವಾದ ಬಿಂಬಾತಿರಿಕ್ತವಾದ ನರಸಿಂಹೋಪಾಸನಕ್ಕೆ ವಿವಿಧ ಕಲ್ಪವು. ಅಂದರೆ ಮಾಡಲೂಬಹುದು, ಮಾಡದೇನೂ ಇರಬಹುದು. ಮಾಡಲೇ ಬೇಕೆನ್ನುವ ನಿಯಮವಿಲ್ಲ. ದುರಿತನಿವೃತ್ತಿರೂಪವಾದ ಫಲವಿಶೇಷಕ್ಕೆ ಕಾರಣವಾಗಿರುವುದರಿಂದ. ಏವಂಚ ಯಾರಿಗೆ ದುರಿತನಿವೃತ್ತಿಯು ಆಗಬೇಕೆಂದು ಅಪೇಕ್ಷೆಯು ಇದೆಯೋ ಅವರು ಮಾಡಲೇಬೇಕು. ಇತರರು ಮಾಡಬೇಕಾಗಿಲ್ಲ. ಎಂದು ವ್ಯವಸ್ಥಿತ ವಿಕಲ್ಪವು.

**ಭಾಷ್ಯ ॥ (೧) ಸ್ವಯೋಗ್ಯೋಪಾಸನಾನಂತರಂ ಸಾಮಾನ್ಯಸ್ಯಾಪಿ ಕಸ್ಯಚಿದುಪಾಸನಂ ವಿಕಲ್ಪೇನ ಭವತಿ ವಿಶಿಷ್ಟಫಲಾಪೇಕ್ಷಯಾ । (೨) ಮುಕ್ತ್ಯರ್ಥಮಾತ್ಮ ಯೋಗ್ಯಂ ಹಿ ಕಾರ್ಯಮೇವ ಹ್ಯುಪಾಸನಂ । ನೃಸಿಂಹಾದಿಕಮನ್ಯಚ್ಚ ದುರಿತಾದಿ ನಿವೃತ್ತಯೇ ॥ ಉಪಾಸ್ಯತೇ ಯಥಾಯೋಗಂ ನ ವಾ ಫಲವಿಭೇದತಃ । ಇತಿ ಚ ಬ್ರಹ್ಮತರ್ಕೇ ॥ ೬೧ ॥ ಅಧಿ.೩೯ ॥ ೧ ॥**

**ಭಾಷ್ಯಾರ್ಥ ॥** (೧) (ಸ್ವಯೋಗ್ಯೋಪಾಸನ ಮಾತ್ರವಲ್ಲ. ಮತ್ತೆ ಅದರಿಂದ ಅತಿರಿಕ್ತವಾದ) ವಿಷ್ಣುಸಂಬಂಧಿಯೇ ಆಗಿ ಬಿಂಬಸಮಾನವಾಗಿ ಇರತಕ್ಕ ನೃಸಿಂಹ ರಾಮಕೃಷ್ಣಾದಿರೂಪ ವಿಶೇಷಗಳದ್ದೂ ಕೂಡ ಉಪಾಸನವು ಸ್ವಯೋಗ್ಯ ಭಗವದ್ರೂಪ ಉಪಾಸನಾನಂತರದಲ್ಲಿ ಮೋಕ್ಷೇಚ್ಛುವಿಗೆ ಉತ್ತಮ ಫಲವನ್ನು ಅಪೇಕ್ಷಿಸಿ ಅಂದರೆ ಜ್ಞಾನಾದಿಗಳಿಗೆ ಪ್ರತಿಬಂಧಕೀಭೂತವಾದ ದುರಿತ ವಿಶೇಷದ ನಿವೃತ್ತಿ ರೂಪವಾದ ಮೋಕ್ಷಕ್ಕೆ ಉಪಯುಕ್ತವಾದ ಫಲವನ್ನು ನಿಮಿತ್ತೀಕರಿಸಿಕೊಂಡು ವಿಕಲ್ಪದಿಂದಲೇ ಆಗುತ್ತದೆ. (ಅಂದರೆ ಉಪಾಸನವನ್ನು ಮಾಡಲೂಬಹುದು. ಮಾಡದೇನೂ ಇರಬಹುದು. ಯಾರಿಗೆ ವಿಶಿಷ್ಟ ಫಲಾಪೇಕ್ಷೆಯು ಇದೆಯೋ ಅವರು ಮಾಡಬೇಕು. ಯಾರಿಗೆ ವಿಶಿಷ್ಟ ಫಲಾಪೇಕ್ಷೆಯು ಇಲ್ಲವೋ ಅವರು

ಮಾಡಬೇಕಾಗಿಲ್ಲ) (ಏವಂಚ ಮೋಕ್ಷಸಾಧನವಾದ ಬಿಂಬೋಪಾಸನವನ್ನು ಮಾಡಿದ ಮೇಲೆ ಈ ನರಸಿಂಹಾದ್ಯುಪಾಸನವನ್ನು ಮಾಡುವುದರಿಂದ ಈ ನರಸಿಂಹಾದ್ಯುಪಾಸನದಿಂದ ಬಿಂಬೋಪಾಸನೇಗೆ ವಿಘ್ನವಿಲ್ಲ) (೨) (ಈ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ.) ಸ್ವಯೋಗ್ಯರೂಪ ವಿಷಯಕ ವಾದ ಉಪಾಸನವು ಯಾವ ಕಾರಣದಿಂದ ಮುಕ್ತಿಗಾಗಿ ಪ್ರಸಿದ್ಧವೇ ಆಗಿದೆಯೋ, ಆದಕಾರಣ ಮಾಡಲೇಬೇಕು. ನೃಸಿಂಹ ಕೃಷ್ಣ ರಾಮ ಹಯಗ್ರೀವ ಮೊದಲಾದ ಬಿಂಬಾತಿರಿಕ್ತವಾದ ರೂಪವನ್ನು ದುರದೃಷ್ಟ ಅಜ್ಞಾನ ಮಿಥ್ಯಾಜ್ಞಾನ ಕಾಮ ಕ್ರೋಧ ಮೊದಲಾದವುಗಳ ನಿವೃತ್ತಿಗಾಗಿ ಯಥಾಯೋಗ್ಯವಾಗಿ (ಮುಮುಕ್ಷುಗಳು) ಉಪಾಸನಾ ಮಾಡುತ್ತಾರೆ. ಕೆಲವರು ದುರಿತಾದಿ ನಿವೃತ್ತಿ ರೂಪವಾದ ಫಲವಿಶೇಷದ ಆಕಾಂಕ್ಷೆಯು ಇಲ್ಲದಿರುವುದರಿಂದ ನರಸಿಂಹಾದ್ಯುಪಾಸನೆಯನ್ನು ಮಾಡುವುದಿಲ್ಲ (ಕೆಲವರಿಗೆ ಶೀಘ್ರವಾಗಿ ಸ್ವಯೋಗ್ಯ ಬಿಂಬೋಪಾಸನದಿಂದಲೇ ದುರಿತಾದಿ ನಿವೃತ್ತಿರೂಪವಾದ ಫಲವು ಸಿದ್ಧಿಸುವುದರಿಂದ ಅವರಿಗೆ ಬಿಂಬಾತಿ ರಿಕ್ತ ನರಸಿಂಹಾದಿ ರೂಪವಿಶೇಷೋಪಾಸನಾಪೇಕ್ಷೆಯು ಇಲ್ಲ) ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ವಿಶೇಷಾಂಶ ॥ ಯದ್ಯಪಿ ಕೆಲವು ಅಧಿಕಾರಿಗಳಿಗೆ ನರಸಿಂಹ ರಾಮ ಕೃಷ್ಣಾದಿ ಅವತಾರ ರೂಪವೂ ಮುಕ್ತಿಸಾಧನವಾದ ಸ್ವಯೋಗ್ಯಾತ್ಮರೂಪವು ಆಗುವುದು. ಅಂತಹವರಿಗೆ ಮುಕ್ತಿಗಾಗಿ ನಿಯಮೇನ ಆ ರೂಪೋಪಾಸನವು ಆವಶ್ಯಕವೇ. ಆದಾಗ್ಯೂ ಅವರಿಂದ ಇತರರಾದ ಅಧಿಕಾರಿಗಳಿಗೆ ನರಸಿಂಹಾದಿರೂಪವು ಸಾಮಾನ್ಯ ರೂಪವಾಗುತ್ತದೆ. ಅಂತಹವರಿಗೇನೇ ಸಾಮಾನ್ಯರೂಪೋಪಾಸನ ದಲ್ಲಿ ವಿಕಲ್ಪವನ್ನು ಹೇಳಿದ್ದು. ಆದಕಾರಣ ರಾಮ ಕೃಷ್ಣಾದ್ಯವತಾರ ದರ್ಶನವೂ ಕೆಲವರಿಗೆ ಮೋಕ್ಷ ಸಾಧನವೆಂದು ಹೇಳಿದ್ದರಿಂದ ನಿಯಮೇನ ಅವತಾರ ರೂಪೋಪಾಸನವು ಆವಶ್ಯಕವೆಂದು ಹೇಳಿದ್ದಕ್ಕೆ ಇದರಿಂದ ವಿರೋಧವಿಲ್ಲ ॥ ೬೧ ॥ ೧ ॥

## ಅಧಿಕರಣ ಸಾರಾಂಶ

ಬಿಂಬಾತಿರಿಕ್ತರೂಪ ವಿಷಯಕವಾದ ಭಗವದುಪಾಸನವನ್ನು ಮಾಡಲೇಬಾರದು, ಎಂದು ನಿಯಮವೋ, ಅಥವಾ ಮಾಡಲೂಬಹುದು ಮಾಡದೇನೂ ಇರಬಹುದು ಎಂದು ವಿಕಲ್ಪವೋ, ಅದಕ್ಕಾಗಿ ಆ ಉಪಾಸನಫಲವು ಇಲ್ಲವೋ, ಇದೆಯೋ, ಅದಕ್ಕಾಗಿ ಆ ಉಪಾಸನೇಗೆ ಮೋಕ್ಷವು ಫಲವೋ, ಇತರ ಫಲವೋ ಎಂದು ಸಂದೇಹವು. ಮುಮುಕ್ಷುಗಳು ಮಾಡತಕ್ಕ ಉಪಾಸನೇಗೆ ಬೇರೆ ಫಲವು ಇಲ್ಲ, ಮೋಕ್ಷವು ಬಿಂಬೋಪಾಸನದಿಂದಲೇ ಸಾಧ್ಯವಾದ ಪ್ರಯುಕ್ತ ಮೋಕ್ಷಫಲಕತ್ವವು ಕೂಡದಿರುವುದರಿಂದ ನಿಷ್ಫಲವಾಗಿದೆ. ಅಲ್ಲದೆ ಮೋಕ್ಷೋಪಯುಕ್ತ ಬಿಂಬೋಪಾಸನೇಗೆ ವಿಘ್ನಕರವೂ ಆಗಿದೆ. ಆದಕಾರಣ ಬಿಂಬಾತಿರಿಕ್ತ ನರಸಿಂಹಾದ್ಯುಪಾಸನವನ್ನು ಮಾಡಲೇಬಾರದು, ಎಂದು ಪೂರ್ವಪಕ್ಷವು ಬಂದರೆ— ಉಪಾಸಕರಿಗೆ ಮೋಕ್ಷದಲ್ಲಿ ಕಾಮನಾ ಇದ್ದರೂ ಮೋಕ್ಷಕ್ಕೆ ಕಾರಣವಾದ ಬಿಂಬೋಪಾಸನೇಗೆ ಉಪಯೋಗಿಯಾಗಿ ಅಪೇಕ್ಷಿತವಾದ ದುರಿತನಿವೃತ್ತಿರೂಪ ಫಲವಿದ್ದುದರಿಂದ ಸಫಲವಾದ ಪ್ರಯುಕ್ತ ಅಂತಹ ಫಲೇಚ್ಛುವು ನರಸಿಂಹಾದ್ಯುಪಾಸನವನ್ನು ಮಾಡಬೇಕು. ॥ಅಧಿ.೩೯॥

ವಿಕಲ್ಪಾಧಿಕರಣವು ಸಮಾಪ್ತವಾಯಿತು.

# ೪೦ ಕಾಮಾಧಿಕರಣವು

ಪೀಠಿಕೆ॥ ಈ ಅಧಿಕರಣದಲ್ಲಿ ಜ್ಞಾನಸಾಧನ ಭಗವದುಪಾಸನವೇ ಆವಶ್ಯಕವು. ಕಾಮ ಸಾಧನವಾದ ಭಗವದ್ರೂಪ ಗುಣವಿಷಯಕ ಉಪಾಸನವು ಆವಶ್ಯಕವಲ್ಲವೆಂದು ಸಮರ್ಥಿಸುತ್ತಾರೆ. ಕಾಮ್ಯೋಪಾಸನದಿಂದ ಅರ್ಥಾದಿಗಳು ಸಿದ್ಧಿಸುವುದರಿಂದ ಅದರಿಂದ ಧರ್ಮದ್ವಾರಾ ಜ್ಞಾನವು ಸಿದ್ಧಿಸುವುದರಿಂದ ಮೋಕ್ಷಕ್ಕೆ ಉಪಯುಕ್ತವಾಗಿರುವುದರಿಂದ ಕಾಮ್ಯೋಪಾಸನವು ಆವಶ್ಯಕವು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ ವಾ ಪೂರ್ವ ಹೇತ್ವಭಾವಾತ್ ಓಂ ॥ ೬೨ ॥

ಸೂತ್ರಾರ್ಥ ॥ ವಿತ್ತಾದಿ ಕಾಮಸಾಧನೀಭೂತಗಳಾದ **ವಸುಪೂರ್ಣಕರಂ ರತ್ನಪರ್ವತಸ್ಥಂ ವಿಭಾವಯನ್ । ವಸುಸಿದ್ಧಿಮವಾಪ್ನೋತಿ** ಇತ್ಯಾದ್ಯುಕ್ತಗಳಾದ ಶ್ರೀಕರಾದಿ ಭಗವದ್ರೂಪ ಗುಣಗಳು ವಿತ್ತಾದಿ ಕಾಮನಾನುಸಾರವಾಗಿ ಮುಮುಕ್ಷುಭಿನ್ನರಿಂದ ಉಪಾಸನಾ ಮಾಡಲ್ಪಡಬೇಕು. ಮುಮುಕ್ಷು ಗಳಿಂದ ಉಪಾಸನಾ ಮಾಡಲ್ಪಡಬಾರದು. ಮೋಕ್ಷೇಚ್ಛೆಯಿಂದ ಮೊದಲು ಇರತಕ್ಕ ವಿತ್ತಾದಿಕಾಮನಾರೂಪಕಾರಣವು ಇಲ್ಲದಿರುವುದರಿಂದ. ಅಥವಾ ಮುಮುಕ್ಷುಗಳೇ ಈಶ್ವರಪ್ರೀತಿಕಾಮನಾನುಸಾರವಾಗಿ ಉಪಸಂಹಾರ ಮಾಡಲೂಬಹುದು. ಮಾಡದೇನೂ ಇರಬಹುದು. ವಿತ್ತಾದಿಗಳಲ್ಲಿ ಕಾಮನೆಯು ಇಲ್ಲದಿರುವುದರಿಂದಲೂ ಪೂರ್ವಸೂತ್ರದಲ್ಲಿ ಹೇಳಿದ ವಿಶಿಷ್ಟಫಲವತ್ತ್ವರೂಪ ಹೇತುವು ಇಲ್ಲದಿರುವುದರಿಂದಲೂ ಏವಂಚ ಪೂರ್ವಾಧಿಕರಣದಲ್ಲಿ ಅಕಾಮ್ಯ ವಿಷಯಕವು. ಇದು ಕಾಮ್ಯವಿಷಯಕವು.

**ಭಾಷ್ಯ ॥ ಯಸ್ಯ ಯಸ್ಯ ಹಿ ಯಃ ಕಾಮಸ್ತಸ್ಯ ತಸ್ಯ ಹ್ಯುಪಾಸನಂ। ತಾದೃಶಾನಾಂ ಗುಣಾನಾಂ ಚ ಸಮಾಹಾರಂ ಪ್ರಕಲ್ಪಯೇತ್ ॥ ಅಕಾಮತ್ವಾನ್ಮುಮುಕ್ಷೂಣಾಂ ನ ವಾ ತೇಷಾಮುಪಾಸನಂ। ತುಷ್ಟ್ಯರ್ಥಮೀಶ್ವರಸ್ಯೈವ ನ ಚೋಪಾಸಾ ವಿದುಷ್ಯತಿ ॥ ಇತಿ ಚ ಬೃಹತ್ತಂತ್ರೇ ॥ ೬೨ ॥ ಅಧಿ. ೪೦ ॥ ೧ ॥**

ಭಾಷ್ಯಾರ್ಥ ॥ ಯಾವ ಯಾವ ಅಧಿಕಾರಿಗೆ ಯಾವ ಯಾವ ವಿತ್ತಾದಿ ಕಾಮನಾ ಇದೆಯೋ, ಆತನು ಆಯಾವ ಕಾಮಪ್ರದವಾದ ಭಗವದ್ರೂಪದ ಉಪಾಸನವನ್ನು ಮಾಡಬೇಕು. ಪ್ರಸಿದ್ಧ ಉಪಾಸನ ಮಾತ್ರವಲ್ಲ ಮತ್ತೆ ಆಯಾವ ಕಾಮಪ್ರದಗಳಾದ ಗುಣಗಳ ಸಮಾರೋಹ (ಏಕಬುದ್ಧ್ಯಾರೋಹಣ)ವನ್ನು (ಅಮುಮುಕ್ಷುವು) ಮಾಡತಕ್ಕುದು. ಮುಮುಕ್ಷುಗಳಿಗಾದರೂ ಅನ್ಯ ಕಾಮನಾ ಇಲ್ಲದಿರುವುದರಿಂದ ಕಾಮವನ್ನು ಕೊಡತಕ್ಕ ರೂಪವೇ. ಮತ್ತು ಗುಣಗಳ ಉಪಾಸನವನ್ನು ಮಾಡದೇನೂ ಇರಬಹುದು. ಮುಮುಕ್ಷುಗಳಿಂದಲೂ ಶ್ರೀಹರಿಯ ಪ್ರಸಾದಕ್ಕಾಗಿಯೇ ಆ ರೂಪದ, ಮತ್ತು ಗುಣಗಳ ಉಪಾಸನೆಯು ಮಾಡಲ್ಪಟ್ಟಿದ್ದಾದರೆ ಆ ಉಪಾಸನೆಯು ದುಷ್ಟವಾಗುವುದಿಲ್ಲ. ಮತ್ತೆ ಮೌಕ್ತಾನಂದದ ಆಧಿಕ್ಯಕ್ಕೇನೇ ಕಾರಣವಾಗುತ್ತದೆ. (ಇತರವಾದ ಕಾಮನಾ ಉದ್ದೇಶದಿಂದಲಾದರೆ

ದುಷ್ಟವಾಗುವುದು. ಅದಕ್ಕಾಗಿ ಮುಮುಕ್ಷುಗಳು ಮಾಡಬಾರದು. ತತ್ವಪ್ರದೀಪದಲ್ಲಿ ಯಾರು ಯಾರಿಗೆ ಯಾವ ಧನಾದಿ ಕಾಮಗಳು ಇವೆಯೋ ಆತನು ಅದಕ್ಕಾಗಿ ಉಪಾಸನವನ್ನು ಮಾಡಬೇಕು. ಆ ಉಪಾಸಕನು ಅಂತಹ ಮುಕ್ತ್ಯರ್ಥವಾಗದಿರುವ ಗುಣಗಳ ಉಪಸಂಹಾರವನ್ನು ಮಾಡಬೇಕು. ಅಥವಾ ಮುಮುಕ್ಷುಗಳು ಅಕಾಮರಾದುದರಿಂದ ಅವರಿಗೆ ಕಾಮ್ಯೋಪಾಸನೆಯಿಲ್ಲ. ಆದುದರಿಂದ ಅತ್ಯಂತ ಆಪತ್ತಿನಲ್ಲಿಯೇ ಕಾಮ್ಯರೂಪ ಗುಣೋಪಾಸನೆಯನ್ನು ಮಾಡಬೇಕು. ಅದೂ ಇತರ ಕಾಮನೆಯಿಂದ ಅಲ್ಲ. ಅದೂ ಈಶ್ವರನ ಪ್ರಸಾದಕ್ಕಾಗಿಯೇ. **ಸ ಕಾಮೇಭ್ಯೋಽಮಿತಗುಣಾಃ** ಎಂದು ಅನ್ಯತ್ರ ಹೇಳಿಯದೆ. ಹೀಗೆ ಬೃಹತ್ತಂತ್ರ ದಲ್ಲಿ ಹೇಳಿಯದೆ. ॥ ೬೨ ॥ ೧ ॥

## ಅಧಿಕರಣ ಸಾರಾಂಶ

ಕಾಮಸಾಧನ ಭಗವದ್ರೂಪ ಗುಣವಿಷಯಕವಾದ ಉಪಾಸನವು ಆವಶ್ಯಕವೋ ವಿಕಲ್ಪವೋ ಅದಕ್ಕಾಗಿ ಆವಶ್ಯಕವಾದರೆ ಮೋಕ್ಷೋಪಯೋಗಾದಿ ಹೇತುವು ಇದೆಯೋ ಇಲ್ಲವೋ, ಎಂದು ಸಂದೇಹವು. ಅರ್ಥಾದಿಗಳಿಂದ ಜ್ಞಾನವು ಸಿದ್ಧಿಸುತ್ತದೆ. ಧನಾದಿಗಳನ್ನು ಸಂಪಾದಿಸಿಕೊಡತಕ್ಕ ಭಗವದ್ರೂಪವು ಭಗವದ್ಗುಣಾದಿಗಳು, ಅವುಗಳ ಉಪಾಸನವು ಜೀವನಾದಿದ್ವಾರಾ ಜ್ಞಾನಕ್ಕೆ ಉಪಯುಕ್ತವಾಗಿರುವುದರಿಂದ ಅರ್ಥ ಕಾಮನೆಯು ಆವಶ್ಯಕವಾದ ಪ್ರಯುಕ್ತ ಕಾಮ್ಯ ಭಗವದ್ರೂಪಾದ್ಯುಪಾಸನವು ಆವಶ್ಯಕವು. ಎಂದರೆ, ಧನ ಗೃಹ ಆರಾಮ ಕ್ಷೇತ್ರ ಇತ್ಯಾದಿಗಳು ಇಲ್ಲದಿರುವ ಯೋಗಿಗಳಿಗೂ ಜ್ಞಾನಸಂಪಾದನೆಯು ಕಂಡದ್ದರಿಂದ ಅವಶ್ಯವಾಗಿ ಅರ್ಥಾದಿಗಳಿಂದಲೇ ಜ್ಞಾನವೆನ್ನುವ ನಿಯಮವು ಇಲ್ಲದಿರುವ ಪ್ರಯುಕ್ತ ಅದು ಮೋಕ್ಷಕ್ಕೆ ಕಾರಣವಾದ ಉಪಾಸನೆಗೆ ಉಪಯುಕ್ತವಾಗದಿರುವುದರಿಂದ ಅಧಿಕಾರಿಗಳು ಮುಮುಕ್ಷುಗಳಾಗಿರುವ ಪ್ರಯುಕ್ತ ಅರ್ಥಾದಿ ಕಾಮನೆಯು ಇಲ್ಲದೆ ಇದ್ದುದರಿಂದಲೂ ಮುಮುಕ್ಷುಗಳು ಅರ್ಥಾದಿ ಕಾಮನೆಯಿಂದ ಕಾಮ್ಯಗುಣೋಪಾಸನವನ್ನು ಮಾಡಬಾರದು. ಭಗವತ್ಪ್ರೀತ್ಯರ್ಥವಾಗಿ ಮಾಡಬಹುದು ಎಂದು ಫಲಭೇದದಿಂದ ವ್ಯವಸ್ಥಿತ ವಿಕಲ್ಪವೇ ಆವಶ್ಯಕವೆನ್ನುವ ನಿಯಮವಿಲ್ಲ. **ಯಸ್ಯ ಯಸ್ಯ ಹಿ** ಎನ್ನುವ ಸ್ಮೃತಿಯಿಂದ ॥ ಅಧಿ. ೪೦ ॥

**ಕಾಮಾಧಿಕರಣವು ಸಮಾಪ್ತವಾಯಿತು.**

# ೪೧ ಅಂಗಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬ್ರಹ್ಮಾದಿ ದೇವತೆಗಳು ಭಗವದಂಗಾಶ್ರಿತರೆಂದು ದೇವತೆಗಳು ಮಾತ್ರ ಉಪಾಸನವನ್ನು ಮಾಡಬೇಕೆಂದು ಸಮರ್ಥಿಸುತ್ತಾರೆ. ೧ ಭಗವತ್ಪರಿವಾರ ಭೂತರು. ೨ ಭಗವದಂಗಾಶ್ರಿತರು ಎಂದು ದೇವತೋಪಾಸನವು ಎರಡು ವಿಧವು. ಅವುಗಳಲ್ಲಿ ೧ನೇದ್ದು ಸರ್ವ ಮುಮುಕ್ಷು ಸಾಧಾರಣವಾದುದು, ಎಂದು **ಅಂಗಾವಬದ್ಧಾಃ** ಎನ್ನುವಲ್ಲಿ ಉಕ್ತವಾಗಿದೆ. ೨ನೇದ್ದು ದೇವತಾಮಾತ್ರಾಧಿಕಾರಿಕವು, ಅದನ್ನು ಇಲ್ಲಿ ಸಮರ್ಥಿಸುತ್ತಾರೆ. ಬ್ರಹ್ಮಾದಿ ದೇವತೆಗಳು ಈಶ್ವರನ

ಅಂಗಾಶ್ರಿತರು ಎನ್ನುವ ಉಪಾಸನವು ನಿರಧಿಕಾರಕವಾದುದರಿಂದ ಯಾರಿಂದಲೂ ಕರ್ತವ್ಯವಲ್ಲ. ಏಕೆಂದರೆ, ಇದು ಸರ್ವಾಧಿಕಾರಿಕವೆಂದು ಹೇಳಕೂಡದು. **ಆನಂದಾದಯಃ** ಎನ್ನುವಲ್ಲಿ ನಾಲ್ಕೇ ಗುಣಗಳನ್ನು ಉಪಾಸನಾ ಮಾಡಬೇಕೆಂದು ಹೇಳಿದ್ದಕ್ಕೆ ಭಂಗವು ಬರುವುದು. ಆದರಲ್ಲಿ ದೇವತೆಗಳಿಗೆ ಅಧಿಕಾರವು ಎಂದೂ ಹೇಳಕೂಡದು. **ಬ್ರಹ್ಮಾ ಶಿರಸಿ, ಲಲಾಟೇ ರುದ್ರಃ** ಇತ್ಯಾದಿ ಆ ಪ್ರಕರಣಗಳಲ್ಲಿ ದೇವತೆಗಳಿಗೆ ಹೀಗೆ ಉಪಾಸನ ಮಾಡಬೇಕು ಎಂದು ಹೇಳಲಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅಂಗೇಷು ಯಥಾಶ್ರಯಭಾವಃ ಓಂ ॥ ೬೩ ॥

**ಸೂತ್ರಾರ್ಥ ॥ ಚಕ್ಷೋಃ ಸೂರ್ಯೋಽಜಾಯತ ತದಾಶ್ರಿತಾಶ್ಚತ್ತೇ ಸರ್ವೇ**, ಇದು ಮೊದಲಾದ ಸೂರ್ಯಾದಿ ದೇವತೆಗಳಿಗೆ ಭಗವದಂಗಗಳಲ್ಲಿ ಹೇಗೆ ಹೇಗೆ ಆಶ್ರಯತ್ವವು ಹೇಳಲ್ಪಟ್ಟದೋ ಹಾಗೆ ಹಾಗೆ ಆವಾವ ಪ್ರಕಾರದಿಂದ ಆವಾವ ದೇವತೆಗಳಿಗೆ ಆಶ್ರಯವಾದ ಅಂಗವುಳ್ಳವನೆಂದು ಶ್ರೀಹರಿಯ ಉಪಾಸನವನ್ನು ಮಾಡಬೇಕು.

**ಭಾಷ್ಯ ॥ ಅಂಗದೇವತಾನಾಂ ಯಥಾ ಯಥಾ ಪರಮೇಶ್ವರಾಂಗಾಶ್ರಯತ್ವಂ । ಚಕ್ಷೋಃ ಸೂರ್ಯೋ ಅಜಾಯತ (ಋ.೧೦.೯೦.೧೩.) ಇತ್ಯಾದಿ । ತಥಾ ಭಾವನಾ ಕರ್ತವ್ಯಾ ॥ ೬೩ ॥ ೧ ॥**

ಭಾಷ್ಯಾರ್ಥ ॥ ಅಂಗದೇವತೆಗಳಾದ ಸೂರ್ಯಾದಿಗಳಿಗೆ ಚಕ್ಷೋಃ ಸೂರ್ಯೋಽಜಾಯತ, ಮುಖಾದಿಂದ್ರಶ್ಚಾಗ್ನಿಶ್ಚ ಇತ್ಯಾದಿಗಳಿಂದ ಹೇಗೆ ಹೇಗೆ ಶ್ರೀಹರಿಯ ಅಂಗಾಶ್ರಯತ್ವವು ಉಕ್ತವಾಗಿಯದೋ, ಹಾಗೆ ಉಪಾಸನಾ ಮಾಡಲೇಬೇಕು. (ಯದ್ಯಪಿ ಶ್ರುತಿಯಲ್ಲಿ ಅಂಗಗಳಿಂದ ಉತ್ಪತ್ತಿಯೇ ಉಕ್ತವಾಗಿದೆ. ತದಾಶ್ರಿತತ್ವವನ್ನು ಹೇಳಲಿಲ್ಲ. ಆದಾಗ್ಯೂ ತದಾಶ್ರಿತಾಶ್ಚತ್ತೇ ಸರ್ವೇ ಎನ್ನುವ ಪ್ರಮಾಣದಿಂದ ಯಾವ ದೇವತೆಗಳಿಗೆ ಯಾವ ಯಾವ ಅಂಗಗಳಲ್ಲಿ ಉತ್ಪತ್ತಿಯೋ, ಅಲ್ಲಿ ಅಲ್ಲಿಯೇ ಸ್ಥಿತಿಯು. ಆದಕಾರಣ ದೋಷವಿಲ್ಲ) ॥ ೬೩ ॥ ೧ ॥

**ಪೀಠಿಕೆ ॥** ಈ ವಿಷಯದಲ್ಲಿಯೇ ಯುಕ್ತ್ಯಂತರವನ್ನು ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಶಿಷ್ಟೇಶ್ಚ ಓಂ ॥ ೬೪ ॥

**ಸೂತ್ರಾರ್ಥ ॥** ಯಸ್ಮಿನ್ ತಸ್ಮಿನ್ ಎನ್ನುವ ಶ್ರುತಿಯಲ್ಲಿ ವಿಧಾನ ಮಾಡಿದ್ದರಿಂದಲೂ ಭಗವದಂಗಗಳಲ್ಲಿ ಸೂರ್ಯಾದಿಗಳ ಉಪಾಸನ ಮಾಡಬೇಕು.

**ಭಾಷ್ಯ ॥ ಯಸ್ಮಿನ್ ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥಾ ತಥೈವ । ಇತಿ ಪೌತ್ರಾಯಣಶ್ರುತೇಃ ॥ ೬೪ ॥ ೨ ॥**

ಭಾಷ್ಯಾರ್ಥ ॥ ಯಾವ ಯಾವ ದೇವತೆಯು ಶ್ರೀಹರಿಯ ಯಾವ ಯಾವ ಅಂಗಗಳಲ್ಲಿ

ಆಶ್ರಿತವಾಗಿಯದೋ, ಪ್ರಸಿದ್ಧ ಆವಾವ ದೇವತೆಯು ಆವಾವ ಅಂಗಾಶ್ರಿತವು ಎಂದು ಉಪಾಸನಾ ಮಾಡತಕ್ಕುದು. ಹೀಗೆ ಪೌತ್ರಾಯಣ ಶ್ರುತಿಯಲ್ಲಿ ವಿಧಾನ ಮಾಡಿದ್ದರಿಂದ ದೇವತೆಗಳು ಅಂಗಾಶ್ರಿತರೆಂದು ಉಪಾಸನಾ ಮಾಡತಕ್ಕುದು ॥ ೬೪ ॥ ೨ ॥

**ಪೀಠಿಕೆ** ॥ ಅಧಿಕಾರಿಗಳು ಇಲ್ಲದಿರುವುದರಿಂದ ಹಾಗೆ ಉಪಾಸನಾ ವಿಧಾನವು ವ್ಯರ್ಥವೆಂದೇ ಉಚಿತವಾದುದರಿಂದ ಅಂಗದೇವತೋಪಾಸನವು ಯುಕ್ತವಲ್ಲ ಎಂದು ಶಂಕಾ ಬಂದರೆ—

## ಸೂತ್ರ ॥ ಓಂ ಸಮಾಹಾರಾತ್ ಓಂ ॥ ೬೫ ॥

**ಸೂತ್ರಾರ್ಥ** ॥ **ಅಂಗೈಃ ಪರಾದ್ಯೇ ಹಿ** ಎನ್ನುವ ಶ್ರುತಿಯಲ್ಲಿ ಪ್ರಕಾಶಕತ್ವಾದಿ ಗುಣಗಳಿಗೂ ಆವಾವ ದೇವತೆಗಳಿಗೂ ಉಪಸಂಹಾರ ಫಲವಚನದಿಂದ ಅಂದರೆ ಈ ಶ್ರುತಿಯಲ್ಲಿ ಹಾಗೆ ಉಪಾಸನಕ್ಕೆ ಪರಮಸ್ಥಾನಾವಾಪ್ತಿರೂಪವಾದ ಫಲವನ್ನು ಹೇಳಿದ್ದರಿಂದ ಆ ಫಲವು ದೇವತೆಗಳಿಗೆ ಯೋಗ್ಯವಾಗಿರುವುದರಿಂದ ದೇವತೆಗಳು ಹಾಗೆ ಉಪಾಸನಾ ಮಾಡಬೇಕು. ಸರ್ವರು ಅಲ್ಲ ಎಂದು ಸಿದ್ಧಿಸುತ್ತದೆ.

**ಭಾಷ್ಯ ॥ ಅಂಗೈಃ ಪರಾದ್ಯೇ ಹಿ ದೇವಾ ವಿಸ್ಪಷ್ಟಾಸ್ತತ್ತದ್ಗುಣಾನ್ ಪರಮೇ ಸಂಹರೇತ । ತಾಂಶ್ಚಾಪಿ ತತ್ರೈವ ವಿಚಿಂತ್ಯ ದೇವಾನ್ ಸ್ಥಾನಂ ಮುಮುಕ್ಷುಃ ಪರಮಂ ವ್ರಜೇತ ಇತಿ ಚ ಕಾಷಾಯಣಶ್ರುತೌ ಸಮಾಹಾರವಚನಾಚ್ಚ ॥ ೬೫ ॥ ೩ ॥**

**ಭಾಷ್ಯಾರ್ಥ** ॥ ಪರಮಾತ್ಮನ ಸಕಾಶದೆಶೆಯಿಂದ ತನ್ನ ಚಕ್ಷುರಾದ್ಯಂಗಗಳಿಂದ ಯಾವ ಯಾವ ದೇವತೆಗಳು ಅನೇಕ ಪ್ರಕಾರವಾಗಿ ಸ್ಪಷ್ಟರಾಗಿದ್ದಾರೋ, ಪ್ರಸಿದ್ಧರೋ, ಆವಾವ ದೇವೋತ್ಪಾದಕ ಅಂಗವತ್ವರೂಪ ಧರ್ಮಗಳನ್ನು ಅಥವಾ ಆವಾವ ಸೂರ್ಯ ಸೋಮಾದಿ ದೇವತೆಗಳ ಮಹಾಪ್ರಕಾಶಕರತ್ವ, ಆಹ್ಲಾದಕರತ್ವ ಮೊದಲಾದ ಗುಣಗಳನ್ನು ಶ್ರೀಹರಿಯ ಅಂಗಗಳಲ್ಲಿ ಉಪಸಂಹಾರ ಮಾಡಬೇಕು. (ಗುಣಗಳನ್ನು ಮಾತ್ರ ಅಂಗಗಳಲ್ಲಿ ಉಪಸಂಹಾರ ಮಾಡುವುದಲ್ಲ, ಮತ್ತೆ) ಆವಾವ ಅಂಗಗಳಲ್ಲಿ ಹುಟ್ಟಿದ ದೇವತೆಗಳನ್ನು ಆವಾವ ಭಗವದಂಗಗಳಲ್ಲಿಯೇ ಧ್ಯಾನ ಮಾಡಿ ಮೋಕ್ಷೇಚ್ಛುವಾದ ಪುರುಷನು (ದೇವಪದವಿಗೆ ಯೋಗ್ಯನಾದವನು) ಉತ್ತಮವಾದ ಸಾಯುಜ್ಯರೂಪವಾದ ಸ್ಥಾನವನ್ನು ಹೊಂದುವನು. ಹೀಗೆ ಕಾಷಾಯಣ ಶ್ರುತಿಯಲ್ಲಿ ಉಪಸಂಹಾರ ವಿಧಾಯಕ ಸಂಹರೇತ ಎನ್ನುವ ಪದಘಟಿತವಾದ ಶ್ರುತಿವಚನ ದೆಶೆಯಿಂದ (ಅಂಗಾಶ್ರಿತರೆನ್ನುವ ಉಪಾಸನೆಗೆ ದೇವತೆಗಳೇ ಅಲ್ಲಿ ಅಧಿಕಾರಿಗಳಾದುದರಿಂದ ನಿರಧಿಕಾರಿಕವಲ್ಲ ಈ ಉಪಾಸನೇಗೆ ಫಲಭೂತವಾದ ಸಾಯುಜ್ಯಪದಪ್ರಾಪ್ತಿಗೆ ದೇವತೆಗಳೇ ಯೋಗ್ಯರು.) (ಕೇವಲ ಅಂಗಗಳಲ್ಲಿ ತತ್ತ್ವಾಭಿಮಾನಿ ದೇವತೆಗಳನ್ನು ಧ್ಯಾನಿಸಿ ಅಧಿಕಾರಿಯು ಪೂರ್ಣ ಫಲವುಳ್ಳವನು ಆಗುವುದಿಲ್ಲ ಮತ್ತೆ ಪರಮಾತ್ಮನ ಚಕ್ಷುರಾದ್ಯಂಗಗಳಲ್ಲಿ ಆಶ್ರಿತರಾದ ಸೂರ್ಯಸೋಮಾದಿ ದೇವತೆಗಳ ಗುಣಗಳಿಗೆ ಬಿಂಬ ಭೂತಗಳಾದ ಮಹಾಪ್ರಕಾಶಕರತ್ವ, ಆಹ್ಲಾದಕರತ್ವ ಮೊದಲಾದ ಗುಣಗಳಿಗೂ **ಅಂಗೈ ಪರಾತ್** ಎನ್ನುವ ಶ್ರುತಿಯಲ್ಲಿ ಸಮಾಹಾರವನ್ನು ಹೇಳಿದ್ದರಿಂದ ಆವಾವ ಈ ಗುಣೋಪಾಸನದಿಂದಲೂ ಪೂರ್ಣ ಫಲವು ಸಿದ್ಧಿಸುತ್ತದೆ ಎಂದು ತತ್ವಪ್ರದೀಪದಲ್ಲಿ ಸೂತ್ರಾರ್ಥವು ಉಕ್ತವಾಗಿದೆ.) ॥ ೬೫ ॥ ೩ ॥

**ಪೀಠಿಕೆ ॥** ಹೇತ್ವಂತರದಿಂದ ಅಂಗದೇವತೋಪಾಸನವನ್ನು ಮಾಡಬೇಕೆಂದು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಗುಣಸಾಧಾರಣ್ಯಶ್ರುತೇಶ್ಚ ಓಂ ॥ ೬೬ ॥

**ಸೂತ್ರಾರ್ಥ ॥** ಜ್ಞಾನ ಆನಂದ ಮೊದಲಾದವುಗಳೂ ಸೂರ್ಯಾದ್ಯಾಶ್ರಯ ಚಕ್ಷುರಾದಿಗಳೂ ಇವುಗಳು ಭಗವದ್ಗುಣಗಳಾಗಿರುವುದರಿಂದ ಭಗವದ್ಗುಣಗಳು ಉಪಾಸ್ಯಗಳಾಗಿ ಸಾಧಾರಣಗಳೇ. ಅಂದರೆ ಇವುಗಳು ಉಪಾಸ್ಯಗಳು ಇವುಗಳು ಉಪಾಸ್ಯಗಳಲ್ಲವೆಂದು ವಿಭಾಗವಿಲ್ಲದೆ ಯೋಗ್ಯಗಳೆಲ್ಲವೂ ಉಪಾಸ್ಯಗಳೆಂದು ಸಾಧಾರಣ್ಯಾತ್ ಎನ್ನುವ ಶ್ರುತಿಯಲ್ಲಿ ಹೇಳಿದ್ದರಿಂದ ದೇವತೆಗಳು ಅಂಗಾಶ್ರಿತರೆಂದು ಅಂಗದೇವತಾ ಭಾವನೆಯನ್ನು ದೇವತೆಗಳು ಮಾಡಬೇಕು. ಅಂದರೆ ಸೂರ್ಯಾದ್ಯಾಶ್ರಯ ಚಕ್ಷುರಾದಿ ಭಗವದಂಗಗಳೂ ಈಶಗುಣಗಳಾಗಿರುವುದರಿಂದ ಅಂಗಾಶ್ರಿತ ದೇವತೋಪಾಸನೆಯನ್ನು ಮಾಡಲೇ ಬೇಕು.

## ಭಾಷ್ಯ ॥ ಸಾಧಾರಣಾತ್ ಸರ್ವಗುಣಾಃ ಪರಸ್ಯ ಸಮಾಹಾರ್ಯಾಸ್ತತ್ತ್ವದೃಶೋ ಮುಮುಕ್ಷೋಃ । ಇತಿ ಮಾಂಡವ್ಯಶ್ರುತೇಶ್ಚ ॥ ೬೬ ॥ ಅಧಿ.೪೧ ॥ ೪ ॥

**ಭಾಷ್ಯಾರ್ಥ ॥** ಬ್ರಹ್ಮಜ್ಞಾನಿಯಾದ ಮುಮುಕ್ಷುವಿನಿಂದ ಶ್ರೀಹರಿಯ ಎಲ್ಲಾ ಗುಣಗಳೂ ಈ ಗುಣಗಳು ಉಪಾಸ್ಯಗಳು ಇವುಗಳು ಉಪಾಸ್ಯಗಳಲ್ಲ ಎನ್ನುವ ವಿಭಾಗವಿಲ್ಲದೆ ಅಥವಾ ಭಗವದ್ಗುಣಗಳಿಗೆ ಉಪಾಸ್ಯತ್ವವಿಷಯದಲ್ಲಿ ವಿಶೇಷವಿಲ್ಲದಿರುವುದರಿಂದ ಅಂದರೆ ಎಲ್ಲಾ ಗುಣಗಳಿಗೂ ಉಪಾಸ್ಯತ್ವವಿದ್ದುದರಿಂದ ಶಕ್ತ್ಯನುಸಾರವಾಗಿ ಉಪಸಂಹಾರ್ಯಗಳು, ಎನ್ನುವ ಮಾಂಡವ್ಯ ಶ್ರುತಿಯಿಂದಲೂ ಭಗವದಂಗಾಶ್ರಿತರೆಂದು ದೇವತೋಪಾಸನವನ್ನು ಮಾಡಲೇಬೇಕು. ಇಲ್ಲವಾದರೆ ಸೂರ್ಯಾದ್ಯಾಶ್ರಯ ಚಕ್ಷುರಾದಿಮತ್ತ್ವರೂಪ ಭಗವದ್ಗುಣಗಳಿಗೆ ಉಪಾಸನವಿಲ್ಲದೆ ಹೋಗುವುದು. ॥ ೬೬ ॥ ೪ ॥

## ಅಧಿಕರಣ ಸಾರಾಂಶ

ಬ್ರಹ್ಮಾದಿ ದೇವತೆಗಳು ಭಗವದಂಗಾಶ್ರಿತರೆಂದು ಉಪಾಸನವನ್ನು ಮಾಡಬಾರದೋ ಮಾಡಬೇಕೋ. ಅದಕ್ಕಾಗಿ ಶ್ರುತಿಯಲ್ಲಿ ದೇವತೆಗಳು ಅಂಗಾಶ್ರಿತರೆಂದು ಹೇಳಿದ್ದು ಹಾಗೆಯೇ ಉಪಾಸನಾವಿಧಾನ ಮಾಡಿದ್ದು ಗುಣಸಾಧಾರಣ ಶ್ರವಣವೂ ಉಪಾಸನಕಾರ್ಯದಲ್ಲಿ ಕಾರಣವಾಗುವು ದಿಲ್ಲವೋ ಆಗುತ್ತದೋ, ಅದಕ್ಕಾಗಿ ಈ ಉಪಾಸನವು ನಿರಧಿಕಾರಿಕವೋ ಸಾಧಿಕಾರಿಕವೋ, ಅದಕ್ಕಾಗಿ ಅಧಿಕಾರಿಕಲ್ಪನವು ಇಲ್ಲವೋ ಇದೆಯೋ ಎಂದು ಸಂದೇಹವು. ಹೇತುವು ಇಲ್ಲದಿರುವುದರಿಂದ ಹಾಗೆ ಉಪಾಸನಾ ಮಾಡಬಾರದು. ಬ್ರಹ್ಮಾ ಶಿರಸಿ ಲಲಾಟೇ ರುದ್ರಃ ಇತ್ಯಾದಿ ಶ್ರುತಿಯಲ್ಲಿ ದೇವತೆಗಳು ಅಂಗಾಶ್ರಿತರೆಂದು ಹೇಳಿದ್ದು ಯಸ್ಮಿನ್ನಸ್ಮಿನ್ ಎನ್ನುವ ಶ್ರುತಿಯಲ್ಲಿ ಹಾಗೆ ವಿಧಾನ ಮಾಡಿದ್ದು ಸಾಧಾರಣ್ಯಾತ್ಸರ್ವಗುಣಾಃ ಇತ್ಯಾದಿಗಳಲ್ಲಿ ಜ್ಞಾನಾನಂದಾದಿ ಗುಣಗಳಿಗೆ ಸಮಾನಗಳಾಗಿ ಸೂರ್ಯಾದ್ಯಾಶ್ರಯ ಚಕ್ಷುರಾದಿ ಅಂಗವತ್ತ್ವರೂಪ ಈಶ್ವರಗುಣಗಳಿಗೆ ಉಪಾಸ್ಯತ್ವಶ್ರವಣವೂ ಹಾಗೆ

ಉಪಾಸನಾ ಮಾಡುವುದರಲ್ಲಿ ಹೇತುವು ಎಂದು ಹೇಳಕೂಡದು. ಹಾಗೆ ಉಪಾಸನವು ಸರ್ವಾಧಿಕಾರಿಕವಾದರೆ ಆನಂದಾದಯಃ ಎಂದು ಹೇಳಿದ ಚತುರ್ಗುಣೋಪಾಸನ ನಿಯಮಕ್ಕೆ ಭಂಗವು ಬರುವುದು. ಬ್ರಹ್ಮಾಶ್ರಿತ ಶಿರಸ್ಸುಕ್ಲತನವು ಭೂಮತ್ವದಂತೆ ಆನಂದಾದಿ ವಿಶೇಷಣವಲ್ಲ. ಆ ಉಪಾಸನವು ಕಲ್ಪಕವಿಲ್ಲದಿರುವುದರಿಂದ ದೇವಾಧಿಕಾರಿಕವೆಂದೂ ಹೇಳಕೂಡದು. ಆದಕಾರಣ ಹಾಗೆ ಉಪಾಸನೆಗೆ ಅಧಿಕಾರಿಗಳು ಇಲ್ಲದಿರುವುದರಿಂದ ಹಾಗೆ ಉಪಾಸನವನ್ನು ಮಾಡಬಾರದು ಎಂದರೆ, ಹಾಗೆ ಉಪಾಸನವನ್ನು ಮಾಡಲೇಬೇಕು. ಹೇತುವು ಇಲ್ಲವೆಂದು ಅಲ್ಲ. ಶ್ರುತಿಯಲ್ಲಿ ಹಾಗೆ ಹೇಳಿದ್ದೇ ಅನುಷ್ಠಾನವು. ಅಧಿಕಾರಿಗಳು ಇಲ್ಲವೆಂದೂ ಹೇಳಕೂಡದು. ಅಂಗ್ಯೈಃ ಪರಾದ್ಯೇ ಹಿ ದೇವಾಃ ಎನ್ನುವ ಶ್ರುತಿಯಲ್ಲಿ ಬ್ರಹ್ಮಾಶ್ರಿತಲಲಾಟವತ್ವ, ಸೂರ್ಯಾಶ್ರಿತ ಚಕ್ಷುರಾದಿಮತ್ವಾದಿರೂಪ ಗುಣೋಪಾಸನಕ್ಕೆ ಪರಮಸ್ಥಾನ ಪ್ರಾಪ್ತಿರೂಪ ಫಲವು ಶ್ರುತವಾಗಿದೆ. ಆ ಪದವು ದೇವತೆಗಳಿಂದ ಪ್ರಾಪ್ತವಾದುದರಿಂದ ದೇವತೆಗಳೇ ಅಧಿಕಾರಿಗಳೆಂದು ಕಲ್ಪಿಸುವುದು ಯುಕ್ತವಾಗುವುದು. ॥ ಅಧಿ. ೪೧ ॥

ಅಂಗಾಧಿಕರಣವು ಸಮಾಪ್ತವಾಯಿತು.

## ೪೨ ನವಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಅಂಗದೇವತೋಪಾಸನವನ್ನು ದೇವೇತರು ಮಾಡಕೂಡದು ಎಂದು ಸಮರ್ಥಿಸುತ್ತಾರೆ. ಸರ್ವ ಶಾಖೆಗಳಲ್ಲಿ ಹೇಳದೆ ಇದ್ದ ಪ್ರಯುಕ್ತ ಈ ಉಪಾಸನವನ್ನು ಮಾಡಕೂಡದು ಎಂದು ಪೂರ್ವಪಕ್ಷವು ಬಂದರೆ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ನ ವಾಽತತ್ಸಹಭಾವಶ್ರುತೇಃ ಓಂ ॥ ೬೭ ॥**

**ಸೂತ್ರಾರ್ಥ** ॥ ಶ್ರೀಹರಿಯ ಅಂಗಗಳಲ್ಲಿ ಸೂರ್ಯಾದಿಗಳ ಉಪಾಸನವನ್ನು ಮಾಡಕೂಡದು. ಸರ್ವಶಾಖೆಗಳಲ್ಲಿದ್ದ ಉಪಾಸನದಿಂದ ಕೂಡಿಕೊಂಡು ಶ್ರುತವಾಗದೆ ಇದ್ದ ಪ್ರಯುಕ್ತ.

**ಭಾಷ್ಯ ॥ ನ ವಾಂಽಗದೇವೋಪಸಂಹಾರಃ ಕಾರ್ಯಃ । ಉಪಸಂಹಾರಸ್ಯ ಸಹಾ ಶ್ರವಣಾತ್ ॥ ೬೭ ॥ ೧ ॥**

**ಭಾಷ್ಯಾರ್ಥ** ॥ ಭಗವದಂಗಗಳಲ್ಲಿ ಅಂಗದೇವತೆಗಳ ಉಪಸಂಹಾರಪೂರ್ವಕವಾಗಿ ಉಪಾಸನವನ್ನು ಮಾಡದೇನೂ ಇರಬಹುದು. ಉಪಸಂಹಾರಪೂರ್ವಕ ಅಂಗದೇವತೋಪಾಸನಕ್ಕೆ ಸರ್ವ ಶಾಖೆಗಳಲ್ಲಿದ್ದ ಉಪಾಸನದಿಂದ ಕೂಡಿಕೊಂಡು ಶ್ರುತವಾಗದೆ ಇದ್ದ ಪ್ರಯುಕ್ತ. ತಥಾಚ ಹೀಗೆ ಉಪಾಸನವು ಕ್ವಚಿತ್ ಉಕ್ತವಾಗಿದೆ. ಸರ್ವತ್ರ ಉಕ್ತವಾಗಲಿಲ್ಲ. ಆದಕಾರಣ ದೇವತೆಗಳು ಮಾಡಬೇಕು. ಇತರರು ಮಾಡಕೂಡದು. ॥ ೬೭ ॥ ೧ ॥

**ಪೀಠಿಕೆ** ॥ ದೇವತೆಗಳೇ ಹಾಗೆ ಉಪಾಸನವನ್ನು ಮಾಡಬೇಕು. ಇತರರು ಮಾಡಕೂಡದು. ಎನ್ನುವ ಯುಕ್ತಿಸಿದ್ಧವೇ ಆದ ಅರ್ಥವನ್ನು ಶ್ರುತಿಯಿಂದಲೂ ಸಮರ್ಥಿಸತಕ್ಕ ಸೂತ್ರವನ್ನು ಹೇಳುತ್ತಾರೆ—

**ಸೂತ್ರ ॥ ಓಂ ದರ್ಶನಾಚ್ಚ ಓಂ ॥ ೬೮ ॥**

ಸೂತ್ರಾರ್ಥ ॥ ಸತ್ಯೋ ಜ್ಞಾನಃ ಇತ್ಯಾದಿ ಶ್ರುತಿಯಲ್ಲಿ ದೇವತೆಗಳೇ ಅಂಗದೇವತೋಪಸಂಹಾರ ಪೂರ್ವಕ ಉಪಾಸನಾ ಮಾಡಬೇಕು. ಇತರರು ಅಲ್ಲ ಎನ್ನುವ ಅರ್ಥವು ಕಂಡದ್ದರಿಂದ.

**ಭಾಷ್ಯ ॥ ಸತ್ಯೋ ಜ್ಞಾನಃ ಪರಾನಂದರೂಪ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ । ನಾನ್ಯತ್ಕಿಂಚಿತ್ ಸಮುಪಾಸೀತ ಧೀರಃ ಸರ್ವೈರ್ಗುಣೈರ್ದೇವಗಣಾ ಉಪಾಸತೇ ॥ ಇತಿ ಕಮಠಶ್ರುತೌ ॥ ೬೮ ॥ ಅಧಿ. ೪೨ ॥ ೨ ॥**

ಭಾಷ್ಯಾರ್ಥ ॥ ಶ್ರೀಹರಿಯು ಸತ್ಯಸ್ವರೂಪನು. ಜ್ಞಾನಸ್ವರೂಪನು, ಪರಮಾನಂದರೂಪನು ಈ ಪ್ರಕಾರವಾಗಿ ಯೋಗ್ಯ ಸರ್ವಕಾಲದಲ್ಲಿ ಸರ್ವ ಮುಮುಕ್ಷುಗಳಿಗೂ ಉಪಾಸನವು ಕರ್ತವ್ಯವು. ಮನುಷ್ಯೋತ್ತಮನು ಇತರ ಯಾವ ಗುಣಾದಿಗಳನ್ನು ಉಪಾಸನಾ ಮಾಡಕೂಡದು. ಬ್ರಹ್ಮರುದ್ರಾದಿ ದೇವಸಮುದಾಯಗಳು ತಂತಮಗೆ ಯೋಗ್ಯ ಸರ್ವ ಗುಣಗಳಿಂದ ಉಪಾಸನಾ ಮಾಡುತ್ತಾರೆ ಎಂದು ಕಮಠ ಶ್ರುತಿಯಲ್ಲಿ ಉಕ್ತವಾದ ಪ್ರಯುಕ್ತ (ಅಂಗದೇವತೋಪಸಂಹಾರವನ್ನು ದೇವೇತರರು ಮಾಡಕೂಡದು. ದೇವತೆಗಳು ಮಾಡಬೇಕು.) ॥ ೬೮ ॥ ೨ ॥

## ಅಧಿಕರಣ ಸಾರಾಂಶ

ಈ ಅಧಿಕರಣದಲ್ಲಿ ಚತುರ್ಮುಖನು ಶಿರಸ್ಸನ್ನು ಆಶ್ರಯಿಸಿಕೊಂಡು ಇದ್ದಾನೆ. ಇತ್ಯಾದಿ ಭಗವದ್ಗುಣೋಪಾಸನವನ್ನು ಮಾಡಬಾರದೋ ಮಾಡಬೇಕೋ ಎಂದು ಸಂದೇಹವು, ಸರ್ವ ಶಾಖೆಗಳಲ್ಲಿ ಹೇಳದೆ ಇದ್ದ ಪ್ರಯುಕ್ತ ಹಾಗೆ ಉಪಾಸನವನ್ನು ಮಾಡಲೇಕೂಡದು. ಅವಶ್ಯವಾಗಿ ಮಾಡಬೇಕಾಗಿದ್ದರೆ ಸರ್ವ ಶಾಖೆಗಳಲ್ಲಿದ್ದ ಉಪಾಸನದಿಂದ ಒಟ್ಟಿಗೆ ಹೇಳಬೇಕಿತ್ತು ಎಂದರೆ, ಸರ್ವಥಾ ಆ ಉಪಾಸನೇಗೆ ಕಾರ್ಯತ್ವವು ಇಲ್ಲದಿದ್ದರೆ ಕ್ವಚಿತ್ ಅದರ ಉಕ್ತಿಯೂ ಇಲ್ಲದೇನೇ ಇರಬೇಕಿತ್ತು. ಸತ್ಯೋ ಜ್ಞಾನಃ ಇತ್ಯಾದಿ ಶ್ರುತಿಯಿಂದ ಜ್ಞಾನ ಮೊದಲಾದ ನಾಲ್ಕು ಗುಣಗಳಿಂದ ಹೆಚ್ಚು ಗುಣಗಳು ದೇವತೆಗಳಿಂದ ಮಾತ್ರ ಉಪಾಸ್ಯಗಳೆಂದು ಹೇಳಿದ್ದರಿಂದ ಆ ಉಪಾಸನೇಗೆ ದೇವತೆಗಳು ಮಾತ್ರ ಅಧಿಕಾರಿಗಳಾದುದರಿಂದ ದೇವತೆಗಳೇ ಹಾಗೆ ಉಪಾಸನಾ ಮಾಡಬೇಕು. ಸರ್ವಾಧಿಕಾರಿಕವಾಗದೆ ಇದ್ದುದರಿಂದ ಸರ್ವತ್ರ ಹೇಳಲಿಲ್ಲ. ಆದಕಾರಣ ನಿರಧಿಕಾರಿಕವಲ್ಲ. ॥ ಅಧಿ.೪೨ ॥

### ನವಾಧಿಕರಣವು ಸಮಾಪ್ತವಾಯಿತು.

ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ(ದ)ವಿರಚಿತೇ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ ॥ ೩—೩ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮದ್ವೇದ ವ್ಯಾಸಕೃತಬ್ರಹ್ಮಸೂತ್ರಗಳ ಭಾಷ್ಯದಲ್ಲಿ ಮೂರನೇ ಅಧ್ಯಾಯದಲ್ಲಿ ಮೂರನೇ ಪಾದವು ಸಮಾಪ್ತವಾಯಿತು. ॥ ೩—೩ ॥

ವಿದ್ವದಾದ್ಯಃ ಸ ಮಧ್ವೋಽದ್ಯ ಪ್ರೋದ್ಯತ್ತದ್ಯೋತನದ್ಯುತಿಃ ।
ಹೃದ್ಯೋಽನವದ್ಯೋ ಬುದ್ಧಿಂ ಮೇ ದದ್ಯಾಚ್ಛುದ್ಧಿಪ್ರಸಿದ್ಧಿಮಾನ್ ॥

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ತೃತೀಯಾಧ್ಯಾಯ ೪ನೇ ಪಾದ

## ಜ್ಞಾನಪಾದ

## ೧. ಪುರುಷಾರ್ಥಾಧಿಕರಣವು

**ಭಾಷ್ಯ ॥ ಓಂ ॥ ಜ್ಞಾನಸಾಮರ್ಥ್ಯಮಸ್ಮಿನ್ ಪಾದ ಉಚ್ಯತೇ ॥ ೧ ॥**

ಭಾಷ್ಯಾರ್ಥ ॥ ಯಾವ ಜ್ಞಾನಕ್ಕಾಗಿ ಪೂರ್ವ ಪಾದದಲ್ಲಿ ಉಪಾಸನೆಯು ಉಕ್ತವಾಗಿಯದೋ, ಅಂತಹ ಬ್ರಹ್ಮಾಪರೋಕ್ಷ ಜ್ಞಾನದ ಮಹಿಮೆಯು ಈ ನಾಲ್ಕನೇ ಪಾದದಲ್ಲಿ ಹೇಳಲ್ಪಡುತ್ತದೆ. ಈ ಅಧಿಕರಣದಲ್ಲಿ ಬ್ರಹ್ಮಜ್ಞಾನಕ್ಕೆ ಮೋಕ್ಷ ಮೊದಲಾದ ಸರ್ವಪುರುಷಾರ್ಥ ಸಾಧನತ್ವ ಮಹಿಮೆಯು ಹೇಳಲ್ಪಡುತ್ತದೆ. ಜ್ಞಾನವು ಮೋಕ್ಷ ಮಾತ್ರಕ್ಕೇನೇ ಸಾಧನವು. ಸರ್ವ ಪುರುಷಾರ್ಥ ಸಾಧನವಲ್ಲ. ಜ್ಞಾನಿಗಳು ವಿರಕ್ತರಾದುದರಿಂದ ಮೋಕ್ಷೇತರ ಪುರುಷಾರ್ಥಗಳಲ್ಲಿ ಅವರಿಗೆ ಇಚ್ಛೆಯೇ ಇಲ್ಲ. ಇಚ್ಛೆಯು ಇಲ್ಲದಿದ್ದರೂ ಮೋಕ್ಷೇತರ ಪುರುಷಾರ್ಥ ಪ್ರಾಪ್ತಿಯಾಗುವುದಾದರೆ ಅವುಗಳಿಗೆ ಪುರುಷಾರ್ಥತ್ವವೇ ಇಲ್ಲದೆ ಹೋಗುವುದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ. ॥ ೧ ॥

**ಸೂತ್ರ ॥ ಓಂ ಪುರುಷಾರ್ಥೋಽತಶ್ಶಬ್ದಾದಿತಿ ★ಬಾದರಾಯಣಃ ಓಂ ॥೧॥**

ಸೂತ್ರಾರ್ಥ ॥ ಸರ್ವ ಪುರುಷಾರ್ಥವೂ ಜ್ಞಾನದಿಂದಲೇ ಆಗುತ್ತದೆ. ಯಂ ಯಂ ಲೋಕಂ ಎನ್ನುವ ಶ್ರುತಿಯಿಂದ ಎಂದು ಬಾದರಾಯಣಾಚಾರ್ಯರು ತಿಳಿಯುತ್ತಾರೆ.

**ಭಾಷ್ಯ ॥ (೧) ಯದ್ದರ್ಶನಾರ್ಥಮುಪಾಸನೋಕ್ತಾ ತಸ್ಮಾದ್ದರ್ಶನಾತ್ಸರ್ವ ಪುರುಷಾರ್ಥ ಪ್ರಾಪ್ತಿಃ । ಇತಿ ಬಾದರಾಯಣೋ ಮನ್ಯತೇ ॥ (೨) ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ (ಮು.೧.೧೦.) ಇತಿ ಶಬ್ದಾತ್ ॥ ೧ ॥ ೨ ॥**

ಭಾಷ್ಯಾರ್ಥ ॥ (೧) ಯಾವ ಬ್ರಹ್ಮದರ್ಶನಕ್ಕಾಗಿ ಅಥವಾ ಯಾವ ವಿಷ್ಣುವಿನ ದರ್ಶನಕ್ಕಾಗಿ

★ ಬಾದೇ— ಜ್ಞಾನೇ ರತಾನಾಮಧಿಕತಯಾ ಆಶ್ರಯತ್ವೇನ ಭಗವತ್ತಮೋ ವೇದೇಶ್ವರಃ ಉಚ್ಯತೇ । ಎಂದು ತತ್ವಪ್ರದೀಪದಲ್ಲಿ ಉಕ್ತವಾಗಿದೆ.

ಪೂರ್ವದಲ್ಲಿ ಉಪಾಸನೆಯು ಉಕ್ತವಾಗಿಯದೋ ಆ ದರ್ಶನದಿಂದ ಅಥವಾ ಆ ವಿಷ್ಣುವಿನ ಪ್ರಸಾದದಿಂದ ಉಂಟಾದ ದರ್ಶನದಿಂದ ಪುರುಷರಿಂದ ಪ್ರಾರ್ಥಿಸಲ್ಪಡತಕ್ಕ ಎಲ್ಲಾ ಶುಭಗಳಿಗೂ ಬ್ರಹ್ಮದರ್ಶನವಾಗುವಾಗ ಪ್ರಾಪ್ತಿಯು ಆಗಿಯೇ ಆಗುತ್ತದೆ. (ಮೋಕ್ಷಮಾತ್ರಕ್ಕೆ ಅಲ್ಲ) ಯಂ ಯಂ ಎನ್ನುವ ಶ್ರುತಿಯಿಂದ, ಎಂದು ಬಾದರಾಯಣಾಚಾರ್ಯರು ತಿಳಿಯುತ್ತಾರೆ. (೨) (ಜ್ಞಾನದಿಂದ ಸರ್ವ ಪುರುಷಾರ್ಥವು ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗುವುದೆಂದರೆ) ಯಾವ ಕಾರಣದಿಂದ ನಿರ್ಮಲಾಂತಃಕರಣವುಳ್ಳ ಅಥವಾ ಪ್ರಾಯಶಃ ಮೋಕ್ಷೇತರ ಪುರುಷಾರ್ಥಗಳಲ್ಲಿ ಅಭಿಲಾಷೆಯಿಂದ ಸಂಬದ್ಧವಾಗದಿರುವ ಅಂತಃಕರಣವುಳ್ಳವನಾದಾಗ್ಯೂ ಬ್ರಹ್ಮಜ್ಞಾನಿಯು ಸ್ವರ್ಗಾದಿರೂಪವಾದ ಯಾವ ಯಾವ ಲೋಕವನ್ನು (ಹೊಂದಲಿಕ್ಕೆ) ಮನಸ್ಸಿನಿಂದ ಇಚ್ಛಿಸುತ್ತಾನೋ ಯಾವ ಯಾವ ಕಾಮ್ಯಗಳನ್ನು ಇಚ್ಛಿಸುತ್ತಾನೋ ಆವಾವ ಲೋಕವನ್ನು ಆವಾವ ಕಾಮ್ಯಗಳನ್ನು ಹೊಂದುತ್ತಾನೋ (ಸೌಭರಿ ಕರ್ದಮಾದಿಗಳಂತೆ) ಹೀಗೆ ಪರಮಾತ್ಮ ಜ್ಞಾನವು ಸರ್ವ ಪುರುಷಾರ್ಥ ಸಾಧನವಾದುದರಿಂದ ಅದಕ್ಕಾಗಿ ಬ್ರಹ್ಮಜ್ಞಾನಿಯನ್ನೇ ಸರ್ವ ಪುರುಷಾರ್ಥಗಳನ್ನು ಇಚ್ಛಿಸತಕ್ಕ ಜನರು ಪೂಜಿಸತಕ್ಕುದು, ಹೀಗೆ ಆಥರ್ವಣಶ್ರುತಿಯಿದ್ದುದರಿಂದ. ॥ ೧ ॥ ೨ ॥

**ಪೀಠಿಕೆ ॥** ಯಾವುದು ಜ್ಞಾನಕ್ಕೆ ಸರ್ವ ಪುರುಷಾರ್ಥ ಸಾಧನತ್ವವು ಉಕ್ತವಾಗಿಯದೋ ಅದನ್ನು ಆಕ್ಷೇಪಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಶೇಷತ್ವಾತ್ಪುರುಷಾರ್ಥವಾದೋ ಯಥಾऽನ್ಯೇಷ್ವಿತಿ ಜೈಮಿನಿಃ ಓಂ ॥ ೨ ॥

**ಸೂತ್ರಾರ್ಥ ॥** ಬ್ರಹ್ಮದರ್ಶನಕ್ಕೆ ಯಂ ಯಂ ಎನ್ನುವ ಶ್ರುತಿಯಲ್ಲಿ ಸ್ವರ್ಗಾದಿ ಪುರುಷಾರ್ಥಸಾಧನತ್ವ ವಚನವು ಸ್ವರ್ಗಾದಿಗಳಿಗೆ ಸಾಧನವಾದ ಜ್ಯೋತಿಷ್ಟೋಮಾದಿಗಳಿಗೆ ಅಂಗವಾದುದರಿಂದಲೇ, ಸಾಕ್ಷಾತ್ತಲ್ಲ. ಧನಾದಿಗಳಲ್ಲಿ ಸ್ವರ್ಗಸಾಧನವಾದ ಕರ್ಮಶೇಷವಾಗಿ ಪ್ರಾಧಾನ್ಯಪ್ರಯೋಗವಿದ್ದಂತೆಯೇ.

**ಭಾಷ್ಯ ॥ (೧) ಅಸ್ಯೈವ ಮೋಕ್ಷಸಾಧನತ್ವಂ ಜ್ಞಾನಸ್ಯ । ಸ್ವರ್ಗಾದಿಷು ತತ್ಸಾಧನಕರ್ಮಶೇಷತ್ವೇನ । (೨) ಸ್ವರ್ಗಂ ಧನಾದ್ದೇಹತೋ ವೈ ಗ್ರಹಾಚ್ಚ ಪ್ರಾಪ್ನುಂತಿ ಧೀರಾ ನ ತ್ವಧೀರಾಃ ಕುತಶ್ಚಿತ್ । ಇತಿ ವದತಿ ಜೈಮಿನಿಃ ॥ ೨ ॥ ॥ ೩ ॥**

**ಭಾಷ್ಯಾರ್ಥ ॥** (೧) ಬ್ರಹ್ಮದರ್ಶನಕ್ಕೆ ಮೋಕ್ಷಸಾಧನತ್ವವೇ ಇದೆ. ಸ್ವರ್ಗಾದಿಗಳಲ್ಲಿ ಸಾಧನತ್ವವಲ್ಲ. ಸ್ವರ್ಗಾದಿಗಳಿಗೆ ಸಾಧನವಾದುದು ಕರ್ಮವೇ. ಆದಾಗ್ಯೂ ಸ್ವರ್ಗಾದಿಗಳಿಗೆ ಸಾಧನವಾದ ಜ್ಯೋತಿಷ್ಟೋಮ ಮೊದಲಾದ ಕರ್ಮಗಳಿಗೆ ಅಂಗವಾದುದರಿಂದ ಜ್ಞಾನಕ್ಕೂ ಸ್ವರ್ಗಾದಿಗಳಲ್ಲಿ ಸಾಧನತ್ವ ವ್ಯವಹಾರವು. (೨) (ಜ್ಞಾನವು ಕರ್ಮಶೇಷವಾದರೆ ಜ್ಞಾನಾದೇವ ಸ್ವರ್ಗಃ ಇತ್ಯಾದಿ ಪ್ರಾಧಾನ್ಯ ನಿರ್ದೇಶವು ಕೂಡಲಾರದು ಎಂದರೆ) ಬಹು ವಿತ್ತವ್ಯಯದಿಂದಲೂ, ಶರೀರಾಯಾಸಾದಿಗಳಿಂದಲೂ ಗೃಹಸ್ಥರಿಂದಲೂ ಗೃಹಸ್ಥಾಶ್ರಮ ಸಾಧ್ಯವಾದ ಯಾಗಾದಿಗಳಿಂದಲೂ ಧೀರರು ಸ್ವರ್ಗವನ್ನು

ಹೊಂದುತ್ತಾರೆ. ಅಧೀರರು ಯಾವುದರಿಂದಲೂ ಹೊಂದಲಾರರು, ಎನ್ನುವ ಶ್ರುತಿಯಲ್ಲಿ ಸ್ವರ್ಗಸಾಧನವಾದ ಕರ್ಮದ ಶೇಷವಾದ ಧನಾದಿಗಳಲ್ಲಿಯೂ ಪ್ರಾಧಾನ್ಯಪ್ರಯೋಗವು ಕಂಡದ್ದರಿಂದ ಆದರಂತೆ ಇಲ್ಲಿಯೂ ಕೂಡುತ್ತದೆ, ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ.

**ವಿಶೇಷಾಂಶ ॥** (೧) ಇಲ್ಲಿ ಜ್ಞಾನಕ್ಕೆ ಕರ್ಮಶೇಷತ್ವವೆಂದರೆ, ಕರ್ಮದಿಂದಲೇ ಸಿದ್ಧವಾಗತಕ್ಕ ಸ್ವರ್ಗಕ್ಕೆ ಆಧಿಕ್ಯಸಂಪಾದಕವಾಗಿ ಫಲೋಪಕಾರಕವಾಗುವುದು. (೨) ಧನಾದಿಗಳಿಗೆ ಕರ್ಮಶೇಷತ್ವ ವೆಂದರೆ, ಯಜ್ಞಾದಿ ಕರ್ಮಗಳನ್ನು ಹುಟ್ಟಿಸುವುದು. ಸ್ವರೂಪತಃ ಉಪಕಾರಕವು ॥ ೨ ॥ ೩. ॥

**ಪೀಠಿಕೆ ॥** ಜ್ಞಾನವೇ ಸರ್ವ ಪುರುಷಾರ್ಥಕ್ಕೂ ಸಾಧನವು ಎಂದು ಏಕೆ ಆಗಲಾರದು, ಶ್ರುತಿಗೆ ಅರ್ಥಾಂತರವನ್ನು ಏಕೆ ಕಲ್ಪಿಸಿದ್ದು ಎಂದರೆ—

## ಸೂತ್ರ ॥ ಓಂ ಆಚಾರದರ್ಶನಾತ್ ಓಂ ॥ ೩ ॥

**ಭಾಷ್ಯ ॥ ಜ್ಞಾನಿನಾಮೇವ ದೇವಾದೀನಾಮಾಚಾರದರ್ಶನಾತ್ ॥ ೩ ॥ ೪ ॥**

**ಭಾಷ್ಯಾರ್ಥ ॥** ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ ಎನ್ನುವ ವಚನದಿಂದ ಪದಪ್ರಾಪ್ತಿಯಿಂದ ಮೊದಲೇ ಜ್ಞಾನಿಗಳೇ ಆದ ಆಮೇಲೆ ದೇವಾದಿಪದವಿಯನ್ನು ಹೊಂದಿರತಕ್ಕ ದೇವಾದಿಗಳಿಗೆ ಯಜ್ಞೇನ ಯಜ್ಞಮಯಜಂತ ಇತ್ಯಾದಿಗಳಲ್ಲಿ ಕರ್ಮಾನುಷ್ಠಾನವು ಕಂಡದ್ದರಿಂದ (ಜ್ಞಾನದಿಂದಲೇ ಸರ್ವ ಪುರುಷಾರ್ಥ ಪ್ರಾಪ್ತಿಯಾಗುವುದಿಲ್ಲ, ಹಾಗಿದ್ದರೆ ಆ ದೇವತೆಗಳಿಗೆ ಕರ್ಮಾನುಷ್ಠಾನವು ವ್ಯರ್ಥವಾಗಬೇಕಾಗುವುದು.) ॥ ೩ ॥ ೪ ॥

**ಪೀಠಿಕೆ ॥** ಜ್ಞಾನ ಕರ್ಮಗಳೆರಡಕ್ಕೂ ಸ್ವರ್ಗಾದಿ ಸಾಧನತ್ವವು ಇರಲಿ. ಜ್ಞಾನಕ್ಕೆ ಕರ್ಮಶೇಷತ್ವವು ಹೇಗೆ ಎಂದರೆ—

## ಸೂತ್ರ ॥ ಓಂ ತಚ್ಛ್ರುತೇಃ ಓಂ ॥ ೪ ॥

**ಭಾಷ್ಯ ॥ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ (ಛಾ.೧.೧.೧೦.) । ಇತಿ ಶೇಷತ್ವಶ್ರುತೇಃ ॥ ೪ ॥ ೫ ॥**

**ಭಾಷ್ಯಾರ್ಥ ॥** ಆಸ್ತಿಕ್ಯ ಬುದ್ಧಿಯಿಂದ ಯುಕ್ತವಾದ ಸ್ವಯೋಗ್ಯಂ ತು ಪರಿಜ್ಞಾನಂ ಯತ್ತಸ್ಯೋಪನಿಷತ್ಸ್ಮೃತಂ ಎನ್ನುವುದರಿಂದ) ಸ್ವಯೋಗ್ಯವಾದ ವಿದ್ಯೆಯಿಂದ ಜ್ಞಾನದಿಂದಲೂ ಯಾವ ಯಜ್ಞಾದಿ ಕರ್ಮವನ್ನು ಮಾಡುತ್ತಾನೋ ಅದೇವೇ ಕರ್ಮವು. ಅಧಿಕ ಫಲಸಾಧನವಾಗುತ್ತದೆ, ಎಂದು ಜ್ಞಾನಕ್ಕೆ ಕರ್ಮಶೇಷತ್ವವನ್ನು ಹೇಳತಕ್ಕ ಶ್ರುತಿಯ ದೆಸೆಯಿಂದ (ಜ್ಞಾನಕ್ಕೆ ಕರ್ಮಶೇಷತ್ವವು ಇಲ್ಲವೆಂದಲ್ಲ) ॥ ೪ ॥ ೫ ॥

**ಪೀಠಿಕೆ ॥** ಹೇಗೆ ಜ್ಞಾನಕ್ಕೆ ಪ್ರಾಧಾನ್ಯವು ಶ್ರುತವಾದಾಗ್ಯೂ ಸ್ವೀಕರಿಸಲ್ಪಡುವುದಿಲ್ಲವೋ ಹೀಗೆಯೇ ಕರ್ಮಕ್ಕೂ ಪ್ರಾಧಾನ್ಯವನ್ನು ಅಂಗೀಕರಿಸದೆ ಇರಬಹುದು, ಮತ್ತೆ ವಿಶೇಷ ಪ್ರಮಾಣವಿಲ್ಲದಿರುವುದ ರಿಂದ ಜ್ಞಾನವಿಶೇಷತ್ವವಾಗಲೀ ಜ್ಞಾನಸಾಮ್ಯವಾಗಲೀ ಬರಬಹುದು ಎಂಬೀ ಶಂಕೆಯನ್ನು ಪರಿಹರಿಸತಕ್ಕ

ಸೂತ್ರವನ್ನು ಹೇಳಿ ಅದಕ್ಕೆ ಅಭಿಮತವಾದ ಶ್ರುತಿಯನ್ನು ಹೇಳುತ್ತಾರೆ—

## ಸೂತ್ರ ॥ ಓಂ ಸಮಾನ್ವಾರಂಭಣಾತ್ ಓಂ ॥ ೫ ॥

ಸೂತ್ರಾರ್ಥ ॥ ಕರ್ಮೈವ ದೇಹಂ ಎನ್ನುವ ಶ್ರುತಿಯಲ್ಲಿ ಕರ್ಮದಿಂದಲೇ ಐಹಿಕ ಆಮುಷ್ಮಿಕ ದೇಹಾದಿಗಳಿಗೆ ಪ್ರಧಾನವಾಗಿ ಉತ್ಪತ್ತಿಯನ್ನು ಹೇಳಿದ್ದರಿಂದ ಕರ್ಮಕ್ಕೇನೇ ಪ್ರಾಧಾನ್ಯವು. ಕರ್ಮಕ್ಕೆ ಜ್ಞಾನವಿಶೇಷತ್ವವಾಗಲೀ ಜ್ಞಾನಸಾಮ್ಯವಾಗಲೀ ಇಲ್ಲ.

**ಭಾಷ್ಯ ॥ ಕರ್ಮೈವ ದೇಹಂ ದೈವಿಕಂ ಮಾನುಷಂ ವಾಽಪ್ಯನ್ವಾರಂಭೇನ್ನಾಪರಸ್ತತ್ರ ಹೇತುಃ। ಭೋಗಾಂಸ್ತದೀಯಾಂಶ್ಚ ಯಥಾವಿಭಾಗಂ ದದಾತಿ ಕರ್ಮೈವ ಶುಭಾಶುಭಂ ಯತ್ ॥ ಇತಿ ಮಾಠರಶ್ರುತೇಶ್ಚ। ಸಂ ಶಬ್ದಃ ಪ್ರಾಧಾನ್ಯಂ ದರ್ಶಯತಿ ॥ ೫ ॥ ೬ ॥**

ಭಾಷ್ಯಾರ್ಥ ॥ ಜ್ಞಾನೋತ್ತರ ಕಾಲದಲ್ಲಿ ಮಾಡಿದ ಶುಭಾಶುಭ ಕರ್ಮವೇ ಮನುಷ್ಯರಿಗೇನೇ ಮಾನುಷ ಶರೀರವನ್ನಾಗಲೀ ದೇವಲೋಕದಲ್ಲಿ ಜ್ಯೋತಿರ್ಮಯ ಶರೀರವನ್ನಾಗಲೀ ಪ್ರತಿಬಂಧ ಪ್ರಯುಕ್ತರಾದ ದೇವತೆಗಳಿಗೂ ದೈವಿಕಶರೀರವನ್ನಾ ಗಲೀ ಮಾನುಷ ಶರೀರವನ್ನಾಗಲೀ ಹುಟ್ಟಿಸುವುದು. ಕರ್ಮಾತಿರಿಕ್ತ ಜ್ಞಾನಾದಿಗಳು ಶರೀರಾದಿಗಳನ್ನು ಹುಟ್ಟಿಸುವ ವಿಷಯದಲ್ಲಿ ಪ್ರಧಾನಕಾರಣವಾಗುವುದಿಲ್ಲ. ಕರ್ಮಶೇಷವಾಗಿಯೇ ಕಾರಣವು ಆಗುತ್ತದೆ. ಆವಾವ ದೇಹದಿಂದ ಭೋಗಿಸಲ್ಪಡತಕ್ಕ ಸುಖದುಃಖಾದಿ ಭೋಗಗಳನ್ನು ದೈವ ಮಾನುಷ ದೇಹಭೇದವನ್ನು ಅನುಸರಿಸಿ ಶುಭಫಲವಾದ ಪುಣ್ಯವನ್ನು ಅಶುಭಫಲವಾದ ಪಾಪವನ್ನು ಪುಣ್ಯಪಾಪಾತ್ಮಕವಾದ ಕರ್ಮವೇ ಕೊಡುತ್ತದೆ ಎಂದು ಕರ್ಮಕ್ಕೇನೇ ಪ್ರಧಾನವಾಗಿ ಸ್ವರ್ಗಾದ್ಯಾರಂಭಕತ್ವ ಪ್ರತಿಪಾದಕ ಮಾಠರ ಶ್ರುತಿಯಿದ್ದುದರಿಂದ (ಕರ್ಮಕ್ಕೆ ಪ್ರಾಧಾನ್ಯವಾಗಿ ಆರಂಭಕತ್ವವೇ.) ಜ್ಞಾನಶೇಷತ್ವವಾಗಲೀ ಜ್ಞಾನಸಾಮ್ಯವಾಗಲೀ ಇಲ್ಲ (ಕರ್ಮಕ್ಕೆ ಪ್ರಾಧಾನ್ಯವು ಸೂತ್ರಿತವಾಗದೆ ಇದ್ದ ಪ್ರಯುಕ್ತ ಶಂಕಾಪರಿಹಾರವು ಹೇಗೆಂದರೆ) ಸೂತ್ರದಲ್ಲಿದ್ದ ಸಂಶಬ್ದವು, ನಾಪರಸ್ತತ್ರ ಹೇತುಃ ಎಂದು ಹೇಳಿದ ಪ್ರಾಧಾನ್ಯವನ್ನು (ಅಂದರೆ ದೇಹಪ್ರಾಪ್ತಿಗೆ ಕರ್ಮದಿಂದ ಇತರವಾದುದು ಪ್ರಧಾನಕಾರಣವಿಲ್ಲ ಅಥವಾ ವಿಷ್ಣುವಿನಿಂದ ಇತರನಾದ ಪುರುಷನು ಸ್ವತಂತ್ರ ಹೇತುವುಇಲ್ಲ. ಅಥವಾ ಸರ್ವೋತ್ತಮನಾದ ಪುರುಷನೇ ಸ್ವತಂತ್ರ ಕಾರಣನು ಎಂದು ಪ್ರಾಧಾನ್ಯವನ್ನು) ತೋರಿಸುತ್ತದೆ. ॥ ೫ ॥ ೬ ॥

ಪೀಠಿಕೆ ॥ ಜ್ಞಾನಕ್ಕೆ ಕರ್ಮಶೇಷತ್ವವಿಲ್ಲ. ಮತ್ತೆ ಜ್ಞಾನವು ತಾನೇ ಪುರುಷಾರ್ಥಕ್ಕೆ ಕಾರಣವು. ಜ್ಞಾನಿಯು ಮಾಡಿದ ಕರ್ಮವು ಮುಕ್ತರ ಕರ್ಮದಂತೆ ಲೀಲಾರೂಪವಾಗಿ ನಿಷ್ಫಲವಾಗಿದೆ ಎಂಬ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ತದ್ವತೋ ವಿಧಾನಾತ್ ಓಂ ॥ ೬ ॥

**ಭಾಷ್ಯ ॥ ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ಸತತಂ ಭವೇತ। ಇತಿ ಕಮಠಶ್ರುತೌ ಜ್ಞಾನವತೋಽಪಿ ವಿಧಾನಾತ್ ॥ ೬ ॥ ೭ ॥**

**ಭಾಷ್ಯಾರ್ಥ ॥** ಜ್ಞಾನಿಯೂ ಕೂಡ ಶ್ರುತಿಗಳಲ್ಲಿ ಹೇಳಲ್ಪಟ್ಟ ಕರ್ಮಗಳನ್ನು ಸರ್ವದಾ ಮಾಡಬೇಕು. ಮತ್ತು ಜ್ಞಾನಿಯು ನಿರಂತರದಲ್ಲಿ ಕಾಮನಾ ಇಲ್ಲದವನೂ ಆಗಬೇಕು, ಎಂದು ಕಮಠ ಶ್ರುತಿಯಲ್ಲಿ ಜ್ಞಾನವುಳ್ಳವನಿಗೂ ಸರ್ವ ಕರ್ಮಗಳನ್ನು ವಿಧಾನ ಮಾಡಿದ್ದರಿಂದ (ವಿಹಿತವಾದ ಆಚಾರಕ್ಕೆ ಲೀಲಾತ್ವವು ಕೂಡದಿರುವುದರಿಂದ ಜ್ಞಾನಿಗಳ ಕರ್ಮವು ನಿಷ್ಫಲವಲ್ಲ, ಆದಕಾರಣ ಜ್ಞಾನಕ್ಕೆ ಕರ್ಮಶೇಷತ್ವವು ಯುಕ್ತವೇ.) ॥ ೬ ॥ ೭ ॥

**ಪೀಠಿಕೆ ॥** ಜ್ಞಾನಿಗೆ ಕರ್ಮವು ವಿಹಿತವಾಗಿದೆ ಎಂದಿಷ್ಟು ಮಾತ್ರವಲ್ಲ, ಮತ್ತೆ ಮಾಡದಿದ್ದರೆ ಪ್ರತ್ಯವಾಯುವೂ ಶ್ರುತವಾಗಿದೆ. ಆದಕಾರಣ ಜ್ಞಾನಿಗಳ ಕರ್ಮವು ಲೀಲಾ ಮಾತ್ರವಲ್ಲ ಎಂದರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಹೇಳಿ ಆ ಶ್ರುತಿಯನ್ನುದಾಹರಿಸುತ್ತಾರೆ—

## ಸೂತ್ರ ॥ ಓಂ ನಿಯಮಾಚ್ಚ ಓಂ ॥ ೭ ॥

**ಭಾಷ್ಯ ॥ ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ । ಏವಂ ತ್ವ ಯಿ ನಾನ್ಯಥೇತೋಽಸಿ ನ ಕರ್ಮ ಲಿಪ್ಯತೇ ನರೇ (ಈ.೨.) ಇತಿ ॥ ೭ ॥ ೮ ॥**

ಭಾಷ್ಯಾರ್ಥ ॥ ಈ ಮಾನುಷಾದಿ ಜನ್ಮದಲ್ಲಿ ನೂರು ವರ್ಷಗಳಲ್ಲಿ ಬದುಕಬೇಕೆಂದು ಇಚ್ಛಿಸಿದರೆ, ಆಪ್ತರವರೇಗೆ ತನಗೆ ಉಚಿತಗಳಾದ ಕರ್ಮಗಳನ್ನು ಮಾಡುವವನಾಗಿಯೇ ಮರಣಪರ್ಯಂತವಾಗಿ ಭಗವದ್ಪೂಜಾತ್ಮಕಗಳಾದ ಅಸಂಕಲ್ಪಿತ ಫಲಗಳುಳ್ಳ ತನಗೆ ಉಚಿತಗಳಾದ ಕರ್ಮಗಳನ್ನು ಸರ್ವದಾ ಮಾಡಲೇಬೇಕು. ಅಥವಾ ಶ್ರೀಹರಿಯಲ್ಲಿ ಅರ್ಪಿತಗಳಾದ ಕರ್ಮಗಳನ್ನು ಮಾಡುವವನಾಗಿಯೇ ನೂರು ವರ್ಷ ಬದುಕ ಬೇಕು. ಹೀಗೆ ಕರ್ಮಗಳನ್ನು ಮಾಡತಕ್ಕ ಮನುಷ್ಯಮಾತ್ರನಾದ ನಿನ್ನಲ್ಲಿಯೂ ಪಾಪವು ಲೇಪಿಸಲ್ಪಡುವುದಿಲ್ಲ (ಏವಂಚ ತನಗೆ ಉಚಿತವಾದ ಅಸಂಗಕರ್ಮದಿಂದ ಭಗವತ್ಪೂಜೆಯನ್ನು ಮಾಡತಕ್ಕ ಅಲ್ಪಾಧಿಕಾರಿಯನ್ನು ಪೂರ್ವೋತ್ತರ ಪಾಪಗಳು ಬಾಧಿಸುವುದಿಲ್ಲ, ಆ ಮೇಲೆ ಜ್ಞಾನಾಧಿಕಾರಿಯು ಆಗುತ್ತಾನೆ.) ಕರ್ಮಕರಣದಿಂದ ಬೇರೆಯಾದರೆ (ಅಂದರೆ ಕರ್ಮ ಮಾಡದಿದ್ದರೆ) ಜ್ಞಾನಿಯಾದ ನಿನ್ನಲ್ಲಿಯೂ ಪಾಪ ಕರ್ಮವು ಲೇಪಿಸಲ್ಪಡುವುದಿಲ್ಲವೆಂದಲ್ಲ (ಅಂದರೆ, ಭಗವತ್ಪೂಜೆಯನ್ನು ಮಾಡದಿದ್ದವನನ್ನು ಪಾಪಗಳು ಸರ್ವಥಾ ಬಾಧಿಸುತ್ತವೆ. ಆದಕಾರಣ ಜ್ಞಾನದಲ್ಲಿ ಇವನು ಅಧಿಕಾರಿಯಾಗುವುದಿಲ್ಲ, ಆದಕಾರಣ ಕರ್ಮಗಳನ್ನು ಮಾಡಲೇಬೇಕು.) ಹೀಗೆ ಈಶಾವಾಸ್ಯ ಶ್ರುತಿಯಲ್ಲಿ ಜ್ಞಾನಿಯಾದವನಿಗೂ ಕರ್ಮವು ವಿಹಿತವಾದ ಪ್ರಯುಕ್ತವೂ ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯ ರೂಪ ನಿಯಮವನ್ನು ಹೇಳಿದ್ದರಿಂದಲೂ ಜ್ಞಾನಿಗಳ ಕರ್ಮವು ಲೀಲಾಮಾತ್ರವಲ್ಲ. ॥ ೭ ॥ ೮ ॥

ಪೀಠಿಕೆ ॥ ಹೀಗೆ ಜೈಮಿನಿ ಮತವನ್ನು ಹೇಳಿ ತನ್ನ ಮತವನ್ನು ಸಾಧಿಸುತ್ತಾರೆ—

## ಸೂತ್ರ ॥ ಓಂ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ಓಂ ॥ ೮ ॥

**ಸೂತ್ರಾರ್ಥ ॥** ವೇದವ್ಯಾಸರಿಗೆ ಜ್ಞಾನದಿಂದಲೇ ಸರ್ವ ಪುರುಷಾರ್ಥವಾಗುತ್ತದೆ. ಎಂದು ಮತವು ಜ್ಞಾನವು ಕರ್ಮಶೇಷವೆನ್ನುವುದು ಅವರ ಮತವಲ್ಲ, ಏಕೆಂದರೆ, ಜ್ಞಾನಾರ್ಜಿತ ಫಲದಲ್ಲಿ

ಕರ್ಮಾಧೀನ ಅತಿಶಯವುಳ್ಳ ಯಥಾ ಯಥಾ ಕರ್ಮ ಕುರುತೇ ಎಂದು ಕರ್ಮಕ್ಕೆ ಜ್ಞಾನಶೇಷತ್ವವನ್ನು ಹೇಳಿದ್ದರಿಂದ ಜ್ಞಾನಫಲದಲ್ಲಿ ಕರ್ಮಾರ್ಜಿತ ಅತಿಶಯವು ರಾಜಸೂಯಾದಿಗಳಿಂದ ಉಪಲಬ್ಧವಾದ ಪ್ರಯುಕ್ತ ರಾಜಸೂಯಾರ್ಜಿತಾನ್ ಲೋಕಾನಶ್ವಮೇಧಾಭಿವರ್ಧಿತಾನ್ । ಪ್ರಾಪ್ನುಹಿ ತ್ವಂ ಮಹಾಭಾಗತಪಸಶ್ಚ ಮಹಾಫಲಂ, ಎಂದು ತತ್ವಪ್ರದೀಪದಲ್ಲಿ ಉಕ್ತವಾಗಿದೆ.

**ಭಾಷ್ಯ ॥ ಜ್ಞಾನಾದೇವ ಸ್ವರ್ಗೋ ಜ್ಞಾನಾದೇವಾಪವರ್ಗೋ ಜ್ಞಾನಾದೇವ (ಸರ್ವೇ) ಕಾಮಾಃ ಸಂಪದ್ಯಂತೇ । ಅಥಾಪಿ ಯಥಾಯಥಾ ಕರ್ಮ ಕರೋತಿ ತಥಾತಥಾಧಿಕೋ ಭವತಿ । ಇತಿ ಕೌಂಠರವ್ಯಶ್ರುತೇಃ । ಯುಧಿಷ್ಠಿರಾದೀನಾಂ ರಾಜಸೂಯಾದಿನಾ ಫಲಾಧಿಕ್ಯದರ್ಶನಾಚ್ಚೇತಿ ಬಾದರಾಯಣ(ಸ್ಯ) ಮತಂ ॥ ೮ ॥ ೯ ॥**

ಭಾಷ್ಯಾರ್ಥ ॥ ಜ್ಞಾನದಿಂದಲೇ ಸ್ವರ್ಗವು, ಜ್ಞಾನದಿಂದಲೇ ಮೋಕ್ಷವು, ಜ್ಞಾನದಿಂದಲೇ ನಿಖಿಲಕಾಮ್ಯಗಳು, ಉಂಟಾಗುತ್ತವೆ. ಆದಾಗ್ಯೂ ಹೇಗೆ ಹೇಗೆ ಯಾವ ಯಾವ ಕರ್ಮವನ್ನು ಪುರುಷನು ಮಾಡುತ್ತಾನೋ ಹಾಗೆ ಹಾಗೆ ಆವಾವ ಕರ್ಮ ದಿಂದ ಜ್ಞಾನ ಫಲದಲ್ಲಿ ಅತಿಶಯಿತನಾಗುತ್ತಾನೆ ಎಂದು ಕೌಂಠರವ್ಯ ಶ್ರುತಿಯಿಂದ ಜ್ಞಾನದಿಂದಲೇ ಸರ್ವ ಪುರುಷಾರ್ಥ ಪ್ರಾಪ್ತಿಯಾಗುತ್ತದೆ. ಸ್ವರ್ಗಿಗಳಾದ ದೇವತೆಗಳ ಮಧ್ಯದಲ್ಲಿ ಧರ್ಮರಾಜಾದಿಗಳಿಗೆ ರಾಜಸೂಯ ಮೊದಲಾದ ಯಜ್ಞಾಗಳಿಂದ ಜ್ಞಾನ ಫಲದಲ್ಲಿ ಅತಿಶಯವು ಕಂಡದ್ದರಿಂದ ಜ್ಞಾನದಿಂದಲೇ ಪುರುಷಾರ್ಥವು ಉಂಟಾಗುವಾಗ ಕರ್ಮಕ್ಕೆ ಅತಿಶಯಾಪಾದಕತ್ವರೂಪವಾದ ಜ್ಞಾನಶೇಷತ್ವವು ಎಂದು ವೇದವ್ಯಾಸರ ಮತವು. ॥ ೮ ॥ ೯ ॥

ಪೀಠಿಕೆ ॥ ಕರ್ಮಕ್ಕೆ ಜ್ಞಾನಫಲದಲ್ಲಿ ಅತಿಶಯಾಪಾದಕವಾಗಿ ಜ್ಞಾನಶೇಷತ್ವವು ಯಾವುದರಿಂದ ಜ್ಞಾನದಲ್ಲಿಯೇ ಅತಿಶಯಾಧಾಯಕವಾಗಿ ಜ್ಞಾನಶೇಷತ್ವವು ಎಂದು ಏಕೆ ಆಗಲಾರದು, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತುಲ್ಯಂ ತು ದರ್ಶನಂ ಓಂ ॥ ೯ ॥

ಸೂತ್ರಾರ್ಥ ॥ ಜ್ಞಾನಿಗಳ ದರ್ಶನವು ಕರ್ಮವನ್ನು ಮಾಡಿದರೂ ಮಾಡದಿದ್ದರೂ ಸಮವೇ. ಪುರುಷಾರ್ಥಸಮರ್ಥವೇ.

**ಭಾಷ್ಯ ॥ (೧) ರಾಜಸೂಯಾದಿಕೃತಾವಕೃತೌ ಚ ಸಮಮೇವ ತೇಷಾಂ (೨) ಜ್ಞಾನಂ । (೨) ವಿಜ್ಞಾತಮೇತತ್ಸರ್ವೇಷಾಂ ಮುನೀನಾಂ ಬ್ರಹ್ಮದರ್ಶನಾತ್ । ಸ್ಯಾದೇವ ಮೋಕ್ಷೋ ನಾನ್ಯಸ್ಮಾದಿತಿ ತತ್ರಾಪಿ ಚಿತ್ರತಾ ॥ (೩) ಸ್ವರ್ಗಾದ ಯಃ ಕರ್ಮಣೈವ ನಾನ್ಯೇನೇತ್ಯಪರೇ ವಿದುಃ । ಜ್ಞಾನೇನಾಧಿಕ್ಯಮಿತ್ಯಾಹುರ್ಜೈಮಿನ್ಯಾದ್ಯಾಸ್ತು ಕೇಚನ ॥ ಅದೃಷ್ಟಮೇವ ಜ್ಞಾನೇನ ದೃಷ್ಟಂ ನೈವೋಪಲಭ್ಯತೇ । ಇತಿ ಕೇಚಿದ್ವಿದಃ ಪ್ರಾಹುರ್ವ್ಯಾಸಶಿಷ್ಯಾ ಇಮೇಽಖಿಲಾಃ॥ ಯಸ್ಮಾದ್ವ್ಯಾಸಮತಂ ಸರ್ವಂ ಸತ್ಯಮೇವ ತತೋಽಖಿಲಂ । (೪) ಯಥಾಽಽಕಾಶಸ್ತ್ವನಂತೋಽಪಿ ವ್ಯಾಮೋ ಹಸ್ತಾವಧಿಸ್ತಥಾ । ಪ್ರಾದೇಶೋಽಪಿ ಹಿ ಸತ್ಯೇನ ತದ್ವತ್ತೇಷಾಂ ಮತಾನಿ ತು ॥ ೧೦ ॥**

**ಭಾಷ್ಯಾರ್ಥ ॥** (೧) ರಾಜಸೂಯ ಅಶ್ವಮೇಧ ಮೊದಲಾದ ಕರ್ಮಗಳನ್ನು ಮಾಡಿದರೂ ಮಾಡದಿದ್ದರೂ ಆ ಯುಧಿಷ್ಠಿರಾದಿಗಳ ವಿಜ್ಞಾನವು ಸಮವೇ. (ವಿಷಮವಲ್ಲ) (ಆದಕಾರಣ ಜ್ಞಾನಿಗಳ ಕರ್ಮಕ್ಕೆ ಜ್ಞಾನದಲ್ಲಿ ಅತಿಶಯಾಧಾಯಕತ್ವವಿಲ್ಲ. ಮತ್ತೆ ಜ್ಞಾನಫಲದಲ್ಲಿಯೇ.) (೨) (ಹಾಗಾದರೆ ಜೈಮಿನಿಮತವು ಭಗವನ್ಮತಕ್ಕೆ ವಿರೋಧಿಯಾದುದರಿಂದ ಅಪ್ರಮಾಣವೆಂದೇ ಆಯಿತು ಎಂದರೆ) ಜೈಮಿನಿ ಮೊದಲಾದ ವ್ಯಾಸ ಶಿಷ್ಯರಿಗೆಲ್ಲಾ ಬ್ರಹ್ಮದರ್ಶನದಿಂದಲೇ ಮೋಕ್ಷವು. ಇತರ ಕರ್ಮದಿಂದ ಮೋಕ್ಷವಾಗುವುದಿಲ್ಲ ಎಂಬುವುದೇ ಸಮ್ಮತವು. ಅವರ ಮತಗಳಲ್ಲಿಯೂ ಮೋಕ್ಷಾಖ್ಯ ಫಲವಿಷಯ ದಲ್ಲಿಯೂ ನಾನಾಪ್ರಕಾರವು (ವೈಲಕ್ಷಣ್ಯವು) ಆದೆ. (೩) (ವೈಚಿತ್ರ್ಯವನ್ನೇ ತೋರಿಸುತ್ತಾರೆ.) ಕೆಲವು ಋಷಿಗಳು ಸ್ವರ್ಗ ಮೊದಲಾದವುಗಳು ಕರ್ಮದಿಂದಲೇ ಆಗುತ್ತವೆ. ಕರ್ಮದಿಂದ ಇತರವಾದ ಕರ್ಮಶೇಷಭೂತವಾದ ಜ್ಞಾನದಿಂದ ಆಗುವುದಲ್ಲ ಎಂದು ಅಂಗೀಕರಿಸಿರುವರು. (ಈ ಮತವು ಅಪರೋಕ್ಷ ಜ್ಞಾನಿಗಳೇ ಆದ ಮನುಷ್ಯರಲ್ಲಿ ಯಾರು ಅಧಮರೋ, ತತ್ಕರ್ತೃಕ ಜ್ಞಾನವಿಷಯವು.) ಕೆಲವು ಜೈಮಿನ್ಯಾದಿ ಋಷಿಗಳಾದರೂ ಕರ್ಮಶೇಷಭೂತವಾದ ಅಪರೋಕ್ಷಜ್ಞಾನದಿಂದ ದೃಷ್ಟ ಅದೃಷ್ಟರೂಪವಾದ ಕರ್ಮಫಲದಲ್ಲಿ ಎಲ್ಲಾ ಅಧಿಕ್ಯವೆನ್ನುತ್ತಾರೆ. (ಈ ಮತವು ಉತ್ತಮ ಮನುಷ್ಯವಿಷಯಕವು) ಕೆಲವರು ಜ್ಞಾನಿಗಳು ಕರ್ಮಶೇಷ ಭೂತವಾದ ಜ್ಞಾನದಿಂದ ಅದೃಷ್ಟವಾದ ಸ್ವರ್ಗ ಮೊದಲಾದವುಗಳೇ ಹೊಂದಲ್ಪಡುತ್ತವೆ. (ಅದೃಷ್ಟ ಫಲದಲ್ಲಿ ಜ್ಞಾನಕ್ಕೆ ಕರ್ಮಶೇಷವಾಗಿ ಉಪಯೋಗವಿದೆ.) ದೃಷ್ಟವಾದ ಪುತ್ರವೃಷ್ಟಿ ಧನ ಮೊದಲಾದವುಗಳೂ ಹೊಂದಲ್ಪಡುವುದಿಲ್ಲ ಎಂದೂ ಕೆಲವರು ಜ್ಞಾನಿಗಳು ಹೇಳುತ್ತಾರೆ. (ಈ ಮತವು ಮಧ್ಯಮ ಮನುಷ್ಯವಿಷಯಕವು) (ಕರ್ಮಫಲಕ್ಕೆ ವೈಚಿತ್ರ್ಯವಿದ್ದರೂ ಮುನಿಮತಗಳಿಗೆ ಅಸತ್ಯತ್ವವನ್ನು ಶಂಕಿಸಕೂಡದು. ಹೇಗೆಂದರೆ) ಯಾವ ಕಾರಣದಿಂದ ಹೀಗೆ ಹೇಳತಕ್ಕವರೆಲ್ಲರೂ ವೇದವ್ಯಾಸರ ಶಿಷ್ಯರೋ, ಆದಕಾರಣ ಹೇಳಿದ್ದೆಲ್ಲವೂ ವೇದವ್ಯಾಸರ ಮತದಲ್ಲಿಯೇ ಅಂತರ್ಭೂತವು. ಆದಕಾರಣ ಅಧಿಕಾರಿಭೇದದಿಂದ ಎಲ್ಲವೂ ಸತ್ಯವೇ. (೪) (ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ.) ಹೇಗೆ ಆಕಾಶವು ವ್ಯಾಪ್ತವಾದಾಗ್ಯೂ ಸತ್ಯವಾದಿ ಇರುತ್ತದೋ, ಹಾಗೆಯೇ ಅದರ ಪ್ರಭೇದಗಳಾದ ವ್ಯಾಮಃಪುರುಷ ಪ್ರಮಾಣವು, ಅಥವಾ ಹಸ್ತದ್ವಯಪರಿಮಿತವು ಆಕಾಶವು, ಹಾಗೆಯೇ ಹಸ್ತಪರಿಮಿತವು ಆಕಾಶವು, ಪ್ರಾದೇಶಪರಿಮಿತವು ಆಕಾಶವು. ಹೀಗೆ ಅನೇಕ ಇವುಗಳ ಪ್ರಭೇದಗಳೂ ಕೂಡ ಸತ್ಯಗಳಾಗಿಯೇ ಇರುತ್ತವೋ, ಹಾಗೆಯೇ ವೇದವ್ಯಾಸರ ಮತವೂ ಆ ಮತದಲ್ಲಿಯೇ ಅಂತರ್ಗತಗಳಾದ ಈ ಜೈಮಿನ್ಯಾದಿಗಳ ಮತಗಳೂ ಕೂಡ ಸಂಪೂರ್ಣವಾಗಿ ಸತ್ಯಗಳೇ ಆಗಿವೆ. ಅಥವಾ ಅಧಿಕಾರಿಭೇದವನ್ನು ಇಟ್ಟುಕೊಂಡು ಸತ್ಯಗಳಾಗಿವೆ. ॥ ೧೦ ॥

ಪೀಠಿಕೆ ॥ ಜ್ಞಾನದಿಂದಲೇ ಸರ್ವ ಪುರುಷಾರ್ಥಗಳು, ಕರ್ಮದಿಂದಲಾದರೂ ಆ ಪುರುಷಾರ್ಥಕ್ಕೆ ಆಧಿಕ್ಯವು ಎಂದು ಭಗವನ್ಮತವು. ಇತರ ಋಷಿಗಳದ್ದು ಹೀಗೆ ಮತವಲ್ಲ. ಆದಕಾರಣ ಭಗವನ್ಮತದಲ್ಲಿ ಇತರರ ಮತಗಳು ಅಂತರ್ಭಾವವನ್ನು ಹೇಗೆ ಹೊಂದುತ್ತವೆ, ಎಂದರೆ—

**ಭಾಷ್ಯ ॥ (೧) ಸ್ವಯಂ ತು ಭಗವಾನ್ ವ್ಯಾಸೋ ವ್ಯಾಪ್ತಜ್ಞಾನಮಹಾಂಶುಮಾನ್। ಅನಂತಾಕಾಶವತ್ಸರ್ವ್ವಂ ನಿಖಿಲಂ ಪುರಷೋತ್ತಮಃ ॥ ಜ್ಞಾನೇನೈವಾಪ್ಯ ತೇ ಸರ್ವಂ**

**ಕರ್ಮಣಾ ತ್ವಧಿಕಂ ಭವೇತ್ । ಇತಿ ಪ್ರಾಹ ಮಹಾಯೋಗೀ ಪುಮರ್ಥಾನಾಂ ವಿನಿರ್ಣಯಂ ॥ ಇತಿ ಭವಿಷ್ಯತ್ಪರ್ವಣಿ ॥ (೨) ಜ್ಞಾನಿನಾಮಪಿ ದೇವಾನಾಂ ವಿಶೇಷಃ ಕರ್ಮಭಿರ್ಭವೇತ್ । ಚೀರ್ಣೇಕೃತೇ ವಾ ಜ್ಞಾನಸ್ಯ ನ ವಿಶೇಷೋಽಸ್ತಿ ಕರ್ಮಣಿ ॥ ಇತಿ ಬ್ರಹ್ಮತರ್ಕೇ ॥ ೯ ॥ ಅಧಿ. ೧ ॥ ೧೧ ॥**

**ಭಾಷ್ಯಾರ್ಥ** ॥ (೧) ಪುರುಷೋತ್ತಮನೂ, ಷಡ್ಗುಣಸಂಪನ್ನನೂ, ಅನಂತಾಕಾಶದಂತೆ ವ್ಯಾಪ್ತವಾದ ಜ್ಞಾನವೆಂಬ ಮಹಾಕಿರಣಗಳುಳ್ಳವನೂ, ಮಹಾಮುನಿಯೂ ಆದ ವ್ಯಾಸರು ನಾನಾಧಿಕಾರ ವುಳ್ಳ, **ಸ್ವರ್ಗಾದಯಃ ಕರ್ಮಣೈವ** ಇತ್ಯಾದ್ಯುಕ್ತವಾದ ಮುನಿಗಳ ಮತವನ್ನು ತನ್ನ ಮತವನ್ನಾಗಿ ನೋಡಿದರೂ ಅಪರೋಕ್ಷಜ್ಞಾನದಿಂದಲೇ ಸ್ವರ್ಗಾದಿಗಳೆಲ್ಲವೂ ಹೊಂದುಲ್ಪಡುತ್ತವೆ. ಜ್ಞಾನೋತ್ತರ ಕಾಲದಲ್ಲಿ ಮಾಡಿದ ಕರ್ಮದಿಂದಲಾದರೂ ಫಲಾಧಿಕ್ಯವುಳ್ಳದ್ದೂ ಆಗುವುದು. ಹೀಗೆ ದೇವತಾ ರೂಪ ಅಧಿಕಾರಿವಿಶೇಷವನ್ನು ವಿವಕ್ಷಾಮಾಡಿಕೊಂಡು ಸ್ವರ್ಗಾದಿ ಪುರುಷಾರ್ಥಸಾಧನ ವಿಷಯಕ ನಿರ್ಣಯವನ್ನು ಹುಟ್ಟಿಸತಕ್ಕ ತನ್ನ ಮತವನ್ನು ಪ್ರತ್ಯೇಕವಾಗಿ ಹೇಳಿರುವರು. ಹೀಗೆ ಭವಿಷ್ಯತ್ಪರ್ವದಲ್ಲಿ ಮತಗಳಿಗೆ ಪ್ರಾಮಾಣ್ಯವು ಉಕ್ತವಾಗಿದೆ. (೨) ಹೀಗೆ ಸ್ಮೃತಿಯಿಂದ ಮತಗಳಿಗೆ ಪ್ರಾಮಾಣ್ಯವನ್ನು ಹೇಳಿದರೂ ಪರಸ್ಪರ ವಿರುದ್ಧವಾದ ಪ್ರಯುಕ್ತ ಅದು ಹೇಗೆ ಕೂಡುವುದು. ಎಂದರೆ— ಭಗವನ್ಮತವು ದೇವತಾದಿವಿಷಯಕವು ಜೈಮಿನ್ಯಾದಿಮತವು ಮನುಷ್ಯವಿಷಯಕವು. ಆದಕಾರಣ ವಿರೋಧವಿಲ್ಲ ಎನ್ನುವ ಅಭಿಪ್ರಾಯದಿಂದ ಸ್ಮೃತಿಯನ್ನು ಹೇಳುತ್ತಾರೆ.) (ತತ್ವ ಪ್ರದೀಪದಲ್ಲಿ ಆದರೂ ರಾಜಸೂಯಾದಿಗಳಿಂದ ಫಲಾಧಿಕ್ಯವಿದೆ ಎಂದೂ ಸಮವೆಂದೂ ಉಕ್ತವಾಗಿದೆ. ಆ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಯದ್ಯಪಿ ದೇವತೆಗಳು ಜ್ಞಾನಿಗಳು, ಆದಾಗ್ಯೂ ಜ್ಞಾನಿಗಳಾದ ದೇವತೆಗಳಿಗೆ (ಜ್ಞಾನದಿಂದ ಸರ್ವ ಫಲವು ಸಿದ್ಧಿಸುವುದಾದರೂ) ಕರ್ಮಗಳಿಂದ ಜ್ಞಾನಫಲದಲ್ಲಿಯೇ ಆಧಿಕ್ಯವು ಸಿದ್ಧಿಸುವುದು. (ಜ್ಞಾನದಲ್ಲಿ ಅಲ್ಲ) (ಏಕೆಂದರೆ) ಕರ್ಮವು ಅನುಷ್ಠಿತವಾದರೂ ಅನುಷ್ಠಿತವಾಗದೆ ಇದ್ದರೂ ಜ್ಞಾನದಲ್ಲಿ ಅತಿಶಯವು (ಅಂದರೆ ಪುರುಷಾರ್ಥಸಾಧನ ಸಾಮರ್ಥ್ಯ ಅಸಾಮರ್ಥ್ಯರೂಪವಾದುದು) ಇಲ್ಲ. ಹೀಗೆ ಬ್ರಹ್ಮತರ್ಕದಲ್ಲಿ (ವ್ಯಾಸರ ಮತಕ್ಕೆ ದೇವತಾವಿಷಯತ್ವ ವನ್ನು ಹೇಳಿದ್ದರಿಂದ ವಿರೋಧವಿಲ್ಲ) (ತತ್ವಪ್ರದೀಪದಲ್ಲಿ ಫಲಾಧಿಕ್ಯವನ್ನು ಜ್ಞಾನಗಳಿಗೆ ವಿಶೇಷವಾಗಿ ಹೇಳಿರುತ್ತಾರೆ.)

**ವಿಶೇಷಾಂಶ** ॥ ಏವಂಚ ಅಪರೋಕ್ಷ ಜ್ಞಾನಿಗಳಾದ ಮನುಷ್ಯರು ಉತ್ತಮ ಮಧ್ಯಮ ಅಧಮ ಭೇದದಿಂದ ಮೂರು ವಿಧರು. ಅದರಲ್ಲಿ **ಸ್ವರ್ಗಾದಯಃ ಕರ್ಮಣೈವ** ಎನ್ನುವ ಆದ್ಯಮತವು ಅಧಮ ವಿಷಯಕವು, ದೃಷ್ಟ ಅದೃಷ್ಟ ಉಭಯ ಕರ್ಮಫಲದಲ್ಲಿಯೂ ಜ್ಞಾನಕ್ಕೆ ಉಪಯೋಗವಿಲ್ಲವೆಂದು ಅಂಗೀಕರಿಸಿರುವರು. (೧) ಜ್ಞಾನೇನಾಧಿಕ್ಯಂ ಎನ್ನುವುದು ಉತ್ತಮವಿಷಯಕವು. ಉಭಯತ್ರಾಪಿ ಜ್ಞಾನಕ್ಕೆ ಉಪಯೋಗವಿದೆ ಎಂದು ಅಂಗೀಕೃತವಾಗಿದೆ. (೩) ಅದೃಷ್ಟಮೇವ ಜ್ಞಾನೇನ ಎನ್ನುವುದು ಮಧ್ಯಮ ವಿಷಯಕವು. ಅದೃಷ್ಟಮಾತ್ರದಲ್ಲಿ ಜ್ಞಾನಕ್ಕೆ ಉಪಯೋಗವನ್ನು ಅಂಗೀಕರಿಸಿರುವರು. ॥ ೯ ॥ ೧೧ ॥

## ಅಧಿಕರಣ ಸಾರಾಂಶ

ಜ್ಞಾನವು ಮೋಕ್ಷಮಾತ್ರಕ್ಕೆ ಹೇತುವೋ, ಮೋಕ್ಷೇತ್ತರವಾದ ಸ್ವರ್ಗಾದಿ ಪುರುಷಾರ್ಥಕ್ಕೆ ಹೇತುವೋ ಎಂದು ಸಂದೇಹವು. ಜ್ಞಾನವು ಮೋಕ್ಷೇತರ ಪುರುಷಾರ್ಥಕ್ಕೂ ಹೇತುವಲ್ಲ. ಮುಮುಕ್ಷುವಿಗೆ ಮೋಕ್ಷೇತರ ಪುರುಷಾರ್ಥದಲ್ಲಿ ಅಲ್ಲಿ ಇಚ್ಛೆಯಿಲ್ಲ. ಸೌಭರ್ಯಾದಿಗಳಂತೆ ಅಲ್ಲಿ ಇಚ್ಛೆಯು ಇಲ್ಲದಿದ್ದರೂ ಅದಕ್ಕೆ ಹೇತು ವೆನ್ನುವ ವಿಷಯದಲ್ಲಿ ಪ್ರಮಾಣವಿಲ್ಲ. ಜ್ಞಾನವು ಮೋಕ್ಷೇತರ ಪುರುಷಾರ್ಥಕ್ಕೆ ಹೇತುವೆಂದು ಬೋಧಿಸತಕ್ಕ ಶ್ರುತ್ಯಾದಿಗಳಿಗೆ , ಕರ್ಮವು ಮೋಕ್ಷೇತರ ಪುರುಷಾರ್ಥಕ್ಕೆ ಹೇತುವು ಎಂದು ಪ್ರತಿಪಾದಿಸತಕ್ಕ ಶ್ರುತ್ಯಾದಿಗಳಿಂದ ವಿರೋಧವು. **ಕರ್ಮೈವ ದೇಹಂ** ಇತ್ಯಾದಿ ಶ್ರುತಿಯಲ್ಲಿ ಕರ್ಮವೇ ಮೋಕ್ಷೇತರ ಫಲಕ್ಕೆ ಹೇತುವು ಎಂದೂ **ಯದೇವ ವಿದ್ಯಯಾ** ಎನ್ನುವ ಶ್ರುತಿಯಲ್ಲಿ ಜ್ಞಾನ್ಯನುಷ್ಠಿತವಾದ ಕರ್ಮ ಜನ್ಯಫಲದಲ್ಲಿ ಅತಿಶಯಾಧಾಯಕವಾದುದರಿಂದ ಜ್ಞಾನದಲ್ಲಿ ಕರ್ಮಶೇಷತ್ವವೂ ಶ್ರುತವಾಗಿದೆ. ಹಾಗೆಯೇ **ನೈವಂ ದೇವಪದಂ** ಎನ್ನುವ ಸ್ಮೃತಿಯಿಂದ ಜ್ಞಾನಿಗಳಾದ ದೇವತೆಗಳಿಗೂ **ಯಜ್ಞೇನ ಯಜ್ಞಮಯಜಂತ** ಎಂದು ಕರ್ಮಾನುಷ್ಠಾನವು ಕಂಡದ್ದರಿಂದ ಜ್ಞಾನವೇ ಸರ್ವ ಪುರುಷಾರ್ಥಕ್ಕೆ ಹೇತುವು ಎಂದಾದರೂ ದೇವತೆಗಳ ಕರ್ಮಾನುಷ್ಠಾನವು ಅನುಪಪನ್ನವಾಗುವುದರಿಂದ ಕರ್ಮಕ್ಕೇನೇ ಹೇತುತ್ವವು ಅನುಮಿತವಾಗುತ್ತದೆ. ಹೀಗೆಯೇ ಜೈಮಿನ್ಯಾದಿಗಳೂ ಅಂಗೀಕರಿಸಿರುವರು. ಜ್ಞಾನಿಗಳ ಆಚಾರವು ಮುಕ್ತರ ಆಚಾರದಂತೆ ಲೀಲಾರೂಪವೆಂದು ಹೇಳಕೂಡದು. **ಜ್ಞಾನೀ ಚ ಕರ್ಮಾಣಿ** ಎನ್ನುವ ಶ್ರುತಿಯಲ್ಲಿ ಜ್ಞಾನಿಗೂ ಕರ್ಮವು ವಿಹಿತವಾಗಿದೆ, ವಿಹಿತವಾದುದು ಲೀಲಾರೂಪವಾಗಲಾರದು. ಮತ್ತು **ಕುರ್ವನ್ನೇವೇಹ** ಎನ್ನುವ ಶ್ರುತಿಯಲ್ಲಿ ಜ್ಞಾನಿಯಾದವನಿಗೂ ಕರ್ಮ ಮಾಡದಿದ್ದರೆ ಪ್ರತ್ಯವಾಯವು ಶ್ರುತವಾದುದರಿಂದ ಜ್ಞಾನಿಗಳ ಆಚಾರಕ್ಕೆ ಲೀಲಾತ್ವವು ಕೂಡಲಾರದು. ಆದಕಾರಣ ಶ್ರುತ್ಯಾಚಾರವಿರುದ್ಧವಾದುದರಿಂದಲೂ ಜೈಮಿನಿಮತ ವಿರುದ್ಧವಾದುದರಿಂದಲೂ **ಯಂ ಯಂ ಲೋಕಂ ಮನಸಾ** ಇತ್ಯಾದಿ ಜ್ಞಾನಕ್ಕೆ ಸರ್ವ ಪುರುಷಾರ್ಥ ಹೇತುತ್ವ ಪ್ರತಿಪಾದಕವಾದ ವಾಕ್ಯವು, ಸ್ವರ್ಗಹೇತು ಕರ್ಮಶೇಷವಾದ ಧನಾದಿಗಳಲ್ಲಿಯೂ **ಸ್ವರ್ಗಂ ಧನಾತ್** ಇತ್ಯಾದಿಗಳಲ್ಲಿ ಪ್ರಾಧಾನ್ಯೋಕ್ತಿಯಿದ್ದಂತೆ ಕರ್ಮಶೇಷಭೂತವಾದ ಜ್ಞಾನಕ್ಕೆ ಪ್ರಾಧಾನ್ಯಪ್ರತಿಪಾದಕವೆಂದೇ ಇಟ್ಟುಕೊಳ್ಳಬೇಕು. ಸಾಕ್ಷಾತ್ ಜ್ಞಾನಕ್ಕೆ ಸರ್ವಪುರುಷಾರ್ಥಸಾಧನ ಹೇತುತ್ವಪರವಲ್ಲ. ಕರ್ಮಕ್ಕೆ ಸರ್ವ ಪುರುಷಾರ್ಥ ಹೇತುತ್ವ ಪರವಾದ ಶ್ರುತ್ಯಾದಿಗಳು ಸರ್ವ ಪುರುಷಾರ್ಥ ಹೇತುವಾದ ಜ್ಞಾನಶೇಷ ಪರವಲ್ಲ. ನಿರವಕಾಶವಾದ ಕಲ್ಪಕವಿಲ್ಲ. ಕರ್ಮವನ್ನು ಮಾಡಿದರೂ ಮಾಡದಿದ್ದರೂ ಜ್ಞಾನವು ಮೋಕ್ಷಾರ್ಜನೇಗೆ ಶಕ್ತವೇ ಆದಕಾರಣ ಜ್ಞಾನದಲ್ಲಿ ಅತಿಶಯಕರತ್ವವಿಲ್ಲದಿರುವುದರಿಂದ ಜ್ಞಾನಶೇಷತ್ವವು ಕೂಡಲಾರದು, ಎಂದರೆ ಕರ್ಮಗಳಿಗೆ ಜ್ಞಾನದಲ್ಲಿ ಅತಿಶಯಾಧಾಯಕತ್ವವು ಇದ್ದುದರಿಂದ ಜ್ಞಾನಶೇಷತ್ವವು ಇಲ್ಲವಾದರೂ **ಜ್ಞಾನಾದೇವ ಸ್ವರ್ಗಃ** ಎನ್ನುವ ಶ್ರುತಿಯಲ್ಲಿ ಜ್ಞಾನದಿಂದಲೇ ಸ್ವರ್ಗಾದಿ ಫಲಪ್ರಾಪ್ತಿಯು ಆಗುವುದರಿಂದ ಕರ್ಮಕ್ಕೆ ಜ್ಞಾನಜನ್ಯ ಫಲದಲ್ಲಿ ಅತಿಶಯ ಸಂಪಾದಕತ್ವವಿದ್ದುದರಿಂದ ಜ್ಞಾನಶೇಷತ್ವವೂ ಶ್ರುತವಾಗಿದೆ. **ರಾಜಸೂಯಾರ್ಜಿತಾನ್ ಲೋಕಾನ್** ಎನ್ನುವ ಭಾರತವಾಕ್ಯದಿಂದ ಯುಧಿಷ್ಠಿರಾದಿಗಳಿಗೆ ರಾಜಸೂಯ ಯಾಗಾದಿಗಳಿಂದ ಫಲಾಧಿಕ್ಯವು ಕಂಡದೆ. ಜ್ಞಾನವೇ ಸರ್ವ ಪುರುಷಾರ್ಥಕ್ಕೂ ಹೇತುವು. ಕರ್ಮವು ಜ್ಞಾನಜನ್ಯ ಫಲದಲ್ಲಿ

ಅತಿಶಯ ಸಂಪಾದಕವಾದುದರಿಂದ ಜ್ಞಾನಶೇಷವೆಂದು ಅವಗತವಾಗುತ್ತದೆಂದು ಬಾದರಾಯಣರ ಮತವು, ಕರ್ಮವು ಪರಮಪುರುಷಾರ್ಥಕ್ಕೆ ಹೇತುವು ಎಂದು ಪ್ರತಿಪಾದಿಸತಕ್ಕ ವಾಕ್ಯಾದಿಗಳನ್ನು ಪರಮ ಪುರುಷಾರ್ಥಕ್ಕೆ ಹೇತುವಾದ ಜ್ಞಾನಾಂಶಪರಗಳನ್ನಾಗಿ ಹೇಳಬೇಕಾದುದರಿಂದ ಅದರಿಂದಲೂ ವಿರೋಧವಿಲ್ಲ. **ಯಂ ಯಂ ಲೋಕಂ** ಇತ್ಯಾದಿ ವಾಕ್ಯಬಲದಿಂದಲೂ ಬಾದರಾಯಣರಿಗೆ ಸಮ್ಮತವಾದ್ದರಿಂದಲೂ ಜ್ಞಾನವು ಮೋಕ್ಷೇತರ ಸರ್ವ ಪುರುಷಾರ್ಥಕ್ಕೂ ಹೇತುವು ಆಗಿಯೇ ಆಗುತ್ತದೆ,. ದೇವತೆಗಳು ಮನುಷ್ಯರು ಎಂದು ಅಧಿಕಾರಿ ಭೇದವನ್ನು ಅನುಸರಿಸಿ ವ್ಯಾಸ ಜೈಮಿನಿಗಳ ಮತವು ಹೊರಟದ್ದರಿಂದ ಆ ಮತಗಳಿಗೆ ವಿರೋಧವಿಲ್ಲ. ॥ ಅಧಿ. ೧ ॥

**ಪುರುಷಾರ್ಥಾಧಿಕರಣವು ಸಮಾಪ್ತವಾಯಿತು.**

## ೨ ಅಸಾರ್ವತ್ರಿಕಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸರ್ವರಿಗೆ ಜ್ಞಾನದಲ್ಲಿ ಅಧಿಕಾರವಿಲ್ಲವೆಂದು ಸಮರ್ಥಿಸುತ್ತಾರೆ—

**ಭಾಷ್ಯ ॥ ಸರ್ವೇಷಾಂ ಪುರುಷಾರ್ಥಾಪೇಕ್ಷಿತ್ವಾಜ್ಜ್ಞಾನಾಧಿಕಾರಿತೇತ್ಯತ ಆಹ ॥ ೧ ॥**

**ಭಾಷ್ಯಾರ್ಥ ॥** ಎಲ್ಲಾ ಜನರಿಗೆ ನಿರ್ದುಃಖಾನಂದಾತ್ಮಕ ಮೋಕ್ಷರೂಪವಾದ ಜ್ಞಾನ ಫಲವಾದ ಪುರುಷಾರ್ಥದಲ್ಲಿ ಅರ್ಥಿತ್ವವಿದ್ದ ಪ್ರಯುಕ್ತವೂ (ಅಂದರೆ— ನಿರ್ದುಃಖ ಸುಖವನ್ನು ಹೊಂದುವೆನೆಂದು ಅಪೇಕ್ಷೆಯಿದ್ದುದರಿಂದ) ಸರ್ವರಿಗೂ ಜ್ಞಾನಸಾಧನವಾದ ಶ್ರವಣಾದಿಗಳಲ್ಲಿ ಸಾಮರ್ಥ್ಯವಿದ್ದುದರಿಂದಲೂ ಅದಕ್ಕೆ ಉಪಯುಕ್ತವಾದ ವಿದ್ವತ್ತು ವಿದ್ದುದರಿಂದಲೂ ಜ್ಞಾನದಲ್ಲಿ ಅಧಿಕಾರವು ಬರುವುದು. (ತಥಾಚ ಸರ್ವರಿಗೆ ಜ್ಞಾನದಲ್ಲಿ ಅಧಿಕಾರವಿದ್ದ ಪ್ರಯುಕ್ತ ಕ್ರಮದಿಂದ ಜ್ಞಾನವು ಅತಿಶಯವುಳ್ಳದ್ದಲ್ಲ) ಹೀಗೆ ಶಂಕಾ ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.

**ಸೂತ್ರ ॥ ಓಂ ಅಸಾರ್ವತ್ರಿಕೀ ಓಂ ॥ ೧೦ ॥**

**ಭಾಷ್ಯ ॥ ನ ಸರ್ವೇಷಾಮಧಿಕಾರಃ ॥ ೧೦ ॥ ೨ ॥**

**ಭಾಷ್ಯಾರ್ಥ ॥** ಜ್ಞಾನಾಧಿಕಾರಿತ್ವವು ಸರ್ವ ಜನರಲ್ಲಿ ಇರತಕ್ಕುದಲ್ಲ. ಅಂದರೆ— ಸರ್ವ ಜನರಿಗೆ ಜ್ಞಾನದಲ್ಲಿ ಅಧಿಕಾರವಿಲ್ಲ. ॥ ೧೦ ॥ ೨ ॥

**ಪೀಠಿಕೆ ॥** ಅರ್ಥಿತ್ವಾದಿಗಳು ಎಲ್ಲರಿಗೂ ಇದ್ದಪ್ರಯುಕ್ತ ಸರ್ವರಿಗೆ ಅಧಿಕಾರವು ಹೇಗೆ ಇಲ್ಲ ಎಂದರೆ—

**ಸೂತ್ರ ॥ ಓಂ ವಿಭಾಗಃ ಶತವತ್ ಓಂ ॥ ೧೧ ॥**

**ಸೂತ್ರಾರ್ಥ ॥** ಒಂಭತ್ತು ಕೋಟಿ ದೇವತೆಗಳಿಗೆ ದೇವತ್ವ ಸಮಾನವಾದರೂ ಪರ ಬ್ರಹ್ಮ

ಅಪರಬ್ರಹ್ಮ ಇಬ್ಬರಿಂದ ಅಧಿಕವಾದ ನೂರು ಮಂದಿ ದೇವತೆಗಳಿಗೇನೇ ಸೋಮಪಾನಾಧಿಕಾರವು, ಇತರರಿಗೆ ಇಲ್ಲ ಎನ್ನುವ ವಿಭಾಗವು ಹೇಗೋ, ಹಾಗೆಯೇ ಅರ್ಥಿತ್ವಾದಿಗಳು ಸಮಗಳಾದಾಗ್ಯೂ ಕೆಲವರಿಗೇನೇ ಜ್ಞಾನಾಧಿಕಾರವು ಕೆಲವರಿಗೆ ಇಲ್ಲ ಎನ್ನುವ ವಿಭಾಗವು ಕೂಡುವುದು (ಅರ್ಥಿತ್ವಾದಿ ಮಾತ್ರವು ಅಪ್ರಯೋಜಕವು.)

**ಭಾಷ್ಯ ॥ ನವಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು । ಸೋಮಾಧಿಕಾರೋ ವೇದೋಕ್ತೋ ಬ್ರಹ್ಮಣೇ ದ್ವೇ ಶತಾಧಿಕೇ ॥ ಯಥಾ ತಥೈವಾಸಂಖ್ಯೇಯಾಃ ಪ್ರಜಾಸ್ತಾಸು ಕಿಯಾಞ್ಜನಃ । ಜ್ಞಾನಾಧಿಕಾರೀ ಸಂಪ್ರೋಕ್ತೋ ವಿಷ್ಣುಪಾದೈಕಸಂಶ್ರಯಃ ॥ ಇತಿ ವಚನಾತ್ ಸುಖಾಪೇಕ್ಷಾಸಾಮ್ಯೇऽಪಿ ವಿಭಾಗ ಇಷ್ಯತೇऽಧಿಕಾರಾರ್ಥಂ ॥ ೧೧ ॥ ೩ ॥**

ಭಾಷ್ಯಾರ್ಥ ॥ ದೇವತೆಗಳಲ್ಲಿ ಒಂಭತ್ತು ಕೋಟಿ ಇದ್ದಾರೆ. (ಅಂದರೆ ಒಂಭತ್ತು ಕೋಟಿ ಸಂಖ್ಯಾತರಾದ ಪ್ರಸಿದ್ಧರಾದ ದೇವತೆಗಳ ಗಣಗಳು ಇರುತ್ತವೆ.) ಒಂಭತ್ತು ಕೋಟಿ ದೇವತೆಗಳ ಮಧ್ಯದಲ್ಲಿ ಶತ (೧೦೦) ಸಂಖ್ಯಾಕ ದೇವಸಮುದಾಯಕ್ಕೇನೇ ವೇದೋಕ್ತವಾದ ಸೋಮಪಾನಾಧಿಕಾರವು. ನೂರರಿಂದ ಹೆಚ್ಚಾದ ಪರ ಅಪರಬ್ರಹ್ಮ ಶಬ್ದವಾಚ್ಯರಾದ ವಿಷ್ಣು ಚತುರ್ಮುಖರೂ ಕೂಡ ಸೋಮಾಧಿಕಾರವುಳ್ಳವರು. ಹೇಗೆ ದೇವತ್ವವು ಸಮಾನವಾದಾಗ್ಯೂ ಒಂಭತ್ತು ಕೋಟಿ ದೇವತೆಗಳಲ್ಲಿ ವಿಷ್ಣು ಚತುರ್ಮುಖ ಇಬ್ಬರಿಂದ ಕೂಡಿದ ನೂರು ದೇವತೆಗಳಿಗೆ ಅಂದರೆ ನೂರ ಎರಡು ಮಂದಿ ದೇವತೆಗಳಿಗೇನೇ ಸೋಮಾಧಿಕಾರವೋ ಹಾಗೆಯೇ ಅಸಂಖ್ಯೇಯರಾದ ಪ್ರಜೆಗಳು ಇದ್ದರೂ ಅವರಲ್ಲಿ ಕೆಲವರು ಮಾತ್ರ ಜ್ಞಾನಾಧಿಕಾರವುಳ್ಳವರೆಂದು ಹೇಳಲ್ಪಡುತ್ತಾರೆ. ಅವರು ಯಾರು? ಶ್ರೀಹರಿಯ ಪಾದಾರವಿಂದವನ್ನು ಆಶ್ರಯಿಸಿಕೊಂಡಿರತಕ್ಕವನೇ ಜ್ಞಾನಾಧಿಕಾರಿಯು, ಎನ್ನುವ ವಚನದಿಂದ ಸರ್ವರಿಗೂ ನಿರ್ದುಃಖಾನಂದರೂಪವಾದ ಪುರುಷಾರ್ಥಾಪೇಕ್ಷೆಯು ಸಮವಾದಾಗ್ಯೂ ಜ್ಞಾನಾಧಿಕಾರಕ್ಕಾಗಿ ಸೋಮಪಾನಾರ್ಹ ನೂರು ದೇವತೆಗಳಂತೆ ಪುರುಷರಲ್ಲಿ ವಿಭಾಗವು (ವ್ಯವಸ್ಥೆಯು) ಅಂಗೀಕರಿಸತಕ್ಕುದೇ.

**ವಿಶೇಷಾಂಶ ॥** ೧೧ ಆದಿತ್ಯರು, ೮ ವಸುಗಳು, ೧೧ ರುದ್ರರು, ೧೩ ವಿಶ್ವೇದೇವತೆಗಳು, ೫೦ ಮರುತ್ತುಗಳು, ೧ ಗುರುವು, ೧ ಅಶ್ವಿನೀ ದೇವತೆಗಳು, ೧ ದ್ಯಾವಾಪೃಥಿವಿಗಳು, ೩ ಪಿತೃಗಳು, ೧ ಋಭುಸಹಸ್ರವು, ಹೀಗೆ ಸೋಮಪಾನಾಧಿಕಾರವುಳ್ಳವರು ೧೦೦ ಮಂದಿ ದೇವತೆಗಳು. **ಪ್ರಧಾನವಾಯುರ್ಮರುತೋऽಶ್ವಿನೌ ಚ ವಸ್ವರ್ಕರುದ್ರಾಃ ಪಿತರೋ ಗುರುಶ್ಚ । ದ್ಯಾವಾಪೃಥಿವ್ಯಾವೃಭವೋऽಪಿ ವಿಶ್ವೇದೇವಾಃ ಶತಂ ಸೋಮಸವಾಧಿಕಾರಿಣಃ ॥** ಹೀಗೆ ತತ್ವಪ್ರದೀಪದಲ್ಲಿ ಹೇಳಲ್ಪಟ್ಟಿದೆ. ॥ ೧೧ ॥ ೩ ॥

**ಪೀಠಿಕೆ ॥** ಅರ್ಥಿತ್ವಾದಿಗಳು, ಸಮಾನಗಳಾದಾಗ್ಯೂ ಸರ್ವರಿಗೆ ಅಧಿಕಾರವಿಲ್ಲವೆಂದಾದರೆ ಯಾರಿಗೆ ಅಧಿಕಾರವಿರುವುದು. ಯಾರಿಗೂ ಇಲ್ಲ ಎಂದಾಕ್ಷೇಪಿಸುತ್ತಾರೆ—

**ಭಾಷ್ಯ ॥ ಕಸ್ಯಾಧಿಕಾರಃ ॥ ೪ ॥**

ಭಾಷ್ಯಾರ್ಥ ॥ ಅರ್ಥಿತ್ವಾದಿಗಳಿಂದ ವ್ಯತಿರಿಕ್ತವಾದ ಯಾವ ವಿಶೇಷಣದಿಂದೊಡಗೂಡಿದವನಿಗೆ ಅಧಿಕಾರವಿರುವುದು. ಅಂತಹ ವಿಶೇಷಣವು ಯಾವುದಿದೆ. ಯಾವುದೂ ಇಲ್ಲ. ಪರಿಹಾರಕ್ಕಾಗಿ ಸೂತ್ರವನ್ನು ಹೇಳುತ್ತಾರೆ ॥ ೪ ॥

## ಸೂತ್ರ ॥ ಓಂ ಅಧ್ಯಯನಮಾತ್ರವತಃ ಓಂ ॥ ೧೨ ॥

ಸೂತ್ರಾರ್ಥ ॥ ಯಥಾಶಕ್ತಿ ಸಾಂಗ ಸಫಲ ನಿಖಿಲ ವೇದಾಧ್ಯಯನವುಳ್ಳವನಿಗೇನೇ ಅಧಿಕಾರವು.

**ಭಾಷ್ಯ ॥ (೧) ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ। ಗುರು ಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ ॥ ನ ಚ ವರ್ಣಾವರಸ್ಯಾಪಿ ತಸ್ಮಾದಧ್ಯಯನಾನ್ವಿತ । ಬ್ರಹ್ಮಜ್ಞಾನೇ ತು ವೇದೋಕ್ತ ಹ್ಯ(ಽಪ್ಯ)ಧಿಕಾರೀ ಸತಾಂ ಮತಃ ॥ ಇತಿ ಹಿ ಬ್ರಹ್ಮತರ್ಕೇ ॥ (೨) ಪಠೇದ್ವೇದಾನಥಾರ್ಥಾನಧೀಯೀತಾಥ ವಿಚಾರ್ಯಾ ಬ್ರಹ್ಮ ವಿಂದೇತ್ । ಇತಿ ಕೌಷಾರವಶ್ರುತಿಃ ॥ ೧೨ ॥ ಅಧಿ. ೨ ॥ ೫ ॥**

ಭಾಷ್ಯಾರ್ಥ ॥ (೧) ವಿಷ್ಣು ಭಕ್ತಿಯಿಲ್ಲದವನಿಗೂ ಅವೈಷ್ಣವನಿಗೂ ವೇದದಲ್ಲಿಯೂ ವೇದೋಕ್ತ ಕರ್ಮದಲ್ಲಿಯೂ ಅಧಿಕಾರವಿಲ್ಲ. ಗುರುಭಕ್ತಿಯಿಲ್ಲದವನಿಗೂ ಶಮದಮಾದಿಗಳು ಇಲ್ಲದವನಿಗೂ ಶೂದ್ರನಿಗೂ ಅಧಿಕಾರವಿಲ್ಲ. ಆದಕಾರಣ (ಅಂದರೆ ಯಾವ ಕಾರಣದಿಂದ ಅಧ್ಯಯನದಲ್ಲಿ ವಿಷ್ಣುಭಕ್ತ್ಯಾದಿಗಳುಳ್ಳವರಿಗೇನೇ ಅಧಿಕಾರವೋ ಇತರರಿಗೆ ಅಧಿಕಾರವಿಲ್ಲವೋ ಆದಕಾರಣ) ಅಧ್ಯಯನದಿಂದ ಯುಕ್ತನಾದವನು ವೇದೋಕ್ತವಾದ ಬ್ರಹ್ಮಜ್ಞಾನದಲ್ಲಿ ಅಧಿಕಾರಿಯೆಂದು ಸಜ್ಜನರಿಗೆ ಸಮ್ಮತವು. (ತಥಾಚ ಸರ್ವರಿಗೆ ಅಧ್ಯಯನದಲ್ಲಿ ಅಧಿಕಾರವಿಲ್ಲದಿರುವುದರಿಂದ ಜ್ಞಾನದಲ್ಲಿ ಅಧಿಕಾರ ಪ್ರಾಪ್ತಿಯಾಗುವುದಿಲ್ಲ ಎಂದು ಬ್ರಹ್ಮತರ್ಕದಲ್ಲಿ(ಸೂತ್ರಕಾರರು ಹೇಳಿದ್ದನ್ನು ಹೇಳಿರುತ್ತಾರೆ.) (೨) ( ಈ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.) ವೇದಗಳನ್ನು ಗುರೂಚ್ಚಾರಣವನ್ನು ಅನುಸರಿಸಿ ಉಚ್ಚರಿಸಬೇಕು. ಅನಂತರದಲ್ಲಿ ವೇದಾರ್ಥಗಳನ್ನೇ ಗುರುಮುಖದಿಂದ ತಿಳಿಯಬೇಕು. ಹೀಗೆ ಶ್ರವಣೋಪಾಸನಾನಂತರದಲ್ಲಿ ಪರಬ್ರಹ್ಮನನ್ನು ತಿಳಿದು ಧ್ಯಾನಮಾಡಿಯೂ ಆ ಮೇಲೆ ಅಪರೋಕ್ಷವಾಗಿ ತಿಳಿಯಬೇಕು. ಆ ಮೇಲೆ ಹೊಂದಬೇಕು. ಹೀಗೆ ಕೌಷಾರವ ಶ್ರುತಿಯು ಭಕ್ತಿ ಪೂರ್ವಕ ಅಧ್ಯಯನವುಳ್ಳವರಿಗೇನೇ ವೈದಿಕ ಬ್ರಹ್ಮ ವಿದ್ಯಾಧಿಕಾರವು ಎನ್ನುವ ಅರ್ಥವನ್ನು ಹೇಳುತ್ತದೆ. ॥ ೧೨ ॥ ೫ ॥

## ಅಧಿಕರಣ ಸಾರಾಂಶ

ಸರ್ವ ಪುರುಷಾರ್ಥಕ್ಕೆ ಹೇತುವಾಗಿ ಪೂರ್ವದಲ್ಲಿ ಪ್ರಕೃತವಾದ ಜ್ಞಾನದಲ್ಲಿ ಸರ್ವರಿಗೆ ಅಧಿಕಾರವು ಇದೆಯೋ ಇಲ್ಲವೋ. ಆದಕ್ಕಾಗಿ ಪುರುಷವಿಭಾಗವು ಅಂಗೀಕಾರಾನರ್ಹವೋ ಅಂಗೀಕಾರಾರ್ಹವೋ. ಆದಕ್ಕಾಗಿ ಅರ್ಥಿತ್ವಾದಿಗಳೇ ಅಧಿಕಾರದಲ್ಲಿ ಪ್ರಯೋಜಕವೋ ಇತರವೂ ಪ್ರಯೋಜಕವು ಆದೆಯೋ ಎಂದು ಸಂದೇಹವು. **ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ** ಎನ್ನುವ ನ್ಯಾಯ ಸಿದ್ಧವಾದ ಫಲಾಪೇಕ್ಷೆಯಿಂದ ಅನ್ಯವಾದ ಅಧಿಕಾರ ಪ್ರಯೋಜಕವು ಇಲ್ಲದಿರುವುದರಿಂದ

ನಿರ್ದುಃಖ ಸುಖರೂಪ ಮೋಕ್ಷದಲ್ಲಿ ಅರ್ಥಿತ್ವವು ಶ್ರುತವಾಗಿದೆ. ಸಾಮರ್ಥ್ಯವೂ ಅದಕ್ಕೆ ಉಪಯುಕ್ತವಾದ ವಿದ್ವತ್ವವೂ ಸರ್ವರಿಗೂ ಇದ್ದುದರಿಂದ ಅರ್ಥತ್ವರೂಪ ಪ್ರಯೋಜಕವು ಸಮಾನ ವಾದಾಗ್ಯೂ ಕೆಲವರಿಗೇನೇ ಅಧಿಕಾರವು ಇತರರಿಗೆ ಇಲ್ಲ ಎನ್ನುವ ಪುರುಷವಿಭಾಗವನ್ನು ಅಂಗೀಕರಿಸುವುದು ನಿರ್ಬೀಜವಾದುದರಿಂದ ಅಯುಕ್ತವಾದ ಪ್ರಯುಕ್ತ ಕೆಲವರಿಗೆ ಅಧಿಕಾರವು ಇಲ್ಲವಾದರೆ ಇತರರಿಗೂ ಇಲ್ಲವೆಂದಾಗಬೇಕಾಗುವುದರಿಂದ ಜ್ಞಾನದಲ್ಲಿ ಯಾರಿಗೂ ಅಧಿಕಾರವು ಇಲ್ಲವೆಂದು ಆಗಬೇಕಾಗುವುದರಿಂದ ಸರ್ವರಿಗೂ ಜ್ಞಾನದಲ್ಲಿ ಅಧಿಕಾರವಿದೆ. ಎಂದರೆ— **ಪಠೇದ್ವೇದಾನ್, ಅವೈಷ್ಣವಸ್ಯ** ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಯಥಾಶಕ್ತಿ ಸಾಂಗಕೃತ್ಸ್ನಾಧ್ಯಯನವತ್ವ ರೂಪವಾದ ಪ್ರಯೋಜಕಾಂತರವೂ ಸಿದ್ಧವಾಗಿದೆ. ಅರ್ಥಿತ್ವಾದಿ ಮಾತ್ರವು ಪ್ರಯೋಜಕವಲ್ಲ. **ನವಕೋಟ್ಯೋ ಹಿ ದೇವಾನಾಂ** ಎನ್ನುವ ಸ್ಮೃತ್ಯುಕ್ತ ಪ್ರಕಾರವಾಗಿ ಸರ್ವರಿಗೆ ದೇವತ್ವವು ಸಮವಾದಾಗ್ಯೂ ೧೦೨ ದೇವತೆಗಳಿಗೇನೇ ಸೋಮಾಧಿಕಾರವು ಇತರರಿಗೆ ಇಲ್ಲ ಎನ್ನುವ ವಿಭಾಗದಂತೆ ಅರ್ಥಿತ್ವಾದಿಗಳು ಸಮಗಳಾದಾಗ್ಯೂ ಪೂರ್ವೋಕ್ತ ಅಧ್ಯಯನರೂಪ ಪ್ರಯೋಜಕವಿದ್ದವರಿಗೇನೇ ಅಧಿಕಾರವು ಇತರರಿಗೆ ಇಲ್ಲ ಎನ್ನುವ ಪುರುಷ ವಿಭಾಗವು ಯುಕ್ತವಾಗಿದೆ. ಆದಕಾರಣ ಸರ್ವರಿಗೆ ಜ್ಞಾನಾಧಿಕಾರವಿಲ್ಲ. ॥ ಅಧಿ. ೨ ॥

**ಅಸಾರ್ವತ್ರಾಧಿಕರಣವು ಸಮಾಪ್ತವಾಯಿತು.**

## ೩. ಅವಿಶೇಷಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಜ್ಞಾನಾಧಿಕಾರದಲ್ಲಿ ತಾರತಮ್ಯವನ್ನು ಸಮರ್ಥಿಸುತ್ತಾರೆ ತಾರತಮ್ಯಕಲ್ಪಕವಾದ ಪ್ರಮಾಣವು ಇಲ್ಲದಿರುವುದರಿಂದ ಸರ್ವರಿಗೂ ಅವಿಶೇಷವಾಗಿ ಜ್ಞಾನಾಧಿ ಕಾರವು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

### ಸೂತ್ರ ॥ ಓಂ ನಾವಿಶೇಷಾತ್ ಓಂ ॥ ೧೩ ॥

**ಸೂತ್ರಾರ್ಥ ॥** ದೇವಾದಿಗಳಿಗೆ ಜ್ಞಾನಾಧಿಕಾರವು ಏಕರೂಪವಲ್ಲ. ಹಾಗಿದ್ದರೆ ಜ್ಞಾನಕ್ಕೂ ವಿಶೇಷವಿಲ್ಲವೆಂದಾಗಬೇಕಾಗುವುದು. ಸಾಮ್ಯವು ಬರಬೇಕಾಗುವುದು. ಮತ್ತೆ ತಾರತಮ್ಯದಿಂದಲೇ

**ಭಾಷ್ಯ ॥ (೧) ನ ಸಾಮಾನ್ಯೇನಾಧಿಕಾರೋ ದೇವಾದೀನಾಂ। (೨) ಅಥ ಪುಮರ್ಥಸಾಧನಾನ್ಯರ್ಥೋ ಧರ್ಮೋ ಜ್ಞಾನಮಿತ್ಯುತ್ತರೋತ್ತರಂ । ತತ್ರಾಧಿಕಾರಿ ಣೋ ಮನುಷ್ಯಾ ಋಷಯೋ ದೇವಾ ಇತ್ಯುತ್ತರೋತ್ತರಂ । ಇತಿ (೩) ಕೌಂಡಿ ನ್ಯಶ್ರುತಿಃ ॥ ೧೩ ॥ ಅಧಿ. ೩ ॥ ೧ ॥**

**ಭಾಷ್ಯಾರ್ಥ ॥** (೧) ದೇವತೆಗಳಿಗೂ ಋಷಿಗಂಧರ್ವರಿಗೂ ಮನುಷ್ಯರಿಗೂ ಸಾಮ್ಯದಿಂದ ಜ್ಞಾನಾಧಿಕಾರವಲ್ಲ. ಹಾಗೆಯೇ ಅವರಿಗೆ ಪ್ರತ್ಯೇಕವಾಗಿಯೂ ಸಾಮ್ಯದಿಂದ ಅಧಿಕಾರವಲ್ಲ. (ಹಾಗೆ

ಇದ್ದರೆ ಜ್ಞಾನದಲ್ಲಿಯೂ ಸಾಮ್ಯವು ಬರಬೇಕಾಗುವುದು. ಅಧಿಕಾರ ತಾರತಮ್ಯವನ್ನು ಹೊರತು ಜ್ಞಾನ ತಾರತಮ್ಯಕ್ಕೆ ಕಾರಣವು ಬೇರೆಯಿಲ್ಲ. ಅವರವರ ಶಕ್ತಿತಾರತಮ್ಯಕ್ಕೂ ಅಧಿಕಾರ ತಾರತಮ್ಯವು ಕಾರಣವು) (೨) (ಜ್ಞಾನಾಧಿಕಾರ ತಾರತಮ್ಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.) ವಿತ್ತವು ಸುಕೃತವು ಬ್ರಹ್ಮದರ್ಶನವು ಇವು ಮೂರು ಮೊದಲು ಮೊದಲಿನದ್ದು ಉತ್ತರೋತ್ತರವನ್ನು ಅಪೇಕ್ಷಿಸಿ ಪುರುಷಾರ್ಥಸಾಧನಗಳು. ಅದರಲ್ಲಿ ಅರ್ಥವು ಧರ್ಮಜ್ಞಾನದ್ವಾರಾ, ಮೋಕ್ಷಸಾಧನವು. ಧರ್ಮವು ಜ್ಞಾನದ್ವಾರಾ, ಜ್ಞಾನವು ಸಾಕ್ಷಾತ್ತಾಗಿ ಮೋಕ್ಷಸಾಧನವು, ಆ ಅರ್ಥಾದಿಗಳಲ್ಲಿ ಮನುಷ್ಯೋತ್ತಮರು ಋಷಿಗಳು ದೇವತೆಗಳು ಇವರು ಉತ್ತರೋತ್ತರವಾಗಿ ಪ್ರತ್ಯೇಕ ಪ್ರತ್ಯೇಕ ಅತಿಶಯಿತ ಅಧಿಕಾರಿಗಳು. ಹೀಗೆ ಕೌಂಡಿನ್ಯ ಶ್ರುತಿಯು. ॥ ೧೩ ॥ ೧ ॥

## ಅಧಿಕರಣ ಸಾರಾಂಶ

ಜ್ಞಾನಾಧಿಕಾರವು ದೇವಾದಿಗಳಿಗೆಲ್ಲಾ ಏಕಪ್ರಕಾರವೋ ನಾನಾಪ್ರಕಾರವೋ ಎಂದು ಸಂದೇಹವು. ಅಧಿಕಾರಿಗಳಿಗೆ ಅಧಿಕಾರಕ್ಕೆ ನಾನಾತ್ವವಿಲ್ಲದೆ ಹೆಚ್ಚು ಕಡಿಮೆ ಶಕ್ತಿಯಿಂದಲೇ ಜ್ಞಾನತಾರತಮ್ಯವು ಕೂಡುತ್ತದೆ ಎನ್ನುವುದಕ್ಕೆ ಕಲ್ಪಕವು ಇಲ್ಲದಿರುವುದರಿಂದ ಅಧಿಕಾರವು ನಾನಾರೂಪವಲ್ಲ ಎಂದರೆ— ಅಧಿಕಾರಿಗಳ ಅಧಿಕಾರಕ್ಕೆ ತಾರತಮ್ಯವಿಲ್ಲವಾದರೆ ಶಕ್ತಿತಾರತಮ್ಯವೂ ಕೂಡಲಾರದು. ಆದಕಾರಣ ಉಪಜೀವ್ಯವಾದ ಅಧಿಕಾರತಾರತಮ್ಯದಿಂದಲೇ ಜ್ಞಾನತಾರತಮ್ಯವು ನಿರ್ವಾಹವಾಗುವದು. ಏವಂಚ ಧರ್ಮಾದಿಗಳು ಪುರುಷಾರ್ಥಸಾಧನಗಳೂ ಅಧಿಕಾರವು ನಾನಾಪ್ರಕಾರವೂ ದೇವೋತ್ತಮರಿಗೇನೇ ಸಂಪೂರ್ಣಾಧಿಕಾರವು ಇತರರಿಗೆ ಇಲ್ಲ ಎಂದು ಜ್ಞಾನಾಧಿ ಕಾರದಲ್ಲಿ ತಾರತಮ್ಯವಿದೆ. ॥ ಅಧಿ. ೩ ॥

### ಅವಿಶೇಷಾಧಿಕರಣವು ಸಮಾಪ್ತವಾಯಿತು

# ೪ ಸ್ತುತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಜ್ಞಾನಿಗಳಿಗೆ ಸದಸತ್ಪ್ರವೃತ್ತಿಯಲ್ಲಿ ವಿಶೇಷವನ್ನು ಹೇಳುತ್ತಾರೆ—

**ಭಾಷ್ಯ ॥ ಅಥ ಮುನಿರಮೌನಂ ಚ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವ** (ಬೃ.೫.೫.೧.) **। ಇತ ಜ್ಞಾನಿನೋ ಯಥೇಷ್ಟ ಚರಣಂ ವಿಧೀಯತೇ ಇತಿ । ಅತ ಆಹ ॥ ೧ ॥**

**ಭಾಷ್ಯಾರ್ಥ ॥** (ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್ ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯಾಥ ಮುನಿಃ । ಇತ್ಯಾದಿ ಅಪರೋಕ್ಷ ಜ್ಞಾನದಿಂದ ಮೋಕ್ಷವಾಗುವುದರಿಂದ ಬ್ರಹ್ಮನನ್ನು ಹೊಂದಲಿಕ್ಕೆ ಯೋಗ್ಯನಾದವನು ಆಗಮಜನ್ಯವಾದ ಶ್ರವಣರೂಪ ಜ್ಞಾನವನ್ನು ಸಂಪಾದಿಸಬೇಕು. ಅಂತಹ ಜ್ಞಾನವನ್ನು ಅತ್ಯಂತವಾಗಿ ಹೊಂದಿ ಯುಕ್ತಿರೂಪಬಲಸಹಿತವಾದ

ಯುಕ್ತಿಜನ್ಯವಾದ ಮನನರೂಪ ಜ್ಞಾನದಿಂದ ಯುಕ್ತಿ ಜನ್ಯ ಜ್ಞಾನವನ್ನು ಹೊಂದಬೇಕು.) ಯುಕ್ತಿ ಆಗಮಗಳಿಂದ ಉಂಟಾದ ಎರಡು ಜ್ಞಾನಗಳನ್ನು ಹೊಂದಿದ ಮೇಲೆ, ಧ್ಯಾನಿಯು ಆಗಬೇಕು. ಅಪರೋಕ್ಷಜ್ಞಾನಿಯು ಆಗಬೇಕು. ಮೌನಂ=ಉಪಾಸನಾಜನಿತ ಜ್ಞಾನವನ್ನು, ಅಮೌನಂ ಚ = ಅಪರೋಕ್ಷ ಜ್ಞಾನವನ್ನು ಅತ್ಯಂತವಾಗಿ ಹೊಂದಿ ಜೀವನ್ಮುಕ್ತನಾಗುತ್ತಾನೆ. ಆ ಜೀವನ್ಮುಕ್ತನು ಯಾವ ಪ್ರಕಾರದಿಂದ ಇದ್ದರೂ ಅಂದರೆ ಸತ್ಕರ್ಮದಿಂದ ಇದ್ದರೂ, ಅಸತ್ಕರ್ಮದಿಂದ ಇದ್ದರೂ, ಯಥೇಷ್ಟವಾಗಿ ಆಚರಿಸುತ್ತಾ ಇದ್ದರೂ ಜ್ಞಾನಫಲವಾದ ಮೋಕ್ಷವನ್ನು ಹೊಂದಿದವನೇ ಆಗುತ್ತಾನೆ. ಅಷ್ಟರಿಂದ ಅವನಿಗೆ ಮೋಕ್ಷಕ್ಕೆ ಹಾನಿಯಿಲ್ಲ. ಹೀಗೆ ಬೃಹದಾರಣ್ಯಕ ಶ್ರುತಿಯಲ್ಲಿ ಜ್ಞಾನಿಯಾದವನಿಗೆ ಯಥೇಷ್ಟಾಚಾರವು ವಿಹಿತವಾಗಿದೆ. (ಜ್ಞಾನಿಯಾದವನಿಗೆ ಸದಸತ್ಪ್ರವೃತ್ತಿಗಳಲ್ಲಿ ವಿಶೇಷವಿಲ್ಲ. ಅಲ್ಲದೆ ಸದಸತ್ಪ್ರವೃತ್ತಿಗಳಲ್ಲಿ ವಿಶೇಷವಿಲ್ಲವೆನ್ನುವದು ಕೇನ ಸ್ಯಾದ್ಯೇನ ಸ್ಯಾತ್ ಇತ್ಯಾದಿ ಶ್ರುತಿಸಿದ್ಧವೂ ಆಗಿದೆ.) ಹೀಗೆ ಶಂಕೆಯು ಬಂದರೆ ಉತ್ತರವನ್ನು ಕೊಡುತ್ತಾರೆ.

## ಸೂತ್ರ ॥ ಓಂ ಸ್ತುತಯೇಽನುಮತಿರ್ವಾ ಓಂ ॥ ೧೪ ॥

**ಸೂತ್ರಾರ್ಥ** ॥ ಸ ಬ್ರಾಹ್ಮಣಃ ಕೇನ ಸ್ಯಾತ್ ಇತ್ಯಾದಿ ಶ್ರುತಿಯಲ್ಲಿ ಜ್ಞಾನಿಯಾದವನಿಗೆ ಯಥೇಷ್ಟಾಚರಣವು, ವಿಧಿಯಲ್ಲ, ಮತ್ತೆ ಜ್ಞಾನಿಸ್ತುತ್ಯರ್ಥವಾಗಿ, (ಅಂದರೆ, ಇಚ್ಛಾನುಸಾರ ಕರ್ಮ ಮಾಡಿದರೂ ಜ್ಞಾನಿಯು ಮುಕ್ತನೇ ಆಗುತ್ತಾನೆ. ಎಂದು ಜ್ಞಾನಿಯ ಸಾಮರ್ಥ್ಯವನ್ನು ಪ್ರಕಟಿಸುವುದ ಕ್ಕಾಗಿಯೇ ಹೇಳಿದ್ದು) ಅಥವಾ ಜ್ಞಾನಿಯಿಂದ ಮಾಡಲ್ಪಡತಕ್ಕ ಎಲ್ಲಾ ಕರ್ಮಗಳಿಗೂ ಅಭ್ಯನು ಜ್ಞಾನಮಾತ್ರವು.

## ಭಾಷ್ಯ ॥ (೧) ನ ವಿಧಿರ್ಜ್ಞಾನಿ(ನಃ) ಸ್ತುತಯೇಽನುಮತಿಮಾತ್ರಂ ವಾ । (೨) ಯುಜ್ಯತೇ ಚ ॥ ೧೪ ॥ ೨ ॥

**ಭಾಷ್ಯಾರ್ಥ** ॥ (೧) ಹೇಗೆ ಒಬ್ಬ ಭೃತ್ಯನನ್ನು ಕುರಿತು ಆತನ ಸಾಮರ್ಥ್ಯವನ್ನು ಪ್ರಕಟೀಕರಿಸುವುದಕ್ಕಾಗಿ ಯಥೇಷ್ಟವಾಗಿ ಮಾಡು ಎಂದು ಹೇಳುತ್ತದೆ. ಅದು ವಿಧಿಯಲ್ಲವೋ, ಹಾಗೆಯೇ ಇದೂ ಕೂಡ ಜ್ಞಾನಿಯನ್ನು ಹೊಗಳುವುದಕ್ಕಾಗಿಯೇ (ಅಂದರೆ, ಜ್ಞಾನಿಯು ಸತ್ಕರ್ಮದಿಂದ ಇದ್ದರೂ ಅಸತ್ಕರ್ಮಾ ಚರಣದಿಂದ ಇದ್ದರೂ ಮೋಕ್ಷವುಳ್ಳವನೇ ಆಗುತ್ತಾನೆ ಎಂದು ಜ್ಞಾನಿಯ ಗುಣವನ್ನು ವರ್ಣಿಸುವುದಕ್ಕಾಗಿಯೇ ಹೇಳುವುದು ವಿಧಿಯಲ್ಲ) ಅಥವಾ ಇದು ಅನುಜ್ಞಾಮಾತ್ರವು. ಅಂದರೆ, ಜ್ಞಾನಿಯು ಅನುಷ್ಠೇಯಗಳಾದ ಸತ್ಕರ್ಮಗಳ ಮಧ್ಯದಲ್ಲಿ ಯಾವ ರೀತಿಯಿಂದ ಇದ್ದರೂ ಅಂದರೆ, ಸ್ವೇಚ್ಛೆಯಿಂದ ಕೆಲವು ಸತ್ಕರ್ಮಗಳನ್ನು ಮಾಡುವುದು, ಕೆಲವನ್ನು ಮಾಡದಿರುವುದು ಹೀಗೆ ಇದ್ದರೂ ಆವಾಗಲೂ ಮಹಾಫಲವುಳ್ಳವನೇ ಆಗುತ್ತಾನೆ. ಅಂತಹವನಿಗೆ ನಿಯಮವಿಲ್ಲದಿರುವುದರಿಂದ ಅವಶ್ಯವಾಗಿ ಕಾರ್ಯವು ಇರುವುದಿಲ್ಲ. ಈ ಪ್ರಕಾರವಾಗಿ ಅನುಷ್ಠೇಯ ಗಳಾದ ಸತ್ಕರ್ಮಗಳಿಗೆ ಯಥೇಷ್ಟವಾಗಿ ಕರ್ಮಗಳನ್ನು ಮಾಡಬಹುದೆಂದು ಅಭ್ಯನುಜ್ಞಾಮಾತ್ರವು. ಸರ್ವಥಾ ವಿಧಿಯಲ್ಲ. (ಆದಕಾರಣ ಜ್ಞಾನಿಯಾದವನಿಗೆ ಸದಸತ್ಪ್ರವೃತ್ತಿ ಗಳಲ್ಲಿ ವಿಶೇಷವು ಇದ್ದೇ ಇದೆ. (೨) (ಸದಸತ್ಪ್ರವೃತ್ತಿಗಳಿಂದ ಜ್ಞಾನಿಯಾದವನಿಗೆ ವಿಶೇಷವು ಕೊಡುವುದಿಲ್ಲ. ಹಾಗೆ ಇದ್ದರೆ ಅಸತ್ಪ್ರವೃತ್ತಿಯಿಂದ

ಕುಂಠಿತವಾದ ಜ್ಞಾನಕ್ಕೆ ಮೋಕ್ಷಸಾಧನತ್ವವು ಇಲ್ಲವೆಂದಾಗಬೇಕಾಗುವುದು. ಸತ್ಪ್ರವೃತ್ತಿಯಿಂದ ಯುಕ್ತವಾದುದಕ್ಕೇನೇ ಮೋಕ್ಷಸಾಧನತ್ವವೂ ಬರಬೇಕಾಗುವುದು ಎಂದರೆ) ಸದಸತ್ಪ್ರವೃತ್ತಿಗಳಿಂದ ವಿಶೇಷವು ಯುಕ್ತವೇ ಆಗುತ್ತದೆ. ॥ ೧೪ ॥ ೨ ॥

ಪೀಠಿಕೆ ॥ ಸದಸತ್ಪ್ರವೃತ್ತಿಗಳಿಂದ ಕುಂಠಿತ ಶಕ್ತಿಯುಳ್ಳ ಜ್ಞಾನಕ್ಕೆ ಮೋಕ್ಷಸಾಧನತ್ವವು ಇಲ್ಲವೆಂದಾಗ ಬೇಕಾಗುವುದರಿಂದ ಹೇಗೆ ಕೂಡುತ್ತದೆ ಎಂಬೀ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಕಾಮಕಾರೇಣ ಚೈಕೇ ಓಂ ॥ ೧೫ ॥

ಸೂತ್ರಾರ್ಥ ॥ ಕೆಲವು ಶಾಖಿಗಳು ಯಥೇಷ್ಟಾಚಾರದಿಂದಲೂ ಜ್ಞಾನಿಗಳಿಗೆ ಮೋಕ್ಷವನ್ನು ಕಾಮಚಾರಾಃ ಕಾಮಭಕ್ಷ್ಯಾಃ ಎನ್ನುವ ಶ್ರುತಿಯಲ್ಲಿ ಹೇಳುತ್ತಾರೆ. (ಆದಕಾರಣ ಬಾಧಕವಿಲ್ಲದಿರುವ ಪ್ರಯುಕ್ತ ಜ್ಞಾನಿಗಳಿಗೆ ಸದಸತ್ಪ್ರವೃತ್ತಿಯಲ್ಲಿ ವಿಶೇಷವದೆ.)

**ಭಾಷ್ಯ ॥ ಕಾಮಚಾರಾಃ ಕಾಮಭಕ್ಷ್ಯಾಃ ಕಾಮವಾದಾಃ ಕಾಮೇನೈವೇಮಂ ದೇಹಮುತ್ಸೃಜ್ಯಾಥ ಪರಾತ್ಪರಮೀಯುರನಾರಂಭಣಂ (ಸಾಮಶಾಖಾ) । ಇತಿ ಚೈಕೇ ಪಠಂತಿ ॥ ೧೫ ॥ ೩ ॥**

ಭಾಷ್ಯಾರ್ಥ ॥ ಜ್ಞಾನಿಗಳು ಯಥೇಷ್ಟವಾಗಿ ಸಂಚಾರ ಮಾಡುವವರಾಗಿ ಇಚ್ಛಾನುಸಾರವಾಗಿ ಭಕ್ಷಿಸುವವರಾಗಿ ಇಚ್ಛಾನುಸಾರವಾಗಿ ಹೇಳುವವರಾಗಿ ಇಚ್ಛೆಯಿಂದಲೇ ಈ ಕರ್ಮನಿಮಿತ್ತವಾದ ಶರೀರವನ್ನು ಬಿಟ್ಟು ಪ್ರಾರಬ್ಧ ಕರ್ಮಕ್ಷಯವಾದ ಮೇಲೆ, ಸರ್ವೋತ್ತಮನಾದ ಅನಾದಿಭೂತನಾದ ಪರಬ್ರಹ್ಮನನ್ನು ಹೊಂದುವರು. ಹೀಗೆ ಯಥೇಷ್ಟಾಚಾರದಿಂದಲೂ (ಜ್ಞಾನಿಗಳಿಗೆ ಮೋಕ್ಷವನ್ನು) ಹೇಳುತ್ತಾರೆ. (ಆದಕಾರಣ ಅಸತ್ಪ್ರವೃತ್ತಿಯಿಂದ ಜ್ಞಾನಕ್ಕೆ ಮೋಕ್ಷಸಾಧನತ್ವವು ಇಲ್ಲವೆಂದಲ್ಲ. ಮತ್ತೆ ಅಸತ್ಪ್ರವೃತ್ತಿಯಿಂದ ಆಗತಕ್ಕ ವಿಶೇಷವು ಮೌಕ್ತಾನಂದಹ್ರಾಸಾದಿರೂಪವು. ॥ ೧೫ ॥ ೩ ॥

ಪೀಠಿಕೆ ॥ ಇದೇ ಅರ್ಥವನ್ನು ಸಾಧಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಉಪಮರ್ದಂ ಚ ಓಂ ॥ ೧೬ ॥

ಸೂತ್ರಾರ್ಥ ॥ ಕಿಂಚಿದ್ಭುಕ್ತವಾದುದಕ್ಕೆ ಜ್ಞಾನದಿಂದ ಫಲಹ್ರಾಸವನ್ನು ಕೆಲವರು ಓಮಿತ್ಯುಚ್ಚಾರ್ಯಾಂತರಿಮಂ ಇತ್ಯಾದಿನಾ ಪಠನಮಾಡುತ್ತಾರೆ.

**ಭಾಷ್ಯ ॥ ಓಮಿತ್ಯುಚ್ಚಾರ್ಯಾಂತರಿಮಮಾತ್ಮಾನಮಭಿಪಶ್ಯೋಪಮೃದ್ಯ ಪುಣ್ಯಂಚ ಪಾಪಂ ಚ ಕಾಮಮಾಚರಂತೋ ಬ್ರಹ್ಮಾನುವ್ರಜಂತಿ । ಇತಿ ಚ ತುರ ಶ್ರುತೌ ॥ ೧೬ ॥ ೪ ॥**

ಭಾಷ್ಯಾರ್ಥ ॥ ಮುಕ್ತಿಯೋಗ್ಯರು ಓಂ ಎಂದು ಉಚ್ಚಾರಣ ಮಾಡಿ ಶ್ರವಣಾದಿಗಳನ್ನು ಮಾಡಿ, ಪ್ರತಿಮಾದಿಗಳ ಒಳಗೆ ಈ ಪರಮಾತ್ಮನನ್ನು ನೋಡಿ ಪ್ರಾರಬ್ಧವಾದ ಅನಿಷ್ಟವಾದ ಪುಣ್ಯವನ್ನು ಪಾಪವನ್ನು ಕಿಂಚಿತ್ ಭುಕ್ತವಾದುದನ್ನು ಜ್ಞಾನದಿಂದ ಉಪಮರ್ದಿಸಿ (ಅಂದರೆ, ಫಲಹ್ರಾಸದಿಂದ ವಿನಾಶಪಡಿಸಿ)

ಯಥೇಷ್ಟವಾಗಿ ಸದಸತ್ಕರ್ಮವನ್ನು ಆಚರಿಸುವವರಾದಾಗ್ಯೂ ಪರಬ್ರಹ್ಮನನ್ನು ಹೊಂದಿಯೇ ಹೊಂದುವವರಾಗುತ್ತಾರೆ. ಎನ್ನುವ ತುರಶ್ರುತಿಯಲ್ಲಿ ಕೆಲವು ಶಾಖಿಗಳು ಪ್ರಾರಬ್ಧವಾದುದಕ್ಕೂ ಜ್ಞಾನಸಾಮರ್ಥ್ಯದಿಂದ ಸ್ವಲ್ಪ ಭೋಗಿಸಿ ಫಲಹ್ರಾಸವನ್ನು ಹೇಳುತ್ತಾರೆ. (ಆಗ ಉತ್ತರಕಾಲೀನವಾದ ಅಸತ್ಕರ್ಮವು ಮೋಕ್ಷಕ್ಕೆ ಪ್ರತಿಬಂಧವಲ್ಲವೆಂದು ಏನು ಹೇಳಬೇಕು.) ॥ ೧೬ ॥ ೪ ॥

**ಪೀಠಿಕೆ ॥** ಸ್ವೇಚ್ಛಾನುಸಾರವಾಗಿ ಇರುವವರಿಗೂ ಜ್ಞಾನಿಗಳಿಗೆ ಮುಕ್ತಿಯೋಗ್ಯತೆಯು ಇರುವುದಾದರೆ ಅವರಂತೆ ಜಿಜ್ಞಾಸುಗಳಿಗೂ ಜ್ಞಾನಯೋಗ್ಯತೆಯು ಬರಬೇಕಾಗುವುದು. ವಿಶೇಷವಿಲ್ಲದಿರುವ ಪ್ರಯುಕ್ತ ಎಂಬೀ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಊರ್ಧ್ವರೇತಸ್ಸು ಚ ಶಬ್ದೇ ಹಿ ಓಂ ॥ ೧೭ ॥

**ಸೂತ್ರಾರ್ಥ ॥** ಜ್ಞಾನಿಗಳಂತೆಯೇ ಜಿಜ್ಞಾಸುಗಳಿಗೂ ವಿಕರ್ಮಾಚರಣ ಮಾಡಿದರೂ ಅಪರೋಕ್ಷಾಧಿಕಾರವು ಎಂದು ಹೇಳಕೂಡದು. ಏಕೆಂದರೆ, ಯ ಇಮಂ ಎನ್ನುವ ಶ್ರುತಿಯಲ್ಲಿ ಗುರುಕುಲವಾಸ, ಊರ್ಧ್ವರೇತಸ್ತ್ವ (ಬ್ರಹ್ಮಚರ್ಯ) ಮೊದಲಾದ ಗುಣವುಳ್ಳವರಲ್ಲಿಯೇ ಜ್ಞಾನೋಪದೇಶವು ವಿಹಿತವಾಗಿದೆ. ಕಾಮಚಾರಿಗಳಲ್ಲಿ ಅಲ್ಲ. ಆದಕಾರಣ ಅವರಿಗೆ ಜ್ಞಾನಾಧಿಕಾರವಿಲ್ಲ.

**ಭಾಷ್ಯ ॥ (೧) ನ ತಾವತಾ ಕಾಮಚಾರಾಣಾಂ ಜ್ಞಾನೇಽಧಿಕಾರಃ । (೨) ಯ ಇಮಂ ಪರಮಂ ಗುಹ್ಯಮೂರ್ಧ್ವರೇತಸ್ಸು ಭಾಷಯೇತ್ । ನ ತಥಾ ವಿದ್ಯತೇ ಭೂಯಾನ್ ಯಂ ಪ್ರಾಪ್ಯಾನ್ಯೇಽಪಿ ಭೂಯಸಃ ॥ ಇತಿ ಮಾಠರಶ್ರುತೇಃ ॥ ೧೭ ॥ ೫ ॥**

**ಭಾಷ್ಯಾರ್ಥ ॥** (೧) ಇಚ್ಛಾನುಸಾರವಾಗಿ ಇರತಕ್ಕ ಜ್ಞಾನಿಗಳಿಗೂ ಮುಕ್ತಿ ಯೋಗ್ಯತೆಯು ಇದೆ, ಎನ್ನುವುದರಿಂದ ಅವರಂತೆ ಇಚ್ಛಾನುಸಾರವಾಗಿ ಇರತಕ್ಕ ತತ್ತ್ವ ಜಿಜ್ಞಾಸುಗಳಿಗೂ ಜ್ಞಾನಾಧಿಕಾರವನ್ನು ತಿಳಿಯಕೂಡದು. (೨) ಯಾವಾತನು ಈ ಗೋಪ್ಯನಾದ ವಿಷ್ಣುವನ್ನು ಅಥವಾ ಗೋಪ್ಯವಾದ ಭಗವತ್ತತ್ತ್ವವನ್ನು ಊರ್ಧ್ವರೇತಸ್ತ್ವ ಮೊದಲಾದ ಗುಣವುಳ್ಳವರಲ್ಲಿ ಉಪದೇಶಿಸುವನೋ, ಅದರಂತೆ ಅಂತಹ ಶ್ರೇಷ್ಠನು ಮತ್ತೊಬ್ಬನು ಇಲ್ಲ. ಯಾವ ಈ ಜ್ಞಾನೋಪದೇಶಕನನ್ನು ಹೊಂದಿ ಇತರರೂ ಶಿಷ್ಯಭಾವದಿಂದ ಇರುತ್ತಾರೋ, ಇತರರಾದ ಶಿಷ್ಯರೂ ಶ್ರೇಷ್ಠರು ಇದ್ದಾರೆಂದು ಏನು ಹೇಳಬೇಕು. ಎನ್ನುವ ಮಾಠರಶ್ರುತಿಯಿಂದ ಊರ್ಧ್ವರೇತಸ್ತ್ವ ಮೊದಲಾದ ಗುಣವುಳ್ಳವರಲ್ಲಿಯೇ ಜ್ಞಾನೋಪದೇಶವನ್ನು ವಿಧಾನಮಾಡಿದ್ದಾರೆ. ಅಪರೋಕ್ಷ ಜ್ಞಾನವು ಪರೋಕ್ಷಜ್ಞಾನಪೂರ್ವಕವು. ॥ ೧೭ ॥ ೫ ॥

**ಪೀಠಿಕೆ ॥** ಕೇನಸ್ಯಾತ್ ಎನ್ನುವುದಕ್ಕೆ ಯಥೇಷ್ಟಾಚಾರವಿಧಿತ್ವವನ್ನು ಅಂಗೀಕರಿಸದೆ ಸ್ವುತ್ಯನುಮತಿರೂಪ ಅರ್ಥಗಳು ಉಕ್ತಗಳಾಗಿವೆ. ಯಥೇಷ್ಟಾಚಾರವಿಧಿತ್ವವನ್ನು ಅಂಗೀಕರಿಸದೇನೇ ಜೈಮಿನಿ ಋಷಿಗಳಿಂದ ಹೇಳಲ್ಪಟ್ಟ ಅರ್ಥಾಂತರವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಪರಾಮರ್ಶಂ ಜೈಮಿನಿರಚೋದನಾ ಚಾಪವದಿತಿ ಓಂ ॥ ೧೮ ॥

**ಸೂತ್ರಾರ್ಥ ॥** ಜೈಮಿನಿ ಋಷಿಗಳು **ಕೇನ ಸ್ಯಾತ್** ಎನ್ನುವ ಶ್ರುತಿಗೆ **ಪ್ರಾತರುತ್ಥಾಯಾ** ಇತ್ಯಾದಿ ಶ್ರುತ್ಯಂತರೋಕ್ತ ಸದಾಚಾರಪರಾಮರ್ಶವನ್ನು ಹೇಳುತ್ತಾರೆ (ಶ್ರುತ್ಯಂತರವಿಹಿತ ಸದಾಚಾರಗಳಲ್ಲಿಯೇ ವಿಧಿಬಂಧವಿಲ್ಲದೆ ಸ್ವೇಚ್ಛೆಯಿಂದ ನಿಯಮದಿಂದ ಇರುತ್ತಾರೆ. ಕಾಮಚಾರವಿಧಿಯಾಗಲೀ ಸ್ತುತ್ಯಾದಿಗಳಾಗಲೀ ಇಲ್ಲ) ಏಕೆಂದರೆ, ನಿಷಿದ್ಧವಾದುದನ್ನು ಜ್ಞಾನಿಗಳು ಮಾಡಬೇಕೆಂದು ಸ್ಪಷ್ಟವಾಗಿ ವಿಧಿಯು ಇಲ್ಲ. ಮತ್ತೆ **ಬ್ರಾಹ್ಮಣೋ ನ ಹಂತವ್ಯಃ** ಎನ್ನುವ ಶ್ರುತಿಯು ಬ್ರಹ್ಮಹನನಾದಿ ನಿಷಿದ್ಧಕರ್ಮವನ್ನು ಮಾಡಬಾರದೆಂದು ನಿಷೇಧಿಸುತ್ತದೆ. (ಆದಕಾರಣ ವಿಧಿಯು ಇಲ್ಲ. ನಿಷೇಧವದೆ. ಆದಕಾರಣ ಜ್ಞಾನಿಯ ಯಥೇಷ್ಟಾಚಾರಕ್ಕೆ ಕಲ್ಪಕವಲ್ಲ.)

**ಭಾಷ್ಯ ॥ ಪ್ರಾತರುತ್ಥಾಯ (ಯಾಥ) ಸಂಧ್ಯಾಮುಪಾಸೀತ ಯತ್ಸಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇಽಥ ದೇವಾನ್ನಮೇಜ್ಜುಹುಯಾದ್ವೇದಾನಾವರ್ತಯೀತನಾನ್ಯತ್ಕಿಂಚಿದಾಚರೇನ್ನ ಸುರಾಂ ಪಿಬೇನ್ನ ಪಲಾಂಡುಂ ಭಕ್ಷಯೀತ ನ ಬೃ ಶಂ ವದೇನ್ನ ವಿಸ್ಮರೇತಾತ್ಮಾನಂ ಸೋಮಂ ಪಿಬೇದ್ದುತಶೇಷೇಣ ವರ್ತಯೇತ್ । ಇತ್ಯುಕ್ತಾಚಾರಪರಾಮರ್ಶೇನ ವಿಧಿಬಂಧವರ್ಜಿತತ್ವೇನ ಕಾಮತ ಏವ ತಸ್ಯ ಚರಣಂ ಕಾಮಚಾರ ಇತಿ ಜೈಮಿನಿರ್ಮನ್ಯತೇ ॥ ೬ ॥**

**ಭಾಷ್ಯಾರ್ಥ ॥** ಪ್ರಾತಃಕಾಲದಲ್ಲಿ ಎದ್ದು ಸ್ನಾನ ಮಾಡಿದಮೇಲೆ ಸಂಧ್ಯಾವಂದನೆಯನ್ನು ಮಾಡಬೇಕು. (ಇದು ಅನ್ಯದೇವತೋಪಾಸನವೆಂದು ತಿಳಿಯಕೂಡದು.) ಸಂಧ್ಯಾವಂದನೆಯನ್ನು ಜನರು ಮಾಡುತ್ತಾರೆ ಎನ್ನುವುದು ಯಾವುದೋ ಅಂತಹ ಸಂಧ್ಯಾವಿಷಯನಾದ ಬ್ರಹ್ಮನನ್ನೇ ಉಪಾಸನಾ ಮಾಡುತ್ತಾರೆ. (ಇದರಿಂದ ಸಂಧ್ಯಾಕಾಲದಲ್ಲಿ ವಿಶೇಷವಾಗಿ ಬ್ರಹ್ಮನು ಸಮ್ಯಕ್ ಧ್ಯೇಯನಾದುದರಿಂದ ಸಂಧ್ಯಾಶಬ್ದವಾಚ್ಯನಾದ ಪರಬ್ರಹ್ಮನನ್ನು ಮಂತ್ರಗಳಿಂದ ಧ್ಯಾನಿಸುವುದೇ ಸಂಧ್ಯೋಪಾಸನವು ಎಂದು ಯುಕ್ತವಾಯಿತು.) ಆ ಮೇಲೆ ಪ್ರಾಚ್ಯಾದಿ ದಿಕ್ಕುಗಳಲ್ಲಿ ಇರತಕ್ಕ ದಿಗಭಿಮಾನಿಗಳಾದ ಬ್ರಹ್ಮೇಂದ್ರಾದಿ ದೇವತೆಗಳನ್ನು ನಮಸ್ಕರಿಸಬೇಕು. ಅಗ್ನಿ ಹೋತ್ರ ಹೋಮಾದಿಗಳನ್ನು ಮಾಡಬೇಕು. ವೇದಗಳನ್ನು ಶಬ್ದದಿಂದಲೂ ಅರ್ಥದಿಂದಲೂ ಅಭ್ಯಾಸ ಮಾಡಬೇಕು. ನಿಷಿದ್ಧವಾದುದನ್ನು ಮಾಡಬಾರದು. ಮದ್ಯವನ್ನು ಪಾನಮಾಡಬಾರದು. ಪಲಂಡು(ಉಳ್ಳಗಡ್ಡೆ)ವನ್ನು ತಿನ್ನಬಾರದು. ನಿಷ್ಠುರವನ್ನು ಮಾತನಾಡಬಾರದು. ಪರಮಾತ್ಮನನ್ನು ಮರತುಬಿಡಬಾರದು. ಸೋಮರಸವನ್ನು ಕುಡಿಯಬೇಕು. ಪುನಃ ಪುನಃ ಹೋಮಾನುಷ್ಠಾನದಿಂದ ಹೋಮಶೇಷವನ್ನು ಆಗಾಗ ಭಕ್ಷಿಸಬೇಕು. ಇತ್ಯಾದಿ ವಾಕ್ಯೋಕ್ತವಾದ ಅಂದರೆ **ಕಾಮಚಾರಾಃ ಯೇನ ಸ್ಯಾತ್** ಇತ್ಯಾದಿಗಳಿಂದ **ಪ್ರಾತಃಸಂಧ್ಯಾಮುಪಾಸತೇ** ಎಂದು ಹೇಳಿದ ಸದಾಚಾರವನ್ನು ಪರಾಮರ್ಶ ಮಾಡಿಕೊಂಡು ವಿಧಿಸಲ್ಪಡತಕ್ಕ ಕಾಮಚಾರವು ಶ್ರುತ್ಯುಕ್ತವಾದ ಸದಾಚಾರಕ್ಕೇನೇ (ಸತ್ಕರ್ಮಗಳಿಗೇನೇ) **ಜಾಯಮಾನೋ ವೈ ಬ್ರಾಹ್ಮಣಃ ತ್ರಿಭಿಃ ಋಣವಾನ್ ಜಾಯತೇ ಬ್ರಹ್ಮಚರ್ಯೇಣ ಋಷಿಭ್ಯಃ ಯಜ್ಞೇನ ಪ್ರಜಯಾ ಪಿತೃಭ್ಯಃ** ಇತ್ಯಾದಿ ಶ್ರುತಿಗಳಿಂದ ಅಜ್ಞನಿಗೆ ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯರೂಪವಾದ ಯಾವುದು ವಿಧಿಬಂಧವೋ ಅದು ಇಲ್ಲದಿರುವುದರಿಂದ ಸ್ವೇಚ್ಛೆಯಿಂದ ಆಚರಣರೂಪವೇ. (ನಿಷಿದ್ಧಕರ್ಮಕ್ಕೂ ಆಚರಣವಲ್ಲ.) ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ.

**ವಿಶೇಷಾಂಶ ॥** (೧) ಇಲ್ಲಿ ನ ಭೃಶಂ ವದೇತ್ ಇತ್ಯಾದಿಗಳು ಸರ್ವವರ್ಣ ಆಶ್ರಮಿಗಳ ಸಾಧಾರಣವು. (೨) ಸಂಧ್ಯೋಪಾಸಾದಿಗಳು ತ್ರೈವರ್ಣಿಕರಿಗೇನೇ. (೩) ಅಗ್ನಿ ಹೋತ್ರಾದಿಗಳಾದರೂ ಗೃಹಸ್ಥಾಶ್ರಮಿಗಳಿಗೇನೇ ಅಸಾಧಾರಣವು, ಎಂದು ವಿವೇಕವು.

**ಪೀಠಿಕೆ ॥** ಕೇನ ಸ್ಯಾತ್ ಎನ್ನುವಲ್ಲಿ ಸತ್ಪ್ರವೃತ್ತಿಯಲ್ಲಿಯೇ ಕಾಮಚಾರಣವೆಂದು ಹೇಳಲ್ಪಡುತ್ತದೆಂದು ಏತಕ್ಕೆ ಹೇಳುವುದು? ನಿಷಿದ್ಧಪ್ರವೃತ್ತಿಯೂ ಇಲ್ಲಿ ಹೇಳಲ್ಪಡುತ್ತದೆಂದು ಏಕೆ ಆಗಲಾರದೆಂದರೆ—

**ಭಾಷ್ಯ ॥ ನ ಚ ನಿಷಿದ್ಧಂ ಕರ್ಮ ಕರ್ತವ್ಯಮೇವೇತಿ ಚೋದನಾ । ಬ್ರಾಹ್ಮಣೋ ನ ಹಂತವ್ಯ ಇತ್ಯಾದ್ಯಪವಾದಶ್ಚ ॥ ೧೮ ॥ ೭ ॥**

**ಭಾಷ್ಯಾರ್ಥ ॥** ನಿಷಿದ್ಧಕರ್ಮವನ್ನು ಜ್ಞಾನಿಗಳು ಮಾಡಲೇಬೇಕು ಎನ್ನುವ ವಿಧಿಯು ಇಲ್ಲ.ಮತ್ತೆ ಬ್ರಾಹ್ಮಣಃ ನ ಹಂತವ್ಯಃ ಇತ್ಯಾದಿ ನಿಷೇಧವೂ ಇದೆ. ಆದ ಕಾರಣ ಜ್ಞಾನಿಗಳಿಗೆ ಸತ್ಪ್ರವೃತ್ತಿಯಲ್ಲಿಯೇ ಕಾಮಚಾರವನ್ನು ಹೇಳಿದ್ದು. ನಿಷಿದ್ಧಕ್ಕೆ ಹೇಳಿದ್ದಲ್ಲ. ॥ ೧೮ ॥ ೭ ॥

**ಪೀಠಿಕೆ ॥** ಈ ವಾಕ್ಯಕ್ಕೆ ಜೈಮಿನಿ ಋಷಿಗಳ ಮತವನ್ನು ಅನುಸರಿಸಿ ಸದಾಚಾರ ವಿಧಿತ್ವವನ್ನೇ ಹೇಳಿ ಯಾವುದು ಸ್ತುತಯೇ ಅನುಮತಿರ್ವಾ ಎಂದು ಉಕ್ತವಾಗಿಯದೋ ಅದನ್ನೇ ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ಓಂ ॥ ೧೯ ॥

**ಸೂತ್ರಾರ್ಥ ॥** ವೇದವ್ಯಾಸರು ಮಾಡಲರ್ಹವಾದುದನ್ನು ಕಾಮಚಾರ ಶ್ರುತಿಗೆ ಅರ್ಥವನ್ನು ಹೇಳುತ್ತಾರೆ, (ಅಂದರೆ, ಅನುಷ್ಠೇಯಗಳಾದ ಕರ್ಮಗಳ ಮಧ್ಯದಲ್ಲಿಯೇ ಸ್ವೇಚ್ಛೆಯಿಂದ ಕೆಲವು ಕರ್ಮಗಳನ್ನು ಮಾಡುವುದು. ಕೆಲವು ಕರ್ಮಗಳನ್ನು ಮಾಡದಿರುವುದು ಎಂದು ಅನುಷ್ಠೇಯವಾದ ಕರ್ಮದಲ್ಲಿಯೇ ಸ್ವೇಚ್ಛಾನುಸಾರವಾಗಿ ಕರ್ಮವನ್ನು ಮಾಡಬಹುದೆಂದು ಅನುಮತಿಯೇ. ಕಾಮಚಾರ ವಿಧಿಯಲ್ಲ (ಏಕೆಂದರೆ ಯಾವ ಪ್ರಕಾರದಿಂದ ಪ್ರವೃತ್ತಿ ಮಾಡಿದರೂ ಇದೇ ರೀತಿಯಾಗಿ ಇರುತ್ತಾನೆಂದು ಸಾಮ್ಯವನ್ನು ಹೇಳಿದ್ದರಿಂದ.

**ಭಾಷ್ಯ ॥ ಅನುಷ್ಠೇಯಾನಾಂ ಮಧ್ಯ ಏವ ಕಾಮತಶ್ಚರಣಂ ಕಾಮತೋ ನಿವೃತ್ತಿಃ । ಇತಿ ಬಾದರಾಯಣೋ ಮನ್ಯತೇ । ಕೇ ನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವ (ಬೃ.೫.೫.೧.) । ಇತಿ ಸಾಮ್ಯಶ್ರುತೇಃ ॥ ೮ ॥**

**ಭಾಷ್ಯಾರ್ಥ ॥** ಅನುಷ್ಠೇಯವಾಗಿ ವಿಹಿತ ಕರ್ಮಗಳ ಮಧ್ಯದಲ್ಲಿಯೇ ಇಚ್ಛೆಯಿಂದ ಕೆಲವು ಕರ್ಮಗಳನ್ನುಮಾಡುವಿಕೆ, ಇಚ್ಛೆಯಿಂದಲೇ ಕೆಲವು ಕರ್ಮಗಳನ್ನು ಮಾಡದಿರುವಿಕೆ, (ಹೀಗೆ ಅನುಜ್ಞೆಯೇ ಕಾಮಚಾರ ಶ್ರುತ್ಯರ್ಥವು.) ಹೀಗೆ ಬಾದರಾಯಣಾಚಾರ್ಯರು ತಿಳಿಯುತ್ತಾರೆ. ಜ್ಞಾನಿಯಾದವನು ಕಿಂಚಿದ್ವಿಹಿತವಾದ ಕರ್ಮಾನುಷ್ಠಾನದಿಂದಲಾದರೂ ಇದ್ದರೂ ಆಗ ಸಮನೇ ಇರುವನು. (ಆತನಲ್ಲಿ ಯತ್ಕಿಂಚಿತ್ ವಿಹಿತ ಅಕರಣನಿಮಿತ್ತವಾಗಿ ಸಾಮ್ಯವಿಲ್ಲವೆಂದು ಹೇಳಕೂಡದು.) ಹೀಗೆ ಸಾಮ್ಯ ಶ್ರುತಿಯು ಇದ್ದುದರಿಂದ.

**ಪೀಠಿಕೆ ॥** ಆದಾಗ್ಯೂ ಸಾಮ್ಯೋಕ್ತಿಯು ಕೂಡುವುದಿಲ್ಲ. ಕರ್ತವ್ಯದಲ್ಲಿ ಬಿಟ್ಟರೆ ಸಾಮ್ಯೋಕ್ತಿಯು ಕೂಡಲಾರದು ಎಂದರೆ—

**ಭಾಷ್ಯ ॥ ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ । ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ (ಗೀ.೩.೧೭.) ಇತಿ ಭಗವದ್ವಚನಾಚ್ಚ ॥ ೧೯ ॥ ೬ ॥**

**ಭಾಷ್ಯಾರ್ಥ ॥** ಯಾವ ಮನುಷ್ಯರ ಪರಮಾತ್ಮದರ್ಶನದಿಂದುಂಟಾದ ಸುಖವುಳ್ಳವನೋ, ಪರಮಾತ್ಮನ ಪ್ರಸಾದದಿಂದ ಅನ್ಯತ್ರ ವಿಷಯ ಸುಖಗಳಲ್ಲಿ ಅಲಂಬುದ್ಧಿಯನ್ನು ಹೊಂದಿದವನೋ ಯಾವ ಕಾರಣದಿಂದ ಜ್ಞಾನಿಯು ಪರಮಾತ್ಮನಲ್ಲಿಯೇ ಸಂತುಷ್ಟನೋ ಅಂದರೆ, ಪರಮಾತ್ಮದರ್ಶನಾದಿ ನಿಮಿತ್ತ ಸುಖವುಳ್ಳವನೋ, ಅಂತಹ ಜ್ಞಾನಿಗೆ ಕರ್ತವ್ಯವು ಇಲ್ಲ ಎನ್ನುವ ಭಗವದ್ವಚನದಿಂದ (ಜ್ಞಾನಿಗಳಿಗೆ ಕರ್ತವ್ಯವಾದ ಕರ್ಮವು ಇಲ್ಲವೆಂದು ಹೇಳಿದ್ದರಿಂದ ಅದನ್ನು ಬಿಟ್ಟರೆ ಸಾಮ್ಯವು ಕೂಡು ವುದಿಲ್ಲವೆಂದು ಯುಕ್ತವಲ್ಲ) ॥ ೧೯ ॥ ೬ ॥

**ಪೀಠಿಕೆ ॥ ಕೇನ ಸ್ಯಾತ್** ಎನ್ನುವ ವಾಕ್ಯಕ್ಕೆ ಯಥೇಷ್ಟಾಚಾರ ವಿಧಿತ್ವವಿಲ್ಲವೆಂದು ಅಂಗೀಕರಿಸಿ ನಿಖಿಲಸದಾಚಾರಗಳನ್ನು ಇಚ್ಛೆಯಿಂದ ಮಾಡಬೇಕೆಂದು ವಿಧಿಪರವಾಗಿಯೂ, ಅನುಷ್ಠೇಯಗಳಾದ ಸದಾಚಾರಗಳ ಮಧ್ಯದಲ್ಲಿಯೇ ಕೆಲವು ಕರ್ಮಗಳನ್ನು ಸ್ವೇಚ್ಛೆಯಿಂದ ಮಾಡಲೂಬಹುದು, ಮಾಡದೇನೂ ಇರಬಹುದು ಎಂದು ಅಭ್ಯನುಜ್ಞಾಪರವಾಗಿಯೂ ಹೀಗೆ ಎರಡು ಅರ್ಥಗಳನ್ನು ಹೇಳಿರುವರು. ಈಗ ಇದು ಸ್ವೇಚ್ಛಾಚರಣವಿಧಿಯೂ ಆಗುತ್ತದೆ. ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.—

## ಸೂತ್ರ ॥ ಓಂ ವಿಧಿರ್ವಾ ಧಾರಣವತ್ ಓಂ ॥ ೨೦ ॥

**ಸೂತ್ರಾರ್ಥ ॥** ಕೇನ ಸ್ಯಾತ್ ಎಂದು ಜ್ಞಾನಿಗೆ ಯಥೇಷ್ಟಾಚಾರ ವಿಧಿಯು ಆಗುವುದು. ಹೇಗೆ ವೇದಧಾರಣವು ತ್ರೈವರ್ಣಿಕರಿಗೇನೇ ವಿಹಿತವಾಗಿಯದೋ, ಹಾಗೆಯೇ ಕಾಮಚಾರವೂ ಜ್ಞಾನಿಗಳಿಗೇನೇ.

**ಭಾಷ್ಯ ॥ ಕೇನ ಸ್ಯಾದ್ಯೇನ ಸ್ಯಾತ್** (ಬೃ.೫.೫.೧.) **ಇತಿ ವಿಧಿರ್ವಾ । ಯಥಾ ವೇದಧಾರಣಂ ತ್ರೈವರ್ಣಿಕಾನಾಂ ವಿಹಿತಂ ನಾನ್ಯೇಷಾಂ । ಏವಂ ಸ್ವಮತಾನುಸಾರಿಣೇ ಪ್ರವೃತ್ತಿರ್ಜ್ಞಾನಿನಾಂ ವಿಹಿತಾ । ನ ತತ್ರಾಧರ್ಮಶಂಕಾ ಕಾರ್ಯಾ । ನಾನ್ಯೇಷಾಮಿತಿ ವಾ ॥ ೧೦ ॥**

**ಭಾಷ್ಯಾರ್ಥ ॥ ಕೇನ ಸ್ಯಾತ್ ಯೇನ ಸ್ಯಾತ್** ಎನ್ನುವ ವಿಧಿಯು ಯಥೇಷ್ಟಾಚರಣ ವಿಧಿಯು ಆಗುತ್ತದೆ. (ಜ್ಞಾನಿಗಳಿಗೆ ಸ್ವೇಚ್ಛಾಚರಣ ವಿಧಿಯು ಯುಕ್ತವಲ್ಲ. ಅಜ್ಞಾನಿಗಳಿಗೂ ಸ್ವೇಚ್ಛಾಚಾರವು ಬರಬೇಕಾಗುವುದು ಎಂದರೆ) ವೇದಾಧ್ಯಯನವು ಅಥವಾ ವೇದವನ್ನು ಕಲಿತವನಿಗೂ ಸ್ಮೃತಿಗಾಗಿ ಪುನಃ ಪುನಃ ಪಾಠವು, ವೇದ ಪಾಠಾದಿಗಳು, ಬ್ರಹ್ಮ ಕ್ಷತ್ರಿಯ ವೈಶ್ಯರಿಗೇನೇ ಸ್ವಾಧ್ಯಾಯೋಽಧ್ಯೇತವ್ಯಃ ವೇದಃ ಕೃತ್ಸ್ನೋಽಧಿಗಂತವ್ಯಃ ಇತ್ಯಾದಿಗಳಿಂದ ವಿಹಿತವಾಗಿದೆ. ಶೂದ್ರಾದಿಗಳಿಗೆ ವಿಹಿತವಾಗಲಿಲ್ಲ (ಮತ್ತೆ

ಶೂದ್ರಾದಿಗಳು ಅಧ್ಯಯನಾದಿಗಳನ್ನು ಮಾಡಿದರೆ ಅವರಿಗೆ ದಂಡವೇ ವಿಹಿತವಾಗಿದೆ.) ಹೀಗೆಯೇ ಸ್ವೇಚ್ಛಾನುಸಾರಿಯಾದ ಪ್ರವೃತ್ತಿಯು ಜ್ಞಾನಿಗಳಿಗೇನೇ ವಿಹಿತವಾಗಿದೆ, ಇತರರಿಗೆ ವಿಹಿತವಾಗಲಿಲ್ಲ. (ಈ ಯಥೇಷ್ಟಾಚಾರ ವಿಧಿಯು ಕೂಡುವುದಿಲ್ಲ. ಹಾಗಿದ್ದರೆ ಜ್ಞಾನಿಗೆ ಅಧರ್ಮಕರಣವೂ ವಿಧಿ ವಿಷಯವಾಗುವುದರಿಂದ **ಅಚೋದನಾ** ಎಂದು ಹೇಳಿದ್ದು ವಿರುದ್ಧವಾಗುವುದು ಎಂದರೆ) ಜ್ಞಾನಿಯು ಮಾಡತಕ್ಕ ಸ್ವೇಚ್ಛಾನುಸಾರ ಪ್ರವೃತ್ತಿಯಲ್ಲಿ ಅಧರ್ಮತ್ವ ಶಂಕೆಯನ್ನು ಮಾಡಕೂಡದು. ಅಜ್ಞಾನಿಗಳಿಗೆ ಸ್ವೇಚ್ಛಾನುಸಾರ ಪ್ರವೃತ್ತಿಯು ವಿಹಿತವಾಗಲಿಲ್ಲ. ॥ ೧೦ ॥

**ಪೀಠಿಕೆ ॥** ಅಧರ್ಮಶಂಕೆಯನ್ನು ಏಕೆ ಮಾಡಕೂಡದು ಎಂದರೆ—

**ಭಾಷ್ಯ॥ ಸ್ವೇಚ್ಛಯೈವ ಪ್ರವೃತ್ತಿಸ್ತು ಬ್ರಹ್ಮಣೋ ವಿಧಿಚೋದಿತಾ । ನಾಶಂ ಕ್ಯಂ ತನ್ಮತಂ ಕ್ವಾಪಿ ವಿಷ್ಣೋಃ ಪ್ರತ್ಯಕ್ಷಚೋದನಾ । ಇತರೇಷಾಂ ನ ವಿಹಿತಾ ಸ್ವೇಚ್ಛಾವೃತ್ತಿಃ ಕಥಂಚನ ॥ ಇತಿ ಹಿ ಬ್ರಾಹ್ಮೇ ॥ ೨೦ ॥ ೧೧ ॥**

**ಭಾಷ್ಯಾರ್ಥ ॥** ಯದ್ಯಪಿ ಸ್ವೇಚ್ಛೆಯಿಂದಲೇ ಪ್ರವೃತ್ತಿಯು ಬ್ರಹ್ಮನಿಗೆ ಒಬ್ಬನಿಗೇನೇ ಯೇನ ಸ್ಯಾತ್ ಎನ್ನುವ ವಿಧಿವಿಹಿತವಾಗಿದೆ. ಆದಕಾರಣ ವಿರಿಂಚನಿಗೆ ಅಭಿಪ್ರೇತವಾದುದು ವೇದವಿರುದ್ಧವಾಗಿ ಪ್ರತೀತವಾದಾಗ್ಯೂ ಪುತ್ರಿಕಾಕಾಮನಾದಿಗಳನ್ನು ಅಧರ್ಮವೆಂದು ಆಶಂಕಿಸಕೂಡದು. ಏಕೆಂದರೆ, ಹೀಗೆ ಮಾಡು ಎಂದು, ಶ್ರೀವಿಷ್ಣುವಿನ ಪ್ರತ್ಯಕ್ಷಪ್ರೇರಣೆಯು ವಿರಿಂಚನಿಗೆ ಅದೆ, ಆದುದರಿಂದಲೂ ಬ್ರಹ್ಮನಿಗೆ ಅಭಿಪ್ರೇತವಾದ ಮತವನ್ನು ಅಧರ್ಮವೆಂದು ಆಶಂಕಿಸಿಕೂಡದು. (ವೇದವಾದರೂ ವಿಷ್ಣುವಿನ ಪರೋಕ್ಷಾಜ್ಞಾರೂಪವು. ಅದಕ್ಕೆ ಪ್ರತ್ಯಕ್ಷಾಜ್ಞಾನುಸಾರವಾಗಿ ಅರ್ಥವನ್ನು ಮಾಡಬೇಕು.) ಇತರರಿಗೆ (ಉತ್ತಮಾಧಿಕಾರಿ ವ್ಯತಿರಿಕ್ತರಿಗೆ) ಯಾವ ರೀತಿಯಿಂದಲೂ ಸ್ವೇಚ್ಛಾವೃತ್ತಿಯು ವಿಹಿತವಾಗಲಿಲ್ಲ ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ॥ ೨೦ ॥ ೧೧ ॥

**ಪೀಠಿಕೆ ॥** ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ ಓಂ ॥ ೨೧ ॥

**ಸೂತ್ರಾರ್ಥ ॥** ಕೇನ ಸ್ಯಾತ್ ಎನ್ನುವ ಶ್ರುತಿಯು ಸ್ವೇಚ್ಛಾಚಾರ ವಿಧಿಯಾಗಿ ಸ್ತುತಿಮಾತ್ರವು. ಸ್ವೇಚ್ಛಾಚರಣ ವಿಧಿಯಲ್ಲ. ಜ್ಞಾನಿಗಳಿಗೂ ಸಂಧ್ಯಾಮುಪಾಸೀತ ಇತ್ಯಾದಿ ಜ್ಞಾನಿ ಅಜ್ಞಾನಿ ಸಾಧಾರಣವಾದ ವಿಧಿಯನ್ನು ಸ್ವೀಕರಿಸಿದ್ದರಿಂದ ಎಂದರೆ, ಹೀಗೆ ಹೇಳಕೂಡದು. ಜ್ಞಾನಿಗಳಿಗೆ ಬ್ರಹ್ಮಕಾರ್ಯತ್ವ ವಿದ್ದುದರಿಂದ. ಅಂದರೆ ಬ್ರಹ್ಮಾಧೀನತ್ವವಿದ್ದುದರಿಂದ (ಅಂದರೆ ಕೇನ ಸ್ಯಾತ್ ಎನ್ನುವುದು ವಿಧಿಯಾಗದೆ ಸ್ತುತಿಯಾದರೆ, ಜ್ಞಾನಿಗಳು ಸರ್ವ ವಿಧಿಗಳಿಗೆ ವಿಷಯರಾಗದೆ ಇದ್ದುದರಿಂದ ಅವರಿಗೆ ಸ್ತುತಿ ಮಾತ್ರ ವಿಷಯತ್ವವು ಬರುವುದು. ಅದು ಅಯುಕ್ತವು. ಸರ್ವವಿಧ್ಯತಿದೂರತ್ವವು ಬ್ರಹ್ಮಲಕ್ಷಣವು. ಜ್ಞಾನಿಯು ಪರಬ್ರಹ್ಮನ ಅಧೀನನು.)

**ಭಾಷ್ಯ ॥ ಸ್ತುತಿಮಾತ್ರಮೇವ ಸ್ವೇಚ್ಛಾಚರಣಂ ನ ವಿಧಿಃ । ತೈರಪಿ ಸಾಮಾನ್ಯವಿಧಿ ಸ್ವೀಕರಣಾದಿತಿ ಚೇತ್ ನ । ಅಪೂರ್ವತ್ವಾತ್ । ಪರವಶತ್ವಾತ್ । ಸರ್ವ ವಿಧ್ಯತಿಕ್ರಮೇಣಸ್ತುತಿಮಾತ್ರವಿಷಯತ್ವಂ ಪರಬ್ರಹ್ಮಣ ಏವ ಹಿ ॥ ೧೨ ॥**

**ಭಾಷ್ಯಾರ್ಥ ॥ ಯೇನ ಸ್ಯಾತ್** ಎನ್ನುವ ಸ್ವೇಚ್ಛಾಚಾರ ವಚನವು ಜ್ಞಾನಿಗಳ ಸ್ತುತಿಗಾಗಿಯೇ. ವಿಧಿ ಸಲ್ಲದುವುದಿಲ್ಲ. ಆ ಜ್ಞಾನಿಗಳಿಂದಲೂ ಸಂಧ್ಯಾಮುಪಾಸೀತ ಇತ್ಯಾದಿ ಸರ್ವಜನಸಾಧಾರಣವಾದ ವಿಧಿಯನ್ನು ಸ್ವೀಕರಿಸಿದ್ದರಿಂದ ಅಥವಾ ಜ್ಞಾನದಾನ ಮೊದಲಾದ ಸಾಮಾನ್ಯ ವಿಧಿಯನ್ನು ಸ್ವೀಕರಸಿದ್ದರಿಂದ. (ಸ್ವೇಚ್ಛಾಚಾರ ವಿಧಿಯೆಂದಾದರೆ ಅದು ಕೂಡಲಾರದು.) ಎಂದರೆ ಹೀಗೆ ಹೇಳಕೂಡದು. (ಅಂದರೆ ಜ್ಞಾನಿಗಳಿಗೆ ಸ್ವೇಚ್ಛಾಚಾರ ವಿಧಿಯಿಲ್ಲ. ಮತ್ತೆ ಇದು ಸ್ತುತಿಮಾತ್ರವು ಎನ್ನುವುದು ಯುಕ್ತವಲ್ಲ) ಹಾಗಿದ್ದರೆ ಜ್ಞಾನಿಗಳು ಸರ್ವ ವಿಧ್ಯತಿಕ್ರಮದಿಂದ ಸ್ತುತಿಮಾತ್ರಕ್ಕೆ ವಿಷಯರು ಆಗಬೇಕಾಗುವರು. ಆದಾದರೂ ಯುಕ್ತವಲ್ಲ (**ಅಃ** = ವಿಷ್ಣುವು, **ಪೂರ್ವಃ** = ನಿಯಾಮಕನು, **ಯೇಷಾಂ ತೇ ಅಪೂರ್ವಾಃ ತೇಷಾಂ ಭಾವಃ ಅಪೂರ್ವತ್ವಂ** ಎನ್ನುವ ವ್ಯುತ್ಪತ್ತಿಯಿಂದ ಜ್ಞಾನಿಗಳಿಗೆ) ಪರಬ್ರಹ್ಮಾಧೀನತ್ವವಿದ್ದುದರಿಂದ. (ಪರಮಾತ್ಮಾಧೀನತ್ವವಿದ್ದರೂ ಸರ್ವವಿಧ್ಯತಿಕ್ರಮದಿಂದ ಜ್ಞಾನಿಗಳಿಗೆ ಸ್ತುತಿ ಮಾತ್ರ ವಿಷಯತ್ವವು ಏಕೆ ಇರಲಾರದು ಎಂದರೆ) ಸರ್ವವಿಧಿಗಳ ನಿಷೇಧಕ್ಕೆ ಗೋಚರವಲ್ಲವೆಂದೂ ವಿಧಿಗೂ ವಿಷಯವಲ್ಲವೆಂದೂ ಹೀಗೆ ಸ್ತುತಿವಿಷಯತ್ವವು ಪರಬ್ರಹ್ಮನಿಗೇನೇ, ಚತುರ್ಮುಖನಿಗೆ ಇಲ್ಲ. ಪ್ರಸಿದ್ಧವು (ಅಂದರೆ ಪರಬ್ರಹ್ಮನ ಅಧೀನದಲ್ಲಿದ್ದವರಿಗೆ ಪರಬ್ರಹ್ಮನಂತೆ ಸರ್ವವಿಧ್ಯತಿಕ್ರಮದಿಂದ ಸ್ತುತಿಮಾತ್ರ ವಿಷಯತ್ವವು ಕೂಡಲಾರದು. ಹಾಗೆ ಇದ್ದರೆ ಪರಬ್ರಹ್ಮನ ಅಧೀನತ್ವವೇ ಕೂಡಲಾರದು.) ॥ ೧೨ ॥

**ಪೀಠಿಕೆ ॥** ಜ್ಞಾನಿಗಳಿಗೆ ಸ್ವೇಚ್ಛಾಚರಣವಿಧಿಯು ಇಲ್ಲದಿದ್ದರೂ ಸಂಧ್ಯೋಪಾಸನಾದಿ ಸಾಮಾನ್ಯ ವಿಧಿಯು ಇದ್ದುದರಿಂದ ಸರ್ವವಿಧ್ಯತಿದೂರತ್ವವಿಲ್ಲ ಎನ್ನುವ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ವಿಧಿನಾಂ ವಿಷಯಾಸ್ತ್ವನ್ಯೇ ಬ್ರಹ್ಮಣಃ ಸ್ವೇಚ್ಛಯಾ ಕೃತೌ । ಪರಸ್ಯ ಬ್ರಹ್ಮಣೋ ಹ್ಯೇವ ಸರ್ವವಿಧ್ಯತಿದೂರತಾ ॥ ಇತಿ ಹಿ ಬ್ರಹ್ಮತರ್ಕೇ ॥ ೨೦ ॥ ೧೩ ॥**

**ಭಾಷ್ಯಾರ್ಥ ॥** ಚತುರ್ಮುಖನಿಂದ ಇತರರಾದ ಜ್ಞಾನಿಗಳು ಸರ್ವ ವಿಧಿಗಳಿಗೂ ನಿಷೇಧಗಳಿಗೂ ಗೋಚರರು. ಚತುರ್ಮುಖನಿಗೆ ತನ್ನ ಇಚ್ಛೆಯಿಂದ ಮಾಡುವ ಕರ್ಮವಿಷಯದಲ್ಲಿ ವಿಧಿ ವಿಷಯತ್ವವು ಆದೆ. ಪರಬ್ರಹ್ಮನಿಗೇನೇ ಸರ್ವವಿಧಿಗಳನ್ನು ಅತಿಕ್ರಮಿಸಿಕೊಂಡಿರುವಿಕೆಯು. ಪ್ರಸಿದ್ಧವು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ॥ ೨೦ ॥ ೧೩ ॥

**ಪೀಠಿಕೆ ॥** ಜ್ಞಾನಿಗಳಿಗೆ ಸ್ವೇಚ್ಛಾಚರಣ ವಿಧಿಯು ಸ್ಪಷ್ಟಪ್ರಮಾಣಸಿದ್ಧವಾಗಿದ್ದರೆ ಯೇನ ಸ್ಯಾತ್ ಎನ್ನುವ ವಾಕ್ಯವು ಸ್ವೇಚ್ಛಾಚರಣವಿಧ್ಯರ್ಥಕವಾಗುವುದು. ಸ್ವೇಚ್ಛಾಚರಣವಿಧಿಯು ಸ್ಪಷ್ಟಪ್ರಮಾಣಸಿದ್ಧವೆನ್ನುವುದೇ ಹೇಗೆ ಎಂಬ ಆಶಂಕೆ ಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಸೂತ್ರ ॥ ಓಂ ಭಾವಶಬ್ದಾಚ್ಚ ಓಂ ॥ ೨೨ ॥**

**ಭಾಷ್ಯ ॥ ಯಥಾವಿಧಾನಮಪರೇ ವಿಧಿರ್ಭಾವೇ ಪ್ರಜಾಪತೇಃ । ಬ್ರಹ್ಮಣಃ ಪರಮ ಸ್ಯೈವ ಸರ್ವವಿಧ್ಯತಿದೂರತಾ ॥ ಇತಿ ಚ ತುರಶ್ರುತೌ ॥ ೨೨ ॥ ೧೪ ॥**

ಭಾಷ್ಯಾರ್ಥ ॥ ಬ್ರಹ್ಮೇತರರಾದ ಜ್ಞಾನಿಗಳು ನಿತ್ಯನೈಮಿತ್ತಿಕ ವಿಧಿಯನ್ನು ಅತಿ ಕ್ರಮಿಸದೆ ವಿಧ್ಯನುಸಾರವಾಗಿ ಇರುತ್ತಾರೆ. ಚತುರ್ಮುಖಾದಿ ದೇವತೆಗಳಿಗೆ ಸ್ವೇಚ್ಛಾಚರಣ ವಿಷಯದಲ್ಲಿ ಯೇನ ಸ್ಯಾತ್ ಇತ್ಯಾದಿ ರೂಪವಾದುದು ಇದೆ. ಆದ ಕಾರಣ ಪರಬ್ರಹ್ಮನಿಗೇನೇ ಸಮಸ್ತ ವಿಧಿಗಳಿಂದಲೂ ಸರ್ವದಾ ಅತಿದೂರತ್ವವನ್ನು ತಿಳಿಯತಕ್ಕುದು. ಹೀಗೆ ತುರಶ್ರುತಿಯಲ್ಲಿ(ಜ್ಞಾನಿಗಳಿಗೆ ಸ್ವೇಚ್ಛಾಚರಣ ವಿಧಿಯು ಉಕ್ತವಾಗಿದೆ.) ತಥಾಚ ತುರಶ್ರುತಿಯಲ್ಲಿ ಇಚ್ಛಾಽಪರ ಪರ್ಯಾಯವಾದ ಭಾವ ಶಬ್ದವಿದ್ದುದರಿಂದಲೂ ಸ್ವೇಚ್ಛಾಚಾರ ವಿಧಿಯು ಸಿದ್ಧವಾಯಿತು ॥ ೨೨ ॥ ೧೪ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ಓಂ ॥ ೨೩ ॥

ಸೂತ್ರಾರ್ಥ ॥ ಕೇನ ಸ್ಯಾತ್ ಇತ್ಯಾದಿ ಶ್ರುತಿಗಳು ಚಂಚಲಾರ್ಥವುಳ್ಳವುಗಳು, ಅಂದರೆ, ಅವ್ಯವಸ್ಥಿತವಾದ ಅರ್ಥವುಳ್ಳವುಗಳಾಗುವವು. ನಿಯಮದಿಂದ ಸರ್ವಧರ್ಮಾಚರಣವು, ಅವುಗಳ ಮಧ್ಯದಲ್ಲಿಯೇ ಕಾಮಚಾರದಿಂದ ಆಚರಣವು, ಯಥೇಷ್ಟಾಚಾರ ವಿಧಿಯು ಹೀಗೆ ಹೇಳಿದ ಅರ್ಥಗಳು ಮೂರು ವಿರುದ್ಧಗಳಾಗಿರುವುದರಿಂದ ಎಂದರೆ, ಹಾಗೆ ಹೇಳಕೂಡದು. ತ್ರೇಧಾ ಹಿ ಜ್ಞಾನಿನಃ ಇತ್ಯಾದಿ ಶ್ರುತಿಗಳಿಂದ ಜ್ಞಾನಿಗಳಿಗೆ ಅನೇಕ ಪ್ರಕಾರತ್ವವಿದ್ದುದರಿಂದ.

**ಭಾಷ್ಯ ॥ ಕೇನ ಸ್ಯಾದ್ಯೇನ ಸ್ಯಾತ್ (ಬೃ.೫.೫.೧.) ಇತ್ಯಾದಯಃ ಸ್ಥಿರತ್ವನಿವೃತ್ತ್ಯರ್ಥಾ ಇತಿ ಚೇನ್ನ। ತ್ರೇಧಾ ಹಿ (ಹ) ಜ್ಞಾನಿನೋ (ಹ ವಾವ ಭವಂತಿ) ವಿಧಿನಿಯತಾ ಅನಿಯತಾಃ ಸ್ವೇಚ್ಛಾನಿಯತಾ ಇತಿ। ವಿಧಿನಿಯತಾ ಮನುಷ್ಯಾ ಅನಿಯತಾ ಹಿ ದೇವಾ ಬ್ರಹ್ಮೈವ ಸ್ವೇಚ್ಛಾನಿಯತಃ । ಇತಿ ಗೌಪವನಶ್ರುತೌ ವಿಶೇಷಿತತ್ವಾತ್ ॥ ೨೩ ॥ ೧೫ ॥**

ಭಾಷ್ಯಾರ್ಥ ॥ ಕೇನ ಸ್ಯಾತ್ ಇತ್ಯಾದಿ ವ್ಯಪದೇಶಗಳು ಅಸ್ಥಿರಗಳು ಚಂಚಲಾರ್ಥವುಳ್ಳವುಗಳು, ವಸ್ತುಗಳು ಇದ್ದ ಹಾಗೆ ಬೋಧಕಗಳು ಆಗುವುದಿಲ್ಲ (ಹೇಗೆಂದರೆ, ಪ್ರಥಮತಃ ಜೈಮಿನಿ ಋಷಿಗಳ ಮತವನ್ನು ಅನುಸರಿಸಿ ಜ್ಞಾನಿಗಳು ಸಮಸ್ತ ಸತ್ಕರ್ಮಗಳನ್ನು ಮಾಡಬೇಕೆಂದು ಹೇಳಿರುವರು. ಆ ಮೇಲೆ ಅನುಷ್ಠೇಯ ಸದಾಚಾರಗಳ ಮಧ್ಯದಲ್ಲಿಯೇ ಕಾಮಚಾರವೆಂದು ಅನುಜ್ಞಾತವಾಯಿತು. ಪುನಃ ಸ್ವೇಚ್ಛಾಚಾರ ವಿಧಿಯನ್ನು ಹೇಳಿರುವರು. ಈ ಮೂರೂ ಕೇನ ಸ್ಯಾತ್ ಇತ್ಯಾದಿಗಳ ಅರ್ಥವೆಂದು ಹೇಳಿರುವರು. ಈ ಮೂರು ಅರ್ಥಗಳು ಪರಸ್ಪರ ವಿರುದ್ಧಗಳಾಗಿರುವುದರಿಂದ ಈ ವ್ಯಪದೇಶಗಳು ಅವ್ಯವಸ್ಥಿತಗಳಾದ ಅರ್ಥವುಳ್ಳವುಗಳು.) ಎಂದರೆ, ಹೀಗೆ ಹೇಳಕೂಡದು. ೧ ವಿಧಿನಿಯತಾಃ = ವಿಧಿ ಬಂಧವಿಲ್ಲದೆ ಸ್ವೇಚ್ಛೆಯಿಂದಲೇ ನಿಯಮದಿಂದ ವಿಹಿತವಾದ ಆಚಾರವುಳ್ಳವರು. ೨ ಅನಿಯತಾಃ

ಅನುಷ್ಠೇಯಗಳ ಮಧ್ಯದಲ್ಲಿಯೇ ಕಾಮಚಾರಾನುಜ್ಞೆಯುಳ್ಳವರು, ೩. ಸ್ವೇಚ್ಛಾನಿಯತಾಃ=ಸ್ವೇಚ್ಛಾಚರಣ ವಿಧಿನಿಯತರು. (ಬ್ರಹ್ಮಯೋಗ್ಯ ಋಜುಗಣಗಳು.) ಹೀಗೆ ಜ್ಞಾನಿಗಳು ಮೂರು ಪ್ರಕಾರವುಳ್ಳವರು. ವಿಧಿನಿಯತರು ಮನುಷ್ಯರು, ಅನಿಯತರು ದೇವತೆಗಳು, ಚತುರ್ಮುಖ ಬ್ರಹ್ಮನೇ ಸ್ವೇಚ್ಛಾನಿಯತನು ಎನ್ನುವ ಗೌಪವನ ಶ್ರುತಿಯಲ್ಲಿ ಜ್ಞಾನಿಗಳಿಗೆ ವಿಶೇಷಿತತ್ವವಿದ್ದಪ್ರಯುಕ್ತ (ವಿಧಿನಿಯತತ್ವಾದಿಗಳನ್ನು ಜ್ಞಾನಿಗಳಿಗೆ ವಿಶೇಷಣ ಕೊಟ್ಟದ್ದರಿಂದ ಕೇನ ಸ್ಯಾತ್ ಇತ್ಯಾದಿ ವ್ಯಪದೇಶಗಳು ಅವ್ಯವಸ್ಥಿತಾರ್ಥವುಳ್ಳವು ಗಳಲ್ಲ. ॥ ೨೩. ॥ ೧೫ ॥

ಪೀಠಿಕೆ॥ ಜ್ಞಾನಿಗಳು ಮೂರು ವಿಧವಾದಾಗ್ಯೂ ಹಿಂದೆ ಹೇಳಿದ ಶಂಕಾಪರಿಹಾರವು ಹೇಗೆಂದರೆ—

## ಸೂತ್ರ ॥ ಓಂ ತಥಾ ಚೈಕವಾಕ್ಯೋಪಬಂಧಾತ್ ಓಂ ॥ ೨೪ ॥

ಸೂತ್ರಾರ್ಥ॥ ಜ್ಞಾನಿಗಳು ಮೂರು ಪ್ರಕಾರವುಳ್ಳವರು ಎಂದು ಆಗೋಣ ಕೇನ ಸ್ಯಾತ್ ಎನ್ನುವುದಕ್ಕೆ ಮೂರು ಅರ್ಥಗಳನ್ನು ಇಟ್ಟುಕೊಳ್ಳುವುದಕ್ಕೆ ಅನುಗುಣಗಳಾದ ಪ್ರಾತರುತ್ಥಾಯ, ಯಸ್ತ್ವಾತ್ಮರತಿರೇವ, ಯಥಾವಿಧಾನಂ ಎನ್ನುವ ಮೂರು ವಾಕ್ಯಗಳಿಗೆ ಏಕವಾಕ್ಯತ್ವವನ್ನು ಇಟ್ಟುಕೊಂಡು ಜ್ಞಾನಿಗಳಲ್ಲಿ ಭೇದವನ್ನು ಆಶ್ರಯಿಸಿಕೊಂಡು ವಿರೋಧವಿಲ್ಲದೆ ಇದ್ದ ಹಾಗೆ ಅರ್ಥವು ಕೂಡುವುದರಿಂದ ಪ್ರಾತ ರುತ್ಥಾಯ ಇತ್ಯಾದಿ ವಾಕ್ಯಗಳು ಅವ್ಯವಸ್ಥಿತವಾದ ಅರ್ಥವುಳ್ಳವುಗಳಲ್ಲ.

### ಭಾಷ್ಯ ॥ ಏವಂ ಸತಿ ವಿಧಿವಾಕ್ಯಾನಾಂ ಸ್ವೇಚ್ಛಾಪ್ರವೃತ್ತಿವಾಕ್ಯಾನಾಂ ಚ ಸಂಬಂಧೋ ಭವತಿ ॥ ೨೪ ॥ ೧೮ ॥

ಭಾಷ್ಯಾರ್ಥ ॥ ಜ್ಞಾನಿಗಳಿಗೆ ತ್ರೈವಿಧ್ಯವು ಸಿದ್ಧವಾಗೋಣ ಪ್ರಾತರುತ್ಥಾಯ ಇದು ಮೊದಲಾದ ಸರ್ವ ಸದಾಚಾರ ವಿಧಿವಾಕ್ಯಗಳಿಗೂ, ಯಸ್ತ್ವಾತ್ಮರತಿರೇವ ಇತ್ಯಾದಿ ಸ್ವೇಚ್ಛಾಚರಣಾನುಜ್ಞಾ ವಾಕ್ಯಗಳಿಗೂ, ಯಥಾ ವಿಧಾನಂ ಇತ್ಯಾದಿ ಸ್ವೇಚ್ಛಾಚರಣ ವಿಧಿವಾಕ್ಯಗಳಿಗೂ ಏಕವಾಕ್ಯತ್ವದಿಂದ ವಿಷಯಭೇದದಿಂದ ಅವಿರೋಧವು ಬರುತ್ತದೆ. (ತಥಾಚ ಕೇನ ಸ್ಯಾತ್ ಎನ್ನುವುದಕ್ಕೂ ಅವುಗಳನ್ನು ಅನುಸರಿಸಿ ಮೂರು ಅರ್ಥಗಳಲ್ಲಿಯೂ ವಿರೋಧಾಭಾವವು ಸಿದ್ಧವಾಯಿತು. ಇದರಿಂದ ಜೈಮಿನಿಮತವು ಜ್ಞಾನಿಗಳಾದ ಮನುಷ್ಯರ ವಿಷಯಕವು. ಅನುಜ್ಞಾಮತವು ದೇವತೆವಿಷಯಕವು. ವಿಧಿರ್ವಾ ಎನ್ನುವ ಮತವು ಹಿರಣ್ಯಗರ್ಭವಿಷಯಕವು.

ಪೀಠಿಕೆ॥ ಜ್ಞಾನಿಗಳಿಗೆ ಕೇನ ಸ್ಯಾತ್ ಎನ್ನುವ ಶ್ರುತಿಬಲದಿಂದ ಸತ್ಪ್ರವೃತ್ತಿ ಅಸತ್ಪ್ರವೃತ್ತಿಗಳಲ್ಲಿ ಯಾವುದು ಅವಿಶೇಷವು ಶಂಕಿತವಾಗಿಯದೋ, ಅದನ್ನು ಶ್ರುತಿಗೆ ಅರ್ಥಾಂತರವನ್ನು ಹೇಳಿ ಪರಿಹರಿಸಿರುವರು. ಇದು ಯುಕ್ತವಲ್ಲ. ಜ್ಞಾನಿಗಳಿಗೆ ಸತ್ಪ್ರವೃತ್ತಿಯಿಂದ ವಿಶೇಷವಿದ್ದರೆ ಜ್ಞಾನವು ಮೋಕ್ಷಕ್ಕೆ ಸಾಧನವಾಗಬೇಕಾಗುವುದಾದರೆ ಜ್ಞಾನಕ್ಕೆ ಸತ್ಪ್ರವೃತ್ತಿಸಾಪೇಕ್ಷತ್ವವು ಬರಬೇಕಾಗುವುದು, ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ಓಂ ॥ ೨೫ ॥

**ಸೂತ್ರಾರ್ಥ ॥ ಕಾಮಚಾರಾಃ ಕಾಮಭಕ್ಷ್ಯಾಃ** ಎನ್ನುವ ಶ್ರುತಿಯಲ್ಲಿ ಸ್ವೇಚ್ಛಾನುಸಾರವಾಗಿ ಇದ್ದರೂ ಮೋಕ್ಷವು ನಿಯತವೇ ಎಂದು ಹೇಳಿದ್ದರಿಂದಲೇ ಜ್ಞಾನಿಗಳಿಗೆ ಸದಸತ್ಪ್ರವೃತ್ತಿಗಳಿಂದ ವಿಶೇಷವಿದ್ದರೂ ಜ್ಞಾನಕ್ಕೆ ಮೋಕ್ಷಜನಕತ್ವ ವಿಷಯದಲ್ಲಿ ಅಗ್ನಿ ಹೋತ್ರ ಮೊದಲಾದ ಆಶ್ರಮಧರ್ಮ, ವರ್ಣಧರ್ಮಗಳ ಅಪೇಕ್ಷೆಯು ಇಲ್ಲ. **ಯೇಷಾಂ ಜ್ಞಾನಂ ಸಮುತ್ಪನ್ನಂ** ಎನ್ನುವ ಸ್ಮೃತಿಸಿದ್ಧವು.

**ಭಾಷ್ಯ ॥ (೧) ಅತ ಏವ ಜ್ಞಾನಸ್ಯ ಮೋಕ್ಷದಾನೇನಾಗ್ನಿಹೋತ್ರಾದ್ಯಪೇಕ್ಷಾ । (೨) ಬ್ರಹ್ಮತರ್ಕೇ ಚ । ಯೇಷಾಂ ಜ್ಞಾನಂ ಸಮುತ್ಪನ್ನಂ ತೇಷಾಂ ಮೋಕ್ಷೋ ವಿನಿಶ್ಚಿತಃ । ಶುಭಕರ್ಮಭಿರಾಧಿಕ್ಯಂ ವಿಪರೀತೈರ್ವಿಪರ್ಯಯಃ ॥ ಸ್ವೇಚ್ಛಾನುವೃತ್ತ್ಯೈವ ಭವೇದ್ಬ್ರಹ್ಮಣಃ ಪ್ರಾಯಶಸ್ತಥಾ । ದೇವಾನಾಮಪಿ ಸರ್ವೇಷಾಂ ವಿಶೇಷಾದುತ್ತರೋತ್ತರಂ ॥ ಇತಿ ॥ ೨೫ ॥ ೧೭ ॥**

**ಭಾಷ್ಯಾರ್ಥ ॥** (೧) ಜ್ಞಾನಿಯಾದವನಿಗೆ ಸತ್ಪ್ರವೃತ್ತಿಯಿಂದ ವಿಶೇಷವಿದ್ದರೂ ಆ ಜ್ಞಾನಿಗೆ ಮೋಕ್ಷಸಾಧನದಲ್ಲಿ ಜ್ಞಾನಕ್ಕೆ ಅಗ್ನಿಹೋತ್ರ, ತಮ್ಮ ಆಶ್ರಮ ವರ್ಣಧರ್ಮ ಮೊದಲಾದ ಸತ್ಪ್ರವೃತ್ತಿಗಳ ಸಾಪೇಕ್ಷತ್ವವು ಇಲ್ಲ. ಏಕೆಂದರೆ— ಅಸತ್ಪ್ರವೃತ್ತಿಯಿಂದ ಆನಂದಹ್ರಾಸಾದಿರೂಪ ವಿಶೇಷವಿದ್ದರೂ ಜ್ಞಾನಿಯಾದವನಿಗೆ ಮೋಕ್ಷಕ್ಕೆ ಪ್ರತಿಬಂಧವಿಲ್ಲ ಎನ್ನುವಲ್ಲಿ ಮೊದಲು **ಕಾಮಚಾರೇಣ ಚೈಕೇ** ಎನ್ನುವಲ್ಲಿ ಉದಾಹೃತವಾದ **ಕಾಮಚಾರಾಃ** ಎನ್ನುವ ಶ್ರುತಿಯಿಂದಲೇ. (ತಥಾಚ ಚ ಶ್ರುತಿಯಲ್ಲಿ ಸತ್ಕರ್ಮವನ್ನು ಮಾಡದಿರುವ, ಅಸತ್ಕರ್ಮವನ್ನು ಮಾಡುವ ಕಾಮಚಾರರಿಗೆ ಮೋಕ್ಷವನ್ನು ಹೇಳಿದ್ದರಿಂದ ಮೋಕ್ಷಸಾಧನದಲ್ಲಿ ಜ್ಞಾನಕ್ಕೆ ಅಗ್ನಿ ಹೋತ್ರಾದಿಗಳ ಅಪೇಕ್ಷೆಯಿಲ್ಲ) (೨) (ಸತ್ಪ್ರವೃತ್ತಿಯಿಂದ ಮೋಕ್ಷವಿಲ್ಲ ಅಸತ್ಪ್ರವೃತ್ತಿಯಿಂದ ಮೋಕ್ಷಕ್ಕೆ ಪ್ರತಿಬಂಧವಿಲ್ಲವೆಂದಾದರೆ ಸದಸತ್ಪ್ರವೃತ್ತಿಗಳಿಂದ ಜ್ಞಾನಿಗೆ ಹೇಗೆ ವಿಶೇಷವು ಎಂದರೆ) ಯಾರಿಗೆ ಜ್ಞಾನವು ಹುಟ್ಟಿಯದೋ, ಅವರಿಗೆ ಶುಭಾಶುಭ ಕರ್ಮಗಳನ್ನು ಮಾಡಿದರೂ ಮೋಕ್ಷವು ವಿನಿಶ್ಚಿತವಾಗಿದೆ. ಸತ್ಕರ್ಮಗಳಿಂದ ಮೋಕ್ಷದಲ್ಲಿ ಮನುಷ್ಯರಿಗೆ ಆನಂದವೃದ್ಧಿಯಾಗುತ್ತದೆ. ಅಸತ್ಕರ್ಮಗಳಿಂದ ಮುಕ್ತಿಯಲ್ಲಿ ಆನಂದಹ್ರಾಸಾದಿಗಳು ಆಗುತ್ತವೆ. (ಇದು ಮನುಷ್ಯವಿಷಯಕವು.) ಚತುರ್ಮುಖನಿಗಾದರೂ ಸ್ವೇಚ್ಛಾನುಸಾರಿ ಪ್ರವೃತ್ತಿಯಿಂದಲೇ ಮುಕ್ತಿಯಲ್ಲಿ ಅಪೇಕ್ಷಿತವಾದ ಸರ್ವಾನಂದಾದಿಗಳ ಆಧಿಕ್ಯವು ಆಗುತ್ತದೆ. ಹಾಗೆಯೇ ಬ್ರಹ್ಮೇತರ ಸರ್ವ ದೇವತೆಗಳಿಗೂ ಉತ್ತರೋತ್ತರದಲ್ಲಿ ಅಧಿಕವಾಗಿ ಪ್ರಾಯಶಃ ಸ್ವೇಚ್ಛಾನುಸಾರಿ ಪ್ರವೃತ್ತಿಯಿಂದಲೇ ಮುಕ್ತಿಯಲ್ಲಿ ಕ್ಲೃಪ್ತವಾದ ಸುಖಕ್ಕಿಂತಲೂ ಆಧಿಕ್ಯವು ಬರುವುದು. ಆದಕ್ಕಾಗಿ ಪ್ರಾಯಶಃ ಸತ್ಕರ್ಮಕರಣ ಅಸತ್ಕರ್ಮತ್ಯಾಗಗಳ ಅಪೇಕ್ಷೆಯು ಇಲ್ಲ ಎಂದು ಸೂತ್ರದಲ್ಲಿ ಮಾತ್ರ ಹೇಳಿದ್ದಲ್ಲ, ಬ್ರಹ್ಮತರ್ಕದಲ್ಲಿಯೂ ಹೇಳಿದೆ.

**ವಿಶೇಷಾಂಶ ॥** ಇಲ್ಲಿ ಮೋಕ್ಷಸಾಧನವೇ ಎಂದು ಹೇಳದೆ ಮೋಕ್ಷದಾನೇ ಎಂದು ಹೇಳಿದ್ದರಿಂದ **ಅಜ್ಞಾನಾಂ ಜ್ಞಾನದಃ, ವಿಷ್ಣುರ್ಜ್ಞಾನಿ ದಾತಾ ಮೋಕ್ಷಸ್ಯ, ಮೋಕ್ಷದಸ್ತು ಜನಾರ್ದನಃ** ಇತ್ಯಾದಿ ಪ್ರಮಾಣಗಳಿಂದ ಜ್ಞಾತನಾದ ಶ್ರೀಪರಮಾತ್ಮನೇ ಮೋಕ್ಷಪ್ರದನು, ಜ್ಞಾನದಾತನೂ ಅವನೇ. ಜ್ಞಾನದಲ್ಲಿ ಮೋಕ್ಷದಾತೃತ್ವವನ್ನು ಹೇಳಿದ್ದು ಔಪಚಾರಿಕವೆಂದು ಸೂಚಿತವಾಯಿತು. ॥ ೨೫ ॥ ೧೭ ॥

**ಪೀಠಿಕೆ ॥** ಸತ್ಪ್ರವೃತ್ತಿಗೆ ಮುಕ್ತಿಯಲ್ಲಿಯೇ ಉಪಯೋಗವು ಬರಲಿ. ಆಧಿಕ್ಯದಲ್ಲಿ ಉಪಯೋಗವೆಂದು ಏಕೆ ಹೇಳಬೇಕು, ಎಂದರೆ—

## ಸೂತ್ರ ॥ ಓಂ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ಓಂ ॥ ೨೬ ॥

**ಸೂತ್ರಾರ್ಥ ॥** ಜ್ಞಾನೋತ್ಪತ್ತಿಗಾಗಿಯೇ ಸರ್ವ ಧರ್ಮಗಳ ಅಪೇಕ್ಷೆಯು, ಮೋಕ್ಷಕ್ಕಾಗಿ ಅಲ್ಲ ವಿವಿದಿಷಂತಿ ಯಜ್ಞೇನ ದಾನೇನ ಇತ್ಯಾದಿ ಶ್ರುತಿಗಳಿಂದ, ಗಮನವು ಮುಗಿದ ಮೇಲೆ ಗಮನಸಾಧನಗಳಾದ ಅಶ್ವ ಮೊದಲಾದವುಗಳ ಅಪೇಕ್ಷೆಯು ಹೇಗೆ ಇಲ್ಲವೋ, ಹಾಗೆಯೇ ಜ್ಞಾನವು ಉಂಟಾದ ಮೇಲೆ ಜ್ಞಾನರೂಪ ಫಲಕ್ಕಾಗಿ ಜ್ಞಾನಕ್ಕಾಗಿ ಕರ್ಮಗಳ ಅಪೇಕ್ಷೆಯು ಇಲ್ಲ.

**ಭಾಷ್ಯ ॥ (೧) ಸರ್ವಧರ್ಮಾಪೇಕ್ಷಾ ಚ ಜ್ಞಾನಸ್ಯೋತ್ಪತ್ತೌ । ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ (ಬೃ.೬.೪.೨೨.) ಇತಿ ಶ್ರುತೇಃ । (೨) ಯಥಾ ಗತಿನಿಷ್ಪತ್ತ್ಯರ್ಥಮಶ್ವಾದಯೋಽಪೇಕ್ಷ್ಯಂತೇ ನ ವಿನಿಷ್ಪನ್ನಗತೇರ್ಗ್ರಾಮಾದಿ ಪ್ರಾಪ್ತೌ ॥ ೨೬ ॥ ೧೮ ॥**

**ಭಾಷ್ಯಾರ್ಥ ॥** (೧) (ಜ್ಞಾನಕ್ಕೆ ಮೋಕ್ಷದಾನದಲ್ಲಿ ಅಗ್ನಿಹೋತ್ರಾದಿ ಸತ್ಕರ್ಮಗಳ ಪ್ರವೃತ್ತ್ಯಪೇಕ್ಷೆಯು ಇಲ್ಲ. ಏಕೆಂದರೆ) ಜ್ಞಾನೋತ್ಪತ್ತಿಗಾಗಿಯೇ ಸರ್ವ ಧರ್ಮಗಳ ಅಪೇಕ್ಷೆಯು. (ಅಂದರೆ ಅಧ್ಯಾಪನ ಶೌರ್ಯ ವ್ಯಾಪಾರ ಶುಶ್ರೂಷಾದಿ ರೂಪಗಳಾದ ವರ್ಣಧರ್ಮಗಳೂ, ಗುರುಕುಲವಾಸ ಅಗ್ನಿಹೋತ್ರ ಪಂಚಯಜ್ಞ ತಪಸ್ಸು ಉಪಾಸ್ತ್ಯಾದಿ ರೂಪಗಳಾದ ಆಶ್ರಮಧರ್ಮಗಳೂ, ಶಮ ದಮ ಭಕ್ತ್ಯಾದಿ ರೂಪಗಳಾದ ಸಾಮಾನ್ಯಧರ್ಮಗಳೂ ಶ್ರಾದ್ಧಾದಿರೂಪಗಳಾದ ನೈಮಿತ್ತಿಕ ಧರ್ಮಗಳೂ ಇವುಗಳಲ್ಲಿ) ಅಪೇಕ್ಷೆಯು. (ಜ್ಞಾನವು ಹುಟ್ಟಿದ ಮೇಲೆ ಅಪೇಕ್ಷೆಯು ಇಲ್ಲ) ಜ್ಞಾನೋತ್ಪತ್ತಿಗಾಗಿಯೇ ಸರ್ವಧರ್ಮಾಪೇಕ್ಷೆಯು ಎನ್ನುವುದು ಯಾವುದರಿಂದ ತಿಳಿಯುತ್ತದೆ ಎಂದರೆ) ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಅನಶನ ವ್ರತದಿಂದಲೂ ಶ್ರೀಹರಿಯನ್ನು ನೋಡಲಿಕ್ಕೆ ಇಚ್ಛಿಸುತ್ತಾರೆ. ಎನ್ನುವ ಶ್ರುತಿಯಿಂದ (೨) ಸತ್ಕರ್ಮವು ಜ್ಞಾನಾರ್ಥವಾದುದಾಗ್ಯೂ ಮೋಕ್ಷಕ್ಕಾಗಿ ಅದು ಆವಶ್ಯಕ ವೆಂದು ಏಕೆ ಆಗಲಾರದೆಂದರೆ) ಹೇಗೆ ಪ್ರಯಾಣಸಾಧನಗಳಾದ ಅಶ್ವ ಗಜ ಮೊದಲಾದವುಗಳು ಪ್ರಯಾಣ ನಿಷ್ಪತ್ತಿಗಾಗಿಯೇ ಪುರುಷರಿಂದ ಅಪೇಕ್ಷಿಸಲ್ಪಡುತ್ತವೆ. ನಿವೃತ್ತಪ್ರಯಾಣವುಳ್ಳ ಪುರುಷನಿಗೆ ಪ್ರಯಾಣಸಾಧ್ಯ ಫಲವುಳ್ಳ ಗ್ರಾಮಾದಿಗಳ ಸಂಯೋಗದಲ್ಲಿ ಅಶ್ವಾದಿಗಳ ಅಪೇಕ್ಷೆಯು ಇಲ್ಲವೋ, (ಹಾಗೆಯೇ ಜ್ಞಾನಸಾಧನಗಳಾದ ಕರ್ಮಗಳು ಜ್ಞಾನಾರ್ಥವಾಗಿ ಅಪೇಕ್ಷಿಸಲ್ಪಡುತ್ತವೆ. ಜ್ಞಾನವು ಉಂಟಾದ ಮೇಲೆ ಜ್ಞಾನಫಲವಾದ ಮೋಕ್ಷಕ್ಕಾಗಿ ಕರ್ಮಗಳು ಅಪೇಕ್ಷಿತಗಳಲ್ಲ) ॥ ೨೬ ॥ ೧೮ ॥

**ಪೀಠಿಕೆ ॥** ಜ್ಞಾನದಿಂದಲೇ ಮೋಕ್ಷದಲ್ಲಿ ಆಧಿಕ್ಯವೂ ಹ್ರಾಸಾಭಾವವೂ ಕೂಡುವುದರಿಂದ ಸದಸತ್ಪ್ರವೃತ್ತಿಗಳಿಂದ ಜ್ಞಾನಿಗೆ ವಿಶೇಷವಿಲ್ಲದಿರುವ ಪ್ರಯುಕ್ತ ಜ್ಞಾನಿಯು ಸತ್ಕರ್ಮವನ್ನು ಮಾಡಬೇಕು. ಅಸತ್ಕರ್ಮವನ್ನು ಬಿಡಬೇಕೆಂಬುವುದು ಇಲ್ಲವೆಂದು ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಶಮದಮಾದ್ಯುಪೇತಃ ಸ್ಯಾತ್ತಥಾऽಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ಓಂ ॥ ೨೭ ॥

**ಸೂತ್ರಾರ್ಥ ॥** ಜ್ಞಾನವೇ ಮುಕ್ತಿಗೆ ಕಾರಣವಾದಾಗ್ಯೂ ಜ್ಞಾನಿಯು ಶಮ (ಶ್ರೀ ಹರಿಯಲ್ಲಿ ಆಸಕ್ತವಾದ ಬುದ್ಧಿ ಇರುವಿಕೆಯು) ದಮ (ಇಂದ್ರಿಯ ನಿಗ್ರಹ) ಮೊದ ಲಾದ ಸತ್ಪ್ರವೃತ್ತಿಗಳಿಂದ ಯುಕ್ತನು ಆಗುವನು. ನಿಷಿದ್ಧಕರ್ಮಹೀನನೂ ಆಗುವನು. ಆಚಾರ್ಯಾದ್ವಿದ್ಯಾಮವಾಪ್ಯ ಇತ್ಯಾದಿಗಳಿಂದ ಜ್ಞಾನಿಯು ಶಮಾದಿ ಯುಕ್ತನಾಗಬೇಕೆಂದು ವಿಧಿಸಿದ್ದರಿಂದ, ಜ್ಞಾನಾಂಗವಾಗಿ (ಜ್ಞಾನದ ವೃದ್ಧಿಗಾಗಿ) ಆ ಶಮಾದಿಗಳು ಅವಶ್ಯವಾಗಿ ಅನುಷ್ಠೇಯಗಳಾಗಿರುವುದರಿಂದ.

**ಭಾಷ್ಯ ॥ (೧) ಯದ್ಯಪಿ ಜ್ಞಾನೇನೈವ ಮೋಕ್ಷೋ ನಿಯತಸ್ತಥಾऽಪಿ ಜ್ಞಾನೀ ಶಮದಮಾದ್ಯುಪೇತಃ ಸ್ಯಾತ್ । (೨) ಆಚಾರ್ಯಾದ್ವಿದ್ಯಾಮವಾಪ್ಯೈತಮಾತ್ಮಾನಮಭಿಪಶ್ಯನ್ ಶಾಂತೋ ಭವದ್ದಾಂತೋ ಭವೇದನುಕೂಲೋ ಭವೇದಾಚಾರ್ಯಂ ಪರಿಚರೇತ್ಪರಿಚರೇದಾಚಾರ್ಯಂ । ಇತಿ ಮಾಠರಶ್ರುತೌ ಜ್ಞಾನಿನೋऽಪಿ ತದ್ವಿಧೇಃ ॥ ೧೯ ॥**

**ಭಾಷ್ಯಾರ್ಥ ॥** (೧) ಯದ್ಯಪಿ ಜ್ಞಾನಿಗಳಿಗೆ ಜ್ಞಾನದಿಂದಲೇ ಮೋಕ್ಷವು ನಿಯತವಾಗಿದೆ. ಆದಾಗ್ಯೂ ಜ್ಞಾನಿಯು ಶಮ ದಮ ಮೊದಲಾದ ಸತ್ಪ್ರವೃತ್ತಿಗಳಿಂದ ಯುಕ್ತನಾಗಬೇಕು. ನಿಷಿದ್ಧಕರ್ಮ ಪ್ರವೃತ್ತಿರಹಿತನೂ ಆಗುವನು. (೨) ಆಚಾರ್ಯರ ಉಪದೇಶದಿಂದ ಪರೋಕ್ಷಜ್ಞಾನವನ್ನು ಹೊಂದಿ ಹೃದ್ಗತನಾದ ಪರಮಾತ್ಮನನ್ನು ನೋಡಿ ಶ್ರೀಹರಿಯಲ್ಲಿ ಆಸಕ್ತನೂ ಇಂದ್ರಿಯನಿಗ್ರಹವುಳ್ಳವನೂ ಆಗುವನು. ಸಜ್ಜನರಿಗೆ ಅನುಕೂಲವಾಗುವನು. ಆಚಾರ್ಯರನ್ನು ಸೇವಿಸಬೇಕು. ಆಚಾರ್ಯರಿಗೆ ಸಮರಾದ ತಮ್ಮಿಂದ ದೊಡ್ಡವರನ್ನು ಬಹುಮಾನಿಸಿ ಸೇವಿಸಬೇಕು. ಎನ್ನುವ ಮಾಠರ ಶ್ರುತಿಯಲ್ಲಿ ಮೋಕ್ಷನಿಯಮವುಳ್ಳ ಜ್ಞಾನಿಗೂ ಶಮಾದಿಗಳನ್ನು ವಿಧಾನ ಮಾಡಿದ್ದರಿಂದಲೂ, ನ ಹಂತವ್ಯಃ ಇತ್ಯಾದಿ ನಿಷೇಧವಿದ್ದುದರಿಂದಲೂ, ಜ್ಞಾನಸಾಧ್ಯ ಮೋಕ್ಷದಲ್ಲಿ ಅತಿಶಯಕ್ಕಾಗಿ ಶಮದಮಾದಿಸತ್ಕರ್ಮಗಳು ಆವಶ್ಯಕಗಳು. ॥ ೧೯ ॥

**ಪೀಠಿಕೆ ॥** ಜ್ಞಾನದಿಂದಲೇ ಸಂಸಾರದುಃಖ ನಿವೃತ್ತಿಯಂತೆ ಆನಂದಾತಿಶಯವೂ ಸಿದ್ಧಿಸುವುದರಿಂದ ಶಮಾದಿ ವಿಧಿಯು ವ್ಯರ್ಥವು ಎಂದರೆ—

**ಭಾಷ್ಯ ॥ ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ ವೇದಾಃ ಸರ್ವಾಂಗಾನಿ ಸತ್ಯಮಾಯತನಂ ಯೋ ವಾ ಏತಾ (ಮುಪನಿಷದ)ಮೇವಂ ವೇದ** (ಕೇನ.೪.೩.೯.) **ಇತಿ ಜ್ಞಾನಾಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ॥ ೨೦ ॥**

**ಭಾಷ್ಯಾರ್ಥ ॥** (ಉಪನಿಷದಂ ಭೋ ಬ್ರೂಹಿ ಎಂದು ರುದ್ರದೇವರು ಬ್ರಹ್ಮದೇವರನ್ನು ಕುರಿತು ಪ್ರಶ್ನಿಸಿದಾಗ) ನಿನಗೋಸ್ಕರ ಪರಬ್ರಹ್ಮ ಪ್ರತಿಪಾದಕವಾದ ವಿದ್ಯೆಯನ್ನು ನಿಸ್ಸಂಶಯವಾಗಿ ಹೇಳಿದವು

ಎಂದು ರುದ್ರನನ್ನು ಕುರಿತು ಬ್ರಹ್ಮದೇವರು ಹೇಳಿದರು. (ಚೆನ್ನಾಗಿಯೇ ನಾನು ಉಪನಿಷತ್ ಸ್ವರೂಪವನ್ನು ಹೇಳಿದೆನು. ಬ್ರಹ್ಮನು ಸಾಕಲ್ಯೇನ ಅಗೋಚರನು. ಆ ವಿದ್ಯೆಗೆ, ಕೃಚ್ಛ್ರಚಾಂದ್ರಾಯಣಾದಿಗಳು ಅಥವಾ ಶಾಸ್ತ್ರಪ್ರವಚನವು, ಇಂದ್ರಿಯನಿಗ್ರಹವು ವರ್ಣಾಶ್ರಮೋಚಿತ ಕರ್ಮವು, ಇವುಗಳು ಪ್ರತಿಷ್ಠಾಪಕಗಳು, (ವಿದ್ಯಾಸ್ಥಿತಿಗೆ ಕಾರಣಗಳು) (ತಪಸ್ಸು ಮೊದಲಾದವುಗಳು ಇರುವವರಲ್ಲಿ ಸರ್ವವಿದ್ಯೆಗಳು ಇರುತ್ತವೆ.) ಋಗಾದಿ ವೇದಗಳು ತದನುಕೂಲ ಗ್ರಂಥಗಳು, ಶಿಕ್ಷಾ ಕಲ್ಪ ವ್ಯಾಕರಣ ನಿರುಕ್ತ ಛಂದ ಜ್ಯೋತಿಷ ಎನ್ನುವ ಷಡಂಗಗಳು, ಮೀಮಾಂಸಾ ಶಾಸ್ತ್ರವು-ಇವುಗಳು ಆ ವಿದ್ಯೆಗೆ ಉತ್ಪತ್ತಿ ಕಾರಣಗಳು, (ಈ ಉಪನಿಷತ್ ಜ್ಞಾನಿಗೆ ಫಲವನ್ನು ಹೇಳುತ್ತಾರೆ.) ಯಾವ ಅಧಿಕಾರಿಯು ಈ ಉಪನಿಷತ್ತನ್ನು ತಿಳಿಯುತ್ತಾನೋ, (ಆತನು ಅಪರಿಚ್ಛಿನ್ನನೂ ಸ್ವರೂಪಸುಖಜ್ಞಾನಾತ್ಮಕನೂ ಪ್ರಕಾಶಮಾನನೂ ಸರ್ವೋತ್ತಮನೂ ಆದ ಪರಬ್ರಹ್ಮನ ಸಮೀಪದಲ್ಲಿ ಇರುತ್ತಾನೆ) ಎಂದು ಶಮದಮಾದಿಗಳಿಗೆ ಜ್ಞಾನಪ್ರತಿಷ್ಠಾಪಕವಾಗಿ (ಅಂದರೆ ಜ್ಞಾನವೃದ್ಧಿಗಾಗಿ ಪ್ರತಿದಿನದಲ್ಲಿಯೂ ಶಮಾದಿಗಳನ್ನು ಅವಶ್ಯವಾಗಿ ಮಾಡುವಿಕೆ) ಜ್ಞಾನಫಲಪೂರ್ತಿಗಾಗಿ ಅವಶ್ಯವಾಗಿ ಅನುಷ್ಠೇಯತ್ವವಿದ್ದುದರಿಂದ ಜ್ಞಾನಿಗಳಲ್ಲಿರುವ ಶಮದಮಾದಿಗಳಿಗೆ ವೈಯರ್ಥ್ಯವಿಲ್ಲ. ॥ ೨೧ ॥

**ಪೀಠಿಕೆ ॥** ಜ್ಞಾನದಿಂದಲೇ ಮೋಕ್ಷವು ಸಿದ್ಧಿಸುವಾಗ ತಪಸ್ಸು ಮೊದಲಾದವುಗಳಿಂದ ಏನು ಪ್ರಯೋಜನವು? ಎಂದರೆ—

**ಭಾಷ್ಯ ॥ ಯಸ್ಯ ಜ್ಞಾನಂ ತಸ್ಯ ಮೋಕ್ಷ ಇತಿ ನಾತ್ರ ವಿಚಾರಣಾ । ತಸ್ಯ ಶಾಂತ್ಯಾದಯೋಽಂಽಗಾನಿ ತಸ್ಮಾತ್ತೇಷಾಮನುಷ್ಠಿತಿಃ ॥ ಅವಶ್ಯ ಕರಣೀಯಾ ಸ್ಯಾದನ್ಯಥಾಽಲ್ಪಫಲಂ ಭವೇತ್ । ಇತಿ ಚಾಗ್ನೇಯೇ ॥ ತು ಶಬ್ದಃ ಪೂರ್ಣಫಲಾರ್ಥತ್ವಂ ಸೂಚಯತಿ ॥ ೨೭ ॥ ೨೧ ॥**

**ಭಾಷ್ಯಾರ್ಥ ॥** ಯಾರಿಗೆ ಬ್ರಹ್ಮಾಪರೋಕ್ಷಜ್ಞಾನವು ಇದೆಯೋ ಆತನಿಗೆ ಮೋಕ್ಷವು ಈ ವಿಷಯದಲ್ಲಿ ವಿಚಾರವಿಲ್ಲ. ಆ ಜ್ಞಾನಕ್ಕೆ ಶಮದಮಾದಿಗಳು ಅಂಗಗಳು. (ಅಂದರೆ ಜ್ಞಾನಾಭಿವೃದ್ಧಿಗೆ ಉಪಯುಕ್ತಗಳು.) ಅಂತೂ ಜ್ಞಾನದಿಂದ ಸಂಪೂರ್ಣ ಮೋಕ್ಷವನ್ನು ಸಾಧಿಸಲಿಕ್ಕೆ ಉಪಯುಕ್ತಗಳಾಗುತ್ತವೆ. ಜ್ಞಾನದಿಂದ ಮೋಕ್ಷವು ಆಗುವುದಾದರೂ ಶಮದಮಾದ್ಯಂಗಗಳಿಂದ ಜ್ಞಾನವು ಯುಕ್ತವಾದರೆ ಅದರಿಂದ ಸಂಪೂರ್ಣವಾಗುತ್ತದೆ. ಶಮಾದಿಗಳು ಸಂಪೂರ್ಣ ಮೋಕ್ಷಸಾಧನಗಳಾದುದರಿಂದ ಆ ಶಮಾದಿಗಳ ಅನುಷ್ಠಾನವು ಜ್ಞಾನೋತ್ತರಕಾಲದಲ್ಲಿಯೂ ಅವಶ್ಯವಾಗಿ ಮಾಡಬೇಕು. ಶಮದಮಾದಿಗಳನ್ನು ಮಾಡದಿದ್ದರೆ ಮತ್ತು ಅಸತ್ಕರ್ಮವನ್ನು ಮಾಡಿದರೆ ಪ್ರಾಪ್ತವ್ಯಕ್ಕೆ ಹ್ರಾಸವೂ ಸಂಪೂರ್ಣ ಅಭಿವ್ಯಕ್ತ್ಯಭಾವವೂ ಆಗುವದು. (ಅಂತೂ ಅಶೇಷಾನಂದಕ್ಕೆ ಅಭಿವ್ಯಕ್ತಿಯು ಆಗುವುದಿಲ್ಲ) ಎಂದು ಆಗ್ನೇಯ ಪುರಾಣದಲ್ಲಿ ಹೇಳಿಯದೆ. (ಶ್ರುತ್ಯುಕ್ತವಾದ ಪ್ರಮೇಯವನ್ನು ಸೂತ್ರದಲ್ಲಿ ಏಕೆ ಹೇಳಿಲಿಲ್ಲವೆಂದರೆ) ಸೂತ್ರದಲ್ಲಿದ್ದ ತು ಶಬ್ದವು ಶಮದಮಾದಿಗಳಿಗೆ ಫಲಪೂರ್ತಿಪ್ರಯೋಜಕತ್ವವನ್ನೂ ಅಸತ್ಪ್ರವೃತ್ತಿಗೆ ಅಲ್ಪಫಲವತ್ವವನ್ನೂ ಸೂಚಿಸುತ್ತದೆ. ॥ ೨೭ ॥ ೨೧ ॥

**ಪೀಠಿಕೆ ॥** ಸದಸತ್ಪ್ರವೃತ್ತಿಗಳಿಂದ ಜ್ಞಾನಿಗೆ ವಿಶೇಷವಿದ್ದರೆ ಏವಂವಿನ್ನಿಖಿಲಂ ಭಕ್ಷಯೀತ

ಎನ್ನುವುದರಿಂದ ನಿಷಿದ್ಧವಾದ ಅನ್ನವನ್ನು ಭೋಜನ ಮಾಡಿದರೂ ಹ್ರಾಸವಿಲ್ಲವೆಂದು ಹೇಳಿದ್ದು ಹೇಗೆ ಕೂಡುತ್ತದೆ ಎಂಬ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ಓಂ ॥ ೨೮ ॥

**ಸೂತ್ರಾರ್ಥ ॥** ಯದಿ ಹ ವಾವ ಎನ್ನುವ ಶ್ರುತಿಯಲ್ಲಿ ನಿಖಿಲ ನಿಷಿದ್ಧ ಅನ್ನಭಕ್ಷಣಾಭ್ಯನಜ್ಞೆ ಯಾದರೂ ಜ್ಞಾನಿಗಳಿಗೆ ಪ್ರಾಣಪರಿತ್ಯಾಗವಿಷಯಕವು ಅಂದರೆ ಪ್ರಾಣ ಹೋಗುವ ಕಾಲದಲ್ಲಿ ಜ್ಞಾನಿಯು ನಿಷಿದ್ಧವಾದ ಅನ್ನವನ್ನು ಊಟಮಾಡಿದರೂ ಅದರಿಂದ ಅವನಿಗೆ ವಿಶೇಷವಿಲ್ಲ ಎಂದು ಪ್ರಾಣಹಾನಿಪ್ರಸಕ್ತಿಕಾಲವಿಷಯಕವು. ಶ್ರುತಿಯು ಪ್ರಾಣಾತ್ಯಯವಿಷಯಕವು ಎನ್ನುವಲ್ಲಿ ಲಿಂಗವು ಕಂಡದ್ದರಿಂದ. ನ ವಾ ಅಜೀವಿಷ್ಯಂ ಎಂದು ಲಿಂಗಪ್ರತಿಪಾದಕ ಶ್ರುತಿಯ ದೆಶೆಯಿಂದ.

**ಭಾಷ್ಯ ॥ (೧) ಯದಿ ಹ ವಾ ಅಪ್ಯೇವಂವಿನ್ನಿಖಿಲಂ (ವಾ ಏವಂ) ಭಕ್ಷಯೀತ್ಯೆವಮೇವ ಸ ಭವತೀತಿ ಸರ್ವಾನ್ನಾನುಮತಿಃ । ಪ್ರಾಣಾತ್ಯಯವಿಷಯಾ । (೨) ನ ವಾ ಅಜೀವಿಷ್ಯಮಿಮಾನಖಾದನ್ನಿತಿ ಹೋವಾಚ ಕಾಮೋ ಮ ಉಪದಾನಂ (ಛಾ.೧.೧೦.೪.) । ಇತಿ ದರ್ಶನಾತ್ ॥ ೨೮ ॥ ೨೨ ॥**

**ಭಾಷ್ಯಾರ್ಥ ॥** (೧) ಹಿಂದೆ ಹೇಳಿದ ಪ್ರಕಾರ ಬ್ರಹ್ಮಜ್ಞಾನಿಯು ನಿಷಿದ್ಧ ಪದಾರ್ಥವನ್ನು ಅನಿಷಿದ್ಧವಸ್ತುವನ್ನು ಎಲ್ಲವನ್ನು ಭಕ್ಷಿಸಿದರೂ ಆವಾಗಲೂ ಆತನು ಮುಕ್ತನೇ ಆಗುತ್ತಾನೆ. ಇಂತಹ ನಿಷಿದ್ಧ ಅನಿಷಿದ್ಧ ಸರ್ವಭಕ್ಷಣಾಭ್ಯನುಜ್ಞಾ ಶ್ರುತಿಯು ಪ್ರಾಣ ಹೋಗುವ ಕಾಲದಲ್ಲಿ ಜ್ಞಾನಿಯು ನಿಷಿದ್ಧ ಪದಾರ್ಥವನ್ನು ತಿಂದರೂ ಅದರಿಂದ ಆತನಿಗೆ ವಿಶೇಷವಿಲ್ಲ, ಈ ಪ್ರಕಾರ ಪ್ರಾಣಹಾನಿಪ್ರಸಕ್ತಿಕಾಲ ವಿಷಯಕವು. (ಸಾಧಾರಣ ಶ್ರುತಿಗೆ ಪ್ರಾಣಾತ್ಯಯವಿಷಯಕತ್ವವನ್ನು ಹೇಗೆ ಕಲ್ಪಿಸುವುದು ಎಂದರೆ.) (೨) ನ ವಾ ಅಜೀವಿಷ್ಯಂ ಎನ್ನುವ ಶ್ರುತಿಯಲ್ಲಿ ಲಿಂಗವು ಕಂಡದ್ದರಿಂದ. (ಚಕ್ರಾಯಣರ ಪುತ್ರರಾದ ಉಷಸ್ತಿ ಋಷಿಗಳು ಅತಿವೃಷ್ಟಿಯಿಂದ ದುರ್ಭಿಕ್ಷೆ ಯಂಟಾಗುತ್ತಿರಲು ತನ್ನ ಹೆಂಡತಿಯಿಂದೊಡಗೂಡಿ ಒಬ್ಬ ಧನಿಕನ ಗ್ರಾಮದಲ್ಲಿ ಆವಾಸ ಮಾಡಿದರು. ಆ ಉಷಸ್ತಿ ಋಷಿಗಳು ಅನ್ನಾರ್ಥಿಗಳಾಗಿ ಸಂಚರಿಸುತ್ತಾ ಕುಲ್ಮಾಷ = ಹೆಸರು, ವಾ ಕುತ್ಸಿತಗಳಾದ ವನಮಾಷಗಳನ್ನು ತಿನ್ನುತ್ತಿದ್ದ ಧನಿಕನ ಹತ್ತಿರ ಬೇಡಿದರು. ಆತನು ಈ ಋಷಿಗಳಿಗೆ ಕುಲ್ಮಾಷಗಳನ್ನು ಕೊಟ್ಟು ಉಚ್ಛಿಷ್ಟ ಜಲಪಾನವನ್ನು ಮಾಡಿರಿ ಎಂದು ಬೇಡಿದನು. ಹೀಗೆ ಧನಿಕನಿಂದ ಪ್ರಾರ್ಥಿತರಾದ ಮುನಿಗಳು ಜಲಪಾನ ಮಾಡಿದರೆ ಉಚ್ಛಿಷ್ಟವನ್ನು ಕುಡಿದಂತೆ ಆಗುವುದು ಎಂದು ಹೇಳಿದರು. ಆಗ ಧನಿಕನು ಈ ಕುಲ್ಮಾಷಗಳು ಉಚ್ಛಿಷ್ಟಗಳು ಅಲ್ಲವೋ ಎಂದನು. ಆಗ ಆ ಋಷಿಗಳು ಈ ಕುಲ್ಮಾಷಗಳನ್ನು ನಾನು ಭಕ್ಷಿಸದೆ ಇದ್ದರೆ ನಾನು ಬದುಕಲಾರೆ, (ಆದಕಾರಣ ಪ್ರಾಣ ಹೋಗುವ ಕಾಲದಲ್ಲಿ ದೋಷವಿಲ್ಲದಿರುವುದರಿಂದ ಆ ಕುಲ್ಮಾಷಗಳು ಭಕ್ಷಿತಗಳಾದವು.) ಜಲಪಾನವಾದರೂ ನನ್ನ ಇಚ್ಛಾಧೀನವಾಗಿ ಈಗ ಅದೆ. (ವ್ಯರ್ಥವಾಗಿ ಉಚ್ಛಿಷ್ಟವಾದ ಜಲವನ್ನು ಸ್ವೀಕಾರ ಮಾಡಿದರೆ ದೋಷವು ಬರುವುದರಿಂದ ಜಲವನ್ನು ಕುಡಿಯುವುದಿಲ್ಲ.) ಇಂತಹ ಜೀವನಕ್ಕೆ ಉಪಯುಕ್ತವಾದ ನಿಷಿದ್ಧ ವಸ್ತುಭಕ್ಷಣಾನುಮತಿ, ಅದಕ್ಕಿಂತ

ಅಧಿಕವಾದ ರಾಗಪ್ರಾಪ್ತವಾದ ಜಲಪಾನ ಪ್ರತ್ಯಾಖ್ಯಾನ ರೂಪವಾದ ಲಿಂಗಪ್ರತಿಪಾದಕವಾದ ಮುನಿಗಳ ವಚನದರ್ಶೆಯಿಂದ (ಜ್ಞಾನಿಗಳಿಗೂ ನಿಷಿದ್ಧಾನ್ನ ಭೋಜನವು ಪ್ರಾಣಾತ್ಯಯ ವಿಷಯಕವು ಎಂದು ತಿಳಿಯುತ್ತದೆ. ಆದಕಾರಣ ಜ್ಞಾನಿಗಳೂ ಅತ್ಯಾಪಸ್ತು ಇಲ್ಲದಿರುವಾಗ ನಿಷಿದ್ಧವನ್ನು ಮಾಡಲೇಬಾರದು.) ॥ ೨೮ ॥ ೨೨ ॥

**ಪೀಠಿಕೆ ॥** ಜ್ಞಾನಿಗಳಿಗೆ ಸದಸತ್ಪ್ರವೃತ್ತಿಗಳಲ್ಲಿ ವಿಶೇಷವಿಲ್ಲವೆನ್ನುವುದು ೧ ಜ್ಞಾನಿಗಳಿಗೆ ನಿಷಿದ್ಧಕರ್ಮವನ್ನು ಮಾಡದಿದ್ದರೆ ಬಾಧಕವು ಇದ್ದ ಪ್ರಯುಕ್ತವೋ, ೨ ಮಾಡಬೇಕೆನ್ನುವ ವಿಷಯದಲ್ಲಿ ಪ್ರಮಾಣವಿದ್ದ ಪ್ರಯುಕ್ತವೋ. ೩. ನಿಷೇಧಕ ಪ್ರಮಾಣವಿಲ್ಲದಿರುವುದರಿಂದಲೋ, ೪ ಮಾಡಿದರೆ ಬಾಧಕವು ಇಲ್ಲದಿರುವುದರಿಂದ ಲೋ, ೧ನೇದ್ದು ಅಯುಕ್ತವೆನ್ನುತ್ತಾರೆ—

## ಸೂತ್ರ ॥ ಓಂ ಅಬಾಧಾಚ್ಚ ಓಂ ॥ ೨೯ ॥

**ಸೂತ್ರಾರ್ಥ ॥** ಕೇವಲ ನಿಷಿದ್ಧಕರ್ಮವನ್ನು ಮಾಡಿದರೆ ಸಾಧಕಪ್ರಮಾಣವು ಇಲ್ಲದಿರುವುದರಿಂದ ಮಾತ್ರ ಜ್ಞಾನಿಗಳಿಗೆ ಸದಸತ್ಪ್ರವೃತ್ತಿಗಳಲ್ಲಿ ಅವಿಶೇಷವು ಯುಕ್ತವಲ್ಲವೆಂದಲ್ಲ, ಮತ್ತೆ ನಿಷಿದ್ಧಕರ್ಮವನ್ನು ಮಾಡದಿದ್ದರೆ ಬಾಧಕಪ್ರಮಾಣವು ಇಲ್ಲದಿರುವುದರಿಂದಲೂ ನಿಷಿದ್ಧಕರ್ಮವನ್ನು ಮಾಡಬಾರದು. ಮತ್ತು (೨ನೇದ್ದು ಅಯುಕ್ತವು.) ಜ್ಞಾನಿಯು ನಿಷಿದ್ಧಕರ್ಮವನ್ನು ಮಾಡಬೇಕೆನ್ನುವ ವಿಷಯದಲ್ಲಿ ಪ್ರಮಾಣವು ಅಸಿದ್ಧವೇ ಆಗಿದೆ.

**ಭಾಷ್ಯ ॥ ಅನ್ಯಾಯ್ಯ(ಯ)ಚರಣಾಭಾವೇ ನ ಹಿ ಜ್ಞಾನಸ್ಯ ಬಾಧನಂ। ಅತೋ ವಿದ್ವಾನಪಿ ನ್ಯಾಯ್ಯಂ ವರ್ತೇತೋತ್ಕರ್ಷಸಿದ್ಧಯೇ। ಇತಿ(ಚ) ಬ್ರಹ್ಮತರ್ಕೇ ॥ ೨೯ ॥ ೨೩ ॥**

**ಭಾಷ್ಯಾರ್ಥ ॥** ನಿಷಿದ್ಧಾನುಷ್ಠಾನ ಮಾಡದಿದ್ದರೆ ಜ್ಞಾನಕ್ಕೆ ಬಾಧಕವಿಲ್ಲ. ಆದಕಾರಣ ಅಜ್ಞಾನಿಯು ಮಾತ್ರವಲ್ಲ. ಜ್ಞಾನಿಯೂ ಕೂಡ ಮೌಕ್ತಾನಂದಾತಿಶಯಾದಿರೂಪವಾದ ಉತ್ಕರ್ಷವು ಸಿದ್ಧಿಸುವುದಕ್ಕಾಗಿ ಯೋಗ್ಯ ಸತ್ಕರ್ಮವನ್ನೇ ಅನುಸರಿಸಬೇಕು. ಹೀಗೆ ಬ್ರಹ್ಮತರ್ಕದಲ್ಲಿ ಹೇಳಿದ ಪ್ರಯುಕ್ತ ಜ್ಞಾನಿಯೂ ನಿಷಿದ್ಧಕರ್ಮವನ್ನು ಮಾಡಬಾರದು. ॥ ೨೯ ॥ ೨೩ ॥

**ಪೀಠಿಕೆ ॥** ನಿಷೇಧಕ ಪ್ರಮಾಣವಿಲ್ಲದಿರುವ ಪ್ರಯುಕ್ತ ಜ್ಞಾನಿಗಳಿಗೆ ಸದಸತ್ಪ್ರವೃತ್ತಿಯಲ್ಲಿ ವಿಶೇಷವಿಲ್ಲವೆನ್ನುವ ೨ನೇ ಕಲ್ಪವನ್ನು ನಿಷೇಧಕ ಸ್ಮೃತಿಯಿದ್ದ ಪ್ರಯುಕ್ತ ಯುಕ್ತವಲ್ಲ ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಪಿ ಸ್ಮರ್ಯತೇ ಓಂ ॥ ೩೦ ॥

**ಭಾಷ್ಯ ॥ ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ । ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರತ್ಯಜೇತ್ ॥ ಇತಿ ಹರಿವಂಶೇಷು ॥ ೩೦ ॥ ೨೪ ॥**

**ಭಾಷ್ಯಾರ್ಥ ॥** ಯಾರು ಭಗವದಪರೋಕ್ಷಜ್ಞಾನಿಗಳೋ ಅವರು ಭೂತಭವಿಷ್ಯಜ್ಞಾನವುಳ್ಳವರೂ ಮೂರು ಲೋಕಗಳನ್ನು ಪಾಪದಿಂದ ಉದ್ಧರಿಸಲಿಕ್ಕೆ ಶಕ್ತರಾದವರೂ ಆಗುತ್ತಾರೆ.

ಇಂತಹವರೂ ಕೂಡ ಶ್ರುತ್ಯುಕ್ತವಾದ ಸದಾಚಾರವನ್ನೂ ಸ್ಮೃತ್ಯುಕ್ತವಾದ ಆಚಾರವನ್ನೂ ಬಿಡಬಾರದು. ಮತ್ತು ಶ್ರುತಿಸ್ಮೃತಿವಿರುದ್ಧವಾದುದನ್ನು ಬಿಡಬೇಕು. ಹೀಗೆ ಹರಿವಂಶಗಳಲ್ಲಿ ಹೇಳಿದೆ. ಆದ ಪ್ರಯುಕ್ತ ಸದ್ಧರ್ಮ ಅತ್ಯಾಗಾದಿಗಳು ಸ್ಮೃತಿಸಿದ್ಧಗಳೂ ಆಗಿವೆ. (ಏವಂಚ ಸದ್ಧರ್ಮತ್ಯಾಗದಲ್ಲಿ ನಿಷೇಧಕ ಸ್ಮೃತಿಯು ಇದೆ.) ॥ ೩೦ ॥ ೨೪ ॥

**ಪೀಠಿಕೆ** ॥ ನಿಷಿದ್ಧಾಚರಣವನ್ನು ನಿಷೇಧಿಸತಕ್ಕದು, ಸ್ಮೃತಿಮಾತ್ರವಲ್ಲ. ಶ್ರುತಿಯೂ ಅದೆ ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಹೇಳುತ್ತಾರೆ. ಅಲ್ಲದೆ ಬಾಧಕವು ಇಲ್ಲದಿರುವುದರಿಂದಲೂ ಸದಸತ್ಪ್ರವೃತ್ತಿಯಲ್ಲಿ ವಿಶೇಷವಿಲ್ಲ ಎನ್ನುವುದೂ ಅಯುಕ್ತವೆನ್ನುತ್ತಾರೆ—

## ಸೂತ್ರ ॥ ಓಂ ಶಬ್ದಶ್ಚಾತೋ ಕಾಮಚಾ(ಕಾ)ರೇ ಓಂ ॥ ೩೧ ॥

**ಭಾಷ್ಯ ॥ ಸ ಯ ಏತದೇವಂವಿದೇವಂ ಮನ್ವಾನ ಏವಂ ಪಶ್ಯನ್ನ ಕಾಮಚರಿತಂ ಚರೇನ್ನ ಕಾಮಂ ಭಕ್ಷಯೀತ ನ ಕಾಮಮನುವರ್ತೇತ । ಇತಿ ಕೌಂಡಿನ್ಯಶ್ರುತೌ ॥ ೩೧ ॥ ೨೫ ॥**

**ಭಾಷ್ಯಾರ್ಥ** ॥ ಯಾವ ಅಧಿಕಾರಿಯು ಈ ಭಗವತ್ತತ್ತ್ವವನ್ನು ತಿಳಿದವನು ಅಥವಾ ಬ್ರಹ್ಮನನ್ನು ಅನಂತಗುಣಗಳುಳ್ಳವನೆಂದು ಶ್ರವಣದಿಂದ ವಿಷಯೀಕರಿಸುತ್ತಾನೋ ಬ್ರಹ್ಮವಿಷಯಕ ಮನನ ಧ್ಯಾನಗಳನ್ನು ಮಾಡುತ್ತಾನೋ ಆ ಮೇಲೆ ಪ್ರತ್ಯಕ್ಷೀಕರಿಸುತ್ತಾನೋ ಆತನೂ ಸ್ವೇಚ್ಛಾನುಸಾರವಾಗಿ ಸಂಚರಿಸಬಾರದು. ಯಥೇಚ್ಛವಾಗಿ ಭಕ್ಷಿಸಬಾರದು. ನಿಷಿದ್ಧರಾಗವನ್ನು ಸರ್ವಕಾಮ್ಯವನ್ನಾಗಲೀ ಅನುಸರಿಸಬಾರದು. ಹೀಗೆ ಕೌಂಡಿನ್ಯಶ್ರುತಿಯಲ್ಲಿ ಉಕ್ತವಾಗಿದೆ. ಆದಕಾರಣ ಕಾಮಚರಣಾಭಾವದಲ್ಲಿ ಅಂದರೆ ಅಸತ್ಪ್ರವೃತ್ತಿಯನ್ನು ಮಾಡದಿರುವ ವಿಷಯದಲ್ಲಿ ಸ ಯ ಏವಂವಿತ್ ಎನ್ನುವ ಶ್ರುತಿಯೂ ಅದೆ. ಆದುದರಿಂದ ಅಲ್ಪ ಫಲವಿದ್ದ ಪ್ರಯುಕ್ತವೂ ಜ್ಞಾನಿಗೂ ಅಸತ್ಪ್ರವೃತ್ತಿಯು ಯುಕ್ತವಲ್ಲ. ॥ ೩೧ ॥ ೨೫ ॥

**ಪೀಠಿಕೆ** ॥ ನಿಷಿದ್ಧಕರ್ಮವನ್ನು ಮಾಡಿದರೆ ಬಾಧಕವಿಲ್ಲದಿರುವುದರಿಂದ ನಿಷಿದ್ಧಕರ್ಮವನ್ನು ಮಾಡುವುದೆಂದರೆ—

**ಭಾಷ್ಯ ॥ (೧) ಅತ ಇತ್ಯಲ್ಪಫಲತ್ವಂ ಸೂಚಯತಿ । (೨) ನ ನಿಷಿದ್ಧಾನಿ ವರ್ತೇತ ಪೂರ್ಣಜ್ಞಾನಫಲೇಚ್ಛಯಾ । ಇತಿ ಪಾದ್ಮೇ ॥ ೩೧ ॥ ೨೬ ॥**

**ಭಾಷ್ಯಾರ್ಥ** ॥ (೧) ಶಮದಮಾದಿ ಸೂತ್ರದಲ್ಲಿ ತಥಾಽಪಿ ತು ಎನ್ನುವಲ್ಲಿದ್ದ ತು ಶಬ್ದದಿಂದ ಸತ್ಪ್ರವೃತ್ತಿಗೆ ಪೂರ್ಣ ಫಲಾರ್ಥತ್ವವನ್ನು ಹೇಳಿದ್ದರಿಂದ ಅಸತ್ಪ್ರವೃತ್ತಿಯು ಮೌಕ್ತಾನಂದ ಹ್ರಾಸಹೇತುವಾಗಿರುವುದರಿಂದ ಅಲ್ಪಫಲವುಳ್ಳದ್ದೆಂದು ಅರ್ಥಾತ್ ಯಾವುದು ಸೂಚಿತವಾಗಿಯದೋ, ಅಂತಹ ಅಲ್ಪಫಲವತ್ತ್ವವನ್ನೇ ಅತಃ ಎನ್ನವುದರಿಂದ ನಿಷಿದ್ಧಕರ್ಮವನ್ನು ಮಾಡದಿರಲಿಕ್ಕೆ ಹೇತುವಾಗಿ ಸೂತ್ರಕಾರರು ಪರಾಮರ್ಶಿಸುತ್ತಾರೆ. ಅಥವಾ ಅತಃ ಶಬ್ದದಿಂದ ನಿಷಿದ್ಧಕರ್ಮಕರಣವು ಫಲಹ್ರಾಸಕ್ಕೆ ಸಾಧನವೆಂದು ಸೂತ್ರಕಾರರು ಸೂಚಿಸುತ್ತಾರೆ. (೨) (ನಿಷಿದ್ಧಕರ್ಮವು ಅಲ್ಪ ಫಲಕ್ಕೆ ಹೇತುವೆಂದು ಹೇಗೆ ಸಿದ್ಧವಾಗುತ್ತದೆ ಎಂದರೆ) ಯಾರು ಪೂರ್ಣವಾದ ಜ್ಞಾನಫಲದ ಇಚ್ಛೆಯಿಂದ ಇರುತ್ತಾನೋ ಆತನು

ಇಚ್ಛಿಸುವವನಾಗಿ ನಿಷಿದ್ಧಕರ್ಮ ಗಳನ್ನು ಮಾಡಬಾರದು ಎನ್ನುವ ಪಾದ್ಮವಚನದಲ್ಲಿ (ನಿಷಿದ್ಧಕರ್ಮವನ್ನು ಮಾಡಿದರೆ ಜ್ಞಾನಿಗೆ ಅಲ್ಪಫಲವತ್ವವು ಉಕ್ತವಾಯಿತು.) ॥ ೩೧ ॥ ೨೬ ॥

**ಟೀಕೆ ॥** ನಿಷಿದ್ಧಕರ್ಮವನ್ನು ಮಾಡಿದರೆ ಫಲಹ್ರಾಸ ಮೊದಲಾದ ಬಾಧಕಗಳು ಇದ್ದ ಪ್ರಯುಕ್ತ ಜ್ಞಾನಿಯು ನಿಷಿದ್ಧವನ್ನು ಬಿಡುತ್ತಾನೆಂದಾಗಲೀ, ಸತ್ಕರ್ಮಕರಣವು ಆವಶ್ಯಕವಲ್ಲ, ಹೀಗಾದರೆ ಪೂರ್ಣಫಲವು ಸಿದ್ಧಿಸುವುದಿಲ್ಲವೆಂದಲ್ಲ ಹ್ರಾಸಕಾರಣವು ಇಲ್ಲದಿದ್ದಮೇಲೆ ಜ್ಞಾನದಿಂದಲೇ ಪೂರ್ಣಫಲವು ಸಿದ್ಧಿಸುವುದು ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ ॥ ೩೨ ॥

**ಸೂತ್ರಾರ್ಥ ॥** ಪಶ್ಯನ್ನಪೀಮಂ ಎನ್ನುವ ಸ್ಮೃತಿಯಲ್ಲಿ ವಿಹಿತವಾದ ಪ್ರಯುಕ್ತವೂ ಆಶ್ರಮಾದಿಗಳಿಗೆ ಉಚಿತವಾದ ಕರ್ಮವನ್ನು ಮಾಡಲೇಬೇಕು. ನಿಷಿದ್ಧಕರ್ಮವನ್ನು ಮಾಡದಿರುವುದು ಮಾತ್ರವಲ್ಲ.

**ಭಾಷ್ಯ ॥ (೧) ನ ಕೇವಲಂ(ಲ)ನಿಷಿದ್ಧಾ ಕರಣೇನ ಪೂರ್ಯತೇ । ಕರ್ತವ್ಯಂ ಚ ವರ್ಣಾಶ್ರಮವಿಹಿತಂ ಕರ್ಮ । (೨) ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ಕರ್ಮಾವಿಚಾರಯನ್ । ಯದಾತ್ಮನಃ ಸುನಿಯತಮಾನಂದೋತ್ಕರ್ಷಮಾಪ್ನುಯಾತ್ ॥ ಇತಿ ಕೌಷಾರವಶ್ರುತೌ ವಿಹಿತತ್ವಾಚ್ಚ ॥ (೩) ಅಪಿಶಬ್ದೋ ವರ್ಣಸಮುಚ್ಚಯಾರ್ಥ ॥ ೩೨ ॥ ೨೭ ॥**

**ಭಾಷ್ಯಾರ್ಥ ॥** (೧) ನಿಷಿದ್ಧ ಕರ್ಮವನ್ನು ಮಾಡದಿರುವುದರಿಂದ ಮಾತ್ರ ಕರ್ಮವು ಅಥವಾ ಸ್ವರೂಪಾನಂದವು ಪೂರ್ತಿಯಾಗುವುದಿಲ್ಲ. ಅಥವಾ ಪುರುಷನು ಪೂರ್ಣಫಲಯುಕ್ತನು ಆಗುವುದಿಲ್ಲ ಮತ್ತೆ ವರ್ಣಗಳಲ್ಲಿಯೂ ಆಶ್ರಮಗಳಲ್ಲಿಯೂ ಕರ್ತವ್ಯವಾಗಿ ವಿಹಿತವಾದ ಕರ್ಮವನ್ನು ಆನಂದಪೂರ್ತಿಗಾಗಿ ಮಾಡಬೇಕು. (೨) ಈ ಪರಮಾತ್ಮನನ್ನು ಜ್ಞಾನಿಯು ಪ್ರತ್ಯಕ್ಷೀಕರಿಸಿದರೂ ಸಂದೇಹವಿಲ್ಲದವನಾಗಿಯೇ ನಿಯಮದಿಂದ ತನ್ನ ವರ್ಣಗಳಿಗೂ ಆಶ್ರಮಗಳಿಗೂ ಉಚಿತವಾದ ಕರ್ಮವನ್ನು ಮಾಡಬೇಕು. ಆದರಿಂದ ತನಗೆ ಯೋಗ್ಯವಾದ ಆನಂದೋತ್ಕರ್ಷವನ್ನು ಹೊಂದುವನು. ಹೀಗೆ ಕೌಷಾರವ ಶ್ರುತಿಯಲ್ಲಿ ವಿಹಿತವಾದ ಪ್ರಯುಕ್ತವೂ ಸತ್ಕರ್ಮವನ್ನು ಮಾಡಬೇಕು. (೩) (ಸೂತ್ರದಲ್ಲಿ ಹೇಳದೆ ಇದ್ದ ವರ್ಣಧರ್ಮ ವನ್ನು ಹೇಗೆ ಹೇಳಿದ್ದು ಎಂದರೆ) ಸೂತ್ರದಲ್ಲಿದ್ದ ಅಪಿ ಶಬ್ದವು ವರ್ಣಧರ್ಮಕ್ಕೆ ಸಮುಚ್ಚಾಯಕವು. ॥ ೩೨ ॥ ೨೭ ॥

**ಟೀಕೆ ॥** ವಿಹಿತವಾದಾಗ್ಯೂ ಜ್ಞಾನಿಯು ಫಲವಿಲ್ಲದಿರುವುದರಿಂದ ಸತ್ಕರ್ಮವನ್ನು ಮಾಡಬೇಕಾಗಿಲ್ಲ. ಹ್ರಾಸಕಾರಣವು ಇಲ್ಲದಿದ್ದ ಮೇಲೆ ಸಂಪೂರ್ಣ ಫಲವು ಸ್ವತ ಏವ ಸಿದ್ಧವಾಗುತ್ತದೆ. ಇಲ್ಲವಾದರೆ ಮೋಕ್ಷವು ಜ್ಞಾನ ಕರ್ಮ ಎರಡರಿಂದ ಸಾಧ್ಯವೆಂದಾಗಬೇಕಾಗುವುದು ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸಹಕಾರಿತ್ವೇನ ಚ ಓಂ ॥ ೩೩ ॥

ಸೂತ್ರಾರ್ಥ ॥ ಶಾಸ್ತ್ರದಲ್ಲಿ ವಿಹಿತವಾದುದರಿಂದ ಮಾತ್ರವಲ್ಲ, ಮತ್ತೆ ಸಂಪೂರ್ಣ ಫಲವು ಸಿದ್ಧಿಸುವುದಕ್ಕಾಗಿ ಮೋಕ್ಷಕ್ಕೆ ಕಾರಣವಾದ ಜ್ಞಾನಕ್ಕೆ ಸಹಕಾರಿಯೆಂದು ಹೇಳಿದ್ದರಿಂದಲೂ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮವನ್ನು ಮಾಡಲೇಬೇಕು.

**ಭಾಷ್ಯ ॥ ಯಥಾ ರಾಜ್ಞಃ ಸಹಕಾರ್ಯೇವ ಮಂತ್ರೀ ತಥಾಽಪ್ಯೃತೇ ತಂ ಕ್ಷಿತಿಪಃ ಕಾರ್ಯ ಮೃಚ್ಛೇತ್ । ಏವಂ ಜ್ಞಾನಂ ಕರ್ಮ ವಿನಾಽಪಿ ಕಾರ್ಯಂ ಸಹಾಯ ಭೂತಂ ನ ವಿಚಾರಃ ಕುತಶ್ಚಿತ್ ॥ ಇತಿ ಕಮಠಶ್ರುತೌ ಸಹಕಾರಿತ್ವೋಕ್ತೇಶ್ಚ ॥ ೨೮ ॥**

ಭಾಷ್ಯಾರ್ಥ ॥ ಯದ್ಯಪಿ ರಾಜನು ಮಂತ್ರಿಯನ್ನು ಹೊರತು ರಾಜ್ಯಕಾರ್ಯವನ್ನು ಹೊಂದಲು ಸಮರ್ಥನಾಗಿದ್ದಾನೆ. ಆದಾಗ್ಯೂ ಮಂತ್ರಿಯು ರಾಜನಿಗೆ ಸಂಪೂರ್ಣ ಕಾರ್ಯಸಿದ್ಧಿಗೆ ಸಹಕಾರಿಯೇ ಆಗಿರುತ್ತಾನೆ. ಹೀಗೆಯೇ ಯದ್ಯಪಿ ಜ್ಞಾನವು ಕರ್ಮವಿಲ್ಲದಿದ್ದರೂ ಮೋಕ್ಷಕಾರ್ಯವನ್ನು ಸಾಧಿಸುವುದು. ಆದಾಗ್ಯೂ ಕರ್ಮವು ಫಲಾಧಿಕ್ಯಕ್ಕೆ ಹೇತುವಾಗಿರುವುದರಿಂದ ಜ್ಞಾನದಿಂದ ಆಗತಕ್ಕ ಸಂಪೂರ್ಣ ಫಲವನ್ನು ಸಾಧಿಸುವ ವಿಷಯದಲ್ಲಿ ಸಹಾಯಭೂತವಾಗುತ್ತದೆ. ಈ ವಿಷಯದಲ್ಲಿ ಯಾವ ಕಾರಣ ದಿಂದಲೂ ಸಂಶಯವನ್ನುಮಾಡಕೂಡದು. ಹೀಗೆ ಕಮಠಶ್ರುತಿಯಲ್ಲಿ (ವಿಹಿತವಾದುದರಿಂದ ಮಾತ್ರವಲ್ಲ, ಮತ್ತೆ ಸಂಪೂರ್ಣಫಲವು ಸಿದ್ಧಿಯಾಗಲಿಕ್ಕೆ ಕರ್ಮವು ಜ್ಞಾನಕ್ಕೆ ಸಹಕಾರಿಯೆಂದು ಹೇಳಿದ್ದರಿಂದಲೂ (ಜ್ಞಾನಿಯು ಸತ್ಕರ್ಮವನ್ನು ಮಾಡಲೇಬೇಕು.) (ಕರ್ಮವು ಇಲ್ಲವಾದರೂ ಜ್ಞಾನಮಾತ್ರದಿಂದ ಮೋಕ್ಷವು ಸಿದ್ಧಿಸುವುದು.) ॥ ೨೮ ॥

ಪೀಠಿಕೆ ॥ ಈ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಜ್ಞಾನಾನ್ಮೋಕ್ಷೋ ಭವತ್ಯೇವ ಸರ್ವಾಕಾರ್ಯಕೃತೋಽಪಿ ತು । ಆನಂದೋ ಹ್ರಸತೇಽಕಾರ್ಯಾಚ್ಛುಭಂ ಕೃತ್ವಾ ತು(ಚ) ವರ್ಧತೇ ॥ ಇತಿ(ಚ) ಬ್ರಹ್ಮಾಂಡೇ ॥ ೨೯ ॥**

ಭಾಷ್ಯಾರ್ಥ ॥ ನಿಖಿಲ ನಿಷಿದ್ಧ ಕರ್ಮಗಳನ್ನು ಮಾಡಿದವನಾದಾಗ್ಯೂ ಜ್ಞಾನಿಗೆ ಸರ್ವ ಕಾರ್ಯಗಳನ್ನು ಮಾಡದಿದ್ದರೂ ಬ್ರಹ್ಮದರ್ಶನದಿಂದ ಮೋಕ್ಷವು ಆಗಿಯೇ ಆಗುತ್ತದೆ. ಆಪತ್ತು ಇಲ್ಲದಿರುವಾಗ ನಿಷಿದ್ಧವನ್ನು ಮಾಡಿದ್ದರಿಂದ ಆನಂದವು ಕ್ಷೀಣವಾಗುತ್ತದೆ. ತಂತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮವನ್ನು ಜ್ಞಾನಿಮಾತ್ರ ಸಾಧಾರಣವಾದ ಶಮದಮಾದಿ ಕರ್ಮಗಳನ್ನು ಕೂಡ ಮಾಡಿ ಇರುವವನಿಗೆ ಆನಂದವು ಅಥವಾ ಶುಭವು ಅಭಿವೃದ್ಧವಾಗುತ್ತದೆ. ಈ ಪ್ರಕಾರವಾಗಿ ಬ್ರಹ್ಮಾಂಡಪುರಾಣ ದಲ್ಲಿ ಕರ್ಮವು ಜ್ಞಾನಕ್ಕೆ ಸಹಕಾರಿಯೆಂದು ಉಕ್ತವಾಗಿದೆ. ॥ ೨೯ ॥

ಪೀಠಿಕೆ ॥ ಸಂಪೂರ್ಣಾನಂದಪ್ರಾಪ್ತಿಯಾಗಲಿಕ್ಕೆ ಕರ್ಮಸಹಕೃತವಾದ ಜ್ಞಾನವು ಸಾಧನವಾದರೆ ಮೋಕ್ಷವು ಜ್ಞಾನ ಕರ್ಮಗಳೆರಡರಿಂದ ಸಾಧ್ಯವೆಂದಾಗಬೇಕಾಗುವುದು. ಸಂಪೂರ್ಣಾನಂದಪ್ರಾಪ್ತಿಯೇ ಮೋಕ್ಷವು ಎಂದರೆ—

**ಭಾಷ್ಯ ॥ ಸರ್ವದುಃಖನಿವೃತ್ತಿಶ್ಚ(ಸ್ತು) ಜ್ಞಾನಿನೋ ನಿಶ್ಚಿತೈವ ಹಿ । ಉಪಾಸಯಾ**

**ಕರ್ಮಭಿಶ್ಚಭಕ್ತ್ಯಾ ಚಾನಂದಚಿತ್ರತಾ ॥ ಇತಿ(ಚ) ಬೃಹತ್ತಂತ್ರೇ ॥ ೩೦ ॥**

ಭಾಷ್ಯಾರ್ಥ ॥ ಜ್ಞಾನಿಗಳಿಗೆ ತಮ್ಮಲ್ಲಿರತಕ್ಕ ಸರ್ವದುಃಖಗಳ ನಿವೃತ್ತಿಯೂ ಬಹುತರಾನಂದಾನು ಭವವೂ ನಿಶ್ಚಿತವೇ. ಜ್ಞಾನೋತ್ತರ ಕಾಲದಲ್ಲಿ ಮಾಡಿದ ಬ್ರಹ್ಮೋಪಾಸನದಿಂದಲೂ ನಿವೃತ್ತ ಕರ್ಮಗಳಿಂದಲೂ ಭಕ್ತಿಯಿಂದಲೂ ಆನಂದಾನುಭವ ವೈಚಿತ್ರ್ಯವೂ ಸಮಗ್ರಾನಂದವ್ಯಕ್ತಿಯೂ ಆಗುತ್ತದೆ, ಎಂದು ಬೃಹತ್ತಂತ್ರದಲ್ಲಿ ಹೇಳಿದೆ. (ಏವಂಚ ಮೋಕ್ಷವು ೧ ಸರ್ವದುಃಖನಿವೃತ್ತಿರೂಪವು, ೨ ಪರಮಾನಂದಾ ವಾಪ್ತಿರೂಪವು ಎಂದು ದಳದ್ವಯಾತ್ಮಕವು. ಅವುಗಳಲ್ಲಿ ೧ನೇದ್ದು ಜ್ಞಾನಮಾತ್ರ ಸಾಧ್ಯವು. ೨ನೇದ್ದು ಜ್ಞಾನಕರ್ಮ ಸಮುಚ್ಚಯಸಾಧ್ಯವು. ॥ ೩೦ ॥

ಪೀಠಿಕೆ ॥ ಚತುರ್ಮುಖಾದಿಗಳಿಗೆ ಪುತ್ರಿಕಾಕಾಮ ಮೊದಲಾದ ಅಸತ್ಪ್ರವೃತ್ತಿಯಿಂದ ಹ್ರಾಸವಿಲ್ಲದಿರುವುದರಿಂದ ಅಸತ್ಪ್ರವೃತ್ತಿಯಿಂದ ಆನಂದಹ್ರಾಸವು ಎಂದು ಹೇಳಿದ್ದು ಹೇಗೆ ಕೂಡುತ್ತದೆ, ಎಂದರೆ—

**ಭಾಷ್ಯ ॥ ಧರ್ಮಸ್ವರೂಪಚಿತ್ರತ್ವಾದ್ಯೋ ಯೋ ದೇವಮನೋಗತಃ । ಸ ಏವ ಧರ್ಮೋ ವಿಜ್ಞೇಯೋ ನ ಹ್ಯೇತೇ ಲೋಕಸಮ್ಮಿತಾಃ ॥ ಇತಿ(ಚ) ಪಾದ್ಮೇ ॥ ೩೩ ॥ ಅಧಿ.೪ ॥ ೩೧ ॥**

ಭಾಷ್ಯಾರ್ಥ ॥ ಯಾವುದು ದೇವಾದಿಗಳಿಗೆ ಧರ್ಮವೋ, ಅದು ಮನುಷ್ಯರಿಗೆ ಅಧರ್ಮವು, ಯಾವುದು ಮನುಷ್ಯರಿಗೆ ಅಧರ್ಮವೋ, ಅದು ದೇವಾದಿಗಳಿಗೆ ಧರ್ಮವು ಆಗುವುದು, ಇತ್ಯಾದಿ ಪ್ರಕಾರ ಶುಭಕರ್ಮಸ್ವರೂಪಗಳಿಗೆ ನಾನಾವಿಧತ್ವವಿದ್ದುದರಿಂದ ಯಾವುದು ಯಾವುದು ದೇವತೆಗಳ ಮನೋವೃತ್ತಿಯಿಂದ ಕರ್ತವ್ಯವಾಗಿ ವಿಷಯೀಕೃತವಾಗಿಯದೋ, ಅದೇ ಧರ್ಮವೆಂದು ತಿಳಿಯಬೇಕು. (ವೇದವಿಹಿತವಾದುದು ಮಾತ್ರವಲ್ಲ) (ಆದುದರಿಂದ ಬ್ರಹ್ಮಾದಿಗಳ ಪುತ್ರಿಕಾ ಕಾಮನಾದಿಗಳನ್ನು ಅಸತ್ಪ್ರವೃತ್ತಿಯೆಂದು ತಿಳಿಯಬಾರದು.) (ಇತರರಿಗೆ ಇಲ್ಲದಿರುವುದರಿಂದ ದೇವತೆಗಳಿಗೇನೇ ಈ ವಿಶೇಷವು ಎನ್ನುವುದು ಹೇಗೆ ಕೂಡುತ್ತದೆ, ಎಂದರೆ) ದೇವತೆಗಳು ಇತರ ಜನರಿಗೆ ಸದೃಶರಲ್ಲ, ಹೀಗೆ ಪಾದ್ಮಪುರಾಣದಲ್ಲಿ ನಿಶ್ಶಂಕವಾಗಿ ವಿವಕ್ಷಿತಾರ್ಥವು ಅಭಿಹಿತವಾಗಿದೆ. ॥ ೩೩ ॥ ೩೧ ॥

## ಅಧಿಕರಣ ಸಾರಾಂಶ

ಜ್ಞಾನವುಳ್ಳವನಿಗೆ ಸದಾಚಾರ ದುರಾಚಾರಗಳಿಂದ ವಿಶೇಷವಿಲ್ಲವೋ ಇದೆಯೋ, ಅದಕ್ಕಾಗಿ ಸ ಬ್ರಾಹ್ಮಣಃ ಕೇನ ಸ್ಯಾತ್ ಯೇನ ಸ್ಯಾತ್ ತೇನೇದೃಶ ಏವ ಎನ್ನುವ ವಾಕ್ಯವು ಜ್ಞಾನಿಮಾತ್ರಕ್ಕೆ ಯಥೇಷ್ಟಾಚಾರವಿಧಪರವೋ ಅಥವಾ ನಿಯಮೇನ ಸರ್ವಸದಾಚಾರಾನುಷ್ಠಾನಪರವೋ, ಅಲ್ಲಿ ಜ್ಞಾನಿಗೆ ಸದಸತ್ಪ್ರವೃತ್ತ್ಯಾದಿಗಳಿಂದ ವಿಶೇಷವಿದ್ದರೆ ಜ್ಞಾನವು ಮುಕ್ತಿಗೆ ಕಾರಣವು ಎನ್ನುವ ನಿಯಮಕ್ಕೆ ಭಂಗ ರೂಪವಾದುದು ಮತ್ತು ಜ್ಞಾನಕರ್ಮಗಳೆರಡು ಕೂಡಿಯೇ ಮೋಕ್ಷಕ್ಕೆ ಕಾರಣವೆಂಬ ಸಮುಚ್ಚಯ ರೂಪವಾದ ಬಾಧಕವೂ ಇದೆಯೋ ಇಲ್ಲವೋ ಅದಕ್ಕಾಗಿ ಜ್ಞಾನಿಗೆ ಅಸತ್ಪ್ರವೃತ್ತಿಯು ಮೋಕ್ಷಸ್ಥರೂಪ

ಪ್ರತಿಬಂಧೋತ್ಪತ್ತಿಯಲ್ಲಿಕಾರಣವೋ ಅಥವಾ ಮೋಕ್ಷದಲ್ಲಿರತಕ್ಕ ಸುಖಾಧಿಕ್ಯ ಪ್ರತಿಬಂಧೋತ್ಪತ್ತಿಯಲ್ಲಿ ಹೇತುವೋ, ಅದಕ್ಕಾಗಿ ಅಸತ್ಪ್ರವೃತ್ತ್ಯಾದಿಗಳಿಂದ ಸುಖಾಧಿಕ್ಯ ವ್ಯಕ್ತಿಗೆ ಪ್ರತಿಬಂಧಾದಿರೂಪವಾದ ವಿಶೇಷವಿದ್ದರೆ **ಯದಿ ಹ ವಾ ಅಪ್ಯನೇವಂವಿತ್** ಎನ್ನುವ ಶ್ರುತಿಯಲ್ಲಿ ಜ್ಞಾನಿಗಳಿಗೆ ನಿಷಿದ್ಧಾನ್ನವನ್ನು ಭಕ್ಷಿಸಿದರೂ ಪ್ರತ್ಯವಾಯವಿಲ್ಲವೆನ್ನುವ ಉಕ್ತಿಯು ಅಯುಕ್ತವೋ ಯುಕ್ತವೋ ಎಂದು ಸಂದೇಹವು. **ಸ ಬ್ರಾಹ್ಮಣಃ** ಎನ್ನುವ ಶ್ರುತಿಯಲ್ಲಿ ಜ್ಞಾನಿಮಾತ್ರಕ್ಕೆ ಯಥೇಷ್ಟಾಚಾರ ವಿಧಿಯನ್ನು ಸ್ಯಾತ್ ಶಬ್ದದಿಂದ ವಿಧಿಸಿದ್ದರಿಂದ ಸದಸತ್ಪ್ರವೃತ್ತಿಗಳಿಂದ ಜ್ಞಾನಿಗಳಿಗೆ ವಿಶೇಷವಿಲ್ಲ. ಸದಸತ್ಪ್ರವೃತ್ತಿಗಳಿಂದ ಜ್ಞಾನಿಗಳಿಗೆ ವಿಶೇಷ ವಿಧಿಯೂ ಇಲ್ಲದಿದ್ದರೆ ಸರ್ವ ವಿಧ್ಯತಿರೂಪತ್ವವಾದ ಈಶ್ವರಲಕ್ಷಣವು ಜ್ಞಾನಿಗಳಲ್ಲಿಯೂ ಪ್ರಸಕ್ತವಾಗುವುದರಿಂದ ಈ ವಾಕ್ಯವು ಜ್ಞಾನಿಮಾತ್ರಕ್ಕೆ ಯಥೇಷ್ಟಾಚಾರವಿಧಿಪರವಲ್ಲ. ಮತ್ತೆ ಜ್ಞಾನಿವಿಶೇಷಕ್ಕೆ ಎಂದು ಹೇಳಕೂಡದು. ಏಕೆಂದರೆ, ಸಾಮಾನ್ಯ ವಾಕ್ಯಕ್ಕೆ ವಿಶೇಷಪರತ್ವವನ್ನು ಕಲ್ಪಿಸತಕ್ಕ ಪ್ರಮಾಣವಿಲ್ಲ. ಮತ್ತು ಕೇವಲ ಯಥೇಷ್ಟಾಚಾರದಲ್ಲಿ ವಿಧ್ಯನ್ಯಥಾನುಪಪತ್ತಿಯಿಂದ ಜ್ಞಾನಿಗಳಿಗೆ ಅವಿಶೇಷವನ್ನು ಕಲ್ಪಿಸುವುದಲ್ಲ. ಮತ್ತೆ ತೇನೇದೃಶ ಏವ ಎಂದು ಸ್ವೇಚ್ಛಾಚರಣದಲ್ಲಿ ಅವಿಶೇಷವು ಶ್ರುತಿಸಿದ್ಧವೂ ಆಗಿದೆ. ಹಾಗಾದರೆ ಜ್ಞಾನಿಮಾತ್ರಕ್ಕೆ ಸ್ವೇಚ್ಛಾಚಾರ ವಿಧಿಪರತ್ವವು ಈ ವಾಕ್ಯಕ್ಕೆ ಕೂಡುವುದಿಲ್ಲ. ಪ್ರಾತರುತ್ಥಾಯ ಇತ್ಯಾದಿ ಶ್ರುತ್ಯನುಸಾರವಾಗಿ ನಿಷಿದ್ಧವನ್ನು ಮಾಡಬೇಕೆಂದು ವಿಧಿಯು ಇಲ್ಲದಿರುವುದರಿಂದಲೂ **ಬ್ರಾಹ್ಮಣೋ ನ ಹಂತವ್ಯಃ** ಇತ್ಯಾದಿ ನಿಷೇಧವಿದ್ದುದರಿಂದಲೂ ವಿಧಿ ಇದ್ದುದರಿಂದ (೧) ನಿಯಮದಿಂದ ಸರ್ವಸದಾಚಾರಾನುಷ್ಠಾನ ಮಾಡಬೇಕೆಂದು ಈ ವಾಕ್ಯಕ್ಕೆ ಅರ್ಥವು ಎಂದು ಪರಮಾಪ್ತರಾದ ಜೈಮಿನ್ಯಾಚಾರ್ಯರಿಂದ ಯಾವುದು ಹೇಳಲ್ಪಟ್ಟದೋ ಹಾಗೆಯೇ **ಯಶ್ಶಾತ್ವರತಿರೇವ ಸ್ಯಾತ್** ಎನ್ನುವ ಸ್ಮೃತ್ಯನು ಸಾರವಾಗಿ ಅನಾಚರಣಪ್ರಯುಕ್ತ ಸಾಮ್ಯಾಭಾವನಿಷೇಧಕ **ಈದೃಶ ಏವ** ಎನ್ನುವ ವಾಕ್ಯಶೇಷಬಲದಿಂದಲೂ,ಸರ್ವಸದಾಚಾರಗಳ ಮಧ್ಯದಲ್ಲಿ ಕೆಲವು ಆಚಾರಗಳನ್ನು ಮಾಡುವುದು ಕೆಲವು ಮಾಡದಿರುವುದು ಈ ರೀತಿಯಾಗಿ ಕೇನ ಸ್ಯಾತ್ ಎನ್ನುವ ವಾಕ್ಯಕ್ಕೆ ೨ ಅಭ್ಯನುಜ್ಞಾಪರತ್ವವು ಅಥವಾ (೩) ಸ್ವೇಚ್ಛಾಚಾರಪರತ್ವವು ಎಂದು ವೇದವ್ಯಾಸರಿಂದ ಹೇಳಲ್ಪಟ್ಟ ಉಭಯಾರ್ಥಪರತ್ವವಿರಲು ವಿಧಿರೂಪವಾದ ಏಕಾರ್ಥತ್ವವನ್ನು ಇಟ್ಟುಕೊಂಡು ಜ್ಞಾನಿಗಳಿಗೆ ಯಥೇಷ್ಟಾಚಾರವಿದ್ದರೂ ವಿಶೇಷವಿಲ್ಲವೆಂದು ಹೇಗೆ ಹೇಳಿದ್ದು ಎಂದರೆ ಹೀಗೆ ಹೇಳಕೂಡದು. ಹಾಗೆ ಇದ್ದರೆ ಈ ವಾಕ್ಯಕ್ಕೆ ಅವ್ಯವಸ್ಥಿತವಾದ ಅರ್ಥವು ಬರಬೇಕಾಗುವುದರಿಂದ ಪ್ರಾಮಾಣ್ಯವಿಲ್ಲವೆಂದಾಗ ಬೇಕಾಗುವುದು. ಮತ್ತೂ ಜ್ಞಾನಿಗಳಿಗೆ ಸದಸತ್ಪ್ರವೃತ್ತಿಗಳಿಂದ ವಿಶೇಷವಿಲ್ಲವೆನ್ನುವುದನ್ನು ಸಾಧಕವು ಇಲ್ಲದಿರುವುದರಿಂದ ಹೇಳುವುದೋ ಅಥವಾ ವಿಶೇಷವಿದೆ ಎನ್ನುವಲ್ಲಿ ಬಾಧಕವು ಇದ್ದುದರಿಂದ ಹೇಳುವುದೋ ಅಂದರೆ, ಜ್ಞಾನಿಗಳಿಗೆ ಸದಸತ್ಪ್ರವೃತ್ತಿಗಳಿಂದ ವಿಶೇಷವಿದೆ ಎಂದು ಹೇಳಿದರೆ ಅಸತ್ಪ್ರವೃತ್ತಿಯಿಂದ ಕ್ಷೀಣಶಕ್ತಿಯುಳ್ಳ ಜ್ಞಾನಕ್ಕೆ ಮೋಕ್ಷಹೇತುತ್ವಕ್ಕೆ ಭಂಗವು ಬರಬೇಕಾಗುವುದರಿಂದ, **ಅನಿಯಮಃ ಸರ್ವೇಷಾಂ** ಎನ್ನುವಲ್ಲಿ ಹೇಳಿದ ಮೋಕ್ಷ ನಿಯಮಕ್ಕೆ ಭಂಗವು ಬರಬೇಕಾಗಿರುವುದು. ಮತ್ತು ಸತ್ಪ್ರವೃತ್ತಿಯಿಂದ ಯುಕ್ತವಾದ ಜ್ಞಾನಕ್ಕೆ ಮೋಕ್ಷ ಹೇತುತ್ವವು ಬರಬೇ ಕಾಗಿರುವುದರಿಂದ ವಿದ್ಯೈವ **ತುನಿರ್ಧಾರಣಾತ್** ಎನ್ನುವಲ್ಲಿ ಹೇಳಿದ ಜ್ಞಾನದಿಂದಲೇ ಮೋಕ್ಷವು ಎನ್ನುವ ಉಕ್ತಿಗೆ ವಿರೋಧವು ಬರುವುದು. ಜ್ಞಾನಿಗಳಿಗೆ ಅಸತ್ಪ್ರವೃತ್ತಿಯಿಂದ ಮೋಕ್ಷಕ್ಕೆ ಪ್ರತಿಬಂಧವಾಗುವುದಾದರೆ ಜಿಜ್ಞಾಸುವಿಗೂ ಜ್ಞಾನಕ್ಕೆ ಪ್ರತಿಬಂಧವು ಬರಬೇಕಾಗಿರುವುದರಿಂದ ವೈರಾಗ್ಯಪಾದವೇ ವ್ಯರ್ಥವಾಗಬೇಕಾಗುವುದು.

ಮತ್ತು ಸತ್ವವೃತ್ತಿಯು ಮುಕ್ತಿಯಲ್ಲಿ ಕಾರಣವಲ್ಲ, ಮತ್ತೆ ಮುಕ್ತಿಯಲ್ಲಿ ಆಗತಕ್ಕ ಆನಂದಾತಿಶಯಾಭಿವ್ಯಕ್ತಿಯಲ್ಲಿ ಕಾರಣವು, ಅಸತ್ವವೃತ್ತಿಯು ಆನಂದಹ್ರಾಸದಲ್ಲಿ ಕಾರಣವು ಎಂದೂ ಹೇಳಕೂಡದು. ಹಾಗಿದ್ದರೆ ಜ್ಞಾನಿಗಳಿಗೆ ಸರ್ವಾನ್ನ ಭಕ್ಷಣಾನುಮತಿಯನ್ನು ಹೇಳುವ ಶ್ರುತಿವಿರೋಧವು ಬರುವುದು. ಅಲ್ಲಿ ಸರ್ವಾನ್ನಭಕ್ಷಣದಲ್ಲಿಯೂ ಅವಿಶೇಷವನ್ನು ಹೇಳಿದ್ದಾರೆ. ಆ ವಾಕ್ಯವು ವಿಷಯಾಂತರಪರವೆಂದು ಹೇಳಲಿಕ್ಕೆ ಜ್ಞಾಪಕವಿಲ್ಲವೆಂದು ಪೂರ್ವಪಕ್ಷವು ಬಂದರೆ, ಜ್ಞಾನಿಗಳಿಗೆ ಸದಸತ್ವ ವೃತ್ತಿಗಳಿಂದ ವಿಶೇಷವು ಉಂಟೇ ಉಂಟು. **ಕೇನ ಸ್ಯಾತ್** ಎನ್ನುವ ವಾಕ್ಯವು ಜ್ಞಾನಿಮಾತ್ರಕ್ಕೆ ಯಥೇಷ್ಟಾಚಾರವಿಧಿಪರವಾಗಿ ಪ್ರತೀತವಾದರೂ ಅದು ಜ್ಞಾನಿಸ್ತುತಿ ಮಾತ್ರಪರವು. ಸರ್ವವಿದ್ಯತಿದೂರತ್ವರೂಪವಾದ ಈಶ್ವರಲಕ್ಷಣಕ್ಕೆ ಅನೀಶರಲ್ಲಿ ಅತಿ ವ್ಯಾಪ್ತ್ಯಾಪತ್ತಿರೂಪವಾದ ಬಾಧಕದಿಂದ ವಿಧಿಪರತ್ವವಿಲ್ಲ. ವಿಧಿಪರತ್ವವಿದ್ದರೂ ಜೈಮಿನಿ ವೇದವ್ಯಾಸರಿಂದ ಹಿಂದೆ ಹೇಳಿದ ಪ್ರಕಾರ ಸರ್ವಸದಾಚಾರ ಅನುಷ್ಠಾನವಿಧಿಪರತ್ವವು, ಸರ್ವಸದಾಚಾರಗಳ ಮಧ್ಯದಲ್ಲಿಯೂ ಕೆಲವು ಧರ್ಮಗಳಿಗೆ ಅನುಷ್ಠಾನವು, ಕೆಲವು ಧರ್ಮಗಳಿಗೆ ಅನನುಷ್ಠಾನವು, ಹೀಗೆ ಅಭ್ಯನುಜ್ಞಾಪರತ್ವವು ಅಥವಾ ಸ್ವೇಚ್ಛಾಚಾರ ವಿಧಿಪರತ್ವವು ಹೀಗೆ ಮೂರು ಅರ್ಥಗಳ ಪರವಾದಾಗ್ಯೂ, **ವಿಧಿನಿಯತಾಃ ಮನುಷ್ಯಾಃ ಅನಿಯತಾ ದೇವಾಃ ಬ್ರಹ್ಮೈವ ಸ್ವೇಚ್ಛಾನಿಯತಃ।** ಎನ್ನುವ ಶ್ರುತಿಯಲ್ಲಿಯೂ **ಸ್ವೇಚ್ಛಯೈವ ಪ್ರವೃತ್ತಿಸ್ತು** ಇತ್ಯಾದಿ ಸ್ಮೃತಿಗಳಲ್ಲಿಯೂ, ಮನುಷ್ಯ, ದೇವ, ಚತುರ್ಮುಖರೆನ್ನುವ ಅಧಿಕಾರಿಭೇದದಿಂದ ವ್ಯವಸ್ಥೆಯನ್ನು ಹೇಳಿದ್ದರಿಂದ ವಿರೋಧವು ಇಲ್ಲದಿರುವುದರಿಂದ ಜ್ಞಾನಿಮಾತ್ರಕ್ಕೆ ಸ್ವೇಚ್ಛಾಚಾರ ಪರವಾದ ವಾಕ್ಯವು ಅಪ್ರಮಾಣವಾಗುವುದಿಲ್ಲ. ಜ್ಞಾನಿಗಳಿಗೆ ಅಸತ್ವವೃತ್ತಿಯಿಂದ ಮೋಕ್ಷಕ್ಕೆ ಪ್ರತಿಬಂಧಾಭಾವವು **ಕಾಮಚಾರಾಃ** ಎನ್ನುವ ಶ್ರುತಿಯಿಂದ ಜ್ಞಾನಿಗಳಿಗೆ ಅನಿವರ್ತ್ಯವಾಗಿ ಪ್ರಾಪ್ತವಾದ ಪ್ರಾರಬ್ಧಕರ್ಮವೂ ಕಿಂಚಿತ್ ಉಪಭುಕ್ತವಾದುದಕ್ಕೆ ಜ್ಞಾನದಿಂದ ಫಲಹ್ರಾಸವನ್ನು **ಆತ್ಮಾನಮಭಿಪಶ್ಯ** ಎನ್ನುವ ಶ್ರುತಿಸಿದ್ಧವೂ ಕೈಮುತ್ಯನ್ಯಾಯಸಿದ್ಧವೂ ಆದುದರಿಂದ. **ಅನಿಯಮಃ** ಎಂದು ಹೇಳಿದ ಮೋಕ್ಷನಿಯಮಕ್ಕೆ ಭಂಗರೂಪವಾದ ಬಾಧಕವು ಇಲ್ಲ. ಮತ್ತು ಕೇವಲ ಜ್ಞಾನವೇ ಮೋಕ್ಷಸ್ವರೂಪವನ್ನು ಹುಟ್ಟಿಸುವುದಾಗ್ಯೂ **ಪಶ್ಯನ್ನಪೀಮಂ** ಇತ್ಯಾದಿ ವಾಕ್ಯಬಲದಿಂದ ಮೋಕ್ಷದಲ್ಲಿ ಸುಖಾತಿಶಯಕ್ಕಾಗಿ ಸಹಕಾರಿಯಾಗಿ ಸತ್ವವೃತ್ತಿಯ ನ್ನು ಅಸತ್ವವೃತ್ತಿಪರಿತ್ಯಾಗಗಳನ್ನು ಅಪೇಕ್ಷಿಸಿದರೂ ಜ್ಞಾನಕರ್ಮಗಳೆರಡೂ ಕೂಡಿಯೇ, ಮೋಕ್ಷವನ್ನುಂಟುಮಾಡುತ್ತದೆ ಎನ್ನುವ ಸಮುಚ್ಚಯವಾದಾಪತ್ತಿರೂಪವಾದ ಬಾಧಕವೂ ಇಲ್ಲ. ಸರ್ವಾನ್ನಾನುಮತಿ ಶ್ರುತಿಯು ಭಾಷ್ಯಾದಿಗಳಲ್ಲಿ ಹೇಳಿದ ಲಿಂಗದಿಂದ ಪ್ರಾಣಾತ್ಯಯವಿಷಯಕವಾಗಿ ಸಾವಕಾಶವಾಗಿದೆ. ಮತ್ತು ಜ್ಞಾನಿಗಳಿಗೆ ೧ ನಿಷಿದ್ಧವನ್ನು ಮಾಡದಿದ್ದರೆ ಬಾಧಕವಿದ್ದ ಪ್ರಯುಕ್ತ ಸ್ವೇಚ್ಛಾಚಾರವು ಹೇಳಲ್ಪಡುತ್ತದೋ, ೨ ನಿಷಿದ್ಧವನ್ನು ಮಾಡು ವಿಷಯದಲ್ಲಿ ಪ್ರಮಾಣವಿದ್ದ ಪ್ರಯುಕ್ತವೋ, ೩ ನಿಷೇಧಕ ಪ್ರಮಾಣವಿಲ್ಲದಿರುವುದರಿಂದಲೋ, ೪ ಮಾಡಿದರೆ ಬಾಧಕವು ಇಲ್ಲದಿರುವುದರಿಂದಲೋ, ಬಾಧಕವಿಲ್ಲದಿರುವುದರಿಂದಲೂ ಪ್ರಮಾಣವಿಲ್ಲ ದಿರುವುದರಿಂದಲೂ ೧ನೇ ೨ನೇ ಕಲ್ಪಗಳು ಕೂಡುವುದಿಲ್ಲ. **ಏವಂ ಪಶ್ಯನ್ನ ಕಾಮ ಚರಿತಂ ಚರೇತ್, ಅತೀತಾನಾಗತಜ್ಞಾನೀ** ಇದು ಮೊದಲಾದ ನಿಷೇಧಕ ಸ್ಮೃತಿವಚನವಿದ್ದುದರಿಂದ ೩ನೇ ಕಲ್ಪವು ಕೂಡಲಾರದು. **ಆನಂದೋ ಹ್ರಸತೇಽಕಾರ್ಯಾತ್** ಎನ್ನುವ ಸ್ಮೃತಿಯಿಂದ ಆನಂದಾತಿಶಯ, ಹ್ರಾಸರೂಪವಾದ ಬಾಧಕವು ಇದ್ದುದರಿಂದ ೪ನೇ ಕಲ್ಪವು ಕೂಡಲಾರದು. ಆದಕಾರಣ ಜ್ಞಾನಿಗಳಿಗೆ

ಸತ್ಪ್ರವೃತ್ತಿಯಿಂದ ಮುಕ್ತಿಯಲ್ಲಿ ಆನಂದಾದಿವೃದ್ಧಿಯೂ ಅಸತ್ಪ್ರವೃತ್ತಿಯಿಂದ ಹ್ರಾಸರೂಪವಾದ ವಿಶೇಷವೂ ಇದ್ದೇ ಇದೆ. ॥ ಅಧಿ.೪ ॥

ಸ್ತುತ್ಯಧಿಕರಣವು ಸಮಾಪ್ತವಾಯಿತು

## ೫ ಉಭಯಲಿಂಗಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬ್ರಹ್ಮಜ್ಞಾನವು ಅಧಿಕಾರಿಮಾತ್ರಪ್ರಾಪ್ಯವು ಎಂದು ಸಮರ್ಥಿಸುತ್ತಾರೆ. ವೇದದಲ್ಲಿ ಅನಧಿಕಾರಿಗಳಾದ ಅವೈಷ್ಣವರಿಗೂ ವೇದಾಧ್ಯಯನವು ಕಂಡದ್ದರಿಂದ ಅದರಂತೆಯೇ ಅಧಿಕಾರವಿಲ್ಲದಿದ್ದರೂ ಮಹಾಪ್ರಯತ್ನದಿಂದ ಜ್ಞಾನವನ್ನು ಹೊಂದಲಿಕ್ಕೆ ಸಾಧ್ಯವಿದ್ದ ಪ್ರಯುಕ್ತ ಅಯೋಗ್ಯರಿಗೂ ಜ್ಞಾನವು ಪ್ರಾಪ್ತವಾಗಿ ಮೋಕ್ಷವು ಆಗಬೇಕಾಗುವುದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಸೂತ್ರ ॥ ಓಂ ಸರ್ವಥಾಽಪಿ ತು ತ ಏವೋಭಯಲಿಂಗಾತ್ ಓಂ ॥ ೩೪ ॥**

**ಸೂತ್ರಾರ್ಥ ॥** ದೇಶ ಕಾಲ ಗುರೂಪಸತ್ತಿ ಶ್ರವಣಾದ್ಯನೇಕ ಉತ್ಸಾಹಗಳಿದ್ದರೂ ತತ್ತ್ವಜ್ಞಾನಯೋಗ್ಯರೇ ಜ್ಞಾನವನ್ನು ಹೊಂದುತ್ತಾರೆ. ಅಯೋಗ್ಯರು ಹೊಂದಲಾರರು. ಅಲ್ಲದೆ, ತು= ಅಯೋಗ್ಯರು ವಿಪರೀತಜ್ಞಾನವನ್ನೇ ಹೊಂದುತ್ತಾರೆ. ಯೋಗ್ಯ—ಅಯೋಗ್ಯರಿಗೆ ಜ್ಞಾನಪ್ರಾಪ್ತಿ—ಅಪ್ರಾಪ್ತಿರೂಪ ಉಭಯವಿಷಯಗಳಲ್ಲಿ ಲಿಂಗವು ಕಂಡದ್ದರಿಂದ. ಹೇಗೆಂದರೆ ಯ ಏಷೋಽಂತರಕ್ಷಿಣಿ ಪುರುಷೋದೃಶ್ಯತೇ ಎಂದು ಚತುರ್ಮುಖನಿಂದ ಉಪದಿಷ್ಟರಾದ ಇಂದ್ರ—ವಿರೋಚನರಿಗೆ ಜ್ಞಾನಪ್ರಾಪ್ತಿ—ಅಪ್ರಾಪ್ತಿ ಗಳು ಶ್ರುತಿಯಲ್ಲಿ ಕಂಡಿವೆ.

**ಭಾಷ್ಯ ॥ (೧) ಸರ್ವಪ್ರಕಾರೇಣೋತ್ಸಾಹೇಽಪಿ ಯೇ ಜ್ಞಾನಯೋಗ್ಯಾಸ್ತ ಏವ ಜ್ಞಾನಂ ಪ್ರಾಪ್ನುವಂತಿ ನಾನ್ಯೇ। (೨)★ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ (ಛಾ.೮.೭.೩.) ಇತಿ ಶ್ರುತ್ಯಾಽಽಚಾರ್ಯೋಪದೇಶಸಾಮ್ಯೇಽಪಿ ವಿರೋಚನೋ ವಿಪರೀತಜ್ಞಾನಮಾಪೇಂದ್ರಃ ಸಮ್ಯಗ್ಜ್ಞಾನಮಿತ್ಯುಭಯವಿಧಲಿಂಗಾತ್ ॥ ೩೪ ॥ ೧ ॥**

ಭಾಷ್ಯಾರ್ಥ ॥ (೧) ದೇಶ ಕಾಲ ಗುರೂಪಸತ್ತಿ ಶ್ರವಣ ಮೊದಲಾದ ಅನೇಕ ಪ್ರಕಾರದಿಂದ ಉತ್ಸಾಹವಿದ್ದರೂ ಯಾರು ಜ್ಞಾನಯೋಗ್ಯರೋ ಅವರೇ ಜ್ಞಾನವನ್ನು ಹೊಂದುತ್ತಾರೆ. ಇತರರು ಹೊಂದಲಾರರು. (ಅಂದರೆ, ಇತರರು ಅಮೃತಕ್ಕೆ ಪ್ರಯತ್ನಪಟ್ಟ ರಾಹುವು ಶಿರಚ್ಛೇದವನ್ನು

★ ಈ ಶ್ರುತಿಯು ದಹರಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಹೊಂದಿದಂತೆಯೇ ವಿಪರೀತ ಜ್ಞಾನವನ್ನೂ ವಿಪರೀತ ಫಲವನ್ನೂ ಹೊಂದುತ್ತಾರೆ.) (೨) ಯ ಆತ್ಮಾ ಎನ್ನುವ ಶ್ರುತಿಯಿಂದ (ಅಂದರೆ, ಶ್ರುತಿರೂಪವಾದ ಚತುರ್ಮುಖ ಕರ್ತೃಕವಾದ ಉಪದೇಶವು ಇಂದ್ರವಿರೋಚನರಿಗೆ ಸಮವಾದಾಗ್ಯೂ) ವಿರೋಚನನಾಮಕ ಅಸುರನು ವಿಪರೀತ ಜ್ಞಾನವನ್ನೇ (ಅಂದರೆ, ಕಣ್ಣಿನಲ್ಲಿ ತೋರತಕ್ಕ ಪ್ರತಿಬಿಂಬವೇ ಅಪಹತಪಾಪ್ಮತ್ವ ಮೊದಲಾದ ಲಕ್ಷಣಗುಳುಳ್ಳ ಪರಮಾತ್ಮನು ಎನ್ನುವ ವಿಪರೀತ ಜ್ಞಾನವನ್ನೇ ಹೊಂದಿದನು.) (ಅಯೋಗ್ಯನಾದ ಪ್ರಯುಕ್ತ ಸಮ್ಯಕ್ ಜ್ಞಾನವನ್ನು ಹೊಂದಲೇ ಇಲ್ಲ) ಇಂದ್ರನೇ (ಯೋಗ್ಯನಾದ ಪ್ರಯುಕ್ತ) ಸಮ್ಯಕ್ ಜ್ಞಾನವನ್ನು ಹೊಂದಿದನು ಅಂದರೆ, ಇಂದ್ರನು ಅಕ್ಷಿನಿಯಾಮಕವಾದ ಭಗವದ್ರೂಪವನ್ನೇ ಇಂತಹ ಲಕ್ಷಣ ವಿಶಿಷ್ಟನಾದ ಶ್ರೀಪರಮಾತ್ಮನೆಂದು ತಿಳಿದುಕೊಂಡನು, ಎಂದು ಯೋಗ್ಯ ಅಯೋಗ್ಯರಾದ ಇಂದ್ರ ವಿರೋಚನರಿಗೆ ತತ್ವಜ್ಞಾನಪ್ರಾಪ್ತಿ ಅಪ್ರಾಪ್ತಿ ರೂಪವಾದ, ಉಭಯ ವಿಧವಾದ ಅರ್ಥವನ್ನು ತಿಳಿಸತಕ್ಕ ಲಿಂಗವು ಕಂಡದ್ದರಿಂದ. ॥ ೩೪ ॥ ೧ ॥

**ಪೀಠಿಕೆ** ॥ ಮಹಾಪ್ರಯತ್ನದಿಂದ ಅಯೋಗ್ಯತೆಯನ್ನು ತಿರಸ್ಕರಿಸಲಿಕ್ಕೆ ಸಾಧ್ಯವಿದ್ದ ಪ್ರಯುಕ್ತ ವಿಶ್ವಾಮಿತ್ರನಿಗೆ ಮಹಾಪ್ರಯತ್ನದಿಂದ ವಿಪ್ರತ್ವ ಪ್ರಾಪ್ತಿಯಾದಂತೆ ಅಯೋಗ್ಯರಿಗೂ ಜ್ಞಾನಪ್ರಾಪ್ತಿಯು ಏಕೆ ಆಗಲಾರದು ಎಂದು ಆಶಂಕೆಯನ್ನು ಪರಿಹರಿ ಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅನಭಿಭವಂ ಚ ದರ್ಶಯತಿ ಓಂ ॥ ೩೫ ॥

**ಸೂತ್ರಾರ್ಥ** ॥ ದೈವೀಮೇವ ಸಂಪತ್ತಿಂ ಎನ್ನುವ ಶ್ರುತಿಯು ಅವರವರ ಯೋಗ್ಯತೆಗೆ ತಿರಸ್ಕಾರಾಭಾವವನ್ನು ತೋರಿಸುತ್ತದೆ. (ಜಃಕ್ಷತ್ರಿಯತ್ವಾದಿಗಳಂತೆ ಅಯೋಗ್ಯತೆಯೇ ಅಸ್ವಾಭಾವಿಕ ವಾಗದಿರುವುದರಿಂದ ಅದಕ್ಕೆ ತಿರಸ್ಕಾರವು ಸರ್ವಥಾ ಬರಲಾರದು.)

**ಭಾಷ್ಯ ॥ ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತ್ಯಾಸುರೀಮೇವ ಚಾಸುರಾ ನೈತಯೋರಭಿಭವಃ ಕದಾಚಿತ್ಸ್ವಭಾವ ಏವಾವತಿಷ್ಠತೇ ಏವಹ್ಯವತಿಷ್ಠತೇ । ಇತಿ ಸ್ವಭಾವಾನಭಿಭವಂ ಚ ದರ್ಶಯತಿ ॥ ೩೫ ॥ ೨ ॥**

**ಭಾಷ್ಯಾರ್ಥ** ॥ ಮುಕ್ತಿಯೋಗ್ಯರು ದೇವಸಂಬಂಧಿಯೇ ಆದ ಮುಕ್ತಿಯೋಗ್ಯತ್ವ ರೂಪವೇ ಆದ (ಅಯೋಗ್ಯತ್ವರೂಪವಾದುದಲ್ಲ) ಸ್ವಭಾವವನ್ನು ಹೊಂದುತ್ತಾರೆ. ಅಸುರರು ಅಸುರಸಂಬಂಧಿಯೇ ಆದ ಅಯೋಗ್ಯತ್ವರೂಪವಾದ ಸ್ವಭಾವವನ್ನು ಹೊಂದುತ್ತಾರೆ. ದೇವಾಸುರ ಸ್ವಭಾವಗಳಿಗೆ ತಿರಸ್ಕಾರವು ಯಾವಾಗಲೂ ಇಲ್ಲ. ಮತ್ತೆ ಈ ದೇವಾಸುರರು ಯೋಗ್ಯತ್ವ ಅಯೋಗ್ಯತ್ವರೂಪ ಸ್ವಭಾವದಿಂದ ಕೂಡಿಕೊಂಡೇ ಇರುತ್ತಾರೆ, ಎನ್ನುವ ಶ್ರುತಿಯು ದೇವಾದಿಗಳ ದೇವತ್ವಾದಿಗಳಿಗೆ ಸ್ವಭಾವತ್ವವನ್ನು ಹೇಳಿ ದೇವಾಸುರ ಸ್ವಭಾವಕ್ಕೆ ತಿರಸ್ಕಾರಾಭಾವವನ್ನು ತೋರಿಸುತ್ತದೆ. (ಆದಕಾರಣ ಅಸುರಾದಿಗಳಿಗೆ ಜ್ಞಾನಾಯೋಗ್ಯತೆಯು ಸ್ವಭಾವವು, ಆದುದರಿಂದ ಸ್ವಭಾವಕ್ಕೆ ಅಭಿಭವ (ತಿರಸ್ಕಾರ) ವಿಲ್ಲದಿರುವ ಪ್ರಯುಕ್ತ ಅಯೋಗ್ಯರಿಗೆ ಜ್ಞಾನ ಪ್ರಾಪ್ತಿಯು ಆಗುವುದಿಲ್ಲ ॥ ೩೫ ॥ ೨ ॥

**ಪೀಠಿಕೆ** ॥ ಅತ್ಯಂತ ದಾರ್ಢ್ಯದಿಂದ ತಿರಸ್ಕಾರವು ಕೂಡದಿರುವುದರಿಂದ ಅತ್ಯಂತ ಅಯೋಗ್ಯ

ರಾದ ಅಸುರಾದಿಗಳಿಗೆ ಸಮ್ಯಕ್ ಜ್ಞಾನಪ್ರಾಪ್ತಿಯೂ ದೇವಾದಿಗಳಿಗೆ ಮಿಥ್ಯಾಜ್ಞಾನ ಪ್ರಾಪ್ತಿಯೂ ಬರಲಿ, ಮಧ್ಯಮ ಮನುಷ್ಯರ ಸ್ವಭಾವವನ್ನು ತಿರಸ್ಕರಿಸಲಿಕ್ಕೆ ಸಾಧ್ಯವಿದ್ದ ಪ್ರಯುಕ್ತ ಅವರಿಗೆ ಜ್ಞಾನಾದಿಪ್ರಾಪ್ತಿಯು ಆಗಲಿ, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಂತರಾ ಚಾಪಿ ತು ತದ್ದೃಷ್ಟೇ ಓಂ ॥ ೩೬ ॥

ಸೂತ್ರಾರ್ಥ ॥ ದೇವಾಸುರರಿಗೆ ಮಾತ್ರವಲ್ಲ ಮತ್ತೆ ಸಮ್ಯಕ್‌ಜ್ಞಾನ ವಿಪರೀತ ಜ್ಞಾನಗಳ ಮಧ್ಯದಲ್ಲಿ ಇರತಕ್ಕ ಮಧ್ಯಮ ಮನುಷ್ಯರಿಗೆ ದೇವಾಸುರಭಾವಗಳ ಮಧ್ಯದಲ್ಲಿ ಇದ್ದು ಸ್ಥಿತಿಯಿದ್ದುದರಿಂದ ಮಿಶ್ರಜ್ಞಾನತ್ವಕ್ಕೆ ತಿರಸ್ಕಾರಾಭಾವವೇ. ಮಿಶ್ರ ಬುದ್ಧಿತ್ವವೇ ಸಮ್ಯಕ್ ಜ್ಞಾನಾದಿಪ್ರಾಪ್ತಿಯಲ್ಲ, ಏಕೆಂದರೆ, ಅವರಿಗೆ ಮಿಶ್ರಜ್ಞಾನದಲ್ಲಿಯೇ ವಿಶೇಷವಾಗಿ ದಾರ್ಢ್ಯವು ದೃಷ್ಟವಾಗಿರುವುದರಿಂದ, ಅಂದರೆ, ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಟ್ಟ ಪ್ರಯುಕ್ತ

**ಭಾಷ್ಯ ॥ ಸಮ್ಯಗ್ಜ್ಞಾನವಿಪರೀತಜ್ಞಾನಯೋರಂತರಾ ಸ್ಥಿತಾನಾಮಪಿ ದೇವಾಸುರ ಭಾವಯೋರ್ದಾರ್ಢ್ಯದೃಷ್ಟೇ ॥ ೩೬ ॥ ೩ ॥**

ಭಾಷ್ಯಾರ್ಥ ॥ ಮನುಷ್ಯರಿಗೆ ಸಮ್ಯಕ್‌ಜ್ಞಾನ ವಿಪರೀತ ಜ್ಞಾನಗಳ ಮಧ್ಯದಲ್ಲಿ ಇರುವಿಕೆಯೇ ಮಿಶ್ರಜ್ಞಾನಿತ್ವವೇ. ಕೇವಲ ಜ್ಞಾನಾದಿಪ್ರಾಪ್ತಿಯಲ್ಲ ಏಕೆಂದರೆ, ಆ ಮಿಶ್ರಜ್ಞಾನಿಗಳದ್ದು ಸ್ವಭಾವಕ್ಕೆ ತಿರಸ್ಕಾರಭಾವವೇ. ಇದು ಹೇಗೆ ಎಂದರೆ— ಅವರಿಗೆ ದೇವಾಸುರ ಸ್ವಭಾವಗಳಾದ ಸಮ್ಯಕ್ ಜ್ಞಾನವಿಪರೀತಜ್ಞಾನಗಳ ಸಮಾಹಾರರೂಪವಾದ ಮಿಶ್ರಜ್ಞಾನದಲ್ಲಿ ವಿಶೇಷವಾಗಿ ದಾರ್ಢ್ಯವು ದೃಷ್ಟವಾಗಿರುವುದರಿಂದ. ಅತಿದೃಢವಾದುದಕ್ಕೆ ತಿರಸ್ಕಾರವು ಕೂಡಲಾರದು. ॥ ೩೬ ॥ ೩ ॥

ಪೀಠಿಕೆ ॥ ದೇವ—ದಾನವ ಮನುಷ್ಯರಿಗೆ ಸಮ್ಯಕ್‌ಜ್ಞಾನಾದಿ ಸ್ವಭಾವವೂ ತದ್ಯೋಗ್ಯತಾ ಸ್ವಭಾವತ್ವವೂ ಇದ್ದರೆ ಅಭಿಭವಾಭಾವವು ಬರುವುದು. ಅದೇ ಹೇಗೆ ಸಿದ್ಧವಾಗುತ್ತದೆ. ಅಂತಹ ಸ್ವಭಾವವಿದ್ದರೆ ಫಲವೂ ಅದಕ್ಕೆ ಅನುಗುಣವಾದುದು ಆಗಬೇಕು, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಪಿ ಸ್ಮರ್ಯತೇ ಓಂ ॥ ೩೭ ॥

ಸೂತ್ರಾರ್ಥ ॥ ಅಸುರಾ ಆಸುರೇಣೈವ ಎನ್ನುವ ಸ್ಮೃತಿಯಿಂದ ಅಂತಹ ಸ್ವಭಾವತ್ವವೂ ಅದಕ್ಕೆ ಅನುಗುಣವಾದ ಫಲವೂ ಎರಡೂ ಸ್ಮೃತಿಸಿದ್ಧವೂ ಆಗಿದೆ.

**ಭಾಷ್ಯ॥ ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ । ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ॥ ದೇವಾ ದೈವಸ್ವಭಾವೇನ ಕರ್ಮಣಾ ಚಾಪ್ಯಸಂಶಯಂ । ಸಮ್ಯಗ್ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಂ ॥ ನಾನಯೋರನ್ಯಥಾಭಾವಃ ಕದಾಚಿತ್ ಕ್ವಾಪಿ ವಿದ್ಯತೇ । ಮಾನುಷಾಮಿಶ್ರಮತಯೋಽವಿಮಿಶ್ರಗತಯೋಽಪಿ ಚ ॥ ಇತಿ ಸ್ಕಾಂದೇ ॥ ೩೭ ॥ ೪ ॥**

ಭಾಷ್ಯಾರ್ಥ ॥ ಅಸುರರು ತಾಮಸಸ್ವಭಾವದಿಂದ (ಯೋಗ್ಯತೆಯಿಂದ) ತಾಮಸ ಯೋಗ್ಯತೆಯನ್ನು ಅನುಸರಿಸಿಕೊಂಡಿರುವ ಕರ್ಮದಿಂದ ಹಾಗೆಯೇ ತಾಮಸಸ್ವಭಾವ ಭೂತವಾದ ವಿಪರೀತಜ್ಞಾನದಿಂದಲೂ ನಿಸ್ಸಂದೇಹವಾಗಿ ತಮಸ್ಸನ್ನು ಹೊಂದಿಯೇ ಹೊಂದುತ್ತಾರೆ. ಮುಕ್ತಿ ಯೋಗ್ಯರು ಸಾತ್ವಿಕಸ್ವಭಾವದಿಂದ ಸ್ವಭಾವಾನುಸಾರಿಯಾದ ಕರ್ಮದಿಂದಲೂ ಯೋಗ್ಯತಾನುಸಾರಿ ಯಾದ ಜ್ಞಾನದಿಂದಲೂ ನಿಸ್ಸಂದೇಹವಾಗಿ ಸರ್ವೋತ್ತಮವಾದ ಅಂದರೆ ವಿಷ್ಣುಸ್ವರೂಪವನ್ನೂ ವಿಷ್ಣುಸ್ಥಾನವನ್ನೂ ಹೊಂದುತ್ತಾರೆ. ದೈವಾಸುರ ಸ್ವಭಾವಗಳಿಗೂ ದೈವಾಸುರ ಫಲಗಳಿಗೂ ಯಾವ ಕಾಲದಲ್ಲಿಯೂ ಯಾವ ಪುರುಷನಲ್ಲಿಯೂ ವ್ಯತ್ಯಾಸವು ಇಲ್ಲ. ನಿತ್ಯ ಸಂಸಾರಯೋಗ್ಯರಾದರೂ ಯಥಾರ್ಥಜ್ಞಾನ ವಿಪರೀತಜ್ಞಾನಗಳಿಂದ ಮಿಶ್ರವಾದ ರಾಜಸಬುದ್ಧಿಯುಳ್ಳವರೂ ಅಂತಹ ಕರ್ಮವುಳ್ಳವರೂ ಸುಖದುಃಖಮಿಶ್ರವಾದ ನಿತ್ಯಸಂಸಾರರೂಪಫಲವುಳ್ಳವರೂ ಆಗುತ್ತಾರೆ. (ಇಲ್ಲಿ ಅಸುರ ದೇವ ಮಾನುಷ ಪದಗಳು ತಮೋಯೋಗ್ಯ ಮುಕ್ತಿಯೋಗ್ಯ ನಿತ್ಯಸಂಸಾರಿಪರಗಳು, ಅಸುರ ದೈವ ಮಿಶ್ರಪದಗಳು ತಾಮಸ ಸಾತ್ವಿಕ ರಾಜಸಪರಗಳು) ಹೀಗೆ ಸ್ಕಾಂದಪುರಾಣದಲ್ಲಿ ಹೇಳಿದೆ. ॥ ೩೭ ॥ ೪ ॥

ಪೀಠಿಕೆ ॥ ಹೇತ್ವಂತರದಿಂದ ದೇವತೆಗಳಿಗೇನೇ ಸಮ್ಯಕ್ ಜ್ಞಾನ ಅದರ ಫಲಗಳು, ಇತರರಿಗೆ ಇಲ್ಲ ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ವಿಶೇಷಾನುಗ್ರಹಂ ಚ ಓಂ ॥ ೩೮ ॥

ಸೂತ್ರಾರ್ಥ ॥ ದೇವತೆಗಳಲ್ಲಿ ಶ್ರೀಹರಿಗೆ ವಿಶೇಷಾನುಗ್ರಹವನ್ನು ಶೃಣ್ವೇವೀರಃ ಎನ್ನುವ ಶ್ರುತಿಯು ತೋರಿಸುತ್ತದೆ. (ಆದ ಕಾರಣ ಅದಕ್ಕೆ ಕಾರಣವಾದ ತತ್ವಜ್ಞಾನವೂ ಅವರಿಗೇನೇ.)

**ಭಾಷ್ಯ ॥ ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ । ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ (ಋ.೬.೪೭.೧೬.) ಇತಿ ವಿಶೇಷಾನುಗ್ರಹಂ ಚ ದರ್ಶಯತಿ ದೇವೇಷು ಪರಮೇಶ್ವರಸ್ಯ ॥ ೩೮ ॥ ೫ ॥**

ಭಾಷ್ಯಾರ್ಥ ॥ ಆರಬ್ಧಾಂತಗಾಮಿಯಾದ ಪರಮೇಶ್ವರನು ಅಥವಾ ತನ್ನ ನಿಶ್ಚಯಾನುಸಾರವಾಗಿ ತನ್ನ ಕಾರ್ಯವನ್ನು ಸಂಪೂರ್ಣಗೊಳಿಸತಕ್ಕ ನರಸಿಂಹನು ಎಲ್ಲಾ ದುಷ್ಟಸ್ವಭಾವವುಳ್ಳ ದೈತ್ಯಾದಿಗಳನ್ನು ನಿತ್ಯನರಕಕ್ಕೆ ಹೊಂದಿಸಿಕೊಡುವವನಾಗಿ ಅಥವಾ ಅಂಧಂತಮಸ್ಸಿನಲ್ಲಿ ಶಿಕ್ಷಿಸುವವನಾಗಿ ಅವರಿಗೆ ವಿರುದ್ಧರಾದ ದೇವತೆಗಳನ್ನು ಸಂಸಾರವನ್ನು ದಾಟಿಸಿ ತನ್ನ ಪದವನ್ನು ಹೊಂದಿಸಿಕೊಡುವವನಾಗಿ ವೇದಾದಿಗಳಲ್ಲಿ ಪ್ರಸಿದ್ಧನಾಗಿದ್ದಾನೆ. ದೇವಾಸುರವರ್ಗಕ್ಕೆ ತಮ್ಮ ಯೋಗ್ಯತೆಯಿಂದ ಅಧಿಕವಾದ ಪುಣ್ಯಪಾಪಾದಿಗಳಿಗೆ ವಿಘಾತುಕನಾಗಿ ವೇದಾದಿಗಳಲ್ಲಿ ಕೇಳಲ್ಪಡುತ್ತಾನೆ. ಇಬ್ಬರಿಗೂ ನಿಯಾಮಕನಾದ ಆ ಶ್ರೀಹರಿಯೇ ಮಧ್ಯಮಜೀವರನ್ನು ಸಂಸಾರದಲ್ಲಿಯೇ ತಿರುಗಿಸುತ್ತಾನೆ. ಹೀಗೆ ಈ ಶ್ರುತಿಯೇ ದೇವಾದಿ ಯೋಗ್ಯಜೀವರಲ್ಲಿಯೇ ಪರಮೇಶ್ವರನ ವಿಶೇಷಾನುಗ್ರಹವನ್ನೂ ವಿಶೇಷ ಫಲಸದ್ಭಾವವನ್ನೂ

ಪ್ರತಿಪಾದಿಸುತ್ತದೆ. ಇತರರಲ್ಲಿ ಇಲ್ಲ. (ಜ್ಞಾನಾದಿಗಳು ಶ್ರೀಹರಿಯ ಅನುಗ್ರಹಾಧೀನಗಳು. ಆದ ಕಾರಣ ದೇವತೆಗಳಿಗೇನೇ ಸಮ್ಯಕ್ ಜ್ಞಾನಾದಿಗಳು. ಅಸುರರಿಗೆ ಇಲ್ಲ) ॥ ૩.૯ ॥ ૭ ॥

ಪೀಠಿಕೆ ॥ ಶ್ರುತ್ಯರ್ಥ ನಿಶ್ಚಾಯಕವಾದ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಅಸುರಾನ್ ದಮಯನ್ ವಿಷ್ಣುಃ ಸ್ವಪದಂ ಚ ಸುರಾನ್ನಯನ್ । ಪುನಃಪುನರ್ಮಾನುಷಾಂಸ್ತು ಸೃತಾವಾವರ್ತಯತ್ಯಸೌ । ಇತಿ (ಚ) ಭವಿಷ್ಯತ್ಪರ್ವಣಿ ॥ ೩.೮ ॥ ೬ ॥**

ಭಾಷ್ಯಾರ್ಥ ॥ ಶ್ರೀಹರಿಯು ಅಯೋಗ್ಯರನ್ನು ಅಂಧಂತಮಸ್ಸಿನಲ್ಲಿ ದಂಡಿಸುವವನಾಗಿಯೂ ಮುಕ್ತಿಯೋಗ್ಯರನ್ನು ವೈಕುಂಠಾದಿರೂಪವಾದ ತನ್ನ ಸ್ಥಾನವನ್ನು ಹೊಂದಿಸಿಕೊಡುವವನಾಗಿಯೂ ಮಿಶ್ರಬುದ್ಧಿಗಳನ್ನು ಮತ್ತೂಮತ್ತೂ ಸಂಸಾರದಲ್ಲಿಯೇ ತಿರುಗಿಸುತ್ತಾನೆ. ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ ನರಕದಲ್ಲಿಯೂ ತಿರುಗಿಸುತ್ತಾನೆ. ॥ ૩.૯ ॥ ૬ ॥

ಪೀಠಿಕೆ ॥ ದೈತ್ಯರಿಗೆ ಸ್ವಭಾವವು ಅಭಿಭೂತವಾಗಿ ದೇವತ್ವಪ್ರಾಪ್ತಿಯಾಗುವುದಿಲ್ಲವೆಂದು ಶ್ರುತಿಸ್ಮೃತಿಗಳಿಂದ ಯಾವುದು ಉಕ್ತವಾಗಿಯದೋ ಅದನ್ನೇ ಯುಕ್ತಿಯಿಂದಲೂ ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ಓಂ ॥ ೩೯ ॥

ಸೂತ್ರಾರ್ಥ ॥ ದೇವಭಾಗದಿಂದ ಅಸುರಸಮುದಾಯವೇ ಅತಿಬಹುಲವಿದೆ. (ಆದ ಕಾರಣ ಸ್ವಭಾವಕ್ಕೆ ಅಭಿಭವವಿಲ್ಲ ಇಲ್ಲವಾದರೆ ದೇವಭಾಗದಿಂದ ಊನತ್ವವು ಬರು ವುದು.) (ಜ್ಯಾಯಸ್ತ್ವವೇ ಹೇಗೆಂದರೆ) ತಸ್ಮಾನ್ನ ಜನತಾಮಿಯಾತ್ ಎನ್ನುವ ಲಿಂಗದಿಂದಲೂ, ಕನೀಯಸಾಃ ಏವದೇವಾಃ ಎನ್ನುವ ಶ್ರುತಿಯಿಂದಲೂ.

**ಭಾಷ್ಯ ॥ (೧) ದೇವಭಾಗಾದಸುರಭಾಗ ಏವ ಬಹುಲಃ । (೨) ತಸ್ಮಾನ್ನ ಜನತಾಮಿಯಾತ್** (ಬೃ.೩.೩.೧೦.) **ಇತಿ ಲಿಂಗಾತ್ । (೩) ಚ ಶಬ್ದಾತ್— ತತಃ ಕನೀಯಸಾ ಏವ ದೇವಾ ಜ್ಯಾಯಸಾ ಅಸುರಾಃ** (ಬೃ.೩.೩.೧.) **। ಇತಿ ಶ್ರುತೇಶ್ಚ ॥ (೪) ಅಸುರಾಬಹುಲಾ ಯಸ್ಮಾತ್ತಸ್ಮಾನ್ನ ಜನತಾಮಿಯಾತ್ । ಇತಿ ಚ ಬ್ರಾಹ್ಮೇ ॥ ೩೯ ॥ ೭ ॥**

ಭಾಷ್ಯಾರ್ಥ ॥ (೧) ದೇವಭಾಗದಿಂದ ಅಸುರಸಮುದಾಯವೇ ಅತ್ಯಧಿಕವು. (೨) (ಏಕೆಂದರೆ, ಮುಂದಿನ ಸ್ಮೃತಿಯಲ್ಲಿ) ಆದಕಾರಣ ಜನಸಮುದಾಯವನ್ನು ಪ್ರವೇಶ ಮಾಡಬಾರದು ಎಂದು (ಜನಸಮುದಾಯದಲ್ಲಿ ಪ್ರವೇಶವು ನಿಷೇಧವು ಮಾಡಲ್ಪಡುತ್ತದೆ. ಆ ನಿಷೇಧವು ಅಸುರರಿಗೆ ಬಾಹುಲ್ಯವಿದ್ದರೇನೇ ಜನಸಮುದಾಯದಲ್ಲಿ ಅವರೂ ಇರಬಹುದೆಂದು ಸಂಭಾವನೆ ಮಾಡಿ ಅದರ ಸಂಗ ದೋಷವು ಬರಬಾರದೆನ್ನುವ ಉದ್ದೇಶದಿಂದಲೇ ಕೂಡುತ್ತದೆ. ಇಲ್ಲವಾದರೆ ನಿಷೇಧವು

ಕೂಡಲಾರದು. ಆದಕಾರಣ) ಜನಸಮೂಹದಲ್ಲಿ ಪ್ರವೇಶನಿಷೇಧೋಕ್ತಿರೂಪವಾದ ಲಿಂಗದೆಶೆಯಿಂದ. (೨.) ಚ ಶಬ್ದದಿಂದ ಸಮುಚ್ಚಿತವಾದ ದೇವಾಸುರ ಭಾಗಗಳ ಮಧ್ಯದಲ್ಲಿ ದೇವತೆಗಳು ಅಲ್ಪಸಂಖ್ಯೆಯುಳ್ಳವರೇ. ಅಸುರರು ಹೆಚ್ಚು ಸಂಖ್ಯೆಯುಳ್ಳವರೇ, ಎನ್ನುವ ಶ್ರುತಿಯಿಂದಲೂ (ತಥಾಚ ಅಸುರರಿಗೆ ಸ್ವಭಾವವು ತಿರಸ್ಕೃತವಾಗಿ ದೇವತ್ವಪ್ರಾಪ್ತಿಯು ಆಗುವುದಾದರೆ ಕೆಲವು ವೇಳೆ ಅಸುರರಿಗೆ ದೇವಸಮೂಹದಿಂದ ಅಲ್ಪಸಂಖ್ಯೆಯು ಬರಬೇಕಾಗುವುದು. ಅದು ಕೂಡಲಾರದು. ಅನಾದ್ಯನಂತ ಕಾಲದಲ್ಲಿಯೂ ದೇವಭಾಗದಿಂದ ಅಸುರಸಮೂಹವೇ ಅಧಿಕಸಂಖ್ಯೆಯುಳ್ಳದ್ದೆಂದು ಪ್ರಮಿತವಾಗಿದೆ.) (೪) (ಜನಸಮೂಹದಲ್ಲಿ ಪ್ರವೇಶನಿಷೇಧವು ಅಸುರರಿಗೆ ಬಾಹುಲ್ಯವಿದ್ದ ಪ್ರಯುಕ್ತವೇ ಎಂದು ಹೇಗೆ ಸಿದ್ಧವಾಗುತ್ತದೆ ಎಂದರೆ) ಯಾವ ಕಾರಣದಿಂದ ಅಸುರರು (ಅಯೋಗ್ಯರು) ಬಹುಸಂಖ್ಯೆ ಯುಳ್ಳವರೋ ಆದಕಾರಣ ಜನ ಸಮೂಹವನ್ನು ಪ್ರವೇಶ ಮಾಡಬಾರದು. ಎಂದು ಬ್ರಾಹ್ಮಪುರಾಣದಲ್ಲಿ ಹೇಳಿಯದೆ. ॥ ೩೯ ॥ ೭ ॥

ಪೀಠಿಕೆ ॥ ಜೈಮಿನಿಗಳ ಮತದಿಂದಲೂ ಸ್ವರೂಪಕ್ಕೆ ವ್ಯತ್ಯಾಸವು ಇಲ್ಲ. ಎನ್ನುವ ಅರ್ಥವನ್ನು ಸಮರ್ಥಿಸತಕ್ಕ ಸೂತ್ರವನ್ನು ಹೇಳುತ್ತಾರೆ—

### ಸೂತ್ರ ॥ ಓಂ ತದ್ಭೂತಸ್ಯ ತು ತದ್ಭಾವೋ ಜೈಮಿನೀರಪಿ ನಿಯಮಾತದ್ರೂಪಾ ಭಾವೇಭ್ಯಃ ಓಂ ॥ ೪೦ ॥

ಸೂತ್ರಾರ್ಥ ॥ ದೇವತ್ವಾದಿಗಳನ್ನು ಹೊಂದಿದ ದೇವಾದಿಗಳಿಗೇನೇ ದೇವತ್ವಾದಿಗಳು. ಇತರರಿಗೆ ಇಲ್ಲ. ನಾಸುರಾಂ ದೈವೀಂ ಎನ್ನುವ ನಿಯಮ ಶ್ರುತಿಯಿಂದಲೂ ಒಬ್ಬನಿಗೆ ಅನ್ಯಭಾವವನ್ನು ನಿಷೇಧಿಸತಕ್ಕ ನಾಸುರಾಣಾಂ ದೈವಂ ರೂಪಂ ಇತ್ಯಾದಿ ಶ್ರುತಿಗಳಿಂದಲೂ, ತಂ ಭೂತಿರಿತಿ ದೇವಾಃ, ಎಂದು ದೇವಾಸುರ ರಿಗೆ ಭೂತ್ಯಭೂತಿ ಪ್ರತಿಪಾದಕ ಶ್ರುತಿಯಿಂದಲೂ ಜೈಮಿನಿ ಋಷಿಗಳಿಗೂ ಸಿದ್ಧವಾಗಿದೆ.

ಭಾಷ್ಯ ॥ (೧) ಅಸುರಜಾತೇರೇವಾಸುರತ್ವಂ ದೇವಜಾತೇರೇವ ದೇವತ್ವಂ ಜೈಮಿನೇರಪಿ ಸಿದ್ಧಮೇವ । (೨) ನಾಸುರಾ ದೈವೀಂ ನ ದೇವಾ ಆಸುರೀಂ ನ ಮನುಷ್ಯಾ ದೈವೀಮಾಸುರೀಂ ಚ ಗತಿಮೀಯುರಾತ್ಮೀಯಾಮೇವ ಜಾತಿಮನು ಭವಂತೀತಿ ನಿಯಮಶ್ರುತೇಃ । (೩) ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ ನ ಚೋಭಯಂ ಮನುಷ್ಯಾಣಾಂ ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋಽಹ್ಯೇವೈಷ ಭವತೀತ್ಯತದ್ರೂಪತ್ವಶ್ರುತೇಃ । (೪) ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿ ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತ್ಯಭೂರಿತ್ಯಸುರಾಸ್ತೇ ಹ ಪರಾಬಭೂವುಃ (ಐ.ಆ.೨.೧.೮.) ಇತಿ ದೇವಾಸುರಾಣಾಂ ಭಾವಾಭಾವಶ್ರುತೇಶ್ಚ ॥ ೪೦ ॥ ೮ ॥

ಭಾಷ್ಯಾರ್ಥ ॥ (೧) ಅಸುರಸ್ವಭಾವವುಳ್ಳವರಿಗೇನೇ ಅಸುರತ್ವವು. ದೇವಸ್ವಭಾವವುಳ್ಳ ವರಿಗೇನೇ ದೇವತ್ವವು. (ಮನುಷ್ಯ ಸ್ವಭಾವವುಳ್ಳವರಿಗೇನೇ ಮನುಷ್ಯತ್ವವು) (ಅನ್ಯಸ್ವಭಾವವುಳ್ಳವರಿಗೆ

ಅನ್ಯಸ್ವಭಾವತ್ವವು ಅಂದರೆ ಸ್ವಭಾವಕ್ಕೆ ವ್ಯತ್ಯಾಸವಿಲ್ಲವೆನ್ನುವುದು ಜೈಮಿನಿ ಋಷಿಗಳಿಗೂ ಸಿದ್ಧವೇ ಆಗಿದೆ.) (ವೇದವ್ಯಾಸರಿಗೆ ಮಾತ್ರಸಿದ್ಧವಾದುದಲ್ಲ) (೨) (ಯಾವ ಹೇತುವಿನಿಂದ ಅದು ಜೈಮಿನಿ ಋಷಿಗಳಿಗೂ ಸಿದ್ಧವಾಗಿದೆ ಎಂದರೆ) ಅಸುರರು (ಅಯೋಗ್ಯರು) ದೇವಸ್ವಭಾವವನ್ನು ಹೊಂದುವುದಿಲ್ಲ. ದೇವತೆಗಳು (ಯೋಗ್ಯರು) ಅಸುರಸ್ವಭಾವವನ್ನು ಹೊಂದುವುದಿಲ್ಲ. ಮನುಷ್ಯರು ದೇವಸ್ವಭಾವವನ್ನು ಅಸುರ ಸ್ವಭಾವವನ್ನು ಹೊಂದುವುದಿಲ್ಲ. ಮತ್ತೆ ತಮ್ಮ ತಮ್ಮ ಸ್ವಭಾವವನ್ನೇ ಅನುಸರಿಸಿಕೊಂಡು ಇರುತ್ತಾರೆ, ಎಂದು ನಿಯಮಪ್ರತಿಪಾದಕ ಶ್ರುತಿಯಿಂದ. (೩.) ಅಸುರರಿಗೆ (ಅಯೋಗ್ಯರಿಗೆ) ದೇವತಾ ಸಂಬಂಧಿಯಾದ ಯಥಾರ್ಥಜ್ಞಾನಾದಿ ಧರ್ಮವು ಇಲ್ಲ. ದೇವತೆಗಳಿಗೆ ಮಿಥ್ಯಾಜ್ಞಾನ ದ್ವೇಷಾದಿ ಧರ್ಮವು ಇಲ್ಲ. ಮನುಷ್ಯರಿಗೆ ಈ ಎರಡು ಧರ್ಮವೂ ಇಲ್ಲ. ಯಾವ ಜನರು ಯಾವ ಲಕ್ಷಣೋಪೇತರೋ ಆ ಜನರು ಆ ಲಕ್ಷಣವುಳ್ಳವರೇ. ಏಕೆಂದರೆ ಸಮ್ಯಕ್ ಜ್ಞಾನಾದಿ ಧರ್ಮವು ಸ್ವಭಾವವೇ ಆಗಿರುತ್ತದೆ. (ಆಗುಂತಕ ಧರ್ಮವಲ್ಲ.) ಎಂದು ಪರಸ್ಪರವಾಗಿ ಒಬ್ಬರಿಗೆ ಇನ್ನೊಬ್ಬರ ಧರ್ಮವನ್ನು ನಿಷೇಧಿಸತಕ್ಕ ಶ್ರುತಿಯ ದೆಶೆಯಿಂದ (೪) ದೇವಾದಿ ಯೋಗ್ಯರು ಆ ಪರಮಾತ್ಮನನ್ನು ಜ್ಞಾನೈಶ್ವರ್ಯಾದಿ ಭೂತಿಪ್ರದನೆಂದೂ ತದ್ರೂಪನೆಂದೂ ಉಪಾಸನಾ ಮಾಡಿದರು. ಆದಕಾರಣ ಮಹಾ ಐಶ್ವರ್ಯವುಳ್ಳವರಾದರು (ಮುಕ್ತರಾದರು) ದೇವತೆಗಳಿಗೆ ಶ್ರೀಹರಿಯು ಭೂತಿದಾಯಕನೆಂದು ಉಪಾಸನಾ ಮಾಡತಕ್ಕ ನಿಯಮವಿದ್ದುದರಿಂದಲೇ ಈಗಲೂ ಕೂಡ ಸುಪ್ತರಲ್ಲಿರತಕ್ಕ ಸರ್ವ ದೇವೋತ್ತಮರಾದ ವಾಯುದೇವರು. ಭೂಃ ಭೂಃ ಎಂದೇ ಅಂದರೆ ಜ್ಞಾನೈಶ್ವರ್ಯಾದಿರೂಪನು. ಜ್ಞಾನೈಶ್ವರ್ಯಾದಿಪ್ರದನು ಎಂದೇ ಶ್ವಾಸರೂಪದಿಂದ ವಿಷ್ಣುವನ್ನು ಹೊಗಳುತ್ತಾರೆ. ಅಸುರರು ನಮಗೆ ಅನೈಶ್ವರ್ಯರೂಪನು ಅಭೂತಿಕಾರಕನು ಎಂದೇ ಉಪಾಸನಾ ಮಾಡುತ್ತಾರೆ. ಆದಕಾರಣ ಅವರು ಭೂತ್ಯಾದಿ ಗುಣರಹಿತರಾಗಿ ಅಂಧಂತಮಸ್ಸನ್ನು ಹೊಂದಿದರು. ಹೀಗೆ ದೇವತೆಗಳಿಗೆ ಐಶ್ವರ್ಯ ವಿಶಿಷ್ಟವಾಗಿ ಇರುವಿಕೆ, ಅಸುರರಿಗೆ ಪರಾಭವವು, ಈ ರೀತಿಯಾಗಿ ಪರಸ್ಪರ ವಿಪರೀತೋಪಾಸನ ಆದರ ಫಲನಿಯಮವನ್ನು ಪ್ರತಿಪಾದಿಸತಕ್ಕ ಶ್ರುತಿಯದೆಶೆಯಿಂದ (ದೇವತ್ವಾದಿಗಳು ಅಸ್ವಾಭಾವಿಕವೆಂದಾದರೆ ಈ ನಿಯಮವು ಇಲ್ಲದೆ ಹೋಗುವುದು. ಈ ನಿಯಮವು ಇದೆ. ಆದಕಾರಣ ದೇವತ್ವಾದಿಗಳು ಸ್ವಾಭಾವಿಕವೇ.) ॥ ೪೧ ॥ ೮ ॥

ಪೀಠಿಕೆ ॥ ಪ್ರಹ್ಲಾದ ಮೊದಲಾದ ದೈತ್ಯರಿಗೂ ಸಮ್ಯಕ್ ಜ್ಞಾನ, ಆದರ ಫಲಗಳು ಕಂಡದ್ದರಿಂದ ದೇವತೆಗಳಿಗೇನೇ ಸಮ್ಯಕ್ ಜ್ಞಾನಾದಿಗಳು ಎನ್ನುವ ನಿಯಮವು ಹೇಗೆ ಕೂಡುತ್ತದೆ ಎಂದರೆ, ಈ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ದೇವಾನಾಂ ಭೂತಿರಿತ್ಯೇವ ಮನೋ ವಿಷ್ಣೌ ಸ್ವಭಾವತಃ । ಅಸುರಾಣಾಮಭೂತಿತ್ವೇ ನೈತನ್ನಿಯಮತೋಽನ್ಯಥಾ ॥ ದೇವಾಃ ಶಾಪಾಭಿಭೂತತ್ವಾತ್ ಪ್ರಹ್ಲಾದಾದ್ಯಾ ಬಭೂವಿರೇ । ಅತಃ ಸುಗತಿರೇಷಾಂ ನಾನ್ಯಥಾ ವ್ಯತ್ಯಯೋ ಭವೇತ್ ॥ ಇತಿ ಚಾಧ್ಯಾತ್ಮೇ ॥ ೪೦ ॥ ಅಧಿ.೫ ॥ ೯ ॥**

ಭಾಷ್ಯಾರ್ಥ ॥ ಯಾವ ಕಾರಣದಿಂದ ದೇವತೆಗಳಿಗೆ ವಿಷ್ಣುವಿನಲ್ಲಿ ಸ್ವಭಾವತಃ ಐಶ್ವ

ರ್ಯಾದಿರೂಪನೆಂದೇ ಮನಸ್ಸು ಇರುವುದೋ, (ಹಾಗೆಯೇ ಉಪಾಸನವೂ ಆಗುವುದೋ, ಆದಕಾರಣ ಫಲವೂ ಹಾಗೆಯೇ ಆಗುವುದು.) ಅಸುರರಿಗೆ ಅಭೂತಿವಿಷಯದಲ್ಲಿಯೇ ಮನಸ್ಸು ಇರುವುದು. ಫಲವೂ ಅಂತಹುದೇ ಆಗುವುದು. ಇದರಿಂದ ಬೇರೆ ರೀತಿಯಾಗಿ ಅಂದರೆ, ನಿಯತ ಧರ್ಮವು ಇಲ್ಲವೆಂದು ತಿಳಿಯಕೂಡದು. (ತಥಾಚ ಪ್ರಹ್ಲಾದಾದಿಗಳು ಭೂತಿರೂಪವೆಂದು ಉಪಾಸನಾ ಮಾಡತಕ್ಕವರಾದುದರಿಂದ ಅವರು ದೈತ್ಯರಲ್ಲ ಎಂದು ಸಿದ್ಧವಾಯಿತು.) (ಹಾಗಾದರೆ, ಅವರು ದೇವತೆಗಳು ಆಗಿದ್ದರೆ ಪ್ರಹ್ಲಾದಾದಿಭಾವಕ್ಕೆ ಏನು ಕಾರಣವು ಎಂದರೆ) ಸ್ವಭಾವತಃ ದೇವತೆಗಳೇ ಬ್ರಹ್ಮಾದಿ ದೇವತೆಗಳ ಶಾಪದಿಂದ ತಿರೋಹಿತವಾದ ಸ್ವಭಾವವುಳ್ಳವರಾದುದರಿಂದಲೇ ಪ್ರಹ್ಲಾದಾದಿಗಳು ದೈತ್ಯಜನ್ಮವುಳ್ಳವರು ಆದರು. (ಸ್ವಭಾವತಃ ಅಸುರತ್ವವನ್ನು ಹೊಂದಿದವರು ಅಲ್ಲ) ಸ್ವಭಾವತಃ ದೇವತೆಗಳಾದುದರಿಂದಲೇ ಆ ಪ್ರಹ್ಲಾದಾದಿಗಳಿಗೆ ಒಳ್ಳೇಗತಿಯು, ಅಂದರೆ ಯಥಾರ್ಥಜ್ಞಾನ ಯಥಾರ್ಥಜ್ಞಾನಫಲಗಳು ಆದವು. ಶಾಪಾದಿ ನಿಮಿತ್ತವು ಇಲ್ಲವಾದರೆ ಈ ಪ್ರಹ್ಲಾದಾದಿಗಳಿಗೆ ದೈತ್ಯಾದಿ ಜನ್ಮಪ್ರಾಪ್ತಿಯು ಬರುತ್ತಿದ್ದಿಲ್ಲ ಎಂದು ಅಧ್ಯಾತ್ಮ ಗ್ರಂಥದಲ್ಲಿಯೂ ಹೇಳಿದ್ದರಿಂದ ಸ್ವರೂಪಾಭಿಭವವು ಇಲ್ಲ ॥ ೪೦ ॥ ೯ ॥

## ಅಧಿಕರಣ ಸಾರಾಂಶ

ಜ್ಞಾನವು ಅಯೋಗ್ಯರಿಂದಲೂ ಪ್ರಾಪ್ಯವೋ ಅಥವಾ ಯೋಗ್ಯರಿಂದಲೇ ಪ್ರಾಪ್ಯವೋ ಅದಕ್ಕಾಗಿ ಯೋಗ್ಯರಿಂದಲೇ ಪ್ರಾಪ್ಯವು ಎನ್ನುವಲ್ಲಿ ಕಲ್ಪಕಪ್ರಮಾಣವು ಇಲ್ಲವೋ ಇದೆಯೋ, ಯೋಗ್ಯರಿಂದಲೇ ಪ್ರಾಪ್ಯವು ಎನ್ನುವ ಪಕ್ಷದಲ್ಲಿಯೇ ಅಯೋಗ್ಯತೆಯನ್ನು ಮಹಾಪ್ರಯತ್ನದಿಂದ ಕಳೆದು ಅವರಿಗೂ ಯೋಗ್ಯತೆಯು ಹುಟ್ಟುತ್ತದೋ ಅಥವಾ ಯೋಗ್ಯತೆ ಹುಟ್ಟುವುದಿಲ್ಲವೋ, ಅದಕ್ಕಾಗಿ ಅಯೋಗ್ಯತೆಯು ಅವರ ಅಸ್ವಭಾವವೋ ಸ್ವಭಾವವೋ, ಅದಕ್ಕಾಗಿ ಅಯೋಗ್ಯತೆಯೇ ಸ್ವಭಾವವಾದುದರಿಂದ ಅದಕ್ಕೆ ಅಭಿಭವವಿಲ್ಲವೆನ್ನುವಲ್ಲಿ ಜ್ಞಾಪಕವು ಇಲ್ಲವೋ ಇದೆಯೋ, ಎಂದು ಸಂದೇಹವು. ಯೋಗ್ಯರಿಗೇನೇ ಜ್ಞಾನಪ್ರಾಪ್ತಿಯು ಎನ್ನುವಲ್ಲಿ ಪ್ರಮಾಣವಿಲ್ಲ. ವೇದಾಧ್ಯಯನಕ್ಕೆ ಅಯೋಗ್ಯನಾದವನಿಗೆ ಪ್ರಯತ್ನದಿಂದ ವೇದಪ್ರಾಪ್ತಿಯು ಕಂಡಂತೆಯೇ ಜ್ಞಾನಕ್ಕೆ ಅಯೋಗ್ಯರಾದವರಿಗೂ ಪ್ರಯತ್ನದಿಂದಲೂ ಜ್ಞಾನಪ್ರಾಪ್ತಿಯು ಆಗಲೇಬಹುದು. ಜ್ಞಾನವು ಯೋಗ್ಯರಿಂದ ಮಾತ್ರ ಪ್ರಾಪ್ಯವು ಎನ್ನುವ ಪಕ್ಷದಲ್ಲಿಯೂ ಅಯೋಗ್ಯರಿಗೂ ಅಯೋಗ್ಯತ್ವವು ಅಭಿಭೂತವಾದಿ ಯೋಗ್ಯತೆಗೆ ಉತ್ಪತ್ತಿಯು ಕೂಡಬಹುದಷ್ಟೆ. ವಿಶ್ವಾಮಿತ್ರ ಋಷಿಗಳಿಗೆ ಮಹಾಪ್ರಯತ್ನದಿಂದ ಕ್ಷತ್ರಿಯತ್ವವು ಅಭಿಭೂತವಾಗಿ ಬ್ರಾಹ್ಮಣತ್ವವು ಕಂಡದಷ್ಟೆ. ಹಾಗಾದರೆ, ಕ್ಷತ್ರಿಯತ್ವವು ಅಸ್ವಾಭಾವಿಕವು, ಅಯೋಗ್ಯತ್ವವು ಸ್ವಾಭಾವಿಕವು, ಆದುದರಿಂದ ಆ ಅಯೋಗ್ಯತ್ವವು ಮಹಾಪ್ರಯತ್ನದಿಂದಲೂ ನಿವರ್ತ್ಯವಲ್ಲ ಎಂದು ಶಂಕಿಸಕೂಡದು. ಅಯೋಗ್ಯತೆಯು ಸ್ವಾಭಾವಿಕವು ಎನ್ನುವಲ್ಲಿ ಪ್ರಮಾಣವಿಲ್ಲ. ಸ್ವಾಭಾವಿಕವೆಂದಾದರೆ ಯವ ಕಲಮ ಬೀಜಾದಿಗಳಂತೆಯೇ ಸ್ವಭಾವಾನುಸಾರಿ ಫಲವು ಬರಬೇಕಾಗುವುದು, ಎಂದು ಪೂರ್ವಪಕ್ಷವು ಬಂದರೆ ದೇಶ ಕಾಲ ಗುರೂಪಸತ್ಯಾದಿ ಮಹೋತ್ಸಾಹವಿದ್ದರೂ ಅಯೋಗ್ಯರಿಗೆ ಜ್ಞಾನಪ್ರಾಪ್ತಿಯಾಗುವುದೇ ಇಲ್ಲ. ಮತ್ತೆ ಯೋಗ್ಯರಿಗೇನೇ ಜ್ಞಾನ ಪ್ರಾಪ್ತಿಯು. ಇಂದ್ರ ವಿರೋಚನರಿಗೆ ಚತುರ್ಮುಖನ ಉಪದೇಶವು ಸಮಾನವಾದಾಗ್ಯೂ ವಿರೋಚನನಿಗೆ ಯಥಾರ್ಥಜ್ಞಾನಪ್ರಾಪ್ತಿಯು ಆಗಲಿಲ್ಲ. ಮತ್ತೆ ವಿಪರೀತಜ್ಞಾನ

ಪ್ರಾಪ್ತಿಯೇ ಆಯಿತು, ಎಂದು ಛಾಂದೋಗ್ಯದಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಇಂದ್ರನಿಗೆ ಸಮ್ಯಕ್ ಜ್ಞಾನಪ್ರಾಪ್ತಿಯು ವಿರೋಚನನಿಗೆ ವಿಪರೀತಜ್ಞಾನಪ್ರಾಪ್ತಿಯು, ಈ ಲಿಂಗದಿಂದಲೂ ಹಾಗೆಯೇ ಜ್ಞಾನಕಾರಣವಾದ ಪ್ರಸಾದವು ಮುಕ್ತಿಯೋಗ್ಯರಲ್ಲಿಯೇ ಇರುವುದೆಂದು **ಶೃಣ್ವೇ ವೀರಃ** ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿರುವುದರಿಂದಲೂ ಯೋಗ್ಯರಿಗೇನೇ ಜ್ಞಾನಪ್ರಾಪ್ತಿಯೆಂದು ತಿಳಿಯುತ್ತದೆ. ಅಯೋಗ್ಯರಿಗೂ ಮಹಾಪ್ರಯತ್ನದಿಂದ ಅಯೋಗ್ಯತೆಯು ಹೋಗಿ ಯೋಗ್ಯತೆಯು ಹುಟ್ಟಬಹುದು ಎನ್ನುವುದು ಯುಕ್ತವಲ್ಲ, ಅಯೋಗ್ಯತೆಯು ಸ್ವಭಾವವೇ ಆಗಿದೆ, **ದೈವೀಮೇವ ಸಂಪತ್ತಿಂ** ಎನ್ನುವ ಶ್ರುತಿಯಲ್ಲಿಯೂ **ಆಸುರಾ ಆಸುರೇಣೈವ** ಎನ್ನುವ ಸ್ಮೃತಿಯಲ್ಲಿಯೂ ಯೋಗ್ಯತೆಗೆ ಅಭಿಭವವಿಲ್ಲವೆಂದೂ ಅದು ಸ್ವಭಾವವೆಂದೂ ಸ್ಪಷ್ಟವಾಗಿ ಶ್ರುತವಾಗಿದೆ. ಹಾಗೆಯೇ **ನಾಸುರಾ ದೈವೀಂ** ಇತ್ಯಾದಿ ನಿಯಮಶ್ರುತಿಯಿಂದಲೂ **ನಾಸುರಾಣಾಂ ದೈವಂ ರೂಪಂ** ಇತ್ಯಾದಿ ಅತದ್ರೂಪತ್ವ ಶ್ರುತಿಯಿಂದಲೂ **ತು ಭೂತಿರಿತಿ ದೇವಾಃ** ಎಂದು ದೇವಾಸುರರಿಗೆ ಯೋಗ್ಯೋಪಾಸನ, ವಿಪರೀತೋಪಾಸನಗಳಿಂದ ಸಮ್ಯಕ್ ಫಲ ವಿಪರೀತ ಫಲಪ್ರತಿಪಾದಕ ಶ್ರುತಿಗಳಿಂದಲೂ ದೇವತೆಗಳೂ ಅಸುರರೂ ಮನುಷ್ಯರೂ ಇವರಿಗೆ ದೇವತ್ವಾದಿಗಳು ಸ್ವಭಾವವೆಂದು ಪ್ರತಿಪಾದಿಸತಕ್ಕ ಜೈಮಿನ್ಯಾಚಾರ್ಯರ ಮತದಿಂದಲೂ **ಕನೀಯಸಾ ಏವ ದೇವಾಃ** ಎನ್ನುವ ಶ್ರುತಿಯಿಂದಲೂ **ನ ಜನತಾಂ** ಎಂದು ಜನಸಮೂಹದಲ್ಲಿ ಪ್ರವೇಶನಿಷೇಧಾನ್ಯಥಾನುಪಪತ್ತಿರೂಪವಾದ ಲಿಂಗದಿಂದಲೂ ಅಯೋಗ್ಯತ್ವಾದಿಗಳಿಗೆ ಸ್ವಭಾವತ್ವ, ಅಭಿಭವಾಭಾವ ಇವುಗಳು ಅವರವರ ಸ್ವಭಾವಾನುಸಾರವಾಗಿ ಫಲಪ್ರದಗಳೆಂದು ಅವಗತವಾಗುತ್ತವೆ. ಏವಂಚ ಜ್ಞಾನವು ಕೇವಲ ಯೋಗ್ಯತೆಯಿಂದಲೇ ಪ್ರಾಪ್ಯವೆಂದು ಉಕ್ತವಾಯಿತು.॥ ಅಧಿ. ೫ ॥

**ಉಭಯಲಿಂಗಾಧಿಕರಣವು ಸಮಾಪ್ತವಾಯಿತು.**

# ೬ ಅಧಿಕಾರಿಕಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಭಗವಜ್ಞಾನವು ತಮಗೆ ಅಯೋಗ್ಯವಾದ ದೇವಾದಿ ಪದಗಳಲ್ಲಿ ಆಕಾಂಕ್ಷೆಯು ಇಲ್ಲದಿರುವುದರಿಂದಲೇ ಪ್ರಾಪ್ಯವಾಗುತ್ತದೆ ಎಂದು ಹೇಳುವುದಕ್ಕಾಗಿ ದೇವತಾಪದವು ಇತರರಿಂದ ಅಪ್ರಾಪ್ಯವೆಂದು ನಿರೂಪಿಸುತ್ತಾರೆ. **ಸ್ವಧರ್ಮನಿಷ್ಠಃ ಶತಜನ್ಮಭಿಃ** ಇತ್ಯಾದಿ ಪ್ರಮಾಣದಿಂದ ದೇವತಾಪದವು ದೇವೇತರರಿಂದ ಪ್ರಾಪ್ಯವು. ಪ್ರಯತ್ನಗಳಿಂದ ಭಗವದೈಶ್ವರ್ಯವನ್ನು ಹೊಂದಲು ಶಕ್ಯವು. ದೇವತಾಪದವನ್ನು ಹೊಂದಬಹುದು ಎಂದು ಸುತರಾಂ ಸಿದ್ಧವು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್ ಓಂ ॥ ೪೧ ॥

**ಸೂತ್ರಾರ್ಥ ॥** ಯಾರು ಅವರಿಗೆ ಯಾವ ಯಾವ ಪದದಲ್ಲಿ ಅಧಿಕಾರವು ಶ್ರುತ್ಯಾದಿ ಸಿದ್ಧವಾಗಿಯದೋ ಅಂತಹ ಬ್ರಹ್ಮಾದಿ ದೇವತೆಗಳ ಪದವು ಅಧಿಕಾರವು. ಆದೂ ಕೂಡ

ಜ್ಞಾನೇಚ್ಛುವಾದ ದೇವತಾಪದಕ್ಕೆ ಅಯೋಗ್ಯನಾದವನಿಂದ ಆಕಾಂಕ್ಷ್ಯವಾಗಬಾರದು. ಶ್ರೀಹರಿಯ ಐಶ್ವರ್ಯವು ಆಕಾಂಕ್ಷ್ಯವಲ್ಲವೆಂದು ಸುತರಾಂ ಸಿದ್ಧಿಸುತ್ತದೆ. ಏಕೆಂದರೆ, ಆ ಆಕಾಂಕ್ಷೆಯೇ ಕೂಡದೆ ಇರುವುದರಿಂದ (ಅದೂ ಏಕೆಂದರೆ) ಅಯೋಗ್ಯವನ್ನು ಆರೋಹಣ ಮಾಡಲಿಕ್ಕೆ ಪ್ರಯತ್ನಿಸತಕ್ಕವನಿಗೆ ಲೋಕದಲ್ಲಿ ಪತನವು ತೋರಿಬಂದುದರಿಂದ ಇಲ್ಲಿಯೂ ಪತನವು ಅನುಮಿತವಾಗುತ್ತದೆ. ತಥಾಚ **ಬ್ರಹ್ಮಾದಿಪದಾಕಾಂಕ್ಷವಾನ್ ಪತತಿ ಅಯೋಗ್ಯಾರೋಹಣಪ್ರಯತ್ನವತ್ವಾತ್ ವಿಮತಃ ದೇವಾದಿಭಿಃ ಪಾತ್ಯತೇ ಅಶಕ್ಯತತ್ಪದೇಚ್ಛುತ್ವಾತ್ ರಾಜಪದೇಚ್ಛುವತ್** ಎಂದಾಗಲೀ ಪತನವು ಅನುಮಿತವಾಗುತ್ತದೆ.

**ಭಾಷ್ಯ ॥ (೧) ನ ಚ ಪರಮಾತ್ಮೈಶ್ವರ್ಯಾದಿಕಮಾಕಾಂಕ್ಷ್ಯಂ । ಬ್ರಹ್ಮಾದೀನಾಮಪಿ ನಾಕಾಂಕ್ಷ್ಯಂ ಕಿಮು ಪರಸ್ಯೇತಿ ಸೂಚಯಿತುಮಪಿಶಬ್ದಃ। ಚ ಶಬ್ದಸ್ತು ಜ್ಞಾನಾರ್ಥಿನಾಂ ಪೂರ್ವೋಕ್ತಾದಿತ್ಥಂ ಭಾವಾಂತರಸೂಚಕಃ । (೨) ಅಯೋಗ್ಯಮಾರೋಢುಂ ಪ್ರಯತನ್ ಪ್ರಪತನ್ ಹಿ ದೃಶ್ಯತೇ । ಏವಮಯೋಗ್ಯ ಸ್ಯ ಪರಮಾತ್ಮೈಶ್ವರ್ಯಸ್ಯ ಬ್ರಹ್ಮಾದಿಪದಸ್ಯ ಚಾಕಾಂಕ್ಷಾಯಾಂ ಪತನಮನು ಮೀಯತೇ । (೩) ನ ದೇವಪದಮನ್ವಿಚ್ಛೇತ್ಯುಕ್ತ ಏವ ಹರೇರ್ಗುಣಾನ್ । ಇಚ್ಛ ನ್ಪತತಿ ಪೂರ್ವಸ್ಮಾದಧಸ್ತಾದ್ಯತ್ರ ನೋತ್ಥಿತಿಃ ॥ ಇತಿ ಬ್ರಹ್ಮಾಂಡೇ ॥ ೧ ॥**

ಭಾಷ್ಯಾರ್ಥ ॥ (೧) ಇತರರಿಂದ ಭಗವದೈಶ್ವರ್ಯವೂ ದೇವತಾಪದವೂ ಆಕಾಂಕ್ಷಿತವಾಗಬಾರದು. (ಯಾವಾಗ ಅಯೋಗ್ಯಪದಾಕಾಂಕ್ಷೆಯು ಅನರ್ಥಸಾಧನವೋ ಆಗ ಆ ಪದಪ್ರಾಪ್ತಿಯು ಸುತರಾಂ ಆಗಲಾರದೆಂದು ಸಿದ್ಧವಾಯಿತು.) (ಸೂತ್ರದಲ್ಲಿ ಬ್ರಹ್ಮಾದ್ಯಧಿಕಾರಿಗಳ ಪದವನ್ನು ಆಕಾಂಕ್ಷಿಸಬಾರದು ಎಂದೇ ಹೇಳಿದ್ದು ಭಗವದೈಶ್ವರ್ಯಾದಿಗಳನ್ನು ಆಕಾಂಕ್ಷಿಸಬಾರದು ಎಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ) ಬ್ರಹ್ಮಾದ್ಯುತ್ತಮಾಧಿಕಾರಿಗಳ ಪದವನ್ನು ರುದ್ರಾದಿಪದಯೋಗ್ಯರಾದವರು ಆಕಾಂಕ್ಷಿಸಬಾರದು. ಶ್ರೀಹರಿಯ ಐಶ್ವರ್ಯವನ್ನು ಆಕಾಂಕ್ಷಿಸಬಾರದೆಂದು ಏನು ಹೇಳಬೇಕು, ಎಂದು ಸೂತ್ರದಲ್ಲಿದ್ದ ಅಪಿ ಶಬ್ದವು ಸೂಚಿಸುವುದು. (ಜ್ಞಾನ ವಿಚಾರವಲ್ಲದಿರುವ ಪ್ರಯುಕ್ತ ಹೇಗೆ ಪ್ರತಿಪಾದಿಸಿದ್ದು ಜ್ಞಾನಪಾದದಲ್ಲಿ ಸಂಗತವಲ್ಲ ಎಂದರೆ) ಚ ಶಬ್ದವಾದರೂ ಜ್ಞಾನಾರ್ಥಿಗಳಿಗೆ ಪೂರ್ವಾಧಿಕರಣದಲ್ಲಿ ನಿರೂಪಿಸಲ್ಪಟ್ಟ ಯೋಗ್ಯತಾರೂಪವಾದ ಅಧಿಕಾರ ದೆಶೆಯಿಂದ ಭಿನ್ನವಾದ ದೇವಾದಿ ಪದಗಳ ಆಕಾಂಕ್ಷಾ ಶೂನ್ಯತ್ವರೂಪವಾದ ಧರ್ಮವನ್ನು ಸೂಚಿಸುತ್ತದೆ. (ತಥಾಚ ಜ್ಞಾನವು ಅಧಿಕಾರಿ ಮಾತ್ರ ಪ್ರಾಪ್ಯವೆಂದಲ್ಲ ಮತ್ತೆ ದೇವಾದಿಪದಾಕಾಂಕ್ಷಾ ಶೂನ್ಯತ್ವರೂಪವಾದ ಇತಿಕರ್ತವ್ಯತಾದಿಂದಲೂ ಪ್ರಯೋಜ್ಯವೆಂದು ಚ ಶಬ್ದದಿಂದ ಸೂಚಿಸಿದ್ದರಿಂದ ಜ್ಞಾನಪದಾಂತರ್ಭಾವರೂಪವಾದ ಸಂಗತಿಯು ಉಂಟೇ ಉಂಟು.) (೨) (ಭಗವದೈಶ್ವರ್ಯಾದಿಗಳನ್ನೇ ಆಕಾಂಕ್ಷಿಸಬಾರದೆಂದು ಯಾವ ಪ್ರಮಾಣದಿಂದ ಸಿದ್ಧ ವಾಗುತ್ತದೆ ಎಂದರೆ) ಅಯೋಗ್ಯವಾದ ವೃಕ್ಷಾದಿಗಳನ್ನು ಹತ್ತಲಿಕ್ಕೆ ಪ್ರಯತ್ನ ಮಾಡತಕ್ಕ ಪುರುಷನು ಪತನವುಳ್ಳವನಾಗಿ ಲೋಕದಲ್ಲಿ ಕಾಣಲ್ಪಡುತ್ತಾನೆ. ಹೀಗೆಯೇ ಅಯೋಗ್ಯವಾದ ಪರಮಾತ್ಮೈಶ್ವರ್ಯವನ್ನು ಬ್ರಹ್ಮಾದಿಗಳ ಪದವನ್ನಾಗಲೀ ಆಕಾಂಕ್ಷಿಸಿದರೆ ಆಕಾಂಕ್ಷಾವುಳ್ಳವನಿಗೆ ಪತನವು ಅನುಮಿತವಾಗುತ್ತದೆ. (ಆ ಪದಯೋಗ್ಯನಿಗೆ ಆ ಪದದ

ಆಕಾಂಕ್ಷೆಯಿದ್ದರೆ ದೋಷವೇ ಇಲ್ಲ, ಎಂದು ಸೂಚಿತವಾಯಿತು.) (೩) (ನಿರ್ಮೂಲವಾದುದರಿಂದ ಈ ಅನುಮಾನವು ಅಪ್ರಮಾಣವು ಎಂದರೆ ಮೂಲಭೂತವಾದ ಸ್ಮೃತಿಯನ್ನು ಹೇಳುತ್ತಾರೆ.) ಯಾವಾಗ ದೇವತೆಗಳ ಪದವಿಯನ್ನೇ ಇಚ್ಛಿಸಬಾರದೋ ಆಗ ಶ್ರೀಹರಿಯ ಐಶ್ವರ್ಯಮೊದಲಾದ ಗುಣಗಳನ್ನು ಇಚ್ಛಿಸಬಾರದೆಂದು ಏನು ಹೇಳಬೇಕು. ಯಾವ ಸ್ಥಾನದಲ್ಲಿ ಬಿದ್ದವನಿಗೆ ಉತ್ಥಾನವೇ ಇಲ್ಲವೋ ಇಂತಹ ಪದವನ್ನು ಆಪೇಕ್ಷಿಸುವವನು ಪೂರ್ವತನವಾದ ಸ್ವಸ್ಥಾನದಿಂದ ಕೆಳಗೆ ಇದ್ದ ತಮಸ್ಸಿನಲ್ಲಿ ಬೀಳುತ್ತಾನೆ, ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದ್ದರಿಂದ. (ಈ ಅರ್ಥವು ಅನುಮಿತವಾಗುತ್ತದೆ.) ॥ ೧ ॥

ಪೀಠಿಕೆ ॥ ಅಯೋಗ್ಯಾರೋಹ ಪ್ರಯತ್ನರೂಪ ಪ್ರವೃತ್ತಿಯು ಪತನಕ್ಕೆ ಕಾರಣವಾದುದಾಗ್ಯೂ ಇಚ್ಛಾಮಾತ್ರರೂಪವಾದ ಪ್ರವೃತ್ತಿಗೆ ಪತನಕಾರಣತ್ವವು ಕಾಣದಿರುವುದರಿಂದ ಅಷ್ಟುಮಾತ್ರ ಬಾಧಕವಲ್ಲ ಎಂದರೆ ಇಚ್ಛೆಗೂ ಪತನಕಾರಣತ್ವವನ್ನು ಸ್ವಾರ್ಥಾನುಮಾನದಿಂದ ತೋರಿಸುತ್ತಾರೆ—

**ಭಾಷ್ಯ ॥ (೧) ಸ್ವಕೀಯಮಿಚ್ಛಮಾನಂ ತು ರಾಜಾದ್ಯಾಃ ಪಾತಯಂತಿ ಹಿ । ಏವಮೇವ ಸುರಾದ್ಯಾಶ್ಚ ಹರಿಶ್ಚ ಸ್ವಪದೇಚ್ಛುಕಂ ॥ ಇತ್ಯಾದ್ಯನುಮಾನರೂಪ ವಾಕ್ಯಾಚ್ಚ । (೨) ಮಾಯಾಭಿರುತ್ಸಿಸೃಪ್ಸತ ಇಂದ್ರ ದ್ಯಾಮಾರುರುಕ್ಷತಃ । ಅವದಸ್ಯೂಂರಧೂನುಥಾಃ (ಋ.೮.೧೪.೧೪.) ಇತಿ (ಚ) ಶ್ರುತಿಃ ॥ ೪೧ ॥ ೨ ॥**

ಭಾಷ್ಯಾರ್ಥ ॥ (೧) ತನ್ನ ಪದವನ್ನು ಇಚ್ಛಿಸತಕ್ಕ ಪುರುಷನನ್ನು ರಾಜ ಮಂತ್ರಿ ಮೊದಲಾದವರು ಬೀಳಿಸುತ್ತಾರೆ. ಪ್ರಸಿದ್ಧ. ಹೀಗೆಯೇ ದೇವತೆಗಳು ಗಂಧರ್ವರು ಮೊದಲಾದವರೂ ಮತ್ತು ಶ್ರೀಹರಿಯೂ ಕೂಡ ತನ್ನಪದವನ್ನು ಇಚ್ಛಿಸ ತಕ್ಕವನನ್ನು ಬೀಳಿಸುತ್ತಾರೆ, ಇತ್ಯಾದಿ ರೂಪವಾದ ಅನುಮಾನರೂಪವಾದ ವಾಕ್ಯದಿಂದಲೂ (ಈ ಅರ್ಥವು ತಿಳಿಯಲ್ಪಡುತ್ತದೆ.) (೨) (ಈ ವಿಷಯದಲ್ಲಿ ಮೂಲ ಭೂತವಾದ ಶ್ರುತಿಯನ್ನು ಹೇಳುತ್ತಾರೆ.) ಪರಮೇಶ್ವರನೇ ನೀನು ಮೋಹಕಗಳಾದ ಕುವಿದ್ಯೆಗಳಿಂದ ಉತ್ತಮತ್ವವನ್ನು ಹೊಂದಲಿಚ್ಛಿಸುವ ಸ್ವರ್ಗಲೋಕವನ್ನು ಆರೋಹಣ ಮಾಡಲಿಕ್ಕೆ ಇಚ್ಛಿಸುವ, ಐಕಾತ್ಮ್ಯಂ ನಾಮ ಯದಿದಂ ಕೇಚಿದ್ಬ್ರೂಯುರನೈಪುಣಾಃ ಇತ್ಯಾದಿಗಳಿಂದ ಹೇಳಲ್ಪಟ್ಟ ಪರಬ್ರಹ್ಮಚೋರರಾದ ಅಸುರರನ್ನು ಅಂಧಂತಮಸ್ಸಿನಲ್ಲಿ ಬಿಸಾಡಿರುತ್ತಿ ಎನ್ನುವ ಶ್ರುತಿಯೂ ಹಿಂದೆ ಹೇಳಿದ ಅರ್ಥದಲ್ಲಿ ಪ್ರಮಾಣವು. ॥ ೪೧ ॥ ೨ ॥

ಪೀಠಿಕೆ ॥ ಕೈಮುತ್ಯ ನ್ಯಾಯದಿಂದಲೂ ದೇವಪದಾಕಾಂಕ್ಷೆಯು ಸುತರಾಂ ಅಯುಕ್ತವೆಂದು ಸಾಧಿಸತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಉಪಪೂರ್ವಮಪೀತ್ಯೇಕೇ ಭಾವಶಮನವತ್ತದುಕ್ತಂ ಓಂ ॥ ೪೨ ॥

**ಭಾಷ್ಯ ॥ (೧) ಉಪದೇವಪದಂ ಚ ನಾಕಾಂಕ್ಷ್ಯ(ನಾಪೇಕ್ಷ್ಯ)ಮಿತ್ಯೇಕೇ । ಭಾವಶಮನದ್ಯುಷಿಪದವದೇವ । (೨) ತಚ್ಚೋಕ್ತಮಿಂದ್ರದ್ಯುಮ್ನಶ್ರುತೌ । ಅಥ ಯಥರ್ಷಿನ್ಪಚಾಪತೀನ್ನಾ(ನ್ನ) ಕಾಂಕ್ಷೇದೇವಂ ನ ಗಂಧರ್ವಾನ್ನ ವಿದ್ಯಾಧರಾನ್ನ ಸಿದ್ಧಾನಿತಿ ॥ ೩**

ಭಾಷ್ಯಾರ್ಥ ॥ (೧) ದೇವತೆಗಳ ಸಮೀಪದಲ್ಲಿರತಕ್ಕವರು ಉಪದೇವರು, ಗಂಧರ್ವಾದಿಗಳು, ಅವರ ಪದವನ್ನೂ ಕೂಡ ಇಚ್ಛಿಸಬಾರದು. ದೇವತೆಗಳ ಪದವನ್ನು ಆಕಾಂಕ್ಷಿಸಬಾರದೆಂದು ಸುತರಾಂ ಸಿದ್ಧವಾಯಿತು. ಹೀಗೆ ಕೆಲವರು ಹೇಳುತ್ತಾರೆ. ಭಾವೇ— ಮನಸ್ಸಿನಲ್ಲಿಯೂ ವ್ಯಾಪಾರದಲ್ಲಿಯೂ, ಶಮನಂ=ಶಾಂತಿಯು, ಯಾರಿಗೆ ಇದೆಯೋ ಅವರು, ಶಾಂತಚಿತ್ತರು. ಅಥವಾ ವಿಷಯೇಚ್ಛೆಯಿಲ್ಲದವರು. ಅಂತಹ ಋಷಿಗಳ ಪದದಂತೆಯೇ, ಏವಂಚ ಗಂಧರ್ವರ ಪದವನ್ನು ಋಷಿಗಳ ಪದವನ್ನು ಆಕಾಂಕ್ಷಿಸಬಾರದು. (೨) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಹೇಗೆ ಋಷಿಧರ್ಮಗಳನ್ನು ಇಚ್ಛಿಸಬಾರದೋ, ಹಾಗೆಯೇ ಜ್ಞಾನಾರ್ಥಿ ಋ ಪ್ರಜಾಪತಿಯ (ಚತುರ್ಮುಖನ) ಐಶ್ವರ್ಯಾದಿಗಳನ್ನು ಇಚ್ಛಿಸಬಾರದು. ಗಂಧರ್ವರ ಐಶ್ವರ್ಯಾದಿಗಳನ್ನು ಇಚ್ಛಿಸಬಾರದು. ವಿದ್ಯಾಧರ ಐಶ್ವರ್ಯಾದಿಗಳನ್ನು ಇಚ್ಛಿಸಬಾರದು. ಸಿದ್ಧರ ಐಶ್ವರ್ಯಾದಿಗಳನ್ನು ಇಚ್ಛಿಸಬಾರದು. ಹೀಗೆ ಉಕ್ತವಾಗಿದೆ. (ಏವಂ ಚ ಯಾವಾಗ ಮುನಿಪದವನ್ನೇ ಆಕಾಂಕ್ಷಿಸಬಾರದೋ, ಆಗ ಅದಕ್ಕಿಂತಲೂ ಅಧಿಕವಾದ ಗಂಧರ್ವಾದಿ ಪದವನ್ನು ಆಕಾಂಕ್ಷಿಸಬಾರದೆಂದು ಸುತರಾಂ ಸಿದ್ಧವಾಯಿತು.) ॥ ೩. ॥

ಪೀಠಿಕೆ ॥ ಸೂತ್ರದ್ವಯಾರ್ಥದಲ್ಲಿ ಸ್ಮೃತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ಬೃಹತ್ಸಂಹಿತಾಯಾಂ ಚ । ನ ದೈವಾನಭಿಕಾಂಕ್ಷೇತ ಕುತ ಏವ ಹರೇ ರ್ಗುಣಾನ್ ಪ್ರಾಜಾಪತ್ಯಾನ್ನ ಚಾರ್ಷಾಶ್ಚ ಗಾಂಧರ್ವಾದೀನಪಿ ಕ್ವಚಿತ್ ॥ ಋಷ್ಯಾದಿಷು ವಿಶೇಷೇ ತು ದೋಷೋ ನೈವಾವಿಶೇಷ(ಷಿ)ತಃ । ಇತಿ ವಿಶೇಷದರ್ಶನಾ ರ್ಥಮೇಕ ಇತ್ಯುಕ್ತಂ ॥ ೪೨ ॥ ೪ ॥**

ಭಾಷ್ಯಾರ್ಥ ॥ ಜ್ಞಾನಾರ್ಥಿಯು ಯಾವಾಗ ದೇವಗುಣಗಳನ್ನೇ ಇಚ್ಛಿಸಬಾರದೋ, ಆಗ ಶ್ರೀಹರಿಯ ಐಶ್ವರ್ಯ ಮೊದಲಾದ ಗುಣಗಳನ್ನು ಇಚ್ಛಿಸಬಾರದೆಂದು ಏನು ಹೇಳಬೇಕು. ಕಶ್ಯಪ ಕರ್ದಮ ಮೊದಲಾದ ಪ್ರಜೇಶ್ವರರ ಗುಣಗಳನ್ನು ಇಚ್ಛಿಸಬಾರದು. ಋಷಿಗಳ ಪದಾಧಿಕಾರಗಳನ್ನು ವಿದ್ಯಾಧರಾದಿಗಳ ಪದಾಧಿಕಾರಗಳನ್ನು ಯಾವ ಕಾಲದಲ್ಲಿಯೂ ಇಚ್ಛಿಸಬಾರದು. (ಹೀಗೆ ಎರಡು ಸೂತ್ರಗಳ ಅರ್ಥದಲ್ಲಿ ಸ್ಮೃತಿವಾಕ್ಯವನ್ನುದಾಹರಿಸಿ ಈಗ ಅದರ ಶೇಷವನ್ನೇ ಪ್ರಮಾಣೀಕರಿಸಿ ಏಕೇ ಎನ್ನುವುದರ ಅಭಿಪ್ರಾಯವನ್ನು ಹೇಳುತ್ತಾರೆ.) ಋಷಿಗಂಧರ್ವಾದಿಗಳಲ್ಲಿರತಕ್ಕ ವಿಶಿಷ್ಟತ್ವ ಮೊದಲಾದ ವಿಶೇಷ ಧರ್ಮವು ಇಚ್ಛಿಸಲ್ಪಟ್ಟರೆ (ಅಂದರೆ ನಾನು ವಸಿಷ್ಠನು ಆಗುವೆನು, ವಿಶ್ವಾಮಿತ್ರನು ಆಗುವೆನು ಎಂದು ಇಚ್ಛಿಸಿದರೆ) ದೋಷವು ಬರುವುದು. ಅಥವಾ ಋಷ್ಯಾದಿಪದಗಳಲ್ಲಿ ವಿಶೇಷಾಕಾಂಕ್ಷೆಯು ಬಂದರೇನೆ ದೋಷವು. ನಾನು ಒಬ್ಬ ಋಷಿಯು ಆಗುವೆನು ಎಂದು ಸಾಮಾನ್ಯ ಧರ್ಮವಾದ ಋಷಿತ್ವವು ಮಾತ್ರ ಆಕಾಂಕ್ಷಿಸಲ್ಪಡುತ್ತಿರಲು ಅಥವಾ ಸಾಮಾನ್ಯವಾಗಿ ಆಕಾಂಕ್ಷಾ ಬಂದರೆ ದೋಷವು ಇಲ್ಲ. ದೇವಾದಿಪದಗಳಲ್ಲಿ ಹೀಗೆ ಅಲ್ಲ. ದೇವಾದಿ ಪದಗಳು ಸಾಮಾನ್ಯತೋಽಪಿ ಅನಾಕಾಂಕ್ಷ್ಯಗಳಾಗಿವೆ. ದೇವಾದಿ ಪದಗಳ ದೆಶೆಯಿಂದ ಋಷ್ಯಾದಿ ಪದಗಳನ್ನು ಆಕಾಂಕ್ಷಿಸಿದರೆ ವೈಲಕ್ಷಣ್ಯವನ್ನು ತಿಳಿಸುವುದಕ್ಕಾಗಿಯೇ ಏಕೇ ಎಂದು ಹೇಳಿದ್ದು (ಗಂಧರ್ವಾದಿ ಪದವಿಷಯದಲ್ಲಿ ಆಕಾಂಕ್ಷ್ಯತ್ವ ಅನಾಕಾಂಕ್ಷ್ಯತ್ವ ವಿಪ್ರತಿಪತ್ತಿಯನ್ನು ಸೂಚಿಸುವುದಕ್ಕಾಗಿ ಅಲ್ಲ) ॥ ೪ ॥

**ಪೀಠಿಕೆ ॥** ಹೇಗೆ ದೇವಾದಿಗಳ ಪದವನ್ನು ಆಕಾಂಕ್ಷಿಸಬಾರದೋ ಹೀಗೆಯೇ ಜ್ಞಾನ ಭಕ್ತ್ಯಾದಿಗಳನ್ನು ಆಕಾಂಕ್ಷಿಸಬೇಕೋ ಬೇಡವೋ ಎನ್ನುವ ಸಂಶಯವನ್ನು ತಿರಸ್ಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಬಹಿಸ್ತೂಭಯಥಾಽಪಿ ಸ್ಮೃತೇರಾಚಾರಾಚ್ಚ ಓಂ ॥ ೪೩ ॥

**ಸೂತ್ರಾರ್ಥ ॥** ದೇವರ್ಷಿ ಗಂಧರ್ವ ಪದಗಳಿಂದ ಇತರವಾದ ಜ್ಞಾನಭಕ್ತ್ಯಾದಿ ಶುಭವಿಷಯದಲ್ಲಿ ವಿಶೇಷವದೆ. ದೇವರ್ಷಿಗಂಧರ್ವಾಣಾಂ ಎನ್ನುವ ಸ್ಮೃತಿಯಿಂದಲೂ, ಆಚಾರಪ್ರತಿಪಾದಕ ವಾಕ್ಯದಿಂದಲೂ, ಚಃಋಷಭಂ ಮಾ ಸಮಾನಾನಾಂ ಎನ್ನುವ ಶ್ರುತಿಯಿಂದಲೂ, ಜ್ಞಾನಭಕ್ತ್ಯಾದಿಗಳನ್ನು ಆಕಾಂಕ್ಷಿಸಿದರೂ ಆಕಾಂಕ್ಷಿಸದೆ ಇದ್ದರೂ ಪತನವಿಲ್ಲ.

**ಭಾಷ್ಯ ॥ (೧) ದೇವರ್ಷಿಗಂಧರ್ವಾದಿಪದೇಭ್ಯೋಽನ್ಯತ್ರ ಶುಭವಿಷಯ ಆಕಾಂಕ್ಷಾಯಾ ಮನಾಕಾಂಕ್ಷಾಯಾಂ ಚ ನ ಪತನಂ । (೨) ದೇವರ್ಷಿಗಂಧರ್ವಾಣಾಂ ಪದಾಕಾಂಕ್ಷೀ (ಕ್ಷಃ) ಪರೇದ್ಧ್ರುವಂ । ಅನ್ಯತ್ರ ಶುಭಮಾಕಾಂಕ್ಷನ್ನ ಪತೇದ ವಿರೋಧತಃ ॥ ಇತಿ ಸ್ಮೃತೇ ॥ (೩) ನಾನಾತ್ವಮೇವ ಕಾಮಾನಾಂ ನಾಕಾಮಃ ಕ್ವಚ ದೃಶ್ಯತೇ । ಅತೋಽ ವಿರುದ್ಧಕಾಮಃ ಸ್ಯಾದಕಾಮಸ್ತೇನ ಭಣ್ಯತೇ ॥ ಇತ್ಯಾಚಾರಾಚ್ಚ ॥ ೪೩ ॥ ಅಧಿ.೬ ॥ ೫ ॥**

**ಭಾಷ್ಯಾರ್ಥ ॥** (೧) ದೇವ ಋಷಿ ಗಂಧರ್ವ, ಪ್ರಜಾಪತಿ ಮೊದಲಾದವರ ಪದಗಳಿಂದ ಇತರವಾದ ಜ್ಞಾನ ಭಕ್ತಿ ಮೊದಲಾದ ಶುಭಧರ್ಮ ವಿಷಯದಲ್ಲಿ ಆಕಾಂಕ್ಷೆಯಿದ್ದರೂ ಆಕಾಂಕ್ಷೆಯಿಲ್ಲ ದಿದ್ದರೂ ಪತನವಿಲ್ಲ. (ಜ್ಞಾನಕ್ಕೆ ಐಶ್ವರ್ಯಾದಿಗಳು ನಿಯತಸಾಧನಗಳಲ್ಲ) (ಹಾಗಾದರೆ, ಜ್ಞಾನ, ಭಕ್ತ್ಯಾದಿಗಳು ಮೋಕ್ಷಕ್ಕಾಗಿ ಅವಶ್ಯವಾಗಿ ಆಕಾಂಕ್ಷ್ಯಗಳಾಗಿರುವುದರಿಂದ ಆಕಾಂಕ್ಷಾ ಇಲ್ಲದಿದ್ದರೆ ಪತನವಿಲ್ಲವೆಂದು ಹೇಳಿದ್ದು ಹೇಗೆ ಕೂಡುತ್ತದೆ. ಎಂದರೆ, ಈ ವಿಕಲ್ಪವು ಅನಾಕಾಂಕ್ಷ್ಯತ್ವವನ್ನು ವಿಧಿಸತಕ್ಕುದಲ್ಲ. ಮತ್ತೆ ದೇವಾದಿಗಳ ಪದದಂತೆ ಅನಾಕಾಂಕ್ಷ್ಯವೇ ಎಂದು ನಿಯಮಾಭಾವಭಿ ಪ್ರಾಯವುಳ್ಳದ್ದು.) (೨) ದೇವತೆಗಳು, ಋಷಿಗಳು ಗಂಧರ್ವರು ಇವರ ಪದಗಳನ್ನು ಆಕಾಂಕ್ಷಿಸತಕ್ಕವನು ನಿಶ್ಚಯವಾಗಿ ಬೀಳುವನು. ಇತರವಾದ ಶುಭವಾದ ಜ್ಞಾನ ಮೊದಲಾದವುಗಳನ್ನು ತತ್ಸಾಧನಗಳಾದ ಐಶ್ವರ್ಯಾದಿಗಳನ್ನು ಆಕಾಂಕ್ಷಿಸತಕ್ಕವನು ಜ್ಞಾನಾದಿ ಕಾಮನೆಯು ಶ್ರುತ್ಯಾದ್ಯವಿರುದ್ಧವಾದ ಪ್ರಯುಕ್ತ ಬೀಳಲಾರನು. ಎನ್ನುವ ಸ್ಮೃತಿಯಿಂದ. (೩) (ವಿಹಾಯ ಕಾಮಾನ್ಯಃ ಸರ್ವಾನ್ ಎಂದು ಸರ್ವ ಕಾಮಗಳ ಪರಿತ್ಯಾಗವನ್ನು ವಿಧಾನ ಮಾಡಿದ್ದರಿಂದ ಶುಭವಾದ ಜ್ಞಾನಾದಿಗಳನ್ನು ಇಚ್ಛಿಸಿದರೆ ಪತನವಿಲ್ಲದಿರುವುದು ಹೇಗೆ ಎಂದರೆ) ಇಚ್ಛಿಸತಕ್ಕ ಪುರುಷನು ಅನಿಷಿದ್ಧ ಇಚ್ಛೆಯುಳ್ಳವನು ಆಗಲೇಬೇಕು. (ಅಕಾಮತ್ವ ವಚನ ವಿರೋಧವಿಲ್ಲ. ಏಕೆಂದರೆ) ಪುರುಷನು ಶ್ರುತ್ಯವಿರುದ್ಧವಾದ ಅನಿಷಿದ್ಧವಾದ ಕಾಮನೆಯಿದ್ದುದರಿಂದಲೂ ಅಕಾಮನೆಂದು ಹೇಳಲ್ಪಡುತ್ತಾನೆ. (ಸಂಕೋಚಕ್ಕೆ ಕಾರಣವೇನೆಂದರೆ) ಕಾಮಗಳಿಗೆ ನಿಷಿದ್ಧಕಾಮತ್ವ ಅನಿಷಿದ್ಧಕಾಮತ್ವಗಳಿಂದ ವಿಲಕ್ಷಣ ತ್ವವಿರುವುದರಿಂದ ಪುರುಷರಲ್ಲಿ ಅವಿರುದ್ಧ ಕಾಮತ್ವವೇ ಕೂಡುತ್ತದೆ. (ಅಕಾಮತ್ವವೇ ಎಂದು ಹೇಳಲಾಗುವುದಿಲ್ಲ)

(ಏಕೆಂದರೆ ಕಾಮ ಮಾತ್ರ ಶೂನ್ಯವಾದ ಪುರುಷನು ಯಾವ ದೇಶದಲ್ಲಿಯೂ ಕಾಣಲ್ಪಡುವುದಿಲ್ಲ ಇಂತಹ ಅವಿರುದ್ಧ ಕಾಮಪ್ರತಿಪಾದಕವಾದ ವಾಕ್ಯದೆಶೆಯಿಂದ. ) ॥ ೪೩ ॥ ୫ ॥

## ಅಧಿಕರಣ ಸಾರಾಂಶ

ದೇವಪದವು ದೇವಪದಾಯೋಗ್ಯರಿಂದ ಹೊಂದಲಿಕ್ಕೆ ಯೋಗ್ಯವೋ ದೇವತೆಗಳಿಂದಲೇ ಹೊಂದಲಿಕ್ಕೆ ಯೋಗ್ಯವೋ, ಅದಕ್ಕಾಗಿ ದೇವಪದ ಪ್ರಾಪ್ತಿಗಾಗಿ ಇಚ್ಛಾ ಪ್ರಯತ್ನಗಳನ್ನು ಮಾಡಿದರೆ ಬಾಧಕವು ಇಲ್ಲವೋ ಇದೆಯೋ, ಎಂಬ ಸಂದೇಹವು. **ಸ್ವಧರ್ಮನಿಷ್ಠಃ ಶತಜನ್ಮಭಿಃ ವಯಾ ವಿಷ್ಣೋರೇಷಸ್ಯ ಪ್ರಭ್ಯಥೇ** ಇತ್ಯಾದಿ ವಾಕ್ಯ ಬಲದಿಂದ ವಿರಿಂಚಪದಾದಿಗಳು ಪ್ರಯತ್ನಸಾಧ್ಯಗಳೆಂದು ಅವಗತಗಳಾಗುತ್ತವೆ. ಚೇತನತ್ವಾದಿಗಳಂತೆ ದೇವತ್ವಾದಿಗಳು ಸ್ವಾಭಾವಿಕಗಳಾಗಿರದೆ ಇರುವುದರಿಂದ ಪ್ರಯತ್ನದಿಂದಲೇ ಸರ್ವರಿಗೂ ಹೊಂದಲು ಶಕ್ಯಗಳಾಗಿವೆ. ಚೇತನತ್ವವು ಸ್ವಾಭಾವಿಕವೆಂದು ಸರ್ವರಿಗೂ ಸಮ್ಮತವು. ದೇವತ್ವಾದಿಗಳನ್ನು ಹೊಂದಲಿಕ್ಕೆ ಇಚ್ಛಾಪ್ರಯತ್ನಗಳನ್ನು ಮಾಡಲಿಕ್ಕೆ ಬಾಧಕವು ಇಲ್ಲ. ಇಲ್ಲದಿದ್ದರೆ ಜ್ಞಾನಭಕ್ತ್ಯಾದಿಗಳಲ್ಲಿಯೂ ಇಚ್ಛಾಪ್ರಯತ್ನಗಳು ಇಲ್ಲದೇ ಹೋಗುವವು. ಆದಕಾರಣ ದೇವತೆಗಳಿಂದ ಇತರರಾದ ಮನುಷ್ಯರಿಂದಲೂ ದೇವಾದಿಪದವು ಹೊಂದಲು ಸಾಧ್ಯವೇ ಆಗಿದೆ. ಪ್ರಯತ್ನಪಟ್ಟರೆ ಭಗವದೈಶ್ವರ್ಯವನ್ನು ಹೊಂದಬಹುದು ಎಂದರೆ, ದೇವತಾಪದವು ದೇವೇತರರಿಂದಲೂ ಭಗವದೈ ಶ್ವರ್ಯವು ಯಾರಿಂದಲೂ ಹೊಂದಲೂ ಸಾಧ್ಯವೇ ಇಲ್ಲ. ಅವುಗಳಲ್ಲಿ ಇಚ್ಛಾಪ್ರಯತ್ನಗಳೇ ಅನರ್ಥಸಾಧನಗಳು. **ವಿಮತಃ ದೇವಾದಿಭಿಃ ಪಾತ್ಯತೇ ಅಶಕ್ಯತತ್ವದೇಚ್ಛುತ್ವಾತ್ ರಾಜಪದೇಚ್ಛುವತ್ ದೇವಾದಿಪದಪ್ರಯತ್ನವಾನ್ ಪತತಿ ಅಯೋಗ್ಯಾರೋಹ ಪ್ರಯತ್ನವತ್ತ್ವಾತ್ ಅಯೋಗ್ಯವೃಕ್ಷಾರೋಹಪ್ರಯತ್ನಯುಕ್ತವತ್** ಎನ್ನುವ ಅನುಮಾನದಿಂದ ಅನರ್ಥವು ಅವಗತವಾಗುತ್ತದೆ. ಮತ್ತು **ದೇವಾಸುರನರತ್ವಾದ್ಯಾಃ ದೇವಾದೀನಾಂ ನಿಸರ್ಗತಃ** ಎನ್ನುವ ವಚನದಿಂದ ದೇವತ್ವಾದಿಗಳು ಸ್ವಾಭಾವಿಕ ಗಳೆಂದು ಅವಗತಗಳಾಗುತ್ತವೆ. **ಅನ್ಯತ್ರ ಯತ್ನಮಾಕಾಂಕ್ಷನ್ನ ಪತೇದವಿರೋಧತಃ** ಎನ್ನುವ ವಚನದಿಂದ ಜ್ಞಾನಾದಿಗಳನ್ನು ಆಕಾಂಕ್ಷಿಸಿದರೆ ಅನರ್ಥವಿಲ್ಲವೆಂದು ತಿಳಿಯುತ್ತದೆ. ಆದಕಾರಣ ದೇವಾತಾಪದವು ದೇವಪದಯೋಗ್ಯರಿಂದಲೇ ಹೊಂದಲು ಯೋಗ್ಯವು. ॥ ಅಧಿ. ೬ ॥

**ಅಧಿಕಾರಿಕಾಧಿಕರಣವು ಸಮಾಪ್ತವಾಯಿತು.**

# ೭ ಫಲಶ್ರುತ್ಯಧಿಕರಣವು

ಪ್ರಜೆಗಳ ಇಂದ್ರಿಯಾದಿಗಳಿಗೆ ದೇವತೆಗಳೇ ಪ್ರೇರಕರಾದುದರಿಂದ ಅವರೇ ಜ್ಞಾನಕ್ಕೆ ಸ್ವಾಮಿಗಳು (ನಿಯಾಮಕರು) ಆದುದರಿಂದ ಜೀವನು ಸ್ವಾಮಿಯಾಗದಿದ್ದರೂ ಅಂತಹ ಪರಾಧೀನನಾದ ಕರ್ತನಾದ ಜ್ಞಾನಿಯಾದ ಜೀವನಿಗೂ ಬ್ರಹ್ಮಜ್ಞಾನವು ಫಲವನ್ನು ಕೊಡುತ್ತದೆ ಎಂದು ಭಗವಜ್ಞಾನದ ಮಹಿಮೆಯನ್ನು ಹೇಳುತ್ತಾರೆ. ಇಲ್ಲಿ ಆತ್ರೇಯ ಮತದಿಂದ ಪೂರ್ವಪಕ್ಷ ಪ್ರದರ್ಶಕವಾದ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ ॥ ೪೪ ॥

**ಸೂತ್ರಾರ್ಥ ॥** ಬ್ರಹ್ಮವಿದಾಪ್ನೋತಿ ಪರಂ ಎನ್ನುವ ಶ್ರುತ್ಯುಕ್ತವಾದ ಜ್ಞಾನಫಲವು ಇಂದ್ರಿಯ ನಿಯಾಮಕರಾದುದರಿಂದ ಜ್ಞಾನಸ್ವಾಮಿಗಳಾದ ದೇವತೆಗಳಿಗೇನೇ, ಸ್ವಾಮೀ ಹಿ ಫಲಮಶ್ನುತೇ ಎಂದು ಜ್ಞಾನಸ್ವಾಮಿಗಳಿಗೇನೇ ಫಲವು ಶ್ರುತವಾದುದರಿಂದ ಎಂದು ಆತ್ರೇಯ ಋಷಿಗಳು ತಿಳಿಯುತ್ತಾರೆ. ತತ್ತ್ವಪ್ರದೀಪದಲ್ಲಿ ಆದರೂ, ಒಬ್ಬನು ಉಪಾಸನಾ ಮಾಡುವುದು ಇನ್ನೊಬ್ಬನು ಫಲವನ್ನುಣ್ಣುವುದು ಎನ್ನುವುದು ಸಮಂಜಸವಾಗಲಾರದು. ಆದಕಾರಣ ಪ್ರಜೆಗಳಿಗೇನೇ ಫಲವು. ಜ್ಞಾನ ಸ್ವಾಮಿಗಳಾದ ದೇವತೆಗಳಿಗೆ ಫಲವು ಇಲ್ಲ ಎಂದು ಪೂರ್ವಪಕ್ಷವು ಬಂದರೆ— ಜ್ಞಾನ ಸ್ವಾಮಿಗಳಾದ ದೇವತೆಗಳಿಗೂ ಫಲವು ಇದೆ. ಅವರದ್ದು ಮಹಾಫಲವು ಎಂದು ತೋರಿಸುವುದಕ್ಕಾಗಿ ಏವಶಬ್ದವು. ಪ್ರಜೆಗಳಿಗಾದರೂ ಅಲ್ಪಫಲವು ಎಂದು ಸಿದ್ಧಾಂತಪರವಾಗಿ ವ್ಯಾಖ್ಯಾತವಾಗಿದೆ.

**ಭಾಷ್ಯ ॥ (೧) ಬ್ರಹ್ಮವಿದಾಪ್ನೋತಿ ಪರಂ (ತೈ.೨.೧.) ಇತ್ಯಾದಿಫಲಂ ಸ್ವಾಮಿನಾಂ ದೇವಾನಾಮೇವ ಭವತಿ । (೨) ಯದು ಕಿಂ ಚೇಮಾಃ ಪ್ರಜಾಃ ಶುಭಮಾಚರಂತಿ ದೇವಾ ಏವ ತದಾಚರಂತಿ ಯದು ಕಿಂ ಚೇಮಾಃ ಪ್ರಜಾ ವಿಜಾನತೇ ದೇವಾ ಏವ ತದ್ವಿಜಾನತೇ ದೇವಾನಾಂ ಹ್ಯೇತದ್ಭವತಿ ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ ಕರ್ಮಕುರ್ವಾಣಃ । ಇತಿ ಮಾಧ್ಯಂದಿನಾಯನಶ್ರುತೇರಿತ್ಯಾತ್ರೇಯೋ ಮನ್ಯತೇ ॥ ೪೪ ॥ ೧ ॥**

**ಭಾಷ್ಯಾರ್ಥ ॥** ಬ್ರಹ್ಮವಿದಾಪ್ನೋತಿ ಪರಂ ಇತ್ಯಾದಿ ಶ್ರುತಿಸಿದ್ಧವಾದ ಭಗವತ್ಪ್ರಾಪ್ತ್ಯಾದಿರೂಪವಾದ ಜ್ಞಾನಫಲವು ದೇವತೆಗಳೇ ಇಂದ್ರಿಯಾದಿಗಳಿಗೆ ಪ್ರೇರಕರಾಗಿ ಜ್ಞಾನ ಸ್ವಾಮಿಗಳಾದುದರಿಂದ ದೇವತೆಗಳಿಗೇನೇ ಆಗುತ್ತದೆ. ಪ್ರಜೆಗಳಿಗೆ ಅಲ್ಲ (ಲೋಕದಲ್ಲಿಯೂ ಸ್ವಾಮಿಗೇನೇ ಫಲವು ದೃಷ್ಟವಾಗಿದೆ.) (**ಯದು ಕಿಂಚ** ಎನ್ನುವ ಫಲ ಶ್ರುತಿಯಿಂದ) (೨) ಈ ಪ್ರಜೆಗಳು ಶುಭವಾದ ಯಾವ ಯಾವ ಕರ್ಮವನ್ನೇ ಮಾಡುತ್ತಾರೋ, ಅದನ್ನು ದೇವತೆಗಳೇ ತಿಳಿಯುತ್ತಾರೆ. (ದೇವತೆಗಳೇ ಕರ್ಮ ಸಾಧನಗಳಾದ ಇಂದ್ರಿಯಾದಿಗಳಿಗೆ ಪ್ರೇರಕರಾದದರಿಂದ ಕರ್ಮಗಳಿಗೂ ಸ್ವಾಮಿಗಳು.) ಪ್ರಜೆಗಳು ಯಾವುದು ಯಾವುದನ್ನೇ ತಿಳಿಯುತ್ತಾರೋ ಅದನ್ನು ದೇವತೆಗಳೇ ತಿಳಿಯುತ್ತಾರೆ. (ಕರ್ಮಜ್ಞಾನಗಳಿಗೆ ಪ್ರಜೆಗಳು ಕರ್ತೃಗಳಾದುದರಿಂದ ದೇವತೆಗಳು ಸ್ವಾಮಿಗಳು ಎನ್ನುವುದು ಹೇಗೆ ಕೂಡುತ್ತದೆ ಎಂದರೆ) ಯಾವ ಕಾರಣದಿಂದ ದೇವತೆಗಳಿಗೆ ಈ ಶುಭಕರ್ಮಾದಿಗಳು ಆಗುತ್ತವೋ, ಆದಕಾರಣ ಅವರಿಗೇನೇ ಫಲವು ಆಗುತ್ತದೆ. (ಕ್ರಿಯಾಕರ್ತೃಗೇನೇ ಫಲವು ಅವಶ್ಯವಾಗಿ ಆಗಬೇಕಾದುದರಿಂದ ಸ್ವಾಮಿಗೆ ಫಲವು ಎನ್ನುವುದು ಹೇಗೆ ಕೂಡುತ್ತದೆ ಎಂದರೆ) ಲೋಕದಲ್ಲಿ ಸ್ವಾಮಿಯೇ ಫಲವನ್ನು ಅನುಭವಿಸುತ್ತಾನೆ. (ಕೃಷ್ಯಾದಿಗಳಲ್ಲಿ ಹಾಗೆ ಕಂಡದೆ. ಅಸ್ವಾಮಿಯು ಕರ್ಮವನ್ನು ಮಾಡುವವನಾದಾಗ್ಯೂ ಫಲವನ್ನು ಅನುಭವಿಸುವುದಿಲ್ಲ ಎನ್ನುವ ಮಾಧ್ಯಂದಿನಾಯನ ಶ್ರುತಿಯಿಂದ ಎಂದು ಆತ್ರೇಯ ಋಷಿಗಳು ತಿಳಿಯುತ್ತಾರೆ) ॥ ೪೪ ॥ ೧ ॥

ಪೀಠಿಕೆ ॥ ಪ್ರಜೆಗಳಿಗೂ ಫಲವು ಆದೆ ಎನ್ನುತ್ತಾರೆ—

## ಸೂತ್ರ ॥ ಓಂ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈಹಿ ಪರಿಕ್ರಿಯತೇ ಓಂ ॥ ೪೫ ॥

ಸೂತ್ರಾರ್ಥ ॥ ಸತ್ರಯಾಗದಲ್ಲಿ ಋತ್ವಿಜರಿಗೆ ಫಲವು ಇದ್ದಂತೆಯೇ ಪ್ರಜೆಗಳಿಗೂ ಜ್ಞಾನಾದಿ ಫಲವು ಇದೆ. ಎಂದು ಔಡುಲೋಮ್ಯಾಚಾರ್ಯರು ತಿಳಿಯುತ್ತಾರೆ. ಪ್ರಜೆಗಳಿಗೋಸ್ಕರ ದೇವತೆಗಳಿಂದ ಜ್ಞಾನ ಮೊದಲಾದುದು ಸಂಪಾದಿಸಲ್ಪಡುತ್ತದೆ. (ಹಿ=ಯಾರು ಯಾರಿಗೋಸ್ಕರ ಯಾವುದನ್ನು ಮಾಡುತ್ತಾರೋ, ಅವರಿಗೆ ಅದರ ಫಲವು ಎಂದು ಪ್ರಸಿದ್ಧಿಯು. ತತ್ವಪ್ರದೀಪದಲ್ಲಿ ಆದರೂ ಸತ್ರಯಾಗಗಳಲ್ಲಿ ಗ್ರಹಪತಿಗೆ ಮಾತ್ರ ಫಲವಲ್ಲ. ಮತ್ತೆ ದ್ರವ್ಯಾದಿಗಳನ್ನು ಸಿದ್ಧಪಡಿಸಿರುವ ಗ್ರಹಪತಿಗೆ ಸಮರಾಗದೆ ಇದ್ದರೂ ಋತ್ವಿಜರು ತಂತಮ್ಮ ಅಗ್ನಿಗಳನ್ನು ಆ ಅಗ್ನಿಗಳನ್ನು ಆರೋಪಿಸಿಕೊಂಡು ದೀಕ್ಷಿತರಾಗಿ ದಕ್ಷಿಣೆಗಳನ್ನು ತೆಗೆದುಕೊಳ್ಳದೆ ಇದ್ದ ಪ್ರಯುಕ್ತ ಅವರಿಗೆ ಅಲ್ಪಫಲವು ಇದ್ದಂತೆಯೇ ಸ್ವಾಮಿಗಳಾಗದೆ ಇದ್ದರೂ ಪ್ರಜೆಗಳಿಗ ಫಲವು ಇದೆ. ಹೇಗೆಂದರೆ ಪ್ರಜೆಗಳಿಗೂ ಫಲವು ಸಿದ್ಧಿಯಾಗುವುದಕ್ಕಾಗಿಯೇ ಪ್ರಜೆಗಳಲ್ಲಿದ್ದು ದೇವತೆಗಳಿಂದ ಜ್ಞಾನಯಜ್ಞವು ಮಾಡಲ್ಪಡುತ್ತದೆ.)

### ಭಾಷ್ಯ ॥ ಸತ್ರಯಾಗೇಷ್ವೃತ್ವಿಜಾಮಪಿ ಫಲದರ್ಶನಾದಲ್ಪಂ ಫಲಂ ಪ್ರಜಾನಾಮಪಿ ಭವತೀತ್ಯೌಡುಲೋಮಿರ್ಮನ್ಯತೇ । ತದರ್ಥಂ ದೇವೈಃ ಕ್ರಿಯಮಾಣತ್ವಾತ್ ॥ ೪೫ ॥ ೨ ॥

ಭಾಷ್ಯ ॥ ಸತ್ರ ಯಾಗಗಳಲ್ಲಿ ಗ್ರಹಪತಿಗೆ ಮಾತ್ರವಲ್ಲ ಮತ್ತೆ ಗ್ರಹಪತಿಗಳಾಗದೆ ಇದ್ದ ಋತ್ವಿಜರಿಗೂ ಯಜ್ಞಫಲವು ಕಂಡದ್ದರಿಂದ ದೇವತೆಗಳಿಗೆ ಮಾತ್ರ ಫಲವಲ್ಲ. ಮತ್ತೆ ಪ್ರಜೆಗಳಿಗೂ ಅಲ್ಪವಾದ ಜ್ಞಾನಫಲವು ಆಗುತ್ತದೆ ಎಂದು ಔಡುಲೋಮ್ಯಾಚಾರ್ಯರು ತಿಳಿಯುತ್ತಾರೆ. ಪ್ರಜೆಗಳಿಗೋಸ್ಕರವೇ ದೇವತೆಗಳಿಂದ ಸಂಪಾದಿಸಿ ಕೊಳ್ಳಲ್ಪಡುವುದರಿಂದ.

ವಿಶೇಷಾಂಶ ॥ ದೇವತೆಗಳಿಗೆ ಪೂರ್ಣ ಫಲವು ಪ್ರಜೆಗಳಿಗೆ ಅಲ್ಪ ಫಲವು. ಅಲ್ಪ ದ್ರವ್ಯ ವಿದ್ದವನಲ್ಲಿ ಧನಿಕನಲ್ಲ ಎಂದು ಪ್ರಯೋಗವಿದ್ದಂತೆಯೇ ಯದು ಕಿಂಚ ಇತ್ಯಾದಿ ಶ್ರುತಿಗಳು ಪ್ರಜೆಗಳಿಗೆ ಅಲ್ಪ ಫಲವಿರುವುದು ಎನ್ನುವ ಅಭಿಪ್ರಾಯದಿಂದಲೇ ಫಲವಿಲ್ಲವೆಂದು ಹೇಳಿರುತ್ತದೆ. ಎಂದು ಔಡುಲೋಮ್ಯಾಚಾರ್ಯರ ಅಭಿಪ್ರಾಯವು. ಆದಕಾರಣ ಶ್ರುತಿ ಮುನಿಮತಗಳಿಗೆ ವಿರೋಧವಿಲ್ಲ. ॥ ೪೫ ॥ ೨ ॥

ಪೀಠಿಕೆ ॥ ದೇವತೆಗಳು ಪ್ರಜೆಗಳಿಗೋಸ್ಕರ ಜ್ಞಾನಾದಿಗಳನ್ನು ಸಾಧಿಸುವುದಾದರೆ ಅದರ ಫಲವು ಪ್ರಜೆಗಳಿಗೇನೇ ಬರುವುದು. ದೇವತೆಗಳಿಗೆ ಬಾರದೆ ಹೋಗುವುದು ಎಂಬ ಆತಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ಓಂ ॥ ೪೬ ॥

**ಸೂತ್ರಾರ್ಥ ॥** ಪ್ರಜೆಗಳಿಗೆ ದೇವತೆಗಳನ್ನು ಕುರಿತು ಸಹಕಾರಿತ್ವೇನ ವಿಧಾನವು ಪಕ್ಷದಿಂದ ಮೂರನೇದ್ದು, ಮೂರನೇ ಪಕ್ಷವು ಪ್ರಜೆಗಳುಳ್ಳ ರಾಜನ ಶಿಷ್ಯರುಳ್ಳ ಗುರುವಿನ ವಿಧ್ಯಾದಿಗಳಂತೆ. ಅಂದರೆ ಪ್ರಜೆಗಳು ರಾಜನಿಗೂ, ಶಿಷ್ಯರು ಗುರುಗಳಿಗೂ, ಸಹಕಾರಿಗಳಾಗಿ ವಿಧಾನ ಫಲವು ರಾಜ ಗುರು ಇವರಿಗೇನೇ ಹೇಗೆ ಮುಖ್ಯವೋ ಹಾಗೆಯೇ. ಹೇಗೆ ರಾಜನಿಗೆ ಜಗದ್ರಕ್ಷಣದಲ್ಲಿ ಪ್ರಜೆಗಳೂ ಗುರುಗಳಿಗೆ ಪಾಠ ಪ್ರವಚನದಲ್ಲಿ ಶಿಷ್ಯರೂ ಸಹಕಾರಿಗಳಾದಾಗ್ಯೂ ರಾಜ, ಗುರು, ಇವರಿಗೇನೇ ಮುಖ್ಯವಾಗಿ ಪಾಲನ ಮೊದಲಾದ ಫಲವು. ಪ್ರಜೆಗಳಿಗೂ ಶಿಷ್ಯರಿಗೂ ಅಲ್ಪವಾದ ಫಲವೋ, ಹಾಗೆಯೇ ದೇವತೆಗಳಿಗೆ ವಿಹಿತವಾದ ಜ್ಞಾನಾದಿಗಳಲ್ಲಿ ಪ್ರಜೆಗಳು ಸಹಕಾರಿ ಕಾರಣರು ಆದುದರಿಂದ ದೇವತೆಗಳಿಗೆ ಮುಖ್ಯವಾದ ಫಲವು ಪ್ರಜೆಗಳಿಗೆ ಅಲ್ಪವಾದ ಫಲವು. (ಇದು ಪುಣ್ಯವಿಷಯಕವು. ಪ್ರಜೆಗಳು ಮಾಡಿದ ಪಾಪಫಲವಾದರೂ ದೇವತೆಗಳಿಗೆ ಇಲ್ಲವೇ ಇಲ್ಲ. ಅಸುರರಿಗೇನೇ ಪಾಪಫಲವು.)

**ಭಾಷ್ಯ ॥ (೧) ತೃತೀಯಃ ಸ್ವಪಕ್ಷಃ । (೨) ದೇವಾನಾಂ ಜ್ಞಾನಾದಿಕರ್ಮಣಿ ಸಹಕಾರ್ಯಂತರತ್ವೇನ ಪ್ರಜಾ ವಿಧೀಯಂತೇ । (೩) ಯಥಾ ಪ್ರಜಾವತೋ ರಾಜ್ಞಃ ಪ್ರಜಾಃ ಸಹಕಾರಿತ್ವೇನ ವಿಧೀಯಂತೇ । (೪) ಯಥಾ ವಾಽಽ(ಚಾ) ಚಾರ್ಯಸ್ಯ ಶಿಷ್ಯಾಃ ॥ ೩ ॥**

ಭಾಷ್ಯಾರ್ಥ ॥ (೧) ಮೂರನೇ ಪಕ್ಷವು ಪೂಜ್ಯರಾದ ವೇದವ್ಯಾಸರದ್ದೇ ಪಕ್ಷವು. ಇತರರದ್ದು ಅಲ್ಲ. (೨) ದೇವತೆಗಳಿಗೆ ಜ್ಞಾನದಾನಾದಿರೂಪವಾದ ಸ್ವವಿಹಿತವಾದ ಕರ್ಮದಲ್ಲಿ ಶ್ರೇಷ್ಠರಾದ ಆಚಾರ್ಯರು ಸಹಕಾರಿಗಳಾಗಿ ವಿಧಿಸಲ್ಪಡುತ್ತಾರೆ. ಇತರರಾದ ಪ್ರಜೆಗಳಾದರೂ ಸಹಕಾರಿವಿಶೇಷರಾಗಿ ಅನುಗ್ರಹಕ್ಕಾಗಿ ಮಾಡಲ್ಪಡುತ್ತಾರೆ. (ಆದಕಾರಣ ಪ್ರಜೆಗಳಿಗೋಸ್ಕರ ಜ್ಞಾನಸಾಧನದಲ್ಲಿಯೂ ಮುಖ್ಯಕಾರಣತ್ವ ವಿದ್ದುದರಿಂದ ದೇವತೆಗಳಿಗೇನೇ ಮಹಾಫಲವು. ಪ್ರಜೆಗಳಿಗಾದರೂ ಸಹಕಾರಿಮಾತ್ರ ತ್ವವಿದ್ದುದರಿಂದ ಅಲ್ಪವಾದ ಫಲವು.) (೩) ಪ್ರಜೆಗಳುಳ್ಳ ರಾಜನಿಗೆ ಪ್ರಜೆಗಳನ್ನು ರಕ್ಷಿಸುವ ಕರ್ಮದಲ್ಲಿ ಪ್ರಜೆಗಳು ಸಹಕಾರಿಗಳಾಗಿ ವಿಧಿಸಲ್ಪಡುತ್ತಾರೆ. (ಆದಕಾರಣ ರಾಜನು ಪ್ರಜೆಗಳಿಗೋಸ್ಕರ ಪಾಲನವನ್ನು ಮಾಡುವುದಾದರೂ ಪ್ರಜೆಗಳಿಗೇನೇ ಪಾಲನ ಫಲವಲ್ಲ. ಮತ್ತೆ ರಾಜನಿಗೇನೇ ಮುಖ್ಯ ಫಲವು.) (೪) ಹೇಗೆ ಆಚಾರ್ಯರಿಗೆ ಶಿಷ್ಯರು ಪ್ರವಚನಕರ್ಮದಲ್ಲಿ ಸಹಕಾರಿಗಳಾಗಿ ವಿಧಿಸಲ್ಪಡುತ್ತಾರೋ (ಆದಕಾರಣ ಆಚಾರ್ಯರು ಶಿಷ್ಯರಿಗೋಸ್ಕರ ವ್ಯಾಖ್ಯಾನವನ್ನು ಮಾಡುವುದಾದರೂ ಶಿಷ್ಯರಿಗೇನೇ ಅದರ ಫಲವಲ್ಲ. ಮತ್ತೆ ಗುರುಗಳಿಗೇನೇ ಮುಖ್ಯ ಫಲವು. ಹೀಗೆಯೇ ಪ್ರಕೃತದಲ್ಲಿಯೂ.) ॥ ೩ ॥

ಪೀಠಿಕೆ ॥ ಇದೇ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯಾ ॥ ವಾರಾಹೇ ಚ । ಜ್ಞಾನಾದಿದಾನಂ ದೇವಾನಾಂ ವಿಷ್ಣುನಾ ಸಾಧು ಚೋದಿತಂ । ವೇದೇಷು (ಚ) ತೇಷಾಂ ವಿಹಿತಂ ತತ್ರಾಚಾರ್ಯೋಽ ಮಹತ್ತರಃ॥ ವಿಹಿತಃ ಸಹಕಾರಿತ್ವೇ ಸಹಕಾರ್ಯಂತರಂ ಪ್ರಜಾಃ । ಪಾತ್ರತ್ವೇನ ಯಥಾ ರಾಜ್ಞೋ ಯಥಾ ಶಿಷ್ಯಾ ಗುರೋರಪಿ ॥ ತಸ್ಮಾಚ್ಛ್ರುತಂ ಫಲಂ ತಾಸಾಮಾಚಾರ್ಯಾಣಾಂ**

**ಮಹತ್ತರಂ । ತತೋ ಮಹತ್ತರಂ ಪ್ರೋಕ್ತಂ ದೇವಾನಾಮುತ್ತರೋತ್ತರಂ ॥ ಇತಿ ॥ ೪೬ ॥ ಅಧಿ. ೭ ॥ ೪ ॥**

**ಭಾಷ್ಯಾರ್ಥ॥** ದೇವತೆಗಳಿಗೆ ಪ್ರಜೆಗಳಿಗೋಸ್ಕರ ಚೆನ್ನಾಗಿ ಸಾಕ್ಷಾತ್ತಾಗಿ ಜ್ಞಾನ ಮೋಕ್ಷ ಮೊದಲಾದವುಗಳ ದಾನವು ಶ್ರೀಹರಿಯಿಂದ ಅಜ್ಞಪ್ತವಾಗಿದೆ. ಜ್ಞಾನಾದಿ ದಾನವು ದೇವತೆಗಳಿಗೆ ವೇದದಲ್ಲಿ ವಿಹಿತವೂ ಆಗಿದೆ. ತಮಗೆ ವಿಹಿತವಾದ ಜ್ಞಾನದಾನದಲ್ಲಿ ಗುರುಗಳು ಪರಮ ಮುಖ್ಯರೆಂದು ಸಹಕಾರಿಗಳಾಗಿ ದೇವತೆಗಳಿಂದ ವಿಹಿತರಾಗಿರುತ್ತಾರೆ. ಇತರರಾದ ಪ್ರಜೆಗಳಾದರೂ ಸಹಕಾರಿ ವಿಶೇಷರು. ಹೇಗೆ ಪ್ರಜೆಗಳಿಗೆ ರಕ್ಷಕನಾಗಿ ಇರತಕ್ಕ ರಾಜನಿಗೆ ಪ್ರಜೆಗಳು ಸಹಕಾರಿರೂಪರು. ಹೇಗೆ ಶಿಷ್ಯರು ಗುರುಗಳಿಗೆ ಸಹಕಾರಿಕಾರಣರೋ ಸಹಕಾರಿಗಳಾದುದರಿಂದ ಆ ಪ್ರಜೆಗಳಿಗೆ ಎಷ್ಟು ಪ್ರಮಾಣದಿಂದ ಶ್ರುತವಾಗಿಯದೋ ಅಷ್ಟು ಫಲವಾಗುತ್ತದೆ. ಆಚಾರ್ಯರಿಗಾದರೂ ಅದಕ್ಕಿಂತಲೂ ಅತಿಶ್ರೇಷ್ಠವಾದ ಫಲವು ಆಗುತ್ತದೆ. ಅದಕ್ಕಿಂತಲೂ ದೇವತೆಗಳಿಗೆ ಶ್ರೇಷ್ಠವಾದ ಫಲವು ಹೇಳಲ್ಪಟ್ಟದೆ. ಅಲ್ಲಿಯೂ ಬ್ರಹ್ಮಪರ್ಯಂತವಾಗಿ ಮುಕ್ತಾವಷ್ಟಗುಣಂ ಶಿಷ್ಯಾದ್ಗುರುರಾಪ್ನೋತಿ ಇತ್ಯಾದ್ಯುಕ್ತಪ್ರಕಾರ ಉತ್ತರೋತ್ತರ ಶ್ರೇಷ್ಠವಾದ ಫಲವು ಆಗುತ್ತದೆ. ॥ ೪೬ ॥ ೪ ॥

## ಅಧಿಕರಣ ಸಾರಾಂಶ

ಜ್ಞಾನವು ತತ್ವಾಭಿಮಾನಿಗಳಾದ ದೇವತೆಗಳಿಗೇನೇ ಫಲವನ್ನು ಕೊಡತಕ್ಕದೋ ಪ್ರಜೆಗಳಿಗೂ ಫಲವನ್ನು ಕೊಡತಕ್ಕದೋ, ಅದಕ್ಕಾಗಿ ಕ್ರಿಯಾಜನ್ಯ ಫಲದಲ್ಲಿ ಪ್ರಯೋಜಕ ಕರ್ತೃತ್ವವೇ ಪ್ರಯೋಜಕವೋ ಅಥವಾ ಕರ್ತೃತ್ವಮಾತ್ರವೂ ಪ್ರಯೋಜಕವೋ, ಕರ್ತೃತ್ವಮಾತ್ರವೂ ಪ್ರಯೋಜಕವು ಎನ್ನುವಲ್ಲಿ ಹೇತುವು ಇಲ್ಲ ಬಾಧಕವು ಇದೆಯೋ, ಅಥವಾ ವಿಪರೀತವೋ, ಅದಕ್ಕಾಗಿ ಕರ್ತೃತ್ವಮಾತ್ರವೂ ಪ್ರಯೋಜಕವು ಎನ್ನುವ ಪಕ್ಷದಲ್ಲಿ ಪ್ರಯೋಜಕ ಕರ್ತೃತ್ವದಿಂದ ಸಮಾನವಾದ ಫಲವು ಆವಶ್ಯಕವೋ ಅಲ್ಲವೋ ಎಂದು ಸಂದೇಹವು. ಕರ್ತೃತ್ವವೂ ಪ್ರಯೋಜಕವು ಎನ್ನುವಲ್ಲಿ ಸಂಕೋಚಕ ಪ್ರಮಾಣವಿಲ್ಲದಿರುವುದರಿಂದ ಸ್ವಾಮಿಯ ಫಲಕ್ಕೆ ಸಮವಾದ ಫಲವನ್ನೇ ಅವಶ್ಯವಾಗಿ ಹೇಳಬೇಕು. ಆದಾದರೂ ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ ಎನ್ನುವ ಶ್ರುತಿಯಿಂದಲೂ ಆತ್ರೇಯಾಚಾರ್ಯರ ಮತದಿಂದಲೂ ವಿರುದ್ಧವಾಗಿದೆ. ಮತ್ತು ಲೋಕದಲ್ಲಿ ಬಡಗಿ ಮೊದಲಾದವರು ಪ್ರಯೋಜಕಾಧೀನ ಕರ್ತೃಗಳು ಆದಾಗ್ಯೂ ಅವರಿಗೆ ಕ್ರಿಯಾಜನ್ಯ ಫಲವು ದೃಷ್ಟವಾಗಲಿಲ್ಲ. ಆದಕಾರಣ ಯದು ಕಿಂಚ ಇತ್ಯಾದಿ ಶ್ರುತ್ಯಾದಿ ವಿರೋಧರೂಪವಾದ ಬಾಧಕವು ಇದ್ದುದರಿಂದಲೂ ಸಾಧಕವು ಇಲ್ಲದಿರುವುದರಿಂದಲೂ ಕರ್ತೃತ್ವವೂ ಪ್ರಯೋಜಕವಲ್ಲ. ಮತ್ತೆ ಪ್ರಯೋಜಕ ಕರ್ತೃತ್ವರೂಪ ಸ್ವಾಮಿತ್ವವೇ ಪ್ರಯೋಜಕವು. ಆದಕಾರಣ ಸರ್ವೇಂದ್ರಿಯಾದಿಗಳಿಗೆ ಪ್ರೇರಕರಾದ ದೇವತೆಗಳಿಗೇನೇ ಪ್ರಜೆಗಳು ಮಾಡಿದ ಶ್ರವಣಾದಿಗಳಿಂದುಂಟಾದ ಜ್ಞಾನಫಲವು. ಪ್ರಜೆಗಳಿಗೆ ಅಲ್ಲ. ಎಂದರೆ— ತತ್ವಾಭಿಮಾನಿ ದೇವತೆಗಳು ಪ್ರಜೆಗಳು ಮಾಡಿದ ಶ್ರವಣಾದಿಗಳಲ್ಲಿ ಪ್ರಯೋಜಕ ಕರ್ತೃಗಳಾದುದರಿಂದ ಸಂಪೂರ್ಣವಾದ ಅದರ ಫಲವು ಸ್ವಾಮೀ ಹಿ ಎನ್ನುವ ಶ್ರುತಿಯಿಂದಲೂ ತತೋ ಮಹತ್ತರಂ ಎನ್ನುವ ಸ್ಮೃತಿಯಿಂದಲೂ ಆತ್ರೇಯ ಋಷಿಗಳ ಮತದಿಂದಲೂ ದೇವತೆಗಳಿಗೇನೇ (ಎಂದು

ತಿಳಿಯುವುದಾದರೂ, ದೇವಾನಾಂ ಎನ್ನುವ ಶ್ರುತಿವಿಹಿತವಾದ ಜ್ಞಾನದಾನಾದಿ ಕರ್ಮದಲ್ಲಿ ಪ್ರಜೆಗಳಿಗೆ ಅನುಗ್ರಹಿಸುವದಕ್ಕಾಗಿಯೇ ಅವರನ್ನು ಸಹಕಾರಿಗಳನ್ನಾಗಿ ಸ್ವೀಕರಿಸಿದ್ದರಿಂದಲೂ ಮತ್ತೂ ಸತ್ರಯಾಗದಲ್ಲಿ ಗ್ರಹಪತಿಯಿಂದ ಸಹಕಾರಿಗಳಾಗಿ ಸ್ವೀಕೃತರಾದ ಋತ್ವಿಜರು ಗ್ರಹಪತಿಗಳಾಗದೆ ಇದ್ದರೂ ಅವರಿಗೆ ಫಲವು ದೃಷ್ಟವಾದುದರಿಂದಲೂ ಅದರಂತೆಯೇ ಪ್ರಜೆಗಳಿಗೂ ಕರ್ತೃತ್ವನಿಮಿತ್ತವಾದ ಜ್ಞಾನಜನ್ಯ ಫಲವು ಇದೆ. ॥ ಅಧಿ. ೭ ॥

**ಫಲಶ್ರುತ್ಯಧಿಕರಣವು ಸಮಾಪ್ತವಾಯಿತು.**

# ೮ ಕೃತ್ಸ್ನಭಾವಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬ್ರಹ್ಮಜ್ಞಾನದಲ್ಲಿ ಮನುಷ್ಯರ ವಿಶೇಷಾಧಿಕಾರಿಗಳಾದ ಯತಿಗಳಿಗೆ ಇತರ ಸರ್ವಾಶ್ರಮಿಗಳಿಂದ ಅತಿಶಯವನ್ನು ಸಮರ್ಥಿಸುತ್ತಾರೆ. ಆಶ್ರಮ ಭೇದವುಳ್ಳ ಮನುಷ್ಯರಲ್ಲಿ ಗೃಹಸ್ಥನೇ ಮುಕ್ತಿಯಲ್ಲಿ ಉತ್ತಮನು. ಆತನಿಗೆ ಯಜ್ಞ ಮೊದಲಾದ ಸರ್ವಸತ್ಕರ್ಮಗಳಲ್ಲಿ ಅಧಿಕಾರವಿದೆ. ಮತ್ತು ಛಾಂದೋಗ ಶ್ರುತಿಯಲ್ಲಿ, **ಕುಟುಂಬೇ ಶುಚೌ ದೇಶೇ,** ಇತ್ಯಾದಿಗಳಿಂದ ಗೃಹಸ್ಥನಿಗೇನೇ ವಿಶಿಷ್ಟ ಮೋಕ್ಷವನ್ನು ಹೇಳಿದ್ದರಿಂದ ಆತನಿಗೇನೇ ಮುಕ್ತಿಯಲ್ಲಿ ಆಧಿಕ್ಯವೆಂದು ತಿಳಿಯುತ್ತದೆ. ಮೋಕ್ಷದಲ್ಲಿ ಸರ್ವರಿಗೆ ಸಾಮ್ಯವಿರುತ್ತಿದ್ದರೆ ವಿಶೇಷೋಕ್ತಿಯು ಯುಕ್ತವಾಗಲಾರದು ಎಂದು ಪೂರ್ವಪಕ್ಷವು ಬರುತ್ತಿರಲು ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ॥ ೪೭ ॥

**ಸೂತ್ರಾರ್ಥ ॥** ಜ್ಞಾನಾಧಿಕಾರಿಗಳಾದ ಯತಿಗಳಿಗೇನೇ ಎಲ್ಲಾ ಆಶ್ರಮಿಗಳಲ್ಲಿ ಉತ್ತಮತ್ವವು **ಕುಟುಂಬೇ ಶುಚೌ ದೇಶೇ** ಇತ್ಯಾದಿಗಳಿಂದ ಗೃಹಸ್ಥಾಶ್ರಮಿಗಳಿಗೆ ಮೋಕ್ಷವನ್ನು ಹೇಳಿ ನ ಚ ಪುನರಾವರ್ತತೇ ಎಂದು ಗೃಹಸ್ಥಾಶ್ರಮಿಯಿಂದ ಉಪಸಂಹಾರವಾದರೂ ದೇವತೆಗಳಿಗೆ ಸರ್ವಗೃಹಸ್ಥ ಧರ್ಮಗಳು ಇದ್ದುದರಿಂದ ( ಈ ವಾಕ್ಯವು ದೇವತೆಗಳ ಪರವು ಮನುಷ್ಯಗೃಹಸ್ಥ ಪರವಲ್ಲ. ದೇವತೆಗಳಿಗೆ ಯತಿಧರ್ಮಗಳೂ ಇವೆ. ಏವಂಚ ಮನುಷ್ಯಗೃಹಸ್ಥಾಶ್ರಮಿಗಳಿಂದ ಯತಿಗಳಿಗೆ ಉತ್ತಮತ್ವವು. ಮನುಷ್ಯಯತಿಗಳಿಂದಲೂ ದೇವತೆಗಳಿಗೆ ಉತ್ತಮತ್ವವು.)

**ಭಾಷ್ಯ ॥ ಕುಟುಂಬೀ (ಬೇ) ಶುಚೌದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧದಿತ್ಯುಕ್ತ್ವಾ ನ ಚ ಪುನರಾವರ್ತತೇ ನ ಚ ಪುನರಾವರ್ತತೇ** (ಛಾ.೮.೧೫.೧.) **ಇತಿ ಗೃಹಿಣೋಪಸಂಹಾರಃ ಕ್ರಿಯತೇ । ತಸ್ಮಾದ್ಗೃಹಸ್ಥಸ್ಯೈವೋತ್ತಮತ್ವಮಿತಿ ನ ವಾಚ್ಯಂ । ಯತಃ ಕೃತ್ಸ್ನಗೃಹಸ್ಥಾನ್ ದೇವಾನಪೇಕ್ಷ್ಯೈವೋಪಸಂಹಾರಃ ಕ್ರಿಯತೇ ॥ ೧ ॥**

ಭಾಷ್ಯಾರ್ಥ ॥ (ಗೃಹಸ್ಥನಿಗೇನೇ ಮುಕ್ತಿಯಲ್ಲಿ ಉತ್ತಮತ್ವವು. ಹೇಗೆಂದರೆ, ಛಾಂದೋಗ್ಯೋಪ

ನಿಷತ್ತಿನಲ್ಲಿ ವಿಧಿಪ್ರಕಾರವಾಗಿ ಆಚಾರ್ಯರ ವಂಶದಿಂದ ವೇದವನ್ನು ಅಧ್ಯಯನ ಮಾಡಿ ಗುರುಗಳ ಸೇವಾರೂಪವಾದ ಕರ್ಮವನ್ನು ಮಾಡಿ) ಗೃಹಸ್ಥಾಶ್ರಮದಲ್ಲಿ ಇರುತ್ತಾ ಶುಚಿಪ್ರದೇಶದಲ್ಲಿ ಇರುವವನಾಗಿ ವೇದಾಧ್ಯಯನವನ್ನು ಮಾಡಿಕೊಂಡು ಧರ್ಮಸಾಧನವ್ಯಾಪಾರಗಳನ್ನು ಮಾಡುತ್ತಾ (ಪರಮಾತ್ಮನಲ್ಲಿ ಸರ್ವೇಂದ್ರಿಯಗಳನ್ನು ಸ್ಥಾಪಿಸಿ ಸರ್ವಭೂತಗಳನ್ನು ಹಿಂಸಾ ಮಾಡದೆ ಆಯುಷ್ಯವು ಇರುವ ತನಕ ಹೀಗೆಯೇ ಇರುತ್ತಾ ಭಗವಂತನ ಅಪರೋಕ್ಷಜ್ಞಾನವನ್ನು ಹೊಂದುತ್ತಾನೆ. ಆ ಮೇಲೆ ಮುಕ್ತನಾಗುತ್ತಾನೆ) ವಿಶಿಷ್ಯ ಗೃಹಸ್ಥನಿಗೇನೇ ಮೋಕ್ಷವನ್ನು ಹೇಳಿ ಯಾವಾಗಲೂ ಯಾವ ನಿಮಿತ್ತದಿಂದಲೂ ಪುನರಾವೃತ್ತಿಯನ್ನು ಹೊಂದುವುದೇ ಇಲ್ಲ ಎಂದು ಗೃಹಸ್ಥಾಶ್ರಮಿಯನ್ನು ಮಾತ್ರ ಪ್ರತಿಪಾದಿಸಿಯೇ ಉಪನಿಷತ್ಸಮಾಪ್ತಿಯು ಮಾಡಲ್ಪಡುತ್ತದೆ. ಆದಕಾರಣ ಗೃಹಸ್ಥಾಶ್ರಮಿಗೇನೇ ಯತ್ಯಾದಿಗಳಿಂದ ಉತ್ತಮತ್ವವು ಎಂದು ಹೇಳಕೂಡದು. ಮತ್ತೆ ಯತಿಗೇನೇ ಸರ್ವಾಶ್ರಮಿಗಳಲ್ಲಿ ಉತ್ತಮತ್ವವು. (ಅದು ಹೇಗೆಂದರೆ ಯತಿಗಳ ಮೋಕ್ಷವು ಗೃಹಸ್ಥಾಶ್ರಮಿಗಳ ಮೋಕ್ಷದಿಂದಲೂ ಚಿರಕಾಲ ಸಾಧ್ಯವಾಗಿದೆ. ಅಲ್ಪ ಕಾಲದಲ್ಲಿ ಅಪಾದಿತಗಳಾದ ಸಾಧನಗಳಿಂದ ಸಾಧ್ಯವಾದ ಮೋಕ್ಷ ದೆಶೆಯಿಂದ ಬಹು ಕಾಲೀನ ಸಾಧನಗಳಿಂದ ಸಾಧ್ಯವಾದುದಕ್ಕೆ ಆಧಿಕ್ಯವು ನಿಯತವು. (ಹಾಗಾದರೆ ಗೃಹಸ್ಥಾಶ್ರಮಿಯಿಂದ ಉಪಸಂಹಾರವಿರೋಧವು, ಎಂದರೆ) ಸಂಪೂರ್ಣ ಗೃಹಸ್ಥ ಧರ್ಮಗಳಿಂದ ಕೂಡಿದ ದೇವತೆಗಳನ್ನೇ ಅಪೇಕ್ಷಿಸಿ ಉಪಸಂಹಾರವು ಮಾಡಲ್ಪಡುತ್ತದೆ (ಸಾಧಾರಣ ಮನುಷ್ಯ ಗೃಹಸ್ಥರನ್ನು ಅಪೇಕ್ಷಿಸಿ ಅಲ್ಲ. ಮನುಷ್ಯ ಗೃಹಸ್ಥರನ್ನು ಅಪೇಕ್ಷಿಸಿಯೇ ಯತಿಗಳಿಗೆ ಉತ್ತಮತ್ವವನ್ನು ಹೇಳಿದ್ದು. ಆದ ಕಾರಣ ಗೃಹಸ್ಥಾಶ್ರಮಿಯಿಂದ ಉಪಸಂಹಾರಕ್ಕೆ ವಿರೋಧವಿಲ್ಲ) ॥ ೧ ॥

**ಪೀಠಿಕೆ ॥** ದೇವತೆಗಳಿಗೆ ಸಂಪೂರ್ಣ ಗೃಹಸ್ಥ ಧರ್ಮಗಳೂ ಸಂಪೂರ್ಣ ಯತಿಧರ್ಮಗಳೂ ಯಾವ ಪ್ರಮಾಣದಿಂದ ಸಿದ್ಧಿಸುತ್ತವೆ, ಎಂದರೆ—

**ಭಾಷ್ಯ ॥ ಕೃತ್ಸ್ನಾ ಹ್ಯೇತೇ ಗೃಹಿಣೋ ದೇವಾಃ ಕೃತ್ಸ್ನಾ ಹ್ಯೇತೇ ಯತ ಯೋಽತ ಏತೇಷಾಂ ನ ಪುತ್ರಾದಾಯುಮಪಯಂತಿ ನ ಚೈತೇ ಗೃಹಾನ್ ವಿಸೃಜಂತ್ಯರಾಗಾ ಅದ್ವೇಷಾ ಅಲೋಭಾಃ ಸರ್ವಭೋಗಾಃ ಸರ್ವಜ್ಞಾಃ ಸರ್ವಕರ್ತಾರಃ । ಇತಿ ಹಿ ಪೌತ್ರಾಯಣಶ್ರುತಿಃ ॥ ೪೭ ॥ ೨ ॥**

**ಭಾಷ್ಯಾರ್ಥ ॥** ಪ್ರಸಿದ್ಧರಾದ ದೇವತೆಗಳೇ ಪೂರ್ಣ ಗೃಹಸ್ಥಾಶ್ರಮಧರ್ಮವುಳ್ಳವರು. ದೇವತೆಗಳೇ ಸಂಪೂರ್ಣ ಯತಿಧರ್ಮವುಳ್ಳವರು. ಸಂಪೂರ್ಣ ಯತಿಧರ್ಮವುಳ್ಳವರಾದುದರಿಂದಲೇ ಮಕ್ಕಳು, ದಾಯ (ಪಿತ್ರಾದಿಗಳಿಂದ ಸಂಪಾದಿತವಾದ ದ್ರವ್ಯ ಮೊದಲಾದುದು) ವನ್ನು ಹೊಂದುವುದಿಲ್ಲ (ತಥಾಚ ಹೇಗೆ ಯತಿಗಳ ಪೂರ್ವಾಶ್ರಮದ ಪುತ್ರರಿಗೆ ಯತಿಗಳು ಸಂಪಾದಿತ ದ್ರವ್ಯಾದಿಗಳ ಪ್ರಾಪ್ತಿಯಿಲ್ಲವೋ ಹೀಗೆಯೇ **ಅದಾಯದಾಸ್ತು ಪುತ್ರಾಣಾಮುದ್ರಿಕ್ತಜ್ಞಾನಚಕ್ಷುಷಃ ।** ನಾರಾಯಣಪರಾ ದೇವಾಃ ಇತ್ಯಾದ್ಯುಕ್ತ ಪ್ರಕಾರ ಇಂದ್ರ ಮೊದಲಾದ ದೇವತೆಗಳ ಪುತ್ರರಾದ ಜಯಂತ ಮೊದಲಾದವರಿಗೆ ಇಂದ್ರಾದಿಗಳ ಐಶ್ವರ್ಯಪ್ರಾಪ್ತಿಯಿಲ್ಲ. ಆದಕಾರಣ ದೇವತೆಗಳಿಗೆ ಯತಿತ್ವವು ಸಿದ್ಧವಾಯಿತು.) (ಗಾರ್ಹಸ್ಥ್ಯ ಸಾಧಕವನ್ನು ಹೇಳುತ್ತಾರೆ.) ಈ ದೇವತೆಗಳು ಗೃಹಸ್ಥಾಶ್ರಮವನ್ನು

ತಂತಮ್ಮ ಮನೆಯನ್ನಾಗಲೀ ಬಿಡುವುದಿಲ್ಲ. (ಪ್ರಸಿದ್ಧ ಗೃಹಸ್ಥರೂ ಹಾಗೆಯೇ.) ಯತಿಗಳು ವಿಷಯಾಭಿಲಾಷೆಯಿಲ್ಲದವರು, ದ್ವೇಷವಿಲ್ಲದವರು, ಲೋಭವಿಲ್ಲದವರು, ಸರ್ವಜ್ಞರು. (ಹೇಗೆ ಯತಿಗಳಿಗೆ ಗೃಹಸ್ಥಾಶ್ರಮಿಗಳಂತೆ ವಿಷಯಾಸಕ್ತಿಯಿಲ್ಲದಿರುವುದರಿಂದ ಅಧಿಕವಾದ ಜ್ಞಾನ ಸಂಪಾದನೆಯು ಇದೆಯೋ, ಹೀಗೆಯೇ ದೇವತೆಗಳಿಗೆ ಸಾರ್ವಜ್ಞ್ಯವು ಇದ್ದುದರಿಂದಲೂ ದೇವತೆಗಳಿಗೆ ಯತಿತ್ವವು ಇದೆ.) ಗೃಹಸ್ಥರು ಸರ್ವಭೋಗವುಳ್ಳವರು, ಪುತ್ರ ಯಜ್ಞ ಮೊದಲಾದ ಸರ್ವ ಕರ್ಮಗಳನ್ನೆಲ್ಲಾ ಮಾಡತಕ್ಕವರು. ಹೀಗೆ ಪೌತ್ರಾಯಣ ಶ್ರುತಿಯು. ಹೀಗೆ ಪೌತ್ರಾಯಣ ಶ್ರುತಿಯಿಂದ ದೇವತೆಗಳಿಗೆ ಗಾರ್ಹಸ್ಥ್ಯವೂ ಯತಿತ್ವವೂ ಎರಡೂ ಇದೆ, ಎಂದು ಸಿದ್ಧವಾಯಿತು. ॥ ೪೭ ॥ ೨

ಪೀಠಿಕೆ ॥ ಯುಕ್ತ್ಯಂತರದಿಂದ ಮನುಷ್ಯಯತಿಗಳಿಂದ ದೇವತೆಗಳಿಗೆ ಉತ್ತಮತ್ವವನ್ನು ಸಮರ್ಥಿಸ ತಕ್ಕ ಸೂತ್ರವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಮೌನವದಿತರೇಷಾಮಪ್ಯುಪದೇಶಾತ್ ಓಂ ॥ ೪೮ ॥

ಸೂತ್ರಾರ್ಥ ॥ ಯತಿತ್ವದಂತೆ ಇತರಾಶ್ರಮ ಧರ್ಮಗಳಿಗೂ ದೇವಾ ಏವ ಬ್ರಹ್ಮಚಾ ರಿಣಃ ದೇವಾ ಏವ ಗೃಹಸ್ಥಾಃ ಇತ್ಯಾದಿ ಪ್ರಕಾರ ಶ್ರುತಿಯಲ್ಲಿ ಹೇಳಿದ್ದರಿಂದ.

**ಭಾಷ್ಯ ॥ (೧) ನ ಚಾಶ್ರಮದ್ವಯಮೇವ ದೇವಾನಾಂ । (೨) ದೇವಾ ಏವ ಬ್ರಹ್ಮಚಾರಿಣೋ ದೇವಾ ಏವ ಗೃಹಸ್ಥಾ ದೇವಾ ಏವ ವನಸ್ಥಾ ಯಥಾ ಹ್ಯೇತೇ ಮುನಯ ಏವಂ ಸರ್ವವರ್ಣಾಃ ಸರ್ವಾಶ್ರಮಾಃ ಸರ್ವ ಹ್ಯೇತೇ ಕರ್ಮ ಕುರ್ವಂತಿ ಇತಿ ಕೌಂಠರವ್ಯಶ್ರುತೌ ಯತಿತ್ವದೃಷ್ಟಾಂತೇನಾನ್ಯೇಷಾಮಪ್ಯುಪದೇಶಾತ್ ॥ ೪೮ ॥ ಅಧಿ.೮ ॥ ೩ ॥**

ಭಾಷ್ಯಾರ್ಥ ॥ (೧) ದೇವತೆಗಳಿಗೆ ಗೃಹಸ್ಥಾಶ್ರಮ ಯತ್ಯಾಶ್ರಮರೂಪವಾದ ಎರಡು ಆಶ್ರಮಗಳ ಕರ್ಮವುಳ್ಳತನವೇ ಅಲ್ಲ, ಮತ್ತೆ ಸರ್ವಾಶ್ರಮಗಳ ಕರ್ಮಗಳೂ ಇವೆ ಎಂದು ದೇವಾ ಏವ ಎನ್ನುವ ಶ್ರುತಿಯಲ್ಲಿ ದೇವತೆಗಳಿಗೆ ಯತಿತ್ವದೃಷ್ಟಾಂತದಿಂದ ಬ್ರಹ್ಮಚರ್ಯಾದ್ಯಾಶ್ರಮಗಳನ್ನು ಉಪದೇಶ ಮಾಡಿದ್ದರಿಂದ. ತಥಾಚ ಎರಡು ಆಶ್ರಮಗಳ ಧರ್ಮಗಳು ಇದ್ದುದರಿಂದಲೇ ದೇವತೆಗಳಿಗೆ ಯತಿಗಳಿಂದ ಉತ್ತಮತ್ವವು ಸಿದ್ಧಿಸುತ್ತದೋ, ಆಗ ಸರ್ವಾಶ್ರಮಗಳ ಧರ್ಮಗಳು ಇರುವಾಗ ಉತ್ತಮತ್ವವು ಇದೆ ಎಂದು ಸುತರಾಂ ಸಿದ್ಧಿಸುತ್ತದೆ.) (೨) ದೇವತೆಗಳೇ ಬ್ರಹ್ಮಚಾರಿಗಳು, ದೇವತೆಗಳೇ ಗೃಹಸ್ಥಾಶ್ರಮಿಗಳು, ದೇವತೆಗಳೇ ವಾನಪ್ರಸ್ಥಾಶ್ರಮಿಗಳು. ಹೇಗೆ ಈ ದೇವತೆಗಳು ಯತಿಗಳೆಂದು ಪ್ರಸಿದ್ಧರೋ, ಹೀಗೆ ಸರ್ವಾಶ್ರಮವುಳ್ಳವರು. ಹೀಗೆ ಬ್ರಾಹ್ಮಣಾದಿ ಸರ್ವವರ್ಣವುಳ್ಳವರೂ ಆಗಿರುತ್ತಾರೆ. ಏಕೆಂದರೆ ಈ ದೇವತೆಗಳು ಸರ್ವವರ್ಣಗಳಿಗೂ ಸರ್ವಾಶ್ರಮಗಳಿಗೂ ಉಚಿತವಾದ ಕರ್ಮವನ್ನು ಮಾಡುತ್ತಾರೆ, ಹೀಗೆ ಕೌಂಠರವ್ಯ ಶ್ರುತಿಯಲ್ಲಿ ಯತಿದೃಷ್ಟಾಂತದಿಂದ ಯತಿತ್ವದಿಂದ ಇತರಗಳಾದ ಬ್ರಹ್ಮಚರ್ಯಾದ್ಯಾಶ್ರಮಗಳನ್ನೂ ಹೇಳಿದುದರಿಂದ. ॥ ೪೮ ॥ ೩ ॥

## ಅಧಿಕರಣ ಸಾರಾಂಶ

ಆಶ್ರಮಭೇದಗಳುಳ್ಳ ಜ್ಞಾನಿಗಳಾದ ಮನುಷ್ಯರಲ್ಲಿ ಮುಕ್ತಿಯಲ್ಲಿ ಗೃಹಸ್ಥಾಶ್ರಮಿಯು ಉತ್ತಮನೋ ಯತಿಯು ಉತ್ತಮನೋ, ಅದಕ್ಕಾಗಿ ಸರ್ವಕರ್ಮಗಳ ಅನುಷ್ಠಾನಯೋಗ್ಯತ್ವವೇ ಮುಕ್ತಿಯಲ್ಲಿ ಉತ್ತಮತ್ವದಲ್ಲಿ ಪ್ರಯೋಜಕವೋ ಚಿರಕಾಲ ಸಾಧನಾನುಷ್ಠಾನವೆಯೋ, ಅದಕ್ಕಾಗಿ ಮುಕ್ತಿಯಲ್ಲಿ ಯತಿಗೆ ಆಧಿಕ್ಯವಿದ್ದರೆ ಆಚಾರ್ಯಕುಲಾದ್ವೇದಮಧೀತ್ಯ ಇತ್ಯಾದಿ ವಿಶಿಷ್ಯ ಗೃಹಸ್ಥನಿಗೆ ಮೋಕ್ಷವನ್ನು ಹೇಳತಕ್ಕ ಉಪಸಂಹಾರಪರ ವಾಕ್ಯದಿಂದ ವಿರೋಧವು ಇದೆಯೋ ಇಲ್ಲವೋ ಅದಕ್ಕಾಗಿ ಅದು ಮಾನುಷ ವಿಷಯಕವೋ ದೇವವಿಷಯಕವೋ, ಅದಕ್ಕಾ। ದೇವ ವಿಷಯತ್ವ ಕಲ್ಪಕವಿಲ್ಲ ಬಾಧಕವು ಇದೆಯೋ, ಅಥವಾ ವಿಪರೀತವೋ ಎಂದು ಸಂದೇಹವು. ಗೃಹಸ್ಥಾಶ್ರಮದಿಂದ ಇತರ ಆಶ್ರಮಗಳಲ್ಲಿ ಇದ್ದವರಿಗೆ ಸರ್ವ ಸತ್ಕರ್ಮಗಳಲ್ಲಿ ಯೋಗ್ಯತೆಯು ಇಲ್ಲದಿರುವುದರಿಂದ ಗೃಹಸ್ಥಾಶ್ರಮಿಗಳಿಗೇನೇ ಸರ್ವ ಸತ್ಕರ್ಮ ಗಳಲ್ಲಿ ಯೋಗ್ಯತೆಯು ಇದ್ದುದರಿಂದ ಅದೇವೇ ಉತ್ತಮತ್ವಕ್ಕೆ ಪ್ರಯೋಜಕವಾದುದರಿಂದ ಗೃಹಸ್ಥನೇ ಉತ್ತಮನು, ಯತಿಯು ಅಲ್ಲ. ಇಲ್ಲವಾದರೆ ಛಾಂದೋಗ್ಯೋಪನಿಷತ್ತಿನಲ್ಲಿ ಆಚಾರ್ಯಕುಲಾದ್ವೇದ ಮಧೀತ್ಯ ಇತ್ಯಾದಿಗಳಿಂದ ಗೃಹಸ್ಥನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಪುನರಾವೃತ್ತಿಯನ್ನು ಹೊಂದು ವುದಿಲ್ಲ ಎಂದು ಮೋಕ್ಷವನ್ನು ಹೇಳುತ್ತಾ ಗೃಹಸ್ಥನನ್ನೇ ಉಪಸಂಹಾರ ಮಾಡಿದ್ದರಿಂದ ಗೃಹಸ್ಥನಿಗೇನೇ ಮುಕ್ತಿಯಲ್ಲಿ ಉತ್ತಮತ್ವವಿದೆಯೆಂದು ಆ ಶ್ರುತಿಗೆ ತಾತ್ಪರ್ಯವು ತಿಳಿದುಬರುವುದರಿಂದ ಯತಿಗೆ ಉತ್ತಮತ್ವವನ್ನು ಹೇಳಿದರೆ ಆ ವಾಕ್ಯದಿಂದ ವಿರೋಧವು ಬರುವುದು. ಈ ವಾಕ್ಯವು ಸಂಪೂರ್ಣ ಗೃಹಸ್ಥ ಧರ್ಮವುಳ್ಳ ದೇವತಾಪರವೆಂದು ಹೇಳಕೂಡದು. ಹಾಗಾದರೆ ವಿಳಂಬದಿಂದ ಸಿದ್ಧಿಯುಳ್ಳ ಯತಿಗಳಿಂದ ಶೀಘ್ರದಿಂದ ಸಿದ್ಧಿಯುಳ್ಳ ಗೃಹಸ್ಥಾಶ್ರಮಿಗಳು ನಿಕೃಷ್ಟರು ಎಂದು ಹೇಳುವ ಸಿದ್ಧಾಂತಿಗಳ ಮತದಲ್ಲಿ ಮನುಷ್ಯಯತಿಗಳಿಂದ ದೇವತೆಗಳಿಗೆ ಮುಕ್ತಿಯಲ್ಲಿ ಆಧಿಕ್ಯವು ಇಲ್ಲವೆಂದಾಗಬೇಕಾಗುವುದು ಎಂದರೆ ಗೃಹಸ್ಥನಿಗೆ ಸರ್ವ ಸತ್ಕರ್ಮಗಳಲ್ಲಿ ಅಧಿಕಾರವಿದ್ದರೂ ಅಷ್ಟು ಆಚರಿಸಬೇಕೆಂದು ನಿಯಮವಿಲ್ಲ ದಿರುವುದರಿಂದ ಗೃಹಸ್ಥನಿಂದ ಸಂಪಾದಿಸಲ್ಪಡತಕ್ಕ ಮೋಕ್ಷವು ಶೀಘ್ರದಲ್ಲಿ ಆಗತಕ್ಕ ಸಾಧನಗಳಿಂದ ಸಾಧ್ಯವು. ಯತಿಗಳಿಗೆ ಆಗತಕ್ಕ ಮೋಕ್ಷವು **ಮುಕ್ತಿಮತ್ತರಯ್ಯೈವ ಯತಯಃ** ಎನ್ನುವ ಶ್ರುತಿಯಿಂದ ಚಿರ (ವಿಲಂಬ) ಕಾಲೀನಸಾಧನಸಾಧ್ಯವು. ಯತಿಗಳಿಗೆ ಆಗತಕ್ಕ ಮೋಕ್ಷವು ಗೃಹಸ್ಥಾಶ್ರಮಿಗಳಿಗೆ ಆಗತಕ್ಕ ಮೋಕ್ಷದಿಂದ ಚಿರಕಾಲೀನ ಸಾಧನಗಳಿಂದ ಸಾಧ್ಯವಾದ ಪ್ರಯುಕ್ತ ಅದಕ್ಕೆ ಆಧಿಕ್ಯವಿದ್ದ ಪ್ರಯುಕ್ತ ಯತಿಯೇ ಮುಕ್ತಿಯಲ್ಲಿ ಉತ್ತಮನು, ಗೃಹಸ್ಥಾಶ್ರಮಿಯು ಅಲ್ಲ. **ಕೃತ್ಸ್ನಾ ಹ್ಯೇತೇ ಗೃಹಿಣಃ** ಇತ್ಯಾದಿ ಶ್ರುತಿ ಗಳಲ್ಲಿ ದೇವತೆಗಳಿಗೇನೇ ಕೃತ್ಸ್ನ ಗೃಹಸ್ಥಧರ್ಮಗಳು ಇದ್ದುದರಿಂದ ಮುಖ್ಯ ಗೃಹಸ್ಥತ್ವವನ್ನು ಹೇಳಿದ್ದರಿಂದ ಹಿಂದೆ ಹೇಳಿದ ಛಾಂದೋಗ್ಯವಾಕ್ಯದಲ್ಲಿಯೂ ಮುಖ್ಯ ಗೃಹಸ್ಥ ದೇವಪರತ್ವವಿದ್ದುದರಿಂದ ಆ ಛಾಂದೋಗ್ಯವಾಕ್ಯದಿಂದ ವಿರೋಧವಿಲ್ಲ. ಮನುಷ್ಯ ಯತಿಗಳಿಂದ ದೇವತೆಗಳಿಗೆ ಮುಕ್ತಿಯಲ್ಲಿ ಆಧಿಕ್ಯ ವಿಲ್ಲವೆಂದು ಹೇಳಕೂಡದು. **ಕೃತ್ಸ್ನಾ ಹ್ಯೇತೇ ಯತಯಃ** ಎನ್ನುವ ಶ್ರುತಿಯಲ್ಲಿ ಪೂರ್ಣ ಯತಿಧರ್ಮ ಗಳೆಲ್ಲವೂ ದೇವತೆಗಳಿಗೆ ಉಕ್ತವಾಗಿವೆ. ಹಾಗೆಯೇ **ದೇವಾ ಏವ ಬ್ರಹ್ಮಚಾರಿಣಃ** ಇತ್ಯಾದಿ ಶ್ರುತಿಗಳಲ್ಲಿ ಸರ್ವ ಆಶ್ರಮಧರ್ಮಗಳೂ ಇವೆ ಎಂದು ಶ್ರುತವಾದ ಪ್ರಯುಕ್ತವೂ ಯತಿಗಳಿಂದಲೂ ದೇವತೆಗಳಿಗೆ ಆಧಿಕ್ಯವು ಸಿದ್ಧಿಸುತ್ತದೆ. ॥ ಅಧಿ. ೮ ॥

**ಕೃತ್ಸ್ನಭಾವಾಧಿಕರಣವು ಸಮಾಪ್ತವಾಯಿತು.**

# ೯ ಅನ್ವಯಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಅಪರೋಕ್ಷಜ್ಞಾನ ಸಾಧನವಾದ ಪರೋಕ್ಷಜ್ಞಾನಕ್ಕೆ ಅತಿ ಗೋಪ್ಯತ್ವವನ್ನು ಸಾಧಿಸುತ್ತಾರೆ. ಜ್ಞಾನವು ಹುಟ್ಟುವಂತೆ ಪ್ರಕಟವಾಗಿಯೇ ಉಪದೇಶಿಸಬೇಕು. ಗೋಪ್ಯವಾಗಿ ಉಪದೇಶಿಸಬಾರದು. ಹಾಗೆ ಉಪದೇಶ ಮಾಡಿದರೆ ಎಲ್ಲರಿಗೂ ಜ್ಞಾನವು ಲಭಿಸುವುದು. ಬಹುಜನರಿಗೆ ಉಪದೇಶ ಕೊಟ್ಟರೆ ಉಪದೇಶಿಸತಕ್ಕವನಿಗೆ ಫಲಾಧಿಕ್ಯವು ಸಿದ್ಧಿಸುವುದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ ॥ ೪೯ ॥

**ಸೂತ್ರಾರ್ಥ ॥** ಸಭಾ ಚತ್ವರಾದಿಗಳಲ್ಲಿ ನಿಂತು ಎಲ್ಲರಿಗೆ ಜ್ಞಾನವು ಬರುವಂತೆ ಪ್ರಕಟೀಕರಿಸಬಾರದು, ಮತ್ತೆ ಗೋಪ್ಯವಾಗಿಯೇ ಯೋಗ್ಯರಿಗೆ ಮಾತ್ರ ಜ್ಞಾನವು ಬರುವಂತೆ ಪ್ರಕಟೀಕರಿಸದೇನೇ ಉಪದೇಶಮಾಡಬೇಕು. ಪ್ರಕಟೀಕರಿಸಿ ಉಪದೇಶ ಕೊಟ್ಟರೆ ಅಯೋಗ್ಯರಿಗೂ ಜ್ಞಾನಪ್ರಾಪ್ತಿಯಾಗಿ ಅನರ್ಥಪ್ರಾಪ್ತಿಯಾಗುವುದು ಎನ್ನುವ ಬಾಧಕರೂಪವಾದ ಯುಕ್ತಿಯಿದ್ದುದರಿಂದ.

**ಭಾಷ್ಯ ॥ ಏತಾಂ ವಿದ್ಯಾಮಧೀತ್ಯ ಬ್ರಹ್ಮದರ್ಶೀ ವಾವ ಭವತಿ । ಸ ಏತಾಂ ಮನುಷ್ಯೇಷು ವಿಬ್ರೂಯಾತ್ । ಯಥಾಯಥಾ ಹ ವೈ ಬ್ರೂಯಾತ್ತಥಾತಥಾಽಧಿಕೋ ಭವತಿ । ಇತಿ ಮಾಠರಶ್ರುತೌ ವಿದ್ಯಾದಾನಂ ಶ್ರೂಯತೇ । ತಚ್ಚ ಬಹೂನಾಂ ಸ್ವೀಕರಣಾರ್ಥಮಾವಿಷ್ಕಾರೇಣೇತಿ ನ ಮಂತವ್ಯಂ । ಅನ್ವಯಾತ್ ಯುಕ್ತೇಃ । ಆವಿಷ್ಕಾರೇಽಯೋಗಾನಾಮಪಿ ಸ್ವೀಕಾರಪ್ರಾಪ್ತಿಃ । ತಚ್ಚ ನಿಷಿದ್ಧಂ ॥ ೧ ॥**

**ಭಾಷ್ಯಾರ್ಥ ॥** ಪ್ರಕೃತವಾದ ಬ್ರಹ್ಮಜ್ಞಾನ ಸಾಧನವಾದ ವೇದವಿದ್ಯೆಯನ್ನು ಅಧ್ಯಯನಮಾಡಿ ವಿಚಾರಮಾಡಿ ಅಪರೋಕ್ಷಜ್ಞಾನಿಯು ಆಗುತ್ತಾನೆ. ಪ್ರಸಿದ್ಧ ಆ ಗುರುಗಳು ಈ ವಿದ್ಯೆಯನ್ನು ಬಹುಜನರ ಮಧ್ಯದಲ್ಲಿ ಹೇಗೆ ಹೇಗೆ ಅಧಿಕವಾಗುತ್ತದೋ ಹಾಗೆ ಚೆನ್ನಾಗಿ ಉಪದೇಶಿಸಬೇಕು. ಉಪದೇಶಾಧಿಕ್ಯಾನುಸಾರವಾಗಿ ಅಧಿಕ ಫಲವುಳ್ಳವನು ಆಗುತ್ತಾನೆ. ಹೀಗೆ ಮಾಠರ ಶ್ರುತಿಯಲ್ಲಿ ವಿದ್ಯಾದಾನವು ಶ್ರುತವಾಗುತ್ತದೆ. (ವಿದ್ಯಾದಾನಾಧಿಕ್ಯಾನುಸಾರವಾಗಿ ಫಲಾಧಿಕ್ಯವು ಶ್ರುತವಾಗುತ್ತದೆ.) ಅಂತಹ ವಿದ್ಯಾದಾನವು (ಅಧಿಕಫಲಕ್ಕಾಗಿ) ಬಹುಜನರಿಗೆ ಸ್ವೀಕಾರಕ್ಕಾಗಿ (ಸಭಾಚತ್ವರಾದಿಗಳಲ್ಲಿ ಕೂತುಕೊಂಡು) ಪ್ರಕಟೀಕರಿಸಿಕೊಂಡು ಉಪದೇಶ ಕೊಡಬೇಕು, ಎಂದು ತಿಳಿಯಕೂಡದು. ಉಪಪತ್ತಿಯಿದ್ದ ಪ್ರಯುಕ್ತ (ಯಾವುದು ಉಪಪತ್ತಿಯೆಂದರೆ) ಸಭಾ ಚತ್ವರಾದಿಗಳಲ್ಲಿ ಕೂತುಕೊಂಡು ಉಪದೇಶ ಮಾಡಿದರೆ ಅಯೋಗ್ಯರಿಗೂ ವಿದ್ಯಾಸ್ವೀಕಾರವು ಅಥವಾ ಜ್ಞಾನವು ಪ್ರಾಪ್ತವಾಗುವುದು. (ಯೋಗ್ಯರಿಗೇನೇ ಜ್ಞಾನ ಪ್ರಾಪ್ತಿಯು ಎನ್ನುವುದು ಆಗದೆ ಹೋಗುವುದು.) (ಅಯೋಗ್ಯರಿಗೂ ಜ್ಞಾನವು ಬಂದರೆ ಏನು ಬಾಧಕವು ಎಂದರೆ) ಅಯೋಗ್ಯರಿಗೆ ಉಪದೇಶಿಸುವುದು ಶ್ರುತ್ಯಾದಿ ನಿಷಿದ್ಧವು. ॥ ೧ ॥

**ಭಾಷ್ಯ ॥ (೧) ಮಾನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ । (ಯೇಷಾಂ ನೈತನ್ನಾಪರಂ ಕಿಂಚ ನೈಕಂ ಬ್ರಹ್ಮಣಸ್ಪತೇ ಬ್ರೂಹಿತೇಭ್ಯಃ ಕದಾಚಿತ್** (ಋ.೨.೨೩..೧೬.) **। (೨) ಅತೋಪಶಮೇ ನೋಪರತಾ ಮನುಷ್ಯಾ ಯೇ ಧರ್ಮಿಣೋ ಬ್ರೂಹಿ ತೇಭ್ಯಃ ಸದಾ ನಃ । ಆ ದೇವಾನಾಮೋಹತೇ ವಿವ್ರಯೋ ಹೃದಿ ಬೃಹಸ್ಪತೇ ನ ಪರಃ ಸಾಮ್ನೋ ವಿದುಃ)** (ಋ.೨.೨೩..೧೬.) **ಇತಿ । (೩) ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾಂ ಶೇವಧಿಸ್ತೇಽಹಮಸ್ಮಿ। ಅನಾರ್ಯಕಾಯಾನೃಜವೇ ಶಠಾಯ ನ ಮಾಂ (ಮಾ ಸ್ಮ) ಬ್ರೂಯಾ ಋಜವೇ ಬ್ರೂಹಿ ನಿತ್ಯಂ** (ಶ್ರುತ್ಯಂತರಂ) **ಇತಿ ಚ ॥ ೪೯ ॥ ಅಧಿ. ೯ ॥ ೨ ॥**

ಭಾಷ್ಯಾರ್ಥ ॥ (೧) (ಇದು ವಾಯುದೇವರನ್ನು ಕುರಿತು ವಿದ್ಯಾದೇವತೆಗಳ ಪ್ರಾರ್ಥನರೂಪವಾದ ವಚನವು.) ವೇದಗಳಿಗೆ ಅಧಿಪತಿಯಾದ ವಾಯುದೇವರೇ, ಯಾರು ನಿರಾಮಿಣಃ ಭಗವಂತನಿಗೆ ಉತ್ತಮತ್ವವನ್ನು ತಿಳಿಯುವುದಿಲ್ಲವೋ, ಮತ್ತು ಪರಬ್ರಹ್ಮನಿಗೆ ಜೀವಸ್ವರೂಪತ್ವಾದಿ ಜ್ಞಾನದಿಂದ ನೀಚತ್ವಮತ್ವವನ್ನು ತಿಳಿದವರೋ, ರಿಪವಃ=ಆತನಿಗೆ ಶತ್ರುಗಳಾಗಿ, ಅನ್ನೇಷು=ಅನ್ನ ಮೊದಲಾದ ಭೋಗ್ಯವಸ್ತುಗಳಲ್ಲಿಯೇ, ಜಾಗೃಧುಃ=ಆಕಾಂಕ್ಷಾವುಳ್ಳವರೋ, ಅಂತಹವರು, ಅಭಿಧ್ರುಹಸ್ಪದೇ ವಿಷ್ಣು ವೈಷ್ಣವದ್ರೋಹ ಫಲವಾದ ನಿತ್ಯ ನಿರತಿಶಯ ದುಃಖಕ್ಕೆ ಆಸ್ಪದವಾದ ಅಂಧಂತಮಸ್ಸಿನಲ್ಲಿ ಇರಲಿಕ್ಕೆ ಯೋಗ್ಯರು ಆಗುವರು. ಅಂತಹ, ಸ್ತೇನೇಭ್ಯಃ=ಬ್ರಹ್ಮತ್ವವನ್ನು ಅಪಹಾರ ಮಾಡುವ ಕಳ್ಳರಿಗೋಸ್ಕರ, ನಃ = ನಮ್ಮನ್ನು, ಮಾ ಬ್ರೂಹಿ = ಉಪದೇಶ ಕೊಡಬೇಡಿರಿ, ಯೇಷಾಂ = ಯಾರಿಗೆ, ಏತತ್ = ಈ ವಾಸುದೇವಾಖ್ಯ ಪರಬ್ರಹ್ಮನು, ನ = ಇಲ್ಲವೋ, (ನಿಯಮವು ಇದ್ದರೇನೇ ನಿಯಾಮಕನು ಆಗುತ್ತಾನೆ. ಇಲ್ಲದಿದ್ದರೆ ನಿಯಾಮಕನು ಆಗಲಾರನು.) ಅಪರಂ = ನಿಯಮ್ಯವಾದ ಜಗತ್ತು ಕೂಡ, ನ= (ಯಾರಿಗೆ) ಇಲ್ಲವೋ, (ನಿಯಮ್ಯಕ್ಕೆ ನಿಯಾಮಕ ವಸ್ತುವಿನ ಅಪೇಕ್ಷೆಯಿದೆ) ಮತ್ತೆ ಕಿಂಚ = ಯಾವುದೊಂದು ನಿರ್ಗುಣ ಬ್ರಹ್ಮನು, ಮತ್ತು ನೈಕಂ=ಏಕ ವಿಧದಿಂದ ಭಿನ್ನವಾದುದು ಅಂದರೆ, ಸದಸದ್ವಿಲಕ್ಷಣವೂ, ಅನಿರ್ವಾಚ್ಯವೂ ಆದ ಜಗತ್ತು (ಅಭಿಮತವಾಗಿಯದೋ) ತೇಭ್ಯಃ=ಅಂತಹ ಕಳ್ಳರಿಗೋಸ್ಕರ, ನಃ=ನಮ್ಮನ್ನು, ಕದಾಚಿತ್=ಯಾವಾಗಲೂ, ಮಾ ಬ್ರೂಹಿ=ಉಪದೇಶ ಕೊಡಬೇಡ. (೨) ಅಥ=ಮತ್ತೆ, ಬೃಹಸ್ಪತೇ=ಭಾರತೀಪತಿಯಾದ ವಾಯುವೇ ಯೇ=ಯಾರು, ಉಪಶಮೇವ= ವಿಷ್ಣುವಿಷಯಕವಾದ ಬುದ್ಧಿಯಿಂದ, ಉಪರತಾಃ=ಸರ್ವೋತ್ಕೃಷ್ಟನೂ, ಪಾಲಕನೂ ಆದ ಶ್ರೀಹರಿಯಲ್ಲಿಯೇ ಆಸಕ್ತರೋ, ಮನುಷ್ಯಾಃ=ಮನನಶೀಲರೋ, ಧರ್ಮಿಣಃ= ನಿಷ್ಕಾಮಕರ್ಮಿಗಳೋ, ದೇವಾನಾಂ=ದೇವತೆಗಳಿಗೆ, ವ್ರಯಃ =ಸರ್ವೋತ್ಕೃಷ್ಟನೂ, (ಮಃ=) ಸರ್ವನಿಯಾಮಕನೂ ಆದ ಪರಬ್ರಹ್ಮನನ್ನು, ಹೃದಿ=ಹೃದಯದಲ್ಲಿ, ವಿ ಆ ಓಹತೇ=ವಿಶೇಷವಾಗಿ ಚೆನ್ನಾಗಿ ಧರಿಸುತ್ತಾರೋ, ಸಾಮ್ನಃ (ಸಾರ) ಸರ್ವರಲ್ಲಿ ಶ್ರೇಷ್ಠನೆಂದು (ಮೇಯ) ತಿಳಿಯಲು ಯೋಗ್ಯನು ಅಥವಾ ಸರ್ವರೂಪಗಳಲ್ಲಿಯೂ ಸಮನೂ ಆದ ವಿಷ್ಣುವಿನ ಸಕಾಶದಿಂದ, ಪರಃ=ಶ್ರೇಷ್ಠವಾದ ವಸ್ತುವನ್ನು, ನ ವಿದುಃ - ತಿಳಿಯುವುದಿಲ್ಲವೋ, ತೇಭ್ಯಃ = ಅಂತಹವರಿಗೋಸ್ಕರ, ಸದಾ =ಯಾವಾಗಲೂ, ನಃ=ನಮ್ಮನ್ನು,

ಬ್ರೂಹಿ=ಉಪದೇಶಿಸು, ಇತಿ=ಈ ಎರಡು ಶ್ರುತಿಗಳಿಂದ, (ಅಯೋಗ್ಯರಿಗೆ ಉಪದೇಶಿಸುವುದು ಅನರ್ಥಸಾಧನವಾದುದರಿಂದ ನಿಷಿದ್ಧವಾಗಿದೆ.) (೩) ವಿದ್ಯಾದೇವತೆಯು, ವಾಯುದೇವರನ್ನು ಕುರಿತು ಪ್ರಾಪ್ತವಾಯಿತು. ಅಥವಾ ರಕ್ಷಕನನ್ನಾಗಿ ಹೊಂದಿತು. (ಬಂದು ಎಲೋ ವಾಯುವೇ) ನನ್ನನ್ನು ರಕ್ಷಿಸು. ನಿನಗೆ ನಾನು ನಿಧಿಯು (ನಿಕ್ಷಿಪ್ತಧನರೂಪನು) ಆಗಿರುತ್ತೇನೆ. ನನ್ನನ್ನು ಆರ್ಯಲಕ್ಷಣಗಳು ಇಲ್ಲದಿರುವವನೂ, ವಿಪರೀತಗಳಾದ ಮನಸ್ಸು ವಾಕ್ ಶರೀರಕರ್ಮಗಳುಳ್ಳವನೂ ಗೂಢದ್ವೇಷಿಯೂ ಆದವನಿಗೋಸ್ಕರ, ಉಪದೇಶಿಸಬೇಡ. ಮತ್ತೆ ನಿತ್ಯದಲ್ಲಿಯೂ ಅವಿಪರೀತವಾದ ಚಿತ್ತಾದಿ ಪ್ರವೃತ್ತಿಗಳುಳ್ಳವನೂ (ಆರ್ಯ ಲಕ್ಷಣಗಳುಳ್ಳವನೂ ಮೂರ್ಖನಲ್ಲದವನೂ) ಆದವನಿಗೋಸ್ಕರ ಉಪದೇಶಿಸು. ಈ ಶ್ರುತಿಯಿಂದಲೂ ಅಯೋಗ್ಯರಿಗೆ ಉಪದೇಶಿಸುವುದು ಸಿಷಿದ್ಧವಾಗಿದೆಂದು ತಿಳಿಯುತ್ತದೆ.

**ವಿಶೇಷಾಂಶ ॥ ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವವೇದಿನಾಂ । ಅಜಾತಶತ್ರವಃ ಶಾಂತಾಃ ಸಾಧನಃ ಸಾಧುಭೂಷಣಾಃ । ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ ದೃಢಂ । ಮತ್ಕೃತೇ ತ್ಯಕ್ತಕರ್ಮಾಣಃ ತ್ಯಕ್ತಸ್ವಜನಬಾಂಧ ವಾಃ । ಮದಾಶ್ರಯಕಥಾ ಹೃಷ್ಟಾಃ** ಇತ್ಯಾದಿಗಳಿಂದ ಭಾಗವತದಲ್ಲಿ ಆರ್ಯ ಲಕ್ಷಣವು ಕಥಿತವಾಗಿದೆ. ॥ ೪೯ ॥ ೨ ॥

## ಅಧಿಕರಣ ಸಾರಾಂಶ

ಪರೋಕ್ಷಜ್ಞಾನಕ್ಕೆ ಕಾರಣವಾದ ತತ್ತ್ವೋಪದೇಶವು ಆವಿಷ್ಕಾರದಿಂದ (ಯೋಗ್ಯಾಯೋಗ್ಯ ಸಾಧಾರಣವಾಗಿ ಸರ್ವರಿಗೂ ತಿಳಿಯುವ ಹಾಗೆ) ಮಾಡಬೇಕೋ, ಬೇಡವೋ, ಅದಕ್ಕಾಗಿ ಸರ್ವರಿಗೂ ತಿಳಿಯುವ ಹಾಗೆ ತತ್ತ್ವೋಪದೇಶವನ್ನು ಮಾಡುವ ವಿಷಯದಲ್ಲಿ ಸಾಧಕವು ಇದೆ ಬಾಧಕವು ಇಲ್ಲವೋ, ವಿಪರೀತವೋ ಎಂದು ಸಂದೇಹವು. ಸಭಾಚತ್ವರಾದಿಗಳಲ್ಲಿ ಇದ್ದು ಉಪದೇಶ ಮಾಡಿದರೆ ಬಹು ಮಂದಿಗೆ ಜ್ಞಾನವು ಹುಟ್ಟುವುದರಿಂದ ಫಲಾಧಿಕ್ಯವಿದ್ದುದರಿಂದ ಸಾಧಕವು ಇದೆ. ಬಾಧಕವು ಇಲ್ಲ, ಆದ ಕಾರಣ ಪ್ರಕಟವಾಗಿಯೇ ಉಪದೇಶ ಮಾಡಬೇಕು, ಎಂದರೆ— ಪ್ರಕಟವಾಗಿಯೇ ಉಪದೇಶ ಮಾಡಿದರೆ ಯೋಗ್ಯರಂತೆ ಅಯೋಗ್ಯರಿಗೂ ಜ್ಞಾನವು ಬರಬೇಕಾಗುವುದು. ಅಯೋಗ್ಯೋಪದೇಶವು **ಮಾ ನ ಸ್ತೇನೇಭ್ಯಃ** ಇತ್ಯಾದಿ ಶ್ರುತಿಗಳಿಂದ ನಿಷಿದ್ಧವಾದುದರಿಂದ ಅನರ್ಥಹೇತುವಾಗಿದೆ. ಆದುದರಿಂದ ಫಲಾಧಿಕ್ಯವು ಇಲ್ಲದಿರುವುದರಿಂದ ಸಾಧಕವು ಇಲ್ಲ. ಆವಿಷ್ಕರಿಸದೆ ಉಪದೇಶವೇ ಅನರ್ಥಕಾರಣವಾಗದಿರುವುದರಿಂದಲೂ ಯೋಗ್ಯರಿಗೇನೇ ಜ್ಞಾನವು ಹುಟ್ಟುವುದರಿಂದ ಫಲಾತಿಶಯಕ್ಕೆ ಕಾರಣವಾಗಿರುವುದರಿಂದಲೂ ಆವಿಷ್ಕರಿಸದೇನೇ ತತ್ತ್ವಜ್ಞಾನ ಯೋಗ್ಯರಿಗೆ ಮಾತ್ರ ಜ್ಞಾನವು ಹುಟ್ಟುವಂತೆ ಉಪದೇಶವನ್ನು ಮಾಡಬೇಕು. ॥ ಅಧಿ. ೯ ॥

**ಅನ್ವಯಾಧಿಕರಣವು ಸಮಾಪ್ತವಾಯಿತು.**

# ೧೦ ಐಹಿಕಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಅಪರೋಕ್ಷಜ್ಞಾನವು ಪ್ರತಿಬಂಧಕವಿಲ್ಲದಿದ್ದರೆ ಶ್ರವಣಾದಿ ಸಾಧನ ಸಂಪೂರ್ತಿ ಜನ್ಮದಲ್ಲಿಯೇ ಹುಟ್ಟುತ್ತದೆಂದು ಸಮರ್ಥಿಸುತ್ತಾರೆ. ಸಾಧನ ಸಂಪೂರ್ತಿ ಜನ್ಮದಲ್ಲಿಯೇ ದರ್ಶನವಾಗುತ್ತದೆ. ಸಾಧನಸಂಪೂರ್ತಿಯಾದರೂ ಜ್ಞಾನವು ಹುಟ್ಟುವುದಿಲ್ಲವೆನ್ನುವುದಕ್ಕೆ ಕಾರಣವಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ ॥ ೫೦ ॥

**ಸೂತ್ರಾರ್ಥ ॥** ಪ್ರಾರಬ್ಧ ಪ್ರತಿಬಂಧವಿಲ್ಲದಿದ್ದರೆ ಜ್ಞಾನವು ಈ ಜನ್ಮದಲ್ಲಿಯೇ ಹುಟ್ಟುತ್ತದೆ. ಪ್ರಾರಬ್ಧ ಪ್ರತಿಬಂಧಕವಿದ್ದರೆ ಜನ್ಮಾಂತರದಲ್ಲಿ ಶ್ರುತ್ವಾತ್ಮಾನಂ ಎನ್ನುವ ಶ್ರುತಿಯಲ್ಲಿ ಈ ಅರ್ಥವು ಉಕ್ತವಾಗಿರುವುದರಿಂದ.

**ಭಾಷ್ಯ ॥ ★ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ (ಬೃ.೪.೪.೫.) ಇತಿ ದರ್ಶನಾರ್ಥಂ ಶ್ರವಣಾದಿ ವಿಧೀಯತೇ । ತಚ್ಚ ದರ್ಶನಮೈಹಿಕಮೇವ ಪ್ರಾರಬ್ಧಪ್ರತಿಬಂಧಾಭಾವೇ ॥ ೧ ॥**

**ಭಾಷ್ಯಾರ್ಥ ॥** ಆತ್ಮಾ ವಾ ಎನ್ನುವ ಶ್ರುತಿಯಲ್ಲಿ ಯಾವ ಬ್ರಹ್ಮದರ್ಶನಕ್ಕಾಗಿ ಶ್ರವಣಾದಿಗಳು ವಿಧಿ ಸಲ್ಪಡುತ್ತವೋ, ಅಂತಹ ಶ್ರವಣಾದಿಗಳಿಂದ ಸಾಧ್ಯವೆಂದು ಶ್ರುತವಾದ ದರ್ಶನವು ಯಾವ ಜನ್ಮದಲ್ಲಿ ಶ್ರವಣಾದಿಸಾಧನಸಂಪತ್ತಿಯಾಗುತ್ತದೋ, ಆ ಜನ್ಮದಲ್ಲಿಯೇ ಅಪರೋಕ್ಷಜ್ಞಾನವು ಆಗುತ್ತದೆ. ಆದರೆ ಪ್ರಾರಬ್ಧಕರ್ಮ ಪ್ರತಿಬಂಧಕವಿಲ್ಲದಿದ್ದರೇನೇ ಆಗುವುದು. (ಪ್ರಾರಬ್ಧಕರ್ಮ ಪ್ರತಿಬಂಧಕವಿದ್ದರೆ ಪ್ರಾರ ಬ್ಧಕರ್ಮಾನುಭವಾನಂತರದಲ್ಲಿ ಜನ್ಮಾಂತರದಲ್ಲಿ ಆಗುತ್ತದೆ. ತಥಾಚ ಶ್ರವಣಾದಿ ಸಾಧನ ಸಂಪೂರ್ತಿಜನ್ಮದಲ್ಲಿಯೇ ಅಪರೋಕ್ಷಜ್ಞಾನವು ಹುಟ್ಟುತ್ತದೆಂದು ನಿಯಮವಿಲ್ಲ) ॥ ೧ ॥

**ಪೀಠಿಕೆ—** ಆ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಶ್ರುತ್ವಾಽಽತ್ಮಾನಂ ಮತಿಪೂರ್ವಂ ಹ್ಯುಪಾಸ್ಯ ಇಹೈವ ದೃಷ್ಟಿಂ ಪರಮಸ್ಯ ವಿಂದೇತ್ । ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ತ್ರೇತ್ಯೈವ ಪಶ್ಯೇದ್ಯೋಗಮೇವಾನ್ವಪೇಕ್ಷ್ಯ ॥ ಇತಿ ಸೌಪರ್ಣಶ್ರುತೌ ತದ್ದರ್ಶನಾತ್ ॥ ೨ ॥**

**ಭಾಷ್ಯಾರ್ಥ ॥** ಶ್ರೀಪರಮಾತ್ಮನನ್ನು ಶ್ರವಣಮಾಡಿ ಆ ಮೇಲೆ ಮನನಪೂರ್ವಕವಾಗಿ ಧ್ಯಾನಮಾಡಿ ಶ್ರವಣಾದಿಸಾಧನಸಂಪತ್ತಿ ಜನ್ಮದಲ್ಲಿಯೇ ವಿಷ್ಣುವಿನ ಅಪರೋಕ್ಷದರ್ಶನವನ್ನು (ಪ್ರಾರಬ್ಧಪ್ರತಿಬಂಧವಿಲ್ಲದಿದ್ದರೆ) ಹೊಂದುವನು. ಪ್ರಾರಬ್ಧವಾದ ಜ್ಞಾನಪ್ರತಿಪಬಂಧಕವಾದ ಕರ್ಮವು ಇದ್ದರೆ ಈ ಶರೀರವನ್ನು ಬಿಟ್ಟು ಹೋಗಿಯೇ ಜನ್ಮಾಂತರದಲ್ಲಿ ಜ್ಞಾನಂ ತು ಯೋಗಮುದ್ದಿಷ್ಟಂ ಯುಜ್ಯತೇ ತೇನ ಯತ್ಸುಖಂ । ಕ್ವಚಿದ್ಯೋಗ ಉಪಾಯಃ ಸ್ಯಾತ್ ಕ್ವಚಿಚ್ಚಿತ್ತನಿರೋಧನಃ ಎನ್ನುವ ಪ್ರಮಾಣಾನುಸಾರ

---

★ ಈ ಶ್ರುತಿಯು ಜಿಜ್ಞಾಸಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ವಾಗಿ ಯೋಗ ಶಬ್ದೋಕ್ತವಾದ ಶ್ರವಣಾದ್ಯುಪಾಯವನ್ನು ಪುನಃ ಕಿಂಚಿತ್ ಅಪೇಕ್ಷಿಸಿಯೇ ಮಾಡಿಯೇ ಬ್ರಹ್ಮನನ್ನು ಪ್ರತ್ಯಕ್ಷೀಕರಿಸುವನು ಎಂದು ಸೌಪರ್ಣ ಶ್ರುತಿಯಲ್ಲಿ ಪ್ರತಿಬಂಧಕವಿದ್ದರೆ ಜನ್ಮಾಂತರದಲ್ಲಿ ಪ್ರತಿಬಂಧಕವಿಲ್ಲದಿದ್ದರೆ ಈ ಜನ್ಮದಲ್ಲಿಯೇ ಎನ್ನುವ ಅರ್ಥವು ಉಕ್ತವಾದ ಪ್ರಯುಕ್ತ.॥೨ ॥

**ಪೀಠಿಕೆ ॥ ಶ್ರುತಿಸಿದ್ಧಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—**

**ಭಾಷ್ಯ ॥ ಅನಾದಿಜನ್ಮಸಂಬಂದ್ಧಂ ನಿರ್ಭೇತ್ತುಂ ಪಾಪಪಂಜರಂ । ಯಾವತ್ಯಾ ಸೇವಯಾ ಶಕ್ಯಂ ತಾವತ್ಕಾರ್ಯಂ ನ ಸಂಶಯಃ ॥ ಯಾವದ್ದೂರೇ ಸ್ಥಿತೋ ಗಮ್ಯಾತ್ತಾವದ್ಗಂತವ್ಯಮೇವ ಹಿ । ಇಹ ಜನ್ಮಾಂತರೇ ವಾಽಪಿ ತಾವತ್ಯೈವ ತು ದರ್ಶನಂ ॥ ೩ ॥**

ಭಾಷ್ಯಾರ್ಥ ॥ ಪ್ರವಾಹತಃ ಅನಾದಿಜನ್ಮಗಳಿಂದ ಸಂಬಂಧವುಳ್ಳ, ಅಂದರೆ ಅನಾದಿ ಜನ್ಮಗಳಿಗೆ ಕಾರಣವಾದ ಪಂಜರ (ಹಕ್ಕಿಗಳ ಗಮನಕ್ಕೆ ಪ್ರತಿಬಂಧಕವಾದ ನೀಡ)ಕ್ಕೆ ಸದೃಶವಾದ ಅನಾದಿಯಾದ ಪಾಪವನ್ನೇ (ಅಂದರೆ ಪಾಪರೂಪ ಜ್ಞಾನಪ್ರತಿಬಂಧಕವನ್ನು) ಎಷ್ಟು ಜನ್ಮದಲ್ಲಿ ಉಂಟಾದ ಸೇವೆಯಿಂದ ಭೇದಿಸಲಿಕ್ಕೆ ಶಕ್ಯವಾಗುವುದೋ, ಅಷ್ಟು ಸೇವೆಯನ್ನು ಮಾಡಬೇಕು. ಸಂಶಯವಿಲ್ಲ. (ದೃಷ್ಟಾಂತವನ್ನು ಹೇಳುತ್ತಾರೆ.) ಪ್ರಾಪ್ಯವಾದ ಗ್ರಾಮಾದಿಗಳನ್ನು ಅಪೇಕ್ಷಿಸಿ (ಜನರು) ಎಷ್ಟು ದೂರದಲ್ಲಿ ಇರುತ್ತಾರೋ, ಅಷ್ಟು ದೂರ ಹೋಗಬೇಕು. ಪ್ರಸಿದ್ಧ (ಹಾಗಾದರೆ, **ತದ್ಯಥಾ ಪುಷ್ಕರಪಲಾಶೇ, ಯದ್ವೈಷೀಕಾ ತೂಲಂ** ಇತ್ಯಾದಿ ಶ್ರುತಿಗಳಿಂದ ಬ್ರಹ್ಮ ದರ್ಶನೈಕಸಾಧ್ಯವಾದ ಪಾಪಪಂಜರ ನಿರ್ಭೇದವು ಸೇವೆಯಿಂದ ಹೇಗೆ ಆಗುವುದು ಎಂದರೆ) ಈ ಸೇವಾಜನ್ಮದಲ್ಲಿ ಜನ್ಮಾಂತರದಲ್ಲಿ ಆಗಲೀ ಎಷ್ಟು ಸೇವೆಯಿಂದ ಪಾಪ ಪಂಜರವನ್ನು ಪರಿಹರಿಸಲಿಕ್ಕೆ ಶಕ್ಯವಾಗುವುದೋ ಅಷ್ಟೇ ಸೇವೆಯಿಂದ ದರ್ಶನವಾಗುತ್ತದೆ. (ಆ ಮೇಲೆ ಪಾಪಪಂಜರ ನಾಶವಾಗುತ್ತದೆ. ತಥಾಚ ಪಾಪಪಂಜರ ಪರಿಹಾರವು ಈ ಜನ್ಮದಲ್ಲಿ ಆಗಲೀ ಶ್ರವಣಾದಿ ಸೇವೆಯಿಂದ ಸಾಧ್ಯವಾಗುವುದು. ಆ ಮೇಲೆ ದರ್ಶನವಾಗುವುದು.) ॥ ೩ ॥

**ಪೀಠಿಕೆ ॥** ಶ್ರವಣಾದಿಗಳಿಂದಲೇ ಸಾಧ್ಯವಾದ ಜ್ಞಾನವು ಶುಶ್ರೂಷಾರೂಪವಾದ ಸೇವೆಯಿಂದ ಹೇಗೆ ಆಗುವುದು ಎಂದರೆ—

**ಭಾಷ್ಯ ॥ ಶ್ರವಣಂ ಮನನಂ ಚೈವ ನಿದಿಧ್ಯಾಸನಮೇವ ಚ । ಪರೇ ಗುರೌ ಚ ಯಾ ಭಕ್ತಿಃ ಪರಿಚರ್ಯಾದಿಕಂ ಹರೇಃ ॥ ಏಷಾ ಸೇವೇತಿ ಸಂಪ್ರೋಕ್ತಾಯಯಾ ತದ್ದರ್ಶನಂ ಭವೇತ್ । ಇತಿ ಚ ಬೃಹತ್ಸಂಹಿತಾಯಾಂ ॥ ೫೦ ॥ ಅಧಿ.೧೦ ॥ ೪ ॥**

ಭಾಷ್ಯಾರ್ಥ ॥ ಶ್ರವಣವು, ಮನನವು, ನಿದಿಧ್ಯಾಸನವು, ಪರಮಾತ್ಮವಿಷಯದಲ್ಲಿಯೂ ಗುರುಗಳ ವಿಷಯದಲ್ಲಿಯೂ ಯಾವುದು ಭಕ್ತಿಯೋ, ಶ್ರೀಹರಿಯ ಪೂಜಾ ನಮಸ್ಕಾರ ಮೊದಲಾದುದು ಯಾವುದೋ, ಯಾವ ಸೇವೆಯಿಂದ ಶ್ರೀಹರಿಯ ದರ್ಶನವು ಆಗುತ್ತದೋ, ಈ ಶ್ರವಣಾದಿ ರೂಪವಾದುದೇ ಆ ಸೇವೆಯೆಂದು ಹೇಳಲ್ಪಟ್ಟಿದೆ. (ಬೇರೆಯಲ್ಲ) (ಏವಂಚ ಇಲ್ಲಿ ಸೇವಾ ಶಬ್ದಾರ್ಥವಾದುದು ಶ್ರವಣಾದಿ ರೂಪವಾದುದು ಸೇವೆಯೇ ಹೇಳಲ್ಪಟ್ಟಿದೆ. ಕೇವಲ ಶುಶ್ರೂಷಾರೂಪವಾದುದು

ಅಲ್ಲ, ಆದಕಾರಣ ಜ್ಞಾನವು ಶ್ರವಣಾದಿ ಸಾಧ್ಯವು ಎಂದು ಪ್ರತಿಪಾದಿಸತಕ್ಕ ಆತ್ಮಾ ವಾ ಅರೇ ಇತ್ಯಾದಿ ಪ್ರಮಾಣವಿರೋಧವಿಲ್ಲ) ಎಂದು ಬೃಹತ್ಸಂಹಿತೆಯಲ್ಲಿ ಹೇಳಿದ್ದರಿಂದ ಹಿಂದೆ ಹೇಳಿದ್ದು ಯುಕ್ತವು. ॥ ೫೦ ॥ ೪ ॥

## ಅಧಿಕರಣ ಸಾರಾಂಶ

ಪರೋಕ್ಷಜ್ಞಾನಸಾಧ್ಯವಾದ ಅಪರೋಕ್ಷಜ್ಞಾನವು ಶ್ರವಣಾದಿಸಾಧನ ಸಂಪೂರ್ತಿ ಜನ್ಮದಲ್ಲಿಯೇ ಆಗುತ್ತದೆಂದು ನಿಯಮವೋ ಅಥವಾ ಜನ್ಮಾಂತರದಲ್ಲಿಯೂ ಎಂದು ಅನಿಯಮವೋ, ಅದಕ್ಕಾಗಿ ಶ್ರವಣಾದಿಸಾಧನ ಪೂರ್ತಿ ಜನ್ಮದಲ್ಲಿ ಹುಟ್ಟದೆ ಇದ್ದ ಪ್ರಯುಕ್ತ ಅಪರೋಕ್ಷ ಜ್ಞಾನವು ಯಾವಾಗಲೂ ಹುಟ್ಟದೇನೇ ಇರಬೇಕಾಗುವುದೋ ಅಲ್ಲವೋ, ಆದಕ್ಕಾಗಿ ಅನಿಯಮಕಲ್ಪಕವು ಇಲ್ಲವೋ ಇದೆಯೋ ಎಂದು ಸಂದೇಹವು. ಶ್ರವಣಾದಿಸಾಧನ ಸಂಪೂರ್ತಿಜನ್ಮದಲ್ಲಿ ಅಪರೋಕ್ಷಜ್ಞಾನವು ಹುಟ್ಟದಿದ್ದರೆ ಜನ್ಮಾಂತರದಲ್ಲಿ ಅಪರೋಕ್ಷಜ್ಞಾನವು ಹುಟ್ಟುತ್ತದೆ ಎನ್ನುವಲ್ಲಿ ಕಲ್ಪಕ ಪ್ರಮಾಣವಿಲ್ಲದಿರುವುದರಿಂದ ಯಾವಾಗಲೂ ಹುಟ್ಟದೇನೇ ಇರಬೇಕಾಗಿರುವುದರಿಂದ ಆ ಜನ್ಮದಲ್ಲಿಯೇ ಅಪರೋಕ್ಷಜ್ಞಾನವು ಹುಟ್ಟುತ್ತದೆ. ಎಂದರೆ, ಶ್ರವಣಾದಿಸಾಧನ ಸಂಪೂರ್ತಿಜನ್ಮದಲ್ಲಿ ಪ್ರತಿಬಂಧಕವಿದ್ದುದರಿಂದ ಜ್ಞಾನವು ಹುಟ್ಟದಿದ್ದರೆ ಜನ್ಮಾಂತರದಲ್ಲಿ ಜ್ಞಾನವು ಹುಟ್ಟುತ್ತದೆ. ಪ್ರತಿಬಂಧಕವು ಇಲ್ಲದಿದ್ದರೆ ಸಾಧನಸಂಪೂರ್ಣ ಜ್ಞಾನದಲ್ಲಿಯೇ ಹುಟ್ಟುತ್ತದೆ. ಹೀಗೆ ಅನಿಯಮವೇ ಈ ವಿಷಯದಲ್ಲಿ ಕಲ್ಪಕಪ್ರಮಾಣವು ಇಲ್ಲವೆಂದಲ್ಲ. ಶ್ರುತ್ವಾsತ್ಮಾನಂ ಮತಿಪೂರ್ವಂ ಎನ್ನುವ ಶ್ರುತಿಯಲ್ಲಿ ಹಾಗೆ ಸ್ಪಷ್ಟವಾಗಿ ಹೇಳಿಯದೆ. ॥ ಅಧಿ. ೧೦ ॥

ಐಹಿಕಾಧಿಕರಣವು ಸಮಾಪ್ತವಾಯಿತು.

# ೧೧ ಮುಕ್ತಿಫಲಾಧಿಕರಣವು

**ಪೀಠಿಕೆ ॥** ಜ್ಞಾನವು ಪ್ರಾರಬ್ಧಕರ್ಮರೂಪ ಪ್ರತಿಬಂಧಕವಿಲ್ಲವಾದರೆ ಹುಟ್ಟಿದೊಡನೆಯೇ ಮುಕ್ತಿಜನಕವಾಗುತ್ತದೆಂದು ಸಮರ್ಥಿಸುತ್ತಾರೆ. ಯಾವ ಶರೀರದಲ್ಲಿ ಜ್ಞಾನೋತ್ಪತ್ತಿಯೋ ಆ ಶರೀರ ಪಾತಾನಂತರದಲ್ಲಿಯೇ ಮೋಕ್ಷವು. ವ್ಯವಧಾನದಿಂದ ಅಲ್ಲ. ಇಲ್ಲಿ ಪ್ರತಿಬಂಧಕವಿಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃ ತೇಃ ಓಂ ॥ ೫೧ ॥

**ಸೂತ್ರಾರ್ಥ ॥** ಜ್ಞಾನಕ್ಕೆ ಶ್ರವಣಾದಿಸಾಧನ ಸಂಪತ್ತಿಜನ್ಮದಲ್ಲಿಯೇ ಉತ್ಪತ್ತಿಯು ಎನ್ನುವ ಅನಿಯಮದಂತೆ ಮುಕ್ತ್ಯಾಖ್ಯಫಲಕ್ಕೂ ಅನಿಯಮವೇ, ಅಂದರೆ, ಜ್ಞಾನೋತ್ಪತ್ತಿ ದೇಹಪಾತಾನಂತರದಲ್ಲಿಯೇ ಉತ್ಪತ್ತಿಯು ಎನ್ನುವ ನಿಯಮಾಭಾವವೇ. ಮುಕ್ತಿಯು ಇಲ್ಲವೆಂದಲ್ಲ. ಬ್ರಹ್ಮಸಂಸ್ಥೋsಮೃತತ್ವಮೇತಿ ಉತ್ಪತ್ತಿಯು ಎನ್ನುವ ಶ್ರುತಿಯಲ್ಲಿ ಬ್ರಹ್ಮನಲ್ಲಿ ಅವಸ್ಥಿತಿಯಿರತಕ್ಕ ಬ್ರಹ್ಮಜ್ಞಾನಿಗೆ ಮುಕ್ತಿಫಲವು ನಿಶ್ಚಿತವಾದುದರಿಂದ.

**ಭಾಷ್ಯ॥ ಏವಮೇವ ಪ್ರಾರಬ್ಧಕರ್ಮಾಭಾವೇ ಶರೀರಪಾತಾನಂತರಮೇವ ಮೋಕ್ಷಃ । ತದ್ಭಾವೇ ಜನ್ಮಾಂತರಾಣೀತ್ಯನಿಯಮಃ ॥ ೧ ॥**

ಭಾಷ್ಯಾರ್ಥ ॥ (ಹಿಂದೆ ಹೇಳಿದ ಪ್ರಕಾರ ಹೇಗೆ, ಜ್ಞಾನದ ಉತ್ಪತ್ತಿಯಲ್ಲಿ ಅನಿಯಮವೋ ಹೀಗೆಯೇ ಜ್ಞಾನೋತ್ಪತ್ತಿ ಶರೀರಪಾತಾನಂತರದಲ್ಲಿಯೇ ಮೋಕ್ಷವು ಎಂದು ನಿಯಮವಿಲ್ಲ. ಮತ್ತೆ ಜನ್ಮಾಂತರಗಳನ್ನು ಹೊಂದಿ ಶರೀರಪಾತಾನಂತರದಲ್ಲಿಯೂ ಆಗುತ್ತದೆ. ಪ್ರಾರಬ್ಧಕರ್ಮ ಪ್ರತಿಬಂಧ ಭಾವಾಭಾವಗಳೇ ಕಾರಣಗಳು.) ಪ್ರಾರಬ್ಧಕರ್ಮಾಖ್ಯ ಮುಕ್ತಿಪ್ರತಿಬಂಧಕವಿಲ್ಲದಿದ್ದರೆ ಶರೀರಪಾತಾ ನಂತರದಲ್ಲಿಯೇ ಮೋಕ್ಷವು. ಪ್ರಾರಬ್ಧಕರ್ಮಾಖ್ಯ ಮುಕ್ತಿ ಪ್ರತಿಬಂಧಕವಿದ್ದರೆ ಜನ್ಮಾಂತರಗಳನ್ನು ಹೊಂದಿಯೇ. ಶರೀರಪಾತಾನಂತರದಲ್ಲಿಯೇ ಎಂದು ನಿಯಮವಿಲ್ಲ. ॥ ೧ ॥

ಪೀಠಿಕೆ ॥ ಪ್ರತಿಬಂಧಕವನ್ನು ಕಲ್ಪಿಸಲಿಕ್ಕೆ ಕಾರಣವೇನೆಂದರೆ—

**ಭಾಷ್ಯ ॥ ಧರ್ಮೀ ಸ್ವರ್ಗಂ ವಿಧರ್ಮೀ ನಿರಯಮೇತ್ಯೇವ ಬ್ರಹ್ಮಸಂಸ್ಥೋಽಮೃತಮೇತ್ಯೇವ ಬ್ರಹ್ಮಸಂಸ್ಥೋಽಮೃತಮೇತ್ಯೇವ । ಇತಿ (ಅಮೃತಮಿತಿ) ಬ್ರಹ್ಮ ಸಂಸ್ಥಸ್ಯ ಮೋಕ್ಷಸ್ಯೈವಾವಧಾರಣಾತ್ ॥ ೨ ॥**

ಭಾಷ್ಯಾರ್ಥ ॥ ಪುಣ್ಯಕರ್ಮವುಳ್ಳವನು ಸ್ವರ್ಗವನ್ನು ಪಾಪಕರ್ಮವುಳ್ಳವನು ನರಕವನ್ನು ಹೊಂದಿಯೇ ಹೊಂದುತ್ತಾನೆ. ಬ್ರಹ್ಮದರ್ಶಿಯು ಮುಕ್ತಿಯನ್ನು ಹೊಂದಿಯೇ ಹೊಂದುತ್ತಾನೆ. ಎಂದು ಶ್ರುತಿಯಲ್ಲಿ ಬ್ರಹ್ಮಾಪರೋಕ್ಷಜ್ಞಾನಿಗೆ (ಅಮೃತಮೇತ್ಯೇವ ಎನ್ನುವಲ್ಲಿದ್ದ ಏವ ಶಬ್ದದಿಂದ) ಮೋಕ್ಷಕ್ಕೇನೇ ಅವಧಾರಣ ಮಾಡಿದ್ದರಿಂದ ಅಂದರೆ, ಜ್ಞಾನ ಮೋಕ್ಷಗಳಿಗೆ ಕಾರ್ಯಕಾರಣಭಾವವನ್ನು ನಿರ್ಧಾರಣ ಮಾಡಿದ್ದರಿಂದ. (ತಥಾಚ ಜ್ಞಾನವು ಉಂಟಾದರೂ ಕೆಲವರಿಗೆ ಆ ಶರೀರಪಾತಾನಂತರದಲ್ಲಿಯೇ ಮೋಕ್ಷವು ಆಗುವುದಿಲ್ಲ. ಇಷ್ಟರಿಂದ ಜ್ಞಾನವು ಮೋಕ್ಷಕಾರಣವು ಆಗುವುದಿಲ್ಲವೆಂದಲ್ಲ. ಹಾಗಾದರೆ ಜ್ಞಾನವು ನಿಯಮೇನ ಮೋಕ್ಷಸಾಧನವು ಎಂದು ಹೇಳುವ ಶ್ರುತಿಗೆ ಅಪ್ರಾಮಾಣ್ಯವು ಬರಬೇಕಾಗುವುದು. ಆದ ಪ್ರಯುಕ್ತ ಪ್ರಾರಬ್ಧಕರ್ಮವು ಮೋಕ್ಷಕ್ಕೆ ಪ್ರತಿಬಂಧಕವೆಂದು ಕಲ್ಪಿಸಲ್ಪಡುತ್ತದೆ.) ॥ ೨ ॥

ಪೀಠಿಕೆ ॥ ಶ್ರುತಿಯಲ್ಲಿ ನಿಯಮವನ್ನು ಹೇಳದಿರುವುದು ಮಾತ್ರ ಅನಿಯಮಸಾಧಕವು ಆಗಲಾರದು ಎಂದರೆ—

**ಭಾಷ್ಯ ॥ ವಿದ್ವಾನಮೃತಮಾಪ್ನೋತಿ ನಾತ್ರಕಾರ್ಯಾ ವಿಚಾರಣಾ । ಅವಸನ್ನಂ ಯದಾರಬ್ಧಂ ಕರ್ಮ ತತ್ರೈವ ಗಚ್ಛತಿ ॥ ನ ಚೇದ್ಬಹೂನಿ ಜನ್ಮಾನಿ ಪ್ರಾಪ್ಯೈವಾಂ ತೇ ನ ಸಂಶಯಃ । ಇತಿ ಚ ನಾರಾಯಣಾಧ್ಯಾತ್ಮೇ ॥ ೫೧ ॥ ಅಧಿ. ೧೧ ॥ ೩ ॥**

ಭಾಷ್ಯಾರ್ಥ ॥ ಬ್ರಹ್ಮಾಪರೋಕ್ಷಜ್ಞಾನಿಯು ಮುಕ್ತಿಯನ್ನು ಹೊಂದಿಯೇ ಹೊಂದುತ್ತಾನೆ. ಈ ವಿಷಯದಲ್ಲಿ ಸಂದೇಹ ಮಾಡಕೂಡದು. (ಅಂದರೆ ಯಾವ ದೇಹದಲ್ಲಿ ಜ್ಞಾನವು ಹುಟ್ಟಿಯದೋ, ಆ ದೇಹಪಾತಾನಂತರದಲ್ಲಿಯೇ ಎಂದು ನಿಯಮವಿಲ್ಲ ಎನ್ನುತ್ತಾರೆ.) ಪ್ರಾರಬ್ಧಕರ್ಮವು ಆ ಶರೀರದಲ್ಲಿಯೇ ಪರ್ಯವಸನ್ನವಾದರೆ ಆ ದೇಹಪಾತಾನಂತರದಲ್ಲಿಯೇ ಮುಕ್ತಿಯನ್ನು ಹೊಂದುತ್ತಾನೆ.

ಪ್ರಾರಬ್ಧಕರ್ಮವು ಪರ್ಯವಸನ್ನವಾಗದೆ ಇದ್ದರೆ ಜನ್ಮಾಂತರಗಳನ್ನು ಹೊಂದಿಯೇ ಪ್ರಾರಬ್ಧಕರ್ಮ ನಾಶದ ಅಂತ್ಯದಲ್ಲಿ ಮುಕ್ತಿಯನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ ಎಂದು ನಾರಾಯಣಾಧ್ಯಾತ್ಮ ಎನ್ನುವ ಗ್ರಂಥದಲ್ಲಿ ಉಕ್ತವಾಗಿದೆ. (ಆದ ಕಾರಣ ಜ್ಞಾನಿಗಳಿಗೆ ಪ್ರಾರಬ್ಧಕರ್ಮ ರೂಪ ಪ್ರತಿಬಂಧಕವಿಲ್ಲವಾದರೆ ಮೋಕ್ಷವು ಆ ಜನ್ಮದಲ್ಲಿಯೇ ಆಗುತ್ತದೆ ಎಂದು ಸಿದ್ಧವಾಯಿತು. ॥ ೫೧ ॥ ೨. ॥

## ಅಧಿಕರಣ ಸಾರಾಂಶ

ಜ್ಞಾನಸಾಧ್ಯವಾದ ಮೋಕ್ಷವು ಯಾವ ಶರೀರದಲ್ಲಿ ಜ್ಞಾನವು ಹುಟ್ಟಿಯದೋ, ಆ ದೇಹಪಾತಾನಂತರದಲ್ಲಿಯೇ ಆಗುತ್ತದೆಂದು ನಿಯಮವೋ ಅಥವಾ ನಿಯಮವಿಲ್ಲವೋ, ಎಂದು ಸಂದೇಹವು. ಜ್ಞಾನೋತ್ಪತ್ತಿ ಶರೀರಪಾತಾನಂತರದಲ್ಲಿಯೇ ಮೋಕ್ಷವು, ವ್ಯವಧಾನದಿಂದ ಅಲ್ಲ. ಜ್ಞಾನ ಹುಟ್ಟಲಿಕ್ಕೆ ಪ್ರತಿಬಂಧಕವಿದ್ದಂತೆ ಇಲ್ಲಿ ಪ್ರತಿಬಂಧಕವು ಕಾಣವುದಿಲ್ಲ, ಎಂದರೆ— ಪ್ರಾರಬ್ಧಕರ್ಮಾಖ್ಯ ವಾದ ಮುಕ್ತಿ ಪ್ರತಿ ಬಂಧಕವಿಲ್ಲದಿದ್ದರೆ ದೇಹಪಾತಾನಂತರದಲ್ಲಿಯೇ ಮುಕ್ತಿಯಾಗುತ್ತದೆ. ಪ್ರಾರಬ್ಧ ಕರ್ಮಾಖ್ಯ ಮುಕ್ತಿ ಪ್ರತಿಬಂಧಕವಿದ್ದರೆ ಅದು ಮುಗಿಯುವ ತನಕ ಅನೇಕ ಜನ್ಮಗಳನ್ನು ಹೊಂದಿ ಪ್ರಾರಬ್ಧಕರ್ಮಾನುಸಾರದಲ್ಲಿ ಮುಕ್ತಿಯನ್ನು ಹೊಂದುತ್ತಾನೆ. **ಬ್ರಹ್ಮಸಂಸ್ಥೋಽಮೃತಮಾಪ್ನೋತಿ, ವಿದ್ವಾನಮೃತಮಾಪ್ನೋತಿ** ಇತ್ಯಾದಿ ಪ್ರಮಾಣಗಳಿಂದಲೂ ಬ್ರಹ್ಮಸಂಸ್ಥನಿಗೆ ಮೋಕ್ಷವು ನಿರ್ಧಾರಿತವಾಗಿದೆ. **ಸರ್ವಪ್ರಮಾಣಸಿದ್ಧತ್ವಂ ವಕ್ತುಮಾಧ್ಯಾಯಮೂಲತಃ । ಅಧ್ಯಾಯಾಂತೇ ದ್ವಿರುಕ್ತಿಃ ಸ್ಯಾತ್ ಪೂರ್ವೋಕ್ತಸ್ಯಾವಧಾರಣೇ ॥** ಎಂದು ಹೇಳಿದ ಪ್ರಕಾರ ಪೂರ್ವೋಕ್ತಾರ್ಥವೆಲ್ಲವೂ ಸರ್ವಪ್ರಮಾಣ ಸಿದ್ಧವು ಎಂದು ಹೇಳುವುದಕ್ಕಾಗಿ ಅಧ್ಯಾಯಾಂತ್ಯದಲ್ಲಿ ದ್ವಿರುಕ್ತಿಯು ॥ ಅಧಿ. ೧೧ ॥

**ಮುಕ್ತಿಫಲಾಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ(ದ) ವಿರಚಿತೇ ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ ॥ ೩—೪ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮದ್ವೇದವ್ಯಾಸಕೃತ ಬ್ರಹ್ಮ ಸೂತ್ರಗಳ ಭಾಷ್ಯದಲ್ಲಿ ಮೂರನೇ ಅಧ್ಯಾಯದಲ್ಲಿ ನಾಲ್ಕನೇ ಪಾದವು ಸಮಾಪ್ತವಾಯಿತು. ॥ ೩-೪ ॥

ಜ್ಞಾನಭಾಹೃತ್ತಮೋಹರ್ತಾ ಶ್ರುತಿಪಂಕಜಬೋಧಕಃ ।
ವ್ಯಾಸಾಂಶುಮಾನ್ ದರ್ಶಯತು ಸನ್ಮಾರ್ಗಂ ಗುಣಮಂಡಲಃ ॥
ದುರ್ಮಾರ್ಗಾದುದ್ಧೃತೋ ಯೈಶ್ಚ ಸನ್ಮಾರ್ಗೇ ಸಂಪ್ರವೇಶಿತಃ ।
ತಾನ್ ಗುರೂನ್ ಸತತಂ ಸೇವೇ ಸರ್ವಶಾಸ್ತ್ರವಿಶಾರದಾನ್ ॥

**ಮೂರನೇ ಅಧ್ಯಾಯವು ಸಮಾಪ್ತವಾಯಿತು.**

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಚತುರ್ಥಾಧ್ಯಾಯ ೧ನೇ ಪಾದ

## ಕರ್ಮಕ್ಷಯಪಾದಃ

## ೧. ಆವೃತ್ತ್ಯಧಿಕರಣವು

ರಾಮಂ ಸರ್ವಗುಣೈಃ ಪೂರ್ಣಂ ನಿರ್ದೋಷಂ ಸಾಧುಸೇವಿತಂ ।
ಮುಕ್ತಿದಂ ಜಾನಕೀಕಾಂತಂ ಪ್ರಣಮಾಮಿ ನಿರಂತರಂ ॥
ವಾಗ್ಜ್ಯೋತ್ಸ್ನಾಧ್ವಸ್ತಹೃಧ್ವಾಂತಂ ವಿಬುಧಾಬ್ಧ್ಯರ್ಥಿಸಾಧಕಂ ।
ಶುದ್ಧಾದ್ವಬೋಧಕಂ ಸೇವೇ ನಿತ್ಯಂ ಮದ್ಧ್ವವಿಧುಂ ವಿದೇ ॥

**ಭಾಷ್ಯ ॥ (೧) ಫಲಂ ನಿಗದ್ಯತೇಽಸ್ಮಿನ್ನಧ್ಯಾಯೇ । (೨) ಕರ್ಮನಾಶಾಖ್ಯಂ ಫಲಮಸ್ಮಿನ್ ಪಾದೇ ॥ (೩) ನಿತ್ಯಶಃ ಕಾರ್ಯಂ ಸರ್ವಥಾ ಭಾವ್ಯಂ ಸಾಧನಂ ಪ್ರಥಮತ ಉಚ್ಯತೇ । (೪) ಪ್ರಾಯಿಕತ್ವಾಚ್ಚಾಧ್ಯಾಯಾನಾಂ ಪಾದಾನಾಂ ಚ ನ ವಿರೋಧಃ ॥ ೧ ॥**

**ಭಾಷ್ಯಾರ್ಥ ॥** (೧) ಪೂರ್ವಾಧ್ಯಾಯದಲ್ಲಿ ವಿರಕ್ತಿ ಮೊದಲಾದ ಸಾಧನಗಳಿಂದ ಯಾವುದು ಬ್ರಹ್ಮದರ್ಶನವು ಸಂಪಾದ್ಯವೆಂದು ಹೇಳಲ್ಪಟ್ಟದೋ ಅದಕ್ಕೆ ಯಾವುದು ಮೋಕ್ಷಾಖ್ಯಫಲವೋ ಆದರ ಸ್ವರೂಪವು ಈ ನಾಲ್ಕನೇ ಅಧ್ಯಾಯದಲ್ಲಿ ಅದು ಎಂತಹುದೆಂದು ವಿಚಾರಿಸಲ್ಪಡುತ್ತದೆ. (೨) (ಈ ಪಾದಾರ್ಥವನ್ನು ತೋರಿಸುತ್ತಾರೆ.) ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ನಾಲ್ಕು ವಿಧವಾದ ಜ್ಞಾನಫಲದಲ್ಲಿ ಕರ್ಮನಾಶಾಖ್ಯ ಫಲವು ಪ್ರಾಥಮಿಕವಾದುದರಿಂದ ದರ್ಶನಕಾಲೀನ ಸಂಚಿತ ಕರ್ಮಗಳ ನಾಶಾಖ್ಯಫಲವು ಈ ಪಾದದಲ್ಲಿ ಹೇಳಲ್ಪಡುತ್ತದೆ. (೩) (ಆವೃತ್ತಿರಸಕೃತ್ ಇತ್ಯಾದಿ ಸೂತ್ರಗಳಲ್ಲಿ ಕರ್ಮಕ್ಷಯರೂಪ ಫಲೋಕ್ತಿಯು ಇಲ್ಲದೆ ಇರುವುದರಿಂದ ಕರ್ಮನಾಶಾಖ್ಯ ಫಲವು ಈ ಪಾದಪ್ರತಿಪಾದ್ಯವೆಂದು ಹೇಳಿದ್ದು ಹೀಗೆ ಕೂಡುತ್ತದೆ ಎಂದರೆ) ಉಪಾಸನಾಪಾದದಲ್ಲಿ ಸರ್ವವೇದಾಂತ ಪ್ರತ್ಯಯಂ ಇತ್ಯಾದಿ ಸೂತ್ರಗಳಲ್ಲಿ ಶ್ರವಣಾದ್ಯಾವೃತ್ತಿರೂಪವಾದುದು ಉಪಾಸನವು ಯಾವುದು ಜ್ಞಾನಕ್ಕೆ ಸಾಧನವಾದುದು ಉಕ್ತವಾಗಿಯದೋ ಅದೇವೇ ಏಳು ಅಧಿಕರಣಗಳಲ್ಲಿ ಅವಶ್ಯವಾಗಿ ಕರ್ತವ್ಯವೆಂದು ಹೇಳಲ್ಪಡುತ್ತದೆ. (ಕರ್ಮಕ್ಷಯವಲ್ಲ) (ಹೇಳಿದ್ದನ್ನೇ ಪುನಃ ಏಕೆ ಹೇಳುವುದು, ಎಂದರೆ, ಇಲ್ಲಿ ಹೇಳಿದ್ದ ಎಲ್ಲಾ ಉಪಾಸನಾದಿಗಳನ್ನೇ ಪುನಃ ಹೇಳುವುದಲ್ಲ, ಮತ್ತೆ ಸರ್ವಪ್ರಕಾರಗಳಿಂದ ವಿಘ್ನ ಬಂದರೂ

ಸರ್ವದಾ ಯಾವ ಭಕ್ತಿ ಮುಮುಕ್ಷುಗಳಿಗೆ ಅನುಷ್ಠೇಯವಾದುದು. ಆದುದರಿಂದಲೇ ನಿತ್ಯದಲ್ಲಿಯೂ ಸರ್ವಥಾ ಕಾರ್ಯವಾದ ಸಾಧನವು ಹೇಳಲ್ಪಡುತ್ತದೆ. (ನಿತ್ಯದಲ್ಲಿಯೂ ಇಂತಹ ಸಾಧನೆಗಳನ್ನು ಮಾಡದಿದ್ದರೆ ಅಪರೋಕ್ಷ ಜ್ಞಾನವು ಆಗದೆ ಇರುವುದರಿಂದ ಅದು ಇಲ್ಲದಿದ್ದರೆ ನಾಲ್ಕು ವಿಧ ಜ್ಞಾನಫಲಗಳ ಮಧ್ಯದಲ್ಲಿ ಒಂದು ವಿಧವಾದ ಮೋಕ್ಷವೂ ಆಗದಿರುವುದರಿಂದ ಸರ್ವಥಾ ಅನುಷ್ಠೇಯವೇ ಆಗಿದೆ. ತಥಾಚ ಅಲ್ಲಿ ಉಕ್ತವಾದ ಸಾಧನವನ್ನು ಸರ್ವಪ್ರಕಾರಗಳಿಂದ ವಿಘ್ನಗಳು ಬಂದರೂ ಸರ್ವದಾ ಪರಮಾದರದಿಂದ ಯಾವಭಕ್ತಿ ಅನುಷ್ಠೇಯವೆಂದು ಇಲ್ಲಿ ಹೇಳಲ್ಪಡುತ್ತದೆ.) (೪) (ಫಲಾಧ್ಯಾಯದಲ್ಲಿಯೂ ಕರ್ಮಕ್ಷಯ ಪಾದದಲ್ಲಿಯೂ ಸಾಧನವನ್ನೇ ಹೇಳುವುದಾದರೆ ಅಧ್ಯಾಯ ಪಾದಗಳಿಗೆ ಅರ್ಥವ್ಯವಸ್ಥೆಯು ಇಲ್ಲವೆಂದಾಗಬೇಕಾಗುವುದು ಎಂದರೆ) ಸಮಸ್ತಯಾದ್ಯಧ್ಯಾಯಗಳಿಗೂ ನಾಮಾದಿ ಪಾದಗಳಿಗೂ ಪ್ರಾಚುರ್ಯೇಣ ಏಕಾರ್ಥಪ್ರತಿಪಾದಕತ್ವ ವಿದ್ದುದರಿಂದ (ಅಂದರೆ, ಪ್ರಧಾನವಾಗಿ ಪ್ರತಿಪಾದ್ಯ ಅರ್ಥಪರತ್ವವಿದ್ದುದರಿಂದ) ಯಾವ ಅರ್ಥವು ಎಲ್ಲಿ ಪ್ರಧಾನವಾಗಿ ಹೇಳಲ್ಪಡುತ್ತದೋ ಅಂತಹ ಅಧ್ಯಾಯಗಳಿಗೂ ಪಾದಗಳಿಗೂ ತದರ್ಥಪರವೆಂಬ ವ್ಯವಸ್ಥೆಯು ಕೂಡುವುದರಿಂದ ವ್ಯವಸ್ಥಾಭಾವರೂಪವಾದ ವಿರೋಧವಿಲ್ಲ. ಏಕೆಂದರೆ, ಈ ಪಾದದಲ್ಲಿ ಕರ್ಮಕ್ಷಯಾಖ್ಯ ಫಲೋಕ್ತಿಯೇ ಪ್ರಧಾನವು. ಸಾಧನವಿಚಾರವು ಇಲ್ಲಿ ಪ್ರಾಸಂಗಿಕವೇ. ಪ್ರಧಾನವಲ್ಲ ॥ ೧ ॥

**ಪೀಠಿಕೆ ॥** ಈ ಅಧಿಕರಣದಲ್ಲಿ ಶ್ರವಣಾದ್ಯಾವೃತ್ತಿಯನ್ನು ಮಾಡಬೇಕೆಂದು ಉಪಪಾದಿಸುತ್ತಾರೆ. ಶ್ರವಣಾದಿಗಳನ್ನು ಒಮ್ಮೆಯೇ ಮಾಡಬೇಕು. ಆವೃತ್ತಿ ಮಾಡಬೇಕಾಗಿಲ್ಲ. ಒಂದು ಸಲ ಮಾಡಿದ ಶ್ರವಣಾದಿಗಳಿಂದಲೇ ಒಂದು ಸಲ ಮಾಡಿದ ಅಗ್ನಿಷ್ಟೋಮಾದಿಯಾಗಗಳಿಂದ ಸ್ವರ್ಗಫಲವು ಲಭಿಸುವಂತೆ ಜ್ಞಾನಲಾಭವು ಆಗುವುದರಿಂದ ಶ್ರವಣಾದ್ಯಾವೃತ್ತಿಯು ವ್ಯರ್ಥವು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆವೃತ್ತಿರಸಕೃದುಪದೇಶಾತ್ ಓಂ ॥ ೧ ॥

**ಸೂತ್ರಾರ್ಥ ॥** ಜ್ಞಾನಕ್ಕಾಗಿ ಶ್ರವಣಾದ್ಯಾವೃತ್ತಿಯನ್ನು ಮಾಡಬೇಕು. ಸ ಆತ್ಮಾ ತತ್ತ್ವಮಸಿ ಎಂದು ಉದ್ದಾಲಕರು ಶ್ವೇತಕೇತುವಿಗೆ ಅನೇಕಾವರ್ತಿ ತತ್ತ್ವವನ್ನು ಉಪದೇಶಿಸಿದ್ದರಿಂದ. (ಶಿಷ್ಯರಿಗೆ ಶ್ರವಣಾದ್ಯಾವೃತ್ತಿಯು ಆವಶ್ಯಕವಾಗದಿದ್ದರೆ ಅನೇಕಾವರ್ತಿ ಗುರೂಪದೇಶವು ವ್ಯರ್ಥವಾಗುವುದು.)

**ಭಾಷ್ಯ ॥ (೧) ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧಾಸಿತವ್ಯಃ । (ಬೃ.೪.೪.೫) ಇತ್ಯಾದೀನಾಂ ನಾಗ್ನಿಷ್ಟೋಮಾದಿವದೇಕವಾರೇಣೈವ ಫಲಪ್ರಾಪ್ತಿಃ । ಕಿಂ ತ್ವಾವೃತ್ತಿಃ ಕರ್ತವ್ಯಾ । (೨) ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ (ಛಾ.೬.೮.೭) ಇತ್ಯಾದ್ಯಸಕೃದುಪದೇಶಾತ್ ॥ ೧ ॥ ॥ ೨ ॥**

**ಭಾಷ್ಯಾರ್ಥ ॥** (೧) ಆತ್ಮಾ ವಾ ಅರೇ ಇತ್ಯಾದಿ ಶ್ರುತ್ಯುಕ್ತಗಳಾದ ಶ್ರವಣಾದಿಗಳಿಗೆ, ಅಗ್ನಿಷ್ಟೋಮ ಮೊದಲಾದ ಯಜ್ಞಗಳಂತೆ (ಅಂದರೆ, ಹೇಗೆ ಒಂದಾವರ್ತಿ ಮಾಡಿದ ಅಗ್ನಿಷ್ಟೋಮಾದಿಗಳಿಂದ

ಸ್ವರ್ಗಫಲವು ಸಿದ್ಧಿಯಾಗುತ್ತದೋ ಹಾಗೆಯೇ ಶ್ರವಣಾದಿಗಳನ್ನು) ಒಂದಾವರ್ತಿ ಮಾಡಿದ್ದರಿಂದಲೇ ಜ್ಞಾನಾಖ್ಯಫಲವು ಸಿದ್ಧಿಯಾಗುವುದಿಲ್ಲ. ಮತ್ತೆ ಶ್ರವಣಾದಿಗಳಿಗೆ ಆವೃತ್ತಿಯೇ ಮಾಡತಕ್ಕುದು. (ಏಕೆಂದರೆ) (೨) (ಉದ್ದಾಲಕರು ಶ್ವೇತಕೇತುವಿಗೆ ಸ ಯ ಏಷಃ ಇತ್ಯಾದಿಗಳಿಂದ ಒಂಭತ್ತಾವರ್ತಿ ತತ್ತ್ವವನ್ನು ಉಪದೇಶ ಮಾಡಿದ್ದರಿಂದ (ಶ್ರವಣಾದಿಗಳನ್ನು ಒಂದಾವರ್ತಿಯೇ ಮಾಡಬೇಕೆಂದು ಇರುತ್ತಿದ್ದರೆ ಉದ್ದಾಲಕರು ಶ್ವೇತಕೇತುವಿಗೆ ಅನೇಕಾವರ್ತಿ ಉಪದೇಶಿಸುತ್ತಿರಲಿಲ್ಲ) ಪರದೇವತೆಯಾದ ವಿಷ್ಣುವು ಸಾರತ್ವಾತ್=ಶ್ರೇಷ್ಠನಾದ ಪ್ರಯುಕ್ತ ಸಃ ಎನ್ನಿಸುತ್ತಾನೆ. ನಿಯಮಿಸುವುದರಿಂದಲೂ ಜ್ಞಾನರೂಪನಾದುದರಿಂದಲೂ ಯಃ ಎನ್ನಿಸುತ್ತಾನೆ. ಸರ್ವರಿಗೆ ಇಷ್ಟತಮನಾದುದರಿಂದಲೂ ನಿರ್ವಿಘ್ನವಾಗಿ ಸರ್ವೇಚ್ಛಾರೂಪನಾದುದರಿಂದಲೂ ಏಷಃ ಎನ್ನಿಸುತ್ತಾನೆ. ಸೂಕ್ಷ್ಮಜ್ಞಾನವಿಷಯನಾದುದರಿಂದಲೂ ಅತಿ ಸೂಕ್ಷ್ಮ ಪರಿಮಾಣರೂಪನಾದುದರಿಂದಲೂ ಅಣಿಮಾ ಎನ್ನಿಸುತ್ತಾನೆ. ಏಷ ಚಾಸೌ ಆತ್ಮಾ ಚ ಏತದಾತ್ಮಾ, ಏತದಾತ್ಮನಃ ಇದಂ ಐತದಾತ್ಮ್ಯಂ, ಈ ಎಲ್ಲಾ ಜಗತ್ತು ಪರಮಾತ್ಮನ ಅಧೀನವಾದುದು, ಎಂದು ಶ್ರುತ್ಯರ್ಥವು (ಆದಿಶಬ್ದದಿಂದ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ, ವ್ಯಾಪ್ತನಾದ ಪ್ರಯುಕ್ತ ತತ್ ಎನ್ನಿಸುತ್ತಾನೆ. ಪರಮಾನಂದರೂಪನಾದುದರಿಂದ ಅಥವಾ ಸಾಧುಸ್ವರೂಪನಾದುದರಿಂದ ಸತ್ಯಂ ಎನ್ನಿಸುತ್ತಾನೆ. ಪೂರ್ಣ ಗುಣಗಳುಳ್ಳವನಾದುದರಿಂದ ಆತ್ಮಾ ಎನ್ನಿಸುತ್ತಾನೆ. ಅಂತೂ ಎಲೋ ಶ್ವೇತಕೇತುವೇ ನೀನು ಯಥಾರ್ಥವಾಗಿ ಆ ಶ್ರೀಹರಿಯಿಂದ ಭಿನ್ನನು ಆಗಿರುತ್ತಿ ಎಂದು ಅರ್ಥವು. ಹೀಗೆ ಒಂಭತ್ತಾವರ್ತಿ ಉದ್ದಾಲಕರು ಶ್ವೇತಕೇತುವಿಕೆ ಉಪದೇಶ ಮಾಡಿದ್ದರಿಂದ ಜ್ಞಾನಕ್ಕಾಗಿ ಶ್ರವಣಾದಿಗಳನ್ನು ಆವೃತ್ತಿಮಾಡಬೇಕೆಂದು ಸಿದ್ಧವಾಯಿತು. ॥ ೧ ॥

**ಪೀಠಿಕೆ** ॥ ಹೇತ್ವಂತರದಿಂದ ಶ್ರವಣಾದ್ಯಾವೃತ್ತಿಯನ್ನು ಸಾಧಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಲಿಂಗಾಚ್ಚ ಓಂ ॥ ೨ ॥

**ಸೂತ್ರಾರ್ಥ** ॥ ಸ ತಪೋಽತಪ್ಯತ ಇತ್ಯಾದಿಗಳಿಂದ ಶ್ರುತವಾದ, ಭೃಗುಋಷಿಗಳು ಮಾಡಿದ ಶ್ರವಣ ಮನನಾದಿಗಳ ಪುನಃಪುನಃ ಆವರ್ತನರೂಪವಾದ ಲಿಂಗದಿಂದಲೂ ಶ್ರವಣಾದಿಗಳಿಗೆ ಆವೃತ್ತಿಯನ್ನು ಮಾಡತಕ್ಕುದು ಎಂದು ಸಿದ್ಧವಾಗುತ್ತದೆ.

**ಭಾಷ್ಯ ॥ (೧) ಸ ತಪೋಽತಪ್ಯತ । ಪುನರೇವ ವರುಣಂ ಪಿತರಮುಪಸಸಾರ (ತೈ.೩.೧.೨.) ಇತ್ಯಾದ್ಯಾವರ್ತನಲಿಂಗಾಚ್ಚ॥ (೨) ನಿತ್ಯಶಃ ಶ್ರವಣಂ ಚೈವ ಮನನಂ ಧ್ಯಾನಮೇವ ಚ । ಕರ್ತವ್ಯಮೇವ ಪುರುಷೈರ್ಬ್ರಹ್ಮದರ್ಶನಮಿಚ್ಛುಭಿಃ ॥ ಇತಿ (ಹಿ) ಬೃಹತ್ತಂತ್ರೇ ॥ ೨ ॥ ಅಧಿ. ೧ ॥ ॥ ೩ ॥**

**ಭಾಷ್ಯಾರ್ಥ** ॥ (೧) (ವರುಣಪುತ್ರರಾದ ಭೃಗುಋಷಿಗಳು ಪರಬ್ರಹ್ಮನನ್ನು ಉಪದೇಶಿಸಿರಿ ಎಂದು ಶಂಕೆಯನ್ನು ಉಪಸತ್ತಿಮಾಡಿದರು. ಆಗ ವರುಣನು ಭೃಗುಋಷಿಗಳಿಗೆ ಅನ್ನಮಯ ಮೊದಲಾದ ಎಂಟು ರೂಪಗಳನ್ನು ಉಪದೇಶಿಸಿದನು. ಆ ಭಗವದ್ರೂಪಗಳಿಗೆ ಜಗಜ್ಜನ್ಮಾದಿ ಕಾರಣತ್ವಾದಿ

ಲಕ್ಷಣಗಳನ್ನು ಉಪದೇಶಿಸಿದನು. ಆಗ ಭೃಗುಋಷಿಗಳು ಪುನಃಪುನಃ ಭಗವದ್ರೂಪ ವಿಷಯಗಳಲ್ಲಿಯೇ ಪ್ರಶ್ನಿಸಿದರು. ಹಾಗೆಯೇ ಪುನಃಪುನಃ ವರುಣನೂ ಉಪದೇಶಿಸಿದನು. ಹೀಗೆ ಉಪದೇಶಿಸಿಕೊಳ್ಳಲ್ಪಟ್ಟ) ಸಃ=ಆ ಭೃಗುಋಷಿಗಳು, ತಪಃ=ಆಲೋಚನರೂಪ ಮನನವನ್ನು ಅತಪ್ಯತ=ಮಾಡಿದರು. (ಹೀಗೆ ಆಲೋಚನೆ ರೂಪ ಮನನಾದಿಗಳನ್ನು ಮಾಡಿ ಅನ್ನಮಯಾಖ್ಯ ಅನಿರುದ್ಧರೂಪವನ್ನು ಜಗಜ್ಜನ್ಮಾದಿ ಕರ್ತೃತ್ವ ಲಕ್ಷಣವುಳ್ಳದ್ದನ್ನಾಗಿ ತಿಳಿದುಕೊಂಡರು. ಹೀಗೆ ಭೃಗುಋಷಿಗಳು ಒಂದು ರೂಪವನ್ನು ಸಾಕ್ಷಾತ್ಕರಿಸಿಕೊಂಡು ಎರಡನೇ ರೂಪವನ್ನು ಸಾಕ್ಷಾತ್ಕರಿಸುವುದಕ್ಕಾಗಿ ಗುರುಗಳ ಅನುಗ್ರಹಕ್ಕಾಗಿ) ಪುನರೇವ=ಮತ್ತು ಪಿತರ=ತಂದೆಯಾದ ವರುಣಂ=ವರುಣನನ್ನು ಉಪಾಸಸಾರ=ಉಪಸತ್ತಿ ಮಾಡಿದನು. (ಪೂಜ್ಯರೇ ಪ್ರಾಣಮಯಾಖ್ಯ ಬ್ರಹ್ಮನನ್ನು ಸಾಕ್ಷಾತ್ಕರಿಸುವುದಕ್ಕಾಗಿ ಅನುಜ್ಞೆ ಕೊಡಿರಿ. ಹೀಗೆ ಭೃಗುಋಷಿಗಳಿಂದ ಹೇಳಲ್ಪಟ್ಟ ವರುಣನು, ತಪಃ ಬ್ರಹ್ಮ=ಬ್ರಹ್ಮನು ಜ್ಞಾನರೂಪನು ಎಂದು, ತಪಸ್ಸಿನಿಂದ (ಜ್ಞಾನಾನುಸಂಧಾನರೂಪವಾದ (ಆಲೋಚನೆಯಿಂದ) ತಿಳಿ ಎಂದು ಉಪದೇಶಿಸಿದನು. ಇತ್ಯಾದ್ಯಾವರ್ತನಲಿಂಗಾತ್=ಇದು ಮೊದಲಾದ ವಾಕ್ಯದಿಂದ ಬೋಧ್ಯವಾದುದು ಅನುಜ್ಞಾ ಪ್ರಾರ್ಥನಾವರ್ತನಾದಿರೂಪವಾದುದು ಶ್ರವಣಾವರ್ತನ ಲಿಂಗದೆಶೆಯಿಂದ, ಅಥವಾ ಇತ್ಯಾದಿರೂಪದಿಂದ ಶ್ರುತನಾದ ಶ್ರೀಹರಿಯ ಅಪರೋಕ್ಷವಾಗಿ ಮನನ ನಿದಿಧ್ಯಾಸನರೂಪವಾದ ತಪಸ್ಸಿನ ಆವರ್ತವು ಎನ್ನುವ ಲಿಂಗವು ಕಂಡದ್ದರಿಂದಲೂ (ದರ್ಶನಕ್ಕಾಗಿ ಶ್ರವಣಾದ್ಯಾವೃತ್ತಿಯನ್ನು ಮಾಡಬೇಕು. ಇಲ್ಲವಾದರೆ ಒಂದಾವರ್ತಿ ಶ್ರುತವಾದ ಭಗವದ್ರೂಪಕ್ಕೆ ಒಂದಾವರ್ತಿಯೇ ಮನನ ನಿಧಿ ಧ್ಯಾಸನಗಳಿಂದ ಆ ಭಗವದ್ರೂಪದ ಅಪರೋಕ್ಷವು ಕೂಡುವುದರಿಂದ ಪುನಃಪುನಃ ಭೃಗುಋಷಿಗಳು ಶ್ರವಣಾದಿಗಳಿಗಾಗಿ ವರುಣನ ಉಪಸತ್ಯಾದಿಗಳನ್ನು ಮಾಡಿದ್ದು ಕೂಡದೆ ಹೋಗುವುದು.) (೨) (ಶ್ರವಣಾದ್ಯಾವೃತ್ತಿ ಮಾಡಬೇಕೆನ್ನುವ ವಿಷಯದಲ್ಲಿ ಸ್ಮೃತಿಯನ್ನು ಹೇಳ್ತಾರೆ.) ಬ್ರಹ್ಮದರ್ಶನವನ್ನು ಇಚ್ಛಿಸುವ ಪುರುಷನಿಂದ ನಿರಂತರದಲ್ಲಿಯೂ ಶ್ರವಣವನ್ನೂ ಮನನವನ್ನೂ ಧ್ಯಾನವನ್ನೂ ಮಾಡಲೇಬೇಕು, ಎಂದು ಬ್ರಹತ್ತಂತ್ರದಲ್ಲಿ ಹೇಳಿಯದೆ. ॥೨॥ ॥೩॥

## ಅಧಿಕರಣ ಸಾರಾಂಶ

ಶ್ರವಣಾದಿಗಳನ್ನು ಒಂದಾವರ್ತಿ ಮಾಡಬೇಕೋ ಬಹ್ವಾವರ್ತಿ ಮಾಡಬೇಕೋ, ಅದಕ್ಕಾಗಿ ಶ್ರವಣಾದಿ ವಿಧಿಗಳಿಗೆ ಅಗ್ನಿಷ್ಟೋಮಾದಿ ವಿಧಿಗಳಂತೆ ಸಕೃದನುಷ್ಠಾನದಲ್ಲಿಯೇ ಪರ್ಯವಸಾನವೋ ಅಥವಾ ಅವಘಾತ ವಿಧಿಯಂತೆ ಆವೃತ್ತಿಯೇ ಇರುವುದೋ, ಅದಕ್ಕಾಗಿ ಶ್ರವಣಾದಿಗಳನ್ನು ಒಂದಾವರ್ತಿ ಮಾಡಿದ್ದರಿಂದ ಜ್ಞಾನವು ಹುಟ್ಟುತ್ತದೋ ಇಲ್ಲವೋ, ಅದಕ್ಕಾಗಿ ಜ್ಞಾನಕ್ಕೆ ಸುಲಭದಿಂದ ಶಕ್ಯವಾಗುವಿಕೆಯು ಗುಣವೋ ಸುಲಭದಿಂದ ಶಕ್ಯವಾಗದಿರುವಿಕೆಯು ಗುಣವೋ, ಎಂದು ಸಂದೇಹವು. ಶ್ರವಣಾದಿ ಸಾಧನಗಳನ್ನು ಅಗ್ನಿಷ್ಟೋಮಾದಿಗಳಂತೆಯೇ ಒಂದಾವರ್ತಿಯೇ ಅನುಷ್ಠಾನ ಮಾಡಬೇಕು. ಅಷ್ಟರಿಂದಲೇ ಜ್ಞಾನವು ಹುಟ್ಟುವುದರಿಂದ ಶ್ರವಣಾದಿ ವಿಧಿಗಳಿಗೆ ಸಕೃದನುಷ್ಠಾನದಲ್ಲಿಯೇ ಪರ್ಯವಸಾನವು. ವ್ರೀಹೀನವಹಂತಿ ಬತ್ತಗಳನ್ನು ಕುಟ್ಟುತ್ತಾನೆ ಇತ್ಯಾದಿ ವಿಧಿ ಗಳಲ್ಲಿ ಒಂದಾವರ್ತಿ ಕುಟ್ಟೋಣದರಿಂದ ತುಷವಿಮೋಕ (ಹೊಟ್ಟು ಹೋಗುವಿಕೆಯು) ರೂಪವಾದ ಫಲವು ಸಿದ್ಧಿಸದೆ ಇರುವುದರಿಂದ ಅವಘಾತಕ್ಕೆ ಆವೃತ್ತಿಯಲ್ಲಿಯೇ ಪರ್ಯವಸಾನವಿದ್ದಂತೆಯೇ

ಇಲ್ಲಿಯೂ ಏಕೆ ಹೇಳಬಾರದೆಂದು ಹೇಳಕೂಡದು. ಹಾಗೆ ಹೇಳಿದರೆ ಒಂದಾವರ್ತಿ ಸಾಧನಗಳನ್ನು ಅನುಷ್ಠಾನ ಮಾಡಿದ್ದರಿಂದ ಹೊಂದಬಹುದೆಂಬ ಸೌಲಭ್ಯ ರೂಪವಾದ ಗುಣವು ಇಲ್ಲವೆಂದಾಗಬೇಕಾಗುವುದು. ಜ್ಞಾನವು ಸುಲಭದಿಂದ ಸಾಧ್ಯವಾಗದಿರುವುದೇ ಗುಣವು ಎಂದು ಹೇಳಕೂಡದು. ಕಲ್ಪಕಪ್ರಮಾಣವಿಲ್ಲ ಎಂದು ಪೂರ್ವಪಕ್ಷವು ಬಂದರೆ—ಅವಘಾತಾದಿಗಳಂತೆಯೇ ಶ್ರವಣಾದಿಗಳನ್ನು ಆವರ್ತನೆ ಮಾಡಲೇಬೇಕು. ಒಂದಾವರ್ತಿ ಅವಹನನ (ಬತ್ತವನ್ನು ಕುಟ್ಟುವುದು)ದಿಂದ ಹೇಗೆ ತುಷವಿಮೋಕ (ಹೊಟ್ಟು ಹೋಗುವಿಕೆ)ವಾಗುವುದಿಲ್ಲವೋ ಆಂದರೆ ಹಾಗೆಯೇ ಆ ತುಷವಿಮೋಕರೂಪ ದೃಷ್ಟಫಲವಾಗುವ ತಕನ ಅವಘಾತ (ಕುಟ್ಟುವುದು) ರೂಪ ಸಾಧನಕ್ಕೆ ಅವೃತ್ತಿಯು ಹೇಗೆ ಆವಶ್ಯಕವೋ ಇಲ್ಲಿಯೂ ಶ್ರವಣಾದಿಗಳನ್ನು ಒಂದಾವರ್ತಿ ಮಾಡಿದ್ದರಿಂದ ಜ್ಞಾನೋದಯ ರೂಪವಾದ ದೃಷ್ಟಫಲವು ಆಗದಿರುವುದರಿಂದ ಜ್ಞಾನರೂಪದೃಷ್ಟಫಲವು ಆಗುವ ಪರ್ಯಂತ ಶ್ರವಣಾದಿಗಳ ಆವರ್ತನ ಮಾಡಲೇಬೇಕು. ಜ್ಞಾನವು ಶ್ರವಣಾದಿಗಳ ಆವರ್ತನದಿಂದ ಸಾಧ್ಯವೆಂದು .ಅಂಗೀಕರಿಸಿದರೆ ಸುಲಭಸಾಧ್ಯತ್ವರೂಪವಾದ ಗುಣವು ಇಲ್ಲವೆಂದಾಗಬೇಕಾಗುವುದು ಎಂದು ಹೇಳಕೂಡದು. ಮಹಾಫಲಕ್ಕೆ ಹೇತುವಾದ ಜ್ಞಾನದಲ್ಲಿ ದುಶ್ಶಕತ್ವವೇ (ಸುಲಭದಿಂದ ಸಾಧ್ಯವಾಗದಿರುವಿಕೆಯೇ) ಗುಣವು. ಜ್ಞಾನಕ್ಕೆ ದುಃಶಕ್ಯತ್ವವು ಗುಣವು ಎಂದು ಇಟ್ಟುಕೊಂಡು ಶ್ರವಣಾದಿಗಳು ಆವರ್ತನ ಸಾಧ್ಯವೆಂದು ಅಗೀಕಾರ ಮಾಡುವ ವಿಷಯದಲ್ಲಿ ಕಲ್ಪಕಪ್ರಮಾಣವು ಇಲ್ಲವೆಂದಲ್ಲ. ದುಃಶಕತ್ವವು (ದೌರ್ಲಭ್ಯವು) ಗುಣವಾದುದರಿಂದಲೇ ಉದ್ದಾಲಕರು ಶ್ವೇತಕೇತುವಿಗೆ **ಸ ಯ ಏಷೋಽಣಿಮಾ** ಇತ್ಯಾದಿ ತತ್ವವನ್ನು ಒಂಭತ್ತಾವರ್ತಿ ಉಪದೇಶ ಮಾಡಿರುವರು. ಇದೇ ಕಲ್ಪಕಪ್ರಮಾಣವು. ಇಲ್ಲವಾದರೆ ಒಂದಾವರ್ತಿಯೇ ಉಪದೇಶ ಮಾಡುತ್ತಿದ್ದರು. ಹಾಗೆಯೇ ತೈತ್ತಿರೀಯದಲ್ಲಿ **ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಂ** ಎನ್ನುವ ಶ್ರುತಿಯಿಂದ ಅನ್ನಾದಿರೂಪವಿಷಯದಲ್ಲಿಯೇ ಭೃಗುಋಷಿಗಳು ಅಧೀಹಿ ಭಗವೋ ಬ್ರಹ್ಮೇತಿ ಎಂದು ತಂದೆಯಾದ ವರುಣನ ಹತ್ತಿರ ಪ್ರಶ್ನೆ ಮಾಡಿರುವರು. ಹಾಗೆಯೇ ವರುಣನು ಶ್ರವಣ ಮನನ ನಿದಿಧ್ಯಾಸನಗಳನ್ನು ಮಾಡು ಎನ್ನುವ ಅಭಿಪ್ರಾಯದಿಂದ ತದ್ವಿಜಿಜ್ಞಾಸಸ್ವ ಎಂದು ಉಪದೇಶಿಸಿರುವರು. ಶ್ರುತವಾದುದಕ್ಕೆ ಪುನಃಪುನಃ ಆಲೋಚನರೂಪ ಮನನದಿಂದ ಅಪರೋಕ್ಷ ತತ್ವರೂಪವಾದ ಲಿಂಗದರ್ಶನವೂ ನಿತ್ಯಶಃ ಶ್ರವಣಂ ಚ ಎನ್ನುವ ಸ್ಮೃತಿಯೂ ಶ್ರವಣ ಮನನ ಧ್ಯಾನಗಳನ್ನು ಆವೃತ್ತಿ ಮಾಡಬೇಕೆನ್ನುವುದಕ್ಕೆ ಕಲ್ಪಕವು. ॥ ಅಧಿ. ೧ ॥

### ಆವೃತ್ತ್ಯಧಿಕರಣವು ಸಮಾಪ್ತವಾಯಿತು.

## ೨ ಆತ್ಮಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಆತ್ಮತ್ವೋಪಾಸನವನ್ನು ನಿತ್ಯದಲ್ಲಿಯೂ ಮಾಡಬೇಕೆಂದು ಸಮರ್ಥಿಸುತ್ತಾರೆ. ಆತ್ಮತ್ವವು ಸರ್ವಥಾ ಸದಾ ಉಪಾಸ್ಯವಲ್ಲ. ಶ್ರೀಹರಿಗೆ ಜಗತ್ಸ್ವಾಮಿತ್ವವು ಯಾವಾಗಲೂ ಅತಿಪ್ರಸಿದ್ಧವಾಗಿದೆ. ಅದೇವೇ ಆತ್ಮತ್ವ ಶಬ್ದಾರ್ಥವು ಯಾವಾಗಲೂ

ಅತಿಪ್ರಸಿದ್ಧವಾದುದನ್ನು ಉಪಾಸನ ಮಾಡುವುದು ವ್ಯರ್ಥವೇ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತಿಕಲಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ॥ ೩ ॥

ಸೂತ್ರಾರ್ಥ ॥ ವಿಷ್ಣುವು ನನ್ನ ಸ್ವಾಮಿಯು ಎಂದೇ ಸಜ್ಜನರು ಉಪಾಸನಾಮಾಡುತ್ತಾರೆ. ತಿಳಿಯುತ್ತಾರೆ. ಹೀಗೆಯೇ ಶಿಷ್ಯರಿಗೆ ಉಪದೇಶವನ್ನು ಕೊಡುತ್ತಾರೆ. ಆದಪ್ರಯುಕ್ತ ಶ್ರೀಹರಿಯು ನನ್ನ ಸ್ವಾಮಿಯು ಎಂದು ಸದಾ ಉಪಾಸನವನ್ನು ಸರ್ವಥಾ ಮಾಡಲೇಬೇಕು.

**ಭಾಷ್ಯ ॥ (೧) ಆತ್ಮೇತ್ಯುಪದೇಶ ಉಪಾಸನಂ ಚ ಮೋಕ್ಷಾರ್ಥಿಭಿಃ ಸರ್ವಥಾ ಕಾರ್ಯಮೇವ। (೨) ನಾನ್ಯಂ ವಿಚಿಂತಯ ಆತ್ಮಾನಮೇವಾಹಂ ವಿಜಾನೀಯಾಮಾತ್ಮಾನಮುಪಾಸ ಆತ್ಮಾ ಹಿ ಮಮೈಷ ಭವತಿ। ಇತಿ ಹ್ಯುಪಗಚ್ಛಂತಿ ಚ (೩) ಆತ್ಮೇತ್ಯೇವೋಪಾಸ್ವ ಆತ್ಮೇತ್ಯೇವ ವಿಜಾನೀಹಿ ನಾನ್ಯಂ ಕಂಚನ ವಿಜಾನಥ ಆತ್ಮಾ ಹ್ಯೇವೈಷ (ಹ್ಯೇಷ) ಭವತಿ। ಇತಿ ಗ್ರಾಹಯಂತಿ ಚ ॥ ೧ ॥**

ಭಾಷ್ಯಾರ್ಥ ॥ (೧) ವಿಷ್ಣುವು ನನಗೆ ಸ್ವಾಮಿಯು ಎನ್ನುವ ಉಪಾಸನವು ಸರ್ವಥಾ ಸದಾ ಮೋಕ್ಷೇಚ್ಛುಗಳಿಂದ ಮಾಡಲೇಬೇಕು. (ಉಪಾಸನವು ಮಾಡದಿದ್ದರೆ ಮೋಕ್ಷವು ಸಿದ್ಧಿಸಲಾರದು.) (ಹಾಗೆ ಉಪಾಸನವು ಮಾತ್ರ ಆವಶ್ಯಕವೆಂದಲ್ಲ ಮತ್ತೆ ಹಾಗೆ ಉಪದೇಶವೂ ಮೋಕ್ಷೇಚ್ಛುಗಳಿಂದ ಮಾಡತಕ್ಕುದೇ. (ಅದು ಇಲ್ಲವಾದರೂ ಮೋಕ್ಷವು ಸಿದ್ಧಿಸಲಾರದು.) (೨) ವಿಷ್ಣುವಿನಿಂದ ಭಿನ್ನನಾದ ದೇವತೆಯನ್ನು ಸ್ವಾಮಿಯೆಂದೂ ತಿಳಿಯಲಾರೆ. ವಿಷ್ಣುವನ್ನೇ ನಾನು ಸ್ವಾಮಿಯನ್ನಾಗಿ ತಿಳಿಯುವೆನು. ಆ ಶ್ರೀಹರಿಯನ್ನೇ ಸ್ವಾಮಿಯನ್ನಾಗಿ ಉಪಾಸನಾಮಾಡುತ್ತೇನೆ. (ಇಲ್ಲಿ ಅವಿದ್ಯಮಾನವಾದ ಉಪಾಸನೆಯು ಅಲ್ಲ) ಏಕೆಂದರೆ ಈ ಶ್ರೀಹರಿಯು ನನಗೆ ಸ್ವಾಮಿಯು ಆಗಿಯೇ ಆಗುತ್ತಾನೆ. ಹೀಗೆ ಉಪಾಸನಾಮಾಡುತ್ತಾರೆ. (೩) ವಿಷ್ಣುವೇ ಸ್ವಾಮಿಯು ಎಂದು ಉಪಾಸನಾಮಾಡು. ಅವನೇ ಸ್ವಾಮಿಯೆಂದು ತಿಳಿ. ವಿಷ್ಣುವಿನಿಂದ ಇತರವಾದ ಯಾವ ದೇವತೆಯನ್ನೂ ಸರ್ವಸ್ವಾಮಿಯೆಂದು ತಿಳಿಯಬೇಡ. (ಈ ಸರ್ವಸ್ವಾಮಿತ್ವವು ವಿಷ್ಣುವಿನಲ್ಲಿ ಅವಿದ್ಯಮಾನವಾದ ಉಪದೇಶವಲ್ಲ) ಏಕೆಂದರೆ ಶ್ರೀಹರಿಯು ನನಗೆ ಸ್ವಾಮಿಯು ಆಗಿಯೇ ಆಗುತ್ತಾನೆ ಎಂದು ಉಪದೇಶ ಕೊಡುತ್ತಾರೆ. (ಹೀಗೆ ಆತ್ಮತ್ವವು ಸರ್ವಥಾ ಉಪಾಸ್ಯವು ಉಪದೇಶ್ಯವೂ ಎನ್ನುವುದು ಈ ಶ್ರುತಿಗಳಿಂದ ಸಿದ್ಧಿಸುವುದು.)

ಪೀಠಿಕೆ ॥ ಆತ್ಮತ್ವೋಪಾಸನವು ಮುಕ್ತಿಗೆ ಕಾರಣವಾದುದರಿಂದ ಅದನ್ನು ಸರ್ವಥಾ ಮಾಡಬೇಕು ಎನ್ನುವುದು ಯಾವದರಿಂದ ಎಂದರೆ—

**ಭಾಷ್ಯ ॥ (೧) ಆತ್ಮೇತ್ಯುಪಾಸನಂ ಕಾರ್ಯಂ ಸರ್ವಥೈವ ಮುಮುಕ್ಷುಭಿಃ । ನಾನಾಕ್ಲೇಶಮಾಯುಕ್ತೋಽಪ್ಯೇತಾವನ್ನೈವ ವಿಸ್ಮರೇತ್ ॥ ಇತಿ ಭವಿಷ್ಯತ್ಪರ್ವಣಿ ॥ (೨) ಆತ್ಮಾ ವಿಷ್ಣುರಿತಿ ಧ್ಯಾನಂ ವಿಶೇಷವಿಶೇಷತಃ। ಸರ್ವೇಷಾಂ ಚ ಮುಮುಕ್ಷೂಣಾಮುಪದೇಶಶ್ಚ ತಾದೃಶಃ॥ ಕರ್ತವ್ಯೋ ನಾಸ್ಯ ಹಾನೇನ**

**ಕಸ್ಯಚಿನ್ಮೋಕ್ಷ ಇಷ್ಯತೇ । ಇತಿ ಬ್ರಾಹ್ಮೇ ॥ ೩ ॥ ಅಧಿ. ೨ ॥ ॥ ೨ ॥**

**ಭಾಷ್ಯಾರ್ಥ** ॥ (೧) ವಿಷ್ಣುವು ಸ್ವಾಮಿಯು ಎನ್ನುವ ಉಪಾಸನವನ್ನು ಸರ್ವಪ್ರಕಾರದಿಂದಲೂ ಯಾವಚ್ಛಕ್ತಿ ಯಾವಾಗಲೂ ಮೋಕ್ಷೇಚ್ಛುಗಳಿಂದ ಮಾಡಲೇಬೇಕು. ಬಹುವಿಧ ಕ್ಲೇಶಗಳಿಂದ ಕೂಡಿದವನಾದಾಗ್ಯೂ ಆತ್ಮತ್ವ ಮಾತ್ರವನ್ನು ಮರೆಯಬಾರದು, ಎಂದು ಭವಿಷ್ಯತ್ಪರ್ವದಲ್ಲಿ ಹೇಳಿಯದೆ. (೨) (ವಿಷ್ಣುವನ್ನು ಆತ್ಮಾ ಜೀವನೆಂದು ಅಂದರೆ ವಿಷ್ಣುವು ಜೀವಾಭಿನ್ನನೆಂದು ಉಪಾಸನಾ ಮಾಡಬೇಕು. ಏಕೆಂದರೆ, **ಅಹಂ ಬ್ರಹ್ಮಾಸ್ಮಿ** ಎಂದು ತಿಳಿಯುತ್ತಾರೆ. **ತತ್ತ್ವಮಸಿ** ಇತ್ಯಾದಿಗಳಿಂದ ಶಿಷ್ಯರಿಗೆ ಉಪದೇಶವನ್ನು ಕೊಡುತ್ತಾರೆ. ಹೀಗೆ ಜೀವಬ್ರಹ್ಮಾಭೇದೋಪದೇಶವು ಈ ಅಧಿಕರಣ ಪ್ರತಿಪಾದ್ಯವು ಎಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವೆನ್ನುತ್ತಾರೆ.) ಎಲ್ಲಾ ಮುಮುಕ್ಷುಗಳಿಂದಲೂ ವಿಷ್ಣುವು ಸ್ವಾಮಿಯು ಎಂದು ವಿಶೇಷಣವಿಶೇಷ್ಯಭಾವದಿಂದಲೇ ಧ್ಯಾನವನ್ನು ಮಾಡಬೇಕು. (ವಿಷ್ಣುವಿಗೆ ಜೀವತ್ವವನ್ನು ವಿಧಾನ ಮಾಡಿ ಧ್ಯಾನಮಾಡಬಾರದು. ವಿಷ್ಣುವು ಸ್ವಾಮಿಯೆಂದು ಧ್ಯಾನಮಾತ್ರ ಮಾಡುವುದಲ್ಲ, ಮತ್ತೆ ಅಂತಹ ಉಪದೇಶವನ್ನು ಮಾಡಬೇಕು. ಇಂತಹ ಧ್ಯಾನದ ಮತ್ತು ಉಪದೇಶದ ಪರಿತ್ಯಾಗದಿಂದ ಅಂದರೆ, ಈ ಉಪಾಸನವನ್ನು ಮಾಡದಿದ್ದರೆ) ಯಾರಿಗೂ ಮೋಕ್ಷವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುವುದಿಲ್ಲ. ಹೀಗೆ ಬ್ರಾಹ್ಮಪುರಾಣದಲ್ಲಿ ಅದ್ವೈತಿಗಳು ಹೇಳಿದ ಜೀವಭೇದದಿಂದ ಉಪಾಸನಾ ಮಾಡಬೇಕೆನ್ನುವ ಅರ್ಥಾಂತರವು ದೂಷಿತವಾಗಿದೆ. ॥ ೩. ॥ ॥ ೨ ॥

## ಅಧಿಕರಣ ಸಾರಾಂಶ

ಆತ್ಮತ್ವೋಪಾಸನ ಉಪದೇಶಗಳು ನಿತ್ಯದಲ್ಲಿ ಮಾಡಬಾರದೋ, ಅಥವಾ ಮಾಡಬೇಕೋ, ಅದಕ್ಕಾಗಿ ಆತ್ಮತ್ವರೂಪ ಸ್ವಾಮಿತ್ವಕ್ಕೆ ಅತ್ಯಂತ ಪ್ರಸಿದ್ಧಿಯು ಆ ಉಪಾಸನಾದಿಗಳಿಗೆ ಪ್ರತಿಬಂಧವಾಗುತ್ತದೋ ಇಲ್ಲವೋ, ಎಂದು ಸಂದೇಹವು. ಆತ್ಮತ್ವಧ್ಯಾನ ಉಪದೇಶಗಳು ನಿತ್ಯದಲ್ಲಿ ಮಾಡಬಾರದು. ಸ್ವಾಮಿತ್ವರೂಪವಾದ ಆತ್ಮತ್ವವು ನಿತ್ಯದಲ್ಲಿಯೂ ಪ್ರಸಿದ್ಧವೇ ಆಗಿದೆ. ಸುಪ್ರಸಿದ್ಧವಾದುದು ನಿತ್ಯದಲ್ಲಿಯೂ ಸರ್ವರ ಮನಸ್ಸಿನಲ್ಲಿ ಇದ್ದುದರಿಂದ ಅವುಗಳ ಧ್ಯಾನ ಉಪದೇಶಗಳೇ ವ್ಯರ್ಥವಾಗು ವುವು. ಅಪ್ರಸಿದ್ಧವಾದುದೇ ಉಪದೇಶಾದಿಗಳಲ್ಲಿ ಪ್ರಯೋಜಕವು. ಸುಪ್ರಸಿದ್ಧವಾದುದನ್ನು ಅವಶ್ಯವಾಗಿ ಧ್ಯಾನಿಸಬೇಕು. ಉಪದೇಶ ಮಾಡಬೇಕು ಎನ್ನುವ ಕಲ್ಪಕವಿಲ್ಲ, ಎಂದು ಪೂರ್ವಪಕ್ಷವು ಬಂದರೆ **ಆತ್ಮೇತ್ಯುಪಾಸನಂ ಕಾರ್ಯಂ** ಇತ್ಯಾದಿ ಪ್ರಮಾಣಗಳಿಂದ ಶ್ರೀಹರಿಯು ಸ್ವಾಮಿಯು ಎನ್ನುವ ಉಪಾಸನ ಉಪದೇಶಗಳು ಮೋಕ್ಷಕ್ಕೆ ಹೇತುಗಳೆಂದು ತಿಳಿಯುವುದರಿಂದ ನಿತ್ಯದಲ್ಲಿಯೂ ಸರ್ವಥಾ ಆತ್ಮತ್ವ ಉಪಾಸನ ಉಪದೇಶಗಳನ್ನು ಮಾಡಲೇಬೇಕು. ॥ ಅಧಿ. ೨ ॥

**ಆತ್ಮತ್ವಾಧಿಕರಣವು ಸಮಾಪ್ತವಾಯಿತು.**

# ೩ ನ ಪ್ರತೀಕಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ವಿಷ್ಣುವಿಗೆ ಪ್ರತೀಕಾಭೇದದಿಂದ ಐಕ್ಯೋಪಾಸನವನ್ನು ಜ್ಞಾನಾರ್ಥಿಯು ಸರ್ವಥಾ ಮಾಡಬಾರದೆಂದು ಪ್ರತಿಪಾದಿಸುತ್ತಾರೆ. ನಾಮಬ್ರಹ್ಮ ಎನ್ನುವ ಶ್ರುತಿಯಿಂದ

ಶ್ರೀಹರಿಯ ಪ್ರತಿಮಾರೂಪವಾದ ನಾಮ ವಾಗಾದಿಗಳನ್ನು ಬ್ರಹ್ಮನಿಂದ ಅಭಿನ್ನವೆಂದು ಉಪಾಸನಾಮಾಡಬೇಕು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನ ಪ್ರತೀಕೇ ನ ಹಿ ಸಃ ಓಂ ॥ ೪ ॥

**ಸೂತ್ರಾರ್ಥ ॥** ನಾಮ ಬ್ರಹ್ಮೇತ್ಯುಪಾಸೀತ ಇತ್ಯಾದಿಗಳಲ್ಲಿ ಶ್ರುತವಾದ ನಾಮ ಮೊದಲಾದ ಪ್ರತೀಕದಲ್ಲಿ ಆತ್ಮಾ ಎಂದು ಉಪಾಸನಾಮಾಡಬಾರದು. ನಾಮಾದಿಗಳನ್ನು ಬ್ರಹ್ಮ ಎಂದು ಉಪಾಸನಾಮಾಡಬಾರದು. ಏಕೆಂದರೆ ಪ್ರಸ್ತುತನಾದ ವಿಷ್ಣುವು ಪ್ರತೀಕಾಭಿನ್ನವಲ್ಲ. (ಆದಕಾರಣ ವಿಷ್ಣು ಪ್ರತೀಕಗಳಿಗೆ ಐಕ್ಯವು ಇಲ್ಲದಿರುವುದರಿಂದ ಹಾಗೆ ಉಪಾಸನವನ್ನು ಮಾಡಕೂಡದು. ಮಿಥ್ಯೋಪಾಸನೆಯು ಅನರ್ಥಕಾರಿಯು) ಮತ್ತೆ ಪ್ರತಿಮಾರೂಪವಾದ ನಾಮಾದಿಗಳಲ್ಲಿ ಆತ್ಮನು ಇದ್ದಾನೆ ಎಂದು ಉಪಾಸನೆಯನ್ನು ಮಾಡಬೇಕು.

**ಭಾಷ್ಯ ॥ ★ನಾಮ ಬ್ರಹ್ಮೇತ್ಯುಪಾಸ್ತೇ (ಛಾ.೭.೧.೫) ಇತ್ಯಾದಿನಾ ಶಬ್ದಭ್ರಾಂತ್ಯಾ ನ ಪ್ರತೀಕೇ ಬ್ರಹ್ಮದೃಷ್ಟಿಃ ಕಾರ್ಯಾ । ಕಿಂತು ತತ್ರತ್ವೇನೈವೋಪಾಸನಂ ಕಾರ್ಯಂ ॥ ೧ ॥**

**ಭಾಷ್ಯಾರ್ಥ ॥** ನಾಮ ಬ್ರಹ್ಮೇತ್ಯುಪಾಸ್ತೇ ಇತ್ಯಾದಿಗಳಲ್ಲಿ ನಾಮ ಬ್ರಹ್ಮ ಇತ್ಯಾದಿ ವಾಕ್ಯದಿಂದ ಏಕವಿಭಕ್ತಿಕತ್ವರೂಪವಾದ ಸಾಮಾನಾಧಿಕರಣ್ಯ ಬಲದಿಂದುಂಟಾದ ಶಬ್ದವಿಷಯಕ ಭ್ರಾಂತಿಯಿಂದ (ಅಂದರೆ ಈ ವಾಕ್ಯದಲ್ಲಿ ಐಕ್ಯೋಪಾಸನೆಯು ವಿಧಿಸಲ್ಪಡುತ್ತದೆ ಎನ್ನುವ ಭ್ರಾಂತಿಯಿಂದ) ನಾಮವಾಕ್ ಮನಃ ಸಂಕಲ್ಪಾದಿ ಶಬ್ದ ಬೋಧ್ಯವಾದ ಉಷಾ ಸ್ವಾಹಾ ಪರ್ಜನ್ಯ ಮಿತ್ರಾದಿರೂಪ ದೇವತಾರೂಪ ಪ್ರತಿಮಾವಿಷಯದಲ್ಲಿ ಬ್ರಹ್ಮತ್ವೋಪಾಸನೆಯನ್ನು ಮಾಡಬೇಕೆಂದು ಯಾವುದು ಪೂರ್ವಪಕ್ಷಿಯಿಂದ ಉಕ್ತವಾಗಿಯದೋ ಅದು ಯುಕ್ತವಲ್ಲ. (ಹೀಗೆ ಅಭೇದೋಪಾಸನವು ಯುಕ್ತವಲ್ಲವಾದರೆ ಹೇಗೆ ಉಪಾಸನಾಮಾಡಬೇಕೆಂದರೆ) ಮತ್ತೆ ಪ್ರತೀಕದಲ್ಲಿ ಇದ್ದಾನೆಂದೇ ಉಪಾಸನವನ್ನು ಮಾಡಬೇಕು.

**ಪೀಠಿಕೆ ॥** ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಬ್ರಹ್ಮತರ್ಕೇ ಚ । ನಾಮಾದಿಪ್ರಾಣಪರ್ಯಂತಮು(ಉ)ಭಯೋಃ ಪ್ರಥಮಾತ್ವತಃ ಐಕ್ಯದೃಷ್ಟಿರಿತಿ ಭ್ರಾಂತಿರಬುಧಾ (ದ್ಧಾ) ನಾಂ ಭವಿಷ್ಯತಿ ॥ ನಾಮಾದಿಸ್ಥಿತಿ ರೇವಾತ್ರ ಬ್ರಹ್ಮಣೋ ಹಿ ವಿಧೀಯತೇ । ಸರ್ವಾರ್ಥಾ ಪ್ರಥಮಾ ಯಸ್ಮಾತ್ಸಪ್ತಮ್ಯರ್ಥಾ ತತೋ ಮತಾ ॥ ಇತಿ ॥ ೪ ॥ ಅಧಿ. ೩ ॥ ॥ ೨ ॥**

**ಭಾಷ್ಯಾರ್ಥ ॥** ನಾಮ ಶಬ್ದವನ್ನು ಆರಂಭಿಸಿ (ಅಂದರೆ ವಾಕ್ ಮನಃ ಸಂಕಲ್ಪ ಚಿತ್ತ ಧ್ಯಾನ

---

★ ಪ್ರಸಿದ್ಧನಾದ ಯಾವ ಅಧಿಕಾರಿಯು, ನಾಮ=ಉಪಾರೂಪವಾದ ಪ್ರತೀಕವನ್ನು ಬ್ರಹ್ಮ ಎಂದು ಉಪಾಸನಾ ಮಾಡುತ್ತಾನೋ, ಈ ಅಧಿಕಾರಿಗೆ ನಾಮಕ್ಕೆ ಎಷ್ಟು ವ್ಯಾಪ್ತಿಸ್ಥಾನವು ಇವೆಯೋ, ಅಲ್ಲಿ ಯಥೇಷ್ಟ ಸಂಚಾರಿಯಾಗಿರುತ್ತಾನೆ. ಪೂರ್ವಪಕ್ಷರೀತ್ಯಾ ಶ್ರುತ್ಯರ್ಥವು. ನಾಮದಲ್ಲಿ ಬ್ರಹ್ಮನು ಇದ್ದಾನೆಂದು ಉಪಾಸನೆ ಮಾಡಬೇಕು, ಎಂದು ಸಿದ್ಧಾಂತರೀತ್ಯಾ ಶ್ರುತ್ಯರ್ಥವು.

**ಕಸ್ಯಚಿನ್ಮೋಕ್ಷ ಇಷ್ಯತೇ । ಇತಿ ಬ್ರಾಹ್ಮೇ ॥ ೩ ॥ ಅಧಿ. ೨ ॥ ॥ ೨ ॥**

ಭಾಷ್ಯಾರ್ಥ ॥ (೧) ವಿಷ್ಣುವು ಸ್ವಾಮಿಯು ಎನ್ನುವ ಉಪಾಸನವನ್ನು ಸರ್ವಪ್ರಕಾರದಿಂದಲೂ ಯಾವಚ್ಛಕ್ತಿ ಯಾವಾಗಲೂ ಮೋಕ್ಷೇಚ್ಛುಗಳಿಂದ ಮಾಡಲೇಬೇಕು. ಬಹುವಿಧ ಕ್ಲೇಶಗಳಿಂದ ಕೂಡಿದವನಾದಾಗ್ಯೂ ಆತ್ಮತ್ವ ಮಾತ್ರವನ್ನು ಮರೆಯಬಾರದು, ಎಂದು ಭವಿಷ್ಯತ್ಪರ್ವದಲ್ಲಿ ಹೇಳಿಯದೆ. (೨) (ವಿಷ್ಣುವನ್ನು ಆತ್ಮಾ ಜೀವನೆಂದು ಅಂದರೆ ವಿಷ್ಣುವು ಜೀವಾಭಿನ್ನನೆಂದು ಉಪಾಸನಾ ಮಾಡಬೇಕು. ಏಕೆಂದರೆ, ಅಹಂ ಬ್ರಹ್ಮಾಸ್ಮಿ ಎಂದು ತಿಳಿಯುತ್ತಾರೆ. ತತ್ತ್ವಮಸಿ ಇತ್ಯಾದಿಗಳಿಂದ ಶಿಷ್ಯರಿಗೆ ಉಪದೇಶವನ್ನು ಕೊಡುತ್ತಾರೆ. ಹೀಗೆ ಜೀವಬ್ರಹ್ಮಾಭೇದೋಪದೇಶವು ಈ ಅಧಿಕರಣ ಪ್ರತಿಪಾದ್ಯವು ಎಂದು ಮಾಯಾವಾದಿಗಳು ಹೇಳುತ್ತಾರೆ. ಅದು ಅಯುಕ್ತವೆನ್ನುತ್ತಾರೆ.) ಎಲ್ಲಾ ಮುಮುಕ್ಷುಗಳಿಂದಲೂ ವಿಷ್ಣುವು ಸ್ವಾಮಿಯು ಎಂದು ವಿಶೇಷಣವಿಶೇಷ್ಯಭಾವದಿಂದಲೇ ಧ್ಯಾನವನ್ನು ಮಾಡಬೇಕು. (ವಿಷ್ಣುವಿಗೆ ಜೀವತ್ವವನ್ನು ವಿಧಾನ ಮಾಡಿ ಧ್ಯಾನಮಾಡಬಾರದು. ವಿಷ್ಣುವು ಸ್ವಾಮಿಯೆಂದು ಧ್ಯಾನಮಾತ್ರ ಮಾಡುವುದಲ್ಲ, ಮತ್ತೆ ಅಂತಹ ಉಪದೇಶವನ್ನು ಮಾಡಬೇಕು. ಇಂತಹ ಧ್ಯಾನದ ಮತ್ತು ಉಪದೇಶದ ಪರಿತ್ಯಾಗದಿಂದ ಅಂದರೆ, ಈ ಉಪಾಸನವನ್ನು ಮಾಡದಿದ್ದರೆ) ಯಾರಿಗೂ ಮೋಕ್ಷವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುವುದಿಲ್ಲ. ಹೀಗೆ ಬ್ರಾಹ್ಮಪುರಾಣದಲ್ಲಿ ಅದ್ವೈತಿಗಳು ಹೇಳಿದ ಜೀವಭೇದದಿಂದ ಉಪಾಸನಾ ಮಾಡಬೇಕೆನ್ನುವ ಅರ್ಥಾಂತರವು ದೂಷಿತವಾಗಿದೆ. ॥ ೩. ॥ ॥ ೨ ॥

## ಅಧಿಕರಣ ಸಾರಾಂಶ

ಆತ್ಮತ್ವೋಪಾಸನ ಉಪದೇಶಗಳು ನಿತ್ಯದಲ್ಲಿ ಮಾಡಬಾರದೋ, ಅಥವಾ ಮಾಡಬೇಕೋ, ಅದಕ್ಕಾಗಿ ಆತ್ಮತ್ವರೂಪ ಸ್ವಾಮಿತ್ವಕ್ಕೆ ಅತ್ಯಂತ ಪ್ರಸಿದ್ಧಿಯು ಆ ಉಪಾಸನಾದಿಗಳಿಗೆ ಪ್ರತಿಬಂಧವಾಗುತ್ತದೋ ಇಲ್ಲವೋ, ಎಂದು ಸಂದೇಹವು. ಆತ್ಮತ್ವಧ್ಯಾನ ಉಪದೇಶಗಳು ನಿತ್ಯದಲ್ಲಿ ಮಾಡಬಾರದು. ಸ್ವಾಮಿತ್ವರೂಪವಾದ ಆತ್ಮತ್ವವು ನಿತ್ಯದಲ್ಲಿಯೂ ಪ್ರಸಿದ್ಧವೇ ಆಗಿದೆ. ಸುಪ್ರಸಿದ್ಧವಾದುದು ನಿತ್ಯದಲ್ಲಿಯೂ ಸರ್ವರ ಮನಸ್ಸಿನಲ್ಲಿ ಇದ್ದುದರಿಂದ ಅವುಗಳ ಧ್ಯಾನ ಉಪದೇಶಗಳೇ ವ್ಯರ್ಥವಾಗು ವುವು. ಅಪ್ರಸಿದ್ಧವಾದುದೇ ಉಪದೇಶಾದಿಗಳಲ್ಲಿ ಪ್ರಯೋಜಕವು. ಸುಪ್ರಸಿದ್ಧವಾದುದನ್ನು ಅವಶ್ಯವಾಗಿ ಧ್ಯಾನಿಸಬೇಕು. ಉಪದೇಶ ಮಾಡಬೇಕು ಎನ್ನುವ ಕಲ್ಪಕವಿಲ್ಲ ಎಂದು ಪೂರ್ವಪಕ್ಷವು ಬಂದರೆ ಆತ್ಮೇತ್ಯುಪಾಸನಂ ಕಾರ್ಯಂ ಇತ್ಯಾದಿ ಪ್ರಮಾಣಗಳಿಂದ ಶ್ರೀಹರಿಯು ಸ್ವಾಮಿಯು ಎನ್ನುವ ಉಪಾಸನ ಉಪದೇಶಗಳು ಮೋಕ್ಷಕ್ಕೆ ಹೇತುಗಳೆಂದು ತಿಳಿಯುವುದರಿಂದ ನಿತ್ಯದಲ್ಲಿಯೂ ಸರ್ವಥಾ ಆತ್ಮತ್ವ ಉಪಾಸನ ಉಪದೇಶಗಳನ್ನು ಮಾಡಲೇಬೇಕು. ॥ ಅಧಿ. ೨ ॥

ಆತ್ಮತ್ವಾಧಿಕರಣವು ಸಮಾಪ್ತವಾಯಿತು.

# ೩ ನ ಪ್ರತೀಕಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ವಿಷ್ಣುವಿಗೆ ಪ್ರತೀಕಾಭೇದದಿಂದ ಐಕ್ಯೋಪಾಸನವನ್ನು ಜ್ಞಾನಾರ್ಥಿಯು ಸರ್ವಥಾ ಮಾಡಬಾರದೆಂದು ಪ್ರತಿಪಾದಿಸುತ್ತಾರೆ. ನಾಮಬ್ರಹ್ಮ ಎನ್ನುವ ಶ್ರುತಿಯಿಂದ

ಶ್ರೀಹರಿಯ ಪ್ರತಿಮಾರೂಪವಾದ ನಾಮ ವಾಗಾದಿಗಳನ್ನು ಬ್ರಹ್ಮನಿಂದ ಅಭಿನ್ನವೆಂದು ಉಪಾಸನಾಮಾಡಬೇಕು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನ ಪ್ರತೀಕೇ ನ ಹಿ ಸಃ ಓಂ ॥ ೪ ॥

ಸೂತ್ರಾರ್ಥ ॥ ನಾಮ ಬ್ರಹ್ಮೇತ್ಯುಪಾಸೀತ ಇತ್ಯಾದಿಗಳಲ್ಲಿ ಶ್ರುತವಾದ ನಾಮ ಮೊದಲಾದ ಪ್ರತೀಕದಲ್ಲಿ ಆತ್ಮಾ ಎಂದು ಉಪಾಸನಾಮಾಡಬಾರದು. ನಾಮಾದಿಗಳನ್ನು ಬ್ರಹ್ಮ ಎಂದು ಉಪಾಸನಾಮಾಡಬಾರದು. ಏಕೆಂದರೆ ಪ್ರಸ್ತುತನಾದ ವಿಷ್ಣುವು ಪ್ರತೀಕಾಭಿನ್ನನಲ್ಲ. (ಆದಕಾರಣ ವಿಷ್ಣು ಪ್ರತೀಕಗಳಿಗೆ ಐಕ್ಯವು ಇಲ್ಲದಿರುವುದರಿಂದ ಹಾಗೆ ಉಪಾಸನವನ್ನು ಮಾಡಕೂಡದು. ಮಿಥ್ಯೋಪಾಸನೆಯು ಅನರ್ಥಕಾರಿಯು) ಮತ್ತೆ ಪ್ರತಿಮಾರೂಪವಾದ ನಾಮಾದಿಗಳಲ್ಲಿ ಆತ್ಮನು ಇದ್ದಾನೆ ಎಂದು ಉಪಾಸನೆಯನ್ನು ಮಾಡಬೇಕು.

**ಭಾಷ್ಯ ॥ ★ನಾಮ ಬ್ರಹ್ಮೇತ್ಯುಪಾಸ್ತೇ (ಛಾ.೭.೧.೫) ಇತ್ಯಾದಿನಾ ಶಬ್ದಭ್ರಾಂತ್ಯಾ ನ ಪ್ರತೀಕೇ ಬ್ರಹ್ಮದೃಷ್ಟಿಃ ಕಾರ್ಯಾ । ಕಿಂತು ತತ್ರಸ್ಥತ್ವೇನೈವೋಪಾಸನಂ ಕಾರ್ಯಂ ॥ ೧ ॥**

ಭಾಷ್ಯಾರ್ಥ ॥ ನಾಮ ಬ್ರಹ್ಮೇತ್ಯುಪಾಸ್ತೇ ಇತ್ಯಾದಿಗಳಲ್ಲಿ ನಾಮ ಬ್ರಹ್ಮ ಇತ್ಯಾದಿ ವಾಕ್ಯದಿಂದ ಏಕವಿಭಕ್ತಿಕತ್ವರೂಪವಾದ ಸಾಮಾನಾಧಿಕರಣ್ಯ ಬಲದಿಂದುಂಟಾದ ಶಬ್ದವಿಷಯಕ ಭ್ರಾಂತಿಯಿಂದ (ಅಂದರೆ ಈ ವಾಕ್ಯದಲ್ಲಿ ಐಕ್ಯೋಪಾಸನೆಯು ವಿಧಿಸಲ್ಪಡುತ್ತದೆ ಎನ್ನುವ ಭ್ರಾಂತಿಯಿಂದ) ನಾಮವಾಕ್ ಮನಃ ಸಂಕಲ್ಪಾದಿ ಶಬ್ದ ಬೋಧ್ಯವಾದ ಉಷಾ ಸ್ವಾಹಾ ಪರ್ಜನ್ಯ ಮಿತ್ರಾದಿರೂಪ ದೇವತಾರೂಪ ಪ್ರತಿಮಾವಿಷಯದಲ್ಲಿ ಬ್ರಹ್ಮತ್ವೋಪಾಸನೆಯನ್ನು ಮಾಡಬೇಕೆಂದು ಯಾವುದು ಪೂರ್ವಪಕ್ಷಿಯಿಂದ ಉಕ್ತವಾಗಿಯದೋ ಅದು ಯುಕ್ತವಲ್ಲ. (ಹೀಗೆ ಅಭೇದೋಪಾಸನವು ಯುಕ್ತವಲ್ಲವಾದರೆ ಹೇಗೆ ಉಪಾಸನಾಮಾಡಬೇಕೆಂದರೆ) ಮತ್ತೆ ಪ್ರತೀಕದಲ್ಲಿ ಇದ್ದಾನೆಂದೇ ಉಪಾಸನವನ್ನು ಮಾಡಬೇಕು.

ಪೀಠಿಕೆ ॥ ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾಷ್ಯ ॥ ಬ್ರಹ್ಮತರ್ಕೇ ಚ । ನಾಮಾದಿಪ್ರಾಣಪರ್ಯಂತಮು(ಉ)ಭಯೋಃ ಪ್ರಥಮಾತ್ತ್ವತಃ ಐಕ್ಯದೃಷ್ಟಿರಿತಿ ಭ್ರಾಂತಿರಬುಧಾ (ದ್ಧಾ) ನಾಂ ಭವಿಷ್ಯತಿ ॥ ನಾಮಾದಿಸ್ಥಿತಿ ರೇವಾತ್ರ ಬ್ರಹ್ಮಣೋ ಹಿ ವಿಧೀಯತೇ । ಸರ್ವಾರ್ಥಾ ಪ್ರಥಮಾ ಯಸ್ಮಾತ್ತಸ್ಮಾತ್ಸಪ್ತಮ್ಯರ್ಥಾ ತತೋ ಮತಾ ॥ ಇತಿ ॥ ೪ ॥ ಅಧಿ. ೩ ॥ ॥ ೨ ॥**

ಭಾಷ್ಯಾರ್ಥ ॥ ನಾಮ ಶಬ್ದವನ್ನು ಆರಂಭಿಸಿ (ಅಂದರೆ ವಾಕ್ ಮನಃ ಸಂಕಲ್ಪ ಚಿತ್ತ ಧ್ಯಾನ

★ ಪ್ರಸಿದ್ಧನಾದ ಯಾವ ಅಧಿಕಾರಿಯು, ನಾಮಃಉಷಾರೂಪವಾದ ಪ್ರತೀಕವನ್ನು ಬ್ರಹ್ಮ ಎಂದು ಉಪಾಸನಾ ಮಾಡುತ್ತಾನೋ, ಈ ಅಧಿಕಾರಿಗೆ ನಾಮಕ್ಕೆ ಎಷ್ಟು ವ್ಯಾಪ್ತಿಸ್ಥಾನವು ಇದೆಯೋ, ಅಲ್ಲಿ ಯಥೇಷ್ಟ ಸಂಚಾರಿಯಾಗಿರುತ್ತಾನೆ. ಪೂರ್ವಪಕ್ಷರೀತ್ಯಾ ಶ್ರುತ್ಯರ್ಥವು. ನಾಮದಲ್ಲಿ ಬ್ರಹ್ಮನು ಇದ್ದಾನೆಂದು ಉಪಾಸನೆ ಮಾಡಬೇಕು, ಎಂದು ಸಿದ್ಧಾಂತರೀತ್ಯಾ ಶ್ರುತ್ಯರ್ಥವು.

ವಿಜ್ಞಾನ ಬಲ ಅನ್ನ ಅಪ್ ತೇಜ ಆಕಾಶ ಸ್ಮರ ಆಶಾ ಶಬ್ದಗಳು ಗೃಹೀತಗಳಾಗುತ್ತವೆ.) ಪ್ರಾಣಶಬ್ದ ಪರ್ಯಂತವಾಗಿ ನಾಮಾದಿ, ಬ್ರಹ್ಮ ಈ ಪದದೊಳಗೆ ಪ್ರಥಮಾವಿಭಕ್ತ್ಯಂತತ್ವವಿದ್ದಪ್ರಯುಕ್ತ (ಅಂದರೆ ಸಾಮಾನಾಧಿಕರಣ್ಯವಿದ್ದುದರಿಂದ) ಐಕ್ಯಜ್ಞಾನವು ಇಲ್ಲಿ ಮಾಡತಕ್ಕುದು ಎನ್ನುವ ಭ್ರಾಂತಿಯು ಶ್ರುತಿತಾತ್ಪರ್ಯಪರಿಜ್ಞಾನವಿಲ್ಲದವರಿಗೆ ಆಗುತ್ತದೆ. (ಇದು ಭ್ರಾಂತಿಯು ಏಕೆ ಆಗಬೇಕು. ಯಥಾರ್ಥವು ಎಂದು ಏಕೆ ಆಗಲಾರದು. ಎಂದರೆ) ನಾಮಾದಿಗಳಲ್ಲಿ ಅವಸ್ಥಿತಿಯೇ ನಾಮ ಬ್ರಹ್ಮ ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮನಿಗೆ ಹೇಳಲ್ಪಡುತ್ತದೆ. (ನಾಮ ಎನ್ನುವ ಪ್ರಥಮಾವಿಭಕ್ತಿಗೂ **ವಾಚಂ ಪ್ರಾಣಂ** ಎನ್ನುವ ದ್ವಿತೀಯಾವಿಭಕ್ತಿಗೂ ಏನು ಗತಿಯು ಎಂದರೆ) ಯಾವ ಕಾರಣದಿಂದ ಪ್ರಥಮಾವಿಭಕ್ತಿಯು ಸರ್ವವಿಭಕ್ತ್ಯರ್ಥವುಳ್ಳದ್ದೋ ಹಾಗೆಯೇ ದ್ವಿತೀಯಾವಿಭಕ್ತಿಯು ಪ್ರಥಮಾವಿಭಕ್ತಿವ್ಯತಿರಿಕ್ತವಾದ ಸರ್ವ ವಿಭಕ್ತ್ಯರ್ಥವುಳ್ಳದ್ದೋ, ಆದುದರಿಂದ ಸಪ್ತಮೀ ವಿಭಕ್ತ್ಯರ್ಥವುಳ್ಳದ್ದು (ಅಧಿಕರಣತ್ವಾರ್ಥವುಳ್ಳದ್ದು) ಎಂದು ಸಮ್ಮತವಾಗಿದೆ. ಎಂದು ಬ್ರಹ್ಮತರ್ಕದಲ್ಲಿಯೂ ಹೇಳಿಯದೆ. ॥ ೪ ॥ ೨ ॥

## ಅಧಿಕರಣ ಸಾರಾಂಶ

ನಾಮ ಬ್ರಹ್ಮೇತ್ಯುಪಾಸ್ತೇ ವಾಚಂ ಬ್ರಹ್ಮೇತ್ಯುಪಾಸ್ತೇ ಇತ್ಯಾದಿ ರೂಪದಿಂದ ಶ್ರುತವಾದ ನಾಮ ವಾಗಾದಿ ಶಬ್ದವಾಚ್ಯರಾದ ಉಷಾ ಸ್ವಾಹಾದಿ ದೇವತೆಗಳನ್ನು ಬ್ರಹ್ಮಾಭೇದದಿಂದ ಉಪಾಸನಾ ಮಾಡಬೇಕೋ ಅಥವಾ ನಾಮಾದಿಗಳಲ್ಲಿ ಬ್ರಹ್ಮನು ಇದ್ದಾನೆ ಎಂದೋ. ಅದಕ್ಕಾಗಿ ನಾಮಬ್ರಹ್ಮ ಇತ್ಯಾದಿ ಶ್ರುತಿಯು ಐಕ್ಯಾಭಿಪ್ರಾಯವುಳ್ಳದ್ದೋ ಅಥವಾ ನಾಮ್ನಿ ಬ್ರಹ್ಮ ಎನ್ನುವ ಪ್ರಕಾರ ಅಲ್ಲಿ ಇರುತ್ತಾನೆಂದು ಅಭಿಪ್ರಾಯವುಳ್ಳದ್ದೋ ಅದಕ್ಕಾಗಿ ಮಿಥ್ಯೋಪಾಸನವೂ ಪುರುಷಾರ್ಥಕ್ಕೆ ಕಾರಣವೋ ಅಥವಾ ಸತ್ಯೋಪಾಸನವು ಪುರುಷಾರ್ಥಕ್ಕೆ ಕಾರಣವೋ ಎಂದು ಸಂದೇಹವು. ನಾಮ ಬ್ರಹ್ಮ ಎಂದು ಸಾಮಾನಾಧಿಕರಣ್ಯ ಶ್ರುತಿಯಿಂದ ನಾಮ ಬ್ರಹ್ಮ ಇವರಿಗೆ ಐಕ್ಯೋಪಾಸನವು ಶ್ರುತವಾದ ಪ್ರಯುಕ್ತ ನಾಮವಾಗಾದಿಗಳನ್ನು ಬ್ರಹ್ಮ ಎಂದು ಉಪಾಸನ ಮಾಡಬೇಕು. **ಪೃಥಗುಪದೇಶಾತ್** ಎನ್ನುವಲ್ಲಿ ಜೀವ ಬ್ರಹ್ಮಭೇದವು ಸಿದ್ಧವಾದಪ್ರಯುಕ್ತ ನಾಮಬ್ರಹ್ಮೈಕ್ಯವು ಮಿಥ್ಯಾಭೂತವೇ ಎಂದು ಹೇಳಕೂಡದು. ಪ್ರಸಿದ್ಧಿ ಅಪ್ರಸಿದ್ಧಿಗಳು ಅಪ್ರಯೋಜಕಗಳಾಗಿರುವುದರಿಂದ ಪುರುಷಾರ್ಥ ಹೇತುತ್ವವಿದ್ದುದರಿಂದ ಆತ್ಮತ್ವೋಪಾಸನವನ್ನು ಮಾಡಬೇಕೆಂದು ಹಿಂದೆ ಹೇಳಿದಂತೆ. ಉಪಾಸ್ಯವಸ್ತುವಿನಲ್ಲಿ ಸತ್ಯತ್ವ ಮಿಥ್ಯಾತ್ವಗಳು ಅಪ್ರಯೋಜಕಗಳಾಗಿರುವುದರಿಂದ **ಯಾವನ್ನಾಮ್ನೋ ಗತಂ ತತ್ರಾಸ್ಯ ಕಾಮಚಾರೋಭವತಿ** ಇತ್ಯಾದಿ ವಾಕ್ಯಶೇಷದಲ್ಲಿ ಶ್ರುತವಾದ ಕಾಮಚಾರರೂಪ ಫಲವಿದ್ದುದರಿಂದ ಹಾಗೆಯೇ ಉಪಾಸನವು ಕೂಡುವುದು ಎಂದರೆ **ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯ ಫಲತ್ವವಿಪರ್ಯಯಾಭ್ಯಾಂ** ಎನ್ನುವ ಸಾಂಕರ್ಷಣ ಸೂತ್ರದಿಂದಲೂ ಅನುವ್ಯಾಖ್ಯಾನೋಕ್ತ ಪ್ರಮಾಣಗಳಿಂದಲೂ ಮಿಥ್ಯೋಪಾಸನೆಯು ಪುರುಷಾರ್ಥಕ್ಕೆ ಹೇತುವಾಗದೆ ಇರುವುದರಿಂದ ಹಾಗೆ ಉಪಾಸನವನ್ನು ಮಾಡಬಾರದು. ಮತ್ತು ನಾಮಾದಿಪ್ರಾಣಪರ್ಯಂತಂ ಇತ್ಯಾದಿ ಸ್ಮೃತಿಬಲದಿಂದಲೂ ನಾಮದಲ್ಲಿ ಬ್ರಹ್ಮನು ಇದ್ದಾನೆಂದು ಉಪಾಸನವನ್ನು ಮಾಡಬೇಕು. ಐಕ್ಯೋಪಾಸನವನ್ನು ಮಾಡಬಾರದು. ॥ ಅಧಿ.೩ ॥

ನ ಪ್ರತೀಕಾಧಿಕರಣವು ಸಮಾಪ್ತವಾಯಿತು.

# ೪ ಬ್ರಹ್ಮಾಧಿಕರಣವು

ಪೀಠಿಕೆ ॥ ಬ್ರಹ್ಮತ್ವೋಪಾಸನವು ಆವಶ್ಯಕವೆಂದು ಸಮರ್ಥಿಸುತ್ತಾರೆ. ಬ್ರಹ್ಮತ್ವವನ್ನು ಸರ್ವದಾ ಸರ್ವಥಾ ಉಪಾಸನಮಾಡಕೂಡದು. ಹಿಂದೆ ಹೇಳಿದ ಅನೇಕ ವಿಧ ಗುಣೋಪಸಂಹಾರದಿಂದಲೇ ಶ್ರೀಹರಿಯ ಪ್ರಸಾದವು ಉಂಟಾಗಬಹುದು. ಶ್ರೀಹರಿಯ ಪ್ರಸಾದದಿಂದ ಅತಿರಿಕ್ತವಾದ ಪ್ರಯೋಜನವು ಕಾಣುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ॥ ೫ ॥

ಸೂತ್ರಾರ್ಥ ॥ ಆತ್ಮನಲ್ಲಿ ಬ್ರಹ್ಮತ್ವೋಪಾಸನವು ಗುಣಪರಿಪೂರ್ಣತ್ವೋಪಾಸನವು ಸರ್ವಥಾ ಕಾರ್ಯವೇ. ಸರ್ವಗುಣಪರಿಪೂರ್ಣತ್ವರೂಪವಾದ ಉತ್ಕರ್ಷಕ್ಕೆ ಬ್ರಹ್ಮಪದ ನಿವೃತ್ತಿನಿಮಿತ್ತತ್ವವಿದ್ದ ಪ್ರಯುಕ್ತ (ಹಾಗೆ ಉಪಾಸನವೇ ಶ್ರೀಹರಿಯ ಪ್ರೀತಿಗೆ ಕಾರಣವಾಗಿದೆ.)

**ಭಾಷ್ಯ ॥ (೧) ಬ್ರಹ್ಮದೃಷ್ಟಿಃ ಸರ್ವಥಾ ಕಾರ್ಯೈವ ಪರಮೇಶ್ವರೇ । ಉತ್ಕೃಷ್ಟತ್ವಾತ್ । (೨) ಬ್ರಹ್ಮದೃಷ್ಟ್ಯಾ ಸದೋಪಾಸ್ಯೋ ವಿಷ್ಣುಃ ಸರ್ವೈರಪಿ ಧ್ರುವಂ । ಮಹತ್ತ್ವವಾಚೀ ಶಬ್ದೋಽಯಂ ಮಹತ್ತ್ವಜ್ಞಾನಮೇವ ಹಿ ॥ ಸರ್ವತಃ ಪ್ರೀತಿಜನಕಮತಸ್ತತ್ಸರ್ವಥಾ ಭವೇತ್ । (೩) ಆತ್ಮೇತ್ಯೇವ ಯದೋಪಾಸಾ ತದಾ ಬ್ರಹ್ಮತ್ವಸಂಯುತಾ । ಕಾರ್ಯೈವ ಸರ್ವಥಾ ವಿಷ್ಣೋರ್ಬ್ರಹ್ಮತ್ವಂ ನ ಪರಿತ್ಯಜೇತ್ ॥ ಇತಿ (ಚ) ಬ್ರಹ್ಮತರ್ಕೇ ॥ ೫ ॥ ಅಧಿ. ೪ ॥ ॥ ೧ ॥**

ಭಾಷ್ಯಾರ್ಥ ॥ (೧) ಪರಮೇಶ್ವರನಲ್ಲಿ ಸರ್ವಥಾ ಸದಾ ಬ್ರಹ್ಮತ್ವೋಪಾಸನವನ್ನು ಸರ್ವೋತ್ಕೃಷ್ಟತ್ವೋಪಾಸನವನ್ನು ಮಾಡಲೇಬೇಕು. ಬ್ರಹ್ಮತ್ವದಲ್ಲಿ ಸರ್ವಗುಣಾಂತರ್ಭಾವದಿಂದ ಬ್ರಹ್ಮಪದ ಪ್ರವೃತ್ತಿನಿಮಿತ್ತವಾದ ಬ್ರಹ್ಮತ್ವದಲ್ಲಿ ಸರ್ವಗುಣಗಳೂ ಸೇರಿದ್ದರಿಂದ ಉತ್ಕೃಷ್ಟತ್ವರೂಪತ್ವ ವಿದ್ದುದರಿಂದ (ತಥಾಚ ಬ್ರಹ್ಮತ್ವೋಪಾಸನವು ಉತ್ಕೃಷ್ಟತ್ವೋಪಾಸನವು ಆಗಿಯೇ ಆಗುತ್ತದೆ.) ಆದಾಗ್ಯೂ ಇತರ ಗುಣಗಳನ್ನು ಬಿಟ್ಟು ಇದನ್ನೇ ಉಪಾಸನ ಮಾಡುವುದು ಹೇಗೆ ಎಂದರೆ) ಇತರ ಗುಣಗಳ ಉಪಾಸನಗಳಿಂದ ಈ ಉಪಾಸನವೇ ಉತ್ಕೃಷ್ಟವಾದ ಪ್ರಯುಕ್ತ ಅತಿಶಯವಾಗಿ ಉತ್ಕೃಷ್ಟಪ್ರಸಾದಕ್ಕೆ ಹೇತುವಾದ ಪ್ರಯುಕ್ತ (೨) (ಸೂತ್ರಾರ್ಥದಲ್ಲಿ ಸ್ಮೃತಿಯಲ್ಲಿ ಹೇಳುತ್ತಾರೆ.) ಎಲ್ಲಾ ಮುಮುಕ್ಷುಗಳಿಂದಲೂ ಶ್ರೀಹರಿಯು ನಿಶ್ಚಯವಾಗಿಯೂ ಬ್ರಹ್ಮತ್ವಭಾವನೆಯಿಂದ ಸದಾ ಉಪಾಸ್ಯನಾಗಬೇಕು ಈ ಬ್ರಹ್ಮಶಬ್ದವು ಯಾವ ಕಾರಣದಿಂದ ಮಹತ್ವರೂಪ ಅರ್ಥವನ್ನು ಹೇಳುತ್ತದೋ, ಯಾವ ಕಾರಣದಿಂದ ಲಕ್ಷ್ಮ್ಯಾದಿಗಳಿಂದ ಮಹತ್ವಜ್ಞಾನವೇ ವಿಷ್ಣುವಿಗೆ ಪ್ರೀತಿಯನ್ನು ಹುಟ್ಟಿಸುತ್ತದೋ, ಅಥವಾ ಮಹತ್ವಜ್ಞಾನವೇ ಇತರ ಗುಣಗಳ ಉಪಾಸನದಿಂದ ಅಧಿಕವಾಗಿ ಪ್ರೀತಿಯನ್ನು ಹುಟ್ಟಿಸುತ್ತದೋ, ಆದಕಾರಣ ಬ್ರಹ್ಮತ್ವೇನ ವಿಷ್ಣುವಿನ ಉಪಾಸನವನ್ನು ಸರ್ವಥಾ ಸದಾ ಮಾಡತಕ್ಕದ್ದು ಆಗುತ್ತದೆ. (೩) (ಆತ್ಮತ್ವೋಪಾಸನದಂತೆ ಬ್ರಹ್ಮತ್ವೋಪಾಸನವಿಲ್ಲದಿದ್ದರೂ ಮೋಕ್ಷವು

ಕೂಡದಿದ್ದ ಪ್ರಯುಕ್ತವೂ ಬ್ರಹ್ಮತ್ವೋಪಾಸನವನ್ನು ಮಾಡಲೇಬೇಕು ಎನ್ನುವ ಅಭಿಪ್ರಾಯದಿಂದ ಪ್ರಮಾಣವನ್ನು ಹೇಳುತ್ತಾರೆ.) ಯಾವಾಗ ವಿಷ್ಣುಧರ್ಮಿಕವಾದ ಆತ್ಮತ್ವಪ್ರಕಾರಕವಾದ ಉಪಾಸನೆಯು ಮೋಕ್ಷಸಿದ್ಧಿಗಾಗಿ ಅಧಿಕಾರಿಯಿಂದ ಮಾಡತಕ್ಕುದೆಯೋ (ಅದು ಇಲ್ಲದೆ ಮೋಕ್ಷವಾಗಲಾರದೋ.) ಆಗ ಬ್ರಹ್ಮತ್ವೋಪಾಸನವಿಲ್ಲದಿದ್ದರೂ ಮೋಕ್ಷವು ಆಗದಿರುವುದರಿಂದ ಅದಕ್ಕಾಗಿ ಬ್ರಹ್ಮತ್ವಪ್ರಕಾರವಾದ ಉಪಾಸನವನ್ನು ಎಷ್ಟು ವಿಘ್ನಗಳು ಬಂದರೂ ಮಾಡಲೇಬೇಕು. ಬ್ರಹ್ಮತ್ವೋಪಾಸನವನ್ನು ಸರ್ವಥಾ ಬಿಡಬಾರದು. (ಬ್ರಹ್ಮತ್ವೋಪಾಸನವಿಲ್ಲದಿದ್ದರೆ ಮೋಕ್ಷವು ಆಗಲಾರದು.) (ಅಥವಾ ಬ್ರಹ್ಮತ್ವೋಪಾಸನವೂ ಅವಶ್ಯಕವಾದರೆ ನಾಲ್ಕು ಗುಣಗಳನ್ನು ಉಪಾಸನಾ ಮಾಡಬೇಕೆನ್ನುವ ನಿಯಮಕ್ಕೆ ಭಂಗವು ಬರುವುದೆಂದರೆ) ಯಾವಾಗ ಆತ್ಮಾ ಎನ್ನುವ ಉಪಾಸನೆಯು ಮಾಡಲ್ಪಡುತ್ತದೋ ಆಗ ವಿಷ್ಣುವು ಸರ್ವೋತ್ಕೃಷ್ಟ ಸ್ವಾಮಿಯು ಎಂದು ಬ್ರಹ್ಮತ್ವವಿಶೇಷಣದಿಂದ ಯುಕ್ತವಾಗಿಯೇ ಆತ್ಮತ್ವೋಪಾಸನವನ್ನು ಮಾಡಬೇಕು. (ತಥಾಚ ಬ್ರಹ್ಮತ್ವವನ್ನು ಆತ್ಮತ್ವವಿಶೇಷಣದಿಂದಲೇ ಉಪಾಸನ ಮಾಡಬೇಕಾಗಿರುವುದರಿಂದ ಚತುರ್ಗುಣೋಪಾಸನಾ ನಿಯಮಕ್ಕೆ ಭಂಗವಿಲ್ಲ) ಎಂದೂ ಬ್ರಹ್ಮತರ್ಕದಲ್ಲಿ ಹೇಳಿಯದೆ. ॥ ೫ ॥ ॥ ೧ ॥

## ಅಧಿಕರಣ ಸಾರಾಂಶ

ಬ್ರಹ್ಮತ್ವವು ಸದಾ ಸರ್ವಥಾ ಉಪಾಸ್ಯವಾಗುವುದಿಲ್ಲವೋ, ಆಗುತ್ತದೋ, ಅದಕ್ಕಾಗಿ ಬ್ರಹ್ಮತ್ವವನ್ನು ಹಾಗೆ ಉಪಾಸನ ಮಾಡಬೇಕೆನ್ನುವಲ್ಲಿ ಹೇತುವು ಇಲ್ಲವೋ ಇದೆಯೋ ಎಂದು ಸಂದೇಹವು. ಬ್ರಹ್ಮತ್ವೋಪಾಸನವನ್ನು ಸದಾ ಸರ್ವಥಾ ಮಾಡಕೂಡದು ಎಂದರೆ, ಬ್ರಹ್ಮತ್ವದಲ್ಲಿ ಸರ್ವಗುಣಗಳೂ ಅಂತರ್ಗತಗಳಾಗಿರುವುದರಿಂದ ಅದು ಅತ್ಯುತ್ಕೃಷ್ಟರೂಪವಾಗಿರುವುದರಿಂದ ಇತರ ಗುಣಗಳಿಂದ ಶ್ರೇಷ್ಠವಾದ ಪ್ರಯುಕ್ತ ಬ್ರಹ್ಮತ್ವೋಪಾಸನೆಯು ಶ್ರೀಹರಿಯ ಪ್ರೀತಿವಿಶೇಷಕ್ಕೆ ಹೇತುವಾಗಿರುವುದರಿಂದ ಆತ್ಮತ್ವೋಪಾಸನದಂತೆಯೇ ಬ್ರಹ್ಮತ್ವೋಪಾಸನೆಯೂ ಇಲ್ಲದಿದ್ದರೆ ಮೋಕ್ಷವು ಸಿದ್ಧಿಸದೆ ಇದ್ದಪ್ರಯುಕ್ತವೂ ಮೋಕ್ಷಕ್ಕೆ ಕಾರಣವಾದ ಶ್ರೀಹರಿಯ ಪ್ರೀತಿ ವಿಶೇಷವನ್ನು ಹುಟ್ಟಿಸುವುದರಿಂದ ಸರ್ವಥಾ ಸರ್ವಪ್ರಕಾರದಿಂದಲೂ ಬ್ರಹ್ಮತ್ವವನ್ನು ಉಪಾಸನ ಮಾಡಲೇಬೇಕು. ಅದಾದರೂ ಪೂರ್ಣಸ್ವಾಮಿತ್ವವಾನ್ ಭಗವಾನ್ ಎಂದು ಆತ್ಮತ್ವ ವಿಶೇಷಣವಾಗಿಯೇ ಉಪಾಸನವು. ಆದಕಾರಣ ಚತುರ್ಗುಣೋಪಾಸನ ನಿಯಮಕ್ಕೆ ಭಂಗವಿಲ್ಲ. ॥ ಅಧಿ.೪ ॥

ಬ್ರಹ್ಮಾಧಿಕರಣವು ಸಮಾಪ್ತವಾಯಿತು.

# ೫ ಆದಿತ್ಯಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ವಿಷ್ಣುವಿನ ಅಂಗಗಳನ್ನು ಆದಿತ್ಯಾದಿ ದೇವತೆಗಳು ಆಶ್ರಯಿಸಿಕೊಂಡು ಇದ್ದಾರೆಂದು ದೇವತೋಪಾಸನೆಯು ಆವಶ್ಯಕವೆಂದು ಸಮರ್ಥಿಸುತ್ತಾರೆ. ಆದಿತ್ಯಾದಿ ದೇವತೆಗಳಿಗೆ ಸರ್ವದಾ ಸರ್ವಥಾ ತಂತಮ್ಮ ಉತ್ತಮಾಂಗಗಳನ್ನು ಆಶ್ರಯಿಸಿಕೊಂಡು

ಇದ್ದಾರೆಂದು ಉಪಾಸನವು ಯುಕ್ತವಲ್ಲ. ಸೂರ್ಯಾದಿಗಳು ಅನೇಕ ಸ್ಥಾನಗಳಲ್ಲಿ ಸಂಚರಿಸಿ ಕೊಂಡಿರುವುದು ಸದಾ ಶ್ರೀಹರಿಯ ಚಕ್ಷುರಾದಿಗಳನ್ನು ಆಶ್ರಯಿಸಿಕೊಂಡಿಲ್ಲ. ಗುಣಾಂತರಗಳು ಇರುವಾಗ ಭಗವಂತನ ಅಂಗಾಶ್ರಿತರೆಂದು ವಿಶಿಷ್ಟ ಧ್ಯಾನಿಸಲಿಕ್ಕೆ ಕಾರಣವಿಶೇಷವೂ ಇಲ್ಲ. ಮತ್ತು ಮಿಥ್ಯೋಪಾಸನೆಯು ಅನರ್ಥ ಫಲಕವೂ ಆಗಿದೆ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ ॥ ೬ ॥

ಸೂತ್ರಾರ್ಥ ॥ ಪರಬ್ರಹ್ಮನ ಅಂಗದಲ್ಲಿ ಇದ್ದಾರೆಂದು ಆದಿತ್ಯಾದ್ಯುಪಾಸನಗಳು (ಅಂದರೆ ಶ್ರೀಹರಿಯು ತಂತಮಗೆ ಆಶ್ರಯವಾದ ಅಂಗವುಳ್ಳವನೆಂದು ಉಪಾಸನಗಳು) ಆದಿತ್ಯಾದಿ ದೇವತೆಗಳಿಂದ ಸದಾ ಸರ್ವಥಾ ಕಾರ್ಯಗಳೇ ಆಗಿವೆ. ದೇವತೆಗಳು ಆವಾವ ಅಂಗಗಳಿಂದ ಹುಟ್ಟಿದವರಾದ ಪ್ರಯುಕ್ತ ಮುಕ್ತಿಯಲ್ಲಿ ಆವಾವ ಅಂಗಗಳಲ್ಲಿಯೇ ಲಯವು ಅಪೇಕ್ಷಿತವಾದ ಪ್ರಯುಕ್ತ ಉಪಾಸನವನ್ನು ಫಲಸಾಮ್ಯದಿಂದ ಮಾಡಬೇಕಾಗಿರುವುದರಿಂದ ರೂಪಾಂತರದಿಂದ ಅಂಗಗಳಲ್ಲಿ ಇದ್ದುದರಿಂದ ಮಿಥ್ಯೋಪಾಸನವು ಆಗುವುದಿಲ್ಲ ಎನ್ನುವ ಉಪಪತ್ತಿಯು ಇದ್ದುದರಿಂದ, ಏವಂಚ ಯಾವ ಯಾವ ಅಂಗದಲ್ಲಿ ಯಾರು ಯಾರು ಇದ್ದಾರೋ ಅವರವರು ಹಾಗೆ ಹಾಗೆ ಉಪಾಸನ ಮಾಡಬೇಕು.

**ಭಾಷ್ಯ ॥ ಚಕ್ಷೋಃ ಸೂರ್ಯೋ ಅಜಾಯತ (ಋ.೧೦.೯೦.೧೩..) ಇತ್ಯಾದ್ಯುಪಾಸನಂ ಚ ದೇವಾನಾಂ ಕಾರ್ಯಮೇವ । ಸ್ವೋತ್ಪತ್ತಿಸ್ಥಾನತ್ವಾತ್ ಸ್ವಾಶ್ರಯತ್ವಾನ್ಮುಕ್ತೌ ತತ್ರ ಲಯಸ್ಯಾಪೇಕ್ಷಿತತ್ವಾಚ್ಚೋಪಪನ್ನಂ ತೇಷಾಂ ತಥೋಪಾಸನಂ ॥ ೧ ॥**

ಭಾಷ್ಯಾರ್ಥ ॥ (೧) ಚಕ್ಷೋಸ್ಸೂರ್ಯೋಽಜಾಯತ್ ಇತ್ಯಾದಿಗಳಿಂದ ಹೇಳಲ್ಪಟ್ಟ ತಂತಮಗೆ ಆಶ್ರಯವೆಂದು ಭಗವದಂಗೋಪಾಸನವನ್ನು ಆದಿತ್ಯಾದಿ ದೇವತೆಗಳು ಸದಾ ಸರ್ವಥಾ ಮಾಡಬೇಕು. ಏಕೆಂದರೆ—ಮುಕ್ತಿಯಲ್ಲಿ ಭಗವದಂಗಗಳಲ್ಲಿ ದೇವತೆಗಳಿಗೆ ಪ್ರವೇಶರೂಪವಾದ ಲಯವು ಅಪೇಕ್ಷಿತವಾದ ಪ್ರಯುಕ್ತ (ಉಪಾಸನವನ್ನು ಫಲಸಾಮ್ಯದಿಂದ ಮಾಡಬೇಕು.) (ಮುಕ್ತಿಯಲ್ಲಿ ಅಲ್ಲಿ ಲಯವೇ ಹೇಗೆಂದರೆ) ಉಪಾಸಕನಿಗೆ ಉತ್ಪತ್ತಿಸ್ಥಾನವಾದುದರಿಂದ. (ಅಂದರೆ ಯಾರಿಗೆ ಯಾವ ಅಂಗದಿಂದ ಉತ್ಪತ್ತಿಯೋ ಅವರಿಗೆ ಅಲ್ಲಿಯೇ ಲಯವೆಂದು ನಿಯಮವು.) (ಹಾಗಾದರೆ ಸೂರ್ಯಾದಿ ದೇವತೆಗಳಿಗೆ ಅನೇಕ ಸ್ಥಾನಗಳಲ್ಲಿ ಸಂಚಾರವಿರುವುದರಿಂದ ಅವರು ಸದಾ ಶ್ರೀಹರಿಯ ಚಕ್ಷುರಾದಿಗಳನ್ನು ಆಶ್ರಯಿಸಿಕೊಂಡು ಇಲ್ಲದಿರುವುದರಿಂದ ಹಾಗೆ ಉಪಾಸನ ಮಾಡಿದರೆ ಅನ್ಯಥೋಪಾಸನವು ಆಗಬೇಕಾಗಿರುವುದರಿಂದ ಇದು ಅಯುಕ್ತವೆಂದರೆ) ಸೂರ್ಯಾದಿ ದೇವತೆಗಳಿಗೆ ಅನೇಕ ಸ್ಥಾನಗಳಲ್ಲಿ ಸಂಚಾರವಿದ್ದರೂ ನಿತ್ಯದಲ್ಲಿಯೂ ರೂಪಾಂತರದಿಂದ ಭಗವದಂಗಗಳಿಗೆ ಸೂರ್ಯಾದಿಗಳ ಆಶ್ರಯತ್ವವಿದ್ದ ಪ್ರಯುಕ್ತ) (ಅಂದರೆ ಸೂರ್ಯಾದಿ ದೇವತೆಗಳು ಶ್ರೀಹರಿಯ ಅಂಗಗಳನ್ನೇ ಆಶ್ರಯಿಸಿಕೊಂಡೇ ಇದ್ದಾರೆ.) ತಥಾಚ ಆ ದೇವತೆಗಳಿಗೆ ಹಾಗೆ ಉಪಾಸನವು ಯುಕ್ತವೇ.

**ಪೀಠಿಕೆ ॥** ಹಿಂದಿನ ಅಧಿಕರಣಾರ್ಥದಲ್ಲಿಯೂ ಈ ಅಧಿಕರಣಾರ್ಥದಲ್ಲಿಯೂ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ನಾರಾಯಣತಂತ್ರೇ ಚ । ಅಧಿವ್ಯಾಧಿನಿಮಿತ್ತೇನ ವಿಕ್ಷಿಪ್ತ ಮನಸೋಽಪಿ ತು । ಗುಣಾನಾಂ ಸ್ಮರಣಾಶಕ್ತೌ ವಿಷ್ಣೋರ್ಬ್ರಹ್ಮತ್ವಮೇವ ತು । ಸ್ಮರ್ತವ್ಯಂ ಸತತಂ ತತ್ತು ನ ಕದಾಚಿತ್ತ್ವರಿತ್ಯಚೇತ್ ॥ ಅತ್ರ ಸರ್ವಗುಣಾನಾಂ ಚ ಯತೋಽತರ್ಭಾವ ಇಷ್ಯತೇ ॥ ೨ ॥**

**ಭಾಷ್ಯಾರ್ಥ ॥** ಮನಸ್ಸಿನಲ್ಲಿರತಕ್ಕ ವ್ಯಥೆಯೂ ಶರೀರದಲ್ಲಿರತಕ್ಕ ರೋಗವೂ ಇದುಮೊದಲಾದ ವಿಘ್ನಹೇತುಗಳಿಂದ ಅನ್ಯತ್ರ ವ್ಯಾಸಕ್ತವಾದ ಮನಸ್ಸುಳ್ಳವನಾದಾಗ್ಯೂ ಪುರುಷನಿಗೆ ಶ್ರೀವಿಷ್ಣುವಿನ ಗುಣಗಳನ್ನು ಸ್ಮರಣ (ಧ್ಯಾನ) ಮಾಡಲಿಕ್ಕೆ ಶಕ್ತಿಯಿಲ್ಲದೆ ಇರುವಾಗ ವಿಷ್ಣುವಿಗೆ ಬ್ರಹ್ಮತ್ವವನ್ನೇ ಸರ್ವದಾ ಸ್ಮರಿಸಬೇಕು. ಬ್ರಹ್ಮತ್ವೋಪಾಸನವನ್ನು ಯಾವಾಗಲೂ ಮರೆತುಬಿಡಬಾರದು. ಯಾವ ಕಾರಣದಿಂದ ಬ್ರಹ್ಮತ್ವದಲ್ಲಿ ಜ್ಞಾನ ಆನಂದ ಮೊದಲಾದ ಎಲ್ಲಾ ವಿಷ್ಣುಧರ್ಮಗಳಿಗೆ ವಿಷ್ಣುರೂಪತ್ವವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೋ ಆದಕಾರಣ ಬ್ರಹ್ಮತ್ವವನ್ನು ಯಾವಾಗಲೂ ಸ್ಮರಣ ಮಾಡುತ್ತಾ (ಉಪಾಸನ ಮಾಡುತ್ತಾ) ಇರಬೇಕು ಎಂದು ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಹೇಳಿದೆ. ॥ ೨ ॥

**ಪೀಠಿಕೆ ॥** ಹಿಂದಿನ ಅಧಿಕರಣಾರ್ಥಕ್ಕೆ ಉಪಯುಕ್ತವಾದ ಅಂಶವನ್ನುದಾಹರಿಸಿ ಈ ಅಧಿಕರಣಕ್ಕೆ ಉಪಯುಕ್ತವಾದ ಸ್ಮೃತ್ಯಂಶವನ್ನುದಾಹರಿಸುತ್ತಾರೆ—

**ಭಾಷ್ಯ ॥ ಸ್ವೋತ್ಪತ್ತ್ಯಂಗ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು । ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ ॥ ತದಾಶ್ರಿತಾಶ್ಚ ತೇ ನಿತ್ಯಂ ತತಶ್ಚಿಂತ್ಯಂ ವಿಶೇಷತಃ । ಇತಿ ೬ ॥ ಅಧಿ.೫ ॥ ॥ ೩ ॥**

**ಭಾಷ್ಯಾರ್ಥ ॥** ದೇವತೆಗಳು ಶ್ರೀವಿಷ್ಣುವಿನ, ತಮ್ಮ ಉತ್ಪತ್ತಿಗೆ ಕಾರಣವಾದ ಚಕ್ಷುರಾದ್ಯಂಗಗಳನ್ನು ತಮಗೆ ಆಶ್ರಯವೆಂದು ಯಾವಾಗಲೂ ಧ್ಯಾನಿಸಲೇಬೇಕು. (ಬ್ರಹ್ಮತ್ವಾದಿಗಳನ್ನು ಮಾತ್ರ ಧ್ಯಾನಿಸುವುದು ಅಲ್ಲ) ಆ ದೇವತೆಗಳಿಗೆ ಆ ಅಂಗಗಳಲ್ಲಿ ಯಾವ ಕಾರಣದಿಂದ ಪ್ರವೇಶವೇ ಮುಕ್ತಿಯೆಂದು ಜ್ಞಾನಿಗಳಿಂದ ಹೇಳಲ್ಪಡುತ್ತದೋ, (ಇದು ಅನ್ಯಥೋಪಾಸನವಲ್ಲ ಏಕೆಂದರೆ) ಆ ದೇವತೆಗಳು ನಿತ್ಯದಲ್ಲಿಯೂ ರೂಪಾಂತರದಿಂದ ಆಯಾ ಅಂಗಗಳನ್ನು ಆಶ್ರಯಿಸಿಕೊಂಡೇ ಇರುತ್ತಾರೆ. ಆಯಾ ಅಂಗಗಳನ್ನು ಆಶ್ರಯಿಸಿಕೊಂಡಿದ್ದ ಪ್ರಯುಕ್ತವೇ ವಿಶಿಷ್ಟ ಸರ್ವಥಾ ಸರ್ವದಾ ದೇವತೆಗಳಿಗೆ ಆಶ್ರಯವಾದ ಅಂಗವು ದೇವತೆಗಳಿಂದ ಉಪಾಸನ ಮಾಡಲ್ಪಡತಕ್ಕುದೇ, ಎಂದೂ ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಹೇಳಿಯದೆ. ॥ ೬ ॥ ॥ ೩ ॥

## ಅಧಿಕರಣ ಸಾರಾಂಶ

ದೇವತೆಗಳ ಉತ್ಪತ್ತಿಗೆ ಕಾರಣವಾದ ಭಗವಂತನ ಅಂಗಗಳನ್ನು ದೇವತೆಗಳು ಆಶ್ರಯಿಸಿ

ಕೊಂಡಿದ್ದಾರೆ ಎನ್ನುವ ಉಪಾಸನವನ್ನು ದೇವತೆಗಳು ಮಾಡಬೇಕೆಂದು ಯಾವುದು ಉಕ್ತವಾಗಿಯದೋ ಅದನ್ನು ದೇವತೆಗಳು ಸದಾ ಸರ್ವಥಾ ಮಾಡಬಾರದೋ, ಮಾಡಬೇಕೋ ಅದಕ್ಕಾಗಿ ಹಾಗೆ ಉಪಾಸನಾ ಮಾಡುವ ವಿಷಯದಲ್ಲಿ ವಿಶೇಷ ಹೇತುವು ಇಲ್ಲವೋ ಇದೆಯೋ, ಹಾಗೆಯೇ ಆದಿತ್ಯಾದಿ ದೇವತೆಗಳಿಗೆ ಭಗವಂತನ ಚಕ್ಷುರಾಂದ್ಯಗಳಲ್ಲಿ ನಿತ್ಯದಲ್ಲಿಯೂ ಸ್ಥಿತಿಯು ಇಲ್ಲವೋ ಇದೆಯೋ, ಎಂದು ಸಂದೇಹವು. ಗುಣಾಂತರಗಳು ಇದ್ದರೂ ವಿಶಿಷ್ಟ ತಂತಮಗೆ ಆಶ್ರಯವಾದ ಅಂಗವತ್ವರೂಪವಾದ ಗುಣವನ್ನೇ ನಿತ್ಯದಲ್ಲಿಯೂ ಉಪಾಸನ ಮಾಡಬೇಕೆನ್ನುವಲ್ಲಿ ಬ್ರಹ್ಮತ್ವೋಪಾಸನದಂತೆ ವಿಶೇಷ ಹೇತುವು ಇಲ್ಲದಿರುವುದರಿಂದ ಸೂರ್ಯಾದಿ ದೇವತೆಗಳು ಜಗತ್ತಿಗೆ ಪ್ರಕಾಶಾದಿಗಳನ್ನು ಮಾಡುವುದಕ್ಕಾಗಿ ಅನೇಕ ಸ್ಥಾನಗಳಲ್ಲಿ ಸಂಚಾರದಿಂದ ನಿತ್ಯದಲ್ಲಿಯೂ ಭಗವಂತನ ಅಂಗಗಳಲ್ಲಿ ಅವಸ್ಥಿತಿಯು ಇಲ್ಲದಿರುವುದರಿಂದ ಹಾಗೆ ಉಪಾಸನವು ಮಿಥ್ಯೋಪಾಸನೆಯು ಆದುದರಿಂದ ಅನರ್ಥಫಲವಿದ್ದುದರಿಂದಲೂ ಸರ್ವದಾ ಹಾಗೆ ಉಪಾಸನವನ್ನು ಮಾಡಕೂಡದು, ಎಂದರೆ ಸ್ವೋತ್ತಂಗಂ ಚ ದೇವಾನಾಂ ಎನ್ನುವ ಸ್ಮೃತಿಯಿಂದ ದೇವತೆಗಳಿಗೆ ಮುಕ್ತಿಯಲ್ಲಿ ಭಗವದಂಗಪ್ರವೇಶವು ಆವಶ್ಯಕವಾದುದರಿಂದ, ಆ ಪ್ರವೇಶವಾದರೂ ಯಾವಾಗಲೂ ಅಂತಹ ಗುಣೋಪಾಸನವಿಲ್ಲದೆ ಸಿದ್ಧಿಯಾಗದೆ ಇರುವುದರಿಂದ ಭಗವದಂಗ ಪ್ರವೇಶರೂಪವಾದ ಕಾರಣವಿದ್ದ ಪ್ರಯುಕ್ತ ನಿತ್ಯದಲ್ಲಿಯೂ ರೂಪಾಂತರದಿಂದ ಭಗವದಂಗಗಳಲ್ಲಿ ಇದ್ದಪ್ರಯುಕ್ತ ಮಿಥ್ಯೋಪಾಸನೇಗೆ ಪ್ರಸಕ್ತಿಯಿಲ್ಲದಿರುವುದರಿಂದಲೂ ಸೂರ್ಯನು ತನಗೆ ಆಶ್ರಯವಾದುದು ಶ್ರೀಹರಿಯ ಚಕ್ಷುಸ್ಸು ಎಂದೂ ಚಂದ್ರನು ತನಗೆ ಆಶ್ರಯವಾದುದು ಶ್ರೀಹರಿಯ ಮನಸ್ಸು ಎಂದೂ ಚತುರ್ಮುಖನು ತನಗೆ ಆಶ್ರಯವಾದುದು ಶ್ರೀಹರಿಯ ಶಿರಸ್ಸು ಎಂದೂ ಇತ್ಯಾದಿ ರೂಪದಿಂದ ದೇವತೆಗಳು ಸದಾ ಸರ್ವತ್ರ ಉಪಾಸನವನ್ನು ಮಾಡಲೇಬೇಕು. ॥ ಅಧಿ.೫ ॥

**ಆದಿತ್ಯಾಧಿಕರಣವು ಸಮಾಪ್ತವಾಯಿತು.**

## ೬ ಆಸೀನಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಭಗವದ್ಧ್ಯಾನದಲ್ಲಿ ಆಸನಾದಿ ನಿಯಮವನ್ನು ಸಮರ್ಥಿಸುತ್ತಾರೆ. ಆಸನವು ಸರ್ವಥಾ ಅಪೇಕ್ಷಿತವಲ್ಲ, ಆಸನವು ಇಲ್ಲವಾದರೂ ಮನಸ್ಸು ಭಗವದ್ವಿಷಯಕವಾದರೆ ಕೇವಲ ಅದರಿಂದಲೇ ಭಗವದ್ದರ್ಶನವು ಕೂಡಬಹುದು. ಅದರಿಂದ ಅತಿರಿಕ್ತವಾದ ಪ್ರಯೋಜನವು ಇಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ಆಸೀನಃ ಸಂಭವಾತ್ ಓಂ ॥ ೭ ॥

ಸೂತ್ರಾರ್ಥ ॥ ಆಸನದಲ್ಲಿ ಕೂತುಕೊಂಡವನಾಗಿಯೇ ಸದಾ ಉಪಾಸನವನ್ನು ಮಾಡಬೇಕು. ಆಸನದಲ್ಲಿ ಕೂತುಕೊಂಡವನಿಗೇನೇ ಉಪಾಸನವು ಕೂಡುವುದರಿಂದ ಇತರರಿಗೆ ಕೂಡದೆ ಇರುವುದರಿಂದ.

**ಭಾಷ್ಯ ॥ ಸರ್ವದೋಪಾಸನಂ ಕುರ್ವನ್ನಪ್ಯಾಸಿನೋ ವಿಶೇಷತಃ ಕುರ್ಯಾತ್ । ತದಾ ವಿಕ್ಷೇಪಾಲ್ಪತ್ವೇನ ಸಂಭವಾತ್ ॥ ೭ ॥ ॥ ೧ ॥**

ಭಾಷ್ಯಾರ್ಥ ॥ ಉಪಾಸನವನ್ನು ಮಾಡತಕ್ಕ ಜಿಜ್ಞಾಸುವು ಆಸನದಲ್ಲಿ ಕೂತುಕೊಂಡವನಾಗಿಯೇ ಉಪಾಸನವನ್ನು ಸರ್ವದಾ ಸರ್ವಪ್ರಕಾರದಿಂದ ವಿಘ್ನಗಳು ಬಂದರೂ ವಿಶೇಷವಾಗಿ ಮಾಡಲೇಬೇಕು. (ತಥಾಚ ಅಧಿಕಾರಿಯು ಸರ್ವದಾ ಉಪಾಸನವನ್ನು ಮಾಡುವವನೇ ಆಗಬೇಕು. ಅದೂ ಕೂಡ ಆಸನದಲ್ಲಿ ಕೂತುಕೊಂಡವನಾಗಿಯೇ ಮಾಡಬೇಕು.) ಆಸನದಲ್ಲಿ ಕೂತುಕೊಂಡರೇನೇ ಉಪಾಸನವು ಕೂಡುವುದರಿಂದ. (ಇಲ್ಲವಾದರೆ ಬಹುಧಾ ಚಿತ್ತವಿಕ್ಷೇಪವು ಬರುವುದರಿಂದ ಉಪಾಸನವೇ ಕೂಡಲಾರದು.) ಆಸನದಲ್ಲಿ ಕೂತುಕೊಳ್ಳುವಾಗ ಚಿತ್ತವಿಕ್ಷೇಪವು ಬಂದರೂ ಅದು ಅಲ್ಪವಾಗಿ ಬರುವುದರಿಂದ ಉಪಾಸನವು ಕೂಡುವುದು.

ವಿಶೇಷಾಂಶ ॥ ಸರ್ವದಾ ಆಸನೋಪವೇಶವು ಇಲ್ಲದಿರುವುದರಿಂದ ಸರ್ವದಾ ಉಪಾಸನೆಯು ಇಲ್ಲವೆಂದಾಗಬೇಕಾಗುವುದು. ಇಷ್ಟಾಪತ್ತಿಯು ಆಗಲಾರದು. ನಿತ್ಯಶಃ ಕಾರ್ಯಂ ಸಾಧನಂ ಪ್ರಥಮತಃ ಉಚ್ಯತೇ ಎಂದು ಹೇಳಿದ್ದು ವ್ಯಾಹತವಾಗುವುದು ಎಂದರೆ—ಅದಕ್ಕಾಗಿಯೇ ಸರ್ವದಾ ಉಪಾಸನಂ ಕುರ್ವನ್ನಪಿ ಎಂದು ಹೇಳಿರುವರು. ॥ ೭ ॥

ಪೀಠಿಕೆ ॥ ಸರ್ವದಾ ಉಪಾಸನವನ್ನು ಮಾಡಬೇಕು. ಆಸನವೂ ಅಪೇಕ್ಷಿತವಾಗಿದೆ ಎಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ—ಇವೆರಡೂ ವಿರುದ್ಧವಾದ ಪ್ರಯುಕ್ತ ಏಕದಾ ಸಮಾವೇಶವು ಕೂಡಲಾರದು. ಎಂಬ ಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಧ್ಯಾನಾಚ್ಚ ಓಂ ॥ ೮ ॥

ಸೂತ್ರಾರ್ಥ ॥ ಆಸನದಲ್ಲಿ ಕೂತುಕೊಂಡಿರತಕ್ಕವನಿಂದ ಮಾಡಲ್ಪಡತಕ್ಕದ್ದಕ್ಕೆ ಧ್ಯಾನರೂಪತ್ವ ವಿದ್ದುದರಿಂದ ವಿರೋಧವಿಲ್ಲ. (ಸ್ಮರಣ, ಧ್ಯಾನ ಎಂದು ಉಪಾಸನವು ಎರಡು ವಿಧವಾದುದರಿಂದ ನಿತ್ಯದಲ್ಲಿಯೂ ಸರ್ವದಾ ಮಾಡತಕ್ಕ ಸ್ಮರಣೆಗೆ ಆಸನದ ಅಪೇಕ್ಷೆಯು ಇಲ್ಲದ್ದಿದರೂ ಧ್ಯಾನರೂಪವಾದ ವಿಶೇಷೋಪಾಸನದಲ್ಲಿ ಆಸನವು ಆವಶ್ಯಕವು. ಇಲ್ಲದಿದ್ದರೆ ಮನಸ್ಸಿಗೆ ವ್ಯಾಕುಲತೆಯು ಬರುವುದು.)

**ಭಾಷ್ಯ ॥ (೧) ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿ ದ್ವಿಧಾ । ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ ॥ (೨) ನೈರಂತರ್ಯಂ ಮನೋವೃತ್ತೇಃ ಧ್ಯಾನಮಿತ್ಯುಚ್ಯತೇ ಬುಧೈಃ । ಆಸೀನಸ್ಯ ಭವೇತ್ತತ್ತು ನ ಶಯಾನಸ್ಯ ನಿದ್ರಯಾ ॥ ಸ್ಥಿತಸ್ಯ ಗಚ್ಛತೋ ವಾಽಪಿ ವಿಕ್ಷೇಪಸ್ಯೈವ ಸಂಭಾವತ್ । ಸ್ಮರಣಾತ್ಪರಮಂ ಜ್ಞೇಯಂ ಧ್ಯಾನಂ ನಾಸ್ತ್ಯತ್ರ ಸಂಶಯಃ ॥ ಇತಿ (ಚ) ನಾರಾಯಣತಂತ್ರೇ। ಅತೋ ಧ್ಯಾನತ್ವಾಚ್ಚ ॥ ೮ ॥ ॥ ೨ ॥**

ಭಾಷ್ಯಾರ್ಥ ॥ (೧) ಸ್ಮರಣೋಪಾಸನವು, ಧ್ಯಾನಾತ್ಮಕ ಉಪಾಸನವು ಎಂದು ಉಪಾಸನವು ಎರಡು ವಿಧವು. ಸ್ಮರಣೋಪಾಸನವು (ಸ್ಮರಣಂ=ವಿಚ್ಛೇದದಿಂದ ಮನಸ್ಸಿನಲ್ಲಿ ಭಗವದ್ವಿಷಯಕ

ಸ್ಮೃತಿಯು) ನಿಲ್ಲುವಾಗಲೂ ನಡಿಯುವಾಗಲೂ ಕೂತುಕೊಳ್ಳುವ ಕಾಲದಲ್ಲಿಯೂ ಯೋಗ್ಯವು. ಧ್ಯಾನೋಪಾಸನವು ಆಸನದಲ್ಲಿ ಕೂತುಕೊಂಡರೇನೇ ಯೋಗ್ಯವು. (೨) (ಧ್ಯಾನಸ್ವರೂಪವನ್ನು ತೋರಿಸುತ್ತಾ ಅದಕ್ಕೆ ಆಸನದ ಅಪೇಕ್ಷೆಯಿದೆ ಎಂದು ಉಪಾದಿಸುತ್ತಾರೆ.) ಮನೋವ್ಯಾಪಾರಕ್ಕೆ ಮನಃಪರಿಣಾಮರೂಪವಾದ ಸ್ಮರಣೆಗೆ ಅಖಂಡಿತತ್ವವು (ಅವಿಚ್ಛೇದವು) ಧ್ಯಾನವೆಂದು ಜ್ಞಾನಿಗಳಿಂದ ಹೇಳಲ್ಪಡುತ್ತದೆ. (ಅಂದರೆ, ನಿರಂತರ ಮನೋವೃತ್ತಿಯೇ ಧ್ಯಾನವೆನ್ನಿಸುತ್ತದೆ.) ಆ ಧ್ಯಾನವಾದರೂ ಆಸನದಲ್ಲಿ ಕೂತುಕೊಂಡು ಇದ್ದವನಿಗೇನೇ ಆಗುವುದು. ನಿದ್ರೆಯಿಂದ ಮಲಗಿದವನಿಗೆ ಆಗುವುದಿಲ್ಲ. ನಿದ್ರೆಯು ಪ್ರಸಕ್ತವಾಗುವುದು. ಹೀಗೆ ನಿಂತವನಿಗೂ ದಾರಿಯಲ್ಲಿ ಹೋಗುತ್ತಿರುವವನಿಗೂ ಧ್ಯಾನವೂ ಇಲ್ಲ. ಆಗ ಮನಸ್ಸಿಗೆ ವ್ಯಾಕುಲತ್ವವೇ ನಿಯಮದಿಂದ ಕೂಡುವುದರಿಂದ. (ಹಾಗಾದರೆ ಸುಖದಿಂದ ಮಾಡಲು ಶಕ್ಯವಾದ ಸಾರ್ವಕಾಲಿಕವಾದ ಸ್ಮರಣವೇ ಸಾಕು. ಧ್ಯಾನವು ಏಕೆ ಎಂದರೆ) ಧ್ಯಾನವು ಸ್ಮರಣದೆಶೆಯಿಂದ ಅಧಿಕವೆಂದು ತಿಳಿಯತಕ್ಕದು. ಆಧಿಕ್ಯ ವಿಷಯದಲ್ಲಿ ಸಂದೇಹವಿಲ್ಲ ಎಂದು ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಹೇಳಿದೆ. (ಯದ್ಯಪಿ ಧ್ಯಾನವು ಕೂಡ ಸ್ಮರಣವಿಶೇಷವೇ. ಆದಾಗ್ಯೂ ಇಲ್ಲಿ ಧಾರಣಾರೂಪವಾದ ಖಂಡ ಸ್ಮರಣವೇ ಸ್ಮರಣಪದದಿಂದ ವಿವಕ್ಷಿತವಾಗಿದೆ. ಧ್ಯಾನವಾದರೂ ಅಖಂಡಸ್ಮರಣವು. **ಖಂಡಾ ಸ್ಮೃತಿರ್ಧಾರಣಾ ಸ್ಯಾದಖಂಡಾ ಧ್ಯಾನಮುಚ್ಯತೇ ।** ಎಂದು ನಾರಾಯಣತಂತ್ರಗ್ರಂಥದಲ್ಲಿ ಯಾವ ಕಾರಣದಿಂದ ಹೇಳಲ್ಪಟ್ಟಿದೋ) ಆದಕಾರಣ ನಿರಂತರ ಮನೋವೃತ್ತಿ ರೂಪವಾದ ಉಪಾಸನ ವಿಶೇಷಕ್ಕೆ ಧ್ಯಾನತ್ವವಿದ್ದುದರಿಂದಲೂ (ಧ್ಯಾನವು ಆಸನವಿಲ್ಲದೆ ಕೂಡದೆ ಇರುವುದರಿಂದ ಅದಕ್ಕೆ ಆಸನ ಆವಶ್ಯಕವು. ಸ್ಮರಣೋಪಾಸನವು ಸರ್ವದಾ ಯೋಗ್ಯವಾಗಿರುವುದರಿಂದ ಸರ್ವದಾ ಮಾಡಲೇಬೇಕು. ॥ ೮ ॥ ॥ ೨ ॥

**ಪೀಠಿಕೆ ॥** ಧ್ಯಾನಕ್ಕಾಗಿಯೂ ಆಸನವು ಆವಶ್ಯಕವಲ್ಲ. ಪ್ರತ್ಯಾಹಾರಾದಿಗಳಿಂದಲೂ ಚಿತ್ತವಿಕ್ಷೇಪ ಪರಿಹಾರವಾಗುವುದು. ಎಂದು ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಚಲತ್ವಂ ಚಾಪೇಕ್ಷ್ಯ ಓಂ ॥ ೯ ॥

**ಸೂತ್ರಾರ್ಥ ॥** ಪ್ರತ್ಯಾಹಾರಾ(ಇಂದ್ರಿಯಗಳನ್ನು ವಿಷಯಗಳಲ್ಲಿ ಹೋಗದೆ ಇದ್ದಹಾಗೆ ಮಾಡುವಿಕೆ)ದಿಗಳಿಂದ ಮಾತ್ರವಲ್ಲ, ಮತ್ತೆ ಶರೀರಕ್ಕೆ ಅಚಲತ್ವವನ್ನು ನಿದ್ರಾಬಾವವನ್ನು ಕೂಡ ಅಪೇಕ್ಷಿಸಿಕೊಂಡೇ ಮನಸ್ಸಿಗೆ ಏಕಗ್ರತ್ವಾಭಾವವು ಆಗುತ್ತದೆ. (ಆದಕಾರಣ ಆಸನದಲ್ಲಿ ಕೂತುಕೊಂಡವನಾಗಿಯೇ ಧ್ಯಾನಿಸತಕ್ಕದು.)

**ಭಾಷ್ಯ ॥ ಅಚಲಂ ಚೇಚ್ಛರೀರಂ ಸ್ಯಾನ್ಮನಸಶ್ಚಾಪ್ಯಚಾಲನಂ । ಚಲನೇ ತು ಶರೀರಸ್ಯ ಚಂಚಲಂ ಚ (ತು) ಮನೋ ಭವೇತ್ ॥ ಇತಿ ಬ್ರಹ್ಮಾಂಡೇ ॥ ೯ ॥ ॥ ೩ ॥**

ಭಾಷ್ಯಾರ್ಥ ॥ ಶರೀರವು ಹಂದಾಡದದೆ ಇದ್ದರೆ ಮನಸ್ಸಿಗೂ ಕೂಡ ಚಲನಾಭಾವವು ಬರುವುದು. ಶರೀರವು ಹಂದಾಡಿದರೆ ಮನಸ್ಸು ಕೂಡ ಚಂಚಲವು ಆಗುವುದು, ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. (ತಥಾಚ ಮನಸ್ಸು ನಿಶ್ಚಲವಾಗಬೇಕಾದರೆ ಅದಕ್ಕೆ ಶರೀರನಿಶ್ಚಲತ್ವದ ಅಪೇಕ್ಷೆಯಿದ್ದ ಪ್ರಯುಕ್ತ ಆ ನಿಶ್ಚಲತ್ವವು ಆಸನದಲ್ಲಿ ಕೂತುಕೊಂಡರೇನೇ ಕೂಡುವ ಪ್ರಯುಕ್ತ ಆಸನವು ಆವಶ್ಯಕವೇ.) ॥ ೯ ॥

ಪೀಠಿಕೆ ॥ ಸ್ಮೃತಿಗಳಿಂದಲೂ ಆಸನಕ್ಕೆ ಆವಶ್ಯಕತ್ವವನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸ್ಮರಂತಿ ಚ ಓಂ ॥ ೧೦ ॥

ಸೂತ್ರಾರ್ಥ ॥ ಶ್ರೀಕೃಷ್ಣ ಮೊದಲಾದವರು ಈ ಅರ್ಥವನ್ನು ಉಪವಿಶ್ಯಾಸನೇ, ಸಮಂ ಕಾಯಶಿರೋಗ್ರೀವಂ ಇತ್ಯಾದಿಗಳಿಂದ ಸ್ಮರಿಸುತ್ತಾರೆ.

**ಭಾಷ್ಯ ॥ ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ (ಲ) ಸ್ಥಿರಃ । ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ (ಭಗವದ್ಗೀತಾ) ಇತ್ಯಾದಿ ॥ ೪ ॥**

ಭಾಷ್ಯಾರ್ಥ ॥ (ಆಸನದಲ್ಲಿ ಕೂತುಕೊಂಡು ಶರೀರ ಶಿರಸ್ಸು ಕುತ್ತಿಗೆ ಇವುಗಳನ್ನು ಸಮ ಹೇಗೆ ಆದೀತೋ ಹಾಗೆ ಧರಿಸುತ್ತಾ ಹಂದಾಡದೆ ಇದ್ದ ಹಾಗೆ ಧರಿಸುತ್ತಾ ಸ್ಥಿರವಾದ (ಅಚಂಚಲವಾದ) ಮನಸ್ಸು ಉಳ್ಳವನಾಗಿ ತನ್ನ ನಾಸಾಗ್ರ (ಮುಗಿನ ತುದಿ)ವನ್ನೇ ನೋಡುತ್ತಾ ದಿಕ್ಕುಗಳಲ್ಲಿರತಕ್ಕ ವಿಷಯಗಳನ್ನು ನೋಡದೆ ಇರತಕ್ಕವನಾಗಿ (ತನ್ನ ಪಾಪನಿವೃತ್ತಿಗಾಗಿಯೂ ಆನಂದವೃದ್ಧಿಗಾಗಿಯೂ ಸಮಾಧಿಯೋಗವನ್ನು ಮಾಡತಕ್ಕದು.) ಇದು ಮೊದಲಾದ ಉಪವಿಶ್ಯಾಸನೇ ಇತ್ಯಾದಿ ಸ್ಮೃತಿಗಳು ಉಕ್ತಾರ್ಥದಲ್ಲಿ ಪ್ರಮಾಣಗಳು. ॥ ೧೦ ॥ ॥ ೪ ॥

ಪೀಠಿಕೆ ॥ ಆಸನಾದಿಗಳ ನಿಯಮದಂತೆ ದೇಶಕಾಲಾದಿಗಳ ನಿಯಮವೂ ಅದೆ. (೧) ಪರ್ವತಾಗ್ರೇ ನದೀತೀರೇ, (೨) ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ವಾರ್ಯುಪಸ್ಪೃಶ್ಯ ಮಾಧವಃ, (೩) ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಧರ್ಮಾರ್ಥಾನುಪಚಿಂತಯೇತ್ ಇತ್ಯಾದಿ ಪ್ರಮಾಣಗಳು. ಆದಕಾರಣ ಆಸನಾದಿಗಳು ಪ್ರಧಾನವಾಗಿ ಅಪೇಕ್ಷಿತವಲ್ಲ ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

## ಸೂತ್ರ ॥ ಓಂ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ ॥ ೧೧ ॥

ಸೂತ್ರಾರ್ಥ ॥ ಯಾವ ದೇಶ ಕಾಲಾದಿಗಳಲ್ಲಿ ಧ್ಯಾನಕ್ಕೆ ಏಕಾಗ್ರತೆಯು (ಏಕವಿಷಯಕತ್ವವು) ಬರುವುದೋ, ಅಲ್ಲಿ ಧ್ಯಾನವನ್ನು ಮಾಡಬೇಕು. (ದೇಶವಿಶೇಷ ನಿಯಮವಿಲ್ಲ ಏಕೆಂದರೆ) (ಧ್ಯಾನಕ್ಕೆ ಉಪಯೋಗಿಯಾಗಿ ಆಸನದಂತೆ ದೇಶವಿಶೇಷವು ಆವಶ್ಯಕವೋ, ಅಥವಾ ಜ್ಞಾನೋಪಯೋಗಿಯೋ, ಎರಡೂ ಯುಕ್ತವಲ್ಲ) ನಿಯತ ದೇಶಾದಿಗಳಿಂದ ಧ್ಯಾನದಲ್ಲಿ ಜ್ಞಾನದಲ್ಲಿ ಆಗಲೀ ವಿಶೇಷವಿಲ್ಲದಿರುವುದರಿಂದ. ತಮೇವಂ ದೇಶಂ ಸೇವಿತ ಇತ್ಯಾದಿ ಸ್ಮೃತಿಯು ಸೂಚಿತವಾಯಿತು.

**ಭಾಷ್ಯ ॥ (೧) ದೇಶಕಾಲಾವಸ್ಥಾದಿಷು ಯತ್ರೈಕಾಗ್ರತಾ ಭವತಿ ತತ್ರೈವ ಸ್ಥಾತವ್ಯಂ । (೨) ತಮೇವ ದೇಶಂ ಸೇವೇತ ತಂ ಕಾಲಂ ತಾಮವಸ್ಥಿತಿಂ । ತಾನೇವ ಭೋಗಾನ್ ಭುಂಜೀತ (ಸೇವೇತ) ಮನೋ ಯತ್ರ ಪ್ರಸೀದತಿ ॥ ನ ಹಿ ದೇಶಾದಿಭಿಃ ಕಶ್ಚಿದ್ವಿಶೇಷಃ ಸಮುದೀರಿತಃ । ಮನಃಪ್ರಸಾದನಾರ್ಥಂ ಹಿ ದೇಶಕಾಲಾದಿ ಚಿಂತನಾ ॥ ಇತಿ (ಹಿ) ವಾರಾಹೇ ॥ ೧೧ ॥ ಅಧಿ.೬ ॥ ॥ ೫ ॥**

**ಭಾಷ್ಯಾರ್ಥ ॥** ದೇಶ, ಕಾಲ, ಆಸನ, ಭೋಗಾದಿಗಳಲ್ಲಿ ಯಾವ ದೇಶಾದಿಗಳಲ್ಲಿ ಧ್ಯಾನಕ್ಕೆ ಏಕಾಗ್ರತೆಯು (ಅಂದರೆ, ಇತರವಾದುದನ್ನು ಬಿಟ್ಟು ಭಗವನ್ಮಾತ್ರ ವಿಷಯಕತ್ವವು) ಇರುತ್ತದೋ, ಅಲ್ಲಿಯೇ ನಿಲ್ಲಬೇಕು. (ಆ ದೇಶಾದಿಗಳನ್ನೇ ಆಶ್ರಯಿಸಬೇಕು. ಪರ್ವತಾಗ್ರ ಬ್ರಾಹ್ಮಮುಹೂರ್ತಾದಿ ರೂಪವಾದ ನಿಯತ ದೇಶ ಕಾಲಾದಿಗಳನ್ನು ಆಪೇಕ್ಷಿಸಬಾರದು. ಆ ನಿಯತ ದೇಶಾದಿಗಳಿಂದ ಧ್ಯಾನದಲ್ಲಿಯೂ ಜ್ಞಾನದಲ್ಲಿಯೂ ವಿಶೇಷವಿಲ್ಲದಿರುವುದರಿಂದ) (೨) (ಇದೇ ಅರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ.) ಯಾವ ದೇಶಾದಿಗಳು ಸೇವಿಸಲ್ಪಟ್ಟರೆ, ಮನಸ್ಸು ಪ್ರಸನ್ನವಾಗುತ್ತದೋ, (ಅಂದರೆ, ಪ್ರಯತ್ನವಿಲ್ಲದೆ ವಿಷಯಗಳನ್ನು ಬಿಟ್ಟು ಭಗವನ್ಮಾತ್ರ ವಿಷಯಕವಾಗುತ್ತದೋ ಅಂತಹ ದೇಶವನ್ನೇ ಅಂತಹ ಕಾಲವನ್ನೇ ಅಂತಹ ಆಸನವನ್ನೇ ಸೇವಿಸಬೇಕು. ಅಂತಹ ಭೋಗಗಳನ್ನೇ ಭೋಗಿಸಬೇಕು. (ನಿಯತ ದೇಶ ಕಾಲಾದಿಗಳನ್ನು ಅಪೇಕ್ಷಿಸಬಾರದು. ಏಕೆಂದರೆ) ನಿಯತ ದೇಶಾದಿಗಳಿಂದ ಧ್ಯಾನದಲ್ಲಿ ಯಾವದೊಂದು ವಿಶೇಷವೂ (ಆತಿಶಯವೂ) ಹೇಳಲ್ಪಡುವುದಿಲ್ಲ (ಆದಕಾರಣ ನಿಯತದೇಶಾದಿಗಳು ಆಸನಾದಿಗಳಂತೆ ಧ್ಯಾನೋಪಯೋಗಿಯಾಗಿ ಆವಶ್ಯಕವಲ್ಲ. ಸ್ವತಂತ್ರವಾಗಿಯೇ ಜ್ಞಾನಕ್ಕೆ ಉಪಯುಕ್ತವೂ ಅಲ್ಲ. ಏಕೆಂದರೆ) ಕೇವಲ ದೇಶಾದಿಗಳಿಂದ ಜ್ಞಾನದಲ್ಲಿ ಯಾವ ವಿಶೇಷವೂ (ಅತಿಶಯವೂ) ಇಲ್ಲ. (ಹೇಗೆಂದರೆ) ಮನಸ್ಸಿಗೆ ತೃಪ್ತಿಯನ್ನು ಅಥವಾ ಅಚಾಂಚಲ್ಯವನ್ನು ಸಂಪಾದಿಸಿಕೊಡುವುದಕ್ಕಾಗಿಯೇ ಪರ್ವತಾಗ್ರಾದಿ ನಿಯತ ದೇಶ ಕಾಲಾದಿಗಳ ವಿಚಾರವು ಅಂದರೆ, ಪ್ರತಿಪಾದಿಸುವಿಕೆಯು. (ಯೋಗಶಾಸ್ತ್ರದಲ್ಲಿ ಮಾಡಲ್ಪಟ್ಟಿದೆ.) (ತತ್ತ್ವಪ್ರದೀಪದಲ್ಲಿ **ಯಾ ತು ಯೋಗಶಾಸ್ತ್ರೇ ಹರಿಕ್ಷೇತ್ರದಿನಾದಿದೇಶಕಾಲವಿಶೇಷಾದಿಚಿಂತಾ ಕ್ರಿಯತೇ ಸಾ ಹರೇರ್ವಿಶೇಷಾಭಿ—ವ್ಯಕ್ತಿಹೇತುತ್ವೇನ ತೇಷಾಂ ಮನಃಪ್ರಸಾದಕರತ್ವೇನೈವ। ನಾನ್ಯವಿಶೇಷಹೇತೋಃ—** ಯೋಗಶಾಸ್ತ್ರದಲ್ಲಿ ಹರಿಕ್ಷೇತ್ರ ದಿನ ಮೊದಲಾದ ದೇಶ ಕಾಲ ವಿಶೇಷಾದಿಗಳನ್ನು ವಿಚಾರ ಮಾಡಿದ್ದು ಶ್ರೀಹರಿಯ ವಿಶೇಷಾಭಿವ್ಯಕ್ತಿಗೆ ಕಾರಣವಾಗಿ ಅವರ ಮನಸ್ಸಿಗೆ ತೃಪ್ತಿಯನ್ನು ಮಾಡುವುದರಿಂದಲೇ. ಬೇರೆ ವಿಶೇಷಕ್ಕಾಗಿ ಅಲ್ಲ ಎಂದು ಹೇಳಿದ್ದರಿಂದ ದೇಶವಿಶೇಷಾದಿಗಳಿಗೆ ಜ್ಞಾನೋಪಯೋಗಿತ್ವವಿಲ್ಲ) ಎಂದು ವಾರಾಹ ಪುರಾಣದಲ್ಲಿ ಹೇಳಿಯದೆ. ॥ ೧೨. ॥ ॥ ೫ ॥

## ಅಧಿಕರಣ ಸಾರಾಂಶ

ಉಪವಿಶ್ಯಾಸನೇ ಯುಂಜ್ಯಾತ್ ಎಂದು ಧ್ಯಾನಾಂಶವಾಗಿ ಹೇಳಿದ ಆಸನಾದಿಗಳು ಅನಾವಶ್ಯಕವೋ ಆವಶ್ಯಕವೋ ಆದಕ್ಕಾಗಿ ಆಸನವಿಲ್ಲದೆ ಉಪಾಸನೆಗೆ ಉಪಯುಕ್ತವಾದ ಶ್ರೀಹರಿಯಲ್ಲಿ ಮನಸ್ಸಿನ ನಿವೇಶವು ಯುಕ್ತವೋ ಅಯುಕ್ತವೋ ಎಂದು ಸಂದೇಹವು. ಭಗವಂತನ ದರ್ಶನಕ್ಕೆ ಕಾರಣವಾದ ಉಪಾಸನವು ಶ್ರೀಹರಿಯಲ್ಲಿ ಕೇವಲ ಮನಸ್ಸನ್ನು ಇಟ್ಟಿದ್ದರಿಂದಲೇ ಕೂಡುವುದರಿಂದ ಆಸನವು ಆವಶ್ಯಕವಲ್ಲ. ಆಸನವಿಲ್ಲದೆ ಶ್ರೀಹರಿಯಲ್ಲಿ ಮನೋನಿವೇಶನವೇ ಅಯುಕ್ತವೆಂದು ಹೇಳಕೂಡದು. ಪ್ರತ್ಯಾಹಾರಾದಿಗಳಿಂದಲೂ ಮನೋನಿವೇಶವು ಕೂಡಬಹುದು. ಇಲ್ಲವಾದರೆ ಸ್ಮರ್ತವ್ಯಃ ಸತತಂ ವಿಷ್ಣುಃ ಇತ್ಯಾದಿ ವಿಧಿಗಳೇ ಅನುಪಪನ್ನವಾಗಬೇಕಾಗುವುವು. ಆಸನಾದಿಗಳನ್ನು ಉಪದೇಶ ಮಾಡಿದ್ದರಿಂದ ಅವುಗಳು ಆವಶ್ಯಕಗಳೆಂದಾದರೆ ಪರ್ವತಾಗ್ರೇ ನದೀತೀರೇ ಬ್ರಾಹ್ಮೇ ಮುಹೂರ್ತೇ ಉತ್ಥಾಯ ಇತ್ಯಾದ್ಯುಕ್ತಿಯಿಂದ ದೇಶಾದಿಗಳ ನಿಯಮವೂ ಆವಶ್ಯಕವಾಗ

ಬೇಕಾಗುವುದು. ಎಂದರೆ ಮನಸ್ಸಿಗೆ ವಿಕ್ಷೇಪ (ವ್ಯಗ್ರತ್ವ)ವಿಲ್ಲದೆ ಶ್ರೀಹರಿಯಲ್ಲಿ ಮನೋನಿವೇಶನವು ಪ್ರತ್ಯಾಹಾರಾದಿಗಳಿಂದ ಕೂಡಿದರೂ ಅಚಲಂ ಚೇಚ್ಛರೀರಂಸ್ಯಾತ್ ಎನ್ನುವ ಸ್ಮೃತಿಯಿಂದ ಶರೀರಕ್ಕೆ ಚಲನವಿಲ್ಲದಿದ್ದರೇನೇ ಮನಸ್ಸಿಗೆ ವಿಕ್ಷೇಪಾಭಾವವು ಅವಗತವಾಗುತ್ತದೆ. ಶರೀರಕ್ಕೆ ಅಚಲತ್ವವು ಆಸನದಲ್ಲಿ ಕೂತುಕೊಂಡರೇನೇ ಕೂಡುತ್ತದೆ. ಸಮಂ ಕಾಯಶಿರೋಗ್ರೀವಂ ಇತ್ಯಾದಿ ಸ್ಮೃತಿಬಲದಿಂದಲೂ ಉಪಯುಕ್ತವಾಗಿ ಚೆನ್ನಾಗಿ ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದಕ್ಕಾಗಿ ಆಸನವು ಆವಶ್ಯಕವೇ. ನಿತ್ಯೋಪಾಸನವೂ, ಆಸನವು ಆವಶ್ಯಕವೂ ಎನ್ನುವುದು ವಿರುದ್ಧವಾದುದರಿಂದ ಆಸನವು ಆವಶ್ಯಕವೆಂದಾದರೆ ಸ್ಮರ್ತವ್ಯಃ ಸತತಂ ಎನ್ನುವ ಸ್ಮೃತಿಯಿಂದ ಉಪಾಸನ ವಿಧಿಗೆ ವಿರೋಧವು ಬರುತ್ತದೆಂದು ಹೇಳಕೂಡದು. ಸ್ಮರಣ, ಧ್ಯಾನ ಎಂದು ಉಪಾಸನವು ಎರಡು ವಿಧವಾದುದರಿಂದ ಸ್ಮರಣರೂಪವಾದ ಉಪಾಸನವನ್ನು ನಿತ್ಯದಲ್ಲಿಯೂ ಮಾಡುತ್ತಿರಬೇಕಾಗಿರುವುದರಿಂದ ಅಲ್ಲಿ ಆಸನ ನಿಯಮವಿಲ್ಲವಾದರೂ ಕದಾಚಿತ್ ಮಾಡತಕ್ಕ ಧ್ಯಾನರೂಪವಾದ ಉಪಾಸನದಲ್ಲಿ ಅದು ಅವಶ್ಯಕವಾದ ಪ್ರಯುಕ್ತ ವಿರೋಧವಿಲ್ಲ. ಆದುದರಿಂದಲೇ ಆಸನಾದಿಗಳನ್ನುಪದೇಶಿಸಿದ್ದು ವ್ಯರ್ಥವಲ್ಲ. ಹೀಗಾದರೆ ದೇಶವಿಶೇಷಾದಿಗಳಿಗೂ ಆವಶ್ಯಕತ್ವವು ಬರಬೇಕಾಗುವುದು ಎಂದೂ ಅಲ್ಲ. ಆಸನಾದಿಗಳಂತೆ ಧ್ಯಾನೋಪಯೋಗಿತ್ವವೂ ಶ್ರವಣಾದಿಗಳಂತೆ ಜ್ಞಾನೋಪಯೋಗಿತ್ವವೂ ದೇಶವಿಶೇಷಾದಿಗಳಿಗೆ ಇಲ್ಲ. ತಮೇ ವಂ ದೇಶಂ ಸೇವೇತ ಇತ್ಯಾದಿ ಸ್ಮೃತಿಗಳಿಂದ ಧ್ಯಾನಕ್ಕೆ ಎಲ್ಲಿ ಭಗವನ್ಮಾತ್ರ ವಿಷಯಕತ್ವವೋ ಅಂತಹ ದೇಶಾದಿಗಳನ್ನೇ ಇಟ್ಟುಕೊಳ್ಳಬೇಕು. ಪರ್ವತಾಗ್ರಾದಿ ನಿಯಮವಿಲ್ಲ. ॥ ಅಧಿ. ೬ ॥

**ಆಸೀನಾಧಿಕರಣವು ಸಮಾಪ್ತವಾಯಿತು.**

# ೭ ಅಪ್ರಾಯಣಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಮುಕ್ತಿಪರ್ಯಂತವಾಗಿ ಭಗವದ್ಧ್ಯಾನವು ಆವಶ್ಯಕವೆಂದು ಸಮರ್ಥಿಸುತ್ತಾರೆ. ಸಾಧನಗಳನ್ನು ಕಾರ್ಯಪರ್ಯಂತವಾಗಿಯೇ ಮಾಡಬೇಕಾಗಿರುವುದರಿಂದ ಜ್ಞಾನವು ಹುಟ್ಟುವ ತನಕವೇ ಧ್ಯಾನವು ಆವಶ್ಯಕವು. ಮುಕ್ತಿಪರ್ಯಂತ ಅನುಷ್ಠಾನ ಮಾಡಲಿಕ್ಕೆ ಕಾರಣವಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆಪ್ರಾಯಣಾತ್ತತ್ರಾಪಿ ಹಿ ದೃಷ್ಟಂ ಓಂ ॥ ೧೨ ॥

**ಸೂತ್ರಾರ್ಥ** ॥ ಚರಮಶರೀರೋತ್ಕ್ರಮಣ ಪರ್ಯಂತವಾಗಿ ಅಥವಾ ಶ್ರೀನಾರಾಯಣನನ್ನು ಕುರಿತು ಪ್ರಾಪ್ತಿರೂಪವಾದ ಮೋಕ್ಷಪರ್ಯಂತವಾಗಿ ಧ್ಯಾನವನ್ನು ಅವಶ್ಯವಾಗಿ ಮಾಡಬೇಕು. ಏಕೆಂದರೆ, ಈ ವಿಷಯದಲ್ಲಿ ಸ ಯೋ ಹ ವಾ ಎನ್ನುವ ಶ್ರುತಿಯು ಅದೆ. ಮುಕ್ತಿಯಲ್ಲಿಯೂ ಕೂಡ ಧ್ಯಾನವನ್ನು ಮಾಡುತ್ತಿರುತ್ತಾರೆ. (ಅದಕ್ಕಿಂತ ಮೊದಲು ಮಾಡುತ್ತಾರೆನ್ನುವುದು ಸುತರಾಂ ಸಿದ್ಧವು.) ಮುಕ್ತಾ ಅಪಿ ಹ್ಯೇನಮುಪಾಸತೇ ಎನ್ನುವ ಶ್ರುತಿಯು ಇದೆ.

**ಭಾಷ್ಯ ॥ (೧) ಯಾವನ್ಮೋಕ್ಷಸ್ತಾವದುಪಾಸನಾದಿ ಕಾರ್ಯಂ । (೨) ಸ ಯೋ ಹ ವೈ ತದ್ಭಗವನ್ಮನುಷ್ಯೇಷು ಪ್ರಾಯಣಾಂತಮೋಂಕಾರಮಭಿಧಾಯಿತ (ಪ್ರ. ೫.೧)। ಇತಿ ಹಿ ಶ್ರುತಿಃ ॥ ೧ ॥**

ಭಾಷ್ಯಾರ್ಥ ॥ (೧) ಮೋಕ್ಷಪರ್ಯಂತವಾಗಿ ಧ್ಯಾನ ಶ್ರವಣಾದಿಗಳನ್ನು ಭಗವದರ್ಚನಾದಿ ಗಳನ್ನೂ ಮಾಡಲೇಬೇಕು. (ಜ್ಞಾನಪರ್ಯಂತವೇ ಅಲ್ಲ) (ಜ್ಞಾನವು ಹುಟ್ಟುವ ಪರ್ಯಂತ ಶ್ರವಣಾದಿಗಳಿಂದ ಯುಕ್ತವಾದ ಧ್ಯಾನವನ್ನು ಮಾಡಬೇಕು. ಜ್ಞಾನವು ಹುಟ್ಟಿದ ಮೇಲೆಯಾದರೂ ಆನಂದಾತಿಶಯಕ್ಕಾಗಿ ಪ್ರಾಯೇಣ ಕೇವಲ ಧ್ಯಾನವನ್ನೇ ಮಾಡಬೇಕು. ಶ್ರವಣಾದಿಗಳಿಗೆ ಆನಂದಾತಿಶಯವು ಸಿದ್ಧಿಸಲಾರದು. ಸಮ್ಯಕ್ ಧ್ಯಾನಲಾಭವಾಗದೆ ಇದ್ದರೆ ಶ್ರವಣಾದಿಗಳೂ ಅವಶ್ಯಕವು.) (೨) (ಧ್ಯಾನಕ್ಕೆ ಜ್ಞಾನವು ಫಲವಾಗಿದ್ದುದರಿಂದ ಜ್ಞಾನದಶೆಯಿಂದ ಮೊದಲು ಧ್ಯಾನವನ್ನು ಮಾಡಬೇಕಾಗಿದ್ದರೂ ಆ ಮೇಲೆಯೂ ಮೋಕ್ಷಪರ್ಯಂತವಾಗಿಯೂ ಮಾಡಬೇಕೆಂದು ಯಾವುದರಿಂದ ತಿಳಿಯುತ್ತದೆ ಎಂದರೆ) ಪೂಜ್ಯರೇ ಈ ಜ್ಞಾನಿ ಮನುಷ್ಯರಲ್ಲಿ ಯಾರಾದರೂ ಅಧಿ ಕಾರಿಯು ಮೋಕ್ಷಪರ್ಯಂತವಾಗಿ ಓಂ ಎನ್ನುವ ಪ್ರಣವವಾಚ್ಯನಾದ ಶ್ರೀಹರಿಯನ್ನು ಪ್ರಣವ ಮಂತ್ರದಿಂದ ಸರ್ವದಾ ಧ್ಯಾನಿಸುತ್ತಾನೋ, (ಅಂತಹ ಪುರುಷನು ಆ ಧ್ಯಾನದಿಂದ ಯಾವ ಲೋಕವನ್ನು ಹೊಂದುತ್ತಾನೆ, ಎಂದು ಶ್ರುತಿಯು ಇದೆ.) (ಇದು ಪಿಪ್ಪಲಾದರನ್ನು ಕುರಿತು ಶೈಬ್ಯನ ವಾಕ್ಯವು.) ॥ ೧ ॥

ಪೀಠಿಕೆ ॥ ಕೈಮುತ್ಯ ನ್ಯಾಯದಿಂದಲೂ ಧ್ಯಾನವು ಮುಕ್ತಿಪರ್ಯಂತ ಆವಶ್ಯಕವೆನ್ನುತ್ತಾರೆ—

**ಭಾಷ್ಯ ॥ ಸರ್ವದೈನಮುಪಾಸೀತ ಯಾವದ್ವಿಮುಕ್ತಿರ್ಮುಕ್ತಾ ಅಪಿ ಹ್ಯೇನಮುಪಾಸತೇ । ಇತಿ (ಚ) ಸೌಪರ್ಣಶ್ರುತಿಃ ॥ ೨ ॥**

ಭಾಷ್ಯಾರ್ಥ ॥ ಜ್ಞಾನದಿಂದ ಮೊದಲೂ ಮೇಲೆಯೂ ಕೂಡ ಮೋಕ್ಷವಾಗುವ ತನಕ ಶ್ರೀಹರಿಯನ್ನು ಉಪಾಸನ ಮಾಡುತ್ತಾ ಇರಬೇಕು. ಮುಕ್ತರೂ ಕೂಡ ಶ್ರೀಹರಿಯನ್ನು ಧ್ಯಾನ ಮಾಡುತ್ತಾ ಇರುತ್ತಾರೆ. (ಇದರಿಂದ ಅಮುಕ್ತರಾದ ಜ್ಞಾನಿಗಳು ಮಾಡಬೇಕೆಂದು ಸುತರಾಂ ಸಿದ್ಧವಾಗುತ್ತವೆ.) ಎಂದು ಸೌಪರ್ಣಾ ಶ್ರುತಿಯು.

ಪೀಠಿಕೆ ॥ ಜ್ಞಾನಪರ್ಯಂತ ಶ್ರವಣಾದಿಗಳಿಂದ ಯುಕ್ತವಾದ ಧ್ಯಾನವನ್ನು ಮಾಡಬೇಕೆನ್ನುವ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಶೃಣುಯಾದ್ಯಾವದಜ್ಞಾನಂ ಮತಿರ್ಯಾವದಯುಕ್ತತಾ । ಧ್ಯಾನಂ ಚ ಯಾವದೀಕ್ಷಾ ಸ್ಯಾನ್ನೇಕ್ಷಾ ಕ್ವಚ ನ ಬಾಧ್ಯತೇ ॥ ದೃಷ್ಟ ತತ್ತ್ವಸ್ಯ ಚ ಧ್ಯಾನಂ ಯದಾದೃಷ್ಟಿರ್ನ ವಿದ್ಯತೇ । ಭಕ್ತಿಶ್ಚಾನಂತಕಾಲೀನಾ ಪರಮೇ ಬ್ರಹ್ಮಣಿ ಸ್ಫುಟಾ ॥ ಆ ವಿಮುಕ್ತೇರ್ವಿಧಿರ್ನಿತ್ಯಂ ಸ್ವತ ಏವ ತತಃ ಪರಂ । ಇತಿ (ಚ) ಬ್ರಹ್ಮಾಂಡೇ ॥ ೧೨ ॥ ಅಧಿ. ೭ ॥ ॥ ३ ॥**

**ಭಾಷ್ಯಾರ್ಥ ॥** ಅಜ್ಞಾನನಿವೃತ್ತಿಪರ್ಯಂತ ಶ್ರವಣ ಮಾಡಬೇಕು. (ಶ್ರವಣಕ್ಕೆ ಅಜ್ಞಾನ ನಿವೃತ್ತಿಯೇ ಫಲವು.) ಯುಕ್ತ್ಯಾಭಾಸದಿಂದುಂಟಾದ ಸಂಶಯವಿಪರ್ಯಾಸಗಳ ನಿರಾಸಪರ್ಯಂತ ಮನನ ಮಾಡಬೇಕು. ಧ್ಯಾನವಾದರೂ ಭಗವದ್ದರ್ಶನಪರ್ಯಂತ ಮಾಡತಕ್ಕುದು. ಬ್ರಹ್ಮದರ್ಶನವು ಎಲ್ಲಿಯೂ ಬಾಧಿಸಲ್ಪಡುವುದಿಲ್ಲ (ಕದಾಚಿತ್ ಆಗತಕ್ಕ ಬ್ರಹ್ಮದರ್ಶನವೂ ಮೋಕ್ಷಸಾಧನವು ಆಗಿಯೇ ಆಗುತ್ತದೆ. ಕದಾಚಿತ್ ಮಾಡತಕ್ಕ ಶ್ರವಣಾದಿಗಳಂತೆ ಫಲವನ್ನು ಹುಟ್ಟಿಸಲಿಕ್ಕೆ ಸಮರ್ಥವಲ್ಲವೆಂದಲ್ಲ) ಭಗವದಪರೋಕ್ಷ ಜ್ಞಾನಿಗೆ ಯಾವಾಗ ಯಾವಾಗ ಅಪರೋಕ್ಷ ಜ್ಞಾನವು ಉಂಟಾಗುವುದಿಲ್ಲವೋ, ಆಗಆಗ ಧ್ಯಾನವನ್ನು ಮಾಡಲೇಬೇಕು. (ಧ್ಯಾನಕ್ಕೆ ಶ್ರವಣಾದಿಗಳಂತೆ ಅವಧಿಯು ಇರುವುದಿಲ್ಲ) (ಕೇವಲ ಅಪರೋಕ್ಷ ಜ್ಞಾನಿಗೆ ಧ್ಯಾನವೇ ನಿರವಧಿಕವೆಂದಲ್ಲ. ಮತ್ತೆ ಪರಬ್ರಹ್ಮ ವಿಷಯದಲ್ಲಿ ನಿರುಪಾಧಿಕವಾದ ಭಕ್ತಿಯೂ ಕೂಡ ಅನಂತಕಾಲೀನವು (ನಿರವಧಿಕವು) ಅಪೇಕ್ಷಿತವಾಗಿದೆ. (ಜ್ಞಾನೋತ್ಪತ್ತಿಯ ನಂತರದಲ್ಲಿಯೂ ನಿರವಧಿಕ ಧ್ಯಾನವು ವಿಹಿತವಾದ ಪ್ರಯುಕ್ತ ಮಾಡಲ್ಪಡುತ್ತದೋ, ವಿಹಿತವಾಗದೇನೇ ಮಾಡಲ್ಪಡುತ್ತದೋ, ೧ನೇದು ಅಯುಕ್ತವು. ನಿರವಧಿಕ ಧ್ಯಾನವು ವಿಹಿತವಾದ ಪ್ರಯುಕ್ತ ಕಾರ್ಯವೆಂದಾದರೆ ಮೋಕ್ಷದಲ್ಲಿಯೂ ಕೂಡ ಅದು ವಿಹಿತವಾದಪ್ರಯುಕ್ತವೇ ಅದನ್ನು ಮಾಡಬೇಕೆಂದು ಆಗುವುದರಿಂದ ಮುಕ್ತನಿಗೆ ವಿಧಿಬಂಧ ವರ್ಜಿತತ್ವರೂಪವಾದ ಮೋಕ್ಷಕ್ಕೆ ವಿರೋಧವು ಬರುವುದು. ೨ನೇದೂ ಕೂಡಲಾರದು. ವಿಧಿಯು ಇಲ್ಲವಾದರೆ ಜ್ಞಾನೋತ್ತರದಲ್ಲಿ ಧ್ಯಾನ ಮಾಡುವುದು ಕೂಡಲಾರದು. ಎಂದರೆ) ಮೋಕ್ಷಪರ್ಯಂತವಾಗಿ ನಿಯಮದಿಂದ ಭಕ್ತಿಧ್ಯಾನಗಳಿಗೆ ವಿಧಿಯೇ. (ವಿಧಿವಿಹಿತವಾದ ಪ್ರಯುಕ್ತವೇ ಮಾಡಬೇಕು.) ಮುಕ್ತಿಯ ಅನಂತರದಲ್ಲಿಯಾದರೂ ಧ್ಯಾನವನ್ನು ಸ್ವಭಾವದಿಂದಲೇ ಮಾಡುವುದು. (ತಥಾಚ ಮೋಕ್ಷಪರ್ಯಂತವಾಗಿಯೇ ಧ್ಯಾನವಿಧಿಯು, ಮೋಕ್ಷಾಂತರದಲ್ಲಿ ಆದರೂ ಸ್ವಭಾವದಿಂದಲೇ ಧ್ಯಾನವು ಜ್ಞಾನಾಂತರದಲ್ಲಿ ಆಗತಕ್ಕ ಧ್ಯಾನಕ್ಕಾದರೂ ಮುಕ್ತಿಯಲ್ಲಿ ಆಗತಕ್ಕ ಆನಂದಾತಿಶಯವೇ ಫಲವು ಎಂದು ಬ್ರಹ್ಮಾಂಡಪುರಾಣದಲ್ಲಿಯೂ ವಿವಕ್ಷಿತವಾದ ಅರ್ಥವು ಉಕ್ತವಾಗಿದೆ. ॥ ೧೨ ॥ ॥ ೨ ॥

## ಅಧಿಕರಣ ಸಾರಾಂಶ

ಧ್ಯಾನವು ಜ್ಞಾನಪರ್ಯಂತವಾಗಿಯೇ ಆವಶ್ಯಕವೋ ಅಥವಾ ಮುಕ್ತಿಪರ್ಯಂತವಾಗಿಯೂ ಆವಶ್ಯಕವೋ, ಅದಕ್ಕಾಗಿ ಜ್ಞಾನಕ್ಕಾಗಿ ವಿಹಿತವಾದ ಧ್ಯಾನವನ್ನು ಮುಕ್ತಿಪರ್ಯಂತವಾಗಿ ಮಾಡಲಿಕ್ಕೆ ಹೇತುವಿಲ್ಲವೋ ಇದಯೋ, ಅದಕ್ಕಾಗಿ ಮುಕ್ತಿಯಲ್ಲಿ ಆನಂದಾತಿಶಯವು ಧ್ಯಾನದಿಂದ ಇತರವಾದ ಶ್ರವಣಾದಿಗಳಿಂದಲೂ ಆಗುತ್ತದೋ, ಧ್ಯಾನದಿಂದಲೇ ಆಗುತ್ತದೋ ಎಂದು ಸಂದೇಹವು. ಮುಕ್ತಿಯಲ್ಲಿ ಆನಂದವೃದ್ಧಿಯು ಧ್ಯಾನದಿಂದ ಇತರವಾದ ಶ್ರವಣ ಮೊದಲಾದ ಸಾಧನಾಂತರದಿಂದಲೂ ಕೂಡುವುದರಿಂದ ಜ್ಞಾನಕ್ಕಾಗಿ ವಿಹಿತವಾದ ಧ್ಯಾನವನ್ನು ಮುಕ್ತಿಪರ್ಯಂತ ಅನುಷ್ಠಾನ ಮಾಡಲಿಕ್ಕೆ ಹೇತುವು ಇಲ್ಲದಿರುವುದರಿಂದ ಮುಕ್ತಿಪರ್ಯಂತ ಧ್ಯಾನವನ್ನು ಮಾಡಬೇಕಾಗಿಲ್ಲ ಎಂದು ಪೂರ್ವಪಕ್ಷವು ಬಂದರೆ—**ಯೋಗಾರೂಢಸ್ಯ** ತಸ್ಯೈವ ಎಂದು ಗೀತೆಯಲ್ಲಿ ಯೋಗಾರೂಢವಾದ ಅಪರೋಕ್ಷಜ್ಞಾನಿಗೆ ಧ್ಯಾನವು ಪರಮಸುಖಕಾರಣವು ಎಂದು ಹೇಳಿದ್ದರಿಂದ ಪ್ರಧಾನವಾಗಿ ಧ್ಯಾನವು ಆನಂದವೃದ್ಧಿಗೆ ಹೇತುವೆಂದು ಅವಗತವಾಗುತ್ತದೆ. ಪ್ರಾಯಣಾಂತಮೋಂಕಾರಮಭಿಧ್ಯಾಯೀತ ಎನ್ನುವ ಶ್ರುತಿ

ಯಿಂದಲೂ ಮುಕ್ತಾ ಅಪಿ ಹ್ಯೇನಮುಪಾಸತೇ ಎನ್ನುವ ಶ್ರುತ್ಯುಕ್ತವಾದ ಕೈಮುತ್ಯನ್ಯಾಯದಿಂದಲೂ ಮುಕ್ತಿಪರ್ಯಂತವಾಗಿ ಧ್ಯಾನವನ್ನು ಮಾಡಲೇಬೇಕು. ॥ ಅಧಿ. ೭ ॥

**ಆಪ್ರಾಯಣಾಧಿಕರಣವು ಸಮಾಪ್ತವಾಯಿತು.**

# ೮ ತದಧಿಗಮಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪ್ರಸಂಗಸಂಗತ್ಯಾ ಪ್ರಾಪ್ತವಾದ ಪ್ರಮೇಯವನ್ನು ಸಮಾಪಿಸಿ ಪಾದಾರ್ಥಭೂತವಾದ ಕರ್ಮಕ್ಷಯರೂಪವಾದ ಫಲವನ್ನು ಸಮರ್ಥಿಸುತ್ತಾರೆ. ಮೊದಲು ಸಂಪಾದಿಸಲ್ಪಟ್ಟ ಬಹು ಕರ್ಮಗಳು ಇದ್ದ ಪ್ರಯುಕ್ತ ಜ್ಞಾನದಿಂದ ಮೋಕ್ಷವು ಆಗುವುದಿಲ್ಲ. ಜ್ಞಾನದಿಂದಲೇ ಕರ್ಮಕ್ಷಯವು ಆಗುತ್ತದೆ ಎನ್ನುವುದು **ನಾಭುಕ್ತಂ ಕ್ಷೀಯತೇ ಕರ್ಮ** ಎನ್ನುವ ಸ್ಮೃತಿಯಿಂದ ವಿರುದ್ಧವಾಗಿದೆ. ಬಹು ಶರೀರಗಳೇ ಫಲವಾಗಿ ಉಳ್ಳ ಕರ್ಮಗಳ ಭೋಗವು ಜ್ಞಾನವು ಉಂಟಾದ ಜನ್ಮದಲ್ಲಿಯೇ ಕೂಡಲಾರದು. ಜ್ಞಾನಜನ್ಮದಲ್ಲಿಯೇ ಭೋಗವು ಕೂಡಿದರೂ ಭೋಗಕಾಲದಲ್ಲಿ ಪುನಃ ಕರ್ಮಾಂತರಪ್ರಾಪ್ತಿಯಾಗುವುದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ॥ ೧೩ ॥

**ಸೂತ್ರಾರ್ಥ ॥** ಬ್ರಹ್ಮದರ್ಶನವಾದ ಮೇಲೆ ಮೇಲಿನ ಪಾಪಕ್ಕೆ ಅಶ್ಲೇಷವು. (ಸಂಬಂಧಾಭಾವವು. ಅಂದರೆ ತನ್ನಿಮಿತ್ತಕ ಫಲಲೇಪವಾಗದಿರುವುದು.) ಮೊದಲಿನ ಪಾಪಕ್ಕೆ ವಿನಾಶವು ಆಗುತ್ತದೆ. **ನಾಭುಕ್ತಂ ಕ್ಷೀಯತೇ ಕರ್ಮ** ಎನ್ನುವುದಕ್ಕೆ ಅಜ್ಞವಿಷಯತ್ವವನ್ನಾಗಲೀ ಪ್ರಾರಬ್ಧಕರ್ಮವಿಷಯತ್ವವನ್ನಾಗಲೀ ಕಲ್ಪಿಸಬೇಕು. (ಏಕೆಂದರೆ) **ತದ್ಯಥಾ ಪುಷ್ಕರಪಲಾಶೇ** ಎನ್ನುವ ಶ್ರುತಿಯಲ್ಲಿ ಮೇಲಿನ ಪಾಪಕ್ಕೆ ಅಶ್ಲೇಷವನ್ನೂ **ತದ್ಯಥೈಷೀಕಾ ತೂಲಂ** ಎನ್ನುವ ಶ್ರುತಿಯಲ್ಲಿ ಸಂಚಿತವಾದ ಕರ್ಮಕ್ಕೆ ನಾಶವನ್ನೂ ಹೇಳಿದ್ದರಿಂದ. ಅಶ್ಲೇಷವೆಂದರೆ—ಈ ಜನ್ಮದಲ್ಲಿ ಅನುಚಿತ್ವ ಅಸಂಭಾಷ್ಯತ್ವಾದಿಗಳು ಇಲ್ಲದಿರುವಿಕೆಯು. ಪರಲೋಕದಲ್ಲಿ ನರಕಾದಿಗಳಿಗೆ ಕಾರಣವಾಗದಿರುವಿಕೆಯು.

**ಭಾಷ್ಯ ॥ (೧) ಬ್ರಹ್ಮದರ್ಶನ ಉತ್ತರಾಘಸ್ಯಶ್ಲೇಷಃ ಪೂರ್ವಾಘಸ್ಯ ವಿನಾಶಶ್ಚ । (೨) ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮನ ಶ್ಲಿಷ್ಯತೇ** (ಛಾ.೪.೧೪.೩)। **(೩) ತದ್ಯಥೈಷೀಕಾ ತೂಲಮಗ್ನೌ ಪ್ರೋತಂ ಪ್ರದೂಯತೈವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ** (ಛಾ.೫.೨೪.೩) **ಇತಿ ತದ್ವ್ಯಪದೇಶಾತ್ ॥ ೧೩ ॥** ॥ ೧ ॥

**ಭಾಷ್ಯಾರ್ಥ ॥** (೧) ಪರಬ್ರಹ್ಮನ ದರ್ಶನವಾದ ಮೇಲೆ ಜ್ಞಾನವು ಹುಟ್ಟಿದ ಮೇಲೆ ಆಗತಕ್ಕ

ಪಾಪಕ್ಕೆ ಸಂಬಂಧಾಭಾವವು. ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಮಾಡಿರತಕ್ಕ ಅಪ್ರಾರಬ್ಧವಾದ ಪಾಪಕ್ಕೆ ಸ್ವರೂಪತಃ ವಿನಾಶವು ಆಗುತ್ತದೆ. (**ನಾಭುಕ್ತಂ ಕ್ಷೀಯತೇ** ಎನ್ನುವ ಸ್ಮೃತಿಯಾದರೂ ಅಜ್ಞವಿಷಯಕವು.) ತದ್ಯಥಾ ಎನ್ನುವ ಶ್ರುತಿಯಲ್ಲಿ ಜ್ಞಾನದಿಂದಲೇ ಪೂರ್ವೋತ್ತರ ಪಾಪಗಳಿಗೆ ವಿನಾಶ ಅಶ್ಲೇಷಗಳನ್ನು ಹೇಳಿದ್ದರಿಂದ. (೨) ಆ ಅರ್ಥದಲ್ಲಿ ಮುಂದೆ ಹೇಳುವ ದೃಷ್ಟಾಂತವು. ಹೇಗೆ ಪದ್ಮಪತ್ರದಲ್ಲಿ ಜಲಗಳು ಸಂಬಂಧ್ದಗಳಾಗುವುದಿಲ್ಲವೋ, ಹೀಗೆಯೇ ಹಿಂದೆ ಹೇಳಿದ ಪ್ರಕಾರ ಬ್ರಹ್ಮಜ್ಞಾನಿಯಲ್ಲಿ ಪಾಪಫಲವು ಸಂಬದ್ಧವಾಗುವುದಿಲ್ಲ (ಆತನು ಪಾಪಫಲವಾದ ನರಕಾದಿಗಳನ್ನು ಹೊಂದುವುದಿಲ್ಲ) (೩) ಹೇಗೆ ತೃಣವಿಶೇಷವೂ, ಹತ್ತಿಯೂ ಅಗ್ನಿಯಲ್ಲಿ ಪ್ರವಿಷ್ಟವಾದುದಾಗಿ ಸುಡಲ್ಪಡುತ್ತದೋ, ಹೀಗೆಯೇ ಈ ಜ್ಞಾನಿಗೆ ಜ್ಞಾನವು ಹುಟ್ಟಿದ ಮೇಲೆ ಪೂರ್ವದಲ್ಲಿ ಮಾಡಿರತಕ್ಕ ಎಲ್ಲಾ ಪಾಪಗಳೂ ಸ್ವರೂಪತಃ ನಷ್ಟಗಳಾಗುತ್ತವೆ. ಹೀಗೆ ಆ ಜ್ಞಾನದಿಂದಲೇ ಪೂರ್ವೋತ್ತರ ಪಾಪಗಳ ವಿನಾಶ ಅಶ್ಲೇಷಗಳನ್ನು ಹೇಳಿದ್ದರಿಂದ. ॥ ೧೩ ॥ ॥ ೧ ॥

**ಪೀಠಿಕೆ** ॥ ಹೀಗೆ ಬ್ರಹ್ಮಜ್ಞಾನಿಗೆ ಮುಕ್ತಿಸಿದ್ಧಿಗಾಗಿ ಜ್ಞಾನದಿಂದಲೇ ಪಾಪಗಳ ವಿನಾಶ ಅಶ್ಲೇಷಗಳನ್ನು ಹೇಳಿ ಅದರಂತೆ ಭಗವದ್ದ್ವೇಷಿಗಳ ಪುಣ್ಯಕ್ಕೂ ಮಿಥ್ಯಾಜ್ಞಾನದಿಂದಲೇ ವಿನಾಶ ಅಶ್ಲೇಷಗಳನ್ನು ತಮಸ್ಸಿದ್ಧಿಗಾಗಿ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಓಂ ॥ ೧೪ ॥

**ಸೂತ್ರಾರ್ಥ** ॥ ಪ್ರಸ್ತುತ ಜ್ಞಾನಿಯಿಂದ ಇತರನಾದ ಈಶ್ವರನ ದ್ವೇಷಿಗೆ ಅನುತ್ಥಾನಪಾತವು ಆಸನ್ನವಾಗುತ್ತಿರಲು ಅಂದರೆ, ಮಿಥ್ಯಾಜ್ಞಾನವು ಪೂರ್ಣವಾಗುತ್ತಿರಲು ತಮಸ್ಸಿನಲ್ಲಿ ಬೀಳುವುದಕ್ಕಾಗಿಯೇ, ಪ್ರಸ್ತುತವಾದ ಪಾಪದಿಂದ ಇತರವಾದ ಪುಣ್ಯಕ್ಕೂ ಕೂಡ ಜ್ಞಾನಿಗಳ ಪಾಪದಂತೆಯೇ ಉತ್ತರಪೂರ್ವ ಪಾಪಗಳಿಗೆ ಅಶ್ಲೇಷ ವಿನಾಶಗಳು ಆಗುತ್ತವೆ.

**ಭಾಷ್ಯ ॥ (೧) ಪುಣ್ಯಸ್ಯಾಪ್ಯೇವಮಸಂಶ್ಲೇಷಃ ಪಾತೇ । (೨) ತು ಶಬ್ದೋಽನುತ್ಥಾನವಾಚೀ। (೩) ಯಥಾಽಶ್ಲೇಷೋ ವಿನಾಶಶ್ಚ ಮುಕ್ತಸ್ಯ ತು ವಿಕರ್ಮಣಃ । ಏವಂ ಸುಕರ್ಮಣಶ್ಚಾಪಿ ಪತತಸ್ತಮಸಿ ಧ್ರುವಂ ॥ ಇತ್ಯಾಗ್ನೇಯ ॥ ೧೪ ॥ ॥ ೨ ॥**

**ಭಾಷ್ಯಾರ್ಥ** ॥ (೧) ಭಗವದ್ದ್ವೇಷಿಗಳಿಗೆ ತಮಸ್ಸಿನಲ್ಲಿ ಬೀಳುವಿಕೆಯು ಪ್ರಾಪ್ತವಾಗುತ್ತಿರಲು (ಅಂದರೆ, ತಮಸ್ಸಿನಲ್ಲಿ ಪತನಕ್ಕೆ ಕಾರಣವಾದ ಮಿಥ್ಯಾಜ್ಞಾನವು ಪೂರ್ಣವಾಗುತ್ತಿರಲು ತಮಸ್ಸಿನ ಪ್ರಾಪ್ತಿಗಾಗಿ) ತತ್ತ್ವಜ್ಞಾನಿಗಳ ಪೂರ್ವೋತ್ತರ ಪಾಪಗಳಿಗೆ ಹೇಗೆ ನಾಶಾಶ್ಲೇಷಗಳೋ ಹಾಗೆಯೇ ಭಗವದ್ದ್ವೇಷಿಗಳ ಪುಣ್ಯಕ್ಕೂ ಸಂಬಂಧಾಭಾವವೂ ವಿನಾಶವೂ ಆಗುತ್ತದೆ. (೨) (ಅಂಧಂತಮಸ್ಸಿನಲ್ಲಿ ಪಾತವು ಪ್ರಾಪ್ತವಾದಾಗ್ಯೂ ಅದನ್ನು ಅನುಭವಿಸಿದ ಮೇಲೆ ಪುಣ್ಯಭೋಗವು ಕೂಡುವುದರಿಂದ ಪಾಪಾಶ್ಲೇಷಾದಿಗಳಿಂದ ಏನು ಪ್ರಯೋಜನವು ಎಂದರೆ) ತು ಶಬ್ದವು ತಮಸ್ಸಿನಲ್ಲಿ ಬಿದ್ದವನಿಗೆ ಅನುತ್ಥಾನರೂಪವಾದ ವಿಶೇಷವನ್ನು ಹೇಳುತ್ತದೆ. ತಥಾಚ ತಮಸ್ಸಿನಿಂದ ಅನುತ್ಥಾನಪಾತವು (ಪುನ ತಿರುಗಿ ಬಾರದಿರುವಿಕೆ) ಪ್ರಾಪ್ತವಾಗುತ್ತಿರಲು ಅದಕ್ಕಾಗಿ ಭಗವದ್ದ್ವೇಷಿಗಳ ಪುಣ್ಯಕ್ಕೆ ಅಶ್ಲೇಷ ವಿನಾಶಗಳು

ಆವಶ್ಯಕಗಳೇ. (೩) (ಸೂತ್ರಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ.) ಜೀವನ್ಮುಕ್ತನ, ಅಥವಾ ಮುಕ್ತಿಗೆ ಹೋಗಲು ಸನ್ನದ್ಧನಾದವನ, ಜ್ಞಾನೋತ್ತರದಲ್ಲಿ ಮಾಡಿದ, ಮತ್ತು ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಮಾಡಿದ ಅಪ್ರಾರಬ್ಧವಾದ ಪಾಪಕರ್ಮಕ್ಕೆ ಅಂದರೆ, ಪಾಪಕರ್ಮಜನ್ಯವಾದ ಅಧರ್ಮಕ್ಕೆ ಅಶ್ಲೇಷವೂ ವಿನಾಶವೂ ಹೇಗೆ, ಅವಶ್ಯಕವೋ, ಹಾಗೆಯೇ ನಿಶ್ಚಿತವಾಗಿ ತಮಸ್ಸಿನಲ್ಲಿ ಬೀಳತಕ್ಕವನ ತಮಸ್ಸಿನಲ್ಲಿ ಬೀಳಲಿಕ್ಕೆ ಸನ್ನದ್ಧನಾದವನ ಪುಣ್ಯಕರ್ಮಗಳಿಗೆ (ಅಂದರೆ, ಪುಣ್ಯಕರ್ಮದಿಂದುಂಟಾದ ಧರ್ಮಕ್ಕೆ) ಅಶ್ಲೇಷವೂ ವಿನಾಶವೂ ಆಗುತ್ತದೆ ಎಂದು ಆಗ್ನೇಯ ಪುರಾಣದಲ್ಲಿ ಹೇಳಿದೆ. (ದ್ವೇಷಿಪುಣ್ಯಕ್ಕೆ ಅಸಂಶ್ಲೇಷವೆಂದರೆ, ಈ ಲೋಕದಲ್ಲಿ ಖ್ಯಾತ್ಯಾದಿಗಳನ್ನು ಸಂಪಾದಿಸಿಕೊಡದೆ ಇರುವುದು. ಪರಲೋಕದಲ್ಲಿ ಸ್ವರ್ಗಾದಿಗಳನ್ನು ಸಂಪಾದಿಸಿಕೊಡದೆ ಇರುವುದು.) ॥ ೧೪ ॥ ॥ ೨ ॥

ಪೀಠಿಕೆ ॥ ಬ್ರಹ್ಮಜ್ಞಾನಿ ಬ್ರಹ್ಮದ್ವೇಷಿಗಳಿಗೆ ಜ್ಞಾನಾದಿಗಳಿಂದಲೇ ಪಾಪಪುಣ್ಯಗಳಿಗೆ ಕ್ಷಯವಾಗಿ ಜ್ಞಾನಾದಿಗಳು ಹುಟ್ಟಿದೊಡನೆಯೇ ತತ್ಕ್ಷಣದಲ್ಲಿಯೇ ಮೋಕ್ಷಾದಿಗಳು ಬರಬೇಕಾಗುವುವು ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ಓಂ ॥ ೧೫ ॥

**ಸೂತ್ರಾರ್ಥ** ॥ ಭೋಗಿಸಲಿಕ್ಕೆ ಉಪಕ್ರಾಂತಗಳಾಗದೆ ಇರುವ ಸುಖದುಃಖರೂಪಕಾರ್ಯಗಳುಳ್ಳ ಪೂರ್ವೋಕ್ತಗಳಾದ ಪುಣ್ಯಪಾಪಗಳು ನಾಶವಾಗುತ್ತವೆ. ಪ್ರಾರಬ್ಧಕಾರ್ಯಗಳುಳ್ಳ ಪುಣ್ಯಪಾಪಗಳು ನಾಶವಾಗುವುದಿಲ್ಲ. (ಜ್ಞಾನಾಂತರದಲ್ಲಿ ಪ್ರಾರಬ್ಧಕರ್ಮವು ಇರುವುದು ಹೇಗೆಂದರೆ) ಆ ಮೋಕ್ಷಕ್ಕೆ ಪ್ರಾರಬ್ಧ ಕರ್ಮಾವಸಾನವೇ ಅವಧಿಯೆಂದು ತಸ್ಯ ತಾವದೇವ ಚಿರಂ ಎಂದು ಶ್ರುತವಾದ ಪ್ರಯುಕ್ತ ಯದನಾರಬ್ಧಪಾಪಂ ಸ್ಯಾತ್ ಇತ್ಯಾದಿ ಸ್ಮೃತಿಯಿಂದಲೂ.

**ಭಾಷ್ಯ ॥ (೧) ಅನಾರಬ್ಧಕಾರ್ಯೇ ಏವ ಪೂರ್ವೇ ಪುಣ್ಯಪಾಪೇ ವಿನಶ್ಯತಃ । (೨) ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯತೇ** (ಛಾ.೬.೧೪.೨) **ಇತಿ ತದವಧೇಃ ॥ ೩ ॥**

**ಭಾಷ್ಯಾರ್ಥ** ॥ (೧) ಯಾವ ಪಾಪದ ಕಾರ್ಯವಾದ ದುಃಖವು ಭೋಗಿಸಲಿಕ್ಕೆ ಅನಾರಬ್ಧವಾಗಿಯದೋ, ಅಂತಹ ಪೂರ್ವ ಪಾಪವೇ ಜ್ಞಾನದಿಂದ ನಾಶವಾಗುತ್ತದೆ. ಯಾವ ಪುಣ್ಯದ ಕಾರ್ಯವಾದ ಸುಖವು ಭೋಗಿಸಲಿಕ್ಕೆ ಆರಬ್ಧವಾಗಲಿಲ್ಲವೋ ಅಂತಹ ಪೂರ್ವಪುಣ್ಯವೇ ಮಿಥ್ಯಾಜ್ಞಾನದಿಂದ ವಿನಾಶವಾಗುತ್ತದೆ. ಪ್ರಾರಬ್ಧಪುಣ್ಯಪಾಪಗಳು ನಾಶಗಳಾಗುವುದಿಲ್ಲ. ಆದಕಾರಣ ಜ್ಞಾನಾದಿಗಳಿಂದ ಸಮಸ್ತ ಪಾಪಗಳಿಗೂ ಪುಣ್ಯಗಳಿಗೂ ನಾಶವಾಗದಿರುವುದರಿಂದ ಆವಾಗಲೇ ಮುಕ್ತಿ ತಮಸ್ಸುಗಳು ಇರಬೇಕಾಗುವುವು ಎಂದಾಗುವುದಿಲ್ಲ. (೨) (ಜ್ಞಾನಾದಿಗಳು ಹುಟ್ಟಿದ ಮೇಲೆ ಪ್ರಾರಬ್ಧ ಕರ್ಮಪ್ರತಿಬಂಧಕವದೆ ಎಂದು ಯಾವುದರಿಂದ ಕಲ್ಪಿಸುವುದು ಎಂದರೆ) ಎಷ್ಟು ಕಾಲ ತನಕ ಜ್ಞಾನಿಯು ಪ್ರಾರಬ್ಧಕರ್ಮದಿಂದ ಬಿಡಲ್ಪಡುವುದಿಲ್ಲವೋ ಅಪರೋಕ್ಷಜ್ಞಾನಿಗೆ ಮೋಕ್ಷವಾಗುವುದಕ್ಕೆ ಅಷ್ಟೆ ಕಾಲ

ವಿಲಂಬವು. ಪ್ರತಿಬಂಧಕವಾದ ಕರ್ಮ ನಿವೃತ್ತ್ಯನಂತರದಲ್ಲಿಯೇ ಜ್ಞಾನಿಯು ಬ್ರಹ್ಮನನ್ನು ಹೊಂದುತ್ತಾನೆ. (ಅಂದರೆ ಮುಕ್ತನಾಗುತ್ತಾನೆ.) ಎಂದು ಮುಕ್ತಿಗೆ ಪ್ರತಿಬಂಧಕ ಪ್ರಾರಬ್ಧಕರ್ಮದಿಂದ ನಿವೃತ್ತ್ಯವಧಿತ್ವವು ಶ್ರುತವಾದುದರಿಂದ ಜ್ಞಾನೋತ್ಪತ್ತ್ಯನಂತರದಲ್ಲಿಯೂ ಪ್ರಾರಬ್ಧಕರ್ಮಪ್ರತಿಬಂಧಕವು ಇದೆ ಎಂದು ತಿಳಿಯುತ್ತದೆ. (ಇಲ್ಲಿ ಮಿಥ್ಯಾಜ್ಞಾನಿಗೂ ಅಂಧಂತಮಸ್ಸಿನಲ್ಲಿ ಬೀಳಲಿಕ್ಕೆ ಅಷ್ಟೇ ಕಾಲವಿಲಂಬಕವು ಎಂದು ತಿಳಿಯತಕ್ಕದು.) ॥ ૩ ॥

ಪೀಠಿಕೆ ॥ ಆದಾಗ್ಯೂ ಪ್ರಾರಬ್ಧಕರ್ಮವದೆ ಎಂದು ಈ ಶ್ರುತಿಯಲ್ಲಿ ಸ್ಪಷ್ಟವಾಗಿ ತೋರುವುದಿಲ್ಲ ಎಂದರೆ—

**ಭಾಷ್ಯ ॥ (೧) ತು ಶಬ್ದಃ ಸ್ಮೃತಿದ್ಯೋತಕಃ। (೨) ಯದನಾರಬ್ಧಪಾಪಂ ಸ್ಯಾತ್ತದ್ಧಿನಶ್ಯತಿ ನಿಶ್ಚಯಾತ್। ಪಶ್ಯತೋ ಬ್ರಹ್ಮ ನಿರ್ದ್ವಂದ್ವಂ ಹೀನಂ ಚ ಬ್ರಹ್ಮ ಪಶ್ಯತಃ ॥ ದ್ವಿಷತೋ ವಾ ಭವೇತ್ಪುಣ್ಯನಾಶೋ ನಾಸ್ತ್ಯತ್ರ ಸಂಶಯಃ ॥ ತಸ್ಯಾಪ್ಯಾರಬ್ಧಕಾರ್ಯಸ್ಯ ನ ವಿನಾಶೋऽಸ್ತಿ ಕುತ್ರಚಿತ್ । ಆರಬ್ಧಯೋಶ್ಚ ನಾಶಃ ಸ್ಯಾದಲ್ಪಯೋಃ ಪುಣ್ಯ ಪಾಪಯೋಃ ॥ ಇತಿ ಚ ನಾರಾಯಣತಂತ್ರೇ ॥ ೧೫ ॥ ॥ ೪ ॥**

ಭಾಷ್ಯಾರ್ಥ ॥ (೧) ಶ್ರುತಿಯಿಂದ ಮೋಕ್ಷಕ್ಕೆ ಪ್ರಾರಬ್ಧ ಕರ್ಮಪ್ರತಿಬಂಧ ನಿವೃತ್ತ್ಯವಧಿತ್ವವು ಮಾತ್ರ ಶ್ರುತವಾಗುವುದಿಲ್ಲ. ಮತ್ತೆ ತು ಶಬ್ದವು ಸ್ಮೃತೇಶ್ಚ ಎಂದು ಚ ಶಬ್ದಾರ್ಥವುಳ್ಳದ್ದಾಗಿ ವಿಶೇಷ ಬೋಧಕ ಸ್ಮೃತಿಸಮುಚ್ಚಾಯಕವೂ ಆಗಿದೆ. (೨) (ಯಾವುದು ಸ್ಮೃತಿಯೆಂದರೆ) ಹೇಗೆ, ನಿರ್ದ್ವಂದ್ವಂ: ಸಮಾಧಿಕ ಶೂನ್ಯನಾದ ಪತ್ರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿದವನಿಗೆ ಯಾವುದು ಭೋಗಿಸಲಿಕ್ಕೆ ಉಪಕ್ರಾಂತ ವಾದ ಪಾಪದಿಂದ ಭಿನ್ನವಾದ ಪಾಪವು ಇರುವುದೋ. ಅದು ನಿಶ್ಚಯವಾಗಿಯೂ ನಾಶವಾಗಿಯೇ ಆಗುತ್ತದೋ, ಹೀಗೆಯೇ ಪರಬ್ರಹ್ಮನನ್ನು ಗುಣಾದಿಗಳು ಇಲ್ಲದವನೆಂದೂ ರುದ್ರಾದಿಗಳಿಂದ ಹೀನ ನೆಂದೂ ಹೀನನಾದ ಜೀವನಿಂದ ಅಭಿನ್ನನೆಂದೂ ತಿಳಿದವನಿಗೂ ಮತ್ತು ಬ್ರಹ್ಮನನ್ನು ದ್ವೇಷ ಮಾಡಿದವ ನಿಗೂ ಮಿಥ್ಯಾಜ್ಞಾನ ಪೂರ್ವಕಾಲೀನ ಧರ್ಮನಾಶವು ಆಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. (૩) ತತ್ತ್ವಜ್ಞಾನಿಯು ಮತ್ತು ಮಿಥ್ಯಾಜ್ಞಾನಿಯ ಪ್ರಾರಬ್ಧವಾದ ಪಾಪಕ್ಕಾಗಲೀ ಪುಣ್ಯಕ್ಕಾಗಲೀ ಯಾವಾಗಲೂ ವಿನಾಶವಿಲ್ಲ. ಅಥವಾ ಭೋಗಿಸಲಿಕ್ಕೆ ಉಪಕ್ರಾಂತವಾದ (ಜ್ಞಾನಿಗಳ ಪಾಪಕ್ಕೆ ಮಾತ್ರವಲ್ಲ ಮತ್ತೆ) ದ್ವೇಷಿಗಳ ಪುಣ್ಯಕ್ಕೂ ಅಥವಾ ಜ್ಞಾನಿದ್ವೇಷಿಗಳ ಸಂಬಂಧಿಯಾದ ಪುಣ್ಯಕ್ಕಾಗಲೀ ಪಾಪಕ್ಕಾಗಲೀ ಸ್ವರೂಪತಃ ವಿನಾಶವು ಯಾವ ದೇಶದಲ್ಲಿ ಆಗಲೀ ಯಾವ ಕಾಲದಲ್ಲಿ ಆಗಲೀ ಆಗುವುದೇ ಇಲ್ಲ. (ಆದುದರಿಂದಲೇ ಪರಮದ್ವೇಷಿಗಳೂ ಕೂಡ ಅಂಧಂತಮಸ್ಸಿಗೆ ಹೋಗುವುದಕ್ಕಿಂತ ಮೊದಲು ಕದಾಚಿತ್ ಭೋಗಗಳನ್ನು ಅನುಭವಿಸುತ್ತಾರೆ.) (ಅಪವಾದಕ್ಕೆ ಅಪವಾದವನ್ನು ಹೇಳುತ್ತಾರೆ.) ಭೋಗಿಸಲಿಕ್ಕೆ ಉಪಕ್ರಾಂತಗಳಾದಾಗ್ಯೂ ಅಲ್ಪ ಪುಣ್ಯಪಾಪಗಳಿಗೆ ಫಲಹ್ರಾಸರೂಪವಾದ ಉಪಮರ್ದವು ಆಗುವುದು ಎಂದು ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಹೇಳಿದೆ. ॥ ೧೫ ॥ ೪ ॥

ಪೀಠಿಕೆ ॥ ತತ್ತ್ವಜ್ಞಾನಿಯ ಪಾಪವು ನಾಶವಾದಾಗ್ಯೂ ತತ್ತ್ವಜ್ಞಾನಿಯು ಮಾಡಿದ ಪೂರ್ವೋತ್ತರ ಪುಣ್ಯವು ಇದ್ದುದರಿಂದ ಮುಕ್ತಿಯು ಹೇಗೆ ಎಂದರೆ—

## ಸೂತ್ರ ॥ ಓಂ ಅಗ್ನಿಹೋತ್ರಾದಿ ತು ತತ್ಕಾರ್ಯೈವ ತದರ್ಶನಾತ್ ಓಂ ॥ ೧೬ ॥

**ಸೂತ್ರಾರ್ಥ** ॥ ಜ್ಞಾನಿಯು ಮಾಡಿದ ಅಗ್ನಿ ಹೋತ್ರ ಮೊದಲಾದ ಅಕಾಮ್ಯಕರ್ಮವು ಜ್ಞಾನಾಖ್ಯ ಕಾರ್ಯಕ್ಕಾಗಿಯೂ ಜ್ಞಾನಕಾರ್ಯವಾದ ಮೋಕ್ಷಾತಿಶಯಾನುಭವಕ್ಕಾಗಿಯೇ. (ನಾಶ ಅಶ್ಲೇಷಗಳನ್ನು ಹೊಂದುವುದಿಲ್ಲ, ಬಂಧಕವೂ ಆಗುವುದಿಲ್ಲ. ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಮಾಡಿದ ಪುಣ್ಯವು ಜ್ಞಾನಕ್ಕಾಗಿ, ಮೇಲೆ ಹುಟ್ಟಿದ ಪುಣ್ಯವು ಅತಿಶಯಕ್ಕಾಗಿ. ಏಕೆಂದರೆ) ಯ ಆತ್ಮಾನಮೇವ ಲೋಕಮುಪಾಸ್ತೇ ಎನ್ನುವ ಶ್ರುತಿಯಲ್ಲಿ ಹಿಂದೆ ಹೇಳಿದ ಅರ್ಥವು ತೋರುವುದರಿಂದ. (ತಥಾಚ ಯಾರು ಜಿಜ್ಞಾಸುವಾದವನು ಉಪಾಸನಾ ಮಾಡುತ್ತಾನೋ ಆತನ ಪುಣ್ಯವು ಜ್ಞಾನದ್ವಾರಾ ಅವಿನಾಶಿಯಾದ ಮೋಕ್ಷಫಲವುಳ್ಳದ್ದು ಆಗುತ್ತದೆ. ಯಾರು ಉಪಾಸನಾ ಮಾಡಿ ಅಪರೋಕ್ಷ ಜ್ಞಾನಿಯೂ ಆಗುತ್ತಾನೋ ಆತನ ಪುಣ್ಯವು ಅಕ್ಷಯಮೋಕ್ಷಾತಿಶಯಕ್ಕಾಗಿ ಆಗುತ್ತದೆ.

**ಭಾಷ್ಯ ॥ (೧) ಅಗ್ನಿಹೋತ್ರಾದ್ಯಪಿ ಮೋಕ್ಷಾ (ಕ್ಷೇ ಅ) ನುಭವಾಯೈವ । (೨) ತು ಶಬ್ದಾದ್ಬ್ರಹ್ಮದರ್ಶನವತಃ । (೩) ಸ ಏನಮವಿದಿತೋ ನ ಭುನಕ್ತಿ ಯಥಾ ಮೇದೋವಾऽನನೂಕ್ತೋऽನ್ಯದ್ವಾ ಕರ್ಮಾಕೃತಂ । ಯದಿ ಹ ವಾ ಅಪ್ಯನೇವಂವಿನ್ಮಹತ್ಪುಣ್ಯಂ ಕರ್ಮಕರೋತಿ ತದ್ಧಾಸ್ಯಾಂ ತತಃ ಕ್ಷೀಯತ ಏವಾऽತ್ಮಾನಮೇವ ಲೋಕಮುಪಾಸೀತ ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮಕ್ಷೀಯತೇऽಸ್ಮಾದ್ಧ್ಯೇವಾऽತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ (ಬೃ.ಹಿ.೪.೧೫) ಇತಿ ತದರ್ಶನಾತ್ ॥ ೧೬ ॥ ॥ ೫ ॥**

**ಭಾಷ್ಯಾರ್ಥ** ॥ (೧) ಕಾಮ್ಯ ಅಕಾಮ್ಯ ಎಂದು ಪುಣ್ಯವು ಎರಡು ವಿಧವು. ಅದರಲ್ಲಿ ಜ್ಞಾನದಿಂದ ಪೂರ್ವೋತ್ತರಕಾಲೀನ ಅಕಾಮ್ಯವಾದ ಅಗ್ನಿಹೋತ್ರ ಮೊದಲಾದ ಸಂಧ್ಯೋಪಾಸನ ಶ್ರಾದ್ಧಾದಿರೂಪವಾದ ನಿತ್ಯ ನೈಮಿತ್ತಿಕ ಪುಣ್ಯವೋ ಅದು ಮೋಕ್ಷದಲ್ಲಿ ಸಾಧನೀಭೂತವಾದ ಯಾವುದು ಭಗವದಪರೋಕ್ಷ ಜ್ಞಾನವೋ ಅದಕ್ಕಾಗಿಯೇ ಆಗುತ್ತದೆ. ಜ್ಞಾನೋತ್ತರದಲ್ಲಿ ಮಾಡಿದ ಪುಣ್ಯವು ಮೋಕ್ಷದಲ್ಲಿ ಆನಂದಾತಿಶಯಾನುಭವಕ್ಕಾಗಿಯೇ ಆಗುತ್ತದೆ. ಆದಕಾರಣ ಜ್ಞಾನಿಯ ಪುಣ್ಯಕ್ಕೆ ಪಾಪದಂತೆ ವಿನಾಶ ಅಶ್ಲೇಷಗಳು ಇಲ್ಲವಾದರೂ ಮೋಕ್ಷದಲ್ಲಿ ಆಗತಕ್ಕ ಆನಂದಾತಿಶಯದಲ್ಲಿ ಹೇತುವಾಗಿರುವುದರಿಂದ ಮೋಕ್ಷವು ಕೂಡುತ್ತದೆ. ಹೇಗೆ ಶ್ರವಣಾದಿಳು ಮೋಕ್ಷದಲ್ಲಿ ಆನಂದಾನುಭವಕ್ಕಾಗಿ ಆಗುತ್ತದೋ, ಹೀಗೆಯೇ ಅಗ್ನಿ ಹೋತ್ರಾದಿಗಳೂ ಅದಕ್ಕಾಗಿಯೇ ಆಗುತ್ತದೆ, ಎಂದು ಅಪಿ ಶಬ್ದಾರ್ಥವು. (ಮತ್ತು ಮಿಥ್ಯಾಜ್ಞಾನಕ್ಕಿಂತ ಪೂರ್ವಕಾಲೀನವಾದ ಮತ್ತು ಉತ್ತರಕಾಲೀನವಾದ ಪಾಪವು ಮಿಥ್ಯಾಜ್ಞಾನಕಾರ್ಯಕ್ಕಾಗಿ ಆಗುತ್ತದೆ.) (೨) (ಮೊದಲು ತತ್ವಜ್ಞಾನಿ ಮತ್ತು ಭಗವದ್ವೇಷಿಗಳು ಅನುವೃತ್ತರಾದುದರಿಂದ ಇಲ್ಲಿಯೂ ಆ ಉಭಯಸಂಬಂಧಿಯಾದ ಪುಣ್ಯವಿಷಯಕವು ಈ ವಚನವು ಎನ್ನುವ ಶಂಕಾನಿವರ್ತಕವಾಗಿಯೂ ತು ಶಬ್ದವನ್ನು ವ್ಯಾಖ್ಯಾನಮಾಡುತ್ತಾರೆ.) ತು ಶಬ್ದದಿಂದ ಬ್ರಹ್ಮದರ್ಶನವುಳ್ಳವರ ಅಗ್ನಿಹೋತ್ರಾದಿಗಳು ತಥಾಚ

ಬ್ರಹ್ಮಾಪರೋಕ್ಷ ಜ್ಞಾನಿಯಿಂದ ಮಾಡಲ್ಪಟ್ಟ ಅಗ್ನಿ ಹೋತ್ರಾದಿಗಳೇ, ಎಂದು ಇಟ್ಟುಕೊಂಡು ಸೂತ್ರಕಾರರು ತು ಶಬ್ದದಿಂದ ದ್ವೇಷಿಗಳಿಂದ ತತ್ವಜ್ಞಾನಿಯನ್ನು ಬ್ರಹ್ಮದರ್ಶಿತ್ವರೂಪ ವಿಶೇಷಣದಿಂದ ವ್ಯಾವರ್ತಿಸುತ್ತಾರೆ, (೩) ಬ್ರಹ್ಮದರ್ಶಿಯು ಮಾಡಿದ ಪೂರ್ವೋತ್ತರ ಪುಣ್ಯಕ್ಕೆ ಜ್ಞಾನ ಮೋಕ್ಷಗಳ ಪ್ರವೇಶದಿಂದ ಬಂಧಕತ್ವಾಭಾವವು ಹೇಗೆ ಎಂದರೆ) ★ಸ ಏನಂ ಇತ್ಯಾದಿಗಳಿಂದ ಅಜ್ಞರು ಮಾಡಿದ ಕರ್ಮಕ್ಕೆ ಅಲ್ಪ ಫಲವನ್ನು ಹೇಳಿ ಸ ಯ ಆತ್ಮಾನಮೇವ ಎನ್ನುವುದರಿಂದ ಬ್ರಹ್ಮಾಪರೋಕ್ಷಿಯು ಮಾಡಿದ ಪೂರ್ವೋತ್ತರ ಅಕಾಮ್ಯ ಪುಣ್ಯಕ್ಕೆ ಮೋಕ್ಷಾನುಪ್ರವೇಶದಿಂದ ಬಂಧಕತ್ವಾಭಾವವು ದೃಷ್ಟವಾದುದರಿಂದ ಅಂತೂ ಬೃಹದಾರಣ್ಯಕ ಶ್ರುತಿಯಲ್ಲಿ ಉತ್ತರಾರ್ಧವು ದೃಷ್ಟವಾದುದರಿಂದ. ॥ ೧೬ ॥ ॥ ೫ ॥

ಪೀಠಿಕೆ ॥ ಅಕಾಮ್ಯ ಪುಣ್ಯಕ್ಕೆ ಮೋಕ್ಷದಲ್ಲಿ ಪ್ರವೇಶವಿದ್ದರೂ ಕಾಮ್ಯಪುಣ್ಯವು ಬಂಧಕವಾಗಿ ಇದ್ದುದರಿಂದ ಮೋಕ್ಷವು ಹೇಗೆ ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅತೋಽನ್ಯದಪೀತ್ಯೇಕೇಷಾಮುಭಯೋಃ ಓಂ ॥ ೧೭ ॥

ಸೂತ್ರಾರ್ಥ ॥ ಪ್ರಸ್ತುತವಾದ ಅಕಾಮ್ಯದಿಂದ ಇತರವಾದ ಕಾಮ್ಯವಾದ ಪೂರ್ವೋತ್ತರ ಪುಣ್ಯವೂ ಅಪ್ರಾರಬ್ಧವಾದ ಅನಿಷ್ಟವೂ ಕೂಡ ನಾಶ ಅಶ್ಲೇಷಗಳನ್ನು ಹೊಂದುತ್ತದೆ. (ಪಾಪವು ಮಾತ್ರ ಅಲ್ಲ) ಹೀಗೆ ಪೂರ್ವೋತ್ತರ ಪುಣ್ಯಪಾಪಗಳ ತ್ಯಾಗದಿಂದ (ಅಂದರೆ ಪೂರ್ವೋತ್ತರ ಪುಣ್ಯಪಾಪಗಳನ್ನು ಬಿಡುತ್ತಾರೆಂದು) ತಸ್ಯ ಪುತ್ರಾದಾಯಮುಪಯಂತಿ ಎನ್ನುವ ಶ್ರುತಿಯಲ್ಲಿ ಕೆಲವು ಶಾಖಿಗಳ ಪಾಠವಿದೆ.

### ಭಾಷ್ಯ ॥ ಮುಕ್ತಾವನುಭವಕಾರಣಾದ್ಯನ್ಯತ್ಪುಣ್ಯಮಪಿ ವಿನಶ್ಯತಿ । ಅಪ್ರಾರಬ್ಧಮಭೀಷ್ಟಂ ಚ ॥ ೬ ॥

ಭಾಷ್ಯಾರ್ಥ ॥ (೧) ಮುಕ್ತಿಯಲ್ಲಿ ಸಾಧನೀಭೂತವಾದುದು ಯಾವುದು ಅಪರೋಕ್ಷ ಜ್ಞಾನವೋ, ಯಾವುದು ಮುಕ್ತಿಯಲ್ಲಿ ಆನಂದಾತಿಶಯಾನುಭವವೋ, ಅದಕ್ಕೆ ಕಾರಣೀಭೂತವಾದ ಅಕಾಮ್ಯ ಪುಣ್ಯದಿಂದ ಇತರವಾದುದು ಯಾವುದು ಕಾಮ್ಯವಾದುದು ಪೂರ್ವೋತ್ತರಪುಣ್ಯವೋ ಅದು ನಷ್ಟವಾಗುತ್ತದೆ. (ಮತ್ತು ಅದರ ಶ್ಲೇಷವೂ ಇರುವುದಿಲ್ಲ) ಆದರೆ ಭೋಗಿಸಲಿಕ್ಕೆ ಪ್ರಾರಬ್ಧವಾಗ ದಿರುವುದು, ಮತ್ತು ಇಷ್ಟವಲ್ಲದೆ ಇರುವುದೂ ನಷ್ಟವಾಗುತ್ತದೆ.

ವಿಶೇಷಾಂಶ ॥ (೧) ಪ್ರಾರಬ್ಧ ಅಪ್ರಾರಬ್ಧ ಎಂದು ಜ್ಞಾನದಿಂದ ಪೂರ್ವತನವಾದ ಕಾಮ್ಯಕರ್ಮವು ಎರಡು ವಿಧವು. ಅದರಲ್ಲಿ ಅಪ್ರಾರಬ್ಧವೇ ನಷ್ಟವಾಗುತ್ತದೆ. ಪ್ರಾರಬ್ಧವು ನಷ್ಟವಾಗುವುದಿಲ್ಲ. ಅಪ್ರಾರಬ್ಧವೂ ಇಷ್ಟ ಅನಭೀಷ್ಟವೆಂದು ಎರಡು ವಿಧವು. ಅದರಲ್ಲಿಯೂ ಅನಿಷ್ಟ ಪುಣ್ಯವೇ ನಷ್ಟವಾಗುತ್ತದೆ. ಇಷ್ಟ ಪುಣ್ಯವು ನಷ್ಟವಾಗುವುದಿಲ್ಲ (೨) ಯದ್ಯಪಿ ಪುಣ್ಯವನ್ನು ಮಾಡುವ ಕಾಲದಲ್ಲಿ ಎಲ್ಲವೂ ಇಷ್ಟವೇ ಆಗುತ್ತದೆ. ಆದಾಗ್ಯೂ ಜ್ಞಾನಕಾಲದಲ್ಲಿ ಅದೇವೇ ಕಿಂಚಿತ್ ಇಷ್ಟವು

★ ಭಾಕ್ತಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಆಗುವುದು. ಕಿಂಚಿತ್ ಅನಿಷ್ಟವು ಆಗುವುದು. ಪ್ರವಕ್ತೃತ್ವಾದಿಗಳಿಗೆ ಆಪಾದಕವಾದ ಪುಣ್ಯವು ಇಷ್ಟವು. ಜ್ಞಾನವು ಹುಟ್ಟಿದ ಮೇಲೆಯೂ ಅವುಗಳ ಇಚ್ಛೆಯು ಇದೆ. ರಾಜತ್ವಾದಿಗಳಿಗೆ ಆಪಾದಕವಾದ ಪುಣ್ಯವು ಅನಿಷ್ಟವು. ಅದು ಜ್ಞಾನಭಕ್ತ್ಯಾದಿಗಳಿಗೆ ಪ್ರತಿಬಂಧಕವಾದುದು. ಹೀಗೆ ಆನಂದಮಾಲಾ ಎಂಬ ಗ್ರಂಥದಲ್ಲಿ ಉಕ್ತವಾಗಿದೆ. (೨.) ಹೀಗೆಯೇ ಉತ್ತರಕಾಲೀನವಾದ ಕಾಮ್ಯಪುಣ್ಯವೂ ಇಷ್ಟ ಅನಿಷ್ಟವೆಂದು ಎರಡು ವಿಧವು. ಅದರಲ್ಲಿ ಅನಿಷ್ಟಕ್ಕೆಸಂಶ್ಲೇಷವಿಲ್ಲ. ಇಷ್ಟಕ್ಕೆ ಸಂಶ್ಲೇಷವಿದೆ. ॥ ೬ ॥

ಪೀಠಿಕೆ ॥ ಇದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆಂದರೆ—

**ಭಾಷ್ಯ ॥ ತಥಾ ಹ್ಯೇಕೇಷಾಂ ಪಾಠ ಉಭಯೋಸ್ತ್ಯಾಗೇನ । ತಸ್ಯ ಪುತ್ರಾ ದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ (ಶಾ) । ಇತಿ ॥ ॥ ೭ ॥**

ಭಾಷ್ಯಾರ್ಥ ॥ ಹಿಂದೆ ಹೇಳಿದ ಪ್ರಮೇಯವು ಯುಕ್ತವು. ಸಾಮಶಾಖಿಗಳ ಪಾಠವು ಪಾಪ, ಕಾಮ್ಯ ಪುಣ್ಯ ಈ ಎರಡರ ತ್ಯಾಗಕ್ಕೆ ಜ್ಞಾಪಕವಾಗಿ ಇದೆ. ಹೇಗೆ ತತ್ತ್ವಜ್ಞಾನಿಯ ಮಕ್ಕಳು ಪಿತ್ರಾರ್ಜಿತವಾದ ದ್ರವ್ಯವನ್ನು ಹೊಂದುತ್ತಾರೋ, ಹಾಗೆಯೇ ವಿಷ್ಣುಭಕ್ತರಾದ ಸುಹೃದಃ= ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಉಪಕಾರ ಮಾಡತಕ್ಕವರು, ಸಾಧುಕೃತ್ಯಾಂ=ಜ್ಞಾನಿಯು ಮಾಡಿದ ಅಪ್ರಾರಬ್ಧವಾದ ಅನಭೀಷ್ಟವಾದ ಕಾಮ್ಯಪುಣ್ಯವನ್ನೇ ಹೊಂದುತ್ತಾರೆ. (ಅಕಾಮ್ಯವಾದ ಇಷ್ಟಪುಣ್ಯವನ್ನು ಪ್ರಾರಬ್ಧವಾದುದನ್ನು ಹೊಂದುವುದಿಲ್ಲ) (ಅಕಾಮ್ಯವು ಜ್ಞಾನದಲ್ಲಿಯೂ ಸುಖಾತಿಶಯದಲ್ಲಿಯೂ ವಿನಿಯುಕ್ತವಾಗುವುದು. ಪ್ರಾರಬ್ಧವು ಭೋಕ್ತವ್ಯವಾಗಿದೆ. ಇಷ್ಟನಾಶವು ಪುರುಷರಿಂದ ಅಪೇಕ್ಷಣೀಯವಿಲ್ಲ) ಅಪರೋಕ್ಷಜ್ಞಾನಿಯ ದ್ವೇಷಿಗಳು ಪಾಪಕರ್ಮದಿಂದುಂಟಾದ ಅಧರ್ಮವನ್ನು ಹೊಂದುತ್ತಾರೆ ಎಂದು ಕೆಲವರ (ಸಾಮಶಾಖಿಗಳ) ಪಾಠವು. ॥ ೭ ॥

ಪೀಠಿಕೆ ॥ ಈ ವಿಷಯದಲ್ಲಿ ಸ್ಪಷ್ಟವಾದ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಅನಭೀಷ್ಟಮನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ । ಕಿಮು ಪಾಪಂ ಪರಬ್ರಹ್ಮಜ್ಞಾನಿನೋ ನಾತ್ರ(ಸ್ತಿ) ಸಂಶಯಃ ॥ ಇತಿ ಪಾದ್ಮೇ ॥ ೧೭ ॥ ॥ ೮ ॥**

ಭಾಷ್ಯಾರ್ಥ ॥ ಪರಬ್ರಹ್ಮಜ್ಞಾನಿಗೆ ಅನಿಷ್ಟವಾದ ಪುಣ್ಯವೂ ಕೂಡ ನಾಶವಾಗುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಹೀಗೆ ಇರುವಾಗ ಈತನ ಪಾಪವು ನಾಶವಾಗುತ್ತದೆಂದು ಏನು ಹೇಳಬೇಕು. ಹೀಗೆ ಪಾದ್ಮಪುರಾಣದಲ್ಲಿ ಅಪ್ರಾರಬ್ಧವೂ ಅನಭೀಷ್ಟವೂ ನಾಶವಾಗುತ್ತದೆ ಎನ್ನುವ ವಿಶೇಷವು ಸ್ಪಷ್ಟವಾಗಿಯೇ ಉಕ್ತವಾಗಿದೆ.

ಪೀಠಿಕೆ ॥ ಕರ್ಮಕ್ಕೆ ನಶ್ವರವಾದ ಅಲ್ಪಫಲವಿದ್ದುದರಿಂದ, ಜ್ಞಾನಿಯು ಮಾಡಿರತಕ್ಕ ಉತ್ತರ ಕಾಲೀನವಾದ ಅಕಾಮ್ಯವಾದ ಪುಣ್ಯವು ಮೋಕ್ಷದಲ್ಲಿ ಆಗತಕ್ಕ ಆನಂದಾತಿಶಯದಲ್ಲಿ ಹೇತುವು ಹೇಗೆ ಆಗುವುದು, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ಯದೇವ ವಿದ್ಯಯೇತಿ ಹಿ ಓಂ ॥ ೧೮ ॥**

**ಸೂತ್ರಾರ್ಥ ॥** ಯದೇವ ವಿದ್ಯಯಾ ಕರೋತಿ ಎನ್ನುವ ಶ್ರುತಿಯು ಯಾವ ಕಾರಣದಿಂದ ಇದೆಯೋ ಆದಕಾರಣ ಅಕಾಮ್ಯವಾದ ಜ್ಞಾನಿಕರ್ಮವು ಮೋಕ್ಷೋಪಯುಕ್ತವು ಎನ್ನುವುದು ಯುಕ್ತವು.

**ಭಾಷ್ಯ ॥ (೧) ಬ್ರಹ್ಮದರ್ಶಿಕೃತಮಲ್ಪಮಪಿ ಪುಣ್ಯಂ ಮಹತ್ತಮಮನಂತಂ ಚ ಭವತಿ। (೨) ★ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ (ಛಾ.೧.೧.೧೦.)। ಇತಿ ಶ್ರುತೇಃ ॥ (೩) ನ ಹಾಸ್ಯ ಕರ್ಮ ಕ್ಷೀಯತೇ (ಬೃ.೩..೪.೧೫) ಇತಿ ಚ । (೪) ಅಲ್ಪಮಾತ್ರ (ತ್ರಃ) ಕೃತೋ ಧರ್ಮೋಃ ಭವೇಜ್ಞಾನವತೋ ಮಹಾನ್ । ಮಹಾನಪಿ ಕೃತೋ ಧರ್ಮೋ ಹ್ಯಜ್ಞಾನಾಂ ನಿಷ್ಫಲೋ ಭವೇತ್ ॥ ಇತಿ ಚ ಭಾರತೇ ॥ ೧೮ ॥ ॥ ೯ ॥**

**ಭಾಷ್ಯಾರ್ಥ ॥** (೧) ಬ್ರಹ್ಮಜ್ಞಾನಿಗಳು ಮಾಡಿದ ಅಗ್ನಿಹೋತ್ರ ಮೊದಲಾದ ಪುಣ್ಯವು ಸ್ವರೂಪತಃ ಅಲ್ಪವಾದಾಗ್ಯೂ ಅತಿಶಯಿತ ಮಹಾಫಲಪ್ರದವು. ಅವಿನಾಶಿಯಾದ ಫಲಪ್ರದವೂ ಆಗುತ್ತದೆ. (ಏವಂಚ ಅಜ್ಞರೂ ಮಾಡಿದ ಕರ್ಮಕ್ಕೆ ನಶ್ವರವಾದ ಅಲ್ಪಫಲವಿದ್ದರೂ ಬ್ರಹ್ಮದರ್ಶಿಗಳು ಮಾಡಿದ ಅಕಾಮ್ಯ ಕರ್ಮಕ್ಕೆ ಮಹಾನಂತ ಫಲವಿದ್ದುದರಿಂದ ಮೋಕ್ಷದಲ್ಲಿ ಆಗತಕ್ಕ ಆನಂದಾತಿಶಯದಲ್ಲಿ ಅದು ಹೇತುವೆನ್ನುವುದು ಯುಕ್ತವಾಗುವುದು.) (೨) (ಇದು ಹೇಗೆ ಸಿದ್ಧವಾಗುತ್ತದೆ ಎಂದರೆ, ಈ ವಿಷಯದಲ್ಲಿ ಶ್ರುತಿ ಸ್ಮೃತಿಗಳನ್ನು ಹೇಳುತ್ತಾರೆ. ಯದೇವ ಎನ್ನುವ ಶ್ರುತಿಯಿಂದ ಜ್ಞಾನಪೂರ್ವಕವಾಗಿ ಮಾಡಿದ ಕರ್ಮವು ಮೋಕ್ಷದಲ್ಲಿರತಕ್ಕ ಆನಂದಾತಿಶಯರೂಪವಾದ ಮಹಾನಂತ ಫಲವುಳ್ಳದ್ದು ಎಂದುಕ್ತವಾಗಿದೆ. (೩) ಜ್ಞಾನಿಯ ಅಕಾಮ್ಯಕರ್ಮವು ಕ್ಷೀಣವಾಗುವುದಿಲ್ಲ. ಜ್ಞಾನದ್ವಾರಾ ಅಕ್ಷಯ್ಯಮೋಕ್ಷವನ್ನು ಕೊಡುತ್ತದೆ ಎಂದೂ ಶ್ರುತಿಯು ಇದೆ. (೪) ತತ್ತ್ವಜ್ಞಾನಿಯಿಂದ ಸ್ವರೂಪತಃ ಅತ್ಯಲ್ಪವಾಗಿ ಮಾಡಲ್ಪಟ್ಟದ್ದು ಧರ್ಮವು ಮಹಾಫಲಪ್ರದವಾಗುತ್ತದೆ. ಸ್ವರೂಪದಿಂದಲೂ ಮಹತ್ತು ಆಗುತ್ತದೆ. ಅನಂತಫಲವುಳ್ಳದ್ದು ಆಗುತ್ತದೆ. ಅಜ್ಞರಿಂದ ಮಾಡಲ್ಪಟ್ಟ ಧರ್ಮವು ಮಹತ್ತಾದಾಗ್ಯೂ ನಿಷ್ಫಲವು ಆಗುತ್ತದೆ, ಎಂದು ಭಾರತದಲ್ಲಿ ಹೇಳಿದೆ.

ವಿಶೇಷಾಂಶ ॥ ದ್ವೇಷಿಗಳು ಮೊದಲು ಮಾಡಿದ್ದ ಅಪ್ರಾರಬ್ಧವಾದ ಪುಣ್ಯಕ್ಕೆ ವಿನಾಶವು. ಮೇಲೆ ಮಾಡಿದ ಪುಣ್ಯಕ್ಕೆ ಅಶ್ಲೇಷವು. ದ್ವೇಷ ಪರಿಪಾಕದಿಂದ ಮೊದಲು ಮಾಡಿದ ಅಪ್ರಾರಬ್ಧ ಪಾಪವು ದ್ವೇಷಾಭಿವೃದ್ಧಿಗೆ ಕಾರಣವು. ದ್ವೇಷ ಪರಿಪಾಕದಿಂದ ಪೂರ್ವತನವಾದ ಕಾಮ್ಯವಾದ ಅಪ್ರಾರಬ್ಧವಾದ ಪುಣ್ಯವು ಅನಿಷ್ಟವಾಗಿದ್ದರೆ ನಾಶವಾಗುವುದಿಲ್ಲ. ಹೇಗೆಂದರೆ ದುರ್ಯೋಧನಾದಿಗಳಿಗೆ ರಾಜ್ಯಾಪಾದಕವಾದ ಕುರುವಂಶಾದಿಗಳಲ್ಲಿ ಉತ್ಪತ್ತಿಗೆ ಕಾರಣವಾದ ಪುಣ್ಯವು. ಅದು ಕೃಷ್ಣ ಭೀಮಾದಿಗಳಲ್ಲಿ ಮಹಾ ದ್ರೋಹಮಾಡಿ ಪೂರ್ಣವಾದ ತಮಸ್ಸಿಗೆ ಕಾರಣವು. ಇಷ್ಟವಾಗಿದ್ದರೆ ನಾಶವಾಗುತ್ತದೆ. ದ್ವೇಷ ಪೂರ್ತಿಯಾದ ಮೇಲೆ ಮಾಡಿದ ಕಾಮ್ಯಪುಣ್ಯವು ಅಪ್ರಾರಬ್ಧವಾದುದು ಅನಿಷ್ಟವಾಗಿದ್ದರೆ ಸಂಶ್ಲೇಷವಾಗುತ್ತದೆ. ಇಷ್ಟವಾಗಿದ್ದರೆ ಪುಣ್ಯವು ಸಂಬದ್ಧವಾಗುವುದಿಲ್ಲ. ದ್ವೇಷ ಪರಿಪಾಕದಿಂದ ಪೂರ್ವಕಾಲೀನವಾದ ಅಪ್ರಾರಬ್ಧವಾದ ಕೆಲವು ಪಾಪವು ದ್ವೇಷಪರಿಹಾರಕ್ಕೆ

★ ಇದು ಪುರುಷಾರ್ಥಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಕಾರಣವಾಗುತ್ತದೆ. ದ್ವೇಷ ಪರಿಪಾಕದಿಂದ ಉತ್ತರದಲ್ಲಿ ಮಾಡಿದ ಕೆಲವು ಪಾಪವು ತಮಸ್ಸಿನಲ್ಲಿ ದುಃಖಾತಿಶಯಕ್ಕೆ ಕಾರಣವು ಆಗುತ್ತದೆ. ದ್ವೇಷ ಪರಿಪಾಕದಿಂದ ಮೇಲೆ ಮನುಷ್ಯಾಧಮರು ಮಾಡಿದ ಕೆಲವು ಪುಣ್ಯವು ತಮಸ್ಸಿನಲ್ಲಿ ದುಃಖಾತಿಶಯದ ಹ್ರಾಸಕ್ಕೆ ಕಾರಣವಾಗುತ್ತದೆ. ಹೀಗೆಯೇ ಕಲ್ಯಾದಿಗಳು ಮಾಡಿದ ಕೆಲವು ಪುಣ್ಯವು ಅವರಿಗೆ ತಮನಸ್ಸಿನಲ್ಲಿ ಆಗತಕ್ಕ ದುಃಖವು ಕ್ಲೃಪ್ತವಾದಪ್ರಯುಕ್ತ ತಮ್ಮ ಯೋಗ್ಯತೆಯಿಂದ ಹೆಚ್ಚು ಮಾಡಿದ ಪಾಪದ ವಿನಾಶಕ್ಕೆ ಕಾರಣವು. ॥ ೧೮ ॥ ॥ ೯ ॥

**ಪೀಠಿಕೆ** ॥ ಆದಾಗ್ಯೂ ಬ್ರಹ್ಮಜ್ಞಾನಿ ಬ್ರಹ್ಮವಿದ್ವೇಷಿಗಳಿಗೆ ಪ್ರಾರಬ್ಧ ಪುಣ್ಯಪಾಪಗಳು ಇದ್ದುದರಿಂದ ಮುಕ್ತಿ ತಮಸ್ಸುಗಳು ಉಂಟಾಗಲಿಕ್ಕಿಲ್ಲ ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ ಓಂ ॥ ೧೯ ॥

**ಸೂತ್ರಾರ್ಥ** ॥ ಅನಾರಬ್ಧ ಪುಣ್ಯಪಾಪಗಳಿಂದ ಭಿನ್ನಗಳಾದ ಪ್ರಾರಬ್ಧ ಪುಣ್ಯಪಾಪಗಳನ್ನು ಫಲಾನುಭವದಿಂದ ನಾಶಪಡಿಸಿ (ಅಂದರೆ ಪ್ರಾರಬ್ಧ ಪುಣ್ಯಪಾಪಗಳ ನಾಶವಾದೊಡನೆಯೇ ವಿಲಂಬವಿಲ್ಲದೇನೇ) ತತ್ವಜ್ಞಾನಿಯು ಜ್ಞಾನಪರಿಪಾಕದಿಂದ ಬ್ರಹ್ಮನನ್ನು ಹೊಂದುತ್ತಾನೆ. ಬ್ರಹ್ಮದ್ವೇಷಿಯು ದ್ವೇಷ ಪರಿಪಾಕದಿಂದ ತಮಸ್ಸನ್ನು ಹೊಂದುತ್ತಾನೆ.

**ಭಾಷ್ಯ ॥ ಆರಬ್ಧಪುಣ್ಯಪಾಪೇ ಭೋಗೇನ ಕ್ಷಪಯಿತ್ವಾ ಬ್ರಹ್ಮ ಸಂಪತ್ಸ್ಯತೇ । ಅಥೇತಿ ನಿಯಮಸೂಚಕಃ ॥ ೧೦ ॥**

**ಭಾಷ್ಯಾರ್ಥ** ॥ (೧) ತತ್ವಜ್ಞಾನಿಯು ಪ್ರಕೃತ ಅನಾರಬ್ಧ ಕಾರ್ಯವುಳ್ಳ ಪುಣ್ಯಪಾಪಗಳಿಂದ ಇತರಗಳಾದ ಆರಬ್ಧ ಪುಣ್ಯಪಾಪಗಳನ್ನು ಕಾರ್ಯದ್ವಾರಾ ಅನುಭವದಿಂದ ನಾಶಪಡಿಸಿ ಆ ಮೇಲೆ ಬ್ರಹ್ಮದರ್ಶಿಯು ಪರಬ್ರಹ್ಮನನ್ನೂ ಬ್ರಹ್ಮದ್ವೇಷಿಯು ತಮಸ್ಸನ್ನೂ ಹೊಂದುತ್ತಾನೆ. (ಆದಕಾರಣ ಪ್ರಾರಬ್ಧ ಕರ್ಮವು ಇದ್ದುದರಿಂದ ಮೋಕ್ಷಾದಿಗಳು ಆಗುವುದಿಲ್ಲವೆಂದು ಶಂಕಿಸಕೂಡದು.) (೨) (ಹೇಗೆ ಜ್ಞಾನ ಅನಂತರದಲ್ಲಿ ಮೋಕ್ಷವು ನಿಯತವಲ್ಲವೋ, ಹೇಗೆ ಉಪಾಸನಾನಂತರದಲ್ಲಿ ಜ್ಞಾನವು ಅನಿಯತವೋ, ಹಾಗೆಯೇ ಕರ್ಮಕ್ಷಯಾನಂತರದಲ್ಲಿಯೂ ಮೋಕ್ಷವು ಅನಿಯತವು ಎನ್ನುವ ಶಂಕಾ ನಿವರ್ತಕವಾಗಿ ಅಥ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) ಅಥ ಶಬ್ದವು ಪ್ರಾರಬ್ಧ ಪುಣ್ಯಪಾಪಗಳ ನಾಶವಾದೊಡನೆಯೇ ಎನ್ನುವ ನಿಯಮವನ್ನು ಸೂಚಿಸುತ್ತದೆ. ॥ ೧೯ ॥ ॥ ೧೦ ॥

**ಪೀಠಿಕೆ** ॥ ಈ ನಿಯಮವು ಯಾವುದರಿಂದ ತಿಳಿಯುತ್ತದೆ—

**ಭಾಷ್ಯ ॥ ಆರಬ್ಧ ಪುಣ್ಯಪಾಪಸ್ಯ ಭೋಗೇನ ಕ್ಷಪಣಾದನು। ಪ್ರಾಪ್ನೋತ್ಯೇವ ತಮೋ ಘೋರಂ ಬ್ರಹ್ಮ ವಾ ನಾತ್ರ ಸಂಶಯಃ ॥ ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧಸಂಕ್ಷಯಃ। ನಿಯಮೇನ ಭವೇನ್ನಾತ್ರ ಕಾರ್ಯಾ ಕಾಚಿದ್ವಿಚಾರಣಾ ॥ ಇತಿ ಚ ನಾರಾಯಣತಂತ್ರೇ ॥ ೧೯ ॥ ಅಧಿ.೮ ॥ ॥ ೧೧ ॥**

**ಭಾಷ್ಯಾರ್ಥ ॥** ಆರಬ್ಧ ಪುಣ್ಯಪಾಪಗಳಿಗೆ ಭೋಗದಿಂದ ನಾಶವಾದೊಡನೆಯೇ ಬ್ರಹ್ಮದರ್ಶಿಯು ಪರಬ್ರಹ್ಮನನ್ನು ಬ್ರಹ್ಮದ್ವೇಷಿಯು ಅಸಹ್ಯ ದುಃಖವುಳ್ಳ ತಮಸ್ಸನ್ನು ಹೊಂದುತ್ತಾನೆ. ಈ ಅರ್ಥದಲ್ಲಿ ಸಂದೇಹವಿಲ್ಲ. (ಆರಬ್ಧ ಭೋಗವು ನಿರವಧಿಕವಾದರೆ—ಬ್ರಹ್ಮಜ್ಞಾನಿ ಬ್ರಹ್ಮದ್ವೇಷಿಗಳಿಗೆ ಬ್ರಹ್ಮಪ್ರಾಪ್ತಿ ತಮಃಪ್ರಾಪ್ತಿಗಳು ಅನುಪಪನ್ನಗಳು ಎಂದರೆ-) ನೂರು ಬ್ರಹ್ಮರದ್ದು ಯಾವುದು ಕಾಲವೋ ಅದು ಸಮಾಪ್ತಿಯಾಗುವುದಕ್ಕಿಂತ ಮೊದಲೇ ಬ್ರಹ್ಮ ಮೊದಲಾದ ಎಲ್ಲಾ ಬ್ರಹ್ಮಜ್ಞಾನಿಗಳಿಗೂ ನಿಯಮದಿಂದ ಪ್ರಾರಬ್ಧಕರ್ಮನಾಶವು ಆಗುತ್ತದೆ. ನೂರು ವರ್ಷವಾದ ಮೇಲೆ ಯಾವ ಬ್ರಹ್ಮಜ್ಞಾನಿಗೂ ಪ್ರಾರಬ್ಧಕರ್ಮವು ಉಳಿಯುವುದಿಲ್ಲ. ನೂರು ವರ್ಷ ಸಮಾಪ್ತಿಪರ್ಯಂತವಾಗಿಯೇ. ಈ ನಿಯಮಕ್ಕೆ ಎಲ್ಲಿಯೂ ವ್ಯಭಿಚಾರವಿಲ್ಲ. ಹೀಗೆ ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಹೇಳಿಯದೆ.

**ವಿಶೇಷಾಂಶ ॥ ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧಸಂಕ್ಷಯಃ । ಬ್ರಹ್ಮಣಸ್ತ್ವೇ ತಾವತ್ಸಂ ಪಂಚಾಶದ್ಬ್ರಹ್ಮಣಸ್ತಥಾ॥ ರುದ್ರಸ್ಯ ವಿಂಶದೇವ ಸ್ಯಾದಿಂದ್ರಸ್ಯಾರ್ಕಾದಿಕೇ ದಶ ॥ ಅನ್ಯೇಷಾಂ ಬ್ರಹ್ಮಮಾತ್ರಸ್ಯ ತ್ವಂತ ಆರಬ್ಧಸಂಕ್ಷಯಃ ॥** ನೂರು ಬ್ರಹ್ಮರ ಕಾಲವು ಸಮಾಪ್ತಿಯಾಗುವುದಕ್ಕಿಂತ ಮೊದಲೇ ಎಲ್ಲಾ ಬ್ರಹ್ಮಜ್ಞಾನಿಗಳ ಆರಬ್ಧ ಕರ್ಮವೂ ನಾಶವಾಗುತ್ತದೆ. ಆದರಲ್ಲಿ ಚತುರ್ಮುಖಬ್ರಹ್ಮನಿಗೆ ನೂರು ಬ್ರಹ್ಮಕಲ್ಪಗಳಿಂದಲೇ ಪ್ರಾರಬ್ಧಕರ್ಮ ಪರಿಸಮಾಪ್ತಿಯು. ಬ್ರಹ್ಮ ಶತಕಾಲದ ಆದಿಯಲ್ಲಿ ಕೆಲವು ಕಾಲ ಬ್ರಹ್ಮಾಪರೋಕ್ಷಜ್ಞಾನ ಸಾಧನಕ್ಕಾಗಿ ಅತೀತವಾಗಿರುವುದರಿಂದ ಅಪರೋಕ್ಷಜ್ಞಾನವನ್ನು ಆರಂಭಿಸಿ ಚತುರ್ಮುಖಪದಯೋಗ್ಯ ಜೀವನಿಗೆ ಪ್ರಾರಬ್ಧಕರ್ಮವು ಸ್ವಲ್ಪ ನ್ಯೂನವಾದ ಬ್ರಹ್ಮ ಶತಕಾಲವನ್ನೇ ಅನುಸರಿಸಿಕೊಂಡಿರುತ್ತದೆ. (೫) ಐವತ್ತು ಬ್ರಹ್ಮಕಲ್ಪಗಳಲ್ಲಿ ರುದ್ರನಿಗೂ (೨೦) ಇಪ್ಪತ್ತು ಬ್ರಹ್ಮಕಲ್ಪಗಳಲ್ಲಿ ಇಂದ್ರನಿಗೂ (೧೦) ಬ್ರಹ್ಮಕಲ್ಪಗಳಲ್ಲಿ ಸೂರ್ಯಾದಿ ದೇವತೆಗಳಿಗೂ ಪ್ರಾರಬ್ಧಕರ್ಮವು ನಾಶವಾಗುತ್ತದೆ. ಇತರ ಜ್ಞಾನಿಗಳಿಗೆ ಒಂದೇ ಬ್ರಹ್ಮಕಲ್ಪದಲ್ಲಿ ಆರಬ್ಧಕರ್ಮ ಪರಿಸಮಾಪ್ತಿಯಾಗುತ್ತದೆ. ಎಂದು ಸತ್ತತ್ತ್ವ ಎನ್ನುವ ಗ್ರಂಥದಲ್ಲಿ ಹೇಳಿದೆ. ॥ ೧೯ ॥ ॥ ೧೧ ॥

## ಅಧಿಕರಣ ಸಾರಾಂಶ

ಜ್ಞಾನದಿಂದ ಮುಕ್ತಿಯು ಅಯುಕ್ತವೋ ಯುಕ್ತವೋ, ಅದಕ್ಕಾಗಿ ಮುಕ್ತಿಪ್ರತಿಬಂಧಕಗಳಾದ ಜ್ಞಾನವು ಹುಟ್ಟುವುದಕ್ಕಿಂತ ಪೂರ್ವೋತ್ತರ ಕಾಲಗಳಲ್ಲಿರುವ ಕರ್ಮಗಳಿಗೆ ಜ್ಞಾನದಿಂದ ನಾಶ ಮೊದಲಾದವುಗಳು ಅಯುಕ್ತವೋ ಯುಕ್ತವೋ, ಅದಕ್ಕಾಗಿ ನಾಶಾದಿಗಳನ್ನು ಅಂಗೀಕರಿಸಿದರೆ ಬಾಧಕವು ಇದೆಯೋ ಇಲ್ಲವೋ ಎಂದು ಸಂದೇಹವು. ಪ್ರಾರಬ್ಧಕರ್ಮರೂಪಪ್ರತಿಬಂಧಕವಿಲ್ಲದಿದ್ದರೆ ಜ್ಞಾನದಿಂದ ಮುಕ್ತಿಯು ನಿಶ್ಚಯವಾಗಿಯೂ ಆಗುತ್ತದೆ, ಎಂದು ಏವಂ **ಮುಕ್ತಿಫಲಾನಿಯಃ** ಎನ್ನುವಲ್ಲಿ ಹೇಳಿದ್ದು ಅಯುಕ್ತವು. ಏಕೆಂದರೆ, ಜ್ಞಾನ ದಶೆಯಿಂದ ಮೊದಲೂ ಮೇಲೆಯೂ ಮಾಡಿದ ಪ್ರತಿಬಂಧಕೀಭೂತಗಳಾದ ಕರ್ಮಗಳು ನಿವೃತ್ತಗಳಾಗದೆ ಇರುವುದರಿಂದ ಸಂಚಿತ ಪೂರ್ವಕರ್ಮಗಳಿಗೆ ನಿವೃತ್ತಿಯು (೧) ಭೋಗದಿಂದಲೋ (೨) ಅಥವಾ ಅಗ್ನಿಯಿಂದ ಹತ್ತಿಯು ಸುಟ್ಟುಹೋಗುವಂತೆ ಜ್ಞಾನದಿಂದ ನಾಶವೋ ಮೇಲಿನ ಕರ್ಮಗಳಿಗೆ ಅಲೇಪವೋ, ಭೋಗದಿಂದ ನಾಶವೆನ್ನುವ ೧ನೇ ಕಲ್ಪದಲ್ಲಿ (೧) ಜ್ಞಾನೋತ್ಪತ್ತಿ ದೇಹದಲ್ಲಿಯೇ ಭೋಗವೋ, ೨ ಅಥವಾ ದೇಹಾಂತರದಲ್ಲಿಯೋ,

ದೇಹಾಂತರದಲ್ಲಿ ಭೋಗವು ಎನ್ನುವ ೨ ನೇ ಕಲ್ಪದಲ್ಲಿಯೂ ಕ್ರಮವಾಗಿ ಬಹುದೇಹಗಳಿಂದ ಭೋಗವೋ ೩. ಅಥವಾ ಒಂದೇ ಜನ್ಮದಲ್ಲಿ ಅನೇಕ ಶರೀರಗಳನ್ನು ತೆಗೆದುಕೊಂಡು ಏಕಕಾಲದಲ್ಲಿಯೇ ಭೋಗವೋ, ಜ್ಞಾನೋತ್ಪತ್ತಿ ದೇಹದಲ್ಲಿಯೇ ಭೋಗವೆನ್ನುವ ೧ನೇ ಕಲ್ಪವು ಬಹುಶರೀರಗಳಾಗುವ ಕರ್ಮಗಳು ಇದ್ದುದರಿಂದ ಯುಕ್ತವಲ್ಲ. ಕ್ರಮದಿಂದ ಬಹುದೇಹಗಳಿಂದ ಭೋಗವು ಎನ್ನುವ ೨ನೇ ಕಲ್ಪವೂ ಯುಕ್ತವಲ್ಲ. ಹಾಗೆ ಇದ್ದರೆ ಬಹುಕಾಲಾಂತರಿತವಾದ ಜ್ಞಾನಕ್ಕೆ ಜೀರ್ಣವಾದ ಬೀಜದಂತೆ ಮೋಕ್ಷಕಾರಣತ್ವವು ಕೂಡುವುದಿಲ್ಲವೆಂದಾಗಬೇಕಾಗುವುದು. ಭಿನ್ನಭಿನ್ನ ದೇಶಕಾಲಗಳಲ್ಲಿ ಫಲಗಳನ್ನು ಕೊಡುವ ಕರ್ಮಗಳಿಗೆ ಒಂದೇ ಕಾಲದಲ್ಲಿ ಒಂದೇ ದೇಶದಲ್ಲಿ ಒಂದೇ ಜನ್ಮದಲ್ಲಿ ಬಹುದೇಹಗಳನ್ನು ತೆಗೆದುಕೊಂಡು ಭೋಗವೆನ್ನುವ ೩.ನೇ ಪಕ್ಷವೂ ಅಯುಕ್ತವು. ಅಂತಹ ಕರ್ಮಗಳಿಗೂ ಯೋಗಪ್ರಭಾವದಿಂದ ಒಂದೇ ದೇಶಕಾಲಗಳಲ್ಲಿಯೇ ಭೋಗವು ಎಂದಂಗೀಕರಿಸಿದರೆ ಯೋಗಸಾಮರ್ಥ್ಯದಿಂದ ಭೋಗವೇ ಇಲ್ಲವೆಂದೂ ಆಗಬೇಕಾಗುವುದು. ಮತ್ತು ಬಹುದೇಹಗಳಿಂದ ಕರ್ಮಭೋಗಗಳನ್ನು ಮಾಡುವ ಕಾಲದಲ್ಲಿ ಪುನಃ ಕರ್ಮಾಂತರವು ಕೂಡುವುದಿರಂದ ಕರ್ಮಭೋಗವು ಸಮಾಪ್ತಿಯಾಗದೆ ಹೋಗುವುದು. ಆ ಕಾಲದಲ್ಲಿ ಜ್ಞಾನಿಯು ಕರ್ಮವನ್ನು ಮಾಡುವುದೇ ಇಲ್ಲವೆನ್ನುವುದು ಕೂಡಲಾರದು. ಏಕೆಂದರೆ, **ನ ಹಿ ಕಶ್ಚಿತ್ ಕ್ಷಣಮಪಿ** ಎನ್ನುವ ಪ್ರಮಾಣಾನುಸಾರವಾಗಿ ಸರ್ವರೂ ಕರ್ಮವನ್ನು ಸರ್ವದಾ ಮಾಡುತ್ತಾ ಇರುತ್ತಾರೆ. ಅಗ್ನಿಯಿಂದ ಹತ್ತಿಯು ಸುಟ್ಟುಹೋಗುವಂತೆ ಜ್ಞಾನದಿಂದ ಸಂಚಿತ ಎಲ್ಲಾ ಕರ್ಮಗಳಿಗೆ ನಾಶವು ಉತ್ತರಕರ್ಮಗಳಿಗೆ ಅಶ್ಲೇಷವು ಎನ್ನುವ ಪಕ್ಷವೂ ಯುಕ್ತವಲ್ಲ. ಏಕೆಂದರೆ, **ನಾಭುಕ್ತಂ ಕ್ಷೀಯತೇ ಕರ್ಮ** ಎನ್ನುವ ಸ್ಮೃತಿವಿರೋಧವು ಬರುವುದು. ಮತ್ತು ಜ್ಞಾನದಿಂದಲೇ ಕರ್ಮವಾದರೆ ಜ್ಞಾನವು ಹುಟ್ಟಿದೊಡನೆಯೇ ಮೋಕ್ಷವು ಆಗಬೇಕಾಗುವುದು. ಮೇಲಿನ ಪುಣ್ಯಕರ್ಮಕ್ಕೆ ಸಂಬಂಧವಿಲ್ಲವಾದರೆ ಸುತ್ರಾಧಿಕರಣದಲ್ಲಿ ಮುಕ್ತಿಯಲ್ಲಿ ಆಗುವ ಆನಂದಾತಿಶಯ ಹೇತುತ್ವವು ಹೇಳಿದ್ದು ಕೂಡಲಾರದು. ಇದೇ ರೀತಿಯಾಗಿ ಹರಿದ್ವೇಷಿಗಳಿಗೂ ದ್ವೇಷಪೂರ್ತಿಯಿಂದ ಮೊದಲೂ ಮೇಲೆಯೂ ಮಾಡಿದ ಕರ್ಮಗಳು ಇದ್ದುದರಿಂದ ದ್ವೇಷಪೂರ್ತಿಯಿಂದ ತಮಸ್ಸು ಆಗುತ್ತದೆಂದು ಹೇಳಿದ್ದು ಅಯುಕ್ತವು ಎಂದು ಪೂರ್ವಪಕ್ಷವು ಬಂದರೆ ಭೋಗದಿಂದ ಕರ್ಮಗಳಿಗೆ ನಾಶವು ಕೂಡದಿದ್ದರೂ ಜ್ಞಾನವು ಹುಟ್ಟಿದ ಮೇಲೆ ಕರ್ಮವನ್ನು ಮಾಡಿದರೂ ಮೋಕ್ಷವು ಯುಕ್ತವೇ. ಜ್ಞಾನದಿಂದ ಪೂರ್ವೋತ್ತರ ಕರ್ಮಗಳಿಗೆ ನಾಶವನ್ನೂ ಅಶ್ಲೇಷವನ್ನೂ ಅಂಗೀಕರಿಸಿದ್ದರಿಂದ ಹಿಂದೆ ಹೇಳಿದ ದೋಷವಿಲ್ಲ. ಪ್ರಾಚೀನಗಳಾದ ಅಪ್ರಾರಬ್ಧಗಳಾದ ಎಲ್ಲಾ ಪಾಪಕರ್ಮಗಳಿಗೆ ಮತ್ತು ಪುಣ್ಯಕರ್ಮಗಳ ಮಧ್ಯದಲ್ಲಿಯೂ ಅಪ್ರಾರಬ್ಧ ಅನಭೀಷ್ಟ ಕಾಮ್ಯ ಪುಣ್ಯಕರ್ಮಗಳಿಗೇನೇ ಜ್ಞಾನದಿಂದ ನಾಶವಾದರೂ ತದ್ವ್ಯತಿರಿಕ್ತವಾದ ಪ್ರಾರಬ್ಧ ಪುಣ್ಯಪಾಪಗಳಿಗೆ ಭೋಗದಿಂದಲೇ ನಾಶವನ್ನು ಒಪ್ಪಿದ್ದರಿಂದ ನಾಭುಕ್ತಂ ಕ್ಷೀಯತೇ ಎನ್ನುವ ಸ್ಮೃತಿಯು ಪ್ರಾರಬ್ಧ ಕರ್ಮವಿಷಕವಾದುದರಿಂದ ಆ ಸ್ಮೃತಿಯಿಂದ ವಿರೋಧಾಭಾವವೂ ಜ್ಞಾನವು ಹುಟ್ಟಿದ ಉತ್ತರಕ್ಷಣದಲ್ಲಿಯೇ ಮೋಕ್ಷವು ಆಗಲಿ ಎನ್ನುವ ದೋಷವೂ ಕೂಡುವುದಿಲ್ಲ. ಹಾಗೆಯೇ ಜ್ಞಾನೋತ್ತರದಲ್ಲಿ ಮಾಡಿದ ಪಾಪಕ್ಕೆ ಅಶುಚಿತ್ವಾದ್ಯನಾಪಾದಕತ್ವರೂಪವಾದ ಅಶ್ಲೇಷವನ್ನೂ ಅಕಾಮ್ಯಪುಣ್ಯಕ್ಕೆ ಮೋಕ್ಷದಲ್ಲಿ ಸುಖಾತಿಶಯ ಹೇತುತ್ವವನ್ನೂ ಅಂಗೀಕರಿಸಿದ್ದರಿಂದ ಸುತ್ರಾಧಿಕರಣದಲ್ಲಿ

ಹೇಳಿದ್ದಕ್ಕೆ ವಿರೋಧವಿಲ್ಲ. ಮತ್ತು ಪ್ರಾರಬ್ಧಪುಣ್ಯಪಾಪಗಳಿಗೂ ಭೋಗದಿಂದ ಅಪ್ರಾರಬ್ಧಗಳಾದ ಕಾಮ್ಯಗಳಾದ ಪೂರ್ವೋತ್ತರ ಅನಿಷ್ಟಪುಣ್ಯಕರ್ಮಗಳಿಗೂ ಜ್ಞಾನದಿಂದನಾ ಅಶಾಶ್ಲೇಷಗಳೂ ಕೂಡುವುದು. ಆದಕಾರಣ ಬಾಧಕವು ಇಲ್ಲದಿರುವುದರಿಂದ ಜ್ಞಾನದಶೆಯಿಂದ ಕರ್ಮನಾಶಾದಿಗಳು ಯುಕ್ತವೇ. ಆದಪ್ರಯುಕ್ತ ಜ್ಞಾನದಿಂದ ಮೋಕ್ಷವು ಯುಕ್ತವೇ. ಹೀಗೆಯೇ ದ್ವೇಷಿಗಳಿಗೂ ದ್ವೇಷಪೂರ್ತಿಯಿಂದ ಮೊದಲು ಮಾಡಿದ ಎಲ್ಲಾ ಅಪ್ರಾರಬ್ಧ ಪುಣ್ಯಗಳಿಗೆ ನಾಶವನ್ನು ಮೇಲೆ ಮಾಡಿದ ಸರ್ವಪುಣ್ಯಗಳಿಗೆ ಆಶ್ಲೇಷವನ್ನು ಪ್ರಾರಬ್ಧಪುಣ್ಯಪಾಪಗಳಿಗೆ ಭೋಗದಿಂದ ನಾಶವನ್ನು ಅಂಗೀಕರಿಸಿದ್ದರಿಂದ ದ್ವೇಷಿಗಳಿಗೆ ದ್ವೇಷಪರಿಪೂರ್ತಿಯಿಂದ ತಮಸ್ಸು ಪ್ರಾಪ್ತವಾಗುತ್ತದೆಂದು ಹೇಳಿದ್ದು ಯುಕ್ತವು. ॥ ಅಧಿ.೮ ॥

ತದಧಿಗಮಾಧಿಕರಣವು ಸಮಾಪ್ತವಾಯಿತು.

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ**
**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ದ)ವಿರಚಿತೇ**
**ಚತುರ್ಥಾಧ್ಯಾಯಸ್ಯ ಪ್ರಥಮ ಪಾದಃ ॥ ೪-೧ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮದ್ವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ನಾಲ್ಕನೇ ಅಧ್ಯಾಯದಲ್ಲಿ ಒಂದನೇ ಪಾದವು ಸಮಾಪ್ತವಾಯಿತು. ॥ ೪-೧ ॥

**ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।**
**ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಚತುರ್ಥಾಧ್ಯಾಯ ೨ನೇ ಪಾದ

## ಉತ್ಕ್ರಾಂತಿಪಾದಃ

## ೧.ವಾಙ್ಮನೋಧಿಕರಣವು

**ಭಾಷ್ಯ ॥ ದೇವಾನಾಂ ಮೋಕ್ಷ ಉತ್ಕ್ರಾಂತಿಶ್ಚಾಸ್ಮಿನ್ ಪಾದ ಉಚ್ಯತೇ ॥ ೧ ॥**

**ಭಾಷ್ಯಾರ್ಥ ॥** ತಂತಮ್ಮ ಪದವಿಯನ್ನು ಹೊಂದಿರತಕ್ಕ ದೇವತೆಗಳಿಗೆ ಉತ್ತರೋತ್ತರಪ್ರವೇಶ ರೂಪವಾದ ದೇಹಲಯದಿಂದ ಮೋಕ್ಷವೂ (ಅಂದರೆ, ತಮ್ಮಿಂದ ಉತ್ತಮರಾದ ದೇವತೆಗಳಲ್ಲಿ ಪ್ರವೇಶದಿಂದ ಅಲ್ಲಿ ದೇಹಲಯರೂಪವಾದುದು). ದೇವತೆಗಳಿಂದ ಭಿನ್ನರಾದ ಮಾನುಷಶರೀರವುಳ್ಳ ಜ್ಞಾನಿಗಳಿಗೆ ದೇಹದಿಂದ ಬ್ರಹ್ಮನಾಡೀದ್ವಾರಾ ಉತ್ಕ್ರಾಂತಿಯೂ ಈ ಪಾದದಲ್ಲಿ ಅಧಿಕಾರಿಗಳ್ಳಲಿ ಉತ್ತಮತ್ವಕ್ರಮದಿಂದ ಹೇಳಲ್ಪಡುತ್ತದೆ. (ಏವಂಚ ಅಧಿಕಾರ್ಯಾಧಿಕ್ಯಕ್ರಮದಿಂದ ಪ್ರಥಮತಃ ದೇವತೆಗಳ ದೇಹಲಯವು ಹೇಳಲ್ಪಡುತ್ತದೆ. ಆ ಮೇಲೆ ಜ್ಞಾನಿಗಳಾದ ಮನುಷ್ಯರ ಉತ್ಕ್ರಾಂತಿಯು ಹೇಳಲ್ಪಡುತ್ತದೆ. ॥ ೧ ॥

**ಪೀಠಿಕೆ ॥** ಈ ಪ್ರಥಮಾಧಿಕರಣದಲ್ಲಿ ಭಗವತ್ಪ್ರಾಪ್ತಿರೂಪವಾದ ಮೋಕ್ಷಕ್ಕಾಗಿ ವಾಗಭಿಮಾನಿ ದೇವತೆಗೆ ಮನೋಭಿಮಾನಿಯಾದ ದೇವತೆಯಲ್ಲಿ ಲಯವನ್ನು ಸಮರ್ಥಿಸುತ್ತಾರೆ. ವಾಕ್ ಅಭಿಮಾನಿಯು ಮನೋಭಿಮಾನಿಯಲ್ಲಿ ಲೀನವಾಗುವುದಿಲ್ಲ. ಯಾವುದು ಯಾವುದರ ಅಧೀನವೋ ಅದಕ್ಕೆ ಅದರಲ್ಲಿ ಲಯವನ್ನು ಹೇಳಬೇಕು. ವಾಕ್‌ಮನಸ್ಸುಗಳಿಗೆ ನಿಯಮ್ಯ ನಿಯಾಕತ್ವಗಳನ್ನು ನಿಶ್ಚಯಿಸಲು ಸಾಧ್ಯವಿಲ್ಲ. ವಾಕ್ಪೂರ್ವ ರೂಪಂ। ಮನ ಉತ್ತರರೂಪಂ । ಮನಃ ಪೂರ್ವರೂಪಂ । ವಾಗುತ್ತರರೂಪಂ ಎಂದು ಸಂದೇಹವನ್ನು ಹುಟ್ಟಿಸತಕ್ಕ ಉಕ್ತಿಯದೆ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ॥ ೧ ॥

**ಸೂತ್ರಾರ್ಥ ॥** ವಾಗಭಿಮಾನಿನಿಯರಾದ ವಾರುಣೀ ಸುಪರ್ಣಿಯರು, ಮನೋಭಿಮಾನಿಗಳಾದ ಶೇಷ ಗರುಡರಲ್ಲಿ ಲಯವನ್ನು ಹೊಂದುತ್ತಾರೆ. ಮನಸ್ಸಿನಿಂದ ಸಂಕಲ್ಪಿತವಾದುದನ್ನೇ ವಾಗಿಂದ್ರಿಯದಿಂದ ವ್ಯವಹಾರ ಮಾಡುವುದರಿಂದ ವಾಗಿಂದ್ರಿಯದಲ್ಲಿ ಮನೋವಶತ್ವವು ಪ್ರತ್ಯಕ್ಷ ಪ್ರಮಾಣದಿಂದಲೇ ದೃಷ್ಟವಾಗಿದೆ. ತಸ್ಯ ನ ಯಾವನ್ನ ವಾಕ್ ಮನಸಿ ಸಂಪದ್ಯತೇ ಎನ್ನುವ ಶ್ರುತಿರೂಪ ಶಬ್ದದಿಂದಲೂ.

ಭಾಷ್ಯ ॥ (೧) ವಾಗಭಿಮಾನಿನ್ಯುಮಾ ಮನೋಭಿಮಾನಿನಿ ರುದ್ರೇ ವಿಲೀಯತೇ । ವಾಚೋ ಮನೋವಶತ್ವದರ್ಶನಾತ್ । (೨) ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ (ಛಾ.೬.೧೫.೧.)। ಇತಿ ಶಬ್ದಾಚ್ಚ (೩) ಉಮಾ ವೈ ವಾಕ್ ಸಮುದ್ದಿಷ್ಟಾ ಮನೋ ರುದ್ರ ಉದಾಹೃತಃ। ತದೇತನ್ಮಿಥುನಂ ಜ್ಞಾತ್ವಾನ ದಾಂಪತ್ಯಾದ್ವಿಹೀಯತೇ ಇತಿ ಹಿ ಸ್ಕಾಂದೇ ॥ ೧ ॥ ॥ ೧ ॥

ಭಾಷ್ಯಾರ್ಥ ॥ (೧) ವಾಗಭಿಮಾನಿನಿಯರಾದ ವಾರುಣೀ ಸೌಪರ್ಣಿಯರು ಮನೋಽಭಿಮಾನಿಗಳಾದ ಶೇಷ ಗರುಡರಲ್ಲಿ ಲಯವನ್ನು ಹೊಂದುತ್ತಾರೆ. ವಾಗಿಂದ್ರಿಯಕ್ಕೆ ಮನಸ್ಸಿನ ಅಧೀನತ್ವವು ಪ್ರತ್ಯಕ್ಷವಾಗಿಯೇ ದೃಷ್ಟವಾದುದರಿಂದ. (ಮನಸ್ಸನ್ನು ಅನುಸರಿಸಿಯೇ ವಾಗಿಂದ್ರಿಯದ ಪ್ರವೃತ್ತಿಯು ಸರ್ವರಿಗೂ ಅನುಭವಸಿದ್ಧವಾಗಿದೆ. ಅಚೇತನಗಳಿಗೆ ಅನ್ಯೋನ್ಯಾಧೀನತ್ವವು ಕೂಡದೆ ಇರುವುದರಿಂದ ತತ್ತದಭಿಮಾನಿ ದೇವತಾನಿಮಿತ್ತಕವೆಂದು ಅವಶ್ಯವಾಗಿ ಹೇಳಲೇಬೇಕು. ಇಲ್ಲವಾದರೆ ಅದು ಕೂಡಲಾರದು.) (೨) (ವಾಗ್ದೇವತೆಯಾದ ಉಮಾದೇವಿಗೆ ಮನೋದೇವತೆಯಾದ ರುದ್ರನ ಅಧೀನತ್ವವು ಇರಲಿ ಅದಾಗ್ಯೂ ನಿಯಾಮಕರು ಅನೇಕ ಮಂದಿ ಇದ್ದಪ್ರಯುಕ್ತ ನಿಶ್ಚಯವು ಆಗದಿರುವುದರಿಂದ ಅಲ್ಲಿ ಲಯವೆಂದು ಹೇಗೆ ತಿಳಿಯುತ್ತದೆ, ಎಂದರೆ) ಸಾಯತಕ್ಕ ಪುರುಷನಿಗೆ ಎಷ್ಟರವರೆಗೆ ವಾಗಭಿಮಾನಿನಿಯಾದ ಉಮಾದೇವತೆಯು ಮನೋಭಿಮಾನಿಯಲ್ಲಿ ವ್ಯಾಪಾರರಹಿತಳು ಆಗುವುದಿಲ್ಲವೋ, (ಮನಸ್ಸು ಪ್ರಾಣನಲ್ಲಿಯೂ ಪ್ರಾಣನು ಮಹಾಲಕ್ಷ್ಮಿಯಲ್ಲಿಯೂ ಲಕ್ಷ್ಮೀದೇವಿಯು ಶ್ರೀಹರಿಯಲ್ಲಿ ವ್ಯಾಪಾರರಹಿತಳು ಆಗುವುದಿಲ್ಲವೋ, ಅಷ್ಟರತನಕ ತನ್ನ ಬಾಂಧವಾದಿಗಳನ್ನು ಪುರುಷನು ತಿಳಿಯುತ್ತಾನೆ. ಯಾವಾಗ ವಾಗಾದಿ ಇಂದ್ರಿಯಾಭಿಮಾನಿಗಳು ಮನ ಆದ್ಯಭಿಮಾನಿಗಳಲ್ಲಿ ಲಯವನ್ನು ಹೊಂದುತ್ತಾರೋ, ಆಗ ಪುರುಷನು ಯಾವುದನ್ನೂ ತಿಳಿಯುವುದಿಲ್ಲ) ಎನ್ನುವ ಶ್ರುತಿಯಿಂದಲೂ, (೩) (ಈ ಶ್ರುತಿ ಸೂತ್ರಗಳಲ್ಲಿ ವಾಕ್ ಮನಶ್ಶಬ್ದಗಳು ಉಮಾ ರುದ್ರಪರಗಳೆಂದು ಹೇಗೆ ತಿಳಿಯುತ್ತದೆ ಎಂದರೆ) ವಾಗಭಿಮಾನಿನಿಯು ಉಮಾದೇವಿಯೆಂದು ಹೇಳಲ್ಪಟ್ಟಿದ್ದಾಳೆ. ಉಮಾಪದದಿಂದ ಲಯಪ್ರಕರಣದಲ್ಲಿ ವಾರುಣೀ ಸೌಪರ್ಣಿಯರು ಹೇಳಲ್ಪಡುತ್ತಾರೆ. ಮನೋಭಿಮಾನಿಯು ರುದ್ರನೆಂದು ಹೇಳಲ್ಪಡುತ್ತಾನೆ. ರುದ್ರಪದದಿಂದ ಶೇಷ ಸುಪರ್ಣರು ಹೇಳಲ್ಪಡುತ್ತಾರೆ. (ಪಾರ್ವತಿಗೆ ಆ ಜನ್ಮದಲ್ಲಿ ಮೋಕ್ಷವು ಇರುವುದಿಲ್ಲ. ರುದ್ರನಿಗೆ ರುದ್ರಪದವಿಯಲ್ಲಿರುವಾಗ ಮೋಕ್ಷವಿಲ್ಲ. ಪಾರ್ವತಿಗೆ ರುದ್ರನಿಗೆ ಮೋಕ್ಷಕ್ಕಾಗಿ ದೇಹನಾಶವಿಲ್ಲ.) ಶ್ರುತ್ಯುಕ್ತವಾದ ಉಮಾರುದ್ರಾಖ್ಯವಾದ ವಾಕ್ ಮನಸ್ಸು ಎಂದು ಹೆಸರುಳ್ಳ ದ್ವಂದ್ವವನ್ನು ತಿಳಿದವನು ಗಂಡಹೆಂಡಂದಿಯರ ಭಾವದಿಂದ ತಪ್ಪುವುದಿಲ್ಲ (ಏವಂಚ ತಿಳಿದವನಿಗೆ ವಿಧುರತ್ವವು ಬರುವುದಿಲ್ಲ.) ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ॥ ೧ ॥

ಪೀಠಿಕೆ ॥ ಹೀಗೆ ವಾಗಭಿಮಾನಿಯಾದ ಪಾರ್ವತಿಗೆ ಲಯನಿರ್ಣಯವಾಗಲಿ, ಆದಾಗ್ಯೂ ಸರ್ವದೇವತೆಗಳಿಗೆ ಮೋಕ್ಷವು ಕೂಡುವುದಿಲ್ಲ. ಲಯ ನಿಶ್ಚಯವಾಗದಿರುವುದರಿಂದ, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

ಸೂತ್ರ ॥ ಓಂ ಅತ ಏವ ಚ ಸರ್ವಾಣ್ಯನು ಓಂ ॥ ೨ ॥

**ಸೂತ್ರಾರ್ಥ ||** ಸಮಸ್ತ ದೇವತೆಗಳೂ ತಂತಮ್ಮ ನಿಯಮ್ಯನಿಯಾಮಕಾನುಸಾರವಾಗಿ ತಂತಮ್ಮ ನಿಯಾಕಮ ದೇವತೆಗಳಲ್ಲಿ ದೇಹಲಯವನ್ನು ಹೊಂದುತ್ತಾರೆ. ಅಗ್ನೌ ಸರ್ವೇ ದೇವಾ ವಿಲೀಯಂತೇ ಇತ್ಯಾದಿ ಶ್ರುತಿಗಳಿಂದಲೇ, ಚ=ಇಂದ್ರಿಯಗಳೂ ಯಥಾಯೋಗ್ಯವಾಗಿ ಲಯವನ್ನು ಹೊಂದುತ್ತವೆ.

**ಭಾಷ್ಯ || (೧) ಅತ ಏವ ಚ ಶಬ್ದಾತ್ ಸರ್ವಾಣಿ ದೈವತಾನಿ (ದೈವಾನಿ) ಯಥಾಽನುಕೂಲಂ ವಿಲೀಯಂತೇ । (೨) ಅಗ್ನೌ ಸರ್ವೇ ದೇವಾ ವಿಲೀಯಂತೇ ಅಗ್ನಿರಿಂದ್ರೇ ಇಂದ್ರ ಉಮಾಯಾಂ ಉಮಾ ರುದ್ರೇ ವಿಲೀಯತೇ ಏವಮನ್ಯಾನಿ ದೈವತಾನಿ (ದೈವಾನಿ) ಯಥಾ-ನುಕೂಲಂ । ಇತಿ ಹಿ ಗೌಪವನಶ್ರುತಿಃ || ೨ || ಅಧಿ.೧ || || ೩ ||**

**ಭಾಷ್ಯಾರ್ಥ ||** (೧) ಈ ಶ್ರುತಿಯಿಂದಲೇ ಎಲ್ಲಾ ದೇವತೆಗಳೂ ಚ=ಎಲ್ಲಾ ಇಂದ್ರಿಯಗಳೂ ತಮ್ಮ ತಮ್ಮ ನಿಯಮ್ಯನಿಯಾಮಕಭಾವವನ್ನು ಅನುಸರಿಸಿಯೇ ಲಯವನ್ನು ಹೊಂದುತ್ತಾರೆ. (ನಿಯಾಮಕರು ಹೆಚ್ಚು ಮಂದಿ ಇದ್ದ ಪ್ರಯುಕ್ತ ನಿಶ್ಚಯವು ಆಗುವುದಿಲ್ಲವೆಂದು ಹೇಳಕೂಡದು.) ಅತಏವ=ಶ್ರುತಿಯಿಂದಲೇ ನಿಶ್ಚಯವು ಆಗುವುದು. (೨) (ಶ್ರುತಿಯು ಯಾವುದೆಂದರೆ) ಎಲ್ಲಾ ದೇವತೆಗಳು ಅಗ್ನಿಯಲ್ಲಿ ಲಯವನ್ನು ಹೊಂದುತ್ತಾರೆ. ಅಗ್ನಿಯು ಸೂರ್ಯ ಬೃಹಸ್ಪತಿದ್ವಾರಾ ಇಂದ್ರನಲ್ಲಿಯೂ, ಇಂದ್ರನು ಸೌಪರ್ಣದೇವಿಯಲ್ಲಿಯೂ, ಸೌಪರ್ಣೀದೇವಿಯು ಗರುಡನಲ್ಲಿಯೂ ಲಯವನ್ನು ಹೊಂದುತ್ತಾಳೆ. ಹೀಗೆಯೇ ಇತರರಾದ ವರುಣಾದಿ ದೇವತೆಗಳು ತಮ್ಮ ನಿಯಮ್ಯನಿಯಾಮಕಭಾವಾನುಸಾರವಾಗಿ ಸೋಮ ಮೊದಲಾದ ಸ್ವೋತ್ತಮರಲ್ಲಿ ಲಯವನ್ನು ಹೊಂದುತ್ತಾರೆ, ಎನ್ನುವ ಗೌಪವನ ಶ್ರುತಿಯಿಂದ. || ೨ || || ೩ ||

## ಅಧಿಕರಣ ಸಾರಾಂಶ

ಜ್ಞಾನಿಗಳಿಗೆ ದೇಹಕ್ಷಯವು ಎರಡು ವಿಧವು. ದೇವತೆಗಳಿಗೆ ಸ್ವೋತ್ತಮರಲ್ಲಿ ಪ್ರವೇಶದಿಂದ ಲಯವು. ದೇವೇತರರಿಗೆ ಬ್ರಹ್ಮನಾಡಿಯಿಂದ ಉತ್ಕ್ರಮಣದಿಂದ ದೇಹಲಯವು ಅದರಲ್ಲಿ ದೇವತೆಗಳು ಅಧಿಕಾರಿಗಳಲ್ಲಿ ಉತ್ತಮರಾದುದರಿಂದ ಅವರಿಗೆ ಏಳು ಅಧಿಕರಣಗಳಿಂದ ದೇಹಲಯವು ಹೇಳಲ್ಪಡುತ್ತದೆ. ಅದರಲ್ಲಿ ವಾಗ್ದೇವತೆಗೆ ಭಗವತ್ಪ್ರಾಪ್ತಿರೂಪವಾದ ಮೋಕ್ಷಕ್ಕಾಗಿ ಮನಸ್ಸಿಗೆ ಅಭಿಮಾನಿಯಾದ ದೇವತೆಯಲ್ಲಿ ಲಯವು ನಿರ್ಣಯಿಸಲಿಕ್ಕೆ ಅಶಕ್ಯವೋ ಅಥವಾ ನಿರ್ಣಯಿಸಲಿಕ್ಕೆ ಶಕ್ಯವೋ, ಅದಕ್ಕಾಗಿ ಮನೋಽಭಿಮಾನಿಗೆ ವಾಗಭಿಮಾನಿಯಿಂದ ಉತ್ತಮತ್ವವನ್ನು ನಿರ್ಣಯಿಸಲಿಕ್ಕೆ ಅಶಕ್ಯವೋ ಅಥವಾ ಶಕ್ಯವೋ ಅದಕ್ಕಾಗಿ **ವಾಕ್ಪೂರ್ವರೂಪಂ । ಮನ ಉತ್ತರರೂಪಂ । ಮನಃ ಪೂರ್ವರೂಪಂ। ವಾಗುತ್ತರರೂಪಂ||** ಎಂದು ಮಿಶ್ರವಾದ ಉಕ್ತಿಯು ವಾಕ್ ಮನಸ್ಸುಗಳಿಗೆ ಪರಸ್ಪರವಾಗಿ ಉತ್ಪತ್ತಿಯನ್ನು ಹೇಳಿದ್ದರಿಂದ ಸಮಪ್ರಧಾನಭಾವವುಳ್ಳದ್ದೋ ಅಥವಾ ಸಮಪ್ರಧಾನಭಾವವಿಲ್ಲದಿರುವದೋ, ಎಂದು ಸಂದೇಹವು. ಶ್ರುತಿಯಲ್ಲಿ ವ್ಯಾಮಿಶ್ರವಾದ ಉಕ್ತಿಯಿಂದ ಇಬ್ಬರಿಗೆ ಸಮಪ್ರಾಧಾನ್ಯವು ಅವಗತವಾಗುವುದರಿಂದ ಮನಸ್ಸಿಗೆ ಉತ್ತಮತ್ವ ನಿರ್ಣಯವಾಗದಿರುವುದರಿಂದ ತಂತಮ್ಮನ್ನು ಸೃಷ್ಟಿಸಿರುವ ಸ್ವೋತ್ತಮರಾದ ದೇವತೆಗಳಲ್ಲಿಯೇ ಲಯವನ್ನು ಹೇಳಬೇಕಾಗಿರುವುದರಿಂದ

ವಾಗಿಂದ್ರಿಯಕ್ಕೆ ಮನಸ್ಸಿನಲ್ಲಿ ಲಯವನ್ನು ನಿರ್ಣಯಿಸಲಿಕ್ಕೆ ಅಶಕ್ಯವು ಎಂದು ಪೂರ್ವಪಕ್ಷವು ಬಂದರೆ, ವಾಗಿಂದ್ರಿಯಕ್ಕೆ ಮನಸ್ಸಿನ ಅಧೀನತ್ವವು ಸರ್ವಪ್ರತ್ಯಕ್ಷ ಸಿದ್ಧವಾದುದರಿಂದಲೂ **ಮನಸಾ ವಾ ಅಗ್ರೇ ಸಂಕಲ್ಪಯತಿ ಅಥ ವಾಚಾ ವ್ಯಾಹರತಿ** ಎಂದು ವಾಕ್ಪ್ರವೃತ್ತಿಗೆ ಮನಃಪ್ರವೃತ್ತಿಪೂರ್ವಕತ್ವರೂಪ ಯುಕ್ತಿಯಿದ್ದುದರಿಂದ ಮನಸ್ಸಿಗೆ ಉತ್ತಮತ್ವ ನಿರ್ಮಯವಾಗುವುದಿರಂದ ವಾಗ್ದೇವತೆಗೆ ಮನೋದೇವತೆಯಲ್ಲಿ ಲಯವು ನಿಶ್ಚಯವಾಗುತ್ತದೆ. ಹಿಂದೆ ಹೇಳಿದ ವ್ಯಾಮಿಶ್ರವಾದ ಉಕ್ತಿಯಿಂದ ವಿರೋಧವೆನ್ನಕೂಡದು. ಆ ಉಕ್ತಿಯು ಆ ಸಂಹಿತೆಯ ಪೂರ್ವೋತ್ತರ ವರ್ಣದೇವತಾತ್ವ ವಿಷಯದಲ್ಲಿಯೂ ಗುಣಪ್ರಧಾನ ಭಾವದಲ್ಲಿಯೂ ಮಾಂಡವ್ಯ ಋಷಿ, ಅವರ ಜ್ಯೇಷ್ಠಪುತ್ರರ ಮತಭೇದ ಪರವಾಗಿದೆ. ಇಲ್ಲಿ ವಾಕ್ ಶಬ್ದದಿಂದ ವಾರುಣೀ ಸುಪರ್ಣಿಯರನ್ನೂ ಮನಃಶಬ್ದದಿಂದ ಶೇಷಗರುಡರನ್ನೂ ಇಟ್ಟುಕೊಳ್ಳಬೇಕು. ಏವಂಚ **ಅಗ್ನೌ ಸರ್ವೇ ದೇವಾ ವಿಲೀಯಂತೇ** ಇತ್ಯಾದಿ ಶ್ರುತಿಬಲದಿಂದ ಸರ್ವ ದೇವತೆಗಳಿಗೂ ತಂತಮ್ಮಿಂದ ಉತ್ತಮರಾದ ದೇವತೆಗಳಲ್ಲಿ ಲಯವು ಸಿದ್ಧವಾಯಿತು. ಅಲ್ಲಿ ವ್ಯಾಮಿಶ್ರೋಕ್ತ್ಯಾದಿರೂಪವಾದ ಬಾಧಕವು ಇಲ್ಲ. ॥ ಅಧಿ. ೧ ॥

ವಾಙ್ಮನೋಽಧಿಕರಣವು ಸಮಾಪ್ತವಾಯಿತು.

## ೨ ಮನಃಪ್ರಾಣಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಮನೋಽಭಿಮಾನಿ ದೇವತೆಗೆ ಮುಖ್ಯಪ್ರಾಣನಲ್ಲಿ ಲಯವನ್ನು ಸಮರ್ಥಿಸುತ್ತಾರೆ. ಮುಖ್ಯಪ್ರಾಣನಲ್ಲಿ ಮನೋಽಭಿಮಾನಿ ದೇವತೆಯು ಲಯವನ್ನು ಹೊಂದುವುದಿಲ್ಲ, ಮನಸ್ಸಿಗೆ ಪ್ರಾಣನಿಂದ ಊನತ್ವವಿಲ್ಲದಿರುವುದರಿಂದ ಸರ್ವಪ್ರವೃತ್ತಿಗೆ ಕಾರಣನು ಪ್ರಾಣನು. ಮನಸ್ಸು ಕೂಡ ಪ್ರತ್ಯಕ್ಷವಾಗಿಯೇ ಸರ್ವಪ್ರವೃತ್ತಿಗೆ ಕಾರಣವೆಂದು ಕಾಣಲ್ಪಡುತ್ತದೆ. ಆದಕಾರಣ ಮನೋಽಭಿಮಾನಿ ದೇವತೆಯೂ ಸರ್ವಪ್ರವೃತ್ತಿಗೆ ಕಾರಣವಾಗಿದೆ. ಆದಕಾರಣ ಸರ್ವಪ್ರವೃತ್ತಿಕಾರಣತ್ವ ದಿಂದ ವಿಶೇಷವಿಲ್ಲದಿರುವುದರಿಂದಲೂ ಲಯವು ಕೂಡುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

### ಸೂತ್ರ ॥ ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ॥ ೩ ॥

**ಸೂತ್ರಾರ್ಥ ॥** ಈಶ್ವರನಿಂದುತ್ಪನ್ನರೆಂದುಕ್ತರಾದ ಅಥವಾ ವಾಙ್ನಿಯಾಮಕರೆಂದು ಪ್ರಸ್ತುತರಾದ ಮನೋಽಭಿಮಾನಿಗಳಾದ ಶೇಷ ಗರುಡರು ಪ್ರಾಣೇಃವಾಣೇದ್ವಾರಾ ಚತುರ್ಮುಖನಲ್ಲಿ ಲಯವನ್ನು ಹೊಂದುತ್ತಾರೆ, ಮನಃ ಪ್ರಾಣೇ ಎನ್ನುವ ಶ್ರುತಿಯಿಂದ.

**ಭಾಷ್ಯ ॥ (೧) ಮನಃ ಪ್ರಾಣೇ** (ಛಾ.೬.೧೫.೧) ಇತ್ಯುತ್ತರವಚನಾನ್ಮನೋಽಭಿಮಾನೀ **ರುದ್ರಃ ಪ್ರಾಣೇ ವಾಯೌ ವಿಲೀಯತೇ । (೨) ವಾಯೋರ್ವಾವ ರುದ್ರ ಉದೇತಿ**

**ವಾಯೌ ವಿಲೀಯತೇ ತಸ್ಮಾದಾಹುರ್ವಾಯುರ್ದೇವಾನಾಂ ಶ್ರೇಷ್ಠಃ । ಇತಿ ಚ ಕೌಂಡಿನ್ಯಶ್ರುತಿಃ ॥ ೩ ॥ ಅಧಿ. ೨ ॥ ॥ ೧ ॥**

**ಭಾಷ್ಯಾರ್ಥ** ॥ (೧) ವಾಙ್ಮನಸಿ ಸಂಪದ್ಯತೇ ಎಂದು ಪೂರ್ವದಲ್ಲಿ ಉದಾಹೃತವಾದ ವಾಕ್ಯಕ್ಕಿಂತ ಉತ್ತರವಾದ ಮನಃ ಪ್ರಾಣೇ ಎನ್ನುವ ವಚನದಿಂದ ಮನೋಽಭಿಮಾನಿಯಾದ ರುದ್ರನು (ಶೇಷ ಗರುಡರು) ಪ್ರಾಣನಲ್ಲಿ (ವಾಣೀದ್ವಾರಾ ಚತುರ್ಮುಖನಲ್ಲಿ) ಲಯವನ್ನು ಹೊಂದುತ್ತಾರೆ. (ರುದ್ರ ಪ್ರಾಣರಿಬ್ಬರಿಗೂ ಆ ಪದವಿಯು ಇರುವಾಗ ಮುಕ್ತಿಯು ಇಲ್ಲ) (೨) (ಪ್ರಾಣನಿಂದ ಹುಟ್ಟಿರುವ ಮನಸ್ಸಿಗೆ ಪ್ರಾಣನಲ್ಲಿ ಹೇಗೆ ಲಯವು ಎಂದರೆ) ಚತುರ್ಮುಖನಿಂದ ಗರುಡ ಶೇಷರು ಹುಟ್ಟುತ್ತಾರೆ. ಉತ್ಪನ್ನರಾದ ಪ್ರಯುಕ್ತವೇ ಚತುರ್ಮುಖನಲ್ಲಿ ಗರುಡ ಶೇಷರು ಲಯವನ್ನು ಹೊಂದುತ್ತಾರೆ. ಗರುಡ ಶೇಷರ ಉತ್ಪತ್ತಿ ಲಯಗಳಿಗೆ ಕಾರಣರಾದ ಪ್ರಯುಕ್ತ ವಾಯುದೇವರು ರುದ್ರಾದಿಗಳಿಂದ ಶ್ರೇಷ್ಠರೆಂದು ಜ್ಞಾನವೃದ್ಧರು ಹೇಳುತ್ತಾರೆ, ಎಂದೂ ಕೌಂಡಿನ್ಯಶ್ರುತಿಯು ಇದೆ. ॥ ೩ ॥ ॥ ೧ ॥

## ಅಧಿಕರಣ ಸಾರಾಂಶ

ಮನೋಽಭಿಮಾನಿ ದೇವತೆಗೆ ಪ್ರಾಣದೇವನಾದ ಚತುರ್ಮುಖನಿಂದ ಉತ್ಪತ್ತಿಯು ಇಲ್ಲವೋ ಇದೆಯೋ, ಎಂದು ಸಂದೇಹವು. ಪ್ರಾಣದೇವನಾದ ಚತುರ್ಮುಖನಿಗೆ ಸರ್ವಪ್ರವೃತ್ತಿ ಹೇತುತ್ವವಿದ್ದಂತೆ ಮನೋಽಭಿಮಾನಿಗಳಾದ ಶೇಷಾದಿಗಳಿಗೂ ಸರ್ವಪ್ರವೃತ್ತಿಕಾರಣತ್ವವಿದೆ, ಎಂದು ಅನುಭವವಿದ್ದ ಪ್ರಯುಕ್ತ ಸರ್ವಚೇಷ್ಟಕತ್ವದಿಂದ ಸಾಮ್ಯವಿರುವಾಗ ಮನೋಽಭಿಮಾನಿಗಳಿಗೆ ಚತುರ್ಮುಖನಿಂದ ಕಡಿಮೆ ಸಾಮರ್ಥ್ಯವು ಇಲ್ಲದಿರುವುದರಿಂದ ಮನೋಽಭಿಮಾನಿ ದೇವತೆಯು ಪ್ರಾಣನಲ್ಲಿ ಲಯವನ್ನು ಹೊಂದುವುದಿಲ್ಲ. ಆದಕಾರಣ ಮೋಕ್ಷವಿಲ್ಲ. ಹೆಚ್ಚು ಬಲವುಳ್ಳವನಲ್ಲಿಯೇ ಕಡಿಮೆ ಬಲವುಳ್ಳವನು ಲಯವನ್ನು ಹೊಂದುತ್ತಾನೆ. ತತ್ಪ್ರಾಕ್ ಶ್ರುತೇಶ್ಚ ಎನ್ನುವ ಸೂತ್ರದಲ್ಲಿ ಮನಸ್ಸು ಶ್ರೀಹರಿಯಿಂದ ಹುಟ್ಟಿದೆಂದು ಹೇಳಿದ್ದರಿಂದ ಮನಸ್ಸಿಗೆ ಅಲ್ಲಿ ಲಯವನ್ನು ಹೇಳಲು ಶಕ್ಯವಲ್ಲ ಎಂದು ಪೂರ್ವಪಕ್ಷವು ಬಂದರೆ, ವಾಙ್ಮನಸಿ ಸಂಪದ್ಯತೇ ಎನ್ನುವ ಉಕ್ತಿಯಿಂದ ಮನಃ ಪ್ರಾಣೇ ಎಂದು ಮನೋಽಭಿಮಾನಿ ದೇವತೆಗೆ ಪ್ರಾಣದೇವನಲ್ಲಿ ಲಯವು ಶ್ರುತವಾಗಿದೆ. ಮನೋಽಭಿಮಾನಿ ದೇವತೆಗಳೂ ಕೂಡ ಪ್ರಾಣದೇವನಾದ ಚತುರ್ಮುಖನಲ್ಲಿ ವಾಣೀ ದ್ವಾರಾ ಲಯವನ್ನು ಹೊಂದುತ್ತಾರೆ. ಮನ ಉದಕ್ರಾಮತ್ ಎನ್ನುವ ಶ್ರುತಿಯಲ್ಲಿ ಬ್ರಹ್ಮನ ಶರೀರದಿಂದ ಮನೋಽಭಿಮಾನಿ ದೇವತೆಯು ಹೊರಟೊಡನೆ ಶರೀರವು ಜೀಳದಿರುವುದೂ ಪ್ರವೇಶವಾದೊಡನೆಯೇ ಏಳದಿರುವುದೂ ಮುಖ್ಯಪ್ರಾಣನು ಹೊರಟು ಹೋದೊಡನೆ ದೇಹಪಾತವೂ ಪ್ರವೇಶವಾದೊಡನೆ ಉತ್ಥಾನವೂ ಶ್ರುತವಾದುದರಿಂದ ಮನೋಽಭಿಮಾನಿ ದೇವತೆಗಳಿಂದಲೂ ಮುಖ್ಯಪ್ರಾಣನಿಗೆ ಆಧಿಕ್ಯವು ಅವಗತವಾಗುವುದರಿಂದ ಸರ್ವ ಚೇಷ್ಟಕತ್ವದಿಂದ ಸಾಮ್ಯವಿಲ್ಲದಿರುವುದರಿಂದ ಶ್ರೀಹರಿಯಿಂದ ಹುಟ್ಟಿದ್ದಾನೆನ್ನುವುದು ಮುಖ್ಯಪ್ರಾಣದ್ವಾರಾ ಕೂಡುವುದರಿಂದಲೂ ವಾಯೋರ್ವಾವ ರುದ್ರ ಉದೇತಿ ಎನ್ನುವ ಶ್ರುತಿಯಿಂದಲೂ ಮನಸ್ಸು ಮುಖ್ಯಪ್ರಾಣನಿಂದಲೇ ಹುಟ್ಟಿದ ಪ್ರಯುಕ್ತವೂ ಮನೋಽಭಿಮಾನಿಗೆ ಚತುರ್ಮುಖನಲ್ಲಿ ದೇಹಲಯದಿಂದ ಮೋಕ್ಷವು. ॥ ಅಧಿ.೨ ॥

**ಮನಃಪ್ರಾಣಾಧಿಕರಣವು ಸಮಾಪ್ತವಾಯಿತು.**

# ೩.ಅಧ್ಯಕ್ಷಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಪ್ರಾಣಶಬ್ದೋಕ್ತ ಚತುರ್ಮುಖನಿಗೆ ಶ್ರೀಹರಿಯಲ್ಲಿ ಲಯವನ್ನು ಸಮರ್ಥಿಸುತ್ತಾರೆ. ಆ ಚತುರ್ಮುಖನು ಪರಮಾತ್ಮನಲ್ಲಿ ಲಯವನ್ನು ಹೊಂದುವುದಿಲ್ಲ, ಅವನು ಇತರಾಧೀನನಲ್ಲ ಎನ್ನುವಲ್ಲಿ ಅನೇಕ ಶ್ರುತಿಗಳು ಇದ್ದುದರಿಂದ ಭಗವದಧೀನತ್ವವಿಲ್ಲ ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ॥

ಸೂತ್ರಾರ್ಥ ॥ ಆ ಚತುರ್ಮುಖನು ಪರಮಾತ್ಮನಲ್ಲಿ ನಾಶವನ್ನು ಹೊಂದುತ್ತಾನೆ. ಬ್ರಹ್ಮಪ್ರಾಪ್ತಿ ಬ್ರಹ್ಮನನ್ನು ಅನುಸರಿಸಿಕೊಂಡು ಜೀವಿಸಿಕೊಂಡಿರುವಿಕೆ, ಬ್ರಹ್ಮಪ್ರವೇಶ ಮೊದಲಾದವುಗಳನ್ನು ಬೋಧಿಸ ತಕ್ಕ ಪ್ರಾಣಃ ಪರಮುಪಗಚ್ಛತಿ ಇತ್ಯಾದಿ ಶ್ರುತಿಸ್ಮೃತಿಗಳಿಂದ.

**ಭಾಷ್ಯ ॥ (೧) ಸ ಪ್ರಾಣಃ ಪರಮಾತ್ಮನಿ ವಿಲೀಯತೇ। (೨) ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಃ ಪರ(ಮ) ಮುಪಗಚ್ಛತಿ ಪ್ರಾಣಂ ದೇವಾ ಅನುಪ್ರಾಣಂತಿ ಪ್ರಾಣಃ ಪರಮನುಪ್ರಾಣಿತಿ ತಸ್ಮಾದಾಹುಃ ಪ್ರಾಣಸ್ಯ ಪ್ರಾಣ ಇತಿ। (೩) ಪ್ರಾಣಃ ಪರಸ್ಯಾಂ ದೇವತಾಯಾಂ ॥ ೧ ॥**

ಭಾಷ್ಯಾರ್ಥ ॥ ಚತುರ್ಮುಖನು ಶ್ರೀಹರಿಯಲ್ಲಿ ಲಯವನ್ನು ಹೊಂದುತ್ತಾನೆ. (೨) ಈಶ ಲಕ್ಷ್ಮೀ ವ್ಯತಿರಿಕ್ತರಾದ ರುದ್ರಾದಿ ದೇವತೆಗಳು ಚತುರ್ಮುಖನನ್ನು ಹೊಂದುತ್ತಾರೆ. ಚತುರ್ಮುಖನು ಪರಮಾತ್ಮನನ್ನು ಹೊಂದುತ್ತಾನೆ. (ಅಲ್ಲಿ ಲಯವನ್ನು ಹೊಂದುತ್ತಾನೆ.) ಶೇಷ ಗರುಡಾದಿ ದೇವತೆಗಳು ಚತುರ್ಮುಖನನ್ನು ಅನುಸರಿಸಿ ಚೇಷ್ಟೆಯನ್ನು ಮಾಡುತ್ತಾರೆ. ಪ್ರಾಣನು ಶ್ರೀಹರಿಯನ್ನು ಅನುಸರಿಸಿ ಚೇಷ್ಟೆಯನ್ನು ಮಾಡುತ್ತಾನೆ. (ಅಂದರೆ ಶ್ರೀಹರಿಯಧೀನವಾದ ಚೇಷ್ಟೆಯುಳ್ಳವನಾಗುತ್ತಾನೆ.) ಪ್ರಾಣನ ಚೇಷ್ಟಾಕ್ಕೂ ಚೇಷ್ಟಾಪ್ರವರ್ತಕನಾದುದರಿಂದಲೂ ಪ್ರಾಣಪ್ರಾಪ್ಯನಾದುದರಿಂದಲೂ ಚತುರ್ಮುಖನಿಗೆ ಪ್ರಾಣನೆಂದು (ಚೇಷ್ಟಾಪ್ರದನೆಂದು) ಹೇಳುತ್ತಾರೆ. (೩) ಚತುರ್ಮುಖನು ವಿಷ್ಣ್ವಾಖ್ಯ ದೇವತೆಯಲ್ಲಿ ಲಯವನ್ನು ಹೊಂದುತ್ತಾನೆ. ॥ ೧ ॥

**ಭಾಷ್ಯ ॥ ಮುಕ್ತಾಃ ಸಂತೋಽಗ್ನಿಮಾವಿಶ್ಯ ದೇವಾಃ ಸರ್ವೇಽಪಿ ಭುಂಜತೇ। ಅಗ್ನಿರಿಂದ್ರಂ ತಥೇಂದ್ರಶ್ಚ ವಾಯುಮಾವಿಶ್ಯ ಸೋಽಪಿ ತು ॥ ಆವಿಶ್ಯ ಪರಮಾತ್ಮಾನಂ ಭುಂಕ್ತೇ ಭೋಗಾಂಸ್ತು ಬಾಹ್ಯಕಾನ್ ॥ ನ ಹ್ಯಾನಂದೋ ನಿಜಸ್ತೇಷಾಂ ಪರ್ರೈರ್ಲಭ್ಯಃ ಕಥಂಚನ ॥ ಕಿಮು ವಿಷ್ಣೋಃ ಪರಾನಂದೋ ನ ತೇ ವಿಷ್ಣಾವಿತಿ ಶ್ರುತೇಃ ॥ ೨ ॥**

ಭಾಷ್ಯಾರ್ಥ ॥ ಅಗ್ನಿಯಿಂದ ಅಧಮರಾದ ಅಗ್ನಿಯಲ್ಲಿ ಲಯಹೊಂದಲಿಕ್ಕೆ ಯೋಗ್ಯರಾದ ಎಲ್ಲಾ ದೇವತೆಗಳೂ ಕರ್ಮಕ್ಷಯವನ್ನು ಹೊಂದಿದವರಾಗಿ ಅಗ್ನಿಯನ್ನು ಪ್ರವೇಶ ಮಾಡಿ ಅಗ್ನಿಯಲ್ಲಿರತಕ್ಕ ಭೋಗ್ಯಗಳಾದ ಸ್ವಯೋಗ್ಯ ಆನಂದಾದಿಗಳನ್ನು ಅನುಭವಿಸುತ್ತಾರೆ. ಅಗ್ನಿಯು ಸೂರ್ಯ ಬೃಹಸ್ಪತಿ

ದ್ವಾರಾ ಇಂದ್ರನನ್ನು ಹಾಗೆಯೇ ಇಂದ್ರನು ಸುಪರ್ಣೀ ಸುಪರ್ಣದ್ವಾರಾ ಚತುರ್ಮುಖನನ್ನು ಪ್ರವೇಶ ಮಾಡಿ ಆ ಚತುರ್ಮುಖನಾದರೂ ಶ್ರೀಹರಿಯನ್ನು ಸರ್ವಾಂಗಗಳಲ್ಲಿ ಪ್ರವೇಶ ಮಾಡಿ ಪರಮಾತ್ಮನ ಸ್ವರೂಪಾನಂದದಿಂದಲೂ ಮುಕ್ತಾಂತರಾನಂದದಿಂದಲೂ ಬಾಹ್ಯಗಳಾದ ಸ್ವಯೋಗ್ಯ ಆನಂದಗಳನ್ನು ಅಥವಾ ಬಾಹ್ಯ ಶುದ್ಧಸತ್ತಾತ್ಮಕ ವಿಷಯಭೋಗಗಳನ್ನು ಅನುಭವಿಸುತ್ತಾನೆ. ತತ್ವಪ್ರದೀಪದಲ್ಲಿ ಆದರೂ ಪರಮಾತ್ಮಸ್ವರೂಪದಿಂದ ಇತರವಾದ ಮುಕ್ತಾಂತರಾನಂದದಿಂದಲೂ ಬಾಹ್ಯವಾದ ಸ್ವರೂಪಭೂತ ವಾದ ಆನಂದವನ್ನು ಅನುಭವಿಸುತ್ತಾನೆ. ಬಹಿರ್ನಿರ್ಗತನಾದವನಾದರೂ ಕೆಲವು ತನಗೆ ಯೋಗ್ಯಗಳಾದ ಬಾಹ್ಯ ವಿಷಯಗಳನ್ನು ಅನುಭವಿಸುತ್ತಾನೆ. ಯಾವ ಕಾರಣದಿಂದ ಅಗ್ನಿಯನ್ನಾರಂಭಿಸಿ ಚತುರ್ಮುಖಪರ್ಯಂತ ಮುಕ್ತರ ಮಧ್ಯದಲ್ಲಿ ಒಬ್ಬನ ಸ್ವರೂಪಭೂತವಾದ ಆನಂದವು ಇತರರಿಂದ ಯಾವ ಉಪಾಯದಿಂದಲೂ ಪ್ರಾಪ್ಯವು ಆಗುವುದಿಲ್ಲ ಶ್ರೀವಿಷ್ಣುವಿನ ಪರಾನಂದವಾದರೂ ಪ್ರಾಪ್ಯವಲ್ಲವೆಂದು ಏನು ಹೇಳಬೇಕು. (ವಿಷ್ಣುಸಂಬಂಧಿ ಆನಂದವು ಇತರರಿಂದ ಲಭ್ಯವಲ್ಲವೆಂದು ಹೇಗೆ ತಿಳಿಯುತ್ತದೆ ಎಂದರೆ) ★ನ ತೇ ವಿಷ್ಣೋ ಎನ್ನುವ ಶ್ರುತಿಯಿಂದ ತಿಳಿಯುತ್ತದೆ. ಇಲ್ಲವಾದರೆ ಈ ಶ್ರುತಿವಿರೋಧವು ಬರುವುದು. ॥ ೨ ॥

ಪೀಠಿಕೆ ॥ ಪ್ರಾಣಃ ಪರಸ್ಯಾಂ ಎನ್ನುವ ಶ್ರುತಿಯಲ್ಲಿ ಪ್ರಾಣನಿಗೆ ಶ್ರೀಹರಿಯಲ್ಲಿ ಲಯವನ್ನು ಹೇಳಿದ್ದಾರೆ. ಅದು ಕೂಡುವುದಿಲ್ಲ, ಪ್ರಾಣಸ್ತೇಜಸಿ ಎನ್ನುವ ಶ್ರುತಿವಿರೋಧವು ಬರುವುದು, ಎಂದರೆ ಸ್ಮೃತ್ಯಂತರವನ್ನು ಹೇಳುತ್ತಾರೆ—

**ಭಾಷ್ಯ ॥ ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮುದಾಹೃತಂ । ಸರ್ವೇಶಿತುಶ್ಚ ಸರ್ವಾದೇಸ್ತಸ್ಮಾನ್ಯತ್ರ ಲಯಃ ಕಥಂ ॥ ಇತ್ಯಾದಿಶ್ರುತಿಸ್ಮೃತಿಭ್ಯಃ ॥ ೪ ॥ ಅಧಿ.೨ ॥ ॥ ೩ ॥**

ಭಾಷ್ಯಾರ್ಥ ॥ ಪ್ರಾಣನಿಗೆ ಲಕ್ಷ್ಮಿಯಲ್ಲಿ ಲಯವೆಂದರೆ ಲಕ್ಷ್ಮೀಪ್ರಾಪ್ತಿ ಮಾತ್ರವು. ಅಲ್ಲಿ ದೇಹ ಲಯವಲ್ಲ. ಆ ಪ್ರಾಣನಿಗೆ ಸರ್ವೋತ್ಪತ್ತಿ ಕಾರಣನಾದ ಸರ್ವನಿಯಾಮಕನಾದ ಶ್ರೀಹರಿಯಿಂದ ಇತರತ್ರ ಸಾಕ್ಷಾತ್ತಾಗಿ ಲಯವು ಹೇಗೆ ಕೂಡುತ್ತದೆ. (ಅಂತೂ ಪ್ರಾಣನಿಗೆ ಸಾಕ್ಷಾತ್ತಾಗಿ ಪರಮಾತ್ಮನಲ್ಲಿ ಲಯ ಯೋಗ್ಯತ್ವರೂಪವಾದ ಹೇತುವು ಉಕ್ತವಾಯಿತು.) ಇದುಮೊದಲಾದ ಶ್ರುತಿಸ್ಮೃತಿಗಳಿಂದ ಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳತಕ್ಕ ಶ್ರುತಿಗಳು ಸಾವಕಾಶಗಳಾದುದರಿಂದ ನಿರವಕಾಶವಾದ ಭಗವದಧೀನತ್ವವನ್ನು ಪ್ರತಿಪಾದಿಸತಕ್ಕ ಶ್ರುತಿಯ ಬಲದಿಂದ ಪ್ರಾಣನಿಗೆ ಭಗವದಧೀನತ್ವ ನಿರ್ಣಯವು ಆಗುತ್ತದೆ. ॥ ೪॥೩॥

## ಅಧಿಕರಣ ಸಾರಾಂಶ

ಇಲ್ಲಿ ಪ್ರಾಣಪದೋಕ್ತವಾದ ಚತುರ್ಮುಖನು ಭಗವತ್ಪ್ರಾಪ್ತಿರೂಪವಾದ ಮೋಕ್ಷಕ್ಕಾಗಿ ಶ್ರೀಹರಿಯಲ್ಲಿ ಲಯವನ್ನು ಹೊಂದುವುದಿಲ್ಲವೋ ಹೊಂದುತ್ತಾನೋ, ಅದಕ್ಕಾಗಿ ಚತುರ್ಮುಖನಿಗೆ ಈಶ್ವರಾಧೀನತ್ವನಿಶ್ಚಯವು ಇಲ್ಲವೋ ಇದೆಯೋ, ಅದಕ್ಕಾಗಿ ಪ್ರಾಣ ಸ್ವಾತಂತ್ರ್ಯಶ್ರುತಿ ಬಾಹುಲ್ಯವೊ

★ ಐನ್ನಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಅನದ್ಯಮಾನತ್ವ (ಇತರರಿಂದ ಉಪಜೀವಿಸಲ್ಪಡುವಿಕೆ) ಮಹಾತ್ಮ್ಯೆಯೂ ನಿರವಕಾಶವೋ, ಸಾವಕಾಶವೋ ಎಂದು ಸಂದೇಹವು. ಪ್ರಾಣನು ಯಾರನ್ನು ಆಶ್ರಯಿಸಿಕೊಂಡಿಲ್ಲ ಏಕೆಂದರೆ—೧ **ಯಸ್ಮಿನ್ನಿದಂ ಸರ್ವಮಧ್ಯಾರ್ಥೋತ್ ೨ ಪ್ರಾಣಸ್ಯೆತದ್ವಶೇ ಸರ್ವಂ ೩ ವಾಯುನಾ ವೈ ಗೌತಮ ಸೂತ್ರೇಣ** ಇದುಮೊದಲಾದ ಶ್ರುತಿಗಳ ಬಾಹುಲ್ಯದಿಂದ ಪ್ರಾಣನು ಇತರರ ಅಧೀನನಲ್ಲ ಎಂದು ತಿಳಿದುಬರುವುದರಿಂದ ಈಶಾಧೀನತ್ವ ನಿಶ್ಚಯವು ಆಗದಿರುವುದರಿಂದ ಶ್ರೀಹರಿಯಲ್ಲಿ ಚತುರ್ಮುಖನಿಗೆ ಲಯವಾಗುವುದಿಲ್ಲ. ಅನನ್ಯೇಶ್ವರತಾ ಪ್ರಾಣೇ ಎಂದು ಹೇಳಿದ ಪ್ರಕಾರ ವಿಷ್ಣುವಿನಿಂದ ವ್ಯತಿರಿಕ್ತ ಈಶ್ವರರು ಇಲ್ಲದಿರುವುದಿರಂದ ಶ್ರುತಿಗಳಿಗೆ ಸಾವಕಾಶತ್ವವನ್ನು ಶಂಕಿಸಕೂಡದು. ಬಹುತ್ವನಿಮಿತ್ತ ಪ್ರಾಬಲ್ಯದಿಂದ ಕೂಡಿದ ಶ್ರುತಿಗಳಿಗೆ **ಅನನ್ಯೇಶ್ವರತಾ** ಇತ್ಯಾದಿ ದುರ್ಬಲ ವಚನದಿಂದ ಗತ್ಯಂತರಕಲ್ಪನೆಯು ಕೂಡಲಾರದು. ಅನದ್ಯಮಾನಃ ಎಂದು ಪ್ರಾಣನಿಗೆ ಲಯಾಭಾವವನ್ನು ಹೇಳಿಯದೇ; ಎಂದು ಪೂರ್ವಪಕ್ಷವು ಬಂದರೆ ಪ್ರಾಣಪದದಿಂದ ಹೇಳಲ್ಪಟ್ಟ ಬ್ರಹ್ಮನಿಗೆ ಲಯವು ಇರಲಿ. ಪ್ರಾಣನಿಗೆ ಸ್ವಾಂತಂತ್ರ್ಯ ವಿಷಯದಲ್ಲಿ ಶ್ರುತಿಬಾಹುಲ್ಯವಿದ್ದರೂ ಅವನಿಗೆ ಈಶ್ವರಾಧೀನತ್ವದಲ್ಲಿ **ಪ್ರಾಣಃ ಪರಸ್ಯಾಂ ದೇವತಾಯಾಂ, ಪ್ರಾಣಃ ಪರಮುಪ ಗಚ್ಛತಿ, ಪ್ರಾಣಃ ಪರಮನುಪ್ರಾಣತಿ** ಇದುಮೊದಲಾದ ಶ್ರುತಿಬಾಹುಲ್ಯವು ಇದೆ. ಶ್ರತಿಸಾಮ್ಯವಿರುದರಿಂದ ಪ್ರಾಣನಿಗೆ ಈಶ್ವರಾಧೀನತ್ವ ನಿರ್ಣಯವಾಗುವುದಿಲ್ಲ. ಪ್ರಾಣಸ್ವಾತಂತ್ರ್ಯ ಶ್ರುತಿಗಳಿಗೆ **ಸರ್ವೇಪ್ರಾಣಮುಪಗಚ್ಛಂತಿ, ಪ್ರಾಣಂ ದೇವಾ ಅನುಪ್ರಾಣಂತಿ, ಅನನ್ಯೇಶ್ವರತಾ ಪ್ರಾಣೇ** ಇತ್ಯಾದಿ ವಚನಗಳ ಬಲದಿಂದ ರುದ್ರಾದಿ ಸರ್ವಜೀವೋಪಜೀವ್ಯತ್ವ, ಭಗವದ್ವ್ಯತಿರಿಕ್ತ ನಿಯಾಮಕರಾಹಿತ್ಯ ಪರವಾಗಿ ಸಾವಕಾಶವಾಗಿದೆ. ಅನದ್ಯಮಾನತ್ವಕ್ಕೆ ಈಶ್ವರನಿಂದ ಇತರರಿಂದ ಅನದ್ಯಮಾನತ್ವ ಎಂದು ಉಪಪನ್ನವಾಗುತ್ತದೆ. **ಪ್ರಾಣಸ್ತೇಜಸಿ** ಎನ್ನುವ ಶ್ರುತಿಯಲ್ಲಿ ಪ್ರಾಣನಿಗೆ ಶ್ರೀತತ್ವದಲ್ಲಿ ಲಯಶ್ರವಣವಾದರೂ **ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಂ** ಎನ್ನುವ ಸ್ಮೃತಿಯಿಂದ ವಿರಿಂಚನಿಗೆ ಲಕ್ಷ್ಮೀಪ್ರಾಪ್ತಿ ಮಾತ್ರ ಪರವು. ಲಕ್ಷ್ಮೀದೇವಿಯಲ್ಲಿ ದೇಹ ಲಯಪ್ರತಿಪಾದಕವಲ್ಲ. ಬ್ರಹ್ಮನಿಗೆ ಸಾಕ್ಷಾತ್ತಾಗಿ ಶ್ರೀಹರಿಯಲ್ಲಿಯೇ ದೇಹಲಯಯೋಗ್ಯತ್ವವಿದ್ದುದರಿಂದ ಮುಖ್ಯಪ್ರಾಣನಿಗೇನೇ ಲಕ್ಷ್ಮೀದೇವಿಯಲ್ಲಿ ದೇಹಲಯವು ಎಂದು ತಿಳಿಯತಕ್ಕದು. ॥ ಅಧಿ.೩. ॥

**ಅಧ್ಯಕ್ಷಾಧಿಕರಣವು ಸಮಾಪ್ತವಾಯಿತು.**

# ೪ ಭೂತಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಮೊದಲು ವಿಶಿಷ್ಟ ಪ್ರತಿಪಾದಿತರಾದ ದೇವತೆಗಳಿಂದ ಇತರರಾದ ದೇವತೆಗಳಿಗೆ ಪೃಥಿವ್ಯಾದಿ ಸಮಸ್ತ ಭೂತಗಳಲ್ಲಿ ಲಯವನ್ನು ಸಮರ್ಥಿಸುತ್ತಾರೆ. **ಅಗ್ನೌ ಸರ್ವೇ ದೇವಾ ವಿಲೀಯಂತೇ** ಎನ್ನುವ ಶ್ರುತಿಯಿಂದ ಅಗ್ನಿಯಲ್ಲಿಯೇ ಸಮಸ್ತ ದೇವತೆಗಳಿಗೂ ಲಯವು. ಇತರತ್ರ ಅಲ್ಲ. ತಥಾಚ ನಿಯಮ್ಯರಿಗೆ ನಿಯಾಮಕರಲ್ಲಿ ಲಯವೆಂದು ಹೇಳಿದ್ದು ಬಾಧಿತವಾಗುವುದು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭೂತೇಷು ತಚ್ಛ್ರುತೇಃ ಓಂ ॥ ೫ ॥

**ಸೂತ್ರಾರ್ಥ** ॥ ವಿಶಿಷ್ಟ ಉಕ್ತರಾದ ದೇವತೆಗಳಿಂದ ಇತರರಾದ ದೇವತೆಗಳು ಪಂಚಭೂತಾಭಿಮಾನಿ ದೇವತೆಗಳಲ್ಲಿ ಲಯವನ್ನು ಹೊಂದುತ್ತಾರೆ. ಒಬ್ಬ ಅಗ್ನಿಯಲ್ಲಿ ಮಾತ್ರವಲ್ಲ. **ಭೂತೇಷು ದೇವಾ ವಿಲೀಯಂತೇ** ಎನ್ನುವ ಶ್ರುತಿಯಲ್ಲಿ ದೇವತೆಗಳಿಗೆ ಭೂತಗಳಲ್ಲಿ ಲಯವನ್ನು ಹೇಳಿದ್ದರಿಂದ.

**ಭಾಷ್ಯ ॥ (೧) ಭೂತೇಷ್ವನ್ಯೇಷಾಂ ದೇವಾನಾಂ ಲಯಃ । (೨) ಭೂತೇಷು ದೇವಾ ವಿಲೀಯಂತೇ ಭೂತಾನಿ ಪರೇ ನ ಪರ ಊದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾ । ಇತಿ ಬೃಹಚ್ಛ್ರುತೇಃ ॥ ೫ ॥ ಅಧಿ.೪ ॥ ॥ ೧ ॥**

**ಭಾಷ್ಯಾರ್ಥ** ॥ (೧) ವಾರುಣೀ ಸೌಪರ್ಣೀ ಶೇಷ ಸುಪರ್ಣ ಚತುರ್ಮುಖ ಇವರಿಂದಲೂ ಇಂದ್ರನಿಂದಲೂ ಇತರರಾದ ದೇವತೆಗಳಿಗೆ ಪಂಚಭೂತಾಭಿಮಾನಿಗಳಾದ ದೇವತೆಗಳಲ್ಲಿ ಲಯವು. (ಒಬ್ಬ ಅಗ್ನಿಯಲ್ಲಿಯೇ ಲಯವು ಅಲ್ಲ) (೨) ದೇವತೆಗಳು ಪಂಚಭೂತಾಭಿಮಾನಿ ದೇವತೆಗಳಲ್ಲಿ ಲಯವನ್ನು ಹೊಂದುತ್ತಾರೆ. ಪಂಚಭೂತಾಭಿಮಾನಿ ದೇವತೆಗಳು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾರೆ. ಪರಮಾತ್ಮನು ಹುಟ್ಟುವುದಿಲ್ಲ. ನಾಶವನ್ನು ಹೊಂದುವುದಿಲ್ಲ. ಸರ್ವಸ್ವತಂತ್ರನು. ದೇಹಮಧ್ಯವಾದ ಹೃದಯದಲ್ಲಿ ಇರತಕ್ಕವನು. ಅಥವಾ ಉತ್ಪತ್ತಿ ನಾಶರಹಿತನು ಎನ್ನುವ ಬೃಹಚ್ಛ್ರುತಿಯಿಂದ. ಏವಂಚ ಆಕಾಶ ಪೃಥಿವ್ಯಭಿಮಾನಿಗಳಾದ ಗಣಪತಿ ಧರಾದೇವಿಯರಿಗೆ ಬೃಹಸ್ಪತಿ ಪುರುಹೂತಾದಿದ್ವಾರಾ, ಭೂತವಾಯ್ವಭಿಮಾನಿಯಾದ ಪ್ರವಹ ವಾಯುವಿಗೆ ಇಂದ್ರಾದಿದ್ವಾರಾ, ಅಬಭಿಮಾನಿಯಾದ ವರುಣನಿಗೆ ಸೋಮ ಅನಿರುದ್ಧ ಕಾಮಾದಿದ್ವಾರಾ, ಅಗ್ನಿಗಾದರೂ ಸೂರ್ಯ ಗುರು ಶುಕ್ರಾದಿ ದ್ವಾರಾ ಲಯವು. ॥ ೫ ॥

## ಅಧಿಕರಣ ಸಾರಾಂಶ

ವಿಶಿಷ್ಟ ಉಕ್ತರಾದ ದೇವತೆಗಳಿಂದ ಇತರರಾದ ದೇವತೆಗಳು ಭಗವತ್ಪ್ರಾಪ್ತಿರೂಪ ಮೋಕ್ಷಕ್ಕಾಗಿ ಒಬ್ಬ ಭೂತಾಭಿಮಾನಿಯಲ್ಲಿಯೇ ಲಯವನ್ನು ಹೊಂದುತ್ತಾರೋ, ಅಥವಾ ಭೂತಾಂತರಾಭಿಮಾನಿಗಳಲ್ಲಿಯೂ ಲಯವನ್ನು ಹೊಂದುತ್ತಾರೋ, ಅದಕ್ಕಾಗಿ **ಅಗ್ನೌ ಸರ್ವೇ ದೇವಾ ವಿಲೀಯಂತೇ** ಎನ್ನುವ ಶ್ರುತಿಯು ಪ್ರತೀತಾರ್ಥಕ್ಕೆ ನಿರ್ಣಾಯಕವಾಗುತ್ತದೋ ಇಲ್ಲವೋ, ಅದಕ್ಕಾಗಿ ಇತರ ಭೂತಾಭಿಮಾನಿ ದೇವತೆಗಳಲ್ಲಿ ಲಯವಿಷಯದಲ್ಲಿ ಪ್ರಮಾಣವು ಇಲ್ಲವೋ ಪ್ರಮಾಣವಿದೆಯೋ, ಎಂದು ಸಂದೇಹವು. **ಅಗ್ನೌ ಸರ್ವೇ ದೇವಾಃ** ಎನ್ನುವ ಶ್ರುತಿಗೆ ಅಗ್ನಿಯಲ್ಲಿಯೇ ಸರ್ವ ದೇವತೆಗಳೂ ಲಯವನ್ನು ಹೊಂದುತ್ತಾರೆ. ಅನ್ಯತ್ರಾಪಿ ಲಯವನ್ನು ಹೊಂದುತ್ತಾರೆ, ಎನ್ನುವಲ್ಲಿ ಪ್ರಮಾಣವಿಲ್ಲ. **ಯೋ ಯನ್ನಿಯತಃ ಸ ತತ್ರ ಲೀಲಯತೇ** ಎಂದು ಹೇಳಿದ ನ್ಯಾಯವು ನಿಯಾಮಕರು ಬಹುಮಂದಿ ಇದ್ದಪ್ರಯುಕ್ತ ನಿರ್ಣಾಯಕವಾಗಲಾರದು. ಆದಕಾರಣ ತಂತಮ್ಮ ನಿಯಾಮಕರಲ್ಲಿ ನಿಯಮ್ಯರಿಗೆ ಲಯವೆಂದು ಹೇಳಿದ್ದು ಯುಕ್ತವಲ್ಲ ಎಂದು ಪೂರ್ವಪಕ್ಷವು ಬಂದರೆ **ಭೂತೇಷು ದೇವಾ ವಿಲೀಯಂತೇ** ಎಂದು ಭಾಷ್ಯದಲ್ಲಿ ಹೇಳಿದ ಶ್ರುತಿಯಿಂದ ಐದು ಭೂತಾಭಿಮಾನಿಗಳಾದ ತಂತಮ್ಮ ನಿಯಾಮಕ ದೇವತೆಗಳಲ್ಲಿ

ನಿಯಮ್ಯರು ಲಯವನ್ನು ಹೊಂದುತ್ತಾರೆ. ನಿಯಾಮಕರು ಹೆಚ್ಚು ಮಂದಿ ಇದ್ದಾಗ್ಯೂ **ಅಗ್ನೌ ಸರ್ವೇ ದೇವಾ ವಿಲೀಯಂತೇ** ಇತ್ಯಾದಿ ವಿಶೇಷ ಶ್ರುತಿಯಿಂದ ನಿರ್ಣಯವು ಕೂಡುವುದು. ॥ ಅಧಿ.೪ ॥

**ಭೂತಾಧಿಕರಣವು ಸಮಾಪ್ತವಾಯಿತು.**

# ೫ ಏಕಸ್ಮಿನ್ನಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ದೇವತೆಗಳಿಗೆ ಸರ್ವಭೂತಗಳಲ್ಲಿ ಲಯವನ್ನು ಸಮರ್ಥಿಸುತ್ತಾರೆ. **ಅಗ್ನೌ ಸರ್ವೇ ದೇವಾ ವಿಲೀಯಂತೇ** ಎನ್ನುವ ಶ್ರುತಿಯಿಂದ ಅಗ್ನಿಯಲ್ಲಿಯೇ ಸರ್ವ ದೇವತೆಗಳಿಗೆ ಲಯವು. **ಭೂತೇಷು ದೇವಾ ವಿಲೀಯಂತೇ** ಎನ್ನುವ ಶ್ರುತಿಯಿಂದ ವಿರೋಧವಿಲ್ಲ. ಒಬ್ಬ ಅಗ್ನಿಯಲ್ಲಿಯೇ ಸರ್ವ ದೇವತೆಗಳಿಗೆ ಲಯವನ್ನು ಅಂಗೀಕರಿಸಿದರೆ ಅಗ್ನಿಗೆ ವಾಯುವಿನಲ್ಲಿಯೂ, ವಾಯುವಿಗೆ ಆಕಾಶದಲ್ಲಿಯೂ ಲಯವು ಹೀಗೆ **ಭೂತೇಷು** ಎನ್ನುವ ಬಹುವಚನವು ಉಪಪನ್ನವಾಗುತ್ತದೆ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ॥ ೬ ॥

ಸೂತ್ರಾರ್ಥ ॥ ದೇವತೆಗಳಿಗೆ ಅಗ್ನಿಯಲ್ಲಿ ಲಯವಾದರೂ ತದ್ವಾರಾ ವಾಯುವಿನಲ್ಲಿಯೂ ಆಕಾಶದಲ್ಲಿಯೂ ಲಯದಿಂದ **ಭೂತೇಷು** ಎನ್ನುವ ಹಿಂದೆ ಹೇಳಿದ ಶ್ರುತಿಯು ಉಪಪನ್ನವಾಗುವುದರಿಂದ ಒಬ್ಬ ಭೂತಾಗ್ನಿಯಲ್ಲಿಯೇ ದೇವತೆಗಳು ಲಯವನ್ನು ಹೊಂದುತ್ತಾರೆನ್ನುವುದು ಕೂಡುವುದಿಲ್ಲ. ಏಕೆಂದರೆ—**ಪೃಥಿವ್ಯಾಮೃಭವೋ ವಿಲೀಯಂತೇ, ಋಭವಃ ಪೃಥಿವ್ಯಾಂ** ಎನ್ನುವ ಶ್ರುತಿಗಳು ಪ್ರತ್ಯೇಕವಾಗಿ ಭೂತಗಳಲ್ಲಿ ದೇವತೆಗಳಿಗೆ ಲಯವನ್ನು ತೋರಿಸುತ್ತವೆ.

**ಭಾಷ್ಯ ॥ (೧) ನೈಕಸ್ಮಿನ್ ಭೂತೇ ಸರ್ವೇಷಾಂ ದೇವಾನಾಂ ಲಯಃ (೨) ಪೃಥಿವ್ಯಾಮೃಭವೋ ವಿಲೀಯಂತೇ ವರುಣೇಽಶ್ವಿನಾವಗ್ನವಗ್ನಯೋ ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿರಿತ್ಯಾಕಾಶ ಏವ ಸಾಧ್ಯಾ ವಿಲೀಯಂತೇ। (೩) (ಋಭವಃ) ಮೃತ್ಯುವಃ ಪೃಥಿವ್ಯಾಂ ವರುಣ ಆಪೋಽಗ್ನಯಸ್ತೇಜಸಿ ಮರುತೋ ಮಾರುತ ಇತಿ ಆಕಾಶೇ ವಿನಾಯಕಾ ವಿಲೀಯಂತೇ । ಇತಿ ಮಹೋಪನಿಷಚ್ಚತುರ್ವೇದಶಿಖಾ ಚ ದರ್ಶಯತಃ । (೪) ಅತೋಽಗ್ನೌ ದೇವಾ ವಿಲೀಯಂತ ಇತಿ ತತ್ರ ನಿರ್ದಿಷ್ಟಾನಾಮೇವ ॥ ೬ ॥ ಅಧಿ.೫ ॥ ॥ ೧ ॥**

ಭಾಷ್ಯಾರ್ಥ ॥ (೧) ತೇಜೋಭಿಮಾನಿಯಾದ ಅಗ್ನಿಯಲ್ಲಿಯೇ ಸಮಸ್ತ ದೇವತೆಗಳಿಗೆ ಲಯವನ್ನು ಹೇಳಕೂಡದು. (೨) ಏಕೆಂದರೆ ಪೃಥಿವ್ಯಭಿಮಾನಿನಿಯಾದ ಧರಾ ದೇವಿಯಲ್ಲಿಯೇ ಋಭುನಾಮಕರಾದ ದೇವತೆಗಳು ಲಯವನ್ನು ಹೊಂದುತ್ತಾರೆ. ಅಬಭಿಮಾನಿಯಾದ ವರುಣನಲ್ಲಿ

ಅಶ್ವಿನೀದೇವತೆಗಳು ಲಯವನ್ನು ಹೊಂದುತ್ತಾರೆ. ಜಡಾಗ್ನಿ ಅಭಿಮಾನಿಯಾದ ಅಗ್ನಿಯಲ್ಲಿ ಅಗ್ನಿಪುತ್ರರು ಲಯವನ್ನು ಹೊಂದುತ್ತಾರೆ. ಇಂದ್ರನು, ಚಂದ್ರನು, ಸೂರ್ಯನು, ಬೃಹಸ್ಪತಿಯು ಇದುಮೊದಲಾದ ಎಲ್ಲಾ ದೇವತೆಗಳೂ ಸ್ವೋತ್ತಮದೇವತಾ ಲಯದ್ವಾರಾ ಚತುರ್ಮುಖನಲ್ಲಿ ಲಯವನ್ನು ಹೊಂದುತ್ತಾರೆ. (೩.) ಋಭುನಾಮಕ ದೇವತೆಗಳು ಅಥವ ಮೃತ್ಯುನಾಮಕ ದೇವತೆಗಳು ಪೃಥಿವ್ಯಭಿಮಾನಿ ದೇವತೆಯಲ್ಲಿ ಲಯವನ್ನು ಹೊಂದುತ್ತಾರೆ. ಅಬಭಿಮಾನಿಯಾದ ವರುಣನಲ್ಲಿ ವರುಣಭಿನ್ನರಾದ ಗಂಗಾ ಮೊದಲಾದ ಅಬ್ದೇವತೆಗಳೂ ತೇಜೋಭೂತಾಭಿಮಾನಿಯಾದ ಪ್ರಧಾನಾಗ್ನಿಯಲ್ಲಿ ಅಗ್ನಿಪುತ್ರರೂ, ಭೂತವಾಯು ಮೊದಲಾದ ಮರುದ್ಗಣಗಳೂ ಪರಂಪರೆಯಿಂದ ಹಿರಣ್ಯಗರ್ಭನಲ್ಲಿಯೂ ಲಯವನ್ನು ಹೊಂದುತ್ತಾರೆ. ಆಕಾಶಾಭಿಮಾನಿಯಾದ ಗಣಪತಿಯಲ್ಲಿ ವಿಘ್ನಾಭಿಮಾನಿ ದೇವತೆಗಳೂ ಅಥವಾ ಗಣಪತಿಭೃತ್ಯರು ಅಥವಾ ಗಣಪತಿಪುತ್ರರು ಲಯವನ್ನು ಹೊಂದುತ್ತಾರೆ. ಹೀಗೆ ಮಹೋಪನಿಷತ್ತು ಚತುರ್ವೇದಶಿಖೆಗಳು ಪ್ರತಿಪಾದಿಸುತ್ತವೆ. (೪) (ಪ್ರತ್ಯೇಕವಾಗಿ ಭೂತಗಳನ್ನು ದೇವತೆಗಳಿಗೆ ಲಯವಾದರೆ **ಅಗ್ನೌ ಸರ್ವೇ ದೇವಾ ವಿಲೀಯಂತೇ** ಎನ್ನುವ ಶ್ರುತಿಗೆ ಏನು ಅರ್ಥವು ಎಂದರೆ) ಹೀಗೆ ಪ್ರತ್ಯೇಕವಾಗಿ ಎರಡು ಶ್ರುತಿಗಳಲ್ಲಿ ಪ್ರತ್ಯೇಕವಾಗಿ ಭೂತಗಳಲ್ಲಿ ದೇವತೆಗಳಿಗೆ ಲಯವು ಪ್ರಸಿದ್ಧವಾದ ಪ್ರಯುಕ್ತ **ಅಗ್ನೌ ಸರ್ವೇ ದೇವಾ ವಿಲೀಯಂತೇ** ಎನ್ನುವ ಶ್ರುತಿಯಿಂದ ಲಯವನ್ನು ಹೇಳಿದ್ದು ಎರಡು ಶ್ರುತಿಗಳಲ್ಲಿ ಹೇಳಲ್ಪಟ್ಟ ಅಗ್ನಿ ಪುತ್ರರಿಗೇನೇ, ಸರ್ವ ದೇವತೆಗಳಿಗೆ ಅಲ್ಲ ಎಂದಂಗೀಕರಿಸಬೇಕು. ( ಅಂತೂ ಶ್ರುತಿಯಲ್ಲಿದ್ದ ಅಗ್ನಿಶಬ್ದವು ಎಲ್ಲಾ ಅಗ್ನಿಪುತ್ರವಿಷಯಕವು.) ॥ ೬ ॥ ॥ ೧ ॥

## ಅಧಿಕರಣ ಸಾರಾಂಶ

ಪೂರ್ವ ಪ್ರಕೃತರಾದ ದೇವತೆಗಳು ಭಗವತ್ಪ್ರಾಪ್ತಿರೂಪ ಮೋಕ್ಷಕ್ಕಾಗಿ ಅಗ್ನಿಯಲ್ಲಿಯೇ ಲಯವನ್ನು ಹೊಂದುತ್ತಾರೋ ಐದು ಭೂತಾಭಿಮಾನಿಗಳಲ್ಲಿಯೇ ಲಯವನ್ನು ಹೊಂದುತ್ತಾರೋ, **ಭೂತೇಷು ದೇವಾ ವಿಲೀಯಂತೇ** ಎನ್ನುವ ಶ್ರುತಿಯು ನಿರವಕಾಶವೋ ಸಾವಕಾಶವೋ, ಆದಕ್ಕಾಗಿ **ಅಗ್ನೌ ಸರ್ವೇ ದೇವಾಃ** ಎನ್ನುವ ಶ್ರುತ್ಯನ್ಯಥಾನುಪಪತ್ತಿಯು ನಿರವಕಾಶವೋ ಸಾವಕಾಶವೋ, ಆದಕ್ಕಾಗಿ ಪಂಚ ಭೂತಾಭಿಮಾನಿಗಳಲ್ಲಿ, ಎನ್ನುವಲ್ಲಿ ವಿಶೇಷ ಪ್ರಮಾಣವು ಇಲ್ಲವೋ ಇದೆಯೋ ಎಂದು ಸಂದೇಹವು ಐವರಲ್ಲಿಯೂ ಎನ್ನುವಲ್ಲಿ ವಿಶೇಷ ಪ್ರಮಾಣವಿಲ್ಲದಿರುವುದರಿಂದ **ಅಗ್ನೌ** ಎನ್ನುವ ಶ್ರುತ್ಯನ್ಯಥಾನುಪಪತ್ತಿಗೆ ಗತ್ಯಂತರ ಕಲ್ಪಕವಿಲ್ಲದಿರುವುದರಿಂದ ನಿರವಕಾಶವಾಗಿ **ಭೂತೇಷು** ಎನ್ನುವ ಬಹುವಚನ ಶ್ರುತಿಗೆ ಅಗ್ನಿಯಲ್ಲಿ ದೇವತೆಗಳಿಗೆ ಲಯವಾದರೂ ಅಗ್ನಿಯು ತನ್ನನ್ನು ಹುಟ್ಟಿಸಿರತಕ್ಕ ವಾಯುವಿನಲ್ಲಿಯೂ, ವಾಯುವಿಗೆ ಸ್ವಜನಕ ಆಕಾಶದಲ್ಲಿಯೂ ಲಯವಿದ್ದುದರಿಂದ ಪರಂಪರಯಾ ಲಯಾಭಿಪ್ರಾಯದಿಂದ ಸಾವಕಾಶತ್ವವನ್ನು ಕಲ್ಪಿಸುವುದರಿಂದ ಅಗ್ನಿಯಲ್ಲಿಯೇ ಸರ್ವದೇವತೆಗಳಿಗೆ ಲಯವು. ಆದಕಾರಣ ಐದು ಭೂತಾಭಿಮಾನಿಗಳಲ್ಲಿ ಲಯವೆಂದು ಹಿಂದೆ ಹೇಳಿದ್ದು ಅಯುಕ್ತವು. ಎಂದು ಪೂರ್ವಪಕ್ಷವು ಬಂದರೆ **ಪೃಥಿವ್ಯಾ ಋಭವಃ, ಋಭವಃ ಪೃಥಿವ್ಯಾಂ** ಎಂದು ಭಾಷ್ಯೋಕ್ತ ವಿಶೇಷ ಪ್ರಮಾಣಗಳಿಂದ ಪ್ರತ್ಯೇಕವಾಗಿ ಐದು ಭೂತಾಭಿಮಾನಿಗಳಲ್ಲಿಯೂ ಋಭು ಮೊದಲಾದ ದೇವತೆಗಳಿಗೆ ಲಯವು ಶ್ರುತವಾದುದರಿಂದ **ಅಗ್ನೌ ಸರ್ವೇ ದೇವಾಃ** ಎನ್ನುವ ಶ್ರುತಿಗೆ **ಅಗ್ನಾವಗ್ನಯಃ** ಇತ್ಯಾದಿ ಶ್ರುತಿಗಳಲ್ಲಿ ನಿರ್ದಿಷ್ಟರಾದ ಪ್ರಾಯಶಃ ಅಧಮರಾದ ಭೂತಾಂತರದಲ್ಲಿ ಪ್ರವೇಶ ಮಾಡದಿರುವ

ಅಗ್ನಿಪುತ್ರರಿಗೆ ಲಯಪರವಾಗಿ ಸಾವಕಾಶತ್ವವಿದ್ದುರಿಂದ **ಭೂತೇಷು** ಎನ್ನುವ ಶ್ರುತಿಗೆ ಪರಂಪರೆಯಿಂದ ಲಯಾಭಿಪ್ರಾಯರೂಪ ಅಮುಖ್ಯಾರ್ಥತ್ವಕಲ್ಪಕತ್ವವು ಕೂಡುವುದರಿಂದ ನಿರವಕಾಶವಾದ **ಭೂತೇಷು** ಎಂದು ಹಿಂದೆ ಹೇಳಿದ ಶ್ರುತಿಯಿಂದ ಐದು ಭೂತಾಭಿಮಾನಿಗಳಲ್ಲಿ ದೇವತೆಗಳಿಗೆ ಲಯವು ಎನ್ನುವುದು ಯುಕ್ತವು. ಹೇಗೆಂದರೆ (೧) ಶೇಷಮಾರ್ಗ (೨) ಗರುಡಮಾರ್ಗ ಎಂದು ಮಾರ್ಗವು ಎರಡು. (೧) ವಿಧವು. ಅದರಲ್ಲಿ ಶೇಷಮಾರ್ಗದಲ್ಲಿ ಗಂಧರ್ವ ಸಿದ್ಧ ಚಾರಣರಿಗೂ ಸುರಾಸುಗರಿಗೂ ಕುಬೇರನಲ್ಲಿ ಲಯವು, ಅಶ್ವಿನೀದೇವತೆಗಳಿಗೂ ಗಂಗಾಗಿ ಅಬ್ದೇವತೆಗಳಿಗೂ ವರುಣನಲ್ಲಿ ಲಯವು. ವರುಣನಿಗೂ ಕುಬೇರನಿಗೆ ಸೋಮನಲ್ಲಿ ಲಯವು. ಅನಿರುದ್ಧನಿಗೂ ಸನಕ ಸನಂದನ ಸನತ್ಸುಜಾತ ಈ ಮೂರು ಯತಿಗಳಿಗೂ ಕಾಮನಲ್ಲಿ ಲಯವು ಕಾಮನಿಗೆ ವಾರುಣಿಯಲ್ಲಿ ಲಯವು, ವಾರುಣಿಗೆ ಶೇಷನಲ್ಲಿ ಲಯವು. ಗರುಡ ಮಾರ್ಗದಲ್ಲಿ ಆದರೂ ನಿಯತಿಗೂ ಪಿತೃಗಳಿಗೂ ವರ್ಣಾಶ್ರಮಾಚಾರಗಳಲ್ಲಿ ಆಸಕ್ತರಾದ ದೇಹದಿಂದುತ್ಕ್ರಾಂತರಾದ ಮನುಷ್ಯೋತ್ತಮರಿಗೂ ಧರ್ಮ (ಯಮ)ನಲ್ಲಿ ಲಯವು. ಧರ್ಮನಿಗೂ ವೈವಸ್ವತ ಮೊದಲಾದ ದ್ವಾದಶ ಮನುಗಳಿಗೆ ಪ್ರಿಯವ್ರತ ಮೊದಲಾದ ಚಕ್ರವರ್ತಿಗಳಿಗೂ ಸ್ವಾಯಂಭುವ ಮನುವಿನಲ್ಲಿ ಲಯವು. ಇತರ ಎಲ್ಲಾ ದೇವತೆಗಳಿಗೆ ಅಗ್ನಿಯ್ಲಲಿ ಲಯವು. ಅಗ್ನಿಗೆ ಸೂರ್ಯನಲ್ಲಿ ಲಯವು. ಋಭುಗಳಿಗೂ ಮೃತ್ಯುದೇವತೆಗಳಿಗೂ ಧರಾದೇವಿಯಲ್ಲಿ ಲಯವು. ಸಾಧ್ಯರಿಗೂ ವಿನಾಯಕರಿಗೂ (ಗಣಪತಿ ಪುತ್ರರಿಗೂ) ಗಣಪತಿಯಲ್ಲಿ ಲಯವು. ಗಣಪತಿಗೂ ಧರಾ ದೇವಿಗೂ ಸೂರ್ಯನಿಗೂ ಬೃಹಸ್ಪತ್ಯಾಚಾರ್ಯರಲ್ಲಿ ಲಯವು. ಭೃಗು ಮೊದಲಾದ ಋಷಿಗಳಿಗೂ ಪ್ರಜಾಪತಿಗಳಿಗೂ ದಕ್ಷಪ್ರಜಾಪತಿಯಲ್ಲಿ ಲಯವು. ದಕ್ಷಪ್ರಜಾಪತಿಗೂ ಬೃಹಸ್ಪತ್ಯಾಚಾರ್ಯರಿಗೂ ಸ್ವಾಯಂಭುವ ಮನುವಿಗೂ ಮರುದ್ಗಣಗಳಿಗೆ ಇಂದ್ರನಲ್ಲಿ ಲಯವು. ಇಂದ್ರನಿಗೆ ಸೌಪರ್ಣಿಯಲ್ಲಿ ಲಯವು. ಸೌಪರ್ಣಿಗೆ ಗರುಡನಲ್ಲಿ ಲಯವು. ಗರುಡನಿಗೂ ಶೇಷನಿಗೂ ಸರಸ್ವತಿಯಲ್ಲಿ ಲಯವು. ಸರಸ್ವತಿಗೆ ಚತುರ್ಮುಖನಲ್ಲಿ ಲಯವು. ಚತುರ್ಮುಖನಿಗೆ ಲಕ್ಷ್ಮೀದ್ವಾರಾ ಶ್ರೀಹರಿಯಲ್ಲಿ ಲಯವು. ಸ್ತ್ರೀಯರಿಗೆಲ್ಲಾ ತಂತಮ್ಮ ಪತಿಗಳಲ್ಲಿ ಲಯವು. ಈ ವಿಷಯವು **ಸೋಮಸ್ತು ವಾರೀಶಯುತೋಽನಿರುದ್ಧಂ ವಿಶತ್ಯಸೌ ಕಾಮಮಸೌ ಚ ವಾರುಣೀಂ। ಸಾ ಶೇಷದೇವಂ ಸ ಗಿರಂ ಚ ಸೈವ ವಾಯುಂ ವಿಶತ್ಯಂಜ ಇತೀಹ ನಿರ್ಣಯಃ** ಇತ್ಯಾದಿ ಅನುವ್ಯಾಖ್ಯಾನದಲ್ಲಿ ಪುಟ ೧೫೬೬.೩.ರಲ್ಲಿ ಸಪ್ರಮಾಣವಾಗಿ ವಿವೃತವಾಗಿದೆ. ॥ ಅಧಿ. ೫ ॥

ಏಕಸ್ಮಿನ್ನಧಿಕರಣವು ಸಮಾಪ್ತವಾಯಿತು.

# ೬ ಸಮನಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಲಕ್ಷ್ಮೀದೇವಿಗೆ ವಿಷ್ಣುವಿನಲ್ಲಿ ಲಯಾಭಾವವನ್ನು ಸಮರ್ಥಿಸುತ್ತಾರೆ. ಲಕ್ಷ್ಮೀದೇವಿಯು ಶ್ರೀಹರಿಯ ಅಧೀನಳಾದ ಪ್ರಯುಕ್ತ ವಿಷ್ಣುವಿನಲ್ಲಿ ಲಯವನ್ನು ಹೊಂದುತ್ತಾಳೆ. **ತೇಜಃ ಪರಸ್ಯಾಂ ದೇವತಾಯಾಂ** ಎನ್ನುವ ವಿಶೇಷ ಶ್ರುತಿಯಿಂದಲೂ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ॥ ೭ ॥

ಸೂತ್ರಾರ್ಥ ॥ ಲಕ್ಷ್ಮೀದೇವಿಯು ಈಶ್ವರನಲ್ಲಿ ಲಯವನ್ನು ಹೊಂದುವುದಿಲ್ಲ. ಉಪಾಸನಾ ಮಾಡದೇನೇ ಲಕ್ಷ್ಮೀದೇವಿಗೆ ಸ್ವತ ಏವ ನಿತ್ಯಮುಕ್ತತ್ವವು. (ಅದು ಹೇಗೆಂದರೆ) ಯಾವಾಗಲೂ ಸಂಸಾರ ಸಂಬಂಧವಿಲ್ಲದಿರುವುದರಿಂದ (ಅದೂ ಹೇಗೆಂದರೆ) ಸಮನಾ=ದೇಶಕಾಲ ವ್ಯಾಪ್ತಿಯಿಂದ, ಸಮಃ=ಸಮಾನಿಕನು, ನಾ=ಪರಮಪುರುಷನಾಗ ವಿಷ್ಣು ಯಸ್ಯಾಃ=ಯಾರಿಗೋ, ಸಾ=ಅವಳು, ಸಮನಾ, ಎನ್ನಿಸುತ್ತಾಳೆ. ಅಂದರೆ ಈಶ್ವರನಂತೆಯೇ ಲಕ್ಷ್ಮೀದೇವಿಗೆ ನಿತ್ಯತ್ವವಿದ್ದ ಪ್ರಯುಕ್ತ ಸರ್ವಗತತ್ವವಿದ್ದ ಪ್ರಯುಕ್ತವೂ.

**ಭಾಷ್ಯ ॥ (೧) ದೇಶತಃ ಕಾಲತಶ್ಚ ವ್ಯಾಪ್ತ್ಯಾ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮನಾ । ಸಂಸಾರಾನುಪಕ್ರಮಾತ್ ಸ್ವತ ಏವಾಮೃತತ್ವಂ ತಸ್ಯಾಃ । (೨) ಬೃಹಚ್ಛ್ರುತಿಶ್ಚ । ದ್ವೌ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯ ಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತ ಇತಿ । ನೈತಾವತಾ ಸಾಮ್ಯಂ ॥ ೭ ॥ ॥ ೧ ॥**

ಭಾಷ್ಯಾರ್ಥ ॥ (೧) ದೇಶದಿಂದಲೂ ಕಾಲದಿಂದಲೂ ವ್ಯಾಪ್ತಿಯಿಂದ ಸರ್ವೋತ್ತಮನಾದ ಶ್ರೀಹರಿಯು ಯಾರಿಗೆ ಸಮಾನಿಕನೋ, ಅವಳು ಸಮನಾ ಎನ್ನಿಸುತ್ತಾಳೆ. ತಥಾಚ ಚಿತ್ಪ್ರಕೃತಿಯು ದೇಹ ಲಯವನ್ನು ಹೊಂದುವುದಿಲ್ಲ. ಏಕೆಂದರೆ, ಲಕ್ಷ್ಮೀದೇವಿಗೆ ಭಗವದುಪಾಸಾವಿಲ್ಲದೇನೇ ಸ್ವತ ಏವ ನಿತ್ಯ ಮುಕ್ತತ್ವವು. ನಿತ್ಯಮುಕ್ತಳಾದ ಲಕ್ಷ್ಮೀದೇವಿಗೆ ದೇಹಲಯವು ಕೂಡುವುದಿಲ್ಲ. ಅವಳಿಗೆ ನಿತ್ಯಮುಕ್ತತ್ವವೇ ಹೇಗೆಂದರೆ, ಯಾವಾಗಲೂ ಸಂಸಾರಸಂಬಂಧವು ಇಲ್ಲದಿರುವುದರಿಂದ ಅದೂ ಹೇಗೆಂದರೆ, ಲಕ್ಷ್ಮೀದೇವಿಯು ಪರಮಪುರುಷನಂತೆ ಸರ್ವದೇಶಗಳಲ್ಲಿ ವ್ಯಾಪ್ತಳು. (ಸರ್ವಗತಳು) ಕಾಲತಃ ವ್ಯಾಪ್ತಳು (ನಿತ್ಯಳೂ) ಆಗಿರುತ್ತಾಳೆ. ಸಂಸಾರಿತ್ವವಿದ್ದರೆ ಅದು ಕೂಡಲಾರದು. (೨) (ಲಕ್ಷ್ಮೀದೇವಿಗೆ ಈಶ್ವರನಂತೆ ನಿತ್ಯತ್ವವೂ ಸರ್ವಗತತ್ವವೂ ಇದ್ದುದರಿಂದ ಸಂಸಾರಸಂಬಂಧವಿಲ್ಲದಿರುವುದರಿಂದ ನಿತ್ಯ ಮುಕ್ತತ್ವವೆಂದು ಯಾವುದು ಉಕ್ತವಾಗಿಯದೋ ಅದು ಹೇಗೆಂದರೆ) ಸೂತ್ರದಲ್ಲಿದ್ದ ಯುಕ್ತಿಮಾತ್ರ ಪ್ರಮಾಣವಲ್ಲ. ಮತ್ತೆ ಬೃಹಚ್ಛ್ರುತಿಯೂ ಕೂಡ ಈ ಅರ್ಥದಲ್ಲಿ ಪ್ರಮಾಣವು. ಸಂಸಾರಸಂಬಂಧವಿಲ್ಲದವರು ನಿತ್ಯಮುಕ್ತರಾದವರು ಲಕ್ಷ್ಮೀದೇವಿಯು ಶ್ರೀಹರಿಯೂ ಕೂಡ ಇಬ್ಬರೇ, ಇವರಿಬ್ಬರು ದೇಹದಿಂದಲೂ ನಿತ್ಯರಾದವರು, ಸರ್ವತ್ರ ವ್ಯಾಪ್ತರಾದವರು ಮುಮುಕ್ಷುವು ಇವರಿಬ್ಬರನ್ನು ತಿಳಿದು ಮುಕ್ತನಾಗುತ್ತಾನೆ. (ಯಾರ ಜ್ಞಾನದಿಂದಲೇ ಇತರರಿಗೆ ಮುಕ್ತಿಯಾಗುತ್ತದೋ ಅಂತಹವರಿಗೆ ಸಂಸಾರವು ಹೇಗೆ ಆಗುವುದು.) (೩) (ಲಕ್ಷ್ಮೀದೇವಿಗೂ ನಿತ್ಯಮುಕ್ತತ್ವವನ್ನು ಅಂಗೀಕರಿಸಿದರೆ ಶ್ರೀಹರಿಯಿಂದ ಸರ್ವಸಾಮ್ಯವು ಬರಬೇಕಾಗುವುದು. ಎಂದರೆ) ಪ್ರಕೃತಿಪುರುಷರಿಗೆ ನಿತ್ಯಮುಕ್ತತ್ವಾದಿಗಳಿಂದ ಸಾಮ್ಯವು ಇದೆ ಎನ್ನುವುದರಿಂದ ಮಾತ್ರ ಸರ್ವಧರ್ಮದಿಂದ ಸಾಮ್ಯವು ಇರುವುದಿಲ್ಲ. ॥ ೭ ॥ ॥ ೧ ॥

**ಪೀಠಿಕೆ ॥** ಆ ವಿಷಯದಲ್ಲಿ ಹೇತ್ವಾಕಾಂಕ್ಷಾ ಬಂದರೆ, ಸೂತ್ರವನ್ನು ಹೇಳಿ ಸೂತ್ರೋಪಾತ್ತ ಶ್ರುತಿಯನ್ನೇ ಹೇಳುತ್ತಾರೆ—

## ಸೂತ್ರ ॥ ಓಂ ತದಪೀತೇಃ ಸಂಸಾರವ್ಯಪದೇಶಾತ್ ಓಂ ॥ ೮ ॥

**ಸೂತ್ರಾರ್ಥ ॥** ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ಎನ್ನುವ ಶ್ರುತ್ಯನುಸಾರವಾಗಿ ಪ್ರಸುತ್ತಳಾದ ಚಿತ್ಪ್ರಕೃತಿಯಲ್ಲಿ ಲಯದಿಂದ ಸಂಸಾರವೆಂದು ವ್ಯಪದೇಶವಿದ್ದ ಪ್ರಯುಕ್ತವೂ ಶ್ರೀಹರಿಯಲ್ಲಿ ಲಯದಿಂದ ಮುಕ್ತಿಯೆಂದು ವ್ಯವಪದೇಶವಿದ್ದ ಪ್ರಯುಕ್ತವೂ ಸರ್ವಸಾಮ್ಯವಿಲ್ಲ.

**ಭಾಷ್ಯ ॥ ಸಮಾವೇತೌ ಪ್ರಕೃತಿಶ್ಚ ಪರಮಶ್ಚ ನಿತ್ಯೌ ಸರ್ವಗತೌ ನಿತ್ಯಮುಕ್ತೌ ಅಸಮಾವೇತೌ ಪ್ರಕೃತಿಶ್ಚ ಪರಮಶ್ಚ ವಿಲೀನೋ ಹಿ ಪ್ರಕೃತೌ ಸಂಸಾರಮೇತಿ । ವಿಲೀನಃ ಪರಮೇ ಹ್ಯಮೃತತ್ವಮೇತಿ ಇತಿ ಸೌಪರ್ಣಶ್ರುತೇಃ ॥ ೮ ॥ ॥ ೨ ॥**

**ಭಾಷ್ಯಾರ್ಥ ॥** ಚಿತ್ಪ್ರಕೃತಿಯು ಶ್ರೀಪರಮಾತ್ಮನೂ ಇವರಿಬ್ಬರೂ ಸಮಾನಿಕರೇ. ದೇಹದಿಂದಲೂ ನಿತ್ಯರು. ಸರ್ವತ್ರ ವ್ಯಾಪ್ತರು. ನಿತ್ಯಮುಕ್ತರು. ಏವಂಚ ಪ್ರಕೃತಿಪುರುಷರಿಗೆ ನಿತ್ಯತ್ವ, ಸರ್ವಗತತ್ವ ನಿತ್ಯ ಮುಕ್ತತ್ವಗಳಿಂದಲೇ ಸಾಮ್ಯವು. (ಸರ್ವಸಾಮ್ಯವಿಲ್ಲ) ಈ ಲಕ್ಷ್ಮೀನಾರಾಯಣರಿಬ್ಬರೂ ಸಮರಲ್ಲ. ಏಕೆಂದರೆ, ಚಿತ್ಪ್ರಕೃತಿಯಲ್ಲಿ ಲಯವನ್ನು ಹೊಂದಿದವನು ಸಂಸಾರವನ್ನು ಹೊಂದುತ್ತಾನೆ. ಪರಮಾತ್ಮನಲ್ಲಿ ಲಯವನ್ನು ಹೊಂದಿದವನು ಮುಕ್ತಿಯನ್ನು ಹೊಂದುತ್ತಾನೆ ಎನ್ನುವ ಸೌಪರ್ಣಶ್ರುತಿಯಿಂದ ಕರ್ತ್ವ ಅಮೋಚಕತ್ವ (ಮೋಚವುಳ್ಳವರಿಗೆ ಸರ್ವಸಾಮ್ಯವು ಕೂಡುವುದಿಲ್ಲ) (ಪ್ರಕೃತಿಗೆ ಮೋಚಕತ್ವವಿಲ್ಲವಾದರ ತೌ ಜ್ಞಾತ್ವಾ ವಿಮುಚ್ಯತೇ ಎನ್ನುವ ಶ್ರುತಿವಿರೋಧವಿಲ್ಲ. ಪ್ರಕೃತಿಜ್ಞಾನಕ್ಕೆ ಭಗವತ್ಪ್ರಸಾದ ದ್ವಾರ ಮೋಕ್ಷಹೇತುತ್ವವಿದ್ದರೂ ಶ್ರೀಹರಿಯಂತೆ ಶ್ರೀಲಕ್ಷ್ಮೀದೇವಿಗೆ ಸಾಕ್ಷಾತ್ತಾಗಿ ಮೋಚಕತ್ವವಿಲ್ಲ. ಪ್ರಕೃತಿಗೆ ಪರಂಪರಯಾ ಮೋಚಕತ್ವ ಸಾಕ್ಷಾತ್ ಮೋಚಕತ್ವಾಭಾವ ಈ ಅಭಿಪ್ರಾಯದಿಂದ ಶ್ರುತಿಗಳೆರಡು ಪರವೃತ್ತಗಳಾಗಿವೆ. ॥ ೨ ॥

**ಪೀಠಿಕೆ ॥** ಹೇತ್ವಂತರದಿಂದ ಲಕ್ಷ್ಮೀನಾರಾಯಣರಿಗೆ ಸರ್ವಸಾಮ್ಯವನ್ನುನಿಷೇಧಿಸತಕ್ಕ ಸೂತ್ರ ವನ್ನು ಹೇಳುತ್ತಾರೆ.

## ಸೂತ್ರ ॥ ಓಂ ಸೂಕ್ಷ್ಮ ಪ್ರಮಾಣತಶ್ಚ ತಥೋಪಲಬ್ಧೇಃ ಓಂ ॥ ೯ ॥

**ಸೂತ್ರಾರ್ಥ ॥** ಆ ಪ್ರಕೃತಿಯಿಂದಲೂ ಪರಬ್ರಹ್ಮನು ಸೂಕ್ಷ್ಮನು, ಜ್ಞಾನ ಆನಂದ ಮೊದಲಾದ ಗುಣಪರಿಮಾಣದಿಂದ ಅಧಿಕನು. ಸರ್ವತಃ ಪ್ರಕೃತಿಃ ಸೂಕ್ಷ್ಮಾ ಇತ್ಯಾದಿ ಶ್ರುತಿಗಳಲ್ಲಿ ಹಾಗೆ ಕಂಡದ್ದರಿಂದ. ಆದುದರಿಂದಲೂ ಸರ್ವಸಾಮ್ಯವಿಲ್ಲ.

**ಭಾಷ್ಯ ॥ (೧) ಸೂಕ್ಷ್ಮತ್ವಂ ಚಾಧಿಕಂ ಬ್ರಹ್ಮಣಃ ಪ್ರಕೃತೇಃ। ಜ್ಞಾನಾನಂದೈಶ್ವರ್ಯಾದಿ ಪ್ರಮಾಣಾಧಿಕ್ಯಂ ಚ ॥ (೨) ಸರ್ವತಃ ಪ್ರಕೃತಿಃ ಸೂಕ್ಷ್ಮಾ ಪ್ರಕೃತೇಃ ಪರಮೇಶ್ವರಃ । ಜ್ಞಾನಾನಂದೌ ತಥೈಶ್ವರ್ಯಂ ಗುಣಾಶ್ಚಾನ್ಯೇಽಧಿಕಾಃ ಪ್ರಭೋಃ । ಇತಿ ಚ (ಹಿ) ತುರ ಶ್ರುತಿಃ ॥ ೯ ॥ ೩ ॥**

ಭಾಷ್ಯಾರ್ಥ ॥ (೧) ಪ್ರಕೃತಿಯ ಸಕಾಶದಿಂದಲೂ ಬ್ರಹ್ಮನಿಗೆ ಸೂಕ್ಷ್ಮತ್ವವು ಅಧಿಕವು. (ಇಷ್ಟು ಮಾತ್ರವಲ್ಲ ಮತ್ತೆ) ಜ್ಞಾನ ಆನಂದ ಐಶ್ವರ್ಯ ಮೊದಲಾದ ಗುಣಗಳ ಪರಿಮಾಣದಿಂದ ಅಧಿಕ್ಯವೂ ಅದೆ. (ಸರ್ವತಃ ಎನ್ನುವ ಶ್ರುತಿಯಿಂದ ಆದುದರಿಂದಲೂ ಸರ್ವಸಾಮ್ಯವಿಲ್ಲ) (೨) ಚಿತ್ಪ್ರಕೃತಿಯು (ಲಕ್ಷ್ಮೀದೇವಿಯು) ಸರ್ವವಸ್ತುಗಳಿಂದಲೂ ಸೂಕ್ಷ್ಮಳು. ಪ್ರಕೃತಿಯ ಸಕಾಶದಿಂದಲೂ ಶ್ರೀಹರಿಯು ಸೂಕ್ಷ್ಮನು ಶ್ರೀಹರಿಯ ಜ್ಞಾನ ಆನಂದಗಳು ಹಾಗೆಯೇ ಅಣಿಮಾದ್ಯೈಶ್ವರ್ಯವೂ ಇತರಗಳಾದ ಬಲ ಮೊದಲಾದ ಗುಣಾದಿ ಧರ್ಮಗಳೂ ಕೂಡ ಪ್ರಕೃತಿಗಿಂತ ಅತ್ಯಧಿಕಗಳಾಗಿವೆ. (ಏವಂಚ ಈಶ್ವರನ ಸೂಕ್ಷ್ಮತ್ವವು ಮಾತ್ರ ಪ್ರಕೃತಿಯಿಂದ ಅಧಿಕವೆಂದಲ್ಲ, ಮತ್ತೆ ಜ್ಞಾನಾದಿ ಧರ್ಮಗಳೂ ಅಧಿಕಗಳಾಗಿವೆ.) ಹೀಗೆ ತುರುಶ್ರುತಿಯು ಪ್ರತಿಪಾದಿಸುತ್ತದೆ. ॥ ೯ ॥ ೩. ॥

ಟೀಕೆ ॥ ಲಕ್ಷ್ಮೀದೇವಿಗೆ ಶ್ರೀಹರಿಯಿಂದ ಸರ್ವಸಾಮ್ಯವಿಲ್ಲವೆಂದಾದರೆ ಬ್ರಹ್ಮಾದಿಗಳಂತೆಯೇ ನಿತ್ಯಮುಕ್ತತ್ವಾದಿಗಳಿಂದಲೂ ಸಾಮ್ಯವೂ ಇಲ್ಲವೆಂದಾಗುವುದು. ಅಂತೂ ಲಯವೂ ಬರಬೇಕಾಗುವುದು, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನೋಪಮರ್ದೇನಾತಃ ಓಂ ॥ ೧೦ ॥

ಸೂತ್ರಾರ್ಥ ॥ ಲಕ್ಷ್ಮೀನಾರಾಯಣರಿಗೆ ಸಾಮ್ಯ ಸಾಮ್ಯಾಭಾವಗಳನ್ನು ಹೀಗೆ ಸಾಧನಮಾಡಿದ್ದರಿಂದ ಸ್ವಾತಂತ್ರ್ಯ ಮೊದಲಾದ ಈಶ್ವರ ಗುಣಾಸಾಧಾರಣ್ಯಕ್ಕೆ ಬಾಧಕವಿಲ್ಲದೆ (ಅಂದರೆ ಸ್ವಾತಂತ್ರ್ಯ ಮೊದಲಾದ ಅಸಾಧಾರಣ ಗುಣಗಳನ್ನು ಬಿಟ್ಟು) ನಿತ್ಯಮುಕ್ತತ್ವಾದಿಗಳಿಂದ ಸಾಮ್ಯವು.

**ಭಾಷ್ಯ ॥ (೧) ಅತಸ್ತಸ್ಯ ಯೇ ವಿಶೇಷಗುಣಾಸ್ತೇಷಾಮನುಪಮರ್ದೇನೈವ ಸಾಮ್ಯಂ । (೨) ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ । ಉಭಯೋರಪ್ಯಬದ್ಧತ್ವಂ ತದಬಂಧಃ ಪರಾತ್ಮನಃ । ಸ್ವತ ಏವ ಪರೇಶಸ್ಯ ಸಾ ಚೋಪಾಸ್ತೇ ಸದಾ ಹರಿಂ । ಪ್ರಕೃತೇ ಪ್ರಾಕೃತಸ್ಯಾಪಿ ಯೇ ಗುಣಾಸ್ತೇ ತು ವಿಷ್ಣುನಾ । ನಿಯತಾ ನೈವ ಕೇನಾಪಿ ನಿಯತಾ ಹಿ ಹರೇರ್ಗುಣಾಃ । ಇತಿ ಭವಿಷ್ಯತ್ಪರ್ವಣಿ ॥ ೧೦ ॥ ॥ ೪ ॥**

ಭಾಷ್ಯಾರ್ಥ ॥ (೧) ಸಾಮ್ಯ ಸಾಮ್ಯಾಭಾವಗಳನ್ನು ಹೀಗೆ ಸಾಧಿಸಿದ್ದರಿಂದಲೇ ಆ ಪರಮೇಶ್ವರನ ಯಾವುವು ಸ್ವಾತಂತ್ರ್ಯ ಮೊದಲಾದ ಅಸಾಧಾರಣ ಗುಣಗಳೋ, ಅವುಗಳ ಅಸಾಧಾರಣ್ಯ (ಈಶ್ವರನಲ್ಲಿ ಮಾತ್ರ ಇರುವಿಕೆ)ವನ್ನು ಬಾಧಿಸದೇನೇ ಆ ಲಕ್ಷ್ಮೀದೇವಿಗೆ ಆ ಪರಮಾತ್ಮನಿಂದ ನಿತ್ಯಮುಕ್ತತ್ವಾದಿಗಳಿಂದ ಸಾಮ್ಯವು ಇದ್ದೇ ಇದೆ. (೨) (ಪ್ರಕೃತಿಗೆ ನಿತ್ಯಮುಕ್ತತ್ವಾದಿಗಳಿಂದ ಸಾಮ್ಯವಿದ್ದರೆ ಸ್ವಾತಂತ್ರ್ಯಾದಿಗಳಿಂದಲೂ ಸಾಮ್ಯವು ಬರಬಹುದಾದುದರಿಂದ ಸ್ವಾತಂತ್ರ್ಯಾದಿ ಭಗವದ್ಗುಣಗಳು ಆತನಲ್ಲಿ ಮಾತ್ರ ಇರತಕ್ಕವುಗಳು ಎನ್ನುವುದು ಆಗದೆ ಹೋಗುವವೆಂದರೆ) ಲಕ್ಷ್ಮೀದೇವಿಯು ದೇಶದಿಂದಲೂ ಕಾಲದಿಂದಲೂ ಶ್ರೀಹರಿಯಿಂದ ಸಮಾನಿಕಳು. ಈ ಲಕ್ಷ್ಮೀನಾರಾಯಣರಿಬ್ಬರಿಗೂ ನಿತ್ಯಮುಕ್ತತ್ವವು ಇದೆ. ಅಂದರೆ ಈಶ್ವರನಂತೆ ಲಕ್ಷ್ಮೀದೇವಿಗೂ ಸಂಸಾರಸಂಬಂಧಾತ್ಯಂತಾಭಾವವು ಇದೆ. (ಹೀಗೆ ನಿತ್ಯಮುಕ್ತತ್ವಾದಿಗಳಿಂದ ಸಾಮ್ಯವಿದ್ದರೂ ಪ್ರಕೃತಿಗೆ ಸ್ವಾತಂತ್ರ್ಯಾದಿಗಳು ಇಲ್ಲವೆನ್ನುತ್ತಾರೆ.) ಯದ್ಯಪಿ

ಲಕ್ಷ್ಮೀನಾರಾಯಣರಿಬ್ಬರಿಗೆ ಅಬದ್ಧತ್ವವಿದೆ. ಆದಾಗ್ಯೂ ಸರ್ವಸ್ವಾಮಿಯಾದ ಶ್ರೀಹರಿಗೆ ಅಬದ್ಧತ್ವಂ ಎಂದು ಹೇಳಿದ ಬಂಧಾಭಾವವು ಅಪರಾಧೀನವೇ. ಪರರ ಪ್ರಸಾದಾಧೀನವಲ್ಲ. ಲಕ್ಷ್ಮೀದೇವಿಗಾದರೂ ಪರಾಯತ್ತವು. ನಿತ್ಯದಲ್ಲಿಯೂ ಬಂಧಾಭಾವವು ಭಗವದನುಗ್ರಹದಿಂದಲೇ. ಆದಕಾರಣ ಅವಳಿಗೆ ಸ್ವಾತಂತ್ರ್ಯಾದಿಗಳು ಇಲ್ಲ (ಇಲ್ಲವಾದರೆ ಅವಳು ಭಗವಂತನನ್ನು ಉಪಾಸನ ಮಾಡುತ್ತಾಳೆ ಎನ್ನುವುದು ಕೂಡದೆ ಹೋಗುವುದು. ಸರ್ವಸ್ವತಂತ್ರನು ಇತರರನ್ನು ಉಪಾಸನ ಮಾಡಲಾರನು. ಆ ಲಕ್ಷ್ಮೀದೇವಿಯು ಯಾವಾಗಲೂ ಶ್ರೀಹರಿಯನ್ನು ಉಪಾಸನಾ ಮಾಡುತ್ತಿರುತ್ತಾಳೆ. (ಯಾವಾಗಲೂ ಶ್ರೀಹರಿಯ ಸಮೀಪದಲ್ಲಿಯೇ ಇರುತ್ತಾಳೆ. ಆದಕಾರಣ ನಿತ್ಯಮುಕ್ತತ್ವವು.) (ಲಕ್ಷ್ಮೀದೇವಿಯ ನಿತ್ಯಮುಕ್ತತ್ವವೊಂದೇ ಭಗವದಧೀನವಲ್ಲ ಮತ್ತೆ) ಲಕ್ಷ್ಮೀದೇವಿಯ ಜ್ಞಾನಾನಂದಾದಿ ಗುಣಗಳೂ ವಿಷ್ಣುವಿನಿಂದ ನಿಯತಗಳಾಗಿವೆ. (ಲಕ್ಷ್ಮೀದೇವಿದ್ದು ಮಾತ್ರವಲ್ಲ. ಮತ್ತೆ ಪ್ರಕೃತಿಬದ್ಧರಾದ ಬ್ರಹ್ಮ ಮೊದಲಾದವರ ಯಾವವು ಗುಣಗಳೋ, ಅವುಗಳೂ ಕೂಡ ವಿಷ್ಣುವಿನಿಂದ ನಿಯತಗಳೇ ಆಗಿವೆ. ವಿಷ್ಣುವಿನ ಅಧೀನಗಳೇ ಆಗಿವೆ. ಶ್ರೀಹರಿಯ ಗುಣಗಳಾದರೂ ಯಾರಿಂದಲೂ ನಿಯತಗಳಲ್ಲ. ಯಾರ ಅಧೀನಗಳೂ ಅಲ್ಲ ಎಂದು ಭವಿಷ್ಯತ್ಪರ್ವದಲ್ಲಿ ಇದೆ. ॥ ೧೦ ॥ ೪ ॥

ಪೀಠಿಕೆ ॥ ಶ್ರುತಿರೂಪವಾದ ಯುಕ್ತ್ಯಂತರದಿಂದ ಕಿಂಚಿತ್ಸಾಮ್ಯವನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಸ್ಯೈವ ಚೋಪಪತ್ತೇರೂಷ್ಮಾ ಓಂ ॥ ೧೧ ॥

ಸೂತ್ರಾರ್ಥ ॥ ದ್ವಿಧಾ ಹೀದಮವದೃಶ್ಯತೇ ಇತ್ಯಾದಿಗಳಿಂದ ಈಶ್ವರನಿಗೆ ಊಷ್ಮಾವತ್ವವನ್ನೂ ಲಕ್ಷ್ಮೀದೇವಿಗೆ ಊಷ್ಮಾವತ್ವ ಅನೂಷ್ಮಾವತ್ವವನ್ನೂ ಪ್ರತಿಪಾದಿಸತಕ್ಕ ಊಷ್ಮಾಪದಘಟಿತವಾದ ಶ್ರುತಿಯ ಲಕ್ಷ್ಮೀನಾರಾಯಣರಿಬ್ಬರಿಗೆ ಕಿಂಚಿತ್ಸಾಮ್ಯವನ್ನೇ ಉಪಪಾದಿಸುತ್ತದೆ. ಊಷ್ಮಾ=ಚಕ್ಷುರಾದಿಗಳ ಅಗೋಚರತ್ವಕ್ಕೆ ಅನುಕೂಲವಾದ ಸಾಮರ್ಥ್ಯವು.

**ಭಾಷ್ಯ ॥ ದ್ವಿಧಾ ಹೀದಮವದೃಶ್ಯತೇ । ಊಷ್ಮಾವದನೂಷ್ಮಾವಚ್ಚ । ತತ್ರೋಷ್ಮಾವತ್ಪರಂ ಬ್ರಹ್ಮ ಯನ್ನ ಜಿಘ್ರಂತಿ ನ ಶೃಣ್ವಂತಿ ನ ಪಶ್ಯಂತಿ ನ ವಿಜಾನಂತಿ । ಅಥಾನೂಷ್ಮಾವತ್ಪ್ರಕೃತಿಶ್ಚ ಪ್ರಾಕೃತಂ ಚ ಯನ್ನ ಜಿಘ್ರಂತಿ ಜಿಘ್ರಂತಿ ಚ ಯನ್ನ ಪಶ್ಯಂತಿ ಪಶ್ಯಂತಿ ಚ ಯನ್ನ ಶೃಣ್ವಂತಿ ಶೃಣ್ವಂತಿ ಚ ಯನ್ನ ಜಾನಂತಿ ಜಾನಂತಿ ಚ । ಇತಿ ಸೌಪರ್ಣಶ್ರುತೇಃ (ತಿಶ್ಚ) ಕಿಂಚಿತ್ಸಾಮ್ಯೋಪಪತ್ತೇಃ ॥ ೧೧ ॥ ॥ ೫ ॥**

ಭಾಷ್ಯಾರ್ಥ ॥ ಈ ನಿತ್ಯಮುಕ್ತತ್ವವು ಊಷ್ಮಾವತ್ ಅನೂಷ್ಮಾವತ್ ಎಂದು ಎರಡು ವಿಧವಾಗಿ ಕಾಣಲ್ಪಡುತ್ತದೆ. ಅವುಗಳ ಮಧ್ಯದಲ್ಲಿ ಪರಬ್ರಹ್ಮನು ಊಷ್ಮಾವತ್=ಊಷ್ಮಾನಾಮಾ ಸ ಭಗವಾನ್ ಸಮರ್ಥತ್ವಾತ್ ಪ್ರಕೀರ್ತಿತಃ ಎನ್ನುವ ಪ್ರಮಾಣದಿಂದ ಚಕ್ಷುರಾದ್ಯಗೋಚರತ್ವಕ್ಕೆ ಅನುಕೂಲವಾದ ಸಾಮರ್ಥ್ಯವುಳ್ಳವನು (ಹೇಗೆಂದರೆ ಜನರು) ಯಾವ ಕಾರಣದಿಂದ ಪರಬ್ರಹ್ಮನನ್ನು ತಮ್ಮ ಶಕ್ತಿಯಿಂದ ಘ್ರಾಣೇಂದ್ರಿಯದಿಂದ ವಿಷಯೀಕರಿಸುವುದಿಲ್ಲವೋ, ಕಣ್ಣಿನಿಂದ ನೋಡುವುದಿಲ್ಲವೋ, ಕಿವಿಯಿಂದ

ಕೇಳುವುದಿಲ್ಲವೋ, ಮನಸ್ಸಿನಿಂದ ತಿಳಿಯುವುದಿಲ್ಲವೋ. ಆ ಮೇಲೆ ಮೂಲರೂಪಿಯಾದ ಚಿತ್ಪ್ರಕೃತಿಯೂ ಚಿತ್ ಪ್ರಕೃತಿಸಂಬಂಧಿಯಾದ ರುಗ್ಮಿಣ್ಯಾದ್ಯವತಾರ ಸಮುದಾಯವು ಊಷ್ಮಾವುಳ್ಳದ್ದು ಮತ್ತು ಅನೂಷ್ಮಾವುಳ್ಳದ್ದು, ಯಾವ ಕಾರಣದಿಂದ ಪ್ರಕೃತ್ಯಾದಿಗಳನ್ನು ಜನರು ಘ್ರಾಣೇಂದ್ರಿಯದಿಂದ ಸಂಪೂರ್ಣವಾಗಿ ವಿಷಯೀಕರಿಸುವುದಿಲ್ಲ, ಯಥಾಯೋಗ್ಯವಾಗಿ ವಿಷಯೀಕರಿಸುತ್ತಾರೆ. ಕಣ್ಣಿನಿಂದ ಸಂಪೂರ್ಣವಾಗಿ ನೋಡುವುದಿಲ್ಲ, ಯಥಾಯೋಗ್ಯವಾಗಿ ನೋಡುತ್ತಾರೆ. ಕಿವಿಯಿಂದ ಸಂಪೂರ್ಣವಾಗಿ ಕೇಳುವುದಿಲ್ಲ, ಯಥಾಯೋಗ್ಯವಾಗಿ ಕೇಳುತ್ತಾರೆ. ಮನಸ್ಸಿನಿಂದ ಸಂಪೂರ್ಣವಾಗಿ ತಿಳಿಯುವುದಿಲ್ಲ, ಯಥಾಯೋಗ್ಯವಾಗಿ ತಿಳಿಯುತ್ತಾರೆ. ಎಂದು ಸೌಪರ್ಣಶ್ರುತಿಯಿಂದ ಕಿಂಚಿತ್ ಸಾಮ್ಯವು ಕೂಡುವುದರಿಂದ ಅಂದರೆ ಈಶ್ವರನಿಗೆ ಸರ್ವೇಂದ್ರಿಯಾಗೋಚರತ್ವವಿದ್ದುದರಿಂದ ಉಷ್ಮೋಪಮಾನವನ್ನು ಪ್ರಕೃತಿಗಾದರೂ ಸಾಕಲ್ಯೇನ ಇಂದ್ರಿಯಾಗೋಚರತ್ವ, ಯಥಾಯೋಗ್ಯವಾಗಿ ಇಂದ್ರಿಯಗೋಚರತ್ವಗಳಿಂದ ಊಷ್ಮೋಪಮಾನ ಅನೂಷ್ಮೋಪಮಾನಗಳನ್ನು ಹೇಳಿದ್ದರಿಂದ ಚಿತ್ಪ್ರಕೃತಿಗೆ ಈಶ್ವರನಿಂದ ಕಿಂಚಿತ್ಸಾಮ್ಯವು ಉಪಪನ್ನವಾಗುತ್ತದೆ. ॥ ೧೧ ॥

ಪೀಠಿಕೆ ॥ ಕಿಂಚಿತ್ಸಾಮ್ಯವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಓಂ ॥ ೧೨ ॥

ಸೂತ್ರಾರ್ಥ ॥ ಸರ್ವೇ ಹ್ಯೇತೇऽಣವೋ ಜಾಯಂತೇ ಇತ್ಯಾದಿ ಶ್ರುತಿಗಳಲ್ಲಿ ಈಶ್ವರನಿಂದ ಇತರರಲ್ಲಿ ನಿತ್ಯತ್ವ ಸರ್ವಗತತ್ವಾದಿಗಳು ಇಲ್ಲವೆಂದು ಈಶ್ವರನಲ್ಲಿ ಅವುಗಳು ಇರುತ್ತವೆ ಎಂದೂ ಹೇಳಿದ್ದರಿಂದ ದೇಶ ಕಾಲ ವ್ಯಾಪ್ತ್ಯಾದಿಗಳಿಂದಲೂ ಸಾಮ್ಯವನ್ನು ನಿಷೇಧಮಾಡಿದ್ದರಿಂದ ಲಕ್ಷ್ಮೀನಾರಾಯಣರಿಗೆ ದೇಶವ್ಯಾಪ್ತ್ಯಾದಿಗಳಿಂದಲೂ ಸಾಮ್ಯವಿಲ್ಲ ಎಂದರೆ, ಹಾಗೆ ಹೇಳಕೂಡದು. ಏಕೆಂದರೆ, ಆ ಶ್ರುತಿಯಲ್ಲಿ ಈಶ್ವರನಿಗೆ ಜೀವನಿಂದ ಸಾಮ್ಯವನ್ನು ನಿಷೇಧ ಮಾಡಿದ್ದರಿಂದ, ಲಕ್ಷ್ಮೀದೇವಿಯಿಂದ ಸಾಮ್ಯವನ್ನು ನಿಷೇಧ ಮಾಡದಿರುವುದರಿಂದ.

**ಭಾಷ್ಯ ॥ ಅಸಮೋ ವಾ ಏಷ ಪರಮೋ (ಪರೋ) ನ ಹಿ ಕಶ್ಚಿದೇವಂ ದೃಶ್ಯತೇ ಸರ್ವೇ ಹ್ಯೇತೇऽಣವೋ ಜಾಯಂತೇ ಚ ಮ್ರಿಯಂತೇ ಚ ಛಿದ್ರಾ ಹ್ಯೇತೇ ಭವಂತಿ । ಅಥ ಪರೋ ನ ಜಾಯತೇ ನ ಮ್ರಿಯತೇ ಪೂರ್ಣಶ್ಚೈಷ ಭವತಿ । ಇತಿ ಚತುರ್ವೇದಶಿಖಾಯಾಂ ಸಾಮ್ಯಪ್ರತಿಷೇಧಾನ್ನೇತಿ ಚೇನ್ನ । ಶಾರೀರಾದ್ಧಿ ಸಾಮ್ಯಂ ಪ್ರತಿಷಿಧ್ಯತೇ ॥ ೧೨ ॥ ॥ ೬ ॥**

ಭಾಷ್ಯಾರ್ಥ ॥ ಈ ಸರ್ವೋತ್ತಮನಾದ ಶ್ರೀಹರಿಯು ಯಾವ ಪ್ರಕಾರದಿಂದಲೂ ಯಾರಿಂದಲೂ ಸಮನು ಅಲ್ಲವೇ ಅಲ್ಲ. ಏಕೆಂದರೆ, ಲೋಕದಲ್ಲಿ ಯಾವನೊಬ್ಬ ಪುರುಷನೂ ಪರಮಾತ್ಮನಂತೆ ಕಾಣಲ್ಪಡುವುದಿಲ್ಲ (ಅದೂ ಹೇಗೆಂದರೆ) ಈ ಎಲ್ಲಾ ಜೀವರೂ ಅಣುತ್ವ ಪರಿಮಾಣವುಳ್ಳವರು ಮತ್ತು ಅಪೂರ್ಣರು, ಹುಟ್ಟುತ್ತಾರೆ, ಸಾಯುತ್ತಾರೆ. ಇವರು ದೋಷವುಳ್ಳವರು ಆಗುತ್ತಾರೆ. ಆ ಮೇಲೆ

ಪರಮಾತ್ಮನಾದರೂ ಜನನಮರಣವುಳ್ಳವನಲ್ಲ, ಸರ್ವಗುಣಪರಿಪೂರ್ಣನು, ಸರ್ವತ್ರ ವ್ಯಾಪ್ತನು. ನಿರ್ದೋಷನೂ ಆಗಿರುತ್ತಾನೆ, ಎಂದು ಚತುರ್ವೇದ ಶಿಖಾದಲ್ಲಿ **ಅಥ ಪರಃ** ಇತ್ಯಾದಿಗಳಿಂದ (ಪರಮೇಶ್ವರನಿಗೇನೇ ನಿತ್ಯತ್ವ, ಸರ್ವಗತತ್ವ ನಿರ್ದೋಷತ್ವಾದಿಗಳನ್ನು ಹೇಳಿ ಸರ್ವೇ ಹ್ಯೇತೇ ಇತ್ಯಾದಿಗಳಿಂದ ಇತರರಿಗೆ ಸರ್ವಗತತ್ವಾದ್ಯಭಾವವನ್ನು ಹೇಳಿ ಪ್ರಕೃತಿ ಪುರುಷರಿಗೆ) ಸಾಮ್ಯವನ್ನು ನಿಷೇಧ ಮಾಡಿದ್ದರಿಂದ ಪ್ರಕೃತಿ ಪುರುಷರಿಗೆ ದೇಶ ಕಾಲ ವ್ಯಾಪ್ತ್ಯಾದಿಗಳಿಂದಲೂ ಸಾಮ್ಯವಿಲ್ಲ ಎಂದರೆ, ಹಾಗೆ ಹೇಳಕೂಡದು. (ಅಂದರೆ ಈ ಶ್ರುತಿಯಲ್ಲಿ ಚಿತ್ಪ್ರಕೃತಿಗೆ ಭಗವತ್ಸಾಮ್ಯವು ನಿಷೇಧಿಸಲ್ಪಡುವುದಿಲ್ಲ, ಮತ್ತು ಶರೀರದಲ್ಲಿರತಕ್ಕ ಜೀವನಿಂದಲೇ ಈಶ್ವರನಿಗೆ ಸಾಮ್ಯವು ನಿಷೇಧಿಸಲ್ಪಡುತ್ತದೆ. (ಅವನು ಶರೀರದಲ್ಲಿರತಕ್ಕವನಾದುದರಿಂದ ನಿತ್ಯತ್ವ ಸರ್ವಗತತ್ವಗಳು ಕೂಡಲಾರವು. ಅನಿತ್ಯವಾದ ಶರೀರದಲ್ಲಿರತಕ್ಕವನಿಗೆ ಈಶ್ವರನಂತೆ ನಿತ್ಯತ್ವಾದಿಗಳು ಕೂಡಲಾರವು.) ॥ ೧೨ ॥ ೬ ॥

**ಭಾಷ್ಯ ॥ ಕುತಃ** ॥ ೭ ॥

**ಭಾಷ್ಯಾರ್ಥ** ॥ ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಅಂದರೆ ಈ ಶ್ರುತಿಯು ಸಾಮಾನ್ಯ ರೂಪವಾದುದರಿಂದ ಪರಮಾತ್ಮನಿಗೆ ಇಲ್ಲಿ ಜೀವನಿಂದಲೇ ಸಾಮ್ಯವು ನಿಷೇಧಿಸಲ್ಪಡುತ್ತದೆ. ಚಿತ್ಪ್ರಕೃತಿಯಿಂದ ಅಲ್ಲ ಎನ್ನುವುದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಎಂದು ಆಕ್ಷೇಪವು. ॥ ೭ ॥

**ಪೀಠಿಕೆ** ॥ ಆ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ. ಅಥವಾ ಸಾಮಾನ್ಯ ಶ್ರುತಿಗೆ ಜೀವನಿಂದ ಸಾಮ್ಯವಿಲ್ಲವೆನ್ನುವ ವಿಶೇಷಪರತ್ವವು ಯಾವ ಪ್ರಮಾಣದಿಂದ ಎಂದರೆ—

## ಸೂತ್ರ ॥ ಓಂ ಸ್ಪಷ್ಟೋ ಹ್ಯೇಕೇಷಾಂ ಓಂ ॥ ೧೩ ॥

**ಸೂತ್ರಾರ್ಥ** ॥ ಮಾಧ್ಯಂದಿನರ ಶ್ರುತಿಯಲ್ಲಿ ಜೀವರಿಗೇನೇ ಅಸಮತ್ವವನ್ನು ಹೇಳುತ್ತಾ ಚಿತ್ಪ್ರಕೃತಿಗೆ ಸಮಾಸಮತ್ವವಾದವು ಸ್ಪಷ್ಟವಾಗಿ ಇದೆ. ಆದಕಾರಣ ಶ್ರೀಹರಿಗೆ ಜೀವನಿಂದಲೇ ಸಾಮ್ಯವು ನಿಷೇಧಿಸಲ್ಪಡುತ್ತದೆ. ಲಕ್ಷ್ಮೀದೇವಿಯಿಂದ ಸಾಮ್ಯವು ನಿಷೇಧಿಸಲ್ಪಡುವುದಿಲ್ಲ.

**ಭಾಷ್ಯ ॥ ಅಥಾತಃ ಸಮಾಶ್ಚಾಸಮಾಶ್ಚಾಭಿಧೀಯಂತೇ ಸಮಾಸಮಾಶ್ಚಾಥ ಸಮಾನಿ ಬ್ರಹ್ಮಣೋ ರೂಪಾಣಿ ಯೈರುತ್ಪತ್ತಿಃ ಸ್ಥಿತಿರ್ಲಯೋ ನಿಯತಿರಾಯತಿಶ್ಚೈಕಂ ಹ್ಯೇವೈತದ್ಬವತ್ಯಥಾಸಮಾಃ ಬ್ರಹ್ಮೇಂದ್ರೋ ರುದ್ರಃ ಪ್ರಜಾಪತಿರ್ಬೃಹಸ್ಪತಿರ್ಯೇ ಕೇಚ ದೇವಾ ಗಂಧರ್ವಾ ಮನುಷ್ಯಾಃ ಪಿತರೋಽಸುರಾ ಯತ್ಕಿಂ ಚೇದಂ ಚರಮಚರಂ ಚಾಥ ಸಮಾಸಮಾ ಪ್ರಕೃತಿರ್ವಾವ ಸಮಾಸಮಾ ಸೈಷಾ ಹಿ ನಿತ್ಯಾಽಜರಾ ತದ್ವಶಾ ಚ । ಇತಿ ಸ್ಪಷ್ಟೋ ಹಿ ಮಾಧ್ಯಂದಿನಾಯನಾನಾಂ ಸಮಾದಿವಾದಃ ॥ ೧೩ ॥** ॥ ೮ ॥

**ಭಾಷ್ಯಾರ್ಥ** ॥ ಅನಂತರದಲ್ಲಿ ಪ್ರಯೋಜನವಿದ್ದುದರಿಂದ ಅಥವಾ ಶ್ರೀಹರಿಯ ಪ್ರಸಾದದಿಂದ, ಸರ್ವಧರ್ಮಗಳಿಂದ (೧) ಬ್ರಹ್ಮಸಮರಾದವರೂ, (೨) ಸಮರಾಗದೆ ಇದ್ದವರೂ (೩) ಕೆಲವು

ಧರ್ಮಗಳಿಂದ ಸಮರೂ ಸರ್ವಧರ್ಮಗಳಿಂದ ಅಸಮರೂ ಆದ ಚೇತನರೂ ನಿರೂಪಿಸಲ್ಪಡುತ್ತಾರೆ. ಪರಬ್ರಹ್ಮನ ಅವತಾರಭೂತಗಳಾದ ಮತ್ಸ್ಯಾದಿರೂಪಗಳು ಸಮಗಳು. ಯಾವ ರೂಪಗಳಿಂದ ಜಗತ್ತಿಗೆ ಉತ್ಪತ್ತಿಯು ಸ್ಥಿತಿಯು ನಾಶವು ನಿಯಮನವು ಪರವೃತ್ತಿಯು ಆಗುತ್ತದೋ, ಈ ಮತ್ಸ್ಯಾದ್ಯವತಾರ ಸಮೂಹವು ಮೂಲರೂಪದಿಂದ ಒಂದೇ ಆಗುತ್ತದೋ. (ಅಲ್ಲಿ ಮೂಲರೂಪಕ್ಕೂ ಅವತಾರರೂಪಕ್ಕೂ ಭೇದ ಲೇಶವೂ ಇಲ್ಲ. ಸಾಮ್ಯವಾದರೂ ವಿಶೇಷ ಬಲದಿಂದ ಕೂಡುತ್ತದೆ. ಸರ್ವಸಾಮ್ಯಕ್ಕೆ ಸವಿಶೇಷಾಭೇದವೇ ಪ್ರಯೋಜಕವು. ಆ ಸವಿಶೇಷಾ ಭೇದವು ಪ್ರಕೃತಿಗೆ ಇಲ್ಲ. ಆದಪ್ರಯುಕ್ತ ಸರ್ವಸಾಮ್ಯವಿಲ್ಲ. ಮತ್ತೆ ಕಿಂಚಿತ್ ಸಾಮ್ಯವೇ ಎಂದು ತಿಳಿಸುವುದಕ್ಕಾಗಿ ಪರಬ್ರಹ್ಮರೂಪಗಳಿಗೆ ಸಾಮ್ಯೋಕ್ತ್ಯಂಶವನ್ನುದಾಹರಿಸಿದ್ದು.) ಆ ಮೇಲೆ ಅಸಮರಾದ ಚೇತನರು ನಿರೂಪಿಸಲ್ಪಡುತ್ತಾರೆ. ಹಿರಣ್ಯಗರ್ಭನು, ಇಂದ್ರನು ರುದ್ರನು ದಕ್ಷಪ್ರಜಾಪತಿಯು ಬೃಹಸ್ಪತಿಯು, ಇತರರಾದ ಯಾವ ದೇವತೆಗಳೋ, ಗಂಧರ್ವರೋ ಮನುಷ್ಯರೋ ಪಿತೃಗಳೋ ದೇವದ್ವೇಷಿಗಳೋ ಯಾವುದಿದು ಚೇತನವೋ ಅಚೇತನವೋ ಇವುಗಳೆಲ್ಲವೂ ಅಸಮಗಳು. ಆ ಮೇಲೆ ಸಮಾಸಮವು ನಿರೂಪಿಸಲ್ಪಡುತ್ತದೆ. ಲಕ್ಷ್ಮೀದೇವಿಯಾದರೂ ಸಮಾಸಮಳು. ಈ ಲಕ್ಷ್ಮೀದೇವಿಯು ನಿತ್ಯಭೂತಳು, ಮುಪ್ಪು ಇಲ್ಲದಿದ್ದವಳು. ಪರಬ್ರಹ್ಮ ಅಧೀನಳು ಎಂದು ಮಾಧ್ಯಂದಿನಾಯನರ ಸಮಾದಿವಾದವು ಸ್ಪಷ್ಟವಾಗಿದೆ. (ಅಂದರೆ, ಬ್ರಹ್ಮಾದಿಜೀವರಿಗೇನೇ ಅಸಮತ್ವವನ್ನು ಹೇಳಿ ಪ್ರಕೃತಿಗೆ ಸಮಾಸಮತ್ವವು ಹೇಳಲ್ಪಡುತ್ತದೆ. ಆದಕಾರಣ ಸರ್ವೇ ಹ್ಯೇತೇ ಎನ್ನುವ ಶ್ರುತಿಯಲ್ಲಿಯೂ ಜೀವನಿಂದಲೇ ಸಾಮ್ಯವು ನಿಷೇಧಿಸಲ್ಪಡುತ್ತದೆ. ಚಿತ್ಪ್ರಕೃತಿಯಿಂದ ಅಲ್ಲ ಎಂದು ನಿಶ್ಚಯಿಸಲ್ಪಡುತ್ತದೆ. ॥ ೧೨. ॥ ॥ ೮ ॥

**ಪೀಠಿಕೆ** ॥ ಸ್ಪಷ್ಟ ಶ್ರುತಿಯಿಂದ ಮಾತ್ರ ಅಲ್ಲ. ಮತ್ತೆ ಸ್ಪಷ್ಟ ಸ್ಮೃತಿಯಿಂದಲೂ ಸಾಮಾನ್ಯ ಶ್ರುತಿಗೆ ಬಾಧವು ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ಸ್ಮೃತಿಯನ್ನುದಾಹರಿಸುತ್ತಾರೆ—

## ಸೂತ್ರ ॥ ಓಂ ಸ್ಮರ್ಯತೇ ಚ ಓಂ ॥ ೧೪ ॥

**ಸೂತ್ರಾರ್ಥ** ॥ ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಎನ್ನುವ ಸ್ಮೃತಿಯಲ್ಲಿ ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಪ್ರಕೃತಿಸ್ತು ಸಮಾಸಮಾ ॥ ಇತಿ (ಚ) ವಾರಾಹೇ ॥ ೧೪ ॥ ಅಧಿ.೬ ॥ ॥ ೯ ॥

**ಭಾಷ್ಯಾರ್ಥ** ॥ ಶ್ರೀಹರಿಯ ಮತ್ಸ್ಯಾದ್ಯವತಾರಗಳು ಸವಿಶೇಷಾಭೇದದಿಂದ ಸರ್ವಧರ್ಮಗಳಿಂದ ಸಮಗಳಾಗಿರುತ್ತವೆ. ಬ್ರಹ್ಮಾದಿಗಳು ಅಸಮರೆಂದು ಹೇಳಲ್ಪಡುತ್ತಾರೆ. ಚಿತ್ಪ್ರಕೃತಿಯು ಸಮಾಸಮಳು ಎಂದು ವಾರಾಹಪುರಾಣದಲ್ಲಿ ಹೇಳಿಯದೆ. ॥ ೧೨ ॥ ॥ ೯ ॥

## ಅಧಿಕರಣ ಸಾರಾಂಶ

ಚಿತ್ಪ್ರಕೃತಿಯು ಶ್ರೀಹರಿಯಲ್ಲಿ ಲಯವನ್ನು ಹೊಂದುತ್ತಾಳೋ ಇಲ್ಲವೋ. ಆದಕ್ಕಾಗಿ ಯಾರು ಯಾರ ಅಧೀನನೋ ಅವನು ಅಲ್ಲಿ ಲಯವನ್ನು ಹೊಂದುತ್ತಾನೆ ಎನ್ನುವ ಹಿಂದಿನ ಯುಕ್ತಿಯೂ ತೇಜಃ ಪರಸ್ಯಾಂ ಎನ್ನುವ ವಿಶೇಷ ಶ್ರುತಿಗಳೆರಡೂ ನಿರವಕಾಶವೋ ಆದಕ್ಕಾಗಿ **ಕಾಮಾತ್** ಎನ್ನುವಲ್ಲಿ ಹೇಳಿದ

ಅಸಂಸಾರಿತ್ವವು ಪ್ರಕೃತಿಗೆ ಅಯುಕ್ತವೋ ಯುಕ್ತವೋ ಅದಕ್ಕಾಗಿ ಲಕ್ಷ್ಮೀದೇವಿಗೆ ಮುಕ್ತತ್ವವು ಆಗಂತುಕವೋ ಸ್ವಾಭಾವಿಕವೋ, ಸ್ವಾಭಾವಿಕವಾದರೆ ಶ್ರೀಹರಿಯಿಂದ ಸರ್ವಸಾಮ್ಯವು ಬರುತ್ತದೋ ಇಲ್ಲವೋ ಎಂದು ಸಂದೇಹವು. ಭಗವದಧೀನತ್ವ ಪ್ರತಿಪಾದಕ ಶ್ರುತಿ ತೇಜಃ ಪರಸ್ಯಾಂ ಎನ್ನುವ ಶ್ರುತಿ ಎನ್ನುವ ಎರಡು ಶ್ರುತಿಗಳಿಂದ ಲಕ್ಷ್ಮೀದೇವಿಯೂ ಕೂಡ ಶ್ರೀಹರಿಯಲ್ಲಿ ಲಯವನ್ನು ಹೊಂದುತ್ತಾಳೆ. ಇಲ್ಲವಾದರೆ ವಾಗಾದಿಗಳೂ ಮನಸ್ಸು ಮೊದಲಾದವುಗಳಲ್ಲಿ ಹೇಳಿದ ಲಯವೂ ಕೂಡದೆಹೋಗುವುದು. ಸಂಸಾರಿಯಾಗಿರುವುದರಿಂದ ಲಯವಿಲ್ಲವೆನ್ನುವುದೇ ಅನುಪಪನ್ನವು. ನಿತ್ಯಮುಕ್ತತ್ವವಿದ್ದುದರಿಂದ ಸಂಸಾರಿತ್ವವು ಕೂಡಲಾರದು ಎನ್ನುವುದು ಅನುಪಪನ್ನವು. ನಿತ್ಯಮುಕ್ತತ್ವವು ಆಗಂತುಕವು. ನಿತ್ಯಮುಕ್ತತ್ವವು ಸ್ವಾಭಾವಿಕವಾದರೆ, ಲಕ್ಷ್ಮೀದೇವಿಗೆ ಶ್ರೀಹರಿಯಿಂದ ಸರ್ವಸಾಮ್ಯವೂ ಬರಬೇಕಾಗುವುದು. ಸರ್ವದಾ ಸಂಸಾರರಹಿತಳು ಎಂದಾದರೆ, ಶ್ರೀಹರಿಯ ಗುಣಾಂತರದಿಂದಲೂ ಸರ್ವಸಾಮ್ಯವು ಬರುವುದು, ಎಂದು ಪೂರ್ವಪಕ್ಷವು ಬಂದರೆ, ದ್ವೌ ವಾವ ಸ್ವತ್ಮನುಪಕ್ರಮೌ ಎನ್ನುವ ಶ್ರುತಿಯಲ್ಲಿ ಶ್ರೀಹರಿಯಂತೆ ಸರ್ವಗತತ್ವ ನಿತ್ಯತ್ವ ಯುಕ್ತಿಗಳಿಂದ ಸರ್ವದಾ ಸಂಸಾರಾಭಾವವೂ ತನ್ನಿಮಿತ್ತಕ ನಿತ್ಯಮುಕ್ತತ್ವವನ್ನು ಹೇಳಿದ್ದರಿಂದ ಆ ಮುಕ್ತತ್ವವು ಶ್ರೀಹರಿಯ ಉಪಾಸನದಿಂದ ಸಾಧ್ಯವಾಗದೆ ಇದ್ದುದರಿಂದ ಸ್ವಾಭಾವಿಕವೇ ಆದುದರಿಂದ ಅಂತಹ ನಿತ್ಯಮುಕ್ತತ್ವವುಳ್ಳ ಲಕ್ಷ್ಮೀದೇವಿಗೆ ಶ್ರೀಪರಮಾತ್ಮನಂತೆಯೇ ದೇಹತ್ಯಾಗರೂಪವಾದ ಲಯವು ಕೂಡದಿರುವುದರಿಂದ ಲಕ್ಷ್ಮೀದೇವಿಯು ಲಯವನ್ನು ಹೊಂದುವುದಿಲ್ಲ. **ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ** ಎನ್ನುವ ವಚನದಿಂದ ತೇಜಃ ಎನ್ನುವ ಶ್ರುತಿಯು ಅತಿಸಾಮೀಪ್ಯಾರ್ಥವುಳ್ಳದ್ದು. ಪ್ರಕೃತಿಗೆ ಶ್ರೀಹರಿಯಿಂದ ಸರ್ವಸಾಮ್ಯವು ಬರಬೇಕಾಗುವುದು ಎನ್ನುವುದು ತದಪೀತೇಃ, ಸೂಕ್ಷ್ಮಂ, ಅಸ್ಯೈವ ಚ ಎನ್ನುವ ಮೂರು ಸೂತ್ರಗಳಲ್ಲಿ ಹೇಳಲ್ಪಟ್ಟ ಮೋಚಕತ್ವ ಅಮೋಚಕತ್ವ, ಪರಮಸುಖಿತ್ವ, ಸುಖವತ್ವ, ಜ್ಞಾನ ಆನಂದ ಮೊದಲಾದ ಗುಣಪರಿಮಾಣಾಧಿಕ್ಯ, ನ್ಯೂನತ್ವ, ಊಷ್ಮಾವತ್ವ, ಅನೂಷ್ಮಾವತ್ವ ಹೇತುಗಳಿಂದ ನಿರಸ್ತವಾಗಿದೆ. ಸರ್ವಸಾಮ್ಯವು ಇಲ್ಲವಾದರೆ ಬ್ರಹ್ಮಾದಿಗಳಂತೆ ನಿತ್ಯ ಮುಕ್ತತ್ವಾದಿಗಳಿಂದಲೂ ಸಾಮ್ಯವು ಇಲ್ಲದೆ ಹೋಗುವುದು ಎನ್ನುವ ಚೋದ್ಯವು ನೋಪಪದ್ಯೇನ ಎನ್ನುವ ಸೂತ್ರದಲ್ಲಿ ಶ್ರೀಹರಿಯ ವಿಶೇಷಗುಣಗಳನ್ನು ಬಾಧಿಸದೇನೇ ದೇಶ ಕಾಲ ವ್ಯಾಪ್ತ್ಯಾದಿಳಿಂದ ಕಿಂಚಿತ್ಸಾಮ್ಯವೇ ಪ್ರಮಾಣ ಸಿದ್ಧವಾಗಿದೆ ಎನ್ನುವ ಉಕ್ತಿಯಿಂದ ನಿರಾಕರಿಸಿದ್ದರಿಂದಲೂ ಅಸಮೋ ವಾ ಏಷಃ ಎನ್ನುವ ಶ್ರುತಿಯಲ್ಲಿ ಶ್ರೀಹರಿಗೆ ಜೀವನಿಂದಲೂ ಸಾಮ್ಯವನ್ನು ನಿಷೇಧಿಸಿದ್ದರಿಂದ ಲಕ್ಷ್ಮೀದೇವಿಗೆ ಈಶ್ವರನಿಂದ ದೇಶವ್ಯಾಪ್ತಿ ಕಾಲ ವ್ಯಾಪ್ತಿಯಿಂದ ಸಾಮ್ಯವು ಕೂಡುತ್ತದೆ. ॥ ಅಧಿ.೬ ॥

**ಸಮನಾಧಿಕರಣವು ಸಮಾಪ್ತವಾಯಿತು.**

## ೭ ಪರಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಚತುರ್ಮುಖನಿಂದ ಇತರರಾದ ದೇವತೆಗಳಿಗೆ ಮೋಕ್ಷದಲ್ಲಿ ಭಗವತ್ಪ್ರಾಪ್ತಿಯನ್ನು ಸಮರ್ಥಿಸುತ್ತಾರೆ. ದೇವತೆಗಳಿಗೆ ಶ್ರೀಹರಿಯಲ್ಲಿ ಲಯವು ಕೂಡುವುದಿಲ್ಲ.

ಪ್ರತಿಬಿಂಬಕ್ಕೇನೇ ಬಿಂಬದಲ್ಲಿ ಲಯವು ನಿಯತವು. ದೇವತೆಗಳಿಗೆ ಮುಖ್ಯಪ್ರಾಣನು ಬಿಂಬಭೂತನು. ಮುಖ್ಯಪ್ರಾಣನೊಬ್ಬನೇ ಪರಮಾತ್ಮನಿಗೆ ಪ್ರತಿಬಿಂಬಭೂತನು. **ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯಾಃ ಕಲಾಃ ಕ್ರಮಾತ್** ಎಂಬ ಪ್ರಮಾಣದಿಂದ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತಾನಿ ಪರೇ ತಥಾ ಹ್ಯಾಹ ಓಂ ॥ ೧೫ ॥

**ಸೂತ್ರಾರ್ಥ ॥ ಭೂತೇಷು ಲೀಯಂತೇ** ಎಂದು ಹೇಳಿದ ಸಮಸ್ತ ದೇವತೆಗಳು ಶ್ರುತ್ಯಂತರದಲ್ಲಿ ಹೇಳಿದ ದ್ವಾರಾಂತರ ಪ್ರವೇಶಪೂರ್ವಕವಾಗಿ ವಿರಿಂಚದ್ವಾರಾ ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾರೆ ವಿರಿಂಚನೇ ಮೊದಲಾದ ತಂತಮ್ಮ ಬಿಂಬದಲ್ಲಿಯೇ ಮಾತ್ರವೇ ಅಲ್ಲ ಏಕೆಂದರೆ—**ಸರ್ವೇ ದೇವಾಃ ಪ್ರಾಣಮಾವಿಶ್ಯ** ಎನ್ನುವ ಶ್ರುತಿಯು ಹಾಗೆ ಪ್ರತಿಪಾದಿಸುತ್ತದೆ.

**ಭಾಷ್ಯ ॥ (೧) ಪ್ರಾಣದ್ವಾರೇಣ ಸರ್ವಾಣಿ, ದೈವತಾನಿ (ದೈವಾನಿ) ಪರಮಾತ್ಮನಿ ವಿಲೀಯಂತೇ । (೨) ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ ಪರಮೇ ಯಾಂತಚಿಂತ್ಯೇ । ಇತಿ (ಹಿ) ಕೌಷಾರವಶ್ರುತಿಃ ॥ ೧೫ ॥ ಅಧಿ.೭ ॥೧॥**

**ಭಾಷ್ಯಾರ್ಥ ॥** (೧) (ದೇವತೆಗಳೆಲ್ಲರೂ ಮುಖ್ಯಪ್ರಾಣನಿಗೆ ಪ್ರತಿಬಿಂಬ ಭೂತರಾದಾಗ್ಯೂ ಸಾಮಾನ್ಯವಾಗಿ ಎಲ್ಲಾ ಜೀವರಿಗೂ ಶ್ರೀಹರಿಯ ಪ್ರತಿಬಿಂಬತ್ವವೂ ಇದ್ದುದರಿಂದ) ಮುಖ್ಯಪ್ರಾಣದ್ವಾರಾ ಭೂತಾಭಿಮಾನಿಗಳಾದ ದೇವತೆಗಳೇ ಮೊದಲಾದ ಎಲ್ಲಾ ದೇವತೆಗಳೂ ಪರಮಾತ್ಮನಲ್ಲಿ ಪ್ರವೇಶಮಾಡುತ್ತಾರೆ. ಸರ್ವೇ ದೇವಾಃ ಎನ್ನುವ ಶ್ರುತಿಯು ಹಾಗೆ ಹೇಳುತ್ತದೆ. (೨) ಚತುರ್ಮುಖನಿಂದ ಇತರರಾದ ಎಲ್ಲಾ ದೇವತೆಗಳಿಗೂ ಚತುರ್ಮುಖ ಬ್ರಹ್ಮನನ್ನು ಪ್ರವೇಶಮಾಡಿ ಕರ್ಮದಿಂದ ಬಿಡುಗಡೆಯನ್ನು ಹೊಂದಿದವರಾಗಿ ಹೀಗೆಯೇ ಇದ್ದಾನೆಂದು ಸಂಪೂರ್ಣವಾಗಿ ಧ್ಯಾನಿಸತಕ್ಕ ಅಶಕ್ಯನಾದ ಸರ್ವೋತ್ತಮನಾದ ಶ್ರೀಹರಿಯಲ್ಲಿ ಪ್ರವೇಶಮಾಡುತ್ತಾರೆ, ಎಂದು ಕೌಷಾರವಶ್ರುತಿಯು ಪ್ರತಿಪಾದಿಸುತ್ತದೆ. ॥ ೧೫ ॥

## ಅಧಿಕರಣ ಸಾರಾಂಶ

**ಭೂತೇಷು ದೇವಾ ವಿಲೀಯಂತೇ** ಎಂದು ಹೇಳಿದ ದೇವತೆಗಳು ಶ್ರೀಹರಿಯಲ್ಲಿ ಲಯವನ್ನು ಹೊಂದುವುದಿಲ್ಲವೋ ಲಯವನ್ನು ಹೊಂದುತ್ತಾರೋ ಅದಕ್ಕಾಗಿ ಈ ದೇವತೆಗಳು ಪ್ರಾಣಪದದಿಂದ ಉಕ್ತನಾದ ಚತುರ್ಮುಖನಿಗೆ ಪ್ರತಿಬಿಂಬರೋ ಅಥವಾ ಶ್ರೀಹರಿಗೆ ಪ್ರತಿಬಿಂಬರೋ ಅವರ ಅಧೀನರಾಗಿದ್ದು ಅವರಿಗೆ ಸದೃಶತ್ವರೂಪವಾದ ಪ್ರತಿಬಿಂಬವು ತನಗೆ ನಿಯಾಮಕವಾದ ಬಿಂಬದಲ್ಲಿ ಲಯವನ್ನು ಹೊಂದುತ್ತದೆ. **ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯಾಃ** ಎನ್ನುವ ವಚನದಿಂದ ದೇವತೆಗಳು ಮುಖ್ಯಪ್ರಾಣನಿಗೆ ಪ್ರತಿಬಿಂಬಭೂತರು. ಮುಖ್ಯಪ್ರಾಣನೊಬ್ಬನೇ ಶ್ರೀಹರಿಗೆ ಪ್ರತಿಬಿಂಬಭೂತನು. ಆತನಿಗೊಬ್ಬನಿಗೇ ಶ್ರೀಹರಿಯಲ್ಲಿ ಪ್ರವೇಶರೂಪವಾದ ಮೋಕ್ಷವು. ಇತರರಾದ ಜ್ಞಾನಿಗಳಿಗೆ ಅಲ್ಲ. ಆದಕಾರಣ **ಅನಿಯಮಃ ಸರ್ವೇಷಾಂ** ಎಂದು ಹೇಳಿದ್ದು ಅಯುಕ್ತವು. ಎಂದು

ಪೂರ್ವಪಕ್ಷವು ಬಂದರೆ ದೇವತೆಗಳು ಪ್ರಾಣನಿಗೆ ಪ್ರತಿಬಿಂಬ ಭೂತರು, ಮುಖ್ಯಪ್ರಾಣನು ದೇವತೆಗಳಿಗೆ ಬಿಂಬಭೂತನಾದಾಗ್ಯೂ **ಸರ್ವೇ ದೇವಾಃ ಪ್ರಾಣಮಾವಿಶ್ಯ** ಎನ್ನುವ ಶ್ರುತಿಯಿಂದ ಪ್ರಾಣದ್ವಾರಾ ಪರಮಾತ್ಮನಲ್ಲಿ ದೇವತೆಗಳಿಗೆ ಪ್ರವೇಶವು ಕೂಡುವುದು. ಶ್ರೀಹರಿಗೆ ಪ್ರತಿಬಿಂಬ ಭೂತನಾದ ವಿರಿಂಚನಲ್ಲಿ ಪ್ರವೇಶ ಮಾಡದಿರುವ ದೇವತೆಗಳಿಗೆ ವಿರಿಂಚನಿಗೆ ಈಶ್ವರನಲ್ಲಿ ಪ್ರವೇಶವಾಗುವಾಗ ಪರಮಾತ್ಮನಲ್ಲಿ ಪ್ರವೇಶವು ತಪ್ಪಲಾರದು. ಆಭಾಸ ಏವ ಚ ಎನ್ನುವ ಸೂತ್ರದಲ್ಲಿ ಹೇಳಿದ ಪ್ರಕಾರ ಸಾಮಾನ್ಯವಾಗಿ ಎಲ್ಲಾ ಜೀವರೂ ಈಶ್ವರನಿಗೆ ಪ್ರತಿಬಿಂಬ ಭೂತರಾದುದರಿಂದಲೂ ಅಲ್ಲಿ ಪ್ರವೇಶರೂಪವಾದ ಮೋಕ್ಷವೇ ಇದೆ. ಆದಕಾರಣ ಅನಿಯಮಃ ಎಂದು ಹೇಳಿದ್ದು ಯುಕ್ತವು. ॥ ಅಧಿ.೭ ॥

**ಪರಾಧಿಕರಣವು ಸಮಾಪ್ತವಾಯಿತು.**

## ೮ ಅವಿಭಾಗಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ದೇವಾದಿ ಮುಕ್ತರಿಗೆ ಈಶ್ವರಾಧೀನತ್ವವನ್ನು ಸಮರ್ಥಿಸುತ್ತಾರೆ. ದೇವತೆಗಳು ಮುಕ್ತರಾದ ಪ್ರಯುಕ್ತವೇ ಮುಕ್ತಿಯಲ್ಲಿ ಸ್ವತಂತ್ರರಾಗಿಯೇ ಇರುತ್ತಾರೆ. ದೇವತೆಗಳಿಗೆ ಅಸ್ವಾತಂತ್ರ್ಯವಿದ್ದರೆ ಸಂಸಾರದಂತೆ ದುಃಖಾದಿಗಳು ಬರಬೇಕಾಗುವವು. ಏತೇ ದೇವಾಃ ಎಂದು ಸತ್ಯ ಕಾಮತ್ವಾದಿ ಪ್ರತಿಪಾದಕ ಶ್ರುತಿಯೂ ಆದೆ. ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ಅವಿಭಾಗೋ ವಚನಾತ್ ಓಂ ॥ ೧೬ ॥

ಸೂತ್ರಾರ್ಥ ॥ ಪ್ರಸ್ತುತ ದೇವಾದಿ ಮುಕ್ತರ ಸತ್ಯಕಾಮತ್ವಾದಿಗಳಿಗೆ ಈಶ್ವರೇಚ್ಛೆಯಿಂದ ತಾದಾತ್ಮ್ಯವು. ಅಂದರೆ ಆ ಸತ್ಯಕಾಮತ್ವಾದಿಯು ಈಶ್ವರೇಚ್ಛಾನುಸಾರಿಯು, ಈಶ್ವರೇಚ್ಛಾಧೀನವು. ಸರ್ವಥಾ ಅದಕ್ಕೆ ಸ್ವಾತಂತ್ರ್ಯವಿಲ್ಲ. ಕಾಮೇನ ಮೇ ಕಾಮ ಆಗಾತ್ ಎನ್ನುವ ವಚನದಿಂದ.

**ಭಾಷ್ಯ ॥ (೧) ಏತೇ ದೇವಾ ಏತಮಾತ್ಮಾನಮನುವಿಶ್ಯ ಸತ್ಯಾಃ ಸತ್ಯಕಾಮಾಃ ಸತ್ಯಸಂಕಲ್ಪಾ ಯಥಾನಿಕಾಮಮಂತರ್ಬಹಿಃ ಪರಿಚರಂತಿ । ಇತಿ ಗೌಪವನಶ್ರುತಿಃ (೨) ತತ್ಪರಮೇಶ್ವರಸ್ಯ ಕಾಮಾದ್ಯವಿಭಾಗೇನೈವ ತೇಷಾಂ ಸತ್ಯಕಾಮತ್ವಂ ॥ ೧ ॥**

ಭಾಷ್ಯಾರ್ಥ ॥ (೧) ಪ್ರಕೃತರಾದ ಸಾಯುಜ್ಯವನ್ನು ಹೊಂದಿರತಕ್ಕ ದೇವತೆಗಳು ಈ ಪರಮಾತ್ಮನನ್ನು ಪ್ರವೇಶಮಾಡಿ ನಿತ್ಯರಾಗಿ ಸತ್ಯಾಭೀಷ್ಟವುಳ್ಳವರಾಗಿ ಅಬಾಧಿತ ಮಾನಸಿಕ ಸಂಕಲ್ಪವುಳ್ಳವರಾಗಿ ಯಥೇಚ್ಛವಾಗಿ ಶ್ರೀಹರಿಯ ದೇಹದೊಳಗೂ ಹೊರಗೂ ಸಂಚರಿಸುತ್ತಾರೆ, ಎಂದು ಗೌಪವನ ಶ್ರುತಿಯು, (ಯಾವ ಸತ್ಯಕಾಮತ್ವವನ್ನು ಹೇಳುತ್ತದೋ), (೨) ಆ ಮುಕ್ತರ ಸತ್ಯಕಾಮತ್ವವು ಶ್ರೀಹರಿಯ ಇಚ್ಛಾಸಂಕಲ್ಪಾನುಸಾರದಿಂದಲೇ (ಶ್ರೀಹರಿಯ ಇಚ್ಛಾ ಸಂಕಲ್ಪಗಳನ್ನು ಅನುಸರಿಸದೆ ಅಲ್ಲ) ಆದಕಾರಣ

ಶ್ರೀಹರಿಯ ಇಚ್ಛಾನಿಮಿತ್ತವಾಗಿ ಮುಕ್ತರ ಇಚ್ಛೆಯಾದ ಮೇಲೆಯೇ ಮನಸ್ಸಿನಲ್ಲಿ ಸಂಕಲ್ಪಿತವಾದದ್ದು ಪ್ರಾಪ್ತವಾಗುವುದರಿಂದ ಮುಕ್ತರು ಅಸ್ವತಂತ್ರರಾದಾಗ್ಯೂ ಅವರಿಗೆ ಸತ್ಯಕಾಮತ್ವ ಅದುಃಖತ್ವಾದಿಗಳು ಉಪಪನ್ನಗಳಾಗುತ್ತವೆ.

**ಪೀಠಿಕೆ ॥** ಸತ್ಯಕಾಮತ್ವ ಶ್ರುತಿಗೆ ಈಶ್ವರೇಚ್ಛಾನುಸಾರಿ ಕಾಮತ್ವರೂಪವಾದ ಅಮುಖ್ಯಾರ್ಥತ್ವ ಕಲ್ಪನವು ಯಾವುದರಿಂದ ಎಂದರೆ—

**ಭಾಷ್ಯ ॥ (೧) ಕಾಮೇನ ಮ ಕಾಮ ಆಗಾದ್ಧೃದಯಾದ್ಧೃದಯಂ ಮೃತ್ಯೋಃ (ತೈ.ಆ.೩.೧೫.೪.) ಇತಿ ವಚನಾತ್ । (೨) ಮುಕ್ತಾನಾಂ ಸತ್ಯಕಾಮತ್ವಂ ಸಾಮರ್ಥ್ಯಂ ಚ ಪರಸ್ಯ ತು । ಕಾಮಾನುಕೂಲಕಾಮತ್ವಂ ನಾನ್ಯತ್ತೇಷಾಂ ವಿಧೀಯತೇ ॥ ೧೬ ॥ ಇತಿ ಚ ಬ್ರಾಹ್ಮೇ ॥ ಅಧಿ. ೮ ॥ ॥ ೨ ॥**

**ಭಾಷ್ಯಾರ್ಥ ॥** (೧) ಸರ್ವಸಂಹಾರಕನಾದ ವಿಷ್ಣುವಿನಲ್ಲಿ ಇಚ್ಛೆಯಿಂದ ಮುಕ್ತಿಯಲ್ಲಿ ನನಗೆ ಇಷ್ಟವಾದುದು ಬರಲಿ. (ಈಶ್ವರನ ಇಚ್ಛೆಯ ಅನಂತರದಲ್ಲಿ ಪ್ರಾಪ್ತವಾದ ಪ್ರಯುಕ್ತ ಈಶ್ವರನಿಂದ ಬಂದದ್ದು ಎನ್ನಿಸುತ್ತದೆ.) (ಈಶ್ವರೇಚ್ಛೆಯು ಹೇಗೆ ಕಾರಣವು ಎಂದರೆ) ಮಾರಕನಾದ ಶ್ರೀಹರಿಯು ಇಚ್ಛೆಯಿಂದ ನನ್ನ ಇಚ್ಛೆಯು ಆಗಲಿ. (ಅಂದರೆ ನನ್ನ ಇಚ್ಛೆಯು ಭಗವಂತನ ಇಚ್ಛೆಯನ್ನು ಅನುಸರಿಸಿಕೊಂಡಿರುವುದು) ಎನ್ನುವ ವಚನದಿಂದ ನನಗೆ ಇಷ್ಟವಾದುದು ಬರಲಿಕ್ಕೆ ಭಗವಂತನ ಇಚ್ಛೆಯು ಕಾರಣವು (೨) (ಈ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ) ಮುಕ್ತರ ಸತ್ಯಕಾಮತ್ವವೂ ಸಾಮರ್ಥ್ಯವೂ ಕೂಡ ಈಶ್ವರನ ಅಧೀನವು. ಮುಕ್ತರ ಸತ್ಯಕಾಮತ್ವವು ಶ್ರೀಹರಿಯ ಇಚ್ಛಾನುಸಾರಿಯಾದ ಇಚ್ಛೆಯೇ, ಇತರವಾದುದು ವಿಧಿಸಲ್ಪಡುವುದಿಲ್ಲ ಎಂದು ಬ್ರಹ್ಮಪುರಾಣದಲ್ಲಿ ಹೇಳಿಯದೆ. ॥ ೧೬ ॥ ॥ ೨ ॥

## ಅಧಿಕರಣ ಸಾರಾಂಶ

ದೇವತೆಗಳು ಮುಕ್ತಿಯಲ್ಲಿ ಸ್ವತಂತ್ರರೋ ಈಶ್ವರಾಧೀನರೋ ಅದಕ್ಕಾಗಿ ಇತರಾಧೀನತ್ವವಿದ್ದರೆ ಸಂಸಾರದಲ್ಲಿರತಕ್ಕ ದುಃಖಾದಿಗಳೂ ಬರಬೇಕಾಗುವುವು. ಶ್ರುತಿಯಲ್ಲಿ ಹೇಳಿದ ಸತ್ಯಕಾಮತ್ವಾದಿಗಳೂ ಕೂಡದೆ ಹೋಗಬೇಕಾಗುವುವು ಎಂಬುದು ಇದೆಯೋ ಇಲ್ಲವೋ. ಮುಕ್ತರೂ ಪರಾಧೀನರಾದರೆ ಸಂಸಾರದುಃಖಾದಿಗಳೂ ಬರಬೇಕಾಗುವುದರಿಂದ ಏತೇ ದೇವಾಃ ಏತಮಾತ್ಮಾನಮನುವಿಶ್ಯ ಇತ್ಯಾದಿ ಶ್ರುತ್ಯುಕ್ತವಾದ ಸತ್ಯಕಾಮತ್ವಾದಿಗಳು ಕೂಡದೆ ಇರುವುದರಿಂದ ಮುಕ್ತರು ಪರಾಧೀನರಲ್ಲ. ಆದಪ್ರಯುಕ್ತ ಹಿಂದೆ ಹೇಳಿದ ಈಶ್ವರಾಧೀನತ್ವಾದಿರೂಪವಾದ ಪ್ರತಿಜ್ಞಾತತ್ವವು ಅಯುಕ್ತವು ಎಂದು ಪೂರ್ವಪಕ್ಷವು ಪ್ರಾಪ್ತವಾದರೆ, ಕಾಮೇನ ಮೇ ಕಾಮ ಆಗಾತ್, ಮುಕ್ತಾನಾಂ ಸತ್ಯಕಾಮತ್ವಂ ಇತ್ಯಾದಿ ಶ್ರುತಿಸ್ಮೃತಿಗಳಿಂದ ಶ್ರುತ್ಯುಕ್ತಗಳಾದ ಸತ್ಯಕಾಮತ್ವಾದಿಗಳು ಈಶ್ವರೇಚ್ಛಾನುಸಾರಿಯು ಎಂದು ಅಂಗೀಕರಿಸಬೇಕಾಗಿರುವುದರಿಂದ ಅವುಗಳು ಈಶ್ವರೇಚ್ಛಾನುಸಾರಿಯಾದುದರಿಂದಲೇ ದುಃಖಾದಿಗಳ ಪ್ರಸಕ್ತಿಯೂ ಇಲ್ಲ. ಇಚ್ಛಿಸಿದ್ದು ಸಿಗದಿರುವುದರಿಂದಲೇ ದುಃಖಾದಿಗಳು ಉಂಟಾಗುವುದಿರಂದ ಶ್ರೀಹರಿಯ

ಇಚ್ಛಾನುಸಾರವಾಗಿಯೇ ಇಚ್ಛಿಸತಕ್ಕ ಮುಕ್ತರಿಗೆ ಕಾಮಿತ ಅಲಾಭವು ಇಲ್ಲದಿರುವುದರಿಂದ ಮುಕ್ತಿಯಲ್ಲಿಯೂ ಕೂಡ ಜ್ಞಾನಿಗಳು ಈಶ್ವರನ ಅಧೀನರೇ ಆಗಿರುತ್ತಾರೆ. ॥ ಅಧಿ. ೮ ॥

ಅವಿಭಾಗಾಧಿಕರಣವು ಸಮಾಪ್ತವಾಯಿತು.

## ೯ ತದೋಕೋಽಧಿಕರಣವು

ಪೀಠಿಕೆ ॥ ದೇವತೆಗಳಿಗೆ ಮೋಕ್ಷವನ್ನು ಹೇಳಿ ಈ ಅಧಿಕರಣದಲ್ಲಿ ಜ್ಞಾನಿಗಳಾದ ಮನುಷ್ಯರಿಗೆ ಮುಕ್ತಿಗಾಗಿ ದೇಹೋತ್ಕ್ರಮಣವು ಅಜ್ಞರ ಮರಣಕ್ಕಿಂತ ವಿಲಕ್ಷಣವಾಗಿದೆ ಎಂದು ಸಮರ್ಥಿಸುತ್ತಾರೆ. ಜ್ಞಾನಿಗಳಿಗೆ ದೇಹದಿಂದ ಉತ್ಕ್ರಮಣವು ಅಜ್ಞರ ಮರಣದಂತೆಯೇ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ॥ ೧೭ ॥

ಸೂತ್ರಾರ್ಥ ॥ ಉತ್ಕ್ರಾಂತ್ಯ ವ್ಯವಹಿತ ಪೂರ್ವಕಾಲದಲ್ಲಿ ಜ್ಞಾನಿಯಾದವನಿಗೆ ಹೃದಯಾಗ್ರದಲ್ಲಿ ಪ್ರಕಾಶವು ಪರಮಾತ್ಮನಲ್ಲಿ ಅನುಗ್ರಹದಿಂದ ಆಗುತ್ತದೆ. ಜ್ಞಾನಿಯು ಹೃದಯಾಗ್ರ ಪ್ರಕಾಶದಿಂದ ಪ್ರಕಾಶಿಸಲ್ಪಟ್ಟ ಮಾರ್ಗ ಪುರೋಭಾಗವುಳ್ಳವನಾಗಿ ಆತನ ಪ್ರಾರಬ್ಧಕರ್ಮವಿದ್ದರೂ ಈಶ್ವರನ ಅಪರೋಕ್ಷಜ್ಞಾನಶಕ್ತಿಯಿಂದಲೇ (ಸ್ವೋದಯಾತ್ಫಲದಂ ಜ್ಞಾನಂ ಇತ್ಯಾದಿ ಪ್ರಮಾಣಗಳಿಂದ ಜ್ಞಾನವು ತನ್ನ ಉತ್ಪತ್ತಿಯನ್ನು ಆರಂಭಿಸಿ ಫಲಪ್ರದವು) (ವಿದ್ಯಾಸಾಮರ್ಥ್ಯದಿಂದ ಮಾತ್ರವಲ್ಲ ಮತ್ತೆ) ವಿದ್ಯೆಗೆ ಅಂಗಭೂತವಾದ (ಇತಿಕರ್ತವ್ಯತಾರೂಪವಾದ) ತನ್ನ ಹೃದಯವನ್ನು ಆರಂಭಿಸಿ ಬ್ರಹ್ಮಪ್ರಾಪ್ತಿ ಪರ್ಯಂತವಾದ ಗಮ್ಯ ಮಾರ್ಗದ ಸ್ಮರಣದ ಸಾಹಿತ್ಯದಿಂದಲೂ (ಆ ಸ್ಮೃತಿಯಾದರೂ ತಮ್ಮ ಕರ್ಮದ ವಿರಾಮಕಾಲದಲ್ಲಿಯೇ ಬರುವುದು, ಮೃತ್ಯಂತರದಲ್ಲಿ ಬರುವುದಿಲ್ಲ ಜ್ಞಾನಿನಾ ಕರ್ಮಯುಕ್ತಾನಾಂ ಇತ್ಯಾದಿ ಪ್ರಮಾಣಗಳಿಂದ) ಹೃದಯದಲ್ಲಿರತಕ್ಕ ವಿದ್ಯಾಪ್ರಸನ್ನನಾದ ಶ್ರೀಹರಿಯಿಂದ ಅನುಗ್ರಹಿಸಲ್ಪಟ್ಟವ ನಾಗಿ ಹೃದಯವನ್ನು ಆಶ್ರಯಿಸಿಕೊಂಡಿರತಕ್ಕ ನೂರೂ (೧೦೦) ನಾಡಿಗಳಿಗಿಂತ ಅಧಿಕವಾದ ಪ್ರಧಾನವಾದ ಸುಷುಮ್ನಾ ನಾಡಿಯಿಂದ ದೇಹದಿಂದ ಹೊರಟುಹೋಗುತ್ತಾನೆ. ಏವಂಚ ಜ್ಞಾನಿಗಳ ಉತ್ಕ್ರಮಣದಲ್ಲಿ ಹೃದಯಾಗ್ರದಲ್ಲಿ ಪ್ರಕಾಶಾದಿಗಳು ಇದ್ದಪ್ರಯುಕ್ತವೂ ಅಜ್ಞರ ಮರಣದಲ್ಲಿ ಹೃದಯಾಗ್ರ ಪ್ರಕಾಶಾದಿಗಳು ಇಲ್ಲದಿರುವುದರಿಂದಲೂ ಜ್ಞಾನಿಮರಣಕ್ಕೆ ಅಜ್ಞಾನಿಗಳ ಮರಣದಿಂದ ವೈಲಕ್ಷಣ್ಯವು ಸಿದ್ಧವಾಯಿತು.

ಭಾಷ್ಯ ॥ (೧) ಉತ್ಕ್ರಾಂತಿಕಾಲೇ ಹೃದಯಸ್ಯಾಗ್ರೇ(ಗ್ರ) ಜ್ವಲನಂ ಭವತಿ। (೨) ತಸ್ಯ ಹೈತಸ್ಯ

**ಹೃದಯಸ್ಯಾಗ್ರಂ ಪ್ರದ್ಯೋತತೇ (ಬೃ.೬.೪.೨.) ಇತಿ ಶ್ರುತೇಃ । (೩) ತತ್ಪ್ರಕಾಶಿತದ್ವಾರೋ ನಿಷ್ಕ್ರಾಮತಿ (೪) ವಿದ್ಯಾಸಾಮರ್ಥ್ಯಾತ್ ॥ ೧ ॥**

**ಭಾಷ್ಯಾರ್ಥ ॥** (೧) ಜ್ಞಾನಿಗಳಿಗೆ ದೇಹದಿಂದ ಉತ್ಕ್ರಮಣವಾಗುವ ಕಾಲದಲ್ಲಿ ಹೃದಯಾಗ್ರದಲ್ಲಿ ಪ್ರಕಾಶವಾಗುತ್ತದೆ. (ಅಂದರೆ ಹೃದಯಾಗ್ರವು ಪ್ರಕಾಶಿಸುತ್ತದೆ.) (ಅಜ್ಞರ ಹೃದಯಾಗ್ರವು ಪ್ರಕಾಶಿಸುವುದಿಲ್ಲ) (ಆದಕಾರಣ ಜ್ಞಾನಿಗಳ ಮರಣವು ಅಜ್ಞರ ಮರಣಕ್ಕಿಂತ ವಿಲಕ್ಷಣವೇ.) (೨) (ಆ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ದೇಹದಿಂದ ಉತ್ಕ್ರಮಣವನ್ನು ಹೊಂದುವ ಈ ಜ್ಞಾನಿಯ ಹೃದಯದ ಅಗ್ರಭಾಗವು ಪ್ರಕಾಶಿಸುತ್ತದೆ. ಪ್ರಸಿದ್ಧವು, ಎನ್ನುವ ಶ್ರುತಿಯಿಂದ. (೩) (ಹೃದಯಾಗ್ರದಲ್ಲಿ ಪ್ರಕಾಶವಿದ್ದರೂ ಜ್ಞಾನ್ಯಜ್ಞಾನಿ ಮರಣಗಳಿಗೆ ಏನು ವಿಶೇಷವು ಎಂದರೆ) ಜ್ಞಾನಿಯು ಆ ಪ್ರಕಾಶದಿಂದ ಪ್ರಕಾಶಿತವಾದ ನಾಡೀದ್ವಾರವುಳ್ಳವನಾಗಿ ದೇಹದಿಂದ ಹೊರಟು ಹೋಗುತ್ತಾನೆ. (ಹಾಗೆ ಅಜ್ಞಾನಿಯು ಅಲ್ಲ, ಆದಕಾರಣ ವಿಶೇಷವದೆ.) (೪) (ಪ್ರಾರಬ್ಧ ಕರ್ಮವುಳ್ಳ ಜ್ಞಾನಿಗೂ ಈ ವಿಶೇಷವು ಹೇಗೆಂದರೆ) ಭಗವಂತನ ಸಾಕ್ಷಾತ್ಕಾರ ಸಾಮರ್ಥ್ಯದಿಂದ, (ತಥಾಚ ಪ್ರಾರಬ್ಧಕರ್ಮವಿದ್ದರೂ ಜ್ಞಾನಿಗೆ ಜ್ಞಾನಸಾಮರ್ಥ್ಯದಿಂದ ವಿಶಿಷ್ಟೋತ್ಕ್ರಾಂತಿಯು ಯುಕ್ತವಾಗುತ್ತದೆ. ಜ್ಞಾನವು ತನ್ನ ಉತ್ಪತ್ತಿಯನ್ನು ಆರಂಭಿಸಿಯೇ ಫಲವನ್ನು ಕೊಡತಕ್ಕುದು.)

**ಪೀಠಿಕೆ ॥** ಜ್ಞಾನಿಯಾದವನಿಗೆ ಜ್ಞಾನಸಾಮರ್ಥ್ಯದಿಂದ ಹೀಗೆ ಚರಮದೇಹೋತ್ಕ್ರಮಣ ವೆಂದಾದರೆ ಜ್ಞಾನಿಗೆ ಜ್ಞಾನವು ಯಾವ ಜನ್ಮದಲ್ಲಿ ಆಗಿಯದೋ ಅಂತಹ ದೇಹವಿಯೋಗರೂಪವಾದ ಪ್ರಥಮ ಮರಣವೇ ಹೀಗೆ ಎಂದು ಏಕೆ ಆಗಲಾರದು, ಎಂದರೆ—

**ಭಾಷ್ಯ ॥ (೧) ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಂ । ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ (ಗೀ.೮.೬.) ಇತಿ ಸ್ಮೃತೇರ್ವಿದ್ಯಾಶೇಷಗತ್ಯನುಸ್ಮರಣಯೋಗಾಚ್ಚ । (೨) ಆಚಾರ್ಯಸ್ತುತೇ ಗತಿಂ ವಕ್ತಾ (ಛಾ.೪.೧೪.೧.) । ಇತಿ ಹಿ ಲಿಂಗಂ ॥ ೨ ॥**

**ಭಾಷ್ಯಾರ್ಥ ॥** (೧) ಎಲೋ ಅರ್ಜುನನೇ ಅಂತ್ಯಕಾಲದಲ್ಲಿ ಯಾವ ಯಾವ ಪದಾರ್ಥವನ್ನು ಅಥವಾ ಯಾವ ಯಾವ ಆಕೃತಿವಿಶೇಷವನ್ನು ಪೂರ್ವಕರ್ಮಾನುಸಾರವಾಗಿ ಸ್ಮರಿಸುತ್ತಾ ದೇಹವನ್ನು ಪುರುಷನು ಬಿಡುತ್ತಾನೋ ಆತನು ಯಾವಾಗಲೂ ಆಯಾವ ಪದಾರ್ಥ ವಿಷಯಕವಾದ ಮನಸ್ಸಿನಿಂದ ಅತಿಸಂಸ್ಕಾರವುಳ್ಳವನಾಗಿ ಆಯಾವ ಪದಾರ್ಥವನ್ನೇ ಹೊಂದುತ್ತಾನೆ, ಎನ್ನುವ ಸ್ಮೃತಿಯಿಂದಲೂ ಜ್ಞಾನದ ಫಲೋಪಕಾರ್ಯಂಗಭೂತವಾದ, ಶರೀರತ್ಯಾಗ ಕಾಲದಲ್ಲಿ ತನ್ನ ಹೃದಯವನ್ನು ಆರಂಭಿಸಿ ಬ್ರಹ್ಮಪರ್ಯಂತ ಗಮ್ಯ ವಿಷಯಾನುಸ್ಮರಣದ ಸಾಹಿತ್ಯದಿಂದಲೂ (ಏವಂಚ ಜ್ಞಾನವಿಶೇಷವಾದ ಗತ್ಯನುಸ್ಮರಣವು ಗಂಪ್ರಾಪ್ತಿ ಕಾರಣವು.) (೨) (ಆದಾಗ್ಯೂ ಗತ್ಯನುಸ್ಮರಣವು ಬ್ರಹ್ಮಪ್ರಾಪ್ತಿಕಾರಣವು ಎನ್ನುವಲ್ಲಿ ವಿಶೇಷ ಪ್ರಮಾಣವಿಲ್ಲ ಎಂದರೆ) (ಅಗ್ನಿಗಳು ಉಪಕೋಸಲನಿಗೆ ಬ್ರಹ್ಮವಿದ್ಯೆಯನ್ನು ಹೇಳಿ) ನಿನಗೆ ಸತ್ಯಕಾಮಾಖ್ಯ ಆಚಾರ್ಯರು ಗಮ್ಯವನ್ನು ಹೇಳುವರು ಎಂದು ಗತಿಸ್ಮರಣವು ಭಗವತ್ಪ್ರಾಪ್ತಿಸಾಧನವು ಎನ್ನುವಲ್ಲಿ ಜ್ಞಾಪಕವು ಇದೆ. (ಅಂದರೆ, ಎಂದು ಹೇಳಿರುವರು ಹೀಗೆ

ಛಾಂದೋಗ್ಯದಲ್ಲಿ ಶ್ರುತವಾಗಿದೆ. ಗತ್ಯನುಸ್ಮರಣವಿಲ್ಲದೆ ಬ್ರಹ್ಮಪ್ರಾಪ್ತಿಯಾಗುವುದಾದರೆ ಆಚಾರ್ಯಸ್ತು ತೇ ಗತಿಂ ವಕ್ತಾ ಎಂದು ಸ್ಮರಣಕ್ಕಾಗಿ ಗತಿಶ್ರವಣವು ವ್ಯರ್ಥವಾಗುವುದು. ಆದಕಾರಣ ಸ್ಮರಣಕ್ಕಾಗಿ ಗತಿಶ್ರವಣಲಿಂಗದಿಂದ ಗತಿಸ್ಮರಣಕ್ಕೆ ಬ್ರಹ್ಮಪ್ರಾಪ್ತ್ಯರ್ಥತ್ವವಿದೆ ಎಂದು ತಿಳಿಯುತ್ತದೆ. ॥ ೨ ॥

**ಪೀಠಿಕೆ ॥** ಈ ವಿಶಿಷ್ಟೋತ್ಕ್ರಮಣವು ಗತ್ಯನುಸ್ಮರಣಯುಕ್ತವಾದ ಸ್ವತಂತ್ರವಾದ ಜ್ಞಾನಸಾಮರ್ಥ್ಯದಿಂದ ಅಲ್ಲ. ಮತ್ತೆ ಜ್ಞಾನಾದಿಗಳಿಂದ ಪ್ರಸನ್ನನಾದ ಶ್ರೀಹರಿಯ ಅನುಗ್ರಹದಿಂದಲೇ ಎನ್ನುತ್ತಾರೆ—

**ಭಾಷ್ಯ ॥ (೧) ಹೃದಿಸ್ಥೇನೈವ ಹರಿಣಾ ತಸ್ಯೈವಾನುಗ್ರಹೇಣ ತು । ಉತ್ಕ್ರಾಂತಿರ್ಬ್ರಹ್ಮರಂಧ್ರೇಣ ತಮೇವೋಪಾಸತೋ ಭವೇತ್ ॥ ಇತಿ ಚಾಧ್ಯಾತ್ಮೇ । (೨) ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಗ (ಙ್ಙ) ನ್ಯಾ ಉತ್ಕ್ರಮಣೇ ಭವಂತಿ (ಕಠ ೨.೬.೧೬) ಇತಿ ಚ ॥ ೧೭ ॥ ॥ ೩ ॥**

**ಭಾಷ್ಯಾರ್ಥ ॥** (೧) ಹೃದಯದಲ್ಲಿರತಕ್ಕ ಶ್ರೀಹರಿಯಿಂದ ಕೂಡಿಕೊಂಡೇ ಶ್ರೀಹರಿಯ ಅನುಗ್ರಹದಿಂದಲೇ ಅಂತ್ಯಕಾಲದಲ್ಲಿ ಶ್ರೀಹರಿಯನ್ನೇ ಧ್ಯಾನಮಾಡತಕ್ಕ ಪ್ರತೀಕಾಲಂಬನರಾದ ಮತ್ತು ಅಪ್ರತೀಕಾಲಂಬನರಾದ ಪುರುಷರಿಗೆ ಬ್ರಹ್ಮನಾಡಿಯಿಂದ ಉತ್ಕ್ರಾಂತಿಯು ಆಗುವುದು, ಎಂದು ಅಧ್ಯಾತ್ಮ ಎನ್ನುವ ಗ್ರಂಥದಲ್ಲಿದೆ. (೨) (**ಪ್ರಕಾಶಿತನಾಡೀದ್ವಾರಃ ನಿಷ್ಕ್ರಾಮತಿ** ಎಂದು ಹೇಳಿದ್ದಾರೆ. ಅದರಲ್ಲಿ ನಾಡಿಯಲ್ಲಿಯೂ ವಿಶೇಷವದೆ ಎನ್ನುತ್ತಾರೆ.) ಹೃದಯಸಂಬಂಧಿಗಳಾದ ನಾಡಿಗಳು ನೂರ ಒಂದು ಇವೆ. ಅವುಗಳ ಮಧ್ಯದಲ್ಲಿ ಸುಷುಮ್ನಾ ನಾಮಕವಾದ ನಾಡಿಯು ಮೂಲವನ್ನಾರಂಭಿಸಿ ಶಿರಃಪರ್ಯಂತವಾಗಿ ಹೊರಟಿದೆ. ಆ ಸುಷುಮ್ನಾ ನಾಡಿಯಿಂದ ಮೇಲಕ್ಕೆ ಹೋಗತಕ್ಕವನು ಮುಕ್ತಿಯನ್ನು ಹೊಂದುತ್ತಾನೆ. ಇತರ ನಾಡಿಗಳು ಲೋಕಾಂತರಗಳನ್ನು ಹೊಂದಿಸಲಿಕ್ಕೆ ಸಮರ್ಥಗಳಾಗುತ್ತವೆ. ಅಂದರೆ, ಇತರ ನಾಡಿಗಳಿಂದ ಉತ್ಕ್ರಾಂತನಾದವನು ಲೋಕಾಂತರಗಳನ್ನು ಹೊಂದುತ್ತಾನೆ ಎಂದೂ ಇದೆ. (ಏವಂಚ ಪ್ರತೀಕಾಲಂಬನರು ಸುಷುಮ್ನಾ ನಾಡಿಯಿಂದ ಹೊರಟವರಾಗಿ ಬ್ರಹ್ಮಲೋಕವನ್ನು ಹೊಂದುತ್ತಾರೆ. ಅಪ್ರತೀಕಾಲಂಬನರು ವೈಕುಂಠವನ್ನು ಹೊಂದುತ್ತಾರೆ. ಬೇರೆ ನೂರು ನಾಡಿಗಳಿಂದ ಹೊರಟವರು ಲೋಕಾಂತರಗಳನ್ನು ಹೊಂದುತ್ತಾರೆ. ॥ ೧೭ ॥ ॥ ೩ ॥

**ಪೀಠಿಕೆ ॥** ಪ್ರಕಾಶಿತ ನಾಡೀದ್ವಾರವುಳ್ಳವನಾಗಿ ಹೊರಟು ಹೋಗುವುದಾದರೆ ಅಜ್ಞಾನಿಯಂತೆ ನಾಡಿಯ ಒಳಗೆ ಕಾರ್ಗತ್ತಲೆಯಿಂದಲೇ ಹೋಗಬೇಕಾಗುವುದು. ಒಳಗೂ ಪ್ರಕಾಶವಿದ್ದರೆ ದ್ವಾರಪದವು ವ್ಯರ್ಥವಾಗುವುದು, ಎಂದರೆ—

## ಸೂತ್ರ ॥ ಓಂ ರಶ್ಮ್ಯನುಸಾರೀ ಓಂ ॥ ೧೮ ॥

**ಸೂತ್ರಾರ್ಥ ॥ ಸಹಸ್ರಂ ವಾ ಆದಿತ್ಯಸ್ಯ ರಶ್ಮಯಃ** ಎನ್ನುವ ಶ್ರುತಿಯಿಂದ ನಾಡಿಯ ಒಳಗೆ ವ್ಯಾಪ್ತಗಳಾದ ಸೂರ್ಯನ ರಶ್ಮಿಗಳನ್ನು ಅನುಸರಿಸಿದವನಾಗಿ ಜ್ಞಾನಿಯು ಹೊರಟು ಹೋಗುತ್ತಾನೆ. ಏವಂಚ

ದ್ವಾರಪ್ರಕಾಶವು ವಿಷ್ಣುಸಂಬಂಧಿಕವಾದುದರಿಂದಲೂ ಅಂತಃಪ್ರಕಾಶವು ಸೂರ್ಯಸಂಬಂಧಿಯಾದುದರಿಂದಲೂ ದ್ವಾರಪದವು ಸಾರ್ಥಕವಾಗಿದೆ. ತದಾ ವಿಷ್ಣೋಃ ಸ್ವತೇಜಸಾ ಇತ್ಯಾದಿ ಪ್ರಮಾಣಗಳಿಂದ.

**ಭಾಷ್ಯ ॥ (೧) ನಿಷ್ಕ್ರಾಮತಿ । (೨) ಸಹಸ್ರಂ ವಾ ಆದಿತ್ಯಸ್ಯ ರಶ್ಮಯ ಆಸು ನಾಡೀಷ್ವಾತತಾಸ್ತತ್ರ ಶ್ವೇತಃ ಸುಷುಮ್ನೋ ಬ್ರಹ್ಮಯಾನಃ ಸುಷುಮ್ನಾಯಾ-ಮಾತತಸ್ತತ್ಪ್ರಕಾಶೇನೈಷ ನಿರ್ಗಚ್ಛತಿ । ಇತಿ (೬) ಪೌತ್ರಾಯಣಶ್ರುತಿಃ ॥ ೧೮ ॥ ॥ ೪ ॥**

ಭಾಷ್ಯಾರ್ಥ ॥ (೧) (ಜ್ಞಾನಿಯಾದವನು ನಾಡಿಯ ಒಳಗೆ ವ್ಯಾಪ್ತಗಳಾದ ಸೂರ್ಯರಶ್ಮಿಗಳನ್ನು ಅನುಸರಿಸಿದವನಾಗಿ ಅಂದರೆ ಸೂರ್ಯರಶ್ಮಿಗಳಿಂದ ಪ್ರಕಾಶಿತವಾದ ನಾಡಿಯ ಒಳಗೆ ಪ್ರದೇಶವುಳ್ಳವನಾಗಿ ಈಶ್ವರನನ್ನು ಅನುಸರಿಸಿಯೇ ದೇಹದಿಂದ) ಹೊರಟು ಹೋಗುತ್ತಾನೆ. (೨) (ನಾಡಿಯ ಒಳಗೆ ವ್ಯಾಪ್ತಗಳಾದ ಸೂರ್ಯನ ರಶ್ಮಿಗಳನ್ನು ಅನುಸರಿಸಿ ಹೊರಡುತ್ತಾನೆ ಎನ್ನುವುದು ಯಾವ ಪ್ರಮಾಣದಿಂದ ಎಂದರೆ) ಎರಡು ರಾಶಿಯಾಗಿ ಪ್ರತ್ಯೇಕ ಪ್ರತ್ಯೇಕ ಐನೂರು ಐದುನೂರು ಐವಂಚ ಸಹಸ್ರ ಸಂಖ್ಯೆಯುಳ್ಳ ಸೂರ್ಯನ ರಶ್ಮಿಗಳು ಆ ನಾಡಿಗಳಲ್ಲಿ ಒಳಗೆ ಆಶ್ರಿತಗಳಾಗಿವೆ. ಆ ಸಹಸ್ರ ಸಂಖ್ಯೆಯುಳ್ಳ ಪೂರ್ವೋತ್ತರ ವರ್ಗಗಳಾದ ರಶ್ಮಿಗಳ ಮಧ್ಯದಲ್ಲಿ ವರ್ಣತಃ ಬಿಳಿಪು ಆದ ಸುಷುಮ್ನಾ ಎಂದು ಹೆಸರುಳ್ಳ ಬ್ರಹ್ಮಪ್ರಾಪಕವಾದ ರಶ್ಮಿ ವಿಶೇಷವು ನೂರ ಒಂದನೇದ್ದಾದ ಸುಷುಮ್ನಾ ನಾಡಿಯ ಒಳಗೆ ವ್ಯಾಪ್ತವಾಗಿದೆ. ಅದರ ಪ್ರಕಾರದಿಂದಲೇ ಜ್ಞಾನಿಯಾದ ಜೀವನು ದೇಹದಿಂದ ಹೊರಟು ಹೋಗುತ್ತಾನೆ, ಎಂದು ಪೌತ್ರಾಯಣ ಶ್ರುತಿಯು. ॥ ೧೮ ॥ ॥ ೪ ॥

ಪೀಠಿಕೆ ॥ ಹಿಂದೆ ಹೇಳಿದ್ದನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನಿಶಿ ನೇತಿ ಚೇನ್ನ ಸಂಬಂಧಾತ್ ಓಂ ॥ ೧೯ ॥

ಸೂತ್ರಾರ್ಥ ॥ ರಾತ್ರಿಯಲ್ಲಿ ಕರ್ಮಾವಸಾನವನ್ನು ಹೊಂದಿದವರಿಗೆ ಆಗ ರಶ್ಮಿಗಳು ಇಲ್ಲದಿರುವುದರಿಂದ ದೇಹೋತ್ಕ್ರಮಣವು ಆಗದೆ ಹೋಗುವುದು ಎಂದರೆ, ಹಾಗೆ ಹೇಳಕೂಡದು. ರಶ್ಮಿಗಳಿಗೆ ಸರ್ವದಾ ಸಂಬಂಧವಿದ್ದುದರಿಂದ, ಅಂದರೆ, ಬಾಹ್ಯಾದಿತ್ಯನು ಇಲ್ಲದಿದ್ದರೂ ದೇಹದೊಳಗೆ ಇರತಕ್ಕ ಆದಿತ್ಯನ ರಶ್ಮಿಗಳಿಗೆ ಸರ್ವದಾ ನಾಡೀಸಂಬಂಧವಿದ್ದುದರಿಂದ.

**ಭಾಷ್ಯ ॥ ರಶ್ಮ್ಯಭಾವಾನ್ನಿಶಿ ಜ್ಞಾನಿನ ಉತ್ಕ್ರಮಣಂ ನ ಯುಕ್ತಮಿತಿ ಚೇನ್ನ । ಸರ್ವದಾ ಸಂಬಂಧಾದ್ರಶ್ಮೀನಾಂ ॥ ೧೯ ॥ ॥ ೫ ॥**

ಭಾಷ್ಯಾರ್ಥ ॥ ರಾತ್ರಿಕಾಲದಲ್ಲಿ ಸೂರ್ಯರಶ್ಮಿಗಳು ಇಲ್ಲದಿರುವುದರಿಂದ ಆಗ ಪ್ರತಿಬಂಧಕೀಭೂತಗಳಾದ ಕರ್ಮಗಳನ್ನು ಪರಿಸಮಾಪ್ತಿಗೊಳಿಸಿದ ಕೆಲವು ಜ್ಞಾನಿಗಳಿಗೆ ಅಪೇಕ್ಷಿತವಾದ ದೇಹೋತ್ಕ್ರಮಣವು ಯುಕ್ತವಲ್ಲ. ಕೆಲವು ಜ್ಞಾನಿಗಳಿಗೆ ಈ ರೀತಿಯಾಗಿ, ಕೆಲವು ಜ್ಞಾನಿಗಳಿಗೆ ಹೀಗೆ ಅಲ್ಲ ಎನ್ನುವ ವೈಲಕ್ಷಣ್ಯವೂ ಯುಕ್ತವಲ್ಲ. (ಅಂದರೆ, ಕೆಲವು ಜ್ಞಾನಿಗಳಿಗೆ ರಾತ್ರಿಕಾಲದಲ್ಲಿ ಕರ್ಮಪರ್ಯವ

ಸಾನವು ಆಗಿಹೋದರೆ ರಾತ್ರಿಯಲ್ಲಿಯೇ ಆತನಿಗೆ ಉತ್ಕ್ರಮಣವು ಆಗಬೇಕು. ಪ್ರತಿಬಂಧಕಕರ್ಮ ವಿಲ್ಲದಿದ್ದರೂ ಸಂಸಾರನಿವೃತ್ತಿಯು ಆಗದೆ ಹೋದರೆ ಸದಾ ನಿವೃತ್ತಿಯೇ ಇಲ್ಲವೆಂದಾಗಬೇಕಾಗುವುದು. ಜ್ಞಾನಿಯಾದವನಿಗೆ ರಾತ್ರಿಕಾಲದಲ್ಲಿ ಉತ್ಕ್ರಮಣವು ಯುಕ್ತವಲ್ಲ. ರಾತ್ರಿ ಕಾಲದಲ್ಲಿ ಸೂರ್ಯರಶ್ಮಿಗಳು ಇರುವುದಿಲ್ಲ. ಸೂರ್ಯರಶ್ಮಿಗಳು ಇಲ್ಲದಿದ್ದರೂ ದೇಹೋತ್ಕ್ರಮಣವನ್ನು ಹೇಳುವುದಾದರೆ ಅಜ್ಞರ ದೇಹೋತ್ಕ್ರಮಣದಿಂದ ಜ್ಞಾನಿಗಳಿಗೆ ವೈಲಕ್ಷಣ್ಯವು ಇಲ್ಲವೆಂದಾಗಬೇಕಾಗುವುದು.) ಎಂದರೆ, ಹಾಗೆ ಹೇಳಕೂಡದು. (ಅಂದರೆ, ರಾತ್ರಿಕಾಲದಲ್ಲಿ ಮೃತರಾದ ಜ್ಞಾನಿಗಳಿಗೆ ಹೊರಗೆ ಇರತಕ್ಕ ಆದಿತ್ಯನ ರಶ್ಮಿಗಳು ಇಲ್ಲದಿರುವುದರಿಂದ ಸರ್ವರಿಗೆ ರಶ್ಮಿಗಳನ್ನು ಅನುಸರಿಸಿ ಉತ್ಕ್ರಮಣವು ಅಯುಕ್ತವೆನ್ನುವುದು ಇಲ್ಲ. ಏಕೆಂದರೆ) ಒಳಗೆ ಇರತಕ್ಕ ಆದಿತ್ಯನ ರಶ್ಮಿಗಳಿಗೆ ಸರ್ವದಾ ನಾಡಿಸಂಬಂಧವಿದ್ದುದರಿಂದ. ॥ ೧೯ ॥

ಪೀಠಿಕೆ ॥ ನಾಡಿಗಳಿಗೂ ರಶ್ಮಿಗಳಿಗೂ ಸಂಬಂಧವು ಸರ್ವದಾ ಇದೆ ಎಂದರೆ ಏನು ಅರ್ಥವು? ೧ ಎಷ್ಟು ಹೊತ್ತಿಗೂ ಅದೆಯೋ ೨ ದೇಹಪಾತಕ್ಕಿಂತ ಪೂರ್ವಕಾಲದಲ್ಲಿ ಇರುವುದೋ, ೩. ಅಥವಾ ದೇಹವು ಇರುವ ಪರ್ಯಂತ ಇರತಕ್ಕುದೊ, ೧ನೇದ್ದು ಅಯುಕ್ತವು. ಸರ್ವದಾ ನಾಡಿಗಳು ಇರುವುದಿಲ್ಲ. ೨ನೇದ್ದು ಅಯುಕ್ತವು. ಕದಾಚಿತ್ ಜ್ಞಾನಿಗಳಿಗೂ ಕಾರ್ಗತ್ತಲೆಯಿಂದ ಉತ್ಕ್ರಮಣವು ಬರಬೇಕಾಗುವುದು. ೩.ನೇದ್ದು ಅಯುಕ್ತವು. ದೇಹವು ಇರುವ ತನಕ ಅದು ನಿಯತವು ಎನ್ನುವಲ್ಲಿ ಪ್ರಮಾಣವಿಲ್ಲ ಎನ್ನುವ ಅಭಿಪ್ರಾಯದಿಂದ ಪ್ರಶ್ನಿಸುತ್ತಾರೆ.

**ಭಾಷ್ಯ ॥ ಕಿಯತ್ಕಾಲಂ ॥ ೬ ॥**

ಭಾಷ್ಯಾರ್ಥ ॥ ಎಷ್ಟು ಕಾಲ ರಶ್ಮಿಗಳಿಗೆ ನಾಡೀಸಂಬಂಧವು ಇರುತ್ತದೆ ಅಂದರೆ, ನಾಡೀರಶ್ಮೀ ಸಂಬಂಧವು ಯಾವದ್ದೇಹಭಾವಿಯು ಎನ್ನುವಲ್ಲಿ ಪ್ರಮಾಣವಿಲ್ಲ ಎಂದು ತಾತ್ಪರ್ಯವು. ॥ ೬ ॥

## ಸೂತ್ರ ॥ ಓಂ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ಓಂ ॥ ೨೦ ॥

ಸೂತ್ರಾರ್ಥ ॥ ನಾಡೀರಶ್ಮಿಗಳ ಸಂಬಂಧವು ದೇಹವು ಇರುವ ಪರ್ಯಂತ ಇರತಕ್ಕದಾದುದ ರಿಂದ ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ಎನ್ನುವ ಶ್ರುತಿಯು ಹಾಗೆ ತೋರಿಸುತ್ತದೆ.

**ಭಾಷ್ಯ ॥ (೧) ಯಾವದ್ದೇಹೋ ವಿದ್ಯತೇ ತಾವದ್ರಶ್ಮಿಸಂಬಂಧೋಽಸ್ತ್ಯೇವ। (೨) ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ವಿಯೋಗೋ ಯಾವದಿದಂ ಶರೀರಮತ ಏತೈಃ ಪಶ್ಯತ್ಯೇತೈರುತ್ಕ್ರಾಮತ್ಯೇತೈಃ ಪ್ರವರ್ತತೇ । ಇತಿ (ಹಿ) ಮಾಧ್ಯಂದಿನಾಯನಶ್ರುತಿಃ ॥ ೨೦ ॥ ॥ ೭ ॥**

ಭಾಷ್ಯಾರ್ಥ ॥ (೧) ಶರೀರವು ಎಷ್ಟರವರೆಗೆ ಇರುತ್ತದೋ ಅಷ್ಟರ ವರೆಗೆ ರಶ್ಮಿಗಳ ಸಂಬಂಧವು ಇದ್ದೇ ಇದೆ. (೨) (ಆ ವಿಷಯದಲ್ಲಿ ಪ್ರಮಾಣವನ್ನು ತೋರಿಸುತ್ತಾರೆ.) ಈ ಆದಿತ್ಯರಶ್ಮಿಗಳೂ ನಾಡಿಗಳೂ ಕೂಡ ಪರಸ್ಪರ ಸಂಬದ್ಧಗಳಾಗಿವೆ. ಪ್ರಮಿತವಾದ ಈ ಸ್ಥೂಲಶರೀರವು ಎಷ್ಟರವರೆಗೆ ಇರುತ್ತದೋ ಅಷ್ಟರವರೆಗೆ ಈ ರಶ್ಮಿಗಳಿಗೆ ನಾಡಿಗಳಿಂದ ವಿಯೋಗವು ಇರುವುದಿಲ್ಲ. ಆದಕಾರಣ ಜ್ಞಾನಿಯು ಈ ರಶ್ಮಿಗಳಿಂದಲೇ ನಾಡ್ಯಂತಮಾರ್ಗವನ್ನು ಅಥವಾ ಭಗವತ್ತತ್ತ್ವವನ್ನು ನೋಡುತ್ತಾನೆ. ಈ

ನಿಮಿತ್ತ ಭೂತ ಪ್ರಕಾಶಗಳಿಂದ ಉತ್ಕ್ರಮಣದಲ್ಲಿ ಪ್ರಯತ್ನಿಸುತ್ತಾನೆ. ಅಥವಾ ಭಗವದ್ವ್ಯಾಪ್ತಿಕ್ಕಾಗಿ ಪ್ರಯತ್ನಿಸುತ್ತಾನೆ. ಇವುಗಳಿಂದಲೇ ಜ್ಞಾನಿಯು ಉತ್ಕ್ರಾಂತಿ ಕಾಲದಲ್ಲಿ ದೇಹದಿಂದ ಹೊರಟು ಹೋಗುತ್ತಾನೆ, ಎಂದು ಮಾಧ್ಯಂದಿನಾಯನ ಶ್ರುತಿಯು ಇದೆ. ॥ ೭ ॥

**ಪೀಠಿಕೆ ॥ ದಕ್ಷಿಣೇ ಮರಣಾದ್ಯಾತಿ** ಎನ್ನುವ ಉಕ್ತಿಯಿಂದ ಜ್ಞಾನಿಯಾದವನಿಗೆ ದಕ್ಷಿಣಾಯನದಲ್ಲಿ ಉತ್ಕ್ರಮಣವು ಹೇಗೆ ಕೂಡುವುದಿಲ್ಲವೋ ಹಾಗೆಯೇ ರಾತ್ರಿಕಾಲದಲ್ಲಿಯೂ ಉತ್ಕ್ರಮಣಾಭಾವವು ಕೂಡುವುದರಿಂದ ರಾತ್ರಿಕಾಲದಲ್ಲಿ ಉತ್ಕ್ರಮಣವನ್ನು ಉಪಪಾದಿಸುವ ಆಯಾಸವು ವ್ಯರ್ಥವು, ಎಂದರೆ—

## ಸೂತ್ರ ॥ ಓಂ ಅತಶ್ಚಾಯನೇಽಪಿ ಹಿ ದಕ್ಷಿಣೇ ಓಂ ॥ ೨೧ ॥

**ಸೂತ್ರಾರ್ಥ ॥ ದಕ್ಷಿಣೇ ಮರಣಾತ್** ಎನ್ನುವ ಸ್ಮೃತಿವಚನದಿಂದ ಜ್ಞಾನಿಯಾದವನಿಗೆ ದಕ್ಷಿಣಾಯನದಲ್ಲಿ ಉತ್ಕ್ರಮಣವು ಕೂಡುವುದಿಲ್ಲ ಎನ್ನುವ ದೃಷ್ಟಾಂತದಿಂದ ರಾತ್ರಿಕಾಲದಲ್ಲಿಯೂ ಉತ್ಕ್ರಮಣಾಭಾವವನ್ನು ಹೇಳಕೂಡದು. **ದಕ್ಷಿಣೇ ಮರಣಾತ್** ಎನ್ನುವ ಸ್ಮೃತಿಯು ಇದ್ದರೂ ಜ್ಞಾನಿಯಾದವನಿಗೆ ದಕ್ಷಿಣಾಯನದಲ್ಲಿ ಉತ್ಕ್ರಾಂತಿಯು ಯುಕ್ತವೇ, ಸೂರ್ಯರಶ್ಮಿಗಳ ಸಹಸ್ರಕ್ಕೆ ನಾಡೀಸಂಬಂಧವು ಇದ್ದುದರಿಂದ.

**ಭಾಷ್ಯ ॥ ದಕ್ಷಿಣೇ ಮರಣಾದ್ಯಾತಿ ಸ್ವರ್ಗಂ ಬ್ರಹ್ಮೋತ್ತರಾಯಣೇ । ಇತ್ಯುಕ್ತೇಽಪಿ ಜ್ಞಾನಿನೋ ದಕ್ಷಿಣಾಯನೋತ್ಕ್ರಾಂತಿರ್ಯುಜ್ಯತೇ ॥ ೮ ॥**

**ಭಾಷ್ಯಾರ್ಥ ॥** ದಕ್ಷಿಣಾಯನದಲ್ಲಿ ಮರಣದಿಂದ ಸ್ವರ್ಗವನ್ನು ಉತ್ತರಾಯಣದಲ್ಲಿ ಮರಣದಿಂದ ಪರಬ್ರಹ್ಮನನ್ನು ಹೊಂದುತ್ತಾನೆ. ಹೀಗೆ ಸ್ಮೃತಿವಚನವಿದ್ದರೂ ಜ್ಞಾನಿಯಾದವನಿಗೆ ಮೋಕ್ಷಕ್ಕಾಗಿ ದಕ್ಷಿಣಾಯಣನದಲ್ಲಿ ದೇಹೋತ್ಕ್ರಮಣವು ಕೂಡುತ್ತದೆ. ಸೂರ್ಯರಶ್ಮಿಗಳ ಸಹಸ್ರಕ್ಕೆ ನಾಡೀಸಂಬಂಧವು ಇದ್ದುದರಿಂದ, ಆದಕಾರಣ ಈ ದೃಷ್ಟಾಂತದಿಂದ ಜ್ಞಾನಿಯಾದವನಿಗೆ ರಾತ್ರಿಕಾಲದಲ್ಲಿ ಉತ್ಕ್ರಮಣಾಭಾವವನ್ನು ಹೇಳಕೂಡದು. ॥ ೮ ॥

**ಪೀಠಿಕೆ ॥** ಸೂತ್ರಾರ್ಥವನ್ನು ಸ್ಮೃತಿಯಿಂದ ವಿಶದೀಕರಿಸುತ್ತಾರೆ—

**ಭಾಷ್ಯ ॥ ಶತಂ ಪಂಚೈವ ಸೂರ್ಯಸ್ಯ ದಕ್ಷಿಣಾಯನರಶ್ಮಯಃ । ತಾವಂತ ಏವ ನಿರ್ದಿಷ್ಟಾ ಉತ್ತರಾಯಣರಶ್ಮಯಃ ॥ ತೇ ಸರ್ವೇ ದೇಹಸಂಬದ್ಧಾಃ ಸರ್ವದಾ ಸರ್ವದೇಹಿನಾಂ । ಮಹರ್ಲೋಕಾದಿಗಂತಾರ ಉತ್ತರಾಯಣರಶ್ಮಿಭಿಃ । ನಿರ್ಗಚ್ಛಂತೀತರೈಶ್ಚಾಪಿ ಯೈರೇಷ್ವನ್ಯೇತರಾ ಗತಿಃ ॥ ಉತ್ತರಂ ದಕ್ಷಿಣಮಿತಿ ತ ಏವ ತು ನಿಗದ್ಯತೇ । ನ ತು ಕಾಲವಿಶೇಷೋಽಸ್ತಿ ಜ್ಞಾನಿನಾಂ ನಿಯಮಾತ್ಫಲಂ ॥ ದದಾತಿ ಕಾಲೇಽನುಗುಣೇ ಫಲಂ ಕಿಂಚಿದ್ವಿಶಿಷ್ಯತೇ । ಅತ್ಯುತ್ತಮಾನಾಂ ಕೇಷಾಂಚಿನ್ನ ವಿಶೇಷೋಽಸ್ತಿ ಕಾಲತಃ ॥ ಇತಿ ಹಿ ನಾರಾಯಣಾಧ್ಯಾತ್ಮೇ ॥ ೨೧ ॥ ಅಧಿ. ೯ ॥ ॥ ೯ ॥**

**ಭಾಷ್ಯಾರ್ಥ ॥** ಸೂರ್ಯನ ದಕ್ಷಿಣಾಯನ ರಶ್ಮಿಗಳು ಐದು ನೂರೇ, ಉತ್ತರಾಯಣ ರಶ್ಮಿಗಳೂ ಐದು ನೂರೇ ಎಂದು ನಿರ್ದಿಷ್ಟಗಳಾಗಿವೆ. ಅವುಗಳೆಲ್ಲವೂ ಎಲ್ಲಾ ಜೀವರಿಗೂ ದೇಹಪಾತ ಪರ್ಯಂತ ದೇಹಸಂಬಂಧ್ದಗಳಾಗಿವೆ. ಉತ್ತರಾಯಣದ ರಶ್ಮಿಗಳಿಂದ ಯಾರು ಹೋಗುತ್ತಾರೋ ಅವರು (ಪ್ರತೀಕಾಲಂಬನರು) ಜನಲೋಕ ಮೊದಲಾದ ಲೋಕಗಳನ್ನು ಹೋಗತಕ್ಕವರು. ಜನಲೋಕಾದಿಗಳಿಂದ ಇತರವಾದ ಸ್ವರ್ಗಾದಿ ಲೋಕಾಂತರ ಪ್ರಾಪ್ತಿರೂಪವಾದ ಗತಿಯು ಯಾವ ರಶ್ಮಿಗಳಿಂದ ಪ್ರಾಪ್ಯವಾಗುತ್ತದೋ ಅಂತಹ ದಕ್ಷಿಣಾಯನ ರಶ್ಮಿಗಳಿಂದ ಇತರ ಜನರು ಹೊರಟು ಹೋಗುತ್ತಾರೆ. ಉತ್ತರಾಯಣದ ಐದು ನೂರು ರಶ್ಮಿಗಳೇ **ದಕ್ಷಿಣೇ ಮರಣಾತ್** ಎನ್ನುವ ಸ್ಮೃತಿಯಲ್ಲಿ ಉತ್ತರಾಯಣ ಎಂದು ಹೇಳಲ್ಪಡುತ್ತವೆ. ದಕ್ಷಿಣಾಯನದ ಐದು ನೂರು ರಶ್ಮಿಗಳೇ ದಕ್ಷಿಣಾಯನ ಎಂದು ಹೇಳಲ್ಪಡುತ್ತವೆ. **ದಕ್ಷಿಣೇ ಮರಣಾತ್** ಎನ್ನುವ ಸ್ಮೃತಿಗೆ (ಈ ಅರ್ಥವು ಯಾವುದರಿಂದ ಸಿದ್ಧವಾಗುತ್ತದೆ ಎಂದರೆ) ಜ್ಞಾನಿಗಳಿಗೆ ಉತ್ಕ್ರಮಣಕ್ಕಾಗಿ ಕಾಲನಿಯಮವಿಲ್ಲ. (ಏಕೆ ಇಲ್ಲವೆಂದರೆ) ಜ್ಞಾನವು ನಿಯಮದಿಂದ ಮುಕ್ತಿರೂಪವಾದ ಫಲವನ್ನು ನಿಶ್ಚಯವಾಗಿಯೂ ಕೊಡುತ್ತದೆ. (ಜ್ಞಾನಿಗಳಿಗೆ ಉತ್ಕ್ರಾಂತಿಯಲ್ಲಿ ಕಾಲನಿಯಮವು ಇಲ್ಲವಾದರೆ ಭೀಷ್ಮಾದಿಗಳಿಗೆ ಉತ್ತರಾಯಣ ಕಾಲನಿರೀಕ್ಷಣವು ಹೇಗೆ ಎಂದರೆ) ಉತ್ತರಾಯಣ ಶುಕ್ಲಪಕ್ಷಾದಿ ಕಾಲವೂ ಅನುಕೂಲವಾಗಿದ್ದರೆ ಕಿಂಚಿತ್ ಫಲವು ಅಧಿಕವಾಗುತ್ತದೆ. ಭೀಷ್ಮಾದಿಗಳಿಂದಲೂ ಅತ್ಯುತ್ತಮವಾದ ದ್ರೋಣಾದಿಗಳಿಗೆ ಕಾಲವಿಶೇಷದಿಂದ ಫಲಾತಿಶಯವು ಇಲ್ಲ. ಸರ್ವಕಾಲವೂ ಅತಿಶಯಕ್ಕೆ ಕಾರಣವಾಗಿದೆ, ಎಂದು ನಾರಾಯಣಾಧ್ಯಾತ್ಮ ಎನ್ನುವ ಗ್ರಂಥದಲ್ಲಿ ಹೇಳಿದೆ. ॥ ೨೦ ॥ ॥ ೯ ॥

## ಅಧಿಕರಣ ಸಾರಾಂಶ

ಜ್ಞಾನಿಗಳಿಗೆ ದೇಹದಿಂದ ಉತ್ಕ್ರಮಣವು ಅಜ್ಞರ ಮರಣದಂತೆಯೋ ಅಥವಾ ಜ್ಞಾನಶಕ್ತಿಯಿಂದ ಅದಕ್ಕಿಂತ ವಿಲಕ್ಷಣವೋ, ಅದಕ್ಕಾಗಿ ಜ್ಞಾನವು ಅಜ್ಞರ ಮರಣದಿಂದ ವೈಲಕ್ಷಣ್ಯವನ್ನು ಜ್ಞಾನಮರಣಕ್ಕೆ ಸಂಪಾದಿಸಲಿಕ್ಕೆ ಅಶಕ್ತವೋ ಶಕ್ತವೋ, ಅದಕ್ಕಾಗಿ ಪ್ರಾರಬ್ಧಕರ್ಮಶೇಷವು ಜ್ಞಾನಶಕ್ತಿಗೆ ಪ್ರತಿಬಂಧಕವಾಗುತ್ತದೋ ಇಲ್ಲವೋ, ಅಥವಾ ಕರ್ಮಾವಸಾನದಲ್ಲಿಯೇ ಫಲವನ್ನು ಕೊಡಲಿಕ್ಕೆ ಸಮರ್ಥವಾಗುತ್ತದೋ, ಅದಕ್ಕಾಗಿ ಜ್ಞಾನವು ತನ್ನ ಉತ್ಪತ್ತಿಯನ್ನು ಆರಂಭಿಸಿ ಫಲವನ್ನು ಕೊಡಲಿಕ್ಕೆ ಸಮರ್ಥವಾಗುತ್ತದೋ, ಅದಕ್ಕಾಗಿ ತನ್ನ ಉತ್ಪತ್ತಿಯನ್ನು ಆರಂಭಿಸಿ ಫಲವನ್ನು ಕೊಡಲಿಕ್ಕೆ ಶಕ್ತವಾಗಿದ್ದರೆ ಅತಿಪ್ರಸಂಗವು ಇದೆಯೋ ಇಲ್ಲವೋ, ಎಂದು ಸಂದೇಹವು. ಜ್ಞಾನವು ತನ್ನ ಉತ್ಪತ್ತಿಯನ್ನು ಆರಂಭಿಸಿಯೇ ಅಜ್ಞರ ಮರಣದಿಂದ ವೈಲಕ್ಷಣ್ಯರೂಪವಾದ ಫಲವನ್ನು ಕೊಡಲಿಕ್ಕೆ ಶಕ್ತವಾಗಿದ್ದರೆ ಜ್ಞಾನಿಯ ಆದಿಮೃತಿಗೂ ಅಜ್ಞರ ಮರಣಕ್ಕಿಂತ ವೈಲಕ್ಷಣ್ಯ ಸಂಪಾದಕತ್ವವು ಬರಬೇಕಾಗಿರುವುದರಿಂದ ಪ್ರಾರಬ್ಧ ಕರ್ಮಾವಸಾನದಲ್ಲಿಯೇ ಫಲವನ್ನು ಕೊಡಲಿಕ್ಕೆ ಶಕ್ತವಾದುದು. ಪ್ರಾರಬ್ಧಕರ್ಮವು ಇರುವಾಗ ಫಲವನ್ನು ಕೊಡಲಿಕ್ಕೆ ಶಕ್ತವಲ್ಲ ಎಂದು ಹೇಳಬೇಕಾಗಿರುವುದರಿಂದ **ಆದೇಹಂ** ಎನ್ನುವ ವಚನದಿಂದ ದೇಹಪಾತ ಪರ್ಯಂತವಾಗಿ ಇರತಕ್ಕ ಪ್ರಾರಬ್ಧಕರ್ಮದಿಂದ ಪ್ರತಿಬದ್ಧವಾದ ಶಕ್ತಿಯುಳ್ಳ ಜ್ಞಾನವು ಅಜ್ಞರ ಮರಣದಿಂದ ಜ್ಞಾನಿಗಳ ಮರಣಕ್ಕೆ ವೈಲಕ್ಷಣ್ಯವನ್ನು ಸಂಪಾದಿಸಿಕೊಡಲಿಕ್ಕೆ ಶಕ್ತವಾಗುವುದಿಲ್ಲ. ಮರಣಕಾಲದಲ್ಲಿ ಪ್ರಾರಬ್ಧಕರ್ಮವು ಇಲ್ಲವೆನ್ನುವುದು ಯುಕ್ತವಲ್ಲ. ಅಜ್ಞರ ಮರಣದಂತೆ ಜ್ಞಾನಿಗಳ

ಮರಣವೂ ಪ್ರಾರಬ್ಧಕರ್ಮನಿಮಿತ್ತಕವಾಗಿದೆ. **ಸ್ವೋದಯತ್ಕಾಲದಂ ಜ್ಞಾನಂ** ಎನ್ನುವುದು ಫಲಾಂತರ ಪರವೆಂದು ತಿಳಿಯತಕ್ಕುದು, ಎಂದು ಪೂರ್ವಪಕ್ಷವು ಬಂದರೆ ಜ್ಞಾನಿಗಳ ಮರಣಕ್ಕೆ ಜ್ಞಾನಮಾತ್ರವೇ ವೈಲಕ್ಷಣ್ಯಸಂಪಾದಕವಾಗಿದ್ದರೆ ಆಗ ಅತಿಪ್ರಸಂಗವು ಬರುತ್ತಿತ್ತು. ಹೀಗೆ ಅಲ್ಲ. ಮತ್ತೆ ತನ್ನ ಹೃದಯವನ್ನು ಆರಂಭಿಸಿ ಭಗವತ್ಪ್ರಾಪ್ತಿ ಪರ್ಯಂತ ಇರತಕ್ಕ ಮಾರ್ಗದ ಸ್ಮೃತಿಯಿಂದ ಸಹಿತವಾದ, ವಿದ್ಯೆಯಿಂದ ಪ್ರಸನ್ನನಾದ ಹೃದ್ಗತನಾದ ಶ್ರೀಹರಿಯ ಅನುಗ್ರಹದಿಂದ ಸಹಿತವಾದ ಜ್ಞಾನವು ವೈಲಕ್ಷಣ್ಯಸಂಪಾದಕವೆಂದು ಹೇಳುತ್ತೇವೆ. ವಿವಂಚ ಮಾರ್ಗಸ್ಮೃತಿ ಭಗವದನುಗ್ರಹ ಇವೆರಡೂ ಪ್ರಾರಬ್ಧಕರ್ಮಾವಸಾನದಲ್ಲಿಯೇ ಆಗುತ್ತವೆ. ಇತರ ಕಾಲದಲ್ಲಿ ಅಲ್ಲ. ಆದಕಾರಣ ಅತಿಪ್ರಸಂಗವಿಲ್ಲ. ಈ ಎರಡರಿಂದ ಕೂಡಿದ ಜ್ಞಾನವು ಅಜ್ಞಾನಿಗಳ ಮರಣದಿಂದ ಜ್ಞಾನಿಗಳ ಮರಣಕ್ಕೆ ವೈಲಕ್ಷಣ್ಯ ಸಂಪಾದಕವು ಆಗಿಯೇ ಆಗುತ್ತದೆ. ಹೃದಯದಲ್ಲಿರತಕ್ಕ ಭಗವತ್ಪ್ರಕಾಶದಿಂದ ಪ್ರಕಾಶಿತ ದ್ವಾರವುಳ್ಳ ದೇಹವು ಇರುವ ಪರ್ಯಂತ ಇರತಕ್ಕ ಸೂರ್ಯರಶ್ಮಿಗಳಿಂದ ಅಂತರ್ವ್ಯಾಪ್ತವಾದ ಬ್ರಹ್ಮನಾಡಿಯಿಂದ ಜ್ಞಾನಿಗೆ ಶರೀರದಿಂದ ನಿಷ್ಕ್ರಾಂತಿಯು. ವಿವಂಚ ದೇವತೆಗಳಿಗೆ ಸ್ವೋತ್ತಮರಲ್ಲಿ ಪ್ರವೇಶದಿಂದ ದೇಹಲಯವು, ಮನೋಷ್ಯೋತ್ತಮರಿಗೆ ದೇಹದಿಂದ ಉತ್ಕ್ರಮಣವು. ॥ ಅಧಿ. ೯ ॥

**ತದೋಕೋಽಧಿಕರಣವು ಸಮಾಪ್ತವಾಯಿತು.**

## ೧೦ ಯೋಗ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಬ್ರಹ್ಮಪ್ರಾಪ್ತಿಯಾಗಲಿಕ್ಕೆ ಗತ್ಯನುಸ್ಮರಣಾದಿಗಳು ಆವಶ್ಯಕಗಳೆಂದು ಸಮರ್ಥಿಸುತ್ತಾರೆ. ಗಮ್ಯಪ್ರಾಪ್ತಿಗಾಗಿ ಜ್ಞಾನ, ಮಾರ್ಗಾನುಸ್ಮರಣ ಇವುಗಳು ಅಪೇಕ್ಷಿತಗಳಲ್ಲ. **ಅಗ್ನಿ ರ್ಜ್ಯೋತಿರಹಃ ಶುಕ್ಲಃ, ಧೂಮೋರಾತ್ರಿಸ್ತಥಾ ಕೃಷ್ಣಃ** ಎಂದು ಗೀತೆಯಲ್ಲಿ ಬ್ರಹ್ಮಚಂದ್ರಗತಿಗಳು ಕೇವಲ ಕಾಲಾದ್ಯಧೀನಗಳೆಂದು ಸ್ಮೃತಗಳಾಗಿವೆ. ಲೋಕದಲ್ಲಿ ಫಲದ ಅನುಸ್ಮರಣವಿಲ್ಲದೇನೇ ಫಲಪ್ರಾಪ್ತಿಯು ದೃಷ್ಟವಾಗಿದೆ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

### ಸೂತ್ರ ॥ ಓಂ ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ ॥ ೨೨ ॥

**ಸೂತ್ರಾರ್ಥ ॥** ಬ್ರಹ್ಮ ಚಂದ್ರಗತಿಗಳು ಜ್ಞಾನಯೋಗಿ ಕರ್ಮಯೋಗಿಗಳನ್ನು ಕುರಿತು **ಅಗ್ನಿರ್ಜ್ಯೋತಿರಹಃ ಶುಕ್ಲಃ, ಧೂಮೋರಾತ್ರಿಸ್ತಥಾ ಕೃಷ್ಣಃ** ಇತ್ಯಾದಿ ಸ್ಮೃತಿಗಳಲ್ಲಿ ಹೇಳಲ್ಪಡುತ್ತವೆ. (ಅಂದರೆ ಜ್ಞಾನಕರ್ಮಸಾಧ್ಯಗಳೆಂದು ಸ್ಮರಿಸಲ್ಪಡುತ್ತವೆ) (ಕೇವಲ ಕಾಲಾದಿನಿಮಿತ್ತಕವಲ್ಲ.) (ಇದರಿಂದ ಬ್ರಹ್ಮಗತಿಯು ವಿದ್ಯಾಸಾಧ್ಯವೆಂದುಕ್ತವಾಯಿತು.) ಗತ್ಯನುಸ್ಮೃತಿಸಾಧ್ಯಗಳೂ ಆಗಿವೆ. **ಅಗ್ನಿರ್ಜ್ಯೋತಿಃ** ಎನ್ನುವ ಸ್ಮೃತಿಯಲ್ಲಿ ಬ್ರಹ್ಮವಿದಃ ಎನ್ನುವ ವಿಶೇಷಣವಿದ್ದುದರಿಂದಲೂ **ಗತ್ಯನುಸ್ಮರಣಾತ್ ಬ್ರಹ್ಮ ಚಂದ್ರಂ ವಾ ಗಚ್ಛತಿ** ಎನ್ನುವ ವಚನದಿಂದಲೂ ಗಮ್ಯವು ವಿದ್ಯಾಗತ್ಯನುಸ್ಮೃತಿಗಳಿಂದ ಸಾಧ್ಯವೂ ಆಗಿದೆ.

ಭಾಷ್ಯ ॥ (೧) ನ ಕೇವಲಂ ಕಾಲಾದಿಕೃತೇ ಬ್ರಹ್ಮಚಂದ್ರಗತೀ ಸ್ಮರ್ಯೇತೇ । ಕಿಂ ತು ಜ್ಞಾನಯೋಗಿನಃ ಕರ್ಮಯೋಗಿನಶ್ಚ । (೨) ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಾಣಂ । ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಶಾ ದಕ್ಷಿಣಾಯನಂ । ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ (ಗೀ.೮.೨೪.೨೫.) ॥ ಇತ್ಯತ್ರ ಯೋಗೀತಿ ವಿಶೇಷಣಾತ್ ಸ್ಮರಣನಿಮಿತ್ತೇ ಚೈತೇ ಗತೀ ॥ (೩) ಗತ್ಯನುಸ್ಮರಣಾದ್ಬ್ರಹ್ಮ ಚಂದ್ರಂ ವಾ ಗಚ್ಛತಿ ಧ್ರುವಂ । ಅನನುಸ್ಮರತಃ ಕಾಲೇ ಸ್ಮರಣಂ ಪ್ರಾಪ್ಯ ವೈ ಗತಿಃ ॥ ಇತ್ಯಾಧ್ಯಾತ್ಮೇ ॥ ೨೨ ॥ ಅಧಿ. ೧೦ ॥ ॥ ೧ ॥

ಭಾಷ್ಯಾರ್ಥ ॥ (೧) ಯಾವಕಾರಣದಿಂದ ಅಗ್ನಿರ್ಜ್ಯೋತಿಃ ಇತ್ಯಾದಿಗಳಿಂದ ಬ್ರಹ್ಮಚಂದ್ರ ಗತಿಗಳು ಕೇವಲ ಜ್ಞಾನಕರ್ಮರಹಿತಗಳಾದ ಕಾಲಾದಿಗಳಿಂದ ಮಾಡಲ್ಪಟ್ಟದ್ದೆಂದು ಸ್ಮರಿಸಲ್ಪಟ್ಟದೋ ಆದಕಾರಣ ಗಮ್ಯಪ್ರಾಪ್ತಿಗಾಗಿ ಮೋಕ್ಷಕ್ಕೋಸ್ಕರ ಜ್ಞಾನ ಗತ್ಯನುಸ್ಮೃತಿಗಳು ಅಪೇಕ್ಷಿತಗಳಲ್ಲ ಎಂದು ಯಾವುದು ಹೇಳಲ್ಪಟ್ಟದೋ ಅದು ಯುಕ್ತವಲ್ಲ (ಅವುಗಳು ಕೇವಲ ಕಾಲಾದಿ ಕೃತಗಳು, ಅಲ್ಲವಾದರೆ ಅವುಗಳಿಗೆ ಯಾವುವು ಹೇತುವು ಎಂದು ಪ್ರಶ್ನಿಸುತ್ತಾರೆ.) ಮತ್ತೆ ಬ್ರಹ್ಮಚಂದ್ರಗತಿಗಳು ಜ್ಞಾನಯೋಗಿಗಳನ್ನು ಕರ್ಮಯೋಗಿಗಳನ್ನು ಕುರಿತು ಯೋಗ ಶಬ್ದಿತ ವಿದ್ಯಾಕರ್ಮಗಳಿಂದಲೇ ಸಾಧ್ಯಗಳೆಂದು ಸ್ಮೃತಿಯಿಂದ ಹೇಳಲ್ಪಡುತ್ತವೆ. ಕೇವಲ ಕಾಲಾದಿಕೃತಗಳಲ್ಲ.) (೨) (ಅದು ಹೇಗೆಂದರೆ) ಯಾವ ಮಾರ್ಗದಲ್ಲಿ ಪ್ರಥಮತಃ ಅಗ್ನ್ಯಭಿಮಾನಿದೇವತಾಲೋಕವೂ ಅರ್ಚಿರ್ಲೋಕವೂ ಅಹರಭಿಮಾನಿ ದೇವತಾ ಲೋಕವೂ, ಶುಕ್ಲಪಕ್ಷಭಿಮಾನಿ ದೇವತಾಲೋಕವೂ ಪ್ರತ್ಯೇಕ ಪ್ರತ್ಯೇಕ ಆರು ಮಾಸಗಳಿಗೆ ಅಭಿಮಾನಿಗಳಾದ ದೇವತಾಲೋಕಗಳೂ ಆ ಮೇಲೆ ಉತ್ತರಾಯಣಾಭಿಮಾನಿ ದೇವತಾಲೋಕಗಳೂ ಇವೆಯೋ ಅಗ್ನ್ಯಾದಿ ದೇವತೆಗಳಿಂದ ಯುಕ್ತವಾದ ಮಾರ್ಗದಿಂದ ಹೋದ ಬ್ರಹ್ಮಜ್ಞಾನಿಗಳಾದ ಜನರು ವಿಷ್ಣ್ವಾಖ್ಯ ಪರಬ್ರಹ್ಮನನ್ನು ಹೊಂದುತ್ತಾರೆ. (ಪುನರಾವೃತ್ತಿಯನ್ನು ಹೊಂದುವುದಿಲ್ಲ.) (ಇಲ್ಲಿ ಶುಕ್ಲಪಕ್ಷ ಲೋಕಾಭಿಮಾನಿ ದೇವತಾಲೋಕಪ್ರಾಪ್ತ್ಯನಂತರದಲ್ಲಿ ಪೂರ್ಣಮಾ ದೇವಲೋಕವನ್ನೋ ಮಾಸದೇವಲೋಕಾನಂತರದಲ್ಲಿ ಮೇಷತುಲಾಖ್ಯ ವಿಷ್ವಭಿಮಾನಿ ದೇವತಾಲೋಕವನ್ನು ಇಟ್ಟುಕೊಳ್ಳಬೇಕು. ದೇವೇನಾಭಿಜಿತಾ ಶುಕ್ಲಪಕ್ಷೇನ ಚ ಸಪೂರ್ಣಮಾ । ವಿಷುವಾಚಾಯನೇನಾಸೌ ಪೂಜಿತಃ ಕೇಶವಂ ವ್ರಜೇತ್ ಎಂದು ಉಕ್ತವಾಗಿದೆ.) (೩.) (ಹೀಗೆ ಪ್ರತಿಜ್ಞಾತವಾದ ಎರಡು ಮಾರ್ಗಗಳಲ್ಲಿ ಅಪುನರಾವೃತ್ತಿಮಾರ್ಗಸಾಧನವನ್ನು ಹೇಳುತ್ತಾರೆ) ಯಾವ ಮಾರ್ಗದಲ್ಲಿ ಧೂಮಾಭಿಮಾನಿ ದೇವತಾಲೋಕವೂ, ಆ ಮೇಲೆ ರಾತ್ರ್ಯಭಿಮಾನಿ ದೇವತಾಲೋಕವೂ ಕೃಷ್ಣಪಕ್ಷಾಭಿಮಾನಿ ದೇವತಾಲೋಕವೂ ಷಣ್ಮಾಸಾಭಿಮಾನಿಗಳಾದ ದೇವತೆಗಳ ಲೋಕಗಳೂ ಆ ಮೇಲೆ ದಕ್ಷಿಣಾಯನಾಭಿಮಾನಿ ದೇವತಾಲೋಕವೂ ಇವೆಯೋ, ಆ ಮಾರ್ಗದಿಂದ ಕಾಮ್ಯಕರ್ಮವುಳ್ಳವನು ಚಂದ್ರಸಂಬಂಧಿಯಾದ ಪ್ರಭೆಯನ್ನು ಹೊಂದಿ ಪುನಃ ಭೂಮಿಯಲ್ಲಿ ಹುಟ್ಟುತ್ತಾನೆ, ಎನ್ನುವಲ್ಲಿ ಯೋಗೀ ಬ್ರಹ್ಮವಿದಃ ಎಂದು ವಿಶೇಷಣಪದಪ್ರಯುಕ್ತ ಈ ಬ್ರಹ್ಮಚಂದ್ರಗತಿಗಳು ಸ್ಮರಣವೇ ನಿಮಿತ್ತವಾಗಿ

ಉಳ್ಳವುಗಳು. (ಆದಕಾರಣ ಈ ಸ್ಮೃತಿಬಲದಿಂದ ಬ್ರಹ್ಮಚಂದ್ರಗತಿಗಳು ಕಾಲಾದಿ ಕೃತಗಳೆಂದು ತಿಳಿಯಕೂಡದು. ಈ ಬ್ರಹ್ಮಚಂದ್ರಗತಿಗಳನ್ನು ಕೇವಲ ಕಾಲಾದಿ ದೇವತಾ ಕೃತಗಳೆಂದು ಸಾಧಿಸುವುದಿಲ್ಲ ಮತ್ತು ಜ್ಞಾನಕರ್ಮಸಹಿತ ಕಾಲಾದಿ ನಿಮಿತ್ತಗಳೇ ಆಗಿವೆ. ಜ್ಞಾನಕರ್ಮಗಳನ್ನು ಹೊರತು ಕಾಲಾದಿ ದೇವತಾಪ್ರಯಾಣವೇ ಇಲ್ಲ) (೪) ಗತ್ಯನುಸ್ಮರಣದಿಂದ ಜ್ಞಾನಿಯು ಬ್ರಹ್ಮನನ್ನಾಗಲೀ ಚಂದ್ರನನ್ನಾಗಲೀ ನಿಶ್ಚಯವಾಗಿಯೂ ಹೊಂದುತ್ತಾನೆ. ಉತ್ಕ್ರಾಂತಿ ಸಮಯದಲ್ಲಿ ಪ್ರತಿಬಂಧಕ ಕರ್ಮದಿಂದ ಅಥವಾ ಅಜ್ಞಾನಾದಿಗಳಿಂದ ಸ್ಮರಿಸದೆ ಇದ್ದರೂ ಕರ್ಮಯೋಗಿಗೂ ಪುನಃ ಜನ್ಮಾಂತರದಲ್ಲಿ ಉತ್ಕ್ರಾಂತಿ ಕಾಲದಲ್ಲಿ ಸ್ಮರಣವನ್ನು ಹೊಂದಿಯೇ ಗತಿಯನ್ನು ಹೊಂದುತ್ತಾರೆ ಎಂದು ಆಧ್ಯಾತ್ಮ ಎನ್ನುವ ಗ್ರಂಥದಲ್ಲಿ ಹೇಳಿಯದೆ.

**ವಿಶೇಷಾಂಶ** ॥ ಬ್ರಹ್ಮಜ್ಞಾನಿಗೆ ಜ್ಞಾನದಿಂದ ಮೊದಲು ಗತಿಪ್ರಕಾರವನ್ನು ಧ್ಯಾನಿಸದೆ ಇದ್ದವನಿಗೂ ಜ್ಞಾನಾನಂತರದಲ್ಲಿ ಜ್ಞಾತನಾದ ಬ್ರಹ್ಮನ ಪ್ರಸಾದದಿಂದ ಉತ್ಕ್ರಾಂತಿ ಕಾಲದಲ್ಲಿ ಸ್ಮರಣವನ್ನು ಹೊಂದಿಗತಿಯು ಆಗಿಯೇ ಆಗುತ್ತದೆ. ಎಂದು ಸ್ಮೃತಿಗೆ ಜ್ಞಾನಸಾಮಾನ್ಯವು ಇಲ್ಲ. ಮತ್ತೆ ಜ್ಞಾನಕ್ಕೆ ಪ್ರಾಧಾನ್ಯವು, ಸ್ಮೃತಿಗೇನೇ ತಚ್ಛೇಷತ್ವವು. ॥ ೨೨ ॥

## ಅಧಿಕರಣ ಸಾರಾಂಶ

ವಿದ್ಯಾ ಗತಿಸ್ಮರಣ ಇವೆರಡೂ ಗಮ್ಯಪ್ರಾಪ್ತಿಗಾಗಿ ಅನಾವಶ್ಯಕವೋ ಆವಶ್ಯಕವೋ ಎಂದು ಸಂದೇಹವು. **ಅಗ್ನಿರ್ಜ್ಯೋತಿರಹಃ ಶುಕ್ಲಂ** ಎನ್ನುವ ಸ್ಮೃತಿಯಲ್ಲಿಯೂ **ಧೂಮೋ ರಾತ್ರಿಃ** ಎನ್ನುವ ಸ್ಮೃತಿಯಲ್ಲಿಯೂ ಬ್ರಹ್ಮಪ್ರಾಪ್ತಿ ಚಂದ್ರಪ್ರಾಪ್ತಿಗಳಿಗೆ ಕ್ರಮದಿಂದ ಅಹರ್ಲೋಕಾದಿ ರಾತ್ರ್ಯಾದಿ ಕಾಲಮರಣಾಧೀನತ್ವವು ತಿಳಿದುಬರುವುದರಿಂದ ಲೋಕದಲ್ಲಿ ಫಲಾನುಸ್ಮರಣವು ಇಲ್ಲದಿದ್ದರೂ ಫಲಪ್ರಾಪ್ತಿಯು ಕಂಡದ್ದರಿಂದ ಗಮ್ಯಪ್ರಾಪ್ತಿಗಾಗಿ ಗತಿಸ್ಮೃತಿಯು ಅಪೇಕ್ಷಿತವಲ್ಲ ಎಂದರೆ **ಅಗ್ನಿರ್ಜ್ಯೋತಿರಹಃ ಶುಕ್ಲಃ** ಎನ್ನುವ ಸ್ಮೃತಿಯಲ್ಲಿ ಬ್ರಹ್ಮವಿದಃ ಎಂದೂ **ಧೂಮೋರಾತ್ರಿಃ** ಎನ್ನುವ ಸ್ಮೃತಿಯಲ್ಲಿ **ಯೋಗೀ** ಎನ್ನುವ ವಿಶೇಷಣವಿದ್ದ ಪ್ರಯುಕ್ತವೂ ಆ ಸ್ಮೃತಿಗಳಿಂದ ಗಮ್ಯವು ಜ್ಞಾನಕರ್ಮರೂಪ ಉಪಾಯಸಾಧ್ಯವೆಂದು ತೋರುವುದರಿಂದ ಕೇವಲ ಅಹರಾದಿಕಾಲಮರಣಾಧೀನತ್ವವು ತೋರುವುದರಿಂದ ವಿದ್ಯಾದಿಗಳು ಅವಶ್ಯವಾಗಿ ಅಪೇಕ್ಷಿತಗಳೇ ಆಗಿವೆ. ಇಲ್ಲವಾದರೆ ಆ ಸ್ಮೃತಿಗಳಲ್ಲಿ ಆ ವಿಶೇಷಗಳು ವ್ಯರ್ಥವಾಗುವುವು. ಅಹರಾದಿಗಳಿಗೆ ಅಭಿಮಾನ್ಯಧಿಕರಣನ್ಯಾಯದಿಂದ ದೇವತಾತ್ವವಿರುವುದರಿಂದ ಕೇವಲ ಕಾಲತ್ವವಿಲ್ಲ. ಯಂ ಯಂ ವಾऽಪಿ ಎನ್ನುವ ಸ್ಮೃತಿಯಲ್ಲಿ ಶರೀರತ್ಯಾಗಕಾಲದಲ್ಲಿ ಸ್ಮೃತವಾದುದಕ್ಕೇನೇ ಪ್ರಾಪ್ಯತ್ವವನ್ನು ಹೇಳಿದ್ದರಿಂದ ಗಮ್ಯಪ್ರಾಪ್ತಿಗಾಗಿ ಗತಿಸ್ಮೃತಿಯೂ ಅವಶ್ಯಕವೇ. ॥ ಅಧಿ.೧೦ ॥

### ಯೋಗ್ಯಧಿಕರಣವು ಸಮಾಪ್ತವಾಯಿತು.

ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ
ಶ್ರೀಮದಾನಂದತೀರ್ಥಭಗವದತ್ಪಾದಾಚಾರ್ಯ(ದ) ವಿರಚಿತೇ
ಚತುರ್ಥಾಧ್ಯಾಯಸ್ಯ ದ್ವಿತೀಯ ಪಾದಃ ॥ ೪-೨ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮದ್ವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ನಾಲ್ಕನೇ ಅಧ್ಯಾಯದಲ್ಲಿ ದ್ವಿತೀಯ ಪಾದವು ಸಮಾಪ್ತವಾಯಿತು. ॥ ೪-೨ ॥

ಯತ್ಪದಂ ಮುನಿಭಿರ್ಧ್ಯಾತಂ ವೇದಾಂತಶ್ರಾಂತಮಾನಸೈಃ ।
ವಂದೇ ತಂ ಪರಮಾತ್ಮಾನಂ ವಿಷ್ಣುಂ ಶ್ರೀಮಧ್ವವಲ್ಲಭಂ ॥
ಜಯತಿ ಶ್ರೀರಮಾಕಾಂತಃ ಜಯತಿ ಶ್ರೀಶ್ಚ ತತ್ಪ್ರಿಯಾ ।
ಶ್ರೀಶ್ರೀಶಭಕ್ತೋ ಜಯತಿ ಮಧ್ವೋ ವಿಧ್ವಸ್ತಸಾಧ್ವಸಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಚತುರ್ಥಾಧ್ಯಾಯ ೩ನೇ ಪಾದ

## ಮಾರ್ಗಪಾದಃ

ಶ್ರುತಿಮುಖಗುಣಪೂರ್ಣಂ ಸರ್ವದೋಷಾತಿತೀರ್ಣಂ
ಶ್ರುತಿಮತಿರತಿಮದ್ಭಿಃ ಗಮ್ಯಮಾದ್ಯಾದಿಸದ್ಭಿಃ।
ನಿಖಿಲನಿಗಮವೇದ್ಯಂ ನಿರ್ಜರಾರಾಧ್ಯಮಾದ್ಯಂ
ನವನಲಿನಸುನೇತ್ರಂ ನೌಮಿ ಲಕ್ಷ್ಮೀಕಳತ್ರಂ ॥

## ೧. ಅರ್ಚಿರಾದ್ಯಧಿಕರಣವು

**ಭಾಷ್ಯ ॥ ಮಾರ್ಗೋ ಗಮ್ಯಂ ಚಾಸ್ಮಿನ್ ಪಾದ ಉಚ್ಯತೇ ॥ ೧ ॥**

ಭಾಷ್ಯಾರ್ಥ ॥ ಬ್ರಹ್ಮನಾಡಿಯಿಂದ ಉತ್ಕ್ರಾಂತರಾದ ಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿಯಾಗಲಿಕ್ಕೆ ಯಾವುದು ಮಾರ್ಗವದೆಯೋ, ಆ ಮಾರ್ಗದಿಂದ ಹೋದವರಿಗೂ ದೇಹಲಯವುಳ್ಳವರಿಗೂ ಪ್ರಾಪ್ತವಾದ ಕಾರ್ಯ ಬ್ರಹ್ಮ ದೇವಾದಿಗಳಿಗೆ ಪ್ರಾಪ್ಯವಾದ ಅಕಾರ್ಯ ಬ್ರಹ್ಮ (ಪರಬ್ರಹ್ಮ) ರೂಪವಾದುದು ಯಾವುದು ಗಮ್ಯವೋ, ಅವೆರಡಕ್ಕೂ ಈ ನಾಲ್ಕನೇ ಅಧ್ಯಾಯದ ಮೂರನೇ ಪಾದದಲ್ಲಿ ಹೇಳಲ್ಪಡುತ್ತದೆ. ॥ ೧ ॥

ಪೀಠಿಕೆ ॥ ಸಂಗತ್ಯಾದಿಗಳ ವಿಚಾರವು ಹುಟ್ಟುವುದಕ್ಕಾಗಿ ಸೂತ್ರವನ್ನೇ ಆದಿಯಲ್ಲಿ ಹೇಳುತ್ತಾರೆ—

**ಸೂತ್ರ ॥ ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ ॥ ೧ ॥**

ಸೂತ್ರಾರ್ಥ ॥ ಪರಬ್ರಹ್ಮನನ್ನು ಹೊಂದತಕ್ಕ ಜ್ಞಾನಿಯು ತೇಽರ್ಚಿಷಮಭಿಸಂಭವಂತಿ ಎಂದು ಹೇಳಿದ ಅರ್ಚಿರಾದಿ ಮಾರ್ಗದಿಂದಲೇ ಹೋಗುತ್ತಾನೆ. ಸ ವಾಯುಮಾಗಚ್ಛತಿ ಎಂದು ಹೇಳಿದ ವಾಯ್ವಾದಿ ಮಾರ್ಗದಿಂದ ಅಲ್ಲ. ಏಕೆಂದರೆ ತೇಽರ್ಚಿಷಮಭಿಸಂಭವಂತಿ ಎನ್ನುವ ಶ್ರುತಿಯಲ್ಲಿಯೂ ದ್ವಾವೇವ ಮಾರ್ಗೌ ಎನ್ನುವ ಸ್ಮೃತಿಯಲ್ಲಿಯೂ ಆ ಅರ್ಥವು ಪ್ರಸಿದ್ಧವಾದುದರಿಂದ.

ಭಾಷ್ಯಾರ್ಥ ॥ (೧) ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣ ಪಕ್ಷ(ಛಾ.೫.೧೦.೧) ಇತ್ಯರ್ಚಿಷಃ ಪ್ರಾಥಮ್ಯಂ ಶ್ರೂಯತೇ। (೨) ಯದಾ ಹ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ (ಬೃ.೭.೧೦.೧.)। ಇತಿ ವಾಯೋಃ ॥ ೨ ॥

ಭಾಷ್ಯಾರ್ಥ ॥ (೧) (ಯಾರು ಅರಣ್ಯದಲ್ಲಿ ಶ್ರದ್ಧೆಯಿಂದ ತಪಃಪದದಿಂದ ಹೇಳಲ್ಪಟ್ಟ ಜ್ಞಾನಸ್ವರೂಪನಾದ ಪರಬ್ರಹ್ಮನನ್ನು ಉಪಾಸನಾಮಾಡುತ್ತಾರೋ) ಶರೀರದಿಂದ ಉತ್ಕ್ರಾಂತರಾದ ಅವರು ಅರ್ಚಿಃ ಎಂದು ಹೆಸರುಳ್ಳ ಅಗ್ನಿಪುತ್ರನ ಲೋಕವನ್ನು ಹೊಂದುತ್ತಾರೆ. ಆಮೇಲೆ ಅರ್ಚಿರ್ಲೋಕಕ್ಕೆ ಅಭಿಮಾನಿಯಾದ ದೇವತೆಯ ಅನುಜ್ಞೆಯಿಂದ ಅಹರಭಿಮಾನಿಯಾದ ದೇವತಾಲೋಕವನ್ನೂ, ಆ ಮೇಲೆ ಆ ದೇವತೆಯ ಅನುಜ್ಞೆಯಿಂದ ಶುಕ್ಲಪಕ್ಷಾಭಿಮಾನಿಯಾದ ದೇವತಾಲೋಕವನ್ನೂ ಹೊಂದುತ್ತಾರೆ. ಎಂದು ಛಾಂದೋಗ್ಯ ಶ್ರುತಿಯಲ್ಲಿ ಬ್ರಹ್ಮಪ್ರಾಪ್ತಿಮಾರ್ಗದಲ್ಲಿ ಅರ್ಚಿರ್ಲೋಕಕ್ಕೆ ಪ್ರಾಥಮ್ಯವು ಶ್ರುತವಾಗುತ್ತದೆ. (೨) ಯಾವಾಗ ಬ್ರಹ್ಮಜ್ಞಾನಿಯು ಈ ಚರಮದೇಹದಿಂದ ಉತ್ಕ್ರಾಂತನಾಗುತ್ತಾನೋ, ಆಗ ಅವನು ಪ್ರವಹಾಖ್ಯ ವಾಯುವನ್ನು ಅಂದರೆ ಪ್ರವಹ ವಾಯುಲೋಕವನ್ನು ಹೊಂದುತ್ತಾನೆ, ಎನ್ನುವ ಶ್ರುತಿಯಲ್ಲಿ ವಾಯುಲೋಕಕ್ಕೆ ಪ್ರಾಥಮ್ಯವು ಶ್ರುತವಾಗುತ್ತದೆ. ಹೀಗೆ ಎರಡು ಶ್ರುತಿಗಳೂ ನಿರವಕಾಶಗಳಾಗಿರುವುದರಿಂದ ಅಧಿಕಾರಿಭೇದದಿಂದ (ಅಂದರೆ ಕೆಲವು ಅಧಿಕಾರಿಗಳಿಗೆ ಅರ್ಚಿರ್ಲೋಕವು ಪ್ರಾಥಮಿಕವು, ಕೆಲವರಿಗೆ ವಾಯುಲೋಕವು ಪ್ರಾಥಮಿಕವು. ಈ ಪ್ರಕಾರ) ಮಾರ್ಗಭೇದದಿಂದ ಎರಡು ಲೋಕಗಳಿಗೂ ಪ್ರಾಥಮ್ಯವು ಕೂಡಬಹುದು ಎಂದು ಪೂರ್ವಪಕ್ಷವು ಪ್ರಾಪ್ತವಾಗುವುದು. ॥ ೨ ॥

ಪೀಠಿಕೆ ॥ ಆಗ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಭಾಷ್ಯ ॥ (೧) ತತ್ರಾರ್ಚಿಷಃ ಪ್ರಾಪ್ತಿರೇವ ಪ್ರಥಮಾ । (೨) ದ್ವಾವೇವ ಮಾರ್ಗೌ ಪ್ರಥಿತಾವರ್ಚಿರಾದಿರ್ವಿಪಶ್ಚಿತಾಂ। ಧೂಮಾದಿಃ ಕರ್ಮಿಣಾಂ ಚೈವ ಸರ್ವವೇದವಿನಿರ್ಣಯಾತ್ ॥ ಅಗ್ನಿರ್ಜ್ಯೋತಿರಿತಿ ದ್ವೇಧೈವಾರ್ಚಿಷಃ ಸಂಪ್ರತಿಷ್ಠಿತಃ । ಅಗ್ನಿಂಗತ್ವಾ ಜ್ಯೋತಿರೇತಿ ಪ್ರಥಮಂ ಬ್ರಹ್ಮ ಸಂವ್ರಜನ್ । ಇತಿ ॥ (೩) ಏಕಸ್ಮಿಂಸ್ತು ಪುರೇ ಸಂಸ್ಥೋ ದ್ವಿರೂಪೋಽಗ್ನಿಃ ಸುತೋ ಮಹಾನ್ । ಇತಿ (೪) ಬ್ರಹ್ಮತರ್ಕೇ ॥ ೧ ॥ ಅಧಿ.೧ ॥ ॥ ೩ ॥**

ಭಾಷ್ಯಾರ್ಥ ॥ (೧) ಅರ್ಚಿರ್ಲೋಕ ವಾಯುಲೋಕಗಳ ಮಧ್ಯದಲ್ಲಿ ಉತ್ಕ್ರಾಂತನಾದ ಜ್ಞಾನಿಗೆ ಅರ್ಚಿರಭಿಮಾನಿದೇವತಾ ಲೋಕದ ಪ್ರಾಪ್ತಿಯೇ ಪ್ರಾಥಮಿಕವು. (ಅಂದರೆ ಅರ್ಚಿರ್ಲೋಕವೇ ಪ್ರಥಮತಃ ಹೊಂದಲ್ಪಡುತ್ತದೆ. ವಾಯುಲೋಕವಲ್ಲ) (೨) (ಜ್ಞಾನಿಪ್ರಾಪ್ಯ ಮಾರ್ಗದಲ್ಲಿ ಅರ್ಚಿರ್ಲೋಕವು ಆದಿಯಾಗಿದೆ, ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ಎಂದರೆ) ಎಲ್ಲಾ ವೇದಗಳನ್ನು ವಿಚಾರಮಾಡಿ ಜ್ಞಾನಿಗಳಿಗೆ ಒಂದು, ಕರ್ಮಿಗಳಿಗೆ ಇನ್ನೊಂದು. ಹೀಗೆ ಎರಡೇ ಮಾರ್ಗಗಳು ಪ್ರಸಿದ್ಧಗಳು. (ಅಂದರೆ ಜ್ಞಾನಿಗಳಿಂದ ನಿರ್ಣೀತಗಳಾಗಿವೆ. ಒಂದಾಗಲೀ ಮೂರಾಗಲಿ ಅಲ್ಲವೇ ಅಲ್ಲ) ಉತ್ಕ್ರಾಂತರಾದ ಜ್ಞಾನಿಗಳಿಗೆ ಯಾವುದು ಮಾರ್ಗವೋ, ಅದು ಅರ್ಚಿರಾದಿಗಳೇ ಎಂದು ತಿಳಿಯತಕ್ಕದು. ಕಾಮ್ಯ ಕರ್ಮಿಗಳ ಮಾರ್ಗವಾದರೂ ಧೂಮಾದಿಗಳೇ ಎಂದು ತಿಳಿಯತಕ್ಕದು. (ಹಾಗಾದರೆ **ಅಗ್ನಿರ್ಜ್ಯೋತಿಃ** ಎನ್ನುವ ಗೀತಾ ಸ್ಮೃತಿಯಲ್ಲಿ ಅಗ್ನಿಲೋಕವು ಪ್ರಾಥಮಿಕವು ಎಂದು ಹೇಳಲ್ಪಡುತ್ತದೆ. ಆದಕಾರಣ ಜ್ಯೋತಿಃಶಬ್ದದಿಂದ ವಾಚ್ಯವಾದ ಅರ್ಚಿರ್ಲೋಕಕ್ಕೆ ಪ್ರಾಥಮ್ಯವು

ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ) ಅಗ್ನಿಪುತ್ರನಾದ ಒಬ್ಬ ಅರ್ಚಿರ್ನಾಮಕನಿಗೇನೇ ಅಗ್ನಿಃ ಜ್ಯೋತಿಃ ಎಂದು ಎರಡು ರೂಪಗಳಿಂದ ಸಮ್ಯಕ್ ಅವಸ್ಥೆಯು ಕೂಡುತ್ತದೆ. ಅರ್ಚಿರ್ನಾಮಕನಿಂದ ಅಗ್ನಿಯು ಬೇರೆಯಲ್ಲ. ಆದರಲ್ಲಿ ಪರಬ್ರಹ್ಮನನ್ನು ಹೊಂದತಕ್ಕ ಜ್ಞಾನಿಯು ಪ್ರಥಮತಃ ಅಗ್ನ್ಯಭಿಮಾನಿದೇವತಾ ಲೋಕವನ್ನು ಹೊಂದಿ ಆ ಮೇಲೆ ಜ್ಯೋತಿರಭಿಮಾನಿದೇವತಾಲೋಕವನ್ನು ಹೊಂದುತ್ತಾನೆ (೩.) (ಆದಾಗ್ಯೂ ತೇಽರ್ಚಿಷಂ ಇತ್ಯಾದಿ ಶ್ರುತಿಯಲ್ಲಿ ಪ್ರತ್ಯೇಕ ಏಕೆ ಹೇಳಲಿಲ್ಲವೆಂದರೆ) ಪೂಜ್ಯನಾದ ಅರ್ಚಿರ್ನಾಮಕ ದೇವತೆಯು ಅಗ್ನಿಃ ಜ್ಯೋತಿಃ ಎನ್ನುವ ಭೇದದಿಂದ ಎರಡು ರೂಪವುಳ್ಳದ್ದಾಗ್ಯೂ ಒಂದೇ ಪಟ್ಟಣದಲ್ಲಿ ಇರುತ್ತದೆ. (ಆದಕಾರಣ ತೇಽರ್ಚಿಷಂ ಎನ್ನುವ ಶ್ರುತಿಯಲ್ಲಿ ಪ್ರತ್ಯೇಕ ಹೇಳಲಿಲ್ಲ. ಪ್ರಥಮತಃ ಎರಡು ವಿಧವಾದಾಗ್ಯೂ ಕ್ರಮದಿಂದ ಜ್ಞಾನಿಗಳಿಂದ ಪ್ರಾಪ್ಯವಾಗಿದೆ. ಆದಕಾರಣ ಅರ್ಚಿರಭಿಮಾನಿದೇವತಾಲೋಕಕ್ಕೆ ಪ್ರಾಥಮ್ಯ ಹೇಳಿದ್ದು ವಿರುದ್ಧವಲ್ಲ) (ಸೋಮಂ ವೈಶ್ವಾನರಂ ಎನ್ನುವಲ್ಲಿ ಅಗ್ನಿಲೋಕವು ಸೋಮಲೋಕದ ಅನಂತರದಲ್ಲಿ ಪ್ರಾಪ್ಯವೆಂದು ಹೇಳಿದ್ದರಿಂದ ಇಲ್ಲಿ ಅಗ್ನಿಲೋಕವು ಪ್ರಾಥಮಿಕವೆಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ) ಇಲ್ಲಿ ಪ್ರಧಾನ ಅಗ್ನಿ ಪುತ್ರನಲೋಕವು ವಿವಕ್ಷಿತವು ಅಲ್ಲಿ ಪ್ರಧಾನಾಗ್ನಿಯ ಲೋಕವು ಸೋಮಲೋಕದಿಂದ ಅನಂತರ ಪ್ರಾಪ್ಯವೆಂದು ವಿವಕ್ಷಿತವಾಗಿದೆ. ಆದಕಾರಣ ವಿರೋಧವಿಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿಯದೆ. ॥ ೧ ॥ । ೩. ॥

## ಅಧಿಕರಣ ಸಾರಾಂಶ

ಪೂರ್ವದಲ್ಲಿ ಗತಿಸ್ಮರಣವು ಆವಶ್ಯಕವೆಂದು ಯಾವುದು ಉಕ್ತವಾಗಿಯದೋ, ಅಂತಹ ಗತಿಯು ಅರ್ಚಿಲೋಕ ವಾಯುಲೋಕ ಇವೆರಡೂ ಪ್ರಥಮಪ್ರಾಪ್ಯವೋ ಅಥವಾ ಅರ್ಚಿರ್ಲೋಕವೇ ಪ್ರಥಮಪ್ರಾಪ್ಯವೋ, ಆದಕ್ಕಾಗಿ ಎರಡು ಶ್ರುತಿಗಳೂ ನಿರವಕಾಶಗಳೋ ಸಾವಕಾಶಗಳೋ, ಆದಕ್ಕಾಗಿ ಎರಡು ಪ್ರಥಮಪ್ರಾಪ್ಯವು ಎನ್ನುವುದು ಗತಿಗೆ ಅವಿರುದ್ಧವೋ, ವಿರುದ್ಧವೋ, ಎಂದು ಸಂದೇಹವು. **ತೇಽರ್ಚಿಷಮಭಿಸಂಭವಂತಿ, ಸ ವಾಯುಮಾಗಚ್ಛತಿ,** ಎನ್ನುವ ಎರಡು ಶ್ರುತಿಗಳಿಂದ ಅರ್ಚಿರ್ಲೋಕ ವಾಯುಲೋಕ ಎರಡು ಲೋಕಗಳೂ ಪ್ರಥಮಪ್ರಾಪ್ಯಗಳೆಂದು ಪೂರ್ವಪಕ್ಷವು ಬಂದರೆ **ದ್ವಾವೇವ ಮಾರ್ಗೌ ಪ್ರಥಿತೌ** ಎನ್ನುವ ಸ್ಮೃತಿಯಲ್ಲಿ ಅರ್ಚಿರಾದಿರೂಪವಾದುದು ಒಂದೇ ಮಾರ್ಗವು ಪ್ರಥಮಪ್ರಾಪ್ಯವು, ವಾಯ್ವಾದಿಗಳಲ್ಲ ಎಂದು ಪ್ರಥಿತೇಃ ಎನ್ನುವುದರಿಂದ ಪ್ರಸಿದ್ಧಿಯನ್ನು ಹೇಳಿದ್ದರಿಂದ **ತೇಽರ್ಚಿಷಂ** ಎನ್ನುವ ಶ್ರುತಿಗೆ ಪ್ರಾಬಲ್ಯವಿದ್ದಪ್ರಯುಕ್ತ ಅದನ್ನು ಅನುಸರಿಸಿ ಅರ್ಚಿರ್ನಾಮಕ ದೇವಲೋಕವೇ ಪ್ರಥಮ ಪ್ರಾಪ್ಯವು. ಪ್ರಾಥಮಿಕ ಬ್ರಹ್ಮಗತಿಯು ಒಂದೇ, ಅನೇಕವಲ್ಲ. **ಸ ವಾಯುಮಾಗಚ್ಛತಿ** ಎನ್ನುವ ಶ್ರುತಿಯಾದರೂ ಪ್ರಕೃತ ಶ್ರುತಿಯನ್ನು ಅನುಸರಿಸಿ ಅರ್ಚಿರ್ಲೋಕದ ಅನಂತರದಲ್ಲಿ ಮಧ್ಯದಲ್ಲಿ ಪ್ರಾಪ್ಯವಾಗಿ ಉಪಪನ್ನವಾಗುವುದು. ಅಂದರೆ ಅರ್ಚಿರ್ಲೋಕ ಪ್ರಾಪ್ತಿಯಾದ ಮೇಲೆ ವಾಯುಲೋಕವು ಪ್ರಾಪ್ಯವಾಗುತ್ತದೆ. ॥ ಅಧಿ.೧ ॥

**ಅರ್ಚಿರಾದ್ಯಧಿಕರಣವು ಸಮಾಪ್ತವಾಯಿತು.**

# ೨ ವಾಯುಶಬ್ದಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ವಾಯು ಲೋಕಕ್ಕೆ ದ್ವಿತೀಯ ಪ್ರಾಪ್ಯತ್ವವನ್ನು ಸಮರ್ಥಿಸುತ್ತಾರೆ. ವಾಯುಲೋಕ, ಅರ್ಚಿರ್ಲೋಕ ಇವೆರಡೂ ಅಧಿಕಾರಿ ಭೇದದಿಂದ ಬೇರೆ ಬೇರೆ ಮಾರ್ಗಗಳಾಗಿರುವುದರಿಂದ ಎರಡನೇದ್ದಾಗಿ ಪ್ರಾಪ್ಯಗಳಾಗುತ್ತವೆ. **ಸ ವಾಯುಮಾಗಚ್ಛತಿ, ಅರ್ಚಿಷೋऽಹಃ** ಎನ್ನುವ ಎರಡು ಶ್ರುತಿಗಳೂ ಪ್ರಮಾಣಗಳಾಗಿವೆ. ಇಲ್ಲಿ ವ್ಯವಸ್ಥಾಪಕವಾದುದು ಯಾವ ಪ್ರಮಾಣವೂ ಇಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ವಾಯು ಶಬ್ದಾದವಿಶೇಷವಿಶೇಷಾಭ್ಯಾಂ ಓಂ ॥ ೨ ॥

**ಸೂತ್ರಾರ್ಥ ॥** ಸಾಮಾನ್ಯ ವಿಶೇಷಗಳಿಂದ ವಾಯುವಿಗೆ ಪ್ರಾಪ್ಯತ್ವಪ್ರತಿಪಾದಕ ಶ್ರುತಿಯಿದ್ದುದರಿಂದ ವಾಯ್ವಭಿಮಾನಿದೇವತಾಲೋಕಕ್ಕೆ ದ್ವಿತೀಯ (ಎರಡನೇದ್ದಾಗಿ) ಪ್ರಾಪ್ಯತ್ವವು. **ಯದಾ ಹ ವೈ ಪುರುಷೋऽಸ್ಮಾಲ್ಲೋಕಾತ್ಪ್ರೈತಿ ಸ ವಾಯುಮಾಗಚ್ಛತಿ** ಎಂದು ಸಾಮಾನ್ಯವಾಗಿ ವಾಯುವಿಗೆ ಪ್ರಥಮ ಪ್ರಾಪ್ಯತ್ವವನ್ನು ಹೇಳಿದ್ದರೂ ಆ ಶ್ರುತಿಯು ಹಿಂದೆ ಹೇಳಿದ **ಅರ್ಚಿಷೋ ವಾಯುಂ** ಎನ್ನುವ ವಿಶೇಷವಚನದಿಂದ ಬಾಧಿತವಾಗುವುದರಿಂದ ವಾಯುಲೋಕವು ಅರ್ಚಿರ್ಲೋಕ ಪ್ರಾಪ್ಯನಂತರದಲ್ಲಿ ಪ್ರಾಪ್ಯವೆನ್ನುವುದೇ ನ್ಯಾಯವಾಗಿದೆ. **ದ್ವಿತೀಯಾಂ ಗತಿಂ ವಾಯುಮಾಗಚ್ಛತಿ** ಎನ್ನುವ ವಿಶೇಷೋಕ್ತಿಯಿಂದಲೂ ಹಾಗೆಯೇ ತಿಳಿಯುತ್ತದೆ.

**ಭಾಷ್ಯ ॥ (೧) ಅರ್ಚಿಷೋ ವಾಯುಂ ಗಚ್ಛತಿ ಸ ವಾಯುಮಾಗಚ್ಛತಿ** (ಬೃ.೭.೧೦.೧)। **ಇತಿ ಸಾಮಾನ್ಯವಚನಾತ್ । (೨) ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ ವಾಯೋರಹರಹ್ನ ಆಪೂರ್ಯಮಾಣಪಕ್ಷಂ । ಇತಿ ವಿಶೇಷವಚನಾಚ್ಚ ॥ ೨ ॥ ಅಧಿ.೨ ॥** ॥ ೨ ॥

**ಭಾಷ್ಯಾರ್ಥ ॥** (೧) (ಒಂದೇ ಮಾರ್ಗದಿಂದ ಪರಬ್ರಹ್ಮನನ್ನು ಹೊಂದತಕ್ಕ ಜ್ಞಾನಿಯು ಆ ಮಾರ್ಗದಲ್ಲಿ) ಅರ್ಚಿರ್ಲೋಕ ಪ್ರಾಪ್ಯನಂತರದಲ್ಲಿ ವಾಯುಲೋಕವನ್ನೇ ಹೊಂದುತ್ತಾನೆ. (ಅರ್ಚಿರ್ಲೋಕವನ್ನು ಅಲ್ಲ) ಏಕೆಂದರೆ ದೇಹದಿಂದ ಉತ್ಕ್ರಾಂತನಾದ ಅಪರೋಕ್ಷಜ್ಞಾನಿಯು ಅರ್ಚಿರ್ಲೋಕ ಪ್ರಾಪ್ತಿದ್ವಾರಾ ಪ್ರವಹಾಖ್ಯ ವಾಯುಲೋಕವನ್ನು ಹೊಂದುತ್ತಾನೆ. ಎಂದು ಸಾಮಾನ್ಯವಾಗಿ ಪ್ರಥಮತಃ ವಾಯುಲೋಕವು ಪ್ರಾಪ್ಯವು ಎನ್ನುವಲ್ಲಿ ಶ್ರುತಿಯು ಇದೆ. (ಸಾಮಾನ್ಯ ಶ್ರುತಿಗೆ ಎಷ್ಟು ಅರ್ಥದಲ್ಲಿ ಯಾವ ಅಂಶದಲ್ಲಿ ವಿಶೇಷಶ್ರುತಿಯಿಂದ ವಿರೋಧವದೆಯೋ, ಅಷ್ಟು ಅಂಶವನ್ನು ಮಾತ್ರವೇ ಬಿಡಬೇಕಾಗಿರುವುದರಿಂದ ಇಲ್ಲಿ ಪೂರ್ವಾಧಿಕರಣದಲ್ಲಿ ಹೇಳಿದ **ದ್ವಾವೇವ ಮಾರ್ಗೌ** ಇತ್ಯಾದಿ ಸ್ಮೃತ್ಯಾದಿಗಳಲ್ಲಿ ಪ್ರಸಿದ್ಧಿಯಿಂದ ವಿರೋಧವಿದ್ದಪ್ರಯುಕ್ತ ವಾಯುಲೋಕಕ್ಕೆ ಪ್ರಾಥಮ್ಯವು ಕೂಡದಿದ್ದರೂ ಎರಡನೇದ್ದಾಗಿ ಪ್ರಾಪ್ಯತ್ವವು ಅವಶ್ಯಕವು. ಅಂತೂ ಪ್ರಥಮತಃ ಅರ್ಚಿರ್ಲೋಕವು, ಎರಡನೇದ್ದು ವಾಯುಲೋಕವು ಪ್ರಾಪ್ಯವು.) (೨) (ಕೇವಲ ಹೀಗೆ ಈ ನ್ಯಾಯದಿಂದ ವಾಯು ಲೋಕವು ಎರಡನೇದ್ದಾಗಿ ಪ್ರಾಪ್ಯವಾಗುತ್ತದೆಂದು ಸಿದ್ಧಿಸುವುದಲ್ಲ. ಮತ್ತೆ ವಿಶೇಷಶ್ರುತಿಯಿಂದಲೂ

ಸಿದ್ಧಿಸುತ್ತದೆ ಎನ್ನುತ್ತಾರೆ) ಜ್ಞಾನಿಯು ಶರೀರದಿಂದ ಹೊರಟವನಾಗಿ ಅಥವಾ ಅರ್ಚಿರ್ಲೋಕದಿಂದ ಹೊರಟವನಾಗಿ ಎರಡನೇದ್ದಾಗಿ ಪ್ರಾಪ್ಯವಾದ ಪ್ರವಹವಾಯ್ವಭಿಮಾನಿದೇವತಾ ಲೋಕವನ್ನು ಹೊಂದುತ್ತಾನೆ. ಆ ವಾಯುಲೋಕದಿಂದ ಅಹರಭಿಮಾನಿದೇವತಾ ಲೋಕವನ್ನು ಆ ಲೋಕದಿಂದ ಶುಕ್ಲಪಕ್ಷಾಭಿಮಾನಿದೇವತಾ ಲೋಕವನ್ನು ಹೊಂದುತ್ತಾನೆ, ಎನ್ನುವ ವಿಶೇಷವಚನದಿಂದ (ಅಂದರೆ ಈ ವಚನವು, ವಾಯುಲೋಕವನ್ನು ಎರಡನೇ ಪ್ರಾಪ್ಯವನ್ನಾಗಿ ಹೇಳತಕ್ಕದಾದುದರಿಂದ ವಿಶೇಷವಚನವಾಗಿದೆ.) ಸಾಮಾನ್ಯವಚನವು ವಿಶೇಷವಚನದಿಂದ ಬಾಧಿತವಾಗುವುದರಿಂದ ವಾಯುಲೋಕವು ಎರಡನೇದ್ದಾಗಿಯೇ ಪ್ರಾಪ್ಯವು ಆಗುವುದು. ॥ ೨ ॥ ೨ ॥

## ಅಧಿಕರಣ ಸಾರಾಂಶ

ವಾಯ್ವಭಿಮಾನಿದೇವತಾ ಲೋಕ ಅಹರಭಿಮಾನಿದೇವತಾ ಲೋಕ ಇವೆರಡೂ ಅಧಿಕಾರಿ ಭೇದದಿಂದ ಎರಡನೇದ್ದಾಗಿ ಪ್ರಾಪ್ಯವೋ ಅಥವಾ ವಾಯ್ವಭಿಮಾನಿದೇವತಾಲೋಕವೇ ದ್ವಿತೀಯ ಪ್ರಾಪ್ಯವೋ, ಅದಕ್ಕಾಗಿ **ಸ ವಾಯುಮಾಗಚ್ಛತಿ, ಅರ್ಚಿಷೋಽಹಃ** ಎನ್ನುವ ಎರಡು ಶ್ರುತಿಗಳು ವಾಯುಲೋಕ ಅರ್ಚಿರ್ಲೋಕ ಇವು ಎರಡಕ್ಕೆ ದ್ವಿತೀಯಪ್ರಾಪ್ಯತ್ವವನ್ನು ತಿಳಿಸಿಕೊಡುತ್ತವೋ, ಇಲ್ಲವೋ. ಅದಕ್ಕಾಗಿ ಎರಡು ಮಾರ್ಗಗಳೋ ಒಂದೇ ಮಾರ್ಗವೋ, ಎಂದು ಸಂದೇಹವು. ಪೂರ್ವದಲ್ಲಿ **ದ್ವಾವೇವ ಮಾರ್ಗೌ** ಎನ್ನುವ ವಿಶೇಷವಚನದಿಂದ ಅರ್ಚಿರ್ಲೋಕಕ್ಕೇನೇ ಪ್ರಾಥಮಿಕತ್ವವು ಅವಗತವಾಗುವುದಾದರೂ ವಾಯುಲೋಕಕ್ಕೇನೇ ಎರಡನೇದ್ದಾಗಿ ಪ್ರಾಪ್ಯತ್ವವು ಎನ್ನುವಲ್ಲಿ ವಿಶೇಷವಚನವಿಲ್ಲದಿರುವುದರಿಂದ **ಅರ್ಚಿಷಃ ಅಹಃ ಸ ವಾಯುಂ** ಎನ್ನುವ ಎರಡು ಶ್ರುತಿಗಳು ಪ್ರಮಾಣಗಳಾಗಿರುವುದರಿಂದ ಮಾರ್ಗಭೇದದಿಂದ ವಾಯುಲೋಕ ಅಹರ್ಲೋಕ ಎರಡು ಲೋಕಗಳಿಗೂ ದ್ವಿತೀಯಪ್ರಾಪ್ಯತ್ವವನ್ನು ಹೇಳಿದರೆ ವಿರೋಧವಿಲ್ಲದಿರುವುದರಿಂದ ಎರಡು ಶ್ರುತಿಗಳ ಬಲದಿಂದ ಅಹರ್ಲೋಕ ವಾಯುಲೋಕ ಎರಡೂ ದ್ವಿತೀಯ ಪ್ರಾಪ್ಯಗಳು, ಎಂದು ಪೂರ್ವಪಕ್ಷವು ಬಂದರೆ **ಸ ವಾಯುಮಾಗಚ್ಛತಿ** ಎನ್ನುವ ಸಾಮಾನ್ಯವಚನದಿಂದ ವಾಯುಲೋಕಕ್ಕೆ ಪ್ರಾಪ್ತವಾದ ಪ್ರಾಥಮ್ಯವನ್ನು ದ್ವಾವೇವ ಮಾರ್ಗೌ ಪ್ರಥಿತೌ ಎಂದು ಹೇಳಿದ ಪ್ರಸಿದ್ಧಿವಿರೋಧದಿಂದ ಬಿಟ್ಟದ್ದರೂ ಎರಡನೇದ್ದಾಗಿ ಪ್ರಾಪ್ಯವೆನ್ನುವುದೇ ನ್ಯಾಯಪ್ರಾಪ್ತವಾದುದರಿಂದಲೂ ದ್ವಿತೀಯಾಂ ಗತಿ ವಾಯು ಮಾಗಚ್ಛತಿ ಎನ್ನುವ ವಿಶೇಷಶ್ರುತಿಯಿಂದಲೂ ವಾಯುಲೋಕವೇ ದ್ವಿತೀಯಪ್ರಾಪ್ಯವು. ಅಹರ್ಲೋಕವು ಆಮೇಲೆಯೇ ಪ್ರಾಪ್ಯವು. ಆದಕಾರಣ ಎರಡು ಮಾರ್ಗವಾಗಿ ಎರಡು ಲೋಕಗಳಿಗೂ ದ್ವಿತೀಯಪ್ರಾಪ್ಯತ್ವವು ದ್ವಾವೇವ ಎನ್ನುವ ವಚನದಿಂದ ಹೇಳಲ್ಪಟ್ಟ ಪ್ರಸಿದ್ಧಿ ವಿರೋಧವಿದ್ದುದರಿಂದಲೇ ಬಾಧಿತವಾಗಿದೆ. ॥ ಅಧಿ.೨ ॥

**ವಾಯುಶಬ್ದಾಧಿಕರಣವು ಸಮಾಪ್ತವಾಯಿತು.**

## ೩. ತಟಿದಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ತಟಿದಭಿಮಾನಿದೇವತಾಲೋಕವು ಸಂವತ್ಸರಾಭಿಮಾನಿದೇವತಾ

ಲೋಕಪ್ರಾಪ್ತ್ಯನಂತರದಲ್ಲಿ ಪ್ರಾಪ್ಯವೆಂದು ಸಮರ್ಥಿಸುತ್ತಾರೆ—

## ಸೂತ್ರ ॥ ಓಂ ತಟಿತೋಽಧಿವರುಣಃ ಸಂಬಂಧಾತ್ ಓಂ ॥ ೩ ॥

**ಸೂತ್ರಾರ್ಥ ॥** ತಟಿದಭಿಮಾನಿದೇವತಾ ಲೋಕಪ್ರಾಪ್ತ್ಯನಂತರದಲ್ಲಿ ವರುಣಲೋಕವು ಉತ್ಕ್ರಾಂತ ಜ್ಞಾನಿಯಿಂದ ಪ್ರಾಪ್ಯವಾಗುತ್ತದೆ. ಸಂವತ್ಸರಾದ್ವರುಣಲೋಕಂ ಎನ್ನುವ ಶ್ರುತಿಯಿಂದ ಸಂವತ್ಸರ ಲೋಕಪ್ರಾಪ್ತ ನಂತರದಲ್ಲಿಯೇ ಅಲ್ಲ. ಏಕೆಂದರೆ **ತಟಿತಾ ಹ್ಯೂಹ್ಯತೇ ವರುಣಲೋಕಃ** ಎಂದು ತಟಿಲ್ಲೋಕದ ಮೇಲೆ ವರುಣಲೋಕಕ್ಕೆ ಸಂಬಂಧವನ್ನು ಬೋಧಿಸತಕ್ಕ ಶ್ರುತಿಯು ಇದ್ದುದರಿಂದ.

**ಭಾಷ್ಯ ॥ (೧) ಮಾಸೇಭ್ಯಃ ಸಂವತ್ಸರಂ ಸಂವತ್ಸರಾದ್ವರುಣಲೋಕಂ ವರುಣಲೋಕಾತ್ ಪ್ರಜಾಪತಿಲೋಕಂ । ಇತಿ ಕೌಂಡಿನ್ಯಶ್ರುತಿಃ ॥ (೨) ಸಂವತ್ಸರಾತ್ತಟಿತಮಾಗಚ್ಛತಿ ತಟಿತಃ ಪ್ರಜಾಪತಿಲೋಕಂ । ಇತಿ ಚ ಗೌಪವನಶ್ರುತಿಃ ॥ ೧ ॥**

**ಭಾಷ್ಯಾರ್ಥ ॥** ಮಾಸಾಭಿಮಾನಿದೇವತಾ ಲೋಕದಿಂದ ಸವಂತ್ಸರಾಭಿಮಾನಿದೇವತಾ ಲೋಕವನ್ನೂ ಆ ಲೋಕದಿಂದ ವರುಣಲೋಕವನ್ನೂ, ವರುಣಲೋಕದಿಂದ ದಕ್ಷಪ್ರಜಾಪತಿ ಲೋಕವನ್ನೂ ನಿಷ್ಕ್ರಾಂತನಾದ ಜ್ಞಾನಿಯು ಹೊಂದುತ್ತಾನೆ, ಎಂದು ಕೌಂಡಿನ್ಯ ಶ್ರುತಿಯು (೨) ಸಂವತ್ಸರಾಭಿಮಾನಿ ದೇವತಾ ಲೋಕದಿಂದ ತಟಿಲ್ಲೋಕವನ್ನು ಹೊಂದುತ್ತಾನೆ. ತಟಿದಭಿಮಾನಿದೇವತಾ ಲೋಕದಿಂದ ದಕ್ಷಪ್ರಜಾಪತಿ ಲೋಕವನ್ನು ಹೊಂದುತ್ತಾನೆ, ಎಂದು ಗೌಪವನ ಶ್ರುತಿಯು.

**ವಿಶೇಷಾಂಶ ॥** ಆದ್ಯಶ್ರುತಿಯಲ್ಲಿ ಸಂವತ್ಸರ ಲೋಕಪ್ರಾಪ್ತ್ಯನಂತರದಲ್ಲಿ ವರುಣಲೋಕವು ಪ್ರಾಪ್ಯವೆಂದು ಪ್ರತಿಪಾದಿತವಾಗಿದೆ. ಎರಡನೇ ಶ್ರುತಿಯಲ್ಲಿ ತಟಿಲ್ಲೋಕವು ಪ್ರಾಪ್ಯವೆಂದು ಪ್ರತಿಪಾದಿಸಲ್ಪಟ್ಟಿದೆ. ಆದಕಾರಣ ಸಂಶಯವು. ಎರಡು ಶ್ರುತಿಗಳೂ ಪ್ರಮಾಣಗಳಾಗಿರುವುದರಿಂದ ವರುಣಲೋಕ ತಟ್ಟಿಲ್ಲೋಕ ಎರಡು ಲೋಕಗಳೂ ಸಂವತ್ಸರಲೋಕಪ್ರಾಪ್ತಿಯಾದ ಮೇಲೆ ಪ್ರಾಪ್ಯಗಳೂ ಸಂವತ್ಸರಲೋಕದಿಂದ ಪ್ರಜಾಪತಿ ಲೋಕಕ್ಕೆ ಹೋಗಲಿಕ್ಕೆ ಅಧಿಕಾರಿ ಭೇದದಿಂದ ಮಾರ್ಗಭೇದವು ಉಪಪನ್ನವಾಗುವುದು, ಎಂದು ಪೂರ್ವಪಕ್ಷವು. ॥ ೧ ॥

**ಪೀಠಿಕೆ ॥** ಹೀಗೆ ಪ್ರಾಪ್ತವಾದ ಪೂರ್ವಪಕ್ಷವನ್ನು ತಿರಸ್ಕರಿಸಿ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಭಾಷ್ಯ ॥ (೧) ತತ್ರ ತಟಿತೋ ವರುಣಂ ಗಚ್ಛತಿ । (೨) ತಟಿತಾ ಹ್ಯೂಹ್ಯತೇ ವರುಣಲೋಕಸ್ತಟಿದುಪರಿ ಮುಕ್ತಾಮಯೋ ರಾಜತೇ ತತ್ರಾಸೌ ವರುಣೋ ರಾಜಾ ಸತ್ಯಾನೃತೇ ವಿವಿಂಚತಿ । ಇತ್ಯುಪರಿ ಸಂಬದ್ಧ(ಸಂಬಂಧ) ತ್ವಶ್ರುತೇಃ ॥ ೩ ॥ ಅಧಿ.೩ ॥ ॥ ೨ ॥**

**ಭಾಷ್ಯಾರ್ಥ ॥** (೧) ಉತ್ಕ್ರಾಂತರಾದ ಜ್ಞಾನಿಗಳೆಲ್ಲರೂ ತಮ್ಮಿಂದ ಗಮ್ಯವಾದ ಮಾರ್ಗದಲ್ಲಿ ಸಂವತ್ಸರಲೋಕಪ್ರಾಪ್ತ್ಯನಂತರದಲ್ಲಿ ತಟಿಲ್ಲೋಕವನ್ನೇ ಹೊಂದುತ್ತಾರೆ. ಆಮೇಲೆ ತಟಿಲ್ಲೋಕಾಭಿಮಾನಿ

ಯಾದ ದೇವತೆಯ ಅನುಜ್ಞೆಯಿಂದ ವರುಣಲೋಕವನ್ನು ಹೊಂದುತ್ತಾರೆ. (ಏವಂಚ ತಟಿಲ್ಲೋಕ ಪ್ರಾಪ್ತ್ಯನಂತರದಲ್ಲಿಯೇ ವರುಣಲೋಕವು ಪ್ರಾಪ್ಯವು. ಅದಕ್ಕಿಂತ ಮೊದಲು ಪ್ರಾಪ್ಯವಲ್ಲ) ಯಾವ ಕಾರಣದಿಂದ ತಟಿಲ್ಲೋಕದಿಂದ ವರುಣಲೋಕವು ಧರಿಸಲ್ಪಡುತ್ತದೋ, ಆದಕಾರಣ ತಟಿಲ್ಲೋಕದಿಂದ ಮೇಲೆ ಇರತಕ್ಕ ತನ್ನ ಲೋಕದಲ್ಲಿ ರೋಗರಹಿತನಾದ ವರುಣನು ಪ್ರಕಾಶಿಸಿಕೊಂಡಿರುತ್ತಾನೆ. ಆ ವರುಣಲೋಕದಲ್ಲಿ ರಾಜನಾದ ವರುಣನು, ಪ್ರಜೆಗಳಿಗೋಸ್ಕರ ಸತ್ಯವನ್ನೂ ಸುಳ್ಳನ್ನೂ ವಿಚಾರ ಮಾಡುತ್ತಾನೆ. (ಅಂದರೆ ಮನುಷ್ಯಾದಿಗಳ ಸತ್ಯ ಅನೃತಾದಿ ನಿಮಿತ್ತಕವಾದ ಪುಣ್ಯ ಪಾಪಗಳನ್ನು ವಿಚಾರ ಮಾಡುತ್ತಾನೆ, ಎಂದು ತಟಿಲ್ಲೋಕದ ಮೇಲೆ ವರುಣನಿಗೆ ಸಂಬಂಧಬೋಧಕ ಶ್ರುತಿಯಿದ್ದದರಿಂದ ಸಂವತ್ಸರಲೋಕವು ಪ್ರಾಪ್ತ್ಯನಂತರದಲ್ಲಿ ತಟಿಲ್ಲೋಕವು ಪ್ರಾಪ್ತಿಯಾಗಿ ಆ ಮೇಲೆಯೇ ವರುಣಲೋಕವು ಪ್ರಾಪ್ಯವು. ॥ ೩. ॥ ॥ ೩. ॥

## ಅಧಿಕರಣ ಸಾರಾಂಶ

**ತೇಽರ್ಚಿಷಮಭಿಸಂಭವಂತಿ ಅರ್ಚಿಷೋಽಹಃ** ಇತ್ಯಾದಿ ಛಂದೋಗ ಶ್ರುತ್ಯಾದಿಗಳಲ್ಲಿ ಹೇಳಿದ ಬ್ರಹ್ಮಪ್ರಾಪ್ತಿಮಾರ್ಗದಲ್ಲಿ ಎಲ್ಲಿ ವಿವಾದವಿದೆಯೋ, ಅಲ್ಲಿ ೧ನೇ ಮತ್ತು ೨ನೇ ಪ್ರಾಪ್ಯವಾದುದನ್ನು ನಿರ್ಣಯಿಸಿದರೂ ಆ ಮೇಲೆ ಸಂವತ್ಸರಲೋಕ ಪರ್ಯಂತವಾಗಿ ಕ್ರಮದಿಂದ ಪ್ರಾಪ್ಯಗಳಾದ ಮಾರ್ಗಗಳಲ್ಲಿ ವಿವಾದವು ಇಲ್ಲದಿರುವುದರಿಂದ ಆ ಅಂಶವನ್ನು ನಿರ್ಣಯಿಸದೆ, ಸಂವತ್ಸಲೋಕ ಪ್ರಾಪ್ತ್ಯನಂತರದಲ್ಲಿ ಪ್ರಜಾಪತಿಲೋಕವನ್ನು ಹೊಂದಲಿಕ್ಕೆ ತಟಿಲ್ಲೋಕ ವರುಣಲೋಕಗಳೆರಡೂ ಮಾರ್ಗಭೇದದಿಂದ ಪ್ರಾಪ್ತಗಳೋ ಅಥವಾ ತಟಿಲ್ಲೋಕವನ್ನು ಹೊಂದಿ ವರುಣಲೋಕವನ್ನು ಹೊಂದುವುದೋ, ಅದಕ್ಕಾಗಿ **ಸಂವತ್ಸರಾದ್ವರುಣಲೋಕಂ ಸಂವತ್ಸರಾತ್ತಟಿತಂ** ಎನ್ನುವ ಎರಡು ಶ್ರುತಿಗಳೂ ಪ್ರಮಾಣವೋ ಅಲ್ಲವೋ, ಪೂರ್ವಾಧಿಕರಣದಲ್ಲಿ **ದ್ವಿತೀಯಾಂ ಗತಿಂ ವಾಯುಂ** ಎನ್ನುವ ವಿಶೇಷ ವಚನದಿಂದ ವಾಯುಲೋಕವು ದ್ವಿತೀಯವಾಗಿ ಪ್ರಾಪ್ಯವು ಎಂದು ನಿರ್ಣಯವಾದರೂ ಇಲ್ಲಿ ಅಂತಹ ಪ್ರಮಾಣವಿಲ್ಲದಿರುವುದರಿಂದ ಎರಡು ಶ್ರುತಿಗಳೂ ಪ್ರಮಾಣಗಳಾಗಿರುವುದರಿಂದ ಅಧಿ ಕಾರಿಭೇದದಿಂದ ಎರಡು ಲೋಕಗಳಿಗೂ ಪ್ರಾಪ್ಯತ್ವವು ಕೂಡುವುದರಿಂದ ಎರಡು ಲೋಕಗಳೂ ಸಂವತ್ಸರಾಭಿಮಾನಿ ಲೋಕದಿಂದ ಅನಂತರದಲ್ಲಿ ಪ್ರಾಪ್ಯಗಳು ಎಂದು ಪೂರ್ವಪಕ್ಷವು ಬಂದರೆ **ತಟಿತೋ ವರುಣಂ ಗಚ್ಛತಿ** ಎನ್ನುವ ವಿಶೇಷ ಶ್ರುತಿಯಿಂದ ತಟಿಲ್ಲೋಕ ಪ್ರಾಪ್ತ್ಯನಂತರದಲ್ಲಿಯೇ ಸಯುಕ್ತಿಕವಾಗಿ ವರುಣಲೋಕವು ಪ್ರಾಪ್ಯವೆಂದು ಹೇಳಿದ್ದರಿಂದ ಎರಡು ಮಾರ್ಗಗಳಿಗೆ ಒಂದು ಮಾರ್ಗದಲ್ಲಿ ಏಕಕಾಲದಲ್ಲಿ ಪ್ರಾಪ್ಯತ್ವವು ವಿರುದ್ಧವಾದುದರಿಂದ ಎರಡು ಶ್ರುತಿಗಳು ಎರಡು ಲೋಕಗಳ ಪ್ರಾಪ್ತಿಯನ್ನು ಪೌರ್ವಾಪರ್ಯದಿಂದಲೇ ಹೊಂದಿಸಿಕೊಡತಕ್ಕವುಗಳು ಎಂದು ಅವಶ್ಯವಾಗಿ ಹೇಳಬೇಕಾದುದರಿಂದ ಪೂರ್ವದಲ್ಲಿ ತಟಿಲ್ಲೋಕವನ್ನು ಹೊಂದಿ, ಆ ಮೇಲೆ ವರುಣಲೋಕವನ್ನು ಹೊಂದುತ್ತಾನೆ. ॥ ಅಧಿ.೩. ॥

**ತಟಿದಧಿಕರಣವು ಸಮಾಪ್ತವಾಯಿತು.**

# ೪ ಆತಿವಾಹಿಕಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಅರ್ಚಿರ್ಲೋಕಪ್ರಾಪ್ತ್ಯನಂತರದಲ್ಲಿ ಪ್ರಾಪ್ತನಾದ ವಾಯುವಿಗೆ ಅತಿವಾಹಿಕತ್ವವನ್ನು ಸಮರ್ಥಿಸುತ್ತಾರೆ. ವಾಯುಶಬ್ದವು ಮುಖ್ಯವಾಯುವಿನಲ್ಲಿಯೇ ಮುಖ್ಯವಾದ ಪ್ರಯುಕ್ತ ಈ ವಾಯುವು ಮುಖ್ಯವಾಯುವೇ ಆಗಬೇಕು, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ॥ ೪ ॥

**ಭಾಷ್ಯ ॥ ಪೂರ್ವೋ (ಪೂರ್ವತ್ರೋ) ಕ್ತಸ್ತ್ವಾತಿವಾಹಿಕೋ ವಾಯುಃ । ಪೂರ್ವಗಮನ-ಲಿಂಗಾತ್ ॥ ೪ ॥** **॥ ೧ ॥**

ಭಾಷ್ಯಾರ್ಥ ॥ ಪೂರ್ವದಲ್ಲಿ ಪ್ರಾಪ್ಯನೆಂದು ಹೇಳಲ್ಪಟ್ಟ ವಾಯುವಾದರೂ ಪ್ರವಹ ಎಂದು ಹೆಸರು ಉಳ್ಳ ಅತಿವಾಹಿಕನು, **ಅತಿಶಯಿತಂ ವಿಷ್ಣುಂ ವಹತಿ** ಎನ್ನುವ ವ್ಯುತ್ಪತ್ತಿಯಿಂದ ಅತಿವಹಿಃ=ಮುಖ್ಯವಾಯುವು, ಆತನ ಮಗನೇ. (ಸರ್ವಥಾ ಮುಖ್ಯನಲ್ಲ) ಪೂರ್ವಪ್ರಾಪ್ಯತ್ವ ರೂಪವಾದ ಲಿಂಗದಿಂದ. (ಪೂರ್ವಪ್ರಾಪ್ಯತ್ವವು ಅಮುಖ್ಯಕ್ಕೇನೇ ಇರುವುದು. ಮುಖ್ಯಕ್ಕೆ ಇಲ್ಲ)

ವಿಶೇಷಾಂಶ ॥ **ಪ್ರವಹಂ ವಾಯುಪುತ್ರಂ ಚ ಸೂರ್ಯಸೋಮೌ ಚ ವಿದ್ಯುತಂ । ಪ್ರಾಪ್ಯ ಪ್ರಧಾನವಾಯುಂ ಚ ಯಾತಿ ತತ್ಪರಮಂ ಪದಂ ॥** ಎನ್ನುವ ಪ್ರಮಾಣದಿಂದ ಪ್ರವಹ ವಾಯುವಿಗೆ ಪ್ರಾಪ್ಯತ್ವವೂ ವಾಯುಪುತ್ರತ್ವವೂ ಸಿದ್ಧವಾಗುವುದು. ॥ ೪ ॥ ॥ ೧ ।ಜ

ಪೀಠಿಕೆ ॥ ಆದಾಗ್ಯೂ ಪೂರ್ವದಲ್ಲಿ ಪ್ರಾಪ್ಯನಾದ ವಾಯುವಿಗೆ ಅತಿವಾಹಿಕತ್ವವೂ ಹೇಗೆ ಸಿದ್ಧಿಸುತ್ತದೆ, ಮುಖ್ಯ ವಾಯುವಿಗೂ ಪೂರ್ವದಲ್ಲಿ ಪ್ರಾಪ್ತಿಯು ಕೂಡಬಹುದು. ಅಧಮನಿಗೂ ನಂತರದಲ್ಲಿ ಪ್ರಾಪ್ತಿಯು ಕೂಡಬಹುದು, ತಥಾಚ ಪೂರ್ವದಲ್ಲಿ ಉಕ್ತನಾದವನು ಆತಿವಾಹಿಕನೋ ಮುಖ್ಯನೋ, ಇತ್ಯಾದಿ ಸಂಶಯವೇ ಬರುವುದು, ಎನ್ನುವ ಅಭಿಪ್ರಾಯದಿಂದ ಆಕ್ಷೇಪಿಸುತ್ತಾರೆ—

**ಭಾಷ್ಯ ॥ ಕುತಃ** **॥ ೨ ॥**

ಭಾಷ್ಯಾರ್ಥ ॥ ಪೂರ್ವೋಕ್ತನಿಗೆ ಅತಿವಾಹಿಕತ್ವ ಸಿದ್ಧಿಯೂ, ಮೇಲೆ ಹೇಳಲ್ಪಟ್ಟವನಿಗೆ ಮುಖ್ಯತ್ವ ಸಿದ್ಧಿಯೂ ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ? (ಪ್ರಾಪ್ಯತ್ವಲಿಂಗವು ಸಾವಕಾಶವಾಗಬಹುದು.) ॥೨॥

## ಸೂತ್ರ ॥ ಓಂ ಉಭಯವ್ಯಾಮೋಹಾತ್ತತ್ಸಿದ್ಧೇಃ ಓಂ ॥ ೫ ॥

ಸೂತ್ರಾರ್ಥ ॥ ವಾಯುಶಬ್ದದಲ್ಲಿ ಅತಿವಾಹಿಕನೋ ಮುಖ್ಯನೋ ಎಂದು ಸಂದೇಹವಿದ್ದರೂ ಪೂರ್ವೋಕ್ತನಾದವನು ಅತಿವಾಹಿಕನು, ಮೇಲೆ ಹೇಳಲ್ಪಟ್ಟವನು ಮುಖ್ಯ ವಾಯುವು ಎನ್ನುವ ಅರ್ಥವು ಸಿದ್ಧಿಸುವುದರಿಂದ (ಮೇಲೆ ಹೇಳಲ್ಪಟ್ಟವನಲ್ಲಿ ದಿವಸ್ಪತಿತ್ವರೂಪಲಿಂಗವಿದೆ.) (**ಉತ್ಕ್ರಾಂತಸ್ತೇ ಶರೀರಾತ್ತ್ವಾತ್** ಎನ್ನುವ ಸ್ಮೃತಿಯಿಂದ ಈ ಅರ್ಥವೆಲ್ಲವೂ ತಿಳಿಯತಕ್ಕುದು.)

ಭಾಷ್ಯ ॥ (೧) ಸ ವಾಯುಮಾಗಚ್ಛತಿ (ಬೃ.೭.೧೦.೧.) ಇತಿ ಪ್ರಥಮಮುಚ್ಯತೇ (೨) ಉತ್ಕ್ರಾಂತೇ ವಿದ್ವಾನ್ ಪರಮಭಿಗಚ್ಛನ್ ವಿದ್ಯುತಮೇವಾಂತತ ಉಪಗಚ್ಛತಿ ದ್ಯೌರ್ವಾವ ವಿದ್ಯುತ್ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ । ಇತ್ಯಂತೇಽಪಿ ವಾಯುಗಮನಶ್ರುತೇಃ। (೩) ಪೂರ್ವೋಕ್ತ ಅತಿವಾಹಿಕಃ ಪರೋವೇತಿ ವ್ಯಾಮೋಹೇ ಉತ್ತರೇ ದಿವಸ್ಪತಿರಿತಿ ವಿಶೇಷಣಾತ್ ಪೂವತ್ರಾತಿವಾಹಿಕಸ್ಯೈವ ಸಿದ್ಧೇಃ ॥ ೩ ॥

ಭಾಷ್ಯಾರ್ಥ ॥ (೧) ಜ್ಞಾನಿಯು ವಾಯುಲೋಕವನ್ನು ಹೊಂದುತ್ತಾನೆ, ಎಂದು ಪ್ರಥಮತಃ ಹೇಳಲ್ಪಡುತ್ತದೆ. (೨) ಉತ್ಕ್ರಾಂತನಾದ ಜ್ಞಾನಿಯು ಶ್ರೀಹರಿಯನ್ನು ಹೊಂದುತ್ತಾ ಅಂತ್ಯದಲ್ಲಿ ವಿದ್ಯುಲ್ಲೋಕವನ್ನೇ ಹೊಂದುತ್ತಾನೆ. ಭಾರತೀದೇವಿಯೇ ವಿದ್ಯುತ್ ಶಬ್ದವಾಚ್ಯಳು. ಭಾರತೀಪತಿಯಾದ ಮುಖ್ಯವಾಯುವನ್ನು ಹೊಂದಿ, ಆ ವಾಯುದೇವರ ದ್ವಾರಾ ಪರಬ್ರಹ್ಮನನ್ನು ಹೊಂದುತ್ತಾನೆ. ಅನಂತರದಲ್ಲಿ ಪ್ರಾಪ್ಯವಾದುದು ಮತ್ತೊಂದು ಇಲ್ಲ ಎಂದು ಅಂತ್ಯದಲ್ಲಿಯೂ ವಾಯುವನ್ನು ಕುರಿತು ಪ್ರಾಪ್ತಿಪ್ರತಿಪಾದಕವಾದ ಶ್ರುತಿಯಿದ್ದುದರಿಂದ. (೩.) (ವಾಯುಮಾಗಚ್ಛತಿ ಎಂದು ಪ್ರಥಮತಃ ವಾಯು ಪ್ರಾಪ್ತಿಯು ಹೇಗೆ ಹೇಳಲ್ಪಡುತ್ತದೆ. ಹಾಗೆಯೇ ಮೇಲೆಯೂ ಉತ್ಕ್ರಾಂತೋ ವಿದ್ವಾನ್ ಎಂದು ಜ್ಞಾನಿಗಳಿಂದ ಪ್ರಾಪ್ಯನಾದ ವಾಯುವಿನಲ್ಲಿರತಕ್ಕ ವಾಯುತ್ವಕ್ಕೆ ಉಭಯತ್ರ ಸಾಮ್ಯವಿದ್ದುದರಿಂದ) ಪೂರ್ವದಲ್ಲಿ ಹೇಳಲ್ಪಟ್ಟ ವಾಯುವು ಅತಿವಾಹಿಕನೋ ಮುಖ್ಯವಾಯುವೋ, ಉತ್ತರದಲ್ಲಿ ಹೇಳಲ್ಪಟ್ಟವನು ಮುಖ್ಯವಾಯುವೋ ಅತಿವಾಹಿಕನೋ, ಎಂದು ಸಂದೇಹವು ಬಂದರೆ, ಉತ್ತರವಾಕ್ಯದಲ್ಲಿ ವಾಯುವಿನಲ್ಲಿ ದಿವಸ್ಪತಿಃ ಎಂದು ವಿಶೇಷಣವದೆ. ಅದು ಮುಖ್ಯ ವಾಯುಲಿಂಗವಾದುದರಿಂದ ಉತ್ತರವಾಕ್ಯದಲ್ಲಿ ಹೇಳಲ್ಪಟ್ಟ ವಾಯುವಿಗೆ ಮುಖ್ಯವಾಯುತ್ವವೇ ಸಿದ್ಧಿಸುವುದರಿಂದ ಪೂರ್ವದಲ್ಲಿ ಹೇಳಲ್ಪಟ್ಟ ವಾಯುವಿಗೆ ಅತಿವಾಹಿಕತ್ವವೇ ಸಿದ್ಧಿಸುತ್ತದೆ. ॥ ೩. ॥

ಟೀಕೆ ॥ ಪೂರ್ವದಲ್ಲಿಯೂ ಅಂತ್ಯದಲ್ಲಿಯೂ ಮುಖ್ಯ ವಾಯುವಿಗೇನೇ ಅವಸ್ಥಾನವು ಕೂಡುವುದರಿಂದ ಪೂರ್ವೋಕ್ತನು ಅತಿವಾಹಿಕನು ಎಂದು ಹೇಗೆ ನಿಶ್ಚಯವಾಗುತ್ತದೆ, ಎಂದರೆ—

ಭಾಷ್ಯ ॥ ಬ್ರಹ್ಮತರ್ಕೇ ಚ । ಉತ್ಕ್ರಾಂತಸ್ತು ಶರೀರಾತ್ಸ್ವಾದ್ಗಚ್ಛತ್ಯರ್ಚಿಷಮೇವ ತು । ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾತಿವಾಹಿಕಃ । ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್ಸಂವತ್ಸರಂ ತಥಾ । ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ॥ ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ । ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಂ ॥ ಇತಿ ॥ ೫ ॥ ಅಧಿ.೪ ॥ ॥ ೪ ॥

ಭಾಷ್ಯಾರ್ಥ ॥ ತನ್ನಿಂದ ಅಭಿಮನ್ಯವಾದ ಜಡದೇಹದಿಂದ ಉತ್ಕ್ರಾಂತನಾದ ಜ್ಞಾನಿಯು ಪ್ರಥಮತಃ ಅರ್ಚಿರ್ಲೋಕವನ್ನು ಹೊಂದುತ್ತಾನೆ. ಆ ಮೇಲೆ ಯಾವನು ನಾಮದಿಂದ ಅತಿವಾಹಿಕನೋ (ಅಂದರೆ ಸರ್ವೋತ್ಕೃಷ್ಟನಾದ ಶ್ರೀಹರಿಯನ್ನು ಹೊತ್ತುಕೊಳ್ಳುವ ಮುಖ್ಯವಾಯುವಿನ ಮಗನಾದ

ಪ್ರವಹ ಎಂದು ಪ್ರಸಿದ್ಧನೋ) ಅಂತಹ ವಾಯುಪುತ್ರನನ್ನು ಹೊಂದುತ್ತಾನೆ. ಆ ಮೇಲೆ ಅಹರ್ಲೋಕವನ್ನು ಆಮೇಲೆ ಶುಕ್ಲಪಕ್ಷಾಭಿಮಾನಿ ದೇವತಾ ಲೋಕವನ್ನೂ, ಉತ್ತರಾಯಣಾಭಿಮಾನಿ ದೇವತಾ ಲೋಕವನ್ನೂ, ಸಂವತ್ಸರಾಭಿಮಾನಿ ದೇವತಾ ಲೋಕವನ್ನೂ ಹಾಗೆಯೇ ತಟಲ್ಲೋಕವನ್ನೂ, ವರುಣಲೋಕವನ್ನೂ, ದಕ್ಷ ಪ್ರಜಾಪತಿಲೋಕವನ್ನೂ, ಸೂರ್ಯನನ್ನೂ, ಚಂದ್ರನನ್ನೂ, ಪ್ರಧಾನಾಗ್ನಿಯನ್ನೂ, ಇಂದ್ರನನ್ನೂ, ಧ್ರುವನನ್ನೂ, ಭಾರತೀ ದೇವಿಯನ್ನು ಆಮೇಲೆ ಮುಖ್ಯವಾಯುವನ್ನೂ ಹೊಂದಿ, ಆ ಮುಖ್ಯ ವಾಯುದ್ವಾರಾ ಶ್ರೀಹರಿಯನ್ನು ಹೊಂದುತ್ತಾನೆ, ಎಂದು ಬ್ರಹ್ಮತರ್ಕ ಎಂಬ ಗ್ರಂಥದಲ್ಲಿ ಹೇಳಿದೆ. ॥ ೫ ॥ ॥ ೪ ॥

## ಅಧಿಕರಣ ಸಾರಾಂಶ

**ದ್ವಿತೀಯಾಂ ಗತಿಂ ವಾಯುಮಾಗಚ್ಛತಿ** ಎನ್ನುವ ಶ್ರುತಿಯಲ್ಲಿ ವಾಯುವು ಆತಿವಾಹಿಕನೋ ಮುಖ್ಯವಾಯುವೋ, ಅದಕ್ಕಾಗಿ ಆತಿವಾಹಿಕನೆಂದಾದರೆ—ಮುಖ್ಯವಾಯುವಿಗೆ ಪ್ರಾಪ್ಯತ್ವವು ಇಲ್ಲವೋ ಇದೆಯೋ, ಅದಕ್ಕಾಗಿ **ದೌರ್ನಾವ ವಿದ್ಯುತ್ತತ್ವಂ ವಾಯುಂ** ಎನ್ನುವಲ್ಲಿ ಶ್ರುತವಾದ ವಾಯುಶಬ್ದಾರ್ಥವು ಮುಖ್ಯಪ್ರಾಣನೋ ಆತಿವಾಹಿಕನೋ, ಎನ್ನುವ ಸಂದೇಹದಿಂದ ದ್ವಿತೀಯ ಪ್ರಾಪ್ಯನಾದ ವಾಯುವಿನಲ್ಲಿಯೂ ಸಂದೇಹದಿಂದ ಅನಿರ್ಣಯವೋ ಅಥವಾ ನಿರ್ಣಯವಾಗುತ್ತದೋ, ಪೂರ್ವದಲ್ಲಿ **ತಟತೋ ವರುಣಂ** ಎನ್ನುವ ಸಯುಕ್ತಿಕ ವಚನಬಲದಿಂದ ಪೌರ್ವಾಪರ್ಯ ನಿರ್ಣಯವಾದರೂ ಇಲ್ಲಿ ಪೂರ್ವದವನು ಆತಿವಾಹಿಕನೋ ಅಂತ್ಯದವನು ಮುಖ್ಯವಾಯುವೋ, ಅಥವಾ ಪೂರ್ವದವನು ಮುಖ್ಯನು ಅಂತ್ಯದವನು ಆತಿವಾಹಿಕನೋ ಎಂದು ಸಂದೇಹವು ಬಂದರೆ ನಿರ್ಣಯವಾಗದೆ ಇರುವುದರಿಂದ ಮೊದಲಿನವನು ಆತಿವಾಹಿಕನು ಎನ್ನುವುದಕ್ಕೆ ಜ್ಞಾಪಕವು ಇಲ್ಲದಿರುವುದರಿಂದ ಸೋಮ, ಅಗ್ನಿ, ಇಂದ್ರ, ಧ್ರುವ ಇವರಿಗೂ ಮಾರ್ಗದಲ್ಲಿ ಕ್ರಮದಿಂದ ಪ್ರಾಪ್ಯತ್ವವನ್ನು ಹೇಳಿದ್ದರಿಂದ ತಾರತಮ್ಯಕ್ರಮವು ಇಲ್ಲಿ ವಿವಕ್ಷಿತವಾಗದಿರುವುದರಿಂದಲೂ ಮುಖ್ಯವಾಯುವಿಗೆ ದ್ವಿತೀಯಪ್ರಾಪ್ಯತ್ವವು ಕೂಡುವುದಿರಂದಲೂ ಮುಖ್ಯಾರ್ಥತ್ವವಿದ್ದುದರಿಂದಲೂ ಮುಖ್ಯವಾಯುವೇ ದ್ವಿತೀಯಪ್ರಾಪ್ಯವಾದ ವಾಯುಶಬ್ದಾರ್ಥವು. ಆತಿವಾಹಿಕನಲ್ಲ ಎಂದು ಪೂರ್ವಪಕ್ಷವು ಬಂದರೆ—ಪೂರ್ವಪ್ರಾಪ್ಯತ್ವ, ವಿದ್ಯುಚ್ಛಬ್ದಿತಭಾರತೀಪತಿತ್ವರೂಪ ಲಿಂಗಗಳಿಂದ ಪೂರ್ವದವನು ಆತಿವಾಹಿಕನು, ಅಂತಿಮನು ಮುಖ್ಯಪ್ರಾಣನು ಎಂದು ನಿರ್ಣಯವು ಕೂಡಬಹುದು. ಪೂರ್ವಪ್ರಾಪ್ಯತ್ವ ಲಿಂಗದಿಂದಲೂ **ಉತ್ಕ್ರಾಂತಸ್ತುಶರೀರಾತ್ ಸ್ವಾತ್** ಇತ್ಯಾದಿ ಪ್ರಮಾಣಗಳಿಂದಲೂ ಮುಖ್ಯಾರ್ಥವನ್ನು ಬಿಡಬಹುದಾದುದರಿಂದ ಪೂರ್ವಪ್ರಾಪ್ಯನು ಆತಿವಾಹಿಕನೇ. ॥ ಅಧಿ. ೪ ॥

**ಆತಿವಾಹಿಕಾಧಿಕರಣವು ಸಮಾಪ್ತವಾಯಿತು.**

# ೫ ವೈದ್ಯುತಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಬ್ರಹ್ಮಪ್ರಾಪ್ತಿ ಮಾರ್ಗದಲ್ಲಿ ಮುಖ್ಯವಾಯುವು ಅಂತಿಮನು

ಎಂದು ಸಮರ್ಥಿಸುತ್ತಾರೆ. ಪರಬ್ರಹ್ಮನಿಂದ ಕೆಳಗೆ ಮುಖ್ಯವಾಯುವಿನಿಂದ ಮೇಲೆ ಮತ್ತೊಬ್ಬ ಪ್ರಾಪ್ಯನು ಇದ್ದಾನೆ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ ॥ ೬ ॥

**ಸೂತ್ರಾರ್ಥ ॥** ಮಾರ್ಗದಲ್ಲಿ ತಾರತಮ್ಯಕ್ರಮವನ್ನು ಬಿಟ್ಟು ಪ್ರಾಪ್ಯರಾದವರನ್ನು ಹೇಳುವುದರಿಂದ ಮುಖ್ಯವಾಯುವಿನಿಂದ ಮೇಲೆ ಪರಬ್ರಹ್ಮನಿಂದ ಕೆಳಗೆ ಮತ್ತೊಬ್ಬ ಪ್ರಾಪ್ಯನು ಇದ್ದಾನೆ, ಎಂದು ಶಂಕಿಸಕೂಡದು. ಏಕೆಂದರೆ ಭಾರತೀಪತಿಯಾದ ಮುಖ್ಯಪ್ರಾಣನಿಂದಲೇ ಸ ಏನಾನ್ ಬ್ರಹ್ಮ ಗಮಯತಿ ಎಂದು ಪರಬ್ರಹ್ಮಗಮನವು ಶ್ರುತವಾದುದರಿಂದ ಅಥವಾ ಮುಖ್ಯವಾಯುವಿನಿಂದಲೇ ಬ್ರಹ್ಮಪ್ರಾಪ್ತಿಯು. ಆದಕಾರಣ ಆತನೇ ಅಂತಿಮ ಪ್ರಾಪ್ಯನು.

**ಭಾಷ್ಯ ॥ (೨) ಪ್ರಕಾರಾಂತರೇಣ ತತ್ರತತ್ರೋಚ್ಯಮಾನತ್ವಾದ್ವಾಯೋರಪಿ ಪರತೋ ಬ್ರಹ್ಮಣೋಽರ್ವಾಗ್ಗಂತವ್ಯೋಽಸ್ತೀತಿ ನಾಶಂಕನೀಯಂ । ವಿದ್ಯುತ್ಪತಿನಾ ವಾಯುನೈವ ಸ ಏನಾನ್ ಬ್ರಹ್ಮ ಗಮಯತಿ (ಛಾ.೫.೧೦.೨.)। ಇತಿ ಬ್ರಹ್ಮಗಮನಶ್ರುತೇಃ । (೨) ವಿದ್ಯುತ್ಪತಿರ್ವಾಯುರೇವ ನಯೇದ್ಬ್ರಹ್ಮ ನ ಚಾಪರಃ । ಕುತೋಽನ್ಯಸ್ಯ ಭವೇಚ್ಛಕ್ತಿಸ್ತಮೃತೇ ಪ್ರಾಣನಾಯಕಂ ॥ ಇತಿ (೮) ಬೃಹತ್ತಂತ್ರೇ ॥ ೬ ॥ ಅಧಿ.೫ ॥ ॥ ೧ ॥**

**ಭಾಷ್ಯಾರ್ಥ ॥** (೧) ಆಯಾವ ಶ್ರುತ್ಯಾದಿಗಳಲ್ಲಿ ಮಾರ್ಗದಲ್ಲಿ ಪ್ರಕಾರಾಂತರದಿಂದ (ಅಂದರೆ ತಾರತಮ್ಯ ಕ್ರಮವನ್ನು ಬಿಟ್ಟು, ಸೋಮಲೋಕ ಪ್ರಾಪ್ತ್ಯನಂತರದಲ್ಲಿ ಸೋಮನಿಂದ ಅವರನಾದ ಅಗ್ನಿಯು ಲೋಕವನ್ನೂ, ಇಂದ್ರಲೋಕ ಪ್ರಾಪ್ತ್ಯನಂತರದಲ್ಲಿ ಇಂದ್ರನಿಂದ ಅವರನಾದ ಧ್ರುವಲೋಕದ ಪ್ರಾಪ್ತಿಯನ್ನೂ ಪ್ರತಿಪಾದಿಸಿದ್ದರಿಂದ ಸರ್ವಾಧಿಕಾರಿಗಳಿಂದ ಉತ್ತಮರಾದ ವಾಯುದೇವರಿಂದಲೂ ಮೇಲೆ (ಅರ್ಚಿರಾದಿಗಳಿಂದ ಮಾತ್ರ ಮೇಲೆಯಲ್ಲ) ಪರಬ್ರಹ್ಮನಿಂದ ಕೆಳಗೆ ಪ್ರಾಪ್ಯನಾದ ಮತ್ತೊಬ್ಬನು ಇದ್ದಾನೆಂದು ಆಕ್ಷೇಪಿಸಕೂಡದು. ಮತ್ತೆ ವಾಯುವೇ ಅಂತಿಮ ಪ್ರಾಪ್ಯನು. (ಏಕೆ ಆಕ್ಷೇಪಿಸಕೂಡದು ಎಂದರೆ) ಭಾರತೀರಮಣನಾದ ಮುಖ್ಯ ಪ್ರಾಣನಿಂದಲೇ ಬ್ರಹ್ಮಪ್ರಾಪ್ತಿಯು ಆಗುತ್ತದೆ. (ಮಧ್ಯದಲ್ಲಿ ದ್ವಾರಾಂತರಾಪೇಕ್ಷೆಯಿಲ್ಲ) (ಆದಕಾರಣ ಮುಖ್ಯವಾಯುವೇ ಅಂತಿಮ ಪ್ರಾಪ್ಯನು.) (ವಾಯುದೇವರೇ ಪರಬ್ರಹ್ಮನನ್ನು ಹೊಂದಿಸಿಕೊಡತಕ್ಕವರು, ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ಎಂದರೆ) ಆ ಮುಖ್ಯವಾಯುದೇವರು ಅಪ್ರತೀಕಾಲಂಬನರನ್ನು ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾರೆ. ಪ್ರತೀಕಾಲಂಬನರನ್ನಾದರೂ ಕಾರ್ಯಬ್ರಹ್ಮನನ್ನು (ಚತುರ್ಮುಖನನ್ನು) ಹೊಂದಿಸಿಕೊಡುತ್ತಾರೆ, ಎಂದು ವಾಯುದೇವರೇ ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾರೆ, ಎಂದು ಪ್ರತಿಪಾದಿಸತಕ್ಕ ಶ್ರುತಿಯಿದ್ದುದರಿಂದ. (೨) (ವಾಯುವಿನಂತೆಯೇ ಇತರರಿಗೂ ಪರಬ್ರಹ್ಮಪ್ರಾಪಕತ್ವವಿದ್ದರೆ ವಾಯುವಿಗೇನೇ ಅಂತಿಮ ಪ್ರಾಪ್ಯತ್ವವು ಹೇಗೆ ಕೂಡುತ್ತದೆ, ಎಂದರೆ) ಭಾರತೀರಮಣನಾದ ಮುಖ್ಯಪ್ರಾಣನೇ ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾನೆ. ಮತ್ತೊಬ್ಬನಾದರೂ ಸಾಕ್ಷಾತ್ತಾಗಿ ಪರಬ್ರಹ್ಮನನ್ನು ಹೊಂದಿಸಿಕೊಡುವುದೇ ಇಲ್ಲ (ಏಕೆಂದರೆ) ಸರ್ವೇಂದ್ರಿಯಗಳಿಗೆ ಅಧಿಪತಿ

ಯಾದ ಆ ಮುಖ್ಯಪ್ರಾಣನನ್ನು ಹೊರತು ಮುಖ್ಯಪ್ರಾಣನಿಂದ ಇತರನಾದ ಜೀವನಿಗೆ ಪರಬ್ರಹ್ಮನನ್ನು ಹೊಂದಿಸಿಕೊಡತಕ್ಕ ಸಾಮರ್ಥ್ಯವು ಯಾವುದರಿಂದ ಬಂದೀತು? (ಹೇಗೂ ಬರಲಾರದು.) ಎಂದು ಬೃಹತ್ತಂತ್ರದಲ್ಲಿ ಹೇಳಿಯದೆ. ॥ ೬ ॥ ॥೧ ॥

## ಅಧಿಕರಣ ಸಾರಾಂಶ

ಬ್ರಹ್ಮಪ್ರಾಪ್ತಿ ಮಾರ್ಗದಲ್ಲಿ ಮುಖ್ಯವಾಯುವಿನ ಅನಂತರದಲ್ಲಿ ಬ್ರಹ್ಮನಿಂದ ಕೆಳಗೆ ಮತ್ತೊಬ್ಬ ಪ್ರಾಪ್ಯನು ಇದ್ದಾನೋ ಇಲ್ಲವೋ, ಅದಕ್ಕಾಗಿ ಮುಖ್ಯವಾಯು ಪರಬ್ರಹ್ಮ ಇವರ ಮಧ್ಯದಲ್ಲಿ ಮತ್ತೊಬ್ಬ ಪ್ರಾಪ್ಯನನ್ನು ಅಂಗೀಕರಿಸಿದರೆ ಬಾಧಕವು ಇಲ್ಲವೋ ಇದೆಯೋ, ಪೂರ್ವಾಧಿಕರಣದಲ್ಲಿ ಉತ್ತರ ವಾಕ್ಯದಲ್ಲಿದ್ದ ವಾಯುವಿನಲ್ಲಿ **ದಿವಸ್ಪತಿಃ** ಎನ್ನುವ ವಿಶೇಷಣವಿದ್ದುದರಿಂದ ಆ ವಾಯುವಿಗೆ ಆತಿವಾಹಿಕತ್ವ (ಪ್ರವಹವಾಯುತ್ವ)ವು ಕೂಡದಿದ್ದರೂ ಇಲ್ಲಿ ಮುಖ್ಯವಾಯು ಪರಬ್ರಹ್ಮ ಇವರ ಮಧ್ಯದಲ್ಲಿ ಮತ್ತೊಬ್ಬ ಯಾರೋ ಒಬ್ಬ ಪ್ರಾಪ್ಯನನ್ನು ಅಂಗೀಕರಿಸಿದರೆ ಬಾಧಕವು ಇಲ್ಲದಿರುವುದರಿಂದಲೂ **ಮುಖ್ಯವಾಯುಃ ಸ್ವಸ್ಮಾದನಂತರಮಪಿ ಬ್ರಹ್ಮೇತರಪ್ರಾಪ್ಯಾಂತರಯುಕ್ತಃ ಅಧಿಕಾರಿತ್ವಾತ್ ಪ್ರಾಚೀನಾಧಿಕಾರಿವತ್** ಎನ್ನುವ ಅನುಮಾನದಿಂದಲೂ ಮಧ್ಯದಲ್ಲಿ ಮತ್ತೊಬ್ಬ ಪ್ರಾಪ್ಯನು ಇದ್ದಾನೆಂದು ಅಂಗೀಕರಿಸಬೇಕು. **ಇಯದಾಮನನಾತ್** ಎನ್ನುವಲ್ಲಿ ಅಧಿಕಾರಿಗಳಲ್ಲಿ ಉತ್ತಮರು ವಾಯುದೇವರು ಎಂದು ಹೇಳಿದ್ದರಿಂದ ಅದರಿಂದ ಅನುಮಾನವು ಬಾಧಿತವಾಯಿತು ಎಂದು ಶಂಕಿಸಕೂಡದು. **ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ** ಎನ್ನುವ ಸ್ಮೃತಿಯಲ್ಲಿ ಇಂದ್ರನಿಂದ ಅವರನಾದ ಧ್ರುವನಿಗೆ ಇಂದ್ರನಿಂದ ಅನಂತರದಲ್ಲಿ ಪ್ರಾಪ್ತಿಯೆಂದು ಹೇಳಿದ್ದರಿಂದ ಉತ್ತಮತ್ವ ಕ್ರಮವನ್ನು ಅನುಸರಿಸಿ ಪ್ರಾಪ್ತಿಕ್ರಮವು ಇಲ್ಲದಿರುವುದರಿಂದ ವಾಯುವಿನ ಮೇಲೆಯೂ ವಾಯುವಿನಿಂದ ಇತರನಾದ ಮತ್ತೊಬ್ಬ ಪ್ರಾಪ್ಯನು ಇರಲಿ ಎಂದು ಪೂರ್ವಪಕ್ಷವು ಬಂದರೆ ಮತ್ತೊಬ್ಬ ಪ್ರಾಪ್ಯನನ್ನು ಅಂಗೀಕರಿಸಿದರೆ ಅಧಿಕಾರ್ಯುತ್ತಮತ್ವಕ್ಕೆ ಬಾಧಕವು ಇಲ್ಲವಾದರೂ **ಸ ಏನಾನ್ ಬ್ರಹ್ಮ ಗಮಯತಿ, ವಿದ್ಯುತ್ಪತಿರ್ವಾಯುರೇವ** ಇತ್ಯಾದಿ ಶ್ರುತಿಸ್ಮೃತಿಗಳ ಬಲದಿಂದ ವಾಯುದೇವರು ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾರೆಂದು ಶ್ರುತವಾದುದು ಮಧ್ಯದಲ್ಲಿ ಮತ್ತೊಬ್ಬ ಪ್ರಾಪ್ಯನು ಇದ್ದಾನೆನ್ನುವ ಕಲ್ಪನವನ್ನು ಬಾಧಿಸುತ್ತದೆ. ಆದಕಾರಣ ಮುಖ್ಯ ವಾಯುವೇ ಅಂತಿಮ ಪ್ರಾಪ್ಯನು. ಇತರರಿಗೂ ಅಂತಿಮ ಪ್ರಾಪ್ಯತ್ವವಿದ್ದರೆ ಅವನೇ ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾನೆಂದು ಆಗಬೇಕಾಗುವುದು. ॥ ಅಧಿ.೫ ॥

**ವೈದ್ಯುತಾಧಿಕರಣವು ಸಮಾಪ್ತವಾಯಿತು.**

# ೬ ಕಾರ್ಯಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಪೂರ್ವದಲ್ಲಿ ಪ್ರತಿಪಾದಿತವಾದ ಅರ್ಚಿರಾದಿ ಮಾರ್ಗದಿಂದ ಹೋದವರಿಗೆ ಗಮ್ಯವನ್ನು ನಿರೂಪಿಸುತ್ತಾರೆ. **ವಾಯುರೇವ ಬ್ರಹ್ಮ ಗಮಯತಿ** ಎಂದು ಗಮ್ಯನೆಂದು ಹೇಳಲ್ಪಟ್ಟ ಬ್ರಹ್ಮನು ಚತುರ್ಮುಖನೇ ಎನ್ನುವ ಪೂರ್ವಪಕ್ಷವನ್ನು ಹೊಂದಿಸಿಕೊಡತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ॥ ೭ ॥

**ಸೂತ್ರಾರ್ಥ ॥** ಸ ಏನಾನ್ ಬ್ರಹ್ಮ ಗಮಯತಿ ಎನ್ನುವ ಶ್ರುತಿಯಲ್ಲಿ ಚತುರ್ಮುಖಾಖ್ಯ ಕಾರ್ಯಬ್ರಹ್ಮನನ್ನೇ ವಾಯುದೇವರು ಹೊಂದಿಸಿಕೊಡುತ್ತಾರೆ, ಎಂದು ಬಾದರಿ (ಶುಕ) ಆಚಾರ್ಯರು ತಿಳಿಯುತ್ತಾರೆ. (ಬ್ರಹ್ಮ ಶಬ್ದವು ಶ್ರೀಹರಿಯಲ್ಲಿಯೇ ಮುಖ್ಯವಾದುದರಿಂದ ಇದು ಹೇಗೆ ಕೂಡುತ್ತದೆ ಎಂದರೆ) ತಥಾಽಪಿ ಪ್ರಕೃತೇರ್ಬಂಧಃ ಬ್ರಹ್ಮಣಾ ಸಹ ಭಿದ್ಯತೇ ಎನ್ನುವ ಪ್ರಮಾಣದಿಂದ ಚತುರ್ಮುಖನ ಮುಕ್ತಿಪರ್ಯಂತವಾಗಿ ಬಂಧವು ಯಾವಾಗಲೂ ಇರತಕ್ಕುದು. ಆದುದರಿಂದ ಮುಕ್ತಿಯಿಂದ ಮೊದಲು ಚತುರ್ಮುಖನಿಗೇನೇ ಪ್ರಾಪ್ತಿಯು ಕೂಡುವುದರಿಂದ ಮತ್ತು ಬದ್ಧರಾದ ಪ್ರಯುಕ್ತ ಪರಬ್ರಹ್ಮ ಪ್ರಾಪ್ತಿಯೋಗರೂಪವಾದ ಯುಕ್ತಿಯ ಬಲದಿಂದಲೂ ಸ ಏನಾನ್ ಬ್ರಹ್ಮ ಎನ್ನುವಲ್ಲಿದ್ದ ಬ್ರಹ್ಮಪದಕ್ಕೆ ಅಮುಖ್ಯಾರ್ಥತ್ವವನ್ನು ಕಲ್ಪಿಸಬೇಕು.

**ಭಾಷ್ಯ ॥ (೧) ಸ ಏನಾನ್ ಬ್ರಹ್ಮ ಗಮಯತಿ (ಛಾ.೫.೧೦.೧.)। ಇತಿ ಕಾರ್ಯಂ ಬ್ರಹ್ಮ ಗಮಯತೀತಿ ಬಾದರಿರ್ಮನ್ಯತೇ । (೨) ಋತೇ ದೇವಾನ್ ಪರಂ ಬ್ರಹ್ಮ ಕಃ ಪುಮಾನ್ ಪ್ರಾಪ್ನುಯಾತ್ ಕ್ವಚಿತ್ । ಯದ್ಯಪಿ ಬ್ರಹ್ಮದೃಷ್ಟಿಃ ಸ್ಯಾದ್ಬ್ರಹ್ಮಲೋಕಮವಾಪ್ನುಯಾತ್ । ಇತ್ಯಧ್ಯಾತ್ಮವಚನಾತ್ತಸ್ಯೈವ ಗತ್ಯುಪಪತ್ತೇಃ ॥ ೭ ॥ ॥ ೧ ॥**

**ಭಾಷ್ಯಾರ್ಥ ॥** (೧) ಸ ಏನಾನ್ ಬ್ರಹ್ಮ ಗಮಯತಿ ಎನ್ನುವ ಶ್ರುತಿಯಲ್ಲಿ ಉತ್ಪತ್ತಿಯುಳ್ಳ ಚತುರ್ಮುಖಾಖ್ಯನಾದ ಬ್ರಹ್ಮನನ್ನು ವಾಯುದೇವರು ಹೊಂದಿಸಿಕೊಡುತ್ತಾರೆಂದು ಹೇಳುತ್ತದೆ. ಹೀಗೆ ಶುಕಾಚಾರ್ಯರು ತಿಳಿಯುತ್ತಾರೆ. (೨) (ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾದ ಪ್ರಯುಕ್ತ ಈ ಅರ್ಥವು ಹೇಗೆ ಕೂಡುತ್ತದೆ ಎಂದರೆ) ಯದ್ಯಪಿ ದೇವೇತರರಿಗೆ ಬ್ರಹ್ಮಾಪರೋಕ್ಷವು ಆಗುವುದು. ಆದಾಗ್ಯೂ ದೇವತೆಗಳನ್ನು ಹೊರತು ಯಾವ ಪುರುಷನು ಬಂಧಕಾಲದಲ್ಲಿ ಚತುರ್ಮುಖನ ಮುಕ್ತಿಪರ್ಯಂತವಾಗಿ ಪರಬ್ರಹ್ಮನನ್ನು ಹೊಂದಲಿಕ್ಕೆ ಶಕ್ತನಾಗುವನು. ಯಾವನೊಬ್ಬನೂ ಶಕ್ತನಾಗಲಾರನು. (ದೇವತೆಗಳಿಗೆ ಸಾಕ್ಷಾದ್ಬ್ರಹ್ಮಪ್ರಾಪ್ತಿಯಾದರೂ ದೇಹಲಯಾನಂತರದಲ್ಲಿ ಅಥವಾ ಮುಕ್ತಿದೆಶೆಯಲ್ಲಿ. ಅದಕ್ಕಿಂತ ಮೊದಲು ಮನುಷ್ಯರಾಗಿ ಹುಟ್ಟಿರುವ ದೇವತೆಗಳಿಗೆ ಉತ್ಕ್ರಾಂತ್ಯನಂತರದಲ್ಲಿ ಬಂಧದೆಶೆಯಲ್ಲಿಯೇ ಬ್ರಹ್ಮಪ್ರಾಪ್ತಿಯು ಎಂದು ತಿಳಿಯತಕ್ಕುದು. ದರ್ಶನಕ್ಕೆ ವೈಯರ್ಥ್ಯವೂ ಇಲ್ಲ. ಏಕೆಂದರೆ) ಆ ಅಧಿಕಾರಿಯು ಚತುರ್ಮುಖಲೋಕವನ್ನು ಹೊಂದುವನು. (ಅಂದರೆ ಪರಬ್ರಹ್ಮ ಪ್ರಾಪ್ತಿಯು ದೇವತೆಗಳಿಗೇನೇ. ಇತರರಿಗೆ ಇಲ್ಲ. ಇತರರಿಗೆ) ಯದ್ಯಪಿ ಜ್ಞಾನಿಗೆ ಬ್ರಹ್ಮಾಪರೋಕ್ಷಜ್ಞಾನವು ಆಗುವುದು. ಆದಾಗ್ಯೂ ಆತನು ಚತುರ್ಮುಖನ ಲೋಕವನ್ನೇ ಹೊಂದುವನು ಎನ್ನುವ ನಾರಾಯಣಾಧ್ಯಾತ್ಮ ವಚನದಿಂದ (ಬ್ರಹ್ಮಶಬ್ದಕ್ಕೆ ಪರಬ್ರಹ್ಮನಲ್ಲಿ ಮುಖ್ಯತ್ವವಿದ್ದರೂ ಬ್ರಹ್ಮ ಗಮಯತಿ ಎನ್ನುವ ಶ್ರುತಿಯಲ್ಲಿ ಬ್ರಹ್ಮ ಶಬ್ದದಿಂದ ಪರಬ್ರಹ್ಮನನ್ನು ಸ್ವೀಕರಿಸುವುದು ಯುಕ್ತವಲ್ಲ. ಮತ್ತೆ ಚತುರ್ಮುಖನನ್ನು ಸ್ವೀಕರಿಸುವುದೇ ಯುಕ್ತವು. ಚತುರ್ಮುಖ ಮುಕ್ತಿಪರ್ಯಂತ ಸರ್ವರಿಗೂ ಬಂಧವು ನಿಯವಃ ದಿಂದ ಇದ್ದಪ್ರಯುಕ್ತ ಅದಕ್ಕಿಂತ ಒಳಗೆ) ಚತುರ್ಮುಖನ ಪ್ರಾಪ್ತಿಯೇ ಕೂಡುವುದರಿಂದ. ॥೭॥

ಪೀಠಿಕೆ ॥ ಕೇವಲ ಯುಕ್ತಿಮಾತ್ರದಿಂದ ಶ್ರುತಿಗೆ ಅನ್ಯಾರ್ಥ ಕಲ್ಪನವಲ್ಲ, ಮತ್ತೆ ವಿಶೇಷ ಶ್ರುತಿಯಿಂದಲೂ ಅನ್ಯಾರ್ಥ ಕಲ್ಪನವು ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ಉಪನ್ಯಾಸ ಮಾಡಿ ಶ್ರುತಿಯನ್ನುದಾಹರಿಸುತ್ತಾರೆ—

## ಸೂತ್ರ ॥ ಓಂ ವಿಶೇಷಿತತ್ವಾಚ್ಚ ಓಂ ॥ ೮ ॥

ಸೂತ್ರಾರ್ಥ ॥ ಯದಿ ಹ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ ಎಂದು ಶ್ರುತಿಯಲ್ಲಿ ಬ್ರಹ್ಮನಿಗೆ ಚತುರ್ಮುಖ ಎನ್ನುವ ವಿಶೇಷಣವನ್ನೇ ಕೊಟ್ಟ ಪ್ರಯುಕ್ತವೂ ಕಾರ್ಯಬ್ರಹ್ಮನೇ ಬ್ರಹ್ಮಪದಾರ್ಥನು.

**ಭಾಷ್ಯ ॥ ಯದಿ ಹ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ । ಇತಿ ಕೌಷಾರವಶ್ರುತೌ ॥ ೮ ॥ ॥ ೨ ॥**

ಭಾಷ್ಯಾರ್ಥ ॥ ಯದ್ಯಪಿ ಪರಮಾತ್ಮನನ್ನು ನೋಡುತ್ತಾನೆ. ಆದಾಗ್ಯೂ ದೇವಭಿನ್ನನಾದ ಜ್ಞಾನಿಯು ಬಂಧಕಾಲದಲ್ಲಿ ಚತುರ್ಮುಖ ಬ್ರಹ್ಮನನ್ನೇ ಹೊಂದುತ್ತಾನೆ. ಪ್ರಮಾಣಬಲದಿಂದ ಪರಬ್ರಹ್ಮನ ಜ್ಞಾನದಿಂದ ಚತುರ್ಮುಖ ಬ್ರಹ್ಮನ ಪ್ರಾಪ್ತಿಯು ಉಚಿತವಾಗಿದೆ ಎಂದು ಪ್ರಸಿದ್ಧಿಯು, ಎಂದು ಕೌಷಾರವ ಶ್ರುತಿಯಲ್ಲಿ ಹೇಳಿಯದೆ. ॥ ೮ ॥

ಪೀಠಿಕೆ ॥ ಬ್ರಹ್ಮವಿದಾಪ್ನೋತಿ ಪರಂ ಎಂದು ಪರಬ್ರಹ್ಮಪ್ರಾಪ್ತಿಯೇ ಶ್ರುತವಾದುದರಿಂದ ಪರಬ್ರಹ್ಮನಿಗೆ ಕಾರ್ಯಬ್ರಹ್ಮಪ್ರಾಪ್ತಿಯು ಹೇಗೆ ಹೇಳಿದ್ದು ಎಂದರೆ—

## ಸೂತ್ರ ॥ ಓಂ ಸಾಮೀಪ್ಯಾತ್ತು ತದ್ವ್ಯಪದೇಶಃ ಓಂ ॥ ೯ ॥

ಸೂತ್ರಾರ್ಥ ॥ ಜ್ಞಾನಿಗೆ ಪರಬ್ರಹ್ಮಪ್ರಾಪ್ತಿ ವ್ಯಪದೇಶವು ಪರಬ್ರಹ್ಮನ ಪ್ರಾಪ್ತಿಗೆ ಕಾಲದಿಂದ ಸಾಮೀಪ್ಯವಿದ್ದುದರಿಂದಲೇ. ಅಂದರೆ ಸಮೀಪಕಾಲದಲ್ಲಿ ಪರಬ್ರಹ್ಮನ ಪ್ರಾಪ್ತಿಯು ಆಗುತ್ತದೆ ಎನ್ನುವ ಅಭಿಪ್ರಾಯದಿಂದ ಕಾರ್ಯಬ್ರಹ್ಮನಿಗೆ ಅಪ್ರಾಪ್ಯತ್ವವಿದ್ದಪ್ರಯುಕ್ತವಲ್ಲ. ಪರಬ್ರಹ್ಮನಿಗೆ ಪ್ರಥಮ ಪ್ರಾಪ್ಯತ್ವದಿಂದಲೂ ಅಲ್ಲ.

**ಭಾಷ್ಯ ॥ ಬ್ರಹ್ಮವಿದಾಪ್ನೋತಿ ಪರಂ (ತೈ.೨.೧.) ಇತಿ ವ್ಯಪದೇಶಸ್ತು ಸಮೀಪತ ಏವ ಪರಮಪಿ ಪ್ರಾಪ್ನೋತೀತ್ಯೇತದರ್ಥ ಮೇವ ॥ ೯ ॥ ॥ ೩ ॥**

ಭಾಷ್ಯಾರ್ಥ ॥ ಬ್ರಹ್ಮವಿದಾಪ್ನೋತಿ ಪರಂ ಎಂದು ಶ್ರುತಿಯಲ್ಲಿ ಜ್ಞಾನಿಯಾದವನಿಗೆ ಪರಬ್ರಹ್ಮಪ್ರಾಪ್ತಿ ವ್ಯಪದೇಶವಾದರೂ ಜ್ಞಾನಿಯಾದವನು ಚತುರ್ಮುಖನನ್ನು ಹೊಂದಿ ಶೀಘ್ರದಲ್ಲಿಯೇ ಪರಬ್ರಹ್ಮನನ್ನು ಹೊಂದುತ್ತಾನೆ. ಈ ಅಭಿಪ್ರಾಯದಿಂದಲೇ, ಚತುರ್ಮುಖ ಪ್ರಾಪ್ತಿಯನ್ನು ನಿಷೇಧಿಸುವ ಅಭಿಪ್ರಾಯ ದಿಂದ ಅಲ್ಲ. ಪ್ರಥಮದಲ್ಲಿಯೇ ಪರಬ್ರಹ್ಮನನ್ನು ಹೊಂದುತ್ತಾನೆ ಎನ್ನುವ ಅಭಿಪ್ರಾಯದಿಂದಲ್ಲ. ಅಥವಾ ಬ್ರಹ್ಮವಿದಾಪ್ನೋತಿ ಪರಂ ಎನ್ನುವ ಶ್ರುತಿಯಾದರೂ ಕಾರ್ಯಬ್ರಹ್ಮಪ್ರಾಪ್ತಿ ಪರಬ್ರಹ್ಮಪ್ರಾಪ್ತಿ ಇವುಗಳಿಗೆ ಕಾಲಸಾಮೀಪ್ಯನಿಮಿತ್ತದಿಂದಲೇ ಪ್ರವೃತ್ತವಾಗಿದೆ. ಜ್ಞಾನಿಯು ಕಾರ್ಯಬ್ರಹ್ಮನ ಪ್ರಾಪ್ತಿಯ ಸಮೀಪ

ಕಾಲದಲ್ಲಿಯೇ (ಅಂದರೆ ಕಾರ್ಯಬ್ರಹ್ಮನನ್ನು ಹೊಂದಿ ಶೀಘ್ರದಲ್ಲಿಯೇ) ಪರಬ್ರಹ್ಮನನ್ನು ಹೊಂದುತ್ತಾನೆ, ಎನ್ನುವ ಅರ್ಥವನ್ನೇ ಹೇಳುತ್ತದೆ. ಅವಧಾರಣವಿಲ್ಲದಿರುವುದರಿಂದ ಕಾರ್ಯಬ್ರಹ್ಮ ಪ್ರಾಪ್ತಿಯನ್ನು ನಿಷೇಧಿಸುವುದಿಲ್ಲ. ಪರಬ್ರಹ್ಮಪ್ರಾಪ್ತಿ ಬೋಧಕಶಬ್ದವು ಇಲ್ಲದಿರುವುದರಿಂದ ಪ್ರಥಮದಲ್ಲಿಯೇ ಪರಬ್ರಹ್ಮಪ್ರಾಪ್ತಿಯನ್ನು ಹೇಳುವುದಿಲ್ಲ. ॥ ೯ ॥ ೩ ॥

**ಪೀಠಿಕೆ ॥** ಸಮೀಪತಃ ಎನ್ನುವುದಕ್ಕೆ ಏನು ಅರ್ಥವು. ೧ ಪ್ರಲಯದಿಂದ ಮೊದಲೇ ಎಂದರೆ, ಹಾಗೆ ಹೇಳಕೂಡದು. ಬದ್ಧತ್ವವು ಸಮಾನವಾದುದರಿಂದ ಪ್ರಥಮದಲ್ಲಿಯೇ ಪರಬ್ರಹ್ಮ ಪ್ರಾಪ್ತಿಯು ಕೂಡಬಹುದು. ೨ ಪ್ರಲಯಕಾಲದಲ್ಲಿಯೇ ಎಂದೂ ಹೇಳಕೂಡದು. ವಿಶೇಷಪ್ರಮಾಣವಿಲ್ಲ ಎನ್ನುವ ಅಭಿಪ್ರಾಯದಿಂದ ಪ್ರಶ್ನಿಸುತ್ತಾರೆ—

**ಭಾಷ್ಯ ॥ ಕದಾ** ॥ ೪ ॥

**ಭಾಷ್ಯಾರ್ಥ ॥** ಜ್ಞಾನಿಯು ಯಾವ ಕಾಲದಲ್ಲಿ ಪರಬ್ರಹ್ಮನನ್ನು ಹೊಂದುತ್ತಾನೆ. ॥ ೪ ॥

## ಸೂತ್ರ ॥ ಓಂ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ಓಂ ॥ ೧೦ ॥

**ಸೂತ್ರಾರ್ಥ ॥** ಸರ್ವಕಾರ್ಯಗಳಿಗೆ ನಾಶರೂಪವಾದ ಪ್ರಲಯವಾಗುವಾಗ ಸರ್ವಕಾರ್ಯಗಳಿಗೆ ಸ್ವಾಮಿಯಾದ ಚತುರ್ಮುಖನಿಂದ ಕೂಡಿಕೊಂಡು, ಈ ಚತುರ್ಮುಖದ್ವಾರಾ ಪರಬ್ರಹ್ಮನನ್ನು ಜ್ಞಾನಿಯು ಹೊಂದುತ್ತಾನೆ. ತೇ ಹ ಬ್ರಾಹ್ಮಣಂ ಎನ್ನುವ ಶ್ರುತಿಯಲ್ಲಿ ಹಾಗೆ ಹೇಳಿದ್ದರಿಂದ.

**ಭಾಷ್ಯ ॥ ತೇ ಹ ಬ್ರಹ್ಮಾಣಮಭಿಸಂಪದ್ಯ ಯದ್ಯೆತದ್ವಿಲೀಯತೇಽಥ ಸಹ ಬ್ರಹ್ಮಣಾ ಪರಮಭಿಗಚ್ಛಂ (ಚ್ಛ)ತಿ । ಇತಿ ಸೌಪರ್ಣಶ್ರುತೇಃ ಮಹಾಪ್ರಲಯೇ ತದಧ್ಯಕ್ಷೇಣ ಬ್ರಹ್ಮಣಾ ಸಹ ಗಚ್ಛಂತಿ ॥ ೧೦ ॥** ॥ ೫ ॥

**ಭಾಷ್ಯಾರ್ಥ ॥** ದೇವತೆಗಳಿಂದ ಇತರರಾದ ಜ್ಞಾನಿಗಳು ಚತುರ್ಮುಖನನ್ನು ಹೊಂದಿ ಯಾವ ಕಾಲದಲ್ಲಿ ಈ ಕಾರ್ಯವು ನಾಶಹೊಂದುತ್ತದೋ ಆಗ ಪ್ರಲಯಕಾಲದಲ್ಲಿ ಕಾರ್ಯಬ್ರಹ್ಮನಿಂದ ಕೂಡಿಕೊಂಡು ಪರಬ್ರಹ್ಮನನ್ನು ಹೊಂದುತ್ತಾರೆ, ಎನ್ನುವ ಸೌಪರ್ಣಶ್ರುತಿಯಿಂದ (ಪ್ರಲಯಕಾಲದಿಂದ ಮೊದಲು ಪರಬ್ರಹ್ಮಪ್ರಾಪ್ತಿಯೆಂದು ಹೇಳುವುದಿಲ್ಲ. ಮತ್ತೆ) ಮಹಾಪ್ರಲಯಕಾಲದಲ್ಲಿ ಸರ್ವಕಾರ್ಯಗಳಿಗೆ ಸ್ವಾಮಿಯಾದ ಚತುರ್ಮುಖನಿಂದ ಕೂಡಿಕೊಂಡು ಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ. ॥೧೦॥೫॥

**ಪೀಠಿಕೆ ॥** ಸ್ಮೃತಿಯಿಂದಲೂ ಈ ಅರ್ಥವನ್ನು ಸಮರ್ಥಿಸತಕ್ಕ ಸೂತ್ರವನ್ನುದಾಹರಿಸುತ್ತಾರೆ—

## ಸೂತ್ರ ॥ ಓಂ ಸ್ಮೃತೇಶ್ಚ ಓಂ ॥ ೧೧ ॥

**ಭಾಷ್ಯ ॥ ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ । ಪರಸ್ಯಾಂತೇ ಪರಾತ್ಮಾನಃ**

ಪ್ರವಿಶಂತಿ ಪರಂ ಪದಂ ॥ ಇತಿ ॥ ೧೧ ॥ ॥ ೬ ॥

ಭಾಷ್ಯಾರ್ಥ ॥ ಪರಮಾತ್ಮನಲ್ಲಿ ಮನಸ್ಸುಳ್ಳ, ಎಲ್ಲಾ ಜ್ಞಾನಿಗಳೂ ಬ್ರಹ್ಮಾಯುಷ್ಯದ ಅಂತ್ಯದಲ್ಲಿ ಬ್ರಹ್ಮನ ನೂರು ವರ್ಷಾತ್ಮಕ ಕಾಲದ ಅಂತ್ಯದಲ್ಲಿ ಪ್ರಲಯಕಾಲವು ಪ್ರಾಪ್ತವಾಗುತ್ತಿರುವಾಗ ಆಗ ಚತುರ್ಮುಖನಿಂದ ಕೂಡಿಕೊಂಡು ಪರಬ್ರಹ್ಮನನ್ನು ಹೊಂದುತ್ತಾನೆ, ಎನ್ನುವ ಸ್ಮೃತಿಯಿಂದಲೂ ಹಿಂದಿನ ಅರ್ಥವು ತಿಳಿಯುತ್ತದೆ. ॥ ೧೧ ॥ ೬ ॥

ಪೀಠಿಕೆ ॥ ಪೂರ್ವಪಕ್ಷಾಂತರವನ್ನು ತೋರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪರಂ ಜೈಮಿನಿರ್ಮುಖ್ಯತ್ವಾತ್ ಓಂ ॥ ೧೨ ॥

ಭಾಷ್ಯ ॥ ಬ್ರಹ್ಮಶಬ್ದಸ್ಯ ತತ್ರೈವ ಮುಖ್ಯತ್ವಾತ್ಪರಮೇವ ಬ್ರಹ್ಮ ಗಮಯತಿ । ಇತಿ ಜೈಮಿನಿರ್ಮನ್ಯತೇ ॥ ೧೨ ॥ ॥ ೭ ॥

ಭಾಷ್ಯಾರ್ಥ ॥ ಸ ಏನಾನ್ ಬ್ರಹ್ಮ ಗಮಯತಿ ಎನ್ನುವ ವಾಕ್ಯದಲ್ಲಿ ವಾಯುದೇವರು ಪರಬ್ರಹ್ಮನನ್ನೇ ಹೊಂದಿಸಿಕೊಡುತ್ತಾರೆ. ಕಾರ್ಯಬ್ರಹ್ಮನನ್ನು ಅಲ್ಲ. ಏಕೆಂದರೆ, ಬ್ರಹ್ಮಶಬ್ದಕ್ಕೆ ಪರಬ್ರಹ್ಮನಲ್ಲಿಯೇ ಮುಖ್ಯತ್ವವಿದ್ದ ಪ್ರಯುಕ್ತ (ಮುಖ್ಯಾರ್ಥವು ಕೂಡುವಾಗ ಅಮುಖ್ಯಾರ್ಥ ಕಲ್ಪನೆಯು ಕೂಡಲಾರದು.) ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ॥ ೧೨ ॥ ೭ ॥

ಪೀಠಿಕೆ ॥ ಬ್ರಹ್ಮಶಬ್ದಕ್ಕೆ ಪರಬ್ರಹ್ಮನಲ್ಲಿ ಮುಖ್ಯತ್ವವಿದ್ದರೂ ಸಂಸಾರದಲ್ಲಿ ಬದ್ಧನಾದವನಿಗೆ ಪರಬ್ರಹ್ಮಪ್ರಾಪ್ತಿಯು ಕೂಡದಿರುವುದರಿಂದ ಅಮುಖ್ಯಾರ್ಥಕಲ್ಪನೆಯು ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ದರ್ಶನಾಚ್ಚ ಓಂ ॥ ೧೩ ॥

ಭಾಷ್ಯ ॥ ದೃಷ್ಟತ್ವಾಚ್ಚ ಪರಬ್ರಹ್ಮಣಃ ॥ ೧೩ ॥ ॥ ೮ ॥

ಭಾಷ್ಯಾರ್ಥ ॥ ಜ್ಞಾನಿಗಳಿಂದ ಶ್ರವಣ ಮೊದಲಾದ ಸಾಧನಗಳಿಂದ ಅಪರೋಕ್ಷವಾಗಿ ಪರಬ್ರಹ್ಮನಿಗೇನೇ ಜ್ಞಾತತ್ವವಿದ್ದಪ್ರಯುಕ್ತವೂ ಚತುರ್ಮುಖನಿಗೆ ಜ್ಞಾತತ್ವವಿಲ್ಲದಿರುವುದರಿಂದಲೂ ವಾಯುದೇವರು ಪರಬ್ರಹ್ಮನನ್ನೇ ಹೊಂದಿಸಿಕೊಡುತ್ತಾರೆನ್ನುವುದು ಯುಕ್ತವು ಏವಂಚ ಬದ್ಧನಿಗೂ ಪರಬ್ರಹ್ಮಪ್ರಾಪ್ತಿಯು ಯುಕ್ತವೇ. ॥ ೧೩ ॥ ೮ ॥

ಪೀಠಿಕೆ ॥ ಹೇತ್ವಂತರದಿಂದ ಈ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ನ ಚ ಕಾರ್ಯೇ ಪ್ರತಿಪತ್ತ್ಯಾಭಿಸಂಧಿಃ ಓಂ ॥ ೧೪ ॥

ಭಾಷ್ಯ ॥ ನ ಹಿ ಕಾರ್ಯೇ ಪ್ರತಿಪತ್ತಿಃ ಪ್ರಾಪ್ಯವಾನೀತ್ಯಸಂಧಿಶ್ಚ ॥ ೯ ॥

ಭಾಷ್ಯಾರ್ಥ ॥ ಜ್ಞಾನಿಗಳಿಗೆ ಕಾರ್ಯಬ್ರಹ್ಮವಿಷಯದಲ್ಲಿ ಉಪಾಸನೆಯು ಇರುವುದಿಲ್ಲ. ಕಾರ್ಯ

ಬ್ರಹ್ಮನನ್ನು ಹೊಂದುತ್ತೇನೆಂದು ಇಚ್ಛೆಯೂ ಇರುವುದಿಲ್ಲ. ಪರಬ್ರಹ್ಮವಿಷಯದಲ್ಲಿಯೇ ಉಪಾಸನೆಯೂ ಹೊಂದುತ್ತೇನೆನ್ನುವ ಇಚ್ಛೆಯೂ ಇರುತ್ತದೆ. ಆದಕಾರಣ ವಾಯುದೇವರು ಪರಬ್ರಹ್ಮನನ್ನೇ ಹೊಂದಿಸಿ ಕೊಡುತ್ತಾರೆ. ಕಾರ್ಯಬ್ರಹ್ಮನನ್ನು ಅಲ್ಲ (ಆದಕಾರಣ ಜ್ಞಾನಿಗಳಿಗೆ ಕಾರ್ಯಬ್ರಹ್ಮಪ್ರಾಪ್ತಿಯೇ ಅನುಪಪನ್ನವು. ಪರಬ್ರಹ್ಮಪ್ರಾಪ್ತಿಯು ಅನುಪಪನ್ನವಲ್ಲ.) ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ.

**ಪೀಠಿಕೆ ॥** ಪರಬ್ರಹ್ಮವಿಷಯದಲ್ಲಿಯೇ ದರ್ಶನ, ಉಪಾಸನಾ, ಇಚ್ಛೆಗಳು ಇರಲಿ. ಆದಾಗ್ಯೂ ಪರಬ್ರಹ್ಮಪ್ರಾಪ್ತಿಯೇ ಎಂದು ಯಾವುದರಿಂದ ಸಿದ್ಧವಾಗುತ್ತದೆ. ಕಾರ್ಯಬ್ರಹ್ಮಪ್ರಾಪ್ತಿಯು ಏಕೆ ಆಗುವುದಿಲ್ಲ ಎಂದರೆ—

**ಭಾಷ್ಯ ॥ ಯದುಪಾಸ್ತೇ ಪುಮಾನ್ ಜೀವನ್ನತ್ರಾಪ್ತುಮಭಿವಾಂಛತಿ । ಯಚ್ಚ ಪಶ್ಯತಿ ತೃಪ್ತಃ ಸಂಪ್ತತ್ರಾಪ್ನೋತಿ ಮೃತೇರನು ॥ ಇತಿ ಪಾದ್ಮೇ ॥ ೧೪ ॥ ॥ ೧೦ ॥**

**ಭಾಷ್ಯಾರ್ಥ ॥** ದೇಹಯುಕ್ತನಾದ ಪುರುಷನು ಉತ್ಕ್ರಾಂತಿಕಾಲದಲ್ಲಿ ಯಾವುದನ್ನು ಹೊಂದಲಿಕ್ಕೆ ಇಚ್ಛಿಸುತ್ತಾನೋ ತೃಪ್ತನಾಗಿ ದರ್ಶನಸಮಯದಲ್ಲಿ ಪರಮಾನಂದದಲ್ಲಿ ಮಗ್ನನಾದುದರಿಂದ ಅನ್ಯತ್ರ ಅಲಂಬುದ್ಧಿಯುಳ್ಳವನಾಗಿ ನೋಡುತ್ತಾನೋ, ದೇಹವಿಯೋಗಾನಂತರದಲ್ಲಿ ಅದನ್ನೇ ನೋಡುತ್ತಾನೆ. ಇತರವಾದುದನ್ನು ಅಲ್ಲ ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ॥ ೧೪ ॥ ೧೦ ॥

**ಪೀಠಿಕೆ ॥** ಹೀಗೆ ಬಾದರಿ ಜೈಮಿನಿಗಳ ಮತಗಳಿಗೆ ಭೇದವನ್ನು ಹೇಳಿದ್ದರಿಂದ ವಿರುದ್ಧದಂತೆ ತೋರತಕ್ಕ ಕಾರ್ಯಬ್ರಹ್ಮ ಪರಬ್ರಹ್ಮ ಗತಿವಿಷಯಕ ಶ್ರುತಿಸ್ಮೃತಿಗಳಿಗೆ ವಿರೋಧವನ್ನು ಪರಿಹರಿಸುತ್ತಾ ವಿಷಯವಿಭಾಗವದೆ ಎಂದು ಸೂಚಿಸಿ ಎರಡು ಕಡೆ ಹೋಗುವವರಿಗೆ ವಿಭಾಗವನ್ನು ತಿಳಿಸುವುದಕ್ಕಾಗಿ ತನ್ನ ಮತವನ್ನು ಹೇಳುತ್ತಾರೆ—

## ಸೂತ್ರ ॥ ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ತತ್ಕ್ರತುಶ್ಚ ಓಂ ॥ ೧೫ ॥

**ಸೂತ್ರಾರ್ಥ ॥** ದೇಹಾದಿಗಳಲ್ಲಿಯೇ ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡವರು ಪ್ರತೀಕಾಲಂಬನರು, ತದಿತರರು ಅಪ್ರತೀಕಾಲಂಭನರು. ಅಂತಹ ವ್ಯಾಪ್ತವಾಗಿ ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡ ಜ್ಞಾನಿಗಳನ್ನು ವಾಯುದೇವರು ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾರೆ. (ಸರ್ವರನ್ನು ಅಲ್ಲ) ಪ್ರತೀಕಾಲಂಬನರನ್ನು ಕಾರ್ಯಬ್ರಹ್ಮನನ್ನು ಹೊಂದಿಸಿಕೊಡುತ್ತಾರೆ, ಎಂದು ಸೂತ್ರಾರ್ಥವು ಎಂದು ಬಾದರಾಯಣಾಚಾರ್ಯರು ತಿಳಿಯುತ್ತಾರೆ. ಏಕೆಂದರೆ, ಎರಡು ಕಲ್ಪಗಳಲ್ಲಿಯೂ ದೋಷವಿದ್ದ ಪ್ರಯುಕ್ತ (ಅಂದರೆ, ಕೆಲವರನ್ನು ಕಾರ್ಯಬ್ರಹ್ಮನನ್ನು, ಕೆಲವರನ್ನು ಪರಬ್ರಹ್ಮನನ್ನು ಎಂದು ಅಂಗೀಕರಿಸದೆ ಸರ್ವರನ್ನು ಕಾರ್ಯಬ್ರಹ್ಮನನ್ನೇ ಹೊಂದಿಸಿಕೊಡುತ್ತಾರೆ. ಪರಬ್ರಹ್ಮನನ್ನು ಅಲ್ಲ ಪರಬ್ರಹ್ಮನನ್ನೇ, ಕಾರ್ಯಬ್ರಹ್ಮನನ್ನು ಅಲ್ಲ ಎಂದಂಗೀಕರಿಸಿದರೆ ಪೂರ್ವೋಕ್ತದೋಷವಿದ್ದ ಪ್ರಯುಕ್ತ.) (ಯತ್ರಾಪ್ತುಮಭಿವಾಂಛತಿ ತತ್ರಾಪ್ನೋತಿ ಎನ್ನುವ ವಚನದಿಂದ ಇಚ್ಛಾನುಸಾರವಾಗಿ ಅವರ ಪ್ರಾಪ್ತಿಯೋ ಎಂದರೆ) ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಎನ್ನುವ

ಶ್ರುತಿಯು ಇದ್ದುದರಿಂದ ಇಚ್ಛಾನುಸಾರವಾಗಿ ಕಾರ್ಯಬ್ರಹ್ಮಪರಬ್ರಹ್ಮ ಪ್ರಾಪ್ತಿಯಲ್ಲ. ಮತ್ತೆ ಯೋಗ್ಯತಾ ಕ್ರಮದಿಂದಲೇ ಚಃಶಬ್ದವು ಕ್ರಮಾನುರಾಗೀ ಭಗವಾನ್ ಕ್ರಮಾತ್ತುಂಭಿರವಾಪ್ಯತೇ। ಸಪ್ರತೀಕಾಶ್ಚತುರ್ಮುಖಮಪ್ರತೀಕಾಃ ಪರಮಿಹೈತೇ ಗಚ್ಛಂತಿ । ಪ್ರತೀಕಂ ದೇಹಃ, ಇತ್ಯಾದಿ ಶ್ರುತಿಸ್ಮೃತಿಗಳಿಗೆ ಸೂಚಕವು.

ಪೀಠಿಕೆ ॥ ಪ್ರತೀಕಾಲಂಬನ ಅಪ್ರತೀಕಾಲಂಬನ ಎಂಬ ಭೇದದಿಂದ ಅಧಿಕಾರಿಗಳು ಎರಡು ವಿಧರು. ಅದರಲ್ಲಿ ಪ್ರತೀಕಾಲಂಬನರಿಗೆ ಲಕ್ಷಣವನ್ನು ತೋರಿಸುತ್ತಾರೆ—

**ಭಾಷ್ಯ ॥ ಪ್ರತೀಕಂ ದೇಹ ಉದ್ದಿಷ್ಟೋ ಯೇಷಾಂ ತತ್ರೈವ ದರ್ಶನಂ । ನ ತು ವ್ಯಾಪ್ತತಯಾ ಕ್ವಾಪಿ ಪ್ರತೀಕಾಲಂಬನಾಸ್ತು ತೇ ॥ ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ । ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾಣಾಂ (ದಿ) ಶತಂ ತಥಾ ॥ ಏತೇಽಧಿಕಾರಿಣೋ ವ್ಯಾಪ್ತ (ಪ್ತಿ) ದರ್ಶನೇಽನ್ಯೇ ನ ತು ಕ್ವಚಿತ್ । ಅಯೋಗ್ಯದರ್ಶನೇ ಯತ್ನಾದ್ಭ್ರಂಶಃ ಪೂರ್ವಸ್ಯ ಚಾಪಿ ತು ॥ ಅಪ್ರತೀಕಾಶ್ರಯಾ ಯೇ ಹಿ ತೇಯಾಂತಿ ಪರಮೇವ ತು । ಸ್ವದೇಹೇ ಬ್ರಹ್ಮದೃಷ್ಟ್ಯೈವ ಗಚ್ಛೇದ್ಬ್ರಹ್ಮಸಲೋಕತಾಂ ॥ ಬ್ರಹ್ಮಣಾ ಸಹ ಸಂಪ್ರಾಪ್ತೇ ಸಂಹಾರೇ ಪರಮಂ ಪದಮಿತಿ ಗಾರುಡವಚನಾತ್ ಉಭಯತ್ರೋಕ್ತದೋಷಾಚ್ಚಾಪ್ರತೀಕಾಲಂಬನಾನ್ನರಂ ನಯತಿ । ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ (ಬೃ.೬.೪.೫.) ಇತಿ ಶ್ರುತೇಶ್ಚ । ಅತ್ರ ಕರ್ಮೋಪಾಸನಮೇವ । ಅನ್ಯಾನ್ಕಾರ್ಯಂ ನಯತೀತಿ ಭಗವನ್ಮತಂ ॥ ೧೫ ॥ ॥ ೧೧ ॥**

ಭಾಷ್ಯಾರ್ಥ ॥ ದೇಹ ಇಂದ್ರಿಯಾದಿಗಳು ಪ್ರತೀಕವೆಂದು ಹೇಳಲ್ಪಟ್ಟಿದೆ, ಯಾರಿಗೆ ಆ ದೇಹಾದಿಗಳಲ್ಲಿ ಬ್ರಹ್ಮದರ್ಶನವು ಉಂಟಾಗುತ್ತದೋ, ಯಾವ ಕಾಲದಲ್ಲಿಯೇ ವ್ಯಾಪ್ತವಾಗಿ ಸರ್ವತ್ರ ಶ್ರೀಹರಿಯ ದರ್ಶನವು ಆಗುವುದಿಲ್ಲವೋ ಅವರು ಪ್ರತೀಕಾಲಂಬರು ಎನ್ನಿಸಿಕೊಳ್ಳುತ್ತಾರೆ. ಅಪ್ರತೀಕಾಲಂಬನರೂ ಹೇಳಲ್ಪಡುತ್ತಾರೆ. ನೂರು ಮಂದಿ ದೇವತೆಗಳೂ, ಋಷಿಗಳ ನೂರು ಅಂದರೆ ನೂರು ಮಂದಿ ಋಷಿಗಳೂ, ನೂರು ಮಂದಿ ರಾಜರೂ ನೂರು ಮಂದಿ ಗಂಧರ್ವರೂ ಹಾಗೆಯೇ ನೂರು ಮಂದಿ ಅಪ್ಸರಸ್ತ್ರೀಯರೂ ಇವರು ಅಪ್ರತೀಕಾಲಂಬನರು. ಈ ಅಧಿಕಾರಿಗಳೇ ವ್ಯಾಪ್ತ್ಯೋಪಾಸಕರು. ಇವರಿಂದ ಭಿನ್ನರಾದ ಋಷಿಗಳೂ ನರೋತ್ತಮಾದಿಗಳೂ ಯಾವ ಕಾಲದಲ್ಲಿಯೂ ಸರ್ವತ್ರ ವ್ಯಾಪ್ತಭಗವದ್ರೂಪೋಪಾಸನೆಗೆ ಯೋಗ್ಯರು ಆಗುವುದಿಲ್ಲ (ಅಯೋಗ್ಯರಿಗೂ ಪ್ರಯತ್ನದಿಂದ ಪ್ರಾಪ್ತಿಯು ಆಗಬಹುದು. ಎಂದರೆ) ತಮಗೆ ಯೋಗ್ಯವಾಗದೆ ಇದ್ದ ದರ್ಶನದಲ್ಲಿ ಅಥವಾ ನೋಡಲಿಕ್ಕೆ ಅಯೋಗ್ಯವಾದ ವಸ್ತುವನ್ನು ನೋಡುವ ವಿಷಯದಲ್ಲಿ ಶ್ರವಣಾದಿರೂಪವಾದ ಪ್ರಯತ್ನವನ್ನು ಮಾಡುವುದರಿಂದ ಪೂರ್ವೋಕ್ತನ್ನದರ್ಶನಕ್ಕೂ ಅದರಿಂದ ಸಾಧ್ಯವಾದ ಫಲವು ಇಲ್ಲದೆ ಹೋಗುವುದು. ಯಾರು ವ್ಯಾಪ್ತಭಗವದ್ರೂಪವನ್ನು ಪ್ರತ್ಯಕ್ಷೀಕರಿಸಿಕೊಂಡವರೋ, ಪ್ರಸಿದ್ಧರಾದ ಅವರು ವೈಕುಂಠಲೋಕದಲ್ಲಿದ್ದ ಪರಬ್ರಹ್ಮನನ್ನೇ ಹೊಂದುತ್ತಾರೆ. ಕಾರ್ಯಬ್ರಹ್ಮನನ್ನು ಹೊಂದುವುದಿಲ್ಲ

(ಪ್ರತೀಕಾಲಂಬನರಾದರೂ ತಮ್ಮ ಶರೀರದಲ್ಲಿಯೇ ಬ್ರಹ್ಮದರ್ಶನದಿಂದ ಬ್ರಹ್ಮಸಾಲೋಕ್ಯವನ್ನೇ ಹೊಂದುವರು. ಪ್ರಲಯದಿಂದ ಮೊದಲು ಪರಬ್ರಹ್ಮನ ಸಮಾನಲೋಕವನ್ನೇ ಹೊಂದುವರು, ವೈಕುಂಠವನ್ನು ಹೊಂದುವುದಿಲ್ಲ. ಪರಬ್ರಹ್ಮನು ವೈಕುಂಠೇತರ ಲೋಕಗಳಲ್ಲಿಯೂ ಇರುತ್ತಾನೆ. ಪ್ರಲಯ ಪರ್ಯಂತ ಚತುರ್ಮುಖನನ್ನೇ ಹೊಂದಿ ಚತುರ್ಮುಖನ ಉಪದೇಶದಿಂದ ಜ್ಞಾನವನ್ನು ಅಭಿವೃದ್ಧಿಕರಿಸುತ್ತಾ ವೈಕುಂಠೇತರಗಳಾದ ಮಹರಾದಿಲೋಕಗಳಲ್ಲಿಯೇ ಇರುತ್ತಾರೆ, ಆಮೇಲೆ ಸರ್ವಕಾರ್ಯಗಳ ನಾಶರೂಪವಾದ ಪ್ರಲಯವು ಪ್ರಾಪ್ತವಾಗುತ್ತಿರಲು ಚತುರ್ಮುಖನಿಂದ ಕೂಡಿಕೊಂಡು ಪರಬ್ರಹ್ಮನನ್ನು ಹೊಂದುವರು, ಎನ್ನುವ ಗಾರುಡವಚನದಿಂದ ಎರಡು ಕಲ್ಪದಲ್ಲಿ ಉಕ್ತವಾದ ದೋಷವಿದ್ದುದರಿಂದ, (ಅಂದರೆ ಪರಬ್ರಹ್ಮಪ್ರಾಪ್ತಿಪಕ್ಷದಲ್ಲಿ ಸಂಸಾರ ಬದ್ಧನಿಗೆ ಸಂಸಾರ ಬಂಧವೇ ಕೂಡದೆ ಹೋಗುವುದು ಇತ್ಯಾದಿ ದೋಷಗಳು ಬರುವುವರಿಂದಲೂ, ಕಾರ್ಯಬ್ರಹ್ಮಪ್ರಾಪ್ತಿ ಪಕ್ಷದಲ್ಲಿ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥತ್ವಾದಿ ದೋಷವು ಉಕ್ತವಾಗುವುದರಿಂದಲೂ) ಅಪ್ರತೀಕಾಲಂಬನರನ್ನು ವಾಯುದೇವರು ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾರೆ. (೨) ಹೀಗೆ ವಿಭಾಗದಿಂದ ಪರಾಪರಬ್ರಹ್ಮಪ್ರಾಪ್ತಿಯಾಗುವಾಗ ಯೋಗ್ಯತಾಕ್ರಮವನ್ನು ಏಕೆ ಅನುಸರಿಸಬೇಕು **ಯತ್ತಾಪ್ತುಮಭಿವಾಂಛತಿ** ಎನ್ನುವ ಸ್ಮೃತ್ಯನುಸಾರವಾಗಿ ಅವರವರ ಇಚ್ಛಾನುಸಾರವಾಗಿಯೇ ತತ್ತತ್ಪ್ರಾಪ್ತಿಯು, ಏಕೆ ಆಗಲಾರದೆಂದರೆ ಆ ಈಶ್ವರನು ಯಾವ ಇಚ್ಛೆಯುಳ್ಳವನು ಆಗುತ್ತಾನೋ, ಜೀವನೂ ಕೂಡ ಅಂತಹ ಇಚ್ಛೆಯುಳ್ಳವನು ಆಗುತ್ತಾನೆ ಹೀಗೆಯೇ ಮಾಡುವೆನು ಎಂದು ನಿಶ್ಚಯರೂಪ ಕಾಮನಾವುಳ್ಳವನು ಆಗುತ್ತಾನೆ. ಆ ಜೀವನು ಯಾವ ನಿಷ್ಠಾವುಳ್ಳವನು ಆಗುತ್ತಾನೋ ತದ್ವಿಷಯಕವಾದ ಉಪಾಸನಾಖ್ಯ ಕರ್ಮವನ್ನು ಮಾಡುತ್ತಾನೆ. ಅಂತೂ ಅದನ್ನು ಹೊಂದುತ್ತಾನೆ. ತದ್ವಿಷಯಕವಾದ ಅಪರೋಕ್ಷಜ್ಞಾನವುಳ್ಳವನು ಆಗುತ್ತಾನೆ. ಆಮೇಲೆ ತತ್ಪ್ರಾಪ್ತಿರೂಪವಾದ ಫಲವನ್ನು ಹೊಂದುತ್ತಾನೆ, ಎನ್ನುವ ಶ್ರುತಿಯಿಂದಲೂ (ಇಲ್ಲಿ ಶ್ರುತಿಯಲ್ಲಿ ಉಪಾಸನವನ್ನು ಹೇಳಲಿಲ್ಲವೆಂದಲ್ಲ, ಕರ್ಮಪದವೇ ಉಪಾಸನವಾಚಕವಾಗಿದೆ ಎನ್ನುತ್ತಾರೆ) ಇಲ್ಲಿ ಕರ್ಮವೆಂದರೆ ಉಪಾಸನವೇ ಆಗಿದೆ. ಪ್ರತೀಕಾಲಂಬನ ರನ್ನು ಕಾರ್ಯಬ್ರಹ್ಮನನ್ನು ವಾಯುದೇವರು ಹೊಂದಿಸಿಕೊಡುತ್ತಾರೆ. ಎಂದು ವೇದವ್ಯಾಸರ ಮತವು.

ವಿಶೇಷಾಂಶ ॥ (೧) ಅಧಿಕಾರಿಭೇದದಿಂದ ಕಾರ್ಯಬ್ರಹ್ಮ ಪರಬ್ರಹ್ಮ ಪ್ರಾಪ್ತಿಯನ್ನು ಅಂಗೀ ಕರಿಸಿದರೆ ಎರಡು ದೋಷಗಳೂ ಬರುವುದಿಲ್ಲ, ಬದ್ಧರಿಗೂ ಕೂಡ ಯೋಗ್ಯತಾಧಿಕ್ಯದಿಂದ ಪರಬ್ರಹ್ಮ ಪ್ರಾಪ್ತಿಯು ಕೂಡಬಹುದು. ಶ್ರುತ್ಯಾದಿಗಳು ಇತರ ನಿಷೇಧಕವಲ್ಲ, ಅಲ್ಪಾಧಿಕಾರಿಗಳಿಗೆ ಬದ್ಧತ್ವವಿರುವಾಗ ಪರಬ್ರಹ್ಮಪ್ರಾಪ್ತಿಯು ಕೂಡದಿರುವುದರಿಂದ ಬ್ರಹ್ಮಶಬ್ದವು ಅಮುಖ್ಯವಾದ ಕಾರ್ಯಬ್ರಹ್ಮನಲ್ಲಿಯೂ ಇದೆ ಎಂದಂಗೀಕರಿಸುವುದು ನ್ಯಾಯಪ್ರಾಪ್ತವಾಗಿದೆ. ಕಾರ್ಯಪ್ರಾಪ್ತಿಯುಳ್ಳವರಿಗೆ ಕಾರ್ಯಬ್ರಹ್ಮದರ್ಶನ ಉಪಾಸನಾ, ಇಚ್ಛೆಯೂ ಕೂಡ ಇವೆ. ॥ ೧೫ ॥ ೧೧ ॥

ಪೀಠಿಕೆ ॥ ಅಪ್ರತೀಕಾಲಂಬನತ್ವಾದಿಗಳನ್ನು ಯಥೇಷ್ಟವಾಗಿ ಆಪಾದಿಸಲಿಕ್ಕೆ ಶಕ್ಯವಾಗುವುದರಿಂದ ಈ ನಿಯಮವು ಹೇಗೆ ಕೂಡುತ್ತದೆ ಎಂದರೆ—

## ಸೂತ್ರ ॥ ಓಂ ವಿಶೇಷಂ ಚ ದರ್ಶಯತಿ ಓಂ ॥ ೧೬ ॥

ಸೂತ್ರಾರ್ಥ ॥ ಅಪ್ರತೀಕಾಲಂಬನತ್ವಾದಿ ವಿಶೇಷವನ್ನು ದೇವಾ ವಾವ ಸರ್ವಪ್ರಕಾಶಾಃ ಎನ್ನುವ ಶ್ರುತಿಯು ತೋರಿಸುತ್ತದೆ.

**ಭಾಷ್ಯ ॥ ಅಂತಃಪ್ರಕಾಶಾ ಬಹಿಃಪ್ರಕಾಶಾಃ ಸರ್ವಪ್ರಕಾಶಾಃ । ದೇವಾ ವಾವ ಸರ್ವಪ್ರಕಾಶಾ ಋಷಯೋಽತಃಪ್ರಕಾಶಾ ಮನುಷ್ಯಾ ಏವ ಬಹಿಃಪ್ರಕಾಶಾಃ । ಇತಿ ಚತುರ್ವೇದಶಿಖಾಯಾಂ ॥ ೧೬ ॥ ಅಧಿ.೬ ॥ ॥ ೧೨ ॥**

ಭಾಷ್ಯಾರ್ಥ ॥ ಅಂತಃಪ್ರಕಾಶಕರು, ಬಹಿಃಪ್ರಕಾಶಕರು, ಸರ್ವಪ್ರಕಾಶಕರು ಎಂದು ಅಪರೋಕ್ಷ ಜ್ಞಾನಿಗಳು ಮೂರು. ವಿಧರು. ಅದರಲ್ಲಿ ದೇವತೆಗಳೇ ಸರ್ವತ್ರ ಭಗವದ್ದರ್ಶನವುಳ್ಳವರು. (ಅಂದರೆ ವ್ಯಾಪ್ತದರ್ಶಿಗಳು.) ಋಷಿಗಳು ತಮ್ಮ ಶರೀರದಲ್ಲಿಯೇ ಭಗವದ್ದರ್ಶನವುಳ್ಳವರು. ಮನುಷ್ಯರೇ ಅಗ್ನ್ಯಾದ್ಯಧಿಷ್ಠಾನಗಳಲ್ಲಿ ಅಭಿವ್ಯಕ್ತವಾದ ಭಗವದ್ರೂಪವನ್ನು ಪ್ರತ್ಯಕ್ಷೀಕರಿಸಿಕೊಂಡವರು. (ತಥಾಚ ಅಪ್ರತೀಕಾಲಂಬನತ್ವಾದಿಗಳು ದೇವಾದಿಗಳಲ್ಲಿ ನಿಯತಗಳಾಗಿರುವುದರಿಂದ ಯಥೇಷ್ಟವಾಗಿ ಆಪಾದಿಸಲಿಕ್ಕೆ ಅಶಕ್ಯವಾದುದರಿಂದ ಈ ನಿಯಮವು ಯುಕ್ತವೇ.) ॥ ೧೬ ॥ ೧೨ ॥

## ಅಧಿಕರಣ ಸಾರಾಂಶ

ಸ ಏನಾನ್ ಬ್ರಹ್ಮ ಗಮಯತಿ ಎನ್ನುವಲ್ಲಿ ಶ್ರುತನಾದ ಬ್ರಹ್ಮನು ಚತುರ್ಮುಖನೋ ಅಥವಾ ಪರಬ್ರಹ್ಮನೋ, ಅಥವಾ ಇಬ್ಬರೂ ಗ್ರಾಹ್ಯರೋ, ಅದಕ್ಕಾಗಿ ಇಬ್ಬರು ಎನ್ನುವ ಪಕ್ಷದಲ್ಲಿ ಒಂದೊಂದು ಪಕ್ಷದಲ್ಲಿ ಹೇಳಿದ ಸಾಧಕ ಬಾಧಕಗಳನ್ನು ಸರಿಪಡಿಸಲಿಕ್ಕೆ ಶಕ್ಯಗಳಾಗುವುದಿಲ್ಲವೋ ಶಕ್ಯಗಳಾಗುತ್ತವೋ ಎಂದು ಸಂದೇಹವು. **ಯದಿ ಹ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ** ಎನ್ನುವ ಶ್ರುತಿಯಿಂದಲೂ **ಬ್ರಹ್ಮಣಾ ಸಹ ತೇ ಸರ್ವೇ**, ಎನ್ನುವ ಸ್ಮೃತಿಯಿಂದಲೂ, **ತಥಾಪಿ ಪ್ರಕೃತೇರ್ಬಂಧಃ** ಇತ್ಯಾದಿಗಳಿಂದ ಚತುರ್ಮುಖ ಮುಕ್ತಿಪರ್ಯಂತ ಬಂಧವು ನಿಯತವಾದುದರಿಂದ ಚತುರ್ಮುಖನ ಪ್ರಾಪ್ತಿಯೇ ಅವಗತವಾಗುವುದರಿಂದ ಬಾಧಕವಿದ್ದುದರಿಂದ ಮುಖ್ಯಾರ್ಥನಾದ ಪರಬ್ರಹ್ಮನನ್ನು ಬಿಡಬಹುದಾದುದರಿಂದ ಅಮುಖ್ಯಾರ್ಥನಾದ ಚತುರ್ಮುಖನನ್ನು ಇಟ್ಟುಕೊಳ್ಳಬಹುದಾದುದರಿಂದ ಶ್ರುತ್ಯುಕ್ತನಾದ ಬ್ರಹ್ಮನು ಚತುರ್ಮುಖನೇ. ಹಾಗಾದರೆ **ಬ್ರಹ್ಮವಿದಾಪ್ನೋತಿ ಪರಂ** ಎಂದು ಪರಬ್ರಹ್ಮಪ್ರಾಪ್ತಿಪ್ರತಿಪಾದಕ ಶ್ರುತಿವಿರೋಧವು ಬರುವುದೆಂದು ಹೇಳಕೂಡದು. ಆ ಸಾಮಾನ್ಯ ವಾಕ್ಯಕ್ಕೆ ಹಿಂದೆ ಹೇಳಿದ ವಿಶೇಷ ಶ್ರುತ್ಯಾದಿಗಳಿಂದ ಚತುರ್ಮುಖನ ಪ್ರಾಪ್ತಿಯಾದ ಮೇಲೆ ಶೀಘ್ರದಲ್ಲಿಯೇ ಪ್ರಲಯ ಕಾಲದಲ್ಲಿ ಚತುರ್ಮುಖನಿಂದ ಕೂಡಿಕೊಂಡು ಪರಬ್ರಹ್ಮನನ್ನು ಹೊಂದುತ್ತಾನೆ ಎಂದು ಸಾಮೀಪ್ಯಾರ್ಥಕವಾಗಿ ಆ ಶ್ರುತಿಯು ಸಾವಕಾಶವಾಗುವುದರಿಂದ ಅದರಿಂದ ವಿರೋಧವಿಲ್ಲ. ಆದಕಾರಣ, ಈ ಶ್ರುತಿಯಲ್ಲಿ ಹೇಳಿದ ಬ್ರಹ್ಮನು ಚತುರ್ಮುಖನೇ ಎಂದು ಪೂರ್ವಪಕ್ಷವು ಬಂದರೆ, ಚತುರ್ಮುಖನನ್ನೇ ಹೊಂದುವುದು, ಪರಬ್ರಹ್ಮನನ್ನು ಅಲ್ಲ, ಪರಬ್ರಹ್ಮನನ್ನೇ ಹೊಂದುವುದು. ಚತುರ್ಮುಖನನ್ನು ಅಲ್ಲ ಎಂದು ಪರಸ್ಪರ ವ್ಯಾವೃತ್ತಿಯು ಮಾಡದಿರುವುದರಿಂದಲೂ ಮತ್ತು ಈ ಬ್ರಹ್ಮಶಬ್ದವು ಚತುರ್ಮುಖಪರವೇ ಅಥವಾ ಪರಬ್ರಹ್ಮ ಪರವೇ ಎಂಬುವಲ್ಲಿ ವಿಶೇಷ ಹೇತುವು ಇಲ್ಲದಿರುವುದರಿಂದಲೂ ಅಧಿಕಾರಿ ಭೇದದಿಂದ ಉಭಯಾರ್ಥಕತ್ವವೂ ಕೂಡಬಹುದಾದುದರಿಂದ

ಕಾರ್ಯಬ್ರಹ್ಮ ಪರಬ್ರಹ್ಮ ಇಬ್ಬರೂ ಬ್ರಹ್ಮಶಬ್ದವಾಚ್ಯರೆಂದು ಈ ಶ್ರುತಿಯಲ್ಲಿ ವಿವಕ್ಷಿತರಾಗಿದ್ದಾರೆ. ಆದಕಾರಣ ವಾಯುದೇವರು **ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು** ಇತ್ಯಾದಿ ಪ್ರಮಾಣಾನುಸಾರವಾಗಿ ಅಪ್ರತೀಕಾಲಂಬನರನ್ನು ಪರಬ್ರಹ್ಮನನ್ನೂ, ಪ್ರತೀಕಾಲಂಬನರನ್ನು ಚತುರ್ಮುಖ ಬ್ರಹ್ಮನನ್ನೂ ಹೊಂದಿಸಿಕೊಡುತ್ತಾರೆ. ಆದಕಾರಣ ಸ ಏನಾನ್ ಬ್ರಹ್ಮ ಗಮಯತಿ ಎನ್ನುವ ಶ್ರುತಿಯಲ್ಲಿದ್ದ ಬ್ರಹ್ಮಶಬ್ದವು ಅಧಿಕಾರಿ ಭೇದದಿಂದ ಕಾರ್ಯಬ್ರಹ್ಮ ಪರಬ್ರಹ್ಮ ಉಭಯಪರವೆನ್ನುವುದೇ ಯುಕ್ತವು. ॥ ಅಧಿ.೬ ॥

**ಕಾರ್ಯಾಧಿಕರಣವು ಸಮಾಪ್ತವಾಯಿತು.**

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ**
**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ದ) ವಿರಚಿತೇ**
**ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ ॥ ೪-೩ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ
ಶ್ರೀಮದ್ವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ನಾಲ್ಕನೇ ಅಧ್ಯಾಯದಲ್ಲಿ
ತೃತೀಯ ಪಾದವು ಸಮಾಪ್ತವಾಯಿತು. ॥ ೪-೩ ॥

**ವಿಟ್ಠಲಂ ಮಧ್ವದೇವೇಶಂ ಮೋಕ್ಷಾದಿಪುರುಷಾರ್ಥದಂ ।**
**ರುಗ್ಮಿಣೀಸತ್ಯಭಾಮಾಭ್ಯಾಂ ಸಹಿತಂ ಪ್ರಣಮಾಮ್ಯಹಂ ॥**
**ಭಾರತೀಶ ನಮಸ್ತುಭ್ಯಂ ರಾಮಪ್ರಿಯ ನಮೋಽಸ್ತು ತೇ ।**
**ನಮಸ್ತೇ ದ್ರೌಪದೀಕಾಂತ ವ್ಯಾಸಶಿಷ್ಯ ನಮೋಽಸ್ತುತೇ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

॥ ಶ್ರೀ ಗುರುಭ್ಯೋ ನಮಃ ॥

॥ ಹರಿಃ ಓಂ ॥

# ಚತುರ್ಥಾಧ್ಯಾಯ ೪ನೇ ಪಾದ

# ಭೋಗಪಾದ

ಅಮಂದಾನಂದಸಂದೋಹದೇವಾಯೇಂದೀವರತ್ವಿಷೇ ।
ಇಂದಿರಾಸ್ಯಾಬ್ಜಪೀಯೂಷಜುಷೇ ಕಂಸದ್ವಿಷೇ ನಮಃ ॥
ಯತೋ ಭೂತಾನಿ ಜಾಯಂತೇ ಯೇನ ಜೀವಂತಿ ತಾನ್ಯುತ ।
ಯೋ ಹಂತಿ ಮೋಕ್ಷದಸ್ತೇಷಾಂ ತಂ ವಿಷ್ಣುಂ ಪ್ರಣಮಾಮ್ಯಹಂ ॥
ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣಿ ಚ ಭಾರತೀ ।
ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಲದೇವತಾ ॥

## ೧. ಸಂಪದ್ಯಾಧಿಕರಣವು

**ಭಾಷ್ಯ ॥ ಭೋಗಮಾಹಾಸ್ಮಿನ್ ಪಾದೇ ॥ ೧ ॥**

**ಭಾಷ್ಯಾರ್ಥ ॥** ನಾಲ್ಕು ವಿಧವಾದ ಫಲದಲ್ಲಿ ಕರ್ಮಕ್ಷಯ ಉತ್ಕ್ರಾಂತಿ ಮಾರ್ಗ ಎಂಬೀ ಮೂರನ್ನು ನಿರೂಪಿಸಿ ಚತುರ್ಮುಖನಿಂದ ಕೂಡಿಕೊಂಡು ಪರಬ್ರಹ್ಮನನ್ನು ಹೊಂದಿದವರಿಗೆ ಮುಕ್ತಿಯಲ್ಲಿ ಯಾವುದು ಭೋಗವದೆಯೋ ಆ ಭೋಗವನ್ನು ಸೂತ್ರಕಾರರು ಈ ಪಾದದಲ್ಲಿ ನಿರೂಪಿಸುತ್ತಾರೆ. ಈ ಅಧಿಕರಣದಲ್ಲಿ ಬ್ರಹ್ಮನನ್ನು ಅತಿಕ್ರಮಿಸದೇನೇ (ಬ್ರಹ್ಮನಿಂದ ಕೂಡಿಕೊಂಡೇ) ಭೋಗ್ಯವಸ್ತುವನ್ನು ಮುಕ್ತರು ಭೋಗಿಸುತ್ತಾರೆಂದು ಸಾಧಿಸುತ್ತಾರೆ. ॥ ೧ ॥

**ಪೀಠಿಕೆ ॥** ಮುಕ್ತನಾದವನು ಅರ್ಚಿರಾದಿ ಮಾರ್ಗಗಳನ್ನೆಂಬಂತೆ ಪರಬ್ರಹ್ಮನನ್ನು ಕೂಡಿ ಅತಿಕ್ರಮಿಸಿಯೇ ಭೋಗಗಳನ್ನು ಅನುಭವಿಸುತ್ತಾನೆ, **ಏತಂ ಸೇತುಂ ತೀರ್ತ್ವಾಂಧಃ ಸನ್ ಅನಂಧೋ ಭವತಿ** ಎನ್ನುವ ಪ್ರುತಿಯಲ್ಲಿ ಸೇತುಶಬ್ದವಾಚ್ಯನಾದ ಪರಮಾತ್ಮನನ್ನು ದಾಟ ಮೊದಲು ಅಜ್ಞಾನಿಯಾಗಿದ್ದವನು ಈಗ ಅಜ್ಞಾನದಿಂದ ಬಿಡುಗಡೆಯನ್ನು ಹೊಂದುತ್ತಾನೆ, ಎಂದು ಪರಮಾತ್ಮನನ್ನು ಅತಿಕ್ರಮಿಸಿದ ಮೇಲೆಯೇ ಸ್ವಸ್ವರೂಪಾವಿರ್ಭಾವವು ಉಕ್ತವಾಗಿದೆ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ–

**ಸೂತ್ರ ॥ ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ॥ ೧ ॥**

ಸೂತ್ರಾರ್ಥ ॥ ಜ್ಞಾನಿಯಾದವನು ಪರಬ್ರಹ್ಮನನ್ನು ಹೊಂದಿ ಪರಬ್ರಹ್ಮನನ್ನು ಅತಿಕ್ರಮಿಸದೆ (ಬಿಡದೇನೇ) ಸ್ವಸ್ವರೂಪದಿಂದಲೇ ಇರತಕ್ಕವನಾಗಿ ಸ್ವಯೋಗ್ಯ ಭೋಗಗಳನ್ನು ಅನುಭವಿಸುತ್ತಾನೆ. ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ, ಇತ್ಯಾದಿ ಶ್ರುತಿಗಳಿಂದ.

**ಭಾಷ್ಯ ॥ (೧) ಸ ಯ ಏವಂವಿದೇವಂಮನ್ವಾನ ಏವಂ ಪಶ್ಯನ್ನಾತ್ಮಾನಮಭಿಸಂಪದ್ಯೈ-ತೇನಾಽತ್ಮನಾ ಯಥಾಕಾಮಂ ಸರ್ವಾನ್ ಕಾಮಾನನುಭವತಿ । ಇತಿ ಸೌಪರ್ಣಶ್ರುತೇಃ (೩ಃ)। (೨) ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ (ಛಾ.೮.೩.೪.) ಇತಿ ಚ । (೩) ಏತಂ ಸೇತುಂ ತೀರ್ತ್ವಾಽಂಧಸ್ಸನನಂಧೋ ಭವತಿ । (ಛಾ.೮.೪.೨.) ಇತಿ ಚ । (೪) ತತ್ರತರಣಂ ನಾಮ ತತ್ಪ್ರಾಪ್ತಯೇಽನ್ಯ ತರಣಮೇವ । (೫) ಇಮಾಂ ಘೋರಾಮಶಿವಾಂ ನದೀಂ ತೀರ್ತ್ವೈತಂ ಸೇತುಮಾಪ್ಯೈತೇನೈವ ಸೇತುನಾ ಮೋದತೇ ಪ್ರಮೋದತ ಆನಂದೀಭವತಿ । ಇತಿ ಮೌದ್ಗಲ್ಯಶ್ರುತೇಃ ॥ ೧ ॥ ॥ ಅಧಿ.೧ ॥ ॥ ೨ ॥**

ಭಾಷ್ಯಾರ್ಥ ॥ (೧) ಯಾವ ಅಧಿಕಾರಿಯು ಹಿಂದೆ ಹೇಳಿದ ಪ್ರಕಾರ ಪರಮಾತ್ಮನನ್ನು ತಿಳಿಯುತ್ತಾ ವಿಚಾರಮಾಡುತ್ತಾ ಶ್ರವಣಾದಿಗಳಿಂದ ನೋಡುತ್ತಾ ಅಪರೋಕ್ಷವಾಗಿ ತಿಳಿಯುತ್ತಾನೋ, ಆತನು ಪರಮಾತ್ಮನನ್ನು ಹೊಂದಿ ಪರಮಾತ್ಮನಿಂದ ಕೂಡಿಕೊಂಡೇ ಯಥೇಷ್ಟವಾಗಿ ಯೋಗ್ಯಗಳಾದ ಎಲ್ಲಾ ಕಾಮ್ಯಗಳಾದ ಅಲೌಕಿಕ ವಿಷಯಗಳನ್ನು ಅನುಭವಿಸುತ್ತಾನೆ, ಎನ್ನುವ ಸೌಪರ್ಣ ಶ್ರುತಿಯಿಂದ. (೨) (ಬ್ರಹ್ಮನನ್ನು ಅತಿಕ್ರಮಿಸದೇನೇ ಸ್ವಸ್ವರೂಪವು ಆವಿರ್ಭೂತವಾಗಿ ಮುಕ್ತರಿಗೆ ಭೋಗವು ಆಗುತ್ತದೆ ಎನ್ನುವುದು ಯಾವ ಪ್ರಮಾಣದಿಂದ ಎಂದರೆ) ***ಪರಂಜ್ಯೋತಿಃ** ಇತ್ಯಾದಿ (ಇದರಿಂದ ಭೋಗವು ಸಿದ್ಧಿಸುತ್ತದೆ.) (೩.) (ಹೀಗೆ ಬ್ರಹ್ಮನನ್ನು ಅತಿಕ್ರಮಿಸದೇನೇ ಸ್ವಸ್ವರೂಪಾವಿರ್ಭಾವವಾಗುವುದಾದರೆ ಏತಂ ಎನ್ನುವ ಶ್ರುತಿವಿರೋಧವು ಬರುವುದು ಎಂದರೆ.) ಸಂಸಾರದಲ್ಲಿ ಬದ್ಧನಾಗಿ ಅವಿದ್ಯಾವೃತನಾಗಿರುವ ಅಧಿಕಾರಿಯು ನಿರ್ದೋಷನಾದ ಶ್ರೀಹರಿಯ ಪ್ರಸಾದದಿಂದ ಸರ್ವಾಶ್ರಯ ನಾದ ಈ ಶ್ರೀಹರಿಯನ್ನು ಕುರಿತು ಹೋಗುವುದಕ್ಕಾಗಿ ಈ ಸಂಸಾರ ನದಿಯನ್ನು ಅಥವಾ ಅವಿದ್ಯಾದಿಗಳನ್ನು ದಾಟ ದೋಷರಹಿತನು ಆಗುತ್ತಾನೆ, ಎನ್ನುವ ಶ್ರುತಿಯು (ಉಕ್ತಾರ್ಥಕ್ಕೆ ವಿರೋಧಿ ಯಲ್ಲ) (೪) ಆ ಶ್ರುತಿಯಲ್ಲಿ ತೀರ್ತ್ವಾ ಎಂದು ಹೇಳಲ್ಪಡತಕ್ಕ ತರಣವೆಂದರೆ ಪರಮಾತ್ಮಪ್ರಾಪ್ತಿಗಾಗಿ ಸಂಸಾರತರಣವೇ ಹೇಳಲ್ಪಡುತ್ತದೆ. (ಬ್ರಹ್ಮತರಣವಲ್ಲ) (೫) ಅಮಂಗಲವಾದ ದುಃಖಕರ ವಾಗಿರುವುದರಿಂದ ಭಯಂಕರವಾದ ಸಂಸಾರಾಖ್ಯನದಿಯನ್ನು ದಾಟ ಸರ್ವಾಶ್ರಯನಾದ ಪರಮಾತ್ಮ ನನ್ನು ಹೊಂದಿ ಸರ್ವಾಶ್ರಯನಾದ ಶ್ರೀಹರಿಯಿಂದ ಕೂಡಿಕೊಂಡು ಶ್ರೀಹರಿಯನ್ನು ಬಿಡದೇನೇ ಅಪ್ರಕೃಷ್ಟ ವಿಷಯಗಳಿಂದುಂಟಾದ ಸುಖವನ್ನು ಹೊಂದುತ್ತಾನೆ. ಪ್ರಕೃಷ್ಟವಿಷಯಗಳಿಂದುಂಟಾದ ಸುಖವನ್ನು ಹೊಂದುತ್ತಾನೆ, ಸ್ವರೂಪಾನಂದಾಭಿವ್ಯಕ್ತಿಯುಳ್ಳವನಾಗುತ್ತಾನೆ, ಎನ್ನುವ ಮೌದ್ಗಲ್ಯ ಶ್ರುತಿಯಿಂದ ॥೧॥ ॥೨॥

---

★ ಇದು ದಹರಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

## ಅಧಿಕರಣ ಸಾರಾಂಶ

ಪ್ರಕೃತನಾದ ಮುಕ್ತನು ಬ್ರಹ್ಮನನ್ನು ಬಿಟ್ಟು ಭೋಗಗಳನ್ನು ಅನುಭವಿಸುತ್ತಾನೋ ಅಥವಾ ಬಿಡದೇನೇ ಅನುಭವಿಸುತ್ತಾನೋ, ಅದಕ್ಕಾಗಿ **ಏತಂ ಸೇತುಂ ತೀರ್ತ್ವಾ** ಎನ್ನುವ ಶ್ರುತಿಯು ಅತಿಕ್ರಮಪರವೋ, ಅಥವಾ ಅನತಿಕ್ರಮಪರವೋ. ಅನತಿಕ್ರಮ ಎನ್ನುವ ಅರ್ಥದಲ್ಲಿ ಕಲ್ಪಕವು ಇಲ್ಲವೋ ಇದೆಯೋ ಎಂದು ಸಂದೇಹವು. **ಏತಂ ಸೇತುಂ** ಎನ್ನುವ ಶ್ರುತಿಗೆ ಅನ್ಯಾರ್ಥವದೆ ಎನ್ನುವಲ್ಲಿ ಕಲ್ಪಕಪ್ರಮಾಣವಿಲ್ಲದಿರುವುದರಿಂದ **ಸೇತುಂ ತೀರ್ತ್ವಾ** ಎಂದು ಬ್ರಹ್ಮಾತಿಕ್ರಮಾನಂತರದಲ್ಲಿಯೇ ಸ್ವರೂಪಾವಿರ್ಭಾವರೂಪವಾದ ಮುಕ್ತಿಯನ್ನು ಹೇಳಿದ್ದರಿಂದ ಬ್ರಹ್ಮನನ್ನು ಹೊಂದಿದವನಿಗೆ ಅಮುಕ್ತತ್ವವು ತಿಳಿದುಬರುವುದರಿಂದ ಬ್ರಹ್ಮನನ್ನು ಬಿಟ್ಟ ಮೇಲೆ ಮುಕ್ತನಾಗಿ ಭೋಗಗಳನ್ನು ಅನುಭವಿಸುತ್ತಾನೆ, ಎಂದು ಪೂರ್ವಪಕ್ಷವು ಬಂದರೆ **ಪರಂಜ್ಯೋತಿರುಪಸಂಪದ್ಯ** ಎನ್ನುವ ಶ್ರುತಿಯಲ್ಲಿ ಬ್ರಹ್ಮನನ್ನು ಹೊಂದಿದವನಿಗೇನೇ ಸ್ವರೂಪಾವಿರ್ಭಾವರೂಪವಾದ ಮುಕ್ತತ್ವವನ್ನು ಹೇಳಿದ್ದರಿಂದ **ಇಮಾಂ ಘೋರಾಮಶಿವಾಂ** ಎನ್ನುವ ಸ್ಪಷ್ಟ ಶ್ರುತಿಯನ್ನು ಅನುಸರಿಸಿ ಈ ಸರ್ವಾಶ್ರಯನಾದ ಶ್ರೀಹರಿಯನ್ನು ಹೊಂದುವುದಕ್ಕಾಗಿ ಅವಿದ್ಯಾದಿಗಳನ್ನೇ ದಾಟ ಎಂದೇ ಈ ಶ್ರುತಿಗೆ ಅರ್ಥವನ್ನು ಹೇಳಬೇಕಾಗಿರುವುದರಿಂದ **ಆತ್ಮಾನಮಭಿಸಂಪದ್ಯ** ಎನ್ನುವ ಶ್ರುತಿಯಿಂದ ಜ್ಞಾನಿಯು ಬ್ರಹ್ಮನನ್ನು ಹೊಂದಿ ಬ್ರಹ್ಮನನ್ನು ಬಿಡದೇನೇ ಭೋಗಗಳನ್ನು ಅನುಭವಿಸುತ್ತಾನೆ. ॥ ಅಧಿ.೧ ॥

**ಸಂಪದ್ಯಾಧಿಕರಣವು ಸಮಾಪ್ತವಾಯಿತು.**

# ೨ ಮುಕ್ತಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪರಬ್ರಹ್ಮನನ್ನು ಹೊಂದಿ ಅವನನ್ನು ಬಿಡದೇನೇ ಭೋಗವನ್ನೇ ಭೋಗಿಸುವವನಿಗೆ ಮುಕ್ತತ್ವವನ್ನು ಸಮರ್ಥಿಸುತ್ತಾರೆ. **ಸ ತತ್ರ ಪರ್ಯೇತಿ** ಎನ್ನುವ ಶ್ರುತ್ಯುಕ್ತನಾದವನು ಮುಕ್ತನಲ್ಲ. **ಪರ್ಯೇತಿ ಜಕ್ಷನ್** ಇತ್ಯಾದಿಗಳಿಂದ ಆತನಿಗೆ ಕ್ರಿಯೆಯು ತೋರುತ್ತದೆ. ಕೃತಕೃತ್ಯನಾದ ಮುಕ್ತನಿಗೆ ಕ್ರಿಯೆಯು ಕೂಡುವುದಿಲ್ಲ. ಆದಪ್ರಯುಕ್ತ ಶ್ರುತ್ಯುಕ್ತನಿಗೆ ಮುಕ್ತತ್ವವು ಇಲ್ಲದಿರುವುದರಿಂದ ಮುಕ್ತನಿಗೆ ಭೋಗವು ಇಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ–

## ಸೂತ್ರ ॥ ಓಂ ಮುಕ್ತಃ ಪ್ರತಿಜ್ಞಾನಾತ್ ಓಂ ॥ ೨ ॥

**ಸೂತ್ರಾರ್ಥ ॥** **ಸ ತತ್ರ ಪರ್ಯೇತಿ** ಎನ್ನುವ ಶ್ರುತಿಯಲ್ಲಿ ಮುಕ್ತನು ಹೇಳಲ್ಪಡುತ್ತಾನೆ. ಕ್ರಿಯೆಯು ತೋರುವುದರಿಂದ ಸಂಸಾರಿಯು ಹೇಳಲ್ಪಡುವುದಿಲ್ಲ, ಏಕೆಂದರೆ, **ಅಥ ಯದ್ಯೈನಂ ಮುಕ್ತೋಽನುಪ್ರವಿಶತಿ** ಎನ್ನುವ ಶ್ರುತ್ಯಂತರದಲ್ಲಿ ಮುಕ್ತನಿಗೇನೇ ಇಂತಹ ಭೋಗವನ್ನು ಪ್ರತಿಜ್ಞಾ ಮಾಡಿದ್ದರಿಂದ ಮತ್ತು **ಸ್ವೇನ ರೂಪೇಣಾಭಿನಿಷ್ಪದ್ಯತೇ** ಎಂದು ಉಪಕ್ರಮದಲ್ಲಿ ಸ್ಪಷ್ಟವಾಗಿ ಮುಕ್ತತ್ವವು ತೋರುವುದರಿಂದ.

**ಭಾಷ್ಯ ॥ ಮುಕ್ತ ಏವಾತ್ರೋಚ್ಯತೇ । ಅಹರಹರೇನಮನುಪ್ರವಿಶತ್ಯುಪಸಂಕ್ರಮ (ಮೇ) ತೇ ಚ ನ ತತ್ರ ಮೋದತೇ ನ ಪ್ರಮೋದತೇ ನ ಕಾಮಾನನುಭವತಿ ಬದ್ಧೋ ಹ್ಯೇಷ ತದಾ ಭವತ್ಯಥ ಯದ್ಯೈನಂ ಮುಕ್ತೋಽನುಪ್ರವಿಶತಿ ಮೋದತೇ ಚ ಪ್ರಮೋದತೇ ಚ ಕಾಮಾಂಶ್ಚೈವಾನುಭವತಿ । ಇತಿ ಬೃಹಚ್ಛ್ರುತೌ ಪ್ರತಿಜ್ಞಾನಾತ್ ॥ ೨ ॥ ಅಧಿ.೨ ॥**

**ಭಾಷ್ಯಾರ್ಥ ॥** ಸ ತತ್ರ ಪರ್ಯೇತಿ ಎನ್ನುವ ಶ್ರುತಿಯಲ್ಲಿ ದಿವ್ಯ ಭೋಗಗಳನ್ನು ಭೋಗಿಸತಕ್ಕವನಾದುದರಿಂದ ಮುಕ್ತನೇ ಹೇಳಲ್ಪಡುತ್ತಾನೆ. ಅಹರಹರೇನಂ ಎನ್ನುವ ಶ್ರುತಿಯಲ್ಲಿ ಸುಪ್ತಿಯಲ್ಲಿ ಪರಮಾತ್ಮನನ್ನು ಹೊಂದಿದರೂ ಅಮುಕ್ತನಿಗೆ ದಿವ್ಯ ಭೋಗಗಳು ಇಲ್ಲವೆಂದು ಹೇಳಿ ಮುಕ್ತನಿಗೇನೇ ಬ್ರಹ್ಮಪ್ರಾಪ್ತಿಯಿಂದ ದಿವ್ಯ ಭೋಗಗಳು ಇವೆ ಎಂದು ಪ್ರತಿಜ್ಞಾ ಮಾಡಿದ್ದರಿಂದ ಜೀವನು ಪ್ರತಿದಿನದಲ್ಲಿಯೂ ಪರಮಾತ್ಮನನ್ನು ಸುಷುಪ್ತಿಯಲ್ಲಿ ಪ್ರವೇಶ ಮಾಡುತ್ತಾನೆ. ಮೂರ್ಛಾವಸ್ಥೆಯಲ್ಲಿ ಸಮೀಪದಲ್ಲಿ ಸಂಕ್ರಮಿಸುತ್ತಾನೆ. (ಅಂದರೆ, ಅರ್ಧಪ್ರಾಪ್ತಿಯುಳ್ಳವನು ಆಗುತ್ತಾನೆ.) ಆದಾಗ್ಯೂ ಆಗ ಅಲ್ಲಿ ಮೋದ (ಅಪ್ರಕೃಷ್ಟ ವಿಷಯಗಳಿಂದ ಅಭಿವ್ಯಕ್ತ ಸುಖವಿಶೇಷ) ಪ್ರಮೋದ (ಉತ್ಕೃಷ್ಟ ವಿಷಯಾಭಿವ್ಯಕ್ತ ಸುಖವಿಶೇಷ)ಗಳನ್ನು ಹೊಂದುವುದಿಲ್ಲ ಏಕೆಂದರೆ, ಕಾಮಿತಗಳಾದ ಭೋಗಗಳನ್ನು ಅನುಭವಿಸುವುದಿಲ್ಲ. (ಭೋಗಾನುಭವವೇ ಇಲ್ಲದಿರುವುದರಿಂದ ಮೋದಾದಿಗಳನ್ನು ಹೊಂದುವುದಿಲ್ಲ) ಏಕೆಂದರೆ, ಈ ಜೀವನು ಆಗ ಸುಪ್ತಿಯಲ್ಲಿ ಬದ್ಧನಾಗಿಯೂ ಇರುತ್ತಾನೆ. ದೇಹ ನಾಶಾನಂತರದಲ್ಲಿ ಯಾವಾಗ ಮುಕ್ತನಾಗಿ ಈಶ್ವರನನ್ನು ಪ್ರವೇಶ ಮಾಡುತ್ತಾನೋ ಆಗ ಮೋದ ಪ್ರಮೋದಗಳನ್ನು ಹೊಂದುತ್ತಾನೆ. ಕಾಮಿತ ಭೋಗ್ಯಗಳನ್ನೇ ಅನುಭವಿಸುತ್ತಾನೆ. ಇತರಗಳನ್ನು ಅನುಭವಿಸುವುದೇ ಇಲ್ಲ ಎಂದು ಬೃಹಚ್ಛ್ರುತಿಯಲ್ಲಿ ಪ್ರತಿಜ್ಞಾ ಮಾಡಿದ್ದರಿಂದ.

**ವಿಶೇಷಾಂಶ ॥** (೧) ಸುಪ್ತನಾಗಲೀ ಮೂರ್ಛಿತನಾಗಲೀ ಬ್ರಹ್ಮಪ್ರಾಪ್ತಿಯುಳ್ಳವನಾದಾಗ್ಯೂ ಅಮುಕ್ತನಾದುದರಿಂದ ದಿವ್ಯಭೋಗವುಳ್ಳವನು ಆಗುವುದಿಲ್ಲ (೨) ಯದ್ಯಪಿ ಸುಪ್ತಿಯಲ್ಲಿ ಸ್ವರೂಪಸುಖದ ಅನುಭವವು ಇದೆ, ಏತಾವಂತಂ ಕಾಲಂ ಸುಖಂ ಸುಪ್ತೋಽಭವಂ ಎಂದು ಪರಾಮರ್ಶವಿದ್ದ ಪ್ರಯುಕ್ತ, ಆದಾಗ್ಯೂ ದಿವ್ಯ ಭೋಗವು ಇಲ್ಲವೆನ್ನುವ ಅಭಿಪ್ರಾಯದಿಂದ ಮೋದ ಪ್ರಮೋದಗಳನ್ನು ನಿಷೇಧಿಸಿದ್ದು. ಯಾವಾಗ ಮುಕ್ತನಾಗಿ ಶ್ರೀಹರಿಯನ್ನು ಪ್ರವೇಶ ಮಾಡುತ್ತಾನೋ ಆಗ ಮೋದಾದಿಗಳನ್ನು ಹೊಂದುತ್ತಾನೆ. (೩) ದಿವ್ಯಭೋಗಭೋಕ್ತೃತ್ವವಿದ್ದರೂ ಅಮುಕ್ತನೆಂದೇ ಏಕೆ ಆಗಲಾರದು, ಬ್ರಹ್ಮಪ್ರಾಪ್ತಿಯ ಮಹಿಮೆಯಿಂದ ಅಮುಕ್ತನಿಗೂ ಅದು ಕೂಡಬಹುದು ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಅಹರಹಃ ಎಂದು ಆರಂಭಿಸಿ ತದಾ ಭವತಿ ಎಂಬ ಪರ್ಯಂತ ಶ್ರುತಿಯನ್ನುದಾಹರಿಸಿದ್ದು. ಬ್ರಹ್ಮಪ್ರಾಪ್ತಿ ಮಾತ್ರವು ದಿವ್ಯಭೋಗದಲ್ಲಿ ಪ್ರಯೋಜಕವಲ್ಲ ಸುಪ್ತ್ಯಾದಿಗಳಲ್ಲಿ ದಿವ್ಯಭೋಗವು ಕಂಡುಬರುವುದಿಲ್ಲ. ಮತ್ತೆ ಸಂಸಾರದಿಂದ ಮುಕ್ತನಾಗಿ ಬ್ರಹ್ಮನನ್ನು ಹೊಂದುವುದೇ ದಿವ್ಯಭೋಗಕ್ಕೆ ಪ್ರಯೋಜಕವು. ॥೨॥

## ಅಧಿಕರಣ ಸಾರಾಂಶ

ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ತತ್ರ ಪರ್ಯೇತಿ ಎನ್ನುವಲ್ಲಿ ಸಃ

ಎಂದು ಹೇಳಲ್ಪಟ್ಟವನು ಅಮುಕ್ತನೋ ಮುಕ್ತನೋ, ಎಂದು ಸಂದೇಹವು. ಜ್ಯೋತೀರೂಪವಾದ ಪರಬ್ರಹ್ಮನನ್ನು ಹೊಂದಿದ ಸ್ವರೂಪಾನಂದಾವಿರ್ಭಾವವುಳ್ಳ ಮುಕ್ತನಿಗೇನೇ ಸ ತತ್ರ ಪರ್ಯೇತಿ ಎನ್ನುವ ಶ್ರುತಿಯಲ್ಲಿ ಪರ್ಯಟನ ಮೊದಲಾದ ಕ್ರಿಯೆಗಳನ್ನು ಹೇಳಿದೆ. ಅಂತಹ ಕ್ರಿಯಾವತ್ವವು ಕೃತಕೃತ್ಯನಾದ ಮುಕ್ತನಿಗೆ ಕೂಡುವುದಿಲ್ಲ. ಆದಕಾರಣ ಈ ಶ್ರುತಿಯಲ್ಲಿ ಹೇಳಲ್ಪಟ್ಟವನು ಮುಕ್ತನಲ್ಲ. ಮುಕ್ತನಿಗೆ ದಿವ್ಯಭೋಗವು ಕೂಡುವುದಿಲ್ಲ ಎಂದು ಪೂರ್ವಪಕ್ಷವು ಬಂದರೆ ಅಹರಹಃ ಎನ್ನುವ ಶ್ರುತಿಯಲ್ಲಿ ಬ್ರಹ್ಮನನ್ನು ಹೊಂದಿರುವ ಸುಪ್ತರು ಅಮುಕ್ತರಾದುದರಿಂದ ಅವರಿಗೆ ದಿವ್ಯ ಭೋಗಗಳು ಇಲ್ಲವೆಂದು ಹೇಳಿ ಮುಕ್ತನಿಗೇ ಅಂತಹ ಭೋಗವನ್ನು ಹೇಳಿದ್ದಾರೆ. ಕ್ರಿಯಾವತ್ವವು ಮುಕ್ತನಲ್ಲಿಯೂ ಸಿದ್ಧವಾದುದರಿಂದ ಸಃ ಎನ್ನುವ ತಚ್ಛಬ್ದಾರ್ಥನು ಮುಕ್ತನೇ. ॥ಅಧಿ.೨॥

**ಮುಕ್ತಾಧಿಕರಣವು ಸಮಾಪ್ತವಾಯಿತು.**

## ೩. ಆತ್ಮಾಧಿಕರಣವು

ಪೀಠಿಕೆ ॥ ಈ ಅಧಿಕರಣದಲ್ಲಿ ಮುಕ್ತರಿಂದ ಪ್ರಾಪ್ಯನಾದ ಪರಂಜ್ಯೋತಿಃ ಎಂದು ಹೇಳಲ್ಪಟ್ಟ ಜ್ಯೋತಿಸ್ಸಿಗೆ ಬ್ರಹ್ಮತ್ವವನ್ನು ಸಮರ್ಥಿಸುತ್ತಾರೆ. ಪರಂಜ್ಯೋತಿಃ ಎಂದು ಶ್ರುತ್ಯುಕ್ತನಾದ ಜ್ಯೋತಿಶ್ಶಬ್ದವಾಚ್ಯನು ವಿಷ್ಣುವಲ್ಲ, ಆದಿತ್ಯನೇ, ಇಲ್ಲಿ ಆದಿತ್ಯನು ಜ್ಯೋತಿಶಬ್ದವಾಚ್ಯನು ಎಂದು ಅಂಗೀಕರಿಸಿದರೆ ಸ ತೇಜಸಿ ಸೂರ್ಯೇ ಸಂಪನ್ನಃ ಎನ್ನುವ ಶ್ರುತಿಯಿಂದ ಏಕಾರ್ಥತ್ವವು ಸಿಗುವುದು. ಏವಂಚ ಮುಕ್ತನಿಗೆ ಬ್ರಹ್ಮಸಮೀಪದಲ್ಲೂ ಭೋಗವಿಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ–

### ಸೂತ್ರ ॥ ಓಂ ಆತ್ಮಾ ಪ್ರಕರಣಾತ್ ಓಂ ॥ ೩ ॥

ಸೂತ್ರಾರ್ಥ ॥ ಪರಂಜ್ಯೋತಿರುಪಸಂಪದ್ಯ ಎಂದು ಶ್ರುತನಾದ ಮುಕ್ತಪ್ರಾಪ್ಯನಾದ ಜ್ಯೋತಿಶ್ಶಬ್ದ ವಾಚ್ಯನು ಪರಮಾತ್ಮನೇ ಸೂರ್ಯಮಗನ್ನಜ್ಯೋತಿಃ ಸ ತೇಜಸಿ ಸೂರ್ಯೇ ಸಂಪನ್ನಃ ಇತ್ಯಾದಿ ಶ್ರುತಿಗಳಿಂದ ಸೂರ್ಯನಲ್ಲ. ಯ ಆತ್ಮಾ ಅಪಹತಪಾಪ್ಮಾ ಎಂದು ಪರಮಾತ್ಮ ಪ್ರಕರಣವಾಗಿರುವುದರಿಂದ.

**ಭಾಷ್ಯ ॥ (೧) ಪರಂಜ್ಯೋತಿಶ್ಶಬ್ದೇನ ಪರಮಾತ್ಮೈವೋಚ್ಯತೇ । ತತ್ಪ್ರಕರಣತ್ವಾತ್ । (೨) ಪರಂ ಜ್ಯೋತಿಃ ಪರಂ ಬ್ರಹ್ಮ ಪರಮಾತ್ಮಾದಿಕಾ ಗಿರಃ । ಸರ್ವತ್ರ ಹರಿಮೇವೈಕಂ ಬ್ರೂಯುರ್ನಾನ್ಯಂ ಕಥಂಚನ ॥ ಇತಿ (ಚ) ಬ್ರಹ್ಮಾಂಡೇ ॥ ೩ ॥ ಅಧಿ.೩ ॥ ॥೧ ॥**

ಭಾಷ್ಯಾರ್ಥ ॥ (೧) ಇಲ್ಲಿ ಪರಂಜ್ಯೋತಿಃ ಶಬ್ದದಿಂದ ಪರಮಾತ್ಮನೇ ಹೇಳಲ್ಪಡುತ್ತಾನೆ. ಯ ಆತ್ಮಾ ಅಪಹತಪಾಪ್ಮಾ ಎಂದು ಪರಮಾತ್ಮನನ್ನೇ ಆರಂಭಿಸಿ ಅಧ್ಯಯನ ಮಾಡಿದ್ದರಿಂದ. ಇದು ಪರಮಾತ್ಮನ ಪ್ರಕರಣವಾಗಿರುವುದರಿಂದ ಸೂರಿಭಿಃ ಪ್ರಾಪ್ಯತ್ವಾತ್ ಸೂರ್ಯಃ ಎಂದು ಸೂರ್ಯಶಬ್ದಕ್ಕೆ ಯೋಗದಿಂದ ಭಗವತ್ಪರತ್ವವಿದ್ದುದರಿಂದ ಸಮಾಖ್ಯಾಶ್ರುತಿಗೆ ಸಾವಕಾಶತ್ವವಿದ್ದುದರಿಂದಲೂ, (೨) (ಇದು ಪರಮಾತ್ಮ

ಪ್ರಕರಣವಾದಾಗ್ಯೂ ಸಾವಿತ್ರ ಪ್ರಕರಣದಲ್ಲಿ ಹ್ವಯಾಮ್ಯಗ್ನಿಂ ಎಂದು ಅನ್ಯಪರವಾದ ಉಕ್ತಿಯು ಇದ್ದಂತೆಯೇ ಪ್ರಸಂಗಸಂಗತಿಯಿಂದ ಆದಿತ್ಯನನ್ನು ಹೇಳಿದ್ದು ಎಂದು ಏಕೆ ಆಗಲಾರದು ಎಂದರೆ)) **ಪರಂಜ್ಯೋತಿಃ ಪರಂಬ್ರಹ್ಮ ಪರಮಾತ್ಮಾ ಪರಮಕ್ಷರಂ** ಇದುಮೊದಲಾದ ವಚನಗಳು ಸರ್ವಾಗಮಗಳಲ್ಲಿಯೂ ಇರತಕ್ಕವುಳು. ಶ್ರೀಹರಿಯನ್ನೇ ಮುಖ್ಯ ವಾಚ್ಯನನ್ನಾಗಿ ಹೇಳುತ್ತವೆ. ಯಾವ ನಿಮಿತ್ತದಿಂದಲೂ ಮತ್ತೊಬ್ಬನನ್ನು ಹೇಳುವುದಿಲ್ಲ ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದ್ದರಿಂದ. ತಥಾಚ ಪರಂಜ್ಯೋತಿಃ ಮೊದಲಾದ ಶಬ್ದಗಳಿಗೆ ಇತರತ್ರ ವೃತ್ತಿಯೇ ಇಲ್ಲದಿರುವುದರಿಂದ ಪ್ರಸಂಗ ಸಂಗತಿಯಿಂದ ಅನ್ಯರನ್ನು ಹೇಳಿದ್ದೆನ್ನುವುದು ಸರ್ವಥಾ ಕೂಡುವುದಿಲ್ಲ ।।೩।। ।।೧।।

## ಅಧಿಕರಣ ಸಾರಾಂಶ

**ಪರಂಜ್ಯೋತಿಃ** ಎಂದು ಹೇಳಲ್ಪಟ್ಟ ಜ್ಯೋತಿಃಶಬ್ದಾರ್ಥನು ಆದಿತ್ಯನೋ, ಬ್ರಹ್ಮನೋ ಅದಕ್ಕಾಗಿ **ಸ ತೇಜಸಿ ಸೂರ್ಯೇ ಸಂಪನ್ನಃ** ಎನ್ನುವ ಸಮಾಖ್ಯೆಯು ಪ್ರಬಲವೋ ಅಥವಾ ಪ್ರಕರಣವು ಪ್ರಬಲವೋ ಅದಕ್ಕಾಗಿ ಸಮಾಖ್ಯೆಯು ನಿರವಕಾಶವೋ ಸಾವಕಾಶವೋ, ಜ್ಯೋತಿಶ್ಶಬ್ದಕ್ಕೆ **ಸೂರ್ಯಮಗನ್ಮ ಜ್ಯೋತಿಃ** ಇತ್ಯಾದಿಗಳಲ್ಲಿ ಆದಿತ್ಯನಲ್ಲಿ ಪ್ರಯೋಗವಿದ್ದಂತೆಯೇ **ಸ ತೇಜಸಿ ಸೂರ್ಯೇ ಸಂಪನ್ನಃ** ಎನ್ನುವ ಸಮಾಖ್ಯೆಯಿಂದ ಏಕಾರ್ಥತ್ವವು ಸಿಗುವುದರಿಂದ, ಜ್ಯೋತಿಶ್ಶಬ್ದವಾಚ್ಯನು ಆದಿತ್ಯನೇ ವಿಷ್ಣುವಲ್ಲ. ಪ್ರಕರಣವು ವೈಷ್ಣವವಾದಾಗ್ಯೂ ಪ್ರಸಂಗ ಸಂಗತಿಯಿಂದ ಇತರರನ್ನು ಹೇಳುತ್ತದೆ ಎನ್ನುವುದೂ ಕೂಡುತ್ತದೆ. ನಿರವಕಾಶವಾದ ಸಮಾಖ್ಯೆಯಿಂದ ಬಾಧಿತವೂ ಆಗಿದೆ, ಎಂದು ಪೂರ್ವಪಕ್ಷವು ಬಂದರೆ, **ಯ ಆತ್ಮಾ ಅಪಹತಪಾಪ್ಮಾ** ಇತ್ಯಾದಿಗಳಿಂದ ಬ್ರಹ್ಮಾಸಾಧಾರಣ ಶ್ರುತಿ ಲಿಂಗಗಳಿಂದ ಪರಬ್ರಹ್ಮನನ್ನು ಉಪಕ್ರಮಿಸಿಕೊಂಡು ಪರಂಜ್ಯೋತಿಃ ಎಂದು ಆದೀತವಾದುದರಿಂದ ಈ ವಾಕ್ಯವು ಬ್ರಹ್ಮಪ್ರಕರಣ ದಲ್ಲಿಯೇ ಇರತಕ್ಕುದು. ಪ್ರಕರಣವು ಸಮಾಖ್ಯೆಗಿಂತ ಪ್ರಬಲವಾಗಿದೆ. ಸಮಾಖ್ಯೆಯು ಪ್ರಾರಬ್ಧಕರ್ಮ ಮೋಕ್ಷಪರವಾದುದರಿಂದ ಬ್ರಹ್ಮಪ್ರಾಪ್ತಿಮಾರ್ಗದಲ್ಲಿ ಮಧ್ಯೇ ಆದಿತ್ಯನಿಗೆ ಪ್ರಾಪ್ತಿಯಿದೆ ಎನ್ನುವ ರೀತಿಯಿಂದಲೂ ಕೂಡುವುದರಿಂದ ಸಾವಕಾಶವಾಗಿದೆ. **ಪರಂಜ್ಯೋತಿಃ ಪರಬ್ರಹ್ಮ** ಎನ್ನುವ ಸ್ಮೃತಿಯಿಂದ ಪರಂ ಜ್ಯೋತಿಃ ಶಬ್ದಕ್ಕೆ ಪರಮಾತ್ಮನಲ್ಲಿಯೇ ಮುಖ್ಯತ್ವವಿದ್ದುದರಿಂದಲೂ ಪರಬ್ರಹ್ಮನೇ ಪರಂಜ್ಯೋತಿಃ ಶಬ್ದವಾಚ್ಯನು. ।।ಅಧಿ.೩. ।।

**ಆತ್ಮಾಧಿಕರಣವು ಸಮಾಪ್ತವಾಯಿತು.**

# ೪ ಅವಿಭಾಗಾಧಿಕರಣವು

**ಪೀಠಿಕೆ ।।** ಈ ಅಧಿಕರಣದಲ್ಲಿ ಸಾಯುಜ್ಯರೂಪ ಮೋಕ್ಷವನ್ನು ಹೊಂದಿದವರಿಗೆ ಶ್ರೀಹರಿಯಿಂದ ಭುಕ್ತವಾದ ಭೋಗಭೋಕ್ತೃತ್ವವನ್ನು ಸಮರ್ಥಿಸುತ್ತಾರೆ. ಸಾಯುಜ್ಯವನ್ನು ಹೊಂದಿದವರು ಶ್ರೀಹರಿಯು ಭೋಗಿಸದೆ ಇರುವ ಭೋಗಗಳನ್ನು ಭೋಗಿಸುತ್ತಾರೆ. ಮೋಕ್ಷವು ಪರಮ ಪುರುಷಾರ್ಥವಾದುದರಿಂದ ಶ್ರೀಹರಿಯಿಂದ ಭುಕ್ತಗಳಾಗದೆ ಇರುವ ಭೋಗಗಳೂ ಸುಖದಿಂದ ಲಭ್ಯಗಳಾಗಿವೆ. ಪರಮಾತ್ಮನು

ನಿತ್ಯಪೂರ್ಣಾನಂದನಾದುದರಿಂದ ಕದಾಚಿತ್ ಕೆಲವು ವಿಷಯಗಳ ಭೋಗವನ್ನು ಮಾಡದೇನೂ ಇರಬಹುದು. ಆಗ ಈಶ್ವರಾಭುಕ್ತವಾದ ಭೋಗದಲ್ಲಿರುವ ಸಾಯುಜ್ಯ ಮುಕ್ತರಿಗೆ ಆ ಭೋಗವು ಆಗದೆ ಹೋದರೆ ಮೋಕ್ಷವು ಪುರುಷಾರ್ಥವಾಗದೆ ಹೋಗಬೇಕಾಗುವುದು. ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ–

## ಸೂತ್ರ ॥ ಓಂ ಅವಿಭಾಗೇನ ದೃಷ್ಟತ್ವಾತ್ ಓಂ ॥ ೪ ॥

ಸೂತ್ರಾರ್ಥ ॥ ಪರಮಾತ್ಮ ಭೋಗಕ್ಕೆ ವಿರೋಧವಿಲ್ಲದೆ ತನ್ನ ಯೋಗ್ಯತಾನುಸಾರವಾಗಿಯೇ ಸಾಯುಜ್ಯರೂಪ ಮುಕ್ತಿಯನ್ನು ಹೊಂದಿದವರು ಭೋಗಗಳನ್ನು ಉಣ್ಣುತ್ತಾರೆ. ಶ್ರೀಹರಿಯು ಭೋಗಿಸಿದ ಭಾಗಗಳನ್ನೇ ಕೆಲವನ್ನು ಮಾತ್ರ ಭೋಗಿಸುತ್ತಾರೆ. ಪೃಥಕ್ಕಾಗಿ ಅಲ್ಲ. ಯಾನೇವಾಹಂ ಶೃಣೋಮಿ ಇತ್ಯಾದಿಗಳಲ್ಲಿ ಹಾಗೆ ಕಂಡದ್ದರಿಂದ.

**ಭಾಷ್ಯ ॥ (೧) ಯೇ ಭೋಗಾಃ ಪರಮಾತ್ಮನಾ ಭುಜ್ಯಂತೇ ತ ಏವ ಮುಕ್ತೈರ್ಭುಜ್ಯಂತೇ । (೨) ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ ಯಾನ್ ಜಿಘ್ರಾಮಿ ತಾನೇವೈತ ಇದಂ ಶರೀರಂ ವಿಮುಚ್ಯಾನುಭವಂತಿ । ಇತಿ ದೃಷ್ಟತ್ವಾಚ್ಚತುರ್ವೇದ-ಶಿಖಾಯಾಂ ॥ ೧ ॥**

ಭಾಷ್ಯಾರ್ಥ ॥ (೧) (ಸಾಯುಜ್ಯವನ್ನು ಹೊಂದಿದ ಮುರ ಭೋಗಗಳು ಕೆಲವು ಪರಮಾತ್ಮನಿಂದ ಭುಕ್ತಗಳಾದವುಗಳು, ಕೆಲವು ಅಭುಕ್ತಗಳು ಎನ್ನುವ ವಿಭಾಗವಿಲ್ಲದೇನೇ ಇರತಕ್ಕವುಗಳು.) ಯಾವ ಭೋಗಗಳು (ಸ್ವರೂಪಸುಖ ವಿಶೇಷ ವ್ಯಕ್ತಿಗೆ ಕಾರಣವಾದ ವಿಷಯಗಳ ದರ್ಶನಕ್ಕೆ ವಿಷಯಗಳಾದವುಗಳು) ಪರಮಾತ್ಮನಿಂದ ಭೋಗಿಸಲ್ಪಡುತ್ತವೋ ಅವುಗಳೇ (ಅಂದರೆ, ಪರಮಾತ್ಮನಿಂದ ಭುಕ್ತಗಳೇ. ಪರಮಾತ್ಮನಿಂದ ಅಭುಕ್ತಗಳಲ್ಲ. ಅಂತಹವುಗಳೇ) ಸಾಯುಜ್ಯವನ್ನು ಹೊಂದಿದವರಿಂದ ಭೋಗಿಸಲ್ಪಡುತ್ತವೆ. (೨) ನಾನು ಯಾವ ಶಬ್ದಗಳನ್ನೇ ಕೇಳುತ್ತೇನೋ ಯಾವುದನ್ನೇ ನೋಡುತ್ತೇನೋ ಯಾವುಗಳನ್ನು ಘ್ರಾಣೇಂದ್ರಿಯದಿಂದ ಸ್ವೀಕರಿಸುತ್ತೇನೋ, ಅವುಗಳನ್ನೇ ಈ ಮುಕ್ತರು ಪ್ರಾರಬ್ಧಕರ್ಮದಿಂದುಂಟಾದ ಜಡ ಶರೀರವನ್ನು ಬಿಟ್ಟು ಅನುಭವಿಸುತ್ತಾರೆ. ಎಂದು ಚತುರ್ವೇದ ಶಿಖಾದಲ್ಲಿ ಕಂಡದ್ದರಿಂದ (ಪ್ರತಿಪಾದಿಸಿದ್ದರಿಂದ) (ಇದು ಭಗವದ್ವಾಕ್ಯವು.) ॥೧॥

ಪೀಠಿಕೆ ॥ ಎಲ್ಲಾ ಭಗವದ್ಭುಕ್ತ ಭೋಗಗಳು ಮುಕ್ತರಿಂದ ಭೋಗಿಸಲ್ಪಡುವುದಿಲ್ಲ ಎನ್ನುವ ಅಭಿಪ್ರಾಯದಿಂದ ಸ್ಮೃತಿಯನ್ನುದಾಹರಿಸುತ್ತಾರೆ–

**ಭಾಷ್ಯ ॥ ಭವಿಷ್ಯತ್ಪುರಾಣೇ ಚ । ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾಂಲ್ಲೇಶತಃ ಕ್ವಚಿತ್ । ಬಹಿಷ್ಠಾನ್ ಭುಂಜತೇ ನಿತ್ಯಂ ನಾನಂದಾದೀನ್ ಕಥಂಚನ ॥ ಇತಿ ॥ ೪ ॥ ಅಧಿ.೪ ॥ ॥ ೨ ॥**

ಭಾಷ್ಯಾರ್ಥ ॥ ಮುಕ್ತರು ಸರ್ವೋತ್ತಮನಾದ ಶ್ರೀ ವಿಷ್ಣುವನ್ನು ಹೊಂದಿ ಈಶ್ವರನಿಂದ ಭೋಗ್ಯ ಗಳಾದ ವಿಷಯಗಳನ್ನು ಈಶ್ವರ ದೇಹದಿಂದ ಹೊರಗೆ ಇರತಕ್ಕ (ಅಂದರೆ, ಈಶ್ವರ ಸ್ವರೂಪ

ಭೂತಗಳಾಗದೆ ಇರುವ) ಕೆಲವು ಭೋಗಗಳನ್ನೇ ನಿತ್ಯದಲ್ಲಿಯೂ ಭೋಗಿಸುತ್ತಾರೆ. ಯಾವ ರೀತಿ ಯಿಂದಲೂ ಅಂದರೆ, ಸಂಪೂರ್ಣವಾಗಿ ಆಗಲೀ ಲೇಶದಿಂದಾಗಲೀ ಪರಮೇಶ್ವರನ ಸ್ವರೂಪಭೂತ ಗಳಾದ ಆನಂದಾದಿಗಳನ್ನು ಭೋಗಿಸುವುದೇ ಇಲ್ಲ. ಕ್ವಚಿತ್ ಎನ್ನುವುದರಿಂದ ಬಾಹ್ಯ ಭೋಗಗಳಲ್ಲಿಯೂ ಲಕ್ಷ್ಮ್ಯಾತ್ಮಕಗಳಾದ ಭೋಗ್ಯಗಳಿಗೆ ಭೋಗವಿಲ್ಲದಿರುವುದರಿಂದ ಸರ್ವ ಬಾಹ್ಯಗಳಿಗೆ ಭೋಗವಿಲ್ಲ ಎಂದುಕ್ತವಾಯಿತು. ಲೇಶತಃ ಎನ್ನುವುದರಿಂದ ಪ್ರಾಕೃತಗಳಲ್ಲಿಯೂ ಪರಮಾತ್ಮೇಂದ್ರಿಯಗಳಿಗೆ ವಿಷಯಗಳಾದ ಎಲ್ಲಾ ರಸಾದಿಗಳಿಗೆ ಭೋಗವಿಲ್ಲದಿರುವುದರಿಂದ ಅವುಗಳಲ್ಲಿಯೂ ಕೆಲವು ಭೋಗ್ಯಗಳನ್ನೇ ಭೋಗಿಸುತ್ತಾರೆ, ಎಂದುಕ್ತವಾಯಿತು, ಎಂದು ಭವಿಷ್ಯತ್ಪುರಾಣದಲ್ಲಿ ಹೇಳಿದೆ. (ಏವಂಚ ಶ್ರೀಹರಿಯು ಪೂರ್ಣವಾದ ಆನಂದವುಳ್ಳವನಾದಾಗ್ಯೂ ಮುಕ್ತರು ಭೋಗಿಸುವ ಎಲ್ಲಾ ಭೋಗಗಳನ್ನು ಭೋಗಿಸುವನು. ಆದಕಾರಣ ಶ್ರೀಹರಿಯಿಂದ ಅಭುಕ್ತಗಳಾದ ಭೋಗಗಳು ಇಲ್ಲದಿರುವುದರಿಂದ ಮುಕ್ತಿಗೆ ಅಪುರುಷಾರ್ಥವು ಪ್ರಸಕ್ತವಾಗುವುದಿಲ್ಲ) ॥೪॥ ॥೨॥

## ಅಧಿಕರಣ ಸಾರಾಂಶ

ಸಾಯುಜ್ಯವನ್ನು ಹೊಂದಿರತಕ್ಕ ಮುಕ್ತರಿಗೆ ಶ್ರೀಹರಿಯಿಂದ ಅಭುಕ್ತವಾದ ಪದಾರ್ಥಕ್ಕೆ ಭೋಗವೋ ಭಗವದ್ಭುಕ್ತ ವಸ್ತುವಿನಲ್ಲಿ ಶಿಷ್ಟವಾದುದಕ್ಕೆ ಭೋಗವೋ, ಆದಕ್ಕಾಗಿ ಭುಕ್ತವಾಗಿ ಶಿಷ್ಟವಾದುದನ್ನು ಭೋಗಿಸಿದರೆ ಮುಕ್ತಿಗೆ ಪುರುಷಾರ್ಥತ್ವವು ತಪ್ಪುತ್ತದೋ ಇಲ್ಲವೋ ಎಂದು ಸಂದೇಹವು. ಮುಕ್ತಿಯು ಪರಮಪುರುಷಾರ್ಥವಾದುದರಿಂದ ಶ್ರೀಹರಿಯಿಂದ ಅಭುಕ್ತವಾದ ಭೋಗವೂ ಸುಲಭವಾದುದರಿಂದ ಶ್ರೀಹರಿಯಿಂದ ಅಭುಕ್ತಗಳಾದ ಭೋಗಗಳನ್ನೇ ಉಣ್ಣುತ್ತಾರೆ. ಶ್ರೀಹರಿಯಿಂದ ಭುಕ್ತನಾಗಿ ಶಿಷ್ಟವಾದುದನ್ನೇ ಉಣ್ಣುವುದು ಎಂದು ನಿಯಮವಿದ್ದರೆ ಈಶ್ವರನು ನಿತ್ಯದಲ್ಲಿಯೂ ಪೂರ್ಣಾನಂದವುಳ್ಳವನಾದುದರಿಂದ ಕದಾಚಿತ್ ಭೋಗವಿಲ್ಲದೆ ಇರಬಹುದಾದುದ ರಿಂದ ಆ ಕಾಲದಲ್ಲಿ ಕೆಲವರಿಗೆ ಭೋಗಿಸಬೇಕೆಂದು ಇಚ್ಛೆಯುಂಟಾದರೆ ಭೋಗವೇ ಇಲ್ಲವೆಂದಾಗಬೇಕಾಗುವುದರಿಂದ ಮುಕ್ತಿಗೆ ಪುರುಷಾರ್ಥತ್ವವು ಇಲ್ಲವೆಂದಾಗಬೇಕಾಗುವುದು ಎಂದು ಪೂರ್ವಪಕ್ಷವು ಬಂದರೆ ಮುಕ್ತಿಯು ಪರಮಪುರುಷಾರ್ಥವಾದುದರಿಂದ ಶ್ರೀಹರಿಯಿಂದ ಅಭುಕ್ತಗಳಾದ ಭೋಗಗಳು ಸುಲಭದಿಂದ ಲಭಿಸತಕ್ಕವುಗಳಾದಾಗ್ಯೂ **ಯಾನೇವಾಹಂ ಶೃಣೋಮಿ** ಎನ್ನುವ ಶ್ರುತಿಯಲ್ಲಿ ಶ್ರೀಹರಿಯು ಭೋಗಿಸತಕ್ಕ ಭೋಗಗಳನ್ನೇ ಭೋಗಿಸುತ್ತಾರೆಂದು ಶ್ರುತವಾದುದರಿಂದ ಮುಕ್ತರು ಶ್ರೀಹರಿಯು ಭೋಗಿಸತಕ್ಕ ಭೋಗ್ಯಗಳನ್ನೇ ಭೋಗಿಸುತ್ತಾರೆಂದು ಅಂಗೀಕರಿಸಬೇಕು. **ಯಾನೇವ** ಎನ್ನುವ ಶ್ರುತಿಯಲ್ಲಿ ಭಗವದ್ಭುಕ್ತ ಅಶೇಷ ಭೋಗ್ಯಗಳನ್ನು ಭೋಗಿಸುತ್ತಾರೆಂದು ತೋರುವುದರಿಂದ ಶ್ರೀಹರಿಯ ಸಾಮ್ಯವು ಬರಬೇಕಾಗುವುದು ಎಂದು ಶಂಕಿಸಕೂಡದು. **ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ** ಎನ್ನುವ ವಿಶೇಷ ಸ್ಮೃತಿಯಿಂದ ತಾನೇವ ಎನ್ನುವ ಸಾಮಾನ್ಯ ಶ್ರುತಿಗೆ ಸಂಕೋಚವು. ಹಿಂದೆ ಹೇಳಿದ ಪ್ರಕಾರ ಕದಾಚಿತ್ ಭೋಗವಿಲ್ಲವೆಂದೂ ಆಗಬೇಕಾಗಿರುವುದರಿಂದ ಮುಕ್ತಿಗೆ ಅಪುರುಷಾರ್ಥತ್ವವನ್ನು ಶಂಕಿಸಕೂಡದು. **ಪೂರ್ಣಾನಂದಃ**

**ಪೂರ್ಣಭುಕ್ ಪೂರ್ಣಕರ್ತಾ** ಎನ್ನುವ ಶ್ರುತಿಯಲ್ಲಿ ಪೂರ್ಣಾನಂದವಿದ್ದರೂ ಪೂರ್ಣಭೋಗವು ಶ್ರುತವಾದುದರಿಂದ ಶ್ರೀಹರಿಗೆ ಭೋಗವಿಲ್ಲ ಎನ್ನುವ ಪ್ರಸಕ್ತಿಗೆ ಅವಕಾಶವೇ ಇಲ್ಲ. ॥ಅಧಿ.೪॥

**ಅವಿಭಾಗಾಧಿಕರಣವು ಸಮಾಪ್ತವಾಯಿತು.**

## ೫ ಬ್ರಾಹ್ಮಾಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಸಾಯುಜ್ಯವನ್ನು ಹೊಂದಿರತಕ್ಕ ಮುಕ್ತರಿಗೆ ಭೋಗವನ್ನು ಸಮರ್ಥಿಸುತ್ತಾರೆ. ಮುಕ್ತರಿಗೆ ದೇಹವಿದ್ದರೆ ಮುಕ್ತತ್ವವೇ ಕೂಡಲಾರದು. ದೇಹವಿಲ್ಲವೆಂದಂಗೀಕರಿಸಿದರೆ ಭೋಗವು ಕೂಡಲಾರದು, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ–

### ಸೂತ್ರ ॥ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ॥ ೫ ॥

**ಸೂತ್ರಾರ್ಥ ॥** ಮುಕ್ತನಿಗೆ ಶರೀರವು ಇಲ್ಲವಾದರೂ ಈಶ್ವರನನ್ನು ಪ್ರವೇಶಮಾಡಿದವನಿಗೆ ಬ್ರಹ್ಮ ಸಂಬಂಧಿಯಾದ ಶರೀರದಿಂದ ಪಿಶಾಚಿಯಂತೆ ಭೋಗವಿದೆ ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. **ಬ್ರಹ್ಮಣಾ ಪಶ್ಯತಿ** ಎನ್ನುವ ಶ್ರುತಿಯಲ್ಲಿ ಹಾಗೆ ಉಪನ್ಯಾಸ ಮಾಡಿದ್ದರಿಂದಲೂ, **ಆದತ್ತೇ ಹರಿಹಸ್ತೇನ** ಇತ್ಯಾದಿ ಸ್ಮೃತಿಗಳಿಂದಲೂ, **ಗಚ್ಛಾಮಿ ವಿಷ್ಣುಪಾದಾಭ್ಯಾಂ** ಎನ್ನುವ ಸ್ಮೃತ್ಯುಕ್ತವಾದ ಯುಕ್ತಿಗಳಿಂದಲೂ.

**ಭಾಷ್ಯ ॥ (೧) ಸರ್ವದೇಹಪರಿತ್ಯಾಗೇನ ಮುಕ್ತಾಃ ಸಂತೋ ಬ್ರಾಹ್ಮೇಣೈವ ದೇಹೇನ ಭೋಗಾನ್ ಭುಜ(ಂಜ)ತೇ। ಇತಿ ಜೈಮಿನಿರ್ಮನ್ಯತೇ। (೨) ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾವುಪನ್ಯಾಸಾತ್। (೩) ಆದತ್ತೇ ಹರಿಹಸ್ತೇನ ಹರಿದೃಷ್ಟ್ವೈವ ಪಶ್ಯತಿ । ಗಚ್ಛೇಚ್ಚ ಹರಿಪಾದಾಭ್ಯಾಂ (ದೇನ) ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥ ಇತಿ ಸ್ಮೃತೇಃ॥ (೪) ಗಚ್ಛಾಮಿ ವಿಷ್ಣುಪಾದಾಭ್ಯಾಂ ವಿಷ್ಣುದೃಷ್ಟ್ಯಾ ಚ ದರ್ಶನಂ । ಇತ್ಯಾದಿಪೂರ್ವಸ್ಮರಣಾನ್ಮುಕ್ತಸ್ಯೈತದ್ಭವಿಷ್ಯತಿ ॥ ಇತಿ ಬೃಹತ್ತಂತ್ರೋಕ್ತಯುಕ್ತೇಶ್ಚ ॥ ೫ ॥ ॥ ೧ ॥**

**ಭಾಷ್ಯಾರ್ಥ ॥** (೧) ಚಿನ್ಮಾತ್ರ ದೇಹದಿಂದ ಅತಿರಿಕ್ತವಾದ ಸ್ಥೂಲದೇಹ ಸೂಕ್ಷ್ಮಲಿಂಗಶರೀರವನ್ನು ಬಿಟ್ಟಿರುವ ಮುಕ್ತರು ಬ್ರಹ್ಮನನ್ನು ಪ್ರವೇಶಮಾಡಿ ಬ್ರಾಹ್ಮಾತಿರಿಕ್ತವಾದ ಸ್ಥೂಲ ಸೂಕ್ಷ್ಮ ಶರೀರವಿಲ್ಲದೆ ಇದ್ದರೂ ಪರಬ್ರಹ್ಮ ಸಂಬಂಧಿಯಾದ ಶರೀರದಿಂದಲೇ (ಪಿಶಾಚಿಗಳಂತೆಯೇ) ಭೋಗಗಳನ್ನು ಭೋಗಿಸುತ್ತಾರೆ. (ಇಲ್ಲವಾದರೆ ಮುಕ್ತತ್ವವೇ ಕೂಡಲಾರದು.) ಆದಕಾರಣ ಭೋಗವು ಕೂಡುವುದಿಲ್ಲ ವೆಂದಿಲ್ಲ, ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. (೨) (ಈ ವಿಷಯದಲ್ಲಿ ಪ್ರಮಾಣವಾಗಿ

ಶ್ರುತಿಯನ್ನು ತೋರಿಸುತ್ತಾರೆ.) ಆ ಬ್ರಹ್ಮಜ್ಞಾನಿಯು ವಿನಾಶ್ಯವಾದ ಪ್ರತ್ಯಕ್ಷಸಿದ್ಧವಾದ ಸ್ಥೂಲಸೂಕ್ಷ್ಮಾತ್ಮಿವಾದ ಶರೀರವನ್ನು ಬಿಟ್ಟು ಪರಬ್ರಹ್ಮನನ್ನು ಹೊಂದಿ ಪರಬ್ರಹ್ಮನ ಶರೀರದಿಂದ ನೋಡುತ್ತಾನೆ, ಪರಬ್ರಹ್ಮನ ಶರೀರದಿಂದ ಕೇಳುತ್ತಾನೆ, ಪರಬ್ರಹ್ಮನ ಶರೀರದಿಂದಲೇ ಈ ಭೋಗ್ಯವಾದುದೆಲ್ಲವನ್ನೂ ಅನುಭವಿಸುತ್ತಾನೆ, ಎಂದು ಮಾಧ್ಯಂದಿನಾಯನ ಶ್ರುತಿಯಲ್ಲಿ ಉಪನ್ಯಾಸ ಮಾಡಿದ್ದರಿಂದ. (ಹೇಳಿದ್ದರಿಂದ) (೩.) (ಇಲ್ಲಿ ಬ್ರಹ್ಮಣಾ ಎಂದೇ ಶ್ರುತವಾಗಿದೆ. ಬ್ರಹ್ಮದೇಹದಿಂದ ಎಂದು ಶ್ರುತವಾಗಲಿಲ್ಲ ಎಂದರೆ) ಮುಕ್ತನು ಶ್ರೀಹರಿಯ ಹಸ್ತದಿಂದಲೇ ತೆಗೆದುಕೊಳ್ಳುತ್ತಾನೆ, ಶ್ರೀಹರಿಯ ದೃಷ್ಟಿಯಿಂದಲೇ ನೋಡುತ್ತಾನೆ. ಶ್ರೀಹರಿಯ ಪಾದಗಳಿಂದಲೇ ಹೋಗುವನು. ಹೀಗೆ ಮುಕ್ತನಿಗೆ ಸ್ಥಿತಿಯು ಆಗುವುದು, ಎನ್ನುವ ಸ್ಮೃತಿಯಿಂದ. (೪) (ತನಗೆ ಸಾಕ್ಷಾತ್ ಶರೀರವಿಲ್ಲದ ಮೇಲೆ ಆತನಿಗೆ ಇತರರ ಶರೀರದಿಂದ ಭೋಗವು ಹೇಗೆ ಕೂಡುತ್ತದೆ. ಪ್ರಲಯಾದಿಗಳಲ್ಲಿ ಇಲ್ಲವಷ್ಟೆ ಎಂದರೆ) ನಾನು ಮುಕ್ತಿಯಲ್ಲಿ ಶ್ರೀ ಹರಿಯ ಚರಣಗಳಿಂದಲೇ ಹೋಗುವೆನು. ಶ್ರೀಹರಿಯ ಕಣ್ಣುಗಳಿಂದಲೇ ನನಗೆ ದರ್ಶನವು ಆಗುವುದು, ಇದು ಮೊದಲಾದ ಉಪಾಸನಾನುಸಾರವಾಗಿ ಸಂಸಾರಕಾಲದಲ್ಲಿ ಸ್ಮರಣರೂಪವಾದ ಉಪಾಸನದಿಂದ ಅಥವಾ ಮುಕ್ತಿಯಿಂದ ಮೊದಲು ಸಂಸಾರದಶೆಯಲ್ಲಿ ಆತನು ತನ್ನ ಶರೀರದಲ್ಲಿರತಕ್ಕ ವಿಷ್ಣುಪಾದಗಳಿಂದ ಹೋಗುತ್ತೇನೆ ಅಲ್ಲಿರತಕ್ಕ ವಿಷ್ಣುದೃಷ್ಟಿಯಿಂದಲೇ ದರ್ಶನವನ್ನು ಮಾಡುತ್ತೇನೆ, ಇತ್ಯಾದಿರೂಪ ಪೂರ್ವನಿಮಿತ್ತದಿಂದ ವಿಷ್ಣುಪಾದಾದಿಗಳಿಂದ ಗಮನಾದಿಗಳು ಅಥವಾ ಇತರ ಶರೀರದಿಂದ ಭೋಜನಾದಿಗಳು ಸಾಯುಜ್ಯರೂಪವಾದ ಮುಕ್ತಿಯೋಗ್ಯರಿಗೆ ಮುಕ್ತಿಯಲ್ಲಿ ಆಗುವುದು, ಎಂದು ಬೃಹತ್ತಂತ್ರದಲ್ಲಿ ಹೇಳಿದ ಯುಕ್ತಿಯಿಂದಲೂ. (ಏವಂಚ ಪ್ರಲಯಾದಿಗಳಲ್ಲಿ ಪರಬ್ರಹ್ಮನ ಶರೀರವನ್ನು ಪ್ರವೇಶ ಮಾಡಿದವರಿಗಾದರೂ ಇಂತಹ ಉಪಾಸನವು ಇಲ್ಲದಿರುವುದರಿಂದ ವಿಷ್ಣುಪಾದಾದಿಗಳಿಂದ ಗಮನಾದಿಗಳು ಆಗುವುದಿಲ್ಲ) ॥೫॥ಜ ॥೧॥

ಪೀಠಿಕೆ ॥ ಹೀಗೆ ಮುಕ್ತನಿಗೆ ಶರೀರವಿಲ್ಲವೆಂದಂಗೀಕರಿಸಿ ಭೋಗವನ್ನು ಸಮರ್ಥಿಸಿ ಈಗ ದೇಹವದೆ ಎಂದಂಗೀಕರಿಸಿ ಭೋಗವನ್ನು ಸಮರ್ಥಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ–

## ಸೂತ್ರ ॥ ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ ॥ ೬ ॥

ಸೂತ್ರಾರ್ಥ ॥ ಚಿನ್ಮಾತ್ರರೂಪವಾದ ಶರೀರದಿಂದ ಮುಕ್ತನು ಭೋಗಗಳನ್ನು ಅನುಭವಿಸುತ್ತಾನೆ. (ದೇಹವಿದ್ದರೆ ಸಂಸಾರಿ ಜೀವನ ಸಾಮ್ಯವೆಂದು ಹೇಳಕೂಡದು.) ಚಿನ್ಮಾತ್ರ ಶರೀರಕ್ಕೆ ಮುಕ್ತಸ್ವರೂಪತ್ವವಿದ್ದುದರಿಂದ. ಮತ್ತು ಚಿನ್ಮಾತ್ರ ಏವೈಷ ಭವತಿ ಎನ್ನುವ ಶ್ರುತಿಯಿಂದ ಮುಕ್ತನಿಗೆ ಚಿನ್ಮಾತ್ರಶರೀರಕತ್ವವಿದ್ದ ಪ್ರಯುಕ್ತವೂ. ಚಿನ್ಮಾತ್ರ ಶರೀರವು ಸರ್ವಥಾ ಕೃತ್ರಿಮವಲ್ಲ. ಕೃತ್ರಿಮ ಶರೀರಕ್ಕೇನೇ ಸಂಸಾರಿ ಜೀವನಸಾಮ್ಯವು ಬರುವುದು. ಎಂದು ಔಡುಲೋಮ್ಯಾಚಾರ್ಯರು ತಿಳಿಯುತ್ತಾರೆ.

ಭಾಷ್ಯ ॥ (೧) ಚಿತಿಮಾತ್ರೋ ದೇಹೋ ಮುಕ್ತಾನಾಂ ಪೃಥಗ್ವಿದ್ಯತೇ ತೇನ ಭುಂಜತೇ ।
(೨) ಸರ್ವಂ ವಾ ಏತದಚಿತ್ಪರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ ಚಿನ್ಮಾತ್ರ ಏವಾವತಿಷ್ಠತೇ ತಾಮೇತಾಂ ಮುಕ್ತಿರಿತ್ಯಾಚಕ್ಷತೇ । ಇತ್ಯುದ್ದಾಲಕಶ್ರುತೇಶ್ಚಿದಾತ್ಮಕತ್ವಾದಿತ್ಯೌಡುಲೋಮಿರ್ಮನ್ಯತೇ ॥೬॥ ॥ ೨ ॥

**ಭಾಷ್ಯಾರ್ಥ ॥** (೧) ಬ್ರಹ್ಮದೇಹದಿಂದ ಅತಿರಿಕ್ತವಾದ ಸ್ವಾಭಾವಿಕವಾದ ಚಿದಾತ್ಮಕವಾದ (ಪ್ರಾಕೃತವಲ್ಲ) ಶರೀರವು ಮುಕ್ತರಿಗೆ ಇದೆ. ಅದರಿಂದಲೇ (ಮುಕ್ತರು) ಭೋಗಿಸುತ್ತಾರೆ. (ಆದಕಾರಣ ಭೋಗವು ಅನುಪಪನ್ನವಾಗುವುದಿಲ್ಲ. ಮುಕ್ತತ್ವಕ್ಕೆ ಅನುಪಪತ್ತಿಯೂ ಇಲ್ಲ) (೨) (ದೇಹವುಳ್ಳತನವೇ ಸಂಸಾರವುಳ್ಳತನವು. ಆದಕಾರಣ ದೇಹವು ಚಿನ್ಮಾತ್ರಸ್ವರೂಪವಾದಾಗ್ಯೂ ಮುಕ್ತತ್ವವು ಹೇಗೆ ಎಂದರೆ) ಪ್ರತ್ಯಕ್ಷಸಿದ್ಧವಾದ ಜಡಾತ್ಮಕವಾದ ಎಲ್ಲಾ ಪ್ರಾಕೃತ ಮತ್ತು ಭೌತಿಕವಾದ ಸ್ಥೂಲ ಸೂಕ್ಷ್ಮ ಶರೀರವನ್ನು ಪರಿತ್ಯಾಗಮಾಡಿ ಈ ಜ್ಞಾನಿಯು ಮುಕ್ತಿಯಲ್ಲಿ ಚಿದಾತ್ಮಕನೇ ಆಗುತ್ತಾನೆ. ಚಿದಾತ್ಮಕನಾಗಿಯೇ ಇರುತ್ತಾನೆ. (ಚಿದಾತ್ಮಕವಲ್ಲದಿರುವ ದೇಹದಿಂದ ಬದ್ಧನಾಗುವುದಿಲ್ಲ) ಇಂತಹ ದೆಶೆಯನ್ನು ಮುಕ್ತಿಯೆಂದು ವಿದ್ವಾಂಸರು ಹೇಳುತ್ತಾರೆ, ಇತ್ಯಾದಿ ಶ್ರುತಿಗಳಿಂದ ಮುಕ್ತನಿಗೆ ಚಿದಾತ್ಮಕ ಶರೀರತ್ವವಿದ್ದುದರಿಂದ (ಅಂದರೆ ಚಿದಾತ್ಮಕ ಶರೀರಕ್ಕೆ ಮುಕ್ತಸ್ವರೂಪತ್ವವಿದ್ದುದರಿಂದ) ಏವಂಚ ಸ್ವರೂಪದೇಹವನ್ನೇ ಅಂಗೀಕರಿಸಿದರೆ ಮುಕ್ತತ್ವಕ್ಕೆ ಅನುಪಪತ್ತಿಯು ಇಲ್ಲ) ಎಂದು ಔಡುಲೋಮ್ಯಾಚಾರ್ಯರು ತಿಳಿಯುತ್ತಾರೆ.

**ವಿಶೇಷಾಂಶ ॥** ಮುಕ್ತರಿಗೆ ಭೋಗವು ಯುಕ್ತವೇ. ಪ್ರತ್ಯೇಕ ಶರೀರವಿಲ್ಲದಿರುವುದರಿಂದ ಅಯುಕ್ತವೆಂದು ಹೇಳಕೂಡದು. ಮುಕ್ತರಿಗೆ ಪರಬ್ರಹ್ಮನ ಶರೀರದಿಂದ ಪ್ರತ್ಯೇಕ ಶರೀರವದೆ. ಹಾಗಾದರೆ ಸಂಸಾರಿಸಾಮ್ಯವು ಬರುವುದರಿಂದ ಮುಕ್ತತ್ವವು ಕೂಡಲಾರದು, ಎಂದು ಹೇಳಕೂಡದು. ಅವರ ಶರೀರವು ಚೈತನ್ಯಸ್ವರೂಪವೇ. ಅದರಿಂದಲೇ ಭೋಗಿಸುತ್ತಾರೆ, ಮುಕ್ತರೂ ಚಿದಾತ್ಮಕರೇ. ಚಿತಿಮಾತ್ರ ಶರೀರವು ಮುಕ್ತಸ್ವರೂಪವಾಗಿದೆ. ಸ್ವರೂಪವು ಕೃತ್ರಿಮವಾಗದೆ ಇರುವುದಿರಂದ ಅದು ಸಂಸಾರಾಪಾದಕವಾಗಲಾರದು. ॥೬॥ ॥೨॥

**ಪೀಠಿಕೆ ॥** ಪೂರ್ವಸೂತ್ರದಲ್ಲಿ ದೇಹವಿಲ್ಲವೆಂದು ಜೈಮಿನ್ಯಾಚಾರ್ಯರು ಹೇಳಿರುತ್ತಾರೆ. ಇಲ್ಲಿ ದೇಹವಿದೆ ಎಂದು ಔಡುಲೋಮ್ಯಾಚಾರ್ಯರು ಹೇಳಿರುತ್ತಾರೆ. ದೇಹ ಭಾವಾಭಾವಗಳು ಪರಸ್ಪರ ವಿರುದ್ಧಗಳಾಗಿರುವುದರಿಂದ ಇದು ಹೇಗೆ ಕೂಡುತ್ತದೆ ಎಂಬ ಆಶಂಕೆಯನ್ನು ಪರಿಹರಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ–

## ಸೂತ್ರ ॥ ಓಂ ಏವಮಪ್ಯುಪನ್ಯಾಸಾತ್ಪೂರ್ವಭಾವಾದವಿರೋಧಂ ಬಾದರಾಯಣಃ ಓಂ ॥ ೭ ॥

**ಸೂತ್ರಾರ್ಥ ॥** ಚಿನ್ಮಾತ್ರ ಶರೀರದಿಂದ ಭೋಗಗಳನ್ನು ಭೋಗಿಸುತ್ತಾರೆ ಎನ್ನುವ ಪ್ರಕಾರ ದಿಂದಲೂ ಸ ವಾ ಏಷ ಏತಸ್ಮಾತ್ ಎನ್ನುವ ಶ್ರುತಿಯಲ್ಲಿ ಹೇಳಿದ್ದರಿಂದಲೂ ಜೈಮಿನಿ ಋಷಿಗಳು ಹೇಳಿದ ದೇಹಾಭಾವವೂ ಇದ್ದುದರಿಂದ ಔಡುಲೋಮ್ಯಾಚಾರ್ಯರು ಹೇಳುವ ಪ್ರಕಾರ ಶ್ರುತಿಗಳಿಂದ ದೇಹವದೆ ಎಂದೂ ತಿಳಿದುಬರುವುದರಿಂದ (ಎರಡೂ ಪ್ರಾಮಾಣಿಕಗಳಾಗಿರುವುದರಿಂದ) ಜೈಮಿನಿ ಔಡುಲೋಮಿ ಮತಗಳಿಗೆ ಮರ್ತ್ಯ ಅಮರ್ತ್ಯ ದೇಹ ಅಭಾವ ಭಾವಗಳನ್ನು (ಅಂದರೆ ಜೈಮಿನ್ಯಾ ಚಾರ್ಯರು ಜಡದೇಹವಿಲ್ಲವೆಂದೂ ಔಡುಲೋಮ್ಯಾಚಾರ್ಯರು ಚಿನ್ಮಾತ್ರ ಶರೀರವದೆ ಎಂದು ಅಂಗೀಕರಿಸಿದ್ದರಿಂದ) ಎರಡು ಪಕ್ಷಗಳಲ್ಲಿಯೂ ವಿರೋಧಾಭಾವವನ್ನು ಬಾದರಾಯಣಾಚಾರ್ಯರು ತಿಳಿಯುತ್ತಾರೆ. ಏವಂಚ ಮರ್ತ್ಯಂ ದೇಹಂ ಪರಿತ್ಯಜ್ಯ ಇತ್ಯಾದಿ ಸ್ಮೃತ್ಯನುಸಾರವಾಗಿ ಚಿನ್ಮಾತ್ರವಾದ ತನ್ನ

ಶರೀರದಿಂದಲೂ ಪರಬ್ರಹ್ಮ ಶರೀರದಿಂದಲೂ ಕೂಡಿಕೊಂಡೇ ಭೋಗಿಸುವರು. ಆದಕಾರಣ ವಿರೋಧವಿಲ್ಲವೆಂದು ವೇದವ್ಯಾಸರು ತಿಳಿಯುತ್ತಾರೆ.

**ಭಾಷ್ಯ ॥ ಸ ವಾ ಏಷ ಏತಸ್ಮಾನ್ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೀಭವತ್ಯಥ ತೇನೈವ ರೂಪೇಣಾಭಿಪಶ್ಯತ್ಯಭಿಶೃಣೋತ್ಯಭಿಮನುತೇऽಭಿವಿಜಾನಾತಿ ತಾಮಾಹುರ್ಮುಕ್ತಿರಿತಿ ಸೌಪರ್ಣಶ್ರುತೌ ಚಿನ್ಮಾತ್ರೇಣಾಪ್ಯುಪನ್ಯಾಸಾಜ್ಜೈಮಿನ್ಯುಕ್ತಸ್ಯ (ಚ) ಭಾವಾದುಭಯತ್ರಾಪ್ಯವಿರೋಧಂ ಬಾದರಾಯಣೋ ಮನ್ಯತೇ ॥ ೩ ॥**

**ಭಾಷ್ಯಾರ್ಥ ॥** ಆ ಈ ಬ್ರಹ್ಮಜ್ಞಾನಿಯು ವಿನಾಶ್ಯವಾದ ಕರ್ಮಾರಬ್ಧ ಜಡಶರೀರದಿಂದ ವಿಮುಕ್ತನಾಗಿ ಚಿದಾನಂದಾತ್ಮಕ ಶರೀರವುಳ್ಳವನಾಗಿ ಅಭಿವ್ಯಕ್ತನಾಗುತ್ತಾನೆ. ಆ ಮೇಲೆ ಚಿತ್ಸ್ವರೂಪವಾದ ಇಂದ್ರಿಯದಿಂದಲೇ ರೂಪಾದಿಗಳನ್ನು ನೋಡುತ್ತಾನೆ. ಶಬ್ದಗಳನ್ನು ಕೇಳುತ್ತಾನೆ. ಸಾಮಾನ್ಯವಾಗಿ ಸ್ವಯೋಗ್ಯವಾದುದೆಲ್ಲವನ್ನೂ ತಿಳಿಯುತ್ತಾನೆ. ವಿಶೇಷವಾಗಿಯೂ ತಿಳಿಯುತ್ತಾನೆ. ಅಂತಹ ದೆಶೆಯನ್ನು ಮುಕ್ತಿಯೆಂದು ಹೇಳುತ್ತಾರೆ, ಎಂದು ಸೌಪರ್ಣಶ್ರುತಿಯಲ್ಲಿ ಚಿನ್ಮಾತ್ರಶರೀರದಿಂದಲೂ ಭೋಗವು ಕೂಡುತ್ತದೆ ಎಂದು ಉಪನ್ಯಾಸ ಮಾಡಿದ್ದರಿಂದಲೂ ಜೈಮಿನಿ ಋಷಿಗಳಿಂದ ಹೇಳಲ್ಪಟ್ಟದ್ದು ಅಂದರೆ ಬ್ರಹ್ಮಶರೀರದಿಂದ ಭೋಗವು ಕೂಡುತ್ತದೆಂದು ಹೇಳಿದ್ದರಿಂದಲೂ ಈ ಎರಡು ಪಕ್ಷಗಳೂ ಪ್ರಾಮಾಣಿಕಗಳಾಗಿರುವುದರಿಂದ ಪ್ರಾಮಾಣಿಕಗಳಾದ ಈ ಎರಡು ಅರ್ಥಗಳಲ್ಲಿ ವಿರೋಧಾಭಾವವನ್ನೇ ವೇದವ್ಯಾಸರು ತಿಳಿಯುತ್ತಾರೆ. ॥ ೩ ॥

**ಪೀಠಿಕೆ ॥** ದೇಹ ಭಾವಾಭಾವಗಳಿಗೆ ವಿರೋಧವು ಬಂದದ್ದಕ್ಕೆ ಏನು ಪರಿಹಾರವು ಎಂದರೆ ಜೈಮಿನಿ ಮತವು ಜಡದೇಹಾಭಾವ ವಿಷಯಕವು. ಔಡುಲೋಮಿ ಮತವು ಚಿನ್ಮಾತ್ರ ಶರೀರ ವಿಷಯಕವು, ಆದಕಾರಣ ವಿರೋಧವಿಲ್ಲ ಎನ್ನುವ ಅಭಿಪ್ರಾಯದಿಂದ ಅವಿರೋಧ ಪ್ರಕಾರವನ್ನು ಸ್ಮೃತಿಯಿಂದ ತೋರಿಸುತ್ತಾರೆ–

**ಭಾಷ್ಯ ॥ ನಾರಾಯಣಾಧ್ಯಾತ್ಮೇ ಚ । ಮರ್ತ್ಯಂ ದೇಹಂ ಪರಿತ್ಯಜ್ಯ ಚಿತಿಮಾತ್ರಾತ್ಮದೇಹಿನಃ । ಚಿತಿಮಾತ್ರೇಂದ್ರಿಯಾಶ್ಚೈವ ಪ್ರವಿಷ್ಟಾ ವಿಷ್ಣುಮವ್ಯಯಂ ॥ ತದಂಗಾನುಗೃಹೀತೈಶ್ಚ ಸ್ವಾಂಗೈರೇವ ಪ್ರವರ್ತನಂ । ಕುರ್ವಂತಿ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ ॥ ಯಥೇಷ್ಟಂ ಪರಿವರ್ತಂತೇ ತಸ್ಯೈವಾನುಗ್ರಹೇರಿತಾಃ ॥ ಇತಿ ॥ ೭ ॥ ಅಧಿ.೫ ॥ ॥ ೪ ॥**

**ಭಾಷ್ಯಾರ್ಥ ॥** ವಿನಾಶಿಯಾದ ಜಡಶರೀರವನ್ನು ಬಿಟ್ಟು ಕೇವಲ ಚಿದಾತ್ಮಕ ಸ್ವರೂಪದೇಹದಿಂದ ಮುಕ್ತರಾಗಿ ಕೇವಲ ಚಿದಾತ್ಮಕ ಇಂದ್ರಿಯಗಳಿಂದ ಯುಕ್ತರಾಗಿ ನಾಶರಹಿತನಾದ ವಿಷ್ಣುವನ್ನು ಪ್ರವೇಶ ಮಾಡಿದವರಾಗಿ ಶ್ರೀಹರಿಯ ಅಂಗಗಳಿಂದ ಅನುಗೃಹೀತಗಳಾದ ಸ್ವರೂಪಭೂತಗಳಾದ ಕರಚರಣಾದಿಗಳಿಂದಲೇ (ಭಿನ್ನಗಳಲ್ಲ, ವಿಷ್ಣುಸಂಬಂಧಿಗಳೂ ಅಲ್ಲ) ವ್ಯಾಪಾರವನ್ನು ಮಾಡುತ್ತಾರೆ. ಭೋಗ್ಯಗಳನ್ನು ವಿಷ್ಣುವಿನ ದೇಹದೊಳಗೂ ಹೊರಗೂ ಯಥೇಷ್ಟವಾಗಿಯೇ ಭೋಗಿಸುತ್ತಾರೆ. ಆ ವಿಷ್ಣುವಿನ ಪ್ರಸಾದದಿಂದ ಪ್ರೇರಿತರಾಗಿ (ಅಂದರೆ ವಿಷ್ಣುವಿನ ಇಚ್ಛೆಯಿಂದಲೇ ವಿಷಯೀಕೃತರಾಗಿ)

ಯಥೇಷ್ಟವಾಗಿ ತಿರುಗಾಡುತ್ತಾ ಇರುತ್ತಾರೆ. (ಏವಂಚ ಇಲ್ಲಿ **ಮರ್ತ್ಯಂ ದೇಹಂ ಪರಿತ್ಯಜ್ಯ** ಎನ್ನುವುದರಿಂದ ನಶ್ವರದೇಹವಿಲ್ಲವೆಂದು ಜೈಮಿನಿ ಮತವು. **ಚಿತಿಮಾತ್ರಾತ್ಮದೇಹಿನಃ** ಎನ್ನುವುದರಿಂದ ಚಿನ್ಮಾತ್ರದೇಹವದೆ ಎಂದು ಔಡುಲೋಮಿ ಮತವು. ಆದಕಾರಣ ಮುನಿಮತಗಳಿಗೆ ವಿರೋಧವಿಲ್ಲ. ।।೭।। ।।೪।।

## ಅಧಿಕರಣ ಸಾರಾಂಶ

ಪ್ರಕೃತ ಭೋಗವು ಮುಕ್ತರಿಗೆ ಅಯುಕ್ತವೋ ಯುಕ್ತವೋ, ಅದಕ್ಕಾಗಿ ಅವರಿಗೆ ಭೋಗಹೇತು ಶರೀರವು ಇಲ್ಲವೋ ಇದೆಯೋ, ಹಾಗೆಯೇ ಭೌತಿಕ ದೇಹವು ಇಲ್ಲವಾದರೂ ದೇಹಾಂತರದಿಂದ ಭೋಗವು ಅಯುಕ್ತವೋ ಯುಕ್ತವೋ, ಎಂದು ಸಂದೇಹವು ಮುಕ್ತರಿಗೆ ಬ್ರಹ್ಮನನ್ನು ಬಿಡದೇನೇ ಭೋಗವಾಗಲೀ ಭಗವದ್ಭುಕ್ತ ಭೋಗವಾಗಲೀ ಯುಕ್ತವಲ್ಲ ಅವರು ಸಂಸಾರಪಾರಂಗತರಾದುದರಿಂದ ಅವರಿಗೆ ಭೋಗಕ್ಕೆ ಹೇತುವಾದ ದೇಹವಿರುವುದಿಲ್ಲ. ದೇಹ ಇದ್ದರೆ ಮುಕ್ತತ್ವವೇ ಕೂಡಲಾರದು. ಪ್ರಲಯಾದಿಗಳಲ್ಲಿ ಬ್ರಹ್ಮ ದೇಹದಲ್ಲಿ ಪ್ರವೇಶವಿದ್ದರೂ ಭೋಗವಿಲ್ಲದಿರುವುದರಿಂದ ಬ್ರಾಹ್ಮದೇಹಾದಿಗಳಿಂದ ಭೋಗವಾದರೂ ಯುಕ್ತವಲ್ಲ ಎಂದು ಪೂರ್ವಪಕ್ಷವು ಬಂದರೆ–ಭೌತಿಕ ಮೊದಲಾದ ಎಲ್ಲಾ ಶರೀರವು ಇಲ್ಲವಾದರೂ ಯುಕ್ತವಲ್ಲ ಎಂದು ಪೂರ್ವಪಕ್ಷವು ಬಂದರೆ–ಭೌತಿಕ ಮೊದಲಾದ ಎಲ್ಲಾ ಶರೀರವು ಇಲ್ಲವಾದರೂ ಸ ವಾ ಏಷ ಬ್ರಹ್ಮನಿಷ್ಠ, **ಆದತ್ತೇ ಹರಿಹಸ್ತೇನ** ಇತ್ಯಾದಿ ಶ್ರುತಿಸ್ಮೃತಿಗಳಿಂದ ಪರಮಾತ್ಮನನ್ನೇ ಪ್ರವೇಶ ಮಾಡಿದವನಿಗೆ ಪರಮಾತ್ಮ ಶರೀರದಿಂದಲೇ ಶರೀರಿಯಂತೆ ಭೋಗವು ಅವಗತವಾಗುವುದು. **ಗಚ್ಛಾಮಿ ವಿಷ್ಣು ಪಾದಾಭ್ಯಾಂ** ಎನ್ನುವ ಸ್ಮೃತ್ಯುಕ್ತವಾದ ಯುಕ್ತಿಯಿಂದಲೂ ವಿಷ್ಣ್ವವಯವಗಳಿಂದಲೇ ಗಮನಾದಿಗಳನ್ನು ಮಾಡುತ್ತೇನೆನ್ನುವ ಪೂರ್ವಸ್ಮರಣ ಬಲದಿಂದಲೂ ಮುಕ್ತಿಯಲ್ಲಿ ಆ ಶ್ರೀಹರಿಯ ದೇಹಪ್ರಾಪ್ತಿರೂಪ ಮುಕ್ತಿಯಿಂದಲೂ ಬ್ರಹ್ಮದೇಹ ದಿಂದಲಾಗಲೀ **ಸ ಏತಸ್ಮಾತ್** ಇತ್ಯಾದಿ ಶ್ರುತಿಯಿಂದಲೂ **ಮರ್ತ್ಯಂ ದೇಹಂ ಪರಿತ್ಯಜ್ಯ** ಇತ್ಯಾದಿ ಸ್ಮೃತಿಗಳಿಂದ ಭಗವದನುಗ್ರಹೀತಗಳಾದ ಸ್ವರೂಪಭೂತಗಳಾದ ಚಿನ್ಮಾತ್ರ ದೇಹಾವಯಗಳಿಂದಾಗಲೀ ಯುಕ್ತರಾಗಿ ಭೋಗಗಳನ್ನು ಭೋಗಿಸುತ್ತಾರೆ. ಕರ್ಮಗಳನ್ನೂ ಮಾಡುತ್ತಾರೆ. ।।ಅಧಿ.೫।।

**ಬ್ರಾಹ್ಮಾಧಿಕರಣವು ಸಮಾಪ್ತವಾಯಿತು.**

# ೬ ಸಂಕಲ್ಪಾಧಿಕರಣವು

**ಪೀಠಿಕೆ** ।। ಈ ಅಧಿಕರಣದಲ್ಲಿ ಮುಕ್ತನಿಗೆ ಸಂಕಲ್ಪಮಾತ್ರದಿಂದಲೇ ಸಕಲ ಭೋಗಗಳೂ ಸಾಧ್ಯಗಳಾಗುತ್ತವೆ ಎಂದು ಸಮರ್ಥಿಸುತ್ತಾರೆ. ಮುಕ್ತರಿಗೆ ಭೋಗಾದಿಗಳಲ್ಲಿ ಆವಾವ ಉಪಾಯಗಳಿಂದ ಸಾಧ್ಯಗಳಾದ ಸಾಧನಗಳ ಅಪೇಕ್ಷೆಯು ಆವಶ್ಯಕವು. ಏವಂಚ ಮುಕ್ತಿಯಲ್ಲಿಯೂ ಭೂಮ್ಯಾದಿಗಳಂತೆಯೇ ಆವಾವ ಉಪಾಯಗಳಿಂದ ಸಾಧ್ಯಗಳಾದ ಸಾಧನಗಳಿಂದ ಸಾಧ್ಯಗಳಾದ ಭೋಗಗಳು ಇರುವುದು ಎನ್ನುವುದೇ ಉಚಿತವು ಎಂದು ಪೂರ್ವಪಕ್ಷವು ಬಂದರೆ, ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ–

## ಸೂತ್ರ ॥ ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ॥ ೮ ॥

**ಸೂತ್ರಾರ್ಥ** ॥ ಮುಕ್ತರಿಗೆ ಸಂಕಲ್ಪದಿಂದಲೇ (ಸಂಕಲ್ಪವಾದೊಡನೆಯೇ ವಿಲಂಬವಿಲ್ಲದೇನೇ) ಸಕಲ ಭೋಗಗಳೂ ಸಿದ್ಧಿಸುತ್ತವೆ. **ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ** ಎಂದು ಶ್ರುತವಾದುದರಿಂದ ಚಃ ಲೋಕದಲ್ಲಿ ಭೋಗವು ಕರ್ಮಸಾಧ್ಯವಾದುದರಿಂದ ಮುಕ್ತಭೋಗವೂ ಪ್ರಯತ್ನಾಪೇಕ್ಷಿತವು ಎಂದು ಹೇಳಕೂಡದು. ಅಥವಾ ಮುಕ್ತಿಯಲ್ಲಿ ಅನಿಷ್ಟ ಭೋಗಗಳೂ ಇರುವುದಿಲ್ಲ.

**ಭಾಷ್ಯ ॥ (೧) ನ ತೇಷಾಂ ಭೋಗಾದಿಷು ಪ್ರಯತ್ನಾಪೇಕ್ಷಾ । (೨) ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ (ಛಾ.೮.೨.೧.) ಇತ್ಯಾದಿಶ್ರುತೇಃ ॥೮॥ ಅಧಿ.೬ ॥ ॥ ೧ ॥**

**ಭಾಷ್ಯಾರ್ಥ** ॥ (೧) ಮುಕ್ತರಿಗೆ ಭೋಗ (ಇಷ್ಟಾನುಭವ) ಉತ್ತಮವಾದ ಆಸಕ್ತಿವಿಶೇಷ ಇತ್ಯಾದಿಗಳಲ್ಲಿ ಆವಾವ ಉಪಾಯಗಳಿಂದ ಸಾಧ್ಯಗಳಾದ ಸಾಧನಗಳ ಅಪೇಕ್ಷೆಯು ಇಲ್ಲ. (ಮತ್ತೆ ಸಂಕಲ್ಪ ಮಾತ್ರದಿಂದಲೇ ನಿಖಿಲ ಭೋಗಗಳೂ ಲಭಿಸುತ್ತವೆ. ಸ ಯದಿ ಎನ್ನುವ ಶ್ರುತಿಯಿಂದ.) (೨) ಮುಕ್ತನು ಯಾವಾಗ ನನ್ನ ಪಿತೃಗಳಿಗೆ ವಿಷ್ಣುಲೋಕವು ಆಗಲಿ, ಆ ಮೇಲೆ ಪಿತೃಗಳ ದರ್ಶನವೂ ನನಗೆ ಆಗಲಿ ಎಂದು ಪಿತೃಗಳಿಗೆ ವಿಷ್ಣುಲೋಕದ ಅಪೇಕ್ಷೆಯುಳ್ಳವನು ಆಗುತ್ತಾನೋ ಆಗ ಮುಕ್ತನಿಗೆ ಅಪೇಕ್ಷಾವಶದಿಂದಲೇ ಈ ಮುಕ್ತನ ಪಿತೃಗಳು ತಮಗೆ ಯೋಗ್ಯಗಳಾದ ಸಾಧನಗಳನ್ನು ಸಂಪಾದಿಸಿ ಸಂಸಾರದಿಂದ ಮುಕ್ತರಾಗಿ ಎದುರು ಬಂದು ನಿಲ್ಲುತ್ತಾರೆ. (ಅಂತೂ ಪಿತೃದರ್ಶನದಿಂದ ಯುಕ್ತನಾಗಿ ತನ್ನಿಂದ ಅಧಮರಿಂದ ಪೂಜಿಸಿಕೊಳ್ಳಲ್ಪಡುತ್ತಾನೆ.) (ಹೀಗೆಯೇ **ಸ ಯದಿ ಮರ್ತ್ಯಲೋಕಕಾಮೋ ಭವತಿ** ಇದು ಮೊದಲಾದ ಉತ್ತರವಾಕ್ಯಗಳನ್ನು ಹೀಗೆಯೇ ವ್ಯಾಖ್ಯಾನ ಮಾಡಬೇಕು.) ಇದುಮೊದಲಾದ ಶ್ರುತಿಗಳಿಂದ. (ಇಲ್ಲಿ ಪಿತ್ರಾದಿಗಳು ಅಂತಿಮಜನ್ಮಕಾಲೀನರೂ ಮುಕ್ತಿಯೋಗ್ಯರೂ ಆದ ಸ್ವರೂಪ ಪಿತ್ರಾದಿಗಳೇ ವಿವಕ್ಷಿತರು. ಅಯೋಗ್ಯರಾಗಿದ್ದರೆ ಮುಕ್ತರಿಗೆ ಅವರನ್ನು ನೋಡಬೇಕೆನ್ನುವ ಅಪೇಕ್ಷೆಯೇ ಕೂಡಲಾರದು. ॥೮॥ ॥೧॥

## ಅಧಿಕರಣ ಸಾರಾಂಶ

ಮುಕ್ತರ ಭೋಗವು ಆವಾವ ಅಪಾಯಗಳಿಂದ ಸಾಧ್ಯಗಳಾದ ಸಾಧನಗಳಿಂದ ಸಾಧ್ಯವೋ, ಸಂಕಲ್ಪ ಮಾತ್ರ ಸಾಧ್ಯವೋ, ಅದಕ್ಕಾಗಿ ಭಗವಂತನ ಲೋಕದಲ್ಲಿ ಇರುವಿಕೆ ಎನ್ನುವ ಯುಕ್ತಿಯು ಲೋಕಾನುಸಾರವಾಗಿ ಸಾಧನಗಳಿಂದ ಸಾಧ್ಯತ್ವವನ್ನು ಸಾಧಿಸುವಂಥಾದ್ದು ಆಗುತ್ತದೋ ಇಲ್ಲವೋ ಎಂಬ ಸಂದೇಹವು. **ಭಗವಲ್ಲೋಕಸ್ಥೋ ಮುಕ್ತಭೋಗಃ ತತ್ತದುಪಾಯಸಾಧ್ಯಸಾಧನಸಾಧ್ಯಃ ಲೋಕಸ್ಥತ್ವಾತ್ ಭೂಮ್ಯಾದಿಲೋಕಸ್ಥಭೋಗವತ್**=ಶ್ರೀಹರಿಯ ಲೋಕದಲ್ಲಿ ಆಗತಕ್ಕ ಮುಕ್ತರ ಭೋಗವು ಆವಾವ ಉಪಾಯಗಳಿಂದ ಸಾಧ್ಯಗಳಾದ ಸಾಧನಗಳಿಂದ ಸಾಧ್ಯವು, ಲೋಕದಲ್ಲಿದ್ದ ಪ್ರಯುಕ್ತ, ಭೂಮಿ ಮೊದಲಾದ ಲೋಕಗಳಲ್ಲಿರತಕ್ಕ ಭೋಗದಂತೆ, ಎನ್ನುವ ಯುಕ್ತಿಯಿಂದ ಲೋಕದಲ್ಲಿ ಭೋಗವು ಆವಾಪ ಉಪಾಯಗಳಿಂದ ಸಾಧ್ಯಗಳಾದ ಸಾಧನಗಳಿಂದ ಸಾಧ್ಯವಾಗಿದೆ

ಎಂದು ಕಂಡದ್ದರಿಂದ ಲೋಕಾನುಸಾರವಾಗಿಯೂ, ಮುಕ್ತಭೋಗವು ಆವಾವ ಉಪಾಯಗಳಿಂದ ಸಾಧ್ಯಗಳಾದ ಸಾಧನಗಳಿಂದ, ಲಭಿಸುವಂಥಾದ್ದೋ, ಎಂದು ಪೂರ್ವಪಕ್ಷವು ಬಂದರೆ, **ಸ ಯದಿ ಪಿತೃಲೋಕಕಾಮೋ ಭವತಿ**, ಎನ್ನುವ ಶ್ರುತಿಯಿಂದ ಮುಕ್ತರ ಭೋಗವು ಸಂಕಲ್ಪವಾದೊಡನೆಯೇ ವಿಲಂಬವಿಲ್ಲದೇನೇ ಲಭಿಸುವಂಥಾದ್ದು. ಆವಾವ ಉಪಾಯ ಸಾಧ್ಯಗಳಾದ ಸಾಧನಗಳಿಂದ ಸಾಧ್ಯವಲ್ಲ. ಹಿಂದಿನ ಯುಕ್ತಿಯು ಶ್ರುತಿಯಿಂದ ಬಾಧಿಸಲ್ಪಟ್ಟ ಪ್ರಯುಕ್ತ ಹಿಂದೆ ಹೇಳಿದ ಸಾಧ್ಯಕ್ಕೆ ಸಾಧಕವಾಗಲಾರದು. ಲೋಕ ವಿರೋಧವಾದರೂ ನಿರ್ದೋಷವಾದ ಭಗವಂತನ ಲೋಕದಲ್ಲಿ ಗುಣವೇ. ॥ ಅಧಿ.೬ ॥

**ಸಂಕಲ್ಪಾಧಿಕರಣವು ಸಮಾಪ್ತವಾಯಿತು.**

## ೭ ಅನನ್ಯಾಧಿಪತ್ಯಧಿಕರಣವು

**ಪೀಠಿಕೆ** ॥ ಮುಕ್ತರಿಗೆ ತಮ್ಮಿಂದ ಅಧಮರಾದವರು ನಿಯಾಮಕರಾಗುವುದಿಲ್ಲ ಎಂದು ಸಾಧಿಸುತ್ತಾರೆ. ರಾಜರ ಮಂದಿರಗಳಲ್ಲಿರತಕ್ಕ ಬ್ರಾಹ್ಮಣಾದಿಗಳಂತೆ ಮುಕ್ತರೂ ಕೂಡ ಪರರ ಮಂದಿರಗಳಲ್ಲಿ ಇರತಕ್ಕವರಾದುದರಿಂದ ಮುಕ್ತರಿಗೆ ಅಧಮರೂ ಕೂಡ ನಿಯಾಮಕರು ಇರುತ್ತಾರೆ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ–

### ಸೂತ್ರ ॥ ಓಂ ಅತ ಏವ ಚಾನನ್ಯಾಧಿಪತಿಃ ಓಂ ॥ ೯ ॥

ಸೂತ್ರಾರ್ಥ ॥ ನಾನು ಇಷ್ಟು ಮಂದಿಗೇನೇ ನಿಯಮ್ಯನು ಆಗುವೆನು, ಎಂದು ಸತ್ಯಸಂಕಲ್ಪನಾದುದರಿಂದಲೇ ಮುಕ್ತನು ಕ್ಲೃಪ್ತರಾದ ಸ್ವೋತ್ತಮರಿಂದ ಇತರರಾದ ಅಧಮಾಧಿಪತಿಗಳಿಂದ ವಿರಹಿತನು. ಚ=ರಾಜರ ಮಂದಿರವನ್ನು ಪ್ರವೇಶ ಮಾಡಿದವನಿಗೆ ದ್ವಾರಪಾಲಕಾದಿಗಳಿಂದ ನಿಯತತ್ವವಿದ್ದಂತೆಯೇ ಈಶ್ವರಲೋಕವನ್ನು ಪ್ರವೇಶಮಾಡಿರುವ ಮುಕ್ತನಿಗೆ ಅಧಮನಿಯಮ್ಯತ್ವವು ಸರ್ವಥಾ ಇಲ್ಲ, ಅಥವಾ ಹಿಂದಿನ ವಿಷಯವು ಪರಮೋಽಧಿಪತಿಸ್ತೇಷಾಂ ಇತ್ಯಾದಿ ಪ್ರಮಾಣಪ್ರಸಿದ್ಧವು.

**ಭಾಷ್ಯ ॥ (೧) ಸತ್ಯಸಂಕಲ್ಪಾ(ಲ್ಪತ್ವಾ)ದೇವ ।(೨) ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ॥ ಬ್ರಹ್ಮಾದಿಮಾನುಷಾಂತಾನಾಂ ಸರ್ವೇಷಾಮವಿಶೇಷತಃ । ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್ । ಆಚಾರ್ಯಾಶ್ಚೈವ ಸರ್ವೇಽಪಿ ಯೈರ್ಜ್ಞಾನಂ ಸುಪ್ರತಿಷ್ಠಿತಂ ॥ ಏತೇಭ್ಯೋಽನ್ಯಃ ಪತಿರ್ನೈವ ಮುಕ್ತಾನಾಂ ನಾತ್ರ ಸಂಶಯಃ । ಇತಿ (ಹಿ) ವಾರಾಹೇ ॥ ೯ ॥**

ಭಾಷ್ಯಾರ್ಥ ॥ (೧) ಈ ಮುಕ್ತನು ನಮಗೇನೇ ನಿಯಮ್ಯನು ಆಗುವನು, ಎಂದು ಅಧಿಪತಿಗಳಿಗೆ ಸತ್ಯಸಂಕಲ್ಪತ್ವವಿದ್ದ ಪ್ರಯುಕ್ತ ಅದನ್ನು ಅನುಸರಿಸಿ ನಿಯಮ್ಯವಾದ ಮುಕ್ತನಿಗೂ ನಾನು ಇವರಿಗೇನೇ ನಿಯಮ್ಯನು ಆಗುವೆನು, ಎಂದು ಸತ್ಯಸಂಕಲ್ಪತ್ವವಿದ್ದ ಪ್ರಯುಕ್ತವೇ ಮುಕ್ತನು ಸ್ವೋತ್ತಮರಿಂದ

ಇತರರಾದ ಅಧಮಾಪತಿಗಳಿಂದ ಯುಕ್ತನಲ್ಲ. (ಲೋಕದಲ್ಲಿ ತಮ್ಮಿಂದ ಅಧಮರಾದವರಿಂದ ತಮಗೆ ನಿಯಮ್ಯತ್ವವು ಅನಪೇಕ್ಷಿತವಾದುದೇ ಇರುವುದು. ಅಂತಹ ಅಧಮನಿಯಮ್ಯತ್ವವು ಮುಕ್ತರು ಸತ್ಯಸಂಕಲ್ಪರಾದುದರಿಂದಲೇ ಸರ್ವಥಾ ಇರುವುದಿಲ್ಲ.) (೨) (ಈ ವಿಷಯದಲ್ಲಿ ಸ್ಮೃತಿಯನ್ನು ಹೇಳುತ್ತಾರೆ.) ಚತುರ್ಮುಖ ಬ್ರಹ್ಮನನ್ನು ಆರಂಭಿಸಿ ಮನುಷ್ಯ ಪರ್ಯಂತರಾದ ಎಲ್ಲಾ ಮುಕ್ತರಿಗೆ ಲಕ್ಷ್ಮೀದೇವಿಯಿಂದಲೂ ಉತ್ತಮನಾದ ವಿಷ್ಣುವೇ ಮುಖ್ಯಾಧಿಪತಿಯು. ಈ ವಿಷಯದಲ್ಲಿ ಸಂದೇಹವಿಲ್ಲ. ಆ ಮೇಲೆ ಚತುರ್ಮುಖನನ್ನು ಆರಂಭಿಸಿ ಉಷಾದೇವಿ ಪರ್ಯಂತರಾದವರು ಎಲ್ಲರೂ ಅವಿಶೇಷವಾಗಿ ಅಂದರೆ ಯೋಗ್ಯತಾಕ್ರಮದಿಂದ ತಮ್ಮಿಂದ ಅಧಮರಾದವರಿಗೆ ಅಧಿಪತಿಗಳು. ಯಾರಿಂದ ತತ್ವಜ್ಞಾನವು ಚೆನ್ನಾಗಿ ಹುಟ್ಟುತ್ತದೋ, ಅವರೆಲ್ಲರೂ ಆಚಾರ್ಯರೂ ಗುರುಗಳೂ ಅಧಿಪತಿಗಳೇ. ಕ್ಲುಪ್ತರಾದ ಅಧಿಪತಿಗಳಿಂದ ಮತ್ತೊಬ್ಬ ಅಧಮನಾದವನು ನಿಯಾಮಕನು ಮುಕ್ತರಿಗೆ ಇಲ್ಲವೇ ಇಲ್ಲ. ಈ ವಿಷಯದಲ್ಲಿ ಸಂದೇಹವಿಲ್ಲ ಎಂದು ವಾರಾಹಪುರಾಣದಲ್ಲಿ ಹೇಳಿಯದೆ. ||೯|| ||೧||

## ಅಧಿಕರಣ ಸಾರಾಂಶ

ಮುಕ್ತನು ಕ್ಲುಪ್ತ ಅಧಿಪತಿಗಳಿಂದ ಇತರನಾದ ಅಧಿಪತಿಯಿಂದ ನಿಯತನೋ, ಅಥವಾ ಕ್ಲುಪ್ತ ಅಧಿಪತಿಯಿಂದ ನಿಯತನೋ, ಅದಕ್ಕಾಗಿ ಮುಕ್ತಿಯಲ್ಲಿ ಅಧಮರಿಂದ ನಿಯಮ್ಯತ್ವವು ಅಪೇಕ್ಷಿತವಾಗದೆ ಇದ್ದುದೂ ಆಗುತ್ತದೋ ಇಲ್ಲವೋ ಎಂದು ಸಂದೇಹವು. ಲೋಕದಲ್ಲಿ ರಾಜರ ಮಂದಿರವನ್ನು ಪ್ರವೇಶಮಾಡಿದವನಿಗೆ ಅಪೇಕ್ಷಿತವಾಗದೆ ಇರುವ ತಮ್ಮಿಂದ ಅಧಮರಾದ ದ್ವಾರಪಾಲಕಾದಿಗಳಿಂದ ನಿಯತತ್ವವಿದ್ದಂತೆಯೇ ಮುಕ್ತರೂ ಪರರ ಗೃಹದಲ್ಲಿ ಇದ್ದುದರಿಂದ ತಮ್ಮಿಂದ ಅಧಮರಿಂದ ನಿಯಮ್ಯತ್ವವು ಮುಕ್ತರಿಗೂ ಬರುವುದು, ಎಂದು ಪೂರ್ವಪಕ್ಷವು ಬಂದರೆ, ಲೋಕದಲ್ಲಿ ಸತ್ಯಸಂಕಲ್ಪತ್ವವಿಲ್ಲದಿರುವುದರಿಂದ ತನಗೆ ಅನಪೇಕ್ಷಿತವಾದ ಸ್ವಾಧಮ ನಿಯತತ್ವವು ಕೂಡಿದರೂ ಮುಕ್ತನು ಸತ್ಯಸಂಕಲ್ಪನಾದುದರಿಂದಲೇ ಅಪೇಕ್ಷಿತವಲ್ಲದಿರುವ ಸ್ವಾಧಮನಿಯಮ್ಯತ್ವವು ಸರ್ವಥಾ ಯುಕ್ತವಲ್ಲ. ಆದಕಾರಣ ಮುಕ್ತರು ಕ್ಲುಪ್ತಾಧಿಪತಿ ನಿಯತರೇ ಆಗಿರುತ್ತಾರೆ. ಈ ವಿಷಯವು ಪರಮೋಽಧಿಪತಿಸ್ತೇಷಾಂ ಇತ್ಯಾದಿ ಸ್ಮೃತಿಸಿದ್ಧವೂ ಆಗಿದೆ. || ಅಧಿ.೭ ||

**ಅನನ್ಯಾಧಿಪತ್ಯಧಿಕರಣವು ಸಮಾಪ್ತವಾಯಿತು.**

# ೮ ಅಭಾವಾಧಿಕರಣವು

**ಪೀಠಿಕೆ ||** ಈ ಅಧಿಕರಣದಲ್ಲಿ ಮುಕ್ತಿಯಲ್ಲಿ ಭೋಗವು ಅನುಪಪನ್ನವೆಂಬುದನ್ನು ನಿವಾರಿಸುತ್ತಾರೆ. ಬಾಹ್ಯದೇಹವಿಲ್ಲದಿರುವುದರಿಂದ ಮುಕ್ತರಿಗೆ ಭೋಗವು ಕೂಡುವುದಿಲ್ಲ. ಬಾಹ್ಯದೇಹವಿದ್ದರೆ ದುಃಖಾದಿಗಳು ಬರಬೇಕಾಗುವುವು. ಚಿದಾತ್ಮಕ ಶರೀರವು ಭೋಗಕ್ಕೆ ಉಪಯುಕ್ತವಲ್ಲ. ಬ್ರಾಹ್ಮದೇಹದಲ್ಲಿ

ಪ್ರವೇಶವು ಸಾಯುಜ್ಯ ಮುಕ್ತಿಯನ್ನು ಹೊಂದಿ ಮುಕ್ತರಿಂದ ಇತರರಾದ ಮುಕ್ತರಿಗೆ ಇಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅಭಾವಂ ಬಾದರಿರಾಹ ಹ್ಯೇವಂ ಓಂ ॥ ೧೦ ॥

**ಸೂತ್ರಾರ್ಥ ॥** ಮುಕ್ತರಿಗೆ ಚಿನ್ಮಾತ್ರ ಶರೀರದಿಂದ ಇತರವಾದ ಪ್ರಾಕೃತ ದೇಹವು ಇಲ್ಲವೆಂದು ಶುಕಾಚಾರ್ಯರು ತಿಳಿಯುತ್ತಾರೆ. (ಆದಕಾರಣ ದುಃಖಾದಿಗಳಿಗೆ ಪ್ರಸಕ್ತಿಯೇ ಇಲ್ಲ) ಅಶರೀರೋ ವಾವ ತದಾ ಭವತಿ ಎನ್ನುವ ಶ್ರುತಿಯು ಹೀಗೆ ಹೇಳುತ್ತದೆ.

**ಭಾಷ್ಯ ॥ (೧) ಚಿನ್ಮಾತ್ರಂ ವಿನಾಽನ್ಯೋ ದೇಹಸ್ತೇಷಾಂ ನ ವಿದ್ಯತ ಇತಿ ಬಾದರಿಃ । (೨) ಅಶರೀರೋ ವಾವ ತದಾ ಭವತ್ಯಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತೋ ಯಾಭ್ಯಾಂ ಹ್ಯೇಷ ಉನ್ಮಥ್ಯತೇ । ಇತ್ಯೇವಂ ಕೌಂಠರವ್ಯಶ್ರುತಾವಾಹ ಹಿ ॥ ೧೦ ॥ ॥ ೧ ॥**

**ಭಾಷ್ಯಾರ್ಥ ॥** (೧) ಮುಕ್ತರಿಗೆ ಚಿನ್ಮಾತ್ರ ಶರೀರ ಹೊರತು ಇತರವಾದ ಪ್ರಾಕೃತ ದೇಹವು ಇರುವುದಿಲ್ಲ (ಆದಕಾರಣ ದುಃಖಾದಿಗಳಿಗೆ ಪ್ರಸಕ್ತಿಯಿಲ್ಲ. ಮತ್ತೂ ಅವರಿಗೆ ಪ್ರಾಕೃತ ದೇಹವು ಇದೆಯೋ ಇಲ್ಲವೋ ಎನ್ನುವ ವಿಕಲ್ಪ ಮೂಲಕವಾದ ಭೋಗವು ಅನುಪಪನ್ನವಾಗುವುದಿಲ್ಲ. ಭೋಗವಾದರೂ ಪ್ರಾಕೃತ ಶರೀರವಿಲ್ಲವಾದರೂ ಚಿದಾತ್ಮಕ ಶರೀರವಿದ್ದುದರಿಂದಲೇ ಮುಕ್ತಿಯಲ್ಲಿ ಕೂಡುತ್ತದೆ.) ಎಂದು ಬಾದರಿ ಆಚಾರ್ಯರು (ಶುಕಾಚಾರ್ಯರು) ತಿಳಿಯುತ್ತಾರೆ. (೨) (ಮುಕ್ತನಿಗೆ ಬಾಹ್ಯದೇಹಾಭಾವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ಎಂದರೆ) ಮುಕ್ತಿಕಾಲದಲ್ಲಿ ಮುಕ್ತನು ಪ್ರಾಕೃತದೇಹರಹಿತನೇ ಆಗುತ್ತಾನೆ. ಯಾವ ಪ್ರಿಯ (ಪ್ರಾಕೃತ ಸುಖ) ಅಪ್ರಿಯಗಳಿಂದ ಈ ಜೀವನು ಸಂಸಾರದಶೆಯಲ್ಲಿ ಪೀಡಿಸಿಕೊಳ್ಳಲ್ಪಡುತ್ತಾನೋ, ಅಂತಹ ವೈಷಯಿಕ ಸುಖದುಃಖಗಳು ಮುಕ್ತಿದಶೆಯಲ್ಲಿ ಶರೀರರಹಿತನಾದ ಆ ಮುಕ್ತನನ್ನು ಮುಟ್ಟುವುದಿಲ್ಲ ಎನ್ನುವ ಕೌಂಠರವ್ಯಶ್ರುತಿಯಲ್ಲಿ ಮಂತ್ರದ್ರಷ್ಟನು ಮುಕ್ತರಿಗೆ ಪ್ರಾಕೃತ ಶರೀರಾಭಾವವನ್ನು ಹೇಳುತ್ತಾನೆ. ॥೧೦॥

**ಪೀಠಿಕೆ ॥** ಮುಕ್ತರಿಗೆ ದೇಹವದೆ ಎಂದಂಗೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭಾವಂ ಜೈಮಿನಿರ್ವಿಕಲ್ಪಾಮ್ನಾತ್ ಓಂ ॥ ೧೧ ॥

**ಸೂತ್ರಾರ್ಥ ॥** ಕದಾಚಿತ್ ಭೋಗಕ್ಕಾಗಿ ಮುಕ್ತರಿಗೆ ಚಿನ್ಮಾತ್ರ ದೇಹದಿಂದ ಅತಿರಿಕ್ತವಾದ ಶುದ್ಧಸತ್ವಾತ್ಮಕವಾದ ಪ್ರಾಕೃತ ದೇಹವು ಇದೆ ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ಚಿತಾವಾಽಚಿತಾ ವಾ ಎಂದು ಶ್ರುತಿಯಲ್ಲಿ ವಿಕಲ್ಪವನ್ನು ಹೇಳಿದ್ದರಿಂದ.

**ಭಾಷ್ಯ ॥ ಸ ವಾ ಏಷ ಏವಂವಿತ್ಪರಮಭಿಪಶ್ಯತ್ಯಭಿಶೃಣೋತಿ ಜ್ಯೋತಿಷೈವ ರೂಪೇಣ ಚಿತಾವಾಽಚಿತಾ ವಾ ನಿತ್ಯೇನ ವಾಽನಿತ್ಯೇನ ವಾಽಥಾನಂದೀ ಹ್ಯೇವೈಷ ಭವತಿ**

**ನಾನಾನಂದಂ ಕಂಚಿದುಪಸ್ಪೃಶತಿ । ಇತ್ಯೌದ್ದಾಲಕ (ಕಾಯನ) ಶ್ರುತೌ ವಿಕಲ್ಪಾಮ್ನಾನಾದನ್ಯದೇಹಸ್ಯಾಪಿ ಭಾವಂ ಜೈಮಿನಿರ್ಮನ್ಯತೇ ॥ ೧೧ ॥ ॥ ೨ ॥**

**ಭಾಷ್ಯಾರ್ಥ ॥** ಪರಮಾತ್ಮನನ್ನು ಹಿಂದೆ ಹೇಳಿದ ಪ್ರಕಾರ ಅಪರೋಕ್ಷವಾಗಿ ತಿಳಿದಿರತಕ್ಕ ಆ ಈ ಮುಕ್ತನು ನಿತ್ಯವಾದ ಅಪ್ರಾಕೃತ ಚೈತನ್ಯಾತ್ಮಕವಾದ ಅಥವಾ ಅನಿತ್ಯವಾದ ಶುದ್ಧಸತ್ವಾತ್ಮಕವಾದ ಕರ್ಮಾನಾರಬ್ಧವಾದ ಪ್ರಾಕೃತವಾದ ಜಡಾತ್ಮಕವಾದ, ಪ್ರಕಾಶಮಾನವಾದ ಜ್ಯೋತಿರ್ಮಯವಾದ ಶರೀರದಿಂದಲೇ ಸರ್ವವನ್ನು ನೋಡುತ್ತಾನೆ. ದರ್ಶನ ಶ್ರವಣಾದಿಗಳಿಂದ ಸರ್ವವಿಷಯಕ ಅನುಭವವುಳ್ಳವನಾಗುತ್ತಾನೆ. ಆದಾಗ್ಯೂ (ಅಂದರೆ ಚಿದಾತ್ಮಕವಲ್ಲದಿರುವ ಶರೀರದಿಂದ ಭೋಗವುಳ್ಳವನಾದಾಗ್ಯೂ) ಈ ಮುಕ್ತನು ಆನಂದ (ಅಭಿವ್ಯಕ್ತಸುಖ)ವುಳ್ಳವನೇ ಆಗುತ್ತಾನೆ. (ದುಃಖವುಳ್ಳವನು ಆಗುವುದೇ ಇಲ್ಲ) ಆನಂದವಿರುದ್ಧವಾದ ದುಃಖವು ಯಾವ ಮುಕ್ತನನ್ನೂ ಮುಟ್ಟುವುದೇ ಇಲ್ಲ. ಅಂದರೆ ಮುಕ್ತನಿಗೆ ದುಃಖ ಲೇಶವೂ ಇಲ್ಲ. ಅಥವಾ ಮುಕ್ತನು ಯಾವುದೊಂದು ವಿಧವಾದ ದುಃಖವನ್ನು ಅನುಭವಿಸುವುದೇ ಇಲ್ಲ. ಎಂದು ಉದ್ದಾಲಕ ಶ್ರುತಿಯಲ್ಲಿ **ಚಿತಾ ವಾ ಅಚಿತಾ ವಾ** ಎಂದು ಎರಡು ವಿಧವಾದ ದೇಹಗಳನ್ನು ಹೇಳಿದ್ದರಿಂದ ಚಿನ್ಮಾತ್ರವಲ್ಲದ ಪ್ರಾಕೃತ ದೇಹಕ್ಕೂ ಸದ್ಭಾವವನ್ನು ಅಂದರೆ ಭೋಗಾರ್ಥವಾಗಿ ಇಚ್ಛೆಯಿಂದ ಶುದ್ಧಸತ್ವಾತ್ಮಕ ಪ್ರಾಕೃತ ಶರೀರವನ್ನು ಸ್ವೀಕರಿಸುತ್ತಾರೆ ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ॥ ೧೧ ॥ ॥ ೨ ॥

**ಪೀಠಿಕೆ ॥** ಈ ಎರಡು ಮತಗಳೂ ಪರಸ್ಪರ ವಿರುದ್ಧಗಳಾದಪ್ರಯುಕ್ತ ವೇದವ್ಯಾಸರ ಮತವು ಯಾವುದು ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ಓಂ ॥ ೧೨ ॥

**ಸೂತ್ರಾರ್ಥ ॥** ಮುಕ್ತರಿಗೆ ದೇಹವಿದೆ ದೇಹವಿಲ್ಲ ಎನ್ನುವ ಹಿಂದೆ ಹೇಳಿದ ಎರಡು ವಿಧವನ್ನೂ ವೇದವ್ಯಾಸರು ತನ್ನ ಮತವನ್ನಾಗಿ ತಿಳಿಯುತ್ತಾರೆ. (ಎರಡೂ ಪ್ರಾಮಾಣಿಕಗಳಾಗಿವೆ.) (ವಿರುದ್ಧವಾದುದೂ ತನ್ನ ಮತವು ಹೇಗೆ ಆಗುವುದೆಂದರೆ) ದ್ವಾದಶಾಹಾಖ್ಯ ಯಾಗಕ್ಕೆ ಕ್ರತುತ್ವವೂ ಸತ್ರತ್ವವೂ ಯಜಮಾನನ ಇಚ್ಛೆಯಿಂದ ಒಬ್ಬ ಯಜಮಾನ ಅನೇಕ ಯಜಮಾನರು ಉಳ್ಳತನದಿಂದ ಹೇಗೆ ವಿರುದ್ಧವಲ್ಲವೋ, ಹಾಗೆಯೇ ಮುಕ್ತರಿಗೆ ಸ್ವೇಚ್ಛೆಯಿಂದ ದೇಹಸದ್ಭಾವ ದೇಹವಿಲ್ಲದಿರುವಿಕೆ ಇವುಗಳು ವಿರುದ್ಧಗಳಲ್ಲ.

**ಭಾಷ್ಯ ॥ ಯಥಾ ದ್ವಾದಶಾಹಃ ಕ್ರತ್ವಾತ್ಮಕಃ ಸತ್ರಾತ್ಮಕಶ್ಚ ಭವತಿ । ಏವಂ ಮುಕ್ತಭೋಗೋ ಬಾಹ್ಯಶರೀರಕೃತಶ್ಚಿನ್ಮಾತ್ರಕೃತಶ್ಚ ಭವತಿ । ಇತಿ ಬಾದರಾಯಣೋ ಮನ್ಯತೇ ॥ ೧೨ ॥ ॥ ೩ ॥**

**ಭಾಷ್ಯಾರ್ಥ ॥** ಹೇಗೆ ದ್ವಾದಶಾಹ ಎಂದು ಪ್ರಸಿದ್ಧವಾದ ಯಾಗವು ಕ್ರತ್ವಾತ್ಮಕವೂ ಸತ್ರಾತ್ಮಕವೂ ಆಗುತ್ತದೋ, (ಯಜಮಾನನ ಇಚ್ಛೆಯಿಂದ ಒಬ್ಬ ಯಜಮಾನನಾದರೆ ಕ್ರತುತ್ವವೂ ಅನೇಕ

ಯಜಮಾನರಾದರೆ ಸತ್ರತ್ವವೂ ಕೂಡುವುದಿಲ್ಲ.) ಹೀಗೆಯೇ ಮುಕ್ತಭೋಗವೂ ಮುಕ್ತರ ಇಚ್ಛಾನುಸಾರವಾಗಿ ಪ್ರಾಕೃತ ದೇಹ ನಿಮಿತ್ತವೂ ಸ್ವರೂಪದೇಹಕೃತವೂ ಆಗುತ್ತದೆ. (ಎರಡು ವಿಷಯದಲ್ಲಿಯೂ ಪ್ರಮಾಣವದೆ. ಆದಕಾರಣ ದೇಹವದೆ ದೇಹವಿಲ್ಲವೆನ್ನುವ ಎರಡು ವಿಧವನ್ನೂ ತನ್ನ ಮತವನ್ನಾಗಿಯೇ ವೇದವ್ಯಾಸರು ತಿಳಿಯುತ್ತಾರೆ.)

**ವಿಶೇಷಾಂಶ ॥** ದ್ವಾದಶಾಹ ಯಾಗವು ಸತ್ರ ಅಹೀನ ಎಂದು ಎರಡು ವಿಧವು. **ಶ್ರೇಷ್ಠಯಜ್ಞೋ ವಾ ಏಷ ಯದ್ದ್ವಾದಶಾಹಃ** ಎನ್ನುವ ಶ್ರುತಿಯಿಂದ ಕ್ರತು ಶಬ್ದದಿಂದ ಅಹೀನವು ವಿವಕ್ಷಿತವಾಗಿದೆ. ಆದರಲ್ಲಿ ಹನ್ನೊಂದು ದಿನ ಪರ್ಯಂತ ಅಹರ್ಗಣಗಳು ಅಹೀನಗಳೇ. ಹದಿಮೂರನೇ ದಿನಾದಿಗಳು ಸತ್ರವೆನ್ನಿಸುತ್ತವೆ. ಮಧ್ಯಮವಾದ ದ್ವಾದಶಾಹವಾದರೂ ಯಜಮಾನನ ಇಚ್ಛೆಯಿಂದ ಒಬ್ಬ ಯಜಮಾನನಾದರೆ ಅಹೀನ ಎಂದು ಹೆಸರು. ಅನೇಕ ಯಜಮಾನರಾದರೆ ಸತ್ರ ಎಂದು ಹೆಸರು. ಹೀಗಾದರೆ ಅಹೀನಾತ್ಮಕಃ ಸತ್ರಾತ್ಮಾಕಃ ಎಂದು ಹೇಳಬೇಕಾದ ಕ್ರತುವಿಶೇಷವಾದ ಅಹೀನದಲ್ಲಿ ಕ್ರತುಪ್ರಯೋಗವು ಕುರುಪಾಂಡವ ನ್ಯಾಯದಿಂದ. ಅಂದರೆ, ಅಹೀನೈಕಾಹಗಳಲ್ಲಿ ಶ್ರೇಷ್ಠವಾದ ಪ್ರಯುಕ್ತ ಏವಂಚ ಕ್ರತುತ್ವವು ವ್ಯಾಪಕ ಧರ್ಮವು ಅಹೀನತ್ವವು ವ್ಯಾಪ್ಯಧರ್ಮವು. ಹೀಗೆ ಪ್ರಾಚೀನ ಗ್ರಂಥದಲ್ಲಿ ಹೇಳಿದ ವಿಶೇಷವನ್ನು ತಿಳಿಯಬೇಕು. ॥೧೨॥ ॥೩॥

**ಪೀಠಿಕೆ ॥** ದೇಹಭಾವ ಅಭಾವಗಳಿಗೆ ಅವಿರೋಧವಿರಲಿ. ಆದಾಗ್ಯೂ ಭೋಗವು ಹೇಗೆ ಕೂಡುತ್ತದೆ. ದೇಹವಿದ್ದರೆ ದುಃಖಾದಿಗಳು ಬರಬೇಕಾಗುವುವು. ದೇಹವಿಲ್ಲವಾದರೆ ಭೋಗವು ಕೂಡಲಾರದು, ಎಂದು ಅನುಪಪತ್ತಿಯು ಬಂದರೆ ಆದನ್ನು ಪರಿಹರಿಸುತ್ತಾರೆ—

**ಭಾಷ್ಯ ॥ ಉಪಪತ್ತಿಶ್ಚ** ॥ ೪ ॥

**ಭಾಷ್ಯಾರ್ಥ ॥** ಎರಡು ಪಕ್ಷಗಳಲ್ಲಿಯೂ ಭೋಗಕ್ಕೆ ಯುಕ್ತತ್ವವೇ. (ಭೋಗವು ಉಪಪನ್ನವೇ ಆಗುತ್ತದೆ.) ॥೪॥

**ಪೀಠಿಕೆ ॥** ಹೇಗೆ ಉಪಪತ್ತಿಯು, ಎಂಬ ಅಶಂಕೆಯನ್ನು ಪರಿಹರಿಸುವುದಕ್ಕೋಸ್ಕರ ದೇಹವು ಇಲ್ಲವಾದರೂ ಭೋಗವು ಕೂಡುತ್ತದೆ ಎಂದು ಪ್ರತಿಪಾದಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ ॥ ೧೩ ॥

**ಸೂತ್ರಾರ್ಥ ॥** ದೇಹವಿಲ್ಲವಾದರೂ ಭೋಗಾನುಪಪತ್ತಿಯಿಲ್ಲ. ಹೇಗೆ ಸ್ವಪ್ನಾವಸ್ಥೆಯಲ್ಲಿ ದೇಹಾಭಿಮಾನವಿಲ್ಲವಾದರೂ ಭೋಗವು ದೃಷ್ಟವಾಗಿಯದೋ, ಹಾಗೆಯೇ ಮುಕ್ತಿಯಲ್ಲಿ ಬಾಹ್ಯ ದೇಹವು ಇಲ್ಲವಾದರೂ ಭೋಗವು ಕೂಡುವುದಿರಂದ.

**ಭಾಷ್ಯ ॥ ಸಂಧ್ಯಂ ಸ್ವಪ್ನಃ। ಸಂಧ್ಯಂ ತೃತೀಯಂ ಸ್ವಪ್ನಸ್ಥಾನಂ (ಬೃ.೬.೩.೯.)। ಇತಿ ಶ್ರುತೇಃ ॥ ೧೩ ॥** ॥ ೫ ॥

ಭಾಷ್ಯಾರ್ಥ ॥ ಜಾಗ್ರತ್ಸುಷುಪ್ತಿಗಳ ಸಂಧಿಯಲ್ಲಿ ಹುಟ್ಟಿರತಕ್ಕ ಸಂಧ್ಯವು ಸ್ವಪ್ನವು. ಜಾಗ್ರತ್ಸುಷುಪ್ತ್ಯಪೇಕ್ಷೆಯಿಂದ ಮೂರನೇದ್ದಾದ ಸ್ವಪ್ನಾವಸ್ಥಾಖ್ಯವಾದ ಸ್ಥಾನವು ಜಾಗ್ರತ್ ಸುಷುಪ್ತಿಗಳ ಸಂಧಿಯಲ್ಲಿ ಹುಟ್ಟಿದ್ದು ಎನ್ನುವ ಶ್ರುತಿಯಿದ. (ಯದ್ಯಪಿ ಸ್ವಪ್ನಾವಸ್ಥೆಯಲ್ಲಿ ಬಾಹ್ಯ ದೇಹವು ಇದ್ದೇ ಇದೆ. ಆದಾಗ್ಯೂ ದೇಹದಲ್ಲಿ ಅಭಿಮಾನವಿಲ್ಲದಿರುವುದರಿಂದ ದೇಹ ಇಲ್ಲವೆಂದು ವ್ಯವಹಾರವು.) ॥ ೧೩ ॥ ॥ ೫ ॥

ಪೀಠಿಕೆ ॥ ದೇಹವಿದ್ದರೆ ಸುತರಾಂ ಭೋಗವು ಕೂಡುತ್ತದೆ, ಎನ್ನುವ ಅಭಿಪ್ರಾಯದಿಂದ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭಾವೇ ಜಾಗ್ರದ್ವತ್ ಓಂ ॥ ೧೪ ॥

ಸೂತ್ರಾರ್ಥ ॥ ಹೇಗೆ ಜಾಗ್ರದ್ದಶೆಯಲ್ಲಿ ದೇಹವಿದ್ದರೆ ಭೋಗವೋ, ಹಾಗೆಯೇ ಮುಕ್ತಿಯಲ್ಲಿಯೂ ದೇಹವಿದ್ದರೆ ಭೋಗವು ಯುಕ್ತವು.

ಪೀಠಿಕೆ ॥ ದೇಹವಿಲ್ಲವಾದರೆ ಸ್ವಪ್ನದಂತೆಯೂ, ದೇಹವಿದ್ದರೆ ಜಾಗ್ರದವಸ್ಥೆಯಂತೆಯೂ ಭೋಗವು ಎನ್ನುವ ಯಾವುದರಿಂದ ಸಿದ್ಧವಾಗುತ್ತದೆ, ಎಂದರೆ ಪೂರ್ವಸೂತ್ರಸಹಿತವಾದ ಈ ಸೂತ್ರಾರ್ಥದಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

**ಭಾಷ್ಯ ॥ ಬ್ರಹ್ಮವೈವರ್ತೇ ಚ । ಸ್ವಪ್ನಸ್ಥಾನಾಂ ಯಥಾ ಭೋಗೋ ವಿನಾ ದೇಹೇನ ಯುಜ್ಯತೇ । ಏವಂ ಮುಕ್ತಾವಪಿ ಭವೇದ್ವಿನಾ ದೇಹೇನ ಭೋಜನಂ ॥ ಸ್ವೇಚ್ಛಯಾವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್ । ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ ॥ ಇತಿ ॥ ೧೪ ॥ ॥ ೬ ॥**

ಭಾಷ್ಯಾರ್ಥ ॥ ಹೇಗೆ ಸ್ವಪ್ನಾವಸ್ಥೆಯನ್ನು ಹೊಂದಿದವರಿಗೆ ದೇಹಾಭಿಮಾನವಿಲ್ಲವಾದರೂ ಪ್ರಾಕೃತ ಶರೀರದಿಂದ ಭೋಗವು ಕೂಡುತ್ತದೋ, ಹೀಗೆಯೇ ಮುಕ್ತಿಯಲ್ಲಿಯೂ ದೇಹವಿಲ್ಲದೆ ಭೋಗವು ಕೂಡುವುದು. ಸ್ವೇಚ್ಛೆಯಿಂದಲೇ ಕೆಲವು ತೇಜೋರೂಪಗಳಾದ ಪ್ರಾಕೃತಗಳಾದ ಶರೀರಗಳನ್ನು ಸ್ವೀಕರಿಸಿ ಜಾಗರಾವಸ್ಥೆಯಂತೆ ಭೋಗಿಸಿ ಭೋಗಾನಂತರದಲ್ಲಿ ಪರಿತ್ಯಾಗವು. ಹೀಗೆ ಬ್ರಹ್ಮವೈವರ್ತದಲ್ಲಿ ಹೇಳಿದೆ.

ವಿಶೇಷಾಂಶ ॥ ಸೂಕ್ಷ್ಮವಾದ ಸ್ವರೂಪದೇಹಕ್ಕೇನೇ ಮುಕ್ತಿಯಲ್ಲಿ ಈಶ್ವರನ ಶಕ್ತಿಯಿಂದ ವೃದ್ಧಿಯನ್ನು ಅಂಗೀಕರಿಸಿ ಭೋಗವು. **ಅಲ್ಪಂ ತೇಜಃ ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ । ತಥಾ ಚ ಸುಮಹತ್ತೇಜಃ ಕರೋತಿ ಭಗವಾನ್ ಮಹತ್ ॥ ಅತೋ ನವತರಂ ಚೈತತ್ ಬ್ರಹ್ಮಾದೀನಾಂ ಕರೋತ್ಯಜಃ** ॥ ಎಂದು ಬೃಹದ್ಭಾಷ್ಯದಲ್ಲಿ ಹೇಳಿದೆ. ॥೧೪॥ ॥೬॥

ಪೀಠಿಕೆ ॥ ದೇಹವಿದ್ದರೆ ಭೋಗವು ಕೂಡಿದರೂ ದುಃಖಭೋಗವೂ ಬಂದೇ ಬರುವುದು, ಎಂದು ಹಿಂದೆಯೇ ಹೇಳಿಯದೆ ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ಓಂ ॥ ೧೫ ॥

**ಸೂತ್ರಾರ್ಥ ॥** ಮುಕ್ತರಿಗೆ ಶುದ್ಧಪ್ರಕೃತಿಮಯವಾದ ಜ್ಯೋತೀರೂಪವಾದ ಬಾಹ್ಯದೇಹ ಪ್ರವೇಶವು ದೀಪಕ್ಕಾಗಿ ದೀಪಿಕಾದಲ್ಲಿ (ಬತ್ತಿಯಲ್ಲಿ) ಪ್ರವೇಶದಂತೆ. (ಅಂದರೆ ಹೇಗೆ ಪ್ರದೀಪವು ದೀಪಿಕಾದಲ್ಲಿ (ದೀಪ ಪಾತ್ರದಲ್ಲಿರತಕ್ಕ ಬತ್ತಿಯಲ್ಲಿ) ಆವಿಷ್ಟವಾಗಿ ಅದರಲ್ಲಿತಕ್ಕ ತೈಲ ಮೊದಲಾದ ಒಳ್ಳೇ ಪದಾರ್ಥಗಳನ್ನೇ ಸ್ವೀಕರಿಸುತ್ತದೋ, ದೋಷರೂಪಗಳಾದ ಕಾಷ್ಠ್ಯಾದಿಗಳನ್ನು ಸ್ವೀಕರಿಸುವು ದಿಲ್ಲವೋ, ಹಾಗೆಯೇ ಮುಕ್ತನು ಜಡದೇಹವನ್ನು ಪ್ರವೇಶಮಾಡಿದನಾದಾಗ್ಯೂ ದುಃಖವನ್ನು ಹೊಂದುವುದೇ ಇಲ್ಲ. ಸುಖವನ್ನೇ ಅನುಭವಿಸುತ್ತಾನೆ. **ತೀರ್ಣೋ ಹಿ ತದಾ ಸರ್ವಾನ್ ಶೋಕಾನ್** ಎನ್ನುವ ಶ್ರುತಿಯು ಮುಕ್ತಿಯಲ್ಲಿ ದುಃಖಲೇಶವೂ ಇಲ್ಲ ಎಂದು ತೋರಿಸುತ್ತದೆ. ಹೇಗೆ ದೀಪವು ದೀಪಿಕೆಯನ್ನು (ಬತ್ತಿಯನ್ನು) ಪ್ರವೇಶಮಾಡಿ ಪ್ರಕಾಶಪಡಿಸುವಂಥಾದ್ದಾಗಿಯೇ ತೈಲಾದಿಗಳನ್ನು ಸ್ವೀಕರಿಸುತ್ತದೋ, ಹಾಗೆಯೇ ಮುಕ್ತನು ಜಡದೇಹವನ್ನು ಪ್ರಕಾಶಿಸುವವನಾಗಿಯೇ ಸುಖವನ್ನು ಅನುಭವಿಸುತ್ತಾನೆ. ಸರ್ವಥಾ ದೇಹಧರ್ಮದಿಂದ ಸಂಬಂಧ್ಧನಾಗುವುದಿಲ್ಲ ಎಂದು ತೋರಿಸುವುದ ಕ್ಕಾಗಿ ಪ್ರದೀಪದೃಷ್ಟಾಂತವನ್ನು ಹೇಳಿದ್ದು.)

**ಭಾಷ್ಯ ॥ (೧) ಶರೀರಮನುವಿಶ್ಯಾಪಿ ತತ್ಪ್ರಕಾಶಯಂತಃ ಪುಣ್ಯಾನೇವ ಭೋಗಾನನುಭವಂತಿ ನ ತು ದುಃಖಾದೀನ್ । ಯಥಾ ಪ್ರದೀಪೋ ದೀಪಿಕಾದಿಷು ಪ್ರವಿಷ್ಟಸ್ತತ್ಸ್ಥಂ ತೈಲಾದ್ಯೇವ ಭುಂಕ್ತೇ ನ ತು ಕಾಷ್ಠ್ಯಾದಿ। (೨) *ತೀರ್ಣೋ ಹಿ ತದಾ ಸರ್ವಾಂಛೋಕಾನ್ ಹೃದಯಸ್ಯ ಭವತಿ (ಬೃ.೬.೩.೨೨) ಇತಿ ಹಿ ದರ್ಶಯತಿ ॥ ೭ ॥**

**ಭಾಷ್ಯಾರ್ಥ ॥** (೧) ಮುಕ್ತರು ಶುದ್ಧ ಪ್ರಕೃತಿಮಯವಾದ ಜ್ಯೋತೀರೂಪವಾದ ಜಡಶರೀರ ವನ್ನು ಇಚ್ಛಾನುಸಾರವಾಗಿ ಪ್ರವೇಶಮಾಡಿದರೂ ಅದರಲ್ಲಿ ಅಭಿಮಾನವಿಲ್ಲದಿರುವುದರಿಂದ ದುಃಖ ಮೊದಲಾದವುಗಳನ್ನು ಅನುಭವಿಸುವುದೇ ಇಲ್ಲ. ಮತ್ತೆ ಆ ಶರೀರವನ್ನು ಚಿತ್ಸ್ವರೂಪದಿಂದ ಪೃಥಕ್ಕರಿಸುತ್ತಾ ತಮ್ಮ ಜ್ಯೋತಿಸ್ಸಿನಿಂದ ಪ್ರಕಾಶಪಡಿಸುವವರಾಗಿ ಪುಣ್ಯಸಾಧ್ಯಗಳಾದ ಭೋಗ್ಯಗಳನ್ನೇ ಅನುಭವಿಸುತ್ತಾರೆ. ಪಾಪಸಾಧ್ಯಗಳಾದ ಅಸಾಧುಗಳಾದ ದುಃಖ ಅಸಹ್ಯ ವಿಷಯಾದಿಗಳನ್ನು ಅನುಭವಿಸುವುದಿಲ್ಲ. ಹೇಗೆ ಪ್ರದೀಪವು ದೀಪಪಾತ್ರದಲ್ಲಿರತಕ್ಕ ಬತ್ತಿ ಮೊದಲಾದವುಗಳಲ್ಲಿ ಪ್ರವಿಷ್ಟವಾದುದಾಗಿ ಅವುಗಳನ್ನು ಪ್ರಕಾಶಪಡಿಸುತ್ತಾ ಬತ್ತಿಯಲ್ಲಿರತಕ್ಕ ತೈಲ ಘೃತ ಮೋದಲಾದವುಗಳನ್ನೇ ಸ್ವೀಕರಿಸುತ್ತದೆ. ಅದರಲ್ಲಿತಕ್ಕ ಪ್ರಕಾಶಕ್ಕೆ ವಿರೋಧಗಳಾದ ಮಾಲಿನ್ಯ, ಧೂಳಿ ಮೊದಲಾದವುಗಳನ್ನು ಸ್ವೀಕರಿಸುವುದಿಲ್ಲ. (ಅಂದರೆ, ಮಾಲಿನ್ಯಾದಿಗಳಿಂದ ಯುಕ್ತವಾದ ತೈಲಾದಿಗಳಿಂದ ಸಂಬದ್ಧವಾದ ಘನೀಭೂತವಾದ ರಜೋಭಾಗವನ್ನು ಸ್ವೀಕರಿಸುವುದಿಲ್ಲ.) ಹಾಗೆಯೇ ಮುಕ್ತರೂ ಅಂತಹ ಜಡಶರೀರವನ್ನು ಪ್ರಕಾಶಪಡಿಸುವವರಾಗಿ ಭೋಗ್ಯಗಳಾದ ಸುಖಾದಿ ಗುಣಗಳನ್ನೇ ಅನುಭವಿಸುತ್ತಾರೆ.

---

* ಈ ಶ್ರುತಿಯು ಹಾನ್ಯಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ತನ್ನಿಮಿತ್ತಕವಾದ ದುಃಖಾದಿಗಳನ್ನು ಅನುಭವಿಸುವುದೇ ಇಲ್ಲ (೨) (ಶರೀರವಿದ್ದರೆ ಮುಕ್ತನಿಗೆ ದುಃಖಾಭಾವವು ಹೇಗೆ. ದೃಷ್ಟಾಂತ ಮಾತ್ರವು ಸಾಧಕವಾಗದಿರುವುದರಿಂದ ಶ್ರುತಿಗೆ ಅರ್ಥಾಂತರ ಪರತ್ವವೂ ಹೇಗೆ ಎಂದರೆ) ಮುಕ್ತಿಯಲ್ಲಿ ಸರ್ವದುಃಖಗಳನ್ನು ದಾಟಿದವನಾಗಿ ಶ್ರೀಹರಿಗೆ ದಾಸನಾಗಿರುತ್ತಾನೆ, ಎನ್ನುವ ಶ್ರುತಿಯು ಈ ವಿಷಯವನ್ನು ಸ್ಪಷ್ಟವಾಗಿ ತೋರಿಸುತ್ತದೆ.

**ವಿಶೇಷಾಂಶ ||** ತಥಾಚ ದೇಹವದೆ ಎನ್ನುವುದು **ಚಿತಾ ವಾ ಅಚಿತಾ ವಾ** ಇತ್ಯಾದಿ ಶ್ರುತಿಸಿದ್ಧವಾಗಿದೆ. ಮುಕ್ತನಿಗೆ ದುಃಖವಿಲ್ಲ ಎನ್ನುವ ವಿಷಯದಲ್ಲಿಯೂ **ತೀರ್ಣೋ ಹಿ** ಇತ್ಯಾದಿ ಶ್ರುತಿಗಳು ಇವೆ. ಆದಪ್ರಯುಕ್ತ ದೇಹಮಾತ್ರವು ದುಃಖಹೇತುವಲ್ಲ. ಆದಕಾರಣ ದೇಹವಿದ್ದರೆ ದುಃಖಾದಿಗಳು ಬರಬೇಕಾಗುವುವು ಎಂದು ಆಪಾದಿಸಿದ್ದು ಪ್ರಮಾಣಗಳಿಂದ ಬಾಧಿತವಾದ ಪ್ರಯುಕ್ತ ಅಯುಕ್ತವೇ, ಸ ಹ ವೈ ಸಶೀರಸ್ಯ ಎನ್ನುವ ಶ್ರುತಿಯಾದರೂ ಕರ್ಮಾರಬ್ಧ ದೇಹವಿಷಯಕವು. ||೭||

**ಪೀಠಿಕೆ || ತೀರ್ಣೋ ಹಿ** ಎನ್ನುವ ವಾಕ್ಯವು ಸ್ವರ್ಗಾದಿ ವಿಷಯಕವೆಂದು ಏಕೆ ಆಗಲಾರದು. **ಸ್ವರ್ಗೇ ಲೋಕೇ ನ ಭಯಂ** ಇತ್ಯಾದಿಗಳಿಂದ ಸ್ವರ್ಗಾದಿ ಲೋಕಗಳಲ್ಲಿದ್ದವನಿಗೂ ದುಃಖಾದಿಗಳು ಇಲ್ಲವೆಂದು ಸಿದ್ಧಿಸುತ್ತದೆ ಎಂಬ ಆಶಂಕೆಯನ್ನು ಪರಿಹರಿಸುತ್ತಾರೆ—

**ಭಾಷ್ಯ || (೧) ನ ಚ ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ** (ಕಠ ೧.೧೨)**| ಇತ್ಯಾದಿನಾ ಸ್ವರ್ಗಾದಿಷ್ವಸ್ಯೈವ ತದಿತಿ ವಾಚ್ಯಂ || ೧೫ || (೨) ಯತಃ || ೮ ||**

**ಭಾಷ್ಯಾರ್ಥ ||** (೧) (ಕಾಠಕದಲ್ಲಿ ಯಮನನ್ನು ಕುರಿತು ನಚಿಕೇತ ಋಷಿಗಳನರ ವಾಕ್ಯವಿದು.) ಸ್ವರ್ಗಲೋಕದಲ್ಲಿ ಅಲ್ಪವಾದ ಯಾವುದೊಂದು ಭಯವೂ ಇಲ್ಲ. ಇದು ಮೊದಲಾದ (**ನ ತತ್ರ ತ್ವಂ ನ ಜರಯಾ ಬಿಭೇತಿ | ಉಭೇ ತೀರ್ತ್ವಾ ಅಶನಾಯಾಪಿಪಾಸೇ ಶೋಕಾತಿಗೋ ಮೋದತೇ ಸ್ವರ್ಗಲೋಕೇ**) ಕಾಠಕ ವಾಕ್ಯದಿಂದ (ಸ್ವರ್ಗದಲ್ಲಿ ದುಃಖವಿಲ್ಲವೆಂದು ಸಿದ್ಧಿಸುವುದರಿಂದ) ಸ್ವರ್ಗ ಮೊದಲಾದ ಪುಣ್ಯಲೋಕಗಳಲ್ಲಿದ್ದವನಿಗೆ ಶೋಕತರಣವು ಅಥವಾ **ತೀರ್ಣೋ ಹಿ** ಎನ್ನುವ ವಾಕ್ಯವು ಸ್ವರ್ಗದಲ್ಲಿರತಕ್ಕವನಿಗೇನೇ ದುಃಖವಿಲ್ಲವೆಂದು ಹೇಳುತ್ತದೆ. ಮುಕ್ತನಿಗೆ ಅಲ್ಲ ಎಂದು ಹೇಳಕೂಡದು. (೨) (ದುಃಖಾದಿರಾಹಿತ್ಯವನ್ನು ಏಕೆ ಹೇಳಕೂಡದು ಎಂದು ಪ್ರಶ್ನಿಸುತ್ತಾರೆ.) ಏಕೆ ಎಂದರೆ ||೧೫|| ||೮||

## ಸೂತ್ರ || ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ಓಂ || ೧೬ ||

**ಸೂತ್ರಾರ್ಥ || ತೀರ್ಣೋ ಹಿ** ಎನ್ನುವ ವಾಕ್ಯವು ಸುಪ್ತಿ ಮುಕ್ತಿ ಉಭಯಪರವು. ಸ್ವರ್ಗವಿಷಯಕ ವಲ್ಲ. ಏಕೆಂದರೆ, ಈ ವಾಕ್ಯಕ್ಕೆ ಉಭಯ ವಿಷಯಕತ್ವವೂ ಸ್ಪಷ್ಟವಾಗಿದೆ. **ಅತ್ರ ಪಿತಾಽಪಿತಾ ಭವತಿ,** ಇತ್ಯಾದಿಗಳಿಂದ ಅಪಿತೃತ್ವ, ಪುಣ್ಯಪಾಪಾದ್ಯಸಂಗತ್ವ ರೂಪವಾದ ಮುಕ್ತಲಿಂಗವು ಶ್ರುತವಾದುದರಿಂದ. ಪುಣ್ಯಸಾಧ್ಯಗಳಾದ ಶ್ರಾದ್ಧಾದಿಗಳನ್ನು ಭೋಗಿಸತಕ್ಕ ಸ್ವರ್ಗಲೋಕದಲ್ಲಿದ್ದವನಿಗೆ ಆ ಲಿಂಗವು ಕೂಡಲಾರದು.

**ಭಾಷ್ಯ || (೧) ಸುಪ್ತೌ ಮೋಕ್ಷೇ ವಾ ತದುಚ್ಯತೇ | (೨) ಅತ್ರ ಪಿತಾಽಪಿತಾ**

**ಭವತ್ಯನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ** (ಬೃ.೬.೩..೨೨)। **ಇತ್ಯಾದ್ಯಾವಿಷ್ಕೃತತ್ವಾತ್** ॥ ೯ ॥

**ಭಾಷ್ಯಾರ್ಥ** ॥ (೧) **ತೀರ್ಣೋ ಹಿ** ಎನ್ನುವ ವಾಕ್ಯದಲ್ಲಿ ಸುಪ್ತಿಯಲ್ಲಿಯಾಗಲೀ ಮೋಕ್ಷದಲ್ಲಿ ಆಗಲೀ ದುಃಖಾದಿರಾಹಿತ್ಯವು ಹೇಳಲ್ಪಡುತ್ತದೆ. ಸ್ವರ್ಗ ಮೊದಲಾದ ಪುಣ್ಯಲೋಕಗಳಲ್ಲಿ ಅಲ್ಲ. ಆದಕಾರಣ ಸ್ವರ್ಗಾದಿಗಳಲ್ಲಿದ್ದವನಿಗೇನೇ ದುಃಖಾದಿರಾಹಿತ್ಯವು ಹೇಳಲ್ಪಡುತ್ತದೆಂದು ಹೇಳಕೂಡದು. (೨) (ಈ ವಾಕ್ಯವು ಸುಪ್ತ್ಯಾದಿ ವಿಷಯಕವು ಹೇಗೆ ಆಗುವುದೆಂದರೆ) (**ಅತ್ರ ಪಿತಾ ಅಪಿತಾ ಭವತಿ ಮಾತಾ ಅಮಾತಾ ಲೋಕಾ ಅಲೋಕಾಃ ದೇವಾಃ ಅದೇವಾಃ—ಅನನ್ವಾಗತಂ ಪಾಪೇನ** ಎಂದು **ತೀರ್ಣೋ ಹಿ** ಎನ್ನುವ ವಾಕ್ಯದಿಂದ ಮೊದಲಿನದ್ದಾದ ಸಮಗ್ರವಾಕ್ಯವನ್ನು ಸಂಗ್ರಹಿಸುವುದಕ್ಕಾಗಿ ಆದ್ಯಂತ ವಾಕ್ಯವನ್ನು ಪ್ರತೀಕತ್ವೇನ ಗ್ರಹಣ ಮಾಡಿದ್ದು.) ತಥಾಚ ಮೋಕ್ಷದಲ್ಲಿ ಆಗಲೀ ಸುಪ್ತಿಯಲ್ಲಿ ಆಗಲೀ ಯಾರು ಮೊದಲು ಪಿತೃ (ತಂದೆಯು) ಎಂದು ಅಭಿಮತನೋ ಅವನು ಮಕ್ಕಳಿಗೆ ದಾಯ (ಪಿತ್ರಾರ್ಜಿತ ದ್ರವ್ಯಾಂಶ)ವನ್ನು ಕೊಡದಿರುವುದರಿಂದ **ಅಪಿತಾ** ಎನ್ನಿಸಿಕೊಳ್ಳುತ್ತಾನೆ. ತಾಯಿಯು ಮಕ್ಕಳ ದುಃಖದಿಂದ ದುಃಖಿತಳಾಗದೆ ಇರುವುದರಿಂದ **ಅಮಾತಾ** ಎನ್ನಿಸಿಕೊಳ್ಳುತ್ತಾಳೆ. ಇತ್ಯಾದಿ ಅಪಿತೃತ್ವ ಮೊದಲಾದ ಲಿಂಗವು ಶ್ರುತವಾದುದರಿಂದಲೂ ಅನಿಷ್ಟವಾದ ಪುಣ್ಯದಿಂದಲೂ ಪಾಪದಿಂದಲೂ ಈತನು ಸಂಬದ್ಧನಾಗುವುದಿಲ್ಲ ಎಂದು ಪುಣ್ಯ ಪಾಪಾಸಂಗತ್ವ ಲಿಂಗವು ಶ್ರುತವಾದುದರಿಂದಲೂ **ತೀರ್ಣೋ ಹಿ** ಎನ್ನುವ ವಾಕ್ಯವು ಸುಪ್ತ್ಯಾದಿ ವಿಷಯಕತ್ವವು ಸ್ಪಷ್ಟವಾಗಿ ತೋರಿದ್ದರಿಂದ ಅಥವಾ ಪ್ರಕಟೀಕರಿಸಲ್ಪಟ್ಟ ಪ್ರಯುಕ್ತ.

**ವಿಶೇಷಾಂಶ** ॥ **ತೇನಾಶ್ಲಿಷ್ಟಃ ಸ್ವಪುತ್ರಾಣಾಂ ದಾಯಾದಾನಾನ್ನ ವೈ ಪಿತಾ। ತೇಷಾಂ ದುಃಖಾದದುಃಖಿತ್ವಾನ್ನ ಮಾತಾ॥** ಇತ್ಯಾದಿ ಪ್ರಮಾಣಗಳಿಂದ ಹಿಂದೆ ಹೇಳಿದ ಶ್ರುತಿಗೆ ಅರ್ಥವನ್ನು ತಿಳಿಯತಕ್ಕುದು.

ಪೀಠಿಕೆ ॥ ಅಧಿಕರಣಾರ್ಥದಲ್ಲಿ ಸ್ಮೃತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ಬ್ರಹ್ಮವೈವರ್ತೇ ಚ । ಜ್ಯೋತಿರ್ಮಯೇಷು ದೇಹೇಷು ಸ್ವೇಚ್ಛಯಾ ವಿಶ್ವಮೋಕ್ಷಿಣಃ । ಭುಂಜತೇ ಸುಸುಖಾನ್ಯೇವ ನ ದುಃಖಾದೀನ್ ಕದಾಚನ ॥ ತೀರ್ಣಾ ಹಿ ಸರ್ವಶೋಕಾಂಸ್ತೇ ಪುಣ್ಯಪಾಪಾದಿವರ್ಜಿತಾಃ । (ನಿವೃತ್ತ ಸರ್ವದೋಷಾಸ್ತೇ ಪುಣ್ಯಪಾಪವಿವರ್ಜಿತಾಃ)। ಸರ್ವದೋಷನಿವೃತ್ತಾಸ್ತೇ ಗುಣಮಾತ್ರಸ್ವರೂಪಿಣಃ॥ ಇತಿ ॥ ೧೬ ॥ ಅಧಿ.೮ ॥** ॥ ೧೦ ॥

**ಭಾಷ್ಯಾರ್ಥ** ॥ ಎಲ್ಲಾ ಮುಕ್ತರೂ ಯಾವ ಕಾರಣದಿಂದ ಜ್ಞಾನ ಆನಂದ ಮೊದಲಾದ ಕೇವಲ ಗುಣಸ್ವರೂಪವುಳ್ಳವರೋ, ಸರ್ವ ಶೋಕಗಳನ್ನು ದಾಟದವರು ಆಗುತ್ತಾರೋ, ಅನಿಷ್ಟಗಳಾದ ಕಾಮ್ಯ ಪುಣ್ಯಪಾಪಾದಿಗಳಿಂದ ವಿರಹಿತರೂ ಆಗಿರುತ್ತಾರೋ, ಸರ್ವ ದೋಷಗಳಿಂದ ವಿರಹಿತರೂ ಆಗಿರುತ್ತಾರೋ ಇದಕಾರಣ ತಮ್ಮ ಇಚ್ಛೆಯಿಂದಲೇ ಗೃಹೀತಗಳಾದ ಜ್ಯೋತಿರ್ಮಯಗಳಾದ ಶುದ್ಧ ಸತ್ವಾತ್ಮಕಗಳಾದ ದೇಹಗಳಲ್ಲಿ ಪ್ರವೇಶಮಾಡಿ ದುಃಖಾಸಂಭಿನ್ನಗಳಾದ ಸುಖಾದಿಗಳನ್ನೇ ಭೋಗಿಸುತ್ತಾರೆ.

ಯಾವಾಗಲೂ ದುಃಖಾದಿಗಳನ್ನು ಭೋಗಿಸುವದೇ ಇಲ್ಲ ಎದು ಬ್ರಹ್ಮವೈವರ್ತದಲ್ಲಿ ಹೇಳಿಯದೆ. ॥೧೦॥ ॥೧೬॥

## ಅಧಿಕರಣ ಸಾರಾಂಶ

ಮುಕ್ತರಿಗೆ ಭೋಗವು ಕೂಡುವುದಿಲ್ಲವೋ ಕೂಡುತ್ತದೋ, ಅದಕ್ಕಾಗಿ ದೇಹವಿದೆ ದೇಹವಿಲ್ಲ ಎನ್ನುವ ಪಕ್ಷದಲ್ಲಿ ಭೋಗವನ್ನು ಉಪಪಾದಿಸಲಿಕ್ಕೆ ಅಶಕ್ಯವೋ ಶಕ್ಯವೋ, ಹಾಗೆಯೇ ಮುಕ್ತರಿಗೆ ದೇಹವಿದೆ ದೇಹವಿಲ್ಲ ಎನ್ನುವುದು ವಿರೋಧದಿಂದ ಅಯುಕತ್ತವೋ ಯುಕ್ತವೋ ಎಂದು ಸಂದೇಹವು. ಮುಕ್ತರಿಗೆ ದೇಹವಿದ್ದರೆ ದುಃಖಾದಿಗಳು ಪ್ರಸಕ್ತಗಳಾಗುವುದರಿಂದ ನಿರ್ದುಃಖವಾದ ಭೋಗವನ್ನು ಉಪಪಾದಿಸಲಿಕ್ಕೆ ಅಶಕ್ಯವು. ಮುಕ್ತರಿಗೆ ದೇಹವಿಲ್ಲವಾದರೆ ಭೋಗವೇ ಕೂಡಲಾರದು. **ಬ್ರಾಹ್ಮೇಣ** ಎನ್ನುವಲ್ಲಿ ಹೇಳಿದ ಪ್ರಕಾರ ಬ್ರಹ್ಮಸಂಬಂಧಿಯಾದ ಶರೀರದಿಂದ ಭೋಗವು ಯುಕ್ತವು ಎಂದು ಹೇಳಕೂಡದು. ಸಾಯುಜ್ಯ ರೂಪವಾದ ಮುಕ್ತಿಯನ್ನು ಹೊಂದಿದವರಿಗೆ ಬ್ರಾಹ್ಮ ಶರೀರದಿಂದ ಭೋಗವು ಕೂಡಿದರೂ ಇತರ ಮುಕ್ತರಿಗೆ ಅದು ಕೂಡಲಾರದು. ಸಾಯುಜ್ಯ ಮುಕ್ತಿಯನ್ನು ಹೊಂದದೆ ಇರುವ ಮುಕ್ತರಿಗೆ ಚಿದಾತ್ಮಕ ಶರೀರದಿಂದ ಭೋಗವು ಕೂಡಬಹುದೆಂದು ಹೇಳಕೂಡದು. ಸುಪ್ತ್ಯಾದಿಗಳಲ್ಲಿ ಚಿದಾತ್ಮಕ ಶರೀರವು ಇದ್ದಾಗ್ಯೂ ಅದಕ್ಕೆ ಭೋಗಾಯತನತ್ವವು ದೃಷ್ಟವಾಗಲಿಲ್ಲ ಆದಕಾರಣ ದೇಹವು ಇದ್ದರೂ ಇಲ್ಲದ್ದಿದರೂ ಭೋಗವನ್ನು ಉಪಪಾದಿಸಲಿಕ್ಕೆ ಸಾಧ್ಯವಿಲ್ಲದಿರುವುದರಿಂದ ಭೋಗವು ಕೂಡಲಾರದು. ಮತ್ತೂ ದೇಹವಿದೆ ದೇಹವಿಲ್ಲ ಎನ್ನುವ ಎರಡು ಪಕ್ಷಗಳು ವಿರುದ್ಧಗಳಾದ ಪ್ರಯುಕ್ತ ಅಯುಕ್ತಗಳೇ, ಎಂದು ಪೂರ್ವಪಕ್ಷವು ಬಂದರೆ, ಮುಕ್ತರಿಗೆ ಭೋಗವು ಯುಕ್ತವೇ ಆಗುವುದು. ಎರಡು ಪಕ್ಷಗಳಲ್ಲಿಯೂ ಭೋಗವು ಉಪಪಾದಿಸಲಿಕ್ಕೆ ಶಕ್ಯವೇ ಆಗಿದೆ. ಬಾಹ್ಯದೇಹವದೆ ಎನ್ನುವ ಕಲ್ಪದಲ್ಲಿ ಅದು ಜಡವಾದಾಗ್ಯೂ ಶುದ್ಧ ಸತ್ವಾತ್ಮಕ ತೇಜೋರೂಪವಾದುದರಿಂದ ದುಃಖಾದಿಗಳನ್ನು ಹೊಂದಿಸಿಕೊಡದೇ ಇರುವುದರಿಂದ ಅದರಿಂದ ಸುಖಾನುಭವ ಮಾತ್ರ ಇದೆ ಎಂದು ಉಪಪನ್ನವಾಗುತ್ತದೆ. ಪ್ರದೀಪವು ಹೇಗೆ ತೈಲಾದಿಗಳನ್ನೇ ಸ್ವೀಕರಿಸುತ್ತದೋ ಅದರಲ್ಲಿತ್ತಕ್ಕ ಮಾಲಿನ್ಯಾದಿಗಳನ್ನು ಸ್ವೀಕರಿಸುವುದಿಲ್ಲವೋ ಹಾಗೆಯೇ **ತೀರ್ಣೋ ಹಿ** ಎನ್ನುವ ಶ್ರುತಿಯಿಂದ ದುಃಖಾಭಾವವು ಸಿದ್ಧವಾಗುತ್ತದೆ. ದೇಹವು ಇಲ್ಲವೆನ್ನುವ ಪಕ್ಷದಲ್ಲಿಯೂ ಹೀಗೆ ಸ್ವಪ್ನಾವಸ್ಥೆಯಲ್ಲಿ ಬಾಹ್ಯ ದೇಹಾಭಿಮಾನವಿಲ್ಲವಾದರೂ ಭೋಗವದೆಯೋ ಹಾಗೆಯೇ ಮುಕ್ತಿಯಲ್ಲಿ ಬಾಹ್ಯ ದೇಹವಿಲ್ಲವಾದರೂ ಚಿದಾತ್ಮಕ ಶರೀರದಿಂದ ಭೋಗವು ಕೂಡುತ್ತದೆ. ದೇಹವಿದೆ ಇಲ್ಲವೆನ್ನುವ ಎರಡು ಪಕ್ಷಗಳು **ಚಿತಾ ವಾ ಅಚಿತಾ ವಾ, ಅಶರೀರೋ ವಾವ ತದಾ ಭವತಿ** ಇತ್ಯಾದಿ ಶ್ರುತಿಸಿದ್ಧಗಳಾಗಿವೆ. ದ್ವಾದಶಾಹ ಯಜ್ಞಕ್ಕೆ ಯಜಮಾನನ ಇಚ್ಛೆಯಿಂದ ಒಬ್ಬ ಯಜಮಾನನು ಆದರೆ ಅಹೀನತ್ವವೂ ಅನೇಕರು ಯಜಮಾನರಾದರೆ ಸತ್ರತ್ವವೂ ಇದ್ದಂತೆಯೇ ಮುಕ್ತರಿಗೆ ಸ್ವೇಚ್ಛೆಯಿಂದ ಬಾಹ್ಯ ದೇಹವಿರುವಿಕೆ, ಬಾಹ್ಯ ದೇಹವಿಲ್ಲದಿರುವಿಕೆ ಇವುಗಳಿಗೆ ವಿರೋಧವಿಲ್ಲದಿರುವುದರಿಂದ ಅವೆರಡೂ ಯುಕ್ತಗಳೇ ಆಗಿವೆ. **ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್ । ಸ್ವೀಕೃತ್ಯ ಜಾಗರಿತವತ್ ಭುಕ್ತ್ವಾ ತ್ಯಾಗಃ ಕದಾಚನ ॥** ಇತ್ಯಾದಿ ಸ್ಮೃತಿಗಳಿಂದ ಪೂರ್ವೋಕ್ತಾರ್ಥವು ಸಿದ್ಧವಾಗುತ್ತದೆ. ॥ಅಧಿ.೭॥

**ಅಭಾವಾಧಿಕರಣವು ಸಮಾಪ್ತವಾಯಿತು.**

# ೯ ಜಗದ್ವ್ಯಾಪಾರಾಧಿಕರಣವು

**ಪೀಠಿಕೆ** ॥ ಈ ಅಧಿಕರಣದಲ್ಲಿ ಪರಬ್ರಹ್ಮನನ್ನು ಹೊಂದಿರತಕ್ಕ ಮುಕ್ತರಿಗೆ ಭೋಗದಲ್ಲಿ ಇಯತ್ತಾವನ್ನು ಅಂದರೆ ಭೋಗವು ಇಷ್ಟೇ ಎಂದು ಸಮರ್ಥಿಸುತ್ತಾರೆ. ಮುಕ್ತರು ಜಗತ್ಸೃಷ್ಟಿ ಮೊದಲಾದ ಸರ್ವ ಕಾಮ್ಯ ವ್ಯಾಪಾರಗಳನ್ನು ಹೊಂದುತ್ತಾರೆ. **ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್** ಎನ್ನುವ ಶ್ರುತಿಯಿಂದ ಮುಕ್ತರಿಗೆ ಇಷ್ಟಗಳಾದ ಸಮಸ್ತ ಕಾಮಗಳೂ ಪ್ರಾಪ್ತಗಳಾಗುತ್ತವೆ, ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಜಗದ್ವ್ಯಾಪಾರವರ್ಜಂ ಓಂ ॥ ೧೭ ॥

**ಸೂತ್ರಾರ್ಥ** ॥ ಮುಕ್ತರು ಸೃಷ್ಟಿ ಮೊದಲಾದ ಜಗದ್ವ್ಯಾಪಾರಗಳನ್ನು ಬಿಟ್ಟು ನಿಖಿಲ ಇಷ್ಟಗಳನ್ನು ಹೊಂದುತ್ತಾರೆ. ಸರ್ವಾನ್ ಕಾಮಾನಾಪ್ತ್ವಾ ಎನ್ನುವ ಶ್ರುತಿಯಿಂದ ಸೃಷ್ಟ್ಯಾದಿ ಕಾಮಗಳನ್ನು ಆದರೂ ಸರ್ವಥಾ ಹೊಂದುವುದೇ ಇಲ್ಲ.

**ಭಾಷ್ಯ** ॥ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್ (ಐ.ಆ.೨.೫.೪.)। ಇತ್ಯುಚ್ಯತೇ । ತತ್ರ ಸೃಷ್ಟ್ಯಾದಿಭ್ಯೋಽನ್ಯಾನಾಪ್ನೋತಿ ॥೧೭ ॥ ॥ ೧ ॥

**ಭಾಷ್ಯಾರ್ಥ** ॥ ಯದ್ಯಪಿ **ಸರ್ವಾನ್ ಕಾಮಾನಾಪ್ತ್ವಾ ಅಮೃತಃ ಸಮಭವತ್** ಎನ್ನುವ ಶ್ರುತಿಯಲ್ಲಿ ಮುಕ್ತನು ಸಮಸ್ತ ಕಾಮ್ಯಭೋಗಗಳನ್ನು ಹೊಂದುತ್ತಾನೆ ಎಂದು (ಮುಕ್ತರಿಗೆ ಸರ್ವ ಕಾಮಗಳ ಪ್ರಾಪ್ತಿಯು) ಹೇಳಲ್ಪಡುತ್ತದೆ. ಆದಾಗ್ಯೂ ಆ ಶ್ರುತಿಯಲ್ಲಿ ಸರ್ವ ಎನ್ನುವ ಪದದಿಂದ ಹೇಳಲ್ಪಟ್ಟವುಗಳ ಮಧ್ಯದಲ್ಲಿ ಜಗತ್ಸೃಷ್ಟಿ ಮೊದಲಾದವುಗಳಿಂದ ಇತರಗಳೇ ಆದ ಕಾಮಗಳನ್ನು ಮುಕ್ತನು ಹೊಂದುತ್ತಾನೆ ಎಂದೇ ಆ ಶ್ರುತಿಗೆ ಅರ್ಥವನ್ನು ಅಂಗೀಕರಿಸಬೇಕು. (ಮುಕ್ತನು ಜಗತ್ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎನ್ನುವ ಅರ್ಥವನ್ನು ಸರ್ವಥಾ ಅಂಗೀಕರಿಸಕೂಡದು. ಪ್ರಪಂಚ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳನ್ನು ಬಿಟ್ಟು ಮುಕ್ತನು ಸರ್ವ ಕಾಮಗಳನ್ನು ಹೊಂದುತ್ತಾನೆ ಎನ್ನುವ ಈ ಅರ್ಥವನ್ನೇ ಶ್ರುತಿಗೆ ಅಂಗೀಕರಿಸಬೇಕು.) ॥೧೭॥ ॥೧॥

**ಭಾಷ್ಯ** ॥ ಕುತಃ ॥ ೨ ॥

**ಭಾಷ್ಯಾರ್ಥ** ॥ ಸರ್ವಾನ್ ಕಾಮಾನ್ ಎನ್ನುವ ಶ್ರುತಿಗೆ ಸಂಕೋಚವು ಯಾವ ಕಾರಣದಿಂದ ಎಂದರೆ. ॥೨॥

## ಸೂತ್ರ ॥ ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ ॥ ೧೮ ॥

**ಸೂತ್ರಾರ್ಥ** ॥ ಶರೀರಭೇದಾದೂರ್ಧ್ವಮುತ್ಕ್ರಮ್ಯ ಎಂದು ಜೀವಪ್ರಕರಣವಾದುದರಿಂದಲೂ, ಜೀವರಿಗೆ ಜಗಜ್ಜನನಾದಿ ಸಾಮರ್ಥ್ಯದಲ್ಲಿ ಅತಿದೂರತ್ವವಿದ್ದುದರಿಂದಲೂ (ಅಂದರೆ ಜಗತ್ಸೃಷ್ಟ್ಯಾದಿಗಳನ್ನು ಮಾಡಲಿಕ್ಕೆ ಸಾಮರ್ಥ್ಯವಿಲ್ಲದಿರುವುದರಿಂದಲೂ) ಸರ್ವಾನ್ ಕಾಮಾನ್ ಎನ್ನುವ ಶ್ರುತಿಗೆ ಸಂಕೋಚವು ಯುಕ್ತವೇ ಆಗಿದೆ.

**ಭಾಷ್ಯ ॥ ಜೀವಪ್ರಕರಣತ್ವಾಜ್ಜೀವಾನಾಂ ತಾದೃಕ್ಸಾಮರ್ಥ್ಯವಿದೂರತ್ವಾಚ್ಚ ॥ ೩ ॥**

**ಭಾಷ್ಯಾರ್ಥ ॥** (ಇದು ಜೀವನ ಪ್ರಕರಣವಾಗಿದೆ. **ಶರೀರಭೇದಾದೂರ್ಧ್ವ ಉತ್ಕ್ರಮ್ಯ** ಎನ್ನುವ ಪೂರ್ವವಾಕ್ಯದಲ್ಲಿ ಶರೀರವನ್ನು ಶೀಳಿ ಮಸ್ತಕದ ಮಧ್ಯಪ್ರದೇಶವನ್ನು ಭೇದಿಸಿ ಮೇಲೆ ಹೊರಟು ಹೋಗಿ ಎಂದು ಜೀವಲಿಂಗವು ಶ್ರುತವಾದುದರಿಂದ, ಇದಕ್ಕೆ) ಜೀವರ ಪ್ರಕರಣತ್ವವಿದ್ದುದರಿಂದ ಜೀವರಿಗಾದರೂ ಅಂತಹ ಜಗತ್ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ಶಕ್ತಿಯು ಇಲ್ಲದಿರುವುದರಿಂದ ಸರ್ವ ಶಬ್ದಕ್ಕೆ ಸಂಕೋಚವು ಯುಕ್ತವೇ ಆಗಿದೆ. (ಏವಂಚ **ಮುಕ್ತಃ ಜಗದ್ವ್ಯಾಪಾರಶಕ್ತಿಮಾನ್ ನ ಜೀವತ್ವಾತ್ ಸಂಸಾರಿವತ್** ಎನ್ನುವ ಅನುಮಾನವು ಉಕ್ತವಾಯಿತು.)

**ಪೀಠಿಕೆ ॥** ಸಂಸಾರಿ ಜೀವರಿಗೆ ಜಗತ್ಸೃಷ್ಟ್ಯಾದಿಗಳಲ್ಲಿ ಸಾಮರ್ಥ್ಯವಿಲ್ಲದಿದ್ದರೂ ಸತ್ಯಕಾಮರಾದ ಮುಕ್ತರಿಗೆ ಜಗತ್ಸೃಷ್ಟ್ಯಾದಿ ವ್ಯಾಪಾರವು ಕೂಡಲಾರದಷ್ಟೆ ಎಂದರೆ—

**ಭಾಷ್ಯ ॥ ವಾರಾಹೇ ಚ । ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ । ಮುಕ್ತಾನಾಂ ನೈವ ಕಾಮಃ ಸ್ಯಾದನ್ಯಾನ್ ಕಾಮಾಂಸ್ತು ಭುಂಜತೇ ॥ ತದ್ಯೋಗ್ಯತಾ ನೈವ ತೇಷಾಂ ಕದಾಚಿತ್ಕ್ವಾಪಿ ವಿದ್ಯತೇ । ನ ಚಾಯೋಗ್ಯಂ ವಿಮುಕ್ತೋಽಪಿ ಪ್ರಾಪ್ನುಯಾನ್ನ ಚ ಕಾಮಯೇತ್ ॥ ಇತಿ ॥ ೧೮ ॥ ॥ ೪ ॥**

**ಭಾಷ್ಯಾರ್ಥ ॥** ತಮ್ಮಿಂದ ಉತ್ತಮರಾದ ಮುಕ್ತರ ಆನಂದವನ್ನು ಹೊಂದುವ ವಿಷಯದಲ್ಲಿಯೂ ಅಥವಾ ತನಗೆ ಎಷ್ಟು ಆನಂದವು ಯೋಗ್ಯವಾಗಿ ಕ್ಲೃಪ್ತವಾಗಿಯದೋ ಅದಕ್ಕಿಂತ ಅಧಿಕವಾದ ಆನಂದದ ಪ್ರಾಪ್ತಿ ವಿಷಯದಲ್ಲಿಯೂ ಜಗತ್ಸೃಷ್ಟಿ ಮೊದಲಾದ ವ್ಯಾಪಾರಗಳಲ್ಲಿಯೂ ಮುಕ್ತರಿಗೆ ಕಾಮವು ಸರ್ವಥಾ ಬರುವುದೇ ಇಲ್ಲ. ಹೇಳಿದ್ದಕ್ಕಿಂತ ಇತರಗಳಾದ ಕಾಮಗಳನ್ನೇ ಉಣ್ಣುತ್ತಾರೆ. ಯಾವಾಗಲಾದರೂ ಯಾವ ಸ್ಥಾನದಲ್ಲಿಯೂ ಅಂದರೆ, ತನ್ನ ಯೋಗ್ಯತೆಯಿಂದ ಅಧಿಕವಾದ ಆನಂದದಲ್ಲಿಯೂ ಸೃಷ್ಟ್ಯಾದಿ ವ್ಯಾಪಾರಗಳಲ್ಲಿಯೂ ಆ ಮುಕ್ತರಿಗೆ ಸಾಮರ್ಥ್ಯವು (ಅಂದರೆ, ಅದನ್ನು ಹೊಂದತಕ್ಕ ಶಕ್ತಿಯು) ಇಲ್ಲವೇ ಇಲ್ಲ. ಮುಕ್ತನು ಸತ್ಯಕಾಮನಾದಾಗ್ಯೂ ಅಯೋಗ್ಯವನ್ನು ಸರ್ವಥಾ ಹೊಂದುವುದೇ ಇಲ್ಲ. ಸರ್ವಥಾ ಇಚ್ಛಿಸುವುದೂ ಇಲ್ಲ. (ತಥಾಚ ಮುಕ್ತರಿಗೆ ಸತ್ಯಕಾಮತ್ವವಿದ್ದರೂ ಅಯೋಗ್ಯ ಕಾಮಿತ್ವವೇ ಇಲ್ಲದಿರುವುದರಿಂದ ಜಗದ್ವ್ಯಾಪಾರವು ಮುಕ್ತರಿಗೆ ಅಯೋಗ್ಯವಾಗಿರುವುದರಿಂದ ಆ ವಿಷಯದಲ್ಲಿ ಕಾಮವೇ ಹುಟ್ಟದಿರುವುದರಿಂದ ಅದು ಪ್ರಾಪ್ತವಾಗುವುದಿಲ್ಲ.) ॥ ೧೮ ॥ ॥೪॥

**ಪೀಠಿಕೆ ॥** ಮುಕ್ತನಿಗೆ ಜಗದೈಶ್ವರ್ಯವದೆ ಎಂದು ಆಕ್ಷೇಪಿಸಿಕೊಂಡು ಸಮಾಧಾನ ಹೇಳತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

**ಸೂತ್ರ ॥ ಓಂ ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕ ಮಂಡಲಸ್ಥೋಕ್ತೇಃ ಓಂ ॥ ೧೯ ॥**

**ಸೂತ್ರಾರ್ಥ ॥** ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ ಎಂದು

ಸ್ಪಷ್ಟವಾಗಿ ಮುಕ್ತನಿಗೆ ಸಮಸ್ತ ದೇವತೆಗಳಿಂದ ಪೂಜ್ಯತ್ವವನ್ನು ಉಪದೇಶ ಮಾಡಿದ್ದರಿಂದ ಮುಕ್ತರಿಗೆ ಜಗದೈಶ್ವರ್ಯವದೆ ಎಂದರೆ, ಹಾಗೆ ಹೇಳಕೂಡದು. ಏಕೆಂದರೆ, ಅಧಿಕಾರದಲ್ಲಿ ನಿಯುಕ್ತರಾದ ತಮಗೆ ಯೋಗ್ಯವಾದ ಪದವಿಯನ್ನು ಹೊಂದಿರತಕ್ಕ, ದೇವತೆಗಳ ಮಂಡಲಕ್ಕೆ ನಿಯಾಮಕವಾಗಿ ಇರತಕ್ಕ ಮುಕ್ತ ಚತುರ್ಮುಖನನ್ನೇ ಹೇಳಿದ್ದರಿಂದ, (ಅಶೇಷ ಮುಕ್ತರಿಗೆ ಜಗದ್ವಿಷಯಕ ಐಶ್ವರ್ಯವಿಲ್ಲ) (ಮುಕ್ತದೇವತೆಗಳೂ ಮುಕ್ತರಾದ ಅಧಮ ದೇವತೆಗಳ ನಿಯಮಾಧಿಕಾರದಲ್ಲಿ ನಿಯುಕ್ತರಾಗಿದ್ದಾರೆಂದು ಸೂಚಿಸುವುದಕ್ಕಾಗಿ ಆಧಿಕಾರಿಕ ಮಂಡಲ ಎಂದು ಹೇಳಿದ್ದು)

**ಭಾಷ್ಯ ॥ ತಾ ಯೋ ವೇದ ಸ ವೇದ ಬ್ರಹ್ಮ ಸರ್ವೇಽಸ್ಮೈ ದೇವಾ ಬಲಿಮಾವಹಂತಿ (ತೈ.ಉ.೧.೫)। ಇತಿ ಪ್ರತ್ಯಕ್ಷೋಪದೇಶಾಜ್ಜಗದೈಶ್ವರ್ಯಮಪ್ಯಸ್ತೀತಿ ಚೇನ್ನ। ಆಧಿಕಾರಿಕಮಂಡಲಾಧಿಪತಿರ್ಬ್ರಹ್ಮಾ ಹಿ ತತ್ರೋಚ್ಯತೇ ॥ ೫ ॥**

ಭಾಷ್ಯಾರ್ಥ ॥ ಯಾವಾತನು ಭೂಃ ಭುವಃ ಸುವಃ ಮಹಃ ಎನ್ನುವ ವ್ಯಾಹೃತಿ ವಾಚ್ಯಗಳಾದ ವ್ಯಾಹೃತಿ ಶಬ್ದವಾಚ್ಯಗಳೂ ಆದ ಪ್ರತ್ಯೇಕವಾಗಿ ನಾಲ್ಕು ಪ್ರಕಾರ ವಿಭಕ್ತಗಳಾದ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ನಾಮಕ ಹದಿನಾರು ೧೬ ಭಗವನ್ಮೂರ್ತಿಗಳನ್ನು ತಿಳಿಯುತ್ತಾನೋ ಅವನೇ ಬ್ರಹ್ಮನನ್ನು ತಿಳಿಯುತ್ತಾನೆ. ಇಂತಹ ಜ್ಞಾನಿಗೆ ಎಲ್ಲಾ ದೇವತೆಗಳೂ ಪೂಜೆಯನ್ನು ಮಾಡುತ್ತಾರೆ ಎನ್ನುವ ಶ್ರುತಿಯಲ್ಲಿ ಸ್ಪಷ್ಟವಾಗಿಯೇ ಮುಕ್ತನಿಗೆ ಸರ್ವದೇವಪೂಜ್ಯತ್ವ ಮೊದಲಾದವುಗಳನ್ನೇ ಉಪದೇಶ ಮಾಡಿದ್ದರಿಂದ ಮುಕ್ತರಿಗೆ ಜಗದೈಶ್ವರ್ಯವೂ ಕೂಡ ಉಂಟೇ ಉಂಟು ಎಂದರೆ, ಹಾಗೆ ಹೇಳಕೂಡದು, ಏಕೆಂದರೆ ಈ ಶ್ರುತಿಯ ಬಲದಿಂದ ಸರ್ವಮುಕ್ತರಿಗೆ ಜಗದ್ವಿಷಯಕ ಐಶ್ವರ್ಯವು ಸಿದ್ಧಿಸುವುದಿಲ್ಲ. ಆ ಶ್ರುತಿಯಲ್ಲಿ ಮುಕ್ತನಾದ ಚತುರ್ಮುಖನೇ ತಮ್ಮಿಂದ ಅಧಮರಾದ ದೇವತೆಗಳ ನಿಯಮನದಲ್ಲಿ ಇರತಕ್ಕ ಶೇಷ ಮೊದಲಾದ ಮುಕ್ತ ದೇವತೆಗಳ ಮಂಡಲಕ್ಕೆ ಅಧಿಪತಿಯೆಂದೂ ಹೇಳಲ್ಪಡುತ್ತಾನೆ. ಅವರಿಂದ ಪೂಜ್ಯನೆಂದು ಹೇಳಲ್ಪಡುತ್ತಾನೆ. (ಮಾಹಾಚಮಸ್ಯಃ ಪ್ರವೇದಯತೇ । ಎಂದು ಚತುರ್ಮುಖನಿಗೇನೇ ಉಪಕ್ರಮವಿರುವುದರಿಂದ. ॥೫॥

ಪೀಠಿಕೆ ॥ ಮುಕ್ತರಾದ ದೇವತೆಗಳಿಗೆ ತಮ್ಮಿಂದ ಅವರರಾದ ಮುಕ್ತರ ನಿಯಾಮಕತ್ವವೂ, ಚತುರ್ಮುಖನಿಗೆ ಅಶೇಷ ಮುಕ್ತನಿಯಾಮಕತ್ವವೂ ಇದೆ ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ, ಎಂದರೆ—

**ಭಾಷ್ಯ ॥ ಗಾರುಡೇ ಚ । ಆತ್ಮೇತ್ಯೇವ ಪರಂ ದೇವಮುಪಾಸ್ಯ ಹರಿಮವ್ಯಯಂ । ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ ॥ ಅತ್ರೈವ ಚ ಸ್ಥಿತಿಸ್ತೇಷಾಮಂತರಿಕ್ಷೇ ತು ಕೇಚನ । ಕೇಚಿತ್ ಸತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಂ ॥ ೬ ॥**

ಭಾಷ್ಯಾರ್ಥ ॥ ಏಕಗುಣೋಪಾಸನ ಯೋಗ್ಯರಾದ ಅತ್ಯಲ್ಪರಾದ ಮನುಷ್ಯರು ಆತ್ಮತ್ವಪ್ರಕಾರದಿಂದಲೇ ನಾಶರಹಿತನೂ ಸರ್ವೋತ್ತಮನೂ ಕ್ರೀಡಾದಿಗುಣವಿಶಿಷ್ಟನೂ ಆದ ಶ್ರೀಹರಿಯನ್ನು ಉಪಾಸನಾ ಮಾಡಿ ಆಮೇಲೆ ಅಪರೋಕ್ಷೀಕರಿಸಿ ಪ್ರಾರಬ್ಧಕರ್ಮವನ್ನು ಭೋಗದಿಂದ ನಾಶಪಡಿಸಿ

ಭೂಮ್ಯಾದಿಗಳಲ್ಲಿಯೇ ದೇಹಬಂಧದಿಂದ ಮುಕ್ತರಾಗುತ್ತಾರೆ. ಸ್ವರೂಪಾನಂದವನ್ನು ಅನುಭವಿಸುತ್ತಾರೆ. ಅವರು ಯಾವಾಗಲೂ ಬ್ರಹ್ಮನಾಡಿಯಿಂದಾಗಲೀ ನಾಡ್ಯಂತರದಿಂದಾಗಲೀ ಉತ್ಕ್ರಾಂತಿಯನ್ನು ಹೊಂದುವುದಿಲ್ಲ. ಮತ್ತೆ ದೇಹನಾಶಪರ್ಯಂತ ದೇಹದಲ್ಲಿಯೇ ಇದ್ದು ಆಮೇಲೆ ಮುಕ್ತಿಯನ್ನು ಹೊಂದುತ್ತಾರೆ. ಉತ್ಕ್ರಾಂತಿರಹಿತರಾದ ಆ ಮುಕ್ತರಿಗೆ ಪೃಥಿವ್ಯಾದಿಗಳಲ್ಲಿಯೇ ಆವಾಸವು. (ಅಂದರೆ ಒಂದಾವರ್ತಿ ಶ್ವೇತದ್ವೀಪಕ್ಕೆ ಹೋಗಿ ಅಲ್ಲಿರತಕ್ಕ ಭಗವದ್ರೂಪವನ್ನು ನೋಡಿ ಅವರ ಅನುಜ್ಞೆಯಿಂದ ಪುನಃ ಬಂದವರಿಗೆ ಪೃಥಿವೀಲೋಕದಲ್ಲಿಯೇ ಸ್ಥಿತಿಯು. ಲೋಕಾಂತರದಲ್ಲಿ ಸ್ಥಿತಿಯಲ್ಲ) (ಅಂದರೆ ಪೂರ್ವೋಕ್ತ ಅಧಿಕಾರಿಗಳಿಗಿಂತ ಏಕಗುಣೋಪಾಸಕರಲ್ಲಿ ಉತ್ತಮರಾದ ಮನುಷ್ಯರು) ಇರುತ್ತಾರೆ. ಕೆಲವರು ಅಂತರಿಕ್ಷ ಲೋಕದಲ್ಲಿಯೇ (ಅಂದರೆ ಪೂರ್ವೋಕ್ತರಿಂದ ಉತ್ತಮರಾದ ಏಕಗುಣೋಪಾಸಕರಾದ ಮನುಷ್ಯರು ಸ್ವರ್ಗದಲ್ಲಿ ಇರುತ್ತಾರೆ. ಕೆಲವರು (ಅವರಿಂದ ಉತ್ತಮರಾದವರು) ಮಹರ್ಲೋಕದಲ್ಲಿಯೂ, ಕೆಲವರು (ಅವರಿಂದ ಉತ್ತಮರಾದವರು) ಜನಲೋಕದಲ್ಲಿಯೂ, ಕೆಲವರು (ಅವರಿಂದ ಉತ್ತಮರಾದವರು) ತಪೋಲೋಕದಲ್ಲಿಯೂ, ಕೆಲವರು (ಅವರಿಂದ ಉತ್ತಮರಾದ ಅಧಿಕಾರಿಗಳು) ಸತ್ಯಲೋಕದಲ್ಲಿಯೂ ಮುಕ್ತರಾಗಿ ಇರುತ್ತಾರೆ. (ಅಲ್ಲಿಯೇ ಅವರು ಇರುತ್ತಾರೆ.) ಬಹುಕಾಲದಲ್ಲಿ ಬ್ರಹ್ಮನನ್ನು ಅಪರೋಕ್ಷೀಕರಿಸಿರುವ ಅಪ್ರತೀಕಾಲಂಬನರಾದ ಬಹುಗುಣೋಪಾಸಕರಾದರೂ ಅಲ್ಲಿರತಕ್ಕ ಶ್ವೇತದೀಪವನ್ನು ಕುರಿತು ಹೋಗುತ್ತಾರೆ. ಅಲ್ಲಿರುತ್ತಾರೆ.

**ವಿಶೇಷಾಂಶ ॥ ಕೇಚಿದತ್ರೈವ ಮುಚ್ಯಂತೇ, ಅತ್ರೈವ ಚ ಸ್ಥಿತಿಸ್ತೇಷಾಂ,** ಎನ್ನುವುದರಿಂದ, ಕೆಲವರು ಇಲ್ಲಿಯೇ ಮುಕ್ತರಾಗಿರುತ್ತಾರೆ, ಇಲ್ಲಿಯೇ ಇರುತ್ತಾರೆ, ಎಂದು ಉಕ್ತವಾಗಿದೆ. **ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಂ** ಮಹಾಜ್ಞಾನಿಗಳು ಮಾತ್ರ ಶ್ವೇತದ್ವೀಪಕ್ಕೆ ಹೋಗುತ್ತಾರೆ ಎನ್ನುವುದರಿಂದ ಮಹಾಜ್ಞಾನಿಗಳಲ್ಲದ ಏಕಗುಣೋಪಾಸಕರು ಶ್ವೇತದ್ವೀಪಕ್ಕೆ ಹೋಗುವುದಿಲ್ಲವೆಂದು ಹೇಳಿದೆ. ಆದರೆ **ಬಹುನಾಽತ್ರ ಕಿಮುಕ್ತೇನ ಯಾವಚ್ಛ್ವೇತಂ ನ ಗಚ್ಛತಿ। ಯೋಗೀ ತಾವನ್ನ ಮುಕ್ತಃಸ್ಯಾತ್,** ಎನ್ನುವಲ್ಲಿ ಶ್ವೇತದ್ವೀಪಕ್ಕೆ ಹೋಗದೆ ಇದ್ದರೆ ಮುಕ್ತಿಯಾಗುವುದಿಲ್ಲವೆಂದು ಹೇಳಿಯದೆ. ಆದಕಾರಣ ವಿರೋಧವೆಂದು ಹೇಳಕೂಡದು. ಏಕೆಂದರೆ, ಸರ್ವರೂ ಒಂದಾವರ್ತಿ ಶ್ವೇತದ್ವೀಪಕ್ಕೆ ಹೋಗಿಯೇ ಮುಕ್ತರಾಗುತ್ತಾರೆಂದು ಅಂಗೀಕರಿಸುವೆವು. ತಥಾಚ ಅಂಡಲಯ ಕಾಲದಲ್ಲಿ ಉತ್ತಮರಲ್ಲಿ ಪ್ರವೇಶದಿಂದ ಊರ್ಧ್ವಲೋಕಕ್ಕೆ ಹೋಗಿ ಲಿಂಗದೇಹಭಂಗವುಳ್ಳವರಾಗಿ ಒಂದಾವರ್ತಿ ಶ್ವೇತದ್ವೀಪಕ್ಕೆ ಹೋಗಿ ಅಲ್ಲಿ ವಾಸುದೇವರೂಪಿಯಾದ ಶ್ರೀಹರಿಯನ್ನು ನೋಡಿ ಅವನ ಅನುಜ್ಞೆಯಿಂದ ಅಲ್ಲಿಂದ ಪುನಃ ಭೂಮ್ಯಾದಿಗಳಿಗೆ ಬಂದು ಆಮೇಲೆ ಇಲ್ಲಿಯೇ ಇರುತ್ತಾರೆ ಎಂಬ ಅಭಿಪ್ರಾಯದಿಂದ **ಅತ್ರೈವ ಚ ಸ್ಥಿತಿಃ** ಇತ್ಯಾದ್ಯುಕ್ತಿಯು. ಏವಂಚ **ಶ್ವೇತದ್ವೀಪಂ ತತೋ ಗತ್ವಾ ದೃಷ್ಟ್ವಾ ವಿಷ್ಣುಂ ಚ ತೇನ ತೇ । ಅನುಜ್ಞಾತಾಃ ಪ್ರಮೋದಂತೇ ನಿರ್ದುಃಖಾಸ್ತು ಧರಾದಿಷು ॥** ಎಂದು ಉಕ್ತವಾಗಿದೆ.

**ಪೀಠಿಕೆ ॥** ಶ್ವೇತದ್ವೀಪದಲ್ಲಿಯೂ ಮಹಾಜ್ಞಾನವುಳ್ಳವರಿಗೆ ಸಾಮ್ಯವಿಲ್ಲವೆನ್ನುತ್ತಾರೆ—

**ಭಾಷ್ಯ ॥ ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ಸಮೀಪಗಾಃ । ಸಾಲೋಕ್ಯಂ ಚ ಸರೂಪತ್ವಂ ಸಾಮೀಪ್ಯಂ ಯೋಗ ಏ(ಮೇ)ವ ಚ ॥ ಇಮಾಮಾರಭ್ಯ ಸರ್ವತ್ರ**

**ಯಾವತ್ಸು ಕ್ಷೀರಸಾಗರೇ । ಪುರುಷೋಽನಂತಶಯನಃ ಶ್ರೀಮನ್ನಾರಾಯಣಾಭಿದಃ ॥ ೭ ॥**

ಭಾಷ್ಯಾರ್ಥ ॥ ಶ್ವೇತದ್ವೀಪದಲ್ಲಿಯೂ ಮಹಾಜ್ಞಾನಿಗಳಲ್ಲಿಯೂ ತಾರತಮ್ಯವೆನ್ನುವ ಉಪಾಯ ದಿಂದ ಜ್ಞಾನಾಧಿಕ್ಯದಲ್ಲಿ ತಾರತಮ್ಯಾಖ್ಯ ಉಪಾಯವನ್ನು ಅನುಸರಿಸಿ ಮಹಾಜ್ಞಾನಿಗಳು ಆದಘ್ನಾಸಃ ಇತ್ಯಾದ್ಯುಕ್ತಪ್ರಕಾರ ಭಗವಂತನ ಸಮೀಪದಲ್ಲಿ ಇರುತ್ತಾರೆ. (ಅಂದರೆ, ಸಾಮೀಪ್ಯರೂಪ ಮುಕ್ತಿಯನ್ನು ಹೊಂದುತ್ತಾರೆ.) (ಭೂಮ್ಯಾದಿಗಳಲ್ಲಿ ಮುಕ್ತರು ಇದ್ದರೆ ಅದು ಸಾಲೋಕ್ಯ ಮೊದಲಾದ ನಾಲ್ಕು ವಿಧ ಮೋಕ್ಷದಲ್ಲಿ ಅಂತರ್ಭೂತವಾಗದಿರುವುದರಿಂದ ಮೋಕ್ಷವಾಗದೆ ಹೋಗುವುದು ಎಂದರೆ) ಈ ಪೃಥಿವಿಯನ್ನು ಆರಂಭಿಸಿ, (ಕೆಲವರು ಇಲ್ಲಿಯೇ ಮುಕ್ತರಾಗುತ್ತಾರೆ, ಕೆಲವರು ಅಂತರಿಕ್ಷದಲ್ಲಿ, ಕೆಲವರು ಸತ್ಯಲೋಕದಲ್ಲಿ, ಮಹಾಜ್ಞಾನಿಗಳು ಕ್ಷೀರಸಾಗರಕ್ಕೆ ಹೋಗುತ್ತಾರೆ. ಇತ್ಯಾದ್ಯುಕ್ತಪ್ರಕಾರ) ಕ್ಷೀರಸಾಗರ ಶ್ವೇತದ್ವೀಪಪರ್ಯಂತ ಲೋಕಗಳಲ್ಲಿ ಎಷ್ಟು ಸ್ಥಾನಗಳಲ್ಲಿ ನಾರಾಯಣ ಎಂದು ಹೆಸರುಳ್ಳ ಶೇಷಶಾಯಿ ಯಾದ ಶ್ರೀಪರಮಾತ್ಮನು ಇರುತ್ತಾನೋ ಅಂತಹ ಎಲ್ಲಾ ಸ್ಥಾನಗಳಲ್ಲಿ ಸಾಲೋಕ್ಯಂ=ಭಗವಲ್ಲೋಕಕ್ಕೆ ಸಮಾನಲೋಕತ್ವವೂ, ಸರೂಪತ್ವಂ=ಚತುರ್ಭುಜತ್ವ ಮೊದಲಾದ ಭಗವದ್ರೂಪಕ್ಕೆ ಸಮಾನವಾದ ರೂಪತ್ವವೂ ಸಾಮೀಪ್ಯಂ=ಶ್ರೀಹರಿಯ ಸಮೀಪದಲ್ಲಿ ಇರುವಿಕೆ, ಯೋಗಃ=ಸಾಯುಜ್ಯವು (ಭಗವ ದಂಗ ಪ್ರವೇಶವು) ಇರುತ್ತದೆ. (ಏವಂಚ ೧ ಸಾಲೋಕ್ಯ ೨ ಸಾರೂಪ್ಯ ೩. ಸಾಮೀಪ್ಯ ೪ ಸಾಯುಜ್ಯ ಎಂದು ಮೋಕ್ಷವು ನಾಲ್ಕು ವಿಧವು. ಸಾಯುಜ್ಯ ಸಾಮೀಪ್ಯ ಸಾರೂಪ್ಯ ರೂಪ ಮುಕ್ತಿಗಳು ಭೂಮ್ಯಾದಿ ಗಳಲ್ಲಿಯೇ ಮುಕ್ತಿಯನ್ನು ಹೊಂದತಕ್ಕವರಿಗೆ ಇರುವುದಿಲ್ಲ. ಮತ್ತೆ ಯಾವಾಗ ಚತುರ್ಮುಖಾದಿಗಳು ಭೂಮ್ಯಾದಿಗಳಲ್ಲಿರತಕ್ಕ ಮುಕ್ತಸ್ಥಾನಕ್ಕೆ ಬರುತ್ತಾರೋ ಆಗ ಅವರಿಗೇನೇ ಅಲ್ಲಿರತಕ್ಕ ಭಗವತ್ಸಾಯುಜ್ಯಾದಿರೂಪಗಳಾದ ಆ ಮುಕ್ತಿಗಳು ಕೂಡಬಹುದು. ಶ್ರೀಹರಿಯು ಸರ್ವತ್ರ ಇದ್ದಪ್ರಯುಕ್ತ ಶ್ರೀಹರಿಯ ಎಲ್ಲಾ ಸ್ಥಾನಗಳಲ್ಲಿಯೂ ಸಾಲೋಕ್ಯಾದಿಗಳು ಇವೆ. ತಥಾಚ ಆವಾವ ಲೋಕಗಳಲ್ಲಿರತಕ್ಕ ರೂಪವಿಶೇಷದಿಂದ ಸಾಲೋಕ್ಯಾದಿ ಮುಕ್ತಿಗಳು ತತ್ತದ್ಯೋಗ್ಯರಿಗೆ ಇದ್ದೇ ಇದೆ. ॥೭॥

ಪೀಠಿಕೆ ॥ ಮನುಷ್ಯರೆಲ್ಲರೂ ಸಮರಾದುದರಿಂದ ಅವರಲ್ಲಿ ಕೆಲವರು ಭೂಮಿಯಲ್ಲಿಯೂ ಕೆಲವರು ಅಂತರಿಕ್ಷದಲ್ಲಿಯೂ ಕೆಲವರು ಸ್ವರ್ಗದಲ್ಲಿಯೂ ಇರುತ್ತಾರೆ ಎನ್ನುವ ಅವಾಂತರ ಭೇದವು ಹೇಗೆ ಕೂಡುತ್ತದೆ ಎಂದರೆ—

**ಭಾಷ್ಯ ॥ ಮಾನುಷಾ ವರ್ಣಭೇದೇನ ತಥೈವಾಶ್ರಮಭೇದತಃ । ಕ್ಷಿತಿಪಾ ಮನುಷ್ಯಗಂಧ-ರ್ವಾ ದೇವಾಶ್ಚ ಪಿತರಶ್ಚಿರಾಃ ॥ ಆಜಾನಜಾಃ ಕರ್ಮಜಾಶ್ಚ ತಾತ್ತ್ವಿಕಾಶ್ಚ ಶಚೀಪತಿಃ । ರುದ್ರೋ ಬ್ರಹ್ಮೇತಿ ಕ್ರಮಶಸ್ತೇಷು ಚೈವೋತ್ತರೋತ್ತರಾಃ(ಮೋತ್ತಮಾಃ)॥ ನಿತ್ಯಾನಂದೇ ಚ ಭೋಗೇ ಚ ಜ್ಞಾನೈಶ್ವರ್ಯಗುಣೇಷು ಚ । ಸರ್ವೇ ಶತಗುಣೋದ್ರಿಕ್ತಾಃ ಪೂರ್ವಸ್ಮಾದುತ್ತರೋತ್ತರಂ ॥ ಪೂಜ್ಯಂತೇ ಚಾವರೈಸ್ತೇ ತು ಸರ್ವಪೂಜ್ಯಶ್ಚತುರ್ಮುಖಃ । ಸ್ವಜಗದ್ವಾಪ್ಯತಿಸ್ತೇಷಾಂ ಪೂರ್ವವತ್ಸಮುದೀರಿತಾ ॥ ೮ ॥**

**ಭಾಷ್ಯಾರ್ಥ ॥** ಮನುಷ್ಯರು ಬ್ರಾಹ್ಮಣ ಕ್ಷತ್ರಿಯಾದಿ ವರ್ಣಭೇದದಿಂದಲೂ ಹಾಗೆಯೇ ಬ್ರಹ್ಮಚರ್ಯ ಮೊದಲಾದ ಆಶ್ರಮ ಭೇದದಿಂದಲೂ ಮುಕ್ತಿಯಲ್ಲಿ ಇರುತ್ತಾರೆ. ಚಕ್ರವರ್ತಿಗಳೂ ಮನುಷ್ಯ ಗಂಧರ್ವರೂ (ಪರಮುಖದಿಂದ ಪ್ರೇಷ್ಯರಾದವರು) ದೇವಗಂಧರ್ವರೂ ಚಿರಪಿತೃಗಳೂ, ಅನಾಖ್ಯಾತ ದೇವತೆಗಳೂ ಕರ್ಮದಿಂದ ದೇವತ್ವವನ್ನು ಹೊಂದಿರತಕ್ಕ ಬಲಿಚಕ್ರವರ್ತಿ ಮೊದಲಾದವರೂ ಕಾರ್ತವೀರ್ಯಾರ್ಜುನಾದಿಗಳೂ ತತ್ವಾಭಿಮಾನಿಗಳಾದ ಬೃಹಸ್ಪತ್ಯಾದಿ ದೇವತೆಗಳೂ, ದೇವೇಂದ್ರನೂ ಶೇಷನೂ ಹಿರಣ್ಯಗರ್ಭನೂ ಇವರೆಲ್ಲರೂ ಇರುತ್ತಾರೆ. ಆ ಉಕ್ತಾಧಿಕಾರಿಗಳಲ್ಲಿಯೂ ಉತ್ತರೋತ್ತರದಲ್ಲಿ ನಿರ್ದಿಷ್ಟರಾದವರು ಪೂರ್ವಪೂರ್ವದಲ್ಲಿ ನಿರ್ದಿಷ್ಟರಾದವರಿಂದ ಕ್ರಮವಾಗಿ ತಾರತಮ್ಯಾನುಸಾರವಾಗಿ ಅಧಿಕ (ಉತ್ತಮ)ರಾಗಿರುತ್ತಾರೆ. ಆ ಉತ್ತರೋತ್ತರ ನಿರ್ದಿಷ್ಟರಾದವರು ನಿತ್ಯವಾದ ಆನಂದದಲ್ಲಿಯೂ ಭೋಗದಲ್ಲಿಯೂ ಜ್ಞಾನೈಶ್ವರ್ಯರೂಪ ಗುಣಗಳಲ್ಲಿಯೂ ಎಲ್ಲರೂ ಮೊದಲು ಮೊದಲು ನಿರ್ದಿಷ್ಟರಾದವರಿಂದ ಉತ್ತರೋತ್ತರದಲ್ಲಿ ನಿರ್ದಿಷ್ಟರಾದವರು ಬಹುಗುಣಗಳಿಂದ ಉತ್ಕೃಷ್ಟರು ಆಗಿರುತ್ತಾರೆ. ಆ ಮುಕ್ತರಾದರೂ ತಮ್ಮಿಂದ ಅವರರಾದ ಮುಕ್ತರಿಂದ ಪೂಜಿಸಿಕೊಳ್ಳಲ್ಪಡುತ್ತಾರೆ. ಚತುರ್ಮುಖನೊಬ್ಬನೇ ಲಕ್ಷ್ಮೀನಾರಾಯಣರು ಹೊರತು ಸರಸ್ವತೀ ಮುಂತಾದ ಎಲ್ಲಾ ಮುಕ್ತರಿಂದ ಪೂಜಿಸಿಕೊಳ್ಳಲ್ಪಡತಕ್ಕವನು. (ಅವರಿಗೆ ಸ್ವಾಧಮ ಪೂಜ್ಯತ್ವ ಮಾತ್ರವಲ್ಲ ಮತ್ತೆ ತಮ್ಮ ಜಗದ್ವ್ಯಾಪಾರವೂ ಇದೆ ಎನ್ನುತ್ತಾರೆ.) ಆ ಮುಕ್ತರಿಗೆ ತನಗೆ ಪ್ರತಿಬಿಂಬ ಭೂತರಾದ ಮುಕ್ತಜೀವರಲ್ಲಿ ನಿಯಮನಾದಿ ವ್ಯಾಪಾರಗಳು ಸಂಸಾರವಸ್ಥೆಯಲ್ಲಿದ್ದಂತೆಯೇ ಹೇಳಲ್ಪಟ್ಟಿದೆ. (ಇಲ್ಲಿ ಅಧಮ ಮುಕ್ತರಲ್ಲಿ ಉತ್ತಮ ಮುಕ್ತರಿಗೆ ವ್ಯಾಪಾರವೆಂದರೆ—ಹೊರಗೆ ಇದ್ದು ನಿಯಾಮಕತ್ವವು. ಅಂತಃಪ್ರವೇಶದಿಂದ ನಿಯಾಮಕತ್ವವು ಮುಖ್ಯಪ್ರಾಣನಿಗೇನೇ. **ತುರೀಯಾಯಾಮವಸ್ಥಾಯಾಂ** (ಮೋಕ್ಷಾವಸ್ಥೆಯಲ್ಲಿ) **ಪ್ರಾಣಾದೇವ ನಿಯೋಧನಂ** ಎನ್ನುವ ಪ್ರಮಾಣ ಪ್ರಸಿದ್ಧವು. ॥೮॥

**ಪೀಠಿಕೆ ॥** ಸಾಯುಜ್ಯ ಮುಕ್ತಿಯನ್ನು ಹೊಂದಿದವರಾದುದರಿಂದ ದೇವತೆಗಳು ಮನುಷ್ಯಾದಿಗಳಿಂದ ಶ್ರೇಷ್ಠರು, ದೇವತೆಗಳಲ್ಲಿಯೂ ಚತುರ್ಮುಖನು ಶ್ರೇಷ್ಠನು ಎಂದು ಹೇಳಿದೆ. ಅದನ್ನು ವಿವರಿಸುವುದಕ್ಕಾಗಿಯೂ ಅವರಿಗೆ ಐಕ್ಯ ಶಂಕೆಯನ್ನು ನಿವಾರಿಸುವುದ್ಯಕಾಗಿಯೂ ಸಾಯುಜ್ಯ ಮುಕ್ತಿಯನ್ನು ಹೊಂದಿದವರ ಮಹಿಮೆಯನ್ನು ಹೇಳುತ್ತಾರೆ—

**ಭಾಷ್ಯ ॥ ಸಯುಜಃ ಪರಮಾತ್ಮಾನಂ ಪ್ರವಿಶ್ಯ ಚ ಬಹಿರ್ಗತಾಃ । ಚಿ(ತ)ದ್ರೂಪಾನ್ಯಾಕ್ರುತಾಂಶ್ಚಾಪಿ ವಿನಾ ಭೋಗಾಂಸ್ತು ಕಾಂಶ್ಚನ ॥ ಭುಂಜತೇ ಮುಕ್ತಿರೇವಂ ತೇ ವಿಸ್ಪಷ್ಟಂ ಸಮುದಾಹೃತಾ । ಇತಿ ॥ ೧೯ ॥ ॥ ೯ ॥**

**ಭಾಷ್ಯಾರ್ಥ ॥** ಶ್ರೀಪರಮಾತ್ಮನಿಂದ ವಿಲಕ್ಷಣ ಸಂಯೋಗರೂಪವಾದ ಸಾಯುಜ್ಯ ಮಹಿಮೆಯನ್ನು ಹೊಂದಿರುವ ಆ ಬ್ರಹ್ಮಾದಿ ದೇವತೆಗಳು ಪರಮಾತ್ಮನನ್ನು ಪ್ರವೇಶಮಾಡಿ ಕದಾಚಿತ್ ಬಹಿರ್ಗತರೂ ಆಗುತ್ತಾರೆ. ಅವುಗಳಲ್ಲಿ ಚಿದ್ರೂಪಗಳಾದ ಬಂಧಕವಾಗದಿರುವ ಶುದ್ಧ ಸತ್ವಾತ್ಮಕಗಳಾಗ ತಮ್ಮಿಂದ ಉತ್ತಮರಿಂದಲೋ ಭೋಗ್ಯಗಳಾದವುಗಳನ್ನು ಹೊರತು ಇತರಗಳಾದ ಸ್ವಸ್ವರೂಪಭೂತ

ಆನಂದಾದಿಗಳನ್ನು ಪ್ರಾಕೃತ ಶುದ್ಧಸತ್ವಾತ್ಮಕ.) ಭೋಗಗಳನ್ನು ಭೋಗಿಸುತ್ತಾರೆ. ಅಥವಾ ಕೆಲವು ಲಕ್ಷ್ಯಾತ್ಮಕಗಳಾದ ತಮ್ಮಿಂದ ಉತ್ತಮರೂಪಗಳಾದ ಚಿದ್ರೂಪಗಳಾದ ಭಗವಂತನಿಗೆ ಅಸಾಧಾರಣ ಭೋಗ್ಯಗಳಾದ ಗಂಧಾದಿಗಳನ್ನು ಹೊರತು ತಮಗೆ ಯೋಗ್ಯಗಳಾದ ಭೋಗ್ಯಗಳನ್ನೇ ಭೋಗಿಸುತ್ತಾರೆ, ಈ ಕ್ರಮದಿಂದ ಅತಿಸ್ಪಷ್ಟವಾಗಿ ನಿನಗೋಸ್ಕರ ನನ್ನಿಂದ ಮುಕ್ತಿಯು ಹೇಳಲ್ಪಟ್ಟಿತು. (ಹೀಗೆ ನಾರದರನ್ನು ಕುರಿತು ಚತುರ್ಮುಖಬ್ರಹ್ಮನ ಉಪದೇಶವು.) ಹೀಗೆ ಗಾರುಡ ಪುರಾಣದಲ್ಲಿ ಉಕ್ತವಾಗಿದೆ. ॥೯॥

**ಪೀಠಿಕೆ ॥** ಬ್ರಹ್ಮಾದಿ ಮುಕ್ತರಿಗೆ ಮುಕ್ತ ಜಗದ್ವ್ಯಾಪಾರವೇ ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ, ಅಮುಕ್ತ ಜಗದ್ವಿಷಯಕವೂ ಏಕೆ ಆಗಲಾರದು, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ವಿಕಾರಾವರ್ತಿ ಚ ತಥಾ ಹಿ ದರ್ಶಯತಿ ಓಂ ॥ ೨೦ ॥

**ಸೂತ್ರಾರ್ಥ ॥** ಸಂಸಾರವನ್ನು ತಿರುಗಾಡಿಸುವ (ಅಂದರೆ, ಸಂಸಾರ ವಿಷಯಕವಾದ) ವ್ಯಾಪಾರವು ಮುಕ್ತರಿಗೆ ಇಲ್ಲ, ಏಕೆಂದರೆ, ಇಮಂ ಮಾನವಮಾವರ್ತಂ ನಾವರ್ತಂತೇ ಎನ್ನುವ ಶ್ರುತಿಯು ಹಾಗೆ ತೋರಿಸುತ್ತದೆ.

**ಭಾಷ್ಯ ॥ ವಿಕಾರಾವರ್ತಿ(ರ್ತೀ) ವ್ಯಾಪಾರೋ ಮುಕ್ತಾನಾಂ ನ ವಿದ್ಯತೇ । ಇಮಂ ಮಾನವಮಾವರ್ತಂ ನಾವರ್ತಂತೇ (ಛಾ.೪.೧೫.೬) ಇತಿ (ಹಿ) ಶ್ರುತಿಃ ॥ ೧೦ ॥**

**ಭಾಷ್ಯಾರ್ಥ ॥** ಅನೇಕ ವಿಧವಾದ ಆಕಾರವಿದ್ದುದರಿಂದ ಅಥವಾ ಮನೋವಿಕಾರವಾದ ದುಃಖ ಮೂಲತ್ವವಿದ್ದುದರಿಂದ ವಿಕಾರಶಬ್ದಿತವಾದ ಸಂಸಾರವನ್ನು ಪ್ರವರ್ತಿಸುವ (ಅಂದರೆ ಅಮುಕ್ತ ಜಗದ್ವಿಷಯಕವಾದ) ಅಥವಾ ಪ್ರಕೃತಿ ವಿಕಾರವಾದ ಶರೀರಕ್ಕೆ ಅಭಿಮಾನಿಯಾದ ಸಂಸಾರಿ ಜೀವವಿಷಯಕವಾದ ವ್ಯಾಪಾರವು ಮುಕ್ತರಿಗೆ ಇರುವುದಿಲ್ಲ, ಏಕೆಂದರೆ, ಮಾನವಾ ಯತ್ರ ಆವರ್ತಂತೇ-ಮನುಷ್ಯರು ಎಲ್ಲಿ ಜನನ ಮರಣಾದಿಗಳನ್ನು ಹೊಂದುತ್ತಾರೋ ಅದು ಮಾನವಾವರ್ತವು ಸಂಸಾರವು. ಅಥವಾ ಸಂಸಾರವನ್ನು ಪ್ರವರ್ತಿಸುವುದಿಲ್ಲ ಅಂದರೆ, ಅಮುಕ್ತಜಗದ್ವಿಷಯಕ ವ್ಯಾಪಾರವನ್ನು ಮುಕ್ತರು ಮಾಡುವುದು ಇಲ್ಲ. ಅಥವಾ ಸಂಸಾರ ವಿಷಯಕ ಆವೃತ್ತಿ ಶೂನ್ಯರು ಆಗುತ್ತಾರೆ. (ಮಾನವಂ ಎಂದು ಮುಮ್ ಆಗಮವು ಛಾಂದಸವು.) ತತ್ವಪ್ರದೀಪದಲ್ಲಿ ಆದರೂ. ಬ್ರಹ್ಮಮಾರ್ಗದಿಂದ ಹೋದ ಮುಕ್ತರು ಮನುಷ್ಯಸಂಬಂಧಿಯಾದ ಸಂಸಾರವನ್ನು ಪ್ರವರ್ತಿಸುವುದಿಲ್ಲ. ತಥಾಚ ಪ್ರಕೃತಿ ವಿಕಾರಗಳಾದ ಶರೀರಾದಿಗಳಿಗೆ ಅಭಿಮಾನಿಗಳಾದ, ಜನನ ಮರಣಾದಿ ವಿಕಾರಗಳುಳ್ಳ ಸಂಸಾರಿಗಳಲ್ಲಿ ಮುಕ್ತರಿಗೆ ವ್ಯಾಪಾರವು ಇರುವುದಿಲ್ಲ ಎಂದು ಶ್ರುತಿಯು ತೋರಿಸುತ್ತದೆ. ॥ ೧೦ ॥

**ಪೀಠಿಕೆ ॥** ಮುಕ್ತ ದೇವತೆಗಳಿಗೆ ಮುಕ್ತ ಜಗದ್ವಿಷಯಕ ವ್ಯಾಪಾರವಿಲ್ಲವಾದರೆ ಪ್ರವರ್ತಕರು ಇಲ್ಲದಿರುವುದರಿಂದ ಸಂಸಾರಾವಸ್ಥಾನವೇ ಇಲ್ಲದೆ ಹೋಗುವುದು ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಉಕ್ತಾರ್ಥದಲ್ಲಿ ಸ್ಮೃತಿಸಮ್ಮತಿಯನ್ನುದಾಹರಿಸುತ್ತಾರೆ—

**ಭಾಷ್ಯ ॥ ವಾರಾಹೇ ಚ । ಸ್ವಾಧಿಕಾರೇಣ ವರ್ತಂತೇ ದೇವಾ ಮುಕ್ತಾವಪಿ ಸ್ಫುಟಂ । ಬಲಿಂ**

**ಹರಂತಿ ಮುಕ್ತಾಯ ವಿರಿಂಚಾಯ ಚ(ತು)ಪೂರ್ವವತ್॥ ಸಬ್ರಹ್ಮಕಾಸ್ತು ತೇ ದೇವಾ ವಿಷ್ಣವೇ ಚ ವಿಶೇಷತಃ । ನ ವಿಕಾರಾಧಿಕಾರಸ್ತು ಮುಕ್ತಾನಾಮನ್ಯ ಏವ ತು ॥ ವಿಕಾರಾಧಿಕೃತಾ ಜ್ಞೇಯಾ ಯೇ ನಿಯುಕ್ತಾಸ್ತು ವಿಷ್ಣುನಾ ॥ ಇತಿ ॥ ೨೦ ॥ ಅಧಿ.೯ ॥ ॥ ೧೧ ॥**

ಭಾಷ್ಯಾರ್ಥ ॥ ದೇವತೆಗಳುಮುಕ್ತಿಯಲ್ಲಿಯೂ ಕೂಡ ತಮ್ಮತಮ್ಮ ಯೋಗ್ಯತಾನುಸಾರವಾಗಿ ತಮ್ಮತಮ್ಮ ಅಧಿಪತ್ಯದಿಂದ ಯುಕ್ತರಾಗಿ ಪ್ರತ್ಯಕ್ಷವಾಗಿಯೇ (ರಹಸ್ಯವಾಗಿ ಅಲ್ಲ) ಮುಕ್ತನಾದ ಬ್ರಹ್ಮನಿಗೋಸ್ಕರ ಸಂಸಾರದಲ್ಲಿ ಇದ್ದಂತೆಯೇ ಪೂಜೆಯನ್ನು ಮಾಡುತ್ತಾರೆ. ಚತುರ್ಮುಖನಿಂದ ಕೂಡಿರುವ ಆ ದೇವತೆಗಳು ಅತ್ಯಧಿಕವಾಗಿ ಶ್ರೀ ಪರಮಾತ್ಮನಿಗೋಸ್ಕರ ಪೂಜೆಯನ್ನು ಮಾಡುತ್ತಾರೆ. ಮುಕ್ತರಿಗೆ ಸಂಸಾರಪ್ರವರ್ತಕತ್ವವು ಇಲ್ಲವೇ ಇಲ್ಲ. ಆವಾವ ಗುಣಗಳಲ್ಲಿರತಕ್ಕ ಮುಕ್ತರಿಂದ ಇತರರಾದವರು ಯಾರು ಶ್ರೀಹರಿಯಿಂದ ಪ್ರೇರಿತರಾಗಿ ಆವಾವ ಅಧಿಕಾರಗಳಲ್ಲಿ ನಿಯುಕ್ತರಾಗಿದ್ದಾರೋ, ಅವರು ಸಂಸಾರಾಖ್ಯ ವಿಕಾರದಲ್ಲಿ ಅಧಿಕೃತರು, ಸಂಸಾರ ಪ್ರವರ್ತಕರೆಂದು ತಿಳಿಯತಕ್ಕದ್ದು, ಎಂದು ವಾರಾಹ ಪುರಾಣದಲ್ಲಿ ಹೇಳಿದೆ. (ಶ್ರುತಿಯಲ್ಲಿ ಮಾತ್ರ ಹೇಳಿದ್ದಲ್ಲ) ॥೨೦॥

## ಅಧಿಕರಣ ಸಾರಾಂಶ

ಮುಕ್ತರು ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುತ್ತಾರೋ ಇಲ್ಲವೋ, ಅದಕ್ಕಾಗಿ **ಸರ್ವಾನ್ಕಾಮಾನಾಪ್ನೋತಿ** ಎನ್ನುವ ಶ್ರುತಿಯಲ್ಲಿ ಸರ್ವ ಶಬ್ದವು ಅಸಂಕುಚಿತ ವೃತ್ತಿಯುಳ್ಳದ್ದೋ ಸಂಕುಚಿತ ಶಕ್ತಿಯುಳ್ಳದ್ದೋ ಅದಕ್ಕಾಗಿ ಅದಕ್ಕೆ ಸಂಕೋಚಕ ಪ್ರಮಾಣವು ಇಲ್ಲವೋ ಇದೆಯೋ, ಅದಕ್ಕಾಗಿ **ಸರ್ವೇಽಸ್ಮೈ ದೇವಾ ಬಲಿಮಾವಹಂತಿ** ಎನ್ನುವ ಸರ್ವ ದೇವತೆಗಳಿಂದ ಪೂಜ್ಯತ್ವವನ್ನು ಹೇಳತಕ್ಕ ಶ್ರುತಿಯು ಸರ್ವ ಜೀವವಿಷಯಕವೋ ವಿರಿಂಚ ವಿಷಯಕವೋ ಎಂದು ಸಂದೇಹವು. **ಸರ್ವೇಽಸ್ಮೈ ದೇವಾಃ** ಎನ್ನುವ ಶ್ರುತಿಗೆ ಜೀವಮಾತ್ರ ವಿಷಯಕತ್ವವಿರುವುದರಿಂದ **ಸರ್ವಾನ್ ಕಾಮಾನ್** ಎನ್ನುವ ಶ್ರುತಿಯು **ಶರೀರಭೇದಾದುತ್ಕ್ರಮ್ಯ** ಇತ್ಯಾದಿ ಜೀವಪ್ರಕರಣದಲ್ಲಿದ್ದರೂ ಜೀವರಿಗೆ ಅಂತಹ ಶಕ್ತಿಯನ್ನು ಕಲ್ಪಿಸಿದ್ದರಿಂದಾಗಲೀ ಅಥವಾ ಶಕ್ತಿಯು ಇಲ್ಲವಾದರೂ ಸತ್ಯಕಾಮತ್ವದಿಂದಲೇ ಸರ್ವೈಶ್ವರ್ಯವು ಕೂಡುವುದರಿಂದ ಸರ್ವ ವಾಕ್ಯಕ್ಕೆ ಸಂಕೋಚ ಪ್ರಮಾಣವು ಇಲ್ಲದಿರುವುದರಿಂದ ಮುಕ್ತರು ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡಿಯೇ ಮಾಡುತ್ತಾರೆ, ಎಂದು ಪೂರ್ವಪಕ್ಷವು ಬಂದರೆ **ಮಹಾಚಮಸ್ಯಃ** ಎಂದು ವಿರಿಂಚವಿಷಯಕ ಉಪಕ್ರಮದಿಂದ **ಸರ್ವೇಽಸ್ಮೈ** ಎನ್ನುವ ಶ್ರುತಿಗೆ ವಿರಿಂಚ ವಿಷಯಕತ್ವವಿದ್ದುದರಿಂದ ಸರ್ವ ಮುಕ್ತವಿಷಯಕತ್ವವಿಲ್ಲದಿರುವುದರಿಂದ ಜೀವರಿಗೆ ಸೃಷ್ಟ್ಯಾದಿಗಳನ್ನು ಮಾಡುವ ಶಕ್ತಿಯಿದೆ ಎಂಬುವುದಕ್ಕೆ ಕಲ್ಪಕವಿಲ್ಲದಿರುವುದರಿಂದ ಅಲ್ಲಿ ಸಾಮರ್ಥ್ಯವಿಲ್ಲದಿರುವುದರಿಂದ ಸತ್ಯಕಾಮತ್ವವಾದರೂ **ಸ್ವಾಧಿಕಾನಂದಸಂಪ್ರಾಪ್ತ್ ಸೃಷ್ಟ್ಯಾದಿವ್ಯಾಪೃತಿಷ್ವಪಿ । ಮುಕ್ತಾನಾಂ ನೈವ ಕಾಮೋಽಸ್ತಿ** ಎನ್ನುವ ಸ್ಮೃತಿಯಿಂದ ಸೃಷ್ಟ್ಯಾದಿಗಳಿಂದ ಇತರವಾದ ಕಾಮನಾ ಇರೋಣದರಿಂದ ಕೂಡುತ್ತವೆ. ಆದಕಾರಣ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳನ್ನು ಬಿಟ್ಟು ಇತರ ಕಾಮಗಳನ್ನು ಮುಕ್ತರು ಹೊಂದುತ್ತಾರೆ.

ಮುಕ್ತಿಯಲ್ಲಿ ಮುಕ್ತ ಚತುರ್ಮುಖನಿಗೆ ಸರ್ವ ಮುಕ್ತರ ನಿಯಮನ ವ್ಯಾಪಾರವೂ, ಇತರ ದೇವತೆಗಳಿಗೆ ತಮ್ಮಿಂದ ಅವರರಾದ ಮುಕ್ತರ ನಿಯಮನ ವ್ಯಾಪಾರವೂ ಇದೆ. ॥ಅಧಿ.೯॥

ಜಗದ್ವ್ಯಾಪಾರಾಧಿಕರಣವು ಸಮಾಪ್ತವಾಯಿತು.

## ೧೦ ಸ್ಥಿತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪರಬ್ರಹ್ಮನನ್ನು ಹೊಂದಿರತಕ್ಕ ಮುಕ್ತರಿಗೆ ಭೋಗಾದಿಗಳಿಂದ ವೃದ್ಧಿಹ್ರಾಸಗಳು ಇಲ್ಲವೆಂದು ಸಮರ್ಥಿಸುತ್ತಾರೆ. ಮುಕ್ತರಿಗೆ ಏತತ್ಸಾಮ ಗಾಯನ್ನಾಸ್ತೇ ಇತ್ಯಾದಿಗಳಿಂದ ಉಪಾಸನಾದಿಗಳು ಶ್ರುತಗಳಾಗಿರುವುದರಿಂದ ಆನಂದವೃದ್ಧ್ಯಾದಿಗಳು ಇವೆ. ಇಲ್ಲವಾದರೆ ಉಪಾಸನಾದಿಗಳು ವ್ಯರ್ಥಗಳಾಗಬೇಕಾಗುವವು ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.

### ಸೂತ್ರ ॥ ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ॥ ೨೦ ॥

**ಸೂತ್ರಾರ್ಥ ॥** ಬ್ರಹ್ಮಣಿ ಸಂಪನ್ನೋ ನ ಜಾಯತೇ ಎನ್ನುವ ಶ್ರುತಿಯು ಮುಕ್ತರಿಗೆ ಏಕಪ್ರಕಾರ ವಾಗಿಯೇ ಅವಸ್ಥಿತಿಯನ್ನು ಹೇಳುತ್ತದೆ. ಮಹಾನುಭಾವರ ಪ್ರತ್ಯಕ್ಷವೋ, **ಮುಕ್ತೋ ನ ವೃದ್ಧ್ಯಾದಿಮಾನ್ ತದ್ಧೇತುಶೂನ್ಯತ್ವಾತ್** ಎನ್ನುವ ಅನುಮಾನವೂ ಒಂದೇ ರೀತಿಯಾಗಿ ಸ್ಥಿತಿಯನ್ನು ತೋರಿಸುತ್ತವೆ. ಮಹಾನುಭಾವರಿಗೆ ಪ್ರತ್ಯಕ್ಷವು ಇದೆ ಎನ್ನುವುದು ನ ಹ್ರಾಸೋ ನ ಚ ವೃದ್ಧಿರ್ವಾ ಇತ್ಯಾದಿ ಸ್ಮೃತಿಗಳಿಂದ ಸಿದ್ಧವಾಗುತ್ತದೆ.

**ಭಾಷ್ಯ ॥ (೧) ಏತತ್ಸಾಮ ಗಾಯನ್ನಾಸ್ತೇ (ತೈ.ಉ.೩.೧೦) ಇತ್ಯುಚ್ಯತೇ । (೨) ತತ್ರಾನಂದಾದೀನಾಂ ವೃದ್ಧಿರ್ಹ್ರಾಸಶ್ಚ ನ ವಿದ್ಯತೇ । ಏಕಪ್ರಕಾರೇಣೈವ ಸರ್ವದಾ ಸ್ಥಿತಿಃ । ಸ ಏಷ ಏತಸ್ಮಿನ್ ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ ಸ್ಥಿತ ಏವ ಸರ್ವದಾ ಭವತಿ ದರ್ಶನ್ನೇವ ಬ್ರಹ್ಮ ದರ್ಶನ್ನೇವಾತ್ಮಾನಂ ತಸ್ಯೈವಂ ದರ್ಶಯತೋ ನಾಪತ್ತಿರ್ನ ವಿಪತ್ತಿರಿತ್ಯಾಹ ಜಾಬಾಲಶ್ರುತೌ । (೩) ಯತ್ರ ಗತ್ವಾ ನ ಮ್ರಿಯತೇ ಯತ್ರ ಗತ್ವಾ ನ ಜಾಯತೇ । ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ ॥ ಇತಿ ಮೋಕ್ಷಧರ್ಮೇ ॥ (೪) ವಿದ್ವತ್ಪ್ರತ್ಯಕ್ಷಾತ್ಕಾರಣಾಭಾವಲಿಂಗಾಚ್ಚ ॥ ೧ ॥**

**ಭಾಷ್ಯಾರ್ಥ ॥** (೧) ಯದ್ಯಪಿ ಮುಕ್ತನು ಈ ಸಾಮವನ್ನು ಗಾಯನಮಾಡುತ್ತಾ ಇರುತ್ತಾನೆ. ಇತ್ಯಾದಿಗಳಿಂದ ಮುಕ್ತಿಯಲ್ಲಿ ಮುಕ್ತನಿಗೆ ಸಾಮಗಾಯನಾಖ್ಯವಾದ ಭಗವದುಪಾಸನವು

ಹೇಳಲ್ಪಡುತ್ತದೆ. ಆದಾಗ್ಯೂ ಮುಕ್ತರ ಆನಂದ ಬಲ ಜ್ಞಾನಾದಿಗಳಿಗೆ ವೃದ್ಧಿಹ್ರಾಸಗಳು ಇರುವುದಿಲ್ಲ. ಮತ್ತೆ ಏಕಪ್ರಕಾರವಾಗಿಯೇ ಸರ್ವದಾ ಸ್ಥಿತಿಯು. (೨) ಯಾವಾತನು ಮೋಕ್ಷದಲ್ಲಿ ಬ್ರಹ್ಮನಲ್ಲಿ ಸಂಗತನಾಗಿ (ಅಂದರೆ ಬ್ರಹ್ಮನನ್ನು ಹೊಂದಿದವನಾಗಿ) ಮುಕ್ತನಾಗಿ ದೇಹದಿಂದಲೂ ಹುಟ್ಟುವುದಿಲ್ಲ. ಮರಣವನ್ನು ಹೊಂದುವುದಿಲ್ಲ (ಇಷ್ಟು ಮಾತ್ರವಲ್ಲ) ಆನಂದಾದಿ ಗುಣಗಳಿಂದಲೂ ಹ್ರಾಸವನ್ನು ಹೊಂದುವುದಿಲ್ಲ. ಅಭಿವೃದ್ಧಿಯನ್ನು ಹೊಂದುವುದಿಲ್ಲ. ಮತ್ತೆ ಮುಕ್ತನು ಏಕಪ್ರಕಾರವಾಗಿಯೇ ಇರುತ್ತಾನೆ. ಯದ್ಯಪಿ ಪರಬ್ರಹ್ಮನನ್ನು ವ್ಯಾಪ್ತರೂಪವನ್ನು ಅಥವಾ ಸರ್ವೋತ್ಕೃಷ್ಟನನ್ನಾಗಿ ಉಪಾಸನಾ ಮಾಡಿದವನಾಗಿ ಶ್ರೀಹರಿಯನ್ನು ಸರ್ವ ಸ್ವಾಮಿಯೆಂದು ಉಪಾಸನಾ ಮಾಡುವವನಾಗಿಯೇ ಇರುತ್ತಾನೆ. ತಥಾಚ ಉಪಾಸನರೂಪ ಕಾರಣವಿದ್ದುದರಿಂದ ವೃದ್ಧ್ಯಾದಿಗಳಿಗೆ ಪ್ರಸಕ್ತಿಯು ಇದೆ. ಆದಾಗ್ಯೂ ಹೀಗೆ ಅಪರೋಕ್ಷೀಕರಿಸತಕ್ಕ ಉಪಾಸಕನಾದ ಆ ಮುಕ್ತನ ಆನಂದಕ್ಕೆ ವೃದ್ಧಿಯಿಲ್ಲ. ಆನಂದಹ್ರಾಸವೂ ಇಲ್ಲ ಎಂದು ಜಾಬಾಲ ಶ್ರುತಿಯಲ್ಲಿ ವೇದಪುರುಷನು ಹೇಳಿರುತ್ತಾನೆ. (ಏವಂಚ ಸ ಏಷಃ ಇತ್ಯಾದಿ ಶ್ರುತಿಗಳಲ್ಲಿ ಮುಕ್ತನಿಗೆ ವೃದ್ಧ್ಯಾದ್ಯಭಾವವನ್ನು ಹೇಳಿ ಉಪಾಸನಾ ಇದೆ ಎಂದು ಆಶಂಕಿಸಿಕೊಂಡು ದರ್ಶನ್ನೇವ ಬ್ರಹ್ಮ ಇತ್ಯಾದಿಗಳಿಂದ ಉಪಾಸನಾವುಳ್ಳವನಿಗೂ ವೃದ್ಧಿಹ್ರಾಸಗಳನ್ನು ನಿಷೇಧಿಸಿಯದೆ. (೩) ಯಾವ ಮೋಕ್ಷಕ್ಕೆ ಹೋಗಿ ಆನಂದಾದಿ ಗುಣಗಳಿಗೆ ಹ್ರಾಸವನ್ನು ಹೊಂದುವುದಿಲ್ಲ. ಆನಂದಾದಿ ಗುಣಗಳ ವೃದ್ಧಿಯನ್ನು ಹೊಂದುವುದಿಲ್ಲ ಎಂದು ಮೋಕ್ಷಧರ್ಮದಲ್ಲಿಯೂ ಆನಂದಕ್ಕೆ ವೃದ್ಧಿ ಹ್ರಾಸಗಳು ಇಲ್ಲೆಂದು ವ್ಯಾಸರು ಹೇಳಿರುತ್ತಾರೆ. (೪) (ಈ ವಿಷಯದಲ್ಲಿ ವಿದ್ವತ್ಪ್ರತ್ಯಕ್ಷವನ್ನೂ ಅನುಮಾನವನ್ನೂ ಪ್ರಮಾಣೀಕರಿಸುತ್ತಾರೆ.) ಮಹಾನುಭಾವರಿಗೆ ಪ್ರತ್ಯಕ್ಷವಿಷಯವಾದುದರಿಂದಲೂ, **ಮುಕ್ತಃ ನ ವೃದ್ಧ್ಯಾದಿಮಾನ್ ತತ್ಕಾರಣಶೂನ್ಯತ್ವಾತ್** ಎನ್ನುವ ಅನುಮಾನದಿಂದಲೂ ಮುಕ್ತರ ಆನಂದಾದಿಗಳಿಗೆ ವೃದ್ಧಿಹ್ರಾಸಾದಿಗಳ ಅಭಾವವು ಸಿದ್ಧಿಸುತ್ತದೆ. (ತತ್ತ್ವಪ್ರದೀಪದಲ್ಲಿ—ಅಪತ್ತಿಃ ಅವಿದ್ಯಮಾನಸ್ಯಾಗಮಃ ಅಂದರೆ ಗುಣಗಳ ಅಭಿವೃದ್ಧಿಯು. ವಿಪತ್ತಿಃ ವಿದ್ಯಮಾನಸ್ಯಾಪಗಮಃ, ಅಂದರೆ—ಗುಣಗಳಿಗೆ ಹ್ರಾಸವು.) ॥೧॥

ಪೀಠಿಕೆ ॥ ಪರಪ್ರತ್ಯಕ್ಷವು ನಮಗೆ ಪ್ರತ್ಯಕ್ಷವಾಗದೆ ಇರುವುದಿರಂದ ಆದರಿಂದ ನಮಗೆ ಹೇಗೆ ಅರ್ಥವು ಸಿದ್ಧಿಸುತ್ತದೆ, ಎಂದರೆ ಆ ವಿಷಯದಲ್ಲಿ ಸ್ಮೃತಿಯನ್ನು ತೋರಿಸುತ್ತಾರೆ—

**ಭಾಷ್ಯ ॥ ಬ್ರಹ್ಮವೈವರ್ತೇ ಚ । ನ ಹ್ರಾಸೋ ನ ಚ ವೃದ್ಧಿರ್ವಾ ಮುಕ್ತಾನಾಂ ವಿದ್ಯತೇ ಕ್ವಚಿತ್ । ವಿದ್ವತ್ಪ್ರತ್ಯಕ್ಷಸಿದ್ಧತ್ವಾತ್ಕಾರಣಾಭಾವತೋಽನುಮಾ॥ ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ । ನ ತು ಸಾಧನಭೂತಾ ಸಾ ಸಿದ್ಧಿರೇವಾತ್ರಸಾಯತಃ ॥ ಇತಿ ॥ ೨೧ ॥ ॥ ೨ ॥**

ಭಾಷ್ಯಾರ್ಥ ॥ ಮುಕ್ತರ ಗುಣಗಳಿಗೆ (ವೃದ್ಧಿ ಹ್ರಾಸಾದಿಗಳು ಇಲ್ಲವೆನ್ನುವುದು) ಜ್ಞಾನಿಗಳ ಪ್ರತ್ಯಕ್ಷದಿಂದ ಸಿದ್ಧವಾದ ಪ್ರಯುಕ್ತವೂ ಯಾವ ಕಾಲದಲ್ಲಿಯೂ ವೃದ್ಧ್ಯಾದಿಗಳಿಗೆ ಕಾರಣವಿಲ್ಲವೆಂದು ಪ್ರತಿಪಾದಿಸತಕ್ಕ ಅನುಮಾನವು ಈ ವಿಷಯದಲ್ಲಿ ಯಾವ ಕಾರಣದಿಂದ ಸಾಧಕವಾಗಿ ಪ್ರವೃತ್ತವಾಗುತ್ತದೋ ಆದಕಾರಣ ಮುಕ್ತರ ಗುಣಗಳಿಗೆ ಹ್ರಾಸವಾಗಲಿ ವೃದ್ಧಿಯಾಗಲೀ ಇಲ್ಲವೇ ಇಲ್ಲ. (೨) (ಮುಕ್ತಿಯಲ್ಲಿಯೂ ಉಪಾಸನಾರೂಪವಾದ ಕಾರಣವಿದ್ದ ಪ್ರಯುಕ್ತ ವೃದ್ಧಿಹ್ರಾಸಗಳು ಏಕೆ

ಇರುವುದಿಲ್ಲ ಎಂದರೆ) ಮೋಕ್ಷದಲ್ಲಿ ಮುಕ್ತರಿಂದ ಮಾಡಲ್ಪಡತಕ್ಕ ಸಾರ್ವಕಾಲಿಕವಾದ ಶ್ರೀಹರಿ ವಿಷಯಕವಾದ ಉಪಾಸನೆಯಾದರೂ ಯಾವ ಕಾರಣದಿಂದ ಯಾವಾಗಲೂ ಸುಖಸ್ವರೂಪವೇ ಆಗಿದೆಯೋ, ಆದಕಾರಣ ಸಾಧನಭೂತವಲ್ಲ (ಸುಖರೂಪತ್ವವು ಯಾವುದರಿಂದ ಸಿದ್ಧವಾಗುತ್ತದೆ. ಉಪಾಸನೇಗೆ ಸಾಧನತ್ವವನ್ನು ಏಕೆ ಹೇಳಬಾರದೆಂದರೆ) ಮುಕ್ತಿಯಲ್ಲಿ ಆ ಉಪಾಸನೆಯು ಅತ್ರಸಾಃಭಯರಹಿತವಾದ ಸಿದ್ಧಿಯೇ ಅಂದರೆ, ಮೋಕ್ಷಫಲರೂಪವೇ, ಆದಕಾರಣ, ಸುಖರೂಪವೇ. ಉಪಾಸನೆಯು ವೃದ್ಧಿಹ್ರಾಸ ವಿಷಯದಲ್ಲಿ ಸುಖಕ್ಕೆ ಸಾಧನಭೂತವಲ್ಲ (ಮುಕ್ತಿಗೆ ಅಭಯತ್ವವು **ಅಥ ಸೋಽಭಯಂ ಗತೋ ಭವತಿ** ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ.) ಎಂದು ಬ್ರಹ್ಮವೈವರ್ತದಲ್ಲಿ ಹೇಳಿಯದೆ. ॥೨೧॥ ॥೨॥

**ಪೀಠಿಕೆ** ॥ ಭೋಗವಿಶೇಷವಿದ್ದ ಪ್ರಯುಕ್ತ ಆನಂದವೃದ್ಧ್ಯಾದಿಗಳಲ್ಲಿ ಕಾರಣವಿಲ್ಲವೆಂದು ಹೇಳಕೂಡದು. ಕಾರಣವಿಲ್ಲವೆಂದಂಗೀಕರಿಸಿದರೆ, ಭೋಗವಿಶೇಷ ಪ್ರತಿಪಾದಕ ಶ್ರುತ್ಯಾದಿಗಳಿಂದ ವಿರೋಧವು ಬರುವುದು, ಎಂಬ ಆಶಂಕೆಯನ್ನು ಪರಿಹರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಭೋಗಮಾತ್ರಸಾಮ್ಯಲಿಂಗಾಚ್ಚ ಓಂ ॥ ೨ ॥

**ಸೂತ್ರಾರ್ಥ** ॥ ಭೋಗಮಾತ್ರವು ಮುಕ್ತನ ಆನಂದವೃದ್ಧ್ಯಾದಿಗಳಿಗೆ ಕಾರಣವು ಅಲ್ಲ ಎನ್ನುವಲ್ಲಿ ಲಿಂಗವಿದ್ದ ಪ್ರಯುಕ್ತ (ಅಂದರೆ, **ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ** ಎನ್ನುವ ಶ್ರುತಿಯಲ್ಲಿ ಮುಕ್ತನಿಗೆ ಆನಂದ ವೃದ್ಧ್ಯಾದ್ಯಭಾವೋಕ್ತಿಪೂರ್ವಕವಾಗಿ ಭೋಗಭಾವ ಅಭಾವಗಳನ್ನು ಹೇಳಿದ್ದರಿಂದ ಭೋಗವಿಶೇಷವು ಆನಂದವೃದ್ಧ್ಯಾದಿಗಳಿಗೆ ಕಾರಣವಲ್ಲ ಎನ್ನುವ ಅರ್ಥದಲ್ಲಿ ಲಿಂಗವದೆ.) (ತಥಾಚ, ಭೋಗವಿಶೇಷವು ಆನಂದವೃದ್ಧ್ಯಾದಿಗಳಲ್ಲಿ ಕಾರಣವಾದರೆ ಭೋಗವು ಉಪರತವಾಗುವಾಗ ಆನಂದಹ್ರಾಸವು ಆಗಬೇಕಾಗುವುದು. ಹ್ರಾಸವಿಲ್ಲವೆಂದು ಶ್ರುತವಾಗಿದೆ. ಆದಕಾರಣ ಭೋಗಭೋಗಾಭಾವಗಳು ಆನಂದಾದಿಗಳ ವೃದ್ಧಿಹ್ರಾಸಗಳನ್ನು ಕುರಿತು ಕಾರಣವೆಂದು ಕಲ್ಪಿಸಕೂಡದು. ಏವಂಚ ಭೋಗವು ಆನಂದಾದಿಗಳಿಗೆ ಕಾರಣವಲ್ಲ. ಮತ್ತೆ ಆನಂದಾದಿ ಕಾರ್ಯವು. ಅಂತೂ ಮುಕ್ತನು ಆನಂದ ವೃದ್ಧಿಹ್ರಾಸವುಳ್ಳವನು ಆಗುವುದಿಲ್ಲ ಕಾರಣವಿಲ್ಲದಿರುವುದರಿಂದ, ಎನ್ನುವ ಅನುಮಾನವು ಸಿದ್ಧವಾಯಿತು. ಏವಂಚ ಈ ಸೂತ್ರವು ಸರ್ವಮುಕ್ತರಿಗೆ ಮುಕ್ತಿಯಲ್ಲಿ ಆನಂದ ಸಾಮ್ಯಬೋಧಕವು ಎಂದು ಹೇಳಲು ಶಕ್ಯವಾಗುವುದಿಲ್ಲ) ॥೨॥

**ಭಾಷ್ಯ ॥ ನ ಚ ಭೋಗವಿಶೇಷಾದಿವಿರೋಧಃ । ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ ಯಥಾಕಾಮಂ ಪಿಬತಿ ಯಥಾಕಾಮಂ ರಮತೇ ಯಥಾಕಾಮಮುಪರಮತೇ॥ (ತೈ.ಉ.೨.೮) ಇತಿ ಭೋಗಮಾತ್ರಸಾಮ್ಯಲಿಂಗಾತ್ ॥ ೩ ॥**

ಭಾಷ್ಯಾರ್ಥ ॥ ಮುಕ್ತನಿಗೆ ಆನಂದವೃದ್ಧ್ಯಾದಿಗಳಿಗೆ ಕಾರಣವಿಲ್ಲವೆಂದು ಅಂಗೀಕರಿಸಿದರೆ—

ಭೋಗಾತಿಶಯ, ಭೋಗಾಭಾವಾದಿಗಳಿಗೆ ಅನುಪಪತ್ತಿಯಿಲ್ಲ ಏಕೆಂದರೆ—ಮುಕ್ತಭೋಗ ವಿಶೇಷಾದಿಗಳು ಮುಕ್ತ ಆನಂದಾದಿಗಳ ವೃದ್ಧಿಹ್ರಾಸಗಳಿಗೆ ಕಾರಣವಲ್ಲ. (ಹೇಗೆ ತಿಳಿಯುತ್ತದೆ ಎಂದರೆ) ಸಾಯುಜ್ಯ ಮುಕ್ತನು ಆನಂದಪೂರ್ಣನಾದ ಈ ಪರಮಾತ್ಮನನ್ನು ಪ್ರವೇಶಮಾಡಿ ಪುನಃ ದೇಹದಿಂದ ಹುಟ್ಟುವುದಿಲ್ಲ, ಆನಂದರೂಪ ಗುಣದಿಂದ ಕ್ಷೀಣನಾಗುವುದಿಲ್ಲ, ಆನಂದದಿಂದ ಅಭಿವೃದ್ಧನಾಗುವುದಿಲ್ಲ. ಯಥೇಚ್ಛವಾಗಿ ಭಕ್ಷಿಸುತ್ತಾನೆ. ಇಚ್ಛಾನುಸಾರವಾಗಿ ಪಾನಮಾಡುತ್ತಾನೆ. ಯಥೇಚ್ಛವಾಗಿ ಕ್ರೀಡಿಸುತ್ತಾನೆ. (ಅಂದರೆ (ಭೋಗವಿಶೇಷವನ್ನು ಹೊಂದುತ್ತಾನೆ) ಸರ್ವ ಭೋಗವಿಶೇಷಗಳಿಂದ ನಿವೃತ್ತಿಯನ್ನು ಹೊಂದುತ್ತಾನೆ. ಎನ್ನುವ ಶ್ರುತಿಯಲ್ಲಿ ಭೋಗಮಾತ್ರ ಸಾಮ್ಯಲಿಂಗಾತ್, ಭೋಗಮಾತ್ರಃ ರಮಣ ಪಾನಾದ್ಯನೇಕ ವಿಶೇಷಗಳಿಂದ ಯುಕ್ತವಾದ ಭೋಗಸಾಮಾನ್ಯಕ್ಕೆ ಏತಮಾನಂದಂ ಎನ್ನುವ ಶ್ರುತಿಯಲ್ಲಿ ರಮತೇ, ಉಪರಮತೇ ಎಂದು ವಿಷಯಭೋಗ ಭಾವಾಭಾವಗಳನ್ನು ಹೇಳಿದ್ದರಿಂದ ಸೂಚಿತವಾದ ಭೋಗವಿಶೇಷವು ಭೋಗವಿಶೇಷಾಭಾವವು ಇದ್ದರೂ (ಸಾಮ್ಯಲಿಂಗಾತ್) ಮುಕ್ತಸ್ವರೂಪಾನಂದಾದಿಗಳಿಗೆ ನ ಹ್ರಸತೇ ನ ವರ್ಧತೇ ಎಂದು ವೃದ್ಧ್ಯಾದಿ ಶೂನ್ಯತ್ವರೂಪವಾದ ಯಾವುದು ಸಾಮ್ಯವು ಉಕ್ತವಾಗಿಯದೋ, ಈ ಲಿಂಗದಿಂದಲೇ ಭೋಗಮಾತ್ರ ವಿಶೇಷಕ್ಕೆ ಮೌಕ್ತಾನಂದವೃದ್ಧ್ಯಾದ್ಯಕಾರಣತ್ವಕ್ಕೆ ಜ್ಞಾಪಕವಾದ ಭೋಗವಿಶೇಷಾದಿಗಳಿಂದ ವೃದ್ಧ್ಯಾದ್ಯಕಾರಣತ್ವವಿಲ್ಲದ ವೃದ್ಧ್ಯಾದಿ ಕಾರಣವು ಇದ್ದರೆ ಕಾರ್ಯಾಭಾವವು ಅನುಪಪನ್ನವು ಎನ್ನುವ ಲಿಂಗದಿಂದ ಭೋಗವಿಶೇಷವು ವೃದ್ಧ್ಯಾದಿಗಳಿಗೆ ಕಾರಣವಲ್ಲ (ಏವಂಚ ಮುಕ್ತನಿಗೆ ಆನಂದ ವೃದ್ಧ್ಯಾದಿಗಳಿಗೆ ಕಾರಣಗಳು ಇಲ್ಲವೆಂದಂಗೀಕರಿಸಿದರೆ ಭೋಗವಿಶೇಷ ಪ್ರತಿಪಾದಕವಾದ ಶುತ್ಯಾದಿಗಳಿಂದ ವಿರೋಧವಿಲ್ಲ. ಏತಮಾನಂದಂ ಎನ್ನುವ ಶ್ರುತಿಯು ಮುಕ್ತನ ಆನಂದಾದಿಗಳಿಗೆ ವೃದ್ಧ್ಯಾದ್ಯಭಾವವನ್ನು ಹೇಳಿ ಯಥಾಕಾಮಂ ರಮತೇ ಇತ್ಯಾದಿಗಳಿಂದ ಭೋಗವಿದೆ ಎಂದೂ ಯಥಾಕಾಮಮುಪರಮತೇ ಇತ್ಯಾದಿಗಳಿಂದ ಭೋಗವಿಲ್ಲವೆಂದೂ ಹೇಳಿದ್ದರಿಂದ ಭೋಗಮಾತ್ರದಲ್ಲಿ ವಿಶೇಷವಿದ್ದರೂ ಮುಕ್ತನಿಗೆ ಏಕಪ್ರಕಾರತಾರೂಪವಾದ ಸಾಮ್ಯವು ತಿಳಿದುಬರುತ್ತದೆ. ಈ ಭೋಗಮಾತ್ರ ಸಾಮ್ಯವು ಭೋಗವಿಶೇಷವು ಮುಕ್ತನಿಗೆ ಆನಂದವೃದ್ಧ್ಯಾದಿಗಳಲ್ಲಿ ಕಾರಣವಲ್ಲ ಎನ್ನುವಲ್ಲಿ ಲಿಂಗವಾಗುತ್ತದೆ. ಇಲ್ಲವಾದರೆ ಸಾಮ್ಯವೇ ಅನುಪಪನ್ನವು. ಆದಪ್ರಯುಕ್ತ ಈ ಭೋಗಮಾತ್ರ ಸಾಮ್ಯರೂಪವಾದ ಲಿಂಗದೆಶೆಯಿಂದ ಮುಕ್ತರ ಭೋಗವಿಶೇಷವು ಆನಂದಾದಿಗಳ ವೃದ್ಧ್ಯಾದಿಗಳಿಗೆ ಕಾರಣವಾಗದಿರುವುದರಿಂದ ಅಲ್ಲಿ ಕಾರಣವು ಇಲ್ಲವೆಂದಂಗೀಕರಿಸಿದ್ದರಿಂದ ಭೋಗವಿಶೇಷ ಶ್ರುತಿಯಿಂದ ವಿರೋಧವು. ॥೩॥

ಪೀಠಿಕೆ ॥ ಭೋಗವು ಆನಂದವೃದ್ಧಿಗೆ ಕಾರಣವು ಅಲ್ಲ ಎಂದಾದರೆ, ವ್ಯರ್ಥವಾದ ಭೋಗವನ್ನು ಮುಕ್ತರು ಏಕೆ ಮಾಡುತ್ತಾರೆ, ಎಂದರೆ ಕ್ರೀಡೆಯಿಂದ ಎಂದು ಪರಿಹಾರವಿರುತ್ತಿರಲು ಮುಕ್ತವಿರಿಂಚನಿಂದ ಇತರರಾದ ಮುಕ್ತರಿಗೆ ಚ ಶಬ್ದಸೂಚಿತವಾದ ವಿಶೇಷವನ್ನು ಹೇಳುತ್ತಾರೆ—

**ಭಾಷ್ಯ ॥ ಅವೃದ್ಧಿಹ್ರಾಸರೂಪತ್ವಂ ಮುಕ್ತಾನಾಂ ಪ್ರಾಯಿಕಂ ಭವೇತ್ ।**
**ಕಾದಾಚಿತ್ಕವಿಶೇಷಸ್ತು ನೈವ ತೇಷಾಂ ನಿಷಿಧ್ಯತೇ ॥ ಇತಿ (ಚ) ಕೌರ್ಮೇ ॥ ೪ ॥**

ಭಾಷ್ಯಾರ್ಥ ॥ ವಿರಿಂಚನಿಂದ ಇತರರಾದ ಮುಕ್ತರಿಗೆ ವೃದ್ಧಿಹ್ರಾಸ ರಹಿತವಾದ ಜ್ಞಾನಾದಿ ಧರ್ಮವತ್ವವು ಬಾಹುಲ್ಯೇನ ಸಾರ್ವಕಾಲಿಕವು ಆಗುವುದು. ಕದಾಚಿತ್ ಇರತಕ್ಕ ವೃದ್ಧ್ಯಾದಿಗಳಾದರೂ

ವಿರಿಂಚನಿಂದ ಇತರರಾದ ಮುಕ್ತರಿಗೆ ನಿಷೇಧಿಸಲ್ಪಡುವುದೇ ಇಲ್ಲ. ಮತ್ತೆ ಅಂಗೀಕರಿಸಲ್ಪಡುತ್ತದೆ, ಎಂದು ಕೌರ್ಮ ಪುರಾಣದಲ್ಲಿ ಹೇಳಿದೆ. ॥೪॥

**ಪೀಠಿಕೆ ॥** ಮುಕ್ತರಿಗೆ ಅಭಿವೃದ್ಧಿಹ್ರಾಸರೂಪತ್ವವು ಬಾಹುಲ್ಯೇನ ಸಾರ್ವಕಾಲಿಕವು ಎಂದು ಹೇಳಿದ್ದನ್ನು ಸ್ಮೃತ್ಯಂತರದಿಂದ ವಿವರಿಸುತ್ತಾರೆ—

**ಭಾಷ್ಯ ॥ ಪ್ರವಾಹತಸ್ತು ವೃದ್ಧಿರ್ವಾ ಹ್ರಾಸೋ ನೈವಾಸ್ತಿ (ಹ್ರಾಸೋ ವಾ ನೈವ) ಕುತ್ರಚಿತ್ । ನಾಪ್ರಿಯಂ ಕಂ(ಕಿಂ) ಚಿದಪಿ ತು ಮುಕ್ತಾನಾಂ ವಿದ್ಯತೇ ಕ್ವಚಿತ್॥ ಕುತ ಏವ ತು ದುಃಖಂ ಸ್ಯಾತ್ಸುಖಮೇವ ಸದೋದಿತಂ। ಭೋಗಾನಾಂ ತು ವಿಶೇಷೇ ತು(ಷು) ವೈಚಿತ್ರ್ಯಂ ಲಭ್ಯತೇ ಕ್ವಚಿತ್॥ ಇತಿ ನಾರಾಯಣತಂತ್ರೇ ॥ ೨೨ ॥ ॥ಅಧಿ.೧೦ ॥ ॥ ೫ ॥**

**ಭಾಷ್ಯಾರ್ಥ ॥** ಹೇಗೆ ಕಾವೇರ್ಯಾದಿ ಪ್ರವಾಹಕ್ಕೆ ಕದಾಚಿತ್ ವೃದ್ಧಿಯು, ಕದಾಚಿತ್ ಹ್ರಾಸವೋ ಹೀಗೆಯೇ ಮುಕ್ತರಿಗೆ ತಮ್ಮ ಗುಣಾದಿಗಳಲ್ಲಿ ಸಾಮಗ್ರ್ಯವಿಶೇಷದಿಂದ ಯಾವಾಗಲಾದರೂ ಯಾವ ಗುಣದಲ್ಲಿಯೂ ವೃದ್ಧಿಯಾಗಲೀ ಹ್ರಾಸವಾಗಲೀ ಇಲ್ಲವೇ ಇಲ್ಲ. ಅಥವಾ ಪ್ರಾಯಶಃ ಮುಕ್ತರ ಗುಣಗಳಲ್ಲಿ ವೃದ್ಧಿಯು ಇಲ್ಲವೇ ಇಲ್ಲ. ಭೋಗಾದಿಗಳಿಂದಲಾದರೂ ಕೆಲವು ಗುಣಗಳಿಗೆ ಕ್ವಚಿತ್ ವೃದ್ಧಿಯಾಗುತ್ತದೆ. ಅದು ಪ್ರವಾಹತಃ ಅನಂತಕಾಲೀನವು. (ಈ ಅಭಿಪ್ರಾಯದಿಂದಲೇ ನ ಹಾಸ್ಯ ಕರ್ಮ ಕ್ಷೀಯತೇ ಎಂದು ಶ್ರುತಿಯು.) ಹ್ರಾಸವಾದರೂ ಮುಕ್ತರಿಗೆ ಯಾವ ಗುಣದಲ್ಲಿಯೂ ಯಾವ ಕಾಲದಲ್ಲಿಯೂ ಸರ್ವಥಾ ಇಲ್ಲವೇ ಇಲ್ಲ. ಹೀಗೆಯೇ ಯಾವುದೊಂದು ಅಪ್ರಿಯವೂ ಇಲ್ಲವೇ ಇಲ್ಲ. ದುಃಖವಾದರೂ ಯಾವುದರಿಂದ ಆಗುವುದು? ಮತ್ತೆ ಸರ್ವದಾ ಅಭಿವ್ಯಕ್ತವಾದ ಸುಖವೇ ಆಗುವುದು. ಭೋಗಗಳಿಗಾದರೂ ವೈಚಿತ್ರ್ಯಗಳು ಇದ್ದರೆ ಆನಂದದಲ್ಲಿ ಕಿಂಚಿತ್ ವಿಶೇಷವು ಸಿದ್ಧಿಸುತ್ತವೆ. (ತಥಾಚ ಹೇಗೆ ಒಂದೇ ಸುವರ್ಣಕ್ಕೆ ಅಂಗುಲೀಯಾತ್ಮಕತ್ವವೂ ಕುಂಡಲಾತ್ಮಕತ್ವವೂ ಇದೆಯೋ, ಹಾಗೆಯೇ ಚೂತಫಲ ಭಕ್ಷಣಾದಿ ಪ್ರಯುಕ್ತವಾದ ಯಾವುದು ಆನಂದವಿಶೇಷವೋ, ತದಾತ್ಮಕತ್ವ ರೂಪವಾದ ವೈಚಿತ್ರ್ಯವೊಂದೇ ವ್ಯಕ್ತವಾದ ಆನಂದವಾಗಿ ಲಬ್ಧವಾಗುತ್ತದೆ, ಎಂದು ನಾರಾಯಣತಂತ್ರ ಎನ್ನುವ ಗ್ರಂಥದಲ್ಲಿ ಉಕ್ತವಾಗಿದೆ. ॥೨೨॥ ॥೫॥

## ಅಧಿಕರಣ ಸಾರಾಂಶ

ಮುಕ್ತರು ಆನಂದವೃದ್ಧಿಹ್ರಾಸವುಳ್ಳವರೋ ಆನಂದವೃದ್ಧಿಹ್ರಾಸ ಇಲ್ಲದಿರುವವರೋ, ಅದಕ್ಕಾಗಿ ಅವರ ಉಪಾಸನಾದಿಗಳು ವೃದ್ಧ್ಯಾದಿಗಳಿಗೆ ಕಾರಣಗಳು ಆಗುತ್ತವೋ ಇಲ್ಲವೋ, ಎಂದು ಸಂದೇಹವು ವಿತತ್ಸಾಮ ಗಾಯನ್ನಾಸ್ತೇ ಇತ್ಯಾದಿಗಳಲ್ಲಿ ಮುಕ್ತರಿಗೆ ಉಪಾಸನಾದಿಗಳು ಶ್ರುತಗಳಾಗಿರುವುದರಿಂದ ಅವುಗಳಿಗೆ ವೈಯರ್ಥ್ಯವು ಕೂಡದಿರುವುದರಿಂದ ಅವಶ್ಯವಾಗಿ ಫಲವನ್ನು ಹೇಳಬೇಕಾಗಿರುವುದರಿಂದ ಮುಕ್ತರಿಗೆ ವಶಿತ್ವರೂಪವಾದ ಐಶ್ವರ್ಯಬಲದಿಂದ ಕಾಮಿತಗಳಾದ ಅಶೇಷ ಪೂರ್ಣ ಭೋಗವಿಶೇಷಗಳು ಇದ್ದುದರಿಂದಲೂ ಆನಂದವು ವೃದ್ಧಿಹ್ರಾಸವುಳ್ಳದ್ದು ಎಂದು ಪೂರ್ವಪಕ್ಷವು

ಬಂದರೆ—ಮುಕ್ತಾನಂದವು ಒಂದೇ ರೀತಿಯಿಂದಲೇ ಸ್ಥಿತಿಯುಳ್ಳದ್ದು. **ಸ ಏಷಃ** ಎನ್ನುವ ಭಾಷ್ಯೋಕ್ತ ಶ್ರುತಿಯಲ್ಲಿ ಆನಂದಕ್ಕೆ ವೃದ್ಧ್ಯಾದಿಗಳು ಇಲ್ಲವೆಂದು ಹೇಳಿದ **ದರ್ಶನ್ನೇವಾತ್ಮಾನಂ** ಎಂದು ಉಪಾಸನಾವುಳ್ಳವರಿಗೂ ವೃದ್ಧಿಹ್ರಾಸಗಳನ್ನು ನಿಷೇಧಮಾಡಿದ್ದರಿಂದ ಮಹಾನುಭಾವರ ಪ್ರತ್ಯಕ್ಷದಿಂದ, **ಮುಕ್ತಃ ನ ವೃದ್ಧ್ಯಾದಿಮಾನ್ ಕಾರಣತೂನ್ಯತ್ವಾತ್** ಎನ್ನುವ ಅನುಮಾನದಿಂದಲೂ ವೃದ್ಧ್ಯಾದಿಗಳು ಇಲ್ಲವೆಂದು ಸಿದ್ಧವಾಗುತ್ತದೆ. **ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ** ಎನ್ನುವ ಸ್ಮೃತಿಯಿಂದ ಮುಕ್ತಿಕಾಲೀನವಾದ ಉಪಾಸನೆಯು ಸ್ವಯಂ ಫಲರೂಪವಾದುದರಿಂದ ಫಲಾಂತರಕ್ಕೆ ಸಾಧನವಾಗಲಾರದು. ತಮ್ಮ ಅಧೀನದಲ್ಲಿದ್ದುದರಿಂದ ಕಾಮಿತಗಳಾದ ಅಶೇಷ ಭೋಗಗಳು ಪ್ರಾಪ್ತಗಳಾಗುವುವಾದರೂ ಅಯೋಗ್ಯದಲ್ಲಿ ಕಾಮನಾ ಇಲ್ಲದಿರುವುದರಿಂದ ಯೋಗ್ಯವಾದುದು ಪ್ರಾಪ್ತವಾದ ಪ್ರಯುಕ್ತ **ಅವೃದ್ಧಿಹ್ರಾಸರೂಪತ್ವಂ ಮುಕ್ತಾನಾಂ ಪ್ರಾಯಿಕಂ ಭವೇತ್ । ಕದಾಚಿತ್ಕವಿಶೇಷಸ್ತು ನೈವ ತೇಷಾಂ ನಿಷಿದ್ಧ್ಯತೇ** ಎಂದು ಹೇಳಿದ ಪ್ರಕಾರ ವೃದ್ಧಿಹ್ರಾಸವಿಲ್ಲದಿರುವ ಸ್ವರೂಪ ಸುಖಾನುಭವವೇ ಉಪಪನ್ನವಾಗುವುದು. ॥ಅಧಿ.೧೦॥

**ಸ್ಥಿತ್ಯಧಿಕರಣವು ಸಮಾಪ್ತವಾಯಿತು.**

# ೧೧ ಅನಾವೃತ್ತ್ಯಧಿಕರಣವು

**ಪೀಠಿಕೆ ॥** ಈ ಅಧಿಕರಣದಲ್ಲಿ ಪರಬ್ರಹ್ಮನನ್ನು ಹೊಂದಿ ಭೋಗಗಳನ್ನು ಭೋಗಿಸತಕ್ಕ ಮುಕ್ತರಿಗೆ ಅಪುನಾವೃತ್ತಿಯನ್ನು ಸಮರ್ಥಿಸುತ್ತಾರೆ. ಸ್ವರ್ಗಾದಿಲೋಕಗಳನ್ನು ಹೊಂದಿದವರಿಗೆ ಪುನರಾವೃತ್ತಿಯು ಕಂಡದ್ದರಿಂದ ಮುಕ್ತರಿಗೆ ಮುಕ್ತಿಯಿಂದಲೂ ಪುನರಾವೃತ್ತಿಯು ಇದೆ. ಸ್ವರ್ಗಾದಿಲೋಕಗಳನ್ನು ಹೊಂದಿದವರು ಯುಗ ಮನ್ವಂತರಾದಿಗಳಲ್ಲಿ ಮಾತ್ರ ಆವಾಸಮಾಡತಕ್ಕವರಾದುದರಿಂದ ಅವರಿಗೆ ಪುನರಾವೃತ್ತಿಯು ಯುಕ್ತವೇ. ಮುಕ್ತರಾದರೂ ಸಮಸ್ತ ಕಾಲಗಳಲ್ಲಿಯೂ ಆವಾಸಮಾಡತಕ್ಕವರಾದುದರಿಂದ ಅವರಿಗೆ ಪುನರಾವೃತ್ತಿಯು ಯುಕ್ತವಲ್ಲ ಎಂದು ಹೇಳಕೂಡದು. ಸಮಸ್ತ ಕಾಲಕ್ಕೂ ಕದಾಚಿತ್ ಸಮಾಪ್ತಿಯು ಕೂಡಬಹುದು. ಕಾಲವು ಅನಂತವಾದ ಪ್ರಯುಕ್ತ ಸಮಾಪ್ತಿಯು ಕೂಡುವುದಿಲ್ಲವೆಂದು ಅಲ್ಲ. ಭಾರತ ಯುದ್ಧದಲ್ಲಿ ದುರ್ಯೋಧನನ ಪಾತಸಮಯದಲ್ಲಿ ಮಹೋತ್ಪಾತವನ್ನು ಸೂಚಿಸುವುದಕ್ಕಾಗಿ ತ್ರಯೋದಶಿಗೇನೇ (೧೩.ನೇ ದಿನಕ್ಕೇನೇ) ಚತುರ್ದಶೀತ್ವವೂ ೧೫ನೇ ದಿವಸತ್ವವೂ ದೃಷ್ಟವಾಗಿದೆ. ಅಂದರೆ ತ್ರಯೋದಶಿಯಲ್ಲಿ ಚತುರ್ದಶಿಯೂ ಅಮಾವಾಸ್ಯೆಯೂ ಸೇರುತ್ತದೆ. ಏವಂಚ ೧೩, ೧೪, ೧೫. ಈ ೩ ಮೂರು ತಿಥಿಗಳು ಏಕಕಾಲದಲ್ಲಿ ಸಮಾಪ್ತಿಯಾಗುವಂತೆ, ಕಾಲವು ಅನಂತವಾದಾಗ್ಯೂ ಸಮಸ್ತ ಕಾಲಕ್ಕೂ ಏಕಕಾಲದಲ್ಲಿ ಸಮಾಪ್ತಿಯು ಕೂಡಬಹುದು. **ಚತುರ್ದಶೀಂ ಪಂಚದಶೀಂ ಭೂತಪೂರ್ವಾಂ ತು ಷೋಡಶೀಂ। ಇಮಾಂ ತು ನಾಭಿಜಾನಾಮಿ ಅಮಾವಾಸ್ಯಾಂ ತ್ರಯೋದಶೀಂ॥** ಪಾಡ್ಯವನ್ನಾರಂಭಿಸಿ ೧೫ನೇ ದಿನದಲ್ಲಿ ಆಗಲಿಕ್ಕೆ ಯೋಗ್ಯವಾದ ಅಮಾವಾಸ್ಯೆಯನ್ನು ತಿಥಿಕ್ಷಯ ಪಕ್ಷದಲ್ಲಿ ೧೪ನೇ ದಿನದಲ್ಲಿ ಬಂದದ್ದನ್ನು ತಿಳಿದಿರುತ್ತೇನೆ. ವೃದ್ಧಿಪಕ್ಷದಲ್ಲಿ ೧೬ನೇ ದಿನದಲ್ಲಿ ಬಂದದ್ದನ್ನು ತಿಳಿದಿರುತ್ತೇನೆ. ಆದರೆ ಇಂತಹ ಅವಸ್ಥೆಯನ್ನು ಅಂದರೆ ಅಮಾವಾಸ್ಯೆಯನ್ನು

ತ್ರಯೋದಶಿಯಲ್ಲಿಯೇ (೧೩ನೇ ದಿನದಲ್ಲಿಯೇ) ಬಂದದ್ದನ್ನು ನಾನು ತಿಳಿಯಲಿಲ್ಲ ಎಂದು ಭಾರತದಲ್ಲಿ ವೇದವ್ಯಾಸ ದೇವರಿಂದ ಉಕ್ತವಾಗಿದೆ, ಎಂದು ಭಾರತದಲ್ಲಿ ಉಕ್ತವಾಗಿದೆ. ಆದಕಾರಣ ಮುಕ್ತಿಯಲ್ಲಿ ಪುನರಾವೃತ್ತಿಯು ಇದ್ದುದರಿಂದ ಮುಕ್ತಿಗೆ ಪುರುಷಾರ್ಥತ್ವವು ಇಲ್ಲ ಎಂದು ಪೂರ್ವಪಕ್ಷವು ಬಂದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

## ಸೂತ್ರ ॥ ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ ॥ ೨೩ ॥

ಸೂತ್ರಾರ್ಥ ॥ ಮುಕ್ತರಿಗೆ ಸರ್ವಕಾಲವೂ ಸಮಾಪ್ತಿಯಾಗಿ ಸ್ವರ್ಗಿಗಳಂತೆ ಪುನರಾವೃತ್ತಿಯಿಲ್ಲ ಮತ್ತೂ (ಸಂಸಾರದಲ್ಲಿ ಭ್ರಮಣವಿಲ್ಲ ನ ಚ ಪುನರಾವರ್ತತೇ ಎನ್ನುವ ಶ್ರುತಿಯಿಂದಲೂ ಸರ್ವಾನ್ ಕಾಮಾನಾಪ್ತ್ವಾ ಎನ್ನುವ ಶ್ರುತಿಯಿಂದಲೂ. ಏವಂಚ ಅಪುನರಾವೃತ್ತಿಬೋಧಕ ಶ್ರುತಿಯಿದಲೂ ಸರ್ವಕಾಮಪ್ರಾಪ್ತಿ ಪ್ರತಿಪಾದಕ ಶ್ರುತಿಯಿಂದಲೂ ಸರ್ವಪಾಪಗಳಿಗೆ ನಾಶಪೂರ್ವಕವಾಗಿ ಅನಂತಲೋಕಪ್ರಾಪ್ತಿಯನ್ನು ಬೋಧಿಸತಕ್ಕ ಶ್ರುತಿಯಿಂದಲೂ.

**ಭಾಷ್ಯ ॥ (೧) ನ ಚ ಪುನರಾವರ್ತತೇ ನಚ ಪುನರಾವರ್ತತೇ** (ಛಾ.೮.೧.೫.೧) **(೨) ಸರ್ವಾನ್‌ಕಾಮಾನಾಪ್ತ್ವಾಽಮೃತಃ ಸಮಭವತ್ಸಮ ಭವತ್** (ಐ.ಆ.೨೫.೧.೧೫) **ಇತ್ಯಾದಿ ಶ್ರುತಿಭ್ಯಃ ॥ ೨೩ ॥ ಅಧಿ.೧೧ ॥** **॥ ೧ ॥**

ಭಾಷ್ಯಾರ್ಥ ॥ (೧) (ಮುಕ್ತರಿಗೆ ಅಪುನರಾವೃತ್ತಿಯೇ ಅಂದರೆ ಭಾರತ ಯುದ್ಧದಲ್ಲಿದ್ದಂತೆ ಏಕಕಾಲದಲ್ಲಿ ಸರ್ವಕಾಲವೂ ಸಮಾಪ್ತಿಯಾಗುವುದರಿಂದ ಸ್ವರ್ಗದಂತೆ ಮುಕ್ತಸ್ಥಾನದಿಂದ ಸಂಸಾರಕ್ಕೆ ಪುನರಾವೃತ್ತಿಯು ಇಲ್ಲವೇ ಇಲ್ಲ) (೧) (**ಸಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕ ಮಭಿಸಂಪದ್ಯತೇ** ಎನ್ನುವ ಪೂರ್ವವಾಕ್ಯದಲ್ಲಿ ಪ್ರಕೃತನಾದ ಮುಕ್ತನು) ಬ್ರಹ್ಮಲೋಕವನ್ನು ಬಿಟ್ಟು ಪುನಃ ಸಂಸಾರವನ್ನು ಕುರಿತು ಬರುವುದೇ ಇಲ್ಲ (೨) (**ಸಯಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವ ಮುತ್ಕ್ರಮ್ಯಾಮುಷ್ಮಿನ್ ಸ್ವರ್ಗೇಲೋಕೇಸರ್ವಾನ್‌ಕಾಮಾನ್**= ಆ ಉಪಾಸಕನು ಹೀಗೆ (ಸ) ತಿಳಿದವನು ಈ ಶರೀರ ಸಂಬಂಧದಿಂದ ಬ್ರಹ್ಮನಾಡಿಯಿಂದಲೂ ರ್ಧ್ವ (ಲೋಕಕ್ಕೆ ಹೊರಟುಹೋಗಿ ಸ್ವರ್ ಆನಂದಃ ವಿಷ್ಣುಃ ಅತ್ರಗತಃ ಎನ್ನುವವ್ಯುತ್ಪತ್ತಿಯಿಂದ ಸ್ವರ್ಗೇಲೋಕೇ= ವಿಷ್ಣುಲೋಕದಲ್ಲಿ) ಮುಕ್ತನಾಗಿ ಅಪೇಕ್ಷಿತ ಸರ್ವವಸ್ತುಗಳನ್ನು ಸ್ವೀಕರಿಸಿ ಅಂತಹ ಎಲ್ಲಾ ಕಾಮಗಳನ್ನು ಅನುಭವಿಸುತ್ತಾನೆ. ಇದು ಮೊದಲಾದ (ಆದಿಪದದಿಂದ **ಯೋವಾ ಏತಾಮುಪನಿಷದಂ ವೇದಾಪಹತ್ಯಪಾಪ್ಮಾನ ಮನಂತೇ ಸ್ವರ್ಗೇಲೋಕೇಜ್ಯೇಯೇ ಪ್ರತಿತಿಷ್ಠತಿ** ಎಂದು ತತ್ವಪ್ರದೀಪದಲ್ಲಿ ಉದಾಹೃತವಾದ ತಳವಕಾರ ಶ್ರುತಿಯು ಗೃಹೀತವಾಗುತ್ತದೆ. ಸ್ವರ್ಗೇ=ಸ್ವರೂಪಭೂತ ರಮಣಜ್ಞಾನಗಳುಳ್ಳ ಲೋಕೇ=ಪ್ರಕಾಶರೂಪನಾದ ಶ್ರೇಷ್ಠನಾದ ವಿಷ್ಣುವಿನಲ್ಲಿ ಇರುತ್ತಾನೆ.) ಶ್ರುತಿಗಳಿಂದ (ಏವಂಚ ಮುಕ್ತರಿಗೆ ಪುನರಾವೃತ್ತಿ ಇಲ್ಲ. ಅಪುನರಾವೃತ್ತಿಯೂ ಕಾಮವಿಷಯವಾಗಿದೆ. ಯಾರೊಬ್ಬನೂ ಶುಭದೆಸೆಯಿಂದ ಪುನರಾವೃತ್ತಿಯನ್ನು ಇಚ್ಛಿಸಲಾರನು. ಮುಕ್ತರು ಸಂಪೂರ್ಣ ಸತ್ಯಕಾಮರಾದುದರಿಂದ ಮುಕ್ತರಿಗೆ ಪುನಃ ಸಂಸಾರ ಸಂಪರ್ಕವಿರುವುದಿಲ್ಲ) ॥೨೩॥ ॥೧೧॥

## ಅಧಿಕರಣ ಸಾರಾಂಶ

ಮುಕ್ತನು ಜನ್ಮಮೃತ್ಯಾದಿ ಪ್ರಾಪ್ತಿರೂಪ ಪುನರಾವೃತ್ತಿಯುಳ್ಳವನೋ ಅಲ್ಲವೋ, ಅದಕ್ಕಾಗಿ ಮುಕ್ತನಿಗೆ ಸಮಸ್ತ ಕಾಲದಲ್ಲಿ ಇರುವಿಕೆಯು ಪುನರಾವೃತ್ತಿಯಲ್ಲಿ ಅಬಾಧಕವೋ ಬಾಧಕವೋ ಅದಕ್ಕಾಗಿ ಸಮಸ್ತಕಾಲಕ್ಕೆ ಸಮಾಪ್ತಿಯುಇದೆಯೋ ಇಲ್ಲವೋ ಎಂದು ಸಂದೇಹವು. ಮುಕ್ತನಿಗೂ ಪುನರಾವೃತ್ತಿಯುಇದ್ದೇ ಇದೆ. ಮುಕ್ತನು ಸಮಸ್ತ ಕಾಲದಲ್ಲಿ ಇದ್ದರೂ ಸರ್ವಕಾಲಕ್ಕೂ ಕದಾಚಿತ್ ಸಮಾಪ್ತಿಯು ಆಗಬಹುದು. ಕಾಲವು ಅನಂತವಾದ ಪ್ರಯುಕ್ತ ಸಮಾಪ್ತಿಯು ಆಗುವುದಿಲ್ಲವೆಂದಿಲ್ಲ ಭಾರತ ಯುದ್ಧದಲ್ಲಿ ಚತುರ್ದಶೀಂ ಪಂಚದಶೀಂ ಇತ್ಯಾದಿಗಳಿಂದ ತ್ರಯೋದಶಿಗೆ (೧೩.ನೇ ದಿನಕ್ಕೆ) ಅಸಂಭಾವಿತವಾದ ಪಂಚದಶೀತ್ವವು (೧೪ ಮತ್ತು ೧೫ನೇ ದಿವಸತ್ವವೂ) ಕಂಡದೆ ಎಂದು ಪೂರ್ವಪಕ್ಷವು ಬಂದರೆ, ಸಮಸ್ತ ಕಾಲಕ್ಕೂ ಸಮಾಪ್ತಿಯು ವ್ಯಾಪತವಾದುದರಿಂದ ಮುಕ್ತಿಗೆ ಅನಂತಕಾಲವೃತ್ತಿತ್ವವು ಇದೆ ಸ್ವರ್ಗದಲ್ಲಿರತಕ್ಕವನು ಮನ್ವಂತರದ ಪರ್ಯಂತವಿರುವುದರಿಂದ ಆತನಿಗೆ ಪುನರಾವೃತ್ತಿಯಿದ್ದರೂ ನಚ ಪುನರಾವರ್ತತೇ ಎನ್ನುವ ಶ್ರುತಿಯಿದ್ದುದರಿಂದ ಮುಕ್ತರಿಗೆ ಪುನರಾವೃತ್ತಿಯಿಲ್ಲ. ಸರ್ವಾನ್ ಕಾಮಾನಾಪ್ನೋತಿ ಎನ್ನುವ ಶ್ರುತಿಯಲ್ಲಿ ಸಮಸ್ತ ಕಾಮಗಳೂ ಲಭಿಸುತ್ತವೆ ಎಂದು ಶ್ರುತವಾದುದರಿಂದ ಶ್ರುತಿಯಲ್ಲಿ ಅಪುನರಾವೃತ್ತಿಯು ಕಾಮಿತವಾದ ಪ್ರಯುಕ್ತವೂ ಪುನರಾವೃತ್ತಿಯಿಲ್ಲ. ಆದಕಾರಣ ಮುಕ್ತರು ನಿತ್ಯನಿರ್ದುಃಖ ಆನಂದಾನುಭವವುಳ್ಳವರೇ ಆಗಿರುತ್ತಾರೆ. ॥ಅಧಿ.೧೧॥

**ಅನಾವೃತ್ತ್ಯಧಿಕರಣವು ಸಮಾಪ್ತವಾಯಿತು.**

## ೪ನೇ ಅಧ್ಯಾಯಾರ್ಥ ಸಂಗ್ರಹವು

**ವಿಶೇಷಾಂಶ ॥** (೧) ಅಪ್ರತೀಕಾಲಂಬನರಾದ ದೇವತೆಗಳು ಭಗವಜ್ಞಾನ ಭೋಗಗಳಿಂದ ಅನಿಷ್ಟಕರ್ಮಗಳನ್ನೆಲ್ಲಾ ನಿವೃತ್ತಿಪಡಿಸಿಕೊಂಡು ಚೇತನೋತ್ಕ್ರಮಣದಿಂದ ದೇಹವು ಮೊದಲೇ ನಷ್ಟವಾದುದರಿಂದಲೂ ಅರ್ಚಿರಾದಿಲೋಕಗಳು ನಷ್ಟಗಳಾಗಿರುವುದರಿಂದಲೂ, ಉತ್ಕ್ರಮಣದಿಂದ ಮತ್ತು ಅರ್ಚಿರಾದಿ ಮಾರ್ಗದಿಂದಲೂ ವಿರಹಿತರಾದ ತತ್ತ್ವಾಭಿಮಾನಿಗಳಲ್ಲದ ದೇವತೆಗಳು ಬ್ರಹ್ಮಾಂಡ ಲಯಕಾಲದಲ್ಲಿಯೂ ತತ್ತ್ವಾಭಿಮಾನಿದೇವತೆಗಳು ಬ್ರಹ್ಮಾಂಡ ಲಯಾನಂತರದಲ್ಲಿಯೂ ಯಥಾಯೋಗ್ಯವಾಗಿ ತಂತಮ್ಮಿಂದ ಉತ್ತಮದೇವತೆಗಳಲ್ಲಿ ಪ್ರವೇಶದಿಂದ ದೇಹವನ್ನು ಬಿಟ್ಟವರಾಗಿ ತಂತಮಗೆ ಉಚಿತವಾದ ಗರುಡಮಾರ್ಗದಿಂದಾಗಲೀ ಶೇಷಮಾರ್ಗದಿಂದಾಗಲೀ ಚತುರ್ಮುಖನಿಂದ ಕೂಡಿಕೊಂಡು ವೈಕುಂಠದಲ್ಲಿರತಕ್ಕ ಶ್ರೀಹರಿಯನ್ನು ಹೊಂದಿ ಚತುರ್ಮುಖನಿಂದ ಕೂಡಿಕೊಂಡು ವಿರಜಾನದಿಯಲ್ಲಿ ಸ್ನಾನದಿಂದ ಲಿಂಗಶರೀರವನ್ನು ಭೇದಿಸಿಕೊಂಡು ನಷ್ಟವಾದ ಜಡಪ್ರಕೃತಿಯುಳ್ಳವರಾಗಿ ಅತ್ಯಂತವಾಗಿ ಅನಿಷ್ಟನಿವೃತ್ತಿಯುಳ್ಳವರು ಆಗುತ್ತಾರೆ. (೨) ಪ್ರತೀಕಾಲಂಬನರಾದ ಋಷಿಗಳು ಗಂಧರ್ವರು ಮತ್ತು ಪಿತೃಗಳೂ ಭಗವಂತನ ಅಪರೋಕ್ಷಜ್ಞಾನಾನಂತರದಲ್ಲಿ ಭಗವಜ್ಞಾನ ಭೋಗಗಳಿಂದ ಎಲ್ಲಾ ಅನಿಷ್ಟಕರ್ಮಗಳನ್ನು ನಿವೃತ್ತಿಪಡಿಸಿಕೊಂಡು ಉತ್ಕ್ರಮಣದಿಂದ ದೇಹವನ್ನೇ

ಬಿಟ್ಟವರಾಗಿ ಅರ್ಚಿರಾದಿ ಮಾರ್ಗದಿಂದ ತಮಗೆ ಯೋಗ್ಯವಾದ ಸ್ಥಾನದಲ್ಲಿ ಇದ್ದವರಾಗಿ ಲಯಕಾಲದಲ್ಲಿ ಉತ್ತಮರನ್ನು ಪ್ರವೇಶ ಮಾಡಿದವರಾಗಿ ವೈಕುಂಠ ವಾಸಿಯಾದ ಶ್ರೀಹರಿಯನ್ನು ಹೊಂದಿ ಚತುರ್ಮುಖನಿಂದ ಕೂಡಿದವರಾಗಿ ವಿರಜಾನದೀಸ್ನಾನದಿಂದ ಲಿಂಗ ಶರೀರವನ್ನು ಭೇದಿಸಿಕೊಂಡು ಪ್ರಕೃತಿ ಸಂಬಂಧವನ್ನು ಬಿಟ್ಟವರಾಗಿ ಸಂಪೂರ್ಣ ಅನಿಷ್ಟ ನಿವೃತ್ತಿಯುಳ್ಳವರು ಆಗುತ್ತಾರೆ. (೩) ಉಪಾಸನಾ ಮಾಡುತ್ತಾ ಸಾಯುಜ್ಯ ಮುಕ್ತರೂ ಭಗವದ್ದೇಹದಲ್ಲಿಯೂ ಹೊರಗೂ, ಇತರರು ಹೊರಗೇನೇ ಸ್ವರೂಪದೇಹದಿಂದಾಗಲೀ ಲೀಲೆಯಿಂದ ಗೃಹೀತಗಳಾದ ಶರೀರಗಳಿಂದಾಗಲೀ ಸಂಕಲ್ಪ ಮಾತ್ರದಿಂದಲೇ ಸಾಧ್ಯಗಳಾದ ದಿವ್ಯಗಳಾದ ಭೋಗಗಳನ್ನು ತಾರತಮ್ಯದಿಂದ ಭೋಗಿಸುತ್ತಾ ಯಾವಾಗಲೂ ಪುನರಾವೃತ್ತಿಯನ್ನು ಹೊಂದುವುದೇ ಇಲ್ಲ. ಹಿಂದೆ ಹೇಳಿದ ಪ್ರಕಾರ ವೈರಾಗ್ಯ ಭಕ್ತಿ ಉಪಾಸನಾ ಇವುಗಳಿಂದುಂಟಾದ ಭಗವತ್ಸಾಕ್ಷಾತ್ಕಾರದಿಂದುಂಟಾದ ಶ್ರೀಹರಿಯ ಪ್ರಸಾದದಿಂದ ಅಶೇಷ ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮೋಕ್ಷವು ಸಿದ್ಧಿಸುವುದರಿಂದ ಶ್ರೀಹರಿಯು ಅಶೇಷ ಗುಣಪೂರ್ಣನೆಂದೂ ನಿರ್ದೋಷನೆಂದೂ ಮುಮುಕ್ಷುಗಳು ಸದಾ ಜಿಜ್ಞಾಸಾ ಮಾಡಲೇಬೇಕು.

**ಪೀಠಿಕೆ ॥** ಭಾಷ್ಯಕಾರರು ಯಾರನ್ನು ಆದಿಯಲ್ಲಿ ಗುಣಗಳ ಸಮೂಹಗಳಿಂದ ಪೂರ್ಣರೆಂದು ಪ್ರತಿಪಾದಿಸಿರುವರೋ, ಯಾರು ಶಿಷ್ಯರಾಗಿಯೇ ಇಂತಹ ಅತಿ ವಿಶದವಾದ ಜ್ಞಾನವನ್ನು ಹೊಂದಿರುವರೋ ಯಾರಲ್ಲಿ ಆಚಾರ್ಯರಿಗೆ ನಿರುಪಾಧಿಕವಾದ ಪ್ರೀತಿಯಿದೆಯೋ ಅಂತಹ ಶ್ರೀಹರಿಯನ್ನೇ ಅಂತ್ಯದಲ್ಲಿಯೂ ದೇವತೆಯೆಂದೂ ಗುರುಗಳೆಂದೂ ನಮಸ್ಕರಿಸುತ್ತಾರೆ—

**ಭಾಷ್ಯ ॥ [೧]ಜ್ಞಾನಾನಂದಾದಿಭಿಃ ಸರ್ವೈರ್ಗುಣೈಃಪೂರ್ಣಾಯ ವಿಷ್ಣವೇ। ನಮೋಽಸ್ತು ಗುರವೇ ನಿತ್ಯ ಸರ್ವಥಾಽತಿಪ್ರಿಯಾಯ ಮೇ ॥ ೧ ॥**

**ಭಾಷ್ಯಾರ್ಥ ॥** ಜ್ಞಾನ ಆನಂದ ಮೊದಲಾದ ಸರ್ವ ಗುಣಗಳಿಂದ ಪೂರ್ಣನೂ ಗುರುಗಳೂ ಆದ ನಿತ್ಯದಲ್ಲಿಯೂ ಸರ್ವರಿಂದಲೂ ಸರ್ವಪ್ರಕಾರದಿಂದಲೂ ನಿರುಪಾಧಿಕ ಪ್ರಿಯನೂ ಆದ ವಿಷ್ಣುವಿಗೋಸ್ಕರ ನಮಸ್ಕಾರವು.

**ವಿಶೇಷಾಂಶ ॥** (೧) ೧ನೇ ವಿಶೇಷಣದಿಂದ ನಮ್ಯತ್ವಕ್ಕೆ ಪ್ರಯೋಜಕಗಳಾದ ಅಧಿಕೃತತ್ವ ವೈಶಿಷ್ಟ್ಯಗಳಿಗೆ ಲಾಭವು. ೨ ಗುರವೇ ಎನ್ನುವುದರಿಂದ ತನಗೆ ಇಂತಹ ಅತಿ ವಿಶದವಾದ ಜ್ಞಾನವನ್ನು ಕೊಟ್ಟದ್ದರಿಂದ ಮಹೋಪಕಾರಿತ್ವವನ್ನು ತೋರಿಸಿದರು. (೨) ನಿತ್ಯಂ ಸರ್ವದಾ **ಅತಿಪ್ರಿಯಾಯ ಮೇ,** ಎನ್ನುವುದರಿಂದ ತನಗೆ ನಿರುಪಾಧಿಕ ಪ್ರೀತಿ ವಿಷಯತ್ವನ್ನು ತೋರಿಸಿದರು. ಈ ಎರಡರಿಂದ ನಮ್ಯತ್ವಕ್ಕೆ ಪ್ರಯೋಜಕವಾದ ಇಷ್ಟತ್ವಕ್ಕೆ ಲಾಭವು. (೩) ಗುರವೇ ಎನ್ನುವುದರಿಂದಲೇ ಗುರುತ್ವದಿಂದಲೇ ನಮ್ಯತ್ವವನ್ನು ಉಪಪಾದಿಸಿರುವರು. (೪) ವಿಷ್ಣವೇ ಎನ್ನುವುದರಿಂದ ದೇವತಾತ್ವದಿಂದಲೂ ನಮ್ಯತ್ವವು ಉಕ್ತವಾಯಿತು. ಮತ್ತು ಬ್ರಹ್ಮಶಬ್ದ ಸಮಾನಾರ್ಥವುಳ್ಳ ವಿಷ್ಣುಶಬ್ದವನ್ನು ಪ್ರಯೋಗಿಸಿದ್ದರಿಂದ ಬ್ರಹ್ಮವಿಚಾರಾತ್ಮಕವಾದ ಶಾಸ್ತ್ರದಲ್ಲಿ ಅಧಿಕೃತತ್ವವೂ ಸೂತ್ರ ಸಂಖ್ಯೆಯೂ (೫೬೪ ಸೂತ್ರಗಳು ಎಂದೂ) ಉಕ್ತವಾಯಿತು.

೧. ಪ್ರಾಚೀನ ಪುಸ್ತಕದಲ್ಲಿಯೂ ತತ್ತ್ವಪ್ರದೀಪದಲ್ಲಿಯೂ ಯಸ್ಯ ತ್ರೀಣಿ ಎನ್ನುವ ಶ್ಲೋಕಾನಂತರದಲ್ಲಿ ಜ್ಞಾನಾನಂದಾದಿಭಿಃ ಎನ್ನುವ ಶ್ಲೋಕವು ಪಠಿತವಾಗಿದೆ.

**ಪೀಠಿಕೆ ॥** ಆಚಾರ್ಯರು ತಾನು ಮಾಡಿದ ಭಾಷ್ಯಕ್ಕೆ ಆಪ್ತಿ ಮೂಲಕತ್ವವನ್ನು ಸಮರ್ಥಿಸುವುದಕ್ಕಾಗಿ ಶ್ರುತಿಪ್ರಸಿದ್ಧವಾದ ಪರಮಾಪ್ತತ್ವವನ್ನು ತನಗೆ ತೋರಿಸುತ್ತಾರೆ. ಮತ್ತು ಮುಮುಕ್ಷುಗಳಿಗೆ ಭಗವಂತನ ಜ್ಞಾನದಂತೆ ತನ್ನ ಜ್ಞಾನವೂ ಅಪೇಕ್ಷಿತವಾದ ಪ್ರಯುಕ್ತ ತನ್ನ ಸ್ವರೂಪವನ್ನು ಪ್ರಸಿದ್ಧಿಪಡಿಸುತ್ತಾ ತನ್ನ ಕೃತಿಯನ್ನು ಶ್ರೀಹರಿಯಲ್ಲಿ ಸಮರ್ಪಿಸುತ್ತಾರೆ—

**ಭಾಷ್ಯ ॥ [೧]ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹರೌ ತೇನ ಹಿ (ತೃತೀಯಮೇತದಮುನಾ ಭಾಷ್ಯಂ ಕೃತಂ ಕೇಶವೇ ॥ ೨ ॥**

**ಭಾಷ್ಯಾರ್ಥ ॥** ಬಳಿತ್ಥಾ ಇತ್ಯಾದಿ ವೇದವಚನಗಳಲ್ಲಿ ಯಾವ ವಾಯುದೇವರ ಕ್ರೀಡಾದಿಗುಣ ವಿಶಿಷ್ಟಗಳಾದ ಅತ್ಯಂತ ಪ್ರಕಾಶವುಳ್ಳ ಸುತ್ಯಗಳಾದ ಸರ್ವ ದೇವತೆಗಳಿಂದ ಸೇವ್ಯಗಳಾದ ಸರ್ವಜ್ಞ ಗಳಾದ ಆನಂದಭರಿತಗಳಾದ ಮೂರು ರೂಪಗಳು ಪ್ರತಿಪಾದಿತಗಳಾಗಿವೆಯೋ (ಅಂತಹ ವಾಯು ದೇವರ ಮೂಲರೂಪವು ಎಂತಹುದು, ಸ್ವರೂಪವು ಎಂತಹುದು, ಮೂರು ರೂಪಗಳು ಯಾವುವು ಎಂತಹುವುಗಳು ಎಂದರೆ) ಆ ವಾಯುದೇವರ ಮೂಲರೂಪವು, ಬಲಾತ್ಮಕವು, ಜ್ಞಾನರೂಪವು, ಅಥವಾ ಜ್ಞಾನಾತ್ಮಕವೂ ವ್ಯಾಪ್ತವೂ ಆಗಿದೆ. ಜಗತ್ತಿಗೆ ಭರಣಗಮನಗಳನ್ನು ಮಾಡತಕ್ಕುದು. ಪೂಜ್ಯ ವಾದುದು, ಸರ್ವಶ್ರೇಷ್ಠವಾದುದು. (ಏವಂಚ ವಾಯುಃ=ವ ಶಬ್ದವು ಬಲವಾಚಕವು, ಆಯಶಬ್ದವು= ಜ್ಞಾನಾರ್ಥಕವು. ತಥಾಚ ಬಲಜ್ಞಾನ ಸ್ವರೂಪವು.) (ಮೂಲರೂಪದಿಂದ ಅವತಾರರೂಪವಾದ ಇಂದ್ರಾರ್ಜುನಾದಿಗಳಂತೆ ಗುಣವೈಷಮ್ಯವನ್ನು ತಿಳಿಯಕೂಡದು ಎನ್ನುತ್ತಾರೆ.) ಮೂಲರೂಪವು ಎಂತಹ ಗುಣಗಳುಳ್ಳದ್ದೋ ಅಂತಹ ಗುಣಗಳುಳ್ಳದ್ದಾಗಿಯೇ ಹನುಮದಾದ್ಯವತಾರವು ಸಜ್ಜನರ ಕಾರ್ಯ ಕ್ಕಾಗಿಯೂ ಮೂರು ಅವತಾರಗಳಿಗೋಸ್ಕರವೂ ಶ್ರೀಹರಿಯಿಂದ ಪ್ರೇರಿಸಲ್ಪಟ್ಟದೆ. ಅವತೀರ್ಣವೂ ಆಗಿದೆ. (ಮೂರು ಅವತಾರಗಳ ವ್ಯಾಪಾರಗಳನ್ನೂ ನಾಮಗಳನ್ನೂ ಹೇಳುತ್ತಾರೆ.) (೧) ಒಂದನೇದ್ದು ಹನುಮದಾಖ್ಯರೂಪವು ರಾಮದೇವರ ವಚನಗಳನ್ನು ಸೀತಾದೇವಿಯ ಸಮೀಪಕ್ಕೆ ಹೊಂದಿಸಿ ಕೊಟ್ಟದ್ದು. ಮತ್ತು ಮೂಲ ರಾಮಾಯಣರೂಪಗಳಾದ ರಾಮವಿಷಯಕ ವಚನಗಳನ್ನು ಶಿಷ್ಯರಲ್ಲಿ ಉಪದೇಶಿಸುವಂಥಾದ್ದು ಮತ್ತು ರಾಮದೇವರ ವಚಸ್ಸಿನಲ್ಲಿದ್ದ ಆಜ್ಞಾರೂಪ ನ್ಯಾಯದಿಂದ ಯುಕ್ತ ವಾದದ್ದು. ಎರಡನೇ ಭೀಮನಾಮಕ ಅವತಾರವು ಕುರುಗಳ ಸೈನ್ಯವನ್ನೇ ನಾಶಪಡಿಸಿದಂಥಾದ್ದು ಯಾವುದು ಮೂರನೇ ಅವತಾರವೋ ಅದು ಆನಂದರೂಪಿಯಾದ ಶ್ರೀಹರಿಯನ್ನು ಪ್ರತಿಪಾದಿಸತಕ್ಕ ಶಾಸ್ತ್ರವನ್ನು ಮಾಡಿದ್ದರಿಂದ ಮಧ್ವನಾಮಕವು. ಮತ್ತು ಆನಂದವನ್ನು ಕೊಡತಕ್ಕ ಶಾಸ್ತ್ರವನ್ನು ನಿರ್ಮಾಣ ಮಾಡಿದಂತಾದ್ದು ಅಂತಹ ವಾಯುದೇವರಿಂದ ಶ್ರೀಮದ್ಬ್ರಹ್ಮಸೂತ್ರಭಾಷ್ಯವು ಶ್ರೀಹರಿ ವಿಷಯಕವಾಗಿ ಮಾಡಲ್ಪಟ್ಟಿತು. **ಮಧ್ವಿತ್ಯಾನಂದ ಉದ್ದಿಷ್ಟಃ ವೇತಿ ತೀರ್ಥಮುದಾಹೃತಂ । ಮಧ್ವ ಆನಂದತೀರ್ಥಃ**

೧. ಪ್ರಾಚೀನ ಪುಸ್ತಕದಲ್ಲಿ ಈ ಶ್ಲೋಕವು ಉಪಲಬ್ಧವಾಗುವುದಿಲ್ಲ.

ಸ್ವಾತ್ತೃತೀಯಾ ಮಾರುತೀತನುಃ । ಏವಂಚ ಪರಮಾಪ್ತರಾದ ಶ್ರೀಮದಾಚಾರ್ಯರಿಂದ ಪ್ರಣೀತವಾದ ಪ್ರಯುಕ್ತ ಸಕಲ ಸಜ್ಜನರೂ ಆತ್ಯಾದರದಿಂದ ಅಂಗೀಕರಿಸಬೇಕೆಂದು ಸಿದ್ಧವಾಯಿತು. ॥೨॥

ಪೀಠಿಕೆ ॥ ತನ್ನ ಮಹಾತ್ಮ್ಯವರ್ಣನದಿಂದ ಗ್ರಂಥವನ್ನು ಸಮಾಪ್ತಿ ಮಾಡಬಾರದೆನ್ನುವಅಭಿ ಪ್ರಾಯದಿಂದ ಪುನಃ ಶ್ರೀನಾರಾಯಣನ ಸ್ತುತಿ ನಮಸ್ಕಾರ ಪ್ರಾರ್ಥನಾರೂಪ ಮಂಗಲವನ್ನು ಮಾಡುತ್ತಾರೆ—

**ಭಾಷ್ಯ ॥ ನಿತ್ಯಾನಂದೋ ಹರಿಃ ಪೂರ್ಣೋ ನಿತ್ಯದಾ ಪ್ರೀಯತಾಂ ಮಮ। ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಚ ವಿಷ್ಣವೇ ॥ ೩ ॥**

ಭಾಷ್ಯಾರ್ಥ ॥ ಸರ್ವದಾ ಆನಂದಪೂರ್ಣನು ಆನಂದರೂಪನು, ದೇಶ ಕಾಲಗುಣಗಳಿಂದ ಅಪರಿಚ್ಛಿನ್ನನೂ ಆದ ಶ್ರೀಹರಿಯು ಸರ್ವದಾ ನನಗೆ ಪ್ರೀತನಾಗಲಿ, ಅಂತಹ ವಿಷ್ಣುವಿಗೋಸ್ಕರ ನಮಸ್ಕಾರವು. ॥೩॥

ವಿಶೇಷಾಂಶ ॥ (೧) ಮೂರಾವರ್ತಿ ನಮಸ್ಕಾರೋಕ್ತಿಯು ಸರ್ವದಾ ನಮಸ್ಕಾರಗಳನ್ನು ಮಾಡುತ್ತಾರೆನ್ನುವುದಕ್ಕೆ ದ್ಯೋತಕವು. ಭಕ್ತಿಯು ಇಲ್ಲವಾದರೆ ಸದಾ ನಮಸ್ಕಾರ ಕರಣವು ಕೂಡದಿರುವುದರಿಂದ ಭಕ್ತಿಪೂರ್ವಕವಾದ ನಮಸ್ಕಾರವು ಸರ್ವದಾ ಭಗವತ್ಪ್ರೀತಿಯು ನಿಶ್ಚಯವಾಗಿಯೂ ಆಗುವುದು. (೨) ವಿಷ್ಣುಶಬ್ದವು ದೇಶತಃ ಕಾಲತಃ ಗುಣತಃ ಹೀಗೆ ತ್ರಿವಿಧವಾದ ಪರಿಚ್ಛೇದ ಶೂನ್ಯಸ್ವರೂಪವಾದುದರಿಂದ ಬ್ರಹ್ಮಶಬ್ದ ಸಮನಾರ್ಥಕವಾದುದರಿಂದಲೂ ಬ್ರಹ್ಮ ಶಬ್ದಶ್ಚ ವಿಷ್ಣಾವೇವ ಎಂದು ಹೇಳಿದ್ದರಿಂದಲೂ ಬ್ರಹ್ಮಮೀಮಾಂಸಾಶಾಸ್ತ್ರದ ಅಂತ್ಯದಲ್ಲಿ ವಿಷ್ಣುವಿಗೆ ನಮಸ್ಕಾರವು ಉಚಿತವಾಗಿದೆ. (೩) ತಥಾಚ ಆದಿಯಲ್ಲಿಯೂ ಅಂತ್ಯದಲ್ಲಿಯೂ ಧರ್ಮ, ಅರ್ಥ ಕಾಮ ಮೋಕ್ಷವೆನ್ನುವ ನಾಲ್ಕು ವಿಧ ಪುರುಷಾರ್ಥಗಳನ್ನು ಕೊಡತಕ್ಕ ಭಗವದ್ವಾಚಕ ನಾರಾಯಣ, ವಿಷ್ಣು ಈ ಶಬ್ದಗಳಿಂದ ಸಂಪುಟೀಕರಿಸಿದ್ದರಿಂದ ಈ ಭಾಷ್ಯವು ಐಹಿಕಾಷ್ಮಿಕ ನಿಖಿಲ ಪುರುಷಾರ್ಥದಾಯಕವೆಂದೂ ವಿಷ್ಣುಶಬ್ದದಿಂದ ಕಟಪಯಾದಿ ಸಂಖ್ಯೆಯಿಂದ ೫೬೪ ಐನೂರ ಅರುವತ್ತನಾಲ್ಕು ಸೂತ್ರಗಳೆಂದೂ ಶ್ರೀಮದಾಚಾರ್ಯರು ಸೂಚಿಸಿರುವರು. ॥೩॥

**ಇತಿ ಶ್ರೀಮತ್ಕೃಷ್ಣದ್ವೈಪಾಯನಕೃತಬ್ರಹ್ಮಸೂತ್ರಭಾಷ್ಯೇ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ(ದ) ವಿರಚಿತೇ ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ (ಯಃ) ॥ ೪-೪ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀಮದ್ವೇದವ್ಯಾಸಕೃತ ಬ್ರಹ್ಮಸೂತ್ರಗಳ ಭಾಷ್ಯದಲ್ಲಿ ನಾಲ್ಕನೇ ಅಧ್ಯಾಯದಲ್ಲಿ ನಾಲ್ಕನೇ ಪಾದವು ಸಮಾಪ್ತವಾಯಿತು. ॥ ೪-೪ ॥

**ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥**
**ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।**
**ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥**

ಶ್ರೀಮದ್ವೇಶಂ ಮಧ್ವಗುರೂನ್ ಟೀಕಾಕೃತ್ಪಾದಪೂರ್ವಕಾನ್ ।
ಗುರೂಂಶ್ಚ ಗುರುರಾಜಾಖ್ಯತಂತ್ರಿಣಂ ಪಿತರಂ ನಮನ್ ॥
ಶ್ರೀಮಾಧ್ವಬ್ರಹ್ಮಸೂತ್ರೀಯಭಾಷ್ಯವ್ಯಾಖ್ಯಾಂ ಸತಾಂ ಮುದೇ ।
ಶಿಶೋಮಣಿರ್ಭಾರ್ಗವೀಯಃ ಓಕುಡ್ಲಾಯಕುಲೋದ್ಭವಃ ॥
ಕರ್ನಾಟಭಾಷಯಾ ಪ್ರೀತ್ಯಾ ತಂತ್ರಿನಾರಾಯಣಾಭಿಧಃ ।
ಕೃತವಾನ್ ಗುರುವರ್ಯಾಣಾಂ ಪ್ರಸಾದಬಲಮಾಶ್ರಿತಃ ॥
ಸಾರಜ್ಞಾನಾಯ ಸತ್ತತ್ವಪ್ರದೀಪಂ ಚಂದ್ರಿಕಾಮಪಿ ।
ತತ್ವಪ್ರಕಾಶಿಕಾಂ ಶ್ಲಾಘ್ಯಾಂ ನ್ಯಾಯಮುಕ್ತಾವಳೀಂ ತಥಾ ॥
ವಿಲಸತ್ತರ್ಕದೀಪಾನಾಮಾವಲಿಂ ವೀಕ್ಷ್ಯ ಸಾದರಂ ।
ಪ್ರೀಯತಾಂ ತೇನ ಮದ್ವೇಶೋ ವ್ಯಾಸದೇವಃ ಶ್ರಿಯಃ ಪತಿಃ ॥
ಶ್ರೀಮದಾನಂದತೀರ್ಥಾರ್ಯೋ ಭಾರತೀ ಜ್ಞಾನದಾಽಪಿ ಸಾ ।
ಭಾರತೀಶ ನಮಸ್ತುಭ್ಯಂ ರಾಮಪ್ರಿಯ ನಮೋಽಸ್ತು ತೇ ॥
ನಮಸ್ತೇ ದ್ರೌಪದೀಕಾಂತ ವ್ಯಾಸಶಿಷ್ಯ ನಮೋಽಸ್ತು ತೇ ।
ವ್ಯಾಖ್ಯಯಾ ಸೂತ್ರಭಾಷ್ಯಸ್ಯ ಪ್ರೀತೋ ಮಧ್ವಮುನಿರ್ಮವ ॥
ನಿವಾರಯನ್ನಪ್ರಕಾಶಂ ಸುಪ್ರಕಾಶಂ ದದಾತು ಮೇ ।
ಶ್ರೀಶಸ್ತೇ ಸುಶ್ರಿಯಂ ದದ್ಯಾದಾಯುರ್ವಾಯುಸುತಪ್ರಿಯಃ ।
ಭೂಮಿಂ ತೇ ವಾಮನೋ ದದ್ಯಾದರೀನ್ ಹಂತು ನೃಕೇಸರೀ ॥

॥ ಸಂಪೂರ್ಣೋಽಯಂ ಚತುರ್ಥಾಧ್ಯಾಯಃ ॥

ಶ್ರೀಲಕ್ಷ್ಮೀಹಯಗ್ರೀವಾರ್ಪಣಮಸ್ತು ॥

# ॥ ಶ್ರೀಮದ್ಬ್ರಹ್ಮಸೂತ್ರಭಾಷ್ಯಂ ಸಂಪೂರ್ಣಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥



## ''ರೂಪಮನ್ಯದಿವ ಧನ್ಯಮಾತ್ಮನಃ''

ಬದರೀನಾರಾಯಣನ ಸನ್ನಿಧಿಯಲ್ಲಿ ಕುಳಿತುಕೊಂಡು ಸರ್ವಜ್ಞಶಿಖಾಮಣಿಗಳಾದ ಶ್ರೀಗುರುಮಧ್ವರು ದೇವಮಾನ್ಯವಾದ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದರು.

ಪೂರ್ಣಪ್ರಜ್ಞರ ಬ್ರಹ್ಮಸೂತ್ರಭಾಷ್ಯವೆಂದರೆ ತೆರೆದಿಟ್ಟ ವ್ಯಾಸರ ಹೃದಯ. ವಾಸುದೇವನ ಗುಣಪೂರ್ಣತೆಯ ಒಂದು ಕೈಗನ್ನಡಿ. ಅವರಲ್ಲಿ ಒಂದೂ ಕುಂದಿಲ್ಲ. ಆ ಮಧ್ವಭಾಷ್ಯದ ತುಂಬ ಕೇಳಿಬರುವುದು ವೇದಗಳ ಪ್ರತಿಧ್ವನಿ. ಚಿಕ್ಕಮಕ್ಕಳು ಸ್ಥೂಲರೂಪವಾಗಿ ಅದನ್ನು ಅರಿಯಬಲ್ಲರು. ಆಳಕ್ಕೆ ಇಳಿದರೆ ಎಂಥ ಪಂಡಿತರೂ ಅರಿಯಲಾಗದಂತಹ ಗಹನವಿಷಯಗಳು ಅಲ್ಲಿ ಉಂಟು. ಈವರೆಗಾದ ಬ್ರಹ್ಮಸೂತ್ರದ ಮೇಲಿನ 21 ಭಾಷ್ಯಗಳ ತಪ್ಪು ತ್ರುಟಿಗಳೆಲ್ಲ ಇದರಿಂದ ಹೊರಬಿದ್ದವು. ಆದರೆ ಈ ಮಧ್ವಭಾಷ್ಯದಲ್ಲಿ ಮಾತ್ರ ಈವರೆಗೂ ಎಂತೆಂಥ ವಿದ್ವಾಂಸರೂ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಪರಕಿಸಿ ನಿರುಕಿಸಿದರೂ ಅಪ್ಪಿತಪ್ಪಿ ಕೂಡ ಒಂದೂ ತಪ್ಪು ಸಿಕ್ಕಿಲ್ಲ. ಹೆಚ್ಚೇನು ? ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯವೆಂದರೆ ಸರ್ವಜ್ಞರಾಯರ ಬೇರೊಂದು ದಿವ್ಯರೂಪವೇ.

ತತ್ವ ಸಂಶೋಧನ ಸಂಸತ್

ಶ್ರೀಹೃಷೀಕೇಶತೀರ್ಥಸಂಸ್ಥಾನಮ್, ಶ್ರೀ ಪಲಿಮಾರು ಮಠ, ಉಡುಪಿ - ೫೭೬ ೧೦೧